**ಗಾರುಡಿಗತನ** (ನಾ).=ಗಾರುಡಿ ೧: ಪಣದಾಸಗೆ ಈ ಹುಸುವನಾಡಿಸಿ ಬೇಡಿಸಿ ಕೂಡಿಸುವ ಗಾರುಡಿಗತನವಂ ಕಂಡೊರೆದ ಜೋಗಿಯ ಜಾಣಂ (ರಾಮಾಶ್ವ. ೧೨೩-೬). [ ಗಾರುಡಿಗ + – ತನ ]

**ಗಾರುಡಿಗಿತ್ತಿ** (ನಾ). ಗಾರುಡವಿದ್ಯೆಯನ್ನು ಬಲ್ಲವಳು ; ಮಂತ್ರವಾದಿನಿ : " ಯಕ್ಷಿಣೀ–ಗಾರುಡಿಗಿತ್ತಿ " (ಕಾಶಕ್ಕ. ೨೬೨).
[ ಗಾರುಡಿಗ + – ಇತ್ತಿ ]

**ಗಾರುಡಿಸು** (ಕ್ರಿ). ೧. ಹಾವಿನ ವಿಷ ಇಳಿಯುವಂತೆ ಮಂತ್ರಹಾಕು : ನಭವಂ ವಿಷಂ ಮುಟ್ಟಿತೆಂದು ಗಾರುಡಿಪಂತೆ (ಚಂದ್ರಕ. ದೇ. ೨೦೮-೪). ೨. ಮಂಕು ಕವಿಸು ; ವಶಪಡಿಸಿಕೊಳ್ಳು : ನುಡಿಯನಡಗಿಸು ಕೋಕಿಲನ ಗಾರುಡಿಸು ವಿಷಯವಿಷಾಹಿಯನು (ತೊರಣಾ. ೬-೪-೧೪). ೩. ಬುದ್ಧಿ ಹೇಳು ; ಒಳ್ಳೆಯ ಮಾತನಾಡು : ಬಳಿಕವರು ಭೀಮನ ಕರೆದು ಗಾರುಡಿಸೆ ಕೇಳುವನು ಹೃದಯಂದು (ಕುಮಾ.ಆ. ೬-೩).
[ ಗಾರುಡ + – ಇಸು₃ ]

**ಗಾರುಡೌಷಧ** (ನಾ). ಗಾರುಡಿಗನ ಔಷಧಿ ; ಸರ್ವವಿಷಹರವಾದ ಮೂಲಿಕೆ : ಗಾರುಡೌಷಧ ಮಂತ್ರತಂತ್ರಕ್ಕೆ ಪರಮಮೃತ್ಯುವದುಳಿಯ ತದ್ವಿಷ ಪರಿಹರಿಸುವುದು (ಬಸವು. ೪೬-೨೬). [ ಗಾರುಡ + ಔಷಧ ]

**ಗಾರುಧ್ವನಿ** (ನಾ). (ಕೂಗಿಕೂಗಿ) ಒಣಗಿಹೋದ ಕಂಠದಿಂದ ಹೊರಡುವ ಕ್ಷೀಣರವ : ಮಗುವಿನ ಗಾರುಧ್ವನಿ ಮುಟ್ಟಿದುದು ಸುಬ್ಬುವಿನ ಕಿವಿಗೆ (ಅವಕಂ. ೨೨೦).
[ ಗಾರು (<ಗಾಜು) + ಧ್ವನಿ ]

**ಗಾರುಬೊಕ್ಕೆ** (ನಾ). ಉಷ್ಣಾಧಿಕ್ಯದಿಂದ ಮೈಮೇಲೆ ಏಳುವ ಗುಳ್ಳೆ; ಸೆಕೆಗುಳ್ಳೆ : ಮೈಮೇಲೆಲ್ಲಾ ಗಾರುಬೊಕ್ಕೆ ಎದ್ದಿದೆ (ರೂಢಿ).
[ ಗಾರು (<ಗಾಜು) + ಬೊಕ್ಕೆ₁ ]

**ಗಾರುಹಪತ್ಯ** (ನಾ). = ಗಾರ್ಹಪತ್ಯ : ಅರುಹಂತಂ, ಗಾರುಹಪತ್ಯಂ (ಭಾಷಾಭೂ. ೦೦೮ ಉದಾ) ; ಆಹವನೀಯ ಗಾರುಹಪತ್ಯ ದಕ್ಷಿಣವಾಯು ಪುರಾಡದರು ತ್ರಿವೇಣುಕವಾ ರಥಾಗ್ರದಲಿ (ಕುಮಾ.ಕ. ೬-೪).
[ <ಸಂ. ಗಾರ್ಹಪತ್ಯ ]

**ಗಾರುಹಸ್ತ** (ನಾ). ಸಂಸಾರಿ ; ಗೃಹಸ್ಥ : ಗಾರುಹಸ್ತರೆನಿಸಿ ಶರಣರ್ಗರ್ಥ ವನ್ನವೀಯದವರ ಕಾಲು ಕಯ್ಯನಗಚಿ ತೋರಣದೊಳು ಕಟ್ಟಿ ಸೀಳಿ ನರರ ನಾಚಿಸುವರು (ಶಾನಂಚ. ೬-೦೧೬ ರಗಳೆ). [ <ಸಂ. ಗೃಹಸ್ಥ ]

**ಗಾರುಹಸ್ತ್ಯ** (ನಾ). ಗೃಹಸ್ಥಧರ್ಮ ; ಗೃಹಸ್ಥಾಶ್ರಮ : ಬಂಧುರದ ಧನವನು ಗಾರುಹಸ್ತ್ಯದ ಪರಮಧರ್ಮವನಾವ ಬಯಸುವವನು (ಕುಮಾ.ಆ. ೩-೩೪). [ <ಸಂ. ಗಾರ್ಹಸ್ತ್ಯ ]

**ಗಾರೆ₁** (ನಾ). ಸುಣ್ಣ ಹಾಗೂ ಮರಳನ್ನು ಕಲಸಿ ಅರೆದು ತಯಾರಿಸಿ ಕಟ್ಟಡಗಳಿಗೆ ಉಪಯೋಗಿಸುವ ಮಿಶ್ರಣ ; ಗಚ್ಚು : ಗಾರೆಯನು ಹಾಕಿಸಿ ಚೆಂನಾಗಿ ಕಟಿಸಿ ಜೀರ್ಣೋದ್ಧಾರವ ಮಾಡಿದ (ಶಾಶಾಇ. IX–ii, ೩೩೨-೧೬ ; 1527) ; ಗಾರೆಗೊದವಿಸಿದ ಹೊಸಸುಣ್ಣವೆಂತೆನಲು ಕೀಳ್ಪೆ ರಾಯ ಶಂಭುಗರ್ಪಿಸಿದ ಪಾಲುಂಬೋನದೊರೆಗೆ (ವೀಶೈಪು. ೮-೪-೨೦) ; ಗೋಪುರದ ಭಾರವನು ಗಾರೆಯ ರೂಪುದೋಚಿದ ಪ್ರತಿಮೆಯಂದದಿ ಈ ಪರಿಯ ಸಂಸಾರಭಾರವನಾರು ತಾಳುವರು (ಹರಿಸಾ. ೮೨) ; ಇಟ್ಟಿಗೆ ಗಾರೆ ತೇಗ ತಾರ್ಸಿ ಸಜ್ಜೆ ಸಿಮೆಂಟು ಇತ್ಯಾದಿಗಳನ್ನು ಕುರಿತ ಪಾಂಡಿತ್ಯ ನನಗಿಲ್ಲ (ಹುಗೂಲಿ. ೨). ' ವಜ್ರಗಾರೆ ' ಪರಾ.

**ಗಾರೆಯ ಚಕ್ರ**=ಗಚ್ಚು ಅರೆಯುವ ಗಾಲಿ : ಗಾರೆಯ ಚಕ್ರದಂತೆ ಉರುಳಿಕೊಂಡು ಭೂಮಿಯು ಸೂರ್ಯಪ್ರದಕ್ಷಿಣೆ ಮಾಡುತ್ತಿದ್ದಿದ್ದರೆ . . . ಆಗುತ್ತಿದ್ದುವು (ನಕ್ಷತ್ರ. ೯೩).
[ ದೇಪ್ತ ತಮಿ. ಕಾರೈ ; ತುಳು. ಗಾರೆ ; ತೆಲು. ಗಾರ ]

**ಗಾರೆ₂** (ನಾ). ಒಂದು ಬಗೆಯ ಗಿಡ : ಇಂಗುಳದ ಗಿಡ; " ಇಂಗುದೀ, ತಾಪಸತರುಃ - ೨ ಗಾರೇಗಿಡ ; ಇಂಗಳದ ಗಿಡ " (ಸಿದ್ಧಾಂತಿ. ೦೦೬).
[ ದೇಪ್ತ. ತೆಲು. ಗಾರ ]

**ಗಾರೆಕಲ್ಲು** (ನಾ). ಗಾರೆಯನ್ನು ನುಣುಪುಮಾಡಲು ಉಪಯೋಗಿಸುವ ಕಲ್ಲು : ನುಣುಪಾದ ಗಾರೆಕಲ್ಲು (ರೂಢಿ). [ ಗಾರೆ₁ + ಕಲ್ಲು(<ಕಲ್₃) ]

**ಗಾರೆಕೆಲಸ** (ನಾ). ಗಾರೆಯನ್ನು ಮಾಡುವುದು ; ಗಾರೆಯನ್ನು ಬಳಿಯುವುದು : ಮನೆಗೆ ಗಾರೆಕೆಲಸ ಮಾಡಿಸಬೇಕಾಗಿದೆ (ರೂಢಿ).

**ಗಾರೆಕೆಲಸದವ**=ಗಾರೆಕೆಲಸಮಾಡುವವನು : ಬಡಗಿಯರು ಕಾಮಾಟಿಯರು ಗಾರೆಕೆಲಸದವರು (ಸೌಗಂಧಿ. ೧೩೩-೧೬). [ ಗಾರೆ₁ + ಕೆಲಸ ]

**ಗಾರೆಗಾರ** (ನಾ). ಗಚ್ಚುಕೆಲಸ ಮಾಡುವವನು : ಒಳ್ಳೆಯ ಗಾರೆಗಾರರಿಲ್ಲದೆ ಮನೆಯ ಕೆಲಸ ಅಪೂರ್ಣವಾಗಿದೆ (ರೂಢಿ).
[ ಗಾರೆ₁ + – ಕಾರ₁ (< –ಕಾಜ) ]

**ಗಾರೆಮಣೆ** (ನಾ). ಗಾರೆಯನ್ನು ಗೋಡೆಗೆ ಬಳಿಯಲು ಉಪಯೋಗಿಸುವ ಚೌಕವಾಗಿರುವ, ಹಿಡಿಯುಳ್ಳ ಮಣೆ ; ಚಕ್ಕೆ : "ಗಾರೆಕೆಲಸದವನ, ಹಿಡಿಯಿರುವ ಚೌಕಹಲಗೆ : ಗಾರೆಮಣೆ " (Hawk. ಇಂಕನ್ನ).
[ ಗಾರೆ₁ + ಮಣೆ ]

**ಗಾರ್ದಪ** (ನಾ).=ಗಾರ್ದಭ : ಅದನುಪೇಕ್ಷೆಗೆಯ್ವಪ್ಪ ಪ್ರಭುವುಂ ಪ್ರಜೆಗಳುಂ ಮೂಲಿಗನುಂ ಸ್ವಾನ ಗಾರ್ದ್ದಪ ಚಾಂಡಳರು . . . ಪಾತಕಕ್ಕೆ ಸಲ್ವರು (ಶಾಶಾಇ. XX, ೫೦-೩೬ ; 1077).
[ P ಇದು 'ಗಾರ್ದಭ'ದ ಅಪಪಾಠ ]

**ಗಾರ್ದಭ** (ನಾ). ಕತ್ತೆ ; ರಾಸಭ : ಶುನಕ ಗಾ[ಪಾಠಾಂ. ಗ]ರ್ದಭ ಕೀರ ದರ್ದುಗ ವನಚರೋಪ್ಪ ಕುರಂಗ (ಬಸವು. ೫೬-೭೩) ; ಕೃಶಾನುವಿನ ಗಾರ್ದಭನ ವೃಷಭನ ಶಿಂಶುಮಾರಕನ . . . ಗುಣವಾ ನರೇಂದ್ರನೋಳರಲು ಬೇಕುದು ಭೂಪ ಕೇಳೆಂದ (ಕುಮಾ.ಆ. ೩-೧೦೪). [ ಸಂ. ]

**ಗಾರ್ಹಪತ್ಯ** (ನಾ). ಯಜ್ಞಯಾಗಗಳಿಗೆ ಸಂಬಂಧಪಟ್ಟ ಅಗ್ನಿತ್ರಯದಲ್ಲಿ ಒಂದು : ಶರೀರ ಸಂಸ್ಕಾರಾದಿ ಗಾರ್ಹಪತ್ಯ ದಕ್ಷಿಣಾಗ್ನ್ಯಾಹವನೀಯವೆಂಬ ಪೆಸರಂ ಪಡೆದಗ್ನಿತ್ರಯಗಳೊಳ್ (ಆದಿಪು. ೦೩-೧೬ ವ) ; ಆ ವೇದಿಯ ಯಥೋಚಿತಸ್ಥಾನಂಗಳೊಳ್ ಸುಕೃತವನಿತಾಪತ್ಯಮೆನಿಪ ಗಾರ್ಹಪತ್ಯ ಮುಮಂ . . . ತೋಱಿ (ಜಗವಿ. ೦೬-೬ ವ) ; ಬಳಿಕ ಗಾರ್ಹಪತ್ಯವು ಪೃಥಿವಿ, ಅಗ್ನಿ, ಅನ್ನ, ಆದಿತ್ಯ–ಇವು ನನ್ನ ತನುಗಳು, ಆದಿತ್ಯನಲ್ಲಿರುವ ಈ ಪುರುಷನೇ ನಾನು (ಬೃಹ್ಮಛಾ. ೨೪೬ ಅಡಿಟಿ). [ ಸಂ. ]

**ಗಾರ್ಹಸ್ಥ್ಯ** (ನಾ). ಗೃಹಸ್ಥನಾಗಿರುವಿಕೆ ; ವಿವಾಹಾನಂತರ ಸಂಸಾರಿಯಾಗಿ ಮನೆಯಲ್ಲಿ ವಾಸಮಾಡುವಿಕೆ ; ಗೃಹಸ್ಥಾಶ್ರಮ ; ಎಲ್ಲವೂ ಯೌವನದ ಗಾರ್ಹಸ್ಥ್ಯದ ಚಟುವಟಿಕೆಯಲ್ಲಿ ಸುಖಮುಕ್ತ್ಯಾಯವಾಗುತ್ತದೆ (ಮನೋಣಂ. ೨೩೩) ; ಅವನು ಗಾರ್ಹಸ್ಥ್ಯದಿಂದ ಸಂನ್ಯಾಸಕ್ಕೆ ನಡೆದರೆ ಅರ್ಹನಾಗುವನು (ಬುದ್ಧಪ. ೮೪). [ ಸಂ. ]

**ಗಾರ್ಹಿಡಕ್ಕೆ** (ನಾ). [ ಸಂಗೀತ ] ಒಂದು ಬಗೆಯ ತಾಳ : ಗಾರ್ಹಿಡಕ್ಕೆ ಎಡಡಕ್ಕೆ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೪). [ ? ]

**ಗಾಲ** (ನಾ). ೧. ಹರಿಯುವುದು ; ಪ್ರವಹಿಸುವುದು. ೨. ಸೋರುವುದು ; ತೊಟ್ಟಿಕ್ಕುವುದು. ೩. ಸೋಸುವುದು. 'ವಸ್ತ್ರಗಾಲ' ಪರಾ.
[ ಸಂ. ]

**ಗಾಲವ** (ನಾ). ೧. ಒಂದು ಬಗೆಯ ಗಿಡ ; ಲೋಧ್ರ : " ಗಾಲವಃ . . . ಮಾರ್ಜನಃ –೬ ಲೋಧ್ರಗಿಡದ ಹೆಸರು " (ಸಿದ್ಧಾಂತಿ. ೦೦೪). ೨. ಒಬ್ಬ ಋಷಿಯ ಹೆಸರು : ವಾಮದೇವಾತ್ರಿ ಗಾಲವ ಗುರುವಸಿಷ್ಠ ವಿಶ್ವಾಮಿತ್ರರಂ ಕರೆಸಿ (ಜೈಮಿಭಾ. ೨೦-೩). [ ಸಂ. ]

**ಗಾಲಿ, ಘಾಲಿ** (ನಾ). ಬಂಡಿ ಮೊದಲಾದ ವಾಹನಗಳ ಚಲನೆಗೆ ಮುಖ್ಯ ಸಾಧನವಾದ ಭಾಗ; ಚಕ್ರ; ರಥಾಂಗ: "ಚಕ್ರಂ, ರಥಾಂಗಂ–ಈ ೨ ಗಾಲಿ" (ಹರಾಯು. ೬೩-೨೯೩); "ಗಾಲಿ ಚಕ್ರಂ ರಥಾಂಗಮೆನಿಕ್ಕು" (ಮಂಗರಾ. ೮೪-೨೪); ವಿಶ್ವಕರ್ಮನಬುದಿಂಗಳೊಳ್ ರಥದೊಂದು ಗಾಲಿಯಂ ಸವೆಯಿಸಿ ತಂದು ತೋಱಿದೊಡೆ (ವರ್ಧಮಾ. ೧೪೬-೧೦); ಬಲವಂತಂ ಮಾರುತಿ ಗಡ ಮಹಾರಥಂ ಮಾರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ (ಗದಾಯು. ೩-೫೫); ಒಂದೆ ಗಾಲಿಯೊಳ್ ರಥವಂ ನಡೆಯಿಸುವೆನೆಂಬ ನೀರಿಲ್ಲದೆ ಕೂಟನಡುವೆನೆಂಬ . . . ಪೆರ್ಗ್ಗಾವಿಲಸಂ ಪೋಲ್ಕುಂ (ಧರ್ಮಾಮೃ. ೫-೧೦೬); ಶಿಥಿಲವಾದುವು ಗಾಲಿಗಳು ಬಳಿ ರಥಿಕರೀತನ ಬಿಟ್ಟು ಹಾಯ್ದರು (ಕುಮಾವ್ಯಾ. ೩-೨೩). **ಘಾಲಿ:** "ಚಕ್ರಂ, ರಥಾಂಗಂ–ಈ ೨ ಘಾಲಿ" (ನಾಚಿರಾ. ೧೩೪).

**ಗಾಲಿಯಂಗದವಕ್ಕಿ** = ಗಾಲಿವಕ್ಕಿ: ಬಲು ಸ್ಥೂಲ ಕುಚಯುಗಗಳಿಗೆ ಸುಂದರಗಾಲಿಯಂಗದವಕ್ಕಿಗಳು ನಿಜವಾಗಿ ಪೋಲುವವು (ರಘುವಂ. ೦೯೩-೬೩). [ ದೇಶ ತಮಿ. ಕಾಲಿ; ತುಳು. ಗಾಲಿ ]

**ಗಾಲಿಕುರ್ಚಿ** (ನಾ). ಗಾಲಿಗಳನ್ನು ಜೋಡಿಸಿರುವ, ನೂಕಲು ಅನುಕೂಲವಾದ ಕುರ್ಚಿ: ರೋಗಿಗಳನ್ನು ಇಲ್ಲಿಂದಲ್ಲಿಗೆ ಕರೆದುಕೊಂಡು ಹೋಗುವುದಕ್ಕಾಗಿ ಉಪಯೋಗಿಸುವ ಗಾಲಿಗಳುಳ್ಳ ಕುರ್ಚಿ; ಗಾಲಿಕುರ್ಚಿ (Bath-chair. ಇಂಕನಿ). [ ಗಾಲಿ + ಕುರ್ಚಿ ]

**ಗಾಲಿಪಲ್** (ನಾ). ಗಾಲಿಯ ಹಲ್ಲು; ಅರೆ; ಚಕ್ರಾರ: ದಿನದಿನಕೆ ಬದಲಿಸುವ ಭಾಗ್ಯನಿವಹವಮದು ಗಾಲಿಪಲ್ಗಳೋಳಿವೊಲಿಕರ್ಮಂ (ಸ್ವಪ್ನವಾ. ೩). [ ಗಾಲಿ + ಪಲ್ ]

**ಗಾಲಿವಂಟಿ** (ನಾ). ಕಿವಿಯ ಒಂದು ಆಭರಣ; ಗಾಲಿಯ ಆಕಾರದ ಒಂಟಿ: ಕಿವಿಯಲ್ಲಿ ಗಾಲಿವಂಟಿ, ವಂಟಿಗಳ ಭಾರದಿಂದಾಗಿ ತೂತುಗಳು ಇಳಿಬಿದ್ದಿವೆ (ತ್ರಿಶಾಶ. ೮). [ ಗಾಲಿ + ವಂಟಿ ]

**ಗಾಲಿವಕ್ಕಿ** (ನಾ). ಜಕ್ಕವಕ್ಕಿ; ಚಕ್ರವಾಕ; ರಥಾಂಗ: "ಜಕ್ಕವಕ್ಕಿಯ ಗಾಲಿವಕ್ಕಿಯೆನಲ್ಕೆ" (ಕರ್ಣಾನಿ. ೬೨); ಅಱಿಕೆವಟ್ಟುಳ್ಳರಲೆ ನೀಳನೈದಲ್ ಮಱುಗಿ ಹೆಱಸಾರೆ ಗಾಲಿವಕ್ಕಿಗಳ್ (ಉದ್ಯದೇ. ೪-೦೦).

[ ಗಾಳಿ + ಪಕ್ಕಿ$_1$ ]

**ಗಾಲೀಚ, ಗಾಲೀಚೆ** (ನಾ). (ಉಕ) ಚಿತ್ರರಂಜಿತವಾದ ಜಮಖಾನ: ಮೇಲೆ ಸುರಿದ ಸಾಂದ್ರಕಿರಣಗಳು . . . ರೇಸಿಮೆಯ ಪಟದ ಮೇಲೆ ಇರಾಣದ ಗಾಲೀಚಗಳನ್ನು ನಿರ್ಮಿಸುತ್ತಿದ್ದವು (ರಕ್ತಧ್ವ. ೨೬೯). **ಗಾಲೀಚೆ:** ತೋಟದಲ್ಲಿ ಸಪಾಟನೆಲದ ಮೇಲೆ ಯಾವತ್ತು ಕಡೆಗೆ ಹಚ್ಚ ಹಸರು ಗಾಲೀಚೆಗಳನ್ನು ಪಸರಿಸಿ . . . ಕಾಲದಾರಿಗಳನ್ನು ಮಾಡಿದ್ದರು (ಅಕ್ರೀಮ. ೪೯).

[ ←ಪಾರ. ಗಾಲೀಚಹ್; ಹಿಂ. ಗಲೀಚಾ; ಮರಾ. ಗಾಲಿಚಾ ]

**ಗಾಲೀಚೆ** 'ಗಾಲೀಚ' ನೋ.

**ಗಾಲು** 'ಗಾಳು' ನೋ.

**ಗಾಲುಮೇಲು** 'ಗಾಳುಮೇಳು' ನೋ.

**ಗಾಲ್ಮೇಲು** 'ಗಾಳುಮೇಳು' ನೋ.

**ಗಾವ** 'ಗಾಮ' ನೋ.

**ಗಾವಕಾರ** (ನಾ). ಗೌಡ; ಗ್ರಾಮಾಧಿಕಾರಿ. 'ಗಾವಕಾರಿಕೆ' ಪರಾ.

[ ಗಾವ (<ಗಾವು) + –ಕಾರ$_1$ (< –ಕಾಱ) ]

**ಗಾವಕಾರಿಕೆ** (ನಾ). ಗ್ರಾಮದ ಯಜಮಾನಿಕೆ; ಗೌಡಿಕೆ; ಪಟೇಲಿಕೆ: ವಿಶ್ವಾಮಿತ್ರ ಗೋತ್ರದವಂಗೆ ಸರ್ವಕೆಲಸದಲು ಸ್ವತಂತ್ರನಾಗಿ ಗಾವಕಾರಿಕೆ ಬಿಹೋರ ಮರ್ಯಾದೆಗಳನು . . . ಗ್ರಾಮಾನುಮತದಿಂದಾ ರಾಜರು ಕೊಟ್ಟರು (ಎಇ. XXVII, ೨೮-೮೩; 12567). [ ಗಾವಕಾರ + –ಇಕೆ ]

**ಗಾವಕೋಸು** (ನಾ). ಗ್ರಾಮದ ಮೂಲೆ; ಊರಿನ ಒಂದು ಕೋಚು: ಗೊಬ್ಬರದ ನಿಮಿತ್ತವಾಗಿ ಊರ ಹೊರಗೆ ಗಾವಕೋಸಿನಲ್ಲಿ ಒಂದು ದೊಡ್ಡತಗ್ಗನ್ನು ತೆಗೆದು (ಕೃಷಿಪ್ರ. ೪೫).

[ ಗಾವ (<ಗಾವು) + ಕೋಸು$_2$ ]

**ಗಾವಗ** (ನಾ). ಒಬ್ಬಾತನ ಹೆಸರು: ಗಾವಗ ಅರಸ ಬೆಳ್ಗಿಱಿಯಂ ದಯೆಗೆಯ್ದು ಆಳುತ್ತವಿಟ್ಟ (ಎಕ. XII, ತಿಪಟೂ. ೧೦೩-೧೨; 972). [ ? ]

**ಗಾವಗಾನೆ** 'ಗಾವುಗಾನೆ' ನೋ.

**ಗಾವಟ** 'ಗಾವಟಿ' ನೋ.

**ಗಾವಟಿ, ಗಾಂವಟಿ, ಗಾಂವಠೀ, ಗಾವಟ, ಗಾವಠಿ** (ಗು). ೧. (ಉಕ) ಹಳ್ಳಿಗೆ ಸಂಬಂಧಿಸಿದ; ದೇಶೀಯವಾದ; ನಾಟಿ; ಗ್ರಾಮೀಣ: ಎಲ್ಲಿಯೋ ಗಾವಟಿ ಶಾಲೆಯಲ್ಲಿ ನಾಲ್ಕು ಅಕ್ಷರ ಕಲಿತು ಸಭಾದಲ್ಲಿ ಕೇಳಿದ ಮಾತುಗಳನ್ನು ನನ್ನ ಮುಂದೆ ಹೇಳಿ ಹೆದರಿಸಬೇಕೆಂದು ಮಾಡುತ್ತೀಯಾ? (ಜಿವಠಿ. ೫೫); ಅವರು ಯಾವುದೋ ಗಾವಟಿ ಔಷಧದ ಪ್ರಯೋಗ ಮಾಡಿಕೊಳ್ಳುವರು (ಉಡಿ). ೨. ಸರಕಾರಕ್ಕೆ ಸಂಬಂಧವಿಲ್ಲದ; ಖಾಸಗಿ. (ನಾ). ೩. ಕಾಡುಸ್ಥಿತಿಯುಳ್ಳುದು: ಉತ್ತಮವಲ್ಲದುದು. **ಗಾಂವಟಿ:** ೧. ಅದು ಅರ್ಧಕ್ಕರ್ಧ ಎಣ್ಣೆ ಬೆರೆಸಿದ ನಾತಕೊಡುವ ಗಾಂವಟಿ ತುಪ್ಪವಾಗಿತ್ತು (ಜಾರುದಾ. ೩೧೩). ೩. ಮುಂಬಯಿಯಲ್ಲಿ ತಯಾರಾಗುವ ಕಲ್ಲುಸಕ್ಕರೆ, ಚುಮುಚುಮಿಸಕ್ಕರೆ ಗಾಂವಟಿ (ಮುಂಬಮ್ಯಾ. ೩೫ ಪ್ರಸ್ತಾವನೆ). **ಗಾಂವಠೀ:** ೧. 'ಗಾಂವಠೀವಕೀಲ' ಪರಾ. **ಗಾವಟ:** ೧. "ಇಲ್ಲಿಯೇ ತಯಾರಾದ" (ಜಾನಕೋ. ೪೬). **ಗಾವಠಿ:** ೨. ಕುಂಭಕರ್ಣನ ತಂದೆ, ಮಕ್ಕಳಿಬ್ಬರನ್ನೂ ಅಪರಾತ್ರಿಯಲ್ಲಿ ಎಬ್ಬಿಸಿ ಬಹುಶಃ ಒಂದು ಗಾವಠಿ ಪಾಠಶಾಲೆಗೇ ಅಟ್ಟುತ್ತಿರಬೇಕು (ಗಾಳಿಹ. ೦೬೩): ಒಬ್ಬ ಅಯ್ಯನವರು ಗಾವಠೀ ಸಾಲೆಯನ್ನು ಹಾಕಿದ್ದರು (ಮೋದಿಮ. ೬). [ ←ಮರಾ. ಗಾಂವಟೀ ]

**ಗಾವಟೆ, ಗಾವಡೆ** (ನಾ). ಒಂದು ಬಗೆಯ ಮರ; ಸಾರಸವೃಕ್ಷ: "ಸಾರಸವೆನಲ್ಕೆ ಗಾವಟೆ" (ಮಂಗರಾ. ೪೨-೪೦); ಗಾವಟೆ ಬೆಲ್ಲವತ್ತ ವರೆಮಾದಲವಂಬಟೆ ಚಿಳ್ಳ ಚಿಲ್ಲಕಾಯ್ ಮಾವಿನಕಾಯ್ಗಳ್ (ನಳಚಂ. ೪೬೨); ಬೆಲ್ಲವತ್ತ ಕಪಿತ್ಥ ಚಿಕ್ಕಣೆ ಚಿಲ್ಲ ಗುಗ್ಗುಳ ಗೇರು ಗಾವಟೆ . . . ಇಲ್ಲಿ ನೋಡಿವೆ (ತೊರರಾ. ೩-೧-೨೯); ಅಲ್ಲಂ ಮೆಣಸೇಲಕ್ಕಿಯ ನೆಲ್ಲಿಯ ಗಾವಟೆಯುಂ ಭಾಗ್ಯಹೀನರಿಗುಂಟೇ (ನೀತಿಸಾ. ೬೪೬). **ಗಾವಡೆ:** "ಮಹಾಮುನಿಃ– ಗಾವಡೆ, ತುಂಬುರು" (ಓಷಧಿ. ೦೦೬). [ ? ]

**ಗಾವಠಾಣ** 'ಗಾಂವಠಾಣ' ನೋ.

**ಗಾವಠಿ** 'ಗಾವಟಿ' ನೋ.

**ಗಾವಡಿವಾಡ, ಗಾವರಿವಾಡ** (ನಾ). ಒಂದು ಊರಿನ ಹೆಸರು: ಗಾವಡಿವಾಡದ ಮಹಾಜನ (ಅ)ಐವ[ದಿ]ನ್ಬ × [ಕಾ]ಲಂ ಕಚ್ಚಿ ತುಷ್ಪದ [ ತೆ ] ಱಿಯ . . . ದಾನಗೊಟ್ಟ (ಸೌಇಇ. XI – 1, ೦೩-೧೦; 869). **ಗಾವರಿವಾಡ:** ಇಟ್ಟಗೆ ಗಾವರಿವಾಡವೆಂಬ ಬಾಡಂಗಳನ್ (ಎಇ. XV, ೩೪೦-೦೮; 1071). [ ಗಾವಡಿ? + ಬಾಡ$_1$ ]

**ಗಾವಡೆ** 'ಗಾವಟೆ' ನೋ.

**ಗಾವಣ$_1$** (ನಾ). ನೆಲೆ; ಆಶ್ರಯಸ್ಥಾನ; ಕಾವಣ; ಮಂಟಪ: ಅಂಬುಜ ಸೌರಭಂ ತನಗೆ ಗಾವಣ ಜೇವಣಮತ್ಯಪೂರ್ವಮಾಸ್ಯಾಂಬುಜ ಗಂಧ ಮೆಂದೆಱಗಿ ಬಗ್ಗಿಸೆ (ಶಾಂತಿಪು. ೮-೮೬); ವನಮಿಂದು ಶೂನ್ಯಮೆಳಮೆಂಡಿರ ಗಾವಣ [ ಪಾಠಾಂ. ಗೋವರ ] ಮಿಂದು ಶೂನ್ಯಂ (ಅರ್ಧನೇ. ೫-೫೨).

[ <ಕಾವಣ ]

**ಗಾವಣ$_2$** (ನಾ). ಹಳ್ಳಿಯವನು; ಗ್ರಾಮೀಣ ಪ್ರದೇಶದವನು (?): ಗದೆ ಮುಡೆ ೪ ಬಯಿದೂರ ಗಾವಣರ ಬಟಯ ಬೈಂದೂಱ (ಸೌಇಎ. ೧೯೩೦, ಮಂಗಳೂ. ೫೩೪-೨೩; 1278). [ <ಸಂ. ಗ್ರಾಮೀಣ ? ]

**ಗಾವಣಿಗ**(ನಾ). ೧. ಹಳ್ಳಿಗ ; ಗ್ರಾಮೀಣ: "ಸಾದಂ ವೃಷಲನೞ್ ಕುಂಚಿಡಿಗನ ವದ್ಮಂ ಗಾವಣಿಗನಂತ್ಯನಱಿಯೆ ಗಂಗಡಿಕಾಱನಕ್ರಮನಭೀರನೆಂದೆನೆ ಮಹಾ ಶೂದ್ರನಕ್ಕುಂ" (ಮಂಗರಾ. ೧೧೦-೬). ೨. ಒಂದು ವಂಶದ ಹೆಸರು : ಕಾಯ್ವರ ಗಣ್ಡಂ ಅಡಿತುರಗತಟ್ಟಸಂಘಟ್ಟಂ ಬಿರುದ ಗಾವಣಿಗ ಶರಭ ಭೇರುಣ್ಡಂ (ಸೌಇಇ. XI-1, ೭೮-೮೦ ; 1045) ; ಅರಿಬಿರುದ ಗಾವಣಿಗ ದಿಶಾಪಟ್ಟ . . . ಬಿರುದ ಗಾವಣಿಗ ಸೂಱೆಕಾರ (ಸೌಇಇ. XI-II, ೧೬೬-೬೯ ; 1125) ; ಗಾವಣಿಗರ ಬಳಿಯ ರಾಜಗುರು ಜಕ್ಕಂಣನಾಯಕ (ಕಇ. I, ೩೫-೭ ; 1398). [ ಗಾವಣ$_{2}$ + – ಇಗ ]

**ಗಾವದ** 'ಗಾವುದ' ನೋ.

**ಗಾವದಿ, ಗಾವುದಿ** (ಗು). ೧. ಹೆಡ್ಡತನದಿಂದ ಕೂಡಿದ; ದಡ್ಡತನದ : ಸಾವಂ ತಿಳಿಯದೆ ಬೞಿದೆ ಗಾವದಿ ಕೆಲಸಕ್ಕೆ ಯೋಗ್ಯನಾದಂ ಭಕ್ತಂ (ಹಮ್ಮೀರ. ೬-೪೯). (ನಾ). ೨. ದಡ್ಡ ; ಮೂಢ ; ಮೂರ್ಖ : ಮುನ್ನ ಭವಿನಿಳಯದೊಳು ತಲೆಮಟ್ಟು ದುಡಿದ ಗಾವದಿಯ್ಯೆಸೆ ಭೂಪಾಲ ನಲ್ಲೆಂದನು (ಹಹಕಾ. ೦೦-೩೩). **ಗಾವುದಿ :** ೨. ಗಾವುದಿಯಾದನೊ ಗಂಭೀರದವನೊ ಸಾವಹುಟ್ಟುಗಳ ಗೆದ್ದವನೊ (ಲಿಙ್ಗರಾ. ೪-೨೩).

[ ←ಪಾರ. ಹಿಂ. ಮರಾ. ಗಾವದೀ ]

**ಗಾವದಿಗ** (ನಾ). ಗಾವದಿ ೨ : ಬಲು ಸುಳ್ಳು ಕೂಲಿಕಾಱನು ಗಾವದಿಗನೆಂದು ಹಲವು ಬಗೆಯುಲಾಡುತಿಹರು (ಅಮುಸಾಂ. ೫-೭೩).

[ ಗಾವದಿ + – ಗ$_{2}$ ]

**ಗಾವದಿತನ** (ನಾ). ಮಂಕುತನ ; ದಡ್ಡತನ (ಕ್ಯಾಂಡರ್).

[ ಗಾವದಿ + – ತನ ]

**ಗಾವನ್ನ** (ನಾ). ೧. ಬಲಿಗಾಗಿ ಹಾಕುವ ಅನ್ನ. ೨. ಕರಗದ ಉತ್ಸವ ಕಾಲದಲ್ಲಿ ಮಾಡುವ ಒಂದು ಸಾಂಪ್ರದಾಯಿಕವಾದ ವಿಧಿ; ದೇವತೆಗಳಿಗೆ ನಾಲ್ಕು ದಿಕ್ಕುಗಳಲ್ಲೂ ಅರಿಸಿನದ ಅನ್ನದಿಂದ ಬಲಿಹಾಕುವ ಕರ್ಮ : (ಎಸಮ್ಮ. IX, ೧೦). [ ಗಾವು + ಅನ್ನ$_{3}$ ]

**ಗಾವಯ್ಯ** (ನಾ). ಒಬ್ಬಾತನ ಹೆಸರು : ಆ ಕಲ್ಲಂ ಬರೆದ ಗಾವಯ್ಯನ ಸೇನಬೋವ ಕಾಮಯ್ಯ (ಎಕ. XII, ತಿಪಟೂ. ೧೦೩-೧೯ ; 372).

[ ಗಾವ (<ಗಾಮ) + ಅಯ್ಯ$_{1}$ ]

**ಗಾವರ** (ನಾ). ೧. ಗದ್ದಲ : ಗಲಾಟೆ; ಅಬ್ಬರ : "ಗಾವರ ಸರದನಿ ಸಪ್ಪಳಿಉಲಿಯು ಗಾವಳಿ ಮಿಗೆಯಬ್ಬರವುಂ ಧ್ವನಿ" (ಕವಿಕಂ. ೦೦೭) ; ಪರಮಮಂಗಳಪಾಠಕರ ಗಾವರದ ಘನಸಂಭ್ರಮದಲ್ಯೆತಹ ಪರಮಶಿವನನು ರಾಜಪುತ್ರರು ಕಂಡರಿದಿರಿನಲಿ (ವಿಭಾಗ. ೪-೧೬-೩). ೨. ಗುಂಜಾರವ; ಝೇಂಕಾರ : ತಣ್ಪಿಡಿದಲರೂದೆ ಗಾವರದ ಮೆಲ್ಲುಲಿ ತುಂಬಿಯ ಗಾವರಂಗಳಂ ಗೆಡೆಗೊಳೆ (ಪಂಪಭಾ. ೪-೧೧೦) ; ನುಣ್ಪನಿಯ ಸುಮ್ಮಿಯ ಗಾವರದೊಳ್ ಕೊಡರ್ಚಿದೋಪನಿಗೆ ಪುಳಿಂದಿ ಪಾಡಿದಳ್ (ಲೀಲಾವ. ೮-೩೦) ; ತಾವರೆವೂಗಳೊಳ್ ಪಲವು ತುಂಬಿಯ ಗಾವರಮುಣ್ಮೆ (ನಳಚಂ. ೦೩೭). 'ಗಾವಳಿ' ಪರ್ಯಾ. [ ? ]

**ಗಾವರಂಬೊರೆ** (ಕ್ರಿ). ಗಾವರದಿಂದ ಕೂಡು; ಝೇಂಕರಿಸು : ಪೆಣ್ದುಂಬಿಯ ಗಾವರಂಬೊರೆದು ಪೊಣ್ಮುತಿರ್ದ ಪುಷ್ಪಾಸ್ತೃಚಾಪಲತಾ ಜ್ಯಾರವದಂತೆ (ಕಾದಂಪೂ. ೬೫೨). [ ಗಾವರ + ಪೊರೆ$_{2}$ ]

**ಗಾವರದುಂಬಿ** (ನಾ). ಝೇಂಕರಿಸುವ ದುಂಬಿ ; ಮೊರೆಯುತ್ತಿರುವ ಭ್ರಮರ : ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೧೧-೦೦).

[ ಗಾವರ + ತುಂಬಿ$_{1}$ ]

**ಗಾವರಸ** (ನಾ). [ ಸಂಗೀತ ] ಆಲಾಪನೆಯ ಸ್ವಾರಸ್ಯ : ಪೂರ್ವಪದಂ ತದ್ಭವಮಾದುದರ್ಕೆ – ಗ್ರಾಮರಸ – ಗಾವರಸ (ಶಮದ. ೨೮೯ ಪ್ರಯೋ) ; ಗಾವರಸಂ, ಗ್ರಾಮರಸಃ. ಗ್ರಾಮೋನಾಮ ಸರಿಗಮಾದಿ ಸ್ವರಸಮೂಹಃ (ಶಬ್ದಾನು ೨೯೭ ವ್ಯಾಖ್ಯಾ).

[ <ಸಂ. ಗ್ರಾಮರಸ ]

**ಗಾವರಿವಾಡ** 'ಗಾವಡಿವಾಡ' ನೋ.

**ಗಾವರಿಸು**(ಕ್ರಿ). ೧. ಗದ್ದಲಮಾಡು ; ಸದ್ದುಮಾಡು ; ಅರ್ಭಟಿಸು : (ಕಿ). ೨. ಝೇಂಕಾರಮಾಡು ; ಧ್ವನಿಮಾಡು : ಒಳ್ಪನಾಳ್ದ ಪೆರ್ಗ್ಗಲ್ಗಳಿನೊಂದಿ ಗಾವರಿಸುತಿರ್ಪ್ಪ ಮದಾಳಿಯಿಂ (ಎಇ. XIII, ೩೩೧-೨೭ ; 929) ; ಅರಗಿಳಿಯಾಗಿ ಮಂಗಳಮನೋದುವ ತುಂಬಿಯ ಬಂಬಲಾಗಿ ಗಾವರಿಸುವ (ಪುಷ್ಪಪು. ೧೨-೭೧) ; ಆಸ್ಯಾಬ್ಜಗಂಧಕ್ಕೆ ಮಂಡಳಿಗೊಂಡಾಱಿಡಿವಿಂಡು ಗಾವರಿಸದುಂತೋರಂತೆ ಜಾಣ್ಮೆಕ್ಕು ಪುಂಶ್ಚಳಿಯರ್ . . . ನಿಶಾಂತಾಂತಂಗಳಂ ಪೊರ್ದಿದರ್ (ರಾಜಶೇ. ೧೦-೨೪) ; ತೀಟದ ಕಂಪೆತ್ತಲತ್ತಲ್ ಮೋಹರಿಸಿ ಗಾವರಿಸಿ ತಂಡತಂಡದಿಂ ತೇಂಕುತ್ಕೈತಂದು (ರಾಮಾಶ್ವ. ೫೪-೩).

[ ಗಾವರ + – ಇಸು$_{2}$ ]

**ಗಾವಸಿಂಗ** (ನಾ). ಗ್ರಾಮಸಿಂಹ ; ನಾಯಿ : ತುಂಗಗಜಂಗಳ್ಗಳ್ಮೃಗಂಗಳನಾಯ್ದುಱಿ ತಿಂಬುದಪ್ಪೊಡೆ ಪೆಱತೇಂ ಸಿಂಗಮದಲ್ಲದು ಪೋಗಾ ಸಿಂಗಂ ತಾಂ ಗಾವಸಿಂಗಮೆಂದುದು ನಿನ್ನಂ (ಪಂಚತಂ. ೯೦-೮).

[ ಗಾವ (<ಗಾಮ) + ಸಿಂಗ$_{1}$ ]

**ಗಾವಳ** 'ಕಾವಳ' ನೋ.

**ಗಾವಳಿ, ಗಾವುಳಿ** (ನಾ). ೧. ಸದ್ದು ; ಗದ್ದಲ; ಅಬ್ಬರ : "ಗಾವರ ಸರದನಿ ಸಪ್ಪಳಿಉಲಿಯು ಗಾವಳಿ ಮಿಗೆ ಅಬ್ಬರವುಂ ಧ್ವನಿ" (ಕವಿಕಂ. ೧೧೭) ; ಭ್ರಮೆಯಾಯ್ತು ವಿದುರಂಗೆಂಬ ಗಾವಳಿಯ ಕೂಡೆ ಕುಣಿದನು (ಕುಮ್ಯಾಅ. ೮-೧೧) ; ಗಾವಳಿಯನೆಬ್ಬಿಸದೆ ಬಿಡೆನು (ಅಂದಿಕಾ. ೩೬-೫). ೨. ದೊಂಬಿ ; ರಂಪ ; ಹಾವಳಿ : ಬಂದ ಗಾವಳಿಗೆ ಹೆದಱೆ ರಂಜಣಿಗೆಯೊಳಡಗಲು (ಹಹಕಾ. ೦೦-೯೩) ; ದಿನಪನಿದಿರಲಿ ತಮದ ಗಾ[ಪಾಠಾಂ. ಹಾ]ವಳಿಯೇ (ನಳಚ. ೯-೮) ; ಕೊಳೆ ಪಾದರಂ ಪುಸಿ ನುಸುಳು ವೈರವುಟ್ಟುಳಿ ತೋಹು ಬೆದಱು ಬೆಜ್ಜರ ಕಷ್ಟ ನಿಷ್ಠುರಂ ಗಜಱು ಗಾವಳಿ ವಿವಾದ (ಕೃಮಿಥಾ. ೨-೫). ೩. ಗುಂಪು ; ಸಮೂಹ : ಪುದಿದ ಕುರುಳ್ . . . ಪೂತ ಕಿಂಕಿರಾತದೊಳೆಱಗುತ್ತುಮಿರ್ಪಳಿಯ ಗಾವಳಿಯಂದದಿನೊಪ್ಪಿ ತೋಱುಗುಂ (ಶಾಂತಿಪು. ೦೦-೧೦೯); ಕರೆದು ತಂದರು ಕವಿದ ಗಾವಳಿಯ ಗಜಬಜದ ಮೊಱೆಕಾಱರಂ (ಸಿದ್ಧರಾ. ೮-೭) ; ಸಂದಣಿಸಿ ಕುರುಭೂಮಿಯಲಿ ತಾ ಮುಂದಿ ಬಿಟ್ಟುದು ನಾಡ ಗಾವಳಿ ಬಂದುದಲ್ಲಿಗೆ (ಕುಮ್ಯಾಭೀ. ೦-೩) ; ಆಜಿರಂಗದೊಳು . . . ಗಾವಳಿಯನು ಬಂದು ಪೊಗುವ ರಾಹುತರ್ (ಕುರಾಸಾಂ. ೧೦-೬೩). ೪. ಕಷ್ಟ ; ತೊಂದರೆ ; ಹಿಂಸೆ : ದೇವರವರ ಮನಸಿನ ಚಿಂತೆಯು ಬಲು ಗಾವಳಿಯನು ಮಿಗೆ ಪಱಿದು ತೀವಿದ ಮುದವ ನಿಮಗೆ ಬೇಱದಿದ್ದೊಡೆ ನಾವಿದ್ದು ಫಲವೇನು (ಕಂಸವಿ. ೦೯-೦೦) ; ಕರುಣಾ ಸಮುದ್ರ ನೀನೆಮ್ಮ ಮುಖವಾಗು ದೇವಾಸುರರ ಬಿನ್ನಪದ ಗಾವಳಿಯನೊಂದು ಕ್ಷಣಂ ಸೈರಿಸು (ಛಕ್ತಿಸ. II, ೬-೩) ; ಗಾವಳಿಯ ಪರಿಹರಿಸು ಜಯಿಸೀ ಭೂವರರನುರೆ ಸಪ್ತವಾರದಲ್ಲಿ ವಸುಧೆಯನು (ಅಧ್ಯಾರಾ. ೧-೮-೦೨). ೫. ರೀವಿ ; ಗತ್ತು : ಆ ವನದೊಳ್ತುಂಬಿಲರೆಡೆಯಾಟದ ಗಾವಳಿ ಪೆಣ್ದುಂಬಿಗಳ ಗಾವರ (ಕುರಾಸಾಂ. ೩-೨೮) ; ಮುತ್ತಿನ ದಗಲೆ ವಜ್ರದ ಜೋಡು ಸಿರದಲಿ ಬಿತ್ತರವಹ ಸೀಸಕದ ಪುಸ್ತಂಗ ತೊಡರಾ ಗಾವಳಿಯಿಂದ ಭೂಪೋತ್ತಮ ನಡೆದನುಬ್ಬಿನಲಿ (ಕಂಸವಿ. ೦೫-೦೨) ; ಬೇಱೆವನಾರ್ಪ್ಪ ಬೇಱೆವನ ಗಾವಳಿ . . . ಎಲ್ಲರಂ ವಿಮಾಱಿದ ಕೂರ್ಚನಪ್ರತಿಘುವೀರನಿವಂ ಚಿಕದೇವಭೂವರಂ (ಚಿಕವಿ. ೫-೮೦). **ಗಾವುಳಿ :** ೩. ಬಳಸಿ ತನ್ನೊಡನೊಯ್ಯನೊಯ್ಯನೆ ಬರ್ಪ ದೇವರದೊಂದು ಗಾವುಳಿಯನಿನ್ನಿರಿಮೆಂದು . . . ಧಾತ್ರಿಗೆ ಪರ್ಪ ಗಂಗೆವೊಲೊಪ್ಪಿದಂ ಮುನಿಪುಂಗವಂ (ಪಂಪಭಾ. ೩-೭).

**ಗಾವಳಿಮಾಡು** = ಗಲಾಟೆಯನ್ನು ಎಬ್ಬಿಸು ; ಗಲಭೆಮಾಡು : ಈ ಊರಿನವರೆಲ್ಲಾ ಬುದ್ಧಿಯವರನ್ನ ಇಲ್ಲಿಂದ ಬಿಡಿಸಿಕೊಳ್ಳಬೇಕು–ಎನ್ನುತ ಗಾವಳಿಮಾಡುತ್ತ ಇದ್ದಾರೆ, ಮಾಸ್ವಾಮಿ (ವಿಗಡ. ೬೩–೦೫).
[ <ಸಂ. ಕಾಹಲ ]

**ಗಾವಳಿಗ** (ನಾ). ೧. ಗಲಾಟೆಮಾಡುವವನು ; ಗದ್ದಲಮಾಡುವವನು ; ಗಲಭೆಕಾರ : ಸೀನೀ ಪರಿಯ ಗಾವಳಿಗಂಗೆ ಕೊರ್ತಡೆ [ಪಾಠಾಂ. ಕೌತುಕಗಳನು ಮಾಡಲು, ಕೌಳಿಕವುನುಜಗೋತಡೆ] ಮರುಳುಗುಟ್ಟದೆ ಮಾಣ್ಬರೇ ಹೇಳೆಂದಳಾ ಸಖಿ (ಪ್ರಭುಲೀ. ೫-೬೫) ; ಕಲುಮರನ ತುಂಬುವೆನು ಹಿಂದಣ ಗಲಬೆಗಲಹದ ಗಾವಳಿಗ[ಪಾಠಾಂ. ಯ]ರೊಳು ಜುಳುಕಿನಾಹವದವನೆ ತಾನೆಂದುಬ್ಬಣವ ಜಡಿದ (ಕೊರಡಾ. ೬–೩೫–೯). ೨. ನಾಡಾಡಿ ; ಸಾಮಾನ್ಯನಾದವನು : ದೇವರುಪಿ ನೀನೆಂದು ತಾಳಿ ದೆನು ಮತ್ತೊಬ್ಬ ಗಾವಳಿಗ ಯತಿಯಾಗಲವನ . . . ದಿಗ್ಬಲಿಯ ಚಲ್ಲಿ ಸುವೆನು (ನವಮೋ. ೨೬–೬೪). [ ಗಾವಳಿ + – ಗ$_{2}$ ]

**ಗಾವಳಿವಡೆ** (ಕ್ರಿ). ಗುಂಪುಗೂಡು ; ಸಮೂಹವಾಗು : ಸೊರ್ಕಿರುವರಗಳಿ ಗಾವಳಿವಡೆದು ಕಾಗೆಗಳೆಬಿಗುವ ಬೇವಿನ ವಣ್ಗಾಸೆವೆತ್ತಬಿಗುವುದೇ (ಗೀತಗೋ. ೬೬–೫). [ ಗಾವಳಿ + ಪಡೆ$_{1}$ ]

**ಗಾವಳಿಸು** (ಕ್ರಿ). ಗುಂಪುಗೂಡು : ಉದ್ಭ್ರಮರಮುದ್ಭ್ರಮರಂಗಳ ಗಾವರಕ್ಕೆ ಗಾ[ ಪಾಠಾಂ. ಚಾ, ಜಾ, ಬಾ ]ವಳಿಸಿ ಧಡಾಳದೊಳ್ ಮೊರೆವುವು (ಆಸೌಕು. ೧–೬೬ ; ಸೂಕ್ತಿಸು. ೪–೪೪ ನೋ) ; ತೊಲಗಿಂ ಗಾವಳಿಸಿ ಗಲಭೆಗೆಯ್ವೊಡೆ ಠಾವಲ್ತು (ಅಪ್ರತಿ. ೧೨೬–೨೨). [ ಗಾವಳಿ + – ಸು$_{1}$ ]

**ಗಾವಿತಿ** (ನಾ). ಗೌಡಿತಿ : ಕಾಳಬ್ಬೆ ಗಾವಿತಿಗೆ ಗುಜ್ಜಣಂ ಪುಟ್ಟಿ ತಂದೆಗೆ ಪದಿಮ್ಮಡಿಯಾಗಿ ಪೆಮ್ಮಾಡಿ ಗಾವುಣ್ಡನೆಂಬ ಪೆಸರಂ ಪಡೆದು (ಎಕ. VII, ಶಿವಮೊ. ೧೦-೩೨ ; 1085 ?).
[ P ಇದು ‘ಗೌಡಿತಿ’ ಎಂಬುದರ ಅಪಲಿಖಿತ ]

**ಗಾವಿಲ, ಗಾವಿಳ** (ನಾ). ೧. ಹಳ್ಳಿಯವನು ; ಗ್ರಾಮಪ್ರದೇಶದವನು : ಗ್ರಾಮಿಣ–ಗಾವಿಲ (ಶಮದ. ೨೮೦ (೩) ಪ್ರಯೋ). ೨. ಹಳ್ಳಿಯ ಅಧಿಕಾರಿ ; ಗ್ರಾಮಾಧಿಕಾರಿ ; ಪಟೇಲ ; ಗ್ರಾಮಣಿ : “ ಗಾವಿಲನೆಂದು ಗ್ರಾಮಣಿ ” (ಕಬ್ಬಿಕ್ಕೆ. ೫೬) ; “ ಗಾಂಪ ಗ್ರಾಮಾಧಿಪತಿಗಳೊಳು ಗಾವಿಲ ಶಬ್ದ ” (ಶಬ್ದಮಂ. ೦೦೮). ೩. ತಿಳಿವಳಿಕೆಯಿಲ್ಲದವನು ; ಹೆಡ್ಡ ; ದಡ್ಡ ; ಅನಾಗರಿಕ : “ ಎಗ್ಗನೆನೆ ಗಾವಿಲಂ ” (ಚಕುನಿ. ೮೨) ; “ ಗಾಂಪ ಗಾವಿಲ ಮೊಣೆಗ್ಗಂ ಹೆಡ್ಡನಕ್ಕು ” (ಕವಿಕಂ. ೦೬೩) ; ತಲೆಸೂಡಿ ಮುನ್ನೆ ಕಷ್ಟದ ಫಲವಂ ಬೆಸಗೊಂಡುವೆ[ಂ]ವನಲ್ಲಿಂ ಬಟಿಯಂ ತಲೆಯಂ ಕಿರಿಚುಸಿ ದಿವಸಮನಲಸದೆ ಬೆಸಗೊಳ್ವನಂತು ಗಾವಿಲನಕ್ಕುಂ (ಕವಿರಾ. ೩-೦೯೪) ; ಬೇವಿನಾರವೆಯನಿಟ್ಟು ಮಾವಿನಪಣ್ಣನಬಿಸುವ ಗಾವಿಲನುಮಂ (ಧರ್ಮಾಮೃ. ೬–೧೬೮) ; ಪೆಣ್ಣಾಪೆಣ್ಣಂದೇತಕೆ ಬೀಳುಗಳೆವರು ಕಣ್ಣಾಕಾಣದ ಗಾವಿಲರು (ಹದಿಬ. ೫–೬) ; ಗಾವಿಲನ ಧನವು ಘನವಾಗಿ ಬಯ್ಚಿಟ್ಟ ಠಾವಿಲೇ ಪೋಕು (ಸರ್ವಜ್ಞ. ೬೮೪). **ಗಾವಿಳ** : ೧. ಬಡವರಿಗೂ ಬಲ್ಲಿದರಿಗೂ ಹುಡುಗರಿಗೂ ಹೆಂಗಸರಿಗೂ ಗಾವಿಳನಿಗೂ ಗಂಡಸಿಗೂ . . . ಸಕಲರಿಗೂ ಸಮವಾದ ಸ್ವಾತಂತ್ರ್ಯ (ಹರಿಜ. ೬೫).
[ <ಪ್ರಾ. ಗಾವಿಲ್ಲ./ಸಂ. ಗ್ರಾಮಿಣ ]

**ಗಾವಿಲತನ** (ನಾ). ದಡ್ಡತನ ; ಹೆಡ್ಡತನ : ಗಾವಿಲತನದಿಂ ಪೊಕ್ಕೊಡೆ ಸಾವಪ್ಪುದು ಪುಸಿಯೆ ಬರ್ದುಕಿದಂ ಪುಣ್ಯದಿಂ (ಧರ್ಮಾಮೃ. ೬–೫೦) ; ವನಜಸಂಭವ ತನ್ನ ಗಾವಿಲತನವ ನೋಡದೆ ನೀವು ನಿಮ್ಮಯ ಘನತೆಯನು ಮಾಜದೀಗ ಕೊಡುವುದು (ಕುಮಾ.ಅ. ೬ರಿ೩. ಪರಿ. ೩೩೯) ; ವರಶುಭವಿಲ್ಲದ ವಧುಗಳ ಗರುವಿಕೆಯಂ ಪೇಳ್ವರೇಕೆ ಗಾವಿಲತನದಿಂ (ಹಮ್ಮೀರ. ೨–೩೮).
[ ಗಾವಿಲ + – ತನ ]

**ಗಾವಿಲತ್ವ** (ನಾ). = ಗಾವಿಲತನ : ದೇವ ಯಿದು ದಲು ಕಾರಣಂ ನಿನಗಾವ ತೆಬಿದೊಳಗಂಜುವೆಂ ಮುಂ ಗಾವಿಲತ್ವದೊಳೆಂದು ಪಡೆದಾ ಲಾಭವದೆ ಸಾಲ್ಗುಂ (ಸಾನಂದ. ೬-೬೩). [ < ಸಂ. ಗ್ರಾಮೀಣತ್ವ ]

**ಗಾವಿಲನುಡಿ** (ನಾ). ದಡ್ಡತನದ ಮಾತು ; ಮೂಢತನದ ನುಡಿ : ದೈವ ವೆಂದವನನೀಶಕೃತವೇದಂ ಸ್ವಯಂಭುವೆಂಬಾ ಗಾವಿಲನುಡಿಯು (ಪದ್ಮರಾ. ೦೦–೦೯೩). [ ಗಾವಿಲ + ನುಡಿ$_{2}$ ]

**ಗಾವಿಲಿ** (ನಾ). ಗಾವಿಲತನವನ್ನು ಹೊಂದಿರುವವಳು ; ದಡ್ಡಳಾದ ಹೆಂಗಸು ; ಹೆಡ್ಡಿ : ಕಂತು ಬಿಲ್ದಿಗೆಯ ಬಟಿಕ್ಕೆ ಕೈದೆಗೆವ ಗಾವಿಲಿ [ ಪಾಠಾಂ. ಲೆ ]ಗೇವುದೋ ಬೇಟದಚ್ಚಿಗಂ (ಲೀಲಾವ. ೧೪-೩೬).
[ ಗಾವಿಲ + – ಇ$_{3}$ ]

**ಗಾವಿಲಿಕೆ** (ನಾ). = ಗಾವಿಲತನ : ಪೆಟಿರ ವಿಭವಕ್ಕೆ ಬಯಸುವ ಮಬಿುಗುವ ಗಾವಿಲಿಕೆಯೇಕೆ (ಅಜಿಪು. ೧೦-೪೨) ; ಹೋಮಂಮಂ ಮಾಡುವ ಬ್ರಾಹ್ಮಣಂ ನೊಣವು ಬೆನ್ನನೂಜಿದೊಡೆ ಸೈರಿಸಲಾಬಿದೆ ಬೆನ್ನಂ ಪೊಯ್ದುಕೊಳ್ವುದುಂ ಕೆಲದೊಳಿರ್ದವರೆಲ್ಲಂ ಕೊಡನ ತುಪ್ಪದೊಳ್ ಕೈಯನದ್ದಿಕೊಂಡು ತಮ್ಮ ಬೆನ್ನಳಂ ಪೊಯ್ದುಕೊಂಡರೆಂಬ ಗಾವಿಲಿಕೆಯುಂ ಮಾಡಿ (ಧರ್ಮಾಮೃ. ೦೦-೫೨). [ ಗಾವಿಲ + – ಇಕೆ ]

**ಗಾವಿಲೆ** (ನಾ). = ಗಾವಿಲಿ : ಕಂತು ಬಿಲ್ದಿಗೆಯ ಬಟಿಕ್ಕೆ ಕೈದೆಗೆವ ಗಾವಿಲೆ [ ಪಾಠಾಂ. ಲಿ ] ಗೇವುದೋ ಬೇಟದಚ್ಚಿಗಂ (ಲೀಲಾವ. ೧೪–೩೬).
[ ಗಾವಿಲ + – ಎ$_{2}$ ]

**ಗಾವಿಳ** ‘ ಗಾವಿಲ ’ ನೋ.

**ಗಾವು** (ನಾ). ಗ್ರಾಮದೇವತೆ ಮೊದಲಾದ ದೇವರುಗಳ ಮುಂದೆ ಪೂಜಾರಿಯು ಬಲಿಗಾಗಿ ಕುರಿಯನ್ನು ಹಲ್ಲಿನಿಂದ ಕಚ್ಚಿ ಕೊಲ್ಲುವುದು. ‘ ಗಾವುಗುಬಿ’, ‘ ಗಾವುಮರಿ ’ ಪರಾ.

**ಗಾವಿನಮರಿ**=ಗ್ರಾಮದೇವತೆಯ ಮುಂದೆ ಪೂಜಾರಿ ಹಲ್ಲಿನಿಂದ ಕಚ್ಚಿ ಕೊಲ್ಲುವ ಕುರಿ : ಗಾವಿನಮರಿ ಅರಚಿಕೊಳ್ಳುವುದನ್ನು ಕೇಳಲಾಗು ವುದಿಲ್ಲ (ಕೂಧಿ). **ಗಾವುಕಟ್ಟು** = ಗ್ರಾಮದೇವತೆ ಮೊದಲಾದ ಕ್ಷುದ್ರಶಕ್ತಿ ಗಳಿಗಾಗಿ ಬಾಯಿಯಲ್ಲಿ ಕಚ್ಚಿ ಕುರಿಯನ್ನು ಬಲಿಕೊಡು : ಇವನು ಕಗ್ಗಲಿಯಮ್ಮನ ಪೂಜಾರಿ. ಊರ ದೊಡ್ಡ ಹಬ್ಬದಲ್ಲಿ ಇವನು ಗಾವು ಕಟ್ಟುತ್ತಾನೆ (ನನ್ನೂರು. ೧೦) ; ಶಕ್ತಿದೇವತೆಗಳ ಆರಾಧನೆಯಲ್ಲಿ ಆವೇಶ ಗೊಂಡ ಪೂಜಾರಿ ಕುರಿಯ ಕುತ್ತಿಗೆಯನ್ನು ಕಚ್ಚಿ ರಕ್ತಹೀರುವುದು. ಇಡೀ ಆಚರಣೆಗೆ ‘ ಗಾವುಕಟ್ಟುವುದು ’ ಎನ್ನುತ್ತಾರೆ (ನನ್ನೂರು. ಟಿಪ್ಪಣಿ). **ಗಾವುಸಿಗಿ** = ಗಾವಿನ ಮರಿಯನ್ನು ಹಲ್ಲಿನಿಂದ ಕಚ್ಚಿ ಸಿಗಿ, – ಸೀಳು: ಗಾವುಸಿಗಿದಾದ ಮೇಲೆ ಎಲ್ಲರೂ ದೇವರನ್ನು ಹೊರಡಿಸಿಕೊಂಡು ಊರಿಗೆ ಬಂದು ಗುಡಿದುಂಬಿಸುತ್ತಾರೆ (ನನ್ನೂರು. ೬೫).
[ ದೇ॥ ತಮಿ. ಕಾವು; ತೆಲು. ಗಾವು ]

**ಗಾವುಂಡ** ‘ ಗಾಮುಂಡ ’ ನೋ.

**ಗಾವುಂಡಪಂತ** (ನಾ). ಗೌಡನ ಅಧಿಕಾರ,—ಪದವಿ : ಶ್ರೀಕಲಿವಿಟ್ಟರಸರ ಬೆಸದೊಳತೀತನಾದೊಡಾತನ ಗಾವುಣ್ಡಗರಸನ್ನಾರ್ಬ್ಬಾಗಾವುಣ್ಡಪಂತವಮನಿ ತ್ತೊಡೆ ಜಕ್ಕಿಯಬ್ಬೆ ನಾಟ್ಬಾಗಾವುಣ್ಡುಗೆಯ್ಯುತ್ತಿರೆ (ಎಕ. VII, ಶಿಕಾರಿ, ೨೦೯-೦೦ ; 918). [ ಗಾವುಂಡ (<ಗಾಮುಂಡ) + ಪಂತ$_{2}$ ]

**ಗಾವುಂಡವಸದಿ** (ನಾ). ಒಂದು ಬಸದಿಯ ಹೆಸರು : ವಾಯುವ್ಯದ ಗೋಂಟನಲ್ ಸೋಭನೇಶ್ವರದ ಗಾವುಣ್ಡವಸದಿಯ [ಕೆಯ್ಯ ಮೋ]ರೆಯಲು (ಸೌಇಇ. XX, ೫೫–೫೩ ; 1082).
[ ಗಾವುಂಡ (<ಗಾಮುಂಡ) + ಬಸದಿ ]

**ಗಾವುಂಡವೃತ್ತಿ** (ನಾ). ೧. ಗೌಡಿಕೆಯ ವೃತ್ತಿ, – ಕೆಲಸ : ಕೀಳೂರು ಅಟಿಯೂರು . . . ಹೆನ್ನವುರದ ಗಾವುಣ್ಡವೃತ್ತಿಯುಮಂ . . . ಇತ್ತು

(ಎಕ. VII, ಶಿಕಮೊ. ೧೦-೩೦ ; 1086 ?). ೨. ಗೌಡನಿಗೆ ಬಿಟ್ಟಿರುವ ವೃತ್ತಿ,-ಉಂಬಳಿ ; ಗ್ರಾಮಾಧಿಕಾರ ನಿರ್ವಹಣೆಗಾಗಿ ಬಿಟ್ಟಿರುವ ಜಮೀನು. [ ಗಾವುಂಡ (<ಗಾಮುಂಡ) + ವೃತ್ತಿ₂ ]

**ಗಾವುಂಡಸುಂಕ** (ನಾ). ತೆರಿಗೆಯಲ್ಲಿ ಗ್ರಾಮಾಧಿಪತಿಯ ಪಾಲು : ಸಿರಿಯಮ್ಮಗಾವುಣ್ಡಂ ಭೋಗೇಶ್ವರ ದೇವರ್ಗ್ಗೆ ತೋಂಟದಲಾದ ಗಾವುಣ್ಡ ಸುಂಕವಂ ಬಿಟ್ಟಂ (ಎಕ. XI, ಚಿತ್ರದು. ೭೮-೩೩ ; 1060) ; ಗಾವುಂಡನಿಗೂ . . . ತೆರಿಗೆಯ ಒಂದು ಭಾಗವನ್ನು 'ಗಾವುಂಡಸುಂಕ' ವೆಂದು ಬಿಟ್ಟು ಕೊಡುತ್ತಿದ್ದರು (ಕಶಾಅ. ೪೩೯). [ ಗಾವುಂಡ (<ಗಾಮುಂಡ)+ಸುಂಕ ]

**ಗಾವುಂಡಸ್ವಾಮಿ** 'ಗಾಮುಂಡಸಾಮಿ' ನೋ.

**ಗಾವುಂಡಿ, ಗವುಂಡಿ, ಗವುಡಿ₁, ಗೌಂಡಿ₁, ಗೌಡಿ₁, ಗೌವುಂಡಿ** (ನಾ). ೧. ಗಾವುಂಡನ ಹೆಂಡತಿ ; ಗ್ರಾಮಾಧಿಕಾರಿಯ ಪತ್ನಿ ; ಗೌಡಿತಿ : ಆ ಪುರ ಗಾವುಂಡಂ ಜಿನವಾದಿಕನೆಂಬೊನಾತನ ಗಾವುಂಡಿ ಜಿನಮತಿಯೆಂಬೊಳ್ (ವಡ್ಡಾರಾ. ೧೦೦-೨೪) ; ಅತನ ಗಾವುಣ್ಡಿಗರಸನ್ನಾರ್ಟ್ಗೊ ವುಣ್ಡ ಪಂಡಿತಮನಿ ತೆನ್ಡೆ (ಎಕ. VII, ಶಿಕಾರಿ. ೨೦೯-೧೦ ; 918) ; ಅವರ ಶ್ರಾವಕಿ ಚನ್ನಿ ಮಬ್ಬೆ ಗಾ ವು ಣ್ಡಿ (ಎಕ. IX, ಕೊಡಗು. ೩೧-೦೦ ; ಸು. 1050 ?) ; ಕಾಮ ವೃತ್ತಿಯೆಂಬ ಗಾವುಂಡಂಗಂ ಇಪ್ಪದಾನಿಯೆಂಬ ಗಾವುಂಡಿಗಂ ಅಕೃತಪುಣ್ಯ ನೆಂಬ ಮಗಂ ಪುಟ್ಟಿರೊಡಂ(ಜೀವಸಂ. ೨೦೦-೩೯ ಪ). **ಗವುಂಡಿ:** ೧. ನಬೆಬ್ಬೆ ಗವುಣ್ಡಿಯ ಮಗ ಅಮ್ಮಣ್ಣ ಗವುಣ್ಡ ತನ್ನೂರಟಿವ ಕಣ್ಣು (ಎಕ. VIII, ಸೊರಬ. ೨೩೮-೯ ; 939). **ಗವುಡಿ₁ :** ೧. ಸೋಮನಹಳ್ಳಿಯ ಮಾಯಿಂದೆಯ ಬಮ್ಮಗಾವುಣ್ಡಂಗಂ ಮಾದಿಗವುಡಿಗಂ ಪುಟ್ಟಿದ ಗೋತ್ರ ಪವಿತ್ರ ಸಾಮನ್ತ ಬೀಳೆಯನಾಯಕ (ಎಕ. VI, ಕಡೂರು. ೧೦೪-೬೨ ; 1141 ?) ; ಸೋಮಗೌವುಂಡಂಗಂ ನಾಗವ್ವೆಗವುಡಿಗಂ ಪುಟ್ಟಿದ ಪುತ್ರರು (ಎಕ. VI,ಕಡೂರು. ೩೦-೪೦ ; 1170). ೨. ಊಳಿಗದವಳು; ಸೇವಕಿ ; ತೊತ್ತು ; ದಾಸಿ : ಅವನು ಅವಳ ಕೂಡ ೧೮ ವರ್ಷ ಸಂಸಾರ ಮಾಡಿದ ಮೇಲೆ, ಅವಳ ಗವುಡಿಯರಲ್ಲಿ ಒಬ್ಬಳಾದ ಆನ್-ಬುಲಿನಳೆಂಬವಳಿಗೆ ಮನ ಸೋತನು (ಇಂಗ್ಲಂಡ. ೧೦೩) ; ಗವುಡಿ ಹಾಡಿಗೆ ತವುಡೇ ತ್ಯಾಗ (ಗಾದೆ). **ಗೌಂಡಿ₁ :** ೧. ಕೇತಗವುಣ್ಡಗಂ ಎಚಕಲುವೆಗೌಣ್ಡಿಗಂ ಸುಪುತ್ರಃ ಕುಲದೀಪಕಂ ಪುಟ್ಟಿ (ಎಕ. VI, ತರೀಕೆ.೫೬-೨೩ ; 1097 ?) ; ದೇಕಬ್ಬೆ ಗೌಣ್ಡಿಯುಂ ಕೊಸಿಗವಳ್ಳಿಯ (ದೊಂಕಶಾ. ೧೯೪೦, ಸಿರಸಿ. ೬೨-೦೨ ; ?). **ಗೌಡಿ₁ :** ೧. ಬೊಂಮ್ಮಗೌಡಂಗಂ ಮಸಣಗೌಡಿಗಂ ಪುಟ್ಟಿದ ಸು[ಪು]ತ್ರರು (ಎಕ. XII, ಚಿಕ್ಕನಾ. ೧೩-೨೯ ; 1181). ೨. ನನ್ನಂತ ಗೌಡಿಯರು ನಿನ್ನ ಪಾದಪದ್ಮಸಮೀಪದೊಳ್ ಬಿದ್ದಿರುವರು (ಸೌಗಂಧಿ. ೩೪೭-೫) ; ದುಶ್ಶಾಸನನು ಕುರುಳನ್ನು ಹಿಡಿದು ಸಭಾಮಧ್ಯಕ್ಕೆ ಎಳೆದುಕೊಂಡು ಬಂದು ಗೌಡಿಯಂತೆ ಎಣಿಸಿ ಅಪಮಾನಪಡಿಸಲು (ಕೃವಾಅ. ೦೩೭) ; ಈ ಮಾತು ಗೌಡಿಯಿಂದ ಗೌಡಿಗೆ ಹೋಗಿ ಆ ಗೌಡಿಯಿಂದ ರಾಣಿಗೆ ಮುಟ್ಟಿ (ಸಣ್ಣಕ. VIII, ೫೩) ; ಉಪಚಾರಕ್ಕೂ ಕೆಲಸಕ್ಕೂ ಇಬ್ಬರು ಗೌಡಿಯರು ಬಂದರು (ಪೀಠೀಮೂ. ೧೮). **ಗೌವುಂಡಿ :** ೧. ಮಾಚಗೌವುಣ್ಡನಾತನ ಮನೋವಲ್ಲಭೆ ಮಾಚಗೌವುಣ್ಡಿಯ ಮಗಂ ಕಾಳಗಾವುಣ್ಡ (ಎಕ. V, ಬೇಲೂರು. ೨೦೨-೫ ; 1138). [ ಗಾವುಂಡ (<ಗಾಮುಂಡ) + – ಇ₃ ]

**ಗಾವುಂಡಿಕೆ, ಗಉಡಿಕೆ, ಗವುಂಡಿಕೆ, ಗವುಡಿಕೆ, ಗಾವುಂಡಿಗೆ, ಗೌಡಿಕೆ, ಗೌವುಂಡಿಕೆ** (ನಾ). ಗಾವುಂಡನ ಕೆಲಸ ; ಗ್ರಾಮಾಧಿಪತ್ಯ : ರಾಜಧಾನಿ ಯಣ್ಣಿಗೆಱೆಯ × × × ರಿಯ ಗಾವುಣ್ಡಿಕೆ × × × ಡೆಯರೆನಿಸಿ (ದೊಂಕಶಾ. ೧೯೨೯, ನವಲಗುಂದ. ೨೦೭-೩೯ ; 1172). **ಗಉಡಿಕೆ :** ಹಾನಗಲ ಲಿಂಗೇಗಉಡರಿಗೆ ಹಾ × × × ಟ್ಟ ಗಉಡಿಕೆ (ಎಕ. IX, ಕೊಡಗು. ೬೩-೬ ; ?). **ಗವುಂಡಿಕೆ :** ಹಲವುಕಾಲಂ ಗವುಂಡಿಕೆಯಂ ಮಾಡುತ್ತಿರ್ದಡವರ (ದೊಂಕಶಾ. ೧೯೪೦, ಸಿರಸಿ. ೬೨-೦೩ ; ?). **ಗವುಡಿಕೆ :** ಆ ಬಲ್ಲಗವುಡ ಕಾಮಗವುಡ ಬೊಂಮ್ಮಗವುಡಂಗಳ ಗವುಡಿಕೆಯ ಪ್ರಸಿದ್ಧ ಸೀಮಾಸಮನ್ವಿತವಹ ಎಸಗೂರ ಕ್ಷೇತ್ರ (ಎಕ. XI, ಚಿತ್ರದು. ೬೨-೯೦ ; 1286). **ಗಾವುಂಡಿಗೆ :** 'ಗಾವುಂಡಿಗೆನಿಲ್' ವರಾ. **ಗೌಡಿಕೆ :** ಚಂದಿಮಯ್ಯಂ ಕುರಂಳಿಯ ತಂಮ ಗೌಡಿಕೆಯಂ ಕಲಿಯರ ಮಲ್ಲಿಸೆಟ್ಟಿ ಮಾಱಂ ಕೊಂಡು (ಎಕ. VII, ಶಿಮೊ. ೬೯-೯೭ ; 1113 ?) ; ಶ್ರೀ ಕೇಶವದೇವರಿಗೆ ಗರ್ದ್ದೆ ಮತ್ತರು ಒಂದು ಗೌಡಿಕೆಯನುಳಿಹಿ (ಎಕ. VII, ಶಿಕಾರಿ. ೧೨೩-೭೫ ; 1159) ; ಮಂಚವಿರನ ಗೌಡಿಕೆಯಲು ಮಂಡಳಿಕಬಾರಿಗೆ ಕೊಟ್ಟ ಕೊಡಂಗೆ (ಮೈಅರಿ. ೧೯೨೯ , ೪೦-೨೪ ; 1191) ; ಯಾತರ ಗೌಡಿಕೆ ಇದು ಮುಂಟ್ಟಾಳ ಗೌಡಿಕೆ (ಸಣ್ಣಕ. VI, ೬೨). **ಗೌವುಂಡಿಕೆ :** ತಂಮಪ್ಪ ಗೌಂಡರಿಗೆ ಗೌವುಂಡಿಕೆಯ ದಂಡಿಗೆ ಉಂಬಳಿ ಸರ್ವಮಾನ್ಯವಾಗಿ ಕೊಟ್ಟೆವು (ಎಕ. X, ಶಿಡ್ಲಘ. ೧೫-೦೭ ; 1528).
[ ಗಾವುಂಡ (<ಗಾಮುಂಡ) + – ಇಕೆ ]

**ಗಾವುಂಡಿಗೆ** 'ಗಾವುಂಡಿಕೆ' ನೋ.

**ಗಾವುಂಡಿಗೆನಿಲ್** (ಕ್ರಿ). ಗೌಡನ ವೃತ್ತಿಯನ್ನು ವಹಿಸಿಕೊಳ್ಳು ; **ಗೌಡಿಕೆ** ಯನ್ನು ಹೊಂದು : ಆತನಿಂ ಬಳಿಕ ಗಾವುಣ್ಡಿಗೆನಿನ್ದನಾಹವಶೌಣ್ಡಂ ತೊಣ್ಡಂ (ಸೌಇಇ. XI-1, ೪೫-೦೩ ; '80).
[ ಗಾವುಂಡಿಗೆ (<ಗಾವುಂಡಿಕೆ) + ನಿಲ್ ]

**ಗಾವುಂಡಿತಿ, ಗವುಡಿತಿ, ಗೌಡಿತಿ** (ನಾ).=ಗಾವುಂಡಿ : ದೇವಿಲನೆಂಬ ಗಾವುಂಡಂಗಂ ಸುದತಿಯೆಂಬ ಗಾವುಂಡಿತಿಗಂ ಧನಶ್ರೀಯೆಂಬ ಮಗಳಾಗಿ ನೀನಾಡು ವೆಡೆಯೊಳ್ (ಚಾವುಂಪು. ೨೬-೦೫). **ಗವುಡಿತಿ :** (+). **ಗೌಡಿತಿ :** ಗೌಡಿತಿಯು ಒಳಗಿಂದ ಬಂದವಳೆ (ಹುಟ್ಟಿಹ. ೧೩೯).
[ ಗಾವುಂಡ (< ಗಾಮುಂಡ) + – ಇತಿ₁ (< – ಇತ್ತಿ) ]

**ಗಾವುಂಡು₁** 'ಗಾಮುಂಡ' ನೋ.

**ಗಾವುಂಡು₂** 'ಗಾಮುಂಡು₂' ನೋ.

**ಗಾವುಂಡುಗೆಯ್** 'ಗಾಮುಂಡಂಗೆಯ್' ನೋ.

**ಗಾವುಂಡುತನ** (ನಾ).=ಗಾವುಂಡಿಕೆ : ಕರಿವಿಡಿ ಹಿರೂರಲು ಗಾವುಂಡು ತನಂಗೆಯ್ಯುತ್ತಮಿರೆ (ಎಕ. XII, ತಿಪಟೂ. ೮೧-೭ ; 1114).
[ ಗಾವುಂಡು₂ (<ಗಾಮುಂಡು₂) + – ತನ ]

**ಗಾವುಗುರಿ** 'ಗಾವುಗುಱಿ' ನೋ.

**ಗಾವುಗುಱಿ, ಗಾವುಗುರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿ ; ಗಾವುಕಟ್ಟಲು ಸಿದ್ಧವಾದ ಕುರಿ : ಒಡೆಯರು ದಿಗ್ಗಜಗಳ ಗಾವ[ು]ಗುಱಿಯಾಗೆ (ಕೋಹಕ. ೬೨-೪). **ಗಾವುಗುರಿ :** ವೈರಿಯನ್ನು ಕಂಡುಹಿಡಿದು ಅರೆದರೆದು ಕುಡಿದು ಬಿಡುತ್ತೇನೆ, ಗಾವುಗುರಿ ಹಾಯುತ್ತೇನೆ . . . ಅನಂತರ ಈ ಘಟಕ್ಕೇನಾದರೇನಂತೆ (ತುಂಗಭ..೫೫).
[ ಗಾವು + ಕುಱಿ₃ ]

**ಗಾವುದ, ಗಾವುದು** (ನಾ). ದೂರವನ್ನು ಅಳೆಯುವ ಒಂದು ಅಳತೆ ; ಎರಡು ಹರಿದಾರಿ ; ಸುಮಾರು ಆರುಮೈಲಿ : ಮುನ್ದೆ ನಿನ್ದು ಕೂಱು ತೂಱಿದು ಮೂವತ್ತು ಗಾವುದ ××× ದೆವಸದೊಳೆಯ್ದಿ (ಸೌಇಇ. XI-1, ೧೧-೦೭ ; 865); ದೇಶದೇಶದ ಪತ್ತಂಟು ಗಾವುದದ ಮಾಹೇಶ್ವರರ್ ಕರುಣಿಸಿ ಬಂದು ಮುಂದೆ ನೆರೆದಿರೆ (ಬಸರ. ೬-೪೧) ; ಆ ಸ್ಥಳದ ನಾಲ್ಕೈದು ಗಾವುದದಳತೆಯೊಳಗಾರುಮಂ ಪೊರ್ದಲೀಯದೆ (ಶಬ್ದಸಾ. ೩-೦೬) ; ವರ ಸುವರ್ಣಸುರತ್ನ ಸರ್ವಾಭರಣಭವನಂಗಳಿಗೆ ಗಾವುದವೆರಡಱಲಿ ಹವಣಿಸಿ ದನಪಿಳಾಂಬರ ಸುವಸ್ತುಗಳ (ತೊರರಾ. ೦-೭-೫) ; ಸಲೆ ಮೂಱು ಗಾವುದ ಪರಿಯಂತ ರಿಪುಗಳ ಬಲವ ಮುಱಿದು ಬೆನ್ನಟ್ಟಿ (ಕಂವಿ. ೦೭-೫೯). **ಗಾವುದು :** ನರರಥಂ ತೂರ್ದ್ದು ಕುರುಕ್ಷೇತ್ರದಿಂ ಪಡುವೆಣ್ಗಾವುದು ಪೋಗೆ ಪೋಗಡಿಸುವಂ (ಪಂಪಭಾ. ೧೧-೨೫). [ <ಸಂ. ಗವ್ಯೂತ ]

**ಗಾವುದಳವಿ** (ನಾ). ಒಂದು ಗಾವುದದ ಅಳತೆ; ಗಾವುದ ಪ್ರಮಾಣ; ಸುಮಾರಂ ಆರುವ್ಮೈಲಿ: ಕಡುಕೋಪದಿಂದ ಪೊಱಮಟ್ಟು ದಡದಡ ಸುತಂ ಗಾವುದಳವಿಯು ಬಟ್ಟೆಯಿಂದೂರ್ಗೆ ನಡೆತಂದು (ಬಸವ. ೧೧-೩೯). [ ಗಾವುದ + ಅಳವಿ ]

**ಗಾವುದಿ** 'ಗಾವದಿ' ನೋ.

**ಗಾವುದು** 'ಗಾವುದ' ನೋ.

**ಗಾವುಮರಿ** (ನಾ). ಗ್ರಾಮದೇವತೆಯ ಬಲಿಗಾಗಿ ಮೀಸಲಾಗಿರುವ ಕುರಿಮರಿ: ಗಾವಿಗೆ ಅರ್ಪಿಸುವ ಮರಿಯನ್ನು 'ಗಾವುಮರಿ' ಎನ್ನುತ್ತಾರೆ (ನನ್ನೂರು. ಟಿಪ್ಪಣಿ). [ ಗಾವು + ಮರಿ (<ಮಱಿ) ]

**ಗಾವುಳಿ** 'ಗಾವಳಿ' ನೋ.

**ಗಾವೆ** 'ಗಾವು' ನೋ.

**ಗಾಸಡಿ, ಗಾಸಿಡಿ** (ನಾ). ಗಂಟು; ಮೂಟೆ; ಗದಡಿ: ಗಾಸಡಿಯ (ಗಂಟುಗಳ)ಮೇಲೆ ಧಾರಣೆ ಇರತಕ್ಕ ಜೀನಸುಗಳು (ಮುಂಬಪ್ರಾ. ೧೩೪). **ಗಾಸಿಡಿ:** ತಂಬಾಕಾ ಗಾಸಿಡಿಯಲ್ಲಿ ಮುಂಬಯಿ ೧೪ ಮಣ ತಂಬಾಕ ಇರುತ್ತದೆ (ಮುಂಬಪ್ರಾ. ೧೩೪). [ ←ಮರಾ. ಗಾಂಸಡೀ ]

**ಗಾಸಿ$_1$, ಘಾಸಿ$_1$** (ನಾ). ತೊಂದರೆ; ಹಿಂಸೆ; ಆಯಾಸ: ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ . . . ಕೋಡದೆ (ಗಿರಿಜಾ. ೯-೫೮ ವ); ಮಳೆಯುಂ ಚಳಿಯುಂ ಗಾಸಿ ಗಾಳಿ ನಿಲಿಸವೆಮ್ಮನು (ವಿಜಗೀ. ೮೫-೫); ಲಲಿತೆಯುಂ ವಿಕಟಪರಿಸ್ಥಿತಿಯಲ್ಲಿ ಸಿಕ್ಕಿ ಗಾಸಿಯಾಗುತ್ತಿದ್ದಳು (ಪರಿಣೀ. ೧೬); ಈ ಮೊನೆಯ ತಿವಿತದಿಂದ ಶಂಭುರಾಯರು ಗಾಸಿಯಾದರು (ಅನ್ನ. ೪೧). **ಘಾಸಿ$_1$:** ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ (ಪಾರ್ಶ್ವಪು. ೯-೨೮ ವ); ಇಂದಿಂದಿರಂಗಳ ಘಾಸಿಯಿಂ ಸ್ಯಂದಮಾನ ಮಕರಂದ ಬಿಂದು ಸಂದೋಹದ ತಂದಲಂ ಸುರಿವುದಱಿಂ (ರಾಘವ. ೦-೧೦೯ ವ); ಅಹಿತನ ಘಾಸಿಯಿಂದನಿಲಜನನುಗಿದನು ಬಗಿದು ರಿಪುಶರವ (ಕುಮ್ಹಾಳ. ೨೦-೨೫).

**ಗಾಸಿಮಾಡು, ಘಾಸಿಮಾಡು** = ತೊಂದರೆಗೊಳಿಸು; ಹಿಂಸಿಸು; ಕ್ಲೇಶಕ್ಕೆ ಗುರಿಮಾಡು; ಆಯಾಸಪಡಿಸು: ಕುಲವಳಿಯ ದೇಶವ ಗಾಸಿಮಾಡುವುದೈಸೆ (ಸಂಭಕ. ೦೫-೩೯); ಗಾಸಿಮಾಡುವನು ಮಕ್ಕಳನೇನು ಕೆಡಿಕನೊ ಕೂಸಾಟದೊಳು ಕೇಶವನು (ನೇಮಿಶಂ. ೦೫-೧೦೦); ಬಡಕಲಾಗಿ ಸೊರಗಿಹೋದ ಗೋಪಿಯ ದೇಹ ಆಕೆಯನ್ನು ಗಾಸಿಮಾಡಿತು (ಕುಣಜೂ. ೦೦೪); ಘಾಸಿಮಾಡುವ ದೇಹ ಹೇಸಿಕೆಗೆ ನಾನಾಱೆ (ದೀಕ್ಷಾಬೋ.೮೫-೧೩); ವೈರಿಬಲವನು ಘಾಸಿಮಾಡಿದರೊಗ್ಗಿನಲಿ ಹಮ್ಮೀರ ರಾವುತರು (ಕುಮ್ಹಾ.ಛೀ. ೯-೬೨). **ಗಾಸಿಯಾಗು, ಘಾಸಿಯಾಗು**=ತೊಂದರೆಗೊಳ್ಳು; ಕಷ್ಟಪಡು; ಆಯಾಸಪಡು; ಬಳಲು: ಕಿಡಿ ಸೂಸಿ ಸುಯ್ಯುದ್ದ ಗಾಸಿಯಾಗಿ ಮೆದೆಗೆಡೆದು ಮದವಳಿದಿರ್ದ ಮಾತಂಗವ್ರಾತದಿಂ(ಗಿರಿಜಾ.೯-೨೬ವ); ಭೂಸುರರು ಚೋರರುಗಳಿಂದವೆ ಗಾಸಿಯಾಗಿ (ಕುಮ್ಹಾ.ಸ. ಒರಿಜಿ. ೦೫-೧೪೧); ಈಸು ದಿನಮೆನ್ನೊಡನೆ ಕಾಳೆಗದೊಳಿದಿರಾಗಿ ಗಾಸಿಯಾಗದ ದೈತ್ಯರಿಲ್ಲ (ಜಬಪು. ೨೫-೧೪); ಆಸೆಯಿಂದ ಘಾಸಿಯಾಗಲೇಕಯ್ಯಾ (ಅವಕಂ. ೦೦೬-೪೮೪); ಅಭಿಮನ್ಯುವೀ ದುಶ್ಶಾಸನನ ಮಗನಿಂದ ರಣದಲಿ ಘಾಸಿಯಾದನು (ಕುಮ್ಹಾ.ದ್ರೋ. ೮-೫೦); ಅನುಜರು ಘಾಸಿಯಾದರು ಹಿಂದೆ ಭೀಷ್ಮಾದಿಗಳ ಬವರದಲಿ (ಕುಮ್ಹಾ.ಶ. ೧-೬೨). **ಗಾಸಿವೀಸಿ** = ಗಾಸಿ$_1$; ನೀಲವ್ವನ ಒಡಲು ಕುದಿದಿದ್ದಿತು; ಮನಸ್ಸು 'ಗಾಸಿವೀಸಿ' ಯಾಯಿತು (ಬರಹಾ. ೦೦೪): ಇಬ್ಬರ ಕೈಯಲ್ಲಿ ಸಿಕ್ಕು ಗಾಸಿವೀಸಿಯಾದಂತೆ (ಸಾಹಿತ್ಯಾಂ. ೪೬).

[ ದೇಶ ತಮಿ. ಕಾಚಿ; ತುಳು. ತೆಲು. ಗಾಸಿ ]

**ಗಾಸಿ$_2$, ಗಾಸೆ$_1$** (ನಾ). ೧. ಕುದುರೆಯ ಜೀನಿನ ಮೇಲೆ ಅಲಂಕಾರಕ್ಕಾಗಿ ಹಾಕುವ ವಸ್ತ್ರ: (೬). **ಗಾಸೆ$_1$:** ೨. ತೆಳುವಾದ ಹೊದಿಕೆ: ರೇಶಿಮೆಯ ಮೆತ್ತಗಾದ ಗಾಸೆಗಳನ್ನು ಹಾಸಿ (ಮುಂಬುಳ. ೦೮೮). [ ←ಅರ. ಗಾಶಿಯಾ; ಹಿಂ. ಗಾಸಿಯಾ; ಮರಾ. ಗಾಶಾ ]

**ಗಾಸಿಗೆಯ್, ಗಾಸಿಗೈ** (ಕ್ರಿ). ತೊಂದರೆಯನ್ನುಂಟುಮಾಡು; ಹಿಂಸಿಸು: ಲೇಸುಲೇಸೈ ಕೃಷ್ಣ ನಮ್ಮನು ಗಾಸಿಗೆಯ್ಯುಕೆ ಪೋಗುವರೆ (ಅಕ್ರೂರ. ೯-೬೮); ಮೊಗದೊಳ್ ಮೊಗವಿಟ್ಟು ಮುದ್ದಿಪ ನೆವದಿಂ ಗಾಸಿಗೆಯ್ದಂ (ಚಿಕವಿ. ೬೯-೧೬). **ಗಾಸಿಗೈ:** ಕಟ್ಟಾಸುರದ ಬೇಸಗೆಯೊಳೀಸರಿಸದೆ ಗಾಸಿಗೈದನೆನುತೆಯ ? (ರಾಮಾಶ್ವ. ೧-೯). [ ಗಾಸಿ$_1$ + ಕೆಯ್$_1$ ]

**ಗಾಸಿಗೈ** 'ಗಾಸಿಗೆಯ್' ನೋ.

**ಗಾಸಿಗೊಳಿಸು, ಘಾಸಿಗೊಳಿಸು** (ಕ್ರಿ). ತೊಂದರೆಯನ್ನುಂಟುಮಾಡು; ಕ್ಲೇಶಪಡಿಸು; ನೋವನ್ನುಂಟುಮಾಡು: ಆ ಹಾವುಗಳು ನನಗೆ ಅಪ್ರರೆನಿಸಿದವರನ್ನೆಲ್ಲಾ ಕಡಿದು ಗಾಸಿಗೊಳಿಸಿದುವು (ಹಾಡುಕ್ತ. ೦೦೦); ಸುಮ್ಮನೆ ಮನಸ್ಸನ್ನು ಗಾಸಿಗೊಳಿಸಬೇಡಿ (ಶೀಬೋಧ. ೫). **ಘಾಸಿಗೊಳಿಸು:** ಯೌವನದ ಗಾಂಭೀರ್ಯ ಘಾಸಿಗೊಳಿಸದೇ ಇದ್ದ ಮುಗ್ಧಸೌಂದರ್ಯ (ಬಣಾಂಗಿ. ೮). [ ಗಾಸಿ$_1$ + ಕೊಳ್$_1$ + - ಇಸು$_3$ ]

**ಗಾಸಿಗೊಳ್ಳು** (ಕ್ರಿ). ತೊಂದರೆಪಡು; ಕ್ಲೇಶಪಡು: ಮನಸ್ಸು ಗಾಸಿಗೊಂಡಿದೆ (ನನ್ನಹೂ. ೩೫). 'ಗಾಸಿಗೊಳಿಸು' ಪರಾ. [ ಗಾಸಿ$_1$ + ಕೊಳ್ಳು (<ಕೊಳ್$_1$) ]

**ಗಾಸಿಡಿ** 'ಗಾಸಡಿ' ನೋ.

**ಗಾಸಿವಡೆ** (ಕ್ರಿ). ಬಳಲು; ದಣಿ; ಆಯಾಸಗೊಳ್ಳು: ಲೇಸಿನ ವಿಟರ ವಯವದಲಿ ಮೋದದೆ ಚೌಶೀತಿ ಬಂಧದ ಕೂಡಿ ಗಾಸಿವಡೆದು ಚಂದ್ರಶಾಲೆಯೊಳ್ ತಂಗಾಳಿ ಬೀಸಿದೊಡೆದೆಯನೊಡ್ಡುವರು (ಮೋಹನ. ೦೮-೪೪); ಗಾಸಿವಡೆದ ಮೂಸೆಯಂತೆ ಎಂತು ಬಾಳ್ವೆನಕಟ! (ಕವಿರಾ. ೮೪-೦೦). [ ಗಾಸಿ$_1$ + ಪಡೆ$_1$ ]

**ಗಾಸೆ$_1$** 'ಗಾಸಿ$_2$' ನೋ.

**ಗಾಸೆ$_2$** 'ಕಾಸೆ$_1$' ನೋ.

**ಗಾಹ** (ನಾ). ೧. ಮುಳುಗುವಿಕೆ; ಜಳಕ; ಸ್ನಾನ. ೨. ಅಡಗಿಕೊಳ್ಳುವುದು. 'ಅವಗಾಹ' ಪರಾ. ಶಿ. ಅಳ. [ ಸಂ. ]

**ಗಾಹನ** (ನಾ).=ಗಹನ೨: ಮೋಹಮೋಹ ಬಿಡದೆ ಆಹಾರ ಇಂದ್ರಿಯಂಗಳ ಗಾಹನದೊಳಗೆ ಬಿದ್ದು ಅಹಸ್ಸು ಕಳೆವೇನೊ (ಮೋಕ್ಷದೀ. ೩೫-೨). [ ಸಂ. ]

**ಗಾಹಿ** (ನಾ). ಮೋಸಗಾರ; ಕಪಟಿ: ಗಾಹಿ ಕೌಶಿಕನ ಕೃತ್ರಿಮಸರ್ಪದಷ್ಟದಿಂ ನಿದ್ರೆ ತಿಳಿದೇಳುವಂತೆ (ಹಕಾಕಾ. ೦೪-೯). [ ಗಾಹು$_2$+ -ಇ$_3$ ]

**ಗಾಹಿಲ** (ನಾ). ಇಲ್ಲದಾಗುವಿಕೆ; ಮರೆಯಾಗುವಿಕೆ; ನಾಶವಾಗುವಿಕೆ. **ಗಾಹಿಲಾಗು**=ಇಲ್ಲವಾಗು; ಮರೆಯಾಗು: ಬಾಹುಮೂರಿದಂತಸುರನಾಯಕಗಾಹವದ ರಣಶೂರ ಕೈಬಿಟ್ಟೈದೆ ಗುರುಬಲವೇ ಗಾಹಿಲಾದಂತೂರೆ ಹ್ಯಾಗೆಂದಾಹಗೊಳುವಾಗ ಪರದಿಗ್ವಧು ಮೋಹಕ್ಕೆದಿದ ಬಟ್ಟು ಪದ್ಮಿನಿ ಪದ್ಮಬಾಂಧವನೂ (ಜರಾಮಾ. ೨೩೮-೨). [ ←ಮರಾ. ಗಾಹಾಳ್ ]

**ಗಾಹಿಲಂಬಡು** (ಕ್ರಿ). ಕಷ್ಟಪಡು; ತೊಂದರೆಯನ್ನನುಭವಿಸು (?): ದೇಹದೊಳಗಿರಲಾತ್ಮಧರ್ಮದ ನೇಹದಿಂ ಸ್ವರ್ಗಾದಿ ಭೋಗವನಾಹನಲದನ್ಯಾಯ ನಡೆತೆಯೊಳೊಕ್ಕು ನರಕವನು ಗಾಹಿಲಂಬಡುತಿಹನು (ಬಿಜ್ಜಪು. ೮೫-೪೨). [ ಗಾಹಿಲ? + ಪಡು$_1$ ]

**ಗಾಹಿಸು$_1$** (ಕ್ರಿ). ೧. ಹರಡು; ವ್ಯಾಪಿಸು: ಸೀರೆಯೊಟ್ಟಿಲು ಗಗನವನು ಗಾಹಿಸಿತು (ಕುಮ್ಹಾಸ. ೦೫-೨); ಗಾಹಿಸಿತು ನಿನ್ನಾಜ್ಞೆ ಜಗದಲಿ ಮುಂ.. ಗೆಳ್ವನಲ (ನಿಜಾಗ. ೧-೦೨-೨೬). ೨. ಮುಳುಗು: ಮೋಹ ಸರ್ಪಸ್ವಗಳ ರಾಗಾಬ್ಧಿಯೋ ಬ್ರಹ್ಮ ಗಾಹಿಸದರೊಳಗೆ ನೀಂ ಮುಂಕುತಿಪ್ಪು (ಮುಂಕುಳ. ೯೩೨). [ ಗಾಹು$_1$ + - ಇಸು$_3$ ]

**ಗಾಹಿಸು₂** (ಕ್ರಿ). **ಮೋಸಮಾಡು ; ವಂಚಿಸು :** ಆಹಾಹ ಹಸನಾಯ್ತು ಕೊಡಿರೇಕೆ ಪಾತ್ರೆಯಂ ಗಾಹಿಸಿಯೆ [ ಪಾಠಾಂ. ಓಹೋಹೊ, ಗಹಗಹಿಸಿ ] ಇಂತು ಕೊಂಡವರುಂಟೆ ಪಾತ್ರೆಯಂ (ತಿರುರ. ದೇ. ೧೩-೮).

[ ಗಾಹು₃ + – ಇಸು₃ ]

**ಗಾಹು₁** (ನಾ). ೧. **ಆಳ ; ಅತಿಶಯಂತೆ ; ಆಧಿಕ್ಯ :** ಹೇಳ್ವೆ ಪಾರ್ಥ ಮೋನದೊಳಿರದಿರೆನ್ನಾಣೆನಲು ಬೆಜಗಿನ ಗರದ ಗಾಹಿನಲದ್ದು ಮೋನ ದೊಳಿದ್ದನಾ ಪಾರ್ಥ (ಕುಮ್ಮಾ.ಕ. ೧೭-೬). ೨. (ಆಳವಾದ) **ತಿಳಿವು ; ಅರಿವು.** 'ಗಾಹುಗೊಳ್' ಪರಾ. [<ಸಂ. ಗಾಹ ]

**ಗಾಹು₂** (ನಾ). **ಹಿಡಿತ ; ಪ್ರಭಾವ ; ಕೈವಾಡ :** ಹೂಹಿಗಳು ಹೊಯ್ದಾಡವೇ ನಿರ್ವಾಹಸೂತ್ರದ ಕುಣಿಕೆಗಾಣಿನ ಗಾಹಿನಲಿ (ಕುಮ್ಮಾ.ಕ. ೯-೯). [<ಪ್ರಾ. ಗಾಹ./ಸಂ. ಗ್ರಾಹ ]

**ಗಾಹು₃** (ನಾ). ೧. **ಮೋಸ ; ಮಾಯೆ ; ವಂಚನೆ ; ಠಕ್ಕು :** "ಕಪಟಂಗಳ ಗನ್ನಗಾಹುಗಳ್" (ಕರ್ಣಾನಿ. ೨೭) ; "ಗಾಹಿನೆ ಕಪಟಕ್ಕೆ ನಾಮಂ" (ಛಾರನಿ. ೩೧) ; ರೋಲಕ್ಷ್ಮಶ್ರುಮುಖಿಂ ತೆಜಂಬೊಳೆವಿನಂ ಗಾಹಿಂಗೆ ಬೀಟ್ಟನ್ನಮಾಭೀಲಾಲೋಕದೆ ಸಾರ್ದು (ಸೂಕ್ತಿಸು. ೩-೩೧) ; ಗಾಹು ಕೊಳ್ಳದ ಭೀಮಪಾರ್ಥರ ಸಾಹಸವನೆಣಿಸುತ (ಕುಮ್ಮಾದ್ರೋ. ೧-೧೨) ; ಮೋಹದಲಿ ಮಾಯಾಪ್ರಪಂಚಿನ ದೇಹಸಿದ್ಧಿಯ ಪಡೆದೆನೆಂಬೀ ಗಾಹಿನಿಂದಲಿ ವಜ್ರಪಿಂಡ ಶರೀರ ಫಲಿಸಿದೊಡೆ (ಪ್ರಭುಲಿ. ೧೯-೩೦). ೨. **ಗುರಿ : ಉದ್ದೇಶ :** ಪೆರ್ದೊಡೆಯಂ ಕಡಿಖಂಡವಪ್ಪಿನಂ ತುಡುಕುವ ಗಾಹು ತಪ್ಪಿದೊಡ ಬೆಂಬಿಡದೆಯ್ದುವ . . . ನಾಯ್ಗಳಂ ಪಿಡಿದು (ಸಕಲಂ. ೬೪) ; ಗಾಹು ಬೇಜೆಹುದೀ ಜಗದ ವೈಗಾಹಿಗೋಸುಗ ಜನ್ಮವೆಂಬಿವು ಚೋಹವ್ಯಸಲ್ಲದೆ ವಿಚಾರಿಸೆ ಮಗನೆ ನಿನಗೆಂದ (ತೊರರಾ. ೦-೯-೩೭). [ ? ]

**ಗಾಹುಕಂಡಿ** (ನಾ). **ಮೋಸದಿಂದ ನುಸುಳಿಹೋಗುವ ಕಂಡಿ ; ಕಳ್ಳಗಂಡಿ ; ತಪ್ಪಿಸಿಕೊಳ್ಳುವ ಮಾರ್ಗ :** ಈ ಮಾಯೆಯು ಗಾಹು ಕಂಡಿಯೊಳು ನುಸುಳುವ ಮಾಯಾವಾದಿಗಳಂತಲ್ಲ ನೋಡಾ (ಅದವ. ೧೯೭). [ ಗಾಹು₃ + ಕಂಡಿ₁ ]

**ಗಾಹುಕಾಜ** (ನಾ). **(ಆಳವನ್ನು) ತಿಳಿದವನು ; ಜ್ಞಾನಿ :** ಮೋಹವಿಲ್ಲದೆ ಸಕಲಜೀವಸ್ನೇಹವುಳ್ಳಾ ವೀರಶೈವದ ಗಾಹುಕಾಜರು ಪರಮಸುಖಿಗಳು ಗಿರಿಜೆ ಕೇಳೆಂದ (ಪ್ರಭುಲೀ. ೨೩-೦೩). [ ಗಾಹು₁ + – ಕಾಜ ]

**ಗಾಹುಗತಕ, ಗಾಹುಗದುಕು** (ನಾ). ೧. **ಮೋಸಗಾರಿಕೆ ; ಕಪಟ ; ಮೋಸ :** ಲಲಿತ ಮಾಯೆಯು ಗಾಹುಗತಕದ ಬಲೆಯನಳವಡಿಸುವುದು . . . ಎಂದು ಸಾಜೆದರಬ್ಬೆಘೋಷದಲಿ (ಜೀವಂಧ. ೬-೪೭) ; ಗಾಹುಗತಕದಲೆಮ್ಮ ಶಿಷ್ಯಂಗೀ ಹದನ ವಿರಚಿಸಿದೆ ನಿನ್ನಯ ಮೋಹದವರೇ ಗೆಲಲಿಯೆಂದನು ಹರಿಗೆ ಬಲರಾಮು (ಕುಮ್ಮಾ.ಗ. ೬-೯). ೨. **ಭ್ರಮೆ ; ಭ್ರಾಂತಿ :** ದೇಹವೇ ದೀವಿಗೆಯ ಕಂಬವದಾ ಹಣತೆಯೇ ಬಾಹ್ಯಕರಣಗಳೊಹಿಸಲು ಪ್ರಾಣಾದಿವಾಯುವೆ ತೈಲದಂತದಕೆ ಗಾಹುಗತಕದ ಸೂಕ್ಷ್ಮತನುವೇ ಮೂಹುರಿಯದಹ ವರ್ತಿಯಲ್ಲಿಯ ದೇಹಿಯೇ ಚಿದ್ದೀಪವದು ನೀನೆಂದು ನಿಶ್ಚಯಿಸು (ಅಮೃತ. ೩-೭೬). **ಗಾಹುಗದುಕು :** ೧. ಗಾಹುಗದುಕ [ ಪಾಠಾಂ. ದಕ, ದುಕು ] ನುಳಿದೇಜೆದರಶ್ವಾರೋಹಕರಾ ಸಮಯದಲಿ (ಕುರಾಸಾಂ. ೧೨-೮೮). 'ಗನ್ನಗತಕ' ಪರಾ.

[ ಗಾಹು₃ + ಗತಕ₁ ]

**ಗಾಹುಗದುಕು** 'ಗಾಹುಗತಕ' ನೋ.

**ಗಾಹುಗಳ್ಳ** (ನಾ). **ವಂಚಿಸುವುದರಲ್ಲಿ ಕದೀಮನಾದ ಕಳ್ಳ ; ಪಕ್ಕಾ ಚೋರ :** ಇಂತೀ ಗಾಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನಂಡಿದು ಸರ್ವ ಸಂಸಾರದಲ್ಲಿ ಏಳುತ್ತ ಮುಳುಗುತ್ತ . . . ಸುಖಿಗಳೆಂತಪ್ಪರೋ (ಶವಿಕ. I, ೨೩೩ ಕೀಲಾರದ ಭೀಮಣ್ಣನ ವಚನ). [ ಗಾಹು₃ + ಕಳ್ಳ₁ ]

**ಗಾಹುಗಾತಿ** (ನಾ). **ಮೋಸಗಾತಿ ; ವಂಚಕಿ :** ಬರೆ ಲಗ್ನಂ ಶಶಿ ಸೂನು ಗೇಹದ ಕುಜತ್ರಿಂಶಾಂಶದೊಳ್ ರೋಹಿಣೀವರನಲ್ಲಿರ್ದೊಡೆ ಗಾಹುಗಾತಿ (ಜಾತಕ. ೨೨-೩). [ ಗಾಹು₃ + – ಕಾತಿ₆ ]

**ಗಾಹುಗೊಳ್** (ಕ್ರಿ). **ಆಳವನ್ನು ತಿಳಿ, — ಕಾಣು, — ಅರಿತುಕೊಳ್ಳು :** ಆಹ ಶಿವಶಿವ ಬಹಳಜನ್ಮವ್ಯೂಹಚಿಂತಿತಯೋಗನಿಷ್ಠರು ಗಾಹುಗೊಳ್ಳದ ಗುರುವ ದೈವವನಕಟ ನಿಂದಿಸುತ (ನಿಭಾಗ. ೭-೦-೧೦).

[ ಗಾಹು₁ + ಕೊಳ್₁ ]

**ಗಾಹುರ** (ನಾ). **ಆತುರ ; ವೇಗ ; ರಭಸ :** ಬೇಹರವುನೆಸಗಿಕೊಳುತಂ ಗಾಹುರದಿಂ ದಾರಿವಿಡಿದು ಬರ್ಪವಸರದೊಳ್ (ಹಾರಾಸ್ಯ. ೦-೯-೨೩).

[ ಕಾಹುರ₁ (< ಕಾವರ₂) ]

**ಗಾಹೆ** (ನಾ). **ಶ್ಲೋಕ ; ಹಾಡಂ :** ತವ್ಮಯ್ಯಂ ಪೇಟ್ದ ಗಾಹೆಯಂ ಕಟ್ಟು ವಂಜರದ ನಡುವಣ ನಾಗವೇದಿಕೆಯೊಳ್ ವಿನೋದದಿಂ ಬರೆದಿಟ್ಟಂ (ಪಂಚತಂ. ೧೯೯-೨೦) ; ಲೇಖಮಂ ಪಾವುಡವುನಭಿಜ್ಞನ ಗಾಹೆಯಂತಿರ ಲೋದಿಸದೆಯುಂ ಶೋಧಿಸದೆಯುಂ (ಅನಂತ. ೦೩-೯೩ ವ) ; ಗಾಥಾ-ಗಾಹೆ (ಕಮರ. ೨೩೭ ಪ್ರಯೋ) ; ಆ ಹರಿಯ ವರಮಹಿಮೆಯು . . . ಗಾಹೆ ವೇದಗಳಟೆಯವೈ (ಸಂಧ್ಯ. ೯-೩೦) ; ಈ ಕಾರಣಗಳಿಂದ ನಾನು ಹೀಗೆ ಮಾಡಿದೆ ಎಂದು, ಅದನ್ನು ಸ್ಪಷ್ಟಪಡಿಸಲು ಈ ಗಾಹೆಗಳನ್ನು ಹೇಳಿತು (ಬುದ್ಧಕ. ೧೩). 'ಗಾದೆ' ಪರಾ. [ <ಪ್ರಾ. ಗಾಹಾ./ಸಂ. ಗಾಥಾ ]

**ಗಾಳ, ಗಾಣ₂** (ನಾ). ೧. **(ಮೀನು ಹಿಡಿಯುವ) ಕೊಕ್ಕೆ, — ಕೊಂಡಿ :** ಪೇಚರಕನ್ನೆಯರ್ಕಳ ಕಣ್ಗಳೆಂಬ ಮೀಂಗಳ್ ಕುಮಾರನ ರೂಪೆಂಬ ಗಾಳದಿಂ ತೆಗೆಯೆಪಟ್ಟು (ವರ್ಧಮಾ.ರಾ. ೩೭-೧೧) ; ಗಡಿಯರ ಸಿಂಗಂ ತೊಡರ್ದ್ದರ ಗಾಳಂ (ಸೌಇಇ. XI-II, ೧೩೩-೩೮ ; 1097) ; ಸೂಳೆಯರ್ ಗಾಳದ ಮೀನಂತಳವಟೆಯೆ (ಧರ್ಮಾಮೃ. ೨-೬೯) ; ಗಾಳದಲ್ಲಿರುವ ಮಾಂಸವನ್ನು ಭಕ್ಷಿಸುವುದಕ್ಕೆ ಹೋದ ಮತ್ಸ್ಯದೋಪಾದಿಯಲ್ಲಿ (ಕೃಪಾಸ. ೦೩೦) ; ಒಕ್ಕಲಿಗರು ಗಾಳದ ಗಣೆಗಳನ್ನು ತೆಗೆದುಕೊಂಡು ಬಂದು ಹೆಂಗಸರ ಕಡವಿನಲ್ಲಿ ಕೂರುತ್ತಾರೆ (ಬಿಸ್ಕ.ಕ. ೧೨). ೨. **(ಅಲಂ) ಕುತಂತ್ರ ; ಹೂಟ :** ಅವನು ಆಕೆಯ ಗಾಳದಲ್ಲಿ ಸಿಕ್ಕಿಬಿದ್ದ (ರೂಢಿ). **ಗಾಣ₂ :** ೧. ದನುಜರೆರೆಗಳ ಹಾಯ್ಕು ಗಾಣದಲನಿಮಿಷರನೀಡಾಡಿ ಕೊಂಡರು ದುರ್ಗವನು ಸುರರ (ಕುಮ್ಮಾ.ಕ. ೬-೦೦) ; ಎಳೆದು ತರಿಸೆನೆ ತನ್ನ ಬಾಲವ ಕಳುಹಿ ಗಾಣ[ ಪಾಠಾಂ. ಳ ]ದ ಬಲೆಗೆ ಸಿಲುಕಿದ ಮೀನಿನಂದದಲಿ (ತೊರರಾ. ೯-೯-೯೩) ; ಖಳರ ಗಂಟಲ ಗಾಣನೋ ಜಗದೊಳಗೆ ಪ್ರವೀಣನೋ (ಪುರಂದ. ೦-೨೦೩-೦).

[ ದೇ ಇ ತುಳು. ಗಾಳ, ಗಾಳೋ ; ತೆಲು. ಗಾಲ, ಗಾಲಾ ; ಪರ್ಜಿ. ಗೇಲ./ಪ್ರಾ. ಗಲಅ ]

**ಗಾಳಕ** (ನಾ). **ಪ್ರೌಢ ; ವ್ಯವಹಾರಚತುರ :** ಸಾತ್ವಿಕನಾದ ಧರ್ಮರಾಯನೂ, ಸಿಟ್ಟಿನ ಸ್ವಭಾವದ ಭೀಮಸೇನನನ್ನೂ-ತೇಜಸ್ವಿಯಾದ ಅರ್ಜುನನನ್ನೂ-ಗಾಳಕರಲ್ಲದ ನಕುಲ ಸಹದೇವರನ್ನೂ ಸಮದೃಷ್ಟಿಯಿಂದ ನೋಡಿ (ಕುಟುಂಬ. ೯೯). [ ←ತೆಲು. ಗಾಳಕ ]

**ಗಾಳಗಟ್ಟಿಗೆ** (ನಾ). **ಮೀನಂ ಹಿಡಿಯುವ ಗಾಳದ ಕಡ್ಡಿ, — ಕೋಲು :** ಇಟ್ಟಣಿಸಿದ ಮೀನನಿಳಿಗೆ ಸಿಲೆವ ಗಾಳಗಟ್ಟಿಗೆಗಳೊ ದೇವತೆಗಳ ಮುಟ್ಟಿ ತಿವಿವ ಸಬಳಗಳೊಯೆಂದೆನಲಲ್ಲಿ ನಟ್ಟ ಡೆಂಕಣಿಗಳೆಸೆದವು (ಕುರಾಸಾಂ. ೧೭-೧೪). [ ಗಾಳ + ಕಟ್ಟಿಗೆ₁ ]

**ಗಾಳಗಾರ** (ನಾ). **ಗಾಳದಿಂದ ಮೀನನ್ನು ಹಿಡಿಯುವವನು ; ಬೆಸ್ತ :** ಗಾಳಗಾರನಾ ಕೊಂಡಿಯೆರೆಯಂ ತಿಂದ ಬಾಳೆಮೀನಂ . . . ಸೋಲಿಸುವ ಮಾಳ್ಕೆಯಿಂದ (ಶ್ರೀರಾಮಾ. ೯೧೯-೨೯೩).

[ ಗಾಳ + – ಗಾರ ( < – ಕಾಜ ) ]

**ಗಾಳನ** (ನಾ). ಸೋಸುವುದು ; ಶೋಧನ. ‘ ಗಾಳಿಸು ’ ಪರಾ.
[ ಸಂ. ಗಾಲನ ]

**ಗಾಳಬ್ಬೆ** (ನಾ). ಒಬ್ಬಾಕೆಯ ಹೆಸರು : ಗಬ್ಬವೆಡಬ್ಬ ಶ್ರೀವಂತ್ ರಾಚೆಯರಸರ ಅರಸಿ ಗಾಳಬ್ಬೆಯರ್ ದೇಗುಲವು ಮಾಡಿಸಿ (ಎಕ. V, ಹೊಳನ. ೧೪-೧೨ ; ಸು. 960).
[ ಗಾಳ ?+ ಅಬ್ಬೆ$_1$ ]

**ಗಾಳಹಾಕು, ಗಾಣಹಾಕು** (ಕ್ರಿ). ೧. ಮೀನು ಹಿಡಿಯಲು ಗಾಳವನ್ನು ನೀರಿಗೆ ಬಿಡು : ಅವನು ಮೀನು ಹಿಡಿಯಲು ಗಾಳ ಹಾಕಿದ್ದಾನೆ (ರೂಢಿ). ೨. (ಅಲಂ) ಆಸೆ ತೋರಿಸು ; ಮರುಳುಗೊಳಿಸು : ಇಂಥ ಸಮಕಾಲೀನ ಶಬ್ದಗಳನ್ನು ಬಳಸಿ, ಜನರ ಮೆಚ್ಚಿಕೆಗೆ ಗಾಳಹಾಕತೊಡಗಿದರು (ಮುಕ್ತಬ. ೧೨೭). **ಗಾಣಹಾಕು :** ೨. ಇದೊಂದು ಆಷಾಢಭೂತಿ, ಹಳ್ಳಿಯವರಿಗೆ ಏನೋ ಗಾಣಹಾಕುವುದಕ್ಕೆ ಬಂದಿದೆ (ಸುವಸಂ. ೧).
[ ಗಾಳ + ಹಾಕು (<ಪಾಯ್ಕು$_1$) ]

**ಗಾಳಿ$_1$, ಘಾಳಿ** (ನಾ). ೧. ಎಲರು ; ವಾಯು ; ಮಾರುತ : “ ಗಾಳಿಯೆ ವಾತದೊಳ್ ” (ಕರ್ಣಾನಿ. ೩೩) ; “ ಗಾಳಿಯೆನಿಪ ಮಾತರಿಶ್ವಂ ” (ಶಶರ. ೩೨) ; ಪಾಯ್ವ ಶೀಕರದೊಳೆ ನಾಂದು ಸೇಡುಗೊಳುತಂ ಸುಟಿದೂದುವ ಗಾಳಿ ಬರ್ಪ ದೇವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು (ಕಾವ್ಯಸಾ. ೭೮ ಕೊಡ್ಕೃಕ) ; ಗಾಳಿಯೆತ್ತಲು ಘಾಡಿಸುವ ಮೇಘಾಳಿಯೆತ್ತಲು (ಕುಮಾರ. ೧೦-೨೩) ; ಗರುಡನ ಗಟಿಯ ಗಾಳಿಗೆ ಫಣೆಗಳ ಮೊತ್ತ ಮುರಿಗೆಡೆದೋಡುವಂದದಲಿ (ಕಂನವಿ. ೧೩-೧೦೪) ; ಸ್ವಚ್ಛವಾದ ಗಾಳಿ ಬರಲಿಕ್ಕೆ ಮಾರ್ಗವಿರಬೇಕು (ಮುಂಬಯಿ. ೯-೨೩). ೨. ದೆವ್ವ ; ಪಿಶಾಚಿ : ಪೊಡೆದುದು ಗರವತಿಕೋಪದೆ ಪಿಡಿದುದು ಪುಲಿ ಗಾಳಿ ಸೋಂಕಿದತ್ತು (ಕಾದಂಪೂ. ೩೭೩) ; ಮಾನಿನಿ ಒಬ್ಬ ಸಂನ್ಯಾಸಿಯ ಕಂಡು ಧೇನಿಸಿ ಕೂಸೆಂದತ್ತ ಬರಲು ಏನು ಗಾಳಿ ಅವರಿಗೆ ಸೋಕಿತೆ ಎಂದು ಪುರಂದರ ವಿಠಲ ತನ್ನೊಳು ನಗುತಿದ್ದನು (ಪುರಂದ. ೧-೧೧೦-೯) : ‘ ಆಚಾರ್ರು ಗಾಳಿಯಾಗಿದ್ದಾರೆ ! ’ ಎಂದು ಜನರಾಡಿಕೊಳ್ಳಲಾರಂಭಿಸಿದರು (ನನ್ನೂರು. ೦೯೭). ೩. ವಾಸನೆ ; ಸುಳಿವು : ನಾಯಿಗಳಿಗೆ ಯಾವುದೋ ಪ್ರಾಣಿಯ ಗಾಳಿ ಸಿಕ್ಕಿದೆಯೆಂದು ಎಲ್ಲರಿಗೂ ಗೊತ್ತಾಯಿತು (ಕಾನೂರು. ೧೪೦). ‘ ಗಾಳಿಹಿಡಿ ’ ಪರಾ. ೪. (ಅಲಂ) ವ್ಯಗ್ರವಾದಂದು : ಪ್ರತಿಭಾನ ಮನಸ್ಸು ಗಾಳಿಯಾಗಿತ್ತು (ಮೂಲಕಿ. ೧೪೩). ೫. (ಅಲಂ) ಪ್ರಭಾವ ; ವರ್ಚಸ್ಸು : ನಿನಗೆ ಅವರ ಗಾಳಿ ಚೆನ್ನಾಗಿ ಬೀಸಿದೆ (ರೂಢಿ). **ಘಾಳಿ :** ೧. ಮದದಾನೆ ಕಂಭಮಂ ಮುರಿದು ಘಾಳಿಯಂತೆ ವೇಗಿಯುಂ ಕಲಿಯಂತೆ ನಿಶ್ಶಂಕನುಂ . . . ಆಗಿರ್ಪುದಂ ಕಂಡು (ಧರ್ಮಾಮೃ. ೧೩-೩೩ ಆದಿಟ) ; ಘಾಳಿಯೊಳು ನಿಂದು ಧೂಳಿಯ ಹೊಯ್ಯುತಿದೆ (ಅದವ. ೧೩-೩೨) ; ಘಾ[ಪಾಠಾಂ. ಗಾ]ಳಿ ಬಂದ ಕೈಯಲ್ಲಿ ತೂರಿಕೊಳ್ಳಿರೊ (ಪುರಂದ. ೨-೨೧ ಪಲ್ಲವಿ) ; ನಿಂದು ಕಣ್ಮುಚ್ಚಿ ಘಾಳಿಯ ಬೀಸುತೇ (ನವಮೋ. ೬-೭).

**ಗಾಳಿಗೆ ತೂರು** = ಉದಾಸೀನ ಮಾಡು ; ಕಡೆಗಣಿಸು ; ಎಸೆದಂ ಬಿಡು : ತಮ್ಮ ಭಾವನೆಯಾದರೋ ಸುಲಭವಾಗಿ ಗಾಳಿಗೆ ತೂರಿಬಿಡತಕ್ಕುದಾಗಿಲ್ಲ (ಚನ್ನಕೇ. ೦೪೯). **ಗಾಳಿಬಂದಲ್ಲಿ ಕೊಡೆ ಹಿಡಿ**=ಸಮಯಕ್ಕೆ ತಕ್ಕಂತೆ ವರ್ತಿಸು ; ಸಂದರ್ಭೋಚಿತವಾಗಿ ವ್ಯವಹರಿಸು : ಅಂತೂ ಗಾಳಿಬಂದಲ್ಲಿ ಕೊಡೆಹಿಡಿಯುವ ಜಾತಿಯವಳು (ಕೀಮೋದ. ೩೩). **ಗಾಳಿಬಂದಾಗ ತೂರಿಕೊ**= ಅವಕಾಶವೊದಗಿದಾಗ ಕಾರ್ಯಸಾಧನೆ ಮಾಡಿಕೊಳ್ಳು : ಈ ಬೆರಳಿನಲ್ಲಿ ಒಂದು ಉಂಗುರ ಇಲ್ಲದಿರುವುದು ಮಾತ್ರ ದೊಡ್ಡ ಕೊರತೆಯೇ ಸರಿ ಎಂದು ಹೇಳಿ ಗಾಳಿಬಂದಾಗಲೇ ತೂರಿಕೊಂಡಳು (ಕೊನಪ್ಪ. ೮೩) ; ಗಾಳಿಬಂದಾಗ ತೂರಿಕೊ (ಗಾದೆ). **ಗಾಳಿಯಸೊಡರು**=ನಶ್ವರವಾದುದು : ಸಂಸಾರವೆಂಬುದೊಂದು ಗಾಳಿಯಸೊಡರು ಸಿರಿಯೆಂಬುದೊಂದು ಸಂತೆಯ ಮಂದಿ ಕಂಡಯ್ಯಾ (ಬಸವ. ೦೭೪). [ ದೇಶ ತಮಿ. ಕಾಲಿ ; ತುಲು. ಗಾಲಿ, ಗಾಳಿ ; ತೆಲು. ಕೊಲಾ. ಗಾಲಿ ; ನಾಯ್ಕಿ. ಘಾಳಿ ]

**ಗಾಳಿ$_2$** (ನಾ). ನಿಂದೆ; ಬೈಗುಳು. ‘ಗಾಳಿಮಾತ್ು$_2$’ ಪರಾ. [<ಸಂ. ಗಾಲಿ]

**ಗಾಳಿಕೂಳ** ‘ ಗಾಳಿಗೂಳ ’ ನೋ.

**ಗಾಳಿಕೊಡೆ** (ನಾ). ವೈಮಾನಿಕರು ವಿಮಾನದಿಂದ ಭೂಮಿಗೆ ಧುಮುಕಬೇಕಾದ ಸಂದರ್ಭದಲ್ಲಿ ಉಪಯೋಗಿಸುವ ಕೊಡೆ ; ಧುಮುಕಂಕೊಡೆ ; ಪ್ಯಾರಾಚೂಟು : ಧುಮುಕಿದರೂ ಪ್ರಾಣಕ್ಕೆ ಹಾನಿಯಾಗದಂತೆ ಕೈಯಲ್ಲಿ ಹಿಡಿದುಕೊಳ್ಳಲು ‘ ಪೆರಾಚ್ಯೂಟ್ ’ಗಳೆಂಬ ಗಾಳಿಕೊಡೆಗಳನ್ನು ಉಪಯೋಗಿಸುತ್ತಾರೆ (ವಿಜ್ಞಾವಿ. ೭೯) ; ಆಗಾಗ ಆಕಾಶದಿಂದ ಬೆಳಕಿನ ಗಾಳಿಕೊಡೆ (Parachute)ಗಳನ್ನು ಹಾರಿಸಿ ಅವು ವೈರಿಪಾಳೆಯಗಳನ್ನು ಬೆಳಗುವಂತೆ ಮಾಡುವರು (ಬಾಲಪ್ರ. I, ೩೮೮).
[ ಗಾಳಿ$_1$ + ಕೊಡೆ$_2$ ]

**ಗಾಳಿಕೋವಿ** (ನಾ). “ ಗಾಳಿಯ ಬಲದಿಂದ ಹೊಡೆಯುವ ತುಪಾಕಿ ; ಗಾಳಿಕೋವಿ ; ಗಾಳಿಬಂದೂಕು ” (Air-gun. ಇಂಕನಿ).
[ ಗಾಳಿ$_1$ + ಕೋವಿ$_1$ ]

**ಗಾಳಿಕೋಳಿ** (ನಾ). ಗಾಳಿ ಬೀಸುವ ದಿಕ್ಕನ್ನು ತೋರಿಸುವುದಕ್ಕಾಗಿ ಎತ್ತರವಾದ ಕಟ್ಟಡಗಳ ಮೇಲೆ ನಿಲ್ಲಿಸಿದ ಸಾಧನ ; ವಾಯು ದಿಕ್ಸೂಚಿ : ನೆಲದ ಮಟ್ಟದಲ್ಲಿ ಗಾಳಿಯು ಯಾವ ಕಡೆಗೆ ಬೀಸುತ್ತದೆ ಎಂಬುದನ್ನು ಎತ್ತರದಲ್ಲಿ ಹಾರುವ ವೈಮಾನಿಕನಿಗೆ ತಿಳಿಸುವುದಕ್ಕೆ ಕತ್ತಲಲ್ಲಿ ಮಿನುಗುವ ಗಾಳಿಕೋಳಿ (Weather-cock)ಗಳನ್ನು ಇರಿಸುವರು (ಬಾಲಪ್ರ. II, ೮೮೩). [ ಗಾಳಿ$_1$ + ಕೋಳಿ$_1$ (<ಕೋಟಿ$_1$) ]

**ಗಾಳಿಗ** (ನಾ). ೧. ಗಾಳಿಯಲ್ಲಿ ಸಂಚರಿಸುವಂಥದು ; ದೆವ್ವ, ಭೂತ, ಪಿಶಾಚಿ ಮುಂತಾದುವು: ಗಾಳಿಗರುಂ ನೆಲಮುಕ್ಕ ಜಕ್ಕಿಯುಂ ಬೊರ್ಮನುನೆಂದು ಜೀವವಧೆಗೈದರೆ ಕುತ್ತದ ದುಃಖದಿಂದ ಸಾಸಿರ್ಮಡಿ ದುಃಖಮಂ ಪಡೆವ ನಾರಕ ದುಃಖಮನ್ನೆಯ್ದದಿರ್ಪರೇ (ಜಾನ್ಕಬೀ. ೨೪-೩). ೨. ಒಬ್ಬಾತನ ಹೆಸರು : ಓಲೆಯ ಚನ್ದಿಗನುಂ ಗಾಳಿಗನುಂ ಮೊದಲಾಗೆ ಅಯ್ನೂರ್ಬರ್ಗರುಂ ತುಪ್ಪವನುಟಿದೋರ್ (ಸೌಇಇ. XI-1, ೦೨-೧೪ ; 967).
[ ಗಾಳಿ$_1$ + – ಗ$_2$ ]

**ಗಾಳಿಗಂಟು** (ನಾ). ೧. (ಅಲಂ) ಗಾಳಿಯನ್ನು ಬಂಧನಮಾಡುವಂತೆ ಅಸಾಧ್ಯವಾದುದನ್ನು ಮಾಡುವ ಪ್ರಯತ್ನ ; ಅತಿಯಾದ ಸಾಹಸ ; ಅಸಾಧಾರಣ ಕಾರ್ಯ : ಏನೇನೊ ಗಾಳಿಗಂಟು ಮಾಡಿ ನೀರೆರೆದು ಈ ತೋಟ ಬೆಳೆಸಿದ್ದೇನೆ (ಮುಗಮೂಂ. ೬೦). ೨. (ಅಲಂ) ಮೋಸ ; ವಂಚನೆ : ಗಾಳಿಗಂಟು ಮಾತುಗಳಿಂದ ನಂಟರಂತೆ ತೋರುವ ಕಂಟಕರಂ (ಸೌಗಂಧಿ. ೦೩೪-೪). [ ಗಾಳಿ$_1$ + ಗಂಟು ]

**ಗಾಳಿಗಿರಣಿ** (ನಾ). ಗಾಳಿಯ ಸಹಾಯದಿಂದ ನಡೆಯುವ ಯಂತ್ರ : ಭೂಮಿ ಇಲ್ಲವೆ ಸಮುದ್ರದ ಮಗ್ಗುಲಲ್ಲಿ ಸದಾ ಬೀಸುತ್ತಿರುವ ಗಾಳಿಗಳಿಂದ ‘ ಗಾಳಿಗಿರಣಿ ’ (Wind-mill)ಗಳನ್ನು ಮಾಡುತ್ತಾರೆ (ಬಾಲಪ್ರ. I, ೦೦೮) ; ಅಲ್ಲಲ್ಲಿ . . . ಗಾಳಿಗಿರಣಿಗಳಿವೆ (ಅಪೂಪ. ೦೯೦).
[ ಗಾಳಿ$_1$ + ಗಿರಣಿ$_1$ ]

**ಗಾಳಿಗುದುರಾಂಕ** (ನಾ). ಜಿಂಕೆಯನ್ನು ಗುರುತಾಗಿ ಉಳ್ಳವನು ; ಚಂದ್ರ ; ಮೃಗಾಂಕ : ಸುಚರಿತ್ರ ನಿಟಲನೇತ್ರಾ ಗಾಳಿಗುದುರಾಂಕನೆ [ ನ ] ರೆವೌಳಿ (ನವಮೋ. ೨೩-೦). P ಇದು ಅಶುದ್ಧ ಶಬ್ದ.
[ ಗಾಳಿಗುದುರೆ + ಅಂಕ$_2$ ]

**ಗಾಳಿಗುದುರೆ** (ನಾ). ವಾಯುದೇವನಿಗೆ ವಾಹನವಾದುದು ; ಜಿಂಕೆ ; ಮೃಗ. ‘ ಗಾಳಿಗುದುರಾಂಕ ’ ಪರಾ.
[ ಗಾಳಿ$_1$ + ಕುದುರೆ ]

**ಗಾಳಿಗುದ್ದು** (ಕ್ರಿ). ೧. ಗಾಳಿಯನ್ನು ಗುದ್ದು,-ತಿವಿ: ತಲೆಯ ಮೇಲೆ ಎಲ್ಲಿಂದೊ ಬಂತೊ ಈ ನಾದ ಗಾಳಿಗುದ್ದಿ. ಗೆಳೆಯ, ನೀವು ವ್ಯೆಗರದಿ ರೆಂದು, ಛೀ! ನಂಬಬರದ ಸುದ್ದಿ (ಹೃದಸ. ೬೩-೪). ೨. (ಆಲಂ) ಉಪಯೋಗವಿಲ್ಲದ ಕೆಲಸವನ್ನು ಮಾಡು; ನಿರರ್ಥಕವಾದ ಕೃತ್ಯದಲ್ಲಿ ತೊಡಗು: ಇದೇನಾಟ, ಗಾಳಿಗುದ್ದಿ ಮೈನೋಯಿಸಿಕೊಳ್ಳುವುದು (ಕಸಬು. ೬೨); ಈಗಾಗಲೇ ಸರಕಾರದಿಂದ ರದ್ದುಮಾಡುವ ನೋಟೀಸು ಮುನಸೀಪಾಲಿಟಿಯ ಕೈಸೇರಿಹೋಗಿದೆ. ಇಂಥದರಲ್ಲಿ ಗಾಳಿಗುದ್ದುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ (ಅಶನಾ. ೨೩೨); ಗಾಳಿಗುದ್ದಿ ಮೈನೋಯಿಸಿ ಕೊಂಡಂತೆ (ಗಾದೆ). [ ಗಾಳಿ$_1$ + ಗುದ್ದು$_1$ (<ಗುರ್ದು$_1$) ]

**ಗಾಳಿಗೂಳ**, ಗಾಳಿಕೂಳ (ನಾ). ೧. ಗಾಳಿಯನ್ನೇ ಆಹಾರವಾಗಿ ಉಳ್ಳ ಪ್ರಾಣಿ; ಎಲರುಣಿಗ; ಹಾವು; ಸರ್ಪ: ಒಂದು ರಾತ್ರಿಯುಲಿ ಬೋಧಿಸಿದಳಾ ಖದ್ರು ಗಾಳಿಗೂಳರ್ಗೆ ಸಾಸಿರಫಣಿಗಳೊಪ್ಪದಿರೆ ಶಪಿಸಿದಳ್ (ರುಕ್ಮಾಂಗ. ೧೬-೪); ಗಾಳಿಗೂಳನ ಶತ್ರುವಾಳುವನ ಸನ್ಮಿತ್ರ (ನವಮೋ. ೨೩-೧). ೨. (ಆಲಂ) ಹಾವಿನಂತಿರುವವನು; ಕುಟಿಲ; ವಕ್ರ: ಪೇಳಿ ವೃದ್ಧರ ನುಡಿಯ ಕೇಳ್ವನಲ್ಲಂ ನಿನಗೆ ಗಾಳಿಗೂಳರ ಮಾತು ಸೊಗಸು (ಜೀರಮ. ೨-೧). **ಗಾಳಿಕೂಳ**: ೧. ಗಾಳಿಕೂಳನ ಪಗೆಯ ವನಯ್ಯನಣುಗನನಾಳಿದನಣುಗನಾತ್ಮಜನ (ಅಮುಶಾಂ. ೬-೧೧೪).

**ಗಾಳಿಗೂಳನ ಹಗೆ**=ಹಾವಿನ ಶತ್ರು; ಗರುಡ, ನವಿಲು ಮೊದಲಾದುವು: ಗಾಳಿಗೂಳನ ಹಗೆಗೊಳಗಾದ ಶಿಬರವ ಕೇಳಿ ನಂದೀಶನೈತರಲು . . . ಹೀಯಾಳಿಸಿ ಬಿಟ್ಟುದಾ ನವಿಲ (ಮೋಹತ. ೩೮-೩೦).

[ ಗಾಳಿ$_1$ + ಕೂಳ್ (<ಕೂಟು$_1$) + -ಅ$_7$ ]

**ಗಾಳಿಗೂಳ್ಗೊಳ್** (ಕ್ರಿ). ಗಾಳಿಯನ್ನೇ ಆಹಾರವಾಗಿ ತೆಗೆದುಕೊಳ್ಳು; ನಿರಾಹಾರವಾಗಿರು: ಪಲಗಾಲಂ ಗಾಳಿಗೂಳ್ಗೊಂಡಲಸದೆ . . . ಒಂದು ಕಾಲೊಳ್ ಸಲೆ ನಿಂದು (ವೀರಶ. ೧೩೦).

[ ಗಾಳಿ$_1$ + ಕೂಳ್ (<ಕೂಟು$_1$) + ಕೊಳ್$_1$ ]

**ಗಾಳಿಗೊಳ್** (ಕ್ರಿ). ದೆವ್ವ ಮೆಟ್ಟಿದಂತೆ ಆವೇಶಗೊಳ್ಳು; ಪರವಶ ವಾಗು: ಪಂದಿಯ ಬಚಿಯಂ ತಗುಳ್ದೊಡದು ಗಾಳಿಗೊಂಡೊಂದು ದೆಸೆಗೆವರಿದು (ವರ್ಧ್ಮಾ.ಚಾ. ೧೬೨-೧೬); ಗಾರ್ದಭಿಯೆಂಬ ದೇವತೆ ಕತ್ತೆಯ ರೂಪಾಗಿ ಗಾಳಿಗೊಂಡಂತೆ ಮಸಗಿ . . . ಪರಿತರೆ (ಬಂಹರಿ. ೬-೧೪ ವ); ಚೆಲ್ವನಪ್ಪ ವಾಜಿಯ ರೂಪನಳವಡಿಸಿ ಗಾ[ ಶಾಶಾಂ. ನಾ ]ಳಿಗೊಂಡು ಮಂದಿಯಂ ತುಳಿವುತ್ತಂ ಬಂದು ಪುರವಂ ಪುಗೆ (ಪುಣ್ಯಾಸ್ರ. ೩-೬೧ ವ).

[ ಗಾಳಿ$_1$ + ಕೊಳ್$_1$ ]

**ಗಾಳಿಗೋಪುರ**, ಘಾಳಿಗೋಪುರ (ನಾ). ಗಾಳಿಯಂತೆ ಆಕಾರ ವಿಲ್ಲದ ವಸ್ತುವಿನಿಂದ ಕಟ್ಟುವ ಗೋಪುರ; ಕೈಗೂಡದ ಮನೋರಥ; ಈಡೇರದ ಆಸೆ: ಅದು ದಿಟದನಿರ್ಪುದೋ ಮೇಣ್ ಬರಿಯ ಆಸೆ ಬೀಸಿದ ಗಾಳಿಗೋಪುರವೊ ಎಂಬೊಂದು ಶಂಕೆಯುಯ್ಯಾಲೆಯಲ್ಲಿ ತೂನೆದವ್ಪುದಯ್ ಶ್ರದ್ಧೆ (ಶ್ರೀರಾಮಾ. ೪೪೬-೪೦); ನನ್ನ ಸಂಕಲ್ಪ ಗಾಳಿಗೋಪುರವಾದಂತಿದೆ (ಹರಿಕೋ. ೬೦); ಗಾಳಿಗೋಪುರ ಕಟ್ಟುವಂತೆ ರಾಜ್ಯರಚನೆಯಲ್ಲಿ ಕೇವಲ ಮಾತಿನಿಂದ ಏನೂ ನಡೆಯುವುದಿಲ್ಲ (ಪ್ರಹಾಪ. ೮೪); ಆದರೆ ವಾಸ್ತವತೆಯ ಅರಿವು ಬಂದಾಗ ತನ್ನ ಕೆಲಸವೆಲ್ಲವೂ ಬರೀ ಗಾಳಿಗೋಪುರವೆಂದು ಅವಳು ನಿಟ್ಟುಸಿರು ಬಿಡುವಳು (ದೂರಕ. ೨೪೦). **ಘಾಳಿಗೋಪುರ**: ಘಾಳಿಗೋಪುರದ ಮುಂದೆ ಧಾಳಿಯಾಡುವಂತೆ ಸುತ್ತ ಧೂಳುಗಳನೆಬ್ಬಿಸಿ (ವಾದಿಕೀ. ೪೦-೨). [ ಗಾಳಿ$_1$ + ಗೋಪುರ ]

**ಗಾಳಿಚೆಂಡು** (ನಾ). ಗಾಳಿಯಲ್ಲಿ ಹಾರುವಂತೆ ರಚಿಸಿರುವ ಚೆಂಡಿನಾ ಕಾರದ ಹಾರುವ ಸಾಧನ; ಬಲೂನು: ದೊಡ್ಡದೊಂದು ಚೀಲದಲ್ಲಿ, ಬಿಸಿಗಾಳಿಯನ್ನು ತುಂಬಿಸಿ ಅದು ಗಾಳಿಯಲ್ಲಿ ಏರುವಂತೆ ಮಾಡಿ ಅದಕ್ಕೆ ತೂಗಿದ ಒಂದು ಬುಟ್ಟಿಯಲ್ಲಿ ತಾವು ಕುಳಿತು ಆಕಾಶವನ್ನು ಏರಿದರು. 'ಗಾಳಿಚೆಂಡು' (Baloon) ಎಂದು ಇದಕ್ಕೆ ಹೆಸರು (ಬಾಲಪ್ರ. II, ೧೧೨೬).

[ ಗಾಳಿ$_1$ + ಚೆಂಡು (<ಸೆಂಡು) ]

**ಗಾಳಿತುಂಬಿಸು** (ಕ್ರಿ). ೧. ಗಾಳಿ ತುಂಬುವಂತೆ ಮಾಡು. ಸೈಕಲ್ ಚಕ್ರಕ್ಕೆ ಗಾಳಿ ತುಂಬಿಸು (ರೂಢಿ). ೨. (ಆಲಂ) ಪ್ರೇರಿಸು; ಹುರಿದುಂಬಿಸು; ಪ್ರೋತ್ಸಾಹಿಸು: ಕೆಲಸದವಳ ಮೂಲಕ ಬೀಬಿಯನ್ನು ಚೆನ್ನಾಗಿ ಗಾಳಿ ತುಂಬಿಸಿಬಿಟ್ಟಿದ್ದೇನೆ (ಪ್ರೇಮಾಶ್ರ. ೨೩).

[ ಗಾಳಿ$_1$ + ತುಂಬಿಸು ]

**ಗಾಳಿತೇರು** 'ಗಾಳಿದೇರ್' ನೋ.

**ಗಾಳಿದೇರ್**, ಗಾಳಿತೇರು (ನಾ). ವಾಯುಮಂಡಲದಲ್ಲಿ ಚಲಿಸುವ ತೇರು,—ರಥ; ವಿಮಾನ: ಗಾಳಿದೇರೊಳ್ ಬೆಂಗದಿರನಂತೊಪ್ಪಿ ವೈದಿಕನೊರ್ವನೆಯ್ತರುತಿರಲ್ (ಅದ್ಭುತ. ೨೪-೧); ದೂರವಾಯ್ತು ಮರೆಯಾದುದಾ ಬಣ್ಣಬಣ್ಣದ ಗಾಳಿದೇರ್ (ಶ್ರೀರಾಮಾ. ೨೧೭-೧೮೬). **ಗಾಳಿತೇರು**: ಪ್ರೀತಿಯು ಮೊದಲು ಗಾಳಿತೇರಿನಲ್ಲಿಯೂ ಆಮೇಲೆ ಎತ್ತಿನ ಗಾಡಿಯಲ್ಲಿಯೂ ಕೊನೆಗೆ ಹೊರೆಹೊತ್ತೂ ಓಡುವುದೆನ್ನುವಂತೆ ದೊಡ್ಡನು ಅವಸರದಲ್ಲಿಯೇ ಹೊರಟನು (ಕಾಲೂರ. ೪ ಕಥಾಸಾರ).

[ ಗಾಳಿ$_1$ + ತೇರ್$_2$ ]

**ಗಾಳಿಪಟ** (ನಾ). ಕಾಗದ, ಕಡ್ಡಿ, ದಾರಗಳಿಂದ ಮಾಡಿ ಗಾಳಿ ಯಲ್ಲಿ ಹಾರಿಸುವ ಆಟದ ಪಟ; ಪತಂಗ: ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೋ ಎಂಬಂತೆ (ಜಯಸಾ. ೧-೪೧); ಪಟಗಾಜಿನುಣ್ ಸೂತ್ರವಿಡಿದಿದ್ದರಾ ಗಾಳಿಪಟ ಗಗನ ದೊಳಾಡುವಂತೆ (ಧರಕ. ೨-೪೩).

**ಗಾಳಿಪಟದ ಹಬ್ಬ**=ಆಷಾಢಮಾಸದ ಮೊದಲ ಏಕಾದಶಿಯ ದಿನ ಗಾಳಿಪಟಗಳನ್ನು ಆಡಿಸಿ ಆಚರಿಸುವ ಹಬ್ಬ: ಈ ಸಲ ನಾನು ಗಾಳಿ ಪಟದ ಹಬ್ಬಕ್ಕೆ ಒಳ್ಳೆಯ ಪತಂಗವನ್ನು ಕಟ್ಟಿದ್ದೇನೆ (ರೂಢಿ).

[ ಗಾಳಿ$_1$ + ಪಟ$_3$ ]

**ಗಾಳಿಪಟಂಬಿಡು** (ಕ್ರಿ). ಗಾಳಿಪಟವನ್ನು ಬಿಡು,—ಹಾರಿಸಂ: ಕಡೆಗಣ್ಣಳ ರಂಚಿ . . . ಎನಸುಂ ಸೊಗಯಿಸಿದುದು ನರರೂಪದ ಮಿನುಗುವ ಗಾಳಿಪಟಂಬಿಟ್ಟಂಗಜನನುರಾಗದಿ ಪಿಡಿಯಲ್ಪಿಚ್ಚೊಪ್ಪುವ ರಜ್ಜು ವಿದೆಂಬಂತೆ (ಜಯಸಾ.೪-೨೮). [ ಗಾಳಿಪಟ + ಬಿಡು$_1$ ]

**ಗಾಳಿಪೂಜೆ** (ನಾ). ೧. ಶಕ್ತಿದೇವತೆಯ ಪೂಜೆ; ಪ್ರಾಣಿಬಲಿಯನ್ನು ಕೊಡುವ ಮಾರಿ ಪೂಜೆ,—ಕಾಳೀಪೂಜೆ: (ಕ). ೨. ದೆವ್ವಗಳಿಗೆ ಪೂಜೆಮಾಡುವುದು: (ಕ). [ ಗಾಳಿ$_1$ + ಪೂಜೆ$_2$ ]

**ಗಾಳಿಬಂದೂಕು** (ನಾ). ಗಾಳಿಯ ಒತ್ತಡದಿಂದ ಶಬ್ದಮಾಡುವ, ಗುಂಡಿಲ್ಲದ ಬಂದೂಕು,—ಕೋವಿ: ಹೆದರಬ್ಯಾಡ, ಸಣ್ಣಕಾಕಾ, ಇದು ಗಾಳಿಬಂದೂಕು (ನಿರಾಶ. ೬೧). 'ಗಾಳಿಕೋವಿ' ಪರಾ.

[ ಗಾಳಿ$_1$ + ಬಂದೂಕು ]

**ಗಾಳಿಬಡಿ** (ಕ್ರಿ). ೧. ದೆವ್ವ, ಪಿಶಾಚಿ ಮೊದಲಾದ ದುಷ್ಟಶಕ್ತಿಗಳು ಮೆಟ್ಟಿಕೊಳ್ಳು; ದೆವ್ವಹಿಡಿ: ಎದುರು ಮನೆಯ ಹುಡುಗಿಗೆ ಗಾಳಿ ಬಡಿದಿದೆ (ರೂಢಿ). ೨. (ಆಲಂ) ಆಪತ್ತು ಒದಗು: ನನ್ನ ವಿಷಯಕ್ಕೆ ಬಿಂದೂನ ಭಯ ಮುರಿದಿತು ಎನ್ನುವಷ್ಟರಲ್ಲಿ ಅವಳಿಗೆ ಮತ್ತೊಂದು ಗಾಳಿಬಡಿದುಕೊಂಡಿತು (ಇಪ್ಪಕ. ೪೩೩).

[ ಗಾಳಿ$_1$ + ಬಡಿ$_1$ ]

**ಗಾಳಿಬಯಲು** (ನಾ). ಆವರಣವಿಲ್ಲದ ಬಯಲು; ಬಟ್ಟಬಯಲು: ಗಾಳಿಬಯಲಿನ ಬೀದಿ ಹೆಜ್ಜೆಮೂಡದ ಹಾದಿಯಲ್ಲಿ ಕುರುಹನು ಕಾಂಬ ಕಣ್ಣುಬರಲಿ (ಗಶಿ. ೮೬-೧೧). [ ಗಾಳಿ$_1$ + ಬಯಲು (<ಬಯಲ್) ]

**ಗಾಳಿಬಾಳೆ** (ನಾ). ಒಂದು ಬಗೆಯ ಬಾಳೆ; ಕಪ್ಪುರಬಾಳೆ; ವಾಟಬಾಳೆ: ತಾಮ್ರದ ಹರಿವಾಣದಲ್ಲಿ ಎರಡು ಹಣತೆ ಗಾಳಿಬಾಳೆ ಹಣ್ಣುಗಳನ್ನಿರಿಸಿದ (ಜಗುಳ. ೯೬). [ ಗಾಳಿ$_1$ + ಬಾಳೆ$_1$ (<ಬಾಟಿ) ]

**ಗಾಳಿಬಿಡಿಸು** (ಕ್ರಿ). ೧. ಪಿಶಾಚಿಯನ್ನು ಬಿಡಿಸು: ಯಾರೋ ಒಬ್ಬ ಮಂತ್ರವಾದಿ ಬಂದು ಆಕೆಗೆ ಗಾಳಿಬಿಡಿಸಿದ (ರೂಢಿ). ೨. (ಅಲಂ) ಶಿಕ್ಷಿಸು; ಬುದ್ಧಿಕಲಿಸು: ಆ ಕಳ್ಳನಿಗೆ ಚೆನ್ನಾಗಿ ಗಾಳಿಬಿಡಿಸಿದರು (ರೂಢಿ). [ ಗಾಳಿ$_1$ + ಬಿಡಿಸು ]

**ಗಾಳಿಬುಡ್ಡೆ** 'ಗಾಳಿಬುರುಡೆ' ನೋ.

**ಗಾಳಿಬುರುಡೆ**, ಗಾಳಿಬುಡ್ಡೆ (ನಾ). ೧. ಗಾಳಿಯನ್ನು ತುಂಬುವ ಬುರುಡೆ. ೨. (ಅಲಂ) ಸತ್ವಹೀನವಾದುದು: ಅವನದು ಸ್ಥೂಲ ದೇಹ, ಆದರೆ ಬರೀ ಗಾಳಿಬುರುಡೆ (ರೂಢಿ). **ಗಾಳಿಬುಡ್ಡೆ**: ೧. ವಿಭುವೊಬ್ಬನೀ ಗಾಳಿಬುಡ್ಡೆಗಳನೂದುವವನು ಹಬೆಗುಳ್ಳೆಯೋ ಸೃಷ್ಟಿ (ಮಂಕುಳ. ೮೫). [ ಗಾಳಿ$_1$ + ಬುರುಡೆ ]

**ಗಾಳಿಮಂಟಪ**, ಘಾಳಿಮಂಟಪ (ನಾ). ೧. ನಾಲ್ಕು ಕಡೆಯೂ ಗಾಳಿ ಬೀಸುವಂತೆ ತೆರೆದಿರುವ ಮಂಟಪ: (ಹ). **ಘಾಳಿಮಂಟಪ**: ೨. ದೇವಸ್ಥಾನದ ಒಂದುಭಾಗ: ಮಹಾಲಕ್ಷ್ಮೀದೇವಿ ಅಂಮನವರಿಗೆ ತಾವೂ ಮಾಡಿಸಿದಂಥಾ ಶೇವೆ . . . ತೆಂಕಣಗೋಪುರ ಆ ಬಾಗಿಲ ವಾಡಗಳು ಅಡಿಗೆಮನೆ ಆ ಮುಂಂದಣ ಚಪ್ಪರ ಪೋಲಗದ ಘಾಳಿಮಂಟಪ (ಸೌಇಇ. IX-ii, ೫೮೫-೧೯; 1588). [ ಗಾಳಿ$_1$ + ಮಂಟಪ ]

**ಗಾಳಿಮಳೆ** (ನಾ). ಗಾಳಿಯಿಂದ ಕೂಡಿದ ಮಳೆ; ರಭಸದ ಮಳೆ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿಮಳೆಯೂ ಸುರಿಯತೊಡಗಿತು (ಚಾಣಿಗಿ. ೭೭). [ ಗಾಳಿ$_1$ + ಮಳೆ (<ಮಟಿ) ]

**ಗಾಳಿಮಾತು** 'ಗಾಳಿವಾತು$_1$' ನೋ.

**ಗಾಳಿಮೆಟ್ಟು** (ಕ್ರಿ). = ಗಾಳಿಹಿಡಿ ೧: ಹಾಳುಬಾವಿಯ ಬಳಿಗೆ ಹೋದಾಗ ಅವಳಿಗೆ ಗಾಳಿಮೆಟ್ಟಿಕೊಂಡಿತಂತೆ (ರೂಢಿ). [ ಗಾಳಿ$_1$ + ಮೆಟ್ಟು$_1$ ]

**ಗಾಳಿಯಂತ್ರ** (ನಾ). =ಗಾಳಿಗಿರಣಿ: ಆಮೇಲೆ ಈ ಊರಿನಲ್ಲಿ ಮೊದಲಾಗಿ ನಾನು ಗಾಳಿಯಂತ್ರ(Wind mill)ವನ್ನು ಕಂಡೆ (ಪ್ರವಾಸಿ. ೦೨೬). [ ಗಾಳಿ$_1$ + ಯಂತ್ರ ]

**ಗಾಳಿಯಮ್ಮ** (ನಾ). ಒಂದು ಬಗೆಯ ದನದ ರೋಗ; ದನಗಳ ಕಾಲು ಮತ್ತು ಬಾಯಿಗೆ ಬರುವ ಬೇನೆ: (ಎಪಿಮೈ. XV, ೩೯). [ ಗಾಳಿ$_1$ + ಅಮ್ಮ$_2$ ]

**ಗಾಳಿಯಿಕ್ಕು** (ಕ್ರಿ). ಗಾಳಿಯನ್ನು ಬೀಸು,—ಹಾಕು: ಬಿಜ್ಜಣಿಗೆಗೊಂಡು, ಮಹಾರಾಜನಿಗೆ ಮೆಲ್ಲಗೆ ಗಾಳಿಯಿಕ್ಕಲಾರಂಭಿಸುವಳು (ಬಟ್ಟೆಅ. ೦೭-೦೭). [ ಗಾಳಿ$_1$ + ಇಕ್ಕು ]

**ಗಾಳಿವಟ್ಟೆ**, ಘಾಳಿವಟ್ಟೆ (ನಾ). ಗಾಳಿ ಸಂಚರಿಸುವ ಹಾದಿ; ವಾಯುಮಾರ್ಗ; ಆಕಾಶ: "ಆಗಸ . . . ಗಾಳಿವಟ್ಟೆಯೆನಲ್ಕಂದಾಗಲಾಕಾಶಮೆಸರದು" (ಶವಿಕಂ. ೯೬); ಭಾಸ್ಕರಂ ಬಟಿಕೆ ಗಾಳಿವಟ್ಟೆಯುನಿಟಿದು ಕಡಲ ನೀರ್ವುಗೆ ತಾರೆಗಳ್ ತೋರ್ದುವಂಬರದೊಳು (ಶ್ರೀರಾಮ. ೫ ೩೦). **ಘಾಳಿವಟ್ಟೆ**: "ಮಾಂಬಟ್ಟೆಯೆನೆ ಘಾ[ಪಾಠಾಂ. ಗಾ]ಳಿವಟ್ಟೆ" (ಶಬ್ದಮ. ೦೦) [ ಗಾಳಿ$_1$ + ಬಟ್ಟೆ$_1$ ]

**ಗಾಳಿವಟ್ಟೆಗ** (ನಾ). ಆಕಾಶದಲ್ಲಿ ಸಂಚರಿಸುವವನಂ; ದೇವತೆ; ಖೇಚರ: "ಅಮರ್ದುಣಿಸುಗಳ್ . . . ಗಾಳಿವಟ್ಟೆಗರ್, ಅಚ್ಚರರ್, (ಬೋಳೆಯರ್)—ಈ ೯ ದೇವರ್ಕಳ ಪೆಸರ್" (ಕಕಶಾ. ೨-೦೯); "ಕನಸಿಲ್ಲದ ರೆಮೆಯಿಕ್ಕದರನುನಯದಿಂ ಗಾಳಿವಟ್ಟೆಗರುಮಚ್ಚರರೆಂದೆನುತುಂ . . . ದೇವವ್ರಾತಕಮರ್ದಾ ನಾಮಮಿವಕ್ಕುಂ" (ಶವಿಕಂ. ೩೨); ಏಳಡಿಭೂಮರ ರೇಳಡಿಖೇಚರರ್ ಗಾ[ಪಾಠಾಂ. ಘಾ]ಳಿವಟ್ಟೆಗ ಸುರರಸುರಜಾಲಮಲ್ಲಿಂದ ನುರೇಂದ್ರರೊಯ್ದರು ನಾಥ ಕೇಳೀವನದ ಮಂಟಪಕೆ (ಪರ್ವತಿ. ೦೦-೫೦.) [ ಗಾಳಿವಟ್ಟೆ + – ಗ$_2$ ]

**ಗಾಳಿವಟ್ಟೆದಲೆಯ** (ನಾ). ಆಕಾಶವೇ ತಲೆಯಾಗುಳ್ಳವನಂ; ವ್ಯೋಮಕೇಶ; ಶಿವ: ಗಾರುಡಧ್ವಜನತಾ ಗಾಳಿವಟ್ಟೆದಲೆಯಾ . . . ವಿರಾಗಾ ಸರಾಗಾ ಜಯ (ಉದ್ಭದೇ. ೬-೨೬). [ ಗಾಳಿವಟ್ಟೆ + ತಲೆ$_1$ + – ಅ$_7$ ]

**ಗಾಳಿವರು** (ಕ್ರಿ). ಗಾಳಿಯಂತೆ ಬರು; ವೇಗವಾಗಿ ಬರು: ಸರ್ವಸ್ವವನ್ನೂ ಕೊಳ್ಳೆಯಿಂದ ಕೊಂಡು ನಿರ್ಮೂಲ ಮಾಡಿಬಿಡಲು ಇಲ್ಲಿಗೆ ಗಾಳಿವರುತ್ತಿರುವನು (ಮಂತ್ರಶ. ೭೫-೨೦). [ ಗಾಳಿ$_1$ + ಬರು$_1$ (<ಬರ್$_1$) ]

**ಗಾಳಿವರ್ತಮಾನ** (ನಾ). "(ನಿಜವೆಂದು ತಿಳಿಯದ) ಕೇಳಿಕೆಯ ಮಾತು; ಗಾಳಿವರ್ತಮಾನ; ಬೀದಿಸುದ್ದಿ" (Hear.say. ಇಂಕನಿ): ಬೇರೆ ಮದುವೆಮಾಡಿಸುವುದಕ್ಕೆ ಪ್ರಯತ್ನಿಸುತ್ತಿದಾಳೆ ಎಂಬುದಾಗಿ ಗಾಳಿವರ್ತಮಾನ ಕೇಳುತ್ತ ಬಂತು (ಮಹಾಗ. ೬೨). [ ಗಾಳಿ$_1$ + ವರ್ತಮಾನ ]

**ಗಾಳಿವಾತು$_1$**, ಗಾಳಿಮಾತು (ನಾ). ಗಾಳಿಯಲ್ಲಿ ಹರಡುವ ವರ್ತಮಾನ; ಸುಳ್ಳುಸುದ್ದಿ: ಜಾಣರ್ ಭಾವಿಸಿ ಬಗೆದು ನೋಡೆ ನೆಲೆಗೊಟ್ಟುಸಿರೆಂಬುದೆ ಗಾಳಿವಾತದಂ ನಂಬುವುದೇ (ಧರ್ಮನಾ. ೫-೮೯); ಗಾಳಿವಾತಲ್ಲವ ಮಜೆಯೆಂದು ತಾಂ ಮುನ್ನ ಕೇಳಿದಂತೊರೆದನಲ್ಲವನು (ಭರತ. ೫೭-೯೪). **ಗಾಳಿಮಾತು**: ಸುಮ್ಮನೆ ಗಾಳಿಮಾತು ನಂಬಿಕೊಂಡು ಮಾತನಾಡಬಾರದು (ರೂಢಿ). [ ಗಾಳಿ$_1$ + ಮಾತು$_1$ ]

**ಗಾಳಿವಾತು$_2$** (ನಾ). ನಿಂದೆ; ಬಯ್ಗುಳು: "ಗಾಳಿವಾತು = ಬೈಗುಳ್" (ಕಮುದ. ಪರಿ. ೨); "ತಿಟ್ಟೆಂದೊಡಂ ಗಾಳಿವಾತೆಂದೊಡಂ ಬೈಗುಳಕ್ಕುಂ" (ಶಬ್ದಮು. ೫೯); "ಗಾಳಿವಾತೆಂದು ತಿಟ್ಟೆಂದು ಬೈಗುಳ್" (ಶಬ್ದಶ್ರೀ. ೮೯). [ ಗಾಳಿ$_2$ + ಮಾತು$_1$ ]

**ಗಾಳಿವಾರ** (ನಾ). (ಉಕ) ಗಾಳಿಪಟ: ಬಾಲಾಗುಸಿಯಿಲ್ಲದೆ ಗಾಳಿವಾರವು ಇರುವ ಬಗೆ ಹೇಗೆ (ಬಟ್ಟಹೊ. ೦೬). [ ಗಾಳಿ$_1$ + ವಾರ ? ]

**ಗಾಳಿವಿಡಿ** (ಕ್ರಿ). ೧. "ದೆವ್ವಹಿಡಿ" (ಪ್ರಥಮ) ೨. "ವಾಸನೆ ಹಿಡಿ" (ಪ್ರಥಮ): ಗಾಳಿವಿಡಿದಳ್ಕಂಕಗೊಂಡು . . . ಹಿಂದೆ ಮರಲ್ದಿಕ್ಕಲಂ (ಹಕಳ. ೬-೦೦). [ ಗಾಳಿ$_1$ + ಹಿಡಿ$_1$ ]

**ಗಾಳಿವೆಜಗು** (ನಾ). ಗಾಳಿ ಬೀಸುವ ಸ್ಥಳ: ಅಂತು ಮಡಿಪಿ ಶರೀರ ಸಮೇತಂ ನಿರಾದಾನವಿಧಾನದಿಂ ಗಾಳಿವೆಜಗಿನೊಳ್ದಮಳದೀಪಿಕೆಯಂತಿರ್ದರುಮೊಡನಿದ್ದಶ್ಮರಾಗಿ ಬಂದು (ಶಾಂತಿಪು. ೬-೮೧ ವ); ಆ ಗಾಳಿವೆಜ[ಪಾಠಾಂ. ಸ]ಗಿನಿಂದಮೆ ಪೋಗಿ ಪರಿಶ್ರಮವಶಾತುರಂ ವಸುದೇವಂ ನಾಗೇಂದ್ರನಂತೆ ಮದಲೀಲಾಗಮನಂ ಕಂಡನೊಂದು ಕಮಳಾಕರಮಂ (ಅರ್ಧನೇ. ೫-೯೯); ಕಿಜಿದು ಬೇಗಮಾ ಗಾಳಿವೆಜಗಿನೊಳೆ ರಥಮಂ ನಿಲಿಸಿ ವಿಸ್ಮಯಂಬಡುತ್ತ (ಪುಷ್ಪಪು. ೫-೧೦೯ ವ). [ ಗಾಳಿ$_1$ + ವೆಜಗು ? ]

**ಗಾಳಿವೇಗ** (ನಾ). ಗಾಳಿಯ ವೇಗ; ವಾಯುವೇಗ: ಗಾಳಿವೇಗದೊಳಿಯ್ದು ಕೈಲಾಸಗಿರಿಯ ನಿರಾಲಸ್ಯದಿಂದೇಜಿ . . . ಭೂಲಲನೇಶ ಪೊರ್ದಿದನು (ಭರತ. ೪೪-೬೩). [ ಗಾಳಿ$_1$ + ವೇಗ]

**ಗಾಳಿಶಂಕೆ** (ನಾ). ದೆವ್ವದ ಭೀತಿ; ಪಿಶಾಚಿಯ ಕಾಟ; ಭೂತಭಯ: (ಹ). [ ಗಾಳಿ$_1$ + ಶಂಕೆ ]

**ಗಾಳಿಸಮಾಚಾರ** (ನಾ).=ಗಾಳಿವರ್ತಮಾನ: "ವದಂತಿ, ಗಾಳಿಸಮಾಚಾರ, ಬೀದಿಸುದ್ದಿ" (Cry. ಇಂಕನಿ). [ ಗಾಳಿ$_1$ + ಸಮಾಚಾರ ]

**ಗಾಳಿಸವಾರಿ** (ನಾ). ಗಾಳಿಯಲ್ಲಿ ಸಂಚಾರಮಾಡುವುದು; ಬಯಲ ತಿರುಗಾಟ; ಶುದ್ಧವಾದ ಗಾಳಿಬೀಸುವ ಕಡೆ ತಿರುಗಾಡುವುದು: ನೀನು ಕುದುರೆಯ ಮೇಲೆ ಗಾಳಿಸವಾರಿ ಹೊರಟರೆ ನಾನೂ ನಿನ್ನ ಪಕ್ಕದಲ್ಲಿ

ರುತ್ತೀನೆ (ಆರ್ಯ್ಕ. ೮೦) ; ಒಂದು ದಿನ ಬೆಳಗ್ಗೆ ನಾನು ಗಾಳಿಸವಾರಿಗೆ ಹೊರಡಬೇಕೆಂದಿದ್ದೆ (ಬರಬಾ. ೧೫೨). [ ಗಾಳಿ$_1$ + ಸವಾರಿ ]

**ಗಾಳಿಸು$_1$** (ಕ್ರಿ). ಮೆಟ್ಟಿಕೊಳ್ಳು ; ಆಡರು : ತಾಳತಪ್ಪೀ ರೀತಿ ಬೇತಾಳ ದುತನ್ನ ಗಾಳಿಸುವ ಗೋಳಿಸುವ ಖಳರು ಕೆಲರು (ನನಲ್ಲ. ೮).
[ ಗಾಳಿ$_1$ + – ಸು$_1$ ]

**ಗಾಳಿಸು$_2$** (ಕ್ರಿ). ೧. ಹೋಗಲಾಡಿಸು ; ದೂರ ಮಾಡು : ಅ ಮುನಿರಾಜಂ ಕರ್ಮಂಗಳಂ ಗಾಳಿ[ ಪಾಠಾಂ. ಘಾತಿ ]ಸಿದಂ ಈ ರಾಜರಾಜಂ ಷಟ್ಖಂಡಮಂಡಳಮಂ ಬಾಯ್ಕೇಳಿಸಿದಂ (ಆದಿಪು. ೬-೨೪ ವ) ; ೨. ಶೋಧಿಸು ; ಸೋಸು ; ಒಂದರಿಯಾಡು : ಶರ್ಕರೆ ಶುಂಠಿ ಮಾತುಳುಂಗದ ಪುಳಿಯುಂಬಿವಂ ಮೊಸರೊಳಿಕ್ಕಿ ಸಿತಾಂಬರದಿಂದೆ ಗಾಳಿಸಿಟ್ಟು (ಲೋಕೋಪ. ೮-೫೩) ; ಸರಿ ಕಳ್ಳಂ ಗಾಳಿಸುವರ ನೆಣದ ನೆತ್ತರಂ ಗಾಳಿಸುವರ್ (ಸುಕುಮಾ. ೧೧-೪೬) ; ಹಾಲನ್ನು ಕುದಿಸಿ, ಚೆನ್ನಾಗಿ ಗಾಳಿಸಿದ ಹಿಟ್ಟಿನೊಡನೆ ಬೆರಸಿ ಮುದ್ದೆಯಾಗುವವರೆಗೆ ಕೆಲಸುವುದು (ಅಡುಸಾ. ೯೪) ; ಇದನ್ನು ಕಡಲುತೀರಗಳಿಂದಲೂ, ನದಿತೀರ ಗಳಿಂದಲೂ ತಂದು ಸಂಗ್ರಹಿಸಿ ಗಾಳಿಸು(sift)ತ್ತಾರೆ (ಪಾಲಿಶ್ರ. I, ೨೩೩). ೩. ಸೋರು ; ಸುರಿ : ಮೇಘ ಸಂತತಿಗಾದ ಗರ್ಭಮೆಲ್ಲಂ ತುಂಬಲ್ ಮಾತೇನೊ ಗಾಳಿಸಲೆಂದಜಿಗೆ ಅಟ್ಟಕಂದರ್ಪನ ಸೂತ್ರೀಪ್ಪದಿಂ (ಅಟ್ಟಮ. ೮-೬೧). ೪. (ಅಲಂ) ಸೂರೆಮಾಡು : ಗಾಳಿಸು ಗೆಲ್ವನಂ ಹರಹು ಹೂಜೆಗನಂ ಸುಲಿ ಸುತ್ತುಗಾಜಿಸಂ (ಲೀಲಾವ. ೨-೧೦೨).
[ ಗಾಳನ + – ಇಸು$_2$ ]

**ಗಾಳಿಸುದ್ದಿ** (ನಾ). ಗಾಳಿ ವರ್ತಮಾನ ; ನಿರಾಧಾರವಾದ ವಾರ್ತೆ : ಅವರ ದಸ್ತಗಿರಿಯಾದ ಬಗ್ಗೆ ಗಾಳಿಸುದ್ದಿ ಕೇಳಿದೆ (ರೂಢಿ).
[ ಗಾಳಿ$_1$ + ಸುದ್ದಿ ]

**ಗಾಳಿಸೆಬೆ** (ನಾ). = ಗಾಳಿಯಮ್ಮ : (ಎಸಮ್ಮ. XV , ೩೯).
[ ಗಾಳಿ$_1$ + ಸೆಬೆ ? ]

**ಗಾಳಿಸೊಂಕು** ' ಗಾಳಿಸೋಂಕು ' ನೋ.

**ಗಾಳಿಸೋಂಕು, ಗಾಳಿಸೊಂಕು** (ನಾ). ಭೂತ, ಪಿಶಾಚಿ ಮೊದಲಾದುವು ಗಳ ಆಕ್ರಮಣ, – ಪೀಡೆ : ಗಾಳಿಸೋಂಕಾಯ್ತೆಂದು ಬೇಗಡಿಗಳಂ ಕರೆದು ಬೇಳುವೆಯನೆಸಗಿದರ್ (ಕಾಲೂರ. ೧೯೩-೪೦೦). **ಗಾಳಿಸೊಂಕು :** ಅವರ ಮನೆಯಲ್ಲಿ ಗಾಳಿಸೊಂಕು ಆಗಿದೆ ಎಂಬ ಸುದ್ದಿ ಹರಡಿತು (ರೂಢಿ).
[ ಗಾಳಿ$_1$ + ಸೋಂಕು$_2$ ]

**ಗಾಳಿಹಡಗು** (ನಾ). ಗಾಳಿಯಲ್ಲಿ ತೇಲುವ ಚೀಲ ; ಆಕಾಶಬುಟ್ಟಿ : " (ಫಲಕವಿಮಾನವಲ್ಲದ) ಗಾಳಿಹಡಗು, ಆಕಾಶಬುಟ್ಟಿ " (Gas-bag. ಇಂಕನಿ). [ ಗಾಳಿ$_1$ + ಹಡಗು ( < ಪಡಂಗು ) ]

**ಗಾಳಿಹಾಕು** (ಕ್ರಿ). ೧. ಗಾಳಿ ಬೀಸು : ಮಗುವಿಗೆ ಸ್ವಲ್ಪ ಗಾಳಿಹಾಕು (ರೂಢಿ). ೨. (ಅಲಂ) ಉಬ್ಬಿಸು ; ಹುರಿದುಂಬಿಸು : ಉದ್ಯಮ ಹೂಡಬೇಕೆಂದು ಅವನಿಗೆ ಗಾಳಿಹಾಕಿದೆ (ರೂಢಿ).
[ ಗಾಳಿ$_1$ + ಹಾಕು ( < ಪಾಯ್ಸು$_1$ ) ]

**ಗಾಳಿಹಿಡಿ** (ಕ್ರಿ). ೧. ದೆವ್ವ ಹಿಡಿ ; ಪಿಶಾಚಿ ಮೆಟ್ಟು ; ಭೂತಾವೇಶ ವುಂಟಾಗು : ಆಕೆಗೆ ಗಾಳಿಹಿಡಿದಿದೆ (ರೂಢಿ). ೨. ವಾಸನೆ ಹಿಡಿ ; ಸುಳಿವು ಹಿಡಿ : ಜೊತೆಯಲ್ಲಿ ಬರುತ್ತಿದ್ದ ನಾಯಿಗಳು ಇದ್ದಕ್ಕಿದ್ದಂತೆ ನೆಲವನ್ನು ಮೂಸಿ ' ಗಾಳಿಹಿಡಿಯುತ್ತ ' . . . ತಿರುಗತೊಡಗಿದುವು ! (ಕಾನೂರು. ೧೪೦). [ ಗಾಳಿ$_1$ + ಹಿಡಿ$_1$ ( < ಪಿಡಿ$_1$ ) ]

**ಗಾಳಿಹೋಗು** (ಕ್ರಿ). ೧. ಗಾಳಿ ಹೊರಬರು : ಕಾರಿನ ಚಕ್ರದಲ್ಲಿ ಗಾಳಿ ಹೋಗಿದೆ (ರೂಢಿ). ೨. ಭೂತಾವೇಶವು ನಿಂತುಹೋಗು ; ಮೈಮೇಲೆ ಬಂದಿದ್ದ ದೆವ್ವ, ಪಿಶಾಚಿ ಮೊದಲಾದುವು ಬಿಟ್ಟು ಹೋಗು : ಗಾಳಿ ಹೋದಮೇಲೆ ಏನೇನಾಯಿತೆಂದು ಮಾವ ಕೇಳಿದರು (ಸ್ಮೃತಿಚಿ. ೩೨). [ ಗಾಳಿ$_1$ + ಹೋಗು$_1$ ( < ಪೋಗು$_1$ ) ]

**ಗಾಳು$_1$, ಗಾಲು** (ನಾ). ೧. ಒರಟಾದುದು ; ಸೊಕ್ಕಿದುದು. ' ಗಾಳುಗೆಡು ', ' ಗಾಳುತನ ' ಪರಾ. ೨. ಸಾಮಾನ್ಯವ್ಯಕ್ತಿ ; ಕೆಲಸಕ್ಕೆ ಬಾರದ ವ್ಯಕ್ತಿ ; ನಾಡಾಡಿ : ಅಟಮಟಿಗಂ ಗಾಳುವಿವಂ ಕುಟಿಲಂ ಲಂಪಟನೆನಿಪ್ಪಮಂ ಮಾನಸನೇ (ಕಾವ್ಯಾವ. ೩೬) ; ಬೀದಿಯೊಳ್ಪಗಿದು ಮುಂದಲೆಯೊಳ್ ಕಿಚುನಕ್ಕನಿಕ್ಕಿದಲ್ಲದೆ ಮಚಿದಾಕೆ ನಕ್ಕಚಿವಳೇ ಸುಡು ವಳ್ ಗಳ ಗಾಳು ಗಂಡನಂ (ಲೀಲಾವ. ೨-೧೦೦) ; ಕೀರ್ತ್ಯಂಗನೆ . . . ನರ್ತಿಸುತವಿರ್ಪಳ್ ಗಾಳುವಿಂತಾವಳೋ (ಎಕ. V, ಅರಸೀ. ೬೯-೫೮ ; 1183). (ಗು). ೩. ಅಸಂಸ್ಕೃತ ; ಒರಟಾದ ; ಕೀಳಾದ. ' ಗಾಳು ಗುಂಟಣಿ ', ' ಗಾಳುಗೊರವ ' ಪರಾ. **ಗಾಲು :** (ಕ).

**ಗಾಳಾಗು** = ಗಣನೆಗೆ ಬಾರದಾಗು ; ಅಪ್ರಯೋಜಕವಾಗು ; ಹಾಳಾಗು : ರಥದ ಗಾಲಿಯು ಗರುವತನ ಗಾಳಾಯ್ತಲೇ ಪೊಪ್ಪರಿಸಿ ತಗ್ಗಿತು ತೇರು (ಕುವ್ಯಾಕ. ೨೬-೧೩) ; ಮೂಗಿಲಿಯೆಸವಂತಂ ಮನೆವಾಗಿಲ್ಬಾಗೆ ಜೋಗಿ ಬಂದನೆಂದೆಳಮಕ್ಕಳ್ ಕೂಗಿಡೆ ಬಿಗುರ್ತದೇಂ ಗಾಳಾಗರೆ ಚಿಕ ದೇವರಾಯನೊಳ್ಪೆಣಸಿದವರ್ (ಅಪ್ರತಿ. ೧೪೦-೨೦) ; ಕಾನೂರುಮನೆ ತಾನು ಬಿಟ್ಟು ಹೋದಾಗ ಇದ್ದುದಕ್ಕಿಂತಲೂ ಈಗ ಹೆಚ್ಚು ಪಾಳಾಗಿ, ಗಾಳಾಗಿ ತೋರಿತು (ಕಾನೂರು. ೫೭೪). [ < ಕಾಟು$_1$ ]

**ಗಾಳು$_2$** (ನಾ). ಕರಿಯ ಬಣ್ಣ ; ಕಪ್ಪು. ' ಗಾಳುಗಣ್ ' ಪರಾ.
[ < ಕಾಟು$_2$ ]

**ಗಾಳುಗಂಡಿಕೆ** (ನಾ). ೧. ಕೀಳಾದ ಪುರುಷತ್ವ ; ಸೊಕ್ಕಿನ ಗಂಡುತನ : ನಿನ್ನ ಸೊರ್ಕುಜವ್ವನದ ಸೊಬಗನ್ನೊಡ್ಡಿ ಹೀಗೆ ಬೀಸಿರುವ ಕಣಕು ಕಣ್ಣುಳ್ಳ ವನನ್ನು ಎರ್ದೆಗಲಂಕಿ ಗಾಳುಗಂಡಿಕೆಗುಬ್ಬಿಸುತ್ತಿದೆ (ಬಟ್ಟಅ. ೦೦-೨೦). ೨. ಧೂರ್ತಸಾಹಸ : ಗಂಗರಾಜನು ಅವನ ಗಾಳುಗಂಡಿಕೆಗೆ ಅಚ್ಚರಿ ಪಟ್ಟನು (ಶವತಿ. ೬೮). [ ಗಾಳು$_1$ + ಗಂಡಿಕೆ ]

**ಗಾಳುಗಜಬು** (ನಾ). ಬಲವಾದ ಗದ್ದಲ ; ಪ್ರಬಲವಾದ ಗರ್ಜನೆ ; ದೊಡ್ಡ ಕೋಲಾಹಲ : ಕೊಂಬಿನ ಗಾಳುಗಜಬಿನ ಕಹಳೆಗಳ ಕಳಕಳದ ಬೊಗ್ಗುಗಳ ಮೇಳವಣೆ ಭುಗಿಲಿಡಲು (ಕುವ್ಯಾಭೀ. ೬-೯).
[ ಗಾಳು$_1$ + ಗಜಬು$_2$ ]

**ಗಾಳುಗಣ್** (ನಾ). ಕಪ್ಪಾದ ಕಣ್ಣು ; ಕಾಂತಿಯುತವಾದ ಕಣ್ಣು ; ಆಕರ್ಷಕವಾದ ನೇತ್ರ : ಚಾವಳ ಹರಿಣೀ ವಿಲೋಕನಮನೀಳ್ಕುಟಿಗೊಂಡ ಕೆನಳ್ಕೆ ಗಾಳುಗಣ್ಕೊಳೆಯು ಪುಳಿಂದಿ ಬೀರಸಿರಿಯುಂತಿರೆ ಬೆನ್ನನೆ ಬಂದಳೋ ಪವಾ(ಅರ್ಧನೇ. ೩-೬೧) ; ನೆತ್ತರ ಸಾರಿಯಂತೆ ವೊಲೆ ಮೂಡಲೊಡಂ ಗುಣವೇಚಿ ಲಜ್ಜೆ ನಾಣ್ ಪತ್ತುವು ಗಾಳುಗಣ್ಣಿರಿದುವಾಸೆಯು ಪಾಸಗೆ ಯಂತೆ (ಅನಂಪು. ೮-೧೫). [ ಗಾಳು$_2$ + ಕಣ್ ]

**ಗಾಳುಗುಂಟಣಿ** (ನಾ). ಕ್ಷುದ್ರೆಯಾದ ಕುಂಟಣಿ ; ಧೂರ್ತಳಾದ ತಲೆಹಿಡುಕಿ : ದಾವರಡಾಕಿನಿ ಶಾಕಿನಿದೇವತೆ ಕತವೇಟಲುತಿಶಯಂ ಬಲ್ಲಳ್ ನಾನಾ ವಿಧದ ಗಾಳುಗುಂಟ[ ಪಾಠಾಂ. ಕೂಂಠ]ಣಿ ಭೂವಳಯದೊಳೆಸೆವ ಕನ್ನೆಯುಜ್ಜಯಿನಿಯೊಳಂ (ಶಂಕಕಂ. ೦೫೨-೪). ' ಕಾಳುಗುಂಟಣಿ ' ಪರಾ.
[ ಗಾಳು$_1$ + ಕುಂಟಣಿ ]

**ಗಾಳುಗೂಟ** (ನಾ). ದುಡುಕು ಸ್ವಭಾವದ ಮೂರ್ಖ ; ಒರಟನಾದ ಪೆದ್ದ : ಗಾಳುಗೂಟರೊಳ್ ಪೊಣರ್ವ ಗನ್ನನಿಟ್ಟುರದ ಸೆಣಸಾಟಮುಂ ರಾಮಸೇನೆಗೆ ಮುಡಿದುದು(ರಾಮಾಶ್ವ. ೦೬೩-೨೩).
[ ಗಾಳು$_1$ + ಕೂಟ ]

**ಗಾಳುಗೆಡು** (ಕ್ರಿ). ಒರಟುತನದಿಂದ ವರ್ತಿಸು : ಗ್ರಾಸ ವಸನ ಪರಿಕರ ವಿಲ್ಲದಿರೆ ಕಟ್ಟಾಸುರದೊಳು ಗಾಳುಗೆಡದೆ ಓಸರಿಸುತ್ತೊಯ್ಯನೇಕಾಂತ

೨. (ಅಲಂ) ಕ್ಷುದ್ರನಾದವನು; ಅಲ್ಪ: ರಂಗ ನಿನ್ನೊಳ್ನಡುವಿನ ಚೆಲ್ವಿಗೆ ಕೈ ಜಗಂಗಳು ನೆರೆಯವೆಂದೆನಲು ಗುಂಗುಱು ನೇಸಱವನು ಪೊಗಳ್ವಡೆ (ಶಶಸಾಂ. ೧-೩). **ಗುಂಗರ** : ೧. "ಮಶಕಂ=ಗುಂಗರಂ" (ಶಾಶಕ್. ೬೩).

**ಗುಂಗುರು₄**: ೧. ಕೆಸರಿನ ಕೂಟದಲಿ ಗುಂಗುರುಗಳೆದ್ದಲ್ಲಿಯ ಚರಿಸುವಂತೆ (ವಿವೇಕ. ೩-೩೨) ; ಸೊಳ್ಳೆಗಳೂ ಗುಂಗುರುಗಳೂ ಹಳ್ಳಿಯಲ್ಲೆಲ್ಲಾ ಪ್ರಬಲವಾದವು (ಮಲೆನಾ. ೦೫೬) ; ನುಸಿ, ಗುಂಗುರು, ಜಿರಲೆ ಮೊದಲಾದ ಇನ್ನೂ ಏನೇನೋ ಇವೆ (ನಂಟರು. ೪೨) ; ಆನೆಗೆ ಗುಂಗುರು ಕಾಡಿದ ಹಾಗೆ (ಗಾದೆ). **ಗುಗ್ಗುರು₁** : ೧. ಎಲ್ಲವೂ ಪತಂಗಗಳಲ್ಲ; ಹಲವು ಭ್ರಮರಗಳೂ, ಗುಗ್ಗುರುಗಳೂ ಇದ್ದವು (ಅಪೂಪ. ೧೧). **ಘುಂಘುಱು**: ೧. ಶಿವಮಹಿಮೆಯೆಂಬಾ ಸೊಗಸಿನತ್ತಿಯ ಮರದ ಹಣ್ಣೊಳಗೆ ಘುಂಘುಱಾದಿಗಳಂತೆ ಹರಿಯಜಾದ್ಯಖಿಳ ಜೀವರ್ಕಳಿನೆ (ವೀಶೈಪು. ೯-೧೩-೯೪).

**ಗುಂಗುರಿಯ ಮಾವು=ಗುಂಗಿಮಾವು**: ಮಾವು ಗೆರ್ಮಾವು . . . ಬೈತರೆ ಮಾವು ಗುಂಗುರಿಯ ಮಾವು (ನವಮೋ. ೨೪-೪೯).

[ ದೇಶ ತುಳು. ಗುಗ್ಗುರು ]

**ಗುಂಗೆ** 'ಗುಂಗಿ' ನೋ.

**ಗುಂಗೆಮಾವು** 'ಗುಂಗಿಮಾವು' ನೋ.

**ಗುಂಗೆಹುಳು** 'ಗುಂಗಿಹುಳು' ನೋ.

**ಗುಂಚಕ್ಕಿ**, ಗುಮಚಕ್ಕಿ (ನಾ). ಒಂದು ಜಾತಿಯ ಪಕ್ಷಿ ; ಗುಬ್ಬಿ ; ಚಟಕ : ಬತ್ತದ ಗದ್ದೆಗಳಲ್ಲಿ ಗುಂಚಕ್ಕಿಗಳು ಹಾರಾಡುತ್ತಿವೆ (ರೂಢಿ). **ಗುಮಚಕ್ಕಿ** : ಬೆಳಗಾಯಿತೆಂದು ಮಲಗೆದ್ದ ಕಾಳಿಂಗಗೆ ದಂಡೆ ಕಟ್ಟಿದರ್ದೋ ಗುಮಚಕ್ಕಿ (ಜಗೀತೆ. ೧೨೦). [ ಗುಂಚಿ + ಹಕ್ಕಿ (<ಪಕ್ಕಿ₁) ]

**ಗುಂಚಿ** (ನಾ). ಗುಬ್ಬಚ್ಚಿ ; ಗುಬ್ಬಿ : ಅಕ್ಕಾತಂಗೀರ ಹುದಗೀನ ಭತ್ತಾಕೆ ಮಾಯಾದಾ ಗುಂಚೀ ಕೌದಾವೋ (ಹುಟ್ಟಹ. ೦೯೭). [<ಗುಬ್ಬಚ್ಚಿ ]

**ಗುಂಜ₁** (ನಾ). ಒಂದು ಅನುಕರಣಶಬ್ದ ; ದುಂಬಿಯ ಗುಂಯಿ ಗುಂಯಿ ಧ್ವನಿ. 'ಗುಂಜಗಾನ' ಪರಾ.

**ಗುಂಜ₂** 'ಗುಂಜಿ' ನೋ.

**ಗುಂಜ₃** (ನಾ). ಭಂಡಾರ ; ಆಶ್ರಯ ; ಗಣಿ : "ಖನಿಗುಂಜಮಾಕರಂ ಕಣಿಯಕ್ಕು" (ಮಂಗರಾ. ೩೦-೩). [ <ಸಂ. ಗಂಜ ]

**ಗುಂಜಗಾನ** (ನಾ). ಮಧುರವಾದ ಧ್ವನಿ,—ಗಾನ : ಅರಳಿದ ತಾವರೆಯ ಬಳಿ ಗುಂಜಗಾನವನ್ನು ಮಾಡುತ್ತ ತುಂಬಿಯು ಬಂದು (ಭಾರಸಂ. ೦೩೯). [ ಗುಂಜ₁ + ಗಾನ ]

**ಗುಂಜತ್ಕುಂಜ** (ನಾ). ಮರ್ಮರಧ್ವನಿ ಬರುತ್ತಿರುವ ಪೊದರು : ಗುಂಜತ್ಕುಂಜದೊಳಂ . . . ಅತಿಮನೋಹರವಾದ ಯಮುನಾಹ್ರದ ಪರಿಸರ ಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೩-೦೦೨ ವ). [ ಸಂ. (ಗುಂಜತ್ + ಕುಂಜ) ]

**ಗುಂಜನ** (ನಾ). ಮಧುರವಾದ ಧ್ವನಿ: ಒಂದು ಕಡೆಯಿಂದ ಸ್ವರ್ಣಭೂಷಣಗಳ ಗುಂಜನ (ಇಪ್ಪಕ. ೧೪೬) ; ಎಲ್ಲಿ ಕುಳಿತರು ಬಂದು ಕಿವಿಗೆ ಝೇಂಕರಿಸುವುದು ಮನೆ ತುಂಬ ಹರಿದಾಡಿ ಮರಿದುಂಬಿ ಗುಂಜನ (ನೆಲಮು. ೩-೨). [ ಸಂ. ]

**ಗುಂಜನ್ಮದಾಳಿ** (ನಾ). ಇಂಪಾಗಿ ಧ್ವನಿಗೈಯುತ್ತಿರುವ ಮದವೇರಿದ ದುಂಬಿ : ಗುಂಜನ್ಮದಾಳಿ ಮಾಲಾಮಂಜರಿ ಬೆನ್ನಟ್ಟಿ ಬಂದ ನವಸೌರಭಮಂ (ಶಾದಂಪೂ. ೬೯೨). [ ಸಂ. (ಗುಂಜತ್ + ಮದಾಲಿ) ]

**ಗುಂಜರಿಸು** (ಕ್ರಿ). ಗುಂಯ್ ಗುಂಯ್ ಎಂದು ಧ್ವನಿಮಾಡು : ಆದರೆ ಅವಳ ಕಿವಿಯ ಬಳಿ ಸುಳಿಸುಳಿದು ಗುಂಜರಿಸುವ ಮಂದಾಕ್ರಾಂತಾ ಛಂದಕ್ಕೆ ಮಾತ್ರ ಒಂದು ಮಾತ್ರೆಯ ಕೊರತೆ ಸಹ ಘಟಿಸದು (ಇಪ್ಪಕ. ೪೦೪). [ ಗುಂಜರ₀ + – ಇಸು₃ ]

**ಗುಂಜವಣ** (ನಾ). (?) : ಹಿರಿಯ ಗುಂಜವಣ ಚಕ್ರ[ವ] × × × ಮಾರಾಧರಪ್ಪ ತ್ರಿಳೋಚನ ಪಂಡಿತದೇ × × × ನಂ ಮಾಡಿ (ಸೌಇಇ. XX, ೧೬೬-೨೦ : 1179). [ ? ]

**ಗುಂಜಾಟ** (ನಾ). ಒಬ್ಬರನ್ನೊಬ್ಬರು ಎಳೆದಾಡುವುದು ; ಜಗಳ; ಸೆಣಸಾಟ : ಸಂಜೆಯಲಿ ಉಣ ಹೊಲ್ಲ ಎಂಜಲನು ತಿನ ಹೊಲ್ಲ ನಂಜು ಒಡಲೊಳಗೆ ಇರ ಹೊಲ್ಲ ಮನೆಯೊಳಗೆ ಗುಂಜಾಟ ಹೊಲ್ಲ (ಸರ್ವಜ್ಞ. ೧೬೪೪). [ ಗುಂಜು₁ + ಆಟ ]

**ಗುಂಜಾಡು** (ಕ್ರಿ). ಎಳೆದಾಡು ; ಸೆಳೆದುಬಿಡು ; ಗುಂಜು : ಜಗಳದಲ್ಲಿ ಪರಸ್ಪರ ತಲೆಯನ್ನು ಗುಂಜಾಡಿದರು (ರೂಢಿ). [ ಗುಂಜು₁ + ಆಡು₁ ]

**ಗುಂಜಾಪ್ರಮಾಣ** (ಗು). ಒಂದು ಗುಲಗಂಜಿಯಷ್ಟು ಗಾತ್ರದ ; ಗುಲಗಂಜಿಯಾಕಾರದ : ಬಳಗಾರ, ಗಂಧಕ . . . ನಿಂಬೇಹಣ್ಣಿನ ರಸದಿಂದ ಮರ್ದಿಸಿ ಗುಂಜಾಪ್ರಮಾಣ ಗುಳಿಗೆಯಂ ಮಾಡಿ ಶುಂಠಿರಸದಿಂದ ತೆಗೆದುಕೊಳ್ಳಲು ಶೀತಜ್ವರಂ ಗುಣಮಕ್ಕುಂ (ಸಕವೈ. ೬೪). [ ಸಂ. (ಗುಂಜಾ + ಪ್ರಮಾಣ) ]

**ಗುಂಜಾಫಳ** (ನಾ). ಗುಲಗಂಜಿ ಬೀಜ : ನಿಂಬಫಲಂ ಬಜೆ ಗುಂಜಾಫಳವಿಮಂ ಪರಿಕ್ಲನ್ನಂ ಮಾಡಿಟ್ಟು (ಲೋಕೋಪ. ೬-೪೩) ; ಗುಂಜಾಫಳಮೆನೆ ತಳೆದಿಭಮುಕ್ತಾವಳಿಯಂ ಮರುಳಮಮ ಶಬರಿಯೆನಿಸಿತ್ತದೞ್ಗೊಳ್ (ರಾಜಶೇ. ೬-೦೦೯). [ ಸಂ. ಗುಂಜಾಫಲ ]

**ಗುಂಜಾಭರಣ** (ನಾ). ಗುಲಗಂಜಿಗಳಿಂದ ಮಾಡಿದ ಆಭರಣ : ಗುಂಜಾಭರಣಮಂ ತೊಟ್ಟು . . . ಪುಳಿಂದಿಯರು ಪಾಡಿ ಚಳಿಸಿದರು ಬಿದಿರಕ್ಕಿಗಳನು (ಹರಿಕಾ. ೩-೩೩). [ ಸಂ. (ಗುಂಜಾ + ಆಭರಣ) ]

**ಗುಂಜಾಯಿಷಿ** (ನಾ). ೧. ಲಾಭ ; ಫಾಯಿದೆ : (ಕ). ೨. ರೈತನ ದಾಖಲೆಯಲ್ಲಿ ನಮೂದಿಸಿರುವುದಕ್ಕಿಂತ ಹೆಚ್ಚಾಗಿರುವ ಜಮೀನು : (ಕ). ೩. ಹರಾಜುಮಾಡುವಾಗ ಹೆಚ್ಚು ಹಣ ಕೊಡುವುದಾಗಿ ಹೇಳುವುದು ; ಛಡಸವಾಲು (ಮೈಗೆಜೆ. IV, ೭೭೦). ೪. (ಅಲಂ) ಗೋಗರೆಯುವಿಕೆ: ಅಲ್ಪ ಸ್ವಲ್ಪ 'ಗುಂಜಾಯಿಷಿ' ಯಲ್ಲೇ ಪ್ರಸನ್ನಯ್ಯನವರಿಂದ ಹಣ ದೊರೆಯುತ್ತಿತ್ತು (ಅವತಂ. ೦೪೧). [ ←ಪಾರ. ಹಿಂ. ಗುಂಜಾಇಶ್ ; ಮರಾ. ಗುಂಜಾಈಶ್ ]

**ಗುಂಜಾರವ** (ನಾ). ೧. ದುಂಬಿಯ ನಾದ,-ಧ್ವನಿ : ಭ್ರಮರಗಳ ಸಮುದಾಯವು ಮಧುವನ್ನು ಸೇವಿಸುವುದಕ್ಕೆ ಗುಂಜಾರವವನ್ನು ಮಾಡಹತ್ತಿವೆ (ಮುಂಜುಳ. ೨). ೨. ಮೆಲುದನಿ ; ಮಧುರ ನಾದ : ಈ ಚತುರ್ದಳ ಮಧ್ಯಬೀಜ ಕರ್ನಾಟಕವು ಧರ್ಮಗುಂಜಾರವದ ಕವಿಯ ಬೀಡು (ಅರಳು. ೩೦೬-೦೬). [ ಸಂ. (ಗುಂಜಾ + ರವ) ]

**ಗುಂಜಾಲಯ** (ನಾ). ಹೆಂಡದಂಗಡಿ ; ಪಡಖಾನೆ : ಪಾಪಂಗಳಸತಿಯರು ಗುಂಜಾಲಯದೊಳಗಿಹರು (ತರ್ಕೆಳ್. ೧-೯೧). [ ಗುಂಜ₃ (<ಗುಂಜ) + ಆಲಯ ]

**ಗುಂಜಾಲಾಡು** (ನಾ). ಒಂದು ಬಗೆಯ ಭಕ್ಷ್ಯ ; ಗುಲಗಂಜಿ ಆಕಾರದ ಕಾಳುಗಳುಳ್ಳ ಲಾಡು ; ಬೂಂದಿಲಾಡು : ಮುತ್ತಿನ ಬುಗುಡಿಯೇ, ಈ ಗುಂಜಾಲಾಡುವನ್ನು ತಿನ್ನು . . . ಎಂದು ಇಡುತ್ತಿದ್ದಳು (ನೀತಿಚಿಂ. XIV, ೬). [←ಮರಾ. ಗುಂಜಲಾಡೂ ]

**ಗುಂಜಿ**, ಗುಂಜ₂(ನಾ). ೧. ಗುಲಗಂಜಿ ಗಿಡ ಮತ್ತು ಅದರ ಬೀಜ : "ಕಾಕಚಿಂಚೀ, ಗುಂಜಾ, ಕೃಷ್ಣಲಾ ಈ ೩ ಗುಂಜಿ" (ನಾಚಿರಾ. ೦೦೯) : "ಆ ಕೃಷ್ಣಲಾ [ಪಾಠಾಂ. ವಾ] ಗುಂಜಿಯೆನಲು ಗುರುಗುಂಚಿ" (ಮಂಗರಾ. ೩೮-೨೩) ; ಗುಂಜಿಯ ಕುಂಜಮಂ ಮಿಸುಪಶೋಕೆಯ ಪಲ್ಲವಮಂ . . . ವನದೊಳೀಕ್ಷಿಸಿ (ಉದ್ಭಟ. ೦-೯೩) : ನಿಱಿದಳಿರ್ದೊಂಗಲಂ ತೆಗೆಯೆ ಬಾರುಳಿಯಂ ದನಿಗೆಯ್ದು ಶೋಕೆಯೊಳ್ಕಿಱುಮುಗುಳ್ಗುಂಜಿಯಂ ತಳೆದು (ಅನಂಪು.

೬-೦೬) : ಧರೆಯು ಗುಂಜಿಯ ಕಪ್ಪಿನಂತಿಹುದು (ಸಂಭಪ. ೬-೨). ೨. ಚಿನ್ನ, ವಜ್ರ ಮೊದಲಾದುವನ್ನು ತೂಗುವ ಸಣ್ಣ ತೂಕದ ಪ್ರಮಾಣ; ಒಂದು ಗುಲಗಂಜಿ ತೂಕ : ನಿಮ್ಮ ಭಕ್ತರ ಮನೆಯಂಗಳ ಪ್ರಯಾಗದಿಂದ ಗುಂಜಿಯಧಿಕ ನೋಡಾ (ಗಣಭಾ. ೪೩೨-೧) ; ಅಂಜದೆ ಮೇಳ್ವಂ ಭಕ್ತಿಯೊಳೊಂದಂ ಗುಂಜಿಯನರ್ಪಿಪವೋಲಾಂ ಕಂಜಾಕ್ಷನ ಕೃಪೆಯ ಮಹಿಮೆಯಿಂದೀ ಕಥೆಯಂ (ದಿವ್ಯಜ. ೦-೩೧) ; ಶಾನುಭೋಗರ ಮೇಳದವರಿಗೆ ಸರಿಸಮಾನವಾಗಿಯೋ ಅದಕ್ಕೂ ಒಂದು ಗುಂಜಿ ತೂಕ ಮಿಗಿಲಾಗಿಯೋ ಇನ್ನೊಂದು ಮೇಳವಿತ್ತು (ಚಿಟ್ಟಹೊ. ೩) ; ಮಂಜಿಯೊಡೆದರೆ ಗುಂಜಿಗಿಂತ ಕಡೆಯೇ(ಗಾದೆ). **ಗುಂಜಿ$_2$** : ೧. "ಲತಿಕಾಸಮೂಹ ಗುರುಗುಂಜಿ ಧನಾಶ್ರಯ ಗುಂಜವಾಚಕಂ" (ನಾನಾರ. ೧೩೪) ೩. ಹೆಂಡದ ಅಂಗಡಿ ; ಪಡಖಾನೆ. 'ಗುಂಜಾಲಯಃ' ಪರಾ. [ <ಸಂ. ಗುಂಜಾ ]

**ಗುಂಜಿಗೆ** (ನಾ). ಕರಿಯ ಜೀರಿಗೆ : "ಕಾಂಚಿಕಾ–ಗುಂಜಿಗೆ, ಕರಿಯ ಜೀರಗೆ" (ಒಷಧಿ. ೩೮). [ ? ]

**ಗುಂಜಿದೊಡವು** (ನಾ). = ಗುಂಜಾಭರಣ : ಮುಡಿಯೊಳ್ಮಲ್ಲೆಯ ಸೂಡಿ ಗುಂಜಿದೊಡವಂ ಕೈಗೆಯ್ದು (ರಾಜಶೇ. ೮-೧೧೨). [ ಗುಂಜಿ + ತೊಡವು$_1$ ]

**ಗುಂಜಿಬೀಜ** (ನಾ). ಗುಲಗಂಜಿಬೀಜ : "ಕಾಂಚಿಕಾ–ಗುಂಜಿಬೀಜ, ಮೇಣ" (ಒಷಧಿ. ೩೮). [ ಗುಂಜಿ + ಬೀಜ ]

**ಗುಂಜಿಯನೂರ್** (ನಾ). ಒಂದು ಊರಿನ ಹೆಸರು : ಮಯ್ಯನ ಗಣ್ಣಯ್ಯನ ಕನ್ನೇಶ್ವರಕ್ಕೆ ಗುಞ್ಜಿಯನೂರ ನೂಱಯ್ವತ್ತಾಱ × × × ಜಾಮುರವಂ ಬಿಟ್ಟುಕೊಟ್ಟ (ಎಕ. XI, ಹೊಳಲ್ಕೆ. ೩೩-೦೨ ; 966). [ ಗುಂಜಿ? + ಊರ್ ]

**ಗುಂಜಿಸರಿ** (ನಾ). ಗುಲಗಂಜಿಯಿಂದಾದ ಒಂದು ಬಗೆಯ ಅಂಟು : (+). [ ಗುಂಜಿ + ಸರಿ$_3$ (<ಸಱ್$_2$) ]

**ಗುಂಜಿಸು** (ಕ್ರಿ). ಧ್ವನಿಸು ; ದನಿಮಾಡು : ಅವಳ ಹೃದಯವೀಣೆ ಒಂದು ಅಜ್ಞಾತ ಆಕಾಂಕ್ಷೆಯನ್ನು ಗುಂಜಿಸುತ್ತಿತ್ತು (ಪ್ರೇಮೂಶ್ರ. ೧೬೮). [ ಗುಂಜನ + –ಇಸು$_3$ ]

**ಗುಂಜು$_1$, ಗೊಂಜು** (ಕ್ರಿ). ೧. ತೊಡಕಿಕೊಳ್ಳು ; ಸಿಕ್ಕುಸಿಕ್ಕಾಗು : ಗುಂಜಿದಳಕತತಿ ಗುಜ್ಜುವಡೆದ ಮೊಲೆ ರಂಜಿಸೆ (ಜಯನೃ. ೮-೩೮). ೨. ಎಳೆ; ಜಗ್ಗು : ಮಹರ್ಷಿಯಂ ಱೋಡಾಡಿ ಕಾಡಿ ಪೆಗಲನೇಱಿರ್ದು ತಲೆಯಂ ಗುಂಜಿ ಗುರ್ದಿ[ಪಾಠಾಂ. ಅುಂಜೆಯುದುರ್ತ್ತುಂ] (ಜೀವಸಂ. ೧೪೪-೨೧ ವ) : ಅಂಜದಿರೆಂದೆನ್ನ ಮುಂಜೆರಗನು ಓಡಿದು ಅಂಜಿಸುವ ಖಳರ ಗುಂಜಿ ಕಡೆಗೆ ಹಾಕೋ (ಮೋಕ್ಷದೀ. ೪೪-೨) ; ಅಂಜಿಸುವರಾ ವಚನದಲಿ ಛಲದಿಂ ಜಲವ ನೀನೊಯ್ವ ಸರಿ ಓಂ ಗುಂಜು ಬೇಗಲ್ಲದಲೆ ಬೇಗುವುದೆನಲು ಶತಭಟರೂ (ಜಿಠಾಮೂ. ೧೦೩-೨೩) ; ಚಂದ್ರಮತಿ ಪಾರ್ವಗೆ ಮಾರಿಸಿಕೊಂಡು ದಾಸಿಯಂತೆಂಜಲನೆತ್ತಿ ಕಾಲ್ತೊಳೆದು ನೀರ ತರಲ್ ಮನೆಯಾಕೆ ಬೈವುತಂ ಗುಂಜಳೆ (ಹಂಡಕ. ೬೬-೬೮). ೩. ಆಕುಂಚನವಾಗು ; ಮುದುಡಿಕೊಳ್ಳು ; ಮುರುಟಿಕೊಳ್ಳು : (+). **ಗೊಂಜು** : ೧. ತಮ್ಮ ತಲೆಗಳ ಮೇಲೆ ಮುಂದಕ್ಕೆ ಗೊಂಜಿಕೊಂಡಿದ್ದ ಕೂದಲನ್ನು ಸರಿಪಡಿಸಿಕೊಳ್ಳುತ್ತ (ಪುನರು. ೧೬೮). [ ದೇ॥ ತೆಲು. ಗುಂಜು, ಗಿಂಜು ]

**ಗುಂಜು$_2$** (ನಾ). ೧. ತೊಡಕು ; ಸಿಕ್ಕುಸಿಕ್ಕಾಗಿರುವುದು ; ಸಿಕ್ಕು : "ಗಂಟು, ಗುಂಜು, ತೊಡಕು, ಮಲಕು" (ಕಂನುಹು. ೮೨) ; ಮದುವೆಯೋಲ್ಗೆಯ ಕಂಡು ನಾಣ್ಚೆ ರಾಣಿಯರು ಗರ್ವದ ಗುಂಜ ಬಿಟ್ಟೆಯ್ದುತಿದ್ದು (ಭರಜ. ೪೨-೬೨) ; ಗೃಹವಿದು ನನ್ನದು ನಾನೆಂದೆಂಬನ ಗುಂಜನು ಬಿಡಿಪನ ಚಿಂತಿಸಿರಿ (ಚಿದಾವ. ೦೪೬-೨). ೨. ತೆಂಗು, ಅಡಕೆ ಮೊದಲಾದುವುಗಳಿಂದ ಕೀಸಿ ತೆಗೆದ ಎಳೆಗಳ ರಾಶಿ; ನಾರು: ಶ್ಮಶ್ರುಸಂಕಟವಾದರೋ . . . ಕರಂಗಿ ಕಳ್ಗಿದ ಕದಬೆಯ ಗುಂಜಿನಂತೆ–ರೂಕ್ಷತೆಯ ಕಡುಗಪ್ಪಾಗಿ ಗೋಳಾಡುತ್ತಿರುವುದು (ಮಂತ್ರಶ. ೯೨-೦೩). ೩. ಸಿಪ್ಪೆ ; ಕಸ : ಮೇಮಯ್ಯನು ಕಸವನುಡುಗುವಾಗ ಬಿದಿರ ಕೀಸಿದ ಗುಂಜುಗಳ ಕೂಡೆ ಉಡುಗಿ ತಿಪ್ಪೆಗೆ ಬಿಸುಟು ಕಾಯಕವಂ ಮಾಡುತ್ತಿರಲು (ಭೈರಸೂ. ೩೪೪). ೪. ಮುದ್ದೆ ; ಉಂಡೆ : ಆ ಸ್ಫಟಿಕಗಳು (ಬರ್ಫದ) ಒಂದಕ್ಕೊಂದು ಕೂಡಿ ದೊಡ್ಡ ಗುಂಜುಗಳಾಗಿ ಕೆಳಗೆ ಬೀಳುತ್ತವೆ (ಮುಂಬಯಿ. ೬-೧೪೧).

ಗುಂಜಾಗು=ತೊಡಕಾಗು ; ಸಿಕ್ಕಾಗು : ನೂಲೆಲ್ಲಾ ಗುಂಜಾಗಿದೆ (ರೂಢಿ). [<ಗುಂಜು$_1$ ]

**ಗುಂಜು$_3$** 'ಗುಜ್ಜು$_2$' ನೋ.

**ಗುಂಜುಂಗ** (ನಾ). ಒಂದು ಬಗೆಯ ವನಸ್ಪತಿ : "ಜೀವಬುದ್ಧಕಂ–(ವ) ಪರಿವೇಲ, ಗುಂಜುಂಗ, ಮುಚ್ಚಿ" (ಒಷಧಿ. ೬೩). [ ? ]

**ಗುಂಜುಗಂಟು**(ನಾ). ತೊಡಕಾಗಿ, ಬಿಚ್ಚಲು ಕಷ್ಟಕರವಾಗಿರುವ ಗಂಟು; ತೊಡಕು ಬಿದ್ದ ಗಂಟು ; ಕಗ್ಗಂಟು : (+). [ ಗುಂಜು$_2$ + ಗಂಟು ]

**ಗುಂಜುಬಿಡಿಸು** (ಕ್ರಿ). ಸಿಕ್ಕು ಬಿಡಿಸು ; ತೊಡಕಿಕೊಂಡಿರುವುದನ್ನು ಸರಿಪಡಿಸು : ದಾದಾ ಬಂದ ಅಂದರ . . . ಇದರ ಗುಂಜುಬಿಡಿಸೋ ಕೆಲಸಾ ಅಪ್ಪ ಮಾಡ್ತಾನ ಅಂತ (ಆೂಜು. ೦೬). [ ಗುಂಜು$_2$ + ಬಿಡಿಸು ]

**ಗುಂಜುಬೀಳು** (ಕ್ರಿ). ತೊಡಕಿಕೊಳ್ಳು ; ಸಿಕ್ಕುಸಿಕ್ಕಾಗು : (+). [ ಗುಂಜು$_2$ + ಬೀಳು$_1$ (<ಬೀೞ್$_1$) ]

**ಗುಂಜೆ** (ನಾ). ೧.=ಗುಂಜಿ ೧: "ಕೃಷ್ಣಲಾ, ಗುಂಜಾ–ಈ ೨ ಗುರುಗುಂಜಿ" (ಹಲಾಯು. ೩೪–೫೦) : ಸಮನಿಸೆ ಮಕುಳದ ಬೇರಿಂದ ಮರ್ಕೆ ಮೇಣ್ ಗುಂಜೆ ನುಗ್ಗೆಯಜ್ಜುಗೆಯೆಂಬಿಂತಿವಱಿಂದಮರ್ಕೆ ಬೇವಿನ ತೊಮಱಂ ತೆಗೆದೊಡೆ ಕೃಪೆಗೆಟ್ಟನಿದಕ್ಕುಂ (ಕೋಕೋಜ. ೮-೨೫) : ಜಳಜಭವಂ ಮಾನಸುರಾಚಳದ ಸುರಾಚಳದ ವ್ಯಮೆಯಂ ತೂಗೆ ಸುರಾಚಳದಡರ್ದ ಕೊಱತೆಗಿಕ್ಕಿದ ತೊಳಗುವ ಗುಂಜೆಯನೆ ರಂಜಿಸಿದನುದಯಾರ್ಕಂ (ಪುಷ್ಪಪು: ೮-೧೧೯) ; ವಾನರಸಂಚಯಂ ನೆರೆದು ಸೈರಿಸಲಾಱದೆ ತೀವ್ರ ಶೀತಮಂ ಕಾನನದಲ್ಲಿ ರಂಜಿಸುವ ಗುಂಜೆಯ ಪುಂಜಮನಗ್ನಿಯೆಂದು ಸನ್ಮಾನಿಸಿ ಪತ್ತೆಸಾರ್ದರ್ (ರಾಧಪು. ೪-೬೩). ೨. = ಗುಂಜಿ ೨ : ಪ್ರತಿಮಾನಮೆಂತೆನೆ ಧಾನ್ಯಂ ಗುಂಜೆ ಮೂಪಕಟ್ಟಲೆ ಮೊದಲಾದುವಕ್ಕುಂ (ಶಬ್ದಮಣಿ. ೫೮-೨೦). [ ಸಂ. ಗುಂಜಾ ]

**ಗುಂಟ$_1$** 'ಗೂಂಟ' ನೋ.

**ಗುಂಟ$_2$, ಗಂಟ$_1$** (ಅ). ೧. ಉದ್ದಕ್ಕೂ ; ಪಕ್ಕದಲ್ಲಿ; ಜೊತೆಯಲ್ಲಿ : ತುಂಗಳ ಮಾಸ್ತರರು ಆಟದ ಬಯಲಿನ ಅಂಚಿನ ಗುಂಟ ಸಾಗಿದ್ದರು (ರಂಗರೋ. ೧೨) : ಇನ್ನು ಕೆಲವರು ಗುಡ್ಡಗಳ ಓರೆ ಗುಂಟ ಪುಟ್ಟ ಪುಟ್ಟ ಹೊಲಗಳನ್ನು ಸಿದ್ಧಗೊಳಿಸಿ . . . ಧಾನ್ಯಗಳನ್ನು ಬೆಳೆಯುವ ಕಾಯಕ ಕೈಗೊಂಡಿದ್ದರು (ಅಶ್ರಮು. ೨) ; ನಿಲ್ದಾಣದ ಪಶ್ಚಿಮಬದಿಯಲ್ಲಿಯ ದೊಡ್ಡ ಬೀದಿ ಗುಂಟ ಇಬ್ಬರೂ ಜೊತೆಯಾಗಿ ನಡೆದರು (ಕಮನ. ೫). **ಗಂಟ$_1$** : ೨. ವರೆಗೆ ; ತನಕ : ಪಟ್ಟೇ ಶೀರೇಯಾ ಎತ್ತಿನ್ಮೇಲೆ ಹೇರಿಕೊಂಡು ಹೋಗಿ ಬನ್ನಿ ಅವ್ರ ಮನೆ ಗಂಟಾ ನೀವು ಶಾಲೂ ಶೀರೇಯಾ ಹೋರಿ ಮೇಲೆ ಹೇರಿಕೊಂಡು ಹೋಗಿ ಬನ್ನಿ ಅವರ ಮನೆ ಗಂಟಾ (ಹುಟ್ಟಿಹ. ೪೬). [ ? ]

**ಗುಂಟವಲೆ** 'ಗೂಂಟವಲೆ' ನೋ.

**ಗುಂಟಿಕೆ$_1$** 'ಗುಂಡಿಗೆ$_2$' ನೋ.

**ಗುಂಟಿಕೆ$_2$** (ನಾ). (?) : ತನು ಪುಳಕದಿಂದ ಗುಡಿಗಟ್ಟಿ ನಯನಾಂತದೊಳ್ಪನ ಹರ್ಷವಾರಿ ಸೂಸಲ್ಕಾಳ್ಗೆ ವಂದಿಸುತ ಮನೆಗೆ ಕರೆದೊಯ್ದು ಮಣಿವೂರೆಯುಮಂ ಗುಂಟಿಕೆಯೊಳಿರಿಸಿ ನೆಱೆ ಕೆಯ್ಮೊಳೆಸೆವ (ಅರಾಜ. ೬-೧೨). [ ? ]

**ಗುಂಟಿಗೆ$_1$** (ನಾ). ಮದ್ದಳೆ ಮೊದಲಾದ ವಾದ್ಯಗಳ ಚರ್ಮವನ್ನು ಬಿಗಿಗೊಳಿಸುವುದಕ್ಕಾಗಿ ಪಕ್ಕದಲ್ಲಿ ಸೇರಿಸುವ ಬೆಣೆ,-ಗೂಟ: ಶ್ರುತಿಯ ನಾರ್ಮೆವೃತ್ತ ಗುಂಟಿಗೆಯಂ ಬೆಟ್ಟ ಬಾರನೋರಣದಿಂ ಬಿಗಿದು ಕಟ್ಟಳೆಗೆ ತಂದು (ವಿರೂಪಾ. ೮೦). [ <ಗೂಂಟ ]

**ಗುಂಟಿಗೆ$_2$** (ನಾ). ಹೆಜ್ಜೆಯ ಮೇಲೆ ಎರಡುಕಡೆಯಲ್ಲೂ ಇರುವ ಗಂಟು; ಗುಲ್ಫ; ಹರಡು: "ಘುಂಟಿಕಾ – ಗುಂಟಿಗೆ" (ಕಮುದ. ೨೫೫ ಪ್ರಯೋ); "ಗುಂಟಿಗೆ (ಗುಳಿಗೆ) – ಘುಂಟಿಕಾ=ಗುಲ್ಫ" (ತದ್ಯಕೋ. ೧೧) [ <ಸಂ. ಘುಂಟಿಕಾ ]

**ಗುಂಟಿಸು** (ಕ್ರಿ). ಆಳವಾಗು; ಮಡುಗಟ್ಟು (?): ಮೊದಲಂ ಬಳಸಿರ ಗುಂಟಿಸಿದುದಕದವೋಲಭಿಷವಾಂಬು ಮೇರುನಗಂ ಸ್ಕಂಧದವೊಲಿರೆ ತೀರ್ಥಕರನಗ್ರದೊಳಿಂದ್ರನ ಪುಣ್ಯಕುಜದ ಫಲದವೊಲಿರ್ದಂ (ಚಂದ್ರಪು. ೦೫-೦೧೦). [ ಗುಂಟು + – ಇಸು$_3$ ]

**ಗುಂಟು** (ನಾ). ಆಳ; ಗಂಭೀರ: ವಾಲಿಯ ಬಲುಹು ಸುಗ್ರೀವಾಜ್ಞೆ ಸೂರ್ಯನ ಶೌರ್ಯ ಸಮುದ್ರನ ಗುಂಟು ಕಾಲನ ದಂಡಣೆ ಭೀಮನಗ್ಗಳಿಕೆ ಭೂಪಾಲನ ಕೀರ್ತಿದಿಗ್ವಿಜದಿ (ಸೌಂದರ್ಯ. ೨-೫೭). [ <ಗುಂಡಿತ್ತು ]

**ಗುಂಟೆ** (ನಾ). ೧. ವ್ಯವಸಾಯದ ಒಂದು ಉಪಕರಣ,—ಕುಂಟೆ: ಅವನು ಗುಂಟೆಯಿಂದ ನೇರವಾದ ಸಾಲುಗಳನ್ನು ಮಾಡುತ್ತಾ ಹೋದನು (ಕಂಕಡ. ೨೬೧). ೨. ಭೂಮಿಯ ಒಂದು ಅಳತೆ; ೧೨೧ ಚದರ ಗಜ; ಒಂದು ಎಕರೆಯ ನಲವತ್ತನೆಯ ಒಂದು ಭಾಗ: ತುಂಗವ್ವನವರ ಕಾಲಕ್ಕೆ ಈ ಎಕರೆ ಗುಂಟೆ ಗೊತ್ತಿರಲಿಲ್ಲ (ಬೆಳಛಾ. ೧೮); ಹನ್ನೊಂದು ಮಾರು ಉದ್ದ ಹನ್ನೊಂದು ಮಾರು ಅಗಲ ಇಷ್ಟು ಭೂಮಿಗೆ ಒಂದು ಗುಂಟೆ ಎಂಬರು (ಕೃಷಿಪ್ರ. ೯೩); ೪೦ ಗುಂಟೆಗಳು ಪೊಂದು ಯೇಕರೆ ಯಾಗುವದೆಂದೂ ತಿಳಿದುಕೊಳ್ಳತಕ್ಕದ್ದು (ಪಾಶ್ಚಾವಿ. ೪೩೮). [ <ಕುಂಟೆ$_1$ ]

**ಗುಂಡ$_1$** (ನಾ). ಒನಪುಗಾರ; ವಿಟ: ಜೂಜುಗಾಱನ ಮಾತು ಬೀದಿಯ ಗುಂಡನ ಸೊಬಗು ಓಡಿನೊಳಗಗೆಯ ಹೊಯ್ದಂತೆ ಕಾಣರೋ (ಬಸವ. ೬೩೬).

**ಗುಂಡಕಂದರ್ಪ**= ಒಂದು ಬಿರುದು: ಫಣಿಧ್ವಜವಿರಾಜಮಾನ ಕೂಡಲೂರ್ಪುರಾಧಿನಾಥಂ ಜೀಮೂತವಾಹನಂ ಗುಣ್ಡಕನ್ದರ್ಪ್ಪಂ (ಎಕ. VI, ಚಿಕ್ಕಮ. ೯೫-೬; ಸು. 1026 ?). **ಗುಂಡಚಕ್ರ** = ಒಂದು ಬಿರುದು: ಪರನಾರೀಪುತ್ರಕ . . . ಬಾವನ ಬಣ್ಣ ಗುಣ್ಡಚಕ್ರ ಜೆಡ್ಡುಗಂ (ಎಕ. II, ೩೦೭; ಸು. ೨೬೦). **ಗುಂಡನ ಗಂಡ**=ಒಂದು ಬಿರುದು: ವೈರಿಮಾರ್ತ್ತಣ್ಡಂ ಗುಣ್ಡನಗಣ್ಡಂ ವಿಕ್ರಮಸಿಂಗ ರಣರಂಗ ತುಂಗ (ಎಕ. VIII, ಸೊರಬ. ೪೭೭-೯; ೨೨೨). [<ಪ್ರಾ. ಗುಂಠ ]

**ಗುಂಡ$_2$** (ನಾ). ೧. ಗುಂಡಿ; ತೋಡಿದ ತಗ್ಗು: ಬರಗಾಲದ ರಭಸಕ್ಕೆ ಆ ಕೆರೆಯೂ ಬತ್ತಿತ್ತು . . . ಅದರ ಮಧ್ಯದಲ್ಲಿ ನೀರಿಗಾಗಿ ಹಳ್ಳಿಗರು 'ಗುಂಡ' ತೋಡಿ ನೀರನ್ನು ಪಡೆಯುತ್ತಿದ್ದರು (ಬರಹಾ. ೦೭೦); ಆದಯ್ಯನು ಆ ಗುಂಡದ ನೀರನ್ನು ಕುಡಿದನು (ಶರಣ. ೬೯೭). ೨. ಕೊಳ: ಆ ಪಶ್ಚಿಮ ದಿಗ್ಭಾಗದಲ್ಲಿ ಚತುರ್ವಿಂಶತಿ ತೀರ್ಥಕರ ಪ್ರತಿಮೆಗಳನೂ ಆ ಬಹಿರ್ದ್ವಾರಯದ ಗುಂಡಂಗಳೊಳಗೆ ಜಿನಬಿಂಬಂಗಳನೂ . . . ಸಂಸ್ಥಾಪಿಸಿ (ಎಕ VIII, ೦೩೨-೨೦; 1586). [ < ಸಂ. ಕುಂಡ./ತಮಿ. ಕುಟ್ಟ, ಕುಟ್ಟೈ, ಕುಣ್ಟು ]

**ಗುಂಡಂಚು** (ನಾ). (ಪಂಚೆಯ) ದಪ್ಪನೆಯ ಅಂಚು; ದುಂಡಂಚು: ಅವರು ಗುಂಡಂಚಿನ ಪಂಚೆ ಹೊದ್ದುಕೊಂಡಿದ್ದಾರೆ (ರೂಢಿ). [ ಗುಂಡು + ಅಂಚು$_2$ ]

**ಗುಂಡಕಲ್ಲು** 'ಗುಂಡುಗಲ್' ನೋ.

**ಗುಂಡಕ್ರಿ** (ನಾ). ೧. = ಗುಂಡಕ್ರಿಯೆ: ಸಪ್ತಸಾಳಂಗ ಕುರಂಗಿ ಗುಂಡಕ್ರಿಯು ಸಪ್ತಪವಕ ಸಪ್ತಧವಳ (ದೇವಾಂಪು. ೪-೨೨೫). ೨. (?): ವಿಕ್ಕ ದಾಸರು ರಚಿಸಿರುವಂತೆ ಸುಳಾದಿ, ಉಗಾಭೋಗ, ಗುಂಡಕ್ರಿಗಳನ್ನು ಇವರು ರಚಿಸಿಲ್ಲ (ಕರ್ನಾಜ. ೬೭). [ ಸಂ. ಗುಂಡಕ್ರೀ ]

**ಗುಂಡಕ್ರಿಯೆ** (ನಾ). [ಸಂಗೀತ] ಒಂದು ರಾಗದ ಹೆಸರು: ಸಮಸ್ತ ರಾಗಂಗಳೊಳಗೆ ರಾಮಕ್ರಿಯೆ . . . ಗುಂಡಕ್ರಿಯೆ . . . ಮಧ್ಯಮಾವತಿಯೆಂಬ ಮೂವತ್ತಾಱು ರಾಗಂಗಳೇ ಮುಖ್ಯಮಾಗಿ . . . ಪ್ರಸಿದ್ಧಗೊಂಡಿರ್ಪವು (ವಿವೇಕ. ೨೬೪). [ ಸಂ. ಗುಂಡಕ್ರಿಯಾ ]

**ಗುಂಡಗಪ್ಪರ** 'ಗುಂಡುಗಪ್ಪರ' ನೋ.

**ಗುಂಡಗಳಿಗೆ** (ನಾ). (ಉಕ) ವೀರಶೈವರು ಕೊರಳಲ್ಲಿ ಧರಿಸುವ ಕರಡಿಗೆ; ಲಿಂಗದ ಕಾಯಿ; ಚೌಕ. [ ಗುಂಡು + ಗಳಿಗೆ$_0$ (<ಕರಡಿಗೆ) ]

**ಗುಂಡಗೆ$_1$** (ಅ). ದುಂಡಗೆ; ವರ್ತುಲಾಕಾರವಾಗಿ: ಅದರ (ಹುಲಿಯ) ತಲೆ ದೊಡ್ಡದಾಗಿ ಗುಂಡಗೆ ಇರುತ್ತದೆ (ಮುಂಬಯಿ. ೪-೩೫): ಕೆಲವು ಗಿಡಗಳನ್ನು ಗುಂಡಗೂ, ಕೆಲವನ್ನು ನವಿಲಿನಂತೆಯೂ . . . ಕತ್ತರಿಸಿ ಅಂದಮಾಡಿದ್ದರು (ಕಲಾಸಾ. ೩೭). [ ಗುಂಡು + – ಅಗೆ$_3$ ]

**ಗುಂಡಗೆ$_2$** 'ಗುಂಡಿಗೆ$_2$' ನೋ.

**ಗುಂಡಬಾವಿ** (ನಾ). ನದಿ ಅಥವಾ ಕೆರೆಯ ಪಾತ್ರದಲ್ಲಿ ನೀರಿಗಾಗಿ ಬೇಸಿಗೆಯಲ್ಲಿ ತೋಡುವ ಗುಂಡಾದ ಕುಳಿ; ಒರತೆ ಬಾವಿ: (ಕ). [ ಗುಂಡ$_2$ + ಬಾವಿ ]

**ಗುಂಡಯ್ಯ** (ನಾ). ಒಬ್ಬಾತನ ಹೆಸರು: ಕೊಟ್ಟಾರದ ಮಾರಪುಲಿಯುಂ ಗುಣ್ಡಯ್ಯನುಂ ಇನ್ನಿವರ್ನ್ನರದರ್ (ಎಕ. XII, ಶಿರಾ. ೨೮-೫೨; 943); ಶ್ರೀಮತ್ಪಂಚಾಲದೇವನ ಪೆರ್ಗ್ಗಡೆ ಗುಣ್ಡಯ್ಯಂ (ಎಕ. XI, ಹಿರಿಯೂ. ೧-೧೧; 975). [ ಗುಂಡು + ಅಯ್ಯ$_1$ ]

**ಗುಂಡರ** (ನಾ). ಗುಂಡಾದ ಅರ; ಉಕ್ಕಿನಿಂದ ಮಾಡಿದ ಉಜ್ಜುವ ಸಾಧನ: (ಕ). [ ಗುಂಡು + ಅರ$_1$ ]

**ಗುಂಡಲ** 'ಗುಂಡಲಿ' ನೋ.

**ಗುಂಡಲಿ**, ಗುಂಡಲ, ಗುಂಡಾಲ$_2$, ಗುಂಡಿಲ$_1$ (ನಾ). ಒಂದು ಬಗೆಯ ನೃತ್ಯ: ಗುಂಡಲಿಯನಾಡಿದಳೀಶಸಮ್ಮುಖದೊಳ್ (ಶೀವಿಲ. ೩೨-೪೮).
**ಗುಂಡಲ**: ಲಕ್ಷಣಯುಕ್ತ ಪದದೊಡನೆ ಪೇರಣಂ ಪೆಕ್ಕಣಂ ಗುಂಡಲಂ ಸದಮಲದ ದಂಡಲಂ ಲಾಸ್ಯಮೆಂದೆಂಬವಂ ತೋಱುತಿರ್ದಂ ಮಹೇಶಂ (ಚೀರಮ. ೦೦-೩೯). **ಗುಂಡಾಲ$_2$**: ಗುಂಡಾಲ ಮೊದಲಾದವಂ ತೋಱೆ ನರ್ತಿಸಿದಳಾ ಬಾಲೆ (ಸೌಂದಪು. ೮-೧೧); ದಿಟ ಮುಂಡಿ ಗುಂಡಾಲು ಸುಟಿ ಲಾಗ ವೇಗ ಸಂಪುಟಿತವಜ್ಜಡಗಳ್ಕಳಾಸ (ಭೈರಸೂ. ೨೩೮). **ಗುಂಡಿಲ$_1$**: ತಾಂಡವ ನಾಟ್ಯ ನೃತ್ತ ಲಾಸ್ಯ ಗುಂಡಿಲ ಪೆಕ್ಕಣ . . . ಸರ್ವತೋಭದ್ರವೆಂಬ ದಶವಿಧ ಪಾತ್ರಂಗಳಂ ಬೀಱಿ (ವಿವೇಕ. ೨೩೯). 'ಕುಂಡಲೀನೃತ್ಯ' ಪರಾ. [ <ಸಂ. ಕುಂಡಲೀ ]

**ಗುಂಡಲಿಗೆ** 'ಗುಂಡಳಿಗೆ' ನೋ.

**ಗುಂಡಲೂರ್** (ನಾ). ಒಂದು ಊರಿನ ಹೆಸರು: ಪದಿಕ್ಕೊರ್ಳಗಾಟ್ಟಿಸಿಗೆ ಗುಣ್ಡಲೂರಾಳಿಯುಮೊಕ್ಕಲು ಸಲಿಪೊ (ಎಕ. X, ಗೋರೀಬಿ. ೫-೫; ಸು. ೨೦೦). [ ಗುಂಡಲ$_0$ + ಊರ್ ]

**ಗುಂಡವಟ್ಟಲ್** 'ಗುಂಡುವಟ್ಟಲ್' ನೋ.

**ಗುಂಡವೇಷ** (ನಾ). ವಿಟನ ವೇಷ: ಆ ರೂಪಂ ಪಲ್ಲಟಿಸಿ ಕಿರುಕುಂತುಱುಯುಂ ಬೋಳದಲೆಯುಂ ಪಱಿದ ಕಪ್ಪಡಮುಂ ಬಡಮೆಯ್ಯುಂ ಕೋಲು ಕರಂಕೆಯುಂ ಬೆರಸು ಗುಂಡವೇಷಂ ತನಗವುರೆ (ಬಂಹರಿ ೯-೫೦ ವ). [ ಗುಂಡ$_1$ + ವೇಷ ]

**ಗುಂಡಳಿಗೆ,** ಗುಂಡಲಿಗೆ (ನಾ). ಬಾಯಿ ಅಗಲವಾದ, ದುಂಡಾದ ಪಾತ್ರೆ ; ಗುಂಡಾಲಿ : ಆಡೋ ಗುಂಡಳಿಗೆಗಿಂತ ಬಡಿಸೋ ಬೀಸಳಿಗೆ ಘನ (ಗಾದೆ). **ಗುಂಡಲಿಗೆ :** (ಕ). 'ಗುಂಡಾಲ$_1$' ಪರಾ.

[ ಗುಂಡು + ಅಳಿಗೆ (< ಅಳಿಗೆ$_1$) ]

**ಗುಂಡಾ** 'ಗೂಂಡಾ' ನೋ.

**ಗುಂಡಾಂತರ** (ನಾ). ೧. ಅಸ್ತಿಭಾರ ; ತಳಪಾಯ ; ತಳಹದಿ : (ಕ). ೨. (ಆಲಂ) ನಾಶ; ಹಾಳು : ಯುದ್ಧಕಾಲದಲ್ಲಿ ಅನೇಕರ ಮನೆಮಠಗಳು ಗುಂಡಾಂತರವಾಗಿ ಹೋಗುತ್ತವೆ (ರೂಢಿ).

**ಗುಂಡಾಂತರಮಾಡು**=(ಆಲಂ) ನಾಶಪಡಿಸು ; ಹಾಳುಮಾಡು : ಎಲ್ಲ ಆಸ್ತಿಯನ್ನು ಗುಡಿಸಿ ಗುಂಡಾಂತರಮಾಡಿಬಿಟ್ಟ (ರೂಢಿ).

[ <ಸಂ. ಗಂಡಾಂತರ ? ]

**ಗುಂಡಾಕ್ರಿ** (ನಾ).=ಗುಂಡಕ್ರಿಯೆ: ಶ್ರೀರಾಗ . . . ಗುಂಡಾಕ್ರೀ ರಕ್ತದೇಶೀ . . . ವಸಂತರಾಗಂ ಇವಾದಿಯಾದ ರಾಗಂಗಳಂ ಪಾಡುತ್ತಿರೆ (ಹಮ್ಮೀರ. ೨-೯೦). [ < ಸಂ. ಗುಂಡಕ್ರೀ ]

**ಗುಂಡಾಕ್ರಿಯೆ** (ನಾ).=ಗುಂಡಕ್ರಿಯೆ : ಗೌಳಪಂಚಕ ಮುಂಬಹುಳಿ ಬಂಗಾಳಮುಂ ಗುಂಡಾಕ್ರಿಯೆಯುಂ ದೇಶಾಕ್ಷಿ ಓಳಿಯಿಂ ಫಳಮಂಜರಿಯುಂ ರಾಮಾಕ್ರಿಯೆಗಳೆಲ್ಲ (ಬಸವು. ೧೯-೧೭). [ < ಸಂ. ಗುಂಡಕ್ರಿಯಾ ]

**ಗುಂಡಾಗಿರಿ** 'ಗೂಂಡಾಗಿರಿ' ನೋ.

**ಗುಂಡಾಗುಂಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಆಯತದ ಹಳು ವಾಯಿದರ ಹಳು ವಾಯಿ ಗುಂಡಾಗುಂಡಿ ಮಾನಸಜೇಯುವೆನಿಪ ಭ್ರಮರ ಲೀಲೆಯು ಕೂಡಿ ರಂಜಿಸಲು ಧರೆಯೊಳಿವು ಮೊದಲಾಗಿ ಚರಿಸುವ ಹಿರಿಯ ರಾಗಂಗಳು (ಬಸವು. ೧೯-೦೫). [ ? ]

**ಗುಂಡಾಟ** (ನಾ). ೧. ಗೋಲಿಯ ಆಟ. ೨. ಒಂದು ಬಗೆಯ ಪಗಡೆ ಜೂಜು : (ಕ). [ ಗುಂಡು + ಆಟ ]

**ಗುಂಡಾಡಿಸು** (ಕ್ರಿ). ೧. (ಗಾರೆ ಮೊದಲಾದುವನ್ನು ಅರೆಯಲು)ಗುಂಡು ಕಲ್ಲನ್ನು ತಿರುಗಿಸು ; ರೋಣಗಲ್ಲನ್ನು ಹರಿಸು : (ಕ). ೨. ಯಾವುದಾದರೂ ಒಂದು ವಸ್ತುವನ್ನು ಗುಂಡಗೆ ತಿರುಗಿಸು : ಸುಜನಕೀರುತಿಯೊಪ್ಪಿದಂ ಸದ್ವಿಜಯಕೀರ್ತಿ ವಿನೋದಿಸಿದ ನಿಜವೆನುತ ಗುಂಡಾಡಿಸಿದನ ಪಕೀರ್ತಿಸನ್ನಾಲೆಯ (ಮದೇವ. ೨೬-೨೭). ೩. (ಬಾಲವನ್ನು) ಗುಂಡಗೆ ಅಲ್ಲಾಡಿಸು ; ಬಾಲ ಬಡಿ : ಬೆಕ್ಕು ನಾಯಿಗಳು ಪರಾನ್ನಕ್ಕೆ ಆಸೆಮಾಡಿ ಬಾಲವ ಗುಂಡಾಡಿಸುತ್ತ ಧನಪಾಲರ ಕಾಲಲ್ಲಿ ಸುಳಿದಾಡುವಂತೆ (ಕೃಷ್ಣ. ೦೨) ; ಶ್ಯಾನುಭೋಗರು ಇಲ್ಲಿ ಬಾಲ ಗುಂಡಾಡಿಸುವ ನಾಯಿಯಾಗಿದ್ದರು (ರಂಗರೋ. ೧೪೯). [ ಗುಂಡು + ಆಡಿಸು ]

**ಗುಂಡಾರ** 'ಗೂಡಾರ' ನೋ.

**ಗುಂಡಾಲ$_1$,** ಗುಂಡಾಲಿ, ಗುಂಡಾಲು (ನಾ).=ಗುಂಡಳಿಗೆ : ಮರದ ಕೈಬಟ್ಟಲಲ್ಲಿ ರಾಸಿ ಕಡುಬನ್ನೂ ದೊಡ್ಡದೊಂದು ಮಣ್ಣಿನ ಗುಂಡಾಲದಲ್ಲಿ ತುಂಬಿ ತುಳುಕುವಷ್ಟಿದ್ದ ಮಾಂಸದ ಪಲ್ಯವನ್ನೂ ತಂದಳು (ಮಲೆಮ. ೨೦). **ಗುಂಡಾಲಿ:** ಈ ಗುಂಡಾಲಿ ತುಂಬ ಸಾರು ಹಾಕು (ರೂಢಿ). **ಗುಂಡಾಲು :** ಶಂಕರ . . . ಗಾಡಿಯಲ್ಲಿದ್ದ ನಾಲ್ಕಾರು ಗುಂಡಾಲುಗಳನ್ನು ಹೊರಲಾರದೆ ಹೊತ್ತು ತಂದು ಅವುಗಳನ್ನು ಎತ್ತುಗಳ ಮುಂದಿಟ್ಟನು (ದಿನಾರಿ. ೯೦).

[ ಗುಂಡು + ? ]

**ಗುಂಡಾಲ$_2$** 'ಗುಂಡಲಿ' ನೋ.

**ಗುಂಡಾಲ$_3$** (ನಾ). ಒಂದು ಬಗೆಯ ಜಲಸಸ್ಯ (?) : "ಜಲಾಶ್ರಯಂ–ಗುಂಡಾಲ" (ಒಷಧಿ. ೬೦). [ ? ]

**ಗುಂಡಾಲಿ** 'ಗುಂಡಾಲ$_1$' ನೋ.

**ಗುಂಡಾಲು** 'ಗುಂಡಾಲ$_1$' ನೋ.

**ಗುಂಡಾಸಿನಿ** (ನಾ). ಒಂದು ಬಗೆಯ ಸಸ್ಯ : "ಗುಂಡಾ–ಗುಂಡಾಸಿನಿ" (ಒಷಧಿ. ೪೪). [ ? ]

**ಗುಂಡಾಳಿಸು** (ಕ್ರಿ). ೧. ಸುತ್ತಿಕಟ್ಟು : ಅವನು ಸಾಮಾನುಗಳನ್ನು ಗುಂಡಾಳಿಸಿಕೊಂಡು ಹೊರಟುಬಿಟ್ಟ (ರೂಢಿ). ೨. "ಉದ್ರೇಕಿಸು ; ಕೆಣಕು" (ಜಾನಕೋ. ೪೯).

[ ಗುಂಡಾಳ$_9$ + – ಇಸು$_3$. P ಗುಂಡಾಳ ← ಮರಾ. ಗುಂಡಾಳಣೇ ]

**ಗುಂಡಿ$_1$** (ನಾ). ೧. ಎದೆ ; ಗುಂಡಿಗೆ : ಲಂಡಮಾಯಿಗಳ ಗುಂಡಿ ಒಡೆಯಲುದ್ದಂಡ ಮಾರುತಿ ಪದಕೆ ಬರುವನ (ಪುರಂದ. ೧-೨೦೨ ಅನುಬಂಧ). ೨. (ಆಲಂ) ಧೈರ್ಯ ; ಕೆಚ್ಚು : ನೋಡು ಎಂತಹ ಗುಂಡಿ (ಮಲೆನಾ. ೦೬೩). [ ದೇಶ್ಯ ತಮಿ. ಕಣ್ಣು ; ತೆಲು. ಗುಂಡೆ, ಗುಂಡಿಯ ]

**ಗುಂಡಿ$_2$** (ನಾ). ೧. ಗುಂಡಾಗಿರುವ, ದೊಡ್ಡದಾದ ಮಣ್ಣಿನ ಅಥವಾ ಲೋಹದ ಪಾತ್ರೆ : ಅಪ್ರಾಕ್ಯ ನೀರ ಮಂ ಗುಂಡಿಯೊಳ್ರೀವಿ ತಂದು ಕುಡುವುದುಂ (ಧರ್ಮಾಮ್ಮ. ೫-೧೬೫). ೨. ಬಿಲ ; ಡೊಗರು ; ಗುಣಿ : ಕೊಲತೂರ ದ್ವಿಸನ್ನಿ ಕೊಲದ ಗುಣ್ಣಿಯ ತೆಂಕ ನೋಡಿ (ಎಕ. III, ನಂಜನ. ೧೨೨-೧೮ ; ೨೬೬ಕ್ರಶ) ; ಹಾಸರಿಯ ಗುಂಡಿಯಲಿ ನೂಕಿಯ ರೋಷವನು ಬಿಟ್ಟೈದೆ ಮರಳಿಯ ಭಾಷೆಗಳ ಕೈಕೊಂಡುಬಂದರು ಪಾಂಡುಸುತರೆಡೆಗೆ (ಸಂಧಿಪ. ೦೭-೨೦) ; ಆ ನೀರ ಕೊಟ್ಟನ ಬಳಿಯ ತೋಡಿ ಗುಂಡಿಯಂ ಮಾಡಿ (ಸೂಪಶಾ. ೫-೨೩) ; ತೋಳ ಗುಂಡಿಗೆ ಬಿದ್ದರೆ ಆಳಿಗೊಂದು ಕಲ್ಲು (ಗಾದೆ). ೨. (ಉಡುಪಿನ ಎರಡು ಕಡೆಗಳನ್ನು ಸೇರಿಸಿಕೊಳ್ಳಲು ಉಪಯೋಗಿಸುವ) ಒಂದು ಸಾಧನ ; ಬಟನ್ನು ; ಬಿರಡೆ : ಅಂಗಿಯ ಗುಂಡಿ ಬಿದ್ದುಹೋಗಿದೆ (ರೂಢಿ). ೪. ಯಂತ್ರ ಮೊದಲಾದುವುಗಳನ್ನು ನಡೆಸಲು ಒತ್ತುವ ಗುಬುಟು,–ಹಿಡಿಕೆ : ಯಾವಾಗ ಬೇಕೊ ಆಗ ತಮ್ಮ ಒಳಗಿನ ಯಾವುದೊ ಒಂದು ಗುಂಡಿ (Button) ಒತ್ತಿಕೊಂಡು ಆರಂಭಿಸಿಬಿಡುತ್ತಾರೆ (ಗಾಳಿಪ. ೧೧೫.) [ <ಗುಂಡು. / ತುಳು. ಗುಂಡಿ ]

**ಗುಂಡಿ$_3$** (ನಾ). ದುಷ್ಟೆ ; ನೀಚಸ್ತ್ರೀ ; ವೇಶ್ಯೆ : ರಂಡೆಯೊಳಂ ಭ್ರಷ್ಟೆಯೊಳಂ ಮುಂಡೆಯೊಳಂ ವ್ಯಾಧಿಯುತೆಯೊಳಂ ಲಲನೆ ಮರುಳ್ಗೊಂಡಳೊಳಂ ಲಿಂಗಿಯೊಳಂ ಗುಂಡ[ಡಿ]ಯೊಳಂ ನೆರೆದೊಡಳಿಗುಮಾಯುಂ ಶ್ರೀಯುಂ (ಮದನ. ೯-೪). [ ಗುಂಡ$_1$ + – ಇ$_8$ ]

**ಗುಂಡಿಂಗಲ್** (ನಾ). ಒಂದು ಊರಿನ ಹೆಸರು : ಶ್ರೀ ಗುಣ್ಡಿಙ್ಗಲಾ ಸಿಯ ಕೊಲ್ಲ ಅಸಿ ಉನ್ನತನ್ ಎನ್ನೋನ್ ಕೆಳೆಇನಿತ್ತನ್ (ಎಕ. XVI, ತುಮಕೂ ೯೫-೬ ; ?). [ ? ]

**ಗುಂಡಿಕಾಯಿ** (ನಾ). ಎದೆ ; ಹೃದಯ : (ಕ). 'ಗುಂಡಿಗೆ$_1$' ಪರಾ.

[ ದೇಶ್ಯ ತಮಿ. ಕುಣ್ಣಿಕ್ಕಾಯ್ ; ಮಲ. ಕುಣ್ಣಿಕಾಯಿ ; ತುಳು. ಗುಂಡೆಕಾಯಿ ; ತೆಲು. ಗುಂಡೆಕ್ಕಾಯ ]

**ಗುಂಡಿಕ್ಕು** (ಕ್ರಿ). (ಬಂದೂಕಿನಿಂದ) ಗುಂಡುಹಾರಿಸು : ಗೋಲಿಬಾರು ಮಾಡು : ಆ ಮಹಾತ್ಮರನ್ನೇ ಈ ಲೋಕ ಗುಂಡಿಕ್ಕಿ ಕೊಂದುಹಾಕಿತು (ಭಾರರ. ೧೭೫). [ ಗುಂಡು + ಇಕ್ಕು ]

**ಗುಂಡಿಗೆ$_1$** (ನಾ).೧.ಎದೆ; ಹೃದಯ: "ಎರ್ದೆ ಕಮಂಡಲು ಗುಂಡಿಗೆಯೆನಿಕ್ಕು" (ಶಬ್ದಮಂ. ೯೫) ; ಮಣಿವಡೆ ಶಿವಭಕ್ತ ಮಣಿಯ ಕಟ್ಟಲೇಬೇಕು ಮಣಿಯ ದಿದ್ದರೆ ಪಣಾಪಣಿ ದೇವರ ಮಣಿಮಾಕುಟ ತಲೆದೆಚಿದು ಶಬ್ದ ಗುಂಡಿಗೆ ಮಣಿಯಲ್ಲಿರ್ದೇನು ಹೇಳಾ (ದೇವಾವ. ೩೬-೬೮) ; ಗುಂಡಿಗೆಯನೊಡೆದುಚ್ಚಳಿಸಿದುದು ಕೋಪಶಿಖಿ (ತೊರಿಗಾ. ೫-೬-೩); ಎತ್ತಿಕೊಂಡಾ ತಲೆಯನೆರ್ದೆಯ ಗುಂಡಿಗೆಯೊಳಮರ್ದೊತ್ತಿ (ಭಾವಚಿಂ. ೮-೨೬) ; ಖಂಡವಿದೆ ಕೋ ಮಾಂಸವಿದೆ ಕೋ ಗುಂಡಿಗೆಯ ಬಿಸಿರಕ್ತವಿದೆ ಕೋ (ಗೋಹಾಡು. ೯೩). ೨. (ಆಲಂ) ಧೈರ್ಯ : ಆ ಕೆಲಸ ಮಾಡಲು ಅವನಿಗೆಷ್ಟು ಗುಂಡಿಗೆಯೊ (ರೂಢಿ). [ ಗುಂಡಿ$_1$ + – ಗೆ/. ತುಳು. ಗುಂಡಿಗೆ ]

**ಗುಂಡಿಗೆ₂**, ಗುಂಟಿಕೆ₁, ಗುಂಡಗೆ₂ (ನಾ). ನೀರಿನ ಪಾತ್ರೆ ; ಜಲಪಾತ್ರೆ ; ಕಮಂಡಲು : "ಗುಂಡಿಗೆಯೆನಲ್ ಜಲಪಾತ್ರೆಯಕ್ಕುಂ" (ಅಭಿಕೌ. ೩೦); "ಜಲಪಾತ್ರೆ ಗುಂಡಿಗೆ ವಲಂ" (ಅಭ್ಯಮಂ. ೩೩); ಕಾಲಂ ಕರ್ಚಲ್ ಗುಂಡಿಗೆಯಂ ಕೊಂಡು ಬನ್ನಿಮೆಂದೊಡೆ ಬ್ರಹ್ಮಯ್ಯನೆಂದಂ ಗುಂಡಿಗೆಯನುಂಡ ಮನೆಯೊಳ್ ಮಱೆದು ಬಂದೆಂ (ವಡ್ಡಾರಾ. ೯೧-೮); ಗುಂಡಿಗೆ ದೋಷಮೆಂಬೊಡೆ ಗುಂಡಿಗೆಯುಪ್ಪುದು ತೆಂಗಿನಕಾಯ್ (ಧರ್ಮಾಮೃ. ೯-೫೯); ಈ ಸೋರೆಯ ಗುಂಡಿಗೆಯೊಳ್ ರಸಮಂ ಮುಟ್ಟದೋಸರಿಸಿ ನೀಡುವುದು (ನೇಮಿಪು. ೪-೮೭ ವ). **ಗುಂಟಿಕೆ₁ :** ಜಪಮಾಲೆ ಗುಂಟಿಕೆ ಸಹಿತಲು ತ್ವರಿತದಿಂ ಕಂಗೆಟ್ಟು ಕೆಲಸಾರುತಿರೆ (ಪ್ರಭುಪು. ೩-೦೪೨). **ಗುಂಡಗೆ₂:** ಗಿಡದ ಕೊಂಬಿನೊಳ್ಳೇಲಿರ್ದ ಗುಂಡಗೆಯಂ ಕೊಂಡು ಬಂದು ಆ ಪ್ರಪಂಚಮಂ ವಿಶಾಲಾಚಾರ್ಯರ್ಗೆ ಪೇಳೆ (ಕಗವಿ. ೯೯-೩ ರಾಜಾವಳೀ ಕಥೆ).

[ <ಸಂ. ಕುಂಡಿಕಾ ]

**ಗುಂಡಿಗೆಗುಳ್ಳ** (ನಾ). ಒಬ್ಬಾತನ ಹೆಸರು : ಮಹಾರಾಜರುಂ ಬಾಣರಸರುಂ ಸೋರೆಮಟಿ ಕೋಟೈಂಯಟ್ಟಲ್ಲಿ ನೊಟಂಬಿದಡಿಗ ರಾಚಮಲ್ಲಂ ಮಯಿನ್ನಡಿ ಗುಣ್ಣಿಗೆಗುಳ್ಳ ಎನಬರು ಸಮಸ್ತ ಬಲ ಬೆಜಿಸ ಬಿಟ್ಟೊಡೆ (ಎಕ. XXVI, ೨೩-೭ : ಸು. 886). [ ? ]

**ಗುಂಡಿಗೆಗೊಳ್** (ಕ್ರಿ). ಎದೆಗೆ ಸೇರಿಸು ; ತಬ್ಬಿಕೊಳ್ಳು ; ಆಲಿಂಗಿಸು : ಕೋಮಲೆಯಾ ಗುರುಕುಚಗಳ ಗುಂಡಿಗೆಗೊಂಡು ನೃಪವರನುರದೊಳ ಮರ್ಚಿದನು (ಶ್ರೀಪಾಲ. ೨-೩೮).

[ ಗುಂಡಿಗೆ₁ + ಕೊಳ್₁ ]

**ಗುಂಡಿಗೆನೋವು** (ನಾ).ಎದೆನೋವು; ಹೃದಯಂದ ನೋವು: ಚೌಳುಪ್ಪನ್ನು ನೆನೆಯುಕ್ಕಿ ಹಸುವಿನ ತುಪ್ಪವನ್ನು ಕಲಸಿ ದಿನ ದುಡ್ಡು ೩ ತೂಕ ಕುಡಿಯಲು ಗುಂಡಿಗೆನೋವು ನಿಲ್ಲುವುದು (ಸಕಲ್ಪ. ಪರಿ. ೪೬೦).

[ ಗುಂಡಿಗೆ₁ + ನೋವು ]

**ಗುಂಡಿಗೆವಾಟ** (ನಾ). ಒಬ್ಬಾತನ ಹೆಸರು (?): ಸ್ವಸ್ತಿಶ್ರೀ ವಲ್ಲವ ಪೃಥುವೀರಾಜ್ಯಂ ಕೆಯೆ ಸಿಯಗೆಲ್ಲ ಕಿಸುಮಾಣ್ಣುನಾಡಾಳೆ ಗುಣ್ಡಿಗೆವಾಟಕ್ಕ ತೊಟ್ಟಲಾಳುತ್ತುಮ್ ಕಾಡುಪಟ್ಟಿ ಬೋಳದುಳ್ಳಿ ಪೆಬ್ಬೀಳ ನಲ್ಲಕ್ಕಳ್ ಎಱಿದುವಿಟ್ಟಾರ್ (ಎಕ. XVI, ತುಮಕೂ. ೯೬-೦ : ?). [ ? ]

**ಗುಂಡಿಗೆವಿಡಿ** (ಕ್ರಿ). ಕಮಂಡಲುವನ್ನು ಹಿಡಿ : ಆಚಾರವಿಹುದೆಂದು ಲೋಚ ಗುಂಡಿಗೆವಿಡಿದು ಭೂಚರದಿ ಸತ್ತ ನವಿಲಗಱಿ ಪಿಡಿಯುವುದು ನೀಚವಲ್ಲೇನು (ಸರ್ವಜ್ಞ. ೦೦೧೯). [ ಗುಂಡಿಗೆ₂ + ಪಿಡಿ₁ ]

**ಗುಂಡಿಗೆವೊಗು** (ಕ್ರಿ). ಎದೆಯನ್ನು ಸೇರು; ಹೃದಯವನ್ನು ಪ್ರವೇಶಿಸು: ಕೊಂದೆನ್ನ ಮಗನನಿಂ ಭಯದಿಂದಂ ರಸವೊಕ್ಕುಮಜನ ಗುಂಡಿಗೆವೊಕ್ಕುಂ . . . ಮೇಣವಂ ಬರ್ದುಕುವನೇ (ಪಂಪಭಾ. ೧೧-೦೨೧).

[ ಗುಂಡಿಗೆ₁ + ಪೊಗು ]

**ಗುಂಡಿತ** (ಗು). ೧. ಪುಡಿಮಾಡಿದ; ಅರೆದ. ೨. ಧೂಳಿನಿಂದ ಮುಚ್ಚಿದ: "ರೂಷಿತಂ, ಗುಂಡಿತಂ [ ಪಾಠಾಂ. ಕುಂಠಿತಂ ]—ಈ ೨ ಮುಸುಕಿದುದು" (ಹಲಾಯು. ೧೨೬- ೮೩). [ ಸಂ. ]

**ಗುಂಡಿತು** 'ಗುಂಡಿತ್ತು' ನೋ.

**ಗುಂಡಿತ್ತು**, ಗುಂಡಿತು, ಗುಣ್ಣಿತು, ಗುಣ್ಣಿತ್ತು (ನಾ). ಆಳವಾದುದು ; ಗಂಭೀರವಾದುದು : ಆದಲೆ ನೀರ್ ಗುಂಡಿತ್ತಿಂದೀದಲೆಯೊಳೆ ನಿಂದು ಸತಿಗೆ ಹರಿಗಂ ತೋಱುತ್ತಾದರದೆ . . . ಕಂಠದಘ್ನಮೆಂಬಳವಿಗಳಂ (ಪಂಪಭಾ. ೩-೭೨); ತಣ್ಣಿತ್ತು; ಬಿಣ್ಣಿತ್ತು; ಗುಂಡಿತ್ತು [ ಪಾಠಾಂ. ಗುಣ್ಣಿತ್ತು ] (ಶಮದ. ೭೭ ಪ್ರಯೋ.). **ಗುಂಡಿತು :** "ಅತಳಸ್ಪರ್ಶಂ, ಅಗಾಧಃ, ಗಂಭೀರಂ, ಗಭೀರಂ, ಅಸ್ಥಾಗಂ—ಈ ೫ ಗುಂಡಿತು" (ಹಲಾಯು. ೦೦೭-೨೭); ಗುಂಡಿತವು ದೊಂದು ನಾಡೆ ಕೆಸಱನೊಡೆಯ ಪೞವಾವಿಯ ತಡಿಯೊಳಿಱಿದು ಕೊಂದು (ವಡ್ಡಾರಾ. ೦೮೦-೨೩). **ಗುಣ್ಣಿತು :** (ಕ). **ಗುಣ್ಣಿತ್ತು :** ಮೇಲಿನ 'ಶಮದ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಗುಂಡು₂ ]

**ಗುಂಡಿದುಳ್ಕಾಡು** (ಕ್ರಿ). ಗುಂಡಿಯಲ್ಲಿ (ನೀರು ಮೊದಲಾದುದು) ತುಳುಕಾಡು.—ಚೆಲ್ಲು : ಗುಂಡಿದುಳ್ಕಾಡಿ ಸರ್ವರು ಹೊಕ್ಕು ಕೂಡೆ ಹೊನ್ನಂಡೆ ಜೇಕರ್ಣೊಳಮೆಯೊಳ್ಗೊಗೆದು (ಭರತೇ. ೪೦-೨೯).

[ ಗುಂಡಿ₂ + ತುಳ್ಕಾಡು ]

**ಗುಂಡಿಬೆಸಣಿಗೆ** 'ಗುಂಡಿಬೆಸಳಿಗೆ' ನೋ.

**ಗುಂಡಿಬೆಸಳಿಗೆ**, ಗುಂಡಿಬೆಸಣಿಗೆ (ನಾ). ಗುಂಡಾಗಿ ಆಳವಿರುವ ಪಾತ್ರೆ : ಉಂಡೆ ಹಲಸಿನ ಕಾಯ ಮೇಲಣಕೋಟೆಯ ಕೆತ್ತಿ ಗುಂಡಿಬೆಸಳಿಗೆಯ ಮಧ್ಯದೊಳು ಹಗಱಂ ಹರಹಿಕೊಂಡದಂ ಮಡಗಿ (ಸೂಪಶಾ. ೩-೪೩). **ಗುಂಡಿಬೆಸಣಿಗೆ :** ಉಂಡೆಗುಂಬಳಕಾಯ ಮೇಲಣ ಹಸುರ ಕೆತ್ತಿಕೊಂಡು ಕರ್ಬೊನ್ನ ಸಲಿಗೆಯೊಳದಂ ಕದುಕಿಱಿದು ಗುಂಡಿಬೆಸಣಿಗೆಯಲ್ಲಿ ನೀರ ಹೊಯಿದದನಿರಿಸಿ ಕುದಿಸಿ (ಸೂಪಶಾ. ೩-೨೩). [ ಗುಂಡಿ₂ + ಬೆಸಳಿಗೆ ]

**ಗುಂಡಿಲ₁** 'ಗುಂಡಲಿ' ನೋ.

**ಗುಂಡಿಲ₂** (ನಾ). ಒಂದು ನದಿಯ ಹೆಸರು : ಪೊನ್ನಱ ಕೊಟ್ಟು ಮಣ್ಣಱ ಕೊಣ್ಣ ಭೂಮಿ ಗುಂಡಿಲದಿಂ ಪಡುವ ಸೀಮೆಯಲ್ (ಎಕ. IV, ಗುಂಡ್ಲುಪೇ. ೯೩-೩೨ : 1049). [ ? ]

**ಗುಂಡಿವಟ್ಟಲ್** (ನಾ). ಗುಂಡಾದ ಬಟ್ಟಲು ; ದುಂಡುಬಟ್ಟಲು : "ಅನುಕರಂ ಗರ್ಶ [ ರ್ಹ ] ಕಂ ಗುಂಡಿ [ ಪಾಠಾಂ. ಡ ] ವಟ್ಟಲಕ್ಕುಂ" (ಮಂಗರಾ. ೬೩-೨೩). [ ಗುಂಡು₂ + ಬಟ್ಟಲ್ ]

**ಗುಂಡು** (ನಾ). ೧. ವರ್ತುಲ ; ಗೋಳಾಕಾರ : ಭೂಮಿ ಗುಂಡಾಗಿದೆ (ರೂಢಿ). ೨. ರುಬ್ಬುವುದಕ್ಕೆ ಉಪಯೋಗಿಸುವ ಕಲ್ಲು ; ರುಬ್ಬುಗುಂಡು : "ಅಸು ಶಿಲಾಪಟ್ಟಮೆನಲಸಿಯಕಲ್ ಗುಂಡಿಂಗೆ ಪೆಸರು ಮುಂಡಾಶ್ಮಮೆನಿಸಿಕ್ಕುಂ" (ಮಂಗರಾ. ೬೦-೧೯). ೩. ದಪ್ಪವಾಗಿರುವ ಕಲ್ಲು ; ದೊಡ್ಡಕಲ್ಲು : ಬಡಿಯಂ ಗುಂಡಂ ಕಲ್ಲಿಂದಿಡುತುಂ ಬೆನ್ನಟ್ಟಿ ಬೆರ್ಚಿ ಭಯವಶದಿಂ ವ್ಯೆ ನಡುಗೆ (ಧರ್ಮಾಮೃ. ೭-೮೪); ಕಾಲಲಿ ಕಟ್ಟಿದ ಗುಂಡು ಕೊರಳಲಿ ಕಟ್ಟಿದ ಬೆಂಡು ತೇಲಲೀಯದು ಗುಂಡು ಮುಳುಗಲೀಯದು ಬೆಂಡು ಇಂತಪ್ಪ ಸಂಸಾರಶರಧಿಯ ದಾಂಟಿಸಿ ಕಾಲಾಂತಕನೆ ಕಾಯೋ (ಬಸವ. ೦೦೭-೩೩೦); ಕಲ್ಲಾದರೇನು ಗುಂಡಾದರೇನು ತಲೆ ಬಡಿಯಲಿಕ್ಕೆ (ಗಾದೆ). ೪. ತುಬಾಕಿಯ ಗೋಲಿ ; ಬಂದೂಕಿಗೆ ಹಾಕುವ ಗೋಲಿ : ನೂಱಾಱು ಪೆಟಲ ಗುಂಡುಗಳ ಜೋಡಿಸಿ ಕಂಚಗಾಱರ ಪಸರಕೆಟ್ಟಂತೆ ಸೀಱಿ ಸಿಡಿಲು ಬೀಳುತಿವೆ (ಭರತೇ. ೩೪-೭೪); ಘಟಶತಘ್ನಿಗಳ ಗುಂಡುಗಳುಱಿ ಮೇಲಕೆ ಪುಟವೆದ್ದು ನಡೆದುವೇವೇಳ್ದೆ (ಕಂಠವಿ. ೦೨-೦೮); ತುಫಾಕದಿಂ ನೆಗೆವ ಗುಂಡಿನ ಪೋಲ್ (ರಾಜಶೇ. ೩-೬೯). ೫. ಗಾರೆಕೆಲಸ ಮಾಡುವವನು ಸಮಮಟ್ಟ ನೋಡಲು ಉಪಯೋಗಿಸುವ ತೂಗುವ ಕಲ್ಲು ; ತೂಗುಗುಂಡು ; (ಕ). ೬. ಬಾಲಕರು ಆಟಕ್ಕೆ ಉಪಯೋಗಿಸುವ ಗೋಲಿ : (ಕ). ೭. ಚಿನ್ನದಿಂದ ಮಾಡಿದ ಮಣಿ ಮತ್ತು ಅದರಿಂದ ಮಾಡಿದ ಆಭರಣ : ಅವಳ ಕತ್ತಿನಲ್ಲಿ ಗುಂಡಿನ ಸರವಿತ್ತು (ರೂಢಿ). ೮. ಪ್ರಾಣಿಗಳ ವೃಷಣ. ೯. ಗುಂಪು ; ನೆರವಿ ; ಸಮೂಹ : "ಗುಂಡು=ನೆರವಿ" (ಕಮುದ. ಪರಿ. ೨); ಗುಂಡೊಂದು ಸಂದೋ [ ಪಾಠಾಂ. ದೇ ] ಹದೊಳ್ "(ಶಬ್ದಾನಿ. ೬೬); ಗುಂಡೆಲ್ಲಂ ಪೊಗಟ್ ಗುಂಡಮಬ್ಬೆ . . . ನೆಗಟ್ (ಅಜಿಪು. ೧-೪೭ ವ); ನಾಯುಮಂ ಪಂದಿಯುಮಂ ಮಿಂಡರುಮಂ ಪೆಂಡಿರುಮಂ ಗುಂಡೆಲ್ಲಂ ನೆರೆದು ನೋಡೆ ಕಾದಿಸುತಿರ್ಪಂ (ಧರ್ಮಾಮೃ. ೨-೦೭); ಏಱಿಸಿಕೊಂಡು ಹಸ್ತಿ ನಿಜಮಸ್ತಕಮಂ ಬರೆ ಕಂಡು ಗುಂಡು ನೀರೇಱಿ ಪುರಪ್ರಧಾನ ಜನಮುಂ ಗುಡಿಗಟ್ಟೆ (ನೇಮಿಪು. ೨-೯೪); ಹಿಂಡೂಡೆದು ಕಾಡಿನೊಳಗಂಡಲೆವ ಕುರಿಮರಿಯ ಕಂಡುಬ್ಬಿ ತೋಳಗಳ ಗುಂಡೂಳುವಂತೆ

(ಗೋರೂ.ಥಾ. ೮-೨೨೮). (ಗು). ೧೧. ಗುಂಡಗಿರುವ ; ದುಂಡಾದ. ಗುಂಡುಕಟ್ಟಿಗೆ', 'ಗುಂಡುಗಪ್ಪರ' ಪರಾ.

**ಗುಂಡುರುಳಿಸು** = (ಆಲಂ) ಸುಳ್ಳುಹೇಳು : ಅವನು ಈಚೆಗೆ ಬಹಳ ಗುಂಡುರುಳಿಸುವುದನ್ನು ಕಲಿತಿದ್ದಾನೆ (ರೂಢಿ):

[ ದೇಶ ತಮಿ. ಕುಣ್ಟು ; ತುಳು. ತೆಲು. ಗುಂಡು ; ಕೊಲಾ. ಗುಂಡ್ ; ನಾಯ್ಕಿ. ಘಂಡ್./ಮರಾ. ಗುಂಡ್ ]

**ಗುಂಡುಕಟ್ಟಿಗೆ** (ನಾ). ದುಂಡಾದ ಮರದ ತುಂಡು,-ಉರುಳಿ : ಕುಲಗಳ ಬಣ್ಣದ ಭೂತವಂತೂ ಸರ್ಕಸ್ಸಿನ ಹೆಣ್ಣು, ಗುಂಡುಕಟ್ಟಿಗೆಯನ್ನು ಕಾಲ್ಕೆಳಗೆ ಉರುಳಿಸಿ ಹೊರಳಿಸುವಂತೆ ಇಡಿಯ ಭೂಮಿಯನ್ನೇ ಉರುಳಾಡಿಸುತ್ತಿದೆ (ವಿಜಾಮು. ೨೮). [ ಗುಂಡು + ಕಟ್ಟಿಗೆ$_1$ ]

**ಗುಂಡುಕಲ್ಲು** 'ಗುಂಡುಗಲ್' ನೋ.

**ಗುಂಡುಗಪ್ಪರ, ಗುಂಡಗಪ್ಪರ** (ನಾ). ಗುಂಡಾದ ಕಪ್ಪರ,- ಭಿಕ್ಷಾಪಾತ್ರೆ : ಶಿವನು . . . ಕಂತೆ ಕಮಂಡಲ ದಂಡಿಗೋಲು ಗುಂಡುಗಪ್ಪರವೆರಸಿ ಭಿಕ್ಷುಕ ಮೂರ್ತಿಯಾಗಿ ಬಂದು (ಭೈರಸೂ. ೩೮೧). **ಗುಂಡಗಪ್ಪರ :** ಮಹಾ ಮಹತ್ತಿಗೆ ವಿಭೂತಿ ಮುಂತಾಗಿ ದಣ್ಡಕೋಲು ಗುಣ್ಡಗಪ್ಪರಕ್ಕೆ ಶರಣು ಮಾಡಿ (ಎಕ. XIV, ಎಳಂದೂ. ೧೮೮-೦೦ ; 1647).

**ಗುಂಡುಗಪ್ಪರದ ಕಾಯಕ** = ಕೈಯಲ್ಲಿ ದುಂಡನೆಯ ಪಾತ್ರೆಯನ್ನು ಹಿಡಿದುಕೊಂಡು ಭಿಕ್ಷೆಗಾಗಿ ತಿರುಗುವ ಜಂಗಮನ ವೃತ್ತಿ: (+).

[ ಗುಂಡು + ಕಪ್ಪರ$_2$ ]

**ಗುಂಡುಗಲ್, ಗುಂಡಕಲ್ಲು, ಗುಂಡುಕಲ್ಲು, ಗುಂಡುಗಲ್ಲು** (ನಾ). ೧. ಗುಂಡಾಗಿರುವ ಕಲ್ಲು ; ದುಂಡುಗಲ್ಲು : ತೂಳುವ ಗುಂಡುಗಲ್ಗಳ ರಾಸಿ ಪಟ್ಟಣದಾಳುವೇರಿಯು ತುಂಬಿಹುವು (ಕಂನವಿ. ೬-೨೧). **ಗುಂಡಕಲ್ಲು: ೨.** ಒರಳಿನಲ್ಲಿ ರುಬ್ಬಲು ಉಪಯೋಗಿಸುವ ದುಂಡಾದ ಕಲ್ಲು ; ರುಬ್ಬು ಗಲ್ಲು : ಗುಂಡಕಲ್ಲಿಗೆ ಕುಲಿಶದುಂಡ ಮುರಿದಂತೆ ಹೆಂಡಗುಡುಹ ಕೈಯ ಗುಂಡುಗಲಿಯುಳಿದ (ಕರಿಕ. ೦೨೬-೩) : ಉಂಡವರಿಗೆ ಉಂಡದ್ದೇ ಬಂತು ಗುಂಡಕಲ್ಲಿಗೆ ಅರೆದದ್ದೇ ಬಂತು (ಗಾದೆ). **ಗುಂಡುಕಲ್ಲು: ೧.** ಗುಂಡುಕಲ್ಲಿನ ಲಟ್ಟೆ ದನುಜರ ತಂಡ ಸಾವುದೆ (ಕಾಶಿರಾ. ೨೧-೩೨) ; ಅಲ್ಲಿ ಮೂರು ಗುಂಡು ಕಲ್ಲುಗಳನ್ನು ಹೂಡಿ, ಒಲೆ ಮಾಡಿ ಹುರುಳಿ ಬೇಯಿಸಬಹುದು (ಸ್ವಪ್ನಹೊ. ೪೪). ೨. ಉಂಡವನಿಗೆ ಊಟ ಬೇಡ ಗುಂಡುಕಲ್ಲಿಗೆ ಎಣ್ಣೆ ಬೇಡ (ಗಾದೆ) ; ಗಂಡನಿಗೆ ಬೇಡಾದವಳು ಗುಂಡುಕಲ್ಲಿಗಿಂತ ಕಡೆ (ಗಾದೆ). **ಗುಂಡುಗಲ್ಲು :** ೧. ಮೊನೆಗಲ್ಲು ಗುಂಡುಗಲ್ಲುಗಳರೆಗಲ್ಲುಗಳ್ . . . ವನಮಾರ್ಗವ ತುಂಬಿ ಹುವು (ಕಂನವಿ. ೦೮-೪೪). [ ಗುಂಡು + ಕಲ್$_3$ ]

**ಗುಂಡುಗಲ್ಲು** 'ಗುಂಡುಗಲ್' ನೋ.

**ಗುಂಡುಗಾಳಗ** (ನಾ). ಗುಂಪುಗಳಿಗೆ ನಡೆಯುವ ಯುದ್ಧ,-ಕಾಳಗ ; ಸಾಮೂಹಿಕ ಕದನ : ಒಂದೆ ಕ್ಷಣದೊಳು ನಿನ್ನ ಕೊಲದಿರುವಂದನಲ್ಲಾ ನಸ್ತ್ರಸರಸಿಗಳಿಂದ ಕಾದಿರಿಸಿದರೆ ತಿಳಿಯದೆ ಗುಂಡುಗಾಳಗವ (ಜರಾಮಾ. ೨೮೩-೩೬). [ ಗುಂಡು + ಕಾಳಗ (<ಕಾಳೆಗ) ]

**ಗುಂಡುಗಿಡಿ** (ನಾ). ಗುಂಪುಗುಂಪಾಗಿ ಸಿಡಿಯುವ ಕಿಡಿ : ತುಂಡುಗಿಡಿಗಳ ತೂಬುಗಿಡಿಗಳ ಗುಂಡುಗಿಡಿಗಳ ಘಾಡಣೆಯ ಕಿಡಿ ಚಂಡಿಯಾಯ್ತು (ತೊರರಾ. ೩-೮-೮೨). [ ಗುಂಡು + ಕಿಡಿ ]

**ಗುಂಡುಗುಬುಚಾಡು** (ಕ್ರಿ). ಕಣ್ಣುಮುಚ್ಚಾಲೆ ಆಟವನ್ನು ಆಡು : ತನಿಗೊರ್ವಿದಲೆವಳ್ಳಿಯೊಳ್ ಗುಂಡುಗುಬುಚಾಡಿ (ಪುಷ್ಪಪು. ೨-೪೪ ರಗಳೆ).

[ <ಅಡಂಗುಬುಚಾಡು ]

**ಗುಂಡುಗೊಲೆ** (ನಾ). ಗುಂಡುಹಾಕಿ ಕೊಲ್ಲುವುದು,-ಸಾಯಿಸುವುದು : ಗುಂಡುಗೊಲೆ ನೇಣುಗೊಲೆಗಳು ಇಂಥ ಅಸಂಖ್ಯಾತ ಅತ್ಯಾಚಾರಗಳಿಗೆ ಸರ್ಕಾರವೇ ಹೊಣೆ (ಪುನರು. ೩೩೦). [ ಗುಂಡು + ಕೊಲೆ$_2$ ]

**ಗುಂಡುಗೊಳ್** (ಕ್ರಿ). ೧. (ಹೊಡೆಯುವುದಕ್ಕಾಗಿ) ಕಲ್ಲನ್ನು ತೆಗೆದು ಕೊಳ್ಳು ; ದುಂಡಿ ತೆಗೆದುಕೊಳ್ಳು : ತೊಲಗದೆ ಗೋವುಗಳ್ ನೆರೆದು ನಾಯ್ಗಳನುಚರ್ಚುವ ಕಂಡು ಗುಂಡುಗೊಂಡಲಸದೆ ನಿಚ್ಚ ಮಾರ್ದಿಡುವ . . . ಬಾರಿಗೆ ಮೆಯ್ಯನೊಡ್ಡಿ ಕೋಲೆಗೊಳಗಾಗಿ ಪಂದಿ ನಮೆವಂದವುದಾರ್ಗ ಮಸೇವ್ಯವರ್ಣನಂ (ಸುಕುಮಾ. ೩-೧೮) ; ಬೆದಱ ಪುಲಿ ಬಾವಿಯೊಳ್ ಬಿರ್ದುದನಱಿದೊಡೆ ಗುಂಡುಗೊಂಡು [ಕೊಂದಿ]ಕ್ಕುಗುವುಲ್ಲದೆ ಪಿಡಿದು ತೆಗೆವರಾರ್ (ಸುಕುಮಾ. ೬-೩೬). ೨. ಗುಂಪಾಗು ; ಸಮೂಹವಾಗು : ಮಂಡಳಿಸಿರೆ ಗಿಳಿಗಳಮೇಯುಷಂಡಂಗಳ ಮೇಲೆ ಗುಂಡುಗೊಂಡೀಕ್ಷಿಸುವು ದ್ದಂಡೆಯುರನಯನರುಚಿ ಮಾರ್ತಂಡಗೋಲಗಿಪುದಿಂದುಮಂಡಳರುಚಿಯಂ (ಮಹಾನೇ. ೧-೩೯) ; ಪೆಂಡವಾಸವುಮೆನಲ್ಕೆಯಂತಃಪುರದೊಳ್ ಗುಂಡು ಗೊಂಡಿರ್ಪ ಸತಿಯರ್ (ಕವಿಕಂ. ೧೪೬) ; ದೆಸೆದೆಸೆಯ ಕಟ್ಟಲೆಯು ಬಂದ ವೊಂದುಗೂಡಿ ಗುಂಡುಗೊಂಡು (ರಾಮಾಶ್ವ. ೬೨-೧೨).

[ ಗುಂಡು + ಕೊಳ್$_1$ ]

**ಗುಂಡುಗೋವಿ$_1$** (ನಾ). ಗುಂಡುಗಳನ್ನು ತುಂಬಿ ಹಾರಿಸುವ ಕೋವಿ ; ಬಂದೂಕು: ಪರಿಪರಿಯ ಗುಂಡುಗೋವಿಯ ಕುದಿವ ಸುಣ್ಣಗಳ ಪಿರಿದಾದ ಗುಂಡುಗಳ . . . ಮೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಚಬಪು. ೪೨-೦೧) : ಗುಂಡುಗಲಿಗಳ ಗುಂಡುಗೋವಿ ಸರಗೋವಿಗಳಿಂ ಬೋದಿಗೆ ತೊಲೆ ಗಳಿಂ . . . ಅನುಗೆಯ್ದು (ಚಿಕವಂ. ೩೪-೧೩).

[ ಗುಂಡು + ಕೋವಿ$_1$ ]

**ಗುಂಡುಗೋವಿ$_2$** (ನಾ). ಮದುವೆ ಇಲ್ಲದವನು ; ಯಾವ ವಿಧವಾದ ಕಟ್ಟುಪಾಡೂ ಇಲ್ಲದವನು ; ಏಕಾಂಗಿ : ಮನೇಲಿ ನಾನೊಬ್ಬನೇ ಆದೆ ಗುಂಡುಗೋವಿ, ಹಿಂದಿಲ್ಲ ಮುಂದಿಲ್ಲ (ಬದುಕ್ಕ. ೨೬) : ಗುಂಡುಗೋವಿ ಹಾಗೆ ತಿರುಗಿಕೊಂಡಿದ್ದ ಆತನಿಗೆ ಲಗ್ನಮಾಡಿದಿರಿ (ನನ್ನರ. ೨೬) ; ನಂಜಪ್ಪ ಸಂಸಾರಿಯೋ ಗುಂಡುಗೋವಿಯೋ ? (ಶನಿಸಂ. ೧೩೯). [ ? ]

**ಗುಂಡುಜಾಜಿ** (ನಾ). ಗುಂಡಾದ ಹೂವುಗಳನ್ನು ಬಿಡುವ ಒಂದು ಬಗೆಯ ಜಾಜಿ : (+). [ ಗುಂಡು + ಜಾಜಿ ]

**ಗುಂಡುತೋಪು** (ನಾ). ದಟ್ಟವಾದ ಮರಗಳ ಗುಂಪು ; ತೋಪು : ಗುಂಡುತೋಪುಗಳನ್ನು ಜನ ಸೌದೆಗಾಗಿ ಕಡಿದು ಹಾಳುಮಾಡಿದರು (ಕಳಹು. ೧೦೧). [ ಗುಂಡು + ತೋಪು$_1$ ]

**ಗುಂಡುದೀವು** (ಕ್ರಿ). ಕಲ್ಲುಗಳಿಂದ ತುಂಬು : ಆದೇಂ ನೆಱ ಪೋಲ್ವುದೊ ಚುಂಡಹುಂಡಸಂಸ್ಥಾನದೆ ಗುಂಡುದೀವಿದ ತಡಂಗವನಂಗದ ಪಾಂಗ ವಂದಿರಾ (ಆದಿಪು. ೩-೯೦). [ ಗುಂಡು + ತೀವು ]

**ಗುಂಡುನಾಲೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೈಜಿಗಿ. ೬೪-೧೩೧೮). [ ಗುಂಡುನಾಲೆ$_0$ + ಹುಲ್ಲು (<ಪುಲ್) ]

**ಗುಂಡುಪಿನ್ನು** (ನಾ).=ಗುಂಡುಸೂಜಿ : ಮನೆಯಲ್ಲಿ ಗುಂಡುಪಿನ್ನಿಗೆ ಬಹಳ ಅಭಾವ (ರೂಢಿ). [ ಗುಂಡು + ಪಿನ್ನು ]

**ಗುಂಡುಬಟ್ಟಲು** 'ಗುಂಡುವಟ್ಟಲ್' ನೋ.

**ಗುಂಡುಬದನಿಕೆ** (ನಾ). ಒಂದು ಬಗೆಯ ಸಸ್ಯ : (ಮೈಜಿಗಿ. ೩೧-೧೦೧೯).

[ ಗುಂಡು + ಬದನಿಕೆ ]

**ಗುಂಡುಮಲ್ಲಿಗೆ** (ನಾ). ಒಂದು ಬಗೆಯ ಮಲ್ಲಿಗೆ ; ದುಂಡುಮಲ್ಲಿಗೆ : ಗುಂಡುಮಲ್ಲಿಗೆ, ಏಳುಸುತ್ತಿನ ಮಲ್ಲಿಗೆ (ಮೈಜಿಗಿ. ೪೬-೯೪೦).

[ ಗುಂಡು + ಮಲ್ಲಿಗೆ ]

**ಗುಂಡುಮುಂಚಿಹುಲ್ಲು** (ನಾ). ಒಂದು ಬಗೆಯ ಹುಲ್ಲು : ಬೆಟ್ಟಂಚಿಹುಲ್ಲು . . . ಗುಂಡುಮುಂಚಿಹುಲ್ಲು, ಗಂಟುಕಾಚಿ (ಮೈಜಿಗಿ. ೬೪-೧೩೧೯).

[ ಗುಂಡುಮುಂಚಿ$_0$ + ಹುಲ್ಲು (<ಪುಲ್) ]

**ಗುಂಡುಮುಳುಗ** 'ಗುಂಡುಮುಳುಕ' ನೋ.

**ಗುಂಡುಮುಟುಕ**, ಗುಂಡುಮುಳುಗ (ನಾ). ಒಂದು ಜಾತಿಯ ಹಕ್ಕಿ; ಸಳಕುಟಹಕ್ಕಿ: "ಆತಾಪೀ, ಶಕುನಿಃ, ಚಿಲ್ಲಃ–ಈ ೩ ಗುಂಡುಮುಟುಕ (ನ ಹಕ್ಕಿ)ಂ" (ಹ ರಾ ಯು. ೪೨-೯೭). **ಗುಂಡುಮುಳುಗ**: (ಕ). [ಗುಂಡು? + ಮುಟುಗು (<ಮುಟುಂಗು) + –ಕ$_3$]

**ಗುಂಡುಮೊಗೆ** (ನಾ). ಒಂದು ಬಗೆಯ ಭೂಮಿ: ಗುಣ್ಡುಮೊಗೆಯೊಮ್ಮತ್ತರ್ ಮಣಲಿಯೊಮ್ಮತ್ತರ್ (ಎಕ. VII, ಶಿಮೊ. ೧೦೫-೦೦; ?). [ಗುಂಡು + ಮೊಗೆ$_2$]

**ಗುಂಡುವಟ್ಟಲ್**, ಗುಂಡವಟ್ಟಲ್, ಗುಂಡುಬಟ್ಟಲು (ನಾ). = ಗುಂಡಿವಟ್ಟಲ್: (ಕ). **ಗುಂಡವಟ್ಟಲ್**: "ಅನುಕರಂ ಗರ್ಶ[ರ್ಹ]ಕಂ ಗುಂಡ [ಪಾಠಾಂ. ಡಿ] ವಟ್ಟಲಕ್ಕಂ" (ಮಂಗರಾ. ೬೩-೨೫). **ಗುಂಡುಬಟ್ಟಲು**: ನಾನು ಪ್ರತಿದಿನವೂ ಈ ಗುಂಡುಬಟ್ಟಲು ತುಂಬ ಹಾಲು ಕುಡಿಯುತ್ತೇನೆ (ರೂಢಿ). [ಗುಂಡು + ಬಟ್ಟಲ್]

**ಗುಂಡುವಡೆ** (ಕ್ರಿ). ಶಿಲಾರೂಪವನ್ನು ಪಡೆ; ಕಲ್ಲಾಗಿರು: ನಮ್ಮ ಹೆಣ್ಣುಮಗಳು ಚಿಕ್ಕಮಲ್ಲಕ್ಕನು ಈ ದೇವಸ್ಥಾನದ ಮುಂದೆ ಅಗ್ನಿಪ್ರವೇಶವನ್ನು ಹೊಂದಿದಳು ಅವಳ ರೂಪು ಈ ಬೆಟ್ಟದಲ್ಲಿ ಬಂಡೆಗೆ ಸ್ಥಾಪಿಸಿ ಇರುತ್ತೆ ಗುಂಡುವಡೆದು ಇರುತ್ತೆ ಶಾಸನ ಇರುತ್ತೆ (ಎಕ. XVI, ಮಧುಗಿ. ೦೦೭-೫೦ ಪುಟ; 1612). [ಗುಂಡು + ಪಡೆ$_1$]

**ಗುಂಡುವಲೆ** (ನಾ). ಒಂದು ಬಗೆಯ ಬಲೆ: ಪಾಸುವಲೆ ಗುಂಡಿ[ಡು]ವಲೆ . . . ತಟ್ಟಿಬಲೆಗಳೆಂಬವನು (ಪುಣ್ಯಾಸ್ರ. ೯-೩೬); ಗುಂಡುವಲೆಗಳ ಬೀಸುವಲೆಗಳ . . . ಮಂಡವಿಗೆಬಲೆಗಳ ಕಿರಾತರು ಕೆದಱಿತಗ್ಗಲದಲಿ (ಕುಮಾ.ಅ. ೧೩-೨೩); ಸೊದರ್ಗಿಡಿಗಂಗಲ್ಗಳೆಯೆಂಟು ಗುಂಡುವಲೆ ಖಡ್ಗಂ (ಯಾದವ. ೬-೫೮). [ಗುಂಡು + ಬಲೆ$_1$]

**ಗುಂಡುಸೂಜಿ** (ನಾ). ಗುಂಡಾದ ತಲೆಯನ್ನುಳ್ಳ ಸಣ್ಣಸೂಜಿ; ಗುಂಡುಪಿನ್ನು; ಟಾಚಣಿ (ಉಕ): ಸೂಜಿ, ಗುಂಡುಸೂಜಿ . . . ಚಿಲ್ಲರೆನಾಣ್ಯ ಇತ್ಯಾದಿಗಳು ಸಹ ಹೇಗೋ ಕಸದ ಗುಡ್ಡೆಯನ್ನು ಸೇರುತ್ತವೆ (ನಾಡಿಗೇ. ೨೩); ಈ ಸಣ್ಣಚುಕ್ಕೆಯು ಚಿನ್ನದ ಗುಂಡುಸೂಜಿಯ ತಲೆಯಂತೆ ಹೊಳೆಯುತ್ತ . . . ಅದರ ಗಾತ್ರವು ಬೆಳೆಯುತ್ತ ಬರುವುದು (ಜ್ಯೋತಿರ್. ೮೪). [ಗುಂಡು + ಸೂಜಿ]

**ಗುಂಡುಹಾಕು** (ಕ್ರಿ). ೧. ಬಂದೂಕು, ಫಿರಂಗಿ ಮೊದಲಾದುವುಗಳಿಗೆ ಗುಂಡನ್ನು ಸೇರಿಸು,–ಭರ್ತಿಮಾಡು: (ಕ). ೨. ಬಂದೂಕು ಮೊದಲಾದುವುಗಳಿಂದ ಗುಂಡನ್ನು ಹಾರಿಸು; ಗೋಲಿಬಾರುಮಾಡು: ಒಬ್ಬ ದ್ರೋಹಿ ಮಹಾತ್ಮಾಗಾಂಧೀಜಿಯವರನ್ನು ಗುಂಡುಹಾಕಿ ಕೊಂದನು (ರೂಢಿ). [ಗುಂಡು + ಹಾಕು (< ಪಾಯ್ಕು$_1$)]

**ಗುಂಡುಹಾರಿಸು** (ಕ್ರಿ). ಫಿರಂಗಿ, ಬಂದೂಕು ಮೊದಲಾದುವುಗಳಿಂದ ಗುಂಡನ್ನು ಉಡಾಯಿಸು,–ಹೊಡೆ: ಸಂಚುಗಾರರಲ್ಲೊಬ್ಬ ಗುಂಡು ಹಾರಿಸಿದನು (ಪುನರು. ೨೪೦). [ಗುಂಡು + ಹಾರಿಸು (<ಪಾಱಿಸು)]

**ಗುಂಡುಹೊಡೆ** (ಕ್ರಿ). =ಗುಂಡುಹಾಕು ೨: ದೊಡ್ಡನು ಗುಂಡುಹೊಡೆದು ಹುಲಿಯನ್ನು ಕೊಂದನು (ಶಾಲೂರ. ೬ ಕಥಾಸಾರ). [ಗುಂಡು + ಹೊಡೆ$_1$ (< ಪೊಡೆ$_1$)]

**ಗುಂಡುಳಿ** (ನಾ). ಗುಂಡಾದ ಉಳಿ; ದುಂಡುಳಿ: (ಕ). [ಗುಂಡು + ಉಳಿ$_6$]

**ಗುಂಡೆಗಾಱ** (ನಾ). (?): ಉಂಡುಬಾರದ ಊಟವನ್ನು ಕಾಣಬಾರದ ಕರ್ಮವನ್ನು ಗುಂಡೆಗಾಱರ ಕೇರಿಗೆ ಸಿಕ್ಕಿ ಚೆಂಡಿಗಿಂತ ಹಗುರವಾದ (ಪುರಂದ. ೫-೯-೩). [? + – ಗಾಱ (< – ಕಾಱ)]

**ಗುಂಡೇಱು** (ನಾ). ಒಂದು ಪ್ರದೇಶದ ಹೆಸರು: ಸಿಡಿಲಯ್ಯಂ ಕಾಲಂ ಕರ್ಚ್ಚಿ ಕೊರವಾಡಿ ಮೂನೂಱರ ಬಟ್ಟಿಯ ಲೋಕಾಯ್ತಪೊಟಲುಂ ಗುಂಡೇಱೊಳಿರ್ಪ್ಪರ್ತ್ತನಾಲ್ಕುಮತ್ತರ್ಕ್ಕೞಿಯ ಕಯ್ಯಂ . . . ಕೊಟ್ಟರ್ (ಎಕ. XI, ಹೊಳಲ್ಕೆ. ೨೩-೦೮; 968). [?]

**ಗುಂಡೊಲೆ** (ನಾ). ೧. ದುಂಡಾದ ಬಾಯುಳ್ಳ ಒಂಟೊಲೆ: (ಕ). ೨. ಮೂರು ಗುಂಡುಗಳನ್ನು ಹೂಡಿ ಮಾಡಿದ ಒಲೆ: ಪ್ರವಾಸದಲ್ಲಿ ಗುಂಡೊಲೆ ಹೂಡಿ ಕಾಫಿ ಮಾಡಿದರು (ರೂಢಿ). [ಗುಂಡು + ಒಲೆ$_4$]

**ಗುಂಡೋತ್ತರ** (ನಾ). =ಗುಂಡಾಂತರ ೧ (?): ನೆಲಗಟ್ಟಿನ ಮೇಲೆ ಕಲಶವ ನಿಡುವ ಗುಂಡೋತ್ತರ[ಪಾಠಾಂ. ಗುಂಡವತ್ತ]ದ ಮೇಲೆ ಸೊದೆಯಂ ಬಱಿವ (ಧರ್ಮಾಮೃ. ೦೨-೨೪). [?]

**ಗುಂಡೋದರ** (ನಾ). ಗುಡಾಣದಂತಹ ಹೊಟ್ಟೆಯುಳ್ಳವನು; ಡೊಳ್ಳುಹೊಟ್ಟೆಯವನು: ಲಕ್ಷೋಪಲಕ್ಷ ಕಿಸೆ ಕಿಸಿದು ನಿಂತರು ಬಾಯಿ ಗುಂಡೋದರಗೆ ಮಾತ್ರ ದಕ್ಕುತ್ತಿದೆ (ನಡಬಂ. ೧೦೩-೮). [<ಸಂ. ಕುಂಡೋದರ]

**ಗುಂತು** 'ಗೊತ್ತು' ನೋ.

**ಗುಂದ** 'ಕುಂದ$_3$' ನೋ.

**ಗುಂದುಗುಡೆ** (ನಾ). ಒಂದು ಊರಿನ ಹೆಸರು: ಸಿಮ್ಮನೂರ ಕಿಳ್ಳಮ್ಮನ್ . . . ಬಳ್ಳಿಗ್ಗಮಯ ಗಾಮುಣ್ಡನ್ ಗುಂದುಗುಡೆಯಾ ಸಾತ್ತುಗಾಮುಣ್ಡ ಇನ್ನಿ ಎನಿಬ್ಬರು ಶ್ರೀಕರಣ ಸಹಿತಂ ಬಿಟ್ಟಾರ್ (ಎಕ. VIII, ಸೊರಬ.೦೦-೧೩; ಸು. 800). [?]

**ಗುಂದೆ** 'ಕುಂದ$_3$' ನೋ.

**ಗುಂದ್ರು** (ನಾ). ಒಂದು ಬಗೆಯ ಹುಲ್ಲು; ಕಾಗೆಬಿದಿರು: "ಗುಂದ್ರುಃ, ತೇಜನಕಃ, ಶರಃ–೩ ಕಾಗಿಬಿದರು" (ಸಿದ್ಧಾಂತಿ. ೦೩೦). [ಸಂ.]

**ಗುಂದ್ರಯಿಸು** (ಕ್ರಿ). ದಟ್ಟೈಸು; ಸಾಂದ್ರವಾಗು: ಅತ್ತ ಘನಸಾಂದ್ರದಿಂ ಕರ್ಣಸೌಬಲಶಲ್ಯದ್ರೋಣನಶ್ವತ್ಥಾಮರ್ಬೆದಿ ರಣದಿ ಗುಂದ್ರಯಿಸಿ ಯಿಳಿದ ರಣಭೂಮಿಯಂ ಪೊಕ್ಕು (ಲಕ್ಷ್ಮಭಾ. ೭-೩-೦೫). [? + –ಇಸು$_3$]

**ಗುಂಫನ** (ನಾ). ೧. (ಶಬ್ದಾರ್ಥಗಳ) ಜೋಡಣೆ. ೨. ಕಟ್ಟುವಿಕೆ; ರಚನೆ: ಗುಂಫನ–ಗುಂಪನ (ಶಮದ. ೨೫೫ ಪ್ರಯೋ); ಗುಂಫನ–ಗುಂಪನ (ಶಬ್ದಾನು. ೦೪೨ ಪ್ರಯೋ). [< ಸಂ. ಗುಂಫನ]

**ಗುಂಪಲು** (ನಾ). ಗುಂಪು; ಸಂದಣಿ. 'ಗುಜುಂಗುಂಪಲು, ನಾರುಗುಂಪಲು' ಪರಾ. [ಗುಂಪು$_1$ (<ಗುಣ್ಪು$_1$)+–ಅಲು (<–ಅಲ್$_2$). /ತಮಿ. ಕುವ್ವಲ್]

**ಗುಂಪಳಿ** 'ಗುಣ್ಪಳಿ' ನೋ.

**ಗುಂಪಿತ** (ನಾ). ತೊಡಕಿಗೆ ಸಿಕ್ಕಿದವನು; ಕಟ್ಟುಂಬಿದ್ದವನು (?): ತನ್ನ ಗುಣವ ಹೊಗಳಬೇಡ ಇದಿರ ಗುಣವ ಹಳಿಯಬೇಡ ಕೆಮ್ಮನೊಬ್ಬರ ನುಡಿಯಬೇಡ ನುಡಿದು ಗುಂಪಿತನಾಗಬೇಡ (ವಚಶಾ. I, ೦೮೦). [<ಸಂ. ಗುಂಫಿತ ?]

**ಗುಂಪು$_1$** 'ಗುಣ್ಪು$_1$' ನೋ.

**ಗುಂಪು$_2$** 'ಗುಣ್ಪು$_2$' ನೋ.

**ಗುಂಪುಕಟ್ಟು** (ಕ್ರಿ). ೧. ಒಟ್ಟಿಗೆ ಸೇರು; ಗುಂಪುಗೂಡು: ಆ ಕಾರಿನ ಸುತ್ತಲೆಲ್ಲ ಪಠಾರದ ಹುಡುಗರು ಗುಂಪುಕಟ್ಟಿಕೊಂಡು ಆಡುತ್ತಿದ್ದರು (ಕಂಬನಿ. ೦೩೨). ೨. ಗುಂಪುಗೂಡಿಸು; ಬಣಕಟ್ಟು: ಅವರೆಲ್ಲರೂ ಸೇರಿ ಗುಂಪು ಕಟ್ಟಲು ಪ್ರಯತ್ನಿಸುತ್ತಿದ್ದಾರೆ (ರೂಢಿ). [ಗುಂಪು$_1$ (<ಗುಣ್ಪು$_1$)+ಕಟ್ಟು$_1$]

**ಗುಂಪುಕೂಡು** 'ಗುಂಪುಗೂಡು' ನೋ.

**ಗುಂಪುಗಾರ** (ನಾ). ಗುಂಪುಗಟ್ಟುವವನು. 'ಗುಂಪುಗಾರಿಕೆ' ಪರಾ. [ಗುಂಪು$_1$ (<ಗುಣ್ಪು$_1$) + – ಗಾರ (<–ಕಾಱ)]

**ಗುಂಪುಗಾರಿಕೆ** (ನಾ). ಗುಂಪುಕಟ್ಟುವಿಕೆ: ಪಾರ್ಟಿ, ಪಕ್ಷ, ಗುಂಪುಗಾರಿಕೆ, ಪಕ್ಷಾಂತರ ನನ್ನೂರಿನಲ್ಲಿಯೂ ಯೋಗ್ಯತಾನುಸಾರ ಇವೆ (ನನ್ನೂರು. ೩೦೬). [ಗುಂಪುಗಾರ + – ಇಕೆ]

**ಗುಂಪುಗುಳಿ** (ನಾ).=ಗುಂಪುಗಾರ. ‘ ಗುಂಪುಗುಳಿತನ ’ ಪರಾ.
[ ಗುಂಪು$_1$ (<ಗುಣ್ಪು$_1$) + – ಕುಳಿ$_3$ ]

**ಗುಂಪುಗುಳಿತನ** (ನಾ).=ಗುಂಪುಗಾರಿಕೆ : ರಾಜಕೀಯಕ್ಷೇತ್ರದಲ್ಲಿ·ಗುಂಪುಗುಳಿತನ ತಲೆದೋರಬಾರದು (ರೂಢಿ). [ ಗುಂಪುಗುಳಿ + – ತನ ]

**ಗುಂಪುಗೂಡು**, ಗುಂಪುಕೂಡು (ಕ್ರಿ). ಒಟ್ಟಿಗೆ ಸೇರು ; ಏಕತ್ರವಾಗು : ಪಲವು ಸುಕೃತವಿಂತು ಪರಿಣತಿವೆತ್ತುದೊ ಕುಲದೇಳ್ಗೆ ಗುಂಪುಗೂಡಿದುದೊ (ಹರಿಬ. ೨-೦೪). **ಗುಂಪುಕೂಡು :** ಕಾರಣವಿಲ್ಲದೆ ಜಗಳಕ್ಕೆ ಕರೆಯುವುದು ಗುಂಪುಕೂಡಿ ಹೊಡೆಯುವುದು (ಕಳಹು. ೧೧).
[ ಗುಂಪು$_1$ (<ಗುಣ್ಪು$_1$) + ಕೂಡು$_1$ ]

**ಗುಂಪುಗೊಳ್ಳು** (ಕ್ರಿ).=ಗುಂಪುಗೂಡು : (ಹ).
[ಗುಂಪು$_1$ (< ಗುಣ್ಪು$_1$) + ಕೊಳ್ಳು$_1$ (<ಕೊಳ್$_1$) ]

**ಗುಂಪುದೆಗೆ** (ಕ್ರಿ). ಕೂಡಲುಂ ಹಿಂದಗೆ : ಹೆಂಪಳಿದ ತನುಲತೆಯು ಹೆರುಷದ ಸೊಂಪು ಸಡಿಲಿದ ಮುಖದ ನೋಟದ ಗುಂಪುದೆಗೆದಕ್ಷಿಗಳ ಕೋಡಿಯ ಲೊಗುವ ಕಿಱುವನಿಯು . . . ಲಜ್ಜೆಯಲಂಪಿನಂಬುಜವದನೆ ವೈಯಿಕ್ಕಿದಳು ನಿಜಪತಿಗೆ (ತೊರಲಾ. ೬-೫೩-೬೭). [ ಗುಂಪು$_1$ (<ಗುಣ್ಪು$_1$) + ತೆಗೆ$_1$ ]

**ಗುಂಪುಬಸರೇಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಗುಂಪುಬಸರೇ ಸೊಪ್ಪು ಹಾಲಲ್ಲಿ ತೆಗೆದುಕೊಳ್ಳೆ ರಕ್ತಪ್ರಮೇಹ ಮಾಣ್ಗುಂ (ವಿಷ್ಯವಿ. ೭೨).
[ ? + ಸೊಪ್ಪು$_3$ ]

**ಗುಂಪುಲಿ** (ನಾ). (ಪಕ್ಷಿ ಮೊದಲಾದುವುಗಳು) ಒಟ್ಟಾಗಿ ಮಾಡುವ ಶಬ್ದ,–ಸಾಮೂಹಿಕವಾದ ಧ್ವನಿ : ಬಿದಿರ್ವೆಳೆಯ ತುದಿಗಣೆಯೊಳಿರ್ದೊಂದು ಕಾಮಳ್ಳಿಗಳ ಹಿಂಡು ಹಾರಿದುದು ಗುಂಪುಲಿಯನೆಸೆದು (ಶ್ರೀರಾಮಾ. ೨೦೩-೨೩೨). [ ಗುಂಪು$_1$ (<ಗುಣ್ಪು$_1$) + ಉಲಿ$_2$ ]

**ಗುಂಪುವಡೆ** (ಕ್ರಿ). ಗುಂಪುಗೂಡು ; ಒಟ್ಟಾಗು : ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಗ. ೧೭).
[ಗುಂಪು$_1$ (< ಗುಣ್ಪು$_1$) + ಪಡೆ$_1$ ]

**ಗುಂಪುಸೇರು** (ಕ್ರಿ). = ಗುಂಪುವಡೆ : ಹುಡುಗರು ಹೆಚ್ಚುಹೆಚ್ಚಾಗಿ ಗುಂಪು ಸೇರಿದರು (ಶಾವಿಜ. ೨೦). [ಗುಂಪು$_1$ (<ಗುಣ್ಪು$_1$)+ಸೇರು$_1$ (<ಸೇರ್$_1$)]

**ಗುಂಪೊಡೆ** (ಕ್ರಿ). ಗುಂಪು ಒಡೆದುಹೋಗು,—ಚೆದರು : ತಾಮರಸ ಮೆಂದು ವದನಾಬ್ಜಕ್ಕೆ ಯೆರಗಿಯಳಿ ಸೋಮನಾಸಿಕ ಚಂಪಕರಲ ನಿಟ್ಟಿಸಿ ಭಯದಿ ಪಾರ್ದು ಗುಂಪೊಡೆಯದಿರಲು (ನವಕೋ. ೨೩-೬).
[ ಗುಂಪು$_1$ (<ಗುಣ್ಪು$_1$) + ಒಡೆ$_1$ ]

**ಗುಂಫ$_1$** (ನಾ). ಆಳ ; ಗಾಂಭೀರ್ಯ : ಶರಧಿಗುಂಫವನಱಿಯಲಿಳಿದನೊ ತರಣಿ ಸಂಧಿಗೆ ವರುಣನಲ್ಲಿಗೆ ತೆರಳಿದನೊ (ಕೌಶಿಲಾ. ೦೫-೩೬).
[ <ಗುಣ್ಪು$_2$ ? ]

**ಗುಂಫ$_2$** (ನಾ). ೧. ಮಾಲೆಯಂತೆ ಕಟ್ಟುವುದು. ೨. ಜೋಡಣೆ ; ರಚನೆ : “ ಶ್ರಂಥನಂ, ಗ್ರಂಥನಂ, ಗುಂಫಃ, ಸಂದರ್ಭಃ, ರಚನಾ–ಈ ೫ ರಚನೆ ” (ಹಲಾಯು. ೦೨೦-೪೫) : “ ಗ್ರಂಥನಂ ಗುಂಫಮೆನೆ ರಚನೆಗಭಿಧಾನಮಕ್ಕುಂ ” (ಮಂಗರಾ. ೦೨೬-೩). [ ಸಂ. ]

**ಗುಂಫನ** (ನಾ).=ಗುಂಫ$_2$ ೨ : ಪದರಚನಾತಿಶಯಂ ರೀತಿದಲದುವುಂ ನಿಯತ ವರ್ಣ ಗುಂಫನ ಗುಣದೊಂದೊದವಿಂ ಮೂದೆಱನಕ್ಕುಂ (ಕಾವ್ಯಾವ. ೭೮೦).
[ ಸಂ. ]

**ಗುಂಫಿತ** (ಗು). ಕಟ್ಟಿದ ; ಜೋಡಿಸಿದ ; ರಚಿತವಾದ. [ ಸಂ. ]

**ಗುಂಬ$_1$** ‘ ಗುಣ್ಪು$_1$ ’ ನೋ.

**ಗುಂಬ$_2$** ‘ ಗುಣ್ಪು$_2$ ’ ನೋ.

**ಗುಂಬ$_3$**, ಗುಂಭ$_2$ (ನಾ). ೧. ಗಡಿಗೆ; ಘಟ; ಕುಂಭ ; ಕಲಶ : ಗುಬ್ಬಿ ಗುಂಬವನೊಡೆದು ಒಬ್ಬುಳಿಯಾಯಿತು (ಮಧುವ· ೧೩) : ಸ್ಮರನೀಱ ಪಿಡಿದ ಕೆಂಪಿನ ಗುಂಬದಡಿಯೋ ಅರುಣಮಣಿಯೋ ಕೆಂಬರೆಯೋ . . . ತರುಣಿಮಣಿಯ ಚೆಂದುಟಿಯೋ (ನೇಮಿಸಂ. ೨೩-೦೯೮) : ತುಂಬಿದ ಗುಂಬಮಂ ಪೊಱಪೊಸಂತಿಲ ಪಕ್ಕದೊಳಿಟ್ಟು ಪೂಜೆಗೆಯ್ಸಿಂ (ಚಳವಿ. ೪-೩೫) : ಕುಂಬಾರ್ರ ಹುಡುಗಿ ಬಲು ಚೆಲುವೆ ಆದರೆ ಗುಂಬ ತಟ್ಬೋದ ಬಿಡಲೊಲ್ಲೆ (ಹಳ್ಳಿಯ. ೬೦). ೨. ಗಾಡಿ, ರಥ ಮುಂತಾದ ವಾಹನದ ಚಕ್ರಗಳ ನಾಭಿ,–ಮಧ್ಯದ ದಿಂಡು,–ನಡುತೂಬು : ಅಚ್ಚು ಮುಱಿದು ಮೂಕು ಗುಡುಗಿಱಿದಾ ಗುಂಬ ನುಚ್ಚುನೂಱಾಗಲಾ ಶಕಟ (ನೇಮಿಸು. ೦೫-೮೪). **ಗುಂಭ$_2$ :** ೨. ೪ ಭಂಡಿ ಚಕ್ರಕ್ಕೆ ಗುಂಭ (ಎಳ. XIV, ಪಂಜನ. ೨೮೯-೫ ; ಸು. 1848). ೩. ಕಂಬದ ತುದಿಯ ಕಲಶಾಕಾರದ ಸಾಧನ ; ಬೋದಿಗೆ : ಬಜ್ಜರದ ಕಂಬಗಳ ಸಕಲ ರುಚಿ ಗುಂಭಗಳನಾಂತು ತೋರ್ಪ ಅರಮನೆ (ಪಂಕಾಶಾ. ೨-೭-೩೬). [ <ಸಂ. ಕುಂಭ ]

**ಗುಂಬಕಟ್ಟು** (ನಾ). ಚಕ್ರದ ನಾಭಿಯ ಮೇಲಿರುವ ಕಬ್ಬಿಣದ ಪಟ್ಟಿ : ಅದು ನನ್ನೂರ ಬಡಗಿ ಗಾಡಿಯ ಗುಂಬಕಟ್ಟನ್ನು ಗಣಗಣ ಕಾಯಿಸಿ ಬಡಿಯಲು ಕುಲುಮೆಯಿಂದ ಹೊರದೆಗೆದಂತೆ ಕಾಣುತ್ತದೆ (ನನ್ನೂರು. ೦೩).
[ ಗುಂಬ$_3$ + ಕಟ್ಟು$_2$ ]

**ಗುಂಬಗುಟಿ** (ನಾ). ಆಳವಾದ ಗುಂಡಿ ; ಹೊಂಡ : ಇವರ್ಗೆಮಾರಾಜ ನೃಪಂಗಂ ತಾರತಮ್ಯಂ . . . ಗುಂಬಗುಟಿಗಳ್ಗಂ ಅಂಬುಧಿಗಂ ಅಣುಗಳ್ಗಂ ಅಮರಗಿರಿಗಂ . . . ಇರ್ಪಂತಿರ್ಕುಂ (ಚಳಮಂ. ೨೬-೧).
[ ಗುಂಬ$_2$ (<ಗುಣ್ಪು$_2$) + ಕುಟಿ$_2$ ]

**ಗುಂಬಚ್ಚು** ‘ ಗುಂಬಜು ’ ನೋ.

**ಗುಂಬಜ್** ‘ ಗುಂಬಜು ’ ನೋ.

**ಗುಂಬಜು**, ಗುಂಬಚ್ಚು, ಗುಂಬಜ್, ಗುಂಬಸ್ಸು, ಗುಮ್ಮಸು (ನಾ). ಅರ್ಧ ಗೋಳಾಕಾರದ ಗೋಪುರದಂಥ ರಚನೆ : ಈ ಕಟ್ಟಡದ ವೈರೇಖೆ ಮೇಲಕ್ಕೆ ದುಂಡಾಗಿ ಗುಂಬಜನಲ್ಲಿ ಕೊನೆಗೊಳ್ಳುವುದು (ಅಬೂಬ. ೭೦). **ಗುಂಬಚ್ಚು :** ಮಸೀದಿಯ ಗುಂಬಚ್ಚುಗಳು ಮೆರೆಯಬೇಕು (ದೌಲತ್.೪೫). **ಗುಂಬಜ್ :** ಪ್ರಪಂಚದಲ್ಲೇ ಹಿರಿದಾದ ಈ ಗುಂಬಜ್ (Dome) ಅದ್ಭುತವಾದೊಂದು ಎಂಜಿನಿಯರಿಂಗ್ ಸಾಹಸದ ಫಲ (ಹುಮುಜ. ೦೬೩). **ಗುಂಬಸ್ಸು :** ಗುಂಬಸ್ಸು ಸುಮಾರು ೨೫ ಮೈಲಿ ದೂರಕ್ಕೆ ಕಾಣುತ್ತದೆ (ಭಾರದ. ೪೦೩). **ಗುಮ್ಮಸು :** ಬಹುಶಃ ಪ್ರಪಂಚದ ಗುಮ್ಮಸುಗಳಲ್ಲೆಲ್ಲ ಇದು ಎರಡನೆಯ ದೊಡ್ಡದು (ಭಾರದ. ೪೦೩).
[ ←ಪಾರ. ಗುಂಬದ್ ; ಹಿಂ. ಗುಂಬಜ್ ]

**ಗುಂಬದಂಬಟೆ** (ನಾ). ತಮಟೆಯಂತೆ ಬಾರಿಸುವ ಕುಂಭ ; ಘಟವಾದ್ಯ.
**ಗುಂಬದಂಬಟೆಯವ** = ಗುಂಬವಾದ್ಯವನ್ನು ಬಾಜಿಸುವವನು : ಅಯ್ಯಾ ನೀಂ ಬಂದುದಂ ಕಾಣದೆ ಈ ಗುಂಬದಂಬಟೆಯವರ್ ದೊಂಬಿಗೂಡಿ ಪಾಡುವ ಬಣ್ಣವಾಡಂ ಕೇಳುತ್ತೆ ಪತ್ತೆಸಾರ್ದ ನಿಮ್ಮನಱಿಯದಾದೆಂ (ಚಳವಿ. ೬-೦೩೪ ಪ). [ ಗುಂಬ$_3$ + ತಂಬಟೆ (<ತಂಬಟ) ]

**ಗುಂಬಮಾತು** (ನಾ). ತಿಳಿಯದ ಮಾತು ; ರಹಸ್ಯವಾದ ನುಡಿ : (ಹ).
[ ಗುಂಬ$_2$ (<ಗುಣ್ಪು$_2$) + ಮಾತು$_1$ ]

**ಗುಂಬವಾದ್ಯ** (ನಾ). ಕುಂಭವಾದ್ಯ ; ಘಟವಾದ್ಯ : “ ಗುಂಬವಾದ್ಯ= ಕುಂಭವಾದ್ಯ, ಗುಮತೀವಾದ್ಯ” (ಗಂಗಾಮ. ೦೦೬). [ ಗುಂಬ$_3$+ವಾದ್ಯ ]

**ಗುಂಬಸ್ಸು** ‘ ಗುಂಬಜು ’ ನೋ.

**ಗುಂಬಹೋಗು** (ಕ್ರಿ). ಆಳಕ್ಕೆ ಹೋಗು ; ಅಡಗಿಹೋಗು : ಮಾತಾಡಿದರೂ ಧ್ವನಿಯು ಗುಂಬಹೋಗಿರುವದರಿಂದ ಶಬ್ದವು ಹೊರಗೇ ಬರಲಾರದು (ಶಿಷಧೀ. ೦೪).
[ ಗುಂಬ$_2$ (<ಗುಣ್ಪು$_2$) + ಹೋಗು$_1$ (<ಪೋಗು$_1$) ]

**ಗುಂಬಳಕಿ** (ನಾ). (ಕರಾ) ನೀರಿನ ಗುಳ್ಳೆ ; ಬುದ್ಬುದ : ಸಂಸಾರ ನೀರ ಮೇಲಿನ ಗುಂಬಳಕಿಯು ಹಾಗೆ (ಜಾ೦). [ ? ]

**ಗುಂಬಾರತಿ** (ನಾ). ೧. ದೇವಾಲಯದ ನರ್ತಕಿಯು ಸಿದ್ಧಪಡಿಸಿದ ಮೇಲೆ ಪೂಜಾರಿಯಿಂದ ಉಪಯೋಗಿಸಲ್ಪಡುವ ದುಂಡಾದ ಆರತಿ ತಟ್ಟೆ : (ಕ). ೨. ದೇವಾಲಯದ ನರ್ತಕಿ : (ಕ).
[ ಗುಂಬು$_3$ + ಆರತಿ$_1$ ]

**ಗುಂಬು$_1$** ‘ ಗುಣ್ಪು$_1$ ’ ನೋ.

**ಗುಂಬು$_2$** ‘ ಗುಣ್ಪು$_2$ ’ ನೋ.

**ಗುಂಬುಟ** ‘ ಗುಮ್ಮಟ$_1$ ’ ನೋ.

**ಗುಂಬೆ** (ನಾ). (?) : ನೆಗ್ಗಿಲ ಗುಂಬೆ ನಿಡುವೆಳುಜಿಗ್ಗೆ ಪುನ ಗಜಸೆಲೆಯ ಗ್ರಾಮ . . . ಕಂತಬಿವ್ವಿನ ದಿಣೆ ಇಂ ಪೂರ್ಬ್ಬದೆ ಕೂಡಿತ್ತು ಸೀಮಾನ್ತರಂ (ಎಶಿ. I, ೦-೨೮ ; 466 ಕ್ರಿಶ). [ ? ]

**ಗುಂಭ$_1$** ‘ ಗುಣ್ಪು$_3$ ’ ನೋ.

**ಗುಂಭ$_2$** ‘ ಗುಂಬು$_3$ ’ ನೋ.

**ಗುಂಭನ** (ನಾ).=ಗುಂಫ$_2$ ೨ (?) : ಒಂದೆಡೆಯು ಸುಷಿರ ಕಾಂಸ್ಯಾದಿ ಧ್ವನಿ ಗುಂಭನವಮದೊಂದೆಡೆಯು ಲಾಸ್ಯ ನರ್ತನ ನೃತ್ಯ ವೈಭವದಿ ವೃಂದಾರಕರ ಲೋಕಕಿವ್ಯಾಡಿಸಿ ತೋರಿದುದು (ವಂಶಾರಾ. ೨-೨೮-೦೨) ; ಆಖ್ಯಾನ, ವ್ಯಾಖ್ಯಾನ, ಟಿಪ್ಪಣ, ಮನನ, ಸೀವನ, ಗುಂಭನ ಇತ್ಯಾದಿಗಳು (ಹೊಸುಗ. ೬೬). [ <ಸಂ. ಗುಂಫನ ? ]

**ಗುಂಭಮೌನ** (ನಾ). ಗಂಭೀರವಾದ ಮೌನ,- ನಿಶ್ಶಬ್ದತೆ,- ನೀರವತೆ : ಇದರೇನೆಲ್ಲಿಲ್ಲು ಗುಂಭಮೌನವ ತುಂಬಿ ಮೂಢನ ಸಮಾಧಿಯೊಲು ಕತ್ತಲಿಸಿದೆ (ಗಂಗಾತ. ೩೨-೦೩). [ ಗುಂಭ$_1$ (<ಗುಣ್ಪು$_3$) + ಮೌನ ]

**ಗುಂಭಾನ್** (ಕ್ರಿ). ಗುಟ್ಟನ್ನು ಹೊಂದು ; ರಹಸ್ಯವಾಗಿರು (?) : ಅಪ್ಪರನು ಗುಂಭಾಂತು ಕಳುಹಿದ ದಿಕ್ಕುದಿಕ್ಕಿಗೆ ಕೌರವರ ರಾಯ (ಜನಧಾ. ೫೬-೨೯). [ ಗುಂಭ$_1$ (<ಗುಣ್ಪು$_3$) + ಆನ್$_1$ ]

**ಗುಂಭಾವನೆ** (ನಾ). ಸುಮ್ಮನಿರುವಿಕೆ ; ಗಾಂಭೀರ್ಯ ; ಮೌನ (?) : ನೀವಿಬ್ಬರು ಗಾಳಿ ತುಂಬಿದ ರಬ್ಬರ ಚೆಂಡಿನಂತೆ ಗುಂಭಾವನೆಯಿಂದಿದ್ದ ಕಾರಣವನ್ನು ತಿಳಿಯಬಹುದೇ? (ಜಯಂತ. ೯೪).
[ ಗುಂಭ$_1$ (<ಗುಣ್ಪು$_3$) + ಭಾವನೆ ]

**ಗುಂಯ್** (ನಾ). ಒಂದು ಅನುಕರಣಶಬ್ದ. ‘ಗುಂಯ್ಗುಡು’ ಪರಾ.

**ಗುಂಯಿ** (ನಾ). ಒಂದು ಅನುಕರಣಧ್ವನಿ ; ಸೊಳ್ಳೆ, ದುಂಬಿ ಮೊದಲಾದುವುಗಳ ಧ್ವನಿಯನ್ನು ಅನುಕರಿಸುವ ಶಬ್ದ. ‘ಗುಂಯಿಗುಟ್ಟು’ ಪರಾ.

**ಗುಂಯಿಗುಂಯಿ** (ದ್ವಿರುಕ್ತಿ): ಸೊಳ್ಳೆಗಳು ಗುಂಯಿಗುಂಯಿ ಎನ್ನುತ್ತಾ ಇವೆ (ಜಾ೦).

**ಗುಂಯಿಗುಟ್ಟು** (ಕ್ರಿ).=ಗುಂಯ್ಗುಡು.

**ಗುಂಯಿಗುಟ್ಟಾಟ**=ಗುಂಯ್ ಎಂದು ಧ್ವನಿಮಾಡುವಿಕೆ : ನಾವು ನಮ್ಮ ಸುತ್ತಲಿರುವ ವಿಶ್ವದ ಕಿರುಗುಟ್ಟಾಟ – ಗುಂಯಿಗುಟ್ಟಾಟಗಳನ್ನು ಕೇಳಬಹುದು (ಆಕಾಶ. ೮). [ ಗುಂಯಿ + ಕುಟ್ಟು$_1$ ]

**ಗುಂಯಿಗುಡು** (ಕ್ರಿ). ಗುಂಯಿ ಗುಂಯಿ ಎಂದು ಧ್ವನಿಮಾಡು : ಹಾಗೇ ಗುಂಯಿಗುಡುತ್ತ ಮೃದುವಾಗಿ ಗಾಳಿಯಲ್ಲಿ ತೇಲಿ ತೇಲಿ ಸರಿವ ರಾಗ ಮಾಧುರ್ಯವೂ ಇದೆ (ಭಾರಜಾ. ೦೮).
[ ಗುಂಯಿ + ಕುಡು$_1$ (<ಕೊಡು$_1$) ]

**ಗುಂಯ್ಯ** (ನಾ). ವಿಶ್ವಾಸಘಾತಕ ; ಮೋಸಗಾರ ; ವಂಚಕ (?) : ವಂಶದಲ್ಲಿ ಯಾರೂ ಕೋರ್ಟುಮೆಟ್ಟಲು ಹತ್ತದಿದ್ದಾಗ ಈ ಗುಂಯ್ಯ ನನ್ನ ಹೆಸರು ಬೀದಿಗೆಳೆದರೆ (ಪ್ರಶ್ನೆ. ೩೨). [ <ಕುಯುಕ? ]

**ಗುಂಯ್ಗುಡು** (ಕ್ರಿ). ೧. ಗುಂಯ್ ಎಂದು ಧ್ವನಿಮಾಡು : ಸುನಂದಳ ಅಂತರಂಗದಲ್ಲಿ ಗುಂಯ್ಗುಡುತ್ತಿರುವ ಮಾತುಗಳು (ದೂಬಟ್ಟ. ೧೬೨). ೨. ಪ್ರತಿಧ್ವನಿಸು : ನೀವು ಹೇಳಿದ್ದೇ ತಲೆಯಲ್ಲಿ ಗುಂಯ್ಗುಡುತ್ತಿತ್ತು (ದೂರಸ. ೯೩). ೩. ಗೊಣಗುಡು ; ಪಿಸುಗುಡು: ಅವನು ಗುಂಯ್ಗುಡುತ್ತಾನೆ (ಜಾ೦). [ ಗುಂಯ್ + ಕುಡು$_1$ (<ಕೊಡು$_1$) ]

**ಗುಕುಗುಕು** (ನಾ). ಪಾರಿವಾಳಗಳು ಮಾಡುವ ಸದ್ದನ್ನು ಅನುಕರಿಸುವ ಶಬ್ದ : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಕು . . . ಚಾರಿಟಿಯೆಂದುವಲ್ಲಲ್ಲಿ (ಭರಚ. ೧೩-೬೨).

**ಗುಕ್ಕ, ಗುಗ್ಗ$_1$** (ನಾ). ತಡವರಿಸುತ್ತ ಮಾತನಾಡುವವನು; ಉಗ್ಗ : ಇದೇ ಇದ್ದಾನಲ್ಲ ನಿನ್ನ ತಮ್ಮ ರಾಜ, ಮೂಕನಲ್ಲದಿದ್ದರೆ ಗುಕ್ಕ (ಹನ್ನೊಂದ. ೮೨) ; ‘ ಗುಕ್ಕ ’ ಮಾತನಾಡಿದ ಹಾಗೆ ಉಗ್ಗಡಿಸಿದ ಬನುವ (ಬನಸಿ. ೫೬). **ಗುಗ್ಗ$_1$** : ಪೂರಾ ಪೂರಾ ನುಡಿಯುವ ನಾಲಿಗೆ ಅರ್ಧಾ ಮಾತ್ರ ಗುಗ್ಗರ ಪಾಲಿಗೆ (ಅರಕೋ. ೬೨).

**ಗುಕ್ಕರಾಯ**=ಉಗ್ಗುವ ಮನುಷ್ಯ : ಬರ್ತಾನ ಅಲ್ಲೆ ನಿನ ಗಂಡ ಆ ಗುಕ್ಕರಾಯ, ನಿನ್ನ ಸಿಂಗಾರ ನೋಡ್ಲಿಕ್ಕೆ (ಹನ್ನೊಂದ. ೧೧೫).
[ ಗುಕ್ಕು$_2$ + – ಅ$_7$ ]

**ಗುಕ್ಕರಿ** (ನಾ). ರಾಟೆಯಲ್ಲಿ ನೂತು ಕದಿರಿಗೆ ಸುತ್ತಿದ ದಾರದ ಉಂಡೆ : ಮರ್ಕಟನ ಕೈ ನೂಲು ಗುಕ್ಕರಿಯು ತೆಱನಂತೆ ಸಿಕ್ಕಿಕೊಂಡು ಕಾಮ ಕ್ರೋಧಾದಿಗಳೆನ್ನ ಹಿಕ್ಕಿ ಹೀರುತಲಿವೆ (ಪುರಂದ. ೫-೬೩ ಉಗಾಭೋಗ).
[ <ಕುಕ್ಕಡ ]

**ಗುಕ್ಕರಿಸು** (ಕ್ರಿ). ತುತ್ತುಮಾಡು ; ನುಂಗು ; ಭಕ್ಷಿಸು : ಕರೆಯದೆ ಕಾಡಿ ಕಂಟಿಸುವ ಕೂಂಟಣಿಯಂ ನೋಣಗಜ್ಜ ತಿಂಗೆ ಬೆಂಗುರುಟ ಬಳಾರಿ ಬಾಡಿಸುಗೆ ಚಂಡಿಕೆ ನುಂಗುಗೆ ವಿಟಬ್ರು ಕೂರ್ತು ಗುಕ್ಕರಿಸುಗೆ [ಪಾಠಂ. ತುತ್ತುಗಟ್ಟುಯಿಸುಗೆ] ಕಾಳಿ ಕೊಳ್ಗೆ (ಲೀಲಾವ. ೨-೦೦೬).
[ ? + – ಇಸು$_2$ ]

**ಗುಕ್ಕಿಸು** (ಕ್ರಿ). ಉಗ್ಗುವಂತೆ ಮಾಡು ; ಮಾತು ಹೊರಡದಂತೆ ಮಾಡು: ಮಾತಿಲಿ ಗುಕ್ಕಿಸಿ ನರಕದೊಳಗೆ ಹಾಕು ಯಾತನೆಬಡಿಸು ಯಮಪುರದಲ್ಲಿಡು (ಕೋಲ್ಪದಿ. ೨೦೨-೪). [ ಗುಕ್ಕು$_2$ + – ಇಸು$_2$ ]

**ಗುಕ್ಕು$_1$** (ಕ್ರಿ). ಮಾತನಾಡುವಾಗ ತಡವರಿಸು; ಉಗ್ಗು : ತಕ್ಕನಿಶು ತಕ್ಕನಲ್ತಾಂ ತಕ್ಕ ಮರಣಕೆ ಬೆಸಸೆನಲ್ಕಳುವಕ್ಕೆಯನಳರ್ಬಿನಲಿ ಗುಕ್ಕನೆ ಗುಕ್ಕಿ ತತ್ಸುತನ ತೆಗೆದು ಬಿಗಿಬಿಗಿದಪ್ಪಿ ಮುದ್ದಿಸಿ(ಮುದೇಖ. ೩-೪೦). ‘ಗುಕ್ಕ’ ಪರಾ. [ ದೇ॥ ತೆಲು. ಗ್ರುಕ್ಕು ]

**ಗುಕ್ಕು$_2$** (ನಾ). ಗುಕ್ಕುವಿಕೆ ; ಉಗ್ಗು : ಅಲ್ಲವೋ, ಗುಕ್ಕು ಇರಲಿಲ್ಲವೇ ನಿನಗೆ ಚಿಕ್ಕವನಾಗಿದ್ದಾಗ ? (ತಿಂಮುತ. ೫೫) ; ಕುಂದುಂದರ ಒಂದ ಗುಕ್ಕು! (ಹರಿಂ. ೦೪). [ <ಗುಕ್ಕು$_1$ ]

**ಗುಕ್ಕು$_3$** (ನಾ). ೧. ಒಂದುಸಲ ಬಾಯಿಗೆ ಹಾಕಿಕೊಳ್ಳುವಷ್ಟು ಆಹಾರ ; ತುತ್ತು : ಹೆಂಡತಿಯ ಮೇಲೆ ರೇಗಿಕೊಂಡು ಒಂದು ಗುಕ್ಕು ಅನ್ನ ತಿಂದು ಹೊರಟ ರಾಮು (ಅನಾಮಿ. ೬೯) ; ಬಾಯಲ್ಲಿಯ ಗುಕ್ಕನ್ನು ನುಂಗಿರಲಿಲ್ಲ (ಕಂದುಟ. ೧೦೦). ೨. (ಆಲಂ) ಹಂಗು : ಅಕ್ಕನ ಗುಕ್ಕಿನೊಳಾಗಬೇಡ (ಸುಧುಮ. ೦೬).

**ಗುಕ್ಕಾಗು**=ತುತ್ತಾಗು; ಆಹುತಿಯಾಗು: ಕ್ರಮವಾಗಿ ಕೋಸಲ,ಕಲಿಂಗ . . . ಕೇರಳದೇಶಗಳೆಲ್ಲಾ ಅವನಿಗೆ ಲೀಲಾಮಾತ್ರದಿಂದ ಒಂದೊಂದು ಗುಕ್ಕಾದವು (ಛತ್ರೋಶಿ. ೩೮). ‘ಮುಕ್ಕು$_2$’ ಪರಾ.
[ ದೇ॥ ತೆಲು. ಗ್ರುಕ್ಕ, ಗ್ರುಕ್ಕು ]

**ಗುಕ್ಕು$_4$** (ನಾ). ಕೊಕ್ಕು ; ಚಂಚು (?) : ಪೊಕ್ಕನು ರಣಾಂಕಣವನಿತ್ತ ದ್ರೋಣನು ಗರುಡಹಕ್ಕಿಯಾಕಾರದೊಳ್ಬಲಿಗಳಂ ನಿಲಿಸಿಯಾ ಹಕ್ಕಿತಲೆಗಂ

ಕೃಪನ ದುಶ್ಶಾಸನನ್ನಿಟ್ಟು ಶಲ್ಯನಂ ಭಗದತ್ತನ ಗುಕ್ಕಿನೊಳ್ಕಲಿಸಿ (ತುರಂಗ: ೪೯-೨). [ <ಕೊಕ್ಕು$_2$ ? ]

**ಗುಕ್ಕು$_6$** (ನಾ). ಎದೆಹಾರುವಿಕೆ; ಎದೆಯ ಬಡಿತ: "ಎರ್ದೆಹಾಯಿ ತುತ್ತಿಗೆ ಗುಕ್ಕು" (ಶಬ್ದಮಂ. ೬೦). 'ಎದೆಗುಕ್ಕು' ಪರಾ. [ ? ]

**ಗುಕ್ಕುಹಿಡಿ** (ಕ್ರಿ). ಮಾತು ಹೊರಡುವಾಗ ತಡೆಯುಂಟಾಗು: ಸೋವಲೆಯೂ ಅಂಥದೆ ಆಭರಣಗಳನ್ನು ಈಗ ಧರಿಸಿದ್ದಳು ಪ್ರಭುಗಳಿಗೆ ಗುಕ್ಕುಹಿಡಿ ದಂತಾಯ್ತು (ಶಾಂತಲಾ. ೩೧೭).

[ ಗುಕ್ಕು$_2$ + ಹಿಡಿ$_1$ (<ಪಿಡಿ$_1$) ]

**ಗುಗು** (ನಾ). (?) : ಅಟು ಹೊಂಗೆ ಬ್ಯವಹಾರವಾಗಿ [ಮಾಡಿದ] ಗುಗುವಿನ ದಶಕದ ತಳಿಗೌದಾರಿಯಿಂದ × × × ಪಟುಕಂ (ಶಾಇ. I, ೩೭-೩೨ ; 1246).

[ ? ]

**ಗುಗ್ಗ$_1$** 'ಗುಕ್ಕ' ನೋ.

**ಗುಗ್ಗ$_2$** (ನಾ). ಒಬ್ಬಾತನ ಹೆಸರು: ಕಲಿಯುಗನೀಲಿ ಮಣಿಪೂಕ್ಕ ರಾಶ್ರಯ ಮಾವನಕೇಸರಿ ವಿಸಿಷ್ಟ ಜನಪ್ರಿಯಮ್ ಆಯುರ್ವರ್ಧರ ಕೋಟಿ ಶ್ರೀಮದ್ಗುಗ್ಗಂ (ಎಕ. III, ಮೈಸೂರು. ೩೭-೧೪ ; ಸು. ೯೯೦ ?). [ ? ]

**ಗುಗ್ಗರಗೋಲು** 'ಗುಗ್ಗರಿಗೋಲು' ನೋ.

**ಗುಗ್ಗರಿ$_1$** 'ಗುಗ್ಗುರಿ$_1$' ನೋ.

**ಗುಗ್ಗರಿ$_2$** 'ಗುಗ್ಗುರಿ$_2$' ನೋ.

**ಗುಗ್ಗರಿಗಟ್ಟು** 'ಗುಗ್ಗುರಿಗಟ್ಟು' ನೋ.

**ಗುಗ್ಗರಿಗಲ್** 'ಗುಗ್ಗುರಿಗಲ್' ನೋ.

**ಗುಗ್ಗರಿಗೊಳ್ಳು** 'ಗುಗ್ಗುರಿಗೊಳ್ಳು' ನೋ.

**ಗುಗ್ಗರಿಗೋಲು, ಗುಗ್ಗರಗೋಲು** (ನಾ). (ಹಿಂದೆ ಶಾಲೆಗಳಲ್ಲಿ ತಪ್ಪು ಮಾಡಿದ ವಿದ್ಯಾರ್ಥಿಗಳಿಗೆ ವಿಧಿಸುತ್ತಿದ್ದ) ಒಂದು ಬಗೆಯ ದಂಡನೆ,-ಶಿಕ್ಷೆ: (೬). **ಗುಗ್ಗರಗೋಲು :** 'ಗುಗ್ಗರಗೋಲು': ಇದರಲ್ಲಿ, ತಪ್ಪು ಮಾಡಿದವನ ಕೈಗಳನ್ನು ಜೋಡಿಸಿ ಹುರಿಯಿಂದ ಕಟ್ಟಿ, ಅವನನ್ನು ಕುಕ್ಕುರು ಗಾಲಿನಲ್ಲಿ ನೆಲದ ಮೇಲೆ ಕೂಡಿಸಿ ಕಟ್ಟಿದ ಕೈಗಳ ಮೇಲ್ಭಾಗದಲ್ಲಿಯೂ ಎರಡು ಮೊಣಕಾಲುಗಳ ಸಂದಿನಲ್ಲಿಯೂ ಒಂದು ದೊಡ್ಡ ಕೋಲನ್ನು ತೂರಿಸಿ ಉರುಳಿಸಿ ಬಿಡುವುದು (ಗುಣಸಾ. ೪): ಗುಗ್ಗರಗೋಲು ಹಾಕಿ ಹಿಂದುಗಡೆ ಮೊಣಕಿನಕಾಯಿ ಹೊಗೇ ಹಾಕುತಾರೆ (ಮೂಮುಕಾ. ೩೨).

[ ಗುಗ್ಗರಿ$_2$ (<ಗುಗ್ಗುರಿ$_2$) + ಕೋಲು$_1$ (<ಕೋಲ್$_1$) ]

**ಗುಗ್ಗರಿಸೆಟ್ಟಿ** 'ಗುಗ್ಗುರಿಸೆಟ್ಟಿ' ನೋ.

**ಗುಗ್ಗಳ** 'ಗುಂಗ್ಗಿಳ' ನೋ.

**ಗುಗ್ಗಿಳ, ಗುಗ್ಗಳ, ಗುಗುರ್ಗಳ** (ನಾ). = ಗುಗ್ಗುಲ ೧: "ಕುಂಭಂ, ಉಲೂಖಲಕಂ, ಕೌಶಿಕಃ, ಗುಗ್ಗುಲುಃ, ಪುರಃ-ಶಿ ಗುಗ್ಗಿಳ ಗಿಡ, ಯಾಳದ ಗಿಡ, ಧೂಪದ ಗಿಡ" (ಸಿದ್ಧಾಂತಿ. ೧೦೩). **ಗುಗ್ಗಳ :** ಗುಗ್ಗಳವನ್ನು ಶುದ್ಧಿ ಮಾಡಿಕೊಂಡು ಪೊಟ್ಟಣಂ ಮಾಡಿ ತುಪ್ಪದ ಅನುಪಾನದಲಿ ಕೊಡಲುಂ ಗುದವಾತ ಮಾಣ್ಗು (ವಾತಾಚಿ. ೮-೭). **ಗುಗುರ್ಗಳ :** ಗುಗುರ್ಗಳ ಹಾಲ ಮಡ್ಡಿಯ ಮಹಿಸಾಕ್ಷಿಯ ಮೆಗ್ಗಳಲೋಬಾನಕ ಪುರಾಳ (ದೇಪಾಂಕು. ೭-೬೦); ಚಂದನಂ ಗುರ್ಗು[ಪಾಠಾಂ. ಗ್ಗಿ]ಳಮಾಚಲ್ ಬನ್ನಿ . . . ವನೆಗಳೊಪ್ಪಿ ಕರ್ಮಮಾ ಕಾಡೊಳೆತ್ತಂ (ಶಬಶಂ. ೩-೩೨); ಶಿವಲಿಂಗಮಂ ತೈಲ ಗುಡಸಿಕ್ಥ ಗುಗುರ್ಗಳ ಸರ್ಜರಸಗಳಿಂದಷ್ಟಬಂಧನವನೆಸಗುತೆ (ಮಹಾವಿ. ೯-೧೮).

[ <ಸಂ. ಗುಗ್ಗುಲ ]

**ಗುಗ್ಗು** (ನಾ). ದಡ್ಡ; ಗಾವಿಲ; ಎಗ್ಗ; ಮೂಢವ್ಯಕ್ತಿ: ಆ ಹುಡುಗಿ 'ಇವನೆಲ್ಲೋ ಹಳ್ಳಿಯ ಗುಗ್ಗು' ಎಂದುಕೊಂಡಿರ್ತಾಳೆ (ಪದದಾ. II, ೧೧೦೦): ಅಂತೂ ಸೇರರ ಕಣ್ಣಿಗೆ ಮಣ್ಣು ಹಾಕಿವಾಳಲ್ಲ. ಅವರೆಂಥ ಗುಗ್ಗು ಇರಬೇಕು (ರಂಗನಾ. ೦೫೭): ಎಲ್ಲೋ ದೂರದ ಹಳ್ಳಿಯಿಂದ ಬಂದಾಕೆ, ಏನೂ ಅರಿಯದ ಗುಗ್ಗು ಎಂದು ಆತ ತಿಳಿದಿದ್ದ (ವಾತ್ಸಲ್ಯ. ೫೯).

[ ← ಹಿಂ. ಘುಗ್ಘೂ./ಸಂ. ಘೂಕ ]

**ಗುಗ್ಗುಟುರು** (ಕ್ರಿ). ಗೂಬೆಯಂತೆ ಕೂಗು: ಗೂಬೆಯು ಗುಗ್ಗುಟುರಿದ್ದು ಅದನ್ನು ಕೊಂದಿದ್ದು, ಮಗು ಸಾಯದೆ ಉಳಿಯಲು ಸಾಧ್ಯವಿಲ್ಲವೆಂದು ಅವನು ಹೇಳಿದ್ದು . . . ಇವುಗಳನ್ನು ಹೇಳಿದೆ (ಮನೋನಂ. ೯೨).

[ ಗುಕ್$_0$ + ಕುಟುರು$_1$ ]

**ಗುಗ್ಗುರಿ$_1$, ಗುಗ್ಗರಿ$_1$** (ನಾ). ೧. ಕಡಲೆಕಾಳುಗಳನ್ನು ನೆನಸಿ, ಬೇಯಿಸಿ, ಒಗ್ಗರಿಸಿ ಮಾಡುವ ತಿನಿಸು; ಉಸಲಿ: ಮಕ್ಕಳ ಕೈಯ ಮಾಣಿಕಮಾ ಗುಗ್ಗುರಿಯಂ ತೋಱಿ ನಂಬಿಸಿ ಕೊಳ್ವಂತೆ (ಧರ್ಮಾಮೃ. ೧೦-೮೩); ಸಿಲುಕು ಗಟ್ಟಿಗೆ ಬೀಸುಗಣ್ಣೆ ಗುಗ್ಗುರಿಯುರಳು ಗೌಜು ಸುರಗಿ . . . ಸಿಂಹಪ್ರಕರ ವೆರಸಿ ಬೇಡರು ನೆರೆದರು (ಹರಿಕಾ. ೫-೯); ಗಳಿಯೊಂ೭ ಎ ಸಂಡುಕಾಲ್ಸಗ್ಗಳ ಗುಗ್ಗುರಿ ಮರ್ದುಮಡ್ಡಿಯರೆಗೂಳ್ಗಾಳಂಗಳಿನಿಪ್ಪವನಾಂತಂದದಿ ಬಲು ಲುಬ್ಧಕನಿಕರವಿರದೆ ನಡೆದತ್ತಾಗಳ್ (ತ್ರಿ ಕು ವಿ. ೨೭-೪೭); ಕುದಿಸಿದ ಕೂಳುಗಳ ಗುಗ್ಗುರಿಯ ಹಗ್ಗರಿ ಮೊಱೆದವಿದಿರಿನಲಿ (ಕೊರಟಾ. ೬-೨೬-೫೦): ಹುಗ್ಗಿ ಕಿಚ್ಚಡಿಯುಱಿಯಪ್ಪ ಸೇವಗೆ ಹಿಂಡಿ ಗುಗ್ಗುರಿ ಸೂಸಲುಂಡಲಿಗೆ (ಭರತ. ೨೦-೦೨೮). ೨. ಸಣ್ಣದು; ಚಿಕ್ಕದಾದುದು. 'ಗುಗ್ಗುರಿಸೆಟ್ಟಿ' ಪರಾ. **ಗುಗ್ಗರಿ$_1$ :** ೧. "ಗುಗ್ಗರಿ ಸುಂಡಮಕ್ಕು" (ಶುಂಗರಾ. ೧೧೦-೬): ಬಂಧು ಬಳಗವು ಕೂಡಿ ಹೊಂದಿ ಜೋಗುಳ ಪಾಡಿ ಹಿಂದೆ ಸತ್ತವರ ಹೆಸರಿಟ್ಟು ಗುಗ್ಗರಿಯ ತಿಂದು ತೂಗುವರಂ (ಸರ್ವಜ್ಞ. ೦೨೮೭); ಹೋಳಿಗೆ ಹುಗ್ಗಿ ಎಡೆ ಮಾಡಿದರೆ ಜೋಳದ ಗುಗ್ಗರಿ ಬೇಡುತ್ತಿದ್ದ (ಗಾದೆ).

[ ದೇಶ್ಯ ತುಳು. ಗುಗ್ಗುರಿ; ತೆಲು. ಗುಗ್ಗಿಳ್ಲು ]

**ಗುಗ್ಗುರಿ$_2$, ಗುಗ್ಗರಿ$_2$, ಗುಗ್ಗುರು$_2$** (ನಾ). ೧. ಸುತ್ತಿಕೊಳ್ಳುವುದು; ಸುರುಳಿಯಾಗುವುದು; ಉರುಳಿಯಾಗುವಿಕೆ: (೬). ೨. ಮೈ ಗೂದಲು ನೆಟ್ಟಗೆ ನಿಲ್ಲುವುದು; ರೋಮಾಂಚನ: (೬). **ಗುಗ್ಗರಿ$_2$ :** ೧. 'ಗುಗ್ಗರಿಗೋಲು' ಪರಾ. **ಗುಗ್ಗುರು$_2$ :** ೨. ಅವಳು ಹಾಡಿದ ಗಾನದ ಪ್ರಸ್ತಾಪ ಎತ್ತಿದರೆ ಈಗಲೂ ಮೈಯೆಲ್ಲಾ ಗುಗ್ಗುರು ನೆಟುಗೊಳ್ಳುವುದು (ಮುಸುಗ. ೧). [ ? ]

**ಗುಗ್ಗುರಿ$_3$** (ನಾ). ಒಂದು ಊರಿನ ಹೆಸರು: ಸ್ವಸ್ತಿ ಸಮಸ್ತ ಗುಣ ಸಂಪನ್ನರಪ್ಪ ಶ್ರೀವತ್ಸಮಸ್ತಾಗಾಡದ ಪನ್ನಾಯದ ಗುಗ್ಗುರಿಯ ಮಾಚಿ ಸೆಟ್ಟಿಯ ಮಗಂ ಚಟ್ಟಯ್ಯನಾಯಕನುಂ (ಸೌಇಇ. IX-1, ೦೪೯-೩; 1081).

[ ? ]

**ಗುಗ್ಗುರಿಗಟ್ಟು, ಗುಗ್ಗರಿಗಟ್ಟು** (ಕ್ರಿ). ಮೈಗೂದಲು ನಿಮಿರಿ ನಿಲ್ಲು; ರೋಮಾಂಚನವಾಗು; ಅಕ್ಕಿಗಟ್ಟು (ಕರಾ): ಹೆಂಬೇಡಿತನದಿಂ ಪಲಸುಗಳೆ ಮೈಗೂಡೆ ಗುಗ್ಗುರಿಗಟ್ಟಿದವು (ಮುದೀಪು. ೨-೩೨). **ಗುಗ್ಗರಿಗಟ್ಟು:** ಒಗ್ಗಿನ ಸುಗ್ಗಿಯ ಮೊಗ್ಗವು ಅರಳಿತ್ತು ಸುಗ್ಗಲವ್ವೆಯ ಮುಖಕಮಲದಿ ಮೂಡಿತ್ತು ಗುಗ್ಗರಿಗಟ್ಟಿತ್ತು ಮೈಯೆಲ್ಲ (ಸಿದ್ಧಪು. ೩-೯೯).

[ಗುಗ್ಗುರಿ$_2$ + ಕಟ್ಟು$_1$ ]

**ಗುಗ್ಗುರಿಗಲ್, ಗುಗ್ಗರಿಗಲ್** (ನಾ). ಸಣ್ಣ ಕಲ್ಲು: ಹರಳುಗಲ್ಲು: ಬೆಳಗಾಡು ಗುಂಡು ಗುಗ್ಗು[ಪಾಠಾಂ. ಗ್ಗ]ರಿಗಲ್ಮೊರಡಿಗಳ ಬಳಗದಿಂ ಮೊಱೆದುದಾ ವಿಪಿನ (ಕುರಾಸಾಂ. ೪-೨); ಗುಗ್ಗುರಿಗಲ್ಗುಂಡುಗಲ್ಲು ಮೊರಡಿ ಬೆಟ್ಟ ನುಗ್ಗುಗಲ್ಗುದುರೆಗಲ್ಲುಗಳ ಮೊಗ್ಗರದೊಳ್ಕಾಲಿಡಬಾರದು (ಕು ರಾ ಸಾಂ. ೨೦-೯೩). **ಗುಗ್ಗರಿಗಲ್ :** ಮಣಲುಮಂ ಮಣ್ಣಿಣಲುಮಂ ತರಿವಣ ಲುಮಂ ಗುಗ್ಗರಿಗಲ್ಲುಮಂ ಗುಂಡುಗಲ್ಲುಮಂ . . . ಬಳ್ಳಿಯುಮಂ ಕಳ್ಳಿಯುಮಂ ಕಳೆದು ಪೋಗಿ (ಲೀಲಾವ. ೬-೨೦). [ ಗುಗ್ಗುರಿ$_1$+ಕಲ್$_2$ ]

**ಗುಗ್ಗುರಿಗೊಳ್ಳು, ಗುಗ್ಗರಿಗೊಳ್ಳು, ಗುಗ್ಗುರುಗೊಳ್ಳು** (ಕ್ರಿ). ಮೈ ನವಿರೇಳು; ರೋಮಾಂಚನಗೊಳ್ಳು: (೬). **ಗುಗ್ಗರಿಗೊಳ್ಳು :** (೬).

**ಗುಗ್ಗುರುಗೊಳ್ಳು :** "ರೋಮಾಂಚಃ, ರೋಮಹರ್ಷಣಂ – ೨ ಮೈ ಕೂದಲು ಗುಗ್ಗುರುಗೊಳ್ಳುವಿಕೆ, ಪುಳಕಿತವಾಗುವಿಕೆ" (ಸಿದ್ಧಾಂತಿ. ೬೨). [ ಗುಗ್ಗುರಿ₂ + ಕೊಳ್ಳು₁ (<ಕೊಳ್₁) ]

**ಗುಗ್ಗುರಿಮೈ** (ನಾ). ಪುಳಕಿತವಾದ ದೇಹ ; ಉತ್ಸಾಹಗೊಂಡ ಶರೀರ: ಗುಗ್ಗುರಿಮೈಯುವರು ಗುಲಗಂಜಿಕಣ್ಣವರು ಒಬ್ಬರಿಲ್ಲವನ ಎಡಬಲಕ (ಶೋಕಗೀ. ೨೦೪). [ ಗುಗ್ಗುರಿ₂ + ಮೈ (<ಮೆಯ್) ]

**ಗುಗ್ಗುರಿಸು** (ಕ್ರಿ). ರೋಮಾಂಚನವುಂಟಾಗು ; ಮೈ ಮುಳ್ಳುಬರು : ಅಧಿಕ ರೋಮಾಂಚ ಮೈ ಗುಗ್ಗುರಿಸಲೊರೊರ್ವೆ ವದನಕಳೆ ನಿಷ್ಕಳೆಯೊಳು ಪುದುಗಲು (ಮದೀಪು. ೨೯-೬). [ ಗುಗ್ಗುರಿ₂ + – ಇಸು₃ ]

**ಗುಗ್ಗುರಿಸೆಟ್ಟಿ**, ಗುಗ್ಗರಿಸೆಟ್ಟಿ (ನಾ). ೧. ಗುಗ್ಗರಿ ವ್ಯಾಪಾರಮಾಡುವವನು : ಸಂಜೆಯು ವೇಳೆಯಲ್ಲಿ ಗುಗ್ಗುರಿಸೆಟ್ಟಿಗೆ ವ್ಯಾಪಾರ ಹೆಚ್ಚು (ಊಧಿ). ಗುಗ್ಗರಿಸೆಟ್ಟಿ : ೨. ಸಣ್ಣಪುಟ್ಟ ವ್ಯಾಪಾರಮಾಡುವವನು ; ಕಿರಾಣಿವರ್ತಕ : ದೊಡ್ಡ ವ್ಯಾಪಾರಗಳಲ್ಲಿ ಲಾಭನಷ್ಟಗಳು ಎರಡೂ ದೊಡ್ಡವಾಗಿರುತ್ತವೆ. ಗುಗ್ಗರಿಸೆಟ್ಟಿಗಳಿಗೆ ಎರಡೂ ಸ್ವಲ್ಪವೇ (ಸಾಹಿಜೀ. ೬೪). [ ಗುಗ್ಗುರಿ₁ + ಸೆಟ್ಟಿ ]

**ಗುಗ್ಗುರು₁** ‘ ಗುಂಗುರು ’ ನೋ.

**ಗುಗ್ಗುರು₂** ‘ ಗುಗ್ಗುರಿ₂ ’ ನೋ.

**ಗುಗ್ಗುರುಗೊಳ್ಳು** ‘ ಗುಗ್ಗುರಿಗೊಳ್ಳು ’ ನೋ.

**ಗುಗ್ಗುಲ**, ಗುಗ್ಗುಳ (ನಾ). ೧. ಒಂದು ಬಗೆಯ ಮರ ಮತ್ತು ಅದರ ಅಂಟು ; ಲೋಬಾನ : "ಕುಂಭಃ, ಉಲೂಖಲಕಂ, ಕೌಶಿಕಃ, ಗುಗ್ಗುಲಃ, ಪುರಃ ಈ ೫ ಗುಗ್ಗುಳದ ಮರ" (ನಾಭಿರಾ. ೧೦೭); ಅಲ್ಲಿ ಒಬ್ಬ ವರ್ತಕನು ಒಂದು ಚೀಲ ಗುಗ್ಗುಲವನ್ನು ಹೊರೆದುಕೊಂಡು ಹೋಗುತ್ತಿದ್ದನು (ಪುರಾವಿ. ೮೯). **ಗುಗ್ಗುಳ :** ೧. "ಪುರಾಖ್ಯಂ, ಮಹಿಷಾಕ್ಷಃ, ಗುಗ್ಗುಳಃ, ಫಲಂಕಷಃ – ಈ ೪ ಗುಗ್ಗುಳಂ" (ಹಲಾಯು; ೧೦೦-೪೬೬) ; "ಗುಗ್ಗುಳಂ ಮಹಿಷಾಕ್ಷ ಕೌಶಿಕಾಖ್ಯಂ" (ಮಂಗರಾ. ೪೩-೪೨) ; ಸಲೆ ನಿಲೆ ಬೇವ ಗುಗ್ಗುಳದ ಕರ್ಪೂಗೆಯಿಂದಮಗುರ್ವನಾಳ್ದು ಕತ್ತಲಿಸುವ ಚಂಡಿಕಾಭವನದೊಳ್ . . . ಸುವ್ರತಮಂ ಲಲಿತಾಂಗಿ ಕಾಣ್ದಿದಳ್ (ಕಾದಂಪು. ೩೬೫); ಶಿರೀಷವಿಂಗುಳವರಿಷ್ಟವಗೋತ್ಪಲ ಸಿಗ್ಗುಗುಗ್ಗುಳಂ ಮತ್ತಮನೇಕ ವೃಕ್ಷತತಿಯಿಂದೆಸೆದಿರ್ದುದು ತದ್ವನಾಂತರಂ (ನಳಚಂ. ೬೧); ಗುಗ್ಗುಳ – ಇದು ಒಂದು ಜಾತಿಯ ಗಿಡದ ಅಂಟು. ಧೂಪ ಹಾಕುವುದಕ್ಕೆ ಸರ್ವತ್ರವೂ ಸುಪ್ರಸಿದ್ಧವು (ಗೃಹವ್ಯ. ೮). ೨. [ವೀಶೈ] ವೀರಭದ್ರದೇವರ ಸೇವೆಗಾಗಿ ತಲೆಯ ಮೇಲೆ ಗುಗ್ಗುಳ ಹೊತ್ತುಕೊಂಡುಹೋಗುವ ಒಂದು ಸೇವಾಕಾರ್ಯ. ‘ಗುಗ್ಗುಳಕಾಯಕ’ ಪರಾ. [ ಸಂ. ]

**ಗುಗ್ಗುಲು**, ಗುಗ್ಗುಳು (ನಾ).=ಗುಗ್ಗುಲ ೧ : "ಜಟಾಯುಃ – ಗುಗ್ಗುಲು" (ಓಷಧಿ. ೩೯). **ಗುಗ್ಗುಳು :** "ಉಲೂಖಲಕಂ – ಗುಗ್ಗುಳು,ಗೂಗೆ" (ಓಷಧಿ. ೧೬). [ ಸಂ. ]

**ಗುಗ್ಗುಲುಧೂಪ** (ನಾ). = ಗುಗ್ಗುಳಧೂಪ : ಅವರು ಪ್ರತಿಸತ್ಯವು ಆ ತಿರುಕ್ಕಡವೂರಲ್ಲಿ ಪ್ರಕಾಶಿಸುವ ಸ್ವಯಂಭುಲಿಂಗಕ್ಕೆ ಗುಗ್ಗುಲುಧೂಪ ಕೈಂಕರ್ಯವನ್ನು ಮಾಡುತ್ತಿದ್ದರು (ಪುರಾವಿ. ೪೯). [ಗುಗ್ಗುಲು+ಧೂಪ]

**ಗುಗ್ಗುಳ** ‘ ಗುಗ್ಗುಲ ’ ನೋ.

**ಗುಗ್ಗುಳಂಬೊತ್ತಿಸು** (ಕ್ರಿ). ಗುಗ್ಗುಳವನ್ನು ಹೊತ್ತಿಸು, – ಉರಿಸು : ಗುಗ್ಗುಳಂಬೊತ್ತಿಸೆಯುಂ ಮನೆಗಲ್ಲಿನೊಳ್ ಮಸೆಯೆಯುಂ (ಅಜಪು. ೧೦-೦೦ ವ). [ಗುಗ್ಗುಳ (=ಗುಗ್ಗುಲ) + ಪೊತ್ತಿಸು

**ಗುಗ್ಗುಳಕ** (ನಾ). = ಗುಗ್ಗುಲ ೧ : ನೆರಪಿ ಮಧುಕಂ ಗುಡಂ ಸಜ್ಜರಸು ಜೇನೆಯ್ಮೆ ಮೆಣಸು ಗುಗ್ಗುಳಕಂ ಸಿಂಧುರುಹು ಜಾಂಬವನಿಟ್ಟೊರಸುತ್ತಿರ ಕಾಲ ಬೀಡೆ ಬೇಗಂ ಕಿಡುಗುಂ (ಧೋಕೋಮ. ೯-೦೪೮). [ ಸಂ. ಗುಗ್ಗುಲಕ ]

**ಗುಗ್ಗುಳಕಾಯಕ** (ನಾ). ದೇವಾಲಯಂಗಳಿಂದ ಗುಗ್ಗುಳಧೂಪವನ್ನು ಮನೆಮನೆಗೆ ಕೊಂಡೊಯ್ದು ಭಿಕ್ಷೆ ಬೇಡುವ ವೃತ್ತಿ : (ಕಿ.- [ಗುಗ್ಗುಳ (=ಗುಗ್ಗುಲ) + ಕಾಯಕ ]

**ಗುಗ್ಗುಳಧೂಪ** (ನಾ). ಗುಗ್ಗುಳವನ್ನು ಹಾಕಿದ ಧೂಪ : ದೇವರಿಗೆ ಗುಗ್ಗುಳಧೂಪ ಹಾಕಿದರು (ಊಧಿ). [ ಗುಗ್ಗುಳ (=ಗುಗ್ಗುಲ) + ಧೂಪ ]

**ಗುಗ್ಗುಳು** ‘ ಗುಗ್ಗುಲು ’ ನೋ.

**ಗುಗ್ಗೆ** ‘ ಕೊಗ್ಗಿ₂ ’ ನೋ.

**ಗುಚ್ಚ**, ಗುಚ್ಚೆ (ನಾ). ೧. ಹೂವು ಮೊದಲಾದುವುಗಳ ಗೊಂಚಲು, – ಕುಚ್ಚು : "ತೊಡಂಬೆ, ತೊಡಬೆ . . . ಗುಚ್ಛಂ–ಈ ೭ ಪುಷ್ಪಮಂಜರಿ" (ಕಕಸಾ. ೧೦-೧೯೬) ; "ತೊಡಬೆ ತೊಡಂಬೆ ಜೊಂಪ ಗೊಂಚಲ್ ಗುಚ್ಛಂ ಸೊಗಯಿಪ ತೊಂಗೆಯೆ ತೊಂಗಲ್ ಬಗೆಯಲ್ ಬುಧರಿಂದೆ ಗುಚ್ಛಕಕ್ಕಂ ನಾಮಂ" (ಕವಿಕಂ. ೬೮). **ಗುಚ್ಚೆ :** ೨. ಪೊದೆ ; ಪೊದರು : ಕೈಹಿಡಿದು ಕೊಂಡು ಹತ್ತಿರವೇ ಇದ್ದ ಒಂದು ಗುಚ್ಚೆಯ ನೆರಳಿಗೆ ಕರೆದುಕೊಂಡು ತೋಗಿ ಕೂರಿಸಿದಳು (ವಂಶವೃ. ೨೮೨). [ <ಸಂ: ಗುಚ್ಛ ]

**ಗುಚ್ಚೆ** ‘ ಗುಚ್ಚ ’ ನೋ.

**ಗುಚ್ಚು** ‘ ಗುಜ್ಜು₂ ’ ನೋ.

**ಗುಚ್ಚೂರಿ** (ನಾ). ಚಿಕ್ಕಚೂರಿ ; ಬಾಕು : ಅವನ ಹೃದಯದಲ್ಲಿ ಗುಚ್ಚೂರಿ ಯಿರಿದಂತಾಯಿತು (ಶ್ರೀಕಾಪ. ೬೧. [ ಗುಜ್ಜು₂ + ಚೂರಿ ]

**ಗುಚ್ಛ** (ನಾ). ೧. ಹೂವು ಮೊದಲಾದುವುಗಳ ಕುಚ್ಚು, – ಗೊಂಚಲು, – ಮಂಜರಿ : "ಪುಷ್ಪಮೆಸೆವ ಗುಚ್ಛಂ ಸ್ತಬಕಂ" (ವಸ್ತುಕೋ. ೩೦-೦೦) ; ನೂತನ ಚೂತಾವನಿಜಾತ ಗುಚ್ಛ ನಿವಹ ವ್ಯಾಜಂಗಳೊಳ್ ನಿಂದು ಮೆಲ್ಲನೆ ತಣ್ಪಂ ತನಿಗಂಪುಮಂ ಪದೆದು ತೀಡಿತ್ತೊಂದು ಮಂದಾನಿಲಂ (ಸುಕುಮಾ. ೪-೪೫) ; ಶಾಂತಲೆ . . . ಅಚ್ಚಮಲ್ಲಿಗೆಯ ಪುಷ್ಪಗುಚ್ಛವೊಂದನ್ನು ತೆಗೆದು ಕೊಂಡು ಶಾರದೆಯ ಗುಡಿಗೆ ಓಡಿದಳು (ಶಾಂತಲಾ. ೯೨). ೨. ಪೊದೆ ; ಪೊದರು : "ಕ್ಷುಪಃ, ಗುಚ್ಛಃ–ಈ ೨ ಪೊದಲ್" (ಹಲಾಯು. ೯೫-೪೨೫). ೩. ಮೂವತ್ತೆರಡು ಅಥವಾ ಎಪ್ಪತ್ತು ಎಳೆಗಳುಳ್ಳ ಮುತ್ತಿನ ಹಾರ: ರಶ್ಮಿಕಲಾಪಗುಚ್ಛನಕ್ಷತ್ರಮಾಲಾರ್ಧಗುಚ್ಛಮಾಣವಕಾರ್ಧಮಾಣವಕಂಗಳೆಂಬ ಪನ್ನೊಂದು ನಾನಾರತ್ನ ಸುವರ್ಣಪದಕ ವಿರಚನಾದಿ ಭೇದದಿಂ (ಆದಿಪು. ೯-೩೪ ವ). ‘ ಗಂತ್ಸ ’ ಪರಾ. [ ಸಂ. ]

**ಗುಚ್ಛಕ** (ನಾ).=ಗುಚ್ಛ ೧ : ಇಂದ್ರನೀಲದ ಪಚ್ಚೆಯ ಗುಚ್ಛಕಂಗಳ ತೋರಣದಂತೆಸೆವ ದ್ರಾಕ್ಷಾಫಳದ ಪರಿಪಂಕ್ತಿಯಿಂದೊಪ್ಪಿದುದು (ಹರಿವಂಶ. ೬-೪೫ ವ). [ ಸಂ. ]

**ಗುಚ್ಛಕಂದ** (ನಾ). ಒಂದು ಬಗೆಯ ಗೆಡ್ಡೆ : "ಗುಲುಚ್ಛಕಂದಃ – ಗುಚ್ಛಕಂದ" (ಓಷಧಿ. ೩೦). [ಗುಚ್ಛ + ಕಂದ₃ ]

**ಗುಚ್ಛದ್ರಾಕ್ಷೆ** (ನಾ). ಗೊಂಚಲು ಗೊಂಚಲಾದ ಫಲಗಳನ್ನು ಬಿಡುವ ದ್ರಾಕ್ಷಿ ; ಚಪ್ಪರದ್ರಾಕ್ಷಿ : ದ್ರಾಕ್ಷೆ . . . ಗುಚ್ಛದ್ರಾಕ್ಷೆ . . . ಸುಖಾರ್ಹ ಸಾರ್ವತ್ರಿಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೦೦). [ ಗುಚ್ಛ + ದ್ರಾಕ್ಷೆ ]

**ಗುಚ್ಛಬಂಧ** (ನಾ). [ಸಂಗೀತ] ಹಾಡುಗಳಲ್ಲಿ ಒಂದು ಬಂಧ : ವೆಂಕಟರಮಣದಾಸರು ಈ ಕಿರುಹೊತ್ತಗೆಯಲ್ಲಿ . . . ಬಂಧ ತಾನಗಳ ವಿವಿಧರೂಪಗಳನ್ನು (ಗುಚ್ಛಬಂಧ ಮತ್ತು ನಾಗಬಂಧ) ವಿಸ್ತಾರವಾಗಿ ವರ್ಣಿಸಿದ್ದಾರೆ (ಸಂಗೀತ. ೭೦). [ ಗುಚ್ಛ + ಬಂಧ ]

**ಗುಚ್ಛಹೊಂಗೆ** (ನಾ). ಒಂದು ಬಗೆಯ ಮರ : "ದಂಡಧಾವನಃ– ಗುಚ್ಛಹೊಂಗೆ, ಬೇಲ" (ಓಷಧಿ. ೭೪). [ ಗುಚ್ಛ + ಹೊಂಗೆ ]

**ಗುಚ್ಛಹೊನ್ನೆ** (ನಾ). ಒಂದು ಬಗೆಯ ಮರ : "ಗುಂಜಾ – ಗುಂಜಿ, ಗುಚ್ಛಹೊನ್ನೆ" (ಓಷಧಿ. ೪೯). [ ಗುಚ್ಛ + ಹೊನ್ನೆ ]

**ಗುಜಗುಂಪಲು** (ನಾ).=ಗುಜುಗುಂಪಲು : ಹೊಸ ಶಂಗೆಗಳ ವಿಚಾರ ಎಲ್ಲೆಲ್ಲಿಯೂ ಗುಜಗುಂಪಲು (ಚಂಗಾಳ್ಯ. ೨೭೮).

[ <ಗುಜಗುಜ + ಗುಂಪಲು ]

**ಗುಜಗುಜ** (ನಾ). ಒಂದು ಅನುಕರಣಧ್ವನಿ : ಮರಣವಿನ್ನೇನೆಂಬ ಜನದಬ್ಬರದ ಗುಜಗುಜನಳಿದು ಯಮುನಾವರನದೀತಿರಕ್ಕೆ ಬಂದನು ಭೀಷ್ಮ ವಹಿಲದಲಿ (ಸಂಧಪ. ೦೩-೨೪).

**ಗುಜಗುಜನೆ** (ಅ). ಅಸ್ಪಷ್ಟವಾಗಿ; ತಮ್ಮತಮ್ಮಲ್ಲಿಯೇ : ಅಷ್ಟ ಪ್ರಧಾನರೂ ಪಂಚಸೇನಾಪತಿಗಳೂ ಗುಜಗುಜನೆ ಮಾತನಾಡಿ ಕೊಳ್ಳುತ್ತಿರುವವರು (ಶುಗುಗಂ. ೯-೦೦). [ ಗುಜಗುಜ + – ಅನ್ನೆ₁ ]

**ಗುಜಗುಜಮಾಪುರಿ** (ನಾ). (ಉಕ) ಹೆಣ್ಣುಮಕ್ಕಳು ಹಾಡಿಕೊಂಡು ಆಡುವ ಒಂದು ಬಗೆಯ ಆಟ : ಗುಜಗುಜಮಾಪುರಿ ಆಡೋಣ ಗುಡೇರ ಮಾಪುರಿ ಆಡೋಣ ಸಾವುದಂಡಿ ಆಡೋಣ (ಜನಗೀ. ೯೦). [ ? ]

**ಗುಜಯ್ಯ** (ನಾ). ಒಬ್ಬಾತನ ಹೆಸರು : ಕರಚುಗರ ಗುಜಯ್ಯಂಗೆ ಪೊನ್ನ ಳಜು ಒವ್ವುರ್ಗ[ತ್ರ]ಲಂ ಕೊಟ್ಟು (ಎಕ. VIII, ಸೊರಬ. ೪೦೩-೦೮ ; 986).

[ ? ]

**ಗುಜರ** ' ಗುಜ್ಜರ ' ನೋ.

**ಗುಜರಾತ** ' ಗುಜರಾತು ' ನೋ.

**ಗುಜರಾತು,** ಗಂಜರಾತ (ನಾ). ಒಂದು ದೇಶದ ಹೆಸರು : ಗುಜರಾತಿನ ಮುಖ್ಯ ಪಟ್ಟಣಗಳು ಹೆಚ್ಚಾಗಿ ರೈಲುಮಾರ್ಗದಲ್ಲಿವೆ (ಭೂವಿವ. ೩೪೦). **ಗುಜರಾತ** : ಗುಜರಾತ ಮತ್ತು ರಾಜಸ್ಥಾನದಲ್ಲಿನ ಜಾನಪದನೃತ್ಯಗಳು ತುಂಬಾ ಆಕರ್ಷಣೀಯ (ಅಭಾನ್ನ. ೦೦೪).

[ ←ಮರಾ. ಗುಜರಾತ್, ಗುಜರಾಥ್ ; ಹಿಂ. ಗುಜರಾತ್ ]

**ಗುಜರಾಥಿ,** ಗುಜ್ಜರಾತಿ (ನಾ). ೧. ಗುಜರಾತ್‌ದೇಶದವನು : (ಕ). ೨. ಗುಜರಾತಿ ಜನರ ಭಾಷೆ. ೩. ಒಂದು ಜಾತಿಯ ಬಾಳೆ : ಬಾಳೆಯ ಕುಲದಲ್ಲಿ ಗುಜರಾಥಿ, ರಸಬಾಳೆ . . . ಎಂದು ಈ ಪ್ರಕಾರ ಹಲವು ವಿಧವಾದ ಬಾಳೆಯ ಕುಲಗಳುಂಟು (ಕೃಷಿಪ್ರ. ೦೫೬). **ಗುಜ್ಜರಾತಿ** : ೧. ಕನ್ನೋಜಿಗಳು ಪಂಡಿತರು ಖುರಾಸಾನಿ ಮನ್ನೆಯ ಗುಜ್ಜರಾತಿಗಳು (ಕಂನವಿ. ೦೨-೭೬). [ ←ಮರಾ. ಗುಜರಾಥೀ ; ಹಿಂ. ಗಂಜರಾತೀ ]

**ಗುಜರಾನ್** ' ಗುಜರಾನು ' ನೋ.

**ಗುಜರಾನು,** ಗುಂಜರಾನ್ (ನಾ). ಜೀವನೋಪಾಯ; ಜೀವನ ನಿರ್ವಹಣೆ : ನಿನ್ನ ಗುಜರಾನು ಬಗ್ಯೆಯೂ ಗ್ರಾಮದಲ್ಲಿ ಯಿನಾಮತಿ ಮಿಲಸ್ಕೆದ ಅಮಿನ (ಎಕ. IX, ದೊಡ್ಡಬ. ೦೨-೬ ; ಶು. 1786) ; ನಾವು ವೀರ ರಾಜೇಂದ್ರ ಒಡೆಯರವರು ನಮ್ಮ ಹಿರಿಯರು ಸಹಾ ಗುಜರಾನು ಮಾಡಿದೆವು (ರಾಜೇಂದ್ರ. ೭೩೦). **ಗುಜರಾನ್** : ಪರಿವಾರ ಜನರುಗಳ ಗುಜರಾನ್ ಬಗ್ಗೆ ೨,೪೦,೦೦೦ ಕಂಠೀರಾಯಿ ವರಹ ನಗದಿ ಹಣವನ್ನು ಪ್ರತ್ಯೇಕಿಸಿ (ಮಹಾಪಂ. II, ೦೨). [ ←ಪಾರ. ಹಿಂ. ಗುಜರಾನ್ ]

**ಗುಜರಾಯಿಸು** (ಕ್ರಿ). ೧. ಕಳುಹಿಸು ; ತಲುಪಿಸು : ಆತನು ಅರ್ಜಿಯನ್ನು ಗುಜರಾಯಿಸುವುದಕ್ಕೆ ಪ್ರಯತ್ನಿಸಿದನು (ಭೂರಾಕಿ. ೧೩೫) ; ತಮ್ಮ ಅರ್ಜಿ ಯನ್ನು ಗುಜರಾಯಿಸಬೇಕೆಂದು ಹರಿದಾಸರ ಯತ್ನ (ಕಾಮೇರಿ. ೯೩). ೨. ಬರೆ : ಹತ್ತಾರು ಜನ ಇದ್ದರು ಆ ಕಂಪನೀಲಿ ; ಬರೀ ಲೇಖನಿ ಹಿಡಿದು ಗರಗರ ಅಂತ ಗುಜರಾಯಿಸುವವರೇ ಆರು ಮಂದಿ (ಹುಂಗೂಲಿ. ೦೨೨).

[ ಗುಜರಾ₀ + – ಇಸು₃. P ←ಹಿಂ. ಗುಜರಾನನಾ ]

**ಗುಜರಿ,** ಗುಜ್ಜರಿ₃ (ನಾ). ೧. ಸಂಜೆ ವೇಳೆಯಲ್ಲಿ ವ್ಯಾಪಾರಮಾಡುವ ಅಂಗಡಿ : (ಕ). ೨. ಚಿಕ್ಕ ವ್ಯಾಪಾರ; ಚಿಲ್ಲರೆ ವ್ಯಾಪಾರ : ಹೊರಗಡೆ ಮೆಟ್ಟಿಲುವರೆಗೂ ಗುಜರಿ ಅಂಗಡಿಗಳು (ದಿಲ್ಲಿಪ. ೩೪). ೩. ಹಳೆಯ ಸಾಮಾನುಗಳನ್ನು ಮಾರುವ ಸ್ಥಳ : ಈ ಟೈರಿಗೆ ಕಂಪನಿ ಬೆಲೆ ಅರುವತ್ತು ರೂಪಾಯಿ. ಗುಜರಿಯಲ್ಲಿ ಐವತ್ತಕ್ಕೆ ಸಿಕ್ಕಬಹುದು (ಬೂಧಿ). **ಗುಜ್ಜರಿ₃** : ೪. ಸಂಜೆಯ ವೇಳೆ ಮಾಡುವ ವ್ಯಾಪಾರ : ಕಳಿಂಗ ನಗರಿಯೊಳ್ ಗುಜ್ಜರಿಯ ಹೊತ್ತಾಯಿತು (ಸೌಗಂಧಿ. ೧೮೫-೦೨).

[ ←ಪಾರ. ಹಿಂ. ಮರಾ. ಗುಜರೀ, ಗುಜ್ಜರೀ [

**ಗುಜರಿಹೊತ್ತು** (ನಾ). ಗುಜರಿ ವ್ಯಾಪಾರದ ಸಮಯ ; ಸಾಯಂಕಾಲ: ಈಗ ಗುಜರಿಹೊತ್ತಲ್ರೇ ? ಅಂಗಡಿಬಿಟ್ಟು ಬಂದಾರ್ರೇ ? (ಹೊಸಂಸಾ. ೪೨) ; ಆ ಬೀದಿಯಲ್ಲಿ ಗುಜರೀಹೊತ್ತಿನಲ್ಲಿ ತಿರುಗಾಡುತ್ತಾ, ನೆವನೆವದಲ್ಲಿ ಆ ಹೆಂಗಸಿನ ಮನೆಯ ಮುಂದೆ ನಿಲ್ಲುತಾ . . . ಒಲವುಮಾಡುತಾ ಬಂದನು (ಮುಸುಗಿ. ೪). [ ಗುಜರಿ + ಹೊತ್ತು₂ (<ಪೊೞ್ತು) ]

**ಗುಜಜು** ' ಗುಜುಜು ' ನೋ.

**ಗುಜಿಗುಜಿ** (ನಾ). ಪಿಸುಮಾತಿನಿಂದುಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ. 'ಗುಂಜಿಗುಂಜಿಗೊಳ್' ಪರಾ.

**ಗುಜಿಗುಜಿಗೊಳ್** (ಕ್ರಿ). = ಗುಂಜುಗುಜಿಸು : ಸೌಂದರ್ಯಮೋರಂತಾ ಕಾಂತೆಗನಂತರಂ ನೆರೆಯ ತಾಯುಂ ತಂದೆಯುಂ ನಿಚ್ಚಲುಂ ಗುಜಿಗುಜಿ ಗೊಂಡು ಪರ್ಯಾಳೋಚಿಸಿ (ಶಾಂತಿಪು. ೯-೦೬ ಪ) ; ಗುಜಿಗುಜಿಗೊಳುತ್ತ ಮೋರೆರೋರ್ವರೊಳ್ನುಡಿಯುತ್ತಂ (ಪಾರ್ಶ್ವಪು. ೦೦-೬೯ ಪ).

[ ಗುಜಿಗುಜಿ + ಕೊಳ್₁ ]

**ಗುಜುಗುಂಪಲು** (ನಾ). ಗುಜುಗುಜು ; ಗದ್ದಲ : ರಾಜಪರಿವಾರದಲ್ಲಿಯೂ ಗುಜುಗುಂಪಲು ಆರಂಭವಾಯಿತು (ಕಲಾಧ. ೭).

[ <ಗುಜುಗುಜು + ಗುಂಪಲು ]

**ಗುಜುಗುಜನೆ** (ಅ). ಅಸ್ಪಷ್ಟವಾಗಿ ; ತಮ್ಮತಮ್ಮಲ್ಲಿಯೇ : ರಾಜರು ಗುಜುಗುಜನೆ ಮಾತನಾಡಿಕೊಳ್ಳಲು ಮೊದಲುಮಾಡಿದರು (ಪಕಭಾ. ೯೫).

[ ಗುಜುಗುಜು + – ಅನ್ನೆ₁ ]

**ಗುಜುಗುಜಿ** (ನಾ). ಪಿಸುಮಾತಿನಿಂದುಂಟಾಗುವ ಧ್ವನಿಯನ್ನು ಅನುಕರಿಸುವ ಶಬ್ದ : ಅದು ಕಂಡು ಕೆಲದೊಳ್ ಬರ್ಪ ಮಂತ್ರಿಮಹತ್ತರರೊಳಾದ ಗುಜುಗುಜಿಯಂ ಕಿವಿಗಿವಿಗೇಳ್ದು (ಅನಂಪು. ೦೩-೮೭ ಪ) ; ಪುರಜನಂಗಳ ಗುಜುಗುಜಿಯನಂತಃಪುರಮಹತ್ತರಿನಚಿದು (ಪುಷ್ಪಪು. ೦೩-೯೦ ಪ).

**ಗುಜುಗುಜಿಸು** (ಕ್ರಿ). ಗುಜುಗುಜು ಮಾತನಾಡು ; ಗಂಟಪ್ಪಾಗಿ ಮಾತ ನಾಡಿಕೊಳ್ಳು ; ಪಿಸುಮಾತನಾಡು : ವ್ಯಾಕುಲಿತಯುತಹೃದಯ ರಾಗಾತನೇಕರುಂ ಗುಜುಗುಜಿಸುತಿರಲು (ಬಸಪು. ೬೦-೫) ; ಕುರುಬಲದ ಮೆಳೆಯಲ್ಲಾಡಿತಲ್ಲಿಯುದಲ್ಲಿ ಗುಜುಗುಜಿಸಿ (ಕುಮಾ.ಭಾ. ೯-೩೯) ; ದಿಮ್ಮಿದರ್ ಗುಜುಗುಜಿಸದಿರಿ (ಚಲಪು. ೨-೨೬) ; ಆಕೆ ಸ್ವಸ್ಥೆಯಾಗಿಲ್ಲವೆಂದು ಅಂತಃಪುರ ಜನವೆಲ್ಲವೂ ಗುಂಜುಗಂಜಿಸುತ್ತಿರುವುದು (ಗುರುಚಿ. ೮೬)

[ ಗುಜುಗುಜು + – ಇಸು₃ ]

**ಗುಜುಗುಜು** (ನಾ). ೧. ಒಂದು ಅನುಕರಣಶಬ್ದ : ತೀವಿ ಗುಜುಗುಜು ವೆಂಬ ಗೀಜಗಂ ಕೊಳರ್ವಕ್ಕಿ . . . ಜೀವಿವುವು ಭಯವನುಳಿದು (ಪ್ರಭುಪು. ೩-೦೪.) ೨. ಒಳಗೊಳಗೇ ಆಡಿಕೊಳ್ಳುವ ಮಾತು ; ಪಿಸುಮಾತು : ಗುಜುಗುಜುಯೆನ್ನುತ್ತಿರದಿರಿ ಮುನಿಗಳಿರ (ಬಸಪು. ೦-೪೪) ; ಯುವತಿಯರ ಗುಜುಗುಜಿನ ಶೂನ್ಯೋತ್ಸವದ ನೃಪಮಂದಿರದ ಜಾಡ್ಯದ ಜವನಿಕೆಯ ಜಂಜಡದ ಕಾಣಾತ (ಕೊರಲಾ. ೨-೨-೨೬) ; ಶ್ರಾವಸ್ತಿಯಲ್ಲಿ ಎಲ್ಲಿ ನೋಡಿದರೂ, ಇದೇ ಗುಜುಗುಜು (ಹತ್ತುಕು. ೦೫೨). ೩. ಗುಪ್ತವಾಗಿ ನಿಂದಿಸುವಿಕೆ ; ನಿಂದಿಸಿ ಆಡಿಕೊಳ್ಳುವುದು ; ಜನಾಪವಾದ : " ಗುಜುಗುಜುಯೆನೆ ಬಿನುಗುನುಡಿಗಳೆಂದಳಿಗೆ ಬಾಧರ್ " (ಭಾರವಿ. ೫೦) ; ಚರ್ಚನೆ ಗುಜುಗುಜು ಪಾಣ್ಬರೊಳಚ್ಚುಂಬಕತಂ (ಮುದಚಿ. ೮-೩೭) ; ಸಡಗರಂಗಳು ಗುಜುಗುಜುಗಳಾಜಡಿಗಳನುಚಿತಕಾರಣಂಗಳು (ಬಸಪು. ೪೦-೬೨) ; ಇವಳ ಕೈ ಹಿಡಿದದ್ದು ಯಾರೋ ನೋಡಿ ' ಗುಜುಗುಜು '

ಆದಾಗ ಕೇಳಿದ್ದರೆ ? (ಮೂರುದಾ. ೪೬). ೪. ಅನುಮಾನ ; ಸಂಶಯ : ಗುಜುಗುಜದೇವುದೌಷ್ಟಿಕವಿಷಂ ಪರೆಗುಂ ಜಲದಿಂದಮಿಂಟವಂ (ಜಮುದ. ೧೩-೬೬).

**ಗುಜುಗುಜುಗುಟ್ಟು** (ಕ್ರಿ).=ಗುಜುಗುಜಿಸು : ಜನಂಗಳ್ ಗುಜುಗುಜು ಗುಟ್ಟಲದನಾ ತಪಸ್ವಿ ಕೇಳ್ದು (ಪುಣ್ಯಾಸ್ರ. ೩-೭೦ ವ) ; ಪಲವು ಪಿಸುಣರ್ ಪಾತಕರ್ ನೆರೆದು ತಾಮೆಲ್ಲರೊಲವಿನಿಂ ಮಂತಣಂಗೊಳುತೆ ಗುಜುಗುಜು ಗುಟ್ಟೆ (ಪದ್ಮರಾ. ೬-೨) ; ಗೂಡಿಂಗೆ ಸಾರಿ ಗುಜುಗುಜುಗುಟ್ಟಿದವು ಹಕ್ಕಿ (ಸಮ್ಮಳಾ. ೧೧-೨೪) ; ಓಹೋ ಗ್ರಾಮಕ್ಕೆ ಏನೋ ತೊಂದರೆ ಬಂತು ಎಂದು ಗುಜುಗುಜುಗುಟ್ಟುತ್ತಿದ್ದರು (ಹುಟ್ಟಿಹ. ೧೨೫).
[ ಗುಜುಗುಜು + ಕುಟ್ಟು$_1$ ]

**ಗುಜುಗುಜುಗೊಳ್** (ಕ್ರಿ). = ಗುಜುಗುಜಿಸು : ಗುಜುಗುಜುಗೊಂಡಾರ್ದ ರವಾರರಂಬರತಳದೊಳ್ (ಹಂಪಭಾ.೧೧-೧೧೬); ದ್ರೋಹರಂತೆ ಗುಜುಗುಜು ಗೊಳ್ಳದೆ ಪೆರ್ಗಣದಂತೆ [ಪೊಸಜಾತಿಗೆ] ಗುಜುಗುಜಿಸದೆ (ಧರ್ಮಾಮೃ. ೫-೯೯) ; ಒಡನೆ ಗುಜುಗುಜುಗೊಳುತ್ತಂ ನೆರವಿ ಬರುತವಿರೆ (ತಿರುಕ. ದೀ. ೧೪-೪). [ ಗುಜುಗುಜು + ಕೊಳ್$_1$ ]

**ಗುಜುಗುಜುಗೋಷ್ಠಿ** (ನಾ). ತಮ್ಮ ತಮ್ಮಲ್ಲೇ ಆಡಿಕೊಳ್ಳುವ ಜನರ ಗುಂಪು ; ಒಳಗೊಳಗೇ ಮಾತನಾಡಿಕೊಳ್ಳುತ್ತಿರುವ ಜನರ ಗುಂಪು : ಬರಲು ಪಾರ್ಥನ ಕಂಡು ಪುರಜನ ಹರೆದುದಲ್ಲಿಯದಲ್ಲಿ ದುಗುಡದ ಭರದ ಗುಜುಗುಜುಗೋಷ್ಠಿಗಳ ಜನಜನದ ಮುಸುಕುಗಳ (ಕುವ್ಯಾ.ಉ. ೧೬-೩).
[ ಗುಜುಗುಜು + ಗೋಷ್ಠಿ ]

**ಗುಜುಗುಜುಮಾತು** (ನಾ). ತಮ್ಮತಮ್ಮಲ್ಲೇ ಆಡಿಕೊಳ್ಳುವ ಮಾತು ; ಪಿಸುಮಾತು : ಆದರೆ ಅವನ ಮುಸುಕು ಚರ್ಚೆಗೆ ಮತ್ತು ಗುಜುಗುಜು ಮಾತಿಗೆ ಎಡೆಯನ್ನು ಕೊಟ್ಟಿತು (ಮುತಿಸ. ೪೧).
[ ಗುಜುಗುಜು + ಮಾತು$_1$ ]

**ಗುಜುಗುಟ್ಟು** (ಕ್ರಿ).=ಗುಜುಗುಜಿಸು : ಗುಜುಗುಟ್ಟುತ್ತಿದ್ದರಾಂತ ಮಾತಿನ ಪೆಟಗೊಂಡಂದು ಪೇಟುತ್ತಿರಲ್ (ಪ್ರಸೂಮ. ೬-೪) ; ಮಾರ್ಗದಲ್ಲಿ ಅಲ್ಲಲ್ಲಿ ಜನರು ಗುಂಪಾಗಿ ನಿಂತು ಗುಜುಗುಟ್ಟುತ್ತಿದ್ದರು (ಚದೇವ. ೫೮).
[ <ಗುಜುಗುಜು + ಕುಟ್ಟು$_1$ ]

**ಗುಜುಬು, ಗುಜಬು, ಗುಜ್ಜರು** (ನಾ). ೧. ಗುಂಜುಗುಂಜಾಗಿರುವಿಕೆ ; ಕೆದರಿರುವುದು : ಹೊಗೆವೊಗದ ಕಿಡಿಗಣ್ಣ ಕೆಮ್ಮೀಸೆಗಳ ಗುಜುಬಿನ ಜುಂಜುಗೇಶದ ವಿಗಡನೆದ್ದನು ಬಂದು ಹಿಡಿದನು ದ್ರೌಪದಿಯ ಸೆಱಗ (ಕುವ್ಯಾ.ಸ. ೧೪-೧೧೧). ೨. ಒಂದಕ್ಕೊಂದು ಹೆಣೆದುಕೊಂಡಂತಿರುವ ಪೊದರು : ಸೀಳ್ಗಲ್ಲಗಳಿಂದೂರು ಗರ್ಭೀಕೃತದ ಕೆಸಱಿಂದೆ ಮುಳ್ಳ ಗುಜುಬಿನ ಘನವಪ್ಪ ಪೇರಡವಿಯಿಂ . . . ಪಥಂ ಭಯದಿ ನೆಸೆಗುಂ (ವೀಶ್ವಪು. ೪-೧೮-೧೪). **ಗುಜಬು** : ೨. ಗುಜಬು ಗುಲ್ಮದ ಕುಂಜರಾಶ್ವ ವ್ರಜದ ಪೆಳೆಯೊಣಗಿದುದು (ಕುವ್ಯಾ.ಶ. ೩-೧೧). **ಗುಜ್ಜರು** : (ಗು). ೩. ಗುಂಗುರಾದ ; ಸುರುಳಿಗೊಂಡ. 'ಗುಜ್ಜರುಮಂಡೆ' ಪರಾ.
[ ದೇ ॥ ತುಳು. ಗುಜ್ಜರ್ ]

**ಗುಜುಬುಗೊಂಬು** (ನಾ). ಒಂದಕ್ಕೊಂದು ಹೆಣೆದುಕೊಂಡಿರುವ ಕೊಂಬೆ : "ಕಟಿಲೆಯಿಂದು ಮುಳ್ಳಿರಿಸಿದ ಗುಜುಬುಗೊಂಬು" (ಶಮುದ. ಸ. ೩೩ ವೃತ್ತಿ). [ ಗುಜುಬು + ಕೊಂಬು$_1$ ]

**ಗುಜುಬುದಲೆ** (ನಾ). ಗುಂಜುಗುಂಜಾಗಿರುವ ಕೂದಲುಳ್ಳ ತಲೆ ; ಕೆದರುದಲೆ : ಕೆಂಗಲಿಪ ತೋರಗಣ್ಣು ಕೆಮ್ಮೀಸೆ ಗುಜುಬುದಲೆ ಬಳೆದ ಕಾಳೋರಗನನೇಳಿಸುವ ತೋಳ್ (ಹದಕಾ. ೫-೨) : ಹಿಡಿದ ಚಕ್ರದ ಗುಜುಬುದಲೆಯ ಶಂಖದ ಮಣಿಯ ತೊಡಿಗೆಗಳ . . . ನಾನಾ ಜೋಗಿವಡೆವೆರಸು . . . ಬಂದಂ (ಸಿದ್ಧರಾ. ೭-೨೬) ; ಕಾರೊಡಲ್ಕೆಮ್ಮೀಸೆ ನಿಡುದೋಳು ದೀರ್ಘಶರೀರ ಗುಜುಬು[ಪಾಠಾಂ. ಗುಂಜುಬ್]ದಲೆ (ಕುರಾಸಾಂ. ೨೭-೩೬).
[ ಗುಜುಬು + ತಲೆ$_1$ ]

**ಗುಜುಬುಮಂಡೆ, ಗುಜ್ಜರುಮಂಡೆ** (ನಾ). ೧. = ಗುಜುಬುದಲೆ : ಗುಜುಬುಮಂಡೆಯ ತಿರಿವ ಸೊರೆಗಳಿಟ್ಟಿಗೆಯ ಹುಡಿಯಂ ಪೂಸಿದಂಗದ . . . ನಾನಾಪರಿಯ ಜೋಗಿಗಳ್ (ಸಿದ್ಧೇಪು. ೫-೩). **ಗುಜ್ಜರುಮಂಡೆ** : ೨. ಗುಂಗುರುಕೂದಲುಗಳಿಂದ ಕೂಡಿದ ತಲೆ : ಅವನದು ಗುಜ್ಜರು ಮಂಡೆ (ರೂಢಿ). [ ಗುಜುಬು + ಮಂಡೆ$_1$ ]

**ಗುಜುಬುಮೀಸೆ** (ನಾ). ಜುಂಜುಮೀಸೆ : ಕಮಲದಳನಿಭವಿಲೋಚನಂ ಗುಜುಬುಮೀಸೆ ಕರಮೆಸೆವ ಕುಂಚಿತ ಚಿಬುಕ (ಶಾಸೋಪು. ೯-೧೫).
[ ಗುಜುಬು + ಮೀಸೆ ]

**ಗುಜುಬೇಱ್** (ಕ್ರಿ). ಗುಂಜುಗಟ್ಟು ; ಜಡೆಗಟ್ಟು : ಮಹೋಗ್ರ ವಿಲೋಚನದ ಗುಜುಬೇಱಿದ್ದ ತಲೆನವಿರ . . . ರಾಕ್ಷಸ ಜನಸಹಿತ ನಡೆತಂದನಾ ರಾಕ್ಷಸ ಕುಲಾಧೀಶ (ತೊರರಾ. ೬ ೫೩-೪೩).
[ ಗುಜುಬು + ಏಱ್$_1$ (<ಏಟ್$_1$) ]

**ಗುಜ್ಜ$_1$** 'ಕುಜ್ಜ' ನೋ.

**ಗುಜ್ಜ$_2$** (ನಾ). ೧.=ಗುಜರಾತು. 'ಗುಜ್ಜರಾಷ್ಟ್ರ' ಪರಾ. ೨. ಗುಜರಾತಿ ಜನ : ಗುಜ್ಜರೋಣಿಯಲಿ ರಾಣಿಜೋಡಿಯಲಿ ತಿರುಗಿ ತಿರುಗಿ ಬಂದೆ (ಜಲಾನ. ೩೨). [<ಗುಜ್ಜರ ]

**ಗುಜ್ಜಗೆ$_1$** 'ಗೊಜ್ಜಗೆ' ನೋ.

**ಗುಜ್ಜಗೆ$_2$** (ನಾ). ಒಂದು ಜಾತಿಯ ಹುಳು : ಒಜಿಲೆ ತಗುಣೆ ಪೇನು ಸೀರು ತೇಟು ಇಂದ್ರಗೋಪ ತೇರಂಟೆ ಗುಜ್ಜಗೆ ಬೆದೆವುಳು ತುಂಬುಳು (ಜಸಾರ. ೯೫-೧೮). [ ? ]

**ಗುಜ್ಜಗೊರವ** (ನಾ). = ಗುಜ್ಜುಗೊರವ : ಜಲಧಿಯ ಗುಳ್ಳು ಗುಜ್ಜ ಗೊರವಂಗೆ ಕರಾಗ್ರದೊಳೆಯ್ದುದದೊಂದು ಮು x x ಳಿಗೆನೆ (ಎಕ. XI, ಹೊಳಲ್ಕೆ. ೧೨೧-೪೩ ; ಕು. 1240). [ ಗುಜ್ಜ$_1$ (<ಕುಜ್ಜ) + ಗೊರವ ]

**ಗುಜ್ಜಡಿ** (ನಾ). ೧. ಚಿಕ್ಕಕಾಲು ; ಸಣ್ಣಪಾದ : ಅಬ್ಜಕೋರಕ ವೃಕ್ಷ ಜಾತಮಿತ ಗುಣಯುತೆ ಗುಜ್ಜಡಿ ಸುಹಂಸಯಾನೆ (ನವಮೋ. ೧೯-೬). ೨. ನಿಧಾನವಾದ ನಡಗೆ ; ಮಂದಗಮನ : ಪಡಿಯಚಿತಿಯರೆಳ್ತಂದು ರತಿಯ ಕೈಪಿಡಿಯೊಳ್ಗುಜ್ಜಡಿ ಗಾಡಿಯೊಳಾದಂ ಪಿಡಿಯಂ ಸೋಲಿಪಳು (ಉದ್ಭದೀ. ೫-೧೫). [ ಗುಜ್ಜ$_1$ (<ಕುಜ್ಜ) + ಅಡಿ$_1$ ]

**ಗುಜ್ಜತನ** (ನಾ). ೧. ಸಣ್ಣತನ ; ಕಿರಿಯತನ. ೨. (ಅಲಂ) ವಿನಯ : ಲಜ್ಜೆ ಸೂತಕವಳಿದು ಗುಜ್ಜತನದಲಿ ಉಳಿದು ಉಜ್ಜುಗದಿ ಶಿವನ ಅಱಿದ ಶಿವಶರಣರ ಹೆಜ್ಜೆಯಲಿ ಇರಿಸೊ (ಸರ್ವಜ್ಞ. ೨೮೭).
[ ಗುಜ್ಜ$_1$ (<ಕುಜ್ಜ) + -ತನ ]

**ಗುಜ್ಜನಂದಿ** (ನಾ). ಒಬ್ಬಾತನ ಹೆಸರು: ಕದ್ದೆಬಯ್ಯನ ಮಗಂ ಗುಜ್ಜನಂದಿ (ಎಕ. XII, ತಿಪಟೂ. ೧೧-೧೭ ; ಕು. 930 ?). [ ? ]

**ಗುಜ್ಜಮಾವು** (ನಾ). = ಗುಜ್ಜುಮಾವು : ನನೆವೆರಸು ಗುಜ್ಜಮಾವಿನ ಕೊನರ್ಗಳನುಡಿದುಡಿದು ನೀಡೆ (ಅರ್ಧನೇ. ೫-೯೪).
[ ಗುಜ್ಜ$_1$ (<ಕುಜ್ಜ) + ಮಾವು ]

**ಗುಜ್ಜರ, ಗುಜರ, ಗುಜ್ಜಾರ** (ನಾ). ೧. = ಗುಜರಾತು : ಆದಿ ದೀರ್ಘಕ್ಕೆ ಹ್ರಸ್ವಂ . . . ಗೂರ್ಜರ-ಗುಜ್ಜರ (ಶಮುದ. ೨೭೧ ಪ್ರಯೋ) : ತತ್ತಬದಱಿದು ಹೊಯ್ದಾಡಿದರು ಗುಜ್ಜರದ ರಾವುತರು (ಕುವ್ಯಾ.ಭೀ. ೪-೭೧) ; ಸೌರಾಷ್ಟ್ರ ಗುಜ್ಜರ ವಿಮಲ ಕಾಶ್ಮೀರಾಂಧ್ರ ಗೌಳ ಪ್ರಮುಖದೇಶಂಗಳಲಿ ನೋಡುತ ತಿರುಗಿದುದು ಸೇನೆ (ತೊರರಾ. ೪-೧೧-೨). **ಗುಜರ** : ೨. ಗುಜರಾತದ ಜನ : ಗುಜರರೆಂಬ ಜನರು ಇಲ್ಲಿ ವಾಸಮಾಡುವದರಿಂದ ಇದಕ್ಕೆ ಗುಜರಾಥ ವೆಂದೆನ್ನುತ್ತಾರೆ (ಮುಂಬಭೂ. ೭೮). **ಗುಜ್ಜಾರ** : (ಕ). [<ಸಂ. ಗುರ್ಜರ]

**ಗುಜ್ಜರಪಟ್ಟೆ** (ನಾ). ಗುಜರಾತು ದೇಶದಲ್ಲಿ ತಯಾರಿಸಿದ ರೇಷ್ಮೆ ಬಟ್ಟೆ.—ಪಟ್ಟಾವಳಿ : ಗೂರ್ಜರಪಟ್ಟೆ–ಗುಜ್ಜರಪಟ್ಟೆ (ಶಮುದ. ನ. ೩೦೭ ಪ್ರಯೋ). [ ಗುಜ್ಜರ + ಪಟ್ಟೆ$_2$ ]

**ಗುಜ್ಜರಾತಿ** ‘ ಗುಜರಾಥಿ ’ ನೋ.

**ಗುಜ್ಜರಾಷ್ಟ್ರ** (ನಾ).=ಗುಜರಾತು : ಪೊಂಬಟ್ಟೆ ಸಿಂಗಳ ಗುಜ್ಜರಾಷ್ಟ್ರದ ಪಟ್ಟೆ ವಾರಾಣಸಿಯ ದಸರಿಯ ಹೊತ್ತಿ ಸಿರಿವಣ್ಣ (ಬಸಪು. ೧೦–೨೬).

[ ಗುಜ್ಜ$_2$ + ರಾಷ್ಟ್ರ ]

**ಗುಜ್ಜರಿ$_1$, ಗುಜ್ಜಾರಿ** (ನಾ). ೧. (ಮಂಚದ ಕಾಲುಗಳಲ್ಲಿರುವ) ಕುಳ್ಳಾಗಿರುವ ಬೊಂಬೆ : ಪೊಸಕುಸುಮತಳ್ಪಗಳ ಗುಜ್ಜರಿಯ ಮಂಚ ಸುತ್ತಲು ಕಂಚ ಕಾಳಂಜಿ ಪಾನ ಪನ್ನೀರ ಗಿಂಡಿ (ಗುಭಜ. ೨–೩೬). **ಗುಜ್ಜಾರಿ :** ೨. ಕುಳ್ಳ ; ಗಿಡ್ಡ ; ವಾಮನ : ಈ ಕುರೂಪಿಯಾದ ದಪ್ಪ ಹೊಟ್ಟೆಯ ಗುಜ್ಜಾರಿ ಯಕ್ಷನು ದೇವೇಂದ್ರನಾದ ಶಕ್ರನ ಆಸನದಲ್ಲಿ ಕುಳಿತಿರುವನು (ಬುದ್ಧಕ. ೩೯) ; ಆದರಲ್ಲಿ ಮಲಗಿರುವವನು ನಿಡುಮೈಯುವ ನಾಗಲಿ ಗುಜ್ಜಾರಿಯೇ ಆಗಲಿ, ಹಾಸಿಗೆಯು ಅವನಿಗೆ ಹಾಳಿತವಾಗುವುದು (ಅಜಿತ. ೨೬).

**ಗುಜ್ಜರಿಗಾಲಮಂಚ**=ಕುಳ್ಳಾದ ವಿಗ್ರಹಗಳಿಂದ ಅಲಂಕೃತವಾದ ಕಾಲಿನ ಮಂಚ : ಸಜ್ಜೆಯ ಮನೆಗಳೊಳಗೆ ಚಿನ್ನಮಯವಾದ ಗುಜ್ಜರಿಗಾಲಮಂಚಗಳು (ಅಂಜಕ. ೩–೦೦೯) ; ಗುಜ್ಜರಿಗಾಲಮಂಚ ಮೇಲುಪ್ಪರ ಮಂಚ ಹೂಮಂಚ . . . ಸೆಳೆಮಂಚವೊಪ್ಪವಾಂತೆಸೆದು ವಲ್ಲಲ್ಲಿ (ಭರಜ. ೧೫–೨೬). [ <ಗುಜ್ಜು$_2$ ? ]

**ಗುಜ್ಜರಿ$_2$** (ನಾ). ೧. ಗುಜರಾತು ದೇಶ. ‘ ಗುಜ್ಜರಿದುಕೂಲ ’ ಪರಾ. ೨. [ಸಂಗೀತ] ಒಂದು ರಾಗದ ಹೆಸರು : ದೇಶಿ ಗುಜ್ಜರಿಗಳಿಂದೀಶ ನಿಮ್ಮಂ ಹಾಡಿ ದೇಶಾಕ್ಷಿ ಗೌಳದೆ ಮಹೇಶ ನಿಮ್ಮಂ ಹಾಡಿ (ಲಿಂಗಾಕ. ಹ. ೫೩೧–೫) ; ನಾಟಿ ದೇಶಿ ಗುಜ್ಜರಿಯಾ ಹಿಂದೋಳಂ ವಸಂತಭೈರವಿ ಗೌಳಮನಾ ವೀಣೆಯಲ್ಲಿ ಮುನಿ ಬಾಜಿಸಿದಂ (ವೀರವಿ. ೬–೮೯).

[ <ಸಂ. ಗುರ್ಜರೀ ]

**ಗುಜ್ಜರಿ$_3$** ‘ ಗುಜರಿ ’ ನೋ.

**ಗುಜ್ಜರಿದುಕೂಲ** (ನಾ). =ಗುಜ್ಜರಪಟ್ಟೆ : ಇಳಿಗೆ ಪೊಸತಹ ಮಂಚಟಕೆ ಗುಜ್ಜರಿದುಕೂಲಗಳ ಅಳವಡಿಸಿ (ಕೋಗಮು. ೩–೩೮).

[ ಗುಜ್ಜರಿ$_2$ + ದುಕೂಲ ]

**ಗುಜ್ಜರಿಮಂಚ** (ನಾ). ಕಾಲುಗಳಲ್ಲಿ ಗಿಡ್ಡಾಗಿರುವ ಗೊಂಬೆಗಳಿರುವ ಮಂಚ : ಸಜ್ಜೆಮನೆಯೊಳಗೀರ್ವರು ಗುಜ್ಜರಿಮಂಚದೊಳು (ಕರಿಕ. ೪೬–೯). [ ಗುಜ್ಜರಿ$_1$ + ಮಂಚ ]

**ಗುಜ್ಜರಿವೇಣಿ** (ನಾ). ಒಂದು ಬಗೆಯ ಫೇಣಿ : ಸಣ್ಣಗೋದುಮೆಯ ಹದನಾಗಿ ಹಿಟ್ಟಂ ಮಾಡಿ ಎಣ್ಣೆಯೊಳು ಕಲಸಿ ಹಪ್ಪಳದಂತೆ ಲತೆಯಿಟ್ಟು . . . ಬೆರಳುದ್ದದೊಳು ಕೊಯ್ದು ಬೆಣ್ಣೆಗಾಸಿದ ತುಪ್ಪದೊಳು ಪಾಕ ಮಾಡೆ ಗುಜ್ಜರಿವೇ[ಪಾಠಾಂ. ಪೇ]ಣಿವೆಸರಾದುದು (ಸೂಪಶಾ. ೦–೪೫).

[ ಗುಜ್ಜರಿ$_2$ + ವೇಣಿ (<ಫೇಣಿ) ]

**ಗುಜ್ಜಾನೆ** (ನಾ). ಕುಳ್ಳಾದ ಆನೆ; ಗಿಡ್ಡಾದ ಆನೆ : ಗೋಪು ಗುಜ್ಜಾನೆ ಮರಿ (ಇಚನೋ. ೪೫). [ ಗುಜ್ಜು$_2$ + ಆನೆ$_1$ ]

**ಗುಜ್ಜಾರ** ‘ ಗುಜ್ಜರ ’ ನೋ.

**ಗುಜ್ಜಾರಿ** ‘ ಗುಜ್ಜರಿ$_1$ ’ ನೋ.

**ಗುಜ್ಜಿ** (ನಾ). ೧. ಕುಳ್ಳಾಗಿರುವವಳು ; ಗಿಡ್ಡಿ : ಕುರುಡಿ, ಕಿವುಡಿ, ಗುಜ್ಜಿ, ಕೆಂಚಿ (ಭಾಷಾಭೂ. ೦೯೧ ಅಡಿಟಿ). ೨. (ಆಲಂ) ಪ್ರೀತಿಯಿಂದ ಪುಟ್ಟ, ಮುದ್ದಾದ ಎಂಬರ್ಥದಲ್ಲಿ ಬಳಸುವ ಪದ: ಅಹುದು ನನ್ನ ಗುಜ್ಜೀ, ನೀನೇನ ಮಾಡುವಿ (ಹಪಶೀ. ೦೦೯) : ಗುಜ್ಜಿನನ ಕಂದಯನ ಗೆಜ್ಜೆಸಪ್ಪಳ ಕೇಳಿ ನಿಬ್ಬಣದೆತ್ತು ಬೆದರ್ಯಾವ (ಗರತಿ. ೪೩). (ಗು). ೩. ಚಿಕ್ಕದಾದ ; ಸಣ್ಣ : ಗೆಜ್ಜೆ ಕಟ್ಟಿದ ಕಾಲು, ಹೆಜ್ಜೆಹಾಕುತ ಕುಣಿದು ಸಜ್ಜು ನಿನ್ನಾಡು ಬೆಳವಲಕೆ ಬೌಡಯ್ಯ ಗುಜ್ಜಿ ಕಣದೊಳಗೆ ಬೆಳತವಕ (ಕನ್ನಜಾ. ೧೩೮). [ ಗುಜ್ಜ$_1$ + – ಇ$_2$ ]

**ಗುಜ್ಜಿಗೆ** ‘ ಗೊಜ್ಜಗೆ ’ ನೋ.

**ಗುಜ್ಜಿರು** ‘ ಗುಜುಟು ’ ನೋ.

**ಗುಜ್ಜಿರುಮಂಡೆ** ‘ ಗುಜುಟುಮಂಡೆ ’ ನೋ.

**ಗುಜ್ಜು$_1$** (ಕ್ರಿ). “ ಹೆಜ್ಜೆಯ ಮೇಲೆ ಹೆಜ್ಜೆಯಿಡು ” (ಶಿವಗೀ. ೯೦೮) : ಅಜ್ಜೆಯನೆಬ್ಬಿಸಿ ಮಜ್ಜಿಗೆ ಪುಳುಕಿಸಿ ಅಜ್ಜೆಯರಾಟು ಹೊತ್ತಾಡಿಯರಾಹೋ ನಿರ್ಜರ ನಿರ್ವಾಣಪ್ರಿಯ ಬೋಳೇಶನ ಗುಜ್ಜಿ ಗುಜ್ಜಿ ಕುಣಿದಾಡಿಯರಾಹೋ (ಶಿವಗೀ. ೮೬೬) [ ? ]

**ಗುಜ್ಜು$_2$, ಗುಂಜು$_3$, ಗುಚ್ಚು, ಗುರ್ಜು** (ನಾ). ೧. ಸಣ್ಣದಾಗಿರುವಿಕೆ ; ಕುಳ್ಳಾಗಿರುವಿಕೆ ; ಗಿಡ್ಡಾಗಿರುವಿಕೆ : ಹಯಾನನಂಗೆ ಸದ್ಭಾವಮನಾಳ್ದ ಗುಜ್ಜುಪಮೆಗಪ್ಪನವೊರ್ವಳನಂಗರಾಜ್ಯಲಕ್ಷ್ಮೀವಿಭವಂ ಗೃಹಾಂಗಣದ ಮುಂದೆಸೆದಿರ್ದಪುದೆಂಬ್ಬ ತೋಱಿದಳ್ (ಶಾಂತಿಪು. ೮–೩): ಉಕಾರಕ್ಕೆ . . . ಕೆಂಚು, ಗುಜ್ಜು, ಬೆಜ್ಜು (ಶಮುದ. ೨೦೦ ಪ್ರಯೋ). ೨. ವಾಮನ ; ಕುಳ್ಳ ; ಗಿಡ್ಡ : ಬಳಸಿದ ಗುಜ್ಜುಗಳ್ ನೆರೆದ ಮೇಳದ ಕನ್ನೆಯರ್ (ಪಂಪಭಾ. ೪–೪೦). ೩. ಬಾವಣಿ ನಿಲ್ಲುವುದಕ್ಕೆ ಕೊಡುವ ಕುಳ್ಳಾದ ಊರೆಗೋಲು ; ಮೋಟುಕಂಬ ; ಸಣ್ಣ ಊರೆಗಂಬ : ಮನೆವಾಗಿಲ ಗುಜ್ಜಂ (ಚಾಹೂರ. ೦೮೦–೦೧). ೪. ಗಾಡಿಯ ಪಾರಿಗೆ ಸಿಕ್ಕಿಸುವ ಗೂಟ : ಗಾಡಿಯ ಗುಜ್ಜನ್ನು ಹಿಡಿದು ಮೇಲೆ ಹತ್ತಿದರು (ರೂಢಿ). ೫. (?) : ಪದಸಮಿತಿಯುಂ ಹಸ್ತಂ ಗ್ರೀವಂಗಳುಂ ಕೃಶಮೊಪ್ಪೆ ದೊಡ್ಡಿದವು ನಯನಂ ಹ್ರಸ್ವಂ ತಾಳ್ಮೋಷ್ಠಮುಂ ಹನುಸಂಕುಲಂ ವದನದೆಡೆ ಕೇಶಾಲ್ಪಂ ಸಂಕ್ಷಿಪ್ತಮಾಗುವ ಗುಜ್ಜುಮಂ ನಿಧುಮನ ಸಮುದ್ಭೂತಂ ನೂತಂ ಮೃಗಾನ್ವಯ ಸಿಂಧುರಂ (ಐಂಹರಿ. ೨–೪೯). (ಗು). ೬. ಸಣ್ಣದಾಗಿರುವ ; ಚಿಕ್ಕ ; ಗಿಡ್ಡ : ಗುಜ್ಜಾಗದ ಕಲ್ಮಿತ್ರಕ್ಕೆ ಮೆಯ್ಯೋರದ ಹರಿಯನಿಪಂ ವಿಷ್ಣು ಜಿಷ್ಣು ಪ್ರತಾಪಂ (ಕ್ಯುಆರಿ. ೦೯೩೬, ೨೮–೨೦; 1148). **ಗುಂಜು$_3$:** (೬). **ಗುಚ್ಚು :** (೬). **ಗುರ್ಜು :** ೧. ‘ ಗುರ್ಜುಗೊಳ್ ’ ಪರಾ. [ ಗುಜ್ಜ$_1$ (<ಕುಜ್ಜ) + – ಉ$_4$ ]

**ಗುಜ್ಜುಕತ್ತಿ** (ನಾ). ಸಣ್ಣ ಕತ್ತಿ ; ಬಾಕು : “ ಈಳೀ, ಕರವಾಳಿಕಾ–೨ ತುಳುವಕತ್ತಿ, ಮೊಟಕುಕತ್ತಿ, ಗುಜ್ಜುಕತ್ತಿ ” (ಸಿದ್ಧಾಂತಿ. ೨೨೮).

[ ಗುಜ್ಜು$_2$ + ಕತ್ತಿ ]

**ಗುಜ್ಜುಕಾಲು** ‘ ಗುಂಜುಗಾಲ್ ’ ನೋ.

**ಗುಜ್ಜುಕೋಲು** ‘ ಗುಜ್ಜುಗೋಲು ’ ನೋ.

**ಗುಜ್ಜುಗರೆ** (ಕ್ರಿ). ನಿಧಾನವಾಗು ; ಮಂದವಾಗು : ಹಟ್ಟುಗೆಗೆ ಗುಜ್ಜು ಗರೆದು/ದು ಮಟ್ಟುವ ಮಲ್ಲಡೆ (ಅನಂಪು. ೦೨·೬೫).

[ ಗುಜ್ಜು$_2$ + ಕರೆ$_1$ ]

**ಗುಜ್ಜುಗಾಲ್, ಗುಜ್ಜುಕಾಲು** (ನಾ). ಮೋಟಾದ ಕಾಲು; ಗಿಡ್ಡಕಾಲು: ಗುಜ್ಜುಗಾಲ್, ನಿಟ್ಟೊಡಲ್, ಕಟ್ಟಾಯದ ಮೆಯ್ಸಿರಿ (ರಾಮಾಶ್ವ. ೮೪–೨೬). **ಗುಜ್ಜುಕಾಲು :** ಈ ಕಿರುಕಂಗಳ ನಾನೇ ಬಗೆದೆ ಗುಜ್ಜುಕಾಲು ಪೇರುದರ ಕ್ಕೊಲಿದೆ (ಗಜೇಶ. ೫–೦೩೦). [ ಗುಜ್ಜು$_2$ + ಕಾಲ್$_1$ ]

**ಗುಜ್ಜುಗಿಡ** (ನಾ). ಸಣ್ಣಮರ: ಯಾವುದಾದರೊಂದು ಗುಜ್ಜುಗಿಡದ ನೆರಳಿನಲ್ಲಿ ಕೂತು ಭಾಗವತ ಪಠಣಮಾಡುವದು ರಾಯರ ದಿನಚರ್ಯೆಯಾಗಿತ್ತು (ಕಥವಿ. ೨೬೫). [ ಗುಜ್ಜು$_2$ + ಗಿಡ (<ಗಿಡು) ]

**ಗುಜ್ಜುಗುಜುಕು** (ನಾ). ೧. ಪಿಸುಗುಟ್ಟುವಿಕೆ : ಗುಸುಗುಟ್ಟುವಿಕೆ : ಚಾರುಚಾಮರದಾತಪತ್ರದಲೆಡೋರಣೆವ ಸೀಗುರಿಯ ತೊಡಙಿನಲೂರ

ಹೊಱವೊಂಟಳು ಮಹೀಸುತೆ ಗುಜ್ಜುಗಱುಕಿನಲಿ (ತೊರರಾ. ೬-೫೩-೩೭) ; ಸಭೆಯಲ್ಲಿ ಗುಜ್ಜುಗುಱುಕಲ್ಲಿ ಗುಡ್ಡೆಕೆಯಂ ಮಾಡುತಿರ್ದರಾಗ (ಸಮ್ಯಕೌ. ೨-೯೫); ಮಾಸಂತದ ಮಡದಿಯರು ಮನೆಯೊಳಂಟೋಸರಿಸದೆ ಗುಜ್ಜುಗುಱುಕು ಆ ಸುದತಿಯರಿಂದಹುದು (ನೇಮಿಸಂ. ೦೮-೮೩). ೨. ಮನಸ್ಸಿನ ಅಳುಕು ; ಸಂಶಯ ; ಅನುಮಾನ : ಗಂಜ್ಜುಗುಟು [ಱು] ಕಿಲ್ಲದೆನಸುಂ ಪಜ್ಜಳಿಸಿರೆ ದಿಟ್ಟ ನಿಪ್ಪೆಯಂ ಮುಕ್ತಿಪದಕ್ಕುಜ್ಜುಗಿಸಿ (ಧರ್ಮನಾ. ೧-೭) : ಮಗಳೆ ಕೇಳೀ ದೊಡ್ಡ ಕಾರ್ಯಕ್ಕೆ ನಿನಗಿನಿತು ಗುಜ್ಜುಗುಱುಕೇನು ಕಾರಣ ಹೇಳು (ಸಮ್ಯಕೌ. ೫-೨೫) ; ಕುಱುದಱುಯದೆ ಮಾಣೆನು ಕೆಲರು ಭೂವರನೞಿಕೆಯ ಮಕ್ಕಳೆಲ್ಲರನು ಬಱುವಾತಲ್ಲ ಪಾಲಿಸು ಬೆಸನನು ಗುಜ್ಜುಗುಱುಕ ಮಾಡದೆ ಮಾನವೇಂದ್ರ (ನೇಮಿಸಂ. ೨೮-೨೮).

[ ಗುಜ್ಜು₂ + ಗುಱುಕು ]

**ಗುಜ್ಜುಗೆಜ್ಜೆ** (ನಾ). ಸಣ್ಣಗೆಜ್ಜೆ : ಚರಣದ ಗುಜ್ಜುಗೆಜ್ಜೆ ಝಣರೆಂದೆನೆ (ವೃಷವಿ. ೩-೩೦). [ ಗುಜ್ಜು₂ + ಗೆಜ್ಜೆ₁ ]

**ಗುಜ್ಜುಗೊಂಬು** (ನಾ). ೧. ಸಣ್ಣಕೊಂಬೆ ; ಮೋಟುರೆಂಬೆ : ನನೆಯಂ ಪೂಗೊಂಚಲಂ ಕಾಯನಂತೆನಸುಂ ತಾಳ್ದಿದ ಗುಜ್ಜುಗೊಂಬು (ಅಭ್ಯಕಾ. ೬.೨); ಪೊಸ ಮೊಗ್ಗೆಗಳನಾಂತ ಗುಜ್ಜುಗೊಂಬಿಂದ . . . ಇಮ್ಮಾವುಗಳ ಬಳಗ ಸೊಗಯಿಸಿದುದು (ಸೌಂದಪು. ೫-೮೮). ೨. ಗಾಡಿಯ ಪಾರಿಗೆ ಸಿಕ್ಕಿಸುವ ಗೂಟ ; ಗುಜ್ಜು : ಗಾಡಿಗೆ ಗುಜ್ಜುಗೊಂಬು ಹಾಕಬೇಕು (ರೂಢಿ).

[ ಗುಜ್ಜು₂ + ಕೊಂಬು₁ ]

**ಗುಜ್ಜುಗೊಂಬೆ** (ನಾ). = ಗುಜ್ಜುಗೊಂಬು ೧ : ಸವಿಯುಣ್ಯ ವ ಗುಜ್ಜುಗೊಂಬೆಯೊಳ್ಪಿರಿದು ನುಸುಳ್ದು ಮೆಲ್ಲನೆ (ಶ್ರೀಮುಹಾ. ೯-೩೯).

[ ಗುಜ್ಜು₂ + ಕೊಂಬೆ₁ ]

**ಗುಜ್ಜುಗೊರಲ್**, ಗುಜ್ಜುಗೊರಲು (ನಾ). ಗಿಡ್ಡಾದ ಕುತ್ತಿಗೆ ; ಕುಸಿ ಗೊರಳು ; ಗುಜ್ಜುಗೊರಲ ತರಳೆ! ಕೇಳ್ (ರಾಮಾಶ್ವ. ೫೦-೦೦). **ಗುಜ್ಜು ಗೊರಲು** : ಚೆಡ್ಡುದೇಹದ ಗುಜ್ಜುಗೊರಲಿನ ಗಿಡ್ಡರೂಪಿನ ಹರುಕು ಗಡ್ಡದ ಹೆಡ್ಡನಾದ ಕುರೂಪಿತನದಲಿ ನೃಪತಿ ವಿಷದಿಂದ (ನಳಚ. ೬-೧೪).

[ ಗುಜ್ಜು₂ + ಕೊರಲ್ ]

**ಗುಜ್ಜುಗೊರಲು** 'ಗುಜ್ಜುಗೊರಲ್' ನೋ.

**ಗುಜ್ಜುಗೊರವ** (ನಾ). ಕುಳ್ಳನಾದ ಋಷಿ ; ಅಗಸ್ತ್ಯಮಹರ್ಷಿ : ಕುಡುತೆಯೊಳೊಮ್ಮೆ ಗುಜ್ಜುಗೊರವಂ ಕುಡಿಯಲ್ ಕುಡಿ ಪಾಱುತೊಂದೆ ಧೀಂಕಿಡುವಡೆಗೆಯ್ದುದಾಯ್ತು (ಧರ್ಮಾಮೃ. ೦-೧೪೪).

[ ಗುಜ್ಜು₂ + ಗೊರವ ]

**ಗುಜ್ಜುಗೊಳ್**, ಗುಜ್ಜರ್ಗೊಳ್ (ಕ್ರಿ). ೧. ಸಣ್ಣದಾಗು ; ಚಿಕ್ಕದಾಗಂ. ೨. ಚಪ್ಪಟೆಯಾಗು : ಅಪ್ಪನೊತ್ತಿನಿಂದಂ ಬಿಡೆ ಗುಜ್ಜುಗೊಂಡ ಮೊಲೆ (ಹಂದ್ರಪ್ರ. ೮-೬೨) ; ನಡುಕಮಾದುದು ಮೆಯ್ಗೆ ರೋಮಾಂಚಮಾಯ್ತು . . . ನಡೆಗೆ ತಡಬಡಿಸಿದುದು ಗುಜ್ಜುಗೊಂಡುವಾ ಪೆರ್ಮೊಲೆಗಳು (ಚಂಪು. ೩೭-೭೭). ೩. ಬಾಗು ; ಕೆಳಕ್ಕೆ ಬಗ್ಗು ; ಕುಸಿ : ಪೂವಿನ ಕನರ್ಗಾಯ ಕಾಯ ತನಿವಣ್ಗಳ ಭಾರದೆ ಗುಜ್ಜುಗೊಂಡ ಮಾವಿನ ಮರದೊಳ್ ದಿಟ್ಟಿಗೆಸೆದಿರ್ಪುದು (ಶಾಂತೀಶ್ವ. ೦೩-೦೩೦) ; ಬೆಳತೊರ್ಗಲೆವ ಕಾಯ್ಗಳನೊಪ್ಪುಹ ಪಣ್ಗಳಿಂ ಕರಂ ಪಸರಿಸಿ ಗುಜ್ಜುಗೊಂಡು . . . ಬಿಲ್ವಕುಜಮೊನ್ನಿದಿರೊಳ್ ಮೆಱುದಿರ್ದುದು (ಚಕಸು. ೮.೭). ೪. ಮಂದವಾಗು : ಗುಜ್ಜುಗೊಂಡುದು ನಡೆ ಮೆಲ್ಪುಗೊಂಡುದು ಸರಂ (ಜಗವಿ. ೨-೯೫); ಹೆಜ್ಜೆಯಿಂದೆ ಹಂಸೆ ಮುಂಚಿ ಮೆಲ್ಲಮೆಲ್ಲನಡಿಯನಿಡುತೆ ಗುಜ್ಜುಗೊಂಡ ನಡೆಗಳಡಿಗೆ ತೊಡವೆ ನಲ್ಕೆ ನಡೆದು ನಿಲುತೆ (ಮುಕಿರ. ಹ. ೨೨೩-೪). **ಗುಜ್ಜುರ್ಗೊಳ್** : ೩. ಪಾದಪ್ರಹಾರಂಗಳಿಂ ಗುಜ್ಜುರ್ಗೊಂಡಂ ಫಣಿವನಗ್ಗಿದುವು ದಿಗ್ಗಜಂ (ಚಂಪು. ೨೮-೦೦). [ ಗುಜ್ಜು₂ + ಕೊಳ್₁ ]

**ಗುಜ್ಜುಗೋಲು**, ಗುಜ್ಜುಕೋಲು (ನಾ). ೧. ಗಿಡ್ಡಾದ ಕೋಲು ; ಚಿಕ್ಕಕೋಲು : ಯಜಮಾನರು ಹತ್ತಿರವಿದ್ದ ಒಂದು ಗುಜ್ಜುಗೋಲನ್ನು ಹಿಡಿದುಕೊಂಡು ಬಂದರು (ಶಂಯಾತ್ರ. ೨). **ಗುಜ್ಜುಕೋಲು** : ೨. ಗಾಡಿಯ ಪಾರಿಗೆ ಕಟ್ಟುವ ಗೂಟ ; ಗುಜ್ಜು : ಗಾಡಿಗೆ ಗುಜ್ಜು ಕೋಲು ಕಟ್ಟಬೇಕು (ರೂಢಿ). [ ಗುಜ್ಜು₂ + ಕೋಲು₁ (<ಕೋಲ್₁) ]

**ಗುಜ್ಜುತಡಮೆ** (ನಾ). ಬೇಲಿ ಅಥವಾ ಪ್ರಾಕಾರದಲ್ಲಿ ಮಾಡಿರುವ ಇಕ್ಕಟ್ಟಾದ ಬಾಗಿಲು; ಕಿರುಬಾಗಿಲು; ಕಡಕಲು : ಕೋಟಿ ಚೆನ್ನಯರು ಈ ಮನೆಯ ಮುಂದಿನ ಅಡ್ಡಗಟ್ಟದ ಗುಜ್ಜುತಡಮೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟಿಚೆ. ೨೩). [ ಗುಜ್ಜು₂ + ತಡಮೆ ]

**ಗುಜ್ಜುನಡೆ** (ನಾ). ಚಿಕ್ಕಚಿಕ್ಕ ಹೆಜ್ಜೆಇಡುವುದು ; ನಿಧಾನವಾದ ನಡಿಗೆ ; ಮಂದಗಮನ : ಪಜ್ಜಳಿಸುವ ಪಾವುಗೆ ಮೆಟ್ಟ ಮೆಲ್ಲನೆ ಗುಜ್ಜು ನಡೆಯೊಳು ತಾ ನಡೆದು (ರಾಮವಿ. ೫-೦೨). [ ಗುಜ್ಜು₂ + ನಡೆ₂ ]

**ಗುಜ್ಜುಮಾವು**(ನಾ). ಗಿಡ್ಡಮಾವಿನ ಮರ: ಗುಜ್ಜುಮಾವಿನ ಪೂಗೊಂಚಲ ನಡುದು ಪಿಡಿದಳಿಪೆರಸೊರ್ವಳ್ (ಲೀಲಾವ. ೦೩-೮೨); ಗುಜ್ಜುಮಾವಿನ ಮರದ ಗುಂಪಿನೊಳ್ ಕುಳಿತುಯಿರುವ ದೇವಲೋಕದಿಂದ ಬಂದ ಲೀಲಾಶುಕ (ಸೌಗಂಧಿ. ೦೭೧-೫). [ ಗುಜ್ಜು₂ + ಮಾವು ]

**ಗುಜ್ಜುಮೆಟ್ಟು₁** (ಕ್ರಿ). ಮೆಲ್ಲನೆ ಹೆಜ್ಜೆ ಇಡಂ : ನಿಬಿಡನಿತಂಬಭಾರದಿಂ ಗುಜ್ಜುಮೆಟ್ಟುತಂ (ಪುಲ್ಲಪು. ೪-೭೦) ; ಇಱುದೊಡೆ ಕೂರದ ಪೆಂಡಿರ ಕೆಟಗಾದಪೆವೆಂದು ರತ್ನಸೋಪಾನಕದೊಳ್ ಗಟಗಟನಿಱುಯದೆ ಬಾಣತಿ ಪೂಟಿಮೆಟ್ಟುವ ತೆಱದೆ ಗಂಜ್ಜುಮೆಟ್ಟದರರೆಬರ್ (ಅನಂಪು. ೭-೩೪) ; ಗೆಜ್ಜೆಗಳು ಘಲಘಲಿಸೆ ಮೆಲ್ಲನೆ ಪಜ್ಜೆಯಿಡೆ ಕೈಪಱುಯನಾಡಿಸಿ ಗುಜ್ಜು ಮೆಟ್ಟುತೆ ನಾಣ್ಚಿ ಹೊಂಗುತೆ ಬಂದು ನಿಱುವಿಡಿದು (ಸಾಳ್ವಭಾ. ೩-೦೪).

[ ಗುಜ್ಜು₂ + ಮೆಟ್ಟು₁ ]

**ಗುಜ್ಜುಮೆಟ್ಟು₂** (ನಾ). ಸಣ್ಣಹೆಜ್ಜೆ ; ನಿಧಾನವಾದ ಹೆಜ್ಜೆ ; ಮಂದವಾದ ಪದವಿನ್ಯಾಸ : ಸೆಜ್ಜೆವನೆಯ ಪೊಱವಟ್ಟು ಗುಜ್ಜುಮೆಟ್ಟಿಂದ ನಡೆದು ಪೋಗಿ ಮೆಲ್ಲನೆ ಮಜ್ಜನವನು ಮಾಡಿದಳು (ಕುರಾಸಾಂ. ೨೪-೦೩೬) ; ಪೆಜ್ಜವಿಲ್ಲದ ಚಿತ್ತದಿಂದೆಯ್ದುತಿರ್ದನು ಗುಜ್ಜುಮೆಟ್ಟಿಂದ ಮುಂಗಡೆಗೆ (ಭರತ. ೦೭-೨೦). [ ಗುಜ್ಜು₂ + ಮೆಟ್ಟು₂ ]

**ಗುಜ್ಜುವಜ್ಜೆ**, ಗುಜ್ಜುಹೆಜ್ಜೆ (ನಾ).=ಗುಜ್ಜುಮೆಟ್ಟು₂ : ಪೊಱವಟ್ಟಂ ಭೋಜಪಂಡಂಗಳಿಂ ನಡೆದಿರ್ಪಾಱದ ಗುಜ್ಜುವಜ್ಜೆಗಳಿವೇನೆತ್ತಂ ಬೆಡಂ ಗಾದುವೋ (ಲೀಲಾವ. ೦೦-೫). **ಗುಜ್ಜುಹೆಜ್ಜೆ** : ಆ ರಾಜನು ಗುಜ್ಜು ಹೆಜ್ಜೆಗಳನ್ನು ಇಕ್ಕಿ ನಡೆದನು (ಮಾಮುಲ್ಲ. ೦೨೪). [ ಗುಜ್ಜು₂ + ಪಜ್ಜೆ ]

**ಗುಜ್ಜುವಡೆ** (ಕ್ರಿ).= ಗುಜ್ಜುಗೊಳ್ ೨ : ಗುಂಜದಳಕತತಿ ಗುಜ್ಜುವಡೆದ ಮೊಲೆ ರಂಜಿಸೆ . . . ಒಪ್ಪಿದಳಾ ತರುಣಿ (ಜಯುಳಾ. ೮-೬೫) ; ಬೆಳರ್ದುಟಿ ಗುಜ್ಜುವಡೆದ ಮೊಲೆ . . . ಅಳವಳಿದಂಗವೆಸೆಯೆ ಸುರತಾಂತದ ನಳಿನಾಕ್ಷಿ ಯೊರ್ವಳೆಸೆದಳು (ಕುರಾಸಾಂ. ೨೮-೪೦). [ ಗುಜ್ಜು₂ + ಪಡೆ₁ ]

**ಗುಜ್ಜುಹೆಜ್ಜೆ** ' ಗುಜ್ಜುವಜ್ಜೆ ' ನೋ.

**ಗುಜ್ಜೆ₁**, ಗೊಜ್ಜೆ₂ (ನಾ). ೧. ಗಿಡ್ಡಿ ; ಕುಳ್ಳಿ ; ಕುಬ್ಜೆ. ೨. ಚಿಕ್ಕ ವಯಸ್ಸಿನ ಹೆಂಗಸು ; ಹುಡುಗಿ : ಇತ್ತ ಸುಪ್ರಾವತಿ ಗುಜ್ಜೆಯಾಗಿ ಬಂದು ಪುಷ್ಪಮಾಲೆಯ ಮೇಲಿಕ್ಕಿ ತೃಷೆಯಂ ಕಳೆದು ಕುಮಾರಂಗೆ ಕನ್ಯಾರೂಪಮಂ ಮಾಡಿದೊಡೆ (ಚಾವುಂಪು. ೦೦೭-೦೨) ; ಎಲೆ ಬಸವ ಗುಜ್ಜೆ ನಿಮ್ಮಕ್ಕನಾಗಲೆ ಗರ್ಭವಾದ ಬಗೆ ಪೇಳು (ಹೋರಬ. ೫-೦೦) ; ಗೆಜ್ಜೆ ಹೆಜ್ಜೆ ಹಾಕಿ ಗುಜ್ಜೇರು ಕುಣಿದಾರ (ಕನ್ನಜಾ. ೦೬೩). **ಗೊಜ್ಜೆ₂** : ೧. ಲೋಕಪಾಲ ನಿರುಳ್ ತೂಂಕಡಿಸುವಾಗಳ್ ವಕುಳಮಾಲೆಯೆಂಬ ಗೊಜ್ಜೆಯಿಂದೆ ನುಡಿಯಿಸಿದೊಡರಸನದಂ ಸ್ವಪ್ನಮೆಂದೆ ಬಗೆದು (ಚಾವುಂಪು. ೫೪).

[ ಗುಜ್ಜು₂ + – ಎ₂ ]

**ಗುಜ್ಜೆ$_2$** (ನಾ). (ಕರಾ) ಹಲಸಿನಕಾಯಿ : ಮನೆಯಲ್ಲಿ ಹಣ್ಣು ಗುಜ್ಜೆ ಇದ್ದರೆ ಅವನು ಶಾಲೆಗೇ ಹೋಗುವುದಿಲ್ಲವೆಂದು ಹಟಮಾಡುತ್ತಾನೆ (ಮೊಮುಗು. ೬೩) ; ಮಳೆಗಾಲದಲ್ಲಿ ಗುಜ್ಜೆಗಳು ಹಣ್ಣಾಗಿ, ಮನೆಯ ಕೋಣೆಯಲ್ಲಿ ಗಮಗಮಿಸುತ್ತಿದ್ದರೂ (ಶರಾಪ. ೧೫೪). 'ಕುಜ್ಜೆ$_1$' ಪರಾ.
[ ←ತುಳು. ಗುಜ್ಜೆ ]

**ಗುಟಕರಿಸು** 'ಗುಟುಕರಿಸು' ನೋ.

**ಗುಟಕು** 'ಕುಟುಕು$_3$' ನೋ.

**ಗುಟಗರಿಸು** 'ಗುಟುಕರಿಸು' ನೋ.

**ಗುಟರು** 'ಕುಟುರು$_2$' ನೋ.

**ಗುಟಾಯಿಸು** 'ಕೊಟಾಯಿಸು' ನೋ.

**ಗುಟಿಕೆ** (ನಾ). ಗುಳಿಗೆ ; ಮಾತ್ರೆ : ಖುಕ್ಷತತಿಗಳೇನಚ್ಚರಿಯ ಬೀರಿದುವೊ ಬಾನೆಡೆಯ ಮೋಹನದ ಗುಟಿಕೆಗಳೆನೆ (ಶಂಕಾರಾ. ೫-೨-೩೬).
[ ಸಂ. ಗುಟಿಕಾ ]

**ಗುಟಿಸು** (ಕ್ರಿ). = ಗುಟುಕರಿಸು ೧ : ನುಂಗುವಾಗ ಒಂದು ಗುಟಿಸುವಾಗ ಎರಡು (ಮೋಕ್ಷಮಾ. ೧೮೦-೬೬೬) ; ಅರಿಸಿದರೆ ಅರಿವೆ ಗುಣಿಸಿದರೆ ಗುಣವೆ ಗುಟಿಸಿದರೆ ಗುಟಿವೆ (ವಿಶ್ವಸು. ೨೩-೨). [ ಗುಟು$_0$ + – ಇಸು$_3$ ]

**ಗುಟುಕರಿಸು, ಗುಟಕರಿಸು, ಗುಟಗರಿಸು** (ಕ್ರಿ). ೧. (ನೀರು ಮೊದಲಾದುವನ್ನು) ಬೇಗನೆ ಕುಡಿ : ಅವರೂ ತುಸು ಉತ್ಸಾಹಿತರಾಗಿಯೇ ಚಹವನ್ನು ಗುಟುಕರಿಸಿದರು (ಅಪನಾ. ೯) ; ಆ ಮುಹೂರ್ತದಲ್ಲಿ ಕಾರ್ಕೋಟಕ ವಿಷ ತುಂಬಿದ ಪ್ಯಾಲೆ ಕೊಟ್ಟಿದ್ದರೂ ಗುಟುಕರಿಸಿಬಿಡುತ್ತಿದ್ದರು (ವೃದ್ಧವಿ. ೯) ; ಅದನ್ನು ಅವಳು ಗುಟುಕರಿಸಲಿಲ್ಲ (ಆದೇಶ. ೨೫೮). ೨. ಗುಟುಗುಟು ಎಂದು ಶಬ್ದಮಾಡು, – ಧ್ವನಿಮಾಡು ; ಗುಬ್ಬಳಿಸು : ಕಪಾಟಿನಲ್ಲಿರುವ ಪಾರಿವಾಳಗಳು ಪ್ರೇಮದಿಂದ ಗುಟುಕರಿಸುತ್ತಿದ್ದವು! (ಘಂಸಂ. ೯೬) ; ಐದು ಗಂಟೆಯ ಹೊತ್ತಿಗೆ ಒಂದು ಗೂಬೆ ಬಂದು ಒಂದಲ್ಲ ಒಂದು ಮನೆಯ ಮೇಲೆ ಕೂತು ಗುಗ್ಗೂ ಗುಗ್ಗೂ ಅಂತ ಗುಟುಕರಿಸುತ್ತಿತ್ತು (ಮನೋಸಂ. ೮೩). ೩. (ಅಲಂ) ವೇದನೆಪಡು : ಸಂಕಟಪಡು ; ಪೇಚಾಡು : ಕೊನೆಯ ದಿನ ಕೆಮ್ಮು ನರಳಾಟಗಳ ನಡುವೆ ಜೀವ ಗುಟುಕರಿಸುತ್ತಿದ್ದಾಗ . . . ಸ್ಮರಿಸಿದ (ವಿಮೋಚ. ೬೮). **ಗುಟಕರಿಸು:** ೧. ಏನೋ ಕಹಿಔಷಧ ಕುಡಿಯುವವರಂತೆ ಗುಟಕರಿಸಿ 'ನಾರಾಯಣ' ಎಂದರು (ನಿರಾಳ. ೬೫) ; ನೊರೆ ಮೂಗಿಗೆ ಮೆತ್ತಿದ್ದನ್ನೂ ಮರೆತು ಗಟಗಟನೆ ಗುಟಕರಿಸಿದರು ಜೋಡೀದಾರರು (ಮೂಮುನಿ. ೩೬). **ಗುಟಗರಿಸು** : ೧. ಆದರೆ ದನಿ ಏಳದೆ ಮುಳುಗಹತ್ತಿದ, ನೀರನ್ನು ಗುಟಗರಿಸುತ್ತ (ಸಮುಜೀ. ೩೫೮). 'ಗುಟಿಸು' ಪರಾ. [ ಗುಟುಕರಣ$_0$ + – ಇಸು$_3$ ]

**ಗುಟುಕಿಡು** (ಕ್ರಿ). (ಪಕ್ಷಿಗಳು) ಮರಿಗಳಿಗೆ ಆಹಾರವನ್ನು ಕೊಕ್ಕಿನಿಂದ ಕೊಡು: ಇಲ್ಲಿ ಗುಟುಕಿಟ್ಟವಾವಿಲ್ಲಿ ಬಾಯ್ಗೂಡಿದೆವು (ಶಂಕಾರಾ. ೫-೨-೨೯).
[ ಗುಟುಕು (<ಕುಟುಕು$_3$) + ಇಡು$_1$ ]

**ಗುಟುಕಿಸು** 'ಕುಟುಕಿಸು' ನೋ.

**ಗುಟುಕೀ** (ಕ್ರಿ). = ಗುಟುಕಿಡು : ಗಿಳಿ ತನ್ನ ಸಾರಿಕೆಗೆ ಗುಟುಕೀಯಲ್ (ಉದ್ಭಟ. ೫-೬೮). [ ಗುಟುಕು (<ಕುಟುಕು$_2$) + ಈ$_2$ ]

**ಗುಟುಕು** 'ಕುಟುಕು$_2$' ನೋ.

**ಗುಟುಕುಜೀವನ** (ನಾ). (ಕರಾ) ಕಷ್ಟದ ಜೀವನ ; ಒಂದು ಗುಟುಕೂ ಸಿಕ್ಕದ ಕಷ್ಟದ ಬಾಳು. [ ಗುಟುಕು (<ಕುಟುಕು$_3$) + ಜೀವನ ]

**ಗುಟುಕುತಂಬುಲ** 'ಕುಟುಕುದಂಬುಲ' ನೋ.

**ಗುಟುಕುತಾಂಬೂಲ** (ನಾ). = ಕುಟುಕುದಂಬುಲ : ನಿನ್ನ ಗುಟುಕು ತಾಂಬೂಲ ಕೊಡೆ ಚಿತ್ರಾಂಗಿ (ಸಾರಂಗ. ೦೪).
[ ಗುಟುಕು (<ಕುಟುಕು$_2$) + ತಾಂಬೂಲ ]

**ಗುಟುಕುನೀರು** (ನಾ). ಒಂದು ಸಲ ಬಾಯಿಗೆ ಹಾಕಿಕೊಂಡು ನುಂಗುವಷ್ಟು ನೀರು; ಒಂದು ಮುಕ್ಕು ನೀರು: ಆಗಿನ ಗುಟುಕುನೀರು ಈಗ ಮೊಳಕಾಲವರೆಗೆ ಬಂತು (ಸ್ವ್ರಶಿಷ. ೪೬೯) : ಗುರುವಿಗೆ ಗುಟುಕು ನೀರು ಶಿಷ್ಯನಿಗೆ ಎಣ್ಣೆಮಜ್ಜನ (ಗಾದ).

**ಗುಟುಕುನೀರು ಕುಡಿಸು** = (ಅಲಂ) ತೊಂದರೆಕೊಡು ; ಕಿರುಕುಳ ಕೊಡು ; ಹಿಂಸೆಮಾಡು : ಅವನು ಸಾಹೇಬರಿಗೇ ಗುಟುಕುನೀರು ಕುಡಿಸಿದ (ಬೂಧಿ). [ ಗುಟುಕು (<ಕುಟುಕು$_3$) + ನೀರು$_1$ (<ನೀರ್$_1$) ]

**ಗುಟುಕುಪ್ರಾಣ** (ನಾ). ಸ್ವಲ್ಪಮಟ್ಟಿಗೆ ಉಳಿದುಕೊಂಡಿರುವ ಪ್ರಾಣ ; ಕಂಠಗತಪ್ರಾಣ ; ಕುಟುಕುಜೀವ : ಅವನ ಸುದೈವದಿಂದ ಷಂಷರ್ ಖಾನನು ಮಡಿದಿರಲಿಲ್ಲ. ಇನ್ನು ಅವನಿಗೆ ಗುಟುಕುಪ್ರಾಣವಿತ್ತು (ಕಾಕ್ಸೋದ. ೧೫೨). [ ಗುಟುಕು (<ಕುಟುಕು$_3$) + ಪ್ರಾಣ ]

**ಗುಟುಕ್ಕನೆ** (ಅ). ಒಂದೇ ಬಾರಿಗೆ ; ಒಂದೇ ಗುಟುಕಿಗೆ : ನಾನು ಗುಳಿಗೆಯನ್ನು ಗುಟುಕ್ಕನೆ ನುಂಗಿಬಿಟ್ಟೆನು (ಬೂಧಿ). [ ಗುಟುಕ್$_0$ + – ಅನೆ$_1$ ]

**ಗುಟುಗುಟನೆ** (ಅ). ಗುಟುಗುಟು ಎಂಬ ಶಬ್ದದೊಡನೆ : ತುಟಿಬಟ್ಟಲೊಂದಿ ರಸಾಯನಗಳ ಗುಟುಗುಟನೆ ಕಾನೀಂಟುವ ಗಾಡಿ (ಭರತ. ೪-೦೦೧).
[ ಗುಟುಗುಟು + – ಅನೆ$_1$ ]

**ಗುಟುಗುಟು** (ನಾ). ೧. ಒಂದು ಅನುಕರಣಶಬ್ದ ; ದ್ರವವಸ್ತುವನ್ನು ಒಂದೇಸಮನೆ ಕುಡಿಯುವಾಗ ಉಂಟಾಗುವ ಶಬ್ದ : ಅವಳು ಒಂದು ಚೆಂಬು ನೀರನ್ನು ಗುಟುಗುಟು ಎಂದು ಕುಡಿದುಬಿಟ್ಟಳು (ಬೂಧಿ). ೨. ಪಾರಿವಾಳದ ಕೂಗು : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರುಳು ಗುಕುಗುಂಕರಿ ಗುಟುಗುಟು ಗುಜುಗುಜು ಚಾರಿಟಿಯೆಂದುವಲ್ಲಲ್ಲಿ (ಭರತ. ೦೫-೬೨).

**ಗುಟುರಿಕ್ಕು** (ಕ್ರಿ). ಗುಟುರುಹಾಕು: ಧೂಳ ಚೆಲ್ಲುತ ಗುಟುರಿಕ್ಕುತ ಕೆರೆವುತ ಗೂಳಿ ಬಂದುದು (ಭರತ. ೨೦-೪೫).
[ ಗುಟುರು$_2$ (< ಕುಟುರು$_2$) + ಇಕ್ಕು ]

**ಗುಟುರಿಡು** (ಕ್ರಿ). = ಗುಟುರು$_1$ : ಅದು ಸಿಂಹವೇ ಬಂತೆಂದೆಣಿಸಿ ಗುಟುರಿಡುತ್ತಾ ಹರಿಕುಲಿಶನಿದ್ದಲ್ಲಿಗೆ ಬಂತು (ಮುಡಸ. ೯೫).
[ ಗುಟುರು$_2$ (<ಕುಟುರು$_2$) + ಇಡು$_1$ ]

**ಗುಟುರು$_1$** (ಕ್ರಿ). (ಗೂಳಿ ಮೊದಲಾದುವು) ಜೋರಾಗಿ ಧ್ವನಿಮಾಡು, – ಗರ್ಜಿಸು, – ಹೂಂಕಾರಮಾಡು : ಇಂಥ ದಿನಗಳಲಿ ರೇಡಿಯೋ ಕೂಡ ಗೂಳಿಯ ಹಾಗೆ ಗುಟುರುವದು (ನಿಲಮು. ೦೬-೦೮). [ <ಕುಟುರು$_1$ ]

**ಗುಟುರು$_2$** 'ಕುಟುರು$_2$' ನೋ.

**ಗುಟುರುಹಾಕು** (ಕ್ರಿ). = ಗುಟುರು$_1$ : ಒಂದು ಗೂಳಿಯು ಇನ್ನೊಂದು ಗೂಳಿಯನ್ನು ನೋಡಿ . . . ಗುಟುರುಹಾಕುವಂತೆ, ಹೂಂಕಾರ ಮಾಡಿದನು (ಎಳೆಳ. ೨೫) : ಗೂಳಿಯಂತೆ ಗುಟ್ಟುರುಹಾಕಿ ಮುಂದೆ ನುಗ್ಗಿಬರುತಿದೆ (ಛಾಪಗೀ. ೦೦೪). [ಗುಟುರು$_2$ (<ಕುಟುರು$_2$)+ಹಾಕು (<ಪಾಯ್ಕು$_1$)]

**ಗುಟ್ಟ** 'ಗುಡ್ಡ$_2$' ನೋ.

**ಗುಟ್ಟುರಿಕೆ** (ನಾ). ಗುಟುರು ; ಡುರುಕು : ಅಗ ಧ್ವಜದಲ್ಲಿದ್ದ ವೃಷಭವು ಗುಟ್ಟುರಿಕೆ ಹಾಕಲು (ಕೃಪಾಳ. ೩೮). [ಗುಟ್ಟುರು (<ಕುಟುರು$_2$)+ – ಇಕೆ]

**ಗುಟ್ಟುರು** 'ಕುಟುರು$_2$' ನೋ.

**ಗುಟ್ಟಳಿ** (ಕ್ರಿ). ೧. ಗುಟ್ಟುರಟ್ಟಾಗು ; ರಹಸ್ಯ ಬಯಲಾಗು. ೨. (ಅಲಂ) ಸತ್ವವಡಗು ; ಶಕ್ತಿಗುಂದು : ಗುಟ್ಟಳಿದುದು ಮುನಿವರನಿಂದೆ ಕ್ಷೇತ್ರವ ಬಿಟ್ಟುದು ಭಾರ್ಗವ ಶರಕೆ (ಮೋಹತ. ೨೦-೦೦) : ಗುಟ್ಟಳಿದುದು ವಜ್ರಮಯರಥ ನೇಗಿಲ ಪೆಟ್ಟು ಸಂಧಿಸಲು ನುಗ್ಗಾಯ್ತು (ಮೋಹತ. ೪೦-೫೯) : ಕಟ್ಟರಸು ಕೌರವನು ಗಾಂಧರ್ವರಲಿ ಸಿಲ್ಕಿ ಗುಟ್ಟಳಿದನವ ವೀರನೇ (ಲಕ್ಷ್ಮೀಛಾ. ೩-೨೨). [ ಗುಟ್ಟು$_1$ + ಅಳಿ$_1$ (<ಅಟ್$_1$) ]

**ಗುಟ್ಟಿ₁** (ನಾ). ತೇದುಹಾಕುವ ಮಾತ್ರೆ,-ಗುಳಿಗೆ; ಕುಪ್ಪಿಮಾತ್ರೆ: "ಗುಟ್ಟಿಯೆನಲ್ ಘುಟಿಕೆ [ಪಾಠಾಂ. ಗುಂಟ್ಟಿಗೆಯೆನೆ ಘುಳಿಗೆ] ವಲಂ" (ಚಿಕನಿ. ೬೦); ತಾಯಿ ಕೊಡುವ ಗುಟ್ಟಿಯಂತೆ, ವೈದ್ಯ ಕೊಡುವ ಕಹಿ ಕಷಾಯ ದಂತೆ (ಕಗದ್ಯ. ೦೫೦). [ <ಸಂ. ಗುಟೀ ]

**ಗುಟ್ಟಿ₂, ಗೂಟ** (ನಾ). ೧. ಹಂದಿ; ಎಕ್ಕಲ; ಕೋಡ: "ಎಕ್ಕಲ ಕೋಡ ಗುಟ್ಟಿ ಘೃಷ್ಟಿಯೆನಿಕ್ಕುಂ" (ಕವಿಕಂ. ೬೦). **ಗೂಟ:** ೨. ಹಂದಿಗೆಡ್ಡೆ; ವಾರಾಹೀಗೆಡ್ಡೆ: ಕೋಟ ಕೊಟ್ಟು ಗೂಟ ತಿನ್ನು (ಗಾದೆ).

[ <ಸಂ. ಘೃಷ್ಟಿ ]

**ಗುಟ್ಟಿಗಟ್ಟು** (ಕ್ರಿ). ಉಂಡೆಮಾಡು; ಗುಳಿಗೆಮಾಡು: ನಿಶಾಟನುಬ್ಬಿನ ಬಲವಂ ಗೋಣ್ಮುಱಿದು ಗುಟ್ಟಿಗಟ್ಟುವೊಡಾನೆ ಸಾರ್ದಂ (ರಾಮಾಶ್ವ. ೦೦೦-೦೩). [ ಗುಟ್ಟಿ₁ + ಕಟ್ಟು₁ ]

**ಗುಟ್ಟಿಗೆ** 'ಗುಳಿಗೆ₁' ನೋ.

**ಗುಟ್ಟು₁** (ನಾ). ೧. ರಹಸ್ಯವಾದ ವಿಷಯ; ಅಂತರಂಗವಿಚಾರ; ಗೌಪ್ಯ: ಗುಟ್ಟು ಪೇಳ್ವೆನಯ್ಯ ಒಂದಿಪ್ಪು ಲಾಲಿಸೊ (ಪುರಂದ. ೪-೯-೦); ಕವಿತಾಸುಲಕ್ಷಣಗಳ ಗುಟ್ಟನಱಿಯದೆ ಕಷ್ಟಸಾಧ್ಯವಹ ಕೃತಿಗೆ ಮನಗೊಟ್ಟು ಕೆಂದೆನ್ನ ನಗೆಗೇಡುಮಾಡದೆ... ಮನ್ನಿಪುದಿದಂ ಸರ್ವಜನರು (ಶ್ರೀರಾಮ. ೨-೪); ಇಬ್ಬರಾಡುವ ಗುಟ್ಟು ಕದ್ದು ಕೇಳುವ ಹೊಲೆಯ (ಗೀವಿಂ. ೦೫-೦೩); ನಮ್ಮ ಸಂಸಾರದ ಗುಟ್ಟು ಹೊರಜಗತ್ತಿಗೆ ಕಾಣುವುದಿಲ್ಲ (ಕಾವೇರಿ. ೦೯೦); ಸ್ವಲ್ಪ ಹತ್ತಿರ ಹೋದ ಕೂಡಲೇ ಗುಟ್ಟು ಬಯಲಾಗಿ ಹೋಯಿತು (ಪಾಣಿಅ. ೩೩); ಗುಟ್ಟಿಗೆ ಸಾವಿರಾಳ ಪೆಟ್ಟು (ಗಾದೆ). ೨. (ಆಲಂ) ಕೆಚ್ಚು; ಸತ್ವ; ಗರ್ವ: ಮುಱಿಯೆ ವಿರಹಿಯ ಗುಟ್ಟು ಬೆಱಿಯೆ ಕುಸುಮೇಷು ಕುಕಿಲಿಱಿಯೆ ಕೋಗಿಲೆ ದುಃಖವಱಿಯೆ ಸುಖ ಜನಕೆ ಕಣ್ದೆಱಿದುದು ವಸಂತಮಾಸಂ (ಪದ್ಮರಾ. ೮-೩).

**ಗುಟ್ಟುರಟ್ಟಾಗು**=ರಹಸ್ಯವು ಬಯಲಾಗು: ಗುಪ್ತಚರನು ಮುಂದಾಗಿಯೇ ಅಲ್ಲಿಗೆ ಹೋಗಿದ್ದರೆ ಗುಟ್ಟುರಟ್ಟಾಗುವುದು (ಕೊತಲಾ. ೬).

[ ದೇಶ್ಯ ತಮಿ. ಕುಟ್ಟು; ತುಳು. ಗುಟ್ಟು; ಕೊಡ. ಗುಂಟ್ಟೀ; ತೆಲು. ಗುಟ್ಟು ]

**ಗುಟ್ಟು₂** (ನಾ). ಹೊಗೆವಾಸನೆ (?): ಗುಟ್ಟಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ ಕಟ್ಟುಬೀಳದ ಸಕ್ಕರೆಯಿಂದೆ ಸವಿವಾತ ನೆಟ್ಟನೆ ಪೇಳ್ವುದೆನ್ನೊಡನೆ (ಮೋಹತ. ೨೩-೦). [ < ಗುಮ್ಮು ]

**ಗುಟ್ಟುಗಟ್ಟು** (ಕ್ರಿ). ಗುಟ್ಟಾಗಿಡು; ರಹಸ್ಯವಾಗಿಡು: ಈಗಳಲ್ಲಿ ಸೆರವೇರಿದ ನಡೆನುಡಿಗಳನ್ನೆಲ್ಲ... ಗುಟ್ಟುಗಟ್ಟಿ, ಮಾತು ಬರಹಗಳಿಗರಿವಾಗದ ಎಚ್ಚರದ ನಿಚ್ಚಟರಾಗಿರಿ (ಮುಂತ್ರಶ. ೮೪-೫).

[ ಗುಟ್ಟು₁ + ಕಟ್ಟು₁ ]

**ಗುಟ್ಟುಗಾಣಿಸು** (ಕ್ರಿ). ಗುಟ್ಟನ್ನು ಬಹಿರಂಗಪಡಿಸು,-ಬಯಲು ಮಾಡು: ಗುಟ್ಟುಗಾಣಿಸದ ಪೊರ್ಕುಳದೀವುದುದಾತ್ತಸೌಖ್ಯಮಂ (ಹಾಲಾಸ್ಯ. ೦-೦೩-೨೬). [ ಗುಟ್ಟು₁ + ಕಾಣಿಸು ]

**ಗುಟ್ಟುಗೊಲೆ** (ನಾ). ಗುಟ್ಟಾಗಿ ಮಾಡುವ ಕೊಲೆ; ರಹಸ್ಯವಧೆ: ಆ ಧೀರ ಸಮರ್ರ್ಥದಳವಾಯಿ ವಿಕ್ರಮರಾಯರೂ ಗುಟ್ಟುಗೊಲೆಯಾಗಿ ... ಇವನಿಗೆ ರಾಜ್ಯಾಭಿಷೇಕವಾಗಬೇಕಾಯ್ತು (ಮುಂತ್ರಶ. ೬೬-೩).

[ ಗುಟ್ಟು₁ + ಕೊಲೆ₂ ]

**ಗುಟ್ಟುಸೆರೆ** (ಕ್ರಿ). ಗುಟ್ಟಾಗಿ ಸೇರು; ರಹಸ್ಯವಾಗಿ ಕೂಡು: ನಿಮ್ಮ ಆಮಂತ್ರಣದಂತೆ ಕಟ್ಟಸವಸದಿಂದ ಇಂದೂ ಗುಟ್ಟುಸೆರೆದಿರುವ ಈ ಮಹಾ ಸಭೆಯು ನಿಮಗೆ ಸಿದ್ಧವಾಗಿರುವುದು (ಮುಂತ್ರಶ. ೬೬-೦೯).

[ ಗುಟ್ಟು₁ + ನೆರೆ₁ ]

**ಗುಟ್ಟುಮಾಡು** (ಕ್ರಿ). ಗುಟ್ಟಾಗಿಡು: ರಹಸ್ಯವಾಗಿಡು: ಅವನದು ಗುಟ್ಟು ಮಾಡುವ ಸ್ವಭಾವ (ರೂಢಿ). [ ಗುಟ್ಟು₁ + ಮಾಡು₁ ]

**ಗುಟ್ಟುಮಾತು** (ನಾ). ರಹಸ್ಯವಾದ ಮಾತು: ಮಿತ್ರಗೆ ಗುಟ್ಟುಮಾತನ್ನು ಕಿವಿಯಲ್ಲಿ ಹೇಳುತ್ತಾರೆ (ಅಂಡೂ. ೪೬). [ ಗುಟ್ಟು₁ + ಮಾತು₁ ]

**ಗುಟ್ಟೆ** 'ಗುಡ್ಡ₂' ನೋ.

**ಗುಡ** (ನಾ). ೧. ಬೆಲ್ಲ: "ಗುಟ ಗುಡಮುಮಕ್ಕುಂ" (ಕವಿಕಂ. ೨೦೮); ಪಿಷ್ಟೋದಕ ಗುಡ ಧಾತಕೀ ಸಂಯೋಗದಿಂದಮೆಂತು ಮದವಿಕಾರಮೆಸೆದಿಪ್ಪುದು (ಆದಿಪು. ೨-೯ ವ); ಬುಧಸಮಿತಿ ಮೆಚ್ಚೆ ಪೇಟ್ಟೆಂ ಮಧುರ ಗುಡ [ ಪಾಠಾಂ. ರಸ ]ಪ್ರಚುರ ವಚನರಚನೆಗಳಿಂದಂ (ಧಂದೋಂಬು. ೦-೩೦); ತೈಲ ಘೃತ ಗುಡಪ್ರಕರ ರಸಭಾಂಡದುಗ್ರಾಣದೊಳ್ವನೆಗಳುಂ (ಚಿಬಪು. ೫-೫೦); ಕರದಿ ಗುಡವಿಹುದೆಂದು ಬೇವಿನ ತಿರುಳ ಮೆಲುವರೆ (ಗಗಹಾ. ೦೫-೨೦). ೨. ಚೆಂಡು, ಗೋಲಿ ಮುಂತಾದ ದುಂಡಾಗಿರುವ ವಸ್ತು. [ಸಂ.]

**ಗುಡಗತಾಣ** (ನಾ). ಒಂದು ಪ್ರದೇಶದ ಹೆಸರು: ಕಿಟುಗ್‌ಕಿಟು ಗುಡಗ ತಾಣಮಮ್ ನೊಕ್ಕಿಗೋಡು ಮಣಲಿ ಮಕ್ಕಿಯಸ್ಯ × × (ಮ್ಯಾಆರಿ. ೧೯೦೮; ೦೦; 700). [ ? ]

**ಗುಡಗುಡಿ** 'ಗುಡುಗುಡಿ' ನೋ.

**ಗುಡಜೀರಿಗೆ** (ನಾ). ಮದುವೆಕಾಲದಲ್ಲಿ ವಧೂವರರು ಪರಸ್ಪರ ತಲೆಯ ಮೇಲೆ ಹಾಕುವ ಜೀರಿಗೆ ಮತ್ತು ಬೆಲ್ಲ: ಗುಡಜೀರಿಗೆಯಿತ್ತು ಕರಗಳ ಕೂಡಿಸಿ ಹೊಡೆದರು ಸನ್ನೆಭೇರಿಗಳ (ಜನರಾ. ೯-೦೯೯). 'ಜೀರಿಗೆಬೆಲ್ಲ' ಪರಾ. [ ಗುಡ + ಜೀರಿಗೆ ]

**ಗುಡಪಾಕ** (ನಾ). ಬೆಲ್ಲದ ಪಾಕ: ಈ ಚೂರ್ಣವನ್ನು ಹಾಕಿ ವಟಕಗಳಿಗೆ ತಕ್ಕಂತೆ ಗುಡಪಾಕ ಮಾಡಿ ಕಲಸಿ (ಸಕವೈ. ಪರಿ. ೪೪೬).

[ ಗುಡ + ಪಾಕ₂ ]

**ಗುಡಪಾನ** (ನಾ). ಬೆಲ್ಲ ಸೇರಿಸಿದ ಪಾನೀಯ; ಬೆಲ್ಲದ ಪಾನಕ: ಗುಡಪಾನಂಗಳೊಳದ್ದೆ ಬೇವಿನ ಫಲಂ ಸ್ವಾದಪ್ಪುದೇ (ಸೋಮೇಶ. ೯೬).

[ ಗುಡ + ಪಾನ ]

**ಗುಡಪಾಲ** (ನಾ). ಒಂದು ಬಗೆಯ ಗಿಡ; ಹೂಲಿಗಿಡ; "ಪಾಂಡುಫಲೀ" (ಶಂಡಿಶ). [ ಸಂ. ]

**ಗುಡಪುಷ್ಪ** (ನಾ). ಹಿಪ್ಪೆಮರ; ಮಧೂಕ: "ಮಧೂಕತರು ಗುಡಪುಷ್ಪಂ" (ವಸ್ತುಕೋ. ೩೪-೯): "ಮಧೂಕಃ, ಗುಡಪುಷ್ಪಃ, ಮಧುದ್ರುಮಃ, ವಾನಪ್ರಸ್ಥಃ, ಮಧುಷ್ಠೀಲಃ-ಶಿ ಹಿಪ್ಪೆಗಿಡ" (ಸಿದ್ಧಾಂತಿ. ೦೦೩).

[ ಸಂ. ]

**ಗುಡಫಲ** (ನಾ). ಗೋಣಿಮರ; ಪೀಲುವೃಕ್ಷ: "ಪೀಲುವೆನಲ್ಗುಡಫಲಂ" (ವಸ್ತುಕೋ. ೩೪-೮): "ಪೀಲುಃ, ಗುಡಫಲಃ, ಸ್ರಂಸೀ-ಶಿ ಗೋನುಮರ, ಗೋಗಿನಾರು ಪ್ರಸಿದ್ಧ. ಗೋಣೀಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೦೦೩). [ ಸಂ. ]

**ಗುಡಮೋಟಿಕೆ** (ನಾ). ಒಂದು ಬಗೆಯ ವನಸ್ಪತಿ: (ಮ್ಯಾಶಿಗಿ. ೨೦-೩೯೫).

[ ? ]

**ಗುಡಯ** (ನಾ). (?): ನೀರಿಲಿಯ ಬಡವೊಳಗೆಱಿಯ ಗದೆ ಕ ೨ ಗುಡಯ ಹಳಲಗದ್ದೆ ಖ ೨ ದಾಭೆಯ ಗದ್ದೆ ಖ ೮ ಸಲಗೆ ಭೂಮಿಯೆಂಟುನೂಱು ಮಿನು ದರ್ಮಾರ್ತವಾಗಿ ಕೊಟ್ಟ ಕೊಡಗೆ (ಮ್ಯಾಆರಿ. ೧೯೪೬, ೨೫-೬; 1492). [ ? ]

**ಗುಡಲು** 'ಗುಡಿಲ್' ನೋ.

**ಗುಡವಾಣ** 'ಗುಡಾಣ' ನೋ.

**ಗುಡವಿಕಾರ** (ನಾ). ಕಾಕಂಬಿ; ಗಡಿಗೆಬೆಲ್ಲ: "ಗುಡವಿಕಾರಂ ಫಾಣಿತಂ ಮತ್ಸ್ಯಂಡಿ [ಡಿ] ಖಂಡಶರ್ಕರೆ ಸಿತಾಹ್ವಯಮೆನಿಕುಂ" (ವಸ್ತುಕೋ. ೯೪-೦೨). [ ಗುಡ + ವಿಕಾರ ]

**ಗುಡಸು** 'ಗುಂಡಸು' ನೋ.

**ಗುಡಾಕು, ಗುಡಾಕೆ, ಗುಡಾಖು** (ನಾ). ಬೆಲ್ಲ, ಮಾದಕ ಹಾಗೂ ಸುಗಂಧ ದ್ರವ್ಯಗಳನ್ನು ಬೆರಸಿ ಹದಗೊಳಿಸಿದ ತಂಬಾಕಂ: ಗುಡಾಕನ್ನು ಹೈದರಾಬಾದಿನಿಂದಲೇ ತರಿಸುತ್ತಾರೆ (ಜಾರುದಾ. ೬೨). **ಗುಡಾಕೆ:** ಆಗ ಗುಡಾಕೆಯು ಗುಳಿಗೆಯನ್ನು ಹೊರತೆಗೆದು . . . ಹೊತ್ತಿಸಿ ಒಂದೆರಡು ದಮ್ಮು ಸೇದಿ ಮುದುಕನ ಕೈಗೆ ಒಪ್ಪಿಸಿದನು (ನಿಷ್ಕಾಮ. ೩೨). **ಗುಡಾಖು:** ಆ ನಾಯಿಕಸಾನಿಯು ಹೊಗೇಸೊಪ್ಪು, ಅಡಕೆ, ಎಲೆ, ನಸ್ಯ, ಗುಡಾಖು, ಭಂಗಿ . . . ಇವುಗಳನ್ನು ಅಂಗಡಿ ಇಟ್ಟುಕೊಂಡು ಕೂತುಕೊಂಡಳು (ಶೀಟೀಮಾ. ೪೫). [ ← ಹಿಂ. ಮರಾ. ಗುಡಾಕೂ ]

**ಗುಡಾಕೆ** ' ಗುಡಾಕು ' ನೋ.

**ಗುಡಾಕೇಶ** (ನಾ). ೧. ದಟ್ಟವಾದ ಕೂದಲುಳ್ಳವನು. ೨. ಅರ್ಜುನ. ೩. ಶಿವ. ೪. ಶ್ರೀಕೃಷ್ಣ. [ ಸಂ. ]

**ಗುಡಾಖು** ' ಗುಡಾಕಂ ' ನೋ.

**ಗುಡಾಣ** ' ಗುಡುವನ ' ನೋ.

**ಗುಡಾರ** ' ಗೂಡಾರ ' ನೋ.

**ಗುಡಾರಗಟ್ಟು**(ನಾ). ಗುಡಾರದ ಮಾದರಿಯಲ್ಲಿ ಮೇಲ್ಛಾವಣಿಯಿರುವ ಮನೆ; ಡೇರೆಯಂತಿರುವ ಮನೆ: ಎಂಟೆಂಟು ಮನೆಗಳಿದ್ದುವು ಅವರಲ್ಲಿ ಸ್ವಲ್ಪ ತೊಟ್ಟಿಗಳು ಸ್ವಲ್ಪ ಗುಡಾರಗಟ್ಟುಗಳು (ಜಂಗಾಳ್ಮ. ೩೪೮).
[ ಗುಡಾರ (< ಗೂಡಾರ) + ಕಟ್ಟು$_2$ ]

**ಗುಡಾರು** ' ಗೂಡಾರ ' ನೋ.

**ಗುಡಾರೆ** ' ಗೂಡಾರ ' ನೋ.

**ಗುಡಾಳಕ** (ನಾ). ದಟ್ಟವಾಗಿರುವ ಕೂದಲುಳ್ಳವನು; ವಿಷ್ಣು: ವರಮಕುಟಮಣಿಕಾಂತಿ ಪರಿಬಂಧುರ ಗುಡಾಳಕ ನಿಚಯ ಸುಮನೋಹರ ಚತುರ್ಭುಜಮೂರ್ತಿಯಲಿ ತೊಳತೊಳಗಿ ರಂಜಿಸಿದ (ನಿಭಾಗ. ೧೦-೩-೩೬). ' ಗುಂಡಾಕೇಶ ' ಪರಾ. [ ಸಂ. ಗುಡಾಲಕ ]

**ಗುಡಿ$_1$** (ನಾ). ೧. ಮಂಡಲ; ವೃತ್ತ; ಸುತ್ತು: ಪರಿವೇಷಃ, ಪರಿಧಿಃ– ೨ ಸೂರ್ಯ ಪರಿವೇಷವೆಂಬ ಗಗನಗುಡಿಯು ಹೆಸರುಗಳು (ಸಿದ್ಧಾಂಶಿ. ೩೨). ' ಗುಡಿಗಟ್ಟು$_1$ ' ಪರಾ. ೨. ಮೊತ್ತ; ಗುಂಪು; ಸಮೂಹ: ಪವಳದ ರನ್ನದ ಗುದಿಗಳ ಗುಡಿಗಳ್ ನವಮೌಕ್ತಿಕ ರಂಗದ ದಾಂಗುಡಿಗಳ್ ಮೆಟಿದವು (ರಾಜಶೇ. ೯-೪೧ ರಗಳೆ). ' ಗಂಡಿಯಿಂಬು$_1$ ' ಪರಾ.
[ ದೇಃ ತೆಲು. ಕೊಲಾ. ಗುಡಿ ]

**ಗುಡಿ$_2$** (ನಾ). ೧. ಬೆಟ್ಟದ ತಂದಿ,– ಶೃಂಗ: (?). ೨. ಧ್ವಜ; ಬಾವುಟ; ಪತಾಕೆ: ಗುಡಿ ಶಂಖಂ ಚಾಮರಂ ಬೆಳ್ಗೊಡೆ (ಎಕ. XIII, ೩೩೦-೧೩; ೨೨೨); ಬಿಡುಮುತ್ತಿನ ರಂಗವಲಿ ಮಿಳಿರ್ವ ದುಗುಲದ ಗುಡಿ (ಪಂಪಭಾ. ೩-೨); ನಭಕೆ ನೆಗಪಿ ಪೊಳೆವ ಗುಡಿಯಿಂ ಪತಾಕಾಳಿಯಿಂ ಶೋಭಿಸುತೆ ತದ್ಗುರುವರಂ (ಪದ್ಮರಾ. ೩-೫೦); ನುಡಿಯ ಭಂಡರು ಕೆಲರು ಸಿಂಧದ ಗುಡಿಯ ಭಂಡರು ಕೆಲರು (ಕುವ್ಯಾಕ. ೦೩-೫). ೩. ಹೊಸವರ್ಷದಂದು ಮನೆಯ ಬಾಗಿಲುಗಳಲ್ಲಿ ನೆಡುವ ಜಯಸ್ತಂಭ ಮತ್ತು ಅಂದು ಆಚರಿಸುವ ಹಬ್ಬ. ' ಗುಂಡಿಪಾಡಿವ ' ಪರಾ.
[ ದೇಃ ತಮಿ. ಮಲ. ತುಳು. ಕೊಡ. ತೆಲು. ಕೊಡಿ ]

**ಗುಡಿ$_3$** (ನಾ). ೧. ಮನೆ; ಕುಟೀರ; ಗುಡಾರ: " ದೂಷ್ಯಂ, ಸ್ಥೂಳಂ, ಪಣಕುಟೀ, ಗುಣಲಯನೀ, ಕೇಳಿಕಾ-ಈ ೫ ಗುಡಿ " (ಹಲಾಯು. ೭೪-೨೯೬); ಬೀಡಿಂಗೆ ಬೀಡುವಿಡಲ್ ನೆಲನುಂ . . . ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ (ಪಂಪಭಾ. ೯-೦೦೪ ವ); ಗುಡಿಗುಡಿ ಕೇರಿಕೇರಿಯೊಳು ಮಂದನಮಾಲೆಗಳೆತ್ತ ನೋಟ್ಟಿಡಂ (ಪುಣ್ಯಾಸ್ರ. ೭-೮೧). ೨. ದೇವಾಲಯ; ದೇವಸ್ಥಾನ: ಗುಡಿಯಂ ಪೊಕ್ಕೀರೇಟ್ವ ಗದೊಡೆಯಂ ಸೋಮೇಶ್ವರಂಗೆಱಗಿ . . . ತದ್ವೃತ್ತಂ (ಕಾದ್ವಟ. ೦೦-೬೬); ಗುಡಿಯೆ ಮಾತಾಡುವಂದದೊಳೋರ್ವನೊಳಗಿರ್ದು ನುಡಿದರನ್ಯರ ಕಿವಿಗೆ ಪ್ರತಿಶಬ್ದದಿಂದಾಗಲೊಡನೆ ತಾಂ ಕೇಳಬುದಂತೆ (ಕಬಪು. ೧-೩೦); ನಳಿನದಳಾಕ್ಷನ ಗುಡಿಯ ಶಿಖರದ ಮೇಲಳವಟ್ಟುದು ಹೊನ್ನ ಕಳಸ (ಕಂನವಿ. ೭-೭೮); ಗುಡಿ ಬಸದಿಯೆ ಜಿನನೆ ಜಗಕ್ಕೊಡೆಯಂ ಬೇರಿನ್ನು ದೈವಮುಂ ಗುಡಿಯುಂ ಪೇಳ್ವೊಡವಿಯೊಳಳವೆ (ವೃಷವಿ. ೩೪-೧೨). ೩. ವಿತಾನ; ಮಂಟಪ: ವಸುಧೆಗೆ ಗುಡಿ ಕವಿದಂತೆಣ್ದೆಸೆಯಂ ಬಾಸಣಿಸಿ . . . ಎಸೆದುದು ಭುವನೈಕಭವನದಂತಾ ಭೂಜಂ (ಆಗಪು. ೪-೪೬). ೪. ಕೆತ್ತನೆಕೆಲಸ; ಕುಶಲಕೈಗಾರಿಕೆ. 'ಗುಂಡಿಕೈಗಾರಿಕೆ' ಪರಾ. ೫. ಬಣ್ಣದ ಕೆಲಸ; ವರ್ಣ ಲೇಪಿಸುವಿಕೆ. ' ಗುಡಿಕಟ್ಟು$_3$ ' ಪರಾ.
[ ದೇಃ ತಮಿ. ಮಲ. ಕುಡಿ; ತುಳು. ಗುಡಿ ; ಕೊಡ. ಕುಡಿ ; ತೆಲು. ಗುಡಿ./ಸಂ. ಕುಟಿ ]

**ಗುಡಿ$_4$** (ನಾ). ಮುಖವಾಡ; ಮುಸುಕು. 'ಗುಡಿಗುಮ್ಮ$_1$' ಪರಾ.
[ ದೇ.ಃ ತುಳು. ಗುಡಿ ]

**ಗುಡಿಕ** (ನಾ). ಧನಿಯ; ಕೊತ್ತಂಬರಿ: " ಗುಟಿಕ ಕೊತುಂಬರಿ " (ಅಕಾನಿ: ೯-೨೩). [ ? ]

**ಗುಡಿಕಟ್ಟಿಸು** ' ಗುಡಿಗಟ್ಟಿಸು ' ನೋ.

**ಗುಡಿಕಟ್ಟು$_1$** ' ಗುಡಿಗಟ್ಟು$_1$ ' ನೋ.

**ಗುಡಿಕಟ್ಟು$_2$** ' ಗುಡಿಗಟ್ಟು$_2$ ' ನೋ.

**ಗುಡಿಕಟ್ಟು$_3$** ' ಗುಡಿಗಟ್ಟು$_3$ ' ನೋ.

**ಗುಡಿಕಾರ** ' ಗುಡಿಗಾರ ' ನೋ.

**ಗುಡಿಕೈಗಾರಿಕೆ** (ನಾ). ೧. ಕೆತ್ತನೆಯ ಕೆಲಸ,–ಉದ್ಯಮ. ೨. ಮನೆಗಳಲ್ಲಿ ಮಾಡಬಹುದಾದ ಸಣ್ಣ ಪ್ರಮಾಣದ ಕೈಗಾರಿಕೆ; ಗೃಹಕೈಗಾರಿಕೆ: ಹಳೆಗಾಲದ ಯಾವ ಗುಡಿಕೈಗಾರಿಕೆಗಳೂ ಇಂದು ಉಳಿಯುವುದು ಕಷ್ಟ (ಗೊಂಡಾರ.೧೯೬); ಕಾಲಕ್ರಮೇಣ ದರಿದ್ರಾವಸ್ಥೆಗೆ ಇಳಿದುಹೋದ ಗುಡಿ ಕೈಗಾರಿಕೆ ಅದು (ನಡುಗೋ. ೦೪); ಗುಡಿಕೈಗಾರಿಕೆಗಳು ಬಲಗೊಳ್ಳುತ್ತಲೇ ಇವೆ (ಬಿಶಿಸಂ. ೪೨). [ ಗಂಡಿ$_3$ + ಕೈಗಾರಿಕೆ ]

**ಗುಡಿಗ** (ನಾ). ಕೆತ್ತನೆ ಕೆಲಸದವನಂ; ಕುಶಲಕರ್ಮಿ (?): ಅಸಗನ ಮುನಿಸು ಕತ್ತೆಯ ಸ್ನೇಹ ಸರ್ಪನ ಮುನಿಸು ಕಪ್ಪೆಯ ವಿವಾಹ ಸಬರನ ಸೊಪ್ಪುಡಿಗೆ ಗುಡಿಗನ ಮನೆಯಂತೆ ಇವು ಅಡಗಿಹ ಭೇದವನಱು ಆತುರ ವೈರಿಮಾರೇಶ್ವರಾ (ನಗಮಾ. ೫೬). ' ಗುಡಿಗಾರ ' ಪರಾ.
[ ಗುಡಿ$_3$ + – ಗ$_2$ ]

**ಗುಡಿಗಟ್ಟಿಸು, ಗಂಡಿಕಟ್ಟಿಸು** (ಕ್ರಿ). ೧. ಉತ್ಸವಕ್ಕಾಗಿ ಊರಲ್ಲಿ ಬಾವುಟಗಳನ್ನು ಕಟ್ಟಿಸು: ಪೊಟಲ ಬೀದಿವೀದಿಗಳನಿತುಮನೋರಂತೆ ತಳಿದು ಗುಡಿಗಟ್ಟಿಸಿ (ಆದಿಪು. ೫-೮); ಗುಡಿಗಟ್ಟಿಸಿ ಬದ್ದಪಣಮನೆಡೆಯುಡುಗದೆ ಪೊಯ್ಸಿ (ನೇಮಿಪು. ೦೦-೦೬೩); ಪುರದೊಳ್ ಕೂಡೆ ಗುಡಿಗಟ್ಟಿಸಿ ಮೃದು ಮೃದಂಗ ನಿಸ್ಸಾಳ ಭೇರೀ ಶಂಖ ಕಹಳೆಗಳ ಬಹಳ ಧ್ವನಿಯುಣ್ಮೆ . . . ಪುತ್ರೋತ್ಸವಂ ಕೊಂಡಾಡಿ ಸಕಲಸಂಭ್ರಮದಿಂದರಮನೆಗೆ ಬಂದು (ಸಂಬಿರ. ೨-೯೦). ೨. ರೋಮಾಂಚನವನ್ನುಂಟುಮಾಡು: ಕುಟಿಲಾಳಕಿಯರ ನುಣ್ಗಲ್ಲ ತೊಂಡೆವಣ್ದುಟಿಯ ಕರ್ದುಕಿ ಮೆಯ್ಮುವಿರ ಸುಟಿಯಿಂದ ಗುಡಿಗಟ್ಟಿಸುವ ಮಾಗಿಯ ಹಿಮ ವಿಟನಂತೆ ಕಣ್ಗೆ ರಂಜಿಸಿತು (ಸೋಹಕ. ೪-೪೫). **ಗುಡಿಕಟ್ಟಿಸು:** ೧. ಭೂಪತಿ ಪುರದೊಳಗೆ ಗುಡಿಕಟ್ಟಿಸಿದನತ್ಯಧಿಕಹರ್ಷದಲಿ (ಕುವ್ಯಾಸ. ೦೩-೫). [ ಗುಡಿಗಟ್ಟು$_2$ + – ಇಸು$_3$ ]

**ಗುಡಿಗಟ್ಟು$_1$, ಗುಡಿಕಟ್ಟು$_1$** (ಕ್ರಿ). ೧. ಮಂಡಲಾಕಾರವಾಗು; ಚಂದ್ರ, ಸೂರ್ಯಬಿಂಬಗಳ ಸುತ್ತ ಪರಿವೇಷ ಕಟ್ಟು: ಗಗನದೊಳೊಡ್ಡುಗಟ್ಟಿ ಬೆಳಗಾ ಬರುತಿರ್ಪುದದಲ್ತು . . . ಜನಕಂ ಬರುತಿರ್ದಪನೆಂದು ಕಣ್ಬೊಲಂಬುಗೆ ನಲಿದತ್ತು ದಿಟ್ಟವೆಳಗಿಂ ಗುಡಿಗಟ್ಟ ಪುರಾಂಗನಾಜನರ (ಪಂರಾಮಾ. ೫-೨೬); ಚಂದ್ರಂಗೆ ಗುಡಿಗಟ್ಟಿದಂತೆ (ಸೌಗಂಧಿ. ೧೩೦-೦೨)

೨. ಸುತ್ತುಹಾಕು; ಪ್ರದಕ್ಷಿಣೆಮಾಡು: ಒರ್ವ ಶಿಶುವಂ ಮಕ್ಕಳೆಲ್ಲಂ ಬಿಟ್ಟೋಡಿ ಪೋಗಲಲ್ಲಿಗೆ ಮತ್ತಗಜಂ ಪರಿತಂದು ಬಲವಂದು ನಿಂದು ಗುಡಿಗಟ್ಟಿ ಪೊಡಮಟ್ಟು ಪೋದುದು (ಸಂಬಿರ. ೨-೯೨). ೩. ಸುತ್ತುಗಟ್ಟು; ಸುತ್ತಲೂ ಆವರಿಸು; ಒಟ್ಟಿಗೆ ಸೇರು: ದೂತರ ತರೆ ಬಂದ ಸಬ್ಬವದ ಮಾತುಗಳಂ ಗುಡಿಗಟ್ಟಿ ಕೇಳರೇ (ಶಂಪಭಾ. ೪-೧೧೦); ಸುರರು ಗುಡಿಗಟ್ಟಿದರು ಮುತ್ತಿದ ತರುಚರರು ಹಿಮ್ಮೆಟ್ಟಿದರು (ತೊರರಾ. ೬-೩-೮); ಸಲೆ ಪ್ರಾಣಲಿಂಗ ಸಂಬಂಧಿಯಂ ಮಾಡಿ ಮತ್ತೊಲಿದು ನಿಜಸುಖಮಿತ್ತು ಪೋಗಲಾತನ ಮಂತ್ರಿಕುಲಮಿರದೆ ಗುಡಿಗಟ್ಟಿ ಮಿಗೆ ಸಮಾಧಿಸ್ಥಿತನ ಮಾಡಿ ಪೋಗಲ್ಕೆ (ಚಬಪು. ೫೭-೬೫); ಶರಣರು ಅಲ್ಲಲ್ಲಿ ಗುಡಿಗಟ್ಟಿದರು (ಛಕ್ರ.ಬ. ೯೯). ೪. ಕೂಡಿಸಿ ಕಟ್ಟು: ಕೆದರಿದ ಕೇಶಪಾಶಗಳ ಗುಡಿಗಟ್ಟಿ ಮುಖ ವಿಧುಂತುದಗೆ ಕಾಣಿಕೆಯಿತ್ತ ತೆರದಿ ಕೋಪಾಗಾರಮಂ ತಡೆಯದೊಳಪೊಕ್ಕು (ಹಂಶಾರಾ. ೨-೫-೨೯). ಗುಡಿಕಟ್ಟು₁: ೩. ಗಿಡಗಿಡದ ಕಳಿತ ಪಕ್ಷಿಗಳೆಲ್ಲ ನೋಡುತಲಿ ಹಿಡಿದು ಜೇನುತುಪ್ಪ ತಂದು ಬಾಯಿವಳಗ ಹಾಕಿ ಗುಡಿಕಟ್ಟಿ ನಿಂತವು ಬಿಸಿಲು ಬೀಳದೆ ಶಿಶುವಿಗೆ (ಕರ್ಜಾಗೀ. ೨೯೪). [ಗುಡಿ₁ + ಕಟ್ಟು₁]

**ಗುಡಿಗಟ್ಟು₂**, ಗುಡಿಕಟ್ಟು₂ (ಕ್ರಿ). ೧. ಬಾವುಟವನ್ನು ಕಟ್ಟು; ಧ್ವಜವನ್ನು ಏರಿಸು: ನೀರದಪಥದೊಳ್ ತಗುಳ್ದರಿಗನಂ ಪೊಗಟ್ಟಾಡಿದನಂದು ದಂಡಕಾಷ್ಠದ ತುದಿಯೊಳ್ ಪಳಂಚಲೆಯ ಕೋವಣಮಂ ಗುಡಿಗಟ್ಟಿ ವಾರದಂ (ಶಂಪಭಾ. ೧೨-೨೦೯); ಗುಡಿಗಟ್ಟುವ ಪೌರಜನದಿಂ ಗಳಿಗೆವಟ್ಟಲ ನಾರ್ಮೈವ ಜೋಯಿಸರಿಂ (ರಾ ಜ ಶೇ. ೮-೩ ಪ); ಸಮಾಜದ ಮನಸ್ಸಿನಲ್ಲಿ ಮಾತಿನಲ್ಲಿ ಮಾಡಿಕೆಯಲ್ಲಿ ಅವನ ಕೀರ್ತಿ ಗುಡಿಗಟ್ಟುತ್ತಿತ್ತು (ನಾಡೋಜ. ೦೨). ೨. ಮೈಗೂದಲು ನಿಮಿರು; ನವಿರೇರು; ರೋಮಾಂಚನವಾಗು: ಮಹೇಂದ್ರನು ಮಾಡುವ ಸತ್ಕಾರಮನಱಿಸಿ ನೋಡಿ ಪ್ರಹ್ಲಾದಂ ದೇಹದೊಳಗೆ ಗುಡಿಗಟ್ಟ ತಳೆದನು ಪ್ರಹ್ಲಾದನೆಂಬ ನಾಮಮನು (ಅಂಜಚ. ೫-೦೪): ಪುಳಕಂ ಸಂದಣಿಸಿ ತನುವಿನೊಳ್ ಗುಡಿಗಟ್ಟಿ ಜೆಮರ್ವನಿಗಳಿಂದಂಗ ಯಷ್ಟಿ ತೊಪ್ಪನೆ ತೋಯೆ (ಪದ್ಮರಾ. ೬-೨೪). ೩. ಎದ್ದುನಿಲ್ಲು; ನೆಟ್ಟಗಾಗು: ನಿಟ್ಟಸಲಕ್ಷಿಯು ಬೆಂಡೆದ್ದು ನವಿರ್ಗುಡಿಗಟ್ಟಿತು (ಹೋಹಕ. ೦೦-೪೨). ೪. ಸಂತೋಷಗೊಳ್ಳು; ಉತ್ಸಾಹಗೊಳ್ಳು: ಉರಿವರ್ದೆಯಾಟಿ ಚಿಂತಿಪ ಮನಂ ಗುಡಿಗಟ್ಟಿ . . . ಸೈಪಿನೊಳಿಂತನೆಗೀಗಳೀ ವನಾಂತರದೊಳೆ ಕಾಣಲಕ್ಕುಮೊ ಮಱಿಯ ಮನೋರಥ ಜನ್ಮಭೂಮಿಯಂ (ಶಂಪಭಾ. ೫-೦೪); ಅಂತಱುವೆ ಚಂದ್ರೋದ [ಯೋಲ್ಲಸಿತ]ಯುಮ್ಮದಧಿವೇಲೆಯಂತೆ ಸಮಕರಧ್ವಜೆಯಾಗಿ ಮನದೊಳಗೆ ಗುಡಿಗಟ್ಟಿ ಮಹಾಶ್ವೇತೆಯಲ್ಲಿಗೆ ಪೋದಪ್ಪೆಂ (ಕಾದಂಊ. ೫೮೨); ಹಂಜರ ಬಲ್ಲಿತ್ತೆಂದು ಅಂಜದೆ ಓದುವ ಗಿಳಿಯೇ ಎಂದೆಂದು ಅಳಿಯೆನೆಂದು ಗುಡಿಗಟ್ಟದೆಯಲ್ಲಾ (ಬಸವ. ೦೬೩); ಮನದೊಳಗೆ ಗುಡಿಗಟ್ಟದನು ಮಾನಿನಿಯ ಕರುಣಾಪಾಂಗ ರಸಭಾಜನವು ಪುಣ್ಯಮಲಾಯೆನುತ ಬೀಳ್ಕೊಂಡನಗ್ರಜೆಯ (ಕುವ್ಯಾ. ವಿ. ೨-೯೯). ಗುಡಿಕಟ್ಟು₂: ೧. ಉತ್ತರೀಯಮವಸನದಿಂ ಗಾಡಿಕಟ್ಟಿಕೊಂಡತಿ ತ್ವರಿತಗತಿಯಿಂ ಪೋಗೆ (ಕುಸುಮಾ. ೦೫-೯೩ ಪ). ೪. ಹಾರುವೆನಯ್ಯಾ ಭಕ್ತರ ಬರವ ಗುಡಿಕ[ಪಾಠಾಂ. ಗ]ಟ್ಟಿ (ಬಸವ. ೭೦೫). [ಗುಡಿ₂ + ಕಟ್ಟು₁]

**ಗುಡಿಗಟ್ಟು₃**, ಗುಡಿಕಟ್ಟು₃ (ಕ್ರಿ). ೧. ದೇವಸ್ಥಾನವನ್ನು ನಿರ್ಮಿಸು: ನಿನ್ನ ಸೀಳಿದ ಹೋಳೆ ನಾಳೆ ಗುಡಿಗಟ್ಟುವುವು ಇಂದಿನೀ ನಿನ್ನ ಸೆರೆಗೆ (ದ್ರಾಕ್ಷಿದಾ. ೬೫-೫). ೨. ದೃಢವಾಗು: ತಮ್ಮ ನುಡಿ ಗುಡಿಗಟ್ಟಿದರೆ ಸರಿ ಜಗವೆ ನೀನೆಂದಂತೆ (ಹ್ಯದಸ. ೪೬-೭). ಗುಡಿಕಟ್ಟು₃: ೧. ಭರತಭೂಮಿಯಾರಿಗಾಗಿ ಗುಡಿಕಟ್ಟಿ ಪುನಃ ಪುನಃ ಪೂಜಿಸಬೇಕೋ ಆ ದೇವಿಯರಿಬ್ಬರು– ಹಿಮಗಿರಿಯ 'ಗೌರಿ'; ವಾಲ್ಮೀಕಿಯ 'ಸೀತೆ' (ಧರ್ಮಸಾ. ೭೮). ೩. ಬಣ್ಣವನ್ನು ಬಳಿ: "ಗುಡಿಕಟ್ಟು (ಗುಡಿ + ಕಟ್ಟು) – ವರ್ಣಪೂರರೇಖಾಯಾಂ (ಕುಂಡಲೀಕರಣಂ)" (ಶಮಧಾ). [ಗುಡಿ₃ + ಕಟ್ಟು₁]

**ಗುಡಿಗಟ್ಟು₄** (ನಾ). ಗುಡಿಯಂ ರಚನೆ; ದೇವಸ್ಥಾನದ ನಿರ್ಮಾಣ: ಇನ್ನಿಡಿಕಿಱಿದ ಗುಡಿಗಟ್ಟುಗಳನು ದೇವಾಲಯದ ಗಡಣಗಳನು (ಶೀವಂ. ೫-೫). [ಗುಡಿ₃ + ಕಟ್ಟು₂]

**ಗುಡಿಗಾರ**, ಗುಡಿಕಾರ (ನಾ). ೧. ಮರದಿಂದ ಬೊಂಬೆ ಮೊದಲಾದ ಕೆತ್ತನೆ ಕೆಲಸವನ್ನು ಮಾಡುವವನು: ಸೊರಬ ಸಾಗರದ ಗುಡಿಗಾರರು ಕೆತ್ತುವ ಶ್ರೀಗಂಧದ ಮತ್ತು ದಂತದ ಸಣ್ಣಸಣ್ಣ ವಿಗ್ರಹಗಳು ಸಣ್ಣ ಪ್ರಮಾಣದಲ್ಲಿ ಸುಂದರವೆನಿಸಿಕೊಳ್ಳುತ್ತವೆ (ಮೈವಾಸ್ತು. ೫೩). ೨. ಬಣ್ಣ ಹಾಕುವವನು: ಇಷ್ಟು, ಗುಡಿಗಾರ ಬರೆಯುವುದಾದರೆ ಬರೆಯಬಹುದಾದ ಪಾಟಾಳಿ ಪರಮಯ್ಯನ ಚಿತ್ರ (ಹಹಸ. ೯೫); ಗುಡಿಕಾರ: ೧. ಚಿತ್ರಕಾರನ ವರ್ಣವೈಶಿಷ್ಟ್ಯವನ್ನು, ಗುಡಿಕಾರನ ಹಸ್ತಚಳಕವನ್ನು, ಶಿಲ್ಪಿಯ ಪ್ರತಿಸೃಷ್ಟಿ ಸಾಮರ್ಥ್ಯವನ್ನು ಕಾಣಬಹುದು (ಜಪೇಪ. ೯೯).

[ಗುಡಿ₃ + – ಕಾರ₁ (< – ಕಾಱ)]

**ಗುಡಿಗಿ** (ನಾ). = ಗಂಡಿಗಿಚಲ್ಲಣ; "ಉದ್ದ ಸಣ್ಣಾದ ಚೊಣ್ಣ" (ಜಾನಕೋ. ೪೯). [← ಹಿಂ. ಗಂಡಗೀ; ಮರಾ. ಗಂಡಘೀ]

**ಗುಡಿಗಿಚಣ್ಣ** 'ಗುಡಿಗಿಚಲ್ಲಣ' ನೋ.

**ಗುಡಿಗಿಚಲ್ಲಣ**, ಗುಡಿಗಿಚಣ್ಣ, ಗುಳಗಿಚಣ್ಣ, ಗುಳಗಿಚೊಣ್ಣ (ನಾ). ಮೊಳಕಾಲಿನವರೆಗೆ ಇರುವ ಚಲ್ಲಣ: ಅಮರಾವತಿ ಮತ್ತು ನಾಗಾರ್ಜುನಕೊಂಡದ ಕೆತ್ತನೆಯ ಕೆಲಸಗಳಲ್ಲಿ ಕೆಲವರು ಪುರುಷರು ಗುಡಿಗಿಚಲ್ಲಣಗಳನ್ನೂ ಅಂಗಿಗಳನ್ನೂ ಧರಿಸಿದ್ದಂತೆ ಕಾಣಿಸಲಾಗಿದೆ (ದಭಾಇ. ೫೭). ಗುಡಿಗಿಚಣ್ಣ: (ಠ). ಗುಳಗಿಚಣ್ಣ: ಗಂಡು ಉಡಗರಿ ಉಟ್ಟು ಗುಂಡಿ ಮುಂಡಾಸ ಸುತ್ತಿ, ಗುಳಗಿಚಣ್ಣಾವ ತೊಡಬೇಕ (ಕೋಳಗೀ. ೨೨೦). ಗುಳಗಿಚೊಣ್ಣ: ಗುಳಗಿಚೊಣ್ಣದವರು ಗುಂಡೀ ಮುಂಡಾಸದವರು (ಕೋಳಗೀ. ೨೦೨). [ಗುಡಿಗಿ + ಚಲ್ಲಣ]

**ಗುಡಿಗುಂಡಾರ** 'ಗುಡಿಗೂಡಾರ' ನೋ.

**ಗುಡಿಗುಡಿ** 'ಗುಡುಂಗುಡಿ' ನೋ.

**ಗುಡಿಗುಮ್ಮ₁** (ನಾ). (ಕರಾ) ಮುಸುಕು ಹಾಕಿಕೊಂಡು ಬರುವ ಗುಮ್ಮ. [ಗುಡಿ₄ + ಗುಮ್ಮ₁]

**ಗುಡಿಗುಮ್ಮ₂** (ನಾ). ಒಂದು ಜಾತಿಯ ಪ್ರಾಣಿ: ನರಿ ಬೆಕ್ಕು ಗುಡಿಗುಮ್ಮ ಕರಡಿ ಸಾರಂಗವು (ಏಬಕಾ. ೦೨೦-೦೦). [?]

**ಗುಡಿಗೂಡಾರ**, ಗುಡಿಗುಂಡಾರ (ನಾ). ಗುಡಿಸಲು; ಗುಡಾರ: ಪುರದೊಳಗೆ ಹೇರಾಳ ಹಬ್ಬದ ಹರಹಿನಲಿ ಬೀಡಾರ ಭಿಕ್ಷಾಚರಿತರಿಗೆ ದೊರಕುವುದೆ ಗುಡಿಗೂಡಾರ ಸಂತತಿಗೆ (ಕುವ್ಯಾ. ಅ. ೦೨-೬). ಗುಡಿಗುಂಡಾರ: ಬಿಚ್ಚಿ ಗುಡಿಗುಂಡಾರವನು ಕಣೆಯ ಕೇಳಿರೊ (ಏಬಕಾ. ೦೯೩-೫೩); ಅಲ್ಲಿ ಗುಡಿಗುಂಡಾರ, ಪತಾಕ ಪಲ್ಲಕ್ಕಿ, ಮಿಾನ, ಮೊಸಳೆ ಇರಬಹುದು (ನಿಠಾಳ. ೦೬೯); ಗುಡಿಗುಂಡಾರಗಳು ಜನರಿಂದ ತುಂಬಿಹೋಗಿದ್ದವು (ದ್ರಥನಿ. ೪); ಬಹುತರ ಹಾಳುದೇವಾಲಯ, ಸಾರ್ವಜನಿಕ ಗುಡಿ–ಗುಂಡಾರಗಳೇ ವಸತಿಸ್ಥಾನಗಳಾಗಿರುತ್ತಿದ್ದವು (ಶಲಾಕ. ೬೦).

[ಗುಡಿ₃ + ಗೂಡಾರ]

**ಗುಡಿಗೂಱು** 'ಗುಡುಂಗೂಱು' ನೋ.

**ಗುಡಿಗೆ** (ನಾ). ಒಂದು ಬಗೆಯ ಆಯುಧ: ಕೊಡಲಿಯೆಂದೂ ತ್ರಿಶೂಲವೆಂದೂ ವಜ್ರಮುಷ್ಟಿಯೆಂದೂ ಗದೆಯೆಂದೂ ಗುಡಿಗೆಯೆಂದೂ ನೇಗಿಲುಯೆಂದೂ . . . ಯಾ ಮೂವತ್ತೆರಡು ಆಯುಧಗಳ ಹೆಸರು (ಅದ್ಭಟಇ. ೨-೬೭).

[P ಇದು 'ಗುದಿಗೆ' ಎಂಬುದರ ಅಪಲಿಖಿತವಿರಬಹುದು]

**ಗುಡಿಗೇಱಿ** (ನಾ). ಒಂದು ಊರಿನ ಹೆಸರು. P ಈಗಿನ ಧಾರವಾಡ ಜಿಲ್ಲೆಯ ಗುಡಿಗೇರಿ: ಆನೆ ಸೆಜ್ಜೆಯ ಬಸದಿಗೆ ತಾಮ್ರಶಾಸನ

ಮರ್ಯ್ಯಾದೆಯಿಂದಾಳ್ವ ಗುಡಿಗೆಱೆಯ ಭೂಮಿಯೊಳಗೆ ಪಡುವಣಪೊಲಂ (ಇಳ. XVIII, ೩೯-೨೦ : ೩೩೩). [ ಗುಡಿ? + ಕೆಱೆ³ ]

**ಗುಡಿಗೊಳ್** (ಕ್ರಿ). (ಅಲಂ) ಹೆಸರಂವಾಸಿಯಾಗು; ಪ್ರಸಿದ್ಧವಾಗು: ನಾಡುಗಳೊಳೆಲ್ಲ ಕನ್ನಡನಾಡೆ ಮೇಲಂತೆ . . . ಅದರೊಳಗೆ ಗುಡಿಗೊಂಡ ಹಾಲುಮನೆ ಮೇಲಂತೆ (ನಡಿದಾ. I, ೯೩೩). [ ಗುಡಿ₂ + ಕೊಳ್₁ ]

**ಗುಡಿಗೊಳಿಸು** (ಕ್ರಿ). ಗುಡಿಯನ್ನಾಗಿ ಮಾಡು; ದೇವಾಲಯವನ್ನಾಗಿ ಮಾಡು: ಬಯಲನೊಂದು ಗುಡಿಗೊಳಿಸುತಿಹಳು ಒಳುಬಾಳ ಹರಕೆ ಎಂದು (ಸೂರ್ಯಪಾ. ೭೯-೮). [ ಗುಡಿ₃ + ಕೊಳ್₁ + – ಇಸು₃ ]

**ಗುಡಿಗೋಪುರ** (ನಾ). ಗುಡಿಯ ಗೋಪುರ; ದೇವಸ್ಥಾನದ ಶಿಖರ: ಗುಡಿಗೋಪುರಕ್ಕು ಬಲೆ ಬೀಸಿ ಬಂದ ಅಗೊ ಬೆಳಕು ಬೇಟೆಗಾರ (ಮುಕ್ತಕಂ. ೨೯-೪) ; ದೂರದೇಶದ ಯಾತ್ರಿಕರು . . . ಕಂಡ ಗುಡಿಗೋಪುರಕೆ ಕೈಮುಗಿಯುತ್ತ ಅಲ್ಲಿಯೆ ನಿಂದರು (ನೆಲಮು. ೧೧-೦೨). [ ಗುಡಿ₃ + ಗೋಪುರ ]

**ಗುಡಿಚಾಪೆ** (ನಾ). (ಉಕ) ಗುಡಿಸಲು, ಚಾಪೆ ಮೊದಲಾದ ಎಲ್ಲ ಇದ್ದ ಬಿದ್ದ ಸಾಮಾನು.

**ಗುಡಚಾಪೆಕಟ್ಟಿಸು**=ಗಂಟುಮೂಟೆಸಹಿತವಾಗಿ ಸ್ಥಳ ಬಿಟ್ಟು ಹೊರಡುವಂತೆ ಮಾಡು: ಉರಿಯೋ ಕಟಗೀ ಮ್ಯಾಲ ನನ್ನ ಹಾಕಿ ಸುಟ್ಟರ ಕೊಳ್ಳಿದೆವ್ವಾಗಿ ಜನ್ಮಜನ್ಮಾಂತರದೊಳಗ ನಿನ್ನ ಗುಡಚಾಪಿಕಟ್ಟಿ ಸತೇನಿ (ಸಮಜೀ. ೨೦೩). **ಗುಡಚಾಪೆಕಟ್ಟು** = ಗುಡಿಚಾಪೆಕಿತ್ತು: ಇನ್ನೇನು ಆರೇಳು ತಿಂಗಳಾದಾಗ ಅವರು ಗುಡಚಾಪಿಕಟ್ಟಿಕೊಂಡ ಹೊರಡಬೇಕಾಗ್ತಿ ನಮ್ಮ ದೇಶಾ ಬಿಟ್ಟು (ಮೂಡಿಮ. ೬೦). **ಗುಡಿಚಾಪೆಕಿತ್ತು**=ಗಂಟುಮೂಟೆ ಸಹಿತವಾಗಿ ಸ್ಥಳಬಿಟ್ಟು ಹೊರಡು; ಕಂಬಿಕೀಳು; ಎತ್ತಂಗಡಿ ಮಾಡು: ಈ ಊರನ್ನೇ ಬಿಟ್ಟು ಗುಡಿಚಾಪೆಕಿತ್ತಿದ್ದೇವೆ (ಅನಸಾ. ೩೬). [ ಗುಡಿ₃ + ಚಾಪೆ ]

**ಗುಡಿದುಂಬಿಸು** (ಕ್ರಿ). ಉತ್ಸವಕ್ಕೆ ಹೋದ ದೇವರನ್ನು ಗುಡಿಗೆ ಕರೆದುಕೊಂಡು ಬರು,–ಪ್ರವೇಶಮಾಡಿಸು: ವಾದ್ಯಸಮೇತ ವೈಭವಯುತವಾದ ಮೆರವಣಿಗೆಯಲ್ಲಿ ವಿಗ್ರಹವನ್ನು ತಂದು ಗುಡಿದುಂಬಿಸುತ್ತಾರೆ (ಪ್ರವಾಇ. I, ೪೧೧). 'ಮನೆದುಂಬಿಸು' ಪರಾ. [ ಗುಡಿ₃ + ತುಂಬಿಸು ]

**ಗುಡಿದೇವ** (ನಾ). ದೇವಾಲಯದಲ್ಲಿರುವ ದೇವರು: ಬಾಲದುದಿ ಸುಟ್ಟ ಕಪಿ ಹನುಮ ಗುಡಿದೇವನೈ (ಕಪಹು. ೯೩-೯). [ ಗುಡಿ₃ + ದೇವ ]

**ಗುಡಿಪಾಡವ** 'ಗುಡಿಪಾಡಿವ' ನೋ.

**ಗುಡಿಪಾಡಿವ**, ಗುಡಿಪಾಡವ (ನಾ). ಮನೆಯ ಮುಂದೆ ಕಂಬವನ್ನು ನೆಟ್ಟು ಬಾವುಟ ಕಟ್ಟುವ ಪಾಡ್ಯ; ಚೈತ್ರಶುದ್ಧಪಾಡ್ಯ; ಯುಗಾದಿ ಪ್ರತಿಪದೆ: ಉತ್ತರಕರ್ನಾಟಕದಲ್ಲಿ ಗುಡಿಪಾಡಿವ ಹೆಚ್ಚು ಬಳಕೆಯಲ್ಲಿದೆ (ರೂಢಿ). **ಗುಡಿಪಾಡವ**: ಉಗಾದಿ ಪ್ರತಿಪದೆ ಇಂದು. 'ಗುಡಿಪಾಡವಾ' ಹಿಂದೂಜನರ ಹೊಸವರುಷ ಪ್ರಾರಂಭದ ದಿನವಿದು (ಸ್ವಪ್ನದ. ೦೦೯). [ಗುಡಿ₂ + ಪಾಡಿವ ]

**ಗುಡಿಬಳಸು** (ನಾ). ದೇವಾಲಯದ ಸುತ್ತುವಳಯ: ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥವೆಡೆಗೊಂಡಿತೀ ಕಬ್ಬದೊಳಗೆ (ಮಲೆದೇ. ೩೯-೩). [ ಗುಡಿ₃ + ಬಳಸು₂ ]

**ಗುಡಿಬಿಡು** (ಕ್ರಿ). ಗುಡಾರವನ್ನು ಹಾಕಿ ಇಳಿದುಕೊಳ್ಳು; ಡೇರೆಹಾಕು; ಬಿಡಾರ ಮಾಡು: ಕೆಸವ ಮರಿವಸೆ ಸೀಮೆಯಲು ಗುಡಿಬಿಟ್ಟಿದ್ದಲ್ಲಿ ಕೆಸವಯದೇವಂಗೆ ಬಿಟ್ಟ ಮಣ್ಣು (ಮೈಆರಿ. ೦೯೩೯, ೪೩-೬ : 12 ನೆಯ ಶತ ?). [ ಗುಡಿ₃ + ಬಿಡು₁ ]

**ಗುಡಿಮೊನೆ** (ನಾ). ದೇವಸ್ಥಾನದ ಕಲಶ; ಗೋಪುರದ ಶಿಖರ: ಕಾಣು ವನಿತೇ ಪೂರ್ಣಮೆಂಬ ತೆರದಿ ನೆಲದುಬ್ಬನೀ ಮಲೆಯ ತಲೆಯ ಗುಡಿಮೊನೆಯಿಂದ (ಮಲೆದೇ. ೩೨-೩). [ ಗುಡಿ₃ + ಮೊನೆ₁ ]

**ಗುಡಿಯಿಸು**, ಗುಡಿಸು₁, ಗೂಡಿಸು, ಘೂಡಿಸು (ಕ್ರಿ). ೧. ರಾಶಿಹಾಕು; ಒಟ್ಟಿಗೆ ಸೇರಿಸು: "ಗುಡಿಯಿಸು (ಗುಡಿಸು) –ಪುಂಜೀಕರಣೇ" (ಶಮುಧಾ). **ಗುಡಿಸು₁**: ೧. ಮತ್ತಮಾಸ್ಥಾನಮೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದು ಗುಡಿಸಿದ ರತ್ನರಾಸಿಗಳೆಂಬಂತೆ ಮಣಿನಿಕರಖಚಿತಮಕುಟಕೋಟಿಗಳ್ ಮೆಱೆಯೆ (ರಾಶಿ. ೨-೦೦೩ ವ); ಅವನಿಯಲಿ ಗುಡಿಸಿ ದೀಪಿಸುವನಿತು ದಿವ್ಯಾಂಬರವಿತಾನವನೊಯ್ದು ಬಳೆಗಿತ್ತ (ಬಸವು. ೦೦-೩೯); ಕಡಿಕುಗಳನಾಯ್ದುಱಸಿ ರಥದೊಳು ಗುಡಿಸಿ (ಕುಮ್ಯಾದ್ರೋ. ೦೯-೩). ೨. ಕಸಪೊರಕೆಯಿಂದ ಕಸವನ್ನು ಉಡುಗು, – ಬಳಿ: ಕಸಂಗಳನಿರದೆ ಗುಡಿಪ ಕೂಲಿಗಳವರ್ (ಚಿಬಪು. ೪೬-೯೨); ಸಾಮಾನುಗಳನ್ನು ತರುವ ಹಿಂದಿನ ದಿನ ಉಗ್ರಾಣವನ್ನು ಚೆನ್ನಾಗಿ ಗುಡಿಸಿ ಚೊಕ್ಕಟಮಾಡಬೇಕು (ಅಡುಸಾ. ೦೨೪). ೩. ಕೆಡಿಸು; ನಾಶಮಾಡು: ಮೂರೂರು ಕುನ್ನಾಡಿಯು ನೆಟಲ ಗುಡಿಸಿದ ತ್ರೈಲೋಕ್ಯವೀರಕೆ ಕೊಟ್ಟ ಮಣ್ಣು ಇರ್ಪಿಣ್ನಾಗ (ಎಕ. IX, ಬೆಂಗಳೂ. ೪೦-೯ : ಸು. 820). **ಗೂಡಿಸು**: ೧. ಜನ್ಮದಿಂ ಜನ್ಮಕ್ಕೆ ಉದುಗಿ ಗೂಡಿಸಿ ತಂದ ತೊಡಕುಗಳ ಮಾಲೆ ನಮ್ಮೆದೆಯಲ್ಲಿ ಜೋಲಾಡುತಿವೆ (ಉಯ್ಯಾಲೆ. ೭೯-೩). ೨. ಆ ಮನುಷ್ಯ ಗುಡ್ಡಗಳು ಅಡ್ಡಬಂದರೂ, ಅವನ್ನು ಕಸಗೂಡಿಸಿದಂತೆ ಗೂಡಿಸಿಕೊಂಡು ಮುಂದೆ ಸಾಗಬಲ್ಲ (ವಿಜಾಮುಂ. ೯೭). **ಘೂಡಿಸು**: ೨. ಮಾಳಿಯ ಮದಿಗೊಂಡ ಗೌಡಾರು ತರಗ ಘೂಡಿಸಿ ಕಟಿದರು (ಎಕ. XI, ಹೊಳಲ್ಕೆ. ೭೬-೮; ?). 'ಉಡುಂಗು₂' ಪರಾ. [ <ಉಡುಗಿಸು₂ ]

**ಗುಡಿಯಿಱು₁** (ಕ್ರಿ). ರಾಶಿಯಾಗು; ಸಮೂಹವಾಗು; ದಟ್ಟೈಸು: ಪಡೆದರ್ದೇವತೆಯರ್ ಮಿಗೆ ಕಡುಮುಳಿಸಿಂದುರಿದು ದಹನಶಿಖಿಗಳ ಪೊಗೆಯಂ ಪಡೆವಂತೆ ಪತ್ತುದೆಸೆಗಂ ಗುಡಿಯಿ[ಪಾಠಾಂ. ೧]ಱಿದಂತಾಗೆ ನೀಳಮೇಘಾವಳಿಯಂ (ಅರ್ಧನೇ. ೮-೬); ಬೆಟ್ಟದ ಹೊರಗೆ ನಡೆತರಲಭ್ರದಲಿ ಗುಡಿಯಱಿದು ಮಱುದುದು ಮೇಘ ಮಿಂಚಿದುದಖಿಳ ದೆಸೆದೆಸೆಗೆ (ಕುಮ್ಯಾಅ.೯-೨೦); ಜಲಧಿಯಡಿಮುಳಲೆತ್ತುತಿರ್ದುದು ಗುಮ್ಮಿಱಿದು ಗುಡಿಯಱಿದು ಗುಳ್ಳೆಗಳು (ಕೂರರಾ. ೪-೧೬೩-೨೪). [ ಗುಡಿ₁ + ಇಱು₂ ]

**ಗುಡಿಯಿಱು₂** (ಕ್ರಿ). ನಿಮಿರು; ನೆಟ್ಟಗೆ ನಿಲ್ಲು: ಜಡಿದ ಶೌರ್ಯದ ಮೃಗಗಳುಬ್ಬಿನ ಗುಡಿಯಱಿ[ಪಾಠಾಂ.ಡಿ]ದ ರೋಮಾಳಿ ರಿವುಗಳ ಕಡಿದ ಕಂಗಳ ಸುಭಟರೆಚ್ಚಾಡಿದರು ಚಳಕದಲಿ (ಕುಮ್ಯಾಕ. ೨೩-೪). [ ಗುಡಿ₂ + ಇಱು₂ ]

**ಗುಡಿಲ್**, ಗುಡಲು, ಗುಡಿಲು, ಗುಡುಲು (ನಾ). ತೆಂಗಿನ ಗರಿ, ಹುಲ್ಲು ಮೊದಲಾದುವನ್ನು ಹೊದಿಸಿದ ವಾಸಸ್ಥಾನ; ಜೋಪಡಿ; ಗುಡಿಸಿಲು: ಕಮ್ಮುಳ್ಳರಂತೆ ಮೇಲೆತ್ತುವ ಶ್ವಾಸಮುಂ ಗುಡಿಲಂತೆ ಬಾಗಿದ ಬೆನ್ನುಂ (ಧರ್ಮಾಮೃ. ೪-೭೩); ಸಂತೆಯ ಗುಡಿಲ[ಪಾಠಾಂ. ಸಲ] ಸೂಳೆಗೆ ಕೊಂತವಳೆವಡುವುದೆ (ಬಸವ. ೦೦೦); ಚೆನ್ನಯ್ಯನಿಪ್ಪ ಗುಡಿಲಿದೆಯೆಂದು ತೋಱುತಿರೆ (ಚನ್ನರ. ೬೩-೦೨); ಗುಡಿಲಂ ಹಿರಿಹಿರಿದು ಧಿಕ್ಕನೆ ಸುಡಲು (ಬಸವು. ೨೬-೪೮). **ಗುಡಲು**: ಹೆಣದಱುವೆಯ ಕಳೆಕೊಂಡು ಬಂದು ಸಾರಿದ ತನ್ನ ಗುಡಲ ಕಂಡಗೆ ಈ ವಿಧಿಯಾಯಿತೆ ಶಿವ ಎಂದು ಬಂದಳು ಸುಡುಗಾಡ ಕಳಿದು (ಹರಿಸಾಂ. ೪-೭೯): ದೇವರೆ, ಅಂತ ಎತ್ತಿಕೊಂಡು ಗುಡಲತ್ತ ಹೊಂಟೆ (ಚಿಕರಾ. ೩೨೮). **ಗುಡಿಲು**: ಬೇಸಱದೆ ಹುಲುಗುಡಿಲನಿಕ್ಕುವೆ[ಪಾಠಾಂ. ಸಲಿಕ್ಕುವೆ] (ಬಸವು. ೦೮-೬): ಪುದಿದ ಮಲಮೂತ್ರಾದಿ ಭಾಂಡಗಳೊಡವಿಯಾದಾ ಪುರಂಪದೇಹದ ಬಿದಿರ ಗುಡಿ

ರಿಗೆ ಮಾಱುವೋದನೆನುತ್ತ ಮಱುಗಿದಳು (ನಿಘಾಗ. ೧೦-೧೩-೦೬) : ಬಳಲಿದ್ದೈ ಭೂಪ ನಡೆ ನಿನಗೆ ನಾಂ ಭುಕ್ತಿಯಂ ಸಲಿಸುವೆನೆನುತ್ತ ಗಂಡಿಲಿಂಗೆ ಕರೆತಂದು (ಜಬಪು. ೫೨-೪೪) : ಬಿಸಿಲು ಬೇಡವೆನೆ ಮರಗಳ ನೆರಳು, ಮಳೆ ಗಂಜದನೇ ಕಾಡಿನ ಗುಡಿಲು (ಕುನೀಕ. ೦-೦೦) : ಸೂರ್ಯಸದನಕೆ ಧಾವಿಸಿದ ಮನ ವೇಗಶಕ್ತಿಯನಿಳಿಸಲಾಗದೆ ತಿರುಗಿ ಗುಡಿಲಿಗೆ ಹಾರಿದೆ ಮೂಲೆ ಗತ್ತಲ ಸೇರಿದೆ (ಹೂಹಾದಿ. ೨೯-೩). ಗುಡುಲು : ಒಡನೆ ಪುರುಷ ಮಾತ್ರ ಸೋಂಕದಿದ್ದರೆ ತನ್ನ ಗುಡುಲಿಗೆ ಕಿಚ್ಚನಿಕ್ಕುವೆನು (ಅಮುಸಾಂ. ೩-೧೦೮).

[ ದೇಶ ತಮಿ. ಮಲ. ಕುಡಿಲ್ ]

**ಗುಡಿಲು** ' ಗಂಡಿಲ್ ' ನೋ.

**ಗುಡಿವಣ** (ನಾ). ದೇವಸ್ಥಾನಕ್ಕಾಗಿ ಕೊಡುವ ಹಣ, – ಕಾಣಿಕೆ (?) : ಹಲರು ಕೂಡಿಕೊಟ್ಟುದು ಗುಡಿವಣ ಗಾಣದಲ್ಲಿ ಧಾರೆಯಣ್ಣೆ (ಎಕ. XII, ಪಾವುಗ. ೫೨-೬೦ : 1232). [ ಗಂಡಿ$_3$ + ಪಣ$_1$ ]

**ಗುಡಿವಿಡಿ** (ಕ್ರಿ). ಬಾವುಟವನ್ನು ಎತ್ತಿಹಿಡಿ ; ಧ್ವಜವನ್ನು ಹಿಡಿ : ಗುಡಿ ವಿಡಿದು ಪಾಡುತ್ತ ಕುಣಿಯುತ ಝಾಡಿತೆಯುಲಿ ನಲಿದಾಡುತಿರ್ದುದು ಶಾಕಿನೀ ನಿವಹ (ಕೋಗಯು. ೨೩-೪). [ ಗುಡಿ$_2$ + ಹಿಡಿ$_1$ (< ಪಿಡಿ$_1$) ]

**ಗುಡಿವಿಡಿಸು** (ಕ್ರಿ). ಬಾವುಟವನ್ನು ಎತ್ತಿಹಿಡಿಯುವಂತೆ ಮಾಡು ; ಧ್ವಜವನ್ನು ಏರಿಸು : ಅಂತು ವಿಜಯಂ . . . ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಜಾಳಿಸಿ ಗಾಂಧರ್ವರಂ ವಿರಥರ್ ಮಾಡಿ (ಶಂಪಥಾ. ೬-೨೯ ವ). [ ಗುಡಿವಿಡಿ + – ಇಸು$_3$ ]

**ಗುಡಿವೃತ್ತ** (ನಾ). ಒಂದು ಬಗೆಯ ಆದಾಯ (?) : ಕಾಮೆಯದಂಣ್ಣಾಯ್ಯರ ಹೊದಕೆಪೂರ್ಬ್ಬಾಯ ಅಪೂರ್ಬ್ಬಯ ಗುಡಿವೃತ್ತಂ ಮದೆ ಮನೆ ೧ ಕ x x ತಿ ಗ (ಎಕ. XIV, ಕೃಷ್ಣರಾ. ೨೮-೨೩ : ?) [ ? ]

**ಗುಡಿವೊಗಿಸು** (ಕ್ರಿ). ದೇವಾಲಯಂಕ್ಕೆ ಪ್ರವೇಶಮಾಡಿಸು,–ಹೊಗಿಸು : ಭಕ್ತನಂ ಕಂಡು ಭಯಂಬಡುತೆ ಕಂದೆಗೆದಾ ತಮ್ಮಡಿಗಳ್ಗುಡಿವೊಗಿಸಿ ಪೋಗಲ್ (ಉದ್ಭಟ. ೧೦-೬೨). [ ಗುಡಿ$_3$ + ಪೊಗಿಸು ]

**ಗುಡಿವೊಱಿಸು** (ಕ್ರಿ). ಬಾವುಟವನ್ನು ಹೊರುವಂತೆ ಮಾಡು ; ಧ್ವಜವನ್ನು ಹೊರಿಸು : ಪಡೆ ನೋಡಲ್ ಬಂದವರಂ ಗುಡಿವೊಱಿಸಿದರೆಂಬುದಾಯ್ತು ನಿನ್ನನ್ನೆಡೆಯೊಳ್ (ಶಂಪಥಾ. ೩-೧೩). [ ಗುಡಿ$_3$ + ಪೊಱಿಸು ]

**ಗುಡಿವ್ರಜ** (ನಾ). ಗುಡಾರಗಳ ಗುಂಪು : ನೃಪಾಲಕರ ಗುಡಿವ್ರಜಮೊಲ್ಲ ಬೆಳ್ಳಿ ಪೇರ್ಗುಂಡುಗಳೋ ಯೆನೆ ಮಧ್ಯ ರಜತಾದ್ರಿಯಾಗಿ ರಾಜಿಸುತಿರ್ದುದು (ನವಮೋ. ೨೯-೬೭). [ ಗುಡಿ$_3$ + ವ್ರಜ ]

**ಗುಡಿಸಲ್** ' ಗುಡಿಸಿಲ್ ' ನೋ.

**ಗುಡಿಸಲು** ' ಗುಡಿಸಿಲ್ ' ನೋ.

**ಗುಡಿಸಿಲ್**, ಗುಡಿಸಲ್, ಗುಡಿಸಲು, ಗುಡಿಸಿಲು, ಗುಡುಸಲು (ನಾ). = ಗುಡಿಲ್ : ಗುಡಿಸಿಲ್ ಚೆಲ್ವಾಗಿಯುಂ ಮಾಳಿಗೆಯಲ್ಲದಂತೆ ಬೂತೊಳ್ಳಿದನಾಗಿಯುಂ ಪ್ರಭುವಲ್ಲದಂತೆ (ಧರ್ಮಾಮೃ. ೦೦-೦೮೬) : ಕರುಣದಿನೊಂದು ಗುಡಿಸಿಲನೆಡಗೊಟ್ಟೊಡಲ್ಲಿರ್ದು ತಾಯುಮಾ ಗಾವುಂಡನ ಮನೆಯೊಳ್ ಬೆಸಕೆಯ್ವುದಣ್ಣಂ (ಜೀವಸಂ. ೨೦೦-೨೦). **ಗುಡಿಸಲ್** : ೧. ನೂಲ್ಗಟ್ಟ ಪೊಯ್ದು ಪೊಸಗುಡಿಸಲ್ಗಳ್ತವೆ ನಟ್ಟ ಗಟಿಗಳಿರಿಸಿದದೋಳ್ಗಳ್ . . . ಇರಲ್ಪೇಡೆಸೆದುದು (ಉದ್ಭಟ. ೩-೦೦೦) : ತನ್ನ ಮನೆಯೊಳೊಂದು ಗುಡಿಸಲಂ ಕಟ್ಟಿಕುಡಲ್ (ಪುಣ್ಯಾಸ್ರ. ೦೨-೨೦ ವ). **ಗುಡಿಸಲು** : ಇಳೆಯ ರಾಯರಿಗೊಬ್ಬ ಭೂಸುರ ಬಳಗ ತಿರಿಕನ ಮನೆಯ ಗುಡಿಸಲ ಹೊಳಲ ಬೀಡಿಕೆಯಾಯ್ತು ಯಿನ್ನೀ ಮನುಜರಳವೇನು (ಕುವ್ಯಾಅ. ಓರಿ೩. ೨೩-೦೨) : ನಮ್ಮ ಬಂಗ್ಲೆಯ ಹತ್ತಿರದಲ್ಲಿ ನಾಲ್ಕೈದು ಬಡವರ ಗುಡಿಸಲುಗಳು ಇದ್ದುವು (ಕೀಮೋದ. ೩೨). **ಗುಡಿಸಿಲು** : ಹುಲ್ಲು ಗುಡಿಸಿಲೊಳಾಗ ಮಡಗಿದ ಬಳ್ಳವಂ ತೆಗೆ ತನ್ನಿ (ಬಸಕು. ೯-೯). **ಗುಡುಸಲು** : ಬೈಲ ಗವ್ಯಾರನ ಗಂಡುಸಲೊಳಗೆ ಹೊರಟು (ಮುಂಬಯಿ. ೨-೦೮).

[ ದೇಶ ತಮಿ. ಕುಡಿಚಲ್ ; ತುಳು. ಗುಡಿಚಿಲ್, ಗುಡಿಸಲ್, ಗುಡಿಸಿಲ್ ]

**ಗುಡಿಸಿಲು** ' ಗುಡಿಸಿಲ್ ' ನೋ.

**ಗುಡಿಸು$_1$** ' ಗಂಡಿಯಿಂಸು ' ನೋ.

**ಗುಡಿಸು$_2$** (ನಾ).=ಗಂಡಿಸಿಲ್ : ಬಡಕಪ್ಪಡಿ ತನ್ನಿಪ್ಪಾ ಗುಡಿಸು ಬಲ್ಲಿತ್ತು ಮೂಟ್ಟನೆಲ್ಲಂದದಿಂ (ಸಮುಪ. ೯-೬೨).

[ ದೇಶ ತಮಿ. ಕುಡಿಚ್ಚೈ ; ತೆಲು. ಗುಡಿಸೆ ]

**ಗುಡಿಸು$_3$** ' ಗುಡುಸು ' ನೋ.

**ಗುಡಿಸೆಟ್ಟಿ**, ಗುಡಂಸೆಟ್ಟಿ (ನಾ). ನಡತೆಗೆಟ್ಟವಳು ; ಸೂಳೆ ; ಬೆಲೆವೆಣ್ಣು : " ವಿವೇಚನೆಯಿಲ್ಲದೆ, ಇತರರ ಸಂಭೋಗಕ್ಕಾಗಿ ದೇಹ ವಿಕ್ರಯ ಮಾಡಿಕೊಳ್ಳುವವಳು ; ಗುಡಿಸೆಟ್ಟಿ ; ಬೆಲೆವೆಣ್ಣು : ವಣ್ಯಾಂಗನೆ " (Prostitute. ಇಂಕನಿ). **ಗುಡುಸೆಟ್ಟಿ** : " ಕೆಲಸಕ್ಕೆ ಬಾರದ ಹೆಂಗಸು. ದಿಟ್ಟಹುಡುಗಿ ; ಗುಡುಸೆಟ್ಟಿ " (Baggage. ಇಂಕನಿ).

[ದೇಶ ತೆಲು. ಗುಡಿಸೆವೇಟು ]

**ಗುಡಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೃಶಿಗಿ. ೨೦-೩೬೨).

[ ಗುಡಿ? + ಹುಲ್ಲು (< ಪುಲ್) ]

**ಗುಡುಂಬ**, **ಗುಳಂಬ** (ನಾ). ಮಾವಿನಕಾಯಿ , ನೆಲ್ಲಿಕಾಯಿ ಮೊದಲಾದುವುಗಳಿಗೆ ಸಕ್ಕರೆ ಅಥವಾ ಬೆಲ್ಲ ಸೇರಿಸಿ ಮಾಡಿದ ಪಾಕ; ಮುರಬ್ಬ: ಕಮಲಾಬಾಯಿ ಮಾಡಿಟ್ಟಿದ್ದ ಮಾವಿನಕಾಯಿ ಗುಡುಂಬ ಅರ್ಧ ಕರಗಿ ಹೋಯಿತು (ನಟಸಾ. ೩೭೪). **ಗುಳಂಬ** : ಒಲೆಯ ಮೇಲೆ ಒಂದು ದೊಡ್ಡ ಪಾತೇಲಿಯಲ್ಲಿ ಗುಳಂಬ ಬೇಯುತ್ತಿತ್ತು (ಸ್ವಶಿಚ. ೨೫೨) : ಗುಳಂಬದ ಹುಳಿಮಿಶ್ರಿತ ಸಿಹಿರುಚಿಯು ಹುರಿದ ಬ್ರೆಡ್ಡುಗಳ ರುಚಿಯನ್ನು ಹೆಚ್ಚಿಸಿತ್ತು (ಅನ್ನದಾ. ೨೦).

[ ←ಹಿಂ. ಗುಡಂಬಾ ; ಮರಾ. ಗುಡುಂಬ, ಗುಳಂಬಾ ]

**ಗುಡುಕಲು** (ನಾ). ಒಂದು ಬಗೆಯ ಕಲ್ಲು ; ಗುಂಡುಕಲ್ಲು (?) : ಅಲಿಂದು ಪಡುವ ನಡುದು ನಟ ಗುಡುಕಲು (ಎಕ. XII, ತಿಪಟೂ. ೧೩೯-೬೭ : ?). [ ಗುಡು? + ಕಲು$_1$ (< ಕಲ್$_3$) ]

**ಗುಡುಗಾಟ** (ನಾ). ೧.=ಗುಡುಗು$_2$ ೧ : ರಾತ್ರಿಯಲ್ಲಿ ಧೋಧೋ ಮಳೆ . . . ಗುಡುಗುಗಳ ಗುಡುಗಾಟ! (ಫಲಸಂ. ೯೬). ೨. ಗುಡುಂಗುಡು ಎಂದು ಒಂದೇ ಉಸಿರಿಗೆ ಗುಡುಂಗುತ್ತಾ ಓಡುವ ಆಟ ; ಕಬಡ್ಡಿ ; ಹುತುತು : ದೈಹಿಕಶಿಕ್ಷಣಕ್ಕೆ ನೆರವಾಗುವ ಚಟುವಟಿಕೆ . . . ಗುಡುಗಾಟ (ಶಿಕ್ಷದ. ೬೮). ೩. (ಅಲಂ) ಆರ್ಭಟ ; ಸದ್ದು : ನಿನ್ನ ಪಾದದ ಗುಡುಗಾಟದಿಂದ ಕೆಂಧೂಳಿ ನೆಗೆದು ನರಲೋಕ . . . ಅಸುರಲೋಕಂಗಳು ಬೂದಿಯಲ್ಲಿ ಮುಸುಕಿದವಯ್ಯಾ (ಜನ್ನವ. ಕ. ೨೩೮-೫೦೬). [ ಗುಡುಗು$_2$ + ಆಟ ]

**ಗುಡುಗಾಡಿಸು** (ಕ್ರಿ). (ಅಲಂ) ಆರ್ಭಟಿಸು ; ಗರ್ಜಿಸು : ಬಡಗಣ ಗಡಿಗಾಪಿನವರ್ ಗುಡುಗಾಡಿಸಿ ಗೋಲಕೊಂಡ ವಿಜಯಾಪುರವುಂ ಕಡಿದು ಮರಾಟರ ಪಡೆಯುಂ ಪೊಡವಿಯ ಬಲ್ಸೊಱೆಯನಿಟ್ಟಿ ಬಣ್ಣಗೆವಡೆದರ್ (ಅಪ್ರಕ. ೨-೦೬). [ ಗುಡುಗಾಡು + – ಇಸು$_3$ ]

**ಗುಡುಗಾಡು** (ಕ್ರಿ). (ಅಲಂ) ಗಟ್ಟಿಯಾಗಿ ಮಾತನಾಡು ; ಕೂಗಾಡು: ನೀರಿಲ್ಲದ ಬರಿಯ ಮೋಡ ಗುಡುಗುವಂತೆ ಗುಡುಗಾಡಬೇಡ ! ಯುದ್ಧದಲ್ಲಿ ನಿನ್ನ ಬಲವನ್ನು ತೋರಿಸು (ವಚಥಾ. ೩೦೬) : ಗೋಪಾಲ ಒಳಗಿನಿಂದ ತನ್ನಜ್ಜಿಯೊಡನೆ ಗುಡುಗಾಡಿದ (ಒಡ್ಡಿಉ. ೦೨೪) : ಗುಡುಗಾಡೊ ಗುಡುಗಾಡೊ ಲಿಂಗವೇ ನೀ ಗುಡುಗಾಡಲೊಲ್ಲೇಕೋ ಲಿಂಗವೆ (ಅರಳು. ೩೨-೫).

[ ಗಂಡುಗು$_2$ + ಆಡು$_1$ ]

**ಗುಡುಗಿಸು** (ಕ್ರಿ). ೧. ಗುಡುಗುವಂತೆ ಮಾಡು ; ಗುಡುಂಗಾಟದಲ್ಲಿ ಸೋಲಿಸಿ ಕೂಗುವಂತೆ ಮಾಡು: ಏನ್ರೋ ನೀವು ಈ ಚಿಕ್ಕ ಹುಡುಗನನ್ನು

ಚೆನ್ನಾಗಿ ಗುಡುಗಿಸುತ್ತಿದ್ದೀರಿ (ರೂಢಿ). ೨. ವಿಜೃಂಭಣೆಯಿಂದ ನಡೆಯುವಂತೆ ಮಾಡು; ಯಶಸ್ವಿಯಾಗಿ ನೆರವೇರಿಸು: ಅವರು ಒಂದೇ ವರ್ಷದಲ್ಲಿ ಎರಡು ಮದುವೆಗಳನ್ನೂ ಗುಡುಗಿಸಿಬಿಟ್ಟರು (ರೂಢಿ).

[ ಗುಡುಗು$_2$ + – ಇಸು$_3$ ]

**ಗುಡುಗು$_1$** (ಕ್ರಿ). ೧. ಗುಡುಗುಡು ಎಂದು ಶಬ್ದಮಾಡು; ಮೇಘಧ್ವನಿಯುಂಟಾಗು: "ಸ್ತನಯತಿ–ಗುಡುಗಿದಪುದು" (ಶಾಶಕ್ಕ. ೨೮೨): ಆಗಸದಲ್ಲಿ ಗುಡುಗಿತು (ಮುಗಿಮು. ೨). ೨. ಕಬಡ್ಡಿ ಆಟದಲ್ಲಿ ಗುಡುಗುಡು ಎಂದು ಕೂಗುತ್ತ ಓಡು: ನನ್ನನ್ನು ಗುಡುಗಿಸಿದ್ದೆಯಲ್ಲಾ ಈಗ ನೀನು ಗುಡುಗು (ರೂಢಿ). ೩. (ಆಲಂ) ಆರ್ಭಟಿಸು; ಗಟ್ಟಿಯಾಗಿ ಕೂಗು: ಮರುತನಾ ಪರಿಮಳದ ದೆಸೆದೆಸೆಗಿರದೆ ಚೆಲ್ಲಲು ಬಾಯ ಹಬ್ಬವು ಬರಲಿ ಬರಲೆನುತಸುರರಾಳಿಯು ಗುಡುಗಿ ಮುತ್ತಿದುವು (ಕಾಶಿರಾ. ೧–೮೯): ಆಗಸದಲ್ಲಿ ಗುಡುಗಿತು. ಡ್ರಾಯ್ವರನೂ ಗುಡುಗಿದ (ಮುಗಿಮು. ೩): ಎಲ್ಲಾದರೂ ಹಾಳಾಗಿ ಹೋಗು . . . ಎಂದು ಗುಡುಗಿ ಅಲ್ಲಿ ನಿಲ್ಲದೆ ಹೊರಟುಹೋದರು (ವಿದ್ಯಾಕಿ. ೨೬).

[ ದೇಶ್ಯ ತುಳು. ಗುಡುಗು ]

**ಗುಡುಗು$_2$** (ನಾ). ೧. ಮೋಡಗಳು ಒಂದಕ್ಕೊಂದು ತಗುಲಿದಾಗ ಉಂಟಾಗುವ ಗುಡುಗುಡು ಎಂಬ ಶಬ್ದ; ಮೇಘಧ್ವನಿ: "ಸ್ತನಿತಂ, ಗರ್ಜಿತಂ, ರಸಿತಂ–೩ ಮೇಘನಿರ್ಘೋಷಃ, ಮೋಘಗಳ ಗರ್ಜನೆ ಅಂದರೆ, ಗುಡುಗಿನ ಹೆಸರುಗಳು" (ಸಿದ್ಧಾಂಶಿ. ೨೮): "ಗುಡುಗೆನೆ ಮೇಘದನಿಯಕ್ಕು" (ಶಶರ. ೩೨): ಖಡ್ಗಗಳ ತೊಳಪು ಮಿಂಚು ಸಲೆ ತುರಗದ ದನಿ ಗುಡುಗು ಖಳರಪಯುವ ಕಾಲಮೇಘವೆಂಬಿನ ಬಲು ಮಳೆಗಳ ಕಚಿದುಮೇವೇಳ್ವೆ (ಕಂಸವಿ. ೧೮–೧೧೧): ಅವಳು ಗುಡುಗಿನ ದನಿಯಲ್ಲಿ ಗದರಿಸದೇ ಇದ್ದಿದ್ದರೆ ನಾನು ನಿಸ್ಸಂಶಯವಾಗಿ ಅವಳನ್ನು ವಿಗ್ರಹಧಾರಿಣಿಯಾದ ಚಂಡಿಯೆಂದೇ ತಿಳಿಯುತ್ತಿದ್ದೆ (ದಾಚಅ. ೯೩). ೨. ಒಂದು ಬಗೆಯ ಆಟ; ಗೊತ್ತಾದೆಡೆಯಿಂದ ಗುಡುಗುಡು ಎಂದು ಗಟ್ಟಿಯಾಗಿ ಹೇಳುತ್ತಾ ಓಡುವ ಆಟ: ಗುಡುಗು ಗುತ್ತಿನ ಚೆಂಡುಗಂಮ್ಮನ ಬಡಿವ ಕತ್ತಲೆಗುದ್ದುಗಂಬದ ಗಡಣೆ . . . ಆಡಿದರು ಪಂಗಡದಲ್ಲೆವರು ನೂರ್ವರಿವರಿತ್ತಂಡವೊಂದಾಗಿ (ಕುವ್ಯಾಆ. ೬–೨): ಗುಡುಗನಾಡುವವನು ಗೊತ್ತ ಮುಟ್ಟುವನೇ ಅಯ್ಯ (ಸಿದ್ಧೇವ. ೯೨–೨೬೬): ಗುಡುಗನಾಡುತ ಕೆಲರು ಪರಿಪರಿ ಹುಡುಗರೀ ಪರಿ ಕಾಡೊಳಾಡಲು (ಶರಲೀ. ೪೧೩–೭). ೩. (ಆಲಂ) ಆರ್ಭಟ; ಗರ್ಜನೆ: ಹುಲಿಯ . . . ಗುಡುಗು ದೊಡ್ಡದು, ಆದರೆ ಸಿಂಹದ ಗರ್ಜನೆಯಷ್ಟು ಭಯಂಕರವಲ್ಲ (ಮುಂಬಯಿ. ೪–೩೬). [ <ಗುಡುಗು$_1$ ]

**ಗುಡುಗುಟ್ಟು** (ಕ್ರಿ). (ಆಲಂ) ಗುಡುಗುಡು ಎಂದು ಧ್ವನಿಮಾಡು; ಗರ್ಜಿಸು: ಗುಡುಗುಟ್ಟಿ ಗುಂಡುಗಳುರುಳ್ದುವುಂಡಲಿಗೆಯ ಮಡಕೆಯು ನೊಡೆಯ ಹೊಯ್ವಂತೆ (ಛಕಕ. ೨೩–೩೩): ಓಪೋ! ಕಾಲಪುರುಷಂಗೆ ಗುಣಮಣವಿಲ್ಲಂ ಗಡ! ನಿಸ್ತೇಜಂ ಗಡ! ಜಡಂ ಗಡ! ಒಡಲೊಳ್ ಗುಡುಗುಟ್ಟುಗುಂ ಗಡ! (ರಾಮಾಶ್ಯ. ೧–೨): ಏನು ತಿರುಗಿ ಯೋಚನೆಮಾಡುತ್ತಿದ್ದೀಯೆ? ಎಂದು ಗುಡುಗುಟ್ಟಿತು (ಪಂಚಾಮ್ಮ. ೦೦೨). [ ಗುಡುಗು$_2$ + ಕುಟ್ಟು$_1$ ]

**ಗುಡುಗುಡನೆ** (ಅ). ಗುಡುಗುಡು ಎಂಬ ಶಬ್ದದಿಂದ ಕೂಡಿ: ನಿಡುಸುಯ್ದುಂ ಗುಡುಗುಡನೆ ಸುರಿವ ಕಣ್ಬನಿಗಳಂ ಮಿಡಿವುತ್ತಂ (ಕಾದಂಪೂ. ೯೩೨): ಮಂಗನನಪ್ಪಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಧನೃಪನಾ ನೃಪನಂ (ಗದಾಯು. ೪–೦೩): ಕಕ್ಕೆ ಕಾರಲೆ ಹರಳು . . . ಪುಡಿಮಾಡಿ ಕಡಲೆಯೆಣ್ಣೆಯೊಳಾಗ ಗುಡುಗುಡನೆ ಕುದಿಸಿದನು (ಶರಲೀ. ೪೦೦–೦೨). 'ಗಟಗಟನೆ' ಪರಾ.

[ ಗುಡುಗುಡು + – ಅನೆ$_1$ ]

**ಗುಡುಗುಡಿ, ಗುಡಗುಡಿ, ಗುಡಿಗುಡಿ** (ನಾ). ಹೊಗೆಬತ್ತಿ ಸೇದುವುದಕ್ಕೆ ಮಾಡಿದ, ಉದ್ದವಾದ ಕೊಳವೆಯುಳ್ಳ ಮತ್ತು ನೀರಿನ ಪಾತ್ರೆಗೆ ಜೋಡಿಸಿದ, ಗುಡುಗುಡು ಎಂದು ಸದ್ದುಮಾಡುವ ಒಂದು ಬಗೆಯ ಸಾಧನ; ಹುಕ್ಕಾ: ಗುಡುಗುಡಿಯನು ಸೇದಿ ನೋಡೊ (ಪುರಂದ. ೩–೯೬ ಪಲ್ಲವಿ): ಅವನು ತನ್ನ ಗುಡುಗುಡಿಯನ್ನು ತರಹೇಳಿದನು (ಮುಂಬಯಿ. ೫–೨೬೯): ಗುಡುಗುಡಿ ಸೇದುತ್ತ ಒಂಟಿಯಾಗಿ ಕೂತಿದ್ದ (ಸಂಸ್ಕಾರ. ೦೦೪): ಕೈಯಿಂದ ಗುಡುಗುಡಿಯ ನಳಿಕೆ ಕೆಳಗೆ ನೆಲದ ಮೇಲೆ ಬಿದ್ದರೂ ಅದನ್ನು ಎತ್ತಿಕೊಡಲು ರಾಮಾಚರಣನೇ . . . ಬರಬೇಕು (ಇಪ್ಪಳ. ೪೦೧). **ಗುಡಗುಡಿ**: ನಾರಾಯಣಮುಖೋಪಾಧ್ಯಾಯರು ಹೊರಗೆ ಜಗುಲಿಯ ಮೇಲೆ ಕುಳಿತುಕೊಂಡು ಗುಡಗುಡಿ ಸೇದುತ್ತಿದ್ದರು (ದೇವದಾ. ೫): ಕೇವಲ ಧನದ ಬಡ್ಡಿಯ ದಲಾಲರು ಅವರ ಗುಡಗುಡಿ ಸೇದಿ ಹೋಗುವವರು (ಇಪ್ಪಳ. ೨೨೯). **ಗುಡಿಗುಡಿ**: ಒಬ್ಬನು ಒಂದು ದೊಡ್ಡ ಗಾಜಿನ ಗುಡಿಗುಡಿಯಿಂದ ತಂಬಾಕನ್ನು ಸೇದುತ್ತಿದ್ದಾನೆ (ನಿಬಂಧ. II, ೨೨೬). [ <ಗುಡುಗುಡು/ಹಿಂ. ಮರಾ. ಗುಡಗುಡೀ ]

**ಗುಡುಗುಡಿಸು** (ಕ್ರಿ). ೧. ರೋಷದಿಂದ ಕೂಗು; ಗರ್ಜಿಸು; ಆರ್ಭಟಿಸು: ಗಡಣಿಸಿದ ಬಾಣಾಬ್ಧಿಯನು ಗುಡುಗುಡಿಸುತನಿಲಜ ಕಾದುತಿರುತಿರೆ (ಕುವ್ಯಾದ್ರೋ. ಓರಿಇ. ೦೩–೫೯ ಅಡಿಟಿ): ಮಿಕ್ಕ ದೊರೆರಕ್ಕಸರ್ ಮಹಾಕೋಪದಿಂ ಗುಡುಗುಡಿಸಿ ಪಲ್ಮೊರೆವುತಿಂತೆಂದರು (ಹರಿಚ. ೨೦–೨೨): ಅವಳ ಕೆಲಸ ಮಾಡಲು ಒಂದಿಷ್ಟು ತಡಮಾಡಿದರೆ ಗುಡುಗುಡಿಸುತ್ತಾಳೆ (ನಡೆದಾ. II, ೯೪೯): 'ಕಡ್' 'ಕಡ್' ಎಂಬ ರೌದ್ರಧ್ವನಿ ಗುಡುಗುಡಿಸುತ್ತಿತ್ತು (ಹಳ್ಳಿಹಾ. ೦೨೦): ಈ ಮನೋಹರ ಜಲರಾಶಿಯು ಎತ್ತರವಾದ ಪರ್ವತಗಳಲ್ಲಿ ಭೋರ್ಗರೆಯುತ್ತ ಸಿಡಿಲಿನಂತೆ ಗುಡುಗುಡಿಸುತ್ತ . . . ತಡಬಡಿಸಿ ಮುಂದುಮುಂದಕ್ಕೆ ಸಂಚರಿಸಿತು (ಹಿಂಕಿರು. ೯೯). ೨. ಗುಳುಗುಳು ಎಂದು ಹರಿ; ಜುಳುಜುಳನೆ ಹರಿ: ಮಿಡಿಯಲೊಡಂ ಸುರಿವುದು ರಸವೆಡೆಯುಡುಗದೆನಿಪ್ಪ ನುಡಿಗೆ ಕಡುಗಿನಿಸಿದವೋಲ್ ಗುಡುಗುಡಿಸೆ ಗಂಟುಗಂಟುಗಳೆಡೆಯಿಂ ರಸಮುಣ್ಬುವಿಕ್ಷುವಾಟಿಗಳೆಸೆಗುಂ (ಕುಸುಮಾ. ೧–೧೧೧): ಕಡುದುಃಖದಿಂ ಕಣ್ಣೀರ್ ಗುಡುಗುಡಿಸುತ್ತಿಟಿಯೆ (ಪುಣ್ಯಾಸ್ರ. ೭–೩೧): ಜಡೆಯ ಕಟ್ಟಿದ ಮುನ್ನ ಒಡನೆ ಬಂದುದು ಮಾರಿ ಗುಡುಗುಡಿಸಿ ಹೇನು ಹರಿವಾಗ ಬೋಳಯ್ಯ ಕಡು ನಗುವನಯ್ಯ (ಸರ್ವಜ್ಞ. ೫೬೬).

[ ಗುಡುಗುಡು + – ಇಸು$_3$ ]

**ಗುಡುಗುಡು** (ನಾ). ಒಂದು ಅನುಕರಣಧ್ವನಿ: ಗುಡುಗುಡುಗುಡು ಗೊಳ್ಳೆಂದೊಡನಾರೆ ಸುಯೋಧನಂ ಕರಂ ಸಿಗ್ಗಾದಂ (ಪಂಪಭಾ. ೩–೫೯): ಗುಡುಗುಡೆಂಬೊಳರುಳ್ಕೆ ಮೇಯೆಂಬ ಕರೆಯಾಯ್ತು (ಕಾದೂರ. ೮೦–೧೫೩)

**ಗುಡುಗುಹಾಕು** (ಕ್ರಿ). (ಆಲಂ) ಗಟ್ಟಿಯಾಗಿ ಮಾತನಾಡು; ಗರ್ಜಿಸು; ಆರ್ಭಟಿಸು: ಪರೀಕ್ಷಕರು ಮೊಟ್ಟಮೊದಲು ವಿದ್ಯಾರ್ಥಿಗಳಿಗೆ ಗುಡುಗು ಹಾಕಿದರು (ಸ್ಕೂಲಮಿ. ೬೦). [ ಗುಡುಗು$_2$ + ಹಾಕು (<ಪಾಯ್ಯು$_1$) ]

**ಗುಡುಗೂರಿಸು** (ಕ್ರಿ). ಕುಗ್ಗಿಸು; ಕುಸಿಯುವಂತೆ ಮಾಡು: ತುರಗಗಳ ಕಡೆ ಮುಟ್ಟ ಸಾಗಿದಮಂಬುಗಳು ವ್ಯತಟ್ಟ ಗುಡುಗೂರಿಸಿದನವನೀನಾಥ ಚಿತ್ರ್ಯಸು (ಜನಭಾ. ೭೩–೧೮).

[ ಗುಡುಗೂರು (<ಗುಡುಗೂಳು) + – ಇಸು$_3$ ]

**ಗುಡುಗೂರು** 'ಗುಡುಗೂಳು' ನೋ.

**ಗುಡುಗೂಳು, ಗುಡಿಗೂಳು, ಗುಡುಗೂರು** (ಕ್ರಿ). ಕುಗ್ಗು; ಕುಸಿ: ನಡು ಮುರಿದು ಗುಡುಗೂಳ್ ತಲೆ ನಡುಗಿ ನೆರೆತೆರೆ ಹೆಚ್ಚಿ ಮತಿಗೆಟ್ಟು, ಒಂದ ನಾಡ ಹೋಗಿ ಒಂಬತ್ತನಾಡುವ ಅಜ್ಞಾನಿಗಳೆಲ್ಲರೂ ಹಿರಿಯರೆ (ಹಸ್ತಪ. ೪. ೦೫೪–೩೫೩). **ಗುಡಿಗೂಳು**: ಒಡೆಯರ ಕಟ್ಟಳೆಯೆಂದು ಮಾಡಿಕೊಂಡು ಅಡುವನ್ನತನಕ ಅಂಗಳ ಬಾಗಿಲಲ್ಲಿ ಗುಡಿಗೂಳ್ ಎನಬಹುದೆ (ಬಸವೇಶ್ವ. ೩೬).

ಪುಕಾರು : ನೀವು ಮಾಡುತ್ತಿರುವ ಬೇಜವಾಬುದಾರಿ ಕೆಲಸದ ಬಗ್ಗೆ ಊರಲ್ಲಿ ಈಗಾಗಲೇ ಗುಲ್ಲು ಎದ್ದಿದೆ (ರಂಗರೋ. ೬೯).

**ಗುಲ್ಲುಮಾಡು, ಗುಲ್ಮಾಡು** = ೧. ಕೂಗಾಡು ; ಗದ್ದಲ ಮಾಡು ; ಗಲಾಟೆ ಮಾಡು : ಕಳ್ಳತನದಲ್ಲಿ ಗೊಲ್ಲರ ಮನೆಪೊಕ್ಕು ಗುಲ್ಲು ಮಾಡದೆಯವರ ಗಲ್ಲ ಕಚ್ಚಿದನೆಂದು (ಪುರಂದ. ೦-೯೪-೨) ; ಸುಮ್ಮನೆ ಗುಲ್ಲು ಮಾಡಿ ಫಲಗಳೇನು(ಚಂದ್ರವಾ. ೪); ಗುಲ್ಲು ಮಾಡುತ್ತಿದ್ದ ಪಾರ್ವತಿಯನ್ನು ಬೆದರಿಸಿ ಸುಮ್ಮನೆ ಕುಳ್ಳಿರಿಸಿದರು ಪಂಡಿತರು (ದೇವದಾ. ೪) ; ವಿದ್ಯಾರ್ಥಿಗಳು ಅವನ ಭಾಷಣಕ್ಕೆ ಗುಲ್ಲುಮಾಡಿ ಹುಯಿಲು ಎಬ್ಬಿಸುತ್ತಿರಲಿಲ್ಲ (ದೂರಸ. ೦೮೭) ; ಸಾಕು ಗುಲ್ಮಾಡದಿರ್ ನಡೆ ಸೇನಾಧಿಪ (ಲೀಳಾವ. ೨-೨೪೧). ೨. ಸುದ್ದಿಯನ್ನು ಹರಡು ; ವಿಚಾರವನ್ನು ಹೊರಡಿಸು : ರಹಸ್ಯ ವಿಚಾರಗಳನ್ನು ಗುಲ್ಲುಮಾಡಬಾರದು(ಕೂಧಿ) .ಗುಲ್ಲೊಗುಲ್ಲು=ಗದ್ದಲವೋ ಗದ್ದಲ ; ಬಹಳ ಗಲಾಟೆ : ಗುಸುಗುಸು ಹೋಗಿ ಗುಲ್ಲೋಗುಲ್ಲಾಯಿತು (ಪಂಚಾಮ್ಮ. ೩೦). [ ದೇಶ ತುಳು. ಗುಲ್ಲು ; ತೆಲು. ಗೊಲ್ಲು ]

**ಗುಲ್ಲುಹಬ್ಬಿಸು** (ಕ್ರಿ). ಸುಳ್ಳು ಸುದ್ದಿಯನ್ನು ಹರಡು; ಸುಳ್ಳು ವಿಚಾರವನ್ನು ಹೊರಡಿಸು : ತಂದೆತಾಯಿಯರು ಅವಳನ್ನು ಗುಟ್ಟಾಗಿ ಅಡಗಿಸಿಟ್ಟು ಅವಳಲ್ಲಿಯೋ ಕಾಣೆಯಾಗಿದ್ದಾಳೆ ಎಂಬ ಗುಲ್ಲುಹಬ್ಬಿಸಿದ್ದಾರೆ (ಪಾಳಮ. ೩೮೯), [ ಗುಲ್ಲು + ಹಬ್ಬಿಸು (<ಪರ್ಬಿಸು) ]

**ಗುಲ್ಲೆಬ್ಬಿಸು** (ಕ್ರಿ): ಗಲಾಟೆಯನ್ನುಂಟುಮಾಡು ; ಗದ್ದಲವನ್ನುಂಟುಮಾಡು ; ಬೊಬ್ಬೆಯೆಬ್ಬಿಸು : ಬಾಗಿಲ ಬಳಿ ಇಬ್ಬರು ಖೈದಿಗಳು ಒಂದೇ ಸಮನೆ ಬಿಸಿಬಿಸಿಯಾಗಿ ಚರ್ಚಿಸುತ್ತ ಕೂಗಾಡುತ್ತ ಗುಲ್ಲೆಬ್ಬಿಸಿದುದರಿಂದ ಮಾತು ನಿಲ್ಲಿಸಬೇಕಾಯಿತು (ಪುನರು. ೫೪೦) : ಸದಾ ಗುಂಪುಕಟ್ಟಿಕೊಂಡಿರುವುದು ಮತ್ತು ಗುಲ್ಲೆಬ್ಬಿಸುತ್ತಿರುವುದು ಈ ಹಕ್ಕಿಗಳ ಸ್ವಭಾವ (ಕಪಪು. ೫-೧೧೭). [ ಗುಲ್ಲು + ಎಬ್ಬಿಸು (<ಎಟ್ಬಿಸು) ]

**ಗುಲ್ಲೇಳು** (ಕ್ರಿ). ಪುಕಾರು ಆಗು ; ಪ್ರಚಾರವಾಗು : ಸುದ್ದಿ ತಿಳಿದ ರಾತ್ರಿಯೇ ಯಾರ ಕಿವಿಯಮೇಲೆ ಸುದ್ದಿ ಬಿದ್ದು ಗುಲ್ಲೇಳುವ ಮೊದಲೇ ಯಾರದಾದರೂ ಕೊರಳಿಗೆ ಕಟ್ಟಬಿಡೋಣ ಎಂದು ಇಲ್ಲಿಗೆ ಓಡಿ ಬಂದಿರಬೇಕು (ಮೂರುದಾ. ೧೫೫). [ ಗುಲ್ಲು + ಏಳು$_1$ (<ಏೞ್$_1$) ]

**ಗುವಳಾಲ** (ನಾ). ಒಂದು ಸ್ಥಳದ ಹೆಸರು ; P ಈಗಿನ ಕೋಲಾರ : ಗುವಳಾಲಂ ಗೊಜ್ಗಂ ವಾಣರಸ ಆಳೆ ವೇಗೂರಊವ್ ಪೊಂಪುಲಂ ಆಳೆ ತುಱುಕೊಳೆಪಳ್ಳಿ ಅರಕ್ಕಮಾನ್ ತುಱುವಿಟ್ಟುವಿಟ್ಟಮಾ ಮಾನಿ (ಎಕ. X, ಮುಳುಬಾ. ೨೬೫-೧ ; ಪು. ೮೬೦). [ <ಕುವಲಾಲ ]

**ಗುವಾಕ** (ನಾ). ಅಡಕೆಮರ. [ ಸಂ. ]

**ಗುವಿ** (ನಾ). ಗುಹೆ; ಗವಿ : "ಗುವಿ–ಗುಹಾ=ಬಿಲ" (ತದ್ಭಕೋ. ೦೦) ; ಸವಿಧಗಳಿಗೆಂದಾರ್ಯವಾರ್ಯನು ಗವನಿಸುವ ಗುವಿ[ಪಾಠಾಂ. ದಿ] ಯೊತ್ತಿನಲಿ ವಿಭ್ರಮಿಸಿದಳೊ ಕಲಿದೇವ ಕೇಳಿರೆ ವಿಮ್ಮ ಮನೆದಾಸಿ (ಬಸಪು. ೫೫-೩೪). [ <ಸಂ. ಗುಹಾ ]

**ಗುವಿಯುಂಗ** (ನಾ). ಒಂದು ಪ್ರದೇಶದ ಹೆಸರು : ಅನ್ನೆಬರೆ ಗುವಿಯುಙ್ಗವಿ ಅನ್ತ ಬರೆ ಪುಣಸೆಯ ಕಿಱಿಯ ಕೆಱೆ (ಮೈಆರಿ. ೦೯೨೦. ೦೦-೦೮೦ ; 967). [ ? ]

**ಗುವುಂಡಭೂಮಿ** (ನಾ). (?) : ಇಱಿಯೆ ವಿರೋಧಿ ಬಿದ್ದ ಸಮರಾಂಗಣದೊಳು ಶ್ರೀಗುವುಣ್ಡಭೂಮಿಯಿಂದೊಱದೊಱದುಕ್ಕು ಯಿಂನು ಪೊನಲೇಳ್ವುದು ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಬು ಚೆಣ್ಬು ಮಾರಲ್ದಿನ್ನುಮದಕ್ಕಿಸಲಾಱವೆಂದೇನ್ ಅಱಿಯಿರೆ ವಿಕ್ರಮಮಂ ಜಸದ ಲಚ್ಚಣಮಿೂ ಹುಳಿಯೋಱ ಚಟ್ಟನವ್ (ಎಕ. XVI, ಚಿಕ್ಕನಾ. ೯೮-೨೫ ; 1169). [ ಗುವುಂಡ$_0$ + ಭೂಮಿ ]

**ಗುಷ್ಟು** 'ಗಸಟು' ನೋ.

**ಗುಸ$_1$** 'ಕುಸಂ' ನೋ.

**ಗುಸ$_2$** (ನಾ). ೧. ಪೆಟ್ಟು ; ಏಟು : (?). ೨. ಕೋಪ ; ಸಿಟ್ಟು. [ ←ಅರ. ಗುಸ್ಸಹ್ ; ಹಿಂ. ಗುಸ್ಸಾ; ಮರಾ. ಘುಸ್ಸಾ ]

**ಗುಸು** 'ಕುಸು' ನೋ.

**ಗುಸುಗಾಟ** (ನಾ). ಗುಸುಗುಸು ಮಾತಾಡುವುದು ; ಪಿಸುಗುಟ್ಟುವುದು : ಇದೇನೋ ಮಾತು ಕಥೆಗಳಾಗುತ್ತಿವೆಯಲ್ಲ ಈ ಗುಸುಗಾಟಗಳೇಕೆ? ಬೀಗರ ಅಸಮಾಧಾನಕ್ಕೆ ಕಾರಣವೇನು? (ಮಹಾಗ. ೨೯೨).

[ ಗುಸುಗು$_0$ + ಆಟ ]

**ಗುಸುಗುಂಪಲು** (ನಾ).=ಗುಜುಗುಂಪಲು : ಈ ಸುದ್ದಿಯನ್ನು ಕೇಳಿ ಗ್ರಾಮದಲ್ಲಿ ಇನ್ನೊಂದು ಗುಸುಗುಂಪಲು ಹುಟ್ಟಿ ಹರಡುತ್ತಿದ್ದಿತು (ಮಾಯಾವಿ. ೦೩೧) ; ಊರಿನಲ್ಲೆಲ್ಲಾ ಗುಸುಗುಂಪಲು (ದಾಂಕ್. ೨೦) ; ದೇವಲೋಕದಲ್ಲೆಲ್ಲಾ ಗುಸುಗುಂಪಲಾಗಿ ಆಡಿಕೊಳ್ಳುತ್ತಿರುವ ಮಾತು ಆಕೆಯ ಕಿವಿಗೂ ಬಿದ್ದಿದೆ (ನಡದಾ. II, ೦೩೭೪).

[ ಗುಸು (<ಕುಸು) + ಗುಂಪಲು ]

**ಗುಸುಗುಂಪು** (ನಾ).=ಗುಸುಗುಂಪಲು: ನೀವು ಯಲ್ಲಿ ಬಂದರು ಗುಸುಗುಂಪು ಮಾತುಗಳು ಬಿಡೋದು ಇಲ್ಲ (ಶಾಗಂಧಿ. ೫೩೨-೫).

[ ಗುಸು (<ಕುಸು) + ಗುಂಪು$_1$ (<ಗುಮ್ಪು$_1$) ]

**ಗುಸುಗುಟ್ಟು** 'ಕುಸುಗುಟ್ಟು' ನೋ.

**ಗುಸುಗುಸುಗುಟ್ಟು** (ಕ್ರಿ).=ಕುಸುಗುಟ್ಟು : ದಾಳಿಮಾಡುವ ವಿಚಾರವನ್ನು ಗುಸುಗುಸುಗುಟ್ಟುತ್ತಿದ್ದರು (ಪುಟ್ಟಕ. ೨೯). [ಗುಸು (<ಕುಸು)+ಕುಟ್ಟು$_1$]

**ಗುಸುಟು** (ನಾ). ೧. ಗೊಣಗುಟ್ಟುವಿಕೆ; ಪಿಸುಮಾತು: ನುಡಿಯಿಂದ ನಡೆಗೆಟ್ಟಿತ್ತು ನಡೆಯಿಂದ ನುಡಿಗೆಟ್ಟಿತ್ತು ಭಾವದ ಗುಸುಟು ಅದು ತಾನೆ ನಾಚಿ ನಿಂದಿತ್ತು (ಅವಚಂ. ೦೫೦-೬೯೦). ೨. ಗೊಡವೆ; ಗೋಜು ಬೇಡ ಕೆಮ್ಮಗಮ್ಮನೆ ಗುಸುಟೇಕೆ ತನ್ನ ಸುಖಕಲ್ಲದೆ ಕೇಳಿಕೆ ಯಾರ ಬಿಟ್ಟಿಯೋ (ಲೀಲಾವ. ೨-೦೧೪); ಧ್ಯಾನಗೀನವ ನೀವು ನಿಮ್ಮರಸನು ಬಲ್ಲಿರಾನೇನ ಬಲ್ಲೆನಾ ಗುಸುಟ (ಭರಜ. ೫-೨೦). [ <ಕುಸು ]

**ಗುಸುನಗೆ** (ನಾ). ಮೆಲ್ಲನೆ ನಗುವಿಕೆ ; ನಸುನಗೆ : ಸಮ್ಮತಿಯ ಗುಸುನಗೆ ಕೋಣೆಯಲ್ಲೆಲ್ಲ ಹರಡಿತು (ಪುನರು. ೫೮೪). [ ಗುಸು (<ಕುಸು)+ನಗೆ ]

**ಗುಸುಮುಸಿ** (ನಾ). ಒಳಗೊಳಗೇ ಆಡುವ ಮಾತು,–ಹರಡುವ ವರ್ತಮಾನ : ದೇಶದಲ್ಲಿ ಗುಸುಮುಸಿಯು ನಡೆವುತೇ ಇತ್ತು (ಇಂಗ್ಲಂಡ. ೦೫೩) ; ಗುಸುಮುಸಿಯು ನಡೆಯೆ ಬಸವನಿಗೆ ವರಸಂಗ (ಕನ್ನಚ. ೨೩೨).

[ ಗುಸು (<ಕುಸು) + ಮುಸಿ$_1$ ]

**ಗುಹ** (ನಾ). ೧. ಕುಮಾರಸ್ವಾಮಿ ; ಷಣ್ಮುಖ : "ಅ ಸಬ್ಬಮಂಗಳೆಯಣಾಗನು ಸಲೆ ನವಿಲ್ದೇರನಿಂಗಳಮಗಂ ಕುವರ . . . ಅಱುಮೊಗನೆನಲು ಗುಹನ ಪೆಸರಪ್ಪುದು" (ಕಬ್ಬಮಂ. ೫) ; ಗೀರ್ವಾಣನಾಥಾತ್ಮಜನಲ್ಲಿಗೆ ಗುಹನನಹಿಭೂಷಣನಂಬಂ ಬೇಡಿಯಟ್ಟಿದೊಡಾತಂ ಬಂದು (ಹಂಪಭಾ. ೮-೧೬೮). ೨. ರಾಮಾಯಣದಲ್ಲಿ ಬರುವ ಶೃಂಗವೇಲ ಪಟ್ಟಣದ ಅರಸು : ವೀರ ರಘುಪತಿ ವಿಮಲತರ ಭಾಗೀರಥಿಯನುತ್ತರಿಸಿ ಗುಹನಿಂ ಸಾರಿದನು ವರಚಿತ್ರಕೂಟ ಮಹಾಮಹೀಧರವ (ತೊರರಾ. ೨-೪ ಸೂಚನೆ).

[ ಸಂ. ]

**ಗುಹಜನಕ** (ನಾ). ಷಣ್ಮುಖನ ತಂದೆ ; ಶಿವ : ಅನುಪಮನನಸಮಾನನಂ ಗುಹಜನಕನಂ . . . ಅಭವನಂ ಕಂಡು (ಬಸಪು. ೪೩-೧೭).

[ ಗುಹ + ಜನಕ ]

**ಗುಹಾಂಗಣ** (ನಾ). ಗುಹೆಯ ಮುಂದಣ ಪ್ರದೇಶ : ಭೋರ್ಗರೆಯಲ್ಪರಿತರ್ಪ ನಿರ್ಝರಾಸ್ಫಾಲನ ಶೀಕರಪ್ರಸರದಿಂದೆಸೆದತ್ತು ಬೃಹದ್ಗುಹಾಂಗಣಂ (ಅದಂಪೂ. ೬೯೦). [ ಸಂ. (ಗುಹಾ + ಅಂಗಣ) ]

**ಗುಹಾಂತರ** (ನಾ). ಗುಹೆಯ ಒಳಭಾಗ: ಬೌದ್ಧರ ಕಾಲದ ಅನೇಕ ಗುಹಾಂತರ ಕಟ್ಟಡಗಳು (Rock Cut-Architecture) ಇದಕ್ಕೆ ಉದಾಹರಣೆಯಾಗಿವೆ (ಭಾರದ. ೯೯೪). [ಸಂ. (ಗುಹಾ + ಅಂತರ)]

**ಗುಹಾಧ್ವನಿ** (ನಾ). ೧. ಗುಹೆಯಿಂದ ಹೊರಡುವ ಮಾರ್ದನಿ,–ಪ್ರತಿಧ್ವನಿ: ನಗಂ ಶತಗುಹಾಧ್ವನಿಗಳಿಂ ಪ್ರತಿಘರ್ಜಿಪ್ಪೋಲಂತೆ . . . ಘರ್ಜಿಸಿದುದಾ ಅದ್ವೈತಿ ತಾಂ ದ್ವೈತಿಯಪ್ಪಂತೆ (ಶ್ರೀರಾಮಾ. ೦೯೩-೪೭). ೨. (ಅಲಂ) ಒಬ್ಬರು ಹೇಳಿದ್ದನ್ನೇ ಮತ್ತೊಬ್ಬರೂ ಹೇಳುವುದು,–ಅನುಕರಣೆಮಾಡುವುದು: ವಿಚಾರವು ಗುಹಾಧ್ವನಿಯಾದರೆ ಮಂದಿಯ ಸೊತ್ತು (ವಿಚಾಮಂ. ೬೨); ಆಧುನಿಕ ಕವಿತೆ ಈಗ ಆಡುತ್ತಿರುವುದು – ಎಲ್ಲಿಯೋ ಗಿಳಿಮಾತು, ಗುಹಾಧ್ವನಿ (ಸಾಹಿವಿ. ೯೬).
[ಸಂ. (ಗುಹಾ + ಧ್ವನಿ)]

**ಗುಹಾನಿಹಿತ** (ಗು). ೧. ಗುಹೆಯಲ್ಲಿ ಇರಿಸಿದ. (ನಾ). ೨. (ಅಲಂ) ಬಹಳ ಗೂಢವಾಗಿರುವುದು: ಗುಹಾನಿಹಿತ, ಅಭಾವನೀಯ ಎನ್ನಬಹುದಾದ ರಸಪ್ರಕೃತಿಯು ಯಾವುದೊಂದು ವಿಶಿಷ್ಟ ಉತ್ತೇಜನ ಪಡೆದ ಸಾಮಯಿಕತೆಯ ಕಟ್ಟು ಕಾನೂನುಗಳಿಗೂ ಅಧೀನವಲ್ಲ (ನಿಬಂಧ. II, ೨೦).
[ಸಂ. (ಗುಹಾ + ನಿಹಿತ)]

**ಗುಹಾಲಯ** (ನಾ). ಗವಿಯನ್ನು ಕೊರೆದು ನಿರ್ಮಿಸಿರುವ ಕಟ್ಟಡ; ಬಂಡೆಯನ್ನೇ ಕೊರೆದು ಮಾಡಿರುವ ಮನೆ: ಪಲ್ಲವರ ಗುಹಾಲಯ ಮತ್ತು ಪ್ರತ್ಯೇಕ ದೇವಾಲಯಗಳು ಏಳನೆಯ ಶತಮಾನಕ್ಕೆ ಹಿಂದೆ ಕಂಡು ಬರುವುದಿಲ್ಲ (ಹೊಯ್ಸವಾ. ೧); ಹಿಂದೂದೇವಾಲಯ ಗಳೊಡನೆ ಜಗತ್ತಿನ ದೃಷ್ಟಿಯನ್ನು ಸೂರೆಗೊಂಡ ಬೌದ್ಧ ಗುಹಾಲಯಗಳು . . . ಅಷ್ಟೇ ಪ್ರಸಿದ್ಧವಾಗಿವೆ (ಭಾರದ. ೯೦೪). [ಸಂ. (ಗುಹಾ + ಆಲಯ)]

**ಗುಹಾಲಿಪಿ** (ನಾ). ಗುಹೆಯಲ್ಲಿ ದೊರೆಯುವ ಶಾಸನಗಳ ಲಿಪಿ: ಕನ್ನಡ ಲಿಪಿಗೂ, ಗುಹಾಲಿಪಿಗೂ ಸಂಬಂಧವುಂಟು (ಕಶಾಅ. ೨೨).
[ಸಂ. (ಗುಹಾ + ಲಿಪಿ]

**ಗುಹಾಲೇಖ** (ನಾ). ಗವಿಯ ಒಳಗಿನ ಬರೆಹ: ನಾಸಿಕದ ಬಳಿಯ ಗುಡ್ಡಗಳ ಓರೆಗಳ ಗುಹಾಲೇಖಗಳಿಂದ ಇದನ್ನು ಊಹಿಸಬಹುದು (ಕರ್ನಾಟ. ೩೧೨). [ಸಂ. (ಗುಹಾ + ಲೇಖ)]

**ಗುಹಾಹಿತ** (ಗು). ೧. ಗುಹೆಯಲ್ಲಿ ಇರಿಸಿದ. (ನಾ). ೨. ಹೃದಯದಲ್ಲಿ ಧ್ಯಾನಿಸಲ್ಪಡುವವನು,–ತೋರುವವನು; ಪರಮಾತ್ಮ: ಈ ಸಕಲ ಕರಣಗಳ ವಿಲಾಸಿಹ ಶೇಷಿತವ ತಿಳಿಯಾತ್ಮನವನನೆ ಆ ಶ್ರುತಿ ಗುಹಾಹಿತ ಪರಬ್ರಹ್ಮೆಂದು ಸಾರುವದು (ಅಮೃತ. ೩-೫೧). [ಸಂ. (ಗುಹ+ಆಹಿತ)]

**ಗುಹಿಲಿಕ್ಕು** (ಕ್ರಿ). ಗಹಗಹ ನಗು; ಗಹಗಹಿಸು: ಗಂಡುಗಲಿ ರಾವಣಗೆ ಬಲ್ಲಿನ ದಂಡೆಯನು ಹಾಯ್ಕಿದಳೆ ನಿಜದೋರ್ದಂಡದಂಗನೆಯೆನುತ ಗುಹಿಲಿಕ್ಕಿತು ಸಖೀನಿವಹ (ತೊರರಾ. ೦-೦೫-೨೫); ನಕ್ಕನಮರವಿರೋಧಿ ಮಿಗೆ ಗುಹಿಲಿಕ್ಕಿ ಶಿಶುವಿಂಗಾರು ಕಲಿಸಿದರೆಕ್ಕಸಕ್ಕವನೀ ಕುಮಾರಂಗೆನ್ನ ಕನಲಿಸಲು (ನಿಭಾಗ. ೬-೪-೧); ಬಿಸರುಹಾಕ್ಷನ ಕೂಡೆ ಕೊಂಬುದೆ ನುಸಿಗಳಿಗೆ ರಣವೆಂದು ಗುಹಿಲಿಕ್ಕಿತು ಸುರಸ್ತೋಮ (ಕೋಗಯು. ೨೨-೫೬).
[ಗುಹಿಲು + ಇಕ್ಕು]

**ಗುಹಿಲು** (ನಾ). ಗಹಗಹ ಎಂಬ ಧ್ವನಿ; ಗಟ್ಟಿಯಾಗಿ ನಗುವಾಗ ಹೊರಡುವ ಶಬ್ದ. ‘ಗುಹಿಲಿಕ್ಕು’ ಪರಾ.

**ಗುಹೆ** (ನಾ). ಬೆಟ್ಟ ಮುಂತಾದ ಕಡೆಗಳಲ್ಲಿರುವ ದೊಡ್ಡ ಕಲ್ಲಿನ ಪೊಟರೆ; ಗವಿ: ಹೆಬ್ಬಾಗಿಲೊಳಡ್ಡಂ ನಿಂದು ಗುಹೆಯ ಬಾಗಿಲೊಳು ಸಿಂಹನಿಪ್ಪಂತೆ ತಾಗಿ ತಳ್ಳಿಸುವಾಗಳು (ಎಕ. VIII, ಸೊರಬ. ೦೬೫ ೬; 1156); ಗುಹೆ ಗುಹೆಗಳೊಳಗೆ ಬಳಸಿದ ಬಹುಗಹ್ವರ ಗಹ್ವರಂಗಳೊಳ್ ವರ ಸೌಖ್ಯಾವಹ ನಿರ್ಝರ ನಿರ್ಝರದೊಳಗಹರಹವೊಪ್ಪಿರ್ಪುದಧಿಕಮಾನು ಮುನಿವೃಂದಂ (ಗಿರಿಕ. ೧-೬೦); ಕುಪಿತ ಸಿಂಹದ ಗುಹೆಯ ಪ್ರಾಂಗಮದವೊ . . . ಎನಿಸಿತು ರೂಹು ಸುಮನೋಹರ ಭಯಂಕರವಾಯ್ತು ಸುರಸತಿಯ (ಕುವ್ಯಾಅ. ೮-೪೩); ಗುಹೆಗಳಲ್ಲಿ ವಾಸಿಸುತ್ತ ಆದಿಮಾನವನು ಆಗತಾನೆ ಕುಟುಂಬ ಜೀವನವನ್ನು ಆರಂಭಿಸಿದ್ದಾಗ . . . ಯಾವ ಶಿಕ್ಷಣ ಕ್ರಮವೂ ಇರಲಿಲ್ಲ (ಶಿಕ್ಷದ. ೩೫). ೨. ಒಂದು ವನಸ್ಪತಿ; ನರೀಹೊನ್ನೆ ಗಿಡ; ನರಿಬಾಲದ ಹುಲ್ಲು: (ಕ). [ಸಂ. ಗುಹಾ]

**ಗುಹ್ನೆ** ‘ಗುನ್ಹೆ’ ನೋ.

**ಗುಹ್ನೇಗಾರ** ‘ಗುನ್ಹೇಗಾರ’ ನೋ.

**ಗುಹ್ಯ** (ಗು). ೧. ಮುಚ್ಚಿಡತಕ್ಕ; ಅಡಗಿಸಿ ಇಡತಕ್ಕ. (ನಾ). ೨. ಮುಚ್ಚಿಡಬೇಕಾದುದು; ಗುಟ್ಟು; ರಹಸ್ಯ: ಬಾಲ ಕೇಳದರಿಂದ ನಿನಗೆನೆ ಪೇಳಿದತಿ ಗುಹ್ಯದಲಿ ನಂಬುಗೆದಾಳಿ ವಾಙ್ಮನಕಾಯಗಳಲದ್ವೈತವನೆ ಬಳಸಿ . . . ಬದುಕೆಂದ (ಗಗತಾ. ೧೭-೬೧); ಮಹಾಜ್ಯೋತಿರ್ಮಹದ್ದರ್ಶನಂ ಲಭಿಸಿದಾತಂಗದೇಂ ಗುರುತರಾನಂದಕರ ಗುಹ್ಯಮಾಗುವುದೇನೋ ದೇಹಯಾತ್ರೆಯ ದುರಂತಂ? (ಶ್ರೀರಾಮಾ. ೦೧೯-೨೦೩). ೩. ಮಾಡಬಾರದ ಕೆಲಸ; ಅಕಾರ್ಯ. ೪. ಪ್ರಧಾನವಲ್ಲದುದು; ಶ್ರೇಷ್ಠವಲ್ಲದುದು; ಅಲ್ಪವಾದುದು. ೫. ಮುಚ್ಚಿಕೊಳ್ಳಬೇಕಾದ ಅವಯವ; ಜನನೇಂದ್ರಿಯ: ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನಂಗಳು ಗುಹ್ಯ ಕಾಮನ ಸ್ಥಾನ (ಬಸವ. ೮೪೪); ಗುಹ್ಯವ ಮುಟ್ಟಿ ನೋಡಿದರೆ ಕಾಮದಹನ ಕಾಣಬಂದಿತ್ತು (ಸರ್ವವ. ೦೬೩-೮೦೯). ‘ಗುಹ್ಯರೋಗ’ ಪರಾ ೬. ಕೌಪೀನ; ಲಂಗೋಟಿ: “ಅಕಾರ್ಯ ಕಚ್ಚುಟಂ ಅಸತಿಸಯುಂ ಭಗಂಗಳಿವು ಗುಹ್ಯಮೆನಿಕ್ಕು” (ನಾವಾರ ೬೦). [ಸಂ.]

**ಗುಹ್ಯಕ** (ನಾ). ೧. ಕುಬೇರ: “ಐಳಬಿಳಃ . . . ಕುಬೇರಃ, ನರವಾಹನಃ, ಗುಹ್ಯಕಃ, ರಾಜರಾಜಃ, ಧನೀ, ಪುಣ್ಯಜನೇಶ್ವರಃ – ಈ ೧೭ ಕುಬೇರನ ಪೆಸರ್” (ಹಲಾಯು. ೦೪-೬೯). ೨. ದೇವತೆಗಳಲ್ಲಿ ಒಂದು ಭೇದ: ಅಂತು ಕಾಮ್ರೂಪಿಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ಪರಿಯೆ (ಹಾಂತಿಪು. ೬-೨೯ ವ); ಅಭ್ರದಲ್ಲಿ ಗುಹ್ಯಕನಾಲಿದನು (ಕುವ್ಯಾಅ. ೨೩-೦೮). [ಸಂ.]

**ಗುಹ್ಯಕೇಶ್ವರ** (ನಾ) ಗುಹ್ಯಕರ ಒಡೆಯ; ಕುಬೇರ: ಗುಹ್ಯಕೇಶ್ವರ ಮುಖ್ಯ ಸುರನಿಕರ ಬಂದುದು (ಕಾಶಿಕಾ. ೪೩-೪೨). [ಗುಹ್ಯಕ+ಈಶ್ವರ]

**ಗುಹ್ಯರೋಗ** (ನಾ). ಜನನೇಂದ್ರಿಯಗಳಿಗೆ ಸಂಬಂಧಪಟ್ಟ ರೋಗ: ಅವನು ಯೌವ್ವನದಲ್ಲಿಯೇ ಗುಹ್ಯರೋಗದಿಂದ ನರಳುತ್ತಿದ್ದನು (ಕಥಿ).
[ಗುಹ್ಯ + ರೋಗ]

**ಗುಹ್ಯಲಂಪಟತ್ವ** (ನಾ). ಲೈಂಗಿಕ ಆಸಕ್ತಿ; ಕಾಮುಕತೆ: ಜಿಹ್ವಾಲಂಪಟ ಗುಹ್ಯಲಂಪಟತ್ವಕ್ಕೊಳಗಾಗಿರ್ದ ನಾವು ಜಿಹ್ವಾಲಂಪಟತ್ವವಿಲ್ಲದವರೆಂದರೆ ಆಗಲರಿಯರು (ಪ್ರೋಳಿಮಾ. ೬೨-೨೫೫ ಅರ್ಥ). [ಗುಹ್ಯ + ಲಂಪಟತ್ವ]

**ಗುಹ್ಯಾಂಗ** (ನಾ). = ಗುಹ್ಯ ೫: ಗುಹ್ಯಾಂಗಗಳು; ಗೋಪ್ಯ ಭಾಗಗಳು (The (Privy) Parts. ಇಂಕನ). [ಗುಹ್ಯ + ಅಂಗ$_2$]

**ಗುಹ್ಯಾತ್ಮ** (ನಾ). ಅಂತರಂಗದಲ್ಲಿ ಅಡಗಿರುವ ಆತ್ಮ; ಪರಮಾತ್ಮ: ಸರ್ವದಲ್ಲಿ ಗುಹ್ಯಾತ್ಮನೆನಿಸುತ ಪರ್ವಿ ಚೇಷ್ಟಿಸುತಿರ್ಪ ಹರಿ ತಾನೇರ್ವ ಗಡ (ಗಗತಾ. ೦೩-೫೬). [ಗುಹ್ಯ + ಆತ್ಮ]

**ಗುಳ್$_1$** ‘ಗೊಳ್’ ನೋ.

**– ಗುಳ್$_2$** (ಪ್ರ). ಭಾವಾರ್ಥದಲ್ಲಿ ಸೇರುವ ಒಂದು ಕೃದಂತ ಪ್ರತ್ಯಯ. ‘ತಿವಿಗುಳ್’, ‘ಪೊಯ್ಗುಳ್’, ‘ಬಯ್ಗುಳ್’ ಪರಾ. [?]

**ಗುಳ$_1$** ‘ಗುಳ್ಳ’ ನೋ.

**ಗುಳ$_2$** ‘ಕುಟು’ ನೋ.

**ಗುಳ$_3$** ‘ಗುಟಿ’ ನೋ.

**ಗುಳಂಬ** ‘ ಗುಡುಂಬ ’ ನೋ.

**ಗುಳಕ್** (ನಾ). ಒಂದು ಅನುಕರಣ ಶಬ್ದ : ಗುಳಿಗೆಯನ್ನು ಗುಳಕ್ ಎಂದು ಒಂದೇ ಬಾರಿಗೆ ನುಂಗಿಬಿಟ್ಟನು (ರೂಢಿ).

**ಗುಳಕವ್ವ** (ನಾ). ಮಣ್ಣಿನಿಂದ ಮಾಡಿದ ದಪ್ಪನಾದ ಗೌರೀವಿಗ್ರಹ : ಅಳಕೂತ ಬಳಕೂತ ಬಂದಾಳ ಗುಳಕವ್ವ ಬಂದು ನಿಂತಾಳ ಅಗಸ್ಯಾಗ (ಜನಗೀ. ೮). [ ? ]

**ಗುಳಗಿಚಣ್ಣ** ‘ ಗುಡಿಗಿಚಲ್ಲಣ ’ ನೋ.

**ಗುಳಗಿಚೊಣ್ಣ** ‘ ಗುಡಿಗಿಚಲ್ಲಣ ’ ನೋ.

**ಗುಳದಾಳಿ, ಗುಳುದಾಳಿ** (ನಾ). ಮಾಂಗಲ್ಯದ ತಾಳಿ; ಐದೆದಾಳಿ : ಸರದಾರ ನಿಮ್ಮಿಂದ ಸರುವೆಲ್ಲ ಮರತೇನ ಸರದಾಗ ಇರುವ ಗುಳದಾಳಿ ನಿಮ್ಮಿಂದ ಸರುವ ಬಳಗೆಲ್ಲ ಮರತೇನ (ಜಿಳಪು. ೦೩೪); ಪಾರ್ವತಿಯು ಗುಳದಾಳಿಯನ್ನು ಹರಿದು ಚೆಲ್ಲಿದಳು (ಜೀವಪ್ರ. ೫೪); ತೆಗೆದುಕೋ ನಿನ್ನ ಗುಳದಾಳಿ ಒಡವೆ ತೊಡವೆ : ನಾನು ಅವನೊಡನೆ ಬಾಳು ವೆ ಮಾಡಿಕೊಂಡಿರುತ್ತೇನೆ (ಸ್ವಕಾವ್ಯ. ೬). **ಗುಳುದಾಳಿ:** ಕಲ್ಲವ್ವನ ಸೀರಿಯು ಮಲ್ಲವ್ವನ ಕುಪ್ಪಸವ ಈರವ್ವ ಕಟ್ಟಿರು ಗುಳುದಾಳಿ! ಸೆ ೬ೀ! ತಕ್ಕೊಂಡು ಹೇಳದೆ ಬಂದಾರ ಮದುವಿಗೆ (ಬೋಳಗೀ. ೨೬).

**ಗುಳದಾಳಿ ಉಳಿಸು** = ಮುತ್ತೈದೆತನವನ್ನು ಉಳಿಸು ; ಗಂಡನನ್ನು ಬದುಕಿಸು : ನನ್ನ ಗುಳದಾಳೀ ಉಳಿಸು ನಮ್ಮವ್ವಾ ಅಂತ ಗೋದವ್ವ ಗೋಗರೆದಳು (ಮೂಡಿಮ.೬೪). [ < ಕುಲ ? + ತಾಳಿ₁ (= ತಾಲಿ₁) ]

**ಗುಳಪಪ್ಪಡಿ, ಗುಳಪಾವಟೆ, ಗುಳ್ಳಪಟೆ** (ನಾ). ಒಂದು ಬಗೆಯ ಸಿಹಿತಿಂಡಿ; ಬೆಲ್ಲದ ಪಾಕದಲ್ಲಿ ಮಾಡಿದ ರವೆಯ ತಿಂಡಿ: (*). **ಗುಳಪಾವಟೆ:** ನೀನು ಆ ದಿನ ಮಾಡಿಕೊಟ್ಟಿದ್ದ ಗುಳಪಾವಟೆ ರುಚಿ ಇನ್ನೂ ಬಾಯಲ್ಲಿ ನೀರೂರಿಸುತ್ತಾ ಇದೆ (ಉಮಾಶಿ. ೦೫). **ಗುಳ್ಳಪಟೆ:** ಗುಳ್ಳಪಟೆ ಮೊದಲಾದ ತಿಂಡಿಗಳನ್ನು ರಾಮಚಂದ್ರನಿಗೆ ಕೊಟ್ಟರು (ಕಳಹು. ೫). [ ← ಹಿಂ. ಗುಲಪಪಡೀ ; ಮರಾ. ಗೂಳಪಾಪಡೀ ]

**ಗುಳಪಾವಟೆ** ‘ ಗುಳಪಪ್ಪಡಿ ’ ನೋ.

**ಗುಳಪುಟ್ಟ** (ನಾ). ಚಿಕ್ಕಪುಟ್ಟ; ಸಣ್ಣಬುಟ್ಟಿ: ಗನ್ನವ್ವ ಪುತ್ರೀರ ತಕ್ಕ ಗುಳ ಪುಟ್ಟ ಕೊ ಅವ್ವ ನಿಮ್ಮ ತುಪ್ಪದ ತಕ್ಕ ಹೊಸನೆಲುವ (ಬೋಳಗೀ. ೦೫೬).

[ < ಕುಳ್ಳ + ಪುಟ್ಟ₂ ]

**ಗುಳಲ** (ನಾ). ಗುಳ್ಳ ಬದನೆಯ ಗಿಡ ಮತ್ತು ಅದರ ಕಾಯಿ. ‘ ಗುಳಲಕಾಯಿ ’ ಪರಾ. [ < ಗುಳ್ಳ ]

**ಗುಳಲಕಾಯಿ** (ನಾ). ಗುಳ್ಳದ ಕಾಯಿ ; ಬದನೆಕಾಯಿ : (*).

[ ಗುಳಲ + ಕಾಯಿ₁ (< ಕಾಯ್₁) ]

**ಗುಳವ** (ನಾ). (?) : ಬತ್ತೀಸ ಕಡಿಯ ಬಾಹರ ಪುಟದ ಗುಳವದ ಕಣಂಗಳ ಕುಳಿಶದಳಂ ಪಳಕದ ಪಾರದದುಪ್ಪಳಿಕೆಯುಂ (ಅನಂಪು. ೦೪-೬ ವ). [ ? ಇದು ‘ಗುಟ ’ಶಬ್ದದ ಅಪಲಿಖಿತವಿರಬಹುದು ]

**ಗುಳವತ್ತಿ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು : ಬೆಳಲು ಬಲ್ಪತ್ರ . . . ಕಾರಿಬೋರೆ ಗುಳವತ್ತಿ ತುಂಬುರು ನಗರೆ ಮುಂತಾದ ಪಣ್ಣಳ ತಂದರಾಳ್ದನ ಬಳಿಗೆ (ಮೋಹತ. ೦೪ ೫೬). [ ? ]

**ಗುಳಾಪು, ಗುಳುಪು, ಗುಳೋಪು** (ನಾ). ಗಾಜಿನ ಬುರುಡೆ,-ಗೋಳ : ಮೇಲೆ ಚಿತ್ರ ವಿಚಿತ್ರವರ್ಣದ ಗುಳಾಪುಗಳು ತೂಗಾಡುತ್ತಿದ್ದುವು (ಸ್ವೂಂಬಿ. ೦೩೪); ತಾನು ಎದುರು ನಿಂತು ಅಲ್ಲಲ್ಲಿ ಕಾಗದದ ಹೂವಿನ ಕುಚ್ಚು, ಗುಳಾಪು, ತೋರಣ, ಫರಫರೆ ಇವುಗಳಿಂದ ಮಂಟಪದ ಶೋಭೆ ಯನ್ನು ರಚಿಸಿದಳು (ಗಂಮಾಯಿ. ೦೩೩); ಗುಳಾಪು ಮುಂತಾದವುಗಳನ್ನು ತರತರದ ಕ್ಷಾರಗಳನ್ನು ಹಾಕಿ ಸಿದ್ಧಮಾಡಿದ ಕಾಚಿನ ರಸವನ್ನು ಕೊಳವಿಯ ತುದಿಗೆ ಹಚ್ಚಿ ಊದಿ ಮಾಡುತ್ತಾರೆ (ಮುಂಬಯಿ. ೪-೨೨೦). **ಗುಳುಪು:** ದೀವಹಚ್ಚುವ ಗುಳುಪು. ಬೀಲೆರು ಗ್ಲಾಸು, ದುರ್ಬಿಣಿಯ ಕನ್ನಡಿ ಮುಂತಾದುವುಗಳನ್ನು (ಮುಂಬಯಿ. ೬-೩೪). **ಗುಳೋಪು :** ಆ ಮಂಟಪ ದಲ್ಲಿ ‘ ಲಸ್ತರು ’, ‘ ಗುಳೋಪು ’, ‘ ಕಂದೀಲು ’, ಯಾವುದೂ ಇರಲಿಲ್ಲ (ನಗಿಗ. ೪೧); ಅರಮನೆಯವರೇ ಬಂದು ಅದನ್ನು ಸಿಂಗರಿಸಿ ಕಂದೀಲು ಗುಳೋಪು ಕಟ್ಟಿದ್ದಾರೆ (ಮಲ್ಲಿ. ೯೬).

[ ← ಇಂ. Globe ]

**ಗುಳಿ₁** ‘ ಕುಟ್ಟು₂ ’ ನೋ.

**–ಗುಳಿ₂** ‘ –ಕುಳಿ₃ ’ ನೋ.

**ಗುಳಿಕ** (ನಾ). ೧. ಅಷ್ಟಫಣಿಗಳಲ್ಲೊಂದು ; ಎಂಟು ಜನ ಸರ್ಪ ನಾಯಕರಲ್ಲಿ ಒಬ್ಬ : ಉರಗಪತಿ ಶೇಷರಾಜನ ಕೋಶದೆಡೆಯೊಳಿಹ ಸಂಜೀವಕದ ಮಣಿಯನು ತರಬಲ್ಲನಾವವಂ ಗುಳಿಕ ವಾಸುಕಿ ತಕ್ಷಕರ . . . ಭೀಕರ ವಿಷೋತ್ಕರದಿಂದೆ ಕಾಹು ಬಲಿದಿಹುದು (ಕೃಮಿಥಾ. ೨೪-೪). ‘ ಅಷ್ಟಫಣಿ ’ ಪರಾ. ೨. ಶನಿಯ ಮಗ ; ಒಂದು ಉಪಗ್ರಹ. ‘ ಗುಳಿಕಕಾಲ ’ ಪರಾ. [ < ಸಂ. ಕುಲಿಕ, ಗುಲಿಕ ]

**ಗುಳಿಕಕಾಲ** (ನಾ). ಗುಳಿಕನು ಅಭಿಮಾನಿ ದೇವತೆಯಾಗಿರುವ ಕಾಲ ; ಶುಭಕಾರ್ಯಗಳಿಗೆ ಪ್ರಶಸ್ತವಲ್ಲದ ಕಾಲ ; ಅಶುಭಕಾಲ : ಮಾರನೆಯ ದಿನ ಆ ಜಟಕಾಗಾಡಿಯನ್ನು ನೋಡಲು ಆಪ್ತಮಿತ್ರನೊಂದಿಗೆ ಗುಳಿಕ ಕಾಲದಲ್ಲಿಯೇ ಹೊರಟ (ನಾಡಿಗೀ. ೪೮); ರಾಹುಕಾಲ ಗುಳಿಕಕಾಲಗಳಲ್ಲಿ ಶುಭಕಾರ್ಯವನ್ನು ಮಾಡಬಾರದು (ರೂಢಿ). [ ಗುಳಿಕ + ಕಾಲ ]

**ಗುಳಿಕಲ್ಲು** ‘ ಗುಟುಕಲ್ ’ ನೋ.

**ಗುಳಿಗ** (ನಾ). (ಕರಾ) ಒಂದು ದೆವ್ವದ ಹೆಸರು ; ಧನಿಗಳಿಗೆ ‘ ಗುಳಿಗ ’ ಬಡಿದಿದೆ (ಕುಡಿಕೂ. ೨೫೯); ಗುಳಿಗನ ಉಪದ್ರದಿಂದ ರಕ್ತ ಕಾರಿ ಸತ್ತಳಂತೆ (ಕೋಮುದು. ೬); ಸದಾಗತಿ ಒಬ್ಬನು ಕಲ್ಲಿಲ್ಲದ ಗುಳಿಗನಂತೆ ಅತ್ತಿತ್ತ ಅಲೆ ಯುತ್ತಿದ್ದಾನೆ (ಹಗಂ. ೩೮). ‘ಗುಳ್ಳಿಕೆ’ ಪರಾ. [ ← ತುಳು. ಗುಳಿಗ ]

**ಗುಳಿಗಣ್ಣು** ‘ ಕುಟುಗಣ್ ’ ನೋ.

**ಗುಳಿಗದ್ದೆ** (ನಾ). ತಗ್ಗಿನ ಗದ್ದೆ : ಬಯಲ ದೊಡ್ಡ ಗದ್ದೆ ಗುಳಿ ಗದ್ದೆಯೂ ಎರಡು (ಸೌಇಂ. ೦೯೩೦, ಉಡುಚಿ. ೫೭೫-೦೭ ; ? ).

[ ಗುಳಿ₁ (< ಕುಟ್ಟಿ) + ಗದ್ದೆ (< ಗಟ್ದೆ) ]

**ಗುಳಿಗೆ₁, ಗುಟ್ಟಿಗೆ, ಗುಣಿಕೆ₂** (ನಾ). ೧. ಉಂಡೆ; ಉರುಳೆ : ಪಳಿಕಂ, ಪೇಳಿಗೆ, ವೀಳಿಗೆ, ಗುಳಿಗೆ . . . ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟ್ಟಿಯುಂ ಕುಳಂಗಳಾದುವು (ಶಮದ. ೨೨ ವೃತ್ತಿ); ಪ್ರಳಯದುರಿ ಕಾಳ ಕೂಟದ ಗುಳಿಗೆ ಪುರಾಂತಕ ಲಲಾಟ ನೇತ್ರಾನಳನೊಂದಳವಿಗವುಗ್ಗಳವು ವರ್ಗಳ ಮುಳಿಸುಗಳುಂ (ಶಂಶಥಾ. ೬-೬೬); ವ್ಯೋಮಕೇಶನು . . . ವಿಭೂತಿಯ ಗುಳಿಗೆಯನು ನೆಗ್ಗೊತ್ತಿ ಸರ್ವಾಂಗದಲಿ ಧೂಳಿಸಿದ (ಕುವ್ಯಾಳ. ೬-೦೧). ೨. ಮಾತ್ರೆ : ನಲವಿಂ ಬೆರಸದ ಭೀತಿಯ ಬಲದಿಂ ಬೆರಸಲ್ಕೆಕಾಂತೆಯರ್ಗನುರಾಗಂ ಪಟದಾಗೆ ಪುರುಷರೌಷಧಿ ಗುಳಿಗೆಯವೊಲ್ ಮನಕ್ಕೆ ಹೇಯಮುಂ ಪುಟ್ಟಿಸುಗುಂ (ದಕಳು. ೪-೯೫); ವೈದ್ಯರು ಎರಡು ಗುಳಿಗೆ ನುಂಗಿಸಿದರು (ರೂಢಿ). ೩. ಒಂದು ನಾಣ್ಯ : ಅಕ್ಷಾರದಲ್ಲೂ ಯದೇ ನಾಣ್ಯ ಕಂಠೀರಾಯ ಗುಳಿಗೆ ವರಹ (ಎಕ. XIV, ನಂಜನ. ೨೯೬-೦೭ ; 1770). ೪. (ಆಲಂ) ಸುಳ್ಳುಮಾತು : ಆ ಕಕ್ಕಶಿವನ ಗುಳಿಗೆಗಳಿಗೆ ನೀನು ಒಳ್ಳೇ ಮರುಳಾದೆ ? (ತುಂಸಿ. ೨೫). **ಗುಟ್ಟಿಗೆ :** ೧. ಭುಜಮೂಲದೊಳೆಸೆವ ವಿಭೂತಿಗುಟ್ಟಿಗೆಯ . . . ಭವಾನಿಯ ರಮಣನಂ ಕಾಣುತ್ತ (ವಿರೂಪಾ. ೬೦). **ಗುಣಿಕೆ₂ :** (*).

[ < ಸಂ. ಗುಟಿಕಾ ]

**ಗುಳಿಗೆ₂** (ನಾ). ಮಡ ; ಗುಲ್ಪ ; ಹರಡು : “ ಗುಳಿಗೆಯ ಘುಟಿಕೆ ಯಪ್ಪುದು ” (ಚತುನಿ. ೦೬). [ < ಸಂ. ಘುಟಿಕಾ ]

**ಗುಳಿಗೆಗಟ್ಟು** (ಕ್ರಿ). ೧. ಉಂಡೆಮಾಡು; ಉರುಳೆಯಾಗಿ ಕಟ್ಟು; ಮುದ್ದೆಮಾಡು. ೨. (ಆಲಂ) ತುತ್ತುಮಾಡು; ನುಂಗು: ಜವನಂ ಜವಗಿಡಿಸುವ ಕಳಿಕನಂ ಗುಳಿಗೆಗಟ್ಟುವ (ರಾಮಾಶ್ವ. ೯೪-೧೭). [ಗುಳಿಗೆ$_1$ + ಕಟ್ಟು$_1$]

**ಗುಳಿಗೆಯಿಕ್ಕು** (ಕ್ರಿ). ೧. ಉಂಡೆಮಾಡು; ಗುಳಿಗೆಕಟ್ಟು. ೨. ಗುಳಿಗೆ ಮಾಡಿ ತಿನ್ನು,-ನುಂಗು: ಹಾಲಾಹಲಮಂ ಗುಳಿಗೆಯಿಕ್ಕಲುಂ ಉರಿ ಲಿಂಗಮನಾಲಿಂಗಿಸಲುಂ . . . ನೆರೆವ ನಿಮ್ಮಿದಿರೊಳೊರ್ವ ಗೋಪ ಕುಟಿಲಂ ಗಂಡಗರ್ವಮಂ ಮೆರೆದಪಂ (ಜಗವಿ. ೭-೮೪ ವ). ೩. ಗುಳಿಗೆ ಯನ್ನು ಹಾಕು: ವಿಯಚ್ಚರನ ಬಾಯ್ಗೆ ಗುಳಿಗೆಯಿಕ್ಕಲು (ಸಾ ಕ್ರೆ ಭಾ. ೧೭-೧೭). ೪. (ರಹಸ್ಯವಾಗಿ) ವಿಷ ಪ್ರಯೋಗಮಾಡು; ಮದ್ದು ಹಾಕು: ಆ ಹುಡುಗನಿಗೆ ಯಾರೋ ಗುಳಿಗೆಯಿಕ್ಕಿದ್ದಾರೆ, ಆರೋಗ್ಯವಿಲ್ಲ (ರೂಢಿ). [ಗುಳಿಗೆ$_1$ + ಇಕ್ಕು]

**ಗುಳಿಗೆಯಿಡು** (ಕ್ರಿ). =ಗುಳಿಗೆಯಿಕ್ಕು ೨: ಬಳವೈರಿಯಂಬ ಸಾಧಕನಿಳೆಯಂ ಪೊಸ ಮಾಸೆ ಮಾತ ಶಶಿಮಂಡಲಮಂ ಗುಳಿಗೆಯಿಡೆ (ಅನಂತ. ೭-೮೫). [ಗುಳಿಗೆ$_1$ + ಇಡು$_1$]

**ಗುಳಿಗೆಯೆತ್ತು** (ಕ್ರಿ). ತುತ್ತುಮಾಡಿ ಎತ್ತು; ಕಬಳಿಸು: ಸಿಂಗದ ಪಿಂಡು ಪೂಡಿರೆ ಘನಾಧ್ವಮನೀಂಟುವ. ದಿಕ್ತಟಂಗಳಂ ನುಂಗುವಜಾಂಡಮಂ ಗುಳಿಗೆ ಯೆತ್ತು [ಪಾಠಾಂ. ಯಿಕ್ಕು]ವ ತಕ್ಕಿನೊಳಿಟ್ಟರರ್ ಕರಂ ಪಿಂಗಳನೇತ್ರನೆಯ್ದೆ ದನುಜಾರಿಯನಪ್ರತಿಮ ಪ್ರತಾಪನಂ (ಜಗವಿ. ೧೮-೩೦). [ಗುಳಿಗೆ$_1$ + ಎತ್ತು$_1$]

**ಗುಳಿಬೀಳು** 'ಕುಳಿಬೀಳು' ನೋ.

**ಗುಳಿಮಣೆ** (ನಾ). ಗುಳಿಗಳಿಂದ ಕೂಡಿದ ಮಣೆ; ಮಕ್ಕಳು ಒಂದು ಬಗೆಯ ಆಟದಲ್ಲಿ ಉಪಯೋಗಿಸುವ, ಕವಡೆ, ಹುಣಿಸೆ ಅಥವಾ ಹಾಲವಾಣದ ಬೀಜ ಮೊದಲಾದುವನ್ನು ಹಾಕಲು ಅನು ಕೂಲವಾದ ಗುಣಿಗಳಿಂದ ಕೂಡಿದ ಮಣೆ; ಚನ್ನೆಮಣೆ: ಮನವೆಳದಿರ ಬೇಕು ಗುಳಿಮಣೆಯಾಟಕೆ ಮುದಿಯಾದರೇನಂತೆ ತನುವು (ಚಂದ್ರವೀ. ೨೭-೭). 'ಅಟ್ಟುಗುಳಿ' ಪರಾ. [ಗುಳಿ$_1$ (<ಕುಟ್ಟಿ$_3$) + ಮಣೆ]

**ಗುಳು$_1$** 'ಕುಟು' ನೋ.

**ಗುಳು$_2$** 'ಕುಳ$_2$' ನೋ.

**ಗುಳುಕ್, ಗುಳುಕು** (ನಾ). ಒಂದು ಅನುಕರಣ ಶಬ್ದ: ಔಷಧಿಯ ಗುಳಿಗೆ ಯನ್ನು ಗುಳುಕ್ ಎಂದು ನುಂಗಿಬಿಡು (ರೂಢಿ). **ಗುಳುಕು**: ಕುದುರೆಯ ಹೊಟ್ಟೆಯ ಗುಳುಕು, ಕೀಲಾಲ – ವಾಜಿಧ್ವನಿ (ನಾನಾರ. ೬. ೫೪).

**ಗುಳುಕನೆ, , ಗುಳುಕ್ಕನೆ** (ಅ). ೧. ಒಂದು ಅನುಕರಣಾವ್ಯಯ; ನುಂಗುವುದನ್ನು ಅನುಕರಿಸುವ ಅವ್ಯಯ: ಮಗು ಗೋಲಿಯನ್ನು ಗುಳುಕನೆ ನುಂಗಿಬಿಟ್ಟಿತು (ರೂಢಿ). ೨. ಪಕ್ಕನೆ; ಒಮ್ಮೆಲೆ: ಗುಣವು ಯಿಲ್ಲದ ಗೂಗಿಯನೀಗ ಗುಳುಕನೆ ತಿಂದರೆ ಶೀಲವೂ (ಜಿದಾವ. ೭೭-೧೪). **ಗುಳುಕ್ಕನೆ**: ೧. ಒಂದೇ ಬಾರಿಗೆ ಗುಳುಕ್ಕನೆ ನುಂಗಿಬಿಟ್ಟ (ರೂಢಿ).

**ಗುಳುಗುಳಕ್ಕನೆ** (ದ್ವಿರುಕ್ತಿ): ಕಂಗಳೆರಮುಗಿವುತ್ತ ನೆಟ್ಟ ಧೈರ್ಯಂ ಗಳೊಂದುತ ಗುಳುಗುಳಕ್ಕನೆ [ಪಾಠಾಂ. ಗುಳುಕುಗುಳುಕ್ಕನೆ] ನುಂಗುತಂ (ಬಸವು. ೫೯-೩೦). [ಗುಳುಕ್ + – ಅನೆ$_1$]

**ಗುಳುಕು** 'ಗುಳುಕ್' ನೋ.

**ಗುಳುಕ್ಕನೆ** 'ಗುಳುಕನೆ' ನೋ.

**ಗುಳುಗು** (ಕ್ರಿ). (?).

**ಗುಳುಗಬಡು** = ಮುಳುಗುವಂತೆ ಮಾಡು; "ಮುಳುಗಿಸು" (ಸೂಪಶಾ. ೮೮): ನೀರಿನೊಳು ತುಪ್ಪವೆಚಿದದ ಮರಳುವೂಲು ಕಾಸಿ ನೀರಾಚಿಸಿಯೆ ಮೇಲೆ ಹತ್ತ ತುಪ್ಪವ ತೆಗೆದು . . . ಹತ್ತಿಹರಳರಸಮಂ ಪೂರೈಸಿ ಕಾಸಿ ಕೆಮ್ಮಣ್ಣಳಿಯ ಗುಳುಗ [ಪಾಠಾಂ. ಗುಳಗು, ಯಳಿಯು. ಗುರುಳ]ಬಿಡಲದಟಿ ನಾತಂ ಕೆಡುವುದು (ಸೂಪಶಾ. ೨-೦೯). [?]

**ಗುಳುಗುಳನೆ** 'ಗುಟುಗುಟನೆ' ನೋ.

**ಗುಳುಗುಳಿಸು** 'ಗುಟುಗುಟಿಸು' ನೋ.

**ಗುಳುಗುಳು** 'ಗುಟುಗುಟು' ನೋ.

**ಗುಳುಗುಳುಗುಪ್ಪಂಡಿ** (ನಾ). ಮಕ್ಕಳು ಆಡುವ ಒಂದು ಬಗೆಯ ಆಟ: ಮಕ್ಕಳಿಬ್ಬರೂ ಗುಳುಗುಳುಗುಪ್ಪಂಡಿಯಾಟಕ್ಕಾಗಿ ಮಣ್ಣು ತರಲು ಹೋಗಿ ಹುತ್ತದಲ್ಲಿ ಕೈಹಾಕಿ ಹಾವು ಕಚ್ಚಿ ಸಾಯುತ್ತಾರೆ (ಶರಚ. ೭೭೦). 'ಉಲುಗು ಲುಗುಂಪ್ಪಂಡೆ' ಪರಾ. [?]

**ಗುಳುಚ್ಚ** 'ಗುಲುಚ್ಚ' ನೋ.

**ಗುಳುದಾಳಿ** 'ಗುಳದಾಳಿ' ನೋ.

**ಗುಳುಪು** 'ಗುಳಾಪು' ನೋ.

**ಗುಳೂಚಿ, ಗುಳೂಚೆ** (ನಾ). ಒಂದು ಬಗೆಯ ಬಳ್ಳಿ; ಅಮೃತವಳ್ಳಿ: ಜಳದೋಳ್ ರಾಸ್ನೆ ಗುಳೂಚಿ ಸಬ್ಬಸಿಗೆ ಬಿಲ್ವಂ ಪದ್ಮಕಂ ನಾಗರಂ . . . ಕುಡೆ ಕಷಾಯಂ ಮಾಡಿ ವಾಹಕ್ಕೆ ಕೇವಲ ವಿಷಾಯೋಗಮೆ ಮಾಣಸಲ್ಕೆ ನೆರ್ಗುಂ ನಾನಾವಿಧ ವ್ಯಾಧಿಯಂ (ಲೋಕೋಪ. ೯-೨೩೮); ಅನಲಂ ಗುಳೂಚಿ ಮೊಸರಳ್ಳಿನಿತುಮನೊದಗೂಡಿ ಕೊಡುವುದಿರ್ವತೆ.ಠ್ಠಂದು ದಿನ ವರೆಗಂ ಕುದಿರೆಗೆ (ಅಶ್ವಶಾ. ೭-೫೨). **ಗುಳೂಚೆ**: ಜಳದಂ ಶುಂಠಿ ದುರಾಲಭೆ ಗುಳೂಚೆಯೆಂಬಿನಿತುಮಂ ಕಷಾಯಂಗೊಂಡಾಗಳ್ ಕುಡಿಯ ವಾತ ದೋಷಂ ಸಲೆ ವಿಷಮಜ್ವರಂ ದಿನತ್ರಯಕ್ಕುಪಶಮಿಕುಂ (ಲೋಕೋಪ. ೯-೦೭). [<ಸಂ. ಗುಡೂಚೀ]

**ಗುಳೂಚೆ** 'ಗುಳೂಚಿ' ನೋ.

**ಗುಳೂರಿಗೆ, ಗುಳ್ಳೋರಿಗೆ** (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ,-ಹೂರಿಗೆ: ತಂಡತಂಡದ ಪಾಕ ಷಡುರಸ ಭಕ್ಷವು ಮಂಡಿಗೆ ಫೇಣಿ ಗುಳೂರಿಗೆಯೂ ವುಂಡಲಿಗೆಯು (ಚಂದ್ರಾವ. ೫). **ಗುಳ್ಳೋರಿಗೆ**: ಗೋಲಬಾಹ್ಯ ಲೆನ್ಸದ ಆಕಾರವು ಗುಳ್ಳೋರಿಗೆಯ ಹಾಗೆ ಇರುತ್ತದೆ (ಮುಂಬಯಿ. ೬-೫೨); ಗಂಗವ್ವ ತುಪ್ಪದಲ್ಲಿ ಅನಾರಸ ಗುಳ್ಳೋರಿಗೆಗಳನ್ನು ಕರಿದು ಮಾವಾಲೇದಾರರ ಮನೆಗೆ ಕಳಿಸಬಹುದಿತ್ತಲ್ಲ (ಗಂಮಾಯಿ. ೩೩); ಗುಳ್ಳೋರಿಗೆಯಂತೆ ಉಬ್ಬಲು ಪಂಡಿತನಿಗೆ ತಡೆಹಿಡಿಯಲಿಲ್ಲ (ಸಮುಜೀ. ೯೦೭) [ಗುಳ್$_3$ (<ಗುಬು) + ಪೂರಿಗೆ]

**ಗುಳೆ** 'ಗೂಳೆಯ' ನೋ.

**ಗುಳೆಏಳು** 'ಗೂಳೆಯೇಳು' ನೋ.

**ಗುಳೆಕಟ್ಟು** 'ಗುಳೆಗಟ್ಟು' ನೋ.

**ಗುಳೆಕಾರ** 'ಗೂಳೆಕಾರ' ನೋ.

**ಗುಳೆಕಿತ್ತಿಸು** (ಕ್ರಿ). ನೆಲೆಬಿಟ್ಟು ಹೊರಡಿಸು; ಕಂಬಿಕೀಳಿಸು; ಹೊರ ದಬ್ಬು: ಅವನನ್ನು ವಾಡೆಯಿಂದ ಗುಳೇಕಿತ್ತಿಸುವದಂತೂ ತೀರ ಕಠಿನ ವಾಗಿತ್ತು (ದೀಪಶ. II, ೧೧೦). [ಗುಳೆ (<ಗೂಳೆಯ) + ಕಿತ್ತಿಸು$_1$]

**ಗುಳೆಕೀಳು** (ಕ್ರಿ). ಸ್ಥಳಬಿಡು; ಕಂಬಿಕೀಳು: ಶ್ಯಾಮರಾಯನ ಸಮ್ಮುಖ ದಲ್ಲಿ ವಿರಾಜಮಾನವಾದ ಶಿಕಡಿ ಗುಳೇಕಿತ್ತಿತ್ತು (ದೀಪಶ. II, ೧೦). [ಗುಳೆ (<ಗೂಳೆಯ) + ಕೀಳು$_1$ (<ಕೀಟ್$_1$)]

**ಗುಳೆಗಟ್ಟು, ಗುಳೆಕಟ್ಟು** (ಕ್ರಿ). ಬರಗಾಲ ಮುಂತಾದ ಕಷ್ಟ ಕಾಲ ದಲ್ಲಿ ವಲಸೆ ಹೋಗಲು ಗಂಟುಕೂಡು; ಒಟ್ಟಿಗೆ ಸೇರು: ಊರ ಹೊರಗೆ 'ಗುಳೇಗಟ್ಟಿ' ಕೂಲಿಗೆಂದು ಬಂದ ಗುಳೇದಗುಡ್ಡದ ಕಡೆಯ ಅನೇಕ ಕನ್ನಡಿಗರನ್ನು ಅಂದು ನಾಟಕಕ್ಕಾಗಿ ಆಮಂತ್ರಿಸಿದ್ದೆವು (ಜನನಾ ೦ ಕೃಸಾ.ವನ). **ಗುಳೆಕಟ್ಟು**: ಈಗಾಗಲೆ ಹದಿನೆಂಟು ಸಾವಿರ ಜನ ಗುಳೆಕಟ್ಟಿ ಹೋಗಿದೆಯೆಂದು ಸೂರಸಿಂಗನು ಕೇಳಿದ್ದನು (ಕೃಣಾಸ. ೭೪).

ಗುಳಿಕಟ್ಟಿಕೊಳ್ಳು=ಗೂಳೆಯೇಳು: ಯಾವ ಬೆಳೆಗಳೂ ಬರಲಿಲ್ಲ. ಜನರು ಕಂಗಾಲಾಗಿ ಗುಳಿಕಟ್ಟಿಕೊಂಡು ಹೋಗಹತ್ತಿದರು (ಚಂದ್ರಶಾ. ೮) ; ಹಳ್ಳಿಯ ಜನರು ಗುಳೇಕಟ್ಟಿಕೊಂಡು ಹೋದವರು ಈಗ ಊರಿಗೆ ತಿರುಗಿ ಬರುತ್ತಿರುವರು (ಅನ್ನ. ೬೬) ; ಎರಡು ದೇಶಗಳಿಂದಲೂ ನಿರಾಶ್ರಿತರ ತಂಡಗಳು, ಗುಳೇಕಟ್ಟಿಕೊಂಡು ಓಡಾಡತೊಡಗಿದವು (ಹೇಮಂತ. ೨೮೫).

[ ಗುಳಿ (<ಗೂಳೆಯು) + ಕಟ್ಟು$_1$ ]

**ಗುಳಿತೆಗೆ** ' ಗೂಳೆಯಂದೆಗೆ ' ನೋ.

**ಗುಳಿಬೀಳು** (ಕ್ರಿ).=ಗುಳಿಗಟ್ಟು: ಒಂದು ಮನೆಯಲ್ಲಿ ಗರ್ಭಿಣಿ . . . ಮತ್ತೊಂದು ಮನೆಯಲ್ಲಿ ದೇನೆಬಿದ್ದ ಮುದುಕ . . . ಇವರೆಲ್ಲ ಗುಳಿಬಿದ್ದು ಹೋಗಬೇಕು (ಮುಕ್ತ ಮು. ೧೦೪).

[ ಗುಳಿ (<ಗೂಳೆಯು) + ಬೀಳು$_1$ (<ಬೀೞ್$_1$) ]

**ಗುಳಿಯ** (ನಾ). ಸಣ್ಣ ಚಿಪ್ಪು : ಪಿಂಗೆ ಪಿನವದುಗ್ಧಮಂ ಗುಬ್ಬಿ(ಬಿ)ಯ ಗೂ(ಗು)ಳಿಯುದೊಳೆ ಕಿಃಪಿ ಸುಟ್ಟು ನವನೀತದಿನೆಚ್ಚುಗೆ ಮೇಣ್ ಗುರುಗುಂಜೆಯ ಬೇರುಗಳಂ ಕೊಂಡೆಚ್ಚು ಗಕ್ಷಿಪುಷ್ಪಂ ಕಿಡುಗುಂ (ಲೋಕೋಪ. ೯-೨೦೦). [ <ಗುರುಳಿ ]

**ಗುಳಿಹೋಗು** ' ಗೂಳೆಯಹೋಗು ' ನೋ.

**ಗುಳೋಪು** ' ಗುಳಾಪು ' ನೋ.

**ಗುಳ್ಕನೆ** (ಅ). ಒಂದು ಅನುಕರಣಾವ್ಯಯ ; ನುಂಗುವುದನ್ನು ಅನುಕರಿಸುವ ಅವ್ಯಯ : ಗುಳ್ಕನೆ ನುಂಗಿದ ಕೊಳದು ಪಳ್ಕೆಗೆ ಬಂದಯ್ದೆ ವೇಳ್ಕೆಗಟ್ಟುವ ಪದದೊಳ್ (ಶಬಾರ. ೯೯೬-೬) ; ಸವಿಯುೂಟಕ್ಕೆ ಮನವಿಟ್ಟು . . . ನಾಲಗೆಯೊಳಿರಿಸಿ ಗುಳ್ಕನೆ ನುಂಗುವಾಗ ವೇ ಗತಿಯಾಗಿ (ವೀಶ್ವೆಪು. ೩ ೪-೨೦). [ ಗುಳ್$_0$ + - ಅನೆ$_1$ ]

**ಗುಳ್ಳ**, ಗುಳ್ಳ$_1$, ಗುಳ್ಳೆ$_2$ (ನಾ). ಬದನೆಯ ಜಾತಿಗೆ ಸೇರಿದ ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ : " ಗುಳ್ಳಂ, ಬೃಹತಿ " (ವಸ್ತುಕೋ. ೩೮-೭೦) ; " ನಿದಿಗ್ಧಿಕೆ, ವ್ಯಾಘ್ರೀ, ಬೃಹತೀ, ಕುಲೀ, ಕ್ಷುದ್ರಾ, ದುಃಸ್ಪರ್ಶೆ, ರಾಷ್ಟ್ರಿಕೆ " (ನಾಚಿರಾ. ೬) ; ಅಗಸೆ ಪೆಸಱವರೆ ಬಾವುಜೆಗೆ ಗುಳ್ಳ ವೆಳ್ಳುಟ್ಟು ಬಳ್ಳಿಸೊರೆಯುಂಬವನಿಕ್ಕುಗೆ ಪಾಲೊಳ್ (ಲೋಕೋಪ. ೯-೧೯೦); ಮರುತ ಶ್ಲೇಷ್ಮಜ್ವರಮಂ ಪರಿಹರಿಸುಗುಮಮರ್ದುವಳ್ಳಿ . . . ಗುಳ್ಳಂ ಶುಂಠಿಗಳಿರೆ ಕಾಯ್ದ ಕಷಾಯಮದು ದಿನತ್ರಯದಿಂದಂ (ಕಲ್ಯಾಕಾ. ೩-೩೫) ; ಮತ್ತೆಯುಂ ಕೀಳ್ಕೊನ್ನ ನೆಃಗಿಲಲುತ್ತು ಗುಳ್ಳದ ಬೀಜವಂ ನೆಟ್ ಬಿತ್ತು ವಂದದಿ (ಬಸಪು. ೬೦-೫೦) ; ವಿತ್ತ ಕೆಲವಂ ಗುಳ್ಳದೆಳೆಗಾಯ ಹರಳಂತೆ ಕತ್ತರಿಸಿಯೊಗರುಹೋಹಂತುಕ್ಕರಿಸಿಕೊಂಡು (ಸೂಪಶಾ. ೪-೩೨). ' ನೆಲಗುಳ್ಳ ', ' ವಾದಿರಾಜಗುಳ್ಳ ' ಪರಾ. ಗುಳ್ಳ$_2$ : " ಗುಳಂ ಬೃಹತಿಯಕ್ಕು " (ಮಂಗರಾ. ೩೯-೨೯) ; "ಹಿಂಗುಳಿ=ಗುಳದಕಾಯಿ" (ಗಂಗಾಮ. ೩೪೯.) ಗುಳ್ಳೆ$_2$: ಪುರಾತನರು ನುಡಿದಂತೆ ನಡೆಯದವರೆಲ್ಲ ಹಾಳೂರೊಳಗೆ ನರಿ ಗುಳ್ಳ[ಪಾಠಾಂ. ಗೂಳೆ]ಯ ತಿಂದು ಬಗುಳಿದಂತೆ ಕಾಣ (ಚನ್ನಪ. ೪. ೦೮೦-೪೯೬). [ ದೇಶ ತುಳು. ಗುಳ್ಳ, ಗುಳ್ಳೊ ]

**ಗುಳ್ಳಕೆ** (ನಾ). ಒಂದು ಕ್ಷುದ್ರ ದೇವತೆ (?) : ಶೀರಿಯಾ ಶಟವಿ ಗುಳ್ಳಕೆ ಪೊಳಕಾಯಿ . . . ಎಲ್ಲನಾ ನಾಕದಾ ಕಳ್ಳದೇವತೆಗಳನಿಲ್ಲದೆ ಒಲಿಸಿದರು ಪೊಳ್ಳಲ್ಲದೆ ಗತಿಯಲ್ಲ (ಪಿಶಾಸು. ೫೮-೨). ' ಗುಳಿಗ 'ಪರಾ. [ ? ]

**ಗುಳ್ಳಗಂಜಿ** ' ಗುರುಗಂಜಿ ' ನೋ.

**ಗುಳ್ಳಪಟೆ** ' ಗುಳಪಪ್ಪಡಿ ' ನೋ.

**ಗುಳ್ಳಿ** (ನಾ). (?) : ಸಣ್ಣಕ್ಕಿ ಬೋನಾಯ್ತು ಸಲೆ ತಂಡುಲ ಬೆಣ್ಣೆಕಾಸಿದ ಘೃತ . . . ಬೋನದ ಗುಳ್ಳಿಯು ಕರುಣ ಪಂಚಭಕ್ಷ್ಯವು ಬೋನಹತ್ತಸರ ಪಾಯಸವು ಬೋನಕ್ಕೆ ಹಸ್ತ ಪುರುಷರ ಂಗಿ ನೀಡಲು ಬೋನವೆ ಷಡುರಸಾನ್ನಗಳು (ದೇವಾಂಪು. ೬-೨೨೯). [ ? ]

**ಗುಳ್ಳಿಗಣ್ಣ** ' ಗುಳ್ಳೆಗಣ್ಣ ' ನೋ.

**ಗುಳ್ಳಿಗಣ್ಣು** ' ಗುಳ್ಳೆಗಣ್ಣು ' ನೋ.

**ಗುಳ್ಳಿಱು** (ಕ್ರಿ). ಗೊಳ್ಳೆಂದು ಬಲವಾಗಿ ಧ್ವನಿ ಹೊರಡುವಂತೆ ನಗು ; ಗೊಳ್ಳೆಂದು ನಗು : ಪೊಳ್ಳೆನುತ ಸುರವಾರನಾರಿಯರಳ್ಳೆಗಳ ಹಿಡಿದುಬ್ಬು ನಗೆಯಲಿ ಗುಳ್ಳಿಱಿದು ಗುಹಿಲಿಕ್ಕಿದರು ಪರಿ ಲೇಸುಲೇಸೆನುತ (ಕುಂರಾ. ೬-೨೨-೨೫). [ ಗುಳ್$_1$ (<ಗೊಳ್) + ಇಱಿ$_1$ ]

**ಗುಳ್ಳುಗಾವಿ** (ನಾ). ಒಂದು ಬಗೆಯ ವನಸ್ಪತಿ (?) : ಗುಳ್ಳುಗಾವಿಯನು ನೇರಿಲ ಕೊನರನು ಅಕ್ಕಿಗಚ್ಚಿನಲ್ಲಿ ಅರೆದು ಜೇನುವೆರಸಿ ಕುಡಿಯ ಹನ್ನೆತ್ತರು ಕೆಡುವುದು (ಸಕವೈ. ೦೯೬). [ ? ]

**ಗುಳ್ಳೆ$_1$** ' ಗುರುಳೆ ' ನೋ.

**ಗುಳ್ಳೆ$_2$** ' ಗುಳ್ಳ ' ನೋ.

**ಗುಳ್ಳೆ$_3$** (ಗು). ಸಣ್ಣ ; ಪುಟ್ಟ. ' ಗುಳ್ಳೆನರಿ ' ಪರಾ. [ <ಕುಳ್ಳ ]

**ಗುಳ್ಳೆಗಣ್ಣ**, ಗುಳ್ಳಿಗಣ್ಣ (ನಾ). ಕಣ್ಣಿನ ಗುಡ್ಡೆಯಮೇಲೆ ಬೊಕ್ಕೆ ಎದ್ದಿರುವವನು : (+). ಗುಳ್ಳಿಗಣ್ಣ : ಅರ್ಥಾನುರೂಪಾನ್ವರ್ಥಕ್ಕೆ – ಹೆಟಗಾಲಂ . . . ಗುಳ್ಳಿಗಣ್ಣಂ, ಹಱಿದಲೆಯಂ – ಎಂಬಂತೆ (ಶಮದ. ೬೬ ಪ್ರಯೋ). [ ಗುಳ್ಳೆಗಣ್ಣು + – ಅ$_7$ ]

**ಗುಳ್ಳೆಗಣ್ಣು**, ಗುಳ್ಳಿಗಣ್ಣು(ನಾ). ಕಣ್ಣಿನಗುಡ್ಡೆಯ ಮೇಲೆ ಬೊಕ್ಕೆ ಎದ್ದಿರುವ ಕಣ್ಣು : (+). ಗುಳ್ಳಿಗಣ್ಣು : ಗುಳ್ಳಿಗಣ್ಣಿನವರ ದೃಷ್ಟಿಯಲ್ಲಿ ದೋಷವಿರುತ್ತದೆ (ಮುಂಬಯಿ. ೬-೧೪೪) ; ಇವ . . . ಗುಳ್ಳಿಗಣ್ಣಿನವ ; ಮುಖ ಬಲು ರಾವು (ಪೀಡಿಮ. ೪).

[ ಗುಳ್ಳೆ$_1$ (<ಗುರುಳೆ) + ಕಣ್ಣು (<ಕಣ್) ]

**ಗುಳ್ಳೆಗೊಟ್ಟೆ** (ನಾ). ಒಂದು ಬಗೆಯ ಆಟ ; ಅಟ್ಟುಗುಳಿಯಾಟ : ಗುಳ್ಳೆಗೊಟ್ಟೆ ಬಟ್ಟುಳಿಸೆಂಡು ಪೊಡೆಸೆಂಡೆಂಬಿವನಾಡುತ್ತೊಡವಳೆದರ್ (ಶಂಪಥಾ. ೨-೩೦). ' ಗೊಟ್ಟುಗುಱಿ ' ಪರಾ. [ಗುಳ್ಳೆ ? + ಗೊಟ್ಟೆ$_1$]

**ಗುಳ್ಳೆನರಿ** (ನಾ). ೧. ಒಂದು ಬಗೆ ನರಿ ; ಸಣ್ಣ ಜಾತಿಯ ನರಿ : ಅವರಂಥ ಪೆದ್ದರಂತೀರಿ ? ಜೊತೆಗೆ ಗುಳ್ಳೆನರಿಯಂಥ ಕುಯುಕ್ತಿವಂತರು (ಪುನರು. ೨೪೫) ; ಸಿಂಹದ ತಲೆಯ ಮೇಲೆ ಗುಳ್ಳೇನರಿಯ ನಿಪಿಪ್ರಹರ (ಕೋಹಿನೂ. ೩೨). ೨.(ಆಲಂ)ಒಳಗಿನ ಭಾವನೆಯನ್ನು ತೋರ್ಪಡಿಸದ ವ್ಯಕ್ತಿ ; ಕಪಟಿ : ಪ್ರೊಫೆಸರು ನನ್ನ ವಿಷಯದಲ್ಲಿ ಪೂರ್ಣ ಅಂತಃಕರಣ ಉಳ್ಳವರಾಗಿದ್ದರೂ, ಅದನ್ನು ಹೊರಗೆ ತೋರ್ಪಡಿಸುತ್ತಲೇ ಇರಲಿಲ್ಲ ಆ ಗುಳ್ಳೆನರಿ (ಹೊಸಕ್ಷ. ೮). ಈಗಿನ ಕಾಲದಲ್ಲಿ ರಾಜಕೀಯದಲ್ಲಿ ಗುಳ್ಳೆನರಿಗಳೇ ಹೆಚ್ಚು (ರೂಢಿ). [ ಗುಳ್ಳೆ$_3$ + ನರಿ/ತಮಿ. ಕುಳ್ಳನರಿ ]

**ಗುಳ್ಳೆಮುತ್ತು** (ನಾ). ಕೃತ್ರಿಮವಾದ ಮುತ್ತು ; ಟೊಳ್ಳಾದ ಮುತ್ತು : (+). [ ಗುಳ್ಳೆ$_1$ (<ಗುರುಳೆ) + ಮುತ್ತು$_6$ ]

**ಗುಳ್ಳೆರೋಗ** (ನಾ). ಮೈಮೇಲೆ ಗಡ್ಡೆ ಬರುವ ಒಂದು ರೋಗ; ಪ್ಲೇಗು : ಭರಮಪ್ಪನಾಯಕನ ಆಳಿಕೆಯಲ್ಲಿ ಕ್ರಿ. ಶ. ೧೭೦೩-೪ ರಲ್ಲಿ ಗುಳ್ಳೆರೋಗ ಪ್ರಾಪ್ತವಾಯಿತು (ಚಿತ್ರಪಾ. ೮ ಉಪೋದ್ಘಾತ) ; ಸ್ವಭಾನುಸಂ॥ ದಲ್ಲಿ ಗುಳ್ಳೆರೋಗ ತಗಲಿ ಜನ ಲಯವಾದದ್ದು (ಚಿತ್ರಪಾ. ೫ ಅನುಬಂಧ ೨). [ ಗುಳ್ಳೆ$_1$(<ಗುರುಳೆ) + ರೋಗ ]

**ಗುಳ್ಳೋರಿಗೆ** ' ಗುಳೂರಿಗೆ ' ನೋ.

**ಗುಱಿ** ' ಕುಱು$_2$ ' ನೋ.

**ಗುಱಿಕಾಱ**, ಗುರಿಕಾರ, ಗುರಿಗಾರ, ಗುರ್ಕಾರ (ನಾ). ೧. ಗುರಿ ಹೊಡೆಯುವುದರಲ್ಲಿ ನಿಪುಣ; ಈಡುಗಾರ. ೨. ಅರಮನೆ; ಗಡಿಪ್ರದೇಶ, ಮೊದಲಾದ ಕಡೆಗಳಲ್ಲಿ ಮೇಲ್ವಿಚಾರಣೆ ಮಾಡಲು ನಿಯುಕ್ತನಾದ ಉನ್ನತಾಧಿಕಾರಿ ; ಗ್ರಾಮಣಿ : ಸುರಪತಿಮುಖ್ಯರೆಣ್ಬೆಸವೆಳಗಡಿಯೊಳ್ಗುಱಿಕಾಱರೆಂಬಪೋಲ್ (ಅಪ್ರತಿ. ೭೦-೭) ; ದೊರೆರಾಯ

ನರಸರಾಜೇಂದ್ರ ಸಾಕಿದ ಬಲು ಗುಱಿಕಾಱ ಮನ್ನೆಯರುಗಳ ಓರಿದು ವಿ ಂ ಗ ಡಿ ಸು ತಾ ಱ ೀ ಳು ಪೌಜುಗಳಿಂದರಿಬಲಾಂಬುಧಿಯನು ವೊಗೆದ (ಕಂನವಿ. ೧೮-೯೯) ; ಓಂತಣ್ಣಾ ಗುಱಿಕಾಱರಾ ಪಡೆವಳರ್ ಬಂದಿರ್ದರ್ (ಚಳವಿ. ೫-೭೯). **ಗುರಿಕಾರ:** ೧. " ಕೃತಹಸ್ತಃ, ಸುಪ್ರಯೋಗ ವಿಶಿಖಃ, ಕೃತಪುಂಖಃ – ಹಿ ಗುರಿಕಾರನ ಹೆಸರು" (ಸಿದ್ಧಾಂತಿ. ೩೩೦). ೨. ಅರಮನೆ ವಳಬಾಗಿಲ ಗುರಿಕಾರ್ರು ಚಂನಪ್ಪನವರು . . . ಮಾಡ್ಸಿದ . . . ಸೇವೆ (ಎಕ. III, ಮಂಡ್ಯ. ೯೫-೩; 1825) ; ಆ ಬೇಡರು ಮಾತಂಗನೆಂಬ ಗುರಿಕಾರ ಸಹ ಬಿಸಿಲಿಗಾರದೆ ನಾವಿರುವ ಎಲವದ ಮರದ ನೆಳಲ ಸೇರಿ ಬಳಲಿಕೆಯ ತೀರಿಸಿ ಕೊಂಡು (ವಚಕಾ. ೩); ಸಜ್ಜೆಯ ಗುರಿಕಾರನಿಗೆ ಮರ್‍ಯ್ಯಾದೆ ಮಾಡಿದ್ದು ಗ. ೧೦೦೦ (ಬಟ್ಟಅ. ೫೭-೧೨); ವೆಂಕಟು ಗುರಿಕಾರನಾದರೂ ಶ್ರೀಮಂತನಲ್ಲ (ಜಾರುದಾ. ೩೩) ; ಹಳ್ಳಿಗಳಲ್ಲಿ ಪಟೇಲರು ಇರುವ ಹಾಗೆ ಆ ಕಾಲದಲ್ಲಿ ಗ್ರಾಮಕ್ಕೊಬ್ಬ ಗುರಿಕಾರನಿದ್ದನು (ಕೋಟಚಿ. ೧) ; ಕುಡಿಯರ ಸಂಸಾರಕ್ಕೆ ಅವನೇ ಗುರಿಕಾರ (ಕುಡಿಕೊ. ೧) ; ಮಾಧವ ಸೋಮಯಾಜಿ ಆ ಅಗ್ರಹಾರ ಗಳಿಗೆಲ್ಲ ಮೇಲಾಳು, ಅಲ್ಲವೆ ಗುರಿಕಾರನು (ನಾಡೋಜ. ೬೪); ಊರಿನ ಗುರಿ ಕಾರರು ಒಬ್ಬೊಬ್ಬರು ಬಂದಿರಲಿಲ್ಲ (ಮರಮ. ೩). **ಗುರಿಗಾರ:** ೧. "ಗುರಿ (ಯಿಟ್ಟು) ಹೊಡೆಯುವುದರಲ್ಲಿ ಕುಶಲನಾದವನು, ಅಭ್ಯಾಸ ಪಡೆದವನು (ಮುಖ್ಯವಾಗಿ ಬಂದೂಕು ಹೊಡೆಯುವುದರಲ್ಲಿ ಒಂದು ಗೊತ್ತಾದ ಸಾಮರ್ಥ್ಯಪಡೆದವನು); ಗುರಿಗಾರ" (Marksman. ಇಂಕನಿ) ; ಹೊತ್ತಿರುವ ಕೋವಿಗಳ ಗುರಿಗಾರರೊಡವೆರದು . . . ಮುತ್ತಿದರ್ ಗೋರಿಬೇಂಟೆಗೆ ಕಾಡನೊತ್ತರದಿ (ಕಾಲೂರ.೯೩-೧೪೦). ೨. ಬಿಲ್ಲವರ ಮುಖ್ಯಸ್ಥನನ್ನು 'ಗುರಿ ಗಾರ' (Gurikar) ನೆಂದು ಕರೆಯುವರು (ತುಳುನಾ. ೩೩೨). **ಗುರ್ಕಾರ:** ೨. ಹಿಂದಿನಕಾಲವಾದರೆ ತಮ್ಮ ಜಾತಿಯಲ್ಲಿ ಹೀಗೇನಾದರೂ ಆಗಿದ್ದರೆ, ನಾಲ್ಕಾರು ಮಾಗಣೆಯ ಗುರ್ಕಾರ ಕಟ್ಟುಹಾಕಿ ಬಹಿಷ್ಕಾರ ಹಾಕುತ್ತಿದ್ದ (ಹೊಸಕ್ಕ. ೫೯) ; ಗುರ್ಕಾರರ ದಯೆಯಿಂದ ನನ್ನ ಹೆಣ್ಣಿನಮೇಲೆ ದಿಟ್ಟ ನಡುವ ಧಿಮಾಕು ಈ ಮಾಗಣೆಯಲ್ಲಿ ಯಾವ ಗಂಡೆದೆಗೆ ಇದೆ ಎಂತೇನೆ (ಹೊಸಕ್ಕ. ೫೦). [ ಗುಱಿ (<ಕುಱು₂) + – ಕಾಱ ]

**ಗುಱಿಗಾಣ್** (ಕ್ರಿ). ಗುರಿಯನ್ನು ಮುಟ್ಟು,—ತಾಕು ; ಗುರಿಸಾಧಿಸು; ಕಾಮನೇಸು ಗುಱಿಗಂಡುದು ತಂಡದೆ ನಿಂದ ನಂದನಂ ತಳೆದುವು . . . ಕರ್ಣನ ಬೆಳ್ಪನಂದದಮಂ (೧೧೯. ೬-೩೯). [ಗುಱಿ (<ಕುಱು₂)+ಕಾಣ್]

**ಗುಱಿಪಾಳ** (ನಾ). ಒಬ್ಬಾತನ ಹೆಸರು: ಎಱೆಗಜ್ಜ ಮಹಾಮಾತ್ಯಂ × × ಱಿದಂ ನತ ಗಂಗವಾಹಿಗೆ ಸಫಳವಾತೆಯಿಂ ಗುಱಿಪಾಳನ್ (ಎಕ. II, ೦೫೦-೮ ; ಸು. ೯೬೦). [ ? ]

**ಗುಱಿಮಾಡಿಸು** (ಕ್ರಿ). ಗುರಿಯಾಗುವಂತೆ ಮಾಡು ; ಈಡಾಗುವಂತೆ ಮಾಡು : ಅರ್ಗೆ ಸತಿ ನೀಂ ಪೆಸರೇಂ ನಿನಗಿಂತು ತೋರ್ಪ ಜವ್ವನ ದೊಳಗೀ ತಪಕ್ಕೆ ಗುಱಿಮಾಡಿಸಿದುಬ್ಬೆಗವಾವುದು (ಕಾದಂಪೂ. ೬೮೫). [ ಗುಱಿಮಾಡು + – ಇಸು₃ ]

**ಗುಱಿಮಾಡು,** ಗುರಿಮಾಡು (ಕ್ರಿ). ಗುರಿಯನ್ನಾಗಿ ಮಾಡು ; ಈಡು ಮಾಡು : ನವಯೌವನೆ ಮರುಳಾದೆ ಈತಂಗೆ ಗುಱಿಮಾಡಿದಪೆ ನಿನ್ನ ಮನುಮತಂಗೆ (ಕಾದಂಪೂ. ೪೮೨) ; ಹಾಹಾ ಎಲೆ ಅಯ್ಯ . . . ಕೋಪದ ಕಾಡುಗಿಚ್ಚಿಗೆ ಅಡವಿಯ ಗುಱಿಮಾಡದಿರಿ (ಸಿದ್ಧವ. ಕ. ೦೮-೫೩) ; ನಿಜಪತಿ . . . ಅಂಗಜನಸಮಾಸ್ತ್ರಸಂತತಿಗೆ ತ ತ್ಸ ತಿ ಯ ೦ ಗುಱಿಮಾಡಿ ಕಾಡಿದಂ (ದಶಕು. ೧೨-೧೩೭) ; ಜಲಧಿಯಲಿ ಜಂಗುಳಿಸಿ ಕಂಧರಕೆ ಕುಲಿಶ ಭೀತಿಯ ಬೀಱ ಕಣೆ ಬಳಿಸಲಿಸಿ ಹರಿದಾಡಿದುವು ಸು ಭ ಟ ರ ಗೋಣ ಗುಱಿಮಾಡಿ (ಕುಮ್ಮಾಭಿ. ೪-೦೯). **ಗುರಿಮಾಡು :** ಅದರಲ್ಲಿನ ಚರಿತ್ರಾಂಶ ವನ್ನು ಸೂಕ್ಷ್ಮವಿಮರ್ಶೆಗೆ ಗುರಿಮಾಡಬಾರದೆಂದು ಓದುವ ಮಹನೀಯರಲ್ಲಿ ವಿನಂತಿ (ಪಂಗಾಳ್ಳಿ. ೩ ಮುನ್ನುಡಿ).

**ಗುಱಿಮಾಡಿಕೊಳ್**=ಉದ್ದೇಶಿಸು ; ಬಯಸು : ದೆಸೆಗಳ ಮೇರೆಯಂ ನಿಱಿಸಿ ಪೋಪುದುಮಾಭರಣ ಪ್ರಸೂನ ಸದ್ವಸನ ವಿಲೇಪನಾದಿಗಳೊಳಂ ಕೆಲವಂ ಗುಱಿಮಾಡಿಕೊಂಡು ಸೇವಿಸುವುದುಂ (ಆದಿಪು. ೬-೮).

[ ಗುಱಿ (<ಕುಱು₂) + ಮಾಡು₁ ]

**ಗುಱಿಮಾನಿಸ** ' ಗುಱಿಪಾನಿಸ ' ನೋ.

**ಗುಱಿಯಾಗು,** ಗುರಿಯಾಗು (ಕ್ರಿ). ಈಡಾಗು ; ಪಕ್ಕಾಗು ; ಪಾತ ವಾಗು ; ಲಕ್ಷ್ಯವಾಗು : ಮನ್ಮಥಕ್ರೀಡೆಗೆ ನೋಡೆ ನಾಡೆ ಗುಱಿಯಪ್ಪುವು ದಂಪತಿ ಭೋಗಭೂಮಿಯೊಳ್ (ಆದಿಪು. ೫-೯೦); ವೀರಸುತಜನನಿಗೀ ಗಾಂಧಾರಿಗೆ ದುಃಖಶತಜನನಿವೆಸರಾಯ್ತೀಗಳ್ ಕೌರವಪತಿ ದುಃಖಮಹಾ ಭಾರಮನಾಂತಾಯಸಕ್ಕೆ ಗುಱಿಯಾದುದಱಿಂ (ಗದಾಯು. ೪-೫); ರಣಮಹಿ ಭಯಾನಕರಸಕೆ ಗುಱಿಯಾಯ್ತು (ಕುಮ್ಮಾಭಿ. ೮-೦೮) ; ಪಾಪ ಕರ್ಮಕ್ಕೆ ನಾ ಗುಱಿಯಾದ ಸ್ವಾಮಿ (ಪುರಂದ. ೦-೧೭೭-೯). **ಗುರಿಯಾಗು :** ಸೂರ್ಯ ನಷ್ಟು, ಮಾನವನ ಮನಸ್ಸನ್ನಾಕರ್ಷಿಸಿ ಲೋಕಶ್ಲಾಘನೆಗೆ ಗುರಿಯಾದುದು ಬೇರೊಂದಿಲ್ಲ (ಹ್ಯೂಕವಿ. ೮೦).

[ ಗುಱಿ (<ಕುಱು₂) + ಆಗು₁ ]

**ಗುಱಿಯಾಳ್,** ಗುಱಿಯಾಳು (ನಾ). ೧. = ಗುಱಿಕಾಱ ೨ : ಪೊಸದೊರ ಯಾಳ್ಗಳಂತರಮನಿನ್ನಱಿಯಂ ಗುಱಿಯಾಳ್ಗಳೀತನೊಂದೆಸಕಮನಿಂತಿ ದೆಂದು ತಿಳಿಯರ್ (ಚಳವಿ. ೫-೦೯). **ಗುಱಿಯಾಳು:** ೨. (ಚೆಂಡಿನಿಂದ ಗುರಿಯಿಟ್ಟು ಹೊಡೆಯುವ) ಒಂದು ಬಗೆಯ ಮಕ್ಕಳಾಟ: ಬಾಲಕರು ನೂಱಾಱು ಮೆಱೆದರು . . . ಆಳಿನೇಱಿಕೆ ಹಿಡಿಗವಡೆ ಗುಱಿಯಾಳು ಚೆಂಡಿನ ಹೊಣಕೆ ಚಿಣಿಕೋಲಾಳುಗೊತ್ತಿನದಂಡೆಯೆನೆ ನಾನಾವಿನೋದದಲಿ (ಕುಮ್ಮಾಅ. ೬-೧). [ ಗುಱಿ ( <ಕುಱು₂) + ಆಳ್₃ ]

**ಗುಱಿಯಾಳು** ' ಗುಱಿಯಾಳ್ ' ನೋ.

**ಗುಱಿಯಿಕ್ಕು** (ಕ್ರಿ). ಗುರಿಯಿಡು; ಈಡಿಕ್ಕು : ಅರಿಜೀವವಡೆದ ಪಣನಂ ಕೊರಳಂ ಕೊಯ್ಯಾಯ್ದು ಶಿರವನೊಟ್ಟುತದಱಿಂ ಗು[ ಪಾಠಾಂ. ಸು] ಱಿಯಿಕ್ಕಿ ಲಗ್ಗೆ ಚೆಂಡಂ ತರುಣ ಮರುಳ್ಗಳಂಡವಾಡುತಿರ್ದುವಪೆತ್ತಂ (ಬೀಳವಂ. ೦-೮೪). [ ಗುಱಿ (<ಕುಱು₂) + ಇಕ್ಕು ]

**ಗುಱಿಯೆಸು** (ಕ್ರಿ). ಗುರಿಯಿಟ್ಟು ಹೊಡೆ : ಭೀಷ್ಮರಂ ಶರಶಯ್ಯಾಗತರಂ ಕಱುತ್ತು ಗುಱಿಯೆಚ್ಚಾ ಪೊಚ್ಚಱಂ . . . ಪಾಂಡುಪುತ್ರರ ಬಲ್ಲರ್ (ಗದಾಯು. ೩-೩೩). [ ಗುಱಿ (<ಕುಱು₂) + ಎಸು₁ ]

**ಗುಱಿಯೆಸೆ** (ನಾ). ಗುರಿಯನ್ನು ಲಕ್ಷಿಸಿ ಮಾಡಿದ (ಬಾಣ, ಮೊದಲಾದುವುಗಳ) ಎಸೆತ.—ಹೊಡೆತ; ಈಡೆಸೆತ : ಧಾನುಷ್ಕ ನೊಂದು ಗುಱಿಯೆಸೆ ತಪ್ಪಿದೊಡೆ ಶರಕೆ ಹೀನವೋ ಎಚ್ಚಂಗೆ ಹೀನವೋ (ಪದ್ಮರಾ. ೦-೩). [ ಗುಱಿ (<ಕುಱು₂) + ಎಸೆ₃ ]

**ಗುಱಿಯೇಸು** (ನಾ). ಗುರಿಯಿಟ್ಟು ಹೊಡೆಯುವಿಕೆ ; ಗುರಿಯನ್ನು ನೋಡಿ ಬಾಣ ಬಿಡುವುದು : ಮಾಲೆಪೂವಂ ನೆಗಪಿ ಸೊಗಯಿಕುಂ ನೀಱಿರೊಳ್ ಪುಷ್ಪಚಾಪಂ ಗುಱಿಯೇಸಂ ತೋಱಲೆಂಬಂ ಪೊದೆಗೆದಱಿದ ವೋಲ್ ಪುಷ್ಪಲಾವೀಕದಂಬಂ (ಶಂಠಾಮಾ. ೦-೦೨೦).

[ ಗುಱಿ (<ಕುಱು₂) + ಏಸು₂ ]

**ಗುಱಿಯೇಱಿಸು** (ಕ್ರಿ). ಗುರಿಯಿಡು ; ಲಕ್ಷ್ಯಕ್ಕೆ ಸರಿಯಾಗಿ ಹಿಡಿ : ಚೋರಕಂಡಿಗಳಂಬುಕಂಡಿಗಳೊಳು ಗುಱಿಯೇಱಿಸಿ ಮೆಱೆವ ಕೈಗೋವಿ (ಕಂನವಿ. ೧೧-೧೩೭). [ ಗುಱಿ (<ಕುಱು₂) + ಏಱಿಸು ]

**ಗುಱಿಯೊಡ್ಡು** (ಕ್ರಿ). ಗುರಿಯನ್ನು ಒಡ್ಡು ; ಲಕ್ಷ್ಯವನ್ನು ಒದಗಿಸು : ಎನಗಿತ್ತಪುದೋ ವಸಂತಕಂ ಮನಸಿಜಮಾರ್ಗಣಕ್ಕೆ ಗುಱಿಯೊಡ್ಡಿದನೆಂಬ ಮನಃಪ್ರವೃತ್ತಿಯಂ (ಶಾಂತಿಪು. ೮-೮೦).

[ ಗುಱಿ(<ಕುಱು₂) + ಒಡ್ಡು₁ ]

**ಗುಱಿವಡೆ** (ಕ್ರಿ). ಉದ್ದಿಷ್ಟ ಸ್ಥಾನವನ್ನು ಸೇರು; ಗುರಿಯನ್ನು ಮುಟ್ಟು: ಬದಲಿಸಿ ಬರೆದಿಡು ಲಿಪಿಯಂ ತೊದಳಿಲ್ಲದ ಸುಗತಿಯೆಡೆಗೆ ಗತಿ ಗುಱಿವಡೆಯಲ್ (ವಸ್ತುವಂ. ೧೩-೧೧೬).

[ ಗುಱಿ (< ಕುಱಿ$_2$) + ಪಡೆ$_1$ ]

**ಗುಱಿವಾನಿಸ, ಗುಱಿಮಾನಿಸ** (ನಾ). ೧. ಗುರಿಯನ್ನು ಸಾಧಿಸಲು ಬಂದ ಮನುಷ್ಯ; ರಾಜನ ಕಡೆಯ ಅಧಿಕಾರಿ; ರಾಯಭಾರಿ: ಬಂದ ಗುಱಿವಾನಿಸನಂ ಬಂದಂತೆ ಕಳುಪಲೊಡಂ (ಚಿಕವಂ. ೦೬೨-೧೪). **ಗುಱಿಮಾನಿಸ:** ೨. ಮುಖಂಡ; ಅಧಿಕಾರಿ; ಗುರಿಕಾರ: ಚೆನ್ನ ಬಸವಂಗೆ ತನ್ನಾನೆ ಮುಱಿದದಱೊಡನೆ ಪಲವುಮಾನೆ ಕುದುರೆಗಳುಂ ಗುಱಿಮಾನಿಸರುಂ ಪಱಿಯುಗೆ ಮುಂತಾದ ಬಿರುದುಗಳುಂ ಮಹಿಶೂರವರ ಬಸಮಾದುದು (ಅಪ್ರತಿ. ೮೮-೦೪).

[ ಗುಱಿ (< ಕುಱಿ$_2$) + ಮಾನಿಸ (< ಮಾನಸ$_1$) ]

**ಗುಱು, ಗುರು$_1$** (ನಾ). ಒಂದು ಬಗೆಯ ಅನುಕರಣಧ್ವನಿ. 'ಗುಱುಗುಟ್ಟು' ಪರಾ. **ಗುರು$_1$.** 'ಗುರುಗುಟ್ಟು' ಪರಾ.

**ಗುಱುಗುಱು, ಗುರುಗುರು**(ದ್ವಿರುಕ್ತಿ): ಧುಳುಧುಳಂ ದೊಪ್ಪೆಂಬ ಗುಱು ಗುಱು ಥಳಥಳಂ ಜೋಱೆಂಬುದಱದಱ ದೊಳದೊಳೆಂಬೀ ಧ್ವನಿಗಳವನಿಗೆ ಭಯವನೀವುತಿರೆ (ಸಾಸಂಪ. ೮-೦೩). ೨. ಸಂಕಟವಾದಾಗ ಗಂಟಲಿನಿಂದ ಹೊರಡುವ ಒಂದು ವಿಧವಾದ ಧ್ವನಿ: ಗಾಳಿಬೀಸಿದರು, ನಿಟ್ಟುಸಿರಿನೊಡನೆ ಗುರುಗುರು ಸದ್ದಾಗುತ್ತಿತ್ತು (ಶಾಲೂರ. ೦೬ ಕಥಾಸಾರ).

**ಗುಱುಕ** (ನಾ). ಸವಾರ (?): ಸತ್ತನಧಿಕಂ ಪಂಪಯ್ಯನುದ್ದಾಮ ಸದ್ಗುಱುಕಂ ವಾಜಿಕುಳೋ[ದಯಂ] ಬುಧನುತಂ [ಕೊ]ಣ್ಡಲ್ಕ ಗೋತ್ರೋನ್ನತಂ (ಸೌಇಇ. XI-1, ೩೬-೨೦; 942); ಕಂಬಗೂಳಿ ಕುದುರೆ ಗುಱುಕಮ್ ಅಳಿರೆ ಬೊಂಮನು ರಣದೊಳು ಪಲಬರಂ ಕೊಂದು . . . ಸುರಲೋಕಪ್ರಾಪ್ತನಾದ (ಎಕ. VIII, ಸೊರಬ. ೫೦೨-೧೨; 1294).

[ ? ]

**ಗುಱುಕಿಡು, ಗುರುಕಿಡು** (ಕ್ರಿ). ೧. ಗುರುಕೆಹಾಕು; ಗೊರಕೆಹೊಡೆ: ಉಸುರ ಸಂಚದ ನಾಡಿಯುವಗಾಹಿಸಲು ಕೊರೆದರು ಗುಱುಕಿಡುತ ತಲೆ ಮುಸುಕಿನಲಿ (ಕುವ್ಯಾಪ. ೮-೮೨). **ಗುರುಕಿಡು:** ೨. ಗುರುಕ್ ಎಂದು ಶಬ್ದಮಾಡು; ಗರ್ಜಿಸು: ವರಾಹಕ್ಕೆ ಬೆಂಬತ್ತಿ ಪೋಗುತಿರಲದು ತಿರುಗಿ ಗುರುಕಿಡುತೆ ಮೇಲ್ವಾಯ್ದು ಬರುತಿರಲು (ನವಮೋ. ೦೬-೨೩); ವರಭಲ್ಲುಕಂ ವ್ಯಾಘ್ರ ಸಿಂಹ ಮದಗಜವ್ರಜಂ ಗುರುಕಿಡುವ ಕಾಡ ಸೂಕರ ಕೋಣ ಮಹಿಷಿ (ನವಮೋ. ೮-೧೦). [ ಗುಱುಕು + ಇಡು$_1$ ]

**ಗುಱುಕು, ಗುರಕೆ$_2$, ಗುರುಕು$_2$, ಗುರುಕೆ, ಗೊರಕು, ಗೊರಕೆ$_2$, ಗೊರಿಕೆ** (ನಾ). ೧. ನಿದ್ರಿಸುವಾಗ ಕೆಲವರ ಮೂಗಿನಿಂದ ಮತ್ತು ಗಂಟಲಿನಿಂದ ಹೊರಡುವ ಗುರ್ ಎಂಬ ಶಬ್ದ: ಕನವರವಿಲ್ಲೊಂದು ಗುಱುಕಿಲ್ಲ ಮೇಲೊಂದು ತೊನೆದಾಟವಿಲ್ಲದೊಪ್ಪಿದರು (ಶರಚ. ೧೫-೦೦೬). **ಗುರಕೆ$_2$:** ೧. ಗುರಕೆ ಶಬ್ದ ಕೇಳುತ್ತಿದೆ. ಆಗಲೇ ಅವನಿಗೆ ನಿದ್ರೆಬಂದುಬಿಟ್ಟಿದೆ (ರೂಢಿ). **ಗುರುಕು$_2$:** ೨. ಗುರುಕ್ ಎಂದು ಶಬ್ದವನಾಡುವಿಕೆ; ಗರ್ಜಿಸುವಿಕೆ. 'ಗುರುಕಿಡು' ರಾ. **ಗುರುಕೆ:** ೧. ಅವನ ಗುರುಕೆಯಿಂದ ನನಗೆ ಎಚ್ಚರವಾಯಿತು (ರೂಢಿ). **ಗೊರಕು:** ೩. ಗಂಟಲು ಒಡೆದು ಮಾತಿನಲ್ಲಿ ಉಂಟಾಗುವ ಒಂದು ಬಗೆಯ ಒರಟುಧ್ವನಿ (?): ನಿದ್ರಾಭಂಗ, ಗಂಟಲಲ್ಲಿ ಗೊರಕು . . . ಗಂಟಲನೋವು ಇವಿಷ್ಟೂ ಉಂಟಾಗಿರುವುದೇ ಸನ್ನಿಪಾತಜ್ವರಲಕ್ಷಣವೆಂದರಿವುದು (ಸಕವ್ಯ. ೯೬). **ಗೊರಕೆ$_2$:** ೧. "ನಿದ್ದೆಯದೇ?" ನನಗೆ ಸೋಜಿಗವೆನಿಸಿತು "ಅಂದ್ರು ಗೊರಕೆಯುದು" ಎಶ್ಮು ಶಾಂತನಾಗಿ ಉತ್ತರಿಸಿದನು (ಚಿಂದುಟ. ೮೩); ಇಕ್ಕಯ್‌ಕರಗಸ ಎಳೆದಾಡಿದಂತೆ ಬರುವ ಗೊರಕೆಯೊಂದನ್ನು ಬಿಟ್ಟರೆ ಅವರ ನಿದ್ದೆ ಎಷ್ಟು ಪ್ರಶಾಂತ! (ನಡೆದಾ. III. ೨೦೭೦). **ಗೊರಿಕೆ:** ೧. ಬಾಟ್ಲೋ . . . ತನ್ನ ಸ್ಥಳಕ್ಕೆ ಹೋಗಿ ಮಲಗಿಕೊಂಡು ಗೊರಿಕೆ ಹೊಡೆಯತೊಡಗಿದ (ಕುರಿಹಿಂ. ೦೧೯). 'ಕೊರ್ಕೆ$_2$' ಪರಾ.

**ಗುಱುಗುಱುಕು**(ದ್ವಿರುಕ್ತಿ): ದೂಱುಂ ದೂರ್ಕುಱಂ ದುಷ್ಟುಂ ನೂಱುಂಟು ಕುರುಳುವು ಕುತ್ತು ಮುಂದು ಗುಱುಗುಱುಕುಂ (ಮದಶಿ. ೦೦-೫).

[ ದೇಱ ತಮಿ. ಕೊಱುಕ್ಕೈ; ತುಳು. ಗುರುಕು, ಗುರ್ಕುಱ; ತೆಲು. ಗುಱಕ ]

**ಗುಱುಗುಟ್ಟು, ಗುರುಗಂಟ್ಟು** (ಕ್ರಿ). ೧. (ಗಂಟಲಲ್ಲಿ) ಗೊರಗೊರ ಸದ್ದಾಗು; ಕೊನೆಗಾಲ ಸನ್ನಿಹಿತವಾಗು: ಕೊರಳೊಳು ಗುಱುಗುಟ್ಟುವಾಗ ನರಹರಿಯು ಸ್ಮರಣೆ ನಿನಗನುಗೊಡದೆಲೆ ಮನ (ಪುರಂದ. ೧-೦೪೨-೨). **ಗುರುಗುಟ್ಟು:** ೨. ಸಿಡುಕಿ ಮಾತನಾಡು: "ನೀವಿದನ್ನು ನಂಬುತ್ತೀರಾ?" ಎಂದು ದಳಪತಿ ಗುರುಗುಟ್ಟಿ, ಒಂದು ಗಳಿಗೆ ತೆಪ್ಪಗಿದ್ದನು (ಪುನರು. ೩೫೫); "ನಾವ್ಯಾರು ಗೊತ್ತೊ?" ಎಂದು ರಾಜಂ ಗುರುಗುಟ್ಟಿದ (ಸ್ವಾಮಿಸ್ನೇ. ೯೪); ವಿಚಾರಗಳು ರಾಜಬಡೆಯನ ತಲೆಯಲ್ಲಿ ಸರ್ವದಾ ಗುರುಗುಟ್ಟುತ್ತಿದ್ದವು (ಶ್ರೀರಾಯ. ೯೩).

**ಗುಱುಗುಱುಗುಟ್ಟು** (ದ್ವಿರುಕ್ತಿ): ಅತಿ ನೋವುಂಡು ಕೂಡೆ ಗುಱು ಗುಱುಗುಟ್ಟಿ . . . ಕರ್ಮಗತಿಗಳ ನೆಯ್ದುವಂ (ವೀಕೃಪು. ೪-೨೫-೨೩).

[ ಗುಱು + ಕುಟ್ಟು$_1$ ]

**ಗುಱುಗುಮ್ಮಗೆ** (ಅ). ಸುಮ್ಮನೆ; ನಿಷ್ಕ್ರಿಯವಾಗಿ; ಏನನ್ನೂ ಮಾಡದೆ: ಪುಗುಗುಂ ಗುಱುಗುಮ್ಮಗೆ ಬಿನ್ನಗೆ ಬಿನ್ನನೆಯೆನಲೊಡಂ ಕ್ರಿಯಾಶೂನ್ಯಾರ್ಥಂ (ಶಮದ. ೩೦೨). [ ಗುಱುಗುಮ್ಮು$_0$ + – ಅಗೆ$_3$ ]

**ಗುಱುಗುಮ್ಮನೆ, ಗುರುಗುಮ್ಮನೆ** (ಅ). = ಗುಱುಗುಮ್ಮಗೆ: ಕಮ್ಮನೆ ಪಾಟ್ಟನೆಯೊಳ್ ಗುಱುಗುಮ್ಮನೆ ಸುಱಿದಿರದೆ ಪೋಪಮಜಿತನ ಬಱಿಯಂ (ಅಜಪು. ೬-೦೨೩); ನೋವುಂ ಸಾವುಮಡಸಿದಾಗಳ್ ನೆರೆದು ಗುಱುಗುಮ್ಮನೆ ನೋಡುತಿರ್ಪ ನಂಟರುಮಂ . . . ನಂಬಿ (ಧರ್ಮಾಮೃ. ೯-೨೩); ದೆವ್ವಮಾಳ್ದಂತಿರೆ ಗುಱುಗುಮ್ಮನೆ ಬೆಕ್ಕಸಮಾಗಿರ್ಪರೆ (ರಾಮಾಶ್ವ. ೬೦-೦೨). **ಗುರುಗುಮ್ಮನೆ:** ಅವನು ಹುಬ್ಬುಗಂಟಿಕ್ಕಿ, ಗುರುಗುಮ್ಮನೆ ಆಲೋಚನಾ ಭಾರದಿಂದ ತನ್ನ ಮನೆಗೆ ನಡೆತಂದು . . . ಕೊಂಬುಕಹಳೆಯವರನ್ನು ಕರೆಯಿಸಿಕೊಂಡನು (ಮುಹಿಸ. ೫೪). [ ಗುಱುಗುಮ್ಮು$_0$ + – ಅನೆ$_1$ ]

**ಗುಱುಗುಮ್ಮೆನ್** (ಕ್ರಿ). ಮೌನವಾಗಿರು; ಯಾವ ಕೆಲಸವನ್ನೂ ಮಾಡದಿರು: ಎಂದುಂಡು ಕುಡಿದು ಮಗುಳ್ದುಂ ಬಂದಿರ್ಪೊಡಮಿರ್ಪ ಮಿನಿತುಮಿಲ್ಲದೆ ಗುಱುಗುಮ್ಮೆಂದು ಪಸಿದಿರ್ದ ಬೆದಬೆದ ಬೆಂದಿನಿಬರ್ ಕಟ್ಟಿಕೊಳ್ವ ಕಣೆಯೇಂ ಪೇಱಿಂ (ಆದಿಪು. ೯-೯೦).

[ ಗುಱುಗುಮ್ಮು$_0$ + ಎನ್$_1$ ]

**ಗುಱುಗುಱಿಸು, ಗುರುಗುರಿಸು** (ಕ್ರಿ). ೧. ಗೊರಕೆಹೊಡೆ: ತೋಳುಗಳ ತಲೆಯೊಳಾನಿಸಿ ಗುಱುಗುಱಿಸಿ ರಥದೊಳಗೆ ಸಾರಥಿವೆರಸಿ ನಿದ್ರಾಕುಲರು ಜೊಮ್ಮಿನ ಮೇಲೆ ಮೈಮಱೆದಿರ್ದರತಿರಥರು (ಕುವ್ಯಾಪ. ೮-೮೫). ೨. ಕೋಪದಿಂದ ಆಕ್ಷೇಪಿಸು; ಗೊಣಗು; ಗುರುಗುಟ್ಟು: ದ್ರೋಹರಂತೆ ಗುಱುಗುಱುಗೊಳ್ಳದೆ ಪರ್ಗಣದಂತೆ [ಪೊಸ ಖುಷಿಗೆ] ಗುಱುಗುಱಿಸದೆ (ಧರ್ಮಾಮೃ. ೫-೯೯). ೩. ಗಂಟಲಿನಲ್ಲಿ ಗುರುಗುರು ಎಂಬ ಶಬ್ದಮಾಡು; ಗೊರಗುಟ್ಟು: ಸದನವೀ ಭೂಮಿ ಯಾರಿಗೆ ಪೋಪುದೋಯೆನುತೆನ್ನುದಱುತ್ತ ಗುಱುಗುಱಿಸಿ ಕಂಠಗತವಾಗುತಂ ಬೆದಱುತ ಪ್ರಾಣಮಂ ಬಿಡುತಿರ್ಪುದಱುವವನ ಚರಣಾಂಬುಜಕ್ಕೆ ಶರಣು (ಲಶಿಜಂ. ೩೯-೭೦); ಉಱಲ ಹತ್ತಿಸಿ ಸೆಳೆಯೆ ಗೋಣಲಿ ಗುಱುಗುಱಿಸಲಸು ಜಾಱಿದುದು (ಕುವ್ಯಾಗ. ೯-೩೨). **ಗುರುಗುರಿಸು:** ೨. ಎಂಟು ಪಾವಲಿ ಕೊಡುವುದಕ್ಕೆ ನೀವು ಗುರುಗುರಿಸುತ್ತೀರಿ (ಪಾರುದಾ. ೨೨೬). ೩. ಗುರುಗುರಿಸುವ ಜೀವದೊಡಲೊಳು ದುರುದುರಿಸುತಿಹ ರಕುತಮಯಾದೀ

ಮೆರೆದುದ್ದೆ ರಣಭೂಮಿ (ದೇವಿಪು. ೩-೧೪) ; ತಡೆಯದಿಹ ನಿಟ್ಟುಸಿರ್ ಗುರುಗುರಿಸುತಿಹುದು (ಕಾಲೂರ. ೧೭೨-೩೪೬). [<ಗುಱು + – ಇಸು₃]

**ಗುಱುಗೆ** (ನಾ). ಶ್ರೇಷ್ಠಳಾದವಳು ; ಹಿರಿಯಳು : ಅಂತು ಮೆಱೆದು ಕೂಸಂ ನೆಱೆಯೆ ಕಯ್ಗೆಯ್ಸಿವೆಂದು ಮುನ್ನ [೦] ಕಯ್ಗೆ[ಯ್ಸುತಿರ್ದ] ತಱಿದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು ಪೇೞ್ವುದುಂ (ಜಂಪಥಾ. ೩-೪೪ ವ). 'ಗರುವೆ' ಪರಾ.

[<ಪ್ರಾ. ಗರುಈ, ಗುರುಈ, ಗುರುಗೀ. / ಸಂ. ಗುರ್ವೀ]

**ಗುಱುತು**, ಗುತ್ತು₁, ಗುರುತು (ನಾ). ೧. ಕುರುಹು ; ಲಕ್ಷಣ ; ವಿಶಿಷ್ಟಚಿಹ್ನೆ. ೨. ಪರಿಚಯ ; ಮಾಹಿತಿ. ೩. ಹೆಸರುವಾಸಿ ; ಪ್ರಸಿದ್ಧಿ : ಗುಱುತಿನ ಹೊಂತಕಾಱಿಗಳೊಳೊರ್ವನನೊಪ್ಪಚಿ ತಾಣ ವಿಕ್ರಮಂ (ಚಕವಿ. ೪-೦೪೦). ೪. ಕೊಡಬೇಕಾದ ಬಾಬತ್ತು (?) : ಗುಱುತುಗಳಿಗೀ ಊರಲು ಒಕ್ಕಲು ಓಡಿಹೋದಡೆ ಆವೂರೂ ಆ ಗಲುಡನೂ ಆ ಒಕ್ಕಲನಾಳ್ವೊನು ತೆಱುವನೂ (ಸೌಇಇ. IX–II, ೪೩೩–೫೮ ; 1407). **ಗುತ್ತು₁** : ೧. ಸೋತವರು ವಹಿಸುವರು ತತ್ಸಂಕೇತದಲ್ಲಿಗೆ ಗೆದ್ದವರನಂತಾತಗಳು ಭಾಂಡೀರಕಾಖ್ಯವಟಪ್ರದೇಶದಲಿ ಓತು ಗುತ್ತನು (ನಿಭಾಗ. ೧೦–೧೮–೨೪). ೨. ಲಕ್ಷ್ಯವಿಲ್ಲದೆ ತೊಡಚುವರೆ ನಿರ್ಲಕ್ಷ್ಯ ಶರವೇ ನೀನುಪಾರ್ಜಿಸಿದಕ್ಷಯುವಲೇ ಪಾರ್ಥ ಗಣನೆಯ ಗುತ್ತಿನಂಬುಗಳೆ (ಕುಪ್ಪಾಆ. ೦೩–೦೦): ಲೆತ್ತ ಪಗಡೆಯನಾಡಿ ಚಿತ್ರವನೊಲಿಸಲು ಮತ್ತೆ ಒಡ್ಡಿದೆ ಬಲಿಯೇನ ।ಕೋ। ಕಾಕಾಳಿ ಹೆಣ್ಣಿನ ಗುತ್ತು ತಿಳಿಯದ (ಕನ್ನಜಾ. ೩೩೦). **ಗುರುತು** : ೧. ಮನೆಯ ಮುಂದೆ ತೆಂಗಿನ ಮರ ಇರುವುದೇ ಅವರ ಮನೆಯ ಗುರುತು (ರೂಢಿ). ೨. "ಯಾವ ಗುರುತೂ ಸಿಗಲಿಲ್ಲಾ" ಅವರು ಕೇಳಿದರು (ದೇವಶಾ. ೨೫); ಗುರುತಿರ ಬಹುದು ಎನ್ನಿಸುವುದು (ಆರ್ಯಾಕ. ೨) ; ಗುರುತಂತೂ ಮೊದಲಿಂದಲೂ ಇದ್ದೇ ಇತ್ತು (ಬಟ್ಟಹೂ. ೦೫) ; ಗುರುತು ಕಂಡ ಕಳ್ಳ ಜೀವ ಸಹಿತ ಬಿಡ (ಗಾದೆ). ೫. ಒಪ್ಪ ; ಹಸ್ತಾಕ್ಷರ ; ಒಪ್ಪಿಗೆಯ ಮುದ್ರೆ; ರುಜು : ಹಣ ಪಡೆದುದಕ್ಕೆ ಗುರುತು ಹಾಕಿ ಕೊಟ್ಟಿದ್ದಾರೆ (ರೂಢಿ). 'ಕುಱುಪು', 'ಗೊತ್ತು' ಪರಾ.

ಗುರುತಿನವನು = ಪರಿಚಯದವನು : ಹಾದಿಯಲ್ಲಿ ಗುರುತಿನವನನ್ನು ಕಂಡರೆ . . . ಅವರಿಗೆ ನಮಸ್ಕಾರ ಮಾಡ ಬೇಕು (ಮುಂಬಯಿ. ೪–೩೪) ; ತನ್ನ ತಂದೆಯ ಗುರುತಿನವನಾದ ಒಬ್ಬ ದೈವುಳ್ಳ ವರ್ತಕನ ಬಳಿಗೆ ಹೋಗಿ (ಮುಂಬಯಿ. ೪–೫೦). ಗುರುತುಹಾಕು=ನೆನಪಿನಲ್ಲಿಡುವುದಕ್ಕಾಗಿ ಮಾಹಿತಿಗಾಗಿ ಬರೆದುಕೊಳ್ಳು : ಹಾಲಿನ ಲೆಕ್ಕ ಗುರುತು ಹಾಕದಿದ್ದರೆ ಮರೆತುಹೋಗುತ್ತದೆ (ರೂಢಿ).

[ದೇಶ ತುಳು. ಗುರುತ, ಗುರುತೊ, ಗುರ್ತ : ತೆಲು. ಗುಱುತು, ಗುರ್ತು]

**ಗುಱುವ** (ನಾ). ಕೋಟೆಕಾಳಗದಲ್ಲಿ ಬಳಸುವ ಒಂದು ಸಾಧನ (?) : ಸಾರಂ ವೈರಿಗಳಂ ನಿಸ್ಸಾರಂ ಮಾಡಿದುದು ಗುಱುವನೊಳವುಗುವವರಂ ವೀರರಸದಟಲೆದುದು ನಿಧಾರಂ ನಿರ್ಧಾಟಿಸಿತ್ತು ವೀರರ ಧೃತಿಯಂ (ಪಾರ್ಶ್ವಪು. ೩–೧೪೨). [?]

**ಗುಱಿಯಮ್ಮ** (ನಾ). ಒಬ್ಬಾತನ ಹೆಸರು : ಕದಲೆಕಧಿ ಪಾಣ್ಣಾ ಎಱ ಯಮ್ಮಂ ನಿವುದಿ ತುರುಗಳೊಳ್ ಕಾದಿ ಸತ್ತೊಂ ಈ ಕಲ್ಲ ಪುಟಿದಾವುಣ್ಣ ತಮ್ಮ ಗುಱಿಯಮ್ಮ ನಿಱಿಸಿದೊ (ಎಇ. XXI, ೩೫–೪ ; 883).

[ಗುಱಿ₂ + ಅಮ್ಮ₁]

**ಗುಟ**, ಗುಳ₃ (ನಾ). ೧. ಗುಡ; ಬೆಲ್ಲ: "ಕೀಳು ಗುಟ ಗುಡಮುಮಕ್ಕು" (ಶವಿಕಂ. ೨೦೮) ; ಮೆಟಸಿಂ ಗುಟದಿಂ ಶರ್ಕರೆಯಿಂ ಚೆಲ್ವಾದ ಕೀರಿಯಂ ಗಡಿಯಿಂ . . . ಪುರಂ ಕಣ್ಗೆಂಬಾದುದು (ರಾಮಾಕ್ಕ. ೦೦೩–೦೮). ೨. ಆನೆ ಕುದುರೆಗಳ ಪಕ್ಷರಕ್ಷೆ ; ಹಕ್ಕರಿಕೆ : "ಗುಟಂ (ಗಟಂ) ಆನೆ ಕುದುರೆಗಳ ಪಕ್ಕಟಿಕೆ" (ಶಮದ. ಪರಿ. ೧) ; "ಗುಟವಾನೆಯ ಹಕ್ಕರಿಕೆಯು" (ಕವಿಕಂ. ೧೨೬) ; ಉಚ್ಚೈಃಕೇತನಂಗಳೊಳ್ ತೂಳವ ಗುಟವಿಂಬಾಗೆ ಕಣ್ಗೊಂಡು ದೆತ್ತಂ . . . ದಂತಿಸೈನ್ಯಂ (ಜಗವಿ. ೭–೬೦) ; ಮದಗಂಧಕ್ಕೆ ಪರಸ್ಪರಂ ಮಸಗಿ ಕೋಪಾಟೋಪದಿಂ ತಳ್ತು ತಾಗಿದ ದಂತಂಗಳ ಕಿಚ್ಚು ಪತ್ತಿ ಗುಟಮಂ[ಪಾಠಾಂ. ತಗುಳ್ದ]ದಳ್ಳೆಂಬಿನಂ . . . ಪೋರ್ದುವು ಗಜವ್ಯೂಹಂ ಗಜವ್ಯೂಹದೊಳ್ (ಅನಂಪು. ೧೪–೩). **ಗುಳ₃** : ೧. ಗೌಳ, ಗುಳಂ, ಝುಗಳೆ, ವಿಳಂಗಂ ಇವು ಕೂಡೆ ದಕಾರಕ್ಕೆ ಪುಟ್ಟಿ ಱಟದಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್ (ಶಮದ. ೨೦ ವೃತ್ತಿ) ; ಗುಡಂ–ಗುಳಂ (ಶಬ್ದಾನು. ೦೪೦ ಪ್ರಯೋ). ೨ : ವಿಳಿ ಲತೆ ಗುಳವೋ ಪತ್ರಂ (ಗಿರಿಕ. ೭–೪೪); ಗುಳವ ಸಡಿಲಿಸಿ ಹಾಯ್ಕಿ ಜೋಧಾವಳಿಗಳಿಳಿದುದು (ಕುಪ್ಪಾದ್ರೋ. ೫–೧೪); ಪೂಕ್ಕಳ ಘಂಟೆಯನೆಳಲಿಕ್ಕಿ ಬಿಗಿದು ಗು[ಪಾಠಾಂ. ಗ್ರೂ]ಳವನು ತಳ ಸಂಕಲೆಯನಳವಡಿಸಿ ಕರಿಯನೇಱಿ ಕಲಿ ಚೋದರೆಳ್ಗೆಂದರಂದು (ಕುಂದಾಶಾಂ. ೧೦–೨೫) ; ಥಳಥಳಿಪ ಬಹುರತ್ನಮಯುವಹ ಗುಳವದೇಂ ಕಾಂಚನದ ದಂಡದ ತತಿಯೊಳ್ಳಿದುಂ ರತ್ನಮಯ ಗರುಡಧ್ವಜದಿನೆಸೆವ ತೊಳಪ ಪಲ್ಲವಸತ್ತಿಗೆಯು ತಣಾನೆಳಲೊಳೀ ಗಜಕಂದರದೊಳಿದ್ದಳವಿ ಗೊಡುವವನಾರು ಬಲ್ಲಡೆ ಸೂತ ಹೇಳು (ಸಾಳ್ವಭಾ. ೦೮–೭೫).

[<ಸಂ. ಗುಡ]

**ಗುಟಿ₁** 'ಕುಟ್ಟಿ₁' ನೋ.

**ಗುಟಿ₂** 'ಕುಟ್ಟಿ₂' ನೋ.

**ಗುಟಿಕಲ್**, ಗುಳಿಕಲ್ಲು (ನಾ). ನಡುವೆ ಹಳ್ಳವಿರುವ ಕಲ್ಲು ; ಒರಳು ಕಲ್ಲು (?) : ಅವಗಟಿಯಾದಿಗಣಸ್ತು ಪ್ರದರ್ಶ್ಯತೇ ಯಥಾ-ಅವಗಟಿಯ . . . ಗುಟಿಕಲ್, ಉಟಿಕಲ್ (ಶಬ್ದಾನು. ೦೪೦ ವ್ಯಾಖ್ಯಾ). **ಗುಳಿಕಲ್ಲು** : ಆ ಕಾಯುವಳಗಿನ ಅವುಷಧಿಯನ್ನು ತೆಗೆದುಕೊಂಡು ಗುಳಿಕಲ್ಲಲಿ ಅಲ್ಲಿ ನಿಂತ ಹಾಲು ಕೆನೆ ಸರಿ ಸಕ್ಕರೆಯಂ ಕೂಡಿ ಮರ್ದಿಸಿ (ವಾಜಾಚಿ. ೨೮–೪).

[ಗುಟಿ₂ (<ಕುಟ್ಟಿ₂) + ಕಲ್₃]

**ಗುಟಿಗಣ್** 'ಕುಟಿಗಣ್' ನೋ.

**ಗುಟು** 'ಕುಟು' ನೋ.

**ಗುಟುಗುಟನೆ**, ಗುಳುಗುಳನೆ (ಅ).=ಗುಡುಗುಡನೆ: ಆ ನೀರ್ವೊನಲ್ಗುಟು ಗುಟನೆ ಗಟಗಟನೆ ಪರಿದತ್ತು (ಸಂಚಿಪ. ೧೧). **ಗುಳುಗುಳನೆ** : ಮಾತೆತ್ತಿದರೆ ಗುಳುಗುಳನೆ ಅತ್ತುಬಿಡುತ್ತಾನೆ (ರೂಢಿ). [ಗುಟುಗುಟು + – ಅನೆ₁]

**ಗುಟುಗುಟಿಸು**, ಗುಳುಗುಳಿಸು (ಕ್ರಿ). ಗುಳುಗುಳು ಎಂದು ಶಬ್ದ ಮಾಡು ; ಗುಳುಗುಳು ಎಂಬ ಧ್ವನಿಯನ್ನುಂಟುಮಾಡು. **ಗುಳುಗುಳಿಸು** : ಕರಗಿದ ಲೋಹರಸದುಷ್ಣ ನಂದುವಾಗಾ ನೀರೊಳಗೆ ಒಂದು ನಿಮಿಷ ಗುಳುಗುಳಿಪಂತೆ ಮಾಗಧನೆಂದನಿಂತೆಂದು ಘೂರ್ಣಿಸುತ (ಸೌಮಿಸಂ. ೩೧–೬೦) ; ಜಗವೆಲ್ಲ ನಗೆಯ ಹೊಳೆಯಾಗಿ ಗುಳುಗುಳಿಸೆ (ಭಾರಂಗ. ೩೫–೭) : ಗಂಭೀರವಾದ ರಾಜಕಾರಣಭಾವನೆ ಗುಳುಗುಳಿಸುತ್ತಿದ್ದುದನ್ನು ಪರಿಜನ ದೊಡನೆ ಪುರಜನವೂ ಕಂಡುಕೊಂಡಿತ್ತು (ವೀರಬಂ. ೫೭).

[ಗುಟುಗುಟು + – ಇಸು₃]

**ಗುಟುಗುಟು**, ಗುಳುಗುಳು (ನಾ). ಒಂದು ಅನುಕರಣ ಶಬ್ದ : ಗುಟು ಗುಟು ಗಟಗಟಿಯೆನುತುಂ ಪರಿವ ಪರಿವೊನಲ್ ಸೊಗಯಿಸುಗುಂ (ಶಮದ. ೫೪ ಪ್ರಯೋ). **ಗುಳುಗುಳು** : ಹೇಮಾವತಿಯ ಗುಳುಗುಳು ಧ್ವನಿಯು ಕಿವಿಗೆ ಇಂಪಾಗಿ ಕೇಳಿಬರುತ್ತಿತ್ತು (ರೂಢಿ).

**ಗುಟುಮ್ಮನೆ** (ಅ). ಒಂದು ಅನುಕರಣಾವ್ಯಯ : ಗುಳುಮ್ ಎಂದು ಶಬ್ದವಾಗುವಂತೆ ; ಒಮ್ಮೆಗೆ ; ಕೂಡಲೆ : ನೀರಜಬಂಧು ಗುಟುಮ್ಮನೆ ರಸೆಗಜಾಂಡದಿಂದಿಟಿದನಾರನಟಿಯದೊ ರಾಗಂ (ಶಾಂತಿಪು. ೮–೬೦) ; ಮನ

ದೊಳ್ ಕಯ್ಗಳಿಯ ಗ[ಗು]ಟುಮ್ಮನೆ ರಸಗಿಟಿದರೆನಿಬರಾನುಮಿಳೇಶರ್ (ಅಜಿಪು. ೨-೧೦೩). 'ಘುಳುಮ್ಮನೆ' ಪರಾ. [ಗುಟುಂ$_0$ + – ಅನೆ$_1$]

**ಗುಟ್ಟಿಪಾಡಿ** (ನಾ). ಒಂದಂ ಪ್ರದೇಶದ ಹೆಸರು: ಗುಟ್ಟಿಪಾಡಿಯುಂ ಕಲ್ನಾಡು ಕೊಟ್ಟುದು (ಎಇ. VI, ೪೩-೬ ; 840).

[ ? ]

**ಗುಟ್ಟಿವೀದಿ** (ನಾ). ಒಂದು ಪ್ರದೇಶದ ಹೆಸರು (?): ಸತ್ಯವಾಕ್ಯ ಪೆಮ್ಮನಡಿಗಳ್ ಗುಟ್ಟಿವೀದಿಯ ಕಲ್ನಾಡ ಕೊಟ್ಟುದು (ಎಕ. III, ತಿರುಮ. ೯೦-೬ ; 921?). [ ? ]

**ಗುಟಿಸ್ಕೋರಿ** (ನಾ). ಒಂದು ಬಗೆಯ ಸಿಹಿಯಾದ ಭಕ್ಷ್ಯ: ಲಾಡು ಮಂಡಿಗೆಯು ಫೇಣಿ ಗುಟಿಸ್ಕೋರಿಗಳೂ ಮೋತೀ ಚೂರುಗಳೂ (ಅಂಜಚ. ೦-೧೪೫). [ಗುಟ + <ಪೂರಿ]

**ಗೂ** (ನಾ). ಗೂಬೆಯ ಧ್ವನಿಯನ್ನು ಅನುಕರಣೆ ಮಾಡುವ ಶಬ್ದ: ಕಾಗೆ 'ಕಾ' ಎನ್ನುತ್ತದೆ, ಗೂಬೆ 'ಗೂ' ಎನುತ್ತದೆ (ರೂಢಿ).

**ಗೂಗೂ** (ದ್ವಿರುಕ್ತಿ): ಗೂಬೆಯ ಗೂಗೂ ಶಬ್ದ ಕಿವಿಗೆ ಬಿತ್ತು (ರೂಢಿ).

**ಗೂಂಕರಿಸು** (ಕ್ರಿ). ಗೂಂಕಾರವನ್ನು ಮಾಡು; ಗುಬ್ಬಳಿಸು: ಕಾಡು ಪಾರಿವಾಳವು ತನ್ನ ಕತ್ತನ್ನುಬ್ಬಿಸಿ, ಗೂಂಕರಿಸಿ, ಹೆಣ್ಣನ್ನೊಲಿಸುವಾಗ ಕತ್ತಿನ ಬಣ್ಣದ ಅವಶ್ಯಕತೆ ಅದಕ್ಕೇಕೆ ಬಂದಿತು ಎಂದು ತೋರಿಸುವುದು (ಬಾಲಕ್ರ. III, ೦೬೯೩). 'ಘೂಂಕರಿಸು' ಪರಾ.

[ಗೂಂಕರಣ$_0$ + – ಇಸು$_3$]

**ಗೂಂಟ, ಗುಂಟ$_1$, ಗೂಟ, ಘೂಟ** (ನಾ). ಮರದ ಅಥವಾ ಲೋಹದ ಚೂಪಾದ ಬೆಣೆ; ದಸಿ: "ಗೂಂಟಂ [ಪಾಠಾಂ. ಗುಂಟಂ. ಗುಂಠಂ] ಶಂಕುವಾರಯ್ಕ" (ಮಂಗರಾ. ೫೯-೦೩); ಗುಡಿಯ ಗೂಂಟಕ್ಕೆ ಬಲ್ಲಡವಿಗಳುಂ ದಂಡಿಗೆಗೆ ವೇಣುವನಂಗಳುಂ . . . ಆ ಪಡೆಗೆ ನೆಟಿಯವು (ಪಂಪಭಾ. ೯-೦೦೪ ವ); ಗುಡಿಯನೆತ್ತುವರಂತೆ ಗೂಂಟವುಂ ಪೆಟ್ಟುವರ್ ಪರ್ದಿನಂತೆ ಕೀಟ್ವರ್ (ಧರ್ಮಾಮೃ. ೩-೬೩); ಬಲಿದು ಗೂಂಟಗಳನೆತ್ತಾನೆ ಕುದುರೆಗಳ ನೀಂ ದಳೆಯಿಕ್ಕು (ಜಲಪು. ೪೬-೩೦). **ಗುಂಟ$_1$**: "ಶಿವಕಃ ಕೀಲಕಃ–ಗುಂಟ" (ನಾಚಿರಾ. ೬); ನಟ್ಟ ಗುಂ[ಪಾಠಾಂ. ಗೂ]ಟವ ತೆಗೆದು ತಾನೆ ಬೀಸಾಡುತ್ತ ಹೊಟ್ಟೆಯುಂ ಹತ್ತಿ ಮೊಲೆಗಲವರುವ ಕರ್ಾಡೆ . . . ಹಾಡಿ ಹರಸುತ್ತಿರ್ದರು (ಸಿದ್ಧರಾ. ೯-೨೬); ಗುಡಿಯ ಹೊಲಿವ ಗುಂಟವ ಕೆತ್ತುವ (ಶ್ರೀಪಾಲ. ೦೩-೫೪); ಮಿಸುಪ ಪಟ್ಟೆಯ ಗೂಡಾರಗಳನು ತೆಗೆ ಹಸಮಾಡು ಹಗ್ಗ ಗುಂಟಗಳ (ಜಂಪ್ರಸಾಂ. ೦೫-೨೫). **ಗೂಟ**: ಕುಡುಗೋಲ್ ಕತ್ತಿಗೆ ದಬ್ಬಳಂ ಕೊಡಲಿ ಗೂಟಂ ಹಾರೆ ಹಾರಂಗಿ ಕೈಪಿಡಿದಾ ತಾಮ್ರಸಭಾಂಡಮೆಂಬಿವಿನಿತುಂ ದಂಡಿಂಗೆ ಸಾಮಗ್ರಿಗಳ್ (ಸೂಕ್ತಿಸು. ೧೮-೨೩); ಶೂಲ ಬರ್ಪುದ ಕಂಡು ಪರಬಲಮಸ್ತ್ರಕಶೂಲನ ಗೂಟವ ತಟಿದು . . . ಬೊಬ್ಬಿಟಿದ (ಮೋಹತ. ೩೯-೦೦); ಸುರಮ ತಂಗಡವು ಗೂಟವುಂ ಕಿತ್ತುಕೊಂಡಮರಾವತೀಪುರ ಪ್ರಾಂತದಲ್ಲೇ ಭಂಗ ಪಡಿಸುತ್ತಮರಸಂತತಿಗೆ ಭೀತಿಯಂ . . . ತೋರುತಿಪ್ಪುದು (ಅರ್ಜಾವಿ. ೦-೩೬); ಗುರು ಕೊಟ್ಟ ಜೋಳಿಗೆಯಂದು ಗೂಟಕ್ಕೆ ಸಿಗಹಾಕಿದರೆ ಹೊಟ್ಟೆ ತುಂಬೀತೆ? (ಗಾದೆ). **ಘೂಟ**: ಅಲ್ಲೇ ಘೂಟಕ್ಕ ಇದ್ದ ಮಡೀ ಹಚಿಗೊಂಡು ವಸ್ತ್ರಾಂತರ ಆದಾ (ದೀಪಹ. II, ೨೬).

[ದೇಶ ತುಳು. ಗೂಂಟ, ಗೂಂಟಿಗೆ, ಗೂಂಟೊ, ಗೂಟ, ಗೂಟೆ; ತೆಲು. ಗೂಟ, ಗೂಟಾ./ಪ್ರಾ. ಖುಂಟ]

**ಗೂಂಟವಲೆ, ಗುಂಟವಲೆ, ಗೂಟವಲೆ** (ನಾ). ಒಂದು ಬಗೆಯ ಬಲೆ: ತಡಿಕೆವಲೆ ಕಣ್ಣವಲೆ ನಿಟ್ಟಡಕಿಲ್ವಲೆ ಗೂಂಟವಲೆ (೧ರಿಕ. ೦-೮೦); ಪಾಸುವಲೆ ಗೂಂಟವಲೆ [ಪಾಠಾಂ. ಗುಂಡಿವಲೆ] ಮತ್ತಾನೆಯ ಬಲೆ ತಟ್ಟೆಬಲೆಗಳೆಂಬಿವನತ್ಯಾತುರಮಾಗಿಯೆರಸಲೆಯಲ್ಕಾ ಸಮಯದೊಳೊರ್ವ ಜೈನ ಮುನಿಪತಿ ಕಂಡಂ (ಪುಣ್ಯಾಸ್ರ. ೯-೩೬). **ಗುಂಟವಲೆ**: ತೊಟ್ಟವಲೆ ಗುಂ[ಪಾಠಾಂ. ಗೂ]ಟವಲೆ ಕಣ್ಣವಲೆ ಕಾಲುವಲೆಯು . . . ಬೇಡವಡೆ ನೆರದು ದೇನೆಂಬೆನು (ಹದಕಾ. ೫-೮). **ಗೂಟವಲೆ**: ಮೇಲಿನ 'ಹಚಕಾ.' ಪ್ರಯೋಗದ ಪಾಠಾಂತರವನ್ನು ನೋಡಿ. [ಗೂಂಟ + ಬಲೆ$_1$]

**ಗೂಂಟು** (ನಾ). ಪಳಗದ ಕುದುರೆ; ಅಗಡು ಕುದುರೆ: ಒತ್ತೆಯ ಗೂಂಟಂ ಸೊಡರಿಟ್ಟೇಱುವಂತೆರವಿನ ಸಿರಿಯನಱಿದು ಪೊಟಲೊಳಂ ಪೊಱಪೊಟಲೊಳಂ . . . ಎಲ್ಲಿ ನೋಟಿಸ್ಟೊಡಂ ಕಾಮದೇವನೆ ಬವಣಿಗೆ ಬಂದಂತೆ ಬರ್ಪ ವಸುದೇವನನೆ ಕಾಣಲಕ್ಕುಂ (ಅರ್ಧನೇ. ೫-೨ ವ); ಅಂತಾ ಗೂಂಟನ ಬಾಯೊಳ್ಗೂಂಟವುಂ ಬೆಟ್ಟದಂತಿರ್ದ ಕಯ್ಯನುರ್ಚಿಕೊಂಡು (ಅರ್ಧನೇ. ೬-೬೮ ವ). [<ಪ್ರಾ. ಗುಂಠ. / ಸಂ. ಘೋಟ]

**ಗೂಂಡಾ, ಗುಂಡಾ** (ನಾ). ಪುಂಡ; ದುಷ್ಟ; ಸ್ವೇಚ್ಛಾಚಾರಿ: ಕಳ್ಳ ವ್ಯವಹಾರಿಗಳೂ, ಕೆಲವು ಗೂಂಡಾಜನರೂ ಸೇರಿಕೊಂಡಿದ್ದರು (ಪಂಜಪಂ. ೧೮೦); ಗೂಂಡಾಜನಗಳಾರೋ ಇದ್ದಿರಬಹುದು (ಸಾಹೇಬ್. ೨೦೪). **ಗುಂಡಾ**: ಇವರಿಗೂ ಗುಂಡಾಗಳಿಗೂ ಏನು ವ್ಯತ್ಯಾಸವುಳಿದಂತಾಯಿತು (ಬಲಬೀ. ೫೯); ಈತನ ಆಳಿಕೆಯಲ್ಲಿ ಗುಂಡಾಜನರ ಸಂಖ್ಯೆ ಹೆಚ್ಚಿದೆ (ಕೊತಕಾ. ೭). [← ಹಿಂ. ಮರಾ. ಗುಂಡಾ]

**ಗೂಂಡಾಗಿರಿ, ಗುಂಡಾಗಿರಿ** (ನಾ). ಪುಂಡಾಟಿಕೆ; ಪುಂಡುತನ; ಸ್ವೇಚ್ಛಾಚಾರ: ಸಾಮಾನ್ಯವಾಗಿ ಗೂಂಡಾಗಿರಿಯಲ್ಲಿ ನಿಸ್ಸೀಮರಾದವರನ್ನು ಈ ಕೆಲಸಕ್ಕೆ ನೇಮಿಸಿಕೊಳ್ಳುತ್ತಿದ್ದರು (ಪಂಜಪಂ. ೧೦). **ಗುಂಡಾಗಿರಿ**: ಈ ಗುಂಡಾಗಿರಿಯನ್ನು ನಿಲ್ಲಿಸು (ಹಬ್ಬಬ. ೨೦೮). [ಗೂಂಡಾ + – ಗಿರಿ$_2$]

**ಗೂಕು** (ನಾ). (ಕರಾ) ಸಣ್ಣ ಹಲಸಿನ ಮಿಡಿ; ಹಲಸಿನ ಹೀಚು; ಗಂಜ್ಜೆ; "ಚಿಗುರಾದ ಹಲಸಿನ ಮಿಡಿ" (ಸಿರಿಕೋ. ೦೬೫); ಹತ್ತು ಗೂಕು ಬಿಟ್ಟರೆ, ಕಾಯಿ ಆಗುವುದು ಒಂದೋ ಎರಡೋ (ರೂಢಿ). [ ? ]

**ಗೂಗ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ, ಮರದ ಎಣ್ಣೆ, ಅಣ್ಣಾತಮ್ಮನಮರ, ಗೂಗ (ಮೃಶಿಗಿ. ೩೦-೬೦೭). [ ? ]

**ಗೂಗರಿಸು** (ಕ್ರಿ). ತೂಕಡಿಸು; ಉತ್ಸಾಹಹೀನವಾಗು: ಬೆಳಗಾಗೆದ್ದು ಗೂಗರಿಸಿಕೊಂಡು ಕೆಲಸಮಾಡುವುದನ್ನ ನೋಡಿದರೆ ಸಾಕು ವ್ಯೆ ಬೆಂಕಿಯಾಗುತ್ತೆ (ನಿಂದನ. ೫೫). 'ಜೂಗರಿಸು' ಪರಾ. [ ? ]

**ಗೂಗಿಡು** (ಕ್ರಿ). ಗೂಗೂ ಎಂದು ಕೂಗು: ಕರಿಕಾಗೆ ಕಾವ್‌ಗುತಲು ಕೆಂಗಾಗೆ ಗೂಗಿಡುವ ನೋಟ ನಡುಹಗಲೊಳಗೆ ಕಾಣಬಹುದು (ಸಹೀಗೀ ೫೮-೦). [<ಗೂ + ಇಡು$_1$]

**ಗೂಗು** 'ಗುಂಗು$_3$' ನೋ.

**ಗೂಗುಕ್** (ನಾ). ಒಂದು ಅನುಕರಣ ಶಬ್ದ; ಗೂಬೆಯ ಕೂಗು: ಗೂಗುಕ್ಕೆಂದು ಗೂಗುಟ್ಟದಿರಿ! (ಚಿಟ್ಯಅ. ೨೦೭-೦೮).

**ಗೂಗುಟ್ಟು** (ಕ್ರಿ). ಗೂಗೂ ಎಂದು ಕೂಗು; ಗೂಬೆಯಂತೆ ಕೂಗು: ಅಮಂಗಳದ ಶಂಕೆಯ ಅವಲಕ್ಷಣವನ್ನರುಚಿ ಗೂಗುಕ್ಕೆಂದು ಗೂಗುಟ್ಟದಿರಿ! (ಚಿಟ್ಯಅ. ೨೦೭-೧೯). [ಗೂ + ಕುಟ್ಟು$_1$]

**ಗೂಗೆ, ಗೂಬೆ** (ನಾ). ಗೂಗೂ ಎಂದು ಕೂಗುವ ಒಂದು ಬಗೆಯ ಹಕ್ಕಿ; ಘೂಕ: "ಉಲೂಕಃ, ಕೌಶಿಕಃ, ಧ್ವಾಂಕ್ಷಾರಾತಿಃ, ನಿಶಾಟನಃ–ಈ ೪ ಗೂಗೆ" (ಹಲಾಯು. ೪೧-೯೩); "ಘೂಕಂ ಗೂಗೆವೆಸರ್" (ಚತುನಿ. ೪೩); ಕಾಗೆ ಗೂಗೆ ಪರ್ದು ಚಕೋರಂ . . . ದುಃಖಂಗಳನೆಯ್ದುಗುಂ (ವರ್ಧಮಾ. ೯೭-೮); ಖಗವುಂ ಸಾಕುವೆನೆಂದು ಗೂಗೆಮಱಿಯಂ ಸಂಪ್ರೀತಿಯಿಂದೋವರೇ (ಸೋಮೇಶ. ೪೦); ವಾಯಸ ಕುಲವನೊಂದೇ ಗೂಗೆ ಹೊಯ್ದುಱಿಯಟ್ಟುವಂದದಲಿ ಬಲುಕಣೆಗಳಿವದಿರನು ಕರಿ ಮುಂಕೊಳಿಸಿ ಕೆಡಹಿತು (ಕುಮಾರವ್ಯಾ. ೩-೨೪); ಮಾಗಧ ನನಗೊಬ್ಬ ಪಗೆಯೆ ಸೂರ್ಯಗೆ ದೊಡ್ಡ ಗೂಗೆಯ ಯೋಚನೆಯೇಕೆ (ಭರತ. ೨೪-೮). **ಗೂಬೆ**: ೧. ಗೂಬೆ

ಕೋಗಿಲೆ ಮುದಿನರಿಗಳಲ್ಲಿಗೆ ಸಭಾಸದರೆಂದನಾ ಚೈದ್ಯ (ಕುಮ್ಯಾ.ಸ. ೭೦೩. ೧೦-೩೯); ಗೂಬೆ ಜರೆದೊಡೆ ಲೋಕರೋಚನಗೆ ಕೊರತೆಯುಂಟೆ (ಅರ್ಜುವಿ. ೧೦ ಓಟಿಕಾಸಂಧಿ); ಎಲ್ಲೋ ಬಳ್ಳು ಗೂಬೆಗಳು ಮಾತ್ರ ಆಗೀಗ ಕೂಗುವುದು ಕೇಳಬರುತ್ತದೆ (ಬಾಠಾಕ್ಕ. ೯೪); ಗೂಬೆ ಮುಂಗುಸಿಗಳೂ ಅತ್ತ ಕಡೆ ಬಂದುವು (ಕಸರಿ. ೭); ಇರುಳು ಕಾಗೆಗೆ ಆಗದು ಹಗಲು ಗೂಬೆಗೆ ಆಗದು (ಗಾದೆ).

**ಗೂಗೆಕೂರಿಸು, ಗೂಬೆಕೂರಿಸು** = ಅಪವಾದವನ್ನು ಹೊರಿಸು; ತಪ್ಪುಹೊರಿಸು: ನಮ್ಮ ಮೇಲೂ ಗೂಗೆ ಕೂರಿಸಿಬಿಟ್ಟರಲ್ಲ ಸಾಮ್ಕಾರ್ರು (ಬೆಲುಮ. ೯೭); ಜತೆಗೆ ನಮ್ಮ ತಲೆಗಳ ಮೇಲೂ ಗೂಬೆ ಕೂರಿಸುತ್ತಾನೆ (ಮಹಾಗ. ೦೮೯). [ದೇಶ ತಮಿ. ಕೂಕೈ; ಮಲ. ಕೂಮನ್; ತುಳು. ಗೂಗೆ; ತೆಲು. ಗೂಬ/ಸಂ. ಘೂಕ]

**ಗೂಗೆಹೂವು** (ನಾ). ಬೆಟ್ಟದಾವರೆ: "ಬೆಟ್ಟದಾವರೆ – ಗುಡ್ಡದಲ್ಲಿ ಆಗುವ ಗೂಗೇ ಹೂವು" (ಗಂಗಾಮು. ೨೩೭). [ಗೂಗೆ ? + ಹೂವು (<ಪೂ)]

**ಗೂಚು,** ಗೂಜು (ನಾ). (ಕರಾ) ಹಲಸಿನ ಹಣ್ಣಿನ ನಡುವೆ ಇರುವ ದಿಂಡು: ಪುಣ್ಯಾತ್ಮ ಹಣ್ಣನ್ನು ಗೂಚಿನಿಂದಲೂ ಬಿಡ (ಊರಿ). **ಗೂಜು:** ಲಲಿತ . . . ಹಲಸಿನ ಕಡಿಗಳನ್ನು 'ಸೇಡೆ' ಗಳಾಗಿ ಕತ್ತರಿಸಿ ಅದರ ಗೂಜು, ಸಿಪ್ಪೆ, ಮಯಣಗಳನ್ನು ತೆಗೆದು ತೊಳೆಬಿಡಿಸಲು ಸಿದ್ಧಪಡಿಸಿದಳು (ಬಾಳಿಪ್ಪ. ೨೦೪). [←ತುಳು. ಕೂಂಜಿ, ಗೂಂಜಿ]

**ಗೂಜು** 'ಗೂಚು' ನೋ.

**ಗೂಟ** 'ಗೂಂಟ' ನೋ.

**ಗೂಟಕೋಲು** (ನಾ). ಕಳಗ; ಕಳಿಗೂಟ; ತಡೆಗೂಟ: (ಕ).
[ಗೂಟ (<ಗೂಂಟ) + ಕೋಲು₁ (<ಕೋಲ್₁)]

**ಗೂಟಗಳ್ಳಿ** (ನಾ). ಒಂದು ಬಗೆಯ ಕಳ್ಳಿ ಗಿಡ; ಬೇಲಿಗಳಲ್ಲಿ ನೆಡುವ ಕಳ್ಳಿ: (ವೃಷಿಗಿ. ೩೩-೬೯೩). 'ಕೋಲುಗಳ್ಳಿ' ಪರಾ.
[ಗೂಟ (< ಗೂಂಟ) + ಕಳ್ಳಿ₃]

**ಗೂಟನಾಮ** (ನಾ). ಹಣೆಯ ಮೇಲೆ ಉದ್ದಕ್ಕೆ ಇಟ್ಟುಕೊಳ್ಳುವ ನಾಮ: ಗೂಟನಾಮವ ಹೊಡೆದು ಗುಂಡು ತಂಬಿಗೆ ಹಿಡಿದು . . . ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ ಬೂಟಕತನ ನೋಡಿ ಧ್ರುವಿಸದಿರಿ ಜನರೆ (ಪುರಂದ. ೪-೦೭೩-೧); ಗೂಟನಾಮವನಿಟ್ಟು ಕೋವಿದನು ತಾನೆನುತ ಬೂಟಕೆಯ ಮಾಡಿದವ ಹರಿದಾಸನೇ (ಕಥವಿ. I, ೨೩೭); ಜೈನರ ಜಿನ್ನಪ್ಪನ ಮಗನೂ ಗೂಟನಾಮವನ್ನು ಹಣೆಯ ಮೇಲೆ ವಿರಾಜಿಸುತ್ತ ಬೇಟೆಗಾರರ ಜೊತೆಗೆ ನಡೆದಿದ್ದ (ಗ್ರಾಮಾಯ. ೨೩೮). 'ಪಂಗನಾಮ' ಪರಾ. [ಗೂಟ (< ಗೂಂಟ) + ನಾಮ]

**ಗೂಟವಲೆ** 'ಗೂಂಟವಲೆ' ನೋ.

**ಗೂಟೆ** 'ಗುಂಟೈ₂' ನೋ.

**ಗೂಡ, ಗೂಳ್₁**(ನಾ). ಗುಟ್ಟು; ರಹಸ್ಯ: ಒಂದು ಮೊಗುವ ಗೂಡದೊಳಿರಿಸಿ ನೋಡಿಸೆ ಭುಂಜಿಪುವ[ದ]ಕಂಡಾಡಿದನೆಲ್ಲರ ಕೂಡೆ ಆಡದೆ ನಾಳೆ ಗುಟ್ಟಾಗಿರ್ದು ಊಟವ ಮಾಡುವ ಸಮಯಕ್ಕೆ ಮುತ್ತಿ ಮಾಡುವಿವೀತಗೆ ತಕ್ಕ ಶಿಕ್ಷೆಯನೆಂದು ಕೂಡಿಸರ್ವರು ಮರುದಿನದಿ (ಪೂಜ್ಯಕ. ೩-೦೩೨). **ಗೂಳ್₁:** "ಗೂಳ, ಗುಟ್ಟು – ಗೂಢ" (ಶದ್ಕೋ. ೦೦).
[< ಸಂ. ಗೂಢ]

**ಗೂಡಂಬುಗೊಳ್** (ಕ್ರಿ). ಗುಂಪುಗುಂಪಾಗಿ ಬಾಣವನ್ನು ಬಿಡು: ಜಕ್ಕೆಯನಾಯಕಂ ಮೊನೆಯಿಟ್ಟ ಗೊಂಡನಾಯಕರ ಮೇಲೆವಾಯಲು ತಳಿಯ ಮಱಿವಿಡಿದು ಹಡಿಕಟ್ಟಿದಾಳೆಚ್ಚು ಗೂಡಂಬುಗೊಂಡು ಕೆಡಹಲವರ ಹೆಗಲ ಮೆಟ್ಟಿ ಸ್ವರ್ಗಸ್ಥನಾದಲ್ಲಿಗೀ ವೀರಗಲ್ಲಂ . . . ನಿಲ್ಸಿ (ಮೈಎಪಿ. ೦೯೪೦.೯೨-೨; 18 ನೆಯ ಶಹ). [ಗೂಡು+ಅಂಬು₂+ಕೊಳ್₁]

**ಗೂಡಗೊಳಿಸು** (ಕ್ರಿ). ಗುಟ್ಟಾಗಿರಿಸು; ಗೋಪ್ಯವಾಗಿ ಇಡು: ಈ ಮಾತು ಗೂಡಗೊಳಿಸದೆ ಹೋಯಿತು ಪಾಪಿ ನಾರದ ಮಗನ ಪೋಡಿ ದಾನವನ ಕೈಗಿತ್ತು . . . ಕುಟಿಲಚರನಂತಾದೆ (ನವಮೋ. ೨೯-೪೩).
[ಗೂಡ + ಕೊಳ್₁ + – ಇಸು₃]

**ಗೂಡಾಡಿಸು** (ಕ್ರಿ). ಕಲಕು; ಕದಡು; ಕ್ಷೋಭೆಗೊಳಿಸು: ರಾಯ ರಾಡದಮೋ ಹಬ್ಬಣನೆಂಬನೊಳ್ ಘಸಣಿಯೇಕೆಂಬಂತೆ ಗೂಡಾಡಿಪಂ ತೊಡರಲ್ . . . ಜಯುಂಬಡೆವಂ ತಾನೆನಲ್ (ಮುಂಬರಾ. X, ೩-೩೦; 1219); ಕೂಡೆ ನಿಜತೇಜದಿಂದಂ ಗೂಡಾಡಿಸುತಿರ್ಪನಮರಲೋಕಮನ ಸುರಂ (ಅನಂಪು. ೦೩-೨೮). [ಗೂಡು ? + ಆಡಿಸು]

**ಗೂಡಾರ,** ಗುಂಡಾರ, ಗುಡಾರ, ಗುಡಾರು, ಗುಡಾರೆ (ನಾ). ೧. (ಸೈನಿಕರು ಮೊದಲಾದವರು) ಇಳಿದುಕೊಳ್ಳುವುದಕ್ಕಾಗಿ, ಬಟ್ಟೆಯಿಂದ ತಾತ್ಕಾಲಿಕವಾಗಿ ಕಟ್ಟಿರುವ ವಸತಿ; ಬಿಡಾರ; ತಂಬು; ಡೇರೆ: ಗೂಡಾರದ ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ (ಆಜಿಪು. ೦-೯೭); ಮುನಿಪತಿ . . . ತಳಿರ ಗೂಡಾರದಲಿ ಕಂಡನು ಧರ್ಮನಂದನನ (ಕುಮ್ಯಾಆ. ೯-೨); ವೈಶ್ಯಕುಲಸಂಭವರು ಹಾಯ್ಯಿದರಲ್ಲಿ ಗೂಡಾರವನು (ನಳಚ. ೩-೪೪). ೨. ಡೇರೆಗೆ ಹೊದಿಸುವುದಕ್ಕೂ ನೆಲದ ಮೇಲೆ ಹಾಸುವುದಕ್ಕೂ ಬಳಸುವ ದಪ್ಪನಾದ ಬಟ್ಟೆ: ಕಂಬಟ್ಟಿಯು ಗೂ[ಪಾಠಾಂ. ಗು]ಡಾರಮಾನಿಂಬಱಿದು ಬಸಂತನೆಯ್ದೆ ಪೊಯ್ದನೊ ಮದನಂಗೆಂಬಂತೆ . . . ಬಂದುದೊ ಕಣ್ಗಾನೇಕಶಾಖಮಶೋಕಂ (ರಾಜಶೇ. ೨-೩೩); ಬಿಡದಿಮನೆಯಲ್ಲಿ ಸರಿಯಾದ ವ್ಯವಸ್ಥೆಯಿಲ್ಲ; ಗೂಡಾರಗಳು ಇದ್ದರೆ ಚಾಪೆಯಿಲ್ಲ, ಚಾಪೆಗಳಿದ್ದರೆ ಇನ್ನೊಂದಿಲ್ಲ (ಮುಳ್ಳಿಹಾ. ೩೭); ಅಲ್ಲಲ್ಲಿ ದೊಡ್ಡ ದೊಡ್ಡ ಗೂಡಾರಗಳನ್ನು ಹಾಸಿ ಕಾಳುಗಳನ್ನು ತೆಗೆ ತೆಗೆದು ಅವುಗಳ ಮೇಲೆ ಸುರುವತೊಡಗಿದರು (ಆನಚೀ. ೦೭). **ಗುಂಡಾರ:** ೧. 'ಗುಡಿಗುಂಡಾರ' ಪರಾ. **ಗುಡಾರ:** ೧. ಕ್ಷೀರವಾರಾಸಿಪತಿ ತನ್ನ ಸುತಗೆ ಮಿತ್ರನೊಪ್ಪಂ ಸೋಂಕದಂತೆ ಧವಲಾಂಬರದ ಚಿತ್ರರದ ವೇರ್ಗುಡಾರವನು ರಚಿಸಿದವೋಲು ಮೃತ್ಯುಂಜಯನವಾಸ ರಜತಾದ್ರಿಪೊಪ್ಪಿ ರಾಜಿಸುತಿರ್ದುದು (ನವಮೋ. ೨-೦೭); ಮುಸುಕಿರ್ಪ ಮಂಜಿನಿಂ ಬೆಳ್ಗುಡಾರಂಗಳಂತೆಸೆಯು ಶೈಲಂಗಳ್ (ಶೀಪಠಾ. ೨೩-೦೦); ಅಣ್ಣನು ಯುದ್ಧ ಮಾಡುವುದನ್ನು ನೋಡಬೇಕೆಂದು ಗುಡಾರದಿಂದ ಬಂದವಳು ಗಾಯಪಡೆದು ಬಿದ್ದಿದಾಳೆ (ಸಂಕಳ. ೧೦೦). ೨. ದೊಡ್ಡ ಗುಡಾರವೊಂದನ್ನು ಹಾಸಿ ಅದರ ಮೇಲೆ ಒಂದೆರಡು ಹಳೆಯ ದಿಂಬುಗಳನ್ನಿಡಲಾಗಿದೆ (ನಡರಾ. I, ೨೩೯); ನೆಲಕ್ಕೆ ಹಾಸುವ ಗುಡಾರದಷ್ಟು ದಪ್ಪಗೆ – ಒರಟು ಒರಟಾಗಿದ್ದ ಆ ಕಂಬಳಿಯನ್ನು ಹೊದೆದುಕೊಂಡು . . . ತಲೆಯೊರಗಿಸಿದ (ಆಗಸ್ಟ್. ೨೮). **ಗುಡಾರು:** ೧. ಹೆಬಸೂರು ಇಲ್ಲಿ ಉತ್ತಮ ಗುಡಾರುಗಳು ಹುಟ್ಟುತ್ತವೆ (ರಾಠಜಿ. ೨೦). **ಗುಡಾರೆ:** ೧. "ದೂಷ್ಯಂ, ವಸ್ತ್ರವೇಶ್ಮನ್ . . . ಬಟ್ಟೆಯಿಂದ ಕಟ್ಟಲ್ಪಟ್ಟ ಮನೆಗೆ ಹೆಸರುಗಳು, ಗುಡಾರ ಗುಡಾರೆ ಡೇರಾ ಆದಿ ಶಬ್ದದಿಂದ ಪಟಕುಟೀರಾದಿ ಶಬ್ದಗಳೂ ಗುಡಾರಕ್ಕೆ ಹೆಸರುಗಳು" (ಸಿದ್ಧಾಂತಿ. ೦೭೮).
[ದೇಶ ತಮಿ. ಮಲ. ಕೂಡಾರ; ತುಳು. ಗುಡಾರ. ತೆಲು. ಗುಡಾರ, ಗುಡಾರು, ಗೂಡಾರ, ಗೂಡಾರು. / ಸಂ. ಗೂಢಾಗಾರ]

**ಗೂಡಾರವಿಡು**(ಕ್ರಿ). ಡೇರೆಯನ್ನು ಹೊಡೆ; ಬೀಡುಬಿಡು: ನಾ ಗೂಡಾರವನಿಟ್ಟ ಬಳಿಯಲೊಬ್ಬ ಬೇಗದೆ ಗೂಡಾರವಿಟ್ಟು ರಾಗದೊಳಗೆ ರಾಜಕಾರ್ಯವ ನೆಱೆ ಕೊನೆಸಾಗಿಸಲಱಿದಪೆನೆಂದ (ಕಂನವಿ. ೦೭-೦೯).
[ಗೂಡಾರ + ಇಡು₁]

**ಗೂಡಿಕ್ಕು** (ಕ್ರಿ). ಗೂಡನ್ನು ಕಟ್ಟು; ಗೂಡುಮಾಡು: ಮೊಳಕಾಲ್ಗಳೆಡೆಯೊಳುದ್ಭವಿಸಿರ್ದ ಕಿಂಶುಕಂಗಳ ಮೇಲೆ ಗೂಡಿಕ್ಕಿ ಬಾಳ್ದಪುವು ಪಕ್ಷಿಗಳ ಬಳಗಂಗಳ್ (ಜೈಮಿಭಾ. ೩೨-೨೭). [ಗೂಡು + ಇಕ್ಕು]

**ಗೂಡಿಟ್ಟಗೊಳಿಸು** (ಕ್ರಿ). ಎದೆಗೆ ಈಟಿಹಾಕು; ಇಟ್ಟಿಯಿಂದ ತಿವಿ: ಮುಟ್ಟಿದ ಮೋಹದಿಂ ಓಡಿದರೆನ್ನನು ಎಂಗೆ ದಟ್ಟಿಸಿ ಹೋದ ಖೂಳನನು ಕಟ್ಟಾಳಿಂ ಕಯ್ಯ ಕಟ್ಟಿ ತರಿಸಿ ಗೂಡಿಟ್ಟಗೊಳಿ [ ಪಾಠಾಂ. ಗುಡಿಕಟ್ಟಿ ಕೊಲಿ ] ಸದೆ ಮಾಣ್ದಪೆನೆ (ಶಬರಶಂ. ೩೩-೭೭). [ ಗೂಡು + ಇಟ್ಟಿ₂ + ಕೊಳಿಸು ]

**ಗೂಡಿಡು** (ಕ್ರಿ). = ಗೂಡಿಕ್ಕು: ಗೂಡಿಡುವ ಗುಬ್ಬಿಗಳಂತಿರೆ ಬಾಗಿಲಲ್ಲಿ ಪುಲ್ಗಚ್ಚಿ ಪುಗುತ್ತುಮಿರ್ಪರಂಭೂಮಿಭುಜರ್ (ಅನಂಪು. ೦೩-೪೭); ಮೃಗಾವಳಿ ಕೋಡ ಶೀಂಟಿಗೀಡಿಡಿಬಿವುವು ಪಕ್ಕಿ ಗೂಡಿಡುವುದು . . . ಮುನೀಂದ್ರನ ನಿಶ್ಚಲಾಂಗದೊಳ್ (ರಶರ. ೨-೦೨೨). [ ಗೂಡು + ಇಡು₁ ]

**ಗೂಡಿರಿಸು** (ಕ್ರಿ). ಮುಂದುರಿಕೊಳ್ಳು: ಒಂದೊಂದು ಮೂಲೆಯಲ್ಲಿ ಒಬ್ಬೊಬ್ಬರು 'ಗೂಡಿರಿಸಿ' ಕೊಂಡು ಕುಳಿತುಕೊಳ್ಳುವರು (ಬಾಲಪ್ರ. II, ೦೦೬೩). [ ಗೂಡು + ಇರಿಸು ]

**ಗೂಡಿಸು** 'ಗುಡಿಯಿಸು' ನೋ.

**ಗೂಡು** (ನಾ). ೧. ಪಕ್ಷಿಗಳ ವಾಸಸ್ಥಾನ; ನೆಲೆ; ಬೀಡು: "ಗೂಡು ನೀಡಂ ಕುಲಾಯಂ" (ವಸ್ತುಕೋ. ೪೧-೧೧); ಗಿಳಿಗಳ ಗೂಡಿಂದುದಿರ್ದ ದಾಳಿಂಬದ ಬಿತ್ತುಗಳಿನೊಸರ್ದ ತನಿರಸದಳಿಪದೊಳಂ . . . ಲತಾ ಮಂಟಪಂಗಳ್ ಮನಂಗೊಳಿಪುವು (ಕಾದಂಪೂ. ೪೭). ೨. ಇರುವೆ, ಜೇನು, ಕಡಜ ಮೊದಲಾದುವು ಕಟ್ಟಿಕೊಳ್ಳುವ ಮನೆ: ತೀಟಿಂಗಂಜಿ ಕಡಂದುಟುಗೂಡು[ಡ]೦ ಪುಗುವಂತಾನುಂ . . . ಮಹಾದುಃಖ ಮೆಂಬಗ್ನಿಗೆ ತಮ್ಮ ಶರೀರಮೆಂಬ ಪುಳ್ಳಿಗಳನಿಕ್ಕುವರದೇಂ ಸಾಸಿಗರೋ (ಧರ್ಮಾಮೃ. ೭-೦೬೩); ಜಗವೊಂದು ಜೇನಿನ ಗೂಡು (ಇಂಚಾಪ. ೨೦೦-೪೨); ೩. (ಮನುಷ್ಯರು ವಾಸಿಸುವ) ಗುಡಿಸಲು; ಮನೆ: ಹೊಲೆಯ ನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ . . . ಚರ್ಮಕಾರರ ಗೂಡಿನಲಿ ಜನಿಸುವನು ಬ್ರಾಹ್ಮರ ನೋಡಿ ಪಾದತ್ರಾಣ ವೀಯ್ಯಲು ರಜಕಜಾತಿಯಲಿ ಕೊಡುವನು (ಕಾವ್ಯಾಆ. ಒ೦೩. ಪಿ. ೩೪೩); ಪಕ್ಷಿಗಳಿಗೆ ಗೂಡು, ಮಕ್ಕಳಿಗೆ ತಾಯಿ(ಗಾದೆ). ೪. ಗೋಡೆಯಲ್ಲಿ ವಸ್ತು ಗಳನ್ನಿಡಲು ಮಾಡಿದ ಮಾಡು: ಕಿರಿಮನೆಯೊಳು ಅವರಣ್ಣನ ಮಕ್ಕಳು ಅವರ ಕಲಾಕೃತಿಗಳನು ಜೋಡಿಸಿಟ್ಟಿರುವರು ಗಾಜಿನಗೂಡೊಳು ಬಂದ ವರಿಗೆ ತೋರಲವನು (ಇಂಚಾಪ. ೦೦-೩೯); ಬಚ್ಚಲುಮನೆ ಕಟ್ಟುವವನು ಅದರಲ್ಲಿ ತೊಟ್ಟಿ,ಒಲೆ, ಗೂಡು ಇತ್ಯಾದಿಗಳನ್ನು ತನ್ನ ಅಭಿರುಚಿಗೆ ತಕ್ಕಂತೆ ನಿರ್ಮಿಸುತ್ತಾನೆ (ಜೀವಾತ್ಮ. ೧೭೨). ೫. ಪಕ್ಷಿಗಳನ್ನು ಇಡಲು ಮಾಡಿರುವ ಪಂಜರ: ಗೂಡುಗಳು ಕತ್ತಿ ಬಡಿಕೋಲ್ ಕಲ್ಲಿ ಹಿಡಿದ . . . ಬೇಡರು ನೆರೆದರು (ಹಕಶಾ. ೫-೯); ಹಕ್ಕಿಯನ್ನು ಸಾಕಲು ಗೂಡೊಂದನ್ನು ತಯಾರುಮಾಡಿದ್ದೇವೆ (ರೂಢಿ). ೬. ನ್ಯಾಯಾಲಯದಲ್ಲಿ ಖೈದಿ ನಿಲ್ಲಲು ಕಟ್ಟಿರುವ ಮರದ ಚೌಕಟ್ಟು; ಕಟಕಟೆ: ಕೈದಿಯಾದ ವಿಮಲಾನಂದನು ಬಿಚ್ಚುಕತ್ತಿಯ ಪೋಲೀಸ್ ಪಹರೆಯವರ ನಡುವೆ ಕೈದಿಯ ಗೂಡಿನೊಳಗೆ ನಿಂತಿದ್ದನು (ವಿಧಿಪ್ರ. ೦೭೩). ೭. ಇದ್ದಲಿನ ಒಲೆ: ಬಳಿಕವಾ ಗೂಡ ಬಿಸಿ ಮಾಡಿ ಮತ್ತದಟೊಳಗೆ ತಳಲುಗೆಂಡವ ಹಾಕಿ . . . ಆ ಕಾಯನರಿಜಾವ ಪರಿಯಂತರನುವಾಗಿ ಬೇಯಿಸುವುದು (ಸೂಪಶಾ. ೫-೨೭); ಮೊದಲನೆಯ ತೂತಿಗೆ ಸಮಿಪಾಪವೇ ಒಂದು ಬೆಂಕಿಯ ಗೂಡನ್ನಿರಿಸಿ ಅದರಲ್ಲಿ ಕೆಂಡಗಳನ್ನು ಹಾಕಿಟ್ಟುಕೊಂಡರೆ ಸುಲಭವಾಗುವುದು (ಅಡುಸಾ. ೨೮). ೮. ದೇಹ; ಶರೀರ: "ಗೂಡೆನಲ್ಕದು ದೇಹಂ" (ಛಾರನಿ. ೩೯); ಕೂಡೆ ಹಟಿಹಂಚಾದ ತಂದೆಯು ಗೂಡ ನೋಡದ ಮುನ್ನ ಕಂಬನಿ ಮೂಡಿ ಮುಳುಗಿದವಾಲಿ ಕಾಣವು (ಕುಮಾರವ್ಯಾ. ೦೯-೮); ಒಂದೇ ಗೂಡಿನಲ್ಲಿದ್ದು ಒಂದು ಕ್ಷಣ ವಗಲದೆ ಎಂದೆಂದು ನಿನ್ನನು ಪೊಂದಿರುವೆ (ಪುರಂದ. ೦-೦೬೩-೦); ಮರಣ ಭಯಕಂಜಿ ನೀ ಹುದುಗಿರ್ದು ಕಾಯಮಂ ನಿರಿಸಿಕೊಂಡರೆಯಿಂದಿಗಂ ಗೂಡು ನಾಳೆಗಿದು ಸ್ಥಿರವೇ (ತುರಂಗ. ೭೫-೫). ೯. ಮನಸ್ಸು; ಅಂತರಂಗ: ಶಾರದಾಂಬಿಕೆ ತಾಯಿ ನೀಯನ್ನ ಗೂಡಿನೊಳು ನೆಲಸಿ ನುಡಿಸ್ಯಾಡೆ (ತುರಂಗ. ೧-೨). ನೋಡಿದಳು ದ್ರೌಪದಿದುರಾತ್ಮನ ವಿಚಾರವಂ ಗೂಡಿ ನೊಳಗಿಟ್ಟು ನುಡಿದಳು (ತುರಂಗ. ೩೫-೪೮). ೧೦. ಎಲುಬಿನ ಗೂಡು; ಅಸ್ಥಿಪಂಜರ: 'ಗೂಡುಪೋಗು' ಪರಾ. ೧೧. ಉಂಗುರ, ಓಲೆ ಮೊದಲಾದುವುಗಳಲ್ಲಿ ಹರಳನ್ನು ಸೇರಿಸಲು ಮಾಡಿರುವ ವೆಜ್ಜ: (ಕ). ೧೨. ಜೋಳ, ಸಜ್ಜೆ ಮೊದಲಾದ ಧಾನ್ಯಗಳ ದಂಟನ್ನು ಕೊಯ್ದು ಒಟ್ಟಿರುವ ಮೆದೆ: ಮತ್ತೆ ಕೆಲವರು ಅವುಗಳನ್ನು ಸಿವುಡು ಕಟ್ಟಿ ಗೂಡುಹಾಕುತ್ತಿದ್ದರು (ಕಶಕ. ೩-೬೪). ೧೩. ಇಟ್ಟಿಗೆಗಳನ್ನು ಸುಡಲು ಜೋಡಿಸಿ ಒಟ್ಟಿರುವ ಗಡ್ಡೆ: ಇಟ್ಟಿಗೆ ಸುಡುವುದಕ್ಕೆ ಇನ್ನೂ ಗೂಡೇ ಸಿದ್ಧವಾಗಿಲ್ಲ (ರೂಢಿ). 'ಇಟ್ಟಿಗೆ ಗೂಡು', 'ಗೂಡುಒಲೆ' ಪರಾ. [ ದೇ॥ ತಮಿ. ಮಲ. ಕೂಡು; ತೊದ. ಕುಡ್; ತುಳು. ತೆಲು. ಗೂಡು ]

**ಗೂಡುಒಲೆ** 'ಗೂಡೊಲೆ' ನೋ.

**ಗೂಡುಕಟ್ಟು** 'ಗೂಡುಗಟ್ಟು' ನೋ.

**ಗೂಡುಗಟ್ಟು, ಗೂಡುಕಟ್ಟು** (ಕ್ರಿ) ೧. ಎದೆಯ ಮೂಳೆಗಳು ಎದ್ದು ಕಾಣು; ಸೊರಗು; ಬಡವಾಗು: ಮಗಳ ಗೂಡುಗಟ್ಟಿದ ಎದೆಯ ಮೇಲೆ ಕೈಯಾಡಿಸುತ್ತ ಹೇಳಿದರು ರಸ್ತುಂ (ಹಾಡುಹು. ೫೪). **ಗೂಡುಕಟ್ಟು:** ೨. (ಹಕ್ಕಿ ಮೊದಲಾದುವು) ಗೂಡನ್ನು ಕಟ್ಟು: ತಲೆಮೇಲೆ ಹಾರುವ ಹಕ್ಕಿಯ ಗತಿಯನು ತಪ್ಪಿಸಲಾರೆವು ನಾವು ಬಂದದು ತಲೆಯೊಳು ಗೂಡು ಕಟ್ಟುವುದನು ತಪ್ಪಿಸಿಕೊಳ್ಳಬಹುದಾವು (ಇಂಚಾಪ. ೦೯೩-೫೨). [ ಗೂಡು + ಕಟ್ಟು₁ ]

**ಗೂಡುಗೀಲು** (ನಾ). ಗೂಡಿನ ಕೀಲು; ಪಂಜರದ ಬಾಗಿಲ ಬೀಗ: ರನ್ನದ ಪೊಸಗೂಡುಗೀಲನುಡಿದೀಟ್ಟು ಕಟಲ್ಚಿ ತೆರಳ್ಚಿ ಕೀರಮಂ . . . ಉರ್ಬಿ ಕೊರ್ಬುಗುಂ (ಚಕಪಿ. ೩ ೫೮). [ ಗೂಡು + ಕೀಲು (<ಕೀಲ್) ]

**ಗೂಡುಗೊಳ್** (ಕ್ರಿ). ೧. ಆಶ್ರಯವನ್ನು ಪಡೆ; ಗೂಡನ್ನು ಸೇರು: ಪೆರ್ಮರದನಟ್ಟಗೊಂಬಿನ ಕವಲ್ಗಲೆಯೊಳಿಟ್ಟ ಗೂಡುಗಳೊಳ್ ಗೂಡು ಗೊಂಡಿರ್ದ ಕುಟುಳಿವಟಿಗಳ್ಗೆ ಕುಟುಂಕನಿಕ್ಕಿ . . . ಪದೆದಿರ್ದ ವನವಿ ಹಂಗಂಗಳಂ ಕೊಂಬುವೆರಸಿ ತೂಗಿ (ಚಂದ್ರಪು. ೮-೪ ವ); ಖಗಗಳು ಗೂಡು ಗೊಳಲೆಂದು ತರಣಿಯಸ್ತಾದ್ರಿಗೆಯಿದಲಿಕೆ (ಅಂಜಪ. ೭-೧೪೨); ಇರದೆ ಸರಿದುವು ಬಿಸಿಲ ಬೀಡುಗಳ್ಗೂಡುಗೊಂಡುವು ಕೂಡೆ ಪಕ್ಷಿಜಾತಿ (ಶ್ರೀಮಿಭಾ. ೦೭-೨೦). ೨. ಅಡಗು; ಮರೆಯಾಗು: ಕೊಡೆಯ ಚರ್ಮದ ಮಟಿ ಯೊಳ್ ಗೂಡುಗೊಳುತಿರ್ದ ಶೌರ್ಯ ಕ್ರೀಡೆಯ ದಿಗ್ವಿಜಯಮೆಸೆದು ದೆಮ್ಮಗ್ರಜನ (ಆದಿಪು. ೧೪-೭೨); ಮಾಳವಂ ಮುಗ್ಗಿರ್ದನತಿಭಯದಿಂ ಗೂರ್ಜ್ಜರಂ ಗೂಡುಗೊಂಡಂ (ಎಪಿಇಇ. IX-1, ೧೧೮-೧೯ ; 1067); ದ್ರೋಣಾ ಚಾರ್ಯರ ಶಿಷ್ಯರೆಲ್ಲಂ ಚಿತ್ರಬೆಟ್ಟಾಗೆ ಗೂಡುಗೊಂಡು ನೋಡುತಿರ್ಪುದಂ ಜನಭಕ್ತಂ . . . ಗಜೇಂದ್ರದ ಬೆಂಗೇಟಿದಂ (ಧರ್ಮಾಮೃ. ೧೩-೫೫); ಗೂಡುಗೊಂಡುದು ವಿಕ್ರಮಾನಳನಾಡಬಾರದು ಭೀಷ್ಮನನು (ಕುಮಾರವ್ಯಾ.ಭೀ. ೯-೪೧). ೩. ಮರುಗು; ವ್ಯಥೆಪಡು; ಕೊರಗು: ಅಂತಾ ವಾನರಂ ಕೇದಗೆಯನೇಟಿದ ಕೋಡಗದಂತೆ ಗೂಡುಗೊಂಡು ಪಲ್ಲಂ ಗಿಡಿಗಿಟಿದು ಮೆಲ್ಲನೆ ಮೊಸಳೆಗಂತರೀಪವಿಲ್ಲಿಗವಿನ್ನೆನಿತು ದೂರವುಂ ಂಬುದುಂ (ಪಂಚತಂ. ೨೭೯-೨೦); ಮೇಲುಗಾಣದೆ ಬಳಿಕಂ ಮನಂ ಜರಿದು ಜಾನಿಸಿ ಚಿಂತಿಸಿ ಗೂಡುಗೊಂಡು (ಪುಣ್ಯಾಸ್ರ. ೧-೨೦). [ ಗೂಡು + ಕೊಳ್₁ ]

**ಗೂಡುಗೊಳವೆ** (ನಾ). "ಮತ್ತೊಂದು ಕೊಳವೆಯನ್ನು ಒಳಗೊಳ್ಳು ವುದಕ್ಕಾಗಿ ಒಂದು ತುದಿಯನ್ನು ಹಿಗ್ಗಿಸಿದ ಕೊಳವೆ" (Socket pipe. ಇಂಕಶಿ). [ ಗೂಡು + ಕೊಳವೆ (<ಕೊಟವಿ) ]

ವರಗತಿಗೆ ಶುದ್ಧಾಂಗದ ಗೆಜ್ಜೆಮೆಟ್ಟಿನ ಗತಿಗಳಿಂ ಬುದ್ಧಿವೆಣ್ಣುಗಳಾಡಿದರು (ಕಂಸವಿ. ೨೦-೦೦೩). [ ಗೆಜ್ಜೆ$_1$ + ಮೆಟ್ಟು$_2$ ]

**ಗೆಜ್ಜೆಯಂದುಗೆ** (ನಾ). = ಗೆಜ್ಜೆಪಾಡಗ : ಸಿಂಗಾರವ್ವ . . . ಗೆಜ್ಜೆಯಂದುಗೆಗಳನ್ನು ಕಯ್ಗ್ಗಿಯ್ಸಿ, ಗೆಜ್ಜೆಯ ಬಣ್ಣಗೋಲ್ಗಳನ್ನು ಹಂಚಿಸುತ್ತಿರುವಳು (ಬಿಟ್ಟಿಅ. ೧೬೯-೨೦). [ ಗೆಜ್ಜೆ$_1$ + ಅಂದುಗೆ ]

**ಗೆಜ್ಜೆಯಲಬು** (ನಾ). ೧. ನೆಲದ ಮೇಲೆ ಉದಕ್ಕೆ ಹಬ್ಬಿಕೊಂಡು ಹೋಗುವ, ಹಳದಿಹೂವುಗಳನ್ನು ಬಿಡುವ, ಮೂರುಮೂರು ಸಣ್ಣಸಣ್ಣ ಎಲೆಗಳುಳ್ಳ ಒಂದು ಬಗೆಯ ಸಸ್ಯ : (ಕ). ೨. ಒಂದು ಬಗೆಯ ಬಳ್ಳಿ : (ಕ). [ ಗೆಜ್ಜೆ$_1$ + ಅಲಬು$_1$ ]

**ಗೆಜ್ಜೆವಸ್ತ್ರ** (ನಾ). ಹತ್ತಿಯಿಂದ ಮಾಡಿದ, ಗೆಜ್ಜೆಸರದಂತೆ ಕಾಣುವ ಮಾಲೆ ವಸ್ತ್ರ, ದುಂಡುಬಿಲ್ಲೆ : ಗೌರಿಗೆ ಗೆಜ್ಜೆವಸ್ತ್ರ ಏರಿಸಿ ಪೂಜೆ ಮಾಡುತ್ತಾರೆ (ಕಂಠಿ). [ ಗೆಜ್ಜೆ$_1$ + ವಸ್ತ್ರ ]

**ಗೆಜ್ಜೆವಳಯಿಗೆ** (ನಾ). ಗೆಜ್ಜೆಗಳಿಂದ ಕೂಡಿದ ಧ್ವಜ,-ಬಾವುಟ : ತಂಕ ಬಡಗಲುವೊಂದಿ ನಡೆಯಂದಾ ಗೃಹೇಂದಿರೆ ಅಂದು ಕೈಬೀಸುವವೊಲಾದುದು ಗೆಜ್ಜೆವಳಯಿಗೆಯು (ಸಾಳ್ವಭಾ. ೨-೦೯).

[ ಗೆಜ್ಜೆ$_1$ + ಪಳಯಿಗೆ (<ಪಟಯಿಗೆ) ]

**ಗೆಜ್ಜೆಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಕ).

[ ಗೆಜ್ಜೆ$_1$ + ಹುಲ್ಲು (<ಪುಲ್) ]

**ಗೆಟ್ಟಿಕ್ಕಿತಳ?** (ನಾ). ಒಂದು ಬಗೆಯ ಮರ : ತಡಸು ಗೆಟ್ಟಿಕ್ಕಿತಳ ಪಿಚು ಮಂದ . . . ತೇಗುಗಳ ವಿಸರ ನಾನಾವೃಕ್ಷಜಾತಿಯಿಂದಸವ ಘೋರಾರಣ್ಯ ಕಣ್ಣಸೆದುದು (ಸಿಂಗಿರಾ. ೩೦-೯). [ ? ]

**ಗೆಟ್ಟೆವಡಿ** (ನಾ). ಒಂದು ಊರಿನ ಹೆಸರು : ಶ್ರೀಮತ್ ಪೆರ್ಮ್ಮನಡಿಗಳ್ಪಟ್ಟಂಗಟ್ಟದ ಅಯ್ದನೆಯ ವರಿಷ ಗೆಟ್ಟೆವಡಿಯ ಅಣ ವ್ಯನಾಳುತುಮಿರೆ (ಎಕ. III, ನಂಜನ. ೯೮-೪ ; 898 ? ) [ ? ]

**ಗೆಡಪ** (ನಾ). ೧. ಹರಟೆ ; ಗಳಹುವುದು : (ಕ). ೨. ಗಿಳಿಯ ಮಾತು. 'ಗಿಳಿಗೆಡಪ' ಪರಾ. [ ಗೆಡೆ$_1$ (<ಕೆಡೆ$_2$) + - ಪ$_2$ ]

**ಗೆಡೆ$_1$** 'ಕೆಡೆ$_2$' ನೋ.

**ಗೆಡೆ$_2$** (ನಾ). ೧. ಎಣೆ ; ಸಮಂ ; ಜೊತೆ : ಪಡೆವಳ ಕಾಳಂಗೊಲ್ಪನ ಗೆಡೆ ಕಾಮುಲನಾರಿ ನೆಗಳ್ದ ಪೆರ್ಮ್ಮಾಡಿಯ ಪೆರ್ಮ್ಮಡದಿಯರೆನೆ ಸೊಗಯಿಸಿದ × (ಎಕ. VII, ಶಿವಮೊ. ೩೩-೭೪ ; 1167) ; ತೊಡೆಗಳ್ ರಂಭಾಸ್ತಂಭದ ಗೆಡೆಗಳ್ (ಶಮದ. ೯೩ ಪ್ರಯೋ). 'ಗೆಡೆವಕ್ಕಿ' ಪರಾ. ೨. ಸ್ನೇಹ ; ಗೆಳೆತನ : ಗುಳ್ಳಿಗೊಟ್ಟಿ ಬಟ್ಟುಳಿಸೆಂಡುಂ ಪೊಡೆಸೆಂಡುಂಬಿವನಾಡುತ್ತೊಡವೆಳೆದರ್ ತವ್ಮೊಳೆಳಸೆ ತಂತಂ ಗೆಡೆಗಳ್ (ಪಂಪಭಾ. ೨-೩೦). [ <ಕೆಳೆ$_2$ ]

**ಗೆಡೆ$_3$** 'ಕೆಡೆ$_3$' ನೋ.

**ಗೆಡೆಗಾಱ** (ನಾ). ಗೆಣೆಯ ; ಗೆಣೆಕಾರ ; ನಲ್ಲ : ಕೊಲೆಯ ಅಪರಾಧದಿಂದಮಾ ಪೇಡಿತನದಪಮಾನಮೇ ಮೇಲೆಂದು ಅಯ್ದು, ಕೊಲದೆ ಬಿಟ್ಟವಳ್ ತನ್ನ ಗೆಡೆಗಾಱನನ್ (ಬಿರ್ದಿಸ್. ೪೬-೯೯೬). [ ಗೆಡೆ$_2$ + - ಕಾಱ ]

**ಗೆಡೆಗೂಡು** (ಕ್ರಿ). ಜೊತೆಗೂಡು ; ಒಟ್ಟಾಗು ; ಸೇರು : ಕುಂಭಾಂಡ ಮಂತ್ರಿ ಸಿಂಗರಿಸಿದ ಕಮ್ಮಲರಂಬನ ಮಗನ ಮೂರ್ತಿಯನು ಹಂಬಲಿಸುವ ಕುಮಾರತಿ ತನ್ನ ಗೆಡೆಗೂಡಿ ಸಂಭ್ರಮದಲಿ ಕರೆಸಿದನು (ಪೋಹಚ. ೪೦-೩೦).

[ ಗೆಡೆ$_2$ + ಕೂಡು$_1$ ]

**ಗೆಡೆಗೊಳ್** (ಕ್ರಿ). ೧. ಜೊತೆಯಾಗು ; ಒಡಗೂಡು ; ಬೆರೆ : ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂಪಂ ಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪-೩೦) : ಕಂಡೊಡನಾಡಿದಕ್ಕರಿಗನಕ್ಕರಿಗಂ ಗೆಡೆಗೊಂಡ ಪಂಡಿತಂ ಪಂಡಿತನೆಯ್ದೆ (ಶಾಂತಿಪು. ೦೨-೭೮) ; ಒಡನೊಡನಿಕ್ಕಿದರಾಗಳೆ ಗೆಡೆಗೊಂಡವ್ಯುತಾಬ್ಧಿ ವೀಚಿನರ್ತನಮುಮಂ ಕಣ್ಗೊಡರಿಸೆ (ನೇಮಿಪು. ೮-೦೨೦) ; ರಾಜಹಂಸನಂ ಗೆಡೆಗೊಳಲಾರ್ಪನೆಂಬ ಬಗೆಯಿಂದಿನನೈದಿದನಸ್ತಶೈಲಮಂ (ರಕಳು. ೨-೩೯) ; ಕಾಳಿಗಕ ಮೂದಲಿಸಿದುದು ಚಲಿಸಿದುದು ಗೆಡೆಗೊಂಡು ಹತ್ತಿರಕೆ ಸೇರಿದುದು ಪೋರಿದುದು ಚೂಳಿ ದಾನವರ ಪಡೆಯು (ಕಬಪು. ೩೮-೩೪). ೨. ಹೊಂದು ; ಪಡೆ : ಸಮಸ್ತದೀಪ್ತಿಪರಮಾಣುಗಳಂ ಗೆಡೆಗೊಂಡು ಜೌವನಂ ನೆಱೆದಿರೆ (ಆದಿಪು. ೨-೬೨) ; ಸೂರ್ಯ್ಯಶಶಾಂಕಮರೀಚಿಯಿಂದೆ ಚೆಲ್ವಂ ಗೆಡೆಗೊಂಡು (ಎಕ. XI, ದಾವಣ. ೦೬೮-೨೪ ; ಸು. 1148) : ಘನಚ್ಛಾಯೆಯನಾಂತೇಂ ಗೆಡೆಗೊಂಡುದೂ ಪೃಥುಳತೆಯಂ ಗಿರಿಯ ನಿತಂಬದಂತೆ ಹರಿಯ ನಿತಂಬಂ (ವರ್ಧಪು. ೪-೨೮). [ ಗೆಡೆ$_2$ + ಕೊಳ್$_1$ ]

**ಗೆಡೆಯಾಟ** (ನಾ). ಸ್ನೇಹದ ಆಟ ; ಒಡನಾಟ : ಎನ್ನ ಕೃಮರ್ಚನ ಗೆಡೆಯಾಟದ ಮುತ್ತಿನ ಸಂಡೆ! (ರಾಮಾಶ್ವ. ೭೦-೨೦). [ ಗೆಡೆ$_2$ + ಆಟ ]

**ಗೆಡೆಯಿಡು** (ಕ್ರಿ). ಜೊತೆಮಾಡು ; ಜೋಡಿಹಾಕು ; ಕೂಡಿಸು ; ಎಸೆಯಲಣ್ಣನು ನಿಲಲಿ ತಾನೊಂದೆಸೆಗೆ ನಿಲುವೆನು ಬನ್ನಿ ಗೋಪಪ್ರಸರವಿತ್ತೆಱನಾಗಿ ಗೆಡೆಯಿಟ್ಟಾಡಬೇಕೆಂದ [ಪಾಠಾಂ. ಗಿರಿಯಾಟಾಟವೆಂದೆಂದ] (ವಿಠಾಗ. ೦೦-೦೮-೨೨). [ ಗೆಡೆ$_2$ + ಇಡು$_1$ ]

**ಗೆಡೆವಕ್ಕಿ** 'ಗೆಳೆವಕ್ಕಿ' ನೋ.

**ಗೆಡೆವಸು** (ಕ್ರಿ). ಸ್ನೇಹವನ್ನು ಕಡಿದುಕೊಳ್ಳು ; ಸ್ನೇಹಭಂಗಹೊಂದು ; ದ್ವೇಷತಾಳು : ಗೆಡೆವಚ್ಚಿ[ಪಾಠಾಂ. ವರ್ಚಿ]ವರ್ ಮನಗೊಂಡೊಡನೊಡನೋರಂತು ತಗುಳ್ದು ರ್ಪೋಂಕರಿಸಿದೊಡೆ (ಪಂಪಭಾ. ೨-೭೩). P ಈ ಶಬ್ದವನ್ನು 'ಗಡೆವಚ್ಚು' (ಗೆಡೆ+ಮಚ್ಚು) ಎಂದು ತೆಗೆದುಕೊಂಡು 'ಸಿಕ್ಕಿದ ಜೊತೆಯನ್ನು ಮೆಚ್ಚಿಕೊಳ್ಳು' ಎಂದೂ ಅರ್ಥಮಾಡಬಹುದು. ಗೆಡೆವಚ್ಚುಗೊಳ್=ಸ್ನೇಹಭಂಗ ಮಾಡಿಕೊಳ್ಳು: ಎಡೆಯೊಳ್ ಗೆಡೆವಚ್ಚು [ಪಾಠಾಂ. ವರ್ಚು, ವಚ್ಚು, ವರ್ಚು] ಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸಪೊಟ್ಟಱೊಳಾದ ಕಿರ್ಚು ಕೌರವರ್ಗಿದು ನಾಡೆಯುಂ ತಿಣುಕ ನಾಗಿಸದೇಂ ಗಳ ಸೈತುಪೋಕುಮೇ (ಪಂಪಭಾ. ೨-೯೭).

[ ಗೆಡೆ$_2$+ಪಸು$_1$ ]

**ಗೆಡ್ಡೆ** 'ಗಡ್ಡೆ' ನೋ.

**ಗೆಡ್ಡೆಗಟ್ಟು** 'ಗಡ್ಡೆಗಟ್ಟು' ನೋ.

**ಗೆಡ್ಡೆಮೊಸರ್** 'ಗಡ್ಡೆಮೊಸರ್' ನೋ.

**ಗೆಣತಿ** 'ಗೆಳತಿ' ನೋ.

**ಗೆಣತಿಕಸ** (ನಾ). ಕಳ್ಳಿಜಾತಿಯ ಒಂದು ಬಗೆಯ ಸಣ್ಣ ಗಿಡ : (ಕ).

[ ? ]

**ಗೆಣರವ** (ನಾ). ಕುದುರೆಯ ಮೈಯನ್ನು ಮಾಲೀಸು ಮಾಡುವ ಒಂದು ಬಗೆಯ ಸಾಧನ : ಕುದುರೆಯನ್ನು ಬಿಟ್ಟು ತಂದು ಹೊಱಗೆ ಸಮನಾದ ನೆಲದಲ್ಲಿ ಹೊರಳಿಸುವುದು ಹೊರಳಿದ ಮೇಲೆ ಗೆಣರವದಿಂದ ಮೈಯನ್ನು ಚೆಂದಾಗಿ ಉಜ್ಜುತ್ತಿರಬೇಕು (ಅಶ್ವಚಿ. ೪೭-೪). [ ? ]

**ಗೆಣಸಂಗು** (ನಾ). ಒಂದು ಬಗೆಯ ದೊಡ್ಡ ಜಾತಿಯ ಸಾಗವಾನಿ ಮರ : (ಕ). [ ? ]

**ಗೆಣಸು** 'ಗೆಣಸು' ನೋ.

**ಗೆಣಸುಗೂರು** (ಕ್ರಿ). ಗೆಣಸನ್ನು ಅಗೆ,-ತೋಡು : ಗೆಣಸುಗೂರುವಂತಕ್ಕಲಂ ಜಾಡಿಸದೆ ಬಿಡ ನಿನ್ನ ! (ಹಪ್ಪರ. ೩-೩೭).

[ ಗೆಣಸು (<ಗೆಣಸು) + ಗೂರು$_2$ (<ಗೂಱು) ]

**ಗೆಣಸುಸಕ್ಕರೆ** (ನಾ). ಗೆಣಸಿನಿಂದ ತಯಾರುಮಾಡುವ ಸಕ್ಕರೆ : ಎರಡನೇ ಮಹಾಯುದ್ಧಕಾಲದಲ್ಲಿ ಯೂರೋಪಿನ ಗೆಣಸು – ಸಕ್ಕರೆ (Beet-Sugar) ಕೈಗಾರಿಕೆಯು ವಿಪತ್ತಿಗೆ ಒಳಗಾದುದರಿಂದ (ಅಂತಕಂ. ೦೯೩).

[ ಗೆಣಸು (<ಗೆಣಸು) + ಸಕ್ಕರೆ ]

**ಗೆಣೆ** ‘ ಕೆಳೆ$_{3}$ ’ ನೋ.

**ಗೆಣೆಕಾತಿ** ‘ ಗೆಳೆಗಾರ್ತಿ ’ ನೋ.

**ಗೆಣೆಕಾರ** ‘ ಗೆಣೆಗಾರ ’ ನೋ.

**ಗೆಣೆಗಾರ, ಗೆಣೆಕಾರ** (ನಾ). ೧. ಒಡನಾಡಿ ; ಗೆಳೆಯಂ ; ಸ್ನೇಹಿತ : ತನ್ನ ಗೆಣೆಗಾರರನ್ನು ರಾಜಪುತ್ರನಲ್ಲಿಟ್ಟು . . . ಅಂತಃಪುರಕ್ಕೆ ಗಮನಿಸುವ ಸಾರಂಗಧರನಂ ನೋಡಿ (ಸಾರಂಗ. ೩) ; ಅವನು ಮೂರು ಹೊತ್ತೂ ಗೆಣೆಗಾರರ ಜೊತೆಯಲ್ಲಿ ಆಡುತ್ತಿರುತ್ತಾನೆ (ರೂಢಿ). **ಗೆಣೆಕಾರ :** ೧. ಪೊಡವಿಪತಿ ಚಿಂತಿಸಿದನಜ್ಞಾತವಾಸಕಾವೆಡೆಗೆ ಪೋದಪೆವೆಂದು . . . ಮೂಡಲು ಪೋಪೆನೆ ಸಡಕಿನಿಂ ಕೌರವನ ಗೆಣೆಕಾರರಾಗಿಹರು (ತುರಂಗ. ೩೫-೩). ೨. ಸೂಳೆಯು ಸಹವಾಸ ಮಾಡುವವನು ; ವಿಟ : ಹಿಂದೊಂದು ದಿನ ಅವಳು ಬೆಳಗ್ಗೆ ಎರಡುಗಂಟೆಯ ಸಮಯದಲ್ಲಿ ಬಂದಿದ್ದ ಗೆಣೆಕಾರರನ್ನೆಲ್ಲ ಕಳುಹಿಸಿ . . . ಪಿಯಾನೋ ಬಳಿ ಕುಳಿತಿದ್ದಳು (ಪುಸರು. ೩೨೫). ೩. ಜೊತೆಗಾರ ; ಇನಿಯಂ : ಗೆಣತಿಯು ಕೂಡಿದ ಗೆಣೆಕಾರನೆರಕವು ಬೆಳೆದಿಹುದು (ಚಂದ್ರವೀ. ೯೨-೬೭) ; ನಿನ್ನೊಂದಿಗಾಡಿ ಗೆಣೆಕಾರ ನಾನು ನೆನ್ನಿಂದ ನೀರ ತರಲಿಲ್ಲ (ಜಗೀತ. ೨೦).

[ ಗೆಣೆ (<ಕೆಳೆ$_{2}$) + – ಕಾರ$_{1}$ (<– ಕಾಱ) ]

**ಗೆಣೆತನ** ‘ ಕೆಳೆತನ ’ ನೋ.

**ಗೆಣೆಯ** ‘ ಕೆಳೆಯ ’ ನೋ.

**ಗೆಣೆವಕ್ಕಿ** ‘ಗೆಳೆವಕ್ಕಿ’ ನೋ.

**ಗೆಣೆಹಕ್ಕಿ** ‘ ಗೆಳೆವಕ್ಕಿ ’ ನೋ.

**ಗೆಣ್ಣ** (ನಾ). ಗದ್ದೆಯ ಚಿಕ್ಕಭಾಗ ; ಮಡಿ : ಸಸಿ ನೆಡಲು ಮೊದಲುಮಾಡಿ, ಕೆಲವು ದಿನಗಳಲ್ಲಿಯೆ ಮನೆಯ ಹತ್ತಿರದ ಹಲಸಿನ ಮರದ ಮೂಲೆಯ ಗೆಣ್ಣಗಳವರೆಗೂ ಬಂದಿದ್ದರು (ಮಲೆಮ. ೬೫೩). ‘ ಗಣ್ಣ ’ ಪರಾ. [ ? ]

**ಗೆಣ್ಣು, ಗಿಣ್ಣು$_{2}$** (ನಾ). ೧. ಕಬ್ಬು, ಬಿದಿರಂ ಮೊದಲಾದಂವುಗಳ ಗಂಟು; ಪರ್ವ: “ಗ್ರಂಥಿ, ಪರ್ವನ್, ಪರುಷಿ[ಸ್] – ಈ ೩ ಬಿದಿರ ಗೆಣ್ಣು” (ನಾಚಿರಾ. ೧೦೨) : ಕಬ್ಬಿನಾ ತುದಿಯಿಂದ ತಾಳು ತನಕ ಮೆದ್ದುಕೊಂಡು ಬರಲದು ಗೆಣ್ಣು ಗೆಣ್ಣಿಂಗೆ ವಿಗಿಲನಿಸಿದಿನಿದೀವುದು (ವೀಶೈಪು. ೪-೧-೦೪). ೨. ಬೆರಳಂಗಳ ಗಂಟು : ಅಂಗುಲಿಯ ಗೆಣ್ಣುಗಳು ಕೇಶಮುಂ ಚರಣದಂತಗಳು ನಖಂಗಳ್ಬೆದಿನ್ನು ಪರಿಕಿಸಲುನ್ನತಂಗಳಂ ಪೇಳ್ವೆ (ವೀಶೈಪು. ೪-೨೩-೬). **ಗಿಣ್ಣು$_{2}$:** ೧. ಚಿಕ್ಕಚಿಕ್ಕದಾಗಿರುವ ಗಿಣ್ಣುಗಳಿಂದ ಕೂಡಿದ ಬಾಣ (ಕೃಪಾವಿ. ೬೨) ; ಕಬ್ಬಿನ ಕಾಂಡದಲ್ಲಿ ಅನೇಕ ಗಿಣ್ಣುಗಳಿವೆ (ಸಸ್ಯಶಾ. ೬೮). ೨. ಒಂದು “ಅಂಗುಲವು” ಪುರುಷನ ಮಧ್ಯದ ಬೆರಳಿನ ಒಂದು ಗಿಣ್ಣಿನಿಂದ ಮತ್ತೊಂದು ಗಿಣ್ಣಿನವರೆವಿಗಿರುವಷ್ಟು ಉದ್ದವಿರುತ್ತದೆ (ಭಾರಿದ. ೫೦೬). [ ದೇ.೩ ಮಲ. ಕೆಣಪ್ಪು ; ಕೊಡ. ಗಿಣ್ಣ ]

**ಗೆಣ್ಪು** (ನಾ). (?) : ಜಾಣ್ಪರಿದಾಳುಗಾಡಿ ನೆಣ್ಪೋಜೆ ನಸೆ ಬರ್ದು ಬಿಣ್ಪುಳುಗಳು ಪೂಸರನಾ ಗೆಣ್ಪೋನ್ನತಿಯ ಪೇರ್ಮೆಲೆ ಮೆಣ್ಪೋರೆ ದರಹಾಸಗಾಣ್ಪೇ ಜವ್ವನೆಯರೆಸೆದರು (ಧರ್ಮದೇ. ೨-೯೬). [ ? ]

**ಗೆತ್ತು$_{1}$** ‘ ಗಿಱು ’ ಪರಾ.

**ಗೆತ್ತು$_{2}$** (ನಾ). ಹೋಲಿಕೆ ; ಸಾದೃಶ್ಯ : “ಪಾಂಗೆಂದುಂ, ಗೆತ್ತೆಂದುಂ ಸದೃಶಭಾವಂ” (ಶಶಸಾ. ೦೫-೨೯೪) ; “ಗೆತ್ತೆಂದು ಪಾಂಗುಮೆನೆ ಸದೃಶಾರ್ಥಂ” (ಕವಿಕಂ. ೦೩೪). [ ? ]

**ಗೆದಲ್, ಗೆಜ್ಜಲು, ಗೆದಲಿ, ಗೆದಲು, ಗೆದಲೆ, ಗೆದ್ದಲಿ, ಗೆದ್ದಲು** (ನಾ). ಮರಮುಟ್ಟು, ಕಾಗದ ಮೊದಲಾದ ವಸ್ತುಗಳನ್ನು ತಿಂದಂ ಮಣ್ಣುಮಾಡುವ ನಸುಂಬಿಳಂಪಾದ ಇರುವೆ ಜಾತಿಯ ಹುಳು; ಒರಲೆ: ಜನಕಂ ಕುರ್ಗಿದ ಸಮಯದೆ ತನಯಂ ನಲವಿಂ ಸಹಾಯನಪ್ಪುದು ಪಿಂದೇ ತಿನೆ ಬೇರಂ ಗೆದಲಾಲಮವನೀತಲಕ್ಕೊಲೆಯದಂತು ತಳೆಯದೆ ಬೀೞಲ್ (ನೀತಿಮಂ. I, ೨೪೮). **ಗೆಜ್ಜಲು :** ಗೆಜ್ಜಲ ತಿಂಬ ಕರಡಿ ಖರ್ಜೂರದ ಹಣ್ಣಿನ ಸವಿಯನೆತ್ತ ಬಲ್ಲುದಯ್ಯ (ಸಿದ್ಧೇವ. ೦೩೬-೪೦೬) ; ಬೀಗದಕ್ಕೆ ಕೆಳಗಡೆ ಅರ್ಧ ಗೆಜ್ಜಲು ಹಿಡಿದು ಜೀರ್ಣವಾಗಿದ್ದ ಒಂದು ಪತ್ರ ಇತ್ತು (ಗೋಪುರ. ೧೫೪). **ಗೆದಲಿ :** ಗೆದಲಿ ಮನೆಯ ಮಾಡಿ ಸರ್ಪಂಗೆ ಇಂಬಾದಂತೆ (ಚೂನ್ನಸಂ. ೨೨೫-೧೦). **ಗೆದಲು :** ಕೆಂಡವಂ ಗೆದ[ಪಾಠಾಂ. ಜ]ಲೊಂದುವುದೆ (ಬಸಪು. ೦೫-೩೨). **ಗೆದಲೆ :** ತೋಂಟದೊಳಗೇನುವಂ ಬಗೆಯದೆ ಶಿವಧ್ಯಾನದಿಂದೆ ಪರವಶವನೈದಿರೆ ಗೆದಲೆ ಹುತ್ತವಿಕ್ಕೆ (ಚಬಸು. ೬೩-೪೫). **ಗೆದ್ದಲಿ :** ನೆಲಧಾರೆ . . . ಆದಕ್ಕೆ ಗೆದ್ದಲಿ ಹತ್ತುವುದಿಲ್ಲ (ಕಭಾಗ. ೪೩) ; ಏನು, ಗೆದ್ದಲಿಗಳ ದಬ್ಬಾಳಿಕೆ . . . ಎಲ್ಲವೂ ಗೆದ್ದಲಿಯ ಪಾಲೇ ಆಗಿಹೋಗಿಬಿಟ್ಟಿತು (ಮುಂಗಾಪು. ೦೪) ; ಉದಾಹರಣೆಗಾಗಿ, ಗೆದ್ದಲಿಯ ಸಮಾಜವನ್ನು ತೆಗೆದುಕೊಳ್ಳಬಹುದು (ಕೀಟಚಿ. ೮). **ಗೆದ್ದಲು :** ಹುತ್ತಗಳು ನೆಲ ಮೂಡಿ ಮೈಯಲಿ ಹತ್ತಿ ಗೆದ್ದಲು ತಿಂದು (ಪ್ರಜ್ಞಾದ. ೪-೦೯) ; ಗೆದ್ದಲು ಮನೆಯನ್ನು ಹಾಳುಮಾಡುವಂತೆ ಗರ್ವವು ಯಾರನ್ನಾದರೂ ಹಾಳುಮಾಡುತ್ತದೆ (ಕುಕಥ. ೩) ; ಗೆದ್ದಲು ಹುತ್ತವಿಕ್ಕೆ ಹಾವಿಗೆ ಮನೆಮಾಡಿತು (ಗಾದ). ‘ಗೊಱಲೆ’ ಪರಾ.

ಗೆದ್ದಲುಹಿಡಿ=ಗೆದ್ದಲಹುಳು ತಿಂದುಹಾಕಂ : ಪುಸ್ತಕಗಳೆಲ್ಲ ಗೆದ್ದಲು ಹಿಡಿದು ಹೋಗಿದ್ದವು (ರೂಢಿ).

[ ದೇ.೩ ತಮಿ. ಚಿದಲ್, ಚಿದಲ್ಬೆ ; ಮಲ. ಚಿದಲ್, ಚಿದಳ್, ಚಿದಳ್ ; ತುಳು. ಉದಳ್ ; ಕೊಡ. ಕೆದೆ ; ತೆಲು. ಚೆದ, ಚೆದಲು ; ಕೊಲಾ. ಸೇದಾಲ್ ; ನಾಯ್ಕಿ. ಸೇದಲ್ ]

**ಗೆದಲಿ** ‘ ಗೆದಲ್ ’ ನೋ.

**ಗೆದಲಿಗೆ** (ನಾ). ಚಮರೀಮೃಗ : “ಚಮರಃ – ಚಮರೀಮೃಗ, ಗೆದಲಿಗೆ” (ಒಷಧಿ. ೫೪). [ ? ]

**ಗೆದಲು** ‘ ಗೆದಲ್ ’ ನೋ.

**ಗೆದಲೆ** ‘ ಗೆದಲ್ ’ ನೋ.

△ **ಗೆದಿ, ಗೆದೆ** (ಕ್ರಿ). ಗೆಲ್ಲಂ; ಜಯಿಸು; ಸಾಧಿಸು: ಇಲೆಕ್ಶನ್ ಗೆದಿಯುವ ಹುಚ್ಚುಹವ್ಯಾಸದೊಳಗೆ ಖರ್ಚುಮಾಡಿಕೊಂಡದ್ದೆಲ್ಲ ತಿರುಗಿ ಹೇಗೆ ಬರಬೇಕು (ಅಪನಾ. ೩) ; ಇಂಥ ಸಂದರ್ಭದಲ್ಲಿ ವೈರಿಯನ್ನು ಚಾತುರ್ಯದಿಂದ ಗೆದಿಯಬೇಕು (ಪ್ರಪೂತಿ. ೨೦). **ಗೆದೆ :** ತಾನು ಗೆದೆಯಲೇ ಬೇಕು ಈ ಸಲ (ಸುಟ್ಟುಮು. ೨೮) ; ಚುನಾವಣೆಯಲ್ಲಿ ಗೆದೆಯುವದೆಂದರೆ ಅದು ಸ್ವಂತ ಖರ್ಚಿನ ವಿಷಯ (ಅಪನಾ. ೮೮) ; ನಿನ್ನ ಅಭಿಪ್ರಾಯದಲ್ಲಿ ಯುದ್ಧವನ್ನು ಯಾರು ಗೆದೆಯಬಹುದೆಂಬುದನ್ನು ಹೇಳು (ಹೇಮಂತ. ೦೮೦) ; ಸಮುದ್ರಗುಪ್ತನು . . . ಸುತ್ತಲಿನ ರಾಜ್ಯಗಳನ್ನು ಗೆದೆಯಲಾರಂಭಿಸಿದನು (ಹಿಂದುಇ. ೫೬). [ <ಗೆಲ್$_{1}$ ]

△ **ಗೆದಿಸು** (ಕ್ರಿ).=ಗೆಲಿಸು : ಸೋತ ನಿಮ್ಮನ್ನು ಕೂಡಾ ಅವ ಗೆದಿಸಿದ (ಮುಗಿಮು. ೩೪); ತಮ್ಮ ತಮ್ಮ ಪಕ್ಷಗಳನ್ನು ಗೆದಿಸುವುದಾಗಿ ಘೋರ ಪ್ರತಿಜ್ಞೆಯನ್ನೇ ಮಾಡಿಬಿಟ್ಟರಂತೆ (ಜಾರುಹು. ೪೫). [ ಗೆದಿ + – ಸು$_{1}$ ]

**ಗೆದೆ** ‘ಗೆದಿ’ ನೋ.

**ಗೆದೆಯ** (ನಾ). ಒಂದು ಊರಿನ ಹೆಸರು : ಎಡೆನಾಡೆಪ್ಪತ್ತು ತಂದವೂರ ಪನ್ನೆರಡು ಗೆದೆಯ ಪನ್ನೆರಡು ಮೂಗುಂದ ಪನ್ನೆರಡು (ಎಕ. VIII, ಸೊರಬ. ೪೬೬-೦೩ : 991). [ ? ]

**ಗೆದ್ದಲಿ** ‘ ಗೆದಲ್ ’ ನೋ.

**ಗೆದ್ದಲು** ‘ ಗೆದಲ್ ’ ನೋ.

**ಗೆಪ್ತಿ** (ನಾ). ತಿಳಿವಳಿಕೆ ; ಬುದ್ಧಿ ; ಜ್ಞಾನ : ದೀಪ್ತನಾಗಿ ಒಪ್ಪುವ ಸರ್ವೋತ್ತಮಾ ಗೆಪ್ತಿಗೆ ನಿಲುಕುವಾ ವಿಜಯವಿಠಲರೇಯ (ವಿದಾಸು. ೩೬-೦). [ <ಸಂ. ಜ್ಞಪ್ತಿ ]

**ಗೆಪ್ಪಲು** (ನಾ). ಆಸ್ತಿ; ಐಶ್ವರ್ಯ : ಆ ದರಿದ್ರನಲ್ಲೇನಿದೆ ಗೆಪ್ಪಲು? (ರೂಢಿ). [ಗೆಪ್ಪೆ + – ಅಲು (<–ಅಲ್$_2$)]

**ಗೆಪ್ಪೆ** (ನಾ). ೧.=ಗೆಪ್ಪಲು : ತಂದೆಯ ಆಸ್ತಿಯೆಲ್ಲಾ ತನಗೇ ಆಗಿದ್ದರೂ, ತಂದೆಯು ಇನ್ನೇನೋ ಗೆಪ್ಪೆ ಇವರಿಗೆ ಕೊಟ್ಟುಹೋಗಿರಬೇಕು ಎಂದು ಅವನಿಗೊಂದು ಸಂಶಯ (ಘಾಟೀಮು. ೧೨) : ಅವಳಿಗೆ ಒಂದಷ್ಟು ಗೆಪ್ಪೆ ಯಿತ್ತು. ಅದು ಕರಗದ ಹಾಗೆ . . . ಇಬ್ಬರೂ ಸಂಸಾರವನ್ನು ಸಾಗಿಸಿದ್ದರು (ಮಲ್ಲಿ. ೧೧೩). ೨. ಗಿಡವನ್ನು ಕೀಳುವಾಗ ಬೇರಿಗೆ ಅಂಟಿಕೊಂಡಿರುವ ಮಣ್ಣಿನ ಭಾಗ,–ಹೆಂಟೆ. 'ಗೆಪ್ಪೆಸಸಿ' ಪರಾ. [ ? ]

**ಗೆಪ್ಪೆಸಸಿ** (ನಾ). ಗೆಪ್ಪೆಯಿರುವಂತೆ ಅಗೆದು ತೆಗೆದ (ತೆಂಗಿನ) ಸಸಿ: ಗೆಪ್ಪೆಸಸಿಗಳನ್ನು ನಾಟಿದರೆ ಅವು ಬೇಗ ಬೇರುಬಿಡುತ್ತವೆ (ರೂಢಿ).

[ಗೆಪ್ಪೆ + ಸಸಿ$_3$]

**ಗೆಬರು** 'ಗಿಬರು$_1$' ನೋ.

**ಗೆಬ್ಬು$_1$** 'ಗೆಬರ್$_1$' ನೋ.

**ಗೆಬ್ಬು$_2$** (ಕ್ರಿ). ಮೇಲಕ್ಕೆ ಎಬ್ಬಿಸು,—ಏಳಿಸು : ಕೆಸರು ನೆಲಕ್ಕೆ ಬಿತ್ತೆಂದರೆ ಒಣಮಣ್ಣನ್ನೂ ತುಸುವಾದರೂ ಗೆಬ್ಬಿಕೊಂಡೇ ಮೇಲೆ ಬರುತ್ತದೆ (ದಾಸಹು. ೯೭). [ಎಬ್ಬು (<ಎಬ್ಬು)]

**ಗೆಬ್ಬುಗೆ** (ನಾ). ಸಂಭೋಗ; ಸುರತ: ಸ್ವಭಾವಸಿದ್ಧವಾದ ಅವಳ ಗೆಬ್ಬುಗೆಯ ಹಂಬಲವು ಇದರಿಂದ ಮತ್ತಷ್ಟು ಬೆಳೆದಿದ್ದಿತು (ಶ್ರೀರಾಹ. ೭೬).

[ಗೆಬ್ಬು$_1$ (<ಗೆಬರ್$_1$) + – ಗೆ]

**ಗೆಬ್ಬೆ** (ನಾ). ಕಪಾಲ; ಗಲ್ಲ: ಒಂದು ಗೆಬ್ಬೆಗೆ ಕೊಟ್ಟು ಚನ್ನವೀರನು ನುಡಿದನು (ಹಾಲಂ. ೯). [<ಕೆಪ್ಪೆ$_1$]

**ಗೆಯ್** 'ಕೆಯ್$_1$' ನೋ.

**ಗೆಯಿಸು** 'ಕೆಯ್ಸು' ನೋ.

**ಗೆಯ್ಕ** (ನಾ). ಕೆಲಸ. 'ಚಿನ್ನಗೆಯ್ಕ' ಪರಾ.

[ಗೆಯ್ (<ಕೆಯ್$_1$) + – ಕ$_3$]

**ಗೆಯ್ತ$_1$** 'ಕೆಯ್ತ$_1$' ನೋ.

**ಗೆಯ್ತ$_2$** 'ಕೆಯ್ತ$_2$' ನೋ.

**ಗೆಯ್ಮೆ** 'ಕೈಮೆ$_1$' ನೋ.

**ಗೆಯ್ಯಾಳು** (ನಾ). ದುಡಿಮೆಗಾರ; ಕೆಲಸಗಾರ: ಇಬ್ಬರು ಗೆಯ್ಯಾಳು ಗಳಿದ್ದರೂ ಕೆಲಸವಿನ್ನೂ ಮುಗಿದಿಲ್ಲ (ರೂಢಿ).

[ಗೆಯ್ (<ಕೆಯ್$_1$) + ಆಳು$_3$ (<ಆಳ್$_3$)]

**ಗೆಯ್ಯು** 'ಕೆಯ್$_1$' ನೋ.

**ಗೆಯ್ವೊಗ** (ನಾ). ಕೆಲಸದ ರೀತಿ (?) : ಬಗೆ ಮತ್ತೊಂದೆನೆಯುಂ ಗೆಯ್ವೊಗ ಮಿತ್ತೊಂದೆನೆಯುಮಂಗುಳೀನಖಚಯಕಾಂತಿಗಳನವಗಯ್ಸಿ ಸಲೆ ಪಾಸ ಗೆಯ ದೆಸೆದೆಸೆಗೆ ಪೊರಳ್ದಿದಂ ಮತ್ತೊರ್ವಂ (ಶಾಂತಿಪು. ೫–೧೧೫).

[ಗೆಯ್ (<ಕೆಯ್$_1$) + ಮೊಗ]

**ಗೆಯ್ವೊಲ** (ನಾ). ಬೇಸಾಯದ ಹೊಲ; ಸಾಗುವಳಿಯ ಭೂಮಿ : ಕರ್ಷಕಂ ಕೃಷಿಯ ಮಾಟಿಪ್ಪುಕ್ಕಲಿಗನಕ್ಕವಂ ಗೆಯ್ವೊಲನ ಪೆಸರು ವಪ್ರಂ ಕ್ಷೇತ್ರಮಕ್ಕು (ಮಂಗರಾ. ೦೧೯–೧). 'ಕೆಯ್ವೊಲ' ಪರಾ.

[ಗೆಯ್ (<ಕೆಯ್$_1$) + ಪೊಲ$_1$]

**ಗೆಯ್ಸು** 'ಕೆಯ್ಸು' ನೋ.

**ಗೆರಚು** (ಕ್ರಿ). ಮೆತ್ತಿಕೊಳ್ಳು; ಬಳಿದುಕೊಳ್ಳು : ಹೇಲು ಗೆರಚಿ, ಉಚ್ಚೇಲಿ ನೆಂದ ಸೊಂಟದ ಪಂಚೇನ . . . ಹಿಡಿದುಕೊಂಡು (ಮಳೆಮು. ೩೦೫). [ ? ]

**ಗೆರಟೆ** 'ಕರಂಟ' ನೋ.

**ಗೆರಸಿ** 'ಕೆರಸಿ' ನೋ.

**ಗೆರಸೆ** 'ಕೆರಸಿ' ನೋ.

**ಗೆರಿಲ್ಲಾ** (ನಾ). ೧. ವೈರಿಗಳ ಮೇಲೆ ಆಕಸ್ಮಿಕವಾಗಿ ಸಣ್ಣಸಣ್ಣ ಗುಂಪುಗಳಿಂದ ದಾಳಿನಡೆಸುವ ಯುದ್ಧ; ಕಪಟಯುದ್ಧ : ಅವನ ಕೆಳಗೆ ನೂರಾರು ಗೆರಿಲ್ಲಾ ಕಾದಾಳುಗಳಿರುವರೆಂದೂ ಸುದ್ದಿ ಹಬ್ಬಿತು (ಗೊಂಡಾರ. ೩೯). ೨. ಗೆರಿಲ್ಲಾ ಪದ್ಧತಿಯಿಂದ ದಾಳಿಮಾಡುವ ಯೋಧ: ಬಾಂಬುದಾಳಿಯಲ್ಲಿ ಸಾವಿರಾರು ಗೆರಿಲ್ಲಾಗಳು ಅಡಗಿ ಕುಳಿತಲ್ಲಿಯೆ ಸಾವಿಗೀಡಾದರು (ರೂಢಿ). [←ಇಂ. Guerilla]

**ಗೆರಿಸೆ** 'ಕೆರಸಿ' ನೋ.

**ಗೆರೆ** 'ಗೆಱೆ' ನೋ.

**ಗೆರೆಸೆ** 'ಕೆರಸಿ' ನೋ.

**ಗೆಬರ್$_1$, ಗೆಬ್ಬು$_1$** (ಕ್ರಿ). ಕೇಯು; ಸಂಭೋಗಮಾಡು : "ಗೆಬರ್– ಮೈಥುನೇ" (ಶಮದ) ; ಸುಖಿಲ್ಲತೀತಿ ಗೆಬರ್ದಪನೆಂಬುದು (ಶಾಶಕ್ಕ. ೪೯). ಗೆಬ್ಬು$_1$ : 'ಗೆಬ್ಬುಗೆ' ಪರಾ. [ ? ]

**ಗೆಬರ್$_2$** (ನಾ). ಕೇಯುವಿಕೆ; ಸಂಭೋಗ; ರತಿಕ್ರೀಡೆ : "ಗೆಬರ್ ಪ್ರದ್ಯುಮ್ನಯುದ್ಧಂ" (ಕರ್ಣನಿ. ೫೨).

[<ಗೆಬರ್$_1$]

**ಗೆಲ್$_1$, ಗೆಲಿ$_1$, ಗೆಲು$_1$, ಗೆಲ್ಲು$_1$** (ಕ್ರಿ). ಗೆಲ್ದು, ಗೆಲಿದು, ಗೆದ್ದು (ಭೂತಕೃ). ೧. ಜಯಿಸು; ಸಾಧಿಸು : ಅರಿನೃಪಬಲಮಂ ಗೆಲ್ದರು ಪರಾಕ್ರಮಕ್ರಮದೆ ಶೌರ್ಯಮಂ ಪ್ರಕಟಿಸು ನೀಂ (ಕವಿರಾ. ೧–೮೨) ; ಭದ್ರಬಾಹುಮಾಣಿಯುಂ . . . ನೆಗಟ್ದ ಪಂಡಿತರ್ಕಳೊಡನೆ ವಾದುಗೆಯ್ದು ಗೆಲ್ದು (ವಡ್ಡಾರಾ. ೭೪–೧೯) ; ಬಗೆ ಗೆಲಲೆಂದು ಕಾಡಿ ಪುಸಿನಿದ್ದೆಯೊಳಾನಿರೆ ಲಲ್ಲೆಗೆಯ್ದು (ಪಂಪಭಾ. ೪–೧೦೬) ; ಗೆಲಲಾರ್ಪೊಡಿಱಿದು ಗೆಲ್ವುದು ಗೆಲಲಾಱದೊಡಣ್ಮಿ ಸಾವುದಾಳ್ಗಿನಿತೆ ಗುಣಂ (ಗದಾಯು. ೨–೨೦); ಗೆಲ್ಲದ ಕಾಳೆಗ ದಿಂದೋಟವೆ ಲೇಸು (ಧರ್ಮಾಮೃ. ೦೩–೦೨೭) ; ಗೆದ್ದ ಎತ್ತಿನ ಬಾಲ ಹಿಡಿ (ಗಾದೆ). ೨. ಮೀರು; ಅತಿಶಯವಾಗು : ನೆಯ್ದಿಲ ಕಡುಗಂಪುಮನಿವಱ ಕಂಪು ಗೆಲ್ದುವು ಸಾಸಿರ್ಮಡಿಯೆನೆ . . . ಸೊಗಯಿಪುವು ಗಂಧಶಾಳಿವನಂಗಳ್ (ಆದಿಪು. ೧–೬೦) ; ಕರ್ಬಿನ ಬಿಲ್ಲಂ ಗೆಲೆ ಪುರ್ಬು (ಗದಾಯು. ೧–೬) ; ಸಾರಂ ಕಂಪಿನೊಳಿವು ಕರ್ಪೂರಮುಮಂ ಗೆಲ್ವವೆನಿಸಿ ಕುಂಕುಮರುಚಿಯಿಂದೋರಂತೊಪ್ಪುವ . . . ಪಣ್ಗಳಂ ಕಂಡು (ಧರ್ಮಾಮೃ. ೨–೧೮೪) ; ಪೊಂಬಳ್ಳಿಯ ಪೊಗರಂ ಗೆಲ್ವಂಗದ ಕಂಬುಲಲಿತ ಕಂಧರೆ (ಜಯುಕಾ. ೧–೯೩). ೩. ಆನಂದಿಸು; ಸಂತೋಷಗೊಳ್ಳು. 'ಗೆಲ್ದನಿ' ಪರಾ. ಗೆಲಿ$_1$ : ೧. ಶರಣನ ಸಂಭ್ರಮ ಲಿಂಗಪೂಜೆ . . . ಅನುಭವ ಓದಿ ಭವ ಗೆಲಿಯುವದು (ಸಿದ್ಧವ. ೯೬–೫೭೧); ಕಾಮನ ಗೆಲಿದೆನು ಬಸವಾ ನಿಮ್ಮ ದಯದಿಂದ (ಮುಹಾದೇ. ಬ. ೭೦–೦೭೪) : ಗೆಲಿದಂ ಅಸನಬೆಸನವ ಛಲರಧಿಕಂ ಹಾಲಬಸವಿದೇವಮುನೀಸಂ (ಎಇ. XXI, ೨–೩೮ ; 1260) ; ನೇತ್ರವನಾಡಿ ಪರರಂ ಗೆಲಿದು (ಬಸಪು. ೪೯–೬೦) ; ಸೋತೆವಾವ್ ನೀ ಗೆಲಿದೆ (ಕುಮಾರವ್ಯಾ. ೫–೨೩) ; ವ್ಯಾಧಿಗಳ ನೆಱೆ ಗೆಲಿದು . . . ಸತ್ಯಸಮಾಧಿಯಲಿ ನಿಂದವನೆ ಭಕ್ತನು (ಪ್ರಭುಲೀ. ೦೮–೦೭) ; ಗೆಲಿಯದಿಹ ನರ (ಅನಳ. ೧೯–೩) ; ಪೂಗಣೆಯ ನಿನ್ನಿನಾಟವ ಗೆಲಿದು ನೀ ಮಲಗಿದೊಡೆ ಬಿಡುವೆನೆ (ಗೀತಗೋ. ೮). ಗೆಲು$_1$ : ೧. ಕೊಲುವಂ ಗೆಲುವಂ ಕಲಿನರಸಿಂಹಂ (ಮೈಆರಿ. ೦೯೩೦, ೧–೨೮; ಸು. 1178) ; ಗೆಲುವ ಸಂಗನಬಸವ ಸೋಲ್ವ ಸಂಗನಬಸವ (ಬಸರ. ೯–೮೭) ; ಹರಿ . . . ಪಾರ್ಥನನೊಲಿದು ಮೈದಡವಿದನು ಗೆಲು ಹೋಗೆಂದು ಹರಸಿದನು (ಕುಮಾರವ್ಯಾ. ೯–೩೫) ; ಗೆಲುವನೋ ಗೆಲದಿಹನೊ ರಕ್ಕಸಗಲಹವನು ನಿಜಪೌತ್ರನಿಂದಿನ ಕೊಳುಗುಳದೊಳು (ತೊರವೆ. ೬–೨೯–೫) ; ಚಪಲತ್ವದೆ ಜೂಜನಾಡಿ ಗೆಲುವ ಬಲುನಿಪುಣರೊಪ್ಪಿದರು ಬೀದಿಯಲಿ (ಅಂಸವಿ. ೨–೭೭). ಗೆಲ್ಲು$_1$ : ೧. ವಿಜಯನಾಗ್ಯೆ ಕಂದ ನೀನವನಿಜೆಯ ಗಂಡನ ಗೆಲ್ಲಃ

(ಶಾಶಿರಾ. ೨೮-೬) : ಕಂದ ಕೇಳ್ ನಿನ್ನ ಗೆಲ್ಲುವರುಂಟು (ಮೋಹತ. ೨೦-೬೮) : ಮೌನದಿಂದೆ ಮನವ ಗೆಲ್ಲು (ಅನಿಕೇ. ೦೭-೬).

**ಗೆಲೆನುಡಿವವಂ** = ಚಿತ್ತಾಕರ್ಷಕವಾಗಿ ಮಾತನಾಡುವವನು ; ಆಸಕ್ತಿಯಿಂದ ಮಾತನಾಡುವವನು : " ಪ್ರಸಕ್ತಃ, ಪ್ರಸೃತಃ – ಈ ೨ ಗೆಲೆನುಡಿವವಂ " (ಹಲಾಯು. ೬೦-೨೦೯). **ಗೆಲೆವರ್** = ಸೋಲಿಸು ; ಮೀರು ; ಅಧಿಕವಾಗು : "ಅಲಗಣಸಾದುದು ಮಿಕ್ಕುದು ಗೆಲೆವಂದುದು . . . ಪೊಡೆದುದೆಯ್ದೆ ಮಾಱುದುದೆಂದುಂ" (ಕವಿಕಂ. ೦೩೭) ; ಪಾಲ್ಗಡಲೊಳ್ ಪುಟ್ಟದಾನೆಯಾನಾನೆಗಳ್ ಗೆಲೆವರೆ (ಪಂಪಭಾ. ೫-೨೬) ; ಚಿತ್ತಜನಿಕ್ಷುಚಾಪಲತೆಯಂ ಗೆಲೆವಂದುದು ಪುರ್ವಿನೊಳ್ಪು (ಅಜಿಪು. ೨-೩೭); ತಂನಂ ಪ್ರತಿಯಿಟ್ಟ ವೀರರೊಡನೆ ತೂಗಿದೊಡೋವತ ವೀರಕ್ಕೆ ಮಾಧವಂ ಗೆಲೆವಂದಂ (ಶಾಇಇ. IX–I, ೨೪೯–೯೬ ; 1147).

[ ದೇ.॥ ತಮಿ. ಕೆಲಿ; ತುಳು. ಗೆಲಿ; ಕೊಡ. ಗೆಲ್; ತೆಲು. ಗೆಲು; ಕೋಲಾ. ಗೆಲ್ಲ್; ನಾಯ್ಕಿ. ಘೆಲ್ ]

**ಗೆಲ್₂, ಗೆಲಿ₂, ಗೆಲು₂** (ಕ್ರಿ). ಲೇಪಿಸು ; ಬಳಿ : ಬಾವನ್ನದಿಗುರಂ ಗೆಲ್ದು ಕಮ್ಮೆಲರ್ಗಳಂ ಸೂಡಿ . . . ಮಱದಂ ಸುಧನ್ವಂ (ಜೈಮಿಭಾ. ೦೧-೯೦). **ಗೆಲಿ₂** : ಸಾರತರ ಸಾದಿನ ಜವಾಜಿಯ ಭೂರಿ ಪರಿಮಳದಿಂದ ನವಕಸ್ತೂರಿ ತಿಲಕವ ರಚಿಸಿ ಗೆಲಿದನು ತಿಗುರ ತವಕದಲಿ (ಕುವ್ಯಾಗ. ೫-೪೦) ; ಇತ್ತಲಾ ದಮಯಂತಿಗೆ . . . ಗೆಲಿ[ಪಾಠಾಂ. ತೀಡಿ]ದರು ತಿಗುರ ಮಿಗೆ ವಿವಿಧೋಪಚಾರದಲಿ (ನಳಚ. ೩-೩೩). **ಗೆಲು₂** : ತಿಗುರ ಗೆಲುವುದು ವಶ್ಯ ತಿಲಕಾದಿಗಳನಿಡುವುದು (ಕುವ್ಯಾಅ. ೦೩-೨). [ ? ]

**ಗೆಲ** 'ಗೆಲ್ಲ' ನೋ.

**ಗೆಲಂಬಡೆ** ' ಗೆಲ್ಲಂಬಡೆ ' ನೋ.

**ಗೆಲಪು** (ನಾ). ಗೆಲವು; ಜಯ : ತಳಿರ್ಗಣೆಗಳು ಕಡುಗೆಲಪನಾಂತವು ಕೇಳು ಕುಲಿಶೋಪಮರಮ್ಮದಂತಾ (ಜಂಪ್ರಸಾಂ. ೦೦-೨೬).

[ ಗೆಲ್₁ + – ಪು₁./ತಮಿ. ಕೆಲಿಪ್ಪು ; ತುಳು. ಗೆಲ್ಪು ; ತೆಲು. ಗೆಲುಪು, ಗೆಲ್ಪು ]

**ಗೆಲವಾನ್** (ಕ್ರಿ). ಸಂತಸಪಡು ; ಸಂತೋಷವನ್ನು ಹೊಂದು : ಬೀಳ್ಕೊಂಡು ಗೆಲವಾಂತು ಗುರುಪಾದವ ಕೂರ್ತು ನಡೆದಳು ಜಲಜಾಕ್ಷಿ ಗಗನವಟ್ಟೆಯಲಿ (ಮೋಹತ. ೨೯-೭). [ ಗೆಲವು (<ಗೆಲ್ವು) + ಆನ್₁ ]

**ಗೆಲವಾಳ್** (ಕ್ರಿ). = ಗೆಲವಾನ್ : ಗೆಲವಾಳ್ದ ಗೋಪಸ್ತ್ರೀರಾಜ್ಯವೆಂದೆನೆ ಚೆಲಿವೆಣ್ಣ ಕೇರಿಯೊಪ್ಪಿದುದು (ಶ್ರೀಚಾಂ. ೦-೭೭).

[ ಗೆಲವು (<ಗೆಲ್ವು) + ಆಳ್₁ ]

**ಗೆಲವು** 'ಗೆಲ್ವು' ನೋ.

**ಗೆಲವುಗಂಬ** ' ಗೆಲುವುಗಂಬ ' ನೋ.

**ಗೆಲವೇಱ್** ' ಗೆಲ್ಲವೇಱ್ ' ನೋ.

**ಗೆಲವೆಱು** (ಕ್ರಿ). ಜಯ ಹೊಂದು ; ಗೆಲ್ಲು : ಗೆಲವೆತ್ತ ಜಯರಾಜಗಿತ್ತನು ಮನ್ನಣೆಗಳ ಸಭೆ ತಲೆದೂಗುವಂತೆ (ಭರತ. ೩೫-೦೨).

[ ಗೆಲ (<ಗೆಲ್ಲ) + ಪೆಱು₁ ]

**ಗೆಲಿ₁** 'ಗೆಲ್₁' ನೋ.

**ಗೆಲಿ₂** 'ಗೆಲ್₂' ನೋ.

**ಗೆಲಿಸು, ಗೆಲ್ಲಿಸು** (ಕ್ರಿ). ಗೆಲ್ಲುವಂತೆ ಮಾಡು ; ಜಯಿಸುವಂತೆ ಮಾಡು : ಎಮ್ಮೆಮ್ಮಂ ಕೆಯ್ಕೊಂಡು ಗೆಲಿಸಲ್ವೇಟ್ಕುಂ (ಪಂಪಭಾ. ೯-೧೦೦ವ) ; ಭಕ್ತರಂ ಗೆಲಿಸಿ ಪ್ರತ್ಯಕ್ಷಂಗಳಂ ತೋಱ . . . ಪರಮಸುಖದಿಂದಪ್ಪುದು (ಬಸರ. ೯-೩೪) ; ಬಿಜ್ಜಳನ ಸಭೆಯಲಿ ಗೆಲಿಸಿದನು ತನ್ನಯ ಸಮಯವಂ . . . ಬಸವಯ್ಯ (ಬಸಪು. ೫೯-೫೫) ; ಗೆಲಿದವರ ಸೋಲಿಸಿ ಗೆಲಿಸುವುದು ಸೋತವರನೀ ವಿಪರೀತಗತಿ ವಿಧಿಗೆ (ಕುವ್ಯಾಳ. ೦೨-೩) ; ಮಾಸಾಳಾದಂಗಜವೀರಗೆ ಪೂವಿನ ಬಾಳಂ ಜಳಪಿಸಿ ರತಿಯನುರಾಗದಿ ಗೆಲಿಸಿ ಕೊಡುವ ತೆಱದಿ (ಜಯಕಾ. ೧-೫೯). **ಗೆಲ್ಲಿಸು** : ಚುನಾವಣೆಯಲ್ಲಿ ತಮ್ಮ ಅಭ್ಯರ್ಥಿಯನ್ನು ಗೆಲ್ಲಿಸಲು ಬಹಳ ಪ್ರಯತ್ನ ಮಾಡಿದರು (ರೂಢಿ). [ ಗೆಲ್₁ + – ಇಸು₃ ]

**ಗೆಲು₁** ' ಗೆಲ್₁ ' ನೋ.

**ಗೆಲು₂** ' ಗೆಲ್₂ ' ನೋ.

**ಗೆಲು₃, ಗೆಲ್ಲು₂** (ನಾ). ವಿಜಯ ; ಗೆಲವು : ಪೊಡವಿಯೊಳಾರದು ಗೆಲು ಸೋಲವೆಂಬುದು ಜಡಮತಿ ತಿಳಿದು ಪೇಳೆನಗೆ (ಮೋಹತ. ४೦-४೦). **ಗೆಲ್ಲು₂**: ಗೆಲ್ಲು ಸೋಲಿಂಗೆ ಹೋರುವವನಲ್ಲ ಶರಣ (ಅಪಂಡೇ. ೦೩೨-೦೦೩) : ಗೆಲ್ಲಿನ ಬಿಲ್ಲೆ ಮೂಡಿತೆ ? (೧೪ವಿಂ. ೫೨-೦೦). 'ಗೆಲ್ವು' ಪರಾ.

[ ಗೆಲ್₁ + – ಉ₄ ]

**ಗೆಲುಗಯ್ಯ** (ನಾ). ಗೆಲುವನ್ನು ಪಡೆಯುವವನು ; ಜಯಶೀಲ : ಅಲರಂಬ ಸಮರೂಪ ಸಲೆ ಜಾಣ ಸಂಪನ್ನ ಗೆಲುಗಯ್ಯ (ಮುಡಿಕಾ. VI, ೦೫೩೬). [ ಗೆಲು₃ + ಕಯ್₂ (<ಕೆಯ್₂) + – ಅ₇ ]

**ಗೆಲುಗೆ** (ನಾ). ಗೆಲ್ಲುವಿಕೆ ; ಜಯಿಸುವಿಕೆ : (ಕ).

[ ಗೆಲು₁ (<ಗೆಲ್₁) + – ಗೆ ]

**ಗೆಲುಗೈ**(ನಾ). ೧. ಗೆಲವಿನಿಂದ ಕೂಡಿದುದು; ವಿಜಯಶಾಲಿಯಾದುದು: ಹೇಳುವೆನು ನಿನಗಿನ್ನೊಮ್ಮೆ ಗೆಲುಗೈಯಹ ಮನೋರಥವ [ಪಾಠಾಂ. ವಿವರಿಸಲು ಕೇಳಿದನು ಜನಮೇಜಯ ಮಹೀಪಾಲ] (ಕುವ್ಯಾವಿ. ೬೦೬. ೯-೯೭). ೨. ಪ್ರಭುತ್ವ ; ಮೇಲುಗೈ : ಊಳಿಗವರ್ಗಕ್ಕೆ ಸಲುವಷ್ಟು ಗೆಲುಗೈಯ ತಾಳಿಕೊಂಡಿರಬೇಕು ಭಟನು (ಸೌಂದಕಾ. ೭-೧೩೫).

[ ಗೆಲು₁ (<ಗೆಲ್₁) + ಕೈ₂ (<ಕೆಯ್₂) ]

**ಗೆಲುಮುಖ** (ನಾ). ಗೆಲವಿನ ಮುಖ ; ಸಂತೋಷದ ಮುಖ ; ಉತ್ಸಾಹದ ಮುಖ : ಅವರ ಪ್ರಶ್ನೆಗೆ ಗೆಲುಮುಖದಿಂದಲೇ ನಾನು ಹೇಳಿದೆನು (ಹೇಮಂತ. ३೦३). [ ಗೆಲು₃ + ಮುಖ ]

**ಗೆಲುಮೊಗ** (ನಾ). = ಗೆಲುಮುಖ: (ಚಟಕೆ ಹೊಡೆದು, ಗೆಲುಮೊಗದಿಂದ) ಊಂ, ಒಂದು ಸೊಗಸಾದ ಉಪಾಯ (ತುಂಗಭ. ३೦). [ಗೆಲು₃+ಮೊಗ₁]

**ಗೆಲುವಡೆ** (ಕ್ರಿ). = ಗೆಲ್ಲಂಬಡೆ : ಗೆಲುವಡೆದು ಮುನ್ನಡೆಯ ಪಡೆಯ ಪಾಂಗಿನಲಿ (ಕಾಲೂರ. ೦೦೦-೨೦೨). [ ಗೆಲು₃ + ಪಡೆ₁ ]

**ಗೆಲುವು** ' ಗೆಲ್ವು ' ನೋ.

**ಗೆಲುವುಗಂಬ, ಗೆಲವುಗಂಬ** (ನಾ). ವಿಜಯದ ಗುರುತಿಗಾಗಿ ನಿಲ್ಲಿಸಿದ ಕಂಬ ; ಜಯಸ್ತಂಭ : ಚೆಲುವು ನೆಟ್ಟಿಹ ಗೆಲುವುಗಂಬದಂತಿಹ ತಾಜಮಹಲಲ್ಲಿ ಮಲಗಿಹರು ಇವರಿಬ್ಬರು! (ಕರುಶ್ರೀ. ೬೭-೧೯). **ಗೆಲವುಗಂಬ**: ಇಂದಿಗೂ ನನ್ನಯ್ಯನ ಚರಿತ್ರೆ ಗುರುಭಕ್ತಿಯ ಗೆಲವುಗಂಬವಾಗಿ ನಿಂತಿದೆ (ಶರಚ. ३९३). ' ಗೆಲ್ಗಂಬ ' ಪರಾ.

[ ಗೆಲುವು (<ಗೆಲ್ವು) + ಕಂಬ₁ (<ಕಂಭ) ]

**ಗೆಲುಹ** (ನಾ). ಗೆಲವು ; " ವಿಜಯ, ಜಯ " (ನಾಚರಾ. ಕ).

[ ಗೆಲು₁ (<ಗೆಲ್₁) + – ಹ₂ ]

**ಗೆಲ್ಕೆ** (ನಾ). ಗೆಲ್ಲುವಿಕೆ ; ಜಯಿಸುವಿಕೆ ; ಗೆಲವು : " ಜಿತಿಃ = ಗೆಲ್ಕೆ " (ಕಾಶಕ್ಕ. ೭೮). [ ಗೆಲ್₁ + – ಕೆ ]

**ಗೆಲ್ಗಂಬ, ಗೆಲ್ಲುಗಂಬ** (ನಾ).=ಗೆಲುವುಗಂಬ : ಐದುವೆ ಗೆಲ್ಗಂಬದೆಡೆಯನು ಸ್ಕಂದನಶತವನು ದೂಡಿ (ಇಂಚಾಪ. ३३९-೯) : ರಘೂದ್ವಹನ ಪೂಣ್ಕೆ ಪೂಡಿದುದು ಲಂಕೆಯ ನೆಲದಿ ತನ್ನಡಿಯ ಗೆಲ್ಗಂಬಮಂ (ಶ್ರೀರಾಮಾ. ೫೯೯-೯೨೦). **ಗೆಲ್ಲುಗಂಬ**: ನಿಲ್ಲಿಸಲು ಗೆಲ್ಲುಗಂಬ! ನಿನಗದುವೆ ಗಲ್ಲುಗಂಬ! (ನಿರೀಕ್ಷೆ. ೮೫). [ ಗೆಲ್₁ + ಕಂಬ₁ (<ಕಂಭ) ]

**ಗೆಲ್ದನಿ** (ನಾ). ಗೆಲವಿನ ಧ್ವನಿ ; ಉತ್ಸಾಹದ ಧ್ವನಿ : (ಗೆಲ್ದನಿ) ಹೂಂ . . . ಅದಕ್ಕೇ ಹೇಳಿದ್ದು (ತುಂಗಭ. ३೦). [ ಗೆಲ್₁ + ದನಿ₂ ]

**ಗೆಲ್ನೋಟ** (ನಾ). ಗೆಲವಿನ ನೋಟ; ವಿಜಯದ ದೃಷ್ಟಿ: ಗೆಲ್ನೋಟದಿಂದ ಪ್ರೇಕ್ಷಕರ ಕಡೆಗೆ ಕಣ್ಣು ಹೊರಳಿಸಿದನು (ಪುನರು. ೫೬೨).
[ ಗೆಲ್$_1$ + ನೋಟ ]

**ಗೆಲ್ಮೆ** (ನಾ). ಗೆಲ್ಲುವಿಕೆ; ಗೆಲವು. 'ಗೆಲ್ಮೆಗೆಯ್ಮೆ' ಪರಾ.
[ ಗೆಲ್$_1$ + -ಮೆ$_1$ ]

**ಗೆಲ್ಮೆಗೆಯ್ಮೆ** (ನಾ). ಗೆಲವಿನ ಕೆಲಸ; ಜಯಪ್ರದವಾದ ಕಾರ್ಯ: ಆದುದಱಿನೆಂತಾನುಂ ಗೆಲ್ಮೆಗೆಯ್ಮೆಯುಂ ಕಾಣ್ಬುದು (ಅದ್ಭುತ. ೩೦-೪).
[ ಗೆಲ್ಮೆ + ಗೆಯ್ಮೆ (<ಕೈಮೆ$_1$) ]

**ಗೆಲ್ಲ, ಗೆಲ** (ನಾ). ೧. ಗೆಲವು; ಜಯ; ವಿಜಯ: "ಜಯಮೆನೆ ಗೆಲ್ಲಂ" (ಚತುನಿ. ೩೫): ಅಟ್ಟಿದುದು ಮತ್ತನೂಜಶತಮಾಜಿಯೊಳಿತ್ತಭಿಮನ್ಯು ಪೂರ್ವನತ್ತಟ್ಟಿದನಿದಾವ ಗೆಲ್ಲಂ (ಪಂಪಭಾ. ೦೦-೦೦೯): ಕಿಱುಕುಳನೊಳ್ ಪಡೆ[ದ ಗೆಲ್ಲದಿಂದಂ] ಪಿರಿಯನೊಳ್ ಪಡೆವ ಸೋಲಮುತ್ತಮಂ (ಶಾಂತಿಪು. ೮-೦೫೦ ವ): ಭಕ್ತಂಗೆ ಸತ್ಯದ ಬಲ ನಿನಗೆ ಶಕ್ತಿಯ ಬಲ ಇಬ್ಬರ ಗೆಲ್ಲಕ್ಕೆ ಕಡೆ ಇಲ್ಲ (ಸಮೂವ. ೦೦): ಇರ್ವರ ಸೋಲಗೆಲ್ಲವರಸನ ಪುಣ್ಯಂ (ಅನಂಪು. ೦೦-೫೫): ನಾಳಿನ ಗೆಲ್ಲವೇ ಗೆಲವು (ಕುಮಾ.ದ್ರೋ. ೯-೦೦). ೨. ಹರ್ಷ; ಸಂತೋಷ. 'ಗೆಲ್ಲಂಗೊಳ್' ಪರಾ. ಗೆಲ: ೧. "ಜಯನಾಮದೊಳ್ ಗೆಲಂ" (ಕರ್ಣಾನಿ. ೫೮): "ಗೆಲಮೆನೆ ಜಯ" (ಚತುನಿ. ಕಿ. I, ೮೩).

**ಗೆಲ್ಲಸೋಲ, ಗೆಲ್ಲಸೋಲು** = ಜಯಾಪಜಯ; ಗೆಲವು ಮತ್ತು ಸೋಲು: ಗೆಲ್ಲಸೋಲಕ್ಕೆ ಹಾರದೆ ತನುವಿನಿಚ್ಛೆಯಲ್ಲಿ ಸುಳಿಯದೆ . . . ಕಾಯವಿದ್ದು ಅಕಾಯರಾಗಿಪ್ಪರೆಯ್ಯಾ (ಅದವ. ೩೦-೮೭): ಗೆಲ್ಲಸೋಲವದೇಕೆ ಸೇವಿಸು ಮೆಲ್ಲಮೆಲ್ಲನೆ ನೀವೆನುತ್ತಂ (ಬಸಪು. ೫೯-೦೦): ಉಂಟಿಲ್ಲವೆಂಬ ಗೆಲ್ಲಸೋಲಿನ ಮಾತಿನ ಮಾಲೆಯ ತೊಡಿಗೆಯಾಳಿದಂದು . . . ಆನೆಂಬುದು ನೀನೆಂಬುದು ಒಂದೆ ಕಾಣಾ (ಅದವ. ೫೦-೦೯೭).
[ ಗೆಲ್$_1$ + -ಅ$_6$ ]

**ಗೆಲ್ಲಂಕ** (ನಾ). ಗೆದ್ದ ಕಾಳಗ,—ಯುದ್ಧ: ಗೆಲ್ಲಂಕದಂತೆ ಮೆಯ್ಯೆರ್ಚಿ ಮದುವೆಯ ಮನೆಯಂತೊಸಗೆಗೆ ಮರುಳ್ಗೊಂಡು (ಧರ್ಮಾಮೃ. ೮-೨೦೫).
[ ಗೆಲ್ಲ + ಅಂಕ$_2$ ]

**ಗೆಲ್ಲಂಗುಡು** (ಕ್ರಿ). ೧. ಸೋಲೊಪ್ಪಿಕೊಳ್ಳು: ಮಾರ್ವಡೆ ಗೆಲ್ಲಂಗುಡೆ ತಮ್ಮುಕಿರ್ವರುಮುಗುರ್ವರ್ವೇಟ್ಟಿನಂ ಕಾದಿದರ್ (ಶಾಂತಿಪು. ೪-೩೫): ಗೆಲ್ಲಂಗು[ಪಾಠಾಂ. ಕು]ಡದಿರ್ಕೆ ಪೊಣದರ್ೊಡಾರ್ಗಂ ಗಂಡಂ (ಕಾವ್ಯಾವ. ೨೫೩). ೨. ಗೆಲವಿನ ಕಾಣಿಕೆಯನ್ನು ಕೊಡು; ಮೆಚ್ಚುಗೆಯನ್ನು ಕೊಡು: ಗಂಟಲಂ ಮೆಟ್ಟಿದೊಡಿಟ್ಟೆಡೆಯೊಳ್ಕಟ್ಟಂ ಗೆಲ್ಲಂಗುಡುವಂತೆ ನರಂಗೆ ಪಾಶುಪತಮಂ ರುದ್ರಂ (ಗದಾಯು. ೩-೩೯): ಎಕ್ಕಲರಸ ಸೋವರಸ ನೋಡಿ ಮೆಚ್ಚಿ ಗೆಲ್ಲಂಗುಡೆ (ಶಾಇ. IV, ೨೩-೮; 1157).
[ ಗೆಲ್ಲ + ಕುಡು$_1$ (<ಕೊಡು$_1$) ]

**ಗೆಲ್ಲಂಗೊಳ್, ಗೆಲ್ಲಗೊಳ್** (ಕ್ರಿ). ೧. ಗೆಲವನ್ನು ಪಡೆ; ಜಯ ಹೊಂದು; ಸೋಲಿಸು: ವಿಸಸನದೊಳಂತೆ ನೀಮುಂ ಪೆಸರಂ ಕರ್ಣಂಗೆ ಮಾಡಿ ಗೆಲ್ಲಂಗೊಳ್ಳಿಂ (ಪಂಪಭಾ. ೧೨-೯೧): ಗೆಲ್ಲಂಗೊಂಡ ಕಾಳೆಗದಂತೆ (ಧರ್ಮಾಮೃ. ೧೦-೫): ರಾಜಮೌಳಿಯಂ ಮಲ್ಲಯುದ್ಧದಿಂ ಗೆಲ್ಲಂಗೊಂಡು . . . ಅಪ್ರತಿಮಲ್ಲನೆನಿಸಲುಂ (ಜಗವಿ. ೦೫-೫ ವ). **ಗೆಲ್ಲಗೊಳ್**: ೨. ಸಂತೋಷಿಸು; ಹರ್ಷಗೊಳ್ಳು: ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ . . . ನಿರವಿಸಿದುದನೆಸಗುವುದು (ಹದಿಬ. ೩-೩೩).
[ ಗೆಲ್ಲ + ಕೊಳ್$_1$ ]

**ಗೆಲ್ಲಂಬಡೆ, ಗೆಲಂಬಡೆ** (ಕ್ರಿ). = ಗೆಲ್ಲಂಗೊಳ್ ೧: ಗೆಲ್ಲಂಪ[ಬ]ಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೫-೦೨೫): ಗೆಲ್ಲಂಬಡೆದರದಟನಿಂ ರಾಯರಾವೃತ್ತರಾಗಳ್ (ಕಬ್ಬಿಗ. ೨೭೯). **ಗೆಲಂಬಡೆ**: ಅವರ ಯುಕ್ತಿಯಂ ಕೌತುಕಮೆನಿಪ್ಪಂತೆ ಖಂಡಿಸಿ ಗೆಲಂಬಡೆದು (ಪಾರ್ಶ್ವಪು. ೯-೦೭೮). [ ಗೆಲ್ಲ + ಪಡೆ$_1$ ]

**ಗೆಲ್ಲಕಾಱ** 'ಗೆಲ್ಲಗಾಱ' ನೋ.

**ಗೆಲ್ಲಗಂಬ** (ನಾ).=ಗೆಲುವುಗಂಬ: ಬಸಂತಂ ನಟ್ಟ ಕಾವನ ಗೆಲ್ಲಗಂಬಮನೆ ಕಾಯ್ಗೊನೆ ಪಣ್ಗೊನೆಯಿಂ ಕಣ್ಗೆಡ್ಡಮಾಗಿರ್ದುಂ ಕೌಂಗುದೋಂಟಂ (ರಾಮಾಶ್ವ. ೮-೨೩). [ ಗೆಲ್ಲ + ಕಂಬ$_1$ (<ಕಂಭ) ]

**ಗೆಲ್ಲಗಾರ್ತಿ** (ನಾ). ಗೆಲ್ಲುವವಳು; ಜಯಶಾಲಿನಿ: ಬಳಿಗಾರ್ತಿ, ಗೆಲ್ಲಗಾರ್ತಿ, ಆಟಗಾರ್ತಿ (ಭಾಷಾಭೂ. ೦೮೯ ಉದಾ).
[ ಗೆಲ್ಲಗಾಱ + -ತಿ$_1$ (<-ಇತ್ತಿ) ]

**ಗೆಲ್ಲಗಾಱ, ಗೆಲ್ಲಕಾಱ** (ನಾ) ಗೆಲ್ಲುವವನು; ವಿಜಯಶಾಲಿ: ಜೊನ್ನ ಹರವರಿಗಾಱ ಕಾವನ ಗೆಲ್ಲಗಾಱ ಚಂದಿರನುದಿಸಿದ (ವರ್ಧಚ. ೮-೭): ಆಟಗಾಱಂ, ಗೆಲ್ಲಗಾಱಂ (ಶಬ್ದಾನು. ೩೮೩ ಪ್ರಯೋ). **ಗೆಲ್ಲಕಾಱ**: ಬಸನಿಯ[ಯ]ಗೆಲ್ಲಕಾಱನ ನೆಗಟ್ತೆಗೆ ಕೇಳಿಗೆ ನಾಡೆ ಗೆಂಟು (ಆದಿಪು. ೦೨-೦೮): ಕಟ್ಟಣ್ಮುಕಾಱಂ ವಿತತ ವಿತರಣೋತ್ಸಾಹದೊಳ್ ಗೆಲ್ಲಕಾಱಂ ಪರವಾದಿವ್ರಾತದೊಳ್ (ಅರ್ಧನೇ. ೦-೩೭): ಬಾಣಸಿಗವೇಷವನಾಂತ ಗೆಲ್ಲಕಾಱನು ಭೀಮಸೇನ (ನೇಮಿಜಿ. ೨೫-೦೦೦). [ ಗೆಲ್ಲ + -ಕಾಱ ]

**ಗೆಲ್ಲಗುಳಿ** (ನಾ). ಗೆಲ್ಲಬೇಕೆಂಬ ಛಲವುಳ್ಳವನು,-ಹಠಮಾರಿ: ಫಲಕ್ಕೆ ಬಾರವೆಂಬ ಬ್ರಾಲೋತ್ತರವ ನುಡಿದು ಬಾಲಹರಾದವೆಂಬ ಗೆಲ್ಲಗೂ[ಗು]ಳಿಗಳು ಕೇಳಿರೋ (ಮೋಳಿಮಾ. ೫೭-೨೩೯): ಶ್ರದ್ಧೆ ಸನ್ಮಾರ್ಗಿಗಳಲ್ಲಿಅಲ್ಲದೆ ಗೆಲ್ಲಗುಳಿಗಳಲ್ಲಿ ಇಲ್ಲ (ಬಾಚೊಕ್ಕು. ೦೭): ತಗರಕಾಳೆಗದ ಪ್ರಭುವಾ ತೆಱದೊಳ್ಳೈದುವಂ ವಿಗೆ ಗೆಲ್ಲಗೂ[ಗು]ಳಿಯಂಗಡಿಯ ಕಷ್ಪಾಯಗಳ ತೆಗೆತೆಗೆದು ಮೆಲುತಿರಲ್ಕಿರದವರ್ ಕೊಲ್ಲುತಿರಲು (ಚಂಪು. ೬೩-೨೮). [ ಗೆಲ್ಲ + -ಗುಳಿ$_3$ (< -ಕುಳಿ$_3$) ]

**ಗೆಲ್ಲಗುಳಿತನ** (ನಾ). ಗೆಲ್ಲಬೇಕೆಂಬ ಹಠ; ತಾನೆ ಗೆಲ್ಲಬೇಕೆಂಬ ಸ್ವಭಾವ: ಅಲ್ಲಿ ಇಲ್ಲಿ ಎಂಬ ಗೆಲ್ಲಗೂ[ಗು]ಳಿತನಬೇಡ (ಮಾದೇವ. ೨೮೭-೬೩): ತಾನೇ ಬಲ್ಲಹನೆಂದು ಇಲ್ಲದ ಹುಸಿಯ ಗೆಲ್ಲಗೂ[ಗು]ಳಿತನಕ್ಕೆ ವಲ್ಲಭನೆಂದು . . . ನಿಲ್ಲದೆ ಹೋರುವ ಖುಲ್ಲನ ನೋಡಾ (ಮೋಳಿಮಾ. ೦೭೦-೬೪೦).
[ ಗೆಲ್ಲಗುಳಿ + -ತನ ]

**ಗೆಲ್ಲಗೈಯ** (ನಾ). ಗೆಲ್ಲುವವನು; ಜಯಶೀಲ: ಗೆಲ್ಲಗೈಯರು ವೀರರು ಜಸವೆಣ್ಣೊಲವಿಲ್ಲದರಿಲ್ಲವಾ ಪುರದೊಳು (ಕೊಬಸೋ. ೦-೫೪). 'ಗೆಲುಗಯ್ಯ' ಪರಾ. [ ಗೆಲ್ಲ + ಕೈ$_2$ (<ಕೆಯ್$_3$) + -ಅ$_7$ ]

**ಗೆಲ್ಲಗೊಳ್** 'ಗೆಲ್ಲಂಗೊಳ್' ನೋ.

**ಗೆಲ್ಲತನ** (ನಾ).=ಗೆಲ್ಲಗುಳಿತನ: ಜಂಗಮ ಜಾತಿಗೊಳಗಾದ ಇವನೆಲ್ಲವ ಹೇಳಿ ಹೇಳಿ ಯನಗಿದು ಪೊಳ್ಳಿತ್ತೊ ಹೊಲ್ಲವೊ ಗೆಲ್ಲತನ ಬೇಡ ಆತುರವೈರಿ ಮಾರೇಶ್ವರಾ (ನಗಮಾ. ೮೪). [ ಗೆಲ್ಲ + -ತನ ]

**ಗೆಲ್ಲವಱೆ** (ನಾ). ಗೆದ್ದ ಉತ್ಸವದಲ್ಲಿ ಬಾರಿಸುವ ವಾದ್ಯ; ವಿಜಯದುಂದುಭಿ: ಮುಚ್ಚಿ ಮುಸುಕಿಟ್ಟು ಬಂದಂ ಗೆಲ್ಲವಱೆಯೊಳಗೆ (ಬಸಾರ. ದೇ. ೦೨೨-೨೦); ಗೆಲ್ಲವಱೆಯ ರಭಸದಿ . . . ಪಲ್ಲಕ್ಕಿಯೇಱ (ಭರಚ. ೫೫-೭೯). [ ಗೆಲ್ಲ + ಪಱೆ$_1$ ]

**ಗೆಲ್ಲವಾಱು** (ಕ್ರಿ).ಉತ್ಸಾಹ ಕಂಂದು: ಉರಗರ್ ಜೇರೇಱೆ ಪಾತಾಳದೊಳಖಿಳದಿಶಾಚಕ್ರಮುಂ ಗೆಲ್ಲವಾಱುತ್ತಿರೆ ಪೊಯ್ದುತ್ತಬ್ಧಿ ಬಂಭಾರವಮೊಗೆಯೆ (ಜಗವಿ. ೬-೬೨). [ ಗೆಲ್ಲ + ಆಱು$_1$ ]

**ಗೆಲ್ಲವೀ** (ಕ್ರಿ).=ಗೆಲ್ಲಂಗುಡು ೧: ಕೃಷ್ಣಂ ರಿಪುಕರಿಗಿನಿಸಂ ಗೆಲ್ಲವೀವಂತೆ ಪೋರ್ದಂ ಕಿಱಿದಾನುಂ ಬೇಗದಿಂದೆ (ಜಗವಿ. ೬-೫೨).
[ ಗೆಲ್ಲ + ಈ$_3$ ]

**ಗೆಲ್ಲವೆಣ್, ಗೆಲವೆಣ್** (ನಾ). ಜಯಲಕ್ಷ್ಮಿ; ವಿಜಯಶ್ರೀ : ಧುರದೊಳು ಗೆಲ್ಲವೆಣ್ಗೊಡೆಯ ನೀನಾಗು (ಕುರಾಸಾಂ. ೦೨-೦೯); ಅವರ್ಗಳ ನೆರಂಬಾರದಾ ಗೆಲ್ಲವೆಣ್ಣ ಮುಂದಲೆಯನ್ ಈಟ್ಕೆನ್ (ಅಶ್ವಶಾ. ೩೦-೬೨೩). **ಗೆಲವೆಣ್** : ಗೆಲವೆಣ್ಣಂಗಭವನ ನಿಡುದೋಳ್ದಲೆಯನೇಱಿ (ಸಾಳ್ವಭಾ. ೦೬-೫೮).

[ ಗೆಲ್ಲ + ಪೆಣ್ ]

**ಗೆಲ್ಲಸೇಸೆ** (ನಾ). ಗೆಲವಿನ ಸೇಸೆ; ಗೆಲವನ್ನು ಹಾರೈಸಿ ಸೂಸುವ ಶೇಷಾಕ್ಷತೆ; ಮಂತ್ರಾಕ್ಷತೆ : ತನ್ಮಾತೆಯ ಪದತಳಕ್ಕೆಱಗಿ ನಲವರಕೆಗಳಂ ಗೆಲ್ಲಸೇಸೆಗಳಂ ಪಡೆದು (ವೃಷವಿ. ೪೨-೨೦ ವ). [ ಗೆಲ್ಲ + ಸೇಸೆ ]

**ಗೆಲ್ಲಾಳು** (ನಾ). ಗೆಲ್ಲುವವನು; ವಿಜಯಶಾಲಿ : ಗೆಲ್ಲಾಳುಗಳೆಲ್ಲರು ಬಿಲ್ಲನೂಱಿ ನಿಂದಿರಲಾಗಿ (ಪಂಚಮಾ. ೦೮೬-೬೯೯).

[ ಗೆಲ್ಲ + ಆಳು$_3$ (<ಆಳ್$_3$) ]

**ಗೆಲ್ಲಿಸು** 'ಗೆಲಿಸು' ನೋ.

**ಗೆಲ್ಲು$_1$** 'ಗೆಲ್$_1$' ನೋ.

**ಗೆಲ್ಲು$_2$** 'ಗೆಲು$_2$' ನೋ.

**ಗೆಲ್ಲು$_3$** (ನಾ). ಕೊಂಬೆ; ರೆಂಬೆ; ಟೊಂಗೆ : ಮರಗಳಿಂದ ಉದುರಿದ ಗೆಲ್ಲುಗಳನ್ನು, ದರಗನ್ನು ಒಟ್ಟುಮಾಡಬೇಕಾಯಿತು (ಮುಗಿಯು. ೩೬೨); ನಾನು . . . ಅಶ್ವತ್ಥದ ಗೆಲ್ಲುಗಳನ್ನು ಎಣಿಕೆ ಹಾಕುತ್ತಲಿದ್ದೆ (ಮ್ಯಾಲಿಮಾ. ೦೦೦); ದಾರಿಗೆ ಬಾಗಿದ ಗೆಲ್ಲುಗಳಿಗೆಲ್ಲಾ ಶಸ್ತ್ರಚಿಕಿತ್ಸೆ . . . ಮಾಡಿಸುತ್ತೇನೆ (ಗಂಗಾವ. ೫). [ ದೇ.೩ ತುಳು. ಗೆಲ್ಲ್ ]

**ಗೆಲ್ಲುಗ** (ನಾ). (?) : ಗೆಲ್ಲುಗನ ಧರ್ಮಂ ಕಾವೋನುಂ ನಡಯಿಸುವೋನು × × × (ಎಕ. VIII, ಪಗರ. ೯೫-೦೬ ; ಕ್ರು. ೧೬೫೦). [ ? ]

**ಗೆಲ್ಲುಗಂಬ** 'ಗೆಲ್ಗಂಬ' ನೋ.

**ಗೆಲ್ಲುಮಂಕರಿ** (ನಾ). "ಜಾಲರಿ ತರ ಹೆಣೆದ ದೊಡ್ಡ ಮಂಕರಿ" (ನನ್ನೂರು. ಟಿಪ್ಪಣಿ); ಗೆಲ್ಲುಮಂಕರಿ ತುಂಬ ಮಣ್ಣನ್ನು ಒಟ್ಟೊಬ್ಬರೇ ಸಲೀಸಾಗಿ ಹೊರುತ್ತಿದ್ದರು (ನನ್ನೂರು. ೦೯೩). [ ಗೆಲ್ಲು$_3$ + ಮಂಕರಿ ]

**ಗೆಲ್ಲುಲಿ** (ಕ್ರಿ). ಗೆಲವಿನಿಂದ ಧ್ವನಿಮಾಡು; ವಿಜಯಧ್ವನಿಯನ್ನುಂಟು ಮಾಡು : ಘೋರ್ಗರೆಯ ರಣಭೇರಿ ದುಂದುಭಿನಿನಾದಗಳ್, ಗೆಲ್ಲುಲಿಯ ಜನತುಮುಲ ಜಯಘೋಷಗಳ್ ದೈತ್ಯಸೇನಾನಿ ತೇರೇರಿದನು (ಶ್ರೀರಾಮಾ. ೬೯೯-೨೦೦). [ ಗೆಲ್$_1$ + ಉಲಿ$_1$ ]

**ಗೆಲ್ಲೂರ್** (ನಾ). ಒಂದು ಊರಿನ ಹೆಸರು : ಗೆಲ್ಲೂರ ಮಾರಗಾವುಣ್ಡ . . . ದೇಗುಲವ ಮಾಡಿಸಿದೊಂ (ಎಕ. VII, ಶಿವಮೊ. ೨೨-೩ : ೯೬೩).

[ ಗೆಲ್ಲ? + ಊರ್ ]

**ಗೆಲ್ಲೊಡೆ** (ಕ್ರಿ). ಕವಲೊಡೆ; ಶಾಖೆಯಾಗು : ನೆಲದೋರೆಗಾರನಾ ಮುಗಿದ ಪೊಗರಿನ ಕುಡಿಕೆ ಗೆಲ್ಲೊಡೆವ ಬಾಳ್ಮರದೊಳಿರೆ ತೋರ್ಪಳಾಕೆ (ಕಾಲೂರ. ೩೯-೩೩); ಕೊಲ್ಲೆಯಿಂ ಗೆಲ್ಲೊಡೆವ ಬಯಲಿನೊಳ್ ಬಯಕೆಗಳ ನೆಲ್ಲಳೆದು ನೆಲ್ಲೂರ ಮೆಲ್ಲಲರ ಮಿಡಿದಂ (ಕಾಲೂರ. ೦೦೮-೨೨೨).

[ ಗೆಲ್ಲು$_3$ + ಒಡೆ$_1$ ]

**ಗೆಲ್ಲು, ಗೆಲವು, ಗೆಲುವು** (ನಾ). ೧. ಗೆಲ್ಲುವಿಕೆ; ವಿಜಯ : "ಜೇಯಂ . . . ಜಯನೀಯಂ—ಈ ೫ ಗೆಲ್ಲು" (ಕಾಶಕ್ಕ. ೭೮). ೨. ಶುಭಾಶಯ; ಹರಕೆ : ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ ವೀರವಿಭ್ರಮ ವಿಜಯೀಭವ ಎಂದು ಗೆಲ್ಲನೀಯೆ (ಗಿರಿಕ. ೬-೬೫ ವ). **ಗೆಲವು** : ೧. ಭಕ್ತ ಸೋತಡೆ ಭಕ್ತನಡಿಗೆ ಗೆಲವು (ಸಮೂವ. ೦೦); ಗೆಲವೇನಿಲ್ಲದ ಯುದ್ಧ ಪಾಟುನೆಲದೊಳ್ಪೇಸಾಯ ನೀಚಾಶ್ರಯಂ . . . ಫಲದ ಭ್ರಾಂತಿಯ ತೋರ್ಪುದೈ (ಸೋಮೇಶ. ೨೩); ಕನಸಿನೊಳಂ ಪಿನಾಕಿಗೆ ಗೆಲವನೀಯದ ಭಾವ ಭಕ್ತರುಗಳಿಗೆ ಗೆಲವಂ ಕೊಟ್ಟು ತಾ ಶರಣೆಂಬುದದು ಭಾವ (ಬಸವು. ೬-೩); ತಪ್ಪೇನು ಸೋಲವು ಗೆಲವು ದೈವಾಧೀನ ನಿನ್ನಾಳ್ದನಕೆ ಕುಂದೇನು (ಕುಮಾ್ರಕ. ೦೩-೨೦). ೩. ಸಂತೋಷ; ಸುಖ; ಉತ್ಸಾಹ : ಗೆಲವಂ ತೋಱದೆ ದುಃಖಮಪ್ಪ ಕಡೆಯೊಳ್ ಭೂತಂಗಳಾವಾಸದೊಳ್ ಸಲೆ ಬಲ್ಲರ್ ನಿಲೆ ಸಲ್ಲದೈ (ಸೋಮೇಶ. ೦೫). **ಗೆಲುವು** : ೧. ಗೆಲು[ಪಾಠಾಂ. ಲ]ವು ನಿಮಗಹಿತರಲಿ (ಕುಮಾ್ರಅ. ೧೦-೩೦) : ಒಂದೊಂದು ಗೆಲುವಿನಲ್ಲಿ ನೂರು ನೂರು ದನಗಳು ನೀಲನ ವಶಕ್ಕೆ ಬರಹತ್ತಿದವು (ಬಂಗಾಹೆ. ೫೨). ೩. ಧರ್ಮರಾಜನು . . . ವಿದುರನ ಮುಖದಲ್ಲಿ ಗೆಲುವು ಇಲ್ಲದ್ದನ್ನು ನೋಡಿ (ವಚಭಾ. ೯೦); ನನ್ನ ಮೈಗೂ ಗೆಲುವಿಲ್ಲ (ಮುಗಮೂಂ. ೦೦೦): ಮನೆಯೊಳು ಮೈಮರೆಯಿಸುವಂಥ ಸುಖವಿತ್ತು, ನೌಕರಿಯೊಳು ಗೆಲುವಿತ್ತು (ಇಂದಾಪ. ೯೨-೯೭). 'ಗೆಲು$_2$' ಪರಾ.

[ ಗೆಲ್$_1$ + – ವು./ತೆಲು. ಗೆಲುವ, ಗೆಲಿವಿ ]

**ಗೆಲ್ಸಿರಿ** (ನಾ).=ಗೆಲ್ಲವೆಣ್ : ವಾಲಿ . . . ಗೆಲ್ಸಿರಿಗೆ ತನ್ನ ತೋಳೊಡ್ಡಾಣಮಂ ಮಾಡಿ ಪೊತ್ತುಯ್ವ ಮತ್ತಚಿತ್ತೋತ್ಸಾಹದಿಂ (ಶ್ರೀರಾಮಾ. ೨೮೦-೬೬).

[ ಗೆಲ್$_1$ + ಸಿರಿ ]

**ಗೆವಚು** (ಕ್ರಿ). ಹಿಂಡು; ಹಿಸುಕು : ಕವಿದು ಹೊಯ್ದು ಕಟ್ಟಿ ಕಚ್ಚಿ ಹಿಡಿದು ಒಡೆದು ತಿವಿದು ಗೆವಚಿ ರಾಕ್ಷಸರ ಚತುರಂಗಬಲವನ್ನು ಪುಡಿಪುಡಿ ಮಾಡಿದರು (ಮುಂಬಯಿ. ೬-೨೯೪). 'ಕಿವುಚು' ಪರಾ. [ ? ]

**ಗೆವರು** 'ಗಿಬರು$_1$' ನೋ.

**ಗೆವಿಗಾವುಂಡ** (ನಾ). ಒಬ್ಬಾತನ ಹೆಸರು : ಕೆಯ ಗೆವಿಗ್ಗಾವುಣ್ಡ ಕಲ್ಲ ಮಾಡಿಸಿ (ಮೈಆರಿ. ೦೯೨೩, ೦೦೫-೬ : ೯೬೩).

[ ಗೆವಿರ್$_0$ + ಗಾವುಂಡ (<ಗಾಮುಂಡ) ]

**ಗೆಳತಿ, ಗೆಣತಿ** (ನಾ). ೧. ಸಖಿ; ಕೆಳದಿ; ಮಿತ್ರೆ : "ಗೆಳತಿ ಹೆಟ್ಟುಗೆಯನಲ್ ಸಖಿ" (ಶಬ್ದಮಂ. ೭೫); "ಕೆಳದಿ ಗೆಳತಿಯನೆ ಸಖಿಯರ್ಕಳ್" (ಕವಿಕಂ. ೦೬೬); ಗೆಳತಿ ಮೈಮರೆತುದನ್ನು ಕಂಡು (ಹಾಹುತ್ತ. ೫೦); ಸಲುಗೆಯಿಂ ಗೆಳತಿಯರ ಕರೆಯೆ (ಕಾಲೂರ. ೦೨೩-೨೫೯); ಮೆಹರ ತನ್ನ ಗೆಳತಿಯರನ್ನೆಲ್ಲ ಚಹಕ್ಕೆ ಕರೆದಿದ್ದಳು (ಕುಂಕುಮ. ೧). **ಗೆಣತಿ** : ೧. ಗೆಣತಿ ಕೇಳೀತನ ಸುದ್ದಿಗಳನ್ನು (ಪುರಂದ. ೦-೨೦೯-೬); ಘನವಾದ ಮುದದಿ ತನ್ನ ಗೆಣತಿಯರಿಗೆಲ್ಲ ಆ ಮಣಿಯ ತೋರಿಸಿ (ಸೌಗಂಧಿ. ೦೦೨-೦೦); ಗೆಣತಿಯರ ಮಧ್ಯದೊಳಲ್ಲಿ ಶೋಭಿಸುವಾ ಕುಂಭಕುಚ ಪದ್ಮಾವತಿಯ ಕಂಡು (ಅರ್ಜಾವಿ. ೦೬-೩೭). ೨. ಪ್ರೇಯಸಿ; ನಲ್ಲೆ : ಬಾರ ನನ ಗೆಣತಿ ತಂತರೀ ನಿನ್ನ ಎದಿ ಕದಾ (ನಾದಲೀ. ೪೮-೦೦); ಇಂಥವನು . . . ಈ ಜೋಗಿತಿಯನ್ನು ಮೆಚ್ಚಿಬಂದು ಅವಳನ್ನು ತನ್ನ ಗೆಣತಿಯಾಗಿ ಮಾಡಿಕೊಂಡಿದ್ದಾನೆ (ಸಮಾಕೋ. ೫೦). 'ಕೆಳದಿ' ಪರಾ. ೩. =ಗೆಳತಿಎಳ್ಳು : (ಕ).

[ ಗೆಳ್$_2$ (<ಕೆಳ್$_2$) + – ತಿ$_1$ (< – ಇತ್ತಿ) ]

**ಗೆಳತಿಎಳ್ಳು** (ನಾ). ಚರ್ಮದ ಮೇಲೆ ಇರುವ ಕರಿಯ ಚುಕ್ಕೆ; ಕಾರೆಳ್ಳು; ಸಂಗಾತಿ : ಕಣ್ಸೆಳೆವ ಮಿಣುಮಿಣುಕು ಚುಕ್ಕೆ ಮಿಂಚುವ ಹಾಗೆ ಅಲ್ಲೊಂದು ಇಲ್ಲೊಂದು ಗೆಳತಿಎಳ್ಳು (ಅರಳು. ೨೫೩-೦).

[ ಗೆಳತಿ + ಎಳ್ಳು (<ಎಳ್) ]

**ಗೆಳಸು** 'ಗೆಟಸು' ನೋ.

**ಗೆಳ್$_1$** 'ಕೆಳ್$_1$' ನೋ.

**ಗೆಳ್$_2$** 'ಕೆಳ್$_2$' ನೋ.

**ಗೆಳೆಗಾರ್ತಿ, ಗೆಣೆಕಾತಿ** (ನಾ). ಜೊತೆಗಾತಿ; ಗೆಳತಿ; ಸ್ನೇಹಿತೆ : (ಕ). **ಗೆಣೆಕಾತಿ** : ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗಿತಿ ಪುಣ್ಯಾತಗಿತ್ತಿ (ನಾಪದ. ೭೯); ವೈಯಾರಿ ಸಣ್ಣದನಿಯೋಳೆ ಗೆಣೆಕಾತಿ ವೈಯಾರ ಬಿಟ್ಟು ತೆರ ಹೇಳೆ (ಜಗೀತ. ೭೭).

[ ಗೆಳ್$_2$ (<ಕೆಳ್$_2$) + – ಕಾರ್$_1$ (<– ಕಾಱ) + – ತಿ$_1$ (< – ಇತ್ತಿ) ]

**ಗೆಳೆಗೊಳ್** 'ಕೆಳೆಗೊಳ್' ನೋ.

**ಗೆಳೆಜೀವ** (ನಾ). ಗೆಳೆಯುಳ್ಳ ಜೀವ ; ಸ್ನೇಹಿತ : ತುಂಬಾ ಸೊಗಸಾಗಿದ ಎಂದು ಬೆನ್ನುತಟ್ಟಿ ಇದು ಅಟ್ಟಾಗುವಾಗ ಜೊತೆಗಿಲ್ಲದೆ ಹೋದ ಆ ಗೆಳೆಜೀವ (ಮಡಾಲ. ಚಿನ್ನ). [ ಗೆಳ್ತ (<ಕೆಳ್ತ) + ಜೀವ ]

**ಗೆಳೆತನ** 'ಕೆಳೆತನ' ನೋ.

**ಗೆಳೆಮಾಟ** (ನಾ). ಗೆಳೆತನದ ಮಾಟ ; ಸ್ನೇಹದ ರೀತಿ : ಹುಡುಗರ ಹುಡುಗಾಟದಲ್ಲಿ ಬೆಡಗಿನ ಗೆಳೆಮಾಟದಲ್ಲಿ . . . ಕನಸುಗಳೇ ಬನ್ನಿ (ನಾದಲೀ. ೦೩-೦೬). [ ಗೆಳ್ತ (<ಕೆಳ್ತ) + ಮಾಟ₁ ]

**ಗೆಳೆಯ** 'ಕೆಳೆಯ' ನೋ.

**ಗೆಳೆವಕ್ಕಿ, ಗೆಡೆವಕ್ಕಿ, ಗೆಣೆವಕ್ಕಿ, ಗೆಣೆಹಕ್ಕಿ** (ನಾ). ಜೋಡಿಹಕ್ಕಿ ; ಚಕ್ರವಾಕ : "ಪೊಣರ್ವಕ್ಕಿ ಜಕ್ಕವಕ್ಕಿಯುಮೆಣೆವಕ್ಕಿಯು ಜೋಡುವಕ್ಕಿ ಗೆಳೆವಕ್ಕಿಯುಂ . . . ಚಕ್ರವಾಕಮೆನಿಕ್ಕುಂ" (ಕವಿಕಂ. ೬೩). **ಗೆಡೆವಕ್ಕಿ** : "ಪೊಣರ್ವಕ್ಕಿ . . . ಗೆಡೆವಕ್ಕಿ, ಅಮಳ್ವಕ್ಕಿ—ಈ ೭ ಚಕ್ರವಾಕಂ" (ಕಶಸಾ. ೦೦-೨೦೦) ; ಒಡಲೆರಡಸುವೊಂದೆನೆ ಗೆಡೆವಕ್ಕಿಗಳಂತೆ ಕೂಡಿ ನಲಿಯುತ್ತಿರ್ದರ್ (ಹಂಡಾಮಾ. ೪-೬) ; ಆ ವನದ ಮಧ್ಯದೊಳು ನಡೆವಕ್ಕಿ . . . ಕೂಗಟವಕ್ಕಿ ಗೆಡೆವಕ್ಕಿಯು . . . ಜೀವಿಪುವು ಭಯವನುಳಿದು (ಪ್ರಭುಪು. ೩-೧೪). **ಗೆಣೆವಕ್ಕಿ** : ಬೆದಱಿ ತಾ ಗೆ[ಪಾಠಾಂ. ದವುಯ]ಣೆವಕ್ಕಿ ಕೊಂಚೆಗಳೊದಱಿ ಹಾಯ್ವುವು . . . ಕಪಿಬಳದ ಕಳಕಳಕೆ (ತೊರವಾ. ೪-೦೦-೯). **ಗೆಣೆಹಕ್ಕಿ** : ಗೆಣೆಹಕ್ಕಿ ಬೆರೆದಾವೋ (ಸಪೀಗೀ. ೯೪-೪).
[ ಗೆಳ್ತ (<ಕೆಳ್ತ) + ಪಕ್ಕಿ₁ ]

**ಗೆಱೆ¹, ಗಱೆ¹, ಗೆರೆ** (ನಾ). ೧. ಗೀಟು ; ರೇಖೆ: "ಗೆಱೆ ರೇಖೆಯಕ್ಕು" (ಮಂಗರಾ. ೯೮-೦೮) ; ಕುಸುಮಾಸ್ತ್ರ ಮಂತ್ರದೇವತೆ ಗೆಱೆಯಂ ತೆಗೆವಂತೆ ಕಣ್ಗೆ ನುಣ್ಣಾಡಿಗೆಗುಡುಪಿಂ ರೇಖೆಗುಡುವಳ್ (ಲೀಲಾವ. ೦೨-೬೪). ೨. (ಉಗುರಿನಿಂದಾದ) ಗುರುತು,—ಕೆರೆ : ನೋಡಿದಳ್ ಕುವರಿ ತನ್ನಯ ಮೊಲೆಗೆಲದಲ್ಲಿ ಮೂಡಿರ್ದ ಮೋಹನ ಗೆಱೆಯ (ಮೋಹತ. ೨೮-೦೦) ; ಕೊರುಗುರ್ಗಳ ಗೆಱೆಯ ಸೂತ್ರಬಂಧದೊಳೆಸೆವ ತೋರಮೊಲೆಗಳ ಕುಂಭ ಸಂಸ್ಥಾಪನಂಗೆಯ್ವು (ಪ್ರಮಿಭಾ. ೦೦-೨೪). ೩. (ಆಲಂ) ಮಿಂತಿ ; ಮೇರೆ : ಎಮ್ಮಣ್ಣನಾಜ್ಞೆಯ ಗೆಱೆಯ ದಾಂಟಿದೆ (ಕುಮ್ಯಾವಿ. ೩-೬೭). **ಗಱೆ¹** : ೧. ಗಱೆಯಿಲ್ಲದ ಕೋಲಿನಲಿ ಉದರೆಯನಿಕ್ಕಿದ ಭಂಡದ ಹರದನಂತಾದೆನಯ್ಯಾ (ಬಸವ. ೯೩೮) ; ನೊಸಲ ನಾಮದ ಗಱೆ ಪೆಱೆ ಗಜಕುಂಭದ ಪೊಸಮುತ್ತಿನ ಮಣಿದೊಡವೆ ಯೆಸೆವ ತಾರಾಮಾಲೆ (ಶ್ರೀಪಾಲ. ೬-೩೩). **ಗೆರೆ** : ೧. "ಗೆರೆಯನಲ್ ರೇಖೆಯಕ್ಕುಂ" (ಕಶರ. ೦೨೨) ; ಹೆಬ್ಬುಲಿಯು ನೋಡಿಲ್ಲಿ ಗುಂಡೆಲ್ಲಿ? ನೊಸಲಿನೊಳ್ ಹೆಬ್ಬಲ್ಲು, ಗೆರೆ (ಕಾಲೂರ. ೮೭-೦೬೮) ; ಸಾಂತಣ್ಣನ ಹಣೆಯ ಮೇಲೆ ವಿಸ್ಮಯದ ಗೆರೆ ಮೂಡಿತು (ಹಾಹುತ್ರ. ೦).

**ಗೆರೆ ಎಳೆ**= ೧. ಗೀಟು ಹಾಕು ; ರೇಖೆಯನ್ನು ಮೂಡಿಸು. ೨. (ಆಲಂ) ನಿರ್ಬಂಧಪಡಿಸು ; ಸೀಮಿತಗೊಳಿಸು : ಆಯತ್ರವಾಗಿ ಹಿಟ್ಟಿನ ಮೇಲೆ ಗೆರೆ ಎಳೆಯುವುದಾದರೂ ಯಾಕೆ? (ಸ್ವಾತಿಪ. ೬೬). **ಗೆರೆ ದಾಟು**= (ಆಲಂ) ಮಾತಂ ಮಿಾರು ; ಅಭಿಪ್ರಾಯವನ್ನು ಮಿಾರು : ಸೋಮುವಿನ ತಂದೆ ತಮ್ಮ ಹೆಂಡತಿ ಹಾಕಿದ ಗೆರೆ ದಾಟುವ ಪ್ರವೃತ್ತಿಯವರಲ್ಲ (ತುಂಬಿಕೊ. ೩೬). **ಗೆರೆಯಷ್ಟು**=ಲವಲೇಶ ; ಕಿಂಚಿತ್ತು : ಸರಕಾರದ ವಿಧಿ ನಿಯಮಗಳಿಗೆ ಗೆರೆಯಷ್ಟೂ ಮಿಾರುವುದಿಲ್ಲ (ಬಿನ್ನಬೀ. ೦೨೫). **ಗೆರೆ ಹಾಕು**= ೧. ರೇಖೆಯನ್ನು ಮೂಡಿಸು ; ಗೆರೆಯೆಳೆ : (೩). ೨. ಮೊದಲು ಬರೆದುದರ ಮೇಲೆ ಅಡ್ಡರೇಖೆ ಎಳೆ ,—ಹೊಡೆದುಂ ಹಾಕು : (೩). ೩. (ಆಲಂ) ಸೀಮೆಯನ್ನು ರಚಿಸಿ ನಿರ್ಬಂಧಿಸು ; ಮೇರೆ ಹಾಕು : ಅಂದರೆ ಗಂಡ ಗೆರೆ ಹಾಕಿದ ಕ್ಷೇತ್ರದಲ್ಲಿಯೇ ಅವಳು ತುಳಿಯಬೇಕೇನು ? (ಬಾಬಲ. ೮೦). [ ದೇ.॥ ತುಳು. ಗೆರೆ, ಗಿರೆ ; ತೆಲು. ಗೀಱ ]

**ಗೆಱೆಗೊಯ್** (ಕ್ರಿ). ಗೆರೆಯನ್ನು ಎಳೆ ; ರೇಖೆಯನ್ನು ಎಳೆ ; ಗೀಟು ಹಾಕು : ಇಹಪರವೆರಡಱ ಸೌಖ್ಯಾವಹಮಿಂತಿದೆ ತಾಣಮೆಂದಜಂ ಗೆಱೆಗೊಯ್ದಂತಿಹ ಲೋಕಕ್ಕಂತಾ ಪುರದಹಿತರ್ಗೆ ಬೆಗಟ್ಟನೀಯುತಗಱೆಸಿದಿರ್ಕುಂ (ಅಧ್ವಟ. ೦-೪೩). [ ಗೆಱೆ¹ + ಕೊಯ್ ]

**ಗೆಱೆನಾಮ** (ನಾ). ರೇಖೆಯಾಗಿ ಎಳೆದ ನಾಮ ; ಗೀಟುನಾಮ : ತಳತಳಿಪೊಳ್ಪೊಸಲ್ಮಿಸುಪ ನುಣ್ಗೆಱೆನಾಮಮಂ . . . ಮಟ್ಟದ ಬಟ್ಟೆಗಡ್ಡದಿಂ ಬಳೆಯಿಪುದೊಲ್ಪೊಗಂ ಸೊಬಗಿನಿಂ ಬಗೆಗಾರ್ತಿಯರ್ಗಾಸೆಯಟ್ಟಿಯಂ (ಚಕವಿ. ೩-೬). [ ಗೆಱೆ¹ + ನಾಮ ]

**ಗೆಱೆಯಾಣೆ** (ನಾ). ರೇಖೆಯೆಳೆದು, ಆ ರೇಖೆಯ ಆಚೆಗೆ ಹೋಗದಂತೆ ನಿರ್ಬಂಧಿಸುವ ಆಣೆ,—ಆಜ್ಞೆ : ತರದಿಂದೆ ಮೂಱುಸೂಳ್ವರಮರಲಂಬುತದಧಿಪತಿಯು ಕಣ್ಗಂ ಮನಕಂ ಗೆಱೆಯಾಣೆಯಿಟ್ಟ ರೇಖೆಗೆಳರವಂ ಪಳರೇಖೆಕಳೆದುವಳೆಕುಂತಳೆಯಾ (ಚಂದ್ರಪು. ೦೧-೦೦೨). [ ಗೆಱೆ¹ + ಆಣೆ₂ ]

**ಗೆಟಸು, ಗೆಣಸು, ಗೆಳಸು** (ನಾ). ಗಡ್ಡೆ ; ಕಂದ : "ಕಟಂಗೆನೆ ಗೆಟಸು[೦]" (ರನ್ನಕಂ. ೨) ; "ಗೆಟಸು=ಗೆಡ್ಡೆ" (ಶಮದ. ಪರಿ. ೧) ; ಪೆಟಿದು, ಗೆಟಸು, ಗೊಟಸು (ಶಬ್ದಾನು. ೦೪೦ ಪ್ರಯೋ). **ಗೆಣಸು** : ಬೇರು ಗಡ್ಡೆ ಗೆಣಸು ಮೊದಲಾದವಱಲ್ಲಿ ಗಂಧವನಱಿವುದು ಆಚಾರಲಿಂಗದಲ್ಲಿಯ ಆಚಾರಲಿಂಗ (ಅದವ. ೩-೦೨); ಕಾಯಿವಣ್ಣು ಗೆಣ[ಪಾಠಾಂ. ಳ]ಸಲ್ಲದಶನವನುಱೆನೆಂದು ಬಲುವ್ರತವನು ಹಿಡಿದು (ಸೊಬಸೊೀ. ೮-೪೩) ; ಗಂಗೆಯೊಳು ಮಾರ್ಪೊಳೆವ ಚಂದ್ರನಂ ತಾವರೆಯ ಗೆಣಸೆಂದು ತೆಗೆಯಲುಜ್ಜುಗಿಸುವನ (ವೀಕ್ಕಪು. ೩-೩-೦); ಮರಳು ಮಿಶ್ರವಾದ ಭೂಮಿಯಲ್ಲಿ ಗೆಣಸು ಹುಲುಸಾಗಿ ಬೆಳೆಯುತ್ತದೆ (ತರಲೆ. ೩೩). **ಗೆಳಸು**: ತಳಿರವನೆಯಲಿ ಕಂದಮೂಲದ ಗೆಳಸುಗಳ ಮೆಲುಮೆಲಿದು (ಕುಮ್ಯಾಕ. ೬೦೩. ಪರಿ. ೪೯೨); ಗಂಗೆಯೊಳೆಳೆಯ ಚಂದಿರಂ ಇರದೆ ಬಂಬಿಸಲು ತಾವರೆಯ ಗೆಳಸೆಂದು ನಿಜಕರದಿಂದೆ ಬರಸೆಳೆವ ವಿಘ್ನೇಶನಂ ನೋಡಿ (ವೀಕ್ಕಪು. ೭-೮-೦) ; ಬೇರೆಲೆ ಪೂವಣ್ಣಾಯಿ ಗೆಳಸು ನೀರ್ಗಳಿಂ . . . ಅತಿಥಿಗಳನಾರಾಧನೆಯನೆಸಗುತ್ತಂ (ಭಾರಶಾಂ. ೪೦-೯) ; ಎಲೆ ಕೆಳದಿ ಈ ತಾವರೆಯಲೆ ಗೆಳಸುಗಳಂ ತೆಗೆ (ಮಿತ್ರಗೋ. ೨೦) ; ಕಾಳ್ಗಂದಿಯಿರುಳು ಗೆಳಸನೆಲ್ಲವನಗೆದು ಮುಗಿಸೆ (ಕಾಲೂರ. ೩೩-೮೩). [ ದೇ.॥ ತೆಲು. ಗೆನಸು, ಗೆನುಸು ]

**ಗೇ** 'ಕೆಯ್₁' ನೋ.

**ಗೇಂಟಿ, ಗೇಟಿ**(ನಾ). ಹೊಡೆಯುವ ಗೋಲಿ ; ದಪ್ಪ ಗೋಲಿ : ಮೂಱು ಗದುಗೆ ಗದ್ದುಗೆಯೆಂದು ಮೇಲಿಟ್ಟುದೆ ಲಿಂಗವೆಂದು ಗೇಂಟಿ [ಪಾಠಾಂ. ಗೇಡ]ಯೆ ಪುಷ್ಪದಿಂಡೆಯೆಂದು ಇಡುತ್ತೀನೆ (ಭೃಕಸೂ. ೩೬೭). **ಗೇಟಿ** : ಬಟ್ಟೆ ವಿಡಿದು ಬಾಲ ಬರುತಿರೆ ಕಂಡನು ಪುಟ್ಟ ಸಾಲಿಗ್ರಾಮಶಿಲೆಯ ಘಟ್ಟುಳ್ಳ ಗೇಟಿಯು ತನಗೆ ದೊರಕಿತೆಂದು ಅಮ್ಮುಜನರಿಗೆ ತೋರಿಸಿದ (ಚಂದ್ರಹಾ. ೦-೩೨). [ ? ]

**ಗೇಂಡ, ಘೇಂಡ** (ನಾ). ಮೂಗಿನ ಮೇಲೆ ಕೊಂಬುಳ್ಳ, ದಪ್ಪಚರ್ಮದ ಒಂದು ದೊಡ್ಡ ಚತುಷ್ಪಾದಿಯಾದ ಪ್ರಾಣಿ ; ಗಂಡಕ ; ಖಡ್ಗಿ : (ಮುಂಬಯಿ. ೬. ೩-೨೪೬). **ಘೇಂಡ** : ಮೊಹರುಗಳಲ್ಲಿ ಶಿವನ ಮೂರ್ತಿ . . . ಘೇಂಡ, ಎಮ್ಮೆ, ಶಿವ, ಪಶುಪತಿ ಮುಂತಾದವುಗಳೂ ಕೆಲವು ಅಕ್ಷರಗಳೂ ಇವೆ (ಭಾರರ. ೩೭೮).
[ ← ಮರಾ. ಗೇಂಡಾ. / ಸಂ. ಗಂಡ ]

**ಗೇಂಡಾಮೃಗ, ಘೇಂಡಾಮೃಗ** (ನಾ).=ಗೇಂಡ : ಆನೆ, ಹುಲಿ, ಕರಡಿ, ಗೇಂಡಾಮೃಗ, ಹಾವು—ಇವು ಕಾಡುಗಳಲ್ಲಿರುತ್ತವೆ (ಭೂಗೋಳ. ೩೭). **ಘೇಂಡಾಮೃಗ** : ಖಡ್ಗಮೃಗ, ಘೇಂಡಾಮೃಗ, ಗಂಡಕ (Rhinoceros. ಇಂಕವಿ). [ <ಗೇಂಡ + ಮೃಗ ]

**ಗೇಂಡು** (ನಾ). ಆಟವಾಡುವ ಚೆಂಡು. [ ಸಂ. ]

**ಗೇಂಡುಕ** (ನಾ).=ಗೇಂಡಂ. [ ಸಂ. ]

**ಗೇಂದಿ** (ಗು). ಹೊಲಸಾದ: ಅಶುದ್ಧವಾದ: ಹೀನವಾದ: ಅದು ಶುದ್ಧ ಗೇಂದಿ ಹೆಂಗಸು ಸ್ವಾಮಿ, ನಿಮ್ಮ ವಿಷಯದಲ್ಲಿ ಸತ್ಯವಾಗಿರುತ್ತಾಳೆ ಎನ್ನುವ ನಂಬಿಕೆ ನನಗಿಲ್ಲ (ಕನಿಸಂ. ೦೦೪). [ ←ಪಾರ. ಗಂದ; ಹಿಂ. ಗಂದಾ ]

**ಗೇಕು, ಗಿಕ್ಕು, ಗೀಕು₂, ಗೆಂಕು, ಜೇಕು** (ನಾ). ೧. ಒಂದು ಬಗೆಯ ಸಸ್ಯ; ಭದ್ರಮುಸ್ತೆ; ಕೊನ್ನಾರಿ: "ಆ ಮುಸ್ತಕಂ ಮುಸ್ತೆ ಭದ್ರಾಖ್ಯಕಂ ಗೇಕು" (ಮಂಗರಾ. ೪೦-೩೬); ಇದಿರಾದ ತರುಗಳು ದಿಂಡುಗೆಡವವು ತೊಟೆಗೆ ಮಣಿದರೆ ಗೇಕು ಬದುಕುವುದು (ಕುಮಾ.ರಾ. ೬-೦೩). ೨. ಜೊಂಡು; ಆಪು: ಮುಸಲವು . . . ಕಡಲಿನ ತಡಿಯುಲದು ಗೇಕಾಗಿ, ಬೆಳೆದುದು (ನಿಘಂ. ೧೧-೦-೪೪). **ಗಿಕ್ಕು**: ೧. (ಕ). **ಗೀಕು**: ೨. ಗೀಕಿನ ಚಾಪೆಯ ಮೇಲೆ ಕಂಬಳಿ ಹೊದೆದು ಮಲಗಿ ನರಳುತ್ತಿದ್ದ (ಮಲೆಮ. ೦೦೦). **ಗೆಂಕು**: ೧. ನೊ(ವೊ)ದೆ ಗೆಂಕು[ಪಾಠಾಂ. ಕೆಂಕೆ] ಬೆಳೆಯ ನೀರಿಲ್ಲದ ನೆಲದೊಳ್ (ಅಭ್ರಮ. ೦೦-೨೩). **ಜೇಕು**: ೧.ಜೇಕು ಮೊದಲಾದವು ಇದ್ದರೆ ನೇಗಿಲೆಯನ್ನು ಹೊಡೆದು ಅದರ ಗಡ್ಡೆಗಳು ಒಂದೂ ಉಳಿಯದ ಹಾಗೆ ಆರಿಸಬೇಕು (ಕೃಷಿಪ್ರ. ೦೩೪); ಮೊಳಕಾಲಿನವರೆಗೆ ಕರಿಕೆ, ಜೇಕು, ಬೆಳೆದು ನಿಂತಿತ್ತು (ಚಂದುಟಿ. ೫೬).

**ಗೇಕಿನಗಡ್ಡೆ, ಗಿಕ್ಕಿನಗಡ್ಡೆ**=ಭದ್ರಮುಸ್ತೆಗಡ್ಡೆ; ಕೊನ್ನಾರಿಗಡ್ಡೆ, ಶುಂಠಿ, ಕಳ್ಳಂಗಡಲೆಬೇರು . . . ಮುಡಿವಾಳ. ಗೇಕಿನಗಡ್ಡೆ ಇವು ಕಷಾಯವಿಕ್ಕಿ ಕೊಡಲು ಶೀತಜ್ವರ ಪರಿಹಾರವಾಗುವುದು (ಸಕವೈ. ೬೪); ಕುಟನ್ನಟಂ, ದಾಶಪುರಂ . . . ರ ತುಂಗಮುಸ್ತದ ಹೆಸರುಗಳು ತುಂಗೇ ಗಡ್ಡೆಗಳು: ಗೇಕಿನಗಡ್ಡೆ ಎಂತಲೂ, ಗಿಕ್ಕಿನ ಗಡ್ಡೆಎಂತಲೂ ಅನ್ನುವರು (ಸಿದ್ಧಾಂತಿ. ೦೯೨). [ ? ]

**ಗೇಕುಳ** (ನಾ).=ಗೇಕು ೨: ಇರದೊಗೆದ ಗೇಕುಳದ ದಂಟ ಕೀಳ್ವು (ವೀಕ್ಷ್ಯ್ಕ. ೩-೦೦-೬೪). [ < ಗೇಕು ? ]

**ಗೇಟಿ** 'ಗೇಂಟಿ' ನೋ.

**ಗೇಟೀಸು** (ನಾ). ಕಣಕಾಲಿಗೆ ರಕ್ಷಣಾರ್ಥವಾಗಿ ಸುತ್ತುವ ಬಟ್ಟೆ; ಕಣಕಾಲ ಕಾಪು.

**ಗೇಟೀಸಿನವ**=ಕಣಕಾಲಿಗೆ ಬಟ್ಟೆ ಸುತ್ತಿದವನು; ಪೋಲೀಸು: ಕೋಳ ಹಾಕಿ ಹಿಡುಕೊಂಡು ಹೋಗಾಕೆ ಗೇಟೀಸಿನೋರು ಬಂದಾರಂತೆ (ಮಲೆಮ. ೫೩೪). [ ← ಇಂ. Gaiter ]

**ಗೇಣ್, ಗೇಣು, ಘೇಣ್** (ನಾ). ೧. ಅಗಲಿಸಿದ ಹೆಬ್ಬೆಟ್ಟಿನ ತುದಿಯಿಂದ ಕಿರುಬೆರಳ ತುದಿಯವರೆಗಿನ ಅಳತೆ; ಒಂಬತ್ತು ಅಂಗುಲದ ಅಳತೆ: "ತಾಳಮೆಂಬುದು ಗೇಣ್" (ಹಲಾಯು. ೬೯-೩೮೪); ಮಡದೆಡೆ ನಾಲ್ವೆರಲುಂ ಗುಟದೆಡೆಯೊಳ್ ಗೇಣಾಗೆ ನಿಲ್ವುದಿಬ್ಬಾಗತಂ (ಅರಿಪು. ೯-೫೪); ಶ್ರೀ ಭೋಗೇಸ್ವ[ರ]ದೇವರ್ಗ್ಗೆ ಅಂಗಭೋಗಕೆ ಯಿಪ್ಪತ್ತೆಂಟು ಗೇಣ ಗಳೆಯೊಳಂ ಬಿಟ್ಟ ಮತ್ತರಾಱು (ಸೌಇಇ. XI-1, ೬೩-೦೬; 1026); ಹೂರಣವ ಮಾಡಿಯಾವುಂಡೆ ಯರಡಱ ನಡುವೆ ಪೂರಯಿಸಿ ಹಱಿಯದಂತೆ ಗೇಣಗಲಂ ಮಾಡಿ (ಸೂಪಶಾ. ೦-೨೬). ೨. ಸಣ್ಣಕತ್ತಿ; ಸುರಗಿ; ಕಠಾರಿ: "ಗೇಣೆನಲ್ ಸುರಗಿ" (ಚತುನಿ. ೨೦); "ಗೇಣೆಂದು ಸುರಗಿ" (ಕಬ್ಬಮಂ. ೪೪); ನೆಗಳಲ್ ತೋಱುವ ಗೇಣ ಬಿನ್ನಣಕ್ಕೊದವುವ ಬಿನ್ನಣಂ (ಎಕ. VIII, ನಗರ. ೪೦-೬೭; 1077); ಕೂರ್ಪ ಕುಂದದ ಕಡೆಗಣ್ಣ ಗೇಣ್ ಪೊಳೆಯೆ (ಅರ್ಧನೇ. ೩-೦೪); ಕಣ್ಗಳ್ ಮನೋಜವೀರನ ಗೇಣ್ಗಳ್ (ಕಮರ. ೯೩ ಪ್ರಯೋ); ಮದನನ ಗೇಣಾ ಪೊಗರ್ಗಣ್ಗಳ ಪೊಳೆವಲಗಣ್ಗಳ ಬೆಳತಿಗೆಗಣ್ಗಳ . . . ಸುದತಿಯರೀಕ್ಷಿಸಿದರ್ ನೃಪನ (ಜಯಕಾ. ೦೦-೫೪). **ಗೇಣು**: ೧. ಕಪಿಯ ಬಾಲವು . . . ಮುಂದೆ ಗೇಣರಗೇಣು ಮೊಳ ತೋಳನಿತು ಬೆಳೆವುತಿರೆ (ಶಾಶಿಖಾ. ೦೨-೪); ಎಂಟು ಗೇಣು ಶರೀರ ಒಂದು ಗೇಣು ಮಾಡಿಕೊಂಡು (ಪುರಂದ. ೧-೦೬೪-೨); ಎಂಟು ಗೇಣಿನ ದೇಪ ರೋಮುಗಳೆಂಟುಕೋಟಿಯು (ಹರಿ ಸಾ. ೬೬); ಇಂಗ್ರೇಜಿಭಾಷೆಯೊಂದು ಚೆನ್ನಾಗಿ ಬಂದರಾಯಿತು. ಆ ವಿದ್ಯಾರ್ಥಿಗೆ ಮುಗಿಲು ಮೂರೇ ಗೇಣು (ಮುಕ್ತಪ್ರ. ೨೬); ಗೇಣು ಬಿಟ್ಟು ಅಗಳು ದಾಟಿದ ಹಾಗೆ (ಗಾದೆ). ೨. ಸಿತೇಕ್ಷು ಚಾಪವಲರ್ದೊಪ್ಪುವ ಕೇದಗೆ ಕೀಳಗೇಣು (ಮುಹಾನೇ. ೦-೬೬). **ಘೇಣ್**: ೨. ಪಲಬರಂ ಕೊನ್ದು ಬಿಲಂ ದಂಡೆಗೊಂಡು ಘೇಣ ಕಿತ್ತು ಕುದುರೆಯ ತಿವಿದು ಸುರಲೋಕ ಪ್ರಾಪ್ತನಾದ (ಎಕ. VII, ಹೊನ್ನಾಳಿ. ೨೮-೦೦; 1197).

**ಗೇಣಾಗು**=೧. ಗೇಣುದ್ದವಾಗು. ೨. ಚಿಕ್ಕದಾಗು; ಕುಗ್ಗು: ಏಕಲಭರದೆ ಪಡಲ್ಪಟ್ಟು ಗೇಣಾಗಿ ಪಾಂಥರ್ತೊಡೆತೊಳ್ಗಳ್ಮಡೆ ಜಾನು ಪ್ರಹಿತ ಶಿರರದೇನಿರ್ದರೋ ಶೀತಭೀತರ್ (ರಾಜಶೇ. ೯-೨೨).

[ ದ.೯೫ ತಮಿ. ಮಲ. ಚಾಣ್; ತುಳು. ಗೇಣ್, ಗೇಣ; ಕೊಡ. ಚಾಣೇ; ತೆಲು. ಜೇನ, ಜೇಣು ]

**ಗೇಣಂಕ, ಗೇಣಾಂಕ** (ನಾ). ಕಠಾರಿಯುದ್ಧ; ಸುರಗಿ ಕಾಳಗ. 'ಗೇಣಂಕ ಚಕ್ರೇಶ್ವರ' ಪರಾ. **ಗೇಣಾಂಕ**. 'ಗೇಣಾಂಕಚಕ್ರೇಸ್ವರ' ಪರಾ.

[ ಗೇಣ್ + ಅಂಕ₂ ]

**ಗೇಣಂಕಚಕ್ರೇಶ್ವರ, ಗೇಣಾಂಕಚಕ್ರೇಸ್ವರ** (ನಾ). ಖಡ್ಗಯುದ್ಧದಲ್ಲಿ ಚಕ್ರೇಶ್ವರನಂತಿರುವವನು; ಒಂದು ಬಿರುದು: ಗೇಣಂಕಚಕ್ರೇಶ್ವರಂ, ರಾವುತ್ತರಾಯಂ (ಕರ್ಣಾಸು. ೨೯೫ ಪ್ರಯೋ). **ಗೇಣಾಂಕಚಕ್ರೇಸ್ವರ**: ಅರಸಂಕ ಮೊನೆಗಾಱ ಗೇಣಾಂಕಚಕ್ರೇಸ್ವರ (ಮ್ಯಆರಿ. ೦೯೪೬, ೨೫-೨; 1496).

[ ಗೇಣಂಕ + ಚಕ್ರೇಶ್ವರ ]

**ಗೇಣಂಜುರಿಗೆ** (ನಾ). ಸಣ್ಣಕತ್ತಿ (?): ಮಿಸಿನಂಬುಟು, ಗೇಣಂಜುರಿಗೆ (ಕರ್ಣಾಸು. ೫೫ ಪ್ರಯೋ). [ ಗೇಣ್ + ಸುರಿಗೆ ]

**ಗೇಣಂಬು** (ನಾ). ಒಂದು ಬಗೆಯ ಬಾಣ; ಗೇಣು ಉದ್ದದ ಬಾಣ: ಮುಂದೊತ್ತುವ ನಾಯ್ಗಳ ಬೊಗಳುವ ಬಾಯ್ಗಳ ಗೇಣಂಬುಗಳಿಂ ಕಟ್ಟಿದನು (ಹಿಟ್ಟಕ. ೨೫-೦೩). [ ಗೇಣ್ + ಅಂಬು₂ ]

**ಗೇಣಾಂಕ** 'ಗೇಣಂಕ' ನೋ.

**ಗೇಣಾಂಕಚಕ್ರೇಸ್ವರ** 'ಗೇಣಂಕಚಕ್ರೇಶ್ವರ' ನೋ.

**ಗೇಣಾಯ** (ನಾ). ಕತ್ತಿವರಸೆ; ಕಠಾರಿಯ ವರಸೆ: ಅರಸಂಕ ಸೂನೆಗಾಱ ಗೇಣಾಯದ ಚಕ್ರವರ್ತಿ (ಎಕ. IX, ಚನ್ನಪ. ೬೦-೨೦; 1831).

[ ಗೇಣ್ + ಆಯ₁ ]

**ಗೇಣಿ** 'ಕೇಣಿ₃' ನೋ.

**ಗೇಣಿಕಾಱ** 'ಕೇಣಿಗಾಱ' ನೋ.

**ಗೇಣಿಕೆ** 'ಧೇನಿಕೆ' ನೋ.

**ಗೇಣಿಗ** (ನಾ).=ಗೇಣಿದಾರ: ಸಾಹುಕಾರರಾಡಿದ ಮಾತುಗಳನ್ನು ಕೇಳಿದ ಮೇಲೆ ಖಂಡಿತ ಅವರ ಗೇಣಿಗನಾಗಬಾರದೆಂದು ನಿಶ್ಚಯಿಸಿದ್ದನು (ತುಂಬಿಕೊ. ೫೨). [ ಗೇಣಿ (<ಕೇಣಿ₃) + -ಗ₃ ]

**ಗೇಣಿಗದ್ದೆ** (ನಾ). ಗೇಣಿಗೆ ಪಡೆದ ಗದ್ದೆ; ಗುತ್ತಿಗೆ ಗದ್ದೆ: ಗೇಣಿಗದ್ದೆಯೇ ಅವನ ಜೀವನಾಧಾರ (ಜೀವನ. ೨೦).

[ ಗೇಣಿ (<ಕೇಣಿ₃) + ಗದ್ದೆ (<ಗಟ್ಟಿ) ]

**ಗೇಣಿಗಾರ** 'ಕೇಣಿಗಾಱ' ನೋ.

**ಗೇಣಿಗೆಯ್** (ನಾ). ಗೇಣಿಗಾಗಿ ಬಿಟ್ಟಿರುವ ಹೊಲ (?): ತೆಂಕ ಗದುಗಿನ ಹೊಲದಿಂ ಪಡುವಲು ಹಱಕಾಱ [ಗೇ]ಣಿಗೆಯಿಂ ಬಡಗಲು (ಸೌಇಇ. XV, ೦೪೦-೩೦; 1184). [ ಗೇಣಿ (<ಕೇಣಿ₃) + ಕೆಯ್₄ ]

**ಗೇಣಿಚೀಟಿ** 'ಗೇಣಿಚೀಟು' ನೋ.

**ಗೇಣಿಚೀಟು, ಗೇಣಿಚೀಟಿ** (ನಾ). ಭೂಮಿಯ ಮಾಲೀಕನು ಗೇಣಿದಾರ ನಿಂದ ಗೇಣಿಗಾಗಿ ಬರೆಸಿಕೊಳ್ಳುವ ಚೀಟಿ; ಲಾವಣಿಪತ್ರ; (ಕ). **ಗೇಣಿಚೀಟಿ**: ಗೇಣಿಚೀಟಿಗಳಿಂದ ಪ್ರತಿವರ್ಷವೂ ಬರುವ ಸ್ವಾಮಿಸ್ವದಲ್ಲಿ

. . . ವಹಿಸಿಕೊಡತಕ್ಕುದು (ಧಾಧಾಪ. ೨೬೯); ಅಡಿಗರಿಗೆ ಬರಕೊಟ್ಟ ಠಸೆ ಗೇಣಚೀಟಿಗೂ ಸಹ . . . ಸಂಕಯ್ಯನ ಸಾಕ್ಷಿ (ಪಾಕೀಸು. ೪).
[ ಗೇಣ (<ಕೇಣ್$_3$) + ಚೀಟು$_3$ ]

**ಗೇಣಿಡು** (ಕ್ರಿ). ಗೇಣು ಹಾಕು ; ಗೇಣಿನಿಂದ ಅಳೆ, – ಅಳತೆಮಾಡು : ಅಳಿಯಲ್ಬಾರದ ದೈತ್ಯನಾಯಕನ ದಿವ್ಯಾದಾರ್ಯಮಂ ಗೇಣಿಡಲ್ ಬಳೆದತ್ತೀ ಕರಪದ್ಮಂ (ವಸ್ತುವಂ. ೨೯). [ ಗೇಣ್ + ಇಡು$_1$ ]

**ಗೇಣಿದಾರ** (ನಾ). ಭೂಮಿಯ ಮಾಲೀಕನಿಂದ ಭೂಮಿಯನ್ನು ಗೇಣಿಗೆ ಪಡೆಯುವವನು ; ಗುತ್ತಿಗೆದಾರ ; ಲಾವಣಿದಾರ : ದುಡ್ಡುಳ್ಳವನು ಭೂಮಿಯನ್ನು ಕೊಂಡು, ದುಡ್ಡಿಲ್ಲದ ಗೇಣಿದಾರರಿಂದ ತನಗೆ ಮನಸ್ಸು ಬಂದಂತೆ ಸುಲಿಗೆಮಾಡುತ್ತಾನೆ (ಪುನರು. ೩೦೨).
[ ಗೇಣಿ (<ಕೇಣ್$_3$) + – ದಾರ್$_4$ ]

**ಗೇಣಿಸಿದ್ಧಾಯ** (ನಾ). ಗೇಣಿಗಾಗಿ ಕೊಡುವ ತೆರಿಗೆ : ಗೇಣಿಸಿದ್ಧಾಯ ಬಡ್ಡಿಯ ಬತ್ತ (ಎಕ. VIII, ೦೩೨–೨೬ ; 1566).
[ ಗೇಣಿ (<ಕೇಣ್$_3$) + ಸಿದ್ಧಾಯ ]

**ಗೇಣಿಸು** 'ಧೇನಿಸು' ನೋ.

**ಗೇಣಿಹಣ** (ನಾ). ಗೇಣಿದಾರರಿಂದ ಪಡೆದ ಹಣ: ರೈತರುಗಳಿಂದ ವಸೂಲು ಮಾಡಿದ್ದ ಗೇಣಿಹಣವನ್ನು ಕರಣಿಕ ಬಲರಾಮಕುಲಕರ್ಣಿ ದುರುಪಯೋಗಪಡಿಸಿಕೊಂಡಿದ್ದನಂತೆ (ಹೇಮುಕೂ. ೩೦).
[ ಗೇಣಿ (<ಕೇಣ್$_3$) + ಹಣ (<ಪಣ$_1$) ]

**ಗೇಣು** 'ಗೇಣ್' ನೋ.

**ಗೇಣುಕಾಱ** (ನಾ). ಕತ್ತಿಯಿಂದ ಯುದ್ಧಮಾಡುವವನು: ಭುಜಬಳವೀರ ನಿಗಳಂಕಮಲ್ಲ ಗೇಣುಕಾಱರಾಚಾರ್ಯ್ಯರ್ಗಂ (ಇಅ. XII, ೯೩–೩ ; 1187).
[ ಗೇಣು (<ಗೇಣ್) + – ಕಾಱ ]

**ಗೇಣ್ಬಾಯ್** (ನಾ). ಕತ್ತಿಯ ಬಾಯಿ ಗೇಣ್ಬಾಯ್ಗ [ಪಾಠಾಂ.ನೇಣ್ಬಾಯ್ಗ] ವೀಟದೆ (ಶಮದ. ೬೬ ಪ್ರಹೂ). [ ಗೇಣ್ + ಬಾಯ್ ]

**ಗೇತೋಜ** (ನಾ). ಒಬ್ಬಾತನ ಹೆಸರು : ಸೇನಬೋವಂ ನಾಗವರ್ಮ್ಮಯ್ಯಂ ಮಾಶಿಳ ಚಾವೋಜಂ ಎಡವ ಗೇತೋಜಂ ಅಯ್ಯಾವೊಳೆ ಗೇತೋಜಂ (ಸಾಇಇ. XI-1, ೫೬–೨೫ ; 1020). [ <ಕೇತೋಜ ]

**ಗೇನಿ** 'ಕೇಣ್$_3$' ನೋ.

**ಗೇನಿಕೆ** 'ಧೇನಿಕೆ' ನೋ.

**ಗೇನಿಸು** 'ಧೇನಿಸು' ನೋ.

**ಗೇಬೆ** (ನಾ). (ರೋಗದಿಂದ ಶರೀರವು) ಊದಿಕೊಂಡಿರುವಿಕೆ ; ಊತ ; ಬಾವು. 'ಗೇಬೆಕಟ್ಟು' ಪರಾ. [ ? ]

**ಗೇಬೆಕಟ್ಟು** (ಕ್ರಿ). (ರೋಗದಿಂದ ಶರೀರವು) ಊದಿಕೊಳ್ಳು ; ಬಾತಿರು: ಯಜ್ಞೇಶ್ವರನಿಗೆ ಅಜೀರ್ಣವಾಯಿತು. ಹೊಟ್ಟೆ ದಪ್ಪವಾಯಿತು. ಮುಖ ಗೇಬೆಕಟ್ಟಿತು (ಏತಿಹಂ. I, ೩೦). [ ಗೇಬೆ + ಕಟ್ಟು$_1$ ]

**ಗೇಮೆ** 'ಕೈಮ್ಮೆ$_1$' ನೋ.

**ಗೇಯ** (ಗು). ೧. ಹಾಡತಕ್ಕ ; ಗಾನಕ್ಕೆ ಯೋಗ್ಯವಾದ : ಮೊದಲಿನಲ್ಲಿ ಸಾಹಿತ್ಯದ ಕೃತಿಗಳು ಕೇವಲ ಗೇಯ ಅಥವಾ ಪಾಠ್ಯವಾಗಿದ್ದುವು (ಅರಿಶಾ. ೨೮೫). (ನಾ). ೨. ಹಾಡುವಿಕೆ; ಗಾಯನ; ಹಾಡಂ: ಇಂಪನಾಳ್ದ ಗೇಯಂ ಕಿ ವೊಕ್ಕೊಡಂ ಬರಿದ ಮಲ್ಲಿಗೆಗಂಡೊಡಂ . . . ನೆನೆವುದೆನ್ನ ಮನಂ ವನವಾಸಿದೇಶಮಂ (ಪಂಪಭಾ. ೪–೩೦). ೩. ಹಾಡುವವನು ; ಹಾಡುಗಾರ; ಗಾಯಕ. ೪. [ಛಂದ]ಅಕ್ಷರಛಂದಸ್ಸಿನ ಅತ್ಯುಕ್ತಿಯಲ್ಲಿ ಒಂದು ವೃತ್ತ ; ಪ್ರತಿ ಪಾದದಲ್ಲಿ ಗುರುವಾದ ಎರಡು ಅಕ್ಷರಗಳಿರುವ ಸಮವೃತ್ತ : ಶ್ರೀಯಂ ದೇಯಂ ಪೇಯಂ ಗೇಯಂ (ಛಂದೋಂಬು. ೨–೫೫ ಅಡಿ). [ ಸಂ. ]

**ಗೇಯತೆ** (ನಾ). ಹಾಡಿಸಿಕೊಳ್ಳುವ ಯೋಗ್ಯತೆ ; ಗಾಯನಗುಣ : ಈ ಕಾವ್ಯಗುಣದಿಂದಾಗಿಯೆ ವಚನಗಳಲ್ಲಿ ಗೇಯತೆಯಿದೆ (ಕರ್ನಾಕ. ೬೫) ; ಇವು . . . ಗೇಯತೆಯ ಸೊಬಗನ್ನು ಹೆಚ್ಚಿಸುವಂಥವು (ಸಂಕೋರ. ೦೨೦).
[ ಸಂ. ಗೇಯತಾ ]

**ಗೇಯನಾಟಕ** (ನಾ). ನಾಟಕದಲ್ಲಿ ಒಂದು ಪ್ರಭೇದ ; ಗೀತನಾಟಕ : ಯಕ್ಷಗಾನ . . . ಆಧುನಿಕಪ್ರಗತಿರೀತಿಯಲ್ಲಿ ಅಭಿನಯಿಸಲ್ಪಟ್ಟಾಗ ಗೇಯನಾಟಕ ಅಥವಾ ಗೀತರೂಪಕ ಎನಿಸಿಕೊಳ್ಳುತ್ತದೆ (ಸಂಗೀಕಂ. ೬೯) ; ಲಕ್ಷ್ಮಿ . . . ಯಕ್ಷಕನ್ನಿಕೆಯರ ಗೇಯನಾಟಕವನ್ನು ನೋಡುತ್ತಲೇ ನಿಂತಿದ್ದಳು (ಹೇಮುಕೂ. ೧). [ ಗೇಯ + ನಾಟಕ ]

**ಗೇಯರಸ** (ನಾ). ಸಂಗೀತವನ್ನು ಕೇಳುವುದರಿಂದ ಉಂಟಾಗುವ ಆನಂದ; ಸಂಗೀತದ ಸುಖ: ತಗುಳ್ದ ಗೇಯರಸವಚ್ಚಿಱದಂತಿರೆ ದೆಚ್ಚು ಚಿತ್ರದೊಳ್ ನಿಲೆ (ಶಾಂತಿಪು. ೪–೬೮) ; ಗೇಯರಸಸುಖವ ಬಿಡದೆ ವೃಷಭನ ನೇಱುತ ಹನುಮ ಬಾ . . . ಎನಗೆ ಗಾನವ ಕೇಳಿಸೆನೆ (ಗುರುಕಾ. ೬–೫೩).
[ಗೇಯ + ರಸ ]

**ಗೇಯವೃತ್ತ** (ನಾ). = ಗೇಯ ೪ : ಅತ್ಯುಕ್ತಿಯೆಂಬ ಛಂದಸ್ಸಿನಲ್ಲಿ ಪಾದವೊಂದಕ್ಕೆ ಎರಡುಗುರುಗಳುಳ್ಳ ಪದ್ಯವು ಗೇಯವೃತ್ತವೆನಿಸುವುದು (ಕೃಪಿಡಿ. ೬೮). [ ಗೇಯ + ವೃತ್ತ ]

**ಗೇಯಿಸು** 'ಕೆಯ್ಯಿಸು' ನೋ.

**ಗೇಯು** 'ಕೆಯ್$_1$' ನೋ.

**ಗೇರ್** 'ಕೇರ್$_2$' ನೋ.

**ಗೇರಗೊಟ್ಟೆ** (ನಾ). = ಗೇರುಬೀಜ : ಮರದರಸಿನಂ . . . ತಿಲಂ ಗೇರಗೊಟ್ಟೆ ಯಿಂತಿವನೊಂದಾಗರದೊಳ್ಳೆಣ್ಣೆಯೊಳಟ್ಟಾದರದಿಂದಂ ಪೂಸೆ (ಖ)ಕಜ್ಜಗುತ್ತಂ ತೀರ್ಗುಂ (ಅಶ್ವಶಾ. ೦೩–೦೮).
[ ಗೇರ್ (<ಕೇರ್$_2$) + ಗೊಟ್ಟೆ$_1$ (<ಕೊಟ್ಟೆ$_1$) ]

**ಗೇರಾಯಿಸು** 'ಘೇರಾಯಿಸು' ನೋ.

**ಗೇರಿ** 'ಘೇರಿ' ನೋ.

**ಗೇರಿಹೊಡೆ** (ಕ್ರಿ). ತಿರುಗು ; ಸುತ್ತು : ಮೊದಲೇ ತಲೆ ಗೇರಿಹೊಡೆಯುತ್ತಾ ಇದೆ (ಮುಸೋನಂ. ೬೫) : ಹೀಗೆ ಗೇರಿಹೊಡೆವ ಮನಸ್ಸಿದ್ದರೆ ನಿದ್ದೆ ಎಲ್ಲಿ ಉಳಿಯುತು ? (ಗಾಳಿಪ. ೦೨೩).
[ ಗೇರಿ (<ಘೇರಿ) + ಹೊಡೆ$_1$ (<ಪೊಡೆ$_1$) ]

**ಗೇರು** 'ಕೇರ್$_2$' ನೋ.

**ಗೇರುಕುಕ್ಕೆ** (ನಾ). ಗೇರೆಣ್ಣೆ ಬಳಿದ ಕುಕ್ಕೆ: ಗೇರುಕುಕ್ಕೆಯಲ್ಲಿ ಕಡಲೆಹಿಟ್ಟು ತುಂಬಿದ್ದಾರೆ (ಲೂಧಿ). [ ಗೇರು (<ಕೇರ್$_2$) + ಕುಕ್ಕೆ$_1$ ]

**ಗೇರುಕೊಮ್ಮೆ** (ನಾ). ಗೇರೆಣ್ಣೆ ಬಳಿದ ಕೊಮ್ಮೆ, – ಕುಕ್ಕೆ : ಪಾರ್ವತಮ್ಮ ಮಂತು ತೊಳೆದುಕೊಂಡು ಮೊಸರನ್ನು ಗೇರುಕೊಮ್ಮೆಗೆ ಬಗ್ಗಿಸಿಕೊಂಡು ಕಡೆಯಲು ಆರಂಭಿಸಿದಳು (ಸರ್ವಮಂ. ೪೦).
[ ಗೇರು (<ಕೇರ್$_2$) + ಕೊಮ್ಮೆ$_1$ ]

**ಗೇರುತೈಲ** (ನಾ). ಗೇರು ಬೀಜದಿಂದ ತೆಗೆದ ಎಣ್ಣೆ ; ಗೇರೆಣ್ಣೆ : ಮಣಶಿಲೆ, ಗಂಧಕ, ತಾಳಕ, ಗೇರುತೈಲ . . . ಕೊಳ್ಳಲು ಸಕಲ ಸನ್ನಿಪಾತ ಸಮಸ್ತ ಕುಷ್ಠರೋಗ ಸಹ ಮಾಣ್ಗುಂ (ಸಕವೈ. ೦೬೮).
[ ಗೇರು (<ಕೇರ್$_2$) + ತೈಲ ]

**ಗೇರುಪಪ್ಪು** (ನಾ). ಗೇರುಬೀಜ ; ಗೋಡಂಬಿಬೀಜ : ಗೋಡಂಬಿ. ಗೇರುಪಪ್ಪು, ಮುಂದಿರಿಪಪ್ಪು, ಜಡಿ (ಪ್ರುಕಗಿ. ೬–೦೦೫).
[ ಗೇರು (<ಕೇರ್$_2$) + ಪಪ್ಪು ]

**ಗೇರುಬೀಜ** 'ಕೇರಬೀಜ' ನೋ.

**ಗೇರುಮರ** 'ಕೇರಮರ' ನೋ.

**ಗೇರುಮಾವು** 'ಕೇರಮಾವು' ನೋ.

**ಗೇರುಹಣ್ಣು** (ನಾ). ಗೇರುಮರದ ಹಣ್ಣು ; ಗೋಡಂಬಿಹಣ್ಣು : ಗೇರುಹಣ್ಣನಲ್ಲಿ ಬೀಜ ಸೇರಿದಂತೆ ಸಂಸಾರದಿ ವಿಹಿಯಾಸೆಮಾಡದದಲೆ ಧೀರ ಕೃಷ್ಣನ ಭಕುತರೆಲ್ಲ (ಪುರಂದ. ೧-೧೨-೨) ; ಗೇರುಹಣ್ಣಿನ ಮರದಿಂದ ಹಳದಿ ತುಂಬಿದ ಕೆಲವು ಹಣ್ಣುಗಳು . . . ಕೆಳಗೆ ಬೀಳುತ್ತಿದ್ದುವು (ರಳ್ರೂ. ೧). [ ಗೇರು (<ಕೇರ್$_{2}$) + ಹಣ್ಣು$_{3}$ (<ಪಣ್$_{3}$) ]

**ಗೇರೆ, ಗೇರೆಯ** (ನಾ). ಸುತ್ತಲೂ ಇರುವ ಗೋಡೆ ; ಆವರಣ : ಅರ್ಧ ಚಂದ್ರಾಕೃತಿಯೊಳು ಸೇನೆಯೊಟ್ಟಿತು ಗೇರೆಯ ಬಳಸಿ (ನಾಗಕು. ೧೩-೦೦೩) ; ಸುತ್ತಲುಂ ಗೇರೆಯುಂ ನೆಗಳ್ದುವಾ ಪಾಳೆಯದೊಳ್ (ಜಂಖ. ೪೮-೩೩) ; "ವರ್ತುಲ" (ಅಬಖ. ಕೋ೮). **ಗೇರೆಯ** : ಗಡೆಗಳೆನೋವದೆ ಗೇರೆಯುಮಂ ಕೆತ್ತಡಸಿ ಕರಂ ಬೆಟ್ಟಿತು ಭೂತಂಗಳ ಗಡಣದ ಪಾಳೆಯಮಾ ದಾರುಣ ಮಪ್ಪಾಹವಧರಣಿಯೊಳು (ಜಯುಕಾ. ೭-೨೪). [ <ಕೇರ್$_{1}$ ]

**ಗೇರೆಣ್ಣೆ** (ನಾ). = ಗೇರುತೈಲ : ಗೇರೆಣ್ಣೆಯನೊರಸುಗೆ ದುತ್ತೂರರಸಂ ಲವಣವೆಂಬಿವಂ ನೆಲದಾಟಿಯೊಳ್ ಚಾರಿಸಿ . . . ತೊಡೆಯ ಮೇಣ್ ಕುಚು ಕಿಡುಗುಂ (ಲೋಕೋಪ. ೯-೦೬೦) ; ಕೋಲಕಳ್ಳಿಬೇರು . . . ಒಳ್ಳೆಣ್ಣೆ ಗೇರೆಣ್ಣೆ ಇವನ್ನು ಹುರಿದು (ಕಾಯಿಸಿ)ಬೆಲ್ಲ ಮತ್ತು ತುಪ್ಪಗಳೊಂದಿಗೆ ಸೇವಿಸಲು ಎದೆಶೂಲೆ ಮಾಣುವುದು (ಸಳಕ್ಕ. ೪೬೨ ಪರಿ). [ ಗೇರು (<ಕೇರ್$_{2}$) + ಎಣ್ಣೆ ]

**ಗೇರೆಯ** 'ಗೇರೆ' ನೋ.

**ಗೇರೈಸು** 'ಘೇರಿಸು' ನೋ.

**ಗೇಲಿ** (ನಾ). ತಮಾಷೆ ; ಲೇವಡಿ : ಯನ್ನ ಗೇಲಿಯ ಮಾಡದೇಕೆಂದು ತಾವು ನಳರಾಜಚಂದ್ರನ ಕಳೆಯ ರೂಪಿನಂತೆ ತದ್ರೂಪು ಧರಿಸಿ ಬಂದವರು ಕುಳಿತಿರಲು (ಯುನಳ. ೩೦); ಗೇಲಿಯ ಮಾಡಿ ಹೊಳ್ಳೆಂದು ನಕ್ಕು ಓಡಿ ಹೋಗುವರು (ಕನ್ನಚಾ. ೪೦) ; ತಮ್ಮ ಅಭಿಮತವನ್ನು ಒರೆಯುತಕ್ಕವರು . . . ಒಂದು ಸಮಯದಲ್ಲಿ ಹಾಸ್ಯ ಕುಚೋದ್ಯ ಗೇಲಿ ಈ ರೂಪವಾಗಿಯೂ . . . ಆಗಾಗ್ಗೆ ಹೇಳುತಾ ಬಂದರೆ (ಅದೂಟ. ೭೬).

**ಗೇಲಿಮಾಡು** = ಅಪಹಾಸ್ಯಮಾಡಂ ; ತಮಾಷೆಮಾಡಂ : ಮುದುಕಿಯನ್ನು ಕಂಡು ಗೇಲಿಮಾಡಬೇಕೆನ್ನುವಿರಾ (ಪ್ರತಿಬಿಂ. ೯) ; ನಿಮ್ಮ ಹೆಸರನ್ನು ಹೇಳಿ ಗೇಲಿಮಾಡುತ್ತಾರೆ (ಘೂರಾಪ. ೪೭). [ ದೇ.॥ ತಮಿ. ಕೇಲಿ ; ತುಳು. ತೆಲು: ಗೇಲಿ ]

**ಗೇಹ** (ನಾ). ೧. ವಾಸಮಾಡುವ ಸ್ಥಳ ; ಮನೆ ; ನಿವಾಸ ; ಗೃಹ : "ಆವಾಸಃ . . . ಗೇಹಂ . . . ಆಲಯಃ - ಈ ೩೧ ಮನೆ" (ಹಲಾಯು. ೪೯-೦೩೬); ಬೆಳ್ಳೊಡೆ ನೋಡೆ ನೋಡೆ ನಿಂದುರಿದುವು ಸಾಲಭಂಜಿಕೆಗಳಟ್ಟುವು ವೈರಿನರೇಂದ್ರ ಗೇಹದೊಳ್ (ಪಂಪಭಾ. ೬-೨೯). ೨. [ಜ್ಯೋತಿ] ಗ್ರಹಗಳು ಇರುವ ರಾಶಿ-ಸ್ಥಾನ : ರಾಹು ನೆಲಸಿದೊಡೆ ಸಪ್ತಮ ಗೇಹದೊಳ್ . . . ಅನಲಂಗಾಹುತಿ ಪನ್ನೆರಡುವರ್ಷದಿಂದವನಕ್ಕುಂ (ಜಾತಕ. ೬-೩೪). [ ಸಂ. ]

**ಗೇಹಕ್ರೀಡೆ** (ನಾ). ಮನೆಯ ಒಳಗೆ ಆಡುವ ಆಟ : ಜಲಕ್ರೀಡೆ ವನಕ್ರೀಡೆ ಗೇಹಕ್ರೀಡೆ ರಾಸಕ್ರೀಡೆ . . . ಮೊದಲಾದ ಸುಖವ್ಯಾಪಾರಂಗಳಿಂ (ವಿವೇಕ. ೩೦೪). [ ಗೇಹ + ಕ್ರೀಡೆ ]

**ಗೇಹಾಂಗಣ** (ನಾ). ಮನೆಯ ಅಂಗಳ-ಆವರಣ : ಗೇಹಾಂಗಣದೊಳ್ ತರ್ಲನಡೆವುದಂ ಕಣ್ಣಾರ ನೋಡಲ್ಕೆ ನೋನೆನೊ (ಸುಕುಮಾ. ೯-೦೦೩). [ ಗೇಹ + ಅಂಗಣ ]

**ಗೇಹಾಜಿರ** (ನಾ). = ಗೇಹಾಂಗಣ : ಮದೌಘಕರ್ದಮಿತ ಕಾಂತಂ ರಾಜ ಗೇಹಾಜಿರಂ (ಚಂದ್ರಪ್ರ. ೧-೦೩೦). [ ಗೇಹ + ಅಜಿರ ]

**ಗೇಹಾಶ್ರಮ** (ನಾ). = ಗೃಹಸ್ಥಾಶ್ರಮಂ : ಗೇಹಾಶ್ರಮದೊಳ್ ಪಣಮಂ ಕಾಯಲಾಗದೆಂದೊಡೆ ಗುಣಮಂ ಕಾಯಲಾರ್ಕುಮೆ ಅದಱಿಂ ಗೇಹಾಶ್ರಮಮೇವುದು (ಜೀವಸಂ. ೩೩-೧೩ ವ). [ ಗೇಹ + ಆಶ್ರಮ ]

**ಗೇಹಿನಿ** (ನಾ). ಮನೆಯೊಡತಿ ; ಹೆಂಡತಿ ; ಗೃಹಿಣಿ. 'ಗಂರಂಗೇಹಿನಿ' ಪರಾ. [ ಸಂ. ಗೇಹಿನೀ ]

**ಗೇಹೋಪವನ** (ನಾ). ಮನೆಯ ಬಳಿಯ ತೋಟ ; ಗೃಹೋಪವನ : (+). [ ಗೇಹ + ಉಪವನ ]

**ಗೈ** 'ಕೆಯ್$_{1}$' ನೋ.

**ಗೈನೆ** 'ಕೈನೆ' ನೋ.

**ಗೈಮೆ** 'ಕೈಮೆ$_{1}$' ನೋ.

**ಗೈಯಾಳಿ** 'ಗಯ್ಯಾಳಿ' ನೋ.

**ಗೈರ್** 'ಗೈರು' ನೋ.

**ಗೈರ್‌ವಿಲೆ** 'ಗೈರುವಿಲೆ' ನೋ.

**ಗೈರ್‌ಹಾಜರ್** 'ಗೈರುಹಾಜರು' ನೋ.

**ಗೈರ್‌ಹಾಜರಿ** 'ಗೈರುಹಾಜರಿ' ನೋ.

**ಗೈರಖರ್ಚು** (ನಾ). ಅನುಚಿತವಾದ ಖರ್ಚು ; ಅನವಶ್ಯಕವಾದ ವೆಚ್ಚ : (+). [<ಗೈರು + ಖರ್ಚು (<ಕರ್ಚು$_{4}$) ]

**ಗೈರತ್** 'ಗೈರತ್ತು' ನೋ.

**ಗೈರತ್ತು, ಗೈರತ್** (ನಾ). ಶಕ್ತಿ ; ಸಾಮರ್ಥ್ಯ ; ತಾಕತ್ತು : ನಮ್ಮನ್ನು ಅನುಸರಿಸಿಕೊಂಡು ಬರುವ ಗೈರತ್ತು ನಿಮಗೆ ಇಲ್ಲ (ಹುಲಿಹಾ. ೮); ಗೈರತ್ತಿದ್ದರೆ ಕುಸ್ತಿಹಾಕಲಿ (ಛಿಮಕಾ. ೮೮) ; ಕ್ರಾಂತಿಕಾರಿಯಾಗೂಂತ ತಾನೇ ನೀನು ಹೇಳೋದು ? ಅದಕ್ಕೂ ಗೈರತ್ತು ಬೇಕು (ಚಿಗುಬ. ೦೯). **ಗೈರತ್** : ಸವಾಲ್‌ಗೆ ಧಡಾಸವಾಲ್ ಹಾಕೋಕೆ ತಕ್ಕ ಗೈರತ್ ಇಲ್ದೆ ಹಾಕ್ತಾರಾ ? (ಛಿಮಕಾ. ೨). 'ಗತ್ತು' ಪರಾ. [ ←ಅರ. ಫಾರ. ಹಿಂ. ಮರಾ. ಗೈರತ್ ]

**ಗೈರಮರ್ಜಿ** (ನಾ). ಒಪ್ಪದಿರುವಿಕೆ ; ಅಸಮ್ಮತಿ : ನಮ್ಮ ಭಾಷೆಯಲ್ಲಿ . . . ಅನ್ಯದೇಶೀಯವೆಂದು ಗುರುತಿಸಲಾಗದ ಶಬ್ದಗಳೆಂದರೆ . . . ಗೈರಮರ್ಜಿ ; ಚೀಜ್ (ಭಾಷಾಶಾ. ೦೩೬). [ <ಗೈರು + ಮರ್ಜಿ ]

**ಗೈರಮಾಹಿತಿ** (ನಾ). ತಪ್ಪು ತಿಳಿವಳಿಕೆ-ಮಾಹಿತಿ : ಇತ್ತ ಕಡಿಯ ಗೈರಮಾಹಿತಿಯಿಂದ . . . ಬರಿಯುತ್ತಾರೆ (ಮುಂಬವ್ಯಾ. ೬ ಪ್ರಸ್ತಾವನೆ). [ <ಗೈರು + ಮಾಹಿತಿ ]

**ಗೈರವಾಜಬಿ** 'ಗೈರುವಾಜಬಿ' ನೋ.

**ಗೈರಶಿಸ್ತ** (ಗು). ಅವ್ಯವಸ್ಥಿತವಾದ ; ನಿಯಮಬಾಹ್ಯವಾದ : ಸ್ವರಾಜ್ಯ ಪಕ್ಷವು . . . ಸರಕಾರದ ಅನೇಕ ಗೈರಶಿಸ್ತ ಕರ್ತವ್ಯಗಳನ್ನು ಬೈಲಿಗೆಳೆಯಿತು (ಕಾಂಗ್ರಸ್. ೦೮). [ ←ಹಿಂ. ಮರಾ. ಗೈರ್‌ಶಿಸ್ತ ]

**ಗೈರಸಮಜೂತಿ** (ನಾ). ತಪ್ಪುತಿಳಿವಳಿಕೆ : ಅವರ ಮನಸ್ಸಿನಲ್ಲಿರುವ ಗೈರಸಮಜೂತಿಗಳನ್ನು ತೆಗೆದುಹಾಕುವದಕ್ಕೋಸ್ಕರ . . . ವಿಚಾರ ಮಾಡುವರು (ಮುಂಬವ್ಯಾ. ೮ ಪ್ರಸ್ತಾವನೆ). [ <ಗೈರು + ಸಮಜೂತಿ ]

**ಗೈರಹಂಗಾಮ** (ನಾ). ಸಕಾಲವಲ್ಲದುದು ; ಅಕಾಲ : ಹೀಂಗೆ ಅವಕಾಶ ಆಗೋಣದರಿಂದ ಗೈರಹಂಗಾಮಕ್ಕೆ ಮಾಲು ಹೋಗಿ ನಫೆ ಬರುವದು ತಪ್ಪಿ ಲುಕಸಾನವಾಗುವ ಸಂದರ್ಭವುಂಟು (ಮುಂಬವ್ಯಾ. ೨೦೩). [<ಗೈರು + ಹಂಗಾಮ ]

**ಗೈರಿ** (ನಾ). ತಪ್ಪು ; ಅಪರಾಧ : ಹಾಗಾದರೆ ನನ್ನದು ಬಹಳ ಗೈರಿ ಆಯಿತು (ಕಿಶ್ರಮ. ೬೮). [←ಹಿಂ. ಮರಾ. ಗೈರೀ ]

**ಗೈರಿಕ** (ಗು). ೧. ಬೆಟ್ಟದಲ್ಲಿ ಹುಟ್ಟಿದ. (ನಾ). ೨. ಒಂದು ಬಗೆಯ ಖನಿಜ ; ಜಾದು ; ಕಾವಿಕಲ್ಲು : "ಗೈರಿಕಂ, ಧಾತುಃ - ಈ ೨ ಜಾದು"

(ಹರಾಯು. ೨೮-೦೬); "ತಾಮ್ರಧಾತುಃ – ಗೈರಿಕ" (ಒಷಧಿ. ೬೬); ಒಡಗೂಡಿ ಹೇಮ ಗೈ[ಪಾಠಾಂ. ಸೈ]ರಿಕ ಗುಡ ಸೈಂಧವ ಸರ್ಜಸಿಕ್ಥಕಂಗಳ ನಿಂಬಾಗಡುಗೆ ತಿಳತೈಳದಿಂದಂ ಕಿಡಿಸುಗುಮದು ಬಡದ ತೊಡೆದೊಡಧರ ವ್ರಣಮಂ (ಲೋಕೋಪ. ೯-೮೨). ೩. ಕೆಂಪುಬಣ್ಣ; ಕಾವಿಬಣ್ಣ. 'ಗೈರಿಕಪರಾಗ', 'ಗೈರಿಕವಸನ' ಪರಾ. ೪. ಚಿನ್ನ; ಸುವರ್ಣ: "ಗೈರಿಕಂ ಕರ್ಬುರಂ . . . ಸ್ವರ್ಣಮೆನೆ ಹೊನ್ನಿಂಗೆ ನಾಮಮಕ್ಕುಂ" (ಮಂಗರಾ. ೩೦-೪); ಗೈರಿಕದಿ ಮುಕ್ತಾಫಲದಿ ಸಮೆದ ಕಲಶಂಗಳಿಂದೆಸೆದುದಾ ದ್ವಾರಾವತಿ (ಭಕ್ತಾಪ. ೨-೩). [ಸಂ.]

**ಗೈರಿಕಪರಾಗ** (ನಾ). ಕೆಂಪುಬಣ್ಣದ ಧೂಳು; ಕೆಂಧೂಳು: ಕಾಡಾನೆಗಳ ಕೋಡವೊನೆಯಿನೀಡಿಱಿವ ಗಿರಿಜು ದರಿಯ ಗೈರಿಕಪರಾಗಮಂ ಸಂಧ್ಯಾ ರಾಗವಿಷದಿನಾಗಸಕ್ಕೆ ಪಸರಿಸಿಯುಂ (ಜಂದ್ರಪ್ರ. ೮-೪ ವ).
[ಗೈರಿಕ + ಪರಾಗ]

**ಗೈರಿಕರುಚಿ** (ನಾ). ಕೆಂಪು ಬಣ್ಣದ ಪ್ರಕಾಶ,–ಕಾಂತಿ: ಗೈರಿಕರುಚಿಯಂತೆ ಮೆಱಗುವಮಾಯಡೆ ಸೊಬಗಿಂ (ವಸ್ತ್ವಂ. ೮೨). [ಗೈರಿಕ + ರುಚಿ]

**ಗೈರಿಕವಸನ** (ನಾ). ಕಾವಿ ವಸ್ತ್ರ; ಕಾಷಾಯವಸ್ತ್ರ. 'ಗೈರಿಕವಸನಧಾರಿ' ಪರಾ. [ಗೈರಿಕ + ವಸನ]

**ಗೈರಿಕವಸನಧಾರಿ** (ನಾ). ಕಾವಿವಸ್ತ್ರವನ್ನು ಧರಿಸಿದವನು: ಗೈರಿಕವಸನ ಧಾರಿಗಳಾಗಿ ಪರಿವ್ರಾಜಕರಾಗಿ ಅಲೆಯತೊಡಗಿದರು (ಭಾರರ. ೩೨೦).
[ಸಂ. ಗೈರಿಕವಸನಧಾರಿನ್]

**ಗೈರಿಕೆ** (ನಾ).=ಗೈರಿಕ ೩: ಎಡಗಾಲಿಂದೆತ್ತಿ ಗೈರಿಕೆ ಧೂಳನು ಒಡನೆ ಕರತಳ ದೊಳು ತಾವಾಂತು ತೊಡೆದುಕೊಳ್ಳುತ (ಜ್ಞಾನಕ. ೩೫-೧೦೬).
[ಸಂ. ಗೈರಿಕ]

**ಗೈರು, ಗೈರ್** (ನಾ). ೧. ಇಲ್ಲದಿರುವುದು. 'ಗೈರುಹಾಜರು' ಪರಾ. ೨. ತಪ್ಪು; ಅಪರಾಧ; ಅಯೋಗ್ಯವಾದುದು: ಈ ಪ್ರಕಾರ ಪತ್ರ ಬರಿಯುವ ಪದ್ಧತಿಯು ಬಹಳೇ ಗೈರೆಂದು ನಮಗೆ ತೋರುತ್ತದೆ (ಮುಂಬವ್ಯಾ. ೮೮). **ಗೈರ್**: 'ಗೈರ್‌ವಿಲೆ', 'ಗೈರ್‌ಹಾಜರ್' ಪರಾ.
[←ಅರ. ಹಿಂ. ಮರಾ. ಗೈರ್]

**ಗೈರುಮಾಮೂಲು** (ನಾ). ಬಳಕೆಯಲ್ಲಿಲ್ಲದುದು; ರೂಢಿಗೆ ವಿರುದ್ಧ ವಾದುದು: ತೊರೆಯರು . . . ಕುದುರೆ ಸವಾರಿಯ ಮರವಣಿಗೆ ಹೋಗುವುದು ಗೈರುಮಾಮೂಲು (ಕಲಿನ. ೨೦೬).
[ಗೈರು + ಮಾಮೂಲು]

**ಗೈರುವಾಜಿಬಿ, ಗೈರವಾಜಬಿ** (ಗು). ಅಯೋಗ್ಯವಾದ; ಅನುಚಿತವಾದ; ಅನ್ಯಾಯದ: (ಓ). **ಗೈರವಾಜಬಿ**: ಯಾವತ್ತು ಗೈರವಾಜಬೀ ಲೆಕ್ಕಾಚಾರ ಸಾಕ್ಷಿ ರುಜು ಮೊಖಾಬಿಲೆಯಿಂದ ಕೂಲಂಕಷದರಿಯಾಫ್ತಿ ಮಾಡಿ (ಮಹಾಪಂ. II, ೩೪). [<ಗೈರು + ವಾಜಿಬಿ]

**ಗೈರುವಿಲೆ, ಗೈರ್‌ವಿಲೆ** (ನಾ). ಕಳೆದುಹೋಗುವಿಕೆ; ತಪ್ಪಿಸಿಕೊಂಡು ಹೋಗುವುದು: ಇಟ್ಟ ಸಾಮಾನುಗಳು ಗೈರುವಿಲೆಯಾದರೆ ಮೇಲ್ಕಿ ಚಾರಕರೇ ಜವಾಬ್ದಾರರು (ಪ್ರಪಾಇ. II, ೦೩೦); ಯುದ್ಧಕ್ಕೆ ಹೋದ ಲಕ್ಷಾಂತರಸೈನಿಕರ ಪೈಕಿ, ಸಾವಿರಾರು ಜನ ಗೈರುವಿಲೆ ಆಗಿಬಿಟ್ಟಿದ್ದಾರೆ (ವೀರಯೋ. ೯೮). **ಗೈರ್‌ವಿಲೆ**: ನನ್ನ ದುರದೃಷ್ಟದಿಂದ ಅದು ಗೈರ್‌ವಿಲೆಯಾಗಿ ಹೋಗಬಹುದು (ವಿನೋದ. ೯); ನನ್ನ ಅದೃಷ್ಟದಿಂದ ಅದು ಗೈರ್ ವಿಲೆಯಾಗಿ ಹೋಗಬಾರದಷ್ಟೆ (ಹಂಚಿನ. ೨೦). [←ಮರಾ. ಗೈರ್‌ವಿಲ್ಹೇ]

**ಗೈರುಹಾಜರಿ, ಗೈರ್‌ಹಾಜರಿ** (ನಾ) ಹಾಜರಾಗದಿರುವಿಕೆ; ಅನುಪಸ್ಥಿತಿ: ರಾಜನು ತನ್ನ ಗೈರುಹಾಜರಿಯಲ್ಲಿ ಒಬ್ಬ ನ್ಯಾಯಾಧೀಶನನ್ನು ನೇಮಿಸ ಬಹುದಾಗಿತ್ತು (ಭಾರರ. ೩೬); ತನ್ನ ಗೈರುಹಾಜರಿಯಲ್ಲಾಗುವ ಅವ್ಯವಸ್ಥೆಯನ್ನು ಸಂಪಾದಿಸಿ ಮನೆ ಸೇರೋಣ (ವಾತ್ಸಲ್ಯ. ೩೬). **ಗೈರ್‌ಹಾಜರಿ**: ಗೊತ್ತಾದ ಸ್ಥಳದಲ್ಲಿಲ್ಲದಿರುವುದು: 'ಗೈರ್‌ಹಾಜರಿ' (Absence: ಇಂಕನಿ).
[ಗೈರು + ಹಾಜರಿ]

**ಗೈರುಹಾಜರು, ಗೈರ್‌ಹಾಜರ್** (ನಾ). ಹಾಜರಾಗದವನು; ಅನುಪಸ್ಥಿತನು: ನಿನ್ನೆಯ ದಿವಸ ಗೈರುಹಾಜರಾಗಿದ್ದ ತಬಲಾ ಕಿಟ್ಟಯ್ಯ (ಬದುಕ್ಕ. ೧೪); ಒಮ್ಮೊಮ್ಮೆ ಇಡೀ ವಾರವೇ ನಾವು ಗೈರುಹಾಜರಾಗುತ್ತಿದ್ದೆವು (ಕಲಿಕ. ೨೨). **ಗೈರ್‌ಹಾಜರ್**: ಈ ನೌಕರರುಗಳು ಗ್ರಾಮದಿಂದ ಗೈರ್ ಹಾಜರಾಗಬೇಕಾದರೆ . . . ಡೆಪ್ಯೂಟಿ ಅಮಲ್ದಾರರ ಹುಕುಂ ವಿನಹ ಗೈರ್ ಹಾಜರಾಗತಕ್ಕದ್ದಲ್ಲವು (ಗ್ರಾಮಾಕ. ೪). [ಗೈರು + ಹಾಜರು]

**ಗೈರೇಯ** (ಗುಂ). ೧. ಗಿರಿಯಲ್ಲಿ ಹುಟ್ಟಿದ. (ನಾ). ೨. ಗೈರಿಕ; ಕಾವಿ ಕಲ್ಲು: "ಗೈರೇಯಂ, ಅರ್ಥ್ಯಂ, ಗಿರಿಜಂ, ಅಶ್ಮಜಂ, ಶಿಲಾಜಿತು–ಈ ಶಿ ಶಿಲಾಜತ್ತು" (ಸಿದ್ಧಾಂತಿ. ೨೬೨). [ಸಂ.]

**ಗೈಲು** (ನಾ). (?): ತೈಲತಪ್ತೋದಕದಲಿ ಮಿಂದರಿರ್ವರು ಶೈಲಾತ್ಮಜೆಯ ಕಾಂತನಿಗೆ ಗೈಲ ಪೂಜೆಯ ಮಾಡಿ ಮಹದುಪಚಾರವ ಕೈಲಾಗಿ ನಿಂದೊಡರ್ಚಿದರು (ಮೋಹತ. ೩೦-೩). [?]

**ಗೈಸು** (ಕ್ರಿ). ಮಾಡಿಸು; ನೆರವೇರಿಸು: ಸಕಲಲೋಕಗಳ ನಾಯಕ ಇವಗೆ ಹೇಯ ಲೌಕಿಕಮಾರ್ಗವನೆ ಬಿಡಿಸಿ ನಿತ್ಯದಲ್ಲಿ ಪ್ರಕಟವನೆ ಗೈಸು ಸದ್ಧರ್ಮ ಕರ್ಮಗಳ (ಜಗದಾ. ೩೨). [<ಕೆಯ್ಯು]

**ಗೊಂಕರು** 'ಗೊಂಕುಟು' ನೋ.

**ಗೊಂಕರುಕಪ್ಪೆ** 'ಗೊಂಕಟುಕಪ್ಪೆ' ನೋ.

**ಗೊಂಕಟುಕಟ್ಟಿ** 'ಗೊಂಕುಟುಗಟ್ಟಿ' ನೋ.

**ಗೊಂಕಟು** 'ಗೊಂಕುಟು' ನೋ.

**ಗೊಂಕಟುಕಪ್ಪೆ, ಗೊಂಕರುಕಪ್ಪೆ, ಗೋಂಕುರುಕಪ್ಪೆ** (ನಾ). (ಕರ್ಕಶವಾಗಿ ಅರಚುವ ದೊಡ್ಡ ಗಾತ್ರದ ಒರಟುಚರ್ಮದ) ಒಂದು ಬಗೆಯ ಕಪ್ಪೆ; ಮಹಾಮಂಡೂಕ: ಗೊಂಕಟುಕಪ್ಪೆ ದ[ವ]ಸುಂಬಂ ತತ್ಕ್ರಮ ದಿಂದಮ ದೀಪ್ರದಿಗ್ಭಾಗದೊಳ್ ದನಿಗೆಯ್ಯೆ ಮನಸಿದ್ಧಿಯನಾಗಳೆ ಉಂಟು ಮಾಡುಗುಂ (ಲೋಕೋಪ. ೦೨-೦೬). **ಗೊಂಕರುಕಪ್ಪೆ**: ಮುಂಗಾರು ಮಳೆಯ ರಾತ್ರಿಗಳಲ್ಲಿ ಗೊಂಕರುಕಪ್ಪೆಗಳ ಕಿರಿಚಾಟ ಬಹಳ (ರೂಢಿ). **ಗೋಂಕುರುಕಪ್ಪೆ**: ಅದು ಗಂಡುಹುಲಿ. ಕೆಳಗೆ ನದಿಯ ನೀರಲ್ಲಿ ಕಪ್ಪೆ ಗೋಂಕುರುಕಪ್ಪೆ ದೊಡ್ಡ ಮೀನುಗಳೇನಾದರೂ ಕಾಣಿಸುತ್ತವೋ ಎಂದು ಹಸಿವೆಯಿಂದ ಹುಡುಕಾಡುತ್ತಿತ್ತು (ಪರಾಜ. ೫೬).
[ಗೊಂಕಟು (< ಗೊಂಕುಟು) + ಕಪ್ಪೆ$_1$]

**ಗೊಂಕುಟಿಡು** (ಕ್ರಿ). ಕರ್ಕಶವಾದ ದೊಡ್ಡದನಿಯನ್ನು ಮಾಡು; ಅರುಚು: ಬೆಳರ್ಗಿಂಪ ಕಿವಿ ಬೀಱ ಸಂಘಟಿಸುತಂ ಬಾಯ್ಬಿಟ್ಟು ಕಣ್ಣೀರ ಬೊಟ್ಟಲೆಯುಂತುರ್ವರೆಯುರ್ವೆ ಗೊಂಕು [ಪಾಠಾಂ. ತ] ಱಿಡುತುಂ ಮಿಳ್ಳಿರ್ದ ಬಾಲಂ ವಿಯತ್ತಳ ಸಮ್ಮಾರ್ಜನಿಯಂತೆ ಸಂಚರಿಸೆ ಕೋಪಾ ಟೋಪದಿಂ ತೊತ್ತಲಿಂದುರುಱಯಲ್ಕೆಟ್ಟರೆ ರಾಸಭಾಕೃತಿಯನಾಗಳ್ ರೌದ್ರಮಂ ಬೀಱುತಂ (ಮಹಾನೀ. ೬-೯); (ಪದ್ಯಸಾ. II, ೧೬೯ ನೋ).
[ಗೊಂಕುಟು + ಇಡು$_1$]

**ಗೊಂಕುಟು, ಗೊಂಕರು, ಗೊಂಕಟು, ಗೋಂಕರು** (ನಾ). ೧. ಕರ್ಕಶವಾದದನಿ; ದೊಡ್ಡಧ್ವನಿ. 'ಗೊಂಕುಟುಗಟ್ಟಿ' ಪರಾ. **ಗೊಂಕರು**: (ಗು). ೨. ದೊಡ್ಡ ಗಾತ್ರದ. 'ಗೊಂಕರುಕಪ್ಪೆ' ಪರಾ. **ಗೊಂಕಟು**: ೨. 'ಗೊಂಕಟುಕಪ್ಪೆ' ಪರಾ. **ಗೋಂಕುರು**: ೨. 'ಗೋಂಕುರುಕಪ್ಪೆ' ಪರಾ. [ದೇ.೩ ತುಳು. ಗೋಂಕುರು, ಗೋಂಕ್ರು]

**ಗೊಂಕುಟುಗಟ್ಟಿ, ಗೊಂಕಟುಕಟ್ಟಿ** (ನಾ). ಕರ್ಕಶವಾಗಿ ಅರಚುವ ಕತ್ತೆ: ಆ ರಥದೊಳೊಡಂಬಡೆ ಪೂಡಿದ ನಾಲ್ಕುನೂಱು ಗೊಂಕುಟುಗಟ್ಟಿಯುರ (ಪಂಪಭಾ. ೦೨-೬ ವ). **ಗೊಂಕಟುಕಟ್ಟಿ**: ಅಂತಾ ಸಿಂಹಂ ಮಱುಗುತ್ತಂ

ಬಟ್ಟು ಗೊಂಕಅಕಟ್ಟಿಯುಂ ಬಯಸಿ ಬಾಯೊಡೆತು (ಶಂಕರಶಂ. ೨೮೨-೧೯).
[ ಗೊಂಕುಅ + ಕಟ್ಟಿ ]

**ಗೊಂಕೆ,** ಕಂಕೆ, ಗೋಕೆ (ನಾ). ೧. ಕೊರಳು ; ಗೋಣು ; ಕುತ್ತಿಗೆ : "ಗೊಂಕೆ=ಗೋಣ್" (ಶಮರ. ಪರಿ ೨) ; "ಗೊಂಕೆ ಗೋಣೊಳಂ" (ಕರ್ಣಾಸಿ. ೨೦); ಕಡುವುಳಿದದಱ ಗೊಂಕೆಯಂ [ಪಾಠಾಂ. ಗೋಣಂ] ಮುಱಿದೊಡೆ (ವರ್ಧ್ಮಾ. ೧೧೯-೧); ಪಂಕಜಾಕ್ಷನಮುಂಕಿ ಗೊಂಕೆಯಂ ನುಲಿದ ಕಾಗೆಯ ಕನ್ನೆತ್ತರನುಂಡ ನೆಲನೆಲ್ಲಂಕೆಮ್ಮಣ್ಣ ನೆಲನಾಗಿ ಪಾಸಿಸಿದೊಡೆ (ಅರ್ಧನೇ. ೮-೨೨ ವ) ; ಪುರಾಣನಾರಕರ್ಕಂಡು ಪರಿತಂದು ಹಿಡಿದುಕೊಂಡು ಗೊಂಕೆಯಂ ನುಲಿದು (ರತ್ನಕ. ೨-೪ ವ) ; ಅವನ ಗೊಂಕೆ ಮುರಿದಿಡುತ್ತೇನೆ (ಮೂರುರಾ. ೫೯). ಕುಂಕೆ : ೨. ಕತ್ತಿನ ಹಿಂಭಾಗ ; ಹೆಕ್ಕತ್ತು; ಹೆಡಕು : (ಕ). ೩. ಹೆಗಲು : (ಕ). ಗೋಕೆ : ೧. "ಗೋಣ್, ಕತ್ತು" (ಶ್ರ.ಧ್ವ.). [ ? ]

**ಗೊಂಗಟೆ** 'ಗೊಂಗಡಿ' ನೋ.

**ಗೊಂಗಡಿ,** ಗೊಂಗಟೆ, ಗೊಂಗೊಟೆ (ನಾ). ೧. ಕಂಬಳಿ : ಕಂಗಾಣಿಸದ ಪಾರಿಯ ವಟ್ಟ ಕರ್ವಣ್ಣ ಗೊಂಗಡಿ ಮುಸುಕಿಟ್ಟುಕೊಂಡು ಅಂಗಡಿ ಸೊಡರ್ಗೆಟ್ಟ ದೇಗುಲದೆಡೆಯ ದುಸ್ಸಂಗದಂಪತಿಗಳೊಪ್ಪಿದರು (ಸೋಹಶ. ೧೮-೨೩) ; ಆತನನ್ನು ಒಳಕೋಣೆಯ ಒಂದು ಚಾಪೆಯ ಮೇಲೆ ಹಾಸಿದ ಗೊಂಗಡಿಯ ಮೇಲೆ ಮಲಗಿಸಿದಳು (ನಿಜ್ಞಾಮು. ೬೩) ; ಅಂಗಡಿ ಮಾರಿ ಗೊಂಗಡಿ ಹೊದ್ದ (ಗಾದೆ). ೨. ಕಂಬಳಿ ಮೊದಲಾದುವುಗಳಿಂದ ಮಾಡಿದ, ತಲೆ, ಬೆನ್ನುಗಳನ್ನು ಮುಚ್ಚುವಂತೆ (ಮಳೆಗಾಲದಲ್ಲಿ)ಧರಿಸಿಕೊಳ್ಳುವ ಗೊಪ್ಪೆ : ಕೊಡೆ ಮೇಣಗವ್ಪಡ ಗೊಂಗಡಿ ಬಹುರಮ್ಯವಡೆದಿರ್ದ ಸಕಲಾಬಿದಳೆದು . . . ಎಡೆಯಾಡುತಿರ್ದರೂರಾಗರು (ಮೋಹಶ. ೪-೪೦) ; ದೃಷ್ಟಿ ಹೊಡೆದೀತೆಂದು ಬೆನ್ನುಭುಜಗಳನ್ನು ಮುಚ್ಚಿಕೊಂಡಿರುವ ಅಪ್ಪಟ ಉಣ್ಣೆಯ ಸಣ್ಣ ಗೊಂಗಡಿ (ಸುವಸು. ೩೨). ೩. ಚೆನ್ನಾಗಿರುವ ಮತ್ತು ಉದ್ದವಾಗಿರುವ ಹಣಿಸಹಣ್ಣು : (ಕ). ಗೊಂಗಟೆ : ೧. ಪುರಹರನು ತಾ ಮತ್ತೊಂದು ರೂಪನು ಧರಿಸಿದನು ಬಳಿಕ ಹರಕುಗೊಂಗಟೆ ಪಾದರಕ್ಷೆಯು ತಿಱದ ಹಲ್ಲಿನ ದೊಡ್ಡನಡುವಿನ ಭರದ ಗವದಿತನಾದ ಕೈಮೂಗು ಮೊಡಸು ದೇಹದಲಿ (ರೇವಣಾ. ೦-೦೬). ೨. ಬೇಗನೆ ತಾರೆ ಗೊಂಗಟೆ ಗೊರಗೆ ಕೋಲ್ಗೊಳ್ಗೆ ಹುಡಿಯಡಿಕೆಯಲೆಯಾ (ಅಜಾಗವಿ. ೩೧-೩೩). ಗೊಂಗೊಟೆ$_1$ : ೧. ಅಂಬಲಿಯನಿಕ್ಕಿದನು ಕೈ ತೊಳೆಯಂದೊಡೆ ಗೊಂಗೊಟೆಯಲೊರಸಿದಾ ಬೆಂಬಳಿಯ ಸೀಮೆಯಯನು ತೋಱಿದನಾತ ರೇವಣಗೆ (ರೇವಶಾ. ೧-೨೨).

[ ←ತೆಲು. ಗೊಂಗಡಿ, ಗೊಂಗಳಿ. / ಮರಾ. ಘೋಂಗಡ್, ಘೊಂಗಡೀ, ಘೋಂಗಡೀ ]

**ಗೊಂಗು** (ನಾ). ಒಂದು ಸ್ಥಳದ ಹೆಸರು: ಗುವಳಾಲಂ ಗೊಙ್ಗುಂ ವಾಣರಸ ಆಳೆ (ಎಕ. X, ಮುಳಬಾ. ೨೬೩-೧ : ಸು. ೮೬೦). [ <ಕೊಂಗು$_1$ ]

**ಗೊಂಗೆ** (ನಾ). ಒಂದು ಬಗೆಯ ಪಕ್ಷಿ : (ಕ). [ ? ]

**ಗೊಂಗೊಟೆ** 'ಗೊಂಗಡಿ' ನೋ.

**ಗೊಂಚಲ್,** ಗೊಂಚಲು (ನಾ). ೧. ಕುಚ್ಚು ; ಗುಚ್ಛ ; ಮಂಜರಿ : "ಭೃಶಸಂಭೃತ ನವಮಂಜರಿ ಗೊಂಚಲ್" (ಪಸ್ತುಕೋ. ೩೦-೮) : ಬಳಸಿದ ಚೆಂಬೊನ್ನ ಮಾಂಗಾಯ ಗೊಂಚಲ್ಗಳ . . . ನಡುವೆ (ಆದಿಪು. ೮-೦೫ ವ) : ಇನಿವಣ್ಗೊಂಚಲುಂ ಕಂಡರಗಿಳಿಯಂತೆ (ಅದ್ಭುಟ. ೧೧-೧೧೬ ವ). ೨. ಹೂವಿನ ಗುಚ್ಛ: "ತೊಡಂಬೆ, ತೊಡಬೆ . . . ಗೊಂಚಲ್, ಗುಚ್ಛಂ—ಈ ೭ ಪುಷ್ಪಮಂಜರಿ" (ಕಕಸಾ. ೧೧-೧೯೬). ೩. ಸಮೂಹ ; ರಾಶಿ : ಮಿಂಚಿನ ಗೊಂಚಲೆನೆ ಸಂಚಳಿಸಿ ಪೊಳೆವ ರತ್ನಾಭರಣಂಗಳ ಪೊಳೆಪಂ ಕಂಡು (ಸುಕುಮಾ. ೭-೧೮ ವ) ; ಕೆಂಚಿಡೆಗಳ ಗೊಂಚಲ್ಗಳಿಂ ದೇಸಿವಡೆದುಟ್ಟ ಪ್ಪಾಪು ಚವರ್ಗೊಂಚಲದೊಳ್ಪಿದೆ ಸಾರೂಪ್ಯದವರು . . . ಎಸೆದಿರ್ದರು (ಶಿಲಪು. ೨-೨೫). 'ಗೊಂಚಲಿಸು' ಪರಾ. ಗೊಂಚಲು : ೧. "ಗುಚ್ಛಕಃ, ಸ್ತಬಕಃ—ಈ ೨ ಗೊಂಚಲು" (ನಾಕಿರಾ. ೦೦೬) ; "ಗೊಂಚಲುಗಳಾ ವಲ್ಲರಿಯು ಮಂಜರಿಗಳಕ್ಕುಂ" (ಮಂಗರಾ. ೩೨-೪) ; ತಳಿರ ನನೆಯಲರ ಕಾಯ ತನಿವಣ್ಣ . . . ಗೊಂಚಲುಗಳುಮಂ (ಕಾದಂಅ. ೩೨೬); ಮುತ್ತುರತ್ನಗಳ ಗೊಂಚಲು . . . ಓಲಗಶಾಲೆಯ ಸುತ್ತಲೊಪ್ಪಿದುವು (ಕಂಸವಿ. ೮-೧೦) ; ಮೇಜಿನ ಮೇಲೆ ನೀಲಿ ದ್ರಾಕ್ಷಿಹಣ್ಣಿನ ಗೊಂಚಲು ಇಡಲ್ಪಟ್ಟಿತ್ತು (ಮಹಾಕ್ಷ್ಮಾ. ೧೬). ೩. ನಕ್ಷತ್ರಗಳ ನಡುವೆಯೂ ಇರುವ ಗೊಂಚಲನ್ನು ಉದಾಹರಣೆಗಾಗಿ ತೆಗೆದುಕೊಳ್ಳೋಣ (ಜ್ಯೋತಿವಿ. ೬೪).

[ ದೇ.ಶ ತುಳು. ಗೊಂಚಲ್ ]

**ಗೊಂಚಲಿಸು** (ಕ್ರಿ). ಗೊಂಚಲಾಗು ; ಒಟ್ಟಾಗು ; ಸಂದಣಿಸು : ಅಲರ್ವಲರ್ಗೊಂಚಲಂತಲುಗೆ ಮಿಂಚು ಪಿಕಂ ನಲಿವಂತೆ . . . ಗೊಂಚಲಿಸಿ [ಪಾಠಾಂ. ಗೊಂಚಲಿಸಿದನ್ನಿ ಸಿ, ಗೊಂದಣಿಸಿ] ಕಂದಳಿರೊಳ್ಗಿಳಿವಿಂದು ಪಾಯ್ದುದಂ ಸಲಿಸೆ ಸುರೇಂದ್ರಚಾಪಲತೆ ಬಂದುದು ಕಾರೆಳವಾಪಿನಂದದಿಂ (ಅರ್ಧನೇ. ೬-೪೨) ; ಕಂಚಗಾಱರ ಹಸರದಿಂ ಕುಡಿವಿಂಚುಗಳು ಬಳೆಗಾಱ ವಸರದ ಗೊಂಚಲಿಪ ಕರಿಮುಗಿಲುಗಳು (ಶಾಕ್ಯಭಾ. ೨-೧೪).

[ ಗೊಂಚಲ್ + - ಇಸು$_3$ ]

**ಗೊಂಚಲು** 'ಗೊಂಚಲ್' ನೋ.

**ಗೊಂಚಲುಗುಂಡು** (ನಾ). ಗುಂಪುಗುಂಪಾಗಿ ಒಮ್ಮೆಲೆ ಸಿಡಿಯುವ ಗುಂಡು : "ಹಲವು ಸಣ್ಣಸಣ್ಣ ಗುಂಡುಗಳನ್ನು ಚೀಲ, ಪೊ. ಗಳಲ್ಲಿ ಒಟ್ಟಿಗೆ ಇಟ್ಟು ಫಿರಂಗಿಗೆ ಹಾಕಿ ಹೊಡೆಯುವುದರಿಂದ ಸುತ್ತಲೂ ಸಿಡಿಯುವ ಗೊಂಚಲುಗುಂಡು" (Grapeshot. ಇಂಕನಿ).

[ ಗೊಂಚಲು ( <ಗೊಂಚಲ್) + ಗುಂಡು ]

**ಗೊಂಚಲುದೀಪ** (ನಾ). ದೀಪಗಳ ಗೊಂಚಲು ; ಒತ್ತೊತ್ತಾಗಿ ಅಳವಡಿಸಿದ ಅನೇಕ ದೀಪಗಳ ಸಮೂಹ : ಅನೇಕ ದೀಪಗಳುಳ್ಳ ಕವಲೊಡೆದ ತೂಗುದೀಪಾಧಾರ: ಗೊಂಚಲುದೀಪ (Chandelier. ಇಂಕನಿ).

[ ಗೊಂಚಲು ( <ಗೊಂಚಲ್) + ದೀಪ$_2$ ]

**ಗೊಂಚಲ್ಮಿಂಚು** (ನಾ). ಕುಚ್ಚುಕುಚ್ಚಾಗಿರುವ ಮಿಂಚು ; ಮಿಂಚುಗಳ ಗೊಂಚಲು,—ಸಮೂಹ : ಅಂತೇಳ್ವರ್ಪಾಗಳ್ ಕಲಿಗಳ್ ಕರತಳದಿನೊಱೆ ಗಳೆದು ಕುರುಳ್ಚುವ ಕೈದುಗಳ ಬಳ್ಳಿವೆಳಗಿಂ ಗೊಂಚಲ್ಮಿಂಚುಗಳ್ಪಂ ಚಳಿಸಿದಂತೆಯುಂ (ರಾಜಶೇ. ೧೩-೬೬ ವ).

[ ಗೊಂಚಲ್ + ಮಿಂಚು$_3$ ]

**ಗೊಂಚಿ,** ಗೊಂಚು, ಗೊಂಚೆ, ಗೊಚ್ಚ (ನಾ). ೧. ಗೊಂಚಲು ; ಗುಚ್ಛ : "ಗೊಂಚಿ=ಗೊಂಚಲು" (ಜಾನಕೋ. ೩೦). ೨. ಗುಂಪು ; ಸಮೂಹ ; ರಾಶಿ : "ಬಂಬಲ್ . . . ಗೊಂಚಿ . . . ಗೊಂದಣ (ಉಂದಲ್)—ಈ ೪೦ ಸಮೂಹಂ" (ಕಕಸಾ. ೧೧-೨೨೨) ; ಸೊಗಸ ಸೈಗಱೆವ ಪಾತಕರ ಗೊಂಚಿಗಳಿಂದೆ (ಚೀರಮ. ೧೧-೩೦): ತವ ನುಡಿಗೆ ಕಿವಿಗುಡೆ ಪುಡಿವಡೆದುದೆಲು ಗೊಂಚಿಯವ್ಯೊಡಲ (ಸಂರಾಅಂ. ೧೬೬). ಗೊಂಚು : ೧. ಉರವಣಿಸಿ ಕೃತವರ್ಮನಂಬಿನ ಸರಳ ಸುರಿವುತ ಕೆಣಕಿ ಕೈಕೊಂಡರಿ ಭಟಾಗ್ರಣಿ ಮೆಚ್ಚಲೆಚ್ಚನು ಗೊಂಚಿನಂಬಿನಲಿ (ಕುಮಾರವ್ಯಾ. ೬೦೩. ಪರಿ ೨೯೨) ; ಹಿತ್ತಲೊಳಗೆ ಮುತ್ತಿನ ಗಿಡ ತೋಱಿಸಿದ ಪಂಟಪಂಟಿಗೆ ಎಂಟುಎಂಟು ಗೊಂಚುಗೊಂಚು ಜೋಲುತಿರಲು ಕಡಿದುಕಡಿದು ರಾಶಿಹಾಕಿದ (ಪುರಂದ. ೩-೦೦೬-೩). ೨. ವಿದ್ಯನಿಪುಣರ್ಗೊಂಚಿನಲಿ ಬೆಳಗರಿಯಭಾಷವಗ್ಗೆಯಲು (ಚಿರಾಮಾ. ೨೩೪-೩೨). ಗೊಂಚೆ : ೧. ಪೊಸಬನದೇಟ್ಗೆ ಕಾರ್ಮುಗಿಲ ಪರ್ಬುಗೆ . . . ಮಿಂಚು ಚಂಪಕ ಪ್ರಸರದ ಗೊಂಚೆ (ಅದ್ಭುಟ. ೯-೩೦). ಗೊಚ್ಚ : ೨. "ತಂದಂ . . . ಗೊಚ್ಚವೊಟ್ಟಲ್ ಪಂಡಿತರಿಂ ಗಡಣವಂಗಡಂ

ಕಿಕ್ಕಿಂದಂ" (ಶಬ್ದಮ. ೦೦೬).

[ <ಪ್ರಾ. ಗೊಂಜೀ, ಗೋಛಿಯಾ./ತುಳು. ಗೊಂಟಿ ]

**ಗೊಂಟಿಗಾರ, ಗೊಂಚುಗಾರ** (ನಾ). ಊರಿನ ಮುಖಂಡ₁-ಮಂಖ್ಯಸ್ಥ : ಊರ ಸಾಹುಕಾರ ಶಿವಣ್ಣನವರು, ಮಠದಯ್ಯನವರು, ಗೊಂಟಿಗಾರರು ... ಎಲ್ಲರ ಎತ್ತುಗಳೂ ಕಾರುಹುಣ್ಣಿಮೆಯಲ್ಲಿ ಮೆರವಣಿಗೆ ಹೊರಡುತ್ತವೆ (ಜನೀಜ. ೨೬). **ಗೊಂಚುಗಾರ:** ನಮಗ ಜ್ವಾಳ, ನವಣಿ ಕೊಡಿಸು ಗೊಂಚುಗಾರ (ಜಾಕೀ. ೧೨). [ ಗೊಂಟಿ + -ಕಾರ₁ (< -ಕಾಅ) ]

**ಗೊಂಚು** 'ಗೊಂಟಿ' ನೋ.

**ಗೊಂಚುಗಾರ** 'ಗೊಂಟಿಗಾರ' ನೋ.

**ಗೊಂಟಿ** 'ಗೊಂಟಿ' ನೋ.

**ಗೊಂಜಿ** (ನಾ). ಒಂದು ಬಗೆಯ ಮರ : ಗೌಜಲ್‌ಮರ ... ಗೊಂಜಿ ... ಹಣ್ಣುವೃತ್ತಿ (ಪ್ರಾಚೀನ. ೧೮-೩೧೯). [ದೇ.॥ ತೆಲು. ಗೊಂಜ ]

**ಗೊಂಜು** 'ಗಂಜು₁' ನೋ.

**ಗೊಂಟಿಕೆ, ಗೆಂಟಗೆ, ಗೆಂಟಿಗೆ, ಗೆಂಟಂಗೆ, ಗೌಂಟಿಕೆ, ಗೌಂಟಿಗೆ, ಗೌಟಿಕೆ** (ನಾ). (ಚೊಚ್ಚಲು ಬಸುರಿಗೆ ಕಟ್ಟುವ) ರಕ್ಷೆ₁-ತಾಯಿತ : ಅಂತು ಗರ್ಭ ಚಿಹ್ನಂ ಪ್ರಕಟಿಸಿ ವಿರಾಜಿಸುತ್ತಿರೆ ಸಪ್ತಮಾಸಕ್ಕೆ ಗೊಂಟಿಕೆ[ಪಾಠಾಂ. ಕಂಠಿಕೆ, ಗೌಂಟಿಕೆ]ಯುಂ ಕಟ್ಟಿಸಿ ನವಮಾಸಂ ತೀವಿ ಬೆಸಲೆಯಪ್ಪುದುಂ (ಧರ್ಮಾಪ. ೧-೬೨ ವ). **ಗೆಂಟಗೆ :** ಕ್ಷಿತಿಪನ ಕಾಂತೆಗಂ ಸಟಿವಮಾನಿನಿ ಬಂದು ... ಅಜಾದಿಂಗಳೊಳ್ಕೆ ಹೋರ್ಜಿತಮುದಮುಣ್ಮೆ ಗೆಂಟಗೆಯನೊಸ್ಸಿರೆ ಮಾಡಿಸಿ ಪೋದಳರ್ಥಿಯಿಂ (ಶ್ರೀಪುವಿ. ೧೬-೧೯೯). **ಗೆಂಟಿಗೆ:** 'ಗೆಂಟಿಗೆಗಟ್ಟು' ಪರಾ. **ಗೆಂಟುಗೆ :** ತನುಭವಲಾಭ ದೌಹದ ನಿಮಿತ್ತದ ಸಂಗತಿ ತಕ್ಕ ನೋಂಪಿ ಮುಂಗನಸು ಬಯಕೆ ಗೆಂಟುಗೆ[ಪಾಠಾಂ. ಗೌಂಟಿಗೆ]ದ್ವಗುತ್ತವ ಕಾರಣ ಗರ್ಭಚಿಹ್ನಂ (ಸೂಕ್ತಿಸು. ೬-೧). **ಗೌಂಟಿಕೆ :** ಮೇಲಿನ 'ಧರ್ಮಪ' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಂಟಿಗೆ:** ಮೇಲಿನ 'ಸೂಕ್ತಿಸು' ಪ್ರಯೋಗದ ಪಾಠಾಂತರವನ್ನು ನೋಡಿ. **ಗೌಟಿಕೆ:** 'ಗೌಟಿಕೆಗಟ್ಟು' ಪರಾ. [ ? ]

**ಗೊಂಟು, ಗೊಂಡಂ₂, ಗೊಟ್ಟು₃, ಗೋಂಟು, ಗೋಟು₁** (ನಾ). ೧. ದಿಕ್ಕು ; ದಿಶೆ : "ಗೊಂಟು, ದೆಸೆ-ಈ ೨ ದಿಕ್ಕು" (ಕರ್ಣಾ. ೪-೪೦) ; "ಗೊಂಟುಂ ದೆಸೆಯುಂ ಕನ್ನಡದ ದಿಕ್ಕುವೆಸರಹುದು" (ಶಬ್ದಮ. ೪೯) ; ಹರ ಕುಳ್ಳಿರ್ದ ಗೊಂಟಿ[ಪಾಠಾಂ. ಕೊಪ್ಪೆ]ಗೊಂದುಜ್ ಸತ್ತರದಲಿ ಮೇಜಿಯಲೊಂದು ... ಇಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿದನು (ಸಿದ್ಧರಾ. ೩-೪೪) ; ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಬ್ಬಿಗಾ. ೨೦೩) ; ಎಸೆವ ಕರ್ಬಿನ ತೋಂಟದ ಗೊಂಟನೊಳ್ (ರಾಮಾಶ್ವ. ೦೦೦-೨೦). ೨. ಮೂಲೆ ; ಕೋನ ; ಸಂದಿ : ಪ್ರಥ್ವಿಯ ಹಸುಂಬೆಯಾಗೆ ಅಷ್ಟಲೋಕ ಪಾಲಕರೇ ಗೊಂಟಾಗೆ ವಾಸುಗಿಯೇ ಬಳಸಾಗೆ (ಎಕ. VII, ಶಿಕಾರಿ. ೧೧೮-೩೦ ; 1066) ; ದ್ರುವ್ಯವ ಬಡ್ಡಿಯ ವ್ಯವಹಾರಕ್ಕೆ ಕೊಟ್ಟು ಮನೆಯ ಗೊಂಟನಲ್ಲಿ ಹೊಯ್ದುಕೊಂಡಿದ್ದನಾದರೆ ಅದು ಎನ್ನರ್ಥವಲ್ಲ ಅನರ್ಥವೆಂಬ (ಐಸಜ. ೩೪-೪೦) ; ಭಿಕ್ಷುವಂ ಪೂರ್ದಿ ಯಕ್ಷಂ ಮರುಳಾದಂ ವಿಕ್ಕವರ್ಗೊಂಟಿನೊಳೆ ಮುದುಡಿದರ್ (ಅನಂಪು. ೧-೧೧೨) ; ಪಾದಿಗಂ ... ತನ್ನ ಗೊಂಟನಲ್ಲಿ ಮನೆಯೊಳದಂಗಿರ್ದನ್ನೆಗಂ (ಪುಣ್ಯಾಸ್ರ. ೬-೪೪ ವ) ; ಆ ಮನೆಯಾ ಗೊಂಟನೊಳವಳ ಕೆಡಹಿ (ಪ್ರಭುಲಿ. ೩-೦೦೬). **ಗೊಂಡು₁ :** ೨. ಎಲ್ಲರಂ ತಣಿಪಿ ಕೆಲಬಲನುಮಂ ನೋಡುತುಂ ಅಲ್ಲಿ ಗೊಂಡಿ[ಪಾಠಾಂ. ಗೊಂಟಿ, ಗೋಂಟಿ]ನೊಳ್ದ ಭಕ್ತನಂ ಕಾಣುತುಂ (ಅನೀಶ. ಹ. ೬೩-೨೩). **ಗೊಟ್ಟು₃ :** ೨. ಅವನ ಅರ್ಜಿ ಗೊಟ್ಟಕ್ಕೆ ಬಿದ್ದಿದೆ (ರೂಢಿ). **ಗೋಂಟು :** ೧. "ದೆಸೆ ಗೋಂ[ಪಾಠಾಂ. ಗೊಂ]ಟೆನಲ್ ದಿಕ್ಕಕ್ಕು" (ಕಬ್ಬಿಗ. ೧೩). ೨. "ಅಣಿ:, ಅಶ್ರಿ:, ಕೋಟಿ:, ಅಶ್ರ:, ಕೋಣ:-ಈ ೫ ಗೋಂ[ಪಾಠಾಂ. ಗೋ]ಟು" (ಹಲಾಯು. ೦೨೦-೯೨) : ನಾಲ್ಕುಂ ಗೋಂಟಿಂಗಂ ಲಿಂಗಮುಂ ತಪೋಧನರುಂ ಕಪಿಲೆಯುಂ ಬೆರಸು ಮಾಡಿ ನಿಱಿಸಿದ ಕಿನ್ನರಿಗಲ್ಲ ಗುಡ್ಡ ನಾಲ್ಕು (ಸೌಇಇ. XI-II, ೦೦೯-೫೪ ; ೯೪೮) ; ಬಸದಿಯ ವೈರಿತ್ಯದ ಗೋಂಟಿನ್ನಂ (ಸೌಇಇ. XI-I, ೭೮-೫೨ ; 1065) ; ಶಿವಾಲಯದೊಳಯಿಕೆಯ್ಯೊಂದು ಅಲ್ಲಿ ಸಂಭ್ರಮಿಪ ಶರಣರನೀಕ್ಷಿಸುತ್ತೊಂದು ಗೋಂಟನೊಳು ಕುಳ್ಳಿರ್ದು (ಅನೀಶ. ದೀ. ೮೭-೯) ; ತಳಾಱಂ ಮನೆಯೊಳಗಂ ಪೊಕ್ಕು ಗೋಂಟನೋಳಿರ್ದವನಂ ತೆಗೆದುಕೊಂಡು ಪೋಗಿ (ಪುಣ್ಯಾಸ್ರ. ೬-೪೪ ವ). **ಗೋಟು₁ :** ೧. ಊರಡೆ ದಡದ ಬಡಗಣ ಪೂರ್ವ ಗೋಟನಲ್ಲಿ ಬ್ರಹ್ಮದೇವ ಪಟ್ಟವರ್ಧನರು ಕೊಟ್ಟ ತಂಕವಾಗಿಲ ತುರುಕೆಯೊಂದು (ಸೌಇಇ. IX-I, ೩೩೩-೫೨ ; 1216) ; ನಿನ್ನ ಪುಣ್ಯದ ತೋಟವನು ತಱಿದೊಟ್ಟಿ ನಿಮ್ಮೈವರನು ಯಮಪುರದ ಗೋಟನಲ್ಲಿ ಗುಱಿಮಾಡುವೆನು (ಕುಮಾವ್ಯಾ. ೩-೦೬). ೨. "ಅಶ್ರಿಶ್ರಿಯೆನೆ ಗೋಟು" (ಮಂಗರಾ. ೦೩೦-೨೦) ; ಮೋಟಿನ ಗೋಟಿಗೆ ಬರ್ಪ ಕಿಱುಕುಳ ದೈವಕ್ಕೆ ಕುಱಿಯನಿಕ್ಕಿಹೆವೆಂದು ಸಲಿನಲಿದಾಡುವರು (ಬಸವ. ೫೬೧) ; ಸಿರಿ ಉರಿ ಮಾದೇವಿ ಮೋಱದ ಗೋಟಿಗೊಳಗಾಯಿತ್ತು (ಚಲಿಮ್ಮು. ೪೦) ; ಮಾಯಾಮೋಹವೆಂಬ ಹಾಳುಗೇರಿಯ ಗೋಟನಲ್ಲಿ ಬಿದ್ದು ಸೂಕರನಂತಿಪ್ಪವರನಂತು ಭಕ್ತರೆಂಬೆ (ಸಿದ್ಧೇವ. ೪೨-೦೦೬) ; ಕುಟಿಲವೇಷದ ಗಿರಿಶಂ ಗೋಟನೊಳಿರಲ್ಕೆ ಕಂಡಂ ಭಕ್ತಂ (ಶ್ರೀಪುವಿ. ೯-೪೬). ೩. ಅಂಚು; ದಡಿ: ಒಬ್ಬ ಜರದ ಗೋಟು ಕಟ್ಟಿದ ಅಂಗಿ ಹಾಕಿದ ಸಾಹೇಬ-ಮುಂದೆ ಬಂದು (ಪರ್ಯಾಕ. ೦೦೨).

**ಗೊಂಟುಗೊಂಟು** (ದ್ವಿರುಕ್ತಿ): ನಿಮಿರ್ದೆಱ ಪಾಱುವ ಪತಾಕೆ ವಿರಾಜಿಪ ಗೊಂಟು ಗೊಂಟನೊಳ್ ಬಳಸಿದ ಕೊತ್ತಳಂ (ಗಿರಿಜಾ. ೨-೬೯) : ಶಕ್ರಾದ್ಯರೆಲ್ಲಂ ಕೊರಗುತ್ತುಂ ಗೊಂಟುಗೊಂಟಂ ಪುಗುತಿರೆ (ಕುಸುಮಾ. ೮-೦೪೩).

[ ದೇ.॥ ತುಳು. ಕೋಂಟು ; ಕಾಯ್ಕ. ಕೋಂಟ./ಹಿಂ. ಮರಾ. ಗೋಟ್ ]

**ಗೊಂಟುಗೊಳ್** (ಕ್ರಿ). ೧. ಮೂಲೆಯನ್ನು ಸೇರು: ದಿನದೊಳ್ ಮೂಡಿದಖಿನಾಯ್ತು ಭಾನುವಿನ ತೇಜಂ ಗೊಂಟುಗೊಂಡಿಯ್ದುದಂತೆನಸುಂ ಪಕ್ಷಿಯು ತೇಜಮೊಟ್ಟಿದವಿಯೊಳ್ ಮಟ್ಟಿತ್ತು (ಕುಸುಮಾ. ೩-೬). ೨. ಅಂಚನ್ನು ಹೊಂದು ; (ಅಲಂಕಾರದ) ದಡಿಯನ್ನು ಹೊಂದು : ಅವಂ ಪೊಱಗುವಮಾಡಿ ರುಗ್ಮಿಕುಳಕ್ಕೆಳಮಂ ಗೆಲ್ದು ರುಗ್ಮಿ ವಿಸ್ಫುರಿತಮಪ್ಪ ಕೋಂಟೆ ಸಲೆ ಗೊಂಟುಗೊಂಡಿರ್ದುದೆಂಬ ವರ್ಣನೆಗೆ ತಕ್ಕುದೇ ದಲೆ[ನಲಂ] ತದಂ ಸುತ್ತಿ ದುಗ್ಧವಾರ್ಧಿಗೆಣೆಯಾದಗಟ್ ಸೊಗಯಿಸಿ ಕುರ್ ಮಚ್ಚಾಂಟುವಿಂ (ಶಾಂತಿಪು. ೯-೦೪೫). [ ಗೊಂಟು + ಕೊಳ್₁ ]

**ಗೊಂಟುಗೊಳಿಸು** (ಕ್ರಿ). ಮೂಲೆಗೆ ಸೇರಿಸು : ತಲೆ ವಿಕ್ಕೆಯ್ದು ತಗುಳ್ದು ಗೊಂಟುಗೊಳಿಸುತ್ತುಗ್ರಾಂಧ್ಯಮಂ ಕೈರವಾವಳಿಯೊಳ್ ಪೊಕ್ಕು ವಿಕಾಸಲಕ್ಷ್ಮಿಗೆಡೆಮಾಡುತ್ತ ... ತಣ್ಣದಿರ್ಗಳೆತ್ತಂ ಪರ್ಬಿದತ್ತುರ್ವಿಯೊಳ್ (ಕುಸುಮಾ. ೪-೪೮). [ ಗೊಂಟುಗೊಳ್ + -ಇಸು₃ ]

**ಗೊಂಟುವೊಗು** (ಕ್ರಿ). ಮೂಲೆಸೇರು ; ಮೂಲೆಪಾಲಾಗು ; ಮೂಲೆಗುಂಪಾಗು : ಪೆಸರ್ವೆತ್ತ ಹಸ್ತಿನಾಪುರಕಸವಂ ಶಾಮಾಗಿ ನಾಣ್ಚಿ ಸುರಪುರಿ ಪೋಯ್ತಾಗಸದತ್ತಲ್ ಫಣಿ[ಪತಿ]ಪುರಿ ರಸೆಗಿಱಿದುದು ಗೊಂಟುವೊಕ್ಕುದಳಕಾನಗರಂ (ಶಾಂತೀಶ. ೦೩-೦೬೨). [ ಗೊಂಟು + ಪೊಗು ]

**ಗೊಂಡ₁** 'ಗಾಮುಂಡ' ನೋ.

**ಗೊಂಡ₂** 'ಗೋಂಡ' ನೋ.

**ಗೊಂಡ₃** (ನಾ). [ಸಂಗೀತ] ಹಾಡುವುದರಲ್ಲಿ ಒಂದು ವಿಶಿಷ್ಟವಾದ ರೀತಿ₁-ಕ್ರಮ : ಗತಿ ಸಂಗತಿವಡೆಯ ಗಮಕಂ ಗಾರವಂಬಡೆಯ ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ ... ಬೆಡಂಗುವಡೆಯ ಪಾಡುತ್ತಿರೆಯುಂ (ಶಾಂತೀಶ. ೧೩-೬೭ ವ). [ ? ]

**ಗೊಂಡರಸ** (ನಾ). ಒಬ್ಬಾತನ ಹೆಸರಂ : ಸ್ವಸ್ತಿಶ್ರೀ ಗೊಣ್ಡರಸರ್ ಪ್ರಿಥಿವೀರಾಜ್ಯಂಗೆಯೆ (ಎಕ. VII, ಶಿಕಾ. ೪೫ (b)-೫೨ ; ಕು. ೬೬೦ ?). [ <ಗೋವಿಂದರಸ ? ]

**ಗೊಂಡಲು** (ನಾ). ಒಂದು ಬಗೆಯ ಭೂಮಿ : ಕಲಿದೇವನಿಗೆ ಬಟ್ಟ ಧರ್ಮ್ಮಪೂರಿಂ ಪಡುವಲು × ೩ ಹುಣಸೆಯ ಕೆಯಿ ಮತ್ತರು ೨ . . . [ಗೌ]ಡಗಟ್ಟೆಯ ಕೆಳಗಣ ಗೊಂಡಲು ಎರಡು ಸಹಿತ (ಸೌಇಇ. XX, ೨೨೦-೩೮ ; 1283). [ ? ]

**ಗೊಂಡವನ** (ನಾ).=ಗೊಂಡಾರಣ್ಯ ೨: ಕಡಲ ಮೇಲೆದ್ದಿತ್ತು ಕೂರ್ಮದಂತೀ ನೆಲವು ಗೊಂಡವನ ಪ್ರಾಚೀನ ಭೂವಿಭಾಗ (ಅಕಳು. ೩೦೬-೨). [ ಗೊಂಡ₂ (<ಗೋಂಡ) + ವನ ]

**ಗೊಂಡಾರಣ್ಯ** (ನಾ). ೧. ವಿಂಧ್ಯಾದ್ರಿಯ ಬಳಿಯಿರುವ ಅರಣ್ಯ. ೨. ದಟ್ಟವಾದ ಅರಣ್ಯ: ಗೊಂಡಾರಣ್ಯಪ್ರಾಂತ್ಯದಲ್ಲಿ ಒಬ್ಬ ಬ್ರಾಹ್ಮಣನಿದ್ದನು (ನೀತಿಚಿಂ. XI, ೧೮): ಹದಿನಾಲ್ಕು ವರ್ಷಗಳ ತನ್ನ ವನವಾಸದ ಅವಧಿಯಲ್ಲಿ ರಾಮನು ಕೆಲಕಾಲ ಪಂಚವಟಿಯ ಗೊಂಡಾರಣ್ಯದಲ್ಲಿ ವಾಸಮಾಡಿದನು (ರೂಢಿ). [ ಗೊಂಡ2 (<ಗೋಂಡ) + ಅರಣ್ಯ ]

**ಗೊಂಡಾಳೆ** (ನಾ). (ಉಕ) ಅಕ್ಕಿಯಲ್ಲಿ ಹುಳುವಿನಿಂದ ಉಂಟಾಗುವ ಜಡೆ,-ಗಂಟು : ಸಂಡಾಗಿ ಮಾಡ್ಯಾಳ ಗೊಂಡಾಳೆಂತಾ ಚಂಡಾಲೆವ್ವ ಬೀಗುತಿ (ಜೋಳಗೀ. ೩೧). [ ←ಮರಾ. ಗುಂಡಾಳೆ ]

**ಗೊಂಡಾಳೆಗಟ್ಟು** (ಕ್ರಿ). ಅಕ್ಕಿಯಲ್ಲಿ ಹುಳುವಿನಿಂದ ಜಡೆಗಟ್ಟು,-ಗಂಟುಕಟ್ಟು : ಅಕ್ಕಿ ಗೊಂಡಾಳೆಗಟ್ಟಿದೆ (ರೂಢಿ). [ ಗೊಂಡಾಳೆ + ಕಟ್ಟು₁ ]

**ಗೊಂಡಿ₁** (ನಾ). [ಸಂಗೀತ] ಹಾಡುವುದರಲ್ಲಿ ಒಂದು ಕ್ರಮ, - ರೀತಿ : ಗತಿ ಸಂಗತಿವಡೆಯ ಗಮಕಂ ಗಾರವಂಬಡೆಯ ಗಹಿಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ಲಾಲಂಗಿ . . . ಬೆಡಂಗುವಡೆಯ ಪಾಡುತ್ತಿರೆಯುಂ (ಶಾಂತೀಶ್ವ. ೧೬-೭೭ ವ). [ ? ]

**ಗೊಂಡಿ₂** ' ಕೊಂಡೆ₄ ' ನೋ.

**ಗೊಂಡು₁** ' ಗೊಂಟಂ ' ನೋ.

**ಗೊಂಡು₂** ' ಕೊಂಡೆ₄ ' ನೋ.

**ಗೊಂಡೆ** ' ಕೊಂಡೆ₄ ' ನೋ.

**ಗೊಂಡೆಕುಚ್ಚು** (ನಾ). ಗೊಂಚಲಾಗಿರುವ ಕುಂಚ್ಚು : ನೆಕ್ಲುದೋವ್ ಬಾಗಿಲು ದಾಟಿದ ಕೂಡಲೇ ಗೊಂಡೆಕುಚ್ಚಿನಂಥ ಕಂಠಾಭರಣ ಧರಿಸಿದ್ದ ಹುಡುಗಿಯೊಬ್ಬಳು ಅವನಿಗೆ ಅಡ್ಡವಾದಳು (ಪುನರು. ೨೭೫) ; ಎತ್ತುಗಳಿಗೆ ಗೊಂಡೆಕುಚ್ಚು ಹಾಕಿದ್ದಾರೆ (ರೂಢಿ). [ಗೊಂಡೆ (<ಕೊಂಡೆ₄)+ಕುಚ್ಚು₄]

**ಗೊಂಡೆಚೌರಿ** (ನಾ). ತುದಿಯಲ್ಲಿ ಗೊಂಡೆಯಿಂದ ಕೂಡಿದ ಚವರಿ : ಹೆಂಡತಿ ನೋಡಿ ಹಲ್ಲನೆ ತೆರವ ಅಕೆ ಗೊಂಡೆಚೌರಿಯ ನೋಡಿ ಬೆರವೇ ಕಂಡಕಂಡಾ ವಿಷಯಕ್ಕೆ ಮನಡರಿವೆ (ಜಿರಾಪ. ೩೦-೨). [ ಗೊಂಡೆ (<ಕೊಂಡೆ₄) + ಚೌರಿ₁ (<ಚವರಿ) ]

**ಗೊಂಡೆಜವರಹುಲ್ಲು** (ನಾ). ಒಂದು ಬಗೆಯ ಹುಲ್ಲು: (ಮೈಕಿಗ. ೨೦-೩೭೦). [ ಗೊಂಡೆಜವರ₀ + ಹುಲ್ಲು (<ಪುಲ್) ]

**ಗೊಂಡೆಯ** (ನಾ). ೧. ಗೊಂಚಲು; ಕುಚ್ಚು : ಕೆಲದ ಚವರದ ಗೊಂಡೆಯದೊಳೆಸೆವ ಜವ್ವನದ ಶಬರಿಯರು . . . ಹುಲ್ಲೆಗಳನೆಸುತಿರ್ದರು (ಹಡಳಾ. ೩-೪೭) : ಕಾವನ ಪೂವಿನ ಗೊಂಡೆಯಗಳನೊರ್ವ ಭಾವಕಿ ವಂಚಿಸಿ ತಂದು ಪೂವಿನಂಗಡಿಯೊಳಿರಿಸಿ ಮಾಱುವೊಲು ಪೊಸಸೇವಂತಿಯರಲ ಮಾಱುವಳು (ಅಂಜಚ. ೩-೭೪): ಕಿಱುವುಲಿಯುಗುರ್ಗಳ್ ಗೊಂಡೆಯದುಡಿದಾರಂ ಭೂಮಂಡಲಪತಿಯಾತ್ಮಜಂಗೆ ರಂಜಿಸುತಿರ್ಕುಂ (ದಕಳು. ೨-೭೩) : ಕಠಾರಿಯ ಹೊಳೆವ ಗೊಂಡೆಯ ಮೆಱೆಯ ಗಂಡಂದವನು ಕೈಕೊಂಡ (ಕುವ್ಯಾ.ವಿ. ೬-೪೯). ೨. ಒಂದು ಬಗೆಯ ದುಂಡಗಿರುವ ಗುಚ್ಛದಂತಹ ಆಭರಣ : ನಿಱಿವಿಡಿದುಟ್ಟ ದೂವಟದ ಸೀರೆಯ ಮೇಲೆ ಮೆಱೆದುದು ಹೊನ್ನ ಗೊಂಡೆಯವು (ಭರತ. ೪೦-೫೪). ೩. ರಾಶಿ : ಸಮೂಹ : (ಶ). [ <ಕೊಂಡೆ₄ ]

**ಗೊಂಡೆಹುಳು** (ನಾ). " ಸಣ್ಣ ಸಸ್ಯಗಳನ್ನು ಹಾಳುಮಾಡುವ, ಚಿಪ್ಪಿಲ್ಲದ ಒಂದು ಬಗೆಯ ಬಸವನ ಹುಳು " (Slug. ಇಂಕನಿ). [ ಗೊಂಡೆ₀ + ಹುಳು2 (<ಪುೞು₁) ]

**ಗೊಂಡೆಹೂ** (ನಾ). ದುಂಡಾದ ಒಂದು ಬಗೆಯ ಗುಚ್ಛದಂತಹ ಕೆಂಪು ಹೂವು : ಚಂಡುಹೂ, ತುಂಬಿಹೂ, ಗೊಂಡೆಹೂ . . . ಇವುಗಳ ಸಂತೆ ನೆರೆಯಿತು (ಸಾಸಮಾ. ೯೧). [ ಗೊಂಡೆ (<ಕೊಂಡೆ₄) + ಹೂ₂ (<ಪೂ₂) ]

**ಗೊಂತು** ' ಗೊತ್ತು ' ನೋ.

**ಗೊಂತುಕಂಬಿ**(ನಾ). ದನಗಳ ಹಕ್ಕೆಯಲ್ಲಿ ದನಗಳನ್ನು ಕಟ್ಟಲು ಗೊಂತಿಗೆ ಅಳವಡಿಸಿರುವ ಕಂಬಿ: ಗೊಂತಿನಲ್ಲಿ ದನಕಟ್ಟಲು ಹಾಕಿರುವ (ಜೋಡಿ) ನಿಲುಗಂಬಿ : ಗೊಂತುಕಂಬಿ (Stanchion. ಇಂಕನಿ). [ ಗೊಂತು (<ಗೊತ್ತು) + ಕಂಬಿ₁ ]

**ಗೊಂತುಗಾರ** ' ಗೊತ್ತುಗಾರ ' ನೋ.

**ಗೊಂತುಗೊಳ್** (ಕ್ರಿ). ಸ್ಥಿರವಾಡಿಕೊಳ್ಳು ; ನೆಲೆಗೊಳ್ಳು ; ನೆಲಸು : ಇಂತೊರೆದ ಸದ್ಬೋಧೆ ಮನದೊಳು ಗೊಂತುಗೊಂಡುದು (ಕಂಕದಾ. ೪-೨). [ ಗೊಂತು (<ಗೊತ್ತು) + ಕೊಳ್₁ ]

**ಗೊಂತುಮಾಡು** ' ಗೊತ್ತುಮಾಡು ' ನೋ.

**ಗೊಂದಣ** ' ಗೊಂದಳ ' ನೋ.

**ಗೊಂದಣಂಗುಣಿ** (ಕ್ರಿ). ಸಾಮೂಹಿಕ ನೃತ್ಯವನ್ನು ಮಾಡು ; ಮೇಳ ನೃತ್ಯಮಾಡು : ಅಳವಿಗಟ್ಟಿದುತ್ಸವದೆ ಗೊಂದಣಂಗುಣಿವ ಗಣಿಕೆಯರ ಪದಪ್ರಚಾರಕ್ಕೆ ಬೆರ್ಚಿ (ಚಂದ್ರಪ್ರ. ೧೨-೩೫ ವ). [ ಗೊಂದಣ (<ಗೊಂದಳ) + ಕುಣಿ₁ ]

**ಗೊಂದಣಂಗೂಡು** (ಕ್ರಿ). ಗುಂಪುಗೂಡು ; ಸಮೂಹವಾಗು : ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು ಮಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂಗೂಡಿ ಗಗನಂ ಕವಿದಂತೆ . . . ಭೂಚಕ್ರಮಂ ತೆಕ್ಕನೆ ತೀವಿದ ಪದಾತಿಬಲದೊಳಂ (ಗಿಳಿ. ೬-೫೫ ವ). [ ಗೊಂದಣ (<ಗೊಂದಳ) + ಕೂಡು₁ ]

**ಗೊಂದಣಂಗೊಳ್, ಗೊಂದಣಗೊಳ್, ಗೊಂದಗೆಗೊಳ್, ಗೊಂದಲಗೊಳ್ಳು** (ಕ್ರಿ). ೧.=ಗೊಂದಣಂಗೂಡು : ಒಂದೆಡೆಯೊಳು ಗೊಂದಣಂಗೊಂಡು ಜನಗಳು ಕೇಳುವಂತೆ ಮನಸಂದೊರ್ವನೊಂದು ಕಥೆಯಂ ಪೇಳ್ವುದನು ಕೇಳಿ (ಸಮ್ಮಳಾ. ೨-೪೬). **ಗೊಂದಣಗೊಳ್:** ೨. ತಬ್ಬಿಬ್ಬಾಗು ; ಗಲಿಬಿಲಿಗೊಳ್ಳು : ಎಂಬತ್ತುನಾಲ್ಕುಲಕ್ಷಯೋನಿಮುಖಜೀವಿಗಳಿಗೆ ಎಂಬತ್ತುನಾಲ್ಕುಲಕ್ಷಾರಾಧನೆ ಒಂದೊಂದಱಾರಾಧನೆಯ ನೊಂದೊಂದಱಿಯದೆ ಗೊಂದಣಗೊಂಡು . . . ಲಯವಾದುದೆಲ್ಲ (ಅಪಚಂ. ೨೮೯-೧೩೦೦). **ಗೊಂದಣೆಗೊಳ್:** ೧. ಮಲ್ಲಿಗೆಯ ಮಕರಂದದೊಡವೆರೆದ ಪರಾಗಮೆಂಬ ಪೊಸಕೆಸರ್ಪತ್ತೆ ಕರ್ಚಿ ಕಳೆಯಲೆಂದು ಸಂದಣಿಸಿ ಗೊಂದಣೆ[ಗೊಂ]ಗೊಂಡ್ಯದುತರಮಿಂದಾಕರದರವಿಂದಬ್ಬಂದಮರಂದರಸದೊಳ್ಮುಳುಂಗಿ (ರಾಜಶೇ. ೨-೬೬ಶ). **ಗೊಂದಲಗೊಳ್ಳು:** ೨. ಆ ಗೋಡೆಯ ಮರೆಯಲ್ಲಿ ನಮ್ಮ ತಯಾರಿ ಮಾಡಿಕೊಂಡು, ಏರಿಹೋಗಿ ದಾರಿಗಾಣದೆ ಗೊಂದಲಗೊಂಡ ವೈರಿಯನ್ನು ಗೆಲ್ಲುವದು (ಅಪನಾ. ೧೧೯) : ಮನಸ್ಸೆಲ್ಲಾ ಗೊಂದಲಗೊಂಡಿತ್ತು (ಕುಸುಸಂ. ೧೧೦). [ ಗೊಂದಣ (<ಗೊಂದಳ) + ಕೊಳ್₁ ]

**ಗೊಂದಣಂಮಾಡು** (ಕ್ರಿ). ಸಾಮೂಹಿಕ ನರ್ತನವನ್ನು ಮಾಡು; ಮೇಳ ನರ್ತನವನ್ನು ಮಾಡು: ಅಂತು ದೇವೇಂದ್ರಕರಸರೋಜಾಕರದೊಳ್ ಸಮುತ್ಫುಲ್ಲಮುಖಪದ್ಮಂಗಳಿಂ ಪದ್ಮಿನಿಗಳೆನಿಸಿ ಸುರೇಂದ್ರಸ್ತಾರಹಾರ ಮುಕ್ತಾಫಳ ಪ್ರತಿಬಿಂಬಿತ ತನುಗಳಿಂ ವಿದ್ಯಾದೇವತೆಗಳೆನಿಸಿ ದಿವಿಜಸೌಂದರಿಯರ್ ಗೊಂದಣಂಮಾಡುವಲ್ಲಿ (ಆದಿಪು. ೭-೦೨೩ ವ).

[ ಗೊಂದಣ (<ಗೊಂದಳ) + ಮಾಡು$_1$ ]

**ಗೊಂದಣಗೊಳ್** 'ಗೊಂದಣಂಗೊಳ್' ನೋ.

**ಗೊಂದಣದುಂಬಿ** (ನಾ). ಗುಂಪುಗುಂಪಾಗಿರುವ ದುಂಬಿ; ಹಿಂಡು ಹಿಂಡಾಗಿರುವ ದುಂಬಿ: ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂದಿಕ್ಕುವ ಕುಂಭದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ ಮೊಕ್ಕಳಮೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ ತೆಕ್ಕನೆ ತೀವಿ ಕೂಡೆ ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೯೦-೦೦); ಗೊಂದಣ [ಪಾಠಾಂ. ಳ]ದುಂಬಿ ತುಳಿಯದ ಬಂಧೂಕಂ ಹೆಚ್ಚದ ಹೆಱ್ ಗಿಳಿ ತುಂಡಿಸದಾಲದ ಪಣ್ಣೊಳವೆಯನುಳಿಯದ ಚೆಂದಳಿರೆನೆಯಿನಿದುಟಿ ಸೊಗಯಿಸಿತಾ ನೃಪಸುತೆಗೆ (ಜಯಕಾ. ೩-೪೧).

[ ಗೊಂದಣ (<ಗೊಂದಳ) + ತುಂಬಿ$_1$ ]

**ಗೊಂದಣನುಡಿ** (ನಾ). ಹಲವುಮಾತು; ಬಹಳಮಾತು: ಬಂದರು ಜಯ ಜಯಯೆನುತಾಗ ದಿಕ್ಕುದಿಕ್ಕಿಂದ ನರೋರಗಸುರರು ಗೊಂದಣನುಡಿಯೇನು ಗಂಧಕುಟಿಗಳು ಚೆಲ್ವಿಂದೆರಡಾದುವಿರ್ವರಿಗೆ (ಧರಕ. ೮೦-೪೮).

[ ಗೊಂದಣ (<ಗೊಂದಳ) + ನುಡಿ$_2$ ]

**ಗೊಂದಣನೃತ್ಯ** (ನಾ). ಸಾಮೂಹಿಕ ನೃತ್ಯ; ಮೇಳನೃತ್ಯ: ಬಾಳು ಗೊಂದಣನೃತ್ಯ ಉಸಿರುಸಿರು ಕೃತಕೃತ್ಯ ಕನ್ನಡದ ಮಗು ಮಾಣ ಮಾತ್ಯ ಭೃತ್ಯ (ಅರಳು. ೩೦೮-೧೪). [ ಗೊಂದಣ (<ಗೊಂದಳ) + ನೃತ್ಯ ]

**ಗೊಂದಣಪೆಕ್ಕಣ** 'ಗೊಂದಳಪೆಕ್ಕಣ' ನೋ.

**ಗೊಂದಣಬೆಳಗು** (ನಾ). ಕಾಂತಿಯ ಸಮೂಹ: ಅಂತು ಕಿಚ್ಚು ಬಾಳ್ಗಳ ಗೊಂದಣಬೆಳಗುಗಳ ಬಳಗಂಗಳೊಳಾಗಸವಳಯಮೆಲ್ಲಂ ಕುವಳಯಿತಮಾಗೆ ಬಂದು ತಾಗುವುದುಂ (ಶಾಂತಿಪು. ೪-೨೬ ವ).

[ ಗೊಂದಣ (<ಗೊಂದಳ) + ಬೆಳಗು$_2$ ]

**ಗೊಂದಣವೆಕ್ಕಣ** 'ಗೊಂದಳವೆಕ್ಕಣ' ನೋ.

**ಗೊಂದಣಾಸ್ಥಾನ** (ನಾ). ಗೊಂದಣನೃತ್ಯವು ನಡೆಯುವ ಆಸ್ಥಾನದಲ್ಲಿ ರಂಪವನಂ: ಚೇರಮನೃಪಂ ಬಹಳ ಗೊಂದಣಾ [ಪಾಠಾಂ. ಣ] ಸ್ಥಾನನಾಗಿ ಸೌಂದರಪೆರುಮಾಳೆಯನೋಲೈಸುತ್ತುಮಿರೆಯಿರೆ (ನಂಬಿರ. ೧೮-೧೧೩); ಸರಸ ಗಾಯಕ ಭಾವ ಚಿತ್ರಕ ಪುಣ್ಯ ಪಾಟ[ಠ]ಕ ನವ್ಯನರ್ತನ ನರ್ತಕಿಪ್ರಯುತಂ ಬಹಳ ಗೊಂದಣಾಸ್ಥಾನನಾಗಿ ಕೆಂಪಡರ್ದ ಕಂಗಳಿಂ . . . ಪೆರ್ಮಾಡಿ ರಾಯಂ ಜೊಮ್ಮಣ್ಣನಂ ಕರೆಯಲು (ಜೊಮ್ಮರ. ೧೧೧-೨೦).

[ ಗೊಂದಣ (<ಗೊಂದಳ) + ಆಸ್ಥಾನ ]

**ಗೊಂದಣಿ** 'ಗೊಂದಳ' ನೋ.

**ಗೊಂದಣಿಗೊಳ್** 'ಗೊಂದಣಂಗೊಳ್' ನೋ.

**ಗೊಂದಣಿಸು** 'ಗೊಂದಳಿಸು' ನೋ.

**ಗೊಂದಲ** 'ಗೊಂದಳ' ನೋ.

**ಗೊಂದಲಗೆಡವು** 'ಗೊಂದಲಗೆಡಹಂ' ನೋ.

**ಗೊಂದಲಗೆಡಹು, ಗೊಂದಲಗೆಡವು** (ಕ್ರಿ). ಗೊಂದಲದಲ್ಲಿ ಬೀಳಿಸು; ಪೇಚಿನಲ್ಲಿ ಸಿಕ್ಕಿಸು; ಪೇಚಾಡಿಸು: ಎಂದಿಗೂ ಅತಿ ಶಾಂತಚಿತ್ತನಾಗಿ ಪ್ರವಾಸದ ಸಿದ್ಧತೆಯನ್ನು ಮಾಡುವ ತನಗೆ ಹೀಗೇಕೆ ಒಂದೊಂದೇ ವಿಚಾರ . . . ಬಂದು ಗೊಂದಲಗೆಡಹುತ್ತಿದೆ? (ಹೊಸಸ್ಕೃ. ೧೬೩). **ಗೊಂದಲಗೆಡವು**: ಪರಜಾತಿಯ ಹುಡುಗನೊಡನೆ ತಮ್ಮ ಮಗಳು ಲಗ್ನವಾಗಲು ಹೊರಟಿರುವ ಸಂಗತಿಯು ಬಲವಾಗಿ ನೋಯಿಸಿತು . . . ಗೊಂದಲಗೆಡವಿತು (ಅದೋಲಿ. ೧೦೧).

[ ಗೊಂದಲ (<ಗೊಂದಳ) + ಕೆಡಹು (<ಕೆಡವು) ]

**ಗೊಂದಲಗೆಡಿಸು** (ಕ್ರಿ).=ಗೊಂದಲಗೆಡಹಂ: ಸಾವಿರ ಘಟನೆಗಳು, ಸಾವಿರ ಮುಖಗಳು . . . ಅಸಂಬದ್ಧವಾಗಿ ನೆರೆದು ಅವಳನ್ನು ಗೊಂದಲಗೆಡಿಸಿಬಿಡುತ್ತಿದ್ದವು (ಹೊಸಸ್ಕೃ. ೨೦೨).

[ ಗೊಂದಲಗೆಡು + – ಇಸು$_3$ ]

**ಗೊಂದಲಗೆಡು** (ಕ್ರಿ) ತಬ್ಬಿಬ್ಬಾಗಂ; ಗಲಿಬಿಲಿ ಹೊಂದು: ಈ ಸಾರೆಯ ಪಯಣದ ಸಿದ್ಧತೆಯಲ್ಲಿ ಅವನು ಸಾಕಷ್ಟು ಗೊಂದಲಗೆಡುತ್ತಾನೆ (ಹೊಸಸ್ಕೃ. ೨೮೯): ನಿದ್ದೆಯಿಂದ ಎಚ್ಚೆತ್ತ ಕಣ್ಣು ಈ ನೋಟದಿಂದ ಗೊಂದಲಗೆಡುವದು ಸ್ವಾಭಾವಿಕ (ಗ್ರಾಮಾಯ. ೧). [ ಗೊಂದಲ (<ಗೊಂದಳ) + ಕೆಡು$_1$ ]

**ಗೊಂದಲಗೊಳ್ಳು** 'ಗೊಂದಣಗೊಳ್' ನೋ.

**ಗೊಂದಲಬಡಕ** (ನಾ). ಗಲಿಬಿಲಿಗೊಂಡವನು: ಸಮಾನಕರ್ತವ್ಯಗಳ ಕರೆ ಒಮ್ಮೆಲೆ ಕೇಳಿಬರಲು ಧರ್ಮಸಂಕಟದಲ್ಲಿ ಸಿಲುಕಿದ ಎಂಥ ಗಟ್ಟಿಗರೂ ಒಂದು ಕ್ಷಣವಾದರೂ ಗೊಂದಲಬಡಕರೂ ಎಬಡರೂ ಆಗುತ್ತಾರೆ (ಕಸಾಜ. ೨೩೭). [ ಗೊಂದಲ (<ಗೊಂದಳ) + ಬಡಕ (<ಬಡಿಕ) ]

**ಗೊಂದಲವೇಳು** (ಕ್ರಿ). ಗಲಿಬಿಲಿಯುಂಟಾಗು; ಗಲಭೆಯಾಗು: ಕೂಡಲೇ ಆ ಸೈನ್ಯದಲ್ಲಿ ಗೊಂದಲವೆದ್ದಿತು (ಮಹಿಸ. ೮೩).

[ ಗೊಂದಲ (<ಗೊಂದಳ) + ಏಳು$_1$ (<ಎಟು$^r_1$) ]

**ಗೊಂದಲಹಾಕು** (ಕ್ರಿ). ೧. ಗಲಾಟೆಮಾಡು; ಗಲಭೆ ಎಬ್ಬಿಸು: ತಾವು ಹೆದರಬೇಡಿರಿ, ನಾವೇನು ಗೊಂದಲಹಾಕುವುದಿಲ್ಲ (ಕುರಿಹಿಂ. ೧೧). ೨. ಗೊಂದಲ ಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಮಾಡು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨).

[ ಗೊಂದಲ (<ಗೊಂದಳ) + ಹಾಕು (<ಪಾಯ್ಕು$_1$) ]

**ಗೊಂದಲಹಾಡು** (ನಾ). ಗೊಂದಲಿಗರು ಹಾಡುವ ಹಾಡು; ಜಾತ್ರೆ ಮುಂತಾದ ಕಡೆಗಳಲ್ಲಿ ಪೌರಾಣಿಕ ಕಥೆಗಳನ್ನೊಳಗೊಂಡ, ಅಂಬಾಭವಾನಿಯನ್ನು ಸ್ತುತಿಸುವ ಹಾಡು: ಕರ್ನಾಟಕದಲ್ಲಿ ಗೊಂದಲಹಾಡುಗಳನ್ನು ಹಾಡುವ ಗೊಂದಲಿಗರು ಈ ತರದ ಜನರನ್ನು ಹೋಲಬಹುದು (ಕನ್ನಜಾ. V ಪ್ರಸ್ತಾವನೆ).

[ ಗೊಂದಲ (<ಗೊಂದಳ) + ಹಾಡು$_1$ (<ಪಾಡು$_2$) ]

**ಗೊಂದಲಿಗ** (ನಾ). ಗೊಂದಲಸಮಾರಂಭದಲ್ಲಿ ಅಂಬಾಭವಾನಿಯ ನಾಮ ಸಂಕೀರ್ತನೆಯನ್ನು ಹೇಳುವವನು: ಅಲ್ಲಿ ಗೊಂದಲಿಗರು 'ಜಗದಂಬೆ' 'ಅಂಬಾಭವಾನೀ' ಎಂದು 'ಗೊಂದಲ' ಹಾಕುತ್ತಿದ್ದರು (ಸಿವಭಾ. ೧೨): ನಮ್ಮಲ್ಲಿ ವಿಶೇಷ ಸಮಾರಂಭಗಳಲ್ಲಿ 'ಹರಕೆಯ ಗೊಂದಲ'ಗಳನ್ನುಹಾಕಿಸುವ ರೂಢಿಯುಂಟು. ಈ ಗೊಂದಲಿಗರೂ ಕೀರ್ತನಕಾರರೇ (ಕಥಕ. ೩); ಗೊಂದಲಿಗರು.–ಇವರೂ ಮಹಾರಾಷ್ಟ್ರರೇ . . . ಸಂಬಾಳ, ಚೌಡಕಿಗಳನ್ನು ಬಾರಿಸುತ್ತ ಭವಾನಿಯ ಹಾಡುಗಳನ್ನು ಹಾಡುತ್ತ ಭಿಕ್ಷೆಬೇಡುವರು (ಕಥಾಗ. ೨೧೦): ಹಾವಾಡಿಗರು, ಗೊಂದಲಿಗರು, ಡೊಂಬರು . . . ಎಲ್ಲರೂ ಸಂದಣಿಸಿ ಒಂದಾಗಿ ಇರುವವರ ತಾಳ್ಮೆಯ ಪರೀಕ್ಷೆಯನು ಮಾಡುವರೋ? (ಅರಳು. ೩೩೪-೦೧): ಗೊಂದಲಿಗರು ಮನೆಯ ಮುಂದೆ ನಿಂತು ಹಾಡಹತ್ತಿದ್ದಾರೆ (ಮುಂಜುಳ. ೮): ಜೋಗಿ–ಗೊಂದಲಿಗರ ಕಥೆ ದಾಸರ ಆಟ, ಕಿಳ್ಳೆಕೇತರ ಆಟ, ರಾಧಾನ ಆಟ ಇವೇ ಜನರಿಗೆ ಪ್ರೀತಿಯ ಮನೋರಂಜಕ ಸಾಧನಗಳಾಗಿದ್ದುವು (ಜನಜೀ. ೩೦).

[ ಗೊಂದಲ (<ಗೊಂದಳ) + –ಇಗ ]

**ಗೊಂದಲಿಸು** 'ಗೊಂದಳಿಸು' ನೋ.

**ಗೊಂದವಾಡಿ** (ನಾ). ಒಂದು ಸ್ಥಳದ ಹೆಸರು ; **P** ಈಗಿನ ರಾಯದುರ್ಗ ತಾಲ್ಲೂಕಿನ ಗೋವಿಂದವಾಡಿ : ಗೊಂದವಾಡಿಯ ಪೂಬವೀಡಿನಲ್ ಸುಖದಿಂ ರಾಜ್ಯಂಗೆಯ್ಯುತ್ತಿರೆ (ಎಇ. IV, ೨೦೫-೭ ; 1072).

[ ಗೊಂದ್ಯ + ವಾಡಿ$_1$ (<ಪಾಡಿ$_1$) ]

**ಗೊಂದಳ, ಗೊಂದಣ, ಗೊಂದಣೆ, ಗೊಂದಲ, ಗೋಂಧಳ** (ನಾ). ೧. ಗುಂಪು ; ಹಿಂಡು ; ಮೊತ್ತ : ಬೆಳಗುವ ಕೈದೀವಿಗೆಗಳ ಬೆಳಗುಂ ತರತರದಿನೊಗೆವ ತಾರಗೆಗಳ ಗೊಂದಳವುಂ (ಆದಿಪು. ೧೨-೩) ; ಅನ್ನೀ ಸಾಲೆಯ ಕಂಬದ ಗೊಂದಳವಂ ನಿಱಿಸುವನ್ನು ಕಂಬದ ರೂಪಿಂ ಪಿನ್ನಜನನ್ನಿಱಿಸುವವೋಲೊನ್ದೆರಡಂ ತಾನೆ ಪಿಡಿದು ನಿಱಿಸಿದನಾತಂ (ಎಇ. IV, ೬೪-೧೪ : 946); ಇಂದ್ರಸ್ತ್ರೀಯರಾನಂದದಿಂ ಗೊಂದಳದೆ ಕುಣಿದು ಲೀಲಾನೃತ್ಯದಿಂ (ಆಜಿಪು. ೫-೪೩) ; ಗೊಂದಳದಿಂದೆ ನರ್ತಿಸುವ ಶೇಷಜನಂಗಳ ಭಂಗಿ ಲೀಲೆಯಿಂ ಮುಂದಿಡೆ ಭಕ್ತಿಬೋಧಿತಮನಂ ಜಿನರಾಜನ ಮುಂದೆ ತಾನುಮಾನಂದದ ನರ್ತನಕ್ಕೆ ಬಗೆದಂದು ಪುರಂದರನಂದು . . . ನಾಟಕಪೇಟಕಮಂ ನಿಮಿರ್ಚಿದಂ (ವರ್ಧಪು. ೧೪-೫೭) ; ಪೆರ್ವುಲಿಯ ಪಿಂಡಿನಂತೆಯುಂ ಕಾಡೆಮ್ಮೆಪೋರಿಯ ಹಾರಿಯಂತೆಯುಂ ಪಂದಿಯ ಗೊಂದಳದಂತೆಯುಂ (ಪುಷ್ಪಪು. ೩-೧೨೭ ವ) ; ಅರಮನೆಗೆ ಪೋಪ ನೃಪರಂದಳದ ಗೊಂದಳ [ಪಾಠಂ. ಣ]ದ . . . ಪಾಳೆಯಂ ಕಣ್ಗೆಸೆದುದು (ಜಬಪು. ೪೨-೧೫). ೨. ಗಲಿಬಿಲಿ; ಸಿಕ್ಕು ; ಗೋಜು : ಅಂತಿಂತೆಂಬುದಕ್ಕೆ ಉಭಯದ ಗೊಂದಳದವನಲ್ಲ (ಮನುಗುಂ. ೬) ; ಹೆಚ್ಚಿದ ಪಟಹ ಪಣಹ ಮೃದಂಗ ಡಿಂಡಿಮದ ಉಲಿಯ ತೇಜಿಯ ಹೇಷಿತದ ವೆಗ್ಗಳೆಯ ಕರಿಗಳ ಬೃಂಹಿತದ ಗೊಂದಳದ ಕಳಗಬರ್ಗ ಯ್ಯ ಕೌರವಸೈನ್ಯಶರಧಿಯಲಿ (ಕುಮ್ಮಾರ್ಯಾ. ೯-೫೭). ೩. (ಉಕ) ಒಂದು ಬಗೆಯ ಧಾರ್ಮಿಕವಿಧಿ ; **P** ಮದುವೆಯ ನಂತರ ಅಂಬಾಭವಾನಿಯನ್ನು ಕುರಿತು ನಡೆಸುವ ನರ್ತನ, ಸಾಮೂಹಿಕ ಭಜನೆ, ಪೂಜೆ ಮೊದಲಾದ ಸಮಾರಂಭ ; (ಗೊಂದಲ ಸಮಾರಂಭದಲ್ಲಿ) ಗೊಂದಲಿಗರು ಹೇಳುವ ದೇವಿಯ ನಾಮಸಂಕೀರ್ತನೆ. 'ಗೊಂದಲಪೂಜೆ' ಪರಾ. ೪. ಸಾಮೂಹಿಕ ನೃತ್ಯ ; ಮೇಳನೃತ್ಯ : ಹೀಗೆ ಗೊಂದಳ ಎಂದರೆ ಮಂಡಲನೃತ್ಯವೆಂದು ಸ್ಪಷ್ಟವಾಗಿತಿಳಿವುದರಿಂದ Chorus ಎಂಬುದಕ್ಕೆಗೊಂದಳದವರು ಎನ್ನುವುದೇ ನನಗೆ ನೇರೆನಿಸಿತು (ಹೆಕ್ಕಿರ. VI ಮುನ್ನುಡಿ). **ಗೊಂದಣ:** ೧. "ಗೊಂದಣ ಮನೆ ನಿಕರಕ್ಕೆ ನಾಮಂ" (ಕಕುನಿ. ೪೭) ; ಕೆಂದಳಿರ ಗೊಂದಣದಿಂ ಸಹಕಾರ ಭೂರುಹಾವಳಿ ಕಡು ರಮ್ಯಮಾಗೆ . . . ಬಂದನೊಱಲ್ದು ವಸಂತವಲ್ಲಭಂ (ಧರ್ಮಾಮೃ. ೧೧-೧೧೨) ; ಗಿಳಿಗಳ ಪಿಂಡು ತುಂಬಿಗಳ ಗೊಂದಣಮಂಚೆಗಳೊಡ್ಡರಲ್ದರಲ್ಲಳ ರಜದುರ್ವ ಬಂದೆಳಸಿ ಸಂದಣಿಸುತ್ತಿರೆ (ಚಂದ್ರಪು. ೧೧-೪೬) ; ಗೊಂದಣದ ದಿವಿಜರರ್ಚಿಪರಲ್ಲಿ ಶೂಲಿಯಂ (ಅಶಿಚಂ. ೨೬-೬೯) ; ಕಾಳೆಯ್ಗೋಣನ ಪೊಗ್ಗರವಿದೆ ಹುಲ್ಲೆಗಳ ಒಗ್ಗಿದೆ ಪಂದಿಯ ಗೊಂದಣವಿದೆಯೆಂದು ಮುಗ್ಗಿ ಕವಿದರು ಶಬರರು (ಕುಠಾಸಾಂ. ೨೭-೭೦) ; ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುಱುಹು ಇರುತಿರಲಿಕೆ ಆ ನಿಜಲಿಂಗದ ಸಂಗವನಱಿಯದೆ ಸಂದಿಗೊಂದಿಯಲ್ಲಿ ಹೊಕ್ಕಿಹನೆಂಬ ಗೊಂದಣವೇತಕ್ಕೆ (ಮದೇಅ. ೨೭೩-೧೫). ೪. ಕಿನ್ನರಿಯ ಗೊಂದಣದಿಂಚರಂ (ರೀವಣ. ೩೦-೪೫) ; ಮರ ಕಿತ್ತಿವೆ ಬುಡ-ತಳ ಹಾದಿ ಉಡುಗೆ ರಥುಳರಥುಳ ಕಡಲು ಕುಣಿಯೆ ಗೊಂದಣ ತೆರೆ-ಮುರಿ-ನೊರೆ ಧಂಧಣ (ಹ್ಮದಸ. ೩೭-೧೦) ; ಗೊಂದಣದಲ್ಲಿ ನಾನಿಕ್ಕಿದ ಹೆಜ್ಜೆ . . . ಅದಕ್ಕೊಂದು ಸಾಮಾನ್ಯತೆಯಿದೆ (ಸಾಹಿವಿ. ೪ ಮುನ್ನುಡಿ). 'ಗೊಂದಣಮಾಡು' ಪರಾ. **ಗೊಂದಣೆ:** "ಬಂಬಲ್, ತುಱುಗಲ್ . . . ಗೊಂದಣೆ(ಉಂದಲ್) – ಈ ೪೦ ಸಮೂಹಂ" (ಶಕಸಾ. ೧೦-೨೨೨) ; "ಗೊಂದಣೆಯೆನಲ್ ಗೊಂಬೆಯನೆ ಸಲ್ಲುಗು ಸಮೂಹದೊಳ್" (ಶಕರ. ೩೪) : ಈಶನಂ ಪೂಜೆಗೆಯ್ದು ಮಣಿವ ಜಲಕನ್ಯಕಾ ಜಲಪುರುಷರ ಗೊಂದಣೆಯುಂ . . . ರಂಜಿಸೆ (ವೃಷವಿ. ೧೧-೪೨ ವ). **ಗೊಂದಲ :** ೩. ಬೊಂಗಲುಡನ ಮಗ ಕಲ್ಲಪ್ಪನ ಕೂಡಿಟುದು x x x ಹೆಂಡಿರ ಕುಲಕೆ x x ಗೊಂದಲಮಾಡಿಕೊಂಡಲ್ಲಿ (ಮೈಆರಿ. ೧೯೨೯, ೮೨-೦೦ ; 15ನೆಯ ಶತ) ; ಗೊಂದಲದೊಳು ನೊಂದು ಬೇನೆಯನುಂಡನು ಬಂಧನದೊಳು ಬಳಲಿಹನು (ಇಂಪಾಪ. ೧೦೦-೮೯) ; ಅಂದು ಮುಂಬಯಿ ನಿಲ್ದಾಣದಲ್ಲಿ ಗೊಂದಲವೇ ಗೊಂದಲ (ಪ್ರಡಸ. ೭೩). 'ಗೊಂದಲಹಾಕು' ಪರಾ. ೫. "ಒಂದು ವಿನೋದಾವಳಿ ಆಟ ; ಗೊಂದಲಿಗರಾಟ" (ಜಾನಕೋ. ೫೦). **ಗೋಂಧಳ:** ೩. ಜನರಿಗೆ ಉಪದೇಶವನ್ನು ಮಾಡುವುದಾದರೆ 'ಗೋಂಧಳ ಕೀರ್ತನ'ದಂತಹ ವಸ್ತುಗಳೇ ಇಲ್ಲ. ವರ್ತಮಾನ ಪತ್ರಗಳು ಇವುಗಳ ಮುಂದೆ ಏನು ಮಾಡಲಾಪವು (ಸಿವಭಾ. ೧೩).

**ಗೊಂದಲದಲ್ಲಿ ಬೀಳು** = ತೊಡಕಿನಲ್ಲಿ ಸಿಕ್ಕಿಕೊಳ್ಳು ; ಗಲಿಬಿಲಿಗೊಳಗಾಗು : ಈ ಪ್ರಶ್ನೆಯ ತರೆಬುಡ ಗೊತ್ತಾಗದೆ ಗೊಂದಲದಲ್ಲಿ ಬಿದ್ದ ವೋನಪ್ಪನಾಯ್ಕರು . . . ಕೇಳಿದರು (ಮೂಕುದಾ. ೨೬೦). **ಗೊಂದಲದವ=** ಅಂಬಾಭವಾನಿಯ ಪ್ರೀತಿಗಾಗಿ ಗೊಂದಲವೆಂಬ ಧಾರ್ಮಿಕ ವಿಧಿಯನ್ನು ನಡೆಸುವವನು : ಗೊಂದಲದವರು ಬಂದು ಚೌಟಿಗಿ ಬಾರಿಸಿಕೊಂಡು 'ಜೀಜೀ' ಅಂತ ಹೇಳ್ತಾರಲ್ಲ, ಕೇಳಿದೀಯೇನು? (ಚಳುಮು. ೮೩). **ಗೊಂದಳಚತುರ್ಮುಖ** = ಸಭೆಗಳಲ್ಲಿ ಮುಖ್ಯನಾದವನು ; ಒಂದು ಬಿರುದು : ಶೌಚಾಂಜನೇಯಂ ಗೊಂನ್ದಳಚತುರ್ಮ್ಮುಖಂ ಸಮರಮುಖ ಷಣ್ಮುಖಂ . . . ಅರಸುಗೆಯ್ಯುತ್ತಮಿರೆ (ಎಇ. XVI, ೮೪-೦೨ ; 1067).

[ ?./ತುಳು. ಗೋಂದಳ, ಗೋಂದೋಳು ; ತೆಲು. ಕೊಂದಲ./ ಮರಾ. ಗೋಂದಳಾ, ಗೊಂಧಳ./ಪ್ರಾ. ಗುಂದಲ ಗೋಂದಲ ]

**ಗೊಂದಳಪೂಜೆ** (ನಾ). ತುಳುನಾಡಿನ ವಿಶೇಷವಾಗಿ ಮರಾಟಿಗರೆಂಬ ಜನಾಂಗದಲ್ಲಿ ಪ್ರಚಾರದಲ್ಲಿರುವ ಒಂದು ಬಗೆಯ ದುರ್ಗಾರಾಧನೆ ; ಒಳಮನೆಯಲ್ಲಿ ದೇವಿಯ ವಿಗ್ರಹವನ್ನಿಟ್ಟು ಅಲಂಕರಿಸಿ, ಹೊರ ಅಂಗಳದಲ್ಲಿ ಉರಿಯುತ್ತಿರುವ ದೀಪದ ಸುತ್ತಲು ಕೈಯಲ್ಲಿ ದೀವಟಿಗೆಯನ್ನು ಹಿಡಿದುಕೊಂಡು ದೇವಿಯ ಸ್ತೋತ್ರಗಳನ್ನು ಹಾಡುತ್ತ ಕುಣಿಯುತ್ತ ಭಕ್ತರು ಆಚರಿಸುವ ಒಂದು ವಿಶಿಷ್ಟರೀತಿಯ ದುರ್ಗಾಪೂಜೆ : ನಮ್ಮ ತುಳುನಾಡಿನಲ್ಲಿ ಹರಕೆಗಾಗಿಯೂ ಬಳಕೆಗಾಗಿಯೂ ಗೊಂದಳಪೂಜೆ ಎಂದು ಮಾಡಿಸುವುದುಂಟು (ಹೆಕ್ಕಿರ. VI ಮುನ್ನುಡಿ).

[ ಗೊಂದಳ + ಪೂಜೆ$_1$ ]

**ಗೊಂದಳವೆಕ್ಕಣ, ಗೊಂದಣವೆಕ್ಕಣ, ಗೊಂದಣವೆಕ್ಕಣ** (ನಾ). ಗುಂಪಾಗಿ ಮಾಡುವ ನೃತ್ಯ ಮೊದಲಾದ ಪ್ರದರ್ಶನ : ದೇಸೆವಿಲಾಸಮಂ ಪಡೆಯೆ ಗೊಂದಳವೆಕ್ಕಣವಾಗಳಾ ನೃಪಾವಾಸದೊಳಾದಿದತ್ತು (ಪಂಠಾಮಾ. ೩-೧೦೬). **ಗೊಂದಣಪೆಕ್ಕಣ:** ಗೊಂದಣಪೆಕ್ಕಣ ಕುಣಿವರು; ಗುಡಿಕಟ್ಟುವರು (ಸಾಹಿಸಂ. ೩೬). **ಗೊಂದಣವೆಕ್ಕಣ :** ವಿವಿಧಲಯಂಗಳಿಂ ಕುಣಿವ ಗೊಂದಣ [ಪಾಠಂ. ಳ] ವೆಕ್ಕಣಮಾಗಳಂತೆ ಕಟ್ಟುವ ಗುಡಿ ಪೊಯ್ವ ಬದ್ದವಣಂ . . . ಮೆಱೆದುವುತ್ಸವಮಂ ಜನಜನ್ಯಗೇಹದೊಳ್ (ಮಲ್ಲಿಪು. ೧೨-೪) ; ಓಲಗ ಸಾಲೆಯ ಸಂಗೀತ ಸದನರಂಗದೊಳಚ್ಚರಸಿಯರ ಗೊಂದಣವೆಕ್ಕಣಮೆ ತೆಕ್ಕನೆ ತೀವೆ (ಅನಂಪು. ೫-೫ ವ) ; ಗೊಂದಣವೆಕ್ಕಣದಮರೀವೃಂದಂಗಳ ಬೆಳಿಯ ನಿಡಿಯ ಕಣ್ಗಾಳ ಬೆಳ್ಪುಂ ಕೆಂದಳದ ಕೆಂಪುಮಾಂತುವು ಚಂದನ ಸಿಂಧೂರರಸದ ಪೊಸ ಕಾಪ್ಪುರಮಂ (ಪುಷ್ಪಪು. ೦೨-೪೩).

[ ಗೊಂದಳ + ವೆಕ್ಕಣ ]

**ಗೊಂದಳಿಸು, ಗೊಂದಣಿಸು, ಗೊಂದಲಿಸು** (ಕ್ರಿ). ೧. ಗುಂಪುಗೂಡು ; ಒಟ್ಟಾಗು ; ದಟ್ಟೈಸು : ಅಂತು ದೇವರ್ ದೇವನೊಳಾವಗಮಾದ ತಂತಮ್ಮಾದರದಿಂ ಮಾಲೆಗಟ್ಟಿ ದುಗ್ಧವಾರಿಪೂರಿತ ಕನಕಕಲಶಂಗಳಂ ತಂದು

ಗೊಂದಳಿ [ಪಾಠಾಂ. ಣಿ] ಸಿ ಸಂದಣಿಸಿ ನೀಡಿದಾಗಳ್ (ಆದಿಪು. ೭-೮೪ ವ): ತೊಳವ ದಂತವುರೀಚಿಸಂತತಿ ಪರ್ವಿ ಬಳ್ಳಳ ನೀಳ್ದು ಗೊಂದಳಿಸಿ . . . ಸಭಾಂತರಾಳಮನೆಲ್ಲಮಂ ಬೆಳಗೆ ಭೂವಳಯಾಧಿಪಂ ನುಡಿಗುಂ (ಕಾವ್ಯಾವ. ೮೭೬): ಬಾಳಕಂ ನಿವ್ವೊಳಾರ ಕೆಯ್ಗೆ ನೆಗೆದು ನಗುತ್ತುಂ ಬಂದನವಳ್ಗೆ ಕುಡುವನೆಂಬುದುಮರಸಿಯರೆಲ್ಲಮೆಮಗೆತಮಗೆಂದು ಗೊಂದಳಿಸಿ ಕರಕಿಸಲಯಂಗಳನಡಸಿ ನೀಡುವುದುಂ (ಅರ್ಜನೇ. ೪-೯೩ ವ); ತರಂತರದಿಂದೆನಿಸಿತ್ತು ಕಣ್ಗೆ ಗೊಂದಳಿಸಿ ಬರುತ್ತುಮಿರ್ಪ ಖಚರೀಜನವಾಳಿನಭೋಂತರಾಳದೊಳ್ (ವರ್ಧಪು. ೫-೨೬). ೨. ಬಹಳವಾಗು; ಹೆಚ್ಚಾಗು; ಅತಿಶಯವಾಗು: ಪಸರಿಸಿ ಪರ್ಬ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂದೊಸೆದಿನನೇಱುವಂತುದಯಪರ್ಬ್ಬತಮಂ (ಎಕ. VII, ಶಿಕಾರಿ. ೦೨೫-೧೯: 1019). **ಗೊಂದಣಿಸು:** ೧. ಅತಿರಥ ಸಮರಥ ಮಹಾರಥಾರ್ಧರಥರೊಂದೆವಿಂದೆಯಲ್ಲದೊಂದೊಂದೊರ್ವರೊಳ್ ಸಂಧಿಸಿ ಗೊಂದಣಿಸಿ ನಿಂದಾಗಳ್ (ಪಂಪಭಾ. ೧೦-೧೪೬ ವ); ತಮ್ಮನಿಬರೊಂದಾಗಿ ಗೊಂದಣಿಸಿ ನಿಂದ ಪಾಂಡುನಂದನರುಮಂ . . . ಕಂಡು (ಗದಾಯು. ೭-೫೬ ವ); ಮುಂದಣ ಸಾಮಂತರಾಜಪುತ್ರೋತ್ಕರದಿಂ ಗೊಂದಣಿಸಿ ಪರ್ವಿ ರಣದೊಳ್ ನಿಂದಿರ್ಪವನೇಣವಾಹನಂ ಪವಮಾನಂ (ಗಿರಿಜಾ. ೬-೬೨); ಗೊಂದಣಿಸಿ ನಡೆವ ಮದಕರಿಗಳಿಂ ಹರಿಗಳಿಂ . . . ಪಡೆ ಪಡಪಾದುದು (ಶಬರಪು. ೪೮-೨೩). ೨. "ಗೊಂದಣಿಸು–ಸಮೂಹೇ, ಬಾಹುಲ್ಯೇಚ" (ಶಮಧ). ೩. ಗದ್ದಲವೆಬ್ಬಿಸು; "ಗಲಾಟೆಮಾಡು" (ಕೃಕಣ). **ಗೊಂದಲಿಸು:** ೪. ಕಕ್ಕಾಬಿಕ್ಕಿಯಾಗು; ಗಲಿಬಿಲಿಗೊಳ್ಳು: 'ಪ್ರವಾಸ' ಎಂದರೆ ಎಂದೂ ಗೊಂದಲಿಸದ ತಾನು ಇಂದು ಇಷ್ಟೇಕೆ ಗೊಂದಲಿಸುತ್ತಿದ್ದೇನೆ (ಹೊಸಕ. ೧೬೬); ನಿರ್ಮಲೆಯ ಈ ಅನಪೇಕ್ಷಿತ ಸಿಟ್ಟಿನ ಅರ್ಥವಾಗದೇ ಗೊಂದಲಿಸಿದ ವಾಸುದೇವನಿಂದ ಕ್ಷಣಕಾಲ ಮಾತೇ ಹೊರಡಲಿಲ್ಲ (ಮೂರುದಾ. ೨೪೦). [ಗೊಂದಳ + – ಇಸು$_3$]

**ಗೊಂದಿ, ಗೊಂದು, ಗೊಂದ್ಯೆ** (ನಾ). ಇಡಕು; ವಂಱಲೆ; ಸಂದು: ಸಿದ್ಧರಾಮಾ ಎಂದು . . . ಅಬ್ಬಿಯೊಳು ಬೆಳಗೆಯ್ಯ ಸಂದಿಯೊಳು ಗೊಂದಿಯೊಳು ಗಬ್ಬರಿಸಿ ತಮತಮಗೆ ಚೀಱಿ ಕರೆದರು (ಸಿದ್ಧರಾ. ೨-೪೮): ಗೊಂದಿಯೊಳಿಹ ಜನಬಿಂಬಕೆ ಮಂದರದಂದದೆ ಜನಭವನವನೂ ರುಂದ್ರತರದೆ ಸವೆಸಿದ ವಾದಿವಿದ್ಯಾನಂದಯೋಗಿಗೆ ನಮಿಸುವೆನೂ (ಅಂಜಪ.೧-೫೦): ಪುರದ ಬಾಹ್ಯದಲೊಂದು ದೇವಾಲಯದ ಮಧ್ಯದ ಗೊಂದಿಯಲಿ ತಾ ದ್ರುಪದನೊಱಗಿರೆ (ಸಂಭಪ. ೦೬-೭೯); ದುರ್ಜನರ ಮಂದಿಯಂ ದೆಸದೆಸೆಯ ಗೊಂದಿಯಂ ಪೊಗಿಸಿ ಬಲು ಬಂದಿಯಂ ಮಾಡಿ ಜಯವೊಂದಿರ್ದ . . . ನಂದಿಯಂ ಬಲಗೊಂಬೆನು (ಶೀಲಮು. ೦-೭). **ಗೊಂದು:** ಗಿರಿಯ ಸಂದುಗುಹೆಯ ಗೊಂದುಗಳೊಳಗೆ ಅರಸಿಯಿಂದುಮುಖಿಯನಂದುಗಾಣದೆ . . . ಮರುಗುವಾಗ (ಹನುಮ. ೧೦೬); ಸಂದಿನೊಳ್ ಪುಡುಕುತುಂ, ಗೊಂದಿನೊಳ್ ನೋಡುತುಂ (ರಾಮಾಶ್ವ. ೦೦೦-೮). **ಗೊಂದ್ಯೆ:** ಬಂದು ಮಾಮರದಡಿಗಳೊಳು ತಮಾಳದ ಗೊಂ [ಪಾಠಾಂ. ವಂ] ದೆಗಳೊಳಗಱಸಿದಳು (ಶುರಾಸಾಂ. ೩೩-೪೭). [ದೇ.II ತಮಿ. ಕೊನ್ದು; ತೆಲು. ಗೊಂದಿ.]

**ಗೊಂದು** 'ಗೊಂದಿ' ನೋ.

**ಗೊಂದೆ$_1$** (ನಾ). ೧. ಎತ್ತು; ಬಸವ; ವೃಷಭ; ನಂದಿ: "ಗೊಂದೆಯ ವೃಷಭಂ" (ಶಪಿಶಂ. ೨೩); "ಗೊಂದೆಯನೆ ಶಂಭುವಾಹನಮಕ್ಕು" (ಶಶರ. ೩೩); ಹೆಟವರದೊಂದು ಗೊಂದೆ [ಪಾಠಾಂ. ಗೋಡೆ] ಮೊದಲಾಗೆ ಪಶುತ್ವನಿಬದ್ಧ ರೂಪಮಂ ತಳೆದ ದುರಾತ್ಮರಿಂದು ಪೆಸರ್ಗೊಂಡವರ್ಗೋಲಗ ವೀಯದೆಂದೊಡೆ (ಸಮಪು. ೧೦-೧೫೮); ಆ ಬಸವಂ ಪಾಯ್ದೊಡೆ ಕೆಸಱೊಳ್ ಬಸವಱದಿರ್ದೊಂದು ಗೊಂದೆ ಪೊಂದಿತ್ತಾಗಳ್ (ಚಂದ್ರಪು. ೨-೨೯). ೨. ದನ; ಕಾಲ್ನಡೆ; ಪಶು: ಗೊಂದೆಗಳಂ ಕಾಯದ ಗೋವಿಂದಂ ಕಂದುಗೊರಲನಲ್ಲದ ಮಾದೇವಂ . . . ಎಂಬಂದದಿನತಿ ವಿಭ್ರಾಜಿಸಿದಂ ರಾಜಪ್ರಭರಾಜಸುತಂ (ಜಯನೃ. ೨-೬೯); ಹಿಂಡಿಂದೊಡೆದೋಡಿ ಪೋಪ ಗೊಂದೆಯನೊಂದ ಕಂಡು (ಕುರಾಸಾಂ. ೩೦-೯೦); ಅಂಕಕ್ಕೈದಿದವರು ಗೊಂದೆಗಳ ಕಾಯ್ವರೋ ಮೇಣಾನು ನಿಮಗೆ ತಕ್ಕುದ್ಧಿಯುಸುರುವ ಸೀಕ್ಷಕರ್ತ ಫಡೆಫಡೆಯೆಂದು ಕಿಡ್ದಿದಂ ಶಶಿಜಾಲ ಬರುಮಳೆಯನವನೀಶ ಕೋಮಲ ಲತಾಂಗಗಳಿಗೆ (ಜಿಮಮು. ೮-೨೪).

[ದೇ.II ತುಳು. ಗಂದೆ; ತೆಲು. ಗೋದ; ಕೊಲಾ. ಕೊಂದಾ. ಕೋಂದ; ಪರ್ಜಿ. ಕೋಂದ; ಗದಬ. ಕೋಂದೆ, ಕೋಂದೇ; ಗೊಂಡಿ. ಕೋಂಡಾ, ಕೋಂದ]

**ಗೊಂದೆ$_2$** 'ಗೊಂದಿ' ನೋ.

**ಗೊಂದೆಗೊರವ** (ನಾ). ಎತ್ತಿನ ಗೊರವ; ವೃಷಭವಾಹನನಾದ ಈಶ್ವರ: ಗೊಂದೆಗೊರವನ ಸೆಣಸಿ ಗೆಲಿದೆನೆಂಬಹಂಕಾರದಿಂದ ಯನ್ನಿದಿರಿನಲಿ ನಿಂದು ಕಾದುವರ ನಿನ್ನಿಂದಲವ್ವುದೆ (ನವಮೋ. ೩೨-೬).

[ಗೊಂದೆ$_1$ + ಗೊರವ]

**ಗೊಂದೆಬೊಂದಿ** (ನಾ). ೧. ಎತ್ತಿನ ದೇಹ. ೨. (ಆಲಂ) ಪಶುವಿನಂತಹವನು: ತನ್ನ ಬಿಮಂ ಮಾಱುಗೊಟ್ಟು ಪಸುವಾಟ್ಟ ಗೊಂದೆಬೊಂದಿಗೆ . . . ಬೆಸಲಾದ ಮಡದಿಯಂ ಬಡಿವ ಮಾನಸರಕ್ಕಸಂಗೆ ಕಣ್ಗೆ ಕಾಣಲ್ಬಾರದೊಂದು ಮೈಮೆವೆತ್ತು ನಿಂದಿರ್ಕುಂ (ರಾಮಾಶ್ವ. ೭೪-೦).

[ಗೊಂದೆ$_1$ + ಬೊಂದಿ]

**ಗೊಂದೆವಳವಿಗ** 'ಗೊಂದೆವಟವಿಗೆಯ' ನೋ.

**ಗೊಂದೆವಳವಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಳವಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟಯಿಗೆ** 'ಗೊಂದೆವಟವಿಗೆ' ನೋ.

**ಗೊಂದೆವಟಯಿಗೆಯ** 'ಗೊಂದೆವಟವಿಗೆಯಂ' ನೋ.

**ಗೊಂದೆವಟವಿಗೆ, ಗೊಂದೆವಳವಿಗೆ, ಗೊಂದೆವಟಯಿಗೆ** (ನಾ). ಎತ್ತಿನ ಗುರುತುಳ್ಳ ಬಾವುಟ; ವೃಷಭಧ್ವಜ. 'ಗೊಂದೆವಟವಿಗೆಯ' ಪರಾ. **ಗೊಂದೆವಳವಿಗೆ:** ಗೊಂದೆವಳವಿಗೆಯವನು ಹೆಕ್ಕಳದಿಂದ ಚಿನ್ನದ ತಟ್ಟೆಯೊಳು ವೀಟಕೆಯ ತರಿಸಿತ್ತು (ಅಜಾಪಿ. ೬-೬). 'ಗೊಂದೆವಳವಿಗೆಯ' ಪರಾ. **ಗೊಂದೆವಟಯಿಗೆ:** 'ಗೊಂದೆವಟಯಿಂಗೆಯ' ಪರಾ.

[ಗೊಂದೆ$_1$ + ಪಟವಿಗೆ]

**ಗೊಂದೆವಟವಿಗೆಯಂ, ಗೊಂದೆವಳವಿಗ, ಗೊಂದೆವಳವಿಗೆಯಂ, ಗೊಂದೆವಟಯಿಂಗೆಯ** (ನಾ). ಎತ್ತಿನ ಗುರುತಿನ ಬಾವುಟವುಳ್ಳವನು; ವೃಷಭಧ್ವಜ; ಶಿವ: "ಎಳೆದೇರ . . . ಗೊಂದೆವಟವಿಗೆಯನೆಣ್ಕೆಯ್ಯುವಂ . . . ಗಂದರಗಿವಿಯನೀಸರಂ ದೇಸಿಗಂ" (ಚಲ್ಮನುಂ. ೩). **ಗೊಂದೆವಳವಿಗ:** ಅಮರ್ದನುಂಬರಿಂ ತುಱಲ್ಗೊಂಬ ಗೊಂದೆವಳವಿಗ ಗೊರವನೇ . . . ಪೊರೆಗೆಮ್ಮನು (ನವಮೋ. ೩೨-೧). **ಗೊಂದೆವಳವಿಗೆಯ:** "ಅಂಬಿಕಾಪತಿ ಗೊಂದೆವಳವಿಗೆಯ ಗೊರವನುಂ" (ಕಶರ. ೩೩). **ಗೊಂದೆವಟಯಿಗೆಯ:** "ಎಣ್ಮೆಯ್ಯಂ, ಗೊಂದೆವಟಯಿಗೆಯಂ . . . ಐವೊಗಂ–ಈ ೩೩ ಈಶ್ವರಂಗೆ ಪೆಸರ್" (ಕಶಸಾ. ೧-೧); "ಗೊಂದೆವಟಯಿಗೆಯ ದೇಸಿಗನೆಂದುಂ ಪೆಣ್ಗೊಡೆಯ ಕಿರ್ಚುಗಣ್ಣನೆನುತ್ತುಂ . . . ಪೇೞ್ವರ್ ಸ್ಮರಹರಂಗೆ ನಾಮವಿದೆನುತುಂ" (ಕಪಿಶಂ. ೧೬). [ಗೊಂದೆವಟವಿಗೆ + – ಅ$_7$]

**ಗೊಂಬಚ್ಚೆ** (ನಾ). ಒಬ್ಬಾಕೆಯ ಹೆಸರು: ಪೊಲೆಯಮ್ಮನ ಪೆಣ್ಣಾತಿ ಗೊಮ್ಮಬ್ಬೆ (ಎಕ. VIII, ಸೊರಬ. ೭೦-೧೫: 938). [ಗೊಂಬೆ$_1$+ಅಬ್ಬೆ$_1$]

**ಗೊಂಬುಕ್ಕಿ** (ನಾ). ಒಂದು ಸ್ಥಳದ ಹೆಸರು: ನೆಲ್ಲಿವರ ಕಾಳಕನ್ನ ಕಲಿಕಬ್ಬರಾನಿಱಿದೋಡಿಸಿ ಗಾಸ್ಸಿನಾಡಕ್ಕಲಿದೊಱೆಗಳುಂ ಗೊಂಬುಕ್ಕಿ ಅರಸರುಂ ಪಡೆದುದು (ಎಕ. X ಮಾಲೂರು. ೯೩-೨; ಸು. 750). [?]

**ಗೊಂಬೆ$_1$** (ನಾ). ೧. ಬೊಂಬೆ; ಪ್ರತಿಮೆ; ಪುತ್ಥಳಿ : ಗೊಂಬೆಯವು ತಾವೇತಕಿಲ್ಲವು ಅಪ್ರಯೋಜಕವು ಗೊಂಬೆಯಹ ದೇವರನೆ ಮಾರಿಯೆ ತಂಬಿಗೆಯ ತಪ್ಪಲೆಯ ಕೊಂಡರೆ ಉಂಬದಕೆ ಕುಡಿವದಕೆ ಬಾಹದು (ಹ್ಯಾಸಸಿಂ. ೩೮-೧೪); ಏನು ಬೇಡ, ಗೊಂಬೆ, ತಿಂಡಿ, ಮುದ್ದು ಬೇಡ(ರಾಮಾನ. ೮೬); ಕಣ್ಣನಾಗಿನ ಗೊಂಬೀ ಹಾಂಗ ಎದ್ಯಾಗ ನಟ್ಟಾಂವಾ (ಸಖೀಗೀ. ೯೨-೨೨); ಗೊಂಬೆ ಮಾತನಾಡದು, ರಂದೆ ಕಾಣಸಿಕ್ಕಳು (ಗಾದೆ). 'ಬೊಂಬೆ' ಪರಾ. ೨. ಕಣ್ಣಿನ ಗುಡ್ಡೆ : (ಕ). [ ದೇ.೩ ತುಳು. ಗೊಂಬೆ ]

**ಗೊಂಬೆ$_2$** (ನಾ). ಗುಂಪು; ಸಮೂಹ : " ಜಂಗುಳಿ . . . ಗೊಂಬೆ . . . ಜಾಳಿಗೆಯುಮೆನೆ ಶ್ರೇಣಿಕಾಖ್ಯಂ " (ಕಬ್ಬಿಕ್ಕ. ೧೬) : " ಗೊಂದಣಿ ತೆರಳ್ಕೆ . . . ಗೊಂಬೆ ಜಂಗುಳಿ . . . ತೊಂಬೆಯೆನೆ ಶ್ರೇಣಿಕಾಖ್ಯಂ " (ಅಭ್ಯಮಂ. ೩೩). [ ಇದು 'ದೊಂಬೆ' ಎಂಬುದರ ಅಪಲಿಖಿತವಿರಬಹುದು. ]

**ಗೊಂಬೆಮದುವೆ** (ನಾ). ಮಕ್ಕಳು ವಿನೋದಕ್ಕಾಗಿ ಬೊಂಬೆಗಳಿಗೆ ಮಾಡುವ ಮದುವೆ ಮತ್ತು ಅಂತಹ ಮದುವೆಯ ಆಟ : ಗೊಂಬೆ ಮದುವೆಯನೊಮ್ಮೆ ಮಾಡಿ, ಚೆನ್ನೆಯಕ್ಕಡಿಯೊಮ್ಮೆ ಹೂಡಿ, ಆಡಿಸುವೆ ಪಲಮಾಟವಾಡಿ–ಕಣ್ಣುಮುಚ್ಚಿಕೆಯಲ್ಲದೆ (ಗೀವಿಂ. ೬೧-೧೩).

[ ಗೊಂಬೆ$_1$ + ಮದುವೆ ]

**ಗೊಂಬೆಯಾಟ** (ನಾ). ೧. ಆಟಗಾರರು ದಾರಗಳ ಮೂಲಕ ಬೊಂಬೆಗಳನ್ನು ಕುಣಿಸಿ ತೋರಿಸುವ ಆಟ; ಸೂತ್ರದ ಬೊಂಬೆಯಾಟ : ಜನನಮರಣಗಳ ಸೂತ್ರದಲ್ಲಿ ನಡೆಸಿರುವ ಗೊಂಬೆಯಾಟ (ಮುಕ್ತಕಿಂ. ೨೪-೦೬); ಕೆಲವು ವಿಗ್ರಹಗಳ ಕೈ ಕತ್ತು ಕಾಲುಗಳ ಸ್ಥಳದಲ್ಲಿ ರಂಧ್ರ ಮಾಡಿರುವದರಿಂದ ಬಹುಶಃ ಸೂತ್ರದ ಗೊಂಬೆಯಾಟವೂ ಪ್ರಚಾರದಲ್ಲಿದ್ದಿತು (ಧಾರದ. ೧೩). ೨. ಬೊಂಬೆಗಳನ್ನು ಇಟ್ಟುಕೊಂಡು ಮಕ್ಕಳು ಆಡುವ ಆಟ; ಬೊಂಬೆಆಟ : ಮಕ್ಕಳು ಗೊಂಬೆಯಾಟ ಆಡುತ್ತಿವೆ (ರೂಢಿ). [ ಗೊಂಬೆ$_1$ + ಆಟ ]

**ಗೊಂಬೆರಂಭ** (ನಾ). ತೊಗಲುಬೊಂಬೆಯನ್ನು ಕುಣಿಸುವವನು; ಕಿಳ್ಳಿಕೇತ : ಗೊಂಬೇರಂಭರಾದ ರಾಮ, ಸಂಜೀವ, ಗೋವಿಂದ–ಇವರು ಬಂದರಂತೂ ಗೌಡರಿಗೆ ಸಂತೋಷವೋ ಸಂತೋಷ (ಸಣ್ಣರು. ೦೧೯).

[ < ಗೊಂಬೆರಾಮ ]

**ಗೊಂಬೆರಾಮ** (ನಾ). = ಗೊಂಬೆರಂಭ : " ಗೊಂಬೆರಂಭರು : ತೊಗಲು ಗೊಂಬೆಯನ್ನು ಕುಣಿಸುವವರು . . . ಗೊಂಬೇರಾಮರು ಎಂದೂ ಇವರನ್ನು ಕರೆಯುತ್ತಾರೆ " (ಸಣ್ಣರು. ಟಿಪ್ಪಣಿ).

[ ಗೊಂಬೆ$_1$ + ರಾಮ ]

**ಗೊಂಬೆಹಚ್ಚಡ** (ನಾ). ಬಣ್ಣದ ಚಿತ್ರಗಳಿಂದ ಕೂಡಿದ ಹಚ್ಚಡ; ವರ್ಣಚಿತ್ರಗಳನ್ನೊಳಗೊಂಡ ಹೊದ್ದುಕೊಳ್ಳುವ ಬಟ್ಟೆ : ತಂಗೀ ಮನೇಗ್ಹೋಗಿ ತಂಗಾದೆ ಹೋಗುತವನೆ ತಂಗೀಸಿ ಕೊಡು ಮಳೆದೇವ ಅಣ್ಣಯ್ಯ ಗೊಂಬೆಹಚ್ಚಡವ ಗೊರೆಯಾದೊ ಅಂಬೂ ಕೊಡುವವನೆ ಗೊಂಬೆಹಚ್ಚಡದವನೆ ರಂಭೆ ತೊಡೆಮೇಲೆ ಮಲಗಿರುವ ಮಳೆದೇವ ಅಂದಾರದಿಂದ ಕರುಣೇಸು (ಹಳ್ಳಿಯ. ೪೦). [ ಗೊಂಬೆ$_1$ + ಹಚ್ಚಡ (< ವಚ್ಚಡ) ]

**ಗೊಂಯಿ** (ನಾ). ಒಂದು ಅನುಕರಣ ಶಬ್ದ : ಸೊಳ್ಳೆಗಳ ಗೊಂಯಿ ಶಬ್ದದಿಂದ ರಾತ್ರಿ ನಿದ್ದೆಯೇ ಇಲ್ಲ (ರೂಢಿ). 'ಗುಂಯಿ' ಪರಾ.

**ಗೊಗಲ್** (ನಾ). ಒಂದು ಬಗೆಯ ಔಷಧಿಸಸ್ಯ : ಉಡಿಮರ . . . ಗೊಗಲ್, ಹೆಣ್ಣುಗೊಡ್ಡ (ವೃಕ್ಷಿಗಿ. ೩೬-೧೦೩೦). [ ? ]

**ಗೊಗ್ಗ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. ಮಕ್ಕಳನ್ನು ಹೆದರಿಸಲು ಕರೆಯುವ ಒಂದು ಕಾಲ್ಪನಿಕ ಭೂತ; ಗುಮ್ಮ : ಗೊಗ್ಗನನ್ನು ಕರೆಯುವೆನೆಂದು ಮಗುವನ್ನು ಹೆದರಿಸಿ ಮಲಗಿಸಿದಳು (ರೂಢಿ). [ < ಗೊರವ ? ]

**ಗೊಗ್ಗಯ್ಯ** (ನಾ). ೧. ಮೈಲಾರಲಿಂಗನ ಭಕ್ತ : (ಕ). ೨. = ಗೊಗ್ಗ೨ : ಗೊಗ್ಗಯ್ಯನನ್ನು ಕರೆಯುತ್ತೇನೆ ಎಂದು ಮಕ್ಕಳಿಗೆ ಹೆದರಿಸಬಾರದು (ರೂಢಿ). [ ಗೊಗ್ಗ + ಅಯ್ಯ$_1$ ]

**ಗೊಗ್ಗರ, ಗೊಗ್ಗರು** (ನಾ). ಗಂಟಲು ಒಡೆದು ಧ್ವನಿಯಲ್ಲಿ ಉಂಟಾಗುವ ಒಂದು ಬಗೆಯ ವಿಕಾರ; ಒಡಕುಧ್ವನಿ : ವನಮಾಲಿ ಗೊಗ್ಗರದ ಏರುಧ್ವನಿ ತೆಗೆದು ಕೇಳಿದನು (ಇಪ್ಪಕ. ೯೨೪); ಹದಿನಾಲ್ಕು ವರ್ಷದ ಬಾಲಕನ ಮುಖ ಕೊಂಚ ವಿಕಾರ ಹೊಂದಿದಂತೆ ಧ್ವನಿಯೂ ಗೊಗ್ಗರವಾಗುವುದು (ಶುಶ್ರೂಷು. ೧೦). ಗೊಗ್ಗರು : 'ಗೊಗ್ಗರುಧ್ವನಿ' ಪರಾ.

[ < ಗೊಂಕರು ? ]

**ಗೊಗ್ಗರು** 'ಗೊಗ್ಗರ' ನೋ.

**ಗೊಗ್ಗರುಧ್ವನಿ** (ನಾ). ಒರಟಾದ ಧ್ವನಿ; ಕರ್ಕಶವಾದ ಸ್ವರ : ಗೊಂಟರು ಕಪ್ಪೆಗಳ ಗೊಟರಿನಂತಹ ಗಡಸು ಗೊಗ್ಗರುಧ್ವನಿ ಕೇಳಿ . . . ಭಯವಾಯಿತು (ಪ್ರಶ್ನೆ. ೨೦) : ಗೊಗ್ಗರುಧ್ವನಿಯಲ್ಲಿಯೇ ಅವನು ಮತ್ತೆ ಮಾತನಾಡಿದನು (ಬಂಗಾಹೆ. ೬೩). [ ಗೊಗ್ಗರು (< ಗೊಗ್ಗರ) + ಧ್ವನಿ ]

**ಗೊಗ್ಗಿ** (ನಾ). ಒಬ್ಬಾತನ ಹೆಸರು : ಜಗಭಕ್ಷಣ ಚಕ್ರವರ್ತಿ ಗೊಗ್ಗಿಯ ಸಾಮನ್ತ × × ರ (ಎಕ. II, ೦೩೨-೨ ; ಶು. ೯೬೦) ; ಆತಂಗೆ ಚಿಕ್ಕಿಯಣ್ಣಂ ಮಾತೆ[ಗೆ]ಸತ್ಪುತ್ರನಾ ಸುಪುತ್ರಂಗೆ ಸುತಂ ನೂತಗುಣಂ ಗೊಗ್ಗಿ (ಎಕ. XI, ಚಿತ್ರದು. ೬೪-೦೦ ; ೯೬೮). [ ? ]

**ಗೊಗ್ಗಿಯಪುರ** (ನಾ). ಒಂದು ಊರಿನ ಹೆಸರು : ಗೊಗ್ಗಿಯಪುರದ ಬಾಳಚನು (ಎಕ. XI, ಚಿತ್ರದು. ೩೦-೨೨ ; ೯೬೮).

[ ಗೊಗ್ಗಿ ? + ಪುರ$_3$ ]

**ಗೊಗ್ಗಿಯಮ್ಮ** (ನಾ). ಒಬ್ಬಾತನ ಹೆಸರು : ಬಿರುದರ ಗಾಳಮುಚ್ಚನಿಯ ಭೂಜಂಗಂ ಶ್ರೀಮತ್ ಗೊಗ್ಗಿಯಮ್ಮ (ಎಕ. XI, ಹೊಳಲ್ಕೆ. ೩೩-೯ ; ೯೬೫).

[ ಗೊಗ್ಗಿ + ಅಮ್ಮ$_1$ ]

**ಗೊಚ್ಚೆ** 'ಗೊಂಚಿ' ನೋ.

**ಗೊಚ್ಚು** 'ಕೊಚ್ಚು$_4$' ನೋ.

**ಗೊಚ್ಚೆ** 'ಕೊಚ್ಚೆ' ನೋ.

**ಗೊಜಗು$_1$** (ಕ್ರಿ). ಅಸ್ಪಷ್ಟವಾಗಿ ಮಾತನಾಡು; ಮೆಲ್ಲಗೆ ಹೇಳು : ಒಂದಿನಂ ಮುಚ್ಚುಂಡೆ ಹಸಿಮಣ್ಣನುಂಡೆ ಗುದ್ದುವೂರು ಪೊಡ್ಡನನು ಸಂತೆಯಲಿ ಕಂಡೆ, ನಾಲಗೆಯ ಸಾಲದುಲಿಯಿಂ ಗೊಜಗಿತಿಂತು ಮೆಲ್ಲನೆಲೆ ತಟ್ಟಣ್ಣ ! ನನ್ನೊಳೀ ದಿಂಡೇ ? (ಗೀವಿಂ. ೦೨೦-೨೬). [ ? ]

**ಗೊಜಗು$_2$** (ನಾ). ಅಸ್ಪಷ್ಟವಾಗಿ ಮಾತನಾಡುವಿಕೆ; ಮೆಲ್ಲಗೆ ಹೇಳುವಿಕೆ: (ಕ). [ < ಗೊಜಗು$_1$ ]

**ಗೊಜಗುಟ್ಟು** (ಕ್ರಿ). = ಗೊಜಗು$_1$ : ಗೊಜಗುಟ್ಟುತ್ತಿದ್ದು ಬದ್ದಿಳಿಗೆ ಪೊಚಿಯಪ್ಪ ಕಡುನುಜುಗು ಮನದಜ್ಞಾನಿ ಜನರೆಲ್ಲ ಚಿರಿಯರೆ (ಮುದೀಪು ೩೦-೨೩) ; ಗದ್ಗದಃ ಗೊಜಗುಟ್ಟುವುದಾಗಿ (ಶಾಹಟೀ. ೨-೩-೪೦ ಪ).

[ ಗೊಜಗು$_2$ + ಕುಟ್ಟು$_1$ ]

**ಗೊಜಡು** (ನಾ). ೧. ಹುರುಳಿಲ್ಲದ ಮಾತು : ಮಿಕ್ಕಿನ ವೇದಾಗಮಂಗಳು ಜಡ್ಡು ಗೊಜಡೆಂದು ಅವ ಬಿಟ್ಟು (ಲಿಂಗಲೀ. ೪೦೯). ೨. ಹುರುಳಿಲ್ಲದ ಮಾತನ್ನಾಡುವ ವ್ಯಕ್ತಿ: ದಾತುಗಾಣಿಸಿ ಕೊಳದ ಮಜಡುಗಳ್ಗೊಜಡುಗಳ್ ಮಾತುಮಾತಿಂಗೆ ಬಾಯಿಬಡಿಕೆಯರ್ (ಷಡಿಂ. ೨-೩೯). [ ? ]

**ಗೊಜರಗಳೆ** (ನಾ). = ಗಜರಗಳೆ : ಅವನ ಗೊಜರಗಳೆ ಯಾವಾಗಲೂ ಇದ್ದದ್ದೇ (ರೂಢಿ). 'ಕಜರಗಳೆ' ಪರಾ. [ ಗೊಜ ? + ರಗಳೆ ]

**ಗೊಜಬಜ** (ನಾ). ಗೊಂದಲ; ಸಿಕ್ಕು; ಗೋಜು: ಏಳೇಳ್ಳ ನಲವತ್ತೊಂಭತ್ತು . . . ಅಲ್ಲಿಯವರೆಗೆ ನೆನಪಿತ್ತು; ಅಲ್ಲಿಂದ ಮುಂದಕ್ಕೆ ಎಲ್ಲಾ ಗೊಜಬಜಯಾಗಿತ್ತು (ಶಾಲಿಶು. ೦೦). [ < ಗಜಬಜ ]

**ಗೊಜ್ಜ** (ನಾ). ಹಿರಿಯಂ ; ಪೂರ್ವಜ (?) : ಕೊಳಗವಂತ್ರ ಸೇ[ವೆ]ಸೊಟಗೆ ಹೇಱಂಗೆ ಸೂಱಿಲೆ ಗೊಜ್ಜ ಗೌತಳಿಗಳು ಬಿಟ್ಟ ಆಯ ಚೈತ್ರಕ್ಕೆ ವೀಸ ಪವಿತ್ರಕ್ಕೆ ವೀಸ ಅಂತು ವರುಶಕ್ಕೆ ಪೊಕ್ಕಲಿಂಗೆ ಬೇಳೆ (ಸೌಇಇ. IX-1, ೩೦೭–೪೫ : 1228). [ ? ]

**ಗೊಜ್ಜಗೆ, ಗುಜ್ಜಗೆ$_1$, ಗುಜ್ಜಿಗೆ, ಗೊಜ್ಜಿಗೆ, ಗೊಜ್ಜುಗೆ** (ನಾ). ೧. ಒಂದು ಬಗೆಯ ಸುವಾಸನೆಯ ಹೂವು ; ಮಲ್ಲಿಗೆ: ಅಳಿಗಳ ಬಳಗಂ ಜಗದ ಮನದೊಡನೆ ಸೇವಂತಿಗೆಗಂ ಗೊಜ್ಜಗೆಗಮಲ್ಲದೇನೆಱಗುಗುಮೇ (ಆದಿಪು. ೧೧–೧೨೫) ; ಸಜ್ಜುಕವೆನಿಸಿದ ಗೊಜ್ಜ [ಪಾಠಾಂ. ಜ್ಜು]ಗೆಯರಲ ಮಿಶ್ರದಿನು ಪಾಶ್ರಯಂಬಡೆದ ಹೇಮತಾಮರಸದ ಪೊಗ್ಗೆಯ ತೋಳ್ಗಟ್ಟುಗಳುಮಂ (ಜಗದಿ. ೬–೧೬ ವ) ; ಗಗನದೊಳಚ್ಚರಿಯೆನೆ ನೆಗೆದೊಗೆದುದು ಕೆಂಧೂಳಿ ಖಚರಿಯ ಸೋರ್ಮುಡಿಯಿಂದುಗುವಿರವಂತಿಯ ಸಂಪಗೆಯ ಗೊಜ್ಜಗೆಯ ಸುರಯಿಯರಲ ರಜದುರ್ವಿನದಿಂ (ವರ್ಧಪು. ೫–೨೬): ದವನದ ಭುವನಿಕೆಗಳಿಂ ಗೊಜ್ಜಗೆಯ ಗುಡಿಗಳಿಂ . . . ತಂಪಿನ ಶಾಯ್ಯನೆಯುಮೆನಿಪ ಲತಾ ಮಂಟಪಮಂ ಕಂಡು (ಶಾಂತೀಶ್ವ. ೦೦–೧೧೬ ವ) ; ಗೊಜ್ಜಗೆ ಬೀಱುಗುಮೆ ಕಂಪನಲರದ ಮುನ್ನಂ (ನೀತಿಸುಂ. I. ೩೯). ೨. "ಇರುವಂತಿಗೆ" (ಶಂಪಥಾ. ಕೋಶ) : ಅಗರುವ ಮೆಚ್ಚು . . . ಪೂತ ಗೊಜ್ಜಗೆಗಳ ಸಿಂದು ರಂಗಳೊಳಗೋಗರಗಂಪನೆ ಬೀಱುತಿರ್ಪ . . . ಸಂಪಗೆಯೊಳಗ್ಗಲಿಸಿತ್ತು ಬಸಂತ ಮಾಸದೊಳ್ (ಶಂಪಥಾ. ೫–೦೦). **ಗುಜ್ಜಗೆ$_1$** : ೩. ಸೇವಂತಿಗೆ : "ಗು[ಪಾಠಾಂ. ಗೊ] ಜ್ಜಗೆಯೆನಲ್ ಸೇವಂತಿಗೆಯ ನಾಮಮಕ್ಕು" (ಕಬ್ಬಿಕ್ಕ. ೨೧). **ಗುಜ್ಜಿಗೆ**: ೩. "ಗುಜ್ಜಿಗೆಯೆನೆ ಸಂದೇಹವಿಲ್ಲ ಸೇವಂತಿಗೆಯ ನಾಮವು" (ಶಬ್ದಮಂ. ೨೬). **ಗೊಜ್ಜಿಗೆ**: ೧. ದವನದ ಪಸುರ್ದನೆಯ ಗೊಜ್ಜಿಗೆಯ ಜಾದಿಯ (ರಾಮಾಶ್ವ. ೪೩–೮). ೨. ಮುಡಿಗೆ ಪೊಸ ಮಲ್ಲಿಗೆಯಂ ಗೊಜ್ಜಿಗೆ ಯುಮನೇಱಿಸಿ ಸಲೆ ಬಿಡ್ಜೋದರಿ ದಿವ್ಯಸತಿಯನಾರಾಧಿಸಿದಳ್ (ಲೀಲಾವ. ೧೦–೯). **ಗೊಜ್ಜುಗೆ**: ೧. ಪುಷ್ಪೋತ್ಕರದೊಳ್ ಗೊಜ್ಜುಗೆಯ ಕಂಪನವು ತಳೆದಿರ್ಕುಂ (ಲೋಕೋಪ. ೬–೪೪) ; ಧರಣಿಪನ ಕೀರ್ತಿವಧು ವಿಸ್ಫುರಿತ ನಭಃಕಬರಿಯಲ್ಲಿ ಗೊಜ್ಜು [ಪಾಠಾಂ. ಜ್ಜ]ಗೆಯ ಸರೋತ್ಕರವಾಂತವೊಲೆ ಸಿತಾಭ್ರಂ ನೆರೆದಿರೆ (ರಾಜಶೇ. ೯–೬). ☞ ಈ ಹೂವನ್ನು ಕೆಲವರು ಇರುವಂತಿಗೆಯೆಂದು, ಕೆಲವರು ಸೇವಂತಿಗೆಯೆಂದು ಭ್ರಮಿಸಿರುವರು. [ ದೇ.॥ ತಮಿ. ಕೊಱುಜ್ಞಿ ; ತೆಲು. ಗುಜರಿ ]

**ಗೊಜ್ಜಲ** (ನಾ). ಒಂದು ಬಗೆಯ ಮರ: ಗೊಜ್ಜಲ (ಮೊಯಿ).–ಮಧ್ಯಮ ಆಕಾರದ್ದು. ಇಮಾರತಿಗೆ ಬರುತ್ತದೆ (ಕಥಾಗ. ೩೯). [ ? ]

**ಗೊಜ್ಜಲು** (ನಾ). ಕೆಸರು ; ಕೊಚ್ಚೆ : ರುಧಿರ ಭಾವಿಯು ಮಜ್ಜ ಹಂಸೆಯು ಅಧಿಕ ವೀರ್ಯವು ಜೊಂಡು ಗೊಜ್ಜಲು ಅದುವೆ ಮೇದಸು ಮಾಂಸ ವೆಂಬುದು (ಜ್ಞಾನಸಿಂ. ೨೮–೨).

[ ಗೊಜ್ಜೆ$_1$ (<ಕೊಚ್ಚೆ) + – ಅಲು (< – ಅಲ್$_3$) ]

**ಗೊಜ್ಜಿಕಬ್ಬೆ** (ನಾ). ಒಬ್ಬಾಕೆಯ ಹೆಸರು : ತನ್ನಿಷ್ಟದೈವಂ ಜಿನೇಶ್ವರ ನಾತ್ಮಾಂಬಿಕೆ ಗೊಜ್ಜಿಕಬ್ಬೆ ಜನಕಂ ಗಂಗಾನ್ವಯ ಶ್ರೀವಧೂವರನಪ್ಪಗ್ಗಳ ದೇವನ್ (ಸೌಇಇ. XI-1, ೧೧೧–೧೪; 1071). ☞ಇದು 'ಗೋವಿಂದವ್ವೆ'ಯ ಗ್ರಾಮ್ಯರೂಪವಿರಬಹುದು. [ ಗೊಜ್ಜಿಕ$_0$ + ಅಬ್ಬೆ$_1$ ]

**ಗೊಜ್ಜಿಗದೇವ** (ನಾ). ಒಬ್ಬಾತನ ಹೆಸರು ; (ಗೋವಿಂದದೇವನೆಂದು ಪ್ರಖ್ಯಾತನಾದ) ರಾಷ್ಟ್ರಕೂಟವಂಶದ ಒಬ್ಬ ದೊರೆ : ಗೊಜ್ಜಿಗದೇವಂ ನೆಗಟ್ಟಂ (ಎಇ. XIII ೩೨೯–೩ ; ೯೨೦). [ <ಗೋವಿಂದ + ದೇವ ]

**ಗೊಜ್ಜಿಗೆ** 'ಗೊಜ್ಜಗೆ' ನೋ.

**ಗೊಜ್ಜು$_1$** (ಕ್ರಿ). (ಉಕ) ಚಿಮುಕಿಸು ; ಎರಚು ; ಸುರಿ ; ಹೊಯ್ಯು : ವಾರೀಗೆ ಗೆಳತೇರಂ ನೀರ ಮೇಲಾಡುತಲಿ ಮಾರಿಮಾರಿಗೆ ನೀರ ಗೊಜ್ಜುವರ (ಜೋಳಗೀ. ೧೯೧) ; ಇದಿರು–ಮಳೆ ರಭಸವಾಗಿ ಮುಖದಲ್ಲಿ ಕಣ್ಣಲ್ಲಿ ಗೊಜ್ಜುತ್ತಿದೆ (ಹೊಸಕ್ಷ. ೨೧೦) : ತಾಯಿ ಲಗುಬಗೆಯಿಂದ ನೀರು ತಂದು ಅವನ ಮುಖಕ್ಕೆ ನೀರು ಗೊಜ್ಜಹತ್ತಿದಳು (ಇಶ್ವಕ. ೩೨೩) : ಶಾನುಭೋಗರು ಉಗ್ರವಾಗಿ ಅವಾಚ್ಯಶಬ್ದಗಳಿಂದ ಹೆಂಡತಿಯನ್ನು ಬಯ್ಯುತ್ತ ಸುಡುವ ಸಾರಿನ ಬೋಗೋಣಿಯನ್ನೇ ಹೆಂಡತಿಗೆ ಗೊಜ್ಜಿಬಿಟ್ಟರು (ರಂಗಹೋ. ೪೩).

[ <ಕೊಚ್ಚು$_2$? ]

**ಗೊಜ್ಜು$_2$** (ನಾ). ೧. ಅನ್ನಕ್ಕೆ ಕಲಸಿಕೊಳ್ಳಲು ಮಾಡಿದ ಒಂದು ಬಗೆಯ ಮೇಲೋಗರ : ಗೊಜ್ಜುಮಜ್ಜಿಗೆ ಪಳದ್ಯ ಸಜ್ಜಾದ ವಸ್ತು ಮೂಜಗನ್ಮಾತೆಯು ಮುದದಿ ಬಡಿಸಿದಳು (ಕುಮಾರಕೋ. ೧೧೬); ಗೊಜ್ಜು ತಿನ್ನುವ ದೃಷ್ಟಿಯಿಂದ ನಾವು ಮಾವಿನಕಾಯನ್ನು ನೋಡಿದೆವಾದರೆ ಅದನ್ನು ಸಮಗ್ರಭಾವದಿಂದ ನೋಡೆವು (ನಿಬಂಧ. I ೧೩೫) : ಈ ಗೊಜ್ಜು, ಈ ಸಾರುಗಳನ್ನು ನಾನು ಉಣದೆ ಬಹು ದಿನಗಳಾದುವು (ಜಾಹುತ್ರ. ೬೧). ೨. ನೀರು ಸೇರಿಸಿ ಕಲ್ಕದಂತೆ ಮಾಡಿದ ಯಾವುದಾದರೂ ವಸ್ತು : ನಮ್ಮಲ್ಲಿನ ಒಂದು ಕಾರ್ಖಾನೆಯು ಬಿದಿರಿನ ಗೊಜ್ಜನ್ನು (Pulp) ಕಾಗದ ತಯಾರಿಯಲ್ಲಿ ಉಪಯೋಗಿಸುತ್ತಿದೆ (ಬಾಲಪ್ರ. II, ೮೨೩). ೩. ಅಪ್ಪಳಿತೆ ; ಹಂಳಿ : ಆಕಾಶ ಮುಟ್ಟುವಂತೆ ಬೆಳೆದಿದ್ದ ಗೊಜ್ಜಿನ ಮಾವಿನ ಮರದ ಹತ್ತಿರ (ಮಲೆಮ. ೪೫೪).

[ ದೇ.॥ ತಮಿ. ಕೊಚ್ಚು ; ತುಳು. ಗೊಜ್ಜಿ, ಗೊಜ್ಜು ]

**ಗೊಜ್ಜುಗೆ** 'ಗೊಜ್ಜಗೆ' ನೋ.

**ಗೊಜ್ಜೆ$_1$** 'ಕೊಚ್ಚೆ' ನೋ.

**ಗೊಜ್ಜೆ$_2$** 'ಗುಜ್ಜೆ$_1$' ನೋ.

**ಗೊಜ್ಜೆ$_3$** (ನಾ). ಒಂದು ಬಗೆಯ ಸುವಾಸನೆಯ ಹೂವು : ತಣ್ಣಂಪಿಂ ದೊಪ್ಪುವುದದಱಿಂದಲರೊಳಗೆ ಗೊಜ್ಜೆ [ಪಾಠಾಂ. ಜ್ಜ]ಗೊಜ್ಜಗೆಯ ವಲಂ (ಆದಿಪು. ೧೦–೨೨೬) ; ಗೊಜ್ಜೆಯ ಸಂಕಡಿಗಳಿಂ ಪನ್ನೀರ ನೀರ್ದಳಿಪದಿಂ . . . ತಣ್ಪಿನ ತಾಣಮುಮೆನಿಸಿರ್ಪ ಲತಾಮಂಟಪಮಂ ಪೊಕ್ಕು (ಕುಸುಮಾ. ೧೨–೧೫೬ ವ). 'ಗೊಜ್ಜಗೆ' ಪರಾ.

[ ? ]

**ಗೊಜ್ಜೆಗೆದಾಱ** (ನಾ). (?) : ಆವಣೂರದಮ್ಮೆಯನ ಭೂಮಿ ಅಯ್ದು ಹಣವಿನ ಬಳದೊಳಗೆ ಗೊಜ್ಜೆಗೆದಾಱ ಒನ್ದು ಹಣವಿನ ಕೆಯ್ಯ ಆವಣೂರ ದೇವರ್ಗ್ಗೆ ಬಿಟ್ಟ ನಾಲ್ಕು ಹಣವಿನ ಕೆಯ್ಯ . . . ಸೇವೆ (ಎಕ. VI, ಚಿಕ್ಕಮ. ೬೨–೩೪ ; 1068 ? ). [ ? ]

**ಗೊಟಕ್** (ನಾ). ಒಂದು ಅನುಕರಣ ಶಬ್ದ.

**ಗೊಟಕ್ ಅನ್ನು, ಗೊಟಕ್ ಎನ್ನು** = ಸಾಯು ; ಮರಣಹೊಂದು : ನನಗೂ ಬಾಣಂತಿಕ್ಷಯ ಬಂದು, ನಾನು ಗೊಟಕ್ ಅಂದರೆ ನೋಡಿದವರು ಏನನ್ನುತ್ತಾರೆ ಹೇಳಿ (ಕಾಯಕ. ೪೦) : ಈಕೆ ಯಾವಾಗ ಗೊಟಕ್ ಅಂತಾಳೋ (ಮಡ್ಡಿಹ. ೧) ; ನಾನೇನಾದರೂ ಗೊಟಕ್ ಎನ್ನುವುದಾದರೆ ಆ ಭೂಮಿಯ ಹಕ್ಕು ನಿನ್ನ ಮಕ್ಕಳಿಗೆ ಲಭಿಸುತ್ತದೆ (ಪುನರು. ೪೬೨).

**ಗೊಟಗುಣಿ** 'ಗೊಟ್ಟುಗುಣಿ' ನೋ.

**ಗೊಟಗೊಟ** (ನಾ). ಒಂದು ಅನುಕರಣ ಶಬ್ದ : ಬಹಳ ಬಾಯಾರಿದ ಅವನು ಒಂದು ತಂಬಿಗೆ ನೀರನ್ನೆಲ್ಲಾ ಗೊಟಗೊಟಯೆಂದು ಕುಡಿದುಬಿಟ್ಟ (ರೂಢಿ).

**ಗೊಟರ್, ಗೊಟರು$_1$** (ನಾ). ಒಂದು ಅನುಕರಣ ಶಬ್ದ. 'ಗೊಟರ್ಗುಡು' ಪರಾ. **ಗೊಟರು$_1$** : 'ಗೊಟರಂಕಪ್ಪೆ' ಪರಾ.

**ಗೊಟರುಹಾಕು**=(ಕಪ್ಪೆ ಮುಂತಾದುವುಗಳು) ಗೊಟರ್ ಗೊಟರ್ ಎಂದು ಶಬ್ದಮಾಡು ; ವಟಗುಟ್ಟು : ಗೊಟರುಹಾಕುವ ಗೊಟರು –ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದೆ ರಾಜಣ್ಣಾ ಎದ್ದು ಕೂತ (ಪ್ರಕೃ. ೧).

**ಗೊಟರು$_1$** 'ಗೊಟರ್' ನೋ.

**ಗೊಟರು$_2$, ಗೊಟರೆ** (ನಾ). ಕೊರಕಲು ; ತೂತು ; ರಂಧ್ರ ; ಪೊಟರೆ : ನಾನು ಹೋಗುತ್ತಿದ್ದ ಸ್ಥಳ ಕಲ್ಲುಗೊಟರು. ನನ್ನ ಕುದುರೆಯ ಮುಂಗಾಲು ಗೊಟರಿನಲ್ಲಿ ಸಿಕ್ಕಿಕೊಂಡಿತು (ಪ್ರವಾಇ. II, ೮೬). **ಗೊಟರೆ :** ಆ ಚೆಂಡು ಯಾವುದೋ ಗೊಟರೆಯಲ್ಲಿ ಹೋಗಿ ಬಿದ್ದಿದೆ (ರೂಢಿ).

[ <ಸಂ. ಕೋಟರ ]

**ಗೊಟರುಕಪ್ಪೆ** (ನಾ). ಗೊಟರು ಗೊಟರು ಎಂದು ಕಿರುಚುವ ಕಪ್ಪೆ ; **ಗೊಂಕರುಕಪ್ಪೆ :** ಗೊಟರುಹಾಕುವ ಗೊಟರು-ಕಪ್ಪೆಗಳ ಶ್ವಾಸಕೋಶ ಎಂಥದಿರಬೇಕೆಂದು ಯೋಚಿಸುತ್ತ ನಿದ್ದೆಬಾರದ ರಾಜಣ್ಣ ಎದ್ದು ಕೂತ (ಪ್ರಕ್ರಿ. ೦). [ ಗೊಟರು$_1$ (<ಗೊಟರ್) + ಕಪ್ಪೆ$_1$ ]

**ಗೊಟರೆ** 'ಗೊಟರು$_2$' ನೋ.

**ಗೊಟಗುರ್ಗುಡು** (ಕ್ರಿ). (ಕಪ್ಪೆ ಮುಂತಾದುವುಗಳು) ಗೊಟರುಗೊಟರು ಎಂದು ಶಬ್ದಮಾಡು ; ವಟಗುಟ್ಟು: ನಸುಕಿನ ಹಕ್ಕಿಯ ಚಿಲಿಪಿಲಿಯಿಲ್ಲ ಗೊಟಗುರ್ಗುಡುತಿವೆ ಕಪ್ಪೆ (ಜೀವಂ. ೦೧೬-೬).

[ ಗೊಟರ್ + ಕುಡು$_1$ (<ಕೊಡು$_1$) ]

**ಗೊಟಾಯಿಸು** 'ಕೊಟಾಯಿಸು' ನೋ.

**ಗೊಟಾಳಿ** 'ಫೋಟಾಳಿ' ನೋ.

**ಗೊಟ್ಟ$_1$** 'ಕೊಟ್ಟ$_1$' ನೋ.

**ಗೊಟ್ಟ$_2$** 'ಕೊಟ್ಟೆ$_1$' ನೋ.

**ಗೊಟ್ಟ$_3$** 'ಗೊಂಟು' ನೋ.

**ಗೊಟ್ಟ$_4$** 'ಗೊಡ್ಡು$_1$' ನೋ.

**ಗೊಟ್ಟ$_5$** 'ಕೊಟ್ಟ$_6$' ನೋ.

**ಗೊಟ್ಟ$_6$** 'ಕೊಟ್ಟ$_7$' ನೋ.

**ಗೊಟ್ಟ$_7$** (ನಾ). ಒಂದು ಬಗೆಯ ಔಷಧಿಗಿಡ : "ತನುಚ್ಛಾಯಾ-ಗೊಟ್ಟ, ಪಾಲಿ" (ಓಷಧಿ. ೬೩); ಪಾರ್ವಾಲಿ, ಕೊಡಚಿ, ಗೊಟ್ಟ (ವ್ಯಾಶಿಗಿ. ೭೯-೦೬೩೩). [ ? ]

**ಗೊಟ್ಟಂಗುಡಿ** (ಕ್ರಿ). (ಗೊಟ್ಟದಲ್ಲಿ ಹಾಕಿದಂತೆ) ಬಲವಂತದಿಂದ ಕುಡಿ; ಅತಿಯಾಗಿ ಕುಡಿ (?) : ಪುಡಿಯೊಳ್ಪುರಳ್ದಿಯುಂ ಮೆಯ್ಯಡಗಂ ತಿಱಿತಿಱಿದು ತಿಂದು ಗೊಟ್ಟಂ [ಪಾಠಾಂ. ಲ್ಲಂ] ಗುಡಿದುಂ ನೆತ್ತರನೆಂತುಂ ಹಿಡಿಂಬರಿಪು ತಣಿದನಿಲ್ಲ ದುಶ್ಶಾಸನನಂ (ಗದಾಯು. ೩-೩).

[ ಗೊಟ್ಟ$_1$ (<ಕೊಟ್ಟ$_1$) + ಕುಡಿ$_1$ ]

**ಗೊಟ್ಟಂಗುಡಿಯಿಸು** (ಕ್ರಿ). ಗೊಟ್ಟದ ಮೂಲಕ ಕುಡಿಸು ; ಬಲವಂತವಾಗಿ ಬಾಯಿಗೆ ಹೊಯ್ಯು : ಕರವೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ ಗೊಟ್ಟಂಗುಡಿಯಿಸುತ್ತೆ (ಅಜಿಪು. ೧೧-೧೦ ವ).

[ ಗೊಟ್ಟ$_1$ (<ಕೊಟ್ಟ$_1$) + ಕುಡಿಯಿಸು ]

**ಗೊಟ್ಟಂಗೊಳ್** (ಕ್ರಿ). (ನೀರು ತುಂಬಿದ) ಮರದ ಪಾತ್ರೆಯನ್ನು ತೆಗೆದುಕೊಳ್ಳು : ಅಂತು ತೇಗಿ ಗೊಟ್ಟಂಗೊಂಡು ಕೈದೊಳೆದು ಗೃಹೀತತಾಂಬೂಲನಾಗಿ ಸಂತೋಷಂಬಟ್ಟು (ದಕಕು. ೧೨-೧೩೧ ವ).

[ ಗೊಟ್ಟ$_1$ (<ಕೊಟ್ಟ$_1$) + ಕೊಳ್$_1$ ]

**ಗೊಟ್ಟಂಗೊಱೆ** (ಕ್ರಿ). (ಗೊಟ್ಟದ ಒಳಗಿನ ರಂಧ್ರದಂತೆ) ದೊಡ್ಡ ರಂಧ್ರವಾಗುವ ಹಾಗೆ ತೊಳ್ಳುಮಾಡು : ಸೀಳ್ದು ಪೋಟ್ವ ಪರವುವ ಗೊಟ್ಟಂಗೊಱೆವ . . . ಪೆಱವುಮುಗುರ್ವಪ್ಪ ಚಿತ್ರವಿಧ ವಧೆಯಿಂದಂ (ಶಾಂತಿಪು. ೭-೯೦) : ಪಲ್ಗಳಂ ನುರ್ಗುಗುಟ್ಟುವುದುಂ ಕೈಗಳಂ ಗೊಟ್ಟಂಗೊಱೆವುದುಂ (ಸುಕುಮಾ. ೦೧-೪೭ ವ). [ ಗೊಟ್ಟ$_1$ (<ಕೊಟ್ಟ$_1$) + ಕೊಱೆ$_1$ ]

**ಗೊಟ್ಟಕೆರೆ** (ನಾ). ನೀರು ಪೂರ್ತಿಯಾಗಿ ಬತ್ತಿಹೋಗಿರುವ ಕೆರೆ : ಕಟ್ಟಿದವಂಗೂ ಅಳಿದವರಿಗೂ ಗೊಟ್ಟಕೆರೆ ತವರುಮನೆ (ಗಾದೆ).

[ ಗೊಟ್ಟ$_4$ (<ಗೊಡ್ಡು$_1$) + ಕೆರೆ$_2$ (<ಕೆಱೆ) ]

**ಗೊಟ್ಟಕ್ಕಿ** 'ಗೊಟ್ಟಬಟ್ಟಿ' ನೋ.

**ಗೊಟ್ಟಗುಣಿ$_1$** 'ಗೊಟ್ಟುಗುಣಿ' ನೋ.

**ಗೊಟ್ಟಗುಣಿ$_2$** (ನಾ). (ಉಕ) ನೀರು ಪೂರ್ತಿಯಾಗಿ ಒಣಗಿದ ಕುಳಿ,-ಹೊಂಡ. [ ಗೊಟ್ಟ$_4$ (<ಗೊಡ್ಡು$_1$) + ಕುಣಿ$_2$ (<ಕುೞಿ$_2$) ]

**ಗೊಟ್ಟಬಟ್ಟಿ, ಗೊಟ್ಟಕ್ಕಿ, ಗೊಟ್ಟಬಟ್ಟಿ** (ನಾ). ಒಂದು ಬಗೆಯ ಗಿಡ ; ನೆಲಬೇವು : "ಗೌರಿ ಗೊಟ್ಟಬಟ್ಟಿ [ಪಾಠಾಂ. ಕ್ಕಿ, ಟ್ಟಿ] ಪನ್ನಂಗಿಯನೆ ನೆಲಬೇವು": (ಮಂಗರಾ. ೪೯-೪೩). **ಗೊಟ್ಟಕ್ಕಿ :** ಲೊಕ್ಕಿ ಗೊಟ್ಟಕ್ಕಿ ದಿಂಡಂ ಬಿರಬಿಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ (ಗಿರಿಕ. ೧-೬೨) ತುಂಬುರ ಬನ್ನಿ ಗೊಟ್ಟಕ್ಕಿ ದಿಂಡ (ಕುಕ್ಕಾಂಗ. ೯-೩೬). **ಗೊಟ್ಟಬಟ್ಟಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ? ]

**ಗೊಟ್ಟಬಟ್ಟಿ** 'ಗೊಟ್ಟಬಟ್ಟಿ' ನೋ.

**ಗೊಟ್ಟವಾಡಿ** (ನಾ). ಒಂದು ಸ್ಥಳದ ಹೆಸರು ; ನಂಜನಗೂಡು ತಾಲ್ಲೂಕಿನ ಈಗಿನ ಗಟ್ಟವಾಡಿ: ಗೊಟ್ಟವಾಡಿಯ ಶಿಲಭಯುರ ಹೊಯ್ಸಳಗಾವುಣ್ಡ (ಎಕ. III, ನಂಜನ. ೯೯-೩ : 898).

[ ಗೊಟ್ಟ$_0$ + ವಾಡಿ$_1$ (<ಪಾಡಿ$_1$) ]

**ಗೊಟ್ಟಾಟ** 'ಗೊಡ್ಡಾಟ' ನೋ.

**ಗೊಟ್ಟಿ$_1$, ಗೋಷ್ಠಿ** (ನಾ). ೧. ಜೊತೆ ; ಒಡನಾಟ ; ಸಾಹಚರ್ಯ : "ಸಂಗತಿಯೊಳಕ್ಕು ಕವಿಜನಪುಂಗವರಿಂ ಗೊಟ್ಟಿ ಗೋಷ್ಠಿಯೆನುತುಂ ಬುವಿಯೊಳ್" (ಕವಿಕಂ. ೨೨೪) ; ಕೆಳೆಯುಂ ಗುಱಿಯುಂ ಗೊಟ್ಟಿಯುಮಳವಿಗೆ ಪಿರಿದಾಗೆ ತನಗೆ ದುರ್ಯೋಧನನೊಳ್ (ಪಂಪಭಾ. ೨-೩೮) ; ಬಸನಿಗಳ ಗೊಟ್ಟಿ ತನಗಾಗಿಸೆ ಸಂತಸದೊದವನುತ್ತಮರ ಗೊಟ್ಟಿ ಕರಂ ಕಸರಿಸಿದರ್ದಯನೇಂ ಸೊಗಯಿಸುಗುಮೆ ಚೋರಂಗೆ ಚಂದ್ರಿಕಾವಿಸ್ತಾರಂ (ವರ್ಧಪು. ೨-೩೩). ೨. ಕೂಟ; ರತಿಕ್ರೀಡೆ: ಒರ್ವಳ ಮೊಗದ ನುಣ್ಪಂಗಂ ಕಣ್ಣ ಬೆಳ್ಪಂಗ ಮೊತ್ತೆಯಿಟ್ಟು ಗೊಟ್ಟಿಗಿರಲ್ಪೋಗಿ ಪರಿತಂದು (ಲೀಲಾವ. ೨-೧೦೬ ವ). ೩. ಗುಂಪು; ಸಮೂಹ; ಸಭೆ: ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯ ಲಂಪಿನಿಂಪುಗಳ್ಗಾಗರಮಾದ ಮಾನಸರೆ ಮಾನಸರ್ (ಪಂಪಭಾ. ೪-೨೯) : ಚಟ್ಟಿಱಿದು ಘಟಮನರ್ಚಿಸಿ ನೆಟ್ಟನೆ ಪೊಸಪೂಗಳಿಂದಮನಿತುಂ ಮಧುವಿಂ ಬೊಟ್ಟಿಟ್ಟು ಮದ್ಯಪಾನದ ಗೊಟ್ಟಿ[ಪಾಠಾಂ. ಗೋಷ್ಠಿ]ಗೆ ಚಷಕಮನೆ ಕೊಂಡು ಕಾಂತೆಯರೆಸೆದರ್ (ಕುಸುಮಾ. ೧೧-೧೩೮); ಹುರುಡಿನ ಮನೆ ಹೋರಟೆಯ ನಿಕೇತನ ಗರುವರ ಗೊಟ್ಟಿ ಗಾವಿಲರ ನೆರವಿಯಿಲ್ಲದ ಗಣಿಕೆಯರಾವಾಸಗಳ್ನಿರುಪಮವೆನಲೊಪ್ಪುತಿಹವು (ಅಂಜಕ. ೩-೯೩). ೪. ಮಾತುಕತೆ ; ಸರಸಸಲ್ಲಾಪ ; ಹರಟೆ: ಅನ್ನೆಗಂ ಕಾಷ್ಠಕೂಟನೆಂಬ ಬೆಸದಮ ಪುಳ್ಳಿಯ ಪೊಱೆಯಂ ಪೊತ್ತು ಪೊಟಲ್ಗೆವರ್ಪೊನಂ ಕಂಡಾತನೊಡನೆ ಗೊಟ್ಟಿಯೊಳ್ ಬಂದು (ವಡ್ಡಾರಾ. ೭೬-೨೪) ; ಕಣ್ಣಱಿದು ಗೊಟ್ಟಿಗೆಯ್ದೆ ಗೊಟ್ಟಿಗಂ ಬಗೆಯಱಿದು ನಗುವ ನಗೆಗಂ . . . ಮನಂದೆಟ್ಟು ಪತ್ತೆಪೊಯ್ದಂತಾಗಿರೆ (ಶಾಂತಿಪು. ೩-೫೯ ವ) : ನಾನಾರತ್ನದಿನೊಪ್ಪುಗುಂಮಾನಾಡಕ್ಕರದ ಗೊಟ್ಟಿಯಿಂ ಪಂಡಿತರಿಂ (ಬೊಂಕಶಾ. ೧೯೪೪. ಬಂಕಾಪುರ. ೨೧-೧೩ : 1069). **ಗೋಷ್ಠಿ :** ೫. (ಕರಾ) ಉಸಾಬರಿ ; ಗೊಡವೆ : ನಮಗೆ ಅವರ ಗೋಷ್ಠಿಯೇ ಬೇಡ (ರೂಢಿ). ೬. ಸಾರ್ವಜನಿಕ ಕೆಲಸಗಳಿಗಾಗಿ ಕೊಟ್ಟ ದತ್ತಿ, ದಾನಗಳ ವಿನಿಯೋಗವನ್ನು ನೋಡಿಕೊಳ್ಳುವ ವ್ಯಕ್ತಿ ; ಧರ್ಮದರ್ಶಿ : ನಾಗದೇವನೀ ಧರ್ಮದೊಳ್ ಗೋಷ್ಠಿ ಆದೋಮ್ (ಎಇ. VII, ೨೦೦-೨೨ : 865).

**ಗೊಟ್ಟಿಗವರ್=ಗೋಷ್ಠಿಗೆ ಬರು** ; ಜತೆಗಾಗಿ ಬರು : ಒಂದೆಡೆಯೊಳ್ ನಾಲ್ವರಯ್ವರ್ ಗಾಟ್ಸೊಟ್ಟಿರ್ದಲ್ಲಿಗೊರ್ವನೆಗ್ಗಂ ಗೊಟ್ಟಿಗೆವಂದು ಕಣ್ಣಱಿಯದೆ ಸೋಂಕೆಯುಂ (ಪಂಪಭಾ. ೪-೯೩ ವ). [<ಸಂ. ಗೋಷ್ಠೀ]

**ಗೊಟ್ಟ₂** 'ಕೊಟ್ಟ₇ ನೋ.

**ಗೊಟ್ಟಗಾಣ** (ನಾ). ೧. ಮೇಳಸಂಗೀತ; ಗೋಷ್ಠಿಗಾನ: ಲತಾಗೃಹಮಿಲ್ಲದ ಗೊಟ್ಟಗಾಣಮಿ[ಪಾಠಾಂ. ೦]ಲ್ಲದ ಕಡೆವಟ್ಟ ಸೂಳೆವನೆಯಿಲ್ಲದವಿಲ್ಲವು ಸೂಳೆಗೇರಿಯೊಳ್ (ಮಲ್ಲಿಪು. ೨-೩೭) : (ಸೂಕ್ತಿಸು. ೪-೦೩೩ ನೋ). ೨. ಗೋಷ್ಠಿಗಾನದಲ್ಲಿ ಭಾಗವಹಿಸುವವನು : ಗೊಟ್ಟಗಾಣರಂತಿರೆ ಮಱುದುಂಬಿ ಮೇಳದವರಂತಿರೆ ಸಾರಿಕೆ ರಾಜಗೇಹದಂತಿರೆ ಕೊಳನಲ್ಲಿ ತಾಮರಸ ರಂತಿರೆ ತಾಮರಸಂಗಳೊಪ್ಪುಗುಂ (ಪಂಪಭಾ. ೩-೫೮).

[ ಗೊಟ್ಟ₁ + ಗಾಣ₃ ]

**ಗೊಟ್ಟಗಾಳೆಗ** (ನಾ). ಗುಂಪುಗಾಳಗ ; ತುಮುಲಯುದ್ಧ : ಪೊಳ್ತನಿತ ನಂತರಂ ಪೊಳ್ತೇರೆ, ಪೊಳ್ತರೆಯ ಕದಿರುಗಳಿಟ್ಟಣಿಸಿದ್ದೈಕಿಲಿಗೆ ಗೊಟ್ಟಗಾಳೆಗವಾಗಿ, ಸೋಲ್ತು ಮಂಜಿನ ಸೇನೆ (ಶ್ರೀರಾಮಾ. ೨೦೦-೧೬೩).

[ ಗೊಟ್ಟ₁ + ಕಾಳೆಗ ]

**ಗೊಟ್ಟಗಾಱ** (ನಾ). ಗೋಷ್ಠಿಗೆ ಸಂಬಂಧಿಸಿದವನು ; ಸಂಗೀತ, ನಾಟ್ಯ ಮುಂತಾದ ವಿನೋದ ಗೋಷ್ಠಿಗಳನ್ನು ಏರ್ಪಡಿಸುವವನು ಅಥವಾ ಅದರಲ್ಲಿ ಭಾಗವಹಿಸುವವನು : ಗರುವರ ಗೊಟ್ಟಗಾಱ [ಪಾಠಾಂ. ಣ]ರ ನೆಗಲ್ತೆಯ ಪಿಂಡರ . . . ಅಗರಮನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುವು ಸೂಳೆಗೇರಿಗಳ್ (ಅಭಿ.ಕಾ. ೪೨).

[ ಗೊಟ್ಟ₁ + -ಗಾಱ (<-ಕಾಱ) ]

**ಗೊಟ್ಟಗೆ₁** (ನಾ). ೧. ಸಭೆ ; ಗೋಷ್ಠಿ : ಆಮುವೊಂದುದಿವಸಮಾತನಂ ಪರಸರ್ ಪೋಗಿ ಗೊಟ್ಟಗೆಯೊಳ್ ಕುಳ್ಳಿರೆ ಗೊಟ್ಟಗೇಯಮಾಗೆ (ಶಾಂತಿಪು. ೨-೨೦ ವ). ೨. ಒಂದಂ ಬಗೆಯ ಆಟ : ಉಯ್ಯಾಲೆ ಜೋಹೋ ಅಳವಾಳ ಗೊಟ್ಟಗೆ ಅಟ್ಟಗೆ ಮುಟ್ಟಗೆ (ವಿಷ್ಣು.ಸು. ೧೯-೩).

[ <ಸಂ. ಗೋಷ್ಠಿಕ ]

**ಗೊಟ್ಟಗೆ₂** 'ಗೋಟಾಗೆ' ನೋ.

**ಗೊಟ್ಟಗೆಯಪ್** (ಕ್ರಿ). ೧. ಸಭೆ ಸೇರು ; ಗೋಷ್ಠಿ ನಡೆಸು. ೨. ಸರಸ ಸಲ್ಲಾಪವನ್ನು ಮಾಡು : ಕಣ್ಣಾಲಿದು ಗೊಟ್ಟಗೆಯ್ದು ಗೊಟ್ಟಗಂ . . . ಮನಂಬೆಚ್ಚು ಪತ್ತೆ ಪೊಯ್ಯಂತಾಗಿರೆ (ಶಾಂತಿಪು. ೩-೫೯ ವ) : ಅಂತಾತನಂ ಮೇಳಿಸುತ್ತ ಮಂಗಡಿಗಳೊಳವಮರಮನೆಗಳೊಳಮಾಟಪಾಟದೆಡೆಗಳೊಳಂ ಪರಿಚಯದಿಂ ಶೃಂಗಾರಕಥಾರಸದೊಳಂ ಗೊಟ್ಟಿ [ಪಾಠಾಂ. ಗೋಷ್ಠಿ] ಗೆಯ್ಯುತ್ತಿರೆ (ಪಂಚಾರಿ. ೩-೩೦ ವ). [ ಗೊಟ್ಟ₁ + ಕೆಯ್₁ ]

**ಗೊಟ್ಟಗೇಯ** (ನಾ). ಮೇಳಗಾನ ; ಸಮೂಹಗಾನ : ಆವುದುವೊಂದು ದಿವಸಮಾತನಂ ಪರಸರ್ ಪೋಗಿ ಗೊಟ್ಟಗೆಯೊಳ್ ಕುಳ್ಳಿರೆ ಗೊಟ್ಟಗೇಯಮಾಗೆ (ಶಾಂತಿಪು. ೨-೨೦ ವ). [ ಗೊಟ್ಟ₁ + ಗೇಯ ]

**ಗೊಟ್ಟಿರ್** (ಕ್ರಿ). ಗೋಷ್ಠಿಯಲ್ಲಿರು; ಜತೆಯಲ್ಲಿರು ; ಸಹವಾಸಮಾಡು: ನೆರದೆವ್ವೊಳಿಂತು ಸದ್ವಾವದೆ ಗೊಟ್ಟಿರಲ್ ಬಯಸಿ ಬಂದೆಯದೇಗಳ ದೂಳ್ಕಿತಾಯ್ತು (ಪಂಪಭಾ. ೯-೯೩). [ ಗೊಟ್ಟ₁ + ಇರ್₁ ]

**ಗೊಟ್ಟು₁** 'ಗೊಡ್ಡು₁' ನೋ.

**ಗೊಟ್ಟು₂** 'ಕೊಟ್ಟಿ₁' ನೋ.

**ಗೊಟ್ಟುಕಾಲ** (ನಾ). ಮಳೆಯಿಲ್ಲದಿರುವ ಕಾಲ; ಅನಾವೃಷ್ಟಿ; ಬರಗಾಲ: (*). [ ಗೊಟ್ಟು₁ (<ಗೊಡ್ಡು₁) + ಕಾಲ ]

**ಗೊಟ್ಟುಗಟ್ಟು** (ಕ್ರಿ). ಒಣಗಿಹೋಗು ; ಮುರುಟಿಹೋಗು ; ವ್ಯರ್ಥವಾಗು : ಮದನನ ಕೆಯ್ದುಕೆಯ್ದ ಕರಶಾಪೆ ಮುರುಂಟಿದುದೆಯ್ದೆ ಗೊಟ್ಟುಗಟ್ಟಿದುದು ಸರಲ್ಗೆ ಬೀಗಿ ನನೆದೋಱುವ ಪೂಗುಡಿ . . . ರಾಮಚಂದ್ರಮುನಿನಾಥನ ಶಾಂತಿರಸಾತಿರೇಕದಿಂ (ಅನಂಪು. ೧-೨೪).

[ ಗೊಟ್ಟು₁ (<ಗೊಡ್ಡು₁) + ಕಟ್ಟು₁ ]

**ಗೊಟ್ಟುಗುಳಿ** 'ಗೊಟ್ಟುಗುಟಿ' ನೋ.

**ಗೊಟ್ಟುಗುಟಿ**, ಗೊಟಗಣಿ, ಗೊಟ್ಟಗುಣಿ₁, ಗೊಟ್ಟುಗುಳಿ (ನಾ). ಒಂದು ಬಗೆಯ ಆಟ ; ಅಟ್ಟುಗುಳಿ ಆಟ : ಚದುರಂಗದ ನೆತ್ತದ ಗೌರವದ ಗೊಟ್ಟುಗುಟಿಯುಂ ಮುಟ್ಟಂ ಮನೆಯೊಳ್ ಪದೆದಿರಿಸುಗೆ ತಾನುಂ ಕಲ್ತುದು ಗಣಿಕೆಗಮದನೆ ಕಲಿಪುದತಿನಯದಿಂದಂ (ಮದತಿ. ೧೦-೩೦) : ಅಟ್ಟುಗೂಟು ಗೊಟ್ಟುಗುಟಿ ಮೊದಲಾಗೆಸೆವೊಟ್ಟುಗಳೆಯ ನೊಡಗೂಡಿ ಪುಟ್ಟಿದಂದು ಮೊದಲಾಗಿ ಮಾಡುವ ಸಖಿ ನಿಟ್ಟಿಸಿ ನುಡಿದಳಿಂತೆಂದು (ಅಂಜಿತ. ೫-೦೯೬). **ಗೊಟಗುಣಿ :** ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಚ. ೭೯). **ಗೊಟ್ಟಗುಣಿ₁ :** ಹುಡುಗಾಟ ಗೊಟ್ಟಗುಣಿ ಕುರಿಕಳ್ಳ . . . ಬಲುಪರಿ ಒಂದೊಂದು ಬಾಲಾಟದಲ್ಲಿ ನಲಿದು (ವಿಷ್ಣು.ಸು. ೧೯-೩). **ಗೊಟ್ಟುಗುಳಿ :** ಏಣಾಕ್ಷಿಯೊರ್ವಳಾಡುವ ಗೊಟ್ಟುಗುಳಿಯು ಕಟ್ಟಾಣಿ ಮುತ್ತುಗಳೊಪ್ಪಿದುವು (ಶಂಪ್ರಸಾಂ. ೧೮-೯೯). 'ಅಟ್ಟುಗುಳಿ' ಪರಾ.

[ ಗೊಟ್ಟು₂ (<ಕೊ.._₁) + ಕುಟಿ₂ ]

**ಗೊಟ್ಟುವಳ್ಳ** (ನಾ). ಒಣಗಿಹೋದ ಗುಂಡಿ,-ಹಳ್ಳ : ಅಂತವಳಣುಗನಂ . . . ಮಡಿಪಿ ಕಾಲ್ವಿಡಿದು ಸರಸರನೆಳೆದಾರುಮಱಿಯದಂತೊಂದು ಗೊಟ್ಟುವಳ್ಳದೊ[ಪಾಠಾಂ. ಗೊಂಟನೊ, ಗೋಂಟುವಳ್ಳದೊ]ಳಿಕ್ಕಿ ಪುಲ್ಲಂ ಕವಿಸುತಾಗ್ನೇಯಸ್ನಾನಮೆಸಗಿ (ವೃಷವಿ. ೧೯-೬೦ ವ).

[ ಗೊಟ್ಟು₁ (<ಗೊಡ್ಡು₁) + ಪಳ್ಳ ]

**ಗೊಟ್ಟಿ₁** 'ಕೊಟ್ಟಿ₁' ನೋ.

**ಗೊಟ್ಟಿ₂** 'ಗೊಡ್ಡು₁' ನೋ.

**ಗೊಟ್ಟಿ₃** (ನಾ). (?) : ಜಗಭಗದ ಊರ್ಧ್ವದಲ್ಲಿ ಮೋಹನದ ಗೊಟ್ಟಿ ಹುಟ್ಟಿತ್ತು, ಗೊಟ್ಟಿಯ ಪೂರ್ವದಲ್ಲಿ ಕಮಲವರಳಿತ್ತು ಕಮಲಹೃತ್ಕಮದಲ್ಲಿ ಬಿಂದುವೆ ವ್ಯಂಜನದಿಂದ ಗುರುಲಿಂಗರೂಪಾಗಿ ಪುಲ್ಲಿಂಗ ಚರಿಸಿತ್ತು (ದಾಸೋಹಂ. ೫೫). 'ಕೊಟ್ಟಿ₁' ಪರಾ. [ ? ]

**ಗೊಟ್ಟಿಗಡಿ** (ನಾ). ಒಂದು ಗ್ರಾಮದ ಹೆಸರು: ಪಶ್ಚಿಮತಃ ಮುಕ್ಕೊಡಲ್ ನಾಮಗ್ರಾಮಃ ಉತ್ತರತಃ ಗೊಟ್ಟಿಗಡಿ ನಾಮಗ್ರಾಮಃ (ಮೈಆರಿ. ೧೯೩೫, ೪೦-೭೦ : 951) : ಗೊಟ್ಟಿಗಡಿಯ ಭದ್ರಯ್ಯನ ಕಾಲ ಕನ್ನಯ್ಯ ಕಟ್ಟಿದ (ಎಕ. VIII, ಸೊರಬ. ೪೪-೧೦ : 971). [ ಗೊಟ್ಟಿ₀ + ಗಡಿ₁ ]

**ಗೊಟ್ಟಿಗೆಱೆವಳ್ಳ** (ನಾ). ಒಂದು ಹಳ್ಳದ ಹೆಸರು : ದಕ್ಷಿಣತಃ ಪರದಗೆಱೆ ವಳ್ಳಂ . . . ಉತ್ತರತೋ ಗೊಟ್ಟಿಗೆಱೆವಳ್ಳಂ (ಮೈಆರಿ. ೧೯೪೪, ೦೩-೪೦ : 725). [ ಗೊಟ್ಟಿಗೆಱೆ₀ + ಪಳ್ಳ ]

**ಗೊಟ್ಟಿಯಣ್ಣಗಾವುಂಡ** (ನಾ). ಒಬ್ಬಾತನ ಹೆಸರು: ಗೊಟ್ಟಿಯಣ್ಣ ಗಾವುಣ್ಣನೂರಳಿವಿನೊಳು ಕಾದಿ ಸತ್ತು ಸ್ವರ್ಗಸ್ತನಾದ (ಎಕ. IX, ಚನ್ನಪ. ೦೫೯-೪ : ಸು. 904 ?).

[ ಗೊಟ್ಟಿಯಣ್ಣ₀ + ಗಾವುಂಡ (<ಗಾಮುಂಡ) ]

**ಗೊಟ್ಟಿವಡ್ಡಿ** (ನಾ). ಒಂದು ಸ್ಥಳದ ಹೆಸರು: ಗೊಟ್ಟಿವಡ್ಡಿಯ ಗೋವುಣ್ಣುಗಳಂ ಸಲಾಂಭ್ಯಯರುಂ ಆನೆಯರು ಕೂಡಿ ಗೊವುಣ್ಣುಂಗೆಯ್ದುವದರ್ಕ್ಕೆ (ಎಕ. III, ನಂಜನ. ೧೯೯-೬ : ?). [ ? ]

**ಗೊಟ್ಟಿಱಿಯ** (ನಾ). ತುರುಹಟ್ಟಿಯ ಯಜಮಾನ (?) : ಗೊಟ್ಟಿಱಿಯರಮ್ಮಲಕೆ ಕೊಟ್ಟುದು ಆಯ್ತೂಮ್ಮು ಕಟನಿ (ಮೈಆರಿ. ೧೯೨೬, ೧೦೦-೮ : ೫ನೆಯ ಶತ). [ ಗೊಟ್ಟಿ₀ (<ಕೊಟ್ಟ₇) + ಎಱಿಯ ]

**ಗೊಡಗು, ಗೊಡಂಗು** (ನಾ). ೧. (ಬಾವಿಯ ಅಥವಾ ಹಗೇವಿನ ಒಳಗೆ ಆಗಿರುವ) ಡೊಗರು : (*). ೨. ಗುಂಡಿಯಲ್ಲಿ ನಿಂತಿರುವ ನೀರು; ಬಗ್ಗಡ : ದನಕ್ಕೇಕೆ ತಿಳಿನೀರು ಎಂದು ರಾಡಿನೀರನ್ನೂ ಗೊಡಗನ್ನೂ ಕುಡಿಸಬಾರದು (ಗೋಗ್ರಾ.ಸ. ೩೮). **ಗೊಡುಗು :** (*). [ ? ]

**ಗೊಡಚಿ₁** 'ಕೊಡಂಚಿ' ನೋ.

**ಗೊಡಚಿ₂** (ನಾ). ಕಣ್ಣುಗುಡ್ಡೆಯ ಮೇಲೆ ದುರ್ಮಾಂಸ ಬೆಳೆಯುವ ಒಂದು ಬಗೆಯ ರೋಗ. 'ಗೊಡಚಿಗಣ್ಣು' ವರಾ. [ ? ]

**ಗೊಡಚಿಗಣ್ಣು** (ನಾ). ದುರ್ಮಾಂಸ ಅಥವಾ ಗ್ರಂಥಿ ಬೆಳೆದ ಕಣ್ಣು : (*). [ ಗೊಡಚಿ₂ + ಕಣ್ಣು (<ಕಣ್) ]

**ಗೊಡಚಿಗಿಡ** (ನಾ). ಕೊಡಂಚಿಯ ಗಿಡ : (*). [ ಗೊಡಚಿ₁ (<ಕೊಡಂಚಿ) + ಗಿಡ (<ಗಿಡು) ]

**ಗೊಡಣಿಸು** (ಕ್ರಿ). ಗುಂಪುಗೂಡು ; ಗಡಣಿಸು (?) : ಪಾಂಡವಬಲಕ್ಕೆ ಸಂತೋಷ ಪೆಚ್ಚಿತ್ತು ಕುರುತಂಡ ಚಿಂತಾಕ್ರಾಂತರಾಗಿ ಸರಿದರು ಮಹಾ ಮಂಡಲೇಶ್ವರರು ಮನಮರುಗಿ ಕಳವಳಗೊಂಡರೊಳಗೊಳಗೆ ಗೊಡಣಿ ಸುತ ಚಂಡಭುಜಬಲಮಹಾಟೋಪದಿಂದಾಗ ಮಾರ್ತಾಂಡಸುತನೊಗ್ಗೊ ಡೆದು ಬಲವ ಕೂಡಿದರು (ಲಕ್ಷ್ಮೀಭಾ. ೪-೨೩). [<ಗಡಣ? + -ಇಸು₂]

**ಗೊಡಚಿ** 'ಗೊಬಡಿ' ನೋ.

**ಗೊಡಬೆ** 'ಗೊಡವೆ' ನೋ.

**ಗೊಡರು** (ನಾ). ಒಂದು ಅನುಕರಣ ಶಬ್ದ.

**ಗೊಡರುಹಾಕು**=(ಗೂಳಿ ಮುಂತಾದುವುಗಳಂತೆ) ಶಬ್ದಮಾಡು : (*).

**ಗೊಡಲೆ** (ನಾ). ಇಳಿಜಾರು ; ಹಳ್ಳ (?) : ಪಸಲೆಯೊಳ್ಪಸುರೇಱೆ ಪರಪಿನೊಳ್ಪೊರೆಯೇಱೆ ಗಿಡುಗಳೊಳ್ ದನಿದೋಱೆ ಗೊಡಲೆಯೊಳ್ಪೊರೆ ವೇಱೆ . . . ಪರಿವ ಬೞಿವೂನಲೆಸೆದುವೊಲ್ಲಿಂದು ತಾಣದೊಳ್ (ಅನಂಪು. ೯-೦೬ ರಗಳೆ). [ ? ]

**ಗೊಡವೆ**, ಗೊಡಬೆ (ನಾ). ತಂಟೆ ; ಗೋಜು ; ಉಸಾಬರಿ : ಅಡವಿಯಂ ಪೊಗೆದು ಸುಡುವಗ್ನಿಗಾಪೋಶನದ ಗೊಡವೆಯೇವುದು (ಜಕಶಾ. ೬-೪೩) : ಋಷಿಗೇಕಾಯುಧಂಗಳ ಗೊಡವ ಬೇಡೀ ಜನಕಜೆಯನೊಲಿಸುವುದು ಕುಲ ಯೌವನ ವಿಲಾಸವಿಚಿತ್ರವೈಭವದಿಂದ ನೀವು (ತೊರರಾ. ೧-೦೩-೩೦) : ಮಾತು ಕೇಳದ ಸೊಸೆ ಗೊಡವೆ ತಾನೇಕೆ (ಪುರಂದ. ೦-೩೦-೩) : ಅಕ್ಕಜವ ಮಾಡದಿರಿವಂ ನಿನ್ನ ವ್ಯವಳಿಗೆ ತಕ್ಕನಲ್ಲಂ ನೀನೊಲಿವ ಗೊಡವೆಯೇಕೆ (ಕೃಮಿಥಾ. ೬-೩೫) : ಅವನ ಗೊಡವೆಯೇಕೆ ಅವನಾರು ನೀನಾರು (ವಿದಾಕ್ಷೆ. ೩೬-೦) : ಊರಿಗೆ ಹೋಗದವರಿಗೆ ದಾರಿ ಗೊಡವೆ ಯಾಕೆ ? (ಗಾದೆ). **ಗೊಡಬೆ** : ಸಾಲು ಗೊಡಬೆಗೆ ಹೋಗದು ಆಱು ಗೊಡಬೆಗೆ ಬಾರದು ಮೂಱು ಕೂಳಿಗೆ ಸಿಕ್ಕದು ನೋಡಾ (ಸರ್ವಜ್ಞ. ೫೯-೩೦೪).

[ ದೇ.೫ ತುಳು. ಗೊಡವೆ ; ತೆಲು. ಗೊಡವ ]

**ಗೊಡವೆಗೊಳ್** (ಕ್ರಿ). ಯೋಚಿಸು; ಆಸಕ್ತಿ ವಹಿಸು : ನಿನ್ನನ್ನರಪ್ಪ ಕಬ್ಬಿಗರ್ ಮನೆವಾೞ್ತೆಯೊಳಿನಿಸೊಂದುಂ ಗೊಡವೆಗೊಳ್ಳದೆ . . . ಏವೊಬ್ಬುಂ ಬೆಮೆಗೊಂಡಿರ್ಪರಲೇ (ಧರ್ಮಾಕ್ಕ. ೧೧೬-೯). [ ಗೊಡವೆ + ಕೊಳ್₁ ]

**ಗೊಡಿಗ** (ನಾ). (?) : ಗೊಡಿಗರೊಡಂ ಮೂನೂರ್ವ್ವರುಂ ಒಕ್ಕಲುಂ ನಾಲ್ಗಾಮುಣ್ಡನುಂ ಇಟ್ಟು ಕೊಟ್ಟೋರ್ (ಎಇ. XIV, ೧೯೦-೪೬; 726). [ ? ]

**ಗೊಡುಗು** 'ಗೊಡಗು' ನೋ.

**ಗೊಡುಮ** (ನಾ). ಒಬ್ಬಾತನ ಹೆಸರು : ಇದರ್ಕ್ಕೆ ಸಾಕ್ಷಿ ಅಗ್ಗಿ ಸರ್ನ್ನವ್ವಯ ಗ್ಗೊರ್ಡುಮರ್ಕ್ಕೊಣ್ಣನ್ದರ್ ಒಮಜಾರ್ ಎನೆ (ಎಳ. XI, ಚಳ್ಳಕೆ. ೩೩-೪೬; ಶು. 815). [ ? ]

**ಗೊಡೆಗುಟ್ಟು** (ಕ್ರಿ). ಬಾಯಿಪಾಠ ಮಾಡುವುದಕ್ಕಾಗಿ ತಿರುತಿರುಗಿ ಗಟ್ಟಿಯಾಗಿ ಉಚ್ಚರಿಸು ; ಉರುಹಾಕು : ಬಡಬಡಗುಟ್ಟಿ ಬಾಯಾಱೆ ಬಹಳ ಕಾಲ ಗೊಡೆಗುಟ್ಟಿ ಶಾಸ್ತ್ರಿಗಳಹರ ನಡೆಯ ನಗುತ ಕ್ಷಣದೊಳು ಶಾಸ್ತ್ರ ವಾರ್ಧಿಯ ಕಡೆಗಂಡ ಕುಶಲನೆಯ್ದಿದನು (ಭರತ. ೭೨-೭೨).

[ ಗೊಡ್ಡ₂ + ಕುಟ್ಟು₁ ]

**ಗೊಡೆಗೊಡೆ** (ನಾ). ಒಂದು ಅನುಕರಣ ಶಬ್ದ : ಘುಡುಘುಡಿಸಿ ಎಲ್ಲ ರೊಂದಾಗಿ ಧೂರ್ತನ ತಲೆಯ ಪೊಡೆಯಬೇಕೆಂದವರು ನುಡಿವುತಿರೆ ಗುರು ಕೇಳಿ . . . ಗೊಡೆಗೊಡೆಯಿದೇತಕ್ಕೆ ಗುರುವಾದ ನಂಬಿರ್ದ ದೃಢಭಕ್ತರ್ಕಳ್ ನೀವು ಗುರುಭಕ್ತಿಹೀನನಾ ಗೊಡವೆಯೇತಕೆ ಬೇಗ ನಡಿಸಿರ್ದ ಶೂಲವನು ತಡೆಯದೇಱುವುದೀಗನೆ (ಪ್ರಭುಲಿ. ೬-೮).

**ಗೊಡ್ಡ₁** (ನಾ). ೧. ಮೋಸ ; ಕಪಟ ; ಕೃತ್ರಿಮ : ಇಂತಿದು ಕುಸುಮಾಸ್ತ್ರನೆಂಬಡಟನಿಕ್ಕಿದ ಸೂರ್ಕಿನ ಗೊಡ್ಡಮಾಗದೇ (ಶಂಕರಾ. ೪-೬೦) : ಇದು ನಮ್ಮಾತನ ಗೊಡ್ಡವೆಂದು ನುಡಿಯುತ್ತಿರ್ಪನ್ನಂ (ನೇಮಿಪು. ೮-೬೩) : ಶಾಲ್ಮಲಿದತ್ತೆ ನಿದ್ರೆಯನೆಚ್ಚಿತ್ತು ವಸುದೇವನನಲ್ಲಿ ಕಾಣದೆ ಪಡಿದಲ್ಲಿರ್ದಾತನ ಗೊಡ್ಡವೆಂದು ಬಾಳುಮತ್ತ ವರಮುಮಂ ಕೊಂಡು ವಾಯುವೇಗದಿನೆಯ್ದೆ ಪೋಗಲ್ (ಬಂಹರಿ. ೨-೩೬ ವ) : ಅಲ್ಲದ ಕುಲದವರ್ಗೀ ಚೆಲ್ವೀ ಭಾಗ್ಯಮುಳ್ಳಸಮೆತ್ತೀ ಚದುರು ಎಲ್ಲಿಯದೆಲೆ ರತಿ ನಿಮ್ಮಾತನ ಗೊಡ್ಡವಲ್ಲದೆ ಪೆಱತೊಂದಲ್ಲ (ನೇಮಿಸಂ. ೨೦-೯೯). ೨. ತೊಂದರೆ ; ಉಪಟಳ ; ಕೇಡು : ನೋಡರಸಾ ನಿಮ್ಮ ಸವಣರ ಗೊಡ್ಡ [ಪಾಠಾಂ. ಡ್ಡಾಟ]ಮಂ ನಿನ್ನಂ ಕೊಲಲ್ ನೆರೆದಾಯುಧಂಗಳು ಪುಟ್ಟಿಟ್ಟೊರ್ (ಬಸ್ತಾ. ರಾ. ೧೬೬-೨೫) : ಆಗಳೆ ಪಾಂಡುಪುತ್ರರಯ್ವರುಮಿದು ನಮ್ಮನಾರಯಲೆ ವೈರಿಯ ಮಾಡಿದ ಗೊಡ್ಡಮಿಲ್ಲಿ ಮಾಣ್ದರಲಣಮಾಗ ಪೂಣ್ದವಧಿಯುಂ ನೆಱೆದತ್ತು ಕಡಂಗಿ ಕಾದುವಂ ಎಂದು (ಶಂಕರಾ. ೮-೯೧) : ಎನ್ನ ಕೂಸ ನಿನ್ನುಱಿದೊಡೆ ನಿನ್ನ ಕಯ್ಯೊಳಱಿವೆಂ ಗಡ ನೋಡಿಮಿದೊಂದು ಗೊಡ್ಡಮಂ (ಲೀಲಾವ. ೨-೬೬).

**ಗೊಡ್ಡಮಾಡು**=ಕೆಡುಕನ್ನುಂಟುಮಾಡು; ಬಾಧೆ ಕೊಡು: ಗೊಡ್ಡಮಾಡಿರ್ದ್ದ ತಕ್ಕುದನೀಗಳೆ ಮಾಟ್ಪೆನೆಂದು ತೊಟ್ಟಗೆ ಪೂಱಮಟ್ಟನೇಱೆ ನಿಜವಾಹನಮಂ ದಿವದಿಂ ಸುರಾಧಿಪಂ (ಶಂಕರಾ. ೫-೧೦೦).

[ ದೇ.೫ ತೆಲು. ಗೊಡ್ಡ ]

**ಗೊಡ್ಡ₂** (ನಾ). ಪ್ರಯೋಜನವಿಲ್ಲದವನು ; ಕೆಲಸಕ್ಕೆ ಬಾರದವನು ; ಕೈಲಾಗದವನು ; ಅಪ್ರಯೋಜಕ : ಪೊಲಂಬುದಪ್ಪಿ ಕೋಟಲೆಗೊಳಗಪ್ಪ ಪಾಪ್ಮನದ ಮಾನಸರು ಸುದು ಸಂದ ಗೊಡ್ಡರು (ಚಂದ್ರಪು. ೮-೫೦) : ದ್ರೋಣಾದಿನಾಯಕರು ತರುಬಿ ನಿಂದು ಚಡ್ಡಿಯಿಲ್ಲದೆ ಸರಳುಗಳ್ಸುರಿದು ಬಲುಹೇರಿ ಗೊಡ್ಡಗಳ ತುಳಿದಾಡಿಯಲ್ಲಿರಿಸಿ ಮೆಟ್ಟಿಸುತಲಡ್ಡವಿಸಿ ಸಮ ಸೀಳುಗಳ್ಸೀಳ್ಸು ಬಿಸುಡಿದವು ದಳಗಳ ಮದೇಭಂಗಳು (ತುರಂಗ. ೪೬-೨೩).

[ ಗೊಡ್ಡು₁ + -ಅ₆ ]

**ಗೊಡ್ಡಕಾರ್ತಿ** (ನಾ). ವಂಚಕಿ ; ಮೋಸಗಾತಿ : ಕಾಯದೆ ಕಣ್ಬರಿಯಂ ತಂಗಾಯದೆ ನಿಮಗರಸನಾಣೆಯೆನೆಯೆನೆ ನೃಪತಿಯ ನಾಯಕಿಯೊಳ್ ನೆರೆದಿರ್ದ ಪಸಾಯತರಂ ಗೊಡ್ಡಕಾರ್ತಿಯರ್ ಪಿಡಿದೆಱೆದರ್ (ಸೂಕ್ತಿಸು. ೧೩-೧೬). [ ಗೊಡ್ಡು₁ + -ಕಾಱ + -ತಿ₁ (<-ಇತ್ತಿ) ]

**ಗೊಡ್ಡಾಕಳ್**, ಗೊಡ್ಡಾಕಳು (ನಾ). ಬಂಜೆಯಾದ ಹಸು ; ಗೊಡ್ಡಾದ ಹಸು : ಕಾಮಧೇನಿರ್ದುಮೂಱಿಕೆ ಗೊಡ್ಡಾಕಳನಾಳ್ವರೇ (ಸೋಮೇಶ. ೩). **ಗೊಡ್ಡಾಕಳು** : ಎಲವ ಸುರಭೂಜ ಗೊಡ್ಡಾಕಳೆ ಸುವರ್ಣ ಸುಧೇನು ಪಳುಕಿನ ಶಿಲೆಯು ಸುಮನೋರತ್ನ ಕಿಱುಗಲ್ಲೇ ಮಹಾಮೇರು (ತೊರರಾ. ೩-೬-೩೬). [ ಗೊಡ್ಡು₁ + ಆಕಳ್ ]

**ಗೊಡ್ಡಾಕಳು** 'ಗೊಡ್ಡಾಕಳ್' ನೋ.

**ಗೊಡ್ಡಾಚಾರ** (ನಾ). ಪ್ರಯೋಜನವಿಲ್ಲದ ಆಚಾರ ; ಕಂದಾಚಾರ ; ವ್ಯರ್ಥವಾದ ಸಂಪ್ರದಾಯ : ಸೂಫಿಧರ್ಮ ಗೊಡ್ಡಾಚಾರವಲ್ಲ (ಇಸ್ಲಾಂಸಂ. ೨೪೯). [ ಗೊಡ್ಡು₁ + ಆಚಾರ ]

**ಗೊಡ್ಡಾಟ**, ಗೊಟ್ಟಾಟ (ನಾ). ೧. ನಿರರ್ಥಕವಾದ ಕೆಲಸ ; ನಿಷ್ಫಲವಾದ ವ್ಯವಹಾರ : ಈಗಲ್ ಪ್ರತ್ಯಕ್ಷಂ ನೋಡು ನಿನ್ನ ಮಹಾದೇವಿ

ಆರು ಕೇಂದ್ರಗಳು. 'ಷಟ್ಚಕ್ರ'ಪರಾ. ೧೭. [ಜ್ಯೋತಿ] ಯೋಗಗಳಲ್ಲಿ ಒಂದು : ಉದಯಾದ್ಯೇಕ ಗೃಹಾಂತರಿತದೊಳೇೞುಂ ನಿಂದೊಡದುವೆ ಚಕ್ರಂ (ಜಾತತಿ. ೧೩-೪). ೧೮. [ಕಾವ್ಯವಿ] ಚಿತ್ರಕಾವ್ಯ ರಚನೆಯಲ್ಲಿ ಒಂದು ಭೇದ : ಶ್ರೀಮದರ್ಧಭ್ರಮಂ ಚಕ್ರನಾಮಂ ಮುರಜಬಂಧಕಂ (ಕವಿರಾ. ೨-೧೧೦) : ಶರಶೂಲಚಾಪಚಕ್ರಾಸಿರೂಪವಿಭರಥ ತುರಂಗ ಪದಗತಪಾಠಂ ಮುರಜಂ ಗೋಮೂತ್ರಿಕೆ (ಕಾವ್ಯಾವ. ೫೬೯). ೧೯. [ನಾಟ್ಯ] ಸಂಯುತಹಸ್ತಗಳ ಇಪ್ಪತ್ತುನಾಲ್ಕು ಪ್ರಕಾರಗಳಲ್ಲಿ ಒಂದು : ೧. ಅಂಜಲಿ . . . ೧೨. ಶಂಖ, ೧೩. ಚಕ್ರ (ಅಭಾನ್ಯ. ೪೮). ೨೦. [ಜೈನ] ಪಾರಿವ್ರಾಜಕಲಕ್ಷಣಗಳನ್ನು ತಿಳಿಸುವ ಇಪ್ಪತ್ತೇಳು ಸೂತ್ರ ಪದಗಳಲ್ಲಿ ಒಂದು : ಚಕ್ರವೆಂಬುದು ಧರ್ಮಚಕ್ರಧರನಪ್ಪ ಜಿನಪತಿಯುನಾರಾಧಿಸಿ . . . ದಿವ್ಯಚಕ್ರಮಂ ಪರಮಾತ್ಮಚಕ್ರಮಂ ಪಡೆಯಲಕ್ಕುಂ (ಚಾವುಂಪು. ೨೪೯). ೨೧. (ಆಲಂ) ಸೊನ್ನೆ ; ಇಲ್ಲದಂತಾಗುವಿಕೆ : ಏಳೆಂಟು ಮನೆಯವರು ಕೂಲಿನಾಲಿ ಮಾಡಿ ಕಾಲ ಕಳೀತಿದ್ದರು, ಬಿಟ್ಟಿಯ ದಾಳಿಯಿಂದ ಅದಕ್ಕೂ ಚಕ್ರ ಬರುತ್ತಿತ್ತು (ಪ್ರೀವಾಶ್ರ. ೨೬೬); ಘಟಿಂಗರು ನನ್ನ ನೌಕರಿಗೆ ಚಕ್ರ ತರುತ್ತಾರೆಂಬುದು ನನಗೆ ಗೊತ್ತಿದೆ (ಎಡಹೆ. ೬೯).

**ಚಕ್ರಹಾಕು** = ಇಲ್ಲವಾಗಿಸು: ಉಳಿದ ದವಸಕ್ಕೆ ಚಕ್ರಹಾಕುತಾ ಕಂಡರೆ ಸುಂಕ, ಕಾಣದಿದ್ದರೆ ಬಿಂಕ ಎಂದು ಮೆರೆಯತಕ್ಕ ರೈತರು ಅನೇಕರಿದಾರೆ (ಅದೂಟ. ೧೮). [ ಸಂ. ]

**ಚಕ್ರ₂** (ನಾ). ಪಟೇಲ, ಶಾನುಭೋಗರ ಕೈಕೆಳಗೆ ಕೆಲಸಮಾಡುವ ಸೇವಕ; ನೀರುಗಂಟಿ : ನೀರುಗಂಟಿ . . . ಇವನಿಗೆ ಕೆಲವು ಕಡೆ ಚಕ್ರನೆಂದು ಹೆಸರುಂಟು (ಗ್ರಾಮೂಕ. ೧) : ಆಯಾ ಗ್ರಾಮದ ತೋಟಿ, ತಳವಾರ, ಚಕ್ರ ಮೊದಲಾದವರನ್ನು ಕರೆದುಕೊಂಡು ಹೋಗಬೇಕು (ಅದೂಟ. ೫).

[ <ಚಾಕರ ? ]

**ಚಕ್ರ₃** (ನಾ). ಒಂದು ಬಗೆಯ ಮೀನು : ಕೂಡಿಲು ಚಕ್ರ ಗೆಂಡೆ . . . ಗಿಱಿಲುಗಳೆಂಬ ಹೊಳೆವಳಿಯ ಮೀನ್ಗಳಂ ತವಿಸುತಿಹ ಬೇಡರಂ ನೋಡಿದಂ ಭೂಪಾಲನು (ಹಚಕಾ. ೫-೪೬). [ ? ]

**ಚಕ್ರಂಗೊಳ್** (ಕ್ರಿ). ಚಕ್ರಾಯುಧವನ್ನು ಕೈಗೆತ್ತಿಕೊಳ್ಳು : ದಾನವರಿಪು ಚಕ್ರಂಗೊಳೆ ಕೌರವಾರಿ ಗದೆಗೊಳೆ ಪೊಣರ್ಕೆಗಾವಂ ನಿಲ್ವಂ (ಶಮದ. ೧೬೬ ಪ್ರಯೋ). [ ಚಕ್ರ₁ + ಕೊಳ್₁ ]

**ಚಕ್ರಕಾಣಿಕೆ** (ನಾ). ಒಂದು ಬಗೆಯ ತೆರಿಗೆ : ಚಕ್ರಕಾಣಿಕೆ ಕಡಾಯ ಸರ್ವ ಬಾಧ ಪರಿಹಾರವಾಗಿ ಬಿ[ಟ್ಟೆ]ವೆಂದು ಪರದತ್ತವ ಮಾಡಿ (ಸೌಇಇ. XX, ೨೩೯-೧೪; 1547). [ ಚಕ್ರ₁ + ಕಾಣಿಕೆ (<ಕಾಣ್ಕೆ) ]

**ಚಕ್ರಕಾರಕ** (ನಾ). ೧. ಒಂದು ಬಗೆಯ ಪರಿಮಳದ್ರವ್ಯ. ೨. "ಹುಲಿಯುಗುರಂ ಗಿಡ" (ಅಮರ. ೮೪೫). [ ಸಂ. ]

**ಚಕ್ರಗತಿ** (ನಾ). ವರ್ತುಲಾಕಾರವಾದ ಚಲನೆ; ಸುತ್ತುಹಾಕುವಿಕೆ: ಕಥೆಯ ಬೆಳವಣಿಗೆ . . . ವರ್ತಮಾನದಿಂದ ಹಳೆಯ ನೆನಪಿಗೆ, ಹಳೆಯ ನೆನಪಿನಿಂದ ಮತ್ತೆ ವರ್ತಮಾನಕ್ಕೆ ಹೀಗೆ ಚಕ್ರಗತಿಯಲ್ಲಿ ಸುತ್ತುತ್ತದೆ (ಹೊಸಕ್ಷಿ. ೨೯೪).

[ ಚಕ್ರ₁ + ಗತಿ ]

**ಚಕ್ರಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ: ಪಾದಗಳಿಂದ ಯೆದೆಯಲ್ಲಿ ಚಕ್ರಾಕಾರದಿಂದ ಪ್ರತ್ಯೇಕವಾಗಿ ತಾಡನವು ಆವುದು ಉಂಟು ಅದು ಚಕ್ರಗಾಲು (ಖಡ್ಗಟೀ. ೪-೩೧) ; ಸಮಪಾದದಿಂದ ಕುಳಿತುಕೊಂಡು ಯೇಳುವಾಗ ಎಡದ ಪಾದದ ಪಾರ್ಶ್ವಗಳು ಬಲದ ಅಂಗೈಯೊಡನೆ ಕೂಡಿಸುವದು ವಿಪರ್ಯಾಸದಿಂದ ಕೂಡಿಸುವುದಾದರೆ ಅದು ಚಕ್ರಗಾಲುಯೆಂಬುದು (ಖಡ್ಗಟೀ. ೪-೫೬). [ ಚಕ್ರ₁ + ಕಾಲು₁ (<ಕಾಲ್₁) ]

**ಚಕ್ರಗುತ್ತಿ, ಸಕ್ಕರೆಗಂತ್ತಿ, ಸಕ್ಕರೆಗುತ್ತು** (ನಾ). ಬಾಯಿ ಕಟ್ಟಿರುವ ಮೂಟೆಯನ್ನು ಚುಚ್ಚಿ ಧಾನ್ಯಗಳನು (ಪರೀಕ್ಷಾರ್ಥವಾಗಿ) ಹೊರ ತೆಗೆಯುವ ಸಾಧನ : ಚಕ್ರಗುತ್ತಿಯಿಂದ ಸ್ವಲ್ಪಬೇಳೆ ತೆಗೆ (ರೂಢಿ). ಸಕ್ಕರೆಗುತ್ತಿ: ಸಕ್ಕರೆಗುತ್ತಿಯಿಂದ ಚೀಲದ ಧಾನ್ಯವನ್ನು ಪರೀಕ್ಷಿಸು (ರೂಢಿ). ಸಕ್ಕರೆಗುತ್ತು : ಕಾಳಿನ ಮೂಟೆಗೆ ಹಾಕುವ ಸಕ್ಕರೆ ಗುತ್ತನ್ನು ಆ ಡಾಕ್ಟರ ಮೈಯಲ್ಲಿ ಎಲ್ಲಿ ತಿ ವಿ ದ ರೂ ಒಂದು ಮೂ ಳೆ ಯೂ ಸಿಗಲಿಕ್ಕಿಲ್ಲ ! (ಹುಚ್ಚುಹು. ೩೩). [ ? ]

**ಚಕ್ರಗೋಷ್ಠಿ** (ನಾ). ಬೇರೆಬೇರೆ ದೇಶದ ರಾಯಭಾರಿಗಳು ಅಥವಾ ಮುಖಂಡರು ಒಂದೆಡೆ ಸೇರಿ ನಡೆಯಿಸುವ ಚರ್ಚೆ; ದುಂಡುಮೇಜಿನ ಪರಿಷತ್ತು : ಚಕ್ರಗೋಷ್ಠಿಗಳು, ರಾಯಭಾರಿ ಸಭೆಗಳು . . . ಫಲಕಾರಿಯಾಗಲಿಲ್ಲ (ಭಾರದ. ೩೭೪) ; ೧೯೩೦-೩೨ರ ಚಕ್ರಗೋಷ್ಠಿ ಬ್ರಿಟಿಷರು ಹೂಡಿದ ಒಂದು ಕಪಟನಾಟಕವೆನ್ನಬಹುದು (ಎಚ್ಛಸಾ. ೧೧).

[ ಚಕ್ರ₁ + ಗೋಷ್ಠಿ ]

**ಚಕ್ರತೀರ್ಥ** (ನಾ). ಸುಳಿಗಳಿರುವ ತೀರ್ಥ; ಆವರ್ತಗಳಿಂದ ಕೂಡಿದ ಜಲಾಶಯ : ಬಗೆಬಗೆಯ ಬಯಕೆಗಳ ಚಕ್ರತೀರ್ಥವಾದ ಈ ಸಂಸಾರದಲ್ಲಿ ಸಿಲುಕಿದ ನಮ್ಮ ಸ್ಥಿತಿಯೂ ಹಾಗೆಯೇ ಆಗಿದೆ (ಬಿತಂಬಾ. ೩೩).

[ ಚಕ್ರ₁ + ತೀರ್ಥ ]

**ಚಕ್ರದಂಡ** (ನಾ). ತಿರುಗಿಸುತ್ತಿರುವ ದೊಣ್ಣೆ,-ಕೋಲು (?): ಕುಱುವಿಡಿದು ಕಂಡಿಹೆನೆಂದಡೆ ಪುಣ್ಯವ ಮಾಡಬೇಕೆಂಬರು ಅಱಿದು ಕಂಡಿಹೆನೆಂದಡೆ ಕಾಯದ ಕರಣಂಗಳ ಬಿಡಬೇಕೆಂಬರು ಕೆಟ್ಟೆನಯ್ಯಾ ಚಕ್ರದಂಡದಲ್ಲಿ ಸಿಕ್ಕಿದ ಮರ್ಕಟನಂತೆ (ಮೋಳಿಮಾ. ೨೫-೧೦೨). [ ಚಕ್ರ₁ + ದಂಡ ]

**ಚಕ್ರದೃಶ್ಯ** (ನಾ). "ಪ್ರಕೃತಿದೃಶ್ಯ, ಮೊ.ಗಳ ಚಿತ್ರವು ವಿಸ್ತಾರವಾದ ಒಂದು ವರ್ತುಲನಾಳಿಯಾಕಾರದ ಅಂತಃಪ್ರದೇಶದಲ್ಲಿ ಅಳವಡಿಸಿರುವುದನ್ನು ಪ್ರೇಕ್ಷಕನು ಒಳಗಡೆ ಮಧ್ಯದಲ್ಲಿ ನಿಂತು ನೋಡುವ ದೃಶ್ಯ" (Cyclorama. ಇಂಕನಿ). [ ಚಕ್ರ₁ + ದೃಶ್ಯ ]

**ಚಕ್ರಧರ** (ನಾ). ೧. ಚಕ್ರವನ್ನು ಧರಿಸಿದವನು ; ವಿಷ್ಣು : ಚಕ್ರಧರನಂತ ಧರಣೀಚಕ್ರದ ಪಿರಿದಪ್ಪ ಭರಮನಾರಾಂಪರೊ (ಬಂಹರಿ. ೧೪-೧೦) ; ತಡವರಿಸದೆಲೆ ಚಕ್ರಧರ . . . ಪೊಱಮಟ್ಟು ಬಾರಾ (ಬಸಪು. ೫೩-೬೩) ; ಸರ್ವೇಶ್ವರಂ . . . ಚಕ್ರಮಂ ಹರಿಗೆ ಕರುಣಿಸಲಾಗಿ ಚಕ್ರಧರನೆಂಬ ಪೆಸರು ಸಂದುದು (ವೀಶೈಪು. ೨-೧೩-೬) ; ನಕ್ರಹರನು ಬಂದ ಚಕ್ರಧರನು ಬಂದ (ಪುರಂದ. ೧-೪೮-೪). ೨. ಸಾಮ್ರಾಟ ; ಚಕ್ರವರ್ತಿ : ಚಕ್ರಧರನಧರಕಿಸಲಯದ ಮೇಲೆ ದಂತಕಾಂತಿ ಲತಾಂತಪ್ರಭೆಗಳ್ ಪಸರಿಸೆ (ಆದಿಪು. ೪-೨೬ ವ): ದಾರಿದ್ರ್ಯದ ಮಾತಿಲ್ಲೆಲ್ಲಿಯುಂ ಬಾಟ್ಟಿಗಮಖಿಳ ಧರಾಚಕ್ರದೊಳ್ ತಾನೆ ನಿಪ್ಪಗ್ಗದ ಮಾತಂ ಮಾಡಿದಾ ಚಕ್ರಧರಂ (ಚಂದ್ರಪು. ೬-೧೦೩). ೩. ಚಕ್ರವಾಕ ; ರಥಾಂಗ : "ಚಕ್ರವಾಕಃ, ಚಕ್ರಧರಃ–ಈ ಯೆರಡುಂ ಚಕ್ರವಾಕ ಪಕ್ಷಿ" (ಒಷಧಿ. ೫೫). ೪. ಆದಿಶೇಷ. 'ಚಕ್ರಧರತಲ್ಪ' ಪರಾ. [ಸಂ.]

**ಚಕ್ರಧರತಲ್ಪ** (ನಾ). ವಿಷ್ಣುವಿಗೆ ಹಾಸಿಗೆಯಾದುದು ; ಆದಿಶೇಷ : ಚಕ್ರಧರತಲ್ಪರಾಜ ವಿರಾಜಿತಾಭರಣ . . . ಸಂಗಮೇಶ ರಕ್ಷಿಪುದೆನ್ನನು (ಪ್ರಾಥರಾ. ೮-೧). [ ಚಕ್ರಧರ + ತಲ್ಪ ]

**ಚಕ್ರಧರತ್ವ** (ನಾ). ಚಕ್ರವನ್ನು ಧರಿಸಿರುವಿಕೆ: ಚಕ್ರಧರತ್ವಮಂದು ಸಫಲಂ . . . ಆ ವಿಕ್ರಮ ಸಾಲ್ವನಂ ತವಿಸಿದಂದು (ಜಗವಿ. ೧-೬೩). [ ಸಂ. ]

**ಚಕ್ರಧಾರಿ** (ನಾ). ೧. ಚಕ್ರವನ್ನು ಹಿಡಿದವನು; ವಿಷ್ಣು. ೨. ಸುಳಿ ಅಥವಾ ಆವರ್ತ ಉಳ್ಳುದು. ೧, ೨ : ವಿಷ ಚಕ್ರಧಾರಿ ಪೆಂಪಿನ ಭುಜಗೇಂದ್ರ ಮಾಪತಿಗಳಂತೆ . . . ಸರಸಿ ರಾಜಿಕುಮುನ್ನತ ನಿರ್ಮಳಾಕರಂ (ಹಮ್ಮೀರ. ೪-೧೯). [ ಸಂ. ಚಕ್ರಧಾರಿನ್ ]

**ಚಕ್ರಧಾರೆ** (ನಾ). ಚಕ್ರದ ಅಂಚು ; ಗಾಲಿಯ ಸುತ್ತು,- ಪಟ್ಟೆ : "ಚಕ್ರಧಾರಾ, ಪ್ರಧೀಃ, ನೇಮಿಃ – ಈ ೩ ನೆತ್ತಿಪಟ್ಟಿಗೆ" (ಹಲಾಯು. ೬೩-೨೯೩).

[ ಚಕ್ರ₁ + ಧಾರೆ ]

**ಚಕ್ರನಾಥ** (ನಾ). ಭೂಮಂಡಲದ ಒಡೆಯ ; ಚಕ್ರವರ್ತಿ : ಮಱದಂ ಭಕ್ತಿಯಿಂ ಚಕ್ರನಾಥಂ (ಆದಿಪು. ೧೭-೨). [ ಚಕ್ರ$_1$ + ನಾಥ ]

**ಚಕ್ರನಾಭಿ** (ನಾ). ಬಂಡಿ ಅಥವಾ ರಥದ ಗಾಲಿಯ ನಡುವಿನ ಗಡ್ಡೆ ; ಗುಂಭ : "ಅಚ್ಚನ್ನೂ ಅರೆಕಾಲುಗಳನ್ನೂ ಹಿಡಿದುಕೊಂಡಿರುವ ಚಕ್ರದ ಮಧ್ಯಭಾಗ : ಗುಂಬ ; ಚಕ್ರನಾಭಿ " (Nave ಇಂಕನಿ). [ಚಕ್ರ$_1$+ನಾಭಿ]

**ಚಕ್ರನೇಮಿ** (ನಾ).=ಚಕ್ರಧಾರೆ ೧ : ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನಘಾತ ನಿರ್ಭರ ಸ್ಫುಟಿತ ಧರಾತಳಂ ವಿಜಯನುಗ್ರರಥಂ ಪರಿದತ್ತು ದಲ್ . . . ಸಂಗರರಂಗಭೂಮಿಯೊಳ್ (ಪಂಪಭಾ. ೧೧-೧೪೬) ; ಚಕ್ರನೇಮಿ ವೃತ್ತಿಯ ಈ ಜಗತ್ತು ಇದ್ದಹಾಗೆ ಇರತಕ್ಕದ್ದಲ್ಲ – ಸದಾ ಭ್ರಮಣಶೀಲ (ಎಮುಕ. III, ಮುನ್ನುಡಿ). [ ಚಕ್ರ$_1$ + ನೇಮಿ ]

**ಚಕ್ರಪಕ್ಷಿ** (ನಾ). ಚಕ್ರವಾಕ ; ರಥಾಂಗ: " ಚಕ್ರಪಕ್ಷಿ – ಚಕ್ಕವಕ್ಕಿ" (ಶಮದ. ೨೭೦ ಪ್ರಯೋ). [ ಚಕ್ರ$_1$ + ಪಕ್ಷಿ ]

**ಚಕ್ರಪರಿವರ್ತನ** (ನಾ). [ಜೈನ] ದ್ರವ್ಯಕ್ಷೇತ್ರ, ಕಾಲ, ಭವ, ಭಾವ ಪರಿವರ್ತನೆಗಳಿಗೆ ಮತ್ತೆಮತ್ತೆ ಈಡಾಗುವಿಕೆ; ಮತ್ತೆಮತ್ತೆ ಹುಟ್ಟು ವಿಕೆ : ಮುನ್ನಮೆ ಕೈಕೊಂಡ ದ್ರವ್ಯಕ್ಷೇತ್ರಕಾಲಭವಭಾವಂಗಳೊಳ್ ಮಱದಪ್ಪೊಡಂ ಪರಿವರ್ತಿಸದೆ ಬೇಱವೇಱ ಪರಿವಡಿದಪ್ಪದೆ ಪುಟ್ಟುವುದು ಚಕ್ರಪರಿವರ್ತನಮೆಂಬುದು (ಸುಕುಮಾ. ೬-೬ ವ).[ಚಕ್ರ$_1$ + ಪರಿವರ್ತನ ]

**ಚಕ್ರಪಾಣಿ** (ನಾ). ಕೈಯಲ್ಲಿ ಚಕ್ರವನ್ನು ಹಿಡಿದಿರುವವನು; ವಿಷ್ಣು. [ ಚಕ್ರ$_1$ + ಪಾಣಿ$_2$ ]

**ಚಕ್ರಪೂಜೆ** (ನಾ). [ಜೈನ] ಚಕ್ರರತ್ನದ ಪೂಜೆ.– ಆರಾಧನೆ : ಬೞಯಂ ಚಕ್ರಪೂಜೆಯಂ ಮಾಡಿ (ಶಾಂತಿಪು. ೪-೭೫ ವ). [ ಚಕ್ರ$_1$ + ಪೂಜೆ$_2$ ]

**ಚಕ್ರಬಂಧ** (ನಾ). ೧. ಒಂದು ಬಗೆಯ ಸ್ಪರ್ಧೆ ; ಅನೇಕ ಮನೆಗಳಿರುವ ಒಂದು ಆಕೃತಿಯ ಒಂದೊಂದು ಖಾನೆಯಲ್ಲಿಯೂ ಒಂದೊಂದು ಅಕ್ಷರವನ್ನು ಸೇರಿಸಿ ನಿರ್ದಿಷ್ಟವಾದ ಅರ್ಥ ಬರುವಂತೆ ಶಬ್ದಗಳನ್ನು ರಚಿಸುವಿಕೆ ; ಪದರಂಗ : ಚಕ್ರಬಂಧದ ಒಗಟ, ರಾಶಿಭವಿಷ್ಯ . . . ಬಂಧಿತರ ಕೈಬಿಸಿಯಾಟ (ಅರಳು. ೪೨೫-೨೨); ಚಕ್ರಬಂಧಸ್ಪರ್ಧೆಗೆ ಪ್ರವೇಶಿಸಿ ಹಣ ಸಂಪಾದಿಸಿದರಾಯ್ತು (ನಿಕಟು. ೦೨೯). ೨. [ಕಾವ್ಯಮಿಾ] ಒಂದು ಬಗೆಯ ಚಿತ್ರಕಾವ್ಯ ; ಚಕ್ರದ ಆಕೃತಿಯಲ್ಲಿ ಪದ್ಯವನ್ನು ರಚಿಸುವಿಕೆ : 'ಚಕ್ರಬಂಧ '. 'ಮುರಜಬಂಧ ' ಮುಂತಾದ ಚಿತ್ರಬಂಧಗಳು (ಧ್ವನ್ಯಾಲೋ. ೭೭ ಅಡಿಟಿ). ೩. [ಸಂಗೀತ] ವೀಣೆಯನ್ನು ನುಡಿಸುವ ಒಂದು ರೀತಿ : ವೆಂಕಟರಮಣದಾಸರು, ಚಕ್ರಬಂಧವನ್ನು ನುಡಿಸು ತ್ತಿರುವಾಗ ಅವರ ಬೆರಳುಗಳು . . . ಆಡುವುದನ್ನು ನೋಡುವುದೇ ಒಂದು ಸೊಗಸಾದ ದೃಶ್ಯ (ಸಂಗೀತ. ೬೯). [ ಚಕ್ರ$_1$ + ಬಂಧ ]

**ಚಕ್ರಬಡ್ಡಿ** (ನಾ). ಬಡ್ಡಿಯ ಮೇಲೆ ಬಡ್ಡಿ : ಸರಳಬಡ್ಡಿ, ಚಕ್ರಬಡ್ಡಿಗಳನ್ನು ತೆರುವುದರಲ್ಲೇ ಅವರ ಹಣ ಬಿದ್ದುಹೋಗಿತ್ತು (ಹೇಮುಕೂ. ೩೪); ಅವನು ಮೋಹನನಿಗೆ ಕೊಟ್ಟಿದ್ದ ಕಿರುಕುಳಗಳನ್ನು ಅಂದು ಅವನಿಗೆ ಪವಿತ್ರಪುರದ ಜನರು ಚಕ್ರಬಡ್ಡಿ ಸಮೇತ ಹಿಂತಿರುಗಿ ಕೊಟ್ಟಿದ್ದರು (ಶಂಜಪಂ. ೨೨೮) ; ಚಕ್ರಬಡ್ಡಿ, ಚಾಲ್ತಿಬಡ್ಡಿಗೆಂದು ಕೊಟ್ಟು ಕೊಟ್ಟು . . . " ಪ್ರಾಂಸರಿ ನೋಟು " ಬರೆಯಿಸಿಕೊಳ್ಳುತ್ತಿದ್ದರು (ಮೂಲಾನ. ೧೮೫).
[ ಚಕ್ರ$_1$ + ಬಡ್ಡಿ$_2$ ]

**ಚಕ್ರಬಾಣ** (ನಾ). ಚಕ್ರಾಕಾರವಾಗಿ ಸುತ್ತುವ ಒಂದು ಬಗೆಯ ಸುಡು ಮದ್ದು : " ಚಕ್ರಬಾಣ; ಸುತ್ತುವ ಚಕ್ರದಿಂದ ಹಾರಿಸುವ ಆಕಾಶಬಾಣ" (Girandole. ಇಂಕನಿ). [ ಚಕ್ರ$_1$ + ಬಾಣ$_2$ ]

**ಚಕ್ರಬಿಂಬ** (ನಾ).=ಚಕ್ರವ್ಯೂಹ ೧ : ಚಕ್ರಬಿಂಬದಿ ಘನಪರಾಕ್ರಮಿಯಾದ . . . ಅಭಿಮನ್ಯುವನು ರಣದಿ . . . ಕೊಂದರೈ (ತಿಮ್ಮಸ್ವೀ. ೦-೫೭). [ ಚಕ್ರ$_1$ + ಬಿಂಬ ]

**ಚಕ್ರಭೃತ್ಕುಲ** (ನಾ). ಚಕ್ರವರ್ತಿಕುಲ,–ವಂಶ: ಜಗಜ್ಜನವಮುತಿಮುಗ್ಧಬಾಳ ನರಪಾಳಕಮಾದುದು ಚಕ್ರಭೃತ್ಕುಲಂ (ಆದಿಪು. ೪-೮೨).
[ ಸಂ. (ಚಕ್ರಭೃತ್ + ಕುಲ) ]

**ಚಕ್ರಭೃತ್ತು** (ನಾ). ೧. ಚಕ್ರವನ್ನು ಹಿಡಿದಿರುವವನು : ವಿಷ್ಣು : " ಚಕ್ರ ಭೃದ್ಯೋವಿಂದಂ ಹರಿ ಶೌರಿ . . . ಸುಪರ್ಣಧ್ವಜಂ" (ವಸು.ಕೋ. ೪-೨೨). ೨. ಭೂಮಂಡಲವನ್ನು ಆಳುವವನು ; ಚಕ್ರವರ್ತಿ. 'ಚಕ್ರಭೃತ್ಕುಲ' ಪರಾ. [ ಸಂ. ಚಕ್ರಭೃತ್ ]

**ಚಕ್ರಭೃತ್ತ್ವ** (ನಾ). ೧. ಚಕ್ರವನ್ನು ಧರಿಸಿರುವಿಕೆ. ೨. ಚಕ್ರವಾಕಪಕ್ಷಿ ಯನ್ನು ಪೋಷಿಸುವಿಕೆ. ೩. ಭೂಮಂಡಲವನ್ನು ಪಾಲಿಸುವಿಕೆ. ೨. ೩: ಎನಗಂ ಭೂಪತಿಗಂ ಸಮಾನಮೆ ಕರವ್ಯಾಪ್ತಾಖಿಲಾಶತ್ವಮತ್ಯನು ರಕ್ತಪ್ರಕೃತಿತ್ವಮಭ್ಯುದಯಮತ್ತಂ ಚಕ್ರಭೃತ್ತ್ವಂ ದಲೆಂದಿನಂ . . . ಅಪರಪಾರಾವಾರಮಂ ಪೊರ್ದಿದಂ (ಚಂದ್ರಪು. ೮-೨). [ ಸಂ. ]

**ಚಕ್ರಮಂಡಲ** (ನಾ). [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು ; ಚಕ್ರದಂತೆ ತಿರುಗುತ್ತ ಮಾಡುವ ನೃತ್ಯ : ಸ್ಥಿತಮೆಂಬ ಚಾರಿಯಂ ಪದಗತಿ ಯಿಂದಂ ಮಾಡಿ ಡೋಲಹಸ್ತಮವಾಗಲ್ ಸತಿ ಕೇಳ್ ಚಕ್ರದವೊಲ್ ಮೇಣತಿಶಯದಿಂ ತಿರುಗೆ ಚಕ್ರಮಂಡಲಕರಣಂ (ಶಾಸ್ತ್ರರಂ. ೪-೧೧೨).
[ ಚಕ್ರ$_1$ + ಮಂಡಲ ]

**ಚಕ್ರಮಂಡಿಗಾಲು** (ನಾ). ಖಡ್ಗಯುದ್ಧದಲ್ಲಿ ಒಂದು ಭಂಗಿ : ಮೊದಲ ಪ್ರಕಾರದಿಂದ ಯಿದ್ದವನಾಗಿ ಮೊಳಕಾಲ್ಗಳ ಹೊರಕಡೆಯ ಪಾರ್ಶ್ವ ಪ್ರದೇಶದ ಭೂಮಿಯ ಮುಟ್ಟುವದೂ ಬೀಳುವ ಹಾಗೆ ಆವದುಂಟೊ ಅದು ಚಕ್ರಮಂಡಿಗಾಲುಯೆಂಬುದು (ಖಡ್ಗಟೀ. ೪-೬೩).
[ ಚಕ್ರ$_1$ + ಮಂಡಿ$_1$ + ಕಾಲು$_1$ (<ಕಾಲ್$_1$) ]

**ಚಕ್ರಮಟ್ಟ** (ನಾ). ಚಕ್ರಸದೃಶ ; ವರ್ತುಲಾಕಾರ (?) : ಪದ್ಮಾಸನ :– ಇದರಲ್ಲಿ ಪ್ರತಿಮೆಯು ಚಕ್ರಮಟ್ಟವಾಗಿ ಕುಳಿತಿರುವಂತೆ ಕೆತ್ತಲ್ಪಟ್ಟಿರುತ್ತದೆ (ಭಾರರ. ೫೦೫). [ ಚಕ್ರ$_1$ + ಮಟ್ಟ$_1$ ]

**ಚಕ್ರಮರ್ದ** (ನಾ). ಒಂದು ಬಗೆಯ ಗಿಡ ; ಚಗಚೆ : " ಕರವಸಂ ಚಕ್ರ ಮರ್ದಂ ಚಗಚೆಯುಕ್ಕುಂ " (ಮಂಗರಾ. ೩೯-೨೭). [ ಸಂ. ]

**ಚಕ್ರಮರ್ದಕ** (ನಾ). =ಚಕ್ರಮರ್ದ. [ ಸಂ. ]

**ಚಕ್ರಮರ್ದನ** (ನಾ).=ಚಕ್ರಮರ್ದ: "ಏಡಗಜಃ, ಪ್ರಪುನಾಟಃ, ದದ್ರುಘ್ನಃ, ಚಕ್ರಮರ್ದನಃ–ಈ ೪ ತಗ(ಚೆ)ಟೆ" (ಹಲಾಯು. ೧೧೧-೪೭೩). [ ಸಂ. ]

**ಚಕ್ರಮಾರುತ** (ನಾ). ಸುಂಟರಗಾಳಿ ; ಆವರ್ತವಮಾರುತ : ಸಮುದ್ರದಲ್ಲಿ ಚಕ್ರ(ಆವರ್ತ)ಮಾರುತ (Cyclones)ಗಳಿಗೆ ಹೆದರುವಂತೆಯೇ ಮರಳು ಕಾಡುಗಳಲ್ಲಿ ಧೂಳಿಮಾರುತ(Dust storms)ಗಳಿಗೆ ಬಹಳ ಹೆದರಬೇಕು (ಭೂವಿವ. ೨೫೯). [ ಚಕ್ರ$_1$ + ಮಾರುತ ]

**ಚಕ್ರಮಿಥುನ** (ನಾ).ಚಕ್ರವಾಕ ದಂಪತಿ : ನೆನೆಯಿಸಿದತ್ತಾ ಮಿಥುನಂ ದಿನಮುಖಮಂ ಕಂಡ ಚಕ್ರಮಿಥುನಾಕೃತಿಯಂ (ಮಲ್ಲಿಪು. ೧೩-೨೦).
[ ಚಕ್ರ$_1$ + ಮಿಥುನ ]

**ಚಕ್ರಮುದ್ರೆ** (ನಾ). ೧. ಮಂತ್ರಶಾಸ್ತ್ರದಲ್ಲಿ ಹೇಳಿರುವ ಚಕ್ರದ ಆಕೃತಿ ಯುಳ್ಳ ಮುದ್ರೆ; ವಿಶೇಷವಾಗಿ ಮಾಧ್ವರು ಇಟ್ಟುಕೊಳ್ಳುವ ಮುದ್ರೆ ಗಳಲ್ಲಿ ಒಂದು : ಚಕ್ರಮುದ್ರೆಯಲ್ಲಿ ಹುಂಕಾರನಾಮದಿಂದಲೂ . . . ಇರುವನು (ಹಸಾರ. ೮-೨೮ ತಾತ್ಪರ್ಯ). ೨. ಮಂತ್ರಶಾಸ್ತ್ರಪ್ರಸಿದ್ಧವಾದ ಒಂದು ಬಗೆಯ ಹಸ್ತಮುದ್ರೆ : ಚಕ್ರಮುದ್ರೆ . . . ಸಂಹಾರಮುದ್ರೆ ಯೆಂಬಾದಿಯಾಗಿ ಸಕಲಮುದ್ರೋಪಮುದ್ರಾಬಂಧಲಕ್ಷಣಗಳಂ ಗುರು ಮುಖದಿಂದಱತು (ವಿವೇಕ. ೧೧೩). 'ಶಂಖಮುದ್ರೆ' ಪರಾ.
[ ಚಕ್ರ$_1$ + ಮುದ್ರೆ ]

**ಚಕ್ರಯಾನ** (ನಾ). ಗಾಲಿಗಳುಳ್ಳ ವಾಹನ. [ ಚಕ್ರ$_1$ + ಯಾನ ]

**ಚಕ್ರಯುಗ** (ನಾ).=ಚಕ್ರಮಿಥುನ: "ತರು ಖರ್ಜೂರ ವನಾಶ್ವ ಚಕ್ರಯುಗ ಭೇಕಂ ಶ್ರೀಷ್ಮವುಂ ಕೋಕವುಕ್ಕು" (ನಾನಾರ. ೧೨೯). [ ಚಕ್ರ$_1$ + ಯುಗ ]

**ಚಕ್ರಯೋಗ** (ನಾ). [ಜ್ಯೋತಿ] ಆಕೃತಿಯೋಗಗಳಲ್ಲಿ ಒಂದು ; ಜನನ ಲಗ್ನದಿಂದ ಪ್ರಾರಂಭಿಸಿ ಒಂದು ಬಿಟ್ಟು ಒಂದು (ಏಕಾಂತರ) ರಾಶಿಗಳಲ್ಲಿ ಏಳುಗ್ರಹಗಳು ಇರುವುದು : ೧, ೩, ೫, ೭, ೯, ೧೧ ಈ ಆರು ಸ್ಥಾನಗಳಲ್ಲಿ ಏಳುಗ್ರಹಗಳೂ ಇದ್ದರೆ ಚಕ್ರಯೋಗ (ಜಾತಕ. ೧೩-೪ ಅಡಿಟಿ). [ ಚಕ್ರ$_1$ + ಯೋಗ ]

**ಚಕ್ರರಕ್ಷಕ** (ನಾ). ಸೇನೆಯ ರಕ್ಷಕ: ಅವನ ಹಿಂದೆ ಅವನ ಚಕ್ರರಕ್ಷಕರಾದ ಯುಧಾಮನ್ಯು ಉತ್ತಮೌಜರೂ ನುಗ್ಗಿದರು (ವಚಭಾ. ೨೪೭). [ ಚಕ್ರ$_1$ + ರಕ್ಷಕ ]

**ಚಕ್ರರತ್ನ** (ನಾ). [ಜೈನ] ಚಕ್ರವರ್ತಿಯಾಗುವವನ ಆಯುಧಾಗಾರದಲ್ಲಿ ಹುಟ್ಟುವ ಚಕ್ರಾಯುಧ: ಈ ರಾಜ್ಯಾಶ್ರಮಮುನಿಯ ಆಯುಧಾಗಾರದೊಳ್ ಚಕ್ರರತ್ನಂ ಪುಟ್ಟಿತ್ತು (ಆದಿಪು. ೬-೨೪ ವ). [ ಚಕ್ರ$_1$ + ರತ್ನ ]

**ಚಕ್ರಲಾಭ** (ನಾ). [ಜೈನ] ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು ; ಚಕ್ರರತ್ನವು ದೊರೆಯುವುದು: ಚಕ್ರಲಾಭ ದಿಗ್ವಿಜಯ ಚಕ್ರಾಭಿಷೇಕ . . . ಗರ್ಭಾನ್ವಯಕ್ರಿಯೆಗಳುಂ (ಆದಿಪು. ೧೩-೧೫ ವ) ; ೧೪ ರತ್ನಗಳಿಗೂ ೯ ನಿಧಿಗಳಿಗೂ ಒಡೆಯನಾಗಿ ಸಕಲರಿಂ ಅಭಿಷಿಕ್ತನಾಗಿ ಅಧಿರಾಜನೆಂಬ ಹೆಸರಂ ಪಡೆಯುವುದೇ ಚಕ್ರಲಾಭವೆಂಬ ೪೪ನೆ ಕರ್ಮವು (ಪುರುಚ. ೨೦೩). [ ಚಕ್ರ$_1$ + ಲಾಭ ]

**ಚಕ್ರಲಿಪಿ** (ನಾ). ಒಂದು ಬಗೆಯ ಲಿಪಿ: ಬಿಂದುಲಿಪಿ, ಚಕ್ರಲಿಪಿ, ಲೇಖಲಿಪಿಯಿ ಅಗಣಿತ ಲಿಪಿಗಳನೋದಲರಿಯದೆ ಬಿಜ್ಜಳರಾಯನ ಸಭೆಯೊಳ್ ಕಳಕಳಗೊಳುತಿದ್ದರು ವಿದ್ವಾಂಸರುಗಳೆಲ್ಲ (ಭಾಸ್ಕರ. ೭೭-೫). [ ಚಕ್ರ$_1$ + ಲಿಪಿ ]

**ಚಕ್ರಲೆ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು : "ಚೂಡಾಲಾ, ಚಕ್ರಲಾ, ಉಚ್ಚಟಾ – ಇ ಒಂದು ಗಡ್ಡೆಗಳಗೆ ಅನೇಕ ಮೋತೆಗಳುಳ್ಳ ಗಂಟುಮುಸ್ತಗಳು" (ಸಿದ್ಧಾಂಶಿ. ೧೩೦). [ ಸಂ. ಚಕ್ರಲಾ ]

**ಚಕ್ರವರಿಸೆ** (ನಾ). ೧. ಖಡ್ಗಯುದ್ಧದಲ್ಲಿ ಒಂದು ಬಗೆಯ ವರಸೆ: "ಒಂದು ತರದ ಕತ್ತಿಯ ವರಿಸೆ; ಚಕ್ರವರಿಸೆ" (Counter. ಇಂಕನಿ). ೨. ಅಂಗಸಾಧನೆಯಲ್ಲಿ ಒಂದು ಪ್ರಕಾರ: "(ಅಂಗಸಾಧನೆಯಲ್ಲಿ) ಚಕ್ರವರಿಸೆ" (Circle. ಇಂಕನಿ). [ ಚಕ್ರ$_1$ + ವರಿಸೆ ]

**ಚಕ್ರವರ್ತ** (ನಾ). ಒಂದು ಬಗೆಯ ಸೊಪ್ಪು : ಹುರುಳಿ, ಚಕ್ರವರ್ತದ ಸೊಪ್ಪು . . . ಅಂತ್ರವೃದ್ಧಿಗಳಿಗೆ ಪಥ್ಯ (ವೈದ್ಯಸಾ. I, ೩೩೦) ; ಚಕ್ರವರ್ತದ ಸೊಪ್ಪು, ಚಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಸಕವೈ. ೧೦೨). [ <ಸಂ. ಚಕ್ರವರ್ತಿನ್ ? ]

**ಚಕ್ರವರ್ತನ** (ನಾ). ೧. ತಿಗುರಿಯ ಮೂಲಕ ಮಾಡುವ ಜೀವನ; ಕುಂಬಾರನ ವೃತ್ತಿ. ೨. ಸುದರ್ಶನಚಕ್ರವನ್ನು ಹೊಂದಿರುವವನು ; ವಿಷ್ಣು. ೩. ಭೂಮಂಡಲವನ್ನು ಆಳುವವನು; ಅರಸ. ೪. ಉತ್ತಮನಾದವನು ; ಪೂಜ್ಯನಾದವನು : "ಉತ್ತಮ ಕೃಷ್ಣಂ ನೃಪ ಕುಲಾಲ ಕ್ರಮದೊಳ್ ನಾಲ್ಕುಮ ಚಕ್ರವರ್ತನಮೆನಿಕುಂ" (ನಾನಾಕಂ. ೧೩೭). [ ಚಕ್ರ$_1$ + ವರ್ತನ ]

**ಚಕ್ರವರ್ತಿ** (ನಾ). ೧. ಕುಂಬಾರ ; ಕುಲಾಲ. ೨. ವಿಷ್ಣು ; ಕೃಷ್ಣ. ೩. ಭೂಮಂಡಲವನ್ನು ಆಳುವವನು ; ಸಾಮ್ರಾಟ ; ಸಾರ್ವಭೌಮ : "ಭುವನೈಕವಲ್ಲಭಂ ಚಕ್ರವರ್ತಿ" (ವಸ್ತುಕೋ. ೫೯-೪೭) ; "ಚಕ್ರವರ್ತೀ, ಸಾರ್ವಭೌಮಃ – ಈ ೨ ಚಕ್ರವರ್ತಿ" (ಹಲಾಯು. ೭೦-೨೬೮) ; ನಿಯಮದೊಳಿರ್ದ ಭರತೇಶ್ವರ ಚಕ್ರವರ್ತಿಯಿರವನಱಿದು (ಆದಿಪು. ೧೩-೧೧ ವ) ; ಜಾರ್‌ಚಕ್ರವರ್ತಿಗೂ ಅವನು ಗೊತ್ತು (ಮಲೆನಾ. ೬೮). ೪. ಸಮಾಜದಲ್ಲಿ ಮಾನ್ಯನಾದ ವ್ಯಕ್ತಿ : ಪೂಜ್ಯವ್ಯಕ್ತಿ. ೫. = ಚಕ್ಕವತ್ತಿ : ಪ್ರತಿನಿತ್ಯವು ಪರಮಶಿವನಿಗೆ ಉತ್ತಮವ್ರೀಹಿಯ ಅಕ್ಕಿಯನ್ನು, ಚಕ್ರವರ್ತಿ ಸೊಪ್ಪನ್ನು ಪರಮಶಿವನಿಗೆ ಸಮರ್ಪಿಸುತ್ತಿದ್ದರು (ಪುರಾವಿ. ೯೪). ೬. [ಯೋಗ]ಮುಕ್ತಿಯೋಗ್ಯರಲ್ಲಿ ಒಂದು ವರ್ಗ : ಮುಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು. ಇವರು ನಿತ್ಯಜ್ಞಾನಾನಂದಸ್ವರೂಪಯೋಗ್ಯತೆಯುಳ್ಳವರು (ಹಿಂದಸಾ. ೨೮೭) ; "ಶೌರಿಯೊಳು ವಾಸ್ತುಕದೊಳವನೀಶನೊಳು ಕುಂಭಕಾರನೊಳು ಚಕ್ರವರ್ತಿಯೆನಿಕ್ಕು" (ಮಂಗರಾ. ೧೫೦-೫೨) ; "ಕುಲಾಲಾವನೀಶಂ ಮಾನ್ಯಂ ನಾರಾಯಣಂ ವಾಸ್ತುಕಮಿವಿನಿತು ಚಕ್ರವರ್ತ್ಯಭಿಧಾನಂ" (ನಾನಾರ. ೧೪೬). [ ಸಂ. ಚಕ್ರವರ್ತಿನ್ ]

**ಚಕ್ರವರ್ತಿತ್ವ** (ನಾ). ಚಕ್ರವರ್ತಿಯಾಗಿರುವಿಕೆ; ಸಾಮ್ರಾಟನಾಗಿರುವಿಕೆ: ನಿಜಸಕಳಚಕ್ರವರ್ತಿತ್ವಕ್ಕಂಪಡಿಯಿಡುವಂತೆ ನಿರಂತರಮಾಡಿಯಿಟ್ಟಂ (ಆದಿಪು. ೮-೪೧). [ ಸಂ. ]

**ಚಕ್ರವರ್ತಿನಿ** (ನಾ). ೧. ಚಕ್ರವರ್ತಿಯ ಹೆಂಡತಿ ; ಪಟ್ಟದ ರಾಣಿ. ೨. ಸಾಮ್ರಾಜ್ಯದ ಒಡತಿ ; ಸಾಮ್ರಾಜ್ಞಿ : ಈ ಚಕ್ರವರ್ತಿನಿಯವರು ಒಳ್ಳೆ ಪ್ರೀತಿವಂತರೂ ಪರೋಪಕಾರಿಗಳೂ ಇದ್ದಾರೆ (ಮುಂಬಯಿ. ४-३). ೩. ಸುವಾಸನೆಯುಳ್ಳ ಒಂದು ಬಗೆಯ ಗಿಡ; ಕೋರಿಂದೆ: "ಸಾರಣೆಗಿಡ, ಮುಳ್ಳಗಸೆ" (ಅಮರ. ೮೪೪) : "ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ – ೬ ಕೋರಿಂದೇ ಗಿಡದ ಪೆಸರು, ಚಕ್ರವರ್ತೀ ಸೊಪ್ಪು" (ಸಿದ್ಧಾಂಶಿ. ೧೨೯). [ ಸಂ. ಚಕ್ರವರ್ತಿನೀ ]

**ಚಕ್ರವಲೆ** (ನಾ). ಗುಂಡಗಿರುವ ಒಂದು ಬಗೆಯ ಬಲೆ : ಹೊಸದಿಕ್ಕಣ್ಣವಲೆ ಚಕ್ರವಲೆ ಪಿಂಗೆ ಮುಕ್ಕಣ್ಣವಲೆ ಪೇರ್ವಲೆಯ ಪೊಱೆಗಳು ವಿಂಧಕನ ಕೂಡೆ (ಸ್ವಾಕಭಾ. ೫-೧೮). [ ಚಕ್ರ$_1$ + ಬಲೆ$_1$ ]

**ಚಕ್ರವಲ್ಲಭ** (ನಾ). ಸಾಮ್ರಾಟ; ಚಕ್ರವರ್ತಿ: ಚಕ್ರವಲ್ಲಭನಾಸ್ಥಾನಮಂಟಪದೊಳ್ ದೂರಾವನತಮಣಿಮಕುಟನಾಗಿ ಕಂಡು (ಆದಿಪು. ೧೩-೪೦ ವ). [ ಚಕ್ರ$_1$ + ವಲ್ಲಭ ]

**ಚಕ್ರವಾಕ** (ನಾ). ೧. ಒಂದು ಬಗೆಯ ಪಕ್ಷಿ ; ಬಿಸಿಲುಹಕ್ಕಿ ; ಜಕ್ಕವಕ್ಕಿ: "ಚಕ್ರಮಾ ಕೋಕಂ ರಥಾಂಗಮೆನೆ ಚಕ್ರವಾಕಂ" (ಮಂಗರಾ. ೫೦-೩). "ಎಣಿಸಲ್ ಬಿಸಿಲ್ವಕ್ಕಿ ಚಕ್ರವಾಕಮೆನಿಕ್ಕುಂ" (ಕವಿಕಂ. ೬೩) ; ಚೆಲ್ವುವೆತ್ತುದುದಯಮೆಂ[ ಮಂ ]ದು ಪದ್ಮಿನೀಚಕ್ರವಾಳ ಚಕ್ರವಾಕಚಕ್ರ ಚಕ್ರವರ್ತಿಯಾ (ಆದಿಪು. ೧೨-೫೫) ; ನದಿಯೊಳಗೆ ಚಕ್ರವಾಕಗಳು ಈಜುತ್ತಿರುವಂತೆಯೂ ಕಾಣಿಸಿತು (ಶ್ರೀಕಾಂತ. II, ४). ೨. ಒಂದು ಬಗೆಯ ಕುದುರೆ : ಬಾಲಮುಮಂಗೋಪಾಂಗಂ ಕಾಲುಂ ಕರಿದಕ್ಕೆ ಪೀತರುಚಿಯುಪ್ಪೊಡಮಕ್ಕಾ ಲಲಿತ ಹಂಸರುಚಿಯಂ ಪೋಲೆ ತನುಚ್ಛಾಯೆ ಚಕ್ರವಾಕಂ ತುರಗಂ (ಅಶ್ವಶಾ. ೨-೨೫). ೩. [ಸಂಗೀತ] ಒಂದು ರಾಗದ ಹೆಸರು : ಚಕ್ರವಾಕ ೧೬ನೇ ಮೇಳಕರ್ತರಾಗ . . . ಭಕ್ತಿಕರುಣಾರಸ ಪ್ರಧಾನರಾಗ (ಸಂಗೀಶಂ. ೧೫೭); ಮಹಾ ವೈದ್ಯನಾಥ ಅಯ್ಯರ್ . . . ಚಕ್ರವಾಕರಾಗವನ್ನು ಹಾಡಿ ಮನಸ್ಸಿಗೆ ಆಹ್ಲಾದವನ್ನುಂಟುಮಾಡಿದರು (ಸಂಗೀತ. ೫). [ ಸಂ. ]

**ಚಕ್ರವಾಕಧ್ವಜ** (ನಾ). ಚಕ್ರವಾಕದ ಚಿಹ್ನೆಯನ್ನು ಧ್ವಜದಲ್ಲಿ ಉಳ್ಳವನು; ಮನ್ಮಥ: ಚಕ್ರೇಶನನುಜಾತ ನರಸುರನಾಗಭೂಚಕ್ರಮೋಹನಮೂಲಕರ್ತಾ ಚಕ್ರವಾಕಧ್ವಜ ತೇ ನಮೋನಮಯೆಂದು ಚಕ್ರಿಯ ಸಖನೆದ್ದು ನಿಂದ (ಭರತ. ४೭-೮४). P ಸಾಮಾನ್ಯವಾಗಿ ಮನ್ಮಥನು ಮಕರಧ್ವಜ. [ ಚಕ್ರವಾಕ + ಧ್ವಜ ]

**ಚಕ್ರವಾಡ** (ನಾ). ೧. ವರ್ತುಳ; ಮಂಡಲಾಕೃತಿ. ೨. ದಿಗಂತ; ಕ್ಷಿತಿಜ. ೩. ಸಮೂಹ ; ರಾಶಿ. ೪. = ಚಕ್ರವಾಡಿಕೆ. [ ಸಂ. ]

**ಚಕ್ರವಾಡಿಕೆ** (ನಾ). ಭೂಮಿಯ ಸುತ್ತಲೂ ಇರುವುದೆಂದು ಭಾವಿಸಲಾದ ಪರ್ವತಶ್ರೇಣಿ: ಮತ್ತಮಾ ಚಕ್ರವಾಡಿಕೆಯ ಕೆಳಗಣ ತಪ್ಪಲುಗಳಲ್ಲಿ ಸಿದ್ಧರುಗಳು ಮೊದಲಾದವರುಗಳು ಇರುತ್ತಿಹರು (ದಶಟೀ. ೫೮-೨). [ ಸಂ. ಚಕ್ರವಾಡಿಕಾ ]

**ಚಕ್ರವಾತ** (ನಾ). = ಚಕ್ರಮಾರುತ : ಚಕ್ರವಾತ, ಸುಳಿಗಾಳಿ (Cyclone. ಪಾರಿಸಿ. ೨೬). [ ಚಕ್ರ$_1$ + ವಾತ ]

**ಚಕ್ರವಾಲ, ಚಕ್ರವಾಳ** (ನಾ). ೧. ವರ್ತುಳ; ಮಂಡಲಾಕೃತಿ. ೨. ದಿಗಂತ : ಕತ್ತಲಿಸಿತೊಡನೆ ಮುಂದಣ ಚಕ್ರವಾಲಂ (ಗೀವಿಂ. ೪೯-೪). ೩. ಸಮೂಹ ; ಗುಂಪು: ರಾಘವಂ ಪೋಗೆ ಕಣ್ಗಂ ಬಗೆಗಮಿಟಿಕೆಯಾದತ್ತು ಸಭಾಚಕ್ರವಾಲಂ (ಹಂರಾಮಾ. ೬-೧೫೬). ೪.=ಚಕ್ರವಾಡಿಕೆ. **ಚಕ್ರವಾಳ :** ೧. ಭಾಸ್ಕರನು ಚಕ್ರವಾಳ (Cyclic Method) ವಿಧಾನದಿಂದ ಪೂರ್ತಿಗೊಳಿಸಿದನು (ಗಣಿಶ. ೩೦೫). ೩. ಚೆಲ್ವುವೆತ್ತುದುದಯ ಮಂ[ ಮಂ ]ದು ಪದ್ಮಿನೀ ಚಕ್ರವಾಳ ಚಕ್ರವಾಕಚಕ್ರಚಕ್ರವರ್ತಿಯಾ (ಆದಿಪು.೧೨-೫೫). ೪. ಮ[ಹಾಕ್ಷೀ]ರಾಬ್ಧಿ ಡಿಂಡೀರಪಾಂಡುರಮಾಕ್ರಾಂತಸಿ (ಸು) ಶೈಲ ಸಾಗರ ಧರಾಶಾಚಕ್ರವಾಳಾಂಬರಂ ಪರಮಶ್ರೀವಿಜಯಪ್ರಭೂತಿಜ ಯಶ [ಂ] . . . ನೆಲೆಗೊಳ್ಗೆಚಂದ್ರತಾರಂಬರಂ (ಕವಿರಾ. ೩-೨೩೬) ; ನೂರು ಚಕ್ರವಾಳವಲ್ಲ ಸಾವಿರ ಚಕ್ರವಾಳಗಳ ಆಚೆ ನಿಂತಿರಲಿ . . . ಕೇಳಿದವರು 'ಗುರು ನನ್ನನ್ನೇ ನೋಡುತ್ತಿದ್ದಾರೆ, ನನಗೇ ಬೋಧಿಸುತ್ತಿದ್ದಾರೆ ' ಎನ್ನುತ್ತಾರೆ (ಹತ್ತುತು. ೪೩). [ ಸಂ. ]

**ಚಕ್ರವಾಳ** 'ಚಕ್ರವಾಲ' ನೋ.

**ಚಕ್ರವಾಳಗದ್ಯ** (ನಾ). ಗದ್ಯದಲ್ಲಿ ಬರುವ ಪದಪುಂಜಗಳ ಒಂದು ಪ್ರಕಾರ : ಮುಕ್ತಪದಗ್ರಹಣ ಚಕ್ರವಾಳಗದ್ಯಂ (ಜಗವಿ.೧೨-೫೬ ವ). [ ಚಕ್ರವಾಳ (=ಚಕ್ರವಾಲ) + ಗದ್ಯ ]

**ಚಕ್ರವೀಟ್** (ಕ್ರಿ). ಉರುಳಿ ಬೀಳು; ಹೊರಳು : ಕರಚಕ್ರಂಗಳಿನೊರ್ವರೊರ್ವರನಿಡಲ್ಕಾಳೆರ್ದು ಘೋಟಾಯ್ಲರಂಬರಮಿಂಬಂ ಕುಡದೆಂಬಿನಂ ಪರಿದು ಚಕ್ರಂ ಕೊಂಡವಾ ಭೋಗವುಂ ತುರಗಾರೂಢರುಮಾ ತುರಂಗಮಮುಮಂದೋರೊಂದಟಿೞ್ ಚಕ್ರವಿಟ್ಟರೆ ಯುದ್ಧಾಂಗದ ಮಧ್ಯದೊಳ್ ಮರುಳ ತಂಡಂ ತಮ್ಮೊಳೊಂದಾರ್ವಿನಂ (ಮಹಾನೇ. ೧೨-೩೬). [ ಚಕ್ರ$_1$ + ಬೀೞ್$_1$ ]

**ಚಕ್ರವೃದ್ಧಿ** (ನಾ). = ಚಕ್ರಬಡ್ಡಿ. [ ಚಕ್ರ$_1$ + ವೃದ್ಧಿ ]

**ಚಕ್ರವ್ಯೂಹ** (ನಾ). ೧. (ಚಕ್ರಾಕಾರವಾಗಿದ್ದು, ಭೇದಿಸುವುದಕ್ಕೆ ತೊಡಕು ತೊಡಕಾಗಿರುವ) ಒಂದು ಬಗೆಯ ಸೈನ್ಯವ್ಯೂಹ : ಅಂತೊಡ್ಡಿದ ಚಕ್ರವ್ಯೂಹದ ನಡುವೆಡೆಯುೞಿದು (ಪಂಪಭಾ. ೧೧-೮೬ ವ) ; ಗುರು ಪಣ್ಣಿದ ಚಕ್ರವ್ಯೂಹರಚನೆ ಪೆಱರ್ಗರಿದು ಪುಗಲ್ (ಗದಾಯು. ೪-೫೪) ; ಚಕ್ರವ್ಯೂಹವನು ನಲವಿಂದ ಬಲಿದನು ನಿಲಿಸಿದನು ಕಾಂಭೋಜಭೂಪತಿಯ (ಕುಮಾ.ದ್ರೋ. ೯-೧೯). ೨. (ಆಲಂ) ಇಕ್ಕಟ್ಟಿನ ಪರಿಸ್ಥಿತಿ : ಈ ಚಕ್ರವ್ಯೂಹದಿಂದ ಪಾರಾಗಿ ಹೋಗಲು ಯಾವ ಕಡೆಗೂ ದಾರಿಯೇ ಇಲ್ಲ (ಇಪ್ಪಕ. ೩೨೯) ; ಈ ಚಕ್ರವ್ಯೂಹದಿಂದ ಪಾರಾಗುವ ದಾರಿ ನನಗೆ ಗೊತ್ತಿಲ್ಲ (ಹೊಸಕ್ಕ. ೨೦೭) ; ತಾನು ಆ ಘಟನಾಪರಂಪರೆಯ ಚಕ್ರವ್ಯೂಹದಲ್ಲಿ ಸಿಕ್ಕಿಕೊಂಡಂತೆ ಅವನು ಭಾವಿಸಿದ್ದನು (ಪುನರು. ೮೮). [ ಚಕ್ರ$_1$ + ವ್ಯೂಹ ]

**ಚಕ್ರಶಕ್ತಿ** (ನಾ). ಕುದುರೆಯ ಶರೀರದಲ್ಲಿ ಜಂಘೆಯ ಮೇಲುಗಡೆ ಇರುವ ಒಂದು ಭಾಗ : ಸ್ಫುರೆಯಿಂ ಮೇಲ್ ಚಕ್ರ(ಚಂದ್ರ)ಶಕ್ತಿ ಬೆರಸಿರ್ಕುಂ (ಅಶ್ವಶಾ. ೯-೫೨) ; ಓರಂತೆ ಚಕ್ರಶಕ್ತಿಯ ಸಾರಣ ಕೆಟಗೆಸೆವ ಜಂಘೆಯೆಂಬಭಿಧಾನಂ (ಅಶ್ವಶಾ. ೯-೫೪). [ ? ]

**ಚಕ್ರಶ್ಲೋಕ** (ನಾ).=ಚಕ್ರಬಂಧ ೨ : ಸಂತಂ ಬಾಟ್ಪುದು ಮಾಜಿದಾ ನರಪನೊಳ್ ಸೌಜನ್ಯಲಕ್ಷ್ಮೀಮದಾಂಧಂ ತನ್ನಿಶ್ಚಯ ಮೆಚ್ಚ ನೀಂ ಪರಗುಣಾದಾರ್ಯಾಭಿಮಾನಂಗಳಿಂ ಪಿಂತಂ ನೋಡದೆ ಪಾಟಿಗೆಟ್ಟಟಿಪಿನಿಂ ಬಾಟ್ಪಂತೆ ಬಾಟ್ವಿಯ್ಕನಾ ಸಂತಂ ತಾಂ ಪಸತಂದನಟ್ಟಿ ಪೆಱುಗುಂ ದಾನಂಗಳಂ ಭೂಪನಾ ॥ ಚಕ್ರಶ್ಲೋಕ ॥ (ಕವಿರಾ. ೨-೧೪೦). [ ಚಕ್ರ$_1$ + ಶ್ಲೋಕ ]

**ಚಕ್ರಸಂಭವ** (ನಾ). [ಜ್ಯೋತಿ] ಚಕ್ರಯೋಗದಲ್ಲಿ ಹುಟ್ಟಿದವನು : ವಸುಧಾಪತಿ ವಿನತಂ ಚಕ್ರಸಂಭವಂ (ಜಾತಕ. ೧೩-೧೪). [ ಚಕ್ರ$_1$ + ಸಂಭವ ]

**ಚಕ್ರಸಹಾಯ** (ನಾ). ೧. ಸುದರ್ಶನಚಕ್ರವನ್ನು ಆಯುಧವನ್ನಾಗಿ ಹೊಂದಿರುವವನು ; ವಿಷ್ಣು. ೨. ಚಕ್ರವಾಕಪಕ್ಷಿಗಳ ಮಿತ್ರ ; ಸೂರ್ಯ. ೧, ೨ : ಮಸಕಂಗುಂದೆ ನಿಶಾಟಕೋಟಿ . . . ಪೀತಾಂಬರೋಲ್ಲಸಿತಂ ಚಕ್ರಸಹಾಯನಾಕ್ರಮಿಸಿದಂ ಭೂಚಕ್ರಮಂ ಪಾದದಿಂ (ಪುಷ್ಪಪು. ೮-೨೩). [ ಚಕ್ರ$_1$ + ಸಹಾಯ ]

**ಚಕ್ರಾಂಕ** (ನಾ). ೧. ರಥದ ಗಾಲಿಗಳ ಗುರುತು. 'ಚಕ್ರಾಂಕವ್ಯಂಜಿತ' ಪರಾ. ೨. ಚಕ್ರದ ಅಂಕಿತವುಳ್ಳವನು: ಅಖಿಲಧರಿತ್ರೀಚಕ್ರಾವನನಿಪುಣಂ ನತಶಕ್ರಾದಿಮದಿವಿಜನೆನ್ನುಗಿಮಾ ಚಕ್ರಾಂಕಂ (ವಸ್ತುವಂ. ೧೦-೬೭). ೩.=ಚಕ್ರವಾಕ ೧ : ಕೋಡಿ ಹಿಮದಿಂ ಚಕ್ರಾಂಕವುಳ್ಕಿದುರ್ವು (ಪುಷ್ಪಪು. ೬-೪೦). [ ಚಕ್ರ$_1$ + ಅಂಕ$_2$ ]

**ಚಕ್ರಾಂಕಣ** (ನಾ). ಚಕ್ರದ ಆಕಾರದಲ್ಲಿ ಮುದ್ರೆ ಹಾಕುವಿಕೆ : (ಶ). [ <ಸಂ. ಚಕ್ರಾಂಕನ ]

**ಚಕ್ರಾಂಕನ** (ನಾ). ಚಕ್ರದ ಮುದ್ರೆಯನ್ನು ಕಾಯಿಸಿ ದೇಹದಲ್ಲಿ ಮುದ್ರೆಯೊತ್ತುವಿಕೆ: P ಇದು ವೈಷ್ಣವ ಮತಸ್ಥರಲ್ಲಿ ಒಂದು ಸಂಪ್ರದಾಯ: ಅನೇಕರು ಚಕ್ರಾಂಕನ ಮಾಡಿಸಿಕೊಂಡು ವೈಷ್ಣವರಾಗಿ (ಕಭವಿ. I, ೧೩). [ ಚಕ್ರ$_1$ + ಅಂಕನ ]

**ಚಕ್ರಾಂಕಯುಗ** (ನಾ). = ಚಕ್ರಮಿಥುನ: ಬೆಚ್ಚಿದವು ಚಕ್ರಾಂಕಯುಗ (ಕುವ್ಯಾವಿ. ೨-೫೧). [ ಚಕ್ರಾಂಕ + ಯುಗ ]

**ಚಕ್ರಾಂಕವ್ಯಂಜಿತ** (ಗು). ೧. ರಥದ ಗಾಲಿಗಳ ಗುರುತುಗಳಿಂದ ವಿಶೇಷವಾಗಿ ಶೋಭಿಸುವ. ೨. ಚಕ್ರವಾಕಪಕ್ಷಿಗಳಿಂದ ಸೂಚಿತವಾದ. ೧, ೨: ಕಂಜವನದಂತೆ ಲಕ್ಷ್ಮೀರಂಜಿತಮುಂ ಚಿತ್ರಪತ್ರಮುಂ ಚಕ್ರಾಂಕವ್ಯಂಜಿತಮುಮಪ್ಪ ಬೀಡಂ ಮಂಜ್ಜೆಱೆವಂತಿರುಳೊಳಿೞಿದನಶ್ವತ್ಥಾಮಂ (ಗದಾಯು. ೯-೩೨). [ ಚಕ್ರಾಂಕ + ವ್ಯಂಜಿತ ]

**ಚಕ್ರಾಂಗ** (ನಾ). ೧. ಚಕ್ರವಾಕಪಕ್ಷಿ. ೨. ಹಂಸಪಕ್ಷಿ: ಹಂಸಃ, ಶ್ವೇತಚ್ಛದಃ, ಚಕ್ರಾಂಗಃ, ಮಾನಸೌಕಾಃ (ಕಸಃ)–ಈ ೪ ಹಂಸಂ " (ಹಲಾಯು. ೪೨-೯೮); ಚಕ್ರಾಂಗವಾಹನಾನನವಾಜಿಶಾಲಹರ ಶುಕ್ರಶಿಷ್ಯಾಧಿಪ ಶಿರೋಮಾಲ (ಪ್ರೌಢರಾ. ೮-೧). [ ಚಕ್ರ$_1$ + ಅಂಗ$_3$ ]

**ಚಕ್ರಾಂಗಿ** (ನಾ). ೧. ಹೆಣ್ಣು ಹಂಸಪಕ್ಷಿ ; ಹಂಸಿ. ೨. ಒಂದು ಬಗೆಯ ಮೂಲಿಕೆ; ಕಟುಕರೋಹಿಣಿ: ಘಟಿಲನೆ ಚಕ್ರಾಂಗಿ [ಪಾಠಾಂ. ಕಿ]ಯುಮಂ ಕಟಿಯಿಂದರೆದೀಂಟೆ ಕಿಡುಗುಮಾಖುಗಳ ವಿಷಂ (ಖಮದ. ೧೨-೨೧). [ ಸಂ. ಚಕ್ರಾಂಗೀ (ಚಕ್ರ + ಅಂಗ + –) ]

**ಚಕ್ರಾಂಶು** (ನಾ). ಚಕ್ರಾಯುಧದ ಕಿರಣ,–ಕಾಂತಿ: ಸಮುದಿತಾರ್ಕಾಕಾರ ಚಕ್ರಾಂಶುವಿಂ . . . ಚೆಲ್ವಾದನಬ್ಜೋದರಂ (ಜಗವಿ. ೧-೪೯). [ ಚಕ್ರ$_1$ + ಅಂಶು ]

**ಚಕ್ರಾಚಕ್ರಿ** (ನಾ). ಚಕ್ರಗಳನ್ನು ಪರಸ್ಪರ ಪ್ರಯೋಗಿಸಿ ಮಾಡುವ ಯುದ್ಧ: ಚಕ್ರಾಚಕ್ರಿಯುಂ ಖಟ್ವಾಖಟ್ವಿಯುಮಾಗೆಯುಂ ಪೆಣೆದಿರುವ ಪದದೊಳ್ (ಶಾಂತಿಪು. ೬-೮೩ ವ). [ ಸಂ. ]

**ಚಕ್ರಾಟ** (ನಾ). ೧. ಮಾಂತ್ರಿಕ; ಗಾರುಡಿಗ. ೨. ಖಳ; ನೀಚ. [ ಸಂ. ]

**ಚಕ್ರಾಣಿಕೆ** (ನಾ). ಒಂದು ಬಗೆಯ ಗಿಡ : ಚಕ್ರಾಣಿಕೆ, ನೀರುಪಾಟಿ (ವ್ಯಜಿಗಿ. ೮-೧೩೦). [ ? ]

**ಚಕ್ರಾತ್ಮಕ** (ನಾ). ಚಕ್ರಾಕಾರವಾದುದು; ಚಕ್ರದಂತಿರುವುದು: ಜಗತ್ಪ್ರವಾಹದಲ್ಲಿ ಸೃಷ್ಟಿಸ್ಥಿತಿಲಯಾದಿಗಳು ಚಕ್ರಾತ್ಮಕವಾಗಿರುವಂತೆ ಮಾನವನ ಇತಿಹಾಸದಲ್ಲಿ ಸಂಸ್ಕೃತಿಗಳ ಆಯುಸ್ಸೂ ಚಕ್ರಾತ್ಮಕ ಮತ್ತು ಪರಿಮಿತ (ಹುಣ್ಣಾರ. ೯೭ ಪೀಠಿಕೆ). [ಸಂ.]

**ಚಕ್ರಾಧಾರ** (ನಾ). ಭೂಮಿಗೆ ಆಧಾರವಾಗಿರುವವನು; ಕೂರ್ಮ; ವಿಷ್ಣು: ಕ್ಷೀರವಾರುಧಿಶಯನ . . . ಚಕ್ರಾಧಾರ ಭವದೂರ (ಹರಿಹ. ೫). [ ಚಕ್ರ₁ + ಆಧಾರ ]

**ಚಕ್ರಾಧಿನಾಥ** (ನಾ).=ಚಕ್ರನಾಥ: ಚಕ್ರಾಧಿನಾಥಂಗೆ ಜಯಪ್ರಾರಂಭಗಜ್ಜ ಸ್ಫಟಿಕಕಳಶವಂ ಕೀಳಿ ದಿವ್ಯಾಂಬುವಿಂ ನಾಕಜನಾಥಂ ಮಜ್ಜನಕ್ಕಿತ್ತಿದ ತೆಱದೆ ಸುಧಾಪೂತಿ ಕಣ್ಗೆಡ್ಡಮಾದಂ (ಆದಿಪು. ೧೨-೮). [ ಚಕ್ರ₁ + ಅಧಿನಾಥ ]

**ಚಕ್ರಾಧಿಪ** (ನಾ).=ಚಕ್ರನಾಥ: ಮಂತ್ರಪೂರ್ವಕಂ ನೆಗೞ್ದುದೆಂದು ಚಕ್ರಾಧಿಪಂ ಮನಂಗೊಳೆ ಪೇೞ್ದಂ (ಆದಿಪು. ೦೫-೧೬). [ ಚಕ್ರ₁ + ಅಧಿಪ ]

**ಚಕ್ರಾಧಿಪತ್ಯ** (ನಾ). ಚಕ್ರವರ್ತಿಯು ಆಳುವ ರಾಜ್ಯ; ಸಾಮ್ರಾಜ್ಯ: ಭಾರತವು ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿತ್ತು (ರೂಢಿ). [ ಚಕ್ರ₁ + ಆಧಿಪತ್ಯ ]

**ಚಕ್ರಾಧೀಶ** (ನಾ). = ಚಕ್ರನಾಥ: ಇಲಾಚಕ್ರವಿಖ್ಯಾತ ಭೂಭೃತ್ಪ್ರಭು ಚಕ್ರಾಧೀಶನೊಳ್ ಮಚ್ಚರಿಪವೊಲೆಸೆದಿರ್ದತ್ತು ರೌಪ್ಯಾಚಲೇಂದ್ರಂ (ಆದಿಪು. ೧೫-೯೭). [ ಚಕ್ರ₁ + ಅಧೀಶ ]

**ಚಕ್ರಾಭಿಷೇಕ** (ನಾ.)[ಜೈನ]ಐವತ್ತುಮೂರು ಗರ್ಭಾನ್ವಯಕ್ರಿಯೆಗಳಲ್ಲಿ ಒಂದು: ಅಂತು ಚಕ್ರಾಭಿಷೇಕೋತ್ಸವಾನಂತರಂ (ಆದಿಪು. ೦೫-೨ ವ): ಚಕ್ರಲಾಭಮುಂ ಚಕ್ರಾಭಿಷೇಕಮುಂ . . . ಅಪ್ಪಯ್ವತ್ತುಮೂಱು ಗರ್ಭಾನ್ವಯಕ್ರಿಯೆಯೊಳು (ಚಾವುಂಪು. ೨೪೦); ಸಕಲರಾಜಾಧಿರಾಜರುಗಳಿಂ ಅಭಿಷೇಕವಂ ಪಡೆದು ಸಕಲರಿಂ ಪೂಜಿತನಾಗಿ ಪುನಃ ಚಕ್ರಪೂಜೆಯಂ ಮಾಡಿ ಸರ್ವರಿಂದಲೂ ವಿಶ್ವಂಜಯ ದಿಶಾಂಜಯ ದಿವ್ಯಮೂರ್ತಿಯೆಂದು ಪೊಗಳಿಸಿಕೊಳ್ಳುವುದೇ . . . ಚಕ್ರಾಭಿಷೇಕವೆಂಬ ೪೭ನೆ ಕರ್ಮವು (ಪುರುಷ. ೨೦೩). [ ಚಕ್ರ₁ + ಅಭಿಷೇಕ ]

**ಚಕ್ರಾಯುಧ** (ನಾ). ೧. ಒಂದು ಬಗೆಯ ವರ್ತುಲಾಕಾರವಾದ ಆಯುಧ,–ಅಸ್ತ್ರ; ಸುದರ್ಶನ ಚಕ್ರ. ೨. ಚಕ್ರವನ್ನು ಆಯುಧವಾಗಿ ಉಳ್ಳವನು; ವಿಷ್ಣು: ಎಲೆ ಚಕ್ರಾಯುಧ . . . ನೀನಱಿವುಗೆಟ್ಟೀತಂದ್ರಿಯಿಂ ದೊಂದಿ ಸಾಯಲಿದೇಂ ತಕ್ಕುದೆ (ಶಾಂತೀಶ್ವ. ೫-೨೫). ೩. = ಚಕ್ರರತ್ನ: ಆಯುಧಶಾಲೆಯೊಳ್ . . . ಚಕ್ರಾಯುಧಮಿಂದು ಬಂದು ನೆಲಸಿರ್ದುದು (ಶಾಂತಿಪು. ೮-೦೫೩). ೪. [ಜೈನ] ದೈವಾಯತ್ತವಾಗಿ ಚಕ್ರವನ್ನು ಪಡೆದವನು; ಚಕ್ರವರ್ತಿ: ಚಕ್ರಾಯುಧಂಗೆ ಗುರು ಪೆಱನೊಳನೇ (ಶಾಂತಿಪು. ೧೦-೯೮); ಚಕ್ರಾಯುಧನಂ ಬಿನ್ನಪಂಗೆಯ್ಯಲ್ವೇೞ್ಪುದುಂ (ಶಾಂತಿಪು. ೦೦-೧೨೨ ವ). [ ಚಕ್ರ₁ + ಆಯುಧ ]

**ಚಕ್ರಾರ** (ನಾ). ಗಾಲಿಯ ಅರೆ; ಚಕ್ರದ ಒಳ ಸುತ್ತಿನ ಅರೆಕೋಲು: ಚಕ್ರಾರಪಂಕ್ತಿಯುರುಳಿದಂತೆ ಇದರ ಕಥೆ (ಬದ್ಧಪ್ರ. XXVI, ಮುನ್ನುಡಿ). [ ಚಕ್ರ₁ + ಅರ₂ ]

**ಚಕ್ರಾರಾವ** (ನಾ). ಗಾಲಿಗಳ ಸದ್ದು,–ಶಬ್ದ: ಪೊಳೆವ ಬಾಳುಳ್ಮಂಗಳಂ ಪೊಳೆ ಪಾಯಿಸಲೆಂದಿರ್ದಳವಂ ಪೊದಟ್ಟಿಸುವ ಚಕ್ರಾರಾವಮೋರಂತೆ ಚೋದಿಸಲೆಂದಿರ್ದ ರಥಂ . . . ನೋಟಕ್ಕೇನಗುರ್ವಾದುದೋ (ಆದಿಪು. ೧೪-೧೦೦). [ ಚಕ್ರ₁ + ಆರಾವ ]

**ಚಕ್ರಾಹ್ವ** (ನಾ). ಚಕ್ರವಾಕಪಕ್ಷಿ: ಇಂದ್ರಿಯಸುಖಾರ್ಥಿ ಸಂಸಾರಗುಹಾಗಹ್ವರದೊಳಗಿರುಳಿನ ಚಕ್ರಾಹ್ವದವೊಲ್ ಮಱುಗದೇಂ ಸುಖಂಬಡೆದವನೇ (ಆದಿಪು. ೩-೭೮). [ ಸಂ. ]

**ಚಕ್ರಿ** (ನಾ). ೧. ಗಾಲಿಯನ್ನು ಉಳ್ಳದು; ಬಂಡಿ; ರಥ: "ಚಕ್ರಿಯೆಂದೆನಲ್ ಭಂಡಿಯಕ್ಕು" (ಮಂಗರಾ. ೮೪-೨೩). ೨. ಕುಂಬಾರ; ಕುಲಾಲ: "ಕುಲಾಲಾಖ್ಯಂ ಚಕ್ರಿ ಕುಂಭಕಾರನವಂ" (ಚನ್ನುಕೋ. ೭೪-೭೪): ಚಕ್ರಿ ಇಕ್ಕಿದ ಕಿಚ್ಚಿನಂತೆ ಅರ್ಕಚಂದ್ರನಂತೆ ಆರಾರ ಚಿತ್ತಕ್ಕೆ ಹೆಚ್ಚು ಕುಂದಿಲ್ಲದೆ ನಿಶ್ಚಿಂತನಾದೆಯಲ್ಲಾ (ಪೋಲೀಮೂ. ೧೩೪-೫೦೦). ೩. ಚಕ್ರಾಯುಧವನ್ನು ಉಳ್ಳವನು; ವಿಷ್ಣು; ಕೃಷ್ಣ: ಒಡಿಯಂ ಚಕ್ರಮನೆಂಬ ಚಕ್ರಿಯಿಂ . . . ಒಡಿಯುವ್ಪೆಂ ಕರಚಕ್ರಮಂ (ಹಂಪಭಾ. ೧೦-೨೫); ಪಾಂಡುತನಯರಿಗೆ ಚಕ್ರಿ ತಾ ಬಂದವರ ಸೇವಾಚಕ್ರದೊಳಗಿಹನು (ಜುವ್ಯಾಕ. ೩-೦೩೦). ೨. ೩: ಅಜಾಂಡಘಟಮಾಲಾಚಕ್ರಿಯೊಳ್ ಮಗನಂ ಬೇಡಿದನೊಲ್ದನಿಲ್ಲ ಗುರು ವಿದ್ಯಾವಿತ್ತಮಂ ವಿತ್ತಮಂ (ಜಗವಿ. ೭-೦೫). ೪. ಚಕ್ರವರ್ತಿ; ಸಾಮ್ರಾಟ: ಜಗದ ಬಡತನವನೊರ್ವೆಯ ಬಗೆದಂತಿರೆ ಕಿಡಿಪ ಚಕ್ರಿ ತನ್ನಿರ್ದೆಡೆಯೊಳ್ ನೆಗೞ್ದ ಬಡತನಮನದೇಕೆ ಗಡಂ ಸೈರಿಸುವನೆನೆ ಪೊದಟ್ಟುದು ಮಧ್ಯಂ (ಆದಿಪು. ೮-೩೦); ಚಕ್ರಿಯೊಳ್ಪಡೆದು ಶಾಸನವಂ (ಸೌಇಇ. XI-1, ೭೪-೦೫: 1028); ಶ್ರೀಮಚ್ಚಾಳುಕ್ಯಚಕ್ರಿಯ ರಾಜಧಾನಿ ಕಲ್ಯಾಣದೊಳ್ (ಸೌಇಇ. XI-1, ೦೦೩-೦೦: 1070 ?). ೫. ಚಕ್ರವಾಕಪಕ್ಷಿಗಳಿಂದ ಕೂಡಿದುದು. ೩, ೫: ಸಿರಿಯುರಸನೆಂಬಂತೆ ಚಕ್ರಿಯೆಂದೆನಿಸಿತ್ತು . . . ಪುಂಡರೀಕಂ (ನವಮೋ. ೮-೩೬). ೬. ಕತ್ತೆ; ರಾಸಭ. ೭. ಹಾವು; ಸರ್ಪ: "ಅಹಿ ಚಕ್ರಿ ಕಾಕೋದರಂ . . . ವ್ಯಾಳನೆನಲು ಸರ್ಪಂಗೆ ನಾಮಂ" (ಮಂಗರಾ. ೦೦೮-೦): "ಆ ಹರಿ ನೃಪ ಕುಂಬಾರಂ ಊಹಿಸೆ ಗಿರಿ ಪಾವು ಪಂಚಶಬ್ದಂ ಚಕ್ರೀ" (ನಾನಾಕಂ. ೦೦೬): "ಹರಿ ಭೂಪಾಲಂ ಕುಲಾಲಂ ಫಣಿ ಕರವಿನಿತುಂ ಚಕ್ರಿಶಬ್ದಂ" (ನಾನಾಥ. ೮೦). [ ಸಂ. ಚಕ್ರಿನ್ ]

**ಚಕ್ರಿಕ** (ನಾ). ಚಕ್ರವನ್ನು ಧರಿಸಿರುವವನು. [ ಸಂ. ]

**ಚಕ್ರಿಕಾವರ್ತಿ** (ನಾ). ಕೃತ್ರಿಮವಾದ ಉಪಾಯವುಳ್ಳವನು; ಕಪಟ ವ್ಯವಹಾರದವನು: ಚಕ್ರಿ ಚಕ್ರಿಕಾವರ್ತಿಯಪ್ಪುದಱಿಂದಾ ವನಾಂತರಾಳಕ್ಕೆಯ್ದರ್ವನೆ ಬಂದು (ಹಂಪಭಾ. ೫-೦೯ ವ). [ ಸಂ. ಚಕ್ರಿಕಾವರ್ತಿನ್ ]

**ಚಕ್ರಿಪದ** (ನಾ). ಚಕ್ರವರ್ತಿಯ ಪದವಿ,–ಸ್ಥಾನ: ಆದಿಯಿಡುವಂತಿರಯ್ದನೆಯ ಚಕ್ರಿಪದಕ್ಕೆ ಜಿನಾರ್ಭಕಂ ತಳರ್ನಡೆ ನಡೆದಂ (ಶಾಂತಿಪು. ೦೦-೮೨). [ ಚಕ್ರಿ + ಪದ₃ ]

**ಚಕ್ರಿಯೋಧ** (ನಾ). ಚಕ್ರವರ್ತಿಯ ಸೈನಿಕ: ಚಕ್ರಿಯೋಧರುಂ ವಿಜಯಶ್ರಮಮನೇಯಪರರಾಗಿ . . . ವಿಶ್ರಮಿಸಿದರ್ (ಶಾಂತಿಪು. ೧೦-೨೪ ವ). [ ಚಕ್ರಿ + ಯೋಧ ]

**ಚಕ್ರಿಶಾಯಿ** (ನಾ). ಸರ್ಪದ ಮೇಲೆ ಮಲಗಿರುವವನು; ಶೇಷಶಾಯಿ; ವಿಷ್ಣು: ಹಾ ವಿಧಿಯೆ ಹಾ ಚಕ್ರಿಶಾಯಿ ಪರಿಪರಿಯ ರಕ್ಕಸರ ಭವಣೆಯಂ ಪರಿಹರಿಸಿ ರಕ್ಷಿಸಿದ ಛೀಮ (ಉಷಾವಿ. ೯); ಚಕ್ರಿಶಾಯಿಯಪ್ಪ ಚಕ್ರಿಯನು ಗೃಹದಿಂ ಸಹಿತಮಾ ಚಕ್ರಮಂ ಚಕ್ರವರ್ತಿ ಕೈಕೊಂಡು (ಅದ್ಭುತ. ೭-೦೨). [ ಸಂ. ಚಕ್ರಿಶಾಯಿನ್ ]

**ಚಕ್ರಿಸೈನಿಕ** (ನಾ). ಚಕ್ರವರ್ತಿಯ ಸೈನ್ಯ,–ದಂಡು: ಕುಸುಮಿತ ಮಂದಾರಚ್ಛಾಯ . . . ಪ್ರಸರಂಗಳೊಳೆಳಸಿದ ಚಕ್ರಿಸೈನಿಕಂ ನೀಗಿತಧ್ವಗಮನಶ್ರಮಮಂ (ಶಾಂತಿಪು. ೦೦-೭೫). [ ಚಕ್ರಿ + ಸೈನಿಕ ]

**ಚಕ್ರೀವತ್** (ನಾ). ಕತ್ತೆ: "ಖರ ಚಕ್ರೀವದ್ವಾಲೇಯ ರಾಸಭಾಖ್ಯಾತಿ ಗರ್ದಭಂ ತಾನದು ವೇಸರಂ" (ಚನ್ನುಕೋ. ೮೮-೩೯). [ಸಂ. ಚಕ್ರೀವತ್]

**ಚಕ್ರೀಶ** (ನಾ). ೧. ವಿಷ್ಣು. ೨. ಭೂಮಂಡಲದ ಅಧಿಪತಿ; ಚಕ್ರವರ್ತಿ. ೩. [ಜೈನ] ಚಕ್ರರತ್ನದ ಒಡೆಯ. ೨, ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರುಮಾಯ್ತುಕ್ಕವು ತಾಂ ಚಕ್ರೀಶನಾದೊಡಂ ತನ್ನಾಶ್ರಮಣವನೆನ್ನೊಳೇಕೆ ಕೆಮ್ಮನೆ ತೋರ್ಪಂ (ಆದಿಪು. ೦೪-೭೯). [ ಚಕ್ರ₁ + ಈಶ ]

**ಚಕ್ರೇಶ್ವರ** (ನಾ). ೧.=ಚಕ್ರೇಶ ೨: ಈ ಮಾಟ್ಕೆಯಿಂ . . . ಭೂಷಣಾಂಗದಳವಂ ಚಕ್ರೇಶ್ವರಂ ತಾಳ್ದಿದಂ (ಆದಿಪು. ೪-೩೫): ಚಕ್ರೇಶ್ವರ ಮಂಡಳೇಶ್ವರಂ ಬೆಸಸೆ ನೆಗಟ್ಟ ಕವಿ ಕವಿರತ್ನಂ (ಅಜಿಪು. ೧೨-೪೫). ೨.=ಚಕ್ರೇಶ ೩: ಚಕ್ರಂ ಪುಟ್ಟಿದೊಡೀಗಳ್ ಚಕ್ರೇಶ್ವರನೆಂಬ ಪೆಸರು ಮಾಯ್ದು (ಆದಿಪು. ೧೪-೬೯). [ ಚಕ್ರ$_1$ + ಈಶ್ವರ ]

**ಚಕ್ಲಿ$_1$** (ನಾ). ಹುಣಿಸೆಜಾತಿಗೆ ಸೇರಿದ ಒಂದು ಬಗೆಯ ಮರ: (ಕ).
[ ←ತುಳು. ಚಕ್ಕುಲಿ ]

**ಚಕ್ಲಿ$_2$** (ನಾ). ಭೂಮಿಯ ಕ್ಷೇತ್ರವನ್ನು ಅಳೆಯುವ ಒಂದು ಪ್ರಮಾಣ: ಚಕ್ಲಿಯೆಂದರೆ ಅರ್ಧಕೂರಿಗೆಗಿಂತ ಹೆಚ್ಚಾಗುವದಿಲ್ಲ (ಕಳಾಗಿ. ೩೬೬).
[ ←ಮರಾ. ಸಾಖಳೀ? ]

**ಚಕ್ಷಣ** (ನಾ). = ಚಕ್ಕಣ. [ ಸಂ. ]

**ಚಕ್ಷು** (ನಾ). ಕಣ್ಣು; ನೇತ್ರ: "ಚಕ್ಷು ನೇತ್ರಂ ನಯನಮಂಬಕಂ . . . ಕಣ್ಗಳೆನಿಸಿಕ್ಕುಂ" (ಮಂಗರಾ. ೯೩-೨): ಇಂದ್ರ ಪಾದದಲ್ಲಿ ಚಂದ್ರ ಮನದಲ್ಲಿ ಚಕ್ಷುವಿನಲ್ಲಿ ಸೂರ್ಯಜನನವು (ಬಸವ. ೩೩೬); ಭಗವಂತನು . . . ಮಧ್ಯಮಮಾರ್ಗವನ್ನು ಕಂಡುಕೊಂಡನು; ಇದರಿಂದ ಚಕ್ಷು ಉಂಟಾಯಿತು, ಜ್ಞಾನ ಉಂಟಾಯಿತು (ಭಾರದ. ೦೯೦). [ <ಸಂ. ಚಕ್ಷುಸ್ ]

**ಚಕ್ಷುಃಪ್ರೀತಿ** (ನಾ). ಮೊದಲಸಲ ನೋಡಿದ ಮಾತ್ರದಿಂದಲೇ ಉಂಟಾಗುವ ಪ್ರೀತಿ; ಕಣ್ಬೇಟ. P ಇದು ಚಕ್ಷುಃಪ್ರೀತಿ, ಮನಸ್ಸಂಗ, ಸಂಕಲ್ಪ, ಜಾಗರ, ಕಾರ್ಶ್ಯ, ಅರತಿ, ಲಜ್ಜಾತ್ಯಾಗ, ಮೋಹೋನ್ಮಾದ, ಮೂರ್ಛಾವಸ್ಥೆ, ಮರಣ ಎಂಬ ಹತ್ತು ಬಗೆಯ ಮದನಾವಸ್ಥೆಗಳಲ್ಲಿ ಮೊದಲನೆಯದು: ಚಕ್ಷುಃಪ್ರೀತಿಯದಿನಿಯನನೀಕ್ಷಿಪುದು (ರಸರ. ೧-೪೦ ಸೂತ್ರ). [ ಸಂ. (ಚಕ್ಷುಸ್ + ಪ್ರೀತಿ) ]

**ಚಕ್ಷುಃಶ್ರವ** (ನಾ). ಕಣ್ಣುಗಳನ್ನೇ ಕಿವಿಗಳಾಗಿ ಬಳಸಿಕೊಳ್ಳುವ ಪ್ರಾಣಿ; ಸರ್ಪ. [ ಸಂ. (ಚಕ್ಷುಸ್ + ಶ್ರವಸ್) ]

**ಚಕ್ಷುಬಂಧನ** (ನಾ). ಕಣ್ಣು ತೆರೆಯದಂತೆ ಮಾಡುವಿಕೆ; ಕಣ್ಣುಕಟ್ಟು (?): ಚಕ್ಷುಬಂಧನಕ್ಕೆ :– ಕೋಳಿಪಿಷ್ಟೆಯ ಜೇನುತುಪ್ಪದಲ್ಲಿ ತಿಲಕವಿಡೆ ಚಕ್ಷುಬಂಧನ (ವಿದ್ಯಾವಿ. ೨೧೬). [ ಚಕ್ಷು + ಬಂಧನ ]

**ಚಕ್ಷುರಿಂದ್ರಿಯ** (ನಾ). ಕಣ್ಣು; ನೇತ್ರೇಂದ್ರಿಯ: ಶಬ್ದಾದಿಗಳೈದರಲ್ಲಿ ಅಡಗಿರುವ ರೂಪೇತರದ ಸಾಕ್ಷಾತ್ಕಾರವನ್ನು ಉಂಟುಮಾಡದುದಾಗಿಯೂ ಇರುವ ಇಂದ್ರಿಯವು ಚಕ್ಷುರಿಂದ್ರಿಯವೆನಿಸಿಕೊಳ್ಳುವುದು (ತತ್ತ್ವಬು. ೭).
[ ಸಂ. (ಚಕ್ಷುಸ್ + ಇಂದ್ರಿಯ) ]

**ಚಕ್ಷುರೋಗ** (ನಾ). ಕಣ್ಣಿನ ರೋಗ; ನೇತ್ರರೋಗ: ಮುಳ್ಳುಮುತ್ತುಗದ ರಸದಲ್ಲಿ ಹುಲಿಗಿಲ ಬೀಜವಂ ಅರೆದು ಗುಳಿಗೆಯಂ ಮಾಡಿ ಹಚ್ಚಲು ಎಲ್ಲಾ ಚಕ್ಷುರೋಗಂ ಕೆಡುಗುಂ (ವಿದ್ಯಾವಿ. ೧೩೪). [ ಚಕ್ಷು + ರೋಗ ]

**ಚಕ್ಷುರ್ಗ್ರಾಹ್ಯ** (ಗು). ಕಣ್ಣಿನಿಂದ ಗ್ರಹಿಸತಕ್ಕ; ನಯನಕ್ಕೆ ಗೋಚರವಾಗತಕ್ಕ: ಪ್ರಾಣಲಿಂಗವು ಸಕಲ ನಿಷ್ಕಲ ಮತ್ತು ಮನೋಗ್ರಾಹ್ಯವು, ಇಷ್ಟಲಿಂಗವು ಸಕಲ ಮತ್ತು ಚಕ್ಷುರ್ಗ್ರಾಹ್ಯವು (ಭಾರದ. ೨೫೩).
[ ಸಂ. (ಚಕ್ಷುಸ್ + ಗ್ರಾಹ್ಯ) ]

**ಚಕ್ಷುರ್ದರ್ಶನಿ** (ನಾ). [ಜೈನ] (?): ದರ್ಶನಾನುವಾದದಿಂ ಚಕ್ಷುರ್ದರ್ಶನಿಗಳ್ಗೆ ಮಿಥ್ಯಾ ದೃಷ್ಟ್ಯಾದಿ ಕ್ಷೀಣಕಷಾಯಾಂತಂಬರಂ ಲೋಕಾಸಂಖ್ಯೇಯ ಭಾಗಂ (ತತ್ತ್ವಪ್ರ. ೨೭). 'ಅಚಕ್ಷುರ್ದರ್ಶನ' ಪರಾ.
[ ಸಂ. ಚಕ್ಷುರ್ದರ್ಶನಿನ್ ]

**ಚಕ್ಷುರ್ವಿಜ್ಞಾನ** (ನಾ). ಕಣ್ಣುಗಳಿಂದ ಪಡೆಯುವ ಜ್ಞಾನ; ನೇತ್ರೇಂದ್ರಿಯದಿಂದ ಗ್ರಾಹ್ಯವಾದ ಅರಿವು: ಪ್ರವೃತ್ತಿವಿಜ್ಞಾನವು– ಚಕ್ಷುರ್ವಿಜ್ಞಾನ, ಶ್ರೋತ್ರವಿಜ್ಞಾನ . . . ಮನೋವಿಜ್ಞಾನ ಎಂದು ಆರು ಪ್ರಕಾರವಾಗಿದೆ (ಹಿಂದಸಾ. ೨೯). [ ಸಂ. (ಚಕ್ಷುಸ್ + ವಿಜ್ಞಾನ) ]

**ಚಕ್ಷುಶ್ರವಣ** (ನಾ).=ಚಕ್ಷುಃಶ್ರವ: ಅತುಳ ಚಕ್ಷುಶ್ರವಣಾಭರಣ ಸುಕ್ಷ್ವೇಡನ ಗ್ರೀವ ರಕ್ಷಿಸುಗೆ (ನವಮೋ. ೧೭-೧). [ <ಸಂ. ಚಕ್ಷುಃಶ್ರವಣ ]

**ಚಕ್ಷುಶ್ರವಾಕಲ್ಪ** (ನಾ). ಸರ್ಪವನ್ನೇ ಆಭರಣವಾಗಿ ಉಳ್ಳವನು; ಶಿವ: ಚಕ್ಷುಶ್ರವಾಕಲ್ಪ ದಕ್ಷಮುಖಶಿಕ್ಷ (ಉದ್ಭಟ. ೩-೫೦).
[ <ಸಂ. ಚಕ್ಷುಃಶ್ರವಾಕಲ್ಪ ]

**ಚಕ್ಷುಶ್ರೋತ್ರ** (ನಾ).=ಚಕ್ಷುಃಶ್ರವ: (ಕ). [<ಸಂ. ಚಕ್ಷುಃಶ್ರೋತ್ರ ]

**ಚಕ್ಷುಶ್ಶ್ರವಾಶ** (ನಾ). ಹಾವನ್ನು ತಿನ್ನುವ ಪ್ರಾಣಿ; ನವಿಲು: "ಚಕ್ಷುಶ್ಶ್ರವಾಶಂ ಕಲಾಪಿ . . . ನವಿಲೆನಿಕ್ಕುಂ" (ಮಂಗರಾ. ೫೦-೨). [ ಸಂ. ]

**ಚಕ್ಷುಶ್ಶ್ರುತಿ** (ನಾ). = ಚಕ್ಷುಃಶ್ರವ: ಚಕ್ಷುಶ್ಶ್ರುತಿಗಳಂತೆ ವಾಯುಭಕ್ಷಕರಾಗಿರ್ದ ಮುಮುಕ್ಷುನಿಕರಮುಮಂ (ಶಂಕರಂ. ೧೧೯-೦೦).
[ ಸಂ. (ಚಕ್ಷುಸ್ + ಶ್ರುತಿ) ]

**ಚಕ್ಷುಷ್ಮಂತ** (ನಾ). ೧. ಕಣ್ಣುಗಳುಳ್ಳವನು; ದೃಷ್ಟಿಶಕ್ತಿಯುಳ್ಳವನು. ೨. ಮುಂದಾಲೋಚನೆಯುಳ್ಳವನು; ದೂರದೃಷ್ಟಿಯುಳ್ಳವನು: ಕಾಂತಿಪ್ರಸಾದಗುಣದದಗುಂತಿಗಳಿಂದುಗಮಿಳೇಶ್ವರೇಂದುಗಮೊಡನತ್ಯಂತಂ ಸಮನಿಸಿ ಚಕ್ಷುಷ್ಮಂತರ ಕಣ್ಗಂ ಮನಕ್ಕಮಿತ್ತುದು ಮುದಮಂ (ಶಾಂತಿಪು. ೧೦-೧೩೭). [ ಸಂ. ಚಕ್ಷುಷ್ಮತ್ ]

**ಚಕ್ಷುಷ್ಯ** (ಗು). ೧. ಕಣ್ಣಿಗೆ ಹಿತವಾದ; ಚೆಲುವಾದ; ಕಂಗೊಳಿಸುವ: ಆಯುರಾರೋಗ್ಯಾಭಿವೃದ್ಧಿಯಾಗಿ, ಚಕ್ಷುಷ್ಯವಾಗಿ, ಐಶ್ವರ್ಯಪ್ರದವಾಗಿರುವುದು (ಸಕಲವ. ೩೩). (ನಾ). ೨. ಚೆಲುವನಾದವನು; ದರ್ಶನೀಯನಾದವನು: "ಚಕ್ಷುಷ್ಯಃ, ಸುಭಗಃ– ಈ ೨ ಸೊಬಗಂ" (ಹಲಾಯು. ೬೦-೨೦೨). [ ಸಂ. ]

**ಚಕ್ಷುಷ್ಯೆ** (ನಾ). ಕಣ್ಣಿಗೆ ಲೇಪಿಸುವ ಒಂದು ಬಗೆಯ ಅಂಜನ: "ಚಕ್ಷುಷ್ಯೆ ಕುಲಾಲಿ ಕುಲತ್ಥಿಕೆ ಎಂದು, ಕುಲಥಾಂಜನ, ಕಂಬೆಳಗಿನ ಬೀಜಮೆಂದೂ, ಎಂಬರು" (ನಾಟಿಕಾ. ೮). [ ಸಂ. ಚಕ್ಷುಷ್ಯಾ ]

**ಚಕ್ಷುಸ್ಸು** (ನಾ).=ಚಕ್ಷು: ಚಕ್ಷುಸ್ಸು, ಶ್ರೋತ್ರ, ಘ್ರಾಣ, ರಸನ ಮತ್ತು ತ್ವಕ್ ಎಂಬುವು ಜ್ಞಾನೇಂದ್ರಿಯಗಳು (ಧಾತತ್ತ್ವ. ೭೦). [ಸಂ. ಚಕ್ಷುಸ್]

**ಚಕ್ಷೂರಾಗ** (ನಾ).=ಚಕ್ಷುಃಪ್ರೀತಿ: ಯಾರಿಗಾದರೂ, ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ಕಾರಾಮೈತ್ರಿಯೆಂತಲೂ, ಚಕ್ಷೂರಾಗವೆಂತಲೂ, ಅನ್ನುತ್ತಾರೆ; ಅದನ್ನೇ ಬಲ್ಲವರು ಅಬಾಧಿತವಾದಂಥ ಅಕೃತ್ರಿಮಪ್ರಣಯವೆಂದು ತಿಳಿಯುತ್ತಾರೆ (ಉರಾಡ. ೧೩೬).
[ ಸಂ. (ಚಕ್ಷುಸ್ + ರಾಗ) ].

**ಚಗಚೆ, ಚಗಚ್ಚೆ, ಚಗತೆ, ಚೊಗಚೆ** (ನಾ). ಒಂದು ಬಗೆಯ ಗಿಡ; ಚಕ್ರಮರ್ದ: "ಕರವಸಂ ಚಕ್ರಮರ್ದಂ ಚಗಚೆಯಕ್ಕುಂ" (ಮಂಗರಾ. ೩೯-೨೭): ಚಾರು ಚಗಚೆ ದೊಟ್ಟಲ್ಸೊಂಬೆಗಳ ಸುಸಾರದ ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳೆಡೆಮಾಡಿದಳು (ಮುದ್ದೇಪು. ೨೭-೭). **ಚಗಚ್ಚೆ**: ಅರಗಾಮಳಕಫಳಂ ವೃಕ್ಷ ರಾಜಪತ್ರಂ ಚಗಚ್ಚೆ[ಪಾಠಾಂ. ಚೆ]ಯೆಕ್ಕೆಯಿವಂ ಕೊಂಡರೆದಿಂಬಾಗಿರೆ ಪೂಸುಗೆ ಶಿರೋವ್ರಣಂ ತದ್ದುರ್ದುಂದುಜುಂಬಿವು ಕಿಡುಗುಂ (ಲೋಕೋಪ. ೯-೫೮). **ಚಗತೆ**: "ಗಜಾಖ್ಯಾ–ಚಗತೆ" (ಒಷಧಿ. ೪೩). **ಚೊಗಚೆ**: ಮಲ್ಲಿಗೆ ಸೇವಂತಿಗೆ . . . ಚೊಗಚೆ ಎಂಬ ಹೂಗಳೂ (ಮುಂಬಯಿ. ೫-೦೯೬). 'ತಗಚೆ' ಪರಾ. [<ಸಂ. ಚಕ್ರಗಜ]

**ಚಗಚ್ಚೆ** 'ಚಗಚೆ' ನೋ.

**ಚಗತಳಿ** 'ಚಗತಿಳಿ' ನೋ.

**ಚಗತಿ** (ನಾ). ಒಂದು ಬಗೆಯ ಔಷಧಿ ಸಸ್ಯ (?): ಕೆಂಪಿನ ಕಣಗಿಲು ಬೇರ ಕೊಕ್ಕು, ಕಕ್ಕೇ ಚಿಗುರು ಚಗತಿ ಬೀಜ . . . ಇವಂ ನಿಂಬೇಹುಳಿಯಲ್ಲರೆದು ಲೇಪವಂ ಮಾಡೆ ಮೈಯ ಸರ್ವ ತಿಮಿರ ಮಾಣ್ಗುಂ (ವಿದ್ಯಾವಿ. ೬೯). 'ಚಗಚೆ' ಪರಾ. [ ? ]

**ಚಗತಿಳಿ, ಚಗತಳಿ, ಚಿಗೆತಳಿ** (ನಾ). ಸಣ್ಣ ಚೂರು,–ತುಂಡು: ಹದನಾಗಿ ಕೆಂಡದೊಳು ಬೆಂದ ಬಾಳೆಯಕಾಯ ಪುದಿದ ಸಿಪ್ಪೆಯ ತೆಗೆದು ಕಯ್ಯು ಚಗತಿ[ಪಾಠಾಂ. ಚಿತ್ರ, ಸೆಗ]ಳಿಗಳುವಮನುದಕದೊಳು ತವರಾಜನಂ ಕದಡಿ (ಸೂಪಶಾ. ೪–೮೯). **ಚಗತಳಿ :** ಮತ್ತನುಕ್ಕರಿಸಿಕೊಂಡೀರ ಪಲಸಿನ ಕಾಯ ನೊತ್ತಿ ಹಿಳಿದದನು ಚಗ [ಪಾಠಾಂ. ಚಿಗೆ]ತಳಿ ಮಾಡಿ (ಸೂಪಶಾ. ೫–೬೯); ಸುಟ್ಟ ಬಾಳೆಯ ಕಾಯ . . . ತಿರುಳ ತೆಗೆದು ಚ[ಗ]ತಳಿಯಾಗಿ ಕೊಯ್ದು (ಭೀಮಸೂ. ೪೨). **ಚಿಗೆತಳಿ :** ಮೇಲಿನ ‘ಸೂಪಶಾ. ೫–೬೯’ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಗತೆ** ‘ಚಗಟೆ’ ನೋ.

**ಚಗರೆ** (ನಾ). ಮೇಯುವಿಕೆ (?): ಅರವ ಕತ್ತೆ ಚಗರೆಗೆ ಬಿಟ್ಟ ಹಾಗೆ (ಗಾದೆ). ‘ಚರೆಯು’ ಪರಾ. [ ? ]

**ಚಗಳಿಇರುವೆ** (ನಾ). ಒಂದು ಬಗೆಯ ನಸುಕೆಂಪುಬಣ್ಣದ ಇರುವೆ : ಕೆಂಜಿಗ : ನಸುಗೆಂಪು ಬಣ್ಣದ ದೊಡ್ಡ ದೊಡ್ಡ ಚಗಳಿಇರುವೆಗಳು ಎಲೆಗಳ ಮೇಲೆಯೂ ಕೊಂಬೆಗಳ ಮೇಲೆಯೂ ಹರಿದಾಡುತ್ತಿದ್ದುವು (ಕಾನೂರು. ೨೯೯). ‘ಚೌಳಿ₁’ ಪರಾ. [ಚಗಳಿ₀+ಇರುವೆ₁(<ಇರುಂಪೆ)]

**ಚಗಳಿಸು** (ಕ್ರಿ). (ಉಕ) (ತುತ್ತನ್ನು) ಅಗಿ; ಚರ್ವಣಮಾಡು : ತುತ್ತನ್ನು ಚೆನ್ನಾಗಿ ಚಗಳಿಸಿ ತಿನ್ನಬೇಕು (ರೂಢಿ).

[ ಚಗಳಿ₀ (P ←ಮರಾ. ಚಘಳಣೇ) + – ಇಸು₃. ]

**ಚಗಳು** ‘ಚೆರಳ್’ ನೋ.

**ಚಗಿಸು** (ಕ್ರಿ). = ಚಗಳಿಸು (?): ಪಂಚಾಸ್ಯನಾಹವಕೆ ಸಾರಗನ ಸೇನೆ ಪುಲ್ಲಂ ಚಗಿಸಿದಂತೆ ಕೊಳದಾ ದುಷ್ಟನೊಳು ಕಾರ್ಯ ಮುಂಚಿದಳಲಿನೊಳೊರಲು ವರು ಶೋಕ ನಿನ್ನಿಂದ ತಣ್ಪುಸುವೆವೆಂಬ ಕಿತರದಿಂ ಚಲಿಸಲಾಗದೇನಾದಡಂ ಸಾಹಸರನಂಚಿನೊಳಗರಸವರಕಾರಣದಿ ಕಾರ್ಯ ಹಸ್ತಂ ಚಗಿಸುತಾತನಂ ದೊತ್ತಿ ಪಾದವ ಪಿಡಿದ ಸುಕುಮಾರಿ ಕೇಳೆಂದನು (ಜನಮು. ೨೪–೪೯). ‘ಜಗಿ₁’ ಪರಾ. [ ? ]

**ಚಚು, ಚಾಚೂ** (ನಾ). ೧. ಚ ಮತ್ತು ಚು ಎಂಬ ಅಕ್ಷರಗಳು. ೨. (ಆಲಂ) ಮಾತಿನಲ್ಲಿಯ ಪ್ರತಿಯೊಂದು ಅಕ್ಷರ,–ಪ್ರತಿಯೊಂದು ವಿವರ : ಅವರ ಹಸ್ತಪ್ರತಿಗೆ ಚ–ಚು ತಪ್ಪದಂತೆ ಅಚ್ಚು ಮಾಡಿಸುವುದು ಕಷ್ಟದ ಕೆಲಸ(ಬಲ್ಮ. ೪ ಅರಿಕೆ); ವಾಲ್ಮೀಕಿಯ ಮಾತುಗಳಲ್ಲಿ ಚ–ಚು ತಪ್ಪದೆ ಎಲ್ಲವೂ ನಿಜವೆಂದು ಸಂಪ್ರದಾಯ ಶರಣರು ಹೇಳುತ್ತಾರೆ (ಧಾರದ. ೮೭). **ಚಾಚೂ :** ೨. ಮಾಡಿದ್ದು ನೋಡಿದ್ದು ಆಡಿದ್ದು ಎಲ್ಲವನ್ನೂ ‘ಚಾ ಚೂ’ ತಮಗೆ ವರದಿ ಒಪ್ಪಿಸಬೇಕೆಂಬ ಇಷ್ಟ (ಸುವಸಂ. ೦೨): ಅದರ ಚಾಚೂ ಕೂಡ ಅವರು . . . ಯಾರೊಡನೆಯೂ ಹೇಳಿಕೊಳ್ಳದಿರುವುದೂ ಒಂದು ವಿಶೇಷವೇ (ಕಾಲಝೂ. ೨೭): ಪ್ರಭುಗಳು ತಮ್ಮ ನುಡಿಯನ್ನು ಚಾಚೂ ವ್ಯತ್ಯಾಸ ಪಡಿಸಲಾರರು (ಕರುಳಾ. ೨೩).

**ಚಚ್ಚ** (ನಾ). ಗರುಡ : ಚಚ್ಚಾ [ಪಾಠಾಂ. ತಾರ್ಕ್ಷ್ಯ] ರವಕೆ ಭುಜಂಗನ ಕೊರಲಂತೆ ಬಾಗಿದಂ (ಆದಿಪು. ೧೨–೧೦೦). [ <ಸಂ. ತಾರ್ಕ್ಷ್ಯ ]

**ಚಚ್ಚಕಾರ** (ನಾ). (ನೃತ್ಯಕ್ಕೆ ಮುಂಚೆ) ಪಾದದಿಂದ ತಾಳ ಹಾಕುವಿಕೆ: “ಆಡಲನುಗೆಯ್ದ ಪದಹತಿ ಚಚ್ಚಕಾರವಾಕ್ಯಂ” (ಮುಂಗಿರಾ. ೨೪–೮).

[ ? ]

**ಚಚ್ಚಗೊಟ್ಟಿ, ಚಚ್ಚಗೋಷ್ಠಿ, ಚಚ್ಚಗೋಷ್ಠಿ** (ನಾ). ಬೈಗಳಿಂದ ಕೂಡಿದ ಮಾತು ; ನಿಂದೆಯ ನುಡಿ : ಅೞಿ ಮೇಳ ಚಚ್ಚಗೊಟ್ಟಿ ಚೌವಟತನಕಾಗಿ ವ್ರತದಾಳಿಯ ಮಾಡಿಕೊಳ್ಳದೆ ತನುವಿಗೆ ಕಟ್ಟು ಮನಕ್ಕೆ ವ್ರತ ಸರ್ವೇಂದ್ರಿಯ ವಿಸರ್ಜನವಾಗಿ ಮಾಡಿ ಕೊಂಬುದೆ ಸ್ವಯವ್ರತ (ಬಲೀಶ್ವ. ೪೪೦–೫೫). **ಚಚ್ಚಗೋಷ್ಠಿ:** ಸತ್ಯನಾಗಿದ್ದು ಭಕ್ತರು ಜಂಗಮದಲ್ಲಿ ಚಚ್ಚಗೋಷ್ಠಿಯನಾಡುತ ಮಿಟ್ಟೆಯ ಭಂಡರಿಗೆ ಸತ್ಯ ಸದಾಚಾರ ಮುಕ್ತಿಭಾವವೊಂದೂ ಇಲ್ಲ(ಬಲೀಶ್ವ. ೬). **ಚಚ್ಚಗೋಷ್ಠಿ :** ಚಚ್ಚಗೋಷ್ಠಿಯ ಮಾಡುವ ಮಿಟ್ಟೆಯ ಭಂಡರಿಗೊಪ್ಪೆ (ಅಂಬಿವ. ೪೨); ಚಚ್ಚಗೋಷ್ಠಿಯಿಂದ ಒಡೆಯಾತನ ಹುಚ್ಚಾಗಿ ಕೆಟ್ಟಿತ್ತು (ಶಿವಮಂ. ೮೫). [ < ಪ್ರಾ. ಚಚ್ಚಾರ ]

**ಚಚ್ಚಗೋಷ್ಠಿ** ‘ಚಚ್ಚಗೊಟ್ಟಿ’ ನೋ.

**ಚಚ್ಚಗೋಷ್ಠಿ** ‘ಚಚ್ಚಗೊಟ್ಟಿ’ ನೋ.

**ಚಚ್ಚಪುಟ** (ನಾ). [ಸಂಗೀತ] ಒಂದು ತಾಳ ಪ್ರಭೇದ : ವಿತತ ಘನ ಶುಷಿರ ವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರ ಮುಖಕಮಳವಿನಿರ್ಗತ ಸು[ಶು]ದ್ಧ ಸಾಳಂಗಬ್ರಹ್ಮವೀಣಾದಿ ಗೇಯ (ಕೊಲ್ಹಾಪು. ೨೨–೦೪ ; 1209); ಅಂಬಿಕಾಪತಿ ನೃತ್ಯಕಂ ನಿಲಲುಮಾಮಾಹೇಶಂದೊಲೆಸೆವೆರಡು ತಾಳಂಗೊಂಡು ಚಚ್ಚಪುಟವಿಂಬಿನಿಂ . . . ಸವಿ ತುಂಬಿ ತುಳ್ಕಾಡುತಿರೆ ನಂಬಿಯಾದಿರೊಳಗಭವನಿಂಬಿನಿಂ ನೆಱೆ ನಟಿಸಿದಂ (ಚೇರಮ. ೧೦–೩೩); ಚಚ್ಚ[ಚ್ಚ]ಪುಟದ ಚಾಚು[ಚ]ಪುಟದ ಸಾಂಬ್ರಾಣಿಯ ಕಚ್ಚು ಕೀಲಣೆಗಳ ನಡೆಇದು (ಭರತ. ೦೨–೮೩). ‘ಚಾಚ ಪುಟ’ ಪರಾ. [ಸಂ. ]

**ಚಚ್ಚರ, ಚೆಚ್ಚರ, ಚೆಚ್ಚರು** (ನಾ). ೧. ಬೇಗ ; ಶೀಘ್ರತೆ; ಜಾಗ್ರತೆ : “ಚಚ್ಚರಮೆನೆ ತುರಿಪಮಪ್ಪುದು” (ಕಕುವಿ. ೨೯); “ಚಚ್ಚರೆನೆ ಚಡು ಪಡನೆಯೆನೆ ಬೇಗ” (ಕಶರ. ೩೫); ಪಟುಯುಂ ತನಗಂ ಪೊರ್ದದಿರ್ಕೆಮೆ ಚಚ್ಚರದಿಂ (ಮದತಿ. ೮–೦೪); ನಾವಾತನನು ರಣದೊಳು ಭರದೆ ಗೆಲಿದೀ ಕನ್ನೆಯಂ ಚಚ್ಚರದೆ ಕೊಂಬೆವೆನುತ್ತ (ಕುಮಾರಾ. ೨–೪೫); ಚಚ್ಚರದಿಂ ನಿದ್ರಿತ ನರನೆಚ್ಚಱಿಕೆಯನೆಯ್ದೆ ಪಡೆದವೊಲ್ (ಬಾಧಪು. ೫–೯೦). ೨. ಎಚ್ಚರಿಕೆ ; ಜಾಗರೂಕತೆ : ಅಪರಂಜಿ ಅಂಥ ಚಚ್ಚರದ ಹೆಣ್ಣೇನಲ್ಲ ತಕ್ಕಷ್ಟು ಮೈಮರೆದು ನಡೆವವಳೆ (ನವರಾ. III, ೫೬); ಈ ಜಂತುಗಳಿಗೆ ಚಚ್ಚರ ಕಡಮೆ; ಶ್ರಮಪಟ್ಟು ತಿಂಡಿಯನ್ನು ಸೇರಿಸಿ ತುಂಬಿಕೊಳ್ಳಲಿಲ್ಲ(ಸುಮತ. ೨೬). **ಚೆಚ್ಚರ:** ೧. ಚೆಚ್ಚರದಿಂ ಬಟಿಸಂದು ಮಱುಗಿ ಬರ್ಪನ್ನ ಬಲಂ (ಕಾದಂಪೂ. ೬೨೫); ಬಾಲೆಯರಂ ಕೆಲರ್ ಪಿಡಿದು ಚೆಚ್ಚರದಿಂದರರೀಪುಟಂಗಳಂ ಕೀಲಿಸಿ (ಸುರಾಮಾ. ೪–೦೮೨); ಪರಮೆಯರ ವಾರ್ತೆಯಂ ಕೊಂಡು ಚೆಚ್ಚರ [ಪಾಠಾಂ. ಸಂಭ್ರಮ]ದಿಂದೆ ಬರಲ್ (ನಂಬಿರ. ೧೭–೧೦೮); ಪಗಲಾಣ್ಮನ ಮೆಯ್ ಬಿಸುಪೇಱೆ ಮಾಗೆ ಚೆಚ್ಚರದೊಳೆ ಪಾಱೆ (ಅದ್ಭುತಾ. ೫೩). ೨. ಮುರಿದು ದಂಡೆಯ ನೋಡಿ . . . ಚೆಚ್ಚರದಿ ಲಾಗಿಸಿ ವೈರಿಯುರವ ಗರ್ಜಿಸಿ ಭೈರವಾಂಕ ತಿವಿಯೆ (ಭೈರವೇ. ೯–೦೨೭). **ಚೆಚ್ಚರು :** ೨. ಎನ್ನೊಳಾದನಿತ ಪೇಳ್ವೆವೞಿವುದು ಚೆಚ್ಚರಿಂ (ಮನೋವಿ. ೦–೪೮).

[ ದೇ.೫ ತುಳು. ಚಚ್ಚರ ; ತೆಲು. ಚಚ್ಚರ./ಸಂ. ಸತ್ವರ ]

**ಚಚ್ಚರಂ, ಚರ್ಚರಂ, ಚೆಚ್ಚರಂ** (ಅ). ೧. ಬೇಗನೆ : ಶೀಘ್ರವಾಗಿ ; ಜಾಗ್ರತೆಯಾಗಿ : ಮುರಾರಿಯ ತಂಗೆಯನಪ್ಪುಕೆಯ್ದು ಚಚ್ಚರಮೊಳಪೊಯ್ದು (ಪಂಪಭಾ. ೪–೩೪); ಅವಳ ದೀರ್ಘಾಪಾಂಗದೇಶಕ್ಕೆ ಚಚ್ಚರಮಾಗಳ್ ಪರಿತಂದ ಸೇದ [ಯೊದವಲ್] (ಕಾದಂಉ. ४३); ಅತುಳತರ ಗುಪ್ತಕಾರ್ಯಸ್ಥಿತಿಯಾಳೋಚನೆಗಳುಂಟು ನೀಂ ಚಚ್ಚರಮಪ್ರತಿಮಂ ಕಾಮನನೊಡಗೊಂಡು ತರ್ಪುದು (ಗಿರಿಕ. ೭–೦೭). **ಚರ್ಚರಂ :** ೨. ಜಾಗರೂಕವಾಗಿ; ಎಚ್ಚರಿಕೆಯಿಂದ : ವಿಡಿಯಂ ಕೊಳೆ ಮಣ್ಣಿಂದುಂದರಯದವರ್ಚರ್ಚರಮವಕ್ಷೆಯಿಂ ನೋಡದೆ ಮಾಡಿದ ರೂಪಿನಂತೆ ನೇರ್ಪಿಲ್ಲದ ವಿಕಟಾಕೃತಿಯ ಹುಂಡ ಸಂಸ್ಥಾನಗಳುಂ (ಶ್ರಾವಕಾ. ೨೧–೨). **ಚೆಚ್ಚರಂ :** ೧. “ಝಾಡಿತಿ ಲಘು ಶೀಘ್ರಂ ಸತ್ವರಮಾಶು ಚೆಚ್ಚರಂ” (ವಸ್ತುಕೋ. ೦೦೩–೦೩): ಚೆಚ್ಚರಮಪರಾಂಬುರಾಶಿಗಿೞಿವಂಕಿಟಿಸಿದಂ ಕಮಳೈಕಬಾಂಧವಂ (ಪಂಪಭಾ. ೦೦–೫೧): ಈ ಕಜ್ಜದೊಳ್ ನೀಂ ತೊಡರ್ದು ಮರುಳೆ ಬೆಂಡಾಗದಿರ್ ಪೋಗು ನೀಂ ಚೆಚ್ಚರಂ (ಗದಾಯು. ೯–೦೫); ತಡೆಯಾಲೆಡೆಯಿಲ್ಲ ಚೆ(ಚಿ)ಚ್ಚರಮೊಡರ್ಚು ನಿನಗಾರ್ಮಮಪ್ಪ ಧರ್ಮಮಂ (ಚೀವಸಂ. ೨೭–೫೦). ೨. ಚೆಚ್ಚರಮೆನೆ ಕಲ್ಪಲತಿಕೆಗಚ್ಚರಿಯರ್ ಮೆಲ್ಲನಮೃತರಸಮಂ ಪೊಯ್ವಂ

ತುಚ್ಛವದಿಂದಾ ಸೌಂದರಿಗೊಚ್ಚರಗಣ್ಣಬಲೆಯರ್ಕಳೆಟಿದರ್ ನೀರಂ (ಉದ್ಭಟ. ೮-೨೨). ೩. ದಿಟವಾಗಿ; ನಿಶ್ಚಯವಾಗಿ: ಚೆಚ್ಚರಮುಪನೀತಳಂ ತನಗೆ ಸಾರ್ದಪೊಲೊರ್ವ ದಲುಣ್ಬ ಪೊಣ್ಮಿದಂ (ಧರ್ಮಾಮೃ. ೬-೮೦); ಮನಸಿಜನೆಚ್ಚೊಡಾವ ತೆಱನಕ್ಕುಮೊ ಚೆಚ್ಚರಮೆನ್ನ ಪೇಟ್ವುದಂ ತನಗಿ ವನೆಯ್ದಿ ಬಿನ್ನವಿಪನಂ ಪಿಡಿದಿರ್ಕುಮೆ ದೇವ ಜೀವಮಂ (ವರ್ಧಮಾ. ೪-೮೦). ೪. "ನಿರ್ನಿಮಿತ್ತವಾಗಿ" (ಶಬ್ದಮಣಿ. ಅಧಿ): ಪುರುಷಾರ್ಥತ್ರಿತಯಮುಮನಟ ಧರಿಸದೆ ವೈರಾಗ್ಯಮೇಕೆ ಪುಟ್ಟಿದುದೊ ಚೆಚ್ಚರಮೆಂಬುದನಾಂ ಪೋಗಿಯೆ ತಿಳಿವೆಂ (ಶಬ್ದಮಣಿ. ೪೫೩). [ <ಚೆಚ್ಚರ ]

**ಚಚ್ಚರಂದಳೆ** (ಕ್ರಿ). ಎಚ್ಚರಿಕೆ ವಹಿಸು; ಜಾಗರೂಕತೆಯನ್ನು ಹೊಂದು: ನಳಿನಾಕ್ಷಿಯೊರ್ವಳೀಕ್ಷಣರಜ್ಜುವಿಂ ವಿಧುವನೆಳೆತರಿಸಿ ಕಾಣಿಸಿದಪಳೋ ಯೆನಲ್ ಚಚ್ಚರಂದಳೆದೊಳಗೆ ಮೌಕ್ತಿಕದಚೆಂಡನೊರ್ವಳ್ ಪೊಯ್ಯು ತಿರ್ದಳ್ ವಿಲಾಸದಿಂದೆ (ಚಲಪು. ೧೦-೦೬). [ ಚಚ್ಚರ + ತಳೆ$_1$ ]

**ಚಚ್ಚರಿ** (ನಾ). [ಸಂಗೀತ] ಒಂದು ಬಗೆಯ ತಾಳ: ತ್ರಿವಿಡ ಚಚ್ಚರಿ ಝಂಪೆಯಟಯೇಕತಾಳೆವಮುಂ ವಿವರವಱಿತುಂ ತಾಳಧಾರಿಗಳು ನೆರೆದು (ಪ್ರಭುಪು. ೨-೬೭). [ <ಪ್ರಾ. ಚಚ್ಚರೀ. / ಸಂ. ಚರ್ಚರೀ ]

**ಚಚ್ಚರಿಗ, ಚೆಚ್ಚರಿಗ** (ನಾ). ೧. ಆತುರಗಾರ; ದುಡುಕುವವನು: (ಕ). ೨. ದುಡುಕಿ ಮಾತಾಡುವವನು: ಚ [ಪಾಠಾಂ. ಚೆ] ಚ್ಚರಿಗಂ ಪರಿವಾದಿಯುಂ ತುಚ್ಛಳನತ್ಯುಗ್ರಕೋಪಿ ಮೂರ್ಖಂ ಕಿಸಱ್ಗೊಳ್ ಕಿಚ್ಚಿಡುವನೆನಿಪ ಖಳನಂ ಬಿಚ್ಚರಿಗನೆನಿಕ್ಕುವೊಂದಿ ಪೈನರ ಕೆಲದೊಳ್ (ಸಮಹ. ೬-೧೬೩). **ಚೆಚ್ಚರಿಗ:** ೩. ವೇಗವುಳ್ಳವನು: "ಪ್ರಪೂರ್ಣಃ, ತ್ವರಿತಃ, ತೂರ್ಣಃ, ಉತ್ಸುಕಃ, ಪ್ರಸೃತಃ—ಈ ೫ ಚೆಚ್ಚರಿಗಂ" (ಕರಾಯು. ೩೮-೧೯೮); "ತ್ವರಿತನುತ್ಸುಕನೆನಲು ಪ್ರಸ್ರಿತಂ ತೂರ್ಣನೆಂದರೆ ಚ[ಚೆ]ಚ್ಚರಿಗನಕ್ಕು" (ತುಂಗರಾ. ೬೪-೦೨). [ ಚೆಚ್ಚರ + -ಇಗ ]

**ಚಚ್ಚಹುಚ್ಚಗೆ** (ಅ). ಅಡ್ಡತಿಡ್ಡವಾಗಿ; ಕ್ರಮತಪ್ಪಿ; ಹುಚ್ಚುಹುಚ್ಚಾಗಿ: ಚಚ್ಚಹುಚ್ಚಗೆ ನಡೆದರು ಭುಜಬಲಿರಾಜ ಮೆಚ್ಚುವನದಂಜರವರು ಹುಚ್ಚು ನಡೆಗೆ ನೀನು ಮೆಚ್ಚಿಯೆಂದವರೆಲ್ಲ ಬೆಚ್ಚಿ ದೂರದೊಳಿರುತಿಹರು (ಭರತ. ೨೦-೦೨೧). [ ಚಚ್ಚಹುಚ್ಚು + -ಅಗೆ$_3$ ]

**ಚಚ್ಚಹುಚ್ಚು** (ನಾ). ಹುಚ್ಚುಹುಚ್ಚು; ಅಸಂಬದ್ಧವಾದುದು; ವಿಕೃತಿ: ಚಚ್ಚಹುಚ್ಚಾಗದೆ ಚಂದಚಂದದೊಳು ಪಳಚ್ಚನೆ ಪಾಡಿದರೊಸೆದು (ಭರತ. ೧೨-೮೩); ಚಚ್ಚಹುಚ್ಚಂಗವನಂದಚಂದವ ಮಾಡಿ ಮೆಚ್ಚಿಸ್ಯವಿಡಿದಿರ್ಪರುಂಟು ಉಚ್ಚಳಿಸುವ ಚೆಲ್ವನಂಗವ ತಪಸಿಗೆ ವೆಚ್ಚಿಪರಾರಿವರಂತೆ (ಭರತ. ೬೦-೦೧೩). [ ಚಚ್ಚ? + ಹುಚ್ಚು (<ಪುಚ್ಚು) ]

**ಚಚ್ಚು$_1$, ಚೆಚ್ಚು$_1$, ಜಜ್ಜು, ಜಜರ್, ಜೆಜ್ಜು** (ಕ್ರಿ). ೧. ಹೊಡೆ; ಬಡಿ; ಕುಟ್ಟು; ನುರಿಸು: ಡೊಣ್ಣೆಯೊಳೆ ಚಚ್ಚಿ ಕೆಲವು ಮಿಗಗಳ ಕೊಂದರು (ನೇಮಿಸಂ. ೨-೩೧); ಎತ್ತಿ ಕುತ್ತಿರಿ ಚಚ್ಚು ತಿವಿವತ್ತಿ ಹೆಳಚು (ಜಿನಮು. ೧೯-೩೫). **ಚೆಚ್ಚು$_1$:** ಅವಳು ಕೋಪದಿಂದ ಮಗುವನ್ನು ಚೆಚ್ಚಿದಳು (ರೂಢಿ). **ಜಜ್ಜು:** ೧. ಕೂರ್ಮನೆರ್ದೆಯೊಡೆದು ಬೃಹತೀಫಲವನು ಜಜ್ಜಿದಂತಾದುದೀ ವೃಷಪತಿಯ ಸಮರಜಯ (ಚಬಪು. ೪೪-೨೦); ಗೋಧಿಯನ್ನು ಜಜ್ಜಿ ತಾಳಗಳನ್ನಾಗಿಮಾಡಿ ಅಕ್ಕಿಯಂತೆ ಬೇಯಿಸಿ ನಿತ್ಯದ ಊಟಕ್ಕೆ ಉಪಯೋಗಿಸಬಹುದು (ಅಡುಸ್. ೬೩); ಈ ಹಾರೆಯಿಂದಲೇ ತಲೆ ಜಜ್ಜಿ ಕೊಳ್ಳುತ್ತೇನೆ (ಚಂದ್ರಶಾ. ೨೩). △ **ಜಜರ್:** ೨. ನಂಗ್ಗಾಗು; ಪೆಗ್ಗು: - ಪಾದ ಪ್ರಹಾರಂಗಳಿಂ ಗುಜರ್ಗೊಂಡಂ ಫಣಿಪನಗ್ಗದುವು ದಿಗ್ಗಜಂ ಜರ್ಜಿದುದು ಕಚ್ಛಪಾಂಗಂ (ಚಬಪು. ೨೮-೧೦). ೩. ಉತ್ಸಾಹಗುಂದು; ಕುಗ್ಗು. 'ಜರ್ಜಿಸು' ಪರಾ. **ಜೆಜ್ಜು:** ೧. ಮುಂಬಲ್ಲು ಬಿದ್ದು ಪೀಳಿಯುವ ಕಡೆಲ್ಲಳು ಜೆಜ್ಜಿ ತಿಂಬರಲ್ಲದೆ ಬಿಟ್ಟರಾರು (ಭರತ. ೬೦-೦೧೨). [ ದೇ. ೩ ತುಳು. ಜಜ್ಜು; ತೆಲು. ಚಚುಚು ]

**ಚಚ್ಚು$_2$** 'ಚರ್ಚು$_1$' ನೋ.

**ಚಚ್ಚುಕ** 'ಚೂಚುಕ' ನೋ.

**ಚಚ್ಚುಮಳೆ** (ನಾ). ಚಚ್ಚುವ ಮಳೆ; ಭಾರಿಮಳೆ; ರಭಸದ ಮಳೆ: ಮುಂಗಾರಿನ ಚಚ್ಚುಮಳೆಗೆ ಸಿಕ್ಕಬೇಡ (ರೂಢಿ). [ ಚಚ್ಚು$_1$ + ಮಳೆ (<ಮಳೆ$^3$) ]

**ಚಚ್ಚೌಕಮೈಲು** (ನಾ). ಚದರ ಮೈಲು; ಚೌರಸ ಮೈಲು: ಸಿಂಹಲ ದ್ವೀಪದ ಕ್ಷೇತ್ರಫಲ ಸುಮಾರು ೨೫ ಸಾವಿರ ಚಚ್ಚೌಕ ಮೈಲು (ಮುಂಬಯಿ. ೪-೨೦೦). [ <ಚೌಕ + ಮೈಲು$_2$ ]

**ಚಜ್ಜ** 'ಛಜ್ಜ' ನೋ.

**ಚಜ್ಜೆ$_1$** 'ಸಜ್ಜೆ$_1$' ನೋ.

**ಚಜ್ಜೆ$_2$** 'ಸಜ್ಜೆ$_2$' ನೋ.

**ಚಟ್** (ನಾ). ಒಂದು ಅನುಕರಣ ಪದ: ಬಾಣಲೆಯಿಂದ ಕಡಲೆ 'ಚಟ್' ಎಂದು ಸಿಡಿಯಿತು (ರೂಢಿ).

**ಚಟ** (ನಾ). ಗೀಳು; ತೆವಲು; ತೀವ್ರಾಸಕ್ತಿ: ಯಾವುದಾದರೊಂದು ಕೆಟ್ಟಚಟ ಬಿದ್ದ ಬಳಿಕ ಅದು ಬೇಗ ಬಿಡುವುದಿಲ್ಲ (ಮುಂಬಯಿ. ೩-೩); ಮನುಷ್ಯನೆಂದರೆ ಚಟಗಳ ಒಂದು ಮೂರ್ತಿ (ಮುಂಗಾಪು. ೩೫); ಭಾಷಾಸೇವೆ ಹಲವರಿಗೆ ಆಟವೆನಿಸಿದರೆ ಇನ್ನೂ ಕೆಲವರಿಗೆ ಚಟವಾಗಿದೆ (ಹುಚ್ಚುಹು. ೬೫); ಇನ್ನೂ ನಿಮಗೆ ದುಂದು ಖರ್ಚಿನ ಚಟ ಬಿಟ್ಟಿಲ್ಲ (ಪಾಂಚಾಗ. ೩೫೪). [ ?. / ಹಿಂ. ಚಟ = ಕಳಂಕ, ದೋಷ, ಐಬು ]

**ಚಟಕ್** (ನಾ). ಒಂದು ಅನುಕರಣ ಶಬ್ದ: ಅವನು ಚಟಕ್ಕೆಂದು ಹೊರಟು ಬಿಟ್ಟನು (ರೂಢಿ). 'ಚಟಕ್ಕನೆ' ಪರಾ.

**ಚಟಕ$_1$** (ನಾ). ಗುಬ್ಬಿ; ಗುಬ್ಬಚ್ಚಿ: ಚಟಕ ಚಾಟಣಕ ಚಕ್ರವಾಕ ಕರಟ ಬಳಾಹಕ ಗೃಧ್ರ ಶುಕ ಮರಕುಟಕ (ಮಲೆಪು. ೩-೯). [ ಸಂ. ]

**ಚಟಕ$_2$** (ನಾ). ದರ್ಭೆಯಿಂದ ಮಾಡಿದ ಕೂರ್ಚ, -ಪ್ರತಿಮೆ. 'ಚಟಕ ಶ್ರಾದ್ಧ' ಪರಾ. [ ಸಂ. ]

**ಚಟಕಶ್ರಾದ್ಧ** (ನಾ) ಬ್ರಾಹ್ಮಣರಿಗೆ ಬದಲಾಗಿ ದರ್ಭೆಯನ್ನು ಇಟ್ಟು ಕೊಂಡು ಮಾಡುವ ಶ್ರಾದ್ಧ. [ ಚಟಕ$_2$ + ಶ್ರಾದ್ಧ ]

**ಚಟಕಾಯಿಸು** (ಕ್ರಿ). ಚಟ್ಟನೆ ಹರಿದು ಹಾಕು, -ಕತ್ತರಿಸಿಬಿಡು: (ಕ). [?]

**ಚಟಕೆ** (ನಾ). ೧. ಹೆಣ್ಣು ಗುಬ್ಬಿ, -ಗುಬ್ಬಚ್ಚಿ. ೨. ಗುಬ್ಬಿಯ ಹೆಣ್ಣುಮರಿ. [ ಸಂ. ಚಟಕಾ ]

**ಚಟಕ್ಕನೆ** (ಅ). ಕೂಡಲೆ; ಒಮ್ಮೆಲೆ; ತಕ್ಷಣ: ಅವಳು ಮಲಗಿಕೊಂಡದ್ದನ್ನು ಕಂಡು... ಚಟಕ್ಕನೆ ಎದ್ದುನಿಂತು ಆಕಳಿಸಿದ (ಎಡಹ. ೧೦೬). [ ಚಟಕ್ + -ಅನೆ$_1$ ]

**ಚಟಗಾರ** (ನಾ). ತೆವಲು ಉಳ್ಳವನು; ಗೀಳುವುಳ್ಳವನು: ಬೆಳಗಾಗುತ್ತಲೆ ಬಂದು ರಾತ್ರಿಯಾದ ಮೇಲೆ ಹೋಗುವ ಚಹದಂಗಡಿಯ ಚಟಗಾರರಲ್ಲಿ ಅವನು ಒಬ್ಬನೆನ್ನಬಹುದು (ಜೀಸಬಾ. ೧೧). [ ಚಟ + -ಗಾರ (< -ಕಾಱ) ]

**ಚಟಗೊಳ್** (ಕ್ರಿ). ತೀವ್ರಾಸಕ್ತಿ ಹೊಂದು; ಗೀಳುಹಿಡಿ: ಪಟಪಕ್ವ ಫಲರುಚಿರಾಧರೆಯಾ ನಿಮ್ಮ ಟಿಲಕುಮಾರ ಚಂದ್ರಮನ ಚಟುಲ ಚಕೋರ ಲೋಚನಪುತ್ರಿಕೆಗಳು ಚಟಗೊಂಬಂತೆ ನೋಡಿದಳು (ನೇಮಿಸಂ. ೧೯-೨೦೯). [ ಚಟ + ಕೊಳ್$_1$ ]

**ಚಟಚಟ** (ನಾ). ಒಂದು ಅನುಕರಣ ಶಬ್ದ: ಚಟಚಟ ಹೆಜ್ಜೆಹಾಕು; ಕತ್ತಲೆಳಿತಿನಲ್ಲೇ ಊರುಸೇರಬೇಕು (ರೂಢಿ).

**ಚಟಚಟನೆ** (ಅ). ಚಟಚಟ ಎಂಬ ಶಬ್ದದೊಡನೆ: ಹುಲ್ಲು ವಿಪ್ರನ ಕುಮೃಕದವುಗಳಲ್ಲಿ ಚಟಚಟ[ಪಾಠಾಂ. ಚಟಚಟ]ನಪ್ಪಳಿಸಿ ಅವಳಿಲ್ಲಿಗೆಳತಹು ದೆಂದು ನುಡಿದನು (ಜಿನಭಾ. ೨೦-೪೫). [ ಚಟಚಟ + -ಅನೆ$_1$ ]

**ಚಟಪಟ** (ನಾ). ಒಂದು ಅನುಕರಣ ಪದ. 'ಚಟಪಟಗುಟ್ಟು' ಪರಾ.

**ಚಟಪಟಗುಟ್ಟು** (ಕ್ರಿ). ಚಟಪಟ ಎಂದು ಸದ್ದು ಮಾಡು: ಚಟಪಟ ಗುಟ್ಟಿ ಚಟಾಕಿಯು ಮುಂಗಡೆ ಠೀವಿಯು ತೋರಂತ ಬರುತಿರಲು (ಸಮೂಲೋ. ೦೯೧). [ಚಟಪಟ + ಕುಟ್ಟು$_1$]

**ಚಟಪಟಿಕೆ$_1$** 'ಚಡಪಡಿಕೆ' ನೋ.

**ಚಟಪಟಿಕೆ$_2$** 'ಚಟವಟಿಕೆ' ನೋ.

**ಚಟಪಟಿಸು** 'ಚಡಪಡಿಸು' ನೋ.

**ಚಟಮಟಿಸು** (ಕ್ರಿ). ಉದ್ವೇಗಗೊಳ್ಳು; ಉದ್ವಿಗ್ನವಾಗು: ಚಟಮಟಿಸಿ ಕೋಪದಿಂ ಜನನಿಯಂ ದೂರಿದಂ (ಶರಚ. ೨-೨೮); ಪಟು ಪರಾಕ್ರಮಿ ಜ್ವಾಲವದನನು ಚಟಮಟಿಸಿ ಕೃತುಭುಜರ . . . ನೆರವಿಯ ನಿಱಿದು (ಅಂಬಿಕಾ. ೧೬-೩೬). [<ಚಟವಟ + – ಇಸು$_2$]

**ಚಟಮಾರಿ** (ನಾ). ಚಟಕ್ಕೆ ಅಂಟಿಕೊಂಡಿರುವವನು, -ದಾಸನಾದವನು: ಅವನೊಬ್ಬ ಬೀಡಿಯ ಚಟಮಾರಿ (ಕೂಡಿ). [ಚಟ + – ಮಾರಿ$_2$]

**ಚಟವಟ, ಚಟುವಟ** (ನಾ). ಲಗುಬಗೆ; ತ್ವರಿತ; ಚಪಲತೆ: ಕುದುರೆಗಳು . . . ಚಟವಟದಿಂದ ಪುನರಪಿ ಎದ್ದು ತಮ್ಮಯ ಸ್ಕಂಧಗಳಿಗಂಟಿರ್ದ ಕುಂಕುಮ ರುಜಾಡಿಸಿದವಾಗ (ಕಳುವಂ. ೬೨-೯೬). ಚಟುವಟ: ಈ ಬಳು ವಟದ, ಈ ಚಟುವಟದ ಎಲ್ಲ ಮೂರ್ತಿಗಳೂ ಅವನವೇ (ನವತ. ೫೩). [<ಚಟಪಟ?]

**ಚಟವಟಿಕೆ, ಚಟಪಟಿಕೆ$_2$, ಚಟುವಟಿಕೆ** (ನಾ). ೧. ಲಗುಬಗೆ; ಬೇಗ; ತ್ವರಿತ; "ಚಪಲತನ" (ಗುಣಾಮ. ೧೨೬). ೨. ಪಟುತ್ವ; ಲವಲವಿಕೆ; ಉತ್ಸಾಹ: ಮಕ್ಕಳ ಚಟವಟಿಕೆ ಮುದುಕರಿಗಿಲ್ಲ (ಕೂಡಿ). ೩. ಕೆಲಸ; ಕ್ರಿಯೆ; ಕಾರ್ಯಕಲಾಪ: (ಟಿ). ಚಟಪಟಿಕೆ$_2$: (ಟಿ). ಚಟುವಟಿಕೆ: ೨. ಬಲವಾಗಿದ್ದರೆ ಮನುಷ್ಯನು ಬಹಳ ಚಟುವಟಿಕೆಯುಳ್ಳವನಾಗಿರುತ್ತಾನೆ (ಜೀವಾತ್ಮ. ೦೫೩). ೩. ಉಪಾಧ್ಯಾಯರಲ್ಲಿ ಹೆಚ್ಚು ಚಟುವಟಿಕೆ, ನಿಯಮಗಳ ಪ್ರಕಾರ ನಡೆಯುವುದು . . . ಇವೆಲ್ಲ ಹೆಚ್ಚುತ್ತ ಬಂದುವು (ಕಂಗಳ. ೦೦೨); ಶಾರದೆ . . . ಅದುವರೆಗೂ ನಡೆಸಿದ ಚಟುವಟಿಕೆಗಳ ಸಿಂಹಾವಲೋಕನ ಮಾಡಿ (ವಿದ್ಯಾಕಿ. ೨೦). [ಚಟವಟ + – ಇಕೆ]

**ಚಟಾಕಿ** (ನಾ). ೧. ಪಟಾಕಿ: ಚಟಪಟಗುಟ್ಟಿ ಚಟಾಕಿಯು ಮುಂಗಡೆ ಠೀವಿಯು ತೋರುತ ಬರುತಿರಲು (ಸಮೂಲೋ. ೦೯೧); ಹುಡುಗರು ಚಟಾಕಿಗಳನ್ನು ಹಾರಿಸುತ್ತಾರೆ (ಕೂಡಿ). ೨. (ಅಲಂ) ಚುಟುಕಾದ ಚುರುಕು ಮಾತು: ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು (ನಡವಾ. I, ೩೦೪); ಮುಮ್ಮಿಸ್ವಾಮಿ ನಗೆಯ ಚಟಾಕಿಗಳನ್ನು ಹಾರಿಸಿ ಅವರೆಲ್ಲರನ್ನು ನಗಿಸುವನು (ದೇವಸಾ. ೦೨). [<ಚಟ್]

**ಚಟಾಕು** (ನಾ). ಅಳತೆಯಲ್ಲಿ ಒಂದು ಪ್ರಮಾಣ; ಸೇರಿನ ಹದಿನಾರನೆಯ ಒಂದು ಭಾಗ: ಏಳು ಚಟಾಕಿನಂತೆಯೆ ಜೋಳವನ್ನು ಅಳೆಯಿಸಿಕೊಂಡು ಅವನು ಹೊರಟು ಹೋದ (ಜನಜೀ. ೨); ಪೇಟೆಯಲ್ಲಿ ಹತ್ತು ಚಟಾಕಿನಂತೆ ಕೊಂಡು ತರಬೇಕಾಗುತ್ತದೆ (ಪ್ರೀಮಾಕ್ಷ. ೪). 'ಚಟ್ಟೆ$_1$' ಪರಾ. [←ಹಿಂ, ಮರಾ. ಛಟಾಕ್].

**ಚಟಿ$_1$** (ನಾ). ಖಡ್ಗಯುದ್ಧದಲ್ಲಿ ಒಂದು ವರಿಸೆ: ಗತಿವಸರವಡ್ಡಾಯು ವಂಕತಿಕೆ . . . ಸಿಂಹಾನೀಕ ಛ[ಪಾಠಾಂ. ಕ]ಟಿಯೆಂಬ ಚತುರ ಠಾಣದ ತರಹರದೊಳು ಫಲಗೆಯ ಮಗ್ಗುಳೊಳು ಖಡ್ಗವಂ ಜಡಿದರು (ಸೊವಿಮುಕ. ೫-೦೪). [?]

**ಚಟಿ$_2$** 'ಚಟ್ಟಿ$_1$' ನೋ.

**ಚಟಿ$_3$** (ನಾ). (?): ಪಗಲಿರುಳು ಬಿಡದೊದರಿಚರ್ದರ ಚಟಿಯ ಕೊನೆಳ ಸಲ್ಮಾಡನೆ ದಾಸಯ್ಯ (ಮುದೀಪು. ೬-೪೩). [?]

**ಚಟಿಕಾಶಿರ** (ನಾ). ಹಿಪ್ಪಲಿಯ ಬೇರು: ಗ್ರಂಥಿಕಂ, ಪಿಪ್ಪಲಿಮೂಲಂ, ಚಟಿಕಾಶಿರಃ ಇ ಹಿಪ್ಪಲಿಯ ಬೇರು (ಸಿದ್ಧಾಂತಿ. ೨೬೪). [ಸಂ. (ಚಟಿಕಾ + ಶಿರ)]

**ಚಟಿಕೆ$_1$** 'ಚಟ್ಟಿಗೆ' ನೋ.

**ಚಟಿಕೆ$_2$** (ನಾ). ೧. ಹೆಣ್ಣು ಗುಬ್ಬಿ: ಕಟ್ಟಿದರೊಳೊಂದು ಚಟಿಕೆ ನೀಡ ದೊಳಿರ್ದುದಂ ಕಿಱುಮಱಿಯಂ . . . ಲಲ್ಲೆಗೆಯ್ವುದಂ (ರಾಮಾಕ್ಷ. ೦೫-೦). ೨. ಹಿಪ್ಪಲಿ ಬೇರು; ಮೋಡಿಯೆಂಬ ಔಷಧಿ ದ್ರವ್ಯ. [ಸಂ. ಚಟಿಕಾ]

**ಚಟಿಗೆ** 'ಚಟ್ಟಿಗೆ' ನೋ.

**ಚಟಿದಾರ** (ನಾ). ಕುಂಬಾರನು (ತಿಗುರಿಯ ಮೇಲಿರುವ) ಮಡಕೆಯನ್ನು ಕೊಯ್ಯುವ ದಾರ: ಕನಸಿನ ಛಾಯಂ ವ್ಯಕ್ತಿಕೆಯಾಗಿರೆ ನೆನಹುಂ ಚಟ[ಪಾಠಾಂ. ಟಿ]ದಾರಂಗಳವಾಗಿರೆ (ಕುಭೂಜ. ೨೩೨-೬); ಅದರಿಂದ ತಿರುಗಿಸಿ ಮಾಡಿಥ ಮಡಕೆಗಳನ್ನು ನೆನಹೆಂಬ ಚಟಿದಾರಗಳಿಂದ ಕೊಯ್ದು ಕರಣಗಳಿಂದ ತಿದ್ದಿ ಬಡಿದು (ಕರಚ. ೧೦). [ಚಟಿ$_2$ (<ಚಟ್ಟಿ$_1$) + ದಾರ$_1$]

**ಚಟು** (ನಾ). ೧. ಪ್ರಿಯವಾದ ಮಾತು; ಹಿತವಾದ ನುಡಿ: "ಚಟು (ಟ), ಚಾಟು (ಟ)–ಪ್ರಿಯವಚನಂ" (ಹಲಾಯು. ೨೪–೦೪೪); "ಪ್ರಿಯವಪ್ಪ ನುಡಿ ಚಟು ಚಾಟುವಕ್ಕು" (ಮಂಗರಾ. ೨೬–೨). ೨. ಹೊಟ್ಟೆ. [ಸಂ.]

**ಚಟುಕು** (ನಾ). ಒಂದು ಅನುಕರಣ ಶಬ್ದ: ಆ ಸತಿಯನಂತೊಮ್ಮೆ ಹೊಡೆಯಲು ಚಟುಕು ಚಟುಕೆನಲು (ಬಸಪು. ೫೨-೧೬).

**ಚಟುಪಡಿಕೆ** 'ಚಡಪಡಿಕೆ' ನೋ.

**ಚಟುಲ, ಚಟುಳ** (ಗು). ೧. ಚಲಿಸುವ ಸ್ವಭಾವವುಳ್ಳ; ಚಂಚಲ: ಚಟುಲಮರುದಲಾನಿಲೋದ್ಧತ ಪಟುಕೃತಕ ಧೂಳಿ ಪಡೆದುದು . . . ವಿಳಾಸವುಂ ಪ್ರಯಾಣಾಂತರದೊಳ್ (ಶಾಂತಿಪು. ೦೦-೦೬); ಮುದ್ಗರಕುಂತ ಚಟುಲ ತೋಮರ ಗದಾಚಕ್ರ . . . ಮೊದಲಾದಾಯುಧಂಗಳಾಂತು (ಪುಲಿಕೇಶಿ. ೩೨-೬೦). 'ಚಟುಲನಯನ' ಪರಾ. ೨. ವೇಗದಿಂದ ಕೂಡಿದ; ತ್ವರಿತವಾದ: ಮಕುಟ ಸಂಘಟಿತ ಚಕ್ರ ಚಟುಲಗತಿ ನಿಯುದ್ಧಾಯುಧಪಾತರುಧಿರ ಕರ್ದಮಸಮ್ಮರ್ದಿತವುಂ (ಗದಾಯು. ೪-೩೬); ಭಾಳತಟಪಟು ಚಟುಲದಹನ ವಿಶಾಲ ನಯನಂ (ಬಸಪು. ೩೦-೯೨). ೩. ಸುಂದರವಾದ; ಚೆಲುವಾದ; ಚೊಕ್ಕವಾದ: ಚಟುಲಸ್ವರೂಪ ನೊಪ್ಪಿದನಜನ ತನುವೆರಲ್ ಸೀಳಾಗೆ (ಚಬಪು. ೧೬-೫). (ನಾ). ೪. ವೇಗ; ತ್ವರಿತ; ಜಾಗ್ರತೆ; ಚಟುಲದಿ ವಿನಿಯೋಗವಿದಕೆ ಪೇಳುವ ಲಕ್ಷ್ಮಂ (ತತ್ವಾನಿ. ೦೪೫). ಚಟುಳ: ೧. ಧನಂಜಯುರಥ ಚಟುಳ ಚಕ್ರನೇಮಿ ಧಾರಾಪರಿವೃತ (ಕಂಪಭಾ. ೦೩-೫೧ ವ). ೨. ಕಿಂಧೂಳುಪ್ಪರಿಸಿದುದು ಚಟುಳ ಚಾತುರ್ಬಲದ ಪದಹತಿಗೆ (ಕುಮ್ಮಾಕ. ೨-೨೮); ಕೊಂಡು ಹೋಗಾ ವಿಬುಧರಿಪು ವೇತಂಡ ಪಂಚಾನನನಾಹವ ಚಂಡ ಚಟುಳಪರಾಕ್ರಮನ ಮಾಯಾ ತ್ರಿವಿಕ್ರಮನ (ಕೊರಂ. ೧-೯-೩). ೩. ಚಟುಳ ಮಣಿ ಕಿಂಕಿಣೀ ಪರಿಘಟಿತ ನಿಜಾಯೋಗಮಾರ್ಗಗಳೆಸೆದುದು (ಧರ್ಮನಾ. ೪-೦೬). [ಸಂ.]

**ಚಟುಲಗಾತ್ರಿ** (ನಾ). ಚುರುಕಾದವಳು: ಸುಂದರಿ ಒಳ್ಳೆಯ ಚಟುಲಗಾತ್ರಿ (ಮುಹಾಗ. ೦೬೬). [ಚಟುಲ + – ಕಾರ$_1$ (<– ಕಾಱು) + – ತಿ$_1$ (<– ಇತ್ತಿ)]

**ಚಟುಲತೆ, ಚಟುಳತೆ** (ನಾ). ೧. ವೇಗ; ಚಪಲತೆ; ಲಗುಬಗೆ: ಏನುಂ ತಳ್ವಿಲ್ಲದಾನೇಗಳೆ ಚಟುಲತೆಯಿಂ ನಿಪ್ಪನೆಯ್ವುರ್ಪನೆಂದೇನಾನುಂ ಸೂರುಳ್ಗಳಿಂ ನಂಬಿಸಿದೊಡೆ (ಸುಕುಮಾ. ೬-೨೦). ಚಟುಳತೆ: ೨. ಸೊಗಸು; ಚೆಲುವು; ಸೌಂದರ್ಯ: ಗಗನಾಭೋಗಮೆಲ್ಲಂ ಕರಂ ಚೆಲ್ವಾದತ್ತಂ ಬಂಧದೇಂ ಬಂದುದೊ ಚಟುಳತೆಯಿಂ ದೇವದೇವೀನಿಕಾಯಂ (ಸುಕುಮಾ. ೧-೩೪). [ಸಂ. ಚಟುಲತಾ]

**ಚಟುಲನಯನ** (ನಾ). ಚಂಚಲವಾದ ಕಣ್ಣು; ಚಪಲ ದೃಷ್ಟಿ : ಚಟುಲ ನಯನದ ಕುಟಿಲಕುಂತಳೆ ತಮ್ಮಾಳ್ದಂಗೀ ವಿವರವುನಚೋಕೆಗೆಯ್ವುದುಂ (ರಾಮಾಶ್ವ. ೧೨೪-೧೪). [ ಚಟುಲ + ನಯನ ]

**ಚಟುಲಲೋಚನೆ** (ನಾ). ಚಂಚಲವಾದ ಕಣ್ಣುಗಳುಳ್ಳವಳು; ಚಂಚಲಾಕ್ಷಿ : ಚಟುಲಲೋಚನೆಯಂತೆ ಕುಟಿಲಕುಂತಳೆಯಂತೆ ವಿಟ ಹೆಣ್ಣನಂತೆ ಹಗಲಲ್ಲಿ ಇರುಳು ಸಂಗಟಿನ ಕಾಯಂತೆ (ಸರ್ವಜ್ಞ. ೨೦೬೨).

[ ಸಂ. ಚಟುಲಲೋಚನಾ (ಚಟುಲ + ಲೋಚನ + –) ]

**ಚಟುವಟ** 'ಚಟವಟ' ನೋ.

**ಚಟುವಟಿಕೆ** 'ಚಟವಟಿಕೆ' ನೋ.

**ಚಟುಹುಟುಗಾರ್ತಿ** (ನಾ). ಚಟುವಟಿಕೆಯುಳ್ಳವಳು; ಉತ್ಸಾಹಗಾರ್ತಿ: ಕುಟಿಲಕುಂತಳೆಯಳ ಚಟುಹುಟುಗಾರ್ತಿಯ ನಟನೆಯ ನಡೆಯ ನಾಯಕಿಯ . . . ಪೊಂದುವುದೆಂದೊ (ಶತಸಾಂ. ೨೪-೨೦).

[ ಚಟುಹುಟು? + –ಕಾರ + – ತಿ$_1$ (< – ಇತ್ರಿ) ]

**ಚಟುಳ** 'ಚಟುಲ' ನೋ.

**ಚಟುಳತೆ** 'ಚಟುಲತೆ' ನೋ.

**ಚಟುಳಿತ** (ಗು). ೧. ವೇಗವಾಗಿ ಚಲಿಸುತ್ತಿರುವ : ಚಟುಳಿತ ಚಕ್ರನೇಮಿ ಪರಿವರ್ತನ ಘಟ್ಟನ ಘಾತ . . . ವಿಜಯನುಗ್ರ ರಥಂ ಪರಿದತ್ತು (ಹಂಪಭಾ. ೧೦-೧೪೬). (ನಾ). ೨. ನಡುಗುವಿಕೆ; ಕಂಪನ; ಸ್ಪಂದನ : ಪೊಟ್ಟಗೊಡೆದತ್ತು ರಟತ್ಪಟು ಪಟಹ ಶಂಖ ಭೇರಿಯ ಚಟುಳಿತದಿಂದಟಳಪಟಳವಂಬರ ಪಟಳಂ (ಹಂಪಭಾ. ೧೦-೬೭). [ ಸಂ. ಚಟುಲಿತ ]

**ಚಟೂಕ್ತಿ** (ನಾ). ಪ್ರಿಯ ವಚನ; ಸಂತೋಷ ಪಡಿಸುವ ನುಡಿ; ಸ್ತುತಿಯ ಮಾತು: ವಿನೋದದಿಂ ಮುಳಿದನಾಂ ನೀನಂಜಲೇಕೆಂದು ಕೋಪಮಲಿಯಂ ಕೋಟಿ ಚಟೂಕ್ತಿಯಿಂದೊಸೆಯಿಸುತ್ತಿರ್ದಂ (ಚಂದ್ರಶು. ೮-೫೩).

[ ಚಟು + ಉಕ್ತಿ ]

**ಚಟೂರಿಸು** (ಕ್ರಿ). ಮುಖಸ್ತುತಿ ಮಾಡಿ ಮೋಸಗೊಳಿಸು : ಲಕ್ಷ್ಮೀ ವಿಡಂಬಂ ವಿಡಂಬಿಸದಂತಾಗಿರೆ ಮಾನ್ಯರೆಲ್ಲ ತೆಱದಿಂದಂ ಪೊಕ್ಕು ನಿನ್ನಂ ಚಟೂರಿಸದಂತಾಗಿರೆ ಕಾಮಿನೀತತಿ ವಿಲಾಸಾಪಾಂಗದಿಂದು ಪ್ರತಾರಿಸದಂತಾಗಿರಲಾತ್ಮವಂತನೆನಿಸೆಂದುಂ (ಕಾದಂಪೂ. ೫೬೪).

[ < ಚಟು + – ಇಸು$_3$ ]

**ಚಟೆಕಾರ** 'ಚಟ್ಟೆಗಾರ' ನೋ.

**ಚಟ್ಟ$_1$, ಚಟ್ಟು$_1$, ಚಟ್ಟೆ$_1$, ಚಿಟ್ಟು$_1$** (ನಾ). ೧. ಸಮತಲವಾಗಿರುವುದು; ಮಟ್ಟವಾದುದು; ಚಪ್ಪಟೆ : (+). ೨. ಗಾಡಿ, ಮಂಚ, ಕುರ್ಚಿ, ಚಿತ್ರಪಟ ಮೊದಲಾದುವುಗಳ ಚೌಕಟ್ಟು ಅಥವಾ ಅದರ ಭಾಗ: 'ಗಾಡಿಚಟ್ಟ' ಪರಾ. ೩. ಹಣವನ್ನು ಸಾಗಿಸಲು ಉಪಯೋಗಿಸುವ ಬಿದಿರಿನ ಚೌಕಟ್ಟು; ಸಿದಿಗೆ : ಅಮ್ಮನವರು ಪಟ್ಟಕ್ಕೆ ಬಂದಾಗ ಅಯ್ಯನವರು ಚಟ್ಟಕ್ಕೆ (ಗಾದೆ). ೪. ಕಟ್ಟಳೆ; ನಿಯಮ; ವಿಧಿ: (+). ೫. ಅಚ್ಚುಕಟ್ಟು; ಸೊಗಸು; ಅಣಿ : (+). ಚಟ್ಟು$_1$: ೬. (ಪಲ್ಲಕ್ಕಿಯ) ಮೇಲೆ ಹೊದಿಸುವ ಬಟ್ಟೆ, – ಮೇಲ್ಕಟ್ಟು, – ಹೊದಿಕೆ : (+). 'ಗುಬ್ಬಿ ಚಟ್ಟು' ಪರಾ. ೭. ಬೀಜ ಬಲಿಯದ ಕಾಯಿ; ಎಳೆಯ ಕಾಯಿ; ಹೀಚು : ಅವರೇಕಾಯಿ ಚಟ್ಟು (ರೂಢಿ). ೮. ಗಡಸುತನ; ಗಟ್ಟಿಯಾಗಿರುವಿಕೆ : (+). ೯. ಬೀಜ ತೆಗೆದು ಒಣಗಿಸಿಟ್ಟ ಕಾಯಿ : ನೆಲ್ಲಿಚಟ್ಟು (ರೂಢಿ). ಚಟ್ಟೆ$_2$ : ೧. ಪಾರ್ಶ್ವಾಸ್ಥಿಗಳು ದೇಹದ ಮುಂದುಗಡೆಯ ಎದೆಯ ಚಪ್ಪು ಎಂಬ ಚಟ್ಟೆಯಾದ ಎಲುಬಿಗೆ ಸಂಧಿಸಲ್ಪಟ್ಟವೆ (ಪ್ರಾಣಿಶಾ. ೩). ಚಿಟ್ಟು$_1$ : ೭. ಈ ಮರದ ಹುಣಿಸೇಹಣ್ಣು ಬಹಳ ರುಚಿ. ಚಿಟ್ಟಾಗಿರಲಿ, ದೋರೆಗಾಯಾಗಿರಲಿ ಅಥವಾ ಹಣ್ಣೇ ಆಗಲಿ (ನನ್ನೂರು.೧೯೯). ೯. ತಿನ್ನಲು ಮಾಡಿಟ್ಟ ಹಲಸಿನ ಹಣ್ಣಿನ ಚಿಟ್ಟುಕೊಡುತ್ತಾಳೆ (ಎಮ್ಮೆಳ. ೩೨).

**ಚಟ್ಟದ ತೋಳು, ಚಟ್ಟನ ತೋಳು** = ಗಾಡಿಯ ಚೌಕಟ್ಟಿಗೆ ಎರಡೂ ಮಗ್ಗುಲಲ್ಲಿ ಸಾಲಾಗಿ ನಿಲ್ಲಿಸಿದ ಕಡ್ಡಿ, – ಕೋಲು; ಗುಜ್ಜುಗೋಲು; ಕಳಗ : (+).

[ ದೇ.: ತಮಿ. ಮಲ. ಚಟ್ಟ; ತುಳು. ಚಟ್ಟ, ಚಟ್ಟೆ; ತೆಲು. ಚಟ್ಟ ]

**ಚಟ್ಟ$_2$** 'ಚರಟ' ನೋ.

**ಚಟ್ಟ$_3$, ಚಿಟ್ಟ$_1$** (ನಾ). ನಿಪುಣ; ಶ್ರೇಷ್ಠ. 'ಮಾಣಿಕಚಟ್ಟ' ಪರಾ. ಚಿಟ್ಟ$_2$ : (+). [ < ಸಂ. ಶ್ರೇಷ್ಠ ]

**ಚಟ್ಟ$_4$, ಚಟ್ಟು$_3$** (ನಾ). ಶಿಷ್ಯ; ಗಂಡ್ಡ : ಸಭಾವಳಯದೊಳೆನ್ನನೇಳಿಸಿದ ನಿನ್ನನನಾಕುಳಮನ್ನ ಚಟ್ಟರಿಂ ತಳವಳಗಾಗೆ ಕಟ್ಟಿಸದೆ ಮಾಣ್ದೊಡೆ ಕಿಮ್ಮ [ನೆ] ವಿಾಸಪೊತ್ತನೇ (ಹಂಪಭಾ. ೨-೫೦); ಶ್ರೀ ಪಟಿಕಜ ಮಾರುಗ ಬಲರ ಚಟ್ಟ ಸುಟಬಣ್ಣರ ಸುಲ (ಎಕ. II, ೬೦-೩ ; ಸು. 1100) ; ಕಂಸಂ ವಸುದೇವಂಗೆ ಚಟ್ಟನಾಗಿ . . . ಧನುರ್ವಿದ್ಯೆಯಂ ಸಾಧಿಸುತ್ತುಮಿರ್ದಂ (ಅರ್ಧನೇ. ೬-೫೧ ವ) ; ಕಂಸಂ ನಾಂ ಬಿಲ್ಗಲ್ತೆಯ ಚಟ್ಟನೆನ್ನೊಜನನುವರದೊಳ್ ಕುಸಿದಿರಲಾಗದೆಂದು ರಥಮಂ ಬೇಡಿಕೊಂಡು ಸಮರಸನ್ನದ್ಧನಾಗಿ (ಬಂಹರಿ. ೫-೨೮ ವ). ಚಟ್ಟು$_3$ : ತಾನುಂ ತನ್ನ ಚಟ್ಟುಗಳುಮಾನೆಯುಸರ ಮನೆಗೆ ತಂದರಸಂಗೊಪ್ಪಿಸಿ (ಧರ್ಮಾಮೃ. ೧೨-೧೩೪).

[ < ಪ್ರಾ. ಚಟ್ಟ. / ಸಂ. ಛಾತ್ರ ]

**ಚಟ್ಟ$_5$** (ನಾ). ಒಬ್ಬಾತನ ಹೆಸರು : ಬನವಸೆಯ ಚಟ್ಟನಾಗರಕಣ್ಣಕ್ಕೆ ಮುನಿದು ಪರಿಯನಟ್ಟಿದಡೆ (ಎಕ. VIII, ಸೊರಬ. ೨೩೪-೭ : 999) ; ಮನ್ನೆಯ ಚಟ್ಟಂ ಬಟ್ಟಂ ಮನ್ನೆಯಮಂ (ಇಆ. XVIII, ೨೬೪-೪೦ ; 1022). [ ? ]

**ಚಟ್ಟಕಟ್ಟು** (ಕ್ರಿ). ಹೆಣ ಸಾಗಿಸುವುದಕ್ಕಾಗಿ ಬಿದಿರಿನ ಚೌಕಟ್ಟನ್ನು ಕಟ್ಟು; ಸಿದಿಗೆಯನ್ನು ರಚಿಸು : ಸತ್ತಮೇಲೆ ಹೆಣ ಸಾಗಿಸುವುದಕ್ಕೆ ಆ ದೇಶದವರು ನಮ್ಮ ಹಾಗೆ ಚಟ್ಟಕಟ್ಟುವುದಿಲ್ಲ (ಹಂಪಾಶ್ಮ. ೬೭); ಅವನು ಸತ್ತೇ ಹೋಗಲಿ ಅವನ ಚಟ್ಟಕಟ್ಟಲಿ (ಜಾನಗೀ. ೦೦೫). ಲೋ ! ಕಾಮಣ್ಣನ್ನ ಚಟ್ಟ ಕಟ್ಬೋಣೊ (ಪಯ್ಯಮ. ೨೬) ; ಮಟ್ಟುಮೀರಿ ಉಂಡರೆ ಚಟ್ಟಕಟ್ಟುವದೇ (ಗಾದೆ). [ ಚಟ್ಟ$_1$ + ಕಟ್ಟು$_1$ ]

**ಚಟ್ಟಗೆಯಿ** (ನಾ). ಶಿಷ್ಯರಿಗಾಗಿ ಕೊಟ್ಟ ಭೂಮಿ : ಭಳಾರಿಗೆ ಮತ್ತ ೬ ಭಟ್ಟಗೆಯಿ ಚಟ್ಟಗೆಯಿ ಮತ್ತ ೬ (ಸೌಇಇ. IX–1, ೭೪-೭ ; 981) ; "ಚಟ್ಟಗೆಯಿ " ಎಂದರೂ ಚಟ್ಟವೃತ್ತಿಯೆಂದೇ ಅರ್ಥ (ಕಶಾಅ. ೨೨೯).

[ ಚಟ್ಟ$_4$ + ಕೆಯಿ (< ಕೆಯ್$_4$) ]

**ಚಟ್ಟಣಿ, ಚಟ್ನಿ, ಚಟ್ನಿ** (ನಾ). ಒಂದು ಬಗೆಯ ವ್ಯಂಜನ : ನಂಜಿಕೊಳ್ಳುವುದಕ್ಕಾಗಿ ರುಬ್ಬಿ ಅಥವಾ ಕುಟ್ಟಿಮಾಡಿದ ಖಾರವಾದ ಪದಾರ್ಥ, – ಹಿಂಡಿ: ನಾನು . . . ಚಟ್ಟಣಿ ರುಬ್ಬಿ ಕೊಡಬೇಕು (ಗಾಳಿಹ. ೦೬೩). ಚಟ್ನಿ: ಚಟ್ನಿ ಕೋಸಂಬರಿ ಕಾಯಿರಸಗಳನ್ನು ಮಾಡುವುದರಲ್ಲಿ ನಮ್ಮ ದೇಶದವರ ಕೌಶಲ್ಯವು ವರ್ಣಸತಕ್ಯಂಥಾದ್ದಿರುತ್ತದೆ (ಮುಂಬಯಿ. ೫-೧೬೭) ; ಚಪಾತಿಗೆ ಅತ್ಯುತ್ತಮ ಕೊಬ್ಬರಿಯ ಚಟ್ನಿಯನ್ನು ತಯಾರಿಸಿ ಇಟ್ಟಿದ್ದಳು (ಗಂಮಾಯಿ.೦೫). ಚಟ್ನಿ: ನಮ್ಮ ಮನೆಯಲ್ಲಿ ಇಡ್ಲಿ ಚಟ್ನಿ ಅಲ್ಲದೆ ಉಪ್ಪಿಟ್ಟೂ ಮಾಡುತ್ತಾರೆ (ಕಹಪು. ೩-೬) ; ನಂಜುವುದಕ್ಕೆ ಹುಚ್ಚೆಳ್ಳಿನ ಚಟ್ನಿ ಬಿಟ್ಟು ಇನ್ನೊಂದನ್ನು ಕಾಣ (ದಾನಚಿಂ. ೮೫) ; ಕುಶೀರ, ನುಗ್ಗಿ, ತುಳಸಿ . . . ಮುಂತಾದವುಗಳ ಚಟ್ನಿಯು ಗ್ರಾಹಕ (ಅಪ್ಪಾಂಗ. ೦೪೧-೦೦೫ ಟೀಕ).

**ಚಟ್ನಿಮಾಡು; ಚಟ್ನಿಮಾಡು** = ೧. ಚಟ್ಟಣಿ ತಯಾರಿಸು : ರೊಟ್ಟಿಗೆ ನಂಜಿಕೊಳ್ಳಲೆಂದು ಚಟ್ನಿ ಮಾಡಿದ್ದರು (ರೂಢಿ). ೨. (ಆಲಂ) ನುಗ್ಗುಮಾಡು; ಅರೆದು ಪೀಡಿಸು : ಸಂಸಾರದೊಳಗೆ ವಿಧಿ ರುಬ್ಬುಗುಂಡಾಗಿ ಚಟ್ನಿಮಾಡಿದನೆನ್ನ ತಿರುವಿ (ಇಂಚಾಪ. ೫೯-೮೪).

[ ← ಮರಾ. ಚಟಣೀ, ಚಟನೀ; ಹಿಂ. ಚಟನೀ; ಸಿಂಧಿ. ಚಟಣೀ ]

**ಚಟ್ಟಣೆ** (ನಾ). ಪಾತ್ರೆಗಳ ಮುಚ್ಚಳ; ರಕ್ಷಾಕಣೆ (ಉಕ): "ಆಹಾರ ಪದಾರ್ಥಗಳನ್ನು ಬಿಸಿಯಾಗಿಟ್ಟಿರಲು ಉಪಯೋಗಿಸುವ ಲೋಹ, ಮೊ.ಗಳ ಮುಚ್ಚಳ; ಚಟ್ಟಣೆ" (Dish-Cover. ಇಂಕಣಿ). [ <ಸಂ. ಛಾದನ ? ]

**ಚಟ್ಟನೆ** (ಅ). = ಚಟಕ್ಕನೆ: "ಫಕ್ಕನೆ, ಭೊಂಕನೆ . . . ಚಟ್ಟನೆ, ಚಕ್ಕನೆ, ಗಮ್ಮನೆ, ಗಕ್ಕನೆ, ಬುದಿಂಗನೆ, ವುಸುಕನೆ" (ಶಂಸುಹು. ೮೪೫); ಗಣಪತಿಯು . . . ಅದರ ಮೇಲೆ ಚಟ್ಟನೆ ಹಾರಿ ಕೂತುಕೊಂಡು ಮನೆಗೆ ಹೋದನು (ಮುಂಬಯು. ೪-೮೦); ಶ್ರೀ ಕೃಷ್ಣನು ಹೇಳಿದ ಯೋಗವು . . . ಸಂಸಾರದ ಕಟ್ಟನ್ನು ಚಟ್ಟನೆ ಕಳಚಬಲ್ಲದು (ಗೀತಾಸಂ. ೩). [ ಚಟ್ + – ಅನೆ₁ ]

**ಚಟ್ಟಬ್ಬೆ** (ನಾ). ಒಬ್ಬಾಕೆಯ ಹೆಸರು: ಪುತ್ರಿ ಗುಣಾನ್ವಿತ ಚಟ್ಟಬ್ಬರಸಿಗೆ ದೊರೆಯಾರ್ದಾನಧರ್ಮ್ಮಶೀಳೋನ್ನತಿಯೊಳ್ (ಕ್ಯುಆರಿ. ೧೯೩೦, ೬೪-೬೬; 1053 ?). [ ಚಟ್ಟ₆ + ಅಬ್ಬೆ₁ ]

**ಚಟ್ಟಯದೇವ** 'ಚಟ್ಟಯ್ಯದೇವ' ನೋ.

**ಚಟ್ಟಯ್ಯ** (ನಾ). ಒಬ್ಬಾತನ ಹೆಸರು: ಬಿಯಳಯ್ಯ ಮಗ ಚಟ್ಟಯ್ಯನಳಿಯ ಕನ್ನಯ್ಯ (ಎಕ. VIII, ಸೊರಬ. ೯೩೩-೬; 972); ಹೊನ್ನಯ್ಯನ ಮಗ ಚಟ್ಟಯ್ಯಂ ಕಲ್ಲಂ ನಿಱಿಸಿದ (ಎಕ. VIII, ಸೊರಬ. ೬೪-೧೫; 1082). [ ಚಟ್ಟ₆ + ಅಯ್ಯ₁ ]

**ಚಟ್ಟಯ್ಯದೇವ, ಚಟ್ಟಯಂದೇವ** (ನಾ). = ಚಟ್ಟಯ್ಯ: ಚಟ್ಟಯ್ಯದೇವನ ಪರಿ ಬನ್ದು ಊರನಿಱಿದಲ್ಲಿ (ಎಕ. VIII, ಸೊರಬ. ೧೬-೪; 1015). **ಚಟ್ಟಯದೇವ**: ತದಾತ್ಮಜಂ ಚಟ್ಟಯದೇವನಿಂ (ಇಕ. X, ೨೫೦-೦೫; 1108). [ ಚಟ್ಟಯ್ಯ + ದೇವ ]

**ಚಟ್ಟವೃತ್ತಿ** (ನಾ). ಶಿಷ್ಯರ ಅಥವಾ ವಿದ್ಯಾರ್ಥಿಗಳ ಉಪಭೋಗಕ್ಕಾಗಿ ಬಿಟ್ಟ ಭೂಮಿ: ದೇವರ ಅಂಗಭೋಗಕಂ ದೇ[ಗು]ಲಕಂ ಮಾಟಕ್ಕಂ ಚಟ್ಟವೃತ್ತಿ ಬಾಲಶಿಕ್ಷೆಯನಿತುವಮಂ ನಡೆಯಿಸುವನ್ತಾಗಿ (ಸೌಇಇ. XI-ii, ೦೭೧-೮೮; 1121). ] ಚಟ್ಟ₄ + ವೃತ್ತಿ ]

**ಚಟ್ಟಸಮಯ** (ನಾ). ಶಿಷ್ಯರ ಸಮೂಹ,–ಗುಂಪು; ಇಷ್ಟಜನಕ್ಕೆ ಚಟ್ಟ ಸಮಯಕ್ಕೆ ಮಹಾಜನಭೋಜನಕ್ಕೆ ಯುಕ್ತಿ ಗ್ರಹ್ಯ . . . ಚರಾಚರೋರ್ವ್ವಿಯೊಳು (ಎಇ. XVIII, ೦೭೪-೯; 1044). [ ಚಟ್ಟ₄ + ಸಮಯ ]

**ಚಟ್ಟಳಿಕು** (ಕ್ರಿ). (?): ಹಿಮಗಿರಿಗಳನೆಂಬ ಗುಂಡವ ಮಾಡಿದ ಕ್ರಮದಪ್ಪ ಮೂರ್ತಿಯ ಚಟ್ಟಳಿಕಿ ವಿಮಲ ಶಕ್ತಿಯ ಹಾಸು ದಟ್ಟನೆ ಮಾಡಿ (ದೇವಾಂಪು. ೩-೯೯). [ ? ]

**ಚಟ್ಟಳೆ₁** 'ಚಡ್ಡಣೆ' ನೋ.

**ಚಟ್ಟಳೆ₂** (ನಾ). ಮಣ್ಣಿನ ಪಾತ್ರೆ: ಚಟ್ಟಳೆಯಲ್ಲಿ ಬಟ್ಟ ಸೊರೆಯೊಳ್ ಪೊಸಗಾಜಿನ ಜಾಡು ಪಾತ್ರೆಯೊಳ್ ಬಟ್ಟಲೊಳಿಂದುಕಾಂತಮಯ ಭಾಜನದೊಳ್ಪರಲಾವೆಯೋಡಿನೊಳ್ . . . ತಿಳಿಗಳ್ಗನದಂ ನೆಱೆ ತುಂಬಿ ತಂದು ಮುಂದಿಟ್ಟುದು ಮಾಱದಗ್ರುಜರನುಕ್ರಮಮಂ ಶಬರೀ ಸಮೂಹಕಂ (ಜಾಧಪು. ೧೦-೦೩೮); ಚಟ್ಟಳೆಯಲ್ಲಿ ತೀವಿದ ಸುರಾರಸಮಂ ಕುಡಿಯುತ್ತು ಮಿರ್ದನೇರ್ಪಟ್ಟನಿಯಳ್ಗೆ ನೀಡಿ (ಜಾಧಪು. ೧೦-೦೩೩). [ <ಚಟ್ಟಿ₁ ? ]

**ಚಟ್ಟಿ₁, ಚಟ್ಟ, ಚೆಟ್ಟಿ₁, ಸಟ್ಟಿ** (ನಾ). ೧. (ಮಣ್ಣಿನಿಂದ ಮಾಡಿದ) ಅಗಲವಾದ ಪಾತ್ರೆ. ೨. ಮಡಕೆ: "ಭಾಂಡದೊಳು ಸಂಕಿಯೊಳ್ ಚಟ್ಟಿ" (ಕಬ್ಬಮಂ. ೯೦); ಚಟ್ಟಿವೆಂಗಳು ಕೆಲಬರು ಸುಳಿದರು ಹೊನ್ನ ಚಟ್ಟ ಸಟ್ಟುಗಗಳನಾಂತು (ಭರತ. ೪-೬೧); ಸುಲಲಿತವೆನಿಪ್ಪ ಚಟ್ಟಿಯ ಮೊಸರನಿಳಿಪಿಕೊಂಡು (ಸಿದ್ಧೇಪು. ೩-೧೫); ಇವುಗಳೆಲ್ಲವನ್ನೂ ಬೇರೊಂದು ಚಟ್ಟಿಯಲ್ಲಿ ಹಸುವಿನ ಬೆಣ್ಣೆ ಸಹಿತ ಒಗ್ಗರಿಸಿ . . . ಕೊಡಲು ದಾಹಜ್ವರ ಬಿಡುವುದು (ಸಕಪ್ಪ. ೮೩); ಹುಟ್ಟು ಮೊದಲೀಗರುಹಲೀ ನರಚಟ್ಟಿ ದಿವ್ಯಶರೀರವಾದುದು ನಿಮ್ಮ ಕೃಪೆಯಿಂದ (ಅಂದೇಶಾ. ೪೭-೩); ಅಟ್ಟು ಉಂಡೇನೆಂದು ಚಟ್ಟೀಕುಡಿಕೆ ತಂದೆ (ಜಗೀತ. ೦೭). **ಚಟ್ಟ**: ೨. 'ಚಟಿದಾರ' ಪರಾ. **ಚೆಟ್ಟಿ₁**: ೨. ಚೆಟ್ಟಿ ಮಡಕೆಗಳೊಳಗೆ ಭಿನ್ನಪರಿಮಳಂಗಳಂ ಕಟ್ಟಿಕೊಂಡು (ಸೂಪಶಾ. ೬-೪); ಚೆ[ಪಾಠಾಂ. ಚ]ಟ್ಟಿಯೊಳು ತುಪ್ಪವೆಱೆದಿಂಗಿಕ್ಕಿ ಪೊಗ್ಗರಣೆಗೊಟ್ಟು (ಸೂಪಶಾ. ೪-೩೬). **ಸಟ್ಟಿ**: ೨. 'ಕೈಸಟ್ಟಿ' ಪರಾ. [ ದೇ.೬ ತಮಿ. ಮಲ. ತುಳು. ತೆಲು. ಚಟ್ಟಿ ]

**ಚಟ್ಟಿ₂** (ನಾ). (ಕರಾ) ಅಕ್ಕಿ, ಉದ್ದು ಇತ್ಯಾದಿ ಧಾನ್ಯಗಳನ್ನು ಸೇರಿಸಿ ಒರಟಾಗಿ ಹುಡಿಮಾಡಿ ಕಲಸಿ ಕಾವಲಿಯ ಮೇಲೆ ತಟ್ಟಿ ಬೇಯಿಸಿದ ಒಂದು ಬಗೆಯ ತಿಂಡಿ,–ರೊಟ್ಟಿ: ರುಚಿಯಾದದ್ದಕ್ಕೆ ಏನೋ, ಎರಡು ಇಂಥಾ ಚಟ್ಟಿ ತಿಂದರೂ, ಹೊಟ್ಟೆಯ ತುದಿಗೂ ಮುಟ್ಟಿದ ಹಾಗೆ ಕಾಣಾವುದಿಲ್ಲ (ಮಠಮ. ೬೨). [ <ಚಟ್ಟಿ₁ ]

**ಚಟ್ಟಿ₃** 'ತಟ್ಟಿ₁' ನೋ.

**ಚಟ್ಟಿ₄** 'ಭಟ್ಟಿ' ನೋ.

**ಚಟ್ಟಿ₆** 'ಸೆಟ್ಟಿ' ನೋ.

**ಚಟ್ಟಿಗ** (ನಾ). ಒಬ್ಬಾತನ ಹೆಸರು: ಕಟ್ಟಾನೆಮಲ್ಲನಂ ಕಡುಗಟ್ಟಿಗನುತ್ತಿಗನು ನೊಲಿಪನಂ ಚಟ್ಟಿಗನಂ ತಟ್ಟುಚಿಟ್ಟಿಱೆ (ಎಕ. XV, ಅರಸಿ. ೨೩೭-೧೪; 971); ತುಱುಗಳೊ[ಳ್ಪಾ][ಟ್ಟಿರ್ದ್ದು]ದಂ ಕೇಟಲಾಗದು . . . ಚಟ್ಟಿಗನ ಸಿರಿಗನ (ಸೌಇಇ. XI-i, ೩೨-೫; ?). [ ಚಟ್ಟಿ₆ + – ಇಗ ]

**ಚಟ್ಟಿಗೆ, ಚಟಿಕೆ₁, ಚಟಿಗೆ** (ನಾ). =ಚಟ್ಟಿ₁ ೨: ಬೈಚಟ್ಟಿ ಬೆಣ್ಣೆಯ ಚಟ್ಟಿಗೆಗಳ ತೆಗೆದಷ್ಟನು ಸವಿದನು (ಪ್ರಸಭಾ. ೦೭-೨೪). **ಚಟಿಕೆ₁**: ವರ ಚಿಂತಾಮಣಿಯಿರುತಿರೆ ಗಾಜಿನ ಚಟಿಕೆಯ ಹಿಡಿದಂತೆ (ಸುಸಾರ. ೧೧೪-೬). **ಚಟಿಗೆ**: ತುಪ್ಪದ ಚಟಿಗೆಯನ್ನು ನೆಲುವಿಗೇರಿಸು (ರೂಢಿ). [ <ಚಟ್ಟಿ₁ ]

**ಚಟ್ಟಿಮ** (ನಾ). ಒಬ್ಬಾತನ ಹೆಸರು: ನಾಗಚನ್ದ್ರಭಟ್ಟ ಪುತ್ರಾಯ ಚಟ್ಟಿಮಭಟ್ಟಾಯ . . . ರಾಜಾದಿತ್ಯೇನ ಗ್ರಾಮದ್ವಯಂ ದತ್ತಂ (ಮೈಆರಿ. ೦೯೩೩, ೪೦-೩೯; 951). [ ಚಟ್ಟಿ₆ (<ಸೆಟ್ಟಿ) + ಅಮ (<ಅಮ್ಮ₁) ]

**ಚಟ್ಟಿಸು** (ಕ್ರಿ). ತಲೆ ಬಗ್ಗಿಸು,–ತಗ್ಗಿಸು; ಹಲುಗಿರಿದು ಹುಬ್ಬೇಱಿಸುತ ಹಣುಗುತ್ತ ಹೆದಱುತ ತಲೆಯ ಚಟ್ಟಿಸುತ (ಕೊರಠಾ. ೫-೬-೪೫). [ ಚಟ್ಟು? + – ಇಸು₃ ]

**ಚಟ್ಟಿಱು, ಚಟ್ಟಿರಿ, ಚಟ್ಟಿಱು, ಚೆಟ್ಟಿಱು** (ಕ್ರಿ). ೧. (ಸುಗಂಧ ಮೊದಲಾದುದನ್ನು) ಲೇಪಿಸು,–ಬಳಿ,–ಹಚ್ಚು: (೩). ೨. = ಚಟ್ಟುಬಡಿ: "ಸ್ಥಾಸಕಂ, ಹಸ್ತಬಿಂಬಂ – ಈ ೨ ಚಟ್ಟಿಱುವುದು" (ಹಲಾಯು. ೮೯-೩೪೭); ಚಟ್ಟಿಱಿದ ಗೋಡೆಗಳ ರಕುತದ ಹೇಸಿಕೆಯನು . . . ನೆರಹಿದಂ ನಿಳಯದೊಳಗೆ (ಹದಕಾ. ೧೦-೩೦); ಚಟ್ಟಿಱಿದು ಘಟಮನರ್ಚಿಸಿ ನೆಟ್ಟನೆ ಪೊಸ ಪೂಗಳಿಂದು (ಕುಸುಮಾ. ೧೧-೦೫೦); ಬಾಗಿಲರ್ಚಿಸಿ ಚಿಗುರಿಕ್ಕಿ ಚಟ್ಟಿಱಿದು (ಪಸಾರ. ೯೩೩); ದಿಗ್ಭಿತ್ತಿಯೊಳ್ಕೂಡಿ ಚಟ್ಟಿಱಿದಂತಿರ್ದ್ದಪುದಪ್ರತರ್ಕ್ಯ್ಕರ ತೇಜಂ ದೇವರಾಜೇಂದ್ರನಾ (ಸೌಇಇ. IV, ೨೬೭-೨೮; ಸು. 1880); ನೃಪನೊಡಹುಟ್ಟಿದನ ಹೊಯ್ದುರುಣಜಲದಲಿ ಚಟ್ಟಿಱಿದು (ಕುವ್ಯಾ.ಕ. ೨೦-೨); ಚಟ್ಟಿಱಿದು ಚಪ್ಪರಿದು ನುಂಗುವ ಭೂತಕೋಟಿಗಳನಟ್ಟ (ಕೊರಠಾ. ೬-೬-೧೨). **ಚಟ್ಟಿರಿ**: ೨. ದರಹಾಸಂ ಜೊನ್ನಮಂ ಚಟ್ಟಿರಿದು ಕರೆಯೆ ತದ್ರೂಪನಂ ನೋಡಲಾಗಳ್ (ಚಂದ್ರಛ್ಛ. ೦೫-೪). **ಚಟ್ಟಿಱು**: ೨. ಅಸ್ರಾಂಬುವಿಂ ಚ[ಪಾಠಾಂ. ಚೆ]ಟ್ಟಿಱಿದು ಕರುಳಿನಿಂ ತೋರಣಂಗಟ್ಟಿ (ಜಗವಿ. ೬-೦೦). **ಚೆಟ್ಟಿಱು**: ಮೇಲಿನ 'ಜಗವಿ' ಪ್ರಯೋಗದ ಪಾಠಾಂತರವನ್ನು ನೋಡಿ. [ ಚಟ್ಟು₆ + ಇಱು₁ ]

**ಚಟ್ಟು₁** 'ಚಟ್ಟಿ₁' ನೋ.

**ಚಟ್ಟು₂, ಚೆಟ್ಟು₂** (ನಾ). ೧. ಅಶುದ್ಧತೆ; ಕೊಳೆ; ಹೊಲಸು. 'ಮುಟ್ಟು ಚಟ್ಟು' ಪರಾ. ೨. ನಾಶ; ಕೆಡುಕು; ಹಾಳು: ಅವನನ್ನು ಚಟ್ಟು ಮಾಡಿದರು (ರೂಢಿ). **ಚೆಟ್ಟು₂**: (೩).

[ ದೇ.೬ ತಮಿ. ಚಟ್ಟು; ತುಳು. ಚಟ್ಟ್; ತೆಲು. ಚೆಡು=ಕೆಡು ]

**ಚಟ್ಟು$_{೩}$** 'ಚಟ್ಟ$_{೪}$' ನೋ.

**ಚಟ್ಟು$_{೪}$** (ನಾ). ಸಣ್ಣಕಲ್ಲಿಂ ತುಂಬಿದ ಭೂಮಿ; ಕಲ್ಲು ಭೂಮಿ: ಈ ಚಟ್ಟನಲ್ಲಿ ಏನು ಬೆಳೆ ಬಂದೀತು (ರೂಢಿ). [←ತೆಲು. ಚಟ್ಟು]

**ಚಟ್ಟು$_{೫}$, ಚೆಟ್ಟು$_{೩}$** (ನಾ). ೧. ಗೋಡೆಗೆ ಕೈಯಿಂದ ಒತ್ತುವ ಬಣ್ಣದ ಗುರುತು. 'ಚಟ್ಟುಬಡಿ' ಪರಾ. ೨. ಪ್ರಥಮ ಋತುಮತಿಯಾದವಳು ಗೋಡೆಗೆ ಒತ್ತುವ ಅರಿಸಿನದಿಂದ ಅಂಕಿತವಾದ ಹಸ್ತದ ಗುರುತು. ೩. ಪರಿಮಳ ದ್ರವ್ಯದ ಲೇಪನ; ಸುಗಂಧದ ಲೇಪ: "ಚರ್ಚಾ, ಚರ್ಚಿಕ್ಯಂ, ಸ್ಥಾಸಕಃ—ಈ ೩ ಗಂಧವನಿಟ್ಟು ತೊಳೆವುದರ ಪೆಸರು. ಚಟ್ಟೆಂದು ಎಂಬರು" (ನಾಚಿರಾ. ೧೨೪). ೪. ನಕಲು. 'ಚಟ್ಟುಹೊಡೆ' ಪರಾ. ಚಟ್ಟು$_{೩}$: ೧. ಕೋಣವೊಂದು ಸ್ಥಾಪಿತವಾಗಿತ್ತು. ಅದರ ಶರೀರದ ಮೇಲೆಲ್ಲಾ ಭಕ್ತಜನರ ಕೈಯ ಕೆಂಪು ಚಟ್ಟುಗಳು ಕಾಣುತ್ತಿದ್ದವು (ಚಾಚಿಅ. ೪೭). ೨. ಚಟ್ಟು ಬಡಿಸುವಶಾಸ್ತ್ರ, ಇನ್ನೂ ಏನೇನೋ ಶಾಸ್ತ್ರಗಳು ಆದುವು (ಕೆಲುಮ. ೩೦೪). ೩. ಪುಣುಗಿನ ಚಟ್ಟು ಹರಿಣ ಗೋರೋಚನ ಕೃಷ್ಣಾಜಪುಲಿಚರ್ಮ ನರಿಗೊಂಬುಗಳನಿತ್ತರೊಲಿದು (ಕೋಚಕ. ೦೯–೭೩).

[ದೇ.॥ ತಮಿ. ಚಟಙ್ಕು = ಹುಡುಗಿಯು ಪ್ರಥಮ ಋತುಮತಿಯಾದಾಗ ಮಾಡುವ ಸಮಾರಂಭ]

**ಚಟ್ಟು$_{೬}$** (ನಾ). ಜಟ್ಟಿ ಕಾಳಗದಲ್ಲಿ ಒಂದು ವರಸೆ: ಎಸೆವ ಮುಹಗ್ಗಳಂ ಕಡಕಿ ಕಕ್ಕವಡಂ . . . ಪಾಸಗೆವನ್ನಿಮುಟ್ಟಿ ಚಟ್ಟು ಸಿರಣವಟ್ಟಿ ಬಾಹುದಣೆ ಖಿಮ್ಮುರಿ ಕತ್ತರಿ . . . ಜಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪು. ೩-೭೮). [ದೇ.॥ ತಮಿ. ಚಟಙ್ಕು]

**ಚಟ್ಟುಕ** (ನಾ). ಸುಗಂಧ ದ್ರವ್ಯಗಳನ್ನು ಸಿದ್ಧಗೊಳಿಸುವವನು,-ಲೇಪಿಸುವವನು; ಘಟ್ಟಿವಳ: ತಟ್ಟುಕಂ ಚಟ್ಟುಕಂ ತಟ್ಟು ಚಟ್ಟು ಶಬ್ದಾ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯ ಕರ್ದಮ ಕೃತ ಸ್ಥಾಸಕ ವಚನೌ ತತ್ಕುರ್ವನ್ (ಶಬ್ದಾನು. ೪೪೦ ವ್ಯಾಖ್ಯಾ). [ಚಟ್ಟು$_{೬}$ + -ಕ$_{೩}$]

**ಚಟ್ಟುಗ** (ನಾ). ಒಬ್ಬಾತನ ಹೆಸರು: ಬಂಟುಗ ಮದಭಂಜನಂ ಜಯಾಂಗನಾ ಮನೋರಞ್ಜನಂ ಚಟ್ಟುಗ ಮದೇಭ ಪಞ್ಚಾನನಂ (ಎಕ. VIII, ಸಾಗರ. ೧೦೯-೪; 1042). [<ಚಟ್ಟು$_{೬}$]

**ಚಟ್ಟುಬಡಿ** (ಕ್ರಿ). ಮಡಕೆ, ಗೋಡೆ, ಬಾಗಿಲು ಮುಂತಾದುವುಗಳ ಮೇಲೆ, ಕೈಯಿಂದ ಬಣ್ಣವನ್ನು ಒತ್ತು; ಗುರುತು ಮಾಡು: ಬಾಗಿಲು, ಗೋಡೆಗಳ ಮೇಲೆ ಚಟ್ಟು ಬಡಿದಿದ್ದರು (ರೂಢಿ); ಚಟ್ಟು ಬಡಿದಿದ್ದ ಮಡಕೆಗಳನ್ನು ಸಾಲಾಗಿ ಇಟ್ಟು ಪೂಜಿಸಿದ್ದರು (ರೂಢಿ).

[ಚಟ್ಟು$_{೫}$ + ಬಡಿ$_{1}$]

**ಚಟ್ಟುಹೊಡೆ** (ಕ್ರಿ). ೧. ಗೋಡೆಗೆ ಕೈಯಿಂದ ಬಣ್ಣವನ್ನು ಒತ್ತು: ಹರಿಗೆ ಮನೆಗೆ ಪುಣ್ಯಾಹಕ್ಕೆ ಮೊದಲು ಚಟ್ಟುಹೊಡೆ (ರೂಢಿ). ೨. ನಕಲು ಮಾಡು; ಕಾಪಿಹೊಡೆ: ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ಪುಸ್ತಕದಲ್ಲಿದ್ದುದನ್ನೇ ಚಟ್ಟು ಹೊಡೆದಿದ್ದರು (ರೂಢಿ). ೩. (ಕರಾ). ಮಂತ್ರೊಬ್ಬರು ಹೇಳಿದ್ದನ್ನೇ ಹೇಳು: ಏನೂ ಕೆಲಸವಿಲ್ಲ, ಸುಮ್ಮನೆ ಚಟ್ಟುಹೊಡೆಯುತ್ತಾನೆ (ರೂಢಿ). [ಚಟ್ಟು$_{೫}$ + ಹೊಡೆ$_{1}$ (<ಪೊಡೆ$_{1}$)]

**ಚಟ್ಟಿ$_{1}$, ಚೊಟ್ಟಿ$_{1}$** (ನಾ). ೧. (ಯೂರೋಪಿನವರ ಮಾದರಿಯ) ಉಡುಗೆ ತೊಡುಗೆ. 'ಚಟ್ಟಿಗಾರ' ಪರಾ. ೨. ಮೈಮೇಲೆ ಬೆಳ್ಳಗೆ ಸ್ವಲ್ಪ ಉಬ್ಬಿದ ಮಚ್ಚೆಗಳೇಳುವ ಒಂದು ಬಗೆಯ ಗುಹ್ಯರೋಗ; ಪರಂಗಿ ರೋಗ: (ಕ). ಚೊಟ್ಟಿ$_{1}$.

ಚೊಟ್ಟಿಯವ=ಯೂರೋಪಿನವರ ಮಾದರಿಯ ವೇಷಧರಿಸಿದವನು; ಚಟ್ಟಿಕಾರ: ಬಾಗಿಲಿಗೆ ಬೀಗ ಹಾಕಿಸಿ ಬಿಟ್ಟರು. ಮುವಿಸಾಮಿಮಪ್ಪನವರು ಚೊಟ್ಟಿಯವನಿಗೆ ಹೇಳಿ (ಕಂಗೂಲಿ. ೧೩೦).

[ದೇ.॥ ತಮಿ. ಚಟ್ಟೈ; ಮಲ. ತುಳು. ತೆಲು. ಚಟ್ಟ]

**ಚಟ್ಟಿ$_{೨}$** 'ಚಟ್ಟ$_{1}$' ನೋ.

**ಚಟ್ಟಿ$_{೩}$** 'ತಟ್ಟ$_{1}$' ನೋ.

**ಚಟ್ಟಿಕಾರ** 'ಚಟ್ಟಿಗಾರ' ನೋ.

**ಚಟ್ಟಿಗಾರ, ಚಟಿಕಾರ, ಚಟ್ಟಿಕಾರ** (ನಾ). ೧. ಯೂರೋಪಿನವರ ವೇಷವನ್ನು ಧರಿಸಿದವನು: (ಕ). ೨. ಯೂರೋಪಿನ ಹಾಗು ಏಷ್ಯಜನರ ಸಂಕರ ಜಾತಿಯವನು; ಆಂಗ್ಲೋ ಇಂಡಿಯನ್: ಬ್ರೌ ಎಂಬ ಚಟ್ಟೀಗಾರನು ಆ ದಿವಸ ಗಾಡಿ ಹೊಡೆಯುತಾ ಇದ್ದನು (ಮೂಮುರಾ. ೧೭). ಚಟಿಕಾರ: ೨. ಚಟೀಕಾರರುಚೌಕಿ ಮಾಡುತ, ನಡಿದರೂ ಹೇಳದೆ ಗುಡದಾಗ (ಕನ್ನಜಾ. ೮೮). ಚಟ್ಟಿಕಾರ: (ಕ).

[ಚಟ್ಟಿ$_{1}$ + -ಕಾರ$_{1}$ (<-ಕಾರ). / ತಮಿ. ಚಟ್ಟೈಕ್ಕಾರನ್; ಮಲ. ಚಟ್ಟಕ್ಕಾರನ್; ತುಳು. ಚಟ್ಟಿಗಾರೆ; ತೆಲು. ಚಟ್ಟಕಾರ]

**ಚಟ್ಟೋಜ** (ನಾ). ಒಬ್ಬಾತನ ಹೆಸರು: ಅರ್ಜುನೋಜನ ಮಗಂ ಚಟ್ಟೋಜ ಕಲ್ಲಂ ಮಾಡಿಸಿದ (ಎಕ. VIII, ಸೊರಬ. ೦೭-೦೦; 1016); ಗೊಯ್ಸಿಸೆಟ್ಟಿಯ ಬೆಸವಗಂ ಅಕ್ಕಶಾಲೆ ಚಟ್ಟೋಜನ ತಮ್ಮಂ (ಎಕ. VII, ಶಿವಮೊ. ೪೩-೩೯; 1172 ?). [ಚಟ್ಟ$_{೬}$ + ಓಜ$_{1}$ (<ಒವಜ್ಝ)]

**ಚಟ್ಟಗ್ರಾಮ** (ನಾ). ಒಂದು ಊರಿನ ಹೆಸರು: ಪಾವಕದಿಶಿ ಶಮಿ ಯಿ ಕೃಷ್ಣಪಾಷಾಣಾಂ ಚ[ಟ್ಟಗ್ರಾ]ಮಶೀ ಕೃಷ್ಣಪಾಷಣಂ (ಸೌಇಇ. XX, ೪-೧೩; ೬೬೬). [ಚಟ್ಟ? + ಗ್ರಾಮ]

**ಚಟ್ನಿ** 'ಚಟ್ಟಣಿ' ನೋ.

**ಚಟ್ನಿಪುಡಿ** (ನಾ). ಕಡಲೆಬೇಳೆ, ಉದ್ದಿನಬೇಳೆ, ಕೊಬ್ಬರಿ, ಮೆಣಸಿನಕಾಯಿ ಮೊದಲಾದುವನ್ನು ಹಾಕಿ ಮಾಡಿದ ನಂಜಿಕೆಯ ಪದಾರ್ಥ: ಚಟ್ನಿಪುಡಿ ಮುಗಿದು ಹೋಗಿದೆ (ರೂಢಿ). 'ಪುಡಿಚಟ್ನಿ' ಪರಾ.

[ಚಟ್ನಿ (<ಚಟ್ಟಣಿ) + ಪುಡಿ]

**ಚಟ್ನಿ** 'ಚಟ್ಟಣಿ' ನೋ.

**ಚಡ್‌ಸಾಲ್** 'ಛಡಸಾಲ್' ನೋ.

**ಚಡ** (ನಾ). ೧. ಬೇಗ (?): ಬಂದವನೆತ್ತಿ ವಿಕ್ರಮದಿನೀಟ್ಕುಳಿಗೊಂಡವನಂತೆ ಕೂಸ ನಿನ್ನಿಂದಮಗೊಳ್ಳೆಯಂ ಬಿಡುವ ಮೇಟ್ ತನಗಿಕ್ಕಿದ ಕೋಂಟೆ ತಾಂ ಚಡಂ ಬಂದು ನಿಜೇಶನಾತಕೊಟೆಯಂ ತಿಟ್ಟಂ ಗಟಪಲ್ಕೆ ಬೇಡ ಪೋಗೆಂದುಜಿದೊತ್ತಿ ಚಪ್ಪರಿಸೆ ಪೋದನವಂ ಪಗೆಸಾರಿ ಕೋಪದಿಂ (ಪುಷ್ಪಪು. ೭-೭೭). ೨. [ಸಂಗೀತ] ರಾಗದಲ್ಲಿ ಒಂದು ಗತ್ತು (?): ಗಹಗಹಿಕೆ ಗೊಂಡಂ ಗೊಂಡಿ ಚಡಂ ಬಾಹಟಂ ರಾಲಂಗಿ ತನ್ನೆವಣೆ ನಿಸ್ಸರಣೆ ರಂಗರಕ್ಕಿ ಬೇಗ ವಣಿತು ತರಹರಂ ಸುಠಿವೊಟ್ಟಜೆ . . . ಬೆಡಂಗು ವಡೆಯೆ ಪಾಡುತ್ತಿರೆಯುಂ (ಶಾಂತೀಕ. ೧೭-೭೭ ವ). [?]

**ಚಡತ** (ನಾ). ಮನೆಯ ಮುಂದಿನ ಜಗಲಿ; ಕಟ್ಟೆ: ಅವರೆಲ್ಲ ಮನೆಯ ಮುಂದಿನ ಚಡತದಲ್ಲಿ ಕುಳಿತಿದ್ದರು (ರೂಢಿ). [?]

**ಚಡತಿ** (ನಾ). ಅಸೂಯೆ; ಹೊಟ್ಟೆಕಿಚ್ಚು; ಕರುಬು: (ಕ). [?]

**ಚಡಪಡ** (ನಾ). ೧. ಅಸಮಾಧಾನ; ಕಳವಳ. 'ಚಡಪಡಿಕೆ' ಪರಾ. ೨. ಆತುರ; ಅವಸರ; ಗಡಿಬಿಡಿ. 'ಚಡಪಡಿಸು' ಪರಾ. [?]

**ಚಡಪಡನೆ, ಚಡಪುಡನೆ, ಚಡುಂಪಡನೆ, ಚಡುಪುಡನೆ, ಚಡುಹುಡನೆ** (ಅ). ಲಗುಬಗೆಯಿಂದ; ಬೇಗನೆ; ತ್ವರಿತವಾಗಿ: "ಚಟ್ಟರಂ . . . ಚಡಪಡನೆ ಭೋರೆನೆ . . . ಶೀಘ್ರಾರ್ಥ" (ಶಬ್ದಮಂ. ೬೨). ಚಡಪುಡನೆ: "ಚಟ್ಟನೆ" (ಹಾಸಕೋ. ೩೪) ಚಡುಹುಡನೆ: "ಭೋಂಕನೆ ಚಡು[ಪಾಠಾಂ. ಡ]ಪಡನೆ ಚಟ್ಟರಂಗಳ್ . . . ತುರಿಪಮುಂ" (ಅಭಿಕ. ೪೯). ಚಡುಪುಡನೆ: ಭೋಂಕಲ್ ಚಡುಪುಡನೆ ಗಿಟ್ಟ ಕಿಟ್ಟನೆಯುಂ . . . ಒದವುಗ್ಗುಂ ಶೀಘ್ರಾರ್ಥಂ (ಕಮುದ. ೩೦೫). ಚಡುಹುಡನೆ: ಚಡುಹುಡನುಂಡು . . . ನಡೆದರ್ (ಸೂಕ್ತಿಸು. ೧೮-೩೩). 'ಸಡುಹುಡನೆ' ಪರಾ. [ಚಡಪಡ + -ಅನೆ$_{1}$]

**ಚಡಪಡಿಕೆ, ಚಟ್ಟಪಟಿಕೆ₁, ಚಟುಪಡಿಕೆ** (ನಾ). =ಚಡಪಡ೦ : ಒಳಗಿನ ಚಡಪಡಿಕೆಯನ್ನು ಆಡಿ ತೋರಿಸುವಂತಿಲ್ಲ (ವ್ಯಾಸ. ೫೯) ; ಸಾವಿತ್ರಿಯ ಚಡಪಡಿಕೆ ಕಣ್ಣೀರ ಕೋಡಿಯಾಗಿ ಹರಿಯ ತೊಡಗಿತು (ಚಿಪರಿ. ೨೪೩) ; ಒಂದು ಒಂದೂವರೆ ತಾಸು ಕುಳಿತರೂ ಯಾರೂ ಬರಲಿಲ್ಲ ಅವನಿಗೆ ಚಡಪಡಿಕೆಯಾಗಹತ್ತಿತು (ಕೃಕಥೆ. ೦೬೪) ; ಯಶೋದೆಗೆ ತಡವಾದಂತೆ ಚಡಪಡಿಕೆ ಹೆಚ್ಚಾಯಿತು (ವಾತ್ಸಲ್ಯ. ೨೫೮). **ಚಟಪಟಿಕೆ₁** : (ಈ). **ಚಟುಪಡಿಕೆ** : ಅನಂತನ . . . ಈ ವ್ಯರ್ಥ ಚಟುಪಡಿಕೆಯನ್ನು ಕಂಡು ಕಮಾಂಡರರೇ ಹೇಳಿದರು (ಶಮನಾ. ೦೦೪). [ ಚಡಪಡ + – ಇಕೆ ]

**ಚಡಪಡಿಸು, ಚಟಪಟಿಸು** (ಕ್ರಿ). ೧. ಕಳವಳಗೊಳ್ಳು ; ವ್ಯಥೆಪಡು : ಕರುಗಳು ಕಣ್ಣುಮರೆಯಾದ ಕೂಡಲೆ ದನಗಳು ಚಡಪಡಿಸುತ್ತವೆ (ಕುಂಬಯ. ೫-೫೩). ೨. ಅವಸರಪಡು ; ಆತುರಪಡು : ಯಾವಾಗ ಅವರನ್ನು ನೋಡಿಯೇನೆಂದು ಆತ ಚಡಪಡಿಸುತ್ತಿದ್ದ (ಕೃಪಾಕ. II, ೦೯೭). ನನಗೂ ಅವರಂತೆ ಕುಣಿದಾಡಬೇಕು ಎಂದು ಕೈಕಾಲುಗಳು ಚಡಪಡಿಸುತ್ತಲೇ ಇದ್ದುವು (ಶಾಂತಮು. ೦೨೦). ೩. ಒದ್ದಾಡು ; ಹೊರಳಾಡು : ಒಬ್ಬನು ಆ ಚಡಪಡಿಸುವ ಆತನ ಎರಡೂ ಕೈಗಳನ್ನು ಬಲವಾಗಿ ಹಿಡಿದುಕೊಂಡನು (ವೀರಬಂ. ೫೦) ; ಕಾಯ್ದ ಹಂಚಿನ ಮೇಲೆ ಹುರಿಯಲು ಹಾಕಿದ ಅರಳಿನ ಜೋಳದ ಕಾಳಿನಂತೆ ಚಡಪಡಿಸಿದನು (ಶಂಕುಟಿ. ೨೦) ; ನಿನ್ನ ಕುದುರೆ ನೆಮ್ಮದಿಯಿಲ್ಲದೆ ಚಡಪಡಿಸುತ್ತಿತ್ತು (ಶಾರಮ. ೮೪). **ಚಟಪಟಿಸು** : ೩. ಅಶಾಂತಿಯಿಂದ ಅವಳು ಚಟಪಟಿಸುತ್ತಿದ್ದಳು (ವಂಶವೃ. ೦೯೯). [ ಚಡಪಡ + – ಇಸು₃ ]

**ಚಡಪುಡನೆ** 'ಚಡಪಡನೆ' ನೋ.

**ಚಡರ** (ನಾ). ಕವಚ : "ಸನ್ನಾಹಂ, ಕವಚಂ, ಚಡರಃ . . . ಜಾ(೯)ಳಕಾ– ಈ ೧೦ ಕವಚಂ" (ಹಲಾಯು. ೬೬-೩೦೫) [ ಸಂ ]

**ಚಡಲೆ** (ನಾ). ಒಂದು ಬಗೆಯ ಮರ : ಅಂಸಿನ, ಬೂರುಗ, ಚಡಲೆ, ನಾರವಳ್ಳಿ, ನೀರವಳ (ಸಮ್ಯಸು. ೩೪೬). [ ? ]

**ಚಡಾಯ, ಚಡಾಯಿ, ಭಡಾಯ** (ನಾ). ೧. (ಪದವಿಯಲ್ಲಿ) ಉನ್ನತಿ ; ಬಡತಿ : ರಾಜಪುತ್ರರ್ಗೆ ಪಸಾಯಮಂ ಕೊಡಿಸುತ್ತಂ ವೀರಭಟರ್ಗೆ ಚಡಾಯಮಂ ಮಾಡಿಸುತಂ (ಬಸವ. ೬-೩೪). ೨. ಅತಿಶಯ ; ಆಧಿಕ್ಯ : ರಾಯರಥಿಕರು ಚಟುಳ ಚರಣ ಚ[ಪಾಠಾಂ. ಛ]ಡಾಯ ಮಾನಿತರೀಳದುದಾಖಳರಾಯ ದುರ್ಗವ (ತೊರರಾ. ೬-೦೮-೪). **ಚಡಾಯಿ** ೩. ಮೇಲೇರಿ ಹೋಗುವುದು ; ದಾಳಿ : ನಿಂ ಚಡಾಯಿ ಮಾಡುವ ನೀತಿ ಅಸಲ್ ನಿರ್ಭೀತಿ ಹೇಳಿಕೇಳಿ (ಅರಳು. ೪೯೬-೦೦). **ಭಡಾಯ** : ಮೇಲಿನ 'ತೊರರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ←ಹಿಂ. ಮರಾ. ಚಢಾಈ ]

**ಚಡಾಯುತಿಕೆ** (ನಾ). (ಕುದುರೆಯನ್ನು) ಏರುವ ಕ್ರಮ,–ಆರೋಹಣ ವಿಧಿ (?) : ವಾಮರಾಜ ಪ್ರಿಯ ತನೂಜಾತ ರೂಪುರೇಖ ಥಾವನ ಬಯ್ಯಾಕೆ ತೊಡೆಮಡ ಕಯ್ದನಿಯೆಂಬ ಚಡಾಯುತಿಕೆಗಾಯುತಿಕೆವಡೆದಾರೂಢ ವಿದ್ಯಾವಿಲಾಸ (ಸೌಇಇ. IX–1, ೩೯೩–೩೦ ; 1226). [ ? ]

**ಚಡಾಯಿಸು, ಭಡಾಯಿಸು, ಭಡಾಯ್ಸು** (ಕ್ರಿ). ೧. ಏರು ; ಹೆಚ್ಚಾಗು ; ಚಡಾಳಿಸು : (ಈ). ೨. ಎತ್ತರಿಸು ; ಹೆಚ್ಚಿಸು ; ಹೆಚ್ಚು ಮಾಡು : (ಈ). ೩. (ಹೊಡೆತ, ಏಟು ಮೊದಲಾದುವನ್ನು) ಕೊಡು ; ಹಾಗಿಸು : [ಬ]ಳಿ. ಚಬಕದಿಂದ ಅಥವಾ ಬೆತ್ತದಿಂದ ಥಳಿಸು : (ಈ). **ಭಡಾಯಿಸು** : ೨. ಜಮಾಬಂದಿಗೆ ಜಾಸ್ತಿ ಭಡಾಯಿಸಿ ತನ್ನ ಕೈಕಾಗಜಕ್ಕೆ ಕೂಡಿ ಬರಬೇಕೆಂಬದಾಗಿ (ಮಹಾವಂ. II, ೭೧). **ಭಡಾಯ್ಸು** : ೩. ಅಗ ಅಡ್ಡೇ ಇದ್ದ ಮಾತ್ನಲ್ಲಾ ಈಗ ಒಂದಕ್ಕೆರಡಾಗಿ ಭಡಾಯ್ಸಿದೀನಿ (ದುರಂಪಾ. ೬೩). [ ಚಡಾಯ + – ಇಸು₃ ]

**ಚಡಾವು, ಭಡಾವು** (ನಾ). ೧. ಏರಿಕೆ ; ಉನ್ನತಿ ; ಬಡತಿ : (ಈ). ೨. ಏರುನೆಲ ; ದಿಣ್ಣೆ : ಚಡಾವಿನಲ್ಲಿ ಮುಂದಕ್ಕೆ ಹೋಗದೆ ನಿಂತುಬಿಡುತ್ತಿದ್ದಿತು (ಬೈಸರ್. ೦೩೦). ೩. ಒಂದು ಬಗೆಯ ಮೆಟ್ಟು : ಕೆಲವರು ತುರುಕರ ಸಂಪ್ರದಾಯದ ಚಡಾವುಗಳನ್ನು ಉಪಯೋಗಿಸುತ್ತಿದ್ದರು (ಹುಟ್ಟಿಹ. ೮) ; ಕಾಲೊಳಗಿನ ಹರಿದು ಹೋದ 'ಚಡಾವ'ನ್ನು ನೆಲಕ್ಕೆ ಅಪ್ಪಳಿಸಿದನು (ನಳುಮಂ. ೪೪) ; ಕೆಂಪು ಬಣ್ಣದ ಸೊಗಸಾದ 'ಕಿರಿಕಿರಿ' ಚಡಾವು (ಪಾಳಹೂ. ೨). **ಭಡಾವು** : ೩. ನಾನು ಜುಬ್ಬ ತೊಟ್ಟು ಪೈಜಾಮ ಹಾಕಿ ಕಾಲಿಗೆ ಪಂಜಾಬಿ ಮಾದರಿಯ ಭಡಾವನ್ನು ಮೆಟ್ಟಿದ್ದ (ಧರ್ಮಕ್ಷೇತ್ರ. ೧೦೫).
[ ←ಹಿಂ. ಚಡಾವ್, ಚಢೌವಾ ; ಮರಾ. ಚಢಾಊ, ಚಢಾವ್ ]

**ಚಡಾಳ, ಚಡಾಳ್, ಭಡಾಳ** (ನಾ). ಹೆಚ್ಚಳ ; ಅತಿಶಯ ; ಆಧಿಕ್ಯ : ಭುಮರಮುದ್ದ್ರಮರಂಗಳ ಗಾವರಕ್ಕೆ ಜಾವಳಿಸ ಚಡಾಳದೊಳ್ಕೊರೆವುವು (ಅನಂಪು. ೦-೬೬) ; ಸಿರಿಯ ಚಡಾ[ಪಾಠಾಂ. ಛಾ]ಳದಲಿ ತಂದಬಿಳ ವಕ್ಷ್ಯಾವನಾಲಯದೊಳೊಪ್ಪಿಸಿದನು (ಕುವ್ಯಾಸ. ೫-೬೦) ; ಹೇಳು ಹೇಳಭಿಮಾನಭಂಗ ಚ[ಪಾಠಾಂ. ಛ]ಡಾಳವಾರಿಂದಾದುದು (ತೊರರಾ. ೩-೩-೪) ; ತೋಳ ಮೂಲಗಳೊಡೆವಂತೆ ಬೆವರೊಲೆಯ ಚಡಾಳದಿ ಮೆರೆವ ಹಣ್ಣುಗಳು (ಮೋಹತ. ೦೯-೬೦) ; ಗಂಧರ್ವ ವಿದ್ಯಾಚಾರ್ಯ ನೃಪಸುತರೂ ಮೊಳ್ಳಿಸಿ ವೀಣೆಯನು ಕಲಿವ ಚಡಾಳವೇನು (ಶಾಳ್ವಭಾ. ೦೬-೧) ; ನಾಲಗೆದೆಱಿದವ ಸಂದಿಪೊಂದು ನಡಿಯ ಚಡಾಳವನೇನ ಬಣ್ಣಿಪೆನು (ಭರತ. ೫೭-೨೪). **ಚಡಾಳ್** : ಬಲ್ ಚದುರ ಚಾವಡಿ ಚಡಾಳದೋಳೀ ಜೇಟದ ಥಾಟ ಸಿಂಗರದ ರಂಗಭೂಮಿ (ಪದ್ಮರಾ. ೬-೮೬). **ಭಡಾಳ** : ಮುನಿವ್ರಜ . . . ಕಡು ಶೋಕರಸದ ಭಡಾಳವನು ನಿಲಿಸಿದರು (ಕುವ್ಯಾಆ. ೫-೨೫) ; ಬಿಸಿಲ ಭಡಾಳದಿ ಬೆಂದರ್ಗೆ ಮಡುನೀರು ಸಸಿನೆಳಲಿದಿರ್ವಂದಂತೆ (ಮೋಹತ. ೨೬-೧೭).
[ < ಪ್ರಾ. ಛಡಾಲ ]

**ಚಡಾಳತೆ, ಭಡಾಳತೆ** (ನಾ). ಹೆಚ್ಚಳ ; ಆಧಿಕ್ಯ : ಚತುರಂಗದ ಚ[ಪಾಠಾಂ. ಛ]ಡಾಳತೆಯಿಂದ ಚೂರಿಸುವಸ್ತ್ರ ಶಸ್ತ್ರದಲಿ ಹೊದಿಸಿಕೊಂಡುದು ಕಟಕಲುವನು (ತೊರರಾ. ೬-೦೭-೩೦). **ಭಡಾಳತೆ** : ನಿಮ್ಮಾತನುಗಿದಟ್ಟಿಸಿದ ಹುಲಿಯೋ ನೊಂದ ಹಂದಿಯೊ ಹಸಿದ ಭುಜಗನೋ ಕಾದ ಕಟ್ಟುಕ್ಕಿನ ಭಡಾಳತೆ[ಪಾಠಾಂ. ಳಿಕೆ]ಯೊ (ಕುವ್ಯಾಆ. ೩ ೬). [ ಚಡಾಳ + – ತೆ₂ ]

**ಚಡಾಳಧ್ವನಿ** (ನಾ). ಅಧಿಕವಾದ ಧ್ವನಿ ; ಅತಿಶಯವಾದ ಧ್ವನಿ : ಅದೆ ರಘುಕುಲತಿಪಾಲಕನ ಚಾಪದ ಚಡಾಳಧ್ವನಿ[ಪಾಠಾಂ. ಧ್ವಾನ]ಯ ಚಿತ್ತೈಸಿದಿರೆ ಮುಂದಿಧ್ದೆ ಸಮರಭೈರವನುಗ್ರುಸಿಂಹರವ (ತೊರರಾ. ೩-೬-೩೩).
[ ಚಡಾಲ + ಧ್ವನಿ ]

**ಚಡಾಳಿಕೆ, ಭಡಾಳಿಕೆ** (ನಾ). ೧. ಉಗ್ರತೆ ; ರಭಸ : ಬಲಾ ಬಿಸಿಲೊಂದು ಚಡಾಳಿಕೆ ಜಗವ ಭಂಗಿಸಿತು (ಮೋಹತ. ೦೯-೪೬) ; ಇವರ ಬಲುಹು ಮತ್ತಿವರಟ್ಟುಳಿ ಮೋಣಿವರ ಚಡಾಳಿಕೆ ಇವರ ಕಟುಕತ್ವ (ಭಕ್ತಿಸ. IV, ೦೫). **ಭಡಾಳಿಕೆ** : ೨. ಅತಿಶಯ ; ಆಧಿಕ್ಯ : ನಾಟ್ಗಿ ಬಸಂತನ ಕಾವು ಕಾಮದೇವನ ರತಿಯಾಜ್ಞೆ ಚಂದ್ರನ ಭಡಾಳಿಕೆ[ಪಾಠಾಂ. ತಳಾರಿಕೆ] ತಂಬೆಲರೊಂದು ದೆಂಬಲಂ (ಅನಂಪು. ೦-೮೬) ; (ಸೂಕ್ತಿಸು. ೪-೨೯ ನೋ).
[ ಚಡಾಳ + – ಇಕೆ ]

**ಚಡಾಳಿಸು, ಚಡಾಳ್ಸು, ಚಢಾಳಿಸು, ಛೌಡಾಳಿಸು, ಭಡಾಳಿಸು** (ನಾ). ೧. ಅಧಿಕವಾಗು ; ಮೇಲಾಗು ; ಆಧಿಕ್ಯವನ್ನು ಪಡೆ : ತೋಳು ಸಾವಿರವಮರಪತಿ ತೆಬುವಾಳಿನೊಕ್ಕಲು . . . ಶೂಲಿ ಬಾಗಿಲ ಕಾಯ್ವನೀಸು ಚಡಾಳಿಸಿದ ಸಿರಿ ಯಾರಿಗೆ (ಕುವ್ಯಾಸ. ೯-೬೩) ; ಮೇಲಣಾಮರಜಾಂಬುಕುದಿವುತಿರ್ದುದು ಶಿಖಿ ಚಡಾಳಿಸಲ್ (ಚಿಬಪು. ೩೦-೬). ೨. ಚಾತುರ್ಯದಿಂದ ಜೋಡಿಸು ; ಸೊಗಸಾಗಿ ಅಳವಡಿಸು : ಜಂತ್ರವೀಣೆಯ ತಂತ್ರಿಗಳನು ಚಡಾಳಿಸಿ ಕಂತುವಿನಂಕಮಾಲೆಯನು . . . ಬಾಜಿಪ ಕಾಂತೆ ಕಣ್ಣೆ

ಸೆದಳು (ಅಂಜಿತ. ೩-೦೩೨) ; ಹಸುರಂಗಿಯುನು ತೊಟ್ಟನು ಚಡಾಳಿಸಿ ಪದದೊಳೆಕ್ಕದವ (ಕುಮಾ.ಭ. ೦೩-೦೯) ; ಪೊನ್ನ ದಂಡಿಗೆಯು ಚಡಾಳಿಸಿ ಬಿಗಿದನು (ತ್ರಿಪುರ. ೬-೨೬). ೩. ತುಂಬು; ವ್ಯಾಪಿಸು ; ಹಬ್ಬು: ಬಲುಗಾಳಿಗದ ಭಾರಣೆಯು ಬಲುಹು ಚ[ಪಾಠಾಂ. ಧ]ಡಾಳಿಸುತಲಿರ್ದುದು ಚತುರ್ದಶ ಭುವನವೀಧಿಗಳ (ಕೂರಾ. ೬-೦೮-೦೦) ; ಅವನ ಕೀರ್ತಿ ಚಡಾಳಿಸಿತು ತ್ರೈಜಗವನು (ನಳಚ. ೪-೦). ೪. ಪ್ರಜ್ವಲಿಸು; ಥಳಥಳಿಸು : ಬಾಲ ಸೂರ್ಯನವೋಲ್ . . . ತೇಜದ ವಿಕಾರ ಚಡಾಳಿಸಿತು (ಕುಮಾ.ದ್ರೋ. ೦೮-೩೦) ; ದುಕೂಲ ಮಣಿಭೂಷಣವ ಧರಿಸಿ ಚಡಾಳಿಸುವ ಕಾಂತಿಯುಲಿ ಸಿಂಹಾಸನದಿ ಕುಳ್ಳಿರ್ದ (ನಳಚ. ೯-೦). ೫. ಉರವಣಿಸು; ರಭಸಗೊಳ್ಳು: ಗುರು ಚಡಾಳಿಸಿ ಹೊಕ್ಕನೊಪ್ಪಂಗುರವಣಿಸಿದನು ಬಾಹ್ಲಿಕನು (ಕುಮಾ.ವಿ. ೮-೭೯) ; ಹೊಗೆ ಚಡಾಳಿಸಿ ಹಬ್ಬಿತಂಬರವ (ಶಾಕಿರಾ. ೨೨-೩೮) ; ಕೋಳೆರಡನು ಕಟ್ಟಿ ಜಯರಾಜನಿತ್ತ ಚಡಾಳಿಸಿ ತರುತ್ತಿದ್ದನತ್ತ (ಭರತ. ೩೪-೯೬). **ಚಡಾಳೈಸು:** ೨. ಕರದ ಬಲ್ಸೆರೆಯಂ ಚಡಾಳೈಸುತಾಗ ಶತಮಾಯುನಿಂದ್ರನ ಸರಿಸದೊಳ್ ನಿಂದು (ಜಂಬು. ೪೯-೨೦). **ಚಧಾಳಿಸು :** ೧. ಕೀಲಿಸಿದ ಹೃದ್ಬೀಜಬಿಂದು ಚಧಾಳಿಸಿದ ಶೀತಾಂಶುವಾಗಲು (ಪ್ರಭುಲಿ. ೨-೧೦) ; ವಿಷರಸದ ಬೊಬ್ಬುಳಿಗೆ ಚಪಳತೆ ಚಧಾಳಿಸಿತು (ತುರಂಗ. ೬೯-೪೦). ೫. ಕಣೆಗಳಿಂ ಚಧಾಳಿಸಿ ಭಟರ ಕಣೆಗಳಿಂ ಮನ್ನಿಸಿದನು (ತುರಂಗ. ೩೪-೪). **ಚೌಡಾಳಿಸು :** ೫. ಚೌಡಾಳಿಸಿಯ್ಯುಯಂಟರೊಳಗೆ ಕಾಯುನು ಕೊಂದು ಅವುಕಿ ಚಿತ್ರಿಯೊಳು ಜೋಡಿತ್ತಿ . . . ಹಳದಿ ಜೋಡ ಬವರಕ್ಕೆ ನಿಲಿಸಿಯಾಡಿದರು (ಸಾಂದಳಾ. ೪-೪೦). **ಧಡಾಳಿಸು :** ೧. ಮನಂ ಸೋಲ್ತುಕಾಂತನಂ ಕಾತರದೆ ಡಾವರಿದೀಕ್ಷಿಸೆ ಧಡಾಳಿಸಿದ ರಾಗದಿಂ (ಹದ್ಯಾ. ೮-೯೪); ನಾಲಗೆಯು ನೆಣಗೊಬ್ಬು ವಿಕ್ಕು ಧಡಾಳಿಸಿದರೇನಹುದು (ಕುಮಾ.ಭ. ೧೬-೦೭) : ಉರಿ ಧಡಾಳಿಸಿತೊಡನೆ ಧೂಮವು ಪುರವ ಮುಚ್ಚಿದುದು (ಅಂಬಿಕಾ. ೪೪-೩೩). ೪. ಥಾಳದ ದೆಂಬಟೆವಿಡಿದು ಧಡಾಳಿಸೆ ದೃಗ್ರುಚಿ (ಉದ್ಭಟ. ೦೧-೧೬) ; ವಿತ್ರ ಕಳಿತಳು ಕಾಂತಿ ಧಡಾಳಿಪ ಮಣಿಮಂಚದೆಡೆಯ ಆಳಿಯರ್ . . . ಪ್ರಕ್ಷಾಲಿಸಿದರು ಪದಯುಗವ (ಸೋಹತ.೨೬-೩೩). ೫. ಕೈದುಕಾಬಿರ ಗುರು ಧಡಾಳಿಸಿ ಮೈದೆಗೆದು ನಿರ್ಜರರ ನಗರಿಗೆ ಹಾಯ್ದನು (ಕುಮಾ.ದ್ರೋ. ೦-೩) ; ಮತ್ತೆ ಖಳರು ಧಡಾಳಿಸುತ ಮೇಲೇಚಿದರು ಘನತರದ ಕೋಪದಲಿ (ಜೀವಂಧ. ೬-೦೩) ; ಈ ದೇಹ ಸುಖದನುಭವ ಧಡಾಳಿಸಿ ಮರಳಿ ನಿನ್ನೆಡೆಗೆಳೆದು ತಹುದು (ಅತ್ಯೂಚ. ೪-೭೩). ೬. ವಿರೋಧಿಸು ; ಎದುರುಬೀಳು : ಕೇಳಿಯೊಳಿನಿಯಂಗೆ ಸುಖವನೆಯ್ದಿಸದೆ ಧಡಾಳಿಸಿದವಳ ಪೇರುರವ ಬಾಳಿನೊಳ್ ಸಿಗಿವಂತೆ . . . ಸೀಳಿದಳೊಂದು ದೆಳ್ಳಿಲೆಯು (ಸೋಹತ. ೦೬-೩೩).

[ ಚಡಾಳ + – ಇಸು$_3$ ]

**ಚಡಾಳೈಸು** ‘ಚಡಾಳಿಸು’ ನೋ.

**ಚಡಿ$_1$** (ನಾ). ಸಣ್ಣಮಾರ್ಗ, ಕಿರುದಾರಿ: ಈಶಾನ್ಯ ಚಡಿಯ ದಾರಿಯಿನ್ತೀವಳಯ ಸೀಮೆಯುಂ (ಎಕ. V, ಹಾಸನ. ೩೦-೪೨; 1218); ದಾಂಬೇಜಿಯಂಥ ದೊಡ್ಡ ಪ್ರವಾಹವು ನಾಲ್ಕು ಕಡೆಗಳಲ್ಲಿ ಮುರಿದು ಈ ಭೂಮಿಯ ಚಡಿಯಲ್ಲಿ ಧುಮುಕುವ ನೋಟವು ಅತಿ ಮನೋಹರವಾಗಿದೆ (ಶಾಂಪ್ರ. I, ೩೦೬). [ < ಹಾ. ಥೇಂಡೀ ]

**ಚಡಿ$_2$** ‘ಭಡಿ’ ನೋ.

**ಚಡಿ$_3$** (ನಾ). ಮರಗೆಲಸದಲ್ಲಿ ಎರಡು ಮರದ ತುಂಡುಗಳನ್ನು ಕೂಡಿಸುವ ಸ್ಥಳದಲ್ಲಿ ಮಾಡುವ ಪಡ ಅಥವಾ ಕೂರು ; ಕೂಲು : (ಕ).

[ ? ]

**ಚಡಿಕೆ, ಚಳಕ$_1$, ಚಳಕಿ$_1$, ಧಡಕಿ, ಧಡಿಕೆ** (ನಾ) ಜಟ್ಟಿಕಾಳಗದಲ್ಲಿ ಒಂದು ವರಸೆ : ಡೊಕ್ಕರಂ ಚಡಿಕೆ ತುಳಾಡಿ ಪೊಟ್ಟು ಮುಡುಹುಂ ಮುಹಡಂ ದಣುವಟ್ಟೆ ವಟ್ಟಿಸಂ (ಅನಂಪು. ೩-೨೬) : ಒಡೆಮುರಿವಪಟ್ಟಸಕೆ ಬಾಡುವ ಚಡಿಕೆ [ಪಾಠಾಂ. ಝುಡಿತೆ]ಗೊದಗುವ ಭಟರು ಹೆಣಗಿದರು (ಕುಮಾ.ಸ. ೨-೯೬). **ಚಳಕ$_1$ :** ತವದ ನಿಜಕೋಪದಿಂ ಚಳಕವಿನ್ನಣಂಗೊಂಡು ತಕ್ಕಿನೊಳ್ . . . ದೊಕ್ಕರಿಸಿ ಕೊಂದನಾ ಮುಷ್ಟಿಕನಂ (ಜಗವಿ. ೬ ೩೮) ; ಕೇಣವಿಲ್ಲದೆ ಬಾರಿ ಚಳಕ ಬಾಳೆಯು ಚದುರ್ ಪಾಣಿಲಾಘವ ಪಂಥ ಪಾಡುಗಳನರಿದು (ಕೃಮಿಥಾ. ೨೨-೬) ; ಪರಿವಿಡಿಯೊಳ್ ಚಳಕಂ ಮೆಯ್ಸರಿಯಟ್ಟಬು ಕಾಣದೊಳ್ಪು ಪೆಣಗುವ ಸೈಪುಂ ದೊರೆಕೊಂಡ ಕುವರನಿರವಂ ನಿರವಿಸಿದರ್ ಗರುಡಿಯೊಜರವನೀಪತಿಯೊಳ್ (ಚಳವಿ. ೪-೦೩೩). **ಚಳಕಿ$_1$ :** ಚಳಕಿ ಚಳವಾಗೆ ಪಾರಂ ಸೆಳೆವೆಳೆವಂ ವಟ್ಟಸಂಡಿ ಪುಟವಟ್ಟರೆ . . . ಕೊಬಗಿಡು ಬಾಣೂರಂ (ಅರ್ಧನೇ. ೮-೧೦೮). **ಧಡಕಿ:** ಎಸೆವ ಮುಹಗ್ಗಳಂ ಧ[ಪಾಠಾಂ. ಠ] ದಕಿ ಕಕ್ಕವಡಂ ಮುಹಡಂ . . . ಬಾಹುದಣಿ ಖಮ್ಮರಿ ಕತ್ತರಿ ಮೋಡವಂಕುಶಂ ಸಸಿಕುವೆನಿಪ್ಪ ಚಿಟ್ಟಿಗನ ನಚ್ಚಿನ ಬಿನ್ನಣಮೊಪ್ಪೆ ಕಾದಿದರ್ (ಚಂದ್ರಪ್ರ. ೩-೭೮). **ಧಡಿಕೆ :** ಚೊಕ್ಕೆಯಬಾಸಗೆ ಪೊಕ್ಕುಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಧಡಿಕೆಯೊಳ್ ಬಗಿದು ಚಾಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಹನಂ ಸೆಳೆದು ಕೆಡಪಿ (ಗಿರಿಳ. ೨-೧೦೩ ಬ).

[ ದೇ.೩ ತೆಲು. ಚಡಿಕಿ, ಚಲಿಕಿ, ಧಡಿಕಿ ]

**ಚಡಿತ$_1$, ಭಡತ, ಭಡಿತ$_2$** (ನಾ). ಮರದ ಸಾಮಾನುಗಳು ಬಿಗಿಯಾಗಿ ಹೊಂದಿಕೊಂಡಿರುವಿಕೆ ; ಹೊಂದಾಣಿಕೆ : ಗಾಜನ್ನು ಪಠದ ಚೌಕಟ್ಟಿನ ಚಡಿತಕ್ಕೆ ಸರಿಯಾಗಿ ಕೂಡಿಸಿ ಆಮೇಲೆ ಪಠವನ್ನು ಜೋಡಿಸಬೇಕು (ಕೂಪ). **ಭಡತ :** ಬಾಗಿಲಿನ ಭಡತ ಸರಿಯಾಗಿಲ್ಲ (ಕೂಪ). **ಭಡಿತ$_2$ :** ಮೇಜದ ಖಾನೆ ಯಾಕೋ ಭಡಿತಕ್ಕೆ ಸರಿಹೊಂದುವುದಿಲ್ಲ (ಕೂಪ). [ <ಚಡಿ$_3$ ]

**ಚಡಿತ$_2$** (ನಾ). ೧. ಅಧಿಕವಾದ ಬೆಲೆ ; ಏನು ಬೆಲೆ : ಮಾರುಕಟ್ಟೆಯಲ್ಲಿ ಅಡಕೆ ೨೫೦ ರೂ ಚಡಿತಕ್ಕೆ ಹೋಗಿತ್ತು (ಕೂಪ). (ಗು). ೨. ಹೆಚ್ಚಾದ: ಪೊಡವಿಯೊಳು ಇದು ಮೊದಲು ಚಡು[ಡಿ]ತಬಾಡಿಯನಾಡೆ ಬಾಡಮುಟ್ಟ ನಾಲಿಗೆಯ ಕೆಡಹಿ ಕೊಯ್ಯುವೆನು (ಕರಲೀ. ೩೩೩-೩).

[ ←ಮರಾ. ಚಢತಾ ]

**ಚಡಿತ್ತ, ಭಡಿತ$_1$** (ನಾ). ಒಂದು ಬಗೆಯ ಸುಂಕ,–ತೆರಿಗೆ (?) ಭೂದಾನದರ್ವದ ತಾಂಮ್ರ ಶಾಸನ . . . ೧ ಉಭಯಂ ಗ ೩೫೫೧ ಮೆಣಸಿನ ಚಡಿತ್ತದಿಂದಲೂ ಗ ೮೨೫ ಉಭಯಂ ಗ ೩೫೫೩ (ಎಕ. VIII, ತೀರ್ಥಹ. ೩೮-೦೩ ; 1630): ಮೆಣಸಿನ ಚಡಿತ್ತಗರ ೨೫ ಉಭಯಂ ೧೫೬೧ (ದ್ಯುಆರಿ. ೧೯೩೩, ೨೮-೨೬ ; 1630). **ಭಡಿತ$_1$ :** ವಕಲ ಬಿರಾಡದಿಂದ ಗ ೧೦ ಭತ್ತ ಮೆಣಸಿನ ಭಡಿತ ಗ ೪ ಭತ್ತ ಸುಂಕದಿಂದ ಗ ೯ (ಎಕ. VIII, ತೀರ್ಥಹ. ೦೦೬-೧೯ ; 1702). [ ? ]

**ಚಡಿಫೌಜು** ‘ಚಡೆಪವ್ವಜು’ ನೋ.

**ಚಡಿಬಾಣ** (ನಾ). ಒಂದು ಬಗೆಯ ಬಾಣ : ಬಾಣಕಾರರು ರಾಮಬಾಣ ಕುಮಾರಬಾಣ, ಚಡಿಬಾಣವೆಂಬ ನಾಲ್ಕಾರು ದಿನಸಿನ ಬಾಣಗಳನ್ನು ಎತ್ತುಗಳ ಮೇಲೆ ಹೇರಿಸಿಕೊಂಡು ಬಂದರು (ಚಿಕ್ಕರು. ೧೪). [ಚಡಿ? + ಬಾಣ$_2$]

**ಚಡಿಮರಿ** (ನಾ). [ವೀಶೈ] “ಸಮಾಜದ ಕಾರ್ಯಕ್ರಮ ಏರ್ಪಡಿಸುವ ವ್ಯವಸ್ಥಾಪಕನು, ಮಠಪತಿ” (ಕರಶಾ. ೨೪-೬).

[ ಚಡಿ? + ಮರಿ (<ಮಣಿ) ]

**ಚಡಿಯೇಟು** (ನಾ). ಬೆತ್ತದ ಏಟು,– ಹೊಡೆತ: ನಾನೊಮ್ಮೆ ಹಳ್ಳಿಯಲ್ಲಿ ರೈತನೊಬ್ಬನಿಗೆ ಚಡಿಯೇಟು ಬಾರಿಸುತ್ತಿದ್ದುದನ್ನು ನೋಡಿದೆ (ಪುನರು. ೨೦೯). [ ಚಡಿ$_2$ (<ಛಡಿ) + ಏಟು$_1$ ]

**ಚಡುಪಡನೆ** ‘ಚಡಪಡನೆ’ ನೋ.

**ಚಡುಪುಡನೆ** ‘ಚಡಪಡನೆ’ ನೋ.

**ಚಡುಹುಡನೆ** ‘ಚಡಪಡನೆ’ ನೋ.

**ಚಡೆಪವುಜು, ಚಡಿಫೌಜು** (ನಾ). ಲಷ್ಕರೀಸಾಮಗ್ರಿಗಳ ಆಡಂಬರ ವಿಲ್ಲದೆ ಹೊರಟ ಸೈನ್ಯ; ಚಿಕ್ಕಪುಟ್ಟ ಆಯುಧಗಳನ್ನು ಮಾತ್ರ ತೆಗೆದುಕೊಂಡು ಯುದ್ಧಕ್ಕೆ ಹೊರಟಿರುವ ಸೈನ್ಯ: (ಚ). **ಚಡಿಫೌಜು:** ಜನರಲ್ ಫ್ಲಾಯಿಡ್ ಸಾಹೇಬರವರು ಚಡಿಫೌಜು ತೆಗೆದುಕೊಂಡು ಬಂದು ಇದ್ದಾರೆ (ರಾಕೇಂದ್ರ. ೯೩). [ ←ಮರಾ. ಸಡೀಫೌಜ್ ]

**ಚಡೆಸವಾರಿ** (ನಾ). ಪರಿವಾರವಿಲ್ಲದೆ ಹೊರಟ ಸವಾರಿ; ಏಕಾಕಿಯಾಗಿ ಹೊರಟಿರುವುದು: ಏನು ನಸುಕಿನಲ್ಲಿಯೇ ಚಡೆಸವಾರಿ ಹೊರಟಿರಿ? (ಜೂಠಿ). [ ←ಹಿಂ. ಛಡೀಸವಾರೀ; ಮರಾ. ಸಡೇಸ್ವಾರೀ ]

**ಚಡ್ಡಣ** 'ಚಡ್ಡಣೆ' ನೋ.

**ಚಡ್ಡಣಿಸು** (ಕ್ರಿ). ವಿಶಾಲವಾಗಿ ಕಟ್ಟು; ವಿಸ್ತಾರವಾಗಿ ಕಟ್ಟು: ಒಡ್ಡಿದರು ದಡಿವಲೆ ಸಿಡಿವಲೆ ಕಡ್ಡಿವಲೆ ಕುಣಿವಲೆಯನಗಲಕೆ ಚಡ್ಡಣಿ[ಪಾಠಾಂ. ವಿ]ಸಿದರು ಬೀಸುವಲೆ ಬೆಳ್ಳಾರವಲೆಗಳಲಿ ಅಡ್ಡವಿಸಿ ಸೋಹಿದರು (ತೊರವೆರಾ. ೩-೩-೦೨). [ ಚಡ್ಡಣ (<ಚಡ್ಡಣೆ) + - ಇಸು ]

**ಚಡ್ಡಣೆ, ಚಟ್ಟಳೆ$_1$, ಚಡ್ಡಣ** (ನಾ). ಅತಿಶಯ; ಆಧಿಕ್ಯ: ಉಪಹಾಸದ ನುಡಿಯು ವೃಕೋದರಾಭ್ಯುದಯದ ರೋಮಾಂಚನದ ಚಡ್ಡಣೆಯು ... ಚೌಪಟಮಲ್ಲ ನಿದ್ದನು ರಿಪುಬಲವ ಲೆಕ್ಕಿಸದೆ ಕಲಿದ್ರೋಣ (ಕುಮಾರವ್ಯಾ. ೦೭-೩೩); ದಂಡೆ ಯೊಳಗಣ ಕಾಳೋರಗನಪೂಲಾ ಚಡ್ಡಣೆಯು ಚಪಳಕ್ರೋಧಶಿಖಿ ಮೋಹಿ ದುದು ಮೋಚಿಯಲಿ (ಕುಮಾವ್ಯಾ. ೨೦-೯). **ಚಟ್ಟಳೆ$_1$:** ಚಟ್ಟಳೆಯು ಚತು ರಾಸ್ಯನಿವರೊಡಹುಟ್ಟಿದರ ಸಮುಜೋಳಿ ಗಡ ಜಗಜಟ್ಟಿಗಳು ಕಾವಿವರನುತ ಕಲೆದೂಗಿದನು ಮಗಧ (ಕುಮಾವ್ಯಾ.ಸ. ೨-೮೩). **ಚಡ್ಡಣ:** ಕೋಟಿಕಾ ವನಮಧ್ಯದಲಿ ... ಸಿಡಿಲಿನ ಚೀಚೌಕೆಯಚಡ್ಡಣದ ರವ ರಾಘವನ ಕಿವಿಗೆಳಗಿ(ತೊರವೆರಾ. ೩-೦೨-೦೪). [ <ಪ್ರಾ. ಚಡನ./ಹಿಂ. ಮರಾ. ಚಢನಾ ]

**ಚಡ್ಡಿ$_1$, ಚೆಡ್ಡಿ** (ನಾ). ೧. ಅರೆ ಚಲ್ಲಣ; ಚಣ್ಣ; ನಿಕ್ಕರು: ಚಡ್ಡಿಗಳ ತೊಟ್ಟು (ಸೌಗಂಧಿ. ೩೦-೪); ಚಡ್ಡಿಯ ಜೇಬಿನ ತುಂಬ ರೂಪಾಯಿಗಳು (ಜಳಜೀ. ೦೦೩); ಉಂಡು ಏಳುವಾಗ ಒಂದು ಲಾಡನ್ನು ಅವನು ತನ್ನ ಚಡ್ಡಿಯ ಕಿಸೆಗೆ ತುರುಕಿಕೊಂಡನು (ಜೀಕಥೆ. ೬೨). ೨. ಗುಹ್ಯಭಾಗಗಳನ್ನು ಮಾತ್ರ ಮುಚ್ಚತಕ್ಕ ಬಿಗಿಯಾದ ಕಾಸೆ; ಕಾಚ; "ಸುತ್ತು ಲಂಗೋಟಿ" (ಜಾನಪೊ. ೩೪): ಹಿಂದು ಹುಡುಗರ ಸಂಗಡ ಚಡ್ಡಿಯನ್ನು ಹಾಕಿಕೊಂಡು ಈಜಲಿಕ್ಕೆಂದು ಹೋಗುತ್ತಿದ್ದಳು (ಭಲಸಂ. ೨೬). **ಚೆಡ್ಡಿ:** ೧. ಲಂಗ ಚೆಡ್ಡಿ ಹೊಲಿದು ತರುವೆ (ಕಪಟು. ೨-೩೦); ಅಗಸನಿಂದ ಬಂದ ಚೆಡ್ಡಿ ಪರಟಿನ ಅಲಂಕಾರ (ಮೂರ್ಗದ.೨೪); ಪಂಚೆಯನ್ನು ಬಿಚ್ಚಿ ಕಳಚುವಂತೆ ಚೆಡ್ಡಿಯನ್ನು ಕಳಚಲಾದೀತೆ (ರಂಗಳ. ೨೮). [ ← ತೆಲು. ಚಡ್ಡಿ ]

**ಚಡ್ಡಿ$_2$** 'ಸಡ್ಡೆ$_2$' ನೋ.

**ಚಡ್ಡಿಸು** (ಕ್ರಿ). ಸಿದ್ಧವಾಗು; ಸಿದ್ಧಗೊಳ್ಳು: ಒಡ್ಡಿದ ಸಾರಿಯಂ ತಿವಿವ ಕಯ್ಯೊಡನಿಕ್ಕುವ ... ತಿದ್ದಿಕೊಳ್ಳೆನಲ್ ಚಡ್ಡಿಸಿ ನಿಲ್ವ ನೂತನ ದುರೋದರಕೇಳಿ ಪಳಾಳವಲ್ಲವೇ (ನಳಚಂ. ೬೩೭). [ ? ]

**ಚಡ್ಡೆ** 'ಸಡ್ಡೆ$_1$' ನೋ.

**ಚಡ್ಡೆಗೊಳ್** 'ಸಡ್ಡೆಗೊಳು' ನೋ.

**ಚಢ, ಛಢ** (ನಾ). ಏರಿಕೆ; ಮೇಲಕ್ಕೆ ಹತ್ತುವುದು. 'ಚಢಸವಾಲು' ಪರಾ. **ಛಢ:** 'ಛಢಸವಾಲು' ಪರಾ. [<ಪ್ರಾ. ಚಡ, ಚಢ ]

**ಚಢಸವಾಲು, ಛಢಸವಾಲು** (ನಾ). ಹರಾಜಿನಲ್ಲಿ ಏರಾಟದ ಬೇಡಿಕೆ; ಹರಾಜಿನಲ್ಲಿ ಹೆಚ್ಚಿನ ಬೆಲೆಗೆ ಸವಾಲು ಹಾಕುವುದು: ಚಢಸವಾಲಿಗೆ ನೀವೆಲ್ಲ ಏರಿರಬೇಕೆಂದು ದೇವರ ಕಡೆಯಿಂದ ನಾನು ಆಶೀರ್ವಾದ ಮಾಡು ತ್ತೇನೆ (ಗಂಗಾಳ. ೦೩೪). **ಛಢಸವಾಲು:** ರೈತರುಗಳ ಜಮೀನನ್ನು ತಮ್ಮವರ ಕಡೆಯಿಂದ ಛಢಸವಾಲು ಮಾಡಿಸಿ ಕೊಂಡುಕೊಳ್ಳುವುದು(ಕಲಿನ. ೨೩೩). [ ಚಢ + ಸವಾಲು ]

**ಚಢಾಯಿ** 'ಚಡಾಯು' ನೋ.

**ಚಢಾಳ** 'ಚಡಾಳ' ನೋ.

**ಚಢಾಳಿಸು** 'ಚಡಾಳಿಸು' ನೋ.

**ಚಣ$_1$** (ನಾ). ಕ್ಷಣ; ಸ್ವಲ್ಪಹೊತ್ತು: "ಕ್ಷಣಂ ಚಣ" (ಶಬ್ದಮಂ. ೧೪). "ಕ್ಷಣಕ್ಕೆ ಬಂದಪುದು ಚಣವೆಂದು" (ಕಕಿರ. ೩೬); ಶಿವನು ಭವನುಂ ದೈವವಂ ಶ್ರಜಿಸುವನು ಚಣಮಾತ್ರದೊಳಲವೂ ಕೇಳಾ (ಬಸಪು. ೩೦-೩೩); ಚಣದೆ ಕಾನ್ಯದುತ್ರಮಪ್ಪಳಿಸಿದನು ಸಹಭವನ (ರಾಮಾಸಂ. ೯-೧-೩೬); ಮಾವನ ಸ್ಥಿತಿಗತಿಯ ಬಗ್ಗೆ ಚಣವೂ ಯೋಚಿಸಿದವನಲ್ಲ (ಕದ್ರಿತ. ೨೦೬); ಸಾಧ್ವಿಯು ನಿಂದಳಾ ಚಣ ವ್ಯವಮರೆಯುತಲಿ (ಕವಿಕೋ. ೩೭-೧೪).

ಚಣಚಣ (ದ್ವಿರುಕ್ತಿ): ಚಣಚಣವು ಹೊಸ ಹಸಿವು ಅದಾಗಿ ಇದಾಗಿ ಮತ್ತೊಂದಾಗಿ (ಮಂಕುತಿ. ೨೦೮); ಗೆಣೆಯನಾಡಿದ ಆಟ ಮನದಾಗ ಊರಿ ನಿಂತ್ಹಾಂಗ ಆ ಹುಡುಗಿ ಚಣಚಣಕ ನೆನಸಿ ಅಳತಾಳೊ (ಕನ್ನಜಾ. ೦೦೮). [ <ಸಂ. ಕ್ಷಣ ]

**ಚಣ$_2$** (ನಾ). ಸಮರ್ಥ. 'ಅಕ್ಷರಚಣ' ಪರಾ. [ ಸಂ. ]

**ಚಣಂಗ** 'ಚಣಗೆ' ನೋ.

**ಚಣಂಗಿ** 'ಚಣಗೆ' ನೋ.

**ಚಣಕ$_1$** (ನಾ). ಅರ್ಧತೊಡೆಯವರೆಗೆ ಮಾತ್ರ ಇರುವ ಚಲ್ಲಣ; ಅರ್ಧೋರುಕ; ಚಡ್ಡಿ: "ಚಣಕಂ = ಚಲ್ಲಣಂ (ಅರ್ಧೋರುಕಂ)" (ಕಮುದ. ಶಟ. ೨). "ಚಲ್ಲಣದಲ್ಲಿ ಮಾತು ಚಣಕಂ" (ಕರ್ಣಾನಿ. ೨೬); ಶ್ರೀದ್ವಾರಪೊಂದಕ್ಕೇ ತನ್ನ ಚಣಕವನ್ನು ಕಟ್ಟಿಸಿದ್ದನಂತೆ (ವಿಗಡ. ೪೩-೭). [<ಸಂ. ಚಂಡಾತಕ ]

**ಚಣಕ$_2$** (ನಾ). ಒಂದು ಬಗೆಯ ದ್ವಿದಳ ಧಾನ್ಯ; ಕಡಲೆ; "ಕಾಂ ಹರಿಮಂಥಂ ಚಣಕಾಖ್ಯಂ" (ಪಶ್ಚಿಕೋ. ೯೯-೦೭); ಅಂತು ಕೊಂಡ ಪದವಟಿಗಳೊಳ್ ... ಚಣಕ ಕುಸುಂಭ ಕಾರ್ಪಾಸ ಸರ್ಷಪ ಜೀರಕ ಧಾನ್ಯಕಾದಿ ವಿವಿಧ ಧಾನ್ಯಭೇದಂಗಳಂ (ಆದಿಪು. ೬-೭೨ ವ); ಕಣಕವಂ ... ವಿವಿದಾವಿಪದಾಕೃತಿಯಾಗಿ ಕೂಡಿಕೊಂಡೂಗಿಸಿದಿಂ ಬಟಿಕ್ಕೆ ಚಣಕೋದಕದಿಂ ತೆಗಪಿ (ಲೋಕೋಪ. ೮-೦೩); ಚಣಕಮುದ್ಗಮಾಷ ಗೋಧೂಮ ಶಾಲಿಯೆಲ್ಲ ಧಾನ್ಯಗಳ ಸಂಪತ್ತಿ (ಶಾಂತೀಶ. ೬-೦೩). [ ಸಂ. ]

**ಚಣಕಡಿಕ** (ನಾ). ಒಂದು ಕ್ಷಣದಲ್ಲಿ ಕತ್ತರಿಸಬಲ್ಲವನು, - ಕಡಿಯುವು ದರಲ್ಲಿ ನಿಪುಣನಾದವನು: ಚಣಕಡಿಕನ ಕಡುಗವುದೊರ್ಗಾಕೊಂಡೈ ದಾರುಕೋಟಿ ಸಬವಂ ಕೆಡೆವೊಲ್ (ಪಂಪಭಾ. ೯೧). [ಚಣ$_1$ + ಕಡಿಕ$_1$ ]

**ಚಣಕಾಲ** (ನಾ). ಒಂದು ಕ್ಷಣದಷ್ಟು ಸಮಯ; ಸ್ವಲ್ಪಹೊತ್ತು: ಚಣಕಾಲ ಮೈ ನಡುಗುತ್ತಿತ್ತು (ಮುಕುಳು. ೪೩); ಅಬ್ಬಕಬ್ಬೆ ಚಣಕಾಲ ಚಿಂತಾಕ್ರಾಂತರಾದಳು (ದಾನಚಂ. ೩೮) [ ಚಣ$_1$ + ಕಾಲ ]

**ಚಣಕಿ** (ನಾ). ಚೌಡಿಕೆಯಂತಹ ಒಂದು ವಾದ್ಯ; ತುಣತುಣಿ: ಚಣಕಿ ನುಡಿಸುತ್ತಾ ಜೋಗಿ ಹಾಡತೊಡಗುವನು (ಜೂಠಿ). [←ಮರಾ. ಚಾಣಕೀ]

**ಚಣಕು** (ಕ್ರಿ). = ಚಲಂಕು ೨: ನೆರೆದು ಬಹ ಬಲವರಾಕ್ರಮಗಳನು ಕಲಕಿ ಚಣಕಿದನದೇನು ಸಾಹಸಿಕನೆಂದಾರು ಬಣ್ಣಿಸಲಕ್ಕುಮೋ (ತೊರವೆರಾ. ೬-೦೩-೪). [ <ಚಲಂಕು ]

**ಚಣಕೆ** (ನಾ). ೧. ಹೋಳುಮಾಡುವ ಸಾಧನ (?): ಉದರ ಸೀಳುವುತ್ತರಿ ಸಂಪ್ರಿ ಹಸ್ತ ಕತ್ತರಿಸು ಹೋಳಿಸಗು ಶಿರವರಿದೆನದಗಿದಗೆಂದು ಹಣಗಿದರ್ ಚಣಕೆಯಂತೆ (ಜಿನಮು. ೨೯-೩೭); ಸೇನೆ ಸಹಿತಭ್ರರಾಜೇಂದ್ರರಂ ಚಣಕೆಗಳ್ ಲೂನಿಸುತ ಮಾನಿಸದೆ ಲೀನಿಸುತಲಂಗಮರಿದೂನಿಸುತ ... ಕರುಳ್ಕಟ್ಟಿ ಚಲಿವಿಂಲಿನ ಪರಿದು (ಜಿನಮು. ೩೦-೪೩). ೨. ಚೂರು; ಚಕ್ಕೆ (?): ಕಣೆಯಾ ಕಣ್ಮನಕೆಣೆಯಗೊಡದಿಹ ವಿಣಾಂಗು ವಿಂಚಿನ ಚಣಕೆಗಳೊ ಸಂದಣೆಯು ಮಿನ್ನಲೊ (ಜರಾಮಾ. ೨೫೦-೪೬). [ ? ]

**ಚಣಗ** 'ಚಣಗೆ' ನೋ.

**ಚಣಗಿ** 'ಚಣಗೆ' ನೋ.

**ಚಣಗೆ**, ಚಣಾಗ, ಚಣಾಂಗಿ, ಚಣಗ, ಚಣಾಗಿ, ಚಣೆಗಿ, ಚನ್ನಂಗಿ$_1$, ಚಾಣಂಗಿ (ನಾ). ಕಡಲೆ : "ಮಾಂಗಲ್ಯಕಃ,ಮಸೂರಃ – ಈ ೨ ಚಣಗೆ" (ಹಲಾಯು. ೯೩-೪೨೭). **ಚಣಾಂಗ** : "ಜಲಧಂಗಂ ವಿರಹಂ ಕಮಂಡಲು ಚಣಾಂಗಂ ಕೋರಕಾವಳ್ಳಿಯುತ್ಕಲಿಕಾಖ್ಯಂ" (ನಾಸಾರ. ೦೦೩). **ಚಣಾಂಗಿ** : "ಚಣಾಂಗಿ ಖಂಡಿಕಮೆನಲು ಕಡಲೆ" (ಶುಟಗಂ೨. ೦೧೦-೪). **ಚಣಗ**: ಅರಸಿನ ಜೀರಿಗೆ ಸಿದ್ಧಾರ್ಥ ಮೆಂಥೆಯು ಕರಿಯು ಹೆಸಱು ಎಳ್ಳು ಚಣಗ ಹರಿಮಂಥ ತೊಗರಿ ಕಲ್ಲುಪ್ಪು ಲವಂಗವು (ಜ್ಞಾ ಸ ಕ. ೩೬-೦೦೨). **ಚಣಗಿ** : ಅದಿಮಾರ್ಗತ್ರಯಮುಂ ಪೂವಿನೆಸಳುಂ ಚಣಗಿಯುಂ ಜವೆಯ ಸುಳಿಯುಂ ಯಥಾಕ್ರಮದಿನಾಕಾರಂಗಳುಂ ಚಕ್ಷುರಿಂದ್ರಿಯಕ್ಕೆ (ತಸೂವೃ. ೪೦); ಗೋದುವೆ ಚಣಗಿ ಹೆಸಱುದ್ದುಗಳನಡಕಿದರು (ತ್ರಿಪುರಿ. ೨೩-೩೭); ಹೇಮನಗದ ಬಣ್ಣದೊಳೆಸೆವ ತೊಗರಿ ಶೋಭನ ಕೋಯ ಬಗೆವೆತ್ತ ಚಣಗಿ ಬೆಳೆಯ ಪರಿಪಿನಂ . . . ಕಲಸುತಂಬುದು (ಅಂಗಪು. ೮-೨೭). **ಚಣೆಗಿ** : ವಟಾಣ ಧಾನ್ಯವೆಂದರೆ ಚಣೆಗಿ ಲಿಂಕ ಬಟ್ಟಗಡಲೆ ಕರಿಹೆಸರು ಮೊದಲಾದವುಗಳನ್ನು ಕೂಡಿಸಿ ಬಿತ್ತಬೇಕು (ಕೃಷಿಪ್ರ. ೮೦). **ಚನ್ನಂಗಿ$_1$**: ಬಟ್ಟಗಡ್ಲೆ ಚನ್ನಂಗಿ ತೊಗರಿ ಅವರಿ ಪುಂಡಿ ಸಾಸಿವೆ ಈ ಧಾನ್ಯಗಳಲ್ಲಿ ತಮಗೆ ಬೇಕಾದವುಗಳನ್ನು ಅಕ್ಕಡಿಯಿಂದ ಬಿತ್ತುತ್ತಾರೆ (ಮುಂಬಯಿ. ೩-೨೦೦); ಜೋಳ, ಬಟಗಡ್ಲೆ, ಚನ್ನಂಗಿ, ಅವರಿ ಸ್ವಲ್ಪಸ್ವಲ್ಪ ಬೆಳೆಯುತ್ತವ (ಧಾರಜಿ. ೯). ಉದ್ದು, ಚನ್ನಂಗಿ . . . ಸೆರೆ–ಇವೆಲ್ಲಾ ರಾಜಸ ಆಹಾರದಲ್ಲಿ ಬರುವವು (ಬ್ರಹ್ಮಶೀ. ೦೬೩). **ಚಾಣಂಗಿ** : ಚಾಣಂಗಿ ಬೇಳೆಯ ಹಾಗೆ ಸರ್ವಾಂಗಗಳಲ್ಲಿಯೂ ಸ್ಫೋಟಕಗಳುಂಟಾಗಿಹವು (ವೈದ್ಯಾ. I, ೩೭೯). [ < ಸಂ. ಚಣಕ ]

**ಚಣಪುಟ** (ನಾ). ಸ್ತನಾಗ್ರ ; ಚೂಚುಕ (?) : ಪೂರ್ಣವರ್ಣಕ್ಕೆ ಬಸಿರಕೊಳ ದಿಂದಣಿಯರಮೆಯ್ಯಿಂದು ರಂಜಿಪುವೆಂಬಾ ಅಣಕವನಾಂತುದು ಸತಿಯರ ಚಣಪುಟ ನೀರಂಧ್ರ ಬಂಧುರ ಸ್ತನಯುಗಳಂ (ಚಂದ್ರಪ್ರಭ. ೦೪-೨೩). [ ? ]

**ಚಣಯಿಗೆ** (ನಾ).=ಚಣಗೆ (?): ದ್ರವ್ಯೇಂದ್ರಿಯಂ ನಿರ್ವೃತ್ತಿಯುಮುಪಕರಣ ಮುಮೆಂದಿತ್ತಅನಂತನೆ ಚಕ್ಷುವಿಂಗೆ ಚಣಯಿಗೆಯಾಕಾರಂ ಶ್ರೋತ್ರಕ್ಕೆ ಯುವೆಯುವೆಯ ಸುಳಿಯಾಕಾರಂ (ಪಸಾರ. ೧೧೭-೦). [ ? ]

**ಚಣಾರ್ಧ** (ನಾ). ಅರ್ಧಕ್ಷಣ ; ಕ್ಷಣಾರ್ಧ ; ಸ್ವಲ್ಪಕಾಲ: ಹಿರಿಯ ಅಧಿಕಾರಿಗಳನ್ನು ಒಲಿಸಿಕೊಳ್ಳುವುದರಲ್ಲಿ ಧರಮ ಹೆಗ್ಗಡೆ ತನ್ನ ಆತ್ಮಗೌರವ ವನ್ನೂ ಮರೆಯಬಲ್ಲವನು,ಎಂಬುದು ಅವನಿಗೆ ಚಣಾರ್ಧದಲ್ಲಿ ಹೊಳೆಯಿತು (ಸವತಿ. ೬೮). [ < ಸಂ. ಕ್ಷಣಾರ್ಧ ]

**ಚಣೆಗಿ** 'ಚಣಗೆ' ನೋ.

**ಚಣೆನ** (ನಾ). (ಕರಾ). ಅಳಿಲು ; ಇಣಚಿ. [ ←ತುಳು. ಚಣಿಲ್, ಚನಿಲ್ ]

**ಚಣ್ಣ** 'ಚಲ್ಲಣ' ನೋ.

**ಚತು** (ನಾ). ಒಂದು ಸಂಖ್ಯೆ ; ನಾಲ್ಕು : "ಚೌ ಚತು ಸಮುದ್ರ . . . ಜಳರಾಶಿಯೆಂದು ನಾಲ್ಕಱ ನಾಮಂ" (ಪ್ರವಚಾ. ೯-೪); ವೇದ ಚತು ವೇದಾಂಗ ಷಡುವಿಧ (ಗಗಶಾ. ೩-೦೦). [ < ಸಂ. ಚತುರ್ ]

**ಚತುಃಕಷಾಯ** 'ಚತುಷ್ಕಷಾಯ' ನೋ.

**ಚತುಃಕಷಾಯಿ** (ನಾ). [ಜೈನ] ಕ್ರೋಧ, ಮಾನ, ಮಾಯೆ, ಲೋಭ ಎಂಬ ನಾಲ್ಕು ಬಗೆಯ ಕಷಾಯಗಳನ್ನುಳ್ಳವನು : ಕಷಾಯಾನು ವಾದದಿಂ ಚತುಃಕಷಾಯಿಗಳ್ಗಂ ಅಕಷಾಯಿಗಳ್ಗಂ ಸಾಮಾನ್ಯೋಕ್ತ್ಯ ಸ್ಪರ್ಶನಂ (ತತ್ತ್ವಪ್ರ. ೨೯). [ ಸಂ. ಚತುಃಕಷಾಯಿನ್ ]

**ಚತುಃಪದಿ** 'ಚತುಷ್ಪದಿ' ನೋ.

**ಚತುರ$_1$** (ನಾ). ಒಂದು ಸಂಖ್ಯೆ; ನಾಲ್ಕು: ದಿವ್, ಸ್ರುಚ್, ಚತುರ್ . . . ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರುಜ, ಚತುರ ಎಂಬಂತತ್ವಮಾ ದೊಡಂ (ಕರ್ಣಾ. ೮೬ ಪ್ರಯೋ). [ ಸಂ. ಚತುರ್ ]

**ಚತುರ$_2$** (ಗು). ೧. ಜಾಣತನವುಳ್ಳ ; ಕುಶಲ : ಸಹಜಕವಿ ಚತುರಕವಿ ನಿಃಸಹಾಯ ಕವಿ(ಶುಶುಮ್ನ. ೦-೩೨); ಭಾರತೀಪತಿ ಚತುರ ಪರಿಮಿತೋದಾರ ಗಂಭೀರ ಭಾಷಿತಂಗಳಿಂ ಬಿನ್ನವಂಗೆಯ್ಯೆ (ಜಗದಿ. ೬-೬೬ ಪಿನ್ ಬಿಲ್ಲೆ ಗಳನ್ನೂ ಗುಂಡುಗಳನ್ನೂ ಚತುರ ರೀತಿಯಲ್ಲಿ ಜೋಡಿಸುವುದು (ಶಿಕ್ಷದ. ೮೪). ೨. ಚಟುವಟಿಕೆಯುಳ್ಳ ; ಲಗುಬಗೆಯ. (ನಾ). ೩. ದಕ್ಷ ನಾದವನು; ಬಲ್ಲವನು; ಜಾಣ: "ಚತುರಃ . . . ಶಿಕ್ಷಿತಃ, ಪ್ರವೀಣಃ– ಈ ೧೧ ಬಲ್ಲವಂ" (ಹಲಾಯು. ೩೩-೦೮೦); "ಚದುರಂ ಚತುರಂ" (ಶವಿಶಂ. ೨೫೭): ಚತುರರೆರ್ದೆಯಿಂದವಿಂಟೆಯಳ್ . . . ತನ್ನೀ ಕೃತಿಕಾಂತೆ (ಲೀಲಾವ. ೦-೮೦) ; ಚತುರಂ ನೀಱನುದಾರನುಜ್ಜ್ವಲಯಶಂ (ಅನಂಪು. ೧-೩೦). ೪. [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ; ಎಡಗೈಯನ್ನು ಅಲ ಪಲ್ಲವ ಹಸ್ತದಲ್ಲೂ ಬಲಗೈಯನ್ನು ಚತುರ ಹಸ್ತದಲ್ಲೂ ಎದೆಯ ಹತ್ತಿರ ಹಿಡಿದು ಒಂದು ಕಾಲಿನಿಂದ ಉದ್ಘಟ್ಟಿತ ಮಾಡುವುದು : ಎಡಗಯ್ಯಲಪಲ್ಲವ[ಮ]ಂ ಪಡೆದೆರ್ದೆಯಲ್ಲಿರ್ದುದು ಬಲದ ಕೈ ಚತುರಾಖ್ಯಮು ನೊಡರ್ಚುತಲ್ಲುದ್ಘಟ್ಟಿಪಮದೊಡವರ್ಚಿರೆ ಪಾದಮೊಂದು ಕರಣಂ ಚತುರಂ (ಶಾಸ್ತ್ರರಂ. ೪-೯೪). ೫. [ನಾಟ್ಯ] ಒಂದು ಬಗೆಯ ಹಸ್ತಮುದ್ರೆ; ಅಸಂಯುತ ಹಸ್ತಗಳಲ್ಲಿ ಒಂದು : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಅಸಂಯುತ ಹಸ್ತಗಳು ಯಾವುವೆಂದರೆ – ೧. ಪತಾಕ . . . ೧೭. ಚತುರ . . . ೨೪. ತಾಮ್ರಚೂಡ (ಅಧಾನ್ಯ. ೪೪). [ ಸಂ. ]

**ಚತುರಂಗ** (ನಾ). ೧. ನಾಲ್ಕು ಅಂಗಗಳನ್ನುಳ್ಳುದು: ಆಧ್ಯಾನಯೋಗಂ . . . ಧ್ಯಾನಂಧ್ಯೇಯಂ ಧ್ಯಾತೃಫಲಮೆಂದು ಚತುರಂಗವುಕ್ಕುಂ (ಅಜಪು. ೮-೨೬ ಪ). ೨. ನಾಲ್ಕು ಅಂಗಗಳನ್ನುಳ್ಳ ಸೈನ್ಯ; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯದಿಂದ ಕೂಡಿದುದು : ಚತುರಂಗಂ ಚತುರಂಗ ಸೈನ್ಯದೊಳಡು[ರ್ತು]ತಿಟ್ಟನೆಯ್ದಿಂದು ತಾಗಿ (ಹಂಪಿಶಾ. ೧೧-೬) ; ಚತುರಂಗಕ್ಕೆಡರಿಲ್ಲ ರಾಯ ನಿನಗೇನು ಮಾಡುವ ರಾಜಕಾರ್ಯವೆಂದು (ಕ್ರಿಮಿಶಾ. ೨-೩೯). 'ಚತುರಂಗಬಲ' ಪರಾ. ೩. ಚದುರಂಗದ ಆಟ: ಚತುರಂಗ . . . ಕಂತುಕ ದ್ಯೂತಾದಿ ಖೇಲನಗಳಂ (ವಿವೇಕ. ೨೦೪). [ ಸಂ. ( ಚತುರ್ + ಅಂಗ) ]

**ಚತುರಂಗದಂಡಾಸನ** (ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು ೧. ಉತ್ತಾನಾಸನ. ೨. ಚತುರಂಗ ದಂಡಾಸನ (ಧಾರದ. ೧೬೭). [ ಚತುರಂಗ + ದಂಡ + ಆಸನ ]

**ಚತುರಂಗಬಲ** (ನಾ). ಆನೆ, ಕುದುರೆ, ರಥ ಮತ್ತು ಕಾಲಾಳು ಎಂಬ ನಾಲ್ಕು ಅಂಗಳನ್ನುಳ್ಳ ಸೈನ್ಯ : ಚತುರಂಗಬಲ ಸಮನ್ವಿತರ್ . . . ಅವನತರಾದರ್ ಚಕ್ರಿಗಳ್ಗೆ (ಆದಿಪು. ೦೨-೬೩); ಬೆಂಗೊಟ್ಟುದು ದಶಮುಖ ಚತುರಂಗಬಲಂ (ಪಂಪರಾಮಾ. ೦೦-೨೦೭). [ ಚತುರಂಗ + ಬಲ ]

**ಚತುರಂಗುಲ, ಚತುರಂಗುಳ** (ನಾ). ೧. ನಾಲ್ಕು ಅಂಗುಲ: ಚತುರಂಗುಲ ಪ್ರಮಾಣೋಧ್ವೃತ ಮದ್ದಿ ಪ್ರಾಪ್ತರ್ . . . ಕುಂದಾಚಾರ್ಯರ್ (ಶುಶುಮ್ನ. ೦-೦೩); ಚತುರಂಗುಲ ಚಾರಣ ಋದ್ಧಿ ತಮಗೆ ಸಮನಿಸಿದುದು (ಪಂಪರಾಮಾ. ೦-೦೨). **ಚತುರಂಗುಳ**: ೨. ಒಂದು ಬಗೆಯ ಸಸ್ಯ ; ಚಕ್ಕೆ ಗಿಡ: "ಶಮ್ಯಾಕಃ, ಚತುರಂಗುಳಃ . . . ೮ ಕಕ್ಕೇಗಿಡದ ಹೆಸರುಗಳು" (ಸಿದ್ಧಾಂಶಿ. ೦೦೩): ಸರ್ವಾಂಗೀಣ ಸಾಂದ್ರ ಹರಿದ್ರ ವಿಲೇಪನ ವಿಲಿಪ್ತ ಹರಿ ತಾಳಿ ಪಂಕಪಿಂಗಲ ಶಿಲಾಸ್ತಂಭ ವಿಭ್ರಮ ನಿತಂಬ ಶಿಖರೆ ತರಂಗಿತ ಚತುರಂಗುಳಾಗ್ರ ಪಲ್ಲವ ನಿವಸನಂ (ಆದಿಪು. ೦೩-೪೩ ಪ). [ ಸಂ. (ಚತುರ್ + ಅಂಗುಲ) ]

**ಚತುರಂಗುಳ** 'ಚತುರಂಗುಲ' ನೋ.

**ಚತುರಂತ** (ಗು). ೧. ನಾಲ್ಕು ಎಲ್ಲೆಗಳನ್ನುಳ್ಳ; ನಾಲ್ಕುದಿಕ್ಕಿನ ಸಮುದ್ರಗಳೇ ಮೇರೆಯಾದ: ಇಂತು ಚತುರಂತ ಧಾತ್ರೀಕಾಂತೆಯ ನಳವಡಿಸಿ (ಎಕ. VII, ಶಿಕಾರಿ. ೦೩೬-೫; 1068). (ನಾ). ೨. ಪಲ್ಲಕ್ಕಿ; ಅಂದಣ. 'ಚತುರಂತಯಾನ' ಪರಾ. [ಸಂ (ಚತುರ್ + ಅಂತ)]

**ಚತುರಂತಕ್ಷಿತಿ** (ನಾ). ನಾಲ್ಕು ಎಲ್ಲೆಗಳನ್ನುಳ್ಳ ಭೂಮಿ; ನಾಲ್ಕು ಸಮುದ್ರದವರೆಗೆ ಹಬ್ಬಿರುವ ಭೂಮಿ: ಚತುರಂತಕ್ಷಿತಿ ಗರ್ಭಸ್ಥಿತನದು ಗಡಿಮೆಂದು ಮುದ್ರಿಪಂತಾಯ್ತು ಯಶಸ್ಸತಿಯ ಪದನ್ಯಾಸಂ (ಆದಿಪು. ೮-೩೨); ಚತುರಂತಕ್ಷಿತಿಕಾಂತೆ ಕೇಳ್ ಜಲಧಿ ಕೇಳ್ ಸಪ್ತಾರ್ಚಿ ಕೇಳ್ . . . ಪಗೆವನಂ ಕೊಂದೆನ್ನ ಕೋಪಾಗ್ನಿಗಾಹುತಿಯಂ ಮಾಳ್ಪೆಂ (ಗದಾಯು. ೬-೨೩); ಚತುರಂತಕ್ಷಿತಿಭಾರವಾಂ ತಳೆಯಲಾಂ ಸಾರ್ದಿದರ್ಪೋಡಂ (ಚಂದ್ರಪು. ೪-೦೩). [ಚತುರಂತ + ಕ್ಷಿತಿ]

**ಚತುರಂತಯಾನ** (ನಾ). ಪಲ್ಲಕ್ಕಿ; ಅಂದಣ: ಕನ್ನೆಯಂ ನೆರೆಯೆ ಕೈಗೆಯ್ಸಲ್ಕೇಟ್ಟು ಮನುಷ್ಯವಾಹ್ಯಮಪ್ಪ ಚತುರಂತಯಾನವನೇಱಿಸಿ (ಶಾಂತಿಪು. ೪-೪೦ ವ); ಕೇಳು ನೃಪ ಚತುರಂತಯಾನದ ಮೇಲೆ ಕುಳ್ಳಿದ್ದು ಧಯ ಚಾಮರ ಢಾಳಿಸಲು ಶಶಿಯಂತೆ ಧವಳಚ್ಛತ್ರ ಥಳಥಳಿಸೆ (ತಿಮ್ಮ.ಅ. ೪-೯೪). [ಚತುರಂತ + ಯಾನ]

**ಚತುರಕಳ್ಳಿ** 'ಚದರಗಳ್ಳಿ' ನೋ.

**ಚತುರಚೂಡಾಮಣಿ** (ನಾ). ಬುದ್ಧಿವಂತರಲ್ಲಿ ಶ್ರೇಷ್ಠನಾದವನು; ಶ್ರೇಷ್ಠಜ್ಞಾನಿ: ಮಣಿಕೂಟಮೆಂಬ ಶೈಲಾಗ್ರಣಿ ಕಣ್ಕೊಲವಾಯ್ತು ಚತುರಚೂಡಾಮಣಿಯ (ಚಂದ್ರಪು. ೦೯-೩೦). [ಚತುರ+ಚೂಡಾಮಣಿ]

**ಚತುರಣ** (ಗು). ಚೌಕಾಕಾರವಾದ: ಸಂಕಿಯನ ಹಳಿಯನು ಮಾಕಲ ಕಾಯಕನ ಮಗ ಚಿಮೆಯ ನಾಯಕಂಗೆ ಚತುರಣ ಸೀಮೆಯೊಳಗಾಗಿ ಕೊಟ ಪೊಡೆಗೊಡಗಿಯ ಕ್ರಮವೆಂತೆಂದಡೆ (ಎಕ. XVI, ತುಮಕೂ. ೮೫-೦೯; ?). [<ಸಂ. ಚತುರ್ಣ]

**ಚತುರತನ** (ನಾ). ಚಾತುರ್ಯ; ಕುಶಲತೆ; ಬುದ್ಧಿವಂತಿಕೆ: ಚತುರತನದಲಿ ನುಡಿದ ನುಡಿಗಳ ಸತಿಗೆ ಮರುಳಾದವನು (ಶಾಶಿಕಾ. ೧೯-೭).
[ಚತುರ + - ತನ]

**ಚತುರತರ** (ಗು). ಬಹಳ ಚಾತುರ್ಯವುಳ್ಳ: ಸಭಾಸದರೆಲ್ಲರ್ ಮೆಚ್ಚಿ ಚತುರತರ ಚತುರ್ವಿಧ ನರ್ತನಮಂ ಬಿತ್ತರಿಪ ರಂಭಾದಿ ದಿವ್ಯನರ್ತಕಿಯರಿಂ (ಕಬಕ. ೦-೭೯ ವ). [ಸಂ.]

**ಚತುರತೆ** (ನಾ). = ಚತುರತನ: ಜಗತ್ಕಾಂತ ವಚಶ್ಚತುರತೆಯೆಂದಿಂತಿವು ಭಾವಿಸುವೊಡಗ್ಗಳಂಗೆ ನಿಸರ್ಗಂ (ಚಂದ್ರಪು. ೧-೫೪); ಚತುರತೆಯಂ ಕೀರ್ತಿಸುವೊಡಮತಿ ಶ್ರುತಾವಧಿ ವಿಬೋಧಮೊಕವುಳ್ಳುದವು (ಪಾರ್ಶ್ವಪು. ೦೫-೮); ಪರಿಮಿತಾಕ್ಷರತತಿಯೊಳಪರಿಮಿತಾರ್ಥ ರಚನೆಯಲಿ ವಿರಚಿಸುವುದದು ಕವಿಯ ಚತುರತೆ (ಬಸಪು. ೦-೩೨); ನುತ ಸೊಬಗು . . . ಸೌಭಾಗ್ಯದ ಸುಲಕ್ಷಣದಲಿ ಸುಶೀಲದಲಿ ಚತುರತೆಯೊಳನುನಯದಿ ಲೋಕದ ಸತಿಯರನು ಗೆಲಿದುದು (ಜೀವಂತ. ೨-೫೪). [ಸಂ. ಚತುರತಾ]

**ಚತುರತ್ವ** (ನಾ).=ಚತುರತನ: ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂಚಾಶ. ೧೭೮-೭೯). [ಸಂ.]

**ಚತುರಧಿಪತಿ** (ನಾ). ೧. ನಾಲ್ಕು ವಿಭಾಗಗಳ ಅಥವಾ ಜಿಲ್ಲೆಗಳ ಒಡೆಯ,-ಅಧಿಕಾರಿ. ೨. ಚತುರಂಗ ಸೇನೆಯ ಅಧಿಪತಿ.
[ಸಂ. (ಚತುರ್ + ಅಧಿಪತಿ)]

**ಚತುರಭಾವ** (ನಾ). ಚಾತುರ್ಯ; ನೈಪುಣ್ಯ: ಕುಟಿಳ ನೀಳ ಕುಂತಳ ಕಳಾಪೆಯರ ಚತುರಭಾವಕ್ಕೆ ತಾಮುಂ ಸೋಲ್ತು (ಶಾಂತಿಪು. ೮-೩೦ ವ).
[ಚತುರ₂ + ಭಾವ₂]

**ಚತುರವೃತ್ತಿ** (ನಾ). ಜಾಣತನ; ಚಾತುರ್ಯ: ರತಿವನಿತೆಗೆ ವಿಧವತೆಯಂ ಶ್ರುತದೇವಿಗೆ ಚತುರವೃತ್ತಿಯಂ ಮಾಳ್ಪ ತಪಶ್ರುತಮೆರಡುಂ ನಿರುಪಮಮಿಾ ಕ್ಷಿತಿಯೊಳ್ ಶ್ರುತಕೀರ್ತಿದೇವ ಭಟ್ಟಾರಕರ (ಚಂದ್ರಪು. ೦-೩೫). [ಚತುರ₂ + ವೃತ್ತಿ]

**ಚತುರಶೀತಿ** (ನಾ). ಎಂಬತ್ತುನಾಲ್ಕು: ಅಂಭೋದನಿನಾದಂ ಭದ್ರಮಾನಂ ಮನೋಜವಂ ಲಕ್ಷಪ್ರಮಿತಂ (ಆದಿಪು. ೦೦-೨೯); ಚತುರಶೀತಿ ಸಹಸ್ರ ಯೋಜನೋತ್ಸೇಧದೊಳ್ ಕಾಳೋದಕ ಸಮುದ್ರವಿರ್ದುದು (ಅಜಿಪು. ೦೦-೦೩ ವ). [ಸಂ. (ಚತುರ್ + ಅಶೀತಿ)]

**ಚತುರಶ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ. ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. ೩. ಒಪ್ಪವಂತಹ; ಹಿತವಾದ. (ನಾ). ೪. ಚೌಕವಾದುದು; 'ಚೌಕಾಕಾರವಾದುದಂ: ಪಂಚರತ್ನ ಹಿರಣ್ಮಯಂ ಚತುರಶ್ರಂ ಮೂಱುಂ ಯೋಜನದಳವಿಯ ಸಭಾಮಂಟಪಮಂ . . . ತಂದು ಮುಂದಿಟ್ಟು (ಪಂಪಭಾ. ೬-೨ವ); ಶಶಿಹಾಸನಭವನರಸಿಯ ಮುಂದೆ ಚತುರಶ್ರದೊಳ್ಕುಂಡಮಂ ತೆಗಸಿ (ಕ್ಷ್ಮಮಿಥಾ. ೩೦-೬೬). ೫. ಮೇರೆ; ಎಲ್ಲೆ; ಸೀಮೆ: ವಿಚಿತ್ರವಾದ ಬುದ್ಧಿಗೆ ಸುಖದುಃಖಗಳ ಚತುರಶ್ರವನ್ನು ತಿಳಿಯಲು ಸಾಮರ್ಥ್ಯವಿರುವುದರಿಂದ (ಶಾಂಪೂಕ. ೪೭) ೬. [ಸಂಗೀತ] ಒಂದು ಬಗೆಯ ತಾಳ: ಚಂಚತ್ಪುಟ . . . ಚತುರಶ್ರ . . . ಜಯಾಳಮೆಂಬಿವು ಮೊದಲಾದ ನೂಱೆಂಟುತಾಳಂಗಳುಂ (ವಿವೇಕ. ೨೩೮); (೧) ತ್ರಿಶ್ರ (೨) ಚತುರಶ್ರ . . . (೫) ಸಂಕೀರ್ಣ ಈ ಐದು ಜಾತಿಗಳೂ ಲಘುವಿಗೆ ಮಾತ್ರ ಸಲ್ಲುತ್ತವೆ (ಸಂಗೀಜಂ. ೫೬). [ಸಂ. (ಚತುರ್ + ಅಶ್ರ)]

**ಚತುರಸ, ಚದುರಸ** (ನಾ). ಚೌಕೋನ: ಚತು[ಪಾಠಾಂ. ದು]ರಸದೊಳಗಣ ನಿಲವ ಕಾಣಬೇಕು (ಅಮೃಂ. ೦೨೯-೫೦೬). **ಚದುರಸ**: ವಿರೂಪಾಕ್ಷ ದೇವರ ಕೆಯಿಂ ಮೂಡಲಾ ಗಡಿಂಬದಿಂ ಕೆನ್ನೆಲ ಚದುರಸ ಮತ್ತ ೧ (ಸಾಇಇ. IX-1, ೨೫೩-೯೨; 1149); ಎಂಟರಳತೆ ಹದಿನಾಱಱ ಚದುರಸವ ಮೂವತ್ತೆರಡಱ ಮಧ್ಯದಲ್ಲಿ ಹಸ್ತ ಕಂಬಿಯನಿಕ್ಕಿ ಮೂಱಱಲ್ಲಿ ಭಾಗಿಸಲಾಗಿ ಎರಡು ಒಳಗು ನಿಂದಿತ್ತು (ಸರ್ವಪ. ೦೦೯-೬೦೬); ದೆಲ್ಲಕ್ಕೆ ಚದುರಸ [ಪಾಠಾಂ. ಚದುರರಸ] ವಲ್ಲದೆ ಸಿಹಿಗೆ ಚದುರಸ[ಪಾಠಾಂ. ಚದುರರಸ]ಉಂಟೆ (ಅಂದಿವ. ೩೯೦-೪೯). [<ಸಂ. ಚತುರಸ್ರ]

**ಚತುರಸ್ರ** (ಗು). ೧. ನಾಲ್ಕು ಮೂಲೆಗಳುಳ್ಳ; ನಾಲ್ಕು ಕೋಣಗಳುಳ್ಳ; ಚೌಕೋನಾಕಾರದ: ಚತುರಸ್ರಾಷ್ಟಾಸ್ರವೃತ್ತೋದರ ಕುಮುದ ಕಪೋತಾಂಸಕಂಠಗಳಾಲಂಬಿತ ಘಂಟಾಚಾಮರೋಜ್ಜೃಂಭಿತಮಣಿಫಳಕಂಗಳ್ (ಅಜಿಪು. ೦೦-೨೮). ೨. ಕ್ರಮಬದ್ಧವಾದ; ಅಚ್ಚುಕಟ್ಟಾದ. (ನಾ). ೩. ನಾಲ್ಕು ಮೂಲೆಗಳನ್ನು ಉಳ್ಳುದು; ಚೌಕೋನ; ಚೌಕ: ಚತುರಸ್ರಾಶ್ವತ್ಥದಳಪ್ರತಿಮರುಚಿಸ್ಥಗಿತಮಣಿಮರಾಂಗಂ ಶುಭಂ (ಲೋಕೋಪ. ೦೦-೫೩); ಬಳಿಕ ದೇವಿಯ ಮುಂದೆ ಚತುರಸ್ರದಲ್ಲಿ ಅವನು ಕುಂಡವನ್ನು ತೆಗೆಸಿದ (ಬಿದುಕ. ೦೬೩); ಶಿವಲಿಂಗ ಲಕ್ಷಣವನ್ನು . . . . ಆಯಾಯ ಲಿಂಗಗಳಿಗೆ ಆಧಾರವಾಗಿರುವ ಚತುರಸ್ರ, ಅಷ್ಟಾಸ್ರ, ವೃತ್ತಪೀಠಗಳಿಂದ ತಿಳಿಯಬಹುದಾಗಿದೆ (ಭಾರತ. ೭೯). ೪. [ಜ್ಯೋತಿ] ಲಗ್ನದಿಂದ ನಾಲ್ಕನೆಯಂ ಹಾಗು ಎಂಟನೆಯ ರಾಶಿಗಳು: ವ್ಯವಹರಿಪ ಸಂಜ್ಞೆ ಚತುರಸ್ರವದೆಂದಷ್ಟಮ ಚತುರ್ಥಗೃಹಕೆ (ಜಾತತಿ. ೦-೩೪). ೫. [ನಾಟ್ಯ] ಇಪ್ಪತ್ತುಮೂರು ದೇಶೀಯ ಸ್ಥಾನಕಗಳಲ್ಲಿ ಒಂದು: ಪಾದಗಳಿಗೆ ಒಂದೂವರೆ ಗೇಣು ಅಂತರವಿರುವಂತೆ ನಂದ್ಯಾವರ್ತ ಸ್ಥಾನಕಗಳಲ್ಲಿ ನಿಂತುಕೊಳ್ಳುವುದು: ಉರು ನಂದ್ಯಾವರ್ತದೆ ಸಂದಿರು ತೊಗ್ಗೇಣರೆಯನುಳಿದು ನಿಲೆ ಚತುರಸ್ರಂ (ಶಾಸ್ಕರಂ. ೬-೩೯). ೬. ಒಂದು ಬಗೆಯ ಹಸ್ತಮುದ್ರೆ: ಮೂವತ್ತು ನೃತ್ತ ಹಸ್ತಗಳಲ್ಲಿ

ಒಂದು: ಒದವಿದ ಕಟಕಾಮುಖವೆರಡೆರ್ದೆಗಿದಿರಾಗೆಂಟು ಬೆರಲ ತೆಱಂ ನಿಂದಿರ್ದುದೆ ಭುಜಕೆ ಸಮದಿನಿರೆ ಕೇಳ್ ಚದುರೇ ಚತುರಸ್ರಹಸ್ತಮೆಂದನಿಸಿರ್ಕುಂ (ಲಾಸ್ಯರಂ. ೨-೪೫); ಈ ಕೆಳಗೆ ಹೇಳಿರುವ ಹಸ್ತಗಳು ನೃತ್ತಹಸ್ತಗಳು ೧. ಚತುರಸ್ರ ೨. ಉದ್ವೃತ್ತ . . . ೩೦. ವಲಿತ (ಅಭಿನ್ಯ. ೪೯).
[ ಸಂ. (ಚತುರ್ + ಅಸ್ರ) ]

**ಚತುರಸ್ರಂಬೆಱು** (ಕ್ರಿ). ನಾಲ್ಕು ಮೂಲೆಗಳನ್ನು ಪಡೆ ; ಚೌಕವಾಗು : ಚತುರಸ್ರಂಬೆತ್ತ ವೇತ್ರಾಸನವೊಲದುಮಿರ್ಕುಂ (ಶಾಂತೀಶ್ವ. ೦-೬೬).
[ ಚತುರಸ್ರ + ಪೆಱು₁ ]

**ಚತುರಾಂತರ** (ನಾ). ಚೌಕದ ಮಧ್ಯಭಾಗ : ಅರ್ದ್ರಮೃತ್ತಿಕಾವಿರಚಿತಮಪ್ಪ ಚತುರಾಂತರದೊಳ್ ಮಾತ್ತಿನ ಚೌಕದ ನಡುವಣ . . . ದುಗುಲದ ಪಸೆಯೊಳ್ (ಶಂಪಥಾ. ೩-೬೪ ಪ); "ಹಸೆಯ ಜಗುಲಿ" (ಶಂಪದೀ. ೦೨೪). [ ಸಂ. (ಚತುರ್ + ಅಂತರ) ]

**ಚತುರಾಕ್ಷ** (ನಾ). ಜಾಣತನವೇ ಕಣ್ಣಾಗಿರುವವನು ; ಕುರುಡ ; ಭಾನುವಿನ ಭಾರಣೆಯ ಪೋಲುತ್ತಾನಮುಖ ಚತುರಾಕ್ಷ [ಪಾಠಾಂ. ಚತುರಾಂಧ] ಭೂಪನ ಸೂನು ಹೊಕ್ಕನು ರಂಗವನು ಭೀಷ್ಮಾದಿಗಳಿಗೆಱಗಿ (ಕುಮಾ್ಯಆ. ೭-೨೭). [ ಸಂ. (ಚತುರ + ಅಕ್ಷಿ + -) ]

**ಚತುರಾಘಾಟ** (ನಾ). ನಾಲ್ಕು ಎಲ್ಲೆ,-ಗಡಿ,-ಮೇರೆ : ಸರ್ವಬಾಧಾಪರಿಹಾರವಾಗಿ ಬಿಟ್ಟ ಮತ್ತನ್ನೂರಱಯ್ವತ್ತರದಱ ಚತುರಾಘಾಟದ ಸೀಮೆಯಾವುದೆಂದಡೆ (ಸೌಇಇ. XX, ೦೮-೩೭: 980) ; ರಾಮನಾಥದೇವರ ಭೂಮಿಯಿಂ ಪಡುವಲು ಚತುರಾಘಾಟ ಲಿಂಗಮುದ್ರೆಯ ಕಲ್ಲಿನ ಸೀಮೆಯಿಂದೊಳಗೆ (ಕಇ. IV, ೦-೦೦೦ ; 1204).
[ ಸಂ. (ಚತುರ್ + ಆಘಾಟ ) ]

**ಚತುರಾತ್ಮ** (ನಾ). ೧. ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ, ವಾಸುದೇವ ಎಂಬ ನಾಲ್ಕು ರೂಪಗಳನ್ನುಳ್ಳವನು. ೨. ಚುರುಕುಬುದ್ಧಿಯುಳ್ಳವನು ; ಕೌಶಲವನ್ನುಳ್ಳವನು ; ಜಾಣ. ೧, ೨ : ಹರಿಯೆಂಬಾತೆಯು ಕೃಷ್ಣನದಾವನೊ ಚತುರಾತ್ಮನು ಸಲೆ ನಿಷ್ಕ್ರಿಯನು (ಧ್ಯಾನ್ಯೆಶೋ. ೪೬).
[ ಸಂ. ಚತುರಾತ್ಮನ್ (ಚತುರ್ + ಆತ್ಮನ್ ; ಚತುರ + ಆತ್ಮನ್) ]

**ಚತುರಾನನ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ಚತುರಾನನನಂ ಬಿಡಿಸಿದರತಿಶಯಿತಾರ್ಥಮನೆ ತೋಱ ಪದಿಂ (ಪುಷ್ಪಪು. ೦-೩೭) ; ಘನ ರಜೋಗುಣದಲ್ಲಿ ಚತುರಾನನ ತಮೋಗುಣದಲ್ಲಿ ಶಂಕರನೆನಿಸಿ ಸತ್ವಗುಣಾನುಗತಿಯಲಿ ವಿಷ್ಣುವೆಂದೆನಿಸಿ (ಕುಮಾ್ಯಸ. ೯-೩). ೨. ಚಾತುರ್ಯದಿಂದ ಕೂಡಿದ ಬಾಯಿ ಉಳ್ಳವನಂ; ಮಾತಿನಲ್ಲಿ ನಿಪುಣ : ಆ ಸರಸತಿಯಂ ಚತುರಾನನಪರಿಚಿತೆಯೆನಿಸಿದನದೇಂ ಸಮರ್ಥನೊ ಪದ್ಮಂ (ಪುಷ್ಪಪು. ೩-೨); ಅಬ್ಜಭವನಂತೆ ಚತುರಾನನಂ . . . ಎಂದು ಧರ್ಮಜನ ಧರೆ ಪೊಗಳುತಿರೆ (ಕೃಮಿಭಾ. ೨-೦೩) . ೩. ಒಬ್ಬ ಕನ್ನಡ ನಿಘಂಟುಕಾರನ ಹೆಸರು; ಚತುರಾಸ್ಯ ಬೊಮ್ಮರಸ: ಕವಿ ಚತುರಾನನನೆಂದೆನಿಸುವ ನಾಮದೆ . . . ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩). [ ಸಂ. (ಚತುರ್+ಆನನ; ಚತುರ+ಆನನ) ]

**ಚತುರಾಶಿಗಿಡ**(ನಾ). ಒಂದು ಬಗೆಯ ಸಸ್ಯ: ಕಾಡು ಸಬ್ಬಸಿಗೆ, ಚತುರಾಶಿಗಿಡ (ಮೃಶಿಗಿ. ೩೮-೬೫೩). 'ಚೇತರಾಶಿ' ಪರಾ.
[ ಚತುರಾಶಿ₀ + ಗಿಡ (<ಗಿಡು) ]

**ಚತುರಾಶ್ರಮ** (ನಾ). ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸವೆಂಬ ನಾಲ್ಕು ಬಗೆಯ ಆಶ್ರಮಗಳು : ಚಾತುರ್ವರ್ಣ್ಯದ ಕರ್ತವ್ಯಗಳು, ಚತುರಾಶ್ರಮದ ಕರ್ತವ್ಯಗಳು . . . ಉಕ್ತವಾಗಿವೆ (ಭಾರದ. ೬೩). [ ಸಂ. (ಚತುರ್ + ಆಶ್ರಮ) ]

**ಚತುರಾಶ್ರಯ** (ನಾ). ನಾಲ್ಕು ಮೇರೆ,-ಎಲ್ಲೆ : ಶ್ರೀಮಾನು ಮಹಾಮಹಿಮ ಕಪಿಲಸಿದ್ಧಮಲ್ಲೇಶ್ವರ ದೇವರ ಕ್ಷೇತ್ರದ ಚತುರಾಶ್ರಯದ ನಾಲ್ಕುಂ ದೆಸೆಯ ಪಳಿಯದೊಳಗೆ (ಎಇ. XXIII, ೦೯೫-೪೮ ; 1266).
[ ಸಂ. (ಚತುರ್ + ಆಶ್ರಯ) ]

**ಚತುರಾಸೀತಿ** (ನಾ).=ಚತುರಶೀತಿ: ಪೆರ್ಮಟ್ಟಿ ಪಱಿಘೋಷಣಾ ಚತುರಾಸೀತಿ ನಗರಾಧಿಷ್ಠಿತಂ (ಸೌಇಇ. XX, ೪೧-೬ : 1068).
[ <ಸಂ. ಚತುರಶೀತಿ ]

**ಚತುರಾಸ್ಯ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ : ಚತುರಾಸ್ಯಂಗಂ ನೆಗಟ್ದಹಿಪತಿಗಮಳುಂಬಂ (ಜನಾಕ. ೭-೭) ; ಚತುರಾಸ್ಯೇಂದ್ರಾದಿದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರರುದ್ವೃತ್ತತೆಯಂ ಪೇಳ್ವುದುಂ (ಜಗವಿ. ೨-೪೪). ೨ ಸುಂದರವಾದ ಮುಖವುಳ್ಳವನು. ೩. ಜಾಣ್ಮೆಯ ಮಾತನ್ನಾಡುವವನು ; ವಾಕ್ಚತುರ. ೧, ೨, ೩ : ಈ ಮಹಾ ಪುರುಷಂ . . . ಚತುರಾಸ್ಯನಾಗಿಯುಂ ಹಿರಣ್ಯಗರ್ಭನಲ್ತು (ಜಗವಿ. ೮-೦೦ ಪ). ೨, ೩ : ಆ ಜನೇಶ್ವರಂ . . . ಚತುರಾಸ್ಯನುಮಚ್ಯುಯನುಮಕ್ಷಿಸ್ಪಂದವ್ಯಪೇತನುಂ . . . ಗಗನಗಮನನಮಾಗಿ (ಸುಕುಮಾ. ೮-೬೯ ಪ) ; ಚತುರಾಸ್ಯನತುಳಮತಿಯಿಂ . . . ನೆಗಟ್ದಂ ಚತುರ್ಗುಣಂ ಸಕಳ ರಾಜನೀತಿಯೊಳ್ (ಪಾರ್ಶ್ವಪು. ೭-೯೮). ೪. =ಚತುರಾನನ ೩ : ಅಚ್ಚಗನ್ನಡ ವಿವರಣೆ ಚೆಲ್ವಾಗೆ ರಚಿಸಿದಂ ಚತುರಾಸ್ಯಂ (ಚತುನಿ. ೩).
[ ಸಂ. (ಚತುರ್ + ಆಸ್ಯ; ಚತುರ + ಆಸ್ಯ) ]

**ಚತುರಾಸ್ಯತೆ** (ನಾ). [ಜೈನ] ಕೇವಲಜ್ಞಾನಿಯಾದವನಿಗೆ ಉಂಟಾಗುವ ಹತ್ತು ಅತಿಶಯಗಳಲ್ಲಿ ಒಂದು ; ಒಮ್ಮೆಲೆ ನಾಲ್ಕು ಕಡೆಯಂೂ ನೋಡುವ ಶಕ್ತಿ : ಚತುರ ಚತುರಾಸ್ಯತೆ . . . ಗತಚ್ಛಾಯತೆಯಿವೀರೈದತಿಶಯವು ಜನನ (ಸಾಳ್ವಭಾ. ೬೦-೬೪). [ ಸಂ. ಚತುರಾಸ್ಯತಾ ]

**ಚತುರಾಸ್ಯತ್ವ** (ನಾ).=ಚತುರಾಸ್ಯತೆ : ಚತುರಾಸ್ಯತ್ವಮಭುಕ್ತಿಭಾವಮನಿಮೇಷತ್ವಂ . . . ಅಚ್ಛಾಯತೆಯೆಂಬ ಪತ್ತತಿಶಯಂ ತೀರ್ಥೇಶನೊಳ್ ಶೋಭಿಕುಂ (ಚಂದ್ರಪು. ೦೫-೦೦೩). [ ಸಂ. ]

**ಚತುರಾಸ್ಯಪ್ರಿಯೆ** (ನಾ). ಸರಸ್ವತಿ : ಪುಸ್ತಕಹಸ್ತಾನ್ವಿತೆ ಪುಣ್ಯಕಥೆಯನೊರ್ವಳೆ ಚತುರಾಸ್ಯಪ್ರಿಯೆ ಸುರಾಗದಿಂ ವಾಚಿಸಿದಳ್ (ಪುಷ್ಪಪು. ೯-೮೬).
[ ಚತುರಾಸ್ಯ + ಪ್ರಿಯೆ ]

**ಚತುರಿಂದ್ರಿಯ** (ನಾ). ೧. ನಾಲ್ಕು ಬಗೆಯ ಇಂದ್ರಿಯಗಳು ; ಕಣ್ಣು, ಮೂಗು, ನಾಲಗೆ ಮತ್ತು ಚರ್ಮ. ೨. (ಕಿವಿಯನ್ನುಳಿದು) ನಾಲ್ಕು ಇಂದ್ರಿಯಗಳನ್ನು ಮಾತ್ರ ಹೊಂದಿರುವ ಜೀವಿ : ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಸಮನ್ವಿತಂಗಳಪ್ಪ ಮಧುಕರಾದಿ ಚತುರಿಂದ್ರಿಯಂಗಳ್ (ಆದಿಪು. ೦೬-೬೦ಪ); ದಂಶಮಶಕ ಮಕ್ಷಿಕಾ ಭ್ರಮರ ಪತಂಗಾದಿ ಚತುರಿಂದ್ರಿಯಂಗಳ್ ಸ್ಪರ್ಶನ ರಸನ ಘ್ರಾಣ ಚಕ್ಷುರಿಂದ್ರಿಯ ಪರಿಚ್ಛಿತ್ತ್ಯಪೇತಂಗಳಪ್ಪುವು (ತತ್ತ್ವಸೂ. ೪೮). [ ಸಂ. (ಚತುರ್ + ಇಂದ್ರಿಯ) ]

**ಚತುರಿಕೆ₁** (ನಾ). ಚಾತುರ್ಯ ; ಚದುರು ; ನೈಪುಣ್ಯ : ತತವಿತತಘನಸುಷಿರ ವಾದ್ಯದ ಚತುರಿಕೆಗೆ . . . ನಲಿದು ನರ್ತಿಪುದು (ಸಾಳ್ವಭಾ. ೬೦-೫೦); ಅಥವನಂ ಜಱೆವ ಚತುರಿಕೆಯ ಮಾತುಗಳನು ಸೊಲ್ಲುಸೊಲ್ಲೆಂದು ಮೂದಲಿಸುತುಂ (ಚಲಪು. ೩೩-೨೨). [ ಚತುರ₂ + - ಇಕೆ ]

**ಚತುರಿಕೆ₂** (ನಾ). ೧. ಚತುರೆಯಾದವಳು ; ಜಾಣೆ. ೨. [ಕಾವ್ಯಮೀ] ನಾಯಿಕೆಯ ನಾಲ್ಕು ಬಗೆಯ ಪರಿಚಾರಿಕೆಯರಲ್ಲಿ ಒಬ್ಬಳು : ಇತ್ತ ಚತುರ ಚತುರಿಕೆಯರಪ್ಪ ಪರಿಚಾರಕಿಯರುಂ . . . ಮಂಗಳವಸದನಂಗೊಳಿಸಲವಸರಂಬಡೆದು (ಪುಷ್ಪಪು. ೮-೫೩ ಪ) ; ಅಭಿಸಾರಿಕೆ, ಚತುರಿಕೆ, ಸಹಸಂಚಾರಿಕೆ, ದೂತಿಕೆಯರೆಂಬ ಚತುರ್ವಿಧ ಸಖಿಯರಿಂ (ವಿವೇಕ. ೨೨೯).
[ ಸಂ. ಚತುರಿಕಾ ]

**ಚತುರುಪಧಾವಿಶುದ್ಧ** (ಗು). ೧. ಧರ್ಮ, ಅರ್ಥ, ಕಾಮ, ಭಯ ಈ ನಾಲ್ಕು ವಿಷಯಗಳಲ್ಲಿ ಮಾಡಿದ ಪರೀಕ್ಷೆಗಳಿಂದ ಪರಿಶುದ್ಧನೆಂದು ನಿರ್ಣಯಿಸಲ್ಪಟ್ಟ : ಚತುರುಪಧಾವಿಶುದ್ಧಮತಿಚಿತ್ರಭವ ಪ್ರತಿರೂಪ ಸುಂದರಾಕೃತಿ . . . ಕಸವಯ್ಯನಾಯಕನೊಳೆಯ್ದೆ ಜಗನ್ನುತಿವೆತ್ತು ಕೋಟುಗುಂ (ಎಕ. XI, ದಾವಣ. ೪೨-೪೩ ; ಕ್ರಿ. 1162) : "ರಾಜಭಕ್ತಿ, ಅಸ್ವಾರ್ಥಪರತೆ, ಜಿತೇಂದ್ರಿಯತ್ವ, ಧೈರ್ಯ-ಈ ಗುಣಗಳಲ್ಲಿ ಪರೀಕ್ಷಿತವಾಗಿ ಶುದ್ಧವಾಗಿರುವ" (ಶಾಕಮು. ೬೮೧ ಟಿಪ್ಪಣಿ). (ನಾ). ೨. ಮೇಲಿನ ಪರೀಕ್ಷೆಗಳಿಂದ ಶುದ್ಧನೆಂದು ನಿರ್ಣಯಿಸಲ್ಪಟ್ಟವನು : ಚತುರುಪಧಾವಿಶುದ್ಧನುಂ ಬುದ್ಧಿವೃದ್ಧನುಂ . . . ಭದ್ರಮೂರ್ತಿಯುಮಪ್ಪ ವಸುಭಾಗಭಟ್ಟನಿಂತೆಂದಂ (ಪಂಚತಂ. ೦೬-೦೩) : ಚತುರುಪಧಾವಿಶುದ್ಧನನವದ್ಯಚರಿತಂ . . . ನೃಪನೇಂ ವಿವೇಕಿಯೋ (ಕೃಷ್ಣಕ. ೩-೬೩) : ಚತುರುಪಧಾವಿಶುದ್ಧನಧಿಕಾರಿ ಕಳಾವಿದಂ (ಸುಕುಮಾ. ೧೬-೫೪)..

[ ಸಂ. (ಚತುರ್ + ಉಪಧಾ + ವಿಶುದ್ಧ) ]

**ಚತುರುಪಧಾಶುದ್ಧಿ** (ನಾ). ಧರ್ಮ, ಅರ್ಥ, ಕಾಮ, ಭಯಂಗಳೆಂಬ ನಾಲ್ಕು ಬಗೆಯ ಗುಣಗಳಲ್ಲಿ ಪರೀಕ್ಷಿತನಾಗಿ ಶುದ್ಧಿಹೊಂದುವಿಕೆ : ವಿದಿತಂ ಪಂಚಾಂಗಮಂತ್ರಸ್ಥಿತಿ ಚತುರುಪಧಾಶುದ್ಧಿ ಸಿದ್ಧಿತ್ರಯಾ ಸಂಪದಮಾ ಷಾಡ್ಗುಣ್ಯವೃತ್ತಂ (ಚಂದ್ರಪ್ರ. ೯-೦೧೬).

[ ಸಂ. (ಚತುರ್ + ಉಪಧಾ + ಶುದ್ಧಿ) ]

**ಚತುರುಪಾಯ** (ನಾ). (ಕಾರ್ಯಸಾಧನೆಗೆ ಪ್ರಯೋಗಿಸಲಾಗುವ) ನಾಲ್ಕು ಬಗೆಯ ಉಪಾಯಗಳು; ಸಾಮ, ದಾನ, ಭೇದ, ದಂಡ: ವಿದಿತಂ . . . ಚತುರ ಚತುರುಪಾಯಪ್ರಯೋಗಂ (ಚಂದ್ರಪ್ರ. ೯-೦೦೬).

[ ಸಂ. (ಚತುರ್ + ಉಪಾಯ) ]

**ಚತುರೋಕ್ತಿ** (ನಾ). ಚಾತುರ್ಯದ ಮಾತು; ಚಮತ್ಕಾರಪೂರ್ಣವಾದ ಮಾತು : ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗನ್ನಾ. ೦-೮) ; ನಾಗರಿಕನುಕ್ತಿಗೆ ಚತುರೋಕ್ತಿ ಚತುರ್ಮುಖಂ ಮೆಚ್ಚುತ್ತುಂ ಪೋಗೆ (ಚಂದ್ರಪ್ರ. ೮-೬೨ ವ).

[ ಚತುರ~ + ಉಕ್ತಿ ]

**ಚತುರೋಪಾಯ** (ನಾ). ೧. = ಚತುರುಪಾಯ: "ಕೊಟ್ಟು ಕೊಳ್ವುದು ದಾನಮೆನಿಸಿಕ್ಕು ವೈರಮಂ ಪುಟ್ಟಿಸಲು ಭೇದಮೆನಿಸಿಕ್ಕು ಶಿಕ್ಷಿಸಲೊಡಂಬಟ್ಟೊಡದು ದಂಡಮೆನಿಸಿಕ್ಕು ಸೈರಣೆ ಸಾಮಮಕ್ಕು ಕಾವಿಂತಿವೆಯ್ದೆ ಮುಟ್ಟೆ ಚತುರೋಪಾಯಮಕ್ಕುಂ" (ಮಂಗರಾ. ೭೯-೬) : ಉಗ್ರಪಂಚಾನನಂ ಗೆಲ್ವ ಚತುರೋಪಾಯಮಂ ಬಿಟ್ಟು ಕಾನಳ್ಕಿ ಬಳ್ಕಿ ಕಡುದೈನ್ಯದಿಂದೀಗ ಮುಗ್ಧಾಂಗಮಂ ತಳೆದಿರ್ಪುದು ವಿನಿದಚ್ಚರಿಯೆಂದು (ಕೃಮಿಥಾ. ೬-೨೮). ೨. ನಾಲ್ಕು ಬಗೆಯ ಉಪಾಯಗಳನ್ನು ಬಲ್ಲವನು : ಸುರಪುರನಿಲಯ ಚೆನ್ನಿಗರಾಯ ಚತುರೋಪಾಯ ರಕ್ಷಿಸು ಪಮ್ಮನನವರತ (ಹರಿಕಾ. ೦). [ <ಸಂ. ಚತುರುಪಾಯ ]

**ಚತುರ್ಗತಿ** (ನಾ). ೧. ನಾಲ್ಕುಗತಿ ; ನಾಲ್ಕು ಅವಸ್ಥೆ. ೨. [ಜೈನ] ದೇವ, ಮನುಷ್ಯ, ತಿರ್ಯಕ್, ನಾರಕ ಎಂಬ ನಾಲ್ಕು ವಿಧವಾದ ಜನ್ಮಗಳಂ: ತಪಃಪೋತದಿನಣ್ಣ ನೀಂ ತಡಿಯನೆಯ್ದಂತಲ್ಲದಿಂತೀ ಚತುರ್ಗತಿ ಸಂಸಾರ ಪಯೋಧಿಯಂ ಪೊಱಮಡಲ್ ಮತ್ತಿಲ್ಲ ನೀನಾರ್ತಪಯ್ (ಆದಿಪು. ೩-೫೬) : ಇನ್ನೆವರಂ ಚತುರ್ಗತಿಗಳೊಳ್ತಿರಿತಂದು ಜವಂಗೆ ಪೇಡಿಯಾದೆಂ (ಮಲ್ಲಿಪು. ೧೩-೯೨). [ ಸಂ. (ಚತುರ್ + ಗತಿ) ]

**ಚತುರ್ಗುಣ** (ನಾ). ೧. ನಾಲ್ಕುಮಡಿ,-ಪಟ್ಟು. 'ದ್ವಿಗುಣ' ಪರಾ. ೨. [ದ್ವೈತ] ಸತ್, ಚಿತ್, ಆನಂದ, ಆತ್ಮ ಎಂಬ ಭಗವಂತನ ನಾಲ್ಕು ಗುಣಗಳಂ. 'ಚತುರ್ಗುಣೋಪಾಸಕ' ಪರಾ.

[ ಸಂ. (ಚತುರ್ + ಗುಣ) ]

**ಚತುರ್ಗುಣಿತ** (ಗು). ನಾಲ್ಕರಿಂದ ಗುಣಿಸಿದ ; ನಾಲ್ಮಡಿಯಾದ : ಆ ಸಂಕಟಸಮಯದಲ್ಲೂ ಅವನು ದ್ವಿಗುಣಿತ ಚತುರ್ಗುಣಿತ ಬಲಿಷ್ಠನಾದನು (ಅಂಬಿಕ. ೦೦೫). [ ಸಂ. (ಚತುರ್ + ಗುಣಿತ) ]

**ಚತುರ್ಗುಣೋಪಾಸಕ** (ನಾ). [ದ್ವೈತ] ಭಗವಂತನ ನಾಲ್ಕು ಗುಣಗಳನ್ನು ಉಪಾಸನೆ ಮಾಡುವವನು : ಮನುಷ್ಯೋತ್ತಮರು ಚತುರ್ಗುಣೋಪಾಸಕರು (ಹಿಂದಸಾ. ೨೯೦).

[ ಚತುರ್ಗುಣ + ಉಪಾಸಕ ]

**ಚತುರ್ಗ್ರಾಮ** (ನಾ). ನಾಲ್ಕು ಹಳ್ಳಿಗಳು ; ಚೌಗಾವೆ.

[ ಸಂ. (ಚತುರ್ + ಗ್ರಾಮ) ]

**ಚತುರ್ಜಾತಕ** (ನಾ). [ವೈದ್ಯ] ದಾಲ್ಚಿನ್ನಿ, ಏಲಕ್ಕಿ, ನಾಗಕೇಸರಿ, ಪಾಪತ್ರೆ ಎಂಬ ನಾಲ್ಕು ಔಷಧಿದ್ರವ್ಯಗಳು : ೨ ಹಲಹಿಪ್ಪಲಿ. ತವಕ್ಷೀರ ೪ ಹಲ, ಚತುರ್ಜಾತಕ ೧ ಹಲ ಜೇನುತುಪ್ಪ ೬ ಹಲ ಸಹ ಹಾಕಿ ಕಲಸಿ ಸೇವಿಸಲು ಕ್ಷಯವ್ಯಾಧಿ . . . ಗುಣಮಕ್ಕು (ಸಕವ್ಯ. ೨೫೮). [ ಸಂ. ]

**ಚತುರ್ಜ್ಞಾನ** (ನಾ). [ಜೈನ] ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಾಯಂಗಳೆಂಬ ನಾಲ್ಕು ಬಗೆಯ ಜ್ಞಾನಗಳು : ಅಂತೊಗೆದ ಚತುರ್ಜ್ಞಾನದೊಳಾವಗಮೆಸೆದು ಜ್ಞಾನರೂಪನಾದಿಬ್ರಹ್ಮಂ (ಆದಿಪು. ೯-೫೮); ದೇದೀಪ್ಯಮಾನ ಪ್ರಭಾಭಾಸುರಗಾತ್ರಂ ಚತುರ್ಜ್ಞಾನನೇತ್ರರಂ . . . ಕಂಡು (ಸುಕುಮಾ. ೮-೪೮ ವ). [ ಸಂ. (ಚತುರ್ + ಜ್ಞಾನ) ]

**ಚತುರ್ಣಿಕಾಯ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಯ ಮತ್ತು ಕಲ್ಪವಾಸಿಗಳೆಂಬ ನಾಲ್ಕು ಪ್ರಕಾರದ ದೇವತೆಗಳ ಸಮೂಹ : ಅಮರಪತಿ ಚತುರ್ಣಿಕಾಯಾಮರೇಂದ್ರಪರಿವೃತಂ ಬಂದು (ಮಲ್ಲಿಪು. ೦೩-೦೬೫). [ <ಸಂ. ಚತುರ್ನಿಕಾಯ ]

**ಚತುರ್ಥ** (ಗು). ೧. ನಾಲ್ಕನೆಯ. 'ಚತುರ್ಥಾಂಶ' ಪರಾ. (ನಾ). ೨. ನಾಲ್ಕನೆಯ ವರ್ಣಕ್ಕೆ ಸೇರಿದವನು ; ಶೂದ್ರ : ಈ ಕೆಜಿಗೆ ಸಂಸ್ಕಾರ ಜಲಶುದ್ಧಿ ದೊರಕದು ಚತುರ್ಥನಿದನಗೆದಾತಂ (ಸಿದ್ಧರಾ. ೪-೬೫).

[ ಸಂ. ]

**ಚತುರ್ಥಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಬಗೆಯ ಧ್ಯಾನಗಳಲ್ಲಿ ಕೊನೆಯದು ; ಶುಕ್ಲಧ್ಯಾನ : ಧ್ಯಾನಾನಳದಗ್ಧ ಶೇಷಾಶೇಷ ಕರ್ಮೇಂಧನನುಮಾಗಿ (ಆದಿಪು. ೦೬-೭೪ ವ).

[ ಚತುರ್ಥ + ಧ್ಯಾನ ]

**ಚತುರ್ಥಸ್ನಾನ** (ನಾ). ಮುಟ್ಟಾದವಳು ನಾಲ್ಕನೆಯ ದಿನ ಮಾಡುವ ಸ್ನಾನ : ಮರುದೇವಿ ಮಹಾದೇವಿ ಚತುರ್ಥಸ್ನಾನದೊಳ್ ಕಲ್ಪದ್ರುಮ ದುಕೂಲವಸನೆಯುಂ . . . ಆಗಿ (ಆದಿಪು. ೬-೨೬ ವ) ; ದೇವಕಿದೇವಿ ಪುಷ್ಪವತಿಯಾಗಿ ಚತುರ್ಥಸ್ನಾನಾನಂತರಂ ಮಂಗಳ ಪ್ರಸಾಧನಮನಪ್ಪುಕೆಯ್ದು (ಜಗನ್ನಾ. ೨-೫೯). 'ನಾಲ್ನೀರ್' ಪರಾ.

[ ಚತುರ್ಥ + ಸ್ನಾನ ]

**ಚತುರ್ಥಾಂಶ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ : ನಕ್ಷತ್ರ ತಾರಾಗಣಕ್ಕೆಯುತ್ಕೃಷ್ಟದಿಂ ಪಲ್ಯೋಪಮ ಚತುರ್ಥಾಂಶಂ ಜಘನ್ಯದಿಂ ಪಲ್ಯೋಪಮಾಷ್ಟಮ ಭಾಗಮಕ್ಕುಂ (ಸುಕುಮಾ. ೦೦-೫೯ ವ).

[ ಚತುರ್ಥ + ಅಂಶ ]

**ಚತುರ್ಥಿ** (ನಾ). ೧. ಚಾಂದ್ರಮಾನ ಮಾಸದ ಒಂದು ಪಕ್ಷದಲ್ಲಿ ನಾಲ್ಕನೆಯ ತಿಥಿ ; ಚೌತಿ : ಷಷ್ಠಿ ಅಷ್ಟಮಿ ನವಮಿ ಪಾಡ್ಯ ಚತುರ್ಥಿ ಪೌರ್ಣಮಿ ಅಮಾವಾಸ್ಯೆ ಈಸು ತಿಥಿಗಳು ಅಶುಭ (ಗಗಶಾ. ೪-೬೬). ೨. [ವ್ಯಾಕ] ನಾಮ ವಿಭಕ್ತಿಗಳಲ್ಲಿ ನಾಲ್ಕನೆಯದು : ನಿನಗೆ ಯೆನಗೆ ತನಗೆಯೆಂಬೀ ನುಡಿ ಚತುರ್ಥಿಯೊಳ್ (ಶಾಬ್ದ್ಯಾವ. ೦೫೨) : ನುತಸಂಪ್ರದಾನ ರೂಢಂ ಚತುರ್ಥಿ (ಶಮದ. ೦೨೯). [ ಸಂ. ಚತುರ್ಥೀ ]

**ಚತುರ್ದಂಡಿ** (ನಾ). [ಸಂಗೀತ] ನಾಲ್ಕು ಬಗೆಯ ಸಂಗೀತ ರಚನೆಗಳು : ಗೀತ, ಆಲಾಪ, ಠಾಯ ಮತ್ತು ಪ್ರಬಂಧ ಎಂದು ನಾಲ್ಕು ವಿಧ ರಚನೆಗಳನ್ನು ತಿಳಿಸಿ ಇವನ್ನು 'ಚತುರ್ದಂಡಿ' ಎಂದು ವೆಂಕಟಮುಖಿ ಕರೆದಿದ್ದಾನೆ (ಸಂಗೀತಶಂ. ೬೦). [ ಸಂ. ಚತುರ್ದಂಡೀ ]

**ಚತುರ್ದಂತ** (ನಾ). ೧. ನಾಲ್ಕು ಹಲ್ಲು : ಗಿಲ್ದುನಂಗರಚತುಯಿಂದ್ರ ರಾವಣನುಂ ಕುಮಾರಚೂಡಾಮಣಿ ರಾಲಾಜಲದೊಳಂ ಚತುರ್ದಂತದೊಳಂ (ಶಂರಾಮಾ. ೩-೧೩೦). ೨. ನಾಲ್ಕು ಕೋರೆಗಳನ್ನುಳ್ಳದು ; ಐರಾವತ : ಲಲಿತಾಂಗುಲಿ ಭಾಸುರಭದ್ರ ಲಕ್ಷಣಾಲಂಕೃತಂ ಚತುರ್ದಂತಂ (ಆದಿಪು. ೫-೩೬). [ ಸಂ. (ಚತುರ್ + ದಂತ) ]

**ಚತುರ್ದಶ** (ಗು). ೧. ಹದಿನಾಲ್ಕನೆಯ. (ನಾ). ೨. ಹದಿನಾಲ್ಕು : ವೃಷಭಾದ್ರಿಗಳಿಂದಂ ಚತುರ್ದಶ ಮಹಾಮೋಹನಗಳಿಂದಮೆಸೆದು (ಆದಿಪು. ೦-೫೮ ವ). [ ಸಂ. ಚತುರ್ದಶನ್ (ಚತುರ್ + ದಶನ್) ]

**ಚತುರ್ದಶಧರೆ** (ನಾ). = ಚತುರ್ದಶಲೋಕ : ಜೀವಾಂತರಾತ್ಮ ಪರಮಾತ್ಮ ಚೇತನರೂಪ ಪಾವನ ಚತುರ್ದಶಧರಾಜನಾಧೀಶ (ವೀಶ್ವಪು. ೯-೬-೨). [ ಚತುರ್ದಶ + ಧರೆ ]

**ಚತುರ್ದಶಪದಿ** (ನಾ). [ಛಂದ] ಹದಿನಾಲ್ಕು ಚರಣಗಳನ್ನುಳ್ಳ ಒಂದು ಬಗೆಯ ಪದ್ಯ ; ಸುನೀತ ; ಇಂಗ್ಲಿಷಿನ ಸಾನೆಟ್‌ರೂಪದ ಪದ್ಯ : ಈವರೆಗೆ ಕೆಲಕೆಲವು ಭಾವಗೀತಗಳನ್ನೂ ಚತುರ್ದಶಪದಿಗಳನ್ನೂ . . . ರಚಿಸಿಲ್ಲದುದರಿಂದ (ಹಕ್ಕಿ. ಕ. ಆ. ಮುನ್ನುಡಿ) [ ಸಂ. ಚತುರ್ದಶಪದೀ ]

**ಚತುರ್ದಶಪೂರ್ವ** (ನಾ). [ಜೈನ] ಶ್ರುತಾಂಗಗಳ ವಿವರಣೆಗಳನ್ನು ಕೊಡುವ – ಉತ್ಪಾದ, ಅಗ್ರಾಯಣೀಯ, ವೀರ್ಯಪ್ರವಾದ, ಅಸ್ತಿನಾಸ್ತಿಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣ, ಪ್ರಾಣಾವಾಯ, ಕ್ರಿಯಾವಿಶಾಲ, ಲೋಕಬಿಂದುಸಾರ ಎಂಬ ಹದಿನಾಲ್ಕು ಪೂರ್ವಗ್ರಂಥಗಳು : ಗುರುವಿನನುಮತದಿಂ ದ್ವಾದಶಾಂಗ ಚತುರ್ದಶಪೂರ್ವಂಗಳಂ ಕಲ್ತು (ಆದಿಪು. ೦೪-೦೩೯ ವ) ; ದ್ವಾದಶಾಂಗ ಚತುರ್ದಶಪೂರ್ವಮಂ . . . ಕಲ್ತು (ಶಾಂತಿಪು. ೯-೦೦೩ ವ). [ ಚತುರ್ದಶ + ಪೂರ್ವ ]

**ಚತುರ್ದಶಭುವನ** (ನಾ). = ಚತುರ್ದಶಲೋಕ : ಈ ಚತುರ್ದಶಭುವನವ ಬೆಲೆಯನಿವ ಕೃತಿಯನವಲೋಕೃತಿಯಂ (ಅರ್ಧನೇ. ೦-೪೬) ; ಇಕ್ಷ್ವಾಕು ವಂಶದೊಳಗಣ ಚತುರ್ದಶ ಭುವನಪತಿಗಳೊಳಗಿಂದುತನಕಾನಜಿಯೊ ಹುಸಿ ಹೊದ್ದದವರಿಲ್ಲ (ಹಕೌ. ೨-೬) ; ಏಕಾಂತರಾಮನನಂತತೇಜೋಮಹಿಮೆಯದು ಲೋಕಾಂತವಾಯಿತ್ತೀ ಚತುರ್ದಶಭುವನಮಧ್ಯದಲಿ (ಬಸಪು. ೫೨-೪೫) ; ಈ ಕಾಳಿಗ ಚತುರ್ದಶಭುವನಜನ ಸಂಕ್ಷೋಭವಾಯ್ತೆಂದ (ಕುಮಾ. ೪. ೨೨-೧೧) [ ಚತುರ್ದಶ + ಭುವನ ]

**ಚತುರ್ದಶಮನು** (ನಾ). ೧. ಸ್ವಾಯಂಭುವ, ಸ್ವಾರೋಚಿತ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಸಾವರ್ಣಿ, ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ ಮತ್ತು ಇಂದ್ರಸಾವರ್ಣಿ ಎಂಬ ಹದಿನಾಲ್ಕು ಜನ ಮನುಗಳು. ೨. [ಜೈನ] ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲವಾಹನ, ಚಕ್ಷುಷ್ಮಂತ, ಯಶಸ್ವಿ, ಅಭಿಚಂದ್ರ, ಚಂದ್ರಾಭ, ಮರುದ್ದೇವ, ಪ್ರಸೇನಜಿತು, ನಾಭಿರಾಜ ಎಂಬ ಹದಿನಾಲ್ಕು ಮನುಗಳು : ಅಜ್ಞಾನತ್ರಯರಹಿತರ್ . . . ಅಧಿಕಪ್ರಜ್ಞರ್ ಪುಟ್ಟುವರೀ ನೆಲನಾಡಜ್ಞಾಮುದ್ರಿತಮೆನಲ್ ಚತುರ್ದಶ ಮನುಗಳ್ (ಶಂರಾಮಾ. ೦-೬೪). 'ಕುಲಂಕರ' ನೋಡಿ. [ ಚತುರ್ದಶ + ಮನು ]

**ಚತುರ್ದಶಮಾರ್ಗಣೆ** (ನಾ). [ಜೈನ] ಜೀವಸಮಾಸದಲ್ಲಿ ಉಂಟಾಗುವ ವಿವಿಧ ರೂಪಗಳನ್ನು ವಿವರಿಸುವ ಹದಿನಾಲ್ಕು ವಿಭಾಗ ; ಗತಿ, ಇಂದ್ರಿಯ, ಕಾಯ, ಯೋಗ, ವೇದ, ಕಷಾಯ, ಜ್ಞಾನ, ಸಂಯಮ, ದರ್ಶನ, ಲೇಶ್ಯಾ, ಭವ್ಯ, ಸಮ್ಯಕ್ತ್ವ, ಸಂಜ್ಞಾ, ಆಹಾರ ಎಂಬ ಹದಿನಾಲ್ಕು ಮಾರ್ಗಣಗಳು : ಗತೀಂದ್ರಿಯ ಕಾಯ ಯೋಗ ವೇದ ಕಷಾಯ ಜ್ಞಾನ ಸಂಯಮ ದರ್ಶನ ಲೇಶ್ಯಾ ಭವ್ಯ ಸಮ್ಯಕ್[ಕ್ತ್ವ] ಸಂಜ್ಞಾಹಾರಗಳೆಂಬ ಚತುರ್ದಶ ಮಾರ್ಗಣೆಗಳೊಳಂ . . . ಸುಖಿವ ಜೀವಂಗಳೆಲ್ಲಂ ಸಂಸಾರಿ ಜೀವಂಗಳೆಂಬುವಕ್ಕು (ಜೀವಶಂ. ೩-೭ ವ). [ ಚತುರ್ದಶ + ಮಾರ್ಗಣೆ ]

**ಚತುರ್ದಶರತ್ನ** (ನಾ). (ಸಮುದ್ರ ಮಂಥನದಿಂದ ಹುಟ್ಟಿದ) ಲಕ್ಷ್ಮಿ, ಕೌಸ್ತುಭ, ಪಾರಿಜಾತಕ, ಸುರೆ, ಧನ್ವಂತರಿ, ಚಂದ್ರ, ಕಾಮಧೇನು, ಐರಾವತ, ರಂಭೆ ಮೊದಲಾದ ಅಪ್ಸರೆಯರು, ಉಚ್ಚೈಶ್ರವಸ್ಸು, ವಿಷ, ಶಂಖ, ಅಮೃತ, ಹರಿಧನುಸ್ಸು ಎಂಬ ಹದಿನಾಲ್ಕು ರತ್ನಗಳು. ೨. [ಜೈನ] ಗೃಹಪತಿ, ಸೇನಾಪತಿ, ಶಿಲ್ಪಿ, ಪುರೋಹಿತ, ಸ್ತ್ರೀ, ಆನೆ, ಕುದುರೆ, ಚಕ್ರ, ಖಡ್ಗ, ಛತ್ರ, ದಂಡ, ಮಣಿ, ಚರ್ಮ, ಕಾಕಿಣಿ ಎಂಬ, ಚಕ್ರವರ್ತಿಗೆ ದೊರೆಯುವ ಏಳು ಜೀವ ರತ್ನಗಳು ಮತ್ತು ಏಳು ಅಜೀವ ರತ್ನಗಳು. 'ಅಜೀವರತ್ನ', 'ಜೀವರತ್ನ' ನೋಡಿ. [ ಚತುರ್ದಶ + ರತ್ನ ]

**ಚತುರ್ದಶಲೋಕ** (ನಾ). ಹದಿನಾಲ್ಕು ಲೋಕಗಳು ; ಭೂ, ಭುವ, ಸುವ, ಮಹ, ಜನ, ತಪ, ಸತ್ಯ ಎಂಬ ಏಳು ಮೇಲಿನಲೋಕಗಳು ಮತ್ತು ಅತಲ, ವಿತಲ, ಸುತಲ, ತಲಾತಲ, ಮಹಾತಲ, ರಸಾತಲ, ಪಾತಾಲವೆಂಬ ಏಳು ಕೆಳಲೋಕಗಳು : ಚತುರ್ದಶಲೋಕಮನೆಯ್ದೆ ಗರ್ಭದೊಳ್ ಧರಿಯಿಸಿದಚ್ಯುತಂ ಬಳೆಯ ತನ್ನುದರಾಂತರದೊಳ್ (ಜಗಮಿ. ೩-೯೮). ಪುಟ್ಟಿದರ್ನೀಗಳ್ ಚತುರ್ದಶಲೋಕಪ್ರಭು (ಜಗಮಿ. ೩-೦೯). [ ಚತುರ್ದಶ + ಲೋಕ ]

**ಚತುರ್ದಶವಿದ್ಯೆ** (ನಾ). ೧. ನಾಲ್ಕು ವೇದ, ಆರು ವೇದಾಂಗ ಮತ್ತು ಮೀಮಾಂಸೆ, ನ್ಯಾಯ, ಧರ್ಮಶಾಸ್ತ್ರ, ಪುರಾಣ ಎಂಬ ಹದಿನಾಲ್ಕು ವಿದ್ಯೆಗಳು: ವೇದ ಚತು ರ್ವೇದಾಂಗ ಷಡು ವಿಧವಾದ ಸ್ಮೃತಿ ಪೌರಾಣದ್ವಯ ವಿಸ್ತಾರ ಧ ನ ಮೀ ಮಾಂ ಸೆ ನ್ಯಾಯಾದ್ಯಯವಿನಿತುದೆರೆಸೆ . . . ಚತುರ್ದಶವಿದ್ಯದೊಳಗೆಯು ಸಾತಿಶಯ ಮೀಮಾಂಸೆ ವಿಂಶತಿ ರೀತಿಯಾಗಿಹುದು (ಗಣಕಾ. ೩-೦೦). ೨. [ಜೈನ] ತಂತ್ರ, ಸಾಮುದ್ರಿಕ, ಸ್ವಪ್ನ, ಜ್ಯೋತಿಷ್ಯ, ಯೋಗ, ಶಿಲ್ಪ, ಕೋಶ, ಅಶ್ವ, ಕೃಷಿ, ನಾಟ್ಯ, ವಾಸ್ತು, ರಸಾಯನ, ಧನುಷ್ಯ ಮತ್ತು ಬ್ರಹ್ಮ ಎಂಬ ಹದಿನಾಲ್ಕು ವಿದ್ಯೆಗಳು. [ ಚತುರ್ದಶ + ವಿದ್ಯೆ ]

**ಚತುರ್ದಶಿ** (ನಾ). ಚಾಂದ್ರಮಾನ ಮಾಸದ ಒಂದೊಂದು ಪಕ್ಷದ ಹದಿನಾಲ್ಕನೆಯ ತಿಥಿ : ಮಾಘ ಬ ಚತುರ್ದ್ದಶಿಯಲ್ಲು ಜಿನರಾತ್ರಿ ಮಹೋತ್ಸವಕ್ಕೆ (ಎಕ. XI, ಹೊಳಕ. ೦-೨೦ : 1154) : ಆ ಪಕ್ಷಂಗಳೊಳಗೆ ಈಶ್ವರನಧಿದೇವತೆಯಾದ ಚತುರ್ದಶಿ (ವಿವೇಕ. ೩೨೦). [ ಸಂ. ಚತುರ್ದಶೀ ]

**ಚತುರ್ದಿಕ್ಕು** (ನಾ). ನಾಲ್ಕು ದಿಕ್ಕುಗಳು ; ಪೂರ್ವ, ಪಶ್ಚಿಮ, ಉತ್ತರ ಮತ್ತು ದಕ್ಷಿಣ : ಅಳಿದ ಭೂಮಿಯ ಚತುರ್ದಿಕ್ಕಿನ ಮೂಲೆಗಳಲ್ಲಿಯೂ ಗುರುತು ಮಾಡುವಿಕೆ (ಭೂಮಿಅ. ೦೪). [ <ಸಂ. ಚತುರ್ದಿಶ್ ]

**ಚತುರ್ನಿಕಾಯ** (ನಾ). = ಚತುರ್ಣಿಕಾಯ : ಕೇವಲಿಪೂಜೆಗೆ ಬಂದತ್ತು ಚತುರ್ನಿಕಾಯ ದೇವನಿಕಾಯಂ (ಶಂರಾಮಾ. ೮-೩೦) ; ಚತುರ್ನಿಕಾಯಾಃ – ಭವನವಾಸಿ ವ್ಯಂತರ ಜ್ಯೋತಿಷ್ಕ ವೈಮಾನಿಕಭೇದದಿಂ ಚತುಃಸಂಘಾತಮನುಳ್ಳರಪ್ಪರ್ (ತತ್ತ್ವಸೂ. ೦೬೪). [ ಸಂ. (ಚತುರ್ + ನಿಕಾಯ) ]

**ಚತುರ್ನಿಕಾಯಾಮರ** (ನಾ).=ಚತುರ್ನಿಕಾಯ: ಅಂತು ಚತುರ್ನಿಕಾಯಾಮರಜನಂಬೆರಸು . . . ಪೋದಂ (ಆಪು. ೫-೬೦ ವ): ಈ ಗತಿಚತುಷ್ಟಯದೊಳುತ್ಕೃಷ್ಟಮೆನಿಸಿದ ಚತುರ್ನಿಕಾಯಾಮರರೊಳ್ (ಮಲ್ಲಿಪು. ೧೩-೧೧೧). [ ಚತುರ್ನಿಕಾಯ + ಅಮರ ]

**ಚತುರ್ನೃಪವಿದ್ಯೆ** (ನಾ). ಅರಸನು ಕಲಿತುಕೊಳ್ಳಬೇಕಾದ ನಾಲ್ಕು ವಿದ್ಯೆಗಳು ; ಸಾಮ, ದಾನ, ಭೇದ, ದಂಡಗಳೆಂಬ ಉಪಾಯಗಳು: ತ್ರಿವಿಧಶಕ್ತಿಪ್ರಯುಕ್ತನುಂ ಚತುರ್ನೃಪವಿದ್ಯಾವಿಶಾರದನುಂ (ಚಂದ್ರಪು. ೬-೩೫ ವ). [ ಸಂ. ಚತುರ್ನೃಪವಿದ್ಯಾ (ಚತುರ್ + ನೃಪ + ವಿದ್ಯಾ) ]

**ಚತುರ್ಬಲ** (ನಾ). ಆನೆ, ಕುದುರೆ, ರಥ, ಮತ್ತು ಕಾಲಾಳು ಎಂಬ ನಾಲ್ಕು ಬಗೆಯ ಸೈನ್ಯ; ಚತುರ್ಬಲವುಂ ನೆರಪುತ್ತುಂ . . . ಚಂಪಾಪುರಮಂ ಪರಿಯಿಟ್ಟು ಮುತ್ತಿದಂ (ಪುಷ್ಪಪು. ೩-೧೨೭) ; ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ತೋರಿದರು ತಂತಮ್ಮಾಳು ಕುದುರೆಗಳ (ಉದ್ಯೋ. ೯-೧೭): ಚತುರ್ಬಲ ನಿಜನಾಮ ಶಿಕ್ಷೆ ವರಚೇತನ ಸೂಚನೆಯಿಂತು ಸಂಜ್ಞೆಯಕ್ಕು (ನಾನಾರ. ೧೦೧).
[ ಸಂ (ಚತುರ್ + ಬಲ) ]

**ಚತುರ್ಭಕ್ತಿ** (ನಾ).[ಜೈನ]ನಾಲ್ಕು ಬಗೆಯ ಭಕ್ತಿ: ಅರ್ಹದ್ಭಕ್ತ್ಯಾಚಾರ್ಯಭಕ್ತಿ ಬಹುಶ್ರುತಭಕ್ತಿ ಶ್ರುತಭಕ್ತಿಯೆಂಬ ಚತುರ್ಭಕ್ತಿಯುಂ (ಚಂದ್ರಪು. ೧೧-೨೨ ವ). [ ಸಂ. (ಚತುರ್ + ಭಕ್ತಿ) ]

**ಚತುರ್ಭದ್ರ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು [ ಸಂ. (ಚತುರ್ + ಭದ್ರ) ]

**ಚತುರ್ಭಾವ** (ನಾ). ನಾಲ್ಕು ವಸ್ತುಗಳು : ಆ ತ್ರಿವಿಧ ಏಕವಾಗಿ ಅಪ್ಪುತತ್ತ್ವವ ಕೂಡಲಿಕ್ಕೆ ಆ ಚತುರ್ಭಾವ ಏಕವಾಗಿ ಪೃಥ್ವಿತತ್ತ್ವವ ಕೂಡಲಾಗಿ ಉತ್ಪತ್ತಿ ಎಲ್ಲಿ ಅಡಗಿತ್ತು (ಪ್ರೋಲಮು. ೬-೨೫). [ಸಂ. (ಚತುರ್+ಭಾವ)]

**ಚತುರ್ಭುಜ** (ನಾ). ೧. ನಾಲ್ಕು ತೋಳುಗಳು. ೨. ನಾಲ್ಕು ತೋಳುಗಳುಳ್ಳವನು : ಪರಶು ಫಲಾಕ್ಷಸೂತ್ರ ವರದೋಚಿತಚಿಹ್ನ ಚತುರ್ಭುಜಂ ಮನೋಹರ ವೃಷಲಾಂಛನಂ (ಆದಿಪು. ೧-೮). ಪ. ಹರಿ; ವಿಷ್ಣು: ಪುಣ್ಯೋದಯದಿಂ ಚತುರ್ಭುಜನೆ ಪುಟ್ಟಿದಪಂ (ಜಗವಿ.೨-೮೪); ರತಿಕಾಂತ ಹರಭಕ್ತನೀತೆಜದಿ ನುಡಿಯಲವ ಚತುರ್ಭುಜನ ಸತಿಯು ಕಾರುಣ್ಯ ನಿನಗಿಲ್ಲ ಎಂದತಿ ಕೋಪದಿಂ ತಿರುಗಿ ತನ್ನ ಗೃಹಕಂ ಪೋಗೆ (ಪ್ರಭುರಾ. ೦೫-೨೪). ೪. (ಆಲಂ) ಮದುವೆಯಾದವನು ; ವಿವಾಹಿತ : ಒಂದು ದೊಡ್ಡ ನವಕರಿಯನ್ನು ಹಿಡಿದು ಬೇಗನೆ ಚತುರ್ಭುಜನಾಗು ಎಂದು ಆಶೀರ್ವದಿಸಿದರು (ಅಮೃತ. ೨೨೪). [ ಸಂ. (ಚತುರ್ + ಭುಜ) ]

**ಚತುರ್ಮಡಿ** (ನಾ). ನಾಲ್ಕು ಮಡಿ ; ನಾಲ್ಕರಷ್ಟು : ಇದರ ಚತುರ್ಮಡಿ ಮೊಸರ ನೀರನ್ನು ಬಿಟ್ಟು ಪಾಕ ಮಾಡುವಾಗ ಹಾಕುವ ಕಲ್ಕದ್ರವ್ಯ (ಸಕವೈ. ೦೦೫). [ ಸಂ. ಚತುರ್ + ಮಡಿ ]

**ಚತುರ್ಮುಖ** (ನಾ). ೧. ನಾಲ್ಕು ಮುಖಗಳನ್ನುಳ್ಳವನು ; ಬ್ರಹ್ಮ ; ಇರ್ದಂ ಜಗತ್ಪತಿಯೊಡ್ಡೋಲಗದೊಳ್ ಚತುರ್ಮುಖಂ . . . ವಾಣೀವಧೂಟೀಸಖಂ (ಜಗವಿ. ೦-೨೬) ; ಚತುರ ಚತುರ್ಮುಖನೆಲ್ಲಾ ಶ್ರುತಿಗಳ ನೊಲವಿಂದೆ ಕಲ್ತು (ಗಿರಿಕ. ೧-೯). ೨. [ಜೈನ] ಮಹಾಸಾಮಂತರುಂ ಮಾಡುವ ಜಿನಪೂಜೆ ; ಸರ್ವತೋಭದ್ರ ಪೂಜೆ : ಮಹಾಮಂಡಳಿಕ ಪ್ರಮುಖಮುಕುಟಬದ್ಧರ್ ಮಾಡ್ಪ ಚತುರ್ಮುಖಮುಂ (ಆದಿಪು. ೦೫-೦೩ ವ). [ <ಸಂ. (ಚತುರ್ + ಮುಖ) ]

**ಚತುರ್ಮುಖತಂತ್ರ** (ನಾ). ಬಿಂಬಾಗಮದ ಹದಿನೈದು ಭೇದಗಳಲ್ಲಿ ಒಂದು: ಚತುರ್ಮುಖತಂತ್ರ ಮಲಯತಂತ್ರ . . . ಮಹಾಸಾರಮೆಂದು ಬಿಂಬಾಗಮದ ಹದಿನೈದು ಭೇದಂಗಳು (ವಿವೇಕ. ೬೧).
[ ಚತುರ್ಮುಖ + ತಂತ್ರ ]

**ಚತುರ್ಯುಗ** (ನಾ). ಕೃತ, ತ್ರೇತಾ, ದ್ವಾಪರ ಮತ್ತು ಕಲಿ ಎಂಬ ನಾಲ್ಕು ಯುಗಗಳು ; ಧರೆಯೊಳು ಚತುರ್ಯುಗಂಗಳು ಮರಳಿ ಮರಳಿ ಸಾವಿರ ಬಾರಿ ಬಂದಡಜಗೊಂದು ದಿನ (ಹರಿಕಾ. ೨-೨೫).
[ ಸಂ. (ಚತುರ್ + ಯುಗ) ]

**ಚತುರ್ವಕ್ತ್ರ** (ನಾ).=ಚತುರ್ಮುಖ ೧ (೩). [ ಸಂ.(ಚತುರ್ + ವಕ್ತ್ರ) ]

**ಚತುರ್ವರ್ಗ** (ನಾ). ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಎಂಬ ನಾಲ್ಕು ಪುರುಷಾರ್ಥಗಳು : ಸಮನಿಪ ಧರ್ಮಕ್ಕವಿರುದ್ಧಮರ್ಥಮರ್ಥಕ್ಕೆ ಕಾಮಮವಿರುದ್ಧಮನುಕ್ರಮದೊಳೆ ಕಾಮಕ್ಕಂ ಕಡೆಯ ಮೋಕ್ಷಮವಿರುದ್ಧಮೆನೆ ಚತುರ್ವರ್ಗಫಲಂ (ಆಪು. ೨-೯೭).
[ ಸಂ. (ಚತುರ್ + ವರ್ಗ) ]

**ಚತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ನಾಲ್ಕು ವರ್ಣಗಳು : ಭರತಚಕ್ರವರ್ತಿಯು ಔದ್ಯೋಗಿಕದೃಷ್ಟಿಯಿಂದ ಜನತೆಯನ್ನು ಚತುರ್ವರ್ಣಗಳಾಗಿ ವಿಂಗಡಿಸಿದನು (ಭಾರದ. ೦೭೩).
[ ಸಂ. (ಚತುರ್ + ವರ್ಣ) ]

**ಚತುರ್ವಲ** (ನಾ). =ಚತುರ್ಬಲ : ನೆರೆದು ಚತುರ್ವಲಂಬೆರಸು ಬಂದುಱದೊಡ್ಡಿದ ಗಂಡರಾರುಮೊನ್ನಱಿಯದ ಗಂಡರೇ (ಪಂಪಭಾ. ೦೧-೮೪).
[ <ಸಂ. ಚತುರ್ಬಲ ]

**ಚತುರ್ವಲಯ, ಚತುರ್ವಳಯ** (ನಾ). (?): ಉತ್ತರೋತ್ತರ ಚತುರ್ವಲಯ[ಪಾಠಾಂ. ಚತುರ್ವಳಯ, ಛತ್ರವಳಯ]ಕಾನಿದ್ದಲ್ಲಿ ಚಂದ್ರಸೂರ್ಯತಾರಾಮಂಡಲ ತಾನಿದ್ದಲ್ಲಿ (ಅನಕಂ. ೮೨-೩೬೦). **ಚತುರ್ವಳಯ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ಸಂ. (ಚತುರ್ + ವಲಯ) ]

**ಚತುರ್ವಳಯ** 'ಚತುರ್ವಲಯ' ನೋ.

**ಚತುರ್ವಿಂಶತಿ** (ನಾ). ಇಪ್ಪತ್ತುನಾಲ್ಕು: ಚತುರ್ವಿಂಶತ್ಯರ್ಹತ್ಪ್ರತಿಮಾವಿರಾಜಮಾನ ಹೇಮದಾಮ ವಿಲಂಬಿತ ಘಂಟಾ ಸಮನ್ವಿತ ವಂದನಮಾಲೆಗಳೊಳಂ (ಆದಿಪು. ೦೭-೩೭ ವ); ಜೈನ ಪುರಾಣಗಳಲ್ಲಿ . . . ಚತುರ್ವಿಂಶತಿ ಕಾಮದೇವರೂ, ಏಕಾದಶರುದ್ರರೂ ನಿರ್ದೇಶಿಸಲ್ಪಟ್ಟಿರುವರು (ಸಾಹಿಸ. ೦೭೩). [ ಸಂ. ]

**ಚತುರ್ವಿಧ** (ಗು). ೧. ನಾಲ್ಕು ಬಗೆಯ ; ನಾಲ್ಕು ರೀತಿಯ: ವನಮಾಲಾ ಮಹಾದೇವಿ ಪುತ್ರಕಾಮ್ಯದಿಂದವೌಷಧಾನ್ನದಾನಾದಿ ಚತುರ್ವಿಧ ಧರ್ಮತತ್ಪರೆಯಾಗಿ (ಪುಷ್ಪಪು. ೩-೧೦೮ ವ). (ನಾ). ೨. ನಾಲ್ಕು ರೀತಿ; ನಾಲ್ಕು ಬಗೆ : ಚತುರ್ವಿಧಮಪ್ಪ ದತ್ತಿಯುಂ . . . ಆರ್ಯಷಟ್ಕರ್ಮಂಗಳು ನಿಮಗಿವು ಕುಲಾಚಾರಂಗಳೆಂದಱಿಯೆ ಪೇೞ್ದು ಕೈಕೊಳಿಸಿ (ಆದಿಪು. ೦೫-೦೩ ವ). [ ಸಂ. (ಚತುರ್ + ವಿಧ) ]

**ಚತುರ್ವಿಧಜೀವ** (ನಾ). ಸ್ವೇದಜ, ಅಂಡಜ, ಉದ್ಭಿಜ ಮತ್ತು ಜರಾಯುಜ ಎಂಬ ನಾಲ್ಕು ಬಗೆಯ ಜೀವಗಳು. [ಚತುರ್ವಿಧ+ಜೀವ]

**ಚತುರ್ವಿಧಪದ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಹಾಗು ಸಾಯುಜ್ಯ ಎಂಬ ನಾಲ್ಕು ಬಗೆಯ ಮೋಕ್ಷಗಳು : ನಿಮ್ಮ ಶರಣರ ಚರಣದ ಭಕ್ತಿಯೇ ಎನಗೆ ಸಾಲೋಕ್ಯಪದವಯ್ಯ . . . ಇಂತೀ ಚತುರ್ವಿಧ ಪದಂಗಳಲ್ಲದೆ ಅನ್ಯವ ನಾನಱಿಯೆನಯ್ಯ (ಉರಿಪ. ೯೮-೮೦).
[ ಚತುರ್ವಿಧ + ಪದ ]

**ಚತುರ್ವಿಧಪದವಿ** (ನಾ).=ಚತುರ್ವಿಧಪದ : ಚತುರ್ವಿಧಪದವಿಯ ಹಾರ ಅಂಪದ್ವರ್ಗಕ್ಕಳುಕ . . . ನಮ್ಮ ಬಸವಣ್ಣನು (ಮಹಾದೇ. ಬ. ೮೪-೨೦೪).
[ ಚತುರ್ವಿಧ + ಪದವಿ ]

**ಚತುರ್ವಿಧವಾದ್ಯ** (ನಾ). ತತ, ಅವನದ್ಧ, ಘನ ಮತ್ತು ಸುಷಿರ ಎಂಬ ನಾಲ್ಕು ಬಗೆಯ ವಾದ್ಯಗಳು. [ ಚತುರ್ವಿಧ + ವಾದ್ಯ ]

**ಚತುರ್ವಿಧಸಂಘ** (ನಾ).[ಜೈನ]ನಾಲ್ಕು ಬಗೆಯ ಶಿಷ್ಯರ ಸಂಘ: ಮಹಾವೀರನ ಶಿಷ್ಯಸಂಘಕ್ಕೆ 'ಚತುರ್ವಿಧಸಂಘ' ವೆಂದು ಹೆಸರು : ಶ್ರಮಣರು, ಶ್ರಮಣಿಯರು, ಶ್ರಾವಕರು, ಶ್ರಾವಕಿಯರು (ತೀರ್ಥಕ. ೧೦೮). [ ಚತುರ್ವಿಧ + ಸಂಘ ]

**ಚತುರ್ವಿಧಾಮರ** (ನಾ). = ಚತುರ್ಣಿಕಾಯ : ನಿರುತಂ ಭಾವನರುಂ ವನಾವಸಥರುಂ ಜ್ಯೋತಿಷ್ಕರುಂ ಕಲ್ಪವಾಸರುಮಾಗಿರ್ದ ಚತುರ್ವಿಧಾಮರರುದಾರರ್ (ಪುಷ್ಪಪು. ೧೧-೧೩). [ ಚತುರ್ವಿಧ + ಅಮರ ]

**ಚತುರ್ವಿಧಾರಾಧನೆ** (ನಾ). [ಜೈನ] ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರ ಮತ್ತು ಸಮ್ಯಕ್ ತಪಸ್ಸು ಎಂಬ ನಾಲ್ಕು ಬಗೆಯ ಆರಾಧನೆಗಳು: ಸಮ್ಯಗ್ದರ್ಶನ ಜ್ಞಾನಚಾರಿತ್ರತಪಸಾಂ ಸ್ವೀಕರಣಮಾರಾಧನಾನಾಮುಮೆಂಬ ಚತುರ್ವಿಧಾರಾಧನೆಗಳನಾರಾಧಿಸಿ (ಸುಕುಮಾ. ೧೩-೪೦ ವ) : ಅನೆ ಸಜ್ಜೆಯ ಬಸದಿಯೊಳ್ ಚತುರ್ವ್ವಿಧಾರಾಧ [ನೆ] [ಯಿಂ] ನಾರಾಧಿಸಿ (ಸೌಇಇ. XX, ೩೨-೩೭ ; 1077). [ ಚತುರ್ವಿಧ + ಆರಾಧನೆ ]

**ಚತುರ್ವಿಧಾಹಾರ** (ನಾ). ೧. ಅನ್ನ, ಪಾನ, ಖಾದ್ಯ ಮತ್ತು ಲೇಹ್ಯ ಎಂಬ ನಾಲ್ಕು ಬಗೆಯ ಆಹಾರಗಳು. ೨. [ಜೈನ] ಲೇಪ್ಯಾಹಾರ, ಓಜಾಹಾರ, ಕಬಳಾಹಾರ ಮತ್ತು ಮಾನಸಾಹಾರ ಎಂಬ ನಾಲ್ಕು ಬಗೆಯ ಆಹಾರಗಳು : ರಾಗದ್ವೇಷವಿಲ್ಲದೆಯುಂ ಕೀರ್ತಿಕಾಮನಲ್ಲದೆಯುಂ ಚತುರ್ವಿಧಾಹಾರ ನಿವೃತ್ತಿಗೆಯ್ದು (ಮಲ್ಲಿಪು. ೧೧-೨೧). [ ಚತುರ್ವಿಧ + ಆಹಾರ ]

**ಚತುರ್ವೇದ** (ನಾ). ಋಕ್ಕು, ಯಜುಸ್ಸು, ಸಾಮ ಮತ್ತು ಅಥರ್ವಣ ಎಂಬ ನಾಲ್ಕು ವೇದಗಳು : ಸಂಖ್ಯಾವಾಚಿ ಸಮಾಸಕ್ಕೆ-ಏಕಾಂಗ . . . ತ್ರಿಲೋಕ, ಚತುರ್ವೇದ, ಪಂಚಭೂತ (ಶಮದ. ೬೨ ಪ್ರಯೋ) : ಸದಾಶಿವ ಮುಖದಲಾ ಚತುರ್ವೇದವುದಿಸಿದವು (ಗಣಕಾ. ೩-೪). [ ಸಂ. (ಚತುರ್ + ವೇದ) ]

**ಚತುರ್ವೇದಪಾಠ** (ನಾ). ನಾಲ್ಕು ವೇದಗಳ ಪಠನ : ಚತುರ್ವೇದಪಾಠ ತೀವ್ರವಾದರೇನು ಲಿಂಗಾರ್ಚನೆ ಹೀನನಾದರೆ ಶಿವಶಿವಾ ಬ್ರಾಹ್ಮಣನೆಂಬೆನೆ (ಬಸವ. ೩೮೮). [ ಚತುರ್ವೇದ + ಪಾಠ ]

**ಚತುರ್ವೇದಪಾರಂಗತ** (ನಾ). = ಚತುರ್ವೇದಪಾರಗ : ಅತಿಶಯದ ಚತುರ್ವೇದಪಾರಂಗತನತುಳ ಶಿವಧರ್ಮಮಾರ್ಗಾಯತ ಪವಿತ್ರಚರಿತ್ರನು (ಬಸಪು. ೪೬-೨). [ ಚತುರ್ವೇದ + ಪಾರಂಗತ ]

**ಚತುರ್ವೇದಪಾರಗ** (ನಾ).ನಾಲ್ಕು ವೇದಗಳನ್ನು ಚೆನ್ನಾಗಿ ತಿಳಿದವನು: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಶಂಕಥಾ. ೩-೨೨ ವ) : ಸಾಸಿರ ಕವಿಲೆಯನಲಂಕಾರಸಹಿತಂ ಚತುರ್ವೇದಪಾರಗರಪ್ಪ ಸಾಸಿರ್ವ್ವರು ಬ್ರಾಹ್ಮಣರ್ಗ್ಗಂ ದಾನಂಗೊಟ್ಟ ಫಳಮಕ್ಕು (ಸೌಇಇ. XX, ೪೬-೪೮; 1072). [ ಚತುರ್ವೇದ + ಪಾರಗ ]

**ಚತುರ್ವೇದಿ** (ನಾ). ಚತುರ್ವೇದಗಳನ್ನು ಬಲ್ಲವನು : ನಿಮ್ಮ ವೇದಶಾಸ್ತ್ರಂಗಳು ಮೂರಾಗಿಗೊಂಡಲ್ಲಿ ಚತುರ್ವೇದಿಗಳೆಗೊಮ್ಮೆ ಅಕ್ಕಿಕ್ಕೆ ಅಯ್ಯಾ (ಬಸವ. ೩೮೮) : ಆಗಳುಂ ನಿಮ್ಮೊಲಿವ ನೋಟದಿ ಮೂಗನುಂ ಚತುರ್ವೇದಿಯಾಗನೆ ಈಗ ನಿಮ್ಮ ಕೃಪಾವಲೋಕದಿ ಹುಟ್ಟುಗುರುಡಂಗೆ ಆಗಳಲರವೆ ದೃಷ್ಟಿಗಳು (ಬಸಪು. ೪೭-೬೩). 'ತ್ರಿವೇದಿ' ಪರಾ. [ಸಂ. ಚತುರ್ವೇದಿನ್]

**ಚತುರ್ಹಾಯಣಿ** (ನಾ). ನಾಲ್ಕು ವರ್ಷದ ಕಡಸು ; ಮಣಕ . [ ಸಂ. ಚತುರ್ಹಾಯಣೀ ]

**ಚತುಶ್ಶಾಲೆ** (ನಾ). ನಾಲ್ಕುಕಡೆಗೂ ಕೈಸಾಲೆ ಕಟ್ಟಿರುವ ಅಂಗಳ; ಚೌಕಿಗೆ: ಚತುರ್ವೇದಪಾರಗರ ಮನೆಯ ಮುಂದಣ ಚತುಶ್ಶಾಲೆಯೊಳ್ ಬೀಡಂ ಬಿಟ್ಟು (ಶಂಕಥಾ. ೩-೨೨ ವ). [ ಸಂ. ಚತುಶ್ಶಾಲ (ಚತುರ್ + ಶಾಲಾ +-) ]

**ಚತುಷ್ಕ** (ನಾ). ೧. ನಾಲ್ಕು ; ನಾಲ್ಕರ ಗುಂಪು, - ಸಮುದಾಯ : ಶುದ್ಧಾಕ್ಷರಂಗಳುಮಂ ಯೋಗವಾಹಚತುಷ್ಕಮುಮಂ ಸಂಯೋಗಾಕ್ಷರಂಗಳುಮಂ ಬ್ರಾಹ್ಮಿಗೆ ದಕ್ಷಿಣಹಸ್ತದೊಳುಪದೇಶಂಗೆಯ್ದು (ಆದಿಪು. ೮-೩೯ ವ): ಪೃಥ್ವ್ಯಪ್ತೇಜೋವಾಯುರೂಪ ಧಾತುಚತುಷ್ಕವಿರಹಿತನೆ ನಾಂ (ತತ್ತ್ವಪ್ರ. ೩೭೭). ೨. ಚೌಕ; ಅಂಗಳ: ಆಗಳಾ ಪುರದ್ವಾರಚತುಷ್ಕದೊಳ್ ಯದುಬಲಂ ತರರ್ದತ್ತು (ಅಗವಿ. ೭-೪೭). [ ಸಂ. ]

**ಚತುಷ್ಕಗೋಪುರ** (ನಾ). ೧. ನಾಲ್ಕು ಗೋಪುರ. ೨. ನಾಲ್ಕು ಗೋಪುರಗಳನ್ನುಳ್ಳದು : ವಿಭೂತಿಯನಾಂತುದಿಂತು ಕೌಶಂಬಿಪುರಂ ಜಿತಾಮರಪುರಂ ಕಮನೀಯ ಚತುಷ್ಕಗೋಪುರಂ (ಸುಕುಮಾ. ೧-೭೯). [ ಚತುಷ್ಕ + ಗೋಪುರ ]

**ಚತುಷ್ಕಷಾಯ, ಚತುಃಕಷಾಯ** (ನಾ). [ಜೈನ]ಕ್ರೋಧ, ಮಾನ, ಮಾಯಾ ಮತ್ತು ಲೋಭ ಎಂಬ ನಾಲ್ಕು ಬಗೆಯ ಕಷಾಯಗಳು : ಜಿನಪತಿಮತರಚಿತವಿವಿದರ್ಥಸಲಿಲ ಧೌತಮತಿಯುಂ . . . ಚತುಷ್ಕಷಾಯಮಥನನುಂ (ಚಾಪುಂಪು. ೩-೨೦). **ಚತುಃಕಷಾಯ**: ಚತುಃಕಷಾಯ [ಪಾಠಾಂ. ಚತುಷ್ಕ,ಚತುಷ್ಕಷಾಯ] ಘಾತಿತಾಶೇಷಾನುಭಾಗಾಶ್ವಕರ್ಣಕರಣಪೂರ್ವಸ್ಪರ್ಧಕಾಭಿಘಾತದಿನಂತಮುಃ ಹೊರ್ತಕಾಲದಿಂ ಕಿಡಿಸಿ (ಆದಿಪು. ೧೦-೧೪ ವ): ಚತುಃಕ[ಪಾಠಾಂ. ಷ್ಕ]ಷಾಯ ದರ್ಪದಳನನುಂ (ಅಜಿಪು. ೩-೧೫). [ ಸಂ. ( ಚತುರ್ + ಕಷಾಯ) ]

**ಚತುಷ್ಕಾಲ** (ನಾ). [ಸಂಗೀತ] ನಾಲ್ಕು ಕಾಲದ ಲಯ : ಅವರ ಪ್ರತಿದಿನದ ಸಾಧನದಲ್ಲಿ ಎಲ್ಲ ಸ್ಥಾಯಿಗಳಲ್ಲಿಯೂ ಚತುಷ್ಕಾಲದಲ್ಲಿ ಅಭ್ಯಾಸ . . . ತಾನಗಳ ಅಭ್ಯಾಸ ಇವು ಕೂಡಿದ್ದುವು (ಸಂಗೀತ. ೬೩). [ ಸಂ. (ಚತುರ್ + ಕಾಲ) ]

**ಚತುಷ್ಕೋಣ** (ನಾ). ೧. ನಾಲ್ಕು ಮೂಲೆ : ವೇದಿಕೆಯೊಳ್ ರಂಜಿಸಿದು ಮೆಳನೇಸಱಿಂ ನೆನೆಯಿಸುವ ಚತುಷ್ಕೋಣ ಶೋಣಮಣಿಕಲಶಂಗಳ್ (ಶಂಕಾಮಾ. ೩-೧೨೬). ೨. ನಾಲ್ಕು ಮೂಲೆಗಳನ್ನುಳ್ಳ ಆಕೃತಿ; ಚೌಕೋನ: ಹೀಗೆ ಶಂಕುವಿನ ಸಹಾಯದಿಂದ ಕಂಡುಹಿಡಿಯುವ ತ್ರಿಕೋಣ ಚತುಷ್ಕೋಣಗಳಿಗೆ "ವಸಲೆ"ಯೆಂದು ಹೇಳುವುದೂ ಉಂಟು (ಭೂಮಿಅ. ೩). [ ಸಂ. (ಚತುರ್ + ಕೋಣ) ]

**ಚತುಷ್ಟಯ** (ಗು). ೧. ನಾಲ್ಕು ವಸ್ತು ಅಥವಾ ವಿಭಾಗಗಳನ್ನುಳ್ಳ. ೨. ನಾಲ್ಮಡಿಯಾದ ; ನಾಲ್ಕುಪಟ್ಟು ಇರುವ. (ನಾ). ೩. ನಾಲ್ಕರ ಸಮುದಾಯ,-ಗುಂಪು: ಮನ ಬುದ್ಧಿ ಚಿತ್ತ ಅಹಂಕಾರವೆಂಬ ಚತುಷ್ಟಯವ ಕಂಡು (ಪ್ರಭುಲೀಮಾ. ೧೩೦-೩೬೦); ಸಾಕು ಪಾರ್ಥನ ಬಿನ್ನಹವ ಕಿಡೆನೂಕದಿರು ನೆಳಲಿಂಗೆ ಬೇಱ್ ವಿವೇಕ ಚೇಷ್ಟೆಗಳೇ ಸಹೋದರರೀ ಚತುಷ್ಟಯಕೆ . . . ಬೇಱ್ ಕಾರ್ಯಮ್ಯಾಕುಳತೆ ಬೇಡೆಂದು ಮುರರಿಪು ತಿರುಹಿದನು ನೃಪನ (ಕುವ್ಯಾಕ. ೧೭-೫೩). [ ಸಂ. ]

**ಚತುಷ್ಪಥ** (ನಾ). ನಾಲ್ಕು ಹಾದಿಗಳು ಕೂಡುವ ಸ್ಥಳ ; ಚೌವಟ ; ಚೌಕ : ಪೂವನೆತ್ತುವ ಪುಷ್ಪಲಾವಿಕಾ ಚತುಷ್ಪಥದೊಳ್ (ಶಾಂತಿಪು. ೮-೭೨ ವ) : ಚತುಷ್ಪಥದಲ್ಲಿ ರತ್ನರಾಶಿಯಂತೆ ಮನುಷ್ಯಜನ್ಮಂ ಪಡೆಯಲರಿದು (ತತ್ತ್ವಪ್ರ. ೩೩೨). [ ಸಂ. ]

**ಚತುಷ್ಪದ** (ನಾ). ನಾಲ್ಕು ಕಾಲುಗಳನ್ನುಳ್ಳದು ; ಚತುಷ್ಪಾದಿ : ಪಕ್ಷಿ ಚತುಷ್ಪದ ಸರೀಸೃಪಾದಿ ತಿರ್ಯಗ್ಜಾತಿಗಳುಂ (ಆದಿಪು. ೧೬-೪೦ ವ). [ ಸಂ. ]

**ಚತುಷ್ಪದಿ, ಚತುಃಪದಿ** (ನಾ). [ಛಂದ] ನಾಲ್ಕು ಪಾದಗಳನ್ನುಳ್ಳ ಒಂದು ಪದ್ಯಜಾತಿ; ಚೌಪದಿ: ಅಂತುಂ ಯತಿಯುಂ ಪೇಟ್ಟಾರ್ವಂತಾದ್ಯದೊಳಲಪಮಾರ್ಯೆಯೊಳ್ ಕಂದದೊಳಂ ಸಂತಂ ದ್ವಿತೀಯ ಪಾದಗತಾಂತದೊಳಕ್ಕದು ಚತುಷ್ಪದೀಪದವಿಗಳೊಳ್ (ಕವಿರಾ. ೧-೭೭) : ತ್ರಿಪದಿ,

ಚತುಷ್ಪದಿ, ಷಟ್ಪದಿ, ಅಷ್ಟಪದಿ . . . ಆದಿಜಾತಿಗಳ್ [ಉಂ] ಉಂಟು (ಛಂದೋಬು. ೩. ೧-೬೭). **ಚತುಃಪದಿ :** ಉಲ್ಲಸಿತ ಜಾತಿಯಾದ ಚತುಃಪದಿ [ಪಾಠಾಂ. ಚತುಷ್ಪದಿ]ಬೃಂದದೊಳ್ ಪಾಡೆ (ಅನಂಪು. ೬-೭೦ ವ).

[ ಸಂ. ಚತುಷ್ಪದೀ ]

**ಚತುಷ್ಪಾಠಿ$_1$** (ನಾ). ನಾಲ್ಕು ವೇದಗಳನ್ನು ಮತ್ತು ನಾಲ್ಕು ದರ್ಶನಗಳನ್ನು ಕಲಿಸುವ ಪಾಠಶಾಲೆ : ತರ್ಕ ವಾಚಸ್ಪತಿಗಳ ಚತುಷ್ಪಾಠಿಯ ಅಭಿಮುಖವಾಗಿ . . . ಪ್ರಯಾಣ ಹೊರಟರು (ನಿಬಂಧ. I, ೪೭) : ಈ ಶಿಕ್ಷಣದ ವಿಶೇಷ ಅನುಶೀಲನ ಟೋಲ್‌ಗಳಲ್ಲಿಯೂ ಚತುಷ್ಪಾಠಿಗಳಲ್ಲಿಯೂ ನಡೆಯುತ್ತಿತ್ತು (ನಿಬಂಧ. I, ೩೧೭) : ಚತುಷ್ಪಾಠೀ—ಬಂಗಾಳದಲ್ಲಿದ್ದ ವೇದ ಪಾಠಶಾಲೆಗಳು ನಾಲ್ಕು ದರ್ಶನಗಳನ್ನು ಕಲಿಸುತ್ತಿದ್ದ ಶಾಲೆಗಳು (ನಿಬಂಧ. I, ೩೧೭ ಅಡಿಟಿ). [ ಸಂ. ಚತುಷ್ಪಾಠೀ ]

**ಚತುಷ್ಪಾಠಿ$_2$** (ನಾ). ನಾಲ್ಕು ವೇದಗಳನ್ನು ಕಲಿತವನು; ಚತುರ್ವೇದಿ. 'ಘನಪಾಠಿ' ಪರಾ. [ ಸಂ. ಚತುಷ್ಪಾಠಿನ್ ]

**ಚತುಷ್ಪಾದ** (ನಾ). = ಚತುಷ್ಪದ : ಧರ್ಮ, ಸತ್ಯ, ದಯಾ, ದಾನವೆಂಬ ೪ ಪಾದಗಳುಳ್ಳ ಧರ್ಮವನ್ನು ಸ್ಥಾಪಿಸುತ್ತಾ, ಮಾಡಿಸುತ್ತಾ, ಚತುಷ್ಪಾದ ನಾಯಕನಾಗಿಯೂ . . . ಇದ್ದು ಸರ್ವಲೋಕಗಳಲ್ಲಿ ವಿಹಾರಮಾಡುತ್ತಿರುವನು (ಹಸಾರ. ೭-೭ ತಾತ್ಪರ್ಯ). [ ಸಂ. (ಚತುರ್ + ಪಾದ)

**ಚತುಷ್ಪಾದಿ** (ನಾ). = ಚತುಷ್ಪದ : ನಾನಾ ಭೇದ ಸತ್ವವ್ರಜದೊಳಿದು ಚತುಷ್ಪಾದಿ ತದ್ಭೇದದೊಳ್ ತಾನಿದು ಶುಂಡಾಳಂ (ಸುಕುಮಾ. ೩-೭).

[ ಸಂ. ಚತುಷ್ಪಾದಿನ್ ]

**ಚತುಷ್ಷಷ್ಟಿ** (ನಾ). ಒಂದು ಸಂಖ್ಯೆ ; ಅರುವತ್ತನಾಲ್ಕು : ಚತುಷ್ಷಷ್ಟಿ ಚಮರರುಹದ ಪೊದಳ್ದ ಪೊಳೆಪು ದೆಸೆಗೆಸೆದಿರ್ಕುಂ (ಆದಿಪು. ೧೦-೪೦).

[ ಸಂ. (ಚತುರ್ + ಷಷ್ಟಿ) ]

**ಚತುಷ್ಷಷ್ಟಿಕಲೆ** (ನಾ). = ಚೌಷಷ್ಟಿಕಲೆ : ನೋಂತು ಚತುಷ್ಷಷ್ಟಿಕಲೆಗಳು ಪೆಣ್ಪರಿಜಾಂತು ಸೇರಿದುವೊ ಎಂಬಂತೆ (ಹರಿಲ. ೧-೧೮).

[ ಚತುಷ್ಷಷ್ಟಿ + ಕಲೆ$_3$ ]

**ಚತುಸ್ಸಂಜ್ವಲನ** (ನಾ). [ಜೈನ] ಕ್ರೋಧ, ಮಾನ, ಮಾಯಾ, ಮತ್ತು ಲೋಭ ಎಂಬ ನಾಲ್ಕು ಕಷಾಯಂಗಳನ್ನುಳ್ಳ ಸ್ಥಿತಿ (?) : ತನ್ನ ಪರಿಣಾಮವಿಶೇಷದಿಂ ಚತುಸ್ಸಂಜ್ವಲನ ನವನೋಕಷಾಯಂಗಳೆಂಬ ಪದಿಮೂಱುಂ ಪ್ರಕೃತಿಗಳನಂತರಕರಣಂ ಮಾಡಿ (ಆದಿಪು. ೧೦-೦೪ ವ).

[ ಸಂ. (ಚತುರ್ + ಸಂಜ್ವಲನ) ]

**ಚತುಸ್ಸಮಯ** (ನಾ). ಮಾಹೇಶ್ವರ, ವೈಷ್ಣವ, ಬೌದ್ಧ ಮತ್ತು ಜೈನ ಎಂಬ ನಾಲ್ಕು ಮತಗಳು . 'ಚತುಸ್ಸಮಯಸಮುದ್ಧರಣ' ಪರಾ.

[ ಸಂ. (ಚತುರ್ + ಸಮಯ) ]

**ಚತುಸ್ಸಮಯಸಮುದ್ಧರಣ** (ನಾ). ನಾಲ್ಕು ಮತಗಳನ್ನೂ ಕಾಪಾಡುವವನು : ಶರಣಾಗತ ವಜ್ರಪಂಜ[ರರುಂ ಚ]ತುಸ್ಸಮಯಸಮುದ್ಧರಣರುಂ (ಸೌಇಇ. V, ೮೪೯-೩೦: 1044); ಚತುಸ್ಸಮಯಸಮುದ್ಧರಣರೆನಿಪ್ಪ ಮಳಯಶಶ್ರೀಗೆ ನೋಂತರ್ (ಕೊಲ್ಹಾಶಾ. ೦೫-೪೦ : 1186).

[ ಚತುಸ್ಸಮಯ + ಸಮುದ್ಧರಣ ]

**ಚತುಸ್ಸಮಯಾಶ್ರಯ** (ನಾ). ನಾಲ್ಕು ಮತಗಳಿಗೂ ಆಶ್ರಯ ಕೊಡುವವನು : ಚತುಸ್ಸಮಯಾಶ್ರಯ (ಹ್ಯಆರಿ. ೦೯೩೭.., ೨೯-೦೪ : 872) : ಧರ್ಮ್ಮಸಾರಥಿ ಚತುಸ್ಸಮಯಾಶ್ರಯಸಕಳಭುವನವಿಖ್ಯಾತಕೀರ್ತ್ತಿ (ಕಇಆ. ೮೫-೦೮-೦೫ : ಸು. 932). [ ಸಂ. (ಚತುಸ್ಸಮಯ + ಆಶ್ರಯ) ]

**ಚತುಸ್ಸಾಗರ** (ನಾ). ನಾಲ್ಕು ದಿಕ್ಕಿನ ಮಹಾಸಮುದ್ರಗಳು : ಬಲದಿಂ ಚತುಸ್ಸಾಗರದ ವೇಳೆಯ ಧರಾಮಂಡಲಂಗಳಂ . . . ಆಳೆಯಂಧಾಸುರಂ (ಶಬಪು. ೪೭-೦೨). [ ಸಂ. (ಚತುರ್ + ಸಾಗರ) ]

**ಚತುಸ್ಸಾರ** (ನಾ). [ವೀಶೈ] (?) : ನವಸಾರ ಅಷ್ಟಸಾರ ದಶಸಾರ ಪಂಚಸಾರ ಚತುಸ್ಸಾರಯೇಕಸಾರಯೆಂತಿವಸಿಗಳೆದ ಮಹಾಮಹಿಮನ ನಿಲವು ಲಿಂಗದಲ್ಲಿ ಸಂಪೂರ್ಣ (ಪದಗೋ. ೦೩-೦೭೩). [ ಸಂ. (ಚತುರ್ + ಸಾರ) ]

**ಚತುಸ್ಸೀಮೆ** (ನಾ). ನಾಲ್ಕು ದಿಕ್ಕಿನ ಮೇರೆ: ಆ ಗ್ರಾಮದ ಚತುಸ್ಸೀಮೆಯ ವಿವರ (ಮ್ಯಆರಿ. ೧೯೪೭, ೦೮-೯ : 1488).

[ ಸಂ. ಚತುಸ್ಸೀಮಾ (ಚತುರ್ + ಸೀಮಾ) ]

**ಚತೂರಸ** (ನಾ). ಕಟು, ತಿಕ್ತ, ಆಮ್ಲ ಮತ್ತು ಕಷಾಯ ಎಂಬ ನಾಲ್ಕು ರಸಗಳು : (೩). [ ಸಂ. (ಚತುರ್ + ರಸ) ]

**ಚತ್ತ್ರಣ** (ನಾ). ಎತ್ತು ಹೂಡಿ ಬಾವಿಯಿಂದ ನೀರೆತ್ತುವ ಸಾಧನ ; ಕಪಿಲೆ : "ಕಪಿಲೆ ಚತ್ತ್ರಣಂ" (ಶಬ್ದಮ. ೨೭೧). [ ? ]

**ಚತ್ತ್ರಿ** 'ಛತ್ರಿ$_2$' ನೋ.

**ಚತ್ತ್ರಿಕೆ** 'ಚತ್ತ್ರಿಗೆ' ನೋ.

**ಚತ್ತ್ರಿಗೆ, ಚತ್ತ್ರಿಕೆ, ಛತ್ತ್ರಿಗೆ** (ನಾ). ಕೊಡೆ ; ಛತ್ರಿ : ಬೆಂಗದಿರನ ಕಿರಣ ಬೀಳದಿರಲೆಂದು ನೆಳಲಿನ ಚತ್ತ್ರಿಗೆ ಹಿಡಿದ ಐರಾವತ (ಬಂಕನ. ೫೦-೦೨) : ನನ್ನ ಬೆನ್ನ ಮೇಲೆ ಒಂದೆರಡು ಚಿತ್ತ್ರದ-ಚತ್ತ್ರಿಗೆಯ ಚಿತ್ರದ ವಿಟುಗಳು ಬಿದ್ದಾಗ ತಿಳಿಯಿತು (ಶ್ರೀಕಾಂತ. I, ೩) ; ಈ ಹುಡುಗಿ ಹೊತ್ತು ಬಂದ ಹಾಗೆ ಚತ್ತ್ರಿಗೆ ಹಿಡಿಯುವವಳಲ್ಲ (ಅರಗಿ. ೨೩೪). **ಚತ್ತ್ರಿಕೆ :** ಶೇಷನು ತನ್ನ ಸಾವಿರ ಹೆಡೆಗಳನ್ನು ಪಸರಿಸಿ ಕೃಷ್ಣನ ಮೇಲೆ ಚತ್ತ್ರಿಕೆ ಹಿಡಿದನು (ಭಾಮೃಕ. ೩೦೦) ; ಬರಿಗಾಲಿನಿಂದ ನಡೆಯುವ ತಲೆಯ ಮೇಲೆ ಚತ್ತ್ರಿಕೆ ಇಲ್ಲದಿರುವ ರಾಮ (ಕುಳಸಿ. ೦೭೭). **ಛತ್ತ್ರಿಗೆ :** ತಾಳೆ . . . ಎಲೆಗಳನ್ನು ಮನೆಗೆ ಹೊಚ್ಚುವರು ; ಅವುಗಳಿಂದ ಛತ್ತ್ರಿಗೆಗಳಾಗುತ್ತವೆ (ಕಭಾಗ. ೪೦).

[ <ಸಂ. ಛತ್ರಿಕಾ ]

**ಚತ್ತ್ರಾಣ** (ನಾ) [ಕಾವ್ಯವಿ] ಕಂದ ಪದ್ಯಗಳು ಹೆಚ್ಚಾಗಿದ್ದು ಕೆಲವು ವೃತ್ತಗಳು, ಚೌಪದಿ, ಅಕ್ಕರ, ಗೀತಿಕೆ ಮತ್ತು ತ್ರಿಪದಿಗಳನ್ನು ಒಳಗೊಂಡ ಒಂದು ಬಗೆಯ ಪ್ರಾಚೀನ ಕಾವ್ಯಪ್ರಭೇದ : "ಚತ್ತ್ರಾಣಂ ಕೃತಿಭೇದಂ" (ಕಶಾಸಿ. ೩೫) ; "ಕಬ್ಬವೆಸರ್ ಚತ್ತ್ರಾಣವೆನಿಪ್ಪುದು" (ಚಹುನಿ. ೦೦೧) : ನುಡಿಗೆಲ್ಲಂ ಸಲ್ಲದ ಕನ್ನಡದೊಳ್ ಚತ್ತ್ರಾಣಮುಂ ಬೆದಂಡೆಯುಮೆಂದೀಗಡಿನ ನೆಗಟ್ತೆಯ ಕಬ್ಬದೊಳೊಡಂಬಡಂ ಮಾಡಿದರ್ ಪುರಾತನ ಕವಿಗಳ್ (ಕವಿರಾ. ೧-೩೨) ; ಕಂದಂಗಳ್ ಪಲವಾಗಿರೆ ಸುಂದರ ವೃತ್ತಂಗಳಕ್ಕರಂ ಚವುಪದಿ ಮತ್ತಂ ದಲ್ ಗೀತಿಕೆ ತಿವದಿಗಳಂದಂಬೆತ್ತಿಸೆಯೆ ವೇಟ್ಟೊಡದು ಚತ್ತ್ರಾಣಂ (ಕವಿರಾ. ೧-೩೫) : 'ಚತ್ತ್ರಾಣ'ವು ದೇಸಿಗಬ್ಬವೇ ಆದರೂ . . . ಶ್ರವ್ಯವೇ ಹೊರತು ದೃಶ್ಯಕ್ಕೊಪ್ಪುವುದಲ್ಲ (ಹಾಶೀಸು. ೩೮). 'ಚಿತ್ರಾಯತನ' ಪರಾ. [ ? ]

**ಚತ್ತ್ರಾರು** (ನಾ). ಛತ್ರ ; ಸತ್ರ (?) : ಸಮರ್ಪಿಸಿ ಕೊಟ್ಟ ಧರ್ಮಸದನ ಚತ್ತ್ರಾರು ಉಂಬವೆಂತೆಂದರೆ ಕೋಳಾಲಸೀಮೆಯೊಳಗಣ ಕೊತನೂರು ಪಟ್ಟಡೆ ಸ್ಥಳದ ಕೆಂದಟ್ಟು ಗ್ರಮ ೧ (ಎಕ. X(8), ಕೋಲಾರ. ೩೦೪-೦೦ : ಸು. 17ನೆಯ ಶತ). [ ? ]

**ಚತ್ತು** 'ಛತ್ತು' ನೋ.

**ಚತ್ರ$_1$, ಛತ್ರ$_1$** (ನಾ). ಧರ್ಮಕ್ಕಾಗಿ ಉಚಿತವಾದ ವಸತಿ ಹಾಗು ಊಟಗಳನ್ನು ಒದಗಿಸುವ ಸ್ಥಳ ; ಧರ್ಮಾಲಯ ; ಧರ್ಮಸತ್ರ: ಬಾಡಿಗೆಯ ಮನೆಗೆ ತಿವಿದುಕೊಳ್ಳ ಚತ್ರದ ಕೂಟ್ಗೆ ಮೆಯ್ಯಾಂಪ ನಡುಮನೆಯೊಳ್ ಬಾವಿಯನಗಟ್ಟ . . . ಕಟ್ಟಿಗ್ಗರಂತೆ (ಧರ್ಮಾಮೃ. ೯-೦೬೨) ; ಗೊಗ್ಗರಸಗೆ ಚತ್ರಕೆ ಅರಕೆರೆಯಲು ಬಟ್ಟ ಗಟ್ಟಿ ಕಮ್ಮ ೨೫ (ಎಕ. VII, ಶಿವಮೊ. ೨೩-೧೧ : 1115). **ಛತ್ರ$_1$ :** ಛತ್ರದ ಗೃಹಂ ಪ್ರತಿಶ್ರಯವಕ್ಕು (ಮಂಗಶಾ. ೫೮-೯) ; ಉಭಯಂ ನಾಲ್ವತಮೂರೆನ್ನನು ನಂಮ ಛತ್ರದ ಧರ್ಮವ ನಡಸುವರಿಗೆ ತೆತ್ತು (ಎಕ. VII, ಶಿವಮೊ. ೭೦-೫೨ : 1431): ವಿನಾಯಕ

ದೇವರ ಸನ್ನಿಧಿಯಲಿ ದಿನಂಪ್ರತಿ ಆರು ಮನ್ನಿ ಬ್ರಾಂಹ್ಮರಿಗೆ ಛತ್ರವನೂ ಇಕಿಸಿ (ಎಕ. X, ಮುಳುಬಾ. ೨೫೯-೨೩ : 1442); ಯಿಪ್ಪನೂ . . . ಛತ್ರಕೆ ಸಲವಾಗಿ ಜನಾರ್ದನದೇವರ ಸನ್ನಿಧಿಯಲಿ ಧಾರೆಯನೆಱೆದು ಬಿಟ್ಟೆವಾಗಿ (ಎಕ. XIV, ಶ್ರೀರಂಗ, ೧೯೮-೨೧ : 1598).

[ <ಸಂ. ಸತ್ರ ]

**ಚತ್ರ$_{೩}$** (ನಾ). = ಚತ್ತರಿಗೆ : ಹೊಳೆವ ಮುತ್ತಿನ ಚತ್ರದ ನೆಳಲೊಳು ಬರುವಿಳೆಯಾಣ್ಮನಾರಬ್ಬನೇತ್ರ (ಕಂಸವಿ. ೨೩-೨೭). [ <ಸಂ. ಛತ್ರ ]

**ಚತ್ರಕೀಯ** (ನಾ). (?) : ಯತಿಯೊಳ್ ಗೋಪುಚ್ಛ ತನ್ನೊಳ್ ನೆಲಸಿ ನೆಗಟ್ಟಿನಂ ಮಾರ್ಗದೊಳ್ ಚತ್ರಕೀಯಂ[ಪಾಠಾಂ. ಚಕ್ರಚಕ್ರ]ಕೃತಕಕೂಟಾಡಂಬರಂ ರಂಜಿಸುವಿನಮೆಸೆಗುಂ (ಅಜಿಪು. ೫-೦೨). [ ? ]

**ಚತ್ರಿಕ್ಕೆ** 'ಛತ್ರಿ$_{೨}$' ನೋ.

**ಚತ್ವ** (ನಾ). ಚ ಎಂಬ ಅಕ್ಷರ : ಇರೆ ಯಲರಹಿತ ವ್ಯಂಜನ ಪರಮಾಗಿ ಸಕಾರವುಲ್ಲಿ ಬಹುಳಂ ಚತ್ವಂ (ಶಮದ. ೬೮). [ ಸಂ. ]

**ಚತ್ವರ** (ನಾ). ೧. ಚೌಕೋನಾಕಾರದ ಅಂಗಳ : "ಅಂಗಣದಲ್ಲಿಯುಂ ಚತ್ವರಮೆಂಬುದು" (ಹಲಾಯು. ೦೩೬-೩೦): "ಗೃಹಾಂಗಣಮನುಡಿಯುತ್ತ ಚತ್ವರಮೆಂಬುದು" (ಮಂಗರಾ. ೧೯೦-೦೬). ೨. ಯಜ್ಞಕ್ಕಾಗಿ, ಸಮತಟ್ಟಾಗಿ ಸಿದ್ಧಗೊಳಿಸಿದ ಭೂಭಾಗ. ೩. ಹಲವು ದಾರಿಗಳು ಕೂಡುವ ಸ್ಥಳ : ಸೂಳೆಗೇರಿಗಳೊಳಂ ಚತ್ವರಂಗಳೊಳಂ ಧರ್ಮದ ಚಾವಡಿಗಳೊಳಂ . . . ತವ್ಮ ಚಾರರಂ ನೆಲೆಗೊಳಿಸಿ (ಧಾರಶಾಂ. ೪೩೫-೭೦). [ ಸಂ. ]

**ಚದರ, ಚದರಂ$_{೨}$, ಚದುರಂ$_{೩}$** (ನಾ). ಚಚ್ಚೌಕ ; ಚೌರಸ : ಕೋಟಿ ಸುತ್ತಳತೆ ೩ ಚದರ ಮೈಲಿ (ದಿಲ್ಲಿಪ. ೩೪); ಏಷ್ಯಾಖಂಡವು ಸುಮಾರು ೧ ಕೋಟಿ ೭೦ ಲಕ್ಷ ಚದರ ಮೈಲುಗಳುಳ್ಳದ್ದಾಗಿಯೂ . . . ಇದೆ (ಭೂಗೋಳ. ೨೦). **ಚದರು$_{೩}$** : (೬). **ಚದುರು$_{೩}$** : 'ಚದುರುಬಿಲ್ಲೆ' ಪರಾ. [ <ಚತುರ$_{1}$ ? ]

**ಚದರಗಳ್ಳಿ, ಚತುರಕಳ್ಳಿ** (ನಾ). ಒಂದು ಬಗೆಯ ಕಳ್ಳಿ : ಬೊಂತೆಗಳ್ಳಿ, ಚದರಗಳ್ಳಿ (ವೃಜಿಗಿ. ೩೫-೬೯೦). **ಚತುರಕಳ್ಳಿ** : (೬). [ ಚದರ$_{0}$+ಕಳ್ಳಿ$_{೨}$ ]

**ಚದರಡಿ** (ನಾ). ಚೌರಸ ಅಡಿ ; ಒಂದು ಅಡಿ ಉದ್ದ ಹಾಗು ಒಂದು ಅಡಿ ಅಗಲವಾಗಿರುವುದು : ಗಾಳಿಗೆ ಅದರ ಮೈಯನ್ನು ಒಡ್ಡುವಾಗ ಒಂದು ಚದರಡಿ (೧೪೪ ಚದರ ಇಂಚು) ಸ್ಥಳವು ಸಿಗುವುದು (ಪಾಲಿಶ್ರ. I, ೪೧). [ ಚದರ + ಅಡಿ$_{1}$ ]

**ಚದರಾಸಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : (ವೃಜಿಗಿ. ೫೪-೦೦೯೦). 'ಚೇತರಾಶಿ' ಪರಾ. [ ಚದರಾಸಿ? + ಸೊಪ್ಪು$_{೩}$ ]

**ಚದರಿಸು** 'ಕೆದಱಿಸು' ನೋ.

**ಚದರು$_{1}$** 'ಕೆದಱ್$_{1}$' ನೋ.

**ಚದರು$_{2}$** 'ಚದರ' ನೋ.

**ಚದಲು** 'ಕೆದಱ್$_{1}$' ನೋ.

**ಚದಳು** 'ಕೆದಱ್$_{1}$' ನೋ.

**ಚದಿ** (ನಾ). ೧. ಮೊಂಡುತನ ; ಹಟ ; ಚಂಡಿತನ. 'ಚದಿಹಿಡಿ' ಪರಾ. ೨. ಮೋಸ ; ದ್ರೋಹ : ಆವಾಗ್ಯ ಅಪ್ಪಾಜೈಯನು ಈ ಗುಂಡು ಇಟ್ಟಾಡಿ ಚದಿಮಾಡಿದ ಪೂರ್ವೋತ್ತರ ಅರಿಕೆಮಾಡುವ ಬಗ್ಯೆ (ರಾಜೇಂದ್ರ. ೧೪೫) : "ನಾನು ಎಂದಿಗೂ ಚದಿಮಾಡುವುದಿಲ್ಲ" ಚೆಂಗುಮಣಿ ಪ್ರಭುಗಳ . . . ಪಾದ ಹಿಡಿದು ಪ್ರಮಾಣ ಮಾಡಿದ (ಹುಲಿಹಾ. ೧೨).

[ ←ತುಳು. ಕೊಡ. ಚದಿ ]

**ಚದಿಹಿಡಿ** (ಕ್ರಿ). ಚಂಡಿತನಮಾಡು ; ಮೊಂಡು ಹಿಡಿ ; ಹಟಮಾಡು : ಮಗು ಯಾಕೋ ಚದಿಹಿಡಿದಿದೆ (ರೂಢಿ). 'ಚಂಡಿಹಿಡಿ' ಪರಾ.

[ ಚದಿ + ಹಿಡಿ$_{1}$ (<ಪಿಡಿ$_{1}$) ]

**ಚದುಂಪಿಸು** 'ಚದುಪಿಸು' ನೋ.

**ಚದುಕ** (ನಾ). ನಾಲ್ಕು ಕಂಬಗಳ ಆಧಾರವುಳ್ಳ ಮಂಟಪ : ಮುದದೆಸೆದಿರ್ಪ ಬದ್ದವಣಮುದ್ದವಣಂ ರಿಪಿ ಪಾಟವಾಟವೆತ್ತಿದ ಗುಡಿ ತೋರಣಂ ಸಸಿ ಮೊಸರ್ ಪಸೆ ಸೇಸೆ ವಿಲಾಸಿನೀಜನಂ ಚದುಕಮಿಪ್ಪೊಡ್ಡುಗಟ್ಟಿ . . . ಕಟ್ಟಿದನಪರಾಜಿತಂಗೆ ಪರಮೋತ್ಸವದಿಂ ಯುವರಾಜಪಟ್ಟಮಂ (ಅರ್ಧನೇ. ೨-೩೯). [ <ಸಂ. ಚತುಷ್ಕ ]

**ಚದುಕು** 'ಸದಕು$_{1}$' ನೋ.

**ಚದುಪಿಸು, ಚದುಂಪಿಸು** (ಕ್ರಿ). ಮೋಸಮಾಡು ; ವಂಚನೆಮಾಡು ; ಮರುಳುಮಾಡು ; ನಂಬಿಸು : ಹೃದಯದ ಕಪಟವ ಕಾಣಿಸಿ ಕೊಳ್ಳದೆ ಮೃದುವಾಕ್ಯದಿಂದ ಸಜ್ಜನರಾ ಚದುಪಿಸಿ ಜೀವವ ಕೊಂಬ ಕೊಳರದೊಂದು ಚದುರು ಗೆಲುವರಳವಲ್ಲ (ಜಂಪ್ರಸಾಂ. ೧-೪೭) ; ಇದಕೆ ನಾವೊಬ್ಬರದೆ ಪಾದರಪ್ಪಾಜಿಯ ಮೃದುಪಾದಪದ್ಮಂಗಳಾಣೆ ಚದುಪಿಸಿ ನಮ್ಮನು ಮಾಱಿವರಿಂತು ಮಾಡಿದರದಕೇನಾಯ್ತು ಕೇಳು (ಭರಜ. ೫೭-೭೩). **ಚದುಂಪಿಸು** : ನಾಂ ಪಡೆಗೂಡಿ ಪೋಗುವೆನೆಂದು ಮಂತ್ರಿ ಚದುಂಪಿಸಿ ಬೀಳ್ಕೊಂಡನೊಡನೆ (ಭರಜ. ೫೭-೨೦). [ ಚದುಪು + – ಇಸು$_{೩}$ ]

**ಚದುಪು** (ನಾ). ೧. ಚದುರು; ಚಾತುರ್ಯ ; ಚಮತ್ಕೃತಿ : ನಿರ್ಭಯಂ ಯುತನಾಗಿ ಕಾಳಗದ ಚದುಪನು ನಿರೀಕ್ಷಿಸೆನುತಾತನಂ ಸೈತಿಟ್ಟು (ಜರಕು. ೨೮-೦೫); ಬವರದೊಳು ರಥವ ಚದುಪಿಂದೆನ್ನ ಬಲವರಿದು ರಥವ ಹರಿಸು (ತುರಂಗ. ೩೭-೪೬) : ಭೀಷ್ಮ ಚದುಪಿಂದ ಬಾಣಾಂಬುಧಿಯೊಳದ್ದಿದನು ಮಾರ್ಗವನು ಮಾರ್ಗಣಕೆ ಯಮನಗರಿಗೆ (ತುರಂಗ. ೪೭-೦೩). ೨. ವಂಚನೆ; ಕಪಟ; ಮೋಸ : ಈ ಮನಂ ಚದುಪು ಚಾಳಿಯವೆ ಮೆಯ್ಯಾಗಿರ್ಪುದು (ಮನೋವಿ. ೪-೨); ಗನ್ನಗದುಕು ಬಟೆಯ ಬೋಸರಣೆ ಚದುಪು ಬೆಳಕ್ಕೆ ಡಾಳಕತನ (ಜಂಪ್ರಸಾಂ. ೧೮-೮೫) : ನಾಭೀಕರ್ಣಕಾರವ ಚದುಪಿನಿಂದವ ಮತ್ತೆ ಸಂಧಿಸಿ ಗದೆಯೊಳಪ್ಪಳಿಸಾ ರಥಾಂಗವ ನಡೆಯ ಮಾಯಾವಿ (ಅಂಬಿಕಾ. ೩೮-೪೭). [ <ಚದುರ್ + – ಪು$_{೨}$./ತುಳು. ಚದುಪು ]

**ಚದುರ್, ಚದುರು$_{೩}$, ಚೆದುರು$_{೨}$** (ನಾ). ೧. ಜಾಣತನ; ಚಾತುರ್ಯ; ಕೌಶಲ ; ಬುದ್ಧಿವಂತಿಕೆ : "ಚದುರೆನೆ ಚಾತುರ್ಯಮಪ್ಪುದು" (ಚತುನಿ. ೪೪): ವಿಧಿ ರತ್ನವ್ರಾತಮಂತಃಪುರಂ . . . ಎಮ್ಮನೀಡಾಡಿ ಸಲ್ಗುಂ ನಿಧನಕ್ಕಂತಪ್ಪುವಂ ಮುಂ ಬಿಸುಡುವುದೆ ಚದುರ್ (ಆದಿಪು. ೪-೭೮) ; ಜಸಮಂ ಧರ್ಮಮುಮನುಪಾರ್ಜಿಸುವೊಡೆ ಚದುರದುವೆ ನಿಟ್ಟೆ ನಿಮಗೆ (ಅಜಿಪು. ೨-೭೮) : ಚದುರಿಂ ನಾಂಟೆ ವಿವೇಕದಿಂ ನ(ದೆ)ಡಪಿ . . . ಸಂಪದದಿಂದಂ ಫಲಮಾಯ್ತು ಸರ್ವಜನಕಂ ಶ್ರೀಶಿಷ್ಟಕಲ್ಪದ್ರುಮಂ (ಲೋಕೋಪ. ೦೨-೬೫) ; ಚಲ್ಲವಾಡುತ್ತೆ ಚದುರೊದವೆ ಬಣ್ಣಿಸುತೆ (ಪದ್ಮರಾ. ೭-೩೧). ೨. ಮೋಸದ ಮಾತು; ಸುಳ್ಳು ನುಡಿ. 'ಚದುಪು' ಪರಾ. **ಚದುರು$_{೩}$** : ೧. ಚದುರುಮಾರ್ತಿೀವ ಪೆಂಪುಂ ನುಡಿಯ ಬಲ್ಮೆಯುಂ (ಪಂಚತಂ. ೨೨-೧೪) : ವಿಲಾಸದ ತಾಣಂ ಚದುರಿಂಗೆ ತಾ[ಯ್ಗ]ಱ ವಿನೋದಕ್ಕಾದಿ (ಸುಕುಮಾ. ೧-೭೮) ; ಚದುರುಂ ವಿಕ್ಕಿರ್ದ ತಕ್ಕುಂ ನೆಲಸಿದ ಸೊಬಗುಂ . . . ಕೈಮಿಗೆ ನೆಲನನಿತಂ ಗೆಲ್ದ (ಕಬ್ಬಿಕಾ. ೦೧೯) ; ಅತಿ ಚದುರಿನಿಂ ವಾಮಲೋಚನೆ ಹೇಳುತಿರೆ (ಬಸಪು. ೧೨-೩೨) ; ಹೃದಯವನಿದಿರಿಗೆ ಕಾಣಿಸದಿರಬೇಕು ಹದಿರು ಚದುರುಗಳು ಬೇಕು (ಕುರಾಸಾಂ. ೨೪-೨೦): ಮೆಚ್ಚಿದನಭವನವನ ಚದುರಿಂಗೆ (ಚಬಪು. ೨೧-೧೫). ೩. ಚಮತ್ಕಾರದ ಮಾತು ; ವಕ್ರೋಕ್ತಿ : ಹದುರಿನ ನೆಲ ಚದುರಿನ ಚಾರಚಾವಡಿ ಮುದದ ಮಂದಿರ . . . ಎನಿಪ ಸೂಳೆಗೇರಿಯು (ಅಂಜಜ. ೩-೯೦); ಚದುರಂ ನುಡಿದ ನಾಲಗೆಯ ಮೊಟ್ಟಮೊದಲಿಗೆ ಕೊಯ್ದು (ಬಸಪು. ೪೫-೨೯) ; ವಿರಹ ಮೋಹನ ಲಲ್ಲೆ ಚಲ್ಲವು ಹದುರು ಚದುರುಗಳು (ಸಾಳ್ವಭಾ. ೧೭-೨೬); ಹದಿರು ಚದುರಿನಾಗರ ಠೌಳಿಯ ಪೇಟೆಯೊದವಿದ ಮೋಹನಶಾಲೆ

(ಕಂಸವಿ. ೨. ೮೭) **ಚದುರು₂:** ೧. ಗಂಡನನ್ನೂ ಕೂಡಿಕೊಂಡು ಬಂದು ಬಾಳ್ವೆ ಮಾಡುವ ಚದುರು ನಿನಗಲ್ಲದೆ ಇನ್ನಾರಿಗೆ ? (ಚವತಿ. ೮). ೩. ಅಳ್ಕಱಪ್ಪುಗೆ ಚೆಲ್ವಂ ಚದುರೋಜೆ ಚಾಟುತನವುಂದು . . . ಎಲ್ಲಮುವರ್ಗೇಂ ಮೈಸಂದು ಮಚ್ಚಿದರ್ದರ್ದೋ (ರಾಜಶೇ. ೧೦-೮೩).

[ ದೇ. ಈ ತಮಿ. ಚತುರ್ ; ತುಳು. ಚದುರ ; ತೆಲು. ಚದುರು. ]

**ಚದುರ** (ಗು). ೧. ಜಾಣತನದಿಂದ ಕೂಡಿದ ; ಜಾಣ್ಮೆಯ. 'ಚದುರ ಗೊಟ್ಟಿ' ಪರಾ. ೨. ಸೊಗಸಾದ ; ಮನೋಹರವಾದ. 'ಚದುರ ವಚ್ಚ', 'ಚದುರವನ' ಪರಾ. (ನಾ). ೩. ಜಾಣ ; ಬುದ್ಧಿವಂತ ; ಕುಶಲ : "ಚದುರಂ ಚತುರಂ" (ಕವಿಕಂ. ೨೫೭) ; ಆ ನಾಡವರ್ಗಳ್ ಚದುರರ್ ನಿಜದಿಂ ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್ (ಕವಿರಾ. ೦-೩೮) ; ಏಂ ಚದುರಂ ಗಳ ಬದ್ದ ದ ಲ್ಲ ಟ ಂ (ಪಂಪಭಾ. ೩-೮೨); ಓದುಗಳಂ ಬಲ್ಲ ಚದುರರೇನಾನುಮೊಂದನೆಲ್ಲಾತೆಱದಿಂ ಮಾಟ್ಪರ್ (ಪಂಚತಂ. ೭೩-೦) ; ಭುವನದಲಿ ಬಾಹಿರರಾವು ನೀವತಿ ಚದುರ ರಾದಿರಲಾ (ಕುಮ್ಮಾಳ. ೯-೧೭) ; ಚದುರರ ತಲೆವಣಿ ತದ್ಭವ ಮೋಕ್ಷ ಸಂಪದನ ಬಣ್ಣಿಸಲೆನ್ನ ಹವಣೆ (ಭರತೇ. ೦-೨೦). [ <ಸಂ. ಚತುರ ]

**ಚದುರಂಗ₁** (ನಾ). ೧. ರಾಜ, ಮಂತ್ರಿ, ಆನೆ, ಕುದುರೆ, ಒಂಟೆ, ಕಾಲಾಳುಗಳೆಂಬ ಕಾಯಿಗಳನ್ನು ಇಟ್ಟುಕೊಂಡು ಅರುವತ್ತುನಾಲ್ಕು ಮನೆಗಳ ಪಟದಲ್ಲಿ ಆಡುವ ಒಂದು ಬಗೆಯ ಆಟ : ನೆಲನೊಡ್ಡಿನಿಂದ ಚತುರಂಗವುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮನೆಯನಲ್ಲಿಗೆದಂತಪ್ಪನೆಗಂ (ಪಂಪಭಾ. ೧೦-೬೦) : ಚದುರಂಗದ ನೆತ್ತದ ಗೌರವದ ಗೊಟ್ಟುಗುಟುಱಿಯಂ ಮುಟ್ಟಂ ಮನೆಯೊಳ್ ಪಡೆದಿರಿಸುಗೆ ತಾನುಂ ಕಲ್ಪುದು ಗಣಿಕೆಗವದನೆ.ಕಲಿವುದತಿನಯದಿಂದಂ (ಮುದತಿ. ೧೦-೩೦) ; ಸರಿ ಸದ ಮೇಲೆ ಹಿಡಿಯ ಹೋದಡೆ ಚದುರಂಗದ ಮೇಲೆ ಮಸಿಯ ಕೋಱಿದ (ಬಸವ. ೭೨೪) ; ಆಡುವ ಪಗಡೆ ಲೆತ್ತ ಚದುರಂಗಂಗಳಂ ಬಿಸುಟ್ಟೋಡು ತಿಹ . . . ಅಖಿಳ ಸ್ತ್ರೀಯರುರು (ಚಬಸು. ೦೯-೨೮). ೨. [ಸಂಗೀತ]ರಾಗದ ಒಂದು ಬಂಧ (?) : ನಿಬದ್ಧ ಗಾಯನದಲ್ಲಿ (೧) ಬರೇ ರಾಗಗಳು ಪ್ರಧಾನವಾದ ಪ್ರೌಢಬಂಧಗಳೂ (ಧ್ರುವ, ಪದ, ವರ್ಣ, ಗೀತ, ಸ್ವರಜತಿ, ತಿಲ್ಲಾನ, ತ್ರಿವಟ್, ಚದುರಂಗ, ಪಲ್ಲವಿ ಇತ್ಯಾದಿ) . . . ಕೃತಿಗಳೂ ಸೇರುತ್ತವೆ (ಭಾರಸಂ. ೫೪೨). [ <ಸಂ. ಚತುರಂಗ ]

**ಚದುರಂಗ₂** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಹೂವು: ಬೀದಿಯ ಬದಿ ಬದಿಗೆ ಚದುರಂಗವುದುರ್ಯಾವು (ಹೂಹಾದಿ. ೪೯-೦). [?]

**ಚದುರಂಗಕಾಱ** (ನಾ). ಚದುರಂಗದಾಟವನ್ನು ಆಡುವವನು : ಚದು ರಂಗಕಾಱರ . . . ಬೀಣೆಗಾಱರಾಗರಮನೆ ಪೆಂಪು ಸೊಂಪನೊಳಕೊಂಡೆಸೆ ದಿರ್ಪುವು ಸೂಳೆಗೇರಿಗಳ್ (ಕಬ್ಬಿಗಕಾ. ೪೨). [ ಚದುರಂಗ₁ + – ಕಾಱ ]

**ಚದುರಂಧರ** (ನಾ). (?) : ಅದಱಿಂ ಭೃತ್ಯರ್ ನಾಲ್ವರ್ ಚದುರಂಧರರಲ್ಲಿ ಪುಯಿಯನಿನಿಸೊಲ್ಲದನುಂ ಸದಮಳ ನಿರ್ಮಳನುಮಂತೆ . . . ವಿನಯಾ ಸ್ಪದನುಂ (ಮುದತಿ. ೭೦-೩೫). [ ? ]

**ಚದುರಗೊಟ್ಟಿ** (ನಾ). ಜಾಣ್ಮೆಯ ಮಾತು; ಚತುರ ಸಲ್ಲಾಪ. 'ಚದುರ ಗೊಟ್ಟಿಗ' ಪರಾ. [ ಚದುರ + ಗೊಟ್ಟಿ₁ ]

**ಚದುರಗೊಟ್ಟಿಗ** (ನಾ). ಚತುರನಾದ ಮಾತುಗಾರ : ವಿಳಾಸದ ಕಣಿ ಯಲ್ಲಿದಂ ಚದುರಗೊಟ್ಟಿಗ[ಪಾಠಾಂ. ಪುಟ್ಟಿದ]ನೆಲ್ಲಿದಂ (ಆದಿಪು. ೩-೦೫) ; (ರಸರ. ೧-೮೮ ಸೂ೬). [ ಚದುರಗೊಟ್ಟಿ + – ಗ₂ ]

**ಚದುರತನ** (ನಾ). ಜಾಣ್ಮೆ ; ಚತುರತೆ; ಚಾತುರ್ಯ: ತನಕ್ಕೆ–ಕಲಿತನಂ, ಚದುರತನಂ, ಅಳ್ತನಂ (ಶಮದ. ೨೦೦ ಪ್ರಯೋ). [ ಚದುರ + – ತನ ]

**ಚದುರತೆ** (ನಾ). = ಚದುರತನ: ಆ ಹೆಣ್ಣು ನಡಿಸಿದ ಕಡು ಚದುರತೆಯನೇ ವೇಳ್ವೆ (ಕಂಸವಿ. ೬-೦೭೩). [ <ಸಂ. ಚತುರತಾ ]

**ಚದುರಭಟ** (ನಾ). ಚತುರನಾದ ಭಟ–ಸೈನಿಕ : ಲಲಿತ ಚಿತ್ರದ ಚದುರ ಭಟರವ್ವಳಿಸಿ ಹೊಯ್ದಾಡಿದರು (ಕುಮ್ಮಾದ್ರೋ. ೦೪-೮). [ ಚದುರ + ಭಟ ]

**ಚದುರವಚ್ಚ** (ನಾ). ಸೊಗಸಾದ ಆಭರಣ; ಮನೋಹರವಾದ ಒಡವೆ : ಚದುರವಚ್ಚದಿ ಕಲಿತ ಮುರಜಾನುಮೋದಕರ ತರುಣಿಯರ ಕಂಡನಾಗ (ಪಂಕಾರಾ. ೫-೪-೦೦). [ ಚದುರ + ವಚ್ಚ₂ ]

**ಚದುರವನ** (ನಾ). ಮನೋಹರವಾದ ಉದ್ಯಾನ ; ಸೊಗಸಾದ ವನ : ವಿಪಣಿಯನಂಗನ ಚದುರವನದೊಲೆಸೆದತ್ತು (ವರ್ಧಮಾ. ೦-೦೦೨). [ ಚದುರ + ವನ ]

**ಚದುರಸ** 'ಚತುರಸ' ನೋ.

**ಚದುರಸಿಕೆ** 'ಚದುರಸಿಗೆ' ನೋ.

**ಚದುರಸಿಗೆ, ಚದುರಸಿಕೆ** (ನಾ). ಚಚ್ಚೌಕವಾದ ವಸ್ತ್ರ ; ನಾಲ್ಕು ಮೂಲೆ ಯಿರುವ ಮೇಲುಹೊದಿಕೆಯ ಬಟ್ಟೆ; ಚೌಕ : ಕುದುರೆಯಿಂದಿಱಿದು ಪಲ್ಲಣವಂ ಚದುರಸಿಗೆಯುಮಂ ಕೀಟುವಂ ಕಳೆದು (ವಡ್ಡಾರಾ.೧೭೫-೨೦). **ಚದುರಸಿಕೆ:** ಗೊಲ್ಲನು ನದಿಯ ಸ್ನಾನವ ಮಾಡಿಕೊಂಡು ಮದನ ತಿಲಕವ ಫಣೆಯೊಳಿಟ್ಟು ಚದುರಸಿಕೆಯನು ಹಾಕಿದ (ಗೋಹಾಚ. ೨೪). [ <ಸಂ. ಚತುರಶ್ರಕ ]

**ಚದುರಾಂಗರನಯ್ಯ** (ನಾ). ಒಬ್ಬಾತನ ಹೆಸರು : ಇದಾರ್ಕ್ಕೆ ಸಾಕ್ಷಿ ಚದುರಾಂಗರನಯ್ಯ ಮಾರಸಿಙ್ಗನಾಯ್ಯ ಈಸರಯ್ಯ ಜಯಸಿ × × ಙ್ಗ (ಮೈಶಾಶ. ೧೯೪೨, ೪೭-೨೬ : ಸು. ೭೪೦). [ ? ]

**ಚದುರಿಕೆ** (ನಾ).=ಚದುರತನ: ಮರುಳೆ ಮರುಳ್ತನದಿಂದುರ್ವರೇಶನಾಸ್ಥಾನ ರಂಗದೊಳ್ ನೀಂ ಪಿತ್ತಜ್ವರಮಾದರಂತೆ ಗಟವುವ ಸಿರಿಸಿಲ್ಲದೆ ನುಡಿವ ಬಡತನಂ ಚದುರಿಕೆಯೇ (ಧರ್ಮಾಮೃ. ೯-೦೧೪) [ ಚದುರ್ + – ಇಕೆ ]

**ಚದುರಿಗ** (ನಾ). ಜಾಣ ; ಬುದ್ಧಿವಂತ : ಕುಡುವುದು ಕುಡದೊಡಂ ನಡೆಯದು ಪಿರಿದೀಯದೊಡೆ ಸೊಡರ್ಗುಡಿಗೆಣ್ಣೆಯಱಿವಂತೆ ಬೆಲೆವೆಣ್ಣ ಕುಡುವುದು ಹದಕೆ ಚದುರಿಗಂ (ಅನಂಪು. ೮-೨೬). [ ಚದುರ್ + – ಇಗ ]

**ಚದುರಿಗತನ** (ನಾ).=ಚದುರತನ: ಧರಣೀಪತಿಯನುಪಚರಿಸಿದನು ಚದುರಿಗ ತನದಿ ಧೃತರಾಷ್ಟ್ರ (ಕುಮ್ಮಾಸ. ೧೬-೪೩). [ ಚದುರಿಗ + – ತನ ]

**ಚದುರಿಸು₁** (ಕ್ರಿ). ೧. ಜಾಣತನದಿಂದ ಮುಚ್ಚು, – ಮರೆಮಾಡು : ಠಕ್ಕನ ಠಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉರಿವ. ೨೯-೦೦); ಇದನೊರ್ವ ತಸ್ಕರಂ ತದ್ಗುಣಾಂಬೋಧಿಯಂ ಚ[ಪಾಠಾಂ. ಚಿ]ದುರಿಸಿ ಬಳಿಕ್ಕ ಕಳ್ದೀಜ (ಸುಮ್ಮನಾ. ೧೧-೬೬). ೨. ಸೊಗಸುಗೊಳಿಸು ; ಕೌಶಲ ವನ್ನು ತೋರು : ಎದೆಯಲ್ಲಿ ಕೊರಳಲ್ಲಿ ಶ್ರೀಗಂಧರೇಖೆಯ ಚದುರಿಸಿ ತಿದ್ದಿತಿಲ್ಲಾಗ (ಭರತೇ. ೦೬-೦೩). [ ಚದುರ್ + – ಇಸು₃ ]

**ಚದುರಿಸು₂** 'ಕೆದಱಿಸು' ನೋ.

**ಚದುರು₁** 'ಕೆದಱ್₁' ನೋ.

**ಚದುರು₂** 'ಚದುರ್' ನೋ.

**ಚದುರು₃** 'ಚದರ' ನೋ.

**ಚದುರುಗೆಡಿಸು** (ಕ್ರಿ). ಬುದ್ಧಿಗೆಡಿಸು ; ಮಂಕುಗೊಳಿಸು ; ಮೋಸ ಗೊಳಿಸು : ಮಾಯೆಯು ಚೆಲುವಿನಂತಿರೆ ಚದುರುಗೆ[ಪಾಠಾಂ. ಕೆ]ಡಿಸಿತು ತಿಳಿಯಲರಿದೆನಿಸಿ (ಕುಮ್ಮಾಅ. ೨೩-೦೬). [ ಚದುರುಗೆಡು (<ಚದುರ್ಗೆಡು) + – ಇಸು₃ ]

**ಚದುರುಗೆಡು** 'ಚದುರ್ಗೆಡು' ನೋ.

**ಚದುರುನುಡಿ** (ನಾ). ಚಾತುರ್ಯದ ಮಾತು ; ಜಾಣ್ನುಡಿ : ಕನ್ನಡ ಸಾಹಿತ್ಯದ ಐಶ್ವರ್ಯ ಅದರ ಚದುರುನುಡಿಗಳಲ್ಲಿ ಅಡಗಿದೆ (ಕಾವ್ಯಕು. ೪೨) [ ಚದುರು₂ (<ಚದುರ್) + ನುಡಿ₂ ]

**ಚದುರುಬಿಲ್ಲೆ** (ನಾ). ಚಚ್ಚೌಕವಾದ, ನೆಲಕ್ಕೆ ಹಾಕುವ ಬಿಲ್ಲೆ.-ಹೆಂಚು: ಚದುರುಬಿಲ್ಲೆಯ ನೆಲವು ಬಹುಬೇಗ ಕೊಳೆಯಾಗಿಬಿಡುತ್ತದೆ (ಗೃಹವಿ. ೧೭೨). [ ಚದುರು$_3$ (<ಚದರ) + ಬಿಲ್ಲೆ ]

**ಚದುರುವಾತು** (ನಾ).=ಚದುರಂನುಡಿ : ಮುದವೆತ್ತು ಕಮಲದಳಾಯತಾಕ್ಷಗೆ ಹಲಾಯುಧ ಪೇಳ್ದ ಚದುರುವಾತಿನಲಿ (ಜೋಹಕ. ೦೪-೩). [ ಚದುರು$_2$ (<ಚದುರ್) + ಮಾತು$_1$ ]

**ಚದುರೆ** (ನಾ). ಜಾಣೆ ; ಕುಶಲೆ; ಚತುರೆ : ಕಕ್ಕನ ಕಕ್ಕಿಪ ತೆಱನನು ಚದುರೆ ಚದುರಿಸದ ನೀನುಸಿರಾ (ಅರವ. ೨೪-೦೦) ; ತಾನವಂ ಚದುರಂ, ತಾನವಳ್ ಚದುರೆ (ಶಮದ. ೦೪೩ ಪ್ರಯೋ) ; ಚದುರೆಯ ಚಟುಲ ಚಕೋರಾಕ್ಷಿಗಳೊಳಗೊದವಿದ ಮೂಱವಣ್ಣದ ರುಚಿಯವಳಿಚಿವುದಕದೊ ಳೊಡವೆರೆಯಲು (ಜಯಹಾ. ೧-೯೨) ; ನುಣ್ಗೊರಲು ಬೆರಲೊಂದಾದುದೆನೆ ಬಾಜಿಸಿದಳಾ ಚದುರೆ(ಸಾಳ್ವಭಾ. ೬೮-೭); ಕುದುರೆಯ ಚದುರೆಯ ಹದಿರೆರಡು ಒಂದಯ್ಯ (ಸರ್ವಜ್ಞ. ೧೬೬೭). [ ಚದುರ + -ಎ$_2$ ]

**ಚದುರೆವೆಣ್** (ನಾ). ಜಾಣೆಯಾದ ಹೆಂಗುಸು ; ಚತುರೆಯಾದ ಸ್ತ್ರೀ : ವದನಕ್ಕೆ ಮುಸಿಸುಣ್ಣವ ಬರೆಯಿಸಿಕೊಂಡ ಚದುರೆವೆಣ್ಣಲ್ಲವೆ ನೀನು (ಕಂಪವಿ. ೬-೦೮೬). [ ಚದುರೆ + ಪೆಣ್ ]

**ಚದುರೇರು** (ಕ್ರಿ). ಜಾಣ್ಮೆ ಹೆಚ್ಚಾಗು ; ಚಾತುರ್ಯ ಹೆಚ್ಚಾಗು : ಹಿಂದಿನ ಸವಿಗೊರಳು ಕುದುರಿದ ಕೋಗಿಲೆಯದು ಚದುರೇರಿ ಹಾಡ ತೊಡಗಿದುದು (ನಾಡೋಜ. ೦೬೫). [ ಚದುರ್ + ಏರು$_1$ (<ಏಱ್$_1$) ]

**ಚದುರೋಕ್ತಿ** (ನಾ).=ಚತುರೋಕ್ತಿ : ಹಸುಳರ ಪಾಳಿಗರ ಚದುರೋಕ್ತಿ ನಮಗೇಕೆಂದಳವರೊಡನೆ (ತೊರರಾ. ೨-೧-೨೭). [ <ಸಂ. ಚತುರೋಕ್ತಿ ]

**ಚದುರ್ಗಿಡು**, ಚದುರಂಗೆಡು (ಕ್ರಿ). ಬುದ್ಧಿ ಮಂಕಾಗು ; ಚಾತುರ್ಯ ಕೆಡು : ಕುದುಗುಳ್ವ ರಕ್ಕಸರ್ ಬಿಸುಗೆಗಳ್ವೆರಸುಗ್ರಮಹಾಗಜಂಗಳಂ ಚದುರ್ಗಿಡೆ [ಪಾಠಾಂ. ಗಜಂಗಳಂ ಚಲುಂಗಡೆ ಬಿಡೆ] ನುಂಗಿ ಬಿಕ್ಕಿ ಕುಡಿದರ್ ಬಿಸುನೆತ್ತರ ಕಾಟ್ಟುರಂಗಳಂ (ಶಂಪಭಾ. ೧೨-೮); ಮದುವೆಯ ದಿವಸದಂದು ಬರವೇಟ್ಟುದು ನೀನೆಂದೆನ್ನನಂದು ನೀಂ ಚದುರ್ಗಿಡೆ ನುಡಿದೊಡಾಂ ನುಡಿದ ನನ್ನಿಗೆ ವಂದೆಂ (ಸುಕುಮಾ. ೭-೨೨). **ಚದುರುಗೆಡು** : ಇದನು ನೀನನು ಭವಿಸಲೊಲ್ಲದ ಚದುರುಗೆಡು[ಪಾಠಾಂ. ಡೆ]ವರೆ (ತೊರರಾ. ೫-೬-೩೭). [ ಚದುರ್ + ಕಿಡು (<ಕಿಡು$_1$) ]

**ಚದ್ದರು** 'ಚಾದರ' ನೋ.

**ಚನ** (ನಾ). ಕಡಲೆ : ಕಡಲೆ, ಚನ (ಬ್ರುಜಿಗಿ. ೨೦-೩೯೨). [ ←ಹಿಂ. ಚನಾ. / ಸಂ. ಚಣಕ ]

**ಚನಕು** (ಕ್ರಿ). ರೇಗಿಸು ; ಪೀಡಿಸು ; ಕೆರಳಿಸು : ಚೇಷ್ಟೆಗಳಲಖಿಳ ದೇವಾಸುರರನು ಚನಕಿ ನಾನಾಪರಿಯ ಕುಣಿಸಿ ಕೂಗಿಸಿ ಕೊಡಹಿ ಕಿನಿಸು ಭ್ರಾಂತಿ ವಿಕಾರಿ ಎನಿಸುತಂ (ವಂಶಾರಾ. ೨-೩೫-೨೫) ; ನಿದ್ರೆಯಿಂದಿರ್ಪ ನೀ ದೈತ್ಯಪತಿಯವನ ಚನಕಿದರೆ ಕಲ್ಪಾಂತರುದ್ರನಂದದಲಸುರವಡೆಯ ನುಂಗದೆ ಮಾಣನು (ವಂಶಾರಾ. ೬-೨೫-೧೫). [ ←ತೆಲು. ಚೆನಕು, ಚೆಣುಕು ]

**ಚನಪೌಸ** (ನಾ). ಒಬ್ಬಾತನ ಹೆಸರು : ಶ್ರೀ ಚನಪೌಸ (ಎಕ. II, ೯೫೧ : ಸು. 1000). [ ? ]

**ಚನ್ನ$_1$** 'ಚೆನ್ನ' ನೋ.

**ಚನ್ನ$_2$** (ಗು). ಮುಚ್ಚಲ್ಪಟ್ಟ ; ಆಚ್ಛಾದಿಸಿದ : ಛನ್ನ, ಚನ್ನ (ಶಬ್ದಾನು. ೦೯೨ ಪ್ರಯೋ). [ <ಸಂ. ಛನ್ನ ]

**ಚನ್ನಂಗ** 'ಚೆನ್ನಂಗಿ' ನೋ.

**ಚನ್ನಂಗಿ$_1$** 'ಚೆನ್ನಂಗಿ' ನೋ.

**ಚನ್ನಂಗಿ$_2$** 'ಚಣಗೆ' ನೋ.

**ಚನ್ನಂಗಿನರಿ** (ನಾ). ಒಂದು ಬಗೆಯ ನರಿ : ಸೀಳುನಾಯಿ, ಕೆಂಪುನರಿ, ಚನ್ನಂಗಿನರಿ (ನಮ್ಮನು. ೨೩೯). [ ಚನ್ನಂಗಿ$_1$ + ನರಿ ]

**ಚನ್ನಂಗಿಬಿದಿರು** 'ಚೆನ್ನಂಗಿಬಿದಿರು' ನೋ.

**ಚನ್ನಂಗಿಬೇಳೆ** (ನಾ). ಒಂದು ಬಗೆಯ ತೊಗರಿ ಬೇಳೆ : ಚನ್ನಂಗಿ ಬೇಳೆ ತುಂಬ ಬೇಗ ಬೇಯುತ್ತದೆ (ರೂಢಿ). [ ಚನ್ನಂಗಿ$_2$ (<ಚಣಗೆ) + ಬೇಳೆ ]

**ಚನ್ನಂಗಿಮರ** (ನಾ). ಒಂದು ಬಗೆಯ ಮರ : (ಮೃಜಿಗಿ. ೪೯-೯೭೫). [ ಚನ್ನಂಗಿ$_1$ (<ಚೆನ್ನಂಗಿ) + ಮರ$_1$ ]

**ಚನ್ನಕಳನಿ** (ನಾ). ಕೆಂಪು ಭೂಮಿ; ಕೆಬ್ಬೆ(?) : ವೆಲ್ಲ ಸಮ್ಮಂಗೆ ಕೊಟ್ಟೋದು ಕಂಡುಗದಯ್ಗುಳ ಕಳನಿಯುಂ. ಚನ್ನಕಳನಿವೆಲೆತೋಟ್ಟಪಟ್ಟು . . . ಮೇಲೆ ಎಣ್ಣೆಣ್ಣುಗಂ (ಎಕ. X, ಮುಳುಬಾ. ೮೦-೭ ; 767). [ ಚನ್ನ$_1$ (<ಚೆನ್ನ) + ಕಳನಿ (<ಕಟನಿ) ]

**ಚನ್ನಡಿ** 'ಚೆನ್ನಡಿ' ನೋ.

**ಚನ್ನತು** 'ಚೆನ್ನಿತ್ತು' ನೋ.

**ಚನ್ನಪ್ಪೆಯ** (ನಾ). ಒಬ್ಬಾತನ ಹೆಸರು : ಶ್ರೀಮತ್(ಮಂಚ್)ಚ್ಛ(ಚ್ಛ)ನ್ನಪ್ಪೆಯ ಭಟ್ಟಾಯ (ಇಆ. XII, ೨೬೬-೫೦ ; 972). [ ಚನ್ನ$_1$ (<ಚೆನ್ನ) + ಅಪ (<ಅಪ್ಪ$_1$) + ಅಯ$_1$ (<ಅಯ್ಯ$_1$) ]

**ಚನ್ನಭಕ್ತಿ** 'ಚೆನ್ನಭಕ್ತಿ' ನೋ.

**ಚನ್ನಯ್ಯ** (ನಾ). ಒಬ್ಬಾತನ ಹೆಸರು: ಶ್ರೀಮಂ ಬಲದೇವನಂ ಗೋವಣ್ಣಯ್ಯ[ನುಂ] [ಚ]ನ್ನಯ್ಯ × × ತದಿಬ್ಬು (ಸೌಇಇ. XI-1, ೦೩-೮ : 869). [ ಚನ್ನ$_1$ (<ಚೆನ್ನ) + ಅಯ್ಯ$_1$ ]

**ಚನ್ನರಸಿ** (ನಾ). ಚೆಲುವೆಯಾದ ಅರಸಿ ; ಸುಂದರಳಾದ ರಾಣಿ : ನನ್ನ ಚನ್ನರಸಿ ಗೌರಿ ಸತ್ತಿಲ್ಲ (ತುಂಗಭ. ೫೭). [ ಚನ್ನ$_1$ (<ಚೆನ್ನ) + ಅರಸಿ ]

**ಚನ್ನಿ** 'ಚೆನ್ನಿ' ನೋ.

**ಚನ್ನಿಗ** 'ಚೆನ್ನಿಗ' ನೋ.

**ಚನ್ನಿಗತನ** 'ಚೆನ್ನಿಗತನ' ನೋ.

**ಚನ್ನಿಗರಾಯ** 'ಚೆನ್ನಿಗರಾಯಂ' ನೋ.

**ಚನ್ನು** 'ಚೆನ್ನು' ನೋ.

**ಚನ್ನೆ** 'ಚೆನ್ನೆ$_1$' ನೋ.

**ಚನ್ನೆಗ್ಗಿಲು** 'ಚೆನ್ನೆಗ್ಗಿಲು' ನೋ.

**ಚನ್ನೆಮಣೆ** 'ಚೆನ್ನೆಮಣೆ' ನೋ.

**ಚನ್ನೆಯ್ದಿಲ್** 'ಚೆನ್ನೆಯ್ದಿಲ್' ನೋ.

**ಚನ್ನೈದಿಲು** 'ಚೆನ್ನೆಯ್ದಿಲ್' ನೋ.

**ಚಪ** (ನಾ). ಬಿದಿರು ; ವೇಣು : "ತ್ವಚಿಸಾರಃ, ಚಪಃ, ವಂಶಃ, ವೇಣುಃ, ತ್ವಕ್ಸಾರಃ, ಮಸ್ಕರಃ-ಈ ೬ ಬಿದಿರ್" (ಹಲಾಯು. ೩೪-೫೦) ; "ವಂಶಂ ಚಪಂ ಮಸ್ಕರಂ ವೇಣು ತ್ವಕ್ಸಾರಮೆನಲುಂ ಬೆಸ್ಸು ಬಿದಿರಕ್ಕು" (ಮಂಗರಾ. ೩೬-೨೩). [ ಸಂ. ]

**ಚಪಕ್** (ನಾ). ಒಂದು ಅನುಕರಣ ಶಬ್ದ : ಸಣ್ಣಸಣ್ಣ ತೆರೆಗಳು 'ಚಪಕ್ ಚಪಕ್' ಯೆಂದೆನ್ನುತ್ತ . . . ಬಂದಪ್ಪಳಿಸುತ್ತಿದ್ದವು (ಪ್ರತಿಬಿಂ. ೩೦). 

**ಚಪಕಾರಕ** (ನಾ). ಬಿದಿರಿನ ಕೆಲಸಮಾಡುವವನು ; ಮೇದ : "ವಂಶಚ್ಛೇದಿ ಚಪಕಾರಕಂ ಮೇದಂ" (ಮಂಗರಾ. ೧೧೦-೨). [ ಸಂ. ]

**ಚಪಗಾಲು** 'ಚಪ್ಪಂಗಾಲು' ನೋ.

**ಚಪಗೊಡಲಿ** 'ಚಪ್ಪಗೊಡಲಿ' ನೋ.

**ಚಪಡಿ** (ನಾ). (ಕರಾ) ೧. ಇಂದ್ರಜಾಲ. ೨. (ಅಲಂ) ಕುಯುಕ್ತಿ ; ಮೋಸ : ಏನೆಲ್ಲ ಚಪಡಿಮಾಡಿ ಶ್ರೀಪಾದಂಗಳವರ ಮನಸ್ಸೇ ತಿರುಗಿಸಿಬಿಟ್ಟರೋ (ವಾಗ್ದೇವಿ. ೩೭). [ ←ತುಳು. ಚಪ್ಪಡಿ ]

**ಚಪರಾಶಿ** 'ಚಪರಾಸಿ' ನೋ.

**ಚಪರಾಸಿ**, ಚಪರಾಶಿ, ಚಪ್ರಾಸಿ, ಛಪ್ರಾಸಿ (ನಾ). ಬಿಲ್ಲೆ ಧರಿಸಿದ ಊಳಿಗದವನು ; ಕಚೇರಿಯ ಸಿಪಾಯಿ : ಚಪರಾಸಿ ದಾದೂ ಅತ್ತ ಇತ್ತ ಅಲೆದಾಡಿ ಒಳಗೆ ಬಂದು ಹೇಳಿದ (ಜೀವರಂ. ೦೩) : ಬೆಲ್ಲನ್ನು ಬಾರಿಸಿ ಒಮ್ಮೆಲೇ ಚಪರಾಸಿಯನ್ನು ಕೂಗಿದರು (ಕನಸಿ. ೦೨೪). **ಚಪರಾಶಿ :** ಚಪರಾಶಿಯೂ ಒಳಗೆ ಮ್ಯಾನೇಜರರಿಲ್ಲದ ಸಂಧಿ ಸಾಧಿಸಿ . . . ತನ್ನ ಪ್ರೇಮಪಾತ್ರದ ಕಡೆಗೆ ಹೋಗಿದ್ದ (ಪ್ರೋಜೀವ. ೭೨). **ಚಪ್ರಾಸಿ :** ಕಾರ ಕೂನ, ಗೇಟ್‌ಮನ್, ಚಪ್ರಾಸಿ, – ವ್ಯಂಜನ ವರ್ಗೀಕರಣ ! (ಚಿಂತನ. ೬೦-೦೩) ; ಚಪ್ರಾಸಿಯನ್ನು ಕರೆದು ಅಪ್ಪಣೆಕೊಟ್ಟರು (ಇಪ್ಪಳ. ೮೯). **ಛಪ್ರಾಸಿ :** ಅಂವಾ ಮಾಮಲೇದಾರ. ನಾನು ಛಪ್ರಾಸಿ (ಜೀವರಂ. ೩) ; ಏ ಛಪ್ರಾಸಿ . . . ನಿನ್ನೆ ಪಾರ್ಸಲ್ ಬಂದದಲ್ಲಾ, ಅದನ್ನ ತಗೊಂಡು ಬಾ (ಫಲಸಂ. ೬೦). [←ಹಿಂ. ಚಪರಾಸೀ; ಮರಾ. ಚಪರಾಸೀ, ಚಪರಾಶೀ]

**ಚಪಲ**, ಚಪಳ₂ (ಗು). ೧. ಅತ್ತಿತ್ತ ಚಲಿಸುವ; ಅಸ್ಥಿರವಾದ ; ಚಂಚಲ: ಚಪಲ ಚಕೋರಲೋಚನೆಯ ವಾರ್ತೆಗೆ ಚಿತ್ತಮನೊಲ್ದು ಮಾಡಿ(ಅದ್ಭುತ. ೬-೨). 'ಚಪಲಚಿತ್ತ' ಪರಾ. ೨. ವೇಗಶಾಲಿಯಾದ ; ಚಟುವಟಿಕೆಯುಳ್ಳ; ಚುರುಕಾದ: ಕುಳಿಂದಕನೆಂಬ ಬೇಡದೊರೆ . . . ಚಪಲ ಹಯವನ್ನೇರಿ ಬಿಲ್ಲು ಹಿಡಿದು ಅತಿವೇಗದಿಂದ ಬೆಂಬತ್ತಿದ (ಅದುರಿ. ೦೩೪). ೩. ದುಡುಕಿನ ಸ್ವಭಾವದ ; ಹಿಂದೆ ಮುಂದೆ ನೋಡದೆ ಮುನ್ನುಗ್ಗುವ ; ವಿವೇಕವಿಲದೆ ತಪ್ಪುಮಾಡುವ. ೪. ಕ್ಷಣಿಕವಾದ ; ಆ ಕ್ಷಣದ. ೫. ತಲ್ಲಣಗೊಂಡ ; ತಳಮಳ ಹೊಂದಿದ. (ನಾ). ೬. ಚಂಚಲತೆ ; ಅಸ್ಥಿರತೆ. ೭. ವೇಗ ; ಶೀಘ್ರತೆ. ೮. ಪಾದರಸ ; ಪಾರದ : " ಪಾರದಂ ಚಪಲಮನೆ ರಸಮೆನಿಕ್ಕುಂ" (ಮಂಗರಾ. ೯೬-೦೩). ೯. ತೀವ್ರವಾದ ಆಸೆ; ವಿಶೇಷಾಸಕ್ತಿ: ಯಾವ ಕರ್ಮಶೇಷ ನನ್ನಲ್ಲಿಂತಹ ಚಪಲವನ್ನು ಪ್ರೇರೇಪಿಸುತ್ತಿದೆ? (ಚಿತಂಬಾ. ೨೨); ಓಡುವ ಕುದುರೆಯನ್ನು ಕಂಡಾಗ ನಾನೂ ಸವಾರಿ ಮಾಡಬೇಕೆಂಬ ಚಪಲ ಮನಸ್ಸಿಗೆ (ಹುಕ್ಕುಹು. ೦೬) : ನೀವೂ ಕೂಡ ಶೀರ ಅಜ್ಜರ ಹಾಗೆ ಚಪಲ ಪಡುತ್ತೀರಲ್ಲ (ಮೂಂಗಲ್ಯ. ೩೫). ೧೦. ಚಂಚಲ ಸ್ವಭಾವದವನು; ಚಪಲಚಿತ್ತ: ಚಪಲಂ ಮೇಳದ ಪಂದೆ ಬೆರ್ಚದಿದಿರೊಳ್ ಮಾತಾಡ (ಶಂಕಾಮೂ. ೦೨-೬೪). ೧೧. ವೇಗಶಾಲಿ ಯಾದವನು; ಚುರುಕಾದವನು: ಚಪಲನಾದ ನಾಯಕನು ಚಾತುರ್ಯ ದಿಂದ ಖಡ್ಗಕ್ಕೆ ತನ್ನ ಢಾಲನ್ನೊಡ್ಡಿ ಹೊಡೆತವನ್ನು ತಪ್ಪಿಸಿಕೊಂಡನು (ಕುಮುದಿ. ೦೬). ೧೨. ಒಂದು ಬಗೆಯ ಸಸ್ಯ : " ಪರ್ಪಟಃ – ಪಾಪ, ಚಪಲ, ಗೇರು" (ಒಷಧಿ. ೯೦). ೧೩. ವಾಯು. 'ಚಪಲವೇಗಿ' ಪರಾ. **ಚಪಳ₂ :** ೧. ಚಪಳ ಕಪಿ ವನಮುದಾನೇಕಪಕ್ಕೆ ಪಕ್ಕಾಗೆ ಪೊಕ್ಕು (ಶಾಂತಿಪು. ೨-೦೦೦) ; ಚಪಳ ವಿಶಾಳಲೋಚನೆ ಜಯಾಂಗನೆ ಧಾರೆಯೊಳಿರ್ದು ನೋಡಿ ಮನ್ನಿಪಳ್ (ಅನಂಪು. ೨-೬). ೬. "ಲೋಲಂ, ಚಪಳಂ . . . ಸಂಚಳಂ– ಈ ೧೦ ಸಂಚಳಂ" (ಹಲಾಯು. ೧೦೫-೧೦). ೭. "ದ್ರಾಕ್, ಚಪಳಂ, ಲಘು . . . ಝಟಿತಿ–ಈ ೧೬ ಶೀಘ್ರಂ" (ಹಲಾಯು. ೦೧೬-೦೨). ೧೦. ಬಂಚಿಸಿ ತನ್ನನುಜೆಯ ಧನಮಂ ಚಪಳಂ ಕೊಂಡು ಪುಸಿದು ಕಳಿಸಿ ಖಳಂ ಪಂಚತ್ವಮನೈದಿ . . . ಈಗಳಲ್ತೆ ವಾನರನಾದಂ (ಆದಿಪು. ೫-೦೮); ತಪಸ್ವಿಗಳುಮಯ್ದೆ ಮನಮಂ ತಗೆಯಲ್ಕಡೆಯರೆನೆ ಚಪಳರಕ್ಕಟ ಪಡೆದವರೆ (ಅಜಿಪು. ೨-೯೦) ; ಚಪಳನಿವಂ ಕಡುಗಟಪಂ ವಿಪರೀತಮನೆನ್ನ ಮುಂದೆ ನುಡಿದಪಂ (ಧರ್ಮಾಮೃ. ೬-೦೪); ಇಂತಪ್ಪ ಚಪಳರೆಮ್ಮೂರೊಳಗೆ ಮಟ್ಟಿದಿಲ್ಲ (ನಂದಿರ. ೬-೨೬). [ಸಂ.]

**ಚಪಲಚಿತ್ತ** (ನಾ). ಚಂಚಲವಾದ ಮನಸ್ಸುಳ್ಳವನು ; ಅಸ್ಥಿರಬುದ್ಧಿ ಯಾವನೂ: ನಮ್ಮ ಈ ಭೌತವಿಜ್ಞಾನಿಯನಿಸಿಕೊಳ್ಳಬೇಕೆಂಬ ಚಪಲಚಿತ್ತರಿಗೆ ತಮ್ಮನ್ನು ಹುಡುಕಿಕೊಳ್ಳುವ ಆಶೆಯೂ ಇಲ್ಲ (ಜೀವಾತ್ಮ. ೦೦೬).
[ಚಪಲ + ಚಿತ್ತ]

**ಚಪಲತನ**, ಚಪಳತನ (ನಾ). ೧. ಅತ್ತಿತ್ತ ಚಲಿಸುವಿಕೆ ; ಚಂಚಲತೆ ; ಅಸ್ಥಿರತೆ: (೩). **ಚಪಳತನ:** ೨. ಅವಿವೇಕ; ದುಡುಕುತನ: ಅನಪ್ಪೊಡೆ ದೇವತೆಯಂ ನೀನಜುಯದ ಕೊರ್ವಿ ಚಪಳತನದಿಂದೆನ್ನಂ ಮಾನಿಸೆಯ ಗೆತ್ತು ನುಡಿದೈ (ಧರ್ಮಾಮೃ. ೩-೧೦೨). [ಚಪಲ + –ತನ]

**ಚಪಲತಾಸಂಗ** (ನಾ). ೧. ಎಳೆಯ ಬದಿರಿನ ಸಂಬಂಧ. ೨. ಚಂಚಲತೆಯ ಸಂಪರ್ಕ. ೧, ೨ : ಚಪಲತಾಸಂಗಂ ವಿಪತ್ಪಕ್ಷಮದ್ರಿಗಳೊಳ್ . . . ಒಪ್ಪುಗುಮುರ್ವೀಶರೊಳೊಪ್ಪದು (ಪುಷ್ಪಪು. ೫-೩೬).
[ಸಂ. (ಚಪ + ಲತಾ + ಸಂಗ; ಚಪಲತಾ + ಸಂಗ)]

**ಚಪಲತೆ**, ಚಪಳತೆ (ನಾ). ೧=ಚಪಲತನ ೧: ಕಪಿಗೆ ಚಪಲ [ಪಾಠಾಂ. ೪]ತೆ ಸಹಜಂ (ಗದಾಯು. ೩-೯೦). ೨. ಹೊಂದಿಕೆ ಇಲ್ಲದಿರುವಿಕೆ; ಅಸಂಬದ್ಧತೆ. ೩. ಕಳವಳ; ಉದ್ವೇಗ. ೪. ಚುರುಕುತನ; ತೀವ್ರತೆ. ೫.[ಕಾವ್ಯಮೀ] ಸಂಚಾರಿಭಾವಗಳಲ್ಲಿ ಒಂದು; ಮನಸ್ಸಿನ ಅಸ್ಥಿರತೆ.– ವ್ಯಗ್ರತೆ: ಮತಿ ನಿರ್ವೇದ . . . ಚಪಲತಾಲಸ್ಯ . . . ಸ್ಮೃತಿಗಳೆವಿಂತೆಯ್ದೆ ಸಂಚಾರಿ ಭಾವಂ (ಕಾವ್ಯಾವ. ೭೮೫): ಮತಿ ಲಜ್ಜೆ . . . ಚಪಲತೆ . . . ಅಪಸ್ಮಾರ ಗಳೆಂಬ ಮೂವತ್ತುಮೂಱು ಸಂಚಾರೀಭಾವಂಗಳಿಂ (ವಿವೇಕ. ೨೨೬). **ಚಪಳತೆ :** ೧. ಸವಿಾಪದೊಳಂ ಚಪಳತೆಯೊಳಂ ಪದನೆರಡು ಸೂಟುಚ್ಚರಿಪುದು (ಶಮದ. ೦೯೫ ವೃತ್ತಿ) ; ಆವ ಸಾಧನದಿಂದ ಚಪಳತೆ ಭಾವ ಸಂಶಯವಳಿದು ಮುಚ್ಚಿರುವೀ ವಿಷಯಸುಖದೆಲಲನೆಂತೋಕರಿಸಿ ಬಿಸುಡುವುದು (ಗಗಕಾ. ೦೩-೯). [ಸಂ. ಚಪಲತಾ]

**ಚಪಲತ್ವ** (ನಾ).=ಚಪಲತನ ೧ : ಚಪಲತ್ವಂ ಪರಿದೆಯ್ದೆ ತನ್ನತಕೆ ಬಂದು (ದಿವ್ಯಕ. ೦೨-೦೦). [ಸಂ.]

**ಚಪಲವೇಗಿ** (ನಾ). [ಜೈನ] ಒಂದು ವಿದ್ಯೆಯ ಹೆಸರು ; ವಾಯು ವಿನಂತೆ ವೇಗವಾಗಿರುವ ಸಾಮರ್ಥ್ಯ: ಮನೋವೇಗಿ ಚಂಡವೇಗಿ ಚಪಲ ವೇಗಿ . . . ಎಂಬಿವು ಮೊದಲಾಗಿ ಕುಲವಿದ್ಯೆ ಜಾತಿವಿದ್ಯೆಗಳೊಳ್ ಸಂಪನ್ನ ನಾಗಿರ್ದು (ಚಾವುಂಪು. ೨೦೦). [<ಸಂ. ಚಪಲವೇಗಿನೀ]

**ಚಪಲಾಕ್ಷಿ**, ಚಪಳಾಕ್ಷಿ (ನಾ). ೧. ಚಂಚಲವಾದ ಕಣ್ಣುಗಳನ್ನುಳ್ಳವಳು ; ಚಂಚಲಾಕ್ಷಿ. ೨. ಮಿಂಚನ್ನೇ ಕಣ್ಣಾಗಿ ಉಳ್ಳವಳು. ೧, ೨: ಚಪಲಾಕ್ಷಿ ಘನಾಗಮಲಕ್ಷ್ಮಿ ಕಂಡು ಹರ್ಷದಿನುಗುತಿರ್ಪ ಕಣ್ಣನಿಯ ಸೋನೆಪೊಲಾ ದುವು ಭೂರಿವೃಷ್ಟಿಗಳ್ (ಜಗವಿ. ೯-೩೦). **ಚಪಳಾಕ್ಷಿ:** ೧. ಮೆಚ್ಚಿ ಬಂದು ನೀಂ ಬನಕ್ಕಂ ಚಪಳಾಕ್ಷಿ ನಿನ್ನ ನಡೆಯಂ ನುಡಿಯಂ ಮುಡಿಯಂ ವಿನೋದದಿ (ಚಂದ್ರಪು. ೬-೬೬).
[ಸಂ. ಚಪಲಾಕ್ಷೀ (ಚಪಲ + ಅಕ್ಷಿ + –) (ಚಪಲಾ + ಅಕ್ಷಿ + –)]

**ಚಪಲಾವೇಗ** (ನಾ). ಮಿಂಚಿನ ವೇಗ : ಚಪಲವೇಗಂ ನೆಗೆದಂ ಗಗನಕ್ಕೆ ವಿಜಿತಚಪಲಾವೇಗಂ (ಶಂಕಾಮೂ. ೪-೧೦೩).
[ಸಂ. (ಚಪಲಾ + ವೇಗ)]

**ಚಪಲೆ**, ಚಪಳೆ (ನಾ). ೧. ಚಪಲ ಸ್ವಭಾವದವಳು; ಚಂಚಲೆ: ಅತಿಮನದ ಚಪಲೆ [ಪಾಠಾಂ. ೪]ಯಾರು ಮೋಹಿಸಿತರಸನಿದಿರಿನಲಿ (ತೊರರಾ. ೦-೫-೨೮). ೨. ಮಿಂಚು; ವಿದ್ಯುತ್ತು: "ಶಂಪಾ, ಚಪಲಾ, ಕ್ಷಣಿಕಾ . . . ಐರಾವತೀ (ಚ ವಿಜ್ಞೇಯಾ ಈ ೧೧ ಮಿಂಚು " (ಹಲಾಯು. ೦೦-೬೦) ; " ಚಪಲೆ ಚಂಚಲೆಯೆನಲು ಮಿಂಚೆನಿಕ್ಕುಂ " (ಮಂಗರಾ. ೦೩-೪). ೩. ಹಿಪ್ಪಲಿ. **ಚಪಳೆ:** ೧. ಲಕ್ಷ್ಮೀಕಾಂತ ಕರಂ ಚಪಳೆ ಸೊಡರ ಕುಡಿಯಂ ಪೋಲ್ವಳ್ (ಕಾದಂಪೂ. ೫೫೦) ; ನಿಷ್ಠುರ ಚಪಳೆಯರು ದುರ್ವ್ಯಸನಿಯರು ಜನವ್ರೋಹ ಪಾಶೆಯರು (ಬಸಪು. ೪೦-೫೪). [ಸಂ. ಚಪಲಾ]

**ಚಪಳ₁** 'ಚಪ್ಪಳ₂' ನೋ.

**ಚಪಳ₂** 'ಚಪಲ' ನೋ.

**ಚಪಳತನ** 'ಚಪಲತನ' ನೋ.

**ಚಪಳತೆ** 'ಚಪಲತೆ' ನೋ.

**ಚಪಳಾಕ್ಷಿ** 'ಚಪಲಾಕ್ಷಿ' ನೋ.

**ಚಪಳಿಕೆ** (ನಾ). = ಚಪಲತನ ೧ : "ಚಾಪಲ್ಯಂ = ಚಪಳಿಕೆಯುಂ" (ನೀತಿವಾ. ೨೩-೫೨); ಕಪಿ ಚಾಪಲತೆಯು ಚಪಳಿಕೆ ನವ್ಮೊಡನೆ ವಿಸ್ಮಟವ (ತೊರಿರಾ. ೬-೨೨-೧೯). [ ಚಪಳ$_{1}$ (=ಚಪಲ) + – ಇಕೆ ]

**ಚಪಳಿಗ** (ನಾ). ಚಪಲನಾದವನು; ಚಂಚಲಚಿತ್ತ: ಅತಿ ಚಪಳಿಗ ಜಂಗವು ಸಂಸಾರಿಯಾದ ಭಕ್ತ ನಿಃಸಂಸಾರಿಯಾದ ವೈರಾಗ್ಯ ಸಂಸಾರನಿಷ್ಠ ಒಂದಾದಡೆ ತೆಱಹಿಲ್ಲ ಕೂಡಲ ಚನ್ನಸಂಗಯ್ಯ ನಿಮ್ಮಲ್ಲಿ (ಚನ್ನವ. ೫. ೩೩೯-೮೦೨). [ ಚಪಳ$_{1}$ (=ಚಪಲ) + – ಇಗ ]

**ಚಪಳೆ** 'ಚಪಲೆ' ನೋ.

**ಚಪಾಡಿಸು** (ಕ್ರಿ). (ತಿನ್ನುವಾಗ) ಬಾಯಿ ಚಪ್ಪರಿಸು; ಚಪಚಪ ಸದ್ದು ಮಾಡು : (೬). 'ಚಪ್ಪರಿಸು' ಪರಾ. [ ಚಪ್$_{1}$ + ಅಡಿಸು ]

**ಚಪಾತಿ** (ನಾ). ಲಟ್ಟಣಿಗೆಯಿಂದ ಲಟ್ಟಿಸಿ ಮಾಡಿದ ಗೋಧಿಯ ರೊಟ್ಟಿ; ಬಿಳಿಹೋಳಿಗೆ (ಉಕ) : ಮರುದಿನದಿಂದ ಮನೆಯಲ್ಲೇ ಚಪಾತಿ ಮಾಡ ಲಿಕ್ಕೆ ಸುರುವಾಯಿತು (ಪ್ರವಿ. ೨೦೭); ಚಪಾತಿ ಅಭ್ಯಾಸ ಮಾಡು ಯಶೋದಾ, ದೇಹಕ್ಕೆ ಒಳ್ಳೆಯದು (ಚಾತ್ಮಲ್ಯ. ೯೭). [ ←ಹಿಂ. ಮರಾ. ಚಪಾತೀ./ಪ್ರಾ. ಧಪ್ಪತ್ತಿಅ ]

**ಚಪೇಟ** (ನಾ). ಬೆರಳುಗಳನ್ನು ಬಿಚ್ಚಿ ಹಿಡಿದ ಅಂಗೈ; ಬಿಚ್ಚಿದ ಕೈ : ಘಾತಿಸಿ ಚಪೇಟ ಚರಣಾಘಾತದೊಳ್ (ಆದಿಪು. ೫-೦೭); ಭೀಮಸೇನನ ಚಲಗತಿಯ ಚಾತುರ ಚಪೇಟ ಪದಪ್ರಹಾರದಲಿ (ಕುಮ್ಯಾಗ. ೪-೨೩); ಚಾತುರಂಗವನುರುಚಪೇಟನಿಘಾತದಲಿ ನಿರ್ಜೈಸಿ (ತೊರಿರಾ. ೬-೪೯-೨೦). [ ಸಂ. ]

**ಚಪೇಟಕ** (ನಾ).=ಚಪೇಟ : ಇಟ್ಟಣಿಸಿ ನಗುತವಳು . . . ಮುನಿಪನ ತೊಟ್ಟುಳಿಕೆಯಲಿ ಚಾಚಿದಳು ಚಾಪಳ ಚಪೇಟಕವ[ಪಾಠಾಂ.ದ ಚೇಷ್ಟೆಯಲಿ] (ತೊರಿರಾ. ೧-೦೦-೦೨); ಅರಿಯ ಕೊರಳಿಗೆ ಚಾಚು ಚಪಳ ಚಪೇಟಕವ ಚೂರಿಸುವ ಖಂಡೆಯವ (ತೊರಿರಾ. ೬-೪೫-೩೭). [ ಸಂ. ]

**ಚಪೋಡು** 'ಚಪ್ಪೋಡು' ನೋ.

**ಚಪ್ಪಂಗಾಲು**, ಚಪಗಾಲು (ನಾ).=ಚಕ್ಕಳಬಕ್ಕಳ: ತಾಯಿಯೂ ಮಗಳೂ . . . ಚಪ್ಪಂಗಾಲು ಹಾಕಿಕೊಂಡು ಕುಳಿತರು (ಮಲೆನಾ. ೦೫೯). **ಚಪಗಾಲು:** ಒಳಗೊಬ್ಬ . . . ಚಪಗಾಲು ಹಾಕಿಕೊಂಡು ಕುಳಿತಿರುವುದು ಮಸಮಸಕಾಗಿ ಕಾಣಿಸುತ್ತಿತ್ತು (ಪೂರ್ವರಂ. ೪). [ ←ತಮಿ. ಚಪ್ಪಣಜ್ಜ್ಯಾಲ್ ]

**ಚಪ್ಪಕೊಡಲಿ** 'ಚಪ್ಪಗೊಡಲಿ' ನೋ.

**ಚಪ್ಪಗೆ** 'ಸಪ್ಪಗೆ' ನೋ.

**ಚಪ್ಪಗೊಡಲಿ**, ಚಪಗೊಡಲಿ, ಚಪ್ಪಕೊಡಲಿ, ಚೆಪ್ಪಗೊಡಲಿ (ನಾ). ಚಪ್ಪಟೆಯಾದ ಕೊಡಲಿ; ತೆಳ್ಳಗಿರುವ ಅಲಗನ್ನುಳ್ಳ ಅರ್ಧಚಂದ್ರಾ ಕೃತಿಯ ಕೊಡಲಿ; ಗಂಡುಗೊಡಲಿ: ದರ್ಪವುಳ್ಳ ಮಹಾಮಾಯಿ ಅರಣ್ಯಕ್ಕೆ ಚಪ್ಪಗೊಡಲಿಯಾಗಿ ಇರುತಿಪ್ಪುದೀ ಚರಣ (ವಿಶ್ವೋಸು. ೬೯-೪); ಕಣೆಗಳಂ ಭಾರ್ಗವನ ಚಪ್ಪಗೊಡಲಿಯನರಿಯವೇಳ್ಕೆಂದು ತುಳ್ಕುತಂ (ಶರಕು. ೨೮-೧೦). **ಚಪಗೊಡಲಿ:** ನನ್ನ ಕೈಗೆ ಒಳ್ಳೆಯ ಹದನವಾದ ಚಪ ಗೊಡಲಿಯನ್ನು ಕೊಟ್ಟು . . . ಟೊಂಕಕ್ಕೆ ಹಗ್ಗ ಕಟ್ಟಿದರು (ಮೀದಿಮು. ೦೩). **ಚಪ್ಪಕೊಡಲಿ:** ಪರಶುರಾಮ (ತನ್ನ ಚಪ್ಪಕೊಡಲಿಯ ಕಡೆಗೆ ನೋಡುತ್ತ) (ತುಳಸಿ. ೯೩). **ಚೆಪ್ಪಗೊಡಲಿ:** ವೃಷಣಾತ್ಮಸಂಭವ ಬಿಲ್ಲ ಬಿಸುಟು ಚೆಪ್ಪಗೊಡಲಿಯ ಕೊಂಡಾರ್ಭಟಿಸಿ ಹೊಡೆದರೆ ಬಲರಾಮನ ಕೆಯ್ಯ ಕಾರ್ಮುಕ ಕಡಿದುದು ತುಂಡಾಗಿ ನೆಲಕೆ (ಮೋಹತ. ೩೮-೫೭). [ <ಚಪ್ಪ$_{1}$ + ಕೊಡಲಿ ]

**ಚಪ್ಪಗೋಡು** 'ಚಪ್ಪೋಡು' ನೋ.

**ಚಪ್ಪಟ** 'ಚಪ್ಪಟೆ' ನೋ.

**ಚಪ್ಪಟಿಕಲ್ಲು** 'ಚಪ್ಪಡಿಕಲ್ಲು' ನೋ.

**ಚಪ್ಪಟೆ**,ಚಪ್ಪಟ,ಚಪ್ಪಟ್ಟೆ, ಚಪ್ಪಡಿ,ಚಪ್ಪಡೆ (ನಾ).೧. ಸಮತಲವಾಗಿರು ವುದು; ಅಗಲವಾಗಿ ತಗ್ಗು ತಿಟ್ಟುಗಳಿಲ್ಲದೆ ಮಟ್ಟವಾಗಿರುವುದು; ಸಪಾಟಾಗಿರುವುದು: ಎತ್ತ ಮೆಟ್ಟಿತ್ತ ಚಪ್ಪಟೆಯೆಂದು ನಗುತಂ ಹೋಗಿ (ಶಾಂತಿಪು. ೮-೫೪ ವ); ಕುಬಿಯಪ್ಪ ನೆತ್ತಿಯಿಂ ಬಡವನನೂನ ದುಃಖ ಪರನಪ್ಪನೆ ಚಪ್ಪಟೆಯಪ್ಪ ಮಂಡೆಯಿಂ (ಲೋಕೋಪ. ೧೧-೨೪); ಮೆಟ್ಟಿತ್ತಲತ್ತ ಚಪ್ಪಟೆಯೆಂಬಂತಿರಲಾಂ ಬೇಟ್ಪನಿತರ್ಥಂ ದೊರೆಕೊಂಡ ವುದು (ಧರ್ಮಾಮೃ. ೧-೧೩೧); ಒತ್ತಿ ಪಿಡಿವನುಂಗುರಿಡುವನು ಬಲಿದಪ್ಪಿ ಚಪ್ಪಟೆ ಮಾಳ್ಪ (ಭರತ. ೧೦-೧೫೧); ಚಿತ್ರವಿದು ಜಗದೊಳಿತ್ತ ಮೆಟ್ಟಿತ್ತ ಚಪ್ಪಟೆಯೆಂಬ ನಾಣ್ನುಡಿಯನಭಿನಯಿಸುವಂತಾದುದು (ಜಿಬಪು. ೩೭-೬೪); ಎತ್ತು ಮೆಟ್ಟಿತ್ತು ಚಪ್ಪಟೆಯಾಯ್ತೆಂಬಿನಂ (ಶಬ್ದಾನು. ೫೧ ಪ್ರಯೋ); ಚೀಣದೇಶದಲ್ಲಿ ಚಪ್ಪಟೆಯಾದ ಮೂಗಿಗೆ ಆದರವಿದೆ (ಕಮಳ. ೭೫). **ಚಪ್ಪಟ:** ೧. ಲೋಕದ ಸಕಲಜನರ ಬಾಡದಲ್ಲಿ ಸಿಕ್ಕು ಚಪ್ಪಟಿಯಾಗಿ ಹೋದ ಹರಲಾಲನಿಗೇ ಗೊತ್ತಿರಲಿಲ್ಲ, ತನ್ನ ಮನೋಲೋಕದಲ್ಲಿ ಇಷ್ಟೊಂದು ಸ್ನೇಹರಸವಿತ್ತೆಂಬುದು (ಇಶ್ವಳ. ೩೦೩). (ಗು). ೨. ಸಮತಲ ವಾದ; ಸಪಾಟಾದ. 'ಚಪ್ಪಟಿಕಲ್ಲು' ಪರಾ. **ಚಪ್ಪಟ್ಟೆ:** ೧. ಪೂರ್ವ ಸಮುದ್ರತೀರವು ಸಾಧಾರಣವಾಗಿ ಚಪ್ಪಟ್ಟೆಯಾಗಿದೆ (ಭೂಗೋಳ. ೭೮). **ಚಪ್ಪಡಿ :** ೩. ಮಟ್ಟವಾಗಿರುವ ಅಗಲವಾದ ಕಲ್ಲು; ಹಾಸುಗಲ್ಲು : ಪರಮಬಿಂದುಸ್ಥಲಂ ಕಲೆ ಪಂಚ ಚಪ್ಪಡಿಗಳ್ . . . ಚತುರ್ವಾಕು ತೊಲೆ ಗಳುಂ (ಅಣೋಪು. ೪-೨೭); ಹತ್ತಿ ಹೋಗಲು ಚಪ್ಪಡಿಯ ಮೆಟ್ಟಲು ಮಾಡಿದ್ದರು (ಪ್ರವಾಇ. II, ೨೦೦). ೪. ಫಲಕ; ಹಲಗೆ: ಗಾಜಿನ ಚಪ್ಪಡಿಯ ಮೂಲಕ ರಶ್ಮಿಗಳು ಭಂಗ ಹೊಂದಿ ಹೊರಗೆ ಬಂದರೆ . . . ಮಿಥ್ಯಾಪ್ರತಿಬಿಂಬವೆಂದು ಹಿಂದೆ ತಿಳಿದಿದ್ದೇವೆ (ಭೌತವಿ. ೨೦೭). **ಚಪ್ಪಡೆ:** ೧. 'ಚಪ್ಪಡೆಮೆಟ್ಟು' ಪರಾ.

**ಚಪ್ಪಡಿಎಳೆ**=೧. ಚಪ್ಪಡಿಯನ್ನು ಹಾಕು; ಹಾಸುಗಲ್ಲನ್ನು ಎಳೆ. ೨. (ಅಲಂ) ಹಾಳುಮಾಡು; ನಾಶಮಾಡು : ಮಕ್ಕಳುಮರೀ ತಲೆ ಮೇಲೆ ಚಪ್ಪಡಿ ಎಳೆಯೋಕೆ ? (ಚಂದಕೋ. ೬೦). **ಚಪ್ಪಡಿಹಾಕು**=ಚಪ್ಪಡಿ ಎಳೆ ೨. : ಒಳ್ಳೆಯ ಕೆಲಸಕ್ಕೆ ಚಪ್ಪಡಿ ಹಾಕಿದರು (ರೂಢಿ). **ಚಪ್ಪಡಿಹಾಸು**= ಚಪ್ಪಡಿಎಳೆ ೨. : ಕೊನೆಗೂ ಅವನ ಮೇಲೆ ಚಪ್ಪಡಿ ಹಾಸಿದರು (ರೂಢಿ). [ ದೇ.೫ ತಮಿ. ಚಪ್ಪಟ್ಟೈ, ಚಪ್ಪಡಿ; ಮಲ. ಚಪ್ಪಡ; ತುಳು. ಚಪ್ಪಟೆ; ತೆಲು. ಚಪ್ಪಿಡಿ. / ಮರಾ. ಚಪಟಾ, ಚಾಪಟ್, ಸಪಾಟ್. / ಸಂ. ಚರ್ಪಟ ]

**ಚಪ್ಪಟೆಕಳ್ಳಿ** (ನಾ). ಒಂದು ಬಗೆಯ ಕಳ್ಳಿ; ಪಾಪಾಸುಕಳ್ಳಿ: ಪಾಪಾಸುಕಳ್ಳಿ, ಶಿವರಾಮಕಳ್ಳಿ, ಚಪ್ಪಟೆಕಳ್ಳಿ (ವೃಕ್ಷಿಗಿ. ೫೮-೦೧೬೦). [ ಚಪ್ಪಟೆ + ಕಳ್ಳಿ$_{2}$ ]

**ಚಪ್ಪಟೆಮೂಗು**, ಚಪ್ಪಟ್ಟೆಮೂಗು (ನಾ). ಚಪ್ಪಟೆಯಾದ ಮೂಗು; ತಟ್ಟೆಯಾದ ಮೂಗು: "ಖುರಣಸ್, ಖುರಣಸ–ಚಪ್ಪಟೆಮೂಗಿನವನು" (ನಾಚಿರಾ. ೬). **ಚಪ್ಪಟ್ಟೆಮೂಗು:** "ಖುರಣಾ, ಖುರಣಸ–೨ ಗಂಟು ಮೂಗಿನವನು ಚಪ್ಪಟ್ಟೆಮೂಗಿನವನು" (ಸಿದ್ಧಾಂತಿ. ೦೫೭). [ ಚಪ್ಪಟೆ + ಮೂಗು$_{1}$ ]

**ಚಪ್ಪಟೆಹಂಬು** (ನಾ). ಒಂದು ಬಗೆಯ ಬಳ್ಳಿ : (ವೃಕ್ಷಿಗಿ. ೫೫-೦೦೦೫). [ ಚಪ್ಪಟೆ + ಹಂಬು ]

**ಚಪ್ಪಟ್ಟೆ** 'ಚಪ್ಪಟೆ' ನೋ.

**ಚಪ್ಪಟ್ಟೆಮೂಗು** 'ಚಪ್ಪಟೆಮೂಗು' ನೋ.

**ಚಪ್ಪಡಿ** 'ಚಪ್ಪಟೆ' ನೋ.

**ಚಪ್ಪಡಿಕಲ್ಲು, ಚಪ್ಪಟಕಲ್ಲು** (ನಾ).=ಚಪ್ಪಡಿ ೧: ಅಡಿಯಲ್ಲಿ ಒಂದು ಚಪ್ಪಡಿ ಕಲ್ಲು ಸಿಕ್ಕಿತು (ಹುಟ್ಟಿಹ. ೬೨). **ಚಪ್ಪಟಕಲ್ಲು**: ಕಂಬಗಳ ಮೇಲೆ ಬರುವ ಚಪ್ಪಟಕಲ್ಲುಗಳನ್ನು ರೇಖಾಚಿತ್ರ ಬರುವಂತೆ ಹರಡಿರುವರು (ಹೊಯ್ಸಳಾ. ೧೮). [ ಚಪ್ಪಡಿ (<ಚಪ್ಪಟೆ) + ಕಲ್ಲು (<ಕಲ್$_3$) ]

**ಚಪ್ಪಡಿಸು** 'ಚಪ್ಪರಿಸು' ನೋ.

**ಚಪ್ಪಡೆ** 'ಚಪ್ಪಟೆ' ನೋ.

**ಚಪ್ಪಡೆವೆಱು** (ಕ್ರಿ). ಚಪ್ಪಟೆಯಾಗು ; ಸಮತಟ್ಟಾಗು : ಕೊಳ್ತಿಗಣ್ಣುಳ ಕೋಕಿಮುಸುಡಿನ ಚಪ್ಪಡೆವೆತ್ತು ನಡೆವ ಹೆಜ್ಜೆಯಿಂದ . . . ಭೂತವೆ ನಡೆತಪ್ಪಂತೆ ಮನೆಗೆ ಬರಲು (ನೇಮಿಶಂ. ೬-೧೦೪).

[ ಚಪ್ಪಡೆ (<ಚಪ್ಪಟೆ) + ಪೆಱು$_1$ ]

**ಚಪ್ಪನ್ನ** 'ಛಪ್ಪನ್ನ' ನೋ.

**ಚಪ್ಪನ್ನಕೋಟಿ** (ನಾ). ಐವತ್ತಾರು ಕೋಟಿ: ಚಪ್ಪನ್ನಕೋಟಿ ಯಾದವರು ಹತ್ತಿದರು (ಪ್ರೋಹಕ. ೩೬-೩೮) ; ಚಪ್ಪನ್ನಕೋಟಿ ಯಾದವರಂ ತಮ್ಮಮ್ಮನೆ ಯೊಳೊಪ್ಪಿ (ತುರಂಗ. ೬೦-೨೦). [ ಚಪ್ಪನ್ನ (<ಛಪ್ಪನ್ನ) + ಕೋಟಿ$_1$ ]

**ಚಪ್ಪನ್ನದೇಶ** 'ಛಪ್ಪನ್ನದೇಶ' ನೋ.

**ಚಪ್ಪನ್ನಭಾಷೆ** 'ಛಪ್ಪನ್ನಭಾಷೆ' ನೋ.

**ಚಪ್ಪನ್ನೈವತ್ತಾರು** 'ಛಪ್ಪನ್ನೈವತ್ತಾರು' ನೋ.

**ಚಪ್ಪಯ್ಯ** (ನಾ). ಒಬ್ಬಾತನ ಹೆಸರು : ಕೊಟಿಯಮ್ಮನ ಅಳಿಯಂ ಚಪ್ಪಯ್ಯನ ಮಗಂ ಪುನ್ನಿ ಗೋಸಾಸಿ ಕಱಿಯಂ ಮ್ಮಾಡಿಸಿ (ಎಕ. VIII, ಸಾಗರ. ೦೦೦-೨; ೯೬೬ ?). [ ಚಪ್ಪ$_2$ + ಅಯ್ಯ$_1$ ]

**ಚಪ್ಪರ** (ನಾ). ೧. ಚಾವಣಿ ; ಮೇಲ್ಕಟ್ಟು ; ವಿತಾನ : ಕವರೆಂಬುದು ಚಪ್ಪರದೊಳ್ (ಕಬ್ಬಿಗಕಾ. ೨೫); ಚಪ್ಪರಮಂ ಬೆಳ್ಳಟ್ಟೆಗಳಿಂ ಪರುಠವಿಸಿದರು (ಚಕವಿ. ೪-೨೭) ; ಕನಕದ ಕಂಭಗಳು ಘನ ಚಪ್ಪರಗಳು (ಯನಳ. ೦೩) ; ಹಂಚಿನ ಚಪ್ಪರದ ತೂತುಗಳೊಳಗಿಂದೆಲ್ಲ ಸೂರ್ಯನ ಬೆಳಕು ನೇರವಾಗಿ ಸುರಿಯುತ್ತಿತ್ತು (ನಿರಾಳ. ೫೫). ೨. ಬಳ್ಳಿ ಮೊದಲಾದುವು ಹಬ್ಬುವುದಕ್ಕೆ ಆಶ್ರಯವಾಗಿ ಎತ್ತಿಕಟ್ಟಿದ ಚೌಕಟ್ಟು ; ಕಾವಣ : "ಕಾವಣ ಪಂದರಮುಮೆನಲ್ಕಾವಗ ಚಪ್ಪರಮನಿಕ್ಕು" (ಕವಿಕಂ. ೦೬೬) ; ಮಧುರ ದ್ರಾಕ್ಷೆಯ ಚಪ್ಪರಂಗಳಿಂ (ಉದ್ಭಟ. ೯-೨೫); ದ್ರಾಕ್ಷೆಯ ಚಪ್ಪರ (ಸೌಗಂಧಿ. ೩೬-೦೨) : ಪಡುವಲಕಾಯಿ ಬಳ್ಳಿಗೆ ಚಪ್ಪರವೇ ಒಳ್ಳೆಯದು (ಅಡುಸೌ. ೧೨೪) ; ೩. ಶುಭಕಾರ್ಯಗಳಿಗಾಗಿ ಹಸುರುವಾಣಿಯಿಂದ ನಿರ್ಮಿಸಿದ ಹಂದರ : ಚಪ್ಪರಂಗಳ ಚೆಲ್ವುಮಂ ಮಂಟಪಂಗಳ ವಿಳಾಸಮುಮಂ . . . ನೋಡುತ್ತುಂ (ಧರ್ಮಾಮೃ. ೯-೧೭೦) ; ಪವಳದ ಚಪ್ಪರ ವಿಕ್ಕಿ ನಮ್ಮವರೆನ್ನ ಮದುವೆಯ ಮಾಡಿದರು (ಮಹಾದೇ. ಬ. ೬-೬); ಮದುವೆಯ ಚಪ್ಪರದ ಮುಂದಿಳಿಹಿದಂತಿರ್ದಂ (ಸಂಬಿರ. ೬-೨೨) ; ಮದುವೆಗೆ ಲಗ್ನವನ್ನೂ ಇಟ್ಟರು; ಚಪ್ಪರ ತೋರಣ ಮಾಡಿಸಿದರು (ಈಳಳ. ೬೦). ೪. ಗುಡಿಸಲು ; ಜೋಪಡಿ : ಅಂಬಿಗನು ಸವಿಾಪದಲ್ಲಿ ಇದ್ದ ಸಂಗನ ಚಪ್ಪರಕ್ಕೆ ನಡೆದನು (ಇಂದುಮು. ೪೫); ಚಪ್ಪರಕ್ಕೆ ಗತಿಯಿಲ್ಲದವ ಉಪ್ಪರಿಗೆ ಅಪೇಕ್ಷಿಸಿದ (ಗಾದೆ). ೫. ಅಂಗಳ ; ಪ್ರಾಂಗಣ : "ಪ್ರಾಂಗಣ ಪಂದರಂಗಳಿವು ಚಪ್ಪರಮೆಂದೆನಿಕುಂ" (ನಾನಾರ. ೧೪೪).

**ಚಪ್ಪರಕಾಣಿಕೆ**=(ಮದುವೆಯ) ಚಪ್ಪರದ ಮೇಲೆ ಹಾಕುವ ತೆರಿಗೆ : ಯಿವರಿಗೆ ಚಪರಕಾಣಿಕೆಯಿಲ್ಲ ಮರ್ರಿಕಾಣಿಕೆಯಿಲ್ಲ ಡೊಂಬಕಾಣಿಕೆಯಿಲ (ಎಕ. XVI, ಗುಬ್ಬಿ. ೬೯-೩೨ ; ?). **ಚಪ್ಪರಗಾಲಮಂಚ** = ಚಪ್ಪರಮಂಚ : (೬). **ಚಪ್ಪರದ ಹಣ**=ಚಪ್ಪರಕಾಣಿಕೆ: 'ಚಪ್ಪರದ ಹಣ' ವೆಂದು ಕರೆಯುವ ಅದನ್ನು ಊರಿನ ದೇವಸ್ಥಾನಕ್ಕೆ ಬಿಟ್ಟುಕೊಡುತ್ತಾರೆ (ಕಶಾಅ. ೪೦೮ ಅಡಿ).

[ ದೇ.॥ ತಮಿ. ಮಲ. ತೆಲು. ಚಪ್ಪರ; ತುಳು. ಚಪ್ಪರ, ಚಪ್ಪರೊ. / ಹಿಂ. ಛಪ್ಪರ್ : ಮರಾ. ಛಪ್ಪರ, ಛಪರ್ ]

**ಚಪ್ಪರಣೆ** (ನಾ). ೧. (ತಿನ್ನುವಾಗ) ತುಟಿಗಳಿಂದ ಮಾಡುವ ಚಪ್ ಎಂಬ ಶಬ್ದ ; ಆಸ್ವಾದನೆ ; ಸಶಬ್ದವಾಗಿ ಸವಿಯುವಿಕೆ : ಚುಂಬನ ಮಪ್ಪು ಚಪ್ಪರಣೆ ಬೇಡುವ ಬಕ್ಕುಡಿ ಕಾಯ್ದು ಕೊಡುವಟ್ಟುಂಬರಿ ಯಂಬಿವಾಗೆ ಸರಿ ತನ್ನವು (ಅರ್ಧನೇ. ೫-೭೦); ಆತಂ . . . ಕೇರಿಯೊಳಾ ದೊಡು ನೆರೆಯಂಬುದಂ ಚಪ್ಪರಣೆಯೊಳಾದೊಡಂ ಪಣ್ಣೆಂಬುದಂ ಸ್ಪರಿಸಂ (ಕಬ್ಬಿಗಕಾ. ೦೪೮). ೨. ಹೂಡಿದ ಕುದುರೆ, ಎತ್ತು ಮೊದಲಾದುವನ್ನು ವೇಗಗೊಳಿಸಲು ಅಥವಾ ನಿಲ್ಲಿಸಲು ಸಾರಥಿಗಳು ಮಾಡುವ ಶಬ್ದ ; ತಟ್ಟುವಿಕೆ : ಸೂತರ ಚಪ್ಪರಣೆಗಳ ವಿಾಟಿ ಖುರದಲಿ ಪೊಪ್ಪರಿಸಿ ಹೊಯ್ದಾಡಿದವು . . . ತೇಜಿಗಳು (ಕುಮ್ಮಾಕ. ೨೨-೦೭) ; ಹೇರ್ಗಳಂ ಬಿಸುಟ ಹೋರಿಗಳ ಚಪ್ಪರಣೆಯಿಂ ನಿಲಿಸಿ ಮೂಗುನೇಣಿಡುತೆ (ಜಬಪು. ೪೭-೪೬) : ರಾವುತರ . . . ಚಪ್ಪರಣೆಯೊಳ್ ಕಿಳರ್ವ ಹಯದ (ರಾಮಾಶ್ವ. ೫೦-೫). ೩. ಹಕ್ಕಿಗಳ ಚಿಲಿಪಿಲಿ ಧ್ವನಿ : "ಚೆಜ್ಜೆ=ಚಪ್ಪರಣೆ" (ಕಮರ. ಪರಿ. ೨) ; "ಬಗ್ಗು ಬಿಪ್ಪಂಡಮೆನೆ ಚಪ್ಪರಣೆಯು" (ಕಬ್ಬಿಗಕೈ. ೭೬) ; "ಗಿಳಿವಾತು ಬೆಜ್ಜೆ ಜಡಿಪಂ ಬಗ್ಗು ಬಿಪ್ಪಂಡವೆಂದೆಂಬಿವು ಚಪ್ಪರಣೆಯೆನಿಕು" (ಶಬ್ದಮಂ. ೩೦) ; ಕಳಕುರಂಗಳ ಬಗ್ಗಣೆ ಗಿಳಿಗಳ ಚಪ್ಪರಣೆಯಳಿಗಳಂಚರವುಸೆಗುಂ (ಶಬಶಂ. ೨-೪೫). ೪. ಹುರಿದುಂಬಿಸುವಿಕೆ ; ಪ್ರೋತ್ಸಾಹ : ಹುರುಡು ಜಾಣುಮ ಚಳಬಳಿಕ ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾ ವರಿಯದ ಮಹಿಳಾಜನ ವಿರಾಜಿಸಿತು (ಕೊರರಾ. ೧-೫-೩೨). ೫. ಗದರಿಸುವಿಕೆ ; ಜಂಕಣೆ : "ಬಿಪ್ಪಂಡ . . . ಚಪ್ಪರಣೆಯುಮನ್ನೆ ರಘುಂಕಣೆಯು ತಾನಕ್ಕುಂ" (ಕವಿಕಂ. ೦೨೩) ; ಅಂದಿನ ದರ್ಪಮನಂದಿ ನೊಂದು ಚಪ್ಪರಣೆಯನಿಂದು ತೋಱು ಖಳ ದುಷ್ಟ (ಶೃಂಗಾರ. ೧-೫೦).

[ ಚಪ್ಪರಿ (<ಚಪ್ಪರಿ) + -ಅಣೆ$_4$ ]

**ಚಪ್ಪರದವರೆ** (ನಾ). ಚಪ್ಪರದ ಮೇಲೆ ಹಬ್ಬಿ ಬೆಳೆಯುವ ಒಂದು ಬಗೆಯ ಅವರೆ: ಪಲಸು ತಡುಗಣೆ ಬಾಳೆ ಚಪ್ಪರದವರೆ ಚಂಬೆಗಳ . . . ಸವಿಯೊಪ್ಪರಣೆ ಘಮಘಮಿಸಲಿಕೆ ಬಡಿಸಿದರು (ಅನಂರಾ. ೬-೨೫-೩೯).

[ ಚಪ್ಪರ + ಅವರೆ$_1$ ]

**ಚಪ್ಪರದ್ರಾಕ್ಷೆ** (ನಾ). ಚಪ್ಪರ ಹಾಕಿ ಬೆಳೆಸಿದ ದ್ರಾಕ್ಷೆ : "ಮೃದ್ವೀಕಾ, ಗೋಸ್ತನೀ, ದ್ರಾಕ್ಷಾ, ಸ್ವಾದ್ವೀ, ಮಧುರಸಾ – ೫ ದ್ರಾಕ್ಷೆ ಹೆಸರುಗಳು . . . ಚಪ್ಪರದ್ರಾಕ್ಷೆಗೂ ಹೆಸರುಗಳು" (ಸಿದ್ಧಾಂತಿ. ೦೨೦).

[ ಚಪ್ಪರ + ದ್ರಾಕ್ಷೆ ]

**ಚಪ್ಪರಬದನೆ** (ನಾ). ಒಂದು ಬಗೆಯ ಗಿಡ ಮತ್ತು ಅದರ ಹಣ್ಣು ; ಟೊಮ್ಯಾಟೊ ; ತಕ್ಕಾಳಿ : ಗೂದೆಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ವೃಕ್ಷಗಿ. ೫೦-೦೦೫೦) ; ಅಯ್ಯನ ಚಪ್ಪರಬದನೆಯನ್ನು ಕರಿಯನ ಹಸು ಮೇದಿದ್ದಿತು (ಗರುಡಾ. ೧೦೨). [ ಚಪ್ಪರ + ಬದನೆ$_1$ (<ಬದನೆ) ]

**ಚಪ್ಪರಮಂಚ** (ನಾ). ಮೇಲ್ಕಟ್ಟು ಅಥವಾ ಸೊಳ್ಳೆಪರದೆ ಕಟ್ಟಲು ಅನುಕೂಲವಾಗುವಂತೆ ರಚಿಸಿದ ಚೌಕಟ್ಟುಳ್ಳ ಮಂಚ ; ಮೇಲು ಚಪ್ಪರವುಳ್ಳ ಮಂಚ : ಚಪ್ಪರಮಂಚದ ಮೇಲಿನ್ನನೊರಿದು ನೀನಪ್ಪಿ ಕೊಂಡಿರೊ ಬೆಚ್ಚಂತೆ (ಕುರಾಸಾಂ. ೨೬-೬೫) ; ದಪ್ಪಕರತಿಯ ವಸಂತ ಕೇಳಿಯ ಚಿತ್ರವಿಪ್ಪುದ ನೋಡಿ ಸಂತಸದಿ ಚಪ್ಪರಮಂಚದ ಮೇಲೆ ಕುಂಕುಮದಲರ್ಸುಪ್ಪತ್ತಿಗೆಯಲಿ ಮಂಡಿಸಿದ (ಪ್ರೋಹಕ. ೨೨-೦೨) ; ಚಪ್ಪರಮಂಚ ಗುಜ್ಜರಿಗಾಲಮಂಚ ಮೇಲುಪ್ಪರಮಂಚ . . . ಸೆಳೆಮಂಚ ವೊಪ್ಪವಾಂತೆಸೆದುವಲ್ಲಿ (ಭರತ. ೦೫-೨೬).

**ಚಪ್ಪರಮಂಚದಾಟ** = ಒಂದು ಬಗೆಯ ನರ್ತನ : ಚಪ್ಪರಮಂಚದಾಟ ಎಂಬುದು ಈ ಸ್ತ್ರೀಪಾತ್ರದ ನರ್ತನಗಳೊಳಗೊಂದು (ಪಾರ್ತಿಸು. ೩೩).

[ ಚಪ್ಪರ + ಮಂಚ ]

**ಚಪ್ಪರಿ** 'ಚಪ್ಪರಿ' ನೋ.

**ಚಪ್ಪರಿಕೆ** (ನಾ). ೧. ಚಪ್ಪರಿಸುವುದು ; ತಟ್ಟುವುದು ; ಚಪ್ಪರಣೆ : ಅದರ ಬೆನ್ನಿಗೊಂದು 'ಶಹಬಾಸಗಿರಿ'ಯ ಚಪ್ಪರಿಕೆಯನ್ನು ಕೊಟ್ಟು ಹೋಗುತ್ತಿದ್ದರು (ಗಂಗಾಪ. ೦೮೪). ೨. ಹೊಗಳಿಕೆ ; ಶ್ಲಾಘನೆ : ಶಶಿಬಿಂಬದ ಪಂಗದೇಕೆ ಚ[ಪಾಠಾಂ. ಪ]ಪ್ಪರಿಕೆಯೊಳಪ್ಪುದೇಂ ತನಗೆ ಪೇಟ್ ಮಧುವಿಂ ಪುರುಳುಂಟೆ (ಲೀಲಾವ. ೧೧-೬೩).

[ ಚಪ್ಪರಿ (< ಚಪ್ಪರಿ) + – ಕೆ ]

**ಚಪ್ಪರಿಸು**, ಚಪ್ಪಡಿಸು, ಚಪ್ಪಳಿಸು₂, ಛಪ್ಪರಿಸಂ, ತಪ್ಪಡಿಸು (ಕ್ರಿ). ೧. ತಿನ್ನುವಾಗ ನಾಲಗೆಯಿಂದ ಅಥವಾ ತುಟಿಗಳಿಂದ ಚಪ್ಪೆಂದು ಸದ್ದು ಮಾಡು ; ಚೀಪು ; ಸವಿ : ದುಷ್ಟ ಚದುರೂರ ಚಪ್ಪರಿಸಿದುದೊ ಕೆಡೆದನೊ ಹಳ್ಳಕೊಳ್ಳದಲಿ (ಕುಮಾರರಾ. ೨-೫-೨೦) ; ಚದುರನಧರಸುಧೆಯಾಂಟಿ ಚಪ್ಪರಿವಾ ವಿಧವನೆಗೆಂದಿಗಾಗುವುದೊ (ಕಂಕವಿ. ೯-೦೨೦) ; ಪಲ್ಯವನ್ನು ಚಪ್ಪರಿಸುತ್ತಿದ್ದ ಹಾಗೆ ಹಠಟೆಯೂ ಸಾಗುತ್ತಿತ್ತು (ನಾಕಾಲೀ ೦೯೫) ; ನಾಲಿಗೆ ಚಪ್ಪರಿಸುವ ಅಳವಿನಲ್ಲಿ ಬರುವುದಷ್ಟೇ ಪುರಸೊತ್ತು (ದೀಪಹ. II, ೦೯೫). ೨. ಧ್ವನಿಮಾಡು ; ಕೂಗು : ಅಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ (ಅಜಿಪು. ೫-೯೦) ; ಕಡು ಕೊಬ್ಬಿ ಚಪ್ಪರಿಪ ರಾಜಶುಕಾಳಿಯನಾವ್ರುವೊಪ್ಪುಗುಂ (ಗಿರಿಕ. ೨-೩೩) ; ಕುಪ್ಪಳಿಸಿದೊಡಂ ಬೀಟದೆ ಚಪ್ಪರಿಸುತೆಚ್ಚರೆಕ್ಕೆಯಿಂ ಬಿಲ್ಲಾಳ್ಗಳ್ (ಅಭಿಶಾ. ೨೮೯) ; ಅಬ್ಬರಣೆಯಲಿ ಚಪ್ಪರಿಸಿ ನೆಗಹಿದರು ಬಲು[ಪಾಠಾಂ. ಚಪ್ಪರಣೆಯಲಿ ಮುಸುಕಿದರು] ಮುಷ್ಟಿಗಳ ನೆಗಹಿನಲಿ (ಕುಮಾರರಾ. ೬-೭-೨೬). ೩. ಚಪ್ಪೆಂದಂ ಸದ್ದಾಗುವಂತೆ ತಟ್ಟು,-ಬಡಿ,-ಅಪ್ಪಳಿಸಂ : ಉಪ್ಪಿಲ್ಲಡೆಂಗು ಸಾಸವೆ ತಪ್ಪಿಲ್ಲದ ಮೆಣಸು ಸುಂಟಿ ಪೊಸಸುಣ್ಣಮಿವಂ ಚಪ್ಪರಿಸಿ ಬಡಿದು ಮಯ್ಯಂ ಸೊಪ್ಪಾಗಿರೆ ವೋದಿ ಪೂಸುವರ್ ನಿರ್ದಯೆಯಿಂ (ಧರ್ಮಾಮೃ. ೬-೭೦) ; ಸೊಳ್ಳೆಯ ಹುಳುಗಳ ಕಾಟದಿಂದ ಅವನು ಮೈಯನ್ನೆಲ್ಲ ಚಪಚಪನೇ ಚಪ್ಪರಿಸಿಕೊಳ್ಳಹತ್ತಿದನು (ಇಕ್ಕಳ. ೩೩೭). ೪. (ಪ್ರೋತ್ಸಾಹಿಸುವಂತೆ) ಮೈದಡಹು ; ನೇವರಿಸಂ : ಕರಂ ರಯ್ಯಮೆನೆ ಪಾಡುತಿರ್ದಳನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ (ಕಾವ್ಯಾವ. ೩೦೯) ; ಕರುಣದಲಿ ಚಪ್ಪರಿಸಿದನು ಕಂಧರವ (ಕುಮಾದ್ರೋ. ೧೦-೩೫) ; ಅರಿಗಂಡಭೈರವ ಚುಬುಕಿಜಿದು ಚಪ್ಪರಿಸಿದನು ಭುಜವ (ಕುಮಾರರಾ. ೪-೦೨-೨೯) ; ವಿಹಗಾಧೀಶ ತದ್ಭುಜವ ಚಪ್ಪರಿಸಿ . . . ಬೊಬ್ಬಿಜಿದ (ಪ್ರಾಂಹಕ. ೩೮-೩೪) ; ತುರಂಗಂಗಳಂ ಚಪ್ಪರಿಸಲು . . . ಕಾರ ಮಿಂಚಿನ ತೆಜದೊಳುರವಣಿಸಿದುವು (ಕೃಮಿಥಾ. ೨೫-೯೫). ೫. ಗದರಿಸು ; ಬೆದರಿಸು : ಇರು ಮಟ್ಟಮೆಂದು ತಾಂ ಚಪ್ಪರಿಸಿದೊಡಾನಿರೆನೆ ಮುಚ್ಚುಮಜಿಯೇಕೆಯೊ (ಅರ್ಧನೇ. ೫-೯) ; ಪಾಮರೀಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಾಂಚರಮೆಂದು ಬೆರ್ಚಿ ಪಾಜಿವು ಗಿಳಿವಿಂಡು (ಅನಂಪು. ೧-೬೨) ; "ಅದನ್ನೆಲ್ಲಾ ಹೇಳಬಾರದು" ರಾಮಿ ಚಪ್ಪರಿಸಿದ (ಕತ್ತಲೆ. ೫೦). ೬. ಕಡೆಗಣಿಸು ; ಅಲಕ್ಷಿಸಂ ; ಪ್ರತಿಭಟಿಸು : ಕಪ್ಪಮಿಾಯದೆ ಚಪ್ಪರಿಸುವ ಮಂಡಲಿಕರುಮಂ (ಆದಿಪು. ೪-೮೨ ವ). ೭. ಹೀಯಾಳಿಸು ; ಹಂಗಿಸು ; ಮೂದಲಿಸು : ನಳಿತೋಳ ಪಿಂಡುಗಂಕಣದ ಸರಂ ಮೊರೆವಳಿಗಳ ಸರವಂ ಚಪ್ಪರಿಸುವಿನಂ ಚೆನ್ನೆ ಪೊನ್ನೆಯರಲಂ ಕೊಯ್ದಳ್ (ಆದಿಪು. ೧೧-೦೦೨) ; ಅಪ್ಪಲೆ ನೀಂ ಪರವೆಣ್ಣಳನಪ್ಪುವುದನೆ ಬಯಸುತಿರ್ಪೆಯಪ್ಪೆಂದು ಕರಂ ಚಪ್ಪರಿಸಿ ನಾರಕರ್ ತಂದಪ್ಪಿಸುವರ್ ಕಾಯ್ದ ಲೋಹಮಯ ಪುತ್ರಿಕೆಯಂ (ಸುಕುಮಾ. ೦೦-೯೩) ; ಚಪ್ಪರಿಸುವ ಮೂದಲಿಸುವ ಹೊಂಕರಿಸುವ ಬಗ್ಗಿಸುವ ಕಳಕಳಂ ಬಳೆವಿನೆಗಂ (ವರ್ಧಪು. ೮-೪೭) ; ಕೊರಳ ರಕ್ಷಿಸಿಕೊಳ್ಳೆನುತ ಚಪ್ಪರಿಸಿ ದ್ರುಪದ ವಿರಾಟರೆಚ್ಚರು (ಕುಮಾದ್ರೋ. ೨-೫೪). ೮. ಆಕ್ರಮಿಸು ; ಆವರಿಸು : ಮದಾಕೃತಿಯಂ ಮಾಸಿಸಿ ಮುಪ್ಪು ಚಪ್ಪರಿಸೆಯುಂ (ಆದಿಪು. ೦-೮೦) ; ಚಪ್ಪರಿಸಿ ಬಂದು ನಿನ್ನಂ ಮುಪ್ಪಡಸಿದುದಣಲೊಳ್ ಅಡಸಲಿರ್ದಂ ಜವಂ (ಅಜಿಪು. ೨-೯೭) ; ಮುಪ್ಪು ಚಪ್ಪರಿಸೆ ಪರಾಧೀನನೆನಿಸುವೆನೆ (ಪಾರ್ಶ್ವಪು. ೦-೦೩೦) : ಉಪ್ಪರಿಸಿತ್ತು ಸೂರ್ಯನ ರಥಂಬರಮಪ್ಪದಿಶಾ ವಿಭಾಗವಂ ಚಪ್ಪರಿಸಿತ್ತು . . . ಭೇರಿಯ ಭೂರಿಗಭೀರನಿಸ್ವನಂ(ಸೂಕ್ತಿಸು. ೦೮-೬) ; ಚಪ್ಪರಿಸಲಿಂದೀ ನಿಶಾಟನ ನಿಪ್ಪಸರದಿಂ ಪಾಂಡವರಿಗಣ ದಪ್ಪಿತೆಂದರೆ ಸಾವುವೇ ಹಿತವು (ಸಾಳ್ವಭಾ. ೩೦-೨೭). **ಚಪ್ಪಡಿಸು**: ೪. ಅವಳ ದೇಹವು ನನ್ನ ದೇಹಕ್ಕೆ ಜೋಗುಳ ಹಾಡಿ ಚಪ್ಪಡಿಸಿ ಉಯ್ಯಾಲೆಯಾಡಿಸಿ ಮಲಗಿಸಿತು (ಮುಕ್ತಿ. ೩೯). **ಚಪ್ಪಳಿಸು₂** : ೩. ಲಲನೆಯಂಜುಲಿ ಸಲಿಲದಿಂ ಚಪ್ಪಳಿಸುತಂ ಬೆನ್ನೊಳು ಶಿರಸಿನೊಳು ಜಲವನೊತ್ತುವಳಾತ್ಮಜೆಗೆ (ಬಸವಪು. ೧೫-೯). **ಛಪ್ಪರಿಸು** : ೫. ಮಹಾಪಾತಕನು ಬಾಗಿಲಿಂಗೆ ಬಾರದಿರೆಂದು ಛಪ್ಪರಿಸಿ ಜಜಿದು ವೃಷಭನಂ ರ್ಝಂಕಿಸುತ್ತೆ ನಿಲಿಸಿ (ಸಿಂಗಿರಾ. ೪-೩೮). **ತಪ್ಪಡಿಸು** : ೪. ತಲೆದಡವಿ ತಪ್ಪಡಿಸಿ ಬಾಲ ಸಿದ್ಧರಾಮ ಕಾಲಭೈರವನು ತೋರುವನು . . . ಬಂಗಾರ ಸಿರಿಗಿರಿಯ (ಸಿದ್ಧಪು. ೬-೭) ; ಅದನ್ನು ತೊಡೆಯ ಮೇಲೆ ಹಾಕಿಕೊಂಡು ತಪ್ಪಡಿಸಿದಳು (ಗ್ರಾಮಾಯ. ೫೭೭).

[ ಚಪ್ಪರಿ (<ಚಪ್ಪರಿ) + – ಸು₁./ತೆಲು. ಚಪ್ಪರಿಂಚು, ಚಪ್ಪಳಿಂಚು ]

**ಚಪ್ಪಲರ್**, ಚಪ್ಪಲರು (ಕ್ರಿ). ೧. ಚಪ್ಪಟೆಯಾಗು ; ತಟ್ಟೆಯಾಗು ; ಗುಜ್ಜುಗೊಳ್ಳು : ಎಸಟಿಸಟ್ಟಪ್ಪದೆ ಮೊಗವಿಜಿದು ಕಾರ್ದು ಚಪ್ಪಲರ್ವಿನೆಗಂ ಸಿಪ್ಪಿಟ್ಟು ಕರೆದುಕೊಂಡುವು ಸಪ್ಪದವುಪ್ಪಳದಿನೊಟಿವ ನಜುವಂಡುಗಳಂ (ಲೀಲಾವ. ೯-೮೬) ; ನಸು ಜೋಲ್ದುಡೆ ಕೊಂಕಿದೋಲೆ ಚಪ್ಪಲರ್ದ ಘನಸ್ತನಂ (ಸೂಕ್ತಿಸು. ೯-೬೦) ; ಚಪ್ಪಲರ್ವಿನಂ ಪೊಲೆ ತೆಕ್ಕೆಗೆ ಸಾರ್ದು (ಪುನ್ನವಿ. ೩-೦೩). ೨. ಸಂಪೂರ್ಣವಾಗಿ ಅರಳು : ಚಪ್ಪಲರ್ದ ಕೊಸವುಗಳು ಕರವೊಪ್ಪಿದವು ಮನೋಜರಾಜ ರಾಜ್ಯೋದಯದೊಳ್ (ವರ್ಧಮಾ. ೧೦-೩೮). **ಚಪ್ಪಲರು** : ೧. ಸಡಿಲಿದ ತಕ್ಕೆ ಚಪ್ಪಲರಿದ ಮೊಗ ನಸುಮಿಡುವಳ್ಳೆ ಬೆಂಡೆದ್ದ ಕಣ್ಣು . . . ಬೆಳ್ಪಡರ್ದ ಬಾಯ್ದೆಜಿ ಚೆಲ್ವ ಬೀಜಿ (ನಾಗಕು. ೬-೬೦). [ <ಚಪ್ಪೆ₁ + ಅಲರ್₁ ]

**ಚಪ್ಪಲರು** 'ಚಪ್ಪಲರ್' ನೋ.

**ಚಪ್ಪಲಿ**, ಚಪ್ಪಲು, ಚೆಪ್ಪಲಿ (ನಾ). ಕಾಲಿನಲ್ಲಿ ಹಾಕಿಕೊಳ್ಳುವ ತೆಳ್ಳಗಿರುವ ಚರ್ಮದ ಮೆಟ್ಟು ; ಪಾದರಕ್ಷೆ : ಹೊಸ ಚಪ್ಪಲಿಯನ್ನು ಕೊಂಡವನು ಹಳೆಯದನ್ನೆಸೆದು ಬಿಡುವಂತೆ ಶ್ಯಾಮ್ ನನ್ನನ್ನು ದೂರಕ್ಕೆ ಎಸೆದಿದ್ದ (ಅಂಬೊ. ೦೩೬) ; ಭಾರತೀಯರು ಹಾಕಿಕೊಳ್ಳುವ ಚಪ್ಪಲಿಗಳು (ಅಗಸ್ಸ್. ೪೦) ; ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡು ತ್ರೇನೆಯೋ (ನಡರಾ. I, ೫೦೬). **ಚಪ್ಪಲು** : ಚಪ್ಪಲು, ನೈಟ್‌ಗೌನು ಈಚೆ ತೆಗೆದು, ಬಾತ್‌ರೂಮನ್ನು ಪ್ರವೇಶಿಸಿದ (ಅಳನಿ. ೦೬) ; ನೀಲೀಬಣ್ಣದ ಪ್ಲಾಸ್ಟಿಕ್ ಚಪ್ಪಲು . . . ಎಷ್ಟು ಮಾಟವಾಗಿ ಕಾಣುತ್ತವೆ ಕಂಡೆಯಾ ? (ಜುಂಬು. ೬೦). **ಚೆಪ್ಪಲಿ**: ಚೆಪ್ಪಲಿ. ಇದು ಕನ್ನಡದಲ್ಲಿ ಕೆರಹು. ತಮಿಳಿನಲ್ಲಿ ಶೆರುಪ್ಪು. ತೆಲುಗಿನಲ್ಲಿ ಇದರ ಬಹುವಚನ ಚೆಪ್ಪುಲ್. ಚೆಪ್ಪುಲ್ ಬಹುವಚನ ಎಂದು ಕಾಣದ ಜನ ಇದನ್ನು ಕನ್ನಡಕ್ಕೆ ಚೆಪ್ಪಲಿ ಎಂದು ಮಾಡಿ ತಂದು ಕೊಂಡಿದೇವೆ (ನಮ್ಮನು. ೦೦೫).

[ ←ಹಿಂ. ಚಪ್ಪಲ್ ; ಮರಾ. ಚಪ್ಪಲ್, ಚಪಲ್, ಚಪಳೀ ]

**ಚಪ್ಪಲಿಚೆಂಡು** (ನಾ). ಒಂದು ಬಗೆಯ ಸಸ್ಯ : (ಕ). [ ? ]

**ಚಪ್ಪಲು** 'ಚಪ್ಪಲಿ' ನೋ.

**ಚಪ್ಪಳ₁** 'ಚಪ್ಪಳೆ' ನೋ.

**ಚಪ್ಪಳ₂**, ಚಪಳ₁ (ನಾ). ತೊಡೆಯ ಹೊರಭಾಗ : ಹೊಡೆದರೆ ನಡುಬೆನ್ನು ಮುಂಡೆ ಚಪ್ಪಳೆಗಳ ಒಡಗೂಡಿ ಕರುಳ ಗುಂಡಿಗೆಯ ಬಿಡದೆ ಚೆಲ್ಲಿತು ರಕ್ತ(ಹರಿಸಾಂ. ೩-೬೪). **ಚಪಳ₁** : ಕುದುರೆ . . . ಕಂದ ಮುಖ ತಲೆಯು ಕೂದಲು ಸತ್ವವಾಗಿ ಚಪಳವೂ ಎದೆಯೂ ಉಬ್ಬಿ ದೊಡ್ಡಿತ್ತಾಗಿ ಇರಲು (ಅಶ್ವವೈ. ೫-೨೨ ಟೀಕೆ). [ <ಚಪ್ಪೆ₁ ]

**ಚಪ್ಪಳಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪಳಿಗೊಳ್** (ಕ್ರಿ). ಚಪ್ಪಾಳೆ ತಟ್ಟು; ಸಪ್ಪಳವಮಾಡು: ಪುಷ್ಪಕದೊಳಗೆ ಕುಳ್ಳಿರಿಸಿ ಚಪ್ಪಳಿಗೊಳಲೊಯ್ದು ಹಾಕುವುವು ದೊಡ್ಡ ಕಪ್ಪಟವಾದ ಕೊಳದಲಿ (ಬಿಜ್ಜಳಾ. ೨-೬೩). [ <ಚಪ್ಪಳೆ + ಕೊಳ್1 ]

**ಚಪ್ಪಳಿಸು1** (ಕ್ರಿ). =ಚಪ್ಪಳೆಯಿಕ್ಕು : ಆ ಕೂಸು . . . ನಗುಗುಂ ಕೈ ಚಪ್ಪಳಿಸುಗುಂ ಹಲವನುಲಿಗುಂ (ಶಾಂತಿ. ೧೩೨-೨೦) ; ಚಪ್ಪಳಿಸಿ ಕೈಗಳಂ ಕುರುನೃಪತಿ ಕೆಟ್ಟೆನಕಟ (ತುರಂಗ. ೭೦-೬೬). [ ಚಪ್ಪಳೆ + – ಇಸು3 ]

**ಚಪ್ಪಳಿಸು2** 'ಚಪ್ಪರಿಸು' ನೋ.

**ಚಪ್ಪಳೆ, ಚಪ್ಪಳ1, ಚಪ್ಪಾಳೆ1, ಚಪ್ಪಾಳೆ, ಛಪ್ಪಳೆ, ತಪಾಳೆ, ತಪ್ಪಣ್ಣೆ, ತಪ್ಪಣೆ, ತಪ್ಪಳೆ, ತಪ್ಪಾಳೆ** (ನಾ). ಎರಡೂ ಅಂಗೈಗಳನ್ನು ಒಂದಕ್ಕೊಂದು ತಾಟಿಸಿ ಮಾಡುವ ಶಬ್ದ ; ಕೈಪರೆ ; ಕರತಾಡನ : "ತಾಳಃ . . . ಕಾಲದಿಂದ ಗೀತಕ್ಕೆ ಕಟ್ಟಳೆಯ ಮಾಡುವ ಚಪ್ಪಳೆಯ ಪೆಸರು" (ಸಾಹಿತ್ಯ. ೯೬). **ಚಪ್ಪಳ1** : ಕರಗಳೆರಡುಂ ಕೂಡಿ ಚಪ್ಪಳಮನಿಕ್ಕುತಂ (ಸಿದ್ಧಕಾ. ೪-೨೦). **ಚಪ್ಪಾಳೆ1**: ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ . . . ತೇರು ಬಂದೊಪ್ಪಿತು (ಕಂಠವಿ. ೨೫-೧೦೦೦); ಚಪ್ಪಾಳೆಗಳಂ ಹುಯ್ಯುತ (ಸೌಗಂಧಿ. ೨೯೬-೮); ಅವಳ ಮಾತಿಗೆ ಅಲ್ಲಲ್ಲಿ ಚಪ್ಪಾಳೆಗಳು . . . ಕೇಳಿಬರುತ್ತಿದ್ದವು (ಅಹನಾ. ೦೩೪). **ಚಿಪ್ಪಾಳೆ** : ಕಿರುದನಿಯ ನಗು ಚಿಪ್ಪಾಳೆ ಮುತ್ತುಗಳು ಪಿಸುಮಾತು ಹಾಡು (ಮುಕಿನಾ. ೧೯೬). **ಛಪ್ಪಳೆ** : 'ಛಪ್ಪಳೆಯಿಡು' ಪರಾ. **ತಪಾಳೆ** : 'ಕೈತಪಾಳೆ' ಪರಾ. **ತಪ್ಪಣ್ಣೆ** : 'ಕೈದಪ್ಪಣೆ' ಪರಾ. **ತಪ್ಪಣೆ** : 'ತಪ್ಪಣೆಗುಟ್ಟು' ಪರಾ. **ತಪ್ಪಳೆ** : ಮೆಲ್ಲುಡಿ ಮುದ್ದುಗೆಯ್ವ ವಿಂಪೊದವಿದ ನುಣ್ಣೊದಟ್ಟುಡಿ ಮುದಂ ಮಿಗೆ ತಪ್ಪಳೆಗಾಡುವಾಯತಂ (ದಶಕು. ೫-೬೨). 'ತಪ್ಪಳೆಗಂಟ್ಟು' ಪರಾ. **ತಪ್ಪಾಳೆ** : ಪುಟ್ಟಕೈಯಲಿ ತಪ್ಪಾಳೆಯನಿಕ್ಕುವಳು ತಪ್ಪು ದಟ್ಟಡಿಯಿಟ್ಟು ನಡೆವಳು (ಕವಿಕ. II, ೪೮೫ ಪರ್ಯಾಲೋಚನ).

**ಚಪ್ಪಾಳೆ ತಟ್ಟು**=ಕರತಾಡನ ಮಾಡು : ಚಪ್ಪಾಳೆ ತಟ್ಟ ನಾ ಪಾಡುವೆ (ಪುರಂದ. ೦-೮೨-೧) ; ಜನ ಯಾವುದಕ್ಕೆ ಚಪ್ಪಾಳೆ ತಟ್ಟುವುದೊ ಅದನ್ನೇ ಪ್ರಯೋಗದಲ್ಲಿ ಸೇರಿಸಿಬಿಡುವುದು (ಭಾರದ. ೫೭೪). **ಚಪ್ಪಾಳೆ ಬಾರಿಸು**= ಚಪ್ಪಾಳೆತಟ್ಟು : ಆತ ಚಪ್ಪಾಳೆ ಬಾರಿಸುತ್ತಾ ಹೇಳಿದ (ಅಕ್ಷಯ. ೯೭). **ಚಪ್ಪಾಳೆಹಾಕು**=ಚಪ್ಪಾಳೆ ತಟ್ಟು : ಸುತ್ತಣ ಜನ ಪ್ರಶಂಸಾಪೂರ್ವಕವಾಗಿ ಚಪ್ಪಾಳೆಹಾಕುತ್ತಿರುವಂತೆಯೂ ಕನಸು ಕಟ್ಟಬಹುದು (ಶಿಕ್ಷಣ. ೬೫೦).

[ ದೇ.॥ ತಮಿ. ಚಪ್ಪಾಣಿ ; ತುಳು. ಚಪ್ಪಳೆ ; ತೆಲು. ಚಪ್ಪಟ್ಲು ]

**ಚಪ್ಪಳೆಗುಟ್ಟು, ತಪ್ಪಣೆಗುಟ್ಟು, ತಪ್ಪಳೆಗುಟ್ಟು** (ಕ್ರಿ). =ಚಪ್ಪಳೆಯಿಕ್ಕು: ತೂಗಿ ಕೊನೆದು ಕೈ ಚಪ್ಪಳೆಗುಟ್ಟುತೆ (ಭಂಗೀರ. ಹ. ೪೬೩-೦೩) ; ಧಿಟ್ಟ ಚಂಚರು ಬಂದು ಚಪ್ಪಳೆಗುಟ್ಟಿ ಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನೆನ್ನಯ ಪಳ್ಳಿಗೈತಂದು (ಬಸವು. ೦೮-೦೫). **ತಪ್ಪಣೆಗುಟ್ಟು** : ಮದಿರಾರಸದ ಮದವೇಱ . . . ತೊದಲ್ನುಡಿಯಿಂದಂ ಕರದು ಬಯ್ವುತ್ತುಮುಟ್ಟುದಂ ಬಿಟ್ಟು ತಪ್ಪಣೆಗುಟ್ಟುತುಂ ಕುಣಿದು (ಪಾರ್ಥವು. ೦೦-೦೩೪ ವ). **ತಪ್ಪಳೆಗುಟ್ಟು** : ತಪ್ಪಳೆಗುಟ್ಟುತ ತಾರೆಲೆವಾಡುತ ಒಪ್ಪ ಗೋವಳರ ಮಧ್ಯದೊಳು ಒಪ್ಪದಿನಾ ಬಲಕೇಶರೀವರ್ರಿರು ಬರ್ಪ ಪಟ್ಟಣದ ದಾರಿಯೊಳು (ನೇಮಿಸಂ. ೦೭-೦೦೩).

[ ಚಪ್ಪಳೆ + ಕುಟ್ಟು1 ]

**ಚಪ್ಪಳೆಗೊಳಿಸು** (ಕ್ರಿ). ಕೈಯಿಂದ ತಟ್ಟು; ಚಪ್ಪರಿಸು; ಸದ್ದುಹೊಡೆ : ನಿಪ್ಪಸರದ ತೋಳ ಮೊದಲ ಚಪ್ಪಳೆಗೊಳಿಸಿ ದಂಡೆಯ ಹೂಡಿ ನಿಂದಿರು ವೊಪ್ಪವನೇನ ಬಣ್ಣಿಪೆನು (ಮೋಹತ. ೦೨-೮೪).

[ ಚಪ್ಪಳೆ + ಕೊಳ್1 + – ಇಸು3 ]

**ಚಪ್ಪಳೆಯಿಕ್ಕು, ಚಪ್ಪಳಿಕ್ಕು, ಚಪ್ಪಾಳೆಯಿಕ್ಕು, ತಪ್ಪಳಿಕ್ಕು** (ಕ್ರಿ). ಚಪ್ಪಾಳೆ ತಟ್ಟು ; ಕೈಪರೆಗುಟ್ಟು; ಕರತಾಡನಮಾಡು: ಚಪ್ಪಳೆಯಿಕ್ಕಿ ನಲಿದು ಕೊಂಡಾಡಿ . . . ಡಾಕಿನಿತಂಡವೆಸೆದುವಾ ರಣದೆ (ಕಂಠವಿ. ೧೫-೬೨); ನೋಡಿ ಚಪ್ಪಳೆಯಿಕ್ಕಿ . . . ಕೇಕೆ ಹಾಕಿದೆ ಮಗುವು (ಹೂಹಾದಿ. ೧೬-೩). **ಚಪ್ಪಳಿಕ್ಕು** : ಓತು ಕುಣಿವರು ಚಪ್ಪಳಿಕ್ಕಿ (ಬಸವು. ೪-೮) ; ನುಡಿವ ನಾಲಿಗೆಯ ಒಡಿದು ಬಿಡದೆ ಥಣಥಣರೆಂದು ಬಡಿದು ಚಪ್ಪಳಿಕ್ಕುತ್ತ (ಪುರಂದ. ೦-೫೩-೧) ; ಸರ್ವರು ಮುತ್ತಿ ಕದುಬಿ . . . ಚಪ್ಪಳಿಕ್ಕುತ ನಗುತಿರೆ (ನವಮೋ. ೦೦-೫೨). **ಚಪ್ಪಾಳೆಯಿಕ್ಕು** : ನಿರ್ದಯ ಅವಿವೇಕತನದ ಪತನಕ್ಕೆ ಚಪ್ಪಾಳೆಯಿಕ್ಕುವನು (ಪ್ರಬಂಧ. ೩೦). **ತಪ್ಪಳಿಕ್ಕು** : ಕಾಲನಾಡಿಸೈ ಕುಮಾರ ಎಂದು ಕಾಂತೆಯರ್ ಮುಂದೆ ನಿಂದು ತಪ್ಪಳಿಕ್ಕಿಯಾಡಿಸಲ್ ವಿಲಾಸದಿಂ . . . ಆಡಿದಂ ಕುಮಾರಕಂ (ದಶಕು. ೨-೭೪).

[ ಚಪ್ಪಳೆ + ಇಕ್ಕು ]

**ಚಪ್ಪಟೆ, ಚಾಪಳಿ** (ನಾ). ೧. ಚಪ್ಪಟೆಯಾದುದು : "ಚಪ್ಪ[ಪಾಠಾಂ. ಕ್ಕ]ಟೆಯೆಂದುವೊತ್ತಿ ಚಪ್ಪಟೆಯಾದುದು" (ಶಮದ. ಮು. ೩೩ ವೃತ್ತಿ); "ಚಪ್ಪಟೆ [ಪಾಠಾಂ. ಕಚ್ಚಟೆ]ಯೆನಲ್ಕೆ ಚಪ್ಪಟೆ" (ಸಂಜೀವ. ೫); ಚಪ್ಪಟೆ, ಪುಚ್ಚಟೆ (ಶಬ್ದಾನು. ೦೪೦ ವ್ಯಾಖ್ಯಾ). **ಚಾಪಳಿ**: (ಗು) ೨. (ಕರಾ) ಸಮತಲವಾದ; ಸಪಾಟಾದ; ಹೆಚ್ಚು ಉಬ್ಬಿಲ್ಲದಿರುವ: ಚಾಪಳಿ ಗೊರಟುಳ್ಳ ಮಾವಿನ ಹಣ್ಣು ಹೆಚ್ಚು ಚೆನ್ನಾಗಿರುತ್ತದೆ (ಲೂಢಿ).

[ ?. / ತಮಿ. ಚಪ್ಪಳಿ=ಚಪ್ಪಟೆಯಾಗು ]

**ಚಪ್ಪಾಣಿಮುತ್ತು** (ನಾ). ಶ್ರೇಷ್ಠವಾದ ಮುತ್ತು: ಚಪ್ಪಾಣಿಮುತ್ತು ಬಾಯಿ ಬಿಟ್ಟಿಹೋಗುವಾಗ ದುಃಖ ಬೇಡ (ಪುರಂದ. ೩-೬೭-೫).

[ <ಚಪ್ಪು1 + ಅಣಿಮುತ್ತು ]

**ಚಪ್ಪಾಳೆ** 'ಚಪ್ಪಳೆ' ನೋ.

**ಚಪ್ಪಾಳೆಯಿಕ್ಕು** 'ಚಪ್ಪಳೆಯಿಕ್ಕು' ನೋ.

**ಚಪ್ಪರಿ, ಚಪ್ಪರಿ, ಚಿಪ್ಪರಿ** (ಕ್ರಿ). ೧. ಆಸ್ವಾದಿಸು; ನಾಲಗೆ, ತುಟಿಗಳಿಂದ ಸವಿಮಾಡಿಕೊಂಡು ತಿನ್ನು ; ಹೀರು ; ಚಪ್ಪರಿಸು : ಚನ್ನಯ್ಯನುಂಡು ಮಿಕ್ಕುದ ಚಪ್ಪರಿದು ಸವಿದ (ಚನ್ನಬ.ಕ. ೩೭೦-೭೭೦); ಕಡುವುಳಿಗಳ್ಳನೊಂದು ತಿಳಿವಟ್ಟಲನಿಟ್ಟೆಱೆಯಲ್ಕೆ . . . ಕುಡಿದು ಚಪ್ಪರಿದು (ದಶಕು. ೮-೨೦೪) ; ಮೊಗದೊಳು ಮೊಗವಿಟ್ಟು ಚೆಂದುಟಿ ರಸವ ಸವಿದು ಚಪ್ಪರಿದ (ಕಂಠವಿ. ೦೦-೪೦). ೨. (ಆಲಂ) ಅನುಭವಿಸು : ಸೌಖ್ಯಮಂ ಚಪ್ಪರಿದು (ಸ್ವರೂಪಾ. ೩-೨೬). **ಚಪ್ಪರಿ** : ೧. ಕೆಳಗೆ ನಿಂದು ಚಪ್ಪರಿದಡೆ ತೊಟ್ಟು ಬಿಟ್ಟತ್ತೇ ಹಣ್ಣು (ಮೋಕ್ಷಮಾ. ೩೦-೧೨೪) ; ಚಪ್ಪರಿದೀಂಟ ನೊತ್ತ ಕಣಿಕೋದ್ಭವ ಸಾರವಂ (ಉದ್ಭಟ. ೩-೨೦) ; ಮರುಳುಗಳು ಬಾಯ ಬಿಡುತ ಮುಕ್ಕುಳಿಸಿ ಚಪ್ಪರಿದು ದಣಿವಂದದಿಂ (ವೀಶ್ವಪು. ೨-೭-೯೬) ; ರಸರಸಾಯನವ ಚಪ್ಪರಿದು (ಮೋಹತ. ೩-೫೭). ೩. ಮೆಲುಕು ಹಾಕು: ಅದನ್ನೇ ಮತ್ತೆ ಮತ್ತೆ ಮಾತಾಡಿ ಅದನ್ನು ಚಪ್ಪರಿಯೋ ನಮ್ಮ ನಡತೆ ಸರೀನೆ? (ನಿಂಬಿನ. ೦೩೪). **ಚಿಪ್ಪರಿ**: ೧. ಈಶ್ವರಂ ತೆರೆಯ ಮುಱೆಯೊಳ್ ಮುನ್ನಿನಂದದಿಂ ಚಿಪ್ಪರಿವುತಾರೋಗಿಸದಿರಲು (ಚಿಬಪು. ೫೫-೧೨).

[ ಚಪ್ಪು + ಇರಿ1 ]

**ಚಪ್ಪು, ಜಬ್ಬು1** (ಕ್ರಿ). ೧. ಅಗಿದು ತಿನ್ನು ; ಅರೆದು ತಿನ್ನು ; ಮೆಲುಕಾಡಿಸು. 'ಚಪ್ಪರಿ' ಪರಾ. **ಜಬ್ಬು1** : ೨. ಚೀಪು; ಸೀಪು: ಮಗು ದೊಡ್ಡದಾದರೂ ಮೊಲೆ ಜಬ್ಬುತ್ತಲೇ ಇದೆ (ರೂಢಿ).

[ದೇ.॥ ತಮಿ. ಮಲ. ತೆಲು. ಚಪ್ಪು; ಮರ್ಲ್ತೊ. ಚೊಪ್ಪೆ ]

**ಚಪ್ಪೆ1, ಚಿಪ್ಪೆ, ಛಪ್ಪೆ** (ನಾ). ೧. ಚಪ್ಪಟೆಯಾದುದು ; ತಟ್ಟೆಯಾದುದು. 'ಚಪ್ಪಲರ್' ಪರಾ. ೨. ತೊಡೆಯ ಹೊರಭಾಗ: ಆ ಆಕಳಿನ ಮುಂಗಾಲಿನ ಚಪ್ಪೆಗೆ . . . ಮೆಲ್ಲನೆ ತಿವಿಯಿತು (ಮುಂಬಯಿ. ೫-೯೧) : ಚಪ್ಪೆ

ಗಳೆರಡೂ ಬಂಡಿಯ ಗಾಲಿಯಂತಾಗಿದ್ದುವು (ಬಳುಕು. ೧೭೭) : ಅದರ ಚಪ್ಪೆ ಎಲುವಿನ ಮಗ್ಗುಲಲ್ಲಿ . . . ಅದರ ಹೆಸರು ಬರೆದನು (ಬಂಗಾಹೆ. ೪೩). **ಚಿಪ್ಪೆ:** ೧. 'ಚಿಪ್ಪೆವಡೆ' ಪರಾ. ೨. 'ಚಿಪ್ಪೆಜಾಡ್ಯ' ಪರಾ. **ಛಪ್ಪೆ:** ೨. ಟೊಂಕದ ಎರಡೂ ಮಗ್ಗುಲಿಗೆ ದೊಡ್ಡವೆರಡು ಛಪ್ಪೆಯ ಎಲುವುಗಳಿವೆ (ಮುಂಬಯಿ. ೬-೩೦೨).

[ ದೇ.॥ ತಮಿ. ಚಪ್ಪೈ; ಮಲ. ಚಿಪ್ಪ; ತೆಲು. ಚಿಪ್ಪ ]

**ಚಪ್ಪೆ₂** 'ಸಪ್ಪೆ' ನೋ.

**ಚಪ್ಪೆ₃** 'ಛಾಪು' ನೋ.

**ಚಪ್ಪೆ₄** (ನಾ). ಒಂದು ಬಗೆಯ ಸಸ್ಯ : ಚಪ್ಪೆಸೊಪ್ಪಿನ ರಸವನೂ ಎಣ್ಣೆಯನೂ ಕೂಡಿ ಮಸ್ತಕಕ್ಕೆ ಒತ್ತಿಸಲು ಪಕ್ಷಿಗ್ರಹ ಹರವಹುದು. ಚಪ್ಪೆಯ ಬೀಜವ ತೇದು ಪಾನ ಲೇಪನಗಳ ಮಾಡಿಸಲು ಪಕ್ಷಿಗ್ರಹ ಹರವಹುದು (ವೈದ್ಯಸಾ. II, ೧೪). [ ? ]

**ಚಪ್ಪೆಗಲ್ಲು** (ನಾ). ಚಪ್ಪಟೆಯಾದ ಕಲ್ಲು ; ಚಪ್ಪಡಿಗಲ್ಲು; ಹಾಸುಗಲ್ಲು: ಒಂದಗುಳು ಚಪ್ಪೆಗಲ್ಲಿನಂದ ಒಂದಗುಳು ಅಡ್ಡಗಲ್ಲಿನಂದ ಒಂದಗುಳು ಊರ್ಧ್ವಗಲ್ಲಾಗಿ ನಿಂದಿಹುದಾಗಿ (ಮೋಳಿಮಾ. ೨೨೩-೭೭೮).

[ ಚಪ್ಪೆ₁ + ಕಲ್ಲು (<ಕಲ್₃) ]

**ಚಪ್ಪೆಜಾಡ್ಯ, ಚಿಪ್ಪೆಜಾಡ್ಯ** (ನಾ).=ಚಪ್ಪೆರೋಗ : (ಎಸಮ್ಮ. XV, ೩೬). **ಚಿಪ್ಪೆಜಾಡ್ಯ :** ಕೆಲವು ಕಾಲಗಳಲ್ಲಿ ದನಕರುಗಳಿಗೆ ದೊಡ್ಡಜಾಡ್ಯ ಚಿಪ್ಪೆಜಾಡ್ಯ ನರಡಿ . . . ವ್ಯಾಪಿಸಿರುವುದುಂಟು (ಗ್ರಾಮಾಳ. ೦೦೫).

[ ಚಪ್ಪೆ₁ + ಜಾಡ್ಯ ]

**ಚಪ್ಪೆರೋಗ** (ನಾ). ದನಗಳಿಗೆ ಭೇದಿ ವಿಪರೀತವಾಗುತ್ತ ಜಂಘಾಬಲ ಉಡುಗಿ ಹೋಗುವ ಒಂದು ಬಗೆಯ ರೋಗ : ಚಪ್ಪೇರೋಗದ ಉಚ್ಚಾಟ ಹೆಚ್ಚಿದಾಗ ಊರು ಮಧ್ಯದಲ್ಲಿರುವ ಗೋಗಲ್ಲು ಪೂಜೆ ಮಾಡುವ ವಾಡಿಕೆ (ಹುಟ್ಟಿಹ. ೭೦) ; ಇದು ಚಪ್ಪೆರೋಗ . . . ಎಂಬ ರೋಗವನ್ನುಂಟುಮಾಡುತ್ತದೆ (ಪಶುಜೀ. ೪೦). [ ಚಪ್ಪೆ₁ + ರೋಗ ]

**ಚಪ್ಪೋಡು, ಚಪೋಡು, ಚಪ್ಪಗೋಡು, ಚಿಪ್ಪೋಡಂ** (ನಾ). ೧. ತಾಮ್ರಶಾಸನ; ಲಿಖಿತವಾದ ಅಧಿಕಾರಪತ್ರ: ಸಾತಿಶಯ ಪದ್ಮಂಗಳೇ ವಜ್ರಮಯದ ವಿಖ್ಯಾತವೆಂದೆನಿಪ ಚಪ್ಪೋಡಾಗಿರುತಿರ್ದವು (ವೀಕ್ಮಪು. ೮-೦೭-೪೫) ; ಚಪ್ಪೋಡ ತಿಳಿದಱಿಹಿದಾತಗಂ ಸೇನಾಧಿಪಟ್ಟಗಟ್ಟುತ್ತ . . . ನನ್ನರ್ಧಸಿಂಹಾಸನಾರೂಢನಂ ಮಾಳ್ಪೆಂ (ಪ್ರಭುಪು. ೭-೦೭). ೨. ಸೊಮ್ಮು ; ಸ್ವತ್ತು ; ಆಸ್ತಿ : ವಿಜ್ಞಾನವು ಯಾವೊಂದು ದೇಶದ ಚಪ್ಪೋಡೂ ಅಲ್ಲ (ವಿಕಾಸ. ೫೦). **ಚಪೋಡು :** ೧. ಯಾ ಚಪೋಡ ಬರದಾತ ನಾಗೇನಹಳಿ ಚಿಕ್ರಪ್ಪನ ಪೌತ್ರರಾದ . . . ಹುಚಣ್ಣಾನ ಕೈಯ ಬರಹ (ಎಕ. XII, ತುರುಕೊ. ೪೫-೯೪ ; 1679). **ಚಪ್ಪಗೋಡು :** ೧. ಮೇಲು ಕೋಟೆ ಚಪ್ಪಗೋಡು ಇಲ್ಲದೆ ಬರಿಯ ಕಾಗದದಲ್ಲಿ ಈಚೆಗೆ ಅನಾಮಧೇಯ ಗುರುಗಳಿಂದ ಅಧಿಕಾರವನ್ನು ಪಡೆದವರು ಬರಿಯ ಬುಡ್ಡ ದಾಸಯ್ಯಗಳು (ಗರುದಾ. ೦೭೬). **ಚಿಪ್ಪೋಡು:** ೨. ಈ ಭೂಮಿ ಯಾವೊಬ್ಬನ ಚಿಪ್ಪೋಡಲ್ಲ; ಅದು ದೇವರದು (ಪುನರು. ೩೦೫) ; ಬುದ್ಧಿಶಕ್ತಿ ಯಾವೊಂದು ಜನಾಂಗದ . . . ಚಿಪ್ಪೋಡಲ್ಲ, ಸ್ವಂತ ಆಸ್ತಿಯಲ್ಲ (ಶ್ರೀಕೃಪ್ರ. VIII, ಮುನ್ನುಡಿ). P ಇದು 'ತಾಮ್ರಪತ್ರ' ಎಂಬ ಸಂಸ್ಕೃತ ಶಬ್ದದ ಅನುವಾದವಿರಬಹುದು. [ ದೇ.॥ ತಮಿ. ಮಲ. ಚಿಪ್ಪೇಟು ]

**ಚಪ್ರಾಸಿ** 'ಚಪರಾಸಿ' ನೋ.

**ಚಬಕ** 'ಚಬುಕು' ನೋ.

**ಚಬಕಾರ** 'ಚಬುಕಾರ' ನೋ.

**ಚಬಿಕು** 'ಚಬುಕು' ನೋ.

**ಚಬುಕ** 'ಚಬುಕು' ನೋ.

**ಚಬುಕಂಗೆಯ್** (ಕ್ರಿ). ಚಾಟಿಯಿಂದ ತಿವಿದು ವೇಗಗೊಳಿಸು,–ಚುರುಕುಗೊಳಿಸು : ಪತ್ತಿರ್ದ ಕುದಿರೆಯಂ ಚಬುಕಂಗೆಯ್ದು (ಚಂದ್ರಪ್ರ. ೭-೦೦೯).

[ ಚಬುಕ (<ಚಬುಕು) + ಕೆಯ್₁ ]

**ಚಬುಕಾಯಿಸು** (ಕ್ರಿ). = ಚಬುಕಂಗೆಯ್ : ಬಾಲಕಿಯು ತನ್ನ ಕುದುರೆಯನ್ನು ಹಿಮ್ಮಡಿಯಿಂದ ಚಬುಕಾಯಿಸುತ್ತಾ . . . ಮುಂದೆ ಓಡಿಸಿಕೊಂಡು ಹೊರಟುಹೋದಳು (ಝಾಡಾಚಿ. ೦೩).

[ <ಚಬುಕು + – ಇಸು₃ ]

**ಚಬುಕಾರ, ಚಬಕಾರ, ಸಬಕಾರ** (ನಾ). ಸೋಪು ; ಸಾಬೂನು ; ಸಬ್ಬು: "ಚಬಕಾರ, ಚಬುಕಾರ–ಸಬಕಾರ" (ಗಂಗಾದು. ೦೨೮). **ಚಬಕಾರ:** ಮೇಲಿನ ಪ್ರಯೋಗವನ್ನು ನೋಡಿ. **ಸಬಕಾರ :** ಆ ಕೊಳೆಗೆ ನಾಲ್ಕು ಬಿಲ್ಲೆಯ ಸಬಕಾರ ಸಾಕಾಗಿದ್ದಿತು (ಜಯಂತ ೩೪೩) : ಸಬಕಾರದ ನೊರೆಯನ್ನು ಮುಖದ ತುಂಬ ಮೆತ್ತುತ್ತಾರೆ (ದೀಕನ್ನ. ೬೯) ; ತಲೆಗೆ ಸಬಕಾರ ಹಚ್ಚುವದರಿಂದ ಕೂದಲುಗಳು ಬಿರುಸಾಗಿ ಬೆಳ್ಳಗಾಗುವವು (ಬ್ರಹ್ಮಜೀ. ೦೨೦). [ದೇ.॥ ತಮಿ. ಚವುಕ್ಕಾರ: ಮಲ. ಚವುಕ್ಕಾಯ್; ತುಳು. ಚಬಕಾರ, ಚಬುಕಾರ, ಸೌಕಾರ; ತೆಲು. ಚವುಕಾರ, ಚೌಕಾರ ]

**ಚಬುಕು, ಚಬಕ, ಚಬಿಕು, ಚಬುಕ, ಚಾಬೂಕು, ಚುಬುಕು₂, ಸಬಕ** (ನಾ). ೧. ಚಾವಟಿ; ಚಾಟಿ; ಚಡಿ: ಚಟುಲ ಹಯಗಳ ಚಬುಕನಿಕ್ಕಲು ಪುಟನೆಗೆದು , . . ತುಳಿದುವು ದಿವವನಾಕ್ಷಣಕೆ (ಕಾಶಿಖಂ. ೦೯-೦೧); ಬಲೆ ಪಟ ಹನುಮನ ಬಾಲ ಚಬುಕು ಕೊಳ್ಳಿ ತೊಲಗದ ಕಂಭ ಮುಂದುಲಿವ ತಲೆ ಕಳಸದ ಬಿರಿದಿನ ಹರಿಗೆಯ ಮಂದಿ ಕಲಹಕ್ಕೆ ಪೊಱಮಟ್ಟರು (ಕುಕಾಸಾಂ. ೦೦-೩೩); ಖಂಡದ ಹಿಡಿಗಲ್ಲು ನರದ ಚಬುಕುಗಳ ಗಂಡುಭೂತಗಳೆದ್ದವಾಗ (ಹರಿಸಾಂ. ೫೪-೫೭) ೨. (ಆಲಂ) ಚುರುಕಂ ; ಚಪಲತೆ : ಸುಬ್ಬು ಎಳೆ ನಾಗರಹಾವಿನಂತೆ ಚಬುಕಾಗಿ . . . ತಿರುಗುತ್ತಿದ್ದ (ಭೀಮಕಾ.೮೨). **ಚಬಕ:** ೧. ಸಾರಥಿಯು ಪುನಃ ಕುದುರೆಗಳನ್ನು ಚಬಕದಿಂದ ಹೊಡೆಯುವನು (ಮುಂಬಯಿ. ೬-೨೯) ; ಒಂದು ದಿನ ಪೋಲೀಸರ ಚಬಕ ಬಿದ್ದು ನನ್ನ ಮೇಲೆ ಬಾಸಾಳವೆದ್ದಿತು(ಗಾಳಿಪ. ೧೨೯); ಕುದುರೆಗೊಂದು ಚಬಕದೇಟನ್ನು ಕೊಟ್ಟು ಹೇಳಿದ (ಶಾಪ. ೮೩). **ಚಬಿಕು:** ೧. ಆ ರಾಯನು . . . ತನ್ನ ಚಬಿಕಿನ ಪೆಟ್ಟಿನಿಂದ ಆತನನ್ನು ಬಹಳವಾಗಿ ನೋಯಿಸಲು (ಕೃಪಾಅ. ೩೨೩). **ಚಬುಕ:** ೧. ಚಬುಕ ಚಾಟಿ ಚಮ್ಮಟಿಕೆಯಿಂದಱಿಚಱಿಚ ಬಡಿದು . . . ಭಂಗಬಡಿಸೆಂದು ನಿರವಿಸಿದನು (ಚಬಪು.೫೭-೪೨). **ಚಾಬೂಕು :** ೧. ಕಾಕಾನಿಂದ ಚಾಬೂಕ ಏಟು ತಿಂದ (ದೀಪಹ. II, ೦೯೮); ಬಡ ಟಾಂಗಾದವನ ಟೊಪ್ಪಿಗೆ ಎಲ್ಲಿಗೆ ಹೋಯಿತೊ, ಚಾಬೂಕು ಯಾರ ಕೈ ಸೇರಿತೊ! (ಶ್ರೀಕಾಂತ. III, ೬೪). **ಚುಬುಕು₂:** ೧. ಸೈರಿಸದೆ ಆರ್ವವರ ಚುಬುಕಿನ ಏಮ್ಮೆಬಾರಿನ ಪರಮಸೇವೆಗೆ ನಿನ್ನನ್ನು . . : ಎಳೆದೊಯ್ಯುತ್ತಿದೆ (ಚಿಟ್ಟಿಅ. ೨೦-೦) . **ಸಬಕ:** ೧. ಚರ್ಮದ ಜೀನೂ ಮತ್ತು ಬಟ್ಟೆಯ ಸಬಕವೂ ಅವೆ (ಚಂಗಾಳ್ಳ. ೨೭).

ಚಬುಕುಮಾಡು, ಚಬಕುಮಾಡು = (ಕುದುರೆಯನ್ನು) ಚಬುಕಿನಿಂದ ಹೊಡೆದು ಚುರುಕುಗೊಳಿಸು : ಛಾಯಾಗುಪ್ತನು ರಥಾಶ್ವಮಂ ಚಬುಕುಮಾಡಿ (ಸೌಗಂಧಿ. ೨೯೭-೧) ; ರಾಕ್ಷಸನು–ಅಶ್ವಮಂ ಚಬುಕು ಮಾಡುತ್ತಾ ಬರುತ್ತಿದ್ದನು (ಮುದ್ರಾಮಂ. ೧೫೦); ರಥಾಶ್ವಗಳ ಶರೀರಗಳಂ ಸವರಿ ಚಬಕುಮಾಡಿ . . . ರಥವನ್ನು ನಡೆಸು (ಕೃಪಾವಿ. ೯೭).

[ ←ಪಾರ. ಹಿಂ. ಚಾಬುಕ್; ಮರಾ. ಚಾಬೂಕ್ ]

**ಚಬ್ಬಣವಾವಿ** (ನಾ). ಒಂದು ಊರಿನ ಹೆಸರು : ತೆಂಕಲು ಚಬ್ಬಣವಾವಿಯ ಸೀಮೆ (ಕಇ. II, ೦೦-೨೩ : 1092) ; ಚಬ್ಬಣವಾವಿಯ ಮಲ್ಲೇಶ್ವರದೇವರಿಗೆ ಸಿನ್ನಿಖೇಡದಲು ಬಿಟ್ಟ ಭೂಮಿ (ಕಇ. II, ೦೭-೦೫; 1122) [ ? ]

**ಚಬ್ಬಯ್ಯ** (ನಾ). ಒಬ್ಬಾತನ ಹೆಸರು : ಅವರಣ್ಣಂ ಚಬ್ಬಯ್ಯಂ ಕಲ್ಲಂ ನಿಱಿಸಿದಂ (ಎಕ. VIII, ಸೊರಬ. ೩೮೬-೭ ; 1004). [ಚಬ್ಬ₀+ಅಯ್ಯ₁]

**ಚಬ್ಬಿಜೋಯಿ** (ನಾ). ಒಂದು ಪ್ರದೇಶದ ಹೆಸರು : ರಾಜಾದಿತ್ಯರಸರ್ ಕೋಸವಳಂ ಸವಲಪ್ಪೇಯ ಭಾಗಮುಮಂ ಚಬ್ಬಿಜೋಯಿ ಯೆಪ್ಪತ್ತೊಂದು ಸಾಸಿರಮುಮಂ . . . ಪ್ರತಿಪಾಳಿಸುತ್ತುಂ (ಕಇಅ. ೨೨-೭-೨೪; 1083). [ ? ]

**ಚಬ್ಬಿಸೆಟ್ಟಿ** (ನಾ). ಒಬ್ಬಾತನ ಹೆಸರು: ಬಸವಸೆಟ್ಟಿಯ ಮಗಂ ಚಬ್ಬಿಸೆಟ್ಟಿ (ಎಕ. IX, ದೊಡ್ಡಬ. ೯-೮ ; 918). [ ಚಬ್ಬಿ₀ + ಸೆಟ್ಟಿ ]

**ಚಬ್ಬೆ** 'ಸಬ್ಬೆ' ನೋ.

**ಚಮ** (ನಾ). ಯಜ್ಞದಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ : ದಶಚಮದಿ ಹದಿನಾಲ್ಕುಗೃಹಗಳು ಮುಸಲ ಶಮ್ಯವುಲೂಖಲಂಗಳು . . . ಅಗ್ನೀಧ್ರರಾ ದ್ವಾದಶಕರೊಪ್ಪಿದರು (ಕೌಶಿರಾ. ೧-೩೯). P ಯಾಗದಲ್ಲಿ ೧. ಹೋತೃವಿಗೆ 'ವಂಡಲ,' ೨. ಬ್ರಹ್ಮನಿಗೆ 'ಚತುರಸ್ರಕ', ೩. ಉದ್ಗಾತೃವಿಗೆ 'ತ್ರ್ಯಸ್ರಿ', ೪. ಯಜಮಾನನಿಗೆ 'ಪೃಥು', ೫. ಪ್ರಶಾಸ್ತೃವಿಗೆ 'ಅವತಪ್ತ', ೬. ಬ್ರಹ್ಮಶಂಸಿಗೆ 'ಉತ್ತ್ರೋಷ್ಠ', ೭. ಪೋತೃವಿಗೆ 'ವಿಶಾಖಿ', ೮. ನೇಷ್ಟೃವಿಗೆ 'ದ್ವಿಗೃಹೀತಕ', ೯. ಅಚ್ಛಾವಾಕನಿಗೆ 'ರಾಸ್ನಾವ', ೧೦. ಅಗ್ನೀಧ್ರನಿಗೆ 'ಮಯೂಖಿಕ' ಎಂಬ ಹತ್ತುಬಗೆಯ ಚಮಗಳು ಬೇರೆ ಬೇರೆ ಋತ್ವಿಜರಿಗೆ ವಿಧಾಯಕವಾಗಿವೆ. [ <ಸಂ. ಚಮಸ ]

**ಚಮಕ₁** (ನಾ). ಒಂದು ಅನುಕರಣ ಪದ : ದುಮುದುಮು ತತ್ತೊಂ ತತ್ತೊಂಗೆನುತಂ ಚಮಕಂ ತಕನಕ ತಕ ಎಂದೆನುತಂ (ತುಂಗಳ. ೨).

**ಚಮಕ₂** (ನಾ). ಒಂದು ವೇದಸೂಕ್ತದ ಹೆಸರು : ಚಮಕದಿಂದ ಖಿ ಲಾ ಧಿ ಪ ತ್ಯ ವ ನಮಕದಿಂದಖಿಲಾತ್ಮಭಾವವಮರಮನುಜಭುಜಂಗ ಮುಖದೊಳ್ಬಿತ್ತರಿಸುತಿರಲು (ವಿವೇಧ. ೦೨-೯೯). [ ಸಂ. ]

**ಚಮಕಾಯಿಸು** (ಕ್ರಿ). ೧. ಕೋರೈಸು; ಕುಕ್ಕು : ಅದನ್ನು ನೋಡಿದಂತೆಲ್ಲ ಕಣ್ಣು ಚಮಕಾಯಿಸಿ ಹೋಯಿತು (ಎಳೆಕ. ೩೯). ೨. = ಚಮಕಿಸು ೩ : ನನ್ನ ಕುದುರೆಯನ್ನು ಚಮಕಾಯಿಸುವುದರೊಳಗೆ ಭೀಮರಾಜನು ಮಾಯವಾಗಿ ಹೋಗಿದ್ದನು (ಶ್ರೀಕಾಯ. ೨೦೬) ; ನಾಯಕನು . . . ಕುದುರೆಯನ್ನು ಚಮಕಾಯಿಸಿದನು (ಮಲ್ಲಿ. ೫೬). ೩. ನಡುಗಿಸು ; ಬೆದರಿಸು ; (ಕ).
[ ಚಮಕಾ₂ (← P ಹಿಂ. ಚಮಕಾನಾ) + –ಇಸು₃.]

**ಚಮಕಿ** (ನಾ). ೧. ಬೇಗಡೆ; ಗುನ್ನಾಂಪಟ್ಟೆ. ೨. ಹೊಳೆಯುವ ವಸ್ತು,– ಪುಡಿ; ಕಿವಿಗಳೆರಡರಲ್ಲೂ ಮಿರುಗುವ ಚಮಕಿಯ ಕಾಗದದ ಓಲೆ (ಅಲಹೂ. ೯); ನಾವು ಚಮಕಿಯ ಅಂಗಿಯನ್ನು ತೊಟ್ಟು (ಅಲಿಮ. ೨೨); ಚಮಕಿಯ ಕುಂಕುಮದ ಬಾಸಿಂಗ . . . ಮೆರಗು ಕೊಡುತ್ತಿತ್ತು (ಅಲಹೂ. ೮೪). ೩. ಖಡ್ಗಯುದ್ಧದಲ್ಲಿ ಒಂದು ವರಸೆ ; ಮಿಂಚಿನ ವೇಗದ ಹೊಡೆತ: ಯಿಬ್ಬರು ಸಾಧಕರ ಕೈಗಳಲ್ಲಿ ಯಿದ್ದಂಥಾ ಬಂಡಿಕೋಲ್ಗಳ ವಳಗೆ ವಂದು ಬಂಡಿಕೋಲಿನ ಕೂಡಿ ಯಿದಿರಾಗಿ ಯಿದ್ದ ವೈರಿಯ ವಕ್ಷಸ್ಥಳದಲ್ಲಿ ದೃಢವಾಗಿ ಯಿದ್ದಂಥಾ ಏಟು ಯಾವದು ಅದು ಚಮಕಿಯೆಂದು ತಿಳಿಯಲ್ಪಡುವುದು (ಐಶ್ವಟೀ. ೫-೩೯). [ ←ಹಿಂ. ಮರಾ. ಚಮಕೀ ]

**ಚಮಕಿತ** (ಗು). ೧. ಚಕಿತ; ವಿಸ್ಮಯಗೊಂಡ; ಬೆರಗಾದ. (ನಾ). ೨. ವಿಸ್ಮಿತನಾದವನು: ಒಡನೇ ಅವರು ಮಾಯವಾದದ್ದನ್ನು ಕಂಡ ಬ್ರಾಹ್ಮಣರೆಲ್ಲರೂ ಚಮಕಿತರಾದರು (ಪುರಾವಿ. ೧೦೪) ; ಭೂಪತಿಯು ಚಮಕಿತನಾಗಿ ನಿಂತು ಚಾರುನ ಮುಖದ ಕಡೆಗೆ ನೋಡುತ್ತಾ ನಿಂತುಕೊಂಡನು (ಇಪ್ಪಕ. ೨೯೪); ದರವಾನನು ತೂಕಡಿಸುತ್ತ ತೂಕಡಿಸುತ್ತ ಹಠಾತ್ತಾಗಿ ಒಂದು ಸಲ ಚಮಕಿತನಾಗಿ ಎಚ್ಚರಗೊಂಡರೆ (ನಿಬಂಧ. II, ೩೬೭).
[<ಸಂ. ಚಮತ್ಕೃತ ]

**ಚಮಕಿಬಟ್ಟು** (ನಾ). "ಉಡುಪು, ಮೊ. ಗಳಿಗೆ ಸೇರಿಸಿ ಹೊಲಿಯುವ ನಾಣ್ಯದಾಕಾರದ, ಬೆಳ್ಳಿ, ಮೊ. ಗಳ ಅಲಂಕಾರದ ಬಟ್ಟು" (Sequin. ಇಂಕನಿ). [ ಚಮಕಿ + ಬಟ್ಟು₁ (<ಬಟ್ಟು₁) ]

**ಚಮಕಿಸು** (ಕ್ರಿ). ೧. ಲಕಲಕಿಸು; ಥಳಥಳಿಸು: ಕೆಂಪು ಬೆರೆತ ಜರಿಯ ದಡಿ ಹೆಚ್ಚು ಝಗಝಗಿಸಿ ಚಮಕಿಸುತ್ತದೆ (ಚಿಂದುಟಿ. ೬೦); ನಗುವಾಗ್ಗೆ ಆಕೆಯ ತುಟಿಗಳೆರಡೂ ತೆರೆದು ಚಮಕಿಸಿದವು (ಚಿಂದುಟಿ. ೮೮). ೨. ಜಳಪಿಸು ; ಹೊಳೆಯಿಸು : (ಕ). ೩. ಚಾಟಿಯಿಂದ ಬಡಿದು ಚುರುಕುಗೊಳಿಸು: ಕುದುರೆಗಳನ್ನು ಚಮಕಿಸುತ್ತಿದ್ದಾರೆ (ಅರ್ಧಕ. ೦೨೪).
[ ಚಮಕು + –ಇಸು₃ ]

**ಚಮಕು** (ನಾ). ೧. ಥಳಕು ; ಥಳಥಳಿಸುವಿಕೆ : ಚಿತ್ರದ ಎಚ್ಚರವು ಅವರಿಗೆ ಸೊನ್ನೆ ; ಅವರಿಗೆ ಚಮಕು ಬೇಕು (ನಿಬಂಧ. II, ೨೦೮). ೨. ಹೊಳಪು : ಚನ್ನಬಸವಾಂಕನ ಬರವಣಿಗೆಯಲ್ಲಿ ಚದುರಿಗೆ ಚಮಕಿಲ್ಲ (ಕಸಾಕ. ೩೩೦). ೩. ಚುರುಕು ; ಚೂಟಿ : ಹವಾದೊಳಗ ಹಾರಾಡಿದರ ಚಮಕ ಹತ್ತಲಿಕ್ಕೆ ಬೇಕು. ಚಮಕ ಇಲ್ದ ಗಾಳಿ ಎಲ್ಲೈತಿ (ರಕ್ತಧ್ವ. ೩೨೭).
[←ಹಿಂ. ಮರಾ. ಚಮಕ್ ]

**ಚಮಗಾರ, ಸಮಗಾರ, ಸಮ್ಮಕಾರ, ಸಮ್ಮಗಾಱ** (ನಾ). ಚರ್ಮದ ಕೆಲಸ ಮಾಡುವವನು ; ಮೋಚಿ : ಹಾದಿಯಲ್ಲಿ ಹೋಗುವ ಚಮಗಾರನನ್ನು ಮುಟ್ಟಿ ಹಾಗೇ ಮನೆ ಒಳಕ್ಕೆ ಹೊಕ್ಕು ಈತ ತಾಯಿಯನ್ನು ಮುಟ್ಟುವನು (ಗೌರಾಂಗ. ೦೦) ; ಚೆಂದವಾದ ಚಪ್ಪಲಿಗಳನ್ನು ಮಾಡಿ . . . ಕೊಳ್ಳಲು ಒತ್ತಾಯ ಮಾಡುವ ಚಮಗಾರನನ್ನು ನೀವು ನೋಡಿರಬಹುದು (ಮಾವಾದ. ೦೦೮). **ಸಮಗಾರ :** "ಸಮಗಾರ–ಚರ್ಮಕಾರ" (ಗಂಗಾಮ. ೩೨೦) ; ಚರ್ಮದ ಮೇಲೆ ಆಸಕ್ತನಾಗುವವನು ಸಮಗಾರನೇ ಸರಿ ಎಂದು ಅಷ್ಟಾವಕ್ರ ಮಹರ್ಷಿಗಳನ್ನುವರು (ಬ್ರಹ್ಮಶೀ. ೧೯೦); ಹಲವು ಸಮಗಾರರು ಕೂಡಿ ತೊಗಲೆಲ್ಲಾ ಹದ ಕೆಡಿಸಿದರು (ಗಾದೆ). **ಸಮ್ಮಕಾರ:** ಬ್ರಹ್ಮವನಂದಲ್ಲಿ ಬ್ರಾಹ್ಮಣ ಸರ್ವ ಜೀವ ಹತಕರ್ಮಕ್ಕೊಳಗಾದಲ್ಲಿ ಸಮ್ಮಕಾರ (ಕಝಮು. ೦೦). **ಸಮ್ಮಗಾಱ:** "ಚರ್ಮಕಾರ" (ನಾಚಿರಾ. ೪); "ಚರ್ಮಕೃತ್ಕಂ ಪಾದುಕಾಕಾರನೆಂದೆನಲು ಸಮ್ಮಗಾಱಂ" (ಮಂಗರಾ. ೦೧೨-೬); ಶ್ರೀಮಹಾಚಾತುರ್ವ್ವಿದ್ಯ ಸಮುದಯಮಿಚ್ಛಾರ್ಸಿವ್ವರುಂ ಈ ಊರ ಸಮ್ಮಗಾಱರಾ ಕವಱಿತ್ತಿಯಾನ್ನಿಟ್ಟಾರ್ (ಕಇ. I, ೯-೩; ಸು. ೮ನೆಯ ಶತ); ಚಕಾರಕ್ಕೆ ಸಕಾರಂ- ಕ್ರಕಚ–ಕರಗಸ; ಚರ್ಮಕಾರ–ಸಮ್ಮಗಾಱ (ಶಮದ. ೨೬೩ ಪ್ರಯೋ) ; ಹುಸಿಮೊಳೆತುದಂತ್ಕಡೆಯಲಾ ಹುಸಿಯೆಸೆದುದುಂಕುರ ಸ ಮ್ಮ ಗಾ ಱ ನ ಲಿ (ಕೌಶಿರಾ. ೦೦-೩೦) ; ದೂಸಿಗರ ಪೂವಡಿಗರ ಸಮ್ಮಗಾಱರ . . . ನಾಡಿಗರೊಂದು ಜಂಗುಳಿ (ಕಾಮೂಶ್ಯ. ೬೮-೦೪). P. ಸಂಸ್ಕೃತದ 'ಚರ್ಮಕಾರ' ಎಂಬ ಪದದಿಂದ 'ಚಮ್ಮಗಾರ' ಎನ್ನುವುದು ಸ್ವಾಭಾವಿಕವಾದ ತದ್ಭವ. 'ಚಮಗಾರ' ಎನ್ನುವುದು ಅದರ ಮುಂದಿನ ರೂಪ. ಸಕಾರದಿಂದ ಮೊದಲಾಗುವ ಮತ್ತು ಶಕಟರೇಫದಿಂದ ಕೊನೆಗಾಣುವ 'ಸಮ್ಮಗಾಱ'ವು ಕವಿಗಳು ಪ್ರಾಚೀನವೆಂದು ರೂಪಿಸಿಕೊಂಡ ಸ್ವರೂಪಗಳಿರಬಹುದು. [<ಸಂ. ಚರ್ಮಕಾರ ]

**ಚಮಚ, ಚಮಚೆ** (ನಾ). ಚಿಕ್ಕ ಸವುಟನಾಕಾರದ ಸಾಧನ : ಖಾರವನ್ನಾದರೂ ತಿನ್ನೋಣವೆಂದರೆ ಅದೂ ಅಷ್ಟೆ ಉಳಿದಿದೆ–ಒಂದು ಚಮಚ, ಎರಡು ಚಮಚ (ಆಗಸ್ಟ್. ೬) ; ಚಾಕು ಚಮಚಗಳ ಉಪಯೋಗ ಗೊತ್ತೇ ಇಲ್ಲ (ಪ್ರವಾಇ. II, ೦೮೧). **ಚಮಚೆ :** ತಮ್ಮನ ತಟ್ಟೆಗೆ ಒಂದು ಚಮಚೆ ತುಪ್ಪ ಹೆಚ್ಚು ಬಿತ್ತು (ಚಿಂದುಟಿ. ೧೧) ; ಚಮಚೆಯಿಂದ ಹಾಲನ್ನು ಕುಡಿಸುತ್ತಿದ್ದೆ (ಜನಜೀ. ೧೦೩) ; ನನಗೆ ನಿನ್ನ ಚುನಾವಣೆ ಗೀತೆಯನ್ನು ಚಮಚೆಯಿಂದ ಕುಡಿಸು (ಹನ್ನೊಂದ. ೩೫).
[←ಪಾರ. ಚಮ್ಚ, ಚುಮ್ಚ : ಹಿಂ. ಮರಾ. ಚಮಚಾ./ಸಂ. ಚಮಸ ]

**ಚಮಚಿ** ‘ಚಮಂಚ’ ನೋ.

**ಚಮಟ$_1$** (ನಾ). ಹೆಚ್ಚು ಬೆವರುವ ಒಂದು ಬಗೆಯ ರೋಗ (?) : ಈ ಗುಳಿಗೆಯಂ ಗರುಗದ ರಸದಲ್ಲಿ ಕೊಡಲು ಚಮಟ ಮಾಣ್ಗುಂ (ವೈವಿ. ೩೫) [←ತೆಲು. ಚೆಮಟ, ಚೆಮ್ಮಟ]

**ಚಮಟ$_2$** ‘ಚಮಡ’ ನೋ.

**ಚಮಡ, ಚಮಟ$_2$, ಚಮ್ಮಡ** (ನಾ). ತೊಗಲು; ಚರ್ಮ: ಅದರ ಚಮಡ ಸುಲೀದೆ ಬಿಡ್ಬಾರ್ದು (ಕಾನೂರು. ೨೭೭); ಕಂಭಕ್ಕೆ ಕಟ್ಟಿ ಚಮಡ ಸುಲೀತೇನೆ (ಅಗಸ್ತ್ಯ. ೯೨) ; ಅವಳಿಗೆ ಈ ದಿನ ಚಮಡ ಸುಲೀದಿದ್ದರೆ ನನ್ನ ಹೆಸರು ಬೇರೆ ಕರೀಬೇಕು (ಮಗಮೂಂ. ೩೭). **ಚಮಟ$_2$** : ಲೇ, ಸುಳ್ಳು ಹೇಳಿದರ ಒಬ್ಬೊಬ್ಬರ ಚಮಟಾ ಬೆಳಗೇನು (ಗ್ರಾಮಾಯ. ೫೭). **ಚಮ್ಮಡ** : ಚಮ್ಮಡ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡುತ್ತೇನೆಯೇ (ನಡದಾ. I, ೫೦೭). [←ಹಿಂ. ಚಮಡಾ, ಚಮಡೀ; ಮರಾ. ಚಮಡೀ]

**ಚಮತು** (ನಾ). ಚಮತ್ಕಾರ; ಚಾತುರ್ಯ: ಈ ಹೊಸ ಸರ್ವಜ್ಞ ... ಯಾವ ಸ್ಟಂಟ (ಚಮತು)ಮಾಡಲಿರುವನೆಂಬುದು ಅವರಿಗೆ ಗೋಚರಿಸಲಿಲ್ಲ (ಕನಕ. ೨೫). [<ಸಂ. ಚಮತ್ ?]

**ಚಮತುಕಾರತ್ವ** (ನಾ). = ಚಮತ್ಕಾರ ೨: ಚಮತುಕಾರತ್ವದಿಂ ಬಾಡಬಂ ನಲಿವಂತೆ ಸುಮತಿ ತತ್ಪರಶುವಂ ಬೀಸಿಡಲ್ ಸಾರಥಿಯ ಕಂಠಮಂ ಕಡಿದೊಯ್ದುದು (ಶರಶು. ೩೦-೩೭). [<ಸಂ. ಚಮತ್ಕಾರತ್ವ]

**ಚಮತುಕೃತಿ** (ನಾ). = ಚಮತ್ಕಾರ ೨ : ಅಮರಪುರಪಾಲನದ ಲೀಲಾ ಚಮತುಕೃತಿಗಿನ್ನೇನನೆಂಬೆನು (ನಿಭಾಗ. ೮-೨೦-೦೭). [<ಸಂ. ಚಮತ್ಕೃತಿ]

**ಚಮತ್ಕರಿಸು** (ಕ್ರಿ). ೧. ಸೋಜಿಗವನ್ನು ಉಂಟುಮಾಡು ; ಆಶ್ಚರ್ಯಗೊಳಿಸು : ಸುಖಂ ಸುಳಿದಾಡೆ ಲೀಲೆ ಮೋಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ (ಗಿರಿಕ. ೩-೨೮) ; ತಳಹತ್ತಂ ದಣುವಟ್ಟೆ ... ಬಾಹುತಳಂ ಚಮತ್ಕರಿಸೆ ನಾನಾಕೌಶಲಂದೊಂಡಿದರ್ (ಶಬಶಂ. ೪-೭೫). ೨. ಅತಿಶಯಿಸು : ಚೆಲ್ವಂ ಚಮತ್ಕರಿಸುವಂತೆ ಸಾಹಿತ್ಯಮಂ ಸಯ್ತುಡುವಂತೆ ಪ್ರಾಣಮಂ ಪರಿರಕ್ಷಿಪಂತೆ ... ಪಾರ್ವತಿಯಂ ಸಲಹುತ್ತುಮಿರೆಯಿರೆ (ಗಿರಿಕ. ೩-೦೧೯ ವ). [ಚಮತ್ಕರಣ$_0$ + – ಇಸು$_3$]

**ಚಮತ್ಕಾರ** (ನಾ). ೧. ಸೋಜಿಗ ; ಆಶ್ಚರ್ಯ ; ವಿಸ್ಮಯ. ೨. ಚಾತುರ್ಯ ; ಕೌಶಲ : ನಯಾನೀಕ ಪ್ರಯುಕ್ತ ಮಹಾಮಂತ್ರ ನಿಚಯ ಚಮತ್ಕಾರಮತಿವಿವೇಕ ಬುದ್ಧ್ಯಾಜೀವಿ (ಎಕ. XIII, ೩೩೦-೨೦ ; 929) ; ವರಪ್ರಸಾದಮ್ಮೂಲ[ರಾ]ಯಾಸ್ಥಾನ ಚಮತ್ಕಾರಬಗೆಕಾಣ (ಬೊಂಕಶಾ. ೦೯೩೭, ಸಿಂದಗಿ. ೦೦-೮ ; 975) ; ಬಲಾತ್ಕಾರವಿದ್ದರೂ ಚಮತ್ಕಾರವಿರಬೇಕು (ಗಾದೆ). ೩. ಶೀಘ್ರತೆ ; ತ್ವರಿತತೆ ; ಬೇಗ : (ಶ). ೪. [ಕಾವ್ಯವಿ] ಆನಂದ : ಆಹ್ಲಾದವಿಶೇಷಕ್ಕೆ "ಚಮತ್ಕಾರ"ವೆಂಬ ಹೆಸರೂ ಉಂಟು (ಭಾರಮೀ. ೧೫೫). [ಸಂ.]

**ಚಮತ್ಕಾರಿ** (ಗು). ೧. ಸೋಜಿಗವನ್ನುಂಟುಮಾಡುವ ; ಆಶ್ಚರ್ಯಕರವಾದ. ೨. ಅಸಾಧಾರಣವಾದ ; ಅಸಾಮಾನ್ಯವಾದ. (ನಾ). ೩. ಚತುರನಾದ ವ್ಯಕ್ತಿ ; ಚಮತ್ಕಾರ ಮಾಡುವವನು : (ಶ). [ಸಂ. ಚಮತ್ಕಾರಿನ್]

**ಚಮತ್ಕಾರಿತ** (ಗು). ಚಕಿತಗೊಳಿಸಿದ ; ವಿಸ್ಮಯವನ್ನುಂಟುಮಾಡಿದ ; ಆಶ್ಚರ್ಯಗೊಳಿಸಿದ : ನಿಖಿಳಜಗದಾಶ್ಚರ್ಯ ಶೌರ್ಯರಸ ಬಹುಲ ಬಾಲಕ್ರೀಡಾ ಚಮತ್ಕಾರಿತ ವೀರಚಕ್ರನುಂ (ಆದಿಪು. ೮-೪೨ ವ). [ಸಂ.]

**ಚಮತ್ಕೃತ** (ಗು). ೧. ಚಕಿತ; ವಿಸ್ಮಿತ. (ನಾ). ೨. ವಿಸ್ಮಿತನಾದವನು; ವಿಸ್ಮಯಗೊಂಡವನು : ಅವನಂ ಚಮತ್ಕೃತನಾಗಿ ಅಲ್ಲಿಯೇ ನಿಂತನು (ಕಥಾಕುಂ. ೨೩). [ಸಂ.]

**ಚಮತ್ಕೃತಿ** (ನಾ). ೧. ಸೋಜಿಗ ; ಆಶ್ಚರ್ಯ : ಮಿಂಚುವ ವಿಭೂಷಣಕೆ ಮುಸುಕಿಟ್ಟು ಸುಳಿವರ್ಗೆ ಹೊಂಚುವ ಚಮತ್ಕೃತಿಯನಳವಡಿಸಿ (ಕೃಮಿಭಾ. ೨೭-೦೦). ೨. ಕೌಶಲ ; ಚಾತುರ್ಯ : ಸತ್ಕೃತಿ ... ಚಮತ್ಕೃತಿಯಂ ಪಡೆದು ಸೊಬಗುವಡೆದತ್ತೀಗಳ್ (ಕಾದಂಪೂ. ೫) ; ಈ ಕೃತಿ ಪುಣ್ಯಾಕೃತಿ ತಾಂ ಚಮತ್ಕೃತಿವಿಲಾಸಾವಾಸಂ(ಸುಕುಮಾ. ೧-೪೫); ಶ್ಯಾಮಕಂಧರನೀವನೀಕೃತಿಗತಿಚಮತ್ಕೃತಿಯ (ಬಸಪು. ೧-೫). ೩. ಆಹ್ಲಾದ ; ಆನಂದ : ಮತ್ಕೃತಿ ಚಮತ್ಕೃತಿಯಂ ಧರೆಗುಂಟುಮಾಡುಗುಂ (ಜಗವಿ. ೦-೦೫). [ಸಂ.]

**ಚಮನ್, ಚಮಾನು, ಚಮಾಲು** (ನಾ). ಹೂದೋಟ; ಪುಷ್ಪೋದ್ಯಾನ: ಕೈದಿ ಕಛೇರಿ ಮುಂದಿನ ಸಣ್ಣ ಚಮನ್‍ನಲ್ಲಿ ಬಹಳ ದಕ್ಷತೆಯಿಂದ ಹೂಗಿಡಗಳ ಪಾತಿ ಕಟ್ಟಿ ... ಕೆಲಸ ಮಾಡುತ್ತಿದ್ದ (ಕಲನೆ. ೪೦೯) ; ಮನೆಯ ಮುಂದೆ ಚಮನ್, ರೋಜಾ, ಡೇರಾ, ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೊಸಕ್ಕ. ೦೨೩). **ಚಮಾನು** : ದಕ್ಷಿಣಾಮೂರ್ತಿ ದೇವಸ್ಥಾನಕ್ಕೆ ಚಮಾನು ಗುರಿಕಾರ ಕಪನ್ನಯ ಹಿತ್ತಾಳೆ ಚೌಕಟ್ಟು ಗುಬ್ಬೇಕದ ಸಹ ಮಾಡಿಶಿ ಪಟ್ಟಿಶಿದ ನಿಲುವಿನ ಸೇವಾರ್ಥ (ಎಕ. XIV, ಚಾಮರಾ. ೨೩೭-೦ ; ?). **ಚಮಾಲು** : ಚಮಾಲನ್ನಂತು ನೋಡುವುದಕ್ಕೇ ಆಗದು, ಚೆನ್ನಾಗಿ ಹುಲ್ಲು ಕೂಡ ಬೆಳೆದಿಲ್ಲ (ಕಂಕಥ. ೧೯೪). [←ಪಾರ. ಹಿಂ. ಮರಾ. ಚಮನ್]

**ಚಮರ** (ನಾ). ೧. ಉದ್ದವಾದ ಕೂದಲು ಮತ್ತು ಗೊಂಡೆಬಾಲವುಳ್ಳ ಒಂದು ಬಗೆಯ ಮೃಗ. ೨. ಚಮರಮೃಗದ ಬಾಲದ ಕೂದಲಿಂದ ತಯಾರಿಸಿದ ಕುಂಚ,–ಚಾಮರ : "ಚಾಮರ ಚಮರಮದಕ್ಕುಂ" (ಕವಿಕಂ.೨೭೭) ; ಇಕ್ಕೆಲದ ಚಮರ ಸೀಗುರಿಯಿಂದೆ ಮೆಱೆವುತಂ (ನಂದಿರ. ೩-೭೫) ; ಕರಗ ಕಾಳಾಂಜಿ ಬಡಪ ಗಿಂಡಿ ಚಮರವ ಧರಿಸಿದೂಳಿಗದವರು (ಕಂನವಿ. ೦೨-೩೭). [ಸಂ.]

**ಚಮರಗಾರ್ತಿ** (ನಾ). ಚಾಮರ ಬೀಸುವವಳು ; ಚಾಮರ ಬೀಸುವ ಊಳಿಗದವಳು: ಕಸ್ತೂರಿ ಹಿಂಗದ ಚಮರಗಾರ್ತಿಯರು ಹೊಂಗದಳಿಯ ಕೋಮಲಪತ್ರವೀಜನದಂಗನೆ ಮೆಱೆದಳೊತ್ತಿನಲಿ (ಮೋಹತ. ೫-೩೯). [ಚಮರ + – ಕಾಱ + – ತಿ$_1$ (< – ಇತ್ತಿ)]

**ಚಮರಜ** (ನಾ). (ಚಮರೀಮೃಗದ ಕೂದಲಿನಿಂದ ಮಾಡಿದ) ಚಾಮರ: ಒರ್ವಳ್ ಕೊಡೆವಿಡಿವುದು ಮತ್ತೊರ್ವಳ್ ಚಮರಜಮ [ಪಾಠಾಂ. ಚಾಮರವ] ನಿಕ್ಕುತಿರ್ಪುದು (ಗದಾಯು. ೯-೩೦) ; ಚಮರಜಮನಿಕ್ಕೆ ಖಚರಪ್ರಮದಾಜನಂ (ಶಂರಾಮಾ. ೦೪-೧೨೮). [ಸಂ.]

**ಚಮರಧಾರಿಗ** (ನಾ). ಚಾಮರದ ಆಳು : ಹಡಪ ಬಾಹಿಯ ಚಮರಧಾರಿಗರ ದೊರೆಗಳುಳಿದರು ಬೆದಱಿ ರಥದಲಿ (ಕುವ್ಯಾಗ. ೧-೦೪). [ಚಮರಧಾರ$_0$ + – ಇಗ]

**ಚಮರರುಹ** (ನಾ). = ಚಮರಜ : ತಚ್ಚಮರರುಹ ಮಹಾಶೋಭೆ ಕೈಗಣ್ಮೆ (ಶಂಶಭಾ. ೪-೧೪) : ಚಮರರುಹದ್ವಯಂ ಬೆಳಪ ಬೆಳ್ಗೊಡೆ ಪೂಮಟ್ಟೆ ಭಾಪ್ರತಾನಮತ್ತಮುಮಣಿಪೀಠಮಿಂದ್ರಸಭೆಯೆಂಬಿವು ಘಾತಿ ಚತುಷ್ಕಘಾತದಿಂ ಸಮನಿಸೆ (ಶಾಂತಿಪು. ೪-೭೩) ; ಚಮರರುಹಾಗ್ರಮಂ ಪಿಡಿದು (ಕಾದಂಅು. ೯೮) : ಇಕ್ಕುವ ಚಮರರುಹಂ ತನ್ನ ಕಣ್ಗೆ ಮಱೆಯಾದಪುದು (ಅಜಿಪು. ೫-೫೪) : ದೇಸೆವೆತ್ತುವು ಕಮಳಭವಂಗಿಕ್ಕುವಮಳ ಚಮರರುಹಂಗಳ್ (ಜಗವಿ. ೧-೩೮). [ಸಂ.]

**ಚಮರಾಲವಟ್ಟ** (ನಾ). ಚಮರಮೃಗದ ಕೂದಲಿನಿಂದ ಮಾಡಿದ ಬೀಸಣಿಗೆ; ಚಾಮರ: ಆಳಿಯರ್ ಬೀಸುವ ಚಮರಾಲವಟ್ಟ ತಣ್ಣಾಳಿಯಿಂದವಳೊಡಲ್ಗಿಚ್ಚು ... ಭಡಾಳಿಸಿತು (ಮೋಹತ. ೨೭-೬೨). [ಚಮರ + ಆಲವಟ್ಟ]

**ಚವರಿ** (ನಾ). ೧. ಹೆಣ್ಣು ಚಮರಮೃಗ : “ಆ ರೋಮಿ ಗೋಕರ್ಣಮೆನಲು ಚ[ಪಾಠಾಂ. ಲ್ಚ]ವರಿಯ ಮೃಗ[ಪಾಠಾಂ. ಚವರಿಮೃಗ]ಮದು” (ಮಂಗರಾ. ೪೯-೧೧); ಮುಸುಗಳವು ಕತ್ತುರಿಯ ಮೃಗವಿವು ಚವರಿಯಿವು . . . ಗಜಗಮನೆ ನೋಡು (ಕೊರರಾ. ೩-೧-೩೦); ಉಡುಗುತ್ತಲ್ಲಿರ್ಪುದುದ್ಯಚ್ಚವರಿ ರಜಮನಾ ತಾಣದೊಳ್ ಹಸ್ತಿ ಕೈನೀರಿಡುತಂ ಸಮ್ಮಾರ್ಜನಂಗೈವುದು (ರಾಜಶೇ. ೧-೦೨೬). ೨. ಚವರಮೃಗದ ಬಾಲದ ಕೂದಲು: ಆನೆಗಳ ದಂತಂಗಳುಂ ಮುತ್ತುಗಳುಂ ಪುಲಿಯ ತೊವಲ್ಗಳುಮಂ ಚವರಿಗಳುಮಂ ಕೊಂಡು ಬಂದು (ವರ್ಧಾರಾ. ೦೩೩-೦೫); ಚವರಿಯನೆಯ್ದೆ ಕರ್ಬುನದ ಮುಟ್ಟುಗಳಿಂ ಪಿಡಿದಿರ್ದು ಮಾಜಿಬು ನೀಂ (ಅಟ್ಟಮ. ೬-೨೨). ೩. ಚೌರಿ; ಚಾಮರ: ಢಾಳಿಸುವ ಹಲವು ಚವರಿಗಳ ಮಧ್ಯದೊಳೋಲಗಂಗೊಟ್ಟು ಕುಳ್ಳಿರ್ದ (ಹರಿಕಾ. ೦೦-೩೭); ನನೆದವು ಬಾಹುರಕೆ ಹಕ್ಕರಿಕೆ ಹಲ್ಲಣ ಜೋಡು ಸೀಸಕ ಛತ್ರ ಚವರಿಗಳು (ಕುಮಾರವ್ಯಾ. ೩-೪೦). ೪. ಒಂದು ಬಗೆಯ ಮೀನು : “ಚವರೀ–ಚವರೀಮೃಗ, ಮೀನಭೇದ” (ಒಕಧಿ. ೫೪). [ಸಂ. ಚವರೀ]

**ಚವರಿಕ** (ನಾ). ಒಂದು ಬಗೆಯ ಮರ; ಕೋವಿದಾರವೃಕ್ಷ. [ಸಂ.]

**ಚವರಿಮೃಗ** (ನಾ).=ಚವರೀಮೃಗ : “ಆ ರೋಮಿ ಗೋಕರ್ಣಮೆನಲು ಚವರಿ ಮೃಗ[ಪಾಠಾಂ. ಚವರಿಯಮೃಗ]ಮದು” (ಮಂಗರಾ. ೪೯-೧೧). [ಚವರಿ + ಮೃಗ]

**ಚವರೀಜ** (ನಾ). = ಚಮರಜ : ನಾನಾಚವರೀಜವಾಯು ಸಭೆಯಂ ತಳ್ಪೊಯ್ಯಲಿರ್ದಾ ಜಗತ್ಪತಿಯೊಡ್ಡೋಲಗದೊಳ್ (ಜಗವಿ. ೦-೨೬). [ಸಂ.]

**ಚವರೀಜಕಾಂತೆ** (ನಾ).ಚಾಮರ ಬೀಸುವ ದಾಸಿ: ಚವರೀಜಕಾಂತೆಯರ್ ಸಿತಚಮರದ ವಿಕ್ಷೇಪದಿಂದಮೆಸೆದರ್ (ಕಾದಂಪೂ. ೪೭೩). [ಚವರೀಜ + ಕಾಂತೆ]

**ಚಮರೀಮೃಗ** (ನಾ). = ಚವರಿ ೧ : ಚವರೀಮೃಗಶಿಶು ತಂದುದು ನಮಗಿದು ಸಾಫಲ್ಯಮಾಯ್ತು (ಕುಸುಮಾ. ೭-೮೬); ಬಳಿಕಲ್ಲಿ ಕಸ್ತೂರಿಮೃಗ ಚವರೀಮೃಗ . . . ಪವಿತ್ರಮೃಗ ಜಾತಿಗಳುಂ (ವಿವೇಕ. ೨೦೨); ಉರಿಗಣ್ಣ ಚವರೀಮೃಗಂ ಹೇರಣಲು ಚಿತ್ರಕ (ರುಕ್ಮಾಂಗ. ೦೦-೯). [ಸಂ.]

**ಚಮರೀರುಹ** (ನಾ).=ಚವರಜ: ಮೀಂವರ್ಣನ್ನಂ ಚವರೀರುಹಂ ಮಿಱುಗುವನ್ನಂ ಪಾಂಡರಚ್ಛತ್ರಮಂಡಳಂ (ಜಗವಿ. ೪-೯೯); ಜಿನಾಂಬಿಕೆಗಿಕ್ಕಿದರವರಿಯರವರ ಧವಳಚವರೀರುಹಮಂ (ಪುಷ್ಪಪು. ೯-೭೪). [ಸಂ.]

**ಚಮಸ** (ನಾ). ೧. ಯಾಗಾದಿಗಳಲ್ಲಿ ಸೋಮರಸವನ್ನು ಕುಡಿಯುವುದಕ್ಕಾಗಿ ಬಳಸುವ ಪಾತ್ರೆ,– ಪಾನಪಾತ್ರೆ: ಚಮಸ ದರ್ವೀ ಆಜ್ಯಸ್ಥಾಲೀ . . . ಪ್ರಮುಖಪಾತ್ರವಿಶೇಷಂಗಳು (ವಿವೇಕ. ೦೩೫); ವಿಹರಿಸುವ ದರ್ಭಾಸ್ತರಣದ ಚಮಸಾದಿಗಳ ಬಹುಸಾಧನಂಗಳಿಂ (ಕೃಮಿಭಾ. ೩೩-೩೮): ಸೋಮಲತೆಗಳನ್ನು ಕೊಂಡು ತಂದು ಚಮಸಗಳೆಂಬ ಪಾತ್ರೆಗಳಲ್ಲಿ ಸೋಮರಸವನ್ನು ಗ್ರಹಿಸಿ (ಶಿವಪ. ೨೦೨-೧೪). ‘ಚಮ’ ಪರಾ. ೨. ಚಮಚ; ಸಣ್ಣ ಆಕಾರದ ಸವುಟು : ಪಾಯಸದ ಸವಿಯನಱಿಗುಮೆ ಚಮಸಂ (ನೀತಿಮಂ. I, ೩೦೪). ೩. ಅಕ್ಕಿಹಿಟ್ಟು, ಗೋಧಿಹಿಟ್ಟು ಮೊದಲಾದುವುಗಳಿಂದ ಮಾಡುವ ಒಂದು ಬಗೆಯ ಸಿಹಿತಿಂಡಿ,–ಮಿಠಾಯಿ. [ಸಂ.]

**ಚಮಸಿ** (ನಾ). = ಚಮಸ ೧ : “ಚಮಸಿ–ಸೋಮಪಾನಪಾತ್ರ” (ಸಿದ್ಧಾಂತಿ. ೩೮೬). [ಸಂ. ಚಮಸೀ]

**ಚಮಾನು** ‘ಚಮನ್’ ನೋ.

**ಚಮಾಲು** ‘ಚಮನ್’ ನೋ.

**ಚಮು** (ನಾ). ೧. ಪಡೆ; ಸೈನ್ಯ : “ಪೃತನಾನೀಕ ಧ್ವಜಿನೀ ಪತಾಕಿನೀ ಸೇನೆ ಬಳ ಚಮೂ ಚಕ್ರಾಖ್ಯಂ” (ವಸ್ತುಕೋ. ೮೩-೭): “ಪೃತನಾ, ಸೇನಾ . . . ಚಮೂಃ, ವರೂಥಿನೀ, ಅನೀಕಿನೀ, ಅನೀಕಂ–ಈ ೧೦ ಪಡೆ” (ಹಲಾಯು. ೭೫-೩೦೩). ೨. ೭೨೯ ಆನೆ, ೭೨೯ ರಥ, ೨೧೮೭ ಕುದುರೆ, ೩೬೪೫ ಕಾಲಾಳು–ಇವುಗಳನ್ನುಳ್ಳ ಒಂದು ಸೈನ್ಯದಳ: “ಪೃತನೆಯುವು ಮುಂದೆ ಮೂಱಾಗೆ ಚಮು” (ಮಂಗರಾ. ೮೬-೩೦). [ಸಂ. ಚಮೂ]

**ಚಮೂನಾಥ** (ನಾ). ಪಡೆವಳ; ದಂಡಾಧಿಪತಿ; ಸೇನಾನಿ : ಚಮೂನಾಥ ಚಕ್ರಾಧಿನಾಥಂಗೆ ಜಯಪ್ರಾರಂಭಗಚ್ಛಸ್ಫಟಿಕಕಳಶಮಂ ತೀವಿ (ಆದಿಪು. ೦೨-೮); ಗಂಗರಾಜ ಚಮೂನಾಥನ ಜನನಿ (ಎಕ. II, ೦೦೮-೨೩ ; 1120). [ಸಂ. (ಚಮೂ + ನಾಥ)]

**ಚಮೂಪ** (ನಾ). = ಚಮೂನಾಥ : ಅರಮನೆಯೊಳೊಡನೆಯ ಚಮೂಪರೊಡಗೂಡಿ ಮಜ್ಜನ ಭೋಜನಂ ಮಾಡಿ ಪವಡಿಸಲು (ಹರಿಕಾ. ೪-೩೩೩). [ಸಂ.]

**ಚಮೂಪತಿ** (ನಾ).=ಚಮೂನಾಥ : “ಚಮೂಪತಿಯನೀಕಸ್ಥನೆನೆ ದಂಡನಾಥನಕ್ಕು” (ಮಂಗರಾ. ೮೦-೮); ಸಿಂಧುರಾರಾತಿಯುಂ . . . ಚಮೂಪತಿ ಕಂಡಂ (ಆದಿಪು. ೦೭-೪೫); ಜನಪತಿ ಮೆಚ್ಚಿ ತನ್ನಯ ಚಮೂಪತಿ ಮಾಡಿದಂ (ಅಜಿಪು. ೦-೪೩). [ಸಂ. (ಚಮೂ + ಪತಿ)]

**ಚಮೂರ** (ನಾ). ಹುಲಿ ; ವ್ಯಾಘ್ರ : “ವ್ಯಾಘ್ರಂ ತರಕ್ಷು ಮೃಗರಿಪು. ಚಮೂರವೆನೆ ಶಾರ್ದೂಲಂ” (ವಸ್ತುಕೋ. ೪೧-೦); “ಚಮೂರವೆನೆ ಹುಲಿ” (ಮಂಗರಾ. ೪೭-೭); ಹರಿಣ ಚಮೂರಂಗಳ್ ಶಾಂತರೂಪದಿಂದಿರ್ದುಪಜಿತನಾಥನ ಕೆಲದೊಳ್ (ಅಜಿಪು. ೭-೬); ತೊಟ್ಟನೆ ಬೀಟ್ ಮೇಲೆ ಪುಲಿದೋಲ್ ನಿಜದೀವದ ಪುಲ್ಲೆ ಬೆರ್ಚಿ ಧೀಂಕಿಟ್ಟು ಚಮೂರವೆಂದು ಬಿಱುತೋಡೆ (ಪುಷ್ಪಪು. ೫-೦೦೦). [?]

**ಚಮೂರು** (ನಾ). ಒಂದು ಬಗೆಯ ಜಿಂಕೆ ; “ಶ್ರೇಷ್ಠವಾದ ಚರ್ಮವುಳ್ಳ ಜಿಂಕೆಯ ಭೇದಗಳು” (ಅಮರ. ೮೮೪). [ಸಂ.]

**ಚಮೂವಲ್ಲಭ** (ನಾ).=ಚಮೂನಾಥ: ವಾಜಿಗಳಂ ವಿಳಾಸಿನಿಯರಂ ತನ್ನಂ ಚಮೂವಲ್ಲಭಾಭರಣಂ ಶ್ರೀಪತಿ (ಸೌಇಇ. XX, ೭೪-೯ ; 1112). [ಸಂ. (ಚಮೂ + ವಲ್ಲಭ)]

**ಚಮ್ಮ**, **ಚೆಮ್ಮ**, **ಸಮ್ಮ**, **ಸಮ್ಮ** (ನಾ). ಚರ್ಮ ; ತೊಗಲು : ತನುವೆಂಬ ಮನೆಗೆ ಅಸ್ಥಿಂಗಳು ಚಮ್ಮ[ಪಾಠಾಂ. ಮರ್ಮ]ದ ಹಂಜರ ನರದ ಭೀಮಗಟ್ಟು (ಅದವ. ೦೫-೩೩); ಮೆಱೆದಿದಿರಾಗಿ ತಾಗಿದ ಗಜಾಸುರನಂ ಪಿಡಿದೆತ್ತಿ ಚಮ್ಮಮಂ ಸಱಸಱೆಸಱನೆ ಸೀಳ್ದು ಬಿದಿರ್ಚಿಯಾಡುತ (ಎಕ. XVI, ಚಿಕ್ಕನಾ. ೭೦-೨೩ ; 1235). ಚೆಮ್ಮ : ‘ಚೆಮ್ಮಾವುಗೆ’ ಪರಾ. ಸಮ್ಮ: “ಸಮ್ಮ (ಸಮ, ಚಮ್ಮ)–ಚರ್ಮ(ನ್)=ತೊಗಲು” (ತದ್ಭಕೋ. ೪೩). ‘ಸಮಗಾರ’ ಪರಾ. ಸಮ್ಮ: “ನೆಱೆ ತೋಲ್ ತೊವಲುಂ ಸಮ್ಮಮುದಿರದಕ್ಕುಂ ಚರ್ಮ” (ಕವಿಕಂ. ೮೫); “ಸಮ್ಮವೆನೆ ಚರ್ಮ” (ಕಕರ. ೦೦೩); ನುಣ್ಪುವಟ್ಟು ತೋಱೆ ಬಿಗಿದುಟ್ಟ ಪುಲಿದೊವಲೊಳಂ ತಕ್ಕನಿಂಮಿಕ್ಕು ಪೋದರ್ದಾನೆರಕ್ಕಸನ ಸ[ಪಾಠಾಂ. ಚ]ಮ್ಮದ ಮೇಲ್ವೊದಿಕೆಯೊಳಂ ಚೆಲ್ವನಾಂತು (ಅಭ್ಯಕಾ. ೦೬೭); ಕಣ್ಣಪ್ಪನಡಿಗೆರ್ಪು ಭರದಿನೊರಸಲ್ಸಮವೆಡೆದು ಪೋದುದು (ಅರಾಜ. ೩-೨೮); ಮೆಯ್ಯ ಸಮ್ಮಂ ಸುಗಿದು (ಭಾಪಜಂ. ೫-೭); ನಸುನಗುತ್ತರಳಿಯುಂ ತಾಳ್ದು ಪುಲಿಯುಂ ಸೀಳ್ದು ಪೊಸಸಮ್ಮವುಟ್ಟು ಫಣಿಗಳ ತೊಟ್ಟು ಕೈದುಗಳನೆಸಕದಿಂ ಧರಿಸಿ (ಚಬಸು. ೨೦-೩೦); ಶಿರಮಾಲೆಯಾಭರಣ ನಿರ್ಮಲ ದುಕೂಲಂ ಸಮ್ಮದಂಬರಂ ಕುಂಕುಮದ ತಿಲಕ ಪಣೆಗಣ್ ವಿರಾಜಿಸುವರ್ಧನಾರೀಶ ಸಿದ್ಧನಂಜೇಶ ಸಲಹಾ (ಗುರುರಾ. ೦೦-೦); ಪೊಂಬುಲಿ ಸಮ್ಮವಾನೆದಲೆಮುತ್ತು ಮೊಲಂಗಳ ಬಿಕ್ಕು . . . ಪೀಲಿಯೆಂಬಿವಂ ತುಂಬಿದ ಕಂಬಿಯುಂ ತಳೆದದೇಂ ತರ್ಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೦೦೪); ಮೆತ್ತನೆಯಾದ ಸಮ್ಮದ ಮನೋಹರ ಮೆಂಡೆನಿರ್ಸಿದ ತೆಳ್ವಸಿರ್ ಬಿತ್ತರವಾಗಲ್ (ಜಾರಾಸ್ಕ. ೧-೦೩-೨೬). ‘ಸಮ್ಮಾವುಗೆ’ ಪರಾ. [<ಸಂ. ಚರ್ಮನ್]

**ಚಮ್ಮಖಿಳ್ಳ** (ನಾ). ಚರ್ಮದ ಮೇಲಿನ ಕಲೆ,- ಕೆಂಪುಚುಕ್ಕೆ : ತಲೆಗಾತ್ರ ಸ್ಫುರಣಂ ನರವುಲಿ ಕಾರೆಳ್ಳುಟ್ಟಿ ಚ(ಂ)ಮ್ಮಖಿಳ್ಳೆಂದಿನಿತುಂ ಬಲದೊಳ್ ಪುರುಷಂಗೆಡದೊಳ್ ಲಲನೆಗೆ ಸಮನಿಸಿದೊಡಿಷ್ಟಫಲವಮಂ ಕುಡುಗುಂ (ಲೋಕೋಪ. ೧೧-೬೪). [ಚಮ್ಮ + ಖಿಳ್ಳ$_0$ (←P ಪ್ರಾ. ಖಿಲ್ಲ = ಗುಳ್ಳೆ)]

**ಚಮ್ಮಟ** (ನಾ). ಚರ್ಮದ ಹೊದಿಕೆಯುಳ್ಳ ಗುರಾಣಿ,- ಖೇಟಕ : ಬಹುಧಾರಣದ ಚಮ್ಮಟದ ಖಡುಗದ ಪಾರಗದ ಪರಿಣತರು ಹೆಣಗಿದರು (ಕುವ್ಯಾದ್ರೋ. ೧೪-೩). [ <ಸಂ. ಚರ್ಮಪಟ ]

**ಚಮ್ಮಟಿಕೆ$_1$, ಚಮ್ಮಟಗೆ$_1$, ಚಮ್ಮಟ್ಟಗೆ$_1$, ಚಮ್ಮಡಿಕೆ**(ನಾ). ಕಮ್ಮಾರನು ಬಳಸುವ ದೊಡ್ಡಸುತ್ತಿಗೆ : ಮಾಯೆಗಲುಗದ ಧೈರ್ಯವೆಂಬಡೆಯ ಮೇಲಿರಿಸಿ ನಿತ್ಯವೆಂದೆಂಬ ಚಮ್ಮಟಿಕೆ[ಪಾಠಾಂ. ಗೆ]ಯಿಂ ಪೊಡೆವುತಂ(ಇಹ°ರ. ದೇ. ೦೦೭-೨೧). **ಚಮ್ಮಟಗೆ$_1$** : ಕಾಯ್ದ ಮೊಳೆಯ ಚಮ್ಮಟಗೆಗಳಿಂದೆ ಅಡಸಿ ಹೊಯ್ಕೆ (ಸಾನಂಪ. ೬-೦೦ ರಗಳೆ) ; ಅಸ್ತ್ರಗಳನು ಮುಱಿಯದೆ ಚಮ್ಮಟಗೆಯೊಳು ಕೊಱೆಯದೆ ಗರಗಸವಿಡಿದು ಕೈಕಾಲ್ಗಳ ಬಱಿದೇಕೆ ಕೊಂದೆನೊ ರಣದಿ (ವರ್ಧಪ. ೮-೧೨); ಕಲ್ಲುಗಳಿದ್ದರೆ . . . ಚಾನಗಳಿಂದಾಗಲಿ ಚಮ್ಮಟಗೆಯಂಥ ದೊಡ್ಡ ಸುತ್ತಿಗೆಯಿಂದಾಗಲಿ ಒಡೆದು ತಂದು ಹೊಲದ ಮೇರೆಗೆ ಹಾಕಬೇಕು (ಕೃಷಿಪ್ರ. ೪೧). **ಚಮ್ಮಟ್ಟಗೆ$_1$** : (೬). **ಚಮ್ಮಡಿಕೆ** : ಚಮ್ಮಡಿಕೆ ಮೊದಲಾದುವಱಂ ಬಡಿವ (ಶಾಸ್ತ್ರಟೀ. ೬೦-೨).

[ ದೇ.॥ ತಮಿ: ಚಮ್ಮಟ್ಟ; ತುಳು. ಚವಟಗೆ; ತೆಲು. ಸಮ್ಮಟ ]

**ಚಮ್ಮಟಿಕೆ$_2$** 'ಚಮ್ಮವಟ್ಟಗೆ' ನೋ.

**ಚಮ್ಮಟಗೆ$_1$** 'ಚಮ್ಮಟಿಕೆ$_1$' ನೋ.

**ಚಮ್ಮಟಗೆ$_2$** 'ಚಮ್ಮವಟ್ಟಗೆ' ನೋ.

**ಚಮ್ಮಟ್ಟಗೆ$_1$** 'ಚಮ್ಮಟಿಕೆ$_1$' ನೋ.

**ಚಮ್ಮಟ್ಟಗೆ$_2$** 'ಚಮ್ಮವಟ್ಟಗೆ' ನೋ.

**ಚಮ್ಮಡ** 'ಚವುಡ' ನೋ.

**ಚಮ್ಮಡಿಕೆ** 'ಚಮ್ಮಟಿಕೆ$_1$' ನೋ.

**ಚಮ್ಮಡೆಗದ್ದೆ** (ನಾ). ಕೆಂಪುಮಣ್ಣಿನ ಗದ್ದೆ (?): ಕೇರಿದ ಚಂಮಡೆಗದ್ದೆ ಕೆವರ ಯುಸಗವೆಳೆ (ಎಕ. III, ತಿರುಮ. ೬೩-೩೦೩ ; 1744).

[ ಚಮ್ಮಡೆ$_0$ + ಗದ್ದೆ (<ಗಟ್ಟಿ) ]

**ಚಮ್ಮಣಿವಟ್ಟು** 'ಚಿಮ್ಮಣಿವಟ್ಟು' ನೋ.

**ಚಮ್ಮರ** 'ಚಮ್ಮಾರ' ನೋ,

**ಚಮ್ಮರಿಗೆ** (ನಾ). ಚಾಟಿ ; ಬಾರುಕೋಲು ; ಕೋರಡೆ: ಅಱುವತ್ತಾಱು ಮಂಡಳಿಕರ ಬೆಂನ ಚಂಮರಿಗೆ ಹೊಳೆಕಲ್ಲ ಬೆಣೆಯನಾಯ್ಕನ ಮಗ ಕಂಬೆಯ ನಾಯ್ಕ (ಎಕ. XVI, ತಿಪಟೂ. ೧೬೦-೧೧ ; 1277).

[ <ಚಮ್ಮಟಗೆ? ]

**ಚಮ್ಮವಟ್ಟಗೆ, ಚಮ್ಮಟಿಕೆ$_2$, ಚಮ್ಮಟಗೆ$_2$, ಚಮ್ಮಟ್ಟಗೆ$_2$, ಸಮಟಗೆ, ಸಮ್ಮಟಗೆ** (ನಾ). ಬಾರುಕೋಲು ; ಚಾವಟಿ : ತತ್ತುರಂಗವನು ತೆಗೆದಂಗಣಕೆ ಹಲ್ಲಣಿಸಿ ಹತ್ತಿ ಹೊಯ್ದಾ ಚಮ್ಮವಟ್ಟಗೆಯ ಹುಯ್ಲಿಗೆ ಕಱುತ್ತು ನಭಕುಪ್ಪರಿಸೆ ಜಗುಳ್ದಧೋಗತಿಗೆ ಬೀಳ್ವಂದದಿಂ ಬಿಳ್ದನವನು (ಸಮ್ಮಕೌ. ೧೭-೬೦). **ಚಮ್ಮಟಿಕೆ$_2$** : ಬಿರುದರ ಬೆನ್ನ ಚಮ್ಮಟಿಕೆ ಗಂಡರ ದಾವಣಿ ವೀರಘಂಟೆಯುಪ್ಪರಗುಡಿ ಬಿಲ್ಲ ಜೇವಣಿಕೆ ಕಣ್ಣಲೆ ಕಾಸದೆಯುಂಬ ಡೊಂಬಿನಾಳ್ ಧುರಧರೆಯೊಳ್ ಸಹಸ್ರಮಿದಿರಾದಡಮಂತಕನೆಮ್ಮಪೋರಿ ಯಂತಿರೆ ಕಡೆಪೊಯ್ವನಲ್ಲದಡೆ ಮಾಡುವೆನಗ್ನಿಮುಖಪ್ರವೇಶಮಂ (ಮಹಾನೇ. ೧೧-೧೩೬) ; ಚಮ್ಮಟಿಕೆಯಂ ಪಿಡಿದು ರಥವನು ತಿರುಗಿಸುತ ಲಂದು (ರಾವದಿ. ೩೯): ಎತ್ತಿ ಚಮ್ಮಟಿಕೆಯನ್ನು ಚಪ್ಪರಿಸುತ್ತ ವಾಜಿಗಳನ್ನು ಗರಗರಸುತ್ತ (ಮುದ್ರಾಲಾ. ೩-೩೦). **ಚಮ್ಮಟಗೆ$_2$** : " ಚರ್ಮದಂಡಃ, ಕಶಾ – ಈ ೨ ಚಮ್ಮಟಗೆ " (ಹಲಾಯು. ೭೩-೨೮೮) : " ಕಶೆ ಚರ್ಮದಂಡಮೆನೆ ಚಮ್ಮಟಗೆಯೆನಿಸಿಕ್ಕು " (ಮಂಗರಾ. ೮೧-೧೩) : ಅನ್ನೆಗಂ ನಕುಳನುಮಂಕ ವಣೆಯುಂ ಬಾಳುಂ ಬಾರುಂ ಚಮ್ಮಟಗೆಯುಮನೊರ್ವ ಕೀಟಾಳಿಂ ಪಿಡಿಯಿಸಿಕೊಂಡು ಬಂದು (ಪಂಪಭಾ. ೮-೩೪ ವ); ಬಟಲ್ವೊಡಲೊಳ್ ಚಮ್ಮಟಗೆಗುತ್ತುಗಳುಮಂ . . . ಮೆಯ್ಯೊಳ್ವೊವಲ್ವೊರಜೆಗಳ ಕಟ್ಟಿಂ ಪುಟ್ಟಿದ ಬೇನೆಯುಮನೆಂತು ಸೈರಿಸಿದೆ (ಕಾದಂಊ. ೭೩೦); ಕಟ್ಟಿ ಚಮ್ಮಟಗೆ ಮುಟ್ಟಿದವೊಲ್ ನಸುಬೆರ್ಚೆ (ಕಾವ್ಯಾವ. ೮೨೩) : ವೀರಘಂಟೆಯ ಹೊನ್ನ ಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಗೆಯ ಬಿಳಿಯ ಚವರದ . . . ತಟ್ಟನೊಟ್ಟಜೆಯ ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ (ಗಿರಿಕ. ೬-೩೩ ವ) : ಮಡದಕಾಂಕಿ ಚಮ್ಮಟಗೆಯಂ ತೆಗೆದೊತ್ತಿದ ಮುನ್ನಮಾ ಹಯಂ ಮಿಡಿದವೊಲಾರ್ಪಿನಿಂ ನೆಗೆದು ಪಶ್ಚಿಮದಿಕ್ಕಿಗೆ ಪಾಯ್ದು (ಪುಣ್ಯಾಸ್ರ. ೦೦-೩೦) ; ತುರಗವನು ಬೋಳಯಿಸಿ ವಾಘೆಯ ತಿರುಹಿ ಚಮ್ಮಟಗೆಯಲಿ ತೇಜಿಯ ಬರಿಯ ಬೆದಱಿಸಿ ಕೃಷ್ಣ ಪಾರ್ಥನ ರಥವ ಲುಳಿವಡೆದ (ಕುವ್ಯಾಭೀ. ೩-೨); ಎಸೆವ ಮಿಳಿ ಸರ್ಪಮುಪನಿಷದಾಳಿ ಹಯ ರಜ್ಜು ಮಿಸುಪ ಚಮ್ಮಟಗೆಯೋಂಕಾರಂ (ಚಬಪು. ೪೮-೪೨) : ಈ ಚಮ್ಮಟಗೆ ಸುಲಿದು, ಬೆನ್ ಪಸುರ್ಗಟ್ಟಿ (ಅಕ್ರಕಾ. ೬-೯೩) ; ತನ್ನ ಕೋಣೆ ಯಲ್ಲಿ ಕುಳಿತು ತನ್ನ ಕಲ್ಪನಾವಿಲಾಸಕ್ಕೆ ಚಮ್ಮಟಗೆಯನ್ನು ಬೀಸಿ ಎತ್ತೆತ್ತೋ ಹರಿಬಿಡುವನು (ಜಯಂತ. ೬೯). **ಚಮ್ಮಟ್ಟಗೆ$_2$** : " ಚರ್ಮ ಪಟ್ಟಿಕಾ–ಚಮ್ಮಟ್ಟಗೆ, ಸಮಟಗೆಯೆನಲುಮಕ್ಕುಂ"(ಶಮದ. ೨೯೪ ಪ್ರಯೋ): "ಚಮ್ಮಟಗೆ – ಚಮ್ಮಟ್ಟಗೆ " (ಶಬ್ದಾನು. ೩೭೮ ಪ್ರಯೋ). **ಸಮಟಗೆ** : "ಚರ್ಮಪಟ್ಟಿಕಾ–ಚಮ್ಮಟ್ಟಗೆ, ಸಮಟಗೆಯೆನಲುಮಕ್ಕುಂ" (ಶಮದ. ೨೯೪ ಪ್ರಯೋ) : " ಸಮಟಗೆ, ಚಮ್ಮಟಗೆ–ಚರ್ಮಪಟ್ಟಿಕಾ " (ತದ್ಭಕೋ. ೪೩). **ಸಮ್ಮಟಗೆ** : ರಾಹುವ ಕೇತುವ ಬಲಿದಿಕ್ಕುಳಿನಿಂ ತೆಗೆದಂಥಾಸುರ ನೆರ್ದಗಲ್ಲೊಳ್ ವಜ್ರದ ಸಮ್ಮಟಗೆಯ ನಿಗುಚಿ ಕುಳಿಕನ ವಿಷದಿಂ ನೀರೂಡಿಸಿ (ವೀರೇಶ. ೨-೯). [ <ಸಂ. ಚರ್ಮಪಟ್ಟಿಕಾ ]

**ಚಮ್ಮವಾವುಗೆ, ಚಮ್ಮಾವುಗೆ, ಚಿಮ್ಮಾವುಗೆ, ಸಮ್ಮವಾವುಗೆ, ಸಮ್ಮಾವುಗೆ**(ನಾ). ಚರ್ಮದ ಪಾದುಕೆ,- ಪಾದರಕ್ಷೆ: ಸೊಸೆವಿರ್ಗೆಲ್ಲಂ ಸಲೆ ಚಮ್ಮ [ಪಾಠಾಂ. ರ್ಮ]ವಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೦-೧೨೦). **ಚಮ್ಮಾವುಗೆ** : ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ ಅಯ್ಯಾ ನಿಮ್ಮ ಶರಣರ ಪಾದಕ್ಕೆ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೭೧) : ಮೂವತ್ತಿರ್ವರ್ ಸೊಸೆವಿರ್ಗಂ ಚಮ್ಮಾವುಗೆಯಂ ಮಾಡಿಸಿ ಕೊಟ್ಟಳ್ (ಜೀವಸಂ. ೦೦೮-೩೭ವ); ಆತನಾ ಕಂಬಳವಂ ಕಂಡು ಕರ್ಕಶಮದನೊಲ್ಲೆನೆಂದು ಮರಳಿ ಕಳಿಪಲಾ ಯಶೋಭದ್ರೆ ಮೂವತ್ತಿರ್ವರ್ ಸೊಸೆಯರ್ಗೆ ಚಂಪಾ[ಮ್ಮಾ]ವುಗೆಗಳಂ ಮಾಡಿಸೆ (ಪುಣ್ಯಾಸ್ರ. ೬-೩೨) : ಪಲ್ಲಕ್ಕಿಯಿಂದಿಳಿದು ಚಮ್ಮಾವುಗೆ ಮೆಟ್ಟಿ (ಭರಕ. ೪೭-೧೨) : ಹರಳಯ್ಯ ಬಸವೇಶಂಗೆ ಪ್ರೀತಿಯಿಂ ನಮಿಸಿ ಚಮ್ಮಾವುಗೆಯ ಮುಂದಿಟ್ಟು ಮೆಟ್ಟೆನ್ನ ಗುರುವೆ ಎನಲು (ಪ್ರಭುಪು. ೯-೧೦೦) : ಶಿವಕವೀಶ್ವರರ ಪ್ರಸಾದವಂ ಸವಿವ ಮೇಣವರ ಚಮ್ಮಾವುಗೆಯ ಮುಡಿದು ಮುಕ್ತ್ಯಂಗನೆಯ ತವಕದಿಂ ನೆರೆವೆನು (ಏಕೋಪು. ೩-೩). **ಚಿಮ್ಮಾವುಗೆ**:ಒಪ್ಪವಸಿಕ್ಕಿದ ಎಪ್ಪತ್ತುಗೊಂಡೆಯ ಸರ್ಪನ ಹೆಡೆಗೈಯುತಲಿ ಚಿಮ್ಮಾವುಗೆಯ ಸುಪ್ಪಾಣಿಯಿಂದ ನಯವಿಟ್ಟ (ಕರಪ. ೨೯೯) : ಈ ಚಿಮ್ಮಾವುಗೆಗಳೆಸ್ನಾದರೂ ಸ್ವೀಕರಿಸಿ ನನ್ನ ಕುಲಕೋಟಿಯನ್ನೆಲ್ಲ ಉದ್ಧರಿಸುವ ಕೃಪೆಮಾಡಿರಿ! (ಶರಪ. ೩೦೧). **ಸಮ್ಮವಾವುಗೆ**: ಸೊಸೆವಿರ್ಗೆಲ್ಲಂ ಸುಸಮಾನಚಿತ್ತದಿಂದಿಂದು ಸಮ್ಮವಾವುಗೆಯನಲ್ತೆ ಮಾಡಿಸಿಕೊಟ್ಟಳ್ (ಸುಕುಮಾ. ೦೦-೧೨೧) : ದೇವರ ಸಮ್ಮವಾವುಗೆಗಳಂ ಪಿಡಿದೆಂಬುದ ನಿಂಬುಕೆಯ್ದು ಸದ್ಭಾವವೆ ಸಾಲ್ಗುಂ (ಪಂರಾಮಾ. ೭-೬೮) : ಬೀವಮಾರುತ ರುಗ್ಮಿಣನ ಪುರಕೆ ಪೋದ ಕಾವನ ಕೈಸೆಱೆ ತಂದು ಭೂವರ ಕೇಳ್ವಿನ್ನ

ಪದಪದ್ಮಕೆ ಸಮ್ಮಾವಾವುಗೆಗಳನಿಕ್ಕಿಸುವವು (ಚೀ ಮಿ ಸಂ. ೫೬-೯೪): ಸಮ್ಮಾವುಗೆ: ಪೊರವ ಸಮ್ಮಾವುಗೆಯ ಮುಙುಕದಿಂ ತೆಗೆದುಟ್ಟಿ ಚೆತ ದುಕೂಲದ ಮುಂಜೆರಂಗಿನಿಂ (ಪದ್ಮರಾ. ೩-೪೨); ಲಳಿತ ದಾಮೋದರಂ ವರಸೋಮಯಾಜಿಗಳ್ಪಳೆಯ ಸಮ್ಮಾವುಗೆಯ ಮಾಧವಂ (ಅರಾಚ. ೬-೧೬): ಜನಮುನಿಗಳೊಡನೆ ವಾದಿಸಿಯವರು ಸೋಲಲ್ತು ಪದವಿನತರಾಗಲ್ಕೆ ಸಮ್ಮಾವುಗೆಯ ಸೇವೆಯಂ ಕೊಟ್ಟವರ ರಕ್ಷಿಸಿದನು (ವೀಕ್ಷ್ಯಪು. ೫-೯-೪೬): ಚಿನ್ನಗಂಬಿಯ ಪಟ್ಟಿ ಪಚ್ಚಡಂಗಳನೊಲಿದು ಚನ್ನಾಗಿ ವಲ್ಲಿವಾಟವ ಪೊದೆದು ಯಡಕೆರದಿ ಪೊನ್ನೊರೆ ಕಠಾರಿಯುಮಂನಂತು ವರಹಸ್ತದೊಳಕುಷ್ಟಮಂ ಪಿಡಿದು ನಡಿಯೆಯಿನ್ನು ಜರಿಸರಿನದ ಸಮ್ಮಾವುಗೆಯ ಮೆಟ್ಟಿ (ನನಪೋ. ೧೬-೫೭). [ ಚಮ್ಮ + ಪಾವುಗೆ. / ಸಂ. ಚರ್ಮಪಾದುಕಾ ]

**ಚಮ್ಮಳಗೆ** 'ಚಮ್ಮಾಳಿಗೆ' ನೋ.

**ಚಮ್ಮಳಿ** (ನಾ). ನವಗ್ರಹಗಳಲ್ಲಿ ಒಂದಂ ; ಕೇತು : " ಚ[ಪಾಠಾಂ. ಚಿ]ಮ್ಮಳಿಯೆಂದು ಕೇತು " (ಕಶಸಾ. ೩-೩೨).: " ಉಜ್ ಚಮ್ಮಳಿ ಕೇತು ರಾಹು ಬಾಂಬಾವಕ್ಕಂ " (ಕವಿಕಂ. ೪೨). 'ಚಾಟ್' ಪರಾ. [ ? ]

**ಚಮ್ಮಳಿಕೆ** (ನಾ). = ಚಮ್ಮಳಿ ಚಮ್ಮಳಿಕೆಯೆನೆ ಕೇತು " (ಕಕರ. ೩೫). [< ಚಮ್ಮಳಿ ]

**ಚಮ್ಮಾರ**, ಚಂಬಾರ್, ಚಂಬಾರ, ಚಮ್ಮರ (ನಾ). ಚರ್ಮದ ಕೆಲಸ ಮಾಡುವವನು ; ಚಮಗಾರ ; ಸಮಗಾರ: " ಚಮ್ಮಾರ – ಚರ್ಮಕಾರ " (ತದ್ಭಕೋ. ೧೨). **ಚಂಬಾರ್:** (ಶ್ರಸಗಿ. II, ೩೭೩): (ಮ್ಯಗಿಶ. IV, ೭೭೬). **ಚಂಬಾರ:** (ಎಪಿಮ್ಯ. XVII, ೨). **ಚಮ್ಮರ:** ಚಮ್ಮರನ ಕಣ್ಣು ಮಬ್ಬೇರಿದುದು, ಕಿವಿ ಕೇಳದಾದುದು (ಕಗದ್ಯ. ೭೯).

[ < ಸಂ. ಚರ್ಮಕಾರ ]

**ಚಮ್ಮಾರುಲಿ** (ನಾ) ಚರ್ಮದ ಮೆಟ್ಟು (?) : ಮೆಟ್ಟಿದ ಚಮ್ಮಾರುಲಿಯ ಹೆಚ್ಚನೊಸಲೊಳಗಿಟ್ಟ ಕಸ್ತುರಿಯು ಶಿಲಿಹದ ಮುಟ್ಟಿ ಪಿಡಿದ ಕೈಸಾಣೆಯ ಕೊನಬುಗಳಿಟ್ಟನಿಸಿಹರು ಬೀದಿಯತಲಿ (ಕಂನವಿ. ೬-೧೯೩). [ ? ]

**ಚಮ್ಮಾವುಗೆ** 'ಚಮ್ಮಾವಾವುಗೆ' ನೋ.

**ಚಮ್ಮಾಳ** (ನಾ). ಒಂದು ಬಗೆಯ ಚರ್ಮವಾದ್ಯ : ಚಮ್ಮಾಳ ಬಾರಿಸು ವವರು ಬಂದರು (ರೂಪಿ). [ ← ಛುರಾ. ಸಂಬಳ್ ]

**ಚಮ್ಮಾಳಿಗೆ**, ಚಮ್ಮಳಗೆ, ಚಮ್ಮೋಳಗೆ, ಚೆಮ್ಮಣಿಗೆ (ನಾ). ಚರ್ಮದ ಪಾದುಕೆ: ನಂಬಿಯಣ್ಣಂ ಪರವಾಲೀಲೆಯೊಳುದ್ದ ಚಮ್ಮಾಳಿ[ಪಾಠಾಂ. ವು]ಗೆಗಳಂ ಮೆಟ್ಟಿ (ಅಸಿಪು. ೨೬-೦೪); ಹಳ್ಳಯನೆಂಬೊ ಮಾದಿಗ ತನ್ನ ಸತಿಗೂಡಿ ಒಳ್ಳೆ ರೌಪಾದ ಚಮ್ಮಾಳಿಗೆಯ(ಬಸ್ಸಸ್ತುರ. ೬-೦೦). **ಚಮ್ಮಳಗೆ :** ಚಮ್ಮಳಗಿ[ಗೆ]ಯ ,ಮೆಟ್ಟಿ ವಾರೆದುರುಬಾ ಕಟ್ಟಿ (ವಿಶಾಸು. ೦೬-೩). **ಚಮ್ಮೋಳಗೆ :** ಚಮ್ಮೋಳಗೆಯ ಮೆಟ್ಟದವನುಂಟೇ ಕಂಟಕಗಳ ಭಯ (ಜಗದಾ. ೨೦೪). **ಚೆಮ್ಮಣಿಗೆ :** ಸರ್ವರು ಮೆಟ್ಟುವದಕ ಕಾಲೊಳು ಚೆಮ್ಮಣಿಗೆ (ಕನ್ನಜಾ. ೮೪); ಮೆಟ್ಟಿದಾನ ಚೆಮ್ಮಣಿಗೆ ಉಟ್ಟದಾನ ಧೋತರ (ಜೋಕಗೀ. ೦೪೭). [ ಚಮ್ಮ + ? ]

**ಚಮ್ಮೋಳಗೆ** 'ಚಮ್ಮಾಳಿಗೆ' ನೋ.

**ಚಯ್$_1$** (ನಾ). ಒಂದು ಅನುಕರಣ ಪದ: ಚಯ್‌ಚಯ್ಯೆಂಬಾಗಳ್ ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದ ತಳ್ತುಱಿವು[ರ್ಕಿಂ] (ಪಂಪಭಾ. ೦೩-೩೪).

**ಚಯ್$_2$**, ಚಯ್ಯ, ಚೆಯ್$_1$, ಚೈ (ನಾ). ಚೆಲ್ಲಾಟ ; ವಿನೋದ . 'ಚಯ್ಯಾಡು' ಪರಾ. **ಚಯ್ಯ :** " ಚಯ್ಯವು[ಪಾಠಾಂ. ಚಯ್ಯಾಟ, ಚೆಯ್ಯಾಟ]ಮೆನಲ್ ಚೆಲ್ಲಾಟವಮಕ್ಕುಂ " (ಕರ್ಣಿಕೈ. ೨೦) ; ಚ[ಪಾಠಾಂ. ಬ]ಯ್ಯಮಾಡುವುದೇಡಿವುದು (ರಾಮವಿ. ೦೭-೮೬). **ಚೆಯ್$_1$ :** 'ಚೆಯ್ಯಾಟ' ಪರಾ. **ಚೈ :** 'ಚೈಗುಡು' ಪರಾ. [ ? ]

**ಚಯ** (ನಾ). ೧. ಗುಂಪು ; ಮೊತ್ತ ; ರಾಶಿ ; ಸಮೂಹ : ದಿಗಂಬರ ಕೆಟಂಬರಂ ಬಳಸೆ ಕೀರ್ತಿವಲ್ಲೀಚಯಂ (ಆದಿಪು. ೩-೫೭) ; ಸ್ಮರಕಾಂತಾರತ ಘರ್ಮಬಿಂದುಚಯಮೋ (ಆದಂಪೂ. ೭೪೧); ಇಂದ್ರಿಯಚಯವ ಗೆಲುವದೆ ತನ್ನ ಗೆದ್ದುದದು (ನೀಗಟ್ಟು. ೦೨೪). ೨. ಮಣ್ಣಿನ ದಿಣ್ಣೆ ; ೩. ಕೋಟೆಯ ಸುತ್ತುಗೋಡೆ,–ಪ್ರಾಕಾರ. [ ಸಂ. ]

**ಚಯನ** (ನಾ). ಕೂಡಿಹಾಕುವಿಕೆ; ಒಟ್ಟುಗೂಡಿಸುವಿಕೆ; ಶೇಖರಿಸುವಿಕೆ; ರಾಶಿಮಾಡುವಿಕೆ : ಚಯನಂ ಮುಗಿಯೆ ಬಲವಂದುಮಡವಂದುಮಾ ಚಿತೆಯಂ (ಶ್ರೀರಾಮಾ. ೧೨೦-೨೨೯). 'ಸಂಚಯನ' ಪರಾ. [ ಸಂ. ]

**ಚಯಿತ್ರ** (ನಾ). = ಚೈತ್ರ ೨ : ಚಯಿತ್ರ ಸು ೧೦ ಬ್ರಿ ದಂದು (ಎಕ. XI, ಚಿತ್ರದು. ೦೨-೦೪ ; 1286). [ < ಸಂ. ಚೈತ್ರ ]

**ಚಯಿತ್ರಪೈಯಿತ್ರ** (ನಾ). = ಚೈತ್ರಪವಿತ್ರ : ಶ್ರೀಗ್ರಾಮೇಶ್ವರದೇವರಂಗ ಭೋಗಕ್ಕಂ ನಿಶ್ಯನಿವೇದ್ಯಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕಂ ಚಯಿತ್ರಪೈಯಿತ್ರಕ್ಕಂ . . . ಬಿಟ ಗದ್ದೆ (ಸೌಇಇ. XX, ೬೬-೫೬ ; 1118).

[ < ಚೈತ್ರಪವಿತ್ರ ]

**ಚಯ್ಯ** 'ಚಯ್$_2$' ನೋ.

**ಚಯ್ಯಾಟ**, ಚೆಯ್ಯಾಟ (ನಾ). ಚೆಲ್ಲಾಟ ; ವಿನೋದ ; ಚೇಷ್ಟೆ : " ಚಯ್ಯಾಟ[ಪಾಠಾಂ. ಚೆಯ್ಯಾಟ]ಮೆನಲ್ ಚೆಲ್ಲಾಟಮಕ್ಕುಂ " (ಕರ್ಣಿಕೈ. ೨೦). **ಚೆಯ್ಯಾಟ:** ಕುಚೇಷ್ಟಿತದ ಚೆಯ್ಯಾಟದ ಮುಗುಳ್ಗೆವೆತ್ತು (ಮಂಕ್ರಶ. ೮೮-೯). [ ಚಯ್$_2$ + ಆಟ ]

**ಚಯ್ಯಾಡಂಬರ** (ನಾ). ಕಾಂತಿ ; ಶೋಭೆ : ಇಂದ್ರವಜಕ್ಕೆ ಚಯ್ಯಾಡಂಬರ ಮೆಂಚಿಂತಿರಲೊಪ್ಪಂಬಡೆದಾತನಿರೆ x x ಎಱಿಯಂಗನ್ನಿಪಂ (ಮ್ಯಅರಿ. ೦೯೨೬, ೯-೧೧ ; 1133). [ ? ]

**ಚಯ್ಯಾಡು**, ಚೆಯ್ಯಾಡು (ಕ್ರಿ). ಚೆಲ್ಲಾಟವಾಡು ; ವಿನೋದಮಾಡು: ಕೆಯ್ಯೊಕಲೆತ್ತಿಯಾನೀ ಮೆಯ್ಯೊಳ್ವಿನಮಪ್ಪಿಕೊಂಡು ಪಣೆಯಿಂ ಪಣೆಯಾದೊಯ್ಯನಣೆದಣೆದು ತಣಿಯದೆ ಚಯ್ಯಾಡುವ ತನಯನೆನಗದೆಂದಾದಪನೋ (ಧರ್ಮನಾ. ೩-೦೨೦). **ಚೆಯ್ಯಾಡು:** ದೂರದಿಂದೆ ಪರಿತಂದಪ್ಪನೆಪ್ಪನುತ್ತಪ್ಪಿ ಪೊಯ್ಯಗೆ ಚೆಯ್ಯಾಡುವ ಮೋಹಿಯಂ ಮುಸುಕಿಡುತ್ತೋಯೆಂಬ . . . ಕಂದನೊಳ್ ನಲಿವ ವೆಣ್ಣೇಂ ನೋಂಪಿಯಂ ನೋಂತಳೋ (ಜಗವಿ. ೨-೯೭). 'ಚೈಗುಡು' ಪರಾ. [ ಚಯ್$_2$ + ಆಡು$_1$ ]

**ಚಯ್ಯಾಳಿ** (ನಾ). (ಸಂತೋಷದ ಸಮಯದಲ್ಲಿ)ವಾದ್ಯವನ್ನು ನುಡಿಸುವ ಒಂದಂ ಗತ್ತು (?): ಹೊಟ್ಟೀಬಸಪ್ಪನು ಉತ್ಸಾಹದಿಂದ 'ಚಯ್ಯಾಳಿ'ಯ ಗತ್ತನ್ನು ಹಿಡಿಯುತೊಡಗಿದನು (ಹಳ್ಳಿಬ. ೩೮). [ ? ]

**ಚರ** (ಗು). ೧. ಚಲಿಸುವ; ಗತಿಯುಳ್ಳ; ನಡೆಯುವ. ೨. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ : ವಾರಸುದಾರರು ಜಮಾನುಗಳನ್ನು ತೆಗೆದುಕೊಳ್ಳಲು ನಿರಾಕರಿಸಿದಾಗ ಓಡಿಹೋದವನ ಚರ ಆಸ್ತಿ ನಮಗೆ ಸೇರುತ್ತದೆ (ಕೃಪಾಇ. II, ೪೭೮). (ನಾ). ೩. ಚಲಿಸುವವನು ; ನಡೆಯುವವನು : ಪರನವರಂ ಭವನಭವಂ ಚರನಚರಂ . . . ಎನಿಪ ಗಣಿತ ವಿರುದ್ಧಗುಣ ನಿನ್ನ ನಿಜವದೇಂ ಕೇವಳಮೋ (ಜಗವಿ. ೩-೯೭). ೪. ಚಲಿಸುವ ವಸ್ತು ; ಪ್ರಾಣಿ : ಪುರಗಗನಜಲವನಚರಂಗಳು ಚರಗಳಿವು (ಅಮೃತ. ೯-೬೪). 'ಚರಾಚರ' 'ಜಲಚರ' ಪರಾ. ೫. ಗೂಢಚಾರ; ಬೇಹುಗಾರ : "ಅಪಸರ್ಪಃ ಚರಃ ಚಾರಃ–ಈ ಮೂಱು ಅರಸಾಳು " (ಹಲಾಯು. ೭೦-೨೮೧) ; ಅವಧರಿಪುದೆಂದು ಚರನಿಂತೆಂದಂ (ಪಂರಾಮಾ. ೪-೫೭); ವಿಜಯಲಕ್ಷ್ಮಿಯ ಸೆಳಗ ಹಿಡಿದನು ದ್ರೋಣನೆಂದರು ಚರರು ಭೂಪತಿಗೆ (ಕುಮಾವ್ಯಾದ್ರೋ. ೦೮-೮). ೬. [ವೀಶೈ] ಜಂಗಮ : ಜಂಗಮ ವೆನಿಸಿಕೊಳ್ಳುವ ಚರಾದಿಗಳು (ಅವಚಂ. ೨೫೮-೧೦೭೩); ನಟವರ ಕಾಯಕವ ಮಾಡಿ ದೊರೆದರ್ಥದಿಂ ಚರಕೆ ಭಕ್ತಿಯಂ ನಡೆಸುತಿರಲು (ಪ್ರಾಳರಾ. ೨-೬) ;

ಚರವು ಗೋಕ್ಷೀರವಂ ಬೇಡೆ ಕೊಟ್ಟುಗೆಯತ್ತ ಬಱಡುಗವಿಲೆಯ ಕರೆದು ಸಲಿಸಿದಂ (ಧಾಕಥಾ. ೮-೪೯). ೭. [ವಿಜ್ಞಾ] ವಿದ್ಯುದ್ವಾಹಿಯಾದ ಕಣ: ವಿದ್ಯುತ್ತನ್ನು ಹೊತ್ತ ಅಣುಭಾಗಗಳಿಗೆ ಚರಗಳೆಂದು (Ions) ಹೆಸರು (ಭೌತವಿ. ೩೯೬). [ಸಂ.]

**ಚರಂಡಿ** (ನಾ). ಕೊಳಚೆನೀರು ಹರಿದು ಹೋಗಲು ಮಾಡಿದ ಮೋರಿ; ಗಟಾರ: ನಮ್ಮ ನಗರಗಳ ಚರಂಡಿಗಳಲ್ಲೂ ಸಿಗದು ಇಂಥ ದುರ್ಗಂಧ! (ಮಾನನ. ೭೮); ಅಡುಗೆಮನೆಯ ಕೊಳಚೆನೀರನ್ನು ನಲ್ಲಿಗಳ ಅಥವಾ ಚರಂಡಿಗಳ ಮೂಲಕ ದೂರ ಒಯ್ಯಬೇಕು (ಆಜಶಾ. ೯೦); ಅವಳು ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೧೭೪); ಅಲೆಕ್ಸಿ ಗುಂಡಿ ತೋಡಿ, ಚರಂಡಿ ಹೊಡೆದು ತನ್ನ ಕೆಲಸವನ್ನು ಮುಗಿಸಿದನು (ಹೋಳಕು. ೧೭).
[ ?. / ಫಾರ. ಚರಾಂಡ = ಗಲ್ಲಿ ]

**ಚರಂಡಿತನ** (ನಾ). ಕೊಳೆಮಾಡುವಿಕೆ; ಹೊಲಸುತನ: ಚಂಡಿಕೆಯ ತೆಗೆದ ಚಂಡಿನೋಳಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯ ಚೆಂಗಾಲ! (ನವ್ಯಧ. ೦೨-೬). [ ಚರಂಡಿ + – ತನ ]

**ಚರಂತ** 'ಚರಂತಿ' ನೋ.

**ಚರಂತಿ, ಚರಂತ** (ಗು). ೧. ಚಲಿಸುವ: ತುಟಿಗೆ ತುಟಿಯಿಡುವ ರತಿಕಾಮರ ಜೋಡಿ! ಚರಂತಿ ತ್ರಿಶಂಕು ಸ್ವರ್ಗದ ಹೊಸ ಮೋಡಿ! (ಹೊಕನ. ೩೦-೩). (ನಾ). ೨. [ವೀಶೈ] ಬ್ರಹ್ಮಚರ್ಯವ್ರತವನ್ನು ಕೈಕೊಂಡ ಜಂಗಮ: ಚೆನ್ನರಾಜದೇವರು ಮಠದ ಕಟ್ಟಸಿ ಚರಂತಿಗಳ ದಾಸೋಹಕ್ಕೆ ಬಿಟ್ಟ ಗದ್ದೆ (ಮೈಆರಿ. ೧೯೨೮, ೩೩-೫ ; ?); ಯಿಾ ಮಠದ ಚರಂತಿ ಹಿರೇರು (ಎಕ. VII, ಶಿವಮೊ. ೧೦೬-೩ ; ?). **ಚರಂತ**: ೨. ಚರಂತರ ಮಠದಲ್ಲಿ ಈ ದಿನ ಪುರಾಣ ಪ್ರವಚನವಿದೆ (ರೂಢಿ). [ <ಸಂ. ಚರತ್ ]

**ಚರಕ₁** (ನಾ). ೧. ಅಲೆದಾಡುವವನು. ೨. ಯಾತ್ರಿಕನಾದ ವಿದ್ಯಾರ್ಥಿ. ೩. ಬೇಹುಗಾರ; ಗೂಢಚಾರ. ೪. ಪ್ರಸಿದ್ಧ ವೈದ್ಯಶಾಸ್ತ್ರಜ್ಞನಾದ ಒಬ್ಬ ಋಷಿಯ ಹೆಸರು. ೫. ಚರಕಋಷಿಯಿಂದ ರಚಿತವಾದ ವೈದ್ಯಗ್ರಂಥ; ಚರಕಸಂಹಿತೆ. [ ಸಂ. ]

**ಚರಕ₂** (ನಾ). ೧. ನೂಲುವ ರಾಟೆ: ಅವಳು ಚರಕ ತೆಗೆದುಕೊಂಡು ದಾರ ತೆಗೆಯುವುದಕ್ಕೆ ಕುಳಿತುಕೊಂಡಳು (ದೇಜಾಂಕ. ೩೭); ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು (ಗೃಹವಿ. ೭೨). ೨. ಅರೆಯುವ ಯಂತ್ರ; ಗಾಣ: ಬಂಡವಾಳಗಾರನು . . . ಇಡೀ ರೈತವರ್ಗವನ್ನು ಸರಕಾರೀ ಕರ-ಕಂದಾಯಗಳ ಚರಕದಲ್ಲಿ ಹಾಕಿ ತೆಗೆದು ಸಿಪ್ಪೆಯುಸಪ್ಪೆಯಾಗಿ ಮಾಡುತ್ತಾನೆ (ಮಾವಾರ. ೧೯೭). ೩. ಚಕ್ರ; ಗಾಲಿ: ದರುಮದ ಚರಕಂ ನನ್ನಿಯ ಪೊರ್ಕುಳಿಮುರಿವು ಸಮಾಧಿ ಧೃತಿಯುಮಿರೆ ನೇಮಿ (ಶಾಸಂಕ. ೩-೧೦). [ ←ಮರಾ. ಚರಕ್; ಫಾರ. ಚರ್ಖ್; ಹಿಂ. ಚರ್ಖ್, ಚರ್ಖಾ / ಸಂ. ಚಕ್ರ ]

**ಚರಕಿ, ಚರಿಕಿ** (ನಾ). ೧. ಲೋಹ, ದಂತ ಮೊದಲಾದುವುಗಳನ್ನು ತಕ್ಕ ಆಕಾರದಲ್ಲಿ ಕಡೆಯುವುದಕ್ಕಾಗಿ ಸಿದ್ಧಪಡಿಸಿದ ಯಂತ್ರ; ಕಡೆತದ ಯಂತ್ರ; ಲೇತ್‌ಯಂತ್ರ: ಚರಕಿಯ ಭಾಗಗಳನ್ನು ತಕ್ಕಂತೆ ಅಳವಡಿಸುವುದಕ್ಕಾಗಿ . . . ಗಾಡಿಯುಳ್ಳ ಚರಕಿ ಯಂತ್ರದ ತಳಚೌಕಟ್ಟು (Lathe-bed. ಇಂಕವಿ). **ಚರಿಕಿ**: ೨. ಕುಂಬಾರನ ತಿಗುರಿ: (ಕ). ೩. ಬೀಸುವ ಕಲ್ಲು: (ಕ). [ ←ಮರಾ. ಚರಕೀ, ಚರಖೀ; ಫಾರ. ಚರ್ಖಾ; ಹಿಂ. ಚರ್ಖೀ ]

**ಚರಗ** 'ಚರುಗ' ನೋ.

**ಚರಚಕ್ರವರ್ತಿ** (ನಾ). ಜಂಗಮರಲ್ಲಿ ಶ್ರೇಷ್ಠನಾದವನು: ಮಲೆಯ ವೀರೇಶ ಸಿದ್ಧರಾಮಸ್ವಾಮಿಯಾ ಕರಕಮಲ ಸಂಭೂತ ಚರಚಕ್ರವರ್ತಿ (ವೀಕ್ಷಪು. ೧-೧-೬). [ ಚರ + ಚಕ್ರವರ್ತಿ ]

**ಚರಚರ** (ನಾ). ಒಂದು ಅನುಕರಣ ಶಬ್ದ. 'ಚರಚರನೆ' ಪರಾ.

**ಚರಚರನೆ** (ಅ). ಚರಚರ ಎಂಬ ಶಬ್ದದೊಂದಿಗೆ: ಕಲುಷದೈತ್ಯರನೆಲ್ಲ ಚರಚರನೆ ಸೀಳಿ (ಜಾದಿಕೀ. ೨೮-೧); ಆ ಪತ್ರವನ್ನು ಚರಚರನೆ ಹರಿದು ಚರಂಡಿಗೆ ಹಾಕಿ . . . ನಡೆದುಬಿಟ್ಟಳು (ರಂಗರೂ. ೧೭೪).
[ ಚರಚರ + – ಅನೆ₁ ]

**ಚರಜಂದಗಿ, ಚರಜಿಂದಿಗಿ, ಚರಜಿಂದಿಗೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಆಸ್ತಿ; ಚರಆಸ್ತಿ: ಮನೆಗಳನ್ನು ಜಪ್ತಿಮಾಡಿ ಹಿಂಡುವ ಎಮ್ಮೆಯನ್ನು (ಕರಸಹಿತ) ಇತರ ಚರಜಂದಗಿಯನ್ನು ಜಪ್ತಿ ಮಾಡಿದರು (ಕರವೀ. ೯೩). **ಚರಜಿಂದಿಗಿ**: ಚರಜಂದಿಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಂದಗಿಯ ಮೌಲ್ಯವನ್ನು ಕುರಿತ ದಾವೆ (ನ್ಯಾಮಾಕ. ೨೦). **ಚರಜಿಂದಿಗೆ**: "ಚರಜಂದಿಗೆ, ಜಂಗಮದ್ರವ್ಯ" (Chattel. ಶಾರಿವಿ. ೦೪).
[ ಚರ + ಜಂದಗಿ ]

**ಚರಜಿಂದಿಗಿ** 'ಚರಜಂದಗಿ' ನೋ.

**ಚರಜಿಂದಿಗೆ** 'ಚರಜಂದಗಿ' ನೋ.

**ಚರಟ, ಚಟ್ಟ₂, ಚಟ್ಟು₁** (ನಾ). ೧. ದ್ರವವಸ್ತುಗಳ ತಳದಲ್ಲಿ ನಿಂತ ಗಟ್ಟಿಯಾದ ವಸ್ತು; ಗಷ್ಟ; ಗಸಿ: ಸಟಾರದ ಚರಟವನ್ನು ಕೂಡಿಸಿ ಮಾಡಿದ ಕಾಜನಿಂದ ಆಗುತ್ತವೆ (ಮುಂಬರು. ೪-೨೨೨); ಬರೀ ಸಾರಿನ ಚರಟ ಇದೆ (ರೂಢಿ). ೨. ನಿಸ್ಸಾರವಾದ ವಸ್ತು; ಸಾರ ತೆಗೆದ ವಸ್ತು: ಕಾಫಿಯ ಚರಟವನ್ನು ಪಾತ್ರೆ ತೊಳೆಯುವುದಕ್ಕೆ ಬಳಸಬಹುದು (ರೂಢಿ). ೩. ಶರೀರದ ಹೊರಪದರ; ಚರ್ಮ; ತೊಗಲು. **ಚಟ್ಟ₂**: (ಕ). **ಚಟ್ಟು₁**: ೨. 'ಚಟ್ಟಬೆಳಗಂ' ಪರಾ.

ಚಟ್ಟಾಎತ್ತು = ಚರ್ಮವನ್ನು ಸುಲಿ; ಹಿಂಸೆಮಾಡು: ಕಟ್ಟಗಿಟ್ಟ ಹಡದೀ ನಿನ್ನ ಚಟ್ಟಾಎತ್ತೀನ (ಕಕ್ಕಜಾ. ೩೦). ಚರಟಾನೇ ಬೆಳಗು, ಚಟ್ಟಾನ ಬೆಳಗು=ಚಟ್ಟಾಎತ್ತು: ಸುಳ್ಳು ಬದ್ದೀ ಅಂದ್ರ ನಿನ್ನ ಚರಟಾನೇ ಬೆಳಗೇನು (ತಿಹುಗು. ೭೩); ನಿನ್ನ ಚರಟಾನೇ ಬೆಳಗೇನು (ಮಿಂಚುಹು. ೧೦೭); ಇವನು ಚಟ್ಟಾನ ಬೆಳಗತಾನ (ದೀಜಹ. II, ೫೭).
[ ದೇ. ≡ ತುಳು. ಚಟ್; ತೆಲು. ಚಟ್ಟ ]

**ಚರಣ** (ನಾ). ೧. ನಡೆ; ಸಂಚಾರ. ೨. ನಡವಳಿಕೆ; ಆಚರಣೆ; ವ್ಯವಹಾರ. 'ತಪಶ್ಚರಣ' ಪರಾ. ೩. ಅಡಿ; ಪಾದ: "ಅಂಘ್ರಿಃ, ಚರಣಃ, ಪಾದಃ– ಈ ೩ ಕಾಲ್" (ಹಲಾಯು. ೮೯-೩೩೭); ಚ[ಪಾಠಾಂ. ಕ]ರಣದ ಚಾರಿಯ ಚಲ್ಲಿಯ ಪರಿಕ್ರಮಕ್ರಮದ ಭಂಗಿಗಳ್ ನಗಟ್ಟಿಡೆಯೊಳ್ (ಅಪು. ೯-೪೯); ಚರಣದೆ ಕಾಂಚಿಯಂ ಗುರುನಿತಂಬದ ಪರ್ವುಗೆಯಿಂದೆ ಮಧ್ಯಮಂ . . . ವಿರಹವಿಹ್ವಲೆಯಾಗಿ ಲತಾಂಗಿ ತಾಳ್ದುವಳ್ (ಶಾರಂಕಾ. ೩೩೩); ಕೂಡಲ ಸಂಗಮದೇವಾ ನಿಮ್ಮ ಚರಣಕಮಲದಲಾನು ತುಂಬಿ (ಬಸವ. ೯೯೨); ಎಂತುಮವಾರ ಚರಣಂ ಶರಣಂ (ಜಗವಿ. ೧-೩೪); ತಿರುನೀಲಕಂಠರ ಚರಣಮಂ ಪಿಡಿದು (ತಿರುರ. ದೇ. ೬-೧೬); ಹಿಂದೆ ಚರಣದಲೊದೆದನೊಬ್ಬನ (ಕೌಶಿಜ. ೨೬-೩೦). ೪. [ಛಂದ] ಪದ್ಯದ ಪಾದ,-ಪಂಕ್ತಿ: ಕವಿತೆಯಲ್ಲಿ ಎರಡು, ಮೂರು . . . ಭಾಗಗಳನ್ನು ಮಾಡಿ, ಒಂದೊಂದಕ್ಕೆ ಅಡಿ, ಚರಣ, ಪಾದ, ಪದ ಮುಂತಾದ ಹೆಸರುಗಳನ್ನಿಟ್ಟಿದ್ದಾರೆ (ಛಂದಶ್ಶಾ. ೦೪). ೫. [ಗಣಿತ] ಎರಡು ಎಂಬ ಸಂಖ್ಯೆಯ ಸಂಕೇತ: "ಕ್ರಮ ಚರಣಂ ಪದಯುಗಳಂ ಸಮ ಉಭಯಂ ಬಾಹು ಕಿವಿಗಳೆರಡಱ ನಾಮಂ" (ವ್ಯವಹಾ. ೯-೨). ೬. [ಜೈನ] ನಾಲ್ಕು ಅನುಯೋಗಗಳಲ್ಲಿ ಮೂರನೆಯದು; ಮುನಿಗಳ ಹಾಗು ಶ್ರಾವಕರ ಆಚರಣೆಯನ್ನು ವಿವರಿಸುವ ಶಾಸ್ತ್ರಭಾಗ: ಪ್ರಥಮ, ಕರಣ, ಚರಣ, ದ್ರವ್ಯ ಎಂಬ ನಾಲ್ಕು ಅನುಯೋಗಗಳನ್ನು ಜೈನರ ಚತುರ್ವೇದಗಳೆಂದು ಕರೆಯಬಹುದು (ಭಾಕರ. ೦೭೪). 'ಚರಣಾನುಯೋಗ' ಪರಾ. [ ಸಂ. ]

**ಚರಣಗ್ರಂಥ** (ನಾ). [ಜೈನ] ಚರಣಾನುಯೋಗವನ್ನು ವಿವರಿಸುವ ಗ್ರಂಥ : ಆಚಾರಮಾರಾಧನೆ ಮೊದಲಾಗೊಡೆಯ ಚರ[ಪಾಠಾಂ. ಶ್ರವ]ಣ ಗ್ರಂಥಂಗಳುಮಂ . . . ಕಲ್ತೊಡಲ್ಲದೆ (ವಡ್ಡಾ.ರಾ. ೬-೭).

[ ಚರಣ + ಗ್ರಂಥ ]

**ಚರಣಚೌಪಟ** (ನಾ). ಶ್ರೇಷ್ಠ ಕಾಲಾಳು ; ಪರಾಕ್ರಮಿಯಾದ ಪದಾತಿ: ನೆರಹಿದನು ಹದಿನಾಱುಸಾವಿರ ಕರಿಘಟೆಯನು . . . ಚರಣಚೌಪಟರೈದು ಲಕ್ಷವ (ಕುಮಾ.ಭಾ. ೨೨-೩). [ ಚರಣ + ಚೌಪಟ (<ಚೌಪಟ್ಟ) ]

**ಚರಣತಲ**, ಚರಣತಳ (ನಾ). ೧. ಕಾಲಿನ ತಳಭಾಗ ; ಅಂಗಾಲು : "ಚರಣತಲ [ಪಾಠಾಂ. ಳ] ಮೆಂದೊಡಂಗಾಲೆನಿಕುಂ" (ಶಬ್ದಮ. ೨೮-೧೮). **ಚರಣತಳ:** ೧. ಚರಣತಳಪ್ರಘಾತದೆ ಪದಾತಿಗಳಂ ನಖರಪ್ರಹಾರದಿಂ ತುರಗದಟಂಗಳಂ . . . ನುಗ್ಗುಮಾಡಿ (ಚಂದ್ರಪ್ರ. ೦೦-೯೬). ೨. ಕಾಲು; ಪಾದ : ಚರಣತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತಿದೆ ಚುರ್ಚುತಿರ್ಪ ನೂಪುರಮನೆ ಸೈತು ಸಾರ್ಚದೆ . . . ಬಂದು ಸಂಭ್ರಮದಿನೀಕ್ಷಿಸು ತಿರ್ದಳೆಳೇಶಕಂತುವಂ (ಕುಸುಮಾ. ೮-೦೦) ; ನಂಬಿಯಣ್ಣಂ ಪೂರ್ವಮಂ ನೆನೆದು ಪರಿತಂದು ಚರಣತಳದೊಳು ಬೀಳುತುಂ (ಸಂಬಿರ. ೭-೦೨೮).

[ ಚರಣ + ತಲ$_2$ ]

**ಚರಣತಳ** 'ಚರಣತಲ' ನೋ.

**ಚರಣದೊಡರು** (ನಾ). ಕಾಲಿನ ಆಭರಣ ; ಅಂದಿಗೆ : ಬೆರಳೆತ್ತು ನಡೆ ಗಲಿಸೆ ಚರಣದೊಡರುಲಿಯ ಘಿತ್ಕಾರದಿಂ ನಡೆವುತ್ತೆ (ಶವಕೋ. ೦೫-೫೫).

[ಚರಣ + ತೊಡರು$_2$(<ತೊಡರ್$_2$) ]

**ಚರಣನ್ಯಾಸ** (ನಾ).=ಚರಣವಿನ್ಯಾಸ ೧ : ಚರಣನ್ಯಾಸೋಚಿತಮೋದುರ ಕಾಂಚನಕಮಳಸಪ್ತಕಂ ಕರಮೆಸೆಗುಂ (ಚಂದ್ರಪ್ರ. ೦೬-೩೬) ; ಚರಣನ್ಯಾಸ ದೋಳಾಂಪರಂಬುಜಮನೇೞಂ ದೇವದೇವಂಗೆ ದೇವರಿಳಾಮಂಡಳಮಂ ಮಹಾನಿಲಕುಮಾರರ್ . . . ಪರಿಸ್ಫುರಿತಾದರ್ಶಮಿದೆಂಬಿನಂ ಬೆಳಗು ವರ್ತಂತಮ್ಮ ಸದ್ಭಕ್ತಿಯಿಂ (ಅನಂಪು. ೦೪-೩೫). [ ಚರಣ + ನ್ಯಾಸ ]

**ಚರಣಪೆಂಡೆಯ** (ನಾ). ಕಾಲಿಗೆ ತೊಡುವ ಒಂದು ಬಗೆಯ ಆಭರಣ: ತಮ್ಮ ನಾಟ್ಯಕ್ಕೆ . . . ನವರತ್ನದ ಬಿರುದಿನ ದಿವ್ಯ ಚರಣಪೆಂಡೆಯವನಿಕ್ಕಿ ದರು (ಕಂಪವಿ. ೨೪-೨೬) ; ಆಗಿನ ಅವರ ಆಭರಣಗಳೆಂದರೆ . . . ಕಿರು ಪಿಲ್ಲಿ, ಚರಣಪೆಂಡೆಯ, ಪಾಯವಟ್ಟ (ಕರ್ಣಾಟ. ೦೬೨).

[ ಚರಣ + ಪೆಂಡೆಯ(<ಪೆಂಡೆ) ]

**ಚರಣಭಜಕ** (ನಾ). ಪಾದಸೇವಕ ; ಭಕ್ತ : ಚರಣಭಜಕಕುಟುಂಬನೆಂಬೀ ಬಿರುದ ಪಾಲಿಸಿ . . . ಕೊಡುವುದೆಮಗೆ ಮಹಾಪ್ರಸಾದವನು (ಕುಮಾ.ಸ. ೦೦-೩೮). [ ಚರಣ + ಭಜಕ ]

**ಚರಣವಲ್ಮೀಕ** (ನಾ). ಹುತ್ತಗಾಲು ರೋಗ : "ಚರಣವ[ಪಾಠಾಂ. ವಾ] ಲ್ಮೀಕಮೆವೆ ಹುತ್ತುಗಾಲಕ್ಕು" (ಶಬ್ದಮ. ೦೦೩-೨). [ಚರಣ+ವಲ್ಮೀಕ]

**ಚರಣವಿಡಿ** (ಕ್ರಿ). ಪಾದಗಳನ್ನು ಹಿಡಿ : ಕರವ ಪಿಡಿಯ ಸಾರ್ಸಾರೆಂದು ಜಱಿದೊಡೆ ಚರಣವಿಡಿದು ದುಃಖಿಸುತ (ಕಂಸವಿ. ೬-೦೬೭).

[ ಚರಣ + ಪಿಡಿ$_1$ ]

**ಚರಣವಿನ್ಯಾಸ** (ನಾ). ೧. ಪಾದಗಳನ್ನು ಇಡುವಿಕೆ ; ಹೆಜ್ಜೆಯಿಡುವಿಕೆ. ೨. [ಛಂದ] ಪದ್ಯದ ಪಾದಗಳ ರಚನೆ. ೧, ೨ : ಚರಣವಿನ್ಯಾಸದೊಳ ಪ್ರಗಲ್ಭನು ತಾನು . . . ಕುಕವಿಯು ಬಾಲಕನಿವನು (ಇಂದಾಪ. ೦೭೩-೫೫).

[ ಚರಣ + ವಿನ್ಯಾಸ ]

**ಚರಣಸಂಘಟ್ಟ** (ನಾ). ಪಾದಗಳ ಹೊಡೆತ,-ತುಳಿತ : ತನ್ನ ನಿಷ್ಠುರ ಚರಣಸಂಘಟ್ಟದೊಳ್ ಪಡಲ್ವಟ್ಟ ವೀರಭಟರ ಮಕುಟಂಗಳೊಳ್ ತಲೆಗರ ದಿರ್ದನೆ ಗೆತ್ತು ಸೋದಿಸಿ ನೋಡಿಯುಂ . . . ಕಾಣದೆ(ಗದಾಯು. ೬-೨೮ ವ).

[ ಚರಣ + ಸಂಘಟ್ಟ ]

**ಚರಣಹತಿ** (ನಾ). ೧.=ಚರಣಸಂಘಟ್ಟ : ಚಾತುರಂಗದ ಚರಣಹತಿ ನಿರ್ಧೂತ ಧೂಳೀಘಯುವಖಿಳದಿಗುಜಾತವನೆ ಥಟ್ಟಿಸೆಯಲೇಱಿತು ಪಾಂಡುಸುತಸೇನೆ (ಕುಮಾ.ದ್ರೋ. ೦೮-೨೫). ೨. ಹೆಜ್ಜೆಯ ಗುರುತು : ಇದುವೆ ಮೊಲ ಪೋದ ಪೆಜ್ಜೆಯು ಹರಿಣ ಚರಣಹತಿ . . . ಬಗ್ಗದಡಿ ಹೆಗ್ಗುರುತು (ನವಮೋ. ೦೬-೧೯). [ ಚರಣ + ಹತಿ ]

**ಚರಣಹೇತಿ**(ನಾ).ಕಾಲುಗಳನ್ನೇ ಆಯುಧವನ್ನಾಗಿ ಉಳ್ಳುದಂ; ಹುಂಜ; ಕುಕ್ಕುಟ : "ಕೃಕವಾಕು ತಾಮ್ರಚೂಡಾಭಿಖ್ಯಂ ತಾಂ ಚರಣಹೇತಿ ಕುಕ್ಕುಟಂ" (ವಡ್ಡ.ಕೋ. ೪೩-೧೮). [ ಚರಣ + ಹೇತಿ ]

**ಚರಣಾನುಯೋಗ** (ನಾ). [ಜೈನ] ಸದಾಚಾರವನ್ನು ನಿರೂಪಿಸುವ ಶಾಸ್ತ್ರಭಾಗ : ಚರಣಾನುಯೋಗಮೆಂಬುದು ಕಷಾಯೇಂದ್ರಿಯೋಪಸರ್ಗ ಪರೀಷಹ ವಿಜಯಿಗಳಪ್ಪ ಚಾರಿತ್ರಮಾನಿಗಳ ಸದಾಚಾರ ಪ್ರಕಾಶನಂ ಗೆಯ್ವುದು (ಚಾವುಂಪು. ೩೯೯-೫); ಪ್ರಥಮ ಕರಣ ಚರಣಾನುಯೋಗಂಗಳಂ ನಿರವಶೇಷಂ ಕಲ್ತೊಡಲ್ಲದೆ ಜೋಯಿಸಮಂ ಕಲಲಪ್ಪರದು (ಸುಕುಮಾ. ೩-೩೫ ವ). [ ಚರಣ + ಅನುಯೋಗ ]

**ಚರಣಾಭರಣ** (ನಾ). ಕಾಲಿಗೆ ತೊಡುವ ಆಭರಣ: ಸಾಲದೇ ನಿಮಗಿನ್ನು ಕೌರವರೋಲಗದ ಫಲವಾಯ್ತಲಾ ವನಮಾಲೆ ಕೊರಳಿಂಗಲ್ಲ ಚರಣಾ ಭರಣವಾಯಿತಲೆ (ಕುಮಾ.ಸ. ೦೬-೬೦). [ ಚರಣ + ಆಭರಣ ]

**ಚರಣಾಯುಧ** (ನಾ).=ಚರಣಹೇತಿ : "ಕೃಕವಾಕುಃ, ತಾಮ್ರಚೂಡಃ, ಕುಕ್ಕುಟಃ, ಚರಣಾಯುಧಃ—ಈ ೪ ಕೋೞಿ" (ಹಲಾಯು. ೪೧-೯೪) ; ಕರಮೆಸೆಯೆ ಸಮೆದು ಬಂದುದು ಚರಣಾಯುಧಮದಱ ಚಿತ್ರಪರಿಶೋಭೆಗೆ ಬೆಂತರನೊಂದಾಶ್ರೈಸಿರ್ದುದು (ಚುಕೋಡ. ೩-೨೪) ; ಬಲಿದ ಚರಣಾ ಯುಧದವೊಲು ಪರರಳವನೀಕ್ಷಿಸಿ ಕಪಿಯವೊಲು ವೈವಳಿಯ ಹತ್ತಿದ ರಂದು ಕಡಿತಲೆಗಾಱರುಭಯದಲಿ (ಕುಮಾ.ಭೀ. ೯-೩೫) ; ಪಾರಾವತಂ ಪರಪುಟ್ಟಂ ಚರಣಾಯುಧಂ ಶಕುನಿ . . . ರತ್ನಖಗವಿಸರ್ಗಂ ತದ್ವನಾ ಗೌಘದೊಳ್ (ರಾಜಶೇ. ೫-೫೯). [ಚರಣ + ಆಯುಧ]

**ಚರಣೆ** (ನಾ). ಕುದುರೆ, ದನ ಮುಂತಾದುವುಗಳಿಗೆ ಮೇವನ್ನು ಹಾಕಲು ಮಾಡಿದ ಮರದ ಚೌಕಟ್ಟು ; ಗೋದಲೆ ; ಚಂಡಿಗೆ : ಕುದುರೆಯ ಮಂದುರವಮಂ ಮಾರಿ ಪುಗುವಂತೆ ಪೊಕ್ಕು ಚರಣೆಯ ಪುಲ್ಲೊಳ್ ಪೊರಳ ಲೊಡಂ (ಚಂಡಶಂ. ೦೭೯-೦೦); ತುರಗದುರದುದ್ದ ಮಾಟ್ಟುದು ಚರಣೆಯ ನದಱೊಳಗು ಹಸ್ತವಿಸ್ತಾರಂ ಮತ್ತೆರಡುಂ ಕೆಲದೊಳ್ ಮುಂಡಿಗೆ (ಅಶ್ವಶಾ. ೭-೮) ; ಕೊಂಡೆಳದು ಹಾಯ್ಕಿದಳ್ಚರಣೆಯೊಳಗೆ (ಜಾಕೋಪು. ೯-೬೩) ; ಮರದ ಪೆಟ್ಟಿಗೆ, ಛತ್ರದ ತೊಂಬೆ, ಹುಲ್ಲಿನ ಚರಣೆ ಒಂದನ್ನೂ ಬಿಡಬೇಡ (ನಿಕಲಾ. ೨೬೮).

[ ತುಳು. ಚರಣೆ = ಹುಲ್ಲುಗಾವಲು, ಗೋಮಾಳ./ಹಿಂ. ಚರನೀ ]

**ಚರಣೋಪಾಂತ** (ನಾ). ಕಾಲಿನ ಬಳಿ,-ಹತ್ತಿರ; ಪಾದದ ಸಮೀಪ: ಅನಂತವೀರ್ಯಕೇವಲಿಗಳ ಚರಣೋಪಾಂತದೊಳ್ ಕೈಕೊಂಡ ಪರಾಂಗನಾ ವಿರತಿವ್ರತದ ಭಂಗಮಂ ಬಗೆಯದೆ (ಶಾಂತಾಪು. ೯-೦೦೩ ವ).

[ ಚರಣ + ಉಪಾಂತ ]

**ಚರಪಡಿ** (ನಾ). ಒಂದು ಸ್ಥಳದ ಹೆಸರು (?) : ಅನ್ತ ಬನ್ದ ಕೊಟ್ಟಲೆ ಪಳ್ಳದ ಅಲಕಿಱುಕೆಯ ಕಗ್ಗರೆಲ್ಲೂಱಿಪ್ಪಿಯ ಪೂಣಾಶೆ ಪಡಿಯ ಘೊರಪಡಿಯ ಬಳಿಪೂಣಾಶೆಯ ಚರಪಡಿಯ ತುಟ್ಟಿರೊಟ್ಟಿಯ ಇಶನ್ಯದಿಶಿ ಒಳಗೆಱಿಯ ಬರಡಗೆಱ (ಎಕ. XVI, ತಿಪಟೂ. ೦೪೦-೭೨ ; ಶು. ೨೦೦). [ ? ]

**ಚರಪಾಠ** (ನಾ). "ನಿರ್ದಿಷ್ಟ ಸ್ವರೂಪವಿಲ್ಲದ, ಅಸಂಗತವಾದ, ಅವ್ಯವಸ್ಥಿತವಾದ, ಸ್ಥಿರಸ್ವರೂಪವಿಲ್ಲದ ಪಾಠಕ್ಕೆ ಅನ್ವಯ ವಾಗುವಂಥದು. ಅಂಥ ಪಾಠವನ್ನು ಚರಪಾಠ(fluid text) ಎಂದೂ ಕರೆಯುತ್ತಾರೆ" (ಭಾರತ. ೦೦೬). [ ಚರ + ಪಾಠ ]

**ಚರಪು** 'ಸೆಱಪು' ನೋ.

**ಚರಬಂಡವಲ** (ನಾ). ೧. ದನಕರುಂ ಮೊದಲಾದ ಚರ ಆಸ್ತಿ : (ಕ). ೨. ವ್ಯಾಪಾರದಲ್ಲಿ ತೊಡಗಿಸಿದ ಬಂಡವಾಳ: (ಮುಂಬಯಿ. ೬: ೫-೧೦೦). 'ಚಲಬಂಡವಾಳ' ಪರ್ಯಾ. [ ಚರ + ಬಂಡವಲ ]

**ಚರಬಿ** 'ಚರ್ಬಿ' ನೋ.

**ಚರಮ** (ಗು). ೧. ಕಡೆಯ ;ಕೊನೆಯ; ಅಂತಿಮವಾದ: ಚರಮಾವಸ್ಥೆಯೊ ವೀತರಾಗಹೃದಯಚ್ಛದ್ಮಸ್ಥ . . . ತವಿಸಿದಂ ಪಂಚಾಂತರಾಯಾಂಗಳಂ (ಅನಂಪು. ೯-೦೧೯) ; ಅಂತರಿಕವಾದ ಕವಿಯ 'ಧ್ಯಾನಾತ್ಮಕ ಅಥವಾ ಭಾವಾತ್ಮಕ ಜೀವನವು ಸ್ವಾಭಿವ್ಯಕ್ತಿಯನ್ನೇ ತನ್ನ ಚರಮ ಗುರಿಯನ್ನಾಗಿ ಮಾಡಿಕೊಂಡು ಅದಕ್ಕಾಗಿ ಮಾತ್ರ ಕಾವ್ಯರೂಪವನ್ನು ತಳೆಯುತ್ತದೆ (ಭಾವಗೀ. ೪). ೨. ತೀರ ಕೆಳವಂಟ್ಟದ; ಅತ್ಯಂತ ಕೀಳಾದ. ೩. ಪಶ್ಚಿಮ ದಿಕ್ಕಿನ; ಪಾಶ್ಚಾತ್ಯವಾದ: ಲೋಕಯಾತ್ರೆಗೈದು ಮನೆಯುಂ ಪುಗುತರ್ಪನಿಯಂಗೆ ಚರಮದಿಕ್ಕಾಂತೆ ರನ್ನವಟ್ಟಲೊಳ್ ಪಿಂಗದೆತ್ತಿದಾರತಿಯ ಕೆಂಬೆಳಗೆನೆ ಸಂಧ್ಯಾರಾಗಮೆತ್ತಂ ಪರಿಯೆ (ಕಾಮಾಕ್ಷ. ೨೨-೬). (ನಾ). ೪. ಕೊನೆಯಲ್ಲಿರುವುದು ; ಅಂತ್ಯದಲ್ಲಿರುವುದು : ಪರಪದ ಪೂರ್ವಂ ದ್ವಿತ್ವಾಕ್ಷರಪಾಗಿರೆ ಪೂರ್ವಪದದ ಚರಮಂ ಹ್ರಸ್ವಾಕ್ಷರಮಾಗೆ ಸಂಧಿದೋಷಂ (ಶಮದ. ೫೯). ೫. ಅಂತ್ಯ ; ಕೊನೆ: ಚರಮದೊಳಯ್ದುಂ ಜ್ಞಾನಾವರಣಮುಮಂ . . . ಪರಿಹರಿಸಿದನಯ್ದುಮಂತರಾಯುಗಳುಮಂ (ಮಲ್ಲಿಪು. ೦೪-೪೦). ೬. ತರುವಾಯಂ ; ಬಳಿಕ : "ಪಶ್ಚಾತ್, ಚರಮಂ – ಈ ೨ ಬಟಿಕಂ" (ಹಲಾಯು. ೦೦೭-೨೨): "ಚರಮಮೆನೆ ಪಶ್ಚಾದೆನಲು ಬಟಿಕಮಕ್ಕು" (ಬಂಗರಾ. ೦೨೯-೦೨); ಅಘಾತಿಗಳ ಚರಮದೊಳು ವಿಘ್ನಂ ಪರಿಸಲ್ಪಟ್ಟುದು (ಗೊಮ್ಮಸಾ. ೨-೪). [ ಸಂ. ]

**ಚರಮಕಲ್ಯಾಣ** (ನಾ). [ಜೈನ] ಜಿನನ ಪಂಚಕಲ್ಯಾಣಗಳಲ್ಲಿ ಕೊನೆಯ ಕಲ್ಯಾಣ ; ಪರಿನಿರ್ವಾಣಕಲ್ಯಾಣ : ಪರಮನ ಚರಮಕಲ್ಯಾಣಂ ಪರಿಪೂರ್ಣಮಾಗೆ (ಶಾಂತಿಪು. ೧೨-೩೭ ವ). [ ಚರಮ + ಕಲ್ಯಾಣ ]

**ಚರಮಗೀತ** (ನಾ). ಸತ್ತುಹೋದವರಿಗಾಗಿ ದುಃಖಿಸಿ ಅವರ ಗುಣಗಾನ ಮಾಡುವ ಹಾಡು : ತೆಲಿಗೊಂದು ಚರಮಗೀತ ಹಾಡಲೆಂದು ಬಯಸಿ, ಇಂತು ನುಡಿದೆ ನಾನು (ಮಾಂಡಳಿ. ೩೭-೦೩). [ ಚರಮ + ಗೀತ ]

**ಚರಮಗೀತೆ** (ನಾ). = ಚರಮಗೀತ : "ಅಳುಹಾಡು . . . ವಿಲಾಪಗೀತೆ; ಚರಮಗೀತೆ" (Elegy. ಇಂಕನಿ). [ ಚರಮ + ಗೀತೆ ]

**ಚರಮತನು** (ನಾ). ೧. ಕೊನೆಯ ದೇಹ; ಕೊನೆಯ ಜನ್ಮ. ೨. [ಜೈನ] ಕೊನೆಯ ಜನ್ಮದವನು; ಮೋಕ್ಷಗಾಮಿ: ಅಮೂರ್ತರ್ ಚರಮತನು ಸಮಾಕಾರರ್ (ಆದಿಪು. ೧-೨) ; ಪರಮಶ್ರೀವಲ್ಲಭಂಗೀ ಚರಮತನುಗಿದೇ ಬಾಟ್ಟಿ (ಶಂರಾಮಾ. ೬-೦೨೫). [ ಚರಮ + ತನು ]

**ಚರಮದೇಹ** (ನಾ).=ಚರಮತನು ೧ : ಚರಮದೇಹ ಶತಾತ್ಮಜರಾದಮಾ ಮಹೋತ್ಪಲನುಖಿಯಿಂದಮಾ ಸತಿ . . . ಪಡೆದಳ್ . . . ವೈಮೆಯುಂ (ಆದಿಪು. ೮-೪೫) ; ಚರಮದೇಹಮಂ ತಾಳ್ದಿ (ಚಾವುಂಪು. ೩೨-೦೫).
[ ಚರಮ + ದೇಹ ]

**ಚರಮದೇಹಧರ** (ನಾ). [ಜೈನ] ಕೊನೆಯ ಸಲ ದೇಹವನ್ನು ಧರಿಸಿದವನಂ ; ಇನ್ನು ಮುಂದೆ ಜನ್ಮವಿಲ್ಲದವನು ; ಮೋಕ್ಷಗಾಮಿಂ : ನೀಂ ಚರಮದೇಹಧರನೈ (ಅಜಿಪು. ೬-೬೨). [ ಸಂ. ]

**ಚರಮದೇಹಧಾರಿ** (ನಾ).=ಚರಮದೇಹಧರ: ಇವರಿರ್ವರರಸುಗಳಪ್ಪೊಡೆ ಚರಮದೇಹಧಾರಿಗಳ್ (ಆದಿಪು. ೧೪-೦೦೦ ವ). [ಸಂ. ಚರಮದೇಹಧಾರಿನ್]

**ಚರಮದೈಹಿಕ** (ಗು). ೧. ಚರಮದೇಹಕ್ಕೆ ಸಂಬಂಧಪಟ್ಟ. (ನಾ). ೨.= ಚರಮದೇಹಧರ : ನೀ ಚರಮದೈಹಿಕನು ಧರೆಯೊಳೀ ನಿನ್ನಂತೆ ಪುಣ್ಯಾತ್ಮರುಗಳಾರೈ (ಗಗಣಾ. ೦೭-೪೭). [ ಸಂ. ]

**ಚರಮಧ್ಯಾನ** (ನಾ). [ಜೈನ] ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಧ್ಯಾನಗಳಲ್ಲಿ ಕೊನೆಯದು ; ಮೋಕ್ಷಸಾಧನವಾದ ಧ್ಯಾನ : ಪರಮಜಿನಪತಿಯ ಚರಮಧ್ಯಾನದಂತೆಯುಂ . . . ಮುನ್ನೀರೆ ಮೇರೆದಪ್ಪಿದಂತಪ್ಪುದುಂ (ಮಲ್ಲಿಪು. ೦೨-೦೫೨). [ ಚರಮ + ಧ್ಯಾನ ]

**ಚರಮವಾಕ್ಯ** (ನಾ). ೧. ಕೊನೆಯ ಮಾತು : ಸಾಯುವಾಗ ಆತನಾಡಿದ ಚರಮವಾಕ್ಯ ಎಲ್ಲರ ಕಣ್ಣಲ್ಲೂ ನೀರು ತರಿಸಿತು (ರೂಢಿ). ೨. ಸತ್ತವರ ಸ್ಮಾರಕವಾಗಿ ಅವರ ಸಮಾಧಿಯ ಮೇಲೆ ಬರೆದ ವಾಕ್ಯ : ಕೆಲವು ಹೊಸ ಗೋರಿಗಳು ಕಂಡುಬಂದವು. ಅವುಗಳ ಮೇಲೆ ಚರಮವಾಕ್ಯಗಳಿದ್ದುವು (ನಿಕಟಾ. ೦೯೨). [ ಚರಮ + ವಾಕ್ಯ ]

**ಚರಮಶರೀರ** (ನಾ). ೧.=ಚರಮತನು ೧ : ಚರಮಶರೀರಮಂ ಪಡುವ ಕೆಯ್ಯುಗಳಿಲ್ಲ (ಮಲ್ಲಿಪು. ೦೪-೪೩). ೨.=ಚರಮತನು ೨: ಚರಮಶರೀರಂ ಸಗರಂ ಚರಮಶರೀರರ್ ನಿಜಾಗ್ರಜಾತರ್ ನೀನುಂ ಚರಮಶರೀರಂ (ಅಜಿಪು. ೦೦-೩೫). [ ಚರಮ + ಶರೀರ ]

**ಚರಮಶ್ಲೋಕ** (ನಾ). = ಚರಮಗೀತ : ನಿನ್ನ ಸಾಹಸಕಾರ್ಯಗಳನ್ನು ಪ್ರಶಂಸಿಸುವ ಚರಮಶ್ಲೋಕಗಳಲ್ಲಿ ಪ್ರತಾಪಕುಮಾರಿಯ ಹೆಸರೂ ಸೇರಿಕೊಳ್ಳಲಿ (ಆರ್ಯಕ. ೯೮). [ ಚರಮ + ಶ್ಲೋಕ ]

**ಚರಮಸಮಯ** (ನಾ). ೧. ಆಯುಷ್ಯಿನ ಕಡೆಗಾಲ ; ಅಂತ್ಯಸಮಯ ; ಮರಣಪೂರ್ವಕಾಲ : ಸ್ವಕೀಯ ಚರಮಸಮಯದೊಳ್ . . . ಪದಿಮೂಱುಂ ಪ್ರಕೃತಿಗಳುಮಂ ನಿರ್ಮೂಲಂ ಕಿಡಿಸಿ (ಆದಿಪು. ೦೬-೪೯ ವ): ಚರಮಸಮಯದೊಳೆ ಬೋಧಾವರಣಮನಯ್ದಂತರಾಯಂ . . . ತಳ್ದಿ ಹಾಳ್ದಿದಂ ಗುಣಗಣಮಂ (ವರ್ಧಪು. ೦೫-೬೮). ೨. ಕೊನೆಯ ಅವಕಾಶ : ಸಿಂಹಾಸನಾರೋಹಣಕ್ಕಿದುವೆ ಚರಮಸಮಯವೆಂದಱಿವವಂತೆ (ಶಂರಾಮಾ. ೦೪-೦೨೫ ವ). [ ಚರಮ + ಸಮಯ ]

**ಚರಮಸ್ವರ** (ನಾ). ಶಬ್ದದ ಕೊನೆಯ ಸ್ವರ : ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಸ್ವರ ]

**ಚರಮಾಂಗ** (ನಾ). ೧.=ಚರಮತನು ೧ : ಕೊರಗದೆ ಕರಗದೆ ಚರಮನ ಚರಮಾಂಗಂ ದೀಪ್ರದೀಪಮೆನಿಕೊಂಡಿರ್ದೊಡಂ (ಪುಷ್ಪಪು. ೦೪-೨೮). ೨.=ಚರಮದೇಹಧರ: ಪುರುಪರಮೇಶ್ವರಪುತ್ರಂ ಚರಮಾಂಗಂ ಚಕ್ರವರ್ತಿಯೆಂದೊಡೆ ಪೇಟಲ್ ದೊರೆ ಪೆಱರಾರ್ ಭರತನೋರ್ (ಆದಿಪು. ೧೨-೦೦೯) : ಈ ದಶರಥಾಗ್ರತನೂಭವನೇಕವಾಕ್ಯನಾಶಾಕರಿಕರ್ಣಚಾಮರಯಶಂ ಚರಮಾಂಗನನಂತವೀರ್ಯಂ (ಶಂರಾಮಾ. ೫-೬೨).
[ ಚರಮ + ಅಂಗ ]

**ಚರಮಾಕ್ಷರ**(ನಾ). ಶಬ್ದದ ಕೊನೆಯ ಅಕ್ಷರ; ಅಂತ್ಯಾಕ್ಷರ : ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಂ (ಶಮದ. ೨೦೯). [ ಚರಮ + ಅಕ್ಷರ ]

**ಚರಮಾದರ್ಶ** (ನಾ). ಕೊನೆಯ ಧ್ಯೇಯ ; ಪರಮಾದರ್ಶ : ಅದು ಚರಮಾದರ್ಶವಲ್ಲದಿದ್ದರೂ ನಮ್ಮ ಪೂರ್ಣಿಕರ ಆದರ್ಶ (ಕೀಪ್ರಕ್ರಿ. ೦೨೭).
[ ಚರಮ + ಆದರ್ಶ ]

**ಚರಮೂರ್ತಿ** (ನಾ).=ಚರಂತ ೨: ಚರಮೂರ್ತಿಯಾನೆ ನಿನ್ನಂ ಕರೆಯುತ್ತಿರೆ ಕೇಳದಂತೆ ತಳರ್ದಪೆ (ಪ್ರಪವಿ. ೨೬-೨೩) ; ವಿವಾಹ ಮಾಡಿಕೊಳ್ಳದೆ ಚರಮೂರ್ತಿಯಾಗಿ ಅಲೆಯುತ್ತಿದ್ದ (ಗಿರಿಶ. ೩೫) : ಶ್ರೀಶರೀಫರು ಹುಟ್ಟು ಕಡಿಮೆ ಚರಮೂರ್ತಿಗಳಾಗಿದ್ದರು (ಶರೀಫ. ೬೯ ಕವಿಕಾವ್ಯಪರಿಚಯ).
[ ಚರ + ಮೂರ್ತಿ ]

**ಚರಯಿಸು** 'ಚರಿಸು' ನೋ.

**ಚರರೂಪು** (ನಾ). ಜಂಗಮನ ರೂಪು: ಹರನು ಚರರೂಪಿಂದೆ ಹರಿಯೆಂದು ನುಡಿವೇಳೆ ಕರದ ಹುಟ್ಟಿಂದ ತಿವಿದೀಶನೊಲಿಸಿದ ಗುರುವೆ ಸತ್ಯಕ್ಕ ಶರಣಾಗು (ಕನಾರ್ಕ. ೦೬೨). [ ಚರ + ರೂಪು ]

**ಚರಲಿಂಗ** (ನಾ). [ವೀಶೈ] ಜಂಗಮರೂಪವಾದ ಲಿಂಗ; ಜಂಗಮ: ಭಾವುರೇ ಚರಲಿಂಗಜೀವಕಳಾವ ಚರಲಿಂಗೈಕದೇವನ (ಬಸಪು. ೩೬-೨೪): ಸರ್ವಕರಣಂಗಳಂ ಚರಲಿಂಗ ಮುಖವ ಮಾಡಿ ಆತ್ಮವಿದ್ಯಾಲಿಂಗದಲ್ಲಿ ಮನ ಸಂದು (ಅನಪ. ೨೬); ಶಿವನು ಚರಲಿಂಗವಾಗಿ ಬಂದು, ಚೂತಫಲವಂ ಬೇಡಲು, ಪವಾಡದಿಂದ ಚೂತಫಲವಂ ಮಾಡಿ ಇತ್ತು (ಭೈರಸೂ. ೯). [ಚರ + ಲಿಂಗ]

**ಚರಲೋಕ** (ನಾ). ಸ್ಥಿರವಲ್ಲದ ಲೋಕ; ಮರ್ತ್ಯಲೋಕ: ಚರಲೋಕ ಸ್ಥಿರವೆಂದು ವರರೆಲ್ಲ ನೆರೆನಂಬಿ, ತಿರುತಿರುಗಿ ತಿರೆಯೊಡನೆ ಕೆಡುತಿಹರಲಾ! (ಕಎಪು. ೨೬-೩). [ಚರ + ಲೋಕ]

**ಚರವಿಗೆ** 'ಚರಿಗೆ$_1$' ನೋ.

**ಚರಸಹ** (ನಾ). ಒಂದು ಬಗೆಯ ಕುದುರೆ; ಪಳಗಿಸಿದ ಕುದುರೆ (?): ಈ ಐದು ಕ್ರಿಯೆಗಳನು ತಿಳಿದು ತಿದ್ದಿದ ಕುದುರೆ ಚರಸಹನೆನಿಸಿಕೊಂಬುವುದು (ಅಶ್ವಟೀ. ೨೫-೧೧). [?]

**ಚರಸೇವೆ** (ನಾ). ಜಂಗಮಸೇವೆ: ಶ್ರದ್ಧೆ ಸನ್ಮಾರ್ಗ ಭಕ್ತಿ ಇಲ್ಲದಲ್ಲಿ ಗುರು ಭಕ್ತಿ ಶಿವಲಿಂಗಪೂಜೆ ಚರಸೇವೆ ತ್ರಿವಿಧವೂ ಇತ್ತಲೆ ಉಳಿಯಿತ್ತು (ಮುದೇಪ. ೨೬೪-೧೭); ತೊರೆಯದಿರಿ ಶಿವಪೂಜೆಯ ಜರೆಯದು ಮರೆಯದಿರಿ ಚರ ಸೇವೆಯ (ಸರ್ವಪ ೩೪-೧೬೯). [ಚರ + ಸೇವೆ$_1$]

**ಚರಸೋಪಾನ** (ನಾ). "ಪ್ರಯಾಣಿಕರನ್ನು ಮೇಲಕ್ಕೆ ಹತ್ತಿಸುವುದಕ್ಕಾಗಲಿ ಕೆಳಕ್ಕಿಸುವುದಕ್ಕಾಗಲಿ ಉಪಯೋಗಿಸುವ ಚರಸೋಪಾನ; ತಿರುಗು ಮೆಟ್ಟಿಲು" (Escalator. ಇಂಕನ್). [ಚರ + ಸೋಪಾನ]

**ಚರಸ್ವತ್ತು** (ನಾ). = ಚರಜಿಂದಗಿ: ನಮ್ಮ ಸ್ಥಿರ ಹಾಗು ಚರಸ್ವತ್ತುಗಳೆಲ್ಲ ಇವರದೇ ಅಲ್ಲವೆ? (ದಾವಶಿಂ. ೦೦೫). [ಚರ + ಸ್ವತ್ತು]

**ಚರಾಕು** (ನಾ). ಹುಲ್ಲುಗಾವಲು. [←ಹಿಂ. ಚರಾಗಾಹ್]

**ಚರಾಚರ** (ಗು). ೧. ಚಲಿಸುವ ಮತ್ತು ಚಲಿಸಲಾರದ; ಸ್ಥಾವರವಾದ ಹಾಗು ಜಂಗಮವಾದ: ಪರಮಾಗಮಮೂರ್ತಿ ಚರಾಚರ ಲೋಕಾ ಲೋಕ ಸಂಪ್ರದಾಯಿನಿ . . . ಸರಸ್ವತೀದೇವಿ ವರದೆಯಕ್ಕೆಮಗೆಂದುಂ (ಶಾಪ್ಯಾಪ. ೨); ಜಗದೊಳುಳ್ಳ ಚರಾಚರ ಪ್ರಾಣಿಗಳವಲ್ಲಿರ್ದಡೆಯೊಳಗುಗಳ ತಗಹು ಬಿಟ್ಟವು (ಬಸಪು. ೨೮-೫೫). (ನಾ). ೨. ಸ್ಥಾವರ ಹಾಗು ಜಂಗಮ ವಸ್ತುಗಳು: ಧರೆ ಗಗನವಡಸಿ ಕಾದುವಡೆಡೆಯಲಿಹ ಚರಾಚರ ವೆಲ್ಲಿ ಹೊಗಲಿ (ಹಕಶಾ. ೨-೨೩). ೩. ಸ್ಥಾವರ ಹಾಗು ಜಂಗಮ ವಸ್ತು ಗಳಿಂದ ಕೂಡಿದ ಜಗತ್ತು: ಈ ಚರಾಚರ ವಿಚಾರ ವ್ಯಾಪ್ತಿ ನಿಮ್ಮಡಿಗ ಗೋಚರವೆ ಶಿವಶಿವಾ (ಕೃಮಿಥಾ. ೨-೫೫); ಅವನೊಳಡಗುವುದಖಿಳ ಚರಾ ಚರವಾ ವಿಷ್ಣುಗಾನೆಡೆಗುವೆನು (ಹರಿಲ. ೮-೦). [ಚರ + ಅಚರ]

**ಚರಾದಾಯ** (ನಾ). ೧. ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ವಸ್ತು, ಪ್ರಾಣಿ ಮೊದಲಾದುವುಗಳಿಂದ ಬರುವ ಆದಾಯ: ಕೋಟ ತಾಡಿಕೆ ಕಳಕೋಠಾರ ಸುಂಕ ಚರಾದಾಯ (ಮೈಆರಿ. ೧೯೪೬, ೦೮-೦೯; 1488); ಚರಾದಾಯ ಸ್ಥಿರಾದಾಯ (ಮೈಆರಿ. ೧೯೩೦, ೯೩-೩೦; 1606); ಗ್ರಾಮಾ ದಾಯ ಚರಾದಾಯ ಹೊರಾದಾಯ ಇವು ಮೊದಲಾದ ಆ ಸಕಲ ಸ್ವಾಮ್ಯ ವನೂ . . . ಅನುಭವಿಸಿಕೊಂಡು ಬಹರು (ಎಕ. XIV, ಮೈಸೂರು. ೧೦೫-೪೦೪; 1674). 'ಸ್ಥಿರಾದಾಯ' ಪರಾ. ೨. ವಾರಸುದಾರ ರಿಲ್ಲದ ದನಕರುಗಳ ಮಾರಾಟದಿಂದ ಸರ್ಕಾರಕ್ಕೆ ಬರುವ ಆದಾಯ: ಈ ವೃತ್ತಿಗೆ ಸಲ್ಲುವ . . . ಹುಲ್ಲುಹಣ ಚರಾದಾಯ ಹೊರಾದಾಯ ಶೀಗೇಮಡಿ ಪತಂಗ (ಹುಟ್ಟಿಹ. ೩). ೩. ಸಂಬಳವಲ್ಲದೆ ಮೇಲೆ ಬರುವ ಲಂಚ, ರುಷುವತ್ತು ಮೊದಲಾದ ಆದಾಯ: (ಕ). [ಚರ + ಆದಾಯ]

**ಚರಾಯ** 'ಚರಾಯಿ' ನೋ.

**ಚರಾಯಿ, ಚರಾಯ** (ನಾ). ೧. ಹುಲ್ಲುಗಾವಲು; ಹುಲ್ಲಿನ ಬಯಲು: (ಕ). ೨. ಹುಲ್ಲುಗಾವಲಿನಲ್ಲಿ ದನಕರುಗಳನ್ನು ಮೇಯಿಸುವಿಕೆ: ಲಷ್ಕರಿನಲ್ಲು ಇದ್ದಂಥಾ ಭಾಗರಾದ ಎತ್ತುಗಳನ್ನು ಮಹಾರಾಜರವರು ತಮ್ಮ ವಶಕ್ಕೆ ತೆಗೆದುಕೊಂಡು, ಹುಲ್ಲು ನೀರು ಇದ್ದಲ್ಲಿಗೆ ಚರಾಯಿಗೆ ಕೂಡಿಸಿ ದರು (ರಾಕೇಂದ್ರ. ೦೪೬). **ಚರಾಯ**: ೧. ಚಿತ್ರದುರ್ಗದ ದನಗಳು ಬೂದಿ ಹಾಳ್ ಚರಾಯದಲ್ಲಿ ಮೆಯ್ಯುವವು (ಚಿತ್ರಬಾ. ೬೫). [←ಮರಾ. ಚರಾಯಿ: ಹಿಂ. ಚರಾಈ, ಚರಹೀ]

**ಚರಾರ್ಚನೆ** (ನಾ). ಚರಸೇವೆ; ಜಂಗಮಾರ್ಚನೆ: ಗಳಗಳನೆ ಬಳೆದು ಧನವಂ ಗಳಿಸಿ ಚರಾರ್ಚನೆಯನೆಸಗಿ ಹರಕೃಪೆವಡೆದು (ರಾಜಶೇ. ೦೩-೦೦೯). [ಚರ + ಅರ್ಚನೆ]

**ಚರಾವು** (ನಾ). ಹುಲ್ಲುಗಾವಲು: ಚರಾವಿನ ನೆಲದ ವಿಸ್ತಾರಕ್ಕೂ, ಉಳುಮೆಗೆ ಬಳಸಿಕೊಳ್ಳುವ ನೆಲದ ವಿಸ್ತಾರಕ್ಕೂ, ಅಜಗಜಾಂತರ ವ್ಯತ್ಯಾಸವಿದೆ (ಜಿಶಿಸಂ. ೪೬). [←ಹಿಂ. ಚರಾಊ]

**ಚರಾಸ್ತಿ** (ನಾ). = ಚರಜಿಂದಗಿ: (Personal-estate. ಶಕ್ತಿನಿ. ೩೫). [ಚರ + ಆಸ್ತಿ]

**ಚರಿ$_1$** (ಕ್ರಿ). (?): ಮೊರೆಹೊಕ್ಕರ ಕಾವ ಮಾರಾಂತರ ಕೊಲುವ ಕಸ್ತೂರಿ ಕೋಲಾಹಲ ಚರಿದು ಚಲ್ವರ ಗಂಡ ಹರತಿಯಿಮ್ಮಡಿರಂಗಪ್ಪನಾಯಕ ಅಯ್ಯನವರ (ಎಕ. XII, ಶಿರಾ. ೪೪-೫; 1612). [?]

**ಚರಿ$_2$** 'ಸಟಿ$_2$' ನೋ.

**ಚರಿ$_3$** (ನಾ). ಸಖಿ; ಸೇವಕಿ: ರಾಕ್ಷಸಿ ನಾ ಸವೀಕ್ಷಿಸು ಕಾ ಚರಿಯರ ವ್ಯೈಲಸಳುತಲೇನೆನಲು (ಬಿರಾಮಾ. ೨೪೮-೦). [ಸಂ. ಚರೀ]

**ಚರಿ$_4$** (ನಾ). ಕೈಯಿಂದ ಹೊಸೆದು ಮಾಡಿದ ನಾರಿನ ಅಥವಾ ಸೆಣಬಿನ ಹುರಿ: ಬೇನೆಯು ಮನುಷ್ಯನು ಮರಣೋನ್ಮುಖನಾದನೆಂದರೆ ಅವನ ಬಾಯಲ್ಲಿ ಸಕ್ಕರೆ ಕೂಡಿಸಿದ ನೀರು ಹಾಕಿ, ಕಾಲುಗಳನ್ನು ಚಾಚಿ ಅಂಗುಷ್ಠ ಗಳನ್ನು ಚರಿಯಿಂದ ಬಿಗಿಯುವರು (ಕಧಾಗ. ೨೨೯). [←ಮರಾ. ಚರೀ]

**ಚರಿಕೆ** 'ಚರಕಿ' ನೋ.

**ಚರಿಗೆ$_1$, ಚರವಿಗೆ, ಚರುವಿಗೆ, ಚವರಿಗೆ. ಚೆರಿಗೆ, ಚೌರಿಗೆ$_1$** (ನಾ). ಚೆಂಬು, ತಂಬಿಗೆ, ಬಿಂದಿಗೆ, ತಪ್ಪಲೆ ಮೊದಲಾದ ಲೋಹದ ಪಾತ್ರೆ: ಧರ್ಮ ಪತ್ನಿ ಚರಿಗೆಯಲ್ಲಿ ನೀರು ತಂದು ಕೊಟ್ಟರು (ನಡಿದಾ. II, ೦೦೫೮); ಒಲೆಯ ಮೇಲೆ ತಕವಕಿಸುತ್ತಿದ್ದ ಅನ್ನದ ಹಿತ್ತಾಳೆ ಚರಿಗೆಯನ್ನು ಒಲೆಯ ಪಕ್ಕದಲ್ಲಿ ಟ್ಟಿದ್ದ ತಾಮ್ರದ ಬಾಗುಮರಿಗೆಗೆ ಎತ್ತಿ ಇಳಿಸಿ . . . ಅನ್ನ ಬಸಿಯಲು ಅಣಿ ಯಾಗುತ್ತಿದ್ದಳು (ಮುಳಿಮ. ೩೦೦); ಪಾಕಶಾಲೆಯ ರೂಪರೇಖೆ ತಕ್ಕಮಟ್ಟಿಗೆ ಪ್ರದರ್ಶಿತವಾಗಿತ್ತು. ಬಾಗುಮರಿಗೆ . . . ಮೊಸರುಗಡಿಗೆ, ಮಜ್ಜಿಗೆ ಚರಿಗೆ . . . ನೊಣಗಳು ಇತ್ಯಾದಿ (ಶಾಕೂರು. ೫೦). **ಚರವಿಗೆ**: ಚರವಿಗೆ ಯಲ್ಲಿ ನೀರನ್ನು ಯಾವಾಗಲೂ ತುಂಬಿಟ್ಟಿರಬೇಕು (ಕೂಶಿ). **ಚರುವಿಗೆ**: ಮಲ್ಲಿಕಾರ್ಜುನನ ಖಾಣಸಕೊಂದುಂ ಚರುವಿ[ಪಾಠಾಂ. ಚಾರಿ]ಗೆಯೂ ಸಟ್ಟುಗವೂ (ಸಿದ್ಧರಾ. ೯-೩); ಇವನ್ನೆಲ್ಲಾ ಕೂಡಿ ತಾಮ್ರದ ಚರುವಿಗೆಯಲ್ಲಿ . . . ಅಟ್ಟು (ಸೂಶಾಸ್ತ್ರ. ೧೬೯); ಕೊಡವಾನ ಚರುವಿಗೆ ಗಿಂಡಿ (ಸಿದ್ಧಕಾ. ೦೩-೪೨). **ಚವರಿಗೆ**: ಒಂದು ಚವರಿಗೆ ನೀರು ತರೋ ಅಷ್ಟರಲ್ಲೇ ಸುಸ್ತಾಗಿ ಬುಟ್ಟು (ಪಾಲ್ಮಮ. ೧೫೦); ಒಂದು ಚವರಿಗೇಲಿ ತಗೊಂಡು ಒಯ್ಯ ಬಾರದೇನ್ರಪ್ಪ? (ಅವಕಂ. ೬೩). **ಚೆರಿಗೆ**: ಚೆರಿಗೆ ಪಾತ್ರೆಗಳು ಬರಿದಾಗುವವು (ನಾಚಿಕೆ. ೫೦). **ಚೌರಿಗೆ$_1$**: ಅತ್ತಿಯ ಮನೆ ಬಾದೊ ಮುತ್ತಿನ ಚೌರಿಗೆ ಬಂದೊ ಹಡೆದವ್ವ ನೀರ ಹದಮಾಡಿ (ಹಳ್ಳಿದಾ. ೫೫); ಚೌರಿಗೆ ತೆಗೆದು ಕೊಂಡು ತಾವೇ ನೀರಿಗೂ ಹೋಗುತ್ತಿದ್ದಳು (ಸರ್ವಮಂ. ೯); ಅಮ್ಮಯ್ಯನು ಚೌರಿಗೆಯನ್ನು ತೆಗೆದುಕೊಂಡು ಭಾವಿಯ ಹತ್ತಿರಕ್ಕೆ ಹೊರಟರು . . . ಅವನು ಐದಾರು ಚೌರಿಗೆ ಸೇದಿಕೊಟ್ಟ (ಚಂಗಾಳ್ಕ. ೦೧).

**ಚರಿಗೆಕಾಯು** = ಹೊಟ್ಟೆ ಹಸಿ : ನೈವೇದ್ಯದ ಅಕ್ಕಿ ಎಸರುನೀರನ್ನು ಸೇರುವ ಮೊದಲೇ, ಐತಾಳರಿಗೆ ಚರಿಗೆಕಾಯುತ್ತದೆ (ಮುಂಮ. ೦೦).

**ಚರಿಗೆ ತೆಗೆದುಕೊಂಡು ಹೋಗು**=ಮಲವಿಸರ್ಜನೆಗೆ ಹೋಗು: ಶಿವಪುತ್ರ ಬಾಗಿಲಿಗೆ ಬರುವುದಕ್ಕೂ, ಬಸವ್ವ 'ಚರಿಗೆ ತೆಗೆದುಕೊಂಡು' ಹೋದವಳು ಹಿಂದಿರುಗುವುದಕ್ಕೂ ಸರಿಹೋಯಿತು (ಬರಹಾ. ೯೯).

[ ದೇ. ೩ ತುಳು. ಚರಿಗೆ, ಚೆರಿಗೆ; ತೆಲು. ಚೆರವ. / ಹಿಂ. ಚರವಾ ; ಮರಾ. ಚರವೀ. / ಸಂ. ಸರಕ ]

**ಚರಿಗೆ₂** 'ಚರಿಯೆ' ನೋ.

**ಚರಿಗೆಗುಡು** 'ಚರಿಗೆಗೊಡು' ನೋ.

**ಚರಿಗೆಗೊಡು, ಚರಿಗೆಗುಡು** (ಕ್ರಿ). [ಜೈನ] ಭಿಕ್ಷೆಗೆ ಹೊರಡು; ಚರಿಗೆಗೆ ಬರು : ಮು ನಿ ಪ ತಿ ಚರಿಗೆಗೊಟ್ಟನರಣ್ಯದಿಂದಾ ರಾಜವೀಧಿಯೊಳು (ಶಾಳ್ವಭಾ. ೩-೩). **ಚರಿಗೆಗುಡು:** ಕಿಸುಕುಳರೂಪಿಂ ಕೃತತರ್ಷಿಯಾಗಿ . . . ಚರಿಗೆಗುಡುವುದುಂ [ಪಾಠಾಂ. ವರ್ಪುದುಂ] (ಧರ್ಮಾಮೃ. ೯-೭೭); ಆ ನಗರಕ್ಕರಣ್ಯದಿಂ ಚರಿಗೆಗೊಟ್ಟನಂಗಜಮಲ್ಲಂ (ಅರ್ಹನ್. ೦-೯೦); ಅರಮನೆ ವಾಗಿಲೊಳ್ ಚರಿಗೆಗೊಟ್ಟವರಂ ನಿಲಿಸಲ್ಕೆ ಪೋಪ ಭೂವರನೊಡವೋಗಿ (ಪುಷ್ಪಪು. ೩-೯೮). [ ಚರಿಗೆ₂ (<ಚರಿಯೆ) + ಕೊಡು₁ ]

**ಚರಿಗೆದೋಱು** (ಕ್ರಿ). ಭಿಕ್ಷೆಯನ್ನು ಸ್ವೀಕರಿಸು ; ಭೋಜನಮಾಡು : ಕಿತ್ತ್ರಯ್ಯಂಗಳನೆಮ್ಮಲ್ಲಿಗೊಡಗೊಂಡು ಬಂದು ಚರಿಗೆದೋಱ್ ನೀಮುಂ ಬಿಜಯಂಗೆಯ್ಯೆಮನೆ (ವಡ್ಡಾರಾ. ೮೦-೦೩).

[ ಚರಿಗೆ₂ (<ಚರಿಯೆ) + ತೋಱು ]

**ಚರಿಗೆನಿಲಿಸು** (ಕ್ರಿ). ಚರಿಗೆಗಾಗಿ ಬಂದ ಮುನಿಗಳನ್ನು ಊಟಕ್ಕಾಗಿ ನಿಲ್ಲಿಸಿಕೊಳ್ಳು : ಅರಸಿ ತಾ ಮಲಧಾರಿದೇವರ ಚರಿಗೆನಿಲಿಸಲೆ ಬಂದಿಸಿರೆ ನಿನ್ನರಸನಾಗಲಿಯುಳ್ಳೊಡಾತ್ಮಜನಾಗಲೆಲೆ ಮಗಳೇ ಚರಿಗೆನಿಲಿಸಲೆ ನಿಲ್ವೆನೆನುತವೆ ಪರಸಿ ಬಿಜಯಂಗೈಯೆ (ಶಾಳ್ವಭಾ. ೩-೦೮).

[ ಚರಿಗೆ₂ (<ಚರಿಯೆ) + ನಿಲಿಸು ]

**ಚರಿಗೆವರ್** (ಕ್ರಿ). ಆಹಾರದ ಭಿಕ್ಷೆಗೆ ಬರು; ಪಾರಣೆಗೆ ಬರು: ಇಂದೆಮ್ಮ ಮನೆಗೆ ಚರಿಗೆವರಲ್ವೇಟ್ಟುಮೆಂದು ನುಡಿದೊಡೆ (ವಡ್ಡಾರಾ. ೮೦-೨೬): ಮುನಿವರರೆಂತೀ ಗಿರಿಗೆ ಚರಿಗೆವರ್ಪರ್ (ಆದಿಪು. ೩-೭); ಕಿಸುಕುಳರೂಪಿಂ ಕೃತತರ್ಷಿಯಾಗಿ . . . ಚರಿಗೆವರ್ಪುದುಂ [ಪಾಠಾಂ. ಗುಡುವುದುಂ] (ಧರ್ಮಾಮೃ. ೯-೭೭). [ ಚರಿಗೆ₂ (<ಚರಿಯೆ) + ಬರ್₁ ]

**ಚರಿಗೆವುಗಿಸು** 'ಚರಿಗೆವೊಗಿಸು' ನೋ.

**ಚರಿಗೆವುಗು** 'ಚರಿಗೆವೊಗು' ನೋ.

**ಚರಿಗೆವೊಗಿಸು, ಚರಿಗೆವುಗಿಸು** (ಕ್ರಿ). ಆಹಾರದ ಭಿಕ್ಷೆಗೆಂದು ಮನೆಮನೆಗೆ ಕಳುಹಿಸು: ಋಷಿಸಮುದಾಯಮೆಲ್ಲಮಂ ಚರಿಗೆವೊ[ಪಾಠಾಂ. ವು]ಗಿಸುತ್ತುಂ (ವಡ್ಡಾರಾ. ೮೩-೦೦). **ಚರಿಗೆವುಗಿಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚರಿಗೆ₂ (<ಚರಿಯೆ) + ಪೊಗಿಸು ]

**ಚರಿಗೆವೊಗು, ಚರಿಗೆವುಗು** (ಕ್ರಿ). ಆಹಾರದ ಭಿಕ್ಷೆಗಾಗಿ ಮನೆಯೊಳಗೆ ಪ್ರವೇಶಿಸು,- ಬರು : ನಿರ್ಮಳಚರಿತಂ ಚರಿಗೆವೊಕ್ಕನರಸನ ಬೀಡಂ (ಆದಿಪು. ೩-೦೦). 'ಚರಿಗೆವೊಗಿಸು' ಪರಾ. **ಚರಿಗೆವುಗು :** ಕಿಱುಮನೆ ಪೆರ್ಮನೆಯೆನ್ನದುಣಲ್ಕಕ್ಕ ಮ ನೆ ಗ ಳ ೦ ಚರಿಗೆವುಗುತ್ತಂ ಬರ್ಪೊರ್ (ವಡ್ಡಾರಾ. ೭೮-೬) ; ಸಾ ಕೇ ತ ನ ಗ ರ ಕ್ಕೆ ಪ್ರೀತಿಂಕರಮುನಿ ಚರಿಗೆವುಗೆ (ಚಾವುಂಪು. II, ೩೮-೨೯). [ ಚರಿಗೆ₂ (<ಚರಿಯೆ) + ಪೊಗು ]

**ಚರಿಗೆವೋಗು** (ಕ್ರಿ). ಭಿಕ್ಷೆಗಾಗಿ ಹೋಗು : ನೀಮಾ ನಗರಕ್ಕಾಗಿ ಚರಿಗೆ ವೋಗುತ್ತುಂ (ಸುಕುಮಾ. ೩-೨) ; ಅತಿಕ್ಷಪಿತಕಾಯರಾಲೋಕನಗರಕ್ಕೆ ಚರಿಗೆವೋ[ಪಾಠಾಂ. ಚರಿಗೆಗೆ ಪೋ, ಚರಿಗೆಗೆ ಪೋ]ದೊಡೆ (ಪಂರಾಮಾ. ೦೩-೯೯ ವ). [ ಚರಿಗೆ₂ (<ಚರಿಯೆ) + ಪೋಗು₁ ]

**ಚರಿಚಲಿ** 'ಚೆಂಚಲಿ' ನೋ.

**ಚರಿಜಲಿ** 'ಚೆಂಚಲಿ' ನೋ.

**ಚರಿತ** (ಗುಂ). ೧. ಮಾಡಿದ; ನೆರವೇರಿಸಿದ; ಸಾಧಿಸಿದ. 'ಚರಿತಾರ್ಥ' ಪರಾ. (ನಾ). ೨. ಗಮನ ; ಗತಿ ; ನಡಗೆ. ೩. ನಡೆದುದು ; ಆಗಿ ಹೋದುದು. ೪. ಜೀವನಕಥೆ; ಚರಿತ್ರೆ; ಇತಿಹಾಸ : ತ್ರಿಷಷ್ಟಿಶಲಾಕಾ ಪುರುಷರ್ಕಳ ಚರಿತಂಗಳುಮನಾಚಾರಮಾರಾಧನೆ ಮೊದಲಾಗೊಡೆಯ ಕರಣಗ್ರಂಥಂಗಳುಮಂ . . . ಕಲ್ತೊಡಲ್ಲದೆ ಪೇಟಲಾಗದು (ವಡ್ಡಾರಾ. ೬-೬) ; ಕವಿರತ್ನನೆನನ್ವಿತಮಾದುದು ಸಗರಚಕ್ರವರ್ತಿಯ ಚರಿತಂ (ಅಜಿಪು. ೦೨-೨೭). ೫. ನಡೆವಳಿಕೆ ; ಆಚಾರ ; ಶೀಲ : " ಚರಿತಂ ರೀತಿ ಚಾರಿತ್ರಮನೆ ಶೀಲಮನೆ ಚರಿತ್ರಮನಲ್ಕೆಯಾಚಾರಕಕ್ಕು ನಾಮಂ" (ಮುಂಗರಾ. ೭೯-೩) : ಆ ಯವ್ವನದೊಳವರ ಚರಿತಂ ಕರಂ ಪೊಸತು (ತಿರುಕ. ದೀ.೯-೩). ೬. ವಿಧಿ ; ಕ್ರಮ : ಹರುಷದಿಂದಾ ಕ್ರಿಯಲಾ ಅವ್ಯಕ್ತಲಿಂಗವಂ ಚರಿತದಿ ಪ್ರತಿಷ್ಠಿಸಿ ಮಹಾಪೂಜೆಯಂ ಮಾಡಿ (ಸಿದ್ಧರಾ. ೬-೩೭). ೭. ಅದ್ಭುತಕಾರ್ಯ ; ಸಾಹಸಕೃತ್ಯ. ೮. (ಅಲಂ) ಅಡಳಿತ; ಅಳ್ವಿಕೆ: ತಿರಿಕನನು ಕರತಂದು ಧರಣಿಯ ಚರಿತದೊಳಗಿರಿಸಿದರೆ ಮರ್ಕಟ ಶರೆಯ ಸೇವಿಸಿದಂತೆ ಕುಣಿವರೆ ಭಗಿನಿಭಗಭಾಗ್ಯಾಧರವ ತಿಂದಿರ ಲಾರದಲೆ ಇದಗರೆದೆಯಾಕೆಯ ನೋಡಿ ನೃಪನನುಸರಿಸಿ ಇಹನೆಂದಂತರಂಗದಿ ತಿಳಿವುದೆನೆ ಮಂತ್ರಿ (ಬಿಜ್ಜಪು. ೬೨-೩೯). [ ಸಂ. ]

**ಚರಿತಂ** (ಅ). ಬೇಗನೆ ; ತ್ವರಿತವಾಗಿ : ಪತ್ರಂಟು ದೇಸೆ ವಿಳಾಸದೊಳ್ ತೊಡರೆ ಚರಿತಂ ಬಂದರ್ ಕಣ್ಗೊಳ್ಪಿರಲ್ ವರಭೋಗಿಯರ್ (ಪಂಪಭಾ. ೯-೦೦೨). [ <ತ್ವರಿತ ? ]

**ಚರಿತಪುರಾಣ** (ನಾ). ಮಹಾಪುರುಷರ ಚರಿತ್ರೆಯನ್ನೊಳಗೊಂಡ ಪುರಾಣ : ಚರಿತಪುರಾಣದೊಳೊಂದಕೆ ಬರೆದರ್ ಬರೆದಿಕ್ಕಿದತ್ರಿರ್ಷಷ್ಟಿ ಸಲಾಕಾಪುರುಷಪುರಾಣಮಂ (ಚಾವುಂಪು. ೯-೨೦) : ಚ ರಿ ತ ಪು ರಾ ಣ ಮನಱಿಯದೆ ತುರಿಪದಿನಧ್ಯಾತ್ಮಿಯಾಗಿ ನೆಗಳ್ದನ ತಪಮುಂ . . . ಪಂದೆಯ ಬಿರುದುಂ ಸುಖಮಾಗಲಾಱಿವೆಂದುಂ ಕಡೆಯೊಳ್ (ಧರ್ಮಾಮೃ. ೬-೯೯). [ಚರಿತ + ಪುರಾಣ ]

**ಚರಿತಾರ್ಥ** (ಗುಂ). ೧. ಗುರಿಯನ್ನು ಸಾಧಿಸಿದ ; ಇಷ್ಟಸಿದ್ಧಿಯನ್ನು ಮಾಡಿಕೊಂಡ (ನಾ). ೨. ಕಾರ್ಯಸಿದ್ಧಿ; ಇಷ್ಟಸಿದ್ಧಿ; ಉದ್ದಿಷ್ಟ ಪ್ರಾಪ್ತಿ : ನನ್ನೊಳಗು ಹೊರಗು ನಾ ಗುಡಿಬಳಸಿನೊಳಗಲೆದ ಚರಿತಾರ್ಥ ಪಡೆಗೊಂಡಿತೀ ಕಬ್ಬದೊಳಗೆ (ಮುರಲೀ. ೩೦-೯). ೩. ಇಷ್ಟಸಿದ್ಧಿಯನ್ನು ಪಡೆದವನು ; ಕೃತಾರ್ಥ ; ಧನ್ಯ : ಪರಮಾಯು ಮೂಱುದಿವಸಂ ಚರಿತಂ ಚರಿತಾರ್ಥನಾ[ಗುನೀ]ನೆಂಬವೊಲ್ (ಸುಕುಮಾ. ೦೦-೮೩) ; ಬಿನ್ನಪಮಂ ಬಗೆಗೊಳ್ವುದು ಚರಿತಾರ್ಥನಾಗೆ ಮಾಡುವುದೆನ್ನಂ (ಪಂರಾಮಾ. ೯-೦೩೬) ; ಎಂ ಚರಿತಾರ್ಥನೊ ಸಾರ್ವಭೌಮರೊಳ್ ಯಮತನಯಂ (ಜಗವಿ. ೦೭-೩); ನಿಮ್ಮ ಕಾರುಣ್ಯೋದಯವು ಯೆಮಗಾಯ್ತಲಾ ಚರಿತಾರ್ಥರಾವೆಂದ (ಕುಮಾ‌ರ‌ರಾ. ೦೦-೨೮). ೪. ಬದುಕು; ಹೊಟ್ಟೆಪಾಡು: ವಸುಮತಿ ಈ ಹೊಲಗಳಲ್ಲಿ ತನ್ನ ದೆವರು ಹರಿಸಿ ಚರಿತಾರ್ಥವನ್ನು ಚೊಕ್ಕಟವಾಗಿ ಸಾಗಿಸುತ್ತಿದ್ದಳು (ಮುಕ್ತಿಮು. ೬) ; ಅವಳ ತಂದೆ . . . ಬಂದುದರಲ್ಲಿಯೇ ಚರಿತಾರ್ಥ ಸಾಗಿಸುತ್ತಿದ್ದ (ಆತ್ಮಕ. ೪೭) ; ಅವರಿಗೆ ಬರುತ್ತಿದ್ದ ಸಂಭಾವನೆಯೂ, ಹೊಲಗದ್ದೆಗಳಿಂದ ಬರುವ ಉತ್ಪನ್ನಗಳೂ ಸೇರಿ ಅವರ ಚರಿತಾರ್ಥ ನಡೆಯುತ್ತಿತ್ತು (ರಾಜ್ಯೋದ. ೩).

[ ಚರಿತ + ಅರ್ಥ ]

**ಚರಿತಾರ್ಥತ್ವ** (ನಾ). ಕೃತಕೃತ್ಯತೆ ; ಕೃತಾರ್ಥತೆ : ಇದುವೆ ಪರ ತತ್ತ್ವಾನುಭವಸುಖವಿದುವೆ ಚರಿತಾರ್ಥತ್ವಮಂದಿರವಿದುವೆ ತುದಿಪದವೆಂದು ನಿನ್ನಿಂದವೆ ವಿದಿತವಹುದು (ಬಸಪು. ೨-೩೬). [ ಸಂ. ]

**ಚರಿತೆ** (ನಾ). ೧. ಚಾರಿತ್ರ್ಯ; ಶೀಲ; ಸ್ವಭಾವ: ಏತರಣ ಧೈರ್ಯ ವಿದ್ಯಾ ಗೌರವಂಗಳಲಿ ಸುರಮಹೀಜನರಾಜ ರುದ್ರರ ಚರಿತೆಗೆಣೆಗಿವ್ಮಡಿಯೆನಿಸಿ ಸತ್ಪುರುಷನಿಲ್ಲಿಗೆ ಸಲಹ ಬಂದನು (ಬಸಪು. ೩-೬೪). ೨. ಕಥೆ ; ಜೀವನ ಚರಿತ್ರೆ : ಮುನ್ನಿನ ವೃದ್ಧಭಕ್ತರ ಚರಿತೆಗಳನೊರೆದುದ್ಧರಿಸಿ ಜಗದೇವನಂ ಸಲಹಿದನು ಬಸವೇಶ (ಬಸಪು. ೬೦ ಸೂಕಟಿ) ; ವಿಶ್ವೇಶ್ವರನು . . . ಸರಸ್ವತಿಯರೀ ಕೃತಿಗೆ ನೆಟಿ ಬಾರದಿರರದೇಕೆಂದೊಡೆ ಮಹಾಶಿವಶರಣ ಶಂಕರದಾಸಿಮಯ್ಯನ ಚರಿತೆಯಾದುದರಿಂದೆ (ಶಂಳದಾ. ೧-೧೦). [ಸಂ. ಚರಿತ ]

**ಚರಿತ್ರ** (ನಾ). ೧. ನಡೆ ; ನಡೆವಳಿ ; ಆಚಾರ : "ಚರಿತ್ರಂ, ಚರಿತಂ, ಶೀಲಂ, ಚಾರಿತ್ರಂ—ಈ ೪ ಆಚಾರಂ" (ಹಲಾಯು. ೬೬-೨೪೨) ; ಕಾಗು ನಿರೋಧದ ಅಗುಹೋಗನಱಿಯದ ಶರಣನ ಚರಿತ್ರವ ನೋಡಿ ನೋಡಿ ಬೆಜಗಾದೆನಯ್ಯಾ (ಬಸವ. ೯೦೨). ೨. ಇತಿಹಾಸ; ಜೀವನ ಕಥೆ; ನಡೆದು ಹೋದ ಸಾಹಸಾದಿಗಳ ನಿರೂಪಣೆ. 'ಚರಿತ್ರಗಾರ' ಪರಾ. ೩. ಆಚರಣೆ ; ಅನುಷ್ಠಾನ. ೪. ಕೆಲಸ; ಕರ್ತವ್ಯ. ೫. ಸಾಹಸಕಾರ್ಯ ; ಅದ್ಭುತ ಕೃತ್ಯ. ೬. ಸ್ವಭಾವ ; ಮನೋಧರ್ಮ. [ಸಂ.]

**ಚರಿತ್ರಕಾರ** (ನಾ). ಇತಿಹಾಸವನ್ನು ಬರೆಯುವವನು; ಇತಿಹಾಸಕಾರ: ಚರಿತ್ರಕಾರರು . . . ಹೇಳಿರುವ ಕೆಲವು ಅಂಶಗಳನ್ನು ನನಗೆ ಸರಿಯೆಂದು ತೋರಿದ ರೀತಿಯಲ್ಲಿ ಹೊಂದಿಸಿಕೊಂಡಿದ್ದೇನೆ (ಷಡ. IV ಪ್ರಸ್ತಾವನೆ). [ ಚರಿತ್ರ + – ಕಾರ$_1$ (<–ಕಾರ) ]

**ಚರಿತ್ರವಂತ** (ನಾ). ಶೀಲವನ್ನು ಕಾಯ್ದುಕೊಂಡವನು ; ಶೀಲವಂತ ; ಚಾರಿತ್ರವುಳ್ಳವನು : ವಿವಾಹಪೂರ್ವದಲ್ಲಿ ಅವರು ಚರಿತ್ರವಂತರಾಗಿ ಉಳಿಯಲಿಕ್ಕೇ ಬೇಕು (ಬ್ರಹ್ಮಚ. ೪). [ ಚರಿತ್ರ + – ವಂತ ]

**ಚರಿತ್ರವತಿ** (ನಾ). ಒಳ್ಳೆಯ ಶೀಲವುಳ್ಳವಳು ; ಪತಿವ್ರತೆ : "ಕುಲವಧು ಸಾಧ್ವಿ ಪತಿವ್ರತೆ ಕುಲವಾಳಿಕೆ ಸತಿ ಚರಿತ್ರವತಿಯುಕ್ಕುಂ"(ಅಭಿಧಾನ. ೩೩-೪); ಆತನ ಪಿರಿಯರಸಿ ಗುಣಾನ್ವಿತೆ ಪತಿವ್ರತೆ ಚರಿತ್ರವತಿ ವಿಶದ ಗುಣಖ್ಯಾತವತಿ . . . ಚಂಡಿಕಬ್ಬೆಯೆನೆ ಪೊಗಳ[ದ]ರಾರ್ (ಸೌತ್. XX, ೪೭-೦೭ ; 1074). [ಸಂ. ಚರಿತ್ರವತೀ ]

**ಚರಿತ್ರವಳ್ಳಿ** (ನಾ). ಒಂದು ಊರಿನ ಹೆಸರು : ಶ್ರೀಮತ್ಕನ್ನಯ್ಯ ಚರಿತ್ರವಳ್ಳಿಯುಮಂ ಪೆಬ್ಬಾಳುಮಂ ಬಿದಿರುವಳ್ಳಿಯು × × × (ಎಕ. XI, ಚಿತ್ರದು. ೪೯-೫೦ ; 947). [ ಚರಿತ್ರ + ಪಳ್ಳಿ$_1$ ]

**ಚರಿತ್ರೆ** (ನಾ).=ಚರಿತ್ರ ೨: ಇಂದಿನ ಬಾಳು ನಾಳೆಗೆ ಚರಿತ್ರೆ (ನಾಹಿಚೀ. ೬೩). [ ಸಂ. ಚರಿತ್ರ ]

**ಚರಿಯ** 'ಚರಿಯೆ' ನೋ.

**ಚರಿಯಿಸು** 'ಚರಿಸು' ನೋ.

**ಚರಿಯೆ, ಚರಿಗೆ$_1$, ಚರಿಯ, ಚರುವೆ, ಚರೆಯ** (ನಾ). ೧. ಆಚರಣೆ ; ಚರ್ಯೆ: ನಿತ್ಯ ಪುನೀತ ಶೀಲ ಬ್ರತ ಚರಿಯೆಯಂ [ಪಾಠಾಂ. ಶೀಲವ್ರಾತ ಚರಿಯಂ] ಸಿಕ್ಕುಗೊಳಿಸಿದೆಯೆಂ (ಬಸಪು. ೪೭-೧೨). **ಚರಿಗೆ$_1$**: ೨. [ಜೈನ] ಮುನಿಗಳು ಆಹಾರಕ್ಕಾಗಿ ಮಾಡುವ ಸಂಚಾರ ; ಭಿಕ್ಷಾಟನೆ : ವಿಂದುಂಡೀಗಳೆ ಬಿಜಯಂಗೆಯ್ವಂದಿರೆ ಕುಳಾದ್ರಿಧೈರ್ಯಂಗೆ ಚರಿಗೆ ಮಾಣ್ದತ್ತಿನಿಸಂ (ಆದಿಪು. ೯-೦೨೪); ಮುನಿಗಳ್ ಚರಿಗೆಗೆ ಬರುತಿರೆ (ಶಂಪತಂ. ೦೯೦-೨೦) ; ಮುನಿಗಳ ಚರಿಗೆಯ ಕಾಲವನಱಿದ್ರರಮನೆಯ ಬಾಗಿಲಿಗೆ ನಡೆದನು (ಧರಕ. ೩-೨). ೩. ಊಟ ; ಔತಣ : ತಡೆದನವನೆಲ್ಲರುಂ ತನ್ನ ನಿಳಯದ ಚರಿಗೆಗೆ (ಸೋಮಚ. ೨-೯೨). **ಚರಿಯ** : ೧. ಚರಿಸಲಾಗದವರ ಚರಿಯ್ನ ನಿರತೆಗೇಳಲಾಗದವರ ಸರಿಯೊಳಾವ ಭುಕ್ತಿ ಭೋಗಮಾಡಲಾಗದು (ಶಿವಗೀ. ೪೩೪); ಎರಡು ವಿಂಶತಿ ವರುಷಕೆ ಈ ಪರಿಯ ಚರಿಯ ಮಾಡಿದ ಪರಮಹರುಷದಿ (ಜಗದಾ. ೦೩೪). ೪. **ನಡೆವಳಿಕೆ**: ಜಾರೆಯರು ತಲೆವಾಗಿಲ ನಿಕ್ಕಿ ನೋಡುವ ಚರಿಯಗಳ ಕಂಡು (ಬಂಕಾಲಾ. ೩-೬-೦). **ಚರುವೆ**: ೩. ಆದಯ್ಯನರಸಿ ಪದ್ಮಾವತಿಯುಮಿರದೆ ಜಂಗಮಕೆಂದು ಮಾಡಿದನ್ನವ ಜಿನರ ಚರುವೆಗೆಂದೊಯ್ಯಲು (ಚಬಸು. ೩೭-೩೬). **ಚರೆಯ** : ೫. ವೇಷಯುವುದು : ಮಂದಮತಿಯು ಮುಂದೆ ತಲೆಯ ಚುಂಚಂ ಪಿಡಿದು ಚರೆಯಕ್ಕೆ ಬಿಟ್ಟು ಗೂಂಟನೆಟ್ಟದು ತಪ್ಪಂತೆ ತಂದು (ಅರ್ಥಸೇ. ೩-೬೩ ಪ).

**ಚರಿಗೆಮಾಡು=ಊಟಮಾಡು** ; ಆರೋಗಿಸು: ಆನುಂ ಭಕ್ತಿಯಿಂದಂ ದಿವ್ಯಾಹಾರಮಂ ಮಗುಟಿಮಗುಟಿ ಬಡ್ಡಿಸೆ ಚರಿಗೆಮಾಡಿ [ಪಾಠಾಂ. ಯುಂಡು] (ಪಚ್ಯಾಲಾ. ೪೯-೩೬). [<ಸಂ. ಚರ್ಯಾ ]

**ಚರಿಷ್ಣು** (ಗು). ೧. ತಿರುಗಾಡುವ. ೨. ಅಸ್ಥಿರವಾದ. [ ಸಂ. ]

**ಚರಿಸು, ಚರಯಿಸು, ಚರಿಯಿಸು** (ಕ್ರಿ). ೧. ನಡೆ; ಚಲಿಸು; ಸಂಚರಿಸು: ಹಂಸನಂತೆ ರಮಣೀಯ ನೂಪುರನಿನಾದಾನಂದಿತ ಮಾನಸಸರೋವರದೊಳ್ ಚರಿಸಿಯುಂ(ಕಾದಂಪೂ. ೩೨೪); ಮಹಾಶರಣರ್ಗೆ ಗುರುವೆನಿಸಿ ಸಕಲ ದೇಶಂಗಳಂ ಚರಿಸಿದಂ (ಚಂಪು. ೦-೦೮) ; ಆಗಸದೊಳು ಚರಿಸುವ ಸುರಸತಿಯರ ಸೋಗೆಮುಡಿಗೆ ಪೂಜ್ಯವಾಗಿ . . . ಪೂಗವೃಕ್ಷಗಳೊಪ್ಪುತಿಹುವು (೪ಂಪವಿ. ೨-೪೦). ೨. ಅಲುಗು; ಅಲ್ಲಾಡು: ಬೆದಱಿ ಭೂಕಂಪದಲ್ಲಿ ಕುಲಗಿರಿಯದಿರುವಂತಿರೆ ಚರಿಸಿ . . . ಕಲಿಕರ್ಣ ವ್ಯೆಮಾಱಿಯೆ (ಕುಮಾರವ್ಯಾ. ೩-೨೪). ೩. ಆಚರಿಸು ; ನಡೆದುಕೊಳ್ಳು ; ಅನುಷ್ಠಾನಮಾಡು : ತಂತಮ್ಮಾಪ್ತರ್ ಚರಿಸುವ ಪೋಚಿಯೊಳೇಕೆಯೊ ಚರಿಯಿಸರನ್ಯರ್ (ಧರ್ಮಾಮೃ. ೭-೪೨) ; ಪರಬ್ರಹ್ಮನು ಹರಂ ಚ[ಪಾಠಾಂ. ಧ]ರಿಸುವರು ಬ್ರಹ್ಮನ್ಯಮಂ(ಬಸಪು. ೩೫-೪೦);ಮುನೀಂದ್ರಂ ಚರಿಪಂ ಸತಿವೆರಸು ತಪವನೀ ಪರ್ವತದೊಳ್ (ಶಾಕುಂತ. ೧೦೦-೦೭೨). ೪. ಇರು ; ವ್ಯವಹರಿಸು ; ವರ್ತಿಸು : ನಾನಾಭೋಜ್ಯಕ್ಕೆ ಪಕ್ಕಾಗುತೆ ಚರಿಸಿದೆನಿನ್ನಾಱಿನಿನ್ನಾಱಿ ನಯ್ಯೋ (ರತ್ನಾಕ. ೪) ; ಈ ಪ್ರಕಾರದಿ ಚರಿಸುತಿರೆ ಸಾತ್ವಿಕ ಸುಭಕ್ತಿ ಸ್ಥಿರಮನಸ್ಕನು (ಬಸಪು. ೪೭-೪) ; ಸಿರಿ ಸರಸ್ವತಿ ಚಂಡಿ ದುರ್ಗಿಯರೆಂಬ ನಾಮದಲಿ ಚರಿಸುತಿಹ ನಿನ್ನೇಕಮೂರ್ತಿಯ ಪರಿಯನಱಿವವರಾರು (ಕುಮಾರವ್ಯಾ. ೬-೧೦೪). **ಚರಯಿಸು** : ೧. "ಚರಯಿಸು (ಚರಿಯಿಸು) ಭ್ರಮಣೇ" (ಶಮುದ) ; ಚರಿಸಿದಂ, ಚರಯಿಸಿದಂ (ಶಮುದ.೭೪ ಪ್ರಯೋ) : ಕನಸಿನೊಳ್ ಚರಯಿಪಂತೊಲ್ ಪೋಗುತಿರ್ದನ್ (ಸಂಸಚ. ೩೨-೦೮೪). **ಚರಿಯಿಸು**: ೧. ಚರಿಯಿಪ ವನದೇವತೆಯರ ಚರಣಾಲಕ್ತಕದೆ ಪೊರೆದು ಪೆನಿಪುವು . . . ಚಿಂದೆಳದುರ್ವುಗಲ್(ಕಾದಂಪೂ. ೪೬); ಚರಿಯಿಸಿ ನಿಚ್ಚವಚ್ಚು ವನದೊಳ್ (ಜಗಪಿ.೦೬-೦೨೪); ಕೇಳು ನೀನೆಲೆ ಪಾರ್ಥ . . . ರವಿರಥ ಕಾಲಚಕ್ರವನ್ನೆದಿ ಗಗನಾಂಗಣದಿ ಚರಿಯಿಪುದ (ಕುಮಾರವ್ಯಾ. ೭-೩೨). ೨. ಸ್ಥಿರನಾಗಿ ಗುಣದೊಳಿಸಗುವ ನರನುಂ ವೈರಾಗ್ಯಮುಳ್ಳನುಂ . . . ಉರ್ವರೆ ಚರಿಯಿಸುವೊಡಮುಟವರಲ್ಲರುತ್ತಮಗುಣಮಂ (ಧರ್ಮಾಮೃ. ೩-೧೩೨). ೩. ಪಿರಿದಪ್ಪುದರದಿಂದಂ ಪುರಾಣಮಂ ಕೇಳ್ವರಲ್ಲದಾ ತೆಱದಿಂದಂ ಚರಿಯಿಸುವರಲ್ಲರನ್ಯರ್ (ಸಮುಚ. ೬-೨೪) ; ಗುರುವಚನಮನುಲ್ಲಂಘಿಸಿ ಚರಿಯಿಸಲಣಮಾಗದು(ಧರ್ಮಾಮೃ. ೩-೧೩೦). ೪. ಜನನಾಥಂ ಕಾಮಾಸಕ್ತನಾಗಿ ಮದದಂತಿಯಂತೆ ಚರಿಯಿಸಿ (ಶಂಕರಂ. ೧೩-೨೦); ಎರಡನೆಯ ಸುಷಮಕಾಲದ ಪೊರೆಯೊಳ್ ಮೂಱನೆಯ ಸುಷಮದುಷ್ಷಮಕಾಲಂ ಚರಿಯಿಸುಗುಂ (ಶಂಕರಚ. ೦-೩೬); ನೆಲೆಗೆ ಪೋಗಿ ಮಕ್ಕಳೊಳಂ ಪೆಂಡಿರೊಳ ವೊಡಗೂಡಿ ಸುಖದಿಂ ಚರಿಯಿಸುವಂ ಮೆಚ್ಚಿದಂದದಿಂ ಭೋಗಿಸುವಂ (ಧರ್ಮಾಮೃ. ೦-೦೪೦).

**ಚರಿಸಾಡು, ಚರಿಸಿಯಾಡು=ಅಲೆದಾಡು**; ಸಂಚ್ಯಾಡು: ನಡೆದಡೆ ಹಜ್ಜೆಯಿಲ್ಲ ಸುಳಿದಡೆ ನೆಳಲಿಲ್ಲದೆ ಬಯಲ ಬೆಳಗೆ ಸ್ವರೂಪವಾಗಿ ಚರಿಸಾಡುತ್ತ ತನ್ನನರ್ಚಿಸುವ ಭಕ್ತರ ನೋಡುತ್ತ ಬಪ್ಪಲ್ಲಿ (ಶರಗೂ. ೪೬) ; ನಿರಾಶಾಭರಿತನಾಗಿ ಚರಿಸಾಡುತ್ತಲು (ಶೂನ್ಯಸಂ. ೨೬೩-೦೦). [ಚರಣ + – ಇಸು$_3$]

**ಚರು₁** (ನಾ). (ಕುಶಾ) ಒಂದು ಬಗೆಯ ಸಣ್ಣ ವಿಮಾನು
[ ←ತುಳು. ಚರು ]

**ಚರು₂** (ನಾ). ೧. ಹೋಮಕ್ಕಾಗಿ ಸಿದ್ಧಪಡಿಸಿದ ಅನ್ನ ; ಹವಿಸ್ಸು : "ಹವ್ಯಂ, ಪಾಕಃ, ಚರುಃ, ಸಾನ್ನಾಯ್ಯಂ, ಹವಿಃ—ಈ ೫ ಚರು" (ಚರಂಋ. ೬೯-೨೬೨); ಜಲಗಂಧಾಕ್ಷತೆ ಪುಷ್ಪಾವಲಿ ಚರು ದೀಪಪ್ರದೀಪ ಧೂಪ ಫಲಂಗಳ್ . . . ತಳತಳ ತೊಳಗಿದುವು (ಆದಿಪು. ೭-೧೦೩); ಚರುಚರುನಿಚಯದಿಂ ಘನಸಾರಾಗರಂ ಧೂಮಲೇಖೆಯಿಂ . . , ಜಿನೇಂದ್ರನನಾರಾಧಿಸಿದಂ ನರೇಂದ್ರ ಚೂಡಾರತ್ನಂ (ಶಾಂತಿ ಪು. ,೩೨-೩); ಲಡ್ಡುಗೆಯುಂ ಬೆಳಸಂಗೆ ಹೆಂಡಮುಂ ಮಾರಿಗೆ ಚೊಪ್ಪುಳುಂಗೆ ಚರುವಂ ಪದೆದೆತ್ತುವೆಂ (ಸ್ಮರತಂ. ೮-೩೪); ಕೊಟ್ಟನು ಚರುವವಾಡೆಯು ದೈತ್ಯ ಚಂಡೋದರಿಗೆ ತಲೆಯೊಡನೆ (ಶಾಕಿಶಾ. ೩೬-೨೩). ೨. ಹವಿಸ್ಸಿನ ಪಾತ್ರೆ: "ಉಖಾ, ಸ್ಥಾಲೀ, ಚರುಃ, ಕುಂಭೀ, ಪಿಠರಂ, ಕುಂಡಂ—ಈ ೬ ಮಡಕೆ" (ಚರಂಋ. ೩೨-೦೩೯); ಕೈಯಲ್ಲಿ ಚರುವನ್ನು ಹಿಡಿದುಕೊಂಡು ಅಗ್ನಿನಾರಾಯಣನು ಪ್ರಕಟನಾದನು (ತುಳಸಿ. ೩೪). ೩. ಬಲಿ: ಇದೇನು ಭೂತದ ಚರುವನ್ನು ಮಾಡುತ್ತೀರಾ? (ಮುಕಮ. ೩೯); ಈರಮ್ಮನು ಚರು, ಓಕಳಿ . . . ಮುಂತಾದ ಶಲಕರಣೆಗಳನ್ನು ಸಜ್ಜುಗೊಳಿಸಿ-ಭಟ್ಟರ ಅಡುಗೆಗೆ ಬೇಕಾದ ಲವಾಜಮೆಗಳನ್ನು ಸಿದ್ಧಗೊಳಿಸಿದಳು (ಶಂಕಶಂ. ೯೦). ೪. (ಆಲಂ) ಆಹಾರ ; ಊಟ : ಒಂದು ಚರುವನ್ನು ರಾತ್ರಿ ಅವರಲ್ಲಿಯೇ ತೆಗೆಯುವ (ಮುಗಿಯು. ೦೬೩). [ ಸಂ. ]

**ಚರುಕ** (ನಾ). ೧. ಹವಿಸ್ಸು ; ನೈವೇದ್ಯ : ಅನೇಕ ಭಕ್ಷ್ಯೋಪದಂಶ ರಸಪ್ರಚುರ ಚಾರುಚರುಕಂ[ಪಾಠಾಂ. ಚರು]ಗಳಿಂದಂ (ಆದಿಪು. ೨-೩೨ ಪ); ಬಲಿತೀಷ್ಟಲಿಂಗ ಪ್ರಸಾದವೇ ಚರುಕಮದನೊಳಿದು ತಾನುಪಭೋಗಿಸುವುದು(ಶಾಕಿಶ. ೦೨-೦೬). ೨. ಹವಿಸ್ಸಿನ ಪಾತ್ರೆ. ೩. ಪಾಕಪಾತ್ರೆ: ಚರವನಿತ್ರನು ನಿನಗೆ ಹೇಮದ ಚರುಕವಿದೆ ವಿವಿಧಾನ್ನ ಪಾನೋತ್ಕರದ ತವನಿಧಿ (ಕುವ್ಯಾಆ. ೧-೯). [ ಸಂ. ]

**ಚರುಕಲು** (ನಾ). ಅಗಲ ಬಾಯಿಯ ಪಾತ್ರೆ: ಹೆಚ್ಚಾಗಿ ಉಳಿದ ಅನ್ನವನ್ನು ಚರುಕಲಿನಲ್ಲಿ ಹಾಕಿ ಮುಚ್ಚಿಡಬೇಕು (ಕುಪ್ರ). [ <ಸಂ. ಚರುಕ ? ]

**ಚರುಗ, ಚರಗ, ಚರಗು; ಚೆರಗ, ಸರುಗ, ಸರುಗು** (ನಾ). ೧. ಹೊಲ, ಗದ್ದೆಗಳಲ್ಲಿ ಪೈರು ಬೆಳೆದಾಗ ರೈತರು ಭೂಮಿತಾಯಿಗೆ ನೈವೇದ್ಯವೆಂದೂ ಕ್ಷೇತ್ರದ ತುಂಬ ಚೆಲ್ಲುವ ಕಡುಬು ಮುಂತಾದ ಭಕ್ಷ್ಯ : "ಚರುಗ = ಹೊಲದೊಳಗೆ ಚೆಲ್ಲುವ ಆಹುತಿಯ ಅನ್ನ" (ಗಂಗಾಶ್ಯು ೦೫೯). ೨. ದೇವತೆಯ ಪ್ರೀತ್ಯರ್ಥವಾಗಿ ಹೊಲದಲ್ಲಿ ಮತ್ತು ಊರಿನ ಸುತ್ತ ಚೆಲ್ಲುವ ಕೋಣದ ರಕ್ತ ಮತ್ತು ಮಾಂಸದ ಬಲಿ : (ಕ). **ಚರಗ** : ೧. ಊರ ಒಕ್ಕಲಿಗರ ಚರಗದ ಬುಟ್ಟಿಗಳೆಲ್ಲ ಹೊರಬಿದ್ದವು. ತಮ್ಮ ದೇವರಿಗೂ ಚರಗ ಸಲ್ಲಬೇಕೆಂದು ಹೆಂಡತಿ ಸೂಚಿಸಿದಳು (ಗರಶಾ. ೭೩); ಚರಗವನ್ನು ಚೆಲ್ಲಿದಂತೆ ಚೆದರಿ ಹೋಗಿರಬಹುದು (ಕ೭ಶಾ. ೩೨). **ಚರಗು** : ೧. ಬಂಡಿ ತೀವಿದ ಚರುಗು [ಪಾಠಾಂ. ಕೂಳು, ಚರುಗಳ್]ವೆರಸು ತನ್ನ ಮಗನಪ್ಪ ಮುಂಡಕೌಶಿಕನಂ ಕುಂಭಂಗಾಹಾರ ನಿಮಿತ್ತವಾಟ್ಟಿದೊಡೆ (ಕಾವ್ಯಂಪು. II, ೩೪-೩೩); ಜನಪದಯುಗಳಕ್ಕೆತ್ತಿ ನೈವೇದ್ಯಮಂ ಜಾತ್ರೆಗೆ ಬಂದವರ್ಗತ್ತ ಕೋರ್ವರ್ ಚ[ಪಾಠಾಂ. ಪ]ರುಗಂ (ಸಮಶ. ೨-೬೯). **ಚೆರಗ** : ೧. ಹೊಲಕೆ ಒಕ್ಕಲಿಗ ಚೆರಗೊಗೆದು (ಕರಶ. ೦೭); ಜೋಕುಮಾರನ ಅಳಕ ಅಂಬಲಿಯೇ ಒಕ್ಕಲಿಗನು ತನ್ನ ಬೆಳಸಿಗೆ ಒಗೆಯುವ ಮೊದಲನೆಯ ಚೆರಗ (ಜನಗೀ. ೦೭ ಮೊದಲಮಾತು). **ಸರುಗ** : ೧. ಮತ್ತಂ ಶುಚಿರ್ಭೂತರಾಗಿ ಚಕ್ಕುಲಿಯಂತೆ ಪಿಟ್ಟನಿಂ ಬಟ್ಟಿತುವಾಗಿ ಬಿರದಮಣಿ ಮೇಲೆ ಸರುಗದ ಹುದ್ದೆಗಳನಿಟ್ಟು (ಶಸಾರ. ೯೬೩); ಪಾಪಮ್ಮ 'ಸರುಗ' ಮಾಡಿಕೊಂಡು ಬಂದು ಎತ್ತುಗಳ ಪ್ರದಕ್ಷಿಣೆಮಾಡಿ 'ಸರುಗ' ಚೆಲ್ಲಿದಳು (ಸಂದಿಕ. ೬೬). **ಸರುಗು** : ೧. ಅದರದಿಂದನರ್ಘ್ಯಮಣಿವಿಷ್ಟರದೊಳ್ ಕುಳ್ಳಿರ್ದು ಸರುಗಮುಣ್ಕೊಂಡುದರಿಂ (ಆದಿಪು. ೧೩-೩೯) ; ಗಂಧ ಮಾಲ್ಯಾದಿಗಳನರ್ಚಿಸಿದ್ ಸಿಂಹಾಸನನಮಸೇಬ್ ನಾಯ್ ಸರುಗನುಣ್ ಕಂಡುದರಿಂ (ಕಾವ್ಯಂಪು. ೭೩-೨೩); ಗಂಧಧೂಪದೀಪಕ್ಕಂ ಸರುಗಿಗ[ಂ] . . . ಕುಡುವ ಭೂಮಿ (ಎಕ. XVII, ೧೨೨-೭ : ೧೦೪೯) ; ಪರಕೆಯನೀಯದೆ ಮಾಸಲ ಸರುಗಂ ಮುಂದಿಡದೆ ತಡೆಯದೂಡದೆ ಪಲರುಂ ಬಿರಸರ್ಚನೆ ಮಾಡದೆ ಮಾಣ್ದಡೆ ಪೀಡೆಗಳೇಕೆ ಮಾಣ್ಬುವೆಂದು ಜಡಾತ್ಮರ್ (ಶಸಾರ. ೯೬೩).

**ಚರಗಚಲ್ಲು, ಸರುಗಚೆಲ್ಲು** = ಭೂಮಿತಾಯಿಗೆ ನೈವೇದ್ಯಕ್ಕೆಂದು ಸಿದ್ಧಪಡಿಸಿದ ಚರುಗವನ್ನು ಚೆಲ್ಲು : ನಾಡಿನ ಒಕ್ಕಲು ಜನ ಶೀಗಿಹುಣ್ಣಿಮೆಯ ದಿನ ಹೊಲದಲ್ಲಿ 'ಚರಗ' ಚೆಲ್ಲಲು ಹೋಗುತ್ತಾರಷ್ಟೆ ? (ಕರೀಶ. ೩೬) ; ಕಲ್ಲಪ್ಪ ರಾಸಿಪೂಜೆಯನ್ನು ಮಾಡಿದ. ಕಣದ ಸುತ್ತೆಲ್ಲ 'ಸರುಗ' ಚೆಲ್ಲಿದ (ದಿಬಾಠ. ೩). **ಚೆರಗ ತೂರಾಡು** = ಯಥೇಚ್ಛವಾಗಿ ಚೆಲ್ಲು ; ಹಾಳು ಮಾಡು ; ಪೋಲುಮಾಡು : ತನ್ನ ಹರೆಯದ ರೂಪಿನ ಚೆರಗ ತೂರಾಡ ಬಾರದೆಂದು ಬಸವಂತಿ ಜಪ್ಪಿಸುತ್ತಿದ್ದಳು (ದೀಜಕ. II, ೦೪೦)
[ <ಸಂ. ಚರುಕ ]

**ಚರುಗು** 'ಚರುಗ' ನೋಡಿ.

**ಚರುಪು** 'ಸೆಚಿಪು' ನೋ.

**ಚರುವಿಗೆ** 'ಚರಿಗೆ₁' ನೋ.

**ಚರುವೆ** 'ಚರಿಯೆ' ನೋ.

**ಚರೆ, ಚೆರೆ** (ನಾ). ಬಂದೂಕಿನಿಂದ ಹಾರಿಸುವ ಚಿಕ್ಕ ಸೀಸದ ಗುಂಡು ; ಸಿಡಿಮದ್ದು : ಕೋವಿಯನ್ನು ಕೆಳಗೂ ಮೇಲೂ ಅಲ್ಲಾಡಿಸುತ್ತಿದ್ದಾಗ ಎಲ್ಲಿಯೋ ಚರೆಯಲ್ಲ ನೆಲಕ್ಕುರುಳಿ ಹೋಗಿದ್ದುವು (ಕಾಮೂರು. ೫೦). **ಚೆರೆ** : ಸಿಡಿಮದ್ದು ಚೆರೆ ಬಿದ್ದು, ಜಗ್ಗದೆಯ ನುಗ್ಗಿದರು (ಕಂಗೀಕ. ೨೨-೧) ; ಜೇಬಿನಿಂದ ಚೆರೆಯನ್ನು ತೆಗೆದು ಅಂಗೈಯ ಮೇಲೆ ಅದರ ಪ್ರಮಾಣ ನಿರ್ಣಯ ಮಾಡುತ್ತಿದ್ದಾಗ ಕೋಳಿ . . . ಓಡತೊಡಗಿತು (ಕಾನೂರು. ೪೩)
[ ←ಹಿಂ. ಮರಾ. ಛರ್ರಾ ]

**ಚರೆಗುಂಡಿನಗಿಡ** (ನಾ). ಒಂದು ಬಗೆಯ ಸಸ್ಯ : ಕ್ಯಾನ್ನಾಗಿಡ, ಚರೆಗುಂಡಿನ ಗಿಡ, ಸರ್ವಜಯ, ಹೂದಿಂಗಣ (ಪ್ರಕಿಗಿ. ೦೭-೨೯೯).
[ ? + ಗಿಡ (<ಗಿಡು) ]

**ಚರೆಯು** 'ಚರಿಯೆ' ನೋ.

**ಚರ್ಕಣ** (ನಾ). ಹೆಂಡ ಕುಡಿಯುವುದರಿಂದುಂಟಾದ ಮದ (?) : ಪಾನಂಗೋಷ್ಠಿಕೆಯದಾಪಾನಂ ಶುಂಡಾಪ್ರಪಾನಂ ಕಳ್ಳುಡಿಹ ಕಡುಸೊರ್ಕಿನ ಚರ್ಕಣಂ ತಾನದು ಪೆಸರೊಳದುಂ (ಪಸ್ತುಕೋ. ೯೩-೬). [ ? ]

**ಚರ್ಚನೆ** (ನಾ). ಗಂಧ ಮೊದಲಾದುವುಗಳನ್ನು ಮೈಗೆ ಲೇಪಿಸುವುದು ; ಅನುಲೇಪನ. 'ಚರ್ಚನೆಗೈ' ಪರಾ.
[ ಸಂ. ಚರ್ಚನ ]

**ಚರ್ಚನೆಗೈ** (ಕ್ರಿ). ಬಳಿ ; ಲೇಪಿಸು : ಮಿಡುಗುವ ಕುಂಕುಮ ಗಂಧವ ಮುನಿಗಳ ಚರಣಕ್ಕೆ ಚರ್ಚನೆಗೈದು (ಜ್ಞಾನಕ. ೨೭-೮೭).
[ ಚರ್ಚನೆ + ಗೈ (<ಕೆಯ್₁) ]

**ಚರ್ಚರಂ** 'ಚಚ್ಚರಂ' ನೋ.

**ಚರ್ಚರಿ** (ನಾ). ೧. ಉಲ್ಲಾಸದ ಆಟ ; ವಿನೋದ ; ಚಲ್ಲಾಟ. ೨. ಸಂತೋಷದ ಕೂಗು ; ಹರ್ಷೋದ್ಗಾರ. ೩. ಒಂದು ಬಗೆಯ ಹಾಡು ; ನೃತ್ಯಗೀತ : ಸಂಗೀತದಿಂಚರಮನನುಸರಿಸಿ ಪೌರಜನಂಗಳ ಚರ್ಚರಿಯ ನಿನದಂ ಪೆರ್ಚುತಿರೆ (ಮಿತ್ರಗೋ. ೭) ; ಗರಿಯ ವಿಶ್ವಿರನೊ ಕಿನ್ನರನೊ ಬಗೆವೆದೆಯ ಮಾಧುರಿಯನರುಹೆಮಗೆಂದುಮಾಲಿಸಿಲ್ಲ ಸುರೆಯ ಚರ್ಚರಿದಲಕ್ಕರೆಯ ಸಂಸ್ಕೃತಿ ಎದೆ ಸುರಿದಿಂತು ದಿವ್ಯ ಹರ್ಷಾವೇಶವಂ (ಗಿರಿವಿಂ. ೭-೭೩೭). [ ಸಂ. ಚರ್ಚರೀ ]

**ಚರ್ಚಾಕೂಟ** (ನಾ). ಚರ್ಚೆ ನಡೆಯುವ ಸಭೆ ; ಆಯ್ದುಕೊಂಡ ಒಂದು ಹೇಳಿಕೆಯಲ್ಲಿ ಪೂರ್ವಪಕ್ಷ ಉತ್ತರಪಕ್ಷಗಳಾಗಿ ಅಥವಾ ಪಕ್ಷ-ವಿರುದ್ಧ ಪಕ್ಷಗಳಾಗಿ ವಾದಮಾಡುವ ಸಭೆ: ಉಪಾಧ್ಯಾಯ–ವಿದ್ಯಾರ್ಥಿ ಸಹಕಾರ ಬೋಧನಕ್ರಮ – ಇದು ಚರ್ಚಾಕೂಟದ ಬೋಧನಕ್ರಮದಂತಿದ್ದು . . . ಯೂರೋಪಿನಲ್ಲಿ ಮುಂತಾದೆಡೆ ಪ್ರಚಾರಕ್ಕೆ ಬಂತು (ಶಿಕ್ಷದ. ೨೯೮) ; ಚರ್ಚಾಕೂಟಕ್ಕಾಗಿ . . ಗ್ರಂಥಾಲಯದ ಕಟ್ಟಡದಲ್ಲಿ ಪ್ರತ್ಯೇಕ ಕೋಣೆಗಳಿರಬೇಕು (ಗ್ರಂಥಾಂ. ೬). [ ಸಂ. (ಚರ್ಚಾ + ಕೂಟ) ]

**ಚರ್ಚಾತೀತ** (ಗು). ವಾದಕ್ಕೆ ನಿಲುಕದ,–ಮೀರಿದ ; ವಾದಾತೀತವಾದ : "ಚರ್ಚಾಸ್ಪದವಲ್ಲದ; ಚರ್ಚಾತೀತ" (Beyond dispute. ಇಕ್ತ್ರಿ. ೩೨). [ ಸಂ. (ಚರ್ಚಾ + ಅತೀತ) ]

**ಚರ್ಚಾಮಂದಿರ** (ನಾ). ಚರ್ಚೆ ನಡೆಸುವ ಮಂದಿರ : ನ್ಯಾಯದರ್ಶಿಗಳು ಗುಂಪುಗುಂಪಾಗಿ ಹೊರಟು ಚರ್ಚಾಮಂದಿರದಲ್ಲಿ ಸೇರಿದರು (ಪ್ರಣಯ. ೩೭). [ ಸಂ. (ಚರ್ಚಾ + ಮಂದಿರ) ]

**ಚರ್ಚಾಸ್ಪದ** (ಗು). ಚರ್ಚೆಗೆ ಅವಕಾಶವಿರುವ ; ಚರ್ಚೆಮಾಡಬೇಕಾದ ; ವಾದವಿವಾದಗಳಿಗೆ ಈಡಾಗಿರುವ : ಇದೇ ಸಂದರ್ಭದಲ್ಲಿ ಚರ್ಚಾಸ್ಪದವಾದ ೨ನೆಯ ಸೂತ್ರವು ಹೊಸ ಪ್ರತಿಯಲ್ಲಿ ಬಾಧಿದೆ (ಕಮಶಾಂ. ೫೧). [ ಸಂ. (ಚರ್ಚಾ + ಆಸ್ಪದ) ]

**ಚರ್ಚೆ** (ನಾ). ೧. ಚರ್ಚೆ ; ವಾಕ್ಕಲಹ : ಜೂಜಾಟಕೆ ಸೋಲೆಬಂಟಿಕೆ ರಣದ ಸಂವಾದ ವೆಗ್ಗಳಿಗಳ ಚರ್ಚೆ ರಾಜವೀಧಿಯೊಳಿಡಾಡುವ ಸಂದಣಿ ಸಮಾಜದು ನಿತ್ಯಕೃತ್ಯದಲಿ (ಪ್ರೋಹಕ. ೨೦-೨೬). ೨. ವಿಚಾರಣೆ ; ಪರಿಶೋಧನೆ. [ ಸಂ. ]

**ಚರ್ಚಿಕೆ** (ನಾ). ಗಂಧಾದಿಗಳನ್ನು ಬಳಿಯುವಿಕೆ ; ಅನುಲೇಪನ : ನವ ಪಿಷ್ಟ ಚರ್ಚಿಕಾಕಸ್ತ್ರಮುಪಾತ್ತ ದರ್ಭರಚನಂ . . . ಪೂರ್ಣ್ಣ ಕಲಶಂ ತಳೆದತ್ತು ತುಳಂ ವಿಳಾಸಮಂ (ಚಂದ್ರಪ್ರ. ೬-೫೩). [ ಸಂ. ಚರ್ಚಿಕಾ ]

**ಚರ್ಚಿತ** (ಗು). ೧. ಬಳಿದ; ಸವರಿದ; ಲೇಪಿಸಿದ: ನಾಕಲೋಕಾಚಾರ ಚರ್ಚಾಚರ್ಚಿತ ಸುರಭಿ ನವೋರು . . . ಸಮುತ್ತುಂಗ ಮಣಿಪೀಠಪ್ರತಿಮಮಪ್ಪ ಸೌಧರ್ಮೇಂದ್ರನುತ್ಸಂಗದೊಳ್ ತೀರ್ಥಕರಕುಮಾರಕನಿರೆ (ಶಾಂತಿಪು. ೧೦-೧೩ ವ); ಘನಸಾರಸುರಭಿ ಮಳಯರುಹ ಚರ್ಚಿತಮುಂ . . . ಸ್ವಸ್ತಿಕಪ್ರಶಸ್ತ ಮಣಿದರ್ಪಣಾ ಸಮರ್ಪಿತಮುಮಪ್ಪ ಕಳಧೌತ ಮಂಗಳ ಕಳಶಮಂ ಬಳಸಿ (ಮಲ್ಲಿಪು. ೯-೧೦೦) ; ಮಂಜುಳ ಹಾರದ್ರ ಕುಂಕುಮಚರ್ಚಿತಾಂಗದಿಂ ಚೆಲ್ವಿಂದೆ ಸಂಗಡಿಸಿದ ಅಂಜಲಿಗಳಿಂ ಮೆರೆವ ದಂಪತಿಗಳಭಿನಮಿಸೆ (ಕೃಮಿಖಾ. ೩೦-೩೨). ೨. ಚರ್ಚಿಸಿದ; ವಿಚಾರಿಸಿದ ; ವಿಮರ್ಶೆಮಾಡಿದ. ೩. ಇಚ್ಛಿಸಿದ ; ಬಯಸಿದ. [ ಸಂ. ]

**ಚರ್ಚಿಸು** (ಕ್ರಿ). ೧. ವಾದ ಮಾಡು ; ವಿವಾದ ಮಾಡು : ದೇವರಕ್ಷಕನಪ್ಪುದಾಗಮಮನೋವದೆ ಮೆಚ್ಚಿ ಚರ್ಚಿಸದಿರ್ಪುದೊಯ್ಯನೆ ವಾವದೊಳ್ (ಧರ್ಮಾಮೃ. ೫-೧೦೦). ೨. ಪರಿಶೀಲಿಸು ; ವಿಚಾರಿಸು ; ಯೋಚಿಸು : ಕೇಳಿಮಿದಿಂತುಟೆಂದು ಚರ್ಚಿಸಿ ನಾಡಿವಂತು ಬೇಟ ಪಡಿತಾವುದು ಕೇಳಿಕೆಯುಂ ವಿಟತ್ವಮುಂ (ಶಾಂತಿಪು. ೮-೯೧); ಸುಮತಿ . . . ಅವರ ಬಗೆಯ ನಱಿದುಪಾಯಮನಾಗಳೆ ಚರ್ಚಿಸಿ (ಸುಕುಮಾ. ೬-೧೫ ವ); ಕವ್ವೊಳ್ ಚರ್ಚಿಸಿ ಕಳ್ವೊಳ್ ವಿಷಮಂ ಬೆರೆಯಿಸಿಕೊಂಡು ಬಂದರ್ (ಧರ್ಮಾಮೃ. ೨-೨೦೦); ಸಾಧಕಬಾಧಕಗಳನ್ನು ಮುಂದಿಟ್ಟು ಸ್ಪಷ್ಟವಾಗಿ ಚರ್ಚಿಸಿದರು (ಹಿಂಕಿಯ. ೩೫). [ ಚರ್ಚೆ + – ಇಸು$_3$ ]

**ಚರ್ಚು$_1$**, ಚಚ್ಚು$_3$, ಚೆಚ್ಚು$_3$ (ಕ್ರಿ). (ಕಂಕುಳಲ್ಲಿ) ಎತ್ತಿಕೊಳ್ಳು: "ಚರ್ಚು –ಶಿಶುಸಂಧಾರಣೇ "(ಶಮಧಾ. ಪ); ಚರ್ಚಲ್ ಶಶಿಶಿಶುವಂ ಕಱಿಗರ್ಚಲ್ ಘನಘಟಿಯುಮರ್ಚಲಮರದ್ರುಮಮಂ . . . ಒಡರ್ಚಿದುವೆನೆ ನೀಳ್ದುವಿದಱ ಶಿಖರಕರಂಗಳ್ (ಕಾವ್ಯಾವ. ೫೫೬). **ಚಚ್ಚು$_3$**: ಮಗುವನ್ನು ಬಗಲಿಗೆ ಚಚ್ಚಿಕೊಂಡು (ಮರಮ. ೨೭); ಅವನನ್ನು ಬಗಲಲ್ಲಿ ಚಚ್ಚಿಕೊಂಡೇ ಅಚ್ಯುತನ ವಿರಾಮ ಕಳೆಯುತ್ತದೆ (ಮುಗಿಯು. ೩೯೦). **ಚೆಚ್ಚು$_3$**: ತುಂಬಿದ್ದ ಕೊಡವನ್ನು ಹಗ್ಗದ ಕೊಂಡಿಯಿಂದ ಬಿಡಿಸಿ, ಸೊಂಟಕ್ಕೆ ಚೆಚ್ಚಿ ಬಚ್ಚಲ ಮನೆಯತ್ತ ನಡದೇಬಿಟ್ಟಳು (ಮೂರುದಾ. ೦೯೭). [ ? ]

**ಚರ್ಚು$_2$** (ನಾ). ಕ್ರೈಸ್ತರ ಪ್ರಾರ್ಥನಾಮಂದಿರ : ಚರ್ಚಿನ ಗೋಪುರದಿಂದ ಬರುವ ಗಂಟೆಯ ಸದ್ದು (ಮಲಿನಾ. ೦). [ ←ಇಂ. Church ]

**ಚರ್ಚೆ** (ನಾ). ೧. ಸುಗಂಧದ್ರವ್ಯಗಳ ಅನುಲೇಪನ : "ಸಮಾಲಂಭನಂ, ಚರ್ಚಾ, ಮಾರ್ಷ್ಟಿ–ಈ ೩ ಚರ್ಚೆ" (ಹಲಾಯು. ೮೯-೩೮೭); ತರಳೆಕೆ ತಂದ ಚಂದನದ ಚರ್ಚೆಗಳಿಂ . . . ಮೂರ್ಛೆಯಿಂದೆಚ್ಚತ್ತು (ಕಾದಂಪೂ. ೮೮೪) ; ಮೃಗಮದ ಕುಸೃಣ ಚಂದನ ಚರ್ಚೆಯೊಳಿಂ (ಜಗವಿ. ೬-೮೦ ವ). ೨. ಚಿಂತನೆ ; ಮನಸ್ಸಿನಲ್ಲಿ ಮತ್ತೆ ಮತ್ತೆ ಆಲೋಚಿಸುವುದು ; ಪರ್ಯಾಲೋಚನೆ : "ಚಿಂತೆಯಲ್ಲಿಯುಂ ಚರ್ಚಾ ಎಂಬುದು" (ಹಲಾಯು. ೧೩೨-೮) ; ಕವಿಕಾವ್ಯದ ವಿಷಯವಾಗಿ ಕೆಲವು ಮಾತುಗಳನ್ನು ಚರ್ಚೆಗೆ ಎತ್ತಿಕೊಂಡಿರುವರು (ಸಾಹಿಸ. ೦೦೪). ೩. ದುರ್ಗೆ; ಚಾಮುಂಡಿ; ಭೈರವಿ: "ಚಾಮುಂಡಿ ಕರ್ಣಮೋಟಿ ಮಹಾ ಮಾಯಾಮೂರ್ತಿ ಚರ್ಚೆಯುಂ ಭೈರವಿಯಾ ನಾಮಮಿವಕ್ಕುಂ" (ಪಶುಕೋ. ೪-೦೯) ; "ಚಾಮುಂಡಿ ಚರ್ಚೆ ಭೈರವಿಯೆನಲು ವನದೇವಿ" (ಮಂಗರಾ. ೫-೦೪). ೪. ಕಾರಣ ಸಹಿತವಾಗಿ ವಿಮರ್ಶಿಸುವುದು; ತರ್ಕ. ೫. ವಾಗ್ವಾದ; ವಿವಾದ. ೬. ಉತ್ಸವ ; ಸಂತೋಷ ; ಉಲ್ಲಾಸ : "ಮುದಮವಲು ಚರ್ಚೆ" (ಮಂಗರಾ. ೪೭-೦೬). ೭. ರತಿಕ್ರೀಡೆ: ಮೈಥುನ. ೮. ಮಾತು; ಉಕ್ತಿ. ೯. ವ್ರತ. ೧೦. ಪ್ರತಿಮೆ. ೧೧. ನೀರುಗುಳ್ಳೆ ; ಬುದ್ಬುದ. "ಸ್ನೇಹಂ ಯುಕ್ತಿ ಪ್ರತಿಮೋತ್ಸಾಹಂ ವ್ರತ ಚಿಂತೆ ಚಂಡಿಕಾದೇವಿಯರುಂ ದೇಹಕ್ಕನುಲೇಪನಕಂ ಮೋಹದಿ ಪುಟ್ಟುವದು ನವಮ ಚರ್ಚಾಶಬ್ದಂ" (ನಾನಾಕೋ. ೦೦೩); "ರತಿಯೊಳ್ ಚಿಂತೆಯೊಳ್ . . . ವ್ರತದೊಳ್ ಲೇಪನಬುದ್ಬುದೋತ್ಸವಗಳೊಳ್ ಚರ್ಚಾಭಿಧಾನಂ" (ನಾನಾರ. ೭೪). [ ಸಂ. ಚರ್ಚಾ ]

**ಚರ್ಚೆಗೈ** (ಕ್ರಿ). ೧. ಬಳಿ; ಸವರು. ೨. ನೇವರಿಸು: ಪೊಚ್ಚ ಪೊಸ ಸುರಚಾಮರಂತೆಸೆವ ವಾಲಧಿಯ ಚರ್ಚೆಗೈವುತಮಣೆದು ಕೊರಳ ಕೊಂಕಿಸಿ ಮರುತನಚ್ಚರಿಯ ಕುವರ . . . ಉಲ್ಲಾಸದಿಂದೆಸೆದನು (ಪಂಚಾರಾ. ೫-೧-೦೫). ೩. ಚರ್ಚೆಮಾಡು; ಚರ್ಚಿಸು; ವಾದಿಸು. [ಚರ್ಚೆ+ಗೈ (<ಕೆಯ್$_1$)]

**ಚರ್ದಿ** (ನಾ). ಕಾರಿಕೊಳ್ಳುವಿಕೆ; ಓಕರಿಕೆ: ವಾಂತಿ; ವಮನ. 'ಚರ್ದಿಸು' ಪರಾ. [ <ಸಂ. ಛರ್ದಿ ]

**ಚರ್ದಿಸು** (ಕ್ರಿ). ಓಕರಿಸು ; ಕಾರಿಕೊಳ್ಳು ; ವಾಂತಿಮಾಡು : ಕಡೆ ವಿಧಿಪೂರ್ವಕಂ ಸುರಸಮಪ್ಪುದನ್ನಮನುಂಡು ತೃಪ್ತಿಯಂ ಪಡೆದು ಬಱಿಕ್ಕೆ ಚರ್ದಿಸಿದೊಡಂತದನಾ ಸತಿ ತನ್ನ ಕೈಗಳಿಂದುಡುಗಿ (ಮಹಾಸೀ. ೬-೦೩೪). 'ಛರ್ದಿಸು' ಪರಾ. [ ಚರ್ದಿ + – ಸು$_1$ ]

**ಚರ್ಪಟಿಸು** (ಕ್ರಿ). ೧. ಶಂಕರಾಚಾರ್ಯರ ಚರ್ಪಟಮಂಜರಿ ಸ್ತೋತ್ರವನ್ನು ಹೇಳು. ೨. ಹೀಯಾಳಿಸು; ಬಡಬಡಿಸು. ೧, ೨: ಜೀವದ ಚಿತ್ತು ಜಗತ್ತಿನ ಸತ್ತು ತಿಳಿದಾನಂದದ ಸಂವಿತ್ತು. ಚರ್ಪಟಿಸಲಿ ಅದ್ವೈತದವಾದ ದಾಣ ಬೊಮ್ಮ ಮೌನದೊಳಿತ್ತು (ಅರಳು. ೨೫೦-೩). [ ಚರ್ಪಟ$_0$ + – ಇಸು$_3$ ]

**ಚರ್ಬಿ**, ಚರಬಿ (ನಾ). ಕೊಬ್ಬು ; ನೆಣ ; ಮಜ್ಜೆ : ಚರ್ಬಿ ಇಲ್ಲದ ನನ್ನ ಮಗ ಇವನು (ಧೀಮಂತ. ೨೨೨). **ಚರಬಿ**: ಅಲ್ಲಿ ಸ್ವಲ್ಪ ಚರಬಿ ಇಟ್ಟಿದ್ದೆ. ತಂದುಕೊಡು ಕತ್ತಿಗೆ ಹಚ್ಚಬೇಕು (ಮರಳಿಮ. ೯೪) ; ಚರಬಿ ಮಿಶ್ರಿತ ಇಂಗ್ರೇಜೀ ಬಿಸ್ಕೀಟುಗಳನ್ನು ತಿಂದು ನಿಮ್ಮ ಸ್ವಾಸ್ಥ್ಯವನ್ನು ಕಳೆದುಕೊಳ್ಳಬೇಡಿರಿ (ಕುರಿಹಿಂ. ೦೩೩) ; [ ←ಪಾರ. ಚರ್ಬೀ; ಹಿಂ. ಮರಾ. ಚರಬೀ ]

**ಚರ್ಮ** (ನಾ). ೧. ತೊಗಲು ; ತ್ವಕ್ಕು ; ಅಜಿನ : "ಕೋಲ್ ತೊವಲುಂ ಸಮ್ಮವುದಿರದಕ್ಕುಂ ಚರ್ಮ" (ಶಬ್ದ. ೮೫). ೨. ಗುರಾಣಿ; ಢಾಲು: "ಖೇಟಕಂ, ಫಳಕಂ, ಚರ್ಮ, ಆವರಣಂ—ಈ ೪ ಹರಿಗೆ" (ಹಲಾಯು. ೭೬-೩೦೬). [ ಸಂ. ಚರ್ಮನ್ ]

**ಚರ್ಮಕಶೆ** (ನಾ). ಸೀಗೆಮರ ಮತ್ತು ಅದರ ಕಾಯಿ [ <ಸಂ. ಚರ್ಮಕಷಾ ]

**ಚರ್ಮಕಾರ** (ನಾ). ಮೆಟ್ಟು ಹೊಲಿಯುವವನು; ಚಮ್ಮಾರ; ಸಮಗಾರ: "ಡೋಹಾರಃ— ಚರ್ಮಕಾರಂ" (ಕಾಕ್ಕ. ೬೬) ; ಹೊಲೆಯನೊಮ್ಮೆಯು ಪಾಡಲಿಕೆಯರವಿಂದನಾಭನ ನಾಮಮಾತ್ರದಲಿ ರೂಢಿಸಿಯೆನಾತ ಚರ್ಮಕಾರರ ಗೂಡಿನಲಿ ಜನಿಸುವನು (ಕುಮಾ.ಆ. ೬೦೩. ೫೦. ೩೪೩). [ ಸಂ. ]

**ಚರ್ಮಕೃತ್ತು** (ನಾ).=ಚರ್ಮಕಾರ : "ಚರ್ಮಕೃತ್, ಪಾದುಕಾಕಾರಃ— ಈ ೨ ಸಮ್ಮಗಾರಂ" (ಹಲಾಯು. ೯೮-೪೪೨). [ ಸಂ. ಚರ್ಮಕೃತ್ ]

**ಚರ್ಮಗತ** (ಗು). ಚರ್ಮಕ್ಕೆ ಸೇರಿದ; ಚರ್ಮಕ್ಕೆ ಸಂಬಂಧಿಸಿದ: ಅನ್ನಗತ ಪ್ರಾಣ, ಚರ್ಮಗತ ದೃಷ್ಟಿ (ಗಾಥ). [ ಚರ್ಮ + ಗತ ]

**ಚರ್ಮಘರ್ಘರ** (ನಾ). ಎಣ್ಣೆ ಮೊದಲಾದುವನ್ನು ಹಾಕಲು ಮಾಡಿದ ಚರ್ಮದ ಬುದ್ದಲಿ,-ಬುದ್ದಿ : "ಚರ್ಮಘರ್ಘರ[ಪಾಠಾಂ. ಗರ್ಘಟ, ಗರ್ಘರ]ವೆನಲು ಬುದ್ದಳಿಗೆ ನಾಮಮಕ್ಕುಂ" (ಮಂಗರಾ. ೩೬-೨೬). [ ಚರ್ಮ + ಘರ್ಘರ (<ಗರ್ಘರಿ) ]

**ಚರ್ಮಚಕ್ಷು** (ನಾ). ಪ್ರಾಕೃತಿಕವಾದ ಕಣ್ಣು ; ಭೌತಿಕ ದೃಷ್ಟಿ; ಹೊರಗಣ್ಣು : ಈ ಚರ್ಮಚಕ್ಷುಗಳಿಂ ಕಾಣ್ಬ ಪದಾರ್ಥಮಿಲ್ಲೆನುತೆ (ಜಗ. ೦-೬೩) ; ಚರ್ಮಚಕ್ಷುಗಳಂತೆ ಅಂತಃಚಕ್ಷುಗಳೂ ಉಪಯೋಗಕ್ಕೆ ಬಾರದ ಧೃತರಾಷ್ಟ್ರನಂಥ ವರ್ಗವನ್ನು ಅಪವಾದವೆಂದು ಬಿಟ್ಟು ಬಿಟ್ಟರೂ (ಪ್ರಬಂಧ. ೪೭). [ ಚರ್ಮ + ಚಕ್ಷು ]

**ಚರ್ಮಣ** (ನಾ). ವಾಗ್ಮಿ ; ಅವಧಾನಿ ; ಅನೇಕರ ಪ್ರಶ್ನೆಗಳಿಗೆ ಏಕಕಾಲದಲ್ಲಿ ಕೊಡಲೆ ಉತ್ತರ ಹೇಳಬಲ್ಲವನು : "ಮೇಳ್ಕಿಸಿ ನಾನಾರವಕ್ಕೆ ಪ್ರತಿಗೈವವಂ ಚರ್ಮಣಂ ವಾಗ್ಮಿಯಕ್ಕುಂ" (ಮಂಗರಾ. ೦೦೬-೦೬). [ ? ]

**ಚರ್ಮದಂಡ** (ನಾ). ಚರ್ಮದಿಂದ ಮಾಡಿದ ಚಾಟಿ ; ಕಶಾದಂಡ ; ಬಾರುಕೋಲು; ಚಮ್ಮಟಿಗೆ: "ಚರ್ಮದಂಡಃ, ಕಶಾ—ಈ ಚಮ್ಮಟಿಗೆ" (ಹಲಾಯು. ೭೬-೨೯೯) ; "ಕಸೆ ಚರ್ಮದಂಡಮೆನೆ ಚಮ್ಮಟಿಗೆಯೆನಿಸಕ್ಕು" (ಮಂಗರಾ. ೮೦-೦೩). [ ಚರ್ಮ + ದಂಡ ]

**ಚರ್ಮಪಟ್ಟಿಕೆ** (ನಾ). ೧. ಚರ್ಮದ ಬಾರು. ೨. ಪಗಡೆ ಮೊದಲಾದುವನ್ನು ಆಡಲು ಬಳಸುವ ಚರ್ಮದ ಹಾಸು ; ಪಟ್ಟಿ. [ ಚರ್ಮ + ಪಟ್ಟಿಕೆ ]

**ಚರ್ಮಪಾದುಕ** (ನಾ). ತೊಗಲಿನ ಹಾವುಗೆ ; ಚರ್ಮದಿಂದ ಮಾಡಿದ ಮೆಟ್ಟು ; ಪಾದರಕ್ಷೆ : "ಚರ್ಮಪಾದುಕಮುಪಾನತಿಯೆನಲ್ ಕೆರವು" (ಮಂಗರಾ. ೬೦-೦೪). [ ಸಂ. ಚರ್ಮಪಾದುಕಾ ]

**ಚರ್ಮಪಾದುಕೆ** (ನಾ).=ಚರ್ಮಪಾದುಕ. [ ಚರ್ಮ + ಪಾದುಕೆ ]

**ಚರ್ಮಪಾಶ** (ನಾ). ಚರ್ಮದಿಂದ ಮಾಡಿದ ಹಗ್ಗ,-ಮಿಣಿ : "ಮಿಣಿ ಚರ್ಮಪಾಶಂ" (ಮಂಗರಾ. ೮೪-೨೫). [ ಚರ್ಮ + ಪಾಶ ]

**ಚರ್ಮಪ್ರಭೇದಿಕೆ** (ನಾ). ಚಮ್ಮಾರನು ಉಪಯೋಗಿಸುವ ಚೂರಿ,-ಉಳಿ ; "ಚರ್ಮ ಕತ್ತರಿಸುವ ಸಾಧನ" (ಅಮರ. ೮೮೪). [ ಸಂ. ಚರ್ಮಪ್ರಭೇದಿಕಾ ]

**ಚರ್ಮಪ್ರಸೇವಿಕೆ** (ನಾ). ತಿದಿ : "ಚರ್ಮಪ್ರಸೇವಿಕೆ = ಕೊಗಲ ತಿದಿ" (ಗಂಗಾಮ. ೦೨೯). [ ಸಂ. ಚರ್ಮಪ್ರಸೇವಿಕಾ ]

**ಚರ್ಮಯಷ್ಟಿ** (ನಾ).=ಚರ್ಮದಂಡ : "ಕಶಾಹ್ವಯಂ ಚರ್ಮಯಷ್ಟಿ" (ಪಶು.ಕೋ. ೮೬-೨೫). [ ಚರ್ಮ + ಯಷ್ಟಿ ]

**ಚರ್ಮಯಷ್ಟಿಕೆ** (ನಾ).=ಚರ್ಮದಂಡ. [ ಚರ್ಮ + ಯಷ್ಟಿಕೆ ]

**ಚರ್ಮರತ್ನ** (ನಾ). [ಜೈನ] ಚಕ್ರವರ್ತಿಯಾಗುವವನಿಗೆ ತಾನಾಗಿ ದೊರಕುವ ಏಳು ಅಜೀವರತ್ನಗಳಲ್ಲಿ ಒಂದು : ೧ ನೀರಿನ ಮೇಲೆ ತೇಲಿ ಹೋಗಲು ಉಪಯೋಗಿಸುವ ಚರ್ಮದ ಸಾಧನ. ಇದರ ಪ್ರಭಾವದಿಂದ ಚಕ್ರವರ್ತಿಯು ಅಗಾಧ ಜಲದುರ್ಗಗಳನ್ನು ಆಕ್ರಮಿಸಬಲ್ಲನು. ಮಳೆ ಬಂದಾಗ ಮೇಲೆ ಛತ್ರರತ್ನವನ್ನು ಹಿಡಿದು, ಚರ್ಮರತ್ನದ ಮೇಲೆ ಅಪಾರ ಸೈನ್ಯದೊಡನೆ ನಿಶ್ಚಿಂತನಾಗಿ ನಿಂತುಕೊ ಳ್ಳ ಬ ಹು ದು : ಅಗಾಧಜಲದುರ್ಗಸಮುತ್ತರಣನಿರತಸಕಲಶಿಬಿರಸಂಧಾರಣಶಕ್ತಿಯುಕ್ತಮಪ್ಪ ವಜ್ರಮಯಮೆಂಬ ಚರ್ಮರತ್ನಮುಂ (ಆದಿಪು. ೧೧-೩ ವ) ; ನೆಲನೆಲ್ಲಮನವರೇಕಾರ್ಣವಂ ಮಾಡಿದೊಡಡಿಯೊಳ್ ಪಾಸಿದ ಚರ್ಮರತ್ನಮುಂ ಮೇಲೆ ಪಿಡಿದ ಛತ್ರರತ್ನಮುಂ ಕಾಯೆ(ಆದಿಪು. ೯-೩೪ ವ); ಗಗನತಳದಂತೆ ಪೆರ್ಮೆಯಂ ತಳೆದ ವಜ್ರಮಯಮೆಂಬ ಚರ್ಮರತ್ನಮುಂ (ಚಂದ್ರಪ್ರ. ೬-೧೧೦ ವ). [ ಚರ್ಮ + ರತ್ನ ]

**ಚರ್ಮವಾದ್ಯ** (ನಾ). ತೊಗಲಿನಿಂದ ಮಾಡಿದ ಹರೆ, ಮೃದಂಗ, ತಬಲ ಮುಂತಾದ ವಾದ್ಯ: ಇಲ್ಲಿ ಚಂಡೆ . . . ಎಂಬ ಒಂದು ಚರ್ಮವಾದ್ಯವನ್ನು ಉಪಯೋಗಿಸುತ್ತಾರೆ (ಯಕ್ಷಗಾ. ೦೭). [ ಚರ್ಮ + ವಾದ್ಯ ]

**ಚರ್ಮವಾವುಗೆ, ಚರ್ಮಾವುಗೆ** (ನಾ).=ಚರ್ಮಪಾದುಕ: ಸೊಸೆವಿರ್ಗೆಲ್ಲಂ ಸರಿ ಚರ್ಮ [ಪಾಠಾಂ. ವ್ಮ] ವಾವುಗೆಯನಾ ಲಲನೆ ಮಹೋತ್ಸಾಹದಿಂದೆ ಮಾಡಿಸಿ ಕೊಟ್ಟಳ್ (ಸುಕುಮಾ. ೧೧-೦೨೦). ಚರ್ಮಾವುಗೆ: ಜನಪವೋಲಗದ ಚಾವಡಿಗೆಯ್ದಿ ಕೇಳ್ದನಾ ಚರ್ಮಾವುಗಾರವೆಂದು (ಸುಕುಮಾ. ೦೩-೫೫). [ ಚರ್ಮ + ಪಾವುಗೆ ]

**ಚರ್ಮಶಾಸ್ತ್ರ** (ನಾ). "ಚರ್ಮ ಮತ್ತು ಚರ್ಮರೋಗ ವಿಷಯಕವಾದ ಶಾಸ್ತ್ರ ; ಚರ್ಮಶಾಸ್ತ್ರ" (Dermatology. ಇಂಕಿ). [ ಚರ್ಮ + ಶಾಸ್ತ್ರ ]

**ಚರ್ಮಸೇವನ** (ನಾ). ತಿದಿ : "ಧೃತಿ ಚರ್ಮಸೇವ[ವ]ನಮೆನಲ್ಕೆ ತಿದಿಯಕ್ಕು" (ಮಂಗರಾ. ೦೩೬-೩೦). [ ಸಂ. (ಚರ್ಮ + ಸೇವನ) ]

**ಚರ್ಮಾಂಬರ** (ನಾ). ತೊಗಲಿನ ಬಟ್ಟೆ, - ವಸ್ತ್ರ, - ಉಡುಗೆ : ಹರಿಣಶಾರ್ದೂಲಾದಿ ಚರ್ಮಾಂಬರವೆ ಸಮುಟಟ್ಟೆವಾಗೆ ರತ್ನಾಭರಣವೇ ರುದ್ರಾಕ್ಷಿಯೆಂದಳು ನಗುತ ತರಳಾಕ್ಷಿ (ಕುಮಾ.ಆ. ೨೦-೬). [ ಚರ್ಮ + ಅಂಬರ ]

**ಚರ್ಮಾಕ್ಷಿ** (ನಾ). = ಚರ್ಮಚಕ್ಷು : ಹರನನೀ ಚರ್ಮಾಕ್ಷಿಯಲಿ ಗೋಚರಿಸಬೇಡಿದುದಂಬು ಮರ್ತ್ಯದೊಳರವು ಮರುಳು ಭಾಪ್ಪ ಪುಣ್ಯವೆನುತ್ತ ಬಿಸುಸುಯ್ದು (ಕುಮಾ.ಆ. ೬-೨). [ ಚರ್ಮ + ಅಕ್ಷಿ ]

**ಚರ್ಮಾಯತನವಕ್ಕಿ** (ನಾ). ಬಾವಲಿ ; ಕಣ್ಣುಕಪ್ಪಡಿ : ಜಠನದಪ್ಪದ ಕೊನೆವಿಡಿದು ನೇಲುವ ಚರ್ಮಾಯತನವಕ್ಕಿಯ ಕಂಡು ನಗುತೆ (ಪ್ರಭುಚ. ೨೯-೬೨). [ ಚರ್ಮ + ಆಯತನ + ಪಕ್ಕಿ ]

**ಚರ್ಮಾವುಗೆ** 'ಚರ್ಮವಾವುಗೆ' ನೋ.

**ಚರ್ಮಿ** (ಗು). ೧. ಗುರಾಣಿಯನ್ನು ಹಿಡಿದುಕೊಂಡ.(ನಾ). ೨. ಹರಿಗೆ; ಗುರಾಣಿ : "ಫಳಕಂ ಖೇಟಕಂ ಚರ್ಮಿ ಹರಿಗೆಯಕ್ಕುಂ" (ಮಂಗರಾ. ೮೬-೩೦). ೩. ಗುರಾಣಿಯನ್ನು ಹಿಡಿದುಕೊಂಡವನು ; ಯೋಧ : "ಚರ್ಮಿ, ಫಲಕಪಾಣಿ-ಕಡಿತಲೆಗಾಱ" (ಪಾಠಕರಾ. ೬). ೪. "ಭುಜಪತ್ರೆಗಿಡ" (ಅಮರ. ೮೮೪). [ ಸಂ. ಚರ್ಮಿನ್ ]

**ಚರ್ಮೇಂದ್ರಿಯ** (ನಾ). ೧. ಪಂಚೇಂದ್ರಿಯಗಳಲ್ಲಿ ಒಂದಾದ ಚರ್ಮ ; ಸ್ಪರ್ಶೇಂದ್ರಿಯ. ೨. ಭೌತಿಕಜಗತ್ತಿಗೆ ಸೀಮಿತವಾದ ಇಂದ್ರಿಯ ; ಚರ್ಮೇಂದ್ರಿಯಗಳಿಗೆ ಗೋಚರಿಸುವ ಮಹಾಭೌತಿಕ ಸೃಷ್ಟಿ; ಶಬ್ದಗಳಿಂದ ಸೂಚಿತವಾಗುವ ಸಾಹಿತ್ಯ ಸೃಷ್ಟಿ; ಮನಸ್ಸಿಗೇ ಹೊಳೆಯುವ ಕಲ್ಪನಾಸೃಷ್ಟಿ (ಸಾಹಿವಿ. ೦೪೨). [ ಚರ್ಮ + ಇಂದ್ರಿಯ ]

**ಚರ್ಯೆ** (ನಾ). ೧. ನಡತೆ; ನಡೆವಳಿ: ನಾವು ಅವಳ ವಿಷಯದಲ್ಲಿ ತೋರಿಸಿದ ಚರ್ಯೆವು ಅಷ್ಟು ಶ್ಲಾಘ್ಯತರವಾದ್ದೆಂದು ಕಾಣುವುದಿಲ್ಲ (ಕಾಟಚಾ. ೩೦). ೨. ಆಚರಣೆ; ಅನುಷ್ಠಾನ: ಶೈವಾಗಮಂಗಳೆಲ್ಲವೂ ಜ್ಞಾನ, ಯೋಗ, ಕ್ರಿಯಾ, ಚರ್ಯೆ ಎಂಬ ನಾಲ್ಕು ವಿಷಯಗಳನ್ನು ವಿವರಿಸತಕ್ಕವುಗಳಾಗಿವೆ (ಕಾಕರ. ೨೦೦). [ ಸಂ. ಚರ್ಯಾ ]

**ಚರ್ಯಾಧಿಕಾರ** (ನಾ). ೧. ಅನುಷ್ಠಾನದ ಯೋಗ್ಯತೆ. ೨. ಅನುಷ್ಠಾನ ಮಾಡಿ ಸಿದ್ಧಹಸ್ತನಾದವನು: ಅರ್ಯಾಶತಕವುಂ . . . ಚರ್ಯಾಧಿಕಾರನಪ್ಪಾಕ್ಷಯರ್ಯಾಮರವಾಣಿಯಿಂದಮೆಸಗಿದನೊಲವಿಂ (ಚಾ ಕು ೦ ಕ. ೬-೧೦). [ ಸಂ. (ಚರ್ಯಾ + ಅಧಿಕಾರ) ]

**ಚರ್ಯಾಪಾದ** (ನಾ). [ವೀಶೈ] ಆಚಾರ ಸಂಪ್ರದಾಯ ಹಾಗೂ ವ್ರತಗಳನ್ನು ತಿಳಿಸುವ ಆಗಮಭಾಗ: ಚರ್ಯಾಪಾದವು ಆಚಾರಸಂಪ್ರದಾಯಗಳನ್ನೂ ವ್ರತನಿಯಮಗಳನ್ನೂ ಹೇಳುತ್ತದೆ (ಕಾಕರ. ೨೦೦). [ ಸಂ. (ಚರ್ಯಾ + ಪಾದ) ]

**ಚರ್ಯಾಮಾರ್ಗ** (ನಾ). ೧. [ಶೈವ] ಚರ್ಯಾಮಾರ್ಗ, ಕ್ರಿಯಾಮಾರ್ಗ, ಯೋಗಮಾರ್ಗ ಮತ್ತು ಜ್ಞಾನಮಾರ್ಗ ಎಂಬ ಮೋಕ್ಷ ಸಾಧನೆಯ ನಾಲ್ಕು ಮಾರ್ಗಗಳಲ್ಲಿ ಒಂದು: ಚರ್ಯಾಮಾರ್ಗ ಅಥವಾ ದಾಸ ಮಾರ್ಗದಲ್ಲಿ ಸಾಧಕನು ದೇವಸ್ಥಾನಗಳಲ್ಲಿ ಶಿವಾರ್ಚನೆಗೆ ಸಲಕರಣೆಗಳನ್ನೊದಗಿಸಿ . . . ಶಿವಭಕ್ತರ ಸೇವೆ ಮಾಡಿಕೊಂಡು . . . ಸಾಲೋಕ್ಯ ಪದವಿಯನ್ನು ಹೊಂದುವನು (ಕಾಕರ. ೨೦೭). ೨. [ಜೈನ] ಚರಿಗೆಗಾಗಿ ಹೋಗುವ ಉದ್ದೇಶ: ಚಂಪಾನಗರಕ್ಕೆ ಚರ್ಯಾಮಾರ್ಗದಿಂ ಬರುತ್ತಂ (ಸುಕುಮಾ. ೪-೨೩ ವ). [ ಸಂ. (ಚರ್ಯಾ + ಮಾರ್ಗ) ]

**ಚರ್ಯೆ** (ನಾ). ೧. ನಡೆ; ನಡತೆ; ವರ್ತನೆ: ಗುರು ಆಕೆಯ ಚರ್ಯೆಗೆ ವಶನಾಗಿ, ಆಕೆಗೆ ಧರ್ಮವನ್ನು ಉಪದೇಶ ಮಾಡಿದನು (ಚಕ್ರಾಭು. ೦೮); ಹೆಂಡತಿಯಾದವಳಿಗೆ ಗಂಡನ ಚರ್ಯೆಯಲ್ಲಿ ಮರುಅಭಿಪ್ರಾಯವನ್ನು ಸೂಚಿಸುವ ಅಧಿಕಾರವಿದೆಯೇ? (ಕಾಚಿಂ. ೦೯೩). ೨. ಅಭಿವ್ಯಕ್ತಿ. 'ಮುಖಚರ್ಯೆ', ಪರಾ. ೩. [ಜೈನ] ಅಹಿಂಸೆಯ ಪ್ರತಿಜ್ಞೆ.-ಆಚರಣೆ: ಚರ್ಯೆಯೆಂಬುದು ದೇವತಾರ್ಥಮುಂ ಮಂತ್ರಸಿದ್ಧ್ಯರ್ಥಮುಂ ಔಷಧಾರ್ಥಮುಂ ಆಹಾರಾರ್ಥಮುಂ ಭೋಗಾರ್ಥಮುಮಾಗೆ ಜೈನನಪ್ಪಾತಂ ಹಿಂಸೆಗೆಯ್ವನಲ್ಲಂ (ಚಾಪುಂಪು. ೨೧೬). [ ಸಂ. ಚರ್ಯಾ ]

**ಚರ್ವಣ** (ನಾ). ೧. ಅಗಿದು ತಿನ್ನುವುದು; ನುರಿಸುವುದು: ಸಮ್ಮಾರ್ಜಿತೋಜ್ಜ್ವಲದಶನನಿಚಯತಾಂಬೂಲಚರ್ವಣಭರಿತಕಪೋಲರುಂ ಗೋ ೯ ನಿಯೋಗ ದಂಡಧರರುಮಾಗಿ(ಜಗಪು. ೪-೯೦ ವ). ೨. ಮನಸ್ಸಿನಲ್ಲಿ ಮೆಲುಕು ಹಾಕುವಿಕೆ; ಪುನಶ್ಚಿಂತನೆ: ಅನುಭವದ ಚರ್ವಣರೂಪದ ಪುನರನುಭವವೇ ಕಲಾಸೃಷ್ಟಿಗೆ ಕಾರಣವಾದ ಅನುಭವ (ಕನ್ನಂದಕ. ೦೯). [ ಸಂ. ]

**ಚರ್ವಣೆ** (ನಾ). = ಚರ್ವಣ ೨: ಅವುಗಳ ಚರ್ವಣೆಯಿಂದ ಆಸ್ವಾದ್ಯವಾದುದೇ ಅಲೌಕಿಕ ಕರುಣರಸ (ಧ್ವನ್ಯಾಲೋ. ೦೯ ಅಡಿಟಿ). [ ಸಂ. ಚರ್ವಣ ]

**ಚರ್ವಿ** (ನಾ). (?): ಉದಿಪುದು ಮಮಾಹವೆಂಬುರು ಭ್ರಾಂತಿ ದುರ್ಮಾರ್ಗಪದವಿಯಂ ಪಿಡಿದ ಚರ್ವಿಯು ಜನಿಸಿ ವೈಕರೂಪ್ಯ ವಿಧಿಯೆನಿಪ ಕೃಷ್ಣ ಜಿಹ್ವೆಯು ಮನೋಧೃಮೆಯಿಂದ ಧಾವಿಸುತಮುಮಿಸುತಿಹುದು (ಪಂಕಾಶಾ. ೩-೨೦-೬೦). [ ? ]

**ಚರ್ವಿತ** (ಗು). ೧. ಅಗಿದು ನುರಿಸಿದ. ೨. ತಿಂದ; ಉಂಡ; ರುಚಿ ನೋಡಿದ. 'ಚರ್ವಿತಚರ್ವಣ' ಪರಾ. [ ಸಂ. ]

**ಚರ್ವಿತಚರ್ವಣ** (ನಾ). ೧. ತಿಂದುದನ್ನೇ ಮತ್ತೆ ತಿನ್ನುವುದು; ಅಗಿದುದನ್ನೇ ಮರಳಿ ಅಗಿಯುವುದು. ೨. (ಅಲಂ) ಮಾಡಿದುದನ್ನೇ ಮಾಡುವಿಕೆ; ವ್ಯರ್ಥವಾದ ಪುನರುಕ್ತಿ; ತೌಡು ಕುಟ್ಟುವುದು: ನಿಚ್ಚಮಾ ಪಿಷ್ಟಪೇಷಣಮಾ ಚರ್ವಿತಚರ್ವಣಂ ಸುಖಮಿದೇಂ ನಿನ್ನಂ ಮರುಳ್ಮಾಡಿತೋ (ಅನಿಪು. ೬-೬೯); ಭವಜಲರಾಶಿಯೊಳ್ ಮುಳುಗಲಟ್ಟಿಯ ಚರ್ವಿತಚರ್ವಣಕ್ಕೆ (ಅಚಿಪು. ೦೦-೩). [ಚರ್ವಿತ + ಚರ್ವಣ]

**ಚರ್ವಿಸು** (ಕ್ರಿ). ತಿನ್ನು; ಸೇವಿಸು: ಕೈಬಾಯಿಗಳ ತೊಳೆದು ತಾಂಬೂಲವುಂ ಚರ್ವಿಸಿ (ಜರಜಾಬೋ. ೦೦-೬೨). [ ಚರ್ವಣ + – ಇಸು$_2$ ]

**ಚರ್ವು** 'ಜರ್ವು$_1$' ನೋ.

**ಚಲ್$_1$** 'ಸಲ್$_1$' ನೋ.

**ಚಲ್$_2$** 'ಚಲ್ಲು$_1$' ನೋ.

**ಚಲ$_1$, ಚಳ$_1$, ಛಲ$_1$** (ನಾ). ೧. ಪಟ್ಟುಹಿಡಿಯುವುದು; ಹಿಡಿದುದನ್ನು ಬಿಡದೆ ನಡೆಸುವ ದೃಢಚಿತ್ತತೆ; ಸ್ಥಿರಸಂಕಲ್ಪ; ಮನೋನಿಶ್ಚಯ: ಕಂದರ್ಪಂ ಚಲದೆನ್ನೊಳ್ಳಿಂದು (ಕವಿರಾ. ೨-೯೨). ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ (ಪಂಪಭಾ. ೦೪-೬೪); ಕಿಡದ ಜಸಕ್ಕೆ ತಾನೆ ಗುಡಿಯಾದ ಚಲಂ . . . ಆಳ್ದ ಚಲಂ ಚಲದಂಕಕಾಜಿನ(ಎಕ. II, ೦೬೩-೨೦ ; ೯೮೭); ಚಲದಿಂ ಯದುಬಲವಾಂತಿಸೆ ಸರ ಶರತತಿ ಖಚರರಮುನೇಗಳನಾಗಳ್ ಗೆಲೆ . . . ನಭಶ್ಚರಸ್ವನ್ಯಂ (ನೇಮಿಪು. ೬-೮೯). ೨. ಪೌರುಷ; ಹಟಮಾರಿತನ: ಚಲದಿಂ ಕೃಷ್ಣೆಯ ಕೇಶಮಂ ಪಿಡಿದ ನಿನ್ನಿಂದಾ ದಟ ಲ್ ನಿನ್ನುರಸ್ಥಲಮಂ ಪೋಚದೆ ಪೋಪುದಲ್ಲು (ಪಂಪಭಾ. ೦೨-೦೯೬). ೩. ಹಿಡಿತ; ಬಿಗಿ: ಶ್ಲೇಷ್ಮದ ಚಲ ಕತ್ತರಿಸಿ ಬೀಳುವುದು (ಸಕವ್ಯ. ೨೨೬). **ಚಳ$_1$**: ೧. ಪುಗೆ ನೃಪಸಂಕುಳಂ ಮನಸಿಜಗ್ರಹವಾಗ್ರಹದಿಂದೆ ಪತ್ತಲಂ ದೂಗೆಯ ವಿಕಾರಚೇಷ್ಟೆ ಚಳವಂ ನುಡಿದು (ನೇಮಿಪು. ೯-೮೯). **ಛಲ$_1$**: ೧. ಛಲ ಬೇಕು ಶರಣಂಗೆ ಪರಧನವನೊಲ್ಲೆನೆಂಬ (ಬಸವ. ೬೭೬); ಛಲದಿಂ ಪೋರಿದರೆಲ್ಲರಂ ಗೆಲಿದು ಬಂದಾ ಪೆಣ್ಣ ಕೊಂಡೋಡಿದಂ (ಸೂಕ್ತಿಸು. ೪೪); ಎಲವೆಲವೋ ಕಲಿಯಾಗು ಮಾರುತಿ ಗೆಲಿದನೆಂದಿರದೇಡ . . . ಛಲವದುಳ್ಳಡೆ ಸಾಕು (ಕುಮಾರವ್ಯಾ. ೦೩-೩೨). 'ಛಲವಿಡಿ' ಪರಾ. ೪. ಹಟಗಾರ; ದೃಢಸಂಕಲ್ಪವುಳ್ಳವನು: ಮೂಜಗದೊಳ್ ಮೆಚ್ಚಿವ ಮಾನವದೇವಂ ಗೆಲಿದಂ ಅಸ(ಶ)ನ ಚೆಸನವ ಛಲರಧಿಕಂ ಹಾಲ ಬಸವಿದೇವಮುನೀಸಂ (ಎಕ. XXI, ೦೩-೩೯ ; 1260).

**ಚಲಚಲ** (ದ್ವಿರುಕ್ತಿ): ಚಲಚಲದಾಂತು ಕಾದುವ ಸುಯೋಧನ ಸಾಧನದೊಡ್ಡುಗಳ್ (ಪಂಪಭಾ. ೦೦-೬೩). **ಚಲಕೆ ನಲ್ಲಾತಂ**=ದೃಢಸಂಕಲ್ಪದಲ್ಲಿ ಆಸಕ್ತಿಯುಳ್ಳವನು; ಒಂದು ಬಿರುದು: ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರಕಂ ಚಲಕೆ ನಲ್ಲಾತಂ ಶ್ರೀಮತ್ಕನ್ನರದೇವನ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಮಿರೆ (ಸೌಇಇ. IX-1, ೬೬-೨ ; ೯೬೮); ಚಲಕೆ ನಲ್ಲಾತಂ ಶ್ರೀಮತ್‌ಕನ್ನರದೇವಂ (ಎಕ. IV, ೩೩೨-೨ ; 976). **ಚಲಕೆ ಮೊದಲಿಗಂ**=ದೃಢಸಂಕಲ್ಪವನ್ನು ಪಾಲಿಸುವವರಲ್ಲಿ ಮೊದಲಿಗನಾದವನು; ಒಂದು ಬಿರುದು: ಅಸಹಿಪಿದೂರನಾಳ್ವಾನಿ ವೀರಂ ಚಾಳುಕ್ಯಾರ್ಜುನಂ ಚಲಕೆ ಮೊದಲಿಗಮರುಳ್ಗಣ್ಣಾನಕಳಂಕ ಮಹೇಶ್ವರಂ (ಎಕ. XIV, ಕೃಷ್ಣರಾಜ. ೦೨೬-೪; ಪು. ೯೦೦). **ಚಲಕ್ಕೆಬಲ್ಲಂ**=ದೃಢನಿಶ್ಚಯಕ್ಕೆ ತಕ್ಕ ಪರಾಕ್ರಮ ಉಳ್ಳವನು; ಒಂದು ಬಿರುದು: ಉದಾರ ಮಹೇಶ್ವರಂ ಚಲಕ್ಕೆ ಬ[ಲ್ಲ]ಿನ್ನಾಂ ಶೌರ್ಯಮಾರ್ತ್ತಣ್ಡಾಂ (ಸೌಇಇ. XI-1, ೦೦೩-೭ ; 1074). **ಚಲದಂಕ, ಛಲದಂಕ**=ಹಟವುಳ್ಳ ವೀರ; ದೃಢನಿಶ್ಚಯವುಳ್ಳವನು; ಒಂದು ಬಿರುದು: ಚಲದಂಕ ಕಂಠೀರವ ನರಸೇಂದ್ರ ಭೂತಳವ ಪಾಲಿಸುತಿರ್ದಿಯಲಿ (ಕಂಪು. ೯-೨); ಗುಟಲಗಾಳಗತ್ತರಿ ಗರಗಸದ ಬಿರುದಾಳಿಗಳ ಛಲದಂಕ ರಾವುತರೊತ್ತಿ ನೂಕಿದರು (ಕುಮಾರಭಿ. ೪-೫೬); ಬಲಗೊಂಡೆನಧಿಕ ಪ್ರವೀಣನ ಬಾಣನ ಕಲೆಗಳಾಸಾರ ಮಯೂರನ ಸುಲಲಿತ ವಾಕ್ಯಭೂಷಣ ಕಾಳಿದಾಸನ ಛಲದಂಕನ ರಾಘವಾಂಕನ (ಕೃಭಾಕಿ. ೨-೦೬). **ಚಲದಂಕಕಾಜಿ**=ಚಲದಂಕ:

ಪರಸೈನ್ಯಮಂ ಪೆಱಂಗೆಡೆಗುಡದಟ್ಟಿ ಕೊಲ್ವ ಚಲವನ್ನಾಳ್ದ ಚಲಂ ಚಲದಂಕ ಕಾಱನ (ಎಕ್. II, ೦೩೩-೨೫ : ೯೮೭). ಚಲದಂಕಮಲ್ಲ, ಛಲದಂಕಮಲ್ಲ= ೧. ದೃಢಚಿತ್ತದಿಂದ ಕಾದಾಡುವ ವೀರ ; ಒಂದು ಬಿರುದು : ಚಲ ದಂಕಮಲ್ಲನಾದ ಕಂಠೀರವನರಸರಾಜನು . . . ಪರಾಕ್ರಮದಿಂದ ಕಾದಿ ದನು (ಕವೀರ. ೧೨೯) ; ಚಲದಂಕಮಲ್ಲನೂ ಅಭಿಮಾನಧನನೂ ಎನಿಸಿದ ಸುಯೋಧನನು ಚಿಂತಾಕ್ರಾಂತನಾದನು (ಧಾಮಿಕ. ೯೦). ೨. ಹಟಗಾರ : 'ಛಲದಂಕಮಲ್ಲರೂ, ಮಾನಧನರೂ' ಆಗಿ ವರ್ತಿಸುತ್ತಾರೆ (ಕಿಕ್ಕದ. ೧೦೩); ಚಲದಂಕರಾಮ=ರಾಮನಂತೆ ಸ್ಥಿರಸಂಕಲ್ಪದಿಂದ ಹೋರಾಡುವವನು; ಒಂದು ಬಿರುದು : ನರಸಂಕಭೀಮಂ ಚಲದಂಕರಾಮಂ ಗಣ್ಡರ ಗಣ್ಡಂ (ಸೌಇಇ. XX, ೧೮-೯ : ೯೮೦) ; ಸನಿವಾರಸಿದ್ಧಿ ಗಿರಿದುರ್ಗಮಲ್ಲ ಚಲದಂಕ ರಾಮ (ಕಇಅ. ೭೯-೦೨-೦೪ : 1170) ; ಸೇಡಿಂಬದ ವಿಪ್ರರೊಂದಳವನೇ ವೋಗಳ್ವೆಂ ಚಲದಂಕರಾಮರ (ಕಇಅ. ೯೭-೪-೩೨ ; ೧೫ನೆಯ ಶತ). ಚಲದ ವಿನಾಯಕ=ನಿರ್ಧಾರಕ್ಕೆ ಬರುವ ಅಡ್ಡಿಗಳನ್ನು ನಾಶಪಡಿಸತಕ್ಕವನು ; ಒಂದು ಬಿರುದು : ಪುರುಷಕಾರದ ತಾಯ್ಗರು ಪೆಂಪಿನಾಗರಂ ಚಲದ ವಿನಾಯಕಂ ನೆಗಳ್ದ ಜಕ್ಕಣಂ (ಕಇ. I೫, ೦೦-೩೫ : 1121). ಚಲದುತ್ತರಂಗ= ಸ್ಥಿರಸಂಕಲ್ಪದಲ್ಲಿ ಮಿಗಿಲಾದವನು ; ಒಂದು ಬಿರುದು : ಏವೂಗಟ್ಟಿ ನೆವ್ವೞಿಯಂ ಚಲದುತ್ತರಂಗನಂ (ಎಕ್. II, ೩೯-೮೭ : 974); ನನ್ನಿಗಿರಿನಾಥಂ ಚಲದುತ್ತರಂಗ ಜಗದೇಕವೀರ ನೊಳಂಬಕುಲಾಂತಕದೇವ (ಎಇ. VI, ೨೩೯-೨ ; 975). ಛಲದಾಳು=ಹಟಸ್ವಭಾವದವನು; ಚಲಗಾಱ: ಕಲಿಯು ಕಾಲತೊ ದರು ಛಲದಾಳಿಗ[ಪಾಠಾಂ. ಕಲಿತನಕ್ಕೆ]ಲ್ಲದೆ ಇಕ್ಕಬಾರದು (ಬಸವ. ೭೭೩).

ಚಲ₂, ಚಳ₂(ಗು). ೧. ಅಲುಗುವ; ನಡುಗುವ; ಚಂಚಲವಾದ; ಅಸ್ಥಿರ ವಾದ. ೨. ಚಲಿಸುವ ; ನಡೆಯುವ : ಸಾಗುವ . ಚಲ[ಪಾಠಾಂ. ಳ]ಕಲ ಹಂಸಸಾರಸರಥಾಂಗಮದಾಲಿನಿನಾದಕೈರವೋತ್ಪಲಶತಪತ್ರ . . . ಗಂಧ ಬಂಧುರಂ ಲಲಿತನ್ಯವಾಂಗನಾಲಕಚಯಂಗಳನಾಡಿಪುದಾಯ್ತು (ಆದಿಪು. ೪-೯೫). ೩. ಕದಡಿದ; ಕ್ಷುಬ್ಧವಾದ; ಉದ್ರಿಕ್ತವಾದ. (ನಾ). ೪. ಚಂಚಲನಾದವನು: ಗಾಳಿಗೊಡ್ಡಿದ ದೀಪಾಂಕುರದಂತೆ ತನ್ನ ನಿಯ್ಯುಮಂ ಕಾಮಂ ಚಲಂ ಮಾಡಿದಂ (ಶಾದಂಪು. ೭೩೫). ೫. ಕ್ಷೋಭೆ ; ಉದ್ವೇಗ. ೬. ಗಾಳಿ; ವಾಯು. 'ಚಲಗತಿ' ಪರಾ. ೭. ವೇಗಶಾಲಿ. ೬, ೭: ಘನಕು ಘನನ ಚಲಕು ಚಲನ ನೋಡೆನ್ನಿನ (ಹಂಸದ. ೭೬-೨೨). ಚಳ₂: ೧. ಚಳ ಚಮರರುಹಸಮಾಜಾನಿಳನಿಂದೊಗೆದೆಸೆವ ಚಾರು ಕರ್ಪೂರರಜೋವಳಿಯಿಂ . . . ಗೆಲೆವಂದುದೋಲಗಂ (ಪಾಂಶಕ್ಕ. ೨-೮೪). ೮. ಚಂಚಲವಾದುದು: ಚಳವಂಭೋಬಿಂದು ಮುಕ್ತಾಫಲಮೆನಿಸುವವೊಲ್ ಶುಕ್ತಿಕಾಸಂಗದಿಂ (ಮಲ್ಲಿಪು. ೩-೦೯).

ಚಳವಾಗು=ತಡವರಿಸು ; ಕ್ರಮತಪ್ಪು : ಅರಗಿಳಿಗಳ್ ನಿರ್ಮಳ(ಲ) ಮುನಿಸೋ(ರೋ)ದುವೋದಂ ಚಳವಾದೆಡೆಯುಱುದು ಪೇದ್ರು(ಳ್ದು) ಪಿರುಳುಂ ಪಗಲುಂ (ಎಇ. XVI, ೩-೦೦ ; ೯೮೦). [ ಸಂ. ]

ಚಲಂಕು, ಚಲಂಗು, ಚಲಕು, ಚಲಗು, ಚಲುಂಕು, ಚಲುಕು, ಚೆಲಂಕು, ಚೆಲಂಗು, ಜಲಕು (ಕ್ರಿ). ೧. ಎರಚು ; ಚಿಮುಕಿಸು ; ಚಲ್ಲು: "ಚಲಕು, ಚಲಂಕು–ಕರವಿಮೋಚನೇ (ಕೈಯಿಂದ ಬಿಡಿಸಿಕೊಳ್ಳು)" (ಶಮಧಾ). ಚೆಲಂಗು: ೧. "ಚೆ[ಪಾಠಾಂ. ಚಿ]ಲಂಗು–ಕರಮುಕ್ತೌ (ಕೈಯಿಂದ ಬಿಡು)" (ಶಮಧಾ). ಚಲಕು: ೧. 'ಚಲಂಕು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ೨. ಬಿಸಾಡು; ಒಗೆ; ಬಿಸುಡು: (೬). ೩. ಕಲಕು: ಅಱಿಲ್ಗಳನುಱೆ ತಱಿದೊಲವಿಂ ತಬುಂಬುತ್ತೊಂಬತ್ತು ಗರದಿನಕ್ಕಸರಂಗೆಯ್ದೊ ಬಲ್ದು ತಳಿಪುತ್ತೆ ನೆಱೆ ಬಾಂದೊಱೆಯಂ ಚಲುಕುತ್ತೆ ತಳರ್ದರಭವಗಣಂಗಳ್ (ವೀರಪಾ. ೦೦-೬೦). ಚಲಗು: ೨. "ಚ[ಪಾಠಾಂ. ಬ]ಲಗೆ [ಪಾಠಾಂ. ಕೆ]ನೆ ಬಿಸುಡೆಂಬರ್ಥಂ" (ರನ್ನಕಂ. ೪). ಚಲುಂಕು : ೧. "ಚಲುಕು, ಚಲುಂಕು–ಜಲೋತ್ಸರ್ಜನೇ (ದ್ರವವನ್ನು ಚೆಲ್ಲು)" (ಶಮಧಾ) : ನಿತ್ಯಬಿಂದುಗೆ–ಬೆಡಂಗು . . . ಚಲುಂಕಿದು, ಪಲುಂಬಿದು (ಶಮದ. ೩೬. ಪ್ರಯೋ) ; ಶೀತಳಾಂಬುವಂ ಮಾನಿನಿ ಪಾಣಿ ಪಲ್ಲವದಿನೆಲ್ಲರ ಮೇಲೆ ಚಲುಂಕಿಯಾಡಿದಳ್ (ಪಳಕಂ. ೦೩೩). ಚಲುಕು : ೧. 'ಚಲುಕಾಡು' ಪರಾ. ಚೆಲಂಕು: ೧. "ಚೆ [ಪಾಠಾಂ. ಚ] ಲಂಕೆಂದು ಕರವಿಮೋಚನಂ" (ಶಶಸಾ. ೨೮-೩೯೯). ೨. "ಚೆ(ಬೆ)ಲಂಕಿದಂ=ಈಡಾಡಿದಂ" (ಕಮಾದ. ಪರಿ. ೩). ಚೆಲಂಗು : ೧. 'ಚಲಂಗು' ಉಲ್ಲೇಖಕ್ಕೆ ಕೊಟ್ಟಿರುವ 'ಶಮಧಾ' ಪ್ರಯೋಗವನ್ನು ನೋಡಿ. ಜಲಕು: ೧. "ಜಲಕೆಂದು ಕರ ವಿಮೋಚನ" (ಶವಿಕಂ. ೩೩೯). 'ಕಲಂಕಂ', 'ಚಲ್ಲು₁' ಪರಾ. [ ? ]

ಚಲಂಗು 'ಚಲಂಕು' ನೋ.

ಚಲಂಬಿಡಿ, ಚಲವಿಡಿ, ಛಲವಿಡಿ (ಕ್ರಿ) ಹಟಹಿಡಿ ; ದೃಢನಿಶ್ಚಯವನ್ನು ತೊಡು : ಕೆಲರ್ ನೆತ್ತರೊಳ್ ಮಿಂದು ತಮಗೆ ದೋಷಮಿಲ್ಲೆಂದದರಿಂ ದಿ ವ್ಯಂ ಬಿ ಡಿ ವಂ ತೆ ಪಂಬಿಸಲ್ ಚಲಂಬಿಡಿದು ನಿಂದಪಂತರ್ (ಪಾಂಕಿಕ. ೪-೩೦ ವ); ಸ್ಕೊಸೆಂದುಂ ಬಾಂಬರವ್ ಅಳಿದಿಕ್ಕೆಂದು ಚಲಂಬಿಡಿದು ತಱಿ ಸಂದರರಬರ್ (ಬದ್ಧಪ್ರ. ೦೨-೨೪೭). ಚಲವಿಡಿ : ಚಲವಿಡಿದೀಗಳಿಂತುಟು ನೆಲಂಬಿಡಿದಿರ್ಪುದು (ಚಕವಿ. ೫-೪೩); ಸತ್ಯಕೀರ್ತಿಯು . . . ಚಲವಿಡಿದನು (ಕವಿಕ. ೬). ಛಲವಿಡಿ: ಛಲವಿಡಿದೊಂದನೆಳಸಿ ಬಾರಿಪರಿಯದ ನೆಲೆವಿಡಿದೊಂದಱೊಳಿರದೆ (ಹರಿಬ. ೩-೩೭). [ ಚಲ₁ + ಪಿಡಿ₁ ]

ಚಲಕು 'ಚಲಂಕು' ನೋ.

ಚಲಗತಿ, ಚಳಗತಿ (ನಾ). ವೇಗವಾದ ಗತಿ ; ವಾಯುವೇಗ : ನಱೆಯಾನೆ ಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯು ಚಾತುರ ಚಪೇಟ ಪದಪ್ರಹಾರದಲಿ (ಕುವ್ಯಾಗ. ೯-೨೩). ಚಳಗತಿ ; ಚಳಗತಿಯ ವಾಜಿಗಳು ಕೊಂಡೊಯ್ದುಳುಹಿದವು ತಮಸೆಯಲಿ (ತೊರರಾ. ೨-೪-೮). [ಚಲ₂+ಗತಿ]

ಚಲಗಾರ, ಛಲಗಾರ (ನಾ). ಹಟಗಾರ; ಚಲವುಳ್ಳವನು (೬). ಛಲಗಾರ. 'ಛಲಗಾರ್ತಿ' ಪರಾ. [ ಚಲ₁ + -ಗಾರ (< -ಕಾಱ) ]

ಚಲಗು 'ಚಲಂಕು' ನೋ.

ಚಲಚಲಿಸು (ಕ್ರಿ). ಚಂಚಲವಾಗು; ಗಾಬರಿಹೊಂದು: ಅವಳ ಕಣ್ಣುಗಳು ಚಲಚಲಿಸುತ್ತಿದ್ದುವು (ಪ್ರಚಾರಿಕ. ೪೬೩). [ <ಚಲ₂ + -ಇಸು₁ ]

ಚಲಚಿತ್ತ, ಚಳಚಿತ್ತ (ನಾ). ೧. ಚಂಚಲವಾದ ಮನಸ್ಸು. ೨. ಚಂಚಲ ವಾದ ಮನಸ್ಸುಳ್ಳವನು : ಅಸ್ಥಿರಬುದ್ಧಿಯವನು : ವಾತ್ರನತಿ ಶ್ರಾಂತನು ಪ್ರಮದೋನ್ಮತ್ತನತಿಕುಪಿತಾನನನು ಚಲಚಿತ್ತನತಿಕಾಮುಕನು . . . ಇಂತೀ ಹತ್ತುಜನವಾಪಾಗ ಧರ್ಮದ ತತ್ತ್ವವನೆಗಳನಱಿಯರೈ (ಕುವ್ಯಾಉ. ೬-೭೭); ನೆತ್ತಿಮುಸುಕಿನ ಕೈಯ ಗಲ್ಲದ ಕುತ್ತದಲಿ ನೆಟ್ಟಾಲಿಗಳ ಚಲಚಿತ್ತರಿದ್ದುದು ಸಕಲನಾಯಕವಾದಿ ದುಗುಡದಲಿ (ಕುವ್ಯಾದ್ರೋ. ೪-೬). ಚಳಚಿತ್ತ : ೨. ಚಳಚಿತ್ತರ್ಗೆ ಬಿಂಕದ ಕದಂ ಸತ್ವಹೀನರ್ಗೆ ಸೋಂಕದ ಕದಂ (ನಂದಿರ. ೦೭-೬೫) : ಚಳಚಿತ್ತಂ ಜಾಡ್ಯವೃತ್ತಂ ಚಪಳಮತಿಮದಾಂಧಂ (ಶಬಶಂ: ೫-೦೪). [ ಚಲ₂ + ಚಿತ್ತ ]

ಚಲಚಿತ್ರ (ನಾ). ಚಲನಚಿತ್ರ; ಸಿನೇಮ: ಇಂದಿಗೂ ನಮ್ಮ ಚಲಚಿತ್ರಗಳಲ್ಲಿ ಹತ್ತು ಹದಿನೈದಕ್ಕೆ ಕಡಿಮೆ ಹಾಡುಗಳಿಲ್ಲದಿದ್ದಲ್ಲಿ ಅವು ಯಶಸ್ವಿಯಾಗಲು ಸಾಧ್ಯವೇ ಇಲ್ಲ (ಧಾರದ. ೫೩೫). [ ಚಲ₂ + ಚಿತ್ರ ]

ಚಲತನ (ನಾ). ಚಂಡಿತನ ; ಮೊಂಡುತನ ; ಹಟಮಾರಿತನ : ಎಳೆಗೆ ನಿನ್ನೊಡನೆ ನಾನೇಂ ಹರಿಯ ಹೋರುವೆಂ ಚಲ[ಪಾಠಾಂ. ಛಲಿ]ತನಕಲಸಿದೆ ನಾಂ (ಹ್ರಮಿಧಾ. ೦೦-೬೦). [ ಚಲ₁ + -ತನ ]

ಚಲತ್ವ (ನಾ). ೧. ಚಂಚಲತೆ ; ಅಸ್ಥಿರತೆ. ೨. ನಡುಗುವಿಕೆ ; ಕಂಪನ. [ ಸಂ. ]

**ಚಲದಲ, ಚಲದಳ, ಚಳದಳ** (ನಾ). ಅಲುಗಾಡುತ್ತಲೆ ಇರುವ ಎಲೆಗಳನ್ನುಳ್ಳುದು ; ಅ ರ ಳಿ ಮ ರ : ಅಶ್ವತ್ಥ. **ಚಲದಳ** : "ಚಲದಳಮಶ್ವತ್ಥಂ" (ಮಙ್ಗಲ. ೩೩-೪). **ಚಳದಳ** : "ಚಳದಳಂ ಪಿಪ್ಪಲಂ ಬೋಧಿಯಶ್ವತ್ಥಮೆನಲರಳಿಹುದಕ್ಕುಂ" (ಮಂಗರಾ. ೩೪-೧೦೦).
[ ಚಲ₂ + ದಲ ]

**ಚಲದಳ** 'ಚಲದಲ' ನೋ.

**ಚಲದಿ** 'ಶಲದಿ₂' ನೋ.

**ಚಲನ, ಚಳನ** (ನಾ). ೧. ಸರಿದಾಡುವಿಕೆ ; ಸಂಚಾರ ; ಗಮನ ; ಗತಿ; ನಡೆ. ೨. ಅಲುಗಾಟ ; ನಡುಕ ; ಕಂಪನ. ೩. ಅಡಿ ; ಚರಣ ; ಪಾದ : ಕೇಳೀವನಸ್ಥಾನದೊಳ್ ಚಲನನ್ಯಾಸವಿಲಾಸಮಂ ಮೆಚ್ಚಿದು (ಕಣಾಮೃ. ೪-೯೦). ೪. ಗಾಳಿ ; ವಾಯು. 'ಚಲನಭವ' ಪರಾ. ೫. [ನಾಟ್ಯ] ಕಣ್ಣಿನ ಒಂಬತ್ತು ಭಾವವಿನ್ಯಾಸಗಳಲ್ಲಿ ಒಂದು : ಭ್ರಮಣ . . . ಚಲನ . . . ಪ್ರಾಕೃತ ಈ ಒಂಬತ್ತು [ಸ್ವನಿಷ್ಟ] ಅಲಿಯ ಭೇದಂಗಳ್ (ಲಾಸ್ಯರಂ. ೩-೩೪ ವ). **ಚಳನ**: ೩. ಅದನಾಳ್ದನೆವನತಾರಾತಿ ನೃಪವಮಣಿಮಯಕಿರೀಟಪ್ರಭಾಲೀಢಚಳನನಳಿನಯುಗ್ಮಂ (ಸು ಕು ಮಾ. ೦-೭೯ ವ) ; ಶ್ರುತಕೀವಳಿಗಳ ಚಳನಂ ನೆಮಗೆಚಳಸುಖಮನೀಗನವರತಂ (ಚಂದ್ರಪ್ರ. ೦-೦೩) ; ಚಳನನಿತಂಬಬಿಂಬಕುಚಕರ್ಣಕಪೋಲಲಲಾಟದೇಶದೊಳ್ ತೊಳಗಿ (ಪುಷ್ಪ. ೮-೦೦೦). [ ಸಂ. ]

**ಚಲನಕ** (ನಾ). ಅರ್ಧದವರೆಗೆ ತೊಡೆ ಮುಚ್ಚುವ ಹೆಂಗಸರ ಒಳ ಉಡುಪು ; ಅರ್ಧೋರುಕ ; ಚಂಡಾತಕ. [ ಸಂ. ]

**ಚಲನಚಿತ್ರ** (ನಾ). = ಚಲಚಿತ್ರ: ಚಲನಚಿತ್ರದ ಪಟವು ಸುರುಳಿ ಬಿಚ್ಚಿದ ಹಾಗೆ (ಇಂಚಾಪ. ೩೦-೪೦). [ ಚಲನ + ಚಿತ್ರ ]

**ಚಲನಭವ** (ನಾ). ವಾಯುವಿನ ಮಗ ; ಭೀಮಸೇನ: ದುಶ್ಶಾಸ ಚಲನಭವನಂ ಕೆಣಕುತ (ತುರಂಗ. ೭೨-೭). [ ಚಲನ + ಭವ ]

**ಚಲನವಲನ** (ನಾ). ೧. ಸಂಚಾರ ; ಗತಿ : ಭೂಮಿಯ ಚಲನವಲನಗಳು ನಿಂತುಹೋದುವು (ಕಾಂತಲಾ. ೨೩೮). ೨. ಹೋಗುವಿಕೆ, ಬರುವಿಕೆ, ಮಾತಾಡುವಿಕೆ ಮುಂತಾದ ಕ್ರಿಯೆಗಳು ; ಚಟುವಟಿಕೆ ; ಸುಧಾಕರನು ಗುಪ್ತಚಾರನಾಗಿ ಮಾರುವೇಷದಿಂದ ನಮ್ಮ ಚಲನವಲನಗಳನ್ನು ಪತ್ತೆಹಚ್ಚಲು ಈಗಾಗಲೇ ತಿರುಗಾಡುತ್ತಿರುವನು (ದೇಶಭ. ೯೪) ; ಅವರ ಚಲನವಲನಗಳಲ್ಲಿ ವ್ಯತ್ಯಾಸವೇನಾದರೂ ಇತ್ತೇ? (ಜೀವಾತ್ಮ. ೨೫೦).
[ ಚಲನ + ವಲನ ]

**ಚಲನಶಕ್ತಿ** (ನಾ). ೧. ಚಲಿಸುವ ಶಕ್ತಿ ; ಸಂಚರಿಸುವ ಸಾಮರ್ಥ್ಯ : ವಾಯುವಿನಲ್ಲಿ ಚಲನಶಕ್ತಿಯೂ, ಆಕಾಶದಲ್ಲಿ ವ್ಯಾಪನಶಕ್ತಿಯೂ ಸ್ವಾಭಾವಿಕವಾಗಿ ನೆಲಸಿರುವುದನ್ನು . . . ಕಾಣಬಹುದಾಗಿದೆ (ಶಕ್ತಿವಿ. ೩೦). ೨. ಚಲನೆಯಲ್ಲಿರುವ ಶಕ್ತಿ; ಕಾರ್ಯಮಾಡುತ್ತ ಇರುವ ಶಕ್ತಿ: "ಚಾಲನಶೀಲಶಕ್ತಿ, ಚಲನಶಕ್ತಿ" (Energy, Kinetic. ಪಾರಿಭಿ. ೩೭). ೩. [ವಿಜ್ಞಾ] "ಒಂದು ಕಾಯವನ್ನು ಚಲನಗೊಳಿಸುವ, ಅಳೆಯಲಾಗುವ, ಒಂದು ಪ್ರಭಾವ ; ಬಲ. (ಹಿಂದೆ) ಚಲನಶಕ್ತಿ" (Force. ಇಂಕನಿ). [ ಚಲನ + ಶಕ್ತಿ ]

**ಚಲನಸಂಭವ** (ನಾ). ೧. ವಾಯುವಿನ ಮಗ; ಆಂಜನೇಯ; ಮಾರುತಿ: ಆ ಚಲನಸಂಭವ ನಿದ್ರೆಯಿಂದಚ್ಚರಿಸಿ ಘರ್ಜಿಸಿದ (ಕೌಶಿರಾ. ೫೯-೨೪). ೨. ಭೀಮಸೇನ : ಚಲನಸಂಭವನೂರ್ವ ಕಾನಾಳ ಮೇಲಿದಿರಾದ ನೆಂಬುದಿದು ಮಿಥ್ಯೆ (ತುರಂಗ. ೬೪-೦೩). [ ಚಲನ + ಸಂಭವ ]

**ಚಲನಸಖ** (ನಾ). ವಾಯುವಿನ ಮಿತ್ರ; ಅಗ್ನಿ: ಚಲನಸಖ ಸಾಕ್ಷಿಕದಲಾ ಕುಂದರೆ ಕುಶೇಶಯಲೋಚನೆಯನಿತ್ತಳು ಕುಬೇರಪ್ರಭಗೆ (ನೆ ಭಾ ಗ. ೯-೦೬-೩೮). [ ಚಲನ + ಸಖ ]

**ಚಲನಸುತ** (ನಾ). = ಚಲನಭವ ೨: ಕೊಳುಗುಳದ ಜಯಲಕ್ಷ್ಮಿಗಾಯಿತು ಚಲನಸುತನಲಿ ಮದುವೆ (ಕುಮಾವ್ಯ. ೧೯-೭೭). [ ಚಲನ + ಸುತ ]

**ಚಲನಾಂಗ** (ನಾ). ಚಲನಕ್ಕೆ ಸಾಧನವಾದ ಅಂಗ,-ಅವಯವ : ಹೀಗೆ ಚಲನಾಂಗಗಳೆಲ್ಲ ಎದೆಗೆ ಸೇರಿವೆ (ಕೀಟಜ. ೦೮). [ ಚಲನ + ಅಂಗ₂ ]

**ಚಲನಿ** (ನಾ). = ಚಲನಕ. [ ಸಂ. ಚಲನೀ ]

**ಚಲನೆ** (ನಾ). = ಚಲನ ೨ : ಈ ಪರಿವರ್ತನೆ ಸುಲಭವಾಗಿ ಕಣ್ಣಿಗೆ ಕಾಣಿಸುವುದಿಲ್ಲ. ಗಡಿಯಾರದಲ್ಲಿ ಗಂಟೆಯ ಮುಳ್ಳಿನ ಚಲನೆಯಂತೆ (ದ್ರಾವಿ. ೩೨೪). [ ಸಂ. ಚಲನ ]

**ಚಲನೆಗೈ** (ಕ್ರಿ). ಚಲಿಸುವಂತೆ ಮಾಡು ; ಚಂಚಲಗೊಳಿಸು: ನಿನ್ನ ಪತಿ ತಪೋನಿಷ್ಠೆಯಿಂದಾನಿರಲು ತತ್ತಪೋ [ ವವ ] ಚಲನಗೈಯಲು ಕೋಪದಿಂ ನೋಡೆ ದಹನವಾದಾ (ಪವಪೂ. ೭-೯೩). [ಚಲನೆ + ಗೈ (<ಕೆಯ್₁)]

**ಚಲಪತ್ರ** (ನಾ). = ಚಲದಲ : ಪಲಸು ನೇರಿಲು ಚೂತ ಪಿಚುಮಂದ ನ್ಯಗ್ರೋಧ ಚಲಪತ್ರ ಬಿಲ್ವಾಮಲಕ . . . ಸಾಲುಮರಗಳೊಪ್ಪಿದುವು (ಪ್ರೋಹಿಕ. ೨-೩೪). [ ಚಲ₂ + ಪತ್ರ ]

**ಚಲಪದ** (ನಾ). ಹಟದ ಸ್ಥಿತಿ ; ಮೊಂಡುತನದ ರೀತಿ : ನೀತಿಮಾರ್ಗದಿ ತಿಳುಹಿ ಪಾರ್ಥನ ಗಯನ ಕಳುಹೆನೆ ಚಲಪದದಿ ಕೊಡೆನೆನಲು ಮರಳಿ ಸುಭದ್ರೆ ಗವಿಸಿದಳು (ಕೋಗಯ. ೦೫ ಸಂಧಿ). [ ಚಲ₁ + ಪದ₂ ]

**ಚಲಪಿಲ್ಲಿ** (ನಾ). ಒಂದು ಬಗೆಯ ಪಿಲ್ಲಿ : ಕಾಲ್‌ಪಿಲ್ಲಿ ಚಲಪಿಲ್ಲಿ ಕೈ ಬಳೆಯ ದನಿಯಲ್ಲಿ . . . ಬಾ (ಬಣ್ಣಕೆ. ೧೨ ೦೭). [ ಚಲ₂ + ಪಿಲ್ಲಿ₁ ]

**ಚಲಪ್ರತಿಮೆ** (ನಾ). ಸ್ಥಳದಿಂದ ಸ್ಥಳಕ್ಕೆ ಸಾಗಿಸಬಹುದಾದ ಪ್ರತಿಮೆ ; ಉತ್ಸವಮೂರ್ತಿ : "ಚಲ" ಪ್ರತಿಮೆಗಳು . . . ಒಂದೆಡೆಯಿಂದ ಮತ್ತೊಂದೆಡೆಗೆ ಸಾಗಿಸಬಹುದು (ಭಾರರ. ೫೧೨). [ ಚಲ₂ + ಪ್ರತಿಮೆ ]

**ಚಲಬಂಡವಾಳ** (ನಾ). ಸ್ಥಿರವಾಗಿರದ ಬಂಡವಾಳ ; ಚಲನೆಯಲ್ಲಿರುವ ಬಂಡವಾಳ : 'ಚಲಬಂಡವಾಳ' ಎಂದರೆ ಶ್ರಮಶಕ್ತಿಯ ಮೇಲೆ ಕೂಲಿ-ಸಂಬಳಗಳ ರೂಪದಲ್ಲಿ ವೆಚ್ಚ ಮಾಡಿದ ಬಂಡವಾಳ (ಮಾವಾದ. ೦೨೨). 'ಚರಬಂಡವಲ' ಪರಾ. [ ಚಲ₂ + ಬಂಡವಾಳ (<ಬಂಡವಲ) ]

**ಚಲಬ್ಬೆ** (ನಾ). ಒಬ್ಬಾಕೆಯ ಹೆಸರು : ಸ್ವಸ್ತಿಶ್ರಿ (ಶ್ರೀ)ಬಿಣ್ಣೇಸ್ವರದ ಸೂಳೆ ಚಲಬ್ಬೆ (ಇಇ. ಪ, ೦೭೦-೦; ೭ನೆಯ ಶತ). [ ? + ಅಬ್ಬೆ₁ ]

**ಚಲಮಲ** (ನಾ). ೧. ಹೊಳಪು ; ಚಕಚಕ; ಮಿನುಗುಟ್ಟುವಿಕೆ : ಚಕಚಕ ಚಂಚಲ ಮಿಂಚಿನ ಗೊಂಚಲ ಚಕಮಕಿ ಚಲಮಲ (ಗಣಿ. ೦೨೩-೦೨). ೨. ಚಂಚಲತೆ ; ಕಂಪನ. 'ಚಲಮಲಿಸು' ಪರಾ. [ ? ]

**ಚಲಮಲಿಸು** (ಕ್ರಿ). ನಡುಗು ; ಚಡಪಡಿಸು : ನಾನು ಹೆದರಿದ ಮೊಲ ಚಲಮಲಿಸುವ ಹಾಗೆ ಮಾಡಿ ಉದ್ಗರಿಸಿದೆನು (ಇಣ್ಣಿಶ. ೦೮೪).
[ ಚಲಮಲ + -ಇಸು₃ ]

**ಚಲಮಜು** (ಕ್ರಿ). ಚಲವನ್ನು ತಿಳಿ; ದೃಢನಿಶ್ಚಯವನ್ನು ಅರಿತುಕೊಳ್ಳು: ಬಲ್ಲಿಡೆ ಸು(ಶೂ)ದ್ರಕನೆ . . . ಮುತ್ತಿ ಆಣಿಯೆಂ ಕದಿವೊಂಗಂ ಚಲಮಜು ವೊಂಗಂ ಆಟ್ಟುವೊಂಗಂ ಕುಡಲ್ವಪ್ಪೊಂಗಂ ಒಬ್ಬನೋ ಆಚಾರ್ಜುನ್ (ಎಇ. XXIV, ೯೩-೮ ; 895). [ ಚಲ₁ + ಅಜು ]

**ಚಲಮೂರ್ತಿ** (ನಾ). = ಚಲಪ್ರತಿಮೆ: ಚಲಮೂರ್ತಿಗಾಗಿ ಅರ್ಧಮಂಟಪವನ್ನು ಸೇರಿಸಲಾಯಿತು (ಹೊಯ್ಸಳವಾ. ೧೮). [ ಚಲ₂ + ಮೂರ್ತಿ ]

**ಚಲಮೆ** 'ಚಲುಮೆ₁' ನೋ.

**ಚಲವಾದಿ₁, ಛಲವಾದಿ** (ನಾ). ಚಲವನ್ನು ಹಿಡಿದವನು ; ದೃಢಸಂಕಲ್ಪವುಳ್ಳವನು ; ಛಲಿ : ಕಡುಚಾಗಿ, ಚಲವಾದಿ (ಕಮರ. ೦೬೫ ಪ್ರಯೋ) ; ಚಲವಾದಿಯು ಸಂಗಡ ಹಟವಾದಿ ಸೇರಿದ ಹಾಗೆ (ಗಾದೆ). **ಛಲವಾದಿ** : ಛಳಿಗಂಡವೊಲು ಮೂರ್ಧಗ್ಗೆಸಿ ವಧಿಸಿದತಿ ಛಲವಾದಿ ಧಂದವಿಡೆನ್ನ (ಕಕಸಾಂ. ೩೯-೪೯). [ ಚಲವಾದ₀ + -ಇ₃ ]

**ಚಲವಾದಿ$_2$** (ನಾ). ಮಾದಿಗರಲ್ಲಿ ಒಂದು ಪಂಗಡ ಮತ್ತು ಆ ಪಂಗಡಕ್ಕೆ ಸೇರಿದವನು; ಕುಳವಾಡಿ: ಸುಂಕ ತಳವಾರ ಆನುವು ಮಗವೆ ಚಲವಾದಿ ಸಂಗೆಡಿ ಮಂತಗಾಜರಿಗೂ ಇದೇ ಭಾಷೆ (ಸೌಇಇ.IX-II, ೫೩೨-೨೦; 1530) ; ಜೊತೆಗೆ ನಾಲ್ಕು ಜನ ಚಲವಾದಿಗಳು ಒಬ್ಬರಾದ ಮೇಲೆ ಒಬ್ಬರು ತಮ್ಮ ಕೊಂಬುಗಳನ್ನು ಊದಿದರು (ಚಳಚಾ. ೩೯೩).
[ ದೇ.₁ ತಮಿ. ಚಲವಾತಿ ; ತೆಲು. ಚಲವಾದಿ ]

**ಚಲವಾದಿಘಂಟೆ** (ನಾ). ಚಲವಾದಿಯು ಹೆಗಲ ಮೇಲೆ ಹೊತ್ತುಕೊಂಡು ಬಾರಿಸುತ್ತಾ ಹೋಗುವ ಗಂಟೆ : ಮಾಯಾಮರತಾವು, ಪಂಚನಿಶಾನಿ, ಡವಣೆ, ಅರಲಿವಸ್ತ್ರ, ಚಲವಾದಿಘಂಟೆ (ಗುರುದ. ೦೦). [ಚಲವಾದಿ$_2$+ಘಂಟೆ]

**ಚಲವಿಡಿ** 'ಚಲಂಬಿಡಿ' ನೋ.

**ಚಲವಿತ್ತ** (ನಾ). ೧. ಅಸ್ಥಿರವಾದ ಸಂಪತ್ತು. ೨. ಸಂಪತ್ತು ಸ್ಥಿರವಾಗಿಲ್ಲದವನು : ಚಲವಿ[ಪಾಠಾಂ. ಚಿ]ತ್ತಂ ಬಲಹೀನಹಾನು ಚಪಲಂ . . . ಮೇಷಜಂ (ಜಾತಕ. ೦೬-೦). [ ಚಲ$_2$ + ವಿತ್ತ ]

**ಚಲವೀಣೆ** (ನಾ). ಒಂದು ಬಗೆಯ ವೀಣೆ : ಧ್ರುವವೀಣೆ, ಚಲವೀಣೆ . . . ಇವುಗಳನ್ನೆಲ್ಲಾ ವಿವರಿಸಿದ್ದಾನೆ (ಭಾರದ. ೫೩೮). [ಚಲ?+ವೀಣೆ]

**ಚಲವು** 'ಶಲವು' ನೋ.

**ಚಲಾಂಡ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಟೀವಂ ಚಲಾಂಡ ಮೆನಿಸಿಕ್ಕು" (ಮಂಗರಾ. ೫೨-೦೧). [ ? ]

**ಚಲಾಕಿ** 'ಚಾಲಾಕಿ' ನೋ.

**ಚಲಾಕು** 'ಚಾಲಾಕು' ನೋ.

**ಚಲಾಯಿಸು, ಚಲಾಯ್ಸು** (ಕ್ರಿ). ೧. ನಡೆಸು; ಬಳಸು; ಉಪಯೋಗಿಸು: ಕಾನೂನು ಮೇರೆಗೆ ತಮಗೆ ಅಧಿಕಾರವಿಲ್ಲದಿದ್ದರೂ ಅಧಿಕಾರವನ್ನು ಚಲಾಯಿಸಿದ್ದಾರೆ (ಗ್ರಾಮೂಳ.೯೩) ; ಎಂಥ ನಿರಂಕುಶನಾದ ರಾಜನಾದರೂ ಅವನು ತನ್ನ ಗುಣಕ್ಕನುಸಾರವಾಗಿ ತನ್ನ ಸ್ವಾಮಿತ್ವವನ್ನು ಚಲಾಯಿಸುವನು (ರಾಜ್ಯಾಂಗ. ೫೦) : ಯಾವಯಾವದೋ ಸಿನಿಮಾ ಹಾಡುಗಳನ್ನು ಅವರು ಚಲಾಯಿಸುತ್ತಿದ್ದರು (ಮೂಲಾಸ. ೦೨೩). ೨. ಚಲಿಸುವಂತೆ ಮಾಡು; ತಿರುಗಿಸು: ಈಗ ಮೊದಲಿಗಿಂತ ಹೆಚ್ಚಿಗೆ ಚರಖಾ ಚಲಾಯಿಸುತ್ತಲೂ ಇದ್ದೇನೆ (ಕಂಳ. ೬೦). **ಚಲಾಯ್ಸು** : ೧. ಪುಡಾನ್ನು ಯಂಟ ಹೆಸರಿನ ಮಂಟ ಕುದುರೆ ಚಲಾಯ್ಸಿ ಅವರನ್ನ ಹೊಡೆಯುತ್ತಿದ್ದಳ್ಳಿ (ಹ್ಮದರ. ೩೦). [ಚಲಾಯಿ$_2$ (P ←ಹಿಂ. ಚಲಾನಾ) + – ಇಸು$_2$ ]

**ಚಲಾಯ್ಸು** 'ಚಲಾಯಿಸು' ನೋ.

**ಚಲಾವಣೆ** (ನಾ). ೧. ನಡೆಸುವಿಕೆ; ಬಳಕೆ;(ನಾಣ್ಯಗಳಂತೆ)ವಿನಿಮಯದ ವ್ಯವಹಾರದಲ್ಲಿರುವಿಕೆ: ಮಹಿವಾಟು : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಧಾನ. ೨೮೦): ಈಗ ಚಿನ್ನ ಯಾವ ರೀತಿ ನಿರ್ದಿಷ್ಟ ಚಲಾವಣೆ ಮೌಲ್ಯ ಹೊಂದಿದೆಯೋ ಹಾಗೆ ತಂಬಾಕು ನಾಣ್ಯವಾಗಿದ್ದಿತು (ಕಸಬು. ೫೬) ; ಪದಗಳು ಜನಮನದ ಟಂಕಸಾಲೆಯಲ್ಲಿ . . . ಚಲಾವಣೆಗೆ ಬರುವ ನಾಣ್ಯಗಳಿದ್ದಂತೆ (ಸೌಂದಶ. ೯೨). ೨. ಸಾಗಾಟ ; ಸಾಗಾಣಿಕೆ: ಒಂದೆರಡು ಪರ್ಮಿಟು ಮಾಡಿಸಿ ಮ್ಹಾಲು ಚಲಾವಣೆ ಮಾಡದಿದ್ದರೆ ನಮ್ಮ ರಥ ಸಾಗಲಾರದು (ದೇಶಭು. ೬೪). [ ← ಚಲಿಸುವಂತೆ ಮಾಡು, ಹಿಂ. ಚಲಾವನಾ=ಮರಾ. ಚಲನೀ= ಚಲಾವಣೆಯಲ್ಲಿರುವ ]

**ಚಲಿ$_1$** 'ಚಿಲ್ಲ$_1$' ನೋ.

**ಚಲಿ$_2$, ಛಲಿ** (ನಾ). ಛಲವುಳ್ಳವನು; ದೃಢಸಂಕಲ್ಪವುಳ್ಳವನು: ಅಮಮ ದಂಡಾಧಿಪ ಕಿರೀಟಪದನೊಳ್ಳಿದಂ ಅಮಮ ಚಲಿ [ಪಾಠಾಂ. ಛವಿ]ನಾಯಕರ ದೇವನಿಂತೊಳ್ಳಿದಂ (ಬಸರ. ೯-೨೦೦). **ಛಲಿ:** ಭಕ್ತಿಯ ಬಲಿಯು ವಿರಕ್ತಿಯ ಛಲಿಯ ಸನ್ಮುಕ್ತಿಯ ನೆಲೆಯಘಾರ್ಣವಕೆ ಭೈತ್ರ . . . ಗೌರನ ನವ್ಯ ಕಾವ್ಯ (ಪೋಲಕು ೫-೨). [ ಚಲ$_1$ + – ಇ$_2$ ]

**ಚಲಿ$_3$** (ನಾ). ಒಂದು ಬಗೆಯ ಮರ; ಚಿನ್ನಂಗಿ: "ಚಿನ್ನಂಗಿ ಚಲಿಯಾಕ್ಕು" (ಮಂಗರಾ. ೩೭-೦೦). [ ? ]

**ಚಲಿಂದಲ** 'ಚಲಿವಿಂದರ' ನೋ.

**ಚಲಿಕಿಸು** (ಕ್ರಿ) .ಕತ್ತರಿಸು; ತುಂಡರಿಸು: ಈಗ ಚಲಿಕಿಸಿ ಶಿರವನು ಕ್ರೂರದಿ ಕೊಂದಾನೆ (ಹಮಚ. ೦೮೦) : ಸತಿಶಿರಮಂ ಚಲಿಕಿಸು ಖಡ್ಗದಿಂ ತಡೆಯದೆ (ಹಮಚ. ೨೦೦). [ ? + – ಇಸು$_2$ ]

**ಚಲಿಕ್ಕ** 'ಚಳುಕ್ಯ' ನೋ.

**ಚಲಿತ, ಚಳಿತ$_2$** (ಗು). ೧.ಹೆಜ್ಜೆಯಿಟ್ಟ ; ಹೊರಟುಹೋದ ; ಮುಂದೆ ಹೋದ. ೨. ಕದಲಿಸಿದ ; ಕದಡಿದ ; ಸಂಚಲಗೊಳಿಸಿದ. ೩. ನಡುಗುವ ; ಕಂಪಿಸುವ. ೪. ಅಲುಗಾಡುವ ; ಚಲಿಸುವ : ಚಲಿತ ಭ್ರೂಚಾಪದಂಡಂ ನಿಶಿತಕರಜಹೇತಿಕ್ಷತಂ (೦೯ ಶಾ ಪ. ೦೩-೩೦). (ನಾ). ೫. ಚಂಚಲವಾದುದು ; ಚಪಲವಾದುದು : ಪದ್ಮ ಪತ್ರದ ಜಲ ಬಿಂದುವಿನಂತೆ ಚಲಿತಮಾದುದು ಚಿತ್ತಂ (ಶಂಭಾಮ. ೯-೭೬). **ಚಳಿತ$_2$** : ೧. ಪ್ರಥಮಚಳಿತದಕ್ಷಿಣಚರಣನಾಗಿ ನಿಜನಿವಾಸದಿಂ ಪೊ ಆ ಮ ಟ್ಟು (ಶಂಕಥಾ. ೪-೦೩ ಪ). [ ಸಂ. ]

**ಚಲಿಮಿಲಿಸು** (ಕ್ರಿ). ಹಾತೊರೆ ; ಆತುರಪಡು ; ಉತ್ಕಂಠವಾಗು : ಚಲಿಮಿಲಿಸುತಿಪ ಧಾತು ಪಂಚಭೂತಾಹುತಿಗೆ ಛಲ ಬ್ಯಾಡ ವ್ರತಕೆ (ಜಸಮು. ೪೬-೦೪). 'ಚಲಮಲಿಸು' ಪರಾ. [ ? + – ಇಸು$_2$ ]

**ಚಲಿಯಿಸು** 'ಚಲಿಸು' ನೋ.

**ಚಲಿವಿಂದರ, ಚಲಿಂದಲ**(ನಾ). ಪ್ರಯಾಣಿಕರ ಉಪಯೋಗಕ್ಕಾಗಿ ರಸ್ತೆಗಳ ಪಕ್ಕಗಳಲ್ಲಿ ನಿರ್ಮಿಸಿದ ನೀರಿನ ಆಶ್ರಯಂ ; ಅರವಟ್ಟಿಗೆ : (ಕ). **ಚಲಿಂದಲ :** (ಎಕಮ್ಮ. XV, ೪೩).
'[←ತೆಲು. ಚಲಿವಿಂದಲ, ಚಲಿಪಂದಿಲಿ, ಚಲಿವಂದ್ರಿ, ಚಲಿವಂದ, ಚಲಿವೇಂದರ, ಚಲಿವೇಂದಲ, ಚಲಿವೇಂದ್ರ ]

**ಚಲಿಸು, ಚಲಿಯಿಸು, ಚಳಯಿಸು, ಚಳಿಯಿಸು, ಚಳಿಸು$_2$** (ಕ್ರಿ). ೧. ನಡೆ ; ನಡೆದಾಡು ; ಓಡಾಡು : ಮಹಾಪ್ರಧಾನರ ನಡುವೆ ಚಲಿಸುವ ಚಾತುರಂಗದ ಸುಳಿಯ ಸಂದಣಿಯ (ಕುಮ್ಮಾಳ. ೮-೨೦) ; ತಂಡತಂಡದೆ ಕೃಷ್ಣನಗರಿಯೊಳ್ ಚಲಿಸುವ ಮಂಡಳಿಕರ ಕಾಲ ಕಡಗ ಪೆಂಡೆಯ ತಾಟಾಡಿ ಸಿಡಿದ ರತ್ನಗಳ ಕೈದಂಡೆಯೊಳ್ ಸಿಕ್ಕಿ ಬಾಚುವರು (ಕೋಹಕ. ೩-೬೦): ಅಲ್ಲಿನ ವಿದ್ವಾಂಸರು ಚಲಿಸುವ ಪುಸ್ತಕಭಂಡಾರಗಳು (ಹಿಂಗಾಳ. ೪). ೨. ಅಲುಗಾಡು ; ಹೊಯ್ದಾಡು : ಅತ್ತಿತ್ತ ಚಲಿಸದಚಲಂ ನಡೆದು ಬರುತಿರ್ದ (ಬಸರ. ೩-೩೭); ಉದ್ದಂಡ ಪದಹತಿಗಳ ಚಲಿಸಿ ದಿಗುಮಂಡಲಂ ಕಿವುಡಾಗೆ ಬಹುವಾದ್ಯಧ್ವನಿಗಳಿಂದ (ಬಸಪು. ೫-೦೪) ; ಅರೆಮುಗಿದ ಲೋಚನದ ಸಂಪುಟವರಳಿ ಚಲಿಸುವ ಚಂಚುಪುಟದುಪ್ಪರಿಸಿದಂಘ್ರಿಯ . . . ಸುರಿವ ನೆತ್ತರ ಪತಿಯ ಸುತ್ತಲು ತಿರುಗಿ ಚೀರುವ ವಿಹಗಸತಿಯನು ಕಂಡನಾ ಮುನಿಪ (ಕೊರಕಾ. ೦-೨-೦೪). ೩. ಕದಡು ; ಕ್ಷೋಭೆಗೊಳ್ಳು; ದೃಢತೆಯಿಲ್ಲವಾಗು ; ಧವಳಚಾಮರಂ ಕಯ್ಗಳೊಳ್ ಮನಂ ಚಲಿಸೆ ಮಾಸಿ ಕಾಜಿದ ಕುರುಳ್ಗಳುಂ ತನ್ನ ಬಿನ್ನನಿರ್ದ ಮೊಗದಿಂ ತವಿಲ್ದಿರೆ ವಿಲಾಸಮುಂ ಮುಂದೆ ಕಂಡನಲ್ಲಿ ಕಮಳಾಕ್ಷಿಯಂ ವೃಷಭಲಕ್ಷಣಂ ಲಕ್ಷ್ಮಿಯಂ (ಗದಾಯು. ೯-೩). ೪. ಅಪಮಾರ್ಗಕ್ಕೆ ಹೋಗು ; ಹಾದಿತಪ್ಪು : (ಕ). ೫. ಚಲ್ಲಾಟವಾಡು: (ಕ). **ಚಲಿಯಿಸು :** ೨. ಚಲಿಯಿಸಿದವುದಸಿತೋತ್ಪಲದಳವಲರಲೆಪಂಗಳಿಂದಿದೆಂಬಿನೆಗಂ ಕಿತ್ತ ಲೊಡಚಿ೯ದತ್ತು ಬಲಗಣ್ಮಲರ್ (ಕಾದಂಪೂ. ೩೯೦) : ಬಿಡೆನೀಶಾ ನಿಮ್ಮ ಪಾದಾಬ್ಜಮಂ . . . ಬಲ್ಪಿಡಿದೆಂ ಮತ್ತತ್ತವಿತ್ತಂ ಚಲಿಯಿಸದೆ (ರಕ್ಷಾಶ. ೯೮). ೬. ಕದಲಿಸು ; ಉದ್ರೇಕಿಸು ; ಕ್ಷೋಭೆಗೊಳಿಸು : ಮುನಿಗೆ ಪಲವುಪಸರ್ಗಮಂ ಮಾಡುತ್ತಮಂತುಂ ಚಲಿಯಿಸಲಾರದೆ ನಾಣ್ಚಿ ಮಯ್ಗರೆದು

ಪೋದಂ (ಶಾಪುಂಪು. ೪೪); ಹರನ ಚಿತ್ರಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇಳೆ (ಗಿರಿಕ. ೨ ಕಥಾಗರ್ಭ). **ಚಳಯಿಸು:** ೭. ಸಡಿಲಿಸು; ಅಳ್ಳಕಮಾಡು: ಕಳೆದುದು ಪತ್ರಭಂಗದ ಬೆಡಂಗುಗಳಂ ಕುಟಿಲಾಲಕಂಗಳಂ ಚಳಯಿಸಿದತ್ತು ಕಣ್ಗೆಸೆವ ರಾಗಮನೆಯ್ದಿಸಿ ಕೇಶಹಸ್ತಮಂ ಚಳಯಿಸಿದತ್ತು ಮೆಯ್ಗೆ ಪುಳಕೋದಯಮಂ ಪಡೆದತ್ತು ತಲ್ಲತಾಲಳಿತೆಯರ್ಗೆ ತನ್ನದಿಂತು ಜಲಕೇಳಿ ಮನೋಭವಕೇಳಿ ಲೀಲೆಯುಂ (ಆದಿಪು. ೧೧-೧೪೯). **ಚಳಿಯಿಸು :** ೧. ಮಿಳಿ ಪೆಗಲೊಳ್ ಕೈಯೊಳ್ ಸಂಬಳಿಗೋಲ್ . . . ಜರ್ಜರರವದಿಂ ಪೊಟಲ ಜನಂಗಳ ಕಿವಿಯೊಳ್ ಚಳಿಯಿಸುತಂ ಬಂದು ನೋಟ್ಟ ಬಹಳಾಗ್ರಮಂ (ಮಹಾನೀ. ೮-೨೩). ೨. ಅನಿಲಾಹತಿಯಿಂ ಚಳಿಯಿಕುಮನೋಕಹಾನೀಕಮದ್ರಿ ಚಳಿಯಿಕುಮೆ (ಅಜಿಪು. ೧೧-೪೮): ಅಳಿರೆಲೆಗಳಲುಗೆ ಮಾಂಗಾಯ್ ಚಳಿಯಿಸೆ (ಪುಷ್ಪಪು. ೧೨-೬೬). ೩. ಕಾಮಂ . . . ಸಂಚಳಿಸದ ಶಂಕರನ ಮನಂ ಚಳಿಯಿಪುದಂ ಸಾರ್ದು ಪಾರ್ದು ತೆಗೆನೆಱೆದಿರ್ದಂ (ಗಿರಿಕ. ೮-೪೪). ೪. ಕೆಲಬ ಮರ್ನನು ಜರ್ ಚಳಿಯಿಸುತ್ತಿರೆ ಮಗುಟ್ಟವರಂ ಧರ್ಮದೊಳೆ ನಿಱಿಸುದುಂ (ಶಾಸ್ತ್ರಟೀ. ೯೪-೧). ೭. ಅಚಳಿತಧೈರ್ಯನ ಮನಮಂ ಚಳಿಯಿಸಲಾಱದಚ್ಚರಸೆಯರಚ್ಚಗಂಗೊಂಡಂತಾಗೆಯುಂ (ಜಂಪಥಾ. ೬-೯೪ ವ). ೮. ಸೋಲಿಸು ; ಹಿಮ್ಮೆಟ್ಟಿಸು : ಈತನ ಶೌರ್ಯಮುಮೀ ಮಹೋಗ್ರಸಂಗ್ರಾಮದೊಳೆನ್ನುಮಂ ಚಳಿಯಿಸಲ್ ಬಗೆದಪ್ಪುದು (ಜಂಪಥಾ. ೧೨-೮೪); ಸುಜತುರಕವಿರವಿಗಳಖಿಳಚೇತೋಗಗನಪ್ರಚುರತಮಸ್ತಿಮಿರಮನಳಱ್ ಚಳಿಯಿಸಲ್ ನೆರೆಗುಮುಱಿದವರ್ ನೆರೆದಪರೇ (ವರ್ಧಪು. ೧-೧೯). ೯. ಅಲುಗುವಂತೆ ಮಾಡು; ಕಂಪಿಸುವಂತೆ ಮಾಡು; ಚುಂಚಲವಾಗುವಂತೆ ಮಾಡು : ಎಱಿಸಿದ ಬಿಲ್ಲಂತೆ ಶರೀರಮಂ ಚಳಿಯಿಸದೆ ಪಾರ್ಶ್ವದೊಳ್ ಪಟ್ಟಿರ್ಪುದುಂ (ಧರ್ಮಾಮೃ. ೧೨-೧೮). **ಚಳಿಸು₂ :** ೨. ಚಳಿಸಿದ ರಸದಿಂಬುಣ್ಗಳ ನಿಲಿಸದಿರದು (ಚೋಳಪಾಲ. ೯-೧೬೯); ಫಳರಸವೆ ಮದಧಾರೆ ಚಳಿಪ ತಳಿಗೊರ್ಂಚಲುಜ್ವಳ ಕರ್ಣಂ (ಪದ್ಮರಾ. ೮-೩೦).

**ಚಲಚಲಿಸು** (ದ್ವಿರುಕ್ತಿ) : ಮಹಾವಾದ್ಯರವ ಚಲಚಲಿಸುತಿಹುದೆತ್ತೆತ್ತಲು (ಜಪಥಾ. ೩೦-೯). **ಚಲಿಸದ ತನ** = ನಿಶ್ಚಲತೆ ; ದೃಢತೆ : ಅನುದಿನವಲಸದೆ ಚಲಿಸದತನದಿಂದ ಜೀವಂಗೆ ಕರಣೀಯ (ಹಾಕೋ. ೫-೧೬-೬) [ ಚಲನ + – ಇಸು₃ ]

**ಚಲುಂಕು** 'ಚಲಂಕು' ನೋ.

**ಚಲುಕಾಡು**(ಕ್ರಿ). ಚೆಲ್ಲಾಡು ; ಎರಚಾಡು : ಪಾಡುತದಱೊಳು ಕೃಷ್ಣನನು ಚಲು[ಪಾಠಾಂ. ತುಳು]ಕಾಡುತುದಕವನೊಬ್ಬರೊಬ್ಬರ ನೋಡಿ ನಗುತಬಲೆಯರು ವಿಹರಿಸುತಿರೆ (ವಿಭಾಗ. ೧೮-೧೯-೪೫).

[ ಚಲುಕು (< ಚಲಂಕು) + ಆಡು₁ ]

**ಚಲುಕು** 'ಚಲಂಕು' ನೋ.

**ಚಲುಮೆ** 'ಚಿಲುಮೆ₁' ನೋ.

**ಚಲುವ** 'ಚೆಲ್ವ' ನೋ.

**ಚಲುವತನ** 'ಚೆಲ್ವತನ' ನೋ.

**ಚಲುವತಿ** (ನಾ). ೧. ಚೆಲುವೆ; ಸುಂದರಿ: (ಕ). ೨. ರತಿದೇವಿ: (ಕತುವಿ. ಕ. I, ೯೦). [ ಚಲುವ (< ಚೆಲ್ವ) + – ತಿ₁ (< – ಇತ್ತಿ) ]

**ಚಲುವನೆ** 'ಚೆಲ್ವನೆ' ನೋ.

**ಚಲುವರಾಯ** 'ಚೆಲ್ವರಾಯ' ನೋ.

**ಚಲುವಳಿ** 'ಚಿಲುವಳಿ' ನೋ.

**ಚಲುವಾನ್** 'ಚಿಲುವಾನ್' ನೋ.

**ಚಲುವಿಕೆ** 'ಚೆಲ್ವಿಕೆ' ನೋ.

**ಚಲುವು** 'ಚೆಲ್ವು₁' ನೋ.

**ಚಲುವೆ₁** 'ಚೆಲ್ವೆ' ನೋ.

**ಚಲುವೆ₂** (ನಾ). ಒಂದು ಬಗೆಯ ಹಕ್ಕಿ : ಹರಡೆ ಚಿಲುವಿಲಿಗನು ಚ[ಪಾಠಾಂ. ಚಿ]ಲುವೆ ಗಿಡುಗಿರಳೆ ಕಮ್ಮರನಸಗ ಕೊಟ್ಟುಳ ಹೊಬಸು ಹೊಡೆಗಳೆಂಬ ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೦). [ ? ]

**ಚಲುವೆ₃, ಚೆಲವೆ, ಚೆಲುವೆ₂** (ನಾ). ಬಟ್ಟೆಗಳನ್ನು ಮಡಿ ಮಾಡುವಿಕೆ,–ತೊಳೆದು ಹಸನುಗೊಳಿಸುವಿಕೆ,–ಶುಚಿಮಾಡುವಿಕೆ : ಗಡುಸಾದ ನೀರು (Hard water) ಚಲುವೆಗೆ ಯೋಗ್ಯವಲ್ಲ (ಗೃಹವಿ. ೮೬). **ಚೆಲವೆ:** ಚಲವೆ (ಮಡಿ) ಮಾಡಿರದ ಮೃದುವಾದ ಒಂದು ಚೀನಾ ರೇಷ್ಮೆ (ಬಟ್ಟೆ) (Pongee. ಇಂಶನಿ). **ಚೆಲುವೆ₂ :** ಓದುತ್ತ ಓದುತ್ತ ಅವರ ಮುಖ ಚೆಲುವೆಯ ಅರಿವೆಯಂತಾಯ್ತು (ಮರಳಿ. ೦೬೯); ತೊಟ್ಟುಕೊಂಡ ಮೇಲೆ ಬಹಳ ಬೆಳ್ಳಗೆ ಚೆಲುವೆಮಾಡಿ ಗಂಜಿಹಾಕಿ ಮಾರುತ್ತಾರೆ (ಪ್ರವಾಇ. II, ೨೬೪). [ ದೇ.೩ ತಮಿ. ಚಲವೈ ; ತುಳು. ಚಲುವ ]

**ಚಲುವೆಱು** 'ಚೆಲ್ವುವೆಱು' ನೋ.

**ಚಲೆ** (ನಾ). ೧. ನಿಂತಲ್ಲಿ ನಿಲ್ಲದವಳು ; ಚುಂಚಲಸ್ವಭಾವದವಳು ; ಅಸ್ಥಿರೆ. ೨. ಹಾದರಗಿತ್ತಿ ; ವ್ಯಭಿಚಾರಿಣಿ : "ಸ್ವೈರಿಣಿ ವಿದರ್ಶಿನಿ ಯನೀತೆ ಚಲೆ ಕುಲಟೆಯಭಿಸಾರಿ ಪಾಂಸುಲೆ ಬಂಧಕಿಯೆನಲ್ಕೆ ಹಾದರದ ನಾರಿಯೆನಿಸಿಕ್ಕು" (ಮುಂಗರಾ. ೯೦-೪) [ ಸಂ. ಚಲಾ ]

**ಚಲ್ಲ₁, ಚಲ್ಲು₃, ಚೆಲ್ಲೆ₃, ಚೆಲ್ಲ₁, ಚೆಲ್ಲು₂** (ನಾ). ೧. ಸರಸ ; ವಿನೋದ; ವಿಲಾಸ ; ಒಯ್ಯಾರ : ಪುಲ್ಲಶರನುಮಂ ಚಲ್ಲದೊಳ್ ಪದವಡಿಸಲುಂ (ಶಾಂತಿಪು. ೮-೬೨ ವ); ಚಲ್ಲಂ ಚಳೆಯಂಗುಡುತ್ತುಮಿರೆ (ಅರ್ಧನೇ. ೨-೯೩); ಪೆಣ್ಣಾನೆಯೊಂದು ಚಲ್ಲದೊಳು ತೆಗೆದೊಡೆರಳ್ಪೆಣ್ಣಾನ ಬರ್ಪ ತೆಱದೊಳು (ಭರತ. ೪೦-೮೩); ಪಲ್ಲಮಱಿಯ ಚಲ್ಲದ ಸೊರ್ಕನಿಟೆಸಿಯ್ದು ಬೀರದ ಜೋದರ ದಟವುಟದಿಂ (ರಾಮಾಶ್ವ. ೯೪-೧೮). ೨. ನಗು : "ಚಲ್ಲ [ಪಾಠಾಂ. ಲ್ಲೆ] ನಗೆ" (ಕಬ್ಬಮಾಂ. ೬೬). **ಚಲ್ಲು₃:** ೧. 'ಚಲ್ಲಂಬಡಿ' ಪರಾ. (ಗು). ೩. ಗಾಂಭೀರ್ಯವಿಲ್ಲದಿರುವ ; ಹಗುರಸ್ವಭಾವದ ; ಕುಚೇಷ್ಟೆಯ ಸ್ವಭಾವದ: ಸ್ವಲ್ಪ ಚಲ್ಲುಸ್ವಭಾವದ ಮನುಷ್ಯ (ಚಿತ್ರಕೂ. ೦೦೪). **ಚೆಲ್ಲೆ₃ :** ೧. 'ಚಲ್ಲೆನೋಟ' ಪರಾ. **ಚೆಲ್ಲ₁ :** ೧. "ಚೆಲ್ಲಮನೆ ಸರಸಮಕ್ಕುಂ" (ಕತುವಿ. ೦೪೩); ಚೆಲ್ಲಂ ಬೇಂಟದ ತೋಟಿಯೊಳ್ ತೊಡರೆ (ಕಾವ್ಯಸಾ. ೩೫೦ ಟಿಪ್ಪಣಿ): ಅಱಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಂ ನುಡಿದುಂ (ಜಂಪಥಾ. ೬-೯೪ ವ); ಅಲ್ಲದ ಬೇಳಿನ ಚೆಲ್ಲಕ್ಕೆ ಹೋಗಿ ಇವರೆಲ್ಲರೂ ನಾಣುಗೆಟ್ಟರಲ್ಲಾ (ಸರ್ವಪ. ೯೨-೫೦೬); ಅಲರ್ಗಣ್ ಚೆಲ್ಲಮಂ ಸೂಸೆ (ಜಗವಿ. ೦೪-೦೦೪). ೨. "ಹಸನಂ ಚೆಲ್ಲಂ" (ಕತುವಿ. ೬೬). **ಚೆಲ್ಲು₂ :** ೧. ಕಂತು ಪಡೆದಗ್ಗದ ಮೋಹನಶಕ್ತಿಸಂಕುಳಂ ಗಡಮನೆ ಚೆಲ್ಲಿ ನೇಟ್ಗೆನಡೆ ನೋಟ್ಟರ ಕಣ್ಗಳನೆಯ್ದೆ ಮುಂಚಲಂಬಡಿವ ವಿಳಾಸಿನೀನಿವಹಂ (ಶಾಂತೀಶ್ವ. ೧೧-೬೬). ೩. ಆ ಎದುರು ಮನೆ ಚೆಲ್ಲು ಹುಡಿಗಿ ರಾಜ ಇದಾಳಲ್ಲ (ನಡೆದಾ. I, ೫೦೬). ೪. ಕುಚೇಷ್ಟೆಯ ಸ್ವಭಾವದ ವ್ಯಕ್ತಿ: ಮನಸ್ಸಿಗೆ ತೋರಿದುದನ್ನು ಬಾಯಲ್ಲಿ ಆಡಿ ತೋರಿಸಿ ಎಲ್ಲರಿಂದಲೂ 'ಚೆಲ್ಲು' ಎನಿಸಿಕೊಳ್ಳುತ್ತಾಳೆ (ಕಂಳಿಣ ೩೪). [ ?./ತೆಲು. ಚರಲು, ಚಿರಲು = ಉತ್ಸಾಹಗೊಳ್ಳು./ ಸಂ. ಚಲ್ = ವಿನೋದಮಾಡು. ]

**ಚಲ್ಲ₂** 'ಸೆಳ್ಳ' ನೋ.

**ಚಲ್ಲಂಬೆರಸು, ಚೆಲ್ಲಂಬೆರಸು** (ಅ). ಸರಸದಿಂದ ಕೂಡಿ ; "ಚಲ್ಲಾಟದೊಡನೆ" (ಜಂಪದೀ. ೨೬೬): ಕಡೆಗಣ್ಣ ಚ[ಪಾಠಾಂ. ಚೆ]ಲ್ಲಂಬೆರಸು ಸೂಸುವ ವಾಸವಸ್ತ್ರೀಯರ ಮುಖಾಬ್ಜಾಸವ ಸಂಬಂಧಿಗಳಪ್ಪ ಶೇಷಾಕ್ಷತಂಗಳಂ . . . ಸೇಸೆಗೊಳುತ್ತುಂ (ಜಂಪಥಾ. ೫-೨೬ ವ) ; "ಪ್ರಸಾರದಿಂದ ಕೂಡಿ" (ಜಂಪವಿ). **ಚೆಲ್ಲಂಬೆರಸು :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚಲ್ಲ₁ + ಬೆರಸು₂ ]

**ಚಲ್ಲಂಬೇಱು** (ಕ್ರಿ). ವಿಲಾಸವನ್ನು ಹೆಚ್ಚಿಸು: ಚಲ್ಲಂಬೇಱಿದ ನೋಟದೊಳ್ಪು ನೆಯುದಿಂ ನಾಣ್ಣಾಣದೊಪ್ಪಂಗೆಳಂ ಬಲ್ಲಂದಂದದೆ ಕೋಱು ವೋದೆ . . ಒರ್ವಳಂಗಜರಸಂ ಕೈಗಣ್ಮೆ ಬಂದಿರ್ದಳಂ ನೋಡದಂತೆ ನೋಡಿ (ಬಂಹರಿ. ೩-೫೦). [ ಚಲ್ಲ$_1$ + ವೇಱು$_1$ ]

**ಚಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚಲ್ಲಕಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲಗಣ್, ಚೆಲ್ಲಗಣ್** (ನಾ). ಸರಸವನ್ನು ಬೀರುವ ಕಣ್ಣು; ಚೆಲುವಾದ ಕಣ್ಣು: ಸೊಗಯಿಪ ಚಲ್ಲಗಣ್ (ಎಕ. VI, ತರೀಕೆ. ೪೫-೩೪: 1196); ಚಲ್ಲಗಣ್ಗಡೆಯ ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕವನೋ ಮೃಗವನೆಯ್ದೆ ಬೀೞ್ ತಂದಿಲ್ಲಿ ತಡೆವರ್ (ಪದ್ಮರಾ. ೮-೯); ಚಲ್ಲ[ಪಾಠಾಂ. ಚೆಲ್ಲೆ]ಗಂಗಳ ಚದುರೆ (ಸಾಳ್ವಭಾ. ೨೯-೬). **ಚೆಲ್ಲಗಣ್**: ನಗೆಗಣ್ ಮಱುವುಲ್ಲೆಯ ಚೆಲ್ಲಗಣ್ಗಳಿಂ ನೂರ್ಮಡಿ ಚೆಲ್ವನಾನೆ (ಕಬ್ಬಿಗಕಾ. ೩೬೮); ನಗೆಗಣ್ಣ ಮುಗುಳ್ನಗೆ ಚೆಲ್ಲಗಣ್ಣ ಚಾಪಳಂ (ಪುಷ್ಪಪು. ೫-೨೪); ಮಣಿಹಾರಂ ವಿಟವೇತ್ರವಾಗುರಮೆನಲ್ ಸಾರ್ದಿರ್ಪನಂ ಚೆಲ್ಲಗಣ್ ಗಣಿಕಾವಲ್ಲಭ ಸಂಕುಲಕ್ಕೆ ಮಥಿಸಲ್ ಸಾಕೆಂಬಿನಂ (ದಶಕು. ೦೦-೫೮).
[ ಚಲ್ಲ$_1$ + ಕಣ್ ]

**ಚಲ್ಲಗಾಯ್** 'ಚೆಳ್ಳಗಾಯ್' ನೋ.

**ಚಲ್ಲಗಾರ್ತಿ, ಚಲ್ಲಕಾತಿ, ಚಲ್ಲಕಾರ್ತಿ, ಚಲ್ಲೆಗಾರ್ತಿ, ಚೆಲ್ಲಕಾತಿ, ಚೆಲ್ಲಗಾತಿ, ಚೆಲ್ಲಗಾರ್ತಿ, ಚೆಲ್ಲೆಗಾತಿ** (ನಾ). ವಿಲಾಸವತಿ; ಸರಸವತಿ; ರಸಿಕಳಾದ ಸ್ತ್ರೀ: "ಸರಸವತಿ ಚಲ್ಲಗಾರ್ತಿ" (ಕವಿಕಂ. ೧೬೪); ಎಡೆಯಾಡುವ ಚಲ್ಲಗಾರ್ತಿಯರ ಹುಲ್ಲೆಗಣ್ಗಳ ಕಾಂತಿಕೌಮುದಿಗಳಿಂ (ಅನಂಪು. ೦-೧೦೫ ವ); ಒರ್ವಳ್ಚಲ್ಲ [ಪಾಠಾಂ. ಲಲ್ಲೆ]ಗಾರ್ತಿ ದೂದವಿಯೊಡನೆ ನಗೆ ಮಿನುಗೆ ಮೊಗಮಂ ನೋಡಿ (ರಾಜಶೇ. ೦೦-೦೪೮ ವ). **ಚಲ್ಲಕಾತಿ**: ಮುಂಗುರುಳುಗಳ ತಿರ್ದುತ ಮೆಲ್ಲನಡಿಯಿಟ್ಟಳು ಚಲ್ಲಕಾತಿ (ಜಂಪ್ರಸಾಂ. ೯-೦೫೮). **ಚಲ್ಲಕಾರ್ತಿ**: ಚಲ್ಲಕಾರ್ತಿಯರ್ ಚಲ್ಲದಿಂ ನಿವಾಳಿಸಿ ನಾಣಂ ಬೞಿದೀಡಾಡಿಯುಂ (ಅರ್ಧನೇ. ೫-೨ ವ). **ಚಲ್ಲೆಗಾರ್ತಿ**: "ಚಲ್ಲೆಗಾರ್ತಿಯೆನೆ ಸರಸವತಿ" (ಕಶಶ. ೩೫). **ಚೆಲ್ಲಕಾತಿ**: ತನ್ನ ಸೇವೆಯ ಚೆಲ್ಲಕಾತಿಯರ ಮೇಳದೊಳು (ಭರತ. ೫೫-೬೯). **ಚೆಲ್ಲಗಾತಿ**: ಚದುರೆಯೆ ಚೆಲ್ಲಗಾತಿಯೆ (ಗೀತಗೋ. ೫೫-೦೦). **ಚೆಲ್ಲಗಾರ್ತಿ**: "ಚೆಲ್ಲಗಾರ್ತಿಯೆಂದು ಸರಸವತಿ". (ಕಶಸಾ. ೧೯-೩೬೬). ಕಣ್ಚೆಲ್ಲದೊಳೆ ಗೆಲ್ವಳಿನ್ನಿವಳಲ್ಲದೆ ಜಗದೊಳಗೆ ಚೆಲ್ಲಗಾರ್ತಿಯರೊಳರೇ (ಅರಾವ. ೨-೮೬); ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೫೦-೧೫). **ಚೆಲ್ಲೆಗಾತಿ**: ಮೆಲ್ಲೆದೆಯವರಿಗೆ ಬಾಹುಬಲಿಯ ಕೃತಿ ಚೆಲ್ಲೆಗಾತಿಯ ಲಲ್ಲೆವಾತು (ನಾಗಕು. ೦-೭೬).
[ ಚಲ್ಲ$_1$ + -ಕಾಱ + -ತಿ$_1$ (< -ಇತ್ತಿ) ]

**ಚಲ್ಲಣ, ಚಣ್ಣ, ಚಲ್ಲಾಣ, ಚೆಲ್ಲಣ, ಚೊಣ್ಣ, ಚೊಲ್ಲಣ** (ನಾ). ೧. ಮೊಣಕಾಲವರೆಗೆ ಬರುವ ಉಡುಪು; -ಚಡ್ಡಿ; ಅರ್ಧೋರುಕ: "ಚಂಡಾತಕಮೆಂಬುದು ಚಲ್ಲಣಂ" (ಅಲಾಯು. ೯೦-೩೯೩); "ಚಣಕಂ— ಚಲ್ಲಣಂ (ಅರ್ಧೋರುಕಂ)" (ಶಮದ. ಪರಿ. ೨); ಅಗಳಂಗರಾಜ . . . ಇಂಬಾಗಿ ಚಲ್ಲಣಮನುಟ್ಟು (ಪಂಪಭಾ. ೧೨-೦೦೮ ವ); ಉಟ್ಟ ಚಲ್ಲಣ ಕೈಯ ಪಟ್ಟೆಯವಿಡಿದು ಗರುಡಿಯ ಕಟ್ಟೆ ಶ್ರಮವ ಮಾಡುವಂತೆ ತನ್ನ ತಪ್ಪಿಸಿಕೊಂಡರೆ ಶಿವ ಮೆಚ್ಚುವನೆ (ಬಸವ. ೬೬೮); ಮುಂಜೆಬಿಗುಗಳ ಚಂದ್ರಿಕೆ ಪಟದ ಚಲ್ಲಣದ . . ವನಿತೆಯರು ಬಳಸಿದರು (ತೊರರಾ. ೦-೦೬-೫೨); ಪಟ್ಟಾವಳಿ ಚಲ್ಲಣವ ತೊಟ್ಟು ಪೆರ್ದೊಡೆಗೆ (ಮೋಹತ. ೦೨-೪೫). ೨. ಷರಾಯಿ; ಇಜಾರ: ಬೆಲೆಬಾಳುವ ಷರಟೂ ಹಾಕಿ ಉಲನ್ ಚಲ್ಲಣವನ್ನು ಧರಿಸಿದ್ದ (ವಂಶವೃ. ೩೩೬). **ಚಣ್ಣ**: ೨. ಅವರ ಅಂಗಿ . . . ಬಣ್ಣಬಣ್ಣದ ಚಣ್ಣ ನೋಡಿದರೇ ಹೇಳಬಡಬಹುದು (ತುಂಗಭ. ೩); ಹಾಕಿ ಚಣ್ಣ ಹಾಕಿಕೊಂಡು ಕಚೇರಿಗೆ ಹಾಜರಾಗಿ ಸಿಪಾಯರಿಂದ ನಗಿಸಿಕೊಳ್ಳುವದು ತಪ್ಪುತ್ತಿತ್ತಲ್ಲ (ಗಂಪೂಯ. ೮೨೦); ಚಣ್ಣ ಪೈರಣ ಹಾಕಿದ್ದರೆ ಬರುತ್ತಿತ್ತು (ಕುರಿಹಿಂ. ೦೨೯); ಪಿಸ್ತೂಲು ತೆಗೆದುಕೊಂಡು ಚಣ್ಣದ ಕಿಸೆಯಲ್ಲಿಟ್ಟೆ (ಮೇದಿಮ. ೬೯). **ಚಲ್ಲಾಣ**: ೧. ಉಲಿವ ಪೊಕ್ಕುಳ ಘಂಟೆ ಚಲ್ಲಾಣದುರ ಗೆಜ್ಜೆ (ನವತೋ. ೧೨-೬೮). **ಚೆಲ್ಲಣ**: ೧. ಸಲ್ಲಲಿತವಾದ ಚೆಲ್ಲಣದ ಚಿತ್ರಿಸಿದ ಪತಾಕಾಂಚಲದಂತೆ ಪಲ್ಲವದ ಶೋಭೆಯಂ ಪಳಚ್ಚನೆ ಮೆಱೆವ ಬಾಲ ಗಚ್ಚೆಯ (ಶಾಂತೀಶ್ವ. ೬-೯೩ ವ); ಉಲಿವ ಗೆಜ್ಜೆಯ ಚೆಲ್ಲಣದ ಹೊಂಬಳಿದ ಹರಿಗೆಯ ಹೊಳೆವ ಕಡಿತಲೆಗಳ ವಿಲಾಸದೊಳೆಂದು ಹೊಕ್ಕುದು ತುಳುವ ಪಡೆ (ಕುವ್ಯಾಧೀ. ೪-೩೩); ಚೆಲ್ಲಣ ಕಾಸೆ ಕುಪ್ಪಸ ಮೊಲೆಕಟ್ಟುಗಳ್ (ಮೋಹತ. ೨೪-೪). **ಚೊಣ್ಣ**: ೨. ನನ್ನ ಬಿಳಿ ಚೊಣ್ಣದ ಸಂಗಡಿಗರೊಡನೆ ಆಡುತ್ತಿದ್ದೆ (ಗೀಪ. ೨); ಚೊಣ್ಣದ ಕಿಸೆಯಲ್ಲಿ ಹುರಿಗಡಲೆ ಇದ್ದುವು (ಜಯಂತ. ೨೦): **ಚೊಲ್ಲಣ**: (೧).
[ ದೇ.॥ ತೆಮಿ. ಮಲ. ಚಲ್ಲಡ; ತುಳು. ಚಲ್ಲಣಿಸ; ತೆಲು. ಚೆಲ್ಲಡ; ಚಲ್ಲಾಡ. / ಸಂ. ಚಲನಕ, ಚಂಡಾತಕ ].

**ಚಲ್ಲಣಂದೆಗೆ** (ಕ್ರಿ). ೧. ಚಡ್ಡಿಯನ್ನು ಕಳಚಿಸು. ೨. (ಅಲಂ) ಅವಮಾನ ಮಾಡು; ಭಂಗಿಸು: ನಿಚ್ಚಟದ ರಾವುತರಂ ಚಲ್ಲಣಂದೆಗೆದುಂ ಮುಂಗುಡಿಯ ರಾವುತರಂ ಭಂಗಿಸಿ ತಿವಿದು (ಮಲ್ಲಿನಾ. ೨೨೬-೦೫). [ ಚಲ್ಲಣ + ತೆಗ್$_1$ ]

**ಚಲ್ಲಣಗಟ್ಟು** (ಕ್ರಿ). ಚಡ್ಡಿಯನ್ನು ಧರಿಸು; ಚಣ್ಣವನ್ನು ತೊಟ್ಟುಕೊಳ್ಳು: ಸಾಸಿರದೆಂಟನೆಯ ದಳದಲ್ಲಿ ಖೇಚರಿ ಚಲ್ಲಣಗಟ್ಟಿ ವಾಸುಗಿಯ ಫಣಾಮಣಿಯು ಪ್ರಜ್ವಲಿಸುವುದ ಕಂಡೆ (ಅವಚಂ. ೬೦-೨೬೦). [ಚಲ್ಲಣ + ಕಟ್ಟು$_1$]

**ಚಲ್ಲಧ್ವಜ** (ನಾ). ಯಾವಾಗಲೂ ಸೋಲದ ವ್ಯಕ್ತಿ; ಒಂದು ಬಿರುದು (?): ಮಾಸಾಮನ್ತ ಚಲ್ಲಧ್ವಜ ರಣದುತ್ತರಂಗನೆನ್ತುಮೊಳ್ಗಿದಂ (ಎಕ. VIII, ಸೊರಬ. ೮೫-೨: 912). [ಇದು 'ಚಲಧ್ವಜ' ಎಂಬುದರ ಅಪಲಿಖಿತವಿರಬಹುದು]

**ಚಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲವಂತ** 'ಚಲ್ಲವತ್ತ' ನೋ.

**ಚಲ್ಲವತ್ತ, ಚಲ್ಲವಂತ, ಚಲ್ಲವರ್ತ, ಚಲ್ಲವೊತ್ತ, ಚೆಲ್ಲವತ್ತ, ಚೆಲ್ಲವೊತ್ತ** (ನಾ). ಸವಿಮಾತುಗಳಿಂದ ಮರುಳುಮಾಡಿ ದ್ರೋಹ ಬಗೆಯುವವನು; ಠಕ್ಕ; ವಂಚಕ: "ನಂಬಿಸಿ ತಿಂಬುವನಂ ಬುಧರೆಂಬರ್ ಬೊಂದುಕನು ಚಲ್ಲವತ್ತನುಮೆಂದುಂ" (ಕವಿಕಂ. ೦೫೫); ಕೆಮ್ಮಗೆ ನಾಡ ಚೆಲ್ಲವ[ಪಾಠಾಂ. ವೊ]ತ್ತರ ನುಡಿಗೊಳ್ಳದಿರ್ (ಪಂಪಭಾ. ೯-೪೨); ನಂಬುಗೆ ಚಲ್ಲವತ್ತರೊಳ್ . . . ಉಂಟುಮಾಡವೆ ಕೇಡಂ (ನೀತಿಮುಂ. I, ೦೦೫). **ಚಲ್ಲವಂತ**: "ಚಲ್ಲವಂತ[ಪಾಠಾಂ. ವತ್ತ]ನುಮೆನಲ್ ನಂಬಿಸಿಯೆ ತಿಂಬಾತನಕ್ಕು" (ಕಬ್ಬಮಂ. ೪೬). **ಚಲ್ಲವರ್ತ**: "ಬೊಂದುಕಂ ಚಲ್ಲವರ್ತ[ಪಾಠಾಂ. ವತ್ತ, ವೊತ್ತ]ನೆನೆ ನಂಬಿಸಿಯೆ ತಿಂಬವನ ಪೆಸರಕ್ಕು" (ಕಬ್ಬಿಗಕೈ. ೫೫). **ಚಲ್ಲವೊತ್ತ**: "ಚಲ್ಲವೊತ್ತರ್ = ನಂಬಿಸಿ ತಿಂಬವರ್" (ಶಮದ. ಪರಿ. ೨); ಎಲ್ಲಿಯಾನುಂ ಬಂದ ಚಲ್ಲವೊತ್ತನ ಬೆಲ್ಲವಾತುಗಳಂ ಕೈಕೊಂಡು ರಾಜ್ಯಹಿತಂ ಕಿಡಿಸಲ್ಬಗೆದೆಯಪ್ಪೊಡದನುಪೇಕ್ಷಿಸಲ್ಬಾರದು (ಪಂಚತಂ. ೦೫-೧). **ಚೆಲ್ಲವತ್ತ**: "ಬೊಂದುಕನೆಂದುಂ, ಚೆಲ್ಲವತ್ತನೆಂದುಂ ನಂಬಿಸಿ ತಿಂಬವನ" (ಕಶಸಾ. ೦೬-೩೩೮); ಬೇಳ್ಪ ತಿರಿಕುಳಿಯಲ್ಲದರ ಚೆಲ್ಲವತ್ತನಂ (ಸಂಸಪ. ೨೪-೦೦). **ಚೆಲ್ಲವೊತ್ತ**: ಮೇಲಿನ 'ಕಬ್ಬಿಕೈ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಲ್ಲವರ್ತ** 'ಚಲ್ಲವತ್ತ' ನೋ.

**ಚಲ್ಲವಾಡು, ಚಲ್ಲಾಡು$_2$, ಚೆಲ್ಲವಾಡು, ಚೆಲ್ಲಾಡು$_2$** (ಕ್ರಿ). ವಿನೋದ ಮಾಡು; ಸರಸವಾಡು: ಚಲ್ಲವಾಡಿ ಪೂವೆತ್ತುವ ಮಾಲೆಗಾರ್ತಿಯರ ನಂದರಿಕೇಸರಿ ನಿಂದು ನೋಡಿದಂ (ಪಂಪಭಾ. ೪-೮೦); ಬೆಳ್ಳೆಯ ಚಿನಕಂಗೆ

ಕೆಂಡದುಂಡಲಿಗೆಯು ಮಾಡಿ ಚಲ್ಲವಾಡಿದರೆ ಹಲ್ಲು ಹೋಹುದು (ಬಸವ. ೩೩೧ ಅ); ಹೋಹ ಮಾರಿಯು ಚಲ್ಲವಾಡುವರು (ಎಕ. VIII, ಸೊರಬ. ೨೬೮-೩೩; ಶು. ೧೭೬೬). **ಚಲ್ಲಾಡು₂:** ನಲ್ಲನೆರ್ದೆಯುಂ ಸಾರ್ದಲ್ಲಿ ಚಲ್ಲಾಡಿ (ಚೆಳವ. ೧-೩). **ಚೆಲ್ಲವಾಡು:** ನೇವುರದ ನುಣ್ಚರಕ್ಕೆ ಮರಳ್ದ ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ವಾಡುತ್ತುಂ (ಅರ್ಧನೇ. ೦-೯೨ ವ); ಬುಲ್ಲವಿಸಿದನು ಕೋಪಶಿಖಿಯಲಿ ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ (ಭಾರತ. ೨೧-೯೮); ಒಲ್ಲದವಳೊಡನಾಡಿ ಚೆಲ್ಲವಾಡುವನೆಗ್ಗ (ಸರ್ವಜ್ಞ. ೧೭೦೭). **ಚೆಲ್ಲಾಡು₂:** ಮಳೆ ಸುಗ್ಗಿಗಳ ತಡೆದು ಮಲ್ಲೆಲ್ಲ ಕುಳಿರ ತೆರೆ ಚೆಲ್ಲಾಡುತಿರಲು (ಶಾರದೆ. ೭೦-೨೩೮). [ ಚಲ್ಲ₁ + ಆಡು₁ ]

**ಚಲ್ಲವೊತ್ತ** 'ಚಲ್ಲವತ್ತ' ನೋ.

**ಚಲ್ಲಾಟ₁, ಚೆಲ್ಲಾಟ₁** (ನಾ). ಚಲ್ಲಾಪಿಲ್ಲಿಯಾಗಿ ಚಲ್ಲುವುದು,-ಎಸೆಯುವುದು; ತೂರಾಡುವುದು: (ಶ). **ಚೆಲ್ಲಾಟ₁:** (ಶ). [ ಚಲ್ಲು₁ + ಆಟ ]

**ಚಲ್ಲಾಟ₂, ಚೆಲ್ಲಾಟ₂** (ನಾ). ೧. ವಿನೋದ; ಸರಸ; ಲೀಲೆ; ವಿಲಾಸ: ಭಾವದಲ್ಲಿ ನನ್ನ ಕೂಡಣ ಚಲ್ಲಾಟದಿಂದ ಸಂಚರಿಸುತ್ತ ತಾನೇ ಜಂಗಮನಾದನಯ್ಯಾ (ವಚಶಾ. II, ೦೩೨); ಅತಿವಿಳಾಸಮನೆಸಗುತ್ತೆಸದಿರ್ಪಳಮ್ಗಳ ಚಲ್ಲಾಟವಮಂ ನೋಡುತ್ತ (ಅದ್ಭುಟ. ೩-೩೨ ವ). ೨. ಗಾಂಭೀರ್ಯವಿಲ್ಲದಿರುವಿಕೆ: ಅವಳ ಚಲ್ಲಾಟದ ನಡವಳಿಕೆ ಗೌರವಕ್ಕೆ ಧಕ್ಕೆ ತರುತ್ತದ (ಬೂ). **ಚೆಲ್ಲಾಟ₂:** ೧. ಚೆಲ್ಲಾಟಂ ಕಲಹಂ ರತಿ ಸಲ್ಲೀಲೆ (ಮನ್ಮವಿ. ೩-೩೩); ಅಳಿಗಳವ್ವುಗೆ ಸಿಂಗವಡಿಗಳ ಚೆಲ್ಲಾಟ (ಶಂಕವಿ. ೦೦-೯೪); ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣಸಂಕಟ (ಗಾದೆ). ೨. ನಲ್ಲ ಕಂಡರೆ ಚೆಲ್ಲಾಟವಾಡುವ ಚೆಲುವೆಯು ಗತಿಯೇನು? (ಹರಿಭಮಾ. ೦೩೦ ಕೃಷ್ಣಾವನಿ). [ ಚಲ್ಲು₁ + ಆಟ. / ತೆಲು. ಚೆಲ್ಲಾಟ ]

**ಚಲ್ಲಾಟಂಬೆಱು** (ಕ್ರಿ). ಸರಸವಾಡು; ಸಂತೋಷಿಸು; ವಿನೋದಪಡು: ಚಲ್ಲಾಟಂಬೆತ್ತು ಕಾಂತಾಮಣಿಯುಂಗುರಿಸಿದಳ್ ಕೈಲಮಂ ಬಾಲೆಗಾಗಳ್ (ಅದ್ಭುಟ. ೮-೦೩). [ ಚಲ್ಲಾಟ₂ + ಪೆಱು₁ ]

**ಚಲ್ಲಾಡು₁, ಚೆಲ್ಲಾಡು₁** (ಕ್ರಿ). ೧. ತೂರಾಡು; ಈಡಾಡು; ಒಗೆದಾಡು: ಫುಲ್ಲನಾಭನ ಪ್ರಾಣವಲ್ಲಭೆಯು ನೆಱಿ ಸಿರಿಯು ಚ[ಪಾಠಾಂ. ಚೆ]ಲ್ಲಾಡುತುಱೆ ಮೆಱೆದ ಕಲ್ಯಾಣಪುರದ ಸುತ್ತೆಲ್ಲ (ಗುರುಚ. ೦-೨೦). **ಚೆಲ್ಲಾಡು₁:** ೧. ಬಂದಚ್ಚಲರ ಧೂಳಿಗಳ ಚೆಲ್ಲಾಡಿ (ಕೃಮಿಭಾ. ೩-೨೪); ಹಿಗ್ಗಿರ್ಪ ಕಂಗಳಿಗೆ ಚೆಲ್ವಿಕೆಯ ಚೆಲ್ಲಾಡಿ (ಶಾರದೆ. ೦೦೯-೨೪೭). ೨. ಅತಿಶಯವಾಗಿ ಬಿದ್ದಿರು; ಯಥೇಷ್ಟವಾಗಿ ಇರು; ಇಟ್ಟಾಡು: ಹೊರಗಡೆ ತ್ರಯೋದಶಿ ಚಂದ್ರನ ಬೆಳಕು ಚೆಲ್ಲಾಡುತ್ತಿತ್ತು (ಶಂಗಾಳ್ಕ. ೩೦೩): ಎರಡಾಣೆ ನಾಕಾಣೆಗೆ ಸೇರಕ್ಕಿ ಬಿದ್ದು ಚೆಲ್ಲಾಡೋದು (ನನ್ನೂರು. ೩೧೭). [ ಚಲ್ಲು₁ + ಆಡು₁ ]

**ಚಲ್ಲಾಡು₂** 'ಚಲ್ಲವಾಡು' ನೋ.

**ಚಲ್ಲಾಣ** 'ಚಲ್ಲಣ' ನೋ.

**ಚಲ್ಲಾನೆ** (ನಾ). ಒಂದು ಬಗೆಯ ಮರ: ವಲೀವರ, ಚಲ್ಲಾನೆ . . . ಗೂಗ (ಮೃಜಿ. ೩೦-೬೦೭). [ ? ]

**ಚಲ್ಲಾಪಿಲ್ಲಿ, ಚಲ್ಲಪಿಲ್ಲಿ, ಚಲ್ಲಿಪಿಲ್ಲಿ, ಚೆಲ್ಲಪಿಲ್ಲಿ, ಚೆಲ್ಲಾಪಿಲ್ಲಿ, ಚೆಲ್ಲಿಪಿಲ್ಲಿ** (ನಾ). ಅತ್ತಿತ್ತ ಚೆದರಿದ ಸ್ಥಿತಿ; ಅವ್ಯವಸ್ಥೆಯ ರೀತಿ; ಅಸ್ತವ್ಯಸ್ತತೆ: ಅವರ ಫೌಜಿಗೆ ಬಹಳ ಪೆಟ್ಟಾಗಿ . . . ಕಡೆಗೆ ಇದಿರಿಗೆ ನಿಲ್ಲಲಾರದೆ ಚಲ್ಲಾಪಿಲ್ಲಿ ಆದ್ದರಿಂದ (ರಾಜೇಂದ್ರ. ೯೩); ಉದ್ದಿನ ಮೂಟೆಯು ಉರಳಿ ಹೋದರೆ ಅದರೊಳಗಿರುವ ಕಾಳುಗಳು ಚಲ್ಲಿ ಚಲ್ಲಾಪಿಲ್ಲಿಯಾಗಿ ಹೋಗುವಂತೆ (ಹುಮ್ಮಹ. ೧೨೮); ಮನಸು ಚದರಿ ಚಲ್ಲಾಪಿಲ್ಲಿಯಾಯಿತು (ಹೂಬಿಸಿ. ೧೨). **ಚಲ್ಲಪಿಲ್ಲಿ:** ಗರ್ಲೆಯೊಡೆಯು ಕಿವಿದನು ಗಡೆಯುವರನು ಚಲ್ಲಪಿಲ್ಲಿಯು ಮಾಡಿದನು (ಕುರಾಸಾಂ. ೦೩-೨೦). **ಚಲ್ಲಿಪಿಲ್ಲಿ:** ಬಲದಲ್ಲಿ ಕೆಲಫೌಜು ನಿತ್ರಾಣಿಸಲಾಱದೆ ಚ[ಪಾಠಾಂ. ಚೆ]ಲ್ಲಿಪಿಲ್ಲಿಯಾದುದು (ಕಮ್ಮಳಾ. ೮-೩೦). **ಚೆಲ್ಲಪಿಲ್ಲಿ:** ರಾಣ್ಮವನೆಲ್ಲವ ಹೊಕ್ಕು ಱಾದಿಱಾದು ಚೆಲ್ಲ[ಪಾಠಾಂ. ಚಲ್ಲಿ]ಪಿಲ್ಲಿಯ ಮಾಡಿ (ಕುರಾಸಾಂ. ೩-೯೩). **ಚೆಲ್ಲಾಪಿಲ್ಲಿ:** ಸಾಮಾನುಗಳೆಲ್ಲ ಅತ್ತಿತ್ತ ಚೆಲ್ಲಾಪಿಲ್ಲಿಯಾಗಿದ್ದವು (ಕೃಶಕಾ. ೭೦); ಪಾಂಡ್ಯ ಸೈನ್ಯಗಳು ಚೆಲ್ಲಾಪಿಲ್ಲಿಯಾಗಿ ಓಡುತ್ತಿದ್ದವು (ಶ್ರೀಣಾಯ. ೩೦೯); ಕೈಯಲ್ಲಿದ್ದ ಬಟ್ಟಲು ಕೆಳ ಉರುಳಿ ಇದ್ದ ದೋಸೆ ಎಲ್ಲಾ ಚೆಲ್ಲಾಪಿಲ್ಲಿಯಾಗಿ ಕೆಳಬಿತ್ತು (ಪದ್ಮಸ. ೩೩). **ಚೆಲ್ಲಿಪಿಲ್ಲಿ:** ದೇವತೆಗಳು . . . ಕಲ್ಲುತಾಗಿದ ನೆಲ್ಲಿಯಂತೆ ಚೆಲ್ಲಿಪಿಲ್ಲಿಯಾಗುವಂ ತೋಡಿದುವಲ್ಲಿ ನಿಲ್ಲದೆ (ನೇಮಿಸಂ. ೨೩-೩೩). [ <ಚಲ್ಲು₁. / ತುಳು. ಚಲ್ಲಾಪಿಲ್ಲಿ ]

**ಚಲ್ಲಿ₁, ಜಲ್ಲಿ₁** (ನಾ). ೧. ಚೂರು; ತುಣುಕು; ತುಂಡು; ಹೋಳು: ಒಗುಮಿಗೆ ಚೇಳೆಗೆಯ್ದು ಮೆಟಸಂ ತಳೆದಲ್ಲದ ಚಲ್ಲಿಯಂ ಪವಣ್ಗೆ ಕಲಸಿರ್ದ ತಣ್ಣಲಸುಗೂಟನಳಾವತಿಗಿತ್ತನಟ್ಟಿಯಿಂ (ಲೀಲಾವ. ೩-೭೦); ಚಳಿಯದಂಗೋಪಾಂಗವಂ ಚಲ್ಲಿ ಮಾಡಿದೊಡಂ ತಳ್ವೊಳಗಿರ್ದೊಡಂ ಕಡೆಗ ದೆಂದುಂ . . . ದೇಹದಿನಾತ್ಮಂ ಪೆಱನೆಂಬ ಬುದ್ಧಿ ನಿನಗೀಗಳ್ ಸಾರ್ದುದು (ಧರ್ಮಾಮ. ೩-೦೦೯); ಕಾಡೆ ಕವಟೆಕಾಯು ತಂದು ಚಲ್ಲಿಯ ಮಾಡಿ ಕೂಡೆ ವರಳೊಳಗಿಡುವುದು (ಸಾಳ್ವಸಾಂ.೯). **ಜಲ್ಲಿ₁:** ೨. ರಸ್ತೆಯನ್ನು ಭದ್ರಪಡಿಸಲು ಹಾಗು ಸಿಮೆಂಟ್ ಕಾಂಕ್ರೀಟ್ ತಯಾರಿಸಲು ಹಾಕುವ ಕಲ್ಲಿನ ಚೂರು,-ತುಂಡು: ಬದುಕಿನ ನಡುಕಟ್ಟನಲ್ಲಿ ಕಟ್ಟಿ ಮೈಯ ಕಲ್ಲಜಲ್ಲಿ(ಗರಿ. ೯೪-೩); ರಸ್ತೆಗೆ ಜಲ್ಲಿ ಎಂದರೆ ಏನೆಂಬುದು ತಿಳಿದೇ ಇರಲಿಲ್ಲ (ರಂಗಳ. ೨೩). ೩. (ಅಲಂ) ಸುಳ್ಳು; ಸತ್ವವಿಲ್ಲದ ವಿಚಾರ: ದುರಗಿ ಆಡಿದ ನುಡಿಯು ಬೇಡನ್ನರಲ್ಲಿ; ಕಾಳಿ ಹೇಳುವ ಮಾತಿನಲಿ ಇಲ್ಲ ಜಲ್ಲಿ (ಜನಪ. IV, ೨೭-೧೨). [ ದೇ.? ತಮಿ. ಮಲ. ಚಲ್ಲಿ; ತುಳು. ಚಲ್ಲಿ, ಜಲ್ಲಿ; ತೆಲು. ಜಲ್ಲಿ ]

**ಚಲ್ಲಿ₂, ಛಲ್ಲಿ₁** (ನಾ). ೧. [ನಾಟ್ಯ] ನೃತ್ಯದ ಒಂದು ಗತಿ,- ಪಾದವಿನ್ಯಾಸ: ರಸಭಾವಾಭಿನಯಂಗಳ್ ಪೊಸವೆ ಪುಗಲ್ ಪೊಸವೆ ಚಲ್ಲಿಗಳ್ ಪೊಸವೆ ನಯಂ ಪೊಸವೆ ಕರಣಂಗಳುಂ ನಿಪ್ಪೊಸವೆನೆ ಪೊಸಯಿಸಿದಳಾಕೆ ನಾಟ್ಯಾಗಮಮಂ (ಆದಿಪು. ೯-೨೩); ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟಿಡೆಯೊಳ್ (ಆದಿಪು. ೯-೩೯). **ಛಲ್ಲಿ₁:** ೨. [ಸಂಗೀತ] ಮೃದಂಗ ಬಾರಿಸುವ ಒಂದು ಮಟ್ಟು,-ಗತ್ತು: ವಾದ್ಯವಿದ್ಯಾಧರನಪ್ಪ ವಿದ್ಯಾಧರಮಾರ್ದಂಗಿಕಂ ಮೃದಂಗಸಂಗತೋತ್ಕಂಠಂಗವಾಗಿ . . . ದೊಲ್ದಾವಣೆ ದೊಲ್ದಾವಣೆ ಛಲ್ಲಿ ಪಾಡು ಪದಂ . . . ಜೋಕೆಯೆಂಬ ದೇಸೆಯ ಶಬ್ದಂಗಳಿಸೆಯೆ ಬಾಜಿಸುತ್ತಿರೆಯುಂ (ಕಾಂತಿಕ್ಕ. ೧೩-೭೭ ವ).

**ಛಲ್ಲಿವಮಾಡು**=ನರ್ತನಮಾಡು; ನಾಟ್ಯವಾಡು: ವರ್ಗ ದ್ವಿತೀಯಾಕ್ಷರಂಗಳ್ಗೆ-ವಕ್ಷ್ಯಾಣಾಂ . . . ಛಲ್ಲಿವಮಾಡಿದಂ (ಛಲ್ಲಂ ಮಾಡಿದಂ) (ಶಮದ. ೦೩ ಪ್ರಯೋ). [<ಪ್ರಾ. ಚಲ್ಲಿ=ನೃತ್ಯದಲ್ಲಿಯ ಗೀತೆ. / ತಮಿ. ಚಲ್ಲಿ= ಒಂದು ಬಗೆಯ ವಾದ್ಯ ]

**ಚಲ್ಲಿ₃, ಚೆಲ್ಲೆ₂, ಚೆಲ್ಲಿ** (ನಾ). ಕನ್ನಡಿ: ದರ್ಪಣ: "ಕನ್ನಡಿಗೆ ಕೈಪಿಡಿ ಚಲ್ಲಿ [ಪಾಠಾಂ. ಲ್ಲೆ]ಯೆಂದು" (ಕಂಮಂ. ೬೩); ಬಲ್ಲವನೆಲ್ಲರಿಗೆ ಲಲ್ಲೆಯ ನುಡಿವನ ಬಲ್ಲವನರವು ಚಲ್ಲಿಯು ರೂಹಿನಂತೆ ಯಿದ ಬಲ್ಲವರಾರೋ(ಶರಗೋ. ೯೮-೦೦೩). **ಚೆಲ್ಲೆ₂:** "ಚಲ್ಲೆಯೆನೆ ದರ್ಪಣಂ ನೇರಾದುದು" (ಕಶರ. ೩೪). **ಚೆಲ್ಲಿ:** ಒಲವಿಂದೀವೊಡೆ ಗೋವಂಗಲಗೆ ಕೊಟಲ್ ಕೋಡ ಕಾಳೆ ಕೋಲುಡೆ ದೋಲ್ ಕಂಬಲ ಕಲ್ಲಿ ಚೆಲ್ಲಿ ಪೀಲಿಯ ತಲೆಸುತ್ತಲ್ಲದೆ ಮಹಾಗ್ರಪೂಜೆ ವಿರುದ್ಧಂ (ಜಗವಿ. ೧೭-೨೨). [ ? ]

**ಚಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚಲ್ಲಿಸು$_1$, ಚೆಲ್ಲಿಸು$_1$ (ಕ್ರಿ).** ೧. ಎರಚುವಂತೆ ಮಾಡು ; ಚೆಲ್ಲುವಂತೆ ಮಾಡು : ಪಾವುಗಳಿಂ ಕರ್ಚಿಸುತ್ತುಂ ಪಲ್ಲಿಯಿಂದಂ ಬೆದಱಿಸುತ್ತುಂ ಕಿಚ್ಚಂ ಚಲ್ಲಿಸುತಂ (ಧರ್ಮಾಪ. ೦-೬೬ ವ) ; ಅಲ್ಲಿ ಉಳಿದಿದ್ದ ಒಂದು ಕೆಂಡವನ್ನು ತರಿಸಿ ಅದಕ್ಕೆ ಅಮೃತದ ನೀರನ್ನು ಚಲ್ಲಿಸಿದನು (ಪಂಚಾಮೃ. ೪೦). ೨. ಸುರಿಯುವಂತೆ ಮಾಡು ; ಸುರಿಸು : (+). **ಚೆಲ್ಲಿಸು$_1$** : ೧. ಮಲ್ಲಿಗೆ ಯರಳಂತೆ ಬೆಳ್ದಾಳು ಬಹುವರ್ಣದಲ್ಲಿ ರಂಜಿಪ ಬಣ್ಣಗೂಳು . . . ಚೆಲ್ಲಿಸಿದಳು ದೆಸೆದೆಸೆಗೆ (ಮೋಹತ. ೩೧-೩೬) ; ಒಂದು ಖಂಡಿಗ ರಾಗಿಯನ್ನು ಚೆಲ್ಲಿಸಿದೆ (ಹಂಗಾಳ್ಕ. ೪೨೦). ೨. ಆಲಿನೀರ್ಗಳಂ ಚೆಲ್ಲಿಸಿಕೊಳುತ್ತೆ (ನಂಬಿರ. ೧೨-೦೦೭). [ಚಲ್ಲು$_1$ + – ಇಸು$_3$]

**ಚಲ್ಲಿಸು$_2$, ಚಳ್ಳಿಸು, ಚೆಲ್ಲಿಸು$_2$ (ಕ್ರಿ).** ಚೂರುಮಾಡು ; ತುಂಡುಮಾಡು ; ಕತ್ತರಿಸು : ತಾಳಿಸಿದ ಬದನೆಯ ಕಾಯ ಚ[ಪಾಠಾಂ. ಚೆ]ಲ್ಲಿಸಿದ ನೀರುಳ್ಳಿ ಶುಂಠಿ ಸಹಿತಿಕ್ಕುವುದು (ಸೂಪಶಾ. ೪-೨೯). **ಚಳ್ಳಿಸು:** ನೀರುಳ್ಳಿಯ ಗಡ್ಡೆಯಂ . . . ಚಳ್ಳಿಸಿ ಜಾಜಿಯುಂ ಕಲಸಿ ಮೆಲ್ಲದ ಮಾನವನೇನ ಬಲ್ಲನೋ (ನೀತಿಸಾ. ೬೪೭). **ಚೆಲ್ಲಿಸು$_2$ :** ಚೆಲ್ಲಿಸಿದ ನೀರುಳ್ಳಿ ನಿಂಬೆಹುಳಿ ಮೆಣಸು ಹಸಿಯಲ್ಲ ಸಕ್ಕರೆ ಹುಳಿಯ ಬೆರೆಸಿ ಪಾಕಂ ಮಾಡಿ (ಸೂಪಶಾ. ೬-೧೭).

[ ಚಲ್ಲಿ$_1$ + – ಇಸು$_3$ ]

**ಚಲ್ಲು$_1$, ಚಲ್$_2$, ಚೆಲ್ಲು$_1$ (ಕ್ರಿ).** ೧. ಹರಡು; ಪಸರಿಸು : ಕ್ರೂರಾಕಾರ ಮನೆಯ್ದೆ ತಾಳ್ದಿ ತಮಮಂ ಚ[ಪಾಠಾಂ. ಚೆ]ಲ್ಲುತ್ತುಮಿರ್ದಲ್ಲಿಯುಂ . . . ರಾಹು ಬಂದು (ಪಾರಪು. ೩-೦೩) ; ಬೆಳುದಿಂಗಳು ಹಾಲು ಚಲ್ಲಿದ ಹಾಗಿದೆ (ಜಾಪ). ೨. ಚದರಿಹೋಗು; ದಿಕ್ಕಾಪಾಲಾಗು: ಸಮಸ್ತಜನಮನಕ್ಕನು ರಾಗಮಾಗಲಲ್ಲಿಗೆ ಚಲ್ಲಿದಲ್ಲಾ ಬ್ರಾಹ್ಮಣೋತ್ತಮರು ಬಂದು ಕೊಡಲ್ (ಉದ್ಭಟ. ೪-೦೦೨ ವ) ; ಮುಂದೆ ಹೆಣದಿನಿಹಿಗಳಿಗೆ ಖಗಮೃಗ ವೃಂದ ಚ[ಪಾಠಾಂ. ಚೆ]ಲ್ಲಿತು ಭೂತಪ್ರೇತನಿವೃಂದ ಕೆದಱಿತು (ಕುಮಾ್ಯಗ. ೧೨-೪); ಚ[ಪಾಠಾಂ. ಚೆ]ಲ್ಲಿತಾಕ್ಷಣ ನೆರೆದ ಸೇನಾವಲ್ಲಭರು (ತೊರಪಾ. ೪-೪-೩೦). ೩. ಸಿಂಪಿಸು ; ಚಿಮುಕಿಸು ; ತಳಿ : ಬದ್ಧಜಲವಂ ಚಲ್ಲಿ ಚಲ್ಲಿ ತದುದ್ಧರಾಗ್ನಿಯನಂತು ಕೆಡಿಸಿ (ಬಸಪು. ೩-೫). ೪. ಬಿಸುಡು ; ಎಸೆ : ಒಡೆದ ಹುಳಿಮಜ್ಜಿಗೆಯ ತಿಳಿಯುಮಂ ಚ[ಪಾಠಾಂ. ಚೆ]ಲ್ಲಿ ಪಾವಡೆಯಲ್ಲಿ ಹಿಂಡಿ (ಸೂಪಶಾ. ೨-೦೬) : ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ . . . ಓಡಹತ್ತಿದನು(ಜೀವಪ್ರ. ೨೬). ೫. ಧಾರಾಳವಾಗಿ ಖರ್ಚುಮಾಡು, –ವ್ಯಯಮಾಡು : ಗಳಿಸಿ ತಂದೆಮಗರ್ಥವೀವುದನುಳಿದು ಭಂಡಾರವನೆ ಮಿಂಡಗರ್ಗೆಳಸಿ ಚ [ಪಾಠಾಂ. ಚೆ] ಲ್ಲುವುದುಚಿತವೇ ಯೆಂದಾಗ್ರಹಿಸಿ ನುಡಿದು (ಬಸಪು. ೦೦-೬). ೬. ಕೆಡಹು ; ಬೀಳಿಸು : ಆರು ಕೊಂಡರು ಹೇಳು ನಡೆವುತ ದಾರಿಯಲಿ ಕೆಡಹಿದೆಯೊ ವ್ಯೋಮಱಿದಲ್ಲಿ ಚ[ಪಾಠಾಂ. ಚೆ]ಲ್ಲಿದೆಯೊ (ಬಸಪು. ೧೪-೨೬) ; ಭಾವನಂಟ ಬಂದಾಗ್ಲೂ ಹಾಲು ಚಲ್ಲೋದು ಬಿಡಲಿಲ್ಲ (ಗಾದ). ೭. ಇಡು ; ಹಾಕು ; ಇರಿಸು : ಕುಡಿಯುವ ನೀರೊಳಗೆ ಮೊದಲೇ ಒಂದು ಶೀತೋಷ್ಣಮಾಪಕ ಯಂತ್ರವನ್ನು ಚಲ್ಲಿಟ್ಟಿರಬೇಕು (ಮುಂಬಯಿ. ೫-೧೨೨). ೮. ಎರಚು ; ತೂರು : ಕಾಲಮೃತ್ಯುವಿನ ಎರಡು ಕಣ್ಣಲಿ ಚಲ್ಲಿ ಮಣ್ಣಂ (ಬಸಪು. ೪೭-೧); ಗದ್ದೆಗಳಿಗೆ ಬೀಜವನ್ನು ಚಲ್ಲಿದ ಮೇಲೆ ಮರುದಿವಸದವರೆಗೂ ನೀರನ್ನು ಬಂದುಮಾಡಬೇಕು (ಕೃಷಿಪ್ರ. ೫೭). **ಚಲ್$_2$ :** ೬. ನೀರ್ಗುಡಿವ ಸೌಹೃದಯರ್ಕಳಕ್ಷಿಗುರೆ ಕೋಮಲೆಯರಕ್ಷಿಗಳ್ ಚದುರಿನಿಂದಂಜುಳಿಗಳಲ್ಲೆಸೆಯೆ ಚಲ್ದುಪರ್ಮಿನ್ನಗಳಿಂದುಚ್ಚರಿಸುತೆ (ಶರಕು. ೪-೨೦). **ಚೆಲ್ಲು$_1$ :** ೧. ಚೆಲ್ಲುತುಮಾಸ್ಯದಿಂ ಮಿಗೆ ಮುಗುಳ್ನಗೆಯಂ (ಕುಸುಮಾ. ೫-೦೩೮) ; ಕಾಂತೆಯರ್ ಬರೆ ಕಟಾಕ್ಷಮಂ ಚೆಲ್ಲುತುಂ (ನಂಬಿರ. ೧೦-೪); ಬಿಲ್ಲನೊದಱಿಸಿ ವೈರಿಭಟರಿಗೆ ಚೆಲ್ಲಿದನು ಭೀತಿಯನು (ಕುಮಾ್ಯದ್ರೋ. ೦೮-೩) ; ಮಲ್ಲಿಗೆಯರಳ್ದಾಡಿ ಪಾಲ್ದಳಿದಂದದಿ ಚೆಲ್ಲಿತು ಬೆಳುದಿಂಗಳೆಳೆಗೆ (ಮೋಹತ. ೦೮-೦೦೨) ; ಆ ದಿನ ಮಳೆಯಿಲ್ಲದ ಸ್ವಚ್ಛ ಬಿಸಿಲು ಚೆಲ್ಲಿದ ದಿನ (ಗಿರಿಬಾ. ೦). ೨. ಘುಳುಘುಳಿಸಿ ಬರ್ಪ ಮತ್ತಗಜಮಂ ಭೋಂಕನೆ ಕಂಡು . . . ಮಕ್ಕಳೆಲ್ಲಂ ಚೆ[ಪಾಠಾಂ. ಚ]ಲ್ಲಿ ಪೋಗೆ (ನಂಬಿರ. ೨-೨೬) ; ಅಂಬರದ ಸುರರ ವಿಮಾನತತಿ ಚೆಲ್ಲಿದವು ದೆಸೆದೆಸೆಗೆ (ತೊರಪಾ. ೪-೪-೦೭) ; ವಿಸ್ಮಯಂಬಡೆದು ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂಕ್ಷೈಸಿಕೊಂಡು (ರಾಜಶೇ. ೭-೭೧ ವ). ೩. ಮರಾಳಬಾಳಕಂಗಳ ಮೊಗದೊಳ್ ಮುಗುಳ್ನಗೆವಾಲಂ ಚೆಲ್ಲಿ ಚೆಲ್ಲ ಪಾಡುತ್ತುಂ (ಅರ್ಧನೇ. ೧-೯೨ ವ) ; ಮರುಗದ ಮಡಿಯೊಳ್ ಕತ್ತುರಿಯಂ ಚೆಲ್ಲು (ನಂಬಿರ. ೧೪-೩೮). ೪. ನಿಸ್ಸ ಕೈಯೊಳಗಿನ ಕೋಲು ಇತ್ತ ಕಡೆಗೆ ಚೆಲ್ಲು (ಮುಂಬಯಿ. ೩-೦೧೯). ೫. ಸಕಲಭಂಡಾರವನು ಭೂಸುರನಿಕರದಲಿ ಚೆಲ್ಲಿದನು (ಕುಮಾ್ಯಅ. ೪-೨೨). ೬. ತೆಗೆದೀಂಟೆ ಜಲಮಂ ಬಿಡೆ ತವೆ ಪೇರ್ ಶೀವಿಕೊಂಡು ಚೆಲ್ಲುವ ಪದದೊಳ್ (ಗಿರಿಳ. ೦-೦೨೦) ; ಮುಸಗೆ ಮೊಗೆದನು ಹೊಗುವ ಸೇನಾಪ್ರಸರವನು ಕುಡಿತೆಯಲಿ ಚೆಲ್ಲಿದನಸಮಬಲನಡಹಾಯ್ದು ಕೊಂಡನು ನೆಲನನಳವಿಯಲಿ (ಕುಮಾ್ಯಶ. ೧೨-೨೩). ೮. ಚೆಲ್ಲಿದರು ಒಬ್ಬರೊಬ್ಬರಿಗೆ ಜೀರಿಗೆವೆರಸು ಬೆಲ್ಲವಂ (ಸಿದ್ಧರಾ. ೮-೮೮) ; ಮಲ್ಲಿಗೆ ದಾಸಣ ಹೂವ ಸಂಪಗೆಯಂತೆ ಚೆಲ್ಲಿತು ಬಣ್ಣಗೂಳುಗಳ (ಮೋಹತ. ೦೫-೩೬) ; ಮಂಕುಬೂದಿಯನ್ನು ಚೆಲ್ಲಿದಳು (ಹಾಡುಕ್ತ. ೯೫). ೯. ವರ್ಷಿಸು ; ಸುರಿ ಕುಳ್ಳಿದರ್ಪರ ಮುಖದೊಳಂ ಕಣ್ಗಳಂ ಮಯ್ಗಳಂ ತುಷ್ಟಂ ಚೆಲ್ಲ (ನಂಬಿರ. ೬-೪೨) ; ಚೆಲ್ಲಿದವು ಸಹದೇವ ಶಿರದಲಿ ಮಲ್ಲಿಗೆಯ ಮೊಗ್ಗೆಗಳ ಮಳೆ (ಕುಮಾ್ಯಸ. ೯-೬೫). ೧೦. (ಬಾಣ ಮೊದಲಾದುವನ್ನು) ಪ್ರಯೋಗಿಸು,– ಬಿಡು : ಚೆಲ್ಲಿದರು ಕೂರಂಬುಗಳನೆಡದಲ್ಲಿ ಬಲದಲಿ ಹಿಂದೆ ಮುಂದೆಸೆ ಝಲ್ಲರಿಯ ಶರದಾಳಿ ಝೊಂಪಿಸಿತಬುಜಸಖಸುತನ (ಕುಮಾ್ಯಶ. ೦೦-೩೫). ೧೧. ಬೀಸು; ಆಡಿಸು : ಚಾಮರ ಛತ್ರ ಕುಂಚ ಸಿತ ಚೌರಿಯ ಚಮತ್ಕಾರದಿಂ ಚೆಲ್ಲುವಾ ಮಡದಿಯರು ಯಿಕ್ಕೆಲದಿ ನಿಂದು (ನವಮೋ. ೦೦-೦೭). ೧೨. ಚಾಚು ; ನೀಡು : ಅವಯವಂಗಳನಲ್ಲಿ ಚೆಲ್ಲಿದಳು ಛಲದಿಂದೆ (ಕಾರಿರ. ಹ. ೫೭-೩೦) ; ಆಕಾಶದ ಸುತ್ತೆಲ್ಲ ನೋಡಿ ಕೈಮುಗಿದು, ಚೆಲ್ಲಿದ ಗೋಣಿನಿಂದ ದಿಕ್ಕುಗಳನ್ನೆಲ್ಲ ಕೇಳುವಂತೆ ಮಾಡಿದನು (ಪಾವಳ. ೩) ; ಬೆಂಚಿನ ಕೆಳಗೆ ಕೈಕಾಲು ಚೆಲ್ಲಿದ (ಕುರಿಹಿಂ. ೦೨೨). ೧೩. ಕಳೆ ; ನೀಗು : ಕಲ್ಲೆಗೆಡೆದವು ಕರಿಗಳಸುಗಳ ಚೆಲ್ಲಿದವು ತೇಜಿಗಳು (ಕುಮಾ್ಯಭೀ. ೭-೨).

**ಚಲ್ಲಬಡಿ, ಚಲ್ಲವಡಿ, ಚೆಲ್ಲಬಡಿ** = ಚದರಿಹೋಗುವಂತೆ ಹೊಡೆ ; ಚಲ್ಲಾಪಿಲ್ಲಿಯಾಗುವಂತೆ ಬಡಿ : ಅಲ್ಲಿ ಬಂದ ಮೃಗವಂ ಚ[ಪಾಠಾಂ. ಚೆ] ಲ್ಲಬಡಿವುತಂ (ಕಬ್ಬಿರ. ಹ. ೩೫-೨೦) ; ಅಲ್ಲಿ ನೆರೆದಾ ಕ್ಷತ್ರವರ್ಗವ ಚಲ್ಲಬಡಿದು (ಕುಮಾ್ಯಆ. ೨-೩೩) ; ಚಲ್ಲಬಡಿವೆ ತನ್ನ ಸೇನೆಯ ಕರೆಯೊ ನಮ್ಮೆಲ್ಲ ವ್ಯಂತರಿಗರನು (ಭರಹ. ೨೪-೪೬) ; ಕಾಪಿನವರನು ಚಲ್ಲಬಡಿದು (ರಾಮಾಸಂ. ೬-೬-೪೧) ; ಮಾವು ಬನದೊಳಗೆ ಮೃಗರೆದವಾ ತುಂಬಿಗಳು ಚಲ್ಲವಡಿದಂತೆ ದೆಸೆದೆಸೆಗೆ ಪಾಱಿ . . . ಬರುತಿರ್ದಳಂತಾ ಭವಾನಿ (ವೀಕೃಪು. ೨-೪-೨೦) : ಸುರಬಲಂಗಳಂ ಚಲ್ಲವಡಿದಣ್ಣನಂ ತೋಱಿತೋಱಿನುತ್ತೆ (ಚಬಪು. ೩೦-೪೬) ; ಸುಶರ್ಮನವದಿರ ಚೆಲ್ಲಬಡಿದನು ದಳದ ನಾಯಕರೆಲ್ಲರಿಂಗೆ ಸವಿದೋಱಿದನು ಬಲುಗದೆಯ ಹೊಯ್ಲುಗಳ (ಕುಮಾ್ಯಶ. ೦೫-೩೪) ; ಮುಱಿಮುಳಿಯವನೆಲುಗಳ ಚೆ[ಪಾಠಾಂ. ಚ]ಲ್ಲಬಡಿ ಮೋದೆನುತ ಕಂಗಳು ದಳ್ಳುರಿಯನುಗುಳಲ್ಕೆ (ನಿಥಾಗ. ೫-೧೦-೭) ; ಉಱುಬುವ ರಥಾರೂಢರಂ ದೆಸೆದೆಸೆಗೆ ಚೆಲ್ಲಬಡಿದು . . . ಮತ್ತವನ ಚಾಪವಂ ಕೋಪದಿಂ ಖಂಡಿಸಿದನು (ಚಬಪು. ೩೯-೨೦) ; ವೈರಿಗಳನು ಚೆಲ್ಲಬಡಿದು ದೆಸೆಗಟ್ಟಿ ನಿಲ್ಲದೈತಂದು ಸತ್ಯಾಗಾಲದ ಪಾಳ್ಯವೆಲ್ಲವ ಸೂಱೆಯಾಡಿದನು (ಕಂನವಿ. ೩-೫೬). **ಚಲ್ಲವರಿ, ಚಲ್ಲುವರಿ, ಚಲ್ಲೆವರಿ, ಚೆಲ್ಲವರಿ, ಚೆಲ್ಲುವರಿ** = ಹರಡು ; ಚದರು ; ವಿಸ್ತಾರವಾಗಿ ವ್ಯಾಪಿಸು ; ಚಲ್ಲಾಪಿಲ್ಲಿಯಾಗು : ನೆಲ್ಲಿಯಕಾಯ್ಗಳ ಹೆಗ್ಗದಿಗೆ

ಯೊಳಿಡೆ ಚಲ್ಲವರಿದು ಬೀಳುವಂತೆ ಬಲ್ಲಿದ ಖಾನರು ಚಿಗಿದು ಬಟ್ಟಾಕ್ಷಣ ಹಲ್ಲ ಕಿರಿದರಗಳೊಳಗೆ (ಕಂನವಿ. ೧೪-೭೯) : ನೆಗೆವ ವ್ಯಗೇಂದ್ರಗಳಿಂ ಚಲ್ಲ ವರಿದ ವುಲ್ಲೆಗಳಿಂ ಸಮ್ಮದಂಬಡೆವ ಪೊಮ್ಮಟಿಗಳಿಂ (ರಾಜಶೇ. ೧-೧೩೩ ವ); ವುಲಿ ಬರವ ಕಾಣುತೆ ಹರಿಣಚಯ ಚಲ್ಲವರಿದಂತೆ ತರುಣಿಯರು ಯಿರದೆ ಮುರಿದೋಡುತ್ತೆ . . . ಇರಲು (ನವಮೋ. ೦೦-೬೩) ; ನಾಡೆಲ್ಲ ಹಸಿರು ಬೆಳೆಗಳಿಂದ ತುಂಬಿ ಎಲ್ಲೆಲ್ಲಿಯೂ ಚೆಲುವು ಚಲ್ಲವರಿದಿತ್ತು (ಜೀವರಂ. ೫೦) ; ಚಲ್ಲುವರಿದ ಹೆಳಲಿನ ತುದಿ ಎಷ್ಟು ಮನೋಹರ (ಕೆಂದುಟಿ. ೬೦) ; ಅಲ್ಲಿ ಸಿಡಿಲುಗಳೆಚಿಗಿದಂದದಿ ಬಲ್ಲಿದರ ಹರಿಗೆಗಳು ಮೊಳಗಲು ಚ[ಶಾಕಾಂ. ಚ] ಲ್ಲೆವರಿದಿಟ್ಟಾಡಿದುದು ಯಾದವರ ಪರಿವಾರ (ಸಾಳ್ವಭಾ. ೧೯-೦೩) ; ತೆಲ್ಲಿಗರ್ ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲದಾರಿಯೆ (ಧರ್ಮಾಮೃ. ೨-೬೯) ; ವುಲ್ಲಶರನ ಮಾರ್ಬಲ ಬನದೊಳು ಪೊಕ್ಕು ಚೆಲ್ಲವರಿದು ಓಡಿಸಲು ವಲ್ಲವಿಸಲು ಸದನದೊಳಿರ್ದ ರಿಸಿಗಳು ಗಲ್ಲಕೆ ಕರವ ಸಾರ್ಚಿದರು (ಮೋಹತ. ೬-೦೦) ; ದಿಕ್ಕುದಿಕ್ಕಿಗೆ ಚೆಲ್ಲವರಿದುದು ಪಾಯ್ದಳ (ನಾಗಕು. ೧೯-೬೬) ; ನೆಟ್ಟ ಚೆಲ್ಲುವರಿದು ಸೂಸುವ ಕಣ್ಮವಣೆಯೆನಿಸಿ ಮೆಟ್ಟಿದರಲ್ಲಿಯ ವಾರ ನಾರಿಯರು (ಭಕ್ತಾಪ. ೨-೮) ; ಕೈಗೆ ಸಿಕ್ಕಿದ ಗ್ರಂಥಗಳನ್ನು ತೆಗೆದುಕೊಂಡು ದಿಕ್ಕುದಿಕ್ಕಿಗೆ ಮತಾನುಯಾಯಿಗಳು ಚೆಲ್ಲುವರಿದಾಗ ಎಷ್ಟೋ ನಾಶ ವಾದುವು (ಕೂನ್ನಕು. ೧೬, ಹಿನ್ನಲೆ). **ಚಲ್ಲೆವೊಯ್** = ಚದರುವಂತೆ ಹೊಡೆ: ಪೊದಚುಗಟ್ಟುವ ಕದಲೆಗದಿರನುರದಿನುರವಣಿಸಿ ನೆತ್ತಿಯಿಂ ಪೊತ್ತು ನೆಗೆದು ಚಂಚುವಿಂ ಚಲ್ಲೆವೊಯ್ದು ನಖದಿಂ ನಲಿಗೆದಟ್ಟ (ಅನಂಪು. ೭-೪೦ ವ). **ಚೆಲ್ಲಿಕೊಡು** = ಬಿಟ್ಟುಬಿಡು ; ಬಿಸುಡು : ಮನವೇಲ ಹುಡುಗೆಯನ್ನು ತನ್ನ ಅಪ್ಪುಗೆಯಿಂದ ಚೆಲ್ಲಿಕೊಟ್ಟು . . . ಅಲ್ಲಿಂದ ಜಾರಿಕೊಂಡ (ಅಡೋಲೀ. ೦೪) ; ಆವೇಶ ಬಂದವಳಂತೆ ಹೊದಿಕೆಯನ್ನು ಚೆಲ್ಲಿಕೊಟ್ಟು ಹಾಸಿಗೆಯಲ್ಲಿ ಎದ್ದು ಕುಳಿತಳು (ಮೂರುದಾ. ೨೭೭). **ಚೆಲ್ಲಿಕೊಳ್** = ಎರಚಿಕೊಳ್ಳು ; ಸಂರಿದುಕೊಳ್ಳು : ತುಟುಗಿದ ಕಾಯಿವಣ್ಗಳ ಸಾಲವೃಕ್ಷವ ಮುಟ್ಟಿದು ದೂಳಿಯ ಚೆಲ್ಲಿಕೊಳುತ . . . ಬಂದುದು ಬಿರುಗಾಳಿ ಮದಗಜದಂತೆ (ಮೋಹತ. ೪-೩೭) ; ಕೇತಕಿಯರರಳ ಧೂಳ್ಗಳ ಚೆಲ್ಲಿಕೊಳುತಳಿವ್ರಾತಕಲರ ಮಧುಮದವ ಪ್ರೀತಿಯಿಂದೀಯುತನಿಲದಂತಿ॰ ವನದೊಳಗಾತುರದಲಿ ಚರಿಸಿದುದು (ಕಂನವಿ. ೯-೯).

[ ದೇ.೨ ತಮಿ. ತುಳು. ಚಲ್ಲು ; ಕೊಡ. ಚೆಲ್ಲ್ ; ತೆಲು. ಚಲ್ಲು ]

**ಚಲ್ಲು$_2$** 'ಸೆಳ್ಳು$_1$' ನೋ.

**ಚಲ್ಲು$_3$** 'ಚಲ್ಲ$_1$' ನೋ.

**ಚಲ್ಲುಚಾಲು** (ನಾ). ಗಾಂಭೀರ್ಯವಿಲ್ಲದ ನಡವಳಿಕೆ ; ಕೆಟ್ಟಚಾಳಿ ; ಹೀನವಾದ ನಡತೆ : ಸತ್ತ ಹೆಣದ ಹೆಬ್ಬೆಟ್ಟಿನ ಗುರ್ತನ್ನು ಹಾಕಿ ಮಗನಿಗೆ ಆಸ್ತಿಯನ್ನು ತಪ್ಪಿಸಿ ಚಲ್ಲುಚಾಲಿನ ಬಡಾರಿಗೆ ಸ್ವತ್ತು ಸೇರು ವಂತೆ ಮಾಡಬಾರದು (ಹುಟ್ಟುಹ. ೧೩೬).

[ ಚಲ್ಲು$_3$ (<ಚಲ್ಲ$_1$) + ಚಾಲು ]

**ಚಲ್ಲುತನ, ಚೆಲ್ಲುತನ** (ನಾ). ಗಾಂಭೀರ್ಯವಿಲ್ಲದಿರುವಿಕೆ ; ಲಲ್ಲೆ ಗಾರಿಕೆ ; ಲಘುಮನೋಭಾವ: (ಕ). **ಚೆಲ್ಲುತನ:** ಇವೆಲ್ಲಾ ದೇವಸ್ಥಾನದ ಆವರಣದಲ್ಲಿವೆ ಅಂತ ಮೊದಲೇ ಒಂದು ಪೂಜ್ಯಭಾವನೆಯ ಪಕ್ಷಪಾತ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿರುವದರಿಂದ, ನೋಡುವ ಕಣ್ಣಿಗೆ ಅದರಲ್ಲೇನೂ ಚೆಲ್ಲುತನ ಕಂಡುಬರುವುದಿಲ್ಲ (ಕಲ್ಲಕಾ. ೬): ಹಿಂದಿನ ಚೆಲ್ಲುತನವೆಲ್ಲ ಈಗ ಅಡಗಿದೆ (ಹುಂಚಾ. ೨೬೭).

[ ಚಲ್ಲು$_3$ (<ಚಲ್ಲ$_1$) + – ತನ ]

**ಚಲ್ಲುಬಡಿ** (ಕ್ರಿ). ಲಲ್ಲೆಯಾಡಂ; ವಿಲಾಸಮಾಡಂ: ಆ ಉಡುಗಿ ಕಂಡಕಂಡ ಗಂಡಸರ ತಾವ ಚಲ್ಲುಬಡೀತ್ಯೆತೆ. ಇದೇನು ಚಂದವಾ ? (ಕಂಕಣ. ೬೦).

[ ಚಲ್ಲು$_3$ (<ಚಲ್ಲ$_1$) + ಬಡಿ$_1$ ]

**ಚಲ್ಲುವಡು** (ಕ್ರಿ). ವ್ಯಾಪಿಸು ; ಆಕ್ರಮಿಸು : ಎಲ್ಲ ನಾಡುಗಳ . . . ಚಲ್ಲುವಡುತ ಗಡಿಸೆಟಿಗಿಗೆ ಪರಿದು (ಚಿಕಸ. ೧೯). [ <ಚಲ್ಲು$_1$ ? ]

**ಚಲ್ಲೆ$_1$** 'ಚೆಲ್ಲೆ' ನೋ.

**ಚಲ್ಲೆ$_2$** 'ಚಲ್ಲಿ$_3$' ನೋ.

**ಚಲ್ಲೆ$_3$** 'ಚಲ್ಲ$_1$' ನೋ.

**ಚಲ್ಲೆಗಣ್** 'ಚೆಲ್ಲೆಗಣ್' ನೋ.

**ಚಲ್ಲೆಗಾರ್ತಿ** 'ಚಲ್ಲಗಾರ್ತಿ' ನೋ.

**ಚಲ್ಲೆನೋಟ, ಚೆಲ್ಲೆನೋಟ** (ನಾ). ಸರಸವಾದ ನೋಟ ; ಸೊಬಗಿನ ನೋಟ ; ವಿಲಾಸದ ದೃಷ್ಟಿ : ಚಲ್ಲೆನೋಟದಿ ರಂಗಕೇಳಿಯನೆಸಗೆಂಬ ವಲ್ಲಭೆಯೆಂದು ವಂದಪಳೊ (ಕಕಶಾಂ. ೨೩-೧೨). **ಚೆಲ್ಲೆನೋಟ:** ಮೆಲ್ಲಾತುದೋಟುತೊಯ್ಯನೆ ಚೆಲ್ವಿನೊಳಂ ಚೆಲ್ಲೆನೋಟಮಂ ಚೆಲ್ಲುವನೋ (ಚಕವಿ. ೬-೨೧೩). [ ಚಲ್ಲೆ$_3$ (<ಚಲ್ಲ$_1$) + ನೋಟ ]

**ಚಲ್ಲೆಹ** 'ಸಲ್ಲೆಹ' ನೋ.

**ಚಲ್ವ** 'ಚೆಲ್ವ' ನೋ.

**ಚಲ್ವಿಕೆ** 'ಚೆಲ್ವಿಕೆ' ನೋ.

**ಚಲ್ವು** 'ಚೆಲ್ವು$_1$' ನೋ.

**ಚಲ್ವೆ** 'ಚೆಲ್ವೆ' ನೋ.

**ಚವ$_1$** 'ಚೆವು' ನೋ.

**ಚವ$_2$, ಚವ್ವ$_3$, ಚೌ$_2$** (ನಾ). (ಉಕ) ೧. ರುಚಿ ; ಸೊಗಸು : ನಾಲಗೆಗೆ ಚವ ಇಲ್ಲ, ಏನೂ ಬೇಡ (ಕೂಧಿ). **ಚವ್ವ$_3$:** 'ಚವ್ವಗೆಡು' ವರಾ. **ಚೌ$_2$:** ೨. ಚೆನ್ನಾಗಿರುವುದಂ; ಉತ್ತಮಸ್ಥಿತಿ; ಸುಖ; ಚೈನಿ (ಉಕ): ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ (ಪ್ರೇಮೂಕ್ರ. ೨೬೩). ೩. (ಆಲಂ) ಮಾತಿನಲ್ಲಿ ಗೌರವ,–ಘನತೆ (?):- ಏ ಚೌ ಅದ ಏನ ಬಾಯಾಗ ? ಒಳಗ ಹೊರಗ ಯಾರ್ಯಾರ ಕೇಳ್ಯಾರಂಬೂ ಅಂಜಿಕೀ ಅಳಕಾ ಏನೂ ಇಲ್ಲೇನು ನಿನಗೆ? (ದೀಪನಿ. ೫೦).

[ ←ಮರಾ. ಚವ್ ]

**ಚವಂಗ** (ನಾ). ಒಂದು ಬಗೆಯ ಆಟ ; ಚೌಕಾಬಾರದ ಆಟ; ಚಕ್ಕದ ಆಟ (ಉಕ) : ಹಗಲೆಲ್ಲ ಬೀದಿಯ ಮುದುಕಿಯರೊಡನೆ ಚವಂಗ, ಗೊಟಗುಣಿ ಆಡುವುದೇ ಅಜ್ಜಿಯ ಕೆಲಸ (ನದೀಪ. ೭೯). [ ? ]

**ಚವಕ** 'ಚೌಕ$_2$' ನೋ.

**ಚವಕಿ** 'ಚೌಕಿ' ನೋ.

**ಚವಚವನೆ** (ಅ). ಮೆಲ್ಲಮೆಲ್ಲನೆ (?) : ಶಿವಸಿದ್ಧಿಯನು ನೀವು ನಿಮ್ಮೊಳಿ ಕಂಡನುಭವಿಸಿದೊಡಹುದೆ ದೇವಿಯರೆ ನವಗಿಷ್ಟು ಬುದ್ಧಿಗಲಿಸಿಯೆಂದು ಗಲ್ಲವ ಚವಚವನಲುಗಿ ಕೇಳುವನು (ಛಠಕ. ೪೩-೫೯).

[ ಚವಚವ$_0$ + – ಅನೆ$_1$ ]

**ಚವಟ** 'ಚೌಟ' ನೋ.

**ಚವಡಿ** 'ಚಾವುಂಡಿ' ನೋ.

**ಚವಡಿಕಿ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಎಲ್ಲಾಯಿ ಯಕನಾತಿ ಬನದ ಶಂಕರಿ . . . ಕಲ್ಲದ ಚವಡಿಕಿ ಮಾರಿಮಸಣಿ (ವಿಸಾಸು. ೫೮-೨). [ <ಸಂ. ಚಾಮುಂಡಿಕಾ ]

**ಚವಡಿಕೆ, ಚೌಟಗಿ, ಚೌಡಕಿ, ಚೌಡಿಕೆ** (ನಾ). ಒಂದು ಬಗೆಯ ಚರ್ಮ ವಾದ್ಯ ; ಒಂದುಂ ಕಡೆಗೆ ಚರ್ಮದ ಆವರಣವಿದ್ದು, ಉದ್ದವಾದ ಹಿಡಿಕೆಯೂ, ಚರ್ಮದ ನಡುವಿನಿಂದ ಒಂದು ತೆಳ್ಳಗಿನ ಹುರಿಯೂ ಜೋಡಿಸಲ್ಪಟ್ಟಿರುವ ವಾದ್ಯ : (ಕ). **ಚೌಟಗಿ:** ಗೊಂದಲದವರು ಬಂದು ಚೌಟಗಿ ಬಾರಿಸಿಕೊಂಡು 'ಜೇಜೇ' ಅಂತ ಹೇಳ್ತಾರಲ್ಲ, ಕೇಳಿದೀ ಯೇನು ? (ಕೆಳುಮು. ೮೩). **ಚೌಡಕಿ:** ಗೊಂದಲಿಗರು . . . ಇಬ್ಬರು

ಮೂವರು ಕೂಡಿ, ಸಂಬಾಳ, ಚೌಡಕಿಗಳನ್ನು ಬಾರಿಸುತ್ತಾ, ಭವಾನಿಯ ಹಾಡುಗಳನ್ನು ಹಾಡುತ್ತಾ ಭಿಕ್ಷೆ ಬೇಡುವರು (ಕಥಾಗ. ೨೦೦) ; ಚೌಡಕಿಯ ನಾದ, ಸುತಿಯ ಸೂರು, ತಾಳ ಹೆಜ್ಜೆಗಳ ಗತ್ತಿನ ಕಡಿತ (ಪೆಟ್ಟು) . . . ಇಂಪಾಗಿ ಇನ್ನಷ್ಟು ಕೇಳಬೇಕೆಂದೆನಿಸುವುದು (ಕನ್ನಜಾ. ೧೩). **ಚೌಡಿಕೆ:** "ಚವಡಿಕೆ (ಚೌಡಿಕೆ)–ಸುತಿ" (ಜಾನಕೋ. ೫೫).

[ ←ಮರಾ. ಚವಂಡಕೀ, ಚೌಂಡಕೀ, ಚೌಂತಕೀ ]

**ಚವತಿ** 'ಚೌತಿ' ನೋ.

**ಚವತಿಚಂದ್ರ** 'ಚೌತಿಚಂದ್ರ' ನೋ.

**ಚವರ, ಚಉರ, ಚವಲ₁, ಚವುರ₁, ಚವುಲ, ಚೌರ₂** (ನಾ). ೧. ಚವಂರ; ಚಾಮರ: "ಚವರಂ ಚಾಮರಮಂತದು" (ಚತುನಿ. ೯೬) ; ಮಂಗಳಾರತಿ ಯಿತ್ತು ಚವರ ಸೀಗುರಿಯಿಕ್ಕಿ (ಬಸರ. ೩-೮೧) ; ನೆರೆದಲರ ಚವರಮಂ ಬಿತ್ತರದಿಂ ಬೀಸುತ್ತುಮಿರ್ದರ್ (ಕಬ್ಬಿಕಾ. ೦೩೮) ; ಪಿಡಿದೆರಳ್ ಸತ್ತಿಗೆ ಗಳೆರಡೆರಳ್ ಚವರಗಳ (ಜಿಬಶು. ೪೭-೩೭) ; ಚವರದ ಕುಂಚದಾರತಿಯ . . . ಬೋನವಮಂ ಸವಿವಡಿಯೂಡುವಾಳಿಯರುವಮಂ ಪದೆದಿತ್ತಳವಳ್ ವಿಳಾಸದಿಂ (ರಾಜಶೇ. ೯-೩೯). **ಚಉರ:** ೧. ಧಾರೆಯಾಜಿದು ಕೊಟ ಹಳ ಚಂನ ಮಾಡಲಾಗಿ ಚಉರ ಮರಿಯಾದಿಯಲು (ಎಕ. X(೬), ಕೋಲಾರ. ೦೪೮-೧೭ ; 1582). **ಚವಲ₁:** ೧. ಜನಿತ ವಿದ್ಯಾದೇವತೆಯರಾ ವನಿತೆಗಾಳಿಯರಾಗಿ ಬೆಳ್ಳರೆಯನು ಗಳಿಸಿ ಕೊಡೆವಿಡಿದು ಢಾಳಿಸಿದರು ಚವಲಗಳನು (ಸಾಳ್ವಭಾ. ೩೦-೨೭) ; ಕರಿಯುವ್ವಾಗೆ ಧೊರೆಗಾಳು ಬೀಸ್ಯಾಕು ಚವಲಾವ (ಹುಟ್ಟಿಹ. ೪೫). ೨. ಚಾಮರ ಬೀಸುವ ಊಳಿಗ: ಅಕ್ಕಸಾಲೆಯ ಕಾಳಯ್ಯ ಕಾಲಾಳು ಚವಲದ ಚಿಕ್ಕ (ನಾಗಕು. ೦೬-೨೬). **ಚವುರ₁:** ೧. ನನ ತಮ್ಮ ಎತ್ತರಿಸಿ ಬೀಸೋ ಚವುರವ (ಗರತಿ. ೪೦). **ಚವುಲ:** ೧. ಹಾಸವೊಜ್ಜುರದ ಹಲಗೆಯ ತುಳಸಮ್ಮ ಬೀಸವ್ನು ಬೆಳ್ಳಿ ಚವುಲವ (ನಾಪದ. ೧೪). **ಚೌರ₂:** ೧. "ಚೌರಮನೆ ತಾಂ ಬರ್ಕೆ ಚಾಮರಕೆ" (ಕಶಿರ. ೩೭) ; ಚೌರ ಬೀಸುತ್ತಿದ್ದವು ಚೌರ (ಅಮನಿ. ೫).

**ಚವರ ಬೀಸು**=೧. ಚಾಮರದಿಂದ ಗಾಳಿ ಹಾಕು. ೨. (ಆಲಂ) ಪೊರಕೆಯಿಂದ ಹೊಡೆ : ಇನ್ನೂ ನಿಮಗೆಷ್ಟು ಚವರಾ ಬೀಸಲೀ ಎಂದು ಕಸ ಉಡುಗುತ್ತ ಕಸಬರಿಗೆ ಸುಮ್ಮನೆ ಮೇಲೆ ಮಾಡಿದೆ (ಹುಡ್ಯಾಟ. ೫).

[ <ಸಂ. ಚಾಮರ ]

**ಚವರಂಗ** 'ಚೌರಂಗ' ನೋ.

**ಚವರಬೊಂಬಾಳ, ಚವಲಬೊಂಬಾಳ, ಚೌರಬೊಂಬಾಳ** (ನಾ). ರಾಜ ಯೋಗ್ಯವಾದ ಚಾಮರದ ಅಲಂಕಾರವುಳ್ಳ ಒಂದು ವಿಶೇಷ ರೀತಿಯ ಅಂದಣ,–ಪಾಲಕಿ: ಚವರಬೊಂಬಾಳ ಪಟ್ಟದ ರಾಜಗಲ್ಲದೆ ಯುವರಾಜ ಗುಂಟೆ ಲೋಕದೊಳು (ಭರತ. ೮೦-೨೭). **ಚವಲಬೊಂಬಾಳ:** ಭವರೋಗಹರ . . . ಲಲಿತ ಚವಲಬೊಂಬಾಳವನೇಱಿ ಮೆಲ್ಲಡಿಯಿಟ್ಟ ವಿವರವನೇನ ಬಣ್ಣಿಪೆನು (ಮೋಹತ. ೪೨-೨೨) ; ಚವಲಬೊಂಬಾಳವನಿಳಿದ ಮಾಧವನು (ಮೋಹತ. ೪೨-೩೭). **ಚೌರಬೊಂಬಾಳ:** ಒಪ್ಪುವ ಚೌರಬೊಂಬಾಳವಡರ್ದು ದಿಗ್ವಿಜಯಕ್ಕೆ ಪೊಱಮಟ್ಟ (ರಾಘಶ. ೧೯-೫೭).

[ ಚವರ + ಬೊಂಬಾಳ ]

**ಚವರಿ, ಚವಲಿ₁, ಚವುರಿ, ಚವುಲಿ, ಚೌರಿ₁, ಚೌಲಿ₁** (ನಾ). ೧. ಚಮರೀಮೃಗದ ಕೂದಲು : ತನ್ನ ಬೆನ್ನೊಳ್ ಪರೆದೊಪ್ಪಲ್ ಕೇಶ ಪಾಶಂ ಕಱಿಯ ಚವರಿಯಂ ಕಟ್ಟಿದಂತೆ (ಆಗವಿ. ೧೭-೧೩೩) ; ಬಾಲದ ಮೇಲಿನ ಕೂದಲು ಚವರಿಯಂತೆ ಒಪ್ಪುವವು (ಮುಂಬಯ. ೩-೫೫). ೨.= ಚವರ ೧ : ಬರುದಿನ ಬಳಿಯ ಚವರಿಯ ಬೀಸಿ ಮಲೆತರ ತಲೆಯ ಶೂಲದೊಳೆತ್ತಿ (ಕುಮ್ಯಾವಿ. ಒರಿಕ. ೬-೩೦) ; ಚವರಿ ಸೀಗುರಿ ಮುಂದೆ ಯುವತಿಯರ್ ಕುವರರು (ಭೈರವೇ. ೨-೬೧) ; ಮಹಾರಾಜರವರು ತಮ್ಮ ಭುಜಬಲದಿಂದ ಸಂಪಾದಿಸಿದ . . . ಸೂರೇಪಾನ, ಚವರಿ, ಪಟಪಾವಡೆ ಮುಂತಾದ ಬಿರುದುಗಳನ್ನು ಹಿಡಿದಿದ್ದರು (ಚಾಮವಂ. ೩೬); ತಂಗಾಳೀಯಾ ಕೈಯೊಳಗಿರಿಸೀ ಎಸಳೀನಾ ಚವರಿ (ಗರಿ. ೨-೪). ೩. ಹೆಂಗಸರು ಕೇಶ ಶೃಂಗಾರಕ್ಕೆಂದು ಜೋಡಿಸಿಕೊಳ್ಳುವ ಕೂದಲ ಕಂಚು : ಗಂಗಾವನ (ಉಕ) ಅವಳ ಜಡೆ ಚಿಕ್ಕದಾದುದರಿಂದ ಚವರಿ ಸೇರಿಸಿಕೊಂಡು ಜಡೆ ಹೆಣೆದುಕೊಳ್ಳುತ್ತಾಳೆ (ರೂಢಿ). **ಚವಲಿ₁:** ೨. ಕಂದಾಟರದ ಕಾಗಕೆ ಕಳಿಹಿದಲಿ ಪರಬಳಸಿಂಗದ ಮೇಲೆ ಬಿಳಿಯ ಚವಲಿಯ ಕಟ್ಟ (ಎಕ. VIII, ಸಾಗರ. ೦೦೪-೬ : 1329 ?). ೩. ವನಿತಾ ಚೊಲ್ಲಹಕಂ ಚವಲಿಯಹುದೆ ಚೂಡಾರತ್ನಾ (ನೀತಿಸಾ. ೯೮೯). ೪. ತಲೆಯಲ್ಲಿ ಧರಿಸುವ ಒಂದು ಆಭರಣ : ಅಲರು ಚವಲಿ ಬೈತಲೆವಣಿ ಮುತ್ತಿನ ಬಲೆಯಿಲ್ಲ ಬಂದರೊಷ್ಮ ದೊಳು (ಭರತ. ೦೭-೨೫) ; ಬೆನಕ ನಿಮ್ಮವ್ವಾಗೆ ಬೆಳ್ಳೀಯ ಶಿವದಾರ ಕುಣಿಕಾಲು ಚವಲೀ ಕೊನೆ ಮುಡಿಯೋ (ಹುಟ್ಟಿಹ. ೩೦); ಹಬ್ಬಿಗೆಲ್ಲಿ ಮರೆತೆ ಹವಳಾವ ಜಾಣಾನ ಮಗ್ಗುಲಲ್ಲಿ ಮರೆತೆ ಚವಲಿಯ (ಜೈಸರ್ವ. ೦೩೧). **ಚವುರಿ:** ೧. ಸುಮನಃ-ಹುವ್ವು, ವಾಲ-ಚವುರಿಯ (ಚಾಹಟೀ. ೨-೬-೩೫ ವ). ೨. ಕೋಳುಗಳ ನೀಡಿ ಚವುರಿಗಳ ಬೀಸುವ ಹೆಣ್ಣುಗಳ ನಡುವೆ (ವಚಕಾ. ೫೦) ; ಸತ್ತಿಗೆ ಸೀಗುರಿ ಸೂರೆಪಾನ ಕುಂಚ ಚವುರಿ ಬೀಸಣಿಗೆ . . . ಕಣ್ಮೀರವಾದ ಬಿರುದುಗಳು ಮುಂತಾದುವನ್ನು ಹಿಡಿದು ಊಳಿಗಗುಡುತ್ತ (ಚಿಟ್ಟಿಅ. ೩೦-೮). ೩. ಎಡಗಯ್ಯೊಳ್ ಕೊಟ್ಟರ್ಥದಂತೆ ತಳಿಗೆಯ ಕೂಟ ನಂತೆ ಮುಡಿದ ಚವುರಿಯಂತೆ ನೆಲಹಿನ ಮೊಸರಂತೆ (ಧರ್ಮಾಮೃ. ೮-೦೪೨ ಅಡಿ). ೫. ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಬಳಕೆಯಲ್ಲಿದ್ದ ಒಂದು ನಾಣ್ಯ: ದುರ್ಗವು ಶೈವಶವಾದ ಮೇಲೆ . . . ಸಿಕ್ಕಿದ ನಾಣ್ಯಗಳ ವಿವರ: ೬,೪೦೦,೦೦೦ –ಬೆಳ್ಳೀನಾಣ್ಯ . . . ೧,೦೦೦,೦೦೦ – ಚವುರಿ (ಚಿತ್ರಪಾ. ೦೦೩). **ಚವುಲಿ:** ೪. ಇಕೆ ಚವುಲಿ, ಬೈತಲೆವಣಿ ಮುಂತಾದ ಆಭರಣಗಳನ್ನು ಧರಿಸಿದ್ದಾಳೆ (ರೂಢಿ). **ಚೌರಿ₁:** ೨. ಅಳವಡಿಸಿಕ್ಕಿದಾ ಬಿಳಿಯ ಚೌರಿಗಳುಜ್ವಲಕಾಂತಿ ನೀಳ್ದುಗೊಂದಳಿಸಿರೆ (ಕುಸುಮಾ. ೮-೬೫) : ನೆಗಹಿ ಬೀಸುವ ಚೌರಿಗಳ ಸನ್ನೆಗೆ ಚತುರ್ಬಲವೆಲ್ಲ ದ್ರೋಣನ ದೃಗುಪಥಕೆ ಕೋಱಿದರು (ಕುಮ್ಯಾದ್ರೋ. ೯-೦೭). ೩. ಬಾಲೆ ಮಾಣಿಕವನುಡು ಸಾದ ಕಿವಿಯಲಿ ಕೂಡು ಕಾಲ ಪೆಂಡೆಯವ ಮುಡಿ ಚೌರಿಯಂ ಕಾಲ್ಗಟ್ಟು (ಹಕಾ. ೪-೪೯) ; ಅಂಗನೆ ಚೌರಿ ಕಾಲಿಗೆ ಕಟ್ಟಿ ಮುಂಗೈಗೆ ತಾಳಿಯ ಬಿಗಿದು . . . ರಂಗನ ಸ್ಮರಿಸುತ ಹೊಱಗೆ ಹೊಱಟಳು (ಪುರಂದ. ೦-೦೧೧-೫). ೪. ಹೆರಳಿಂಗೆ ರನ್ನ ಕೆತ್ತಿಸಿದ ರಾಗಟ ಚೌರಿ ಗೊಂಡೆ ಮುತ್ತಿನ ಕುಚ್ಚುಗಳು (ಶ್ರೀಕೃಪಾ. ೧೦). ೬. (ಮಂಟಪ ಮುಂತಾದುವು ಗಳ) ಅಲಂಕಾರಕ್ಕಾಗಿ ಕಟ್ಟುವ ಕುಚ್ಚು : ಕಟ್ಟಿದ ಚೌರಿಗಳ್ ಗಗನಮಂ ಮಿಗೆ ಚುಂಬಿಪ ಕೂವಕಂಭಂ (ದಶಕು. ೦೨-೫೪) ; ಆಯಿದನು . . . ಕುಣಿವ ಗಂಟೆಯ ಹೊಳೆವ ಹೊಂಗಱಿಯ ಬಾಯಿಧಾರೆಯ ತೈಲಲೇಪನದಾಯತದ ಚೌರಿಗಳ ರಿಪುಭಟನಾಯುಷದ ಕಡೆವಗಲಭುಕ್ತಿಯ ಶಕ್ತಿಯನು ನೃಪತಿ (ಕುಮ್ಯಾಶ. ೩-೬೫) ; ಬಿಳಿಯ ಚೌರಿಯ ಮೇಲುಗಟ್ಟಿನ ಹೊಳಹು ಮಿಗೆ ರಚಿಸಿದರು ಸತಿಯ ವಿವಾಹಮಂಟಪವ (ನಳಚ. ೩-೬). **ಚೌಲಿ₁:** ೩. ಚೌಲಿ, ಟೋಪು, ಪಿನ್ನು ಮೊದಲಾದುವು ಹೆಂಗಸರ ಕೇಶಾಲಂಕಾರ ಸಾಮಗ್ರಿ ಗಳು (ರೂಢಿ). [ <ಸಂ. ಚಮರೀ ]

**ಚವರಿಕೊಟ್ಟು, ಚೌರಿಕೊಟ್ಟು** (ನಾ). ಒಂದು ಬಗೆಯ ಚವರಿ ಸೇರಿರುವ ತಲೆಯ ಆಭರಣ; ಚಿನ್ನದ ಕೊಪ್ಪಿನಲ್ಲಿ ಸೇರಿಸಿ ಕಟ್ಟಿರುವ ಚಮರೀಮೃಗದ ಕೂದಲಿಂದ ಮಾಡಿದ ಗೊಂಡೆ ; ಚವಲಿತುಂಬು : (+). **ಚೌರಿಕೊಟ್ಟು:** ರೇಗಟಿ, ಕೇದಿಗೆ, ಚೌರಿಕೊಟ್ಟು, ಜಡೆಬಂಗಾರ, ಗೊಂಡ್ಯ . . . ಡಾಬು ಮೊದಲಾದ ಆಭರಣಗಳನ್ನು ಧರಿಸಿಕೊಂಡು (ಮಲಮಂ. ೩೮). [ ಚವರಿ + ಕೊಟ್ಟು₂ ]

**ಚವರಿಕೊಪ್ಪು** (ನಾ). = ಚವರಿಕೊಟ್ಟು : (ಕ). [ ಚವರಿ + ಕೊಪ್ಪು₂ ]

**ಚವರಿಗೆ** 'ಚರಿಗೆ₁' ನೋ.

**ಚವರಿಬಿಜ್ಜಣ** (ನಾ). ಚವರಿಯಿಂದ ಮಾಡಿದ ಬೀಸಣಿಗೆ : ಚವರಿ ಬಿಜ್ಜಣವಿಡಿದ. ಬಾಗಿರ್ದ ಮಾಯಕುವರಿ. ಹೆದರುತಂಜುತೆ ಮೆಲ್ಲನೆಯ ಮಾತು ತೆಗೆದಳು (ಶ್ರೀರಾಮಾ. ೬೩೦-೨೩೪). [ ಚವರಿ + ಬಿಜ್ಜಣ ]

**ಚವರಿಮಿಗ** (ನಾ).=ಚಮರೀಮೃಗ: ಮಜಿುಯಾನೆಗಳ್ ಕಲಂಕಿದ ದಡೆಯಂ ತುದಿವಾಲದಿಂ ಬಟಿುಪ ಚವರಿಮಿಗಂಗಳಿಂ (ರಾಮಾಶ್ವ. ೯೩-೨೫).
[ ಚವರಿ + ಮಿಗ ]

**ಚವರೀಮೃಗ** (ನಾ).=ಚಮರೀಮೃಗ: "ಸೃಮರಃ–ದೊಡ್ಡ ಚವ[ಪಾಠಾಂ. ಮ]ರೀಮೃಗ" (ಸಿದ್ಧಾಂತಿ. ೦೩೬). [ <ಸಂ. ಚಮರೀಮೃಗ ]

**ಚವರೆ** (ನಾ). (?) : ದೇವಿಯರ ಚವರೆಯಲು × × × ಕಲುಕುಳ (ಸೌತ್ಇ. ೧೯೩೨. ಅಡುಹು. ೩೯೨-೩೦ ; ?). [ ? ]

**ಚವರ್ಗ** (ನಾ).[ವ್ಯಾಕ] ಚ, ಛ, ಜ, ಝ, ಞ ಎಂಬ ಐದು ಅಕ್ಷರಗಳ ಗುಂಪು : ಚಟವರ್ಗಂ=ಚವರ್ಗ ಟವರ್ಗಂಗಳ್ (ಕಬುದ. ೬೫ ಟೀಕೆ) ; ವರ್ಗಗಳಿಗೆ ಕ್ರಮವಾಗಿ ಕವರ್ಗ, ಚವರ್ಗ, ಟವರ್ಗ, ತವರ್ಗ, ಪವರ್ಗ ಎಂದು ಆಯಾ ವರ್ಗದ ಮೊದಲನೆಯ ವ್ಯಂಜನದ ಹೆಸರನ್ನು ಇಟ್ಟಿದ್ದಾರೆ (ಮಧ್ಯಕು. ೦೩). [ ಚ + ವರ್ಗ ]

**ಚವಲ₁** 'ಚವರ' ನೋ.

**ಚವಲ₂** (ನಾ). ಹುಟ್ಟುಕೂದಲನ್ನು ತೆಗೆಸುವುದು ; ಮುಡಿ ತೆಗೆಸುವುದು; ಚೌಲಕರ್ಮ; ಜಾವಳ ಇಳಿಸುವಿಕೆ (ಉಕ): ಹುಟ್ಟಿದಾಗ ಹಾಡುವ ಹಾಡುಗಳಿವೆ; ಚವಲದ ಹಾಡುಗಳಿವೆ (ಜಾನಗೀ. ೦೭); ಮದುವೆ, ಮುಂಜಿ, ಚವಲ . . . ಮಾತೀಯ ಪ್ರೇರಣೆಗಳನ್ನು ಬಿಂಬಿಸುವ ಸಾವಿರಾರು ಹಾಡುಗಳಿವೆ (ಸುವರ್ಣ. ೦೨೫). [ <ಸಂ. ಚೌಲ ]

**ಚವಲ₃, ಚವಲಿ₂, ಚೌಲ₂, ಚೌಲಿ₂** (ನಾ). ಎರಡಾಣೆ ಬೆಲೆಯ ಬೆಳ್ಳಿಯ ಒಂದು ಚಿಕ್ಕ ನಾಣ್ಯ : ಒಂದು ಚವಲ ದಕ್ಷಿಣೆ ಕೊಡಬೇಕು (ಕರುಳ. ೪೭) ; ಅವರದು–ಚವಲದಲ್ಲಿಯ ಡೌಲು ! (ಸುಕ್ರುಮು. ೦೫) ; ಒಂದು ಚವಲ ' ಇನಾಂ ' ಎಂದು ತಮ್ಮ ಒಕ್ಕಲುಗಳಿಗೆ ಕೊಡುತ್ತಿದ್ದರು (ಪಠಾವ. ೧೬೦). **ಚವಲಿ₂**: ಗೌಡ ಬೇಡಬೇಡವೆಂದರೂ ಎರಡಾಣೆಯ ಚವಲಿ ಯೊಂದನ್ನು ಅವನ ಕೈಯಲ್ಲಿ ತುರುಕಿದರು (ಮುತುರುದಾ. ೪) : ' ಚವಲಿ ಮಲ್ಲಿಯ ದವಲು ' ಎಂಬಂತೆ ವಿಶೇಷ ಆಭರಣಗಳಿಲ್ಲದಿದ್ದರೂ (ಮುಂಗಾಳು. ೨೯). **ಚೌಲ₂**: ನೀರು ತುಂಬಿದ ಪಂಚಪಾತ್ರೆಯೊಳಗೆ ಒಂದು ಚೌಲವನ್ನು ಚೆಲ್ಲಿ . . . ವಕ್ರರೇಷೆಯಿಂದ ನೋಡಿರಿ : ಅದು ಪಾವಲಿಯಷ್ಟು ದೊಡ್ಡದಾಗಿ ಕಾಣಿಸುತ್ತದೆ (ಮುಂಬಯಿ. ೬-೯೩). **ಚೌಲಿ₂**: ಗಡಿಯಾಳಗಳು ತೀರ ಸಣ್ಣವೆಂದರೆ ಚೌಲಿಯಷ್ಟು ಇರುತ್ತವೆ (ಮುಂಬಯಿ. ೩-೮೬).
[ ←ಮರಾ. ಚವಲ್, ಚವಲೀ. / ತಮಿ. ಚವಲ : ತುಳು. ಚವಲೊ ; ತೆಲು. ಚವಲ ]

**ಚವಲಂಬ** (ನಾ). ಕಣ್ಣೆವೆ ; ರೆಪ್ಪೆ: "ಚವಲಂಬಮೆಂದು ಕಣ್ಣೆವೆ" (ಕವಿಕಾ. ೧೮೫); ಪೊಂಗಳಿುಯ ಕವಲಂಬಂ ಚವಲಂಬವಮಾಡದ ಮುನ್ನಮೋಡುವಿನಂ ಪೋಗೆಚ್ಚಂ (ರಾಮಾಶ್ವ. ೧೯೫-೨) ; ಚವಲಂಬವನವಲಂಬಿಸಿ ನಗೆಯು ಕಣ್ಣಗೊನೆಗಿದೆ (ಅರಳು. ೯೯೫-೧). [ ? ]

**ಚವಲಬೊಂದಾಳ** 'ಚವರಬೊಂಬಾಳ' ನೋ.

**ಚವಲಿ₁** 'ಚವರಿ' ನೋ.

**ಚವಲಿ₂** 'ಚವಲ₃' ನೋ.

**ಚವಲಿತುಂಬು** (ನಾ). ತಲೆಯಲ್ಲಿ ಧರಿಸುವ ಒಂದು ಆಭರಣ : ಆಕೆ ಚವಲಿತುಂಬು ಹಾಕಿಕೊಂಡಿದ್ದಾಳೆ (ರೂಢಿ).
[ ಚವಲಿ₁(<ಚವರಿ) + ತುಂಬು₂ ]

**ಚವಳಿ, ಚವಳೆ, ಜವಳಿ₄** (ನಾ). ಒಂದು ಬಗೆಯ ತರಕಾರಿ ; ಗೋರಿಕಾಯಿ: ಹೀರೆ ಸೌತೆ ಕೂಷ್ಮಾಂಡಳೆಗೂಗುರಿ ಕಾರಸೆಗದಳಿ ಚವಳಿ ಬಿಂಬಂ ಬಿಜುಸೇಬದ ಮಾಡಿವಾಗಲ ಹಾಗಲ . . . ಶಾಖಾಳಿಗಳಂ ಸಲೆ ಸಂಭಾರಂ ಬೊರೆದುಪ್ಪಿನಕಾಯಿಗಳನೆಡೆವಮಾಡಿದಳೆಡೆವಿಡದೆ (ಮುದೀಪು. ೨೭-೭); ಚವಳಿ, ಬದನೆ, ಅವರೆ, ಸವತಿ, ಕೋತಂಬರಿ, ಸಾಸಿವೆ, ಮುಂತಾದ ತೋಟಗಳಲ್ಲಿ ಬೆಳೆಯುವ ಪಲ್ಲೆಕಾಯಿಗಳು (ಕಥಾಗ. ೪೫೭) ; ಗೋಧಿಯ ಜೋಳದೊಡನೆ ಚವಳಿಯನ್ನು ತುಸು ಕೂಡಿಸಿದರೆ, ಬಾಳಕ ಬಹಳ ಒಳ್ಳೆಯದಾಗುವದು (ಗೊಂಗ್ರಾಸ. ೭೦). **ಚವಳೆ** : ಚವಳೆ ಹೀರಿ ಹಾಗಲು . . . ಎಂಬ ಕಾಯಿ ಎಲೆ ಪಲ್ಲೆಗಳು (ಮುಂಬಯಿ. ೩-೧೯೫). **ಜವಳಿ₄**. 'ಜವಳಿಕಾಯಿ' ಪರಾ.
[ ← ಮರಾ. ಚವಳೀ, ಚಂವಳೀ ]

**ಚವಳಿಕಾಯಿ, ಜವಳಿಕಾಯಿ** (ನಾ). ಗೋರಿಕಾಯಿ: ಅವ್ವ ಝುರಡಿಯೊಳಗೆ ಹಾಕಿಟ್ಟ ಚವಳಿಕಾಯಿ ಆರಿಸುತ್ತ . . . ಕೂತಿದ್ದಳು (ಪ್ರನಿ. ೨೬೦). **ಜವಳಿಕಾಯಿ** : ಕಡೂರಿನಿಂದ ಉತ್ತರಕ್ಕೆ ಗೋರಿಕಾಯಿಯನ್ನು ' ಜವಳೀ ಕಾಯಿ ' ಎನ್ನುತ್ತಾರೆ (ಸುವರ್ಣ. ೨೬೦).
[ ಚವಳಿ + ಕಾಯಿ₁(<ಕಾಯ್₄) ]

**ಚವಳೆ** 'ಚವಳಿ' ನೋ.

**ಚವಿ** (ನಾ). ಹೊಳಪು ; ಕಾಂತಿ : "ಕಳೆಗದಿರು ವಿನುಗು . . . ಬೆಳಗುಂ ಚವಿಯುಂ ತೀವೆಸರ್ ಕಾಂತಿಗೆ " (ಕಬ್ಬಮಂ. ೦೬) : ನುಡಿಯ ಪಲ್ಲಳ ಚ[ಪಾಠಾಂ. ಛ]ವಿಯುಂ ತುಟಿದಳಿರ ಕೆಂಪುಮೇಂ ಕೆದಜಿದುದೋ (ಅರ್ಧನೇ. ೦-೯೩) ; ಮಿಸುನಿ ರತುನದ ಚವಿ[ಪಾಠಾಂ. ರತ್ನಪ್ರಭೆ]ಗಳಲ್ಲಿ ರಂಜಿಸುವ ಮಂಟಪದೊಳಗೆ . . . ಅವನೀಶನಿದ್ದನು ಸಿಂಹಪೀಠದಲಿ (ನಳಚ. ೪-೨೫).
[ <ಸಂ. ಛವಿ ]

**ಚವಿಕೆ** (ನಾ). ಮೆಣಸಿನ ಜಾತಿಗೆ ಸೇರಿದ ಒಂದು ಔಷಧಿ ಸಸ್ಯ : (ಕ).
[ ←ಮರಾ. ಚವಕ್ ]

**ಚವಿಸು** (ಕ್ರಿ). ತಳತಳಿಸು; ಮಿರುಗು; ಪ್ರಕಾಶಿಸು; ಹೊಳೆ.
ಚವಿಚವಿಸು, ಚವಚವಿಸು (ದ್ವಿರುಕ್ತಿ) : ಹರಳೋಲೆ ಮಕರಿಕಾಪತ್ರ ಮಾಣಿಕದ ಸಣ್ಣಗೆಜಿುಯ ತಿಲಕ ಚವಿಚವಿಸೆ (ಭರಕ. ೪೧-೫೩) ; ನೀನೀಗ ಧವಳವಟ್ಟಿಯ ನೂಂಕಿ ಮೊಗದೋಱೆ ಮೋಹನ ಚವಚವಿಸಿದು ದೆಂದರವರು (ಭರಕ. ೦೯-೧೩೬). [ ಚವಿ + – ಇಸು₂ ]

**ಚವು₁** 'ಚೌ₁' ನೋ.

**ಚವು₂** 'ಚೆವು' ನೋ.

**ಚವುಂಡನಾಯಕ** (ನಾ). ಒಬ್ಬಾತನ ಹೆಸರು : ಲೋಕವಿದ್ಯಾಧರನ ವಾಳೆಯಜಿುಪ್ಪ ಚವುಣ್ಡನಾಯಕ ಅವಂಗೆ ಕೊಟ್ಟ ಮಣ್ಣು ಬಸದಿಗೆ (ಎಕ. VI, ಕಡೂರು. ೮-೧೦ ; ಕ್ರಿ. ೯೯೦). [ <ಚಾವುಂಡ + ನಾಯಕ ]

**ಚವುಕ** 'ಚೌಕ₂' ನೋ.

**ಚವುಕಛತ್ರಿ** (ನಾ). ಚಚ್ಚೌಕವಾದ ಕೊಡೆ,–ಛತ್ರಿ: ಮುತ್ತಿನ ಚವುಕಛತ್ರಿ ವಲ್ಲವದ ಜಲ್ಲರಿಗಳೆತ್ತಿದವು (ಸಂಗಿರಾ. ೭-೯೩). 'ಚವುಕಸತ್ರಿಗೆ' ಪರಾ.
[ ಚವುಕ (<ಚೌಕ₂) + ಛತ್ರಿ₂ ]

**ಚವುಕವಳಿ** (ನಾ). ಒಂದು ಬಗೆಯ ಸೀರೆ : ಭುವನಕೋಶದ ಸೀರೆ ಶುಭ್ರ ಪಟ್ಟಾವಳಿ ನವರಂಗವು ಕರ್ಕವಡ ಚವುಕವಳಿಯು ಸಿಂಹಳಾಂತಕ ಕಂಠಿಯು ಅವುಗಿದೇವನ ಮನೆದೊಳಗೆ (ಅಮುಸಾಂ. ೪-೨೩).
[ ಚವುಕ (<ಚೌಕ₂) + ವಳಿ₃ (<ಪಟ್ಟ₇) ]

**ಚವುಕಸತ್ರಿಗೆ** 'ಚೌಕಸತ್ರಿಗ' ನೋ.

**ಚವುಕಳಿ** 'ಚೌಕಳಿ' ನೋ.

**ಚವುಕಿ** 'ಚೌಕಿ' ನೋ.

**ಚವುಕಿಗೆ** 'ಚೌಕಿಗೆ' ನೋ.

**ಚವುಕು** 'ಚೌಕ$_1$' ನೋ.

**ಚವುಕುಳಿ** 'ಚೌಕಳಿ' ನೋ.

**ಚವುಗಾವೆ** 'ಚೌಗಾವೆ' ನೋ.

**ಚವುಟು** (ನಾ). (?) : ಪಟ್ಟನೇಗಾಣ (ವಾಣ) × × × ಮಾನಿ ಚವುಟುಂ ಪ್ರತಿಗೃಹೇ ಮಾಲಾಕಾರಿಷು ಪುಃಪಸೂತ್ರತ್ರಯುಂ ಚ ದತ್ತವಾನ್ (ಕಇಅ. ೬೦-೪೩-೩೨ ; 1104). [ ? ]

**ಚವುಡಂಗಿ, ಚೌಡಂಗಿ, ತವುಡಂಗಿ, ತೌಡಂಗಿ** (ನಾ). ಒಂದು ಬಗೆಯ ಸಸ್ಯ : ಮೂತ್ರರಕ್ತಕ್ಕೆ:–ಚತುರ್ಭಾಗ ಚವುಡಂಗಿರಸ ಆವಿನ ನೊರೆಪಾಲು ಕುಡಿಸುವುದು (ವಿದ್ಯಾವಿ. ೧೨೪). **ಚೌಡಂಗಿ :** ಚೌಡಂಗಿ ಸೊಪ್ಪಿನ ರಸ, ನೆಲ ಗುಳ್ಳದ ರಸ ಹೆಗ್ಗುಳ್ಳದ ರಸ (ಸಳಪ್ಪ. ಹರಿ. ೪೪೪). **ತವುಡಂಗಿ:** "ತವು [ಪಾಠಾಂ. ತೌ]ಡಂಗಿ ಅಜಗಂಧಿಯುಕ್ಕು" (ಮಂಗರಾ. ೪೦-೩೨). **ತೌಡಂಗಿ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚವುಡಿ** 'ಚಾವುಂಡಿ' ನೋ.

**ಚವುತಿ** 'ಚೌತಿ' ನೋ.

**ಚವುಥಾಯ** 'ಚೌಥಾಯಿ' ನೋ.

**ಚವುದಂತ** 'ಚೌದಂತ' ನೋ.

**ಚವುದರಿ** 'ಚೌಧುರಿ' ನೋ.

**ಚವುದಳ** 'ಚೌದಳ' ನೋ.

**ಚವುಪಟಮಲ್ಲ** 'ಚೌಪಟಮಲ್ಲ' ನೋ.

**ಚವುಪದಿ** 'ಚೌಪದಿ' ನೋ.

**ಚವುಹರ್ಣ** (ನಾ). ಗರುಡ : [ಸಿ]ಲೆಯೊಳು ಕಾಣ್ಬನಂ ಜಲದೊಳಂಬುಜ ದಾಶರಥಂಗೆ ರಾಘವಂ ಕಲಿ ಚವುವರ್ಣ್ಣನಾ ವಿನತೆಗಂತನುರಾಗದೆ ಪುಟ್ಟಿ ಕೀರ್ತಿಯಂ ನಿಲಿಸುವ ಪಾಂಗಿನಿಂ (ಕಇ. IV, ೨೨-೧೬ : 1024). [ <ಸಂ. ಸುಪರ್ಣ ]

**ಚವುಬಾರ** 'ಚೌಬಾರ' ನೋ.

**ಚವುರ$_1$** 'ಚವರ' ನೋ.

**ಚವುರ$_2$** 'ಚೌರ$_1$' ನೋ.

**ಚವುರಸ** 'ಚೌರಸ' ನೋ.

**ಚವುರಾಶಿ** 'ಚೌರಾಸಿ' ನೋ.

**ಚವುರಿ** 'ಚವರಿ' ನೋ.

**ಚವುರಿಸು** (ಕ್ರಿ). ಚಾಮರ ಬೀಸು; ಚಾಮರಸೇವೆ ಮಾಡು: ಎಸಳೆಸಳಿನ ಸಿರಸಲ ಚವುರಿಸುವದು ಮೈಯನ್ನ ಬೀಸಲು ಮೈನವಿರೇರಿದ ನೇರಿಳೆ ನವಕನ್ನೆ (ಮುಳ್ತಿಕಂ. ೪೪-೭). [ ಚವುರ (<ಚವರ) + –ಇಸು$_2$ ]

**ಚವುರಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೃಶಿಗಿ. ೦೪-೨೬೪). [ ಚವುರಿ$_1$ + ಹುಲ್ಲು (<ಪುಲ್) ]

**ಚವುಲ** 'ಚವರ' ನೋ.

**ಚವುಲಿ** 'ಚವರಿ' ನೋ.

**ಚವುವಟ್ಟೆ, ಚವ್ವಟ್ಟೆ** (ನಾ). ೧. ನಾಲ್ಕು ಹಾದಿಗಳ . ೨. ನಾಲ್ಕು ಹಾದಿ ಕೂಡುವ ಸ್ಥಳ ; ಚೌವಟ ; ಚೌಕ : ಜೂದಿನ ಕಟ್ಟೆ ಮೈಲಿಗೆ ಸಂತೆಯಂಗಡಿ ಬೀದಿ ಚವುವಟ್ಟೆ [ಪಾಠಾಂ. ಚವ್ವಟ್ಟೆ, ಚಾವ್ವಟ್ಟ]ಗಳೊಳಗೆ ಬಾದುರನವರ ಕಾಣದೆ (ಕುರಾಸಾಂ. ೦೮-೦೨೮). **ಚವ್ವಟ್ಟೆ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚವು$_1$ (<ಚೌ$_1$) + ಬಟ್ಟೆ$_3$ ]

**ಚವುಷಷ್ಟಿ** 'ಚೌಷಷ್ಟಿ' ನೋ.

**ಚವುಸರ** 'ಚೌಸರ' ನೋ.

**ಚವುಳಪ್ರಪ್ತ** (ನಾ). ಸವುಳಂಭೂಮಿ ; ಚೌಳುನೆಲ (?) ಗೋವಣ್ಣ ದೇವಣ್ಣಂಗಳ ಕಯಲು ಕೊಂಡ ಚವುಳಪ್ರಪ್ತದ ಕಂಬ ೩ ಕಂ ಸಿಧಾಯ ಬೆ ೩ (ಎಕ. XI, ಹೊಳಲ್ಕೆ. ೦೬೬-೬೩ ; 1307). [ ಚವುಳು (<ಸವುಳು$_1$) + ಪ್ರಪ್ತ ? ]

**ಚವುಳಿ** 'ಚೌಳಿ$_1$' ನೋ.

**ಚವುಳು** 'ಸವುಳು$_1$' ನೋ.

**ಚವುಳುಪ್ಪು** 'ಸವುಳುಪ್ಪು' ನೋ.

**ಚವುಳುಭೂಮಿ** 'ಸವುಳುಭೂಮಿ' ನೋ.

**ಚವುಳುಮಣ್ಣು** 'ಸವುಳುಮಣ್ಣು' ನೋ.

**ಚವೆ** 'ಚವ್ವೆ' ನೋ.

**ಚವ್ಯ** (ನಾ). = ಚವ್ವೆ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ಯವಕ್ಕು [ಪಾಠಾಂ. ಚವ್ವಮಕ್ಕು, ಚವ್ವೆಯಕ್ಕು] " (ಮಂಗರಾ. ೪೨-೩೮) : " ಚಿಕ್ರಿಕಾ – ಚವ್ಯ " (ಒಷಧಿ. ೩೩) : ತ್ರಿಕಟುಕಮುಂ . . . ಜೀರಕ ಚವ್ಯ ಲವಣ ಸಂವರ್ಚಕಮುವ್ಯ್ಯತಂ ಶ್ಲೇಷ್ಮವಾತಶೂಲಾಪಹರಂ (ಅಶ್ವಶಾ. ೦೦-೦೦). [ ಸಂ. ]

**ಚವ್ವ$_1$** 'ಚವ್ವೆ' ನೋ.

**ಚವ್ವ$_2$** 'ಚೌ$_1$' ನೋ.

**ಚವ್ವ$_3$** 'ಚವ$_2$' ನೋ.

**ಚವ್ವಂಗುಲ** 'ಚೌವಂಗುಲ' ನೋ.

**ಚವ್ವಗೆಡು** (ಕ್ರಿ). ಹದಗೆಡು ; ರೀತಿಗೆಡು : ಕಾಲು ಬಿದ್ದರು ಇವಗ ಕರುಣ ಹುಟ್ಟುವದಿಲ್ಲ ನೀತಿ ನಡಾವಳಿಯಿಂದ ಚವ್ವಗೆಟ್ಟನೆ, ಮತಿಗೆಟ್ಟನೆ (ಮಡ್ಡಿಹ. ೮೩). [ ಚವ್ವ$_3$ ( <ಚವ$_2$ ) + ಕೆಡು$_1$ ]

**ಚವ್ವಟ** 'ಚೌವಟ್ಟ' ನೋ.

**ಚವ್ವಟ್ಟೆ** 'ಚವುವಟ್ಟೆ' ನೋ.

**ಚವ್ವಲಿಸು** 'ಜವ್ವರಿಸು' ನೋ.

**ಚವ್ವಾಳಿ** (ನಾ). (ಉಕ) ಉದ್ದವಾದ ನಾಲ್ಕು ಸೀಳುಗಳನ್ನು ಜೋಡಿಸಿ ಹೊಲಿದ ಚೌಕಾಕಾರದ ಬಟ್ಟೆ ; ಹಾಸುವ ಜಮಖಾನದಂತಹ ಬಟ್ಟೆ : ಆ ಹೊರಸಿನ ಮೇಲೆ ಏನೋ ಒಂದು ಚವ್ವಾಳಿಯ ಹಾಗೆ ಒಗೆದದ್ದು (ಕನ್ನಡಿ. ೦೦೨) : ಒಬ್ಬಳು ಚವ್ವಾಳಿಯ ಒಂದು ಚುಂಗು ಕೈಯಲ್ಲಿ ಹಿಡಿದುಕೊಂಡು . . . ಧೂಳೆಬ್ಬಿಸಿದ್ದರೆ (ಸ್ವಶಿಬೆ. ೨೩೪). [ ← ಮರಾ. ಚವಾಳ, ಚವಾಳೀ ]

**ಚವ್ವಿ** (ನಾ). ಒಂದು ಅನುಕರಣ ಶಬ್ದ ; ಮಕ್ಕಳನ್ನು ಮಲಗಿಸುವಾಗ ಮೆಲ್ಲಗೆ ತಟ್ಟುವುದಕ್ಕೆ ಹೇಳುವ ಮಾತು : ಆ ಚಳಿಗಾಳಿಗೆ ಶಿವು . . . ಕುಸಗುಡಹತ್ತಿದ. ಪಾರ್ವತಿ ಅವನ ಮಗ್ಗುಲಲ್ಲಿಯೇ ಮಲಗಿ ಚವ್ವಿಬಡಿಯ ಹತ್ತಿದಳು (ನಡುಗೋ. ೩೮).

**ಚವ್ವೀಶ** 'ಚೌವೀಸ' ನೋ.

**ಚವ್ವೆ, ಚವೆ, ಚವ್ವ$_1$** (ನಾ). ಒಂದು ಬಗೆಯ ಸಸ್ಯ : "ಕೃಕವಾಕು ಮಸ್ತಕಂ ನೇತ್ರಿಯೆನೆ ಚವ್ವೆಯಕ್ಕು [ಪಾಠಾಂ. ಚವ್ಯವಕ್ಕು, ಚವ್ವಮಕ್ಕು]" (ಮಂಗರಾ. ೪೨-೩೮). **ಚವೆ :** ತಾಳೀಸಪತ್ರ ದು ೩ ತೂಕ, ಮೆಣಸು ದುಡ್ಡು ೩ ತೂಕ, ಚವೆ ದು ೩ ತೂಕ . . . ಇವ್ಪನ್ನೂ ಇಡಿದು ಚೂರ್ಣವಂ ಮಾಡಿ (ವಿದ್ಯಾವಿ. ೩೨). **ಚವ್ವ$_1$ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ <ಸಂ. ಚವ್ಯಾ ]

**ಚಷಕ** (ನಾ). ಮದ್ಯವನ್ನು ಕಂಡಿಯುವ ಬಟ್ಟಲು ; ಪಾನಪಾತ್ರೆ : "ಮಧುಪಾತ್ರಂ ಚಷಕಂ" (ವಸ್ತುಕೋ. ೪೯-೨೬); " ಗರ್ಹಕಃ, ಅನುತರ್ಷಃ, ಚಷಕಃ, ಸರಕಃ–ಈ ೪ ಕಿಳಿವಟ್ಟಲ್ " (ಹಲಾಯು. ೩೪-೦೬೨) ; ಇರೆ ನವ ಪದ್ಮರಾಗ ಚಷಕಂ ನಿಜಹಸ್ತತಳಾಗ್ರದೊಳ್ (ಜಗಪಿ. ೦೬-೦೦೩). [ ಸಂ. ]

**ಚಷಕಭಾಂಡ** (ನಾ). ಮದ್ಯದ ಪಾತ್ರೆ : ಕಡುಮುಳಿದವನರ್ೞಂಕೆ ಚಷಕ ಭಾಂಡದ ಮೇಲೆ ಪೊಡೆಗೆಡೆಯುತೆ (ಅರಾಡ. ೬-೦೩). [ ಚಷಕ + ಭಾಂಡ ]

**ಚಷಾಲ** (ನಾ). ಯಜ್ಞಶಾಲೆಯಲ್ಲಿ ಯೂಪಸ್ತಂಭದ ತುದಿಗೆ ಸೇರಿಸಿದ ಮರದ ಬಳೆ: ಯೂಪವಮಂತೇಕವಿಂಶತಿಗಳುತ್ಕೃಷ್ಟ ತ್ರಿವೃತ್ಸೂತ್ರಭೂಷಿತ ಚಷಾಲದಿಂ ಮೆಱೆದುವಾ ಮಂಟಪದೊಳು (ಜೈಮಿಭಾ. ೩೩-೩೭). [ ಸಂ. ]

**ಚಷ್ಕ**(ನಾ). ಅಪಹರಿಸುವುದು ; ಲಪಟಾಯಿಸುವುದು : ಹೊರಡುವವರು . . . ಹೆಣ್ಣಿನವರಲ್ಲಿ ಯಥೇಷ್ಟವಾಗಿ ಪಾತ್ರೆ-ಪಳಗಗಳನ್ನು 'ಚಷ್ಕ' ಹೊಡೆದಿದ್ದರು (ಮನೆಬಿ. ೨೫) : ಹಗಲು ಹೂ ಮೊಡುವುದು, ರಾತ್ರಿ ಹೂವಿನ ಕಾಲು ತಲೆ ಕಡಿದು 'ಚಷ್ಕ' ಮಾಡುವುದು (ರೀಜಹ. I, ೭) : ಅಪ್ಪನ ಪಾಕೀಟನೊಳಗಿಂದ ಐದುರೂಪಾಯಿಯ ನೋಟನ್ನು ಚಷ್ಕಮಾಡಿ . . . ಒಂದು ಮಟ್ಟವನ್ನು ಮುಟ್ಟಿದ್ದನು (ಗಂಮಾಯಿ. ೫೪). [ ←ಹಿಂ. ಚಸನಾ ; ಮರಾ. ಚಸಣೇ=ಮೋಸ]

**ಚಷ್ಮ** (ನಾ). ಕನ್ನಡಕ ; ಉಪನೇತ್ರ ; ಚಾಳೀಸು (ಉಕ) : ದಶದಿಶೆ ನಿಶೆಯು, ಜಗವೆಲ್ಲಾ ನಿಶೆಯು ನಿಶನಿರಂತರ ಚಷ್ಮ (ಚಿಂತನ. ೭೫-೯). [ ←ಪಾರ. ಚಷ್ಮಾ; ಹಿಂ. ಚಶ್ಮಾ; ಮರಾ. ಚಷ್ಮಾ, ಚಶ್ಮಾ, ಚಸ್ಮಾ ]

**ಚಸಕ** (ನಾ).=ಚಷಕ: " ಚಸಕ-ಶಾಕಗಳ ಪಾತ್ರೆ " (ಅಕಾನಿ. ೧೦-೧೭). [ <ಸಂ. ಚಷಕ ]

**ಚಹ**, ಚಹಾ, ಚ್ಯಾ (ನಾ). ಟೀಸೊಪ್ಪು ಮತ್ತು ಅದರಿಂದ ಮಾಡಿದ ಪಾನೀಯಂ : ಚಹದ ಗಿಡದ ಮೂಲಸ್ಥಾನವು ಚೀನ (ಸಸ್ಯಶಾ. ೦೩೪) ; ಚಹಕ್ಕೆ ರೊಕ್ಕ ನೀನು ಕೊಟ್ಟುಬಿಡು (ಚಿಂದುಟ. ೫೬) ; ಎರಡು ಕಪ್ಪು ಚಹ ಮಾಡಲಿಕ್ಕೆ ಹೇಳು (ಆಡೋಲೀ. ೦೪೯). **ಚಹಾ** : ಚಹಾತೊಪ್ಪಲದ ಬೀಜವು ಸಣ್ಣದಾಗಿ ಕಸಕಸಿಯಂತೆ ಇರುತ್ತದೆ (ಕೃಷಿಪ್ರ. ೨೦೦) ; ಚಹಾ ಆಗಲಿ, ಬಿಸಿ ಇರುವಾಗಲೆ . . . ತೆಗೆದುಕೊಳ್ಳಿ (ಒಂಟಿದ. ೧೭೦); ಗೋಪಾಲ ಎರಡು ಚಹಾ ತಗೊಂಡು ಬಾ (ಬಿನ್ನಹಿ. ೧೦). **ಚ್ಯಾ** : ಒಂದೊಂದು ಕಪ್ಪು 'ಚಾ'ನಾದರೂ ಕುಡಿಯೋಣ (ಚಿಂದುಟ. ೫೬) ; ಇಬ್ಬರು ಚಾ ಕುಡೀಲಿಕ್ಕೆ ಹೋಗಿದ್ದರು (ಕಳ್ತಧ್ವ. ೨೦). [ ←ಚೀನಿ. ಚಾ. / ಪೋರ್ಚು.ಚಾ. / ಹಿಂ. ಚಾ, ಚಾಯ್ ; ಮರಾ. ಚಹಾ ]

**ಚಹಡ**, ಚಹಡಿ, ಚಹಡೆ, ಚಾಡ$_1$, ಚಾಡಿ, ಚಾಹಡ, ಭಾಡ, ಥಾಡಿ (ನಾ). ೧. ಇನ್ನೊಬ್ಬರನ್ನು ಕುರಿತು ದೋಷಾರೋಪಣೆ ಮಾಡಿ ಹೇಳುವುದು ; ಕೊಂಡೆಯ ; ಪಿಸುಣು : ಪೈಶೂನ್ಯವೆಂಬುದು ಪರರ ಕೆಡಿಪೆನೆಂಬಾಸುರ ಚಹಡ ಕೊಂಡೆಯವು (ದ್ವಾದಶಾ. ೨೯-೬೬೦). ೨. ಚಾಡಿ ಹೇಳುವವನು ; ಚಾಡಿಕೋರ; ಹಿಸುಣ: "ದುಸ್ಥಿತಿಪ್ರೇರಕಂ ಚಹಡಂ" (ಮುಂಗರಾ. ೭೨-೨೩); ವೀರೇಶ ನೀಂ ಸೌಂದರ್ಯದೂಪಾಟವಂ ತೊಳೆದು ಪೊದಿಸು ನಾರದ ಸ್ನೇಹ ಚಹಡನಾಗು (ಪ್ರಭುಪು. ೬-೬೦). 'ಚಹಡತನ' ಪರಾ. **ಚಹಡಿ**: ೧. ನಾರದನು ಚಹಡಿಯು ಹೇಳಿ ಹಲವಂಗದಲಿ ಬಳಿಕಾ ಫಾಳಿಯನು ಕಳುಹಿದನು ಕೋಪಾಗ್ನಿಯನು ಹೊತ್ತಿಕ್ಕಿ (ತಿಮ್ಮಕಾಂ. ೫-೦೦೭) ; ಖೂಳ ನಾರದ ಬಂದು ಬಾಣನೊಳ್ ಚಹಡಿಯು ಹೇಳಲುಜ್ವಾಗ ವೆತ್ರನಂತೆ (ಮೋಹತ. ೩೩-೪೦) : ಮಂಚಣ್ಣ ಚಹಡಿಯಂ ವಿಸ್ತಾರದಿಂ ಪೇಳೆ (ಚಬಪು. ೭ ಸೂಚನೆ). **ಚಹಡೆ**: ೧. ದುರ್ಜನರ ಚಹಡೆಯು ಮಾತುಗಳ ಕೇಳ್ದು (ಚಬಪು. ೮-೯). **ಚಾಡ$_1$** : ೧. ನಾರದಂ . . . ಚಾಡವ ಪೇಳೆ (ಗುರುದಾ. ೮-೭೨) ; ಆಡದಿರು ಪುಸಿ ನಿಂದ್ಯ ನಿಷ್ಠುರ ಚಾಡವಂ (ಶಂಕದಾ. ೦೭-೪೮). **ಚಾಡಿ** : ೧. "ಪಿಸುಣ ಕೊಂಡೆಯ ಚಾಡಿಯನೆ ಕುತ್ಸಿತಕ್ಕೆ ಪೆಸರೆಸಗು " (ಚಲ್ಯಕುಂ. ೬೩) ; ಚಾಡಿಗಳ್ ಹೇಳುವುದಿಲ್ಲಿ ನುಡಿದಾಡುವ ನಾಲಿಗೆ ಕೀಳುವರಲ್ಲಿ (ಪುರಂದ. ೨-೩೯-೩) : ಅಕಮಾರ್ರೆಮಾಡಿ ಚಾಡಿಯ ಹೇಳಿದರು (ಎಕ. XI, ಮೊಳಕಾ. ೯-೬. 1551) ; ಅವರು ಪ್ರೀತಿಯಿಂದ, ಬಿಡದೆ ಹೋದರೆ ದೋಷವನ್ನು ಕಲ್ಪಿಸಿ, ಚಾಡಿಯನ್ನು ಹೇಳಬೇಕು (ಕೃಶಾಅ.೩೬೦). ೩. ಸೂಚನೆ.'ಚಾಡಿಯೋಲೆ 'ಪರಾ. **ಚಾಹಡ**: ೧. ಮಹ ರಸಿಕತನದೊಳು ಚಾಹಡವ ಪೇಳೆ ದೇವದಾನವರು ಕನಲ್ದುರುಳುತಿಹರು (ಪ್ರಭುಪು.೭-೩೭). **ಭಾಡ**: ೧. ಭಾಡವ ಪೇಳಿ ಉತ್ತಮರನ್ನ ಬಳಲಿಸಿ ನಾಡೊಳು ಸ್ವಾಮಿದ್ರೋಹತನದಲ್ಲಿ ಆಡಬಾರದ ಮಾತುಗಳೆಲ್ಲ ಸರ್ವದಾ ಜೋಡಿಸಿನುಡಿವುತ್ತ (ವಿಶಾಸು. ೮೪-೬). **ಥಾಡಿ**: ೧. ಥಾ[ಪಾಠಾಂ. ಚಾ]ಡಿ ಹೇಳಲುಬೇಡ ನಾಲಿಗೆ ನಿನ್ನ ಬೇಡಿಕೊಂಬುವೆನು ನಾಲಿಗೆ (ಪುರಂದ. ೧-೦೮೩-೨) ; ಬೇಡಿರಿ ಬೇಡಿರಿ ಹೀಗೆ ಥಾಡಿ ಹೇಳುವುದನ್ನು ಯಾರು ಕಲಿಸಿದರು (ಜನನಾ.೦೦೫). [ ?. / ತಮಿ. ತುಳು. ತೆಲು. ಚಾಡಿ./ಮರಾ. ಚಹಾಡ್, ಚಹಾಡೀ, ಚಾಡೀ ]

**ಚಹಡತನ**, ಚಾಡತನ(ನಾ). ಚಾಡಿಹೇಳುವ ಸ್ವಭಾವ; ಚಾಡಿಕೋರತನ: ಚಹಡತನಗಳನಱಿಯೆ ಏಗುವೆ ನೀನು ಹಸುಳೆಯಲಾ (ಕಾಶಿಕಾ. ೧೮ ೩೮). **ಚಾಡತನ**: (೬). [ ಚಹಡ + – ತನ ]

**ಚಹಡಿ** 'ಚಹಡ' ನೋ.

**ಚಹಡೆ** 'ಚಹಡ' ನೋ.

**ಚಹರೆ**, ಚೇರೆ, ಚೇಹರಾ (ನಾ). ಕೃತಿ ; ಆಮುದ್ರೆ ; ಲಕ್ಷಣ : ಅವನಿಗೆ ಸಾಮಾನ್ಯ ನಡವಳಿಕೆಯಲ್ಲೂ ನಾಟಕದ ಚಹರೆ ರೀತಿ ಬಂದುಬಿಟ್ಟಿತ್ತು (ಆಂಹೂ. ೧೭) ; ಈ ಬಂದೂಕಿನ ಚಹರೆಯೂ . . . ನಿನ್ನ ಬಂದೂಕಿನ ಚಹರೆಯೂ ಒಂದೇ ಆಗಿದೆ (ಹಂಜಹಂ. ೨೨೦). 'ಮುಖಚಹರೆ' ಪರಾ. **ಚೇರೆ** : ಆರು ತಿಂಗಳ ಕೂಸು, ಚೇರೆ ಬದಲಾಯಿಸಿತು (ಕನ್ನಡಶಾ. ೦೮೯). **ಚೇಹರಾ**: ನಮಗೆ ಮೊದಲು ಚೇಹರಾ ಮಾತ್ರ ತೋರಿಸಬೇಕು (ಕಳ್ತಧ್ವ. ೩೦೮). [ ←ಪಾರ. ಚಿಹ್ರಾ; ಹಿಂ. ಚೆಹರಾ; ಮರಾ. ಚಹರಾ, ಚೇಹರಾ, ಚೇಹೇರಾ ]

**ಚಹರೆಪಟ್ಟಿ** (ನಾ). ಆಕಾರ, ಲಕ್ಷಣ, ಮುಖಮುದ್ರೆ ಮೊದಲಾದುವುಗಳ ವಿವರ,-ತಪಶೀಲು : ಸಾಹಿತಿಯ ಚಹರೆಪಟ್ಟಿಯನ್ನು ಬರೆಯ ಹೊರಟವನು ಅವನ ಬಡತನವನ್ನು ಮೊದಲು ಕಾಣಿಸದೆ ವಿಧಿಯಿಲ್ಲ (ಅರಿಮು. ೧೦೪). [ ಚಹರೆ + ಪಟ್ಟಿ$_2$ ]

**ಚಹಾ** 'ಚಹ' ನೋ.

**ಚಹಾಪಾಣಿ** (ನಾ). ಚಹ, ತಿಂಡಿ, ನೀರು ಮೊದಲಾದುವುಗಳನ್ನು ತೆಗೆದುಕೊಳ್ಳುವುದು ; ಚಹ ಹಾಗೂ ಫಲಾಹಾರ : ಅವನು ಬಾಚಿದ ಬಿಲ್ಲಿನಲ್ಲಿ ಈ ಚಹಾಪಾಣಿಯು ವೆಚ್ಚವೂ ಸೇರಿತ್ತು (ದೀಕನ್ನ. ೧೦೪). [ ←ಮರಾ. ಚಹಾಪಾಣೀ ]

**ಚಹಾಪಾನ** (ನಾ). ಚಹವನ್ನು ಕುಡಿಯುವುದು : ಚಹಾಪಾನ ನಮ್ಮ ನೀರಡಿಕೆಯನ್ನು ಹಿಂಗಿಸಿದುದಲ್ಲದೆ ನಮ್ಮ ಮನಸ್ಸುಗಳಿಗೂ ನವಚೇತನ ನೀಡಿತು (ಕಾಂಯಾ. ೦). [ ಚಹಾ (<ಚಹ) + ಪಾನ ]

**ಚಳ$_1$** 'ಚಲ$_1$' ನೋ.

**ಚಳ$_2$** 'ಚಲ$_2$' ನೋ.

**ಚಳ$_3$** (ನಾ). ಬೆಲ್ಲ: ಮಲಯರುಹಂ ನುಗ್ಗಿಯ ಬೇರ್ ಜಲಮಂಬುದಮಾಣಿಲೆ ಮಾಂಸಿ ಚಳಮೇಲೆಯಿಮಂ ತಳಿವುದು (ಲೋಕೋಪ. ೭-೪೩). [ ? ]

**ಚಳಂಕಿ** (ನಾ). ಒಂದು ಔಷಧಿ ದ್ರವ್ಯ : ಹಲಸಂದೆ ಔಡಲ ಚಳಂಕಿ ಇವು ಕ್ರಿಮಿದೋಷಹರ (ಅಶ್ವಟೀ. ೯೧-೨). [ ? ]

**ಚಳಕ$_1$** 'ಚಡಿಕೆ' ನೋ.

**ಚಳಕ$_2$** (ನಾ). ೧. ವೇಗ; ಚಪಲತೆ ; ಶೀಘ್ರತೆ: "ಚಳಕಮೆನಲ್ ವಹಿಲಮೆಂದು ತಿಳಿಗೆ ವಿದಗ್ಧರ್" (ಧಾರನಿ. ೦೧): ಕಲಕಿದನು ಬಲಜಲಧಿಯನು ಬಲು ಚಳಕದಲಿ ತೆಗೆದೆಸುತ (ಸಂಭಪ. ೧೯-೭): ಊರ್ಮಿಳಾಪತಿ

ಚಳಕ[ಪಾಠಾಂ. ದಳಯ, ನಿಳಯ]ದಿಂದ್ಯೆತಂದು ಕಂಡನು ಕಪಟರಕ್ಕಸಿಯ (ತೊರರಾ. ೩-೪-೨೬) ; ಚಳಕದೆ ಕಳಸದ ಘಟ್ಟವನಿಳಿದು (ಕೆಳನ್ನ. ೧೧-೩೪). ೨. ಜಾಣ್ಮೆ; ಚಾತುರ್ಯ; ಕೌಶಲ; ಚಮತ್ಕಾರ: ಆ ಬಿಲ್ಲನಾ ರಥವ ತಳುವದೆ ಕಡಿದು ಭಂಗಿಸಿದನವನ ಕೈಯ ಚಳಕವನೇನ ಬಣ್ಣಿಪೆನು (ನೇಮಿಸಂ. ೧೨-೬೯) ; ಈ ಲುಳಿಯಿಾ ಬಿನ್ನಣಮಾ ಯೊಡಲ್ಮಣಿತ ವಿಾಯಿಂದಾಳಮಿಾ ಬೀರವಿಾ ಚಳಕಂ ಶ್ರೀಚಿಕದೇವನೊಳ್ ಮೆಱೆಗುಂ (ಚಿಕವಿ. ೪-೧೪೮) ; ಬಿರಿಮುಗುಳ ಬಿಡಿಸುತ್ತಲಿರ್ದನು ಕರದ ಚಳಕದಲಿ (ಅಂಬಿಕಾ. ೪-೨೬); ಕೆಲವರು ರಂಗೋಲಿಯ ಕೆಳಗೆ ತೂರುವ ಚಳಕವನ್ನು ತೋರಿಸಿದರು (ನಂಟರು. ೩೦). 'ಚಾಲಾಕು' ಪರಾ. [ ? ]

ಚಳಕಿ₁ 'ಚಡಿಕೆ' ನೋ.

ಚಳಕಿ₂ (ನಾ). (?) : ಲಕ್ಷ್ಮೀನರಸಿಂಹದೇವರ ಅಮೃತಪಡಿಗೆ ಕೊಟ್ಟ ಗ ೫ ಚಳಕಿಯ ವೃತ್ತಿಯನು (ಎಕ. VI, ಕಡೂರು. ೬೮-೪೬ ; 1223 ?). [ ? ]

ಚಳಕಿಗೆ, ಚಳಿಕಿಗೆ (ನಾ). ತೋಳಿಗೆ ಧರಿಸುವ ಒಂದು ಆಭರಣ ; ತೋಳ್ಬಳೆ ; ಬಂದಿ: ದ್ವಿಗುಣಿಸೆ ಚಮರಜಮಂ ಪೊಳೆವುರ್ಗುರ್ಗಳ್ ಚಳಕಿಗೆಯ ಪೊಚ್ಚ ಪೊಸಮುತ್ತಿನ ತಟ್ಟುಗಿವಂಶುಮಾಳೆ ಮೇಗಣ್ಕೊಗೆಯೆ ಕುಚಾಭೋಗವಿಕ್ಕಿದರ್ ಚಮರಜಮಂ (ಮಲ್ಲಪು. ೬-೧೦೨); ದ್ಯುತಿವೀಱುವ ಮುತ್ತಿನ ಚಳಕಿಗೆಯಂ ಯುವತಿಯು ನಳಿತೋಳ್ಗೆ ಕಟ್ಟಿದಳ್ ಮತ್ತೊರ್ವಳ್ (ಜಗವಿ. ೧೧-೧೧೬); ಕಂಕೆಲ್ಲಿಯ ಕಂಕಣಮುಮಂ ವಿಚಕಿಳದ ಚಳಕಿಗೆಯುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೭-೧೧೪ ವ) ; ಕಿಱುಗೆಜ್ಜೆ ಚಳಕಿಗೆ ಜೂಳಿಯವೆಸೆದವಾ ನಿಱಿಗುರುಳಬಲಾಮಣಿಗೆ (ರಾಮವಿ. ೭-೭೪); ಹಸ್ತಕಡಗ ಚಳಕಿಗೆ ರನ್ನದ ಬಳೆ ಹರಳುಂಗುರಗಳನವರಿಯರಿಟ್ಟರವಳ್ಗೆ (ಚಂಪ್ರಸಾಂ. ೨೩-೦೩೬). ಚಳಿಕಿಗೆ : ಜೂಳಿಯ ಚಿನ್ನವೂ ಕಮಲವೂ ಚಳಿಕಿಗೆ ತಾಳಿಹೂ ಬೆಂಬಟ್ಟೆದಂಡೆ ತೋಳೊಂಕಿ . . . ಬಾಲೆಗಾಭರಣವೊಪ್ಪಿದುವು (ಭರತೇ. ೪೦-೬೩) : ಗೊಜ್ಜಗೆಯ ಸಜ್ಜುಕದ ಚಳಿಕಿಗೆಯುನಜ್ಜಗೆಯ ವಜ್ರಳಿವ ಬಜ್ಜರದ ಬಾವುರಿಯ (ರಾಜಶೇ. ೧೧-೫೭ ರಗಳೆ). 'ಚಳಕಿ' ಪರಾ.

[ ? ]

ಚಳಕು₁, ಚಳುಂಕು₁, ಛಳಕು, ಛಳುಕು (ನಾ). ಒಮ್ಮಿಂದೊಮ್ಮೆಲೆ ನರ ಮಿಡಿದು ಉಂಟಾಗುವ ನೋವು ; "ನರವಾಯು" (ಜಾನಕೋ. ೫೫). ಚಳುಕು₁ : ಕೆಲರುರದ ಚಳುಕಿಂ ವಾತಪಿತ್ತಜ್ವರದಿ ಕೆಲಬರು ಮಡಿಯುತಿರ್ದರ್ (ಅಶ್ವಾವಿ. ೬-೨೧) ; ಅಯ್ಯೋ . . . ಮಯ್ಯೆಲ್ಲೆಲ್ಲ ಚಳಕು(ತುಂಗಭ. ೨೨). ಛಳಕು: ಆಗಾಗ್ಗೆ ಸೊಂಟದ ಛಳಕು, ಕೈಕಾಲುಗಳ ಹಿಡಿತದಿಂದ ಸಂಕಟ ಪಡುತ್ತಿದ್ದ ಮುದುಕಿ, ಹಬ್ಬವಾದುದರಿಂದ . . . ಕೆಲಸಮಾಡುತ್ತಿದ್ದುದನ್ನು ಕಂಡು ರತ್ನಮ್ಮನಿಗೆ ಕೊಂಚ ಕನಿಕರವೂ ಆಯಿತು (ಶೀಲಾಗೌ. ೧) : ತೊಡೆ ಛಳಕು ಒಂದೂ ಇಲ್ಲವೆಂದೂ ಚಿಕ್ಕಪ್ಪಟ್ಟಮ್ಮ ಹೇಳಿದ್ದಳು (ಮನೋರಂ. ೦೩೦). ಛಳುಕು : ಮುಂದೆ ಕಂಕುಳು ಸಂದಿಯಲ್ಲಿ ಬಾತುಕೊಂಡಿತು. ತುಂಬಾ ಛಳುಕು ಕಾಣಿಸಿಕೊಂಡಿತು (ಊರುಳ. ೩೨) ; ಅವನಿಗೆ ಛಳುಕು ಹೊಡೆದಂತಾಯಿತು (ರಂಗನಾ. ೧೭೩).

ಚಳಕುಹಿಡಿ = ನರಗಳು ಮಿಡಿ ; ಸ್ನಾಯು ಅಲುಗಾಡದಂತಾಗಿ ನೋವಾಗು : ಅವನಿಗೆ ಚಳಕುಹಿಡಿದಂತೆ ಆಗಿತ್ತು (ಕನಕ. ೮೯) ; ನನ್ನ ಸೊಂಟ ಚಳಕು ಹಿಡಿದದ್ದು, ಕೈಕಾಲು ತತ್ತರಿಸಿದ್ದ ಅವಲಕ್ಷಣವೇ (ಸ್ವಪ್ನತಿಳಿ. ४३०). [ ದೇ.೩ ತಮಿ. ಮಲ. ಚುಳುಕ್ಕು ]

ಚಳಕು₂ (ನಾ). (ಹಾಡುವ ಪದ್ಯಗಳ) ಸಮುದಾಯ : ದುಂದುಮಿಯಲ್ಲಿ . . . ಚೌಪದಿಗಳರದೆ, ತ್ರಿಪದಿ ಅರ್ಧಚೌಪದಿ ಮೊದಲಾದವುಗಳ ಕೂಡುವಿಕೆಯ 'ಚಳಕು' ಗಳಿರುವುವು (ಕನ್ನಛಾ. ೯೩).

[ ←ಮರಾ. ಚಳಕ್ ]

ಚಳಕೆ, ಚಳಿಕೆ₁ (ನಾ). ೧. = ಚಳಕಿಗೆ : ವೈಡೂರ್ಯದ ಹೀರಗಡಗ ಚಳಕೆಗಳ (ಜಿನರಾ. ೯-೧೪೦).ಚಳಿಕೆ₁: ೧ ಪಾಣಿ ಕಂಕಣ ಚಳಿಕೆ ಹಿಂಬಳೆಯು (ಜಿನಮು. ೦೨-೩೯); ಕರದ ಕಂಕಣ ಚಳಿಕೆ ಹಿಂಬಳೆ ಕೊರಳ ಸರ (ಜಿರಾಮಾ. ೨೩-೪೦). ೨. (ಕರಾ) ಕೈಬಳೆಗಳ ನಡುವಿನ ಹಸ್ತಾಭರಣ.

[ ದೇ. ೩ ತುಳು. ಚಳಕಿ ]

ಚಳಗತಿ 'ಚಲಗತಿ' ನೋ.

ಚಳಚಮತ್ಕೃತಿ (ನಾ). ವೇಗದ ಚಾತುರ್ಯ; ಅದ್ಭುತವಾದ ಚಟುವಟಿಕೆ: ಬಳಿಯ ರಕ್ಕಸರಧಿಕರೆಸುಗೆಯ ಚಳಚಮತ್ಕೃತಿಯಿಂದ ದೂಷಣ ಹಳಚಿದನು (ತೊರರಾ. ೩-೬-೦೪). [ ಚಳ್₂ (=ಚಲ್₂) + ಚಮತ್ಕೃತಿ ]

ಚಳಚಳ (ನಾ). ಒಂದು ಅನುಕರಣ ಶಬ್ದ : ಅಪ್ಪವಿಂಗೆ ಇಳಿಜಾರಿನಲ್ಲಿ ಚರಿಸುವಾಗ ಹುಟ್ಟುವ ಬುಳುಬುಳು ಚಳಚಳ ಭೋರ್ಭೋರೆಂಬ ಶಬ್ದ ಉಂಟು (ವಚಾ. II, ೩೨).

ಚಳಚಳನೆ (ಅ). ೧. ಥಳಥಳನೆ: ಚಳಚಳನೆ ಮಿಂಚಿತ್ತು ಸಿಡಿಲ ಕೈದೀವಿಗೆ ವೊಲ್(ಕಮರ. ೦೯೩ ಪ್ರಯೋ):ಬಳಬಳನುದುರುತಿರ್ದುದು ಕರ್ವು ಚಿತ್ರಭಿ ಚಳಚಳನೊಳಗೇಱುತಿಹುದು (ಭರತ. ೭೭-೩೪). ೨. ಬೇಗನೆ; ಲಗುಬಗೆಯಿಂದ ಕೂಡಿ : ಭೋಜನಕೆ ಸಲುವುಪಕರಣವನಲ್ಲಲ್ಲಿಗೆಲ್ಲಕೆ ಚಳಚಳನನು ಗೊಳಿಸಿದರು (ಭರತ. ೪-೩೮) ; ಚಳಚಳನೆಯ್ದಿದರಂಗ ಶೃಂಗಾರಾಂಶು ತಳತಳನತ್ತಿತ್ತ ಕೆದಱೆ (ಭರತ. ೩೮-೩). [ <ಚಲ್₂ + –ಅನೆ₁ ]

ಚಳಚಳಿಸು (ಕ್ರಿ). ಲಕಲಕಿಸು ; ತಳತಳಿಸು ; ಉಜ್ವಲವಾಗು : ಸಿರಿಸೋರ್ವ ಮುಖಪದ್ಮಂ ಚಳಚಳಿಸೆ (ರಾಮಾಶ್ವ. ೬೯-೨೪).

[ <ಚಲ್₂ + –ಇಸು₃ ]

ಚಳಚಿತ್ರ 'ಚಲಚಿತ್ರ' ನೋ.

ಚಳಣ, ಥಲ್ಲಣ (ನಾ). ೧. ಅಡಿ ; ಪಾದ ; ಚರಣ : ನರೇಂದ್ರಂ . . . ಭೀಷ್ಮರ ಚಳಣಯುಗಕ್ಕೆಱಗೆ (ಪಂಪಭಾ. ೧೧-೬೦); ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳಮಿರೆ ಮನದೊಳ್ ಜನಪತಿ ಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದಳ್ (ಪಂಪರಾಮಾ. ೦೭-೨೮). ಥಲ್ಲಣ ; ೨. ಚಲನೆ ; ಹರಿದಾಟ : ಉದುಕದ ಥಲ್ಲಣಿಯಿಂದ ಚಂದ್ರ ಕಂಪನ ಅನುಭವಿಸುವಂತೆ (ತತ್ತ್ವಬಿಂ. ೩-೦೩). [ <ಸಂ. ಚಲನ ]

ಚಳತುಂಬಿ (ನಾ). ಸುಳಿದಾಡುವ ದುಂಬಿ ; ಚಂಚಲವಾದ ಭ್ರಮರ : ಗೊಂಚಲನಾಗೋತ್ರರ ಚಳತುಂಬಿಗೆ ಗುಣಗುಟ್ಟುವುದೆ ಮಾಯಾ (ಕಿದಾವ. ೩೬-೧). [ ಚಳ್₂ ( = ಚಲ್₂) + ತುಂಬಿ₁ ]

ಚಳತುಂಬು, ಚಳತೊಂಬು (ನಾ). ಓಲೆಗೆ ಸೇರಿಸುವ ಜುಮುಕಿಯಂತಹ ಅಲ್ಲಾಡುವ ಒಂದು ಆಭರಣ : ಫುಲ್ಲಲೋಚನೆ ಚಳತುಂಬು ಮಿಾನ ಬಾವುಲಿಯ . . . ಕರ್ಣದಲಿಟ್ಟು (ಶ್ರೀಕೃಷ್ಣಪಾ. ೧೧) : ನೀಲದ ಬಾವುಲಿ ಚವುಕಳಿ ಚಳತುಂಬು ತೂಬು ತಕ್ಕಡಿ ಇಟ್ಟರು (ಕನಾಕ. ೩೦೮) ; ಮುಗಿಲಲ್ಲಾಡುವ ಬಾವಿಲಿ ಮಲ್ಲಿಗೆ ಕಿವಿಗೊಪ್ಪು ಓಲೆಕೊಪ್ಪು ಚಳತುಂಬು (ಗರಿ. ೦೦೬-೯) ; ವಾಲೇಗೆ ಚಳತುಂಬ ಮರತೇ ಬಂದ್ಯಾ (ನಾಪದ. ೦೦೮). ಚಳತೊಂಬು ; ಎಸೆವ ಕಪೋಲ ಹೊಸ ಕುಂಡಲ ಚಳತೊಂಬುಳ್ಳ ಶ್ರವಣ (ಪುರಂದ. ೦-೦೯೦-೪).

[ ಚಳ್₂ ( = ಚಲ್₂) + ತುಂಬು₄./ತುಳು. ಚಳತುಂ, ಚಳ್ತುಂಬು ]

ಚಳತೆ (ನಾ). ೧.ಚಂಚಲತೆ ; ಚಪಲತೆ: ತಿಳಿವು ತಿರುಗಿತು ಲಾಸ್ಯಲೀಲೆಯ ಚಳತೆ ಚಂಡಿಸಿ ಹಿಂಗಿಹೋಯಿತು (ಪ್ರಭುಲಿಂ. ೭-೩೪). ೨. ಲಗುಬಗೆ ; ತ್ವರೆ : ಹಿಡಿಗುದುರೆಯ ಸಾವಿರವ ಬಿಡದೆ ಚ[ಪಾಠಾಂ. ದಚ್ಚ]ಳತೆ ಮಾಡಿ ತಂದೊಪ್ಪಿಸಿದನಂದು ಕಡುಗಲಿ ರಾಮನಾಥನಿಗೆ (ಕುಂರಾಸಾಂ. ४२-६०).

[ ಸಂ. ಚಲತಾ ]

ಚಳತೊಂಬು 'ಚಳತುಂಬು' ನೋ.

**ಚಳದಳ** 'ಚಲದಲ' ನೋ.

**ಚಳನ** 'ಚಲನ' ನೋ.

**ಚಳನತಳ** (ನಾ). ಪಾದತಲ ; ಕಾಲಡಿ : ಚಳನತಳಂಗಳಂ ತೊಳೆದು ಮುಂ ಬಟಾಕಟ್ಟ್ರಿಯ ತೀರ್ಥವಾರಿಯಿಂ . . . ಫಳಕುಳದಿಂ ಧರಾಧಿಪತಿ ಪೂಜಿಸಿದಂ (ಚಂದ್ರಪು. ೦೪-೯) ; ಚಳನತಳದ್ಯುತಿಚ್ಛಲದೆ ಕಂಬಿಸಿಲಂ ಕಿಡೆ ಮೆಟ್ಟಿ . . . ಪೊಱಮಟ್ಟಳೊರ್ವಳಭಿಸಾರಿಕೆ ಭೂಚರ ಚಂದ್ರಮೂರ್ತಿವೋಲ್ (ವರ್ಧಪು. ೬-೯೮). [ ಚಳನ (=ಚಲನ) + ತಳ$_2$ (=ತಲ) ]

**ಚಳಪಳ್** (ನಾ). ಒಂದು ಅನುಕರಣ ಶಬ್ದ : ನೀರು ಸುರಿಯುವಾಗ ಚಳವಳ ಸದ್ದು ಕೇಳಿಸುತ್ತಿತ್ತು (ರೂಢಿ).

**ಚಳಪಳನೆ** (ಅ). ಚಳಪಳ ಎಂಬ ಸದ್ದಿನೊಡನೆ : ಚಳವಳನೆಳ್ದು ಬಿಮ್ಮಿ ಗರಿಗಳ್ ಪೊಳೆಯಲ್ ನೆಗೆದೆಳ್ದು ಮತ್ತೆಯುಂ ತಳತಳಿಸುತ್ತೆ . . . ತೋರ್ದುದಾ ವಿಳಸಿತರತ್ನಕೋಶಮೆನಿಸುತ್ತೆ ಧರಾತಳದೊಳ್ ನಿರಂತರಂ (ಹಾಲಾಸ್ಯ. ೯-೯-೨೦). [ ಚಳವಳ + – ಅನೆ$_1$ ]

**ಚಳಬಳಿಕೆ** (ನಾ). ೧. ಲಗುಬಗೆ; ಚಪಲತೆ; ಚಳಕ; ವೇಗ: ಚಳಬಳಿಕೆಗಳ ಚಾರುತುರಗಕುಲವನುವಾಗಿ ನಿಂದವು (ಸೋಮಶ. ೬-೨೮); ಭಾವಿಸುವೊಡಾ ಚಳಬಳಿಕೆಯನು ತಾವೆ ಬಲ್ಲರು ದೇವಭಕ್ತರು (ಪ್ರಭುಲಿಂ. ೨೩-೨೮); ಕುಣಿದ ವಸುರನ ರಥದ ಹಯ ದಿನಮಣಿಯ ದಿವ್ಯವರೂಥವಾಜಿಯ ಹಣೆಗೆ ಹೊಂಚುವ'ಖುರದ ಚಳಬಳಿಕೆಯ[ಪಾಠಾಂ. ಪುಟದ ಚಲಗತಿಯ]ಧಡಾಳದಲಿ (ತೊರವೆ. ೬-೨೦-೩೧) ; ಮಂಡಲಭೇದ ಚಳಬಳಿಕೆ ಚದುರೋಜೆವೆರಸಿ ರಣರಂಗದೊಳ್ . . . ಉರವಣಿಸಿದುವು (ಕೃಮಿಭಾ.೨೫-೪೫). ೨. ಅಬ್ಬರ: ಪರಮವಿದ್ಯೆಯ ನೆರವಿ ನಿಲುಕುವ ಚಳಬಳಿಕೆ ಮೊಳಗುವ ಜಯಾಂತದ ವಾದ್ಯ ರಭಸದಲಿ (ತೊರವೆ. ೬-೦೮-೮) ; ಕೊರಲೊಂದು ಚಳಬಳಿಕೆ [ಪಾಠಾಂ. ಳಿಕೆ]ಯನುಳ್ಳ ಪಲಬಣ್ಣದಿರವಾಂತ ಜೋಡ ಮೈಗಿಟ್ಟು (ವರ್ಧಕ. ೧೦-೦೨೬). ೩. ಗಾನದ ಇಂಪು: ಕೊರಳ ಚಳಬಳಿಕೆಯುಲಿಯೊಳ್ [ಪಾಠಾಂ. ಳಿಕೆಯೊಳುಲಿಯ]ಪುರುಷನ್ನದೆ . . . ಬಸಕೆ ತಪ್ಪುದಂಗನೆ (ಅನವ. ೯-೨೦) : ಭಡ್ಡೆಯಿಲ್ಲದೆ ತನ್ನ ಗಂಧರ್ವಗಾಯಕಮನಡ್ಡಮಾಡುವತಲಖಿಳ ಚಳಬಳಿಕೆಯಿಂ ಕೊನರಿ (ಲಿಂಗಪು. ೨೬-೪೬). ೪. ಸೊಗಸು; ಚಾತುರ್ಯ; ಬಿನ್ನಾಣ (?) : ಚಳಬಳಿಕೆಯೊಳು ಚಂದದೊಳು ಬಂಧದೊಳು ನಿರ್ವಾಳ ಮೋಹಿಗಳು ನೆರೆವಾಗ (ಭರತ. ೩೦-೧೩೦) ; ಹಾವಭಾವದ ಚಳಬಳಿಕೆ ರಂಜಿಸೆ ತನ್ನ ಹಾವಂತೆ ಬಂದೊರ್ವಳೊಲೆದು (ಭರತ. ೪೭-೩೮). ೫. [ನಾಟ್ಯ] ಒಂದು ನೃತ್ಯಭಂಗಿ : ಥಾಳ ಡಿಳ್ಳಾಯಿ ಚಂಡಣ ಚಳಬಳಿಕೆ ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೬೭ ಪ).

[ ಚಳಬಳ$_0$ + – ಇಕೆ ]

**ಚಳಬಳಿಸು** 'ಚಳವಳಿಸು' ನೋ.

**ಚಳಮತಿ** (ನಾ). ಚಂಚಲಬುದ್ಧಿಯುಳ್ಳ ವ್ಯಕ್ತಿ : ಚಳಮತಿಯಾದ ನೀಂ ಜಡಧಿಸಂಭವೆಯಪ್ಪುದಱಿಂ (ಗದಾಯು. ೯-೫) ; ಚಳಮತಿ ಬೆಸನಿ ಸುಖ ಪ್ರಿಯಂ (ಸೂಕ್ತಿಸು. ೦೬-೫೨). [ ಚಳ$_2$ (= ಚಲ$_3$) + ಮತಿ ]

**ಚಳಮಾಲೆ** (ನಾ). ಪೊದರಾಗಿ, ನೇರವಾಗಿ ಬೆಳೆಯುವ ಒಂದು ಬಗೆಯ ಮುಳ್ಳಿನ ಗಿಡ,-ಕಂಟಿ : (ಕ). [ ? ]

**ಚಳಮಿಳನೆ** (ಅ). ಚಕಚಕನೆ ; ಮಿರಮಿರನೆ: 'ತಾನೆ ಹೂ, ಹಕ್ಕಿ,'ಹೆಣ್ಣು ಕಣ್ಣೊಂದಾಗಿ ನೀಡಿ ಬಾನ್‍ಮಿನಂಗಳಲ್ಲು ಚಳಮಿಳನಾಗಿ ಅಗ ಬಗೆಯ ಮಿಂಚಿತ್ತು ಒಂದೇ ಬಿಚು (ಮುಳ್ಕಂ. ೩೨-೬). [ಚಳಮಿಳ$_0$ + – ಅನೆ$_1$]

**ಚಳಯ$_1$** 'ಚಳೆಯ$_1$' ನೋ.

**ಚಳಯ$_2$**, ಚಳೆಯ$_2$, ಚಾಳೆಯಂ, ಛಳೆಯ$_2$ (ನಾ). ೧. ಲಗುಬಗೆ ; ವೇಗ ; ಶೀಘ್ರತೆ : ಕಟ್ಟಾಯತನಾಗಿ ಚಳೆಯದಿಂ ಪೊಱಮಟ್ಟಂ (ಅನಂಪು. ೦೦-೫೬) : ಚಳೆಯದಲಿ ತರಿಸಿದನು ಸಂಭಾರವನು ತವಕದಲಿ (ಶಾರಿರಾ. ೦-೫೮). ೨. ಚಲನ ; ಗತಿ : ಸುಳುಹಿನ ಸೂಕ್ಷ್ಮದ ತಿಳುಹಿನ ಚಳಯವ ತಾಳ್ದಿಡೆಯ ಬಲ್ಲರೆ ಬಲ್ಲರೆಂಬೆ (ಮೋಹಿಡೂ. ೦೦೩-೪೦೨).

**ಚಳೆಯ$_2$**: ೧. ಪಟನೀರಿಂದಂ ಮರ್ದಿಸಿ ಚಳೆಯ[ಪಾಠಾಂ. ಪಳಯ]ದೊಳಂ ಪೂಸೆ (ಖಮದ. ೦೦-೬೮) : ಚಳೆಯದಿಂ ಸೂತನವನಿವನ ತರಲಾಲಯಕೆ (ಸೀಂಧ್ರ. ೪೦). **ಚಾಳೆಯ**: ೩. ಕುಪ್ಪಳಿಸುತ್ತ ಸಾಗುವ ಒಂದು ರೀತಿಯ ಚಲನ ಕ್ರಮ: "ಚಾ [ಪಾಠಾಂ. ಚಾ] ಳೆಯಂ ಗ[ಪಾಠಾಂ. ದ]ತಿ ಲಂಘನಂ" (ಮಂಗರಾ. ೨೩-೯). ೪. ಕುಸ್ತಿಯಲ್ಲಿ ಅಥವಾ ಕಾಳಗದಲ್ಲಿ ಶತ್ರುವನ್ನು ಹಿಡಿಯಲು ಹೊಂಚು ಹಾಕುತ್ತಾ ವೇಗವಾಗಿ ಸಂಚರಿಸುವ ಕ್ರಮ : ಕೈಲಾಸ ಚಾಳೆಯ ಮಂಡಿಸೀರಣಾ ಹಜ್ಜೆಯಕ್ರಮಂ (ಮಂಗರಾ. ೮೮-೩೮) ; ಶಕ್ತಿ ಮೊದಲಾದ ಕೈದುಗಳೊಳು ಕೇಣಮಿಲ್ಲದೆ ಚಾರಿ ಚಳಕ ಚಾಳೆಯ ಚದುರ್ವಾಣಿ ಲಾಘವ ಪಂಥ ಪಾಡುಗಳನಱಿದು ಬಿನ್ನಾಣದಿಂ ಗಾಯ ಗಾಣಿಸಿದರತಿಬಲರು (ಕೃಮಿಭಾ. ೨೨-೬). ೫. [ಸಂಗೀತ] ಸ್ವರ ವಿನ್ಯಾಸ ಕ್ರಮ : ಗತಿ ಗಮಕ ಗಹಗಹಿಕೆ ತಿರುಪು ಚಾಳೆಯ ಕೊಂಕು ಜತಿ ಜೋಕೆ ಮಾರ್ಗವಣೆ . . . ನುತ ಶುದ್ಧ ಸಾಳಂಗ ಸಂಕೀರ್ಣಮಂ ಯಥೋಚಿತ ತಾರ ಮಧುರಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹದಶಾ. ೭-೬) ; ಗಹಗಹಿಕೆವಡೆದ ವಹಣಿಯ . . . ಮಹ ಚಾಳೆಯದಲ್ಲಿ ಮೂರ್ತಿವಡೆದುದು ರಾಗಂ (ಹುಕೋಚ. ೨-೨೯). ೬. [ನಾಟ್ಯ] ನೃತ್ಯದಲ್ಲಿ ಹೆಜ್ಜೆಯಿಡುವ ಕ್ರಮ: ಪಯ ಪಾಡು ನಿಚ್ಚವಣೆ ಚಾಳೆಯಮುಲ್ಲಾಸ ತಿರುಂಪು ತ ದ ವಿ ತ್ರ ದ ಮು ನ್ನ ಯ ನ ವಿ ಶೇ ಷ ಂ ಡಿಳ್ಳಾಯಿಯ ಲುಳಿ ಪುದಿದುಸುರಮಸೆವಿನಂ ನರ್ತಿಸಿದರ್ (ಧರ್ಮಪ. ೨-೨೬); ತೋಳ ನೀಡಿದಳು ಮನ್ಮಥನೊಱೆಯಿಂದುರ್ಚಿ ಬಾಳ ನೀಡಿದನೊಯಂಬಂತೆ ಚಾಳೆಯದೊಳು ಹೊಳೆದಳು ರಾಜಸುತರೆದೆ ಹೋಳಾಗುವಂತೆ ಹೊಮ್ಮಿಱಿದು (ಭರತ. ೦೨-೬೬); ಅತಿ ಸೂಠಿಯಲಿ ಚಾಳೆಯವಾಗಿ ತಿರುಹಿದಳು(ಅಕ್ಷರಾ. ೨೭-೦೮). **ಛಳೆಯ**: ೧.ಛಳೆಯದಲಿ ಬರಹೇಳು ನಿನ್ನೀ ತಲೆಯೊಡೆಯನಹ ವಿಷ್ಣುವನು (ನಿಧಾಗ. ೭-೬-೦೦). [ <ಪ್ರಾ. ಚಲಿಅ. / ಸಂ. ಚಲಿತ ]

**ಚಳಯಂಗುಡು** 'ಚಳೆಯಂಗೊಡು' ನೋ.

**ಚಳಯಂಗೊಡು** 'ಚಳೆಯಂಗೊಡು' ನೋ.

**ಚಳಯಂಬೆಱು** (ಕ್ರಿ). ಜಲಸೇಚನವನ್ನು ಪಡೆ ; ಸಿಂಪಡಣೆಯನ್ನು ಪಡೆ : ಕ್ಷಿತಿತಳಂ ಸದ್ರಾಗದಿಂದೆಂಬಿನಂ ಘನಕಾಶ್ಮೀರದ ನೀರಿನಿಂದೆ ಚ ಳ ಯ ಂ ಬೆತ್ತಿತ್ತಲುಂ . . . ಮಾಡಿತ್ತು ಸಂತೋಷಮಂ (ವರ್ಧಪು. ೦೩-೬೩).

[ ಚಳಯ$_1$ (<ಚಳೆಯ$_1$) + ಪೆಱು$_1$ ]

**ಚಳಯಗೊಡು** 'ಚಳೆಯಂಗೊಡು' ನೋ.

**ಚಳಯಿಸು** 'ಚಲಿಸು' ನೋ.

**ಚಳವಳ**, ಚಳವಳಿ, ಚಳುವಳಿ (ನಾ). ೧. ಚಲನೆ ; ಅಲ್ಲಾಡುವಿಕೆ ; ಜರಗುವಿಕೆ. 'ಚಳವಳಿಸು' ಪರಾ.೨. ಚಟುವಟಿಕೆಯಿಂದ ನಡೆಸುವ ಸಾಮಾಜಿಕ ವಿಡಾಯ; ಸಾಮೂಹಿಕ ಕ್ಷೋಭೆ ; ಯಾವುದಾದರೂ ಒಂದು ಪದ್ಧತಿ, ಕ್ರಮ ಅಥವಾ ಕಾನೂನಿನ ವಿಷಯವಾಗಿ ನಡೆಸುವ ಸಾಮೂಹಿಕ ಆಂದೋಲನ: ನನ್ನ ಮಿತ್ರರ ಪ್ರೀತಿಯ ಚಳವಳಕ್ಕಾದರೋ ಇದೇ ಒಂದು ನೆವವಾಯಿತು (ಜೀವನಾ. ೯) ; ರಾಷ್ಟ್ರೀಯ ಚಳವಳದಲ್ಲಿ ಸೇರಿಕೊಂಡು ತ್ಯಾಗಬುದ್ಧಿಯಿಂದ ದೇಶಸೇವೆ ಮಾಡಿದ ವೀರವ್ಯಕ್ತಿ ಅವರು (ರಾಜಪ. ೨೭) : ಬ್ರಿಟಿಷರ ಕಾಲದಲ್ಲಿ ನಾಟ್ಯಕಲೆಯನ್ನೆ ಬಹಿಷ್ಕರಿಸ ಬೇಕೆಂದು ಚಳವಳವೆದ್ದಿತ್ತು (ಭಾರತ. ೫೫೦). **ಚಳವಳಿ** : ೨. ಸ್ವದೇಶಿ ಚಳವಳಿಯ ಸಮಯದಲ್ಲಿ . . . ತಂದೆಯವರು ತಮ್ಮ ನೌಕರಿಯನ್ನೂ ಬಿಡುವ ಪ್ರಸಂಗ ಬಂದಿದ್ದು (ಛಾಂತಿ. ೨) ; ಕರನಿರಾಕರಣೆಯ ಚಳವಳಿಯ ಸಮಯದಲ್ಲಿ . . . ಅಲ್ಲಿ ಇದ್ದೆ (ಬದುಕು. ೦೦). **ಚಳುವಳಿ** : ೨. ಇವರು ಹೂಡಿದ ಚಳುವಳಿ ಯುರೋಪಿನ ಬೌದ್ಧಿಕವಿಕಾಸವನ್ನು ತ್ವರೆಗೊಳಿಸಿತು

(ಕನ್ನಸಂ. ೨೨); ಸ್ವಾತಂತ್ರ್ಯದ ಚಳುವಳಿ ತೀವ್ರವಾಯಿತು (ಭಾರದ. ೪೨೮); ಕ್ಷಾಮನಿವಾರಣೆಗೆ . . . ತಿಲಕರು ಚಳುವಳಿಯನ್ನ ಹೂಡಿದರು (ಸ್ವಾವೀರ. ೩೯): ಚಳುವಳಿ ನಿಂತಿತ್ತು, ಕಾಲೇಜು ತೆರದಿತ್ತು (ಇಂದಾಶ. ೩೯-೮೨). [ ←ಮರಾ. ಚಳವಳ ]

**ಚಳವಳಿ** 'ಚಳವಳ' ನೋ.

**ಚಳವಳಿಖೋರ** (ನಾ). ಚಳವಳಿ ಮಾಡುವವನು ; ಚಳವಳಿ ಮಾಡುವ ಸ್ವಭಾವದವನು: ಈ ಚಳವಳಿಖೋರ ಮಂದೀ ಮಾನಸೂ ಬಲೇ ಚಂಚಲ (ಶಿಡುಗು. ೧೨). [ ಚಳವಳಿ + – ಖೋರ(<–ಕೋರ್$_3$) ]

**ಚಳವಳಿಸು**, ಚಳಬಳಿಸು (ಕ್ರಿ). ೧. ಅಲುಗಾಡು ; ಅಲ್ಲಾಡು ; ಚಲಿಸು : ಅಳವಳಿಸು ಬೆಬ್ಬಳಿಸಂ ಕಳವಳಿಸಂ ಕನಲನೊನಲನಳ್ಕಂ ಬಳ್ಕಂ ಚಳವಳಿಸಂ ಚಪ್ಪರಿಸಂ ತಳವಳಿಸಂ ಬೇಸಱಿಯ್ದು ಬೆಳ್ಳಾಗದಿನಿರಂ (ಅಜಿಪು. ೩-೯೦); ಕೌತುಕವಿದೇನೆಂದು ಚಳವಳಿಸುತಿರಲೆಲ್ಲರು(ಜಸಮು. ೩೦-೩೯). **ಚಳಬಳಿಸು** : ೨. [ನಾಟ್ಯ] ನೃತ್ಯಭಂಗಿಯನ್ನು ತೋರು: ತಾಳದಲಿ ತರಹರಿಸಿ ಮೆಲ್ಲನೆ ಮೇಳದಲಿ ಮೈನಿಗುರಿ ಕರ ಸಂಚಾಳಿಯಲಿ ಚಳಬಳಿಸಿ ತಿರುಪಿನ ಮಡುಪಿನಲಿ ಮಣಿದು . . . ವಿನುತ ಮರಾಳಗತಿಯಲಿ ಗಮಕಿಸುತಮೊಪ್ಪ್ಪಿರ್ದಳಾ ಮಾಯೆ (ಪ್ರಭುಲೀ. ೪-೩೬). [ ಚಳವಳ + – ಇಸು$_3$ ]

**ಚಳಾಯ** (ನಾ). ಸಾಗಾಣಿಕೆಯ ಸುಂಕ ; ಸ್ಥಳದಿಂದ ಸ್ಥಳಕ್ಕೆ ಸಾಗಿಸುವ ವಸ್ತುಗಳ ಮೇಲೆ ಸಾಗಣೆಗಾಗಿ ಹೇರುವ ಸುಂಕ : ಉಳಿದ ಶೇಷವುಮಂ ಚಳಾಯವುಮಂ ಬಿಟ್ಟು (ಎಕ. VI, ತರೀಕೆ. ೨೦-೨೬ ; 1195); ಆರು ವರ್ಷಗಳ ಹಿಂದೆ ದಾಯದರೆ ಎಲ್ಲದರ ಜತೆಗೆ ಚಳಾಯವನ್ನೂ ಘಟಕಾಸ್ಥಾನಕ್ಕೆ ಮಾಯಕೊಡಲಾಯಿತು (ಸವತಿ. ೨೧). [ ಚಳ$_2$(=ಚಲ$_8$) + ಆಯ$_7$ ]

**ಚಳಿ$_1$**, **ಸಳಿ$_1$** (ಕ್ರಿ). ಚಳಿತು, ಸಳಿತು (ಭೂತನ್ಯೂ) . ೧. ಪ್ರಭಾವ ಕಡಮೆಯಾಗು ; ಸೆಡೆ ; ಹಿಂದೆಗೆ ; ಕಂಗ್ಗು : "ಚಳಿ-ವಿಗತಪ್ರಭಾವೇ (ಶಕ್ತಿಗುಂದು), ಶೀತೇ ಚ" (ಶಮಧಾ): ಕಳ್ದ ಕಸವರಮಂನೆಲ್ಲಮನೇಗೆಯ್ದಿಯುಂದು ಬೆಸಗೊಂಡೊಡನಿತುಮಿರ್ದುವಯ್ನಾಸಿರಮುಱುಸಾಸಿರ ದೀನಾರಮನ್ನ ಸೂಳಿಗೆ ಬಿಯವಾದುದುಟಿದುವೆಲ್ಲ[ಂ] ವಣ್ಣ[ಂ] ಚಳಿಯದಿರ್ದುದೆಂದೊಡೆ (ವಡ್ಡಾರಾ. ೧೨೩-೨೩); ತುಂಗಕುಚದ್ವಯ ಶೈಲದುರ್ಗಮಂ ಚಳಿತ[ಪಾಠಾಂ. ತಳಿದ]ಡರ್ದೇಱಿದಂಗಜನುಂ (ಗದಾಯು. ೮-೩೯); ಸುನಂದೆಯ ನುಡಿಗೆ ಚಂಡಶಾಸನನೇವೈಸಿ ಮುಳಿಯದೆ ಲಜ್ಜೆಯಿಂ ಚಳಿಯದೆ ಮತ್ತುಮಿಂತೆಂದಂ (ಅನಂಪು. ೧೦-೯೧ವ); ಚಳಿಯ ದಾಹವಕಾಂಕ್ಷೆ ಯಕ್ಷರಿಗೆಲೆಲೆ ನೋಡಾ (ಉತ್ತರಾ. ೬-೩೧); ಬವರಿವರಿವ ಚಮ್ಮಟಿಗೆಗೆ ಚಳಿಯದ ಕಡಿಯಾಣವಮಂ ಕೈಗೊಳದ ಬಗೆಯಂ ಬಗೆದಂತೆ ಕಂಡು (ರಾಜಶೇ. ೬-೧೧ವ); ನಿಮ್ಮಿಾ ಬಲ್ಮೆಯ ಜಂಕಣೆಗಂ ಕಣೆಗಂ ಚಳಿತರ್ (ರಾಮಾಶ್ವ. ೧೨೧-೨೬). ೨. ಬಳಲು ; ಸೋಲು ; ಸೋತುಹೋಗು : ಕೆಯ್ ಚೆಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳ ಮುದಟರ್ (ಪಂಪಭಾ. ೦೩-೫೯); ಖಳಿಲ್ ಖಳಿಲ್ ತೊಪ್ಪು ತೊಪ್ಪು ಛಳಿಲ್ ಛಳಿಲೆಂದು ಕೊಳ್ವ ಬಡಿಗಂ ಚಳಿತು (ಧರ್ಮಾಮೃ. ೬-೮೮); ಬಳಸಿ ತೋಟಲ್ದಿನ್ನಡಿಗಳ್ ಚಳಿತುವು ಕಣ್ ನಂದಿ ಬಂದವುದು (ಲೀಲಾವ. ೧೪-೬೨); ಆವ ಪರಿಯೊಳಾದೊಡೆಯು ಚಳಿಯದೆ ಮತ್ತೆ ಶ್ರೀವರನೊಳು ತೊಳಲಿದರೆ ದೇವದೇವನ ಕಾಣಲಹುದು (ಕೃಷ್ಣಗೋ. ೨-೯೯). **ಸಳಿ$_1$** : ೨. ತಲೆ ಸಳಿತು ಕೈಮಱಿದರಂತೆ ಯಸುವಾಳುಗಳ್ ನಿಲೆ ಕಂಡು (ಸಮ್ಯಕ್ತ್ವ. ೮-೩೮). [ ದೇ.II ತಮಿ. ತುಳು. ಚಲಿ ]

**ಚಳಿ$_2$**, ಛಳಿ, ಸಳಿ$_2$ (ನಾ). ೧. ಶೀತ ; ಶೈತ್ಯ ; ಥಂಡಿ : "ಚಳಿ–ವಿಗತ ಪ್ರಭಾವೇ(ಶಕ್ತಿಗುಂದು), ಶೀತೇ ಚ" (ಶಮಧಾ); ಚಳಿ ಬಿಸುವು ಬಿಸುವು ಚಳಿಯನೆ ಬಳೆದುದು ಹಿಮರಾಜತೇಜಮಿಾ ಜಗದೆಡೆಯೊಳ್(ಗಿರಿಕ. ೯-೬೪); ಗಿರಿಯ ಶೃಂಗಾಗ್ರದೆ ಚಳಿ ಮಳೆ ಬಿಸಿಲೆನ್ನದುರುತರ ಯೋಗಮಾರ್ಗದಲ್ಲಿ . . . ಯೋಗೀಶ್ವರರಿರುತಿಹರು (ಕಂನವಿ. ೨-೩೧); ಅಲ್ಲಿ ಕೊರಗೆಂಬುದಿಲ್ಲಮ್ಮ, ಅಲ್ಲಿ ಚಳಿ ಭಿದ್ರವಿಲ್ಲಮ್ಮ (ಇಂಗೀತ. ೮೯-೬). ೨. ಹಿಮ ; ಮಂಜು . 'ಚಳಿವೆಟ್ಟು' ಪರಾ. ೩. ಚಳಿಜ್ವರದಲ್ಲಿ ಬರುವ ಮೈ ನಡುಕ : ಅವನಿಗೆ ಚಳಿ ಬಂದಿತ್ತು (ರೂಢಿ). **ಛಳಿ** : ೧. 'ಛಳಿಗಾಲ' ಪರಾ. ೩. 'ಛಳಿಜ್ವರ' ಪರಾ. **ಸಳಿ$_2$** : ೧. ಬೆಂಕಿಗೆ ಸಳಿ ಬಂದು ಉದಕವ ಕಾಯಲಾಗಿ ಹಿಮ ಹಿಂಗಿ ಜ್ವರ ಬಂದಿತ್ತು (ಸಗದೊ. ೬೬); ಏನು ಕಾರಣವಾಗಿ ನೀನಿಂತು ಮೌನದಲ್ಲಿ ಮಂಡಿಸಿರ್ಪೆ . . . ಸಳಿ ಮಳೆ ಘಾಳಿ ಬಿಸಿಲ ಬೇನೆ ಬಾಯಾಱಿಕೆ ಪಸಿವು ಮುಂತಾದ ವೇದನೆಗಳೊಂದುಂ ಗಣನೆಗೆ ಕಾರದೆ (ಭಾರತಾಂ.೧೪-೬೧); ಹರಿಯುಮಿಾ ಹಿಮಕಂಜಿ ಕಲಶಾಬ್ಧಿಯಂ ಬಿಟ್ಟು . . . ಉರುವ ಸಳಿ ತೊಲಗದಿರಲೋಡಿಬಂದಾಗಸದ ತರಣಿಮಂಡಲ ಮಧ್ಯದೊಳ್ಮನೆಯ ಮಾಡಿಕೊಂಡಿರುವನೀ ಹೈಮಂತ ಶಕ್ತಿಯಂ ಬಣ್ಣಿಸಲ್ಕಾರಳವೊ ಮೂಜಗದೊಳು (ಅಪಾವಿ. ೧-೨೯). [ ದೇ.II ತಮಿ. ಮಲ. ಚಳಿ ; ತುಳು. ಚಳಿ, ಚಲಿ, ಸಲಿ ; ತೆಲು. ಚಲಿ ]

**ಚಳಿ$_3$** 'ತಳಿ$_4$' ನೋ.

**ಚಳಿಕ** (ನಾ). ಲವಲವಿಕೆ : "ತವಕ, ಲವಲವಿಕೆ, ಚವಲ, ಆಸವಸ, ಚಳಿಕ" (ಕಂನುಹು. ೮೪). [ ? ]

**ಚಳಿಕಿಗೆ** 'ಚಳಕಿಗೆ' ನೋ.

**ಚಳಿಕೆ$_1$** 'ಚಳಕೆ' ನೋ.

**ಚಳಿಕೆ$_2$** (ನಾ). ಇಬ್ಬನಿ ; ಹಿಮ : ಪರೆದುದು ಚಳಿಕೆ ರವಿಯ ಕರಂಗಳು ಪರಕರಸಿದವೆಣ್ದೆಸೆಯ ಹರುಷವಾದುದು ಕೋಕಮಿಥುನ ಕೋಕನದ ಕೊರಗೆ ಚಕೋರ ಕೈರವವು (ಕರ್ಣಕಾ. ೪-೬೨). [ ? ]

**ಚಳಿಕೊಡು** 'ಚಳಿಗೊಡು' ನೋ.

**ಚಳಿಕ್ಕ** 'ಚಳಂಕ್ಕ' ನೋ.

**ಚಳಿಗದಿರ್** (ನಾ). ತಂಪಾದ ಕಿರಣ; ಹಿಮಕಿರಣ: ಶಶಿಯ ಚಳಿಗದಿರ್ಗಳ ಕುಳಿರ್ಕಾಂತಿ (ಶ್ರೀರಾಮಾ. ೪೨೦-೬). [ ಚಳಿ$_2$ + ಕದಿರ್$_2$ ]

**ಚಳಿಗದಿರ**, ಸಳಿಗದಿರ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಸವಿಗಡಲಣುಗಂ . . . ನೈದಿಲ್ಗೆಳೆಯ ಚಂದ ಚಳಿಗದಿರ ಕತ್ತಲೆವಣೆಯ ಶಶಿಯ ನಾಮಂ" (ಕಬ್ಬಿಕೈ. ೪೩); "ಚಳಿಗದಿರಂ ಕತ್ತಲೆವಣೆ ಕುಳಿರ್ವೆಳಗನು . . . ತಣ್ಗದಿರ ಮಂಜುಗೈಯಂ ಚಂದಂ" (ಕವಿಕಂ. ೪೩). **ಸಳಿಗದಿರ** : ಸಳಿಗದಿರನ ಕಳಂಕನುದ್ದುವವೊಲು ತಿಲಕವ ತೊಡೆದು (ಜ್ಞಾನಸ. ೪೩-೮೦). [ ಚಳಿಗದಿರ್ + – ಅ$_7$ ]

**ಚಳಿಗದಿರ್ಗಲ್ಲು** (ನಾ). ಚಂದ್ರಕಾಂತಶಿಲೆ : ಎಕ್ಕಲಂ ಚಳಿಗದಿರ್ಗಲ್ಲಿನೊಳು ದಾಡೆಯಂ ಮಸೆದು ಪದಗೊಳಿಸುವನಿತಕ್ಕೆ (ರಾಘಕ. ೧೬-೬೨). [ ಚಳಿಗದಿರ್ + ಕಲ್ಲು(<ಕಲ್$_3$) ]

**ಚಳಿಗಾಲ**, ಛಳಿಗಾಲ (ನಾ). ಚಳಿ ಹೆಚ್ಚಾಗಿರುವ ಕಾಲ ; ಮಾಗಿ ; ಹೇಮಂತ ಶಿಶಿರಋತುಗಳ ಸಮಯ : ಹರಿವ ತೊಱೆಗಳ ನಡುವೆ ಧೃತಿಯೋಸರಿಸದುಱೆ ಚಳಿಗಾಲವೆಲ್ಲಂ ನಿರುತದಿಂ ಕೊರಳುದ್ದ ನೀರೊಳು ನಿಂದು (ಬಸಪು. ೨-೦೨); ಬಿಸಿಲು ಮಳೆ ಚಳಿಗಾಲವಿವು ಸಂಧಿಸಿದವೇ ರಘುಪತಿಯನೀಯಾಯಸವ ನೋಡಲಿಕಿದ್ದಪೇ ಶಿವಶಿವ ಮಹಾದೇವ (ತೊರರಾ. ೬-೨-೬). **ಛಳಿಗಾಲ** : ಛಳಿಗಾಲದಲ್ಲಿ ಅವು ಒಂದೂವರೆ ಅಡಿ ಆಳದವರೆಗೂ ಹೋಗುತ್ತವೆ (ಕೀಟಪ. ೩). [ ಚಳಿ$_2$ + ಕಾಲ ]

**ಚಳಿಗಿರಿ** (ನಾ). ಹಿಮಾಲಯ ಪರ್ವತ; ಹಿಮಾಚಲ: ಒಂದು ದಿನ ಚಳಿಗಿರಿಯ [ಪಾಠಾಂ. ವೆಟ್ಟ] ದೆಸಗೆ ಚೆಲ್ಲಲು ನಿತ್ಯದಂತಲ್ಲದತ್ತ ನೀ ಬಿಸುಟ ಪರಿಯ ತಿಳುಹೆನಲ್ಕೆ (ಪ್ರಾಭರಾ. ೪-೧೪). [ ಚಳಿ$_2$ + ಗಿರಿ$_1$ ]

**ಚಳಿಗೊಳ್** (ಕ್ರಿ). ತಣ್ಣಗಾಗು ; ಕುಗ್ಗು ; ತಗ್ಗು : ಕೇಡಿನಲ್ಲಿ ಕುಂಗಿಡದ ಒಲವು, ಮುಪ್ಪಿನಲ್ಲಿ ಚಳಿಗೊಳದ ಗೆಲವು (ಇಂಗಿತ. ೮೩-೦೮).
[ ಚಳಿ$_1$ + ಕೊಳ್$_1$ ]

**ಚಳಿಜ್ವರ, ಛಳಿಜ್ವರ** (ನಾ). ಚಳಿಯೊಡನೆ ಬರುವ ಜ್ವರ ; ಮೈನಡುಕದೊಂದಿಗೆ ಏರುವ ಜ್ವರ ; ಮಲೇರಿಯಂ : ಇವು ಚಳಿಜ್ವರ ಅಥವಾ ಮಲೇರಿಯಾಜ್ವರವನ್ನುಂಟುಮಾಡುತ್ತವೆ (ಜರಜೀ. ೨೭). **ಛಳಿಜ್ವರ :** ಮಂದಾಗ್ನಿಯಲ್ಲಿ, ಛಳಿಜ್ವರದಲ್ಲಿ [ಪಾಠಾಂ. ಛಳಿಯಲ್ಲಿ] . . . ವಮನ ಕ್ರಿಯೆಯ ಮಾಡಿಸುವುದು (ವೃದ್ಯಸಾ. I, ೩೦) ; ಗರುಗದ ಸೊಪ್ಪಿನಲ್ಲಿ ಒಂದು ಪಾವು ರಸವಂ ಹಿಂಡಿ ಛಳಿಬರುವ ಸಮಯದಲ್ಲಿ ಕೊಡಲು ಛಳಿಜ್ವರಂ ಮಾಣ್ಗುಂ (ಸಕವೈ. ೭೩). [ಚಳಿ$_2$ + ಜ್ವರ]

**ಚಳಿತ$_1$** (ನಾ). ಚಳಿ ; ಶೀತ ; "ಕುಳಿರ್ದುದು" (ಚತುನಿ. ೬. I, ೩೭).
[ಚಳಿ$_2$ + — ತ$_2$]

**ಚಳಿತ$_2$** 'ಚಲಿತ' ನೋ.

**ಚಳಿನಾಡು** (ನಾ). ಚಳಿ ಹೆಚ್ಚಾಗಿರುವ ನಾಡು ; ಶೀತವಲಯದಲ್ಲಿ ಇರುವ ನಾಡು : (+). [ಚಳಿ$_2$ + ನಾಡು]

**ಚಳಿಯ** 'ಚಳೆಯಂ$_1$' ನೋ.

**ಚಳಿಯಿಸು** 'ಚಲಿಸು' ನೋ.

**ಚಳಿಲ್** (ನಾ). ಒಂದು ಅನುಕರಣ ಶಬ್ದ : ಪೊಸ ಪೂವಿನೊಳ್ ಪೊರೆದು ಪೊಣ್ಮಿದ [ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಯೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೩-೩೪) ; ಉರ್ಕಂಬುಗಳೆಱಗಿ ರೋಮರೋಮಕ್ಕೆ ನೆಲಲ್ ನೆಕ್ಕು ಚಳಲ್ ಚಕ್ಕು ದೊಗಲ್ ದೊಕ್ಕನೆ ನಾಂಟಿದುವರಾತಿಭಟರವಯವಮಂ (ಜಗವಿ. ೭-೫೦).

**ಚಳಿಲನೆ** (ಅ). ಒಮ್ಮೆಲೆ ; ಕೂಡಲೆ : ಚಳಿಲನೆ, ಕಿಳಿಲನೆ, ಗಳಗಳನೆ, ಕಿಳಿಕಿಳನೆ (ಶಬ್ದಾನು. ೦೯೦ ವ್ಯಾಖ್ಯಾ). [ಚಳಿಲ್ + — ಅನೆ$_1$]

**ಚಳಿವೆಟ್ಟ** 'ಛಳಿವೆಟ್ಟು' ನೋ.

**ಚಳಿವೆಟ್ಟಣುಗಿ** (ನಾ). ಹಿಮವಂತನ ಮಗಳು; ಪಾರ್ವತಿ: ಚಳಿವೆಟ್ಟಣುಗಿಯಾಣ್ಮನ ಭಕ್ತ ಸಂಗನಾದಳವ ನೋಡಲ್ಕೆ . . . ಸೂರ್ಯನುದಯಂಗೈದನಾ ಸಮಯದಿ (ಪ್ರಾಚ್ಯಕಾ ೦೩-೨೯).
[ಚಳಿವೆಟ್ಟು + ಅಣುಗಿ (< ಅಣುಂಗಿ)]

**ಚಳಿವೆಟ್ಟಳಿಯ** (ನಾ). ಹಿಮವಂತನ ಅಳಿಯ; ಶಿವ: "ಎಲರುಣಿವೆದೆಯಂ ಚಳಿವೆಟ್ಟಳಿಯಂ ಸಸಿದಲೆಯ . . . ಪೇೞ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಳಂ. ೦೫). [ಚಳಿವೆಟ್ಟು + ಅಳಿಯ]

**ಚಳಿವೆಟ್ಟಾಣ್ಮ** (ನಾ). ಹಿಮಗಿರಿಯ ಒಡೆಯ ; ಹಿಮವಂತ ; ಚಳಿವೆಟ್ಟಾಣ್ಮನ ಪುತ್ರಿ ಸುರ್ಕೆ ಚಳಿಯಿಂ (ರಾಜಶೇ. ೯-೦೭).
[ ಚಳಿವೆಟ್ಟು + ಆಣ್ಮ (< ಆಳ್ಮ) ]

**ಚಳಿವೆಟ್ಟು, ಚಳಿವೆಟ್ಟ, ಛಳಿವೆಟ್ಟು** (ನಾ). ಹಿಮಗಿರಿ ; ಹಿಮಾಚಲ : "ಕುಳಿರ್ವೆಟ್ಟು ಕಿಲ್ವೆಟ್ಟುಂ ಚಳಿವೆಟ್ಟು ಹಿಮಾದ್ರಿ" (ಚತುನಿ. ೦೦) ; ಮನ್ಮಥನು ತೇರ್ ರಥವನೇಱ ಮುಂದೆ ಪೋಗಲ್ಕಾ ಚಳಿವೆಟ್ಟು ಕಣ್ಗೆ ರಂಜಿಸಿತು (ಮೋಹತ. ೬-೪೫). **ಚಳಿವೆಟ್ಟ:** ಚಳಿವೆಟ್ಟದಳಿಯ ಕೇಳುಳಿದ ಮಾತೇನೀಗ (ಮಲ್ಲಾರಿ. ೬-೪). **ಛಳಿವೆಟ್ಟು:** ಛಳಿವೆಟ್ಟನಿಂದಬ್ಧಿ ಪರಿಯಂತವವನಿಯು ತದಾಕಾರದಂತೆಸೆವುದು (ನವಮೋ. ೨-೦೮).

ಚಳಿವೆಟ್ಟುಮಗಳ್ = ಚಳಿವೆಟ್ಟಣುಗಿ: ಚಳಿವೆಟ್ಟುಮಗಳ ನಲ್ಲಂ ಪೇೞ್ದ ಶಾಸ್ತ್ರಂಗಳ್ (ಏಕೋತ್ತ. ೬-೭೮). [ಚಳಿ$_2$ + ಬೆಟ್ಟು$_2$]

**ಚಳಿವೆಱು** (ಕ್ರಿ). ಚಳಿಯನ್ನು ಹೊಂದು ; ಶೀತದಿಂದ ಬಾಧೆಪಡು : ಭೀತಿಯಲಿ ಚಳಿವೆತ್ತು ನಡುಗುವಂದದಿ ಪೇೞ್ದ ರಣದುಮ್ಮಳಿಕೆಯ ಬಹಳ ನಿಮ್ಮರವ (ಮೋಹತ. ೩೪-೪೩). [ಚಳಿ$_2$ + ಪೆಱು$_1$]

**ಚಳಿಸು$_1$** 'ತಳಿಸು$_1$' ನೋ.

**ಚಳಿಸು$_2$** 'ಚಲಿಸು' ನೋ.

**ಚಳುಕಿ$_1$** 'ಚಳುಕ್ಯ' ನೋ.

**ಚಳುಕಿ$_2$** (ನಾ). ಒಂದು ಬಗೆಯ ವಿಮಾನ: "ಚಳುಕಿಯೆನೆ ಶಿಂಶುಮಾರಂ" (ವಸ್ತುಕೋ. ೨೩-೬). [ ? ]

**ಚಳುಕಿಡು** (ಕ್ರಿ). ನರಗಳ ಮಿಡಿತದಿಂದ ಬೇನೆಯುಂಟಾಗು; ನರಗಳಲ್ಲಿ ಚುಚ್ಚಿದಂತೆ ನೋವುಂಟಾಗು: ನವಮಾಸ ಪೂರ್ಣಸಲಾ ಸತಿಗೆ ಬಿಡದೊಡನೆ ದಿವದಲ್ಲಿ ಕಾಂಚಿ ಕಟ ಮಿಡಿಮಿಡಿದು ಚಳುಕಿಡಲ್ (ಶರಶು. ೩-೪೯). [ಚಳುಕು$_1$ (< ಚಳಕು$_1$) + ಇಡು$_1$]

**ಚಳುಕು$_1$** 'ಚಳಕು$_1$' ನೋ.

**ಚಳುಕು$_2$** (ನಾ). (?) : ಅಳರಶರಕೇಳಿಪಂಪಿಂದಲಾಸ್ಯಶ್ರೀಯ ಚಳುಕಿನಿಂ ನೋಳ್ಪರಂತಃಕರಣತುಷ್ಟಿಯ ಸುಸೋಪನೇವರ್ಣಿಸುವೆನು (ಜಿನಮು. ೨-೦೨). [ ? ]

**ಚಳುಕ್ಯ, ಚಲಿಕ್ಯ, ಚಳಿಕ್ಯ, ಚಳುಕಿ$_1$, ಚಟುಕ್ಯ, ಚಾಳೋಕ್ಯ, ಸಳುಕಿ** (ನಾ). = ಚಾಲುಕ್ಯ: ಸತ್ಯಾಶ್ರಯವಿಸರಸಿದುದಾ ಚಳುಕ್ಯಾನ್ವಯದೊಳ್ (ಕಇಇ. ೨-೨-೨೦ : 1058). **ಚಲಿಕ್ಯ :** ಚಲಿಕ್ಯೋ ವಲ್ಲಭೇಶ್ವರಃ (ಎಇ. XXVII, ೮-೩; ೬೬೩). **ಚಳಿಕ್ಯ:** ಸಮಜನಿ ನವಮುಸ್ತಸ್ಯ ರಾಜ್ಞಶ್ಚಳಿಕ್ಯಕ್ಷ್ಮಾಪ (ಎಕ. VII, ಶಿವಮೊ. ೮೩-೦೯ : 1587). **ಚಳುಕಿ$_1$ :** ಚಳುಕಿವಂಶೋತ್ತಮರಂ (ಎಇ. XVI, ೩೮-೫: 1107). △ **ಚಟುಕ್ಯ :** ಚಟುಕ್ಯರನ್ವಯಂ ನೆಗಳೆ ನಗಳ್ತೆಯಂ ತಳೆದು ತಂನಯ ತೇಜದೊಳಾಣೆ ಯೋಲೆಯುಂಡಿಗೆ ಸಲೆ ಸಾಧ್ಯವಾದ ನೆಲನಂ ತಳೆದಂ ನೃಪಮೇರುತ್ತಿಲಪಂ (ಕಇಇ. ೯೫-೪-೯ ; 12ನೆಯ ಶತ). **ಚಾಳೋಕ್ಯ:** ನನ್ನಿಯಂ ಪೇಳುವೆನರಸ ಕೇಳಿನ್ನು ಚಾಳೋಕ್ಯಾನ್ವಯದವರು ಮುನ್ನ ನಿಕ್ಷೇಪಿಸಿದುದೆಂಬತ್ತೆಂಟು ಕೋಟಿ ಧನ ಐನ್ನ ಸಿಂಹಾಸನದ ಕೆಳಗಿದೆ (ಬಸಪು. ೩-೫೭). **ಸಳುಕಿ :** ವಿದಿತ ಶ್ರೀ ಸಳುಕಿ ರಾಜ್ಯ[ದೊ]ಳ್ (ಸೌಇಇ. XI-1, ೦೪-೦೫: 872).
[< ಸಂ. ಚಾಲುಕ್ಯ]

**ಚಳುಪು** (ನಾ). = ಚಳಕು$_1$ : (+). [ ? ]

**ಚಳುಮ** (ನಾ). = ಚಳಕು$_1$ : ಯೋನಿಯೋನಿಯಲ್ಲಿ ಭೇದ ಚಳುಮ ರುಜಾ ಇತರ ತೋರಿದ ನೋವು (ಶಾಹಚು. ೨-೦-೭೭ ವ). [ ? ]

**ಚಳುವಳಿ** 'ಚಳವಳ' ನೋ.

**ಚಳೆ$_1$** 'ತಳೆ$_4$' ನೋ.

**ಚಳೆ$_2$** 'ಚಿಲ್ಲ$_1$' ನೋ.

**ಚಳೆ$_3$** 'ಸೆಳೆ$_4$' ನೋ.

**ಚಳೆ$_4$** 'ತಟಿ$^3$' ನೋ.

**ಚಳೆ$_5$** (ನಾ). ೧. ಒಂದು ಬಗೆಯ ಬಟ್ಟೆ : ದೇವಾಂಗದ ಚಳೆಯ ವಟಿಯ ಪಟ್ಟಾವಟಿಯೆಕ್ಕಾರೋಹಣದ ಕಕ್ಕರವಟಿಯಗೆಯ ದುಗುಳದ ಪಾಗುಡಂಗಳಂ . . . ತೊಟ್ಟು (ಮಹಾನೀ. ೯-೪ ವ). ೨. ಚಿಕ್ಕವಲ್ಮಕ್ಕಳನ್ನಾಗಲಿ, ಅಶಕ್ತರನ್ನಾಗಲಿ ಎತ್ತಿಕೊಂಡು ಹೋಗುವುದಕ್ಕಾಗಿ ಬಳಸುವ ಬಟ್ಟೆ; ಜೋಳಿಗೆ : (+).

**ಚಳೆಕೊಡು** 'ಚಳೆಗೊಡು' ನೋ.

**ಚಳೆಗೊಡು, ಚಳೆಕೊಡು, ಚಳೆಕೊಡಂ** (ಕ್ರಿ). ಸಿಂಪಡಿಸು; ಚಿಮುಕಿಸು ; ತಳಿಸು: ಕೇಸರಿಪೀಠವ ಪಾಸಿ ಕಸ್ತೂರಿನೀರ ಪೋಸರಿಸದೆ ಚಳೆಗೊಡುವ (ಅನಂತ. ೫-೫೭); ಕಸ್ತೂರಿಯಾ ಜಲದಿಂದೆ ಚಳೆಗೊಟ್ಟು (ನವಮೋ. ೦೦-೭೮); ನಾರಣೆಯನೇ ಹಾಕಿ ಚಳೆಗೊಟ್ಟು ರಂಗವಲ್ಲಿಯನಿಟ್ಟು (ಮಲ್ಲಜ. ೨-೦೫). **ಚಳೆಕೊಡು :** ಅಂಗಳ ಸಾರಿಸಿ ಗಂಧದ ಚಳೆಕೊಟ್ಟು (ಲೋಕಗೀ. ೨೦೫). **ಚಳೆಕೊಡು :** (+). [ಚಳೆ$_1$ (< ತಳೆ$_4$) + ಕೊಡು$_1$]

**ಚಳೆಯು₁**, ಚಳಯು₁, ಚಳಿಯು, ಛಳಯು, ಛಳೆಯು₁ (ನಾ). (ನೆಲವನ್ನು ಗುಡಿಸಿದ ಬಳಿಕ)ನೀರು ಛಿಯುವುದು,-ಸಿಂಪಿಸುವುದು,-ಚಿಮುಕಿಸುವುದು : "ಚಳಿಯ ಮನೆ ನೀರ ತಳಿದುದು" (ಧಾರನಿ. ೧೧); "ಚಳೆಯಮುಮನೆ ಸಿಂಪಿಸುವುದಕಕ್ಕುಂ" (ಶವಿಕಂ. ೨೪೬); ಎಳೆದಳಿರ ಹಸೆ ಪನ್ನೀರ ಚಳೆಯ ಮೆಱೆದವಾ ಶೃತ್ಯಶಾಲೆಯೊಳಗೆ (ಹಡಕಾ. ೩-೪೩); ಕತ್ತುರಿನೀರ ಚಳೆಯದೊಳಂ (ಪುಷ್ಪಪು. ೮-೩೦ ವ); ಚಂದ್ರಕಾಂತದ ಜಲದ ಚಳೆಯಮಂ ಕೊಟ್ಟು (ಸೌಂದಪು. ೮-೨೦); ಚಳೆಯದಿಂ ಚೆಲ್ಲಿದ ಚಂದನರಸದಿಂದ ಪೊಳಲು ಕಣ್ಗೆಸೆದುದು (ಕುರಾಹಾಂ. ೧೦-೬೬); ಮೇಗಣೆಂದುದಿರ್ವ ಕ್ರಮ್ಮಲರ್ಸರಿಯ ಪನ್ನೀರ್ಚಳೆಯದ . . . ಅಗಡೆಯುರ್ವಿಡೆ ಮೆಱೆದುದು (ಸಂದಿಪಾ. ೬-೩). **ಚಳಯು₁** : "ಜಲಸೇಚನಂ ಚಳಯಮೆನಿಕುಂ" (ಶಶರ. ೧೨೩): ಪುಷ್ಪರಸದ ಚಳಯಂಗಳೆನೆ ವ್ಯಸಿರಿಯನಾಂತ ತದ್ವನದೇವಿ (ಸೌಂದಪು. ೧೮-೩೨); ಪನಿನೀರೊಳೊದವಿದ ಚಳಯವೊಪ್ಪಿದುದು (ಪರ್ಧಕ. ೩-೪೩). **ಚಳಿಯು**: ಬೀದಿಬೀದಿಯೊಳ್ ಬಡದಿತ್ತ ಪನ್ನೀರ ಚಳಿಯ ವಾಡುವ ಪಾತ್ರದ (ಚಲಪು. ೩೬-೧೭). **ಛಳಯು** : ಅರಳದ ಹೂವುಗಳಲ್ಲಿ ಸುರಿವ ಮಕರಂದದಿಂದ ವನಪ್ರದೇಶವೆನುವ ಬೀದಿಯೊಳ್ ಛಳಯಮಂ ಕೊಟ್ಟು (ಸಾಗಂಧಿ. ೪೬೨-೦). **ಛಳೆಯು₁**: ಬಾವನ್ನಮುಂ ಕದಡಿ ಸಿಂಪಿಸುವ ಛಳೆಯದಿಂ (ನಳಚಂ. ೧೯೩); ಹರುಷದಿಂ ಗುಡಿಗಟ್ಟಿ ವೀಥಿವೀಥಿಯಲಿ ಛಳೆಯದಿ ರಂಗವಲಿಗಳಿಂದ ವಿರಚಿಸಲು (ಬಶಿಚಂ. ೩೬-೩೦); ಪನ್ನೀರ ಬಾವನ್ನದೆಸೆವ ಛಳೆಯಂ ಮೃಗಮದೋನ್ನತದ ಸಾರಣೆಯು (ರಾಶಕಿ. ೪-೩). [ ಚಳಿ₁ (<ತಳಿ₄) + - ಅ₆ ]

**ಚಳೆಯು₂** 'ಚಳಯು₂' ನೋ.

**ಚಳೆಯು₃** 'ತಟ' ನೋ.

**ಚಳೆಯಂಗುಡು** 'ಚಳೆಯಂಗೊಡು' ನೋ.

**ಚಳೆಯಂಗೆಯ್** (ಕ್ರಿ). = ಚಳೆಗೊಡು: ತಂಗೆ ತಲೆವೀದಿಯಂ ಕೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹಡಕಾ. ೪-೨೪). [ಚಳೆಯು₁ + ಕೆಯ್₁]

**ಚಳೆಯಂಗೊಡು**, ಚಳಯಂಗುಡು, ಚಳಯಂಗೊಡು, ಚಳಯಗೊಡು, ಚಳೆಯಂಗುಡು, ಛಳೆಯಂಗೊಡು(ಕ್ರಿ). = ಚಳೆಗೊಡು : ಚಳೆಯಂಗೊಡುವವೋಲೆಸೆದುದಾ ಚಟುಳುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨); ಕೇರಿಕೇರಿಯೊಳು ಪನ್ನೀರಿನಿಂದರರೆ ಚಳೆ [ಪಾಠಾಂ. ಳೆ] ಯಂಗೊಟ್ಟು (ಸಿದ್ಧೇಪು. ೦೯-೧೮). **ಚಳಯಂಗುಡು** : ಚಲ್ಲಂ ಚಳ [ಪಾಠಾಂ. ಳೆ]ಯಂಗುಡುತ್ತುವಿಐರಿ ರಾಗರಸಾಮೃತದಿಂ (ಅರ್ಧನೇ. ೨-೯೩); ಘುಸೃಣರಸಂಗಳಿಂ . . . ಚಳಯಂಗುಡುತಿರ್ಪ ಮೌಕ್ತಿಕಪ್ರಸರದೆ ಕೂಡೆ ರಂಗವಲಿಯಂ ನಲಿದಿಕ್ಕುತುಂ (ಪರ್ಧಪು. ೦೩-೬೪). **ಚಳಯಂಗೊಡು** : ಅನಿಮಿಷವಧು ಕತ್ತುರಿಗದಡಿನ ಚಳಯಂಗೊಟ್ಟಳ್ (ಅನಂಪು. ೬-೪೬). **ಚಳಯಗೊಡು**: ಚಳಯಗೊಟ್ಟುದು ಲೇಸು ಕುಸುಮಾಜಿ ಹೊಸರಂಗವಲಿ ಲೇಸು ಕುಸುಮವಾಗಿ (ಭರತ. ೧೧-೯). **ಚಳೆಯಂಗುಡು** : ಜೋಳಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯುಂಗುಡೆ (ಗಿರಿಶ. ೬-೩೩ ವ); ಘುಸೃಣರಸಂಗಳಿಂದೆ ಚಳಯಂಗುಡುವಂತೆ (ಅನಂಪು. ೧೧-೩೩). **ಛಳೆಯಂಗೊಡು** : ಪುನಗು ಜವಾದಿ ಜಲದೀಯಲ್ಲ ಪೊರವಳೆಯಂಗಣದಿ ಛಳೆಯಂಗೊಟ್ಟು (ನವಮೋ. ೨೧-೧೮). [ ಚಳೆಯು₁ + ಕೊಡು₁ ]

**ಚಳೆಹಾಕು** (ಕ್ರಿ). = ಚಳೆಗೊಡು : ಅಂಗಳಕ್ಕೆಲ್ಲ ಚಳೆಹಾಕಿ ರಂಗವಲ್ಲಿ ಇಟ್ಟಿದ್ದಾರೆ (ರೂಢಿ). [ ಚಳಿ₁ (<ತಳಿ₄) + ಹಾಕು (<ಪಾಯ್ಕು₁) ]

**ಚಳೆಹೊಡೆ** (ಕ್ರಿ). = ಚಳೆಗೊಡು: ಮತ್ತೆ ಕೆಲವರು ಬೀದಿಗಳಿಗೆ ಪನ್ನೀರಿನ ಚಳೆ ಹೊಡೆಯುತ್ತಲಿದ್ದರು (ದೇಯಾನಿ. ೦೩೦).

[ ಚಳಿ₁ (<ತಳಿ₄) + ಹೊಡೆ₁ (<ಪೊಡೆ₁) ]

**ಚಳ್ಳ** 'ಸೆಳ್ಳ' ನೋ.

**ಚಳ್ಳಪಿಳ್ಳಿ**, ಚಳ್ಳಿಪಿಳ್ಳಿ (ನಾ). ಒಂದು ಬಗೆಯ ಮಕ್ಕಳಾಟ : ಚಳ್ಳಿ ಬಂಗಾರಿಟ್ಟುಕೊಂಡು ಒಳ್ಳೆ ವಸ್ತ್ರ ಹೊದ್ದುಕೊಂಡು ಚಳ್ಳಪಿಳ್ಳಿ [ಪಾಠಾಂ. ಅಳ್ಳಂಚೇರ, ಅಳ್ಳಾಬಾರಿ]ಗೊಂಬೆಯಂತೆ ಆಡಿಹೋಯಿತು (ಕನಕ. ೦೧೬-೩). **ಚಳ್ಳಿಪಿಳ್ಳಿ** : "ಮಕ್ಕಳ ಆಟ" (ಜಾನಕೋ. ೩೩). 'ಚಿಳ್ಳಿಪಿಳ್ಳಿ' ಪರಾ. [ ? ]

**ಚಳ್ಳವರೆ** (ನಾ). (ಉಕ) ಒಂದು ಬಗೆಯ ಸಸ್ಯ ಮತ್ತು ಅದರ ಕಾಯಿ; ಹಿತ್ತಲವರೆ ; ಚಪ್ಪರದವರೆ : ಔಡಲಗಿಡಗಳ ಬುಡ್ಡದಲ್ಲಿ ಚಳ್ಳವರೆಯ ಬೀಜವನ್ನು ಹಾಕಿ ಆ ಬಳ್ಳಿಯನ್ನು ಔಡಲಗಿಡಗಳಿಗೆ ಹಬ್ಬಿಸಬೇಕು (ಕೃಷಿಶ್ರ. ೧೩೩); ನಾನೇನು ನಿಮ್ಮ ತೋಟದಲ್ಲಿ ಬೆಳೆದ ಬದನೆಕಾಯಿಯೇ ಚಳ್ಳವರೆಯೇ (ಇಪ್ಪಕ. ೨೦೩). [ಚಳ್ಳು (<ಸೆಳ್ಳು) + ಅವರೆ₁]

**ಚಳ್ಳಿಸು** 'ಚಲ್ಲಿಸು₂' ನೋ.

**ಚಳ್ಳು** 'ಸೆಳ್ಳು' ನೋ.

**ಚಳ್ಳುಗುರ್** 'ಸೆಳ್ಳುಗುರ್' ನೋ.

**ಚಳ್ಳುಗುರು** 'ಸೆಳ್ಳುಗುರ್' ನೋ.

**ಚಳ್ಳೆ** 'ಸೆಳ್ಳ' ನೋ.

**ಚಳ್ಳೆಕೆಂದಾಳ** (ನಾ). ಒಂದು ಬಗೆಯ ಮರ : ಚಳ್ಳೆಕೆಂದಾಳ, ಕೆಂಪುಚಳ್ಳೆ (ವೃಕ್ಷಔ. ೨೪-೪೩೩). [ ? ]

**ಚಳ್ಳೆಪಿಳ್ಳೆ** 'ಚಳ್ಳಪಿಳ್ಳಿ' ನೋ.

**ಚಱಪು** 'ಸೆಱಪು' ನೋ.

**ಚಱಿಂಗಯ್ಯ** (ನಾ). ಒಬ್ಬಾತನ ಹೆಸರು : ಮಲ್ಲಿಸೇನಭಟಾರರ ಗುಡ್ಡಂ ಚಱಿಙ್ಗಯ್ಯಂ ತೀರ್ತ್ಥವಂ ಬನ್ದಿಸಿದಂ (ಎಕ. II, ೪-೦ : ಸು. ೯೦೦).

[ ? ]

**ಚಱಿತ್ರಿ** (ನಾ). ಒಬ್ಬಾಕೆಯ ಹೆಸರು : ಮಾರವರ್ಮ್ಮಸ್ವಾಮಿಗೆ ಸುನ್ದರಿ ಚಱಿತ್ರಿಯರಾ ದೇಗುಲಂ ಮಾಡೆಯ್ವದಾ ವೃತ್ತಿಯುಂ ಸರ್ವ್ವಪರಿಹಾರಂ ಎಟ್ಟಾರ್ (ಎಕ. VI, ಚಿಕ್ಕಪು. ೯೨-೪ ; ಸು. 750 ?). [ ?. ]

△**ಚಟಕ್ಕ** 'ಚಳುಕ್ಕ' ನೋ.

**ಚಟುವಟ್** (ನಾ). ಪ್ರತಿಜ್ಞೆ (?) : ಸಾಸಿಗ × × × ಪಱಯರೊಡೆಯ × ಅವೆಡೆಯವ್ವಂ ಹರಿತ್ರನ ಕುಮಾರಂ ಚಟುವಟ್ ಪೊಡದು ನುಡಿದು ಮತ್ತೆನ್ನದಾತನ್ ನುಡಿವಕ್ಕು (ಸೌಇಇ. IX-I, ೨೨-೧೦ : ೯೭೩). [ ? ]

**ಚಾ₁** (ನಾ). ೧. ಒಂದು ಅನುಕರಣ ಧ್ವನಿ : ಇದ್ದರೆಲ್ಲರ ಕೂಡಿಕೊಂಡು ಎದ್ದನು ಯುವರಾಜನೆಡೆಗೆ ಚಾ[ಪಾಠಾಂ. ಬಾ] ಹೋಯನೆ ಗೆದ್ದನು ಜಗದ ಜಾಣರನು (ಧರಕ. ೩೬-೯೩). ೨. ದನಕರುಗಳನ್ನು ಅಥವಾ ಮೇಕೆಗಳನ್ನು ಮುಂದಕ್ಕೆ ಹೋಗುವಂತೆ ಅಟ್ಟುವಾಗ ಬಳಸುವ ಧ್ವನಿ : ಹುಡುಗನು ಚಾ ಎಂದು ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಾನೆ (ರೂಢಿ).

**ಚಾ₂** 'ಚಹ' ನೋ.

**ಚಾಂಕಿಮಯ್ಯ** (ನಾ). ಒಬ್ಬಾತನ ಹೆಸರು : ಚಾಂಕಿಮಯ್ಯನ ಮಾಡಿಸಿದ ಶ್ರೀಶಾಂತಿನಾಥದೇವರ ತ್ರಿಭುವನತಿಳಕ ಚೈತ್ಯಾಲಯದಲಿರ್ಪ್ಪ ರಿಶಿ(ಷಿ)ಯರ್ (ಇಇ. XIX, ೨೬೩-೩೩ : 1064). [ ಚಾಂಕಿಮ್ಮ₀+ಅಯ್ಯ₁ ]

**ಚಾಂಗಾಳ್ವ** 'ಚಂಗಾಳ್ವ' ನೋ.

**ಚಾಂಗು**, ಚಾಗು, ಜಾಂಗು, ಜಾಗು₂ (ಅ). ಭಲೆ, ಭೇಷ್, ಭಾಪು ಎಂಬರ್ಥದ ಹೊಗಳಿಕೆಯ ಮಾತು,-ಕೊಂಡಾಟದ ನುಡಿ: ಇಂದೆನ್ನ ಮನೆಗೆ ಪ್ರಮಥರು ಬಂದಹರೆಂದು ಗುಡಿತೋರಣವ ಕಟ್ಟಿ . . . ರಂಗವಾಲಿಯನಿಕ್ಕಿ ಉಘೆ ಚಾಂಗು ಭಲಾ ಎಂಬೆ (ಬಸವ. ೩೭೬); ಉಗೆ ಚಾಂಗು ಬಲಯೆಂಬ ನೆಗೆವ ರಭಸಂಗಳೊಳು(ದೇಶ್ಯಾದೋ. ೦೦೭-೭); ಚಾಂಗು ಬಲಾಯೆನಲು ನಂದಿಧ್ವಜವ್ರಜವು (ಬಸಪು. ೩-೩೯); ಜಯ ಜಯ ಚಾಂಗು ಬೊಲ್ಲೆಂಬ ರಭಸದಿಂ ಕೀರ್ತಿಸುತ್ತ (ವೀಶ್ಯಪು. ೪-೧೨-೪೩); ಪಾದವೆಟ್ಟಱಿಕೆ

ಪರಾಕು ಚಾಂಗೆಂದು ಮುಂದೋದೆ ಕೈಸನ್ನೆಯೊಳ್ನಿಲಿಸಿ . . . ಪಾಡುವ ನಾದವ ನಿಲಿಸಿಯಿದ್ದನು (ಭರತ. ೪೯-೪). **ಚಾಗು:** "ಅರರೆ ಧಣು . . . ಚಾಗು ಸಲೆ ಸುಂಪುರೆಯೆನೆ ಕೊಂಡಾಟದ ನುಡಿ" (ಭಾಜನಿ. ೪೭); ಮರುಳು ಪೂತು ಪಾಯಕು ಗಂಡುಗಲಿಯಹೆ ಚಾಗು ತೊಟ್ಟೆಸು (ಕು ಬ್ರಾ ಭೀ. ೦೦-೦); ಎಲ್ಲರುಂ ಪೂತುರೇ ಸುಭಟ ಚಾಗೆಂದುಲಿಯೆ ಕೋಪದಿಂ ಗುಹನಾರ್ದು ತೆಗೆದೆಚ್ಚನು (ಚಂಪು. ೪೩-೦೭); ಚಾಗು ದಣುದಣು ಭಾಪು ಭಳಿರೆ ಬಲ ಬಲರೆ ಕೇಳೀಗ ನಿನ್ನಂ ಪೋಲ್ವರಂ ಕಾಣೆನು (ರುಕ್ಮಾಂಗ. ೧೩-೭೩). **ಜಾಂಗು:** ಸಭೆಯೊಳುಣ್ಮೆ ಪೊಣ್ಮೆತ್ತು ಜಾಂಗು ಬೊಲ್ಲ ಶುಭ ಬೊಲ್ಲ ಪಮಾಂಗಳೆಕ ಬೊಲ್ಲಮೆಂಬೀ ರವಂ (ಜಗವಿ. ೦೦-೭೨); ಕರಿಗಮನೆಯರು ತಂದರು ರತ್ನ ಮಯ ಹೊನ್ನ ಹರಿವಾಣ ದುಂಬಿದಾರತಿಯ ತಿರುಹಿ ನಿವಾಳಿಸಿ ಜಾಂಗು ಬೊಲ್ಲೆಂದೆಂದು ಸಿರಿವೆತ್ತು ನಿಂದರಿಕ್ಕೆಲದಲಿ (ಮೋಹತ. ೨೨-೦೩). **ಜಾಗು₂:** "ಅರರೇ ಭಾಪುರೆ . . . ಜಾಗುಮಪ್ಪಾ ಧಣು ಧಿರುರೇ ಪುರೆಯನೆ ಕೊಂಡಾಟಂ" (ಚತುವಿ. ೩೫); ಜಾಗು ಧಣು ಧಣು ಪೂತು ಕಾರ್ಮುಖ ಯೋಗಸಿದ್ಧನೆ (ಕುಪ್ಪಾಳ. ೦೫-೨೪); ಸೊಲ್ಲಿಸಿದರು ಜಾಗು ಬೊಲ್ಲು ತುಬ್ಬುವ ಕಂಬಲ್ಲ ತಳಿಗೆ ಗಾರ್ತಿಯರು (ಮೋಹತ. ೦೫-೩೭).

**ಚಾಗುಚಾಗು, ಜಾಗುಜಾಗು** (ದ್ವಿರುಕ್ತಿ): ತಾನೊಹಿಸಿಕೊಳೆ ಸದರ ಗಂಡನೆ ಚಾಗುಚಾ[ಪಾಠಂ. ಜಾಗುಜಾ]ಗೆನುತೆ (ಮದೀಪು. ೩-೫೫); ಸುಭಟ ರಹುದೋ ಜಾಗುಜಾಗೆನುತೊಲೆದನಾ ದ್ರೋಣ (ಕುಪ್ಪಾದ್ರೋ. ೨-೮೧); ಜಾಗುಜಾಗೆಂದಸುರ ಪ್ರಾತಿಯೊಳುಬ್ಬಿ ಘರ್ಜಿಸಿದ (ಅಂಬಿಕಾ. ೦೫-೨)

[ ←ತೆಲು. ಚಾಂಗು. / ಮರಾ. ಚಾಂಗ ]

**ಚಾಂಗೇರಿ** (ನಾ). ಒಂದು ಬಗೆಯ ಸೊಪ್ಪು; ಹುಲ್ಲುಹುಳಿಗನ ಸೊಪ್ಪು; ಪುಲ್ಲಂಪುರುಚಿ : (ಶ). [ ಸಂ. ಚಾಂಗೇರೀ ]

**ಚಾಂಚಲ್ಯ** (ನಾ). ಚಂಚಲತೆ ; ಅಸ್ಥಿರತೆ : ಕುದುರೆಗಳೆರಡೂ ಚಾಂಚಲ್ಯ ತೋರಿದವು (ಇಪ್ಪಳ. ೩೨೦). 'ಚಿತ್ತಚಾಂಚಲ್ಯ' ಪರಾ. [ ಸಂ. ]

**ಚಾಂಡಾಲ, ಚಾಂಡ್ಡಾಳ** (ನಾ). ಚಂಡಾಲ ; ಹೀನ : ಕರ್ಮಾಧಿಗತ ಚಾಂಡಾಲರಿವದಿರ ಮಾತುಗಳನೆಲೆ ನಂಬದಿರು ಭೂಪ (ಬಸಪು. ೫೬-೫೦); ಏಕಗೋತ್ರದ ಪುರುಷಸತಿಯರಜ್ಞಾನದಿಂದಾ ನೆರೆದಲ್ಲಿ ಪುಟ್ಟಿದಂ ಚಾಂಡಾಲನೈ (ಷೀಕೃಷ್ಣ. ೬-೨-೨೦). **ಚಾಂಡಾಳ :** ಇದನೆಳಿದಾತಂಗಕ್ಷಯ ನರಕಂ ನಿಜವಂಶಕ್ಷಯವಾತಂ ಧರಿತ್ರಿಯೊಳು ಚಾಣ್ಡಾಳ (ಸೌಇಇ. XX,೦೦೬-೫೦: 1188). [ಸಂ.]

**ಚಾಂಡಾಲಗಿತ್ತಿ** (ನಾ). ಹೊಲತಿ ; ಪಂಚಮಸ್ತ್ರೀ : ಕೀಳು ವರ್ಗದ ಹೆಂಗುಸು : ಕಂಡಕಂಡವರ ಹಿಂದೆ ಹರಿವ ಚಾಂಡಾಲಗಿತ್ತಿಯಂತೆ (ಗಜಕಾ. ೨೪೯-೧). [ ಚಾಂಡಾಲ + – ಗಿತ್ತಿ ]

**ಚಾಂಡಾಲತ್ವ** (ನಾ). ಹೊಲೆತನ; ಪಂಚಮ ವರ್ಗಕ್ಕೆ ಸೇರಿರುವಿಕೆ : ಉತ್ತಮದ ರವಿಕುಲದೊಳುದಿಸಿ ಚಾಂಡಾಲತ್ವವೆತ್ತ ಸತಿಯರ್ಗೆಳಿಸಿ ಘೋರ ನರಕಾಳಿಗನಿಮಿತ್ತ ಹೋಹವನಲ್ಲ (ಹರಿಕಾ. ೮-೨೫). [ ಸಂ. ]

**ಚಾಂಡಾಲಪತಿ**(ನಾ). ಹೊಲೆಯರ ಪ್ರಮುಖ ; ಪಂಚಮರ ಮುಖ್ಯಸ್ಥ : ಚಾಂಡಾಲಪತಿಯ ಮನಮೆರ್ದೆಗೊಂಡು ಮನಃಪದ್ಮ ಮುಕುಳವಂ ಸವಿವಳಿಯಂ ಕಂಡೊಡೆ ಮುನಿವಾ ನರರುಂ ಪೆಂಡಿರುದಾರತೆಗದೇಕೆ ಮುನಿವರೋ ದೇವಿ (ಶಾಂತಿಪು. ೯-೦೯೪). [ ಚಾಂಡಾಲ + ಪತಿ₂ ]

**ಚಾಂಡಾಲಿಕೆ** (ನಾ). ಕೀಳುದರ್ಜೆಯ ಒಂದು ಬಗೆಯ ವಾದ್ಯ.

[ ಸಂ. ಚಾಂಡಾಲಿಕಾ ]

**ಚಾಂಡಾಳ** 'ಚಾಂಡಾಲ' ನೋ.

**ಚಾಂಡಾಳಿಸು** (ಕ್ರಿ). ಚಂಡಾಲನಂತೆ ವರ್ತಿಸು : ಮದ್ಯಮಂ ಕುಡಿಕುಡಿದು ಮರುತಹತಿಯಿಂದ ಚಾಂಡಾಳಿಸುವ ಚಿತ್ರೆಯರನರಸ ನೋಡುತ ಬಂದನು (ಹರಿಕಾ. ಪರಿ. ೪-೫೫). [ ಚಾಂಡಾಳ ( = ಚಾಂಡಾಲ) + – ಇಸು₃ ]

**ಚಾಂತ** (ನಾ). ಚಕಾರವನ್ನು ಕೊನೆಯಲ್ಲಿ ಉಳ್ಳ ಶಬ್ದ : (ಶ).

[ ಚ + ಅಂತ₂ ]

**ಚಾಂತಿ** 'ಸಾಂತಿ' ನೋ.

**ಚಾಂದಣೆ, ಚಾಂದನಿ** (ನಾ). ಮೇಲ್ಕಟ್ಟು ; ವಿತಾನ ; ಛತ್ತು: ವಿಧವಿಧದ ಪಾಸಿ ಚಾಂದಣೆಗಳಂ ಕಟ್ಟಿ (ಕೃಷ್ಣವಿ. ೨-೯೦); ಹಡಗಿನ ಮೇಲ್ಗಡೆ ಚಾಂದಣೆ ಯನ್ನು ಕಟ್ಟದ್ವಿತಾದ ಕಾರಣ ಹಡಗಿನೊಳಗಿದ್ದ ಪ್ರಯಾಣಿಕರಿಗೆ ಯಾವುದೂ ಗೊತ್ತಾಗುತ್ತಿರಲಿಲ್ಲ (ಕಪಾಕುಂ. ೩). **ಚಾಂದನಿ :** (ಶ).

[ ←ಮರಾ. ಚಾಂದಣೀ : ಹಿಂ. ಚಾಂದನೀ ]

**ಚಾಂದನಿ** 'ಚಾಂದಣೆ' ನೋ.

**ಚಾಂದಸ, ಚಾನಸ, ಛಾನಸ** (ಗು). ೧. ಸಂಪ್ರದಾಯನಿಷ್ಠ. (ನಾ). ೨. ವೇದಾಧ್ಯಯನ ಮಾಡಿದವನು; ವೈದಿಕ: ಧ ಕಾರಕ್ಕೆ ಚಕಾರಂ–ಛವಿ–ಚವಿ . . . ಛಾಂದಸ – ಚಾಂದಸ (ಶಮದ. ೨೫೫ ಪ್ರಯೋ). ೩. ಮಂದಮತಿ ; ದಡ್ಡ : ವರರತ್ನಘೋಷನ ಪರಿಯಲ್ಲ ವಿದ್ಯಾಸಾಗರನಾದ ವ್ಯಾಳಿಯಂತಲ್ಲಾ ಪರಮಚಾಂದಸನಾದತು (ಭೃರಸೂ. ೩೨೭). **ಚಾನಸ:** ೪. ಎಚ್ಚರವಿಲ್ಲದಿರುವಿಕೆ; ಅಜಾಗರೂಕತೆ: ಹುಲಿಯು ದುಷ್ಟಮೃಗ ವೆಂದು ತಿಳಿದಿದ್ದರೂ . . . ಚಾನಸದಿಂದ ಹುಲಿಯ ಬೋನಿಗೆ ಬಿದ್ದಿರುವ ಬಾಗಿಲ ಹಲಗೆಯನ್ನು . . . ಎತ್ತಿದನು (ಕಥಾಮಂ. IV, ೮೪). **ಛಾನಸ :** ೧. ಸ್ವಲ್ಪ ಛಾನಸ ಸ್ವಭಾವದ ಪದ್ದಕ್ಕನಿಗೆ ದೇವರು ದಿಂಡರ ಕೆಲಸಗಳನ್ನು ಎರಡನೆಯವರು ಮಾಡಿದರೆ ಎಷ್ಟೂ ಒಗ್ಗುತ್ತಿರಲಿಲ್ಲ (ಸಾವಿಅ. ೬೩). ೩. ಉರಿದುವೀ ನಿಮ್ಮಯ ತಪೋಜಪ ಧ್ಯಾನಂಗಳೆರವದೇಂ ಛಾನಸಮದೊರ್ವ ಮಾಯಾವಿ ನಿಮ್ಮ ರಿಸಿಯರನೊಲಿಸಿಕೊಂಡೊಯ್ದಪಂ ಬಿಡಿಸಿಕೊಳಿ ಮೇಳಂದೊಡಿಲ್ಲರಂದು (ಚಂಪು. ೨೧-೨೩). 'ಛಾನಸತನ' ಪರಾ.

[ <ಸಂ. ಛಾಂದಸ ]

**ಚಾಂದಸಿಕೆ** (ನಾ). ತಡಮಾಡುವಿಕೆ; ಆಲಸ್ಯ; ಜಡತೆ: ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸಪಾಟಿಕೆಯಿಂದ ಪಾಡಿದರು (ಭರತ. ೫-೫೪). 'ಛಾಂದಸಿಕೆ' ಪರಾ.

[ ಚಾಂದಸ + – ಇಕೆ ]

**ಚಾಂದ್ರ** (ಗು). ೧. ಚಂದ್ರನಿಗೆ ಸಂಬಂಧಿಸಿದ. (ನಾ). ೨. ಮೃಗಶಿರಾ ನಕ್ಷತ್ರ. [ ಸಂ. ]

**ಚಾಂದ್ರಜ್ಞಾನಿ** (ನಾ). ಚಂದ್ರಮಂಡಲವನ್ನು ಕುರಿತು ವಿಶೇಷ ಜ್ಞಾನ ವುಳ್ಳವನು : ಚಂದ್ರಮಂಡಲದ ವಿಷಯದಲ್ಲಿ ವಿಶೇಷಜ್ಞಾನವುಳ್ಳ ಜ್ಯೋತಿರ್ವಿಜ್ಞಾನಿ ಅಥವಾ ನಾವಿಕ : ಚಾಂದ್ರಜ್ಞಾನಿ (Lunarian. ಇಂಕನಿ).

[ ಸಂ. ಚಾಂದ್ರಜ್ಞಾನಿನ್ ]

**ಚಾಂದ್ರಪ್ರಭ** (ಗು). [ಜೈನ]ಚಂದ್ರಪ್ರಭನೆಂಬ ತೀರ್ಥಂಕರನಿಗೆ ಸಂಬಂಧಿಸಿದ : ಕಣ್ಗಿಂಬಾದ ಚಾಂದ್ರಪ್ರಭಂ ರೂಪಂ . . . ಎಮ್ಮೊಳ್ ಮಾಟ್ಕೆ ನೈರ್ಮಲ್ಯಮಂ (ಚಂದ್ರಪ್ರ. ೦-೧). [ ಸಂ. ]

**ಚಾಂದ್ರಮಸ** (ಗು) .=ಚಾಂದ್ರ. [ ಸಂ. ]

**ಚಾಂದ್ರಮಸಾಯನ** (ನಾ). ಚಂದ್ರನ ಮಗ; ಬುಧ: "ರೌಹಿಣೇಯಃ, ಬುಧಃ, ಸೌಮ್ಯಃ, ಚಾಂದ್ರಮಸಾಯನಃ – ಈ ೪ ಬುಧನ ಪೆಸರ್" (ಹಲಾಯು. ೯-೪೬). [ ಸಂ. ]

**ಚಾಂದ್ರಮಾನ** (ನಾ). ಚಂದ್ರನ ಗತಿಯನ್ನು ಅನುಸರಿಸಿ ಕಾಲವನ್ನು ಗಣಿ ಸುವ ಕ್ರಮ : ಚಂದ್ರನ ಗತಿಯ ಸಂಬಂಧದಿಂದ ಎಣಿಸಲ್ಪಡುವ ಪಕ್ಷ, ಮಾಸ, ವರ್ಷಗಳ ಮಾನವು ಚಾಂದ್ರಮಾನವೆಂದೆನಿಸಿಕೊಳ್ಳುತ್ತದೆ (ಮುಂಬಯಿ. ೬-೭೮); ಚಾಂದ್ರಮಾನದ ಮಧ್ಯಾಹ್ನದಲ್ಲಿ, ಚಂದ್ರನ ಭಾಗ ಸೂರ್ಯಾಭಿಮುಖವಾಗಿರುವುದರಿಂದ ಅದು ಕುದಿಯುವ ನೀರಿನಷ್ಟು ಕಾವುಳ್ಳದ್ದಾಗಿರುತ್ತದೆ (ಅಕಾಶ. ೩೯). [ ಸಂ. ]

**ಚಾಂದ್ರಮಾಸ** (ನಾ). ಚಾಂದ್ರಮಾನ ಕ್ರಮದಲ್ಲಿರುವ ಚೈತ್ರ, ವೈಶಾಖ ಮೊದಲಾದ ತಿಂಗಳು : ಈ ರೀತಿಯಾದ ಪರಿಕ್ರಮಣವೇ . . . ಆತನ ಕಲೆಗಳಿಗೆ ಕಾರಣವಾಗಿ, ಅವುಗಳಿಂದ ಚಾಂದ್ರಮಾಸವು ನಿರ್ಧಾರಿತವಾಗಿರುವುದು (ಜ್ಯೋತಿರ್ವಿ. ೨೦೩). [ ಚಾಂದ್ರ + ಮಾಸ₂ ]

**ಚಾಂದ್ರಾಯಣ** (ನಾ). ೧. ಚಂದ್ರನ ಗತಿ,-ಚಲನೆ ; ಚಂದ್ರನು ಕ್ಷಯಿಸುವುದು ಮತ್ತು ವೃದ್ಧಿಯಾಗುವುದು. ೨. ಚಂದ್ರನ ವೃದ್ಧಿ ಕ್ಷಯಗಳಿಗನುಸಾರವಾಗಿ ತಮ್ಮ ಆಹಾರವನ್ನು ಒಂದು ತುತ್ತಿನಿಂದ ಆರಂಭಿಸಿ, ದಿನಕ್ಕೆ ಒಂದೊಂದೇ ತುತ್ತು ಹೆಚ್ಚಿಸುತ್ತ ಆಮೇಲೆ ಕ್ರಮೇಣ ಒಂದೊಂದೇ ತುತ್ತು ಕಡಮೆ ಮಾಡುತ್ತಾ ಬರುವ ಒಂದು ವ್ರತ : ಪ್ರಿಯಕಾರಿಣಿಯುಂ . . . ಚಾಂದ್ರಾಯಣಮಂ ನೋಂತು (ಶಾಂತಿಪು. ೯-೧೧೪) ; ಅನುದಿನಂ ಭುಂಜಿಸಿದ ಶವದ ಶಿರದಕ್ಕಿಯಲ್ಲನಮೇಯ ಚಾಂದ್ರಾಯಣಂ (ಹಕಶಾ. ೧೪-೭); ಅತಿಕೃಚ್ಛ್ರ ಚಾಂದ್ರಾಯಣ ಸಾಂತಪನಾದಿ ವ್ರತನಿಯಮದ ಪವಣಲ್ಲ (ಹದಿಬ. ೨-೦೩). ೧, ೨: ನೆಲೆಮಾಡದೊಳೆಡೆಯಾಡುವ ಕಲಹಂಸಾಲಸ ವಿಳಾಸವತಿಯರ ಮುಖಮಂಡಲಕೆ ಸರಿಯಾಗಲಾಜಿದೆ ಸಲೆ ಮಾಟ್ಟಂ ಚಂದ್ರನಿಂತು ಚಾಂದ್ರಾಯಣಮಂ (ಯಶೋಚ. ೦-೩೦). [ ಸಂ. ]

**ಚಾಂದ್ರಿ** (ನಾ). ಬುಧಗ್ರಹ: ಚಾಂದ್ರಿ ನೋಡೆ ಯಮಳ ಸ್ತ್ರೀಜನ್ಮಂ (ಜಾತಕತಿ. ೩-೦೩). [ ಸಂ. ]

**ಚಾಂಪೇಯ** (ನಾ). ೧. ಸಂಪಿಗೆ ; ಚಂಪಕ : ಧರೆಗೆಲ್ಲಂ ಸೊಗಸಂಬಳಿಕ್ಕೊದವಿ ಚಾಂಪೇಯಮೋರಂತೆ ಷಟ್ಚರಣಂಗಳ್ಗೆಯಮಥ್ಯಮಾದ ತೆಱದಿಂ (ಶ್ರೀಸೋಚ. ೭೩) ; ವಿಲಸಿತ ಚಾಂಪೇಯದ ಮೊಗ್ಗೆ ತುದಿಯೊಳು ನೆಲಸಿದ ತುಹಿನಾಂಬುವೆನಲು (ಜ್ಞಾನಚ. ೩-೭೦). ೨. ನಾಗಸಂಪಿಗೆ ; ನಾಗಕೇಸರ. ೩. ಚಿನ್ನ ; ಬಂಗಾರ. ೪. ಚಂಪಾದೇಶದ ರಾಜಪುತ್ರ ; ಕರ್ಣ : ಬಾಳ್ದ ವಸ್ತುಗಳೆಲ್ಲ ದಾನಕೆ ಸರಿಯು ಸರಿಮಾಡಿ ಕೀರ್ತಿಗೆ ಕೊಟ್ಟಮಲಕೀರ್ತಿಯೊಳಾಳ್ದ ಧರ್ಮೋದ್ಯೋಗದಲಿ ಕೃತ ಚಾಳ್ದನೀ ಚಾಂಪೇಯಗೆಣೆಯಾರೆಂದಳಿಂದುಮುಖಿ (ಜನಭಾ. ೦೯-೩೧). [ ಸಂ. ]

**ಚಾಂವ** 'ಚಾವು' ನೋ.

**ಚಾಂವಯ್ಯ** (ನಾ). ಒಬ್ಬಾತನ ಹೆಸರು: ಜಟಾಸಿಂ[ಗ]ನಂದಿ ಆಚಾರ್ಯ್ಯರ ಪದವ ಚಾ[ಂ]ವಯ್ಯಂ ಮಾಡಿಸಿದೋಂ(ಕಇಇ. ೭೨-೭-೨; ಸು. 10ನೆಯ ಶತ). [ ಚಾಂವ (< ಚಾವು) + ಅಯ್ಯ₁ ]

**ಚಾಕ** (ಗು). ೧. ಅಚ್ಚುಕಟ್ಟಾದ; ಚೊಕ್ಕಟ ; ಚೊಕ್ಕ: (+). (ನಾ). ೨. ಚೊಕ್ಕತನವುಳ್ಳವನು : ಈ ಕಾಯಕ್ಕೆ ಬಂದವರ ಸಾಕುವೆನೆಂಬೊ ಮಹ ವ್ಯಾಕುಲದಲ್ಲಿ ತಿರುಗಿ ಚಾಕಾನಾಗದೆ ಪೋದೆ (ಪೋಶ್ಯದೀ. ೫೪-೦). [ ←ಮರಾ. ಚಾಕ್ ]

**ಚಾಕಗೌಡ** (ನಾ). ಒಬ್ಬಾತನ ಹೆಸರು: ಚಾಕಗೌಡ ಮಾಳಗವು[ಡ] ನಿಲಿಸಿದ (ಎಕ. VIII, ಸೊರಬ. ೭೨-೭; 1034 ?). [ಚಾಕ₁+ಗೌಡ (<ಗಾವುಂಡ)]

**ಚಾಕಚಕ್ಯ** (ನಾ). ೧. ಲಗುಬಗೆ ; ವೇಗ; ತ್ವರೆ : ಹಣ್ಣು . . . ಅತಿ ಮುಂದಾಗಿ ಚಾಕಚಕ್ಯದಿಂದ ನುಗ್ಗಬಾರದು (ಹಣ್ಣಿಬಾ. ೬೩); ಈ ಕೆಲಸವನ್ನು ಚಾಕಚಕ್ಯದಿಂದ ನೆರವೇರಿಸಿದ ಹೆಂಡತಿಯ ಬಗ್ಗೆಯೂ ಅವರಲ್ಲಿ ಅಸಮಾಧಾನ ಮೂಡಿತು (ಚವಂ. ೫೭). ೨. ಜಾಣ್ಮೆ ; ಚಾತುರ್ಯ ; ಕೌಶಲ: ಲೋಕನಾಯಕ ಶಿಕ್ಷೆ ರಕ್ಷೆಯ ಚಾಕಚಕ್ಯದೊಳಾರು ನೀನುಳಿದೇಕೆ ಸರಿವಿಡಿದಿರ್ಪೆ (ರಾಮಾಸಂ. ೦-೩-೦೮) ; ಅವಳು . . . ಅತ್ಯದ್ಭುತವಾದ ಚಾಕಚಕ್ಯದೊಡನೆ ಅಭಿನಯಿಸಲಾಗಿ, ಸಭೆಯಲ್ಲೆಲ್ಲೆಲ್ಲಿಯೂ ಭೇಷ್ ಭೇಷ್ ಎಂಬ ಜಯಜಯಕಾರವು ಹುಟ್ಟಲು (ಮೊಗ್ಗು. ೫೦); ಎದುರಾಳಿಗಳನ್ನು . . . ದುಡುಮ್ಮನೆ ಪರಾಜಯಗೊಳಿಸುವ ಒಂದು ನೂತನ ಚಾಕಚಕ್ಯವಿದೆ ಅವರಲ್ಲಿ (ರಾಜಪ. ೮೧). [ ಸಂ. ]

**ಚಾಕಚಕ್ಯತೆ** (ನಾ). ಚಾತುರ್ಯ ; ಚಾಲಾಕು : ಸಹೋದರರನ್ನು ಚಾಕ/ಚಕ್ಯತೆಯಿಂದ ಮೂಲೆಗೊತ್ತಿಸಿ . . . ಔರಂಗಜೇಬ್ ಅಟ್ಟಹಾಸ ಮಾಡುತ್ತಿರುವ ಪರ್ವಕಾಲ (ದುರಂನಾ. ೩) ; ಉಡುಪಿನೊಳಗೆ ಬಹಳ ಚಾಕಚಕ್ಯತೆಯಿಂದ ಸೇರಿಸಿದ್ದ ವಜ್ರ, ನೀಲ . . . ನವರತ್ನಗಳು ಹೊರಬಿದ್ದುವು (ಕ್ರಪಾಇ. II.೧೦); ನಾಲ್ಕುಜನರಿಗೆ ಹೊಂದಿಕೊಂಡು ಸರಿಯಾಗಿ ನಡೆಯುವ ಚಾಕಚಕ್ಯತೆಯೂ ಇತ್ತು (ಕುರುಕ್ಷ. ೮೪). [ ಚಾಕಚಕ್ಯ + – ತೆ₂ ]

**ಚಾಕಣ** 'ಚಕ್ಕಣ' ನೋ.

**ಚಾಕರ** (ನಾ). ಆಳು; ಸೇವಕ; ನೌಕರ: ಅವಗೆ ಚಾಕರರಾಗಿ ನಾವಿರ್ದಿವನು ಭಾವಿಸಬಾರದು (ಜನಭಾ. ೯೭-೧೦) ; ಒಡೆಯನಂತೆ ಚಾಕರ (ಮುಂಬಯಿ. ೯-೩೩) ; ಇವನಂತಿರುವ ಚಾಕರನು ದೇವರ ದಯದಿಂದಲೇ ನಮಗೆ ದೊರಕಿದನು (ವಾಗ್ಭೂಷಿ. ೨). [ ← ಪಾರ. ಹಿಂ. ಮರಾ. ಚಾಕರ್ ]

**ಚಾಕರವಾನ** 'ಚಾಕರಿವಾನ' ನೋ.

**ಚಾಕರಿ** (ನಾ). ಊಳಿಗ ; ಸೇವೆ ; ನೌಕರಿ : ಚಾಕರಿಯ ಮಾಡಿದರೆ ಆಚೀಚೆಲಾಡುವರು (ಪುರಂದ. ೧-೦೪೮-೩) ; ತುರಗದ ಚಾಕರಿಯೊಳಿರು ಪವನಿಗೆ ತರುಣಿಯ ಭೋಗವು ಬೇಕೆ (ವಾದಿಕೀ. ೭೭-೦೦) ; ತಂತಮ್ಮ ಚಾಕರಿಯನ್ನು ಮಾಡಿದ ನೃಪಗೆ ತಾವು ಚಾಕರಿಯ ಮಾಡಿದರು (ಜನಕ. ೯); ಕೆಲವರು ಚಾಕರಿ ಇಲ್ಲದೆ ದಿನಗೂಲಿ ಮಾಡಿ ಹೊಟ್ಟೆ ತುಂಬಿಕೊಳ್ಳುವರು (ಮುಂಬಯಿ. ೯-೦೩೮); ಸರ್ಕಾರದ ಚಾಕರಿಯನ್ನು ಸಂಪಾದಿಸಿಕೊಳ್ಳುವುದಕ್ಕೆ . . . ಹೋದರು (ದೇವೀಜೀ. ೩೩) ; ನೃತ್ಯದ ಚಾಕರಿಯನ್ನು ಅವಳು ಈಗ ಬಿಟ್ಟುಬಿಟ್ಟರುವುದಾಗಿಯೂ . . . ಸರಕಾರಕ್ಕೆ ಅರ್ಜಿ ಕೊಡಲು ಸೂಚಿಸಿದರು (ಗಂಗಾಸಾ. ೧೭). [ ←ಪಾರ. ಹಿಂ. ಮರಾ. ಚಾಕರೀ ]

**ಚಾಕರಿದಾರ** (ನಾ).=ಚಾಕರ : ನಾನಂತೂ ಚಾಕರಿದಾರ ; ಕೇಳಲೀಬೇಕು (ನಮ್ಮಳ್ಳಿ. ೩೦). [ ಚಾಕರಿ + – ದಾರ₁ ]

**ಚಾಕರಿವಾನ, ಚಾಕರವಾನ** (ನಾ).=ಚಾಕರ : ಚಕ್ರವರ್ತಿಯಿಂದ ಚಾಕರಿವಾನನವರೆಗೆ ಎಲ್ಲರ ಮನೆಯ ವೃತ್ತಾಂತಗಳೂ . . . ಪ್ರತ್ಯಕ್ಷವಾಗಿ ಬಿಡುತ್ತವೆ (ಶ್ರೀಕಥ. ೭೭). **ಚಾಕರವಾನ** : ಖಾವಂದರಾದವರು ತಾವೆ ಯಿದಕ್ಕೆ ಸಾಹಸ ಮಾಡಿದರೆ ಚನ್ನವಲ್ಲದೆ ನಮ್ಮಂಥಾ ಚಾಕರವಾನರು ಮಾಡುವ ಕೆಲಸವಲ್ಲಾ (ಕೃದರ. ೭೩). [ <ಚಾಕರಿ ]

**ಚಾಕಲೆಟ್** 'ಚಾಕಲೇಟು' ನೋ.

**ಚಾಕಲೇಟು, ಚಾಕಲೆಟ್, ಚಾಕ್ಲೇಟ್** (ನಾ). ಕೋಕೋ ಬೀಜದ ಹಿಟ್ಟನ್ನು ಕಲಸಿ ಮಾಡುವ ಒಂದು ಬಗೆಯ ಸಿಹಿಯಾದ ತಿಂಡಿಯ ಬಿಲ್ಲೆ : ಚಾಕಲೇಟು ಬಹಳ ತಿನ್ನಲಿಕ್ಕೆ ಕೊಡಬೇಡಿರಿ (ಕುರಿಹಿಂ. ೦೩೨). **ಚಾಕಲೆಟ್** : ಇಂಗ್ಲೀಷ್ ಕೇಕ್, ಚಾಕಲೆಟ್ ಮುಂತಾದ ಅನೇಕ ಬಗೆಯ ತಿಂಡಿಗಳೂ . . . ಇಡಲ್ಪಟ್ಟವೆ (ಕ್ರಪಾಶಿ. ೦). **ಚಾಕ್ಲೇಟ್** : ಅವರಿಗೆಲ್ಲ ರಾಯರು ಈವರೆಗೆ ಅದೆಷ್ಟು ಚಾಕ್ಲೇಟ್, ಪೆಪ್ಪರಮಿಂಟ್ . . . ಕೊಟ್ಟಿದ್ದಾರೋ (ಕಂಬಹು. ೦೨೦). [ ←ಇಂ. Chocolate ]

**ಚಾಕಿ** (ನಾ). ಮೊಟ್ಟೆಯೊಡೆದು ಆಗ ತಾನೆ ಹೊರಬಂದ ರೇಷ್ಮೆ ಹುಳುವಿನ ಮರಿ.

**ಚಾಕಿಕಟ್ಟು** = ಮೊಟ್ಟೆಯಿಂದ ಆಗತಾನೆ ಬಂದ ರೇಷ್ಮೆ ಹುಳುವಿನ ಮರಿಗೆ (ಆಹಾರದ) ಸೊಪ್ಪು ಹಾಕು: ಚಾಕಿಕಟ್ಟುವುದಕ್ಕೆ ಹಿಪ್ಪೆನೇರಳೆ ಸೊಪ್ಪನ್ನು ಸಣ್ಣಗೆ ಕತ್ತರಿಸಿಟ್ಟುಕೊಳ್ಳಬೇಕು (ರೂಢಿ). [ ? ]

**ಚಾಕು** (ನಾ). ಕೊಯ್ಯುವ ಸಾಧನ ; ಚಿಕ್ಕ ಚೂರಿ : ಒಂದು ಹರಿತವಾದ ಚಾಕುವಿನಿಂದ ಕೀವನ್ನು ಹೊರಗೆ ತೆಗೆದು ಹಾಕಬೇಕು (ಗ್ರಾಮಾಳ. ೦೯೯) ; ಊಹಾಪೋಹಗಳು ತಮ್ಮ ಸರ್ಜರಿ ಚಾಕುಗಳಿಂದ ನನ್ನನ್ನು . . . ಕತ್ತರಿಸಿದುವು (ಎಮುಳ. ೬೩). [ ←ಪಾರ. ಹಿಂ. ಮರಾ. ಚಾಕೂ ]

**ಚಾಕುಸು** (ನಾ). ಒಂದು ಬಗೆಯ ಸಸ್ಯ ; ಆವರಕ . ತಂಗಡಿ; "ಆಹುಲೀ" (ಶಂಡಿಕ). [ ? ]

**ಚಾತ್ರಿಕ** (ನಾ). ೧. ಮೇಳದವರೊಡನೆ ಗಾಯನ ಮಾಡಿ ರಾಜನನ್ನು ಹೊಗಳುವವನು. ೨. "ಕಾಲವನ್ನು ತಿಳಿಸುವವರು" (ಅಮರ. ೬೬೪). [ ಸಂ. ]

**ಚಾಕ್ಲೇಟ್** 'ಚಾಕಲೇಟು' ನೋ.

**ಚಾಕ್ಷುಷ** (ಗು). ೧. ಕಣ್ಣಿಗೆ ಸಂಬಂಧಪಟ್ಟ. (ನಾ). ೨. ಕಣ್ಣಿಗೆ ಕಾಣುವಂತಹುದು : ಅಕ್ಕರಂ . . . ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ ಪುರಾತನ ಮತದಿಂ (ಶಮದ. ೩) ; ಕೆಲವು ಚಾಕ್ಷುಷಂಗಳ್ ಕೆಲವು ಅಚಾಕ್ಷುಷಂಗಳಪ್ಪುವು (ಶಶ್ಯ, ಶ್ರ. ೨೪೬). ೩. ಹದಿನಾಲ್ಕು ಮನುಗಳಲ್ಲಿ ಒಬ್ಬ. [ ಸಂ. ]

**ಚಾಕ್ಷುಷಪ್ರತ್ಯಕ್ಷ** (ನಾ). ಸ್ವತಃ ಕಣ್ಣಿಂದ ನೋಡಿ ತಿಳಿಯತಕ್ಕದು : ಈ ವಸ್ತು ಕರಿದಿದು ಬಿಳಿದು ಎಂಬಿವು ಮೊದಲಾಗಿ ಪುಟ್ಟುವ ತಿಳಿವು ಚಾಕ್ಷುಷ ಪ್ರತ್ಯಕ್ಷಮೆನಿಪುದು (ಚಳಿಲ. ೩). [ ಚಾಕ್ಷುಷ + ಪ್ರತ್ಯಕ್ಷ ]

**ಚಾಕ್ಷುಷಿ** (ನಾ). [ವೀಶೈ] ಸಾಧಾರ ದೀಕ್ಷೆಯ ಐದು ಪ್ರಕಾರಗಳಲ್ಲಿ ಒಂದು ; ನೋಟದ ಮೂಲಕ ಕೊಡುವ ದೀಕ್ಷೆ : ಗುರು ತನ್ನ ನಯನವಂ ಮುಚ್ಚಿ ಶಿಷ್ಯನ ನೋಡಿಯಱಿದುಮಾಹ್ವಾನಮಂ ಮಾಡಿ ಮೋಕ್ಷವನೀವುದರರೆ ಚಾಕ್ಷುಷಿ (ವೀಶೈಪು. ೬-೬-೬೩); ವರದೇಶಿಕೇಂದ್ರನುರು ವಾಸುಭಕ್ತನಂ . . . ಕರ ಚೆಲ್ವ ದಿಟ್ಟಿ ಪೂರೆಯೇರೆ ನೋಡಲಾ ದುರಿತಾರಿ ದೀಕ್ಷೆಯಿರದಾಯ್ತು ಚಾಕ್ಷುಷೀ (ಚಾರಾಸ್ತ. ೪-೧೧-೪೩). [ಸಂ. ಚಾಕ್ಷುಷೀ]

**ಚಾಗ$_1$, ಜಾಗ$_1$** (ನಾ). ೧. ಹಸಿರು ಬಣ್ಣ ; ಮರಕತ ವರ್ಣ : ಚಾ[ಪಾಠಾಂ. ಜಾ]ಗದ ಬಲ್ಮಿಳಾದ ಪೊನಲಿಂ ಬೆಳೆದೊಪ್ಪುವ ನಾಳಿಕೇರದಿಂ (ಮಲ್ಲಿಪು.೨-೪೩). ಜಾಗ$_1$: ೧. "ಜಾಗಮೆಂದುಂ, ಪಸುರ್ಪೆಂದುಂ ಮರಕತ ವರ್ಣಂ" (ಶಬಮ. ೧೧-೨೦೯); ಜಾಗದ ನೆರವಡಲಗೆಗಳ ಜಾಗಂಗಳ ಪಸುರ್ಗಳಿಸೆಯೆ (ಆದಿಪು. ೪-೩೧); ಜಾಗದ ಪೊನಲ್ ಕೃತಕಾಚಳ ನಿರ್ಜರಾಂಬುವೆಂಬಿನಿತಱಿನಾದೆ ಕೊಟ್ಸಗಿಸಱಿಂ (ಪುಷ್ಪಪು. ೨-೪೦). ೨. ಪಚ್ಚೆ ಮಣಿ ; ಮರಕತ : ಜಾಗಂಗಳಿಸವ ಪಸುರ್ಪಳಿಗುಂ ಪ್ರಜ್ವಳಿಪ ಮಣಿ ಸ್ತಂಭದ ಕೆಂಬೆಳಗುಂ ಪಸರಿಪುವು ಸುರಶರಾಸವಶತಮಂ (ಚಂದ್ರಪು. ೬-೫೦).

**ಚಾಗ$_2$** (ನಾ). ತ್ಯಾಗ; ದಾನ: "ಚಾಗಂ ತ್ಯಾಗದೊಳಂ" (ಶಬ್ದಾನಿ. ೪೯) ; ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರ್ (ಪಂಪಭಾ. ೪-೨೯); ರವಿನಂದನ ನನ್ನಿ ಚಾಗ[ಪಾಠಾಂ. ಸತ್ಯ]ಮಣ್ಮೆಂಬನಿತರ್ಕಂ ನೀನೆ ಪೊತ್ತವೊದಲಿಗನಾದೈ (ಗದಾಯು.೫-೧೬); ಚಾಗದ ಪೆಂಪಿಂದಮ ಗಜ್ಜರಾಜನೆಸೆದಂ (ಎಕ. II, ೩೮೪-೦೯ ; ಸು. 1136). ಚಾಗಜಗಝಂಪ = ತ್ಯಾಗ ಗುಣದಲ್ಲಿ ಲೋಕಪ್ರಸಿದ್ಧನಾದವನು ; ಒಂದು ಬಿರುದು : ಚಟ್ಟಭೂಪಂಗೆ ನೆಟ್ಟನೆ ಕೊಟ್ಟಂ ಧರೆ ಮೆಚ್ಚಿ ಚಾಗ ಜಗಝಂಪಂ ರಘುಂಪಳಾಚಾರ್ಯಂ (ಎಕ. XIII, ೩೦೨-೧೮ : 1126). ಚಾಗವೆಡಂಗಿ = ತ್ಯಾಗಗುಣದ ವೈಭವವುಳ್ಳವಳು ; ಒಂದು ಬಿರುದು : ನೆಗಬ್ದ್ಳ್ ಜಗಕ್ಕೆ ವಿನಯಗುಣೈಕಾಸ್ಪದೆ ಸುಗ್ಗಿಯಬ್ಬೆ ತನಗೊಂದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ (ಕಾವ್ಯಾವ. ೦೬೦). [<ಸಂ. ತ್ಯಾಗ]

**ಚಾಗಂಗೆಯ್** (ಕ್ರಿ). ದಾನಮಾಡು : ಅಂತು ಚಾಗಂಗೆಯ್ದು ಜಗನ್ಮಂಗಳ ಗಂಗಾವಾರಿಯೊಳ್ . . . ಮಿಂದು (ಪಂಪಭಾ. ೯-೬೨೩); ಲೇಸಪ್ಪ ವಸ್ತುನಿಕರಮನೋಸರಿಸದೆ ಸೂಱೆಗೊಂಡು ಚಾಗಂಗೆಯ್ವಂ(ಧರ್ಮಾಮೃ. ೨-೩೩). [ ಚಾಗ$_2$ + ಕೆಯ್$_1$ ]

**ಚಾಗಗುಣ** (ನಾ). ದಾನಮಾಡುವ ಗುಣ; ದಾನಶೀಲತೆ: ಸುರಭೂರುಹ ಮುಮನಗ್ಗದ ಸುರಭಿಯುಮಂ ಚಾಗಗುಣದೊಳೆಮ್ಮರಸಂ ತ್ರಸ್ತಂ ಯಾದುಂವಂ (ಧರ್ಮಾಮೃ. ೪-೨೦೬). [ ಚಾಗ$_2$ + ಗುಣ ]

**ಚಾಗಟೆ** (ನಾ) ಒಂದು ಬಗೆಯ ಬಳ್ಳಿ : ಕುದುರೆಯ ರಿಕಾವು ಚಾಗಟೆಯ ಬಳ್ಳಿಯೊಂದಕ್ಕೆ ತೊಡಕಿಕೊಂಡಿತು (ಹುಂಚಾ. ೩). [ ? ]

**ಚಾಗವಟ್ಟೆ** (ನಾ). ಒಂದು ಬಗೆಯ ಕೇದಗೆ ; ಹುಚ್ಚುಕೇದಗೆ : ಹುಚ್ಚು ಕೇದಗೆ ಎಂದರೂ ಚಾಗವಟ್ಟೆ ಎಂದರೂ ಗಾಯದರಿ ಎಂದರೂ ಒಂದೇ ಪರ್ಯಾಯವು (ಕೃಷಿಪ್ರ. ೧೩೨). [ ? ]

**ಚಾಗವಿಕ್ಕು** (ಕ್ರಿ). ೧. ದಾನಮಾಡು ; ತ್ಯಾಗಮಾಡು. ೨. ಹೊರಚೆಲ್ಲು : ಮನದೊಳ್ತೀವಿರ್ದ ಮೋಹಾಮೃತರಸಮನೆ ಸರ್ವಾಂಗವುಂ ಚಾಗವಿಕ್ಕುತ್ತನಿಸಲ್ ಘರ್ಮಾಂಬು ತಳ್ತೊಪ್ಪಲು (ಕಾದಂಸಾ. ೫೨೩). [ಚಾಗ$_2$+ಇಕ್ಕು]

**ಚಾಗಿ** (ನಾ). ತ್ಯಾಗಗುಣವುಳ್ಳವನು ; ದಾನಿ ; ದಾನಶೀಲ ; ಕೊಡುಗೈಯಾತ : "ಚಾಗಿಯೆ ತಾಂ ತ್ಯಾಗಿ" (ಶಬ್ದಾನಿ. ೪೩) ; ನೊಳಂಬ್ಬದೊಡ್ಡರು ಇರ್ವ್ವರಿ ಚಾಗಿಗಳ್ ಮಹಾದೇವರ ದೇಗುಲಮಂ ಮಾಡಿಸಿ (ಸೌಇಇ. IX-1, ೧೭-೧೬ ; ೨ನೆಯ ಕಶ) : ಭಯಮಱಿಯದ ಕಲಿಯುಂ ಚಾಗಿಯುಮೆನಿಸದೆ . . . ಪಂದೆಯುಮಾಗಿ (ಪಂಪಭಾ. ೬-೭೩) ; ದೇವೋತ್ತಮ ನೀನೆ ಚಾಗಿವೆಸರಂ ಪಡೆದೈ (ಪಂಪಾಮಾ. ೫-೩) ; ಚಾಗಿಗಳ ನಡುವೆ ಕಡುಚಾಗಿ ಸಂಗನ ಬಸವ (ಬಸವ. ೯-೮೩) ; ಚೋಳಕುಲಕಮಲಬಾಲಾರ್ಕನೆನಿಪ ಚಾಗಿ ಕುವರನಿತ್ತು ರಕ್ಷಿಸನೆ (ಭಾವಚಿಂ. ೩-೩೨). [ < ಸಂ. ತ್ಯಾಗಿನ್ ]

**ಚಾಗಿಗುಣ** (ನಾ). ತ್ಯಾಗಮಾಡುವವನ ಗುಣ ; ದಾನಶೀಲತೆ : ಚಾಗಿಗುಣಂ ಧಾರಿಣಿಪತಿಗೋಗಡಿಸದೆ ವೈಶ್ಯಜಂಗೆ ಲುಬ್ಧಗುಣಂ . . . ಸಹಜಮಕ್ಕುಂ ಜಗದೊಳ್ (ಧರ್ಮಾಮೃ. ೦೩-೩೮). [ ಚಾಗಿ + ಗುಣ ]

**ಚಾಗಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಚಾಗಿಯಬ್ಬರಸಿಯು ಬೂತುಗನು ಬಿತ್ತುವಟ್ಟವು ಕೊಟ್ಟ (ಎಕ. XV, ಅರಸೀ. ೨೩೭-೦೭ : 971). [ ಚಾಗಿ$_0$ + ಅಬ್ಬೆ$_1$ ]

**ಚಾಗು** 'ಚಾಂಗು' ನೋ.

**ಚಾಗುರೆ, ಜಾಗುರೆ** (ನಾ). = ಚಾಂಗು : ಪೂತುರೇ . ಹನುಮಂತ ಚಾಗುರೇ ಪೂತು ಮರುತಜ (ತೊರಿರಾ. ೨೭-೩೯); ಕಾದಿ ಮಿಗಿಲಪ್ಪ ವರವಂ ಚಾಗುರೇ ಪಡೆದೆ (ವೀಶೈಪು. ೩-೧೮-೪೦); ಭಳಿರೆ ಚಾಗುರೆ ಚಾಗು ಸಹಸಿಗಳ್ಕೈವಾಳುಗಳನು ತೋರಲ್ಪಂದಿರೇ (ಕುರಂಗ. ೫೮-೦೩) . ಜಾಗುರೆ : ಜಾಗುರೆ ಜಾಗು ಭಲರೆ ನುತ್ತಿರ್ಪವರ್ಕೆಲಬರು (ಅರಾಕ. ೮-೩೦). ಜಾಗುಜಾಗುರೆ (ದ್ವಿರುಕ್ತಿ) : ಜಾಗುಜಾಗುರೆ ಕರ್ಣ (ಕುಮಾವ್ಯಾದ್ರೋ. ೦-೩೬). [ ? ]

**ಚಾಗೆ** 'ಚೀಗೆ' ನೋ.

**ಚಾಚಪುಟ** (ನಾ). [ಸಂಗೀತ] ತಾಳ ಕ್ರಮದಲ್ಲಿ ಒಂದು: ಸಮರಪ್ರಚಂಡಗೀತನ್ರು[ನೃ]ತ್ಯರತ ವಿತತಘನಶುಷಿರವಾದ್ಯಲಯ ಚಚ್ಚಪುಟ ಚಾಚಪುಟ ಪರಮೇಶ್ವರಮುಖಕಮಳ . . . ಬ್ರಹ್ಮವೀಣಾದಿ ಗೇಯ ಗಾಂಧರ್ಬ್ಬ[ರ್ವ] (ಶೂಲ್ಯಾಶಾ. ೨೨-೦೪ : 1257) ; ಎಸೆವೆರಡು ತಾಳಂಗೊಂಡು ಚಚ್ಚಪುಟವೆಂಬಿನಿಂ ಚಾಚು[ಚ]ಪುಟ . . . ಪ್ಲುತದಶಪ್ರಾಣವಱಿದೊತ್ತೆ (ಚೀರಮ. ೦೦-೩೩) ; ಚಚ್ಚಪುಟದ ಚಾಚು[ಚ]ಪುಟದ ಸಾಂಬಪ್ರಣಯ ಕೆಚ್ಚು ಕೀಲಣೆಗಳನಱಿದು . . . ಪಾಡಿದರು (ಭರತ. ೧೨-೮೩). 'ಚಚ್ಚಪುಟ' ಪರಾ. [ ಸಂ. ]

**ಚಾಚತ್ಪುಟ** (ನಾ). = ಚಾಚಪುಟ : ಬಳಿಕ ಧ್ರುವ . . . ಏಕವೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಂಚತ್ಪುಟ ಚಾಚತ್ಪುಟ . . . ಜಯಾಳವೆಂಬಿವು ಮೊದಲಾದ ನೂಱೆಂಟು ತಾಳಂಗಳುಂ (ವಿವೇಕ. ೨೩೮). [ ಸಂ. ]

**ಚಾಚರೆ** (ನಾ). ಮುಂದಕ್ಕೆ ಚಾಚಿಕೊಂಡಿರುವ ಬಂಡೆ,–ಕಲ್ಲು : ಬಾನ್ ಬಟ್ಟೆಯಲೆವ ಬರ್ದಿಲರಾ ಚಾಚರೆಯೋಳೆಗಳುಂ ಕುಳಿತಿರ್ದ ಶಿಖರಗಾತ್ರದ ಪರ್ದುಮಾದಿಯನಂ ಕಂಡು (ಶ್ರೀರಾಮಾ. ೩೩೩-೩೯). [ ಚಾಚು$_1$ + ಅರೆ$_2$ (<ಅಱೆ$_4$) ]

**ಚಾಚಾ** (ನಾ). ಚಿಕ್ಕಪ್ಪ ; ತಂದೆಯ ಸೋದರ : ನಿಮಾಯಿ ಚಾಚಾನ ಡೈರಿಯಲ್ಲಿ ಇದೇ ವ್ಯಕ್ತಿಯ ಹೆಸರು ಬರೆದಿದೆ (ಛಾರತಿ. ೫೨).
[ ←ಹಿಂ. ಚಚಾ, ಚಾಚಾ ]

**ಚಾಚಿ, ತಾಚಿ** (ನಾ). ಮಕ್ಕಳ ಭಾಷೆಯಲ್ಲಿ ತಾಯಿಯ ಮೊಲೆ : (ಸ). **ತಾಚಿ:** ತಾಚಿ ಹಾಲಿಗೆ ಒಗ್ಗಿದ ಮಗು ಮೇಲುಹಾಲನ್ನು ಕುಡಿಯುವುದಿಲ್ಲ (ರೂಢಿ). [ ದೇ.೩ ತಮಿ. ತೆಲು. ಚಾಚಿ. / ಹಿಂ. ಮರಾ. ಛಾತೀ ]

**ಚಾಚು$_1$** (ಕ್ರಿ). ೧. ಮುಂದೆ ನಡೆ,–ಸಾಗು,–ಸರಿ : ಪನ್ನಗಾಭರಣ ಶ್ರೀ ಮಲ್ಲಿಕಾರ್ಜುನ ಬಲ್ಲನೆನಲು ದಂಡಿಗೆ ಚಾಚಿತು (ಸಿದ್ಧರಾ. ೯–೮). ೨. ಮುಂದೆ ಒಡ್ಡು,–ಹಿಡಿ: ತಾಯಿಗಳು ಮೊಲೆಗಳನೊಡನೊಡನೆ ಕಱುಗಳಿಗೆ ಬಿಗೆ ಮೆಯ್ಯಡವಿ ಚಾಚಿಕೊಳುತ್ತಿರಲು (ಬಸವ. ೬೦–೩೬) ; ಕರಪಲ್ಲವವ ಚಾಚಿದಳು ಕಂಕಣ ಘಲ್ಲುಘಲಿರೆನೆ (ನಳಚ. ೨–೩೩ ಪ) ; ನೃಪವರನಡಿಗೆ ನಿರ್ಮಲ ಕಿರೀಟಮಂ ಚಾಚುತಿರೆ (ಜೈಮಿಭಾ. ೭–೦೮). ೩. ಮುಂದೆ ತಳ್ಳು,–ನೂಕು : ಓಹಿಲದೇವನಂ ಪೊಱಮಡಿಸಿ ಕದವಂ ಚಾಚಲಾಗದು (ಓಹಿರ. ಹ. ೨೦೭–೮); ನಕುಲನುದಾರಕರ್ಣನ ಮುಟ್ಟ ಬಂದನು ಚಾಚಿದನು ರಥವ (ಕುಮಾವ್ಯಾ. ೪–೦೦) ; ಮೃತ್ಯುವಿನ ಗೋಸಾಳಿಯಲಿ ಚಾಚಿದನು ಚಾವಳ ಚಂದ್ರಹಾಸಕವ (ಕೂರಿರಾ. ೦–೮–೩೩). ೪. ನೀಡಂ; ವಿಸ್ತರಿಸು: ಭೃತ್ಯನ ಕಾವುದೆಂದರ್ಜುನನು ಹಣೆ ಚಾಚಿದನು ಹರಿಪದಕೆ (ಕುಮಾವ್ಯಾ. ೨–೪೪);ಹಾಸಿಗೆ ಇದ್ದಷ್ಟು ಕಾಲು ಚಾಚಬೇಕು (ಗಾದೆ). ೫. ಪಾರುಮಾಡು; ರಕ್ಷಿಸು : ಹಿಡಿದುದ ಬಿಡದಿದ್ದಡೆ ಕಡೆಗೆ ಚಾಚುವ ಅಲ್ಲದಿದ್ದಡೆ ನಡು ನೀರಲ್ಲದ್ದುವ (ಬಸವ. ೩೩೦). ೬. ಹೆಚ್ಚಾಗಿ ಒದಗಿಸು; ಧಾರಾಳವಾಗಿ ಹಾಕು: ಆ ಸಂತರ್ಪಣೆಯಲ್ಲಿ ಕೇಳಿ ಕೇಳಿದಷ್ಟು ಹೋಳಿಗೆ ಚಾಚುತ್ತ ಇದ್ದರು (ರೂಢಿ). [ ದೇ.೩ ತಮಿ. ಚಾಟು ; ತುಳು. ತೆಲು. ಚಾಚು ]

**ಚಾಚು$_2$** (ನಾ). ವಿಸ್ತಾರ ; ವ್ಯಾಪ್ತಿ ; ಹರವು : ಅವರ ಶಾರೀರಕ್ಕೆ ಬಹಳ ದೊಡ್ಡ ಚಾಚಿತ್ತು (ಸಂಗೀತ. ೨೬) ; ಭೂಮಿಯ ಉಬ್ಬು ಸೂರ್ಯನಿಗೂ ಆ ಚಾಚಿಗೂ ನಡುವೆ ಎದ್ದು . . . ನೆಲದ ಮೇಲೆ ನೆರಳಿನಾಟವಿರಲಿಲ್ಲ (ಖಳಜೀ. ೯೩). [ < ಚಾಚು$_1$ ]

**ಚಾಚುಬಂಕ** (ನಾ). ಮನೆಯ ಮುಂದೆ ಅಥವಾ ದೋಣಿ ಹಡಗು ಇತ್ಯಾದಿಗಳಲ್ಲಿ ವಿಸ್ತರಿಸಿದ ಸೂರುಳ್ಳ ಜಾಗ : ಒಂದು ನಿರ್ದಿಷ್ಟವಾದ ರೀತಿಯಲ್ಲಿ ಹಗ್ಗ ಮತ್ತು ಕೂವೆಮರಗಳು ಅಳವಟ್ಟಿರುವ ಹಡಗು ; ದೋಣಿಯಲ್ಲಿ ಹುಟ್ಟು ಆನಿಕೆಯನ್ನು ಹೊತ್ತಿರುವ ಕಬ್ಬಿಣದ ಚಾಚುಬಂಕ: ಇಂಥ ಬಂಕವಿರುವ ದೋಣಿ (Bigger. ಕಂಳನಿ). [ ಚಾಚು$_1$ + ಬಂಕ$_1$ ]

**ಚಾಚೂ** 'ಚೆಚು' ನೋ.

**ಚಾಜು** (ನಾ). ೧. ಸಂಪ್ರದಾಯವಾಗಿ ಬಂದುದು ; ಪರಂಪರೆಯಿಂದ ಬಂದುದು: ಜನಾಂಗದ ಪೀಳಿಗೆಗೆ ಚಾಜಾಗಿ ಉಳಿಯಲೆಂದು . . . ಹುಂರಿ ದುಂಬಿಸಿ ನಗುವಳು (ಅನ್ನಜಾ. ೫೨). ೨. ಬಳುವಳಿ: ಕುಂಬಾರ ಮನೆಯಾಗ ಹುಟ್ಟಿದಿ ಸೀಗಿ ಚರಗ ಬುಟ್ಟಿ ಚಾಜ ತಂದೆ (ಜಾನಪದ. ೦೩೯).
[ ? ]

**ಚಾಟ** (ನಾ). ಮೋಸಗಾರ ; ವಂಚಕ. 'ಚಾಟವಿದ್ಯೆ' ಪರಾ. [ ಸಂ. ]

**ಚಾಟಕ** (ನಾ). ೧. ಗಾರುಡಿವಿದ್ಯೆ ; ಅಭಿಚಾರ ; ಕಣ್ಣುಕಟ್ಟುವಿದ್ಯೆ : ನೋಟ ಲಕ್ಷಣ ಹೇಳ್ವ ಕೇಳ್ವ ಚಾಟಕದ ಯೋಗಲ್ಲ ರಾಜಾಯೋಗ ತಾನು (ಪ್ರಾಸಿಂ. ೦೮–೬೨) ; ಮಣಿಮಂತ್ರೌಷಧಂಗಳಂ ಬಲ್ಲಸಲ್ಲ ಚಾಟಕದ ವಿದ್ಯೆಯಂ ತೋರುವವನಲ್ಲ (ಮಲ್ಲಿಚ. ೩–೦೦). ೨. ಮಂತ್ರಗಾರ; ಯಕ್ಷಿಣಿಗಾರ : ಪಡಿಯ ಚಾಟಕನಲ್ಲ ಒಡನೆ ಬೂಟಕನಲ್ಲ ನಡುವೆ ಚಾಟಕನಲ್ಲ ಶೈವನಂತೆ (ಪ್ರಭುಲಾಕ. ೦೩೦–೫). 'ಚಾಟಕತನ' ಪರಾ. [ ಸಂ. ]

**ಚಾಟಕತನ** (ನಾ). ೧. ಮೋಸಗಾರಿಕೆ. ೨. ಮಾಯಾಜಾಲ : ಪಾಟಲಿಪೂಗಳ ಮಾಟಿಸಿ ಶಿಖಿಯೊಳು ಚಾಟಕತನದಲಿ ಕಾಟಕರತಿಭರದಿ . . . ನೋಡುತ (ಹಮಚ. ೦೮) ; ಊಟಕೆ ಬಂದವರಲ್ಲಾ ಬೀಗರು ಚಾಟಕತನದಲಿ ರಾಜಕುಮಾರಿಯ ಬ್ಯಾಟಕೆ ಮೆಚ್ಚಿ ಆತನ ಮದುವೆಯ ನೋಟಕೆ ಬಂದವರೇ (ಕರ್ನಾಳ. ೩೨೯). [ ಚಾಟಕ + – ತನ ]

**ಚಾಟಕ್ಕೈರ** (ನಾ). ಗಂಡುಗುಬ್ಬಿಮರಿ : "ಚಾಟಕ್ಕೈರವೆಂದರೆ ಗಂಡು ಗುಬ್ಬಚ್ಚೀ ಪಿಳ್ಳೆ" (ಸಿದ್ಧಾಂತಿ. ೦೩೯). [ ಸಂ. ]

**ಚಾಟಣಕ** ನಾ). ಒಂದು ಬಗೆಯ ಪಕ್ಷಿ : ಚಟಕ ಚಾಟಣಕ ಚಕ್ರವಾಕ ಕರಟಿ ಬಳಾಹಕ ಗೃಧ್ರ ಪಿಕ ಮಾರಕುಟಕ (ಮದಶಿಖ. ೫–೯). [ ? ]

**ಚಾಟವಿದ್ಯೆ** (ನಾ). ಮೋಸಮಾಡುವ ವಿದ್ಯೆ ; ಗಾರುಡೀ ವಿದ್ಯೆ ; ಕಣ್ಣುಕಟ್ಟು ವಿದ್ಯೆ : ತಾಂತ್ರಿಕರ ಚಾಟವಿದ್ಯೆಗಳಿಂದಲೂ, ವಿಷಪ್ರಯೋಗಗಳಿಂದಲೂ ನೀವು ಯಾವಾಗಲೂ ಜಾಗರೂಕರಾಗಿರಬೇಕು (ಕಳವಿ. I,೬೨೩).
[ ಚಾಟ + ವಿದ್ಯೆ ]

**ಚಾಟಿ$_1$, ಚಾವಟಿ, ಛಾಟಿ, ಛಾವಟಿ** (ನಾ). ೧. ಹುರಿಯನ್ನು ಅಥವಾ ಬಾರನ್ನು ಕಟ್ಟಿ ಮಾಡಿದ ಹೊಡೆಯುವ ಸಾಧನ ; ಬಾರುಕೋಲು ; ಕೊರಡೆ:ಮುಂದಣಂ ತೆಗೆದು ಕಟ್ಟಿದ ಬಲ್ಮಱಿಗಳ್ಗೆ ಚಾಟಿಯಂ ಪಿಡಿವ . . . ಸಂಭ್ರಮಕ್ಕೆ ನೆಲೆಯಾದನಪೂರ್ವದ ಬಾಹುಕಂ (ನಳಚಂ. ೬೩೦) ; ಚಾಟಿಯೊಳ್ ಬಡಿವುತುಂ ಸರಳ್ಗಳಂ ಪೊಸೆವುತುಂ . . . ಬಳಲಿಸುವರು (ಜಬಪು. ೫೬–೨೬) ; ಕರವಜ್ರಮುಷ್ಟಿಯನ್ನೊಲೆದು ವ್ರತತಿಯ ಕೊನರ ಚಾಟಿಯಂ ಕಳೆದು ಪೊಯ್ದು . . . ಸುಳಿಘಾಳಿ ಸುಳಿವುದಾ ನಂದನದೊಳು (ಚಿನಮು. ೪೮–೩೪). ೨. ಬುಗುರಿಯನ್ನು ಆಡುವುದಕ್ಕಾಗಿ ಉಪಯೋಗಿಸುವ ಹುರಿ,–ದಾರ : ಬುಗುರಿಯಾಡಿಸಲು ಚಾಟಿ ಅಗತ್ಯ (ರೂಢಿ). **ಚಾವಟಿ :** ೧. ಚಾವಟಿ ಹಿಡಿದು ಪಾರ್ಥನ ಸಾರಥಿಯಾಗಿದ್ದನು (ವಾಲ್ಮೀಕಿ. ೬೬) ; ಚಾವಟಿಯ ಏಟನಂತೆ ಕೇಳಿಸಿತು ಆ ಮಾತು ನನಗೆ ! (ಜಾಳರು. ೯೦) ; ಕೈಯಲ್ಲಿ ಚಾವಟಿಯನ್ನು ಹಿಡಿದು ತನ್ನ ಚಿಕ್ಕಪ್ಪನ ಕುರಿಯ ಮಂದೆಯನ್ನು ಕಾಯಬೇಕಾಗಿದ್ದಿತು(ಕೃಗಂಬ. ೭). **ಛಾಟಿ:** ೧. ಒಂದೇಟು ಕೊಡುವುದಕ್ಕಾಗಿ ಕುದುರೆಯ ಛಾಟಿಯನ್ನು ಮೇಲಕ್ಕೆತ್ತಿದೆ (ಪ್ರಶಾಪ. ೫೪) ; ಛಾಟಿ ಹೊಡೆತದ ಸದ್ದು ಛಾಟಿ ಹೊಡೆದ ನಂತರ . . . ಗಾಡಿ ಎಳೆಯುವ ಸದ್ದು (ಕೊನೆಳೀ. ೨೦). **ಛಾವಟಿ :** ೧. ಕಸ್ತೂರಿ ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಛಾವಟಿ ಏಟು ಬಿತ್ತು (ಬೆಂದಳೀ. ೭೮).

**ಚಾಟಿಯಿಲ್ಲದೆ ಬುಗುರಿ ಆಡಿಸು** = (ಅಲಂ) ಸಾಹಸಮಾಡು : ಅವನು ಚಾಟಿಯಿಲ್ಲದೆ ಬುಗುರಿ ಆಡಿಸುತ್ತಾನೆ (ರೂಢಿ).
[ದೇ.೩ ತಮಿ. ಚಾಟ್ಟಿ, ಚಾಟ್ಟೈ : ಮಲ. ಚಾಟ್ಟ ; ತೆಲು. ಜಾಟ ; ಕೊಲಾ. ಸಾಟ್ ]

**ಚಾಟಿ$_2$** ' ಸಾಟಿ$_1$ ' ನೋ.

**ಚಾಟಿಕೋಲು** 'ಚಾಟಿಗೋಲು' ನೋ.

**ಚಾಟಿಗುಂಡು** (ನಾ). ತುದಿಯಲ್ಲಿ ಗುಂಡನ್ನುಳ್ಳ ಒಂದು ಬಗೆಯ ಚಾವಟಿ : ಚಾಟಗುಂಡು ಬಂಧನಕ್ಕಲ್ಲದೆ (ಜಲೀಕ್ಕ.೨): ಕುಟ್ಟಿಕೊಳ್ಳದಿರಿ ಚಾಟಿ[ಚಾಟ]ಗುಂಡಿನಲಿ ಶಸ್ತ್ರವನು ಚಟ್ಟಿಕೊಳ್ಳದಿರಿ ಬೆನ್ನಿನಲಿ ಸಿಡಿಯನು ಕಟ್ಟ ತೂಗಿಸಿಕೊಳ್ಳದಿರಿ (ಅನಳ. ೦೩೨–೩). [ ಚಾಟಿ$_1$ + ಗುಂಡು ]

**ಚಾಟಿಗೋಲು, ಚಾಟಿಕೋಲು** (ನಾ). ಚಾವಟಿಯ ಕೋಲು ; ಬಾರುಕೋಲು : ತನ್ನ ಉದ್ದನೆಯ ಚಾಟಿಗೋಲಿನ ಮೇಲೆ . . . ಕೈಯಾಡಿಸುತ್ತ (ಪುನರು. ೨೬೩). **ಚಾಟಿಕೋಲು :** ಮತ್ತಕೋಕಿಲನೆಂಬ ಚಾಟಿಕೋಲವಗೆ ಕಣ್ಗೊತ್ತಿ ಹೊಯ್ ಹೊಯ್ಯೆಂದನೊಡನೆ (ಭರತ. ೪೮–೬೬).
[ ಚಾಟಿ$_1$ + ಕೋಲು$_1$ (< ಕೋಲ್$_1$) ]

**ಚಾಟಿಸು$_1$** (ಕ್ರಿ). ಚಾವಟಿಯಿಂದ ಹೊಡೆ,–ಮರ್ದಿಸು,–ಪ್ರಹಾರ ಮಾಡು: ಕರಿಘಟೆ ತುರಂಗಮಂ . . . ಕೂಡಿಕೊಂಡು ಕೌರವಬಲವ ಚಾಟಿಸೇಳೆಂದು ನುಡಿದಂ (ತುರಂಗ. ೩೬–೨೬). [ ಚಾಟಿ$_1$ + – ಇಸು$_2$ ]

**ಚಾಟಿಸು₂** (ಕ್ರಿ). ಸಾರು ; ಪ್ರಕಟಿಸು : ಕೂಲಿ ಕೆಲಸ ಕೂಡ ದೊರೆಯದಿರಲು ತನ್ನ ಹೆಂಡತಿಯನ್ನು ವಿಕ್ರಯಿಸುವೆನೆಂದು ಚಾಟಿಸಿದರು (ಪುರಾವಿ. ೨೦೬). [ ←ತೆಲು. ಚಾಟಿಂಚು, ಸಾಟಿಂಚು ]

**ಚಾಟು₁** (ನಾ). ಒಂದು ಅನುಕರಣ ಶಬ್ದ.

**ಚಾಟುಚಾಟು** (ದ್ವಿರುಕ್ತಿ): ಸತಿಯಂ ಚಮ್ಮಟಿಗೆಯುಲಿ ಚಾಟು ಚಾಟನೆ ಪತಿ ಹೊಡೆವುತಿರಲು (ಬಸಪು. ೫೨-೮).

**ಚಾಟು₂** (ನಾ). ೧. ಆಶ್ರಯ; ಶರಣು: (+). ೨. ಆಸರೆ; ರಕ್ಷಣೆ; ಮಳೆ, ಗಾಳಿ, ಬಿಸಿಲು ಮೊದಲಾದುವುಗಳಿಂದ ರಕ್ಷಿಸಿಕೊಳ್ಳಲು ಮಾಡಿಕೊಂಡ ರಕ್ಷಣಾ ಸ್ಥಾನ. – ಮರೆ, ತಡಿಕೆ ಮೊದಲಾದದ್ದು : ಆನೆ ಕುದುರೆ – ಒಂಟೆಗಳ ಸಲುವಾಗಿಯೂ ಚಾಟು ಮಾಡಲ್ಪಟ್ಟಿತ್ತು (ತಿರುಚಾಮು. ೭೬).

**ಚಾಟಾಗು**=ಆಶ್ರಯವಾಗು; ರಕ್ಷಣೆ ನೀಡು ; ಮರೆಯನ್ನುಂಟುಮಾಡು : ಸಣ್ಣ ಗಿಡಗಳನ್ನು ಹಾಕಿದರೆ ಸುತ್ತಲೂ ಚಾಟಾಗಿ ಗಾಳಿಯ ಭಾರವನ್ನು ಹಿಡಿಯುತ್ತವೆ (ಕೃಷಿಪ್ರ. ೧೫೦). [ ದೇ. ಶ. ತೆಲು. ಚಾಟು ]

**ಚಾಟು₃** 'ಸಾಟಿ₁' ನೋ.

**ಚಾಟು₄** (ಗು). ೧. ಸಂತೋಷಕರವಾದ; ಪ್ರಿಯವಾದ. 'ಚಾಟೂಕ್ತಿ' ಪರಾ. ೨. ಚಮತ್ಕಾರವಾದ; ಚಾತುರ್ಯದ: ಮೈ ಮೈಯೊಳದಗು ವಂದದೊಳಪ್ಪಿ . . . ರಮಿಸಿದರ್ಪ ಮರುಳು ಚಾಟುವೋಹಿಗಳು (ಭರತ. ೭೮-೧೯೬). (ನಾ). ೩. ಸಂತೋಷಕರವಾದ ಮಾತು ; ಪ್ರಿಯವಚನ : ಅತಿ ಕೃಪಣಾಂಗಳುಮಪ್ಪ ಚಾಟು ಸಹಸ್ರಂಗಳಿಂದವೆ (ಕಾದಂಪೂ. ೯೨೭). ೪. ಚಮತ್ಕಾರ; ಚಾತುರ್ಯ: ನಾಟಕಸತಿಯರಲ್ಲವೆ ನೀನು ತಾನೆಂದು ಚಾಟಾಗಿ ನುಡಿದರೆ ನೃಪಗೆ ತೀಟವೇಳುತಿದೆ . . . ಎಂದೆಣಿಸಿದರು (ಭರತ. ೧೪-೯೦). ೫. ಚಮತ್ಕಾರದ ಮಾತುಗಳನಾಡುವವನು : ಬಂದಿಕಾಱನು ಚಾಟು ಚಪಳಿಗನೆಂದು ನಾ ಮುಂದಱಿಯೆನೆಂದಳು ಮಾಯೆ (ಪ್ರಭುಲಿ. ೭-೫೩). [ ಸಂ. ]

**ಚಾಟುಕ** (ನಾ). ಸಂತೋಷಕರವಾದ ಮಾತು ; ಸಂತೋಷಗೊಳಿಸುವ ಮಾತು. ೨. ಹೊಗಳುವವನು ; ಸ್ತುತಿಗಾರ: "ಮುಖಸ್ತುತಿ ಮಾಡುವವ" (ಜಾನಕೋ. ೫೫). [ ಸಂ. ]

**ಚಾಟುಕಾತಿ** (ನಾ). ಹಿತವಾದ ಮಾತುಗಳನ್ನಾಡುವವಳು ; ಪ್ರಿಯಭಾಷಿಣಿ : ಚಾಟುಕಾತಿಯರು ಚಾಂದಸಿಕೆಯು ನೂಕಿ ಸಘಾಟಿಕೆಯಿಂದ ಪಾಡಿದರು (ಭರತ. ೫-೫೮). [ ಚಾಟು₄ + – ಕಾತಿ₂ ]

**ಚಾಟುಕಾರ** (ನಾ). ೧. ಹಿತವಾಗಿ ನುಡಿಯುವ ಮಾತು ; ಸಂತೋಷಗೊಳಿಸುವ ಮಾತು ; ಪ್ರಿಯವಚನ ; ಮುಖಸ್ತುತಿ: ಪುಸಿಗೂರ್ಮೆಯಿಂದನೇಕ ಚಾಟುಕಾರದಿಂ ನಂಬಿಸಿ ಮೆಲ್ಲನೆ ಬೆಸಗೊಳ್ವುದುಂ (ಧರ್ಮಾಮೃ. ೨-೧೦೬) ; ಆ ವನಂ . . . ಚಾಟುಕಾರಪಟು ಶಠವಿಟನಂತೆ ಕುಶಲವಥಸನಾಥಮುಂ (ಶಾಂತಪು. ೧೦-೧೦೮). ೨. ಪ್ರೀತಿ ; ವಿಶ್ವಾಸ. 'ಚಾಟುಕಾರಂಗೆಯ್' ಪರಾ. [ ಸಂ. ]

**ಚಾಟುಕಾರಂಗೆಯ್** (ಕ್ರಿ). ಸಂತೋಷಗೊಳಿಸು ; ಪ್ರೀತಿಯನ್ನು ತೋರಿಸು: ಕಾಲ ಮೇಲೆ ಪೊರಳ್ದು ಚಾಟುಕಾರಂಗೆಯ್ಯುದುಂ (ಪಂಪಭಾ. ೦೪೯-೮). { ಚಾಟುಕಾರ + – ಕೆಯ್₁ ]

**ಚಾಟುಕಾರಿಸು** (ಕ್ರಿ). ಕೀರ್ತಿಸು; ಹೊಗಳು ; ಸ್ತುತಿಸು: ಗುಣಪಾಲಸೆಟ್ಟಿ ಬೆಱಗಾಗಿ ಪೆರ್ಗಡೆಗಳಂ ಚಾಟುಕಾರಿಸಲೆಂದು ಕೃತಕವಚನಂಗಳಿಂ ನಲ್ಲನುಡಿದು (ಧರ್ಮಾಮೃ. ೦೦-೪೨). [ ಚಾಟುಕಾರ + – ಇಸು₂ ]

**ಚಾಟುಕಾಱ** (ನಾ). ೧. ಪ್ರಿಯವಾದ ಮಾತುಗಳನ್ನಾಡುವವನು : ವಂಗತೊಳ್ ಬಗೆಯಿಲ್ಲದಂಗನೊಳ್ ಮನವೊಲ್ಲದತಿ ಚಾಟುಕಾಱನಂ ರತರಪ್ಸುಚೋರನಂ ಭೂಮಿನುತ ರೂಪನಂ ಭಾವಿಸುತ್ತೋಪನಂ ಬಂದು (ಜಗವಿ. ೦೭-೧೧೯ ರಗಳೆ). ೨. ಮುಖಸ್ತುತಿ ಮಾಡುವವನು; ಹೊಗಳುಭಟ್ಟ : ಋಷಿಯರ ಮಾರ್ಗಮಂ ಕಲಿಯಲೆಂದು ಕೃತಕ ವೈರಾಗ್ಯದಿಂ ಸಂಸಾರಕ್ಕೆ ಪೇಸುವರಂತೆಲ್ಲಾ ಋಷಿಯರ್ಗಂ ಚಾಟುಕಾಱ[ರ] ವಿನಯದಿಂ ಪೊಡೆವಡುವುದುಂ (ಧರ್ಮಾಮೃ. ೬-೨೮).

[ ಚಾಟು₄ + – ಕಾಱ ]

**ಚಾಟುಗಾಲು** (ನಾ). ಒಂಟಿಕಾಲಿನಲ್ಲಿ ನಿಂತು ಭೂಮಿಯನ್ನು ಗಟ್ಟಿಸುವುದು : ಸಮವಾದ ಪಾದಗಳಿಂದ ನಿಂತು ಒಂದು ಕಾಲಿಂದ ಭೂಮಿಯ ತಾಟಿಸುವುದುಂಟು ಅದು ಚಾಟುಗಾಲುಯೆಂಬುದು (ಅಭ್ಯಚಿ. ೪ ೪೬).

[ ಚಾಟು₀ + ಕಾಲು₁ (<ಕಾಲ್₁) ]

**ಚಾಟುಗೋಷ್ಠಿ** (ನಾ). ಪ್ರಿಯವಾದ ಸಂಭಾಷಣೆ ; ಸರಸಸಲ್ಲಾಪ : ಅವರು ಕುಲಾಂಗನೆಯರ ನೆಳಲಿಗೆ ಕೂಡ ಹೆದರುವವರಾಗಿದ್ದರೂ . . . ಮಠಗಳಲ್ಲಿ ಊಟ ನೀಡುವ ನಗೆಮೊಗದ ವಿಗಡೆಯರನ್ನಾಗಲೀ, ಕಂಡು ಚಂದ್ರಶೇಖರರಾಯರು ಅವರೊಡನೆ ಯಥೇಷ್ಟವಾಗಿ ಚಾಟುಗೋಷ್ಠಿಗಳನ್ನಾಡುವರಂತೆ ! (ಶವಚಿ. ೮). [ಚಾಟು₄+ಗೋಷ್ಠಿ (<ಗೊಷ್ಟಿ₁)]

**ಚಾಟುತನ** (ನಾ). ೧. ಇಷ್ಟವಾಗಿರುವಿಕೆ ; ಪ್ರಿಯವಾಗಿರುವಿಕೆ : (+). ೨. ಮಾತಿನ ಚತುರತೆ; ಪ್ರಿಯೋಕ್ತಿಗಳನ್ನು ನುಡಿಯುವಿಕೆ : ಕೂಟದ ರಸುಗಳ ಮಧ್ಯದೊಳಿರ್ದ ನೃಪಗವಳ್ಚಾಟುತನದಿಂ ಮಾಡಿದಳಮಟವನು ಸುರೆ(ಸಮ್ಯಕ್. ೯-೩೮) ; ಚಲ್ಲಂ ಚದುರೋಜೆ ಚಾಟುತನವವಂದಂ ಬಂಧದೊಳ್ಪೇಟಮಿಚ್ಚೆಗೆ ಸಂದೊಂದುವ ಕೂಟಮಲ್ಲಮವರ್ಗೇಂ ಮೈಸಂದು ಮಚ್ಚುರ್ದುದೋ (ರಾಜಶೇ. ೧೧-೮೩). ೩. ಹೊಗಳಿಕೆ ; ಮುಖಸ್ತುತಿ : "ಚಾಟು, ಚಟು, ಶ್ಲಾಘೇ=ಚಾಟುತನದ ನುಡಿ" (ನಾಚಿರಾ. ೩); ನೀನೀ ಚಾಟುತನದಲಿ ಸುಲಭನಹೆ ನಿಜವಿದ್ಯವಲಾ ಕಳನೊಳಾಂತರನಿಱಿ ದಡೊಪ್ಪುವುದದುವೆ ಶೂರತನ (ಕೌಶಿಕಾ. ೧೯-೨೬).

[ ಚಾಟು₄ + – ತನ ]

**ಚಾಟುಪದ್ಯ** (ನಾ). ಮನೋಹರವಾದ ಅರ್ಥವುಳ್ಳ ಚಿಕ್ಕ ಪದ್ಯ ; ಚುಟುಕ ; ಸುಭಾಷಿತ : ಒಂದು ಶತಕ ಹಾಗು ಕೆಲವು ಚಾಟುಪದ್ಯ ಮುಕ್ತಕಗಳನ್ನು ಬಿಟ್ಟರೆ 'ಕಾವ್ಯಸಾರ'ದಲ್ಲಿ ಉದ್ಧೃತವಾದ ಪದ್ಯಗಳೆಲ್ಲ ಚಂಪೂ ಪ್ರಬಂಧಗಳಿಂದ ಆಯ್ದುಕೊಂಡವುಗಳಾಗಿವೆ (ಕವಿಸಿ. ೩೬).

[ ಚಾಟು₄ + ಪದ್ಯ ]

**ಚಾಟುಪೊಂಗ** (ನಾ). ಪ್ರಿಯವಾಗಿ ಮಾತನಾಡುವವನು (?): ನಗುತ್ತ ಜನನಿಯಂತದಕ್ಕೆನುತ್ತ ಚಾಟುಪೊಂಗನುಸುರೆ ಬಂದೆ (ಜಾಲಾಸ್ಯ. ೪-೦೩-೧ ರಗಳೆ). [ ಚಾಟು₄ + ಪೊಂಗ ]

**ಚಾಟುಭಣಿತಿ** (ನಾ). ಚಮತ್ಕಾರದ ಹೇಳಿಕೆ ; ಚತುರತೆಯ ಮಾತು ; ಚತುರೋಕ್ತಿ: ಗಣಿಕೆಯ ಚಾಟುಭಣಿತಿ[ಪಾಠಾಂ. ಭಣಿತೆ]ಯಂ ಕೇಳ್ದರಸನೊಳ್ ಪೀಠಮರ್ದಕನಿಂತೆಂದಂ (ರಾಜಶೇ. ೧೦-೦೨೨ವ).

[ ಚಾಟು₄ + ಭಣಿತಿ ]

**ಚಾಟುಮಾತು** (ನಾ). ಸಂತೋಷಗೊಳಿಸುವ ಮಾತು ; ಚತುರೋಕ್ತಿ: ನೀಟುದೋಱುತ ವಿಟಾರಿಯರೊಲಿಸುತಾ ಚಾಟುಮಾತುಗಳಾಡಿ ನಗುತಾ ಮಾಟ ಮಿಸುಕುವ ಚುನ್ನಾಟದಿ ನರ್ತನದಾಟ ನೋಡಿದರು ಕೋವಿದರು (ಸೌಂದರಾ. ೩-೧೧೧). [ ಚಾಟು₄ + ಮಾತು₁ ]

**ಚಾಟುಲ** (ಗು). ಚಂಚಲವಾದ ; ಚಪಲವಾದ. 'ಚಾಟುಲತನ' ಪರಾ.

[ ಸಂ. ]

**ಚಾಟುಲತನ** (ನಾ). ಚಂಚಲ ಸ್ವಭಾವ ; ಅಸ್ಥಿರತೆ ; ಚಪಲತನ : ಸದ್ಭಕ್ತ ದೈವವೆಂದು ಅರ್ಚಿಸುವ ಠಾವಿನಲ್ಲಿ ಮತ್ತತ್ತ ದುಶ್ಚಾರಿತ್ರ ವಗಡ ಪರಿಹಾಸಕತನ ಚಾಟುಲತನ ಗೆಲ್ಲ ಸೋಲತನ ಇವೆಲ್ಲವ ಬಿಡಬೇಕು (ಮೋಳಿಮಾ. ೫೫-೨೨೫). [ ಚಾಟುಲ + – ತನ ]

**ಚಾಟುವಚನ** (ನಾ).=ಚಾಟುಮಾತು : ಕುಸಂ ವಸುದೇವ ದೇವಕಿಯರ ಸೆರೆಯಂ ಬಿಟ್ಟು . . . ಕಿಮ್ಮನೆ ನಿಮ್ಮನಟ್ಟಿಗಂಬಡಿಸಿದೆನೆಂದು ಚಾಟು ವಚನಂಗಳಂ ನುಡಿದು (ಜಗವಿ. ೩-೨೨ ವ) ; ಅರಸಂ ಯಥಾರ್ಥ ಪ್ರೇಮ ಚಾರುಚಾಟುವಚನಾಮೃತವರ್ಷದಿಂದರಸಿಯ ಗಾ ತ್ರ ಕ್ಷೇ ತ್ರ ದೊ ಳ್ ರೋಮಹರ್ಷಸಸ್ಯಸಮೃದ್ಧಿಯಂ ಮಾಡಿ (ಪುಷ್ಪಪು. ೩-೧೦೬ವ) ; "ಇಷ್ಟು ದೊಡ್ಡ ಭೂತಾಕಾರದ ಶರೀರಕ್ಕೆ ಅನ್ನವಿಲ್ಲದಿದ್ದರೆ ಶಿವನು ಮೆಚ್ಚುಯಾನೇ?" ಎಂದು ಚಾಟುವಚನಗಳನ್ನು ಆಡಿದನು (ಶ್ರೀರಾಯ. ೧೯).

[ ಚಾಟು$_4$ + ವಚನ ]

**ಚಾಟುವೆಣ್** (ನಾ). ಸಂತೋಷಗೊಳಿಸುವ ಮಾತುಗಳನ್ನಾಡುವವಳು; ಪ್ರಿ ಯ ಭಾ ಷಿ ಣಿ : ಬೇಟವ ಮಾಡಿದಳ್ಪಹುಕಾಲವಿಂದಾತ ಕೂಟಕೆ ಸಾರ್ತಂದನೆನಲು ಚಾಟುವೆಣ್ಣೊಬ್ಬಳೆ ನಗುತಿದಿರ್ಗೊಂಡ ಸಘಾಟವನೇನ ಬಣ್ಣಿಪೆನು (ಭರತ. ೭೬-೧೧೪) ; ಎದೆಗೋಂಟೆಯ ತಳಪಟ ಮಾಳ್ಪ ಚಾಟು ವೆಣ್ಗಳ ತಿಂಥಿಣಿಯಿಂದ ವೇಶ್ಯಾವಾಟ ರಾರಾಜಿಸುತಿಹುದು(ನಾಗಳು. ೨-೩೪).

[ ಚಾಟು$_4$ + ಪೆಣ್ ]

**ಚಾಟೂಕ್ತಿ** (ನಾ). ೧. ಸಂತೋಷಗೊಳಿಸುವ ಮಾತು; ಪ್ರಿಯವಚನ. ೨. ಚಮತ್ಕಾರೋಕ್ತಿ : 'ಶ್ಲೋಕ' ರೂಪದಲ್ಲಿರುವ ಸಂಸ್ಕೃತದ ಸುಭಾಷಿತಗಳನ್ನೂ ಅನ್ಯೋಕ್ತಿಗಳನ್ನೂ ಚಾಟೂಕ್ತಿಗಳನ್ನೂ ಕನ್ನಡಿಸುವುದಕ್ಕೆ ಸಾಂಗತ್ಯವು ಅತ್ಯಂತ ಸಮರ್ಥವಾದ ಛಂದಸ್ಸು (ಇಂಚಾಪ. IV, ೮೩೯).

[ ಚಾಟು$_4$ + ಉಕ್ತಿ ]

**ಚಾಟೆ** (ನಾ). (ಕರಾ) ಒಂದು ಬಗೆಯ ಉದ್ದವಾದ ವಿಮಾನ. [ ? ]

**ಚಾಟ್ಪೂರ್** (ನಾ). ಒಂದು ಊರಿನ ಹೆಸರು : ಚಾಟ್ಪೂರುಂ ಪೆರ್ಮ್ಮಾಣೂರುಂ ಸಮೀಪಮವ್ (ಖ್ಯಆರಿ. ೦೪೪೧, ೧-೩೩ : 788). [ ? + ಊರ್ ]

**ಚಾಡ**$_1$ 'ಚಹಡ' ನೋ.

**ಚಾಡ**$_2$ (ನಾ). ಮರ ; ವೃಕ್ಷ : ಒಂದು ಗಿಡುವಿನಲ್ಲಿ ಹುಟ್ಟಿದ ಮುಳ್ಳ ಒಂದೊಂದ ಮುಱಿದು ಸುಡಲೇತಕ್ಕೆ ಚಾಡವ ಕಡಿದು ಒಡಗೂಡಿ ಸುಡಲಿಕ್ಕೆ ವಿಶ್ವಮಯ ಮೊನೆ ನಷ್ಟ (ಅಮರೀ. ೩೦). [ <ಪ್ರಾ. ಝೂಡ ]

**ಚಾಡಗಾರ** 'ಚಾಡಿಕಾಱ' ನೋ.

**ಚಾಡತನ** 'ಚಹಡತನ' ನೋ.

**ಚಾಡಿ** 'ಚಹಡ' ನೋ.

**ಚಾಡಿಕಾಱ**, ಚಾಡಗಾರ, ಚಾಡಿಕಾರ, ಚಾಡಿಗಾರ (ನಾ). ಚಾಡಿ ಹೇಳುವವನು; ಇಲ್ಲದ ಅಪವಾದವನ್ನು ಸೃಷ್ಟಿಸುವವನು; ಪಿಸುಣ; ನಿಂದಿಸುವವನು : ನಾಱುತಿರ್ಪ ಮೂಗುಳ್ಳಾತನೆನ್ತಲುಂ ಚಾಡಿಕಾಱಂ ವದನದುರ್ಗಂಧಿಯಾ ಕೊಂಡೆಯದ ಸೂಚಕಂ (ವೀಕ್ಯಪು. ೪-೨೨-೩೩); ಮೃಡನ ನಿಜವೇಳ್ಪಲ್ಲಿ ಪಾರಂಗತದ ಚಾಡಿಕಾಱನಾಗುತ ಚರಿಪುದು (ಹರಿಂ. ೧೩-೮). **ಚಾಡಗಾರ** : (ಕ). **ಚಾಡಿಕಾರ** : "ಪಿಶುನಃ—ಚಾಡಿಕಾರಂ" (ಶಾಕಕ್ಯ. ೨೦೪) ; "ದ್ವಿಜಿಹ್ವಃ – ಹಾವು, ಸುಳ್ಳ, ಚಾ[ಶಾಕಾಂ. ಭಾ] ಡಿಕಾರ" (ಸಿದ್ಧಾಂತಿ. ೩೯೯) ; ಚಾಡಿಕಾರನಿಗೆ ಊರೆಲ್ಲಾ ನಂಟರು (ಹುಟ್ಟಿಪ. ೦೦೨). **ಚಾಡಿಗಾರ** : (ಕ). [ ಚಾಡಿ (<ಚಹಡ) +– ಕಾಱ ]

**ಚಾಡಿಕೋರ**, ಚಾಡಿಖೋರ (ನಾ). ಚಾಡಿ ಹೇಳುವ ಸ್ವಭಾವವುಳ್ಳವನು ; ಪಿಸುಣ : ಆದರೆ ಎಲ್ಲರೂ ನನ್ನನ್ನು ಚಾಡಿಕೋರ ಎಂದು ಬಿಟ್ಟರೆ! ಎಂದು ನನಗೆ ಹಾಗೆ ಮಾಡಲು ಹೆದರಿಕೆಯಾಗಿತ್ತು (ಶಾಲಮ. ೦೩೦); ಆ ಜಗಳಗಂಟ ಚಾಡಿಕೋರನ ವಿಚಾರ ಬಹಳವಾಗಿ ಯೋಚಿಸಬೇಕಾಗಿದೆ (ಕೃರಾಳ. ೭೩). **ಚಾಡಿಖೋರ**: (ಕ). [ಚಾಡಿ (<ಚಹಡ) +–ಕೋರ$_3$]

**ಚಾಡಿಕೋರಿ** (ನಾ). ಚಾಡಿ ಹೇಳುವ ಸ್ವಭಾವದವಳು : ನಾನೇನು ಚಾಡಿಕೋರಿಯಲ್ಲ (ಶಾಲಮ. ೧೩೧). [ ಚಾಡಿಕೋರ + – ಇ$_2$ ]

**ಚಾಡಿಖೋರ** 'ಚಾಡಿಕೋರ' ನೋ.

**ಚಾಡಿಗಾರ** 'ಚಾಡಿಕಾಱ' ನೋ.

**ಚಾಡಿಗಾರ್ತಿ** (ನಾ). ಚಾಡಿ ಹೇಳುವವಳು: (ಕ).

[ ಚಾಡಿಗಾಱ + – ತಿ$_1$ (< – ಇತ್ತಿ) ]

**ಚಾಡಿಬಾಕ** (ನಾ). = ಚಾಡಿಕೋರ : ತನ್ನ ಅಂತರಂಗವನ್ನು ಗೆಳೆಯರ ಮುಂದಾಗಲಿ ಚಾಡಿಬಾಕರ ಮುಂದಾಗಲಿ ಇರಿಸಿ ಉಪಯೋಗವೂ ಇಲ್ಲ (ಸರಸ. ೦೦೩). [ಚಾಡಿ (<ಚಹಡ) + ಬಾಕ (<ಬಕ್ಕ) ]

**ಚಾಡಿಬುರಕ** (ನಾ).=ಚಾಡಿಕೋರ : ಲೋಭಿಯಾಗುವುದರಿಂದ ನಿಷ್ಕರುಣಿಯಾಗುವುದರಿಂದ ಚಾಡಿಬುರುಕನಾಗುವುದರಿಂದ ಮನವು ಅಶುದ್ಧವಾಗುವುದು (ವಿಚಾಮು. ೩೦).

[ ಚಾಡಿ (<ಚಹಡ) + ಬುರಕ (<ಪುರುಕ) ]

**ಚಾಡಿಮಾತು** 'ಚಾಡಿವಾತು' ನೋ.

**ಚಾಡಿಯೋಲೆ** (ನಾ). ಗ್ರಂಥಗಳಲ್ಲಿ ಸೇರಿಸುವ ಅಕಾರಾದಿ ಮುಂತಾದ ಸೂಚಿ ;ಅನುಬಂಧ: ಈ ಸಲದ ಮುದ್ರಣದಲ್ಲಿಯೂ ನಾಲ್ಕು ಚಾಡಿಯೋಲೆಗಳನ್ನು (Indices) ಸೇರಿಸಿದೆ (ಶವಿಕ. II, ಮುನ್ನುಡಿ XI).

[ ಚಾಡಿ (<ಚಹಡ) + ಓಲೆ ]

**ಚಾಡಿವಾತು**, ಚಾಡಿಮಾತು (ನಾ). ಚಾಡಿಯ ಮಾತು; ಇಲ್ಲದ ದೂಷಣೆಯನ್ನು ಆರೋಪಿಸುವ ಮಾತು : ಮುಂ ಗೋಕುಲದೊಳು ಬಲಭದ್ರನ ಚಾಡಿವಾತಂ ಕೇಳ್ದು (ಜಕರಿ. ೦೮). **ಚಾಡಿಮಾತು** : ಹೊಗಳಿಕೆಗಾಗಲಿ ಚಾಡಿಮಾತುಗಳಿಗಾಗಲಿ ಕಿವಿಗೊಟ್ಟು ಆತ ಇತರರನ್ನು ತೆಗಳಬಾರದು (ಕತ್ಯಶಾ. ೩೭೦). [ ಚಾಡಿ (<ಚಹಡ) + ವಾತು$_1$ ]

**ಚಾಡಿಸು**(ಕ್ರಿ). ಚಾಡಿಹೇಳು; ದೂರನ್ನು ಆರೋಪಿಸು: ರೂಢೀಶನೊಡನೆಯಂಬಲಿಯನುಂಡುದು ಯೂಶ ಚಾಡಿಸಿದನದರಿಂದ ಹೊಲಗೇರಿಯೊಳು ನಮ್ಮ ನೋಡಲಿಚ್ಛೈಸಿ ನೃಪ ಬಂದಪನು (ಹೋರಬ. ೮-೩೨).

[ ಚಾಡಿ (<ಚಹಡ) +– ಸು$_1$ ]

**ಚಾಣ** 'ಚೇಣ' ನೋ.

**ಚಾಣಂಗಿ** 'ಚಣಗೆ' ನೋ.

**ಚಾಣಕಿ** 'ಚಾಳಾಂಕಿ' ನೋ.

**ಚಾಣಕ್ಕಿ** 'ಚಾಳಾಂಕಿ' ನೋ.

**ಚಾಣಕ್ಯ** (ನಾ). ೧. ಮೌರ್ಯ ರಾಜ್ಯಸಂಸ್ಥಾಪನೆಗೆ ಕಾರಣನಾದ ವ್ಯಕ್ತಿ; ಮೌರ್ಯ ಚಂದ್ರಗುಪ್ತ ಮಹಾರಾಜನ ಮಂತ್ರಿ ; ಅರ್ಥಶಾಸ್ತ್ರದ ಕರ್ತೃ : ಮನೆಯೊಳು ಚಾಣಕ್ಯನಿನ್ದಂ ಮಿ ಗಿ ಲೆ ನಿ ಪ ಮಹಾಮಂತ್ರಿ ನಾನಾ ನಯಜ್ಞಂ (ಎಕ. VI. ಚಿಕ್ಕಮ. ೦೩೦-೩೦; 1108 ?). ೨. (ಅಲಂ) ಬುದ್ಧಿವಂತ; ವ್ಯವಹಾರಕುಶಲ; ತಂತ್ರಗಾರ: ರಾಜಕೀಯದಲ್ಲಿ ಇವನು ಚಾಣಕ್ಯ (ಕೂಡಿ). [ ಸಂ. ]

**ಚಾಣಕ್ಯಚೌಕ** (ನಾ). ಒಂದು ದುರ್ಗದ ಹೆಸರು: ವಂದನಮುಂ ಕಿಳಿಗಿಳವುಂ ಚಂದನ ಚಾಣಕ್ಯಚೌಕ ಪನ್ನವಳಗಯೆ ಸನ್ನಣಿಗಡಗನಿಕರಮನೊನ್ನರ ನಿ ಮಿ ಷ ದೆ ಕೊಣ್ಡ ವೀರಪಾಣ್ಡ್ಯ (ಸೌಇಇ. IX–1, ೧೦೮.೬೩ ; 1107).

[ ? ]

**ಚಾಣಕ್ಯತನ** (ನಾ). ವ್ಯವಹಾರಕೌಶಲ್ಯ ; ಕುಟಿಲನೀತಿ ; ಕುಶಲತೆ : ವಿಷ್ಣುವರ್ಧನನ ಚಾಣಕ್ಯತನ ಇಲ್ಲಿ ಚೆನ್ನಾಗಿ ಫಲಿಸಿತು (ಶಾಂತಲಾ. ೨೨೮).

[ ಚಾಣಕ್ಯ + – ತನ ]

**ಚಾಣಕ್ಯನೀತಿ** (ನಾ). ಕುಟಿಲ ನೀತಿ ; ಕುಟಿಲೋಪಾಯ : ಎಲ್ಲರನ್ನೂ ಶಿಬಿರಗಳಿಗೆ ಕಳಿಸಿಕೊಟ್ಟು ತಾವೂ ಬೊಪ್ಪಣನೂ ಚಾಣಕ್ಯನೀತಿಯೊಂದನ್ನು ಹೊಸೆಯುತ್ತ ಕುಳಿತರು (ಶಾಂತಲಾ. ೨೨೩). [ ಚಾಣಕ್ಯ + ನೀತಿ ]

**ಚಾಣಕ್ಯಮೂಲ** (ನಾ). ಒಂದು ಬಗೆಯ ಔಷಧಿ ಗೆಡ್ಡೆ : "ಮಹಾಕಂದಂ–ಚಾಣಕ್ಯಮೂಲಂ" (೬ಷಧಿ. ೦೧೬). [ ಚಾಣಕ್ಯ$_0$ + ಮೂಲ ]

**ಚಾಣಾಂಕಿ** 'ಚಾಳಾಂಕಿ' ನೋ.

**ಚಾಣಾಕ್ಷ** (ನಾ). ಹರಿತವಾದ ಬುದ್ಧಿಯುಳ್ಳವನು; ಸೂಕ್ಷ್ಮ ದೃಷ್ಟಿಯುಳ್ಳವನು; ಕುಶಲಮತಿ; ವ್ಯವಹಾರ ಚತುರ: ಕೊಡುವ ಬಾಣವ ಕಾಣಬಾರದು ಹಿಡಿದ ಧನು ಚಾಣಾಕ್ಷರುಬ್ಬರ ಕಡುಹ ಬಣ್ಣಿಸಲರಿದು (ಕೌಶಿರಾ. ೩೬-೫೦): ಅಲ್ಲದೆ ಚಾಣಾಕ್ಷರಾದ ಅವರು ಈ ಪ್ರಸಂಗದಲ್ಲಿ ಆಚಾರ್ಯರ ಕಾರಸ್ಥಾನವನ್ನು ಕಂಡು ಹಿಡಿದಿದ್ದರು (ಸಮಜೀ. ೪೧); ಆದರೆ ಚಾಣಾಕ್ಷರಾದ ಫಿಡಲ್ ವೆಂಕೋಬರಾಯರು . . . ನಾರಾಯಣಗೌಳ ರಾಗವನ್ನು ಹಾಡುವಂತೆ ಸನ್ನೆ ಮಾಡಿದರು (ಸಂಗೀತ. ೦೩).

[ < ಚಾಣಕ್ಯ / ಮರಾ. ಚಾಣಖ್ಯ, ಚಾಣಕ್ಷ, ಚಾಣಾಕ್ಷ ]

**ಚಾಣಾಕ್ಷತನ** (ನಾ). ಸೂಕ್ಷ್ಮದೃಷ್ಟಿ; ಚಾತುರ್ಯ; ವ್ಯವಹಾರ ಕುಶಲತೆ: ಮೈದುನನ ಜಾಣತನಕ್ಕೂ ಚಾಣಾಕ್ಷತನಕ್ಕೂ ಅಕ್ಕ ಅಟ್ಟಹಾಸದಿಂದ ನಕ್ಕಳು (ಶೃನಿ. ೪೩); ನನ್ನ ಚಾಣಾಕ್ಷತನದ ಅರಿವು ಆ ವೃದ್ಧನಿಗೆ ಚೆನ್ನಾಗಿ ಗೊತ್ತಿದೆ (ಬಂಗಾಹೆ. ೬೯); ಸಾಧಾರಣವಾಗಿ ಉಚ್ಚ ತರಗತಿಯ ಮೇಧಾಶಕ್ತಿಯೂ, ಯಶಸ್ವೀ ಆಡಳಿತದ ಚಾಣಾಕ್ಷತನವೂ, ಒಬ್ಬ ವ್ಯಕ್ತಿಯಲ್ಲಿ ಕೂಡಿ ಹೋಗುವುದಿಲ್ಲ (ಸಸ್ಮಕ. ೮೧). [ ಚಾಣಾಕ್ಷ + – ತನ ]

**ಚಾಣಾಕ್ಷತೆ** (ನಾ). = ಚಾಣಾಕ್ಷತನ: ಮಾಸ್ತರು ತಮ್ಮ ಚಾಣಾಕ್ಷತೆಯನ್ನು ಉಪಯೋಗಿಸಿದರು (ಕಾವೇರಿ. ೦೮೨). [ ಚಾಣಾಕ್ಷ + – ತೆ₃ ]

**ಚಾಣೆ** (ನಾ). (ಉಕ). ಅಂಗೈಯ ಮೇಲೆ ಬೆತ್ತದಿಂದ ಕೊಡುವ ಏಟು. [ ? ]

**ಚಾತ** (ನಾ). ೧. ಭೂತ; ಪಿಶಾಚಿ. 'ಕುಟ್ಟಿಚಾತ' ಪರಾ. ೨. "ಒಬ್ಬ ರಾಕ್ಷಸ" (ಕಸೂಕೋ. ೩೬೩). [ ದೇ. ≈ ತಮಿ. ಮಲ. ಚಾತ್ತ ]

**ಚಾತಕ** (ನಾ). ಮಳೆಯ ನೀರಿನ ಆಧಾರದಿಂದಲೇ ಬದುಕುವುದೆಂದು ನಂಬಲಾದ ಪಕ್ಷಿ; ಮಳೆಯ ಹನಿಗಳನ್ನು ಬಾಯೊಡ್ಡಿ ಕುಡಿದು ಬಾಯಾರಿಕೆಯನ್ನು ತೀರಿಸಿಕೊಳ್ಳುವ ಒಂದು ಬಗೆಯ ಪಕ್ಷಿ; ಚಾದಗೆ: ಚಾತಕವಲ್ಲದೆ ವೃಷ್ಟಿನಿಪಾತವುನಲ್ಲಿಯ ಜನಂಗಳೆಳಸರ್ (ಶಾಂತೀಶ್ವ. ೧-೮೭); ಮಾರುತ್ತರದ ಪನಿಮಳೆಗೆ ಜನಮನ ನಿರೀಕ್ಷಣಾಚಾತಕಂ . . . ಕೊರಳೆತ್ತಿ ನಿಂತಿರೆ (ಶ್ರೀರಾಮಾ. ೧೬೯-೪೬೯). [ ಸಂ. ]

**ಚಾತಕಿ** (ನಾ). ಹೆಣ್ಣು ಚಾತಕ ಪಕ್ಷಿ: ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟ ಧ್ವಾಂಕ್ಷ ಚಾ[ಪಾಠಾಂ. ಜಾ]ತಕಿ ಚಿಲಿಮಿಲಿಗ (ಕೊರರಾ. ೩-೧-೩೩). [ ಸಂ. ಚಾತಕೀ ]

**ಚಾತಗುದ್ದಿ** (ನಾ). ಒಬ್ಬಾತನ ಹೆಸರು: ಮೂದೆಕಲ್ಲ ಕಾಳೆಗದುಳ್ ಗಾರ ವರಾಳ್ ಅವಧೀರರಾ ಮಗನ್ ಚಾತಗುದ್ದಿಯಾರುವರ್ ಪುಲಿಕುಟಿಯರಾ ದುಗ್ಗಮಾರನ್ . . . ಅನ್ನಿಚಿದು ಸತ್ತರ್ (ಎಕ. X, ಶ್ರೀನಿವಾ. ೪೦-೩; ಸು. ೯೦೦). [ ? ]

**ಚಾತಬೊಕ್ಕಣಂಗಟ್ಟು** (ಕ್ರಿ). (?): ನಖದೊಳ್ ಸೂಜಿಯುಂ ಪೆಟ್ಟಿಯುಂ ಚಾತಬೊಕ್ಕಣಂಗಟ್ಟಿಯುಂ ಕರ್ಜಜಿಯನೂಚಿಯುಂ . . . ಪಲ್ಲಂ ಕಟಿರೆಗುಟ್ಟಿಯುಂ ನೀರೊಳಿಕ್ಕಿ ಮೆಟ್ಟಿಯುಂ (ಅಜಿಪು. ೧೧-೧೦೮). [ ಚಾತಬೊಕ್ಕಣ ? + ಕಟ್ಟು₁ ]

**ಚಾತಮ್ಮ** (ನಾ). ಒಬ್ಬಾತನ ಹೆಸರು: ಸ್ವಸ್ತಿಶ್ರೀ ನಟುಳ್ಗನ್ನ ಚಾತಮ್ಮನ್ ತೊಱುಗೊಳ ಇರ್ವರ್ ವೇಡರಾ ಕೊನ್ದು ತೊಱುವಿಕ್ಕಿಸಿ ಸುರಲೋಕಂ ಪೊಕ್ಕ (ಎಕ. X, ಬಂಗಾಮ. ೧೨೨-೧: ಸು. 1000). [ ? ]

**ಚಾತರಾಸಿ** 'ಚೀತರಾಶಿ' ನೋ.

**ಚಾತಾಣಿ** 'ಸಾತಾನಿ' ನೋ.

**ಚಾತಾಲ** 'ಸಾತಾನಿ' ನೋ.

**ಚಾತಾಳ** 'ಸಾತಾನಿ' ನೋ.

**ಚಾತಾಳಿ** 'ಸಾತಾನಿ' ನೋ.

**ಚಾತುಃಶ್ರುತಿ** (ನಾ). ನಾಲ್ಕು ವೇದಗಳು: ನಿರುತ ಚಾತುಃಶ್ರುತಿಗಳೊಳು ವಿಸ್ತರಣದಿಂದೊಂದು ಶಾಪವ ಕರಮೊಸೆಯುಲಜಿದತ್ತಿ ಶುನಕವನುಷ್ಟಿಸುತ್ತಿರಲು (ಬಸಪು. ೫೫-೫೧). [ < ಸಂ. ಚತುಃಶ್ರುತಿ ]

**ಚಾತುಃಸ್ವರ** (ನಾ). ಉದಾತ್ತ, ಅನುದಾತ್ತ, ಸ್ವರಿತ ಮತ್ತು ಪ್ರಚಯಗಳೆಂಬ ನಾಲ್ಕು ವೇದೋಚ್ಚಾರಣದ ಕ್ರಮ ಸ್ವರಗಳು: "ತ್ರಿದಿವಂ, ಷಡಾದಿ ಸಪ್ತಸ್ವರಮುಮ್ಮೃತಮುದಾತ್ತಾದಿ ಚಾತುಃಸ್ವರಂ ಸಂಪದಘೋಷಂ ವರ್ಣಜಾಲಂ ಸ್ವರಮೆನಿಕುಂ" (ನಾನಾರ. ೮೫). [ ಸಂ. ]

**ಚಾತುರ** (ಗು). ೧. ಜಾಣ್ಮೆಯ; ಕೌಶಲದ; ಚಾತುರ್ಯದ: ಬಳಿಕ ನೂಱಾನೆಯಲಿ ನಿನ್ನವನಳವಿಗೊಟ್ಟನು ಭೀಮಸೇನನ ಚಲಗತಿಯ ಚಾತುರ ಚಪೇಟ ಪದ[ಪಾಠಾಂ. ಚಾಪಳ ಚಪೇಟ ಪದ, ಚಾತುರ್ಯ ಪೀಠಪದ]ಪ್ರಹಾರದಲಿ (ಕುವ್ಯಾಗ. ೪-೨೩). ೨. ಸುಂದರವಾದ; ಮನೋಹರವಾದ: "ಬಸವನೆನೆ ಗೊಂದೆಯೆನೆ ಚಾತುರ[ಪಾಠಾಂ. ಚಾರುತರ] ವೃಷಭನೊಳ್ಪೆಸರಕ್ಕು" (ಕಲ್ಯಮಂ. ೬). (ನಾ). ೩. ಜಾಣತನ; ಚಾತುರ್ಯ. ೪. ಪ್ರಿಯವಾದ ಮಾತನ್ನಾಡುವಿಕೆ; ಹೊಗಳುವಿಕೆ; ಸ್ತುತಿಸುವಿಕೆ. [ ಸಂ. ]

**ಚಾತುರಂಗ** (ನಾ). ನಾಲ್ಕು ಅಂಗಗಳನ್ನುಳ್ಳುದು; ಆನೆ, ಕುದುರೆ, ರಥ, ಕಾಲಾಳು ಎಂಬ ನಾಲ್ಕು ಅಂಗಗಳಿಂದ ಕೂಡಿದ ಸೈನ್ಯ; ಚತುರಂಗಬಲ: ಅಲ್ಲಿ ತುಂಬುರನನೀಕ್ಷಿಸಿ ಪೇಳುತ ಚಾತುರಂಗಮಂ ಪಾನಿಸಿ ನೋಡಿ ನೋಡಿ ಹೊಗೆ ಹತ್ತಿದ ಪುತ್ತಳಿಯಂತೆ ಬಂದಂ (ನಂಬಿಕ. ೬-೨); ನೆರಪಲ್ ಪೇಟ್ಟಂ . . . ಚಾತುರಂಗಮಂ ನಿಜಬಳಾಧಿಪತಿಗೆ ಕುಮಾರಂ (ಪುಶ್ಯಪು. ೫-೬); ಕದಳಿಯೊಳು ಮದದಾನೆ ಹೊಕ್ಕಂದದಲಿ ಹೆಚ್ಚಿದ ಚಾತುರಂಗದ ಮೆದೆಯನೊಟ್ಟಿದು ಹೊಣೆ ಹೊಕ್ಕನು ಥಟ್ಟನೊಡೆತುಳಿದು (ಕುವ್ಯಾದ್ರೋ. ೫-೪). [ ಸಂ. ]

**ಚಾತುರಂಗಬಲ** (ನಾ). ಚತುರಂಗ ಸೈನ್ಯ: ಉನ್ನತಮುಹಿಮಂ ತನ್ನ ಮುಂದಿರ್ದ ಚಾ[ಪಾಠಾಂ. ಚ]ತುರಂಗಬಲಮಂ ನಡೆ ನೋಡಿ (ನಂಬಿಕ. ೮-೭). [ ಚಾತುರಂಗ + ಬಲ ]

**ಚಾತುರತನ** (ನಾ). ಚತುರತೆ; ಕುಶಲತೆ; ಜಾಣತನ: "ಜಾಟು, ಚಟು, ಶ್ಲಾಘೇ = ಚಾತುರತನದ ನುಡಿ" (ನಾಚಿಶಾ. ೬). [ ಚಾತುರ + – ತನ ]

**ಚಾತುರಿ** (ನಾ). ಚಾತುರ್ಯ; ಜಾಣತನ; ಕೌಶಲ: ನರನ ದೋರ್ಬಲ ನಿಶಿತ ಚಾತುರಿಯಶೇಷವ ನೋಡಲೋಸುಗ ಬಂದನೈಸೆಂದ (ಕೋಗಹು. ೧೬-೨೭); ಐರೋಪ್ಯರು . . . ಈ ಘಟನೆಗಳು ಬ್ರಾಹ್ಮಣರೆಂದು ಹೆಸರಾದ ಒರಿದು ವ್ಯವಸಾಯಿಗಳ ಚಾತುರಿ ಎಂದು ಅರ್ಥ ಮಾಡಿದ್ದಾರೆ (ಸಾಂಧ. I, ೦೦೯): ಪಂಪನು ಚಾಣಕ್ಯನೀತಿಯ ಚಾತುರಿಯನ್ನು ಹೊರಗೆಡುವುವಂತೆ ಬಣ್ಣಿಸಿದ್ದಾನೆ (ಕವನಿ. ೬೫). [ ಸಂ. ಚಾತುರೀ ]

**ಚಾತುರಿಯ₁** (ನಾ). ಚಾತುರ್ಯ; ಕೌಶಲ; ಜಾಣತನ: ನೆತ್ತದೊಳ್ ಬಿತ್ತರಂಬಡೆದು ಚದುರಂಗದೊಳ್ ಚಾತುರಿಯಮನಿತ್ತು [ಪಾಠಾಂ. ಚಾತುರ್ಯಂಗೊಟ್ಟು] (ಗಿರಿಕ. ೨-೦೦೫ವ); ನಿಜಜ್ಞಪ್ತಿವೆಸರಿನ ಯೋಗದಂಡವನು ಚಾತುರಿಯದಿಂ ಪಿಡಿವುತೆ (ಗಗಶಾ. ೦೬-೨೦); ಈ ಚಾತುರಿಯ ಮಧುರವಾಣಿಗಾಲಯಮಾದುದು (ಶಂಕಾರಾ. ೦-೩-೪೪).

[ < ಸಂ. ಚಾತುರ್ಯ ]

**ಚಾತುರಿಯ₂** (ನಾ). ಜಾಣ; ಬುದ್ಧಿವಂತನಾದವನು; ಚತುರ: ಉರುತರದ ಮಚ್ಚವ ಕಟ್ಟುವತಿ ಚಾತುರಿಯರಿಪ್ಪರು ಚಿನ್ನವರದರು ತತ್ಪುರಾಂತದಲಿ (ಜೀವಂಕ. ೨-೨೮). [ ಚಾತುರಿ + – ಅ₇ ]

**ಚಾತುರಿಸು** (ಕ್ರಿ). ಜಾಣ್ಮೆತೋರು (?): ಅಬ್ಬಿದರು ಹಿಮಜಳವ ತವತವಗೊಪ್ಪದಲಿ ಚಾತ[ತು]ರಿಸಿ ಸಖಿಯರು ಚಪ್ಪರಿಸಿ ಚೆಲ್ಲಿದರು ಕುಚಯುಗನಾಭಿ ಜಘನದಲಿ (ಅಂಬಿಕಾ. ೫-೨೪). [ ಚಾತುರಿ + – ಇಸು₃ ]

**ಚಾತುರ್ಗತಿಕ** (ನಾ). [ಜೈನ] ದೇವ, ಮಾನವ, ತಿರ್ಯಂಕ್ ಮತ್ತು ನಾರಕವೆಂಬ ಚತುರ್ಗತಿಗಳನ್ನು ಹೊಂದುವವನು : ಚಾತುರ್ಗತಿಕನುಂ ಮಿಥ್ಯಾದೃಷ್ಟಿಯುಂ ಸಂಜ್ಞಿಯುಂ ಪರ್ಯಾಪ್ತಕನುಂ ಗರ್ಭಜನುಂ . . . ಉಪಲಬ್ಧಿಕನುಮಪ್ಪ ಭವ್ಯಂಗೆ ತತ್ಪ್ರಥಮೋಪಶಮ ಸಮ್ಯಕ್ತ್ವಮುಕ್ಕುಂ (ತತ್ತ್ವಪ್ರ. ೮೦). [ ಸಂ. ]

**ಚಾತುರ್ಜಾತಕ** (ನಾ). ೧. ದಾಲ್ಚಿನ್ನಿ, ಲವಂಗಪತ್ರೆ, ಏಲಕ್ಕಿ ಮತ್ತು ನಾಗಕೇಸರಗಳೆಂಬ ನಾಲ್ಕು ಬಗೆಯ ಔಷಧದ್ರವ್ಯಗಳು : ಶತಾವರಿ ಘೃತ . . . ಚಂಗೆಲ್ವಕೋಷ್ಟ, ಚಾತುರ್ಜಾತಕಗಳು (ದಾಲ್ಚಿನ್ನಿ, ಲವಂಗ ಪತ್ರೆ, ಏಲಕ್ಕಿ ಮತ್ತು ನಾಗಕೇಸರಿ) . . . ಕಲ್ಕಮಾಡಿ ಪಾಕದಲ್ಲಿ ಕಲಸಿ ಹದದಲ್ಲಿಳಿಸಿ ಘೃತವನ್ನು ಶೋಧಿಸಬೇಕು (ಸಕವೈ. ೪೧೭ ಪ೧). ೨. ತಪಸ್ವಿಗಳಲ್ಲಿ ಒಂದು ಬಗೆ : ಕಾರ್ತಿಕದ ಪುಣ್ಣಮಿ ಸೋಮವಾರದನ್ದು ಚಾತು[ರ್ಜಾ]ತಕ ತಪೋಧನರ ಪಂಚರಾಶಿ ಪಾದಮೂಲ ಪರಿವಾರ (ಕಇಅ. ೦೦೬-೦೨-೦೯ : 1051). [ ಸಂ. ]

**ಚಾತುರ್ಜಾಮ** (ನಾ). ೧. ನಾಲ್ಕು ಜಾಮಗಳು. ೨. ನಾಲ್ಕು ಜಾಮಗಳುಳ್ಳದು ; ರಾತ್ರಿ: ಚಾತುರ್ಜಾಮದ ಹೊತ್ತು ಜಾಗರಗಳ ಮಾಡಿ (ಪುರಂದ. ೩-೧೨೫-೧). [ <ಸಂ. ಚಾತುರ್ಯಾಮ ]

**ಚಾತುರ್ಥ** (ಗು). ೧. ನಾಲ್ಕನೆಯ: ಆ ಜ್ಞಾನದಾಚೆ ವಿಜ್ಞಾನ ಉದಯವಿದೆ ಗಂಟೆ ಬಾರಿಸಿತ್ತು ಚಾತುರ್ಥ ಸರ್ಗ ನೈಸರ್ಗ ಮಾರ್ಗ ಡಂಗುರವ ಸಾರಿಸಿತ್ತು (ಹ್ರದಸ. ೧೦-೬). ೨. ನಾಲ್ಕನೆಯದಕ್ಕೆ ಸಂಬಂಧಿಸಿದ. [ ಸಂ. ]

**ಚಾತುರ್ಥಿಕ** (ಗು). ೧. ನಾಲ್ಕನೆಯದಕ್ಕೆ ಸಂಬಂಧಿಸಿದ ; ನಾಲ್ಕನೆಯ ದಿನ ಮಾಡತಕ್ಕ. 'ಚಾತುರ್ಥಿಕಸ್ನಾನ' ಪರಾ. (ನಾ). ೨. ನಾಲ್ಕು ದಿನಕ್ಕೊಮ್ಮೆ ಬರುವ ಜ್ವರ : ಚಾತುರ್ಥಿಕವೆಂಬ ಜ್ವರವು . . . ನಾಲ್ಕು ದಿನಕ್ಕೊಮ್ಮೆ ತಪ್ಪದೆ ಬರುವುದು (ಸಕವೈ. ೯೮). [ ಸಂ. ]

**ಚಾತುರ್ಥಿಕಸ್ನಾನ** (ನಾ). (ಮುಟ್ಟಾದವಳು) ನಾಲ್ಕನೆಯ ದಿನ ಮಾಡುವ ಶುದ್ಧಸ್ನಾನ : ಚಾತುರ್ಥಿಕಸ್ನಾನಮಂ ಸಂತಸದಿ ಮಾಡಿ ದೇವಾಂಗಮಂ ತೆಗೆದುಟ್ಟು (ಕಾಮಾಪು. ೭-೩೯). [ ಚಾತುರ್ಥಿಕ+ಸ್ನಾನ ]

**ಚಾತುರ್ದಂತ** (ನಾ). ೧. ನಾಲ್ಕು ದಂತಗಳುಳ್ಳದು; ಐರಾವತ. ೨. ಆನೆ: ಅಂತು ಚಾತುರ್ದಂತಕೊಂದೊಂದಱೊಳೋರಂತೆ ನಡುವಗಲ್ವರಂ ಕಾದುವುದುಂ (ಶಾಂಪಥಾ. ೧೧-೩೬ ವ) ; ಚಾತುರ್ದಂತಮನಪರಾಜಿತ ನೆಟ್ಟದಂ ತನ್ನ ಮನಃಪ್ರಸ್ಫಾರಿ ಪೌರುಷಮತಿಯಿಂ (ಶಾಂತಿಪು. ೪-೭). [ ಸಂ. ]

**ಚಾತುರ್ದಂತಬಲ** (ನಾ). ಗಜಸೈನ್ಯ : ಅಂತು ನೆರೆದ ಚಾತುರ್ದಂತಬಲ ಜಲಧರ ಶಬ್ದಸಂ ಪ್ರಭಿನ್ನ ಬ್ರಹ್ಮಾಂಡಾಖಂಡ ಶಂಕೆಯಂ ಪುಟ್ಟಿಸೆ (ಶಾಂತಿಪು ೩-೦೦೧ ವ). [ ಚಾತುರ್ದಂತ + ಬಲ ]

**ಚಾತುರ್ಬಲ, ಚಾತುರ್ಬಳ** (ನಾ). ಚತುರಂಗ ಸೈನ್ಯ : ಚಾತುರ್ಬಲ ವಿಲ್ಲದರಸನಂತೆ ಕಣ್ಗೆಳಿದನಾಗಿ (ಶಾಂತಿಪು. ೪-೩೦ ವ). **ಚಾತುರ್ಬಳ** : ನಿಜೈಕಂ ದೋರ್ಬಳಂ ಶತ್ರುದುರ್ದಮ ಚಾತುರ್ಬಳನಾಶಮಂ ಪಡೆಯ (ಚಂದ್ರಪು. ೨-೯). [ ಸಂ. ]

**ಚಾತುರ್ಬಳ** 'ಚಾತುರ್ಬಲ' ನೋ.

**ಚಾತುರ್ಭಾಗ** (ನಾ). ನಾಲ್ಕನೆಯ ಒಂದು ಭಾಗ ; ಕಾಲುಭಾಗ. 'ಚಾತುರ್ಭಾಗಾರ್ಧ' ಪರಾ. [ ಸಂ. ]

**ಚಾತುರ್ಭಾಗಾರ್ಧ** (ನಾ). ನಾಲ್ಕನೆಯ ಒಂದು ಭಾಗದ ಅರ್ಧ ; ಎಂಟನೆಯ ಒಂದು ಅಂಶ : ಹಿಪ್ಪಲಿ ಮೂಲ, ತಾವರೆಬೇರು . . . ಈ ಚೂರ್ಣದ ವರಾಹ ತೂಕಮಂ ಚಾತುರ್ಭಾಗಾರ್ಧ ಕಷಾಯಾ ಕಾಸಿ ಪಾನವ ಮಾಡಲು ಸಂಧಿಗಸನ್ನಿ ಹರ (ಸಕವೈ. ೦೫೩). [ ಚಾತುರ್ಭಾಗ + ಅರ್ಧ ]

**ಚಾತುರ್ಮಾಸ** (ನಾ). ೧. ನಾಲ್ಕು ತಿಂಗಳು. ೨. ನಾಲ್ಕು ತಿಂಗಳು ನಡೆಸುವ ವ್ರತ,-ನಿಯಮ ; ನಾಲ್ಕುಮಾಸಗಳಲ್ಲಿ ಮಾಂಗಿಯುವ ವ್ರತ: ಚಾತುರ್ಮಾಸದ ಪಾರಣೆಯೆಂದು . . . ಪೊಡಮಟ್ಟು (ವಡ್ಡಾರಾ. ೯೮-೮). ೩. ಚಾತುರ್ಮಾಸ್ಯ ವ್ರತದ ಕಾಲ,-ಅವಧಿ : ಚಾತುರ್ಮಾಸ ಹಿದು ಸನ್ನಿಹಿತವಾಯ್ತುದ ನೂಕಿ ಬಿಜಯಂಗೈವುದಿಚ್ಛೆಯಲಿ (ಕುಮಾ. ೧೯-೩೧). [ ಸಂ. ]

**ಚಾತುರ್ಮಾಸ್ಯ** (ಗು). ೧. ನಾಲ್ಕು ತಿಂಗಳುಗಳಲ್ಲಿ ನಡೆಯಬೇಕಾದ. (ನಾ). ೨. ಮಳೆಗಾಲದ ನಾಲ್ಕು ತಿಂಗಳು, ಆಷಾಢ ಶುಕ್ಲ ಪೌರ್ಣಮಿಯಿಂದ ಹಿಡಿದು ಕಾರ್ತಿಕ ಶುದ್ಧ ಪೌರ್ಣಮಿಯವರೆಗೆ ವ್ರತ ಹಿಡಿದು ಮುನಿಗಳು ಒಂದೆಡೆ ವಾಸಿಸುವುದು ; ಒಂದು ವ್ರತ : ಸಂಸ್ಕಾರ; ವೈಶ್ವದೇವ, ಚಾತುರ್ಮಾಸ್ಯ, ಶುದ್ಧಿ . . . ಬಗ್ಗೆ . . . ಅಪರಾರ್ಕನು ಉದಾಹರಿಸಿದ್ದಾನೆ (ಭಾರದ. ೬೫) ; ಮಳೆಗಾಲದಲ್ಲಿ ನಾಲ್ಕು ತಿಂಗಳು ಮಾತ್ರ ಒಂದು ಕಡೆ ಮುನಿಗಳು ವಾಸಿಸಬೇಕು. ಇದಕ್ಕೆ 'ಚಾತುರ್ಮಾಸ್ಯ' ವೆನ್ನುತ್ತಾರೆ (ಕಶಾಅ. ೮೫). [ ಸಂ ]

**ಚಾತುರ್ಮುಕ್ತಿ** (ನಾ). ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯವೆಂಬ ನಾಲ್ಕು ವಿಧವಾದ ಮುಕ್ತಿ : ಯುಕ್ತಿಯುಂ ಗುರು ಭಕ್ತಿ ತನಗಾ ಭಕ್ತಿಯುಂ ಗುರುಭಕ್ತಿ ಚಾತುರ್ಮುಕ್ತಿಯುಂ ಗುರುಭಕ್ತಿಯೇ ವ್ರತಯೋಗುರುಸ್ಸ ಶಿವಃಪ್ರೋಕ್ತವೆನುತಂ (ಬಸಪು. ೩೯-೩). [ <ಸಂ. ಚತುರ್ಮುಕ್ತಿ ]

**ಚಾತುರ್ಯ** (ನಾ). ೧. ಜಾಣತನ ; ಕೌಶಲ ; ಬುದ್ಧಿವಂತಿಕೆ : ಮಾಕರಾಂಕಧ್ವಜಮಾಳಿಕಾಪ್ರಕಟಿತ . . . ರತವ್ಯಾಪಾರ ಚಾತುರ್ಯಂ . . . ಅದೇಂ ಬೆಡಂಗಮುರ್ದುದೋ (ಚಂದ್ರಪು. ೧-೦೩೪); ವಾಣೀಪತಿಗೆ ಚಾತುರ್ಯಮಂ . . . ಸ್ವಾಹಾಪತಿಗೆ ತೇಜಮಂ ಕೊಟ್ಟ ಗುರುಮೂರ್ತಿ ಪಂಪಾಪತಿ ವಿರೂಪಾಕ್ಷನೆಮಗಿಷ್ಟಸಿದ್ಧಿಯಂ ಮಾಳ್ಕೆ (ಹಕಾ. ೦-೧). ೨. ಮಂನೋಹರವಾದುದು; ಆಹ್ಲಾದಕರವಾದುದು : ನಮಿಸಿ ಚಾತುರ್ಯರಸ ಸಂಸ್ತುತಿಗಳಂ ಮಾಡಿ (ಬಸಪು. ೫೮-೫೮). [ ಸಂ. ]

**ಚಾತುರ್ಯವಚನ** (ನಾ). ಜಾಣ್ನುಡಿ; ಚಮತ್ಕಾರದ ಮಾತು:ಜಗನ್ನುತ ಚಾತುರ್ಯವಚನರಚನೆಗಳಿಂದಂ ಭಟ್ಟಾರಕರ್ಬೆಸಸುವುದುಂ (ಸುಕುಮಾ. ೫-೫). [ ಚಾತುರ್ಯ + ವಚನ ]

**ಚಾತುರ್ಯವಡೆ** (ಕ್ರಿ). ಚತುರತನವನ್ನು ಹೊಂದು ; ಕೌಶಲತೆಯನ್ನು ಪಡೆ: ಜನರಿವಳನು ಪೋಲ್ವ ಜಾಣೆ ಜಗದೊಳಿಲ್ಲೆನೆ ಚಾತುರ್ಯವಡೆವಳು (ಹರಿಬ. ೦-೫೪). [ ಚಾತುರ್ಯ + ಪಡೆ$_1$ ]

**ಚಾತುರ್ಯಾಮ** (ನಾ). ೧. ನಾಲ್ಕುಜಾಮ : ಅಗಳುಭಯಬಲಂಗಳೊಳಂ ಚಾತುರ್ಯಾಮಾವಸಾನ ಘಟಿತ ಘ[ಂ]ಟಿಕಾಧ್ವನಿಗಳುಂ . . . ನೆಗಟ್ದುವು (ಶಾಂಪಥಾ. ೦೦-೩೩ವ). ೨. [ಜೈನ] ಪಾರ್ಶ್ವನಾಥನಿಂದ ಪ್ರತಿಷ್ಠಿತವಾದ ಅಹಿಂಸಾ, ಸತ್ಯ, ಅಸ್ತೇಯ, ಅಪರಿಗ್ರಹ ಎಂಬ ನಾಲ್ಕು ಮಹಾ ವ್ರತಗಳು: ಬೌದ್ಧ ಪಿಟಕಗಳಲ್ಲಿ ಜ್ಞಾತಪುತ್ರ ಮಹಾವೀರನು ಚಾತುರ್ಯಾಮಯುಕ್ತನೆಂದು ವರ್ಣಿಸಲಾಗಿದೆ (ಜೈನಪ. ೫೬೩). [ ಸಂ. ]

**ಚಾತುರ್ವರ್ಗ** (ಗು). ೧. ನಾಲ್ಕು ಪುರುಷಾರ್ಥಗಳಿಗೆ ಸಂಬಂಧಿಸಿದ. (ನಾ). ೨. ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳು : ಲಿಂಗ ಜಂಗಮ ಪೂಜನಂಗಳೆ ತುಂಗ ಚಾತುರ್ವರ್ಗ ಸೌಖ್ಯಫಲಂಗಳಿರೆ ಮಿಗಿಲೆಂದು ಧರಣಿಯೊಳಿದ್ದಳಾ ನಿಂಬಿ (ಬಸಪು. ೨೩-೮೯). [ ಸಂ. ]

**ಚಾತುರ್ವರ್ಣ** (ನಾ). ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳು : ಸಮಯಿಗಳುಂ ಚಾತುರ್ವರ್ಣಮುಮುಚಿತ ಚರಿತ್ರಮಂ ಬಿಸುಟ್ಟಾದಂ ಪೊಲ್ಲಮೆಯೊಳ್ ಸಲೆ ನಡೆವರ್(ಅದಿಪು.೦೫-೩೩);

ಚಾತುರ್ವರ್ಣಂಗಳೊಳಂ . . . ಮಹಾಗುಣ ವಾತ್ಸಲ್ಯಂ(ಶಿಸಾರ. ೯೮೩); ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರು ಹೀಗೆ ಚಾತುರ್ವರ್ಣ ಜಾತಿ ಪಂಗಡಗಳ ಕವಲು ಕವಲಾದ ಬಳ್ಳಿಗಳನ್ನು . . . ಹಬ್ಬಿಸಿರುತ್ತಾರೆ (ಹೊಸೂಹ. ೧೭). [ ಸಂ. ]

**ಚಾತುರ್ವರ್ಣ್ಯ** (ನಾ). =ಚಾತುರ್ವರ್ಣ: ಮಧ್ಯಾಹ್ನದಾಗಳ್ ಚರಿಗೆವೊಕ್ಕು ಚಾತುರ್ವರ್ಣ್ಯದ ಮನೆಗಳುಮಂ ತೊಟಲ್ಚುತ್ತಂ (ವಡ್ಡಾ. ೧೦೭-೮); ಚಾತುರ್ವರ್ಣ್ಯದೊಳಂ ದ್ವಿಜಜಾತಿಗೆ ದರ್ಭಾಧಿಕಾರಮಲ್ಲದೆ . . . ಶಸ್ತ್ರಾಸ್ತ್ರಮವರ್ಗೆ ಜಾತಿವಿರುದ್ಧಂ (ಗದಾಯು. ೩-೧೭); ಪರಮಾತ್ಮಂ ಪರಮಾಗಮಂ ಪರಮ ಚಾತುರ್ವರ್ಣ್ಯಮಾರ್ಹಂತ್ಯ ಮುದ್ಧುರ ಸದ್ಧರ್ಮಮಿವಂ ತಿರಸ್ಕರಿಸೆ ಸಾಗ್ರುಂ ದೃಕ್ಮೋಹಾಸ್ರವಂ (ಸುಕುಸೂ. ೬-೦೯); ಸ್ವಧರ್ಮದಿಂ ನಿರ್ವಿಘ್ನಮಾಗಿ ಸಕಲಪ್ರಕೃತಿಜಾತಿ ಚಾತುರ್ವರ್ಣ್ಯಮಂ ಬಿಡದೆ ಪೊರೆವಲ್ಲಿ ನೀತಿಶಾಸ್ತ್ರಂಗಳ್ಗೆ ಪಳಿವೊರಿಸದೆ (ಕ್ಷಮಿಳಾ. ೧೪-೧೫); ಆ ಪಾಠಶಾಲೆಗಳಲ್ಲಿ ಚಾತುರ್ವರ್ಣ್ಯದ ಬಾಲಕರಿಗೂ ಮತ್ತು ಅವರೊಡನೆ ಸೇರತಕ್ಕ ಇತರ ಮತದವರಿಗೂ ಓದು . . . ಕಲಿಸುತ್ತಿದ್ದರು (ಮಹಾವಂ. II, ೫೨). [ ಸಂ. ]

**ಚಾತ್ರ** (ನಾ). ಶಿಷ್ಯ; ವಿದ್ಯಾರ್ಥಿ: ಗೊಮ್ಮಟಯ್ಯನ ಭಾವಂ ಸಿಲ್ಲಪಯ್ಯಂ ತಪೋಧನರ್ಗಂ ಚಾತ್ರರ್ಗಂ ವಿದ್ಯಾರ್ತ್ಥಿಮಾಣಿಯರ್ಗಂ . . . ನಾಲ್ಕು ಮಾವಿನ ಮರನ ದಿಟ್ಟಂ (ಕಇಳ. ೯೨-೦-೫೭; 1082). [<ಸಂ. ಛಾತ್ರ]

**ಚಾದಗೆ, ಜಾದಗೆ** (ನಾ). =ಚಾತಕ: "ಚಾದಗೆ ಚಾತಕಂ" (ವಸ್ತುಕೋ. ೯೨-೦೭); ಕಾರ್ಗಾಲದ ಬರವಂ ಚಾದಗೆ ಪಾರ್ಪಂತೆ ತನ್ನ ಬರವನೆ ಪಾರುತಿರ್ದ ಧರ್ಮಪುತ್ರನ ಮರುತ್ಸುತನ ಪಾದಕಮಲಂಗಳಂ . . . ಅರ್ಚಿಸಿ (ಪಂಪಭಾ. ೮-೩೬ ವ); ಚಾದಗೆಯಂತಾಕಾಸವನಿಗೆ ಬಾಯಂ ಬಿಡುತ್ತುಂ (ಧರ್ಮಾಮೃ. ೦-೦೩೦); ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು (ಕಾವ್ಯಸಾ. ೪೨೨). **ಜಾದಗೆ:** ಜಾ[ಪಾಠಾಂ. ಚಾ]ದಗೆ ನಮೋದಬಿಂದುವನಾದರಿಪವೊಲುಟಿದ ಕಿಱಿಯ ತೊಱೆಯುದಕಮನೇನಾದರಿಕುಮೆ (ಆದಿಪು. ೯-೦೦೯): ಮುಂಗಾರ ಪನಿಯಂ ಸೇವಿಸುವ ಜಾದಗೆಯಂತೆ (ಅದ್ಭುಟ. ೫-೬೯ ವ). [<ಸಂ. ಚಾತಕ]

**ಚಾದಗೆವಕ್ಕಿ, ಜಾದಗೆವಕ್ಕಿ** (ನಾ). ಚಾತಕಪಕ್ಷಿ: ನಲಿದುದು ಸೋಗೆ ನುಣ್ಪನೆಡೆಗೊಂಡುದು ಚಾದಗೆವಕ್ಕಿ (ಗಿರಿಳ.೯-೩೩). **ಜಾದಗೆವಕ್ಕಿ:** ಕಾರ್ಗಾಲಮಂ ಸೋಗೆ ಮುಂಬನಿಯಂ ಜಾದಗೆವಕ್ಕಿ . . . ನೆನೆವಂತಾಂ ನೆನೆವೆಂ ಸರೋಜಮುಖಿಯಂ (ಆದಿಪು. ೧೨-೩೦). [ ಚಾದಗೆ + ಪಕ್ಕಿ₁ ]

**ಚಾದಗೆವಱಿ** (ನಾ). ಚಾತಕ ಪಕ್ಷಿಯ ಮರಿ: ಕಾರದಿನಂ ಕೈಮಿಗಿದ ಬಳಿಕವೆ ನೀರನುಣದ ಚಾದಗೆವಱಿಯುಂತಾಹಾರಂಗೊಳ್ಳದನುಳಿದಳ್ (ಜಯಾಕಾ. ೪-೩೩). [ ಚಾದಗೆ + ಮಱಿ ]

**ಚಾದರ, ಚದ್ದರು, ಚಾದರಿ, ಚಾದರು, ಛಾದರು** (ನಾ). ೧. ಹತ್ತಿಯ ಅಥವಾ ರೇಷ್ಮೆಯ ದಪ್ಪ ಹೊದಿಕೆ,–ದುಪ್ಪಟಿ. ೨. ರೇಷ್ಮೆಯ ಜರತಾರಿಯಿಂದ ಅಲಂಕೃತವಾದ ವಸ್ತ್ರ; ಶಾಲು: ರನ್ನದೊಟ್ಟರೊಳಿಟ್ಟು ಚಾದರವ ಮರೆ ಮಾಡಿ ಜೋಗುಳವ ಪಾಡುತಾ ದಂಪತಿಗಳಿರುತ್ತಿದ್ದರು (ಪರಬು. ೩-೫೩): ಹಸರು ಜರತಾರ ಚಾದರ ಜಾಣೆ ಮುಸುಕಿಟ್ಟು (ಶ್ರೀಕೃಪಾ. ೧೨); ಪಲ್ಲಂಗವು ಸುಂದರವಾದ ಬಹು ಬೆಲೆಯುಳ್ಳ ಚಾದರದಿಂದಲೂ . . . ಅಲಂಕೃತವಾಗಿತ್ತೆಂದು ಹೇಳಲವಶ್ಯಕವಿಲ್ಲ (ರಾಜಾರಾ. ೦೯). **ಚದ್ದರು:** ೧. ಚದ್ದರು ಹಾಸಿ . . . ಶ್ರೀಮತಿಯನ್ನು ಮಲಗಿಸಿದ್ದರು (ಚಗುಳ. ೨೦೯). **ಚಾದರಿ:** ೨. ಹಣದದ್ದು ನಮಿಸಿ ಖಂಡೆಯವಿಡಿದು ಚಾದರಿಯ ಮಣಿದುಡುಗೆ ಸುತ್ತಿ (ಜನಪದು. ೫-೨೦). **ಚಾದರು:** ೧. ನಿರ್ಮಲೆಗೆ ಬಾಯಲ್ಲ ಕಹಿಯಾದಂತಾಗಿ ಚಾದರಿನ ಕೊನೆಯನ್ನು ಬಾಯೊಳಗಿಂದ ಹೊರತೆಗೆದಳು (ಮೂರುದಾ. ೨೨೦); ಅದೇ ವಿಚಾರದಲ್ಲಿ ಬೆನ್ನೂ ಹಾಸಿಗೆಯಲ್ಲಿ ಉರುಳಿ ಚಾದರು ಹೊದ್ದುಕೊಂಡ (ಕ್ಷತಿಜ. ೫೨). ೨. ಮುರಿಯುತ ಚಕ್ರವ ಹರಿವುತ ಚಾದರ ಭರದಿ ನಿಮ್ಮಪ್ಪಗೆ ವರ ಹೋಗೆಂದರು (ಶಂಬ್ರಾವ. ೦೨). **ಛಾದರು:** ೧. ಅವನು ಹೇಳಿದಂತೆ ಒಂದೆರಡು ಸಲ ಕೆಳಗಿಳಿದು ಬಂದು ಅವನ ಛಾದರು ಮೊದಲಾದುವುಗಳನ್ನು ತಂದುಕೊಟ್ಟೆ (ಚಂದುಬು. ೦೩).

[ ←ಪಾರ. ಚಾದರ್; ಹಿಂ. ಮರಾ. ಚದ್ದರ್, ಚಾದರ್ ]

**ಚಾದರಿ** 'ಚಾದರ' ನೋ.

**ಚಾದರು** 'ಚಾದರ' ನೋ.

**ಚಾದಾನಿ** (ನಾ). ಚಹದ ಪಾತ್ರೆ; ಟೀ ಕಾಯಿಸುವ ಪಾತ್ರೆ: "ವರ್ಕ, ಚಾದಾನಿಯನ್ನು ಒಲೆಯ ಮೇಲಿರಿಸು" – ಎಂದು ಯಜಮಾನಿಯು ಕೂಗುವಳು (ಚಾಂಪ್ರ. I, ೬೯೩); ಒಂದು ಚಾದಾನಿಯಲ್ಲಿ ಬಿಸಿ ಚಾ, ಸಮಿಾಪದಲ್ಲಿ ಸಕ್ಕರೆಯ ಪಾತ್ರೆ (ನಿಜ್ಞಾಮ. ೦೦).

[ ಚಾ₂ (< ಚಹ) + ದಾನಿ₂ ]

**ಚಾದುಪೊಲ** (ನಾ). ಒಂದು ಬಗೆಯ ಭೂಮಿ; ಕೆಂಪು ಭೂಮಿ (?): ಆಗ್ನೇಯದ ಎಲಂಚಿ ಕೂಣ್ಚೆಯಿನ್ದೆ ಪೂಲಿ ಕುಣ್ಚೆಯಿನ್ದೆ ಪೆರ್ಬಳದೊಳಗಣ ಚಾದುಪೊಲದಿನ್ದೆ ಪರಿಯೊಟ್ಟಿಯ ಕೈವರದೊಳ್ ಒನ್ದು ಮಾನ್ಕಂ ಮಣಮುಂ ಮೂಗಣ್ಣುಗಂಮಣ್ಣು (ಎಕ. X (ಪ), ಚಿಕ್ಕಬ. ೦೦೬-೬೬; 850). [ <ಚಾದು₁ + ಪೊಲ ]

**ಚಾದ್ಯ** (ನಾ). ಗುಣಾಕಾರ ಮಾಡುವ ಅಂಕ; ಗುಣಕ: (೬). [ ? ]

**ಚಾನ** 'ಚೇಣ' ನೋ.

**ಚಾನಸ** 'ಚಾಂದಸ' ನೋ.

**ಚಾಪ** (ನಾ). ೧. ಬಿಲ್ಲು; ಧನುಸ್ಸು: "ಚಾಪಮೆನಲು ಬಿಲ್ಲಿಂಗೆ ನಾಮಂ" (ಮಂಗರಾ. ೬೭-೩೨); ದಿಟ್ಟರಹರಿ ನೀವೆನುತಲವರ ಬೆನ್ನಟ್ಟಿ ಬಡಿದು ಚಾಪಗಳ ಕುಟ್ಟಿ ಮುಱಿದು (ಶ್ರೀಕೃಸಾಂ. ೨೦-೨೨೦); ಕಣ್ಬೇನೆಯ ಕರಡಿಯಂತೆಯೂ ಜಲದಿಕೆಳೆ ಕೂಟ ಚಾಪಂ ಪೋದೊಡೇನಕ್ಕುಂ (ರಾಮಾಶ್ವ. ೦೧೫-೨೭). ೨. ವೃತ್ತ ಪರಿಧಿಯ ಒಂದು ಭಾಗ. ೩. ಕಾಮನಬಿಲ್ಲು. ೪. [ಜ್ಯೋತಿ] ಮೇಷಾದಿ ರಾಶಿಗಳಲ್ಲಿ ಒಂದು; ಧನೂರಾಶಿ: ಚಾಪಾ[ದಿ]ತ್ರಿಕಗೇಹದೊಳ್ ದಿನಪನಂ ಸೌಮ್ಯಗ್ರಹಂ ನೋಡೆಯುಂ (ಅಭ್ಯಮ. ೬-೦೯೯). ೫.= ಚಾಪಯೋಗ: ಉದ್ಯೋಗಗೇಹದಿನಾ ತುರ್ಯಗ್ರಹಂಬರಂ ನೆಲಸೆ ಚಾಪಂ ಯೋಗಮಕ್ಕುಂ ಗ್ರಹಂ (ಜಾತಕತಿ. ೦೩-೮). ೬. [ಕಾವ್ಯಮಿಾ] ಚಿತ್ರಕಾವ್ಯದ ಬಂಧಗಳಲ್ಲೊಂದು; ಬಿಲ್ಲಿನ ಆಕಾರದಲ್ಲಿ ಶ್ಲೋಕವನ್ನು ರಚಿಸುವುದು: ಶರ ಶೂಲ ಚಾಪ ಚಕ್ರಾಸಿ ರೂಪಮಿಭರಥತುರಂಗ ಪದಗತಪಾಠಂ ಮುರಜಂ . . . ಸರ್ವತೋಭದ್ರಂಗಳ್ (ಕಾವ್ಯಾವ. ೫೬೯).

[ ಸಂ. ]

**ಚಾಪಕ** (ನಾ). ಚಪ್ಪಟೆಯಾಗಿರುವ ರತ್ನ: ಪೇಳುವೆ ತ್ರಿವೃತ್ತಮೆಂಬುದು ಮೂರು ಕೂಡಿಹುದು ಕೇಳು ಚಾಪಕಮೆಂದು ಚಪ್ಪಟೆಯನ್ನೈದಿಹುದು ತಾಳಿರುವ ತ್ರಿಪ್ಪಮೆಂಬುದು ಮೂರು ಮೂಲೆಯದು (ರತ್ನಶಾ. ೨೦-೦೪).

[ ? ]

**ಚಾಪಕ್ಷೇತ್ರ** (ನಾ). [ಜ್ಯೋತಿ] ಧನೂರಾಶಿ: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ . . . ಮಕರದೊಳಿರೆ ಮೂರ್ಖಂ (ಜಾತಕತಿ. ೦೭-೦೭). [ ಚಾಪ + ಕ್ಷೇತ್ರ ]

**ಚಾಪಗತಿ** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಗತಿ,–ಗಮನ; ಅರ್ಧವೃತ್ತಾಕಾರದ ಚಲನೆ; ಬಿಲ್ಲಿನ ಹಾಗೆ ನಿಲ್ಲುವ ಭಂಗಿ (?): ಶೃಂಗಾರ ಸಾರ ರಸಮನಪಾಂಗ ದ್ಯುತಿ ಬೀಱಿ ಮಿಱಿ ಲಾವಣ್ಯರಸಂ ತುಂಗ ಕುಚೆ ಚಾಪಗತಿಯಂ ಸಂಗುಳಿಸುತನಂಗಚಾಪಲತೆಯೆನೆ ಮೆಱೆದಳ್ (ರಾಜಶೇ. ೦೨-೯೪). [ ಚಾಪ + ಗತಿ ]

**ಚಾಪಚಾಪಳ** (ನಾ). ವೇಗವಾಗಿ ಬಾಣ ಬಿಡುವವನು ; ಧನುರ್ವಿದ್ಯಾ ಕುಶಲ : ಉಗ್ರಭಟಪಟಳಮನಾರ್ದುರುಳಿಚ್ಚಂ ಪೊರಳಿಚ್ಚಂ ಮರಳಿಚ್ಚಂ ಚಾಪಚಾಪಳಂ ಯುವರಾಜಂ (ಚಂದ್ರಪ್ರ. ೫-೧೦೦).
[ ಚಾಪ + ಚಾಪಳ (= ಚಾಪಲ) ]

**ಚಾಪಚ್ಯುತ** (ನಾ). ಬಿಲ್ಲು ಕೈಯಿಂದ ಜಾರಿದವನು ; ಬಿಲ್ಲನ್ನು ಕಳೆದುಕೊಂಡವನು; ಧನುಸ್ಸು ಇಲ್ಲದವನು : ಕ್ಷಿತಿಯೊಳ್ ಕ್ಷತ್ರಿಯರ ಧರ್ಮಸ್ಥಿತಿಯನರಿಯಾ ಕೃಷ್ಣ ಚಾಪಚ್ಯುತರನಪಗತವಾಹನರ ಪರಿಮುಕ್ತಕೇಶಿಗಳ . . . ಇರಿವುದು ಧರ್ಮವೇ ನಾವರಿಯೆವಿದನು(ಕುಮಾ.ಭಾ. ೨೬-೩೨).
[ ಚಾಪ + ಚ್ಯುತ ]

**ಚಾಪಟಂಕೃತಿ** (ನಾ). ಬಿಲ್ಲಿನ ಟೇಂಕಾರ; ಧನುಸ್ಸಿನ ಟಂಕಾರ ; ಒದವಿದ ಚಾಪಟಂಕೃತಿ ಭಯಂಕರವಾಗೆ ವರೂಥಭಾರದಿಂದದಿರೆ ನೆಲಂ (ಜಂಗಾಮಾ. ೪-೩೩). [ ಚಾಪ + ಟಂಕೃತಿ ]

**ಚಾಪಟಿಯ, ಚಾಪಟೆಯ, ಚಾವಟೆಯ** (ನಾ). ೧. ಜಾರ : " ಚಾಪ [ಪಾಠಾಂ. ವ] ಟಿಯರೆನಲ್ ಜಾರರೆಂದು ತಿಳಿಗೆ ವಿದಗ್ಧರ್ " (ಶಬ್ದನಿ. ೬೪). **ಚಾಪಟೆಯ** : ೨. ಧೃಷ್ಟ ; ಧೂರ್ತ. 'ಚಾಪಟೆಯತನ' ಪರಾ. **ಚಾವಟೆಯ** :೨. ನಟರಲಾ ನೀವ್ ಸುರಪುರ ಚಾವಟೆಯರೈ ಚತುರೋಕ್ತಿಗಳಲವಟಿಸಿದರೆ ನಾ ಮರಳುವೆನೆ (ಕುಮಾ.ಅ. ೨೦-೩೪) ; ಚಾವಟೆಯರನು ಚಿಮ್ಮುರಿಯ ಬಿಗಿಸುವೆನಮರಿತುರ ಕಡೆಗಣ್ಣ ಕಣ್ಣಿಯಲಿ(ಕುಮಾ.ಸ. ೨-೩೮).
[ ← ಮರಾ. ಜಾವಟ ]

**ಚಾಪಟೆಯ** 'ಚಾಪಟಿಯ' ನೋ.

**ಚಾಪಟೆಯತನ** (ನಾ). ಧೂರ್ತತನ; ಚಾಪಲ್ಯ: ಪಾಣೆಯಲಾ ಹರಾಧ್ವರ ಬಗೆಗೊಳದ ನಮ್ಮಾ ಹರೀಶ್ವರನೊಡನೆ ಹಳಚುವ ಚಾಪ [ಪಾಠಾಂ. ವ] ಟೆಯತನವ (ತೊರವೆರಾ. ೬-೪೭-೧). [ ಚಾಪಟೆಯ + -ತನ ]

**ಚಾಪಣೆ** (ನಾ). ಪ್ರಭಾವ ; ವರ್ಚಸ್ಸು (?) : ಯೋಗಿಗಳ ತಪದಿಂದ ಕೆಲಸಾರ್ಚಿ ವೈಸಿಕ ವಿರಾಗಿಗಳ ಧ್ಯಾನದಿಂ ಪರಿದೆಗೆದು ಬಿಸುಟಾಗಲಾಗವಿಹಿಕರ ಕ್ರಿಯಾಭ್ರಂಶಮೆನಿಸುತ ತತ್ತ್ವವಿದರ ಚಾಪಣೆಯ ಕಳೆದು ಬೀಗಿಸಿ ಸಮಾಧಿಯಂ ಮೌನಿಗಳ ಶುನಿಯಂತೆ ಕೂಗಿಪುದು (ವಿಜಂಕಾರಾ. ೨-೩೫-೨೬).
[ ←ಹಿಂ. ಮರಾ. ಛಾಪ್ ]

**ಚಾಪತಂತ್ರ** (ನಾ). ಬಿಲ್ವಿದ್ಯೆ; ಧನುರ್ವಿದ್ಯೆ; ಚಾಪಾಗಮ : ಮಗುಳೀ ಚಾ ಪ ತಂ ತ್ರ ವಿ ಶಾ ರ ದಾ ಎನುತೊಬ್ಬರೊಬ್ಬರ ಬಿರುದ ಮೂದಲಿಸಿ (ಕುಮಾ.ಭೀ. ೪-೧೫). [ ಚಾಪ + ತಂತ್ರ ]

**ಚಾಪಧರ** (ನಾ). ಬಿಲ್ಲನ್ನು ಧರಿಸಿದವನು ; ಬಿಲ್ಲುಗಾರ ; ಧನುರ್ಧಾರಿ : ಅಂತಿಸುವ ಚಾಪಧರ ನೀರದನಿಕರದ ಶರಾಸಾರವಂ ಮಂಜಿನ ಮುಟ್ಟೆಯನ ಹಿಮಕಿರಣನಾತ್ಮಕಿರಣಂಗಳಿಂ ಕಿಡಿಸುವಂತೆ ತನ್ನಂಬುಗಳಿಂ ಕಡಿಕಡಿದು ಕಿಡಿಸಿ (ಶಾಂತಿಪು. ೪-೦೪ ವ). [ ಸಂ. ]

**ಚಾಪಪ್ರಮುಕ್ತ** (ಗು). ಬಿಲ್ಲಿನಿಂದ ಬಿಡಲ್ಪಟ್ಟ : ಹೂಂಕೃತಿ ಬಿಲ್ಲಾಳಿರ ಗುಣಟಂಕೃತಿ ಚಾಪಪ್ರಮುಕ್ತ ಶರನಿಕರ ಮಹಾಭೀಂಕೃತಿ ನೋಳ್ಪಮರರ್ಗೆ ಭಯಂಕೃತಿಗೆಯ್ದುದು (ರಾಜಶೇ. ೬-೪೭). [ ಚಾಪ + ಪ್ರಮುಕ್ತ ]

**ಚಾಪಯೋಗ** (ನಾ). [ಜ್ಯೋತಿ] ಒಂದು ಯೋಗ : ಹತ್ತನೆಯ ರಾಶಿಯಿಂದ ನಾಲ್ಕನೆಯ ರಾಶಿಯವರೆಗಿರುವ ಏಳು ರಾಶಿಗಳಲ್ಲೂ ಗ್ರಹವಿದ್ದರೆ ಚಾಪಯೋಗ(ಜಾತಕ. ೦೩-೮ ಅಡಿಟಿ). Pಚಾಪಯೋಗದಲ್ಲಿ ಹುಟ್ಟಿದವನು ಪರಾಕ್ರಮಿಯಾಗುತ್ತಾನೆ ಎಂದು ಜ್ಯೋತಿಶಾಸ್ತ್ರದಲ್ಲಿ ಹೇಳಿದೆ.
[ ಚಾಪ + ಯೋಗ ]

**ಚಾಪರಿಕೆ** (ನಾ). ೧. (ಕರಾ). ತೆಂಗಿನ ಮರಕ್ಕೂ ಮತ್ತು ಹೆಡೆಗೂ ನಡುವೆ ಅಂಟಿರುವ ಬಲೆಯಂತಹ ನಾರಿನ ಪದರು ; ಸೀಬಿ. ೨. ತೆಳ್ಳಗಿರುವ ಹೆಂಗಸು. [ ? ]

**ಚಾಪಲ, ಚಾಪಳ** (ಗು). ೧. ಚಪಲವಾದ ; ಚಂಚಲವಾದ : ಚಾಪ ಬಾಣಂಗಳಿರ್ದಪುವೆಮ್ಮೊಳೆಂದೊಲಿಹ ಚಾಪಲ ಭ್ರೂಲತೆಯ ಚಂಚಲಾಪಾಂಗದ ಪುಳಿಂದಿಯರ್ತಮ್ಮ ತಮ್ಮ ಓವರಂ ಬಳಿವಿಡಿದು ಬರುತಿರ್ದರು (ಕೃಮಿಲಾ. ೨೮-೯೨). (ನಾ). ೨. ಅಸ್ಥಿರತೆ ; ಚಂಚಲತೆ : ಬಿನ್ನಪಂ ಗೆಯ್ವುದೆ ಧಾರ್ಷ್ಟ್ಯಂ ಸೇವೆಯುಂ ಚಾಪಲಮುಪಕರಣಂ (ಕಾದಂಬ. ೧೦೨). ೩. ಆತುರ ; ತೀವ್ರಗತಿ. **ಚಾಪಳ** : ೨. ದೂರಾಭೀಕ್ಷಣ . . . ಉರುತರ ಚಾಪಳಾದಿಗೆ ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಂ (ಶಮದ. ೦೯೫). ೩. ಕಿದಱಿಕೊಂಡರು ಭಟರಂ . . . ಮದದ ವೀರಾವೇಶ ರೋಷೋತ್ಕರಿತ ಚಾಪಳವ (ತೊರವೆರಾ. ೪-೧೨-೬). ೪. ಉತ್ತೇಜನ : ಕನಗೊರ್ನರಿಂ ಬಾಳೆಚೂತದ್ರುಮಂ ಚಾಪಳಮುಂ ಪುಂಸ್ಕೋಕಿಲಕ್ಕೋಲಗಿಸೆ (ಮಲ್ಲಿಪು. ೨-೩೪). [ ಸಂ. ]

**ಚಾಪಲತಾಯೋಗ** (ನಾ). ೧. ಬಿಲ್ಲಿನ ಸಂಬಂಧ. ೨. ಅಸ್ಥಿರವಾಗಿರುವಿಕೆ; ಚಂಚಲತೆ. ೧, ೨ : ಮುಖರತೆ ಪುರಳಿಯೊಳ್ ಚಾಪಲತಾಯೋಗಂ ಜೀವೆಯೊಳ್ ಪ್ರ ತಾ ರ ಣ ಂ ನಾವೆಯೊಳ್ . . . ಅಲ್ಲದಿಲ್ಲಮಲ್ಲಿಯುಂ (ಚಂದ್ರಪ್ರ. ೩-೯ ವ).
[ ಸಂ. (ಚಾಪಲತಾ + ಯೋಗ ; ಚಾಪ + ಲತಾ + ಯೋಗ) ]

**ಚಾಪಲತಾರೋಹಣ** (ನಾ). ೧. ಚಾಪಲ್ಯವುಂಟಾಗುವಿಕೆ. ೨. ಧನುಸ್ಸಿನ ಹೆದೆಯೇರಿಸುವಿಕೆ. ೧, ೨ : ಕಲಕಂಠಕ್ಕತನುಗೆ ಚಾಪಲತಾರೋಹಣ ವಿಕಾರಂ . . . ಮಾನವಕುಲಕ್ಕೆ ಕನಸಿನೊಳಮಿಂತಿವಿಲ್ಲಾ ನಾ ಡೊ ಳ್ (ಜಂಗಾಮಾ. ೧-೦೦೫). [ ಸಂ. (ಚಾಪಲತಾ + ಆರೋಹಣ) ]

**ಚಾಪಲತೆ** (ನಾ). ೧. (ಬಳ್ಳಿಯಂತಿರುವ) ಬಿಲ್ಲು ; ಧನುರ್ಲತೆ ಮದನ ಚಾಪಲತೆಯಂತೆ ಮುಷ್ಟಿಗ್ರಾಹ್ಯಮಧ್ಯೆಯುಂ . . . ಎನಿಸಿ (ಕಾದಂಪೂ. ೪೯) ; ಆಳಿವದೆಯುಂ ಸಡಿಲ್ಚಿ ನಿಲಿಸಿದ ತನುಚಾಪಲತೆಯಂತೆ ತನುಲತೆ ನಿಡುಜಡೆಯಿಂ ಕಡು ಬೆಡಂಗುವಡೆಯ (ರಾಜಶೇ. ೫-೦೯ ವ). ೨. ಚಪಲತೆ ; ಚಾಂಚಲ್ಯ. ೧, ೨ : ಆ ಚಾಪಲತೆ ಕರ್ವ ಕೋಮಳೆಯ ಚಾಪಲತೆಯಂತೆಯುಂ . . . ಇರ್ಪನ್ನೆಗಂ (ಪುಷ್ಪಪು. ೬-೩೪ ವ). [ಸಂ. ಚಾಪಲತಾ]

**ಚಾಪಲಾಘವ** (ನಾ). ಬಿಲ್ಲನ್ನು ಬಳಸುವಲ್ಲಿನ ಕೈಚಳಕ, ಹಸ್ತಕೌಶಲ, - ಜಾಣ್ಮೆ : ಇಂತಹ ಅಪೂರ್ವ ಚಾಪಲಾಘವವನ್ನು ನೋಡಿ ಸಂತೋಷಪಡಲು ನಾವೆಲ್ಲರೂ ಕುತೂಹಲಿಗಳಾಗಿರುವೆವು (ಶಾಂತಲಾ. ೨೨೫).
[ ಚಾಪ + ಲಾಘವ ]

**ಚಾಪಲ್ಯ** (ನಾ). ೧. ಚಪಲತೆ ; ಚಾಂಚಲ್ಯ ; ಚಂಚಲಸ್ವಭಾವ : ಚಾಪಲ್ಯವನ್ನು ಮಾ ಡ ಬೇ ಡ (ಪಾಳಂತ. ೦೦೩). ೨. ಚಟುವಟಿಕೆ ; ಉತ್ಸಾಹ: ಇದರಿಂದ ದೇಹಕ್ಕೆ ಚಾಪಲ್ಯ ಹುಟ್ಟಿ, ಮಿಂಚು ಹೆಚ್ಚಾಗುತ್ತದೆ (ಮುಂಬಯಿ. ೫-೦೭೨). ೩. ಬಯಕೆ ; ಲವಲವಿಕೆ. 'ವಾಕ್ಚಾಪಲ್ಯ' ಪರಾ. [ ಸಂ. ]

**ಚಾಪವಲ್ಲರಿ** (ನಾ). = ಚಾಪಲತೆ ೧: ನಿಬದ್ಧನಿಷಂಗಚಾಪವಲ್ಲರಿ ಮಿಸುಪಂಗಮೆತ್ತ ಘನಶಾಂತಿ ಸಮುನ್ನತಿಯೆತ್ತ (ಶಬಶಂ. ೨-೮೨).
[ ಚಾಪ + ವಲ್ಲರಿ ]

**ಚಾಪವಿದ್ದೆ** (ನಾ). ಧನುರ್ವಿದ್ಯೆ ; ಬಿಲ್ವಿದ್ಯೆ : ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ದೆಯೊಳ್ (ಎಕ. XIII, ೩೩೨-೪ : 929).
[ ಚಾಪ + ವಿದ್ದೆ (<ಬಿದ್ಯೆ) ]

**ಚಾಪವಿದ್ಯಾಧರ** (ನಾ). ಧನುರ್ವಿದ್ಯೆಯನ್ನು ಬಲ್ಲವನು ; ಬಿಲ್ಗಾರ : ಧರಧುರವ ಮಾಡಿದರೇಕೆ ಕರೆಕರೆ ಬಿರುದ ಬೆಸಗೊಂಬ ಗುರುತನಯನೋ ಚಾಪವಿದ್ಯಾಧರನೊ (ಕುಮಾ.ಭೀ. ೮-೩೫). [ ಸಂ. ]

**ಚಾಪವೇದ** (ನಾ). ಧನುರ್ವೇದ ; ಬಿಲ್ವಿದ್ಯೆ : ತಂದೆಯೈದನೆ ಚಾಪವೇದ ಮುಕುಂದನೈದನೆ (ಕುಮಾ.ದ್ರೋ. ೦೯-೭). [ ಚಾಪ + ವೇದ ]

**ಚಾಪಳ** 'ಚಾಪಲ' ನೋ.

**ಚಾಪಳಮತಿ** (ನಾ). ಚಪಲ ಸ್ವಭಾವದವನು ; ಚಂಚಲಚಿತ್ತ : ರೂಪಕದೊಳಂ ವಿಶೇಷಾಳಾಪೋದ್ದೇಶದೊಳಮಲ್ಲದುೞಿದೆಡೆಗಳೊಳಂ ಚಾಪಳಮತಿಗಳ್ ವಿರಸ ಸಮಾಸಮನಿಡದಿರ್ಕೆ ಬಹಂ ವಿಶೇಷಣಗಣಮಂ (ಕವಿರಾ. ೨-೨೬). [ ಚಾಪಳ (= ಚಾಪಲ) + ಮತಿ ]

**ಚಾಪಳವೃತ್ತಿ** (ನಾ). ಚಂಚಲತೆ ; ಚಪಲಸ್ವಭಾವ : ಚಾಪಳವೃತ್ತಿಯಂ ಮೆಱೆವ ತಾಣವಿದಲ್ತೆಮಗೆಂದು ಮಾನ್ಯ ಧಾತ್ರೀಪತಿಗಳ್ ಕೆಲರ್ ನೆಲನನಪ್ಪುವವೊಲ್ ತಲೆವಾಗಿದರ್ (ನಳಚಂ. ೪೩೨).
[ ಚಾಪಳ ( = ಚಾಪಲ) + ವೃತ್ತಿ ]

**ಚಾಪಳಿ** 'ಚಪ್ಪಟೆ' ನೋ.

**ಚಾಪಳೆ** (ನಾ). ಚಪಲಚಿತ್ತದವಳು ; ಚಂಚಲ ಸ್ವಭಾವದ ಹೆಂಗಸು : ಚಾಪಳೆಬರಾಲೋಚಿಸುತ ಕಡುಪಾಪಿಯಂಗಜನೆಂದು ಬೈಯುತ ತೋಪಿ ನೆಡೆಗಿಡದ್ಯದೆ ತಂದರು ಸತಿಯ ಸಂತೈಸಿ (ನಳಚ. ೦-೪೦).
[ ಚಾಪಳ (=ಚಾಪಲ) + – ಎ$_{2}$ ]

**ಚಾಪಾಗಮ** (ನಾ). ಧನುರ್ವಿದ್ಯೆ; ಬಿಲ್ವಿದ್ಯೆ ; ಧನುರ್ವೇದ : ನಿಮ್ಮ ನದಿರ್ಪುವಲ್ಲಿ ಚಾಪಾಗಮಮೇವುದಂತೆನಗೆ ಬಿಲ್ವರಮಾಜಿಯೊಳಾಂಪ ಗಂಡರಾರ್ (ಶಾಂತಿಪು. ೧೦-೧೨೨) ; ರಾಘವಂಗೆ ಚಾಪಾಗಮದೊಳ್ ಲವಂ ಶತಸಹಸ್ರಗುಣಂ ಮಿಗಿಲಾದಂ (ಶಂಕರಾಸು. ೦೬-೦೨). [ ಚಾಪ+ಆಗಮ ]

**ಚಾಪಾಗಮಜ್ಞ** (ನಾ). ಬಿಲ್ವಿದ್ಯೆಯಲ್ಲಿ ನೈಪುಣ್ಯ ಪಡೆದವನು : ಕಾಪಾಲಕರತಳ ಸದಾಪಾವನಾಂಗ ನಿರ್ವ್ಯಾಪಾರ ಘನಮೇರು ಚಾಪಾಗ ಮಜ್ಞ ನಿರ್ಲೇಪಾತ್ಮ . . . ಪಾಲಿಸೈ (ವೀಶೈಪು. ೭-೧-೧). [ ಸಂ. ]

**ಚಾಪಾಗಮಾಚಾರ್ಯ** (ನಾ). ೧. ಧನುರ್ವಿದ್ಯಾಗುರು. ೨. ದ್ರೋಣ: ಚಾಪಾಗಮಾಚಾರ್ಯನ ಘಡಾವಣೆ ಘಲ್ಲಿಸಿತು ಜಗವ (ಕುವ್ಯಾಆ. ೭-೨೦).
[ ಚಾಪಾಗಮ + ಆಚಾರ್ಯ ]

**ಚಾಪಾಚಾರ್ಯ** (ನಾ). = ಚಾಪಾಗಮಾಚಾರ್ಯ ೧ : ನಿಯಮಿಸುವರ್ . . . ನಿಜಶಿಕ್ಷೆಯಿನನುಪಮಮಾಗೆ ಚತುರ ಚಾಪಾಚಾರ್ಯರ್ (ಪುಷ್ಪಪು. ೨-೩೯). [ ಚಾಪ + ಆಚಾರ್ಯ ]

**ಚಾಪಾಭ್ಯಾಸ** (ನಾ). ಧನುರ್ವಿದ್ಯೆಯ ಅಭ್ಯಾಸ : ಚಾಪಾಭ್ಯಾಸವನ್ನು . . . ಮಾಡುವುದರಿಂದ . . . ಶಕ್ತಿಯನ್ನು ಉಂಟುಮಾಡಿ, ಮುಪ್ಪನ್ನೂ ಕೆಡಿಸುವುದು (ಸಳಪ್ಯ. ೩೬). [ ಚಾಪ + ಅಭ್ಯಾಸ ]

**ಚಾಪಿಸು** 'ಛಾಪಿಸು' ನೋ.

**ಚಾಪು$_{1}$**, ಜಾಪು, ಜೇಪು$_{1}$, ಝಾಪು, ದಾಪು$_{1}$ (ನಾ). ೧. ಹರವು; ವಿಸ್ತಾರ; ಚಾಚು; ಉದ್ದ. 'ಚಾಪುಗಲ್ಲು', 'ಚಾಪುಗಾಲು' ಪರಾ. ೨. ಆಟದಲ್ಲಿ ಉಪಯೋಗಿಸುವ ಸಣ್ಣ ಚಪ್ಪಟೆಯ ಕಲ್ಲು ; ಬಚ್ಚ. **ಜಾಪು**: ೩. ದೂರದೂರಕ್ಕೆ ಇಡುವ ಹೆಜ್ಜೆ ; ದೊಡ್ಡ ಹೆಜ್ಜೆ. 'ಜಾಪುಗಾಲು' ಪರಾ. **ಜೇಪು$_{1}$**: ೧. 'ಜೇಪುಗಾಲು' ಪರಾ. ೪. ನೆಗೆತ; ಹಾರಂವಿಕೆ. 'ಜೇಪುಕೊಡು' ಪರಾ. **ಝೂಪು**: ೩. 'ಝೂಪುಗಾಲು' ಪರಾ. **ದಾಪು$_{1}$** : ೩. ಒಂದು ಗಾವುದ ದಾರಿ ಎರಡೇ ದಾಪ ಮಾಡಿ . . . ಬಂದಳೆ ತಾಯವ್ವ (ನಾಪದ. ೦೬೭) : ಒಳಕೊಠಡಿಗೆ ನಾಲ್ಕೇ ದಾಪಿನಲ್ಲಿ ಚಿಮ್ಮಿ ಹೋಗಿ . . . ಮಗುವನ್ನು ಎತ್ತಿಕೊಂಡನು (ನಂಟರು. ೩೯). ೫. ದೂರ ದೂರಕ್ಕೆ ಇಡುವ ಹೆಜ್ಜೆಯ ಅಂತರದ ಒಂದು ಪ್ರಮಾಣ ; ಮಾರು ಗಾಲಿನ ಅಳತೆ : ಈ ರಾಜ್ಯದಲ್ಲಿ ನಾಯಿಯ ಬಾಲದಂತೆ ಒಂದು ದಾಪು ಉದ್ದ ಬಾಲವುಳ್ಳ ಮನುಷ್ಯರಿದ್ದಾರೆ (ಪ್ರಬಾಇ. II, ೨೦). ೬. ಗೋಲಿ ಆಡಿ ಸೋತಾಗ ಕೈ ಗೆಣ್ಣುಗಳಿಂದ ಭೂಮಿಯ ಮೇಲೆ ಗೋಲಿ ಯನ್ನು ನೂಕುವುದು (?) ; "ತೇಕು ; ಜೇಪು" (ಜಾನಕೋ. ೪).
[ ದೇ.॥ ಮಲ. ಚಾಮ್ಪು ]

**ಚಾಪು$_{2}$** (ನಾ). ಬಂದೂಕಿನ ಕುದುರೆ : ಕೋವಿ ಚಾಪು ರಿಪೇರಿ ಮಾಡಲಾಕೆ ಅಂತ . . . ಆಚಾರಿಗೆ ಕೊಟ್ಟಿಂದಾನೆ (ಪಂಜಪಂ. ೨೧೭).
[ ತಮಿ. ಚಾಪ್ಪು. ಚಾಪ್ ; ಮಲ. ತುಳು. ಚಾಪು./ಮರಾ. ಚಾಪ್./ ಪೋರ್ಚ್. ಛಾಪ=ಬಂದೂಕಿಗೆ ಹಾಕುವ ಲೋಹದ ತೆಳ್ಳನೆಯ ಪಟ್ಟಿ ]

**ಚಾಪು$_{3}$** (ನಾ). ೧. [ಸಂಗೀತ] ಮೃದಂಗಾದಿಗಳನ್ನು ಬಾರಿಸುವುದರಲ್ಲಿ ಒಂದು ಗತ್ತು : ಮೃದು ಮೃದಂಗದ ಚದುರ ಚಾಪು ಕೇಳುತಿದೆ (ದ್ರಾಕ್ಷಿದಾ. ೩೮-೩); ಹೊಸದಾಗಿ ಮೃದಂಗವನ್ನೊಂದನ್ನು ಮಾಡಿ ತಂದಾಗ . . . ಅದರ ಮಿಟ್ಟು, ಚಾಪು ಮತ್ತು ಟೊಪ್ಪಿ ನಾದಗಳನ್ನು . . . ಪರೀಕ್ಷಿಸು ತ್ತಿದ್ದರು (ಸಂಗೀತ. ೧೦೦). ೨. ಒಂದು ಬಗೆಯ ತಾಳ: ಆದಿ, ದೇಶಾದಿ, ರೂಪಕ, ಚಾಪು ಮತ್ತು ಝಂಪೆತಾಳಗಳಲ್ಲಿ ಬಹಳ ಹಾಡುಗಳನ್ನು ರಚಿಸಿದ್ದಾರೆ (ಸಂಗೀತ. ೨೯).

**ಚಾಪುಹಾಕು** = ತಬಲದ ಮೇಲೆ ವಿಶಿಷ್ಟವಾದ ತಾಳದ ಹೊಡೆತ ಹಾಕು : ಮಾದಣ್ಣ ಮಾತುಗಳಿಗೆ ಮುಗಿತಾಯದ 'ಚಾಪು' ಹಾಕಿದನು (ಬೆಳುಮ. ೨೩೮). [ ← ಮರಾ. ಛಾಪ್ ]

**ಚಾಪು$_{4}$** (ನಾ). ತೆನೆಯಾದ ದಂಟಿನ ಸೂಡು; "ತೆನಿದಂಟು ಒಟ್ಟಿದ್ದು": (ಜಾನಕೋ. ೩೩). [ ←ಮರಾ. ಚಾಪ್ = ರಾಶಿ ; ಸಮುದಾಯ ]

**ಚಾಪುಗಲ್ಲು** (ನಾ). ಅಗಲವಾಗಿ ಮಟ್ಟವಾಗಿರುವ ಕಲ್ಲು ; ಚಪ್ಪಟೆ ಯಾದ ಕಲ್ಲು : (೬). [ ಚಾಪು$_{1}$ + ಕಲ್ಲು (<ಕಲ್$_{3}$) ]

**ಚಾಪುಗಾಲು**, ಜಾಪುಗಾಲು ಜೇಪುಗಾಲು, ಝಾಪುಗಾಲು, ದಾಪುಗಾಲು (ನಾ). ದೂರದೂರಕ್ಕೆ ಇಡುವ ಹೆಜ್ಜೆ ; ದಾಟುಗಾಲು : (೬). **ಜಾಪುಗಾಲು** : ಗೋಣು ಹಾಕುತ್ತಾ ಜಾಪುಗಾಲನ್ನು ಎತ್ತಿಡುತ್ತ . . . ತಿರುಗಿದನು (ಅಷ್ಟ. ೩೩೭). **ಜೇಪುಗಾಲು** : ಒಬ್ಬ ಮನುಷ್ಯ ಬೇಲಿಯ ಆಚೆಗೆ ಜೇಪುಗಾಲು ಹಾಕುತ್ತ ಹೋದುದನ್ನು ಕಂಡೆ (ಸ್ಮೃತಿಜಿ. ೩೦೯) ; ಜೇಪುಗಾಲಿನಿಂದ ಯುದ್ಧವೀರನ ಭಂಗಿಯಲ್ಲಿ ನಿಲ್ಲುವನು (ಹುಚ್ಚಾಟ. ೩೮); **ಝಾಪುಗಾಲು** : ತಂಗಿಯು ಝಾಪುಗಾಲಿಟ್ಟು ಓಡುವವರಂತೆ ನಡೆಯುತ್ತಿದ್ದಾಳೆ (ಹೊಸಜ್ಞ. ೧೯೩). **ದಾಪುಗಾಲು** : ಶೀನಪ್ಪ ದಾಪುಗಾಲಿ ನಿಂದ ಪಡಸಾಲೆಯ ಬಾಗಿಲ ತನಕ ಹೋಗಿ ಒಳಗೆ ಇಣಕಿ ನೋಡಿದ (ಅನಾಥ. ೨೪).

**ದಾಪುಗಾಲು ಹಾಕು** = ದೂರದೂರಕ್ಕೆ ಹೆಜ್ಜೆಯಿಡು : ಬಾದಾಮಿ ಮರದಿಂದ ಮನೆಯ ಕಾರ್ನಿಸ್‌ವರೆಗೆ ದಾಪುಗಾಲು ಹಾಕಿ ನಿಲ್ಲುತ್ತಿದ್ದ ಪಿಶಾಚಿ (ನಿಲಂಥ. II, ಮುನ್ನುಡಿ X) ; ದಾಪುಗಾಲು ಹಾಕಿ ಮಂಟಪವನ್ನು ಸಮೀಪಿಸಿದ (ಹೇಮುಕೂ. ೨೪). [ ಚಾಪು$_{1}$ + ಕಾಲು$_{1}$ (< ಕಾಲ್$_{1}$) ]

**ಚಾಪೆ**, ಛೇಪೆ$_{2}$ (ನಾ). ನೆಲದ ಮೇಲೆ ಹಾಕುವ ಗರಿ, ನೊದೆಹುಲ್ಲು, ಜೊಂಡು, ಬಿದಿರು ಮೊದಲಾದುವುಗಳಿಂದ ಹೆಣೆದ ಹಾಸು ; ಮಂದಲಿಗೆ: "ವಂಶಾಸನಂ ಚಾಪೆ" (ಮಂಗರಾ. ೬೨-೨೦); ಉರ್ವೀತಳಮಂ ತಾಂ ಚಾಪೆವೊಲ್ ಸುತ್ತಿದಂ (ಸೋಮೇಶ. ೪೪): ವರ್ಷವಂದಕ್ಕೆ ಬ್ರಾಹ್ಮಣರಿಗೆ ಹಾಸುವ ಬಿದಿರ ಚಾಪೆ ಕುಳಿರುವ ಚಕ್ಕಳಕ್ಕೆ ವೊಂದು ಹಣ (ಎಕ. VIII, ತೀರ್ಥಹ.೩೩-೩೮; ಸು. 1430); ಒಬ್ಬ ಚಾಪೇ ಕೆಳಗೆ ತೂರಿದರೆ ಇನ್ನೊಬ್ಬ ರಂಗೋಲಿ ಕೆಳಗೆ ತೂರಿದ (ಗಾದೆ). **ಛೇಪೆ$_{1}$**: ಒಬ್ಬ ಗೊಲ್ಲ ರಾಕೆಯು . . . ಕೈಯಲ್ಲಿ ಛೇಪೆ ಹೆಣೆಯುತ್ತ (ತಿರುಗು. ೦೪).
[ ದೇ.॥ ತಮಿ. ಚಾಪ್ಪೈ ; ಮಲ. ಚಾಪ್ಪ = ಗುಡಿಸಲು; ತುಳು. ಚಾಪೆ : ತೊದ. ಸೋಪಿ; ತೆಲು. ಚಾಪ ; ಪರ್ಜಿ. ಚಾಪ್./ ಸಂ. ಛಪ = ಬಿದಿರು ]

**ಚಾಪೆಗೂಳು** (ನಾ). ಚಾಪೆಯ ಮೇಲೆ ಹರಡಿದ ಅನ್ನ ; (ಭೂರಿ ಸಂ ತರ್ಪಣೆಗೆ ತಯಾರಿಸಿದ) ಅಧಿಕವಾದ ಕೂಳು: ಪೀಗಲ್ಲದೆ ಚಾಪೆಗೂಳಿನ ಭಟರಂತೆ ಓಗರ ಮೇಲೋಗರದಾಸೆಗೆ ಲೇಸಿನ ದ್ರವ್ಯಕ್ಕೆ ಆಸೆ ಮಾಡಲಿಲ್ಲ (ಬಲೇಶ್ವ. ೦೪೪). [ ಚಾಪೆ + ಕೂಳು (< ಕೂೞ್$_{1}$) ]

**ಚಾಪೆಹಿಡಿ** (ಕ್ರಿ). ಚಾಪೆ ಹಿಡಿದು ಮಲಗು ; ಹಾಸಿಗೆ ಹಿಡಿ ; ರೋಗ ಗ್ರಸ್ತವಾಗು ; "ನೆಲಹಿಡಿ; ಬೇನೆಯಿಂದ ಬಳಲು" (ಜಾನಕೋ. ೩೩) : ನಿನ್ನನ್ನು ಕಾಣದೆ ಪ್ರಮಿಳೆ ಸಾಯೋದಕ್ಕೆ ಸಿದ್ಧವಾಗಿದ್ದಾಳೆ. ಚಾಪೆ ಹಿಡಿದಿದ್ದಾಳೆ (ಮಲೆ. ೧೯೦). [ ಚಾಪೆ + ಹಿಡಿ$_1$ (<ಪಿಡಿ$_1$) ]

**ಚಾಬಕ್‌ಸವಾರಿ** (ನಾ). ಕುದುರೆಯ ನಡಗೆಗಳಲ್ಲಿ ಒಂದು ಬಗೆ: "ಹಾರುತ್ತಾ ಸುತ್ತು ತಿರುಗುವ ಚಾಬಕ್‌ಸವಾರಿ ಸುಳಿನಡಿಗೆ ಹಾಯ್ದು ಹೋಡುವಿಕೆ . . . ಈ ನಡಿಗೆಗಳೈದೂ ಅಶ್ವಧಾರೆಗಳು" (ಸಿದ್ಧಾಂತ. ೨೦೩). [ ← ಪಾರ. ಚಾಬುಕ್‌ಸುವಾರೀ ; ಹಿಂ. ಚಾಬುಕ್‌ಸವಾರೀ ; ಮರಾ. ಚಾಬೂಕ್‌ಸ್ವಾರೀ = ಕುದುರೆಯನ್ನು ತಿದ್ದುವಿಕೆ,–ಪಳಗಿಸುವಿಕೆ ]

**ಚಾಬೂಕಸ್ವಾರ** (ನಾ). ಕುದುರೆಯನ್ನು ಪಳಗಿಸುವವನು : ವಿಕ್ರಮ ರಾಜನು ಚಾಬೂಕಸ್ವಾರನನ್ನು ಸಾರಂಗಬಣ್ಣದ ಕುದುರೆ ಮೇಲೆ ಸ್ವಾರಿಯಂ ಮಾಡಿಸಲು (ಶನಿಮಾ. ೮).

[ ←ಪಾರ. ಚಾಬುಕ್‌ಸುವಾರ್ ; ಹಿಂ. ಚಾಬುಕ್‌ಸವಾರ್ ; ಮರಾ. ಚಾಬೂಕ್‌ಸ್ವಾರ್ ]

**ಚಾಬೂಕು** 'ಚಬುಕು' ನೋ.

**ಚಾಮ, ಚಾಂವ** (ನಾ). ಶ್ಯಾಮ ; ಕೃಷ್ಣ : "ಚಾಮ–ಶ್ಯಾಮ = ನೀಲ" (ಶಬ್ದಕೋ. ೧೨). **ಚಾಂವ**: 'ಚಾಂವಯ್ಯ' ಪರಾ. [<ಸಂ. ಶ್ಯಾಮ]

**ಚಾಮಕಬ್ಬೆ** (ನಾ). ಒಬ್ಬಾಕೆಯ ಹೆಸರು : ಚಾತುರ್ವರ್ಣ್ಣ ಶ್ರವಣಸಂಘ ಕಾಧಾರರಪ್ಪ ಚಾಮಕಬ್ಬೆಗಳ ನಿಸಿಧಿಗೆ (ಎಕ. XV, ಹೊಳೆನ. ೬೭-೮ ; ಸು. ೯೫೦). [ ಚಾಮ + ಅಕ$_1$ (<ಅಕ್ಕ$_1$) + ಅಬ್ಬೆ$_1$ ]

**ಚಾಮಯ್ಯ** (ನಾ).ಒಬ್ಬಾತನ ಹೆಸರು: ಬೆಣ್ಣೆಯೂರ ದೇವಗಣನುಂ ಮಳ್ಳ ವೂರದ ಪೆವರ್ಮ್ಮಡಿಗಾವುಣ್ಣನುಂ ಉರ್ವ್ವವಳ್ಳಿಯ ಚಾಮಯ್ಯನುಂ ಇನ್ನವೂರದ ಏಟಿಯ್ಯನುಂ ಮಜ್ಜಿಗಳಂ (ಎಕ. VI, ಚಿಕ್ಕಮ. ೩-೦೬ ; ೯೦೦ ?) ; ನೆಲ್ಲಲ್ಲಿಯೂರ ಚಾಮಯ್ಯಂ ಪತಿಹಿತನ್ ಪಣ್ಣ ಪೆಣ್ಡಿರನುಡೆ ಯುಟ್ಟಲುಂ ಎಟ್ಟಿನ ತುಱುಗೊಳಲುಂ ಅಟ್ಟಿ ಸತ್ತನ್ (ಎಕ.X,ಮುಳಬಾ. ೦೬೩-೨ ;ಸು. ೯೫೦). [ ಚಾಮ + ಅಯ್ಯ$_1$ ]

**ಚಾಮರ** (ನಾ). ಚವರ ; ಚವಂರ : "ಚಾಮರ ಚಮರಮದಕ್ಕು" (ಶಬ್ದಮಂ. ೨೬೭): ಕರೆಗಳ್ ಮಿಳ್ಳಿಸೆ ಚಾಮರಂಗಳೆಲರಿಂದಂ . . . ಬೆಳ್ದಿಂಗಳಂತಿರೆ ತೋಱುತ್ತಿಸೆವುತ್ತರೀಯ ವಸನಂ (ಕಾದಂಪೂ. ೨೫) ; ಇಕ್ಕುವ ಸೀಗುರಿಯ ಬೀಸುವ ಚಾಮರದ ವಿಲಾಸಿನಿಯ . . . ಸವಿದನಿಗಳ್ಗೆ ಕಿವಿಗೊಡುತ್ತೆ (ಬಸವ. ೬-೧೬) ; ಎತ್ತಿದ ಸತ್ತಿಗೆ ಬರುದಿನ ಡಾಳಿನ ಮೊತ್ತ ಡಾಳಿಪ ಚಾಮರದ ಬಿತ್ತರದಿನವುಂಡಲವ ಮುಸುಕಿ ನೆಲ ಕತ್ತಲೆಯಾಯಿತು ಧರೆಗೆ (ಕಂಸವಿ. ೦೦-೨೬) ; ತೆಂಗುಗರಿಯ ಚಾಮರವು, ಸುತ್ತು ಸಂಪಿಗೆಯ ತಂಪು ಗಾಳಿ (ನಲಿಮು. ೩೭-೦೩).

**ಚಾಮರವನಿಡು** = ಚಾಮರದಿಂದ ಗಾಳಿ ಹಾಕು : ತರಣಿಶಶಿಗಳು ಚಾಮರವನಿಡುತಿರೆ (ಬಸವ. ೦-೦೬). **ಚಾಮರಸೇವೆ** = ೧. ದೇವರಿಗೆ ಚಾಮರ ಬೀಸುವ ಸೇವೆ ; ಷೋಡಶೋಪಚಾರಗಳಲ್ಲಿ ಒಂದು. ೨. (ಆಲಂ). ಕಸಪೊರಕೆಯಿಂದ ಹೊಡೆಯುವುದು : ಅವರಿಗೆ ಚಾಮರ ಸೇವೆಯಾಗದ ಹೊರತು ಬುದ್ಧಿ ಬರುವುದಿಲ್ಲ (ರೂಢಿ). **ಚಾಮರಹಾಕು** = ಚಾಮರಬೀಸು; ಗಾಳಿಬೀಸು: ಭೀಮನು ಕೃಷ್ಣನಿಗೆ ಸತ್ತಿಗೆ ಹಿಡಿದನು; ಅರ್ಜುನನು ಚಾಮರ ಹಾಕಿದನು (ರಾಜಕೂ. ೨). [ ಸಂ. ]

**ಚಾಮರಗ್ರಾಹಿಣಿ** (ನಾ). ಚಾಮರ ಬೀಸುವವಳು: ಆಗಳುಭಯಪಾರ್ಶ್ವದೊಳಂ ಚಾಮರಗ್ರಾಹಿಣಿಯರ್ಕಳ್ ಕಾಶಕಣಿಶಂಗಳಿಂದೆಸೆವ ಶರಲ್ಲಕ್ಷ್ಮಿಯಂ ನೆನೆಯಿಸೆ (ಶಂಕಾಮಾ. ೩-೮೩ ವ): ಸೂಳಱಿದು ಕೋಳಂ ನೆಗಪಿ ಚಾಮರಮಂ ಬೀಸುವ ಚಾಮರಗ್ರಾಹಿಣಿಯರಿಂ (ರಾಜಶೇ. ೩-೦೯ವ).

[ ಸಂ. ಚಾಮರಗ್ರಾಹಿಣೀ ]

**ಚಾಮರಧಾರಿಣಿ** (ನಾ). = ಚಾಮರಗ್ರಾಹಿಣಿ : ಉತ್ತರಗರ್ಭಗುಡಿಯ ಪಶ್ಚಿಮದಲ್ಲಿ ಚಾಮರಧಾರಿಣಿ (ಹೊಯ್ಸವಾ. ೦೩೩).

[ ಸಂ. ಚಾಮರಧಾರಿಣೀ ]

**ಚಾಮರಮಿಕ್ಕು, ಚಾಮರವಿಕ್ಕು** (ಕ್ರಿ). ಚಾಮರ ಹಾಕು : ನೆರೆದಂತಃ ಪುರಕಾಂತೆಯರ್ ಪಲಬರುಂ ಸೇಸಿಕ್ಕೆಯುಂ ವಾರಸೌಂದರಿಯರ್ ಚಾಮರಮಿಕ್ಕೆಯುಂ (ಆದಿಪು. ೦೨-೦೩೦). **ಚಾಮರವಿಕ್ಕು**: ಗಾಳಿಯಲಿ ತಲೆದೂಗುತಿವೆ ಹುಲ್ಲು ಹಸ್ಲಂಬ ಮೃದುನಾದದಿಂದ ಚಾಮರವಿಕ್ಕುವಂದದಲಿ (ಕೋಗಿಲೆ. ೦೦-೦೨). [ ಚಾಮರ + ಇಕ್ಕು ]

**ಚಾಮರರೇಖೆ** (ನಾ). [ ಸಾಮುದ್ರಿ] ಹಸ್ತರೇಖೆಗಳಲ್ಲಿ ಒಂದು ; ಐಶ್ವರ್ಯವನ್ನು ಸೂಚಿಸುವ ರೇಖೆ: ಹಲರೇಖೆಯು ಚಾಮರರೇಖೆಯು ಯಿರಲು ರಾಜ್ಯಾಧಿಪತಿಯಾಗಿ ನಿತ್ಯದಲ್ಲಿಯೂ ಸಂಪತ್ತು ಅಭಿವೃದ್ಧಿಯಾಗುವುದು (ಸಾಮುಲ. ೦೦೩-೩). [ ಚಾಮರ + ರೇಖೆ ]

**ಚಾಮರವಿಕ್ಕು** 'ಚಾಮರಮಿಕ್ಕು' ನೋ.

**ಚಾಮರಿಗ**(ನಾ). ಚಾಮರವನ್ನು ಹಿಡಿಯುವವನು : ಚಾಮರ ಬೀಸುವ ಉದ್ಯೋಗದವನು : ಅಡಪಿಗಂ, ಚಾಮರಿಗಂ, ಕರಹಟಿಗಂ (ಶಮಾಡ. ೦೯೬ ಪ್ರಯೋ). [ ಚಾಮರ + – ಇಗ ]

**ಚಾಮರಿಗಿತಿ** (ನಾ).ಚಾಮರ ಹಾಕುವ ಉದ್ಯೋಗದವಳು: ಚಾಮರಿಗಿತಿ, ಮದ್ದಳೆಗಿತಿ(ಶಮಾಡ. ೨೦೮ ಪ್ರಯೋ).

[ ಚಾಮರಿಗ + – ಇತಿ (< – ಇತ್ತಿ) ]

**ಚಾಮರಿಯ** (ನಾ). = ಚಾಮರಿಗ : ಹೊರೆಯ ಹಡಪಿಗ ಚಾಹಿಯರ ಚಾಮರಿಯರರಸು ನೋಯಿಸಿದ ಗೆಲವಿನ ಗರುವತನವನು ಬಡ್ಡಿ ಸಹಿತು ಗುಳಿಚಿದನು ಪಾರ್ಥ (ಕುಮಾ,ಕ. ೨೪-೩೩). [ <ಸಂ. ಚಾಮರಿಕ ]

**ಚಾಮರಿಸು** (ಕ್ರಿ). ಹೊಂದಿಸು; ಅಳವಡಿಸು: ಬಣ್ಣದ ವಸ್ತ್ರವ ಕೆನ್ನೆಗೆ ಚಾಮರಿಸಿ ಸಣ್ಣ ರುದ್ರಾಕ್ಷಿ ಸಕಲಾತಿ . . . ಅಳವಟ್ಟು ಅಪ್ಪಮರ್ತ್ಯಕ್ಕೆ ಇಳಿದಾರು (ಜಗೀತ. ೯೩). [ < ಸಾವರಿಸು ? ]

**ಚಾಮಿಕರ** (ನಾ). = ಚಾಮೀಕರ : ಚಾಮಿಕರಾಂಚಿತ ಚಾಮರ ತಳಿತಭರಾಮ ಧವಳಾತಪತ್ರಗಳು (ಭರವೇ. ೨-೦೦) ; ಅರಮನೆಯ ಚೋರರುಂ ಪೊಕ್ಕು ಚಾಮಿಕರ ನವರತ್ನ ಭೂಷಣವ ಕದ್ದು (ಪ್ರಭುಪು. ೯-೦೯). P ಇದು ಛಂದಸ್ಸಿಗಾಗಿ ಅಳವಡಿಸಿಕೊಂಡಿರುವ ರೂಪ.

[ < ಸಂ. ಚಾಮೀಕರ ]

**ಚಾಮೀಕರ** (ನಾ). ಚಿನ್ನ ; ಹೊನ್ನು ; ಬಂಗಾರ : ಚಾರು ಚಾಮೀಕರ ಘಟಿತ ಯಂತ್ರವ್ರಾತದಿಂ ಕುಂಕುಮ ಘನರಸಮಂ ಸಿಂಪಿಸುತ್ತಿರ್ದನೆಂಬಂತಿರಲಿತ್ತಂ ನೀಳ್ದು ಪೊಣ್ಮುತ್ತು . . . ಶೋಣ ಸೂರ್ಯಾಂಶುಜಾಲಂ (ಕಾದಂಪೂ. ೦೯೦) ; ಚಾಮೀಕರದ ಗದ್ದುಗೆಯಖಿಳ ಸಾಮಂತರನು ಪೃಥ್ವೀಪಾಲರನು ನೆರಹಿದನು (ಕುಮಾ,ಆ. ೮-೨೯) ; ಗೋಪುರದ ಚಾಮೀಕರದ ದೀಪ್ತಿ (ಶ್ರೀರಾಮಾ. ೩೩೩-೩೪). [ ಸಂ. ]

**ಚಾಮೀಕರಪರಿಷ್ಕೃತ** (ಗು). ಚಿನ್ನದಿಂದ ಲೇಪನ ಮಾಡಲ್ಪಟ್ಟ: ಬಂಗಾರದ ಒಪ್ಪವಿಕ್ಕಿದ: ಅರಸ ತೊಡು ಕವಚವನು ಚಾಮೀಕರ ಪರಿಷ್ಕೃತ ವಜ್ರಮಯ ಬಂಧುರದ ಸೀಸಕವಿದೆ . . . ಪತಿಕರಿಸು (ಕುಮಾ,ಗ. ೩-೩೯). [ ಚಾಮೀಕರ + ಪರಿಷ್ಕೃತ ]

**ಚಾಮೀಕರಪೀಠ** (ನಾ). ಚಿನ್ನದ ಪೀಠ ; ಬಂಗಾರದ ಆಸನ : ಆಸ್ಥಾನ ಮಂಡಪೋಪಗತ ಚಾಮೀಕರಪೀಠಾಧ್ಯಾಸಿತನಂ ತ್ರಿವಿಷ್ಟಪಗುರುವಂ ಕಂಡು (ಶಾಂತಿಪು. ೮-೬೬ ವ). [ ಚಾಮೀಕರ + ಪೀಠ ]

**ಚಾಮುಂಡ** (ನಾ). ಒಬ್ಬಾತನ ಹೆಸರು : ಜಿನಗೃಹವಂ ಬೆಳ್ಗೊಳದೊಳ್ವ ನಮೆಲ್ಲಂ ಪೊಗಳೆ ಮನ್ನಿ ಚಾಮುಣ್ಡನ ನನ್ದನನೊಲವಿಂ ಮಾಡಿಸಿದಂ (ಎಕ. II, ೦೨೦-೨ ; ಸು. ೯೯೬) ; [ ? ]

**ಚಾಮುಂಡಯ್ಯ** (ನಾ). = ಚಾವುಂಡ : ಚಾ ಮು ಣ್ಡ ಯ್ಯ (ಎಕ. I.I, ೪೦೩-೦ ; ಹು. 1000) ; ಶ್ರೀಯೂರ ಚಾವುಣ್ಡಯ್ಯನ ಭೂಮಿಯಲು ಪತ್ತುಕೊಳಗ ಬೆದೆಗದ್ದೆಯುಂ (ಮೈಅರಿ. ೦೯೪೩, ೨೮-೧೨ ; 1032). [ ಚಾಮುಂಡ + ಅಯ್ಯ$_1$ ]

**ಚಾಮುಂಡರಾಜ** (ನಾ). = ಚಾವುಂಡ : ಶ್ರೀ ಚಾ ಮು ಣ್ಡ ರಾ ಜ ೦ ಮಾಡಿಸಿದಂ (ಎಕ. I.I, ೧೬೩೦ ; ಹು. ೯೮೩). [ಚಾಮುಂಡ + ರಾಜ ]

**ಚಾಮುಂಡಿ** (ನಾ). ೧. ಸಪ್ತಮಾತೃಕೆಯರಲ್ಲಿ ಒಬ್ಬಳು ; ಶಕ್ತಿದೇವತೆ. ೨. ದುರ್ಗೆ ; ಪಾರ್ವತಿ : ಬ್ರಾಹ್ಮಿ ಮಾಹೇಶ್ವರಿ . . . ಚಾಮುಂಡಿಯೆಂಬವರೇ ಕ್ರಮದಿಂದಾ-ಷಡ್ಜಾದಿ ಸ್ವರಾಧಿದೇವತೆಗಳು (ವಿವೇಕ. ೨೪೦); ಲೋಕಮಾತೆ . . . ಚಾಮುಂಡಿಯೆಂಬವಳು ಜನವನ ಕುಲದೇವತೆ (ಕಂಸವಿ. ೦೦-೭೫) : ಚಂಡಿ ಚಾಮುಂಡಿ ಪೇಳ್ ಬೇಕಾದುದೇನು (ಗು. ೩೬-೯).

ಚಾಮುಂಡಿಯ ಬೆಟ್ಟ, ಚಾಮುಂಡಿಬೆಟ್ಟ = ಮೈಸೂರ ಬಳಿಯಿರುವ ಒಂದು ಬೆಟ್ಟ; ಚಾಮುಂಡಿ ದೇವತೆ ನೆಲಸಿರುವ ಬೆಟ್ಟ: ಚಾಮುಂಡಿಯ ಬೆಟ್ಟಕ್ಕೆದಿದ ತುಱುಗಳ ಸ್ತೋಮದ ಮೇಲೆ ಬದ್ದಿಱಿದು (ಕಂಸವಿ. ೦೩-೬೨) ; ಯಾತ್ರಿಕರು ಬೆಳಗ್ಗೆ ಚಾಮುಂಡಿಬೆಟ್ಟಕ್ಕೆ ಹೊರಟರು (ರೂಢಿ). [<ಸಂ. ಚಾಮುಂಡಾ ]

**ಚಾಮೂರ** (ಗು). ಜಿಂಕೆಗೆ ಸಂಬಂಧಿಸಿದ: ಹರಿ ಹರಿಣನಾಗೆ ಸಲೆ ಕೊಂದು ಸೀಳ್ದ ಚಾಮೂರಮಾಲೆಯುಮನ್ನಗಳ ಕರಕಟಗಳೊಳವೆ ನೋಡ (ಪದ್ಮಚ. ೦೦-೨೬). 'ಚಮೂರು' ಪರಾ. [<ಸಂ. ಚಾಮೂರವ ]

**ಚಾಮೊಂತ** (ನಾ). ಸಾಮಂತ ; ಮಾಂಡಲಿಕ.

ಚಾಮೊಂತಚೂಡಾಮಣಿ=ಸಾಮಂತ ಶ್ರೇಷ್ಠ; ಮಾಂಡಲಿಕ ಶ್ರೇಷ್ಠ; ಒಂದು ಬಿರುದು : ಕಿಲ್ಲಗಾವುಣ್ಡ ಚಾವೊನ್ತಚೂಡಾಮಣಿ (ಮೈಅರಿ. ೦೯೩೨, ೩೭-೭ ; ಹು. 950). [<ಸಂ. ಸಾಮಂತ ]

**ಚಾಯ**, ಚಾಯೆ (ನಾ). ೧. ಬಣ್ಣ ; ವರ್ಣ : ಪದ್ಮರಾಗವದು ಕಾಣೆ ಜಾತರಂಗಂ ಕುರುವಿಂದಂ ಸೌಗಂಧಿಕಂ ಗದಾಂಗ ನೀಲಯುಗ್ಮನಾಮಕವೆಂಬೀ ನಾಲ್ದೆಱನಾಗಿರ್ಕುಮಾ ಚತುರ್ವಿಧಕ್ಕೆ ಬೇಱೆ ಬೇಱೆ ಚಾಯಂಗಳಂ ಪೇಳ್ದಪೆಂ ಕೇಳಿಂ (ಜಾತಾಸ್ಕ. ೨-೧-೭೦ ವ) : ಬಿಳಿ ಚಾಯದ ಉಡುಪಿನೊಡನೆ ಜರದ ರುಮಾಲನ್ನು ಸುತ್ತದ ಬೆಳುವಲದ ಕೆಂಚ (ಚೆಲುವ) ನಿಲ್ಲವೆಂದರೆ ಅತಿಶಯೋಕ್ತಿಯಾಗದು (ಕನ್ನಡಾ. ೦೭೮). ೨. ಹೊಳಪು ; ಕಾಂತಿ : ಅರು ಕಲ್ಲೊಳ್ಳ ಏರಿತಂದನ ಭೀಮ ದಾರಿ ಕಂಕಣದ ಕರವೀರ ಈ ಮನಿಗೆ ಚಾಯವಾದಾವೆಂದು ನಸುನಕ್ಕ (ಲೋಕಗೀ. ೨೦) ; ಅಯವಾದವು ಬಂಡಿ ಚಾಯವಾದವು ಕುರುಜು ರಂಗಯ್ಯ ತೇರು ಹೊಸತೇರು ಗೊಂಬೆತೇರು ರಾಣರಂಗಡಿಗೆ ಹರಿದಾವೊ (ಹಳ್ಳಿಯ. ೨೮) : ಅಯುಳ್ಳ ಅತಿಗಲ್ಲ ಚಾಯುಳ್ಳ ಮತಿಗಲ್ಲ ಸೂರಿದ ಮತಿಯಂಬು ಕರಸಿಯು ಗೋರಿ ಕಲ್ಲಿಗೆ ನಾರೇರ್ಯ್ಯವರು ನೆರೆದಾರ (ಲೋಕಗೀ. ೦೮). ಚಾಯೆ: ೧. ಈ ನಾಡ ಅರಿಸಿಣ ಚಾಯೆ ಇಲ್ಲವೆಂದು ಗೋವೆ ಮಲೆನಾಡ ಅರಸಿಣ ಅವರಪ್ಪ ಆನೆಯ ಕೊಟ್ಟು ತರಿಸ್ಯಾರಾ (ಲೋಕಗೀ. ೩೦). ೩. ರೀತಿ ; ಮಾರ್ಗ ; ಕ್ರಮ : ರಾಯರ ಮೆಚ್ಚಿದು ನಿಮಗೀ ಚಾಯೆಯ ಪೊಲನಲ್ಲು ಕಲ್ಲು ವಿಲ್ಲಿದನದೞಿಂ ದಾಯಂಗಿಡದೀಯೆಡೆಯೊಳ್ ತಾಯುಂ ಸವಿಗಾರ್ತಿಯೊಡನೆ ತರ್ಪುದೆ ದಾಯಂ (ಚಿಕವಿ. ೩-೦೭೭). ೪. ನೆರಳು. [ <ಸಂ. ಛಾಯಾ ]

**ಚಾಯಬೇರು**, ಚಾಯಿಬೇರು, ಛಾಯಾವೇರು (ನಾ). ಕೆಂಪು ಬಣ್ಣ ಹಾಕಲು ಉಪಯುಕ್ತವಾದ ಒಂದು ಬಗೆಯ ಕೆಂಪು ಬಣ್ಣದ ಬೇರು: ಮಜ್ಜಿಗೆ ಹುಲ್ಲಿನ ಬೇರು (ಚಾಯಬೇರು) ಹಿಟ್ಟುಳಕನ ಬೇರು . . . ಪುತ್ತು ಸಕ್ಕರೆ ಇಷ್ಟನ್ನು ಅರೆದು ಕಲಸಿಕೊಡಲು ಆ ತಕ್ಷಣವೇ ಮೂತ್ರ ಬಿಡುವುದು (ಸಕಚ್ಛ. ೪೯೪ ಪರಿ). ಚಾಯಿಬೇರು: ರಸಾಂಜನ, ಚಾಯಿಬೇರು ಇವನ್ನರೆದು ಅಕ್ಕಿ ತೊಳೆದ ನೀರಿನೊಡನೆ ಕೊಟ್ಟರೂ ರಕ್ತವಾಂತಿ, ಅಜೀರ್ಣದಿಂದಾದ ಉಬ್ಬಸ ಇವು ಹೋಗುವುವು (ಸಕಚ್ಛ. ೪೨೫). ಛಾಯಾವೇರು : ಚಿರಿವೇರು, ಛಾಯಾವೇರು (ಪ್ಯಾಶಿಗ. ೩೭- ೦೦೫೫). [ ದೇ.; ತಮಿ. ಮಲ. ಚಾಯವೇರ್ ]

**ಚಾಯಮಿನು** (ನಾ). ಬಣ್ಣದ ಮೀನು ; ರಂಗುರಂಗಿನ ಮೀನು : ಮಾಚಿಕ ಮೆಯ್ವಣ್ಣದ ಚಾಯಮೀನ ಕಂಡಾಣಿಕಾಂಕೆ ಜ ಲ ಗಾ ಬ ಕ್ಷೋಣೀಶ್ವರನಾಸ್ಥಾನಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಪೋಹಕ. ೧೦-೩೪). [ ಚಾಯ + ಮಿನು( <ಮೀನ್$_1$) ]

**ಚಾಯಿಬೇರು** 'ಚಾಯಬೇರು' ನೋ.

**ಚಾಯೆ** 'ಚಾಯ' ನೋ.

**ಚಾರ** (ನಾ). ೧. ಚಲಿಸುವಿಕೆ ; ನಡಗೆ ; ಸಂಚಾರ : ಸೂರ್ಯಚಾರವಂ ನೋಡಲ್ ಐದು ಗಗನ ಖಂಡಂಗಳಂ ಅಗ್ಗಳಂ ಸಲ್ಲುಂ (ಶಕ್ಷ್ಯಪ್ರ. ೨೦೪): ಚಾರ ತಪ್ಪಿತೆ ಗ್ರಹಕೆ ವ್ಯಾಧಿ ವ್ಯಾಪ್ತವಾಯಿತೇ ? (ಕಎಪು. ೫೦-೩). ೨. ಗೂಢಚಾರ ; ಬೇಹುಗಾರ. ೩. ದೂತ; ಸೇವಕ : ಮಕುಟವರ್ಧನರಂ ಕಾಣಿಸುತಂ ಬಂದ ಚಾರರ್ ಬೀಳ್ಕೊಡಿಸುತಂ ಸುಖದೊಳಿಪ್ಪಲ್ಲಿ (ಬಸರ. ೬-೩೩) ; ಚಾರರಿಗೆ ಸಿರವ ಕತ್ತರಿಸಿ ಚೆಲ್ಲೆಂದು (ಕನ್ನಡಾ. ೨೪೭). ೪. ನಿರ್ವಹಣೆ; ಆಚರಣೆ; ಅಭ್ಯಾಸ; ಸಾಧನೆ: ದೂತೆ ಕೇಳ್ನಮ್ಮವರು ಶೋಭನರೀತಿ–ಚಾರವನೆಲ್ಲ ತೀರಿಸಿ ಆತನೊಳು ವ್ಯಾಹೊಂದಿಕೆಯ ಮಾಡಿ ಮಮತೆಯಲ್ಲಿ ಕೂಡಿ (ಕಠಿಶ. ೪೯-೨). ೫. ಬೇಡಿ ; ಸಂಕೋಲೆ. ೬. ಸೆರೆ ; ಬಂಧನ. ೭. ಪ್ರಿಯಾಲವೃಕ್ಷ. ೮. ಕುಹಕಚೇಷ್ಟೆ; ವಂಚಗಚೇಷ್ಟೆ; (ಶ). ೯. ದನಗಳಿಗೆ ಆಹಾರವಾಗುವ ಹಸಿರು ಹುಲ್ಲು, ಸೊಪ್ಪು ಮೊದಲಾದುವು ; ಮೇವು : (ಶ). [ಸಂ.]

**ಚಾರಕ** (ನಾ). ೧. ಗತಿ; ಗಮನ; ಸಂಚಾರ. ೨. ದೂತ; ಪರಿಚಾರಕ: ಕರಸಿ ಚಾರಕರ್ಗೆ ಕೆಲಸಂಗೊಟ್ಟು ಊರೂರ್ಗೆ ಬೇಱೆಬೇಱೊಲಿದು ರಾಯಸವಿತ್ತು (ಶಂಕರ. ೫-೪) ; ಆಗ ಚಾರಕ, ದೂತ, ಹಾಸ್ಯಗಾರ, ಹನುಮನಾಯಕನೆಂಬ ಬಹುಕಾರ್ಯದ ಏಕಮುಖಿಯಾದ ಅಧಿಕ ಪ್ರಸಂಗಿಯು ಬಂದು ಮಾತಿಗೆ ತೊಡಗುತ್ತಾನೆ (ಯಕ್ಷಬ. ೪೪) ; ಮರುದಿನ ಬೆಳಗಾಗುತ್ತಿದ್ದ ಹಾಗೆ ಅರಮನೆಯ ಚಾರಕನು ಒಂದು ನೂರು ಥೊಲ್ಲಗಳನ್ನು ತಂದನು (ದೇಶಾಂಕ. ೬೩). [ ಸಂ. ]

**ಚಾರಕ್ಷೇತ್ರ** (ನಾ). ಸಂಚಾರ ಮಾಡತಕ್ಕ ಸ್ಥಳ : ಇದರಂತೆಯೇ ಚಂದ್ರನ ಚಾರಕ್ಷೇತ್ರ (ಶಕ್ಷ್ಯಪ್ರ. ೨೦೦). [ ಚಾರ + ಕ್ಷೇತ್ರ ]

**ಚಾರಚಕ್ಷು** (ನಾ). ಚಾರರನ್ನು ಕಣ್ಣಾಗಿ ಉಪಯೋಗಿಸಿಕೊಳ್ಳುವವನು; ಚಾರರ ಮೂಲಕ ತಿಳಿದುಕೊಳ್ಳುವವನು : ಯಾಚಕಯಾಚಿತಾರ್ಥಸುಸಮರ್ಥನಗೋಚರ ಚಿತ್ರನರ್ಥಶಾಸ್ತ್ರೋಚಿತ ಚಾರಚಕ್ಷು ವಿಮಳಾಚರಣಂ ಸಚರಾಚರಸ್ತುತಂ (ಚಂದ್ರಪು. ೬-೦೯); ಸದಾ ಚಾರಚಕ್ಷುರಭಿವ್ಯಕ್ತ ಪರಕ್ಷಿತೀಶಗೃಹ ವೃತ್ತಂ . . . ನಂದನಂ ಪುಟ್ಟಿದಂ (ಪುಣ್ಯಶ್ರ. ೦೩-೦೦). [ ಸಂ. ಚಾರಚಕ್ಷುಸ್ (ಚಾರ + ಚಕ್ಷುಸ್) ]

**ಚಾರಚಿಪ್ಪಿ**, ಚಾರಚಿಬ್ಬಿ (ನಾ). ಕಕ್ಕಸಂ ; ಪಾಯಖಾನೆ ; ಶೌಚಕೂಪ: (ಶ). ಚಾರಚಿಬ್ಬಿ : (ಶ). [ ? ]

**ಚಾರಚಿಬ್ಬಿ** 'ಚಾರಚಿಪ್ಪಿ' ನೋ.

**ಚಾರಟಿ** (ನಾ). (ಕಾಶ್ಮೀರದಲ್ಲಿರುವ) ಒಂದು ಬಗೆಯ ಬೆಟ್ಟದಾವರೆ ; ಸ್ಥಳಪದ್ಮಿನಿ: "ಅವ್ಯಥಾ, ಅತಿಚರಾ, ಪದ್ಮಾ, ಚಾರಟೀ, ಪದ್ಮಚಾರಿಣೀ–ಕಾಶ್ಮೀರ ದೇಶದಲ್ಲಿರುವ ಬೆಟ್ಟದಾವರೇ ಹೆಸರು" (ಶಿಘ್ನಂತಿ. ೦೨೪). [ ಸಂ. ಚಾರಟೀ ]

**ಚಾರಟ್ಟಿ** (ನಾ). = ಚಾರಟಿ : "ಚಾರಟ್ಟಿ–ಸ್ಥಲಪದ್ಮಿನಿ" (ಅಕಾನಿ. ೦೦-೨೫). [ <ಸಂ. ಚಾರಟೀ ]

**ಚಾರಣ** (ನಾ). ೧. ತಿರುಗಾಡುವಿಕೆ; ಸುತ್ತಾಡುವಿಕೆ; ಸಂಚಾರ. ೨. ದ್ವಂದ್ವಯುದ್ಧದಲ್ಲಿ ಒಂದು ವರಸೆ: ಚಂಡಶಾಸನಂ ಚಾರಣದಾಸೆಯಿಂ ನುಸುಳ್ದು (ಅಸಂಪು. ೦೦-೬೦). ೩. ನಟ್ಟುವಿಗ; ಸಂಚಾರೀ ನಟ: "ಶೈಲಾಲೀ, ಶೈಲೂಷಃ, ಕುಶೀಲವಃ, ಚಾರಣಃ . . . ಈ ೮ ನಟ್ಟುವಿಗಂ" (ಹಲಾಯು. ೯೬-೯೩೮). ೪. ಕತೆಯನ್ನು ಕವಿತೆ ಮಾಡಿ ಹಾಡುವವನು; ಕಥಾಗೀತೆಯನ್ನು ಹಾಡುವವನು: ಹಲವಾರು ಅಜ್ಜಅಜ್ಜಿಯರು ಮತ್ತು ಚಾರಣರು ತಮ್ಮ ಕಲ್ಪನೆಗೆ ಬಂದಂತೆ ಕತೆ ಕಟ್ಟಿ ... ಹಾಡಿರಬೇಕು(ನಂಜುಂಡ. ೩೨). ೫.ಹೊಗಳು ಭಟ್ಟ; ಸ್ತುತಿಪಾಠಕ: ಚಾರಣಗಣಂಗಳೋದುವ ಕಂದ ವೃತ್ತದಿಂ (ಅಜಿಪು. ೪-೬). ೬. ದೇವಗಾಯಕ; ಗಂಧರ್ವ: ಈತನನಂತರಿಕ್ಷದೊಳ್ ಕರಗಳನೆತ್ತಿ ರಾಯರಿಸಿಯೆಂದುರೆ ಕೀರ್ತಿವರಲ್ತೆ ಚಾರಣರ್ (ನಾಕುಂಕ. ೨೬-೯೯). ೭. ಚಲಿಸುವಂತೆ ಮಾಡುವ ಸಾಧನ: "ಅಂಕುಶ (ನಾ) ಚಾರಣವುಂ ಯಾತವೆಂಬುದು" (ಹಲಾಯು. ೩೬-೬೯). ೮. [ಜೈನ] ಯಾವಾಗಲೂ ಸಂಚಾರಶೀಲನಾಗಿ ಅಲ್ಲಲ್ಲಿ ಜಿನಧರ್ಮೋಪದೇಶ ಮಾಡುವ ಅವಧಿಜ್ಞಾನವುಳ್ಳ, ಗಗನಗಾಮಿಯಾದ ಮುನಿ: ಒಂದು ದಿವಸಂ ಮಣಿಮಾಳಿ ರತಿಚಾರಣರೆಂಬ ಚಾರಣರನವಧಿಜ್ಞಾನಿಗಳಂ ಕಂಡು (ಆದಿಪು. ೨-೦೩ ವ); ಮತ್ತಮೊಳಗಣ ನಾಲ್ಕುಂ ದೆಸೆಯೊಳ್ ಚಾರಣಾಚ್ಯುತೇಂದ್ರಪ್ರಮುಖರಪ್ಪ ಕಲ್ಪಾಮರರುಮಂ (ಚಂದ್ರಪು. ೧೨-೦೦೩ ವ). [ಸಂ]

**ಚಾರಣಋದ್ಧಿ** (ನಾ). [ಜೈನ] ಚಾರಣ ಮುನಿಗಳು ತಪೋಬಲದಿಂದ ಸಾಧಿಸಿಕೊಳ್ಳುವ ಗಗನಸಂಚಾರಶಕ್ತಿ: ಅಂದಿನಭವದೇವನ ತಂದೆಯನಾಂ ರತಿವರ್ಮನೆನಿಲ್ಲಿ ಶ್ರೀವರ್ಮನೆನಾಗಿ ಸಂಯಮಮಂ ಕೈಕೊಂಡು ಚಾರಣಋದ್ಧಿಯುಮಂ ಪರಮಾವಧಿಯುಮಂ ಪಡೆದೆಂ (ಪಾರ್ಶ್ವಪು. ೫೯-೬). [ಚಾರಣ + ಋದ್ಧಿ]

**ಚಾರಣಋದ್ಧಿಪಡೆ** (ಕ್ರಿ). ಗಗನಸಂಚಾರಶಕ್ತಿಯನ್ನು ಪಡೆ,—ಹೊಂದು: ಅದುವೆ ನಿರ್ವೇಗನಿಮಿತ್ತಮಾಗೆ ತೊಱೆದು ತಪಂಬಟ್ಟು ಚಾರಣಋದ್ಧಿಪಡೆದು ಪೋಗಲೊಡಂ (ಶಾಂತಿಪು. ೮-೫೬ ವ). [ಚಾರಣಋದ್ಧಿ + ಪಡೆ₁]

**ಚಾರಣಋಷಿ** (ನಾ). [ಜೈನ] ಚಾರಣಋದ್ಧಿಯನ್ನು ಪಡೆದ ಯೋಗಿ: ಧರ್ಮಾಭರಣರೆಂಬ ಚಾರಣಋಷಿಯರ ಸಮಕ್ಷಮದೊಳ್ ದೀಕ್ಷೆಯಂ ಕೊಂಡಂ(ಶಾಂತಿಪು. ೦೬-೯೨ ವ); ಚಾರಣಋಷಿಯರ ರೂಪಂ ಚಾರುಗುಣಂ ನೋಡಿ . . . ಹಸ್ತಾಂಭೋರುಹಮಂ ಮುಗಿದು (ಧರ್ಮಾಮೃ. ೦೧-೫೬). [ಚಾರಣ + ಋಷಿ]

**ಚಾರಣಕವಿ** (ನಾ). ಆಶ್ರಯದಾತನನ್ನು ಕೀರ್ತಿಸಿ ಹೊಗಳಿ ಕಾವ್ಯ ರಚಿಸುವವನು: ಚಾರಣಕಾವ್ಯ . . . ಅವುಗಳನ್ನು ರಚಿಸುವ ಕವಿಗಳೆ ಚಾರಣಕವಿಗಳು (ಕರ್ನಾಟ. ೦೦೮). [ಚಾರಣ + ಕವಿ₁]

**ಚಾರಣಕ್ರಮ** (ನಾ). (ಅಂಕುಶದಿಂದ ತಿವಿದು ಆನೆ) ಮುಂದಕ್ಕೆ ಚಲಿಸುವಂತೆ ಮಾಡುವ ರೀತಿ; ಚೋದನೆ ಮಾಡುವ ಬಗೆ: ಅಮರಾನೀಕದ ಸುತ್ತು ಪೋಲೆ ದಿನನಾಥಾಮಂದ್ಯ ಸಂಧ್ಯಾಭ್ರವಿಭ್ರಮಮಂ ವಾಹನ ದೇವದಂತಿಶಿರದೊಳ್ ಕೂರಂಕುಸಂ ಚಾರಣಕ್ರಮದಿಂದಾದಱುವತ್ತು ನಾಲ್ಕು ಪೊಳೆಪಿಂ ಕಣ್ಗೊಪ್ಪೆ (ಶಾಂತಿಪು. ೯-೦೧೬). [ಚಾರಣ + ಕ್ರಮ]

**ಚಾರಣಗೀತ**(ನಾ). ಚಾರಣರು ಹಾಡುವ ಹಾಡು: ವೀರರಸಪ್ರಧಾನವಾದ ಚಾರಣಗೀತಗಳನ್ನು . . . ಎಷ್ಟೋ ಜನ ಚಾರಣರು ತಾವೇ ರಚಿಸಿಕೊಳ್ಳುತ್ತಿರಬಹುದು (ಕರ್ನಾಟ. ೦೦೮). [ಚಾರಣ + ಗೀತ]

**ಚಾರಣಗುಣ** (ನಾ). = ಚಾರಣಋದ್ಧಿ: ಚಾರಣಗುಣದಿಂದಂ ಸಂಸಾರಾರ್ಣವಪಾರ ಚೈತ್ಯವಂದನೆಗೆಂದಂದೋರಂತೆ ಪೋಗಿ ಗಗನವಿಹಾರದಿನುರ್ವೀವಿಹಾರಮಂ ಮುನಿ ಬಿಸುಟಂ (ಶಾಂತಿಪು. ೯-೦೦೩). [ಚಾರಣ + ಗುಣ]

**ಚಾರಣಯೋಗಿ** (ನಾ). = ಚಾರಣಋಷಿ: ಅನಂತಸಂಜ್ಞನಂ ಚಾರಣಯೋಗಿಯಾಂ ನೃಪತಿ ಕಂಡಂ (ಚಂದ್ರಪು. ೩-೬೯). [ಚಾರಣ + ಯೋಗಿ]

**ಚಾರಣೆ** (ನಾ). ೧. ಚಂಡಿನ ಆಟದಲ್ಲಿ ಒಂದು ವರಸೆ: ಚಾರಿಸೆ ನಾಲ್ಕು ಪ್ರಕರಣ ಚಾರಣೆ ಮೂನೂಱ ಮೂವತ್ತೆನಿಸಿದವಾ ಚಾರಣೆಗಳನ ಕ್ರಮದಿಂ ಚಾರಿಸುಗುಂ ಕೋಟಿ ತೆಱದಿನೆಱೆವ ಚೆಡಂಗಂ (ಎಕ. II, ೦೩೩-೮೩; ೧೩೩). ೨. ಶತ್ರುವಿನ ಸಂಚನ್ನು ನೋಡಿ ಹೊಡೆಯುವುದಕ್ಕಾಗಿ ಯುದ್ಧದಲ್ಲಿ ವಿಚಿತ್ರಗತಿಯಿಂದ ನಡೆವ ಕ್ರಮ: ಚಿತ್ರದ ಚಳಗತಿಯ ಚೌಪಟದ ಚಾರಣೆ[ಪಾಠಾಂ. ಚದ್ದಣೆ]ಗಳ ಧಡಾಳದಲಿ ಹೊಳೆದ ರಾವರ್ತದಲಿ . . . ಭೀಮಕೌರವರು (ಕುಮಾ.ಗ. ೬-೨೨). ೩. ಆನೆ, ಕುದುರೆ, ಮುಂತಾದ ವಾಹನಗಳನ್ನು ನಡೆಸುವುದು; ಚೋದನೆ.

**ಚಾರಣೆಪೆಡಂಗ** = ಆನೆ, ಕುದುರೆಗಳೇ ಮುಂತಾದ ವಾಹನಗಳನ್ನು ನಡೆಸುವುದರಲ್ಲಿ ಚಾತುರ್ಯವುಳ್ಳವನು; ಒಂದು ಬಿರುದು: ಶೌರ್ಯದಿಳೀಪ ಸೊಗಸುಗದಾಣ್ಮಂ ಚಾರಣೆಪೆಡಂಗಂ ವಿಶಿಷ್ಟಜನಮಿತ್ರಂ (ಎಕ. VIII, ಸೊರಬ. ೪೬೪-೧೧; ೧೩೬). [ಸಂ. ಚಾರಣ]

**ಚಾರಪಪ್ಪು** (ನಾ). = ಚಾರಬೀಜ: ಚಾರಪಪ್ಪು = ನುರುಕಲು ಬೀಜ ಮಧುರ (ಅಷ್ಟಾಂಗ. ೧೪೬-೧೨೨); ಚಾರು[ರ]ಪಪ್ಪು ಅಕಲಕರೆ . . . ಚೂರ್ಣವ ಮಾಡಿ (ಸಕಲವೈ. ೩೯೨). [ಚಾರ + ಪಪ್ಪು./ತೆಲು. ಚಾಱಪಪ್ಪು]

**ಚಾರಪಾಯ, ಚಾರಪಾಯಿ** (ನಾ). (ಉಕ) ನೂಲು ಅಥವಾ ಹುರಿಯ ಹೆಣಿಗೆಯಿಂದಾದ ಮಂಚ; ಹೊರಸು: ಕೆಲವು ಚಿಂದಿಗಳು ತೂಗಬಿದ್ದಿವೆ. ಚಾರಪಾಯ ಒಂದು ತಿರುವಿ ಬಿದ್ದಿದೆ (ಅನ್ನ. ೩೫೪). ಚಾರಪಾಯಿ: ನಾಗರಾಜ . . . ತನ್ನ ತಂಬುವಿಗೆ ತೆರಳಿ ಚಾರಪಾಯಿ(ಹೊರಸು) ಯ ಮೇಲೆ ಬಿದ್ದನು (ಕನಸಿ. ೨೪).

[← ಪಾರ. ಮರಾ. ಚಾರ್‌ಪಾಯೀ; ಹಿಂ. ಚಾರ್‌ಪಾಈ]

**ಚಾರಪಾಯಿ** 'ಚಾರಪಾಯ' ನೋ.

**ಚಾರಬೀಜ** (ನಾ). ಪ್ರಿಯಾಳದ ಬೀಜ: "ಪ್ರಿಯಾಳಂ–ಚಾರಬೀಜ" (ಓಷಧಿ. ೯೮); ಕಡೆಯಿಲ್ಲದ ಕದಳಿಯ ಫಲ ಚಾರಬೀಜ ಎಂಭತ್ತು ಖಂಡುಗ (ಬಸವ. ೯೧-೨೬೩). [ಚಾರ + ಬೀಜ]

**ಚಾರರಾಸಿಪಪ್ಪು** (ನಾ). ಒಂದು ಬಗೆಯ ಬೀಜ (?): ಬಹುಮೂತ್ರಕ್ಕೆ ಕಾರಸೊಪ್ಪು, ಚಾರರಾಸಿಪಪ್ಪು, ಚಕ್ರವತ್ತದ ಸೊಪ್ಪು . . . ಇವೆಲ್ಲಂ ಪಥ್ಯಂಗಳು (ಸಕಲವೈ. ೪೦೧). 'ಚಾರಪಪ್ಪು' ಪರಾ. [?]

**ಚಾರಾಖರ್ಚು** (ನಾ). ದನಗಳ ಮೇವಿನ ವೆಚ್ಚ: ಜುರ್ಮಾನೆ ದರದ ಪಟ್ಟಿಯನ್ನು ದನಗಳ ಚಾರಾಖರ್ಚಿನ ಪಟ್ಟಿಯನ್ನು ಚಿಕಟಾಯಿಸಿರತಕ್ಕದ್ದು (ಗ್ರಾಮೂಕ. ೦೦೬). [←ಹಿಂ. ಮರಾ. ಚಾರಾಖರ್ಚ್]

**ಚಾರಿ₁** (ನಾ). ೧. ಪಗಡೆಕಾಯಿ; ಲೆತ್ತದ ಕಾಯಿ; ನೆತ್ತದ ಕಾಯಿ: ಒರ್ವಳ್ ನೆತ್ತದ ಚಾರಿಯಂ ಕೊಂಡು ಬಂದು . . . ಆಡಿಮೆಂದೊಡನೆ (ಬಂಚರಿ. ೩-೬೦ ವ); ಒಡ್ಡಡಸಿದ ಚಾರಿಯನೆ ಪೊಯ್ದು (ಉದ್ಭಟ. ೦೧-೧೫); ಕೆಲರುಚಿತದ ಕಥೆವೇಳ್ವ ಕೆಲರು ನೆತ್ತದ ಚಾರಿಯಿಡುವ ಕೆಲರಾಲಿವಟ್ಟಲ ಬೀಸುವ ಕಾಲೊತ್ತಿ ಕೆಲಕೆಲರೆಸಗಿದರವಳ್ಗೆ (ವರ್ಧಮಾ. ೧೦-೩೫); ಅಕ್ಷ ಹೃದಯವೆಂಬ ಹೆದೆಯನ್ನೂ ಚಾರಿಯೆಂಬ ರಥವನ್ನೂ ಸಂಪಾದಿಸಿಕೊಂಡು ಜೂಜೆಂಬ ಯುದ್ಧದಲ್ಲಿ (ಕೃಪಾಸ. ೦೨೪). ೨. ಒಂದು ಬಗೆಯ ಬಣ್ಣ,-ರಂಗು: (೬). [< ಸಂ. ಶಾರಿ, ಶಾರೀ, ಸಾರಿ, ಸಾರೀ]

**ಚಾರಿ₂** (ನಾ). ೧. ಗತಿ; ಗಮನ; ಚಲನೆ: ಧಾರೆಗಳ ದಳ್ಳುರಿಯ ಖಡಿಗಳ ಭಾರಣೆಯ ಬಲು ಝಳದಲಂಪಿನ ಚಾರಿಗಳು ಹೊಱಸೂಸಲು (ನಿಭಂಗ. ೯-೧೪-೪೬); ನೆಲವ ಮುದ್ದಿಡುವ ಚಾರಿಯಲ್ಲಿ ಪದಚಾರಿಯಾಗಿ ಹೊರಟ (ಸೂರ್ಯಪಾ. ೧೫-೯). ೨. ನಡವಳಿಕೆ; ವ್ಯವಹಾರ: ಬೇರೆ ಮತವೆಮಗೇನು ಬೊಪ್ಪನ ಚಾರಿ ನಿಮ್ಮದು (ಕುಮಾ.ಆ. ೮-೬೫). ೩. ಬೇಡಿ;

ಸಂಕೋಲೆ: ವಿಟಜನಕ್ಕೆ ತೊಡರ್ವ ಚಾರಿಯೆನಿಪ ಸೂಳೆಗೇರಿಯಿಂ ವಿದಗ್ಧ ಹೃದಯಹಾರಿಯಿಂ (ಹಂಪಮಾ. ೦-೩೮ ಕಗಳ). ೪. ಅಗ್ಗದ ಬೆಲೆ; ಸುಲಭ ಬೆಲೆ : (ಕ). ೫. ಕಾಳಗದ ಒಂದು ವರಸೆ; ಯುದ್ಧದ ಒಂದು ಬಗೆಯ ತಂತ್ರ ; ಉಪಾಯ : ಸುಳಿದರೆಡಬಲ ಚಾರಿಯಲಿ ಚಾಪಳದ ಪಯ ಪಾಡಿನಲಿ (ಕುಮಾ.ಗ. ೬-೨೨) ; ಕೇಣವಿಲ್ಲದೆ ಚಾರಿ ಚಳಕ ಚಾಳೆಯ ಚದುರ್ವಾಣಿ ಲಾಘವ ಪಂಥ ಪಾಡುಗಳನಱಿದು (ಪ್ರಮಿಥಾ. ೨೨-೬). ೬. [ಸಂಗೀತ] ವಾದ್ಯವನ್ನು ನುಡಿಸುವ ಒಂದು ಕ್ರಮ್ಮ,-ಬಗೆ : ಬಹು ಲಯಭೇದದೊಡೆ ಗತಿಭೇದದೊಡಂ ಚಾರಿಭೇದ ದುರ್ವಹಿತ ತಗುಳ್ದ ಆಂಕರಣಭೇದದಮರ್ಕೆ ನಿವಿರ್ಕೆಯಿಂ . . . ಹೃದ್ಯವಾದ್ಯಮಂ ಬಹಳಿಕೆ ವೆತ್ತು ಬಿತ್ತರಿಸಿ ಬಾಜಿಸಿದರ್ (ಪುಷ್ಪದ. ೦೨-೨೬). ೭. [ನಾಟ್ಯ] ನರ್ತನದಲ್ಲಿ ಒಂದು ರೀತಿ; ನೃತ್ಯದಲ್ಲಿ ಹೆಜ್ಜೆ ಹಾಕಂತ್ತಾ ಮುಂದೆ ಸಾಗುವಿಕೆ: "ಸುತ್ತುವಳಯಂ ತಿರುವು ಚಾರಿ ಬೈಸಿಕೆ ಪುಟವದೊತ್ತಿ ತೋಱುವ ಹಜ್ಜೆಯೆನಿಕ್ಕು" (ಮಂಗರಾ. ೨೩-೯) ; ಚರಣದ ಚಾರಿಯ ಚಲ್ಲಿಯ ಪರಿಕ್ರಮ ಕ್ರಮದ ಭಂಗಿಗಳ್ ನೆಗಟ್ಟೆಡೆಯೊಳ್ ಸುರವಂದಿಗಳಿಂ ಹೋಹೋಯೆರೆಯೆನಿಸಿ ದುದಾಟವಿಂತು ನೀಲಾಂಜನೆಯು (ಆದಿಪು. ೯-೩೯); ಚಾರಿವೆಟ್ಟುವ ಭಂಗಿ ದೋರ್ವಲನಂ ಮನಂಗೊಳೆ . . . ಮುರಾರಿ ಕೈಪಱಿಗಾಡಿದಂ (ಜಗವಿ. ೩-೩೨) ; ನಿಲವಿವು ಗತಿಗಳಿವಾಸನಕುಲವಿವು, ಚಾರಿಗಳಿವೆಂದು ತಾನಭಿನಯಿಸುತ್ತ (ಕುಸುಮಾ. ೬-೬೨). [ಸಂ. ಚಾರೀ]

**ಚಾರಿಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಗತಿ : ಚಾರಿಗತಿಯಲಿ ನಡೆವನೊಡನೊಡನೆ ಹೊಡೆಯುವವನು (ಭಾಸನಾ. ೦೦೬).
[ಚಾರಿ₂ + ಗತಿ]

**ಚಾರಿಟ** (ನಾ). ಒಂದು ಅನುಕರಣ ಶಬ್ದ ; ಪಾರಿವಾಳದ ಕೂಗು : ಪಾರಿವಾಳದ ಪಕ್ಕಿ ಮದನಕ್ಕೆಯೊಳು ತನ್ನ ನಾರಿಗಿದಿರು ನಡೆದಾಡಿ ಗೂರ್ರುಳು ಗುಕುಗುಕು ಗುಟುಗುಟು ಗುಟುಗುಟು ಚಾರಿಟಿಯೆಂದುವಲ್ಲಲ್ಲಿ (ಭರಶ. ೦೩-೩೨).

**ಚಾರಿತ್ರ** (ನಾ). ಶೀಲ; ನಡತೆ ; ಆಚಾರ : "ಚರಿತಂ ರೀತಿ ಚಾರಿತ್ರಮೆನೆ . . . ಆಚಾರಕಕ್ಕು ನಾಮಂ" (ಮಂಗರಾ. ೭೪-೩); ತತ್ತ್ವಭೇದನೆ ಚಾರುತರ ಸುಜ್ಞಾನವದರಾಚರಣೆ ಚಾರಿತ್ರ (ಕಬಿಥಾ. ೫-೨೦). [ಸಂ.]

**ಚಾರಿತ್ರಂಗೆಡು** (ಕ್ರಿ). ನಡತೆಗೆಡು ; ಶೀಲವನ್ನು ಬಿಡಂ : ಚಾರಿತ್ರಂಗೆಟ್ಟ ರನಾಟ್ಯಡಿಗಳಿವಂತೆ ಚಾರಿತ್ರಮುಳ್ಳರನೇಕಾಟ್ಯಡಿಗಳೆಯರ್ (ಧರ್ಮಾಮೃ. ೬-೪೩). [ಚಾರಿತ್ರ + ಕೆಡು₁]

**ಚಾರಿತ್ರಕ** (ನಾ). ಶೀಲ ; ಗುಣ : ಹೃದಯಕ್ಲೇಶವನು ಬಿಡು ತೊಡಸು ಚಾರಿತ್ರಕದ ಭೂಷಣವ (ತಿಮ್ಮಸ್ವೀ. ೨-೬೭). [ಸಂ.]

**ಚಾರಿತ್ರಮೋಹ** (ನಾ). = ಚಾರಿತ್ರಮೋಹನೀಯ : ಇರ್ತೆಱನಪ್ಪ ವೇದನೀಯಮುಮಂ ದರ್ಶನಮೋಹದೊಳಂ ಚಾರಿತ್ರಮೋಹದೊಳಂ ಯಥಾಕ್ರಮದಿಂ . . . ಸ್ತ್ರೀಪುನ್ನಪುಂಸವೇದಮನಿಸಿಯುಂ (ಸು ಕು ಮಾ. ೩-೩೯ ವ). [ಚಾರಿತ್ರ + ಮೋಹ]

**ಚಾರಿತ್ರಮೋಹನೀಯ** (ನಾ). [ಜೈನ] ಮೋಹನೀಯ ಕರ್ಮಗಳಲ್ಲಿ ಒಂದು ; ಆಚಾರವನ್ನು ದೂಷಿಸುವ ಒಂದು ಕರ್ಮವಿಧ : ದರ್ಶನ ಮೋಹನೀಯಂ ಚಾರಿತ್ರಮೋಹನೀಯಮುಮೆಂದಿರ್ತೆಱನಕ್ಕುಂ (ಶಾಂತಿಪು. ೦೨-೦೦ ವ). [ಚಾರಿತ್ರ + ಮೋಹನೀಯ]

**ಚಾರಿತ್ರವಂತ** (ನಾ). ಸದಾಚಾರಶೀಲ. 'ಚಾರಿತ್ರವಂತಿಕೆ' ಪರಾ.
[ಚಾರಿತ್ರ + - ವಂತ]

**ಚಾರಿತ್ರವಂತಿಕೆ** (ನಾ). ಒಳ್ಳೆಯ ಶೀಲವನ್ನು ಪಡೆದಿರುವಿಕೆ; ಸದಾಚಾರ ಶೀಲತೆ : ಇದ್ದ ಬಿದ್ದವರಲ್ಲಿ ಚಾರಿತ್ರವಂತಿಕೆಯಿಲ್ಲ (ಸಮಾಜೀ. ೩೩).
[ಚಾರಿತ್ರವಂತ + - ಇಕೆ]

**ಚಾರಿತ್ರಾರಾಧನೆ** (ನಾ). [ಜೈನ] ಸಮ್ಯಗ್ದರ್ಶನ, ಸಮ್ಯಗ್ಜ್ಞಾನ, ಸಮ್ಯಕ್ಚಾರಿತ್ರ ಎಂಬ ರತ್ನತ್ರಯದಲ್ಲಿ ಮೂರನೆಯದು ; ಒಳ್ಳೆಯ ಚಾರಿತ್ರವನ್ನು ಅನುಸರಿಸುವಿಕೆ : ಪಾಪಕ್ರಿಯೆಯಿಂ ನಿವೃತ್ತಿಮಾಡಿ ಶುಭ ಪರಿಣಾಮಮಂ ತನ್ನೊಳ್ ನಿಱಿಸುವುದು ಚಾರಿತ್ರಾರಾಧನೆ (ಜೀವಸಂ. ೩-೮ ವ). [ಚಾರಿತ್ರ + ಆರಾಧನೆ]

**ಚಾರಿತ್ರಿಕ** (ಗು). ಚರಿತ್ರೆಗೆ ಸಂಬಂಧಿಸಿದ; ಐತಿಹಾಸಿಕವಾದ: ಚಾರಿತ್ರಿಕಾಧಾರಗಳೇನೂ ಇಲ್ಲವಾದರೂ ಹಾಗೆ ಇದ್ದಿತ್ತು ಎಂಬುದನ್ನು ಊಹಿಸುವುದು ಕಷ್ಟವೇನೂ ಅಲ್ಲ (ಕವಿಚ. ಪ. ಪ್ರಸ್ತಾವನೆ). [ಸಂ.]

**ಚಾರಿತ್ರ್ಯ** (ನಾ). = ಚಾರಿತ್ರ : ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಇಂಚಾಪ. ೧೭೮-೬೯). [ಸಂ.]

**ಚಾರಿವರಿ₁** (ಕ್ರಿ). ೧. ಸಂಚನ್ನು ನೋಡಿ ನುಗ್ಗು ; ಯುಕ್ತಿಯಿಂದ ಮುಂದೆ ಸರಿ; ಯುಕ್ತಿಯಿಂದ ಮುಂದೆ ಸಾಗು: ನೃಪನೊಡಹುಟ್ಟಿದನ ಹೊಯ್ದರುಣಜಲದಲಿ ಚಟ್ಟಱಿದು ರಿಪು ಚಾರಿವರಿದನು ಕಳನ ಚೌಕದಲಿ (ಕುಮಾ.ಕ. ೨೦-೨) ; ಹಱಿದು ತೇಜಿಯ ಥಟ್ಟನಂಬರಕುಱುಬ ರಕ್ಕಸ ಭಟರ ಬೀದಿಯ ತೆಱಹ ತಪ್ಪಿಸಿ ಚಾರಿವರಿದೊಡಹೊಕ್ಕರಗಲದಲಿ (ತೊರರಾ. ೬-೦೦-೦೫) ; ಅರಿಯರೆನಿಪ ರಾಯರ ಪೌಜಿನೊಳು ಚಾರಿವರಿದಾಡಿದನಾ ಸುಭಟ (ನೇಮಿಸಂ. ೦೨-೮೦) ; ರಸಿಕಜನದಕ್ಷಿಗಳಂ ಚಾರಿವರಿದಾಡಿಸಿದಳೆ ಚ್ಚಾರಿ ತದಂಗಮನನಂಗನಿರೆ ಪಿಂಗಡೆಯೊಳ್ (ರಾಜಶೇ. ೦೨-೮೯). ೨. ಸುತ್ತುವರಿ ; ಆವರಿಸು; ಆಕ್ರಮಿಸಂ: ದನುಜನಾಯಕರಾಳಿಗೊಂಡರು ಚಾರಿವರಿದರು ಸಿಂಗಣೇಕರನು (ಶಾಶಿರಾ. ೦೭-೧೫); ಅಕ್ಕತುಳ ವೀರರ್ಕಳಂ ಚಾರಿವರಿದೆಂಟುದಿಕ್ಕಿನೊಳ್ (ರುಕ್ಮಾಂಗ. ೦೩-೫೯) : ಘೋರತರ ದಂಡಮಂ ಓಡಿದಿರ್ದು ಕರ್ಬುರ ಶರೀರದಿಂ ಭೀಕರಾಕ್ಷಿಗಳಿಂದಳಂತಕಂ ಚಾರಿವರಿವನು ಜನರಂ (ತುಳಂಗ. ೮೬-೪). [ಚಾರಿ₂ + ಪರಿ₂]

**ಚಾರಿವರಿ₂** 'ಚಾಲುವರಿ' ನೋ.

**ಚಾರಿವರಿ₃** (ನಾ). ಸಂಚನ್ನು ನೋಡಿ ನುಗ್ಗುವಿಕೆ. 'ಚಾರಿವರಿವರಿ' ಪರಾ. [< ಚಾರಿವರಿ₁]

**ಚಾರಿವರಿಯಿಸು, ಚಾರಿವರಿಸು** (ಕ್ರಿ). ಯುಕ್ತಿಯಿಂದ ನಡೆಸು : ತಾರಕನ ಸುತರುಳಿದ ಧೊರೆಗಳೊಳು ತೇಗ್ಗಳಂ ಚಾರಿವರಿಯಿಸಿ ಕಾದುತಿರೆ (ವೀಶ್ವಪು. ೨-೦೦-೦೮). **ಚಾರಿವರಿಸು** : ಒಬ್ಬೊಬ್ಬರೆಯ್ದಿಂದು ಸಸಿನೆ ಸರಳಿನ ಮಳೆಯ ಕರೆಯಲು ನಸುನಗುತ ಕಡಿದೆಲ್ಲವನು ಮಗುಳೆಸದು ರಣದಲಿ ಚಾರಿವರಿಸಿದನಮಿತ ಸಾಹಸದಿ (ಕೋಗಮ. ೨೩-೨೬).
[ಚಾರಿವರಿ₁ + - ಇಸು₁]

**ಚಾರಿವರಿವರಿ** (ಕ್ರಿ). = ಚಾರಿವರಿ₁ : ಅನಿತು ಚಾತುರ್ಬಲವನಾಗಳೊರ್ವನೆ ಚಾರಿವರಿವರಿದು . . . ಕೊಲ್ವುದಂ ಕಂಡು (ಪ್ರಮಿಥಾ. ೮-೨೯).
[ಚಾರಿವರಿ₁ + ಪರಿ₂]

**ಚಾರಿವರಿಸು** 'ಚಾರಿವರಿಯಿಸು' ನೋ.

**ಚಾರಿಸು** (ಕ್ರಿ). ೧. ಅರೆ ; ರುಬ್ಬು ; ಮರ್ದಿಸು : ಅಸುವೆಯ ಕಲ್ಲಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ [ಪಾಠಾಂ. ಸಾ]ರಿಸಿ (೧೮೪. ೨-೮೯). ೨. ಉಜ್ಜಿ ಅಥವಾ ಅರೆದು ಮಿಶ್ರಮಾಡು ; ಕೂಡಿಸು : ಏರಂಡತೈಲದೊಳ್ ಸುರವಾರುಣಿಯುಂ ಕಲಸಿ ತಾಮ್ರಪಾತ್ರೆಯೊಳಧಿಕಂ ಚಾ[ಪಾಠಾಂ. ಬಾ]ರಿಸಿ ಪೂಸುತಿರೆ (ಲೋಕೋಪ. ೯-೧೯೦); ನೀರೊಳಗಿರವುದು ಸೌತೆಯ ಬೇರಂ ಬೀಜಮುಮನಲ್ಲಿ ಬೆಲ್ಲಮನಿನಿತಂ ಚಾರಿಸಿ ಕುಡುವುದಂ (ಅಶ್ವಶಾ. ೧೧-೨೬) ; ಹೆತ್ತ ತುಪ್ಪವ ತೆಗೆದು ಚಾರಿಸಿದ ನಿಂಬೆಹುಳಿಯನ್ನೆ ಸುಣ್ಣವ ಕದಡಿ (ಸೂಪಶಾ. ೨-೦೯). ೩. ಚಾತುರ್ಯದಿಂದ ನಡೆಸು ; ಜಾಣತನದಿಂದ ನೆರವೇರಿಸು : ಚಾ[ಪಾಠಾಂ. ಬಾ] ರಿಸಿ ಬಾಳಾಗಮಮುಮ ತಾರಂಗೆಯ್ದಂತೆ ಕಾಲದಂತಕನನೆ ಪೋಲ್ತು . . . ಪೊಯ್ದು ಕೊಂದರ್

ವಲರಂ (ಶಂಶಧಾ. ೧೧-೮೩) ; "ಕತ್ತಿಗಳನ್ನು ಝುಳಪಿಸಿ" (ಶಂಕರದೀ. ೩೩೮): ಇನ್ನದಱ ಪೊಱಗಗ್ಗಳಿಕೆಯನಿಪತಿವಿಷಯ ಮನದಱಿವಿಷಯಮದುಷ್ಕರಮಂಟ ಮಷ್ಕರವಂ ಎಳೆಯೊಳೊರ್ವನೆ ಚಾರಿಸಲ್ ಬಲ್ಲಂ (ಎಳ್. II, ೧೩೩-೮೩ : ೫೯೭). [ ಚಾರಣ + – ಇಸು₃ ]

**ಚಾರು** (ಗು). ೧. ಚೆಲುವಾದ ; ಸುಂದರವಾದ ; ಆಹ್ಲಾದಕರವಾದ : ಚಾರು ರೂಪಧಾಸಕ ಸತಿಯೀ (ಚಂದ್ರೋಬು. ಕೆ. ೦-೨೬) ; ಸುಳಿವುದಲ್ಲಿ ಚಾರು ಸಮೀರಂ (ಜಗವಿ. ೨-೨೫) ; ಚಾರು ಕಂಗಳ ಮುಚ್ಚಿ ಮೆಱೆದಿವೆ ನಾರಿಕೇಳಗಳು (ಜೀವಂಧ. ೧೬-೧೧). ೨. ಉತ್ತಮವಾದ ;ಶ್ರೇಷ್ಠವಾದ: 'ಚಾರುಚರಿತ್ರ' ಪರಾ. [ ಸಂ. ]

**ಚಾರುಕಲ್ಯಾಣ** (ನಾ). [ಸಂಗೀತ] ತಾಳ ಪ್ರಭೇದಗಳಲ್ಲಿ ಒಂದು ; ಬಳಿಕ ಧ್ರುವ . . . ಏಕಮೆಂಬ ಸಪ್ತತಾಳ ಭೇದಂಗಳಂ ಅವುಗಳೊಳು ಚಾಚತ್ಪುಟ . . . ಚಾರುಕಲ್ಯಾಣ . . . ಜಯಾಳವೆಂಬಿವು ಮೊದಲಾದ ನೂಱಿಂಟು ತಾಳಂಗಳುಂ- (ವಿವೇಕ. ೨೩೮). [ ಚಾರು + ಕಲ್ಯಾಣ ]

**ಚಾರುಕೇಶಿ** (ನಾ). [ಸಂಗೀತ] ಒಂದು ರಾಗದ ಹೆಸರು : ಚಾರುಕೇಶಿ-ಜನಕರಾಗ ಶಿಷೇ ಬಾಣಚಕ್ರದ ಎರಡನೇ ರಾಗ ಮೇಳಸಂಖ್ಯೆ ೨೬ . . . ಈ ರಾಗದ ಪೂರ್ವಾಂಗ ಶಂಕರಾಭರಣ, ಉತ್ತರಾಂಗ ತೋಡಿ (ಸಂಗೀತಂ. ೦೩೪). [ ಸಂ. ಚಾರುಕೇಶೀ ]

**ಚಾರುಗಣ್ಣು** (ನಾ). ಹಿತಕರವಾದ ದೃಷ್ಟಿ: ಚಾರುಗಣ್ಣಿನಿಂದ ಮಾಳೂನನ್ನು ನೋಡಿ, ಮುಂಗೈ ತಗುಲಿಸಿ ಕಿಳದನಿಯಲ್ಲಿ ಕೇಳಿದನು (ಶವನ. ೦೩). [ ಚಾರು + ಕಣ್ಣು (<ಕಣ್) ]

**ಚಾರುಗಾತ್ರ** (ನಾ). ೧. ಚೆಲುವಾದ ದೇಹ : ಚಾರುಗಾತ್ರದ ಸುಪ್ರಸನ್ನ ಮುಖಾರವಿಂದದ . . . ಸಾರ ಸೌಭಾಗ್ಯದಲಿ ಬಲದೈತ್ಯಾರಿಗಳು ರಂಜಿಸಿದರಾ ಜನನಿವಹಮಧ್ಯದಲಿ (ನಿಘಾಗಿ. ೦೦-೦೬-೩೦). ೨. ಚೆಲುವಾದ ದೇಹವುಳ್ಳವನು : ಘನವಿರಾಟ್ಚಾರುಗಾತ್ರ ಕೃತವಿಷ್ಣು ಕಮಳಜ ತುರಾಷಾಟ್ಕಿತ ಚಂಚಲಿತ ತಾಂಡವಾಡಂಬರ ದಿಗಂಬರಾಂಬರ ಕುಂತಲ (ಉದ್ಭರೇ. ೬-೩೨). [ ಚಾರು + ಗಾತ್ರ ]

**ಚಾರುಚರಿತ್ರ** (ನಾ). ೧. ಒಳ್ಳೆಯ ನಡತೆ ; ಸದಾಚಾರ: ಒಡಲಂ ಚಾರುಚರಿತ್ರದೊಳ್ ಧನಮಂನಿಷ್ಟಾಪೂರ್ತದೊಳ್ ಸತ್ಯಮಂ ನುಡಿಯೊಳ್ . . . ತಾಳ್ದಿದಂ (ಲೋಕೋಪಕಾ. ೧-೦೮ ಪೀಠಿಕೆ) ; ಚಾರುಚರಿತ್ರ ತೀರ್ಥ ಜಲದಿಂದಘಕರ್ದಮಮಂ ಕಚಲ್ಚಿ (ಶಂಗಾಮಾ. ೦-೧೪) . ೨. ಒಳ್ಳೆಯ ನಡತೆಯುಳ್ಳವನು ; ಸದಾಚಾರಿ : ಚಾರುಚರಿತ್ರನಪ್ಪುದು ಗುಣಾನ್ವಿತನಪ್ಪುದು (ಧರ್ಮಾಮೃ. ೩-೪೦). [ ಚಾರು + ಚರಿತ್ರ ]

**ಚಾರುಚೋಪಿ** (ನಾ). ಚೂರು ಚೂರು (?): ಸ್ವರ್ಗ ನಿರ್ಗವೆಂಬಧಾನು ಚಾರುಚೋಪಿ ಮಾಡಿದೇನು ಅಗ್ಗ ಮಾಡಿದೇನು ನಾಲ್ಕು ಪದಗಳೆಂಬವಾ ನುಗ್ಗು ಮಾಡಿ ಕಳೆದೆ ನಾನು ದಶಾವಾಯುವೆಂಬರಾ (ಚದಾವ. ೧೪೪-೦೩). [ ? ]

**ಚಾರುತರ** (ಗು). ೧. ಹೆಚ್ಚು ಚೆಲುವಾದ; ಹೆಚ್ಚು ಸುಂದರವಾದ : ಚಾರುತರಾಪ್ಸರಾಸ್ತ್ರೀವಂದ್ಯೆಯಹ ರಂಭೆ (ಬಸವಾ. ೪೦-೩) ; ಪೊಗಳೆ ಕೆಸರ್ಮಲ್ಲಿಗೆಯೆನಲ್ಪಾವರಿಗೆ ಚಾರುತರಮಪ್ಪ ನಾಮಮುಮಿಕ್ಕುಂ (ಕವಿಶಿಕ್ಷೆ. ೧೨) ; ಜನರೆಲ್ಲ ಚಾರುತರ ಬೋಧೆಯ ನೀಡುವರು (ಸಿದ್ಧಪು. ೮೦-೮). ೨. ಉತ್ತಮವಾದ ; ಶ್ರೇಷ್ಠವಾದ : ಚಾರುತರ ಯಜ್ಞವಿದ್ಯಾ ಪಾರಗರ ರವಂಗಳಿಂ . . . ನೆಗಟ್ದುದಾಹುತಿಧೂಮಂ (ಶಂಶಧಾ. ೬-೩೪). (ನಾ). ೩. ಉತ್ತಮವಾದ ರೀತಿ : ಚಾರುತರದಲಿಕ್ಕೇರಿಯವರ ಬಲ ಷಾರಿಧಿ ಮುತ್ತಿ ಮಾರಿದಲಿಸಿ (ಕಂನವಿ. ೦೪-೪೦). [ ಸಂ. ]

**ಚಾರುತ್ವ** (ನಾ). ಮನೋಹರತೆ ; ಸುಂದರತೆ: ನಿಶಾಂತಸ್ಫಾರ ಚಾರುತ್ವಮಾಗಿಯುಂ ಅನಿಶಾಂತ ಸ್ಫಾರ ಚಾರುತ್ವಮುಂ . . . ಎನಿಸಿ (ಚಂದ್ರಪ್ರ. ೧೧-೦೬ ವ) ; ತತ್ಪಂಕಜಾಕರ ಚಾರುತ್ವಕೆ ಮೆಚ್ಚಿ ತೂಗೆ ಶಿರವಂ (ರಾಜಶೇ. ೨-೬೩) ; ಚಾರಿತ್ರ್ಯವಿಲ್ಲದ ಚಾರುತ್ವವೇತಕೆ ಬರಿಯ ಚತುರತ್ವವೆ ಸಾಕೆ (ಕಂಜಾಶ. ೦೬೮-೬೮) ; ರಚನೆಯಿಂದಲೂ ಪ್ರಸಾದದಿಂದಲೂ ಚಾರುತ್ವದಿಂದಲೂ ತುಂಬಿಕೊಂಡಿರುವ ಶಬ್ದಗಳನ್ನೇ ಕಾವ್ಯದಲ್ಲಿ ಸೇರಿಸಬೇಕು (ಛಾಕಮಿ. ೩೬). [ ಸಂ. ]

**ಚಾರುರೂಪ** (ನಾ). ಮನೋಹರವಾದ ರೂಪು ; ರಮಣೀಯವಾದ ಆಕೃತಿ : ಈ ಚಾರುರೂಪ ಲಲಿತ ವನೇಚರಿಯರನೀ ಕಂರೂಪವರೊಳ್ ಕೂಡಿ (ಪುಷ್ಪಪು. ೩-೯೦). [ ಚಾರು+ ರೂಪ ]

**ಚಾರುರೂಪಿಣಿ** (ನಾ). ಸುಂದರವಾದ ರೂಪವುಳ್ಳವಳು ; ಸುಂದರಿ : ಇಂದಿನಿತು ಚಾರುರೂಪಿಣಿಯಾಗಿ ತೋರುತಿಹೆ ನೀನೆನಗೆ (ಶ್ರೀರಾಮಾ. ೩೪-೨೮೬). [ ಸಂ. ಚಾರುರೂಪಿಣೀ ]

**ಚಾರುವೃತ್ತ** (ನಾ). ೧. ಮನೋಹರವಾದ ವರ್ತುಲಾಕಾರವುಳ್ಳದು. ೨. ಮನೋಹರವಾದ ನಡತೆಯುಳ್ಳವನು. ೧, ೨ : ಮಂಜು ಮಹಿಮಾಸ್ಪದಂ ಚಾರುವೃತ್ತಂ ಕಲಾಪುಂಜಂ . . . ರಾಜನೆನ್ನವೊಲಾದೊಡಂ (ಕೃಮಿಥಾ. ೨೮-೬೨). [ ಚಾರು + ವೃತ್ತ ]

**ಚಾರುಹಾಸ** (ನಾ). ಮೋಹಕವಾದ ನಗು ; ಮನೋಹರವಾದ ನಗು : ಚಾರುಹಾಸನಿವಾಸನಾಡಿದನಾಡಿದಂ ಸುಭಗಂ (ಜಗವಿ. ೩-೫೩). [ ಚಾರು + ಹಾಸ್ಯ ]

**ಚಾರುಹಾಸಿನಿ** (ನಾ). ಮೋಹಕವಾದ ನಗೆಯುಳ್ಳವಳು : ಒಡಂಬಟ್ಟು ಚಾರುಹಾಸಿನಿ ನಿಜನಿವಾಸಕ್ಕೆ ಪೋದಳ್ (ಗದಾಯು. ೨-೦೦ ವ). [ ಸಂ. ಚಾರುಹಾಸಿನೀ ]

**ಚಾಕೆ** (ನಾ). (ಕರಾ) ಹಲಸಿನ ತೊಳೆ ತೆಗೆದು ಉಳಿದ ಭಾಗ; ಸೋಲೆ; ಸೆಡೆ. [ ? ]

**ಚಾರ್ಕಲ** (ನಾ). ನಕ್ಷತ್ರ ; ಚುಕ್ಕಿ ; ತಾರೆ : ತಂಗೀಯ ಕರೆಯಂದ್ರೆ ಸಂಜೆಯಾಯಿತೆಂದ ಬಂಗಾರದ ಕೊರಳ ಮಡದೀಯ ಕರೆಯಂದ್ರೆ ಚಾರ್ಕಲದ ಬೆಳಕು ಹಗಲೆಂದ (ಹೇಳು. ೦೬೩): ಚಾರ್ಕಲಕ್ಕೆ ಎಂದಾದರೂ ಚಂದ್ರಮನ ಸೊಬಗು ಬಂದೀತೆ ? (ರೂಢಿ). [ ? ]

**ಚಾರ್ಖಾನೆ** (ನಾ). ಚಚ್ಚೌಕವಾದ ಮನೆ ; ಚಚ್ಚೌಕ ; ಪೊಪ್ಪಳಿ: (ಕ). ಚಾರ್ಖಾನೆಸೀರೆ = ಚಚ್ಚೌಕವಾದ ಮನೆಗಳಿಂದ ಕೂಡಿದ ಸೀರೆ ; ಚೌಕಡಿಸೀರೆ: (ಕ). [←ಪಾರ. ಹಿಂ. ಚಾರ್‌ಖಾನಾ; ಮರಾ. ಚಾರಖಾನೇ]

**ಚಾರ್ಚಿಕ್ಯ** (ನಾ). ೧. ಗಂಧ ಮೊದಲಾದ ಸುಗಂಧದ್ರವ್ಯಗಳನ್ನು ಶರೀರಕ್ಕೆ ಲೇಪಿಸುವುದು ; ಸುಗಂಧದ್ರವ್ಯಗಳನ್ನು ಮೈಗೆ ಲೇಪಿಸಿಕೊಳ್ಳುವಿಕೆ. ೨. ಅಂಗರಾಗದ ಹಿಟ್ಟು.-ಹುಡಿ ; ಬುಕ್ಕೀಹಿಟ್ಟು : "ಚರ್ಚಾ, ಚಾರ್ಚಿಕ್ಯಂ, ಸ್ಥಾಸಕಃ – ಇ ಕುಂಕುಮ ಮುಂತಾದ ಅಂಗರಾಗದ ಹಿಟ್ಟಿಗೆ ಹೆಸರು, ಮೈಮಿಂಚುಪುಡಿ, ಮೈಗುಜ್ಜುವ ಗಂಧಪುಡಿ, ಉದ್ವರ್ತನಚೂರ್ಣ, ಬುಕ್ಕೀಹಿಟ್ಟು" (ಸಿದ್ಧಾಂತಿ. ೦೬೮). [ ಸಂ. ]

**ಚಾರ್ಜು, ಛಾರ್ಜು** (ನಾ). ೧. ಪ್ರಯಾಣದ ವೆಚ್ಚ, – ಖರ್ಚು : ಪ್ರವಾಸದ ಟಿಕೆಟ್ಟು ಮೊದಲಾದಂವುಗಳ ಬೆಲೆ : ಹೋಗಿ ಬರುವ ಚಾರ್ಜು ಕೊಟ್ಟೀ ಕಳುಹಿದ್ದೆ (ಹುಕ್ಕುಹು. ೫೫). ೨. ಹೊಣೆ ; ಅಧಿಕಾರ; ವಶ : ಯಾವುದಾದರೂ ಒಂದು ಕೋರ್ಟಿನ ಚಾರ್ಜಿಗೆ ನೇಮಿಸತಕ್ಕದ್ದು (ಗ್ರಾಮಾಳ. ೦೦) ; ಕಿಟ್ಟಿ ಹೊಸ ದಪ್ಪರಿನ ಚಾರ್ಜು ತೆಗೆದುಕೊಂಡಿರಲಿಲ್ಲ (ಗಂಮಾಯಿ. ೨೨) ; ಚಾವಡಿಯ "ಚಾರ್ಜು" ಓಲೆಕಾರನ ಕಡೆಗೆ ಇರುವುದು (ಗ್ರಾಂಗು. ೩). ಛಾರ್ಜು : ೧. ಮೈಸೂರಿಗೆ ಹನ್ನೆರಡಾಣೆ ಛಾರ್ಜು (ಷ್ಮಶ. ೨೬). [←ಇಂ. Charge ]

**ಚಾರ್ಮಣ** (ಗು). ೧. ಚರ್ಮದ ಆವರಣವುಳ್ಳ. (ನಾ). ೨. ಚರ್ಮಗಳ ರಾಶಿ ; ತೊಗಲಿನ ಸಮೂಹ. ೩. ಗುರಾಣಿಗಳ ಸಮೂಹ. [ಸಂ.]

**ಚಾರ್ವಕ** (ನಾ). = ಚಾರ್ವಾಕ ೧ : ವಾಗ್ಬಲದ ಪೊಡಪ್ಪುರ್ಗೆ ವೇಡ ಗಡ ಚಾರ್ವ್ವಕ ಚಾರ್ವ್ವಕ ನಿಮ್ಮ ದರ್ಪ್ಪಮಂ ಸಲಿಪನೆ ಗೋಷನನ್ನಿ ಮುನಿಪುಂಗವನೆಂಬ ಮದಾನ್ಧ ಸಿನ್ಧುರಂ (ಎಳ: II, ೬೯-೪೦ ; ಸು. 1100).
[ <ಸಂ. ಚಾರ್ವಾಕ ]

**ಚಾರ್ವರಿ** 'ಚಾಲಂವರಿ' ನೋ.

**ಚಾರ್ವಾಕ** (ನಾ). ೧. ನಿರೀಶ್ವರವಾದಿ ; ದೇವರ ಅಸ್ತಿತ್ವದಲ್ಲಿ ನಂಬಿಕೆ ಯಿಲ್ಲದವನಂ ; ನಾಸ್ತಿಕ : "ಲೋಕಾಯತಿಕಃ, ಚಾರ್ವಾಕಃ – ಈ ೨ ಚಾರ್ವಾಕನು" (ನಾಚರಾ. ೦೨೬); ಎಲೆ ಚಾರ್ವಾಕ ನಿನಗಿದು ಕೇಳುವೊಡೆ ಪವಣಲ್ಲ (ಬಸಪು. ೪೯-೨೩); ಸಂಪನ್ನ ತನುವೇ ಆತ್ಮನೆಂಬರು ಕೆಲರು ವಾದಿಗಳು ಕೆಲಕೆಲರು ಚಾರ್ವಾಕರು (ಅಮೃತ. ೩-೫೭). ೨. ಆರು ನಾಸ್ತಿಕ ದರ್ಶವಗಳಲ್ಲಿ ಒಂದು : ಈ ಮೂಲ ತತ್ತ್ವಾನ್ವೇಷಣ ರೂಪದಲ್ಲಿ ಚಾರ್ವಾಕ, ವೈಭಾಷಿಕ . . . ಆರು ನಾಸ್ತಿಕದರ್ಶನಗಳೂ . . . ಆವಿರ್ಭವಿಸಿರುತ್ತವೆ (ಭಾರದ. ೨೨೯). [ ಸಂ. ]

**ಚಾರ್ವಾಕತೆ** (ನಾ). ನಾಸ್ತಿಕತೆ ; ನಿರೀಶ್ವರವಾದ : ಈ ಚಾರ್ವಾಕತೆಯ ಒಂದು ಕ್ಷಣ ಅವನಿಗೆ ಮೋಜಾಗಿ ಕಂಡಿತ್ತು (ಸಮಜೀ. ೬೬೩).
[ ಸಂ. ಚಾರ್ವಾಕತಾ ]

**ಚಾರ್ವಾಕದರ್ಶನ** (ನಾ). ನಿರೀಶ್ವರವಾದವನ್ನು ಪ್ರತಿಪಾದಿಸುವ ದರ್ಶನ; ನಾಸ್ತಿಕತ್ವವನ್ನು ತಿಳಿಸುವ ಶಾಸ್ತ್ರ : ದರ್ಶನಗಳಿಗೆಲ್ಲ ಮೊದಲನೆಯದಾಗಿಯೂ, ಸರ್ವದರ್ಶನ ಪ್ರತಿಕಕ್ಷಿಯಾಗಿಯೂ ಇರುವ ದರ್ಶನವು ಚಾರ್ವಾಕದರ್ಶನವು (ಹಿಂದಸಾ. ೧೦).
[ ಚಾರ್ವಾಕ + ದರ್ಶನ ]

**ಚಾರ್ವಾಕಮತ** (ನಾ). = ಚಾರ್ವಾಕದರ್ಶನ : ಕೃತಕದ್ವಿಜಂ ಚಾರ್ವಾಕ ಮತಾವಲಂಬಿಯಾಗಿ . . . ಮಹೀಪಾಲನೊಳ್ ಸಹಸ್ರಜಿಹ್ವನಪ್ಪ ನಾಗ ರಾಜನನೆ ಪೋಲ್ತು ನುಡಿಯೆ (ಶಾಂತಿಪು. ೮-೧೨೬ ವ).
[ ಚಾರ್ವಾಕ + ಮತ ]

**ಚಾರ್ವಾಕವಾದ** (ನಾ). ನಿರೀಶ್ವರವಾದ; ನಾಸ್ತಿಕವಾದ: ಅವನ ವಿಚಾರ ವಾದವೆಲ್ಲ ವಾದಸರಣಿಯಲ್ಲ ಚಾರ್ವಾಕವಾದ, ಚಾರ್ವಾಕವಾದಸರಣಿ (ಭಾರದ. ೦೦೨). [ ಚಾರ್ವಾಕ + ವಾದ ]

**ಚಾಲ್** 'ಚಾಲು' ನೋ.

**ಚಾಲ** (ನಾ). ಒಂದು ಬಗೆಯ ಮರ : ಕಗ್ಗಲಿ ಚಾಲ ಮೂಲ ಕವಳಂ (ಯಾದವ. ೪-೫೨). [ ? ]

**ಚಾಲಕ**, ಚಾಳಕ$_1$ (ನಾ). ೧. ನಡೆಯಿಸುವವನು; ನಿರ್ವಾಹಕ; ವ್ಯವಸ್ಥಾಪಕ : ಬ್ಯಾಂಕು ಸ್ಥಾಪನೆಯಾಗುವಾಗ . . . ಚಾಲಕರು 'ಬ್ಯಾಂಕ್ ರಿಜಿಷ್ಟರ್ ಮಾಡಿದ ಬಗ್ಗೆ ಪತ್ರಿಕೆಯನ್ನು ಹೊರಡಿಸುವರು (ಬ್ಯಾಂಕಕ್ಕೆ. ೧೦); ಈ ಉದ್ಯಮದ ಚಾಲಕರೆಂದರೆ ಸ್ವಯಂ ಶ್ಯಾಮಲಾಲರು (ಕಾರಿಹಿಂ. ೧೪೮). ೨. ಸಾರಥಿ ; ಬಂಡಿ ಹೊಡೆಯುವವನು : ಜ್ಞಾನಾಂಬೆಯನ್ನು ಬಂಡಿಯಲ್ಲಿ ಕೂರಿಸಿ ಚಾಲಕನನ್ನು ಪನ್ನಂಪಳ್ಳಿಯ ಕಡೆ ಬಿಡಲು ಹೇಳಿದೆ (ಪ್ರತಾಪ. ೩೦). ೩. ಮದಿಸಿದ ಆನೆ. ೪. ಚಲನಶಕ್ತಿಯನ್ನು ನೀಡುವ ಯಂತ್ರ : ಈ ವಿಧಿಯನ್ನನುಸರಿಸಿ ವಿದ್ಯುತ್ಪ್ರವಾಹದಿಂದ ತಿರುಗುವ ಚಾಲಕಗಳನ್ನು (Motors) ಕಟ್ಟಿರುತ್ತಾರೆ (ಭಾತವಿ. ೩೩೭). **ಚಾಳಕ$_1$** : ೧. ಚಾಳಕನಿಲ್ಲದೂರು . . . ಸೊಬಗಿಲ್ಲದ ನಾರಿಯರೊಪ್ಪಲಾರ್ವರೇ (ನೀತಿಸಾ. ೦೫೬). [ ಸಂ. ]

**ಚಾಲತಿ**, ಚಾಲ್ತಿ (ಗು). ೧. ವ್ಯವಹಾರದಲ್ಲಿರುವ ; ಚಲಾವಣೆಯಲ್ಲಿರುವ ; ಬಳಕೆಯಲ್ಲಿರುವ : ಅಲ್ಲಿಯ ಪ್ರಮುಖ ವ್ಯಾಪಾರಿಯು ೫ ಯಾವತ್ತು ಕಾಳನ್ನು . . . ಚಾಲತಿ ಬೆಲೆಗೆ ಸಾಟಿ ಮಾಡುತ್ತಾನೆ (ಬಾಲಪ್ರ. II, ೫೯೩); ಅದು ಸಾಧಾರಣ ಚಾಲತಿ ಶ್ರೇಣಿಯ ಆದರ್ಶ (ನಿಬಂಧ. II, ೦೮). (ನಾ). ೨. ಜನಬಳಕೆ; ವ್ಯವಹಾರ: ಬೆಂಕಿಕಡ್ಡಿ ಬಂದ ಮೇಲೆ ಚಕಮಕಿ ಬೆಂಕಿ ಚಾಲತಿಯಲ್ಲಿಲ್ಲ (ಕೂಳಿ). ೩. ವಾದ್ಯಗಳ ವಾದನದ ರೀತಿಗಳಲ್ಲಿ ಒಂದು : ಮೇಳದವರು ಅದಕ್ಕೆ ಮೊಟ್ಟಮೊದಲು 'ಮುಕ್ತಾಯ' ಕೊಟ್ಟು ಚಾಲತಿಯನ್ನು ಬಾರಿಸಿ ಮುಗಿಸುವರು (ಚಟ್ಟಹೂ. ೧೩). **ಚಾಲ್ತಿ**: ೨. ಕೆಂಪು ಟಿಪಥಿ ಸವರಿದ ಕಡ್ಡಿಗಳೇ ಆಗ ಚಾಲ್ತಿ (ಬೆಂಗೂಲಿ. ೦೦೨); ಕತ್ತಿ ಏರುವ, ಕೊಂಡ ಹಾಯುವ . . . ಸಂಪ್ರದಾಯ ಈ ಶತಮಾನದಲ್ಲಿಯೂ ಎಲ್ಲ ಕಡೆಯೂ ಚಾಲ್ತಿಯಲ್ಲಿದೆ (ನಾಜುಂಡ. ೧೩೪): ರಂಜಣದಲ್ಲಿಯು . . . ನಾಣ್ಯ ಚಾಲ್ತಿಯಿಲ್ಲದೆ ಹಸರುಗಟ್ಟಿದ್ದವಂತೆ (ಗೀಜುಗ. ೩). [ ←ಮರಾ. ಚಾಲತೀ ]

**ಚಾಲತಿಠೇವಣಿ** (ನಾ). = ಚಾಲತಿಠೇವು : ಅವನು ಸಿರಿವಂತನಾದ್ದರಿಂದ ಚಾಲತಿಠೇವಣಿಯಲ್ಲಿಯೇ ಬಹಳ ಹಣ ಇಟ್ಟಿದ್ದಾನೆ (ಕೂಳಿ).
[ ಚಾಲತಿ + ಠೇವಣಿ ]

**ಚಾಲತಿಠೇವು** (ನಾ). (ದಿನನಿತ್ಯದ ವ್ಯವಹಾರಕ್ಕೆ ಬಳಸುವುದಕ್ಕಾಗಿ) ಬ್ಯಾಂಕು ಮೊದಲಾದುವುಗಳಲ್ಲಿ ಇಟ್ಟ ಹಣ; ಕರೆಂಟ್ ಡಿಪಾಸಿಟ್ಟು : ಬಳಕೆಯ ಇಡುಗಂಟು (ಚಾಲತಿಠೇವಿ)ನಲ್ಲಿಟ್ಟರೆ . . . ಈ ಖಾತೆಯ ಉಪಯೋಗವನ್ನು ಹೆಚ್ಚಾಗಿ ಮಾಡಿಕೊಳ್ಳುವರು (ಬ್ಯಾಂಕಕ್ಕೆ. ೦೭).
[ ಚಾಲತಿ + ಠೇವು ]

**ಚಾಲತಿದಪ್ತರ** (ನಾ). ದಿನನಿತ್ಯದ ವ್ಯವಹಾರಕ್ಕೆ ಸಂಬಂಧಪಟ್ಟ ಲೆಕ್ಕಪತ್ರ,–ದಾಖಲೆ : (ಕ). [ ಚಾಲತಿ + ದಪ್ತರ ]

**ಚಾಲತಿಭಂಡವಲ** (ನಾ). ವ್ಯವಹಾರದಲ್ಲಿ ತೊಡಗಿಸುವ ಬಂಡವಾಳ; ಚಲಾವಣೆಯಲ್ಲಿರುವ ಹಣ : ಇದಕ್ಕೆಲ್ಲ ಬೇಕಾಗುವ ಚಾಲತಿಭಂಡವಲ (Working Capital)ವೂ ಬಹಳವಾಗಿದೆ (ಬಾಲಪ್ರ. I, ೪೭೪).
[ ಚಾಲತಿ + ಭಂಡವಲ (<ಬಂಡವಲ) ]

**ಚಾಲತಿಮಾಲು** (ನಾ). ಸದ್ಯ ಬಳಕೆಯಲ್ಲಿರುವ ಸರಕಂ : ಅವನಿರುವ ಅಂಗಡಿಯಲ್ಲಿ ಚಾಲತಿಮಾಲಿನ ದಾಸ್ತಾನೇ ಹತ್ತು ಲಕ್ಷ ರೂಪಾಯಿಗಳಷ್ಟಿರಬಹುದಂತೆ (ಜಾರುದಾ. ೬೬). [ ಚಾಲತಿ + ಮಾಲು$_4$ ]

**ಚಾಲತಿಸಾಲು**, ಚಾಲ್ತಿಸಾಲು (ನಾ). ನಡೆಯುತ್ತಿರುವ ವರ್ಷ : ಕಂದಾಯದ ಬಾಕಿಗೋಸ್ಕರ ರೈತರು ಪಾವತಿ ಮಾಡುವ ಹಣವನ್ನು ಮತ್ತು ಚಾಲತಿಸಾಲಿಗೆ ಕೊಟ್ಟ ಹಣವನ್ನು ಲೆಕ್ಕದಲ್ಲಿ ದಾಖಲ್ಮಾಡಿ . . . ದಸ್ಕತ್ತು ಮಾಡಬೇಕು (ಗ್ರಾಮೂಕ. ೭೦). **ಚಾಲ್ತಿಸಾಲು** : 'ಚಾಲ್ತಿಸಾಲಿ'ನ ಬಾಕಿಯನ್ನು ಗುದಸ್ತಬಾಕಿಯನ್ನೂ ಬೇರೆ ಬೇರೆ ಹಾಕಿ . . . ತಲೆ ಕೆಡಿಸುತ್ತಿದ್ದರು (ನನ್ನೂರು. ೧೫೩). [ ಚಾಲತಿ + ಸಾಲು$_3$ (<ಸಾಲ್$_3$) ]

**ಚಾಲನ** (ನಾ). ೧. ನಡೆಸುವಿಕೆ ; ಚಲಿಸುವಂತೆ ಮಾಡುವಿಕೆ : "ಚಾಲನ, ಪ್ರೇರಣ" (Actuation. ಇಂಕನಿ). ೨. ಜರಡಿ ಮೂಲಕ ಸೋಸುವಿಕೆ. ೩. ಅಲ್ಲಾಡಿಸುವಿಕೆ. 'ಲಾಂಗೂಲಚಾಲನ' ಪರಾ. ೪. ಸಡಿಲಗೊಳಿಸುವಿಕೆ. [ ಸಂ. ]

**ಚಾಲನಿ**, ಚಾಳನಿ (ನಾ). ಸಾರಣಿಗೆ ; ಒಂದರಿ ; ಜರಡಿ : "ಚಾಲ[ಪಾಠಾಂ. ಳ]ನಿ ರಂಧ್ರ ಸಾರಣಿಗೆ" (ಮಂಗರಾ. ೬೨-೨೦).
**ಚಾಳನಿ** : "ಚಾಳನಿಯೆನೆ ಶಾರಣಿಕಂ" (ಪಟ್ಟಶೋ. ೪೯-೨೭).
[ ಸಂ. ಚಾಲನೀ ]

**ಚಾಲನೆ** (ನಾ). ಚಲನಶಕ್ತಿ ; ಪ್ರೇರಣೆ : ಅವರಿಗೆ ನಾವು ಚಾಲನೆ ಕೊಟ್ಟರೆ ಅವರಿಗೆ ಸರಿಯಾದ ದಾರಿ ಸಿಗಬಹುದು (ಅಪನಾ. ೧೭೫): ಒಂದು ದೃಷ್ಟಿಯಿಂದ ಈ ಎಲ್ಲ ಚಾಲನೆ ಶೇಖರಿಸುವುದು ನರಹರಿ ಕುಸುಮಾರ ಪರಿಸರದಲ್ಲಿ (ಸಮಜೀ. ೧೭, ಟಿಪ್ಪಳಿ); ಇದಕ್ಕೆ ಹೆಚ್ಚಿನ ಚಾಲನೆಯನ್ನು ಕೊಡಬೇಕೆಂದು ಅವಳು ಅವನ ಹರಟೆಯ ಕೊನೆಗೆ ಹೇಳುತ್ತಿದ್ದಳು (ರಂಗರೋ. ೩೪).
[ ಸಂ. ಚಾಲನ ]

**ಚಾಲವರಿ** 'ಚಾಲುವರಿ' ನೋ.

**ಚಾಲಾಕಿ**, ಚಲಾಕಿ (ನಾ). ಚತುರಂಕತನ; ಬುದ್ಧಿವಂತಿಕೆ: ಅಹಹಹಾ ನಿನ್ನ ಚಾಲಾಕೀನೇ (ರಂಗವ. ೨೨೨). **ಚಲಾಕಿ:** ಅಂಗಡಿಗಳ ವೈವಿಧ್ಯ, ವ್ಯಾಪಾರದ ಚಲಾಕಿ, ಜನರ ಮಾತುಕತೆ ಅವನ ಪ್ರಬಂಧದಲ್ಲಿ ಮರುಧ್ವನಿಸುತ್ತವೆ (ಕೃಕೃಹೊ. ೦೦೦); ತಮ್ಮ ಮಾತಿನ ಚಲಾಕಿ ತೋರಿಸಿ, ತನಗೂ ವೇದಾಂತ ಸಾಕಷ್ಟು ತಿಳಿದಿದೆ ಅನ್ನುವುದೇನು ? (ಅಕಿಸಿ. ೯೨).

[ ←ಪಾರ. ಚಾಲಾಕೀ; ಮರಾ. ಚಲಾಕೀ, ಚಲಾಖೀ ]

**ಚಾಲಾಕು**, ಚಲಾಕಂ, ಚಾಲೂಕಂ, ಚಾಲೋಕು (ನಾ). ೧. ಚುರುಕು; ಚಾತುರ್ಯ ; ಜಾಣತನ ; ಚಾಕಚಕ್ಯತೆ : ವ್ಯಾಪಾರ ಮಾಡಲು ತುಂಬ ಚಾಲಾಕು ಬೇಕು (ರೂಢಿ). ೨. ಚತುರನಾದ ವ್ಯಕ್ತಿ ; ಬುದ್ಧಿವಂತಿಕೆಯುಳ್ಳ ವ್ಯಕ್ತಿ: ನೀವು ಮಾತಿನಲ್ಲಿ ತುಂಬಾ ಚಾಲಾಕಿದ್ದೀರಿ(ಬದುಕು. ೦೨೩); ಅವನ್ನ ಹಿಡೀಬೇಕಾದರೆ ನಿಮಗಿಂತ ಚಾಲಾಕಾದವರು ಬರಬೇಕು (ಕಳಾಕ. ೩೩): ಹುಡುಗಿ ಒಳ್ಳೇ ಚಾಲಾಕಾಗಿ ಭಾಗೀರಥಿಗೆ ಕಂಡಳು (ಭಾಕಥಿ. ೦೬). **ಚಲಾಕು:** ೨. ಪಾರಜದಂತೆ ಚಲಾಕಾದ ಸಾಹೇಬರೂ ಕೂಡ, ಅಕಾಲ ಜಡತ್ವವನ್ನು ಪಡೆದಂತಾಗಿತ್ತು (ದೀಕಹ. II, ೩೭೪). **ಚಾಲೂಕು:** ೧. ಸ್ವರಸೃಷ್ಟಿಯಲ್ಲಿ ಅವರಿಗೆ ಅಪಾರವಾದ ಚಾಲೂಕಿತ್ತು (ಸಂಗೀತ. ೨೬). **ಚಾಲೋಕು:** ೨. ಈಗಿನ ಕಾಲದ ಹುಡುಗಿಯರಂತೆ ಆಗಿನ ಕಾಲದವರು ಚಾಲೋಕೂ ಅಲ್ಲ (ಅಣಮಿ. ೬೦).

[ ←ಪಾರ. ಚಾಲಾಕ್; ಮರಾ. ಚಲಾಕ್, ಚಲಾಖ್ ]

**ಚಾಲಿ₁** (ನಾ). [ನಾಟ್ಯ] ನೃತ್ಯದಲ್ಲಿ ಒಂದು ಭಂಗಿ : ಅನುವಿನಿಂ ಚೌಷಷ್ಟಿ ಹಸ್ತ ಮುವ್ವತ್ತೆರಡು ಮಿಸುವ ದೃಷ್ಟಿಗಳು ನಾಲ್ವತ್ತು ಮಂಡಲ ವಿನೂತನದ ಪನ್ನೆರಡು ಪೈಪಾಡು ಪಿರಿದೆನಿಸುವೈವತ್ತೊಂದು ಚಾಲಿಯಿಂದ . . . ನರ್ತನಂಗೆಯ್ಯುತಿರೆ (ಪಾಸೋಕು. ೦-೯೮). [ <ಸಂ. ಚಾರೀ ]

**ಚಾಲಿ₂** (ನಾ). (?) : ಬನದಾಗ ಬಿತ್ತೂದು ಬನದಾಗ ಬೆಳೆಯೂದು . . . ಬನದಾಗ ಚಾಲೀ ಎರಗೂವ ಬಿದುರೀನ ಬುಟ್ಟಿ ಭೂಮಾಕ ಬರಬೇಕ (ಮಲ್ಲಿಗೆ. ೬೦). [ ? ]

**ಚಾಲಿತ** (ಗು). ೧. ಚಲಿಸುವಂತೆ ಮಾಡಿದ; ನಡೆಸಿದ. ೨. ಅಲುಗಿಸಿದ; ಬೀಸಿದ : ವಿಭವರಮೆಯು ಕಟಾಕ್ಷವೆಂಬಂತೆ ಭಾವಿನೀಚಾಲಿತ ಚಾರು ಚಾಮರಂ ಮುಂಬಿನೊಳಿಂಬುವಡೆಯೆ ಬಳಜಳಧಿಯೊಳ್ನೆಗೆದ ತರಂಗದಂತೆ ಸೂಸುವ ಸೀಗುರಿ ದೇಸಿವಡೆಯೆ (ಧಾಚಕೀ. ೦೩-೭೦ ವ). [ ಸಂ. ]

**ಚಾಲಿಸು**, ಚಾಳವಿಸು, ಚಾಳಿಸು₁, ಚಾಳೈಸು₁ (ಕ್ರಿ). ೧. ಚಲಿಸುವಂತೆ ಮಾಡು ; ನಡೆಯಿಸು : ಮೂಲೆ ಮೂಲೆಯಲಿ ವಿದ್ಯುಲ್ಲಹರಿಯೊಂದು ಧೂಲಿಕಣ ಭೂಗೋಳ ರವಿಚಂದ್ರತಾರೆಗಳ ಚಾಲಿಪುದು ಬಿಡು ಕೊಡದೆ (ಮಂಕುತಿ. ೯೩). ೨. ಅಲ್ಲಾಡಿಸು; ಅಲುಗಿಸು: ಚಾಲಿಪ ಬಾಲವುಗುರ್ವಿಪಾನನಂ . . . ಅರಲ್ದ ಮೂಗೆಸೆಯೆ ತರಕ್ಷುದಂಸಕಶಕಂವ್ಯತವಿರ್ದುದು (ಧಾಚಕೀ. ೩-೯೨). ೩. ಪಸರಿಸು ; ವಿಸ್ತರಿಸು ; ಹಬ್ಬು : ಏಳು ಪಾತಾಳ ಅಪ್ಪಅಗಲಕೆ ಚಾಲಿಸಿಹುದೆಂಬತ್ತ್ಯಯೆರಡೇ ಕೋಟಿ ಪರಿಯಂತ ಕೇಳು ತಾ ಭೂವಳಯ . . . ಚಾಲಿಸಿಹುದವಕರಸಯೆರಡೇ ಲಕ್ಷ ಲವಣಾಂಬು (ಸಂಥಪ. ೧೧-೭). **ಚಾಳವಿಸು:** ೪. ಹೆಚ್ಚುವಂತೆ ಮಾಡು ; ಅಧಿಕಗೊಳಿಸು : ಮೇಲೆ ಮೇಲಭಿಲಾಷೆ ಧೈರ್ಯವ ಚಾಳವಿಸೆ ಪರಿತೋಷ ಪೂರಣದೇಳುಮುಳುಗಾಯ್ತುತ್ತರಕೆ ನಸು ಬಾಗಿದಳು ಶಿರವ (ಕುವ್ಯಾ.ಅ. ೭-೦೦೨). ೫. ಚಲಿಸು; ನಡೆ; ಘಂಂನ್ನಂಗ್ಗ್ : ಚಾಳವಿಸಿದುದು ವಿಷಯ ಸೌಖ್ಯದ ಮೇಲೆ ಮನ (ನಿಘಾಗ. ೩-೩-೩). **ಚಾಳಿಸು₁** : ೧. " ಚಾಳಿಸು–ಚಾವರ್ಲೇ " (ಕಮುಧಾ). ೨. ಶೈಲ ಸೂಕರಿಳಮಂ ಚಾಳಿಪ ಮಲ್ಲ ಜಟ್ಟಿಗಳಿಂ (ಕುಸುಮಾ. ೩-೮೭). ೫. ಚಾಳಿಸಬೇಡ ವಿಗ್ರಹಕೆ ವಿಕಳ ಬಲನಿವನು (ಕುವ್ಯಾ.ಕ. ೧೨-೩). ೬. ನಿವಾರಿಸು ; ಹೋಗಲಾಡಿಸು : ಪಾಲುಂನೇ ಟಿ ಲ ಪಣ್ಣಗನಾಲೋಚಿಸದಧಿಕಮಾಗಿ ಕೊಂಡತಿವಿಷಮಂ ಚಾಳಿ[ಪಾಠಾಂ. ಲಿ]ಸುಗುಂ ನೆಲ್ಲಿಯಕಾಯ್ (ಖಮರ. ೨-೮೦). ೭. ಹಾಳು ಮಾಡು ; ಕಳೆ: ಬರಿದೆ ರತಿಗೊಡದೆ ಈ ಪುತ್ರ ಚಾಳಿಸಿದೆ (ಪ್ರಾಭಗಾ. ೯-೩೦). ೮. ಸುಳ್ಳು ಹೇಳಿ ನಂಬಿಸು ; ಠಕ್ಕಿಸು : ಅದಕಲ್ಲ ನೋಡೊಂದು ನೋಂಪಿಯೆಂದೆಮ್ಮನೊಪ್ಪದಿ ಚಾಳಿಸುವುದೊಂದು ಬಗೆಯು (ಭರತ. ೬-೨೦). ೯. ಬಿಡು ; ತ್ಯಜಿಸು ; ದೂರಮಾಡು (?) : ಬೇಡ ಚಾಳಿಸುವನಾನಾಡ ಚಾಳಿಸುವನ ಕೂಡೆ ಜಾಣ್ಮೆಯ ತೋಱುವಂತೆ ನೋಡದಣ್ಣ ನಿನ್ನ ತಮ್ಮಂದಿರಾಟವನೆಂದ (ಭರತ. ೯೩-೯೮) ; ಮೇಲಾದೊಡವೆಯ ಸೆಳೆಕೊಂಡಾತನ ಚಾಳಿಸಿ ಬಿಡು ನೀ ಮಗಳೆ (ಕಂಸವಿ. ೬-೦೫೬) ; ಬಾಲಕಂ ತೊದಲಿಸುತೆ ನುಡಿದರಾಮೋದಮಂ ತಾಳದುರೆ ತವುತವಗೆ ತಾತಮಾತೆಯರದಂ ಚಾಳಿಸುತೆ ಜರೆದವರೆ (ಶರಕು. ೦-೨೦). **ಚಾಳೈಸು₁** : ೫. ತರುಗಳೊಳಡಗುತ್ತ ಕಡೆಗಣ್ಣಿನಲಿ ನೋಡುತ್ತ ತರಳೆ ಚಾಳೈಸಿದಳು (ನಿಘಾಗ. ೮-೦೦-೦೯). ೮. ಬಲ್ಲೆವೈ ನೀನಿಷ್ಟು ಜಾಣನೆಂಬುದ ಮಾತಿನಲ್ಲಿ ನಮ್ಮನು ಚಾಳೈಸದಿರು (ಭರತ. ೯೮-೨೨). [ ಚಾಲನ + – ಇಸು₁ ]

**ಚಾಲು**, ಚಾಲ್, ಚಾಲೂ, ಚಾಳಿ₂, ಚಾಳು₁ (ನಾ). ೧. ಚಲಿಸುವಿಕೆ ; ಚಲನೆ : (ಇ). ೨. ಆರಂಭ ; ತೊಡಗುವಿಕೆ : ಈ ಬಲವು ಕಾರನ್ನು ಹೊಸದಾಗಿ 'ಚಾಲು' ಮಾಡುವಾಗಲೋ (starting) ಗುಡ್ಡದ ರಸ್ತೆಯಲ್ಲಿ ಹತ್ತುವಾಗ ಕಾರು ಕಡಿಮೆಯ ವೇಗದಲ್ಲಿ ಹೋಗುವಾಗಲೋ ಬೇಕಾಗುತ್ತದೆ (ಶಿಲ್ಪನಾ. ೨೦೯). ೩. ನಡೆವಳಿಕೆ ; ವರ್ತನೆ ; ಸ್ವಭಾವ : ಈಗಲಾದರೂ ತಮ್ಮ ಚಾಲು ಬಿಡದೆ, ಮತ್ತೂ ಈ ಮೇಲೆ ಸರಕಾರದ ನಿಶಾನಿ ತಂದು, ನಮ್ಮ ಜನದ ಮೇಲೆ ಚಿಕ್ಕವುಟ್ಟ ಮಾತನಾಡಿದರು (ರಾಜೇಂದ್ರ. ೦೦೩). ೪. ಸಂಪ್ರದಾಯ ; ಪದ್ಧತಿ : ಗೌಡರು ಅಳಿಯತನಕ್ಕೆ ಅತ್ತೆಮನೆಗೆ ಹೋಗುತ್ತಿದ್ದಾಗಲೂ ಎರಡು ಮೂರು ದಿನಗಳು ಇದ್ದು ಬರುವುದೇ 'ಚಾಲಾ' ಗಿತ್ತು (ನಮ್ಮೂರು. ೦೨೭). ೫. ಚಲಾವಣೆ ; ಬಳಕೆ ; ಚಾಲ್ತಿ : ಕಱವಿಲ್ಲದ ಎಮ್ಮೆಗೆ ಕೊಟ್ಟರು ಮೊಱುಹೊನ್ನುಗಳ ಎರಡು ಸವಕಲು ಒಂದು ಚಾಲ[ಪಾಠಾಂ. ಸಲ್ಲಲೆ]ಇಲ್ಲ (ಪುರಂದ. ೩-೨೭-೯). ೬. ಕಂದುರೆಯಂ ಹೆಜ್ಜೆ–ನಡೆ : (ಇ). ೭. [ಸಂಗೀತ] ಹಾಡಿನ ಧಾಟಿ : ಇಂಗ್ಲಿಷ್ ಪದ್ಯಗಳನ್ನು ಹಿಂದುಸ್ತಾನಿ ಚಾಲುಗಳಲ್ಲಿಯೂ ಅಲಾಪ ಮಾಡಿ ಆ ನಂತರ ಭಾರತೀಯ ಗೀತೆಗಳನ್ನು . . . ರಾಗ ಎಳೆಯುವವನು (ಗಾಳಿಪ. ೯೯) ; ಆಮೇಲೆ ಶಂಕರಾಭರಣ ರಾಗ ಏಕತಾಳದ 'ಚಾಲು' ಕುಣಿತವನ್ನೂ ಕುಣಿದ (ನಮ್ಮೂರು. ೩೦೮). **ಚಾಲ್ :** ೩. ಹಾಗೆ ಬಂದಂತಾವರ ಚಾಲ್ ಚಲನ್ ವಗ್ಗೈರೆ ನಡತೆಗಳನ್ನು ಇನ್ನೂ ಅವರ ಸಮ್ಮಂಧವಾಗಿ ತಿಳಿಯತಕ್ಕ ಸಂಗತಿಗಳನ್ನೆಲ್ಲಾ ವಿಚಾರಿಸಿ ತಿಳಿದುಕೊಂಡು . . . ರಿಪೋರ್ಟ್ ಮಾಡತಕ್ಕದ್ದು (ಗ್ರಾಮೂಕ. ೯೬). **ಚಾಲೂ :** ೫. ಆಹಾರಧಾನ್ಯಗಳ ರೇಶನ್ನು ಚಾಲೂ ಆಗಿ . . . ಸಾಗಿಸಲ್ಪಡುತ್ತಿತ್ತು (ಪಾನಕ. ೬೧). **ಚಾಳಿ₂ :** ೩. ಕೀಳುಜಾತಿಯ ಮನೆಯಲುಂಬುದು ಮೇಲೆ ತಂದೆಯ ತಲೆಯನರಿವುದು ಚಾಳಿಯೇ ಭಕ್ತರಿಗೆ ಭಕ್ತರ ಭಕ್ತಿ ಏತಱದು (ಬಸಪು. ೨೮-೩೨); ಭಾವಶುದ್ಧಿಯಲ್ಲೈವರನು ಸಂಭಾವಿಸುವೆನವರವರ ಚಿತ್ರದ ಭಾವವಱದುವಚರಿಸುವೆನು ಚತುರತೆಯ ಚಾಳಿಯಲಿ (ಕುವ್ಯಾ.ಅ. ೧೩-೨೩) ; ಹೊತ್ತ ಬೋಹಕೆ ಚಾಳಿ[ಪಾಠಾಂ. ಬೋಹದಜಾಳಿ]ಲೇಸಾಯಿತ್ತು(ಕೂರಿಗಾ ೪-೪-೪೦). ೮. ಚಟ; ಅಭ್ಯಾಸ; ಗೀಳು : ಅಲುತೇಲುತ ಬೆರಳು ಚಾಳಿ ಮಿಡುಕುವ ಬಾಯಿ ಮೇಳದೊಳು ತೊಡಕ ಬಿಡದವನ ಜಪವದುವೆ ಹಾಳುಮನೆಯಂತೆ (ಸರ್ವಜ್ಞ. ೦೭೩) ; ದೇವಲೋಕದವರಿಗೂ ಅಂಥ ಚಾಳಿ ತಪ್ಪಿದ್ದಲ್ಲ (ಕಲ್ಲಿಕಾ. ೦೮೭) ; ಯಾವ ಮನೆಹಾಳು ನನಮಗ ಕಲಿಸಿದನೋ ಈ ಚಾಳೀನ (ಬಂಗಾ. ೬); ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ (ಗಾದೆ). ೯. ಬಗೆ ; ರೀತಿ : ತಾಳಮೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗುತ

ಲಿರ್ದಳಾ ಮಾಯೆ (ಪ್ರಭುಲಿಂ. ೭-೨೬): ವನರುಹಾಕ್ಷನ ಧ್ಯಾನದಲಿ ಕೇಳಿನಕುಲೇಶ್ವರ ಸತಿಯರೀತನನನುವಡೆಂತು ಹೊದ್ದಿದರು ಹರಿಮೇಖಲೆಯ ಚಾ[ಪಾಠಾಂ. ಧಾ]ಳಿಯಲಿ (ತೊರವೆ. ೧-೫-೪೬). ೧೧. ಮಲ್ಲಯುದ್ಧದ ಒಂದು ವರಸೆ: ಭಾಳನೇತ್ರನ ವರದ ಗರುಡಿಯ ಚಾ[ಪಾಠಾಂ. ಜಾ]ಳಿಯನಿತುಂಟನಿತನಿವರಲಿ ಮೇಳವಿಸಿದವು (ತೊರವೆ. ೦-೦೩-೦): ಸೂಳುದೆಗದದ್ರಿಯಲಿ ತರುಶಾಖಾಳಿಯಲಿ ಮುಷ್ಟಿಯಲಿ ಲಾಗಿನ ಚಾಳಿಯಲಿ ಮಂಡಿಯಲಿ ಕಾದಿದರು (ಅನಂತಾ. ೪-೦-೪೫). ಚಾಳು₂: ೮. ಕಾಳದ ಶ್ವಾಪದ ಲೋಲಭಕ್ತರಿಗೀವ ಚಾಳಿಹುದೀತಗೆ ಪಾಲಿಸಲೆಂತು (ಅಂಬಿಕ. ೦-೧೦೦).

**ಚಾಳಿ ಬಿಡು**=ಸ್ನೇಹ ಬಿಡು ; ಸಂಗ ಬಿಡು: ಇಷ್ಟು ಸಣ್ಣ ಮಾತಿಗಾಗಿ ಅಣ್ಣ ತಂಗಿಯರಲ್ಲಿ ವೈಮನಸ್ಸು ಹುಟ್ಟಿತು ; ಮೊದ ಮೊದಲು ಹುಡುಗರಂತೆ ಚಾಳಿ ಬಿಟ್ಟರು (ಭೂಮಿತಾ. ೪೧). [ ←ಹಿಂ. ಮರಾ. ಚಾಲೂ ]

**ಚಾಲುಕ್ಯ, ಚಾಳುಕ್ಯ** (ನಾ). ಕರ್ನಾಟಕದ ಒಂದು ಪ್ರಾಚೀನ ರಾಜವಂಶದ ಹೆಸರು: ಚಾಲುಕ್ಯರ ಶಿಲ್ಪದಲ್ಲಿ ನಾಗರ ಮತ್ತು ದ್ರಾವಿಡ ರೀತಿಗಳ ಮಿಳಿತವಿರುವುದರಿಂದ ಅದನ್ನೇ ವೇಸರವೆಂದು ಹೇಳಬಹುದು(ಭಾರದ.೪೯೨). **ಚಾಳುಕ್ಯ** : ಕಾದಿಯೋಡಿದೊಡೆಟ್ಟಿಟ್ಟದನಟ್ಟಿ ಮುಟ್ಟಿ ಪಿಡಿದಂ ಚಾಳುಕ್ಯ ಚಕ್ರೇಶ್ವರಂ(ಕಾವ್ಯಾವ. ೭೬); ಕದಂಬರು . . . ಚಾಳುಕ್ಯರು, ಹೊಯ್ಸಳರು– ಇವರ ಪ್ರೋತ್ಸಾಹದಿಂದ ಜೈನಧರ್ಮ ಹನ್ನೆರಡನೇ ಶತಮಾನದವರೆಗೆ ಬೆಳೆದು ಬೆಳಗಿತು (ಕಜಾಅ. ೭೯); ಚಾಳುಕ್ಯರ ಶಿಲ್ಪವನ್ನನುಸರಿಸಿಯೇ ಪಲ್ಲವರು ದೇವಾಲಯಗಳನ್ನು ನಿರ್ಮಿಸಿದರು ,(ಹೊಯ್ಸವಾ. ೩).

**ಚಾಳುಕ್ಯಕಂಠೀರವ** = ಚಾಳುಕ್ಯ ಪಂಚಾನನ ; ಕಾಂಚಿಯ ಮುಂದೆ ಪೂಣ್ದು ನುಡಿದಂ ಚಾಳುಕ್ಯ ಕಂಠೀರವಂ (ಗದಾಯು. ೮-೭೪). **ಚಾಳುಕ್ಯ ಚಕ್ರವರ್ತಿ** = ಒಂದು ಬಿರುದು : ಚಾಳುಕ್ಯ ಚಕ್ರವರ್ತಿ ಶ್ರೀಸಾಹಸಭೀಮವಿಜಯದೊಳ್ ಭೀಮಸೇನಪ್ರತಿಜ್ಞಾವರ್ಣನಂ (ಗದಾಯು. ೧-೭೪ ವ). **ಚಾಳುಕ್ಯ ನಾರಾಯಣ** = ಚಾಳುಕ್ಯರಲ್ಲಿ ನಾರಾಯಣ ನಂತಿರುವವನು ; ಒಂದು ಬಿರುದು : ಶಂಕರ ಕಲ್ಪದ್ರುಮನೀಗಭೀಷ್ಟ ಫಲಮಂ ಚಾಳುಕ್ಯ ನಾರಾಯಣಂ (ಗದಾಯು. ೦-೨). **ಚಾಳುಕ್ಯಪಂಚಾನನ** = ಚಾಳುಕ್ಯರಲ್ಲಿ ಸಿಂಹದಂತಿರುವವನು ; ಒಂದು ಬಿರುದು : ಚಾಳುಕ್ಯ ಪಂಚಾನನಂ ಶ್ರೀಮತ್ ಪಳ್ಳಾಲದೇವರ್ (ಎಇ. VI, ೨೫೯-೪ ; 975). **ಚಾಳುಕ್ಯ ಮಾರ್ತಂಡ** = ಚಾಳುಕ್ಯರಲ್ಲಿ ಸೂರ್ಯನಂತಿರುವವನು ; ಒಂದು ಬಿರುದು : ಮಾಟ್ಕೆ ಮಂಗಲಮುಚ್ಚಂಡಕರಂ ಮಹೀವಲಯದೊಳ್ ಚಾಳುಕ್ಯಮಾರ್ತಂಡನಾ (ಗದಾಯು. ೧-೪). **ಚಾಳುಕ್ಯಾಭರಣ** = ಚಾಳುಕ್ಯರಿಗೆ ಆಭರಣದಂತಿರುವವನು ; ಒಂದು ಬಿರುದು : ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ (ಸಾಇಇ. XX, ೪೬-೪ ; 1072).

[ ಸಂ. ]

**ಚಾಲುಗೇಣಿ**(ನಾ). ವರ್ಷಕೊಮ್ಮೆ ಕೊಡುವ ಗೇಣಿ,–ಗುತ್ತಿಗೆ : ಮಳೆ ಬಿದ್ದೊಡನೆ ಅವರು ಕೆಲಸಕ್ಕೆ ಬರುವುದನ್ನು ನಿಲ್ಲಿಸಿದರು, ಅವರದೂ ತಪ್ಪಲ್ಲ ಏಕೆಂದರೆ ಅವರೂ ಹಂಗಿನ ಚಾಲುಗೇಣಿ ಒಕ್ಕಲುಗಳೇ (ಬಾಳಿ.೧. ೫೬).

[ ಚಾಲು + ಗೇಣಿ (<ಕೇಣಿ₃) ]

**ಚಾಲುವರಿ, ಚಾರಿವರ್ರಿ₂, ಚಾರ್ವರಿ, ಚಾಲವರಿ, ಚಾಲುವರೆ, ಚಾಲ್ವರಿ** (ಕ್ರಿ).ಬೇಡು; ಅಂಗಲಾಚು; ಬಹಳವಾಗಿ ಬೇಡಿಕೊಳ್ಳು; ಗೋಗರೆ: ಚಾಲುವರಿದು ನಾನು ಅವರನ್ನು ಇಲ್ಲಿಗೆ ಕರೆಸಿಕೊಂಡಿದ್ದೇನೆ (ಹುಚ್ಚಾಟ. ೦೦) ; ಕಾಕಾ ಊಟ ಮಾಡಿಕೊಂಡು ಹೋಗಿರೆಂದು ಚಾಲುವರಿದ (ತ್ಯನಿ. ೨೬೪). **ಚಾರಿವರ್ರಿ₂** : ಥಲವಿಡಿದೊಂದನೆಳಸಿ ಚಾರಿವರಿಯದೆ ನೆಲೆವಿಡಿದೊಂದಚಿ³ೂಳರದೆ ನೆಚಿ³ ನಿಂದ ನೀರ ತೆಪ್ಪದವೋಲು (ಹದಿಬ. ೩-೩೭). **ಚಾರ್ವರಿ** : ಚಂದಿರನ ಕಾಣುತಲೆ ಚಾರ್ವರಿಯ ಚಿತ್ತಾ (ರಾಜವಿ. ೪೦).

**ಚಾಲವರಿ** : ಕಾಲನು ಪೊರಳಿಗೆ ಬೀಳು ಕಟ್ಟಿಸಿಕೊಂಡೆ ಚಾಲವರಿದೆ ಗೊಲ್ಲ ಬಾಲೆಯರೆಲ್ಲರಿಗೆ (ಏದಾಳ್ಯ. ೧೫೫-೨) : ಅವ ಕಾವ ಗೋವ ಚಾಲವರಿದು ಕೂಗಿ ಶುದ್ಧ ಲಾವಕರಟ್ಟುಳಿ ಬಿಡಿಸು (ಮೋಹದೀ. ೩೮-೫). **ಚಾಲುವರೆ** : ಬೇಕಾದಷ್ಟು ಚಾಲುವರೆದು ಹೇಳತಿದ್ದೆ (ನಮ್ಮಬ. ೦೨) ; ವೇಲೂರ ಮುತ್ತಿಗೆಯನ್ನೆಬ್ಬಿಸಬೇಕೆಂತಲೂ ಚಾಲುವರೆದುದರಿಂದ ಕೂಟ್‌ನು ಆ ಮಾತಿಗೆ ಒಡಂಬಟ್ಟು (ಜರಿತಂ. ೦೫೪). **ಚಾಲ್ವರಿ** : ಹಲವು ದೈವರಿಗೆ ಕೇವಲ ಚಾಲ್ವರಿದರೆ ಹಲಬುವುದಲ್ಲದೆ ಬಳಲಿಕೆ ಪೋಗೋದೇನಯ್ಯ (ಮೋಹದೀ. ೫೨-೨) ; ಕೈಲಿ ಬೆಣ್ಣೆಯಿದ್ದವನು ತುಪ್ಪಕೆ ಚಾಲ್ವರಿವುದುಂಟೆ (ಕುಹೀಲೋ. ೧೮). ‘ಆಲ್ಪರಿ’ ಪರಾ. [ ? ]

**ಚಾಲುವರೆ** ‘ಚಾಲುವರಿ’ ನೋ.

**ಚಾಲೂ** ‘ಚಾಲು’ ನೋ.

**ಚಾಲೂಕು** ‘ಚಾಲಾಕು’ ನೋ.

**ಚಾಲೋಕು** ‘ಚಾಲಾಕು’ ನೋ.

**ಚಾಲ್ತಿ** ‘ಚಾಲತಿ’ ನೋ.

**ಚಾಲ್ತಿಸಾಲು** ‘ಚಾಲತಿಸಾಲು’ ನೋ.

**ಚಾಲ್ವರಿ** ‘ಚಾಲುವರಿ’ ನೋ.

**ಚಾವಂಡಯ್ಯ** (ನಾ). ಒಬ್ಬಾತನ ಹೆಸರು : ಚಾವಣ್ಡಯ್ಯಂಗೆ ಇವರ್ಪೇಟ³ ನಾಡುಸಾಸನಂಗೊಟ್ಟ (ಎಕ. IX, ಹೊಸಕೋ. ೦೧೦-೭ ; 997).

[ <ಚಾವುಂಡ + ಅಯ್ಯ₁ ]

**ಚಾವಕ** (ನಾ). [ಗಣಿತ] ಒಂಭತ್ತು ಎಂಬ ಸಂಖ್ಯೆಯಂ ಸಂಕೇತ : ನವ . . . ಚಾವಕ, ಕೌಶವ ? . . . ನಾಟ್ಯಾಂಗ, ಇಂತಿನಿತುಂ ೯ಕ್ಕೆ ಪೆಸರು (ವ್ಯವಹಾ. ೧೧). P ‘ನವಕ’ ಇರಬಹುದೆ ?

**ಚಾಮಗಾವುಂಡ** (ನಾ). ಒಬ್ಬ ವ್ಯಕ್ತಿಯ ಹೆಸರು : ಲಕಗಾವುಣ್ಡಂ ಭವಗಾವುಣ್ಡ ಚಾವಗಾವುಣ್ಡ ಭಸಗಾವುಣ್ಡ (ಎಕ. IV, ಹಗ್ಗ.ಡ. ೦೦೪-೯ ; 1087).

[ <ಚಾಮ + ಗಾವುಂಡ (<ಗಾಮುಂಡ) ]

**ಚಾವಟಿ** ‘ಚಾಟಿ₁’ ನೋ.

**ಚಾವಟೆಯು** ‘ಚಾಪಟಿಯು’ ನೋ.

**ಚಾವಡಿ, ಚಾವಡೆ, ಚಾವುಡಿ, ಛಾವಡಿ** (ನಾ). ೧. ಆಸ್ಥಾನ ; ಸಭಾಮಂದಿರ ; ಓಲಗಶಾಲೆ : ಮುತ್ತಿನೊಳೆಸೆವ ಚಾವಡಿಯೊಳು ಕುಳ್ಳಿರ್ದು . . . ನುಡಿದನು (ಅಂಜನ. ೭-೧೩೬) : ಮರುಳು ತಂಡಗಳಾಪ್ತಸೈನ್ಯವು ನಿರುತ ಚಾವಡಿ ರುದ್ರಭೂಮಿಯು (ಕೌಶಿಕಾ. ೩-೨೨) : ಭಿತ್ತಿಯೊಳ್ ಪೊಱಮಟ್ಟು ಚಾವಡಿ ಮದನಕೈಯತ್ತಿದ ಪದೆವುದಂಡೆಗಳು . . . ರಂಜಿಸಿತು (ಮೋಹತ. ೨೨-೬). ೨. ಹಳ್ಳಿಯಲ್ಲಿಯ ಪಂಚಾಯಿತಿ ಸಭೆ ಸೇರುವ ಸ್ಥಳ ; ಹಳ್ಳಿಯ ಕಚೇರಿ ; ಗ್ರಾಮಕಚೇರಿ : ಈತನು ಗ್ರಾಮದ ಚಾವಡಿಯಲ್ಲಿ ಬಂದ ವ್ಯವಹಾರಗಳನ್ನು ಇತ್ಯರ್ಥ ಪಡಿಸುತ್ತಿರುವಾಗ . . . ಸೈನ್ಯಸಮೇತನಾಗಿ ಬಂದು (ಸಂಸಳ. ೦೦೬) ; ಊರು ಎನಿಸಿಕೊಳ್ಳುವುದಕ್ಕೆ ಒಂದು ‘ ಚಾವಡಿ ’ ಇರಬೇಡವೆ ? (ಗಾಳಿಗು. ೧) ; ಚಾವಡಿಯಲ್ಲಿ ಕುಳಿತು ನಡೆಸುವ ತಾಳಮದ್ದಳೆಯ ಸಂಪ್ರದಾಯ (ಯಕ್ಷಬ. ೧೬). ೩. ಮನೆಯ ಮುಂದಿನ ಜಗುಲಿ,–ಕಟ್ಟೆ. ೪. ಆಶ್ರಯಸ್ಥಾನ : “ ಹಕ್ಕಿ ಗಳಿ . . . ಚಾವಡಿ ಪೊಟಲ್ ಬೀಡುಮಾಗರವೆಂದೊಡಾಶ್ರಯಕೆ ನಾಮಮಕ್ಕುಂ ” (ಅಭ್ಯಕ್ಕ. ೩೩) : “ ಚಾವಡಿಯು ಮೇರೆಯಾಗರ ವಸದು ” (ಕವಿಕಂ. ೦೫೫). ೫. ಕೊತವಾಲನ ಕಚೇರಿ ; ಪೋಲೀಸ ಚೌಕಿ : ಚೆಂನ್ನಪಟ್ಟಣದ ಚಾವಡಿಗೆ ಸಲುವ ಕಿಱುಗವರ ಸ್ಥಳದ ಸುಳ್ಳಿರಿಯ ಕಾಲುವಳಿ ಹಿರಿಯಾಕ ಮನೆಯ ಮಣಪ್ರಮಾಣಿನಲ್ಲಿ ಕುಳಬಳಿ ಸಾಂಮ್ಯ ಸಹ (ಎಕ. IX (8), ಚನ್ನಪ. ೨೯೯-೮; 1387) ; ಕಳ್ಳನನ್ನು ಹಿಡಿದು . . . ಕಟ್ಟಿ ಚಾವಡಿಗೆ ತೆಕ್ಕೊಂಡು ಹೋಗಿ ಲಾಲಕಂಭಕ್ಕೆ ಬಿಗಿದರು (ಕಥಾಮಂ. IV, ೨೬).

**ಚಾವಡೆ :** ೨. ಮುಳುವಾಯ - ಜಾವಡೆಯ - ಮಂನೆಯ ಶ್ರೀಮನ್ಮಹಾನಾಯಚಾರ್ಯಾಚಾರ್ಯರ . . . ಮಕ್ಕಳು (ಎಕ್. X, ಚಿಂತಾಮ. ೩೯-೩ ; 1407?). **ಚಾವುಡಿ :** ೫. ಮೇಷಲಗ್ನ ಉದಯದಲಿ ಘಳಿಗೆ ೬ . ಯಲೂ ಬೇಲೂರು ಚಾವುಡಿಗೆ ಸಲುವ ಎಲಹಕ್ಕ ನಾಡ ಶಿವನಸಮುದ್ರ ಸೀಮೆ ವೊಳಗಣ . . . ಸರ್ವ್ವಮಾನ್ಯದ ಅಗ್ರಹಾರದಲೂ (ಎಕ್. IX, ನೆಲಮಂ. ೩೦-೩ ; 1583). **ಛಾವಡಿ :** ೩. ಮಾತನಾಡುತ್ತ ನಮ್ಮ ಛಾವಡಿಯವರೆಗೂ ಅವನನ್ನ ಕರೆದುಕೊಂಡು ಹೋದೆ (ತುಬಿಮಿ. ೪೪).

[ ←ಹಿಂ. ಮರಾ. ಚಾವಡೀ ]

**ಚಾವಡಿಕಾರ** (ನಾ). ಪಂಚಾಯತಿಯ ಸದಸ್ಯ ; ಪಂಚ (ಉಕ) : ಶಿವಾಚಾರದ ನಂಜಪ್ಪಯೆಂಬ ಚಾವಡಿಕಾರ ಬಂದು (ರಾಜೇಂದ್ರ. ೧೪೧).

[ ಚಾವಡಿ + – ಕಾರ$_1$ ( < – ಕಾಱ ) ]

**ಚಾವಡಿಮನೆ** (ನಾ). ಚಾವಡಿಯ ಮನೆ; ಸಭಾಮಂದಿರ; ಓಲಗಶಾಲೆ: ದಿಸವನುದಯಾಚಲದ ಚಾವಡಿಮನೆಗೆ ಬರೆ ಬಲವೆರಡು ಗಳಗರ್ಜನದಿ ಬಂದೊಡ್ಡಿದವು ಕಳನೊಳು ಖತಿಯ ಪಡಪಿನಲಿ (ಕುಮಾ.ಭಿ. ೩-೮)

[ ಚಾವಡಿ + ಮನೆ ]

**ಚಾವಡಿವಳಿತ** (ನಾ). ಆಸ್ಥಾನದ ಅಧಿಕಾರ ; ಸೀಮೆಯ ಆಡಳಿತ : ಈ ನಮ್ಮ ಅವಸ್ಥೆಯ ಗುಟ್ಟನ್ನು ಭೇದಿಸಿಕೊಳ್ಳಬಲ್ಲ ಗೂಢಚಾರ ಪ್ರಣಿಧಿಗಳು ಮೈಸೂರ ಮಹಾಸ್ವಾಮಿಯವರ ಚಾವಡಿವಳಿತದಲ್ಲಿಲ್ಲದಿಲ್ಲವೆಂಬ ನಿಶ್ಚಯವೂ ನಮ್ಮನ್ನು ಕದಡಿರಲಿಲ್ಲ (ಕಟ್ಟಿಅ. ೬೩-೧೯).

[ ಚಾವಡಿ + ವಳಿತ (=ವಲಿತ) ]

**ಚಾವಡೆ** 'ಚಾವಡಿ' ನೋ.

**ಚಾವಣ** 'ಛಾವಣಿ' ನೋ.

**ಚಾವಣಿಗೆಗೊಳು** (ಕ್ರಿ). ಆಶ್ರಯಕೊಡು (?) : ತಲೆಗಾಯದುತ್ತ ಮರನೂ ಚಾವಣಿಗೆಗೊಳುತಲ್ಲಿಗಲ್ಲಿಗುರೆ ಕನಕವಣಿ ಕೇವಲುತ್ಕೃಷ್ಟದಿಂ (ಶರಕು. ೧೦-೦೫). [ ಚಾವಣಿಗೆ ? + ಕೊಳು ( < ಕೊಳ್$_1$ ) ]

**ಚಾವಬ್ಬೆ** (ನಾ). ಒಬ್ಬಾಕೆಯ ಹೆಸರು: ಚಾವಬ್ಬೆಯ ಮಗಂ ಪೋಚಣಕಲ್ಲ (ಮೈಅರಿ. ೧೯೪೨, ೨-೬ ; 973 ?) [ <ಚಾಮ + ಅಬ್ಬೆ$_1$ ]

**ಚಾವಯ್ಯ** (ನಾ). ಒಬ್ಬಾತನ ಹೆಸರು : ಕನ್ನಬ್ಬರಸಿಯ ತಮ್ಮ ಚಾವಯ್ಯಮುಂ ದವ್ವಡಯ್ಯನುಂ ನಾಗವರ್ಮನುಂ ಬಂದಿಲ್ಲಿ ದೇವರಂ ಬಂದಿಸಿದರ್ (ಎಕ್. II, ೪೬೬-೧ ; ಸು. 1080).

[ <ಚಾಮ + ಅಯ್ಯ$_1$ ]

**ಚಾವಲ, ಚಾವಳ, ಜಾವಳ$_1$** (ನಾ). ಚಾಪಲ್ಯ; ಚಪಲತನ; ದುಡುಕುವ ಸ್ವಭಾವ. 'ಚಾವಲಿಸು' ನೋ. **ಚಾವಳ :** ಪತ್ನಕ್ಕೆ ಪತ್ನಂ – ಕಪಿಲಾ – ಕವಿಲೆ . . . ಚಾವಳ – ಜಾವಳ (ಶಮದ. ೨೩೦ ಪ್ರಯೋ). **ಜಾವಳ$_1$ :** "ಜಾವಳಮೆನಲ್ಕೆ ಚಾಪಲಮದು ತಾಂ" (ಕವಿಕಂ. ೨೦೦).

[ <ಸಂ. ಚಾಪಲ ]

**ಚಾವಲಿಸು, ಚಾವಳಿಸು, ಜಾವಳಿಸು** (ಕ್ರಿ). ೧. ಚಪಲತೆಯನ್ನುಂಟು ಮಾಡು ; ದುಡುಕುವಂತೆ ಮಾಡು : ಕುಲಮದವೊಂದು . . . ರಾಜ್ಯಮದವೊಂದಿನಿತುಂ ಮದಮೆಯ್ದೆ ಕೂಡೆ ಚಾ[ಪಾಠಾಂ. ಜಾ]ವಲಿಸೆ ಮದೋದ್ಧತರ್ಕಳಿರಲಾರದೆ ಪೇಳ್ ಬೆಸನಾವುದೆಂದು . . . ಕದರ್ಥಿಸಿದರ್ ಸಹಸ್ರನಂದನರ್ (ಅಜಿಪು. ೧೦-೧೦). **ಚಾವಳಿಸು :** ೨. ಅಲ್ಲಗಳೆ ; ಜರೆದು ಮಾತನಾಡು ; ಹೀಯಾಳಿಸು : ಇಳೆಯಂ ತಾಳ್ದಿದ . . . ಧೂಮಧ್ವಜಂ ರಘುಳಮಂ ಮೇಲೆ ಕಡಂಗಿ ಪೊಯ್ದು ವಿಳಿಕೆಯ್ನೇನಾನುಮಂ ಕೇಳ್ ಚಾ[ಪಾಠಾಂ. ಜಾ]ವಳಿಪಂತಾದುದು ಜೀರ್ಣಪರ್ಣಪರುಷಪ್ರಧ್ವಾನದಿಂ ಮಾರುತಂ (ಶಾಂತಾಮಾ. ೬-೧೦೨). ೩. ಧ್ವನಿಮಾಡು ; ತೊಂಡುಗೆಡೆ : ಕಾಮನ ಡಾಮರದಲ್ಲಿ ಕೋಕಿಲೋತ್ಕರರವವಲ್ಲಿ ಚಾವಳಿಪ ರಾಜಶುಕಪ್ರಜದಲ್ಲಿ . . . ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ಅರಗಿಳಿವಿಂದು ಬಂದಳಿಪ ಸಾರಿಕೆ ಚಾವಳಿಪುನ್ನದಾಳಿಗಾವರಿಸುವ ಸೋಗೆ (ಪುಷ್ಪ. ೦೪-೨೩). **ಜಾವಳಿಸು :** ೨. ಉದ್ಧುರ ಮುದ್ಧುರಂಗಳ ಗಾವರಕ್ಕೆ ಜಾ[ಪಾಠಾಂ. ಚಾ. ಬಾ]ವಳಿಸಿ ಚಡಾಳದೊಳ್ಗೊರೆವವು (ಅನಂಪು. ೧-೬೬). [ ಚಾವಲ + – ಇಸು$_3$ ]

**ಚಾವಳ** 'ಚಾವಲ' ನೋ.

**ಚಾವಳಿಸು** 'ಚಾವಲಿಸು' ನೋ.

**ಚಾವಿ** (ನಾ). ಬೀಗದ ಕೈ; ಕೀಲಿ ಕೈ: ಒಳಗಣ ಹೊರಗಣ ಬಧ್ಯುಗಳಿಗೆ ಎಷ್ಟು ಚಾವಿ – ಬೀಗದ ಕಯ್ಗಳು ? (ಮಂತ್ರಿಕ. ೩೩-೨೩) ; ಚಾವೀನ ತಗೊಂಬಾಂತ ಹೇಳಿದ್ರು (ದೇಶರು. ೯೩).

[ ←ಹಿಂ. ಚಾಬೀ ; ಮರಾ. ಚಾವೀ. ]

**ಚಾವುಂಡ** (ನಾ). ಒಬ್ಬಾತನ ಹೆಸರು : ನೆಗಟ್ದ ಮಾಚಬಳಯ್ಯಂಗನೇಕ ಗುಣರತ್ನರಾಶಿ ಮನುಮುನಿಚರಿತಂ ವಿನಯವಿಭೂಷಣನೊಳ್ಪಿಂಗಿನೆಯಂ ಮೊದಲೆನಿಸಿ ಪುಟ್ಟಿದೊಂ ಚಾವುಣ್ಡಂ (ಎಕ್. III, ತಿರುಮ. ೬೯-೦೫ ; ಸು. 990). [ <ಚಾಮುಂಡ ]

**ಚಾವುಂಡಿ, ಚವಡಿ, ಚವುಡಿ, ಚೌಡಿ** (ನಾ). = ಚಾಮುಂಡಿ : ಮಕಾರಕ್ಕೆ ವಕಾರಂ – ಅಮರೀ – ಅವರಿ . . . ಚಾಮುಂಡೀ – ಚಾವುಂಡಿ (ಶಮದ. ೨೩೩ ಪ್ರಯೋ). **ಚವಡಿ :** ಬಲವ್ಪದಂನಾಯಕರ ಪ್ರಧಾನ ಕಳವತಿಹ ಚವಡಿಯಕ್ಕನವರು (ಎಕ್. X. ಕೋಲಾರ. ೩೨-೯ ; 1348). **ಚವುಡಿ :** ಅವನು ಚವುಡಿಯನ್ನು ಪೂಜಿಸುತ್ತಿದ್ದಾನೆ (ಬೂಧಿ). **ಚೌಡಿ:** ಬೆಟ್ಟದ ಚೌಡಿಗೆ ಗಡಿಯ ಭೈರವನಿಗೆ ಕೊಟ್ಟೆವು ನರಬಲಿಯನುತ (ಕಂನವಿ. ೩-೭೦).

[ <ಚಾಮುಂಡಿ ]

**ಚಾವುಡಿ** 'ಚಾವಡಿ' ನೋ.

**ಚಾಷ** (ನಾ). ಒಂದು ಬಗೆಯ ನೀಲಿಬಣ್ಣದ ಪಕ್ಷಿ ; ಶಕುನದ ಪಕ್ಷಿ ; "ಚಾಷಃ, ಕಿಕೀದಿವಿಃ – ೨ ಹಂಗನಹಕ್ಕೀ ಹೆಸರು. ಶಕುನದ ಹಕ್ಕಿ, ಆಂಧ್ರದಲ್ಲಿ ಪಾಲಪಕ್ಷಿ" (ಸಿದ್ಧಾಂತಿ. ೧೩೮) ; ತರದಿಂ ಚಾಷ[ಪಾಠಾಂ. ಪ] ಮಯೂರ ತಾರ ತಿಳಿಗೆಂಪಕ್ಷಿರಾಟ್ಟ ನೀರೋಪಮಂ ದೊರೆಕೊಳ್ಗುಂ ಶಶಿ ಭಾನುಗಳ್ಗೆ (ಕೋಟಿಶಾತ. ೪-೨೯) ; ಚಾಷ ಭಾಸ ಹಂಸ ಬಕ . . . ಸುಪರ್ಣಾದಿ ಪಕ್ಷಿ ಸಮೂಹಗಳಂ (ಭಾರತಶಾಂ. ೩೬-೨೬೪). [ ಸಂ. ]

**ಚಾಷಗತಿ** (ನಾ). [ನಾಟ್ಯ] ನರ್ತನದಲ್ಲಿ ಒಂದು ಬಗೆಯ ಪಾದಚಲನೆ ; "ಬಲಗಾಲನ್ನು ಒಂದು ಗೇಣು ಮುಂದಿರಿಸಿ ಪುನಃ ಅದೇ ಕಾಲನ್ನು ಜಾಗ್ರತೆ ಎಡದು ಗೇಣು ಹಿಂದಕ್ಕಿರಿಸಿ ನೆಗೆದು ಸ್ವಭಾವವಾಗಿ ನಿಂತು ಕೊಂಡು ಹೆದರಿಕೆಯಿಂದ ಕೂಡಿರುವಂತೆ ಹಿಂದಕ್ಕೂ ಮುಂದಕ್ಕೂ ಅನೇಕಾವರ್ತಿ ಚಲಿಸುವುದು" (ಅಭಿನಯ. ೩೦೬ ಗದ್ಯಾನುವಾದ) : ಮಿಸುಗುವ ಸಮಪಾದಂ ರಂಜಿಸುತ್ತಿರ್ಪ ಸ್ಥಿತಾವರ್ತ ಶಕಟಾಸ್ಯಂಗಳ್ ಪಸರಿಪ ವಿಚ್ಯವೆಯಧ್ಯರ್ಧಿ ಸಮಂತಾ ಚಾಷಗತಿಯುಮುಂಬುಜಗಂಧೀ (ಅಭಿನಯ. ೬-೨). [ ಚಾಷ + ಗತಿ ]

**ಚಾಸರಾಳ್** (ನಾ). ಒಂದು ಊರಿನ ಹೆಸರು (?) : ಶ್ರೀ ಚಾಸರಾಳ್ ಪೊನ್ನಾಕವಳಿಗೆ ಕಾಳಮ್ಮನ್ ಮಾನ್ದಳಿ ಬೀರಿಯದುಳ್ಪೆ ಬಲವೆಮ್ಮರಸರ ಕಾಳೆಗದುಳ್ಪೆ ಎಱದು ಸತ್ತನ್ (ಎಕ್. XVI, ತುಮಕೂ. ೦೦೦-೦ ; 780).

[ ? ]

**ಚಾಹಡ** 'ಚಹಡ' ನೋ.

**ಚಾಹಿಯ** (ನಾ). ಛತ್ರಿ ಹಿಡಿಯುವವನು (?) : ಸಿಡಿದು ಕರ್ಣನ ತಲೆ ಧರಿತ್ರಿಗೆ ಕೆಡೆಯ . . . ಹಡಪಿಗರು ಚಾಮರದ ಚಾಹಿಯರೊಡನೆ ನೆಲ ಕುರುಳಿದರು (ಕುಮಾ.ಕ. ೦-೮). [ <ಪ್ರಾ. ಛಾಹಿ, ಛಾಹಿಯಾ = ನೆರಳು ]

**ಚಾಹುಲ್ಲು** (ನಾ). ಶುಂಠೀಹುಲ್ಲು; "ಭೂತೃಣಾ" (ಶಂಡಿಕ.). [ ? ]

**ಚಾಳ**, ಚಾಳು$_1$ (ನಾ). (ಉಕ) ಒಂದೇ ಬಗೆಯ ಮನೆಗಳ ಸಾಲು; ಹಲವು ಮನೆಗಳನ್ನೊಳಗೊಂಡ ವಠಾರ: ಗಿರಣಿಯ ಕೂಲಿಕಾರರು ವಾಸಿಸುವ 'ಚಾಳ'ದಂಥ ಓಣಿ (ಮೋಹಲ. ೪೫೯); ದೊಡ್ಡ ದೊಡ್ಡ ಚಾಳಗಳನ್ನು ಕಟ್ಟಿಸುವವರು . . . ಗಿರಣಿಯ ಮಾಲಕರು ನಿಮ್ಮ ಕಣ್ಣು ಕಕ್ಷೆಯಲ್ಲಿ ಬರದಿರುವದು ವಿಚಿತ್ರವಾಗಿದೆ (ಮುಕ್ತಮ. ೨೨೧). **ಚಾಳು$_1$**: ಆ ಚಾಳುಗಳನ್ನು ನೋಡಿ ಪಾರಿವಾಳಗಳನ್ನಿಡುವುದಕ್ಕೆ ಮಾಡಿದ ಪೆಟ್ಟಿಗೆಯು ನೆನಪಾಯಿತು ಶಾಮಣ್ಣನಿಗೆ (ಮುಹಾಲ. ೯೬); ನಮ್ಮ ಚಾಳಿನ ಬಾಡಿಗೆ ಎಷ್ಟು ವಸೂಲಾಯಿತು (ಹರಿಲ. ೮): ಮಳೆಗಾಲದಲ್ಲಿ ಚಾಳಿನಲ್ಲಿರುವವರ ಬವಣೆ ಹೇಳತೀರದು (ಶಾವಿಯ. ೧). [←ಮರಾ. ಚಾಳ್./ಸಂ. ಶಾಲಾ]

**ಚಾಳಂಕಿ** 'ಚಾಳಾಂಕಿ' ನೋ.

**ಚಾಳಕ$_1$** 'ಚಾಲಕ' ನೋ.

**ಚಾಳಕ$_2$**, ಚಾಳ್ಕ (ಗು). ೧. ತುಂಟತನದ; ಧೂರ್ತತೆಯುಳ್ಳ; ಕುಟಿಲವಾದ :(೬).(ನಾ). ೨. ತಂತ್ರಿ; ಉಪಾಯಗಾರ; ಧೂರ್ತ; "ಹಂಚಿಕೆಯುಳ್ಳವ, ಕಿಡಿಗೇಡಿ" (ಜಾನಕೋ. ೩೬): ಸರಡುಪತ್ರದ ಲಾಳು ಗೊಂಬಗಡ ನಮ್ಮನೀ ನರೆದಲೆಯ ಚಾಳಕನೆನುತ ಕೋಪಿಸಿದ ಸೌಂದರಕುವರನಾ ವಿಪ್ರನ (ಸೌಂದಕು. ೩-೯); ಚಾಳಕನ ನಗೆನುಡಿಯು ಮಾಳಿಗೆಯು ಮುಱಿದಂತೆ ಬಾಳು ಉಳ್ಳವರ ಬಿಱು ನುಡಿಯು ಬೀಳ್ವನೆಯು ಏಳಿಗಾದಂತೆ (ಸರ್ವಜ್ಞ. ೧೩೪೯). **ಚಾಳ್ಕ**: 'ಚಾಳ್ಕತನ' ಪರಾ. [←ಹಿಂ. ಚಾಲಕ್]

**ಚಾಳಣಿ** (ನಾ). = ಚಾಲನಿ: ಆ ಡಬ್ಬಿ ತಳದ ತಗಡಿನೊಳಗ ಎಷ್ಟು ಚಾಳಣಿ ಆಗಬಹುದಂತ ಅನ್ನಿಸತದ ನಿನಗ? (ಪ್ರಜಾಡಿ. ೪೨). [<ಸಂ. ಚಾಲನೀ]

**ಚಾಳನಿ** 'ಚಾಲನಿ' ನೋ.

**ಚಾಳಯಿಸು** 'ಚಾಳಿಸು$_1$' ನೋ.

**ಚಾಳವಿಸು** 'ಚಾಲಿಸು' ನೋ.

**ಚಾಳಾಂಕಿ**, ಚಾಣಕಿ, ಚಾಣಕ್ಕಿ, ಚಾಣಾಂಕಿ, ಚಾಳಂಕಿ, ಜಾಣಾಂಕಿ (ನಾ). ಒಂದು ಬಗೆಯ ಪಕ್ಷಿ; ಮೈನಾಹಕ್ಕಿ; ಸಾರಿಕೆ: ಜಯವಿಲ್ಲನ ಮುಂದೆ ಪುಸರನನು ಪೊಗಳ್ವರು ಖೂಳರೆಂದು ಸಂತೋಷದಿ ಚಾಳಾಂಕಿ [ಪಾಠಾಂ. ಚಾಣಾಂಕಿ, ಜಾಣಾಂಕಿ, ಜಾಣ್ಯಕ್ಕಿ]ಯುಲಿದವು (ಕೂಬಕೋ. ೩-೦೬); ಹಂಸೆಗಳಗಲಸಗಮನಂಗಳಂ ತೋಱುತಂ ಚಾಳಾಂಕಿಗಳಿಗೆ ನೀತಿಯನು ಸಿರುತ... ಚಲುವೆಣ್ಗಳಿಸೆದಿರ್ದರು (ಜಲಪು. ೧೦-೯೦). **ಚಾಣಕಿ**: ಕಳಹಂಸ ನಲಿಯಲೊಪ್ಪದ ಸೋಗೆ ಕುಣಿಯೆ . . . ಗಿಳಿವಿಂಡುಗಳ ಮಾತು ಸೊಗಸೆ ಚಾಣಕಿಯೋದೆ (ಅಶಿಚಂ. ೧೯-೩೩). **ಚಾಣಕ್ಕಿ**: ಶುಕಸಾರಿಕಾಭ್ಯಾಂ = ಗಿಳಿಯುಂ, ಚಾಣಕ್ಕಿಯುಮೆಂಬಿವಱಿಂ (ನೀತಿವಾ. ೯-೩೩); ಖಿಂಬಿಯ ಬನದೊಳು ಹೊಂಬುಳ್ಳ ಚಾಣಕ್ಕಿಗಳಿರಾ ರಂಬೆ ಗಿರಿಜಮ್ಮನರಸಗ ಸೋ ಇಂದು ಧರಗ ತುಂಬಿದಾರೂತಿ ಬೆಳಗಿರೆ (ರೂಳಗೀ. ೦೯). **ಚಾಣಾಂಕಿ**: ಮಿಾನ್ಬುಲಿಗ ಮರಕುಟಕ ಚಾಣಾಂಕಿ (ಋಕ್ಮಾಂಗ. ೦೦-೩). **ಚಾಳಂಕಿ**: ಕೋಕಿಳಂಗಳ ರವದ ಕಹಳೆ ಚಾಳಂಕಿ ಪಾಠಕರ ಕಳಕಳದಿಂದೆ ಪೊಱಮಟ್ಟನು (ಜಿಪು. ೩೩-೭); ಪಾರಿವಾಳದ ಪಕ್ಷಿ ಮಱಿಹುಲ್ಲೆ ಚಾಳಂಕಿಗಳಾ ಸರಸಗೋಷ್ಠಿಗೆ ಸಲೆ ಹೇಮಪಂಜರದೊಳಿರಿಸಿ (ಜನರಾ. ೭-೩೦). **ಜಾಣಾಂಕಿ**: ಅರಗಿಳಿ ಪರಿಸಲರ್ಥ್ಯಸುವ ಜಾಣಾಂಕಿ . . . ನರ್ತಿಪ ನವಿಲು (ಶ್ರೀಪಾಲ. ೧-೨೪). [?]

**ಚಾಳಿ$_1$** 'ಚಾಟ್' ನೋ.

**ಚಾಳಿ$_2$** 'ಚಾಲು' ನೋ.

**ಚಾಳಿತನ** (ನಾ). ದುರಭ್ಯಾಸ; ಕೆಟ್ಟನಡತೆ: ಕಡಿಮೆ ಹುಡಿರು, ಹದಿನಾರು ಸಾವಿರ ಮಂದಿ ಬಿಡು ನಿನ್ನ ಚಾಳಿತನವೆಂದ (ಕರ್ಣಾಳ. ೨೮೭). [ಚಾಳಿ$_2$ (<ಚಾಲು) + -ತನ]

**ಚಾಳಿಸು$_1$**, ಚಾಳಯಿಸು, ಚಾಳ್ಕೆಸು$_2$ (ಕ್ರಿ). ೧. ಜರಡಿ ಹಿಡಿ; ಶೋಧಿಸು: ಹಳೆಯ ಗಂಟು ಗಡಡಿಗಳನ್ನೆಲ್ಲಾ ಚಾಳಿಸಿ ಅದನ್ನು ಹುಡುಕಾಡಿಕೊಂಡನು (ಬೆಳಗು. ೨೩); ಡಬ್ಬಿಯೊಳಗಿನ ಹಿಟ್ಟನ್ನು ಪರಾತಕ್ಕೆ ಚಾಳಿಸಿದನು (ಕಳ್ಳರ್ವ್ರ. ೨೨೧). ೨. ಸೋಲಿಸು; ಹಿಮ್ಮೆಟ್ಟಿಸು; ಓಡಿಸು: "ಚಾ [ಪಾಠಾಂ. ಚಾ] ಳಿಸಿತೆಂದು ಸೋಲಿಪುದು" (ಕಬ್ಬಿಕೈ. ೭೨); ವಿಜಯದ ಗುಡಿವಿಡಿಸಿ ಅರಿನೃಪರಂ ಭೇದಿಸಿ ಪಾಂಚಾಳರಂ ಚಾಳಿ[ಪಾಠಾಂ. ಚಾರಿ, ಬಾರಿ]ಸಿ ಗಾಂಧರ್ವರಂ ವಿರಥರ್ ಮಾಡಿ (ಹಂಪಥಾ. ೬-೨೯ ವ); ಮಲ್ಲಕ್ರಮದೆ ಪೊಣರ್ದು ಗೋಪಾಲರಂ ಚಾ [ಪಾಠಾಂ. ಜಾ]ಳಿಸುತ್ತುಂ (ಜಗವಿ. ೪-೩೮). ೩. ಹೀಯಾಳಿಸು; ತಿರಸ್ಕರಿಸು: ಓರೊರ್ವರಂ ದೂಕ್ಕರಿಸು ತ್ತೋರೊರ್ವರಂ ಚಾಳಿಸುವ ಪದದೊಳ್(ಜಗವಿ. ೬-೩೪); ಚೊಕ್ಕೆಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಛಡಿಕೆಯೊಳ್ ಬಗಿದು ಚಾಳಿಸಿ ನೂಂಕುವ (ಗಿರಿಕ. ೨-೧೦೩ವ). ೪. ಪೀಡಿಸು; ಕಾಡು: ಎಂದು ತನ್ನ ಟಿಪನದರೆ ಚಾಳಿಸಿ ನುಡಿದು ಪೋಗುತ್ತುಂ (ಅನಂಪು. ೧೧-೯೩ ವ); ತೆಗೆದೆತ್ತೆ ಬಾರದಿರೆ ಸಿದ್ಧನಂ ಚಾಳಿಸಲ್ಬಗೆದು (ಪಾಶೋಪು. ೧೦-೬೪); ಅಱಿವುಗೇಡಿಂ ನಾಡೆ ನಿಮ್ಮವರಂ ಚಾಳಿಸಿದೆವು (ರಾಮಾಕ್ಯ. ೧೨೨-೪). ೫. [ಸಂಗೀತ] ರಾಗಾಲಾಪನೆಮಾಡು, -ಹಾಡು: ಸುಖಸುಧಾತಸದೊಳ್ ಪರಿಷಜ್ಜನಂಗಳಂ ಮುಳುಗಿಸಿದತ್ತು ಚಾಳಿಸಿದ ರಾಗಮ ನಟ್ಟನ ಮಂಜುಘೋಷೆಯಾ (ಅನಂಪು.೪-೬೮). **ಚಾಳಯಿಸು**: ೨. ಚಾಳಯಿಸಿಕೊಂಡುಳಿದವಿನ್ನಾ ಬಾಳೆ ಸಾಕೆಮಗೆಂದು ಭೂಪರು ಚಾಳಿಸಿದೊಡ ಬರೆಯರು ನಗುತಿರೆ ನಾಚಿ ತವಕದಲಿ (ಜೀವಂಚ. ೦೩-೨೬). **ಚಾಳ್ಕೆಸು$_2$**: ೬. ತಾತ್ಸಾರಮಾಡು; ಬೇಸರಪಡು: ಪೇಳಲ್ಪದಾರ ಜಿಹ್ವೆಗಸಾಧ್ಯ ರತ್ನದ ಮೇಳವಿದೆಲ್ಲಿ ಸಿದ್ಧಿಸಿತೋ ಚಾಳ್ಕಿಸದೆ ಕೆತ್ತಿದನಾರೋ ಕೆಲಸಿಯಂದಾಳೋಚಿಸಿದಳು (ಮೋಹತ. ೨೬-೨೯). [<ಚಾಲಿಸು]

**ಚಾಳಿಸು$_2$** 'ಚಾಲಿಸು' ನೋ.

**ಚಾಳಿಸು$_3$** 'ಚಾಳೀಸು' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳೀಸಪತ್ರೆ** 'ತಾಳೀಸಪತ್ರೆ' ನೋ.

**ಚಾಳೀಸು**, ಚಾಳಿಸು$_3$, ಚಾಳೀಸ, ಚಾಳೇಸ (ನಾ). ೧. ನಲವತ್ತು. ೨. ಸುಮಾರು ನಲವತ್ತರ ವಯಸ್ಸಿಗೆ ಉಂಟಾಗುವ ದೃಷ್ಟಿಮಾಂದ್ಯ; ದೂರದ ವಸ್ತುಗಳು ಮಾತ್ರ ಕಣ್ಣಿಗೆ ಸ್ಪುಟವಾಗಿ ಕಾಣುವ ಕಣ್ಣಿನ ಕುಂದು: ವಯೋನುಗುಣವಾಗಿ ಮನುಷ್ಯನಿಗೆ ಚಾಳೀಸು (Long sight) ಬಂದಮೇಲೆ . . . ಓದುವುದನ್ನು ಕಡ್ಡಾಯವಾಗಿ ನಿಲ್ಲಿಸಬೇಕಾಗಿತ್ತು (ಶಿಲ್ಪನಾ. ೧೩೨). ೩. ಕನ್ನಡಕ; ಉಪನೇತ್ರ; ಸುಲೋಚನ: ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ . . . ಔರಂಗಜೇಬನೂ ಇತಿಹಾಸಕ್ಕೊಂದು ಹೊಸ ಮುಖವನ್ನು ತಂದು ಕೊಟ್ಟರು (ಗುಳಿಪ. ೭೦); ಸರಿಯಾಗಿ ಕಾಣೋದಿಲ್ಲಾ ಅಂತಾನೆ 'ಚಾಳೀಸು' ಹಾಕೇನಿ (ಅಂದುಟಿ. ೩೨); ಜೋಶಿಯವರು ಪುನಃ ಚಾಳೀಸನ್ನು ಮೂಗಿಗೇರಿಸಿದರು (ಬೀದಿನಾ. ೫೯). **ಚಾಳಿಸು$_3$**: (೬). **ಚಾಳೀಸ**: ೨. ನಿನ್ನ ಕಣ್ಣಿಗೆ ಚಾಳೀಸ ಹುಟ್ಟಿ (ಜನರಾ. ೪-೨೭); ಏನೋ ಸಹಜವಾಗಿ ವಯೋಧರ್ಮದಿಂದುಟಾಗಿರುವ ದೃಷ್ಟಿ ಮಾಂದ್ಯವೆಂದೋ ಇಲ್ಲವೇ ಚಾಳೀಸವೆಂದೋ ಕಡೆಗಣಿಸುವುದುಂಟು (ನಿಮ್ಮದೃ. ೮೩). ೩. ಚಾಳೀಸ-ತಂತಿಯ ಬದಲು ತಂತಾವನ್ನು ಕಟ್ಟಿಕೊಂಡಿದ್ದ ಚಾಳೀಸವನ್ನು ಮೂಗಿನ ಮೇಲಿಟ್ಟುಕೊಂಡು ದಾರವನ್ನು ಕಿವಿಗೆ ಸುತ್ತಿದ್ದಾರೆ (ಹುವಸಂ. ೭೮). **ಚಾಳೇಸ**: ೨. ಕಣ್ಣುಗಳಲ್ಲಿ ನೀರು ಸುರಿಯಲು ಕಣ್ಣು ಚಾಳೀಸವಾಗಿ ವಿಕಾರವಾಗಿರಲು (ಅಶ್ವಚಿ.೩೮-೧೧). [←ಮರಾ. ಚಾಳೀಸ, ಚಾಳಿಸೀ; ಹಿಂ. ಚಾಲೀಸ್ /ಪ್ರಾ. ಚತ್ತಾಲೀಸ್./ಸಂ. ಚತ್ವಾರಿಂಶತ್]

**ಚಾಳು$_1$** 'ಚಾಳ' ನೋ.

**ಚಾಳು$_2$** 'ಚಾಲು' ನೋ.

**ಚಾಳುಕ್ಯ** 'ಚಾಲುಕ್ಯ' ನೋ.

**ಚಾಳುವ** 'ಸಾಳುವ' ನೋ.

**ಚಾಳೆಯ** 'ಚಳಯ್ಯ$_2$' ನೋ.

**ಚಾಳೀಸ** 'ಚಾಳೀಸು' ನೋ.

**ಚಾಳ್ಸು$_1$** 'ಚಾಲಿಸು' ನೋ.

**ಚಾಳ್ಸು$_2$** 'ಚಾಳಿಸು$_1$' ನೋ.

**ಚಾಳೋಕ್ಯ** 'ಚಳುಕ್ಯ' ನೋ.

**ಚಾಳ್ಕ** 'ಚಾಳಕ$_2$' ನೋ.

**ಚಾಳ್ಕತನ** (ನಾ). ಧೂರ್ತತನ ; ಉಪಾಯಗಾರಿಕೆ : ಆರನೆಯ ಸೂಳಿನೊಳ್ ಚಾಳ್ಕತನದಿಂ ಕಳಿಂಗನಂ ಬೀನಹಮ್ಮಿರರಂ ಕೊಂದು (ಹರಚ. ೩೭-೧೮) : ಬೀಳ್ಕೊಟ್ಟರಾವು ಪೋಪೆವೆಂದಖಿಳ ಬಾಡಬರ್ ಚಾಳ್ಕತನ ದೀನತೆಯೊಳಭಿನವಿಸಲ್ (ಹರಚ. ೪೧-೨೦).

[ ಚಾಳ್ಕ (< ಚಾಳಕ$_1$) + – ತನ ]

**ಚಾಟ್, ಚಾಳಿ$_1$** (ನಾ). ನವಗ್ರಹಗಳಲ್ಲಿ ಒಂದು ; ರಾಹು : "ಚಾಟ್= ರಾಹು" (ಕರುಪ. ಹರಿ. ೧) ; "ಚಾಟ[ಪಾಠಾಂ. ಚಾಳ]ಲವರ್ಗ್ಟಿವಾವೆನೆ ರಾಹು" (ಅಭ್ಯಮಂ. ೧೮); "ಚಾಟನಲ್ ಚಾಪೆ[ಪಾಠಾಂ. ಚಾಪ]ನಪ್ಪುದು" (ಸಂಜೀವ. ೩). **ಚಾಳಿ$_1$** : ಅಕಟವನ ನೊಸಲಲ್ಲಿ ತಿಂಗಳಂ ಬರೆವೋಗಿ ಚಾಳಿಯಂ ಗೀಚಿದೆಯೊ (ಹಿಶ್ಮರ. ೩೩-೦೪೨).

[ ದೇ.೩ ತುಲ. ಚಾಟ್=ಕಿಟ್ಟಗಳಿಗೆ ; ಕಿಟ್ಟಿಕರುನ ]

**–ಚಿ** (ಪ್ರ). ಒಂದು ತದ್ಧಿತ ಪ್ರತ್ಯಯ. 'ಕುಡಿಚಿ' ವರಾ.

**ಚಿಂಕಿಲು** (ನಾ). ಸಣ್ಣಕೀಲು (?) : ವಜ್ರದ ಘಾಲಿಗೆ ವಜ್ರದ ಚಿಂಕಿಲು ವಜ್ರದ ನೊಗ ಹೊಮ್ಮಿಗಳು ವಜ್ರದಾಯುಧನ ವಾಹನದಂತೆ ವಾಡೆಯು ಪ್ರಜ್ವಲ ಸಾಲದಿದುರದ (ದೇವಾಂಶು. ೩-೦೭೯). [ ? ]

**ಚಿಂಕು** (ನಾ). ಒಂದು ಬಗೆಯ ಆಭರಣ : ವೀರಮುದ್ರಿಕೆ ಪಂಚಸರ ಗೌಳಸರ ಮುಕ್ತಾಹಾರ ಹೊಂಬಂದಿ ಚಿಂತಾಕು ತೋರವಾಗುತಿ ಹೊನ್ನ ಕುಸುಮ ಚಿಂಕು ಕರ್ಣಪೂರ ಕೊರಲ ಕಂಠಿಕೆಗಳ (ಶಾಂತೀಶ. ೩-೭೦).

[ ? ]

**ಚಿಂಗಯ್ಯ** (ನಾ). ಒಬ್ಬಾತನ ಹೆಸರು : ಚಿಂಗಯ್ಯನ ಚಾವಚ್ಚಿಯ ಮಗಂ ಪೋಚನಕಲ್ಲ (ಪ್ರಶಾಂ. ೧೯೪೨, ೨-೭ ; 973 ?). [ ಚಿಂಗ$_0$ + ಅಯ್ಯ$_1$ ]

**ಚಿಂಚ$_1$** (ನಾ). ಮೈಮೇಲೆ ಚುಕ್ಕೆಗಳಿರುವ ಎತ್ತು : ಕೆಲವ ಕೇಸಿಗ ನಿಚ್ಚವ ಹಂಡ ಹಾರುವ ಚಿಂಚ ಮಲೆವ ಪುಲ್ಲೋರಿ . . . ಕಬ್ಬಸಿಗಳೊಳಗಾದ ಪಲವು ಪರಿಯೆತ್ತು ತೊಂಬತ್ತಾರು ಲಕ್ಷ ಮೇಳೈಸಿ ಹಿಡಿದುವು ಗೆಲ್ಲಕೆ (ಸಿಂಗಿರಾ. ೩೩-೭): ಚಿಂಚವೆರಡೆಡಿಶ್ಶಾಗಿ ಸಂಚಿನ ಸೂಸೆಯಾಗಿ ಮಿಂಚಾಗಿ ಬರುವ ಮಗನಾದರಾ ಮನೆಗೆ ಲಂಚ ತಪ್ಪುವುದೆ (ಸರ್ವಜ್ಞ. ೦೭೩೪).

**ಚಿಂಚ$_2$** (ನಾ). ಹುಣಸೆಮರ : ಬದರಿಯ ಫಲಮಂ ಮೇಣ್ ಚಿಂಚದ ಚಿಗುರಿಂ ಕೂಡಿ ಪುದಿದ ಸಜ್ಜಿಗೆಯಂ ಮಾಡಿದ ಸೇವಗೆಯಂ (ಶೋಕೋಪ. ೮-೧೩): ಕನಕಮಂಡುಕ ಮತ್ಸ್ಯ ಕಮಠ ಕಲ್ಪೇಂದು ಚಂದನ ಚಿಂಚ ಮಧು ಶೃಂಗ ಕಡವ ಪೂರುಷ ಶೇಷವೃಕ್ಷಂಗಳು (ಮದೇಪು. ೩೦-೧೩).

[ ದೇ.೩ ತಮಿ. ಚಿನ್ನ ; ತೆಲು. ಚಿಂತ ; ಕೊಲಾ. ಸಿಂತಾ ; ನಾಯ್ಕಿ. ಶಿತ್ತ ; ಗೊಂಡಿ. ಸಿತ್ತಾ./ಸಂ. ಚಿಂಚಾ ]

**ಚಿಂಚಕ** (ನಾ). ಒಂದು ಬಗೆಯ ಮರ : "ಲವಣಕಿಂಶುಕಃ–ಕಂಗುಂಗೆ, ಚಿಂಚಕ" (ಒಷಧಿ. ೦೪೨). [ ? ]

**ಚಿಂಚಗ** (ನಾ). ಒಂದು ಬಗೆಯ ಗಿಡ ; ಕೆಂಪು ಗೋರಂಟೆ : "ಕಿಂಕಿರಾತಃ –ಹೊಂಗೋರಟೆ, ಚಿಂಚಗ" (ಒಷಧಿ. ೩೩). [ ? ]

**ಚಿಂಚಪಟ್ಟಿ** (ನಾ). ಒಂದು ಬಗೆಯ ಕೊರಳಿನ ಆಭರಣ ; ಹುಣಿಸೆ ಎಲೆ ಆಕಾರದ ಪದಕಗಳುಳ್ಳ ಸರ : ನೇತ್ರಾವಳಿಯ ಸೀರಿ ಮಿತ್ರಿ ಗಂಗಮ್ಮ ಉಟ್ಟು ನಕ್ಷತ್ರಮಾಲೆ ಚಿಂಚಪಟ್ಟಿ ಮುಗಬೊಟ್ಟು ಕರ್ತುವಿನ ಕಾರ್ಯಕ್ಕೆ ತೊಡಗಿದಳು (ಸಿದ್ಧಪು. ೧೯-೯೮). [←ಮರಾ. ಚಿಂಚಪಟೀ, ಚಿಂಚಪೇಟೀ]

**ಚಿಂಚಿಲ** (ನಾ). ಒಂದು ಊರಿನ ಹೆಸರು; P ಈಗಿನ ಗದಗ ತಾಲೂಕಿನ ಚಿಂಚಲಿ : ಚಿಂಚಿಲದಯ್ವತ್ತಯುವರುಂ ಮಹಾಜನದ ಕಾಲಂ ಕರ್ಚಿ ಕೊಟ್ಟು (ಸೌಇಇ. XI-I, ೦೩-೨ ; 871) : ಚಿಂಚಿಲಗ್ರಾಮಸ್ಯ (ಎಇ. IV, ೨೦೭-೨೪ ; 982) : ಅದಱಿಂ ಮೂಡಣ ಚಿಂಚಿಲ ಅಕ್ಕಸಾಲೆಯ ಕೆಯಿಂ ಮೂಡಲು ಮತ್ತರು ೧ (ಸೌಇಇ. XX, ೨೨೧-೩೯ ; 1283). [ ? ].

**ಚಿಂಚು** (ನಾ). ಒಂದು ಬಗೆಯ ಸಸ್ಯ (?) : "ಚಿರುಂಡಿ ಚಿಂಚು" (ಅಕಾನಿ. ೦೦-೨೭). [ ? ]

**ಚಿಂಚಿ** (ನಾ). ಮೈಮೇಲೆ ಚುಕ್ಕೆಯನ್ನು ಉಳ್ಳ ಹಸು : ಭೃಂಗೆ ಚಿಂಚಿ ಓಂಗೆ ಹಂಡೆ ಶೃಂಗಿ ಕೃಷ್ಣೆ ರಂಗು ಮುತ್ತ ತಿಂಗಳೆ ಹೇಮಾಂಗಿಯೆಂದು ರಂಗ ಕರೆದನು (ಪ್ರಸಭಾ. ೩೧-೬). [ಚಿಂಚ$_1$ + – ಇ$_2$]

**ಚಿಂಚಿಗ** (ನಾ). ಒಂದು ಬಗೆಯ ಗಿಡ : ಚಿಂಚಿಗದ ಸೊಪ್ಪನು ಎಳ್ಳೆಣ್ಣೆಯಲ್ಲಿ ಎಳವದನಾಗಿ ಹುರಿದು ಒಣಗಿಸಿ ಪುಡಿಮಾಡಿ (ಸಕವ್ಯ. ೦೯೪).

[ ? ]

**ಚಿಂಡೆ** (ನಾ). ಒಂದು ಬಗೆಯ ಸಸ್ಯ : ಚಿಂಡೇ, ಹೊಂಡೇಮರ (ಮ್ಯಶಿ. ೨೦-೩೩೮). [ ? ]

**ಚಿಂತಕ** (ನಾ). ಯೋಚಿಸುವವನು ; ಯಾವುದಾದರೂ ವಿಷಯವನ್ನು ಚಿಂತಿಸುವವನು : "ಧ್ಯಾತಾ, ಧ್ಯಾ, ಧ್ಯಾಯಕಃ–ಈ ೩ ಚಿಂತಕಂ" (ಶಾಶಸ್ತ್ರ. ೭೩). 'ಹಿತಚಿಂತಕ' ವರಾ. [ ಸಂ. ]

**ಚಿಂತಕುಂಟೆ** (ನಾ). ಒಂದು ಊರಿನ ಹೆಸರಂ: ಚಿರುಪಿಯು ಚಿನ್ನಕುಣ್ಟೆಯು ಚಿಱಾಯುವೊಟಲು ವುಳುವಟ್ಟು ನಾಲ್ಕೂರುವಿಟ್ಟು ನಡೆದ ಕೆಲ್ಲಿಗೊಡಂಗೆಯೊಡ್ಡಿನ ಕಿಟಗೆ (ಸೌಇಇ. IX-I, ೨೭-೦೦; 950).

[ ಚಿಂತ$_0$ + ಕುಂಟೆ$_3$ ]

**ಚಿಂತನ** (ನಾ). ೧. ಯೋಚನೆ ; ಆಲೋಚನೆ : ಗುರುತತ್ತ್ವಚಿಂತನವದು ಗುರುಧ್ಯಾನ (ಬಸಪು. ೩೯-೨೯) ; ವಿಷಯಗಳ ಚಿಂತನದಿಂದ ಮನುಷ್ಯನಿಗೆ ಅವುಗಳಲ್ಲಿ ಆಸಕ್ತಿ ಹುಟ್ಟುತ್ತದೆ (ಧರ್ಮಶಾ. ೦೩೨). ೨. ಧ್ಯಾನ : ಭವದಂಘ್ರಿ ಚಿಂತನಮೆ ಕೇಳ್ ಕೈವಲ್ಯಲಕ್ಷ್ಮೀಸುಖೋತ್ಸವಮಂ ಸಾರ್ಚುವ ದೂತಿ (ಕಬಕಂ. ೩-೩೨). [ ಸಂ. ]

**ಚಿಂತನಪರ** (ಗು). ಚಿಂತನದಲ್ಲಿ ಆಸಕ್ತವಾದ ; ಯೋಚನೆಯನ್ನು ಅವಲಂಬಿಸಿದ : ಒಂದೊಂದು ಶಬ್ದವೂ ಸ್ಫೂರ್ತಿಯ ಒಂದೊಂದು ಕುಡಿಯಾಗುತ್ತದೆ . . . ವಿಚಾರಿತ ರಮಣೀಯ ಇಲ್ಲವೆ ಚಿಂತನಪರ ಶೈಲಿಯಾಗುತ್ತದೆ (ನವ್ಯಕಾ. ೩೩). [ ಸಂ. ]

**ಚಿಂತನಶೀಲ** (ಗು). = ಚಿಂತನಪರ: ಅವರು ತುಂಬ ಚಿಂತನಶೀಲ ಕವಿಗಳು (ರೂಢಿ). [ ಸಂ. ]

**ಚಿಂತನಾಂಶ** (ನಾ). ೧. ಯೋಚಿಸಲು ಯೋಗ್ಯವಾದ ಭಾಗ. ೨. ಯೋಚನೆಯ ಅಂಶ ; ಯೋಚನಾಭಾಗ : ನನ್ನ ಈಗಿನ 'ದರ್ಶನ'ಕ್ಕೆ ಒಪ್ಪುವ ಭಾವಾಂಶ ಚಿಂತನಾಂಶ ಕಲ್ಪನಾಂಶ ರೂಪಾಂಶಗಳಲ್ಲಿ ಎರಕ ಹೊಯ್ದು ಅದನ್ನೊಂದು ಹೊಸಕೃತಿಯಾಗಿಯೆ ಮಾಡಿದ್ದೇನೆ (ಕಂದ್ರಸ. IV, ಮುನ್ನುಡಿ). [ ಚಿಂತನ + ಅಂಶ ]

**ಚಿಂತನೀಯ** (ಗು). ೧. ಆಲೋಚಿಸತಕ್ಕ; ಯೋಚಿಸಬೇಕಾದ ; ಯೋಚನೆಗೆ ಯೋಗ್ಯವಾದ. (ನಾ). ೨. ಯೋಚಿಸತಕ್ಕದು : ಯೋಚನೆಗೆ ಯೋಗ್ಯವಾದುದು : ಈ ವಿವರಣೆ ಚಿಂತನೀಯವಾಗಿದೆ (ದ್ರಾವಿವಿ. ೧೨೬). [ ಸಂ. ]

**ಚಿಂತನೆ** (ನಾ). ೧. = ಚಿಂತನ ೧ : ಅಕ್ಷರ . . . ಚಿಂತನೆ . . . ಇವೆಲ್ಲವ ಕಲಿತಡೇನೋ ಚೌಷಷ್ಟಿ ವಿದ್ಯಾಕಳಾವಿದನೆನಿಸಿಕೊಂಬನಲ್ಲದೆ ಲಿಂಗವಂತನೆನಿಸಿಕೊಂಬುದಿಲ್ಲ (ಮಡಿಮಾ. ೯೩-೬೦); ಈ ಎರಡು ಅನುಭವಗಳ ತಾರತಮ್ಯದ ಚಿಂತನೆಯನ್ನು ಪದ್ಯರೂಪದಲ್ಲಿರಿಸಿದ್ದಾರೆ (ಸೌಂದಸ. ೩೨೩); ತಾವು ಹೇಳಿದ ಸಂಗತಿಯನ್ನೆಲ್ಲ ಇನ್ನೊಮ್ಮೆ ಚಿಂತನೆ ಮಾಡುತ್ತೇವೆ (ಮುಂಬಯಿ. ೪-೯೩). ೨. ಧ್ಯಾನಿಸುವುದು : ಎಱಗಿ ನೋಡುವುದೊಂದಱಿ ಎರಡಱಿ ಚಿಂತನೆ . . . ಮೋಹ್ ಹತ್ತಱಿ ಮರಣ ಇವು ದಶಾವಸ್ಥೆಗಳೆನಲು (ಬಸಪು. ೩೩-೩೨) : ಮನೆಯಲ್ಲಿ ಕೂತುಕೊಂಡು ಇದೇ ರೋಗದ ಚಿಂತನೆ ಮಾಡಿದರೆ ಒಳ್ಳೆಯದಲ್ಲ ಎಂದು ಕೆಲಸಕ್ಕೂ ಕಳುಹಿಸುತ್ತಿದ್ದೆ (ಮನೋನಂ. ೮೨). [ಸಂ. ಚಿಂತನಾ]

**ಚಿಂತನೆಗೊಳು** (ಕ್ರಿ). ಆಲೋಚನೆಗೆ ಒಳಗಾಗು ; ಯೋಚನಾಪರನಾಗು ; ಚಿಂತೆಮಾಡು : ಜಿನದೀಕ್ಷೆಗೆಳಸಿ ತಂದೆಗೆ ಪೇಳಲಂಜಿ ಚಿಂತನೆಗೊಳುತಿರ್ಪ್ಪುಂದರಾಗ (ಭರತ. ೯೩-೩೯). [ಚಿಂತನೆ+ಕೊಳು(<ಕೊಳ್$_1$)]

**ಚಿಂತಾಕ** 'ಚಿಂತಾಕು' ನೋ.

**ಚಿಂತಾಕು, ಚಿಂತಾಕ** (ನಾ). ೧. ಕೊರಳಲ್ಲಿ ಧರಿಸುವ ಒಂದು ಬಗೆಯ ಆಭರಣ ; ಅಡ್ಡಿಕೆ ; ಹುಣಿಸೆಯ ಎಲೆಯ ಆಕಾರದ ರತ್ನಗಳನ್ನು ಕೆತ್ತಿರುವ ಆಭರಣ : ಕಾಂತನ ಮುಖಕೆ ಕಾಂತಿಯನೀವುದೊಂದು ಸುಕಾಂತ ಚಿಂತಾಕನಂಗನೆಗೆ ಕಾಂತೆಯರೂಲಿದು ಕಟ್ಟಲು (ಅಂಜಿಕ. ೮-೩೯); ಮೂಕುತಿ ಮುತ್ತಿನ ಸರ ಕರ್ಣಪತ್ರ ಚಿಂತಾಕು ನೇವಳ ಲುಳಿ ಪದಕ (ಭರತ. ೩೧-೪೩) ; ವಜ್ರದ ಚಿನ್ನದ ಚಿಂತಾಕು (ಸಿದ್ಧಪು. ೦೯-೬೨) ; ಚಿಂತಾಕು ಇಟಗೊಂಡು ಚಿಪ್ಪಾಡಿ ಬಳೆವಾಕಿ ಚಿಂತಿಲ್ಲ ಏನ ನಿನಗಪ್ಪು ನಿಮರಾಯ ಅಲ್ಲೊಬ್ಬ ಕೂಡ ನಗುತಿದ್ದ (ಕನ್ನಜಾ. ೩೮). ೨. ಒಡ್ಯಾಣ; ನಡುಪಟ್ಟಿ ; ಡಾಬು : ತೂಕದ ಮೊರೆಗಳ ಬಡನಡು ತಾಳದೆಂದಾ ಕಾಂತೆ ಚಿನ್ನದ ಕಟ್ಟಾ ಜೋಕೆಗೈದಳೊಯೆನೆ ನವರತ್ನಮಯದ ಚಿಂತಾಕು ತೋಜುತು ನಡುವಿನೊಳು (ಭರತ. ೧೦-೩೮) ; ಪದಕ ಕೊರಲ ಪಂಚಸರ ನಾನಾರತ್ನ ಪುದಿದ ನಡುವಿನ ಚಿಂತಾಕು . . . ಸುದತಿಯೊಳೊಂದಿ ಮೆಱೆದುವು (ರಾಮವಿ. ೬-೬೨). **ಚಿಂತಾಕ** : ೧. ಕಾಂತಾಕಚಭಾರದಿಂದೆ ನುಣ್ಗೊರಲು ಮುಂದೆಂತಹುದೆಂದು ಸಂದೆಗದೆ ಸಂತತ ಬಣ್ಣಗಲ್ಲುಗಳ ಕೀವಣಿಸಿರ್ದ ಚಿಂತಾಕ ಬಲುಹನಿಕ್ಕಿದರು (ಪ್ರೋಹಿತ. ೨೩-೩೦) ; ಪರದ್ಯೆವ ಹರಿಯೆಂಬೊ ಮುತ್ತಿನ ಮೂಗುತಿಯು ತರಣಿ ಭಾಸನೆಂಬೊ ಮುತ್ತಿನ ಚಿಂತಾಕ (ವಿಕಾಸು. ೩೯-೩) ; ಸರ ಮುತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಶ್ರೀಕೃಷಾ. ೦೨) ; ನನಗೊಂದು ಚಿಂತಾಕವು ಬೇಕಾಗಿರುವುದರಿಂದ ನಮ್ಮ ತಂದೆಯು . . . ಪೇಟೆಗೆ ಹೋಗಿದ್ದಾನೆ (ಕೋಮು. ೬೮).

[ದೇ.ಶ ತಮಿ. ಚಿನ್ನಾಕ್ಕು ; ತೆಲು. ಚಿಂತಾಕು./ಮರಾ. ಚಿತಾಂಕ್, ಚಿತಾಕ್]

**ಚಿಂತಾಕುಲ, ಚಿಂತಾಕುಳ** (ಗು). ೧. ಯೋಚನೆಯಿಂದ ಕಲಕಿದ; ವ್ಯಸನದಿಂದ ಕೂಡಿದ ; ಚಿಂತೆಯಿಂದ ವ್ಯಗ್ರವಾದ. **ಚಿಂತಾಕುಳ** : (ನಾ). ೨. ಚಿಂತೆಗೆ ಒಳಗಾದವನು ; ಚಿಂತಾಕ್ರಾಂತ : ಫಲುಗುಣನ ಪರಮವಿವೇಕವನು ಪತಿಕರಿಸಿ ನೆಱೆ ಚಿಂತಾಕುಳನ ಮಾಡಿದನು ಕೌರವರಾಯನನು ಭೀಷ್ಮ (ಕುಮ್ಯಾಭೀ. ೧೦-೨೮).

[ಸಂ. (ಚಿಂತಾ + ಆಕುಲ)]

**ಚಿಂತಾಕುಲತೆ, ಚಿಂತಾಕುಳತೆ** (ನಾ). ಚಿಂತೆಯಿಂದ ವ್ಯಗ್ರವಾಗಿರುವಿಕೆ,- ಪೀಡಿಸಲ್ಪಟ್ಟಿರುವಿಕೆ. **ಚಿಂತಾಕುಳತೆ** : ಒಳಗೊಳಗಳಲ್ದು ಚಿಂತಾಕುಳತೆಯನೊಳಕೊಂಡು ಬೇಡನಿವನೆನ್ನಿಂದಗ್ಗಳಿಸಿದನೆ (ಕಬಕಂ. ೪-೯೨).

[ಸಂ. ಚಿಂತಾಕುಲತಾ (ಚಿಂತಾ + ಆಕುಲತಾ)]

**ಚಿಂತಾಕುಲಿತ** (ನಾ). ಚಿಂತೆಯಿಂದ ವ್ಯಗ್ರನಾದವನು ; ಚಿಂತಾಕ್ರಾಂತನಾದವನು : ಚಿಂತಾಕುಲಿತನನಾಱಿಸುವಂತಿರೆ . . . ಪರ್ಣಕುಟೀರಾಂತರಮಂ ಪೊಕ್ಕು (ಕಾದಂಅ. ೭೦೦). [ಸಂ. (ಚಿಂತಾ + ಆಕುಲಿತ)]

**ಚಿಂತಾಕುಳ** 'ಚಿಂತಾಕುಲ' ನೋ.

**ಚಿಂತಾಕುಳತೆ** 'ಚಿಂತಾಕುಲತೆ' ನೋ.

**ಚಿಂತಾಕ್ರಾಂತ** (ಗು). ೧. ಚಿಂತೆಗೊಳಗಾದ ; ಚಿಂತೆಯಿಂದ ತುಂಬಿದ. (ನಾ). ೨. ಚಿಂತೆಯಿಂದ ಕೂಡಿದವನು ; ವ್ಯಥೆಗೆ ಒಳಗಾದವನು : ಆ ಪಾರ್ವಂಗೆ ಮಕ್ಕಳಿಲ್ಲದಿರೆ ಪೆಂಡಿತಿಯುಂ ತಾನುಂ ನಿಚ್ಚನಿಚ್ಚಲುಂ ಚಿಂತಾಕ್ರಾಂತರಾಗಿರ್ಪರ್ (ಜೀವಸಂ. ೩೬-೨೨ ವ) ; ಲಕ್ಷ್ಮಣ . . . ಮೂರ್ಖಿರಿಗೊಡೆಯ ನೀನೆನುತೊಱಲಿ ಪೊಡವಿಗೆ ಕೆಡೆದು ಹೊರಳಲು ರಾವ ಚಿಂತಾಕ್ರಾಂತನಾಗಿರ್ದ (ಕೌಶಿರಾ. ೯೩-೩೬). [ಸಂ. (ಚಿಂತಾ + ಆಕ್ರಾಂತ)]

**ಚಿಂತಾಕ್ರಾಂತೆ** (ನಾ). ಚಿಂತೆಯಿಂದ ಕೂಡಿದವಳು : ತನಗೆರಡಿಲ್ಲದೋಪನ ವಿಯೋಗದೊಳ್ ಚಿಂತಾಕ್ರಾಂತೆಯಾಗಿರ್ದ ಕೆಳದಿಗಿಂತೆಂದಳ್ (ಕಾಂತಿಪು.- ೮-೧೦೬) ; ಕಾಂತೆ ತಾಂ ಸುತರಿಲ್ಲದಿರ್ದಡನಂತ ಚಿಂತಾಕ್ರಾಂತೆಯಾಗುತ ತೂಂತು ನೋಂಪಿಗಳಂ ಪಲವನುಱೆ ನೋಂತು ಬೇಸತ್ತು (ಬಸಪು. ೨-೪೮).

[ಸಂ. ಚಿಂತಾಕ್ರಾಂತಾ (ಚಿಂತಾ + ಆಕ್ರಾಂತಾ)]

**ಚಿಂತಾಪರ** (ಗು). ೧. ಯೋಚನೆಯಲ್ಲಿ ಆಸಕ್ತವಾದ ; ಚಿಂತನೆಯಲ್ಲಿ ಮುಳುಗಿದ. ೨. ಧ್ಯಾನದಲ್ಲಿ ತೊಡಗಿರುವ ; ಧ್ಯಾನಮಗ್ನವಾದ. (ನಾ). ೩. ಚಿಂತನೆಯಲ್ಲಿ ಮುಳುಗಿದ ವ್ಯಕ್ತಿ ; ಆಲೋಚನಾಶೀಲ : ವಿಜ್ಞಾನಿಗಳು ಸಾಮಾನ್ಯವಾಗಿ ಚಿಂತಾಪರರಾಗಿಯೇ ಇರುತ್ತಾರೆ (ರೂಢಿ).

[ಸಂ. (ಚಿಂತಾ + ಪರ)]

**ಚಿಂತಾಪರವಶತೆ** (ನಾ). ಚಿಂತೆಯಿಂದ ಮೈಮರೆಯುವಿಕೆ : ಚಿಂತಾಪರವಶತೆಯಿನಿಸಂ ತಡೆದಿದಿರೇಟದಾತ್ಮಪರ್ಯಂಕದೊಳಾ ಕಾಂತಂ ಕುಳ್ಳಿರೆ (ಪುಷ್ಪಪು. ೩-೬೬). [ಸಂ. ಚಿಂತಾಪರವಶತಾ(ಚಿಂತಾ + ಪರವಶತಾ)]

**ಚಿಂತಾಭರ** (ನಾ). ಯೋಚನೆಯ ಹೊರೆ ; ಚಿಂತೆಯ ಆಧಿಕ್ಯ : ಆಕ್ರಾಂತಚಿಂತಾಭರಸ್ತಿಮಿತ ಗಾತ್ರೆಯುಂ . . . ಆಗಿರ್ದಿನೆಗಂ (ಚಂದ್ರಪು. ೩-೩೦ ವ). [ಸಂ. (ಚಿಂತಾ + ಭರ)]

**ಚಿಂತಾಮಗ್ನ** (ಗು). ೧. ಚಿಂತೆಯಲ್ಲಿ ಮುಳುಗಿದ. (ನಾ). ೨. ಚಿಂತೆಯಲ್ಲಿಯೇ ಮುಳುಗಿರುವವನು: ಮುಕುಂದರಾಯರು . . . ಹುಬ್ಬು ಗಂಟಿಕ್ಕಿ ಚಿಂತಾಮಗ್ನರಾಗಿದ್ದಾರೆ (ವೀರಯೋ. ೨). [ಸಂ. (ಚಿಂತಾ + ಮಗ್ನ)]

**ಚಿಂತಾಮಣಿ** (ನಾ). ೧. ಸ್ವರ್ಗಲೋಕದ ಒಂದು ದಿವ್ಯರತ್ನ ; ಬೇಡಿದುದನ್ನು ಕೊಡಬಲ್ಲುದೆಂದು ನಂಬಲಾದ ದೇವಲೋಕದ ರತ್ನ : ಅದರ್ಕೆ ಮುನ್ನ ಚಿಂತಾಮಣಿ ಕಾಮಧೇನು ಸುರಭೂರುಹಮೆಂಬಿವನೇಕೆ ಮಾಡಿದಂ ತಾಮರಸೋದ್ಭವಂ (ಆದಿಪು. ೧-೬೨); ಚಿಂತಾಮಣಿ ಬಂದಂತಿರೆ . . . ಒಸಗೆಯಾಯ್ತುರವುನೆಯೊಳ್ (ಪುಷ್ಪಪು. ೦೩-೦೨೨) ; ತರುಗಳೊಳು ಕಲ್ಪಾವನೀಜಂ . . . ರತ್ನನಿಕರದೊಳಗೆ ಚಿಂತಾಮಣಿಯು (ಬಸಪು. ೩-೬೯) ; ಚಿಂತಾಮಣಿಗೆ ಕೈದುಡುಕಿ ಹರಳುತಕ್ಕೆಯಿದೆಂಬ ಪಾಟಿಗೆ ಪರಮಗುರು ನಾನಾದೆನೈ (ಕುಮ್ಯಾಭೀ. ೩-೬೯) ; ರಸದ ಬಾವಿಯು ಮನೆ ಮನೆಗಳಲಿ ಮಿಸುಪ ಚಿಂತಾಮಣಿಗಳಿರುತಿರೆ ಎಸೆವ ಪರುಷದ ಕಣಿಗಳಗ್ಗದ ವೀಥಿವೀಥಿಯಲಿ (ಕೌಶಿರಾ. ೩೯-೬). ೨. (ಅಲಂ) ತುಂಬ ಬೆಲೆಯುಳ್ಳ ವ್ಯಕ್ತಿ ; ಶ್ರೇಷ್ಠವ್ಯಕ್ತಿ : ಸೋಬಾನಕ ನೀ ನಡಿಯ ಸೊಬಗಿನ ಚಿಂತಾಮಣಿಯು (ಲೋಕಗೀ. ೦೦). 'ದಾನಚಿಂತಾಮಣಿ' ಪರಾ. ೩. [ಸಂಗೀತ] ಒಂದು ರಾಗದ ಹೆಸರು : ಚಿಂತಾಮಣಿ, ಕಲ್ಗಡ . . . ಮುಂತಾದ ಕಷ್ಟ ರಾಗಗಳಲ್ಲಿ ಕೃತಿರಚನೆ ಮಾಡಿ ಶಾಸ್ತ್ರಿಗಳು ಆ ರಾಗಗಳ ಸ್ಪಷ್ಟ ಪರಿಚಯ ಮಾಡಿ ಮಾರ್ಗದರ್ಶಕರಾಗಿದ್ದಾರೆ (ಸಂಗೀಜಂ. ೨೯೪).

[ಸಂ.]

**ಚಿಂತಾಯಕ** (ನಾ). ಭಕ್ತರ ಕ್ಷೇಮವನ್ನು ಕುರಿತು ಯಾವಾಗಲೂ ಚಿಂತಿಸುತ್ತಿರುವವನು; ವಿಪತ್ತನ್ನು ನಿವಾರಣೆ ಮಾಡತಕ್ಕವನು: ಸಂತಸದಿ ಗುರುವಿನಡಿಗಂತಾಗ ವ್ಮೈಯಿಕ್ಕ ಚಿಂತಾಯಕನೆ ಮತ್ತದೆಂತೆಂದನೆ (ಮನೋವಿ. ೨-೪೦); ತಾಯನಗಲಿದ ಶಿಶುವಿನಂದದಿ ಬಾಯಬಿಡು ವಂತಾಯ್ತಲೇ ಚಿಂತಾಯಕನೆ ಬಿಡಬೇಡ ರಕ್ಷಿಸು (ಹರಿಸಾ. ೯೪); ಇಂತಿಪ್ಪ ದಶದೋಷಾ ಚಿಂತಾಯಕಗಿಲ್ಲವದರಿಂದ ಸುಖವೆ ನಿರಂತರ ನಿಜದೊಳೊಪ್ಪಿಹುದು (ಭರಜ. ೬೬-೧೧೬); ಮುದದಿ ಚಿಂತಾಯಕಂ 'ಅವರ ಚಿತ್ತ ಶುದ್ಧಿಯ ನೋಳ್ಪೆನೆಂದು ನಟಿಸಿದ ಸತ್ವನೌ (ಪ್ರಭುಪು. ೫-೧೫೬); ಚಿಂತೆಯನುಳಿದಾತನವನು ಚಿಂತಾರತ್ನ ಚಿಂತಾಯಕ ರಂಗಧಾಮ (ಕಕಸಾಂ. ೫೮-೯೬). [ ಸಂ. ]

**ಚಿಂತಾರತ** (ನಾ). ಮನಸ್ಸಿನಲ್ಲಿಯೇ ಒಡಗೂಡುವಿಕೆ; "ಸಂಕಲ್ಪ ಸಮಾಗಮ" (ಕಾದಂಉ. ಅಡಿಟಿ): ಕರ್ಣಪೂರೋತ್ಪಲದಿಂ ಚಿಂತಾರತ ಕ್ಕ್ಯಾಟಿಸಿ. ಮಣಿಮಯದೀಪಂಗಳಂ ನಂದೆ ಪೊಯ್ಯುಳ್ (ಕಾದಂಉ. ೩೩೯). [ ಸಂ. (ಚಿಂತಾ + ರತ) ]

**ಚಿಂತಾರತಿ** (ನಾ). ಯೋಚನೆಯಲ್ಲಿ ಆಸಕ್ತಿ: ಇವರಿರವಿನ ಚಿಂತಾರತಿ ನಿಮಗೇಕೀ ಕ್ಷುಧೆಯನೀ ಪಥಶ್ರಮಮಂ ತೀರ್ಚುವ ಬಗೆಯಂ ಬೇಗಂ ಮಾಡುವುದು (ಗಿರಿಶ. ೯-೯೩). [ ಸಂ. (ಚಿಂತಾ + ರತಿ) ]

**ಚಿಂತಾರತ್ನ** (ನಾ).=ಚಿಂತಾಮಣಿ ೧: ರತ್ನಂಗಳ ನಡುವಣ ಚಿಂತಾರತ್ನದಂತೆ . . . ಗಿರಿರಾಜತನೂಜೆ ವಿರಾಜಿಸುತಿರ್ದು (ಗಿರಿಶ. ४-४३ ವ); ಬಸವನೆಂಬ ವಿನೂತ್ನ ಚಿಂತಾರತ್ನವಿರುತಿರಲು (ಬಸಪು. ೬೦-೮೪). [ ಸಂ. (ಚಿಂತಾ + ರತ್ನ) ]

**ಚಿಂತಾಲು** (ನಾ). ಒಂದು ಬಗೆಯ ಭಾರಮಾಪಕ; ತೂಕದ ಪರಡಿಗಳಿಲ್ಲದ, ಬರಿ ಕೊಂಡಿಗಳಿಗೆ ಭಾರವನ್ನು ಅಳವಡಿಸಿ ತೂಕ ಮಾಡುವ ಒಂದು ಸಾಧನ. ೨. ದೊಡ್ಡ ತಕ್ಕಡಿ: ಗೋಣಿಯ ಚೀಲದಂತೆ ಚಿಂತಾಲಿನಲ್ಲಿಟ್ಟು ತೂಗುವುದಕ್ಕಾಗುವುದಿಲ್ಲ (ನಿಬಂಧ. II, ೨೧೫); ಅದಕ್ಕೆ ಶಿಬಿಯು ಒಪ್ಪಿ ಚಿಂತಾಲನ್ನು ತರಿಸಿ (ವಡಭಾ. ೦೪೯). ೩. "ಬಂಗಾರ-ಬೆಳ್ಳಿಗಳನ್ನು ತೂಗುವ ಸಣ್ಣ ತಕ್ಕಡಿ, ತರಾಜು" (ಕಸೂ.ಕೋ. ೩೪೩); ತುಲಾ-ತ್ರಾಸು, ಚಿಂತಾಲು, ತಕ್ಕಡಿ, ತೂಗುಕೋಲು (ಸಿದ್ಧಾಂತಿ. ೨೫೬). [ ? ]

**ಚಿಂತಾಲೋಲ** (ಗು). ೧. ಯೋಚನೆಯಿಂದ ಕೂಡಿದ ಮನಸ್ಸುಳ್ಳ; ಆಲೋಚನಾ ಪರವಾದ. (ನಾ). ೨. ಚಿಂತೆಯಲ್ಲಿ ಮುಳುಗಿದವನು: ಸೈಂಧವನು ಚಿಂತಾಲೋಲನಿರ್ದನು ಮರಣಜೀವನಜಾತಸಂಶಯನು (ಕುವ್ಯಾ.ದ್ರೋ. ೮-೬೮). [ ಸಂ. (ಚಿಂತಾ + ಲೋಲ) ]

**ಚಿಂತಿ** (ನಾ). ಒಂದು ಬಗೆಯ ಆಭರಣ; ಚಿಂತಾಕು: ಎಡನರ ಬವರಿ ಮುತ್ತಿನ ಚಿಂತಿ ಕುಲ್ಲಾವಿ ಬೆಡಗುಗಾಣಿಸುತಿರಲೆಯ್ದಿ (ನಾಗಕು. ೨೯-೫). [ <ಚಿಂತಾಕು./ತಮಿ. ಚಿನ್ನಿ ]

**ಚಿಂತಿತ**(ಗು). ೧. ಯೋಚಿಸಿದ; ಆಲೋಚಿಸಿದ. ೨. ಸ್ಮರಿಸಿದ; ಎಣಿಸಿದ; ನೆನೆದ. (ನಾ). ೩. ಯೋಚನೆ. ೪. ಬಯಕೆ; ಇಷ್ಟಾರ್ಥ: ಇಂತೆಂದು ನುತಿಸಲಿಂದ್ರಂ ಸಂತಸದಿಂ ಶಂಭುವೆಂದನೆಲೆ ಸುರನಾಥನೆ ಚಿಂತಿತಮನೀವೆನೀಗಳೆ ನೀಂ ತಳ್ವದೆ ಬೇಡೆನಲ್ಕೆ ಕೈಮುಗಿದೆಂದಂ (ಹಾ ರಾ ಸ್ಕ. ೦-೨-೯೬). ೫. [ಸಂಗೀತ]ಸ್ವರದೋಷಗಳಲ್ಲಿ ಒಂದು: ಕಂಪಿತ ಚಿಂತಿತ . . . ಕಾಲಹೀನವೆಂಬ ಹದಿನೈದು ಸ್ವರದೂಷಣಂಗಳಂ ತೊಱೆದು (ವಿವೇಕ. ೨೩೬). [ ಸಂ. ]

**ಚಿಂತಿಸು** (ಕ್ರಿ). ೧. ಯೋಚಿಸು; ಆಲೋಚಿಸು; ಭಾವಿಸು: ಮಾರ್ಗಗದಿತ ದೋಷಂಗಳುಮಂ ಚಿಂತಿಸಿ (ಕವಿರಾ. ೦-೪೭); ಧುರದೊಳ್ ಮಾಱುಂ ಲೋಕಂ ನೆರೆದಿರೆಯುಂ ಕುಡುವ ಪೊ[ಟ್ಟ]ಱೊಳ್ ಮೇರುವೆ ಮುಂದಿರೆಯುಂ ಬೀರದ ಬಿಯದಂತರಕ್ಕೆ ಕಿಱಿದೆಂದು ಚಿಂತಿಪಂ ಪ್ರಿಯಗಳ್ಳಂ (ಶಂಪಭಾ. ೦-೪೮); ಮತಿಯಂ ಬಿಪ್ಪಂಡಿಪಳ್ ಲಕ್ಷಣಮನೆಣಸಳೌದಾರ್ಯಮಂ ಚಿಂತಿಸಳ್ (ಕಾದಂಪೂ. ೫೪೮); ಚಿಂತಿಸಿದೊಡಲ್ಲದೀಯದು ಚಿಂತಾಮಣಿ (ಸಮಹ. ೩೯೪-೮ ಅನುಬಂಧ. I); ಅಳಿಯನಳಿವನು ಹೇಳಬಾರದು ತಿಳಿಯಲಿದನಿನ್ನೆನುಗೆ ಚಿಂತಿಸಿ ನಳಿನಲೋಚನ ಬರುತ ಕಂಡನು (ಕುವ್ಯಾ.ದ್ರೋ. ೮-೨); ಮುಂದೊರ್ವ ಖಳನುಯ್ವನೆಂದು ಚಿಂತಿಸಿ ಭಾನು ಸಂದನು ಪಡುಗಡಲೊಳಗೆ (ವೀರಾಹತ. ४-೬೨). ೨. ಆತಂಕಪಡು; ಕಳವಳಿಸು; ವ್ಯಥೆಗೊಳ್ಳು: ಮಾವಂ ಚರಿತಾರ್ಥಂ ನೀನಣಂ ಚಿಂತಿಸದಿರು ನಮಗಿನ್ನಂಟೆ ಶೋಕಾವಕಾಶಂ (ಆದಿಪು. ४-೮೯); ಅಂತವನಿಪನಿಕರಂ ಕೈಯಾಂತವನಿಪನಿಕರಮೊಂದುಕೋಟಿಗೆ ಮಿಗಿಲೆಂಬಂತಾದೊಡಮೊಳಸೋಱದೆ ಚಿಂತಿಸದಾಂತಿಱುಗುಮಿಗುಮಿಱಿವಬೆಡಂಗಂ (ಗದಾಯು.೦-೦೫); ತಾ ಮುನ್ನ ಕರ್ಣನ ಶರಹತಿಯಲೇಕಳಿದುದಿಲ್ಲಾ ಎನುತ ಚಿಂತಿಸಿದ (ಕುವ್ಯಾ.ಶ. ೦೨-೮). ೩. ಮನನಮಾಡು; ಅರಯ್ಯು; ಬಗೆದು ನೋಡು: ಮಾಣದ ಚಿಂತಿಸದೋದುಂ ಪಲವಂ ಭಾವಿಸುತಿರ್ಪನ ತಪಮುಮೊಪ್ಪರಾರ್ಕುಮೆ ಕಡೆಯೊಳ್ (ಧರ್ಮಾಮೃ. ೨-೮೨). ೪. ಧ್ಯಾನಮಾಡು: ಚಿಂತಿಪುದು ಜಿನೇಶ್ವರನಂ ಸಂತತಮುತ್ಸವದೆ (ಸಮಹ. ೦-೧೧೧). [ ಚಿಂತನ + – ಇಸು$_{3}$ ]

**ಚಿಂತೂರ್** (ನಾ). ಒಂದು ಊರಿನ ಹೆಸರು. 'ಚಿಂತೂರ್‌ಬೋಯ' ಪರಾ. [ ? + ಊರ್ ]

**ಚಿಂತೂರ್‌ಬೋಯ** (ನಾ). ಒಬ್ಬಾತನ ಹೆಸರು: ಚಿಂತೂರ್ ಬೋಯಸ್ಕ ಭಾರದ್ವಾಜಸಗೋತ್ರ (ಇಆ. VII, ೧೮೭-೨೪; 668). [ ಚಿಂತೂರ್ + ಬೋಯ ]

**ಚಿಂತೆ** (ನಾ). ೧. ದುಃಖದಿಂದ ಕೂಡಿದ ಯೋಚನೆ; ದುಮ್ಮಾನ: "ಬೇವಸಮ ಚಿಂತೆ" (ಚತುನಿ. ೨೦); "ಚಿಂತೆ ತಾನೆಯುಬ್ಬೆಗಮಕ್ಕುಂ" (ಕಲ್ಯಾಕ್ಕ. ೭೦); ಚಿಂತೆಯಿದೇನೋ ಸಂತತಿಗೆ (ಶಂಪಭಾ. ೦-೧೧೮); ಪೇಟ್ ನಿನಗಿನಿತೊಂದು ಚಿತ್ತದ ನಿಮಿತ್ತದ ಚಿಂತೆ (ಪುಷ್ಪಪು. ೩-೬೦); ಚಿಂತೆ ಏತಕೋ ಬಯಲ ಭ್ರಾಂತಿ ಏತಕೋ (ಪುರಂದ. ೧-೭೮-೧); ಆ ಚಿಂತೆಯೇ ವ್ಯಾಧಿ (ರತ್ನಾಕ. ೭೪). ೨. ಯೋಚನೆ; ಆಲೋಚನೆ: ಪರರ ಚಿಂತೆ ನಮಗೇಕಯ್ಯ ನಮ್ಮ ಚಿಂತೆ ನಮಗೆ ಸಾಲದೆ (ಬಸವ. ೫೦೯); ಮಚ್ಚೇತದೊಳುಣ್ಮ ಪೊಣ್ಮುವ ತನೂಭವ ಲಾಭದ ಚಿಂತೆ ಪೋಸುನಿರ್ಣೀತಮಿದೆಂದದೇಂ ನುಡಿದನೋ ಬಗೆಯಂ ನವಭಾವಕೋವಿದಂ (ಪುಷ್ಪಪು. ೩-೬೨). ೩. ಧ್ಯಾನ: ಅವರು ಯಾವಾಗಲೂ ದೇವರ ಚಿಂತೆಯಲ್ಲಿಯೇ ಕಾಲಕಳೆಯುತ್ತಾರೆ (ರೂಢಿ). ೪. ಅಡ್ಡಿ; ಆತಂಕ: ಎಷ್ಟು ಕಠಿಣವಾದರೂ ಚಿಂತೆಯಿಲ್ಲ (ದ್ರಾವಿವಿ. ೬೩). ೫. [ಕಾವ್ಯಮೀ]ಸಂಚಾರೀಭಾವಗಳಲ್ಲಿ ಒಂದು; ಅನುಭೂತವಸ್ತುವನ್ನು ಎಡೆಬಿಡದೆ ಧ್ಯಾನಿಸುವುದು: ಮತಿ ನಿರ್ವೇದ . . . ಚಿಂತೋಗ್ರತೇರ್ಷ್ಯಾಧೃತಿ . . . ಇವಿಂತೆಯ್ದು ಸಂಚಾರಿಭಾವಂ (ಕಾವ್ಯಾವ. ೭೯೫); ಮತಿ ಲಜ್ಜೆ . . . ಚಿಂತೆ . . . ಅಪಸ್ಮಾರಗಳೆಂಬ ಮೂವತ್ತು ಮೂಱು ಸಂಚಾರೀಭಾವಂಗಳಿಂ ಪರಿವರ್ಧಿಸಿ (ವಿವೇಕ. ೨೨೬).೬. ಹತ್ತು ಕಾಮಾವಸ್ಥೆಗಳಲ್ಲಿ ಒಂದು: ಅಭಿಲಾಷೆ ಚಿಂತೆ . . . ಮರಣವೆಂಬ ದಶಾವಸ್ಥಾವಿಚಾರಪರರಿಂದು ಪಾಶ್ರಿತರಾಗಿ (ವಿವೇಕ. ೨೩೦). [ ಸಂ. ಚಿಂತಾ ]

**ಚಿಂತೆಗೆಯ್** (ಕ್ರಿ). ೧. ತಲ್ಲಣಿಸು; ಉಮ್ಮಳಿಸು; ಕಳವಳಿಸು: ಇನ್ನಿದಕೆ ಚಿಂತೆಗೆಯ್ವೊಡೆ ಪನ್ನತಿಕೆಗೆ ಬನ್ನವಲ್ತೆ (ರಾಜಶೇ. ೧೩-೯೭). ೨. ಯೋಚನೆ ಮಾಡಂ: ಆಲೋಚಿಸು: ಒಂದು ದಿವಸಂ ಸುಕವಿಯಂತಪೂರ್ವಾರ್ಥ ಲಬ್ಧಿಗೆ ಚಿಂತೆಗೆಯ್ದು ತನ್ನೊಳಿಂತೆಂದು ಬಗೆದಂ (ಪಂಚತಂ. ೨೨-೧೦). [ ಚಿಂತೆ + ಕೆಯ್$_{1}$ ]

**ಚಿಂತೆಗೊಳ್ಳು** (ಕ್ರಿ). ವ್ಯಥೆಪಡು ; ಕಳವಳಪಡು ; ಉಮ್ಮಳಿಸು : (ಕ). [ ಚಿಂತೆ + ಕೊಳ್ಳು$_1$ (<ಕೊಳ್$_1$) ]

**ಚಿಂತೆದಾಳ್** (ಕ್ರಿ).=ಚಿಂತೆಗೊಳ್ಳು : ಪೇಳು ವೈಶಂಪಾಯ ಮುನಿರಾಯ ಧರ್ಮಸುತನಾಳೋಚನೆಯನೇಕೆ ಮಾಳ್ಪ ರೋಮಶನಂದು ಪೇಳಿದ ರಹಸ್ಯ ಮಾನ್ನಾರೊಡನೆಯುಸುರನರ್ಜುನ ಬಂದ ಮೇಲೆ ಚಿಂತೆದಾಳಬೇಡೆಂದು (ಲಕ್ಷ್ಮೀಭಾ. ೩-೩೨-೩). [ ಚಿಂತೆ + ತಾಳ್$_1$ ]

**ಚಿಂತೆವಡು** (ಕ್ರಿ).=ಚಿಂತೆಗೊಳ್ಳು: ಇಂತು ಹನ್ನೆರಡು ಸಾವಿರ ಮೂಕೊಟಿ ಯರು ಮುಂತಾಗ ವಿಜಯಾಪುರಕೆ ಚಿಂತೆವಡುತಲೈದಿ (ಕಂಸವಿ. ೧೩-೬೩). [ ಚಿಂತೆ + ಪಡು$_1$ ]

**ಚಿಂತೆವಿಡಿ** (ಕ್ರಿ).=ಚಿಂತೆಗೊಳ್ಳು : ಮಕ್ಕಳ ಹರಾಪಗಾಣದೆ ಚಿಂತೆವಿಡಿದರೆ ಹಲವು ವರ್ಷಗಳು (ಶುವ್ಯಾಖ. ೬೮೩. ಪರಿ. ೩೦೨). [ ಚಿಂತೆ + ಪಿಡಿ$_1$ ]

**ಚಿಂತೆವೆಱು** (ಕ್ರಿ).=ಚಿಂತೆಗೊಳ್ಳು : ಇಂತಿರುತಿರಲ್ಕೆ ಕೌಂಡಿನ್ಯನೆಂಬೊರ್ವ ಮುನಿಪಂ ತನ್ನ ಮನೆಗೆ ಬರಲಾತನಂ ಸತ್ಕರಿಸಿ ಚಿಂತೆವೆತ್ತಿರಲವನಿದೇನೆಂದು ಬೆಸಗೊಂಡೊಡೆ (ಜ್ಞಮಿಭಾ. ೦೦-೨೫). [ ಚಿಂತೆ + ಪೆಱು$_1$ ]

**ಚಿಂತ್ಯ** (ಗು). ೧. ಯೋಚಿಸತಕ್ಕ ; ಪರಿಶೀಲಿಸಲು ಯೋಗ್ಯವಾದ ; ಆಲೋಚಿಸತಕ್ಕ : "ಚಿಂತ್ಯ(ತರ್ಕ್ಯ)" (Conceivable. ಪಾರಿಭಿ. ೧೯) ೨. ಯೋಚಿಸಲು ಸಾಧ್ಯವಾದ. 'ಅಚಿಂತ್ಯ' ಪರಾ. [ಸಂ.]

**ಚಿಂತ್ಯಾಗಮ** (ನಾ). ಆಗಮಗಳಲ್ಲಿ ಒಂದು ಬಗೆ : ಮಂತ್ರಮಾ ಸಿದ್ಧಾಂತ ಭೇದಂಗಳಾವಾವವೆಂದೊಡೆ ಕಾಮಿಕಾಗಮ ಯೋಗಜಾಗಮ ಚಿಂತ್ಯಾಗಮ . . . ಇಪ್ಪತ್ತೆಂಟು ದಿವ್ಯಾಗಮಗಳಕ್ಕುಂ (ವಿವೇಕ. ೬೮). [ಸಂ.]

**ಚಿಂದ** (ನಾ). ನಪುಂಸಕ ; ಖೊಜ್ಜ : ಅದಱೊಳ್ ಪುಟ್ಟಿದ ಗಂಡರೆಲ್ಲ ಮತಿವೀರರ್ ಪೆಂಡಿರೆಲ್ಲಂ ವಿಲಾಸದ ಸೌಭಾಗ್ಯದ ಸೀಮೆಗಳ್ . . . ಮೂಕರುಂ ಚದುರರ್ ಚಿಂದ[ಪಾಠಾಂ. ಲೆಂಕ]ರುಮಾಯಕಾಱರಧಮ ವ್ಯಾಪಾರಿಗಳ್ ಧಾರ್ಮಿಕರ್ (ಕಾವ್ಯಸಾ. ೧೯೮) ; (ಅನಂಪು. ೦೦ ೧೨ ನೋ). [ <ಪ್ರಾ. ಚಿಂಧ ]

**ಚಿಂದಗಾವುಂಡ** (ನಾ). ಒಬ್ಬಾತನ ಹೆಸರು : ಚಿನ್ದಗಾವುಣ್ಡರ ಮಗ ನಾಡ ಗಾವುಣ್ಡ ಗಾವುಣ್ಡಗೆಯ್ವನ್ನು (ಎಕ. X, ಮಾಲೂರು. ೯೪-೮ ; ಸು. ೨೬೦). [ ಚಿಂದ$_2$ + ಗಾವುಂಡ(<ಗಾಮುಂಡ) ]

**ಚಿಂದರಿ** (ನಾ).=ಚಿಂದಿ ೨ : ಉಟ್ಟ ಮಲ್ಲಗಂಟಿನ ತೊಡರ್ಚಿದುಡೆಗಂಟೆಯ ಕಿರ್ಗಟ್ಟಿನ ಸುರಗಿಯು ಕಟ್ಟಿದ ಚಿಂದರಿಯು [ಪಾಠಾಂ. ಚಿಂದಿಯು] ತೊಟ್ಟ ಕಂಚುಳಿಕೆಯು ಹಿಡಿದ ಬಿಲ್ಲ ಬಲಗೈಯು ಸರಳ ಚೆನ್ನ ಬತ್ತಳಿಕೆಯು . . . ಸಿಂಗರಂಬೆರಸಿ (ಗಿರಿಕ. ೬-೫೫ ವ). [ ?. ; ತೆಲು. ಚಿಂದರ, ಚಿಂದಱ. / ಮರಾ. ಚಿಂದರ್, ಚಿಂದರೀ ]

**ಚಿಂದರುಬಾವಲಿ** (ನಾ). ಒಂದು ಬಗೆಯ ಕರ್ಣಾಭರಣ : ಕೆಂದೆತ್ತು ಕೈಯಾಗ ಕೆಂಪಂಗಿ ಮೈಯಾಗ ಚಿಂದರುಬಾವಲಿ ಕಿವಿಯಾಗ ಇಟ್ಕೊಂಡು ತಂಗಿಯಾರ ಕರೆಯ ಬರುತಿದ್ದ (ಹಳ್ಳಿಹಾ. ೬೨) ; ಚಿಂದರುಬಾವಲಿ ಕಿವಿಯಲ್ಲಿ ಇಕ್ಕೊಂಡು ಅಣ್ಣಾ ಬಂದಾ ತಂಗೀ ಕರೆಯೋಕೆ (ಜಗೀತ. ೨೯). [ <ಚಂದ್ರಬಾವುಲಿ ]

**ಚಿಂದಾಟ** (ನಾ). ಚಿಂದಿಚಿಂದಿಯಾದುದು ; ಹರಕಲು ಬಟ್ಟೆ : ಎರಡನೆಯ ಖಲೀಫನಾದ ಉಮರನು ಭರತಖಂಡದ ನೂಲಿನ ಬಟ್ಟೆಯ ನಿಲುವಂಗಿಯನ್ನು ತೊಟ್ಟದ್ದನೆಂತಲೂ ಅದಕ್ಕೆ ೧೨ ತೂತುಗಳು ಬಿದ್ದು ಅದು ಹರಿದು ಚಿಂದಾಟಯಾಗಿದ್ದಿತೆಂತಲೂ ಉಲ್ಲೇಖವಿದೆ (ವಾದಿಶಾ. ೨೦). [ ←ಮರಾ ಚಿಂಧೋಟೀ ]

**ಚಿಂದಿ** (ನಾ). ೧. ಹರಕು ಬಟ್ಟೆ ; ತುಂಡಂ ಬಟ್ಟೆ : ಒಂದು ಪಟ್ಟಾವಳಿಯ ಚಿಂದಿಯೊಳೊಂದೆಸೆಯೊಳೀಶ್ವರನೊಡನೆ ಬಲುಹೊಂದಿ ಸಂಧಿಸಿ (ಬಸಪು. ೨೭-೧೩) ; ಪೀತಾಂಬರಗಳ ಹೊದೆಯುವರಲ್ಲಿ, ಕೌಪೀನಕೆ ಚಿಂದಿಯು ಸಿಗದಿಲ್ಲಿ (ಪಾಂಡೇಜ. ೬೭-೨೦). ೨. ತಲೆಗೆ ಕಟ್ಟಿಕೊಳ್ಳುವ ಚಿಕ್ಕ ವಸ್ತ್ರ: ತೋರದ ದೇಹ ಕುಂಡಲವೆದೆ ನರೆಗಡ್ಡ ಸೇರಿದ ಚಿಂದಿ ಕುಲ್ಲಾಯಿ (ಭರತ. ೦೩-೯) ; ವೈಯಾರದ ಬಿರುದಿನ ಚಿಂದಿಗಳ ಚೆಲ್ವರಾಯ ರಾವುತರೈದಿದರು (ಕಂಸವಿ. ೨೩-೮೫) : ವಾರೆದುರುಬಿನ ಚಿಂದಿ ವಾರಣದ ಶಿಖಿಯಲ್ಲಿ (ಕೊಟ್ಟೂಬ. ೦೫-೫೦) ; ಇಟ್ಟ ಮುತ್ತಿನ ಚೌಕಳಿ ಚಿಂದಿ ಹರೆನಾವು ತೊಟ್ಟ ಭೂಷಣ ರತ್ನಾಭರಣ (ಸೌಂದಾ. ೯-೬೫) ; ಚಿಂದಿಯೊಳಪೊಕ್ಕು ಬ್ರಹ್ಮಸ್ಥಾನ ಗೊರೆದು(ಜಿನಮು. ೨೭-೧೧). ೩. ಸೊಂಟಪಟ್ಟಿ ; ನಡುಕಟ್ಟು : ಕಟ್ಟಿದ ಚಿಂದಿಯುಂ ಸುರಿಗೆಯುಂ ಪೆಗಲೇಱಿದ ಮಕ್ಕಳುಂ (ಸೂಕ್ತಿಸು. ೧೮-೬೩).

ಚಿಂದಿಉಡಾಯಿಸು = ಸ್ವಲ್ಪವೂ ಉಳಿಯದಂತೆ ಕೊಳ್ಳೆಹೊಡೆ,- ಲಪಟಾಯಿಸು : ಅಂತೂ ಇಂಥ ಅತಿರಥ ಮಹಾರಥರ ಸಂಘಟನೆಯಲ್ಲಿ ಕಳವು ಮಾಲು ಚಿಂದಿ ಉಡಾಯಿಸಿ ಹೋಗುವುದರಲ್ಲಿ ಸಂದೇಹವಿಲ್ಲ (ಕಲಿಸ. ೧೦೮). ಚಿಂದಿಯಾಗು = ಚೂರು ಚೂರಾಗು : ಉಟ್ಟದ್ದ ಧೋತ್ರ, ತೊಟ್ಟದ್ದ ವಸ್ತ್ರಗಳು ಮುಳ್ಳುಪೊದೆಗಳಿಗೆ ಸಿಕ್ಕಿ ಹರಿದು ಚಿಂದಿಯಾಗಿವೆ (ಶಾಂತಲಾ. ೩೩೬). [ ?./ ಹಿಂ. ಚಿಂದೀ ; ಮರಾ. ಚಿಂಧೀ./ಪ್ರಾ. ಛಿಂದಾವಿಯ=ಹರಿದ ; ಕತ್ತರಿಸಿದ ]

**ಚಿಂದಿಬಟ್ಟೆ** (ನಾ). ತುಂಡುಬಟ್ಟೆ : ಮೊದಲಿದ್ದ ಚಿಂದಿಬಟ್ಟೆಯೂ ಈಗ ಮಾಯವಾಗಿದ್ದಿತು (ಪಾಪಾಳ. ೧೦೯). [ ಚಿಂದಿ$_1$ + ಬಟ್ಟೆ$_2$ ]

**ಚಿಂದು** (ನಾ). ೧. [ನಾಟ್ಯ] ನೃತ್ಯದಲ್ಲಿ ಒಂದು ಬಗೆ ; ಅಭಿನಯದಲ್ಲಿ ಒಂದು ರೀತಿ : ಮಾತಂಗಿ ಶಬರಿ ಯೋಗಿಣಿ ಮುಂತಾದ ಆಟಮನಾಡಿ ನಾನಾದೇಶ ವೇಷ ಭಾಷೆಗಳನಳವಡಿಸಿ ಚಿಂದು ಜಕ್ಕಡಿ . . . ಮೊದಲಾದ ಆಟಗಳಿಂ (ವಿರೂಪಾ. ೯೦) ; ಕೋಲಚಾರಿಯ ಕೊಳ ವನ ಚಿಂದು ಮೊದಲಾದ ಲೀಲೆಯನೆಲ್ಲವ ತೋಱಿ (ಭರತ. ೧೨-೯೩) ; ಚಿಂದು ಚಕ್ಕಡಿ ಕೋಲಚಾರಿಗಳ್ (ಚಿಬಸು. ೨-೨೯). ೨. [ಸಂಗೀತ] ಸಂಗೀತದ ಸ್ಥಾಯಿಗಳಲ್ಲಿ ಒಂದು ಬಗೆ : ಜಕ್ಕಡಿ ಚಿಂದು ಮೊದಲಾದ ಠಾಯವು . . . ಮೆಱೆಯೆ (ರೇವಣ. ೩೦-೩೮) ; ಗೀತಕ್ರಮದಿ ಸಂಕೀರ್ಣವೆತ್ತು ರತಿ ಜೋಡಣೆಗೆ ಚಿಂದು ಜಕ್ಕಡಿ ಗೀತ ಕಂಪನವ ಸೂಡೆ ಸರಸಾಲಾಪದಿ (ಲಿಂಗಪು. ೨೭-೧೭). [ ದೇ.॥ ತಮಿ. ಚಿನ್ದು ; ತೆಲು. ಚಿಂದು ]

**ಚಿಂಪಯ್ಯ** (ನಾ). ಒಬ್ಬಾತನ ಹೆಸರು . ಕೊವರಪಯ ಚಿಂಪಯ್ಯನುಂ ಲೋಕಯ್ಯನುಂ ಕೊಟ್ಟಾರದ ಮಾರ ಪುಲಿಯುಂ (ಎಕ. XII, ಶಿರಾ. ೨೮-೫೦ ; ೨೬೨). [ ? + ಅಯ್ಯ$_1$ ]

**ಚಿಂಪಾಂಜಿ** (ನಾ). (ಮನುಷ್ಯನನ್ನು ಹೋಲುವ) ಒಂದು ವಾನರ ಜಾತಿ : ಮಂಗನ ಮರಿಗೆ ಇನ್ನೂ ಹೆಚ್ಚು ಕಾಲ ಶಿಕ್ಷಣ ಅಗತ್ಯ. ಚಿಂಪಾಂಜಿ ಎಂಬ ಮಾನವ ಮಂಗದ ಮರಿಗಳು ಇನ್ನೂ ಹೆಚ್ಚುಕಾಲ ತೆಗೆದುಕೊಳ್ಳುತ್ತವೆ (ಶಿಕ್ಷದ. ೮೬). [ ←ಇಂ. Chimpanzee ]

**ಚಿಂಪಿ** 'ಸಿಪ್ಪು' ನೋ.

**ಚಿಂಪಿಗ** 'ಸಿಪ್ಪಿಗ' ನೋ.

**ಚಿಂಪೆ** 'ಸಿಪ್ಪು' ನೋ.

**ಚೀಃ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಅನುಕರಣ ಶಬ್ದ ; ಧಿಕ್ಕರಿಸುವ ಶಬ್ದ : ಆ ಸುದತಿಯ ರೂಪಿನಿಂ ಪೆಱತನೆಂದೊಡೆ ಚೀಃ ಕರಮೆಗ್ಗನಾಗನೇ (ಆದಿಪು. ೨-೭೪) ; ಚೀಃ ಜಪವೆಣಿಸುವ ನೆವದಿಂದಂ ನೃಪ ತದ್ಗುಣಗಣಮನೀಗಳೆಣಿಸುತ್ತಿರ್ಪೆಂ (ಕಾದಂಪೂ. ೯೫೬) ; ಸಾರಮಸಾರಮಿದೆಂದು ವಿಚಾರಿಸಿ ಕೈಕೊಂಡು ಕಿಡಿಸ ಲಾರ್ಪುದೆ ಚೀಃ ನಿಷ್ಕಾರಣಂ (ಧರ್ಮಾಮೃ. ೩-೨೭೦).

**ಚೀಃಗೈ** (ಕ್ರಿ). ತಿರಸ್ಕರಿಸು; ಧಿಕ್ಕರಿಸು: ಮನಮೇಕೊ ಕಳವಳಂಗೊಳುತಿರ್ಪ ದಾಶೆಯಂ ಚೀಗೈದು (ಶ್ರೀರಾಮಾ. ೮೨೨-೨೯೩). [ ಚೀಃ + ಗೈ (<ಕೆಯ್$_1$) ]

**ಚಿಕಟಾಯಿಸು**, ಚಿಗಟಾಯಿಸು (ಕ್ರಿ). ಅಂಟಿಸು; ಲಗತ್ತಿಸು: ನೋಟೀಸಿನ ನಕಲಿನ ಮೇಲೆ ಷರಾ ಬರೆದು ಬಾಕಿದಾರನು ವಾಸಮಾಡುವ ವಾಸಸ್ಥಾನದಲ್ಲಿಯಾಗಲಿ ಜಪ್ತಿ ಸೊತ್ತುಗಳನ್ನು ಇಟ್ಟಿರುವ ಸ್ಥಳದಲ್ಲಿಯಾಗಲಿ ಚಿಕಟಾಯಿಸತಕ್ಕದ್ದು (ಗ್ರಾಮಾಕ. ೭೩). **ಚಿಗಟಾಯಿಸು** : ನಕಲನ್ನು ಆತನ ವಾಸದ ಮನೆಗೆ ಚಿಗಟಾಯಿಸಿ ಅಸಲಿಗೆ ಹಾಜರಿದ್ದವರ ರುಜು ಪಡೆಯಲಾಯಿತು (ಪಂಜಪಂ. ೪೭).

[ ಚಿಕಟ್ಟ (P ←ಮರಾ. ಚಿಕಟಣೇ) + – ಇಸು₃. ]

**ಚಿಕಣ** (ನಾ). (ಕರಾ). ಒಂದು ಬಗೆಯ ಮೀನು. [ ? ]

**ಚಿಕಣೆ** (ಗುಂ). ೧. ಗಟ್ಟಿಯಾದ: (+). ೨. ಸಾರವತ್ತಾದ: (+). ೩. ದಪ್ಪನಾದ : (+). ೪. ಜಿಡ್ಡಿನ : (+). [ ?./ಸಂ. ಚಿಕ್ಕಣ./ಹಿಂ. ಚಿಕನಾ ]

**ಚಿಕಣ್ಣ** (ನಾ). ಒಬ್ಬಾತನ ಹೆಸರು : ಮೂವತ್ತರುವರುಮರಸುಂ ಚಿಕ(೦)ಣ್ಣಬಿಗ್ಗೆ ಪದಿ × × × ಗೊಟ್ಟರ್ (ಸೌಇಇ. XI-1, ೧೧-೩೦ : 864).

[ < ಚಿಕ್ಕ₁ + ಅಣ್ಣ₁ ]

**ಚಿಕಪ** 'ಚಿಕ್ಕಪ್ಪ' ನೋ.

**ಚಿಕರ** 'ಸಿಕರ' ನೋ.

**ಚಿಕರಿ** (ನಾ). ಬೆಟ್ಟ : ಶತ್ವಕ್ಕೆ ಚತ್ವಂ—ನಿಶ್ಚಲ—ನಿಚ್ಚಲ . . . ಶಿಖರಿ—ಚಿಕರಿ (ಶಮದ. ೨೬೩ ವೃಯೋ). [ < ಸಂ. ಶಿಖರಿನ್ ]

**ಚಿಕಸಂಭು** (ನಾ). ಒಬ್ಬಾತನ ಹೆಸರು : ಕುರುವರನ ಮಗ ಚಿಕಸಂಭುವನಯ್ದ ನೀಲಿ ಎಡೆನಾ(ಣ್ಡೆ)ಬ್ಬತ್ತು ಆಳುತ್ತಿರೆ (ಎಕ. VIII, ಸೊರಬ. ೫೭೦-೬ : 951). [ < ಚಿಕ್ಕ₁ + ಸಂಭು₀(< ಸಂಬು) ]

**ಚಿಕಿಚ್ಚೆ** (ನಾ).=ಚಿಕಿತ್ಸೆ : ದ್ವಿತ್ವದ ಥತ್ವಕ್ಕೆ ದಡ್ಡಕ್ಕರದ ಚಕಾರಂ—ಇಚ್ಛೆ—ಇಚ್ಚೆ ; ಮಚ್ಛರ – ಮಚ್ಚರ ; ಚಿಕಿಚ್ಛೆ – ಚಿಕಿಚ್ಚೆ (ಶಮದ. ೬. ೨೫೬ ವೃಯೋ). [< ಸಂ. ಚಿಕಿತ್ಸಾ ]

**ಚಿಕಿತ್ಸಕ** (ನಾ). ೧. ಚಿಕಿತ್ಸೆ ಮಾಡುವವನು; ವೈದ್ಯ: "ಆಯುರ್ವೇದೀ, ಭಿಷಕ್, ವೈದ್ಯಃ, ದೋಷಜ್ಞಃ, ಚಿಕಿತ್ಸಕಃ – ಈ ೫ ವೈದ್ಯಂ" (ಹಲಾಯು. ೧೧೧-೪೫೮) ; ಮನಶ್ಶಾಸ್ತ್ರವೇತ್ತರೂ, ಚಿಕಿತ್ಸಕರೂ ಆದ ಅವರ ಕಣ್ಣುಗಳಲ್ಲಿ ನೀರು ಕಟ್ಟಿತ್ತು (ಹೊಸಕ್ಷ. ೧). ೨. (ಅಲಂ) ಆಳವಾಗಿ ಪರಿಶೀಲಿಸುವವನು,–ವಿಮರ್ಶಿಸುವವನು : ಚಿಕಿತ್ಸಕ ಓದುಗರು ಸಂಶಯ ತಳೆದಾರೆಂದೆನಿಸುವುದು (ಸುತು ಮು. ೦). [ ಸಂ. ]

**ಚಿಕಿತ್ಸಕಬುದ್ಧಿ** (ನಾ). ವಿಮರ್ಶಕ ಬುದ್ಧಿ ; ಪರೀಕ್ಷಕ ಬುದ್ಧಿ : ರಂಗನಲ್ಲಿ ಸಾಕಷ್ಟು ಚಿಕಿತ್ಸಕ ಬುದ್ಧಿಯೂ ಇತ್ತು (ರಂಗಲೋ. ೩೪). [ಚಿಕಿತ್ಸಕ+ಬುದ್ಧಿ]

**ಚಿಕಿತ್ಸಾಂಗ** (ನಾ). ಚಿಕಿತ್ಸೆಗೆ ಸಂಬಂಧಪಟ್ಟುದು : ವೈದ್ಯ, ಔಷಧ, ರೋಗಸ್ಥ, ಪರಿಚಾರಕ ಈ ನಾಲ್ಕೂ ಚಿಕಿತ್ಸಾಂಗವೆನಿಸಿಕೊಂಬುವುವು (ಸಕವ್ಯ. ೨೩). [ ಸಂ. (ಚಿಕಿತ್ಸಾ + ಅಂಗ) ]

**ಚಿಕಿತ್ಸಾಕ್ರಮ** (ನಾ). ವೈದ್ಯೋಪಚಾರದಲ್ಲಿ ಅನುಸರಿಸುವ ರೀತಿ : ರೋಗವಿಧಾನದಲ್ಲಿಯಾಗಲಿ ಚಿಕಿತ್ಸಾಕ್ರಮದಲ್ಲಿಯಾಗಲಿ ಇರುವ ಭಿನ್ನಾಭಿಪ್ರಾಯಗಳನ್ನು . . . ಬರೆದು ಸೂಚಿಸಿದ್ದಾನೆ (ಸಕವ್ಯ. IX, ಪ್ರಸ್ತಾವನೆ).

[ ಸಂ. (ಚಿಕಿತ್ಸಾ + ಕ್ರಮ) ]

**ಚಿಕಿತ್ಸಾಲಯ** (ನಾ). ರೋಗಿಗೆ ಪರೀಕ್ಷೆ ಮತ್ತು ಉಪಚಾರ ಮಾಡುವ ಸ್ಥಳ ; ಆಸ್ಪತ್ರೆ : ಚಿಕಿತ್ಸಾಲಯದಲ್ಲಿ ಮೇರಿ ಗುಟ್ಟಾಗಿ ಡಾಕ್ಟರಿಂದ ದೇಹಪರೀಕ್ಷೆ ಮಾಡಿಸಿದಳು (ಕಾವೇರಿ. ೧೬೫): ರಾತ್ರಿಯಾಗಿ ಚಿಕಿತ್ಸಾಲಯದ ಪಟಾಂಗಣದಲ್ಲಿ ಎರಡು ಗಂಟೆ ಬಾರಿಸಿತು (ಹೇಮಂತ. ೫೦೫).

[ ಸಂ. (ಚಿಕಿತ್ಸಾ + ಆಲಯ) ]

**ಚಿಕಿತ್ಸಿತ** (ಗು). ರೋಗದ ಪರೀಕ್ಷೆ ಮತ್ತು ಔಷಧೋಪಚಾರಗಳಿಂದ ಕೂಡಿದ : ಚಿಕಿತ್ಸಿತಾಗೂಢಪ್ರೌಢವಪ್ಪ ಗದಾಂಗವುಮಂ . . . ತ್ರಿದಶವರ್ಗಕ್ಕುಪದೇಶಂಗೆಯ್ಯುತ್ತುಂ (ಶಾಂತಿಪು. ೧೧-೯೦ ವ). [ ಸಂ. ]

**ಚಿಕಿತ್ಸೆ** (ನಾ). ರೋಗವನ್ನು ಗುಣಪಡಿಸುವ ಕಾರ್ಯ ; ರೋಗನಿವಾರಣೋಪಾಯ; ವೈದ್ಯೋಪಚಾರ: "ಉಪಚರ್ಯಾ, ಚಿಕಿತ್ಸಾ – ಈ ೨ ವೈದ್ಯಂ ಮಾಡುಹ" (ಹಲಾಯು. ೧೧೧-೪೫೮) : ಉದಾರವಹ್ನಿಯ ವಿವಿಧ ಪೀಡಾಕಾರಕರುಂಟೆ ಚಿಕಿತ್ಸೆಯಿಂದನು ಮುನಿ ನೃಪಾಲಂಗೆ (ಕುಮಾವ್ಯಾ. ೧೬-೦೩) : ಚಿಕಿತ್ಸೆಯ ಮಾಡುವ ವೈದ್ಯನಿಗೆ . . . ಚಿಕಿತ್ಸಾವಿಷಯವು ನಿಷ್ಫಲವಲ್ಲವೆಂದು ಪೂರ್ವಾಚಾರ್ಯರು ಹೇಳುವರು (ಸಕವ್ಯ. ೧೩) ; ಆಂಗ್ಲೇಯ ವೈದ್ಯರು ಕೂಡ ಚಿಕಿತ್ಸೆ ನಡೆಸಿದರು (ಪ್ರಕಾಪ. ೧೭).

[ ಸಂ. ಚಿಕಿತ್ಸಾ ]

**ಚಿಕೀರ್ಷೆ** (ನಾ). ೧. ಕೆಲಸ ಮಾಡುವ ಬಯಕೆ : ನಿಯಮದಿಂ ಶುಭರೂಪವಿಗುರ್ವಣೇಚ್ಛೆಯಿಂ ಅಶುಭಾಕಾರಂಗಳಂ ದುಃಖಪ್ರತೀಕಾರ ಚಿಕೀರ್ಷೆಯಿಂ ಅತಿದುಸ್ಸಹ ದುಃಖ ಹೇತುಗಳನೆ ವಿಗುರ್ವಿಸುವರ್ (ತತ್ತ್ವಾರ್ಥಪ್ರ. ೧೩೨) : ನೆಟ್ಟನಾ ಜ್ಞಾನವಸ್ತುವಿನೊಳು ಚಿಕೀರ್ಷೆ ನೆಲೆಗೊಹುಟ್ಟದಾಗಿಯು (ವೀಕ್ಯಪು. ೫-೦೨-೨೭) ; ಚಿಕೀರ್ಷೆಯಾವೇಗದ ವ್ಯೂಘಣೆ ಲೇಲಿಹ್ಯಮಾನ ಜಿಹ್ವೆಗಳಂತೆ (ಶ್ರೀರಾಮಾ. ೧೩-೩೩೦). ೨. ಉದ್ದೇಶ ; ಮನೋರಥ : ಅನಂತನು ಪದುಮನಾಭಪ್ರಿಯ ಚಿಕೀರ್ಷೆಯಲುದಿಸಿದಪನು (ನಿಘಾಗ. ೧೧-೦-೩೫). [ ಸಂ. ಚಿಕೀರ್ಷಾ ]

**ಚಿಕುರ** (ಗು). ೧. ಯಾವುದಕ್ಕೂ ಹಿಂದೆಗೆಯದೆ ಇನ್ನೊಬ್ಬರಿಗೆ ತೊಂದರೆಯನ್ನುಂಟುಮಾಡಂವ. ೨. ಹಿಂದೆ ಮುಂದೆ ಆಲೋಚಿಸದೆ ಕೆಲಸ ಮಾಡುವ ; ದುಡುಕಿನ ಸ್ವಭಾವದ. ೩. ಚಂಚಲವಾದ; ಅಸ್ಥಿರವಾದ. (ನಾ). ೪. ತಲೆಯ ಕೂದಲು : "ಕೇಶಃ, ಶಿರಸಿಜಃ . . . ಚಿಕುರಃ, ಶಿರೋರುಹಃ, –ವಾಳಃ – ಈ ೭ ತಲೆಯ ನವಿರ್" (ಹಲಾಯು. ೮೭-೩೭೬) ; ಚಿಕುರ ಚಾರು ಮೃದುಕುಂತಳ ಕಳಾಪವಮಳಿಕೇಶಂ (ಗದಾಯು. ೮-೫೭) ; ಮಧುಪವ್ಯೂಹನಿಭಕುಟಿಳಚಿಕುರವಮನೋಹರೆ ಮನಸಿಜನ ಕಣೆಗೆ ದೊಣೆಯೆನೆ ನೆಗಟ್ದಳ್ (ಸುಕುಮಾ. ೧-೭೯) ; ಕಮಲವನದೊಳೆಱಗಿದ ಪರಮೆದುಱುಗಲೆಂಬಂತಲ್ಲಿ ಚಿಕುರನಿಕರವೆಸೆಯೆ (ರಾಜಶೇ. ೧-೦೩೫ ವ) ; ಚೆಲ್ಲಿದಾ ಚಿಕುರರಾಶಿಯ ಕತ್ತಲೆಯ ಮೊತ್ತವೆಂಬಂತೆವೋಲ್ (ಶ್ರೀರಾಮಾ. ೭೭-೩೭೦). [ ಸಂ. ]

**ಚಿಕೆಯ** (ನಾ). ಒಬ್ಬಾತನ ಹೆಸರು : ಶ್ರೀ ಕನ್ನರದೇವಂ ಪೃಥಿವೀರಾಜ್ಯಂಗೆಯೆ ಚಿಕೆಯಣ್ಣಾಡನಾಳೆ (ಎಕ. VIII, ಸೊರಬ. ೭೦-೨ : 938).

[ < ಚಿಕ್ಕಯ್ಯ ]

**ಚಿಕೋರಿ** (ನಾ). ಒಂದುಬಗೆಯ ಗಿಡ; P ಇದರ ಬೇರಿನ ಪುಡಿಯನ್ನು ಕಾಫಿಪುಡಿಗೆ ಬೆರೆಸುತ್ತಾರೆ : (ಬೇರಿಗಾಗಿ ಬೆಳೆಸುವ, ನೀಲಿಹೂವು ಬಿಡುವ) ಒಂದು ಜಾತಿಯ ಗಿಡ ; ಇದರ ಬೇರಿನ ಪುಡಿ : 'ಚಿಕೋರಿ' (Chicory. ಇಂಕನಿ) ; ತನ್ನ ಮುಂದಿದ್ದ ವ್ಯವಹಾರದ ಬಗ್ಗೆ ಚಿಂತಿಸುತ್ತ . . . ಚಿಕೋರಿ ದಟ್ಟವಾಗಿ ಬೆಳೆದಿದ್ದ ಟೆನಿಸ್‍ಮೈದಾನದಲ್ಲಿ . . . ಅಡ್ಡಾಡಿದನು (ಪುನರು. ೨೬೫). [ ← ಇಂ. Chicory ]

**ಚಿಕ್ಕ₁** (ನಾ). ೧. ಎಳೆಯತನ ; ಎಳೆಯ ವಯಸ್ಸು : ಮಕ್ಕಳ ಮದುವೆಯ ಚಿಕ್ಕಲ್ಲಿ ಮಾಡಿದಡೆ . . . ಇಷ್ಟವ ಮಾಡಿಯಬೇಕು (ಪೋಲೀಮಾ. ೮೦-೩೦೯). ೨. ಒಬ್ಬಾತನ ಹೆಸರು : ಆತನ ಮಗ ಚಿಕ್ಕ ಕಲ್ಲ ನಿಱಿಸಿದೊ (ಎಕ. VIII, ಸೊರಬ.೫೦೨-೬ : 955). (ಗು). ೩. ಸಣ್ಣ ; ಕಿರಿಯ : ಮದದಾನೆಯುಮಂ ಮಾಣಿಕವುಮನೊತ್ತೆವಿಡಿಸಲಟ್ಟುವ ಚಿಕ್ಕ ಪೋರ್ಕುಳಿ ಬೋಜಂಗರುಮಂ . . . ಮೆಱೆದು (ಪಂಪಭಾ. ೪-೮೭ ವ); ದೇವಾ ನೀನೆನಗೆ ಚಿಕ್ಕ ತಮ್ಮ (ಬಸವ. ೯೦೪) : ಕೈಯಲ್ಲಿ ಚಿಕ್ಕ ಕೊಡಲಿ (ಆರ್ಯಕ. ೧೧). ೪. ಕೀಳಾದ ; ಕ್ಷುಲ್ಲಕವಾದ. 'ಚಿಕ್ಕನಂಡಿ' ಪರಾ.

**ಚಿಕ್ಕಚಿಕ್ಕ** (ದ್ವಿರುಕ್ತಿ): ಪಾದಾಃ, ಪ್ರತ್ಯಂತ ಪರ್ವತಾಃ– ೨ ದೊಡ್ಡ ಬೆಟ್ಟಗಳ ಬಳಿಯಲ್ಲಿ ಸುತ್ತುಮುತ್ತಲೂ ಸಮೀಪವಾಗಿರುವ ಚಿಕ್ಕಚಿಕ್ಕ

ಕಲ್ಲು ಗುಡ್ಡಗಳು (ಸಿದ್ಧಾಂತಿ. ೯೫). ಚಿಕ್ಕದು = ಸಣ್ಣದಂ : ಚೇಳ್ ಚಿಕ್ಕದೆಂದಳ್ಕಱಿಂ ತೆಗೆಯಲ್ ಕಚ್ಚದೆ (ಕೋಮಲೀಕ. ೪೦) ; ಅಕ್ಕ ನಿನ್ನ ಮಾತ ಕೇಳಿ ಚಿಕ್ಕದೊಂದು ಗಿಳಿಯು ಸಾಕಿದೆ (ಪುರಂದ. ೧-೦೦೨-೧). ಚಿಕ್ಕವ, ಚಿಕ್ಕವನು = ಸಣ್ಣ ವಯಸ್ಸಿನವನು ; ಸಣ್ಣವನು : ಚಿಕ್ಕವನಂ ಬೇಂಟೆಗೆ ಬಲಿಯಿಕ್ಕುವನೋ (ದಶಕು. ೩-೦೩೮) ; ಧುರವ ಹೊಗತಕ್ಕವನೆ ಚಿಕ್ಕವ ನಿಱಿಯಲಾಪನೆ (ಕುಮಾರವ್ಯಾ. ೩-೦೭) ; ಚಿಕ್ಕವನೇ ಇವನು ನಮ್ಮ ಕೈಗೆ ಸಿಕ್ಕದೆ ಓಡುವನು (ಪುರಂದ. ೧-೬೦ ಪಲ್ಲವಿ). ಚಿಕ್ಕವಳು, ಚಿಕ್ಕಳು = ಸಣ್ಣ ವಯಸ್ಸಿನವಳು ; ಸಣ್ಣವಳು : ಚಿಕ್ಕವಳಿದ್ದಾಗಲೇ ಆಕೆ ಅನಾಥಳಾದಳು (ರೂಢಿ); ಚಿಕ್ಕಳ ನುಡಿಗೇಳು ಮತ್ತುಂಬವೆಂದರು ತಕ್ಕಕೊರ್ವರ್ಗೆಗೊರ್ವರ್ಗಳಲ್ಲಿ (ಭರತ. ೪-೩೦); ಚಿಕ್ಕವು (ಬಹುವ): ಮಕ್ಕಳು ತುಂಬಾ ಚಿಕ್ಕವು (ರೂಢಿ). ಚಿಕ್ಕಾತ = ಚಿಕ್ಕವ: ಚಿಕ್ಕಾತನಾದೊಡಂ ಬುದ್ಧಿವಂತನಲ್ಲಿ ಕಾರ್ಯಮಂ ಕೇಳ್ವುದು (ಪಂಚತಂ. ೧೧೦-೪). [ದೇ. ? ತಮಿ. ತುಳು. ಚಿಕ್ಕ; ತೆಲು. ಚಿಕಿ./ ಪ್ರಾ. ಚಿಕ್ಕ = ಅಲ್ಪವಾದ, ಸ್ವಲ್ಪ]

ಚಿಕ್ಕ₂ 'ಸಿಕ್ಕ₁' ನೋ.

ಚಿಕ್ಕ₃ (ಗು). ಚಪ್ಪಟೆಯಾದ ಮೂಗುಳ್ಳ. [ಸಂ.]

ಚಿಕ್ಕಎಲಚಿ (ನಾ). ಎಲಚಿಯಲ್ಲಿ ಒಂದು ಬಗೆ ; ಸಣ್ಣ ಎಲಚಿ ಗಿಡ : "ನಿಮ್ನಕಟೀ-ಚಿಕ್ಕಎಲಚಿ" (ಓಷಧಿ. ೮೭). [ಚಿಕ್ಕ₁ + ಎಲಚಿ]

ಚಿಕ್ಕಂದು₁ (ನಾ). ಎಳೆಯ ವಯಸ್ಸು; ಎಳವೆ; ಬಾಲ್ಯ: ಮೆಚ್ಚಿಸಲೆಂದು ಮೆಯ್ದೆ ಜಗಮಂ ಚಿಕ್ಕಂದು ತೊಟ್ಟಾಂ ಪರೀಕ್ಷಿಸಿ (ಶಾಂತಿಪು. ೩೦೮) ; ಚಿಕ್ಕಂದಿನ ಬಾಳುವೆ ನಿಮ್ಮ ಆಣೆಯಯ್ಯ (ಬಸವ. ೩೦೯) ; ಚಿಕ್ಕಂದಿನಲ್ಲಿ ಹುಡುಗರ ಬುದ್ಧಿ ಬಹಳ ಕೋಮಲವಾಗಿರುವುದು (ಮುಂಬಯಿ. ೪-೩೪). [ಚಿಕ್ಕ₁ + ಅಂದು₂]

ಚಿಕ್ಕಂದು₂(ಅ). ಬಾಲ್ಯಕಾಲದಲ್ಲಿ ; ಎಳವೆಯಲ್ಲಿ: ಇವನು ತಮ್ಮಯ್ಯನನು ನೆಱೆ ಪರಿಭವಿಸನೇ ಚಿಕ್ಕಂದು (ಕುಮಾರವ್ಯಾ. ೧೯-೨೩). [ಚಿಕ್ಕ₁ + ಅಂದು₃]

ಚಿಕ್ಕಕಲ್ಲುರಿ (ನಾ). ಒಂದು ಬಗೆಯ ಮೂಲಿಕೆ : "ಬ್ರಹ್ಮಸೋಮಾ – ಚಿಕ್ಕಕಲ್ಲುರಿ ; ನೀರಗಿಚ್ಚು" (ಓಷಧಿ. ೮೧). [ಚಿಕ್ಕ₁ + ಕಲ್ಲುರಿ₀]

ಚಿಕ್ಕಕಾಗೆದೊಂಡೆ (ನಾ). ಒಂದು ಬಗೆಯ ಮೂಲಿಕೆ : "ಧ್ವಾಂಕ್ಷಾಂಗೀ– ಚಿಕ್ಕಕಾಗೆದೊಂಡೆ" (ಓಷಧಿ. ೮೧). [ಚಿಕ್ಕ₁ + ಕಾಗೆದೊಂಡೆ]

ಚಿಕ್ಕಕಾಡತ್ತಿ (ನಾ). ಒಂದು ಬಗೆಯ ಹತ್ತಿಗಿಡ : ಚಿಕ್ಕಕಾಡತ್ತಿ, ಬೆಟ್ಟರಳಿ (ವೃಕ್ಷಗಿ. ೩೭-೭೨೫). [ಚಿಕ್ಕ₁ + ಕಾಡತ್ತಿ]

ಚಿಕ್ಕಕ್ಕ (ನಾ). ಕಿರಿಯ ಅಕ್ಕ : ನಮ್ಮ ಚಿಕ್ಕಕ್ಕನನ್ನು ಕಂಡರೆ ಎಲ್ಲರಿಗೂ ಪ್ರೀತಿ (ರೂಢಿ). [ಚಿಕ್ಕ₁ + ಅಕ್ಕ₁]

ಚಿಕ್ಕಗುಂಜಿ (ನಾ). ಸಣ್ಣ ಗುಲಗಂಜಿ : "ಕಾಕನುಂದಿಕಾ – ಚಿಕ್ಕಗುಂಜಿ" (ಓಷಧಿ. ೩೨). [ಚಿಕ್ಕ₁ + ಗುಂಜಿ]

ಚಿಕ್ಕಚಿರಾಯತ (ನಾ). ಒಂದು ಬಗೆಯ ಮೂಲಿಕೆ : (ವೃಕ್ಷಗಿ. ೩೪-೬೫೦). [ಚಿಕ್ಕ₁ + ಚಿರಾಯತ (< ಕಿರಿಯಾತು)]

ಚಿಕ್ಕಟ₁ 'ಚಿಕ್ಕುಟ' ನೋ.

ಚಿಕ್ಕಟ₂ (ನಾ). (?) : ಮುಕ್ಕುಳಿಸಿ ವುಕ್ಕುಳಿಸೆ ಕಕ್ಕಸದಿ ಚಿಕ್ಕಟದಿ ದಿಕ್ಕನ ಮರಿಕ್ಕಿ (ಜನಮು. ೨೯-೭) ; ಸಿಕ್ಕಿಸಂತರದಲ್ಲಿ ಶಾರ್ವರಿ ಚಿಕ್ಕಟದಿ ಮುಸುಕಿಕ್ಕಿ ದಹಿತರ ಸೊಕ್ಕ ಹಾರಿಸುತಿರುವ ರಘುಜರ ಮೌಲಿ ರವಿಯಾಗೀ (ಜರಾಮಾ. ೨೮೭-೨೭). [?]

ಚಿಕ್ಕಟು 'ಚಿಕ್ಕುಟ' ನೋ.

ಚಿಕ್ಕಟ್ಟು (ನಾ). ಒಂದು ಬಗೆಯ ಔಷಧಿ ಸಸ್ಯ : "ಧೂರ್ತಃ – ಉಮ್ಮತ್ತ, ಖಚೋರ, ಚಿಕ್ಕಟ್ಟು" (ಓಷಧಿ. ೮೨). [?]

ಚಿಕ್ಕಡು 'ಚಿಕ್ಕುಟ' ನೋ.

ಚಿಕ್ಕಣ (ಗು). ೧. ಮೃದುವಾದ ; ನಯವಾದ. (ನಾ). ೨. ಮೃದುಗೊಳಿಸುವಿಕೆ : "ಮಾರ್ದವಕರಣ, ಚಿಕ್ಕಣ" (Demulcent. ಪಾರಿಸಿ. ೨೯). ೩. ಮೃದುಗೊಂಡುದು ; ಮೆತ್ತಗಾಗಿರುವುದು : ಕಿಮುಟ್ಟಿದನೆಂದು ಚಿಕ್ಕಣವಾಗಿ ಮಾಡಿದಂ (ಕಮುದ. ಸ. ೩೩ ವೃತ್ತಿ). ೪. ಸ್ನಿಗ್ಧವಾಗಿರುವಂತೆ ಬೇಯಿಸಿದ ಅಡಿಗೆ : "ಚಿಕ್ಕಣಂ, ಮಸೃಣಂ, ಸ್ನಿಗ್ಧಂ – ಇ ಹೆಚ್ಚು ದಂಥಾದ್ದಕ್ಕೂ ನಯವಾದದ್ದಕ್ಕೂ ಮೆತ್ತಗಿರುವ ಹಾಗೆ ಅಟ್ಟಲ್ಪಟ ಅಡಿಗೆಗೂ . . . ಪೆಸರುಗಳು" (ಸಿದ್ಧಾಂತಿ. ೨೪೭). ೫. ಅಡಕೆ : ಇನಿನುಡಿ ನುಡಿಯುವಾ ಇಂಚಾದ ಕಣ್ಣಾಗಳುಳ್ಳ ಚಿಕ್ಕಣದ ಬಣ್ಣದ ಒಕ್ಕಲಿಗರ ಚಿಕ್ಕಹುಡುಗ (ಕೋಹಿನೂ. ೩೪). ೬. ಅಡಕೆಯ ಮರ. [ಸಂ.]

ಚಿಕ್ಕಣಗೆಸಱ್ (ನಾ). ಅಡಕೆಯಿಂದ ತಯಾರಿಸಿದ ಕಲ್ಕ: ಕಾಸದ ಚಿಕ್ಕಣ [ಪಾಠಾಂ. ಣಿ]ಗೆಸಱೊಳ್ ಸಾಸಿವೆ(ಸವಿ) ಕಲ್ಲುಪ್ಪು ಕಣಿಕಮುರ್ದಿನ ಪುಡಿಯುಂ ಬೇಸಱದೆ ಕೂಡಿ ಕುದಿರೆಗೆ ಪೂಸುಗೆ (ಅಶ್ವಶಾ. ೧೪-೩೦). 'ಚಿಕ್ಕಣಿಗೆಸಱ್' ಪರಾ. [ಚಿಕ್ಕಣ + ಕೆಸಱ್]

ಚಿಕ್ಕಣಪಾಕ (ನಾ). ಸ್ನಿಗ್ಧವಾದ ಪಾಕ : ಮಂಜಿಷ್ಟ, ನೀಲಾಂಜನ ತಾವರೆಗೆಣಸು ಇವಿಷ್ಟನು ಪ್ರತ್ಯೇಕ ಎರಡು ವರಹ ತೂಕಗಳನು ಸೂಕ್ಷ್ಮವಾಗಿ ಚೂರ್ಣಿಸಿ ಹಾಕಿ ಕಾಸಿ ಚಿಕ್ಕಣಪಾಕದಲ್ಲಿ ಇಳುಹಿ (ವೃದ್ಧಶಾ. II, ೦೩೫) ; ವಾಸಾಘೃತ – ಆಡುಸೋಗೆ, ಅಮರದವಳ್ಳಿ . . . ಶುಂಠಿ ಇವುಗಳನ್ನು ಅರೆದು ಅರ್ಧ ಪಾವು ತುಪ್ಪ ಸೇರಿಸಿ ಚಿಕ್ಕಣಪಾಕದಲ್ಲಿ ತೆಗೆದು ಶೋಧಿಸಿಕೊಂಡು (ಸಕವೈ. ೦೦೫). [ಚಿಕ್ಕಣ + ಪಾಕ]

ಚಿಕ್ಕಣಿ₁ (ನಾ). ಒಂದು ಬಗೆಯ ಅಡಕೆ : ಕರ್ಪೂರಭರಿತ ಚಿಕ್ಕಣಿ ನಾಗವಳ್ಳಿಯ ಭರದ ಹೊಂಬಟ್ಟಲಲಿ ಹೊಯ್ಸಣದವರು ಕೊಡುತಿರಲು (ಭಾರತಿರಾ. ೨-೬೯).

ಚಿಕ್ಕಣಿಅಡಿಕೆ ಚಿಕ್ಕಣಿಜಾತಿಯ ಅಡಕೆ : ಚಿಕ್ಕಣಿ ಅಡಿಕೆ ಕೇದಿಗೆ ಕಾಚು ಕೊಡಿದ ಎಲಕ್ಕಿ (ಪುರಂದ. ೩-೫೪-೨). ಚಿಕ್ಕಣಿಕ್ರಮುಕ = ಚಿಕ್ಕಣಿ ಅಡಿಕೆ : ಸ್ವೇತವರ್ಣ ಮನಾ ಚಿಕ್ಕಣಿಕ್ರಮುಕ ಕರ್ಪೂರದಾ ತಿಳಿ ಸುಚೂರ್ಣಮಂ ತಂದೀಯಲವನು ಚರ್ವಣಗೈದು (ನವಮೋ. ೦೬-೮). [< ಸಂ. ಚಿಕ್ಕಣ]

ಚಿಕ್ಕಣಿ₂ (ನಾ). ಒಂದು ಬಗೆಯ ಹುಲ್ಲು : ಚಿಕ್ಕಣಿ, ಸಿಂಪಿಗನ ಹುಲ್ಲು . . . ಏನೇನೋ ಜಾತಿಯ ಎಲ್ಲವೂ ಮಣ್ಣಿನ ರಚನೆಯಲ್ಲಿಯೆ ಇದ್ದಹಾಗೆ ತೋರುತ್ತದೆ (ಗಾಳಿಪ. ೦೦೪). [< ಚಿಕ್ಕಣಿಕೆ]

ಚಿಕ್ಕಣಿಕೆ (ನಾ). ಒಂದು ಬಗೆಯ ಹುಲ್ಲು : "ಚಿಕ್ಕಣಿಕೆ [ಪಾಠಾಂ. ಬಂಡಿ] ಬಂದಿಯಾತ್ತು" (ಮಂಗರಾ. ೩೩-೮) ; ಪೊಸ ಚಿಕ್ಕಣಿಕೆಯ ಪುಲ್ಲಂ ಪೊಸ ಬೆಳ್ಳುಳ್ಳಿಯ ರಸಂಗಳಂ ತಳದಿಂದಂ ಪೊಸದು (ಕಲ್ಯಾಕಾ. ೩-೯೭) ; ಕಿಱುಮೂಲೆ ನೂಲೆ ಕಿಸುಕುರಿ ನೆಱಿದೀ ಚಿಕ್ಕಣಿಕೆ ಮಾನಿನಿ ಕಸಕೆ ಕಲ್ಬಾರ್ (ಸೂಕ್ತಿಸು. ೩-೨೯) ; ಚಿಕ್ಕಣಿಕೆಯ ರಸಮಂ ಮೂತ್ರಕ್ಕಂ ಸರಿಯಾಗಿ ಬೆರಸಿ ನಸ್ಯಂಗೆಯ್ಯಲ್(ಖಮದ. ೧೧-೭೫). [?]

ಚಿಕ್ಕಣಿಕೆಸಱ್ 'ಚಿಕ್ಕಣಗೆಸಱ್' ನೋ.

ಚಿಕ್ಕಣಿಕ್ಕೆ (ನಾ). ಕ್ಷುಲ್ಲಕ ವ್ಯಕ್ತಿ ; ನೀಚ ವ್ಯಕ್ತಿ (?) : ತೆರಳ್ದ ಮೊಗಂನರ ಮತ್ತೆ ಮಾಣಲೀ ಬಟ್ಟೆಯ ಚಿಕ್ಕಣಿಕ್ಕೆ ಪೊಸ ಬರ್ಬರ ಸೂಳೆಯರಾಳಿ ಗೊಂಬುದಂ (ಸೂಕ್ತಿಸು. ೮-೩೮೪). [?]

ಚಿಕ್ಕಣಿಗೆಸಱ್, ಚಿಕ್ಕಣಿಕೆಸಱ್ (ನಾ).=ಚಿಕ್ಕಣಗೆಸಱ್ : ಇರ[ಭ] ದೊಟ್ಟೆಯ ತುರಗದ ಗಾರ್ಧವದ ಪುರೀಷಂಗಳೊಡನೆ ಚಿಕ್ಕಣಿಗೆರಸಂ [ಸಱಂ] ಕ್ಷುಭಿಯಿಸಿ ಮೃಪದಮನಱದಱದುಂ ಲಿಪ್ತಗೈದು (ಅಶ್ವವೈ. ೧೧-೧೧);" ಸಣ್ಣ ಕೆಸರು" (ಅಶ್ವವೈ. ಟಿಳು). ಚಿಕ್ಕಣಿಕೆಸಱ್ : ಕಾಸಿದ ಚಿಕ್ಕಣಿಕೆಸಱೊಳ್ ಸಾಸಿವೆ ಕಲ್ಲುಪ್ಪು ಕಣಿಕಮುರ್ದಿನ ಪುಡಿಯಂ ಬೇಸಱದೆ ಬಾಹಿನೆಡೆಯೊಳ್ ಪೂಸುವುದು (ಅಶ್ವಶಾ. ೧೧-೭೦). 'ಚಿಕ್ಕಣಗೆಸಱ್' ಪರಾ. [ಚಿಕ್ಕಣಿ₁ + ಕೆಸಱ್]

**ಚಿಕ್ಕಣ್ಣ** (ನಾ). ಕಿರಿಯ ಅಣ್ಣ : ನಮ್ಮ ದೊಡ್ಡಣ್ಣನಿಗಿಂತಲೂ ಚಿಕ್ಕಣ್ಣ ಹೆಚ್ಚು ಬುದ್ಧಿವಂತನಾದ್ದರಿಂದ ನಮ್ಮ ತಾಯಿಗೆ ಅವನ ಮೇಲೆ ಬಹಳ ಪ್ರೀತಿ (ರೂಢಿ). [ ಚಿಕ್ಕ$_{1}$ + ಅಣ್ಣ$_{1}$ ]

**ಚಿಕ್ಕತಂದೆ** (ನಾ).=ಚಿಕ್ಕಪ್ಪ : (+). [ ಚಿಕ್ಕ$_{1}$ + ತಂದೆ ]

**ಚಿಕ್ಕತನ** (ನಾ). ೧. ಬಾಲ್ಯ ; ಎಳೆಯ ವಯಸ್ಸು : ಚಿಕ್ಕತನ ಕಳೆದನು ಕಾಣಲು ಮಕ್ಕಳಿಗೆ ತಾನೇಕೆ (ಕುಮಾ.ಅ. ಒಂಡ. ೩೩-೭೧). ೨. ಸಣ್ಣತನ ; ಕ್ಷುಲ್ಲಕತನ : ತಮ್ಮ ಚಿಕ್ಕತನಕ್ಕಾಗಿ ತಾವೇ ನಾಚಿಕೊಳ್ಳುವಂತಾಗುತ್ತದೆ (ರೂಢಿ). [ ಚಿಕ್ಕ$_{1}$ + – ತನ ]

**ಚಿಕ್ಕತಮ್ಮ** (ನಾ). ಕೊನೆಯ ತಮ್ಮ : ಕೂಡಲ ಸಂಗಮದೇವಾ ನೀನೆನಗೆ ಚಿಕ್ಕತಮ್ಮ (ಬಸವ. ೯೦೪); ನನ್ನ ತಮ್ಮಂದಿರೆಲ್ಲಾ ಊರಿನಲ್ಲಿ ನಮ್ಮ ತಂದೆ ತಾಯಿಯ ಬಳಿ ಇದ್ದಾರೆ, ಚಿಕ್ಕತಮ್ಮನೊಬ್ಬ ಮಾತ್ರ ನನ್ನ ಬಳಿ ಇದ್ದಾನೆ (ರೂಢಿ). [ ಚಿಕ್ಕ$_{1}$ + ತಮ್ಮ ]

**ಚಿಕ್ಕತಾಯಿ** (ನಾ). ೧.=ಚಿಕ್ಕಮ್ಮ : (+).
[ ಚಿಕ್ಕ$_{1}$ + ತಾಯಿ (<ತಾಯ್) ]

**ಚಿಕ್ಕತಾರ** (ನಾ). ಒಂದು ಬಗೆಯ ನಾಣ್ಯ (?) : ತೆಲ್ಲಿಗರು ಎಳ್ಳ ಮಾಱಿ ಕೊಂಡವಗು ಹೊಂಗೆ ಕಟ್ಟಿದಲಗಿನ ಚಿಕ್ಕತಾರವ ತೆಱುವರು ಬೆಳೆಯ ತಾರದರ್ದ್ಧದ ಎಣ್ಣೆಯನು ಗಾಣಕ್ಕೆ ನಿಚ್ಚಲು ಅರ್ದ್ಧಸೊಲ್ಲಿಗೆಯನು ಆಡಿತಕ್ಕೆ ಎಱೆವರು (ಸೌಇಇ. IX-1, ೩೩೬-೩೭ ; 1219).
[ ಚಿಕ್ಕ$_{1}$ + ತಾರ$_{1}$ ]

**ಚಿಕ್ಕತೂಬರ** (ನಾ). ಒಂದು ಬಗೆಯ ಮರ: "ಕಾಕಾಂಡಃ–ಚಿಕ್ಕತೂಬರ, ಹೆಬ್ಬೇವು, ಹೆಮ್ಮರ" (ಓಷಧಿ. ೨೯).
[ ಚಿಕ್ಕ$_{1}$ + ತೂಬರ$_{1}$ (<ತುಂಬುರು$_{1}$) ]

**ಚಿಕ್ಕತೊಗರಿ** (ನಾ). ಒಂದು ಬಗೆಯ ತೊಗರಿ: ಚಿಕ್ಕತೊಗರಿ, ಘಟತೊಗರಿ, ಕೇಸರಿಬೇಳೆ (ಮೃಶಿಗ. ೪೯-೯೪೦). [ ಚಿಕ್ಕ$_{1}$ + ತೊಗರಿ$_{1}$ (<ತೊವರಿ) ]

**ಚಿಕ್ಕನರುವಲು** (ನಾ). ಒಂದು ಬಗೆಯ ಔಷಧಿ ಗಿಡ ; ಅಗ್ನಿಮಂಥ : "ತೇಜೋವೃಕ್ಷಃ–ಚಿಕ್ಕನರುವಲು" (ಓಷಧಿ. ೭೨).
[ ಚಿಕ್ಕ$_{1}$ + ನರುವಲು (<ನಱುವಲ್) ]

**ಚಿಕ್ಕನುಗಹುಲ್ಲು** (ನಾ). ಒಂದು ಬಗೆಯ ಹುಲ್ಲು : (ಮೃಶಿಗ. ೬-೧೧೧).
[ ಚಿಕ್ಕ$_{1}$ + ನುಗ ? + ಹುಲ್ಲು(<ಪುಲ್) ]

**ಚಿಕ್ಕನುಡಿ** (ನಾ). ಕೀಳುಮಾತು ; ಸಣ್ಣಮಾತು ; ಕ್ಷುದ್ರವಾದ ನುಡಿ : ಅಕ್ಕ ಕೇಳೌ ಚಿಕ್ಕನುಡಿಗಳು ತಕ್ಕುವೇ ಹಿರಿಯಗೆ (ಸಂಛವ. ೨೦-೧೧೧).
[ ಚಿಕ್ಕ$_{1}$ + ನುಡಿ$_{2}$ ]

**ಚಿಕ್ಕನೆಕ್ಕಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಚಿಕ್ಕನೆಕ್ಕಿ ಸೊಪ್ಪು, ಲಕ್ಕಿ (ಮೃಶಿಗ. ೪೮-೯೩೬). [ ಚಿಕ್ಕ$_{1}$ + ನೆಕ್ಕಿ + ಸೊಪ್ಪು$_{3}$ ]

**ಚಿಕ್ಕನೆಲದಾಳು** (ನಾ). ಒಂದು ಬಗೆಯ ಔಷಧಿ ಗಿಡ : "ಪುತ್ರಜನನೀ – ಚಿಕ್ಕನೆಲದಾಳು ; ತಾಳಿಯಸೊಪ್ಪು" (ಓಷಧಿ. ೧೦೦).
[ ಚಿಕ್ಕ$_{1}$ + ನೆಲದಾಳು (<ನೆಲದಾೞ್) ]

**ಚಿಕ್ಕನೇರಳೆ** 'ಚಿಕ್ಕನೇಱಿಲ್' ನೋ.

**ಚಿಕ್ಕನೇರಿಲು** 'ಚಿಕ್ಕನೇಱಿಲ್' ನೋ.

**ಚಿಕ್ಕನೇಱಿಲ್, ಚಿಕ್ಕನೇರಳೆ, ಚಿಕ್ಕನೇರಿಲು** (ನಾ). ಒಂದು ಬಗೆಯ ನೇರಿಳೆ : "ವೈರಸೀ – ಚಿಕ್ಕನೇಱಿಲ್" (ಓಷಧಿ. ೧೩೬). **ಚಿಕ್ಕನೇರಳೆ** : (ಮೃಶಿಗ. ೭೩-೦೪೯೩). **ಚಿಕ್ಕನೇರಿಲು** : ಚಿಕ್ಕನೇರಿಲು ಜಂಬುನೇರಿಲು ಗಳರುಟಾಳ (ರುಕ್ಮಾಂಗ. ೧೦-೩). [ ಚಿಕ್ಕ$_{1}$ + ನೇಱಿಲ್ ]

**ಚಿಕ್ಕಪ್ಪ, ಚಿಕಪ, ಚಿಗಪ್ಪ** (ನಾ). ೧. ತಂದೆಯ ತಮ್ಮ ; ಕಕ್ಕ : ಅಪ್ಪನ ಅಪ್ಪ ಅನ್ನದವ ಚಿಕ್ಕಪ್ಪನ ಅಪ್ಪಾ ಅಂದಾನೇ (ಗಾದೆ). ೨. ಚಿಕ್ಕಮ್ಮನ ಗಂಡ; ತಾಯಿಯ ತಂಗಿಯ ಗಂಡ: ತಂದೆಯ ತಮ್ಮನಷ್ಟೇ ಚಿಕ್ಕಪ್ಪನಲ್ಲ, ಚಿಕ್ಕಮ್ಮನ ಗಂಡನೂ ಚಿಕ್ಕಪ್ಪನೇ (ರೂಢಿ). **ಚಿಕಪ**: ೧. ಯಿಮಂದಿರ ಚಿಕಪ ಉಡಖಾನ ಮಗ ಆಬೂಖಾನನು (ಎಕ. VII, ಶಿಮೊ. ೨೯-೧೯; 1712) ; **ಚಿಗಪ್ಪ** : ೧. ಚಿಗಪ್ಪ ಚಿಗವ್ವ ಅವಾರಲ್ಲಾ (ಮಡ್ಮಹ. ೧೬೧); ಉಂಡುಟ್ಟು ಸುಖದಿಂದಿದ್ದು ವಕೀಲಿ ಮಾಡುತ್ತ ಕಾಲ ಕಳೆಯಬೇಕೆಂದು ಆತನ ಚಿಗಪ್ಪನ ಇಚ್ಛೆ (ಜೋಕಿಶಾ. ೧೬). [ ಚಿಕ್ಕ$_{1}$ + ಅಪ್ಪ$_{1}$ ]

**ಚಿಕ್ಕಪ್ರಾಯ** (ನಾ). ಎಳೆಯ ವಯಸ್ಸು ; ಚಿಕ್ಕವಯಸ್ಸು : "ಕನಿಷ್ಠಃ, ಅತಿಯುವಾ – ಬಹಳ ಚಿಕ್ಕಪ್ರಾಯದ ಹುಡುಗ. ಅಲ್ಪಃ – ಚಿಕ್ಕವನು ೨ ಕ್ಕೂ ಹೆಸರು" (ಸಿದ್ಧಾಂತಿ. ೩೩೦). [ ಚಿಕ್ಕ$_{1}$ + ಪ್ರಾಯ ]

**ಚಿಕ್ಕಬಳ್ಳಿ** (ನಾ). ಒಂದು ಬಗೆಯ ಔಷಧಿ ಗಿಡ : "ಲಘುಪೂರ್ವಕಃ – ಚಿಕ್ಕಬಳ್ಳಿ" (ಓಷಧಿ. ೧೪೨). [ ಚಿಕ್ಕ$_{1}$ + ಬಳ್ಳಿ ]

**ಚಿಕ್ಕಬಿಟ್ಟುವ** (ನಾ). (?): ಮೂಡಣ ಹೆಗ್ಗದ್ದೆ ಆದಱ ಮೇಗಣ ಕೊಡಂಗೆ ಎರಡಱಲ್ಲಿಯೂ ಮೂಡೆ ೨ ಬಂಣಟೆಮೂಡೆ ೨ ಮುಂಡಿನ ಮಾಡುವ ಬಳುಮೂಡೆ ೧ ಚಿಕ್ಕ ಬಿಟ್ಟುವ ಕೊಡಂಗೆ ಮೂಡೆ ೧ (ಎಇ. XXVII, ೨೮-೩೨ ; 1256). [ ? ]

**ಚಿಕ್ಕಬ್ಬೆ** (ನಾ). ೧.=ಚಿಕ್ಕಮ್ಮ : ನನ್ನ ಚಿಕ್ಕಬ್ಬೆಗೆ ನನ್ನನ್ನು ಕಂಡರೆ ಬಹಳ ಪ್ರೀತಿ (ರೂಢಿ). ೨. ಒಬ್ಬಾಕೆಯ ಹೆಸರು: ತನ್ನರಸಿ ಚಿಕ್ಕಬ್ಬೆಗೆ ಬಡಗನ್ನಿ ಕೆಱೆಯ ಬಡಗಣ ಬದರಿಯ ಪಿನ್ತಣ ಕೆಱೆಯುಮ್ಮಿಟ್ಟ ದೇವರ್ಗೆ (ಎಕ. VII, ಶಿಮೊ. ೯೬-೧೯ ; ಸು. 915). [ ಚಿಕ್ಕ$_{1}$ + ಅಬ್ಬೆ$_{1}$ ]

**ಚಿಕ್ಕಬ್ರಹ್ಮಿ** (ನಾ). ಒಂದು ಬಗೆಯ ಔಷಧಿ ಗಿಡ : "ಲಘುಬ್ರಹ್ಮಿ–ಚಿಕ್ಕಬ್ರಹ್ಮಿ" (ಓಷಧಿ. ೧೪೨). [ ಚಿಕ್ಕ$_{1}$ + ಬ್ರಹ್ಮಿ ]

**ಚಿಕ್ಕಮರುಳು** (ನಾ). ಒಂದು ಬಗೆಯ ಔಷಧಿ ಗಿಡ : ಚಿಕ್ಕಮರುಳು, ಮೈಕಬೇರು ಗಂಡರಿಸಿನದಲ್ಲಿ ನಿಂಬೆಕಾಯಷ್ಟು ಕುಡಿಯೆ ಬಾಣಂತಿ ರೋಗ ಬಸುರಿಳಿವದು ಮಾಣ್ಗುಂ (ವಿವ್ಯವಿ. ೮೧). [ ? ]

**ಚಿಕ್ಕಮಾತು** (ನಾ).=ಚಿಕ್ಕನುಡಿ : ಚಿಕ್ಕಮಾತುಗಳನ್ನಾಡಿ ನೋಯಿಸುವುದೇ ಅವರ ಸ್ವಭಾವ (ರೂಢಿ). [ ಚಿಕ್ಕ$_{1}$ + ಮಾತು$_{1}$ ]

**ಚಿಕ್ಕಮಾರಯ್ಯ** (ನಾ). ಒಬ್ಬಾತನ ಹೆಸರು : ಕಿಟ್ಟಪಳ್ಳಿ . . . ತುಱು ಗೊಳೊಳ ಚಿ[ಕ್ಕ]ಮಾರಯ್ಯ ಸತ್ತ (ಎಕ. IX ಕಾನಕಾ. ೮೮-೩ ; ಸು. 870).
[ ಚಿಕ್ಕ$_{1}$ + ಮಾರಯ್ಯ ]

**ಚಿಕ್ಕಮ್ಮ** (ನಾ). ೧. ತಾಯಿಯ ತಂಗಿ : ಹರುಷದಿಂಗಿಲಾ ಬೈದ್ಯಪುರದಲಿ ವರಜನನಿ ಚಿಕ್ಕಮ್ಮನಲ್ಲಿಹಳೆಂದನು (ನಳಚ. ೬-೩೩). ೨. ಚಿಕ್ಕಪ್ಪನ ಹೆಂಡತಿ ; ಕಕ್ಕಿ : ಆ ನೃಪನ ಚಿಕ್ಕಮ್ಮ ಪಡೆದಳು (ಸಾಳ್ವಭಾ. ೦-೨೬); ಇವರೂ ಸಹ ನಮ್ಮ ಚಿಕ್ಕಮ್ಮನೇ, ಅಂದರೆ ತಾಯಿಯ ತಂಗಿಯಲ್ಲ, ನಮ್ಮ ಚಿಕ್ಕಪ್ಪನ ಹೆಂಡತಿ (ರೂಢಿ). ೩. ಮಲತಾಯಿ : ಚಿಕ್ಕಮ್ಮ ಕೇಳು ಹಿಂದಣ ಜನ್ಮದೊಳು ನಾನು ಮಕ್ಕಳಂ ಬಯಸಿ ದೈವದಮುಂದೆ ನೋಂಪಿಯಂ ಚೊಕ್ಕಟದಿ ಮಾಡಿತಿಲ್ಲದಱಿಂದಮಾ ನನ್ನ ಬಸಿಱು ಪಾಳ್ಪಸಿರಾದುದು (ಸಮ್ಮಕಾ. ೩-೧೩). [ ಚಿಕ್ಕ$_{1}$ + ಅಮ್ಮ$_{2}$ ]

**ಚಿಕ್ಕಯ್ಯ** (ನಾ).=ಚಿಕ್ಕಪ್ಪ ೧ : ಅಯ್ಯನಯ್ಯನು ಚೆನ್ನಯಂ ಚಿಕ್ಕಯ್ಯ ಕಕ್ಕಯ್ಯನು ತೆಲುಗು ಬೊಮ್ಮಯ್ಯನಯ್ಯನು ನಿಂಬಿ ತಾಯ್ ಚೇರಮನ ಮಗ ನಾನು (ಬಸಪು. ೩-೮೨) ; ಯಾರ ಬಲದಿಂದ ಬಾದುದೀ ಮಹಾಕಪಿ ಸಂತೆ ಮುಳಿದುಚಿಕ್ಕಯ್ಯನೈದಿ ಸೇರಿದಂ ಮಾನುಷರ (ವೆಂಕಾರಾ. ೬-೦೮-೨೪).
[ ಚಿಕ್ಕ$_{1}$ + ಅಯ್ಯ$_{1}$ ]

**ಚಿಕ್ಕವಯಸ್ಸು** (ನಾ).=ಚಿಕ್ಕಪ್ರಾಯ: ಚಿಕ್ಕವಯಸ್ಸಿಗೇ ನಾನು ನನ್ನ ತಾಯಿಯನ್ನು ಕಳೆದುಕೊಂಡಿದ್ದೆ (ರೂಢಿ). [ ಚಿಕ್ಕ$_{1}$ + ವಯಸ್ಸು ]

**ಚಿಕ್ಕಪೂಸಿ** (ನಾ). ಪುನರ್ವಸು ಮಳೆ : (ಎಸಮ್ಮ. XV, ೩೧).
[ ಚಿಕ್ಕ$_{1}$ + ಪೂಸಿ$_{0}$ ( < ಪುಷ್ಯ) ]

**ಚಿಕ್ಕವ್ವ** 'ಚಿಕ್ಕವ್ವೆ' ನೋ.

**ಚಿಕ್ಕವ್ವೆ, ಚಿಕ್ಕವ್ವ, ಚಿಗವ್ವ** (ನಾ).=ಚಿಕ್ಕಮ್ಮ: ಚಿಕ್ಕವ್ವೆಯ ಮೇಲೆ ಸಿಟ್ಟು ಹುಟ್ಟಿತು (ಮುನಿಮಾ. ೩). **ಚಿಕ್ಕವ್ವ**: ಮಕ್ಕಳು ಚಿಕ್ಕವ್ವ ಎನ್ನುತ್ತಾ (ಮುನಿಮಾ. ೯೪). **ಚಿಗವ್ವ**: ನಿನಗ್ಯಾಕ ಅದರ ಚಿಂತಿ ಚಿಗವ್ವಾ? (ಗ್ರಾಮಾಯ. ೨೮); ನಾನು ನಾಳೆ ಮುಂಜಾನೇ ನಮ್ಮ ಚಿಗವ್ವನ ಮನೆಗೆ ಹೊರಟೆನು (ಮುಂಬಯಿ. ೧-೩೮). [ ಚಿಕ್ಕ$_1$ + ಅವ್ವ ]

**ಚಿಕ್ಕಸ** (ನಾ). ಜವೆಗೋಧಿಯ ಹಿಟ್ಟು; ಯವ ಚೂರ್ಣ. [ ಸಂ. ]

**ಚಿಕ್ಕಸಾಡಿಹುಲ್ಲು** (ನಾ). ಒಂದು ಬಗೆಯ ಹುಲ್ಲು: ಚಿಕ್ಕಸಾಡಿಹುಲ್ಲು, ಕರಿಕೊಡೆಹುಲ್ಲು, ನಾಲೆಹುಲ್ಲು (ವೃಶಿಗಿ. ೬೯-೧೪೦೨).

[ ಚಿಕ್ಕ$_1$ + ಸಾಡಿ$_2$ + ಹುಲ್ಲು (<ಪುಲ್) ]

**ಚಿಕ್ಕಸಿವನ್ನಿ** (ನಾ). ಒಂದು ಬಗೆಯ ಔಷಧಿ ಗಿಡ: "ಲಘುಕಾಶ್ಮರ್ಯ – ಚಿಕ್ಕಸಿವನ್ನಿ" (ಒಷಧಿ. ೧೯೨). [ ಚಿಕ್ಕ$_1$ + ಸಿವನ್ನಿ ]

**ಚಿಕ್ಕಸುರಟಿಗಿಡ**(ನಾ). ಒಂದು ಬಗೆಯ ಗಿಡ: ಚಿಕ್ಕಸುರಟಿಗಿಡ, ಗರುಡಫಲ (ವೃಶಿಗಿ. ೪೩-೮೮೧). [ ಚಿಕ್ಕ$_1$ + ಸುರಟ$_0$ + ಗಿಡ (<ಗಿಡು) ]

**ಚಿಕ್ಕಹಣ** (ನಾ). ಎರಡು ಆಣೆಗಳ ಬೆಲೆಯ ಒಂದು ಬೆಳ್ಳಿ ನಾಣ್ಯ: (೬). [ ಚಿಕ್ಕ$_1$ + ಹಣ ]

**ಚಿಕ್ಕಹೀರೆ** (ನಾ). ಒಂದು ಬಗೆಯ ಹೀರೆ: "ಮಾರಣೀ – ಚಿಕ್ಕಹೀರೆ" (ಒಷಧಿ. ೧೨೪). [ ಚಿಕ್ಕ$_1$ + ಹೀರೆ$_1$ (<ಪೀರೆ) ]

**ಚಿಕ್ಕಹೊಂಬಳಿ** (ನಾ). ಒಂದು ಬಗೆಯ ತೆರಿಗೆ: ಶಾನುಭೋಗರ ವರ್ತನೆಯಿಂದ ಗ ೨ ಅಂಗ್ರುವಕ್ಕೆ ನಾಡೋಪಾದಿಯಲ್ಲಿ ಬಾಹ ಉಂಬಳಿಯ ಚಿಕ್ಕಹೊಂಬಳಿ ಹೊಂವಾರು ಕ್ರಯ ಕಡಾಯ ಭಟ್ಟ ಕೊಟ್ಟ (ವ್ಯಾಅರಿ. ೧೯೩೪, ೨೬-೩೦; 1430). [ ? ]

**ಚಿಕ್ಕಹೊರಲಿಗ** (ನಾ). ಒಂದು ಬಗೆಯ ಮೂಲಿಕೆ (?): ಹೊರಲಿಗ, ಚಿಕ್ಕಹೊರಲಿಗನಸಮೂಲ ಭಂಗಿಯ ಪುಡಿ . . . ಇಷ್ಟನ್ನೂ ಕೂಡಿ ಅರೆದು (ವಿವೈವಿ. ೨೧೩). [ ಚಿಕ್ಕ$_1$ + ಹೊರಲಿಗ ? ]

**ಚಿಕ್ಕಾಟ** 'ಚಿಕ್ಕುಟ' ನೋ.

**ಚಿಕ್ಕಾಡಿ** 'ಚಿಕ್ಕುಟ' ನೋ.

**ಚಿಕ್ಕಾಡು** 'ಚಿಕ್ಕುಟ' ನೋ.

**ಚಿಕ್ಕಾಣೆ** (ನಾ). (ಆಕಾರದಲ್ಲಿ ಚಿಕ್ಕದಾದ) ಒಂದು ಬೆಳ್ಳಿಯ ನಾಣ್ಯ: (೬). [ ಚಿಕ್ಕ$_1$ + ಆಣೆ$_6$ ]

**ಚಿಕ್ಕಾಸು** (ನಾ). ಸಣ್ಣಕಾಸು; ತೀರ ಚಿಕ್ಕನಾಣ್ಯ: ಒಂದುಚಿಕ್ಕಾಸು ಕೂಡ ಬಡ್ಡಿ ಸಹ ಕೊಟ್ಟಿಲ್ಲ (ಕುರುಜಾ. ೯೩); ಮಾಸ್ತರು ಎಂದರೆ ಚಿಕ್ಕಾಸು ಸಾಲ ಕೊಡುವರಿಲ್ಲ (ಕಾವೇರಿ. ೦೦೧); ದುಂದುವೆಚ್ಚ ಮಾಡಿ, ಒಂದು ಚಿಕ್ಕಾಸೂ ಅವನ ಬಳಿ ಉಳಿದಿಲ್ಲ (ರೂಢಿ). [ ಚಿಕ್ಕ$_1$ + ಕಾಸು$_2$ ]

**ಚಿಕ್ಕಿ** 'ಚುಕ್ಕಿ$_1$' ನೋ.

**ಚಿಕ್ಕಿಹಾವು** (ನಾ). ಮೈಮೇಲೆ ಬಣ್ಣದ ಬೊಟ್ಟುಗಳಿರುವ ಹಾವು; ಸುಂಟಿಗನೆಂಬ ಒಂದು ಬಗೆಯ ವಿಷಸರ್ಪ: (೬).

[ ಚಿಕ್ಕಿ (<ಚುಕ್ಕಿ$_1$) + ಹಾವು (<ಪಾವು$_1$) ]

**ಚಿಕ್ಕೀಚಲು** (ನಾ). ಒಂದು ಬಗೆಯ ಈಚಲು ಮರ; ಕಿರೀಚಲು: "ಪರುಃ – ಗಿಣ್ಣ, ಚಿಕ್ಕೀಚಲು" (ಒಷಧಿ. ೯೦).

[ ಚಿಕ್ಕ$_1$ + ಈಚಲು$_1$ (<ಈಂಚಿಲ್) ]

**ಚಿಕ್ಕೀರೆ** (ನಾ). ಒಂದು ಬಗೆಯ ಕೀರೆಸೊಪ್ಪು: (ವೃಶಿಗಿ. ೬-೯೪).

[ ಚಿಕ್ಕ$_1$ + ಕೀರೆ ]

**ಚಿಕ್ಕು$_1$** 'ಸಿಕ್ಕು$_1$' ನೋ.

**ಚಿಕ್ಕು$_2$** (ನಾ). (ಉಕ) ಒಂದು ಬಗೆಯ ಗಿಡ ಮತ್ತು ಅದರ ಹಣ್ಣು; ಸಪೋಟಾ: ಚಿಕ್ಕುಹಣ್ಣು ತಿನ್ನಲು ಬಲುರುಚಿ (ರೂಢಿ).

[ ←ಮರಾ. ಚಿಕೂ, ಚಿಕ್ಕೂ ]

**ಚಿಕ್ಕು$_3$** (ನಾ). ಒಂದು ಕ್ಷುದ್ರದೇವತೆಯ ಹೆಸರು: ಗಾಡಿಗ ಡಿಂಬುಗಂಗೆ ಚಿಕ್ಕು ಮುಟ್ಟಿಗೆ ಹುಂಬುತ್ತಿಯ ಬೇಡಿ ಈಡಾಡಿದ ಕೂಳಂಬಲಿಯ ನಾಯ್ದು ಕುಜುಕುವ ಹೇಸಿ ದೈವಂಗಳ ಬೇಡಿ ಬೇಡಿ ನಿರರ್ಥ ಕೆಡಬೇಡ (ಬಸವ. ೩೩೬). [ ? ]

**ಚಿಕ್ಕುಟ, ಚಿಕ್ಕಟ$_1$, ಚಿಕ್ಕಟಂ, ಚಿಕ್ಕಡು, ಚಿಕ್ಕಾಟ, ಚಿಕ್ಕಾಡಿ, ಚಿಕ್ಕಾಡು, ಚಿಕ್ಕುಟು, ಚಿಕ್ಕುಡಂ, ಚಿಗಟ, ಚಿಗಟೆ** (ನಾ). ಸೊಳ್ಳೆಯಂತಹ ಸಣ್ಣ ರೆಕ್ಕೆಹುಳು: ದಂಸೇಹಿಯ = ಚಿಕ್ಕುಟಗಳಿಂದಂ (ವಡ್ಡಾರಾ. ೧೨೨-೪); ಯುಗಜುಗವ ಬಲ್ಲೆನೆಂಬವರು ನಿಚ್ಚಕ್ಕೆ ನಿಚ್ಚ ಬಪ್ಪ ಚಿಕ್ಕುಟ [ಪಾಠಾಂ. ಚಿಕ್ಕಟ, ಚಿಕ್ಕುಟ] ಸಾವನರಿಯರು (ಅವಚಂ. ೧೧೩-೩೦೦); ಪೆರ್ವಾಗಿಲಂ ತಾಗೆ ಒಂದು ಬೀಯಗವಿಕ್ಕಿ ಚಿಕ್ಕುಟಂ [ಪಾಠಾಂ. ಚಿಕ್ಕಟಂ, ಚಿಕ್ಕಡಂ] ನುಸುಟಲ್ಬಾರದಂತಾಗಿ ಬಿಗಿಯೆ (ಅರ್ಧನೇ. ೬-೪೯ ವ); ಹೇನು ಕೂರೆ ಚಿಕ್ಕುಟ ತಗುಣೆಗಳಿವು ಹೀರುವರಿಣಿವವು ರಕ್ತವ (ಭಕ್ತ್ರಸ. II, ೦೨-೧). **ಚಿಕ್ಕಟ$_1$**: "ಯೂಕಾ ಮಕ್ಷಿಕಾದಯಃ = ಕೂರೆ, ತಗುಣೆ, ಚಿಕ್ಕಟ ಮೊದಲಾದವು" (ಶಾಹಟೀ. ೨-೩-೩೭ ವ); ಚಿಕ್ಕಟವು ಮೈಯ್ಯ ಕಡಿವಂತೆ (ಸರ್ವಜ್ಞ. ೧೪೧೬); ಚಿಕ್ಕಟದ ಕಾಲುಗಳು ೦.೦೫ ಅಂಗುಲ ಉದ್ದ–ಅದ್ದಲಾಗಿ ೧೩ ಅಂಗುಲ, ಎತ್ತರ ೭.೭೫ ಅಂಗು ಲಹಾರಬಲ್ಲವು (ಕೀಟಜ. ೩). **ಚಿಕ್ಕಟಂ**: ಎಕ್ಕತೂಳದ ಭಟತತಿಯ ಚಿಕ್ಕಟಂ ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರಗಳಿಗೆಯೊಳು (ನೇಮಿಸಂ. ೨೯-೩೦). **ಚಿಕ್ಕಡು**: ಗುಡವಮಾಕ್ಷಿಕ ಮಳಯಜ . . . ಎಂಬಿವ ನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕಡು ನೊರಜುಂ ತಗುಣೆ ಬಾವಲೆಂಬಿವು ಕಿಡುಗುಂ (ಲೋಕೋಪ. ೬-೩೯); ದಂಶಮಶಕ–ಚಿಕ್ಕಡು ನೊರಜು (ಕಸೂಪ್ರ. ೨೯೭); ಕೊಂಡೆಯನಂತೆ ಪತ್ತುವ ಚಿಕ್ಕಡಿನಿಂ ಕಡುಘಾತಕನಂತೆ ನೋಯಿಸುವ ಪೆನೋರ್ಣಗಳಿಂ . . . ಬಂಬಿಮ್ಮಂಬ ಪೇರವಿಯಿಂ ನೋಡಿ(ಧರ್ಮಾಮೃ. ೩-೩೩); ದಂಶಮಶಕ–ಚಿಕ್ಕಡು ಗುಂಗುಱುಂ (ತತ್ತ್ವಪ್ರ. ೩೩೩). **ಚಿಕ್ಕಾಟ**: ಇಲ್ಲಿಗೆ ಬಂದರೆ ಅವರನ್ನು ತಗುಣೆ ಚಿಕ್ಕಾಟಗಳಂತೆ ಕಾಲಿನಿಂದ ತುಳಿದು ನಾಶಮಾಡುತ್ತೇನೆ (ಮಂದಾಕಿ. ೧೫೪). **ಚಿಕ್ಕಾಡಿ**: ಚಿಕ್ಕಾಡಿ ತಗುಣೆಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳೆಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ. ೧೮೫೫). **ಚಿಕ್ಕಾಡು**: ಆನೆ ನೀರೊಡಗೂಡಿ ತಾನಾಡುತಿರಲೊಂದು ಮೌನದ ಚಿಕ್ಕಾಡು ನುಂಗೆ ಕಂಡು ಮಾನಿನಿ ನಲಿದಾಡುತ (ಮಿಶ್ರಸೋ. ೩೮); ಆನೆಯನೆತ್ತುವಂಗಾಡು ಚಿಕ್ಕಾಡೆಂಬಂತೆ ಗೋವರ್ಧನಾಚಲಮನೆತ್ತಿ (ಅರ್ಧನೇ. ೭-೮೨ ವ); ಚೆಕ್ಕಿಲಿಯೂ ಗೂಬೆಯೂ ಚಿಕ್ಕಾಡು ತಗುಣೆಯೂ ರಕ್ಕಸ ಕಳ್ಳಜಾರರುಱಿ ಕತ್ತಲೆಯ ಮಕ್ಕಳು (ಸರ್ವಜ್ಞ. ೧೧೯೧); ಇಲಿ ಮತ್ತು ಚಿಕ್ಕಾಡುಗಳ ಮೂಲಕ ಪ್ಲೇಗು ಬರುತ್ತದೆ (ಆಯುಶಾ. ೪೮). **ಚಿಕ್ಕುಟು**: ಮುನ್ನಿನ ಭವದೊಳ್ ಪಂಪಡೆ ಚಿಕ್ಕುಟುವುಂ ಗುಂಗುಱುವುಂ ನೆಱಿ ಸೋವುತಿರ್ದ ಭಕ್ತಿಯ ಭರದಿಂ (ಬಂಜರಿ. ೬-೭೫). **ಚಿಕ್ಕುಡು**: ತುಂಬಿ ಪತಂಗ ನೊಣ ಜೇನನೊಣ ಚಿಕ್ಕುಡು . . . ಮೊದಲಾದುವಕ್ಕೆ ಸ್ಪರ್ಶನ ರಸನ ಘ್ರಾಣಮುಮಕ್ಕು (ಶಾಸ್ತ್ರಟೀ. ೦೧೭-೬). **ಚಿಗಟ**: ಇವುಗಳಲ್ಲಿ ಇಲಿಗಳ ಮೇಲೆ ಜೀವಿಸುವ ಚಿಗಟಗಳು ಪ್ಲೇಗ್ ರೋಗವನ್ನು ತರುವುವು (ಗೃಹವಿ. ೧೮೭); ಕಣಜದ ಶೈತ್ಯದಿಂದ ಚಿಗಟಗಳು ಮೇಲಕ್ಕೆ ಹಾರಿ ಬಂದು ಆಳಿನ ಮೊಗಕ್ಕೆ ಮುತ್ತಿದವು (ಶಸ್ತ್ರಶ. ೧೦೮); ಚಿಗಟನ ಕಣ್ಣೊಳಗೆ, ಆನೆಪೋಗಿ ಕುಂತರೂ ನಾವು ಆಶ್ಚರ್ಯಪಡಬೇಕಾಗಿಲ್ಲ (ಕರಿಕಂ. ೭); ಅಡವಿಗೆ ಹೋದರೂ ಚಿಗಟದ ಕಾಟ ತಪ್ಪದು (ಗಾದೆ). **ಚಿಗಟೆ**: ತತ್ತತ್ಪ್ರಕೃತಿ ವಿಶೇಷಂಗಳಿಂ . . . ಮತ್ಕುಣಃ – ಚಿಗಟೆಯಾಗಿ (ಶಾಹಟೀ. ೧೧-೧೩ ವ).

**ಚಿಕ್ಕುಟು** 'ಚಿಕ್ಕುಟ' ನೋ.

**ಚಿಕ್ಕುಡಿಪ್ಪೆ** (ನಾ). ಒಂದು ಬಗೆಯ ಗಿಡ: (ವೃಶಿಗಿ. ೪೧-೮೦೨). [ ? ]

**ಚಿಕ್ಕುಡು** 'ಚಿಕ್ಕುಟ' ನೋ.

**ಚಿಕ್ಕುಳ** (ನಾ). ಸಣ್ಣವ್ಯಕ್ತಿ ; ಕೀಳು ದರ್ಜೆಯವನು : ವೇದವ ಕಲಿತು ಶಾಸ್ತ್ರವನೋದಿ . . . ಪರತತ್ವವ ನೋಡಿ ಕಂಡಿಹೆವೆಂದು ಹೇಳುತಿಪ್ಪ ಹಿರಿಯರೆಲ್ಲರು ಇಕ್ಕುವ ದಾತಾರನ ಬಾಗಿಲವ ಕಾಯ್ದು ಚಿಕ್ಕುಳರಾದರು [ಪಾಠಾಂ. ಚಿಕ್ಕಮಕ್ಕಳಾದರು] (ಮೋಳಿಮಾ. ೫೬-೨೦೮).

[ ಚಿಕ್ಕ₁ + ಕುಳ₅ (= ಕುಲ) ]

**ಚಿಕ್ಕೊಳಿ** (ನಾ). (?) : ಹುತ್ತದ ಮೇಗಣ ಕಾಗೆ ನೆತ್ತಾ ಕಾರೋದ ಕಂಡ ಕಿತ್ತೂಳಿ ಕಂಡೇ ಗುರುತೀಗೆ ಅತ್ಯಮ್ಮ ಚಿಕ್ಕೊಳಿರಾಗೀಲಿ ಇರ್ವೇಳುತ್ತಿದ್ದೋ (ಹುಟ್ಯಹ. ೬೨). [ ? ]

**ಚಿಕ್ಕೊಳಿಗ** (ನಾ). ಸಣ್ಣಪುಟ್ಟ ಕೆಲಸ ; ಕಿರುಕುಳ ಸೇವೆ : ಓಲಗ ದಬಲೆಯರನು ಬೀಳ್ಕೊಟ್ಟು ಚಿಕ್ಕೊಳಿಗದವರೊಡಗೂಡಿ ಲೀಲೆಯಿಂ ನರಸಿಂಹನಂತೈದಿದ (ಕಂನವಿ. ೧೧-೦೨೫): ತೂಗದಿರಿಯೆಂದು ಚಿಕ್ಕೊಳಿಗ ದವರ ಸಂಜ್ಞೆಯಾಗಿ ನಿಂದಿರಿಸಿ ಅಪ್ಪಣೆವಿಡಿದು (ಕೃಷ್ಣವಿ. ೩-೪೬).

[ ಚಿಕ್ಕ₁ + ಊಳಿಗ (< ಊಳಿಗ) ]

**ಚಿಕ್ಕೆ₁** 'ಚುಕ್ಕೆ₁' ನೋ.

**ಚಿಕ್ಕೆ₂** (ನಾ). ೧. ಚಪ್ಪಟೆಯಾದ ಮೂಗುಂಳ್ಳ ಹೆಂಗಸು. ೨. ಇಲಿ. ೩. ಅಡಕೆ : (ಕ). [ ಸಂ. ಚಿಕ್ಕಾ ]

**ಚಿಕ್ಕೆಬೊಟ್ಟು** (ನಾ). ಚುಕ್ಕೆಯ ಆಕಾರದಲ್ಲಿರುವ ಬೊಟ್ಟು; ಹಣೆಗೆ ಇಡುವ ದುಂಡನೆಯ ಸಾದಿನ ಗುರುತು : (ಕ).

[ ಚಿಕ್ಕೆ₁ (< ಚುಕ್ಕೆ₁) + ಬೊಟ್ಟು₂ (< ಬಟ್ಟು₁) ]

**ಚಿಕ್ಕೆರಲೆ** (ನಾ). ಮರಿಹುಲ್ಲೆ ; ಜಿಂಕೆಯ ಮರಿ : ಕಿಱುದಳಿರಂ ಗೆಲ್ವಧರದ ಚಿಕ್ಕೆರಲೆಯ ಸೋಲಿಪ ನಗೆಗಣ್ಣ (ಜಯಚಾ. ೩-೨೨).

[ ಚಿಕ್ಕ₁ + ಎರಲೆ ]

**ಚಿಕ್ಕೇಲ** (ನಾ). ಒಂದು ಬಗೆಯ ಔಷಧಿ ಗಿಡ : "ಅರೇಣು, ಚಿಕ್ಕೇಲ, ಕಡಲೆ" (ಒಷಧಿ. ೩). [ ? ]

**ಚಿಕ್ಕೇಲಕ್ಕಿ** (ನಾ). ಸಣ್ಣ ಏಲಕ್ಕಿ : "ರಾಪ್ಪ್ರವೃದ್ಧಿಕರೀ-ಚಿಕ್ಕೇಲಕ್ಕಿ" (ಒಷಧಿ. ೧೩೯). [ ಚಿಕ್ಕ₁ + ಏಲಕ್ಕಿ ]

**ಚಿಕ್ಕೊತ್ತೆ** (ನಾ). ಸ್ವಲ್ಪಹೊತ್ತಿನ ಸಹವಾಸಕ್ಕಾಗಿ ಮಾತ್ರ ಸೂಳೆಯರಿಗೆ ಕೊಡುವ ಒತ್ತೆಯ ಹಣ; ಹಗಲು ಹೊತ್ತಿನಲ್ಲಿ ಕೊಡುವ ಒತ್ತೆಹಣ; ಹಗಲೊತ್ತೆ : ಮತ್ತೆ ಬೊಜಂಗರಿಲ್ಲ ಪೊಱಗೊಚ್ಚತವೇಂ ನಿನಗುಂಟು ತೋಳ ಚಿಕ್ಕೊತ್ತೆಗೆ ಪೊಕ್ಕಿಯಂತು ಕುನಿಯಂತಿರೆ ನಿಲ್ವರೆ ಸೂಳೆಕೇರಿಯೇ ಒತ್ತೆಗೆ ನಾಣ್ಚಿಯುಂ ಪೊಱಮಡಾಂ ಮೊಱೆಯಿಟ್ಟಪೆನೆಂದು ಸುತ್ತಿದಳ್ ಮುತ್ತಿದಳಟ್ಟೆ ಚೌಕಿಗೆಯನೊರ್ಬಳೆ ಮಾರಿಯ ಮೂರಿಯುಂದದಿಂ (ಲೀಲಾವ. ೨-೧೨೨) ; ಬಾಗಿಲೊಳ್ಪೊಜಗರೀಗಳ್ಬಂದು ನಿಂದಿರ್ದಪರ್ ಕರೆ ನಿಮ್ಮಕೃನನಕ್ಕುವಕ್ಕು ಹೊಸತೀ ಚಿಕ್ಕೊ[ಪಾಠಾಂ. ತ್ಕೊ]ತ್ತೆಯಂ ಕೊಟ್ಟು ನೋಡಿರೆ (ಶಾಂತೀಶ್ವ. ೦೦-೬೯): ಹರಿಸದಿನಿತ್ತ ಹಗಲ ಚಿಕ್ಕೊತ್ತೆಯ ನಿರುಳೊತ್ತೆಯ ಹಣಮನುತವೆ ಬಗೆದು (ಜಯಚಾ. ೦೪-೫೨).

[ ಚಿಕ್ಕ₁ + ಒತ್ತೆ₁ ]

**ಚಿಕ್ಕೋತಾಸೊಪ್ಪು** (ನಾ). ಒಂದು ಬಗೆಯ ಸೊಪ್ಪು: ಚಿಕ್ಕೋತಾಸೊಪ್ಪು, ನೀರುಪುಳ್ಳಂಪುರಚಿಎಲೆ ಗಿಡ (ಮೃಡಿಗಿ. ೨೩-೧೦೫೨). [ ?+ ಸೊಪ್ಪು₃ ]

**ಚಿಗಟ** 'ಚಿಕ್ಕಟ' ನೋ.

**ಚಿಗಟಾಯಿಸು** 'ಚಿಕಟಾಯಿಸು' ನೋ.

**ಚಿಗಟೆ** 'ಚಿಕ್ಕಟ' ನೋ.

**ಚಿಗಣಿ** 'ಚಿಗುಳಿ' ನೋ.

**ಚಿಗಪ್ಪ** 'ಚಿಕ್ಕಪ್ಪ' ನೋ.

**ಚಿಗರಿ₁** 'ಚಿಗರೆ₁' ನೋ.

**ಚಿಗರಿ₂** 'ಚಿಗರೆ₂' ನೋ.

**ಚಿಗರಿಗಣ್**, ಚಿಗರಿಗಣ್ಣು (ನಾ). ಜಿಂಕೆಯ ಕಣ್ಣುಗಳಂತಿರುವ ಕಣ್ಣು. ಚಿಗರಿಗಂಗಳ ಚೆಲುವಿ ಚೆದರಿ ನಿಂತಾಳ (ಸಖೀಗೀ. ೧೦೦-೦). **ಚಿಗರಿಗಣ್ಣು** : ನೆಕ್ಸಾದ್ರೋವ್ ಒಳಗೆ ಪ್ರವೇಶಿಸಿದಾಗ ಆ ಚಿಗರಿಗಣ್ಣುಗಳು ಕ್ಷಣಕಾಲ ಮಾತ್ರ ತಾಯಿಯಿಂದ ಸರಿದು ಅವನ ಕಣ್ಣುಗಳನ್ನು ಸಂಧಿಸಿದುವು (ಪುನರು. ೨೩೮). [ ಚಿಗರಿ₁ (< ಚಿಗರೆ₁) + ಕಣ್ ]

**ಚಿಗರಿಗಣ್ಣು** 'ಚಿಗರಿಗಣ್' ನೋ.

**ಚಿಗರೆ₁**, ಚಿಗರಿ₁ (ನಾ). ಜಿಂಕೆ ; ಹುಲ್ಲೆ : ಹಕ್ಕಿ ಗಾನ ಮಾಡುತಿವೆ ಭೃಂಗ ದಿಕ್ಕಿಗೋಡುತಿವೆ ಇದನು ನಿಂತು ನೋಡುತಿವೆ ಚಿಗರೆ ಸಾಲ್ಗಳು (ಪಯಣ. ೫೧-೮) : ಅವಳೊಂದು ಹೆಣ್ಣು ಚಿಗರೆ ಯಾರ ಕೈಗೆ ಬಿದ್ದಿತೋ (ಹೊಸಬ. ೪೮): 'ದೀರ್ಘಾಪಾಂಗ' ವೆಂಬ ಚಿಗರೆ ಆಕೆಯ ಮುದ್ದುಕಂದ (ಧರ್ಮಶಾ. ೬೪). ತಾರಾಪದನು ಚಿಗರೆಯ ಮರಿಯ ಹಾಗೆ ಬಂಧನಭೀರು (ಇಪ್ಪತ. ೧೬೧). **ಚಿಗರಿ₁** : ಚಿಗರಿ ಮೊಲ ಜೇನ್ನುಣಿಸೆವಣ್ಣಂ (ಮಹಾವಿ. ೭-೩೨) : ಚಿಗರಿಯಂತೆ ಜಗಿದು ಒಳಗೆ ಓಡಿಹೋದ (ಪ್ರೇಮತ. ೯೬) ; ಚಂದಪ್ಪ ಮೂಡ್ನಾನ ಚಿಗರೀಯನೇರ್ಯಾನೋ(ಗಾಳಿಗು. ೧೬) ; ನಮ್ಮ ಚಿಗರಿಯನ್ನು ಬಿಟ್ಟು ಅದನ್ನು ಹಿಡಿಯಲಿಕ್ಕೆ ಓಡೋಣ (ಮುಂಬಯಿ. ೧-೨೭).

**ಚಿಗರೆ₂**, ಚಿಗರಿ₂ (ನಾ). ಒಂದು ಬಗೆಯ ಗಿಡ ; ಸುಂಜ್ಜಲು ; P ಇದರ ಸೊಪ್ಪನ್ನು ಒಣಗಿಸಿ ಪುಡಿಮಾಡಿ ಸೀಗೆಪುಡಿಯೊಂದಿಗೆ ಉಪಯೋಗಿ ಸುತ್ತಾರೆ : ಚಿಗರೆಯ ಪುಡಿಗೂ ಈಗ ಬೆಲೆ ಹೆಚ್ಚಾಗಿದೆ (ರೂಢಿ). **ಚಿಗರಿ₂** : ಸುಂಜ್ಜಲು, ಚುಚ್ಚಲು, ಚಿಗರಿ, ಬೀಳ್ಕಂಬಿ, ತುಗಿ (ಮೃಡಿಗಿ. ೪-೬೨).

**ಚಿಗವ್ವ** 'ಚಿಕ್ಕವ್ವ' ನೋ.

**ಚಿಗಳಿ** 'ಚಿಗುಳಿ' ನೋ.

**ಚಿಗಿ₁**, ಜಿಗಿ₁ (ಕ್ರಿ). ೧. (ಬೆರಳುಗಳಿಂದ) ಚಿಮ್ಮಿಸು ; ಮಿಡಿ : "ಚಿಗಿ- ಅಂಗುಲಿ ವಿಸರ್ಜನೇ(ಬೆರಳಿನಿಂದ ಚಿಮ್ಮು)"(ಕಮಧಾ); ಚಿಗಿದಂಬು ಕಡಿದುದು ಕರ್ಣನಂದನನ (ಕುಮ್ಮಾ.ಕ. ೨೦-೫೫) ; ಅಂಡೆಯ ನೆಗಹಿ ಕುಂಕುಮರಸ ದುಂಬಿ ಕೈಯಂಡೆಯ ಕೊಳವೆಯ ಚಿಗಿದು ಮಂಡೆಯ ನಿಡುಜಡೆವಿಡಿದು ಹೊಯ್ದಾಡಿದರು (ಮೋಹತ. ೧೪-೬೫). ೨. ನೆಗೆ ; ಕುಪ್ಪಳಿಸು ; ಹಾರು ; ಚಿಮ್ಮು : ಗಗನಕೆ ಚಿಗಿದು ಮಾರುತಿಯಗ್ಗಿಬಾಣವ ತೆಗೆದಸಲಸುರಾಧಿಪನು (ಅಂಜಸ. ೧೪-೨೦೪) ; ಸೆಳೆದು ಹಿರಿಯುಬ್ಬಣವನವನಿಪ ಕಲಕೆ ಚಿಗಿದನು (ಕುಮ್ಮಾ.ಕ. ೪-೩೬) ; ತುರಗದ ಮೊಗಂ ಮೊಗರಂಬುಮಾಗ ಗಗನಕೆ ಚಿಗಿಯೆ (ಜಬಪು. ೩೨-೬) ; ನೇಜೆಯದಿಱಿತಕೆ ಚಿಗಿದು ಕುದುರೆಯಿಂದ ಮಾಜದೆ ಬೀಳ್ವ ರಾವುತರ . . . ಯಮರಾಜನಾಲಯಕಟ್ಟಿದರು (ಕಂನವಿ. ೩-೬೯) : ತೆಗೆದಾ ಜಟಾಯುವಿನ ಪ್ರಾಣಗಳನಾಕ್ಷಣದಿ ಚಿ[ಪಾಠಾಂ. ಜಿ]ಗಿಯೆ ಸದನಕೆ (ಪಂಕಾರಾ. ೧-೩-೨೦). **ಜಿಗಿ₁** : ೨. ಅತ್ತಳ್ ಬಸಿಱಿಂ ಪೊಸೆದರ್ ಜಿಗಿದರ್ (ಅರ್ಧನೇ. ೭-೫೫) ; ಜಿಗಿವ ರಕುತದ ಗದೆಯ ಬಿಱುಪೊಯ್ಲುಗಳೊಳಗೆ ಕಿಡಿ ಮಸಗಿ (ಕುಮ್ಮಾದ್ರೋ. ೩-೩೫) ; ಧರಣಿ ಜಿಗಿದುದು ಗಜಂಗಳ್ ಕುಗ್ಗಿದುವು (ಜಬಪು. ೨೬-೧೧) : ತಿಂಮ ಸಿದಿಗೆಯಿಂದ ಜಿಗಿದು ಹಾರಿ ಮನೆಗೇ ಓಡಿದ (ತಿಂಮತ. ೧೯).

**ಚಿಗಿದಾಡು** = ಕುಣಿದಾಡು ; ನಲಿದಾಡು: ಕಂಜನಾಭನ ಕಂಡು ಪರವಶ ದಲಿ ಹಾಹಾ ರಂಜಿಸುತಲಿ ಎರಗಿ ಚಿಗಿದಾಡಿದ ಚರಣ(ವಿದ್ಯಾಕ್ಕೆ. ೨೭-೨); ದಿಕ್ಕು ಗಳ ಮರೆದು ಧಿಗಿಧಿಗಿಯೆಂದು ಚಿಗಿದಾಡೆ (ವಿದ್ಯಾಕ್ಕೆ. ೧೨೭-೪). **ಚಿಗಿದೇಳು**= ಚಿಮ್ಮಿ ಮೇಲಕ್ಕೆ ಬರು : ಅದ್ದ ರಥ ಹರಿಯುರವಣೆಗೆ ಚಿಗಿದೆದ್ದು ಸಮ ವಾಯ್ತುಭಯ ಘಟ (ಕುಮ್ಮಾ.ಕ. ೭-೨೨).

**ಚಿಗಿ₂** (ಕ್ರಿ). ಚಿಗಿತು (ಭೂತನ್ಯೂ). ೧. ಚಿಗುರು ; ಮೊಳಕೆಯಾಗು ; ಮೊಳೆದೋರು ; ಪಲ್ಲವಿಸು : ಏತದ ಗಣೆ ಚಿಗಿತು ಕಾತು ಫಲ ವಾದಂದು(ಸರ್ವಜ್ಞ. ೦೭-೬೦); ಈ ಕುಡಿಯು ಚಿಗಿಯುವುದಿನ್ನು ಕರುಣಾಳು, ನನ್ನೊಡೆಯ (ಬಿಹಾಸಿ. ೪೦-೭) : ಒಂದೊಂದು ದೇಶ ಮೋಹಪಾಶವನ್ನು

ಬಗಿಯಿತು ಅದಕು ಹೃದಯ ಚಿಗಿಯಿತು (ಹಯಂ. ೫-೮) : ಕಲ್ಪವೃಕ್ಷದ ಅಗಿಯೇ, ಚಿಗಿಯೇ (ಗಿರಿ. ೪೮-೪). ೨. (ಅಲಂ) ಚೈತನ್ಯಹೊಂದು : ಚೇತರಿಸಿಕೊಳ್ಳು : ಶ್ರೀಕಂಠಶಾಸ್ತ್ರಿಗಳು ಮತ್ತೆ ಚಿಗಿತರು (ಗಂಗಾಶಾ. ೧೧೧).

[ < ಚಿಗುರ್$_1$. / ಕುರುಖ್. ಚಿಗಾ. ಚಿಗೀ ]

**ಚಿಗಿಲ್** 'ಜಗಿಲ್$_1$' ನೋ.

**ಚಿಗಿಹಲ್ಲೆ** (ನಾ). (?) : ಸುರಪನಿತುವ ಚಿಗಿಹಲ್ಲೆಯ ಮೋಹನ ಶರಮಂ ಬೆಳಗುವ ಸಿಕಿನಿವಳೆಯ ರತಿವರನಾ ಮೋಹನವಂಚಕ ವಿತತಿಯನಟಿಸಿ ಹಿಡಿದು ತರಲು (ಜಯಕಾ. ೧೪-೧೧). [ ? ]

**ಚಿಗುಟು** 'ಚಿವುಂಟು' ನೋ.

**ಚಿಗುರ್$_1$** ಚಿಗುರು$_1$ (ಕ್ರಿ). ಚಿಗುತು, ಚಿಗುರ್ತು (ಭೂತನ್ಯೂ). ೧. ಅಂಕುರಿಸು ; ಪಲ್ಲವಿಸು ; ಮೊಳಕೆಯಾಗು : "ಚಿಗುರ್-ಪಲ್ಲವೋತ್ಪತ್ತೌ" (ಶಮಧಾ) ; "ಚಿಗುರಾದುದರ್ಕೆ ಚಿಗುರ್ತುದಕ್ಕುಂ" (ಶಶರ. ೩೬); "ಪರ್ಣತೀತಿ ಚಿಗುರ್ದಪುದೆಂಬುದು" (ಕಾಶಳ್ಳ. ೩೬); ನೀರಸ ತರು ಚಿಗುರ್ವವು (ತೊರರಾ. ೧-೫-೬೦). **ಚಿಗುರು$_1$** : ೧. ಮಾಗಿಯೊಳ್ಪೇಸೆಗೆಯೊಳುಂ ಚಿಗುರಿದೆಳವುಲ್ ಮೃಗಂಗಳ್ಗೆ ಬೀಯದು (ಕ್ರಮಿಭಾ. ೧೫-೧೮) ; ಗಿಡ ಹಬ್ಬುವುದು ; ಚಿಗುರುವುದು (ಸಾಹಿಜೀ. ೮೧). ೨. ಉಂಟಾಗು ; ತಲೆದೋರು : ಹಗೆತನವು ನಿನಗೇನು ಕಾರಣ ಚಿಗುರಿದುದು (ತೊರರಾ. ೪-೨-೨೩). ೩. ಉತ್ಸಾಹಗೊಳ್ಳು: ರಸಂದೆಗೆವ ದನಿ ನಿಮಿರೆ ನಾಲ್ಕು ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ (ಗಿರಿಕ. ೨-೩೯). ೪. ಚೈತನ್ಯ ಹೊಂದು ; ಪ್ರವರ್ಧಮಾನಕ್ಕೆ ಬರು : ಹಿಂದೆ ವ್ಯಾಪಾರದಲ್ಲಿ ನಷ್ಟ ಹೊಂದಿ ಕುಗ್ಗಿದ್ದರೂ ಈತ ಈಚೆಗೆ ಚಿಗುರಿಕೊಂಡಿದ್ದಾನೆ (ರೂಢಿ).

ಚಿಚ್ಚಿಗುರು (ದ್ವಿರುಕ್ತಿ) : ದೇವನ ಕರುಣೆಯು ಕರುಳಿನ ತಿರುಳೊಂದು ಚಿಚ್ಚಿಗುರುತಿರುವಂತೆ ಪ್ರತಿದಿನವು (ಸಹೀಗೀ. ೩೩-೬೪೨).

[ ದೇ.ಸ ತಮಿ. ಇವಿಟ್ ; ತುಳು. ಇಗುರು, ಚಿಗುರು, ತಿಗುರು, ಸಿಗುರು ; ತೆಲು. ಇಗುರು, ಚಿಗುರು, ಚಿವುರು = ತಳಿರು, ಕುಡಿ ]

**ಚಿಗುರ್$_2$**, ಚಿಗುರು$_2$ (ನಾ). ತಳಿರು ; ಕುಡಿ ; ಪಲ್ಲವ : ಮರಂಗಳ ಚಿಗುರ್ಗಳಿಂದೆಸೆಗೆದೆಲರಿಂ (ಕಾದಂಪೂ. ೧೧೬) ; ಚಿಗುರಿಂ ಪೂವಿಂ ಕಾಯಿಂ ಸೊಗಯಿಪ ಮಾವಿಂಗೆ ಪುಣಸೆಗೆಡಿಗಲ್ವೇಡಾ (ಸಮುಹ. ೯-೫೬) ; ಚಿಗುರೆಂದುಂ ಮೆಲೆ ಬೇವು ಸ್ವಾದುವಹದೇ (ಸೋಮೇಶ. ೪೧). **ಚಿಗುರು$_2$** : ಚಿಗು [ಪಾಠಾಂ. ಗ] ರು ತಳಿರು ಪತ್ರೆ ಮೊದಲಾದಪಬಿಲ್ಲಿಯ ಗಂಧವನಜಿವುದು ಆಚಾರಲಿಂಗದಲ್ಲಿಯು ಶಿವಲಿಂಗ (ಅರವ. ೫-೧೨) ; ಚಿಗುರನಿರದೊದವಿಸುತ . . . ಬಂದೆಸೆದುದು ನವಚೈತ್ರಂ (ಜಯಕಾ. ೧೧-೧) ; ಕೆಲರು ಚಿಗುರಿನ ತೊಡವ ಧರಿಸಿದರು (ನಳಚ. ೧-೪೦) ; ಸವಿಯು ಬಾ . . . ಸೀ ಹುಳಿಯ ಚಿಗುರನ್ನು (ನವ್ಯಧ್ಯ. ೨-೯).

ಚಿಚ್ಚಿಗುರು (ದ್ವಿರುಕ್ತಿ) : ಮೊಳಕೆಯಲಿ ತುಂಬಿ ಚಿಚ್ಚಿಗುರಿನಲ್ಲಿ ತುಂಬಿ (ಗಂಗಾತ. ೧೦೮-೧೧). **ಚಿಗುರಾಗು** = ಚಿಗುರು ; ಮೊಳಕೆದೋರು : "ಚಿಗುರಾದುದೆಲೆ ಚಿಗುರ್ತುದಕಕ್ಕು ಪೆಸರು" (ಅಭ್ಯಕ್ಷ. ೨೨): "ಚಿಗುರ್ತುದೆನೆ ಚಿಗುರಾದುದು (ಶಬ್ದಮಂ. ೨೨). [ < ಚಿಗುರ್$_1$ ]

**ಚಿಗುರಾಸೆ** (ನಾ). ಮುಂದೆ ಕಾರ್ಯರೂಪಕ್ಕೆ ಬರುತ್ತದೆಂಬ ಆಸೆ ; ಆಶಾಂಕುರ : ತುಕ್ರನ ಹೆಂಡತಿ ಸಂಕ್ರಿ ಇವರಾದರೂ ಜೊತೆಯಾದಾರು ಎನ್ನುವ ಚಿಗುರಾಸೆಯಿಂದ 'ಓಯ್' ಎಂದು ಕೂ ಹಾಕಿದ್ದಕ್ಕೆ (ಹೊಸಕ್ಷ. ೪೯). [ ಚಿಗುರ್$_2$ + ಆಸೆ$_1$ ]

**ಚಿಗುರಿಕ್ಕು** (ಕ್ರಿ). ಚಿಗುರುಗಳಿಂದ (ಮನೆಯನ್ನು) ಅಲಂಕರಿಸು ; ಹಸಿರು ತೋರಣವನ್ನು ಕಟ್ಟು : ಪೊಸತಿಲ ಮೇಲನೊಕ್ಕೆಲಿದು ಮಿಸಲ ತುಯ್ಯಲನಟ್ಟು ಬಾಗಿಲರ್ಚಿಸಿ ಚಿಗುರಿಕ್ಕಿ ಚಿಟ್ಟಿಟಿದು (ಹಸಾರ. ೪೬೫).

[ ಚಿಗುರ್$_2$ + ಇಕ್ಕು ]

**ಚಿಗುರಿಡು** (ಕ್ರಿ). ೧. = ಚಿಗುರಿಕ್ಕು. ೨. ಕಾಂತಿಯನ್ನು ಹೊಂದು.- ಪಡೆ : ಚಿಗುರಿಡೆ ದೇಗುಲಂಗಳಗರಂ ಪೊಗರೇಟ (ಚಳವಿ. ೨-೬೦).

[ ಚಿಗುರ್$_2$ + ಇಡು$_1$ ]

**ಚಿಗುರಿಸು** (ಕ್ರಿ). ೧. ಮೊಳೆಯುವಂತೆ ಮಾಡು; ಚಿಗುರುವಂತೆಮಾಡು: ಮಿಂಡೆದ್ದ ಹೆಣ್ಣಾಳುಪವನಕೆ ನಡೆತಂದು . . . ಕಂಡ ಕಂಡವನಿಜಾತಂಗಳಂ ಚಿಗುರಿಸಿದರು (ಕ್ರಮಿಭಾ. ೩೦-೫) ; ಸುಗಿವ ಮಳೆ ಹಳೆಯಾಗೆಯೊಳದಗಿರ್ಪ ಬೇರ್ಗಳಿಂ ಚಿಗುರಿಸಿತು ತಾಯ್ನೆಲದ ಪಸುರುಡುಗೆಯೊಡಲಂ (ಕಾಲೂಠ. ೪೫-೬೩). ೨. (ಅಲಂ) ಸಂತೋಷಪಡಿಸು ; ಉತ್ಸಾಹಗೊಳಿಸು ; ನಲಿಯಿಸು: ಈ ಗಿರಿಜೆಯ ನಿಜರಾಗಂ ಶಂಕರನ ಚಿತ್ತಮಂ ಚಿಗುರಿಸದೇ (ಗಿರಿಕ. ೪-೫೬); ಚಿತ್ತಮೋಹಿನಿ ಕೂಡೆ ಬಂದು ನಿಂದಳು ಮರ್ಘು ಚಿತ್ತವೆಲ್ಲವ ಚಿಗುರಿಸುತ (ಭರಹ. ೧೨-೭೨) ; ಕೇಳ್ದರ ಚಿತ್ತಮಂ ಚಿಗುರಿಕುಂ ಚಿಕದೇವನ ಜಾಣದೆಂತುಟೋ (ಚಳವಿ. ೪-೧೦೫). [ ಚಿಗುರ್$_2$ + – ಇಸು$_3$ ]

**ಚಿಗುರು$_1$** 'ಚಿಗುರ್$_1$' ನೋ.

**ಚಿಗುರು$_2$** 'ಚಿಗುರ್$_2$' ನೋ.

**ಚಿಗುರುದೋಱು** (ಕ್ರಿ). ಎಳೆಯ ಮೊಳಕೆ ಕಾಣಿಸಿಕೊಳ್ಳು; ಮೊಳಕೆಯೊಡೆ : ತೆಗೆದು ದಾರಿಗೆ ಹಜ್ಜೆಹಜ್ಜೆಗೆ ಚಿಗುರುದೋಱಿದ ತಳಿರ ಪಱಪಱದು (ತೊರರಾ. ೨-೪-೧೯).

[ ಚಿಗುರು$_2$ (< ಚಿಗುರ್$_2$) + ತೋಱು ]

**ಚಿಗುರುಪ್ರಾಯ** (ನಾ). ಎಳೆಯ ವಯಸ್ಸು: ಮಲ್ಲಿಗೆಯಂದದಿ ಚಿಗುರು-ಪ್ರಾಯದ ಮನವಾಲರುತಿದೆ (ಸಹೀಗೀ. ೨೦-೩೨೮).

[ ಚಿಗುರು$_2$ (< ಚಿಗುರ್$_2$) + ಪ್ರಾಯ ]

**ಚಿಗುರುಬೋಣೆ** (ನಾ). ಕೋಮಲೆ ; ಎಳೆಯ ಪ್ರಾಯದ ಹುಡುಗಿ : ಚಿಗುರುಯಲೆಗಳ ತಂದು ಹಾಸಿಗೆಯನ್ನು ಮಾಡಿ ಚಿಗುರುಬೋಣೆಯು ಮಲಗೆ ಚಿಗುರುಪೊಗೆಯಾಯ್ತು (ಯನಳ. ೩೫) ; ಪಲ್ಲವಪಾಣಿಯು ಚೆಲ್ವ ಚಿಗುರುಬೋಣೆಯು ಮಲ್ಲಿಗೆ ಹೂವಿನ ಚೆಂಡ ಗಂಧದುಡಿಯೊಳದ್ದಿ ಬಸವಗಿಟ್ಟು (ಶರಲೀ. ೧೩೯-೩).

[ ಚಿಗುರು$_2$ (< ಚಿಗುರ್$_2$) + ಬೋಣೆ$_2$. / ತೆಲು. ಇಗುರುಬೋಡಿ, ಇಗುರುಬೋಣಿ, ಚಿಗುರುಬೋಡಿ, ಚಿಗುರುಬೋಣಿ ]

**ಚಿಗುರುಮೀಸೆ** (ನಾ). ಹೊಸಹರಯದ ಗುರುತಾಗಿ ಆದೇ ತಾನೆ ಮೂಡುತ್ತಿರುವ ಮೀಸೆ : ಅಯ್ಯೋ ಚಿಗುರುಮೀಸೆ ಸರ್ದಾರ ಕೈಕಾಲು ಸೋಲ್ತಾವೊ (ರಿನಾರಿ. ೧). 'ತುಪ್ಪುಳುಮೀಸೆ' ಪರಾ.

[ ಚಿಗುರು$_2$ (< ಚಿಗುರ್$_2$) + ಮೀಸೆ ]

**ಚಿಗುರೆತ್ತು** (ಕ್ರಿ). ಮೊಳಕೆದೋರು: ಆಲದ ಎಲೆ ಸೀಳಿ ಅರಳೆಲೆ ಚಿಗುರೆತ್ತಿ ಬಂದಂತೆ (ವಿಜಾಮಂ. ೧೩೧). [ ಚಿಗುರು$_2$ (< ಚಿಗುರ್$_2$) + ಎತ್ತು$_1$ ]

**ಚಿಗುರೆಲೆ** (ನಾ). ೧. ಚಿಗುರಾಗಿರುವ ಎಲೆ ; ಎಳೆಯ ಎಲೆ ; ಎಳತಾದ ಎಲೆ : ಚಿಗುರೆಲೆಗಳಿಂ ಕೂಡಿರುವ ಕುಡಿಲು. ಮರದ ಸುಳಿ (ಸಿದ್ಧಾಂತಿ. ೧೦೦) ; ಹಣ್ಣೆಲೆ ಉದುರುವಾಗ ಚಿಗುರೆಲೆ ನಗುವುದು (ಗಾದೆ). ೨. ತಾಂಬೂಲಕ್ಕೆ ಉಪಯೋಗಿಸುವ ಎಳೆಯ ವೀಳೆಯದೆಲೆ : ಹಣ್ಣುಕಾಯಿ ಎರಡೂವೆ ಮೊದಲಾಗಾಬೇಕು ಕಳಿಅಡಿಕೆ ಚಿಗೂರೇಲೆ ಮೊದಲಾಗಾಬೇಕು (ಹುಟ್ಟಹ. ೪೬).

[ ಚಿಗುರು$_2$ (< ಚಿಗುರ್$_2$) + ಎಲೆ$_1$ ]

**ಚಿಗುರೊಡೆ** (ಕ್ರಿ). ೧. ಚಿಗುರಂ ಮೂಡು : ಬಳ್ಳಿ ಚಿಗುರೊಡದಿದ (ರೂಢಿ). ೨. ಕಾಣಿಸಿಕೊಳ್ಳು; ತಲೆದೋರು ; ಆವಿರ್ಭವಿಸು : ತನ್ನ ಕಾಲ ಮೇಲೆ ತಾನೇ ನಿಲ್ಲಬೇಕಾಯಿತು. ಈ ವಿಚಾರ ಚಿಗುರೊಡೆದು ಕಾರ್ಯೋನ್ಮುಖವಾಗಹತ್ತಿತು (ಜಯಂಕ. ೩೪೩).

[ ಚಿಗುರು$_2$ (< ಚಿಗುರ್$_2$) + ಒಡೆ$_1$ ]

**ಚಗುಳಿ, ಚಿಗಣಿ, ಚಿಗಳಿ, ಜವುಳಿ** (ನಾ). ಎಳ್ಳು, ಬೆಲ್ಲಹಾಕಿ ಕುಟ್ಟಿ ಮಾಡಿದ ಉಂಡೆ : ಪೂಜಿಸಿ ಎಣ್ಣೆಯಲ್ಲಿ ಅಭಿಷೇಕವಂ ಮಾಡುವುದು ಚಿಗುಳಿ ತಂಬಿಟ್ಟನಲ್ಲಿ ಪೂಜಿಸುವುದು (ವಾಖಚಿ. ೧೩೩-೬); ಚಿಗುಳಿ ಚಕ್ಕುಲಿ ಹಾಲವುಗೆ ಮಂಡಗೆ . . . ತಂದುಕೊಡುವರು (ಬಸಪು. ೦೪-೧೫); ಚಿಗುಳಿ ಲಡ್ಡುಗೆ ಸಕ್ಕರೆವೇಣಿಯೊಳವು ಮನ್ಮಂದಿರದೊಳ್ನೀಂ ಬಯಸಿ ಪೋಗಿ ತಂದಪೆನೀಗಳ್ (ವೃಷಪಿ. ೯-೬೮). **ಚಿಗಣಿ**: ಚಿಗಣಿಯು ನೆನೆಅಕ್ಕಿ ನೆನೆಗಡಲೆ ಎಲ್ಲವನು ತಕ್ಕೊಂಡು (ನಾಪಠ. ೧೬೫). **ಚಿಗಳಿ**: ಚಿಗಳಿ ತಂಬಿಟ್ಟುಗಳನ್ನೂ, ಕಡಬುಗಳನ್ನೂ . . . ತಂದುಕೊಡಲು (ಕೃವಾಳ. ೩೦೪): ಇನ್ನು ಮೇಲೆ ನಿಮ್ಮನ್ನ ಮರೆತರೂ ಚಿಗಳೀನ ಮರೆಯೊಲ್ಲ! (ನಮ್ಮೆಳ್ಳ. ೧೨); ಚಿಗಳಿ, ತಂಬಿಟ್ಟು, ಹೆಸರುಂಡಿ, ಚಕ್ಕುಲಿ ತಯಾರಿಸಿದರು (ಕಪಪು. ೩-೮೬). **ಜವುಳಿ**: 'ಜವುಳಿದುಟು' ಪರಾ.

ಚಿಗಳಿಬೊಂಬೆ = ೧. ಚಿಗುಳಿಯಂತೆ ಕಪ್ಪಾಗಿರುವ ಬೊಂಬೆ. ೨. (ಆಲಂ) ಕಪ್ಪುಬಣ್ಣದ ವ್ಯಕ್ತಿ: ಎಲ್ಲಿ ಬೇಕಾದರೂ ನೋಡಿ "ಚಿಗಳಿ" ಬೊಂಬೆಗಳು (ಬಿಸ್ಕ್ಕ. ೫).

[ದೇ.; ತೆಲು. ಚಿಮ್ಮಿರಿ, ಚಿಮ್ಮಿಲಿ]

**ಚಗುಳಿದುಳಿ** 'ಚಗುಳಿದುಟು' ನೋ.

**ಚಗುಳಿದುಟು, ಚಗುಳಿದುಳಿ, ಜವುಳಿದುಟು** (ಕ್ರಿ). ಚಿಗಂಳಿಯಾಗುವಂತೆ ತುಳಿ; ಗಿಜಿಗಿಜಿಯಾಗುವಂತೆ ತುಳಿ; ಜಜ್ಜಿಹೋಗುವಂತೆ ತುಳಿ: ರಾಸಭಂ ಬಂದುಮಾ ವಾಸವಸೈನ್ಯಮಂ ಕರ್ಚಿಯುಂಮೊದೆದು ಚಗುಳಿ ದುಟುದುಂ ಪಡಲ್ವಡಿಸುತ್ತುಮಿರೆ (ಜಗವಿ. ೪-೩೯ ವ). **ಚಗುಳಿದುಳಿ**: ಅಟ್ಟ ಕಪಿಗಳ ಚಗುಳಿದುಳಿದನು ಸೇನೆ ಮೆದೆಗೆಡಲು (ತೊರಾ. ೨೫-೨೦); ಹಗೆಯ ಬಲದಲಿ ಹರಿದು ಸುಭಟರ ಚಗುಳಿದುಳಿದುದು ತಲೆಗಳನು ಮುಗಿಲಗಲದಲಿ ಹರಹಿದುದು ದಿಕ್ಕರಿ (ಕುವ್ಯಾದ್ರೋ. ೩-೧೩); ನಿಮಿಷಮಾತ್ರದೊಳ್ ಮುತ್ತಿದ ಭಟರ್ಗಳಂ ಮುರಿದು ಶತಪತ್ರಗಳಂ ಚಗುಳಿದು[ತಾಂ. ಳಿಂಬಂತೆ ತು]ಳಿದು (ಚಬಪು. ೨೮-೨೪); ಅಸಂಖ್ಯಾತ ವಾಜಿ ಕರಿಘಟೆ ಪಾಯ್ದಳವನ್ನು ಚಗುಳಿದುಳಿಯುತ್ತಾನೆ (ನಂಜುಂಡ. ೬೮). **ಜವುಳಿದುಟು**: ಸುಪ್ರತೀಕ[ಂ] ಕೆಯ್ಯ ಕಾಲ ಕೋಡೇಟಿನೊಳ್ ಬಲವುನೆಲ್ಲಂ ಜವನೆ ಜವುಳಿದುಟುವಂತೆ ತೊಟ್ಟುಟುದುಟುದು (ಪಂಪಭಾ. ೧೧-೬೨ ವ). [ಚಗುಳಿ + ತುಟು$_1$]

**ಚಗುಳಿದುಟಿಸು** (ಕ್ರಿ). ಜಜ್ಜಿಹೋಗುವಂತೆ ತುಳಿಸು: ತುರಗಖುರಪುಟ ದೊಳರಿಗಳ ಶಿರಂಗಳಂ ಚಗುಳಿದುಟಿಸಿ (ರಕಸು. ೭-೫೨).

[ಚಗುಳಿದುಟು + -ಇಸು$_3$]

**ಚಿಗ್ಲಾಣ** (ನಾ). ಸಡಿಲವಾಗುವುದು; ಆಳ್ಳಕವಾಗಂವುದು : "ಶ್ಲಥತಾ = ಚಿಗ್ಲಾಣವು" (ವಾಪಟೀ. ೨-೨-೭೭ ವ). [?]

**ಚಿಚ್ಚಕ್ಷು** (ನಾ). ಮನಸ್ಸಿನ ಕಣ್ಣು; ಅಂತರ್ದೃಷ್ಟಿ; ಜ್ಞಾನದೃಷ್ಟಿ: ಅಖಂಡಜ್ಯೋತಿಯಂ ಶುದ್ಧಭಾಸುರ ಚಿಚ್ಚಕ್ಷುವೊಳೀಕ್ಷಿಸುತ್ತೆ ಯುಮಿವ್ವಂದಂ ತಾಳ್ದುಮಾನಂದದಮಂ (ಕಬಕಂ. ೨-೬೦).

[ಸಂ. ಚಿಚ್ಚಕ್ಷುಸ್ (ಚಿತ್ + ಚಕ್ಷುಸ್)]

**ಚಿಚ್ಛಕುದಿಬೋಯ** (ನಾ). ಒಬ್ಬಾತನ ಹೆಸರು: ಚಿಚ್ಛಕುದಿಬೋಯಸ್ಯ . . . ಶಮ್ಮಣ (ಎಇ. VII, ೧೮೮-೫೭; ೬೬೩). [<ಚಿಚ್ಛಕ್ತಿ + ಬೋಯ]

**ಚಿಚ್ಛಕ್ತಿ** (ನಾ). ಚೈತನ್ಯ; ಆತ್ಮಶಕ್ತಿ: ಶಾಂತ್ಯತೀತೋತ್ತರಕಲೆಯೆಂಬ ಹೆಸರಿನ ಚಿಚ್ಛಕ್ತಿಯೂ . . . ಕ್ರಿಯಾಶಕ್ತಿಯೂ ಎಂದು ಆರು ವಿಧವಾದ ಶಕ್ತಿಗಳಿರುವುವು (ಶಿವಾಷೂ. ೪೦-೨೬ ಟೀಕೆ); ಘನತಮಸ್ಸತ್ತ್ವಪ್ರಧಾನಗಳೆನಿಸಿ ಧೂಮಜ್ವಾಲೆಗಳವೋಲ್ ಜನಿಸಿ ಮಾಯಾಶಕ್ತಿ ಚಿಚ್ಛಕ್ತಿಗಳೆನಿಸಿಹವು (ಅಮೃತ. ೫-೪೦); ದಿವ್ಯಚಿಚ್ಛಕ್ತಿಯಿಂ ತಿರುಗುತಿಹ ಸೃಷ್ಟಿಚಕ್ರಂಗಳ್ ಕಣಾ (ಶ್ರೀರಾಮಾ. ೮೭೧-೮೦); ಇದರ ಬಹಿಷ್ಕರಣಕ್ಕೆ ಒದಗಿ ಬರುವ ಚಿಚ್ಛಕ್ತಿ ಪ್ರತಿಭೆ (ಕಾವ್ಯಕು. ೦೪). [ಸಂ. (ಚಿತ್ + ಶಕ್ತಿ)]

**ಚಿಚ್ಛಾಸಕ** (ನಾ). ಜ್ಞಾನವನ್ನು ನಿಯಂತ್ರಿಸುವವನು : ನಾನೆಂಬ ಮೂಟು ಸುಶ್ಲೋಕಾರ್ಥದಂದವೆಂತೆನಲಾಗಿ 'ಚಿತ್ರರಿಪೆನೆಂದನಾ ದೇಶಿಕಂ ಚಿಚ್ಛಾಸಕಂ (ಏಕ್ಕಿಪು. ೫-೮-೨೪). [ಸಂ. (ಚಿತ್ + ಶಾಸಕ)]

**ಚಿಟ್** (ನಾ). ಒಂದು ಅನುಕರಣ ಶಬ್ದ. 'ಚಿಟ್ಟನೆ', 'ಚಿಟ್ಟಿಕ್ಕು$_1$' ಪರಾ.

**ಚಿಟ$_1$** (ನಾ). ಒಂದು ಅನುಕರಣ ಶಬ್ದ. 'ಚಿಟಗುಟ್ಟು' ಪರಾ.

ಚಿಟಚಿಟ (ದ್ವಿರುಕ್ತಿ) : ಸಾಸಿವೆ ಚಿಟಚಿಟ ಎಂದು ಸಿಡಿಯಿತು (ರೂಢಿ).

**ಚಿಟ$_2$** 'ಚಿಟ್ಟು$_1$' ನೋ.

**ಚಿಟಕಿ$_1$** 'ಚಿಟುಂಕು' ನೋ.

**ಚಿಟಕಿ$_2$** 'ಚಿಟಕೆ$_2$' ನೋ.

**ಚಿಟಕಿಸು** (ಕ್ರಿ). ಸನ್ನೆಗೋಲಿನಿಂದ ಯಾವುದಾದರೊಂದು ವಸ್ತುವನ್ನು ಮುಂದಕ್ಕೆ ನೂಕಂ : (ಠ). [? + -ಇಸು$_3$]

**ಚಿಟಕಿಹೊಡೆ** 'ಚಿಟಕೆಹೊಡೆ' ನೋ.

**ಚಿಟಕು** 'ಚಿಟುಂಕು' ನೋ.

**ಚಿಟಕುದೆಗೆ**(ಕ್ರಿ).=ಚಿಟುಕುಗಳೆ: ಕರವನೊತ್ತುತ ಬೆರಳ್ಗಳ ಚಿಟಕುದೆಗೆವುತಂ ಉಸಿರ್ದಳತಿಕುಶಲದಿಂದಂ (ಪ್ರಭುಪು. ೫-೬೦).

[ಚಿಟಕು (<ಚಿಟುಂಕು) + ತೆಗೆ$_1$]

**ಚಿಟಕುಮುಳ್ಳು** 'ಚಿಟುಕುಮುಳ್ಳು' ನೋ.

**ಚಿಟಕೊಳಗು, ಚಿಟಿಕೊಳಗು, ಚಿಟಗೊಳಗು** (ನಾ). ದನಕರುಗಳ ಕಾಲು ಗೊರಸುಗಳ ಹರಡಿನಲ್ಲಿ ಅಂಟಿಕೊಂಡು ಸಣ್ಣಗೆ ತೋರಿಬರುವ ಪುಟ್ಟ ಬೆರಳಿನಾಕಾರದ ಗೊರಸು: (ಠ). **ಚಿಟಿಕೊಳಗು**: (ಠ). **ಚಿಟಗೊಳಗು**: ಇವುಗಳ ಹಿಂದೆ ಚಿಟ್ಟಡಿಕೆಯ ಹಾಗೆ ಇವೇನು ? ಇವು ಚಿಟಗೊಳಗು (ಮುಂಬಯಿ. ೧-೩೩). 'ಕಿಟುಗೊಳಗು' ಪರಾ.

[ಚಿಟ$_2$(<ಚಿಟ್ಟು$_1$) + ಕೊಳಗು]

**ಚಿಟಗ** (ನಾ). ಗುಬ್ಬಿಯ ಜಾತಿಗೆ ಸೇರಿದ ಕೆಂಪುಬಣ್ಣದ ಹಕ್ಕಿ : (ಠ).

[?]

**ಚಿಟಗಾಣಿ, ಚಿಟಗಾಳಿ** (ನಾ). ಚಿಕ್ಕವಳು ಯುವತಿ: ಈ ಚಿಟಗಾಣಿ ನಮ್ಮ ಸೊಸಿ ಕಾಣಸ್ವಾಳ! (ಬಾಂಡಾಯಿ. ೧೪). **ಚಿಟಗಾಳಿ**: ಆಡಲಾರಿನೇ ಗೌರಿ, ಪಾಡಲಾರಿನೇ ಗೌರಿ, ಚನ್ನದ ಚಿಟಗಾಳೀ ಗೌರಿ (ಕನ್ನಜಾ. ೧೬೮).

[<ಚಿಟುಂಕು]

**ಚಿಟಗಾಳಿ** 'ಚಿಟಗಾಣಿ' ನೋ.

**ಚಿಟಗುಟ್ಟು** (ಕ್ರಿ). ೧. ಚಿಟಚಿಟ ಎಂದು ಶಬ್ದಮಾಡು: ಕಿಡಿಗಳು ಚಿಟ ಗುಟ್ಟುತ್ತಾ ಹಾರುತ್ತಿವೆ (ರೂಢಿ). ೨. (ಮನಸ್ಸಿನ ವೇದನೆಯಿಂದ ನರ ಮೊದಲಾದುವು) ಮಿಡಿ; ತುಡಿ: ವಿಜಯನ ಮೈ ಚಿಟಗುಟ್ಟಿ ಹೋಯಿತು (ಕಲಾಕೋ. ೬೮). [ಚಿಟ$_1$ + ಕುಟ್ಟು$_1$]

**ಚಿಟಗುಬ್ಬಿ** 'ಚಿಟ್ಟಗುಬ್ಬಿ' ನೋ.

**ಚಿಟಣವೀಸ, ಚಿಟಣೀಸ, ಚಿಟನೀಸ, ಚಿಟ್ನೀಸ** (ನಾ). (ಅರಸನ) ಪತ್ರಗಳನ್ನೂ ಪತ್ರಗಳಿಗೆ ಉತ್ತರಗಳನ್ನೂ ಬರೆಯುವ ಅಧಿಕಾರಿ; ಕಾರ್ಯದರ್ಶಿ; ಕಾರಭಾರಿ : ಗೋವಳಕೊಂಡದ ಸುಲ್ತಾನನ ಚಿಟಣವೀಸನಾದ ರಾಮಚಂದ್ರಪಂಡಿತನು ಬರೆದಿರುವ ಪತ್ರವನ್ನು ನೀನು ಓದಿದಿಯೇನು ? (ಶಿರಂಗ. ೧೨೪). **ಚಿಟಣೀಸ**: ಮಹಾತ್ಮಾಜಿಯವರ ಏಕನಿಷ್ಠ ಚಿಟಣೀಸ ಶ್ರೀಮಹಾದೇವಭಾಯಿ ದೇಸಾಯಿ (ಕಾಂಗ್ರೆಸ. ೪೪). **ಚಿಟನೀಸ**: ಚಿಟನೀಸ ಗಿರಿಯಪ್ಪನಂ ಕಳುಹಲ್ (ಕಿಲನ್ನ. ೮-೪೩) : ನಾನು ಚಿಟನೀಸರಿಗೆ ಹೇಳಿದೆನು (ಹೇಮಂತ. ೨೬೭). **ಚಿಟ್ನೀಸ**: ಬಾಳಾಸಾಹೇಬನು ಚಿಟ್ನೀಸನ ಕೈ ಬೆಚ್ಚಗೆ ಮಾಡುವುದೇ ತಡ . . . ಅಪ್ಪಣೆ ಕೊಟ್ಟುಬಿಟ್ಟ (ಪ್ರಣಸ. ೩೬). [←ಹಿಂ. ಚಿಟನವೀಸ್; ಮರಾ. ಚಿಟಣೀಸ್, ಚಿಟನವೀಸ್, ಚಿಟನೀಸ್]

**ಚಟಣೇಸ** 'ಚಿಟಣವೀಸ' ನೋ.

**ಚಟನೀಸ** 'ಚಿಟಣವೀಸ' ನೋ.

**ಚಟಪಾಗು** (ನಾ). ಪುಟ್ಟರುಮಾಲು ; ಸಣ್ಣಪೇಟ . ವಡ್ಡರ ಯಿಾರನ ಬೋಯಿಗೆ ಕಡಗ ಸ ೧ ಸರವಣಿ ಸ ೧ ಚಟಪಾಗು ೧ ಪಪ್ಪುಳ್ಳಿ ಅಚ್ಚಡ ೧ ಸಹ ಯಿನಾಮು ಕೊಟ್ಟು (ಎಕ. XI, ಹಿರಿಯೂ. ೩೬-೧೪ ; 1533 ?). [ ಚಟ್ಟ₂ (<ಚಿಟ್ಟು₁) + ಪಾಗು₂ ]

**ಚಟಬರಿಸು** (ಕ್ರಿ). ಹಿಡಿಸಲಾರದೆ ಒದ್ದಾಡು ; ಕಕ್ಕಸಬಡು : ನಾನು ತುರುಕಿದ ಅರ್ಥವನ್ನು ತಾಳಲಾರದೆ ಕೊನೆಯ ಸಾಲು ಚಟಬರಿಸುತ್ತಲಿದೆ (ದೇಕನ್ನ. ೧೦೦). [ ? ]

**ಚಟಯ್ಯ** (ನಾ). ಒಬ್ಬಾತನ ಹೆಸರು ಅವರ ಪುತ್ರರಣ್ಣಯ್ಯನುಂ ಚಟಯ್ಯನುಂ (ಎಕ. VII, ಶಿಕಾರಿ. ೨೮೬-೧೦ ; ಸು. 900 ?). [ ಚಟ್ಟ₂ (<ಚಿಟ್ಟು₁) + ಅಯ್ಯ₁ ]

**ಚಟಿಕಿ** 'ಚಿಟುಂಕು' ನೋ.

**ಚಟಿಕಿಡು** 'ಚಿಟುಂಕಿಡಂ' ನೋ.

**ಚಟಿಕಿವಾಲೆ** (ನಾ). ಒಂದು ಬಗೆಯ ಔಷಧಿಗಿಡ : " ಪಯಸ್ಯಃ – ಚಟಿಕಿ ವಾಲೆ " (ಒಷಧಿ. ೯೧). [ ? ]

**ಚಟಿಕಿಸು** 'ಚಿಟುಂಕಿಸು' ನೋ.

**ಚಟಿಕಿಹಾಕು** 'ಚಟಿಕೆಹಾಕು' ನೋ.

**ಚಟಿಕಿಜು** (ಕ್ರಿ). ಚಟಿಕೆಯನ್ನು ಹಾಕು: ಅನ್ನವನೆ ತೋಱಿ ಚಟಿ ...ಯು ಬಾಲವ ಬೀಸಿ ಕುನ್ನಿ ಸುಳಿದಾಡಿ ಕಾಲ್ಗೆ ಜಗುವ ತೆಱದಿ (ಪುರಂದ. ...೬೪-೪). [ ಚಟಿಕು (<ಚಿಟುಂಕು) + ಇಜು₁ ]

**ಚಟಿಕು** 'ಚಿಟುಂಕು' ನೋ.

**ಚಟಿಕೆ₁** 'ಚಿಟುಂಕು' ನೋ.

**ಚಟಿಕೆ₂** ಚಟುಕ್ಕೆ, ಚಿಟುಕೆ (ನಾ). ಒಂದು ಬಗೆಯ ಸಣ್ಣ ಮೂಲಿಕೆ : " ಅಮೃತಶಿಖಾ-ಚಟಿಕೆ ; ಹಾಲೆ " (ಒಷಧಿ. ೮); ಗ್ರಹಣೀ ಗಜಕೇಸರಿ ಲೇಹ್ಯ . . . ಕಳ್ಳಂಗಡಲೆಬೇರಿನ ತೊಕ್ಕು, ಚಟಿಕೆಬೇರು, ತುರುಚನಬೇರು . . . ಇವನೆಲ್ಲ ಖಂಡುಗ ನೀರಿನಲ್ಲಿ ಹಾಕಿ ಕಷಾಯವ ಕಾಸಿ (ಸಕವ್ಯ. ೩೩೯). **ಚಟಿಕ್ಕೆ:** " ಶೋಫ – ಚಟಿಕಿ, ಹಾಲೆ " (ಒಷಧಿ. ೧೬೨) ; ಬೆಕ್ಕಿನಬುಡ್ಡೆಗಿಡ . . . ಚಟಿಕಿಹಂಬು, ಮಿಂಚುಬಳ್ಳಿ, ಕನಕಾಯ (ಮೃಜಿ. ೧೭೭-೩೦೮). **ಚಿಟುಕೆ:** " ಅರ್ಕಪುಷ್ಪಿ – ಚಿಟುಕೆ ; ಹಾಲೆ ; ಹಿಟ್ಟುಳಿಕೆ " (ಒಷಧಿ. ೬). [ ? ]

**ಚಟಿಕೆ₃** (ನಾ). ಊತ ; ಬಾವು. 'ಗಂಟಲುಚಟಿಕೆ' ಪರಾ. [ ? ]

**ಚಟಿಕೆಗುಂಡಿ** (ನಾ).=ಚಟಿಕೆಗುಬ್ಬಿ: ಅಂಗಿಗೆ ಚಟಿಕೆಗುಂಡಿ ಹಾಕಿಸಿದೆ (ರೂಢಿ). [ ಚಟಿಕೆ₁ (<ಚಿಟುಂಕು) + ಗುಂಡಿ₂ ]

**ಚಟಿಕೆಗುಬ್ಬಿ** (ನಾ). (ಕುಪ್ಪಸ, ಅಂಗಿ ಮೊದಲಾದಂವುಗಳಲ್ಲಿ) ಒತ್ತಿ ಹಾಕಿಕೊಳ್ಳುವ ಸಣ್ಣ ಆಕಾರದ ಗುಂಡಿ: ಸೆರಗನ್ನು ಕೈಯ ಮೇಲೆ ಹಾಕಿಕೊಂಡು ಕುಪ್ಪಸದ ' ಚಟಿಕೆ – ಗುಬ್ಬಿ 'ಯನ್ನು ಒತ್ತಿ ಹಾಕಿಕೊಂಡಳು (ಹೊಸಕ್ಕ. ೪೭). [ ಚಟಿಕೆ₁ (<ಚಿಟುಂಕು) + ಗುಬ್ಬಿ₁ ]

**ಚಟಿಕೆತಾಳ** (ನಾ). ಕೀರ್ತನಕಾರರು ಬಳಸುವ ಮರದ ಅಥವಾ ದಂತದ ತಾಳ : (೬). [ ಚಟಿಕೆ₁ (<ಚಿಟುಂಕು) + ತಾಳ₁ (=ತಾಲ) ]

**ಚಟಿಕೆಹಾಕು, ಚಟಿಕಿಹಾಕು, ಚುಟಿಕೆಹಾಕು** (ಕ್ರಿ). ೧. = ಚಟಿಕೆಹೊಡೆ: ಅನೇಕ ಬಾರಿ ಚಟಿಕೆಹಾಕಿ ಏನು ಅನುಷ್ಠಾನವಮಾಡಿದಳೋ ! (ದಾಜಿ. ೧೦೦) ; ಭಾಗೀರಥಮ್ಮ ಮಗುವಿನ ಮುಂದೆ ನಿಂತು ಚಟಿಕೆಹಾಕುವಳು (ವಂಶವೃ. ೪೬). ೨. (ಶೀತ, ವಾತ ಮುಂತಾದುವನ್ನು ಗುಣಪಡಿಸಲು) ಬಳೆಯ ಚೂರನ್ನು ಕಾಯಿಸಿ ಬರೆಹಾಕು: ಮಗುವಿಗೆ ಸೆಳವು ಬಂದಿದೆ, ಚಟಿಕೆ ಹಾಕು (ರೂಢಿ). **ಚಟಿಕಿಹಾಕು :** ೧. ಮೊದಲುಮೊದಲು ನಾನು ಜೋರಾಗಿ ಚಟಿಕಿಹಾಕಬೇಕಾಗುತ್ತಿತ್ತು (ಶಾಲಮ. ೧೯೪). **ಚುಟಿಕೆಹಾಕು:** ೨. ಲೋಹದಿಂದ ಸುಡುವುದು ಅಥವಾ ಚುಟಿಕೆಹಾಕುವುದು ಅವರ ಮುಖ್ಯ ಚಿಕಿತ್ಸಾವಿಧಾನ (ಪ್ರವಾಇ. I, ೩೦೮). [ ಚಟಿಕೆ₁ (<ಚಿಟುಂಕು) + ಹಾಕು (<ಪಾಯ್ಯು₁) ]

**ಚಟಿಕೆಹೊಡೆ, ಚಟಿಕಿಹೊಡೆ** (ಕ್ರಿ). ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳನ್ನು ಸೇರಿಸಿ ಸದ್ದುಮಾಡು,–ಶಬ್ದಮಾಡಂ : ಬೆರಳಿಂದ ಚಟಿಕೆ ಹೊಡೆದು, ಸ್ವಾಮಿಜಿಗೆ ಸಂಜ್ಞೆಮಾಡುತ್ತಾರೆ (ವೀರಯೂ. ೧. ೦೦೨). **ಚಟಿಕಿಹೊಡೆ:** ಆತ ಚಟಿಕಿಹೊಡೆಯುತ್ತ ಸಂತೋಷದಿಂದ ಮನೆಯ ಕಡೆ ಹೊರಟ (ರೂಢಿ). [ ಚಟಿಕೆ₁ (<ಚಿಟುಂಕು) + ಹೊಡೆ₁ (<ಪೊಡೆ₁) ]

**ಚಟಿಕೊಳಗು** 'ಚಿಟಕೊಳಗು' ನೋ.

**ಚಟಿಗೊಳಗು** 'ಚಿಟಕೊಳಗು' ನೋ.

**ಚಟಿಚಟಿ** (ನಾ). ಒಂದು ಅನುಕರಣ ಶಬ್ದ : ಉಸಿರ್ಗಾಳಿ ಕಣ್ಣು ಮುಚ್ಚಿಲ್ಲ ಯೋಗಿಯು ಕೂಸಾಗಿ ಚಟಿಚಟಿ ಚೀರಿಲ್ಲ (ಸಿದ್ಧಪು. ೩-೨೧). ೨. ಮನಸ್ಸಿಗೆ ಆಗುವ ಕಿರಿಕಿರಿ: ನಾನು ಸುಮ್ಮನೆ ಮುಪ್ಪಾಗುತ್ತಾ ಇದೀನಿ. ಆಗ ಈಗ ಮನಸ್ಸಿನ ಚಟಿಚಟಿಗೂ ಇದೇ ಕಾರಣ ಇರಬೇಕು (ರಂಗನಾ. ೯೯).

**ಚಟಿಚಟಿಯಾಗು** = ಒಡೆದುಹೋಗು : ಕಿರುಗತ್ತಿಯನ್ನು ಬೆನ್ನ ಮೇಲಿನ ' ಬೆವರುಸಲೆ 'ಯ ಮೇಲೆ ಯಥೇಚ್ಛ ಆಡಿಸಿ ಅದು ಚಟಿಚಟಿ ಯಾದಾಗ " ಅಯ್ಯಬ್ಬ " ಎಂದು ತೃಪ್ತಿಯ ನಿಟ್ಟುಸಿರು ಬಿಟ್ಟಳು (ಹೊಸಕ್ಕ. ೪೮). **ಚಟಿಚಟಿಯೆನ್ನು** = ಕಿರಿಕಿರಿಯಾಗು: ತಲೆ ಚಟಿಚಟಿ ಯೆನ್ನುತ್ತಿದೆ (ರೂಢಿ).

**ಚಟಿಚಟಿಸು** (ಕ್ರಿ). ಚಟಿಚಟಿ ಎಂದು ಶಬ್ದಮಾಡು : ಸುಡುಗಿಚ್ಚು ಚಟಿಚಟಿಸುತ (ಕಾಲೂರ. ೧೮೪-೪೧೭). [ ಚಟಿಚಟಿ + – ಇಸು₃ ]

**ಚಟಿಚಟಿರ್** (ನಾ). ಒಂದು ಅನುಕರಣ ಶಬ್ದ: ಏನೆಂಬೆನಾ ಹೋಮವ ವೇಳುವೆಡೆಯೊಳು ಸಾನುರಾಗದೆ ರಾಜೆಯನು ಭೂನುತೆವೆನೆ ವೇಳುತಿರೆ ಚಟಿಚಟಿರೆಂಬ ಧ್ವಾನವೆಸೆದುದು (ಅಂಜಿಚ. ೫-೨೨೭).

**ಚಟಿಲ್** (ನಾ). ಒಂದು ಅನುಕರಣ ಶಬ್ದ.

**ಚಟಿಲ್ಚಟಿಲ್** (ದ್ವಿರುಕ್ತಿ) : ಸೋಗೆಯ ಹಂಸೆಯಾನೆ ವೃಷದಂದದ ಸಿಂಗದ ಪಾಂಗಿನಿಂ ಬೆಡಂಗಾಗಿ ಚಟಿಲ್ಚಟಿಲ್ಗಿರೆಯಲೊಂದದ ಮಂದಗತಿ ಕ್ರಮಂ ಮಹಾಭೋಗಿ[ಯನಿಪ್ಪ]ಂ (ಶೋಕಶೋಚ. ೧೧-೩೮) ; ಪೆರ್ಗಲ್ಲಿಂದ ದಪುತ್ತುಂ ಕರ್ಗಲ್ಲಿಂ ನೆರಪಿ ತಂದು ಬರಿಯಲ್ವಲ್ಲಿಂ ನುರ್ಗಾಗಿ ಚಟಿಲ್ಚಟಿಲೆನೆ ಕುರ್ಗುತ್ತುಂ (ಧರ್ಮಾಮೃ. ೬-೧೯೦).

**ಚಟು₁** (ನಾ). ಒಂದು ಅನುಕರಣ ಶಬ್ದ. 'ಚಟುಗುಟ್ಟು' ಪರಾ.

**ಚಟು₂** 'ಚಿಟ್ಟು₁' ನೋ.

**ಚಟುಂಕಿಸು, ಚಟಿಕಿಸು, ಚಟುಕಿಸು** (ಕ್ರಿ). ೧. ಹೆಬ್ಬೆರಳು ಮತ್ತು ಮಧ್ಯದ ಬೆರಳಂಗಳನ್ನು ಸೇರಿಸಿ ಶಬ್ದಮಾಡು ; ಚಟಿಕೆಹಾಕು: (೬). ೨. ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮುರಿ ; ನೆಟಿಗೆ ತೆಗೆ : ಕರಾಂಗುಲಿಯಂ ಚಟುಂ[ಪಾಠಾಂ. ಟು]ಕಿಸಿ . . . ಗಲ್ಲಮಂ ಪಿಡಿದಲುಂಗಿ (ರಾಜಶೇ. ೮-೮೨ ವ); ಕರಪಲ್ಲವಮನೊತ್ತುತ್ತೆ ಬೆರಲಂ ಚಟುಂಕಿಸುತೆ (ಕುಮಾಪು. ೫-೨೯೭). **ಚಟಿಕಿಸು :** ೧. ಯಾದವರ ಬಡಕಜುವೆ ಬಾ ಬಾ ಎಂದು ಚಟಿಕಿಸಿ ಕರೆದು ಗುರುಸುತ ಸಾತ್ಯಕಿಯ ತಾಗಿದನು (ಕುಮ್ಮಾಕ. ೩-೧೭). **ಚಟುಕಿಸು :** ೧. ಜಾಲಿಕಂ ನೋಡಿ . . . ಮದವಣಿಗಂ ಬಂದೀ ಜನದ ಬಗೆಗೆ ಬೆಱಗು ಸೋಜಿಗವುನೆ ಮಾಬ್ಬುದೆಂದು ಚಟುಕಿಸಲಾಗಳ್ (ದಶಕು. ೬-೧೧೭) ; ಕರೆಯಲುಂಗೈತಳಕೆ ಬಹನೇ ತರಣಿ ವನಕೇಸರಿಯ ಚಟುಕಿಸಿ ಕರೆಯೆ ಹೊಱೆಯನು ಹೊದ್ದುವುದೆ (ಕೌಶಿಕಾ. ೧-೪೧) ; ಬೆರಳು ಚಟುಕಿಸಿ ಕರೆವ ಕೃಷ್ಣನ ನಿರುಪಮಾಕ್ಷೇಪವನು ಕೇಳುತ (ನಿಭಾಗ. ೧೦-೭೮-೫೦). [ ಚಟುಂಕು + – ಇಸು₃ ]

**ಚಿಟುಂಕು, ಚಿಟಕಿ$_1$, ಚಿಟಕು, ಚಿಟಿಕಿ, ಚಿಟಿಕು, ಚಿಟಿಕೆ$_1$, ಚಿಟುಕೆ. ಚಿಟುಕು$_1$, ಚುಟಕಿ, ಚುಟಕು, ಚುಟಕೆ, ಚುಟಿಕೆ, ಚುಟಿಗೆ, ಚುಟುಕ$_1$, ಚುಟುಕಿ, ಚುಟುಕು** (ನಾ). ೧. ಕೈಯ ಹೆಬ್ಬೆರಳು ಮತ್ತು ಮಧ್ಯದ ಬೆರಳುಗಳನ್ನು ಸೇರಿಸಿ ಮಾಡುವ ಶಬ್ದ : ವೇದಪಿತಾಮಹನೆಂಬ ಪೆಸರಿನಂಗುಲಿಯ ಚಿಟುಂಕನಿಟ್ಟು ಕರೆದು (ವೃಷವಿ. ೪೮-೫೧ ವ). **ಚಿಟಕಿ$_1$:** ೧. 'ಚಿಟಕಿಹೊಡೆ' ಪರಾ. ೨. ಹೆಬ್ಬೆರಳು ಮತ್ತು ತೋರು ಬೆರಳುಗಳನ್ನು ಸೇರಿಸಿ ಹಿಡಿಯಬಹುದಾದಷ್ಟು ; ಸ್ವಲ್ಪಮಾತ್ರ : ಅಲ್ಲಿ ಕುಳಿತವರು ಒಂದು ಚಿಟಕಿ ನಶ್ಯ ಹಾಕಿಕೊಳ್ಳಬೇಕಾದರೂ ಹೊರಗೆ ಎದ್ದು ಹೋಗುತ್ತಿದ್ದರು (ಹುಟ್ಟಿಹ. ೧೪). **ಚಿಟಕು :** ೩. ನಲವತ್ತು ಸುತ್ತು ನೂಲಿನ ಕುಚ್ಚು : (ಕ). ೪. ಒಂದು ಬಗೆಯ ಚಿಕ್ಕ ಹೋಳಿಗೆ : "ಚಿಟಕು–ಹೋಳಿಗೆ" (ಜಾನಕೋ. ೫೬). **ಚಿಟಿಕಿ :** ೧. 'ಚಿಟಿಕಿಹಾಕು' ಪರಾ. ೨. ಒಂದು ಕಪ್ಪು ಬೇಯಿಸಿದ ತರಕಾರಿಗಳು : ೧ ಚಿಟಕಿ ಅರಸಿನ (ಅಡುಶಾ. ೧೦೬). **ಚಿಟಿಕು :** ೧. 'ಚಿಟಿಕಿಬಿ' ಪರಾ. **ಚಿಟಿಕೆ$_1$ :** ೧. 'ಚಿಟಿಕೆಹಾಕು', 'ಚಿಟಿಕೆಹೊಡೆ' ಪರಾ. ೨. ರಾಯರು ಒಂದು ಚಿಟಕೆ ನಶ್ಯವನ್ನು ಜ್ಞಾನವಶಕ್ಕಾಗಿ ಮಂತ್ರಿಸಿ ಮೂಗಿಗೆ ಹಾಕಿಕೊಂಡು (ರಾಯಳ. ೪೦) : ನವಸಾರ ಪುಡಿಯನ್ನೂ ಸುಣ್ಣದ ಭರಣಿಯೊಂದನ್ನೂ ತೆಗೆದುಕೊಂಡು, ಎರಡನ್ನೂ ಎರಡೆರಡು ಚಿಟಕೆ ಅಂಗೈಯಲ್ಲಿ ಹಾಕಿಕೊಂಡು (ಶಾಂತಲಾ. ೭೪). ೫. ಚಿಕ್ಕದು ; ಸಣ್ಣದು : "ಚಿಟಕೆ" ಯಲ್ಲಿ ಮಾಡಿಬಿಡು (ನಮ್ಮನು. ೯೪). 'ಚಿಟಿಕೆಗುಬ್ಬಿ' ಪರಾ. ೬. (ಶೀತ, ವಾತ ಮುಂತಾದವುಗಳನ್ನು ಗುಣಪಡಿಸಲು) ಬಳೆಯ ಚೂರು, ಚರ್ಮದ ತುಣುಕು ಮುಂತಾದುವನ್ನು ಕಾಯಿಸಿ ನೆತ್ತಿ, ಹಣೆ ಮುಂತಾದ ಕಡೆ ಬರೆಯೆಳೆಯುವಿಕೆ : ಮಗುವಿಕೆ ಸಂದಾಗಿದೆ, ಚಿಟಕೆ ಹಾಕಿಸಬೇಕು (ರೂಢಿ). ೭. ಮರ ಅಥವಾ ದಂತದಿಂದ ಮಾಡಿದ ತಾಳಹಾಕುವ ಒಂದು ಸಾಧನ : ದಾಸರು ಚಿಟಕೆಗಳಲ್ಲಿ ತಾಳಹಾಕುತ್ತಾ ಹಾಡುತ್ತಿದ್ದರು (ರೂಢಿ). **ಚಿಟುಂಕೆ :** ೧. 'ಕೈಚಿಟುಂಕೆ' ಪರಾ. **ಚಿಟುಕು$_1$ :** ೧. ಗುರುವಿನೊಳಗಪಹಾಸ್ಯ ಪ್ರತ್ಯುತ್ತರಂಗಳಂ ಬೆರಳಂ ಚಿಟುಕಂ . . . ಮಾಡಲಾಗದು (ದೀಕ್ಷಾಬೋ. ೪೦-೨೦). ೫. ಕಾಲವಶವಿ ಜಗದ್ವ್ಯಾವಹಾರವೆಲ್ಲವುನ್ಮಿಷ ನಿಮಿಷವ್ಯದೆ ಚಿಟುಕು (ವೀಕ್ಷಪು. ೪-೫-೪೭). 'ಚಿಟುಕುವನಿ' ಪರಾ. ೮. ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮುರಿಯುವುದು ; ನೆಟಿಕೆ : ಮೆಲ್ಲನೆ ಬೆರಳ್ಗಳ ಚಿಟುಕನೊತ್ತುತವೆ . . . ಸಂತೈಸಿದನು (ಅಂಜಪ. ೮-೯೬). ಬೆರಳ ಚಿಟುಕ ತೆಗೆವನು (ಶರಪ. ೪೧-೧೦೯). 'ಚಿಟುಕಂಮುರಿ' ಪರಾ. **ಚುಟಕಿ :** ೭. ನಾಮದೇವ . . . ಚುಟಕಿಯಿಂದ ತಾಳಹಾಕುತ್ತ ಕುಣಿಯುತ್ತ ಇದ್ದುಬಿಡುತ್ತಿದ್ದನು (ಭಾರದ. ೨೯೨). **ಚುಟಕು :** ೫. "ಸ್ವಲ್ಪು, ಸಣ್ಣ" (ಜಾನಕೋ. ೫೭). **ಚುಟಕೆ :** ೬. ಇನ್ನೂ ಅವರಿಗೆ ಚುಟಕೆ ಬದ್ದಿಲ್ಲ. ಬಿದ್ದ ಮೇಲೆ ಇಂಥ ಉಸಾಬರಿ ಬಿಡೋದು (ಊರುಳ. ೯೫). **ಚುಟಿಕೆ :** ೬. 'ಚುಟಿಕೆಹಾಕು' ಪರಾ. **ಚುಟಿಗೆ :** ೫. ಎಲ್ಲ ಕೆಲಸವೂ ಚುಟಿಗೆಯಲ್ಲಿ ಮುಗಿಯಿತು (ರೂಢಿ). **ಚುಟುಕ$_1$ :** ೫. ವೈಶ್ವಾನರನ ಆವರ್ತನೃತ್ಯರಂಗದಲ್ಲಿ ಸಣ್ಣ ಚುಟುಕ (ಅರಳು. ೧೯೫ ೨) ; ಅವನಿಗೆ ಒಂದೆರಡು ಚುಟುಕ ವೈದ್ಯಗಳನ್ನು ಹೇಳಿಕೊಡುತ್ತ . . . ಪಂಡಿತನನ್ನಾಗಿ ಮಾಡಬೇಕೆಂದಿದ್ದರು (ಶಾಂತಲಾ. ೨೪೩). **ಚುಟುಕಿ :** ೫. ಸೂಜಿಕಾಯಕದ ಕುಶಲಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ (ನಂಮು. VII ನಾಲ್ಕುಮಾತು). **ಚುಟುಕು :** ೫. ಚುಟುಕಾಗಿಯೇ ಉತ್ತರ ಹೇಳಿ ಹೊರಟುಹೋದ ರಾಮಕೃಷ್ಣ (ತ್ಯಾಗಮ. ೪೬) : ಈ ಆಟಗಳು ಚುಟುಕು ಪಲ್ಲವಿಗಳ ತಾನದೊಂದಿಗೆ ಇರುವ ಮೂಲಕ ಆಡುವ ಮಕ್ಕಳಿಗೆ ದಣಿವೇ ಅನಿಸದು (ಕನ್ನಜಾ. ೪೦).

ಚಿಟಕಿಚಪ್ಪರ = (ಅಲಂ) ಕಡಮೆವೆಚ್ಚ : ಚಿಟಕಿ ಚಪ್ಪರ ಆರು ಕಾಲ ಬೇಟೆ (ಗಾದೆ) ; ಅವನು ಮಗಳ ಮದುವೆಯನ್ನು ಚಿಟಕಿಚಪ್ಪರದಲ್ಲಿ ಮುಗಿಸಿದ (ರೂಢಿ).

[ ದೇ.೫ ತಮಿ. ಚಿಟಿಕೈ, ಚಿಟ್ಟಿಕೈ, ಚುಟುಕ್ಕು ; ತುಳು. ಚಿಟಿಕಿ : ಚಿಟ್ಕ್ : ತೆಲು. ಚಿಟಿಕ, ಚಿಟುಕು./ಮರಾ. ಚುಟಕೀ./ಸಂ. ಛೀಟಿಕಾ ]

**ಚಿಟುಂಕೆ** 'ಚಿಟುಂಕು' ನೋ.

**ಚಿಟುಕಿಕ್ಕು** (ಕ್ರಿ). ಬೆರಳುಗಳಿಂದ ಶಬ್ದಮಾಡು ; ಚಿಟಿಕೆಹಾಕು : ಇಂತುಚಚ್ಚು ಚ್ಚಿರೇಯೆಂದೆನುತ ಚಿಟುಕಿಕ್ಕುತವೆ ತನ್ನರಮನೆಯ ಹಿತ್ತಿಲ ಬಾಗಿಲಲಿ ಲಿಂಗಪ್ರಸಾದವನು ಜನನಿ ತಂದವನಿಯಲಿ ಸುರಿಯಲು (ಬಸಪು. ೬೧-೨೦). [ ಚಿಟುಕು$_1$(<ಚಿಟುಂಕು) + ಇಕ್ಕು ]

**ಚಿಟುಕಿಡು, ಚಿಟಿಕಿಡು** (ಕ್ರಿ). = ಚಿಟಿಕೆಹಾಕು ೧ : ತೊದಳ್ನುಡಿ ನುಡಿದಂ ತಳರ್ನಡೆಗಳಂ ನಡೆದಂ ಚಿಟುಕಿಟ್ಟೊಡಾಡಿದಂ (ಅನಂಪು. ೬-೬) ; ಅದುಭುತ ಸ್ವಾಂತನ್ನಿಗುಬಿ ಚಿಟುಕಿಡುತ ಬೆರಳಂ ನಾಸಿಕದೋಳಿಟ್ಟು (ಬಸಪು. ೪೧-೧೬). **ಚಿಟಿಕಿಡು :** ಚಿಟಿಕಿಟ್ಟು ಮೈದಡಹಿ ಹಾಸಗಳ ಕಳಚುತ್ತ (ವಂಕಾರಾ. ೩-೬-೪೧). [ ಚಿಟುಕು$_1$ (<ಚಿಟುಂಕು) + ಇಡು$_1$ ]

**ಚಿಟುಕಿಸು** 'ಚಿಟುಂಕಿಸು' ನೋ.

**ಚಿಟುಕೀ** (ಕ್ರಿ). ಬೆರಳುಗಳನ್ನು ಮೆತ್ತಗೆ ಅದುಮಿ ಗಿಣ್ಣುಗಳ ಬಳಿ ಸದ್ದಾಗುವಂತೆ ಮಡಿಸು ; ನೆಟಿಗೆ ತೆಗೆ : ನುಣ್ಪೊಡೆಗಳಂ ಒಡಿದೌಂಕಿ ಬೆರಲ್ಗಳಂ ಕ್ರಮಕ್ರಮದೊಳೆ ಕೋದು ತಳ್ತು ಚಿಟುಕಿತ್ತು . . . ರಸದಂ ಬುಲಮುಂ ಸವಿಮಾಡಿ ನೀಡಿ ಮಲ್ಪುಮರಿ ಬಟಲ್ದುತನ್ನನಿಯಳಂ ನೃಪ ನಾಜಿಸಿದಂ ರತಾಂತದೊಳ್ (ಸೂಕ್ತಿಸು. ೧೪-೭೫).

[ ಚಿಟುಕು$_1$(<ಚಿಟುಂಕು) + ಈ$_2$ ]

**ಚಿಟುಕು$_1$** 'ಚಿಟುಂಕು' ನೋ.

**ಚಿಟುಕು$_2$** (ನಾ). ಪ್ರಣಯಕೋಪ; ಶೃಂಗಾರಚೇಷ್ಟೆ: "ಚಿಟುಕು ಬಿಂಬ ಮಕ್ಕುಂ" (ಮಂಗರಾ. ೯೭-೧೬). P 'ಬಿಂಬ' ಎಂಬುದು 'ಬಿಬ್ಬೋಕ' ಎಂಬುದರ ಸಮಕಳಿರೂಪವಿರಬಹುದು. [ ದೇ.೫ ತೆಲು. ಚಿಟ್ಟಿಕ ]

**ಚಿಟುಕು$_3$** (ನಾ). (ಕುದುರೆಯ) ಕಿವಿಗಳ ಹೊರಭಾಗ : "ಕಿವಿಗಳ ಹೊರಗನು ಚಿಟುಕೆಂಬುದು" (ಅಶ್ವವೈ. ೮-೨೪ ಟೀಕೆ). [ ? ]

**ಚಿಟುಕುಗಳೆ** (ಕ್ರಿ). ಬೆರಳುಗಳನ್ನು ಸದ್ದಾಗುವಂತೆ ಮಡಿಸು ; ನೆಟಿಗೆ ತೆಗೆ : ಬೆನ್ನ ನಸು ಮುರಿಯುತ್ತೆ ಕರತಲಾಂಗುಳಿಗಳಂ ಚನ್ನಮರ್ದು ಚಿಟುಕುಗಳೆಯುತ್ತೆ (ಅರಾಕ. ೧೧-೮೦) ; ಮುಂಗುರುಳನೆ ತಿದ್ದಿ ಮುದ್ದಿಸಿ ಬಯಲನಾಲಂಗಿಸಿಯವಳಂಗುಳಿಗಳ ಹಾಂಗೆ ಮೃಣಾಳವ ಚಿಟುಕುಗಳೆವ ಕರಣಂಗಳಿಗುಜ್ಜುಗಿಸುವನು (ಮದೇಪು. ೨೧-೩೪).

[ ಚಿಟುಕು$_1$(<ಚಿಟುಂಕು) + ಕಳೆ$_1$ ]

**ಚಿಟುಕುಮುರಿ** (ಕ್ರಿ). ೧. ನೆಟಿಗೆ ಮುರಿ. ೨. (ಅಲಂ) ಕೆಟ್ಟದ್ದನ್ನು ಬಯಸು : ಅಮಲನ ಹೆಸರಿನಲ್ಲಿ ಚಿಟುಕುಮುರಿಯಲು ಚುಚ್ಚುಮಾತಾಡಲು ಬಿಡುತ್ತಿರಲಿಲ್ಲ (ಇಪ್ಪಳ. ೨೪೩) ; ಹೊಟ್ಟೆಕಿಚ್ಚಿನ ಹೆಂಗಸರು ಚಿಟುಕು ಮುರಿದರು (ವಾಗ್ಮಿವಿ. ೧೦೮). [ ಚಿಟುಕು$_1$(<ಚಿಟುಂಕು) + ಮುರಿ$_1$ ]

**ಚಿಟುಕುಮುಳ್ಳು, ಚಿಟಕುಮುಳ್ಳು, ಚಿಟುಗುಮುಳ್ಳು** (ನಾ). ಕಾಲಿನಲ್ಲಿ ಚುಚ್ಚಿಕೊಂಡು ಹೊರತೆಗೆಯಲು ಕಷ್ಟವಾಗುತ್ತಿರುವ ಮುಳ್ಳು,– ಹೊರಬರದೆ ನೋವುಂಟುಮಾಡುತ್ತಿರುವ ಮುಳ್ಳು : ನನ್ನ ನಿಮ್ಮ ಮನದಲ್ಲಿ ಅಥವಾ ಯಾವ ಮನದಲ್ಲಿಯೇ ಆಗಲಿ ಚಿಟುಕುಮುಳ್ಳು ಆಡಿಸುತ್ತ ಬಂದಿದೆ (ವಚಸಂ. LXXII, ೬೮೪). **ಚಿಟಕುಮುಳ್ಳು :** ಚಿಟಕು ಮುಳ್ಳಿನಂತೆ ಅವನು ಮನಸ್ಸಿಗೆ ನೋವುಂಟುಮಾಡುತ್ತಲೇ ಇದ್ದ (ರೂಢಿ). **ಚಿಟುಗುಮುಳ್ಳು :** ಕಾಲಿನಲ್ಲಿರುವ ಚಿಟುಗುಮುಳ್ಳು ಬಹಳ ಯಾತನೆಯನ್ನುಂಟು ಮಾಡುತ್ತಿದೆ (ರೂಢಿ).

ಚಟುಕುಮುಳ್ಳಾಗು = ನೋವುಂಟುಮಾಡು ; ವ್ಯಥೆಪಡಿಸು : ಅದರ ಕಿರುಕುಳ ಬಹಳ ಜನಕ್ಕೆ ಚಟುಕುಮುಳ್ಳಾಗಿ . . . ಇರುತ್ತದೆ (ದೀಪಹ. II, ೩೬೪). **ಚಟುಕುಮುಳ್ಳಾಟ** = ಒಳಗೊಳಗೇ ಉಂಟಾಗುವ ನೋವು,- ಯಾತನೆ : ಸೂಟಿಯನ್ನು ಮುಗಿಸಿ ಊರನ್ನು ಬಿಡುವ ತನಕವೂ ಚಟುಕುಮುಳ್ಳಾಟವಾಗಿತ್ತು (ದೀಪಹ. II, ೧೬೭) ; ನೀಲಕಂಠನ ಸಂಗಡ ವನಮಾಲಿಲಾಲನ ಚಟುಕುಮುಳ್ಳಾಟ, ಛಲನೆ ಬಹಳ ದಿನಗಳಿಂದಲೂ ನಡದೇ ಇತ್ತು (ಇಪ್ಪಳ. ೪೦೧). **ಚಟುಕುಮುಳ್ಳಾಡಿಸು**, **ಚಟಕುಮುಳ್ಳಾಡಿಸು**, **ಚಟುಗುಮುಳ್ಳಾಡಿಸು** = ಒಳಗೊಳಗೇ ಚುಚ್ಚಿ ವ್ಯಥೆಪಡಿಸು : ಕಾವೇರಿ ಮದುವೆ ಆಗದೆ ಇದ್ದಾಗ ಶೇಷಣ್ಣ ಆಕೆಯನ್ನು ಚಟುಕುಮುಳ್ಳಾಡಿಸುತ್ತಿದ್ದ ನಂತೆ (ವೃನಿ. ೧೬೬) ; ಸರ್ವರ ಕಣ್ಣಿಗೂ ಬೀಳುವಂತೆ ನಾವು ಪ್ರದರ್ಶಿಸು ತ್ತಿದ್ದೇವಲ್ಲ ಎಂಬ ಆತ್ಮಪ್ರಜ್ಞೆ ನಮ್ಮ ಒಳಗೆ ಚಟಕುಮುಳ್ಳಾಡಿಸುತ್ತದೆ (ಗಾಳಿಪ. ೬೮); ಇದು ಅವಳ ಮನಸ್ಸಿನಲ್ಲಿ ಚಟುಗುಮುಳ್ಳಾಡಿಸಿದಂತೆ ಮಾಡುತ್ತಿತ್ತು (ಇಪ್ಪಳ. ೬೪).

[ ಚಟುಕು$_1$ (< ಚಟುಂಕು) + ಮುಳ್ಳು (< ಮುಳ್$_2$) ]

**ಚಟುಕುವನಿ** (ನಾ). ತೊಟ್ಟಿಕ್ಕುವ ಹನಿ ; ತುಂತುರುಹನಿ ;, ಸೋನೆ: ಮದನಮದಮರ್ದನನ ಬರವಿಂಗೆ . . . ಚಳೆಯಂಗೊಡುವವೋಲೆಸೆದುದಾ ಚಟುಕುವನಿ ಸಿದ್ಧಪತಿ ನಲಿಯಲು (ಸಿದ್ಧರಾ. ೩-೩೨).

[ ಚಟುಕು$_1$ (< ಚಟುಂಕು) + ಪನಿ$_2$ ]

**ಚಟುಕುವಾರೆ**(ನಾ). ಒಂದು ಬಗೆಯ ಔಷಧಿ ಗಿಡ: "ಜಲರಾಮು:-ಚಟುಕು ವಾರೆ" (ಓಷಧಿ. ೬೦). [ ? ]

**ಚಟುಕೆ** 'ಚಟಿಕೆ$_2$' ನೋ.

**ಚಟುಕೆನ್** (ಕ್ರಿ). ನೆಟಿಗೆ ಬರು : ಸೌಷ್ಠವದಿಂದಂ ಚಟುಕೆನ್ನದಿರ್ಪ ಮೊಟ ಕೆಯ್ ವೃತ್ತತ್ವದಿಂದೊಂದಿ ತೋಱುವ ಮುಂಗೆಯ್ ಕಡುದೊಡ್ಡಿತಪ್ಪ ತಳವೊಳ್ಪಿಂದೊಂದಿ ನೇರ್ಪಟ್ಟು ತೋಱುವ ದೀರ್ಘಾಂಗುಲಿ ಕೆಂಪುವೆತ್ತಸೆ ವುಗುರ್ ಮಾಟ್ಕುಂ ಮಹೈಶ್ವರ್ಯಮಂ (ಲೋಕೋಪ. ೧೧-೧೧).

[ ಚಟುಕು$_1$ (< ಚಟುಂಕು) + ಎನ್$_1$ ]

**ಚಟುಕೊತ್ತು** (ಕ್ರಿ). = ಚಟಂಕಂಗಳೆ : ಎಳವೆರಲ್ಗಳ ಚಟುಕೊತ್ತಿ ಕೈ ದೊಡಿಸುವ ಬಳೆಗಾಱಿರ್ದರಿಕ್ಕೆಲದಿ (ಪೋಹಕ. ೩-೨೩).

[ ಚಟುಕು$_1$ (< ಚಟುಂಕು) + ಒತ್ತು$_1$ ]

**ಚಟುಗುಟ್ಟು** (ಕ್ರಿ). ೧. ಚಟ್‌ಚಟ್ ಎಂದು ಶಬ್ದಮಾಡು : ಕೆಂಡದ ಮೇಲೆ ಉಪ್ಪು ಬಿದ್ದು ಚಟುಗುಟ್ಟುತ್ತಾ ಇದೆ (ರೂಢಿ). ೨. (ಅಲಂ) ಸಿಡಿಮಿಡಿಗೊಳ್ಳು : ಕಂಗೆಟ್ಟವುದ ಕಚ್ಚಿ ತೂಬರದ ಕೊಳ್ಳಿಯೊಲು ಚಟು ಗುಟ್ಟುತಂ (ಷಕಿಲ. ೧೩-೨೩). [ ಚಟು$_1$ + ಕುಟ್ಟು$_1$ ]

**ಚಟುಗುಮುಳ್ಳು** 'ಚಟುಕುಮುಳ್ಳು' ನೋ.

**ಚಟುಚಟಕ** (ನಾ). ಸಣ್ಣಗುಬ್ಬಚ್ಚಿ ; ಚಿಟಗುಬ್ಬಿ : ಹಸುಬಂ ಚಟುಚಟಕ ಕಬ್ಬಕ್ಕಿ ಹೆಬ್ಬಕ್ಕಿಗಳ ನೋಡಿದವು (ಮದೀಪು. ೫-೯).

[ ಚಟು$_2$ (< ಚಟ್ಟು$_1$) + ಚಟಕ$_1$ ]

**ಚಟುಬಾಳೆ** 'ಚಟ್ಟುಬಾಳೆ' ನೋ.

**ಚಟುಮಿಟಿ** (ನಾ). ಅಸಂಬದ್ಧವಾದುದು : ಲಂಡ ಕೇಳ್ನಿನ್ನ ಚಟುಮಿಟಿ ಬಿನುಗುವಾದವು . . . ಅತರ್ಕ್ಯನನೆಯ್ದಲಾರ್ಪುದೇ (ವೀಕ್ಷ್ಮಪು. ೪-೬-೨೩).

[ ? ]

**ಚಟ್ಟ$_1$** 'ಚಟ್ಟು$_1$' ನೋ.

**ಚಟ್ಟ$_2$** 'ಚಿಟ್ಟ' ನೋ.

**ಚಟ್ಟಗುಬ್ಬಿ**, **ಚಿಟಗುಬ್ಬಿ**(ನಾ). ಒಂದು ಬಗೆಯ ಸಣ್ಣಗುಬ್ಬಿ: ಚಟ್ಟಗುಬ್ಬಿ ಚಿಂವು ಚಿಂವು (ಅರಳು. ೨೬೬-೧). **ಚಿಟಗುಬ್ಬಿ**: "ವರ್ತಿಕೆ – ಚಿಟಗುಬ್ಬಿ" (ಗಂಗಾಮ. ೨೮೩). [ ಚಟ್ಟ$_1$ (< ಚಟ್ಟು$_1$) + ಗುಬ್ಬಿ$_2$ ]

**ಚಟ್ಟಚಚ್ಚು** (ನಾ). ೧. ಅಚ್ಚನ್ನು ತಯಾರಿಸುವ ಚಿಕ್ಕಸಾಧನ: ಸಕ್ಕರೆಅಚ್ಚು ಗಳನ್ನು ತಯಾರಿಸಲು ಚಟ್ಟಚಚ್ಚನ್ನು ಉಪಯೋಗಿಸುತ್ತಾರೆ(ರೂಢಿ). ೨. ಸಣ್ಣ ಅಚ್ಚು ; ಬೆಲ್ಲ,ಸಕ್ಕರೆ ಮುಂತಾದುವುಗಳ ಎರಕ ಹೊಯ್ದ ಚಿಕ್ಕ ಆಕೃತಿ : ನಾಲ್ಕು ಚಟ್ಟಚಚ್ಚು ಬೆಲ್ಲ ಬೇಕಾಗಿದೆ (ರೂಢಿ).

[ ಚಟ್ಟು$_1$ + ಅಚ್ಚು$_3$ ]

**ಚಟ್ಟಜೇನು**, **ಚಿಟ್ಟಜೇನು** (ನಾ).ಒಂದು ಬಗೆಯ ಜೇನು ; ಕಿರಿಜೇನು: ಹೊಗೆಲಸಿ ಚಟ್ಟಜೇನಿಳಿಸಿದೀ ಚಿಂಜೇನು (ಜಾಕಸಿ. ೨೩-೫೨೦). **ಚಿಟ್ಟಜೇನು** : 'ಚಿಟ್ಟಜೇನುತುಂಪ್ಪ' ಪರಾ.

[ ಚಟ್ಟ$_1$ (< ಚಟ್ಟು$_1$) + ಜೇನು$_1$ (< ಜೇನ್) ]

**ಚಟ್ಟನಬೇರು** (ನಾ). ಒಂದು ಬಗೆಯ ಔಷಧಿ ಗಿಡ: ಅಡಕೆ, ಚಟ್ಟನಬೇರು, ಸೊಗದೆಬೇರು . . . ಮೆಣಸು ಇವಂ ಸಮತೂಕ ಕಷಾಯವಿಟ್ಟು ತೆಗೆದು ಕೊಳ್ಳಲು ರಾತ್ರಿಜ್ವರಂ ನಾಶಮಕ್ಕುಂ (ಸಕವ್ಯ. ೦೦೮).

[ ? + ಬೇರು (< ಬೇರ್) ]

**ಚಟ್ಟನೆ** (ಅ). ಗಟ್ಟಿಯಾಗಿ ; ಜೋರಾಗಿ : ಅವಳು ಚಟ್ಟನೆ ಚೀರಿದಳು (ಧಾರಕಿ. ೨೦). [ ಚಟ್ +- ಅನೆ$_1$ ]

**ಚಟ್ಟಬಳ** (ನಾ). ಸಣ್ಣಬಳ್ಳ : ಚಟ್ಟಬಳಗಳಿಗೆ ಕಟ್ಟುಗಳಲ್ಲದೆ ಚಿಟ್ಟಕ್ಕೆ ಕಟ್ಟ ನಿಕ್ಕುವರೆ (ಶಾಂತೀಶ. ೬-೫೨). [ಚಟ್ಟ$_1$ (< ಚಟ್ಟು$_1$) + ಬಳ್ಳ (< ಬಳ್ಳ)]

**ಚಟ್ಟಬಾಸುರ** (ನಾ). ಸಣ್ಣಜಾತಿಯ ಕಬ್ಬು (?) : ಕರಿಯ ಕಬ್ಬು ರಸ ದಾಳಿಯ ಬಿಳಿಗಬ್ಬು ಮೆಱೆವ ಚಟ್ಟಬಾಸುರದ ಹೊಱೆಹೊಱೆಗಟ್ಟಿ ನಿಲ್ಲಿಸಿ ಮಾಱುವುದನಾ ದೊರೆಮಗ ಕಂಡನು (ಜ್ಞಾನಕ. ೩೮-೧೨೪).

[ ಚಟ್ಟ$_1$ (< ಚಟ್ಟು$_1$) + ? ]

**ಚಟ್ಟಬಿಲ್ಲು** (ನಾ).ಸಣ್ಣಬಿಲ್ಲು : ಕಡೆಗೊಂದು ಹಕ್ಕಿ ಹೊಡೆಯುವ ಚಟ್ಟ ಬಿಲ್ಲಾದರೂ ಇತ್ತೇ ? (ಮುಳಿಮು. ೬೬).

[ ಚಟ್ಟ$_1$ (< ಚಟ್ಟು$_1$) + ಬಿಲ್ಲು$_1$ (< ಬಿಲ್$_2$) ]

**ಚಟ್ಟಮುಟ್ಟ**, **ಚಟ್ಟಾಮುಟ್ಟಿ**, **ಚಿಟ್ಟೆಮುಟ್ಟಿ** (ನಾ). ಒಂದು ಬಗೆಯ ಮೂಲಿಕೆ : ಚಟ್ಟಮುಟ್ಟಬೇರು, ಪಿರಾಮುಟ್ಟವೇರು (ಸಕವ್ಯ. ೧೦೭). **ಚಟ್ಟಾಮುಟ್ಟಿ** : ದಶಮೂಲ . . . ಕಿಱುಕಳ್ಳಂಗಡಲೆ, ಚಟ್ಟಾಮುಟ್ಟಿ, ಇಷ್ಟನೂ ಪ್ರತ್ಯೇಕ ಹತ್ತು ಹಲಗಳ ಚೆನ್ನಾಗಿ ಒಣಗಿಸಿ, ಜಜ್ಜುಗುಟ್ಟಿ (ವೈದ್ಯಸಾ. I, ೪೦೫). **ಚಿಟ್ಟೆಮುಟ್ಟಿ** : ಧಾತಕಿಕುಸುಮ, ಎಳೆಚಿಟಕ್ಕೆ, ನೆಲಗುಳ್ಳ, ಚಿಟ್ಟೆಮುಟ್ಟಿ, ಶುಂಠಿ, ಅರಿಸಿನ ಇವಂ ಕಷಾಯವಿಕ್ಕಿ ಕೊಡಲು ವಾತಜ್ವರಂ ಮಾಣ್ಗುಂ (ಸಕವ್ಯ. ೬೯). [ ← ತೆಲು. ಚಿಟಮುಟಿ ]

**ಚಟ್ಟಲು** (ನಾ). ಒಂದು ಬಗೆಯ ಮರ: (ಎಸಕ್ಕು. XVII, ೩೩). [ ? ]

**ಚಟ್ಟವುಡಲ**, **ಚಟ್ಪೊಡಲ** (ನಾ). = ಚಿಟ್ಟುಹರಳು : ಕರಿಯ ಚಿಕ್ಕಿನ ತಲೆಯೊಳಗೆ ಚಟ್ಟವುಡಲವ ಬಿತ್ತಿ ಬೆಳೆದು ಆ ಬೀಜವನ್ನು ಬಾಯೊಳಗೆ ಹಾಕಿಕೊಳ್ಳೆ ಆ ಚಿಕ್ಕೆನಂತಕ್ಕು (ವಿಷ್ಣುವಿ. ೨೦೯). **ಚಟ್ಪೊಡಲ**: ವರ ಚಟ್ಪೊಡಲ ದೇಣ್ಣೆಯಲಾಗಲಿ ಮೇಣಾರುವ ತ್ರಿಫಲೆ ಕಷಾಯದಲಿ (ಶಾಳ್ಕಸಾಂ. ೨೦) ; ಚಟ್ಪೊಡಲದ ಹರಳು ಒಂದು ಹಿಡಿಯನ್ನು ಮೇಲಣ ತೊಟ್ಟ ತೆಗೆದು ಆ ತಿರುಳ ಹುಳಿಮಜ್ಜಿಗೆಯಲ್ಲಿ ಅರೆದು ಕುಡಿಯ ಶ್ವಾಸಪಾಸಗಳು ಹುಟ್ಟು ಗೆಡುವುವು (ಸಕವ್ಯ. ೨೦೬): ಚಟ್ಪೊಡಲ: – ಈ ಎಣ್ಣೆಯಂ ಹಾಲಲ್ಲಿ ತೆಗೆದು ಕೊಳ್ಳೆ ವಾತೋದರ ಮಾಣ್ಗುಂ (ವಿಷ್ಣುವಿ. ೪). [ಚಟ್ಟು$_1$+ಅವುಡಲ]

**ಚಟ್ಟಹಲಗೆ** (ನಾ). ಚಿಕ್ಕತಮ್ಮಟೆ : ಕರಡಿಯ ಮಜಲು ಊಡಕ – ಚಟ್ಟ ಹಲಗೆಯ ಮಜಲಿನವರು (ಸುಪರ್ಣ. ೪೦).

[ ಚಟ್ಟ$_1$ (< ಚಟ್ಟು$_1$) + ಹಲಗೆ (< ಪಲಗೆ) ]

**ಚಟ್ಟಹುಲ್ಲು** (ನಾ). ಸಣ್ಣಜಾತಿಯ ಹುಲ್ಲು : ಚಟ್ಟಹುಲ್ಲು – ಇದರಿಂದ ಬಹಳ ಚಾಪೆಗಳನ್ನು ಮಾಡುತ್ತಾರೆ (ಸಿದ್ಧಾಂತಿ. ೦೩೩).

[ ಚಟ್ಟ$_1$ (< ಚಟ್ಟು$_1$) + ಹುಲ್ಲು (< ಪುಲ್) ]

**ಚಿಮ್ಮಿ₂** (ನಾ). ಚರ್ಮ (?): ಚರಣದೊಳಿಸೆವ ಚಿಮ್ಮಿಯ ಕೆಂಪು ಬಿಗಿದುಟ್ಟ ಮರಕತವಟ್ಟೆ ವೊಂದಳಿರು ಸಿರದಲಿ ಮೆಟ್ಟಿಯ (ಕೋಹಿತ. ೧೯-೩೨). [ ? ]

**ಚಿಮ್ಮಿಸು** (ಕ್ರಿ). ೧. ಬೆರಳಿನಿಂದ ಮಿಡಿ,-ಮೀಟು. ೨. **ಹಾರಿಸು; ನೆಗೆಯಿಸು**: ವಾನರರಿಗೋಸುಗ ಗಿರಿಯನೆತ್ತಿ ಚಿಮ್ಮಿಸಿ ನೆಲಕೆ ನಿಲಿಸಿದ ನೀ ಅಸಮ ಹನುಮಂತ (ಪುರಂದ. ೨-೬೩-೩). ೩. **ಹೊರ ಹೊಮ್ಮಿಸು; ಸ್ರವಿಸು**: ಪಾಪರಟುಕಿರ್ವ ಬಾಲಕನ ಪಾದಪೂನಾಲಿಗೆ ಹಸ್ತವಂ ಬಿಸುಟತಿವೇಗದಿಂ ಪಂದು ಸೋಗಿಳೊಳದ್ದಮಿಟ್ಟು ಚಿಮ್ಮಿಸಿ ಮೊಲೆವಾಲ್ಗಳಂ . . . ಸಾರ್ಚಿ ಮೊಲೆಯೂಡುವ ನೃಪನಗೆಂದು ಸಾರ್ವುದೊ (ಸೂಕ್ತಿಸು. ೬-೩). ೪. **ಚಿಮುಕಿಸು**: ಸಿಂಪಡಿಸು: ಪನ್ನೀರ ವ್ಯಗೆ ಚಿಮ್ಮಿಸಿಯಾಲವಟ್ಟತಿಕ್ಕುವಳು (ಭರತ. ೧೦-೪೬). ೫. **ಝಳಪಿಸು**: ಸುರಗಿಕಾಟಿಂ ಸುರಗಿಯಾ ಚಿಮ್ಮುವಂತೆ ನಾಲಗೆಯಂ ಚಿಮ್ಮಿಸುತ್ತಲ್ (ಪುಣ್ಯಾಸ್ರ. ೯-೨೩ ವ); ಜಯಘೋಷದಿಂ ರಾಜತೇಜಿಯನಡರಿ ಖಂಡೆಯವ ಚಿಮ್ಮಿಸುತ ಕಡುತವಕದಲಿ ಕಂಠೀರವರಾಜೇಂದ್ರ ನಡೆದನು (ಕಂನವಿ. ೧೩-೦೩). ೬. **ಬೀಸು**: ಇಕ್ಕೆಲದ ಕೋಕನದವೇತ್ರಿಯರ್ಚಿಮ್ಮಿಸುವ ಚಾರುಚಂಚಲಚಾಮರಂಗಳಿಂದೆ (ಕೃಮಿಥ. ೩೦-೯೯).

[ ಚಿಮ್ಮು₁ + -ಇಸು₂ ]

**ಚಿಮ್ಮು₁** (ಕ್ರಿ). ೧. ಬೆರಳಿನಿಂದ ಮಿಡಿ,-ಮೀಟು: "ಚಿಮ್ಮು-ಅಂಗುಲಿ ವಿಮೋಚನೇ ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಕರ್ನಾ). ೨. **ನೂಕು; ತಳ್ಳು**: ರಣದೊಳ್ ಶಕ್ರನ ತೇರನೇಜ಼ದ ಮಹಾಶ್ವಲಾಳಿ ಬೆಂಬಿಡ್ತ ಮಾರ್ಗಣದಿಂ ಚಿಮ್ಮಿದ (ಪಾರ್ಶ್ವಕೋ. ೮೧); ತೋಳುಗಳ ಹಿಡಿದಳೆದು ಖಳ ಕರವಾಳದಲಿ ಚಿಮ್ಮಿದನು (ಕೊರಡ. ೬:೦೦-೫೮). ೩. **ಎಸೆ; ಚೆಲ್ಲು; ತೂರು**: ಕಡಿದು ಚಿಮ್ಮಿದ ಬೆರಳುಗಳ . . . . ಹೊಡೆಕುರಳದಾಲಿಗಳ ತೋಳ್ಗಳ ಕಡಿಕುಗಳ ರಣಮುಖ ಭಯಾನಕರಸಕೆ ಗುರಿಯಾಯ್ತು (ಷೋಡ. ೮-೦೮); ಕಂಡಪಾ ಗಜದ ಮಸ್ತಕ ಸಹ ಕೆಡೆದಿರ್ದ ಮುಂಡದ ತಲೆ ಗಗನದಲಿ ಚಂಡಪ್ರತಾಪಿಯ ಜಯವಧು ತಿಣ್ಕಲ್ಲ ಕೊಂಡಾಡುವಂತೆ ಚಿಮ್ಮಿದನು (ಕೋತಕ. ೩೪-೯). ೪. **ನೆಗೆ; ಹಾರು; ಪುಟಿ**: ತೆರಪೊಯ್ಯನಿಂ ಚಿಮ್ಮುವಂಬುಕಣದಾಲದಿಂ (ಹರ್ಷಟ. ೩-೮೩); ಧಾತ್ಮಕ ನಕುಲರೆಡವಂಕದಲಿ ಚೂಣಿಗೆ ಚಿಮ್ಮಿದರು (ಕುಮ್ಯಾಶ. ೩-೨); ಹಯವಡಿಗಡಿಗೆ ಚಿಮ್ಮಿತು ವಾಯುವೇಗದೊಳು (ಸೌಶ. ೬-೫); ನೆತ್ತರಾಗಸಕೆ ಚಿಮ್ಮಿತ್ತು ರಣದೊಳೋಕುಳಿಯ ಮಿತ್ತುವಿನ ಜೀರ್ಕೊಳವಿಯಾಗುಳ್ಳ ಕೆನ್ನೀರೆಂಬೊಲು (ಕೃಮಿಥ. ೨೫-೦೩). ೫. **ಹೊರಹೊಮ್ಮು; ಹೊರಸೂಸು**: ಅವನ ಕಣ್ಣುಗಳಲ್ಲಿ ನೀರು ಚಿಮ್ಮಲಾರಂಭಿಸಿತು (ಮುಹಾಗ. ೦೯೯). ೬. **ಎರಚು; ಚಿಮುಕಿಸು; ತಳಿ**: ನರಪತಿ ಕೊಂಡು ಪಾಕಶಾಟವೆಯಂ ದಿಡದೊಯ್ಯನೆ ಕರ್ಮುಯಿಂ ಮನೋಹರಿಯರ ಮೇಲೆ ಚಿಮ್ಮೆ (ಧರ್ಮಾಮೃ. ೬೪-೮೫); ಪದುಳದೊಡವೃತ ಪನ್ನೀರ ಚಿಮ್ಮುತ . . . . ಸೌಂದರಿಯುದ್ದತು ಬಳಸಿನೊಳು (ಭರತ. ೪-೧೧೮). ೭. **ರಭಸವಾಗಿ ತೂಗು; ಝಳಪಿಸು**: "ಚಿಮ್ಮು-ಅಂಗುಲಿ ವಿಮೋಚನೇ, ಶಸ್ತ್ರಕ್ರಿಯಾಯಾಂ ಚ (ಜಳಪಿಸು)" (ಕರ್ನಾ): ಕಠಾರಿಗಳನುದ್ದಕ್ಕೆ ಚಿಮ್ಮಿಕೊಂಡವೆ ಕಿರುಹುಶ್ರ (ಪುಣ್ಯ. ೬೦-೩೨); ಝಡಿದು ಚಿಮ್ಮುವ ಖಂಡೆಯವ ಕೈದುಡುಕಿ (ಕೊರಡ. ೫-೩-೬೦): ಕಡಿದು ಮುಂಗೈಯ ಕೋಪಾಟೋಪದಲಿ ಖಳ ಜಡಿದು ಖಂಡೆಯವ ಚಿಮ್ಮಿದನು (ಕಂನವಿ. ೦೩-೬೫). ೮. **ಬೀಸು**: ಚಿಮ್ಮುವ ಚಾಮರದ ಸೂಸುವ ಸೀಗುರಿಯ (ಗಿರಿಕ. ೩-೫೫ ವ); ಚಿಮ್ಮುವ ಚಾಮರಂಗಳನೆಡೆಯಿಡದೆ ಪಸರಿಸಿದ ಸೀಗುರಿಗಳೆಡೆಯೊಳ್ (ಹರ್ಷಟ. ೮-೩೭ ವ); ಶಶಿಮುಖಿಯರೆಡಬಲದಿ ಕೈವಾರಿಸುತ ಸಿತಚಾಮರವ ಚಿಮ್ಮಲು (ನಳಚ. ೬-೨೫).

[ ದೇ.೩ ತೆಲು. ಚಿಮ್ಮು ]

**ಚಿಮ್ಮು₂** (ನಾ). ನೆಗೆತ: ಚಿಮ್ಮುಗಳ ಕಾಣಿಸುವುದು ಸ್ಫುರಿತವೆನಿಸಿಕೊಂಬುದು ಹಾವು ನಡೆದಂತೆ ಡೊಂಕುಡೊಂಕಾಗಿ ಓಡಿಸುವುದು ನಾಗೋತ್ಪವೆನಿಸಿಕೊಂಬುದು (ಅಶ್ವಟೀ. ೨೫-೬). [ <ಚಿಮ್ಮು₁ ]

**ಚಿಮ್ಮುಗಾಲ** (ನಾ). (ಆಲಂ) ಉತ್ಸಾಹದ ಕಾಲ: ಏಳು, ಎಚ್ಚರವಾಗು, ಉಸಿರು ತುಂಬು—ಈ ಚಿಮ್ಮುಗಾಲದಲ್ಲಿಯೂ ನೀನೇಳದೇ ಹೋದರೆ ಎಂದೆಂದಿಗೂ ಬೀಳು, ಬಿದ್ದಿರು, ಓ ಕನ್ನಡ ಮಗುವೇ! (ಕನ್ನಸು. I, ೩೬).

[ ಚಿಮ್ಮು₂ + ಕಾಲ ]

**ಚಿಮ್ಮುಗೆ** (ನಾ). ೧. ಚಿಮ್ಮುವಿಕೆ; ಬುಗ್ಗೆ: ಮುಂದಕ್ಕೆ ಅಥವಾ ಮೇಲಕ್ಕೆ ಚಿಮ್ಮಿ ಸೂಸುವ ನೀರು, ಆವಿ, ಅನಿಲ, ಮೊ.ಗಳ ಧಾರೆ: ಬುಗ್ಗೆ: ಚಿಮ್ಮುಗೆ (೨೦೬. ಇಂಕನಿ). ೨. ಸ್ಫುರಣ: ಮನವ ದೇಹವನಲೆವ ಚಿಮ್ಮುಗೆಗಳೊಂದಾಗಿ ಘನಸಹಜದಂಗನೆಯ ಕೆರಳಿಸಿದುವು (ಇಂಗೀಕ. ೪೬-೨೧).

[ ಚಿಮ್ಮು₁ + -ಗೆ ]

**ಚಿಮ್ಮುಗೊಳ್ಳು** (ಕ್ರಿ). ನೆಗೆ; ಹಾರು: ದಿಮ್ಮಿಡುವ ಘಣಘಣಾಯೆಂಬ ಘಂಟೆಯ ರವಕೆ ಚಿ[ಪಾಠಾಂ. ಚೆ]ಮ್ಮುಗೊಳ್ಳುತ್ತಿರುವ ಆ ಹರಿಣದಂತೆ (ಕನಕ. ೮೪-೪). [ ಚಿಮ್ಮು₂ + ಕೊಳ್ಳು₁ (<ಕೊಳ್₁) ]

**ಚಿಮ್ಮುಗೋವಿ** (ನಾ). ಪಿಚಕಾರಿ; ಜೀರ್ಕೊಳವೆ: ಬಗೆಬಗೆಯ ಚಿತ್ರದ ಚಿಮ್ಮುಗೋವಿಯ ತುಂಬಿದೋಕುಳಿಯ (ಅನಂತಾ. ೬-೧-೫೬).

[ ಚಿಮ್ಮು₁ + ಕೋವಿ₁ ]

**ಚಿಮ್ಮುಟ, ಚಿಮುಟ, ಚಿಮುಟಿ, ಚಿಮಟಿ, ಚಿಮುಂಟ, ಚಿಮ್ಮಟ, ಚಿಮ್ಮುಟಿ** (ನಾ). ೧. ಚಿವುಟಿ ಹಿಡಿಯುವ ಇಕ್ಕುಳದಂತಹ ಸಣ್ಣ ಸಾಧನ; ಪುಟಕಾರ: ಹಿಡಿಯುಳ್ಳದ ಶಸ್ತ್ರ ಕೀಲಿಲ್ಲದ ಕತ್ತರಿ ಉಭಯವನೊಡಗೂಡದ ಚಿಮ್ಮುಟ (ಸವಚನ. ೧೨೫-೩೪೧); ಕತ್ತಿಯ ಬಸವಣ್ಣ ಕೊಟ್ಟ ಕತ್ತರಿಯ ಚೆನ್ನಬಸವಣ್ಣ ಕೊಟ್ಟ ಕಿತ್ತುಹಾಕುವ ಚಿಮ್ಮುಟವ ಪ್ರಭುರಾಯ ಕೊಟ್ಟ (ಹರಗೋ. ೧೩೬-೬೨); ದಾನವಿಲ್ಲದರ ಕಡಿದಿಟ್ಟು ಚಿಮ್ಮುಟ ಮೊನೆಯೊಳವರ ಖಂಡವನುಗಿದು (ವೀಕೃಪು. ೪-೧೯-೪೬). **ಚಿಮುಟ**: ೧. ನಿನ್ನೆ ದಿನ ಕಾದ ಚಿಮುಟಗಳಿಂದ ಅವನ ಹಲ್ಲುಗಳನ್ನೆಲ್ಲ ಕೀಳುವುದರಲ್ಲೇ ಇಡೀ ದಿನವೆಲ್ಲಾ ಕಳೆದ (ನಗಹೊ. ೨೨೬). ೨. ಹೆಬ್ಬೆರಳಂ ಮತ್ತು ತೋರಬೆರಳಿನಲ್ಲಿ ಹಿಡಿಯುವಷ್ಟು ಪ್ರಮಾಣ; ಒಂದಂ ಚಿಟಿಕೆ: ಅವನನ್ನು ಅಲ್ಲಿಂದ ಎತ್ತಿ ಹೊರಗೆ ತರೋದು ಅಂದ್ರೆ ಅವರಪ್ಪ ಶಾಮಣ್ಣನವರಿಂದ ಒಂದು ಚಿಮುಟ ನಸ್ಯ ತರುವಷ್ಟು ಕಷ್ಟವಾಯಿತು. (ಕುಂಟಿಕೊ. ೮೩). **ಚಿಮುಟಿ**: ೧. ಇಕ್ಕುಳ ಇಲ್ಲವೆ ಚಿಮುಟಿ (Pincers)ಗಳು ಇಂಥ ಸನ್ನೆಕೋಲುಗಳು (ಭಾಶಾ. I, ೩೩೪). **ಚಿಮುಟೆ**: ೨. ನಿಂಗಿಯು . . . ಜರದಾ ತಂಬಾಕಿನ ಚಿಮುಟೆಯನ್ನು ಬಾಯಲ್ಲಿಟ್ಟುಕೊಂಡಳು (ಕಳ್ಳಧ್ವ. ೨೨೫). **ಚಿಮುಟ**: ೧. ಒಂದು ದಬ್ಬಳ, ಒಂದು ಚಿಮುಟ . . . . ಇತ್ಯಾದಿ ಸಲಕರಣೆಗಳು ಬೇಕು (ಮುದ್ರಕ. ೨೦); ಕತ್ತರಿ, ಚಿಮುಟ - ಇವು ಸನ್ನೆಗಳು (ಶಿಲ್ಪನಾ. ೦೯೫). **ಚಿಮ್ಮಟ**: ೧. ಅಮ್ಮಮ್ಮ ಕ್ರೂರದಿ ಕೊಯ್ದು ಬಿಸುಡುತ್ತಲ್ಲಿ ಚಿಮ್ಮಟಗಳಿಂ ತಿಚ್ಚಿದು ತಿಚ್ಚಿದು ಚಿಮ್ಮುತ್ತಲ್ಲಿ (ಕೊಮ್ಮಕ. ೧೬೬-೧೮). **ಚಿಮ್ಮಟಿ**: ೧. ನೆಟ್ಟ ಕಾದ ಚಿಮ್ಮಟಗಳಲಿ ಖಂಡವ ತೆಗೆವರು (ನಿಥಾಗ. ೫-೧೧-೨೬).

[ ←ಹಿಂ. ಚಿಮಟಾ, ಚಿಮಟೀ; ಮರಾ. ಚಿಮಟ್, ಚಿಮಟಾ, ಚಿಮೂಟ್. / ತಮಿ. ಚಿಮಿಟ್ಟಾ; ತುಳು. ಚಿಮಟಿ, ಚಿಮಿಂಟ, ಚಿಮ್ಮಿ; ತೆಲು. ಚಿಮಟ, ಚಿಮ್ಮಟ ]

**ಚಿಮ್ಮರಿ** (ನಾ). ೧. ತಲೆಯುಡಿಗೆ; ರುಮಾಲು: ದೊಡ್ಡ ಮುದ್ರೆಯ ಕಳ್ಳರು ತುಬಾಬು ಚಿಮ್ಮರಿಗಳ ಕಟ್ಟಿ ಹಗರಣದ ನಿಚ್ಚಗುರುಳ ಬಾಲೆಯರ ಮುಂದೆ . . . ಬೀಗಿ ಬೆಚ್ಚಿಯುತ್ತಿಪ್ಪರು (ಮೋಹಮಾ. ೧೮೮-೭೦೯); ತುಬಾಬು ಚಿಮ್ಮರಿ ಚಿಂದಿ ಕಾಸೆಯ ಸಡಗು (ಪ್ರಭುಲೀ. ೫-೬); ಕತ್ತರಿಸಿದ ಪನ್ನೆಯೊತ್ತಿದ ಕೊನೆಮಾಸಿ ಸುತ್ತಿದ ಚಿಮ್ಮರಿ (ಕುರಾಸಾಂ. ೪೦-೯೨);

ನೀಳಕುಂತಳದ ವಿಡಾಯ ಚಿಮ್ಮುರಿಯ ಚೆಲ್ವ ತುಱುಂಬಿನ . . . ಖಿಟ ಸಾರ್ವಭೌಮ (ಹಮ್ಮೀ. ೬-೨೦). ೨. ಬಿಗಿದ ದಟ್ಟಿ; ವೀರಗಚ್ಚೆ: ಸುತ್ತಿದ ಚಿಮ್ಮುರಿ ತೊಟ್ಟಿದ್ದ ಚಿಮ್ಮುರಿ ಮತ್ತೆ ಹಿಡಿದ ಕೈಯಲಗು ಮುತ್ತಿನ ಸಂಯೋಗದ ಕುಡುರೆಯನೇಱಿಯುತ್ತಮರಾಹುತರಿಯ್ಯ (ಚೀಕಂಸಾಂ. ೩-೩೮); ಮುರಿದುಟ್ಟ ಕಾಸೆ ಚಿಮ್ಮುರಿ ಬಿಟ್ಟ ಜಡೆ (ಭರತ. ೬೩-೦೪). ೩. ಕೈಗಳನ್ನು ಬೆನ್ನ ಹಿಂದೆ ಸೇರಿಸಿ ಬಿಗಿದು ಕಟ್ಟುವುದು; ಹೆಡಮುರಿಗೆ; ಹಿಂಗಟ್ಟು: ಸಾಧುಗಳನಾದರಿಸುವೆನು ಮಾಱಾಂತರನು ಚಿಮ್ಮುರಿಯ ಬಿಗಿಸುವೆನವಮರಿಯರ ಕಡೆಗಣ್ಣ ಕಣ್ಣೆಯಲಿ (ಕುಭಾ.ಸ.೨-೩೦). [ ? + ಮುರಿ ]

**ಚಿರ** (ಗು). ೧. ದೀರ್ಘಕಾಲ ಬಾಳುವ; ಬಹುಕಾಲದ. 'ಚಿರಕಾಲ' ನೋ. (ನಾ). ೨. ಬಹುಕಾಲವಿರತಕ್ಕುದು; ಶಾಶ್ವತವಾದುದು: ಚಿರ ಮಲ್ಲೆನ್ನಯ ತೇಜಮುಂ(ಅಜಿಪು. ೩-೩೪); ಅರಸೊತ್ತಿಗೆಯ ನಂಬಿ ಬರುಸು ಮಾತುಗಳೇಕೆ ಚಿರವೆ ಹೊಱಬಿಲು ತಿಳಿಯರಸ ಪರಿಕಿಸಲು (ಕೃಭಾ. ೨೦೩). [ ಸಂ. ]

**ಚಿರಋಣಿ** (ನಾ). ಉಪಕಾರವನ್ನು ಸದಾ ಸ್ಮರಿಸಿಕೊಳ್ಳುತ್ತಿರುವವನು; ಕೃತಜ್ಞ: ನಾನು ಅವರಿಗೆ ಚಿರಋಣಿ (ಚೀವಾಕ್ಯ. XI. ಸಂಕೆಲ್ಪ); ನಾನು ತಮ್ಮ ಉಪಕಾರಕ್ಕೆ ಚಿರಋಣಿಯಾಗಿರುತ್ತೇನೆ (ರಾಯಕ. ೩೩); ಅವುಗಳ ಅಪಾರವಾದ ಮಹತ್ವವನ್ನು ತೋರಿಸಿಕೊಟ್ಟಿದ್ದಕ್ಕೆ ಭಾರತೀಯರು ಚಿರ ಋಣಿ (ಕಕ್ಕಾ. ೩೬). [ ಸಂ. ಚಿರಋಣಿನ್ ]

**ಚಿರಂ** (ಅ). ಶಾಶ್ವತವಾಗಿ; ಯಾವಾಗಲೂ: ಕಿಸಱಿಕ್ಕುಗೆ ಭೃಗು ಸುತನುದಯಮಾಗೆ ನಿಲ್ಕುಂ ಚಿರಮುಂ (ಕೋಕೋಪ. ೩-೨೬). [ <ಚಿರ ]

**ಚಿರಂಜೀವ** (ನಾ). ೧. ಬಹುಕಾಲ ಬಾಳುವವನು, ಬದುಕುವವನು. ೨. ಹಿರಿಯರು ಚಿಕ್ಕವರನ್ನು ಕರೆಯುವಾಗ ಬಳಸುವ ಶಬ್ದ: ಚಿರಂಜೀವ, ರಾಜಶ್ರೀ . . . ಮೊದಲಾದ ಶಬ್ದಗಳನ್ನೂ . . . ಪತ್ರ ಸ್ವೀಕರಿಸತಕ್ಕವರ ಹೆಸರಿನ ಹಿಂದೆ ಜೋಡಿಸಿ ಬರೆಯುವ ಸಂಪ್ರದಾಯವುಂಟು (ಮುಂಬಯಿ. ೯-೮೪). ೩. ಮಗ; ಪುತ್ರ: ಇಂವ ನಿನ್ನ ಚಿರಂಜೀವ ಏನು? (ಅಶಾ. ೦೦). [ ಸಂ. ]

**ಚಿರಂಜೀವಿ** (ನಾ). ೧. ಬಹಳ ಕಾಲ ಬದುಕಿರುವವನು. ೨. ಚಿರಂಜೀವ ೩: ತಮ್ಮ ಚಿರಂಜೀವಿ ಎಂತಹ ಸುಸಂಸ್ಕೃತ ಯುವಕ(ಮಹಾಗ. ೦೮೩). ೩. ಬಹಳ ಕಾಲ ಬದುಕಿರುವವರೆಂದು ಪುರಾಣಪ್ರಸಿದ್ಧರಾದ ಏಳು ಜನರು: ಅಶ್ವತ್ಥಾಮ, ಬಲಿ, ವ್ಯಾಸ, ಪರಶುರಾಮ, ವಿಭೀಷಣ, ಕೃಪಾಚಾರ್ಯ ಮತ್ತು ಆಂಜನೇಯ. ೯ ಕೆಲವರು 'ಮಾರ್ಕಂಡೇಯ' ನನ್ನೂ ಇವರ ಜೊತೆ ಸೇರಿಸುತ್ತಾರೆ. ೪. ಕಾಗೆ: ದೊರೆಯೇ ಮಲ್ಲಿಗೆಗೆಕ್ಕೆ ಹಂಸೆಗೆ ಬಕಂ . . . ಪಿಕನಿಕಾಯ[ಕ್ಕ] ಚಿರಂಜೀವಿಗಳ್ (ಕಾ. IV, ೦-೮೪; ೩೬೩). [ ಸಂ. ಚಿರಂಜೀವಿನ್ ]

**ಚಿರಂಟಿ**(ನಾ). ೧. ತಂದೆಯ ಮನೆಯಲ್ಲಿಯೇ ಇರುವ ಪ್ರಾಪ್ತವಯಸ್ಕಳಾದ ಹೆಂಗಸು. ೨. ಯುವತಿ: ವಾತ ಚಿರಂಟಿಯರ್ (ಅಂದ್ಯ. ೮-೬೦). [ ಸಂ. ಚಿರಂಟೀ ]

**ಚಿರಂಟಿಕೆ** (ನಾ). ಚಿರಂಟಿ ೧: "ಚಿರಂಟಿಕೆ ಸುವಾಸಿನಿಯಪ್ಪವಳುಂ ವಯಸ್ಥೆಯುಂ" (ಶಮ್ರೀ. ೦೩೩-೬೩). [ ಸಂ. ಚಿರಂಟಿಕಾ ]

**ಚಿರಂತನ** (ಗು). ೧. ಪೂರ್ವದ; ಹಿಂದಿನ ಕಾಲದ; ಪ್ರಾಚೀನವಾದ: ಚಿರಂತನಭವದ ಕಲ್ಪಿತ ಕರ್ಮಪಾಶವ್ರಜದ ದುರಿಯೋಧನನ ಸದ್ಯಪಬೋಧ ಮಾತ್ರದಲಿ ಎವಗೆ ರಚಿಸಿತು ರಾಜ್ಯವಿಧ್ವಂಶವನು (ಕುಭಾ.ಗ. ೦೦-೪೪). ೨. ಸ್ಥಿರವಾದ; ಶಾಶ್ವತವಾದ: ಆತ್ಮಜ್ಞಾನ, ಜಗದ ಅನುಭವ, ಅನುಭಾವಗಳೇ ಅಕ್ಕನ ಸಾಹಿತ್ಯಕ್ಕೆ ಚಿರಂತನ ವಸ್ತು! (ಕವಾಕ. ೬೬). (ನಾ). ೩. ನಿರಂತರ; ಸತತ: ಚಿರಂತನವೂ ನೂತನವೇರುತ್ತಿರುವ

ಜೀವನದ ಸ್ವರೂಪ ಎಂಥದು? (ತಿಕ್ಕದ. ೦). ೪. ವಯೋವೃದ್ಧನು; ಹಿರಿಯಂ: ಅವಱೊಳಗೆ ಚಿರಂತನನುಂ ಬುದ್ಧಿವಂತನುಮಪ್ಪುದೊಂದು ಕಪೋತಂ ಪಕ್ಷಿಗಣಕ್ಕಿಂತೆಂದುದು (ಪಂಚತಂ. ೨೦೮-೦೪). [ ಸಂ. ]

**ಚಿರಂತಹಿಂಸೆ** (ನಾ). ಒಂದು ಬಗೆಯ ನರಕ: ಯಮಮಾನುಗನಿಹುವುದು . . . ಚಿರಂತಹಿಂಸೆಗಳೆಲ್ಬೈದು ಮಂತ್ರಿನರಕಂಗಳಿಂ ಭಯಂಕರಮಾಗಿ ಯಮಮಾಯೆಯಿಂಬರಸುವರಕವಿಹುದು (ವಿಜಕ. ೦೪೦). [ ? + ಹಿಂಸೆ ]

**ಚಿರಂತನಾಚಾರ್ಯ** (ನಾ). ಹಿಂದಿನ ಕಾಲದ ಆಚಾರ್ಯ, ವಿದ್ವಾಂಸ: ಮಿಗೆ ಕನ್ನಡಗಬ್ಬಂಗಳೊಳಗಣತಗುಣಗದ್ಯಪದ್ಯಸಮ್ಮಿಶ್ರಿತಮಂ ನಿಗದಿಸು ವರ್ಗದ್ಯಕಥಾಪ್ರಗೀತಿಯಿಂ ತಚ್ಚಿರಂತನಾಚಾರ್ಯರ್ಕಳ್ (ಕವಿರಾ. ೦-೨೭). [ ಚಿರಂತನ + ಆಚಾರ್ಯ ].

**ಚಿರಕಾಲ** (ನಾ). ಬಹಳ ಕಾಲ; ದೀರ್ಘಕಾಲ: ಚಿರಕಾಲಂ ಬಂಧನದೊಳ್ ಮರುಗಿರ್ದನ ಮರುಳ್ತನಂ ತೀರದಪೊಲರೋಸರಿಸಿರೆ ಮಿಥ್ಯಾತ್ವಂ (ಜಗಪು. ೦೩-೩); ಅಂತು ದೀಕ್ಷೆಯಂ ಕೆಯ್ಕೊಂಡು . . . ಚಿರಕಾಲಮಿರ್ದು (ಪುಣ್ಯಾಪು. ೯-೪ ವ). [ ಚಿರ + ಕಾಲ ]

**ಚಿರಕಾಲಿಕ** (ನಾ). ಬಹಳ ಕಾಲ ಇರುವುದು: ಜನಸಮುದಾಯವು ಒಂದು ರಾಜಕೀಯೋದ್ದೇಶದಿಂದ ಚಿರಕಾಲಿಕವಾಗಿ ಸ್ಥಾಪಿಸಲ್ಪಟ್ಟಿರಬೇಕು (ರಾಜ್ಯಾಂಗ. ೨೭); ಆ ಸತ್ಯ ಚಿರಕಾಲಿಕವಾಗಲಿ ಎಂದು ಶ್ರವಿಸುವ ಮಾತು ಬೇರೆ (ಶಾಕ್ತಲ. ೨೭೪). [ ಸಂ. ]

**ಚಿರಚ** 'ಚಿರತೆ$_1$' ನೋ.

**ಚಿರಚು** 'ಚಿರತೆ$_1$' ನೋ.

**ಚಿರಜೀವಿ**(ನಾ). ೧. ಬಹಳ ಕಾಲ ಬದುಕುವವನು; ದೀರ್ಘಾಯುಸ್ಸುಳ್ಳವನು: ಪುತ್ರಾನ್ವಿತಂ ಉಂಬಮುಪ್ಪನತಂ (ತಾಂ) ಚಿರಜೀವಿ ತತ್ಸಮತೆಯಿಂದಂ ಧೈರ್ಯಮಂ ತಾಳ್ದುಗುಂ (ಕೋಕೋಪ. ೦೦-೫); ಕಡಲ ಕಡೆ ಸುಧೆಯ ಕುಡಿ ಹರಿಹರರ ಮೀರಿ ಚಿರಜೀವಿಯಾಗು! (ಕಾಂಚನ. ೪೪-೩) ೨. ಕಾಗೆ: "ಅರಿಷ್ಟಃ . . . ಚಿರಜೀವೀ, ವಾಯಸಃ-ಈ ೧೦ ಕಾಗೆ" (ಚಕಾಂಮು. ೪೦-೯೨). [ ಸಂ. ಚಿರಜೀವಿನ್ ]

**ಚಿರಜೀವಿತೆ** (ನಾ). ಬಹಳಕಾಲ ಬದುಕುವಿಕೆ; ಶಾಶ್ವತವಾಗಿರುವಿಕೆ: ಇನ್ನೇಮಸಗೊಂಡಪುದನ್ನ ನರರ ಚಿರಜೀವಿತೆಯಂ (ಚಂದ್ರಪು. ೩-೩೨). [ಸಂ. ಚಿರಜೀವಿತಾ ]

**ಚಿರಡಿ$_1$** (ನಾ). ಕಿರಿಗೆ; ಚಿಕ್ಕಸೀರೆ: ಚಿರಡಿ ಚಂದಿ ಕದ್ದನಂತೆ (ಜನಪ. II, ೩೩೩). [ ←ತುಶಾ. ಚಿರಡೀ ]

**ಚಿರಡಿ$_2$** (ನಾ). ಕೋಪ; ಸಿಟ್ಟು: ಅವರ್ನ ಚಿರಡಿಗೆ ಕರಸ್ಥಾನ (ಜಾನಪ. II, ೨೦೭).

ಚಿರಡೀಗೇಳು=ಸಿಟ್ಟಿಗೇಳು; ರೇಗು: ಚಿರಡಿಗೆದ್ದು ರಾಗಿನ್ನ ಒಂದೇಟು ಹೊಡೆದ (ಜ್ಞಾಪಿ. ೩೩೩); ಅವರಿಗೆ ಉಂಟಾದ ಕುಂಠಿತತನವನ್ನು ಕಂಡು ಅವರು ಬಹಳ ಚಿರಡಿಗೇಳುವರು (ಸ್ವತಿಪ. ೪೨೪). [ ←ತುಶಾ. ಚಿರಡೀ ]

**ಚಿರಣ** 'ಚೀರಣ' ನೋ.

**ಚಿರಣಿಗೆಲಸ** 'ಚೀರಣಿಗೆಲಸ' ನೋ.

**ಚಿರತೆ$_1$**, ಚಿರಚ, ಚಿರಚು, ಚಿರ್ಚ, ಚಿರ್ಚು (ನಾ). ಮೈಮೇಲೆ ಚುಕ್ಕೆ ಗಳುಳ್ಳ ಹುಲಿಜಾತಿಗೆ ಸೇರಿದ ಒಂದು ಬಗೆಯ ಕ್ರೂರಪ್ರಾಣಿ; ಚಿಟ್ಟೆಹುಲಿ: ಹುಲಿಜಾತಿ: ಹುಲಿ, ಹೆಬ್ಬುಲಿ . . . ಚಿರತೆ (ಪಪ್ರಾಸು. ೨೩೪). ಚಿರಚು ಹುಲಿ ಜಾತಿ: ಹುಲಿ, ಹೆಬ್ಬುಲಿ . . . ಚಿರತೆ, ಶಿವಂಗಿ, ಚಿರಚ (ಪಪ್ರಾಸು. ೨೩೪). ಚಿರಚು: ಚಿರಚು ಕಾಮುಕಪ್ರಾಣಿಯೆಂದೂ . . . ಹೇಳರುವನು (ಪಕಪ. ೨೪). ಚಿರ್ಚ: (೬). ಚಿರ್ಚು: ಅಡವಿಗಳಲ್ಲಿ ಚಿರ್ಚು . . . ಅಡವಿಯ ಬೆಕ್ಕು ಮುಂತಾದವುಗಳಿರುತ್ತವೆ (ಜೀಪ. ೩೪) [ ದೇ.; ತಮಿ. ಚಿಱುತ್ತೈ; ಕೊಡ. ಚಿರತೆ; ತೆಲು. ಚಿಱುತ

**ಚಿರತೆ₂** (ನಾ). ಶಾಶ್ವತ ಪದವಿ ; ಮೋಕ್ಷ : ನಲವಿಂದ ಚಿರತೆಯು ಬಯಸಿ ಜಿನೇಂದ್ರನ ಚರಣಸೇವೆಯನಂ ಮಾಳ್ಪೆನೆಂದು (ಜಿನೇಂದ್ರಪು. ೩೯-೧೨೬). [ಸಂ. ಚಿರತಾ]

**ಚಿರನವತೆ** (ನಾ). ಸದಾ ಹೊಸದಾಗಿರುವಿಕೆ: ಒಂದು ಕೊಂಬೆಯು ಬಾಡಲಿನ್ನೊಂದು ಚಿಗುರುವುದು ಸಂದಿಹುದು ಚಿರನವತೆಯತ್ಯತ್ತ ಮರಕೆ (ಸುಜನಿ. ೨೩೩). [ಚಿರ + ನವತೆ]

**ಚಿರನಿದ್ರೆ** (ನಾ). (ಆಲಂ) ಸಾವು: ಆ ರೋಗಿಯುನ್ನು ಚಿರನಿದ್ರೆ ಆವರಿಸಿತು (ರೂಢಿ). [ಚಿರ + ನಿದ್ರೆ]

**ಚಿರನಿಧಿ** (ನಾ). ಶಾಶ್ವತವಾದ ಆಶ್ರಯ ; ಶಾಶ್ವತವಾದ ನೆಲೆ: ವಿವಿಧ ಪಯೋಜದಿ ವ್ಯರ್ಥಾಯಾಸದಿ ತೊಳಲಿದೆ ತೃಪ್ತಿಯ ಚಿರನಿಧಿಗೆ (ಅಗ್ನಿಹಂ. ೧೧-೩). [ಚಿರ + ನಿಧಿ]

**ಚಿರನಿಮಿಷ** (ನಾ). ಬಹಳ ಹೊತ್ತು ಕಣ್ಣು ಮುಚ್ಚಿಕೊಂಡಿರುವುದು : ಇರ್ದುದನಿಮಿಷಜಾತಂ ಚಿರನಿಮಿಷವಶಾಗೆ ಕಣ್ಣುಳ್ಳ್ಯವಿನಂ (ಆದಿಪು. ೧-೪೭). [ಚಿರ + ನಿಮಿಷ]

**ಚಿರನೂತನ** (ನಾ). ಸದಾಕಾಲ ಹೊಸದಾಗಿರುವುದು : ಅವನ ಕಾವ್ಯ ಕನ್ನಡಕ್ಕೆ ಚಿರನೂತನ ಚಿರಂತನ (ಸಾಹಿಸ. ೧೧೯). [ಚಿರ + ನೂತನ]

**ಚಿರಪರಿಚಿತ** (ನಾ). ಬಹುಕಾಲದಿಂದಲೂ ತಿಳಿದಿರುವುದು : ಇದು ದಿನದಂಥ, ಚಿರಪರಿಚಿತವಾದ ಹಗಲಲ್ಲ (ಕಿಕಂಕಾ. ೧) ; ಮತ್ಸ್ಯ, ಕೂರ್ಮ . . . ಕಲ್ಕಿ ಎಂಬ ದಶಾವತಾರಗಳು ಚಿರಪರಿಚಿತವಾಗಿವೆ(ಭಾರತ. ೧೯೨). [ಚಿರ + ಪರಿಚಿತ]

**ಚಿರಪು** 'ಸೆಜವು' ನೋ.

**ಚಿರಪ್ರಣಯ** (ನಾ). ಬಹುಕಾಲದ ಪ್ರೀತಿ : ಕಡೆಯಲ್ಲಿ ಒಂದು ಬಾರಿ ಮುದ್ದಿಸಿ ಚಿರಪ್ರಣಯವಿದ್ದುದರಿಂದ ಮತ್ತೆ ಮರುಗಿದವನಾಗಿ . . . ಅಳತೊಡಗಿದನು (ಕಬಿಳ. ೫೨). [ಚಿರ + ಪ್ರಣಯ]

**ಚಿರಬಿಲ್ವ** (ನಾ). ಹುಲಿಗಿಲ ಮರ ; ಹೊಂಗೆಮರ ; ಕರಂಜವೃಕ್ಷ : ಅರನೇಜೀಲ್ ತಾಜಿ . . . ದಿಂದಂ ಚಿರಬಿ[ಶಾಕಾಂ. ಟಿ]ಲ್ವಂ ಬ್ರಹ್ಮವೃಕ್ಷಂ ಕಜೀಕೆ ತಜೀಯದಿಂದೊವ್ವುತಿರ್ದತ್ತರಣ್ಯಂ (ಗಿರಿ. ೦-೭೨). [ಸಂ.]

**ಚಿರಮಂಗಲವತಿ** (ನಾ). ಯಾವಾಗಲೂ ಮುತ್ತೈದೆತನವನ್ನುಳ್ಳವಳು : ಚೆನ್ನಮಲ್ಲಿಕಾರ್ಜುನನನ್ನು ಅಮರಪತಿಯನ್ನಾಗಿ ವರಿಸಿದಳು ; ಚಿರಮಂಗಲವತಿಯಾದಳು (ಚಾಕಿಂ. ೩೦). [ಸಂ. ಚಿರಮಂಗಲವತೀ]

**ಚಿರಮುತ್ತೈದೆ** (ನಾ). = ಚಿರಮಂಗಲವತಿ : ಆಯುಷ್ಮಂತೆಯಾಗಿ ಐಶ್ವರ್ಯವಂತೆಯಾಗಿ ಚಿರಮುತ್ತೈದೆಯಾಗಿರು (ಹಂಗಾಳ್ಯ. ೧೨). [ಚಿರ + ಮುತ್ತೈದೆ (<ಮುತ್ತಯ್ದೆ)]

**ಚಿರರಾತ್ರ** (ನಾ). ಅಸಂಖ್ಯಾತ ರಾತ್ರಿಗಳು ; ಬಹಳ ಕಾಲ ; ದೀರ್ಘಕಾಲ : "ಹಲವಿರುಳಾದೆಡೆ ಗಣರಾತ್ರಮೆಂಬುದು ಅಲ್ಲಿಂದ ಮೇಲೆ ಚಿರರಾತ್ರಮೆಂಬುದು" (ಶಬ್ದಾಮ. ೧೮-೧೦೮). [ಸಂ.(ಚಿರ + ರಾತ್ರಿ + –)]

**ಚಿರರಾತ್ರೆ** (ನಾ). = ಚಿರರಾತ್ರ : "ಚಿರರಾತ್ರೆಯೆಂಬುದುದುಮಸಂಖ್ಯಾತದಿರುಳು" (ಮಂಗರಾ. ೨೦-೭). [ಸಂ. ಚಿರರಾತ್ರ]

**ಚಿರವಿಚ್ಛೇದ** (ನಾ). ಶಾಶ್ವತವಾದ ಬೇರ್ಪಡೆ,-ಅಗಲಿಕೆ : ಕಪಾಲಕುಂಡಲೆಗೂ ಅವಳ ಸ್ವಾಮಿಗೂ ಚಿರವಿಚ್ಛೇದ ಉಂಟುಮಾಡುವುದೊಂದೇ ಉದ್ದೇಶ (ಕಪಾಕುಂ. ೯೨). [ಚಿರ + ವಿಚ್ಛೇದ]

**ಚಿರವಿಲ್ವ** (ನಾ). ಚಿರಬಿಲ್ವ: "ಕರಂಜಕಾ" (ಹಂಡಿಕ). [ಸಂ.]

**ಚಿರಶಾಂತಿ** (ನಾ). ಶಾಶ್ವತವಾದ ನೆಮ್ಮದಿ : ವಿಶ್ವವು ಜೀನರಿಗಮೃತವು ಅಮೃತವು ಚಿರಶಾಂತಿ ಸಂನ್ಯಾಸಿಗಳಿಗೆ (ಅಂಜಾಚ. ೭೩-೫೩); ಮತ್ತೆ ಹಿಂದಿರುಗಲಾರದ ಆ ದೇವದೇವನ ರಾಜ್ಯದಲ್ಲಿ ಚಿರಶಾಂತಿಯನ್ನರಸುತ್ತಾ ಶರಿರದ್ಧರು (ಕುರುಕು. ೩೦೨). [ಚಿರ + ಶಾಂತಿ]

**ಚಿರಸೂತೆ** (ನಾ). ಬಹುಕಾಲವಾದ ಮೇಲೆ ಕರು ಹಾಕಿದ ಹಸು: "ಚಿರಸೂತಾ, ಬಷ್ಕಯಣೀ – ೨ – ಬಹುಕಾಲಕ್ಕೆ ಈಯಲಾದ ಆಕಳಿಗೂ ಈಘುದರಾದರೂ ಬಹುಕಾಲ ಹೆರಿಗೆಯಿಲ್ಲದೇ ನಿಂತ ಆಕಳಿಗೂ, ಬಹುಕಾಲಕ್ಕೆ ೧ ಸಾರಿ ಈಯುವ ಆಕಳಿಗೂ, ಹೆಸರುಗಳು, ಕಡೆಗಂದಿನ ಆಕಳು" (ಸಿದ್ಧಾಂತಿ. ೨೩೩). [ಸಂ. ಚಿರಸೂತಾ]

**ಚಿರಸ್ಥಾಯಿ** (ನಾ). ಬಹಳ ಕಾಲ ತಾಳುವ ಸ್ವಭಾವವುಳ್ಳದು ; ದೀರ್ಘಕಾಲ ಉಳಿಯುವಂತಹುದು ; ದಾಳಿ, ಶುಂಠಿ ಮುಂತಾದ ಸಸ್ಯಗಳು ಬಹುಕಾಲ ಬದುಕುವವು, ಇವುಗಳು ಚಿರಸ್ಥಾಯಿ (Perennials) ಪೈರುಗಳು (ಸಸ್ಯಶಾ. ೨೯); ದೇಶಚರಿತ್ರೆಯಲ್ಲಿ ಮಾತೆಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದನೆಂದು ನಿನ್ನ ಹೆಸರು ಚಿರಸ್ಥಾಯಿಯಾಗಿ ನಿಲ್ಲಲಿ(ಹಿಂಕರು. ೨೯). [ಸಂ. ಚಿರಸ್ಥಾಯಿನ್]

**ಚಿರಸ್ಥಾಯಿಸು** (ಕ್ರಿ). ಸದಾಕಾಲದಲ್ಲೂ ನೆಲಸುವಂತೆ ಮಾಡು : ನನ್ನ ಹೆಸರಂ ಜಗದಿ ನಿನ್ನಿಂ ಚಿರಸ್ಥಾಯಿಸುವೆನೆಂಬ ಪಂಥಕೇಂ ಮಣ್ಣೂಡಿಸಲೆ? (ಹರಿಶ್ಚಂ. ೨೬-೫೮). [ಚಿರಸ್ಥಾಯಿ + – ಇಸು₂]

**ಚಿರಸ್ಮರಣೀಯ** (ನಾ). ಸದಾಕಾಲ ನೆನಸಿಕೊಳ್ಳುವಂತಹುದು : ಗುಪ್ತರ ಸೇವೆ ಚಿರಸ್ಮರಣೀಯ (ಹುಳ್ಯಾರ. ೧೦೬ ಟಿಆರ). [ಚಿರ + ಸ್ಮರಣೀಯ]

**ಚಿರಾತೀತ** (ಗು). ಬಹಳ ಹಿಂದೆ ಕಳೆದುಹೋದ. [ಚಿರ + ಅತೀತ]

**ಚಿರಾಯತ** 'ಕಿರಿಯಾತು' ನೋ.

**ಚಿರಾಯ** (ನಾ). ಹೊದಿಸುವ ಬಟ್ಟೆ (?) : ಚಂದ್ರನೋಪಾದಿಯಲ್ಲಿ ಬಿಳುಪಾಗಿ ಮನೋವೇಗವುಳ್ಳ ಮಹಾಶ್ವರಥಗಳಂ ಕಟ್ಟಿ ಚಿನ್ನದ ಚಿರಾಯಿಗಳಿಂದ ಮುಚ್ಚಲ್ಪಟ್ಟಂಥಾದ್ದಾಗಿ (ಶಿಪರ. ೩೮-೪). [<ಚೀರ₂]

**ಚಿರಾಯಿತ** 'ಕಿರಿಯಾತು' ನೋ.

**ಚಿರಾಯು** (ನಾ). ೧. ದೀರ್ಘಾಯುಸ್ಸು : ನಿರ್ವಾಳತೆ ಚಿರಾಯು ವೈರಿವ್ರಾತ ತೊನ್ನತೆ . . . ವಿಮುಕ್ತಿಯೆಂಬಿವಂ ಪಡೆವಂ (ಕಾಚಿಕ. ೩-೧೦೦). ೨. ದೀರ್ಘಾಯುಸ್ಸುಳ್ಳವನು : ಸೂಸದ ಸ್ವೇತುಮಯ್ಯ ವಕ್ಷವುಮವರ ಪ್ರದೇಶಮುಮಾಗಲ್ದಿರೆ ವಾಜಿ ಚಿರಾಯು ನಿಶ್ಚಯಂ(ಅಶ್ವಶಾಸ್ತ್ರ. ೦೦-೩೪). ೩. ಕಾಗೆ: "ಕಾಕಂ ಚಿರಕೆಯು . . . ಕರಟಮೆಸನೆ ಕಾಗೆ" (ಮಂಗರಾ. ೩೦-೩). [ಸಂ. ಚಿರಾಯುಸ್]

**ಚಿರಾಯುಷ್ಮತಿ** (ನಾ). ಬಹುಕಾಲ ಬದುಕುವ ಹೆಂಗಸು : ನೀನು ಚಿರಾಯುಷ್ಮತಿಯಾಗಿರು, ನನಗೆ ಪ್ರಾಣದಾನವನ್ನು ಮಾಡಿದೆ (ಕಪಾಕುಂ. ೦೨೦). [ಸಂ. ಚಿರಾಯುಷ್ಮತೀ]

**ಚಿರಾಯುಷ್ಯ** (ನಾ). ಬಹಳಕಾಲ ಬದುಕುವಿಕೆ ; ದೀರ್ಘಾಯುಷ್ಯ : ಶುಭಮಸ್ತು ಶೋಭನಮಸ್ತು . . . ಚಿರಾಯುಷ್ಯಮಸ್ತು(ಮುದ್ರಕ. ೬-೨ ಅಡಿಟಿ). [ಚಿರ + ಆಯುಷ್ಯ]

**ಚಿರಾಸಾಣಿ** (ನಾ). ಒಂದು ಬಗೆಯ ಓಮ ; ಖುರಾಸಾನಿ: ಲವಂಗ, ಚಿರಾಸಾಣಿ, ಓಮ, ವಾದಕ್ಕಿ, ಚವ್ಯ, ಚಿತ್ರಮೂಲ . . . ಚೂರ್ಣವ ಮಾಡಿ ತೆಗೆದುಕೊಳ್ಳುವುದು (ವಿಶ್ವವಿ. ೩೯). [<ಖುರಾಸಾನಿ]

**ಚಿರಿ** (ನಾ). ಒಂದು ಅನುಕರಣ ಶಬ್ದ. 'ಚಿರಿಗುಟ್ಟು'. ಮರಾ.

**ಚಿರಿಗಾವುಂಡ** (ನಾ). ಒಬ್ಬಾತನ ಹೆಸರು : ಬಂನವತ್ತಕೆಯ ಪ[ದ್ಮ] [ರ]ಸನುಂ ಅಲ್ಲಿಯ ಹಿರಿಯಕೇರಿಯ ಚಿರಿಗಾವುಂಡನುಂ ತಂಬರಸಾಯಗಾವುಂಡನುಂ (ಸೌಇಇ. XI-1, ೩೦-೩೩ ; 1006). [ಚಿರಿ₀ + ಗಾವುಂಡ (<ಗಾವುಂಡ)]

**ಚಿರಿಗುಟ್ಟು** (ಕ್ರಿ). ಚಿರ್ರೆಂದು ಶಬ್ದಮಾಡು : ಕರುಳುಗಳನು ಹಿರಿಹಿರಿದು ಅಸ್ಥಿಗಳನು ಧರದಿ ಬಿಸುಟು ರಕ್ತವನು ಚಿರಿಗುಟ್ಟಿ ಹೀರುವ ಪುಂಡರೀಕನ ಕಂಡು (ಜ್ಞಾನಸ. ೨೩-೯).

**ಚಿರಿಚಿರಿಗುಟ್ಟಿಸು**=ಚಿರಿಚಿರಿ ಎಂದು ಕಿರುಚುವ ಹಾಗೆ ಮಾಡು,-ಕೂಗಿ ಕೊಳ್ಳುವಂತೆ ಮಾಡು : ಮರದ ಮಾಂಗಾಯ್ಗಳಂಗನನು ಬಲು ಚಿರಿಚಿರಿಗುಟ್ಟಿಸದಿರೆ ನಾನು (ಹರಿಕಥಾ. ೭). [ಚಿರಿ + ಕುಟ್ಟು₁ ]

**ಚಿರಿಚು** (ಕ್ರಿ). ನಗು : ಉಕ್ಕಿಬರುವ ನಗುವನ್ನು ಅದುಮಿ ನಗು ; ಚಿರಿಚು (Titter. ಕಿಟ್ಟೆಲ್). [ದೇ.॥ ತಮಿ. ಮಲ. ಚಿರಿ ]

**ಚಿರಿಟು** 'ಸುರುಂಟು' ನೋ.

**ಚಿರಿವೇರು** 'ಚಿಱುವೇರು' ನೋ.

**ಚಿರು** 'ಚಿಱು' ನೋ.

**ಚಿರುಕುಟ** (ನಾ). ಚಿಂದಿ ; ಹರುಕು ಬಟ್ಟೆ: ಚಿರುಕುಟ [ಪಾಠಾಂ. ಚಿರಕುಟ] ಮನುಟ್ಟು ಕಯ್ಯೋಳ್ ಕಿರಿದುಣುತಂ ದೆಸೆಗೆ ನಗುತುಮಾಡುತ್ತಿಪ್ಪಾ ಮರುಳ್ (ಸಮಯ. ೧೨-೩೩).
[ ? ./ಮರಾ. ಚಿರಕುಟ, ಚಿರಕೂಟ, ಚಿರಗುಟ, ಚಿರಗೂಟ, ಚೀರಕುಟ ]

**ಚಿರುಗುಳ್ಳ** 'ಚಿಱುಗುಳ್ಳ' ನೋ.

**ಚಿರುಟು** 'ಸುರುಂಟು' ನೋ.

**ಚಿರುಪಿ** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿನ್ನಕುಣ್ಚಿಯು ಬಱಿಯುವೂಲಲು ವುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆ ಯೊಡ್ಡಿನ ಕಟಗೆ (ಸೌಇಇ. IX-1, ೨೬-೧೦ ; 960). [ ? ]

**ಚಿರೂಟು** 'ಚುರುಟು' ನೋ.

**ಚಿರೋಟಿ** (ನಾ). ಮೈದಾಹಿಟ್ಟು, ತುಪ್ಪ, ಸಕ್ಕರೆಗಳನ್ನು ಕೂಡಿಸಿ ಕರಿದು ಮಾಡುವ ಒಂದು ಬಗೆಯ ಸಿಹಿ ಭಕ್ಷ್ಯ : ಮೈಸೂರಿನಿಂದಲೇ ತಯಾರು ಮಾಡಿ ತಂದಿದ್ದ ಚಿರೋಟಿಗಳನ್ನೂ ಹುರಿಗಾಳನ್ನೂ ಶಾರದಮ್ಮನವರು ಎಲ್ಲರಿಗೂ ಹಂಚಿದರು (ಮೂಲಾನ. ೧೨೩).
[ ←ಮರಾ. ಚಿರೋಟೀ, ಚಿರೋಟಾ ]

**ಚಿರ್ತ** 'ಚಿರತೆ₁' ನೋ.

**ಚಿರ್ರಿರಿಲ್** (ನಾ). ಒಂದು ಅನುಕರಣ ಶಬ್ದ : ಇಳಾಮಂಡಲಂ ಚಿರ್ರಿರಿಲ್ಲೆಂದೊಡೆಗುಂ (ಸೌಇಇ. XI-II, ೧೨೬-೦೪ ; 1090).

**ಚಿರ್ತು** 'ಚಿರತೆ₁' ನೋ.

**ಚಿರ್ಪುಳಿ** (ನಾ). ಒಂದು ಊರಿನ ಹೆಸರು ; ಪೆ ವಂದನವಲ್ಲಿ ತಾಲ್ಲೂಕಿಗೆ ಸೇರಿರುವ ಈಗಿನ ಚಿಪ್ಪಲಿ ಎಂಬ ಊರು : ಬಾಣರಸರ್ ಇತ್ತ ಕೆಯು ಕಱಿಯು ನಾಲ್ವತ್ತು ಪುಣಸೆ ಇದಕ್ಕೆ ಉತ್ತರ ಸಾಕ್ಷಿ ಕಣ್ಣಾಗ. x x ಕ ಯಿರು ಚಿರ್ಪುಳಿ x x x ಸಾಕ್ಷಿ ಪಡೆದೊರ್ (ಸೌಇಇ. IX-I, ೦-೩ ; 7).
[ ? ]

**ಚಿರ್ಭಟ** (ನಾ). ಒಂದು ಬಗೆಯ ಸೌತೆ ; ಮೆಕ್ಕೆಗಿಡ ಮತ್ತು ಅದರ ಕಾಯಿ : "ಉರ್ವಾರುಃ, ಚಿರ್ಭಟಃ-ಈ ೨ ಮೆಕ್ಕೆ" (ಹಲಾಯು ೩೮-೫೬).
[ ಸಂ. ]

**ಚಿರ್ಯಾತ** 'ಕಿರಿಯಾತು' ನೋ.

**ಚಿಲಕ** 'ಚಿಲುಕ' ನೋ.

**ಚಿಲಕಡಿ** (ನಾ). ಒಂದು ಬಗೆಯ ಮರ : ಚಿಲಕಧೂಪ, ಚಿಲಕಡಿ, . . . ಧೂಪ (ಬ್ರುಶಿನಿ. ೧೩-೨೩೭). [ ? ]

**ಚಿಲಕತ್ತು** 'ಚಿಲಖತ್ತು' ನೋ.

**ಚಿಲಕಧೂಪ** (ನಾ)=ಚಿಲಕಡಿ : ಚಿಲಕಧೂಪ, ಚಿಲಕಡಿ, ಗುಗ್ಗುಳಧೂಪ, ಮಡ್ಡಿಮರ, ಮಾಡಿ, ಚಿತ್ರ, ಧೂಪ (ಬ್ರುಶಿನಿ. ೦೩-೨೩೭). [ ? ]

**ಚಿಲಕಿ₁** 'ಚಿಲಿಕೆ₁' ನೋ.

**ಚಿಲಕಿ₂** 'ಚಿಲಿಕೆ₂' ನೋ.

**ಚಿಲಕು** (ನಾ). (ಉಕ) ಗಂಡಸರಿಗೆ ಉಂಟಾಗುವ ಒಂದು ಬಗೆಯ ಮೂತ್ರರೋಗ : (ಕ). [ ? ]

**ಚಿಲಕುರುಳಿ**, ಚಿನಕುರುಳಿ, ಚಿನುಕುರುಳಿ (ನಾ). ೧. ಹುರುಳಿ, ಕಡಲೆ ಮುಂತಾದ ಧಾನ್ಯಗಳನ್ನು ಹುರಿದು ಖಾರ ಹಾಕಿ ಮಾಡಿದ ಒಂದು ಖಾದ್ಯ ವಿಶೇಷ; ಹುರಿಗಾಳು: ಚಿಲಕುರುಳಿ ಮಾರೋಳಿ ತಿಲಕಬೊಟ್ಟೀನ ಕಂಚಲುವೆ (ಹಕ್ಕಿಯ. ೪೩). **ಚಿನಕುರುಳಿ**: ೧. ನನ್ನ ಸ್ನೇಹಿತ ಊರಿಂದ ತಂದಿದ್ದ ಚಿನಕುರುಳಿ ಬಹಳ ಸೊಗಸಾಗಿತ್ತು (ರೂಢಿ): ೨. ಒಂದು ಬಗೆಯ ಪಟಾಕಿ; ಮದ್ದಿನ ಚಟಾಕಿ: ಪಟಾಕಿ, ಚಿನಕುರುಳಿ, ಹೂಬಾಣ, ಹೂವಿನ ಕುಂಡ (ಪಂಚಮು. ೬೨-೧). ೩. (ಅಲಂ) ಹಾಸ್ಯ; ಜೋಕು: ಈ ವರ್ಷದ ದೀಪಾವಳಿ ಸಂಚಿಕೆಯಲ್ಲಿ ಚಿನಕುರುಳಿ ಸೊಗಸಾಗಿತ್ತು (ರೂಢಿ). **ಚಿನುಕುರುಳಿ**: ೧. ಚಿನುಕುರುಳಿ ಬಹಳ ಚೆನ್ನಾಗಿದೆ (ರೂಢಿ).
[ ಚಿಲಕು ? + ಹುರುಳಿ ]

**ಚಿಲಕೂಲಿ** 'ಚಿಲುಕೂಲಿ' ನೋ.

**ಚಿಲಕೆ** 'ಚಿಲಿಕೆ₁' ನೋ.

**ಚಿಲಖತ್ತು**, ಚಿಲಕತ್ತು (ನಾ). ಯುದ್ಧದಲ್ಲಿ ಶರೀರ ರಕ್ಷಣೆಗಾಗಿ ಹಾಕಿಕೊಳ್ಳುವ ಕವಚ ; ಉಕ್ಕಿನ ಕವಚ ; ತನುತ್ರಾಣ ; ಸವಂಗ : ಅವನು ಘೋಷಾಕಿನಲ್ಲಿ ಯಾವಾಗಲೂ ಚಿಲಖತ್ತನ್ನು ಪಯೋಗಿಸುತ್ತಿದ್ದನು (ಇಂಗ್ಲೆಇ. ೦೦೦); ಬೇರೆ ಬೇರೆ ಬಗೆಯ ಹಳೆಯ ಆಯುಧಗಳನ್ನೂ ಚಿಲಖತ್ತುಗಳನ್ನೂ ಸಂಗ್ರಹಿಸಿ ಅಲ್ಲಿಡಲಾಗಿದ್ದಿತು (ರಕ್ಕಸಗೋ. ೩). **ಚಿಲಕತ್ತು** : ಚಿಲಕತ್ತು ಒರೆಗತ್ತಿ ಎತ್ತಿ ದಂಡಿನ ಮಂದಿ (ಲೋಕಗೀ. ೨೦೨); ಉನ್ನೀಸಳು ಗಂಡನ ಚಿಲಕತ್ತು ಕಳೆದು ಉಪಚರಿಸುವವಳು (ಸೂರಜ. ೧೭).
[ ←ಮರಾ. ಚಿಲಖತ್, ಚಿಲಕತ್; ಪಾರ. ಚಿಹಿಲ್ಕದ್ ]

**ಚಿಲಣ** 'ಚೀರಣ' ನೋ.

**ಚಿಲಣಗೆಲಸ** 'ಚೀರಣಗೆಲಸ' ನೋ.

**ಚಿಲವಾನ್** 'ಚಿಲುವಾನ' ನೋ.

**ಚಿಲಿ** (ಕ್ರಿ). ಹಲ್ಲುಬಿಡು ; ಕಿಸಿ : ಕವೋಗದೆಡೆಯ ಪಲ್ಗಳಂ ಬೆಳ್ಪನೆಯ ಚಿಲಿವ ಘೋರಕಿ ಬೆದರಿ (ಕ್ರೀರಾಮಾ. ೧೦೪-೧೨೬). 'ಕಿರಿ₂' ಪರಾ. [?]

**ಚಿಲಿಕಿ** 'ಚಿಲಿಕೆ₂' ನೋ.

**ಚಿಲಿಕೀರೆ** 'ಚಿಲುಕೀರೆ' ನೋ.

**ಚಿಲಿಕೆ₁**, ಚಿಲಕಿ₁, ಚಿಲಕೆ, ಚಿಲುಕೆ, ಚೀಲಿಕೆ (ನಾ). ಒಂದು ಬಗೆಯ ಸೊಪ್ಪು : "ಚಿಲಿಕೆ ಸ್ವಸ್ತಿಕೆಯುಕ್ಕು" (ಮಂಗರಾ. ೪೪-೪೬) ; ನುಗ್ಗೆಯ ಕಾಯ ತೊಂಡೆಯ ಕಾಯ ಚಿಲಿಕೆಯ . . . ಮೇಲೋಗರವುಣ್ಣೆಯಗ್ಗದಾರೋಗ್ಯವು ಪಥ್ಯ (ಸಾಳ್ವಸೂ. ೭). **ಚಿಲಕಿ₁** : ಸೊಪ್ಪುಗಳು : ಅಗಸೆ; ಬೀಸಸೊಲಿ . . . ದಂಟು, ಹರಿವೆ, ಚಿಲಕಿ, ದಗ್ಗಳಿ, ಕೆಸವೆ (ಪಮ್ಮಸು. ೨೩೭). **ಚಿಲಕೆ** : "ವ್ಯುದುಪತ್ರೀ–ಚಕ್ರವತ್ತ, ಚಿಲಕೆ" (ಓಷಧಿ. ೧೨೦). **ಚಿಲುಕೆ** : ಮತ್ತೆ ಕೆಲವಕ್ಕೆ ಐದನೆಯ ಬಚ್ಚ ಕೆಲವಕ್ಕೆ ಕತ್ತರಿಸಿದೆಳೆಕೀರೆ ಚಿರಾಣಿ [ಪಾಠಾಂ. ಚಿಗಡೆ]ನರುವಲು ಚಕ್ರವತ್ತ ಮೊದಲಾದ ಸೊಪ್ಪಂ ತುಪ್ಪದೊಳಗೆ ಚೆನ್ನಾಗಿ ತಾಳಿಸಿ (ಸೂಪಶಾ. ೪-೨೧). **ಚೀಲಿಕೆ** : "ಚಿಲ್ಲೀಶಾ–ಚೀಲಿಕೆ" (ಓಷಧಿ. ೫೬). [ದೇ.॥ ತೆಲು. ಚಿಲುಕ, ಚಿಲ್ಕ./ಸಂ. ಚಿಲ್ಲಿಕಾ ]

**ಚಿಲಿಕೆ₂**, ಚಿಲಕಿ₂, ಚಿಲಿಕಿ (ನಾ). ೧. (ಉಕ) ಚಾವಣಿಯನ್ನು ಹಾಕುವಾಗ ಬಿದಿರಿಗೆ ಬದಲಾಗಿ ಹಾಕುವ ಸಣ್ಣ ಗಳು ; ಸಣ್ಣ ಮರದ ಪಟ್ಟಿ ; ರಿಪೀಸು : ಬಡವರಿದ್ದವರು ಜಂತೆಗಳ ಮೇಲೆ ಚಿಲಿಕೆಗಳನ್ನು ಹಾಕಿ ಅವುಗಳ ಮೇಲೆ ಯಾವುದಾದರೂ ಒಂದು ಗಿಡದ ಎಲೆಗಳನ್ನು ಹರವಿ ಮೇಲುಮುದ್ದಿಯ ಹಾಕುವರು (ಮೂಲಿಯ. ೪-೧೧೭). ೨. ಚಟ್ಟ ; "ಸಿದಿಗೆ" (ಜಾನಕೋ. ೫೭). **ಚಿಲಕಿ₂**: ೧. ಗಂಡಸಮಗ ಗುಱಿಯು ಹುಟ್ಟಿದರ ಚಿಲಕಿ ಚಿತ್ತರ ನಗತಾವ (ಗರತಿ. ೮೯). **ಚಿಲಿಕಿ**: ೧. ಬರಿಕೆ ಎಲುಗಳು ಜಂತಿಗಳು ಚಿರಳೆಲುಗಳೇ ಚಿಲಿಕಿ ಇಂತೀ ಗೃಹಕ್ಕೆ ಮಾಂಸದ ಮೇಲುಮುದ್ದೆಗಳು ರಕ್ತದ ಸಾರಣೆಗಳ (ವಚನ. I, ೨೭೦-೨೯). [ ? ]

**ಚಲಿಕೆನೆವಾಲು** (ನಾ). ಚೆನ್ನಾಗಿ ಕಾಯಿಸಿ ಕೆನೆಗೂಡಿದ ಹಾಲು : ಇನಿದೊಸರ್ವ ತನಿಪಾಯಿನೊರ್ಳ್ವಣ್ಣ ರಸದಿ ಚಲಿಕೆನೆವಾಲನೆಟ್ಟಿದು ಸಿರದಚ್ಚ ವೆಡಿಯನ್ನುದುರಿಸಿ(ಕವಿಜ. III, ೨೦೦ ಶ್ರ ಛಾವತೀ ಪರಿಣಯ). 'ಚಲುವಾಲು' ಪರಾ. [ < ಚಲು$_1$ + ಕೆನೆವಾಲು( < ಕೆನೆವಾಲ್) ]

**ಚಲಿಚಿಮ, ಚಿಳಿಚಿಮ** (ನಾ). ಒಂದು ಬಗೆಯ ಸಣ್ಣ ಮೀನು ; ಜಂಬು ಮೀನು : "ನಲಮೀನ ಚಿಲ[ಲಿ]ಚಿಮ ಎಂದೊಡೆ ಸಿಸಿಲು, ಚೆಳಿಯ ಮೀನೆಂದು ಎಂಬರು" (ಶಾಟೀಕಾ.೬). **ಚಿಳಿಚಿಮ**: "ನಳಮೀನಃ, ಚಿಳಿಚಿಮಃ– ಈ ೨ ಕಿಱುಮೀನ್". (ಅಭಿಧಾ. ೦೦೮-೩೭); "ಚಿಳಿಚಿಮವೆನಲು ನಳಮೀನ ವೆನೆ ಕಿಱುಮೀನ ಪೆಸರೆನಿಕ್ಕು" (ಮಂಗರಾ. ೦೨೧-೭); ವಿಸ್ಮರಕ್ಕೇನದೊಳಂ ಚಳಚ್ಚಿಳಿಚಿಮದೊಳಂ . . . ಅತಿಮನೋಹರಮಾದ ಯಮುನಾಹ್ರದ ಪರಿಸರಪ್ರದೇಶದೊಳಕ್ರೂರಂ ನಿಜವರೂಥಮಂ ನಿಲಿಸಿ (ಜಗವಿ. ೫-೧೧ ೨ವ); ಪುಟನೆಗೆದು ಮಗುಟುಟುವ ಚಿಳಿಚಿಮಾನೀಕದಿಂ (ಉದ್ಭಟ. ೩-೮೪). [ ಸಂ. ]

**ಚಲಿಪಾಲು** 'ಚಲುಪಾಲ್' ನೋ.

**ಚಲಿಪಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಪಕ್ಕಿಗಳುಲಿಗಕ್ಕು ನಾಮ ಚಲಿಪಿಲಿಯೆನುತುಂ" (ಕವಿಕಂ. ೬೩); ಚಲಿಪಿಲಿ ಹಾಡಿಗೆ ಗುಬ್ಬಿಯ ಥಕ ಥೋಂ ಧಿಕ್ಕಿಟ್ಟ (ಮಾಂಡಳಿ. ೪೩-೧) ; ಅಲ್ಲೊಂದು ಇಲ್ಲೊಂದು ಹಕ್ಕಿಗಳ ಚಲಿಪಿಲಿ ಕೂಗು ಅವನ ಕಿವಿಗೆ ಕಚಕುಳಿಯಾಡಿಸಿ ದಂತಾಯಿತು (ಶಿವಪೂಜ. ೧೦).

**ಚಲಿಪಿಲಿಗುಟ್ಟು** (ಕ್ರಿ). ಚಲಿಪಿಲಿ ಎಂದಂ ಧ್ವನಿಮಾಡು : ಚಲಿಪಿಲಿಗುಟ್ಟ ನುಣ್ಣೊದಳ್ದಳೆಂ ಕಿವಿಗಿಂಪನೊದರ್ಚೆ (ದಶಕು. ೧-೩೭) ; ಹಕ್ಕಿಗಳೆಲ್ಲಾ ಸಂತೋಷದಿಂದ ಚಲಿಪಿಲಿಗುಟ್ಟ ಕೂಗುತ್ತಾ ಹಾರಾಡುತ್ತಿದ್ದವು (ಕಳಹು.೨); ಇತರ ಹಂಸಪಕ್ಷಿಗಳು . . . ಚಲಿಪಿಲಿಗುಟ್ಟುತ್ತಾ ಹಾರಿಹೋದವು (ಹಿಂಕಿರು. ೩೭). [ ಚಲಿಪಿಲಿ + ಕುಟ್ಟು$_1$ ]

**ಚಲಿಪಿಲಿಗುಡು**(ಕ್ರಿ).(ಆಲಂ) ಹಕ್ಕಿಯು ಚಲಿಪಿಲಿಗುಟ್ಟುವಂತೆ ಸಂತೋಷ ದಿಂದ ಕೂಡಿರು,–ಆನಂದದಿಂದಿರು : ಮನಸ್ಸು ಸಂತೋಷದಿಂದ ಚಲಿಪಿಲಿಗುಡುತ್ತಿದ್ದ ದಿನ (ರಂಗಹ. ೦೨೪). [ ಚಲಿಪಿಲಿ + ಕುಡು$_1$( < ಕೊಡು$_1$) ]

**ಚಲಿಪಿಲಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಕೊಟ್ಟು : "ಚಾಷಃ = ಚಲಿಪಿಲಿಹಕ್ಕಿ" (ಶಾಶಕ್ಕ. ೦೫೭). 'ಚಲಿಮಿಲಿಗ'ಪರಾ. [ ಚಲಿಪಿಲಿ + ಹಕ್ಕಿ$_1$( < ಪಕ್ಕಿ$_1$) ]

**ಚಲಿಮಿಲಿ** (ನಾ). ಹಕ್ಕಿಗಳು ಗುಂಪಾಗಿ ಮಾಡುವ ಧ್ವನಿಯ ಅನುಕರಣ: "ಚಲಿಮಿಲಿಯೆಂದು ಪಕ್ಕಿಗಳುಲುಹು" (ಕಶಸಾ. ೩-೦೫) ; ಸಮಸ್ತಧಾತ್ರಿ ಯುಮನಾಳಿಪೆವೆಂದುಲಿವಂತೆ ಪಕ್ಕಿಗಳ್ ಚಲಿಮಿಲಿಯೆಂಬ ಪೊಟ್ಟಜೊಳೆ ಬಂದುಱದೊಡ್ಡಿದನಂತಕಾತ್ಮಜಂ (ಪಂಪಭಾ. ೦೦-೩೩) ; ಚಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೇ ನೀವು ಕಾಣಿರೇ (ಮುಹಾದೇ. ಬ. ೩೩-೭೩).

**ಚಲಿಮಿಲಿಗ, ಚಲುಮಿಂಲಿಗ** (ನಾ). ಚಲಿಮಿಲಿ ಎಂದು ಶಬ್ದಮಾಡುವ ಒಂದು ಬಗೆಯ ಹಕ್ಕಿ ; ಕೊಟ್ಟು ; ಚಾಷ : ಗೌಜು ಪಾರಿವ ನಿರಿಲೆ ಸಾಳುವ ಚಲಿಮಿಲಿಗ ಚಂಬೋತ . . . ಗರಿಗ ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುಮಾರ. ೨೦-೫೩) ; ವಲಿಯ ಭಾರದ್ವಾಜ ಪಿಕ ಪಿಂಗಲಿ ನಿಶಾಟಧ್ವಾಂಕ್ಷ ಚಾತಕಿ ಚಲಿಮಿಲಿಗ ಜಾಣ್ವಕ್ಕಿ . . . ಮಡಗೊಳಲೆ ಮುಖ್ಯವಿಹಂಗವಿವೆ ವೈದೇಹಿ ನೋಡೆಂದ (ತೊರರಾ. ೩-೧-೩೩). **ಚಲುಮಿಲಿಗ** : ಹರಡೆ ಚಲುಮಿಲಿಗನು ಚಲುವೆ ಗಿಜುಗಿರಳೆ ಕಮ್ಮರನಸಗ . . . ಪಕ್ಕಿಗಳವಱೊಳೊಪ್ಪಿದವು (ಸಾಳ್ವಭಾ. ೫-೨೦). [ ಚಲಿಮಿಲಿ + – ಗ$_2$ ]

**ಚಲಿಮಿಲಿಸು** (ಕ್ರಿ). ಚಲಿಮಿಲಿ ಎಂದಂ ಧ್ವನಿಮಾಡು: ಬಳಸಿ ಚಲಿಮಿಲಿಪ ವಿಹಗಂಗಳ ಕಳಕಳದೊಡನೆ ತೊಡರ್ದು . . . ತೀಡಿತ್ತು ಸುಪ್ರಭಾತ ಸಮೀರಂ (ಕುಸುಮಾ. ೪-೭೦) ; ಬಳಸಿ ಚಲಿಮಿಲಿಪ ವಿಹಗಂಗಳ ಕಳಕಳ ದೊಡನೆ ತೊಡರ್ದು ಸರಸೀಜಳಮಂ ಪಳಿಗೊಳಿಸಿ ಕುಮುದ ಮುಖಮಂ ಪೆಳಱಿಸಿ ತೀಡಿತ್ತು ಸುಪ್ರಭಾತ ಸಮೀರಂ (ಶಾಂತೀಶ್ವ. ೦೦-೯೫). [ ಚಲಿಮಿಲಿ + – ಇಸು$_1$ ]

**ಚಲಿಮೆ$_1$** 'ಚಲುಮೆ$_1$' ನೋ.

**ಚಲಿಮೆ$_2$** 'ಚಲುಮೆ$_2$' ನೋ.

**ಚಲಿವಾಲು** 'ಚಲುಪಾಲ್' ನೋ.

**ಚಲು$_1$** (ಕ್ರಿ). ೧. ಅನ್ನದಂತೆ ಚೆನ್ನಾಗಿ ಬೇಯು. ೨. ಚೆನ್ನಾಗಿ ಕುದಿ,– ಕಾಯು. 'ಚಲುಪಾಲ್' ಪರಾ. [ ದೇ.ಶ ತಮಿ. ಚಲು ]

**ಚಲು$_2$** (ನಾ). (?) : "ಗೋಧಾಸ್ತನ್ಯಃ–ಚಲು" (ಒಷಧಿ. ೫೦). [ ? ]

**ಚಲುಕ, ಚಲಕ, ಚಿಲುಕಂ$_1$** (ನಾ). ೧. ಕದವನ್ನು ಭದ್ರಪಡಿಸುವುದಕ್ಕಾಗಿ ಉಪಯೋಗಿಸುವ ಕೊಂಡಿ,–ಸರಪಣಿ : ಕದವ ಮುಚ್ಚಿದಳದಕೋ ಚಲುಕ ಅಲ್ಲಾಡುತಿದೆ (ಪುರಂದ. ೨-೯೭ ಅನುಪಲ್ಲವಿ). ೨. ಬೇಟೆಯಲ್ಲಿ ಉಪಯೋಗಿಸುವ, ತುದಿಯಲ್ಲಿ ಮುಳ್ಳಿನಂತೆ ಮೊನೆಯಿರುವ ಒಂದು ಉಪಕರಣ; ಈಟಿ; ಬರ್ಜಿ (?) : ತಡಿಕೆ ತಳೆಯು ಅಂಟನ ಕಣೆ ಬಾಳುವ ಹಿಡಿದ ದೀಹವು ಪಾಚಿ ಸಿಡಿಯು ಹೊಡೆದೆತ್ತುವ ಮೊಲ ಎಸೆವ ಚಲುಕಗಳು ಬಿಡುಗಣ್ಣ ಬೇಡರೊದಗಿತು (ಹರಿಸಾಂ. ೨-೨). **ಚಲಕ**: ೧. ಅತ್ತೆಮನೇಲಿ ಹೇಗಿರುವೆ ಮಗಳೇ ಅಂದ್ರೆ ಚಲಕಕ್ಕೆ ಮೊಳಕ್ಕೆ ತಗುಲಿದ ಹಾಗೆ ಅಂದ್ಲು (ಹುಟ್ಟಿಹ. ೦೦೩). **ಚಲುಕು$_1$**: ೨. ಮದನನ ನನೆಯಂಬು ಮುನಿಹೃದಯಮಂ ನಡವನುತ್ತೆ ಚಲುಕಿನ ದೂಡ್ಡ ಮೊನೆಯಂಬ ನಾಗಿಸಿದನೋ ಯೆನಲ್ . . . ಹೊಂಗೇದಗೆಗಳೊಪ್ಪಿದುವು ತರುತರಮೊಳ್ (ಚಬಪು. ೪೫-೦೮). [ ದೇ.ಶ ತಮಿ. ಮಲ. ಚಲುಕ್ಕು ; ತುಳು. ಚಲ್ಕ್; ತೆಲು. ಚಿಲಕ, ಚಿಲುಕು, ಚಿಲುಕ ]

**ಚಲುಕವರೆ** (ನಾ). ನೀರಿನಲ್ಲಿ ನೆನಸಿ ಸಿಪ್ಪೆ ತೆಗೆದ ಅವರೆಕಾಳು ಮತ್ತು ಅದರಿಂದ ಮಾಡಿದ ಒಂದು ಬಗೆಯ ಮೇಲೋಗರ : ಇಂದು ನಮ್ಮ ಮನೆಯಲ್ಲಿ ಚಲುಕವರೆ ಮಾಡಿದ್ದರು (ರೂಢಿ). 'ಚಿದಕವರೆ' ಪರಾ. [ ಚಲುಕು$_2$ + ಅವರೆ$_1$ ]

**ಚಲುಕಾಯಿ** (ನಾ). ಗಿಳಿ (?) : ಯಾಕತ್ತೆ ನನ್ನ ಗೋಪೀದೇವಿ ಕಂದಯ್ಯ ಗೋಪುರದಲ್ಲಾಡೊ ಚಲುಕಾಯಿ ಚಿಂತಾಮಣಿ ಹಸುಳೆ ಬಂದಾಡೊ ತೊಡೆ ಮೇಲೆ-(ಹಳ್ಳಿಯ. ೬೯). [ ?,/ತೆಲು. ಚಿಲುಕ, ಚಿಲ್ಕ ]

**ಚಲುಕಿಸು** (ಕ್ರಿ). ಕಾಳಿನ ಮೇಲಿರುವ ಸಿಪ್ಪೆ ತೆಗೆ, – ಸಿಪ್ಪೆ ಬಿಡಿಸು : ಚಲುಕಿಸಿದ ಅವರೆಕಾಳು ಬಹುರುಚಿ (ರೂಢಿ). [ ಚಲುಕು$_2$ + – ಇಸು$_1$ ]

**ಚಲುಕೀರೆ, ಚಲಿಕೀರೆ** (ನಾ). ಒಂದು ಬಗೆಯ ಸೊಪ್ಪು ; "ಶೋಧಿನೀ– ಚಲುಕೀರೆ" (ಒಷಧಿ. ೦೭೨) ; ಚಲುಕೀರೆ ಸೊಪ್ಪು ಸಿಹಿಪಾಲೆ ಸೊಪ್ಪು ಚಕ್ರವರ್ತಿ ಪುಳಂಪುರುಚಿ ಜಾಂಗಲಮಾಂಸ . . . ಯುಮ್ಮ ಪಥ್ಯ ಕರವಹುದು (ವಿಷಚಿ. ೦೩-೩). **ಚಲಿಕೀರೆ** : ಚಲಿಕೀರೆಯ ಸೊಪ್ಪಿನ ರಸದಲ್ಲಿ ಒಂದು ಜಾವ ಮರ್ದಿಸಿ ಸಾಸಿವೆ ಪ್ರಮಾಣ ಗುಳಿಗೆಯಂ ಮಾಡಿ ಸಮುಜ್ಜರಕ್ಕೆ ಜೀರಿಗೆ ಸಕ್ಕರೆಯಲ್ಲಿ ಕೊಡುವುದು. (ವೈವಿ. ೩೭); ಚಕ್ರವರ್ತಿದ ಸೊಪ್ಪು, ಚಲಿಕೀರೆ ಸೊಪ್ಪು ಇವುಗಳೆಲ್ಲವೂ ಜ್ವರದವರಿಗೆ ಪಥ್ಯದ್ರವ್ಯಗಳು (ಕಳಚು. ೦೦೨). [ ←ತೆಲು. ಚಿಲುಕಕೂರ ]

**ಚಲುಕು$_1$** 'ಚಲುಕ' ನೋ.

**ಚಲುಕು$_2$** (ನಾ). ಸಿಪ್ಪೆ ; ಪೊರೆ. 'ಚಲುಕಿಸು', 'ಚಿದಕು$_2$' ಪರಾ. [ ? ]

**ಚಿಲುಕೂಲಿ**, ಚಿಲಕೂಲಿ (ನಾ). ಒಂದು ಬಗೆಯ ಹಕ್ಕಿ : ಪರ್ಬಕ್ಕಿ ಹೆಂಗುರು ಕಾಕಂ ಚಿಲುಕೂಲಿ ರತ್ನಖಗಮಿರ್ದುಂ ತದ್ವನಾಗೌಘದೊಳ್ (ರಾಜಶೇ. ೩-೩೯) ; ಪಾರಾವತಂ ಪರಪುಟ್ಟಂ ಚಿಲುಕೂಲಿ ಚಾತಕಮು ವಿಕರ್ದುಂ (ಯಾದಪ. ೪-೩೩) ; ಗರುಡಂ ಶರಾರಿ ಚಿಲುಕೂಲಿ ಪಿಕಳಂ ಬಕಂ (ಕುಮಾವ್ಯ. ೪-೧೯೮). **ಚಿಲಕೂಲಿ** : ಅಂಚೆಯ ಚಿಂಬೋತನ ಚಿಲಕೂಲಿಯ ಕೊಂಚೆಯ ಗಿಳಿ ಕೋಳರ್ವಕ್ಕಿಯ ಪುರುಳಿಯ (ಹಮ್ಮೀರ. ೪-೧೨ ರಗಳೆ). [?]

**ಚಿಲುಕೆ** 'ಚಿಲಿಕೆ$_1$' ನೋ.

**ಚಿಲುತಲಿ** (ನಾ). ಒಂದು ಬಗೆಯ ಆಯುಧ : ಸಂಣ ಚಂದ್ರಾಯುಧಾ ಚಿಲುತಲಿ ಮೊದಲಾದಾ ಬತ್ತೀಶಾಯುಧಾ (ಎಕ. XVI, ಗುಬ್ಬಿ. ೬೪-೨೩ ; ಶ. 1776). [?]

**ಚಿಲುಪಾಲ್**, ಚಿನಿಪಾಲು, ಚಿನಿವಾಲ್, ಚಿನಿವಾಲು, ಚಿಲಿಪಾಲು, ಚಿಲಿವಾಲು, ಚಿಲುಪಾಲು, ಚಿಲುಹಾಲು (ನಾ). ನೀರು ಇಂಗುವಂತೆ ಚೆನ್ನಾಗಿ ಕಾಯಿಸಿದ ಹಾಲು ; ಕೆನೆಹಾಲು : "ಕಾಯ ಬತ್ತಿದ ಹಾಲು ಚಿಲು[ಪಾಠಾಂ. ಚಿರ]ಪಾಲೆನಿಕ್ಕು" (ತುಂಗರಾ. ೬೪-೨) ; ಸಗ್ಗದಮರ್ದಿನ ಕೊಳಂ ಮೇಲ್ವಾಯ್ದು ಮಿಸುಪ ಚಿಲುಪಾಲ್ಗನೆಗಳಂ ನೆಱೆದಾರೆಯಿಟ್ಟವೋ (ವೀರಭ್ರ. ೩-೯-೩೪). **ಚಿನಿಪಾಲು** : ಇನಿದಾದ ಚಿನಿಪಾಲು ಪೀರ್ವರಸಂಚೆ ಹುಳಿಗಂಗೆಯ ಕುಡಿವುದೇ (ಶರಶ. ೧೯೩-೯೦೦) ; ಕಾಸಿ ಚಿನಿಪಾಲಂ ಕೊಡುವವಳು ನಿಮಗೆ ಕೊಡಗೂಸು (ಬಸಪು. ೯-೩೮) ; ಸಕ್ಕರೆಯ ಜೇನ ಸವಿಗಿಮ್ಮಿಗಿಲು ಕೆನೆಗಟ್ಟಿ ಪುಕ್ಕುಳ್ಕಿ ಕಾಯ ಚಿನಿಪಾಲ ರುಚಿಗಿಂದಧಿಕ (ಷಡಕೋ. ೦-೨) ; ಸಕ್ಕರೆ ಚಿನಿಪಾಲು ತುಪ್ಪವ ಯಿಕ್ಕೊಡನೀರ್ವರು ಸವಿದು (ಶರಿಶ. ೩೮-೩). **ಚಿನಿವಾಲ್** : ಚಿನಿವಾಲ್ಗನೆ ಸದ್ಘೃತಂಗಲಸಿ ದುಂದದೊಳೆನ್ನ ಕೃತಿರಸಂ ನಾಡೆ ಸವಿಗೊಳಿಸುವುದು (ಶಂದಿಶಾ. ೦-೩೦). **ಚಿನಿವಾಲು** : "ಲಿಂಗಮೂರ್ತಿ ಇನ್ನೊಬ್ಬರಿಗೆ ಶಿವ ಕಾರುಣ್ಯ" ಎಂಬ ಆ ಚಿನಿವಾಲನ್ನು ಕೊಡಲು ಯತ್ನಿಸುವವನೇ ಹೊರತು ಹುಳಿಯನ್ನು ಕೊಡನು (ಶಬ್ದಾಶ. ೦೨೦). **ಚಿಲಿಪಾಲು** : ಶಿವಮ್ಮೃಡನಾಮ ಶಿವಜ್ಞಾನವೆಂಬ ಚಿಲಿಪಾಲನಾರೋಗಿಸುವ ಪರಹಿತದಿಂದ (ಚು ದೃ ಭಾ . ೯೨) ; ಚಿಲಿಪಾಲು ಸಕ್ಕರೆಯಾ ಸುಲಿದ ಬಾಳೆಯ ಹಣ್ಣು ಕಲಸಿ (ಗುರುಕೋ. ೬೦); ಚಿಲಿಪಾಲಿನೊಳಗೆ ಶರ್ಕರೆವೆರದು ಪರಿಮಳಂ ಕಲಿತಮೆಂದೆನಿಸುತಿರಲೀಂಟ ನಾಲಗೆದಣಿದು ಸುಲಭದಿಂ ನೆನೆದಪುದೆ ದೇವ (ಶಂಕಾರಾ. ೩-೦-೨) ; ಶರ್ಕರೆವೆರಸಿ ಚಿಲಿಪಾಲೀವ ಸಿರಿಯನಗಹುದೆಯೆಂದು (ಜಿನಧಾ. ೩೦-೯). **ಚಿಲಿವಾಲು** : ತುಪ್ಪ ಸಕ್ಕರೆ ಚಿಲಿವಾಲ ಸವಿವವೋಲು ಪೊಪ್ಪುಕಥೆಯ ಪೇಳುವೆನು (ರಾಜುವಿ. ಅನುಬಂಧ ೩.೨೦-೬). **ಚಿಲುಪಾಲು** : ರಸವೊಸರ್ವ ಮುಪ್ಪಳಮಂ ಚಿಲುಪಾಲ ತಿರುಳ ಕರಣೆಗಳುಮಂ . . . ಒಂದುಗೂಡಿ (ಸಂಪಿರ. ೦೦-೩೮) ; ಚಿಲುಪಾಲಿನೊಳು ವಿಷಂ ತವರಾಜನೊಳು ಕೃಪೆ (ಭಾವಚಿಂ. ೯-೩); ಗುಟ್ಟುಡರದೆ ಕಾದ ಚಿಲುಪಾಲು ಮಕ್ಷಿಕೋಚ್ಛಿಷ್ಟವಿಲ್ಲದ ಜೇನುತುಪ್ಪ (ಕೋಚಕ. ೨೩-೧) ; ಚಿಲುಪಾಲು ಶಂಬಾಲು ಕೆನೆವೆರಸಿದ ಪಾಲುಂ (ಶಂಚವಿ. ೮-೯೦). **ಚಿಲುಹಾಲು** : ಬಟ್ಟಹಾಲು, ಚಿಲುಹಾಲು, ಕೆನೆಹಾಲು, ಎಟ್ಟಿಹಾಲು, ತನಿಹಾಲು ಮುಂತಾದ ತರತರದ ಹಾಲುಗಳನ್ನು ಬಟ್ಟಲು ಬಟ್ಟಲು ತುಂಬಿ ತಂದು ಎಡೆ ಮಾಡಿದಳು(ಮಾಕುಲ್ಲಿ. ೩೪).

[ ಚಿಲು$_1$ + ಪಾಲ್$_1$ ]

**ಚಿಲುಹಾಲು** 'ಚಿಲುಪಾಲ್' ನೋ.

**ಚಿಲುಮಿಲಿಗ** 'ಚಿಲಿಮಿಲಿಗ' ನೋ.

**ಚಿಲುಮುರಿ** (ನಾ). ಗೋಧಿಯ ಹಿಟ್ಟಿನಿಂದ ಮಾಡಿ, ತುಪ್ಪದಲ್ಲಿ ಕರಿದ ಒಂದು ಬಗೆಯ ಭಕ್ಷ್ಯ : ನೆಱೆ ಸಣ್ಣ ಗೋದುವೆಯ ಹಿಟ್ಟು ಸಿಹಿಪಾಲೊಳಗೆ ನುಱುಗುವಂದದಿ ಕಲಸಿ . . . ತುಪ್ಪದೊಳಗಡು ಚಿಲುಮುರಿಯಾದುದು (ಸೂಪಶಾ. ೦-೩೩). [?]

**ಚಿಲುಮೆ$_1$**, ಚಲುಮೆ, ಚಲುಮೆ, ಚಿಲಿಮೆ$_1$ (ನಾ). ೧. ನೀರು ಉಕ್ಕುವ ಸ್ಥಳ ; ಬುಗ್ಗೆ ; ತಲಪರಿಗೆ : ಒರತೆ ; ಊಟೆ : ಕಲ್ಲ ಮೊರಡಿಯೊಳಗೆ ಚಿಲುಮೆಯಗ್ಗವಣಿಯುಂಟೆ ಅಯ್ಯಾ (ಅದಪ. ೦೩-೨೮): ನಿತ್ಯ ಚಿಲುಮೆಯ ತೋಡುವಾತಂಗೆ ಉಚ್ಚೆಯ ಬಚ್ಚಲ ತೋಡಲಾಗದು (ಶಿವಮಂ. ೩೯) ; ಬಱಿತಿರ್ದ ಚಿಲುಮೆಯ ನೀರನಿತ್ತು ಜಂಗಮಕೆ (ಚಂಪು. ೫೬-೬). ೨. ಕಾರಂಜಿ: ಅದರ ಮುಂಭಾಗದಲ್ಲಿ ನೀರಿನ ಚಿಲುಮೆ (Fountain) ಯೊಂದನ್ನು ಇಟ್ಟಿದ್ದರು (ಶಿವಾಸಾ. ೩೬). **ಚಲುಮೆ**: ೧.ಮಳಲಿನ ಮಱೆಯ ನೀರ ಬಳಸದೆಸಲೆ ಪೃಥ್ವಿಯಲ್ಲಿ ನೆಲ ಚಲುಮೆಯಂ ಕಂಡು (ಜಲೇಶ್ವ. ೦೯): ಕಲ್ಲ ಹಳ್ಳದೊಳುಂಟೆ ಚಲುಮೆ ಕಾಣ್ಬುದೆ ಗೂಗೆ ರವಿಯ (ವೀರಭ್ರ.೪-೬-೩೨): ಹರ್ಷದಿಂದಾ ಮಳಲ ಬಗಿದು ಚಲುಮೆಯ ತೆಗೆವರೆಬರು(ಸಿದ್ಧೇಶ. ೦೯-೮). **ಚಲುಮೆ** : ೧. ಬಹು ಜಲಮಂ ಬಿಟ್ಟು ಚ[ಪಾಠಾಂ. ಚಿ]ಲುಮೆಯಂ ತೆಗೆದರೆ ಅದು ನೆಲಶುದ್ಧ ಸೌಕರ್ಯವಲ್ಲದೆ ಅವು ಶೀಲವಲ್ಲ (ಮಾಡಿಮಾ. ೦೮-೨೩); ಕೂಪಕಾಃ, ವಿದಾರಕಾಃ – ೨ ಚಲುಮೆಗಳಾಗಿ ತೋಡಲ್ಪಟ್ಟ ಮರಳು ಹಳ್ಳ ಮುಂತಾದುವುಗಳು ನೀರೂರಿ ಬರುವ ಹಳ್ಳಗಳು (ಸಿದ್ಧಾಂಶಿ. ೬೦). **ಚಿಲಿಮೆ$_1$** : ೨. ನಗರದ ಕೇಂದ್ರ ಸ್ಥಳಗಳಲ್ಲಿ ನೀರಿನ ಚಿಲಿಮೆಗಳನ್ನು ನಿರ್ಮಿಸಿದ್ದಾರೆ (ರೂಢಿ).

[ ದೇ.॥ ತೆಲು. ಚೆಲಮು ; ಕುವಿ. ಸಲ್ಮ ]

**ಚಿಲುಮೆ$_2$**, ಚಿಲಿಮೆ$_2$ (ನಾ). ತಂಬಾಕು ಸೇದಲು ಉಪಯೋಗಿಸುವ ಮಣ್ಣಿನ ಕೊಳವಿ,–ನಳಿಕೆ : ಚಿಲುಮೆ ದೊರೆಯುವುದು, ಎಷ್ಟು ಹುಡುಕಿದರೂ ಕಡ್ಡಿಪೆಟ್ಟಿಗೆ ದೊರೆಯಲೊಲ್ಲದು (ಶಲ್ಯಾಟ. ೪) ; ಕೈಯಲ್ಲಿ ಚಿಲುಮೆ ಯನ್ನು ಹಿಡಿದುಕೊಂಡು ಲಗುಬಗೆಯಿಂದ ಅವಳ ಬೆನ್ನು ಹತ್ತಿ ಹೋಗುತ್ತ ಅಂದ (ಅಕೋಳ. ೦೦). **ಚಿಲಿಮೆ$_2$** : ತಂಬಾಕವೇ ಇಲ್ಲ. ಚಿಲಿಮೆಯಲ್ಲಿಂದ ಬರಬೇಕು (ಶಬಿಹಿಂ. ೬೦).

[ ←ಪಾರ. ಹಿಂ. ಚಿಲಮ್ ; ಮರಾ. ಚಿಲಮ್, ಚಿಲಿಮಾ, ಚಿಲೀಮ್ ]

**ಚಿಲುವಾಣ**, ಚಿಲವಾನ್, ಚಿಲುವಾನು (ನಾ). ೧. ಪೂರ್ಣವಾದ ಹಣದ ಭಾಗ ; ಚಿಲ್ಲರೆ ಹಣ : ಚಿಲುವಾಣದ ಬಿನುಗುಗಳಿಗೆ ನಾನಾ ಜಾತಿಯ ಪೊಕ್ಕಲುಗಳಿಗೆ ವರುಷ ೧ ಕೆ (ಸೌಇಇ. IX-ii, ೫೦೬-೩; 1525). ೨. ಚಿಲ್ಲರೆ ; ಸಣ್ಣ ; ಅಲ್ಪ : ಅರೆಮೊದಲಹ ಚಿಲುವಾಣಂ ಬರೆ ಲೆಕ್ಕದ ಕಡೆಯೊಳಗಲ ನೀಳನ ಸಂಖ್ಯೆಕ್ಕಿರದೆ ಪರಸ್ಪರದಿಂದಾ (ವ್ಯವಗಾ. ೮ ಕ್ಷೇತ್ರಗಣಿತ) ; ಯಿವರೆಲ್ಲರಿಗೆ ಸಲುವ ಚಿಲುವಾನ ಕೊಡಗಿಗಳು (ಎಕ. IX, ನೆಲಮಂ. ೮೧-೦೩ ; 1545) ; ಚಿಕ್ಕಗನಂ ಪಿಡಿದಾರ್ಜಿಸಿದರ್ಥದ ಚಿಲುವಾನ ದೊಳಿನ್ನೇನಹುದು (ಕಕೈಸ. IV, ೦೨). **ಚಿಲವಾಣ್**: (?). **ಚಿಲುವಾನು**: ೨. ತಮ್ಮ ರಾಜ್ಯದಲ್ಲಿ ನಿಡುಂಬರೆ ಕಟ್ಟುವ ಕೆಲಸದಲ್ಲಿ ಮುನ್ನೂರು ಚಿಲುವಾನು ಆಳು ಉಂಟಷ್ಟೆ(ರಾಜೇಂದ್ರ. ೬೩).

[ ?./ತಮಿ. ಚಿಲ್ಲುವಾಣ, ಚಿಲ್ವಾಣ, ಚಿಲ್ವಾಣ ; ಮಲ. ಚಿಲ್ವಾನ; ತುಳು. ಚಿಲುವಾನ, ಚಿಲ್ವಾನ ; ತೆಲು. ಚಿಲುವಾನ, ಚಿಲುವಾಯನ. /ಮರಾ. ಚಿಲವಣಾ, ಚಿಲವನಾ, ಚಿಲವಾನ್, ಚಿಲವಾಣ್ ]

**ಚಿಲುವಾನಪೈರು** (ನಾ). ಅವರೆ, ಹುರುಳಿ, ಕಡಲೆ, ಕೊತ್ತುಂಬರಿ ಮುಂತಾದ ಚಿಲ್ಲರೆ ಧಾನ್ಯದ ಬೆಳೆ ; ಚಿಲ್ಲರೆ ಪೈರು (?) : ಸೊಪ್ಪಿನ ತೋಟ ಚಿಲುವಾನಪೈರು ಉಪಗ್ರಾಮಗಳ ಹೆಚ್ಚು ಹುಟ್ಟುವಳಿ ಕೆರೆಗಳ ಹೆಚ್ಚು ಹುಟ್ಟುವಳಿ ಮುಂತಾದ ಸಕಲ ಸ್ವಾಮ್ಯಉ (ಎಕ. III, ತಿರುಮ, ೩೩-೦೩೬೦ ; 1748). [ ಚಿಲುವಾನ + ಪೈರು (<ಪಯಿರ್) ]

**ಚಿಲುವಾನಸುಂಕ** (ನಾ). ಚಿಲ್ಲರೆ ಸುಂಕ ; ಸಣ್ಣ ಪುಟ್ಟ ಬಾಬಿನ ತೆರಿಗೆ : ತಳವಾಱಿಕೆ ಆಳಿವಾಣನ್ಯಾಯಸಭೆಯ ಸಂತೆಯ ಚಿಲುವಾನಸುಂಕ ಸೋಡಿಗೆ ಇವು ಮೊದಲು (ಎಕ. V, ಹಾಸನ. ೨-೮೪ ; 1563).

[ ಚಿಲುವಾನ + ಸುಂಕ ]

**ಚಲುವಾನು** 'ಚಲುವಾನ' ನೋ.

**ಚಲುಹಾಲು** 'ಚಲುಪಾಲ್' ನೋ.

**ಚಲ್ಯೆತ** 'ಚೇಲ್ಯೆತ' ನೋ.

**ಚಲ್ಕರಿವೆ** 'ಚಲ್ಕುಹರಿವೆ' ನೋ.

**ಚಲ್ಕುಹರಿವೆ, ಚಲ್ಕರಿವೆ** (ನಾ). ಒಂದು ಬಗೆಯ ಸೊಪ್ಪು : ಕಿರುಕು ಸಾಲೆ : ಹರಿವೆಸೊಪ್ಪು, ಚಲ್ಕುಹರಿವೆಸೊಪ್ಪುಗಳಲ್ಲಿ ಎರಡು ವಿಧಗಳಿವೆ (ಕಕಕ. ೦೬). **ಚಲ್ಕರಿವೆ** : ಹರಿವೇ ಸೊಪ್ಪು, ದಂಟು ಸೊಪ್ಪು, ಚಲ್ಕರಿವೇ ಸೊಪ್ಪು (ಕ್ಯಾಶಿಗ. ೬-೯೨). [ ಚಲ್ಕು ? + ಹರಿವೆ ]

**ಚಲ್ಯ** (ನಾ). ೧. ಸಣ್ಣವನು ; ಚಿಕ್ಕವನು : ಈ ಚಲ್ಯ ಈಸಲ ವೊದಲ ಬಹುಮಾನ ಪಡೆದಿದ್ದಾನೆ (ರೂಢಿ). ೨. ಕುಳ್ಳಾದ ಎತ್ತು; ಗಿಡ್ಡ ಎತ್ತು: ನೇಗಿಲಿಗೆ ಹೂಡಿರುವ ಚಲ್ಯಗಳು ಒಳ್ಳೆ ಬಲಿಷ್ಠವಾಗಿವೆ (ರೂಢಿ). (ಗು). ೩. ಸಣ್ಣದಾದ ; ಚಿಕ್ಕದಾದ : ಈ ಚಲ್ಯಹುಡುಗ ಬಹಳ ಬುದ್ಧಿವಂತ (ರೂಢಿ). [ ? ]

**ಚಲ್ಯಾರಿ** 'ಚಲ್ಯೇರಿ' ನೋ.

**ಚಲ್ಯೇರಿ, ಚಲ್ಯಾರಿ, ಚುಲ್ಯಾರಿ** (ನಾ). ಸಣ್ಣವನು; ಚಿಕ್ಕವನು: ನಿಮ್ಮಂಥ ಚಲ್ಯೇರಿಗಳೆಲ್ಲ ರಾಜಕೀಯಕ್ಕೆ ತರೆಹಾಕದೆ ನಿಮ್ಮ ವ್ಯಕ್ತಿ ನೀವಿರ ಬಾರದೇನೋ (ಸ್ವಾಮಿಸ್ಮೃ. ೦೨೯). **ಚಲ್ಯಾರಿ**: ಆ ಚಲ್ಯಾರಿ ಬಹಳ ಚೇಷ್ಟೆ ಮಾಡುತ್ತಾನೆ (ರೂಢಿ). **ಚುಲ್ಯಾರಿ** : ಒಬ್ಬ ಚುಲ್ಯಾರಿಯನ್ನು ಎತ್ತಿ ಒಳಕ್ಕೆ ಬಿಡುತ್ತಿದ್ದವು (ಹರಿಕ್ಷ. ೩೨). [ <ಚಲ್ಯ ]

**ಚಲ್ಮಿಷ** (ನಾ). ಮೋಸ ; ವಂಚನೆ : ಅವನೇನೋ ಒಳ್ಳೆಯವನೇ, ಅವನ ಹೆಂಡತಿ ಬಲು ಚಲ್ಮಿಷದವಳು (ಅಡೂಟ. ೦೦೨).

[ ←ತೆಲು. ಚಲಿವಿಸ./ಸಂ. ಕಿಲ್ಬಿಷ ]

**ಚಲ್ಲ$_1$, ಚಲಿ$_1$, ಚಳೆ$_2$, ಚಿಲ್ಲು$_1$** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ ; ಕತಕ. ೧ ಕದಡಿದ ನೀರನ್ನು ಶುದ್ಧ ಮಾಡಲು ಉಪಯೋಗಿಸುವ ಬೀಜ : ತದಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತ್ರದ ಬೀಯತ್ರಿಯುಪ್ಪೆಯ ಮರಂಗಳ (ಲೀಲಾವ. ೬-೨೬); ಚಿಲ್ಲ ಚೆನ್ನೆಗೆ ತೇಗು ತುಂಬುರವರಗಳಿಂ ನಿಲ್ಲದೆ ಮೆಚಿದುದಾ ವಿಪಿನ (ಶಬರಶಂ. ೨೬-೩೩) ; ಚಿಲ್ಲ ನೆಲ್ಲಿಯು ಹೊಂಗೆ ಪೇಚಿಲು . . . ಸೂರ ಮಾರ್ಗವ ತಡೆದಿಹುವು (ಶಂಪವಿ. ೦೮-೩೬). **ಚಲಿ$_1$** : (೪). **ಚಳೆ$_2$**: ಚಳಿ ಚುಜ್ಜುಲು . . . ಮೊದಲಾದ ಗಗನಮಂ ತುಡುಕುವ ವೃಕ್ಷಂಗಳ್ (ಸೌಗಂಧಿ. ೫೯-೭). **ಚಿಲ್ಲು$_1$** : "ಕತಕಂ ಚಿಲ್ಲು" (ಹುಂಗರಾ. ೯೨-೩೯) : ಬೆಲ್ಲವತ್ತ ವರವಾದಲ ವಂಬಚೆ ಚಿಲ್ಲು ಚೆಳ್ಳೆಗಾಯ್ [ಪಾಠಾಂ. ಚೆಳ್ಳ ಚಿಲ್ಲಕಾಯ್] (ಹೂಕ್ರ್ರ್ಶು. ೦೦-೪೭) ; (ಶಳಹಂ. ೯೬೨ ತೋ) ; ಮರಗಳು ; ಹೆಸವ . . . ಚಿಲ್ಲು, ಹೂವರುಸು, ದೆವ್ವಾಲೆ, ಹಾಲೆ (ಸಸ್ಯಶು. ೩೬೬).

[ ದೇ.೫ ತಮಿ. ತೆಲು. ಚಿಲ್ಲ ]

**ಚಲ್ಲ$_2$, ಚಿಲ್ಲು$_2$** (ನಾ). ರಾಟೆಯಲ್ಲಿ ಕದಿರನ್ನು ಜೋಡಿಸಲು ಇರುವ ಕಿವಿಯಂತಹ ಭಾಗ ; ಕದಿರನ್ನು ಜೋಡಿಸುವ ಮರದ ಅಥವಾ ಚರ್ಮದ ಕಿವಿ: ಚಿಲ್ಲ ಹಮ್ಮಿಗಿ, ಕಟ್ಟ, ಇವೆಲ್ಲವನ್ನು ಮಾಡಿಕೊಡುತ್ತಾನೆ (ಕಶ್ಯಶು. I, ೩೬೬). **ಚಿಲ್ಲು$_2$** : ಮನಿಯಾಪ ಕೋಣವ ಕಡಿಸಿ ಚಿಲ್ಲು ಮಾಡಿಸಿ ಕೊಟ್ನ್ಯಾ (ಹುಲ್ಲಿಗೆ. ೯೭).

**ಚಲ್ಲ$_3$** 'ಚುಲ್ಲ$_1$' ನೋ.

**ಚಲ್ಲ$_4$** (ನಾ). ೧. ರೋಗದಿಂದ ನೀರಂ ಸುರಿಯುತ್ತಿರುವ ಕಣ್ಣುಳ್ಳವನು; ಸೋರುಗಣ್ಣ. ೨. ಗುಂಡುಮುಳುಕನ ಹಕ್ಕಿ ; ಮುಂಡುಮುಳುಕನ ಹಕ್ಕಿ : "ಆಟಾಪೀ, ಶಕುನೀ, ಚಿಲ್ಲಃ – ಈ ೩ ಗುಂಡುಮುಳುಕ (ನಹಕ್ಕಿ)" (ಹಲಾಯು. ೯೨-೯೭): "ಚಿಲ್ಲಮಾತಪವಕ್ಷಿಯೆನೆ ಮುಂಡುಮುಳುಕನಕ್ಕುಂ" (ಮಂಗರಾ ೩೦-೩). [ ಸಂ. ]

**ಚಿಲ್ಲಗೊಟ್ಟೆ** (ನಾ). =ಚಿಲ್ಲಬಿತ್ತು: ನೆಲ್ಲಿಯ ಸಟ್ಟು ಬಾಳಮುಸಿತಾಂಜನವೊಳ್ಳಿಹ ಮುಸ್ತೆಯುಪ್ಪೆ ಕೇಡಿಲ್ಲದ ಚಿಲ್ಲಗೊಟ್ಟೆ ಪೊಸಬೇರೆಯ ಬಿತ್ತಿನೊಳಾದ ಬೂದಿಯಂ ನಿಲ್ಲದೆ ಬಾವಿಯೊಳ್ ಕಲಸಲ್ . . . ಬಾವಿಗಳ ನೀರಮೃತೋಪಮಮಂ (ಅಭಿಸು. ೦೦-೩೩). [ಚಿಲ್ಲ$_1$+ಗೊಟ್ಟೆ$_1$ (<ಕೊಟ್ಟೆ$_1$)]

**ಚಿಲ್ಲತನ** (ನಾ). ಕ್ಷುಲ್ಲಕತನ ; ನೀಚತನ : ಚಿಲ್ಲವೇ ಹೇಳಕಟಯನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು (ಬಸಪು. ೪೩-೪೦).

[ ಚಿಲ್ಲ$_3$ (<ಚುಲ್ಲ$_1$) + – ತನ ]

**ಚಿಲ್ಲಫಲ** (ನಾ). =ಚಿಲ್ಲಬಿತ್ತು : ಚ(ಚಿ)[ಪಾಠಾಂ. ಛಿ]ಲ್ಲಫಲದಿಂದೆ ನೀರ್ಕದಡೆಲ್ಲಂ ತಿಳಿ (ಕಿಡು) ವಂತೆ ತಿಳಿಗುಮುದಯಂ ಧರೆಯೊಳ್ (ಜಿಹುದ. ೦೨-೪೬).

[ ಚಿಲ್ಲ$_1$ + ಫಲ ]

**ಚಿಲ್ಲಬಿತ್ತು** (ನಾ). ಚಿಲ್ಲದ ಬೀಜ: "ವಾಂಪ್ರಸಾದನಃ–ಚಿಲ್ಲಬಿತ್ತು" (ಶಿಹಂ. ೦೫೨). [ ಚಿಲ್ಲ$_1$ + ಬಿತ್ತು$_2$ (<ಬಿಟ್ಟು) ]

**ಚಿಲ್ಲಬೀಜ** (ನಾ). =ಚಿಲ್ಲಬಿತ್ತು: "ಕಾಂಸ್ಯಂ-ಕಂಚು, ಚಿಲ್ಲಬೀಜ" (ಒಷಧಿ. ೫೯).

[ ಚಿಲ್ಲ$_1$ + ಬೀಜ ]

**ಚಿಲ್ಲರೆ** (ಗು). ೧. ಸಣ್ಣ ; ಕ್ಷುದ್ರವಾದ ; ಅಲ್ಪವಾದ ; ಸಾಮಾನ್ಯವಾದ : ಎಲ್ಲಾ ದೇವರ ಗಂಡ ಅವ ಚಿಲ್ಲರೆ ದೈವದ ಮಿಂಡ (ಪುರಂದ. ೦-೩೬-೮); ಇತರೆ ಚಿಲ್ಲರೆ ಬಾಬುಗಳನ್ನೆಲ್ಲಾ ನಿರ್ವಹಿಸಬೇಕು (ಗ್ರಾಮಾಜ. ೨); "ಚಿಲ್ಲರೆ ಮಂದಿ" ಎಂದಳು ಇನ್ನೊಬ್ಬಳು (ಜಾಕೂಲೇ. ೨೯೬). (ನಾ). ೨. ಒಂದು ಪೂರ್ಣ ನಾಣ್ಯದ ಅಂಶ,–ಭಾಗ ; ಸಣ್ಣ ಪುಟ್ಟ ನಾಣ್ಯ: ಸಮಯಕೆ ದೊರೆಯುವ ರೂಪಾಯಿ ಚಿಲ್ಲರೆ ಸೂರರ ಚಿಕ್ಕಿಗೆ ಮಿಗಿಲು (ಹಂಪ್ರವಿ. ೦೪೯-೯೩) ; ಎಂಟಾಣೆಯ ಪಾವಲಿಯೊಂದನ್ನೆತ್ತಿ ಅವನ ಕೈಗೆ, 'ಚಿಲ್ಲರೆ ಇಲ್ಲವಲ್ಲೋ' ಎಂದು (ರೂಪಾಸಂ. ೮).

**ಚಿಲ್ಲರೆಯಂಗಡಿ**=ನಿತ್ಯೋಪಯೋಗದ ವಸ್ತುಗಳನ್ನು ಸಣ್ಣ ಪ್ರಮಾಣದಲ್ಲಿ ಮಾರುವ ಅಂಗಡಿ; ಸಣ್ಣ ಅಂಗಡಿ; ಕಿರಂಕುಳ ಅಂಗಡಿ(ಉಕ): ನನ್ನ ತಮ್ಮ ಚಿಲ್ಲರೆಯಂಗಡಿ ಇಟ್ಟಿದ್ದಾನೆ (ರೂಢಿ). **ಚಿಲ್ಲರೆವ್ಯಾಪಾರಿ** = ನಿತ್ಯೋಪಯೋಗಿ ವಸ್ತುಗಳನ್ನು ಸಣ್ಣಪ್ರಮಾಣದಲ್ಲಿ ವ್ಯಾಪಾರ ಮಾಡುವವನು: ನಾನೊಬ್ಬ ಚಿಲ್ಲರೆ ವ್ಯಾಪಾರಿ (ಪ್ರೂಕುದಾ. ೦೩೪).

[ ?./ತಮಿ. ಚಿಲ್ಲಱೈ ; ಮಲ. ಚಿಲ್ಲಱ ; ತುಳು. ಚಿಲ್ಲರೆ ; ತೆಲು. ಚಿಲ್ಲರ./ಹಿಂ. ಚಿಲ್ಲರ್ ; ಮರಾ. ಚಿಲ್ಲರ್, ಚಿಲ್ಲಾರ್, ಚಿಲ್ಲೇರ್. / ಪ್ರಾ. ಛಿಲ್ಲರ ]

**ಚಿಲ್ಲರೆಖರ್ಚು** (ನಾ). (ಲೆಕ್ಕಕ್ಕೆ ಸಿಕ್ಕದ) ಸಣ್ಣಪುಟ್ಟ ವೆಚ್ಚ : ಚಿಲ್ಲರೆ ಖರ್ಚಿಗಾಗಿ . . . ರೂಪಾಯಿಗಳನ್ನು ಕೊಡಲು ಕಾರ್ಯಕಾರಿಸಮಿತಿಯು ನಿರ್ಧರಿಸಿದೆ (ಹುಕ್ಕುಶು. ೯೭). [ಚಿಲ್ಲರೆ + ಖರ್ಚು$_4$ ]

**ಚಿಲ್ಲರೆಕೆಲಸ** (ನಾ). ಮುಖ್ಯವಲ್ಲದ ಕೆಲಸ ; ಸಣ್ಣಪುಟ್ಟ ಕೆಲಸ : ಚಿಲ್ಲರೆ ಕೆಲಸಕ್ಕೆ ಆಳು ಇಟ್ಟುಕೊಳ್ಳಲಾಗಿದೆ (ರೂಢಿ). [ ಚಿಲ್ಲರೆ + ಕೆಲಸ ]

**ಚಿಲ್ಲರೆಜನ** (ನಾ). ಸಣ್ಣಪುಟ್ಟ ಜನ ; ಸಾಮಾನ್ಯ ಜನ : ಮಣ್ಣಿನ ಬಟ್ಟಲುಗಳಲ್ಲಿ ಮಿಠಾಯಿ ಕೊಡುತ್ತಾರೆ ಚಿಲ್ಲರೆಜನಕ್ಕೆ (ಸಾಹಿತ್ಯ. ೩೬೦ ಅಭಿ). [ ಚಿಲ್ಲರೆ + ಜನ ]

**ಚಿಲ್ಲರೆಧಾನ್ಯ** (ನಾ). ಮುಖ್ಯವಲ್ಲದ ಕಾಳು ಕಡ್ಡಿ ; ಹುರುಳಿ, ಅವರೆ ಮೊದಲಾದ ಧಾನ್ಯಗಳು ; ಅಕ್ಕಡಿಕಾಳು : ವರ್ಷಕ್ಕೆ ಒಂದೆರಡು ಪಲ್ಲ ಚಿಲ್ಲರೆಧಾನ್ಯವೂ ಬರುವುದುಂಟು (ರೂಢಿ). [ ಚಿಲ್ಲರೆ + ಧಾನ್ಯ ]

**ಚಿಲ್ಲರೆಮಾತು** (ನಾ). ಅಪ್ರಧಾನವಾದ ಮಾತು; ಸಣ್ಣಪುಟ್ಟ ಮಾತು : ಸುಮ್ಮನೆ ಯಾಕಯ್ಯಾ ಈ ಚಿಲ್ಲರೆಮಾತನ್ನೆಲ್ಲಾ ಕಟ್ಟಿಕೊಂಡು ಕುಣಿಯುವುದು (ರೂಢಿ). [ ಚಿಲ್ಲರೆ + ಮಾತು$_1$ ]

**ಚಿಲ್ಲರೆವೆಚ್ಚ** (ನಾ). = ಚಿಲ್ಲರೆಖರ್ಚು : "ಚಿಲ್ಲರೆ ವೆಚ್ಚ; ಸಾದಿಲ್ವಾರು" (Contingency. ಹಕ್ಕಿವಿ. ೨೯). [ ಚಿಲ್ಲರೆ + ವೆಚ್ಚ ]

**ಚಿಲ್ಲರೆಸಾಮಾನು**(ನಾ). ಸಣ್ಣಪುಟ್ಟ ಸಾಮಾನು: ಈ ಚಿಲ್ಲರ ಸಾಮಾನುಗಳಿಗೆ ಸಂಬಳದಲ್ಲಿ ಅರ್ಧ ಖರ್ಚಾಗುತ್ತದೆ (ಬೂಧಿ). [ ಚಿಲ್ಲರೆ + ಸಾಮಾನು ]

**ಚಿಲ್ಲಹರಿ** (ನಾ). ಜ್ಞಾನಪ್ರವಾಹ,-ಪರಂಪರೆ; ಚಿದ್ಭಾವತರಂಗ: ಪರವಶೀಭಾವದಿಂದರೆವಿರಿದ ಕಣ್ಗಳಿಂ ಪರಮ ಚಿಲ್ಲಹರಿ ತಲೆಗೇರಿದುನ್ಮತ್ತದಿಂ ಯೋಗೀಂದ್ರರುರೆ ಮೆರೆದರು (ಬಕೋಶ. ೪-೩೫). [ ಸಂ. (ಚಿತ್ + ಲಹರಿ) ]

**ಚಿಲ್ಲಳಿ** 'ಚಿಲ್ಲೆಳಿ' ನೋ.

**ಚಿಲ್ಲಾಣ** (ನಾ). ೧. ಸಣ್ಣಕತ್ತಿ ; ಕಠಾರಿ. ೨. ಬಳುಕುವ ಕತ್ತಿ : (ಕ) 'ಚೀಲಣ' ಪರಾ. [ ←ತೆಲು. ಚಿಲ್ಲಾಣ, ಚಿಲ್ಲಾಡ ]

**ಚಿಲ್ಲಿಕ** (ನಾ). ಒಂದು ಬಗೆಯ ಸಸ್ಯ : "ಶ್ವಾಸನಃ – ಚಿಲ್ಲಿಕ. ನಾಯ ಚಿಲಕೆ" (ಒಷಧಿ. ೦೬೪). [ < ಚಿಲಿಕೆ$_1$ ? ]

**ಚಿಲ್ಲು$_1$** 'ಚಿಲ್ಲ$_1$' ನೋ.

**ಚಿಲ್ಲು$_2$** 'ಚಿಲ್ಲ$_2$' ನೋ.

**ಚಿಲ್ಲು$_3$** (ನಾ). ಬಂದೂಕಿನಿಂದ ಹೊಡೆದಾಗ ಹಾರುವ ಗುಂಡು; ಚರೆ: ಕಾಲಿಗೆ ಗುಂಡು ತಾಗಿ ಇಬ್ಬರು ಉರುಳಿದರು. ಒಂದು ಚಿಲ್ಲು ಬಂದು ನನ್ನ ತೊಡೆಯನ್ನು ಕೊರೆಯಿತು (ಧೂಮಮ. ೯೦). [ ? ]

**ಚಿಲ್ಲುಕಭಟಾರ** (ನಾ). ಒಬ್ಬಾತನ ಹೆಸರು : ಉತ್ತರಾಯಣ ಸಂಕ್ರಾನ್ತಿಯೊಳ್ಕಲ್ಯಾಣಭಟಾರರ ಶಿಷ್ಯರ್ ಚಿಲ್ಲುಕಭಟಾರರ ಕಾಲಂ ಕರ್ಚಿ ಕೊಟ್ಟ ಮರ್ಯಾದೆಯೊಳಗೆ (ಎಕ. XII, ಶಿರಾ. ೨೮-೯೧; ೯೪೩). [ ಚಿಲ್ಲುಕ$_0$ + ಭಟಾರ ]

**ಚಿಲ್ಲುಗುಂಡು**(ನಾ). ಬಂದೂಕಿನಿಂದ ಸಿಡಿಯುವ ಗುಂಡು; ಸಿಡಿಗುಂಡು: ಎರಡೆರಡು ಚಿಲ್ಲುಗುಂಡು ಗುರಿ ಇಡಿಸಿದಲ್ಲಿ ಚನ್ನವೀರ, ಅಕ್ಕಸಾಲಿ ನರಜು, ಇವರಿಬ್ಬರೂ ಗುರಿಗೆ ಇಟ್ಟದ್ದು ತಗಲಿತು (ರಾಜೇಂದ್ರ. ೦೯೬). [ ಚಿಲ್ಲು$_3$ + ಗುಂಡು ]

**ಚಿಲ್ಲೆ, ಚಿಳ್ಳೆ$_2$** (ನಾ). ನೀಚಳಾದ ಹೆಂಗಸು; ಕೆಟ್ಟ ನಡತೆಯುಳ್ಳವಳು: ಕುಟಿತಮತಿಗಳು ಖುಲ್ಲೆಯರು ಕಳ್ಳೆಯರು ಚಿಲ್ಲೆ[ಪಾಠಾಂ. ಳ್ಳೆ]ಯರು (ಬಸಪು. ೪೬-೩೪). **ಚಿಳ್ಳೆ:** ಕಳ್ಳೆಯರ್ ಚಿಳ್ಳೆಯರ್ ಶಾಂತರುಂ ಯೆಣಸದಪ ರಾಧೆಯರ್ (ಜಾಂ. ೨-೫೮). [ ಚಿಲ್ಲ$_3$ (< ಚುಲ್ಲ$_1$) + – ಎ$_2$ ]

**ಚಿಲ್ಲೆಳಿ, ಚಿಲ್ಲಳಿ** (ನಾ). ಒಂದು ಬಗೆಯ ಮರ: ಒಕ್ಕಳಮಪ್ಪ ಚಿಲ್ಲೆಳೆಯ [ಪಾಠಾಂ. ಚಿಲ್ಲಳೆಯ, ಚಿಲ್ಲೆಳೆಯ, ಚಿಳ್ಳೆಲೆಯ]ಕಾಯ್ಗಳೊಳಿಕ್ಕಿ ಸುರೇಂದ್ರ ಶಾಖೆಯುಂ ಚಕ್ಕನೆ ಕೂಡಿರಲ್ (ಜಮಚ. ೭-೫೬). **ಚಿಲ್ಲಳಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚಿವ** 'ಸಿವ' ನೋ.

**ಚಿವಟು** 'ಚಿವುಂಟು' ನೋ.

**ಚಿವಡಾ, ಚಿವುಡಾ, ಚುಡುವ, ಚೂಡಾ** (ನಾ). ಹುರಿದು, ಒಗ್ಗರಣೆ ಹಾಕಿದ ಅವಲಕ್ಕಿ; ಖಾರದ ಅವಲಕ್ಕಿ: ಹೊರಗೆ ಒಬ್ಬ 'ಮಹಾರಾಜರು' ಚಹಾದ ತಪ್ಪೇಲಿಯನ್ನೂ, ಚಿವಡಾದ ರಾಶಿಯನ್ನೂ ಇಟ್ಟುಕೊಂಡು ಕುಳಿತು, ಶಿಷ್ಯರಾಗಬಂದ ಉಮೇದುವಾರರಿಗೆ ಅನುಗ್ರಹಿಸುತ್ತಿದ್ದರು (ಪೂರ್ವಕಂ. ೩). **ಚಿವುಡಾ** : (ಚಿವುಡಾ) ಖಾರದ ಅವಲಕ್ಕಿ ಇವೆಲ್ಲ ನಾಜೂಕ ಆಹಾರದಲ್ಲಿ ಬರುವವು (ಬೃಹತ್ಕೋ. ೦೩೨). **ಚುಡುವ** : ಚಹ ಚುಡುವ ಭಕ್ಷಣವು ಗೃಹಸ್ತನ ಲಕ್ಷಣವು (ಶಿಭ್ರಮು. ೩೦). **ಚೂಡಾ:** ಚಾಹಾದ ಜೋಡಿ ಚೂಡಾಧಾಂಗ ನೀ ನನಗಂದಾವಾ (ಸಖೀಗೀ. ೯೨-೧೫) : ಅಲ್ಲಿಯ ಕೆಲಸಗಾರರು ಉಪ್ಪಿಟ್ಟು, ದೋಸೆ, ಸಿರಾ, ಇಡ್ಲಿ, ಚೂಡಾ ಮುಖಾಂತರ ತಮ್ಮ ನಿತ್ಯದ ನಾಮಾವಳಿಯ ಪಠಣಕ್ಕಾರಂಭಿಸಿರುವರು (ಹುಚ್ಚುಪ್ರ. ೮). [ ←ಮರಾ. ಚಿವಡಾ. /ಪ್ರಾ. ಚಿಪಿಟ್ಟ, ಚಿಮಿಢ, ಚಿವಿಟ್ಟ, ಚಿವಿಡ./ಸಂ. ಚಿಪಿಟ, ಚಿಪುಟ ]

**ಚಿವರು$_1$** 'ಸಿವುಡು$_1$' ನೋ.

**ಚಿವರು$_2$** 'ಸಿವುಡು$_2$' ನೋ.

**ಚಿವರುಗಾಯ** 'ಚಿವುರುಗಾಯ' ನೋ.

**ಚಿವಲ್ಲಿಕೆ** (ನಾ). ಒಂದು ಬಗೆಯ ವನಸ್ಪತಿ: " ಉಚ್ಚಲ್ಲಿಕಾ–ಚವಲ್ಲಿಕೆ ? " (ಓಷಧಿ. ೧೬). [ ? ]

**ಚಿವಾನಿಕಳನಿ** 'ಚಿವಾನಿಕಟನಿ' ನೋ.

**ಚಿವಾನಿಕಟನಿ, ಚಿವಾನಿಕಳನಿ**(ನಾ). ಒಂದು ಗದ್ದೆಯ ಹೆಸರು: ವಾಳ್ಗಟ್ಟು ಚಿವಾನಿಕಟನಿ (ಎಕ. XVI, ತುಮಕೂ. ೯೯-೬; ?). **ಚಿವಾನಿಕಳನಿ** : ಇದರ್ಕೆ ಚಿವಾನಿಕಳನಿ ವಾಳ್ಗಟ್ಟುಕೊಟ್ಟೊದು (ಎಕ. XVI, ತುಮಕೂ. ೫೬-೫ ; ?). [ ಚಿವಾನಿ$_0$ + ಕಟನಿ ]

**ಚಿವಿ** (ಕ್ರಿ). ಕೆರೆದುಕೊಳ್ಳು ; ತುರಿಸು : " ಕೆರೆ, ತುರಿಸು, ತಿಕ್ಕು, ಚಿವಿ, ಚಿವುಟು, ಚಿವುರು, ಚಿಗಟು" (ಕಂನುಹು. ೮೨). [ ? ]

**ಚಿವಿಕೆ** (ನಾ). ಒಂದು ಬಗೆಯ ಗಿಡ ; "ಗ್ರಾಥಿಲಾಪುರಾರಿಷ" (ಹಂಡಿತ). [ ? ]

**ಚಿವು** (ನಾ). ಒಂದು ಅನುಕರಣ ಧ್ವನಿ; ಹಕ್ಕಿಗಳ ಚಿಲಿಪಿಲಿ: 'ಚಿವುಗುಡು' ಪರಾ.

**ಚಿವುಚಿವು** (ದ್ವಿರುಕ್ತಿ): ಹೂವಿನ ಗಿಡದ ಸಾಲೊಳಗೆ ಚಿವುಚಿವು ಅನ್ನುತ್ತ . . . ಹಾರಾಡುವ ಹಕ್ಕಿ ನೋಡು (ಮುಂಬಯಿ. ೨-೦೧).

**ಚಿವುಂಟು, ಚಿಗುಂಟು, ಚಿಮುಟು, ಚಿವಟು, ಚಿವುಟು$_2$, ಚಿವುಡು, ಚೂಟು$_1$, ಜಿಗಟು$_1$, ಜಿಗುಟು$_1$** (ಕ್ರಿ). ೧. ಉಗುರುಗಳಿಂದ ಚರ್ಮವನ್ನು ಹಿಂಡು,-ಅದುಮು,-ಒತ್ತು : ಕೂಸಂ ಚಿವುಂಟುವೈ ತೊಟ್ಟಿಲಂ ತೂಗುವೈ (ನಂಬಿರ. ೧೫-೧೪೧). ೨. ಉಗುರಿನಿಂದ ಕತ್ತರಿಸು,-ಕೀಳು : ಜಾಲಂಧರ ಬೊಮ್ಮನೇಕಶಿರಸ್ಸನಾ ನಖರಾಗ್ರದಿಂ ಸಾಲೊಳೊಂದನದು ಚಿವುಂಟಲಜಂ ತದಾವ್ಯತನಾದನೇ (ಹಾರಾಕ್ಕ. ೨-೧೬-೫). **ಚಿಗುಟು :** ಚಿಗುಟುವುದು, ಕಾರಣವಿಲ್ಲದೆ ಕೆಣಕಿ ಜಗಳಕ್ಕೆ ಕರೆಯುವುದು (ಕಳಹು. ೧೦). **ಚಿಮುಟು :** ೧. ಅವನ ತೋಳನ್ನು ಗಟ್ಟಿಯಾಗಿ ಚಿಮುಟ . . . ಎಂದ (ದಾಪಹೆಂ. ೧೪೩). **ಚಿವಟು :** ೧. ಚಿವಟುವುದೂ, ಚಿವರುವುದೂ ನಡೆಯಿತು (ಕುರಿಹಿಂ. ೭೭). **ಚಿವುಟು$_2$ :** ೧. ಸವರಣಾ ತಲೆಗಳನರಿದು ವೈಷ್ಣವರ ಘೋಣಾಗ್ರಂಗಳಂ ಮಿಗೆ ಚಿವುಟಿ ಬೌದ್ಧರುಗಳ ಮದೋದ್ಧತಿಯೆಂಬ ಕಾನನನೆ ಸವಟ್ (ಬಸಪು. ೫೨-೦೦); ಶೈಲೆ . . . ಮಮತೆಯಿಂದ ಕೆನ್ನೆಗೆ ಮೆಲ್ಲನೆ ಚಿವುಟಿ, ಅಲ್ಲಿಂದ ಪಾರಾಗಿ ಸ್ನಾನಕ್ಕಾಗಿ ಹೊರಟು ಹೋದಳು (ಶಿಕಪೋಡ. ೧೩) ; ಅವನ ಹೃದಯದಲ್ಲಿ ಚಿಂತೆಯು ಚಿವುಟಿದಂತಾಗುತ್ತಿದ್ದಿತು (ಪ್ರಣಸ. ೭೧). ೨. ರಾಕ್ಷಸರ ಹುಡುಗರು . . . ಚಿಗುರುಗಳಂ ಚಿವುಟಿ (ಸೌಗಂಧಿ. ೪೦೯-೯); ಕರುಳುವಳ್ಳಿಯ ಕುಡಿಯ ಚಿವುಟಿ ಸೊನೆಗರಸುತಿಹೆ ಇಂಥ ಹಾಲುಳ್ಳ ಹಾಡು (ಅಕಲು. ೩೫೯-೦೧). **ಚಿವುಡು :** ೨. " ಚಿವುಡು–ನಖಚ್ಛೇದೇ " (ಶಮಧಾ). **ಚೂಟು$_1$ :** ೧. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು (ಭಾರಸಂ. ೨). **ಜಿಗಟು$_1$ :** ೧. ಅಮ್ಮ, ನೋಡಮ್ಮ ಇವಳನ್ನ! ಜಿಗಟತಾಳೆ (ಬಳಜೀ. ೦೬೯). **ಜಿಗುಟು$_1$:** ೧. ಅವನ ತೋಳಿನ ಚರ್ಮ ಎದ್ದು ಬರುವಂತೆ ಜಿಗುಟುತ್ತಿದ್ದರು (ಮಸಳೂ. ೧೩). ೨. ಶೂಲಿ ತಾ ಮಗನ ತಲೆ ಜಿಗುಟಿ ಹರಿಯೇಕೆ ಪಾಲಿಸದೆ ಹೋದ (ಸರ್ವಜ್ಞ. ೨೧೫). [ ದೇ. ತಮಿ. ಚಿಮಿಣ್ಣು ; ಮಲ. ಚೀಣ್ಣು ]

**ಚಿವುಕಳಿ** (ನಾ). ಖಡ್ಗಯುದ್ಧದಲ್ಲಿ ಒಂದು ವರಸೆ: ಭ್ರಮಣದಲ್ಲಿ ಹಿಮ್ಮಡಿಗಳಿಂದ ಒಂದು ಬಾರಿ ಯರಡು ಪಥಳವ ತಾಡಿಸುವುದು. ಅವುದು ಉಂಟು ಅದು ಬಲ್ಲವರಿಂದ ಚಿವುಕಳಿ ಎಂದು ನುಡಿಯಲ್ಪಡುವುದು (ಖಡ್ಗಲ. ೪-೩೦). [ ? ]

**ಚಿವುಕುಲಿ** 'ಚಿನುಕುಲಿ' ನೋ.

**ಚಿವುಗಣ್ಣು** (ನಾ). ೧. ಅರೆಗಣ್ಣು ; ಕಿರುಗಣ್ಣು : ಆವನ ಆ ಚಿವುಗಣ್ಣುಗಳು ಅಗಲವಾದುವು (ಜೀವಡಾ. ೨೩೨). ೨. ಸಣ್ಣದಾಗಿಸಿದ ಕಣ್ಣು : ದೂರದಲ್ಲಿ ಬರುತ್ತಿದ್ದ ಬಸ್ಸನ್ನು ಚಿವುಗಣ್ಣಿನಿಂದ ನೋಡಿದಳು (ದೂಂ).
[ ಚಿವು$_0$ + ಕಣ್ಣು (<ಕಣ್) ]

**ಚಿವುಗುಡು** (ಕ್ರಿ). ಚಿವುಚಿವು ಎಂದು ಧ್ವನಿಮಾಡು ; ಚಿಲಿಪಿಲಿಗುಟ್ಟು : ಕಣ್ಣು ಮುಚ್ಚಿಕೊಳ್ಳುತಾವು ಚಿಕ್ಕ ಚಿವುಗುಡುತಾವ ಹಕ್ಕಿ (ಹಾಡುಹಾ. ೪೧-೨).
[ ಚಿವು + ಕುಡು$_1$ (<ಕೊಡು$_1$ )]

**ಚಿವುಟು$_1$** 'ಚಿವಂಟು' ನೋ.

**ಚಿವುಟು$_2$** 'ಚಿವುಂಟು' ನೋ.

**ಚಿವುಡಾ** 'ಚಿವಡಾ' ನೋ.

**ಚಿವುಡಿಕೆ** (ನಾ). ಜಿಗುಟಿ ಹಾಕುವಿಕೆ ; ಉಗುರಿನಿಂದ ಕತ್ತರಿಸುವಿಕೆ : ಪೊಡಮಡಿಕೆ. ತಲೆವಡಿಚಿವುಕೆ. ಡಿಕೆ (ಕರ್ನಾನು. ೩೭೦ ಪ್ರಯೋ).
[ ಚಿವುಡು (<ಚಿವುಂಟು) + – ಇಕೆ ]

**ಚಿವುಡು** 'ಚಿವುಂಟು' ನೋ.

**ಚಿವುರು$_1$** 'ಸಿವುಱು$_1$' ನೋ.

**ಚಿವುರು$_2$** 'ಸಿವುಱು$_2$' ನೋ.

**ಚಿವುರುಗಾಯ**, ಚಿವರುಗಾಯ (ನಾ). ಉಗುರು ಮುಳ್ಳು ಮೊದಲಾದುವುಗಳಿಂದಾದ ಗಾಯ : ಪರಚುವುದರಿಂದಾದ ಗಾಯ : ಗಲ್ಲದ ಮೇಲೆ ಚಿವುರುಗಾಯದ ಕಲೆಗಳಿದ್ದವು (ನಿರಾಕ. ೬೦). **ಚಿವರುಗಾಯ:** ನನಗೆ ಚಿವರುಗಾಯಗಳಾಗಿದ್ದವು (ಮೋದಿಮ. ೨೧೪)
[ ಚಿವುರು$_1$ (<ಸಿವುಱು$_1$) + ಗಾಯ ]

**ಚಿವ್ವು** 'ಚೀವು' ನೋ.

**ಚಿಹಣ, ಚೇಹಣ** (ನಾ). ಮೇಳಗಾತಿ (?) : ಗೀಗಳೋದುಗೃಡಣೆ ಕೋಕಿಲರವಂ ಕಹಳೆ ಫಳವಿಡಿದ ಪಲಸು ಮದ್ದಳೆ[ಯು] ಮೊರೆವಳಿಕುಲಂ ಬಳಸಿ ತಾರ್ಕ್ಯಪ ಚಿಹಣ[ಪಾಠಾಂ. ಚಹಣ, ಚಿಂಹಣತೆ, ಶಿಹಣ]ಯರು . . ನವಿಲು ನರ್ತನಂಗೈವವಂತಾ ವನದೊಳು (ಸೋಮಶ. ೨-೮೦); (ಹಕಶಾ. ೩-೩೬ ನೋ); "ಹಿಮ್ಮೇಳ" (ಸೋಮುಡ. ೪೨೨). **ಚೇಹಣ:** ಲಲ್ಲೆಗೂಡುವ ಚೇಹಣೆಯ [ಪಾಠಾಂ. ದೇವಣಿಗೆಯರ] ಸಂಗೀತದ ಸಂದಣಿಯೊಳ್ ಪುಷ್ಪಾಂಜಲಿಯ ಸಮಯದೊಳ್ (ಮಲುಕ. ಹ. ೦೬೯-೦೦). [ ? ]

**ಚಿಹ್ನ** (ನಾ). ಗುರುತು ; ಲಕ್ಷಣ ; ಲಾಂಛನ : ಎಸೆದೊಪ್ಪಿದರ್ ವಿಮಾನವಾಲಿ ಖಚರಾನೀಕಕ್ಕೆ ಚಿಹ್ನಂಗಳ್ (ಶಾಂತಿಪು. ೩-೩೮); ಗುರು ಶಿಷ್ಯ ಸಂಬಂಧವಾದುದಕ್ಕೆ ಇದು ಚಿಹ್ನ (ಬಸವ; ೯೨೮) ; ಮಹೋತ್ಸವೋತ್ಸವನಿಮೇಷೋನ್ಮೇಷ ಚಿಹ್ನಂಗಳಿಂ ಗಡ ಬೆಳ್ದಿಂಗಳೆಂಬುದೇ ಪೊಗಟ್ಟಿನೂರ್ಜಶ್ರೀಯ ಬೆಳ್ದಿಂಗಳಂ (ಜಗವಿ. ೪-೬೪). [ ಸಂ. ]

**ಚಿಹ್ನೆ** (ನಾ). = ಚಿಹ್ನ : ಇತರರಿಂದ ಅವನನ್ನು ಪ್ರತ್ಯೇಕಿಸುವ ಚಿಹ್ನೆಗಳೂ ಹೌದು (ಚಿತ್ರನ್ಕಳು. ೬೨೩). [ ಸಂ. ಚಿಹ್ನ ]

**ಚಿಳಕ** (ನಾ). ಸಮೂಹ ; ಮಂಡಲ (?) : ಇಳೆಯಿಂತೀರೇಳು ಲೋಕಂಗಳೊಳವತಿಶಯಂ ಚೆಲ್ವಿನಿಂ . . . ಕುಳಾದ್ರೀಂದ್ರದಿಂದಂ ಬಳಸಿರ್ದ ಮೇರುವೇಳುಂ ಗ್ರಹದ ಚಿಳಕವೇಳುಂ ಯತಿಖ್ಯಾತಿಯೇಳುಂ . . . ತಂನೊಳೊಪ್ಪಲು (ಕಶಾ. IV, ೧-೮ ; 1204). [ ? ]

**ಚಿಳಿಚಟಿಲ್** (ನಾ). ಒಂದಂ ಅನುಕರಣ ಶಬ್ದ : ಅಗಶಿಖರಂ ಚಿಳಿಚಟಲೆನೆ [ಪಾಠಾಂ. ಛಿಳಿಛಟಿಲೆನೆ]ಮಿಗೆ ಸಿಡಿದುದು (ರಾಜಶೇ. ೩-೩೩).

**ಚಿಳಿಚಿಮ** 'ಚಿಲಿಚಿಮ' ನೋ.

**ಚಿಳಿಚಿಳಿ** (ನಾ). ಒಂದು ಅನುಕರಣ ಶಬ್ದ : ಚಿಳಿಚಿಳಿ [ಪಾಠಾಂ. ಛಿಳಿಛಿಳಿ] ಧ್ವನಿ ಛಟಛಟತ್ಕೃತಿ ಘುಳುಘುಳುಸ್ವನ (ತೊರರಾ. ೩-೮-೬೨)

**ಚಿಳಿಲ್** (ನಾ). ಒಂದಂ ಅನುಕರಣ ಶಬ್ದ : ಬೀಸುವ ಬಿಱುಗಾಳಿ ಕೊಳ್ದು ಮಟ್ಟೆ ಪೊಯ್ದ ಸಿಡಿಲ್ ಚಿಳಿಲೆಂಬ ಮಿಂಚು (ಹಮದ. ೧೮೩ ಪ್ರಯೋ).

**ಚಿಳಿಬರಸು**(ನಾ). ಒಬ್ಬಾತನ ಹೆಸರು(?) : ಸಪನದ ರಾಚನ ಮಗನಣುಗನ್ ಚಿಳಿಬರಸು ಮಾಡಿಸಿದೊನ್ (ಸೌಇಇ. IX-1, ೨೨-೮೪ ; ೯23).
[ ? + ಅರಸು$_2$ (<ಅರಸ$_1$) ]

**ಚಿಳ್ಕೀಳ್** (ನಾ). ಒಂದು ಅನುಕರಣ ಶಬ್ದ : ಪಂದಳೆಗಳನೆರ್ದೆಯುಂ ಮೆಟ್ಟೆ ಚಿಳ್ಕೀಳೆನಲ್ ಬೆಟ್ಟುಱುವನ್ನಂ ಕಿಟ್ಟಿ ಕಿಟ್ಟಿಪ್ಪಳಿಸಿ (ಶೃಂಗಾರ. ೮-೬೧).

**ಚಿಳ್ಳ** 'ಚುಲ್ಲ$_1$' ನೋ.

**ಚಿಳ್ಳನೆ**(ಅ). ತಟ್ಟನೆ; ಕೂಡಲೆ: ಉಗುರೊತ್ತಲು ನೀರಿನ ಸೆಲೆ ಚಿಳ್ಳನೆ ಪುಟಿಲ್ದ ಚಿಮ್ಮುವ ಸಿರಿನೆಲವೆ (ಹೂಹಾರ. ೩೧-೧೦).
[ ಚಿಳ್ಳ$_0$ + – ಅನೆ$_1$ ]

**ಚಿಳ್ಳು** (ನಾ). ಒಂದು ಬಗೆಯ ಮರ : "ಕೋವಿದಾರಃ – ಕಂಚಿವಾಳ. ಚಿಳ್ಳು, ಹೇರಾಚ ?" (ಒಷಧಿ. ೪೧). [ ? ]

**ಚಿಳ್ಳೆ$_1$** 'ಚಿನ್ನಿ$_1$' ನೋ.

**ಚಿಳ್ಳೆ$_2$** 'ಚಿಲ್ಲೆ' ನೋ.

**ಚಿಳ್ಳೆ$_3$** (ನಾ). ಸಣ್ಣದಂ; ಪುಟ್ಟದು; ಮರಿ : "ಶಿಶು. ಕೂಸು. ಪಾಪ; ಚಿಳ್ಳೆ, ಚಿಣ್ಣ, ಪಿಳ್ಳೆ, ಕಂದ . . . ಹುಡುಗ" (ಕಂನುಹು. ೮೧). **ಚಿಳ್ಳೆಪಿಳ್ಳೆ** = ಚಿಳ್ಳೆ$_3$ : ಎಲ್ಲರ ಮನೇಲೂ ಚಿಳ್ಳೆಪಿಳ್ಳೆಗಳೇ ಇರೋದು (ಪಾರ್. ೯೮). [ ? ]

**ಚಿಳ್ಳೆಕೇತ** (ನಾ). ಕೀಟಲೆಮಾಡುವ ಒಂದು ಬಗೆಯ ಬೆಂತರ,–ಅತಿಮಾನುಷವ್ಯಕ್ತಿ : Robin good fellow ಎಂಬ ಪಿಳ್ಳೆಯಕ್ಷ, ಚಿಳ್ಳೆಕೇತ (Puck. ೩೦೪೨). 'ಕಿಳ್ಳೆಕೇತ' ಪರಾ. [ ಚಿಳ್ಳೆ$_3$ + ಕೇತ$_2$ ]

**ಚಿಳ್ಳೆಪಿಳ್ಳೆರಾಯ** 'ಚಿಲ್ವಟಿಳ್ಳೆರಾಯ' ನೋ.

**ಚಿಱಿಯಪೊಟಲು** (ನಾ). ಒಂದು ಊರಿನ ಹೆಸರು : ಚಿರುಪಿಯು ಚಿಸ್ತ ಕುಣ್ಣೆಯು ಚಿಱಿಯಪೊಟಲು ಪುಳುವಟ್ಟು ನಾಲ್ಕೂರುಮಿಟ್ಟು ನಡೆದ ಕಲ್ಲಿಗೊಡಂಗೆಯೊಡ್ಡಿನ ಕೆಟಗೆ (ಸೌಇಇ. IX-1, ೨೬-೧೦ ; ೨60).
[ ಚಿಱಿ$_0$ + ಪೊಟಲು (<ಪೊಟಲ್) ]

**ಚಿಱು, ಚಿರು** (ನಾ). ಕಿಱಿದು ಎಂಬುದಕ್ಕೆ ಸಮಾಸದಲ್ಲಿ ಬರುವ ಸಂಕ್ಷಿಪ್ತರೂಪ: ಚಿಱುನನೆ ಚಿಲ್ಲರಲ್ದ ಕಳಿವೂವಳಿವೂ . . . ಕೀಡೆ ಕರ್ದುಂಕಿದವೂ (ತ್ರಿಶವಿ. ೪೨-೬). 'ಚಿಱುಗುಳ್ಳ' ಪರಾ. **ಚಿರು:** 'ಚಿರುಗುಳ್ಳ' ಪರಾ. [ <ಕಿಱು$_2$ ]

**ಚಿಱುಗುಳ್ಳ, ಚಿರುಗುಳ್ಳ** (ನಾ). ಒಂದು ಬಗೆಯ ಮರ : ಇಷ್ಟವಕುಳಂ ಕರಿಯುವೀಳೆ ಚಿಱುಗುಳ್ಳಂ . . . ಮೊದಲಾದುತ್ಕಲ್ಲ ತರುಸಂತತಿಗಳಿಂದೆಸೆವುದುಚ್ಚಳಿತ ನಿರ್ಝರ ವಿಪುಂಜತತಿ ರಂಜಿಸುತ್ತ ಬಿಂಜಂ (ಉದ್ಭಟ. ೨-೪೨). **ಚಿರುಗುಳ್ಳ:** "ನಿದಿಗ್ಧಿಕಾ, ಸ್ಪೃಶ್ರೀ . . . ರಾಷ್ಟ್ರಿಕಾ–೧೦ ಹೆಗ್ಗುಳ್ಳದ ಹೆಸರುಗಳು ಮುಳ್ಳುಳ್ಳ ಚಿರುಗುಳ್ಳ" (ಸಿದ್ಧಾಂತಿ. ೦೧೬).
[ ಚಿಱು + ಗುಳ್ಳ ? ]

**ಚಿಱುಬಾಳೆ** (ನಾ). ಒಂದು ಬಗೆಯ ಬಾಳೆ : ನಂದನಾದ್ಯಾರಾಮಂಗಳೊಳು . . . ಚಿಱುಬಾಳೆ . . . ಸಾರ್ವರ್ತುಕವಾದ ಫಲಂಗಳುಳ್ಳ ತರುನಿಕರಂಗಳುಂ (ವಿವೇಕ. ೨೧೧). [ ಚಿಱು + ಬಾಳೆ$_1$(<ಬಾಟ್) ]

**ಚಿಱುವೇರು, ಚಿರಿವೇರು** (ನಾ). ಕೆಂಪುಬಣ್ಣವನ್ನು ಒದಗಿಸಿಕೊಡುವ ಒಂದು ಬಗೆಯ ಬೇರು,–ಮೂಲಿಕೆ : ಚಿಱುವೇರಿನ ಬಣ್ಣಂ ಮಿಗೆ ಪಱಿಯಲ್ಕೆಂಬರವ ಬಿಡದುಮಾ ತೆಱದಿಂದ ಶಾಂ ಶುಱುಗಿರ್ಕು ನೇಹವಾತನು ಮಱವನ್ನಂ ಬಿಡದು ಮೈದೊಱದುಮಾಯಾಸಂ (ಕವಿಚ. ೪-೨೪). **ಚಿರಿವೇರು:** ಚಿರಿವೇರು, ಛಾಯಾವೇರು (ಮೃಶಿಗ. ೩೬-೦೦೩೩). 'ಚಾಯಬೇರು' ಪರಾ. [ ←ತೆಲು. ಚಿಱುವೇರು, ಚಿರುವೇರು ]

**ಚಟೀಯ** (ನಾ). ಒಡ್ಡಾತನ ಹೆಸರು : ಮಾರಾನ್ತ ರಿಪುಬಲದೊಳ್ಕಾಗಿ × × × ಊದು ಸಗ್ಗಸ್ಥನಾದಂ ಚಟೀಯಂ (ಎಕ. X, ಮುಳಬಾ. ೯೬-೩; ಸು. 767 ?). [ ? ]

**ಚೀಕಟಿ** (ನಾ). ಒಂದು ಬಗೆಯ ಗಿಡ : ಏರೇಕಕ್ಕೆ:–ನುಗ್ಗೆಯ ಸೊಪ್ಪು, ಹರುವೆ ಸೊಪ್ಪು . . . ಚೀಕಟಿ, ತ್ರಿಫಲೆ ಇವು ಪ್ರತ್ಯೇಕವು ಒಂದೊಂದು ತೊಲ (ವಿದ್ಯಾವಿ. ೧೯೩). [ ? ]

**ಚೀಕರಿ** ‘ಸೀಕರಿ’ ನೋ.

**ಚೀಕರಿವೋಗು** ‘ಸೀಕರಿವೋಗು’ ನೋ.

**ಚೀಕಲು** ‘ಸೀಕಲು’ ನೋ.

**ಚೀಕಾತು** (ನಾ). ಅಜಗಿಜಿಯಾದಂದಂ; ಮುಜದ್ದೆ: ತುಳಿದರು ಕೆರಿದರು ಕೆಡಹಿದರು ಸತ್ತ್ವದಿ ಚೀರಿದರು ಚೀಕಾತು ಮಾಡಿದರರ್ಧರ್ನಿಮಿಷದಲಿ (ಕೋಗಯ. ೨೩-೪೮). [ ←ಹಿಂ. ಮರಾ. ಚೀಂಟ್ ]

**ಚೀಕು₁** ‘ಸೀಕು₁’ ನೋ.

**ಚೀಕು₂** ‘ಸೀಕು₂’ ನೋ.

**ಚೀಕೊಳವೆ** ‘ಚೀರ್ಕೊಟಬಿ’ ನೋ.

**ಚೀಜು, ಚೀಸ್, ಚೀಸು** (ನಾ). [ಸಂಗೀತ] ಹಾಡು ; ಸಂಗೀತಕೃತಿ : ನಿನ್ನಿನ ಚೀಜು ರುಚಿ ಹತ್ತಲಿಲ್ಲೋ ಭರಮಾ (ಕಲ್ಪವೃ. ೩೦೪). **ಚೀಸ್ :** ರೋಷನ್ . . . ಹಿತವಾಗಿ ಒಂದು ಚೀಸ್ ಹಾಡಿದಳು (ಬೂಹಸ. ೪೯). **ಚೀಸು :** ಮಾರವದಲ್ಲಿ ಒಂದು ಚೀಸು, ಬೇಹಾಗ್, ಶಹನಗಳಲ್ಲಿ ಎರಡು ದೇವರ ನಾಮಗಳನ್ನು ಹಾಡಿದಳು (ಬೂಹಸ. ೨೨೩).

[ ←ಪಾರ. ಹಿಂ. ಮರಾ. ಚೀಜ್ ]

**ಚೀಟಾಡು** (ಕ್ರಿ). ಇಸ್ಪೀಟು ಆಟವನ್ನು ಆಡು ; ಗಂಜೀಫ ಆಡು : ದೇಸರದಿ ಕುಳಿತಿರಲು, ರಾಯರೆ, ಎಳೆ, ತುಸ ಹೊತ್ತು ಚೀಟಾಡಬಾರದೇ ಎನ್ನುವರು (ಜನಪ. IV, ೨೦-೦೦). [ ಚೀಟು₂ + ಆಡು₁ ]

**ಚೀಟಾಳು** (ನಾ). ಸಣ್ಣ ಆಳು, – ಸೇವಕ : ಆಟಾಳಿಗೊಂದು ಚೀಟಾಳು (ಗಾದೆ). [ ಚೀಟು₂(<ಚಿಟ್ಟು₁) + ಆಳು₂(<ಆಳ್₂) ]

**ಚೀಟಿ₁, ಚೀಟು₁** (ನಾ). ನಾನಾ ಬಣ್ಣಗಳ ಚಿತ್ರದ ನಮೂನೆಯನ್ನೊಳಗೊಂಡ ಹತ್ತಿಯ ಬಟ್ಟೆ ; ಬಣ್ಣದ ಚಿತ್ರಗಳ ಬಟ್ಟೆ: ಜಂಗಮ ದೇವರ ಜಂಗಿನ ಪಾವು ಲಿಂಗ ಧರಿಸೋ ಕಾವೀ ವಲ್ಲಿ ಜೋಗಿಗಳ್ ಹೊದೆಯೋ ಚೀಟೀದಟ್ಟಿ (ನಾಪದ. ೧೪೨) ; ಲಾಂಗ್‌ಕ್ಲಾತ್, ಚೀಟಿ, ವಾಯಲ್, ಮಸ್ಲಿನ್, ಮಲ್ ಇವನ್ನು ಸಾದಾ ನೇಯ್ಗೆ ಉಪಯೋಗಿಸಿ ನೇಯುವರು (ಗೃಹವಿ. ೬೩). **ಚೀಟು₁ :** (ಮುಂಬಯಿ. ೧. ೫-೨೯೬).

[ ?. / ತಮಿ. ಮಲ. ಚೀಟ್ಟಿ; ತೆಲು. ಚೀಟ./ಹಿಂ. ಛೀಂಟ್, ಛೀಟ್ ; ಮರಾ. ಚೀಟ್, ಛೀಟ್./ಇಂ. Chints ]

**ಚೀಟಿ₂** ‘ಚೀಟು₂’ ನೋ.

**ಚೀಟಿಬಟ್ಟೆ** (ನಾ). = ಚೀಟಿ₁ : ಬಣ್ಣ ಬಣ್ಣಗಳ ಚಿತ್ರದ ನಮೂನೆಗಳಿಂದ ಬಣ್ಣ ಕಚ್ಚುವಂತೆ ಫಾಟಿಕ ಸಾ., ಗಾಡುಮೆರಗು ಕೊಟ್ಟು ತಯಾರಿಸಿದ ಹತ್ತಿಯ ದಾರದ ಬಟ್ಟೆ(ಯ) ಚೀಟಿಬಟ್ಟೆ(ಯ) (Chints. ಇಂಕೋ).

[ ಚೀಟಿ₁ + ಬಟ್ಟೆ₂ ]

**ಚೀಟು₁** ‘ಚೀಟಿ₁’ ನೋ.

**ಚೀಟು₂, ಚೀಟಿ₂** (ನಾ). ೧. (ಬರೆಹವಿರುವ) ಸಣ್ಣ ಕಾಗದ ; ಪತ್ರ: ಪಂಚಾಕ್ಷರಿಯ ಮಂತ್ರವೇ ಮಹಾಘನವೆಂದು ಸಂಚಿಕೆಯ ಚೀಟನಿಂ ಬರೆದದಂ ತೂಗಿ ಮೆಚ್ಚಿವಂ (ಚಂಪು. ೬೨-೩೭): ಕಂದಾಯದ ಚೀಟು ಬರೆಸಿ . . . ಹರಹರ ರೈತರಿಗೂ ಚೀಟಗಳು ಕೊಡುವರು (ಮುಹಾಪಂ. II, ೩೦). ೨. ಆಜ್ಞಾಪತ್ರ ; ಅಪ್ಪಣೆ ಚೀಟಿ : ಕೈಯೊಳಗಣ ಹೊಚ್ಚಿಯ ಬಿಟ್ಟು ತೋಟು ಕೆಡದಿಹರೆ ಜಗದೊಡೆಯನ ಚೀಟ ಕೊಳ್ಳಿ ಬಂಕೇಶ್ವರಲಿಂಗದಾ (ಸುಂಕಲಂ.೨) : ಕಾಲನ ಚೀಟುಗಳು ಕವಿವಂತೆ ಕವಿದವು ಹರಿ ಶರವ್ರಾತ (ನಿಧಾಗ. ೧೦-೩೫-೨೭) ; ಗುರಂಸುತಂ ಯಮುನವರ ಚೀಟುಗಳ್ ಕವಿವಂತೆ ಕವಿಸಿದಂ ಕೂರ್ಗಣೆಯ ವೈರಿಗಳ ನಾಯಕರಿಗೆ (ಕುಕಂಗ. ೩೪-೫). ೩. ಭೀತಿ, ರೋಗ ಮೊದಲಾದ ಉಪದ್ರವಗಳ ಪರಿಹಾರಕ್ಕಾಗಿ ಉಪಯೋಗಿಸುವ ಯಂತ್ರಗಳನ್ನು ಬರೆಯುವ ತಾಳೆಗರಿ, ತಗಡು ಮೊದಲಾದಂವು:ಯಾ ಮಂತ್ರವಂ ನೂರೆಂಟು ಬಾರಿ ವಿಧಿಯಿಂದ ಜಪವಂ ಮಾಡಿ ಚೀಟನಲ್ಲಿ ಬರದು ಉದ್ಯಾನ ಮಧ್ಯದಲ್ಲಿ ಹೂಳಲು ಸಮಸ್ತವಾದ ದುಷ್ಟ ಜಂತುಗಳು ನಾಶವನ್ನೈದುವವು (ಸಾಗಂರಿ. ೪೨೫-೦೭) : ಭಟ್ಟರು . . . ಮೂರು ಮಕ್ಕಳಿಗೂ ಚೀಟುಗಳನ್ನು ಕಟ್ಟಿ, ಮಂತ್ರೋದಕವನ್ನು ಪ್ರೋಕ್ಷಣೆ ಮಾಡಿದರು (ಹಂಜಪಂ. ೪೦) ; ಆಚಾರ್ಯ . . . ಚೀಟು ಕಟ್ಟುವ, ದಾಟು ತೆಗೆಯುವ ಅಥವಾ ಅನ್ನ ತೆಗೆದುಹಾಕುವ ನೆಪದಲ್ಲಿ ಬುಂಡೇದಾಸನ ಪಡಸಾನೆ ಕಡೆಗೆ ಹೋಗಿ ಬರುತ್ತಿದ್ದರು (ನಸ್ಮೂರು. ೦೬೯). ೪. ಅಂಚೆಯ ಚೀಟಿ ; ಸ್ಟಾಂಪು : ಈ ದುಷ್ಟನು . . . ತನ್ನ ಮನೆಯೊಳಗಿನ ವೀರಾಗ್ರಣಿಗಳನ್ನೂ . . . ಅಜ್ಜಿಗಳನ್ನೂ ವಿಲಾಯತಿ ಚೀಟುಗಳಂತೆ ಅಗ್ಗವಾಗಿ ಮಾರಿಬಿಟ್ಟನು (ಕೋಹಿನೀ. ೦೩೨). ೫. ದಾಖಲೆಪತ್ರ ; ರಿಕಾರ್ಡ್ : ಶ್ರೀನರಸಿಂಹ ಭಾರತೀವೊಡೆಯರ ದಿವ್ಯನಾಮದಲ್ಲಿ ಮುದ್ರೆ ಚೀಟು ತಾಂಧ್ರ ಶಾಸನ (ಎಕ. VIII, ತೀರ್ಥಹ. ೦೫೩-೦೦ : ಸು. 1480) : ಧರಣಪತಿಗಳು ತೆರುವ ಕಪ್ಪಕಾಣಿಕೆಯು ಮುಡುವು ಬೊಕ್ಕಸ ಚೀಟು . . . ಓದದೆ ಕೇಳಿದನು (ಶಕರೀ. ೦೬೨-೭). ೬. ಇಸ್ಪೀಟು ; ಗಂಜೀಫ : ಸಂತೆಗೆ ಚೀಟು, ಮುಂಗೈಗೆ ಬಳೆ (ಗಾದೆ). ‘ಚೀಟಾಡು’ ಪರಾ. **ಚೀಟಿ₂ :** ೧. ಕಡೆಯ ಸಂಬಳಕಲ್ಲ ಮುಕುತಿಸಾಧನವನ್ನು ಕೊಡುವಂತೆ ತಿರುಗದ ಚೀಟಿ ಬರಸಿಕೊಟ್ಟ (ಪುರಂದ. ೨-೦೫-೪) : ಪೆಸರ ಬರೆದೊಂದು ಚೀಟಿಯನೋರಿಸಿ (ಕೊಟ್ಟೂರು. ೪-೫೯) : ಸಾಯುವಾಗ ಒಂದು ಚೀಟಿ ಬರೆದು ಕೊಟ್ಟಿದ್ದನ್ನು. ಎಂದು ಆ ಚೀಟಿಯನ್ನು ಕೊಟ್ಟನು (ಐತ್ರೀಕು. ೨೪) ; ರಾಯರ ಚೀಟಿಯು ಬಂದಿತ್ತು (ರಾಯುಳ. ೩೭). ೭. ಔಷಧಿಸೀಸೆ ಮೊದಲಾದುವುಗಳ ಮೇಲೆ ಗುರುತಿಸಲು ಅಂಟಿಸುವ ಸಣ್ಣ ಕಾಗದ ; ಗುರುತಿನ ಚೀಟಿ : ಪ್ರತಿಯೊಂದು ಪಾತ್ರೆಯ ಮೇಲೂ ಆ ಪಾತ್ರೆಯಲ್ಲಿರುವ ಸಾಮಾನಿನ ಚೀಟಿ ಅಂಟಿಸಿದರೆ . . . ತೆಗೆದುಕೊಳ್ಳಲು ಸುಲಭವಾಗುವುದು (ಅಡುಶಾ. ೫೨). ೮. ಹಣದ ಕಂತಿನ ರೂಪದಲ್ಲಿ ನಡೆಸುವ ವ್ಯವಹಾರ: ನಮ್ಮ ಕಚೇರಿಯಲ್ಲಿ ಒಂದು ಚೀಟಿ ಆರಂಭಿಸಿದ್ದೇವೆ (ಬೂಡು). ೯. ಪ್ರಯಾಣದಲ್ಲಿ ಕೊಂಡುಕೊಳ್ಳುವ ಟಿಕೀಟು : ಬಸ್ಸಿನಲ್ಲಿ ಚೀಟಿ ತೆಗೆದುಕೊಳ್ಳದೆ ಪ್ರಯಾಣ ಮಾಡಬಾರದು(ಬೂಡು). ೧೦. (ಉಕ) ಔಷಧಿಯ ಪುಡಿ, ಮಾತ್ರೆ ಮೊದಲಾದುವನ್ನು ಕಟ್ಟಿದ ಕಾಗದದ ಚಿಕ್ಕ ಪುಡಿಕೆ.

**ಚೀಟಿಬರು**= ೧. ಚೀಟಿಯ ಹಣ ಕೈಸೇರು: ಈ ತಿಂಗಳು ನನಗೆ ಚೀಟಿ ಬಂತು (ಬೂಡು). ೨. (ಅಲಂ) ಸಾವು ಬರು : ಇನ್ನೇನು ಹುಷಾರಾದರು ಎಂದುಕೊಳ್ಳುವಷ್ಟರಲ್ಲಿಯೇ ಚೀಟಿ ಬಂದು ಬಿಟ್ಟಿತು (ಬೂಡು).

[ ?./ತಮಿ. ಮಲ. ಚೀಟ್ಟು ; ತುಳು. ಚೀಟ್, ಚೀಟಿ : ತೆಲು. ಚೀಟಿ./ ಇಂ. Chit ]

**ಚೀಟು₃** ‘ಚಿಟ್ಟು₁’ ನೋ.

**ಚೀಡೆ** (ನಾ). ಎಣ್ಣೆ ಅಥವಾ ತುಪ್ಪದಲ್ಲಿ ಕರಿದ ಗೋಲಿಯಾಕಾರದ ಸಿಹಿತಿಂಡಿ : (೩).

[ ದೇ.॥ ತಮಿ. ಚೀಟ್ಟೆ ; ಮಲ. ಚೀಡ : ತೆಲು. ಚೀಡೆ ]

**ಚೀಡೆಹುಳು** (ನಾ). ಸಣ್ಣಹುಳು ; ಕ್ರಿಮಿ : ನಿಜವಾಗಿ ನಮ್ಮ ದೇಹಾತ್ಮಗಳನ್ನು ತಿಂದುಹಾಕಿದ, ತಿನ್ನುತ್ತಿರುವ ಚೀಡೆಹುಳು ಉಪೇಕ್ಷೆ(ಸಾಹಿಚಿ. ೪೫). ‘ಕೀಡೆ’ ಪರಾ. [ ಚೀಡೆ₂ (<ಕೀಡೆ) + ಹುಳು₂ (<ಪುೞು₁) ]

**ಚೀಣ** (ನಾ). = ಚೀನ₁. [ <ಸಂ. ಚೀನ ]

**ಚೀಣಾಂಬರ** (ನಾ). = ಚೀನಾಂಬರ : ಪಟುಪಟಾವಳಿ ಚೀಣ ಚೀಣಾಂಬರ ನ್ಯಾಯ ವ್ಯವಹಾರ ಭರವರಾಗಿಯುಂ (ಎಕ. XVI, ಗುಬ್ಬಿ. ೭೪–೪೬ : ?). [ <ಸಂ. ಚೀನಾಂಬರ ]

**ಚೀಣಾಕಾಗದ** (ನಾ). (ಹಿಂದೆ) ಚೀನಾದೇಶದಿಂದ ಬರುತ್ತಿದ್ದ ಕಾಗದ ; ಬಿಳಿಕಾಗದ: ಬಿಳಿಯ ಕಾಗದಕ್ಕೆ ಚೀಣಾಕಾಗದವೆಂದು ಹೆಸರು(ಗುಣಸಾ. ೪). [ <ಚೀಣ + ಕಾಗದ ]

**ಚೀಣಿಕಾಯಿ** 'ಚೀನಿಕಾಯಿ' ನೋ.

**ಚೀತ್ಕರಣ** (ನಾ). = ಚೀತ್ಕಾರ ೧. 'ಚೀತ್ಕರಿಸು$_1$' ಪರಾ. [ ಸಂ. ]

**ಚೀತ್ಕರಣೆ** (ನಾ) =ಚೀತ್ಕಾರ ೨ : ಉರುರಭಸವಳ್ಳಿಱಿಯೆ ರಥ ಚೀತ್ಕರಣೆ ರಥಹಯಹೇಷಿತದ ನಿಷ್ಠುರನಿನಾದದಲೌಕಿ ಹೊಕ್ಕನು ಕಲ್ಕನಾಹವವ (ಕುಮಾ್ಯಕ. ೩–೨೫). [ ಸಂ. ಚೀತ್ಕರಣ ]

**ಚೀತ್ಕರಿಸು$_1$** (ಕ್ರಿ). (ಭಯಂ, ದುಃಖ ಮೊದಲಾದಂವುಗಳಿಂದ) ಗಟ್ಟಿಯಾಗಿ ಅರಚು ; ಆರ್ತನಾದ ಮಾಡು ; ಕೂಗು : "ಅಯ್ಯೋ" ಎಂದು ಚೀತ್ಕರಿಸಿದಳು (ಕಾವೇರಿ. ೨೦೫). [ ಚೀತ್ಕರಣ + – ಇಸು$_3$ ]

**ಚೀತ್ಕರಿಸು$_2$** 'ಸೀತ್ಕರಿಸು' ನೋ.

**ಚೀತ್ಕಾರ** (ನಾ). ೧. ಗಟ್ಟಿಯಾಗಿ ಅರಚುವ ಶಬ್ದ ; ಆರ್ತನಾದ : ಈ ಚೀತ್ಕಾರಗಳಿಂದ ಆ ಮಹಾಧೀರನ ಎದೆಯೂ ಜರ್ಜರಿಸಿತು(ಚಾಂತಲಾ. ೭೩); ಚೀತ್ಕಾರ ಕೇಳಿದಾಗ ಮನೆಯ ಪರಿಸ್ಥಿತಿಯೇ ಬದಲಾಗಿ ಹೋಯ್ತು (ಪದ್ಮಸ. ೦೮೩). ೨. ರಥವು ಚಲಿಸುವಾಗ ಉಂಟಾಗುವ ಧ್ವನಿ : ರಥಾಂಗ ರಥಚೀತ್ಕಾರಂ ಶಿಳೀಮುಖ ಝೇಂಕಾರಂ . . . ಬಳೆದಾಗಸಮಂ ಮುಸುಂಕೆ (ಗಿರಿಜ. ೮–೮ ವ) ; ಘುಳುಘುಳಿಪ ಚೀತ್ಕಾರ ಕೋಳಾಹಳದ ಸೂತನ ರೇಪೆಯುಲಿ ಘಟಕುಲಲಲಾಮನ ತೇರು ಬಂದುದು (ಕುಮಾ್ಯದ್ರೋ. ೪–೫೦). [ ಸಂ. ]

**ಚೀತ್ಕೃತಿ** (ನಾ). = ಚೀತ್ಕಾರ ೧ : ವಿಹಗ ಸಮುತ್ಕರಚೀತ್ಕೃತಿ ತೀವಿ ವಿಪಿನದೊಳ್ಪಡದೆಸೆಗುಂ (ರಾಜಶೇ. ೫–೬೨). ೨. = ಚೀತ್ಕಾರ ೨ : ತುರಗ ಗರ್ಜನೆ ರಥದ ಚೀತ್ಕೃತಿ ವರಧನುಷ್ಟಂಕಾರ (ಕುಮಾ್ಯವಿ. ೬–೬೩) : ಧೂಳಿಯಂ ಮೇಣ್ ಚಕ್ರಚೀತ್ಕೃತಿಯುಮಂ ತವಿಸಿ, ಓಂದೋಡಿದರ್ (ಶ್ರೀರಾಮಪ–೯೩–೪೨೭). [ ಸಂ. ]

**ಚೀನ$_1$**(ನಾ). ೧. ಒಂದು ದೇಶದ ಹೆಸರು : ನೀರರುಹವದನೆ ಸುಕುಮಾರೆ ಮಧುರಪ್ರಿಯೆ ವಿಚಾರವಿದೆಯವಳೆ ಚೀನದ ಮಾನಿನಿ (ಅಪವ. ೬–೩೮) : ಇಂಥ ಸುದ್ದಿಯನ್ನು ಚೀನದಲ್ಲಿ ದೊರಕಿಸುವುದು ಕಠಿನವಾದ್ದರಿಂದ ಈ ವರದಿ ಬಹಳ ವಿರಳವಾಗಿದೆ (ಚೀನವಾ. ೩೪೫) ; ಚೀನಾಕ್ಕೆ ಪಶ್ಚಿಮದಲ್ಲಿ ಮಧ್ಯ ಏಷ್ಯದ ಎತ್ತರವಾದ ಪ್ರಸ್ಥಭೂಮಿಗಳಿವೆ (ಭೂವಿಜ. ೪೦೮). ೨. ಚೀನಾ ದೇಶದಲ್ಲಿ ತಯಾರಾದ ರೇಷ್ಮೆ,–ರೇಷ್ಮೆಯ ಬಟ್ಟೆ : ಸೌಧಾಳಿಯೊಳ್ಗುಡಿಯಾಯ್ತು ಚೀನದ ಸುಯ್ಯಕಾಣದ ಪಟ್ಟೆ (ಪಂಪಭಾ. ೦೪–೦೫) : ನಾಳೆ ವಿನೋದದಿಂದೊಡನಿರ್ವರುಂ ಮುತ್ತಿನಾಭರಣಂಗಳಂ ನೆಱ ತೊಟ್ಟು ಚೀನಮನುಟ್ಟು (ಧರ್ಮಾಮೃ. ೬–೩೭) : ಪಸುರ್ವಡಿಯ ಬೆಳ್ಪಟ್ಟೆಯ ಚಿನ್ನದಾರ ಹೊಂಬಿಸಿಲ [ ಚೀ ] ನಂ [ಪಾಠಾಂ. ಲಂಚನಂ, ಲಚಿಷ್ಮಂ ಲಚೀಪಂ,] (ಸಿದ್ಧರಾ. ೮–೫೬). ೩. ಒಂದು ಬಗೆಯ ಜಿಂಕೆ : "ಚೀನ–ಹಕ್ಕೀಬಣ್ಣವಾಗಿ ೩೦ ಅಂಗುಲದುದ್ದವಿರುವ ದುಪ್ಪೀ ಹೆಸರು" (ಸಿದ್ಧಾಂತಿ. ೦೩೭). [ ಸಂ. ]

**ಚೀನ$_2$** (ನಾ). ಒಂದು ಬಗೆಯ ವಾದ್ಯ : ಯುದ್ಧಸಮಯದಲ್ಲಿ ಬಳಸುತ್ತಿದ್ದ ವಾದ್ಯಗಳೂ ಹಲವಾರು : ಭೇರಿ, ಕೊಂಬು, ಚೀನ, ಢಕ್ಕೆ . . . ಶಂಖವಾಸ, ಇತ್ಯಾದಿ (ಸಂಜುಂಡ. ೦೩೦). [ ? ]

**ಚೀನಕ** (ನಾ). = ಚೀನಿಕರ್ಪೂರ : "ಚೀನಕಃ– ಚೀನಿಕರ್ಪೂರ"(ಒಷಧಿ. ೫೭). [ ಸಂ. ]

**ಚೀನಗರ್ಪೂರ** (ನಾ). ಚೀನಾ ದೇಶದಿಂದ ಬರುವ ಕರ್ಪೂರ ; ಪಚ್ಚಕರ್ಪೂರ (?) : " ಕಪ್ರ(ಕೃ) ?ಕ್ರಿಮಃ – ಅಟ್ಟುಪ್ಪು, ಚೀನಗರ್ಪೂರ, ಕರ್ಕಸ್ಥಲ " (ಒಷಧಿ. ೩೮). 'ಚೀನಿಕರ್ಪೂರ' ಪರಾ. [ ಚೀನ$_1$ + ಕರ್ಪೂರ (<ಕಪ್ಪುರ) ]

**ಚೀನಚೇಳ** (ನಾ).=ಚೀನಾಂಬರ: ಪೂತಲವಕ್ಕೆ ಪೌರವನಭೂರುಹವೊಪ್ಪುವ ಮುಳ್ಳಿಗುಚ್ಛ ಳಕ್ಕೀತನ ಚೀನಚೇಳವರುಣೋಪಲಭಿತ್ತಿಗೆ . . . ದೊರೆಯಾಗಿ ತೋಱದತ್ತು . . . ರಕ್ತಸೇಕದಿಂ (ಚಂದ್ರಪ್ರ. ೬–೩೭). [ ಚೀನ$_1$ + ಚೇಳ ( = ಚೇಲ$_1$) ]

**ಚೀನವಸನ** (ನಾ). = ಚೀನಾಂಬರ : ಬರೆ ತೆಗೆದಪ್ಪಿ ಚೀನವಸನಾಂಚಲಮಂ ನಸು ನೂಂಕಿ (ರಾಜಶೇ. ೪–೬೬) ; ಓಂದೆಸೆಗೋಡುವುದು ಬಳಕೆಗ್ಗೆದದ ಮನವೇನೆಂದಪೆನೊ ಪವನನಿದಿರೊಳ್ ತಂದ ಪತಾಕಿಕೆಯ ಚೀನವಸನವಿದಂಬೊಲ್ (ಶಾಕುಂತ. ೧೮–೩೪). [ ಚೀನ$_1$ + ವಸನ ]

**ಚೀನಾಂಬರ** (ನಾ). ಚೀನಾದೇಶದಲ್ಲಿ ತಯಾರು ಮಾಡಿದ ಬಟ್ಟೆ,–ವಸ್ತ್ರ,–ರೇಷ್ಮೆವಸ್ತ್ರ : ರುದ್ರಾಕ್ಷಿಯ ಧರಿಸಿ ಮಿಸುಪ ಚೀನಾಂಬರ ದುಡಿಗೆಯನೆಲ್ಲ ತ್ಯಜಿಸುತೆಳಗಾವಿಯನುಟ್ಟು (ಕೋಳಿಪ್ರ. ೫–೫) : ಕೆಳೆದು ತಣ್ಣಾಸ ವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಜವಿ. ೨೫–೦೩೪) ; ಹಾಲ್ನೊರೆಯಂತೆ ಶುಭ್ರವಾದ ಚೀನಾಂಬರಗಳನ್ನುಡಿಸಿ, ಅಷ್ಟೇ ಶುಭ್ರವಾದ ವಕ್ಷವಸ್ತ್ರವನ್ನು ಲಘುವಾಗಿ ಬಿಗಿದರು (ಶಾಂತಲಾ. ೦೦೪). [ ಚೀನ$_1$ + ಅಂಬರ ]

**ಚೀನಾಂಶುಕ** (ನಾ). = ಚೀನಾಂಬರ : ವಿಚಿತ್ರ ಚೀನಾಂಶುಕರುಚಿರಂಗಳುಂ . . . ಉತ್ಪಳಪೇಟಮುಂ ಪುಗುವಾಗಳ್ (ಆದಿಪು. ೪–೫೮ ವ) ; ಚಾರು ಚೀನಾಂಶುಕ ವಿತಾನ ಶೋಭಾ ಸನಾಥರೊಳ್ . . . ಸುಖಸುಪ್ತನಾಗಿ (ಧರ್ಮಾಮೃ.೫–೨ವ); ರೇಷ್ಮೆಯನ್ನು ಭಾರತದಲ್ಲಿ 'ಚೀನಾಂಶುಕ' ಎನ್ನುತ್ತಿದ್ದರು (ಶಿಲ್ಪನಾ. ೫೭). [ ಚೀನ$_1$ + ಅಂಶುಕ ]

**ಚೀನಾಕ** (ನಾ). ತರಕಾರಿಯಾಗಿ ಉಪಯೋಗಿಸುವ ಒಂದು ಬಗೆಯ ಸೊಪ್ಪು : ಚೀನಾಕ (ಸವತೀ ಜಾತಿ) ಚಿರ್ಭಟ ಇವು ಕಫವಾತಕರ (ಅಷ್ಟಾಂಗ. ೦೩೭–೮೦). [ ಸಂ. ]

**ಚೀನಾಬಳೀಮರ** (ನಾ). ಒಂದು ಬಗೆಯ ಮರ : ಚೀನಾದೀಮರ, ಪುನಾಲಿ, ಹಂದಿಬಳ್ಳಿ (ಕೃಷಿಗಿ. ೨೯–೫೬೪). [ ಚೀನಾ$_0$ + ಬಳಿ + ಮರ$_1$ ]

**ಚೀನಾರು** (ನಾ). ಒಂದು ಬಗೆಯ ಮರ : ಭವ್ಯ ಚೀನಾರುಗಳು ಚಾಚಿವೆ ತೋಳು, ಹಾಕುತ ರಿಂಗಣ (ಚಂಪಕ. ೪೮–೦೫). [ ←ಪಾರ. ಚೀನಾರ್ ; ಹಿಂ. ಚಿನಾರ್ ]

**ಚೀನಾಲಿ** 'ಛಿನಾಲಿ' ನೋ.

**ಚೀನಾಸೋಂಪು** (ನಾ). ಒಂದು ಬಗೆಯ ವನಸ್ಪತಿ : ಮರಾಟಿಮೊಗ್ಗು, ಚೀನಾಸೋಂಪು (ಕೃಷಿಗಿ. ೯೩–೮೯೦). [ ಚೀನಾ$_0$ + ಸೋಂಪು ]

**ಚೀನಿ** (ನಾ). ೧. ಚೀನಾದೇಶದಿಂದ ಬಂದುದು ; ಚೀನಾದೇಶದಲ್ಲಿ ಉತ್ಪನ್ನವಾದುದು. ೨. ಪಚ್ಚಕರ್ಪೂರ ; ಹಿಮವಾಲುಕ : " ಪ್ರಾಲೇಯಮನಲು ಘನಸಾರಮನೆ ಪಚ್ಚೆ ಹಿಮವಾಳುಕಂ ಚೀನಿ " (ಮಂಗರಾ. ೯೯–೨೨). ೩. ರೇಷ್ಮೆಬಟ್ಟೆ : ಮಗಮಗಿಪರಲ ಮುಡಿದು ಚಂದನಂಬೊರೆದು ಚೀನಿಗಳ ಪೊದೆದು (ಪದ್ಮಥಾ. ೮–೨೭) ; ಎಳದಳಿರ ಪೊದಕೆಯಿಂ ಚೀನಿ ಚೀನಾಂಬರಂಗಳ ಮೇಲುಕಟ್ಟಿನಿಂ . . . ರಾಜಗೃಹದೊಳೊಪ್ಪಿದುದು ಚಪ್ಪರವತುಳ ವಿಸ್ತರದಲಿ (ಸೌಂದರ್ಯ. ೪–೨೦) ; ಚೀನಿ ದುಕೂಲ ಜಲ್ಲಿ ಕರ್ನೆ ವಿಕರ್ನೆಗಳ್ಪಾನುಮಂಡಲದಂತೆಸೆಯಲು (ಶಾಂತೀಶ. ೦–೪೪) ೪. ಒಂದು ಬಗೆಯ ಸಕ್ಕರೆ ; ಬೂರಾಸಕ್ಕರೆ. ೫. ಒಂದು ಬಗೆಯ ಕಬ್ಬು : ಚೀನಿಯ ಕಬ್ಬು ಸಾಮಾನ್ಯವಾಗಿ ತೆಳ್ಳಗಿರುತ್ತದೆ (ಬೂಧಿ). [ <ಸಂ. ಚೀನೀಯ ]

**ಚೀನಿಕರ್ಪೂರ** (ನಾ). ಪಚ್ಚಕರ್ಪೂರ; ಹಿಮವಾಲುಕ : ಕರಶಿಗೆ ತಗಚಿಯ ಬೀಜ ಬಾವಂಜಿಯ ಬೀಜ . . . ಚೀನಿಕರ್ಪೂರ ಇವೆಲ್ಲವಂ ತವ್ಮೊಳು ಸರಿಯಾಗಿ ಕೊಂಡು (ವೈ.ವಿ. ೯೨). [ ಚೀನಿ + ಕರ್ಪೂರ ]

**ಚೀನಿಕಾಯಿ, ಚೀಣಿಕಾಯಿ** (ನಾ). ಸಕ್ಕರೆಗುಂಬಳಕಾಯಿ ; ಸಿಹಿ ಕುಂಬಳಕಾಯಿ: ಚಾವಡಿಯ ಮಾಡಿಗೆ ತಾಗಿರುವ ಅಡ್ಡ ಕೋಲಿನಲ್ಲಿ ಸೌತೆ, ಕುಂಬಳ, ಚೀನಿಕಾಯಿ ಮೊದಲಾದುವುಗಳು ತೂಗುತ್ತಿದ್ದುವು (ಹಗುಲ. ೨೪). **ಚೀಣಿಕಾಯಿ** : ಚೀಣಿಕಾಯಟ್ಟುವಳ್ಯಾರವ್ವಾ ಚೀಣೀಕಟ್ಟೀ ಪುಟ್ಟವೆಂಕವ್ವಾ (ನಾಪದ. ೨೦೩). [ ಚೀನಿ + ಕಾಯಿ$_4$ (<ಕಾಯ್$_4$) ]

**ಚೀನಿಕೊಳವೆ** (ನಾ). ದುರ್ಬೀನು; ದೂರದರ್ಶಕಯಂತ್ರ; ಸಿದ್ದೇಶ್ವರನ ಗದ್ದಿಗೆ ಮೇಲೆ ಹೋಗಿ, ಚೀನಿಕೊಳವೆ ಹಾಕಿ ನೋಡಿದಲ್ಲಿ, ಒಂದು ತಂಬಾದರೂ ಕಾಣುವುದಿಲ್ಲ (ರಾಜೇಂದ್ರ. ೯೨).

[ ಚೀನಿ ? + ಕೊಳವೆ (<ಕೊಳವಿ) ]

**ಚೀನೀಯ** (ನಾ). ಚೀನಾದೇಶದಲ್ಲಿ ಹುಟ್ಟಿದವನು ; ಚೀನಾದೇಶದ ಪ್ರಜೆ : ಹಿಂದೂದೇಶದವರಲ್ಲದ ಅಸ್ಯಾಖಂಡದ ವಂಶೀಯರು . . . ಆರಬರು, ಬೆಲುಚಿಯರು, ಚೀನೀಯರು, ಮೊಗಲರು (ಶುಕಾನಾ. ೧೭೪).

[ ಸಂ. ]

**ಚೀನೋತ್ತರೀಯ** (ನಾ). ಹೊದೆಯುವ ರೇಷ್ಮೆಯ ವಸ್ತ್ರ,-ಮಗುಟ : ಮತ್ತಮತಿಸಂಭ್ರಮಸ್ಖಲಿತ ಚಿತ್ರಚೀನೋತ್ತರೀಯಮಂ ಮಾಜಿದು (ಮಲ್ಲಿಪು. ೯-೨೦). [ಚೀನ$_1$ + ಉತ್ತರೀಯ ]

**ಚೀಪು$_1$** 'ಸೀಪು$_1$' ನೋ.

**ಚೀಪು$_2$, ಚಿಪ್ಪು$_2$, ಚೂಪು$_2$** (ನಾ). ೧. ಬೆಣೆಯಾಗಿ ಉಪಯೋಗಿಸುವ ಕಲ್ಲಿನ ಅಥವಾ ಮರದ ಚೂರು,-ತುಂಡು: (+). (ಗಂ). ೨. ಮೊನಚಾದ ; ಚೂಪಾದ ; ಹರಿತವಾದ. 'ಚೀಪುಗಲ್ಲು' ಪರಾ. **ಚಿಪ್ಪು$_2$** : ೧. 'ಚಿಪ್ಪುಕುಂಟೆ' ಪರಾ. **ಚೂಪು$_2$** : ೨. ಕೋಡು . . . ಚೂಪಾದ ತುದಿಯುಳ್ಳದ್ದು ಇರುತ್ತದೆ (ಮುಂಬಯಿ. ೪-೪೭); ಹರಿಯ ಕಿರೀಟದ ಚೂಪು ಕುಡಿ ಎಡವೀಯ (ಮುಕ್ತಿಕಂ. ೨೦-೭).

[ ದೇ.೩ ತಮಿ. ಮಲ. ಚಿವಪ್ಪು ; ತುಳು. ಚೀಪು ; ತೆಲು. ಚಿಂಪಿ ].

**ಚೀಪು$_3$** 'ಸೀಪಿ' ನೋ.

**ಚೀಪುಗಲ್ಲು** (ನಾ). ಮೊನಚಾದ ತೆಳ್ಳನೆಯ ಕಲ್ಲು;ಚೂಪುಗಲ್ಲು: ಇವುಗಳ ಅವಶೇಷಗಳೂ ಅವರು ಬಳಸುತ್ತಿದ್ದ ಚೀಪುಗಲ್ಲುಗಳ ಆಯುಧಗಳೂ ಹಿಂದೂಸ್ಥಾನದ ದಕ್ಷಿಣ ಭಾಗದಲ್ಲಿ ಹೇರಳವಾಗಿ ದೊರೆತಿವೆ (ಹಿಂದೂಇ. ೪).

[ ಚೀಪು$_2$ + ಕಲ್ಲು (<ಕಲ್$_3$) ]

**ಚೀಪುತೊಟ್ಟು** (ನಾ). ಸಣ್ಣಮಕ್ಕಳಿಗೆ ಚೀಪುವುದಕ್ಕಾಗಿ ಕೊಡುವ ಮೊಲೆಯ ತೊಟ್ಟಿನಾಕಾರದ ಸಾಧನ : ಕೂಸಿಗೆ ಚೀಪುವುದಕ್ಕಾಗಿ ಕೊಡುವ ಕೃತಕ ಮೊಲೆತೊಟ್ಟು ; ಚೀಪುತೊಟ್ಟು (Comforter. ಇಂಕನಿ).

[ಚೀಪು$_1$ (<ಸೀಪು$_1$) + ತೊಟ್ಟು$_4$ ]

**ಚೀಪೆಟ್ಟು** (ನಾ). =ಚೀಮಾರಿ: ಯಾವುದೋ ಒಂದು ನೆಪ ಸಿಕ್ಕಿದರೆ ಸಾಕು; ಕೆಲಸವನ್ನು ಬಿಟ್ಟುಬಿಡುವೆ ಎಂದು ಚೀಪೆಟ್ಟು ಹಾಕಿದೆ (ಲಕ್ಷ್ಮೀಪ್ರ. ೪೪).

[ <ಛೀ + ಪೆಟ್ಟು$_2$ ]

**ಚೀಮಾರಿ** (ನಾ). ಎದುರಿಗೆ ಮಾಡುವ ಅವಮಾನ,-ತೆಗಳಿಕೆ; ತಿರಸ್ಕಾರ: ಅಪ್ಪನ ಹತ್ತಿರ ಹೋಗು, ಚೀಮಾರಿ ಆಗುವುದು (ರೂಢಿ). 'ಛೀಮಾರಿ' ಪರಾ.

**ಚೀಮಾರಿಮಾಡು**=ಅವಮಾನಿಸು; ಛೀ ಎನ್ನು; ಧಿಕ್ಕರಿಸು : ಅವಳು ಆ ಕ್ಲಬ್ಬಿನ ಶಾಂತ ವಾತಾವರಣದ ಮೇಲೂ ಧಾಳಿಯಿಟ್ಟು, ಅಲ್ಲಿದ್ದವರೆಲ್ಲರನ್ನೂ ಚೀಮಾರಿ ಮಾಡಿದಳು (ಯೋಧಪು. ೭೮).

[ <ಛೀ + ಮಾರಿ ? ]

**ಚೀಮೆ** (ನಾ). ಇರುವೆ : ಹಗಲಗತ್ತಲೆಯಂತೆ ಯಿಹ ಕಾಪಿಗರು ಮೇಲಧಿ ಚೀಮೆ ಕೂರದ ಬಗೆಯ ಮುಚ್ಚಿರ್ದಲ್ಲಿ ಬಂತೀ ಕೋಡಗೆಂದೆಳ್ಲಾ (ಜಿರಾಮಾ. ೨೦೭-೬೨). [ ←ತೆಲು. ಚೀಮ ]

**ಚೀರ$_1$** 'ಚೀಲ' ನೋ.

**ಚೀರ$_2$**(ನಾ).೧. ಮರದ ತೊಗಟೆ. ೨. ನಾರುಬಟ್ಟೆ; ವಲ್ಕಲ: ಭಾರ್ಯಾನುಜನಃ ಸಹಿತಡವಿಗೆ ನಡೆದನಾ ರಾಮ ಚೀರಾದಿಗಳ ಧರಿಸಿ (ಅರಾಮಾ. ೭-೫೦). ೩. ಹರುಕುಬಟ್ಟೆ ; ಚಿಂದಿ. ೪. ಗೆರೆ ; ರೇಖೆ. ೫. ಬಟ್ಟೆ; ವಸ್ತ್ರ: ಚಿನ್ನಗೆಯಿಕದ ಚೀರಕ್ಕೆ ಧೂಸಿಗವಸರಕ್ಕೆ ಹತ್ತಿವಸರಕ್ಕೆ ಪ್ರಾಣಗಾಬಿವಸರಕ್ಕೆ ಗಂಧವಣವಸರಕ್ಕೆ ಗಂಧವಣಗರಂಗಡಿಗೆ . . . ಬೇಜಿ³ವೇಜಿ³ ಹುರಿಸಧೆಜಿ ಹಿರಿಯರಾಗವೊಂದು (ಎಪಿ. XIII, ೨೧-೫೨; 1204); ಕೃಷ್ಣನ ಚೀರದಂತ್ಯವ ಪಿಡಿದು ಸದನಕೆ ಕರೆದು ಪದಕೆಜಿಗೆ (ಅಕ್ರೂರ. ೬-೫೫). ೬. ಒಂದು ಬಗೆಯ ಹಾರ ; ನಾಲ್ಕು ಎಳೆಗಳ ಮುತ್ತಿನ ಹಾರ ; ಗ್ರೋಸ್ತನ: ಕರವೆಸೆವ ಚಿನ್ನಗುಳ್ಳೆಯ ಚೀರದಿಂದೊಪ್ಪೆ (ಲಸರ. ೯-೦೦೦). ೭. [ಬೌದ್ಧ] ಸಂನ್ಯಾಸಿಯ ವಸ್ತ್ರ ; ಕಾವಿಯ ಬಟ್ಟೆ : (+). [ ಸಂ. ]

**ಚೀರಗಟ್ಟು** (ಕ್ರಿ). ಬಟ್ಟೆಯಿಂದ ಬಿಗಿದು ಕಟ್ಟು : ಚೀರಗಟ್ಟಿದ ಹಡಪ ಹಲ್ಲಣ ಹಿಂದೆ ಹಾರವುಪ್ಪಂದದಿ ಹಾಕಿ ಭೋರೆನೆ ಬರುತಿರ್ದರು ತ್ರಿಂಟಿ ರಾವುತರು (ಶ್ರೀಪಾಲ. ೦೩-೯೩). [ ಚೀರ$_2$ + ಕಟ್ಟು$_1$ ]

**ಚೀರಟೆ** (ನಾ). ಒಂದು ಬಗೆಯ ಹಕ್ಕಿ : ಚೀರಟೆ ಹಕ್ಕಿಗಳ ಚೀರುದನಿಯ ಲಾಲಿ (ಅನಾಥ. ೫). [ ? ]

**ಚೀರಣ, ಚಿರಣೆ, ಚಿಲಣ, ಚೀರಣೆ, ಚೀರ್ಣ, ಚೀಲಣ, ಚೀಲಣೆ** (ನಾ). ೧. ಲೋಹವನ್ನು ಕತ್ತರಿಸಲು ಬಳಸುವ ಚಿಕ್ಕ ಉಳಿ; ಅಪ್ರ; ಚಾಣ: ಹೊನ್ನು ಹೆಣ್ಣು ಮಣ್ಣೆಂಬ ಮೂಜು ಸಂಕಲೆಯ ಕೀಲ ಜ್ಞಾನಚೀರಣದಿಂದ ತಡೆಗಡಿದು (ಘನವ. ೭೩). ೨. ಉಳಿಯಿಂದ ಮಾಡಿರುವ ಕೆತ್ತನೆಯ ಕೆಲಸ: ಚೀರಣದುಡಿದಾರ ಮೇಖಲೆ ಮುಂಜೀರ ಹಾರಗಳನ್ನು ಕ್ರೊಟ್ಟು ನೊಲಿದು (ಕುರಾಸಾಂ. ೪೮-೩೭) ; ಭೂರಿವೆಳಗಿನ ವಜ್ರಪಂಕ್ತಿಯ ಚೀರಣದ ಫೊಲೆಗಳ ರಭಸದಿ ತೋಜುವತಿಸಿಂಗರದ ಚಾಮಿಾಕರದ ಕಲಶಗಳ (ಅಂಬಿಕಾ. ೬-೫೭). **ಚಿರಣೆ**: ೧. 'ಚಿರಣೆಗೆಲಸ'ಪರಾ. **ಚಿಲಣ**: ೧. 'ಚಿಲಣಗೆಲಸ' ಪರಾ. **ಚೀರಣೆ**: ೧. 'ಚೀರಣೆಗೆಲಸ' ಪರಾ. **ಚೀರ್ಣ**: ೧. "ವೃಶ್ಚನಃ, ಪತ್ರಪರಶುಃ–ಚೀರ್ಣದ ಪೆಸರು ಅಗಸಾಲಿಗನ ಕೊರಮುಟ್ಟು" (ಸಿದ್ಧಾಂತಿ. ೨೭೦). **ಚೀಲಣ** : ೧. ಅಲಿಕಲುಗಳ ಕಡಿವಡುಕ್ಕಿನ ಚೀಲಣದ ಹಂಗೇಕೆ (ಕುಮ್ಮಾದ್ರೂ. ೧೦-೩೦). 'ಚೀಲಣಿಸು' ಪರಾ. **ಚೀಲಣೆ**: ೨. 'ಚೀಲಣೆಗೆಯ್' ಪರಾ. [ ದೇ.೩ ತೆಲು. ಚೀರಣ, ಚೀರ್ಣ ]

**ಚೀರಣಗೆಲಸ, ಚಿರಣೆಗೆಲಸ, ಚಿಲಣಗೆಲಸ, ಚೀರಣೆಗೆಲಸ** (ನಾ). ಉಳಿಯಿಂದ ಮಾಡಿದ ಕೆತ್ತನೆಯ ಕೆಲಸ : ತಾರೇಶನಂ ನಗುವ ಲೋವೆ ಚೀರಣಗೆಲಸ ಚಾರುವೇದಿಕೆಗಳಿಂದ (ಮರುಕ. ೬-೬). **ಚಿರಣೆಗೆಲಸ**: ಸಣ್ಣ ಚಿರಣೆಗೆಲಸಗಳಿಂದ ಸೊಬಗಾಂತ ಬಣ್ಣದ ಚಾವಡಿಯಿಹುದು (ಗೋಮಟೇ. ೧-೦೩೭). **ಚಿಲಣಗೆಲಸ** : ಚಿತ್ರದ ಶಾಲೆ ಚಿಲಣಗೆಲಸದ ಪೊಸ ಮುತ್ತಿನ ಚಾವಡಿವಿಡಿದು ನಿತ್ಯದಾನವನೀವ ಮಂಡಪವದಜೊಳು ಚಿತ್ರರದಿಂದೊಪ್ಪುತಿಹುದು (ಅಂಜನ. ೩-೩೪). **ಚೀರಣೆಗೆಲಸ** : ರನ್ನದ ಚೀರಣೆಗೆಲಸದಿಂ ಸೊಬಗಾಂತ ಚಿನ್ನದ ಕಳಸಂದಿಂದೆಸೆವ (ಗೋಮಟೇ. ೫-೩೭).

[ ಚೀರಣ + ಕೆಲಸ ]

**ಚೀರಣೆ** 'ಚೀರಣ' ನೋ.

**ಚೀರಣೆಗೆಲಸ** 'ಚೀರಣಗೆಲಸ' ನೋ.

**ಚೀರಲ** (ನಾ). (ಉಕ) ಬಿರುಕು : ಹೊಲವು ತಗ್ಗು ಶೆವರಾಗಿ ಹಳ್ಳನಾಲಿ ಕೊರಿ ಚೀರಲಗಳು ಇದ್ದರೆ ಅಂಥ ಹೊಲಗಳ ಬೆಳೆಯು ಹೊಲದಲ್ಲೆಲ್ಲ ಒಂದೇ ಸಮನಾಗಿ ಬೆಳೆಯುವದಿಲ್ಲ (ಕೃಷಿಪ್ರ. ೩೭). [ ←ಮರಾ. ಚೀರ್ ]

**ಚೀರಳಚಿಂತೆ** (ನಾ). ಒಂದು ಊರಿನ ಹೆಸರಂ : ಮುಡಣದೆಸೆ ಪೆಣ್ಣಲ್ಲಿನ್ನ ಪುಲ್ಲೇಡು ಉದಿಚೇಡು ಚೀರಳಚಿನ್ತೆ (ಎಕ. XII, ಶಿರಾ. ೩೮-೩೯ : 978). [ ? ]

**ಚೀರಾಟ** 'ಚೀಱಾಟ' ನೋ.

**ಚೀರಿ** (ನಾ). ಜೀರುಂಡೆಹುಳು; ಚಿಮ್ಮುಂಡೆ : "ಝಿಲ್ಲೀಕಾ, ಚೀರೀ-ಈ ೨ ಜಿಮ್ಮುಂಡೆ" (ಹಲಾಯು. ೯೩-೧೦೨) : "ಭೃಂಗಾರೀ, ಚೀರಿಕಾ. ಚೀರೀ, ಝಿಲ್ಲಿಕಾ ಈ ೪ ಜೀಱುಂಡೆ" (ನಾಚಿಂ. ೧೧೫). [ ಸಂ. ಚೀರೀ ]

**ಚೀರಿಕಾರುತ** (ನಾ). ಜೀರುಂಡೆಗಳ ಧ್ವನಿ,-ಶಬ್ದ : ಬಂದುದು ಬೇಸಗೆ ಗಾಲವುಸ್ತ್ರಕಾಸಾರಕಸಾರವುಸ್ತ್ರವಿತತಮಾರುತನುದ್ಗತ ಚೀರಿಕಾರುತಂ (ಶಂಬಾಮಾ. ೬-೮೫). [ ಸಂ. (ಚೀರಿಕಾ + ರುತ) ]

**ಚೀರಿಕೆ** (ನಾ). = ಚೀರಿ : "ಭೃಂಗಾರಿ, ಚೀರಿಕಾ . . . ರೆಕ್ಕೆಗಳುಳ್ಳ ಇರುವೆಗಳ ಹೆಸರುಗಳು, ಚಿಮ್ಮುಂಡೇಹುಳವೆನ್ನುವರು" (ಸಿದ್ಧಾಂತಿ. ೦೯೧). [ ಸಂ. ಚೀರಿಕಾ ]

**ಚೀರಿಡು** (ಕ್ರಿ). ಅರಚು ; ಕಿರಿಚು : ನಿನ್ನ ಸಂಕಲ್ಪಗಳ ಲೆಕ್ಕಿಸದೆ ಚೀರಿಡೆ (ವಿಶ್ವಗೀ. ೧೦-೭). 'ಕೀಱಿಡು₁' ಪರಾ. [ ಚೀರು₃ (<ಕೀಱು₁) + ಇಡು₁ ]

**ಚೀರಿಲ್ಲಿ** (ನಾ). ಒಂದು ಬಗೆಯ ದೊಡ್ಡ ಮೀನಂ : ಏನು ಬಾಯ್ಬಡಿಕ ಹೆಣ್ಣೆ ನೀನು, ಚೀರಿಲ್ಲಿ ಚೀಲಿ (ಮಂತ್ರಕ. ೫೬-೭). [ <ಸಂ. ಚೀರಲ್ಲಿ ]

**ಚೀರೀರವ** (ನಾ).=ಚೀರಿಕಾರುತ : ನಿಷ್ಠುರ ಚೀರೀರವ ಮುಖರಪರುಷ ಕಾನನಪವಮಾನನ ಸೋಂಕನಾಸೆಗೆಯ್ಯಲ್ ಬಗೆದೈ (ಶಂಬಾಮಾ. ೬-೧೧). [ ಸಂ. (ಚೀರೀ + ರವ) ]

**ಚೀರು₁** 'ಸಿವುಱು₁' ನೋ.

**ಚೀರು₂** 'ಸಿವುಱು₂' ನೋ.

**ಚೀರು₃** 'ಕೀಱು₁' ನೋ.

**ಚೀರು₄** 'ಚೀಱು₂' ನೋ.

**ಚೀರುಮಣ್ಣು** (ನಾ). ಪಾತ್ರೆ ಮೊದಲಾದುವುಗಳ ಬಾಯನ್ನು ಗಾಳಿ ಹೋಗದಂತೆ ಭದ್ರಪಡಿಸುವ ಜಿಗುಟಾದ ಜೇಡಿಮಣ್ಣು : ಶ್ವೇತಾಭ್ರಕವನ್ನು ಕುಟ್ಟಿ ವಸ್ತ್ರಗಾಳಿತ ಚೂರ್ಣಮಾಡಿ . . . ಸೂರಣಗೆಡ್ಡೆ ಮಧ್ಯದಲ್ಲಿಟ್ಟು ಚೀರುಮಣ್ಣು ಹಚ್ಚಿ ಪುಟ ಹಾಕಬೇಕು (ಸಕವೈ. ಪರಿ. ೫೦೦). [ ಚೀರು₄ (<ಚೀಱು₂) + ಮಣ್ಣು (<ಮಣ್) ]

**ಚೀರುಲಿ** (ನಾ). ಚೀರುವ ಧ್ವನಿ ; ಕಿರಿಚುವ ಧ್ವನಿ : ಮಸಣದ ದೆವ್ವದ ಚೀರುಲಿ ನಾನು ಸಿಡಿಮದ್ದಿನ ಪೇರುಂಡೆಯು ನಾನು (ಪಾಂಚಜ. ೧೬-೫). [ ಚೀರು₃(<ಕೀಱು₁) + ಉಲಿ₂ ]

**ಚೀರ್ಕೊಳವಿ** 'ಜೀರ್ಕೊಟವಿ' ನೋ.

**ಚೀರ್ಕೊಳವೆ** 'ಜೀರ್ಕೊಟವಿ' ನೋ.

**ಚೀರ್ಕೊಟವೆ** 'ಜೀರ್ಕೊಟವಿ' ನೋ.

**ಚೀರ್ಗರೆ** (ಕ್ರಿ). ಚೀರೆಂದು ಧ್ವನಿಮಾಡು,-ಶಬ್ದಮಾಡು: ಚೀರ್ಗರೆವಿಕ್ಷುಯಂತ್ರ ನಿಕರಂ ಪುಂಡ್ರೇಕ್ಷುಷಂಡಂಗಳೊಳ್ (ಅನಂಪು. ೦-೬೯). 'ಜೀರ್ಗರೆ' ಪರಾ. [ ಚೀಱು₁ (<ಕೀಱು₁) + ಕರೆ₁ ]

**ಚೀರ್ಗಾಳೆ** (ನಾ). ಚೀರೆಂದು ಧ್ವನಿಮಾಡುವ ಒಂದು ಬಗೆಯ ಕಹಳೆ : ಮುರಜ ಡಕ್ಕೆಯು ಮುರುಡೀ ರಭಸಾಗಳಿಂದ ಕರಡೆ ಚೀರ್ಗಾಳೆ ಭೂರ್ಗ ಶಬ್ದಾಗಳಿಂದ (ಹಮತ. ೨೩೯). [ ಚೀರು₃ (<ಕೀಱು₁) + ಕಾಳೆ (<ಕಹಳೆ) ]

**ಚೀರ್ಗೊಳವೆ** 'ಜೀರ್ಕೊಟವಿ' ನೋ.

**ಚೀರ್ಚಟಲ್** (ನಾ). ಒಂದು ಅನುಕರಣ ಶಬ್ದ : ಚೀರ್ಚಟಲೆಂಬ ತಱಿಗೆಂಡಗಳ ಹೋಮಕುಂಡ (ಭರತ. ೨೦-೧೨೯).

**ಚೀರ್ಣ** 'ಚೀರಣ' ನೋ.

**ಚೀಲ, ಚೀರ₁** (ನಾ). ಪದಾರ್ಥಗಳನ್ನು ತುಂಬಲು ಬಟ್ಟೆ, ಗೋಣಿ ಮೊದಲಾದುವುಗಳಿಂದ ಮಾಡಿರುವ ಸಾಧನ; ಕೋಶ: "ಅರ್ತಿಯನೆ ಚೀಲಮುದು" (ಮಂಗರಾ. ೧೦೫-೧೯) ; ಪರದನ ಚೀಲವನೊಳಗಿರ್ದು ಮಲ್ಲನೀಕ್ಷಿಸಿ ಚೋರಂ (ಧರ್ಮಾಮೃ. ೧೨-೭೬) ; ಕೊರ್ತು ಕೂಸಿರ್ಪ ಚೀಲಂ ಜರಾಯುವೆನಿಕ್ಕುಂ (ಮಂಗರಾ. ೯೧-೮) ; ನಿರ್ಮದನು ಮತ್ಸ್ಯನ ಪುರಿಗೆ ಯತಿವೇಷದಲಿ ಬಂದನು ಹೊನ್ನಸಾರಿಯು ಚೀಲ ಕಕ್ಷದಲಿ (ಕುಮಾವ್ಯಾ.ವಿ. ೧-೧೭) ; ರಕ್ತ ಕೀವು ತಾಕಿ ಮಾಂಸ ಚೀಲದೊಳಗೆ ಬೆಳೆದ ನಾ (ಪುರಂದ. ೧-೧೬೬-೧);ಮಿಱುಪ ಕಕ್ಷದ ಪಟ್ಟೆಯ ಚೀಲ ನೊಸಲೊಳು ಪರಿಮಳ ಗಂಧಾಕ್ಷತೆಯು ಸಿರಿವಂತರಿವರಾರೆ (ಕಂನವಿ. ೨೫-೧೦೨) ; ಪುಸ್ತಕಗಳನ್ನು ಚೀಲಕ್ಕೆ ಹಾಕಿಕೊಂಡು ಸ್ಕೂಲಿಗೆ ಹೊರಟೆ (ಬಾಳಮ. ೨) . **ಚೀರ₁** : "ಸ್ಯೂತಃ, ಪ್ರಸೇವಃ – ಚೀರ" (ನಾಚಿಂ. ೬) ; ಚೀರದಲಿ ನೆಱೆ ತುಂಬಿ ದಂತಿರೆ ಪೂರವಿಸಿ ಭುಗಿಲೆನಿಸಿ ಭಸಿತದ ಧಾರೆ ಪೊಱಮಡೆ(ಬಸಪು. ೪೪-೧೫); ಜನನಿಯುದರದ ಮಾಂಸಚೀರದಿಂ ಬದ್ಧನಾಗನುಕರಿಪ ಗರ್ಭಜಲದಿಂ ಮುಳುಗಿ (ಅಶಿಚಂ. ೩೯-೩೯); ಮಿಳಿವೊಱೆಯ ತೊಗಲ ಚೀರವಂ ತೆಗೆದು ಕಡೆಗಿರಿಸಿ ಸಂಬಳಿಗೋಲ ಸೂರೊಳ್ಳಮಂತಿಟ್ಟು ಪದತಳಂದೊಳಿದು ನಿಳಯಕ್ಕೆ ಕರೆದೊಯ್ದು (ಪಾಕೋಪು. ೬-೨೧). [ ದೇ.ಶ ಮಲ. ಚೀಲ, ಶೀಲ ; ಕೊಡ. ಚೀಲೆ ; ತುಳು. ಚೀರವು ]

**ಚೀಲಕೀಲಿ** (ನಾ) . ಒಂದು ಬಗೆಯ ಗಿಡ: ಚೀಲಕೀಲಿಯ ಬೇರು ತಿಗುಡೆಯ ಸಮಾಂಶವಾಗಿ ಚೂರ್ಣಿಸಿ ಹಸುವಿನ ತುಪ್ಪದಿಂದಾ ಘಾಯಕ್ಕೆ ತೊಡೆಯಲು ಸರ್ಪವಿಷ ಹರ (ವಿಷಚಿ. ೧೩-೨). [ ? ]

**ಚೀಲಣ** 'ಚೀರಣ' ನೋ.

**ಚೀಲಣಿಸು** (ಕ್ರಿ). ಕೆತ್ತನೆ ಕೆಲಸವನ್ನು ಮಾಡು; ಕಂಡರಿಸು: ಕಾಲಭೈರವನೊಂದುಗ್ರಾಕಾರವ ಸೋಲಿಸಿ ಬಿದಿಯುಕ್ತಿನಿಂದ ಚೀಲಣಿಸಿದ ಚಿತ್ರವೆಂಬಂತೆ ಭಿಲ್ಲನಾಭೀಳಾಕಾರವೊಪ್ಪಿದುದು (ನೇಮಿಸಂ. ೨-೩೪) ; ಪಜ್ಜಳಿಸುವ ತಿಳುವಳಿಕಿನ ಪರಲಿಂ ಚೀಲಣಿಸಿದ ಚಿತ್ರಮುಮನೆ ಕರಮೆಸೆದಂ ಭೂಪತಿ ಪುರಸತಿಯರ ಕಣ್ಗಳ ಕದಿರಿಂದ (ಜಯುಕಾ. ೧೦-೫೬) . [ ಚೀಲಣ (<ಚೀರಣ) + – ಇಸು₃ ]

**ಚೀಲಣೆ** 'ಚೀರಣ' ನೋ.

**ಚೀಲಣೆಗೆಯ್** (ಕ್ರಿ).=ಚೀಲಣಿಸು: ಕಡುಗಾಡಿಯಿಂ ಕಡೆದ ನೀಲದ ನೀಱೆ ಕಾಮುಗಿಲ ನೋಡಿ ಚೀಲಣೆಗೆಯ್ದು ಪುತ್ರಳಿಯ ತೆಱದಿಂ ಪುಳಿಂದಿಯರ್ ಸೊಗಯಿಸಿದರು (ಸಮ್ಯಕೌ. ೧೦-೩೦). [ ಚೀಲಣೆ (< ಚೀರಣ) + ಕೆಯ್₁ ]

**ಚೀಲಯ** 'ಚೀಲಾಯ' ನೋ.

**ಚೀಲಾಯ, ಚೀಲಯಂ** (ನಾ). ಸಣ್ಣ ಕತ್ತಿ; ಸುರಿಗೆ; ಕಠಾರಿ : "ಚೀಲಾಯಮನಲ್ ಕಿತ್ತಲಗು " (ಛಾಂನಿ. ೬) ; ವಿಷವ ತೆಗೆದಳು ದ್ರುಪದಸುತೆ ಕೈಮುಸುಕಿನಲಿ ಚೀಲಾಯವುಗಿದನು ವಸುಮತೀಶ್ವರನು ( ಕುಮಾವ್ಯಾ.ಅ. ೨೫-೩೧) ; ರಕ್ಕಸರಾಯ ಚೀಲಾಯದಲಿ ಶಿವಿಸುತನ ಹೊಟ್ಟೆಯನು ತಿವಿದಿಳೆ ಬಿರಿಯೆ ಬೊಬ್ಬಿಟ್ಟನು (ತೊರರಾ. ೬-೩೨-೧೬). **ಚೀಲಯ** : ಆತನೀತನ ನಿಲುಕಿ ಹೊಯ್ದನು ದಂಡೆಯಿಂದದ ಕಳಚಿ ಮಾರುತಿ ಹೊಕ್ಕಡವ ಚಿಮ್ಮಿದನು ಚೀಲಯವ (ಕುಮಾವ್ಯಾ.ಅ. ೨೨-೩೩). 'ಚಿಲ್ಲಾಣ' ಪರಾ. [ ? ]

**ಚೀಲಾಯುಧ** (ನಾ). ಚೀಲಾಯ ; ಸಣ್ಣಕತ್ತಿ : ಕುಕ್ಕುಟಗಳ ಕಾಲ್ಗೆ ಚೀಲಾಯುಧವಿಕ್ಕಿ ಸೊಕ್ಕುಮದ್ದಿನ ಗುಟುಕಿತ್ತು ಉಕ್ಕಂದದೆ ಕಾದಿಪರಸುಮಕ್ಕಳ ಮೊತ್ತ ಕಿಕ್ಕಿಱಿದೆಸೆದುದರ್ತಿಯೊಳು (ಕಂನವಿ. ೬-೧೨). [ <ಚೀಲಾಯ + ಆಯುಧ ]

**ಚೇಲಿ** (ನಾ). ಬೆಕ್ಕು; ಮಾರ್ಜಾಲ : "ಚೇಲಿಯೆನಲು ಬೆಕ್ಕು" (ಚತುರ. ೦೫೦) : ತನಿವಣ್ಣನಿತ್ತು ಭಯವೀವ ರಿಪುವೆಂಬ ಚೇಲಿಯನೆಬ್ಬಟ್ಟ (ಕೃವಲ್ಯ. ೪-೮-೨); ಚೇಲಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ (ಗಾದೆ). [←ತೆಲು. ಚೇಲಿ]

**ಚೇಲಿಕೆ** 'ಚಲಿಕೆ$_1$' ನೋ.

**ಚೇಲಿತ** (ನಾ). ಮುಚ್ಚುವಿಕೆ; ಮರೆ: ಸಾಲುವಿಡಿದು ಪುದಿದಿಹ ದೋಷಂಗಳ ಚೇಲಿತವನು ಮಾಡಿ ಗುಣವ ಪಾಲಿಸಿ ಕೃತಿಯ ಕೊಂಡಾಡುವ ಸುಜನರ ಜಾಲವ ನಾ ಸ್ತುತಿಸುವೆನು (ರಾಮವಿ. ೧-೫೮). [ ? ]

**ಚೇಲಿಸು** (ಕ್ರಿ). ೧. ಕತ್ತರಿಸು; ಕೊನೆಗೊಳಿಸಂ : ಚೇಲಿಪಂ ಸಾರ್ಚಿರ್ದ ವೈರಿವೀರರ ಚಿರಾಯುವನಾಜಿಯೊಳೀಂ ಪ್ರವೀಣನೋ (ಸೌಇಇ. XX, ೭೬-೭೭ ; 1118). ೨. ತಿರಸ್ಕರಿಸು; ತ್ಯಜಿಸು: ಚಿಂತಾಮಣಿಯಂ ಚೇಲಿಸಿ ಶಕ್ಕೆಯನಾಂತೊಲ್ದುತಕ್ಕೋತೊಪ್ಪುವ ನವಸಂತಾನವ ಸವಜಿದೊಲು (ಮದೇಶು. ೨೭-೩೦). [ <ಚೇಲಣಿಸು ]

**ಚೇಲ್ಯೆತ, ಚಲ್ಯೆತ, ಜೇಲ್ಯೆತ** (ನಾ). ಒಂದು ಬಗೆಯ ಗಿಡ; ಕಾಗಿತೊಂಡೆ ಗಿಡ : ಹುಚ್ಚುತೊಂಡೆ ಗಿಡ : "ಚೇ[ಪಾಠಾ. ಜೇ]ಲ್ಯೆತವುನೆ ಕಾಕಜಂಘೆಯಕ್ಕು" (ಮಂಗರಾ. ೪೦-೩೦): ಚೇಲ್ಯೆತನ ಬೇರನೊಂದೆ ಕಟಿಯಿಂದೀಂಟಲ್ (ಖಮದ. ೧೧-೩೦). **ಚಲ್ಯೆತ:** "ಪಾರಾವತಪದೀ—ಚಲ್ಯೆತ, ಕಂಗುಂಗೆ" (ಒಷಧಿ. ೯೬). **ಜೇಲ್ಯೆತ:** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ. [ ? ]

**ಚೇವರ** (ನಾ). ಸಂನ್ಯಾಸಿಗಳ ಬಟ್ಟೆ : ಯಾರ ಪತ್ರ ಚೀವರವತ್ರಿ ಹಿಡಿವ (ವೃಶಾಖ. ೭೭-೩೪೭) ; ಆಗ ಭಗವಂತನು ಉಡುವು ಹಾಕಿಕೊಂಡು ಪಾತ್ರ ಚೀವರಗಳನ್ನು ಕೊಂಡು . . . ಪೂರ್ವದ ಕಡೆ ಮುಖಮಾಡಿ ಕುಳಿತನು (ತೀರ್ಥಕ. ೪೧). [ ಸಂ. ]

**ಚೇವು, ಚವ್ವು, ಜೇವು** (ಕ್ರಿ). ೧. ಸೀಸದ ಕಡ್ಡಿ ಮೊದಲಾದುವುಗಳನ್ನು ತೆಳುವುಮಾಡು.– ಹೆರೆ : (*). ೨. ರಸವನ್ನು ಹೀರು; ಸೀಪು : ಹಕ್ಕಿ ಬಳಗ ಕೊಕ್ಕಸಿಕ್ಕಿ ಚೇವುತಿರಲು ಕವಣೆ ಬೀಸಿ (ಬಸ್ಕಾಬಿ. ೬೨-೧೩). **ಚವ್ವು :** (*). **ಜೇವು:** ೧. ಚೇವು ಜೇವು (ಸೀಸದ ಕಡ್ಡಿ ಜೇವಿಕೊಡು) (ನಮ್ಮನು. ೯೧) ; ಸೀಸದ ಕಡ್ಡಿಯನ್ನು ಜೇವುವವನು ಚಾಕಿಂದು ಹೇಳಬಹುದೋ ? (ಜೀವಾತ್ಮ. ೬೦).

[ ದೇ. ॥ ತಮಿ. ಮಲ. ಚೇವು; ತೆಲು. ಚವ್ವು ]

**ಚೇಸ್** 'ಚೇಜು' ನೋ.

**ಚೇಸು** 'ಚೇಜು' ನೋ.

**ಚೇಹಾಕು** (ಕ್ರಿ). ಚೇಮಾರಿ ಮಾಡು; ಧಿಕ್ಕರಿಸು; ಅವಮಾನಗೊಳಿಸು: (*). [ <ಚೀ + ಹಾಕು (<ಪಾಯ್ಸು$_1$) ]

**ಚೇಳ್** (ನಾ). ಕಿರಿಚುವಿಕೆ; ಅರಚುವಿಕೆ. 'ಚೇಳಿಡು' ಪರಾ. [ ? ]

**ಚೇಳಿಡು**(ಕ್ರಿ). ಅರಚು; ಕೂಗು; ಘೀಳಿಡು: "ಚೇಳಿಡುವುದನೆ ಘೀಟಿಡುವುದಕ್ಕುಮರ್ದನಾವಾಂ" (ಶಬ್ದಕ್ಕೆ. ೩೩) ; "ಚೇಳಿಡನೆ ಘೀಟಿಡುವುದಕ್ಕು" (ಶಬ್ದಮಂ. ೫೦). [ ಚೇಳ್ + ಇಡು$_1$ ]

**ಚೇಟ್** 'ಕೇಜು$_1$' ನೋ.

**ಚೇಟಾಟ, ಚೇರಾಟ**(ನಾ). ಕಿರಿಚಾಟ; ಕೂಗಾಟ : ಅಹ, ಏನ್ ಚೇಟಾಟಂ ಏನ್ ಕೊಲ್ವ ಗರ್ವಂ (ಅಶ್ವತ್ಥಾ. ೩-೪೪). **ಚೇರಾಟ :** ಗಂಡಸರ ಕೊಟಡಿಯಲ್ಲಿದ್ದಂತೆಯೆ ಚೇರಾಟ ಕೂಗಾಟಗಳು ಕಿವಿ ಬಿರಿಯುವಂತಿದ್ದುವು (ಪುನರು. ೧೮೪). [ ಚೇಟು$_1$ (<ಕೇಜು$_1$) + ಆಟ ]

**ಚೇಟಿಕೆ** (ನಾ). = ಚೇಟಾಟ : ತೋಟಾತಾ ವನಮಧ್ಯದಲಿ ಮುಗಿಲೇಟಿಕೆಯ ಮುಂಗುಡಿಯ ಸಿಡಿಲಿನ ಚೇಟಿಕೆಯ ಚಡ್ಡಣದ ರವ ರಾಘವನ ಕಿವಿಗಳಿಗೆ (ತೊರಾ. ೩-೧೨-೧೪). [ ಚೇಟು$_1$ (<ಕೇಜು$_1$) + – ಇಕೆ ]

**ಚೇಟು$_1$** 'ಕೇಜು$_1$' ನೋ.

**ಚೇಟು$_2$** 'ಸೀಟು$_3$' ನೋ.

**ಚೇಟು$_3$, ಚೇರು$_4$** (ನಾ). ಮಣ್ಣಿನ ಲೇಪ : ಪಳುಗಿದ ಮಡಕೆಯೊಳ್ ಸುರಿದು ಬಾಯಿಗೆ ಮುಚ್ಚಳ ಮುಚ್ಚಿ ಚೇಟನು ಮಾಡಿ ಒಲೆಯ ಮೇಲಿಟ್ಟು (ಸಾಳ್ವಸಾಂ. ೧೮). **ಚೇರು$_4$ :** 'ಚೇರುಮಣ್ಣು' ಪರಾ.

**ಚೇರುಮಾಡು** = ಕೆಸರು ಮಣ್ಣನ್ನು ಬಳಿದು ಸ್ವಲ್ಪವೂ ತೂತು ಇಲ್ಲದಂತೆ ಮಾಡು.–ಭದ್ರಪಡಿಸು : ಕಪ್ಪೆಚಿಪ್ಪನ್ನು ಹಾಲುಕೊರಟಿಗೆ ರಸದಲ್ಲಿ ಭಾವನೆ ಮಾಡಿ ಶರಾವ ಸಂಪುಟಗಳಲ್ಲಿಟ್ಟು ಚೇರುಮಾಡಿ . . . ಅರೆದು (ಸಕಲ್ಪ. ಪ. ೯೯೯). [ ದೇ.॥ ತಮಿ. ಮಲ. ಚೇಟು ]

**ಚೇಟು$_4$** 'ಸಿವುಟು$_2$' ನೋ.

**ಚೇಟ್ಲೇಟ್** 'ಸಿವುಟ್ಲೇಟ್' ನೋ.

**–ಚು$_1$** (ಪ್ರ). ಪ್ರೇರಣಾರ್ಥದಲ್ಲಿ ಧಾತುಗಳ ಮೇಲೆ ಹತ್ತುವ ಒಂದು ಪ್ರತ್ಯಯ. 'ಒಡರ್ಚು', 'ತಗುಳ್ಚು', 'ಸಡಿಲ್ಚು' ಪರಾ.

**–ಚು$_2$** (ಪ್ರ). ಒಂದು ಭಾವವಾಚಕ ತದ್ಧಿತಪ್ರತ್ಯಯ. 'ಕೆಂಚು' ಪರಾ.

**ಚುಂಗಚ್ಚೆ** (ನಾ). ಚುಂಗು ಬಿಟ್ಟ ಕಚ್ಚೆ : ಚುಂಗಚ್ಚೆ ಹಾಕಿ ದೋತರ ಉಟ್ಟಿದ್ದಾರೆ (ತಿರುಗು. ೩೦). [ ಚುಂಗು$_1$ + ಕಚ್ಚೆ ]

**ಚುಂಗಡಿ$_1$** (ನಾ). ೧. ಚಿಲ್ಲರೆ : ಅಂಗಡಿಯಲ್ಲಿ ಚುಂಗಡಿ ಸಿಕ್ಕದೇ ? (ಗಾದೆ). ೨. ಸಾಲದ ಹಣಕ್ಕೆ ಕೊಡುವ ಹೆಚ್ಚಿನ ಹಣ; ಬಡ್ಡಿ : ನನ್ನ ಅಸಲ ಚುಂಗಡಿ ಸಹವಾಗಿ ಹಣ ಕೊಡು (ಬತ್ತೀಸ. ೪೩); ನೀವು ಚುಂಗಡಿಗೆ ಚುಂಗಡಿಯನ್ನು ಕಟ್ಟಿ, ಎಲ್ಲರ ಮನೆಯನ್ನು ಹಾಳುಮಾಡಿ . . . ತಿರುಗುತ್ತಿದ್ದೀರಿ (ಮುದ್ರಾಮಂ. ೧೧೭). [ ದೇ.॥ ತಮಿ. ಚುಜ್ಮುಟು ; ತುಳು. ಚುಂಗುಡಿ ; ತೆಲು. ಚುಂಗುಡು. / ಮರಾ. ಚುಂಗಡೀ ]

**ಚುಂಗಡಿ$_2$, ಚಿನಡಿ, ಚುಂಗುಡಿ** (ನಾ). (ಹೊಳೆಯುವ) ಚುಕ್ಕೆಗಳಿಂದ ಕೂಡಿದ ಬಟ್ಟೆ : ಅಂಗಡಿ ಭಾರಿ ಆದ್ದರಿಂದ ಗುಳೋವು, ಗುಂಡಾರು, ಕನಡಿ, ಕಾಂಗಡಿ, ಚುಂಗಡಿ, ಸಿಂಗಡಿಗಳ ಸಿಂಗಾರವೇನು ಕೇಳಬೇಕೆ! (ದಿವಾಗಿ. ೮೯). **ಚಿನಡಿ :** 'ಚಿನಡಿಸೀರೆ' ಪರಾ. **ಚುಂಗುಡಿ :** ಮುಂದಲೆ ಚುಂಗುಡಿ ಸುತ್ತಿದ ಹಚ್ಚಡ ಹೊಂದೊಡವಾಂತ ಕೈ ಸೆಳವೆ (ಧರಕ. ೦೨-೩೦).

[ ←ಮರಾ. ಚುನಡೀ ; ಹಿಂ. ಚುನರೀ ]

**ಚುಂಗಡಿಲಾಭ** (ನಾ). (ಅಸಲಿನ ಮೇಲೆ) ಬಡ್ಡಿ ಹಾಕುದವುರಿಂದ ಪಡೆಯುವ ಲಾಭ : "ಕುಸೀದಿಕಃ, ವಾರ್ಧುಷಿಕಃ, ವೃದ್ಧ್ಯಾಜೀವಃ, ವಾರ್ಧುಷಿಃ–ಳೆ ಬಡ್ಡಿ ತೆಲವಾಸಿ ಮುಂತಾದ ಚುಂಗಡಿಲಾಭದಿಂದ ಬದುಕುವವನ ಹೆಸರು" (ಸಿದ್ಧಾಂತಿ. ೨೩೬). [ ಚುಂಗಡಿ$_1$ + ಲಾಭ ]

**ಚುಂಗಡಿಹಣ** (ನಾ). ೧. ಸಾಲದ ಹಣಕ್ಕೆ ಕೊಡುವ ಬಡ್ಡಿ : (*). ೨. ಚಿಲ್ಲರೆ ಹಣ : (*). [ ಚುಂಗಡಿ$_1$ + ಹಣ ]

**ಚುಂಗಲ** (ನಾ). ಒಂದು ಬಗೆಯ ಆಯುಧ : ಪರಸ ತೋಮರ ಶಕ್ತಿ ಚುಂಗಲ ಪರಿಘ (ಮುಂಬರಾ. IX, ೮೯-? ; ?). [ ? ]

**ಚುಂಗಾಣಿ** (ನಾ). ಜೇಡಿಮಣ್ಣಿನಿಂದ ಮಾಡಿದ, ಚಿಕ್ಕದಾದ ಹೊಗೆಬತ್ತಿಯ ಕೊಳವೆ : (ಉ.ಅಮೆರಿಕದ ಇಂಡಿಯನರು ಶಾಂತಿಸೂಚನೆಯಾಗಿ ಸೇದುವ) ಶಾಂತಿ ಚುಂಗಾಣಿ (Peace pipe. ಇಂಕನಿ).

[ ← ಹಿಂ. ಚೋಂಗಾ./ತಮಿ. ಚುಜ್ಮಾನ್ ; ಮಲ. ಚುಜ್ಞ ; ತುಳು. ಚುಂಗಾಣಿ, ಸುಂಕಾಣಿ ]

**ಚುಂಗು$_1$, ಚೆಂಗು$_3$** (ನಾ). ತುದಿ ; ಕೊನೆ ; ಅಂಚು ; ಸೆರಗು : ಪಟ್ಟೆವಾಳಿಯನುಟ್ಟು ಬನ್ನಿ ಧಟ್ಟಿ ಚುಂಗ ಬಿಟ್ಟು ಬನ್ನಿ (ಪುರಂದ. ೧-೧೦೭-೬): ಚಲ್ಲಣಗೊಟ್ಟು ಕಾಸಿಯನುಟ್ಟು ಸೆಳಗುಗಳಿಲ್ಲವ ಚುಂಗ ಹಾಕಿದನು (ಅಮುಸಾಂ. ೫-೨೦): **ಚೆಂಗು$_3$ :** ಕೊರಳಿಯ ಚೆಂಗುಬಿಟ್ಟ ಸೆರಗನ್ನು ಹಿಡಿದೆಳೆದು . . . ಘರ್ಜಿಸಿದನು (ಬಾಗಿನ. ೧೭).

[ ದೇ.॥ ತಮಿ. ಚುಜ್ಮು ; ತೆಲು. ಚುಂಗು ]

**ಚುಂಗು$_2$** 'ಸುಂಕು$_3$' ನೋ.

**ಚುಂಗು$_3$** (ನಾ). ೧. ಕೊಳೆತ ಗಂಜಲ ಮೊದಲಾದುವುಗಳಿಂದ ಹುಟ್ಟುವ ದುರ್ವಾಸನೆ: 'ಚುಂಗು'ಯಿದ್ದಲ್ಲಿ ಮುಂಗು (ಹೇಮಂತ. ೧೮೧). 'ಚುಂಗುನಾತ' ಪರಾ. ೨. ಒಂದು ಬಗೆಯ ವಾಸನೆ : ಅವನ ಮೈ ಯಿಂದ ಏನೋ ಒಂದು ವಿಧವಾದ, ಆದರೆ ಹಿತವಾದ ಚುಂಗು ಹೊರ ಹೊಮ್ಮುತ್ತಿತ್ತು (ಪುನರು. ೬೧). [ ? ]

**ಚುಂಗುಡಿ** 'ಚುಂಗಡ್ಡಿ$_2$' ನೋ.

**ಚುಂಗುನಾತ** (ನಾ). ಗಂಜಲದ ವಾಸನೆ ; ಹೊಲಸು ವಾಸನೆ ; " ದನದ ಗೋತದ ನಾತ; ಉಚ್ಚೆನಾತ " (ಜಾನಕೋ. ೩೬).

[ ಚುಂಗು$_3$ + ನಾತ ]

**ಚುಂಗುರಿಸು** (ಕ್ರಿ). ರೋಮಾಂಚನಗೊಳ್ಳು ; ನವಿರೇಳು : ನಾನೆಂದ ಮಾತಿಗೆ ನಿನಗೆ ಮೈ ಚುಂಗುರಿಸಿತೆಂತು ಕೈ ಕಂಪಿಸಿಹುದೆಂತು (ಚಂದ್ರವೀ. ೧೩೮-೬೦). [ ? + – ಇಸು$_3$ ]

**ಚುಂಗುವಾಸನೆ** (ನಾ). = ಚುಂಗುನಾತ : ಬೆವರಿನ ಚುಂಗುವಾಸನೆಯಿಂದ ಪೈರಿಗಳು ಆ ಮುಂಗೋಣೆಯನ್ನು ಹೊಲಸು ಮಾಡಿದರು (ಪುನರು. ೦೩೮).

[ ಚುಂಗು$_3$ + ವಾಸನೆ ]

**ಚುಂಗುಳ** (ನಾ). ಒಂದು ಬಗೆಯ ಹುಳು: ಚುಂಗುಳಂ ತಿನೆ ಮೊಗಂಗೆಟ್ಟು ಸಂಮ್ಲಾನವಾದ ಮಲರಂತಿರ್ದಾಕೆಯಂ ಕಾಣಾತೆರ್ದೆಯುರಿದುದಣ್ಣಂಗೆ (ಶ್ರೀರಾಮಾ. ೨೦೪-೧೦೦). [ ? ]

**ಚುಂಚ** 'ಚುಂಚು$_2$' ನೋ.

**ಚುಂಚಲ, ಚುಂಚಲಿ, ಚುಚಲ, ಚುಚಲಿ** (ನಾ). ಒಂದು ಬಗೆಯ ಔಷಧಿ ಸಸ್ಯ : (ಕ). **ಚುಂಚಲಿ:** ಚುಂಚಲಿಗಿಡ, ಕಾಡುಸೆಣಬು (ವೃಕ್ಷಗಿ. ೨೪-೪೪೯). **ಚುಚಲ** : ಚುಚಲ–ಈ ಬೇರಂ ಹಾಲಲ್ಲರೆದು ತೆಗೆದುಕೊಳ್ಳೆ ವಾಂತಿ ಆಗಿ ಪೈತ್ಯ ಹರ (ವಿಶ್ವವಿ. ೪). **ಚುಚಲಿ:** ಚುಚಲಿಸೊಪ್ಪಂ ತಂದು ನೀರಲ್ಲಿ ತುಳಿದು ಸೊಲ್ಲಗೆ ರಸವಂ ಸೂತಕವಾದಾಗ ಮೂರು ಸೂತಕದಲ್ಲಿ ಕೊಡಲು ಗುಣ (ವಿಶ್ವವಿ. ೦೦೬). [ ? ]

**ಚುಂಚಲಿ** 'ಚುಂಚಲ' ನೋ.

**ಚುಂಚಿ$_1$** 'ಚುಂಚು$_2$' ನೋ.

**ಚುಂಚಿ$_2$** (ನಾ). ಒಂದು ಬಗೆಯ ತಾಮ್ರದ ಆಭರಣ (?) : ಕಾಲ ಪಳಂಚಿನುಂಗುರದ ಮುತ್ತಿನ ಹಾರದ . . . ಬಾಲೆಯರೇವರೊಲ್ದೊಲಿಸಿ ಪತ್ತಿಸಿ ಚಿತ್ರಮನಿಂಬುಗೆಯ್ವ ಕೀಸೋಲೆಯ ಕಾಚಿನುಂಗುರದ ಚುಂಚಿಯ ಬಂದಿಯರೆಮ್ಮ ನಲ್ಲೆಯರ್ (ಸೂಕ್ತಿಸು. ೮-೪೦೦). [ ? ]

**ಚುಂಚಿಗೆಯಿ** (ನಾ). ಒಂದು ಬಗೆಯ ಭೂಮಿ : ಕಂಡಿಕೆ ಎರಡು ಸ್ಥಳದ ಕೆಯಿ ಮತ್ತರಂಟು ಚುಂಚಿಗೆಯಿ ಮತ್ತರು ನಾಲ್ಕು (ಶಾಇ. XI-II, ೧೩೯-೨೩ ; 1119). [ ಚುಂಚಿ ? + ಕೆಯಿ (<ಕೆಯ್$_4$) ]

**ಚುಂಚಿಲಿ** (ನಾ). ಮೂತಿ ಉದ್ದವಾಗಿದ್ದು, ಆಕಾರದಲ್ಲಿ ಚಿಕ್ಕದಾಗಿರುವ ಇಲಿ : ಸುಂಡಿಲಿ : ಸೊಂಡಿಲಿ ; ಮೂಗಿಲಿ : (ಕ).

[ ಚುಂಚು$_2$ + ಇಲಿ$_1$ ]

**ಚುಂಚು$_1$**, ಜುಂಜು$_1$ (ನಾ). ೧. ಜುಟ್ಟು ; ಕೂದಲು : ಮಂದಮತಿಯ ಮುಂದೆ ತಲೆಯ ಚುಂಚಂ ಪಿಡಿದು ಚರೆಯಕ್ಕೆ ಬಿಟ್ಟು ಗೂಂಟನೆಟಿದು ತಪ್ಪಂತೆ (ಅರ್ಧನೇ. ೬-೬೬ದ). ೨. ಮುಂಗುರುಳು ; ಗುಂಗುರು ; ಸುರುಳಿಗೂದಲು : ಪೊದಟ್ಟಧರಪೊತ್ತದೆಯುಂ ನಿಬಿಗೊಂಡ ಚುಂಚು ಸೋರ್ಮುಡಿ ಕಡುನುಣ್ಪುವೆತ್ತ ತೊಡೆ . . . ಕರಮೆ ರಂಜಿಸೆ ಬಂದರಿಳೇಶ ಕಾಂತೆಯರ್ (ಕಾವ್ಯಾವ. ೯೩೪); ಚುಂಚು ಚಂಚಲವಾಗಿ ಚುಮ್ಮುಚುಮ್ಮನೆ ತಾಗಿ ಹಿಂಚುಮುಂಚಿನ ಸವಿ ತೂಗಿ ಕಂಚುಮಿಂಚಾಗಿ ರಾಗಿಸಿದರು (ಭರತ. ೦೩-೩೦). **ಜುಂಜು$_1$:** ೧. ಕೆಂಜೆಡೆಗಳಿಂದಳವಟ್ಟಿಹ ಕಿರೀಟವಾ ಜುಂಜು ನಡು ನೆತ್ತಿಯೊಳು (ವೀರಶೈಪು. ೩-೩-೨೦); ಎತ್ತಿಕೊಂಡಾ ಕೂಸು ತಲೆಯಲಿ ಪೊತ್ತ ಗೂಡೆಯ ಮಲಿನ ವಸನದ ಸುತ್ತುಡಿಗೆ ತಲೆ ಜುಂಜು ಸೊಗಯಿಸೆ ಕೊರವಿಯಾಂ ಬಂದೇ (ಶಾಕ್ಯಥಾ. ೩೦-೨೦); ನೆತ್ತಿಯ ಜುಂಜು ಮೇಗಣಳಿಮಾಲೆ ಕರಾಸಿಯು ನೀಳ್ದ ಕೊಂಬು . . . ಗೆಲೆವಂದುದು ಬೀರನನಂದು ಮಾವುರಂ (ವೃಷವಿ. ೪-೩೭). ೩. ಗುಂಜುಗುಂಜಾದ ಕೂದಲು; ಒರಟುಕೂದಲು; ಕೆದರಿದ ಕೂದಲು. 'ಜುಂಜುಗೇಶ', 'ಜುಂಜುದಲೆ' ಪರಾ. ೪. ನವಿಲು,ಕೋಳಿ ಮುಂತಾದುವುಗಳ ತಲೆಯ ಮೇಲಿನ ಶಿಖೆ;ಕೊಟ್ಟು: ಜುಂಜೆಟ್ಟ ನವಿಲ್ಗಳ್ ಮಿಗೆ ಮಂಜುಳತನುವಿನೊಳಡಂಗಿಸಿದ ತುಂಡದಿನಾ ರಂಜಿಸಿದುವು (ಉದ್ಭಟ. ೪-೩೪) ; ಕೂರ್ಪಿನ ಡೊಂಕಣಿಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಳ್ಳ (ಕಬ್ಬಿಗಾ. ೨೬೩).

[< ಪ್ರಾ. ಚುಂಚುಲ=ತಲೆಗೆ ಧರಿಸುವ ಒಂದು ಬಗೆಯ ಆಭರಣ ; ಶಿರೋಭೂಷಣ./ತೆಲು. ಚುಂಚು ]

**ಚುಂಚು$_2$, ಚುಂಚ, ಚುಂಚಿ$_1$, ಚೂಚು$_1$** (ನಾ). ೧. ಪಕ್ಷಿಯ ಕೊಕ್ಕು : ನಾನು ನಿಮ್ಮನ್ನು ಒಂದೊಂದಾಗಿ ನನ್ನ ಚುಂಚಿನಲ್ಲಿ ಹಿಡಿದುಕೊಂಡು ಹೋಗಿ . . . ಸರೋವರದಲ್ಲಿ ಬಿಡುವೆನು (ಬುದ್ಧಜಾ. ೩೭); ಗಿಳಿ ಸಿಟ್ಟಿಗೆದ್ದಿತು. ನೀರಜಾನ ಕೈಗೆ ಚುಂಚಿನಿಂದ ಕುಟುಕಿತು (ದಳಕು. ೬೪). ೨. ಸೊಂಡೆ ; ಮೂತಿ. 'ಚುಂಚಿಲಿ' ಪರಾ. ೩. ಗೋಡೆಯಿಂದ ಮುಂಚಾಚಿಕೊಂಡಿರುವ ಭಾಗ ; ಸೂರು ; ಒಪ್ಪಾರಿನ ತುದಿ : " ವಲೀಕಂ, ನೀವ್ರಂ, ಪಟಲಪ್ರಾಂತಂ – ಇ ಒಪ್ಪಾರದ ಚೂರು, ಲೋವೆ ಚೂರು,ಮನೆಯ ಚುಂಚು" (ಸಿದ್ಧಾಂತಿ. ೯೧); ಒಳಅಂಗಳದಲ್ಲಿ ಚುಂಚಿನ ಕೆಳಗೆ ವೇದಿಕೆಯ ಮೇಲೆ ಎರಡು ವೇತ್ರಾಸನಗಳು (ರಾಕ್ಷಮು. ೯). 'ಚುಂಚು ಲೋವೆ' ಪರಾ. **ಚುಂಚ** : (ಕ). **ಚುಂಚಿ$_1$** : ೧. ನೆರೆ ಚುಂಚಿಯೊಳ್ ಕಚ್ಚಿ ಮುನಿಗಳ್ಗೆ ಪಾಯಮಂ ಬರೆದಂತೆ (ಲಕ್ಷ್ಮಾಥಾ. ೧-೬-೩೩). **ಚೂಚು$_1$** : ೧. ಪಕ್ಷ ಪುಚ್ಛ ಮೈ ಚೂಚು ಚಾಚಿದರು ಬೇರೆ ಪ್ರಾಣಪಕ್ಷಿ (ಹೃದಸ. ೬೬-೩) : ಚೂಚು ಚಾಚಿ ಚಾದಗೆಯು, ಎಡಕೆ ಕೂಗುವುದು ಚೆಂದವಾಗಿ (ಪಾಕಶಾದೂ. ೩-೯). [ <ಸಂ. ಚಂಚು ]

**ಚುಂಚು$_3$** (ಗು). ೧. ಹೆಸರುವಾಸಿಯಾದ ; ಪ್ರಖ್ಯಾತವಾದ. 'ಅಕ್ಷರ ಚುಂಚು' ಪರಾ. ☞ ಇದು ಸಂಸ್ಕೃತದ ಒಂದು ಪ್ರತ್ಯಯ. ಪೂರ್ವ ಪದದೊಡನೆ ಸೇರಿದಾಗ ಮಾತ್ರ ಬರುತ್ತದೆ. (ನಾ). ೨.=ಚುಂಚಿಲಿ.

[ ಸಂ. ]

**ಚುಂಚು$_4$** (ನಾ). ಒಂದು ಬಗೆಯ ವನಸ್ಪತಿ: "ವೀರ್ಯವತಿ ಚುಂಚಿನಿಕ್ಕುಂ" (ಮಂಗರಾ. ೪೪-೪೬) ; ಚುಂಚಿನೊಳೂದವಿದ ಬೀಜಮುಮನರೆದು ಕುಡುವುದು ಬೇಗಂ (ಖಮುದ. ೨-೦೪). [ ? ]

**ಚುಂಚು$_5$** (ನಾ). ಕಂದು ಅಥವಾ ಕೆಂಪುಬಣ್ಣ : (ಕ). [ ? ]

**ಚುಂಚುಕಾಲು** (ನಾ). " ಕುದುರೆಯ ಗೊರಸಿನ ಮೇಲ್ಗಡೆಯ ಕೀಲಿನ ಮೇಲ್ಭಾಗದಲ್ಲಿ ಕೂದಲು ಕುಚ್ಚುಕುಚ್ಚಾಗಿ ಬೆಳೆಯುವ ಸ್ಥಳ ; ಕುದುರೆಯ ಚುಂಚುಕಾಲು " (Fetlock. ಇಂಕಿನಿ).

[ ಚುಂಚು$_1$ + ಕಾಲು$_1$ (<ಕಾಲ್$_1$) ]

**ಚುಂಚುದಲೆ, ಜುಂಜುದಲೆ** (ನಾ). ೧. ಕೆದರಿದ ಕೂದಲಿನ ತಲೆ : ಚುಂಚುದಲೆಯ ಲಕ್ಕ . . . ಮುಕುತಿಯ ಗಂಗಣ್ಣ (ಕುರಾಸಾಂ. ೦೯-೯೩). **ಜುಂಜುದಲೆ:** ೧. ಜುಂಜುದಲೆ ಕೆಂಗಣ್ಣ ಗುಂಜಾಭರಣವೆಸೆಯೆ (ಕಣ್ವರ. ದೀ. ೧೨೭-೯) ; ಜುಂಜುದಲೆಗಳ ಮೇರುರದ ಕೆಂಜುರಿಯ ಪುಂಜವ ಮಿಾಱುತಿಹ ಕೆಂಗಣ್ಣಗಳ . . . ಧೀರ ಜವದೂತರ್ಜವದಿ ನೆರದು (ಮದೀಪು. ೩-೪೮); ಜುಂಜುದಲೆ ಕೆಮ್ಮಿಸೆ ಕೆಂಗಣ್ಣಳಿಂದಂ . . . ನಡೆತಂದು (ಚಬಪು. ೩೦-೯). ೨. ಗುಂಗುರು ಕೂದಲಿನ ತಲೆ ; ಸುರುಳಿಗೂದಲಿನ ತಲೆ : (ಕ). [ ಚುಂಚು$_1$ + ತಲೆ$_1$ ]

**ಚುಂಚುಪತ್ರ** (ನಾ). ಒಂದಂ ಬಗೆಯ ಸಸ್ಯ: "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಓಷಧಿ. ೫೭). [ ಚುಂಚು₄ + ಪತ್ರ ]

**ಚುಂಚುಮಿಸೆ, ಜುಂಜುಮಿಸೆ** (ನಾ). ೧. ಸುರುಳಿಯಾಗಿ ತಿರುವಿದ ಮಿಸೆ: ಮುರಿದಣ್ಣಿಕ್ಕಿದ ಗಡ್ಡ ಮಿಸೆ ಮುಡಿ ಕಟ್ಟಂ ತಳ್ತ ಕೆಂಬಟ್ಟೆ ಕತ್ತುರಿಯಂ ತುಱುವ ಚುಂಚುಮಿಸೆ (ಅನಂಪು. ೧೦-೭೫) ; ಈ ಚುಂಚು ಮಿಸೆಯೂ ಪಟ್ರೋಳ್ಕ್ಷೀಪದಡಿಯು ನೊಸಲ ಮೇಲೆಯಲ್ಲಿ ತೆರೆಗಳಂತೆ ಸೂಸುವತ್ತಿರುವ ಅಲಕಗಳೂ (ಮಂತ್ರ.ಶ. ೯೨-೦೨). **ಜುಂಜುಮಿಸೆ :** ೨. ಕೆದರಿದ ಮಿಸೆ ; ಗುಂಜುಗುಂಜಾಗಿರುವ ಮಿಸೆ: ಭಯಂಕರ ವದನದಿಂದ ಕೆಂಡದಂತಿರೆ ತೋರ್ಪ ಕಣ್ಗಳಿಂ ಜುಂಜುಮಿಸೆಗಳಿಂದೆ ನಿರುತದಿಂ ಫಲಕ ಖಡ್ಗಗಳಾಂತ ಕರಯುಗಳದಿಂ (ಪಾಸೋಪು. ೩-೬೭). [ ಚುಂಚು₁ + ಮಿಸೆ ]

**ಚುಂಚುರ** (ನಾ). ಒಂದು ಬಗೆಯ ಸಸ್ಯ : "ಚುಂಚುರಃ, ಚುಂಚುಪತ್ರ ಈ ಯೆರಡುಂ ಚಂಚಸೊಪ್ಪು" (ಓಷಧಿ. ೫೭). [ ? ]

**ಚುಂಚುರುಚು** (ನಾ). ಒಂದು ಬಗೆಯ ಸಸ್ಯ (?) : ಮರಗಜುಕೆಯ ಬಳ್ಳಿಯು ಪೆರ್ಗುರುಟಿಗೆಯಂ ಬ್ರಹ್ಮದಂಡೆಯಂ ಕಳವಲ್ ಚುಂಚುರುಚುಂ ಗಿಣಮೂಗಿಯ ಜಂಗರ ಹಿತಕರಮೆನಿಪ ಬಂಜೆ ಮಡುಹಾಗಲುಮಂ (ಜಮದ. ೧೬-೫೮). [ ? ]

**ಚುಂಚುಲೆ** (ನಾ). ಒಂದಂ ಬಗೆಯ ಆಯುಧ : ಸುರಗಿ ಕರಾಚೂರಿ ಕಡಿತಲೆ . . . ಸಿರಿಮುರಿ ಕಕ್ಕಡೆ ಚುಂಚುಲೆ ರವಿಹಾಸ ಉರಿಯನುಗುಳು ತಿರ್ದುವಲ್ಲಿ (ಭರತ. ೨೦-೧೩೩). [ ? ]

**ಚುಂಚುಲೋವೆ** (ನಾ). ಗೋಡೆ ಮೊದಲಾದುವುಗಳಿಂದ ಮುಂಚಾಚಿ ಕೊಂಡಿರುವ ಭಾಗ : ಪೊಂಬಿಸದುಪ್ಪರಿಗೆಯ ಬಿಸವಂದವಾದ ಚುಂಚು ಲೋವೆಗಳೊಳಗೆ ಬಳಸಿ ನಲಿದುಲಿವ ಪಾರಿವಂಗಳ ಕೊರಲುಲಿಯೊಳಂ (ಕಬ್ಬಿಗಾ. ೪೪) ; ಪಳುಕಿನ ಚುಂಚುಲೋವೆಯೊಳವಲಂಬಿಪ ತೋಳಪ ಮುತ್ತಿನ ಲಂಬಣವನು . (ಶ್ರೀಪಾಂ. ೬-೫೨) ; ಹೊನ್ನ ರನ್ನದ ಚುಂಚು ಲೋವೆಗಳಿಂ ನೆರೆದ ಕೆಂದೆಳಗನಿಂಬಿಡುವುನ್ನತದ ಮಾಣಿಕದ ಕಳಸಾಳಿ ವೆಳಗಳಿಂ (ಸಾಳ್ವಭಾ. ೪-೪೦). [ ಚುಂಚು₂ + ಲೋವೆ ]

**ಚುಂಚುಬು** 'ಜುಂಜುಬು' ನೋ.

**ಚುಂಚುಬುದಲೆ** 'ಜುಂಜುಬುದಲೆ' ನೋ.

**ಚುಂಟಿ** (ನಾ). = ಚುಂಡಿ. [ <ಸಂ. ಚುಂಡೀ ]

**ಚುಂಡ** (ನಾ). (ಕರಾ) ಸಣ್ಣ ಜುಟ್ಟುಳ್ಳವನು. [ ? ]

**ಚುಂಡಿ** (ನಾ). ಒಂದು ಬಗೆಯ ಸಣ್ಣ ಬಾವಿ: "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ಹಲಾಯು. ೬೦೩-೬೨) ; "ಚುರಿ ಚುಂಡಿ ಮಾನಂಗಿ" (ಮಂಗರಾ. ೧೨೫-೦೯). [ ಸಂ. ಚುಂಡೀ ]

**ಚುಂಡಿಲಿ** 'ಸುಂಡಿಲಿ' ನೋ.

**ಚುಂದಿ** (ನಾ). ಕೆಂಟಣಿ; ತಲೆಹಿಡುಕಿ . [ ಸಂ. ಚುಂದೀ ]

**ಚುಂದು** 'ಸುಂದು₁' ನೋ.

**ಚುಂಬಕ** (ನಾ). ೧. ಮುತ್ತಿಡುವವನು; ಚುಂಬಿಸುವವನು : "ನಿಕ್ಷಃ- ಚುಂಬಕಂ" (ಅಭಿಧಾ. ೫೫). ೨. ವ್ಯಭಿಚಾರಿ ; ಕಾಮುಕ. ೩. ಮೋಸ ಗಾರ ; ವಂಚಕ. ೪. ಅಯಸ್ಕಾಂತ : "ಚುಂಬಕಮಯಸ್ಕಾಂತಮಕ್ಕುಂ" (ಮಂಗರಾ. ೩೦-೫) : ಆ ಸಮಯದಲಿ ಬಂದನಗ್ಗದ ಭೂಸುರ ಶ್ರೀಕಂಠನೋ ಪದ್ಮಾಸನನ ಪಲ್ಲಟವೊ ಕಮಲಾಂಬಕನ ಚುಂಬಕವೊ (ಕುವ್ಯಾ.ಅ. ೪-೭); ಚುಂಬಕವನು ಸೂಜಿಗಳೆಯ್ದುಂದವಲಂಬಿಸುವಂತೆ ಕಲಿಗಳು . . . ರಾಮನನಾಡಂಬರದಿಂದ ಪೊರ್ದಿದರು (ಕುರಾಸಾಂ. ೯-೦೭); ಪ್ರೀತಿಯೆಂಬ ಚುಂಬಕಾ ಕೂಡಿಸಿತ್ತು ಆಡಿಸಿತ್ತು(ಸರ್ವೀ. ೯೬-೪).'ಚುಂಬಕಗಾಳಿ'ಪರಾ. [ ಸಂ. ]

**ಚುಂಬಕಗಾಳಿ** (ನಾ). ಆಕರ್ಷಿಸುವ ಶಕ್ತಿಯಿಂದ ಕೂಡಿದ ಗಾಳಿ : ಉತ್ತರಧ್ರುವದಿಂ ದಕ್ಷಿಣಧ್ರುವಕೂ ಚುಂಬಕಗಾಳಿಯು ಬೀಸುತಿದೆ (ನಾದಲೀ. ೫೦-೨) ; ಅದರ ಚುಂಬಕಗಾಳಿಯು ಅವನ ಸುತ್ತಲೂ ಬೀಸುತ್ತಿತ್ತು (ಸಮಜೀ. ೮೯೪). [ ಚುಂಬಕ + ಗಾಳಿ₁ ]

**ಚುಂಬಕತ್ವ** (ನಾ). ಆಕರ್ಷಿಸುವ ಶಕ್ತಿ ; ಕಾಂತಶಕ್ತಿ : ರಾಸನು . . . ದಕ್ಷಿಣಧ್ರುವದ ಬಳಿ ಭೂಮಿಯ ಮೇಲಿನ ಚುಂಬಕತ್ವದ ಬಗ್ಗೆ ಪರಿ ಶೋಧಿಸುವ ಸಲುವಾಗಿ ಹೊರಟದ್ದನು (ಸಸ್ಯಳ. ೮) ; ಅಯಸ್ಕಾಂತದ ನೆರೆಯಲ್ಲಿ ನಿಂತ ಕಬ್ಬಿಣದ ತುಂಡೂ ಚುಂಬಕತ್ವವನ್ನು ಪಡೆಯುವಂತೆ (ಳ್ಳಾಂಡಕ್ಕ. VI, ಮುನ್ನುಡಿ). [ ಸಂ. ]

**ಚುಂಬನ** (ನಾ). ೧. ಪ್ರೀತಿಗಾಗಿ (ಸಾಮಾನ್ಯವಾಗಿ) ಮತ್ತೊಬ್ಬರ ಕೆನ್ನೆ ಮೊದಲಾದ ಅಂಗಗಳ ಮೇಲೆ ತುಟಿಗಳನ್ನು ಶಿರೆದು ಬಳಿಕ ಮುಚ್ಚಿ ಒತ್ತುವುದು ; ಅಧರವನ್ನು ಸವಿಯುವುದಂ; ಬಾಯ್ಗೊಟ; ಮುತ್ತು;ಮುದ್ದು:"ವದನಕೂಟಂ ಮುತ್ತು ಚುಂಬನಮದೋಷ್ಠಪಾನಂ" (ಮಂಗರಾ. ೯೬-೦೬); "ಮೌಕ್ತಿಕದೊಳು ಚುಂಬನದೊಳುಂ ಮುತ್ತೆನಿಕ್ಕುಂ" (ಕಬ್ಬಮಂ. ೯೮) ; ಕಳಾನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗ ಪ್ರಪಂಚಂಗಳಂ (ಜಗವಿ. ೧೦-೧೪೦) ; ಮೊದಲ ಚುಂಬನದೊಳು ಹಲು ಬಿದ್ದಂತೆ (ಕುವ್ಯಾವಿ. ೬-೮). ೨. ಸ್ಪರ್ಶ: ಚರಣಚುಂಬನಕೆ ಕಲ್ಲೆ ತಾಂ ಬೆಣ್ಣೆ ಯಾಯ್ತೆನೆ ಕಂಪಿಸಿತು ಬಂಡೆ (ಶ್ರೀರಾಮಾ. ೩೮-೩೭೯). [ ಸಂ. ]

**ಚುಂಬನಗೊಡು** (ಕ್ರಿ). ಮುತ್ತನ್ನು ಕೊಡಂ; ಮುದ್ದಿಕೊಡು: ಚುಂಬನ ಗೊಟ್ಟು ಚುಂಬಿಸಿ ರಂಗುಮಾಣಿಕದಂಬುಲವಿತ್ತು ಮುದ್ದಿಸಿದ . . . ಮಾನಿನಿಯ (ಮೋಹತ. ೩೩-೪೯). [ ಚುಂಬನ + ಕೊಡು₁ ]

**ಚುಂಬಿ** (ಗು). ಮುಟ್ಟುವ; ತಾಗುವ. 'ಗಗನಚುಂಬಿ' ಪರಾ. [ ಸಂ. ಚುಂಬಿನ್ ]

**ಚುಂಬಿತ** (ಗು). ೧. ಮುತ್ತಿಟ್ಟ; ಚುಂಬಿಸಿದ. ೨. ತಾಗಿದ ; ಮುಟ್ಟಿದ: ಏರಿದನು ಸೌಮಿತ್ರಿ . . . ವಿರಳವರ್ಣದ್ರುಮದ ಪುಷ್ಪಿತಶರೀರದಾ ಸ್ವರ್ಗ ಚುಂಬಿತ ಸಾಲದುನ್ನತಶಿರದ ಕರದ ಗೋಪುರಕೆ (ಶ್ರೀರಾಮಾ. ೧೫೭-೦೪೭). (ನಾ). ೩. ಮುತ್ತಿಟ್ಟುದು; ಚುಂಬಿಸಿದುದು ; ಒಂದು ಶೂನ್ಯ ಅಧರವಾಗೆ ಒಂದು ಶೂನ್ಯ ಓಷ್ಠವಾಗೆ ಪೂರ್ಣವೊಂದೆ ಚುಂಬಿತ (ಅನಿಕೇ. ೧೯-೮). [ ಸಂ. ]

**ಚುಂಬಿಸು** (ಕ್ರಿ). ೧. = ಚುಂಬನಗೊಡು : ಪೊಸತಲರ್ದೊಂದು ತಾವರೆಯ ಗೆತ್ತು ಮುಖಾಬ್ಜಮನೊಂದು ತುಂಬಿ ಚುಂಬಿಸೆ ಸತಿ ಬೆರ್ಚಿ ಪೆರ್ಚಳಿಸಿ (ಪಂಪಭಾ. ೫-೬೩) ; ಪ್ರತಿಬಿಂಬವ್ಯಾಜದಿಂ ನಿನ್ನಯ ಕದಪುಗಳಂ ಚುಂಬಿಸುತ್ತಂ (ಅಾದಿಪು. ೮೯೭); ನೊಸಲೆಡೆಯನು ಚುಂಬಿಸಿ ತಕ್ಕೈಸುತ ಪರವಶೆಯಾದಳು (ಕಂನವಿ. ೯-೦೭೭). ೨. ಮುಟ್ಟು ; ಸ್ಪರ್ಶಿಸು; ತಾಗು : ಅಂಬರಮಂ ಚುಂಬಿಸಿ[ಪಾ. ಅಂಬರ ಚುಂಬಿತ ಮಾಗಿ] ನಳನಳಿಸಿ ಕೊರ್ಬಿ ಬೆಳೆದ ಪೆರ್ಬಿದಿರ ತುದಿ (೧ಂಳ. ೦-೦೫೮ ವ) ; ಅವನ ದೇಹದ ಛಾಯವೆನ್ನಯ ಛಾಯ ಚುಂಬಿಸುತ (ಕುವ್ಯಾಳ. ೮-೪೦) ; ಮಹಾಬಲಾಚಲವೊಪ್ಪುತಿಹುದು ವ್ಯೋಮಮಂಡಲವ ಚುಂಬಿಸುತ (ಕಂನವಿ. ೨-೨೭). [ ಚುಂಬನ + – ಇಸು₃ ]

**ಚುಕತಾ** 'ಚುಕ್ತಾ' ನೋ.

**ಚುಕಾಣಿ** 'ಚುಕ್ಕಾಣಿ' ನೋ.

**ಚುಕಾಯಿಸು** (ಕ್ರಿ). ೧. ಮೀರೆ ಮಿಾರು ; ಮುಂದುವರಿ : ಚುಕಾಯಿಸಿ ಅವಳನ್ನು ಹಿಡಿದುಕೊಂಡು(ದಾಂಲಕ್. ೧೦೭). ೨.ಮುಗಿಸು; ಪೂರೈಸು. ೩. ಸರಿಹೊಂದಿಸು; ಕ್ರಮಪಡಿಸು. ೪. ಬೆಲೆಯನ್ನು ನಿಗದಿಗೊಳಿಸು,–ಗೊತ್ತುಪಡಿಸು. ೫. ಸಾಲ ಮುಂತಾದುವನ್ನು ತೀರಿಸು,–ಸಂದಾಯ ಮಾಡು : (+). [ ಚುಕಾ₀ (P ಹಿಂ. ಚುಕಾನಾ) + – ಇಸು₃ ]

**ಚುಕಿ** 'ಚೂಕು' ನೋ.

**ಚುಕುಳ** (ನಾ). ಒಂದು ಬಗೆಯ ಗಿಡ; ಹಾಲುತೊಟ್ಟಿನ ಗಿಡ: "ಅಕ್ಕಿಹಡೆ ಹೇಮದುಗ್ಧಂ ಚುಕುಳ[ಪಾಠಾಂ. ಕಿಲ]ಮೆಂದೆನಿಕ್ಕುಂ" (ಮಂಗರಾ. ೩೯-೨೬). [ ? ]

**ಚುಕ್ಕಣ** 'ಚುಕ್ಕಾಣಿ' ನೋ.

**ಚುಕ್ಕಮನ** (ನಾ). ಹೀನವಾದ ಮನಸ್ಸು; ಕ್ಷುದ್ರಮನಸ್ಸು: ರೊಕ್ಕದೊಳಗೆ ಲೆಕ್ಕ ಮುಕ್ಕಾಣಿ ಹೋದರೆ ಕಕ್ಕುಲತೆಯ ಬಿಡು ಚುಕ್ಕಮನವೆ (ಪ್ರಾಚಾರ. ೧೯೮-೬). [ <ಚುಕ್ಕೆ$_1$ + ಮನ$_1$ ]

**ಚುಕ್ಕಾಣಿ, ಚುಕಾಣಿ, ಚುಂಕ್ಕಣ, ಸುಕಾಣ, ಸುಕಾಣು**(ನಾ). ೧. (ಹಡಗು, ವಿಮಾನ ಮುಂತಾದುವುಗಳ) ದಿಕ್ಕನ್ನು ಬದಲಿಸಲು ಸಹಾಯ ಮಾಡುವ, ಮರ ಅಥವಾ ಲೋಹದಿಂದ ಮಾಡಿದ ಒಂದು ಬಗೆಯ ಸಾಧನ: ಅಂಬಿಗರು ಚುಕ್ಕಾಣಿಗಳನ್ನು ತಿರುಗಿಸತೊಡಗಿದರು (ಪಾಹುಕ್ರ. ೨೩): ವಿಮಾನಗಳನ್ನು ಎಡ-ಬಲಗಳಿಗೆ ತಿರುಗಿಸಲು ಸಹಾಯಕವಾದ ಈ ಫಲಕಕ್ಕೆ ಚುಕ್ಕಾಣಿಯೆನ್ನುತ್ತಾರೆ (ವಿಜ್ಞಾವಿ. ೭೮); ದಿಕ್ಕಿಲ್ಲದಂತೆ ಹರಿದಾಡುವವಗೆ ಚುಕ್ಕಾಣಿ ಬೇಡ (ಸೂರ್ಯಪಾ. ೩೩-೪). ೨. ಮಾರ್ಗದರ್ಶಿಯ ಸ್ಥಾನ,-ಪದವಿ: ಪುರುಷನ ಜೀವನದ ಚುಕ್ಕಾಣಿಯೇ ಸ್ತ್ರೀಗೆ ಯೋಗ್ಯಸ್ಥಳ (ಅಶನಾ. ೫೧). **ಚುಕಾಣಿ**: (೩). **ಚುಕ್ಕಣ**: ೧. "ಹಡಗಿನ ಮುಖಂ ಕೋಟಿಪತ್ರಂ . . . ಅದಱ ಹಿಂದು ಚುಕ್ಕಣಮೆನಿಕ್ಕುಂ" (ಮಂಗರಾ. ೧೨೧-೫); ಆ ಹಡಗದ ಚುಕ್ಕಣಕ್ಕೆ-ಹಿಂಬದಿಗೆ ನಿಂತು ಈ ದೃಶ್ಯವನ್ನು ನೋಡುತ್ತಿರುವಂತೆ ವಿಷ್ಣೂನಿಗೆನಿಸಿತು (ಸಮುಜೀ. ೯೮೩). **ಸುಕಾಣ**: (೩) **ಸುಕಾಣು**: ೧. ಕುದುರೆಗಳನ್ನು ನಡಿಸುವದಕ್ಕೆ ಕಡಿವಾಣವಿದ್ದಂತೆ ಹಡಗುಗಳನ್ನು ನಡಿಸುವದಕ್ಕೆ ಸುಕಾಣು ಇರುತ್ತದೆ (ಮುಂಬಯಿ. ೩-೧೧೩). [<ಪ್ರಾ. ಸುಕ್ಕಾಣಯ./ಅರ. ಹಿಂ. ಸುಕ್ಕಾನ್; ಮರಾ. ಸುಕಾಣ್ ]

**ಚುಕ್ಕಾಣಿಗ** (ನಾ). ಚುಕ್ಕಾಣಿಯುನ್ನು ಹಿಡಿದಿರುವವನು: "(ಚುಕ್ಕಾಣಿ) ನಡಸುವವನು; ಚುಕ್ಕಾಣಿಗ; ಕರ್ಣಧಾರ" (Helmemann. ಇಂಕಿನಿ).
[ ಚುಕ್ಕಾಣಿ + – ಗ$_2$ ]

**ಚುಕ್ಕಾಣಿಚಕ್ರ** (ನಾ). "ಹಡಗಿನ ಕರ್ಣವನ್ನು ತಕ್ಕಂತೆ ತಿರುಗಿಸಲಾಗುವ ಚಕ್ರ; ಚುಕ್ಕಾಣಿಚಕ್ರ" (Helm. ಇಂಕಿನಿ). [ ಚುಕ್ಕಾಣಿ + ಚಕ್ರ$_1$ ]

**ಚುಕ್ಕಿ$_1$** 'ಚುಕ್ಕೆ$_1$' ನೋ.

**ಚುಕ್ಕಿ$_2$** 'ಚುಕ್ಕೆ$_3$' ನೋ.

**ಚುಕ್ಕಿ$_3$, ಚುಕ್ಕೆ$_3$** (ನಾ). ೧. ಒಂದು ಗ್ರಹದ ಹೆಸರು; ಶುಕ್ರಗ್ರಹ: "ಚುಕ್ಕಿಯೆನೆ ಶುಕ್ರಂ" (ಕಕರ. ೩೬). ೨. ರಾಕ್ಷಸರ ಗುರು; ಶುಕ್ರಾಚಾರ್ಯ: ಬೋಟಿಯರೋಜನ ಜಾಣ್ಮೆ, ಚುಕ್ಕಿಯಱಿವು, ಜವನ ಜರ್ಪು, ಜಕ್ಕರರಸನೈಸಿರಿ ತನ್ನೊಳೊದವೆ ಮನುವಿನ ಮಾರ್ಗದೆ ನಡೆಯುತ . . . ಮೆಱೆದಂ(ರಾಮಾಶ್ವ. ೧೦೪-೧೧). 'ಚುಕ್ಕಿಗುವರ' ಪರಾ. **ಚುಕ್ಕೆ$_3$**: ೧. ಮೂಡ ಚುಕ್ಕೆಯು ಮೂಡೆ ಗಾಡದಿಂ ಕುಕ್ಕುಟವು ಜೋಡು ಕೂಡಿಯೆ ತಾವು ಕೂಗುತಿರಲು (ಯನಳ. ೩೪). [ <ಸಂ. ಶುಕ್ರ ]

**ಚುಕ್ಕಿಗುವರ** (ನಾ). ಶುಕ್ರಾಚಾರ್ಯನ ಶಿಷ್ಯ; ರಾಕ್ಷಸ; ಅಸುರ: "ರಕ್ಕಸರ್, ಮರ್ಬಿಗರ್, ಚುಕ್ಕಿಗುವರರ್, ಮೊದಲ ಸಗ್ಗಿಗರ್-ಈ ೪ ರಕ್ಕಸರ ಪೆಸರ್" (ಕಕಸಾ. ೨-೨೨);. "ಚುಕ್ಕಿಗುವರರ್ಮಬ್ಬಿಗರ್ . . . ರಕ್ಕಸರತ್ಕು" (ಕಬ್ಬಿಕ್ಕ. ೦೦); "ಚುಕ್ಕಿಗುವರರು ರಕ್ಕಸರು ಮಬ್ಬಿಗರು ಮೆನಲ್ಕೆ ಅಸುರಾಭಿಧಾನದೊಳ್ ಸಲೆ ತೋರ್ಪುದು" (ಶಬ್ದಮಂ. ೧೦).
[ ಚುಕ್ಕಿ$_3$ + ಕುವರ$_2$ ]

**ಚುಕ್ಕಿತ** (ನಾ). [ನಾಟ್ಯ] ನೃತ್ಯದಲ್ಲಿ ಚೆನ್ನಾಗಿ ಕಾಣುವಂತೆ ಹಲ್ಲನ್ನು ಪ್ರದರ್ಶಿಸುವುದು: ಬಿಂಗೆ ಕರ್ಚಿದರ್ೊಡೆ ಭಿನ್ನಂ ಮಗುಳ್ದುಂ ಚೆನ್ನಾಗಿ ತೆಱೆಯೆ ಚುಕ್ಕಿತಮಕ್ಕುಂ (ಶಾಸ್ತ್ರಂ. ೩-೯೦). [ ? ]

**ಚುಕ್ಕಿವಟ್ಟೆ** (ನಾ). ನಕ್ಷತ್ರಗಳು ಸಂಚರಿಸುವ ಮಾರ್ಗ; ಆಕಾಶ: ಮುಗಿಲವೇಷವನಾಂತು ನಿಂದುದಲ್ಲಲ್ಲಿ ಬೃಂದಾರಕರ ವೃಂದವೂ, ಚಾರಣರ ಚರಣಚಿಹ್ನೆಯಂ ಚುಕ್ಕಿವಟ್ಟೆಯಿಂ (ಶ್ರೀರಾಮಾ. ೪೦೫-೭೧). 'ಅಬ್ಬಲ್ವಟ್ಟೆ' ಪರಾ. [ ಚುಕ್ಕಿ$_1$(<ಚುಕ್ಕೆ$_1$) + ಬಟ್ಟೆ$_1$ ]

**ಚುಕ್ಕಿಸು** (ಕ್ರಿ). ಸಂಕೋಚಗೊಳ್ಳು (?): ಅಕ್ಕಟ ತನ್ನ ಮನಕೆ ತಂಗಿ ತಾ ಮಱೆಯಿಕ್ಕುವುದೊಂದು ಮಂತಣವುಂಟೆ ಚುಕ್ಕಿಸದಿರು ಸೂಚಿ ಕವಲಾದಂತೆ ನಿನ್ನ ಮನಕ್ಕಾವು ಪೊಱಗೆ ಪೇಳೆಂದಳು (ಸೊಬಸೋ. ೨೫-೫).
[ <ಸುಕ್ಕಿಸು ? ]

**ಚುಕ್ಕಿಸೊಪ್ಪು** 'ಚಂಕ್ಕೆಸೊಪ್ಪು' ನೋ.

**ಚುಕ್ಕುತಟ್ಟು** (ಕ್ರಿ). (ಮಕ್ಕಳನ್ನು ಮಲಗಿಸಲು) ಬೆನ್ನಿನ ಮೇಲೆ ಮೃದುವಾಗಿ ಕೈಯಿಂದ ತಟ್ಟು: ತಾಯಿ ಮಗುವನ್ನು ಚುಕ್ಕುತಟ್ಟುತ್ತ ಮಲಗಿಸುವಂತೆ ತಮ್ಮನ ತಲೆಯ ಮೇಲೆ ಕೈಯಿಟ್ಟು ಅಡ್ಡಾದರು (ಪ್ರನಿ. ೩೪೬): ಗೋದಾವರಿ . . . ಕೇಶವನಿಗೆ ಚುಕ್ಕುತಟ್ಟುತ್ತಿದ್ದಳು (ಛಾಠಥಿ. ೨೪).
[ ಚುಕ್ಕು$_0$ + ತಟ್ಟು$_1$ ]

**ಚುಕ್ಕುಬಡಿ** (ಕ್ರಿ). = ಚುಕ್ಕುತಟ್ಟು: ಎಷ್ಟು ಚುಕ್ಕುಬಡಿದರೂ, ಚಪ್ಪರಿಸಿದರೂ ಸಿಮಾಯಿಗೆ ನಿದ್ದೆಯೇ ಬರಲಿಲ್ಲ (ಗೌರಾಂಗ. ೧೦): ಈ ಕುಮಾರ ಕಂಠೀರವನನ್ನು ಮೆಚ್ಚಿ, ಚುಕ್ಕುಬಡಿದು ಅವನನ್ನು ಮಲಗಿಸಲು ಪ್ರಯತ್ನ ಮಾಡಿದ (ಗಾಳಿಪ. ೧೬೧). [ ಚುಕ್ಕು$_0$ + ಬಡಿ$_1$ ]

**ಚುಕ್ಕೆ$_1$, ಚಿಕ್ಕಿ$_1$, ಚಿಕ್ಕೆ$_1$, ಚುಕ್ಕಿ$_1$** (ನಾ). ೧. ನಕ್ಷತ್ರ; ತಾರೆ: ಈ ಚಟಗಳ ಪರಂಪರೆ ಹೇಳುತ್ತ ಹೋಗುವುದೆಂದರೆ ಮುಗಿಲ ಚುಕ್ಕೆಗಳನ್ನು ಎಣಿಸಿದಂತೆಯೇ ಸರಿ (ಗಾಳಿಗು. ೩೦). ೨. ವರ್ತುಲಾಕಾರದ ಸಣ್ಣ ಗುರುತು, -ಚಿಹ್ನೆ; ಬಿಂದು. 'ಚುಕ್ಕೆದುಂಬಿ' ಪರಾ. ೩. (ಆಲಂ) ಕೆಲಸಕ್ಕೆ ಬಾರದವನು; ಅಲ್ಪ; ಹೀನ: ಹೊಕ್ಕರಾಹವದೊಳಗೆ . . . ಚುಕ್ಕೆ[ಪಾಠಾಂ. ಕ್ಕಿ]ಗಳಿರಾ ಎನುತ ಹೊಯ್ದರು (ನಳಜ. ೯-೨೪). **ಚಿಕ್ಕಿ$_1$**: ೧. ಭೂಮಧ್ಯರೇಖೆಯಿಂದ ಬಡಗಕ್ಕೂ. ತೆಂಕಣಕ್ಕೂ ಹೋದಹೋದ ಹಾಗೆ ಗುರುತಿನ ಚಿಕ್ಕಿಗಳು ಕಾಣದ ಹಾಗಾಗಿ ಹೊಸಹೊಸ ಚಿಕ್ಕಿಗಳು ದೃಷ್ಟಿಗೆ ಬೀಳಹತ್ತುತ್ತವೆ (ಮುಂಬಯಿ. ೪-೬೮): ಮುಗಿಲ ಮ್ಯಾಗಿನ ಚಿಕ್ಕಿ, ಹಗಲ ಮೂಡಿದರೇನ (ಕನ್ನಜಾ. ೧೨೮). ೨. ಹುಲಿಯ ಮೋರೆಯ ಮೇಲೆಯೂ ಕುತ್ತಿಗೆಯ ಮೇಲೆಯೂ ಚಿಕ್ಕಿಗಳು ಇರುತ್ತವೆ (ಮುಂಬಯಿ. ೪-೩೬). **ಚಿಕ್ಕೆ$_1$**: ೧. ನೇಸರಿನ ಮುಂದೆ ಚಿಕ್ಕೆಗಳು ಒಪ್ಪುವವೆ ? (ಬದುಕಿ. ೧೫೧): ಸೂರ್ಯ, ಚಂದ್ರ, ಚಿಕ್ಕೆ ಕೋಟಿ ಕಣ್ಣರಳಿಸಿ ನೋಡಿವೆ (ನಲಮು. ೨೪-೧೧). **ಚುಕ್ಕಿ$_1$**: ೧. ಚುಕ್ಕಿಗಳುದುರಲಡಿಗಡಿಗೆ ವನಚರರ್ ಬೆದರೆ (ಪಂಕಾರಾ. ೬-೩೮-೩೧): ಚುಕ್ಕಿಗಳಿನಡಸಿರ್ದ ನಭವನು (ರಾಮಾಸಂ.೬-೮-೨೧): ಗಾಜಿನಾಚೆ ದಿಗಂತದಲ್ಲಿ ಚುಕ್ಕಿಗಳು ಮಿನುಗುತ್ತಿದ್ದವು (ಮಾರ್ಗದ. ೮೪). ೨. ಬಿಳಿ ಚಾಯೆಯ ನೀಲದುಕೂಲದಲ್ಲಿ ನೆಯ್ದಿರುವ ಜರತಾರಿಯ ಚುಕ್ಕಿಗಳಂತೆ ಅಲ್ಲಿ ಇಲ್ಲಿ ಮ್ಲಾನ ನಕ್ಷತ್ರಗಳು ಮಿನುಗುತ್ತಿದ್ದುವು (ರಾಮಾನ. ೮೦). ೩. ಚುಕ್ಕಿಗಳಲಾ ನಿನ್ನವರು ಕೈಯಿಕ್ಕ ಹೇಳಾ (ಕುವ್ಯಾಳ. ೧೯-೫೦): ಜಲಜಭವಭವಲೋಕಪಾಲಾವಳಿಗಳೀಕ್ಷಣ ತೊಲಗಿ ಬದುಕುವುದುಳಿದ ಚುಕ್ಕಿಗಳೇನು ಗಣನೆಂದೊದರಿದವು ಕಹಳೆ (ಅಂಬಿಕಾ. ೩೧-೬).

**ಚುಕ್ಕೆಯ ಮಾತು** = (ಆಲಂ) ಕೆಲಸಕ್ಕೆ ಬಾರದ ಮಾತು; ಪೊಳ್ಳು ನುಡಿ: ಮಿಕ್ಕಾ ವಿಷವೈದ್ಯದೊಳಂ ಚುಕ್ಕೆಯ ಮಾತೇವುದಣ್ಣ (ಖಮದ. ೭-೭೫). **ಚುಕ್ಕೆಯಾಗು** = ಗುರಿಯಾಗು: ಅತ್ಮಜದ ಮುಖವಿದಱ ಚೂಣಿಗೆ ಚುಕ್ಕೆ[ಪಾಠಾಂ.ಕ್ಕಿ]ಯಾಯಿತು ಮನ ಮಹೀಶನ ಮಕ್ಕಳಾಟಿಕೆಯಾಯ್ತೆನುತ ತೂಗಿದನು ಸಿರಿಮುಡಿಯ (ಕುವ್ಯಾಸ. ೨-೧೪).

[ ದೇ. ೫ ತಮಿ. ಚುಕ್ಕೈ; ತೆಲು. ಚುಕ್ಕ; ಕೊಲಾ. ಸುಕ್ಕ; ನಾಯ್ಕಿ. ಪರ್ಜಿ. ಚುಕ್ಕ; ಗೊಂಡಿ. ಸುಕ್ಕುಮ್; ಕುಇ. ಸುಕ ]

**ಚುಕ್ಕೆ$_2$, ಚುಕ್ಕಿ$_2$, ಸುಕ್ಕೆ** (ನಾ). ಒಂದು ಬಗೆಯ ಸಸ್ಯ ; ಹುಳಿಯಾದ ಎಲೆಗಳುಳ್ಳ ಸಸ್ಯ : "ಕಾಡಹುಳಿ ಚಿಕ್ಕೇಸೊಪ್ಪು" (ಪ್ರ ಥಳ). **ಚುಕ್ಕಿ$_2$ :** ಮಳೆಗಾಲದಲ್ಲಿ ಚುಕ್ಕಿ ಪಲ್ಯ ಹೆಚ್ಚಾಗಿ ಬೆಳೆಯುತ್ತದೆ (ರೂಢಿ). **ಸುಕ್ಕೆ:** ಬಸಲೆ, ಬಾಯಿಬಸಲೆ, ಸುಕ್ಕೆ (ನಮ್ಮನು. ೨೩೮). [<ಸಂ. ಚುಕ್ರ]

**ಚುಕ್ಕೆ$_3$** 'ಚುಕ್ಕಿ$_3$' ನೋ.

**ಚುಕ್ಕೆಗಳೆ** (ಕ್ರಿ). (ಆಲಂ) ಅಲ್ಪವೆಂದು ಹೀಯಾಳಿಸು,-ಹೀಗಳೆ : ಯಾಕೆ ಭಯ ನಿಮಗಿನ್ನು . . . ನೀ ಚುಕ್ಕೆಗಳೆಯದಿರು ಸಾಹಸವ ನೋಡೆಮ್ಮ ಪಗೆಯದಿರೊಳು (ತುರಂಗ. ೭೮-೨೫). [ ಚುಕ್ಕೆ$_1$ + ಕಳೆ$_1$ ]

**ಚುಕ್ಕೆದುಪ್ಪಿ** (ನಾ). ಒಂದು ಬಗೆಯ ಜಿಂಕೆ ; ಕವಲು ಕವಲಾಗಿರುವ ಕೊಂಬುಗಳೂ ಮೈಮೇಲೆ ಸಣ್ಣಸಣ್ಣ ಚುಕ್ಕೆಗಳೂ ಇರುವ ಜಿಂಕೆ; ಕೃಷ್ಣಸಾರ; ಸಾರಂಗ : "ಪೃಷತಃ – ಚುಕ್ಕೆದುಪ್ಪಿ" (ಸಿದ್ಧಾಂತಿ. ೧೩೭). [ ಚುಕ್ಕೆ$_1$ + ದುಪ್ಪಿ ]

**ಚುಕ್ಕೆಸೊಪ್ಪು, ಚುಕ್ಕಿಸೊಪ್ಪು, ಸುಕ್ಕೆಸೊಪ್ಪು** (ನಾ). = ಚುಕ್ಕೆ$_2$ : ಚುಕ್ಕೇಸೊಪ್ಪು ಹುಳಿಹುಳಿಯಾಗಿರುವುದು (ತರಕ. ೧೭). **ಚುಕ್ಕಿಸೊಪ್ಪು :** ಸುಕ್ಕಸೊಪ್ಪು, ಚುಕ್ಕಿಸೊಪ್ಪು (ವೃಕಿಗಿ. ೭೭-೧೩೭೪). **ಸುಕ್ಕೆಸೊಪ್ಪು :** ಮೇಲಿನ 'ವ್ಯಾಟಿಗಿ' ಪ್ರಯೋಗವನ್ನು ನೋಡಿ. [ ಚುಕ್ಕೆ$_2$ + ಸೊಪ್ಪು$_3$ ]

**ಚುಕ್ತ** 'ಚುಕ್ತಾ' ನೋ.

**ಚುಕ್ತಾ, ಚುಕತಾ, ಚುಕ್ತ, ಚುಕ್ತಿ** (ನಾ). (ಹಣವನ್ನು) ಬಾಕಿಯಿಲ್ಲದಂತೆ ತೀರಿಸುವಿಕೆ,-ಮುಗಿಸುವಿಕೆ; ಬೇಬಾಕಿ : ಎಂಕಪ್ಪನೂ ಅಸಲೂ ಬಡ್ಡೀ ಮುಟ್ಟಿಸಿ ಲೆಕ್ಕಾ ಚುಕ್ತಾ ಮಾಡಿಕೊಂಡ (ತಿರುಗು. ೬೮); ಪೈಗೆ ಪೈ ಕಂದಾಯ ಚುಕ್ತಾ ಮಾಡುತ್ತೇವೆ (ಪ್ರೇಮಾಶ್ರ. ೫). **ಚುಕತಾ:** ಖಾತೇದಾರ ಆಸಾಮಿಯು ಕೂಲಿಯ ಫಾಯದೆಯ ಇಚ್ಛೆಯಿಂದ ಮೊದಲನೇ ಬಾಕಿಯನ್ನು ಚುಕತಾ ಕಳುಹಿಸಿ (ಮುಂಬಯಾ. ೨೪೭). **ಚುಕ್ತ:** ಇನ್ನು ಎರಡು ದಿನಗಳಲ್ಲಿ ಗೇಣಿ ಚುಕ್ತ ಮಾಡಿ (ಮುಗಿಯು. ೨೪೧) ; ವ್ಯಾಸ ಬಿಲ್ ಚುಕ್ತ ಮಾಡಿ (ನಿರೋಳ. ೩). **ಚುಕ್ತಿ :** ಅದರ ಚುಕ್ತಿಗೆ ಮಾದಯ್ಯ ಅವನ ಯಾಲಕ್ಕಿಮಲೆಯಲ್ಲಿ ಎರಡು ವರ್ಷ ಆಳುಗಳ ಮೇಲ್ವಿಚಾರಕನಾಗಿ ಬಿಡಾರ ಹೂಡಬೇಕು (ಮಸಳೂ. ೧೧). [ ←ಹಿಂ. ಮರಾ. ಚುಕತಾ ]

**ಚುಕ್ತಿ** 'ಚುಕ್ತಾ' ನೋ.

**ಚುಕ್ತಿಪಟ್ಟಿ** (ನಾ). ಸಾಲದ ವಿವರಣೆಯನ್ನು ತೋರಿಸಿ, ಉಳಿದ ಬಾಕಿದಾರರ ಹೆಸರುಗಳನ್ನು ತಿಳಿಸುವ ಪಟ್ಟಿ: ಸೊಸೈಟಿಯ ಈ ಸಲದ ಚುಕ್ತಿಪಟ್ಟಿಯಲ್ಲಿ ಅವನ ಹೆಸರಿರಲಿಲ್ಲ (ರೂಢಿ). [ ಚುಕ್ತಿ (<ಚುಕ್ತಾ) + ಪಟ್ಟಿ$_2$ ]

**ಚುಕ್ರ** (ನಾ). ೧. ಹುಳಿಯಾದ ಮದ್ಯ. ೨. ಹುಣಿಸೆ. ೩.=ಚುಕ್ಕೆ$_2$. [ ಸಂ. ]

**ಚುಕ್ರಿಕೆ** (ನಾ). ಒಂದು ಬಗೆಯ ಸಸ್ಯ; ಪುಲ್ಲಂಪುರಿಚೆ ; ಹುಳಿಚಿಕ್ಕ : "ಚಾಂಗೇರಿ ಚುಕ್ರಿಕಾಹ್ವಂ" (ವಸ್ತುಕೋ. ೬೭.೨೭). [ ಸಂ. ಚುಕ್ರಿಕಾ ]

**ಚುಚಲ** 'ಚುಂಚಲ' ನೋ.

**ಚುಚಲಿ** 'ಚುಂಚಲ' ನೋ.

**ಚುಚುಂದರ** (ನಾ). ದೇಹ ಚಿಕ್ಕದೂ ಉದ್ದವಾದ ಮೂತಿಯೂ ಇರುವ ಒಂದು ಬಗೆಯ ಇಲಿ; ಸುಂಡಿಲಿ; ಮೂಗಿಲಿ: "ಸುಂಡಿಲಿ ಚುಚುಂದರಂ [ಪಾಠಾಂ. ಕುದ್ರುಂದರಂ, ಚುಚ್ಚುಂದರಂ, ಬುಂಚುಂಧರಂ]" (ಮಂಗರಾ. ೪೯-೧೨). [<ಸಂ. ಛುಚ್ಛುಂದರ ]

**ಚುಚುಂದರಿ** (ನಾ). = ಚುಚುಂದರ : ಚುಚುಂದರಿಯಂ ಪಿಡಿದು ಮದಗಜೇಂದ್ರಕ್ಕಿದಿರಂ ಬಂದು ನಿಲೆ ತೊಲಗಿ ಪ್ರೋಕಂ (ಲೋಕೋಪ. ೧೦-೫೧). [ ಸಂ. ಚುಚುಂದರೀ ]

**ಚುಚುಂದ್ರಿ, ಚುಚೇಂದ್ರಿ** (ನಾ). ೧.=ಚುಚುಂದರ : ಹಾವು ಚುಚುಂದ್ರಿಯನ್ನು ನುಂಗಿದಂತೆ ಆಕೆಯ ಸ್ಥಿತಿಯಾಯಿತು (ತುಳಸಿ. ೧೨೫). **ಚುಚೇಂದ್ರಿ:** ೨. ಒಂದು ಬಗೆಯ ಮದ್ದಿನ ಬಾಣ. ೩. (ಆಲಂ) ತೊಂದರೆ ಕೊಡುವ ಮಾತು : ಪೀಡಿಸಬೇಕೆಂದು ಇನ್ನೊಂದು ಚುಚೇಂದ್ರಿ ಬಿಟ್ಟ (ಸುತ್ತುಮು. ೯೩). [ <ಸಂ. ಚುಚುಂದರೀ ]

**ಚುಚುಲು** 'ಸುಜ್ಜಲು' ನೋ.

**ಚುಚೇಂದ್ರಿ** 'ಚುಚುಂದ್ರಿ' ನೋ.

**ಚುಚ್ಚಳ(ಗು)**.ವ್ಯರ್ಥವಾದ; ತುಚ್ಛ:ಆ ಕಮಲದ ನೆಲೆಯು ಕಾಣಲರಿಯದೆ ತೊಳಲಿ ಬಳಲಿ ಜಗದೊಳಗೆ ನಚ್ಚುಮಚ್ಚಗೊಳಗಾಗಿ ಚುಚ್ಚಳ ಪೂಜೆಗೆ ಸಿಲ್ಕಿ . . . ಭವಕೆ ಗುರಿಯಾಗುವ ಮನುಜರ ಕಂಡು ನಾಚಿತ್ತೆನ್ನ ಮನವು (ಲಿಂಗವ. ೪೩-೬). 'ಚುಚ್ಚು$_4$' ಪರಾ. [ ? ]

**ಚುಚ್ಚಿಸು** (ಕ್ರಿ). ತಿವಿಯುವಂತೆ ಮಾಡು; ಇರಿಯಿಸು; ನಾಟಿಸು : ಕಚ್ಚನೆ ಕಾಯಿನ್ನು ಕನಲ್ದು ಕೊಳ್ಳಿಯೊಳ್ ಸೋಲೆ ತಗುಳ್ದು ಚುಚ್ಚಿಸು (ಧರ್ಮಾಮೃ. ೯-೧೮೧); ಸಸನೆ ಇರಲಾರದ ಬಡ್ಡಿ ಗೇರು ಚುಚ್ಚಿಸಿಕೊಂಡಳು (ಗಾದೆ). [ ಚುಚ್ಚು$_1$ (<ಚುಚುರ್$_1$) + – ಇಸು$_3$ ]

**ಚುಚ್ಚು$_1$** 'ಚುಚುರ್$_1$' ನೋ.

**ಚುಚ್ಚು$_2$** 'ಚುಚುರ್$_2$' ನೋ.

**ಚುಚ್ಚು$_3$** (ನಾ). ೧. ಇರಿತ; ತಿವಿತ. 'ಒಳಚುಚ್ಚು' ಪರಾ. ೨. ಬಾಣ (?): ಅಮರ್ಕೆಪತ್ರ ಪುಲಿದೋಲ ಪಟ್ಟಿಗೆಯುಮೊಟ್ಟಿದ ಚುಚ್ಚುಂ ಕಟ್ಟಿದ ತೊಂಗಲುಂ ಬೆರಸು . . . ಇದಿರ್ಗೆ ನಿಂದ ಬಿಲ್ಲಡೆಯ ಪಡೆಗೆ ಪಡೆನಾಯಕನಾಗಿ (ವರ್ಧಮಾ. ೪-೪೨ ವ). [ <ಚುಚುರ್$_1$ ]

**ಚುಚ್ಚು$_4$** (ನಾ). ಚಿಕ್ಕದು ; ಸಣ್ಣದು : "ಚುಚ್ಚಿಂದು ಗುಚ್ಚಿಂದು ಕಿಚುದು" (ಶಬ್ದಮಂ. ೬೩). [ <ಪ್ರಾ. ಚುಚ್ಛ./ ಸಂ. ತುಚ್ಛ ]

**ಚುಚ್ಚುಕ** (ನಾ). ಚುಚ್ಚಿಕೊಡುವವನು ; ಕಲಹಕ್ಕೆ ಪ್ರೇರಿಸುವವನು ; ಚಾಡಿಕೋರ : ನುಚ್ಚುಗೂಳುಣ ಹೊಲ್ಲ ಚುಚ್ಚುಕರ ನೆರೆ ಹೊಲ್ಲ ಮಚ್ಚರದಿ ನಡೆವ ಮಗ ಹೊಲ್ಲ (ಸರ್ವಜ್ಞ. ೧೯೧೨). [ ಚುಚ್ಚು$_1$ (<ಚುಚುರ್$_1$) + – ಕ$_3$ ]

**ಚುಚ್ಚುಕಳಿಲೆ** (ನಾ). ಎಳೆಯ ಬಿದಿರ ಕಳಿಲೆಯಲ್ಲಿ ರಂಧ್ರ ಮಾಡಿ ಮಸಾಲೆ ಮತ್ತು ಒಗ್ಗರಣೆಯನ್ನು ತುಂಬಿ ಮಾಡುವ ಒಂದು ಬಗೆಯ ತಿಂಡಿ: ಕಳಲೆಯ ಕುಡಿಯನೊತ್ತಿ ಶತಛಿದ್ರವಾಗುವ ತೆಱದಿ ಕದುಕಿಱದು . . . ಪೊಡ್ಡಣಿಗೆಯಾತ್ತು ನರೆಯಂ ಕೊಟ್ಟು ಪರಿಮಳವ ನಿಕ್ಕಲದು ಚುಚ್ಚುಕ [ಪಾಠಾಂ. ಗ]ಳಿಲೆ (ಸೂಪಶಾ. ೬-೨). [ ಚುಚ್ಚು$_1$ (<ಚುಚುರ್$_1$) + ಕಳಿಲೆ (<ಕಟಿಲೆ) ]

**ಚುಚ್ಚುಕೂದಲು** (ನಾ). ಚುಚ್ಚುವ ಕೂದಲು ; ಒರಟಾದ ಕೂದಲು: ಪತಂಗ ಚಿಟ್ಟೆಗಳ ಮರಿಗಳ ಮೇಲೆ ಚುಚ್ಚುಕೂದಲುಗಳೂ ಇರುತ್ತವೆ (ಕೀಟಬಿ. ೧೨೩). [ಚುಚ್ಚು$_1$ (<ಚುಚುರ್$_1$) + ಕೂದಲು (<ಕೂಂದಲ್)]

**ಚುಚ್ಚುಗ** (ನಾ). ಮಗುಚುವ ಕೈ ; ಕುರುಪೆ : ರತ್ನ ಕಿತ್ತಲಿ ತೆಗೆದು ಚುಚ್ಚುಗದಿಂದ ಅಲ್ಲಾಡಿಸಿದಳು (ಚಂದಕೀ. ೧೨೩). [ ಚುಚ್ಚು$_1$ (<ಚುಚುರ್$_1$) + – ಗ$_2$ ]

**ಚುಚ್ಚುಗಲೆ** (ನಾ). ಇರಿತದ ಗಾಯದಿಂದುಂಟಾದ ಕಲೆ: ಕುತ್ತದೊಳಾದ ಚುಚ್ಚುಗಲೆಯೇ ಎದೆಗಗ್ಗಳ ಕಪ್ಪು ಕಾಡಿ ಮೇಣ್ ಕುತ್ತಿಸಿಕೊಂಡುವೇ (ಸೂಕ್ತಿಸು. ೯-೪೧೯). [ ಚುಚ್ಚು$_1$ (<ಚುಚುರ್$_1$) + ಕಲೆ$_2$ ]

**ಚುಚ್ಚುಗೊಂಡೆಯ** (ನಾ). ಚುಚ್ಚಿಕೊಡುವ ಚಾಡಿ ; ಮನಸ್ಸಿಗೆ ನೋವುಂಟುಮಾಡುವಂಥ ನಿಂದೆ : ಚುಚ್ಚುಗೊಂಡೆಯದದಟಮುನಿ ಜಡೆವಿಟ್ಟ ನರ್ತಿಸೆ ರಾಮ ಕುಬುಬಿಱದೆಚ್ಚು ಕಡಿದನು ಶಿರವ ಸರಳಿನಲಾ ಖರಾಸುರನ (ತೊರವೆ. ೩-೬-೫೫). [ಚುಚ್ಚು$_1$ (<ಚುಚುರ್$_1$)+ಕೊಂಡೆಯ]

**ಚುಚ್ಚುನುಡಿ** (ನಾ). ಕೇಳುವವರಿಗೆ ನೋವನ್ನುಂಟುಮಾಡುವಂಥ ಮಾತು ; ಕಟಕಿ : ಕೊಟ್ಟ ಹಣವನ್ನು ದಕ್ಕಿಸಿಬಿಡಬೇಡಿರಿ ಎಂದು ಮೊದಲಾದ ಚುಚ್ಚುನುಡಿಗಳನ್ನು . . . ಹೇಳಿದ (ಕುರುಕ್ಷೇ. ೦೩೪).
[ ಚುಚ್ಚು$_1$ (<ಚುಚ್ಚುರ್$_1$) + ನುಡಿ$_2$ ]

**ಚುಚ್ಚುನೋಟ** (ನಾ). ಇರಿಯುವಂತಹ ನೋಟ; ತೀಕ್ಷ್ಣದೃಷ್ಟಿ : ಆನಂದನ ಚುಚ್ಚುನೋಟ ಅವಳ ಹೃದಯದಲ್ಲಿ ಕೋಲಾಹಲವೆಬ್ಬಿಸಿತ್ತು (ಮರಳಿ. ೧೪೬) ; ಅಡಿಗೆಮನೆಯಲ್ಲೂ ನಾನಾನ ಚುಚ್ಚುನೋಟವಿದ್ದದ್ದೇ (ಸ್ವ.ಶಿಬಿ. ೧೬). [ ಚುಚ್ಚು$_1$ (<ಚುಚ್ಚುರ್$_1$) + ನೋಟ ]

**ಚುಚ್ಚುಮದ್ದು** (ನಾ). ಶರೀರಕ್ಕೆ ಸೂಜಿಯಿಂದ ಚುಚ್ಚಿ ಪಿಚಕಾರಿಯ ಮೂಲಕ ಕೊಡುವ ಔಷಧ; ಸೂಜಿಮದ್ದು; ಇಂಜೆಕ್ಷನ್: ಈಗ ಎಲ್ಲೆಲ್ಲೂ ಚುಚ್ಚುಮದ್ದಿಗೇ ಪ್ರಾಶಸ್ತ್ಯ (ನವನೀ. ೩೪) : ಬಾವಿಗೆ ಒಂದು ಚುಚ್ಚುಮದ್ದು ಕೊಟ್ಟರು (ಕಶಪು. ೩-೩೬).
[ ಚುಚ್ಚು$_1$ (<ಚುಚ್ಚುರ್$_1$) + ಮದ್ದು$_1$ (<ಮರ್ದು) ]

**ಚುಚ್ಚುಮಾತು** (ನಾ). = ಚುಚ್ಚುನುಡಿ : ದ್ರೋಣನು ದುರ್ಯೋಧನನ ಚುಚ್ಚುಮಾತಿನಿಂದ ನೊಂದು ಕಿಚ್ಚಿನಿಂದ ಕಾದುತ್ತಿದ್ದನು (ಪಕಥಾ. ೨೮೯) ; ಅವರ ಚುಚ್ಚುಮಾತುಗಳು ಶೂಲದಂತೆ ಇರಿಯುತ್ತಿದ್ದವು (ಕುಂಕುಮ. ೬೬).
[ ಚುಚ್ಚು$_1$(<ಚುಚ್ಚುರ್$_1$) + ಮಾತು$_1$ ]

**ಚುಚ್ಚುರೊಟ್ಟಿ** (ನಾ). ಚುಚ್ಚಿ ರಂಧ್ರ ಮಾಡಿ ಬೇಯಿಸಿದ ಒಂದು ಬಗೆಯ ರೊಟ್ಟಿ : ಕುಟ್ಟಿ ಕಣಕದೊಳು ಸಂಬೆಣ್ಣೆಯಾಜ್ಯಮೊಳೊಂದು ಬಟ್ಟವಾಲನೆಯಿಕ್ಕಿ ಮಿದಿದು ಬಟ್ಟಂ ಮಾಡಿ . . . ಸಲಗೆಯಿಂ ಚುಚ್ಚಿ ತಿಳಿದುಪ್ಪಮಂ ಬಿಟ್ಟು ಸಕ್ಕರೆಯುಮಂ ತಳಿದು ತೆಗೆದೊಡೆ ಚುಚ್ಚು[ಪಾಠಾಂ. ಕರ್ಕುರ, ಕುಕ್ಕು]ರೊಟ್ಟಿಯೆಂಬೊಳ್ಪಿಸರವಡೆದು (ಸೂಪಶಾ. ೧-೧೦).
[ ಚುಚ್ಚು$_1$ (<ಚುಚ್ಚುರ್$_1$) + ರೊಟ್ಟಿ ]

**ಚುಚ್ಚುಳ** (ನಾ). ೧.=ಚುಚ್ಚುನುಡಿ: ಮದನಕೇಳಿಗೆ ನಮ್ಮ ಗುಜುಮಾಡಿ ನಿಶ್ಚೈಸಿ ಸತಿಯರೆಂದಾಳಿ ಚುಚ್ಚುಳ ನುಡಿದು ಎಮ್ಮನು ಒಲ್ಲದಿಹನು (ಹರಿಶಾಂ. ೩೦-೪೯). ೨. ಚುಚ್ಚುಮಾತನಾಡುವವನು : ಚೆಚ್ಚರಿಗಂ ಪರಿವಾಯಂ ಚುಚ್ಚುಳ [ಪಾಠಾಂ. ತುಚ್ಚುಳ]ನತ್ಯುಗ್ರಕೋಪಿ ಮೂರ್ಖಂ ಕೆಸಱೊಳ್ ಕಿಚ್ಚಿಡುವನೆನಿಪ ಖಳನಂ (ಸಮುಶ. ೬-೧೦೬). [ ? ]

**ಚುಜ್ಜಲು** 'ಸಂಜ್ಜಲು' ನೋ.

**ಚುಜ್ಜಲುಮರ** (ನಾ). ಒಂದು ಬಗೆಯ ಮರ ; ಸುಜ್ಜಲು : ಚುಜ್ಜಲು ಮರದ ಕೆಳಗೆ ವಾಯುವ್ಯ ಮುಖನೆ ಕ ೧ (ಎಕ. III, ತಿರುಮ. ೬೩-೧೦೨೪: 1748). [ ಚುಜ್ಜಲು (<ಸುಜ್ಜಲು) + ಮರ$_1$ ]

**ಚುಜ್ಜಲು** 'ಸುಜ್ಜಲು' ನೋ.

**ಚುಟಕ, ಚುಟುಕ$_2$** (ನಾ). ಒಂದು ಬಗೆಯ ಪದ್ಯ; ಅಣಕದಿಂದ ಕೂಡಿದ (ಸಾಮಾನ್ಯವಾಗಿ ನಾಲ್ಕುಸಾಲುಗಳಿರುವ) ಸಣ್ಣ ಪದ್ಯ : ಪ್ರಾಸಬದ್ಧವಾದ ಚುಟಕಗಳನ್ನು ಬರೆಯುವಷ್ಟು ಶಕ್ತಿ ಅವನಿಗೆ ಜನ್ಮದತ್ತವಾಗಿದ್ದು (ಬೀಜೀ. ೩೦) ; ಅದರ ಕೆಳಗೆ ನಾಲ್ಕುಸಾಲಿನ ಒಂದು ದರಿದ್ರ ಚುಟಕ ಬೇರೆ ಬರೆದಿತ್ತು ! (ಶಾರದಮ. ೪೬). **ಚುಟುಕ$_2$ :** ಚಕಮಕಿಗಳು ಚುಟುಕಗಳು ಇವುಗಳ ಕರ್ತೃಗಳಿವರಾಗಭವಂದ್ಯರು (ಇಂಚಾಶ. ೪-೯).
[ ←ಮರಾ. ಚುಟಕಾ ]

**ಚುಟಕಿ** 'ಚಿಟುಂಕು' ನೋ.

**ಚುಟಕು** 'ಚಿಟುಂಕು' ನೋ.

**ಚುಟಕೆ** 'ಚಿಟುಂಕು' ನೋ.

**ಚುಟಿ** 'ಸೂಟಿ$_1$' ನೋ.

**ಚುಟಿಕೆ** 'ಚಿಟುಂಕು' ನೋ.

**ಚುಟಿಕೆಹಾಕು** 'ಚಿಟಿಕೆಹಾಕು' ನೋ.

**ಚುಟಿಗೆ** 'ಚಿಟುಂಕು' ನೋ.

**ಚುಟು** (ನಾ). ಒಂದು ರಾಜವಂಶದ ಹೆಸರು: ' ಹರಿತೀಪುತ್ರ ವಿಷ್ಣುಸ್ಕಂದ ಚುಟುಕುಲಾನಂದ ಶಾತಕರ್ಣಿ' ಎಂಬ ಅರಸನು ವೈಜಯಂತಿ(ಬನವಾಸಿ)ಯ ಅರಸನಾಗಿದ್ದು (ಕುಳುನಾ. ೨೪) ; ಬನವಾಸಿಪ್ರಾಂತದಲ್ಲಿ ಶಾತವಾಹನರ ಶಾಖೆಯೇ ಆದ ಚುಟುಕುಲದವರು . . . ಕ್ರಮೇಣ ಸ್ವತಂತ್ರರಾದರು (ಧಾಇಕೃ. ೩೦೪). ಶ್ರೀ ಗೋವಿಂದಪೈಗಳು ಚುಟು ಮತ್ತು ತುಳುವಿಗೆ ಸಂಬಂಧವಿರಬಹುದೆಂದು ಅನುಮಾನಿಸಿದ್ದಾರೆ. [ ? ]

**ಚುಟುಕ$_1$** 'ಚಿಟುಂಕು' ನೋ.

**ಚುಟುಕ$_2$** 'ಚುಟಕ' ನೋ.

**ಚುಟುಕಿ** 'ಚಿಟುಂಕು' ನೋ.

**ಚುಟುಕು** 'ಚಿಟುಂಕು' ನೋ.

**ಚುಟ್ಟ$_1$** 'ಚುರುಟು' ನೋ.

**ಚುಟ್ಟ$_2$** (ನಾ). ೧. ಚಿಕ್ಕದು; ಸಣ್ಣದು: " ಪುಟ್ಟ, ಚುಟ್ಟ – ಅಲ್ಪೀಭಾವೇ, ಕಿರಿದರೊಳ್ " (ಶಾಶಕ್. ೨೫೬). ೨. ಸಣ್ಣ ಉಂಡೆ,–ಗುಳಿಗೆ : ಅವರು ಸುಣ್ಣ, ಬೆಣ್ಣೆ ಎಲ್ಲಾ ಹಾಕಿ ,ತಿಕ್ಕಿ, ಸಣ್ಣದ ' ಚುಟ್ಟ ' (ಚುಟಿಗೆ)ಗಳನ್ನು ಸಿದ್ಧಪಡಿಸಿ . . . ಹೋಗುತ್ತಿದ್ದರು (ಮರಳಿ. ೬೦). [ <ಪ್ರಾ. ಛುಟ್ಟ ]

**ಚುಟ್ಟಾ** 'ಚುರುಟು' ನೋ.

**ಚುಟ್ಟಿ** (ನಾ). ಒಂದು ಬಗೆಯ ಹಣೆಯ ಆಭರಣ ,–ಮುಂದಲೆಯ ಆಭರಣ : (ಕ). [ ದೇ.$_2$ ತಮಿ. ಮಲ. ಚುಟ್ಟಿ ]

**ಚುಡಾಯಿಸು** 'ಚಿಡಾಯಿಸು' ನೋ.

**ಚುಡಿತ$_1$** (ನಾ). ನಿಂದೆಯ ಮಾತು ; ದೂಷಣೆ (?) : ಚಾಡಿ ಚುಡಿತಗಳಾಡಿ ಸರಿ ಪಂಥಗಳನಾಡಿ ಕೆಡುಕ ನೀನಾಗಬೇಡ (ಪುರಂದ. ೩-೨೨-೪).
[ ? ]

**ಚುಡಿತ$_2$** (ಗು). ಹರಿತವಾದ (?) : ಹಿಡಿದು ತರ್ಕಿಸಿಕೊಂಡು ಮುಡುಹಿಲಿ ಚುಡಿತ ನಖರೇಖೆಗಳ ಬರದು ಕಡುಘನದಿ ಕ್ರೀಡಿಪುದು ಬಿಂದುವ ವಜ್ರವನು ಮಾಡಿ (ಕಕ್ಕೋಕ. ೬-೨೦). [ ? ]

**ಚುಡುವ** 'ಚಿವಡಾ' ನೋ.

**ಚುಣಚುಣಿ** 'ಚುನಿಚುನಿ' ನೋ.

**ಚುಣಿ** 'ಚೂಳಿ$_1$' ನೋ.

**ಚುಣುಕು$_1$** 'ಜುಣುಂಗು' ನೋ.

**ಚುಣುಕು$_2$** 'ಚುಳುಕು' ನೋ.

**ಚುಣುಗು** 'ಜುಣುಂಗು' ನೋ.

**ಚುಣ್ಣ** (ನಾ). (ಕರಾ) ಗೆಣಸಿಗೆ ಹುಳು ಬೀಳುವ ಒಂದು ಬಗೆಯ ರೋಗ: ಈ ಬಾರಿ ಗೆಣಸಿನ ಬೆಳೆಗೆ ಚುಣ್ಣ ಹಿಡಿದು ಹಾಳಾಯಿತು (ರೂಢಿ).
[ ? ]

**ಚುತಿ** (ನಾ). ಚ್ಯುತಿ; ನಾಶ. 'ಚುತಿಸು' ಪರಾ. [ <ಸಂ. ಚ್ಯುತಿ ]

**ಚುತಿಸು**(ಕ್ರಿ). ಇಲ್ಲವಾಗು; ನಾಶಹೊಂದು: ವೈರಿಸಿದಳಗ್ರಮಹಿಷಿಯೋರ್ಗ ಚುತಿಸಿತಾ ಸಲ್ಲಾಪ (ಜನಮು. ೬-೨೬). [ ಚುತಿ + – ಇಸು$_1$ ]

**ಚುತ್ತು** (ಕ್ರಿ). ಬಳಲು ; ಆಯಾಸಪಡು (?) : ಹತ್ತಲಾರೆನು ನಾನು ಯತ್ತರದ ಯಾ ಮರವ ತತ್ತರವು ಪುಟ್ಟುವದು ಚುತ್ತಿ ಕೈಕಾಲು (ಜನಪದ. ೦೧೨). [ ? ]

**ಚುದ್ರತನ** (ನಾ). ಚಾಡಿ ಹೇಳುವ ಬುದ್ಧಿ ; ದೂರುವ ಗುಣ : ಚು[ಪಾಠಾಂ. ಕ್ಷು]ದ್ರತನ ಕಳವು ಪರದ್ರೋಹದಿಂದ ಬುದ್ಧಿಯಿಂದರೆ ಗಳಿಸಿ ಸಿಕ್ಕಿದಂಥರ್ಥವನು ಸದ್ಯದಲ್ಲಾರು ಉಂಬುವರ್ (ಪುರಂದ. ೦-೧೩೨-೩).
[ <ಕ್ಷುದ್ರತನ ]

**ಚುನಮರಿ** 'ಚುರುಮುರಿ' ನೋ.

**ಚುನಮರಿಉಂಡೆ** (ನಾ). ಪುರಿ ಮತ್ತು ಬೆಲ್ಲದ ಪಾಕದಿಂದ ಮಾಡಿದ ಉಂಡೆ ; ಪುರಿಯುಂಡೆ : ಚುನಮರಿಉಂಡೆಗಳನ್ನು ಮಾರುವ, ಹೆಂಗಸು ಅವಳು (ಮತ್ತಿಮ. ೧೫೧). [ ಚುನಮರಿ (< ಚುರುಮುರಿ) + ಉಂಡೆ ]

**ಚುನಾಯಿ** (ನಾ). ಆಯ್ಕೆ ; ಆರಿಸುವಿಕೆ. 'ಚುನಾಯಿತಾಣ' ಪರಾ.
[ ← ಹಿಂ. ಚುನಾಈ ]

**ಚುನಾಯಿಕೆ** (ನಾ). = ಚುನಾಯಿ : (*). [ ಚುನಾಯಿ + – ಕೆ ]

**ಚುನಾಯಿತ** (ಗುಂ). ಆರಿಸಿದ ; ಆಯ್ಕೆಯಾದ : ನಾಲ್ಕುಬಾರಿ ಕೂಡ ಪ್ರಜಾಪ್ರತಿನಿಧಿಸಭೆಗೆ ಚುನಾಯಿತರಾದವರು (ಅಲಹೂ. ೬೫).
[ < ಚುನಾಯಿಸು ]

**ಚುನಾಯಿತಾಣ** (ನಾ). ಚುನಾವಣೆ ನಡೆಯುವ ಸ್ಥಳ; ಚುನಾವಣೆಯ ಕಟ್ಟೆ : ಪುಂಡರೀಕನು ಒಂದು ಚುನಾಯಿತಾಣದಲ್ಲಿ ಅಧಿಕಾರಿಯಾಗಿದ್ದನು (ಕೋದಂಡ. ೫೫). [ ಚುನಾಯಿ + ತಾಣ ]

**ಚುನಾಯಿಸು** (ಕ್ರಿ). ಆಯು; ಆರಿಸು: ಕಾರ್ಯಕಾರಿಮಂಡಲಿಗೆ ನಿನ್ನನ್ನೂ ಒಬ್ಬ ಸದಸ್ಯನನ್ನಾಗಿ ಚುನಾಯಿಸಿರುವರೆಂದು ತಿಳಿಯಿತು (ರಾಯಳ. ೩೮) : ನೀವು ಬಟ್ಟೆ ಚುನಾಯಿಸುವುದರಲ್ಲೂ ಜಾಣ್ಮೆ ತೋರಿಸ್ತೀರಲ್ಲ (ಬದುಕ. ೧೨೫). [ ಚುನಾಯಿ + – ಇಸು$_3$ ]

**ಚುನಾವಣೆ** (ನಾ). ಜನರ ಅಭಿಮತಗಳ ಮೂಲಕಒಬ್ಬನನ್ನು ತಮ್ಮ ಪ್ರತಿನಿಧಿಯನ್ನಾಗಿ ಆರಿಸುವುದು: ಚುನಾವಣೆಯ ರಂಗು ಮಾಯವಾದ ಕೂಡಲೆ ಪಕ್ಷಗಳ ಸೊಲ್ಲೂ ಕೂಡ ಕೇಳಿಬರುವುದಿಲ್ಲ (ರಾಜಕ. ೧೧); ಚುನಾವಣೆಯ ತಾರೀಖು ಇನ್ನೂ ಒಂದು ವಾರ (ರಾಯಳ. ೯೦).
[ ಚುನಾಯಿಸು + – ಅಣೆ$_4$ ]

**ಚುನಾವಣೆಗೊಳ್ಳು** (ಕ್ರಿ). ಜನರ ಅಭಿಮತಗಳ ಮೂಲಕ ಆಯ್ಕೆಯಾಗು: ತಾನು ನಾಯಕಸ್ಥಾನಕ್ಕೆ ಚುನಾವಣೆಗೊಂಡ ವಿಷಯವನ್ನು . . . ತಿಳಿಸಿದನು (ಪುನರು. ೩೬). [ ಚುನಾವಣೆ + ಕೊಳ್ಳು$_1$ (< ಕೊಳ್$_1$) ]

**ಚುನಿಚುನಿ, ಚುಣಚುಣಿ** (ನಾ). ಜ್ಯೋತಿಷ್ಮತಿಬಳ್ಳಿ ; ಅಗ್ನಿಬಳ್ಳಿ : ಜೀನಸಿನ ಹೆಸರು . . . ಚುನಿಚುನಿಬೀಜ ಚುಮುಚುಮಿ ಕಲಸಕ್ಕರಿ (ಮುಂಬವ್ಯಾ. ೧೫೬). **ಚುಣಚುಣಿ** : ಸೂರ್ತಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು. ೧, ಅಕ್ಕಲ ಖಾರ . . . ೯೦, ಚುಣಚುಣಿ ಬೀಜ ; ೯೧, ಚೋಬಚಿನ್ನಿ (ಮುಂಬವ್ಯಾ. ೧೨೫).
[ ← ಹಿಂ. ಚುನ್‌ಚುನೀ ]

**ಚುನ್ನ** (ಗುಂ). ೧. ಹೀನವಾದ; ಅಲ್ಪವಾದ; ಕ್ಷುದ್ರವಾದ: ಮಾರುತಿ ಮುನ್ನ ಶರಧಿಯ ದಾಂಟ ಬನವನು ಮುರಿದು ತವಸುತರ ಚುನ್ನವಾಳದ ಲೊರಸಿ ಲಂಕೆಯ ಬನ್ನಬಡಿಸುತಲುರುಹಿ ರಕ್ಕಸಕುನ್ನಿಗಳ ಕೊಲುವಂದು (ಅನಂರಾ. ೬-೭-೬೮). 'ಚುನ್ನಕಥೆ' ಪರಾ. (ನಾ). ೨. ನಿಂದೆ; ತೆಗಳಿಕೆ; ಬಯ್ಗುಳು: "ನಿಂದೆ ಚುನ್ನಂ" (ಕಹಿನಿ. ೬೭); ನಿನ್ನ ಬೋಧದೆಸಕಂ ಚುನ್ನಕ್ಕೆ ಪಕ್ಕಾಗದೇ (ಪುಷ್ಪಪು. ೧೩-೬೬); ಚುನ್ನವಾದೊಡಂ, ಜುಗುಪ್ಸೆಯಾದೊಡಂ ಇರ್ದುದನಿರ್ದಂತರಸಂಗೆ ಒಳಓಲಗದೊಳಱಿಪುವುದೆ ದೂತರ್ಗೆ ನೀತಿ (ಚಿಕವಂ. ೫-೫); ಚುನ್ನದಿಂ ಕೀರ್ತಿಸಲು ರಯ್ಯಮ ಹೇಳು (ಲಿಂಗಪು. ೧೭-೨೩) ೩. ಅಣಕ ; ಕೊಂಕುನುಡಿ ; ವ್ಯಂಗ್ಯ ; ಉಪಹಾಸ : "ಸೋಲ್ಲುಂಠಃ, ಸೋತ್ಪ್ರಾಸಃ, ಸೋಪಹಾಸಃ-ಈ ಮೂಱು ಚುನ್ನಂ" (ಹಲಾಯು. ೨೪-೦೪೮); ನುಡಿದೊಡೆ ಚುನ್ನಮಂ ನುಡಿದಳೆಂದಪೆ(ರಸರ. ೩-೧೭೨). ೪. ತಪ್ಪು ; ದೋಷ : ಸುಮ್ಮನಿರ್ದರೆ ಜ್ಞಾನಕ್ಕೆ ಭಂಗ ಉಭಯವನು ಪ್ರತಿಪಾದಿಸದಿರ್ದರೆ ತನ್ನಯ ಭಕ್ತಿಗೆ ಇದಿರೆಡೆಗೆಡುವುದು ಇದು ಚುನ್ನವಲ್ಲ (ಸರ್ವವ. ೧೨೪-೬೩೭) : ಲಾವಣ್ಯವಿರಲೇನು ಚುನ್ನ ಮಯಣನ ಗುಣಂ ನನಗಿಲ್ಲ ನಿನಗಿಲ್ಲ ಪೋಗು (ಪ್ರಭುಪು. ೮-೯೪). ೫. ಅಲ್ಪವಾದುದು; ಕ್ಷುದ್ರವಾದುದು : ನಿನ್ನ ಹಸುಬೆಯು ನೂರು ಛಿನ್ನಭಿನ್ನದ ದ್ವಾರ ನಿನ್ನಂಗಿಪಾಗುಗಳು ಚುನ್ನ ಚಿಂದಿಗಳು (ಶರಶೀ. ೧೯೩-೮). ೬. ಆಸೆ ; ಅಪೇಕ್ಷೆ : ಷಡುರುಚಿಯನಱಿವನ್ನಕ್ಕ ಬೇಟದ ಚುನ್ನ ಬಿಡದು (ಮದೇವ. ೨೮೭-೩೮): ಎನ್ನಯ ಸುತ್ತಿದ ಮಾಯೆ ನಿನಗೆ ಅನ್ಯವೆ ಅದು ನಿನ್ನಯ ಚುನ್ನ (ಸುಂಕಬಂ. ೫೪) : ಚುನ್ನದಿ ಕಯ್ಯೊಲೆ ಘಳಿಗೆಯ ಸೆಳೆದೀಯ ತನ್ನಯ [ಪಾಠಾಂ. ಯ್ಯ] ಸವಿದುದರ್ಧವನು ಇನ್ನು ಕೊಳ್ಳಬ್ಬಬ್ಬ ನೀನೆಂಬ ಬಾಲನನೆನ್ನ ತೋಳಿಂದು ತಕ್ಕಿಪವೊ (ಪರ್ವಜ. ೩-೨೯). ೭. ಅಲ್ಪನಾದವನು ; ಸಣ್ಣವ್ಯಕ್ತಿ : ಇನ್ನಂ ವಿಷಮಸಮಸ್ಯೆಯನೆನ್ನೊಳ್ ಕುಡಲುಚಿತಮಕ್ಕುಮೋ ಎಂದವನಂ ಚುನ್ನ ಮನಾಗಿಸಿ (ದಿವ್ಯಕ. ೯-೫೩).

**ಚುನ್ನಮಾಡು, ಚುನ್ನವಾಡು** = ೧. ಅಪಹಾಸ್ಯಮಾಡು ; ಹೀಯಾಳಿಸು ; ಅಣಕವಾಡು : ನಿನ್ನೊಕ್ಕಲ್ತನಮೇನೆನುತುಂ ಚುನ್ನ ಮಾಡಲ್ಕೆ ಮುನಿದವಂ ಕೈವೊಯ್ದಂ (ಮಹಾನೇ. ೧೦-೯೨); ಗಿರಿಸುತೆ ಚುನ್ನವಾಡಿ ನಗುತಿರ್ದಪಳೀಶನ ಮುಗ್ಧವೃತ್ತಿಗೆ (ಜಗವಿ. ೧೭-೯೮) : ತನ್ನ ತಾ ಕೊಂಡಾಡುತನ್ಯರ ಚುನ್ನವಾಡುವ (ಅಮ್ಮಕ. ೨-೫೫) : ನನ್ನನ್ನು ಹಂಗಿಸಿ ಬಯ್ದು ಚುನ್ನವಾಡಿ ಜರೆದು,ಕೊರಬಾಡಿ . . . ಕೆರಳಿಸುತ್ತಿದ್ದರೆ (ಮುಂತ್ರಶ. ೨೭-೧೪). ೨. ನಿಂದಿಸು ; ಬಯ್ಯು : ಆತನಸಗನೆ ಭಾಳನೇತ್ರನ ತನು ಕಡಾ ನೀ ಚುನ್ನವಾಡದಿರು (ಬಸಪು. ೨೦-೨೩) : ತನ್ನೊಳಿದ್ದವಗುಣವ ನೋಡದೆ ಚುನ್ನವಾಡುವನು (ಕುಮ್ಮಾದ್ರೌ. ೧೯-೨೮): ಮಡಿವಳನೊರ್ವನ ಭದ್ರಮಾಗೆ ದೇವಿಯರೊಳ್ ಕುಂದಿಟ್ಟು ದೇವರಂ ಚುನ್ನವಾಡಿದಂ (ರಾಮಾಕ್ಕ. ೩೪-೨೨). ೩. ಚುಚ್ಚುಮಾತನಾಡು ; ಕೊಂಕುನುಡಿ : "ಪರ್ಯನುಯೋಗಃ, ಉಪಾಲಂಭಃ – ಈ ೨ ಚುನ್ನವಾಡಿ ಬೆಸಗೊಳುಹ" (ಹಲಾಯು. ೨೫-೦೫೩); "ಉಪಾಲಂಭಮೆನೆ ಚುನ್ನವಾಡಿ ಬೆಸಗೊಂಬುದಕೆ ಪೆಸರ್" (ಮಂಗರಾ. ೨೭-೭) ; ಮುನ್ನೆ ತಂಗಿಯಂ ಚುನ್ನವಾಡಿದಕ್ಕನ ವಕ್ರಮೆಗೆ ಬಟಿಕೆ ಮಗಳಂ ನುಡಿದ ಕುಂಟಣಿಯ ಕೊಂಕು ಸಂಗತಿವಡೆದುದು (ಅನಂಪು. ೮-೧೫ ವ). **ಚುನ್ನವಾಡಿಸು** = ಹೀಯಾಳಿಸುವಂತೆ ಮಾಡು ; ಹೀಯಾಳಿಕೆಯ ಮಾತುಗಳನ್ನು ಆಡಿಸು : ತನ್ನೊಳಗದ ತೊತ್ತಿರ ಕೈಯಲೆನ್ನನು ಚುನ್ನವಾಡಿಸಿದ ಕನ್ನೆಯನು ಎನ್ನ ತೊತ್ತಿರ ತೊತ್ತ ಮಾಡದೆ ಬಿಡೆಂ (ಅಂಜಕ. ೫-೧೬೩). [ < ಸಂ. ಕ್ಷುಣ್ಣ ? ]

**ಚುನ್ನಂಗೆಯ್, ಚುನ್ನಗೈ** (ಕ್ರಿ). ಹೀಯಾಳಿಸು; ಅವಹೇಳನ ಮಾಡು : ಬಱುಜಱುಚಿನ ಸೊಲ್ಲಂ ಸೊಲ್ವುದು ನಿನಗೇಂ ಮೊಗ್ಗೆಯೆನಲು ಚುನ್ನಂಗೆಯ್ವುದನುಳಿದು ಹೊಣೆಸಿ (ಉದ್ಭದೇ. ೩-೬೧). **ಚುನ್ನಗೈ**: ವಿಂಚಿಡೆಯಲ್ಲಿ ವಿನುಗೆ ಬರ್ಪ ಕಾಮುರ್ಗಿಲಂ ಚುನ್ನಗೈವ [ಪಾಠಾಂ. ಚುನ್ನಗೆಯ್ವೊಲ್] ಪೊಂಬಳ್ಳಿಯ ಸಂಚವ ನಗುವ ಪೆಂಡಿರುಗೂಡಿ (ಸೂಬಸೋ. ೧೦-೨೯).
[ ಚುನ್ನ + ಕೆಯ್$_1$ ]

**ಚುನ್ನಕ** (ನಾ). ನಿಂದಿಸುವವನು; ತೆಗಳುವವನು: ನಿನ್ನ ಸಂಪದ ನೋಡಲಾಱದೆ ಚಿನ್ನಭಿನ್ನವ ಮಾಡಿ ಕೆಡಿಸುವ ಚುನ್ನಕರ ನುಡಿವಿಡಿಯದಿರ ಪ್ರಸನ್ನ ನಿಧಿಯೆ (ಆದಿಪು. ೧೦-೫). [ ಚುನ್ನ + – ಕ$_3$ ]

**ಚುನ್ನಕಥೆ** (ನಾ). ಹೀನವಾದ ಕತೆ ; ಕ್ಷುದ್ರವಾದ ಕಥೆ : ಕನ್ನೆಯರ ಕೀರ್ತಿಸಿದ ಚುನ್ನಕಥೆವೇಳೆ ಸತ್ಫಲವುಪ್ಪುದೇ (ಪ್ರಭುಪು. ೨-೭).
[ ಚುನ್ನ + ಕಥೆ ]

**ಚುನ್ನಗಾರ್ತಿ** (ನಾ). ನಿಂದಿಸುವವಳು ; ತೆಗಳುವವಳು : ಈ ಚುನ್ನಗಾರ್ತಿಯಂ ಬನ್ನಂಬಡಿಸುವೆನೆಂದೆಣಿಸಿ ಕೆಂಕರಿಸುತ್ತ (ಚಿಕವಿ. ೬-೨೭೫ ವ).
[ ಚುನ್ನ + – ಕಾಱ + – ತಿ$_1$ (< – ಇತ್ತಿ) ]

**ಚುನ್ನಗೈ** 'ಚುನ್ನಂಗೆಯ್' ನೋ.

**ಚುನ್ನನುಡಿ** (ನಾ). ಅಣಕ; ಚುಚ್ಚುಮಾತು; ಉಪಹಾಸ: "ಸೋಲ್ಲುಂಠಮಾಸೋಪಹಾಸಂ ಚುನ್ನನುಡಿಯಕ್ಕು" (ಮಂಗರಾ. ೨೭-೫).
[ ಚುನ್ನ + ನುಡಿ$_2$ ]

**ಚುನ್ನಾಟ** (ನಾ). ಅಣಕ ; ಅಪಹಾಸ್ಯ: ಕೃಷ್ಣ ನಿನಗೆ ಚುನ್ನಾಟ ಬೇಡೆಂದ ನಾರದನು (ವೋಹಕ. ೧೩-೬೦) : ಚುನ್ನಾಟವಾಡಿ ಪುಣ್ಯಾಪಾಪವ ಹಿಂದು ಮಾಡಿ (ಮೈಲಾರ. ೧೯೬-೭). [ ಚುನ್ನ + ಆಟ ]

**ಚುಬುಕ್** (ನಾ). ಒಂದು ಅನುಕರಣ ಶಬ್ದ : ಆ ವ್ಯಾಖ್ಯಾನಮನಂತಾ ನವ್ಯಂ ಚುಬುಕೆಂದವಜ್ಞೆಯಿಂ ದಕ್ಷಿಣಹಸ್ತ ವ್ಯಾಪಾರದೆ ತೋಱಿದಂ . . . ವಟುಕಂ (ವರ್ಧಪು. ೦೬-೯).

**ಚುಬುಕ** (ನಾ). ಬಾಯಿಯ ಕೆಳಗಿರುವ ಮುಖಭಾಗ ; ಗದ್ದ ; ಗಲ್ಲ : ಚುಬುಕಂ ಹೃದಯಂ . . . ಪುರ್ಬುಗಳೆಂಬೆಡೆಯಂ ಮಹಾಹಿ ಕೊಂಡೊಡೆ ಗರುಡಂಗಮೆತ್ತಲರಿದು (ಕೋಕೋಪ. ೦೦-೪) ; ಒಬ್ಬಳು ಮೂಗನ್ನು, ಒಬ್ಬಳು ಚುಬುಕವನ್ನು ವರ್ಣಿಸಿದಳು (ಚಿಕಣ. ೩೨೯). 'ಚಿಬುಕ' ಪರಾ. [ ಸಂ. ]

**ಚುಬುಕಾಗ್ರ** (ನಾ). ಗದ್ದದ ತುದಿ: ಆ ನೃಪಂ ಕರಸರೋರುಹದಿಂ ಚುಬುಕಾಗ್ರ ಭಾಗಮಂ ಪಿಡಿದು (ಶಾರಂಪೂ. ೪೯೪) ; ಚುಬುಕಾಗ್ರಮಂ ನಲವೊಡರಿಸೆ ಮುದ್ದಾಡಿಸುತ್ತುಮಿರ್ದರ್ ಸುತನಂ (ಚಂದ್ರಪು. ೬-೯೭) ; ಕೋಮಲಿತ ಚುಬುಕಾಗ್ರ ಲಲಿತಾರುಣಾಧರದ . . . ಸಿರಿಮೊಗವನೆಂತು ನೋಡದೆ ಮಾಣ್ಬೆನು (ಕೃಮಿಥಾ. ೦೯-೨೦). [ ಚುಬುಕ + ಅಗ್ರ$_1$ ]

**ಚುಬುಕಿರಿ** 'ಚುಬುಕಿಱು' ನೋ.

**ಚುಬುಕಿಱು**, ಚುಬುಕಿರಿ (ಕ್ರಿ). ೧. ಗಲ್ಲವನ್ನು ಸವರಿಕೊಳ್ಳು. ೨. (ಆಲಂ) ಅಲಕ್ಷ್ಯವಾಗಿ ಕಾಣು ; ಉದಾಸೀನತೆಯನ್ನು ತೋರು : ಅವ್ ಕೈಕೊಂಡ ಗಮನಕಿದಲ್ಪವೆನುತರಿಗಂಡಭೈರವ ಚುಬುಕಿಱಿದು ಚಪ್ಪರಿಸಿದನು ಭುಜವ (ಕೊರರಾ. ೯-೦೨-೫೯) : ಒತ್ತಿ ಹೊಳೆಕುವ ಹಾಸ್ಯಗರ್ವದ ಹತ್ತುಗೆಯ ಹವಣಿಸದ ಹವ್ಮಿನ ಚಿತ್ತದಿನೆಸುತ ಚುಬುಕಿಱುವುತಂಗೈಸಿದನು ರಣಕೆ (ಕೊರರಾ. ೬-೦೯-೨೪); ಕೇಳಿ ಚುಬುಕಿಱು ದಾಗಳಿಂದ್ರನು ಬೀಳುಗೆಡಹುವೆನಸುರನೆನುತ ಕಟ್ಟಾಳುತನವನು ತೋಱುವನು(ಉತ್ತರಾ. ೩೮-೪೩). **ಚುಬುಕಿರಿ:** ೨. ರಾಕ್ಷಸಮಂಡಲೇಂದ್ರನ ಪುರವ ದಿಟ್ಟಿಸಿ ನಗುತ ಚುಬುಕಿರಿದ (ಅನಂರಾ. ೪-೩-೨೪). [ ಚುಬುಕ + ಇಱು$_1$ ]

**ಚುಬುಕು$_1$** 'ಚಿಬುಕು' ನೋ.

**ಚುಬುಕು$_2$** 'ಚಬುಕು' ನೋ.

**ಚುಮ್** (ನಾ). ಒಂದು ಅನುಕರಣ ಶಬ್ದ. 'ಚುಮ್ಮನೆ', 'ಚುಮ್ಮೆನ್' ಪರಾ.

**ಚುಮಚುಮ** (ನಾ). ಗಾಯ ಅಥವಾ ಹುಣ್ಣಿನಿಂದ ಉಂಟಾಗುವ ಉರಿ: ಕಾಲಿಗೆ ಮುಳ್ಳು ಚುಚ್ಚಿದ್ದರಿಂದ ಇನ್ನೂ ಚುಮಚುಮ ಅನ್ನುತ್ತಿದೆ (ರೂಢಿ). [ ? ]

**ಚುಮುಕಿಸು** 'ಚಿಮುಕಿಸು' ನೋ.

**ಚುಮುಚುಮು** (ನಾ). (ನಸುಬೆಳಕನ್ನು ಸೂಚಿಸುವ) ಒಂದು ಅನುಕರಣ ಶಬ್ದ : ಕುಲುಕುಲು ನಗುವ ಚುಮುಚುಮು ನಸುಕಿನೊಲು ನಗೆಮುಗುಳ ನರಳಿಸಿದಳಾ ಧನ್ಯೆ (ಜೀವಂ. ೯-೩) ; ಚುಮುಚುಮು ನಸುಕಿನಿಂದ ಒಂದು ಪ್ರಹರ ಕಳೆಯುವವರೆಗೆ ಏನಾದರೊಂದು ಮನೆಯ ಹೊರಗಿನ ಕಾರ್ಯಕ್ರಮವನ್ನು ಏರ್ಪಡಿಸುವುದು ಅಗತ್ಯ (ಗಾಳಿಪ. ೦೬೦) ; ಚುಮುಚುಮು ನಸುಕಿನಲ್ಲೆದ್ದು ಪಸೂನಿಯಲ್ಲಿ ಸ್ನಾನಮಾಡಿ ಸ್ವಾಮಿದರ್ಶನಕ್ಕೆ ಹೊರಟಳು (ಪ್ರೇಮಾಕ್ರ. ೨೩೦).

**ಚುಮುಚುಮುಗುಟ್ಟು** (ಕ್ರಿ). = ಚುರುಗುಟ್ಟು ೧ : ಕಾಲಿನಲ್ಲಿ ಮುರಿದ ಮುಳ್ಳು ಚುಮುಚುಮುಗುಟ್ಟುತ್ತಿದೆ (ರೂಢಿ). [ ಚುಮುಚುಮು + ಕುಟ್ಟು$_1$ ]

**ಚುಮ್ಮ** (ಗು). ದುಃಖಿತ. 'ಚುಮ್ಮಿಸು' ಪರಾ. [ <ಸಂ. ಚುಮ್ರ ]

**ಚುಮ್ಮನೆ** (ಅ). ಚುಂ ಎಂಬ ಸದ್ದಿನೊಂದಿಗೆ : ಒಡೆವ ಸಮಯದೊಳು ಹಾಲೊಳಗೆ ಸುಣ್ಣದ ತಿಳಿಯ ಬಿಡಲು ಚು[ಪಾಠಾಂ. ಜು]ಮ್ಮನೆ ತಿಳಿವುದದು (ಸೂಪಶಾ. ೨-೫). [ ಚುಮ್ + - ಅನೆ$_1$ ]

**ಚುಮ್ಮಿಸು** (ಕ್ರಿ). ನೋಯಿಸು; ಪೀಡಿಸು: ಅಮ್ಮ ಕೇಳಿ ವಿಪ್ರ ದುಮ್ಮಾನದೊಳಗೆನ್ನ ಚುಮ್ಮಿಸಿದ ವೇತ್ರದೊಳು (ಹಮಚ. ೦೩೫). [ ಚುಮ್ಮ + - ಇಸು$_3$ ]

**ಚುಮ್ಮುಚುಮ್ಮು** (ನಾ). ಒಂದು ಅನುಕರಣ ಶಬ್ದ : ತರಣಿ ಕಿರಣ ಚುಮ್ಮುಚುಮ್ಮನೆ ಬಿಸುವನು ಧರಿಸಿತಿರುಳ ಕುಮುದಿನಿಯು (ಚಂಪ್ರಸಾಂ. ೦೫-೦೨) ; ಹೊಸ ಹೊನ್ನ ಮಳೆ ಚುಮ್ಮುಚುಮ್ಮನೆ [ಪಾಠಾಂ. ಜುಮ್ಮು ಜುಮ್ಮನೆ] ಕಱೆದು ರಂಜಿಸುತದೆ ರಾಶಿರಾಶಿಯೊಳು (ಭರತ. ೩-೦೦೯).

**ಚುಮ್ಮುಟು** (ನಾ). ಅಲಕ್ಷ್ಯ ; ತಿರಸ್ಕಾರ : "ಅನಾದರೇ – ಚುಮ್ಮುಟನೊಲ್" (ಶಾಶಕ್ಕ. ೩೮). [ ? ]

**ಚುಮ್ಮೆನ್** (ಕ್ರಿ). (ರಭಸದಿಂದ) ಶಬ್ದಮಾಡು ; ಸುಯ್ ಎನ್ನು : ಚಂಚನ್ಮೌರ್ವಿ ಚುಮ್ಮೆಂದುಗುಟ್ಟವುವೊ ಶರಶ್ರೇಣಿಯಂ ಮಾಣದೆಂಬಂತೆ (ಅರ್ಧನೇ. ೬-೪೧). [ ಚುಮ್ + ಎನ್$_1$ ]

**ಚುಯ್**(ನಾ). ಒಂದು ಅನುಕರಣ ಶಬ್ದ ; ಕಾದ ಪಾತ್ರೆ ಮೊದಲಾದುವುಗಳ ಮೇಲೆ ನೀರನ್ನು ಚಿಮುಕಿಸಿದಾಗ ಉಂಟಾಗುವ ಸದ್ದು : ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ ಬಿಸಿಯ ತೆರೆ ತಾಮುರ್ಬಿ (೧೧೪೮. ೪-೦೧೯ ವ) ; ಪೂತಳಿರ್ ಬಾಡಿ ಕರಂಗಿ ಚುಯ್ಯನುತುಮಿರ್ದುವು (ಕಬ್ಬಿಕಾ. ೩೦೪) ; ಪೊಡಕರಿಸಿದುಗ್ರಶರದುರಿಯು ಬಂಬಲ್ಗಳಿಂ ಕಡಲೇಳಱುದಕ ಚುಯ್ಯೆಂದಿಂಗುತಂ ಕೂಡೆ ಹುಡಿಯಾದವು(ಮೀಕೃಪು. ೩-೦೨-೦೨); ಕೊಳದಂಬು ಬತ್ತೆ ಚು[ಪಾಠಾಂ. ಸೀ]ಯ್ಯೆಂದೊಳಗಣ ನಳಿನಾಳಿ ಕರಿಕುವರಿಗುಂ (ರಾಜಶೇ. ೫-೩೮).

**ಚುಯಿಚ್ಚುಯಿ** (ದ್ವಿರುಕ್ತಿ) : ವೀಜನದೆಲರಿಂದ ಪನಿನೀರ್ಗಳಿಂದೆ ಚುಯಿಚ್ಚು[ಪಾಠಾಂ. ಚ್ಚುಇಚ್ಚು]ಯೆಂದಿಂಗಿರುವವೂ (ಭೈರವೇ. ೨-೦೦೪).

**ಚುಯ್ಯನೆ** (ಅ). ಚುಯ್ಯೆಂಬ ಸದ್ದಿನಿಂದ ಕೂಡಿ: ಜನಿತ ನಿದಾಘದುಗ್ರತರ ತಾಪದಳುರ್ಕೆಯೊಳೆಯ್ದೆ ಕಾಯ್ದು ಚುಯ್ಯನೆ ಕುದಿಗೊಂಡ ನೀರ ಬಿಸುಪಿಂಗೆನಸುಂ ಮಱುಗುತ್ತೆ (ಶಾಂತೀಶ್ವ. ೦೨-೨೮). [ ಚುಯ್ + – ಅನೆ$_1$ ]

**ಚುರುಕ್** (ನಾ). ಬಿಸಿ, ನೋವು ಮುಂತಾದುವುಗಳಿಂದ ಉಂಟಾಗುವ ಚುರುಕನ್ನು ಸೂಚಿಸುವ ಅನುಕರಣ ಶಬ್ದ : ನನ್ನ ಮನಸ್ಸು ಒಳಗೊಳಗೇ ಚುರುಕ್ ಎಂದಿತು (ಬರಣಾ. ೦೪೪) ; ಅವನ ಮನಸ್ಸಿಗೆ ಕಿರಿಕಿರಿಯಾದದ್ದು ನೋಡಿ ಸುಬ್ಬಕೃಷ್ಣನಿಗೆ ಚುರುಕ್ ಎಂದಿತು (ರಾಗಿತ. ೦೦೩).

**ಚುರಚುರನೆ** (ಅ). ಸಶಬ್ದವಾಗಿ: ಚುರಚುರನುರಿವ ಹೆಜ್ಜೊಡರು ಚೀರ್ಚಟಲೆಂಬ ತಱಗೆಂಡಗಳ ಹೋಮಕುಂಡ (ಭರತ. ೨೦-೦೨೯). [ <ಚುರುಚುರು + – ಅನೆ$_1$ ]

**ಚುರಮುರಿ** 'ಚುರುಮುರಿ' ನೋ.

**ಚುರಮೂರಿ** 'ಚುರುಮುರಿ' ನೋ.

**ಚುರಿ$_1$** 'ಚೂರಿ' ನೋ.

**ಚುರಿ$_2$** (ನಾ). ಸಣ್ಣ ಬಾವಿ ; ಬಗರಗೆ : "ಚುರೀ, ಚುಂಡೀ, ಚೂಚುಕಃ– ಈ ೩ ಬಗರಗೆ" (ಹಲಾಯು. ೦೦೩-೬೨) : "ಚುರಿ ಚುಂಡಿ ಮಾನಂಗಿ" (ಮಂಗರಾ. ೦೨೫-೦೯). [ ಸಂ. ಚುರಿ, ಚುರೀ ]

**ಚುರಿತಕ** (ನಾ). ಮೊನಚಾದ ಉಗುರಿನಿಂದಾದ ಗಾಯ ; ನಖಕ್ಷತ : ನಖಕ್ಷತದ ಠಾವುಗಳ ಪೇಳುವೆ ಸುಕುಮಾರ ಕೇಳು ಮೈಯಲಿ ನಖವ ಮೆಲ್ಲನೆ ಪೊತ್ತೆ ಚುರಿತಕನೆಂಬರದನೆಲ್ಲಾ (ಕಕ್ಕೋಕ. ೦೦-೦೯). [ <ಸಂ. ಆಚ್ಛುರಿತಕ ]

**ಚುರಿಮುರಿ** 'ಚುರುಮುರಿ' ನೋ.

**ಚುರುಕ** (ನಾ). ಚುರುಕುಳ್ಳವನು; ಜಾಣ; ಕುಶಾಗ್ರಮತಿ: ಶಾನಭಾಗರು ಆಟದಲ್ಲಿ ತುಂಬ ಚುರುಕರು (ಮೂರುದಾ. ೮) : ತಮ್ಮ ಕೆಲಸದಲ್ಲಿ ಇವರು ಇಷ್ಟು ಚುರುಕರಿರಬಹುದು ಎಂದು ಅನಿಸಿರಲೇ ಇಲ್ಲ (ಆದೋಣಿ. ೧೦೩). [ ಚುರುಕು (<ಚುಱುಕು) + – ಅ$_7$ ]

**ಚುರುಕು** 'ಚುಱುಕು' ನೋ.

**ಚುರುಕುಗೊಳಿಸು** (ಕ್ರಿ). ತೀಕ್ಷ್ಣಗೊಳಿಸು ; ಜಾಗ್ರತಗೊಳಿಸು ; ತೀವ್ರಗೊಳಿಸು: ಬರಲಿರುವ ಅನುಭವವನ್ನು ಸಮಗ್ರವಾಗಿ ಸ್ವೀಕರಿಸಲು ಇಂದ್ರಿಯಗಳನ್ನೆಲ್ಲಾ ಚುರುಕುಗೊಳಿಸಿ ಕುಳಿತಿದ್ದರು (ಬೆಕಂಚಾ. ೨); ನಡೆಯನ್ನು ಮತ್ತಷ್ಟು ಚುರುಕುಗೊಳಿಸಿ, ಆ ಬಾಲಕನನ್ನು ಸಮೀಪಿಸಿ (ಬೆಕಂಚಾ. ೨೬). [ ಚುರುಕು (<ಚುಱುಕು) + ಕೊಳ್$_1$ + – ಇಸು$_3$ ]

**ಚುರುಕುತನ** (ನಾ). ಚಾಣಾಕ್ಷತೆ ; ಬುದ್ಧಿವಂತಿಕೆ ; ಚಾಲಾಕಿ : ಅವಳಿಗೆ ಬಹಳ ಚುರುಕುತನವಿದೆ (ರೂಢಿ). [ ಚುರುಕು (<ಚುಱುಕು) + – ತನ ]

**ಚುರುಕುದೃಷ್ಟಿ** (ನಾ). ತೀಕ್ಷ್ಣವಾದ ನೋಟ ; ಸೂಕ್ಷ್ಮವಾದ ದೃಷ್ಟಿ : ಇತರ ಪ್ರಾಣಿಗಳು ನಮಗಿಂತ ಚುರುಕುದೃಷ್ಟಿಯನ್ನು ಹೊಂದಿವೆ (ಮನೋಣಿಸಂ. ೦೮೩). [ ಚುರುಕು (<ಚುಱುಕು) + ದೃಷ್ಟಿ ]

**ಚುರುಕುಬುದ್ಧಿ** (ನಾ). ಕುಶಾಗ್ರಬುದ್ಧಿ ; ಸೂಕ್ಷ್ಮಬುದ್ಧಿ : ಅವನು ಚುರುಕುಬುದ್ಧಿಯವನು (ರೂಢಿ). [ ಚುರುಕು(<ಚುಱುಕು) + ಬುದ್ಧಿ ]

**ಚುರುಕೆ** (ನಾ). ಒಂದು ಬಗೆಯ ಔಷಧಿ ಸಸ್ಯ : ಬೆಳ್ಳುಳ್ಳಿ ಚುರುಕೆಯ ಸೊಪ್ಪು ಇವಂ ಸಮಭಾಗ ಮಾಡಿ ಅರೆದು (ಅಶ್ವಶಾ. ೫೧-೧೧). [ ? ]

**ಚುರುಕೆನ್** (ಕ್ರಿ). ೧. ಬಿಸಿಯಾಗು ; ಕಾವೇರು. ೨. ಸಂಕಟವಾಗು : ತಳಮಳವಾಗು : ಈ ವಿಧದ ಕಷ್ಟಮಂ ಏಕೆ ನೀ ಕೊಟ್ಟೆ ನೋಡುವರ ಮನವೆಂತು ನಿಮಗೆ ಚುರುಕೆನದೆ (ಶರಲೀ. ೦೬೦-೦೩) ; ತನ್ನಯ ವಡಲು ಚುರುಕೆನದೆ (ಶರಿಶಿ. ೯೬-೯). [ ಚುರುಕು (<ಚುಱುಕು) + ಎನ್$_1$ ]

**ಚುರುಗುಟ್ಟು** (ಕ್ರಿ). ೧. ನೋಯು ; ಸಂಕಟವಾಗು : ಒಂದೊಂದು ಸಂಗತಿಯನ್ನೂ ಕೇಳುತ್ತ ಹೋದಂತೆ, ನನ್ನ ಹೃದಯವು ಚುರುಗುಟ್ಟುತ್ತ ನಡೆಯಿತು (ಅನಜೀ. ೩೩) ; ಆ ಮಾತಿಗೆ ಶೆಟ್ಟರ ಹೃದಯ ಒಮ್ಮೆ ಚುರುಗುಟ್ಟಿದಂತಾಗಿತ್ತು (ಹೊಸಕ್ಷ. ೩೪). ೨. ಹಸಿವೆಯಾಗು : ಬಸ್ಸಿನ ಪ್ರಯಾಣದಿಂದ ಅರ್ಧ ಹೊಟ್ಟೆ ಚುರುಗುಟ್ಟುತ್ತಿತ್ತು (ಬದುಬೆ. ೨೦); ಹೊಟ್ಟೆ ಚುರುಗುಟ್ಟಿದಾಗಲೊಮ್ಮೆ ಆ ಸಮಸ್ಯೆ . . . ಹೆಡೆಯಾಡುತ್ತಿತ್ತು (ಹಾಡುಹು. ೨೨). [ <ಚುಱುಕು + ಕುಟ್ಟು$_1$ ]

**ಚುರುಗುಡು** (ಕ್ರಿ). ಬಿಸಿ ತಾಗು ; ಸುಡು : ಭಾದ್ರಪದ ಮಾಸ. ಮೈ ಚುರುಗುಡುವಂತಹ ಬಿಸಿಲು (ಜಮೀನ್ದಾ. ೧). [ <ಚುಱುಕು +.ಕುಡು$_1$(<ಕೊಡು$_1$) ]

**ಚುರುಚುರಕೆಗಿಡ** (ನಾ). ಒಂದು ಬಗೆಯ ಔಷಧಿ ಸಸ್ಯ : (ಶ್ಯುಕಿಗಿ. ೬೬-೦೩೬೪). [ ಚುರುಚುರಕೆ$_0$ + ಗಿಡ(<ಗಿಡು) ]

**ಚುರುಚುರು** (ನಾ). ೧. ಕುದಿಯುವ ಇಲ್ಲವೆ ಉರಿಯುವ ಸದ್ದು ೨. ಸುಡುವ ವಸ್ತುವನ್ನು ಮುಟ್ಟಿದಾಗ ಉಂಟಾಗುವ ನೋವನ್ನು ಸೂಚಿಸುವ ಅನುಕರಣ ಶಬ್ದ : ಬೆಳಗಿನ ಎಂಟುಗಂಟೆ ಬಿಸಿಲು ಇನ್ನೂ ಚುರುಚುರು ಅನ್ನುವುದಿಲ್ಲವಲ್ಲಾ ಎಂದು ವಟಗುಟ್ಟುತ್ತಿದ್ದರು (ಹುಟ್ಟುಹ. ೦೬೬) ; ಬೆಂಕಿ ತಗುಲಿ ಕೈ ಇನ್ನೂ ಚುರುಚುರು ಎನ್ನುತ್ತಿದೆ (ರೂಢಿ).

**ಚುರುಚುರುಗುಟ್ಟು** (ಕ್ರಿ). ೧. ಬಿಸಿ ಮುಟ್ಟಿ ಬಾಧೆಯಾಗು; ಉರಿ ತಾಗಿ ನೋವಾಗು: ಬೆಂಕಿಗೆ ಕೈ ತಗುಲಿ ಚುರುಚುರುಗುಟ್ಟುತ್ತಿದೆ (ರೂಢಿ). ೨. ತೀವ್ರವಾದ ವೇದನೆಗೊಳಗಾಗು : (ಈ). [ ಚುರುಚುರು+ಕುಟ್ಟು$_1$ ]

**ಚುರುಚುರೆನ್ನು** (ಕ್ರಿ). = ಚುರುಚುರುಗುಟ್ಟು ೨ : (ಈ). [ ಚುರುಚುರು + ಎನ್ನು(<ಎನ್$_1$) ]

**ಚುರುಟು**, ಚಿರೂಟು, ಚುಟ್ಟ$_1$, ಚುಟ್ಟಾ, ಚುರೂಟು (ನಾ). ಒಂದು ಬಗೆಯ ಹೊಗೆಬತ್ತಿ; ಹೊಗೆಸೊಪ್ಪನ್ನು ಎಲೆಯಲ್ಲಿ ಸುತ್ತಿ ಮಾಡಿದ ಬೀಡಿ : ಚುರುಟು ಬಾಯಿಗಿಟ್ಟು ಬೆಂಕಿಪೆಟ್ಟಿಗೆ ಹುಡುಕುವವನು . . . ಕಡ್ಡಿ ಹಚ್ಚಿ ಚುರುಟು ಹೊತ್ತಿಸುವವನು (ಜೀವಮು. ೯೩). **ಚಿರೂಟು :** ಚಾಳೀಸು ಹಾಕಿ ಚಿರೂಟು ಸೇದುವ ಅಕಬರಬಾದಶಹನೂ, ತ್ರಿಪುಂಡ್ರಕ ಧಾರಿಯಾದ ಔರಂಗಜೇಬನೂ ಇತಿಹಾಸಕ್ಕೊಂದು ಹೊಸಮುಖವನ್ನು ತಂದುಕೊಟ್ಟರು (ಗಾಳಿಪ. ೭೦); ಎಡ ಬದಿಯಿಂದ ಚಿರೂಟಿನ ವಾಸನೆಯ ಜೊತೆಗೆ ಒಂದು ಗಂಡಸು-ಧ್ವನಿ ಅವಳನ್ನು ಇಂಗ್ಲಿಷಿನಲ್ಲಿ ಕೇಳಿತು (ಕ್ಷಿತಿಜ. ೪). **ಚುಟ್ಟ$_1$ :** ಅವನು ಚುಟ್ಟ ಸೇದುತ್ತಿದ್ದಾನೆ (ರೂಢಿ). **ಚುಟ್ಟಾ :** ಕೆಲವರು . . . ಚುಟ್ಟಾ ಸಿಗರೇಟುಗಳನ್ನು ಸೇದುತ್ತಾ ಊರಿನ ಸಮಾಚಾರಗಳನ್ನು ಚರ್ಚಿಸುತ್ತಲಿದ್ದರು (ನಿಜ್ಞಾಮ. ೧೧) ; 'ಚುಟ್ಟಾ' ಸೇದುವದನ್ನು ಒಮ್ಮೆ ನಿಶ್ಚಯಿಸಿ ಬಿಟ್ಟಿದ್ದಾನೆ (ಜೀಂದುಟಿ. ೩೪). **ಚುರೂಟು :** ಬಹಳ ಆದರದಿಂದ ಸರ್ವೋತ್ಕೃಷ್ಟವಾದ ಚುರೂಟುಗಳನ್ನು ಮುಂದಿಟ್ಟನು (ಕಳ್ಳಕಾ. ೩೪). 'ಸುರುಂಟು' ಪರಾ.

[ <ಸುರುಂಟು./ತಮಿ. ಮಲ. ಚುರುಟ್ಟು./ಇಂ. Cheroot ]

**ಚುರುಮರಿ** 'ಚುರುಮುರಿ' ನೋ.

**ಚುರುಮುರಿ**, ಚುನಮರಿ, ಚುರಮರಿ, ಚುರಮುರಿ, ಚುರಿಮುರಿ, ಚುರುಮರಿ (ನಾ). (ಉಕ) ನೆನೆಸಿದ ಬತ್ತವನ್ನು ಹುರಿದು ಮಾಡುವ ಅರಳು ; ಮಂಡಕ್ಕಿ ; ಪುರಿ : ವೇಣಾ ಅಲ್ಲಿ ಹೊತ್ತು ಮಾರುತ್ತಿದ್ದವನಿಂದ 'ಅಲ್ಲೀಪಾಕ–ಚುರುಮುರಿ' ಕೊಂಡುಕೊಂಡಿದ್ದಳು (ನಿರಿಜ. ೯೬) ; ಅವರ ಮೇಲೆ ಚುರುಮುರಿ ಬತ್ತಾಸು ತೂರಿದರು (ಕಥಪು. ೬-೧೯). **ಚುನಮರಿ :** ಫಳಿ ಮೇಲೆ ಡಬ್ಬಿಯೊಳಗೆ ಉಂಡಿ, ಚುನಮರಿ . . . ಅದಾವ ತಂದು ಕೊಡು (ಆಕೋಳ. ೪೦). **ಚುರಮರಿ :** ವಿಠಾಯಿಗಾರನಲ್ಲಿ ಚುರಮರಿಯನ್ನು ಕೊಂಡರು (ಹೊಂದಿ. ೩) ; ಹೌದಿನೊಳಗೆ ಮೀನಗಳಿದ್ದವು. ಅವಕ್ಕೆ ಚುರಮರಿ ತಿನ್ನಿಸುವುದು ಇವರ ಒಂದು ಕೆಲಸವಾಗಿತ್ತು (ಇಪ್ಪಳ. ೩೦೬). **ಚುರಮುರಿ :** ಅವಲಕ್ಕೀ ಕುಟ್ಟುವದು, ಚುರಮುರೀ ಹುರಿಯುವದು, ಇವೇ ಇವರ ಕಾಲದ ಹೋರಿಗೆಗಳು (ಕಭಾಗಿ. ೧೦೩): ಗುರವ್ವನ ಅಂಗಡಿಗೆ ಹೋಗಿ ಒಂದು ಪಾವು ಚುರಮುರಿ ತಕ್ಕೊಂಡು ಬಾ (ತಿಡುಗು. ೪೬). **ಚುರಿಮುರಿ:** ಚುರಿಮುರಿಯಿಂದು ಅವಲಕ್ಕಿಯನ್ನು ಶರ್ಕರೆ ಸಹಿತ ದೇವರಿಗನ್ನು ಮಾಡಿರಿ (ಕವಿಚ. III, ೧೬೯ ಮುಲ್ಲಾಖಾಸ್ಸ). **ಚುರುಮರಿ :** ಅವನು ಚುರುಮರಿ ದಾಣಿಗಳನ್ನು ಸಂಗ್ರಹಿಸಿ ತನ್ನ ಹತ್ತಿರ ಇಟ್ಟುಕೊಳುತ್ತಿದ್ದ (ಛಲಸಂ. ೧೮) ; ಬಿಸೀ ಚುರುಮರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ (ನಂಮು. ೦೩-೩).

[ ←ಮರಾ. ಚುರ್‌ಮುರಾ, ಕುರ್‌ಮುರಾ ]

**ಚುರುಳೊಮುದು** (ನಾ). ವೀಳೆಯದೆಲೆ ಮತ್ತು ಅಡಕೆ ; ತಾಂಬೂಲ : ಆ ಕೈಂಕರ್ಯಗಳ ದಾನಗಟ್ಟಳೆಯು ವಿವರ ಪ್ರತಿದಿನ ೧ಕ್ಕೆ . . . ಅರ್ಧ ಪರಮಮುದು ಕಟಿಯಮುದು ನೈಯಮುದು ಚುರುಳೊಮುದು ಸಹ ವರ್ಷ ೧ಕ್ಕೆ ಸಲುವುದು (ಎಕ. XIV, ಶ್ರೀರಂಗ. ೯೩-೨ ; 1535).

[ ←ತಮಿ. ಚುರುಳಮುದು ]

**ಚುರೂಟು** 'ಚುರುಟು' ನೋ.

**ಚುರ್ಕಿ** 'ಸುರ್ಕಿ' ನೋ.

**ಚುರ್ಕಿಗಾರೆ** 'ಸುರ್ಕಿಗಾರೆ' ನೋ.

**ಚುರ್ಚೆ** (ನಾ). ಕಣ್ಣು ಉರಿಯುವ ಒಂದು ಬಗೆಯ ರೋಗ ; ಉರಿಗಣ್ಣು : ವ್ಯಾಲಿಗೆಗಣ್ಣೊ ವಾತದಿಂ ಬಲಿದ ಕಣ್ಣೊ ಕುಟಿಯಗಣ್ಣೊ ಚುರ್ಚೆಯಗಣ್ಣೊ . . . ಇದಕ್ಕೆ ತಿಳಿಯೆನೇನಂ ಮರ್ದಂ (ಮಹಾವಿ. ೬-೩೦).

[ <ಚುರ್ಚು$_2$ ]

**ಚುರ್ಚು₁**, ಚುಚ್ಚು₁ (ಕ್ರಿ). ೧. ಆಯುಧ, ಮುಳ್ಳು, ಕೊಕ್ಕು ಮುಂತಾದುವುಗಳಿಂದ ತಿವಿ,—ಇರಿ : "ಸುಡುವಲ್ಲಿ ತಿವಿವಲ್ಲಿ ಚುರ್ಚು" (ಶಬ್ದಮಂ. ೯೭); ಸೇನೆಯುಂ ಮುತ್ತಿದುವು ಕುತ್ತಿದುವು ರವಿರಥತುರಂಗಮಂ ಚುರ್ಚಿದುವು . . . ಬಾಣಂಗಳು (ಜಬಪು. ೨೫-೧೮); ಚುರ್ಚಿ ಮಹಿಶೂರ ಬಾಣಮಿದಿರ್ಚದೆ ಕೆಬದಿಯವರೆಬಗಿ ನರಪತಿಗೆ ಕರ್ಚಿದರಡಿಯುಂಗುಟವಮಂ (ಅಪ್ರತಿ. ೫೮-೫೩); ಚುಚ್ಚುಗವನ್ನು ಚುರ್ಚಿ ತೆಗೆದಳು. ಅದರ ಜೊತೆಗೆ ವಿಡಿನಾಗರ ಹಾವು ಬಂದಿತು! (ಬಂಡಜೀ. ೦೨೩). **ಚುಚ್ಚು₁ :** ೧. ನಿಡಿಯ ನಾಲಗೆಯುಂ ಪಿಡಿದು ಪೆಡತಲೆಯುಂ ತೆಗೆದೆರಡು ಕೆಯ್ಯೊಳ್ ಮುಚ್ಚಿ ಚು[ಪಾಠಾಂ. ಮು]ಚ್ಚುತ್ತಿರ್ಪಂ (ಅಜಿಪು. ೧೧-೧೦ ವ); ಮೆಲ್ಲಮೆಲ್ಲನೆ ಸೀಳಿರೆಮ್ಮಯ್ಯ ದಮ್ಮಯ್ಯ ಮೆಲ್ಲಮೆಲ್ಲನೆ ಚುಚ್ಚಿರೆಮ್ಮಯ್ಯ ದಮ್ಮಯ್ಯ (ಸಾನಂಚ. ೪-೨೦೦); ಶರದಲಿ ಚುಚ್ಚಿದನು ಜೀಕುಳಿಯ ಬಿಟ್ಟನು ನೆತ್ತರನು ನೆಲಕೆ (ಕುಮ್ಯಾಕ. ೩-೩೦); ಮೊನೆನೋಟದಿಂ ಚುಚ್ಚಿ ಬೆಳ್ಳಿ ನೋಡುವಳು (ಕಾಲೂರ. ೪೨-೫೪); ಪ್ರಾಣಿಗಳ ಚರ್ಮದೊಳಕ್ಕೆ ಚುಚ್ಚಿ . . . ರಕ್ತವನ್ನು ಹೀರುತ್ತವೆ (ಕೀಟಬಿ. ೭೪). ೨. ತೂತುಮಾಡು ; ರಂಧ್ರಮಾಡು: ಒತ್ತಿ ಮೂಗಂ ಚುಚ್ಚಿ ನತ್ತಿತಂ (ಮಂಗರಾ. ೫೩-೨); ಇವೊತ್ತು ಮಗುವಿಗೆ ಕಿವಿ ಚುಚ್ಚಲಾಯಿತು (ರೂಢಿ). ೩. ಕಟಕಿಯ ಮಾತನಾಡು : ಬಸವಂತಿ ಕೂತು ಮಯ್ಯಲಿಕೆ ಬಂದವಳೆಂದು ಚುಚ್ಚುತ್ತಿದ್ದಳು (ದೀಪಹ. II, ೧೪೧).

**ಚುಚ್ಚಿಕೊಡು** = ೧. ಚಾಡಿಹೇಳು ; ಎತ್ತಿಕಟ್ಟು ; ಪ್ರಚೋದಿಸು : ಒಚ್ಚತಯಿಲ್ಲೆನಲಾಗುವುದು ಕಾಲವೊಂದಚ್ಚಿ ಕರ್ಮಗಳತ್ತ ತಹುದು ಚುಚ್ಚಿಕೊಡುವರಂತೆ ಪುದ್ಗಲಪರಿಣತಿಗಚ್ಚಾದ ಕಾರಣದಿಂದ (ಭರತ. ೩೮-೪೨); ನೆರೆಹೊರೆಯ ಹೆಂಗಸರು ನಾಗಮ್ಮನಿಗೆ ಚುಚ್ಚಿಕೊಡುತ್ತಿದ್ದುದಲ್ಲದೆ ಆ ಗುಂಡಪ್ಪನ ನಾಚಿಕೆ ಇಲ್ಲದೆ ವರ್ತನೆಗೆ ಹೇಸುತ್ತಿದ್ದರು (ಜಾಗಸ. ೩೨). ೨. ಹೇಳಿಕೊಡು ; ಗುಟ್ಟಾಗಿ ತಿಳಿಸು : ತರಗತಿಯಲ್ಲಿ ಉತ್ತರ ಚುಚ್ಚಿಕೊಡುವ ವಿಷಯವಾಗಿ ದೊಡ್ಡ ದೊಂದು ಚರ್ಚೆಯೇ ನಡೆಯಿತು (ಜಾರಮು. ೨೦). **ಚುರ್ಚಿನುಡಿ, ಚುಚ್ಚುನುಡಿ** = ಮನಸ್ಸಿಗೆ ನಾಟುವಂತೆ ಮಾತನಾಡು : "ಚುರ್ಚಿನುಡಿ–ಮರ್ಮೋದ್ಘಾಟನೆಯ ಮಾತುಗಳನ್ನಾಡು, ಒತ್ತಿಹೇಳು" (ಪ್ರಪಂ); ನೃಪನ ಮರ್ಮವ ಚುಚ್ಚಿನುಡಿದನು ಘಾಸಿ ಮಾಡಿದನಾ ನೃಪಾಲಕನ (ಕುಮ್ಯಾಕ. ೦೩-೨೯); ಹುಚ್ಚನೆಂದರು, ಲುಚ್ಚನೆಂದರು . . . ಚುಚ್ಚಿ ನುಡಿದರು (ಕಏಪು. ೨೦-೨).

[ ದೇ.॥ ತುಳು. ಚುಚ್ಚು ; ತೆಲು. ಚೊರ್ಚು, ಚೊಚ್ಚು ; ಕೊಲಾ. ಚೊಚ್ಚಿಲ್ಲು, ಚೊಟ್ಟಿಂಚು, ಚೊಸ್ಸು ]

**ಚುರ್ಚು₂**, ಚುಚ್ಚು₂, ಚುಟ್ಟು (ಕ್ರಿ). ಸುಡು ; ದಹಿಸು : "ಚುರ್ಚು ದಾಹೇ (ಉರಿ)" (ಶಮದಾ); "ಸುಡುವುದುಂ ಚುರ್ಚಿನಲ್ಕುವ್ಪುದು" (ಕವಿಶ್ಚೆ. ೧೪); "ಚುರ್ಚೆಂಬುದು ತಾನೊಗೆಗುಂ ದಹಿಪರ್ಥದಲ್ಲಿಯತಿಭರದಿಂದಂ" (ಕವಿಕಂ. ೩೫); ಉರಿವ ಕೈದೀವಿಗೆಗಳೊಳ್ ಮೊಗಮಂ ಚುರ್ಚುವರುಂ (ಆದಿಪು. ೫-೮೫ ವ); ಚುರ್ಚಿದವೊಲ್ ಬಿಸಿಲಲುರೆ ಕಿಮುಟ್ಟಿದ ತಳಿರಂತೆ ನೊಂದು (ಶಮದ. ೨೪ ಪ್ರಯೋ); ನರಿ ನಾಯ್ ಮೊದಲಾದುವಡಸಿ ಪಿಡಿದೆಡೆಯೊಳ್ ನೆತ್ತರನೊತ್ತಿ ಕಳೆದು ಬಟಿಯಂ ಭರದಿಂ ಚುರ್ಚುವುದು ಕಾಯ್ದ ಕರ್ಬುನದಿಂದಂ(ಶಮದ. ೧೩-೪); ವಿರಹಶಿಖಿ ದವಶಿಖಿ ಚುರ್ಚುಗುಂ (ರಾಜಶೇ. ೭-೮೩); ನೀರೊಳ್ ಕಿರ್ಚು ಚುರ್ಚುಗುಮೇ ? (ರಾಮಾಶ್ವ.೩-೧). **ಚುಚ್ಚು₂ :** "ಚುಚ್ಚಿನಲು ಸುಡುವುದುಂ" (ಕಶಶ. ೩೭); ಕೊಳ್ಳಿಯೊಳ್ ಪಿರಿದುಂ ಚುಚ್ಚುವುದುಂ (ಸುಕುಮಾ. ೦೦-೪೭ ವ); ಬಾಗಿಲಿಕ್ಕಿದು ಹೊಱಗೆ ಮುದ್ರಿಸಿ ಕಿಚ್ಚ ಚುಚ್ಚುವ ಪರುಠವಣೆಯಲಿ ಖಳ ಪುರೋಚನನಂದು ನಿರ್ಮಿಸಿದ (ಕುಮ್ಯಾಭ. ೮-೭೦). △ **ಚುಟ್ಟು :** ಚುಟ್ಟಿದ ತೆಱದಿಂ ಪುಸಿಗಳನುಟ್ಟುವನಿವನೆಂದು ಕಾಯ್ದ ಕರ್ಬುನದಿಂದಂ ಚುಟ್ಟಿ (ಸುಕುಮಾ. ೦೧-೪೪). [ ? ]

**ಚುರ್ಚುಂಗೊಳ್ಳಿ**, ಚಂಚುರ್ಚುಗೊಳ್ಳಿ (ನಾ). ಉರಿಯುಂವ ಕೊಳ್ಳಿ ; ಸೂಟಿ ಚುರ್ಚುಂಗೊಳ್ಳಿ, ಇರ್ಕುಂಗೋಲ್ (ಶಮದ. ೦೭೦ ಪ್ರಯೋ): ಚುರ್ಚುವ ಕೊಳ್ಳಿ, ಚುರ್ಚುಂಗೊಳ್ಳಿ (ಶಬ್ದಾನು. ೩೪೫ ಪ್ರಯೋ). **ಚುರ್ಚುಗೊಳ್ಳಿ :** ಎಂತು ಪಿಡಿದ ಚುರ್ಚುಗೊಳ್ಳಿ ಗಾಳಿ ಸೋಕೆ ಸುಡುವುದೋ . . . ಅಂತು ಪೆಣ್ಣ ಸೇರ್ಕೆ ಕೇಡಿಗಕ್ಕುಮಲ್ತೆ (ಸಾನಂಚ. ೮-೭೦). [ಚುರ್ಚು₂ + ಕೊಳ್ಳಿ₁]

**ಚುರ್ಚುಗೊಳ್ಳಿ** 'ಚುರ್ಚುಂಗೊಳ್ಳಿ' ನೋ.

**ಚುರ್ಚುವಾಯ್** (ಕ್ರಿ). ತಿವಿಯಲೆಂದು ಮೇಲೆ ಬೀಳು,– ಎದುರಿಗೆ ಬರು : ಶತಜೀವಿ ಎಂಬಾದೇಶವಮಂ ಕೇಳ್ದು ಭರದಿಂದಂ ಚುರ್ಚುವಾಯ್ಬಂ ಪೊಗಳೆ ಬಾಧಜನಂ ಬಂದ ಕಾವೇರಿಯೊಳ್ . . . ಅಸ್ತು ಚುರ್ಚುವಾಯ್ದು ಬದ್ದ್ವಾಗ್ಸ್ಯೆದನ್ (ಎಕ. VII, ಶಿಮೊ. ೪-೪೦; 1122).

[ ಚುರ್ಚು₁ + ಪಾಯ್₁ ]

**ಚುರ್ಚೆ** (ನಾ). ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ . . . ಚುರ್ಚೆ, ಬೆಳ್ನಾಲೆ . . . ಮುಂತಾದ ಗಗನಚುಂಬಿತ ವೃಕ್ಷಗಳು (ಕಂಜಶಂ. ೨). [ ? ]

**ಚುಲ್** 'ಸೂಲ್' ನೋ.

**ಚುಲಕ**, ಚುಳಕ₂ (ನಾ). ಅಂಗೈ; ಕುಡಿತೆ: ಕಯ್ಯುಚ್ಚಿ, ಚುಲಕದ ಮುದ್ರಿಕೆಯನ್ನಾತನಿಗೆ ನೀಡುವನು (ಮಂತ್ರಕ. ೧೩೦-೦೦). **ಚುಳಕ₂ :** ಚುಳಕ ಪ್ರಮಾಣಮಾದೊಡಮುಳಿಯದವೋಲ್ ದುಗ್ಧವಾರ್ಧಿಜಳಮಂ ಮೊಗೆದರ್ . . . ದಿವಿಜರ್ (ಚಾಧಪು. ೮-೯೭). 'ಚುಳಕಪಾನ' ಪರಾ. [ಸಂ.]

**ಚುಲಕತನ** 'ಚುಲುಕುತನ' ನೋ.

**ಚುಲಕಬುದ್ಧಿ** 'ಚುಲುಕುಬುದ್ಧಿ' ನೋ.

**ಚುಲುಕ**, ಚುಳುಕ (ನಾ). ೧. = ಚುಲಕ : ಬಿಸಿಲ ನಡಗೆಯಲಿ ಜನಿತ ವಿಸ್ಮೃತಿಯೈದೆ ಮಸ್ತಕವನು ಚುಲುಕಸಲಿಲದೊಳಗೊತ್ತಲು (ವಿವೇಚ. ೮-೫). **ಚುಳುಕ :** ೧. ದಿಗ್ಗಜಮಂ ಪಡೆ ಪಾಯ್ದ ವಾರ್ಧಿಯುಂ ಚುಳುಕದೊಳಾಂಪ . . . ಅಳವಂ ಸಮಂತು ತಳೆದಂ (ಚಂದ್ರಪು. ೬-೨೮); ಅಗಸ್ತ್ಯಂಗೆ ಚುಳುಕಮಾತ್ರಂ ಭವಸಾಗರಶತಂ (ಅನಂಪು. ೧೭-೪೪). ೨. ಕಾಡಿಗೆ, ಮುಲಾಮು ಮುಂತಾದುವುಗಳನ್ನು ಹಾಕಿಡುವ ಸಣ್ಣ ಪಾತ್ರೆ ; ಭರಣಿ. [ ಸಂ. ]

**ಚುಲುಕು** 'ಚುಳುಕು' ನೋ.

**ಚುಲುಕುಗಾಣು** (ಕ್ರಿ). ಹಗುರವಾಗಿ ಕಾಣು ; ಕಡೆಗಣಿಸು ; ಅಲಕ್ಷ್ಯ ಮಾಡು : ಬೆಳವಾಗ ಗೆಲವು ವಿಡಾಯುಗಳವಗೊಡವೆಳೆದು ಬಂದುವು ಸಾಜವಾಗಿ ಬೆಳೆದ ಮೇಲೀ ಸಿರಿ ಬಂದ ಮೇಲವನಾರ ಚುಲು[ಪಾಠಾಂ. ಳು]ಕುಗಾಣನೆ (ಭರತ. ೩೦-೨೪).

[ ಚುಲುಕು (<ಚುಳುಕು) + ಕಾಣು (<ಕಾಣ್) ]

**ಚುಲುಕುತನ**, ಚುಲಕತನ (ನಾ). ಗಂಭೀರವಲ್ಲದ ನಡತೆ; ಹಗುರವಾದ ನಡತೆ ; ಲಾಘವ : (+). **ಚುಲಕತನ :** (+).

[ ಚುಲುಕು(<ಚುಳುಕು) + – ತನ ]

**ಚುಲುಕುಬುದ್ಧಿ**, ಚುಲಕಬುದ್ಧಿ (ನಾ). = ಚುಲುಕುತನ : (+). **ಚುಲಕಬುದ್ಧಿ :** (+). [ ಚುಲುಕು (<ಚುಳುಕು) + ಬುದ್ಧಿ ]

**ಚುಲುಕೋದಕ**, ಚುಳುಕೋದಕ (ನಾ). ಅಂಗೈಯಲ್ಲಿ ಹಿಡಿಯುವಷ್ಟು ನೀರು ; ಮುಕ್ಕುನೀರು : ಮಹಾತ್ಮ ಜಹ್ನು ತಾಂ ಮೊಗೆಯೆ ಸುಹಸ್ತದಲ್ಲಿ ಚುಲುಕೋದಕವಾದಳದೊಮ್ಮೆ ಗಂಗೆ (ಪಂಚಶ. ೮೨-೧೦೩). **ಚುಳುಕೋದಕ :** ಚುಳುಕೋದಕಂಗಳಿಂ ಕಿಂಚಿದ್ ದಳಂಗಳಿಂ ನಲಿದು ಗಂಗಾಂಬುಶೇಖರನ ಪೂಜಿಸಿದಂಗೆಯೊಲಿದಿಂದ್ರನರಮನೆಯ ಸಿರಿ ಬಂದು ತೊತ್ತಾಗಿಯಿರ್ಪಳೆಂಬುದೆ ನಿಶ್ಚಯಂ (ಗುರುಜಾ. ೫-೫೭). [ ಚುಲುಕ + ಉದಕ₂ ]

**ಚುಲ್ಬಾರಿ** 'ಚಿಲ್ಬೇರಿ' ನೋ.

**ಚುಲ್ಲ$_1$**, ಚಲ್ಲ$_3$, ಚಿಳ್ಳ (ಗು). ೧. ಕೀಳಾದ; ಕ್ಷುದ್ರವಾದ. 'ಚುಲ್ಲವಮಾತು' ಪರಾ. (ನಾ). ೨. ಅಲ್ಪತನ; ಕ್ಷುದ್ರತೆ : ಈ ಪಳ್ಳಿ ಪಟ್ಟಣದ ಜನರೆಲ್ಲ ಚುಲ್ಲಮುಳಿದು ಕಳೆಗೊಳ್ಳುವರು (ಬಾಂಧಾ. ೩-೮೧). **ಚಲ್ಲ$_3$**: ೩. ಕೀಳಾದ ಆಳು ; ಹೀನ : ವಾತಾತ್ಮಂ ಚಲ್ಲನೂನಂ ಪಿಶುನಗನಳಿಪಂ (ಮುದಿಕ. ೩-೦೯); ಮಲ್ಲಮರ್ದಾನಾಳುಗಳೆಕ್ಕಟಿಗರ್ಚ[ಪಾಠಾಂ. ಬ]ಲ್ಲಗರ್ಗೋಳಾಯಿಲ ಪೇಟಕರ್ . . . ಎಸೆದರ್ (ಮದೇಪು. ೧೯-೩). **ಚಿಳ್ಳ**: ೩. ಗೆಲ್ಲ ಸೋಲ ಬಲ್ಲವರಿಗೇಕೆ ಅದು ಚಿಳ್ಳರ ಗುಣ (ಸಗವಿ. ೪೫) ; ಎಳ್ಳನಿತು ಈ ಭೂಪತೀಶನು ಸುಳ್ಳ ಪೇಳುವನಲ್ಲ ಮನುಜರೆ ಕಳ್ಳ ಚಿಳ್ಳನು ಅಲ್ಲ (ಹಮುಕ. ೧೧೪). [ <ಪ್ರಾ. ಚುಲ್ಲ. / ಸಂ. ಕ್ಷುಲ್ಲ ]

**ಚುಲ್ಲ$_2$** (ನಾ). ೧. ನೀರು ಸುರಿಯುವ ಕಣ್ಣು ; ಸೋರುಗಣ್ಣು ; ಮಂಜುಗಣ್ಣು : ನಾನಾ ಕಂಟಕದೋಷಂ ಚುಲ್ಲ ಚಿಲ್ಲಂ ಪಿಟಕಪಿಲ್ಲಾದಿಗಳು ತೊಂಬತ್ತಾರೆನಿಸುತಿಹುವೂ (ವಿವೇಥ. ೩-೪೫). ೨. ಮಂಜುಗಣ್ಣಿನವನು; ಸೋರುಗಣ್ಣಿನವನು : "ಪಿಲ್ಲಃ, ಚಿಲ್ಲಃ, ಚುಲ್ಲಃ–ಈ ೩ ಅಟಿಗಣ್ಣನವಂ" (ಜಲಾಯು. ೯೯-೪೩೩). [ ಸಂ. ]

**ಚುಲ್ಲಕ**, ಚಂಲ್ಲಿಕ, ಚಂಲ್ಲುಕ (ಗು). ೧. ಕೀಳಾದ ; ಕ್ಷುಲ್ಲಕವಾದ : "ಚುಲ್ಲಕ–ಕೆಟ್ಟ, ಕ್ಷುದ್ರ" (ಪ್ರಥಮ). **ಚುಲ್ಲಿಕ**: ೧. ಶ್ರೀವಿಜಯವಿಠಲನ ಕರುಣದಿಂದ ಚುಲ್ಲಿಕ ನಡತೆ ಪೋಗಿ ಒಳ್ಳೆ ಫಲ ದೊರಕುವದೂ (ಕೀರ್ತನ. ೨೦೧). **ಚುಲ್ಲುಕ** : (ನಾ). ೨. ಕೀಳಂಮನುಷ್ಯ ; ಅಲ್ಪ : ಅವರ ಕಾರ್ಯಮ ಲೇಸುಂ ಎಂದುಸಿರೆ ಚು[ಪಾಠಾಂ. ಚ]ಲ್ಲುಕರ್ (ಹಾರಾಸ್ಯ. ೪-೦೫-೭೦). [ <ಸಂ. ಕ್ಷುಲ್ಲಕ ]

**ಚುಲ್ಲಮಾತು** (ನಾ). ಅಲ್ಪವಾದ ಮಾತು; ಕ್ಷುದ್ರವಾದ ಮಾತು : ನಿಲ್ಲಿಸಲು ಧರಣಿಪನ ಮಾರ್ಗದಿ ಚುಲ್ಲಮಾತುಗಳಾಡಿ ಕೌಶಿಕ (ಹಮುಕ. ೦೩೪). [ಚುಲ್ಲ$_1$ + ಮಾತು$_1$ ]

**ಚುಲ್ಲಿ** (ನಾ). ಬೆಂಕಿ ಉರಿಸುವ ಸಲಕರಣೆ; ಒಲೆ: "ಚುಲ್ಲೀ, ಅಶ್ಮಂತಕಂ, ಉತ್ತಾನಂ, ಅಧಿಶ್ರಯಣೀ – ಈ ೪ ಒಲೆ" (ಜಲಾಯು. ೩೨-೦೫೪); ಅಡಿಗಡಿಗೆ ಚುಲ್ಲಿಯೋಳಿಡುವ ಸೌದ ಸಿಡಿವುತ್ತ ಕಿಡಿಗಳ ಕೆದಱುತಿರ್ಪವಂ ಬಿಟ್ಟು (ವೀಶ್ರೈಪು. ೭-೧೦-೩೭); ಚುಲ್ಲಿ ಪೇಷಣ ಕಂಡನಿ ಉಪಸ್ಕರ ಉದಕುಂಭ ಎಂಬೈದು ಗೃಹೋಪಕರಣಗಳೂ ಹತ್ಯಾಕಾರಕಗಳು (ಆರ್ಯಧ. ೧೮೭). [ ಸಂ. ]

**ಚುಲ್ಲಿಕ** 'ಚುಲ್ಲಕ' ನೋ.

**ಚುಲ್ಲುಕ** 'ಚುಲ್ಲಕ' ನೋ.

**ಚುಲ್ಲುವಾಸ್ತ್ರ** (ನಾ). (?) : ಸ್ತ್ರೀಯರಲ್ಲದಡೆ ಕಡಸಾರು ಹೆಂಗಳಡಿದನ ಮೇಲೆ ಚುಲ್ಲುವಾಸ್ತ್ರಗಳಿಂದ ದಾನವನ ಕೊಳಚುದಕದಲ್ಲಿ ತೇಲ್ಮುಳುಗು ತಬ್ಬಿಯ ಪಾಯ್ದನೆಂಬ ಮರುಳೀನೆನ್ನೊಳುಳಿಯೆಂದನು (ಜನಮು. ೩೩-೨೨). [ ? + ಅಸ್ತ್ರ ]

**ಚುಸ್ತ** (ನಾ). ೧. ಸುಟ್ಟ ಅಥವಾ ಕರಿದ ಮಾಂಸ. ೨. ಮಾಂಸವನ್ನು ಸುಟ್ಟಾಗ ಅಥವಾ ಕರಿದಾಗ ಅದಕ್ಕೆ ಉಂಟಾಗುವ ಕರಿಕಾದ ಹೊರಪದರ : (ಕ). [ ಸಂ. ]

**ಚುಳಕ$_1$** (ಗು). ಸೂಕ್ಷ್ಮವಾದ: ಸಕಲ ನಿಷ್ಕಲ ಉಭಯಾಕಾರವ ಅಖಿಲಾಂಡ ಗಳನೊಳಕೊಂಡೊಪ್ಪುವ ಚುಳಕ ಚಿದಾನಂದವನು (ಮ್ಯೂಲಾರ. ೦೩೯-೨). [ <ಚುಳುಕು ]

**ಚುಳಕ$_2$** 'ಚುಲಕ' ನೋ.

**ಚುಳಕಪಾನ** (ನಾ). ಅಂಗೈಯಲ್ಲಿ ತುಂಬುವಷ್ಟು ನೀರು ; ಬೊಗಸೆ ಯಷ್ಟು ನೀರು : ಅಂತಸ್ಸ್ಫುರದತಿಸ್ಫಾರರಸಮರೋಷ್ಮಸಂತಪ್ತಜಲ ತೃಷ್ಣೇಕಚುಳಕಪಾನಮಾತ್ರಜಾನುದಘ್ನಜಲದುರ್ಗನುಮಾಗಿ ನಡೆದು (ಅದಿಪು. ೦೪-೩೨ ವ). [ ಚುಳಕ$_2$ (<ಚುಲಕ) + ಪಾನ ]

**ಚುಳಕಿತ** (ನಾ). ಅತಿಸೂಕ್ಷ್ಮವಾದಂದಂ (?) : ಅಳಿಕನೇತ್ರಾಶ್ರುಮಕಿ ನವಿಸುತ ಗಣಂ ಕೂಡೆ ಪುಳಕಿಸುತ ಬರಲು ಶಶಿರವಿಕೋಟಿಕಿರಣದಿಂ ಚುಳಕಿತವನತಿಗಳದ ಕೈವಲ್ಯಮಂ ಕಂಡ ಕುಳಕಪ್ರಸಾದಿ ವೃಷಭಾ (ಲಿಂಗಪು. ೬-೩೫). [ ಸಂ. ಚುಲಕಿತ ]

**ಚುಳಕು** (ನಾ). ತೀಕ್ಷ್ಣತೆ (?) : ಚರಲಿಂಗಂ ಚಾತುರ್ಭುಜ ವಂದಿತ ಚಿರ ಕಾಯಾ ಚೇಲಾಳ ಸುರಕ್ಷಕ ಗರಳಾಂಕಾ ಚುಳಕಿಲ್ಲದ ಶಾರ್ವರಿವರ ಚೂಡಾ ಮಕುಟ (ಪ್ರಭುಪು. ೩-೪). [ ? ]

**ಚುಳಕೆ** 'ಚುಳಿಕೆ' ನೋ.

**ಚುಳಿ** 'ಚೂಳಿ$_1$' ನೋ.

**ಚುಳಿಕೆ**, ಚುಳಕೆ (ನಾ). ೧. ಉಕ್ಕಿನ ಅಥವಾ ಕಬ್ಬಿಣದ ತುದಿಯುಳ್ಳ ಬೆತ್ತ,–ಕೋಲು : ಕವಣೆಕಲ್ಬಿಂಗಲ್ಲು ವನಿಕೆಯು ವಿವರಿಸಲ್ಪಡಿಗೆಗಳು ಚುಳಿಕೆಯು (ಜ್ಞಾನಸಿಂ. ೨-೩೫). **ಚುಳಕೆ**: ೨. "ಹತ್ತಿ ಬಡಿಯುವ ಬೆತ್ತ" (ಜಾನಕೋ. ೫೭). [ ←ತಮಿ. ಚುಳಿಕ್ಕು ]

**ಚುಳುಕ** 'ಚುಲಂಕ' ನೋ.

**ಚುಳುಕಾಡು** 'ಚುಳ್ಕಾಡು' ನೋ.

**ಚುಳುಕಿ** (ನಾ). ಕಿರುತೊಳೆ; ಸೋಲೆ: ಹಣ್ಣು ಹಿಸಿದು ಇಬ್ಭಾಗವಾಗಿ ತನ್ನ ಹೊಟ್ಟೆಯ ತೊಳೆ ಚುಳುಕಿಗಳನೆಲ್ಲ ಬಯಲಿಗೆ ಹಾಕಿತು (ಮಲಮ. ೪೩೧). [ ←ಮಲ. ಚೂಳ ]

**ಚುಳುಕು**, ಚುಣುಕು$_2$. ಚಂಲುಕು, ಚುಳ್ಕು (ನಾ). ೧. ಅತಿ ಸೂಕ್ಷ್ಮ ವಾದುದು ; ತೀರ ಸಣ್ಣದಾಗಿರುವುದು : ಅಗೋಚರ ಅಪ್ರತಿಮ ಲಿಂಗವೆ . . . ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ (ಬಸವ. ೭೪೩); ಘನಮಹಿಮಲಿಂಗವೆ ಅನುಪ್ರಾಣಿ ಎನ್ನ ಕರವನಜಕ್ಕೆ ಬಂದು ಚುಳು ಕಾದಿರಲ್ಲ (ಸುಜಾರ. ೦೦ ಪಲ್ಲವಿ); ತವ್ಮ ಬುದ್ಧಿಯ ಅಂಗೈಯಲ್ಲಿ ಲಿಂಗದಂತೆ 'ಚುಳುಕಾ'ಗಿ ಬರುವದೆ ನನ್ನ ಹಾದಿ (ಮನಾಹಿ. ೩). **ಚುಣುಕು$_2$**: ೧. ನಿಮ್ಮ ಹೊಟ್ಟೆ ಕರುಳಿನಾ ತುಣುಕು ಅಂತನ ಚುಣುಕು ತೋರಿಸಿದಿರಿ ವಿಣುಕು (ಹಾದುಪಾ. ೪೩-೫). **ಚುಲುಕು** :೨. ಲಾಘವ ; ಹಗುರವಾದ ನಡತೆ. 'ಚಂಲುಕುತನ' ಪರಾ. **ಚುಳ್ಕು**: ೩. ಕುಳ್ಳು ; ಗಿಡ್ಡು : ಮೈಯಲ್ಲಿ ನೀನು ಸ್ವಲ್ಪ ಚುಳ್ಳು. ಆದ್ದರಿಂದ ನಿನ್ನ ವಯಸ್ಸು ಥಟ್ಟನೆ ತಿಳಿಯುವದಿಲ್ಲ (ಮೂರುದಾ. ೪೭). [ದೇ.॥ ತಮಿ. ಚುಳುವು; ಮಲ. ಚುಲುಂಗ; ತೆಲು. ಚುಲುಕ, ಚುಲ್ಕ]

**ಚುಳುಕೋದಕ** 'ಚುಲುಕೋದಕ' ನೋ.

**ಚುಳ್ಕಾಡು**, ಚುಳುಕಾಡು (ಕ್ರಿ). ನೀರಿನಲ್ಲಿ ತುಳುಕಾಡು,–ತೇಲಾಡು : ಕೌಂಗಿನ ಪೊಂಬಾಟೆಯ ನಟ್ಟಗಂಪುಗಡಲೊಳ್ ಚುಳ್ಕಾಡಿ ಚುಳ್ಕಾಡಿ . . . ಪದ್ಮಿನಿಯೊಳ್ ತುಂಬಿ ಮಲಂಗಿ ಸೇದೆಗಟೆಗಂ ಕಾಸಾರತೀರಂಗಳೊಳ್ (ಅನಂಪು. ೩-೦೦) ; ತೊಳಗುವ ತಿಳಿನೀರ್ಗೊಳದೊಳು ಚುಳ್ಕಾಡಿ ಬಳಿಕ ಮುಳುಗಿ ಮೇಲಕೇಳಲಾ ಲಲನೆಯ ಮುಖವೊಪ್ಪಿತು ಪಾಲ್ಗಡಲೊಳು ಪೊಳೆದುದಯಿಪ ಚಂದ್ರನಂತೆ (ಶ್ರೀಪಾಲ. ೩-೩೪). **ಚುಳುಕಾಡು** : ಮುನ್ನ ಕಣ್ಬೇಟದವಳ್ ತುಳುಕಿದೆಡೆಗೆಯ್ದು ಚುಂಬಿಸಿ ಚುಳುಕಾಡೆ ಮರಳ್ದು ಮೂಡಿದಂ ಸ್ಮರನೊರ್ವಂ (ಅನಂಪು. ೬-೩೮). [ < ತುಳ್ಕಾಡು ]

**ಚುಳ್ಕು** 'ಚುಳುಕು' ನೋ.

**ಚುಳ್ಕೋದಕ** (ನಾ).=ಚುಲುಕೋದಕ : ಪ್ರಕಟಂ ಹಾರೀತಿಮಂತ್ರಾತ್ಮಕ ನನುಪವಿತಂ ಕೊಟ್ಟ ಸನ್ಮಾರ್ಘ ಚುಳ್ಕೋದಕದಿಂದಂ ಪುಟ್ಟಿ ಚಾಳುಕ್ಯ ಕುಳರೆನಿಸಿ (ಸಾಂದೇಶ್. ೨೩-೪ ; 1122). [ < ಚುಲುಕೋದಕ ]

**ಚುಳ್ಳನೆ** (ಅ). ನೋವಾಗುವಂತೆ : ಇಱುಂಪೆ ಊಱಲು . . . ಗಂದೆ ನೆಸದುದೊ ನೊಂದು ಚುಳ್ಳನುರಿದುದೊ ತಂದೆ (ರುದ್ರಕ. ದೀ. ೨೦೪-೩). [ ಚುಳ್$_0$ + – ಅನೆ$_1$ ]

**ಚುಳ್ಳಿ₁** (ನಾ). ೧. ಒಂದು ಬಗೆಯ ಸಾಗವಾನಿ ಮರ: (*). ೨. ಒಂದು ಬಗೆಯ ಮುಳ್ಳುಪೊದೆ. 'ಕರಿಚುಳ್ಳಿ' ಪರಾ.
[ ದೇ.॥ ತಮಿ. ಮಲ. ತುಳು. ಚುಳ್ಳಿ ]

**ಚುಳ್ಳಿ₂** (ನಾ). ವಿಕಾರ; "ತಂಟೆಗಳನ್ನು ಚುಂಚಿನಂತೆ ನೀಡುವುದು" (ಸಿರಿಕೋ. ೧೮೫): ಅಚ್ಯುತ ಅಳುಕಳುಕಿ, ನಾಚಿ, ನಾಚಿ ತನ್ನ ಮುಖವನ್ನು ಚುಳ್ಳಿ ಮಾಡಿಕೊಂಡು . . . ಕಾರ್ಯೋದ್ದೇಶವನ್ನು ವಿವರಿಸಿದ (ಮುಗಿಯು. ೧೮೩). 'ಚುಳ್ಳಿಸು' ಪರಾ. [ ? ]

**ಚುಳ್ಳಿಮುಳ್ಳಿಗಿಡ** (ನಾ). ಒಂದು ಬಗೆಯ ಔಷಧಿಸಸ್ಯ: ಗುಬ್ಬಚ್ಚಿಗಿಡ, ಚುಳ್ಳಿಮುಳ್ಳಿಗಿಡ (ವೃಜಿಗಿ. ೧೧-೧೮೫). [ಚುಳ್ಳಿಮುಳ್ಳಿ₀+ಗಿಡ (<ಗಿಡು)]

**ಚುಳ್ಳಿಸು** (ಕ್ರಿ). ಕಿವುಚು; ವಿಕಾರಮಾಡು: ಆಕೆ ಕೊಂಚವೂ ಮುಖ ಚುಳ್ಳಿಸದೆ ನಗುನಗುತ್ತ ತನ್ನ ಕಠಾರಿಯನ್ನು ಬೀಸುತ್ತಿರುತ್ತಾಳೆ (ಶೃವಾಇ. II, ೨೯೯). [ ಚುಳ್ಳಿ₂ + – ಇಸು₃ ]

**ಚುಱ್** (ನಾ). ಒಂದು ಅನುಕರಣ ಶಬ್ದ. 'ಚುಱ್ಚನ್' ಪರಾ.

**ಚುಱಿ** 'ತುಂಬುಚಿ' ನೋ.

**ಚುಱುಕು, ಚುರುಕು** (ನಾ). ೧. (ಚಾಕು ಮುಂತಾದುವುಗಳಂತೆ) ತೀಕ್ಷ್ಣವಾಗಿರುವಿಕೆ; ಮೊನಚಾಗಿರುವಿಕೆ; ಹರಿತವಾಗಿರುವಿಕೆ: ಒಳಗೊಳಗೆ ನಲ್ಲನಂ ಪಲ್ಲುಗುರ್ಗಳ ಚುಱುಕುಗಳನಱಿದು ಬೈವುತಂ ಬರುತಿರ್ದರಾತ್ಮಮಂದಿರಕಂದು ಬಂಧಕಿಯರು (ಹಬಪು. ೯-೧೭). **ಚುರುಕು:** ೨. ತೀಕ್ಷ್ಣವಾದುದು; ಹರಿತವಾದುದು: ಹೆಂಗಸರಿಗೆ ಈ ವಿಷಯದಲ್ಲಿ ಬುದ್ಧಿ ಬಹಳ ಚುರುಕು (ಅಂಚಹೂ. ೪೧); ರೋಜಕಿಯ ಕಿವಿ ತುಂಬ ಚುರುಕು (ಮಹಾಕ್ಷ್ಯಾ. ೨೨); ಜನಗಳ ಬುದ್ಧಿಯ ಚುರುಕಿನ ಮೇಲೆ, ಪ್ರಮಾಣಿಕತೆಯ ಮೇಲೆ ಅದರ ದೊಡ್ಡಸ್ತಿಕೆ ಹೊಂದಿಕೊಂಡಿದೆ (ಅಳಸಿ. ೦೩೭).೩. ಸೂಕ್ಷ್ಮವಾದುದು; ಚಾಲಾಕಾದುದು: ಪೇಟೆಯ ಮಕ್ಕಳು ಬಹಳ ಚುರುಕು (ತ್ಯಾಗಮ. ೦೮೦). ೪. ಕಾವು; ಬಿಸುಪು: ಪ್ರಶಾಂತ ಮತ್ತು ತಂಪಾದ ಕೋಣೆ ಹೊರಗಿನ ಬಿಸಿಲಿನ ಚುರುಕನ್ನು ಮರೆಯಿಸಿ, ಕೆಲಸಕ್ಕೆ ಪ್ರೋತ್ಸಾಹಿಸುತ್ತಿದ್ದವು (ಅಪನಾ. ೨೧). ೫. ವೇಗ; ಲಗುಬಗೆ: ಚುರುಕಿನ ಕಡಲೆಡೆ ಗಾಳಿಗಳೆಮ್ಮನ್ ಕರೆತಂದಿರ್ದಪುವೆಂತೋ ಎಮ್ಮನ್ (ಬಧ್ಯಪ್ರ. ೯-೧೬೯): ಹುಕ್ಕರಾಯನು . . . ಯುದ್ಧಸಿದ್ಧತೆಗಳನ್ನು ಚುರುಕಿನಿಂದ ನಡೆಯಿಸುತ್ತಿದ್ದನು (ಶ್ರೀವಿದ್ಯಾ. ೫೬); ಚುರುಕಾಗಿ ಹೋದರೆ ಹೊತ್ತು ಮುಳುಗುವುದರಲ್ಲಿ ಹೋಗಿಬಿಡಬಹುದು (ಹಂಗಾಳ್ನ ೩೩). ೬. ಪದಾರ್ಥಗಳ ಬೆಲೆಯಲ್ಲಿ ಏರಿಕೆ; ವಸ್ತುಗಳು ತುಟ್ಟಿಯಾಗುವಿಕೆ: (*). (ಗು). ೭. (ಕತ್ತಿಯಂತೆ) ಹರಿತವಾದ; ಹದನಾದ; ತೀಕ್ಷ್ಣವಾದ: ಚುರುಕು ಶಬ್ದಪ್ರಯೋಗದಲ್ಲಿಯೂ, ಅದಕ್ಕಿಂತ ಚುರುಕಾದ ತಿನಿಸುಗಳಲ್ಲಿಯೂ ಆಕೆ ತುಂಬ ಆಸಕ್ತಳು (ಸಾಸಮೂ. ೮೪). ೮. ಚತುರ; ಚಾಲಾಕಾದ: ಎಂತಹ ಚುರುಕು ಹುಡುಗಿ (ಮಹಾಕ್ಷ್ಯಾ. ೯೨).

ಚುರುಕಿನವ = ಬುದ್ಧಿವಂತ; ಚಾಲಾಕು ವ್ಯಕ್ತಿ: ಹುಡುಗ ಒಳ್ಳೇ ಚುರುಕಿನವನಾಗಿದ್ದ (ಕಾವೇರಿ. ೧೯೦). **ಚುರುಕುಮಾಡು**=ವೇಗಗೊಳಿಸು; ಶೀಘ್ರಗೊಳಿಸು: ಕುದುರೆಯನ್ನು ಚುರುಕುಮಾಡಿದರು (ಕಳಕು. ೫). **ಚುರುಕುಮುಟ್ಟಿಸು**=(ಆಲಂ) ಹಿಂಸೆಮಾಡು; ನೋಯಿಸು: ಪೋಲೀಸರು ಅವನಿಗೆ ಚನ್ನಾಗಿ ಚುರುಕುಮುಟ್ಟಿಸಿದರು (ರೂಢಿ). **ಚುರುಕುಮೆಣಸಿನಕಾಯಿ**=೧. ಒಂದು ಬಗೆಯ ಮೆಣಸಿನಕಾಯಿ; ಲವಂಗ ಮೆಣಸಿನ ಕಾಯಿ: ಒಂದಷ್ಟು ಚುರುಕುಮೆಣಸಿನಕಾಯಿ ಕೊಂಡುಕೊಂಡು ಬಾ (ರೂಢಿ). ೨. (ಆಲಂ) ಚಟುವಟಿಕೆಯಿಂದ ಕೂಡಿರುವವನು: ಆ ಹುಡುಗ ಚುರುಕುಮೆಣಸಿನಕಾಯಿ (ರೂಢಿ).

[ ದೇ.॥ ತಮಿ. ಚುರುಚುರುಪ್ಪು; ಮಲ.ಚುರುಕ್ಕು; ತುಳು. ಚುರುಕು; ಕೊಡ. ಚುರೀಕೀ; ತೆಲು. ಚುಱುಕು ]

**ಚುಱುಚುಱಿಗ** (ನಾ). ಚುರುಕಾದ ನಡಗೆಯುಳ್ಳವನು; ವೇಗಶಾಲಿ: "ಉತ್ಸಾಹಃ, ತ್ವರಿತಃ–ಈ ೨ ಚುಱುಚುಱಿಗಂ" (ಕರಾಯು. ೬೦-೨೦೫).
[ ಚುಱುಚುಱು₀ + – ಇಗ ]

**ಚುಱ್ಚನೆ** (ಅ). ವೇಗವಾಗಿ; ರಭಸದೊಡನೆ: ಅಚ್ಚುಳಕೋಲಿಂ ತಿಱ್ಚನೆ ತಿರಿಪಿ ದುರಾತ್ಮರ್ ಚುಱ್ಚನೆ ಕೆನ್ನೆತ್ತರೊಗೆಯೆ ತೊಲಗದೆ ಬಡಿದರ್ (ಧರ್ಮಾಮೃ. ೩-೧೯೧); ಚುಱ್ಚನೆ ಕೊಂದಿಕ್ಕಿದವು (ಜಂಪ್ರಸಾಂ. ೮-೫೨).

**ಚುಱ್ಚುಚುಱ್ಚನೆ** (ದ್ವಿರುಕ್ತಿ): ಕಡುಗಾಯ್ದು ತೀವ್ರಖರಕರಪ್ರಕರಮಂ ಚುಱ್ಚುಚುಱ್ಚನೆ [ಪಾಠಾಂ. ಚುಟಚುಟನೆ] ಸುಡೆ (ಗಿರಿಕ. ೯-೨೭ ವ).
[ ಚುಱ್ + – ಅನೆ₁ ]

**ಚುಱ್ಚನ್** (ಕ್ರಿ). ಚುರುಗುಡು; ಸಂಡು: ಮಹಾಕ್ಷುಧಾಗ್ನಿಯೇಟಗ್ಗಿಗೆ ಬಿಸಿಲಟ್ಟೆ ಪೆರ್ಚುವ ಪಿಪಾಸೆಗೆ ಚುಱ್ಚಿನುತಿರ್ಪ ಕಲ್ಲ ಬೆಂಕೆಗೆ ಬಿಡದೊಂದು ಮಗ್ಗುಲಿರವಿರಗಿನಿತಟ್ಟದೆ . . . ಹೃದಯಂ ಕುಳಿರ್ಕೊಳುತುಮಿರ್ದುದು (ವರ್ಧಪು. ೧೨-೩೫). [ ಚುಱ್ + ಎನ್₁ ]

△ **ಚುಟ್ಟು₂** 'ಚುರ್ಚು₂' ನೋ.

**ಚೂ** (ನಾ). ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಹೇಳುವ ಮಾತು. 'ಚೂಬಿಡು' ಪರಾ.

**ಚೂಕ** (ನಾ). ತುಚ್ಛನಾದವನು; ಅಲ್ಪ; ನೀಚ: ಸೇರದಿವರ ಸಂಗ . . . ಲೋಕಾಪವಾದವ ಸ್ಯೆರಿಸುವ ಚೂಕ ಗಳಿಗೆನುತಸುರಾರಿ ನಗುತಿರ್ದ (ಅಕ್ರೂಚ. ೬-೭೭). [ <ಸಂ. ಶೂಕ./ತಮಿ. ಚೂಕ್ಕ ]

**ಚೂಕಿ** 'ಚೂಕು' ನೋ.

**ಚೂಕು, ಚುಕಿ, ಚೂಕಿ** (ನಾ). ತಪ್ಪು; ನ್ಯೂನತೆ; ಲೋಪ: "ಚೂಕು = ತಪ್ಪು; ಅಪರಾಧ" (ಜಾನಕೋ. ೫೭). **ಚುಕಿ:** (ರೈಸಗ. II, ೫೪೭). **ಚೂಕಿ:** (ವ್ಯಗಕ. IV, ೭೭೭): ಚೂಕಿಯಲ್ಲಿ ಯಾರ ಲುಕಸಾನಿ ಇದ್ದಾಗ್ಯೂ ತತ್ಕಾಲವೇ ಬರಿದು ತಿಳಿಸಬೇಕು (ಮುಂಬಧಾ. ೯೩).
[ ←ಹಿಂ. ಮರಾ. ಚೂಕ್./ಪ್ರಾ. ಚುಕ್ಕ ]

**ಚೂಕುನ್ನ** (ನಾ). ೧. ಚೂ ಎಂದು ಅಟ್ಟುವ ನಾಯಿ. ೨. (ಆಲಂ) ಹೇಳಿದಂತೆ ಕೇಳುವವನು: ಧರ್ಮಜಗೆ ಪಟ್ಟವಾದರೆ ರಾಜ್ಯದ ಕನ್ನೆಗರಸಹರವರ ಪಾರಂಪರೆಯ ಪುತ್ರರಿನ್ನು ಸಂದೇಹಮೇತಕೆಯಿಕ್ಕು ಪಡಿಯ ಚೂಕುನ್ನರಾದೆವೆ ಮಹಾದೇವ (ಲಕ್ಷ್ಮಭಾ. ೩೨-೮).
[ ಚೂ + <ಕುನ್ನಿ₁ ]

**ಚೂಚಕ₁** 'ಸೂಸಕ' ನೋ.

**ಚೂಚಕ₂** (ನಾ). = ಚೂಚಂಗ: ಇಂಬೊಪ್ಪುವ ಕುಕ್ಷಿ ಚೆಲ್ವನೊಳಕೊಂಡಾ ಚೂಚಕಂ (ಲೀಲೀ. ೧೧-೬೦); ಬೆಳೆದು ಕೊಬ್ಬಿದ ನಡುವನು ಕಂಡು ಮೊಗಗುಂದಿದೊಲು ಚೂಚಕಗಳೆಲ್ಕೊಪ್ಪಿದವು (ಜಂಪ್ರಸಾಂ. ೪-೯೩).
[ <ಸಂ. ಚೂಚುಕ ]

**ಚೂಚಿಸು** (ಕ್ರಿ). ನೋಡು; ತಿಳಿ; ಪರೀಕ್ಷಿಸು (?): ದಶಮುಖ ನೊರ್ಮೆಯೆ ಚೂಚಿಸಲಾಟಿಸಿ ದಶಮುಖನಳಿಪಿಂ ನೋಡುತ್ತಿರ್ದಂ (ಕುಮುರಾ. ೯-೮). [ ಚೂಚು ? + –ಇಸು₃./ತೆಲು. ಚೂಚು ]

**ಚೂಚು₁** 'ಚುಂಚು₁' ನೋ.

**ಚೂಚು₂** (ಗು). ಚೂಪಾದ; ಮೊನಚಾದ. 'ಚೂಚುಗದ್ದ' ಪರಾ.
[ ? ]

**ಚೂಚುಕ** (ನಾ). ಮೊಲೆಯ ತೊಟ್ಟು: ಪೊಂಗೊಡನಂ ತಮಾಳಪಲ್ಲವ ದೊಳ್ ಮುಚ್ಚಿದಂದದೊಳೆ ಚೂಚುಕಮಾಂತುದು ಕರ್ಪಂ (ಪಂಪಭಾ. ೧-೧೨೫): ಹೃದಯದ ಕಾಳಿಕೆಯೆನೆ ಸೊಗಯಿಸಿದತ್ತು ಮೇಚಕತೆ ಚೂಚುಕ ದೊಳ್ (ಚಂದ್ರಪು. ೩-೮೭): ಚೂಚುಕಂ ಕರ್ಪಂ ತಳೆಯೆ (ರಾಮಾಶ್ವ. ೨೧-೭).
[ ಸಂ. ]

**ಚೂಚುಗದ್ದ** (ನಾ). ಚೂಪಾಗಿರುವ ಗದ್ದ ; ಮೊನಚಾದ ಗದ್ದ : ಒಂದೆರಡು ಕೆಂಪುಹನಿಗಳು ಅವರ ಚೂಚುಗದ್ದದ ಮೇಲೆ ಕುಳಿತಿದ್ದವು (ರಂಗರೋ. ೭೭). [ ಚೂಚು$_{4}$ + ಗದ್ದ (<ಗದ್ದ$_{1}$) ]

**ಚೂಟ್** (ನಾ). ಬಿಟ್ಟುಬಿಡುವುದು; ಬಿಟ್ಟು ಹೊರಡಂವಿಕೆ. 'ಚೂಟಾಟ' ಪರಾ. [ ←ಹಿಂ. ಛೂಟ್ ]

**ಚೂಟಾಟ**, ಚೂಡಾಟ, ಜೂಟಾಟ (ನಾ). ಒಂದು ಬಗೆಯ ಆಟ ; ಚೂಟ್ ಎಂದು ಹೇಳಿದ ಕೂಡಲೆ ಒಬ್ಬರು ಉಳಿದವರನ್ನು ಅಟ್ಟಿಸಿಕೊಂಡು ಹೋಗಿ ಮುಟ್ಟುವ ಆಟ; ಮುಟ್ಟಾಟ : ಚಂದ್ರ ಮೋಡಗಳೊಡನೆ ಚೂಟಾಟವಾಡುತ್ತಾ ದಿಗಂತದ ಕಡೆಗೆ ಓಡುತ್ತಿದ್ದ (ಮುರುಳಿ. ೬೨); ಒಂದರ ಹಿಂದೆ ಒಂದು ಮುಟ್ಟಿಟ್ಟುಕೊಳ್ಳುತ್ತಾ ಅವು ಚೂಟಾಟವಾಡುತ್ತಿರುವಂತೆ ಕಾಣುತ್ತಿದ್ದವು (ಇಳಿಮ. ೨೬). **ಚೂಡಾಟ:** ಎಳೆಗಾಳಿಗೆ ಚೂಡಾಟವಾಡುತ್ತಿದ್ದ ನೀಳಕೇಶ ಹಾರಿ ನಾಗೇಂದ್ರನ ಮೊಗಕ್ಕೆ ಕಚಕುಳಿಯಿಟ್ಟವು (ಸಿಡಿಲು. ೩೭). **ಜೂಟಾಟ:** ಒಂದು ಸಂಜೆ ಹುಡುಗಿಯರೆಲ್ಲರೂ ಜೂಟಾಟವಾಡುತ್ತಿರುವಾಗ ಮಾಧವಿಯು . . . ಬಿದ್ದುಬಿಟ್ಟಳು (ಮೊಗ್ಗು. ೪೭) ; ಮಕ್ಕಳೆಲ್ಲರೂ ಜೂಟಾಟ ಆಡುತ್ತಿದ್ದರು (ರೂಢಿ).
[ ಚೂಟ್ + ಆಟ ]

**ಚೂಟಿ$_{1}$** 'ಸೂಟಿ$_{1}$' ನೋ.

**ಚೂಟಿ$_{2}$** (ನಾ). ಗುರಿ ; ಲಕ್ಷ್ಯ$_{6}$ : (ಕ).
[ ದೇ.೩ ತುಳು. ಚೂಟ ; ತೆಲು. ಸೂಟ ]

**ಚೂಟಿ$_{3}$** 'ಸೂಟಿ$_{2}$' ನೋ.

**ಚೂಟಿಕಾತಿ** (ನಾ). ಚುರುಕಾಗಿರುವವಳು; ಚತುರೆ: ಬೇಟದ ಪದನೇನು ಕೂಟದ ಕುಟುಹೇನು . . . ರಂಗಾಯೆಂಬ ಚೂಟಿಕಾತಿಯನೆಂದೀಕ್ಷಿಪೆನೊ (ಕತಸಾಂ. ೨೯-೩೩). [ ಚೂಟಿ$_{1}$ (<ಸೂಟಿ$_{1}$) + – ಕಾತಿ$_{5}$ ]

**ಚೂಟು$_{1}$** 'ಚಿವುಂಟು' ನೋ.

**ಚೂಟು$_{2}$** 'ಸೂಟಿ$_{1}$' ನೋ.

**ಚೂಟುಗಾರ** (ನಾ). ಚದುರ ; ಉಪಾಯಗಾರ : (ಕ).
[ ಚೂಟು$_{2}$(<ಸೂಟಿ$_{1}$) + – ಗಾರ (<–ಕಾಱ) ]

**ಚೂಡ$_{1}$** (ನಾ). ೧. ಶಿಖೆ ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,–ಕೊಟ್ಟು: "ಶಿಖಾ ಚೂಡಮೆನಲಾ ಕೊಟ್ಟು" (ಮಂಗರಾ. ೩೦-೩). ೩. ಶಿಖರ ; ತುದಿ. 'ಚೂಡಾಗ್ರ' ಪರಾ. [ <ಪ್ರಾ. ಚೂಡಾ. / ಸಂ. ಚೂಡಾ ]

**ಚೂಡ$_{2}$** (ನಾ). ಗುಂಟುಗಂಟಾಗಿರುವ ಕೂದಲು ; ಜಡೆಗಟ್ಟಿರುವ ಕೂದಲು : "ಚೂಡ ಜೂಟ" (ಚತುನಿ. ೯೩) : ಹರನ ಚೂಡದಲ್ಲಿ ಹಾರುತ್ತಿದ್ದ ಆ ಸುಧಾಂಶುಲೇಖೆಯು ಜಗತ್ತಿನಲ್ಲಿ ಎಲ್ಲೆಲ್ಲಿಯೂ ಕಾಣಿಸಲಿಲ್ಲ (ಕೋಹಿನೂ. ೭). [ <ಸಂ. ಜೂಟ ]

**ಚೂಡಕ** (ನಾ). ಜಡೆಯಲ್ಲಿ ಧರಿಸುವ ಒಂದು ಬಗೆಯ ಚಿನ್ನದ ಆಭರಣ; ಜಡೆಬಿಲ್ಲೆ : (ಕ). [ ಸಂ. ]

**ಚೂಡಾ** 'ಚಿವಡಾ' ನೋ.

**ಚೂಡಾಂತ** (ನಾ). ಅತ್ಯಂತ ಕೊನೆಯದು; ತುತ್ತತುದಿ: ಜಗತ್ತಿನಲ್ಲೇನು ನನ್ನ ಪ್ರಾರ್ಥನೆ ಒಂದೇ ಚೂಡಾಂತವೆ ? (ಇಪ್ಪಳ. ೨೨೩).
[ ಸಂ. (ಚೂಡಾ + ಅಂತ) ]

**ಚೂಡಾಕರಣ** (ನಾ).(ಮೊದಲನೆಯ ಬಾರಿಗೆ) ಗಂಡುಮಕ್ಕಳಿಗೆ ತಲೆಯ ಕೂದಲನ್ನು ತೆಗೆಸುವ ವಿಧಿ ; ಚೌಲ. P ಷೋಡಶಸಂಸ್ಕಾರಗಳಲ್ಲಿ ಒಂದು: ಚಂದ್ರಾಪೀಡಂ ಪ್ರತಿದಿನಂ ಪ್ರವೃದ್ಧಮಾನನಾಗೆ ಚೂಡಾಕರಣಾದಿ ಕ್ರಿಯಾಕಲಾಪಮುಮಂ ಮಾಡುತ್ತುಂ (ಕಾದಂಪೂ. ೯೩೩).
[ ಸಂ. (ಚೂಡಾ + ಕರಣ) ]

**ಚೂಡಾಕರ್ಮ** (ನಾ).=ಚೂಡಾಕರಣ : ಆ ಅರಸುಮಕ್ಕಳಿಗೆ ಐದು ವರ್ಷ ತುಂಬುತ್ತಲೆ . . . ಚೂಡಾಕರ್ಮವನ್ನು ಮಾಡಿಸಿ (ಛೀಪ್ಪಕ.೩೦); ಅವರವರ ಕುಲಾಚಾರದ ಪ್ರಕಾರ ಆಯಾಕಾಲದಲ್ಲಿ ಚೂಡಾಕರ್ಮವನ್ನು ಮಾಡುವುದು (ಆರ್ಯಧ. ೧೨೩). [ ಸಂ. (ಚೂಡಾ + ಕರ್ಮ) ]

**ಚೂಡಾಗ್ರ** (ನಾ). ಶಿಖರದ ತುದಿ,–ಕೊನೆ : ಅಪ್ಪುಕುಂಜದ ಮೇಲ್ಭಾಗದಲ್ಲಿ ಬೆಳ್ದಿಂಗಳದ ಗುಣ್ಪೆಗೆ ನುಣ್ಣಾಗಿ ಕಂಗೊಳಿಸುವ ನಮ್ಮ ಕಿಲ್ಲೆಯ ಚೂಡಾಗ್ರ ಭಾಗ (ಇಪ್ಪಳ. ೧೯೨). [ ಸಂ. (ಚೂಡಾ + ಅಗ್ರ) ]

**ಚೂಡಾಟ** 'ಚೂಟಾಟ' ನೋ.

**ಚೂಡಾಮಣಿ** (ನಾ). ೧. ತಲೆಯಲ್ಲಿ ಧರಿಸುವ ರತ್ನ,–ರತ್ನದ ಆಭರಣ; ಬೈತಲೆಬಟ್ಟು : "ಶಿರದ ರತ್ನ ಚೂಡಾಮಣಿಯೆನಿಕ್ಕುಂ" (ಮಂಗರಾ. ೯೮-೧೪); ಪ್ರಣತ ರಿಪುನೃಪತಿಚೂಡಾಮಣಿರಂಜಿತಪಾದಂ (ಕಾದಂಪೂ.೦೪); ಹನುಮಂತನು ಒಪ್ಪಿ ಸೀತೆ ಗುರುತಿಗೋಸ್ಕರ ಕೊಟ್ಟ ಚೂಡಾಮಣಿಯನ್ನು ತೆಗೆದುಕೊಂಡು ರಾವುನ ಬಳಿಗೆ ಹೋದನು (ನೀತಿಚಿಂ. VII, ೨೦). ೨. (ಆಲಂ) ಶ್ರೇಷ್ಠವಾದ ವ್ಯಕ್ತಿ ಅಥವಾ ವಸ್ತು: ವಿಶದಾತ್ಮೀಯ ವಂಶಕ್ಕೆ ಚೂಡಾಮಣಿಯಂ . . . ಬಂದು ಕಂಡು (ಶಂಪಭಾ. ೬-೯೩) ; ಉಪಮಾತೀತಂ ಕೃತಿ ಶಾಂತಿಪುರಾಣಂ ಸಲೆ ಪುರಾಣಚೂಡಾಮಣಿಯೆಂದು ಪಶಮದಿಂ ಬರೆಯಿಸಿ (ಶಾಂತಿಪು ೦-೩೮) ; ಸಕಳದಿಗನ್ತರಪ್ರವರ್ತ್ತಿತಕೀರ್ತ್ತಿಯನ್ತಪ್ಪುರ ಚೂಡಾಮಣಿ (ಶಾಇಇ. XX, ೯೭-೧೪ ; 1072) ; ನೀನು ಶೀಲಸಂಪನ್ನೆಯಾಗಿ ಕನ್ನಡಕನ್ಯೆಯರ ಚೂಡಾಮಣಿಯಾಗಿರುವೆ (ದಾನಚಿಂ.೧೭೭).
[ ಸಂ. (ಚೂಡಾ + ಮಣಿ) ]

**ಚೂಡಾಯತ** 'ಚೂಡಾಯ್ತ' ನೋ.

**ಚೂಡಾಯ್ತ**, ಚೂಡಾಯತ (ನಾ). ಒಂದು ಬಗೆಯ ಆಯುಧ (?) : 'ಜೋಡು ಸೀಸಕವಾಂತ ಸಬಳಿಗರೊತ್ತಂಡ ಚೂಡಾಯ್ತ ಹರಿಗೆ ಬಿಲ್ಲವರ ಪೇಡೆಯವಡೆದ ರಾವುತ ಜೋದ ರಥಿಕರ ನೋಡ (ಮೋಹತ. ೨೦-೩೪).

**ಚೂಡಾಯತ:** ಕಡಿತಲೆ ಚೂಡಾಯತ ಕಾಗಿನ ಕಾಸೆ ಉಡಿಗೆ ಬದ್ದುಗೆಯ ಕಠಾರ ಹಿಡಿದ ಹರಿಗೆ (ಶ್ರೀಪಾಲ. ೦೩-೭೩) ; ರನ್ನದ ಬಾಕು ಕಯ್ಯಂಬು ಹೊನ್ನ ಚೂಡಾಯತ ಮೆಚಿಯೆ (ಕುರಾಸಾಂ. ೧೧-೨೧). [ ? ]

**ಚೂಡಾರತ್ನ** (ನಾ). ೧.=ಚೂಡಾಮಣಿ ೧: ವರತನುವಿನ ಕೈಯೊಳಭೇದ್ಯಕವಚಮುಮಂ ಚೂಡಾರತ್ನ[ಪಾಠಾಂ. ಚೂಡಾಮಣಿರತ್ನ]ಮುಮಂ ರತ್ನಕಟಕಂಬೆರಸು ಪಲವುಂ ಪರಾರ್ಧ್ಯ ರತ್ನಂಗಳಂ ಕೊಂಡು (ಆದಿಪು. ೧೩-೩ ವ); ಹೆಂಗಸರು ತೊಟ್ಟುಕೊಳ್ಳುತ್ತಿದ್ದ ಒಡವೆಗಳ ವೈವಿಧ್ಯ ದಂಗುಬಡಿಸುವಂಥದ್ದಾಗಿದೆ . . . ಚೂಡಾರತ್ನ, ನೂಪುರ, ನೇವುರ (ನಂಜುಂಡ. ೧೨೭). ೨.=ಚೂಡಾಮಣಿ ೨: ಕವಿಜನ ಚೂಡಾರತ್ನಂ ಕವಿತಿಲಕಂ ಕವಿಚತುರ್ಮುಖಂ ಕವಿರತ್ನಂ (ಅಜಿಪು. ೧-೮೦) ; ಯಾಕಬ್ಬೆಗಂ ಜನಿಯಿಸಿದಂ ಖ್ಯಾತಂ ಧರೆಯೊಳು ವೆರ್ಗ್ಗಡೆ ಬೇತಂ ಮಂತ್ರಿಜನಮಕುಟ ಚೂಡಾರತ್ನಾ (ಕಇಇ. ೮೧-೦೩-೪೦ ; 1117). [ ಸಂ. (ಚೂಡಾ + ರತ್ನ) ]

**ಚೂಡಾಲ** (ನಾ). ಒಂದು ಬಗೆಯ ಸುವಾಸನೆಯ ಹುಲ್ಲು ; ಕೊಡನಾರಿ ಹುಲ್ಲು ; ಭದ್ರಮುಸ್ತೆ: "ಚೂಡಾಲ–ನಾಗರಮುಸ್ತೆ, ಉಚ್ಚಟಿಗೆ" (ಓಷಧಿ. ೩೮). [ ಸಂ. ಚೂಡಾಲಾ ]

**ಚೂಡಾಲು** 'ಚೌಡಾಲು' ನೋ.

**ಚೂಡಿ$_{1}$** 'ಸೂಟಿ$_{1}$' ನೋ.

**ಚೂಡಿ$_{2}$** 'ಸೂಟಿ$_{1}$' ನೋ.

**ಚೂಡಿಕೆ** (ನಾ). ತುದಿ ; ಶಿಖರ ; ಅಗ್ರಭಾಗ: ಷೋಡಶಪ್ರತಿಯ ಕರಣಿಕರೊಳಗ್ರಗಣ್ಯನೆನಿಪ ಗಾಡಿಕಾಱಂ ವಿರೂಪಾಕ್ಷನಿರವಂ ಮನಶ್ಚೂಡಿಕಾಪಟದೊಳಂಕಿಸಿ ಬಳಿಕುಳಿದ ಬಾಹ್ಯವೃತ್ತಿಯಂ ಬಳಸುವಚಲಂ (ಪದ್ಮರಾ.೩-೬).
[ ಸಂ. ಚೂಡಿಕಾ ]

**ಚೂಡೆ** (ನಾ). ೧. ಶಿಖೆ ; ಜುಟ್ಟು. ೨. (ನವಿಲು, ಹುಂಜ ಮುಂತಾದುವುಗಳ) ತಲೆಯ ಮೇಲಿನ ತುರಾಯಿ,–ಗೊಂಡೆ : "ಶಿಖಾ, ಚೂಡಾ–ಈ ೨ ನವಿಲ ಕೊಟ್ಟು" (ಹಲಾಯು. ೪೧-೮೯). ೩. ಸಿರಪೇಶು; ಕಿರೀಟದ ತುದಿಯ ಗುಚ್ಛ,–ಕುಚ್ಚು. ೪. ತಲೆ; ಶಿರಸ್ಸು: "ಚೂಡಾ, ಶಿಖಾ – ಈ ಎರಡಱಲ್ಲಿಯುಂ ಶಿರಸ್ಸೆಂಬುದು" (ಹಲಾಯು. ೧೪೩ ೧೩). ೫. ಶಿಖರ ; ತುದಿ. ೬. ಒಂದು ಬಗೆಯ ತೋಳುಬಳೆ ; ವಂಕಿ : ಅಳವಡಿಸಿ ತೋಳ ಬಾಪುರಿ ಬಂದಿ ಭುಜಕೀರ್ತಿಗಳನು ಪೊಂಬಳೆದೋರೆ ಕಂಕಣಂ ಚೂಡೆಯು (ನವಮೋ. ೧೦-೨೫) ; ಕಂಕಣ ಚೂಡೆವ ವಂಕಿ ಬಾಜುಬಂದ ಬಂಗಾರ ಬಳೆಯು ತಗಿರೆಂದ (ಕೋಳಗೀ. ೨೧೨).
[ ಸಂ. ಚೂಡಾ ]

**ಚೂಡೋದಯ** (ನಾ).=ಚೂಡಾಕರಣ : ಪಿಕವಾನವ್ರತದುಂದುಭಿಧ್ವನಿ ಬಲಾಕಾದ್ಯಶ್ವ ಚೂಡೋದಯಾನಕರಾವಂ . . . ಚಾತಕೋದಕಕೇಳೀಕೃತ ತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ (ಚಂದ್ರಪು. ೪-೩೫).
[ ಸಂ. (ಚೂಡಾ + ಉದಯ) ]

**ಚೂಣಿ** 'ಚೂಳಿ$_1$' ನೋ.

**ಚೂಣಿಗ** (ನಾ). ಸೈನ್ಯದ ಮುಂಭಾಗದಲ್ಲಿ ನಿಂತು ಕಾದುವವನು ; ಮುಂದಳದ ಯೋಧ : ಭಲರೆ ಭಲರತಿಬಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣಿ[ಪಾಠಾಂ. ಣೆ]ಗರನು (ಕುವ್ಯಾಭೀ. ೪-೩) ; ರಕ್ತಪ್ರವಾಹ ಮಾದುದು ರಣಂ ಸಾಹಸವಿರಕ್ತರಾದರ್ ಖಳನ ಚೂಣಿಗರ್ (ಪಬಪು. ೨೪-೧೩) ; ಚೂಣಿಗರ ಚೌಕಳಿಸಿ ಕೆಡಹುತಂ (ನಂದಿಮಾ. ೧೩-೫೦).
[ ಚೂಣಿ(<ಚೂಳಿ$_1$) + – ಗ$_2$ ]

**ಚೂಣಿಗಾಳಗ** 'ಚೂಣಿಗಾಳೆಗ' ನೋ.

**ಚೂಣಿಗಾಳೆಗ**, ಚೂಣಿಗಾಳಗ (ನಾ). ಸೈನ್ಯದ ಮುಂಭಾಗದಲ್ಲಿ ನಡೆಯುವ ಯುದ್ಧ ; ಮುಂಚೂಣಿಯುದ್ಧ: ತೊಡಗಿತ್ತು ಚೂಣಿಗಾಳೆಗ [ಪಾಠಾಂ. ಕಾಳಗ]ದಲ್ಲಿ ತನತನಗೆ (ವೀರಶ. ಹ. ೪೯೩-೨೩) ; ಚೂಣಿಗಾಳೆಗದ ಭಟರ್ ಎತ್ತಿದರೆ ಪಂಥ ಪಾಡುಗಳನು (ಜೈಮಿಭಾ. ೯-೧೫). ಚೂಣಿಗಾಳಗ: ಅಸುರದ ಭಟರವೃಕಿ ಹಿಡಿದರು ಚೂಣಿಗಾಳಗವ (ಕಾಶಿರಾ. ೩೩-೧೩).
[ ಚೂಣಿ(<ಚೂಳಿ$_1$) + ಕಾಳೆಗ ]

**ಚೂಣಿನೋಟ** (ನಾ). ಕುಡಿನೋಟ ; ಕಟಾಕ್ಷ : ರಾಣಿಯರೋಲಗ ಹರೆದುದು ಪೆಣ್ಮೊಡೆಮಾಣಿಕವಹ ಪಟ್ಟದರಸಿ ಚೂಣಿನೋಟದ ಸೊಬಗಿಂದೆ ಪೂಗೋಲನ ಕಾಣಿಸಿದಳು ಕಾಂತನೆದೆಗೆ (ಮೋಹತ. ೨೨-೧೭).
[ ಚೂಣಿ (<ಚೂಳಿ$_1$) + ನೋಟ ]

**ಚೂಣಿಯಾಳ್** (ನಾ).=ಚೂಣಿಗ: ಕಾದವ ಪಾಣ್ಡ್ಯಾದಿಗಳು ಕಾದಿ ಗೆಲ್ದಂ ನರಸಿಂಹ್ಮಂ ಚೂಣಿಯಾಳೊಳಾ ತಿಮಿಳವಡೆ ಪಡಲ್ವತ್ತಡಳ್ಕಾಡೆ ಪಾಣ್ಡ್ಯಂ ಸರಿದಂ (ಎಕ. XVI, ಚಿಕ್ಕನಾ. ೭೦-೬ : 1285).
[ ಚೂಣಿ (<ಚೂಳಿ$_1$) + ಆಳ್$_3$ ]

**ಚೂತ** (ನಾ). ಮಾವಿನ ಮರ ; ಸಹಕಾರ : ನವಚೂತಂ ತಳಿರ್ವಣ್ಣದಿಂ ತಳಿರ್ಗುಮೇ ಸ್ಥಾಣುಗೋತ್ರಂ ಚೈತ್ರದೊಳ್ (ಜಗವಿ. ೧-೧೩) ; ಪಾಡುವೆಳ ಕೋಗಿಲೆಗಳಲಿ ರಂಜಿಸುವುದಿದು ಚೂತ (ನಿಘಾಗ. ೧೦-೨೫-೨೩). [ ಸಂ. ]

**ಚೂತಕ** (ನಾ). ಸಣ್ಣ ಜಲಾಶಯ ; ಬಗರಗೆ ; ಹೊಂಡ : "ಚುಂಡೀ, ಚುಂಡೀ, ಚೂತಕಃ – ಈ ೩ ಬಗರಗೆ" (ಹಲಾಯು. ೧೦೩-೬೨). [ ಸಂ. ]

**ಚೂತಕುಜ** (ನಾ). ೧. ಮಾವಿನ ಮರ. ೨. [ಛಂದ] ಪ್ರತಿಯೊಂದು ಚರಣದಲ್ಲಿ ಇಪ್ಪತ್ತೆರಡು ಅಕ್ಷರಗಳಿರುವ ಒಂದು ಸಮವೃತ್ತದ ಹೆಸರು: ಅನಿಲಂ ಭೂಚಕ್ರವಾಕಂ ಶ್ವಸನ ಶೀತಕರಾಗ್ನಿಯುಗ್ಮಂಗಳಿಂ ಮುಂದೆ ನೆಗಲ್ದಾ ಭೂತೇಶಂ ನಿಲಲ್ . . . ಚೂತಕುಜಾಹ್ವಯಂ ನಾಮ ವೃತ್ತಮಕ್ಕುಂ (ಛಂದೋಂಬು. ೨-೧೮೭). [ ಚೂತ + ಕುಜ ]

**ಚೂತಡಿಂಭ** (ನಾ). ಮಾವಿನ ಕುಡಿ,–ಚಿಗುರು ; ಮಾಂದಳಿರು : ಜೋಕೆ, ಜೋಕೆ, ಚೂತಡಿಂಭ, ನಿನ್ನ ಕಂಡರಯ್ಯೊ ಎಂಬ ಒಬ್ಬ ಕೂಡ ಇಲ್ಲದಿಂದು ನೀನು ನನ್ನಿ ಬೆಳಕ ತಂದು ತಮವ ಕಣಕೆ ಮುಳಿವುದೇನೊ ? (ಮಾಂದಳಿ. ೩೬-೪). [ ಚೂತ + ಡಿಂಭ ]

**ಚೂತತತಿ** (ನಾ). ಮಾವಿನ ಮರಗಳ ಗುಂಪು ; ಮಾವಿನ ತೋಪು : ತೊಳಪೆಳವೆಱೆಯುಂ ಮೊರೆವಳಿಕುಳಂಗಳುಂ . . . ಮುಳಿಸಂ ಕಟಲ್ಚಿ ಕಳೆದುವು ಕಳಿಕಾಂಕುರ ಚೂತತತಿಗಳುಂ ಕಾಮಿಗಳಾ (ಕವಿರಾ. ೨-೬೯).
[ ಚೂತ + ತತಿ$_2$ ]

**ಚೂತದ್ರುಮ** (ನಾ). = ಚೂತಕುಜ ೧ : ರಕ್ತಾಶೋಕ ಚೂತದ್ರುಮ ಸಮುದಿತ ಬಾಲಪ್ರವಾಳ ಧ್ವಜಂ ಬಂದುದು ಚಂಚಚ್ಚಂಚರೀಕ ಪ್ರಕರಶುಕ ಕುಲಾಲಾಪ ಕಾಂತಂ ವಸಂತಂ (ಕಾದಂಪು. ೭೭೮). [ ಚೂತ + ದ್ರುಮ ]

**ಚೂತನಂದನ** (ನಾ). ಮಾವಿನ ತೋಟ,–ವನ : ಚಂಪಕಗಂಧಿ ಮಂದ ಮನದೊಳ್ ಕಟುವಲ್ ಬರೆ ಮಾಣ್ದು ಮಾರುತೋತ್ಕಂಪಿತ ಚೂತನಂದನದೊಳಿನ್ನಿರು ನೀನೆನೆ ಮಾವಿನಳ್ಳಿಗೊಂಬಂ ಪಿಡಿದೊಂದು ಕೆಯ್ಯೊರಸು ಮೆಯ್ಗುರೆದಳ್ (ಶಾಂತಿಪು. ೮-೯೩). [ ಚೂತ + ನಂದನ ]

**ಚೂತಲತೆ** (ನಾ). ಮಾವಿನ ಮರ : ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ ಚೂತಲತೆ ಪೂತುದು (ಜೈಮಿಭಾ. ೨೯-೩೦). [ಚೂತ + ಲತೆ]

**ಚೂತವನ** (ನಾ). = ಚೂತನಂದನ : ಕಿಕ್ಕಿಱಿಗಿಱಿದು ಬೆಳೆದಡರ ಕೊಳೆಪೂತ ಚೂತವನಮೆ ಬಾಟ್ಸ್ಲೀಯಾಗೆ ಪೊದರ್ತಗುಟ್ಟು ಕವಲ್ತೆಳದಳಿಸುವ ಲಸದಶೋಕೋದ್ಯಾನ ವಧ್ಯದೊಳ್ (ಶಾಂತಿಪು. ೪-೯೫ ವ) ; ವಿರಚಿಸಿದಂ . . . ಸದ್ವಿನುತ ಕರ್ಣಾಟಕವಿಚೂತವನಚೈತ್ರ ಲಕ್ಷ್ಮೀಶ ನೆಂಚೊರ್ವನು . . . ಎಮಲಜೈಮಿನಿಭಾರತದ ಕಥೆಯನು (ಜೈಮಿಭಾ. ೦-೧೧). [ ಚೂತ + ವನ ]

**ಚೂತಾಂಕುರ** (ನಾ). ಮಾವಿನ ಚಿಗುರು : ಪಂಜರದ ಗಂಡುಕೋಗಿಲೆಗಳ್ಗೆ ಚೂತಾಂಕುರದ ಕುಟುಕನಿಕ್ಕಲುಂ (ಕಾದಂಪೂ. ೧೦೦೬) ; ನೀಂ ಬರಲ್ ಬವರಂ ಬರ್ಕುಮೆ ಸೋಲಿಸಲ್ಕುನಿಪನಂ ಚೂತಾಂಕುರಂ ಸಾಲದೇ (ಮಲ್ಲಿಪು. ೦೪-೩೬) : ಎಲೆ ಚೂತಾಂಕುರ ನಿನ್ನಂ ಮಲರ್ವಿಲ್ಲಂ ತಳೆದ ಕಾಮದೇವಂಗಿತ್ತಂ . . . (ಎಂದು ಮಾವಿನ ಮೊಗ್ಗನ್ನು ಎಸೆಯುವಳು) (ಶಾಕುಂತ. ೬೦-೦೩೪).
[ ಚೂತ + ಅಂಕುರ ]

**ಚೂತೋತ್ಕರ** (ನಾ). = ಚೂತತತಿ : ಸಕಳೋದ್ಯಾನಂಗಳೊಳ್ ಸಂತತ ಸರಸಫಳವ್ರಾತದಿಂ ಸೇವ್ಯಮಲ್ಲಲ್ಲಿ ಕರಂ ಖರ್ಜೂರವೃಂದಂ . . . ಚೂತೋತ್ಕರಂ ದಾಡಿಮತತಿ (ಪುಷ್ಪಪು. ೯-೧೫). [ ಚೂತ + ಉತ್ಕರ ]

**ಚೂಪು$_1$** (ನಾ). ೧. ನೋಟ ; ಕಾಣ್ಕೆ ; ದೃಶ್ಯ : (+). ೨. ಕಣ್ಣು ; ನೇತ್ರ : (+). [ ←ತೆಲು. ಚೂಪು ]

**ಚೂಪು$_2$** 'ಚೀಪು$_2$' ನೋ.

**ಚೂಪುಗಲ್ಲು** (ನಾ). ಚೂಪಾದ ಕಲ್ಲು ; ಮೊನಚಾದ ಕಲ್ಲು : ಅವನು ಕೈಯಲ್ಲಿ ಒಂದು ಚೂಪುಗಲ್ಲು ತೆಗೆದುಕೊಂಡು ಬೇವಿನ ತೊಗಟೆ ಕೆತ್ತ ಹತ್ತಿದನು (ಬಾಬಂ. ೨೬). [ ಚೂಪು$_2$ (<ಚೀಪು$_2$)+ಕಲ್ಲು (<ಕಲ್$_3$) ]

**ಚೂಪುಗಾರಿಕೆ$_1$** (ನಾ). ತೋರಿಕೆ ; ಆಡಂಬರ ; ಬೂಟಾಟಿಕೆ : "ನೀನು ಚೂಪುಗಾರಿಕೆಯ ಕೆಲಸ ಇದು ಎಂದು ತಿಳಿದಿದ್ದೆಯೋ ?" ಎಂದು ಹೀಯ್ಯಾಳಿಕೆ ಮಾಡಿದ (ಕೂನಭೀ. ೨೧೬).
[ ಚೂಪು$_1$ + – ಕಾರ$_1$ (< – ಕಾಱ) + – ಇಕೆ ]

**ಚೂಪುಗಾರಿಕೆ$_2$** (ನಾ). ಕುಶಲತೆ; ಚಾಲಾಕುತನ : ಆ ಪೊಡವಿಪಾಲಕನ ಸಂಭವಂ ಗಡ ತಾಯ ಚೂಪುಗಾರಿಕೆಯೊಳಂ ಏರ್ದುತ್ತಮಾಶ್ವಮಂ (ಶರಕು. ೩೮-೪೬).
[ ಚೂಪು$_2$ (<ಚೀಪು$_2$) + – ಕಾರ$_1$ (< – ಕಾಱ) + – ಇಕೆ ]

**ಚೂಪುಗೊಳಿಸು** (ಕ್ರಿ). ಹರಿತಗೊಳಿಸು; ಹದನುಗೊಳಿಸು : ಕತ್ತಿ ಕತ್ತರಿಯನು ಸಾಣೆಯ ಹಿಡಿವರು ಸೂಜಿಯ ಚೂಪುಗೊಳಿಸುವರು (ಇಂಚಾಪ. ೭೧-೪೨). [ ಚೂಪು$_2$ (<ಚೇಪು$_2$) + ಕೊಳ್$_1$ + – ಇಸು$_3$ ]

**ಚೂಪುಗೋಲು** (ನಾ). "(ಬೇಲಿ, ಮೊ.ಗಳಿಗೆ ಉಪಯೋಗಿಸುವ) ಮರದ ಚೂಪುಗೋಲು ; ದಸಿ" (Pale. ಇಂಕನಿ). [ ಚೂಪು$_2$ (<ಚೇಪು$_2$) + ಕೋಲು$_1$ (<ಕೋಲ್$_1$) ]

**ಚೂಪೇಣು**(ನಾ). ಹರಿತವಾದ ಮೊನೆ ; ಮೊನಚಾದ ತುದಿ : "ಬೆಣೆಯಾಕಾರದ ಹಲಗೆಯ ಚೂಪೇಣು" (Feather-edge. ಇಂಕನಿ). [ ಚೂಪು$_2$ (<ಚೇಪು$_2$) + ಏಣು (<ಏಣ್) ]

**ಚೂಬಿಡು** (ಕ್ರಿ). ೧. ನಾಯಿಯನ್ನು ಮತ್ತೊಬ್ಬರ ಮೇಲೆ ನುಗ್ಗುವಂತೆ ಮಾಡು : ಅವನ ಮೇಲೆ ನಾಯಿಯನ್ನು ಚೂಬಿಟ್ಟನು (ರೂಢಿ). ೨. (ಅಲಂ) ವಿರುದ್ಧವಾಗಿ ನಿಲ್ಲಿಸು ; ಎತ್ತಿಕಟ್ಟು ; ಪ್ರೇರಿಸು : ಪಕ್ಕದ ಮನೆಯವರ ಮೇಲೆ ಇವರನ್ನು ಚೂಬಿಟ್ಟನು (ರೂಢಿ). [ ಚೂ+ಬಿಡು$_1$ ]

**ಚೂರ್** (ಕ್ರಿ). ಹರಿತವಾಗು ; ತೀಕ್ಷ್ಣವಾಗು. 'ಚೂರ್ಮೊನೆ' ಪರಾ. [ <ಕೂರ್$_2$ ]

**ಚೂರಡಿಕೆ** (ನಾ). ಹೋಳು ಅಡಕೆ ; ಚೂರು ಮಾಡಿದ ಅಡಕೆ : ಎಲೆಗೆ ಸುಣ್ಣ ಹಚ್ಚಿ ಚೂರಡಿಕೆಯೊಂದನ್ನು ಬಾಯಿಗೆ ಹಾಕಿಕೊಂಡಳು (ರೂಢಿ). [ ಚೂರು$_3$ + ಅಡಿಕೆ (<ಅಡಕೆ$_1$) ]

**ಚೂರಣ** (ನಾ). ಪುಡಿ ; ಹುಡಿ : "ಚೂರಣ – ಚೂರ್ಣ = ಹುಡಿ" (ಕದ್ಮಕೋ. ೧೪). 'ಚೂರಣಿಸು' ಪರಾ. [ <ಸಂ. ಚೂರ್ಣ ]

**ಚೂರಣಿಸು** (ಕ್ರಿ). ಪುಡಿಯಾಗುವಂತೆ ಮಾಡು : ತೇರು ಬ್ಯಾರೆನದಂತೆ ಸರ್ವವ ಚೂರಣಿಸಿ ಚಯನಿಚಯ ನೋಡೊಳತೂರುವನಿಗಂಡುಳಿದ ದನುಜರು ಪಾರಲಾಗಸಕೆ (ಜಿರಾಮಾ. ೬೮-೫೨). [ ಚೂರಣ + – ಇಸು$_3$ ]

**ಚೂರಿ, ಚುರಿ$_1$** (ನಾ). ಸಣ್ಣ ಕತ್ತಿ ; ಸುರಿಗೆ : ರಮಣನಿಲ್ಲದ ನಾರಿ . . . ಹಡೆದವಳ ಎದೆ ಕೊರಳ ಕೊಯ್ವಂಥ ಚೂರಿ (ಪುರಂದ. ೧-೧೪೮ ಅನುಪಲ್ಲವಿ); ಇಱಿವ ಬಲ್ಲಹದಿಂದ ತಱಿವ ಖಂಡೆಯ ಮಾಗ ಕೊಱಿವ ಕರದ ಚೂರಿಯಿಂದ . . . ಬಲ ನೊಂದು (ಕಂನವಿ. ೩-೬೬); ಚೂರಿಯನು ಬಾಳನ್ನು ಶೂರತ್ವದಿಂ ಓಡಿದು ಸಾರಿ ರಣದೊಳಗೆ ಸಾಗಲಾ ಚೂರಿಯ ಸೂಟಿ ನೋಡೆಂದ (ಸರ್ವಜ್ಞ. ೭೧೬) ; ಚೂರಿ ಹದ ಆದರೂ ಗಿಡ ಕಡಿಯಲಾರದು (ಗಾದ). **ಚುರಿ$_1$** : ಪರಶು ತೋಮರ ಕೊಂತ . . . ಓಂಡಿವಾಳಿಟ್ಟ ಚುರಿ ಭಾಕು (ಜಿನಮು. ೩೮-೧೨).

**ಚೂರಿಯಿಡು** = ಚೂರಿಹಾಕು : ಕಂಡ ದೃಶ್ಯ ಅವರ ಎದೆಗೇ ಚೂರಿಯಿಟ್ಟಂತಿತ್ತು (ಹೊಸಕ್ಕ. ೨೨). **ಚೂರಿಹಾಕು** = ಚೂರಿಯಿಂದ ಇರಿ : ಯಾವನೊಬ್ಬ ಚೂರಿಹಾಕಿ ಅಂತೆ ಮಸಣದಲ್ಲಿ ನೂಕಿ (ಪಯುಡ. ೬೧-೧೨) ; ನೀನು ಚೀರಿಕೊಂಡೆಯಾದರೆ ಚೂರಿ ಹಾಕುತ್ತೇನೆ. ಇದು ನೋಡು (ಹೇಮುಂತ. ೧೪೫). [ <ಸಂ. ಛೂರೀ ]

**ಚೂರಿಕೆ** (ನಾ).ತೀಕ್ಷ್ಣತೆ ; ಉಗ್ರತೆ(?) : ಭರದಿ ಸುತ್ತುತ ಬಿಗಿದು ಕಚ್ಚುತ ತೆರೆದು ಫಣಗಳ ಕಣಾಗಳಿಂದಲೆ ಸುರಿವ ಕಿಡಿಗಳ ಚೂರಿಕೆಯೊಳೊಪ್ಪಿರಲು ಕಾಳಿಯನು ನೆರೆದ ಗೋಪೀಜನವು ಕಾಣುತ ತರಳಗೀ ವಿಧಿಯಾಗಲೆವಿಷ್ಣಾಹರಣವೇಕೆಂದೆನುತ ಮಡುವೊಗಲೆದ್ದರವರಂದು (ಕೃಕರ್ಣಾ. ೨-೪೧). [ ಚೂರ್ + – ಇಕೆ ]

**ಚೂರಿತ** (ನಾ). = ಚುರಿತಕ (?) : ಕೊರಳು ಕಂಗಳೊಳಿರಲು ನಖದಲಿ ಬೆರಟು ಎರಡಕೆಯಿದು ಬಂದಡೆ ಹಿರಿದು ಮರ್ದಿಸೆ ಕರುಣೆ ಸುಖಿಪಳು ಬಹಳವೆಯಿದವಳು ಮೆರೆವ ಮೆಲ್ಲದೆಗೆಯು ತಾಡಣ ವರ ಸುನಾಭಿಗೆ ಬರಲು ಚೂರಿತ ಸ್ಮರನ ಮಂದಿರ ಜಘನಕೆಯಾತರೆ ಬೆರಳ ನಖಗಳನು (ಕಕೊ್ಕೀಶ. ೧೦-೫೯). [ ? ]

**ಚೂರಿಪಾನ** 'ಸೂರಿಪಾನ' ನೋ.

**ಚೂರಿಸು$_1$** (ಕ್ರಿ). ೧. ಚೂರುಚೂರುಮಾಡು ; ಪುಡಿಮಾಡು ; ನಾಶಗೊಳಿಸು : ಎಡಬಲಕೆ ತೂಳುವ ಮದೇಭವ ಕಡಿದು ಹರಹಿದನೌಕಿ ಚೂ[ಪಾಠಾಂ. ಭೂ]ರಿಸಿ ಗಡಣಿಸುವ ಭೂಪರಿಗೆ ಮಾಡಿದನಮರಪದವಿಯನು (ಕುವ್ಯಾದ್ರೋ. ೧೧-೧೩) : ಅಶ್ವವನ್ನೆದೆ ಮೀಂಟಿ ಕೂರಸಿಯಿಂ ಚೂರಿಸು ತೊಳಪೊಕ್ಕುರುಬುವ ಯವನ ಸಮೂಹಾಧೀಶನುರುಬೆಗಂದಿದಿರಾಂತಂ (ಕೀನ್ನ. ೨-೩೬). ೨. ಕಾಡು ; ಪೀಡಿಸು : ಬಾರಿಪರಿದು ಬೆಂತಿಸಿ ಚೇಱು ತಱುಚುತ ಚೂರಿಸದಿಚ್ಚೆ ಚೈತನ್ಯ ಚೋರತ್ವವೆತ್ತಿದೆಯೆನೆ(ಶತಸಾಂ.೭೫-೮೩). [ ಚೂರು$_3$ + – ಇಸು$_3$ ]

**ಚೂರಿಸು$_2$** (ಕ್ರಿ). ೧. ಇರಿ ; ತಿವಿ : ಪಾರ್ಥನ ಕಟ್ಟಳವಿಯಲಿ ಚೂರಿಸಿದ ರುಬ್ಬಣದ ಮೊನೆಗಳಲಿ (ಕುವ್ಯಾಅ. ೨೦-೨೪) : ದುಶ್ಶಾಸನನ ಮಗನಿದಿರಾಗಿ ಖಡುಗದ ಮೊನೆಯ ಚೂರಿಸಿ (ಕುವ್ಯಾದ್ರೋ. ೬-೫೬) ; ಚತುರಂಗದ ಚಡಾಳತೆಯಿಂದ ಚೂರಿಸುವಸ್ತ್ರಶಸ್ತ್ರದಲಿ (ತೊರರಾ. ೬-೧೭-೨೯) ; ಚೂರಿಸುವ ಖಂಡೆಯುದ ಕರದ ಬಹು ರೌದ್ರರಸಧಾರಣಾನನದ ಕಣ್ಗಳ ಕಿಡಿಯ (ಜಬಪು. ೪೨-೪೫). ೨. ಹರಡು ; ಚಾಚು ; ನೀಡು : ಕಾನಿಡುವ ಕಬ್ಬೊಗೆಯು ಚೂರಿಸುವಾನನದ . . . ಬಸಿವ ವಿಷದಲಿ ಬಾದುದುರಗಾಸ್ತ್ರ (ಕುವ್ಯಾಕ. ೨೫-೧೮) ; ಚೂರಿಸುವ ನಿಡುನಾಲಗೆಯು ಪೂತ್ಕಾರರವದಕ್ಷಿಗಳಲುಬ್ಬುವ ತೋರಗಿಡಿಗಳ ದಾಡೆಗಳ (ತೊರರಾ. ೬-೧೫-೩೩) ; ಜಿಹ್ವೆಯಂ ಚೂರಿಸು ತಲುರಿ ಮಸಗಿ ಕಡಲಂತೆ ಗರಳಮಂ ಕಾರಿ (ಕುರಂಗ. ೬೯-೪೦). [ ಚೂರಿ + – ಇಸು$_3$ ]

**ಚೂರು$_1$** 'ಸಿವುಱು$_1$' ನೋ.

**ಚೂರು$_2$** 'ಸೂರ್' ನೋ.

**ಚೂರು$_3$** (ನಾ). ೧. ತುಂಡಂ ; ಭಾಗ ; ಹೋಳಂ : "ಭಿತ್ತಂ, ಶಕಲಂ, ಖಂಡಂ, ಅರ್ಧಃ–ಳ ಮೂರುಕು ಚೂರುಗಳ ಹೆಸರು" (ಸಿದ್ಧಾಂತಿ. ೨೯) ; ಆ ರೊಟ್ಟಿಯನ್ನು ಮುರಿದು ಏಳು ಚೂರು ಮಾಡಿ, ತೀರ ಸಣ್ಣ ಚೂರು ತನಗೆ ಇಟ್ಟುಕೊಂಡು, ಉಳಿದ ಆರು ಚೂರುಗಳನ್ನು ಆರು ಮಂದಿ ಮಕ್ಕಳಿಗೆ ಕೊಟ್ಟನು (ಮುಂಬಯಿ. ೪-೬೫) ; ಕಲ್ಲಿನ ಚೂರು ಮೊಳಕೆಯನ್ನು ಉತ್ಪತ್ತಿ ಮಾಡಲಾರದು (ತಕ್ಕಪ್ರಾ. ೧೯೬). ೨. ತುಸು ; ಸ್ವಲ್ಪ ; ಕೊಂಚ : ಅವಳಿಗೆ ಒಂದು ಚೂರು ನಾಚಿಕೆಯಿಲ್ಲ (ರೂಢಿ): ಒಂದು ಚೂರು ಇಲ್ಲಿಗೆ ಬಂದುಹೋಗು (ರೂಢಿ).

**ಚೂರುಚೂರು**(ದ್ವಿರುಕ್ತಿ) : ಮಡಕೆ ಕೆಳಗೆ ಬಿದ್ದು ಚೂರುಚೂರಾಯಿತು (ರೂಢಿ). **ಚೂರುಚಾರು, ಚಾರುಚೂರು** = ಅಲ್ಪ ಸ್ವಲ್ಪ ; ಚಿಕ್ಕಪುಟ್ಟ : ತನ್ನ ಮೈಮೇಲಿನ ಚೂರುಚಾರು ವಸ್ತುಗಳನ್ನು ಮಾರಿಸಿ . . . ಅವನಿಗೆ ವಿದ್ಯಾಭ್ಯಾಸ ಮಾಡಿಸಿದಳು (ಮುಂಬಯಿ. ೪-೫೦): ಮೈಮೇಲಿದ್ದ ನಾಲ್ಕಾರು ಚೂರುಚಾರು ಒಡವೆಗಳು . . . ಹೋಗಿಬಿಟ್ಟವು (ಸಂಚಿತ್ರ. ೩೧) ; ಸ್ವಪ್ನವಾರ್ತೆಯನ್ನು ಚೂರುಬಾರು ಬಿಡದಂತೆ ನಿವೇದನ ಮಾಡಿದರು (ಕಥಾವಿ. II, ೦೬೪); ಉಪಾಧ್ಯಾಯರಿಗೆ ಕಾಯಿಪಲ್ಯ, ಕಾಳುಕಡ್ಡಿ ತಂದು ಕೊಡುವವರಿಗೆ, ಅವರ ಮನೆಯ ಚಾರುಚೂರು ಕೆಲಸ ಮಾಡಿ ಕೊಡುವವರಿಗೆ . . . ಶಿಕ್ಷಕರ ಬೆತ್ತವು . . . ನಿಂತು ಬಿಡುತ್ತಿತ್ತು (ನಾಡಿಗೇ. ೧೦೫). [ <ಪ್ರಾ. ಚೂರ ]

**ಚೂರ್ಚಗೊಳಿಸು** (ಕ್ರಿ). ಏಕಾಗ್ರವಾಗಿಸು ; ಒಮ್ಮುಖವಾಗಿಸು ; ಚೂಪುಮಾಡು (?) : ಉರೆ ಶ್ರದ್ಧೆಯಿಂ ಕನಕವಿಷ್ಟರದಲಿ ಮಂಡಿಸಿರೆ ಮಾರ್ತಾಂಡಂಗೆ ನೀರ್ಚಲ್ಲಿ ವಿದ್ಯುಕ್ತದಿಂ ನಮಿಸಿ ಕರಣಮಂ ಚೂರ್ಚಗೊಳಿಸುನ್ಮೀಲನೇತ್ರವಾಗಿ . . . ಮೈದೋರ್ದನು (ಪರಳು. ೨೯-೬). [ ಚೂರ್ಚ$_0$ + ಕೊಳ್$_1$ + – ಇಸು$_3$ ]

**ಚೂರ್ಣ$_1$** (ನಾ). ಒಂದು ಬಗೆಯ ಗೆಡ್ಡೆ ; ಸುವರ್ಣಗೆಡ್ಡೆ : "ಅರ್ಶೋಘ್ನಃ. ಸೂರಣಃ, ಕಂದಃ–ಶಿ ಚೂರ್ಣದ ಗಡ್ಡೆ" (ಸಿದ್ಧಾಂತಿ. ೦೩೦) ; ಗಡ್ಡೆಗಳು : ಚೂರ್ಣ, ಕೆಸವೆ, ಗೆಣಸು (ನಮ್ಮನು. ೨೩೭). [ <ಸಂ. ಸೂರಣ ]

**ಚೂರ್ಣ$_2$** (ನಾ). ೧. ಸುಣ್ಣ : ಸ್ಥೂಲವಡಿಕೆಯಾದಂತೆ ಸೂಕ್ಷ್ಮ ವರ್ಣವಾದಂತೆ ಕಾರಣ ಚೂರ್ಣವಾದಂತೆ ಮೂಱು ಕೂಡಿದ ಮತ್ತೆ ಬಣ್ಣವಾಯಿತ್ತು ರಜ (ಮೋಕ್ಷಮಾ. ೧೦೮–೪೩೦) ; ಪೊಂಬರಿಯಣದಿ ಪೋಳ್ಕಣ ಮಯವಡೆದಿರ್ದ ಸಂಬಳಿಗೆಯ ಪರ್ಣ ಚೂರ್ಣ ಕೊಂಬ ಕರ್ಪೂರಕರಂಡವಸ್ಕರನ ತಲೆಗಿಂಬಿನೊಳ್ ತಂದಿರಿಸಿದರು (ಪ್ರಬೋಹಕ. ೧೬–೨೭).೨. ಪುಡಿ ; ಹುಡಿ : ಸೂಸುವ ನವ ಪಟವಾಸದ ಚೂರ್ಣಂ ಮಾಸರಮಾದುದು ದಿಕ್ಪರಿಪೂರ್ಣಂ (ಚಂದ್ರಪ್ರ. ೪–೭೩ ರಗಳೆ) ; ವ್ಯೆಯೊಡ್ಡುವಡೆ ಪಂಚಾಗ್ನಿಯುಂಟು ತಲೆಯಡಿಯಾಗಿ ನಿಲುವಡುಕ್ಕಿನ ಸೂಜಿಯುಂಟು ಮೆಲುವೊಡೆ ಲೋಹಚೂರ್ಣವುಂಟು (ಹರಿಶ್ಚ. ೮–೬೨) ; ಚೂರ್ಣ, ಘೃತ, ತೈಲ . . . ತಯಾರಿಸುವಾಗ ಕೆಂಪು ಚಂದನವನ್ನೂ ಉಪಯೋಗಿಸಬೇಕು (ಸಕಲವೈ. XII, ಪ್ರಸ್ತಾವನೆ). ೩. ಸುವಾಸನೆಯ ಪುಡಿ; ಪರಿಮಳದ ಹುಡಿ : ಕಣ್ಣಿಗೆ ಅಂಜನ, ತುಟಿಗೆ ಕೆಂಪು, ಮುಖಕ್ಕೆ ಚೂರ್ಣಗಳನ್ನು ಆಧುನಿಕ ರೀತಿಯಲ್ಲಿ ಅಲಂಕಾರಕ್ಕಾಗಿ ನಿಯೋಜಿಸುತ್ತಿದ್ದರು (ಭಾರದ. ೦೩). ೪. ತುಂಡು; ಚೂರು : ತಮ್ಮ ಪತ್ರದ ಚೂರ್ಣವೆಲ್ಲಮುಮನುಡುಗುತಂ (ಸಂಭವ. ೭–೯೦). ೫. ಚೋರವಿದ್ಯೆಗಳಲ್ಲಿ ಒಂದು ; ಪುಡಿ ಎರಚಿ ಮಂತ್ರ ಹಾಕುವುದು. 'ಚೂರ್ಣಯೋಗ' ಪರಾ. ೬. [ಕಾವ್ಯವಿ] ಗದ್ಯದ ಒಂದು ಭೇದ : "ಸುಲಭವಾದ ಗದ್ಯ ಶೈಲಿಗೆ 'ಚೂರ್ಣ'ವೆಂದು ಹೆಸರು. ಇದರಲ್ಲಿ ಪದಗಳು ಸಮಾಸವಾಗದೇ (ಅಥವಾ ದೊಡ್ಡ ಸಮಾಸಗಳಿರದ) ಬಿಡಿಬಿಡಿಯಾಗಿ ಇರುತ್ತವೆ" (ಕೃಬಿಡಿ. ೧೭೮). [ ಸಂ. ]

**ಚೂರ್ಣಂಗೆಯ್** (ಕ್ರಿ). ಪುಡಿಮಾಡು; ಅರೆ: ಇವನೆಲ್ಲ ಚೂರ್ಣಂಗೆಯ್ದು ಸೇವಿಸೆ (ಸಳಿವೈ. ೨೩೮). [ ಚೂರ್ಣ$_2$ + ಕೆಯ್$_1$ ]

**ಚೂರ್ಣಕ**(ನಾ). ೧. ಅರೆಯುವುದು; ಪುಡಿಮಾಡುವುದು. ೨."ಪದಾರ್ಥಗಳನ್ನು ಪುಡಿಮಾಡುವ ಯಂತ್ರ ; ಚೂರ್ಣಕ" (Disintegrator. ಇಂಕನಿ). ೩.=ಚೂರ್ಣ$_2$ ೬. : ಕೆಲವರು ಮುಕ್ತಕ, ವೃತ್ತಗಂಧಿ ಉತ್ಕಲಿಕಾಪ್ರಾಯ, ಚೂರ್ಣಕ ಎಂದು ನಾಲ್ಕು ಭಾಗ ಮಾಡಿ . . . ಚೂರ್ಣಕವು ಅಲ್ಪಸಮಾಸಕವೆಂದೂ ಹೇಳುತ್ತಾರೆ (ಕೃಬಿಡಿ. ೦೭೯ ಅಡಿಟಿ). [ ಸಂ. ]

**ಚೂರ್ಣಕುಂತಲ, ಚೂರ್ಣಕುಂತಳ** (ನಾ). ಮುಂಗುರುಳು ; ಸುಳಿಗೂದಲು : ಹದವಡೆದ ಬೀರವಿೞಸೆಗೂ, ನಿರಿನಿರಿಗೊಳಿಸಿರುವ ಚೂರ್ಣಕುಂತಲಕ್ಕು-ಪರಮ ನಾಪಿತವ್ರತ ! (ಮುಂತ್ಯಾಕ ೯೨–೨೪). **ಚೂರ್ಣಕುಂತಳ**: ಝೋಂಕೃತಿಯಿಲ್ಲದಳಿವಿಂಡುಗಳೋಯೆನಲಾ ನೀಱಯಾ ಕೊಳಪ ಮುಡಿ ಚೂರ್ಣಕುಂತಳಮೆಸೆದವೆಯ್ದೆ ಕಂಗಳಿಗೆ (ಗುಭಕ. ೨೩–೮). [ ಸಂ. ]

**ಚೂರ್ಣಕುಂತಳ** 'ಚೂರ್ಣಕುಂತಲ' ನೋ.

**ಚೂರ್ಣಗಡ್ಡೆ, ಚೂರ್ಣಗೆಡ್ಡೆ** (ನಾ). ಸೂರಣಗಡ್ಡೆ ; ಸುವರ್ಣಗೆಡ್ಡೆ : "ಅರ್ಶೋಘ್ನಃ, ಸೂರಣಃ, ಕಂದಃ–ಶಿ ಚೂರ್ಣಗಡ್ಡೆ, ಸೂರಣದ ಗಡ್ಡೆ" (ಸಿದ್ಧಾಂತಿ. ೦೩೦). **ಚೂರ್ಣಗೆಡ್ಡೆ** : ಸುವರ್ಣಗೆಡ್ಡೆ, ಚೂರ್ಣಗೆಡ್ಡೆ, ಸೂರ್ಯನ ದಂಟು (ಮೃಶಿಗಿ. ೩–೧೦೦). [ ಚೂರ್ಣ$_1$ + ಗಡ್ಡೆ ]

**ಚೂರ್ಣಗೆಡ್ಡೆ** 'ಚೂರ್ಣಗಡ್ಡೆ' ನೋ.

**ಚೂರ್ಣನ** (ನಾ). ಅರೆಯುವುದು ; ಪುಡಿಮಾಡುವುದು : ಚೂರ್ಣನ ವಿಮುಖೀಕರಣ ದುರ್ಭೋಗ್ಯ ನಾನಾ ವಿಧಾಸಂಖ್ಯಾತ ತೀವ್ರ ವೇದನಾರೂಪಂಗಳಾಗಿ (ವಿವೇಕ. ೦೮೦). [ ಸಂ. ]

**ಚೂರ್ಣನೀಯ** (ಗು). ಪುಡಿಮಾಡಲು ಬರುವ ; ಪುಡಿಗೊಳಿಸುವುದಕ್ಕೆ ಸಾಧ್ಯವಾದ : ಅನಿಷ್ಟುರೋಷ್ಮಪುಟಮಧ್ಯಸಂಧಾರಣಮಾತ್ರ ಚೂರ್ಣನೀಯ ಶಾಕವರ್ತಿಕಮುಂ (ಆದಿಪು. ೧೧–೨೬ ವ). [ ಸಂ. ]

**ಚೂರ್ಣಮಾಡು**(ಕ್ರಿ).=ಚೂರ್ಣಂಗೆಯ್: ಸೈಂಧವಲವಣ, ಕೊನ್ನಾರಿಗಡ್ಡೆ . . . ಇವಂ ಚೂರ್ಣಮಾಡಿ ನಸ್ಯಮಂ ಮಾಡೆ ಶೀತಜ್ವರಂ ಮಾಣ್ಗುಂ (ಸಳಿವೈ. ೭೯). [ ಚೂರ್ಣ$_2$ + ಮಾಡು$_1$ ]

**ಚೂರ್ಣಯೋಗ** (ನಾ). (ಮಂತ್ರಿಸಿದ) ಹುಡಿಯನ್ನು ಚೆಲ್ಲಿ ಮರುಳುಗೊಳಿಸುವುದು : ಚೂರ್ಣಯೋಗ ಘುಟಿಕಾಂಜನಮೆಂದಿವು ಮಾಡಲಾಗೊಡೆಯ ತಸ್ಕರ ಶಾಸ್ತ್ರಂಗಳೊಳ್ (ಪದ್ಮಚ. ೧೨೨–೦೭). [ ಚೂರ್ಣ$_2$ + ಯೋಗ ]

**ಚೂರ್ಣವಾಸ** (ನಾ). ವಾಸನೆ ಕಟ್ಟಿದ ಪುಡಿ ; ಸುವಾಸನೆಯ ಪುಡಿ : ಮಗನ ಮಯ್ಯಂ ಚೂರ್ಣವಾಸದಿನುದ್ವರ್ತಿಸಿ ಮಂದರಾಭಿಷೇಕಾರ್ಹನಾಗೆಂದು ಪರಸಿ (ಚಾವುಂಪು. ೨೫೫). [ಚೂರ್ಣ$_2$ + ವಾಸ$_3$ ]

**ಚೂರ್ಣಾಳಕ** (ನಾ). = ಚೂರ್ಣಕುಂತಲ : ಸೆಣಸಲೆಳಸಿ ನೆಗೆವಂತೆ ಚೂರ್ಣಾಳಕಂ ಪಣೆವಿಡಿದು ಕುಣಿವುತ್ತಿರೆಯುಂ (ರಾಜಶೇ. ೭–೧೭ ವ). [ ಚೂರ್ಣ$_2$ + ಅಳಕ$_3$ ( = ಅಲಕ) ]

**ಚೂರ್ಣಿ** (ನಾ). ೧. ನೂರು ಕವಡೆಗಳ ಮೊತ್ತ. ೨. ಉತ್ತರವನ್ನು ಕೊಡಲು ಸಾಧ್ಯವಾಗದಿರುವಂಥ ತರ್ಕವನ್ನು ಅರಿಸುವಿಕೆ. [ಸಂ. ]

**ಚೂರ್ಣಿಕೆ** (ನಾ). ೧. ಸುಲಭ ಶೈಲಿಯ ಒಂದು ಗದ್ಯ ಪ್ರಕಾರ : ಚೂರ್ಣಿಕೆ ಲತಿಕೆ . . . ಚಿತ್ರಮೆಂಬ ಗದ್ಯಬಂಧದೊಳಂ (ಅಸಂಪು. ೧೦–೨೮ ವ) ; ಗಣೇಶ ಪ್ರಾರ್ಥನೆಯಾದ ತರುವಾಯ ಸಭಾಪೂಜೆ ನಡೆಯುತ್ತದೆ. ತರುವಾಯ ಚೂರ್ಣಿಕೆ(ಭಾರದ.೫೫೬) ; ಈಗಲೂ ಚೂರ್ಣಿಕೆ ಮತ್ತು ಶ್ಲೋಕ ವೃತ್ತಗಳ ರಾಗ ರಾಗದ ಹಾಡಿಕೆ ದೇವಪೂಜಾಸಮಯದಲ್ಲಿ ರೂಢಿಯಲ್ಲಿದೆ (ಸಂಗೀಶಂ. ೭೭). ೨. ಮದುವೆಯ ಸಂದರ್ಭದಲ್ಲಿ ಹಾಡುವ ಒಂದು ಶೋಭನ ಗೀತ (?) : ಲೋಭವ ತೊಱದು ದಿಬ್ಬಣಿಗರ ಹೇಮ ವಸ್ತ್ರಾಭರಣದೊಳೊಲ್ದು ತಣಿಪಿ ಶೋಭನ ಮಾಡದೆ ಚೂರ್ಣಿಕೆ ಮಾಳ್ಪಾಗ ಲಾಭದ ಪರದರುತ್ಸವವೆ (ಭರತ. ೩೮–೦೨೮). [ ಸಂ. ಚೂರ್ಣಿಕಾ ]

**ಚೂರ್ಣಿಗ** (ನಾ). ಪುಡಿ ಮಾಡುವವನು ; ನಾಶಮಾಡುವವನು : ಅಡಸಿ ವೈರವ ಭಾವ ಪರಿಯೊಳು ಕೆಡುಕ ಹಡೆವರು ನೂರುಮಂದಿಯ ನಿಡಿವನಾ ಚೂರ್ಣಿಗನ ತೆರದೊಳಗೆ (ಜಿನಭಾ. ೭–೦೩). [ ಚೂರ್ಣ$_2$ + – ಇಗ ]

**ಚೂರ್ಣಿಸು** (ಕ್ರಿ). ಪುಡಿಮಾಡು : ಕಲ್ಲುಕಂಬವ ಚೂರ್ಣಿಸಿದ ಪರಾಕ್ರಮ ವೀಗಳೆಲ್ಲಿ ಪೋದುದು (ಶಾಂತೀಶ. ೨–೦೧೬) ; ಅಂಜನಗಿರಿಯಂ ಚೂರ್ಣಿಸಿ ಕುಂಡಳಮಪ್ಪಂತೆಯಾದಂ . . . ಕರಂಡದೊಳಂಜನಮಂ ತುಂಬಿ ಬೊಮ್ಮನಿರಿಸಿದನೋ (ಹಮ್ಮೀರ. ೩–೦೫). [ ಚೂರ್ಣನ + – ಇಸು$_3$ ]

**ಚೂರ್ಣೀಕರಿಸು** (ಕ್ರಿ). = ಚೂರ್ಣಿಸು : ವನದೊಳಗಿದ್ದ ಗೋಮಯವನು ಚೂರ್ಣೀಕರಿಸಿ ದಹಿಸಿ ಮಾಡಿಕೊಂಬುದೇ ಅನುಕಲ್ಪವೆನಿಸುವದು (ವಿವೇಕ. ೭೫). [ ಚೂರ್ಣೀಕರಣ$_0$ + – ಇಸು$_3$ ]

**ಚೂವೊನೆ** (ನಾ.) ಹರಿತವಾದ ತುದಿ ; ತೀಕ್ಷ್ಣವಾದ ಧಾರೆ : ನೀಗಿರ್ದ್ರುತೆ ಮುಳ್ಗಿ ಚೂವೊನೆ ಭವಚ್ಛಿತ್ತಕ್ಕೆ ತತ್ತ್ವಜ್ಞಕಾವಿಭವಂ ಸಾಜಂ (ಶಾಂತಿಪು. ೧೧–೯೪). 'ಕೂವೊನೆ' ಪರಾ. [ಚೂರ್+ಮೊನೆ$_1$]

**ಚೂವೊನೆಗೊಳ್** (ಕ್ರಿ). ಹರಿತವಾದ ತುದಿಯನ್ನು ಹೊಂದು,- ಪಡೆ : ವನಿತಾಪಾದಪಯೋಜಸಂಗಸುಖದಿಂದಂಗಕ್ಕೆ ರೋಮಾಂಚಮಾಯ್ತೆನೆ ನಟ್ಟಂತಿರೆ ಸೂಸೆ ಸೂಜಿಗಳನಾ ಪೊಂಜಾಜಿಯೊಂದೊಂದು ಚೂವೊನೆಗೊಂಡೊಂದಲರಾಯ್ತು ಕೋದ ತೆಱದಿಂದಿರ್ದಂತು ಫುಲ್ಲಾಂಬುಜಾನನೆ ಪುಷ್ಪಾಂಜಲಿಗೊಟ್ಟಳ್ (ಅರ್ಧನೇ. ೩–೯೯). [ ಚೂವೊನೆ + ಕೊಳ್$_1$ ]

**ಚೂರ್** 'ಸೂರ್' ನೋ.

**ಚೂಲ,** ಚೂಳ₂ (ನಾ). ೧. ಜುಟ್ಟು : ಶಿಖೆ. ೨. ತುದಿ : ಶಿಖರ. ಇಲ್ಲಿ ಕವಿಕರ್ಮ ಸಾರ್ಥಕತೆಯ ಚೂಲವನ್ನು ಮುಟ್ಟಿದೆ (ಧಾವಗೀ. ೧೫೬) : ಆನಂದವೇ ಸಮಸ್ತ ವ್ಯಾಪಾರಗಳ ಮೂಲ ಮತ್ತು ಚೂಲ (ಶ್ರೀಂದಸ. ೧೦೦). **ಚೂಳ₂ :** ೨. ಖೇಚರ ಚಕ್ರವರ್ತಿ ಧರಣೀಧ್ವಜನಸ್ಮದಧೀಶನು ಧೃತತಾರಾಚಳಚೂಳಶೇಖರಂ (ಚಂದ್ರಪ್ರ. ೬-೧೪) : ನಿವಿಧುರ್ದೀ ಕಾಂಚನ ಶೈಳಂ ಋತುವಿಮಾನ ಚುಂಬಿತಚೂಳಂ (ಪುಷ್ಪಪು. ೧೦-೫೬). [ ಸಂ. ]

**ಚೂಲಿಕೆ,** ಚೂಳಿಕೆ (ನಾ). ೧. (ಆನೆಯ) ಕಿವಿಯ ಬುಡ,– ತಳಭಾಗ : ಮೃದುಸುವೃತ್ತ ಬಹಲಪ್ರಲಂಬ ಶಿವಾತರ ಮಹಾಸ್ರೋತೋಪರಿಭನ್ನಾಂ ತಸುತ್ಕೃಷ್ಟಾವಿಪುಲ ಚೂಲಿಕಾದುಂದುಭಿಸಿಘೋರ್ಷಕರ್ಣನುಂ (ಆದಿಪು. ೧೨.೫೬ ವ). ೨. ಹುಂಜದ ತಲೆಯಲ್ಲಿರುವ ಕೊಟ್ಟು : ತುರಾಯಿ. ೩. ಬೆಟ್ಟ, ಮರ ಮುಂತಾದುವುಗಳ ತುದಿ,-ಶಿಖರ. ೪. ಮುಂಭಾಗ ; ಮುಂಬದಿ. ೫. [ಕಾವ್ಯಮಿ] ನಾಟಕದಲ್ಲಿ ಬರುವ ವಿಷಯಗಳನ್ನು ತೆರೆಯ ಹಿಂದಿನಿಂದ ಸೂಚಿಸುವುದು : ಚೂಲಿಕಾ–ಪಾತ್ರಗಳು ರಂಗಕ್ಕೆ ಬರದೆ ತೆರೆಯ ಹಿಂದೆಯೇ ಇದ್ದು ಮಾತನಾಡಿ ಯಾವುದಾದರೂ ಒಂದು ಸಂಗತಿಯನ್ನು ಸೂಚಿಸುವುದು (ಕ ಟ ಕ. ೨೦೬). ೬. [ಜೈನ] ದೃಷ್ಟಿವಾದದ ಐದು ಪ್ರಕಾರಗಳಾದ ಪರಿಕರ್ಮ, ಸೂತ್ರ, ಪ್ರಥಮಾನುಯೋಗ, ಪೂರ್ವಗತ ಮತ್ತು ಚೂಲಿಕೆ ಎಂಬುವುಗಳಲ್ಲಿ ಕೊನೆಯದು: ಆ ದೃಷ್ಟಿವಾದು ಪರಿಕರ್ಮಮುಂ ಸೂತ್ರಮುಂ ಪ್ರಥಮಾನುಯೋಗಮುಂ ಪೂರ್ವಗತಮುಂ ಚೂಲಿಕೆಯುಂ ಎಂದು ಪಂಚಪ್ರಕಾರಮಕ್ಕುಂ (ಶಕ್ತ್ರ. ೬೦). **ಚೂಳಿಕೆ :** ೧. "ಕರ್ಣಮೂಲಂ, (ತು) ಚೂಳಿಕಾ–ಈ ೨ ಕಿವಿಯ ಮೊದಲ್" (ಚೆಂಥಾಯು. ೫೬-೬೪). ೩. ಆ ಚೂಳಿಕಾಭಾಗದಾದಲೆಯೊಳ್ ನಿಂದಪುದೂರ್ಧ್ವಲೋಕಮೆನೆ . . . ಶ್ರೀಸುಂದರಂ ಮಂದರಂ (ಆದಿಪು. ೧-೫೦) ; ಕನಕಾಚಲ ಚೂಳಿಕೆಯುಂ ಕನಲ್ದು ಗರ್ಜಿಸುತುಮೆಟ್ಟ ಸಿಂಗದ ಪೋಲ್ . . . ಉತ್ತಂಸ ಕಿರಣ ಕೇಸರನೆಟ್ಟಂ (ಶಂಕಾಸಾ. ೯-೫೨) ; ಚೂಳಿಕೆಯುಗ್ರಭಾಗದಿಂ ಸ್ವರ್ನಿಳಯಂಬರಂ ನಿವಿಧುರ್ದ . . . ಮೇರುಗಿರಿ ಪುಟ್ಟಿಸುತ್ತಿರ್ದುದಗುರ್ವ ನಾದಗಂ (ಶಾ ಧ ಪು. ೧-೬೬). ಹೆ ಮ ವ ತೂಳುವತಿರಥರಾಜಿಗಳ ಗಿರಿಚೂಳಿಕೆಯುಲೇ ಚಲ್ಲಬಡಿದಮರಾಳಿಹೊಗಳಲು ಕಾದಿದರು ನೀಲಾಂಗದಾದಿಗಳು (ತೊರವೆ. ೬-೩೪-೫೦). ೪. ಧಾಳಿಯಿಟ್ಟುದು ರಾಯದಳ ಪಾಂಚಾಲದೇಶಕೆ ಮುಂದೆ ಹೊಕ್ಕುದು ಚೂ ಳಿ ಕೆ ಯ ಲಿ ಸುಯೋಧನಾದಿಗಳೂರನರವಣಿಸಿ (ಕು ಶಾ, ಅ. ೬-೬೪). ೬. ಅಮ್ಮು ಚೂಳಿಕೆಯಂಮನಾಜವಧಿಯುಮಂ. . . ಹೆಸರ್ಗೊಂಡು (ಆದಿಪು. ೩-೪೦ ವ). ೭. ಕೂದಲು; ಕೇಶ. 'ಚೂಳಿಕಾವರ್ಧನ' ಪರಾ. [ ಸಂ. ಚೂಲಿಕಾ ]

**ಚೂಲು** 'ಸೂಲ್' ನೋ.

**ಚೂಷೆ** (ನಾ). ತೊಗಲಿನಿಂದ ತಯಾರಿಸಿದ ಆನೆಯ ನಡುಕಟ್ಟು.
[ ಸಂ. ಚೂಷಾ ]

**ಚೂಳ₁,** ಚೂಟ (ನಾ). ಜುಟ್ಟು ; ಶಿಖೆ : " ಚೂಳ (ಚಂಡಿಕೆ) –ಚೂಡಾ= ಶಿಖೆ " (ಶಬ್ದಸೋ. ೦೩). △ **ಚೂಟ :** ಈಡಿತಂ, ಈಟಿತಂ ; ಚೂಡಾ, ಚೂಟಂ (ಶಬ್ದಾನು. ೦೪೦ ಪ್ರಾಕೃ). [ <ಸಂ. ಚೂಡಾ ]

**ಚೂಳ₂** 'ಚೂಲ' ನೋ.

**ಚೂಳಯ** 'ಚೂಳಿಯ' ನೋ.

**ಚೂಳಾಕರಣ** (ನಾ).=ಚೂಡಾಕರಣ: ಚೂಳಾಕರಣದಿನತ್ಶಲೆ ಭಾಳಚ್ಛಾಯೆಯೊಳ್ ಭಂಗಮಂ ಪಡೆದರಿಭೂಪಾಳರ್ಗೆ ದೀನವೃತ್ತಿಯ ಚೂಳಾಕರ್ಮಮನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೫೬). [<ಸಂ. ಚೂಡಾಕರಣ]

**ಚೂಳಾಕರ್ಮ** (ನಾ).=ಚೂಡಾಕರ್ಮ: ಅರಿಭೂಪಾಳರ್ಗೆ ದೀನ ವೃತ್ತಿಯ ಚೂಳಾಕರ್ಮಮನೊಡರ್ಚಿದಂ ನೃಪತನಯಂ (ಮಲ್ಲಿಪು. ೪-೧೫೬).
[ <ಪ್ರಾ. ಚೂಲಾಕಮ್ಮ./ಸಂ. ಚೂಡಾಕರ್ಮ ]

**ಚೂಳಾಮಣಿ** (ನಾ). = ಚೂಡಾಮಣಿ : ಶ್ರೀಜಿನಮಾರ್ಗ್ಗನ್ನೀತಿಸಪ್ಪನ್ನ ಸ್ಸರ್ಪ ಚೂಳಾಮಣಿ (ಎಕ. II, ೪೪೫ ; ಹು. 700).
[ <ಪ್ರಾ. ಚೂಲಾಮಣಿ./ಸಂ. ಚೂಡಾಮಣಿ ]

**ಚೂಳಾಯ್ತು** 'ಸೂಟಾಯ್ತು' ನೋ.

**ಚೂಳಿ₁,** ಚೂಣೆ, ಚುಳಿ, ಚೂಣಿ(ನಾ). ೧. ಮುಂಭಾಗ; ಮುಂದಿನ ಸಾಲು: ಚೂಳಿಯೊಳ್ ಮೃದೋಟದಿಂ ಮಂದಮಾರುತಂ ಪಾಳಿಯಿಂ ನಡೆಸಿದಂ ಸೇನೆಯಂ ಸೇನಾನಿ (ಚಿಬಪು. ೫೩-೧೨). ೨. ಆರಂಭ ; ಮೊಟ್ಟಮೊದಲು : ಬಾಳ್ವ ಮಾತಿನ್ನೇಕೆ ಚೂಳಿಲಿ ಬಂದ ಸ್ತ್ರೀಯಳಿಯ (ಕವೋಕ. ೧೬-೬೪). ೩. (ಯುದ್ಧದಲ್ಲಿ) ಎಲ್ಲಕ್ಕೂ ಮುಂದೆ ಇರುವ ಸೈನ್ಯ ; ಮುಂದಳ; ಅಗ್ರಗಾಮಿ ದಳ: ಒದವಿದರಾ ಚೂಳಿಯ ಬಲುಗಾಜರು (ಪರ್ವಕ. ೬-೮೫); ಚೂಳಿಯ ಭಟರ ಕೈಯಿಂದ ಭೋರ್ಗರೆದೈದಿ ಮೇಲಿಕ್ಕೈದುವ ಬಾಣಗಳ ದಾಳಿಯೊಪ್ಪಿದುದು (ಕಂಸವಿ. ೧೨-೨೧) ; ಎಸೆದುದು ಸಂಜೆಗೆಂಪೆನಿಪ ಕಾವಸ ಚೂಳಿಯ ದೂಳ ದಾಟಿಗಂ . . . ಪೊಣ್ಮುವ ಪಿರಂಗಿಯ ಗುಂಡೆನೆ ಚಂದ್ರ ಮಂಡಲಂ (ಅಕವಿ. ೬-೧೬); ಸಮುದ್ರದ ತಟದಿ ನಿಂದು ಚೂಳಿಯ ಕಳುಪಲೋಷಧಿಪ್ರಸ್ಥಪುರಕೆ (ಶಂಗಪು.೧೦-೪೬). **ಚುಣೆ:** ೨.ಚುಣೆಗೆ ಮೂರ್ತಿ ಸ್ಥಾಪನಾ ಮಾಡಿದವರು ನಮ್ಮ ಜನರು (ಹೊಸಂಕಾ. ೨೯) ; ಚುಣೇಗೆ ಈ ಊರಿಗೆ ಗಂಟಿನ ಬ್ಯಾನಿ ಬಂತು (ಅಮನಿ. ೪). **ಚುಳಿ :** ೪. ಕೊಕ್ಕು ; " ಚುಂಚು " (ಚಾಸಕೋ. ೫೬). **ಚೂಣಿ :** ೧. ಪಂಚಪರುಷವಸುಳ್ಳ ಬಸವನು ಸಂಚಿಸಿದ ಸಾಧನ ಸಮಗ್ರತೆ ಮುಂಚೆ ಜೀರ್ಣಿಸಿ ಹೋದುದೂಟದ ಮೊದಲ ಚೂಣಿಯಲಿ (ಪ್ರಭುಲೀ. ೨೩-೪೩); ಸುಮನಸ ರೊಬ್ಬುಳಿಯ ಚೂಣಿಯಲಿ ಮುನಿಗಳು ಬೆಬ್ಬಳಿಸಿದರು (ತೊರವೆ. ೧-೧೧-೯); ರಂಗದಿಂದ ಚೂಣಿಗೆ ಬರುವಾಗ ಆರತಿಯಾಗುವಾಗ ಬೇರೆ ಬೇರೆ ಪದಗಳನ್ನು ಹೇಳುವರು (ಯಕ್ಷಗಾ. ೩೪). 'ಚೂಣಿಗಾಳೆಗ' ಪರಾ. ೩. ರಾಯನ ಚೂಣಿ ಹೋದಹುದೀಸು ಸಂದಣಿ ಕಾಣೆವು (ಬಸಪು. ೩-೩೪) ; ಚೂಣಿ ಹಳಚಿತ್ತುಭಯದಳದಲಿ ರೇಣು ಮುಸುಕಿತು ದಿಕ್ಕುದೆಸೆಗಳ (ಶಾ ಕಿ ಶಾ. ೨೦-೧೪) ; ಚೂಣಿ ಬಿದ್ದುದು ಜವನ ದೂತಶ್ರೇಣಿಯೆದ್ದುದು (ತೊರವೆ. ೬-೩೮-೪). ಇತ್ತಲ್ ದಮನಂ . . . ತನ್ನ ಮಯ್ಯಾಪಲ ಕಿಱುಪಡೆಗೆ ಕೈವೀಸಿ ಚೂಣಿಯೊಳ್ ನಿಂದು ತಾಗಿದಂ (ರಾಜಶೇಖ. ೯೦-೧೪). ೪. ತುದಿ ; ಅಗ್ರ ; ಕೊನೆ. 'ಚೂಣಿನೋಟ' ಪರಾ.

**ಚೂಣಿಯ ಬಲಿ** = ಯುದ್ಧರಂಗಕ್ಕೆ ಕೊಡುವ ಬಲಿ,–ಆಹುತಿ : ದುರುಳ ದಾನವ ನಿಮ್ಮ ನನ್ನ ಖಡ್ಗಾಹುತಿಗೆಯರದೆ ಚೂಣಿಯ ಬಲಿಯ ಕಳುಹಿದನೆ (ಅಜಮಪು. ೦೫-೪೦).

**ಚೂಳಿ₂** (ನಾ). ೧. ಚವರಿ ; ಹೆರಳು : ಒಡಲಿಚಂ ತನ್ನ ಬೆದೆಗಾರ್ತಿಯ ಚೂಳಿಯ ಸಿಂಗರಕ್ಕೆಂದು ಸಮೆದು ಬೈತಿಟ್ಟ ಕುಂದಣದ ಗೊಂಡೆಯೆನೆ . . . ಎಸೆವ ಜೋಳದ ಪಾಟಿಯಂ (ರಾಜಶೇಖ. ೧೦೦-೫೬). ೨. ರಾಜ ಚಿಹ್ನೆಗಳಲ್ಲಿ ಒಂದು : ಕಾಳಿ ಡಮಾಮಿ ಟಕ್ಕೆಯ ಸಾಲಸತ್ತಿಗೆ ಚೂಳಿ [ಪಾಠಂ. ಚೌರಿ]ಸೂರೇಪಾನ್ಗಳಿಂದ ಮೇಲಾದ ಸಾವಿರ ಕುದುರೆಯು ಸಹ ಬಂದ ಗಾಲಿಯಿನೇನ ಬಣ್ಣಿಪೆನು (ಕಂಸವಿ. ೧೮-೮೨).
[ <ಸಂ. ಚೂಲ, ಚೂಲಾ ]

**ಚೂಳಿಕಾವರ್ಧನ** (ನಾ). ಗರ್ಭಿಣಿಯರಿಗೆ ಮಾಡುವ ಮಂಗಳಶಾಸ್ತ್ರ : ಸೀಮಂತೋನ್ನಯನ; ಸೀಮಂತೋತ್ಸವ: ಘನಗರ್ಭಾಶಾವಧೂಪುಂ ಸವನದೆಸೆವ ತೂರ್ಯಸ್ವನಂ ಚೂಳಿಕಾವರ್ಧನಮಾಂಗಲ್ಯಂ ಬಳಾಕಕ್ಕೆಸೆಯೆ ಪಸರಿಪಾತೋದ್ಯಘೋಷಂ . . . ಘೂರ್ಣಿಸಿದುದಭಿನವಾಂಭೋದ ಗಂಭೀರ ನಾದಂ (ಶಂಕಾಸಾ. ೭-೦೫೦).
[ ಸಂ. ಚೂಲಿಕಾವರ್ಧನ (ಚೂಲಿಕಾ + ವರ್ಧನ) ]

**ಚೂಳಿಕೆ** 'ಚೂಲಿಕೆ' ನೋ.

**ಚೂಳಿಗಲಹ** (ನಾ). ಸೈನ್ಯದ ಮುಂಭಾಗದಲ್ಲಿ ನಡೆವ ಯುದ್ಧ ; ಮುಂಚೂಣಿಯುದ್ಧ : ಸೂಳು ಮತ್ಸರ ಬಿರುದು ಪಾಡಿನ ಚೂಳಿಗಲಹದ ಕದಡು. ಬೂಜಿನ ತೋಳುವಲರೊಳತೋಟಿ ಮಸಗಿತು ದಿವಸ ದಿವಸದಲಿ (ಕುಮ್ಯಾಅ. ೮-೦). [ ಚೂಳಿ$_1$ + ಕಲಹ ]

**ಚೂಳಿಗಾಳಿ** (ನಾ). ಮುಂಭಾಗದಿಂದ ಬೀಸುವ ಗಾಳಿ : ಚೂಳಿಗಾಳಿಯು ದನಿಯನಾಲಿಸುತೆ ನೆಲದೊಳಗೆ ಪೊಳ್ದರ್ದ ತನುಗಳಂ ಕೀಳಲಾಱದೆ . . . ಮುಮ್ಮಲಂ ಮಱುಗಿದರ್ ತತ್‌ಕ್ಷಣದೊಳು (ಚಿಬಪು. ೩೫-೧೪).
[ ಚೂಳಿ$_1$ + ಗಾಳಿ$_1$ ]

**ಚೂಳಿಯ,ಚೂಳಯ, ಜೂಳಯ, ಜೂಳಿಯಂ, ಜೋಳಯ, ಜೋಳಿಯ** (ನಾ). ೧. ಬೈತಲೆಗೆ ಇಡುವ ಮುತ್ತಿನ ಆಭರಣ; ಬೈತಲೆಮುತ್ತು; ಹಣೆಬೊಟ್ಟು : ಕಂಕಣ ಚೂಳಿಯ ತೊಳಪ ಕಾಲುಂಗುರದ . . . ಬರುತಿರ್ದರು (ಕುಮುರಾ. ೦೪-೭೫); ಮುತ್ತಿನ ಮುಡಿಕಟ್ಟು ಚೂಳಿಯ ಭುಜಕೀರ್ತಿ . . . ದೇಸೆವೆತ್ತಿರೆ ಮೆಱೆದಳಾ ನೀಱೆ (ಕುರಾಸಾಂ. ೨೯-೯೫). **ಚೂಳಯ : ೨.** ಹಣೆಗೆ ಇಡುವ ಕುಂಕುಮದ ತಿಲಕ; ನೇರವಾದ ಬೊಟ್ಟು : ಲಲಾಮಕವನ್ನೋಸರಿಸಿ ಸಿಂದುರದ ಚೂಳಯವನ್ನು ತಿದ್ದಿ ಉಗುರಿಂಸಿ ನೇವರಿಸಿಕೊಳ್ಳುತ್ತ (ಮುಂಕ್ಯಕ. ೦೪೨-೨). **ಜೂಳಯ : ೨.** ಜೂಳಯ ತಿಂಗಳಿಗೆಯನಲ್ ನೇರಬೊಟ್ಟಿಗೆ ಪೆಸರ್ (ಅಭಿ ಕೈ. ೨೬) ; "ಜೂಳಯಮೆನಲುಂ ಮೆಱೆವ ಬೊಟ್ಟು" (ಅಭಿಮಂ. ೭೩) : "ಜೂಳಯಂ ತಿಲಕಮಕ್ಕುಂ" (ಕಿಶಕ. ೪೦). **ಜೂಳಿಯ: ೧.** "ಮುತ್ತಿನ ಬೈತಲೆಯಕ್ಕು ಜೂಳಿಯಂ" (ಕವಿಕಂ. ೧೬೨); ನೂಪುರಂ ಮೇಖಲೆ ಪೊಸಕಡಗಂ ಜೂಳಿಯಂ (ದಕಕು. ೬-೮೦); ತೆತ್ತಿಸಿದ ನವರತುನದಿಂದಲಿ ಮುತ್ತಿನುಂಡೆಯು ಜೂಳಿಯಂಗಳ ಪತ್ತಿ ಪಚ್ಚೆಯ ಹಲಗೆ ಪವಳದ ಕಡೆದ ಬೋದಿಗೆಯ (ಕುಷ್ಕಾದ್ರೂ. ೭೦೩. ಹರಿ. ೨೬೮) ; ಜೂಳಿಯ ಚಿನ್ನ ಪೂ ಕಮಲ ಪೂ ಚಳಕಿಗೆ ಶಾಳೆಹೂ . . . ಆಭರಣವೊಪ್ಪಿದುವು (ಧರಹ. ೪೦-೭೫). **೨.** ನೊಸಲ ಚೆಲ್ವಿಕೆಗೊಂದು ಕಡೆಯ ಜೂಳಿಯುವಿಟ್ಟು ಹಸಿ ಬಾಳೆಯುಲೆಯ ಹಸುಯುಲಿ ಮುಲಗಿಸಿದರು (ಶಾರೂರ. ೦೮೩-೪೦೫). **೩.** ಕೊರಳ ಸರ,-ಪಟ್ಟಿ: ಬಿರುದಿನ ಪೊಂಬಾವಡ ಸಡಕಿನ ವಲ್ಲಿ ಕೊರಳ ಮುತ್ತಿನ ಜೂಳಿಯುದ . . . ಭೂಷಣಗಳಾಂತಿಹ ಹಯ ಖುರವತ್ತಿ ಕುಣಿಯುತ್ತೈದಿದುವು (ಕಂಸವಿ. ೦೩-೦೪). **೪.** ಕೈಗೆ ತೊಡುವ ಮುತ್ತಿನ ಆಭರಣ : ಪೊಳೆವ ಕಂಕಣಾವಳಿಯ ಮುದ್ರಿಕೆಯ ಬೆರಳ ಜೂಳಿಯ ಕಡಗಗಳ್ ಮೆರೆಯೆ (ಕುರಂಗ. ೪-೨೯). **ಜೋಳಯ: ೧.** ಮುತ್ತಿನ ಬೊಟ್ಟು, ಮುತ್ತಿನ ಮೂಕುತಿ . . . ಜೋಳಯ, ಭುಜಕೀರ್ತಿ (ಕುಮೂಸಾಂ. ೩೭೬). **ಜೋಳಿಯ: ೧.** ಮುಡಿಗೆ ಜೋಳಿಯ ತೆಲ್ಲಟಯೆಂಬ ನಾಟ್ಟುಡಿಯಂತೆ ಪಾಪಮನೆ ಪೆರ್ಚಿಸಿ (ಧರ್ಮಾಮೃ. ೬-೦೭೫ ಪ). **೪.** ತೋಳಬಂದಿಯ ಮಣಿಖಚಿತ ಕೇಯೂರದ ಪುಷ್ಯರಾಗ ಜೋಳಿಯದ (ಧರ್ಮಾಪ. ೨-೨೩ ಪ); ಕೀಲಕಡಗದ ವಜ್ರಲಹರಿಯ ಜೋಳಿ [ಪಾಠಾಂ. ಲೆ] ಯದ ಕಂಕಣದ ರವೆಯುದ ತೋಳಬಂದಿಯ ಕೊರಳ ತ್ರಿಸರದ ಬೆರಳ ಮುದ್ರಿಕೆಯ . . . ಮೇಲು ಶೃಂಗಾರದ ಸಖೀಜನ ಸಂದಣಿಸಿತು (ಕುಮ್ಯಾಅ. ೦೩-೩೨). [ <ಪ್ರಾ. ಚೂಲಿಯಾ, ಚೂಲಾ ]

**ಚೂಱಿಕಾಱ** 'ಸೂಱಿಗಾಱ' ನೋ.

△ **ಚೂಟ** 'ಚೂಳ್$_1$' ನೋ.

**ಚೆಂ$_1$, ಚಂ** (ಗು). ಕೆಂಪು ಎಂಬುದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಗಣಗಿಲೆ', ಪರಾ. **ಚಂ** : 'ಚಂಗಾವಿ' ಪರಾ.
[ ದೇ.೫ ತಮಿ. ಮಲ. ಚೆವ್ ; ತುಳು. ಚನ್ನ ; ತೆಲು. ಚೆಂ ]

**ಚೆಂ$_2$** (ಗು). 'ಚೆನ್ನು' ಎನ್ನುವ ಪದಕ್ಕೆ ಸಮಾಸದಲ್ಲಿ ಆದೇಶವಾಗಿ ಬರುವ ಸಂಕ್ಷಿಪ್ತರೂಪ. 'ಚೆಂಕೊನ್ನಿಗ', 'ಚೆಂಗಾಲ' ಪರಾ.
[ <ಚೆನ್ನು ]

**ಚೆಂಕೊನ್ನಿಗ** (ನಾ). ಸುಂದರನಾದ ಪರಾಕ್ರಮಿ (?): ಪನತರುಗಳ ಪಣ್ಣಲೆಗಳ್ ಚಟುಲೆ ಕಳಿಂಕೆಗಳ್ ತಾರಕೆಗಳಂತೊಗೆಯೆ ಕೊನೆಗಳ್ ಚೆಂಕೊನ್ನಿಗ [ಪಾಠಾಂ. ಚೆಂಕೊಂಗ]ರಟ್ಟೆಯಂತೆ ನಿಮಿರೆ ತಳಿರನಂಗನ ಬಾಳಂತೆ ಪೊಳೆಯೆ (ಐಂಹರಿ. ೫-೫ ಪ). [ ಚೆಂ$_2$ + ಕೊನ್ನಿಗ ]

**ಚೆಂಗಟ್ಟು** (ನಾ). ಸುಂದರವಾದ ಚೌಕಟ್ಟು,-ಆವರಣ : ಚೆಂಗಟ್ಟಂ ಧನುವಂತೆ ಕೊಂಕಿಯೆಸೆಗುಂ ಮೇಗೆಟ್ಟಿ ಮುಮ್ಮಾಡಮುಂ (ಮ್ಯಸೂಮು. ೫-೦೬).
[ ಚೆಂ$_2$ + ಕಟ್ಟು$_2$ ]

**ಚೆಂಗಣಗಿಲೆ, ಚಂಗಣಗಿಲೆ, ಚಂಗಣೆಗಿಲ್, ಚಂಗಣೆಗಿಲು, ಚೆಂಗಣೆಗಲು, ಚೆಂಗಣೆಗಿಲ್, ಚೆಂಗಣೆಗಿಲು, ಚೆಂಗಣೆಗಿಲೆ** (ನಾ). ೧. ಕೆಂಪು ಕಣಗಿಲೆ. **೨.** ತಾವರೆ; ಕಮಲ: "ಚೆಂಗಣಗಿಲೆ, ಸೌಗಂಧಿಕ, ಕಲ್ಹಾರ, ಹಲ್ಲಕ, ರಕ್ತಸ್ಕಂಧಕ" (ನಾಚಿರಾ. ೬). **ಚಂಗಣಗಿಲೆ: ೨.** ಸುಕರ್ಪೂರಂ ತಮಾಲದಳ ಚಂಗಣಗಿಲೆಯು ಕೋಷ್ಠಸಾರ ಕಸ್ತೂರಿ ಲಾಮಂಚಸಂಯುಕ್ತ ಶಿವಗಂಧಾಷ್ಟಕಂ ಲೇಸು (ಗುರುಚಾ. ೬-೫). **ಚಂಗಣೆಗಿಲ್: ೨.** "ಕಲ್ಹಾರಂ ಸುಗಂಧಿಕಂ ಚಂಗಣೆಗಿಲೆ[ಪಾಠಾಂ. ಕನ್ನೈದಿಲೆ, ಕನ್ನೈದಿಲೆ]ನಿಸಿಕ್ಕು" (ಮಂಗರಾ. ೦೨೪-೦೭). **ಚಂಗಣೆಗಿಲು : ೨.** ಪನ್ನೀರಿಂದ ತೇದ ಚಂಗಣೆಗಿಲಾದಿಯಾದ ಪರಿಮಳಪುಷ್ಪಗಳಿಂದ ವಾಸಿತವಾದ ಶ್ರೀಗಂಧವನ್ನು ಧರಿಸಿದಲ್ಲಿ ಜನರುಗಳ ತಾಪವನ್ನು ಪರಿಹರಿಸಿ . . . ಮನ್ಮಥನ ನಿದಾನಸ್ಥಾನವಾಗಿರುವುದು (ಚಕಮ್ಮ. ೪೦). **ಚೆಂಗಣೆಗಲು : ೨.** "ಸೌಗಂಧಿಕಂ, ಕಲ್ಹಾರಂ, ಹಲ್ಲಕಂ, ರಕ್ತಸ್ಕಂಧಕಂ – ಈ ೪ ಚೆಂಗಣೆಗಲ ಹೂವಿನ ಹೆಸರು" (ನಾಚಿರಾ. ೧೧೦) ; "ಕಲ್ಹಾರಂ – ಚೆಂಗಣೆಗಲು ಬಿಳಿಯ ನೈದಿಲು, ಈಚಲು ತುರುಕುಡಿ ?" (ಓಷಧಿ. ೨೨). **ಚೆಂಗಣೆಗಿಲ್ : ೧.** ಆದಿಕೃಪಂ ದೇವದೇವೇಶ್ವರನ ಪೂಜೆಯನು ಮಾಡಲೊಂದು ಚೆಂಗಣೆಗಿಲಿಂಡೆಯ ಕೊಂಡು ಹೋಗುತಿರಲು (ಸೌಂದಪು. ೩-೧೯). **೨.** ಸಿಂಗಾರದ ವನಸಿರಿಗೆ ನೆಲೆಯನೀವ ತುಂಗಭದ್ರೈಕಶಾಲನವು ಚೆಂಗಣೆಗಿಲ ಮಡು ಕಮಲಾಕರಗಳು ಕಂಗೆ ಮಂಗಳವಾಗಿಹವು (ಅಂಜಿಹ. ೩-೩೬) ; ಚೆಂಗಣೆಗಿಲ ದಿವ್ಯಪರಿಮಳಕೆಱಗುವ ಭೃಂಗವಿಂಡುಗಳ ಝೇಂಕಾರ (ಕಂಸವಿ. ೫-೧೦೨). **ಚೆಂಗಣೆಗಿಲು : ೨.** "ಪದ್ಮಕಂ–ಪದ್ಮಕ, ತಾವರೆ, ಶ್ರೀಗಂಧ, ಚೆಂಗಣೆಗಿಲು, ಕೋಷ್ಠ" (ಓಷಧಿ. ೯೦) ; ಚೆಂಗಣೆಗಿಲು ನೈದಿಲು ಹೊಂದಾವರೆ ಪೊಂಗಿದ ಸರಸಿಗಳಿಂದ . . . ರಾಜಿಸುತಿಹುದು (ಕಂಸವಿ. ೨-೪೯). **ಚೆಂಗಣೆಗಿಲೆ : ೨.** ಚೆಂಗಣಗಿಲೇ ಜಾರ ಲಿಂಗದೊಲವೇ ಎನುತ . . . ಕೊಳಂಗಳ ಜಳಂಗಳೊಳು ಪೊಗಿರ್ದ ಮಂಗಳವನಿಪ್ಪ ಹೂವಂ ಕೊಂಡು (ಪುಷ್ಪಕ. ಹ. ೩೨೫-೦೭) ; ಚೆಂಗಣೆಗಿಲೆಯೆಳೆಯಲರ್ವಾಸಿಗಕೆ ಮನಂಗೊಳಿಸುವ ಮೃಗಮದದಣ್ಪಂ ಲಲಿತಾಂಗಿಯದೊರ್ವಳ್ ಕೊಡೆದು (ಜಯುಸಾ. ೧೯-೨೨). [ ಚೆಂ$_1$ + ಕಣಗಿಲೆ$_1$ ]

**ಚೆಂಗಣೆಗಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲ್** 'ಚೆಂಗಣಗಿಲೆ' ನೋ.

**ಚೆಂಗಣೆಗಿಲು** 'ಚೆಂಗಣಗಿಲೆ' ನೋ.

**ಚೆಂಗಣೆಗಿಲೆ** 'ಚೆಂಗಣಗಿಲೆ' ನೋ.

**ಚೆಂಗದಿರ್, ಚಂಗದಿರ್** (ನಾ). ಕೆಂಪಾದ ಕಿರಣ ; ಕೆಂಬೆಳಕು : ಅಳಿಯೆ ತಮಮಿಂದು ಚೆಂಗದಿರ್ಗಳನುಳಿದಮಳಾಂಶುಗಳೆವಪೋಲ್ ರಿಪುಗರ್ವಂ ಕಳಿಯೆ (ರಾಜಚಂ. ೬-೦೩೩). 'ಚೆಂಗದಿರ' ಪರಾ. **ಚಂಗದಿರ್ :** 'ಚಂಗದಿರ' ಪರಾ. [ಚೆಂ$_1$ + ಕದಿರ್$_2$ ]

**ಚೆಂಗದಿರ, ಚಂಗದಿರ** (ನಾ). ಕೆಂಪಾದ ಕಿರಣಗಳಿಂದ ಕೂಡಿದವನು ; ಸೂರ್ಯ : "ಚೆಂ[ಪಾಠಾಂ. ಚೆಂ]ಗದಿರನುಂ ನೇಸಱು ಪೊಟ್ಟು ಮನೆ ಸೂರ್ಯನುಂ" (ಅಭಿಕೈ. ೧೧) ; ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಹಕ. ೧). **ಚಂಗದಿರ :** "ಚಂಗದಿರನೆನಲಕ್ಕು ದಿನಪಂ" (ಕಕರ ೩೫). [ ಚೆಂಗದಿರ್ + – ಅ$_7$ ]

**ಚೆಂಗನೆ, ಚಂಗನೆ** (ಅ). ಚಕ್ಕನೆ : ಕೂಡಲೆ ; ತಟ್ಟನೆ: ಮರದಿಂದ ಕೆಳಕ್ಕೆ ಚೆಂಗನೆ ಹಾರಿದನು (ಬೂಕೊ). **ಚೆಂಗನೆ:** ಸೇವಕನು ಚೆಂಗನೆ ಹಾರಿ ಅಧಿಕಾರಿಯನ್ನು . . . ತನ್ನ ಕಠಾರಿಯಿಂದ ಇರಿದನು (ಒಡೆಕೆ. ೨೪).

**ಚೆಂಗಚೆಂಗನೆ, ಚೆಂಗುಚೆಂಗನೆ** (ದ್ವಿರುಕ್ತಿ): ಚೆಂಗಚೆಂಗನೆ ತೇಜಿ ತೆಗೆಯೆ ದ್ವಾದಶಯೋಜನಾಂಗಣಪರ್ಯಂತ ಹರಿದು . . . ನಿಂದುದು ತೊಟ್ಟನಲ್ಲಿ (ಭರತೇ. ೨೪-೩೦) ; ಚೆಂಗುಚೆಂಗನೆ ಓಡುತ್ತಾ ಬಂದಳು (ಬೂಕೊ).

[ ಚೆಂಗು$_2$ + – ಅನೆ$_1$ ]

**ಚೆಂಗಯ್** (ನಾ). ಕೆಂಪಾಗಿರುವ ಕೈ; ಅಂಗೈ: ಕೆಂಬಾಯ್ಗೆ ಚೆಂಗಯ್ಗೆ ಬಡಮೆಯ್ಗೊಲ್ದು ಬಾಯ್ಗೆಂತು ಬಂತಂತೆ ಬಣ್ಣಿಸುತೆ ಚದುರರೆಯ್ತರೆ ಪೆಂಡಿರೆಳ್ತಂದರು (ಉದ್ಯದೇ. ೫-೨೩). [ ಚೆಂ$_1$ + ಕಯ್$_2$ (<ಕೆಯ್$_2$) ]

**ಚೆಂಗಲವೆ, ಚೆಂಗಲವೆ, ಚೆಂಗಳವೆ** (ನಾ). ಕೆಂಪು ತಾವರೆ, ಕೆಂದಾವರೆ : "ಚೆನ್ನೈದಿಲೆಯುಂ ಚೆಂಗಲವೆಯುಮದೆನ್ನಲ್ ಸರಿ ರಕ್ತೋತ್ಪಳಮಕ್ಕುಂ" (ಕವಿಕಂ. ೯೩). **ಚೆಂಗಲವೆ:** "ಅವಲೆಂದುಂ, ಚೆಂಗಲವೆಯೆಂದುಂ, ಚೆನ್ನೆಯ್ದಿಲ್" (ಕರ್ಣಾ. ೯-೧೮೬) ; "ಚೆಂಗಲವೆಯಾವಲೆಂದು ಚೆನ್ನೈದಿಲ್ಗೆ . . . ಪೆಸರಪ್ಪುದು" (ಅಲ್ಮಕುಂ. ೨೬). **ಚೆಂಗಳವೆ :** "ಮಿಗೆ ಚೆಂಗಳವೆಯಾವಲೆಂದೆನಲ್ ಚನ್ನೈದಿಲಿಗೆ ಪೆಸರ್" (ಅಭಿಕೃ. ೨೧). [ ಚೆಂ$_1$ + ಕಲವೆ ]

**ಚೆಂಗಲ್ಲು** (ನಾ). ಕೆಂಪುಬಣ್ಣದ ಕಲ್ಲು ; ಕೆಂಗಲ್ಲು : ಉಳಿಮುಟ್ಟದ ಶಿರೆಯಲ್ಲವು ಕಲೆಯಾಯಿತು ಇಲ್ಲಿ . . . ಚೆಂಗಲ್ಲೇ ಮಾಂಗಲ್ಯಕೆ ಸೆಲೆಯಾಯಿತು ಇಲ್ಲಿ (ಕರುಣಾ. ೬೧-೧೦). [ ಚೆಂ$_1$ + ಕಲ್ಲು (<ಕಲ್$_3$) ]

**ಚೆಂಗಳ್ಪು** (ನಾ). ಕೆಂಪು ಬಣ್ಣದ ಮದ್ಯ.–**ಹೆಂಡ:** ವೇಣುವೀಣೆಗಳಿಂಪುದನಿ ಕರ್ಣಕಮೃತಮಂ ಸೂಸುತಿರೆ, ಚೆಲ್ವು ಚೆಂಗಳ್ಪಾಯ್ತು ನರಪತಿಯ ಮತಿಗೆ (ಶ್ರೀರಾಮಾ. ೬೭-೩೫೧). [ ಚೆಂ$_1$ + ಕಳ್ಪು (<ಕಳ್$_2$) ]

**ಚೆಂಗಾಟ, ಚಂಗಾಟ** (ನಾ). ಚೆಲ್ಲಾಟ : "ನಗೆದಾಟ : ಜಗಿದಾಟ" (ಜಾನಪೋ. ೫೩). **ಚಂಗಾಟ :** ಚೇಲಿಗೆ ಚಂಗಾಟ, ಇಲಿಗೆ ಪ್ರಾಣಸಂಕಟ (ಗಾದೆ). [ ಚೆಂಗು$_2$ + ಆಟ ]

**ಚೆಂಗಾಯ್** (ನಾ). ಕೆಂಪುಬಣ್ಣದ ಕಾಯಿ : ಚೆಂದಳಿರ್, ಕೆಂದಳಿರ್; ಚೆಂಗಾಯ್, ಕೆಂಗಾಯ್ (ಶಬ್ದಾಸು. ೩೪೨ ಪ್ರಯೋ).

[ ಚೆಂ$_1$ + ಕಾಯ್$_4$ ]

**ಚೆಂಗಾರೆ** (ನಾ). ಕೆಂಪು ಕಾರೆಯ ಹಣ್ಣು : ಜಲವೃಟ್ಟಿಗಳನಾವಗಂ ಜೆದಕಿ ತಿಂದಾ ಬಟ್ಟೆಯೊಳ್ ಬಟ್ಟನೇಱಲ ಚೆಂಗಾರೆಯ ಮೆಲ್ದುಗುಟ್ಟ ಸಹಕಾರೋಚ್ಚಿಷ್ಟ ಪಕ್ಷಿಗಳಂ (ಸುಕುಮಾ. ೪-೫೭). [ ಚೆಂ$_1$ + ಕಾರೆ$_1$ ]

**ಚೆಂಗಾಲ** (ನಾ). ಒಳ್ಳೆಯ ಕಾಲ ; ಚೆನ್ನಾದ ಕಾಲ : ಚಂಡಿ ಚಾಮುಂಡಿಯರ್ ನರಶಿರಗಳೊಂದರ್ಬುದವ ಹರಡಿ ಧ್ರುವದಿಂದ ಧ್ರುವಬರಂ ಬೀಸುಗಾಲಿಂದೊದೆದು ಕ್ರೀಡಿಸುವ ಕೆಂಗಾಲ ಚೆಂಡಿಕೆಯ ತೆಗೆದ ಚೆಂಡಿನೊಳಿಂದು ಮಾಡಿದ ಚರಂಡಿತನವನು ತೊಳೆವ ಚಂಡಿಕೆಯು ಚೆಂಗಾಲ! (ನವ್ಯಕ್ತ.೧೨-೩).

[ ಚೆಂ$_2$ + ಕಾಲ ]

**ಚೆಂಗಾವಿ, ಚಂಗಾವಿ** (ನಾ). ೧. ಕೆಂಪು ಬಣ್ಣ ; ಕಾವಿ ಬಣ್ಣ : ಚೆಂಗಾವಿಯಂಶುಕದಿನುಜ್ವಳವಾಗಿ . . . ಸಾರಂಗಾಕ್ಷಿಯಂಗಜನನರ್ಚನೆಗೆಯ್ದುಂ (ಮಿತ್ರಗೋ. ೧೫-೨೯); ಆ ಜೋಗವಟ್ಟಿಗೆಯುಮಾ ಬೆಳ್ಪಡೆಯುಮಾ ಬೆಂಬೂದಿಯು ಪೂಸುಮಾ ಚೆಂಗಾವಿಗಪ್ಪಡದುಡೆಯುಂ (ರಾಮಾಶ್ವ. ೫೬-೧೩) ; ಚೆಂಗಾವಿಯ ನಿಲುವಂಗಿಯನ್ನು ಧರಿಸಿದ್ದಾನೆ (ತುಂಗಭ. ೨). ೨. ಕೆಂಪು ಬಣ್ಣದ ಸೀರೆ : ಚೆಂಗಾವಿಯನ್ನುಟ್ಟು ಬಾಗಿನಗಳನಾಂತು ನಿನ್ನನೆ ನೋಳ್ಪೆನೆಂದು (ಗಾಥಾಸ. ೮೨-೨೮). **ಚಂಗಾವಿ :** ೧. ಖಳಗೆ ಬೆಂಬಲಮಾಗಿ ಸಂಧ್ಯಾಸುರಕನ್ಯಕೆಯು ಚಲುವ ಚಂಗಾವಿ ಸೀರೆಯನುಟ್ಟು ಬಪ್ಪಂತೆ . . . ಸಂಜೆಗೆಂಪಡರ್ದುದು (ನವಮೋ. ೦೧-೨೩). [ ಚೆಂ$_1$ + ಕಾವಿ ]

**ಚೆಂಗಾಳ್ವ** 'ಚಂಗಾಳ್ವ' ನೋ.

**ಚೆಂಗಿಸು, ಚಂಗಿಸು, ಜಂಗಿಸು** (ಕ್ರಿ). ೧. ಉಕ್ಕಿಬರು ; ಹೆಚ್ಚಾಗು : ಹೆಂಗಸಿನ ಕೈಯಿಂದಲಿ ಸಮರಾಂಗಣದಿ ಬಳಿಕೆಂದು ಊರ್ವಶಿ ಚೆಂಗಿಸಿದ ಕೋಪದಲಿ ಶಾಪವ ಕೊಡಲು (ಅಂಬಿಕಾ. ೮-೩೩). **ಚೆಂಗಿಸು:** ೨. ಹಾರು: ಕುಪ್ಪಳಿಸು : ನೆಗೆ : ಬಂದಿತು ಬಂದಿತು ಬಂದಿತು ಹೊಮ್ಮುಗ . . . ಕೊಂಗಿಸಿ ಕುಣಿಯುತ ಚಂಗಿಸಿ ಪಾರಿ (ಹಮಕ. ೨೨). **ಜಂಗಿಸು :** ೨. ಸಿಂಗಂ ಪೆಱುತಿರಲಾ ಶಿಶುವಂ ತಾಯಂಗದಿ ತಲೆ ಹೊರಟುದಯಿಪ ಸಮಯಾಕೆ ಮಾಂಗಡೆದೊಂದು ಮತಂಗದ ಮಱಿಯಾರೆ ಕಾಣುತ ಕಡು ಮುಳಿದು ಜಂಗಿಸಿಯಾವೊಡಲಿಂದದನವಱಿತು (ಜಯುಕಾ. ೧೫-೩೨).

[ ಚೆಂಗು$_2$ + – ಇಸು$_3$ ]

**ಚೆಂಗು$_1$, ಚಂಗು$_1$** (ಕ್ರಿ). ಹಾರು ; ನೆಗೆ ; ಕುಪ್ಪಳಿಸು : ಏರೊಡೆದು ಚೆಂಗಿದಂ ತಲೆಗೆದರ್ದು ಶಾಕಿನಿಗೆ ಕೈಸಿಲ್ಕದೆ (ಪರಶು. ೩೧-೪೨) ; ಕಂಗಳಿಗೆ ಕಣ್ಣಾದರೆ ಚೆಂಗು ನೀ ಮಾಯದಲಿ (ಹಮಕ. ೧೭೫); ಮರುತ್ತನಯನತ್ತಣ್ಗೆ ಚೆಂಗಿದನಭ್ರ ಮಾರ್ಗದೊಳು (ಸಂರಾಪಂ. ೧೦೯). **ಚೆಂಗು$_1$ :** (ಕ).

[ ದೇ.ಶ ತಮಿ. ಚಿಮ್ಪು. ]

**ಚೆಂಗು$_2$, ಚಂಗು$_2$** (ನಾ). ಹಾರುವಿಕೆ ; ನೆಗೆತ ; ಜಿಗಿತ: (ಕ). **ಚಂಗು$_2$ :** ಚಂಗು ಹೊಡೆದು ನುಣಚಿಕೊಳ್ಳುತ್ತಿದ್ದ (ಪದಿಕೇ. ೫೮). [ <ಚೆಂಗು$_1$ ]

**ಚೆಂಗು$_3$** 'ಚುಂಗು$_1$' ನೋ.

**ಚೆಂಗು$_4$, ಚಂಗು$_3$, ಜಂಗು$_2$** (ನಾ). ಒಂದು ಬಗೆಯ ತಂತಿವಾದ್ಯ : ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವುಪಾಂಗ ಮುಂತಾದುವನಾಂತು (ಭರತೇ. ೪೭-೪೬); ಜೇಗಟೆ ಘಂಟೆ ವರತಂತಿ ಚೆಂಗು ಮೊದಲಾದವಗ್ಗಿಯ ವಂಶ (ಗುರುಚಾ. ೬-೩೬) : ಕೂಗುತಿಹವು ಸರ್ವಕಾಲದಿ ಜಾಗಟೆ ಕೊಳಲು ದಪ್ಪಟೆ ಚೆಂಗು ಕೊಂಬು ತಾಳ ರವಗಳಿಂದ (ಚದಾವ. ೫೧-೨). **ಚಂಗು$_3$ :** ಅವಚ ಚಂಗು ಶ್ರೀಮುಖವೀಣೆಗಾಱರು ತಾವಾಗ ತಂತವನ್ನು ಕಲೆಯು ಭಾವ ಭಿನ್ನಣದೋಱ ಕೇಳಿಸಿದರು (ನಾಗಳು. ೨೨-೭೦) ; ಉತ್ತಮ ಸುತಾಳವೀಣಾಮೃದಂಗಂ ಚಂಗು ತಿತ್ತಿಯುಮುಪಾಂಗದಾ ಮೇಳಗಳ (ಪ್ರಭುಪು. ೪-೩೬) ; ಚಂಗ ಬಾಜಿಸುವ ಫಣವೇಣಿಯರ ತತಿ (ರಾಘಕ. ೬-೮೩). **ಜಂಗು$_2$ :** ಜಂಗು ಗೆಜ್ಜೆ ಮೃದಂಗ . . . ವೀಣೆಗಳ ನುಡಿನುಡಿಸುವಾ (ಪರಶು. ೦೦-೨೮). [ ←ಪಾರ. ಚಂಗ್. / ತೆಲು. ಚೆಂಗು ]

**ಚೆಂಗುಡಿ, ಚಂಗುಡಿ** (ನಾ). ೧. ಕೆಂಪಾದ ಚಿಗುರು–ಕುಡಿ: ಚೆಲ್ವಿಂಗಳುಚಿದಾಸಣಿಸಿದಂತೆಪೊಲ್ಪಿಂದಳಿರ್ ಚೆಂಗುಡಿಯುನಾ ಸುದಿಂಬಂ ಪ್ರಕಾಶಮಾನಿಳಿಪರಂಗದಾ ರೋಪಾತಿಶಯ ಕಾಂತಿಯಾ (ಶಂದಿಮಾ. ೦೭-೩೪) : ಸಂತಸದ ಕೂಟಗಳು ಕಂಗೊಳಿಪ ನೋಟಗಳು ಚೆಂಗುಡಿಗಳುಯ್ಯಲೆಗಳೆಲ್ಲ ಹೋಗಿಹವು (ಮೀಗೀ. ೩೨-೨೦). ೨. ಹವಳ ; ಪ್ರವಾಳ : "ಚೆಂಗುಡಿಯೆಂದು ಪ್ರವಾಳಂ" (ಕರ್ಣಾ. ೮-೦೪೮) ; ಸಿಂಗರಂಬಡೆದ ಮೊಗ ಚೆಂಗುಡಿಯ ಕುಡಿಯೊಲೆಸೆವಧರ (ಸಂದಿಮಾ. ೨೩-೩೭) : ಚೆಂಗುಡಿಯ ಕುಡಿಗಳೆಂದನೆಗಮಣಂ ಮಿನುಮಿನನೆ ಮಿನುಗುತಿರ್ದುವು ನನೆದೀವಿದ ಪಾಟಲೀದ್ರುಮಂಗಳ ಕೊನೆಗಳ್ (ರಘುಸ್ವ. ೧-೮೫). **ಚಂಗುಡಿ:** ೨. "ಚಂಗುಡಿಯೆನಲ್ ವಿದ್ರುಮಂ" (ಅಭಿಕೃ. ೪೬); "ಚಂಗುಡಿಯೆ ಹವಳಮಕ್ಕುಂ" (ಕಕರ. ೩೫).

[ ಚೆಂ$_1$ + ಕುಡಿ$_2$ ]

**ಚೆಂಗುಲಾಬಿ, ಚಂಗುಲಾಬಿ** (ನಾ). ಕೆಂಪು ಗುಲಾಬಿ : ಚೆಂಗುಲಾಬಿ, ಮಲ್ಲಿಗೆಯು, ಬಕುಳ ಸೇವಂತಿ ರಂಗು ತಾಳಿ (ನಂಮು. ೩೫-೦೪). **ಚಂಗುಲಾಬಿ :** ಚಂಗುಲಾಬಿಯ ಅರೆ ಅರಳಿದ ಪುಷ್ಪಗಳನ್ನು ಎತ್ತಿಕೊಂಡು (ಚಂದುಚು. ೦೭). [ ಚೆಂ$_1$ + ಗುಲಾಬಿ ]

**ಚೆಂಗೂದಲು** (ನಾ). ಕೆಂಪಗಿರುವ ಕೂದಲು : ಅವಳ ದುಂಡುಮುಖದ ಮೇಲೆ ಚೆಂಗೂದಲು ಗುಂಗುರುಗುಂಗುರಾಗಿ ಕುಣಿಯುತ್ತಿತ್ತು (ಪುನರು. ೩೮೫). [ ಚೆಂ$_1$ + ಕೂದಲು (<ಕೂಂದಲ್) ]

**ಚೆಂಗೂಲಿ**, ಚಂಗೂಲಿ (ನಾ). ೧. ಕೈಗೂಲಿಮಾಡುವವನು; ದಿನಗೂಲಿಯವನು ; ಆಯಾ ದಿನದ ಕೂಲಿಯನ್ನು ಅಂದೇ ಪಡೆದು ಕೆಲಸ ಮಾಡುವವನು: ಕಾಮಾಟಿ ಚೆಂಗೂಲಿಗಳು ಸಹಾ ಅವರವರ ಸದ್ದಿವಾಲರ ಸಮೇತ ಸಮಯ ಬಿದ್ದ ಹಾಗೆ ಕೆಲಸ ಮಾಡಲು ಬರುತ್ತಿರಲಿ (ಹೇಚಿಮಾ. ೩). ೨. ಸೂಳೆ ; ವೇಶ್ಯೆ: ಯಾಕೆ ಚೆಂಗೂಲಿ ಆಡಿದ ಹಾಗೆ ಆಡುತ್ತಿರುವೆ ? (ರೂಢಿ). **ಚಂಗೂಲಿ:** ೧. ಗುಮಾಸ್ತೆಯರು . . . ಚಂಗೂಲಿ ಪಹರೆಯವರು ಮುಂತಾದ ಜನಗಳನ್ನೂ . . . ನೇಮಕ ಮಾಡಿಸಿ (ಮುಹಾಚಂ. I, ೦೨೭) ; ಆಂಗ್ಲೇಯರು ಭಾರತೀಯರನ್ನು ಚಂಗೂಲಿಗಳನ್ನಾಗಿಸಿ . . . ಶ್ರೀಮಂತರಾಗಲಾರಂಭಿಸಿದರು (ಹೊಸಹು. ೬೮).

[ ದೇ.॥ ತಮಿ. ಚೆಯ್‌ಕೂಲಿ: ತೆಲು. ಚೇಕೂಲಿ ]

**ಚೆಂಗೆಂಡ** (ನಾ). ಕೆಂಪಗಿರುವ ಕೆಂಡ ; ನಿಗಿನಿಗಿಯಾದ ಕೆಂಡ : ವಿಷಯ ವಿಂದ್ರಿಯದೊಡನೆ ತಾಗೆ ಚೆಂಗೆಂಡವನು ಕೆದರಿ ಚೇತವ ಸುಡುತ ಇರವನರುಹುವುದು (ಮಿಕದೇ. ೨೩-೭). [ ಚೆಂ$_1$ + ಕೆಂಡ ]

**ಚೆಂಗೊಕ್ಕು** (ನಾ). ಕೆಂಪಗಿರುವ ಕೊಕ್ಕು, – ಮೂತಿ: ಕಳವೆಯ ಪೊಂದೆನೆಯಿಂ ಸಂಗಳಿಸಿರೆ ಚೆಂಗೊಕ್ಕು ಪಚ್ಚೆಯಂತೆವೊಲಿರೆ ಮೆಯ್ಗಳಿಗಳ ಸಾಲ್ನಭದೊಳ್ಕಣ್ಗೊಳಿಸಿತ್ತಾಗಳ್ಸುರೇಂದ್ರಚಾಪದ ತೆರದಿಂ(ಪುರಾಚ. ೫-೩೦).

[ ಚೆಂ$_1$ + ಕೊಕ್ಕು$_2$ ]

**ಚೆಂಗೊಡೆ** (ನಾ). (?) : ಇಡಿದುದ್ದಂ ಬೆಳೆದೇಟ್ಗೆವಟ್ಟದ ಬದಿಗಾಡೆಲ್ಲವಂ ಬೇಗೆ ನಿಚ್ಚಡರ್ವಂತಿರ್ದುದು ಸಂಜೆಗೆಂಪದಱ ಬಿತ್ತೊಂದೊಂದರಲ್ ತೋರ್ಪನಂ ಪಿಡಿದಂತಿರ್ದುವು ನಟ್ಟ ಬಾಂದೊಱೆಯ ಮಿಾವೆಲ್ಲಂ ಕಟ್ ತಂದ ಚೆಂಗೊ [ಪಾಠಾಂ. ಚೇನೊ]ಡೆಯಂತಿರ್ದುವು ಪಕ್ಕವಟ್ಟದೆಡೆಯೊಳ್ ನೀಹಾರರುಚ್ಯಂಡಲಂ (ಸೂಕ್ತಿಸು. ೯-೧೨).

[ P ಇದು 'ಚೇಂಗೊಡ'ಎಂಬುದರ ಅಪಲಿಖಿತವಿರಬಹುದು ]

**ಚೆಂಗೊರಲ್** (ನಾ). ಕೆಂಪಾದ ಕೊರಳು, – ಕಂತ್ತಿಗೆ : ಚಕಾರಕ್ಕೆ – ಚೆಂಗಣಗಿಲೆ . . . ಚೆಂಗೊರಲ್, ಚೆಂದುಟಿ (ಕಮುದ. ೦೮೨ ಪ್ರಯೋ).

[ ಚೆಂ$_1$ + ಕೊರಲ್ ]

**ಚೆಂಗೋಟು** (ನಾ). ಅಂಕಡೊಂಕಾಗಿರುವುದು ; ವಿಶೇಷವಾಗಿ ವಕ್ರವಾಗಿರುವುದು (?) : ಮೊಳಕಾಲಿಕ್ಕುತ್ತೆಱಗುತೆ ನಿಲುತಂ ಕಾಲುಂ ಕೆಯ್ಯುಂ ಚೆಂಗೋಟಾ [ಪಾಠಾಂ. ಚೆಂಗೊಂಡಾ]ಗಿರೆ ಮೇಲುಂ ತಳವುಂ ಕೆಲವುಂ ಡೊಂಕಿರೆ ಕುಳ್ಳಿರ್ದೇಳುತ್ತಂ ಬೀಳುತ್ತಂ (ಭ್ರಂಗೀಚ. ಹ. ೪೭೩-೨).

[ ? ]

**ಚೆಂಗೋಲ್** (ನಾ). ಕೆಂಪಾದ ಕೋಲು : ಚಕಾರಕ್ಕೆ – ಚೆಂಗಣಗಿಲೆ . . . ಚೆಂದೊನ್, ಚೆಂಗೋಲ್ (ಕಮುದ. ೦೮೨ ಪ್ರಯೋ). [ ಚೆಂ$_1$ + ಕೋಲ್$_1$ ]

**ಚೆಂಚ$_1$**, ಚಂಚ, ಚಂಚು$_1$ (ನಾ). ಬೇಡ ; ಬೇಟೆಗಾರ ; ಶಬರ : ಧಿಟ್ಟ ಚೆಂ[ಪಾಠಾಂ. ಚಂ] ಚರು ಬಂದು ಚಪ್ಪಳೆಗುಟ್ಟಿಯೇಡಿಸಿ ಕಾಡಿದಲ್ಲದೆ ಬಿಟ್ಟು ಹೋಗರು ನಿನ್ನನು(ಬಸಪು. ೦೮-೧೫); ಬಿಲ್ಲುಗಳಂಗೆ ತಿರುವಿಡುವ ಚೆಂಚರ್ಕಳಿಹ ಗೂಳಿಯಂ (ರೇವಣ. ೩೭-೦೧); ನರೆತೆರೆಯರೆತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೦೯-೨೦). **ಚಂಚ :** ಹೀನಮಾನವರನೀ ಬೇಡರಂ ಚಂಚರಂ . . . ಏನೆಂದು ಅಯ್ಯಯ್ಯಯೆಂದು ಬಾಯ್ಬಿಟ್ಟಿಂದಡೇನಪ್ಪುದು (ಸಿದ್ಧರಾ.೨-೬೩). **ಚಂಚು$_1$** : 'ಚಂಚುದೊಡ್ಡಿ' ಪರಾ. [ ದೇ.॥ ತೆಲು. ಚೆಂಚು ]

**ಚೆಂಚ$_2$** (ನಾ). ಒಂದು ಬಗೆಯ ಸಸ್ಯ : "ಅಸಿಸಿಂಬಿ–ಚೆಂಚ" (ಒಷಧಿ. ೫).

[ ? ]

**ಚೆಂಚಲಿ**, ಚಂಚಲಿ, ಚರಿಚಲಿ, ಚರಿಜಲಿ (ನಾ). ಒಂದು ಬಗೆಯ ಸಸ್ಯ: ಚೆಂಚಲಿಸೊಪ್ಪು (ಮೃಣಿಗಿ. ೩೦-೫೮೩). **ಚಂಚಲಿ :** ಗೊರಜೆ, ಚಂಚಲಿ, ಚರಿಜಲಿ, ಶಾಳಿಸಪತ್ರ (ಮೃಣಿಗಿ. ೩೭-೭೩೩). **ಚರಿಚಲಿ :** (+). **ಚರಿಜಲಿ :** ಮೇಲಿನ 'ಮೃಣಿಗಿ' ಪ್ರಯೋಗವನ್ನು ನೋಡಿ. [ದೇ.॥ ತೆಲು.ಚೆಂಚಲಿ]

**ಚೆಂಚಿತಿ**, ಚಂಚಿತಿ (ನಾ). ಬೇಡರ ಹೆಂಗಸು ; ಬೇಡಿತಿ ; ಶಬರಿ : ಮಱುವೊಲ್ಲೆಯ ಕಣ್ಮಂಚಂ ಕೆದಱುವ ನೋಟದ ಚೆಂ[ಪಾಠಾಂ. ಚಂ]ಚಿತಿಯಂ ವಿಪ್ರರಾಜವಧು ಕಂಡು (ಪುಣ್ಯಾಸ್ರ. ೧೨-೩೨) ; ನರೆತೆರೆಯರೆತ ಚೆಂಚರಿಂ ಚೆಂಚಿತಿಯರಿಂ (ರೇವಣ. ೦೦೯-೨೦). **ಚಂಚಿತಿ :** ಹಗಲುವಿರುಳುಂ ಚಂ[ಪಾಠಾಂ. ಚೆಂ]ಚಿತಿಯರೊಡನಗಲದೆಡೆಯಾಡುತ್ತ ಬಂದು(ಬಸಪು. ೪೪-೭).

[ ಚೆಂಚ$_1$ + –ಇತಿ$_1$ (< – ಇತ್ತಿ) ]

**ಚೆಂಚು** 'ಸಂಚು' ನೋ.

**ಚೆಂಜಂಜೆ** (ನಾ). ಕೆಂಬಣ್ಣದ ಸಂಜೆ : ಕೆಂಜಂಜೆ, ಚೆಂಜಂಜೆ : ಕೆಂದಳಿರ್, ಚೆಂದಳಿರ್ (ಶಬ್ದಾನು. ೩೪೩ ಪ್ರಯೋ). [ ಚೆಂ$_1$ + ಸಂಜೆ ]

**ಚೆಂಜೇನು** (ನಾ). ಕೆಂಪು ಬಣ್ಣದ ಜೇನುತುಪ್ಪ : ಅಚ್ಚಹಸು ಕರೆದ ಈ ಇನಿದಾದ ಬೆಳ್‌ಪಾಲು, ಹೂಗೆಲಸಿ ಚಿಟ್ಟಜೇನಿಳಿಸಿದೀ ಚೆಂಜೇನು (ಪಾರಸಿ. ೨೩-೫೨೦): ಬೆಳಕು ಮರಳಿತು, ಹೂವು ಅರಳಿತು, ಚೆಂಜೇನಾಯಿತು ಬಿಳಿ ಹಾಡು (ಶಿರಾಲ. ೬೧-೩). [ ಚೆಂ$_1$ + ಜೇನು(<ಜೇನ್) ]

**ಚೆಂಟಕಣ್ಣೆ** (ನಾ). ಒಂದು ಬಗೆಯ ಮರ: ಮರಗಳು; ಹೆಸವ, ಹೆಬ್ಬಲಸು . . . ಚೆಂಟಕಣ್ಣೆ, ಚಿಟ್ಟುತಂದ್ರಿ, ಬೇವು, ಹುಚ್ಚುಬೇವು (ನಮ್ಮನು. ೨೩೭).

[ ? ]

**ಚೆಂಡಕನರಿ**, ಚಂಡಕನರಿ (ನಾ). ಒಂದು ಬಗೆಯ ನರಿ ; ಗುಳ್ಳೆನರಿ : (+). **ಚಂಡಕನರಿ :** ಒರ್ವ ರಾಯಭಾರಿಯೊಲಿನ್ನೊರ್ವ ಚಂಡಕನರಿ ಸಾಲು (ಚಂಕನ. ೬೨-೦೯). [ ಚೆಂಡಕ ? + ನರಿ$_1$ ]

**ಚೆಂಡಲರು** (ನಾ). ಒಂದು ಬಗೆಯ ಹೂವು ; ಚೆಂಡುಹೂವು : ಸತಿಯರ್ಗೆ . . . ಚೆಂಡಲರಿನ ಪೊಟ್ಟಣ ದಿವ್ಯಚಂದನದುಂಡೆಗಳನು ಕೊಟ್ಟು ನಗುತ(ಮೋಹತ. ೦೪-೩೯). [ಚೆಂಡು(<ಸೆಂಡು)+ಅಲರು$_2$(<ಅಲರ್$_2$)]

**ಚೆಂಡಾಟ** 'ಸೆಂಡಾಟ' ನೋ.

**ಚೆಂಡಾಟಗಾರ** (ನಾ). ಚೆಂಡಿನಿಂದ ಆಟವಾಡುವವನು : ಚೆಂಡಾಟಗಾರರಲ್ಲಾಗಲೀ ಅಥವಾ ಒಂದು ಜೇನುನೊಣದ ಶರೀರದಲ್ಲಾಗಲೀ–ಜಯ ಮತ್ತು ಪ್ರಗತಿ ಸಾಧ್ಯ (ಕೀಟಚ. ೦೦).

[ ಚೆಂಡಾಟ(<ಸೆಂಡಾಟ) + – ಗಾರ(<– ಕಾಱ) ]

**ಚೆಂಡಾಡು** 'ಸೆಂಡಾಡು' ನೋ.

**ಚೆಂಡಾಲ** (ನಾ). ಒಂದು ಬಗೆಯ ಮರ : ಕೆಂದಾಳೆ, ಸುಗಡೆಕೆಂದಾಳೆ, ಚೆಂಡಾಲ (ಮೃಣಿಗಿ. ೬೮-೦೩೯೫). [ ? ]

**ಚೆಂಡಿ$_1$** 'ಚೆಂಡೆ$_2$' ನೋ.

**ಚೆಂಡಿ$_2$** 'ಚಂಡಿ$_1$' ನೋ.

**ಚೆಂಡಿಕಸ** (ನಾ). ಬತ್ತದ ಗದ್ದೆಯಲ್ಲಿ, ಪೈರಿನ ನಡುವೆ ಬೆಳೆಯುವ ಒಂದು ಬಗೆಯ ಕಳೆ,–ಹುಲ್ಲು: (+). [ ಚೆಂಡಿ$_1$(<ಚೆಂಡೆ$_2$) + ಕಸ ]

**ಚೆಂಡಿಕೆ**, ಚಂಡಿಕೆ$_1$(ನಾ). ಜುಟ್ಟು; ಶಿಖೆ: "ಶಿಖಾ, ಕಾಕಪಕ್ಷಃ, ಶಿಖಂಡಿಕಾ–ಈ ೩ ಚೆಂಡಿಕೆ" (ಹಲಾಯು. ೮೮-೩೭೮) ; ಪೊನ್ನ ಪಂಜರಮಂ ಪೊತ್ತಿರದೇಟ್ಟಂದಂ ಚೆಂ[ಪಾಠಾಂ. ಚಂ] ಡಿಕೆವೆರಸಿದ ಚಂಡಾಲ ಬಾಲಕಂ(ಕಾದಂಪೂ. ೩೭) ; ನಂದಿನಿಯ ಪಾಲಿದೆ ನೀಂ ಕುಡಿಯಲ್ಕೆ ನಿನ್ನ ಚೆಂಡಿಕೆ ಬಳೆದಪ್ಪುದು (ಜಗನಿ. ೩-೫೧); ಚೆಂದದಿಂ ಚೆಂ[ಪಾಠಾಂ. ಚಂ]ಡಿಕೆವಿಡಿದು ಮಗಳನುತ್ತರಿಸುವಂದದಿಂ (ಮಾನರ. ಹ. ೭೯-೦೮) ; ಚೆಂ[ಪಾಠಾಂ. ಚಂ]ಡಿಕೆಗಳ ಬಾಲಕರ ಮಂಡಳಿಯನು . . . ಕಂಡಳಾ ಕಮಲದಳಾಕ್ಷಿ (ಕುರಾಷಾಂ. ೭-೫೪). **ಚಂಡಿಕೆ$_1$:** ಕಪ್ಪೆಗೆ [ಸಲೆ] ಚೆಲ್ವಾಗಿಯೆ ಚಂಡಿಕೆ ನೆಗೆದೊಡಮಾಗವು ಮಾಟ (ಅಟ್ಟಮಾ. ೫-೨) ; ಕೆಂಡದಂಥವಯೆನ್ನ ಗಂಡ ಕಂಡರೆ ಹಿಡಿದುಕೊಂಡು ಚಂಡಿಕೆಯ ದಂಡಿಸದೆ ಬಿಡ (ಪುರಂದ. ೧-೭೫-೫) : ಅಂದವಾಗಿ ಚಂಡಿಕೆ ಕಟ್ಟಿ ಹಣೆಗೆ ತಿಲಕವನ್ನು ಇಟ್ಟುಕೊಂಡು ದೇವರಿಗೆ ವಂದಿಸುವನು(ಕಹಪು. ೫-೩೩).

[ <ಸಂ. ಶಿಖಂಡಿಕಾ ]

**ಚೆಂಡಿಕೆವುಣುಸೆ** (ನಾ). ಒಂದು ಬಗೆಯ ಹುಣಿಸೆ (?) : ಚಾವಗಾವುಣ್ಡನ ಸೋಭನಗಾವುಣ್ಡನ ಪೊಲದೊಳ್ [ಚೆ] ಣ್ಡಿಕೆ [ವು] ಣುಸೆಯಿಂ ಮೂಡಂ ಮು[ಟ್]ಯಂಗೇರಿ ಸೀಮೆಯಿಂ ಬಡಗಣ ದೆಸೆಯೊಳ್ (ಸೌಇಇ. XX, ೩೮-೩೦ : 1068). [ ಚೆಂಡಿಕೆ$_0$ + ವುಣುಸೆ(<ವುಣಸೆ) ]

**ಚೆಂಡಿಗೊಳ್ಳು** 'ಚಂಡಿಗೊಳ್' ನೋ.

**ಚೆಂಡಿಸು**, ಚಂಡಿಸು$_1$ (ಕ್ರಿ). ೧. ತಲೆ ಕತ್ತರಿಸು : ಈ ಕ್ಷಿತಿಮಂಡಲದೊಳು ಉದ್ದಂಡ ದೈತ್ಯರ ಚೆಂಡಿಪ ನರಹರಿಯ (ಪುರಂದ. ೦-೦೬೬-೨). **ಚೆಂಡಿಸು** : ೨. ಉತ್ಸಾಹಿಸ ; ಪುಟನೆಗೆ : ಕಂಡು ಕನಸಿನೊಳು ರೂಪ ಜಯಂತನ ಪುಂಡರೀಕಾಕ್ಷಿ ಪುಳಕದೆ ಚೆಂಡಿಸಿ ಮೇಲ್ವಾಯ್ದವನೆಂದೇ ತಬ್ಬಿಕೊಂಡಳು ಬಯಲನೇನೆಂಬೆ (ಕಂಪವಿ. ೯-೦೬೬). [ ಚೆಂಡು (<ಸೆಂಡು) + – ಇಸು$_2$ ]

**ಚೆಂಡು** 'ಸೆಂಡು' ನೋ.

**ಚೆಂಡುಕಾರೆ** (ನಾ). ಕಾರೆಗಿಡದಲ್ಲಿ ಒಂದು ಬಗೆ : ಬೆಟ್ಟದ ಕವ್ವುಗಗ್ಗರಿ ಚೆಂಡುಕಾರೆ (ವೃಕ್ಷಿಗಿ. ೮೮-೦೩೦೯). [ ಚೆಂಡು (< ಸೆಂಡು) + ಕಾರೆ$_1$ ]

**ಚೆಂಡುಗ** (ನಾ). ಒಂದು ಬಗೆಯ ಮರ : " ಅಕ್ಷ–ತಾಡಿಕವಡೆ, ಚೆಂಡುಗ, ದೇವಸಾಕಿವೆ " (ಓಷಧಿ. ೦). [ ? ]

**ಚೆಂಡುಚೇಣಿಹುಲ್ಲು** (ನಾ). ಒಂದು ಬಗೆಯ ಹುಲ್ಲು : (ವೃಕ್ಷಿಗಿ ೨೬-೩೨೬).
[ ಚೆಂಡು$_0$ + ಚೇಣಿ$_1$ + ಹುಲ್ಲು(<ಪುಲ್) ]

**ಚೆಂಡುಮಲ್ಲಿಗೆ**, ಚಂಡುಮಲ್ಲಿಗೆ (ನಾ). ಒಂದು ಬಗೆಯ ಗುಂಡಾದ ಹೂ : ಸೀಮೆ ಶಾವಂತಿಗೆ, ಚೆಂಡುಮಲ್ಲಿಗೆ (ವೃಕ್ಷಿಗಿ. ೬೩-೦೩೦೦). **ಚೆಂಡುಮಲ್ಲಿಗೆ** : (೩). [ ಚೆಂಡು(<ಸೆಂಡು) + ಮಲ್ಲಿಗೆ ]

**ಚೆಂಡುವೂ**, ಚೆಂಡುಹೂವು, ಚೆಂಡುಹೂ (ನಾ). ಒಂದು ಬಗೆಯ ಹಳದಿ ಹೂ : ' ನೀನೊಂದು ಪೂವಿನ ಚೆಂಡು ' ಎನುತೆನ್ನ ಮುದ್ದಾಡು ತಿರ್ದನ್ ' ಚೆಂಡುವೂ !ಚೆಂಡುವೂ ! ' ಎಂದಟ್ಟಹಾಸಂ ಮೊಳಗಲದ್ಭುತಂ ನಗುತೆ (ಶ್ರೀರಾಮಾ. ೭೦೪-೦೪೬). **ಚೆಂಡುಹೂವು** : ಚೆಂಡು ಹೂವಿನಲ್ಲಿ . . . ಬಹಳ ಪ್ರಕಾರ ಕುಲಗಳುಂಟು (ಕೃಷಿಪ್ರ. ೨೦೦). **ಚೆಂಡುಹೂ** : ಗೌರೀಮುಡಿ, ಚೆಂಡುಹೂಗಳಂಥ ಬಣ್ಣಬಣ್ಣದ ಹೂಗಳಿಗೆ ಬಡತನವೇ ಆ ಎರೆಯಲ್ಲಿ ? (ಕಲುಮ. ೧೩). [ ಚೆಂಡು(<ಸೆಂಡು) + ಹೂ$_2$(<ಪೂ$_2$) ]

**ಚೆಂಡುಹೂ** 'ಚೆಂಡುವೂ' ನೋ.

**ಚೆಂಡೆ$_1$**, ಚಂಡೆ$_1$ (ನಾ). ಒಂದು ಬಗೆಯ ಚರ್ಮವಾದ್ಯ : ಚೆಂಡೆಯ ತಾಳಕ್ಕನುಗುಣವಾಗಿ . . . ಕುಣಿವುದನ್ನು ನೋಡುತ್ತಿದ್ದರೆ, ನೋಡು ತ್ತಿದ್ದವರಿಗೆ ಆಡುತ್ತಿರುವ ಕಥೆಯೇ ಮರೆತುಹೋಗುತ್ತಿತ್ತು (ಏಕದು. ೦೯). **ಚಂಡೆ$_1$** : ಮೇಳದವರ ಚಂಡೆಯ ಧ್ವನಿ ಉಕ್ಕೇರಿ ಹರಡುತ್ತಿದ (ಸಂಸ್ಕಾರ. ೦೪೨). [ದೇ.॥ ತಮಿ. ಚೆಣ್ಡೈ; ಮಲ. ಚೆಣ್ಡ ; ತುಳು. ಚೆಂಡೆ]

**ಚೆಂಡೆ$_2$**, **ಚೆಂಡಿ$_1$** (ನಾ). ೧. ಒಂದು ಬಗೆಯ ಗಂಧದ್ರವ್ಯ ; ಕರಿಕಚೋರ : " ಗಣಹಾಸಕಃ–ಚೆಂಡೆಯೆಂಬ ಗಂಧದ್ರವ್ಯ " (ಓಷಧಿ. ೪೬). **ಚೆಂಡಿ$_1$** : ೨. ಒಂದು ಬಗೆಯ ಸಸ್ಯ : (೩). [ <ಸಂ. ಚಂಡಾ ]

**ಚೆಂತಲಪಲ್ಲಿ** (ನಾ). ಒಂದು ಊರಿನ ಹೆಸರು ; P ಈಗಿನ ಬಾಗೇಪಲ್ಲಿ ತಾಲ್ಲೂಕಿನ ಚಿಂತನಪಲ್ಲಿ : ಪಲ್ಲವಮಾರಾಜ ಪ್ರಿಥಿವೀರಾಜ್ಯಂಗೆಯ ಚೆನ್ತಲಪಲ್ಲಿನ ಊರಕೆ ದೇವಿನಮ್ಮ . . . ಚೆನ್ತಕಪುಲ್ಲನಾಟಿಕಾರ (ಎಕ. X, ಬಾಗೆಪ. ೭೭-೪ ; ಸು.೯೦೦). [ ಚೆಂತಲ ? + ಪಲ್ಲಿ$_2$(<ಪಳ್ಳಿ$_1$) ]

**ಚೆಂದ$_1$** 'ಚಂದ$_1$' ನೋ.

**ಚೆಂದ$_2$** 'ಚಂದ$_2$' ನೋ.

**ಚೆಂದಂಗೆಡು** 'ಚಂದಗೆಡು' ನೋ.

**ಚೆಂದಂಬಡೆ** (ಕ್ರಿ). ಅಂದವನ್ನು ಪಡೆ ; ಸೊಗಸನ್ನು ಹೊಂದು : ಪಾರ್ವರ ಕೇರಿಯಂತೆ ಚೆಂದಂಬಡೆದ ಮಡದಿನೆಸೆದುಂ ತೇರೆಸಿಸಂ (ಕಬ್ಬಿಗಾ. ೫೦).
[ ಚೆಂದ$_1$(<ಚಂದ$_1$) + ಪಡೆ$_1$ ]

**ಚೆಂದಕಾಣಿಸು** 'ಚಂದಕಾಣಿಸು' ನೋ.

**ಚೆಂದಕಾಣು** 'ಚಂದಕಾಣು' ನೋ.

**ಚೆಂದಗಲೆ** (ನಾ). ಚಂದ್ರನ ಕಳೆ ; ಚಂದ್ರಬಿಂಬ : ದೇವರಾದಿತ್ಯನಂ ಪೊಸ ಚೆಂದಗಲೆಯು ಹುಟ್ಟಂಗೆಯ್ದನಂ (ಉದ್ಭದೇ. ೩-೩೦).
[ ಚೆಂದ$_2$(<ಚಂದ$_2$) + ಕಲೆ$_3$ ]

**ಚೆಂದಗೇಡಿ** 'ಚಂದಗೇಡಿ' ನೋ.

**ಚೆಂದಗೇಡಿತನ** 'ಚಂದಗೇಡಿತನ' ನೋ.

**ಚೆಂದಬಾಳು** (ನಾ). ಸೊಗಸಾದ ಬದುಕು,–ಜೀವನ : ಒಂದಿರಿತಕಂದ ನೀನೆಲ್ಲರದೆಯನ್ . . . ಚೆಂದಬಾಳನ್ ಮೆಚ್ಚುವೆಲ್ಲರದೆಯನ್ ! (ಹೂಂಗಳು. ೨೬-೨೦). [ ಚೆಂದ$_1$(<ಚಂದ$_1$) + ಬಾಳು$_2$(<ಬಾಟ್$_2$) ]

**ಚೆಂದಮಿಟ್** (ನಾ). ಶುದ್ಧವಾದ ತಮಿಳುಭಾಷೆ : (೩).
[ ಚೆಂ$_1$ + ತಮಿಟ್./ತಮಿ. ಚೆನ್ತಮಿಟ್ ]

**ಚೆಂದಲ್** (ನಾ). ಒಂದು ಬಗೆಯ ಭತ್ತ,–ನೆಲ್ಲು : ನವಗಂಧೋದ್ಗಮ ಗಂಧಶಾಳಿ ಶುಕಲೀಲಾಶಾಪದಿಂದಾದಮೊಪ್ಪುವ ಚೆಂದಲ್ ಸಹಕಾರಪಕ್ವರಸ ಸಾರಾಸಾರ ಪಾನೀಯದಿಂ ಸವಿಶೇಷಂ ಬೆಳೆದೊಪ್ಪಿ ತೋರ್ಪ ಕಳಮಂ (ಸುಕುಮಾ. ೦-೭೪). 'ಕೆಂದಳಗ' ಪಠಾ. [ ? ]

**ಚೆಂದಲ** (ನಾ). ಒಂದು ಬಗೆಯ ಮರ: ಮರಗಳು : ಹೆಸವ, ಹೆಬ್ಬಲಸು . . . ಸಾಗಡೆ, ಚೆಂದಲ (ನಮ್ಮನು. ೨೩೬). [ ? ]

**ಚೆಂದವ** 'ಚಂದವ' ನೋ.

**ಚೆಂದವಗಲ್** (ನಾ). ಚಂದ್ರಕಾಂತಶಿಲೆ: ಕಿಸುವೊನ್ನ ಪಂಜರಿಯ ಚೆಂದವಗಲ್ಲ ಕೋಂಟೆಯ ಮೂಾವಳಸಿನಗಟ್ಂದೊಳಗೆ ಕರ್ಪುರಣಿಯ ನೆರೆಗಟ್ಟಿಂ ಪಳಿಕಿನಜ್ಯ ಭಿತ್ತಿಯಿಂ (ರಾಮಾಶ್ವ. ೫೪-೦೯). 'ಚಂದಗಲ್' ಪಠಾ.
[ ಚೆಂದವ (<ಚಂದವ) + ಕಲ್$_3$ ]

**ಚೆಂದವೇರು** (ಕ್ರಿ). ಸೊಗಸು ಹೆಚ್ಚಾಗು ; ಅಂದವೇರು : ಸಾರಣೆ ಕಾರಣೆ ಸುಣ್ಣಬಣ್ಣಗಳಿಂದೆ ಗುಡಿಸಲು ಚೆಂದವೇರುವೊಲು (ಜಂಜಾಪ. ೨೩೩-೫೩). [ ಚೆಂದ$_1$ (<ಚಂದ$_1$) + ಏರು$_1$ (<ಏಱ್) ]

**ಚೆಂದಳ**,ಚಂದಳ (ನಾ).ಕೆಂಪಾಗಿರುವ ಅಂಗೈ: ನುಣ್ಗೊಡನಂ ಮುಗುಂದೆಯ ರೆರಡುಂ ಚೆಂದಳದಿಂದವೆ ನೆಗೆಪಿ ಮನೋರಾಗದಿ ರಂಜಿಪ ಸಿರಿದರೆ ಯೊಳಗೇಱಿಸಲು (ಜಯಾಕಾ. ೯-೦೫) ; ಚೆಂದಳವ ನೊಸಲೆಡೆಗೆ ತಂದೊಲು ವಿಂದ ನೆಗೆದಪ್ಪಿದಳು ಪರಸುತ ಕಂದದನು ಮೂಜಗದ ಸಿರಿ ಕೈಸಾರ್ದ ತೆಱವಾಗೀ (ಸಾಳ್ವಭಾ. ೩೦-೪೪). **ಚಂದಳ** : ಚೈತ್ರಮಿತ್ರನ ಪಟಿಯಗೆಯು ತಳಿರ್ಗಳಿಂ ಪಟಿವ ಚಂದಳದಿಂದಶೋಕೆಯು ಕೊನೆದಳರನಾಣಿಸುತ್ತು ವಸುಳೆಗೋಗಿಲೆಗಳಂ ಪೊರೆವ ವೀಣಾನಿನಾದೆಯರಿಂ (ಅದ್ಭುಟ. ೦-೭೮ ಪ).
[ ಚೆಂ$_1$ + ತಳ$_3$ ( = ತಲ$_3$) ]

**ಚೆಂದಳಿರ್**, ಚಂದಳಿರ್, ಚೆಂದಳಿರು (ನಾ). ಕೆಂಪು ಚಿಗುರು ; ಎಳೆಯ ಚಿಗುರು : ಮಧುಮಿ[ದುಱ್] ಸೊಕ್ಕನಾಳ್ದ ಕೀರಳಿಯರ ಕದಪಿನ ಬಣ್ಣಮಪ್ಪ ಚೆಂದಳಿರ್ದುಱುಗಲ್ (ಶಾಂತಿಪು. ೯೬); ಚೆಂದಳಿರ್ ಪೊಸನನೆಗಳಳ್ಕರಲ್ ಕಸುಗಾಯ್ ಕರಂದೋಱಿ (ಪದ್ಮರಾ. ೮-೪) : ಎಳವೆಯನುಳಿಯದ ಚೆಂದಳಿರೆನೆಯಿನಿದುಟ ಸೊಗಯಿಸಿತು (ಜಯಾಕಾ. ೩-೪೧) ; ಗಿಡುಗಳೆಲ್ಲಂ ತಳಿರ್ಚೆಂದಳಿರೆಳದಳಿರೆರೆ ಬೆಳ್ಳಿಲೆ ಪಸುರೆಲೆ ಪಣ್ಣೆಲೆ ಗಳಿಂ ರಂಜಿಸೆಯುಂ (ರಾಮಾಶ್ವ. ೦೬-೨೫). **ಚಂದಳಿರ್** : ಸೋಮಾರ್ಗಡಿ ಚಂ[ಪಾಶಾಂ ಚಂ]ದಳಿರೆಳಲತೆ (ಚತುನಿ. ೦೨೨) **ಚೆಂದಳಿರು** : ಚೆಂದಳಿರು ದಿನದಿನವುಂಬೊಗೆಯೆ ನೀರೆರೆದು (ಮಂಕುತಿ. ೨೫೩) ; ವೃಕ್ಷಲತೆಗಳೆಲ್ಲ ಹೊಸ ಚೆಂದಳಿರ ಉಡಿಗೆಯುಂದೊಪ್ಪಿವೆ (ಶಾಂಕುಶಾ. ೪೦).
[ ಚೆಂ$_1$ + ತಳಿರ್$_3$ ]

**ಚೆಂದಳಿರು** 'ಚೆಂದಳಿರ್' ನೋ.

**ಚೆಂದಳಿರ್ಗೈ** (ನಾ). ಕೆಂಪು ಚಿಗುರಿನಂತಿರುವ ಕೈ; ಅಂಗೈ: ಚೆಂದಳಿರ್ಗೈಯ ಕುಮಾರಿಯು ರೂಪವನದೇನಂ ಬಣ್ಣಿಪೆನು (ಆಯುಕಾ. ೩-೬೨) ; ಸುದತಿಯರಧಿ ನಾಯಕಿಯ ನುಣ್ದೋಳ್ಗಳಗ್ರದೊಳು ಚೆಂದಳಿರ್ಗೈಯ್ಗಳೆಸೆದವು (ಕೃಭುತಿ. ೭೦-೫೩). [ ಚೆಂದಳಿರ್ + ಕೈ$_2$ (< ಕೆಯ್$_2$) ]

**ಚೆಂದಳಿರ್ದೊಂಗಲ್** (ನಾ). ಕೆಂಪಾದ ಚಿಗುರುಗಳ ಗೊಂಚಲು,- ಗುಂಪು : ಚೆಂದಳಿರ್ದೊಂಗಲಿಂ ಪಿಸುಪಶೋಕೆ ಫಲಾವಳಿ ತೀವಿ ತೋರ್ಪ ಮಾಕಂದಂ . . . ಒಪ್ಪಿರೆ ನಂದನವಮಲ್ಲಿ ರಂಜಿಕುಂ (ಶಬಶಂ. ೨-೪೧). [ ಚೆಂದಳಿರ್ + ತೊಂಗಲ್ ]

**ಚೆಂದಳಿರ್ವಾಸು** (ನಾ). ಕೆಂಪು ಚಿಗುರಿನಿಂದ ಮಾಡಿದ ಹಾಸಿಗೆ : ಚೆಂದಳಿರ್ವಾಸಿನೊಳತ್ತಮಿತ್ತ ಚಿಲ್ವಿಂಗೆಡೆಯಾಗಿ ಸೂಸಿದರಲಂ ನಲಿದುದಂಬುಲವುಂ . . . ದೇವದಂಪತಿಯ ಕೂಟವನೇಂ ಪಿಸುಣಾಡ ಲಾರ್ತುವೋ! (ಶಬಶಂ. ೧-೫೦). [ ಚೆಂದಳಿರ್ + ಪಾಸು$_3$ ]

**ಚೆಂದಾವರೆ** (ನಾ). ಕೆಂಪಾದ ತಾವರೆ ; ಕೆಂದಾವರೆ " ರಕ್ತೋತ್ಪಲಂ- ಚೆಂದಾವರೆ " (ಒಷಧಿ. ೧೩೩) [ ಚೆಂ$_1$ + ತಾವರೆ (< ತಾಮರೆ) ]

**ಚೆಂದಿರ** (ನಾ). ಚಂದ್ರ : ಚೆಂದಿರಗೆಣಿಗಿ ದೇವಾಂಗದೆಳೆದೆಗೆದು ಮಧುವ ನೊಲವಿಂದೆ ಮನ್ನಿಸಿ (ಪದ್ಮರಾ. ೮-೯೩) ; ಇಂದ್ರಿಯದ ಆಶೆಗಳ ಬಂಧಿಸದೆ ಕೊಂದವನು ಸುಂದರನು ಅಕ್ಕ ಸುಖಿಯಕ್ಕ ಲೋಕಕ್ಕೆ ಚೆಂದಿರನು ಅಕ್ಕ (ಸರ್ವಜ್ಞ. ೫೪೩). [ < ಸಂ. ಚಂದಿರ ]

**ಚೆಂದಿರುಳು** (ನಾ). ಉತ್ತಮವಾದ ತಿರುಳು ; ಚೆನ್ನಾದ ಸಾರ : ಪೆರುಮಾಳನ ಕೆಂದಾವರೆ ಚೆಳಕಿನ ಚೆಂದಿರುಳೇ ಬಾಳಿನ ತಿರುಕೋಡೊಳಗಿನ ಬಲು ಅರಿವಿನ ಅರುಳೇ (ಅರಳು. ೨೨೫-೯). [ ಚೆಂ$_2$ + ತಿರುಳು (< ತಿರುಳ್) ]

**ಚೆಂದುಗೋಳಿ** (ನಾ). ಒಂದು ಸ್ಥಳದ ಹೆಸರು (?) : ವಿಕ್ರಮಾದಿತ್ಯ ಭಟರಕ x x x ಚೆನ್ದುಗೋಳಿ ವಳಿಯರಾದಿಲಿ x x ಳಿಗಳ್ಗೆ ಕೊಟ್ಟ ಭೂಮಿ ವಿವರ (ಎಕ. VIII, ಸಾಗರ. ೯೩-೩ ; ಸು. ೬೮೦ ?). [ ? ]

**ಚೆಂದುಟ, ಚಂದುಟ** (ನಾ). ಕೆಂಪಗಿರುವ ತುಟಿ ; ಕೆಂದುಟಿ : ಅವಳ ಚೆಂದುಟಿಯಂ ಪೊಸ ತೊಂಡೆವಣ್ಣದೊಂದಚ್ಚರಿಯಲ್ಲಿ ಪುಟ್ಟಿಸೆನುತ (ಉದ್ಭಟ. ೬-೭೪) ; ಅವಳು ಚೆಂದುಟಗಳಲ್ಲಿ ಬೆಳ್ನಗೆಯನ್ನು ಅರಳಿಸಿ ಆನಂದದ ನಿರ್ಝರಿಯನ್ನು ಹರಿಸಿದಳು (ಎರಸಿ. ೧೭). **ಚೆಂದುಟಿ :** ತಳಿರ್ಗೊಯ್ದ ಎಳೆಯಳ ಚ[ಪಾಠಾಂ ಚೆ]ಂದುಟದೆಳರಂ ತಳಿರ್ಗೆತ್ತು ಕರ್ದುಂಕಿದುದು ಶಿಕಂ (ರಾಜಶೇ. ೧೧-೫೪). [ ಚೆಂ$_1$ + ತುಟಿ$_2$ ]

**ಚೆಂದುಡಿಗೆ** (ನಾ). ಕೆಂಪುಬಣ್ಣದ ಬಟ್ಟೆ,-ಉಡಿಗೆ: ಚೆಂಗದಿರನು ಚೆಂಬಿಸಿಲ ಚೆಂದುಡಿಗೆಯನ್ನು ವಿಂಧ್ಯೆಯ ಗಿರಿಶಿಖರಗಳಿಗೆ ತೊಡಿಸುತ್ತಿದ್ದಾನೆ (ಮುಚಿತ. ೧). [ ಚೆಂ$_1$ + ತುಡಿಗೆ (< ತೊಡುಗೆ) ]

**ಚೆಂದುಳ್ಳಿ** 'ಚಂದೊಳ್ಳಿ' ನೋ.

**ಚೆಂದುಳ್ಳೆ** 'ಚಂದೊಳ್ಳೆ' ನೋ.

**ಚೆಂದೆಂಗಾಯ್** (ನಾ). = ಚೆಂದೆಂಗು : ಎಸೆವ ಚೆಂದೆಂಗಾಯ್ಗಳೊಂದೊಂದ ನೊಡೆಯೊತ್ತಲೊಸರಿ ಸೋರ್ವೆಳನೀರ್ಗಳೋರ್ಘ್ಗಂಗಳಾಗಿ ರಂಜಿಸುವ ಬನ ದೇವಿ (ಕೃಮಿಥಾ. ೩-೨೭). [ ಚೆಂ$_1$ + ತೆಂಗಾಯ್ ]

**ಚೆಂದೆಂಗು, ಚಂದೆಂಗು** (ನಾ). ಕೆಂಪು ಬಣ್ಣದ ತೆಂಗು ಮತ್ತು ಅದರ ಕಾಯಿ: ಕಾಯ್ದುಬುಗಲಂ ಪೇಳ್ದ ಚೆಂದೆಂಗು ಕಟ್ಟಲಿಸುತ್ತಿರ್ಪಲೆವಳ್ಳಿ . . . ಎಸೆಗುಂ (ಆದಿಪು. ೧-೬೭) ; ಭೂಲತಾಂಗಿ ತೆಗೆದಿಟ್ಟ ರಸರತ್ನವೋ ಎನಿಸಿ ಫಲಿತ ಚೆಂದೆಂಗೆಸೆದುವು (ಹರಿಕಾ. ೩-೨೮) ; ಒಪ್ಪುವ ಚೆಂದೆಂಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲ ನಾಡೊಳ್ (ಅಭ್ಯಕಾ. ೨೦); ವೇಘರಾಜನ ಬರವನೆ ಪಾರ್ವ ಚೆಂದೆಂಗುಗಳ ಪಂತಿಗಳ್ (ರಾಮಾಶ್ವ. ೮-೨೨). **ಚೆಂದೆಂಗು :** (ಶಿ). [ ಚೆಂ$_1$ + ತೆಂಗು$_3$ ]

**ಚೆಂದೊಂಗಲ್** (ನಾ). ಕೆಂಪಾದ ಗೊಂಚಲು ; ಚಿಗುರಿನ ಗೊಂಚಲು : ಅಗ್ನಿ ನೀಡಿದನಲ್ತೆ ತನ್ನಂಗಳದ ಮರದ ಮಾಂದಳಿರ ಚೆಂದೊಂಗಲಂ ? (ಶ್ರೀರಾಮಾ. ೪೮-೫೫೧). [ ಚೆಂ$_1$ + ತೊಂಗಲ್ ]

**ಚೆಂದೊರಳೆ** (ನಾ). ಕೆಂಪಾದ ಗುಲ್ಮ,-ಪ್ಲೀಹ : ಕರುಳ ಪೂಗೊಂಚಲು ಖಂಡದ ಕಳಿಕೆ ಬಂಧುರದೆಲು ಶಾಖೆಗಳಾಗೆ ಪಿರಿದು ಚೆಂದೊರಳೆದಳರ ಕಬಂಧದ್ರುಮ ಮೆಱೆದುವು ಖಡ್ಗಚೈತ್ರದಲಿ (ಕಂಸವಿ. ೦೫-೫೧). [ ಚೆಂ$_1$ + ತೊರಳೆ$_1$ ]

**ಚೆಂದೊಳ್ಳೆ** 'ಚಂದೊಳ್ಳೆ' ನೋ.

**ಚೆಂದ್ರಕಾಳಿ** 'ಚಂದ್ರಕಾಳಿ' ನೋ.

**ಚೆಂಬಕ** 'ಚಂಬಕ' ನೋ.

**ಚೆಂಬಕವಜೀ** 'ಚಂಬಕವಜೀ' ನೋ.

**ಚೆಂಬಟ್ಟೆ** (ನಾ). ಕೆಂಪು ಬಟ್ಟೆ,-ವಸ್ತ್ರ : ಬಾಲೆಯುರದೊಳೊಂದಿದ ಪೊಸ ಬೆವಮರ್ಬುತ್ತು ಬೀಳಲುಳಿದ ಚೆಂಬಟ್ಟೆಯ ನೂಲಂತೆ ಕಂಗೆಸೆದುದು ತೋರಪೊರೆಗಳ ಮೇಲೆ ರಂಜಿಪ ನೀಲ ನಖರೇಖೆ (ಕೃಭುತಿ. ೦೩-೬೪). [ ಚೆಂ$_1$ + ಬಟ್ಟೆ$_2$ ]

**ಚೆಂಬಡಿ** (ನಾ). ಒಂದು ಪ್ರದೇಶದ ಹೆಸರು (?) : ಅನ್ತೆ ತೆ[೦]ಕ ಅತ್ತಿಯೋಡು ಪಳ್ಳಂ[ಬೆ]x ಗಾಲು ಬೆವ್ವಡಿ (ಎಇ. X, ೬೭-೯೪; ೨ನಯ ೫೫). [ ? ]

**ಚೆಂಬಣ್ಣ** (ನಾ). ೧. ಕೆಂಪುಬಣ್ಣ : ಚೆಂಬಣ್ಣ ಮಾಂದಳಿರಸುಗೆ ಪುನ್ನಾಗ ದಾಳಿಂಬ ತ್ರಿಪರ್ಣ ಪುಷ್ಪಗಳು . . . ಬನದಿ ರಂಜಿಸಿತು (ಪ್ರೋಹಕ. ೪-೪೯): ಬಾಯ್ದೆಱೆಬವಳದ ಚೆಂಬಣ್ಣಮಿಂತು ಬನ್ನಂಬಡಿಕುಂ (ಚಳವಿ. ೬-೬೩). ೨. ಕೆಂಪುಬಣ್ಣದ ವಸ್ತ್ರ,-ಬಟ್ಟೆ : ಕುಂಭಾಂಡ ಮಂತ್ರಿಶೇಖರ ಮುಖ್ಯ ದೈತ್ಯರ್ಗೆ ಚೆಂಬಣ್ಣವನುಡಿಸಿದನು (ಪ್ರೋಹಕ. ೩೫-೪). [ ಚೆಂ$_1$+ಬಣ್ಣ ]

**ಚೆಂಬಣ್ಣು** (ನಾ). ಕೆಂಪಾದ ಹಣ್ಣು ; ಪಕ್ವವಾದ ಹಣ್ಣು : ಚೆಂಬಣ್ಣು ಗಾಯ್ಗಳಂ ತೊಡವಿಟ್ಟು ಹೂವಿಟ್ಟು ಕಾಣೆಯುವಳ್ (ಶಾಲಾಶ. ೧೨೦-೨೫೦). [ ಚೆಂ$_1$ + ಪಣ್ಣು$_3$ (< ಪಣ್$_3$) ]

**ಚೆಂಬದುವ** (ನಾ). ಕೆಂಪು ಕಮಲ : ಅದಱ ಮೊದಲ್ ಸುವರ್ಣಘಟಿತಂ . . . ಚೆಂಬದು(?)ವದ ಘಂಟಿಕಾಪಟಕವಂ ತಳದಿಂತೊಗೆದಿರ್ಪುದು (ಶಾಂತೀಶ್ವ. ೧೬-೩೨). [ ಚೆಂ$_1$ + ಪದುವ (< ಪದುಮ) ]

**ಚೆಂಬರಣೆ** (ನಾ). ಕೆಂಪು ಭರಣಿ : ಏಂ ಬಱಿದೆ ಪರಪುವೈ ಪಲವುಂ ಬರಣಿಯನಿರಿಸು ಕೆಲಕೆ ನೆರೆ ವೆರೆ ವೇಲಾ ಪೊಂಬರಣಿಗಳೆರಡರ್ಕಂ ಚೆಂಬರಣಿಗಮಿನಿತಱಿಂದೆ ತಣಿದಪವೀಗಳ್ (ಚಳವಿ. ೬-೫೦). [ ಚೆಂ$_1$ + ಬರಣಿ ]

**ಚೆಂಬರಿಗೆ** (ನಾ). ಚೆನ್ನಾದ ಗುರಾಣಿ : ಕಚಂ ಸಾರಮನಿಪ್ಪ ಚೆಂಬರಿಗೆಯಂ ನಳಿತೋಳಿಸಿಯಂ ಸಮಂತು ಪೋಲ್ತಾ ರಮಣೀನಿಕಾಯದಿನನಂಗನ ನಚ್ಚಿನ ದಿವ್ಯಶಸ್ತ್ರ ಭಂಡಾರದ ಗೇಹಮಂ ನೆಱೆಯ ಪೋಲ್ತುದು ಭೂಪನಿ ತೇಶನೋಲಗಂ (ಧರ್ಮಾಮೃ. ४-०४०). [ಚೆಂ$_2$ + ಪರಿಗೆ$_3$ ]

**ಚೆಂಬವಳ** (ನಾ). ಕೆಂಪು ಹವಳ : ಕರ್ಮಗಸರದೊಳ್ ಚೆಂಬವಳಮಂ ಕೋದಂತಿರೆ . . . ತಿರುಳ್ಗನ್ನದದೊಳೆ ಕತೆಯನುಸಿರ್ವೆಂ (ರಾಮಾಶ್ವ. ೬-೦೫) ; ನಡುವಿನಿಂದ ಜಗ್ಗುತ್ತಿದ್ದ ಚೆಂಬವಳದ ಒರೆಯನ್ನು ನಡುಪಟ್ಟಿಯ ಸಮೇತ ಕಳಚಿ (ಸವತಿ. ४८). [ ಚೆಂ$_1$ + ಪವಳ ]

**ಚೆಂಬಳದಿ** (ನಾ). ಕೆಂಪು ಮಿಶ್ರಿತವಾದ ಹಳದಿಯ ಬಣ್ಣ : ಬಿರುಕು ದೋರ್ದೊಳ್ಕಿದುದು ಪೊನಲ್ ಚೆಂಬಳದಿಯಾ ಮತಂಗನ ಪೆಸರ ಮಡುವಿ ನೊಳ್ ನೀರು ಓಕುಳಿಯಾಯ್ತು (ಶ್ರೀರಾಮಾ. ೨೧೫-೬). [ ಚೆಂ$_1$+ಪಳದಿ ]

**ಚೆಂಬಾನ್** (ನಾ). ಕೆಂಪಾದ ಆಕಾಶ : ಚೆಂಬಾನ ಕುಂಬಿಡುವ ಬೆಟ್ಟಗಳ ಸಾಲು (ಶಾಲಾಶ. ೨೫-೦೨). [ ಚೆಂ$_1$ + ಬಾನ್$_3$ ]

**ಚೆಂಬಾಯ್** (ನಾ). ಕೆಂಪಾಗಿರುವ ಬಾಯಿ: ಆ ಸತಿಗೆಡ್ಡಂಬಡೆದವು ನಗೆ ಮೊಗವಾಸುರವಡಗಿದ ಚೆಂಬಾಯ್ ನಟಿಸುಯ್ ಸೂಸುವ ನಾಸಿಕ (ಉದ್ಭದೀ. ೨-೫೬) : ಚೆಂಬಾಯ್ಸೀನನೀಂಟುತ್ತುಂ (ಚಿಕವಿ. ೬-೨೫೩).
[ ಚೆಂ$_1$ + ಬಾಯ್ ]

**ಚೆಂಬಾಯ್ದೆಱೆ** (ನಾ). ೧. ಕೆಂಪನೆಯ ತುಟಿ. ೨. ಕೆಂಬಣ್ಣ ಬಳಿದ ಬಾಗಿಲು. ೧, ೨: ಕಾಣದೆ ಚೆಂಬಾಯ್ದೆಱೆಯಂ ಮಾಣನ್ನೀ ಪರಿಯ ಮನದ ಬಱುಸಂದೆಯಮಂ (ಚಿಕವಿ. ೬-೬೨). [ ಚೆಂ$_1$ + ಬಾಯ್ದೆಱೆ ]

**ಚೆಂಬಾವುಗೆ** (ನಾ). ಕೆಂಪಾದ ಪಾದುಕೆ,-ಹಾವುಗೆ: ಲಾಲಿತ ಚೆಂಬಾವುಗೆ ಮೆಟ್ಟಿ . . . ಸಲೀಲೆಯಿಂದೆದ್ದಳಾ ಕುವರಿ (ಬೋಹಚ. ೨೮-೬).
[ ಚೆಂ$_1$ + ಪಾವುಗೆ ]

**ಚೆಂಬಾವುಡೆ** (ನಾ). ಕೆಂಪು ಬಣ್ಣದ ವಸ್ತ್ರ : ಚೆಂಬಾವುಡೆಯುಡಿವಸನವು ತೋಯ್ದು . . . ಮೆಱೆಯೆ ಪೀತಾಂಬರ ನೋಡಿ ಹಿಗ್ಗಿದನು (ಬೋಹಚ. ೧೯-೩೮). [ ಚೆಂ$_1$ + ಪಾವುಡೆ (<ಪಾವುಡ) ]

**ಚೆಂಬಾಟೆ** (ನಾ). ಬಾಳೆಯಲ್ಲಿ ಒಂದು ಬಗೆ; ಕೆಂಪುಬಾಳೆ; ಚಂದ್ರಬಾಳೆ: ಪಣ್ತ ಪೊಂಬಾಟೆಯ ಚೆಂಬಾಟೆಯ ರಂಗಬಾಟೆಯ ತೋಂಟದಿನೊಳ ಗೊಳಗೆ ಬಾಂಬಟ್ಟೆಗರ್ಕ್ಕೆ ಪೊಟಲ ಸೊಬಗಂ ನಿರುಕಿಸಲ್ಕೆಂದು (ರಾಮಾಶ್ವ. ೦೦೦-೨೯). [ ಚೆಂ$_1$ + ಬಾಟೆ ]

**ಚೆಂಬಿಸಿಲ್, ಚೆಂಬಿಸಿಲು** (ನಾ). ಕೆಂಪು ಬಣ್ಣದ ಬಿಸಿಲು : ಕೆಂದಾವರೆ ಚೆಂಬಿಸಿಲಿಂದೊಂದುವ ತೆಱದಿಂದೆ ನಿನ್ನ ಮೃದುಪದಯುಗಮೆಂದಂದಿನ ಪೊಲಲಕ್ತಕ ರಸದಿಂದಂ ಪೇೞೆಂದಿತಿಲ್ಲಿದೇನಿಂದುಮುಖೀ (ಶಾದಂಪು. ೩೬೨) ; ಪೊಸರನ್ನದ ಲೋಲಾಂಶು ಪುರಗೋಪುರಗಳ ಮೇಲೆ ಚೆಂಬಿಸಿಲಂತೆ ಚಂದ್ರಿಕೆಯಂತೆ ತಮಾಲದಂತೆಸೆದವು (ಶ್ರೀಭಾಗ. ೨-೨೫) ; ಇನಬಿಂಬ ಕಂದಿ ಚೆಂಬಿಸಿಲಿಪ್ಪ ಮಾಸೆ ಮಾರ್ದನಿಗೊಟ್ಟುವೆಂಟುದಿಕ್ಕುಗಳು (ಭರತ. ೫೦-೦೦೬). **ಚೆಂಬಿಸಿಲು :** ಹೂಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು ಎದೆಯನ್ನೆ ತುಂಬಿಸಲು ಬಿಂಬಿಸುತಿರೆ (ಭಾವಜೀ. ೨೦-೪೦೫). 'ಕೆಂಬಿಸಿಲ್' ಪರ್ಯಾ. [ ಚೆಂ$_1$ + ಬಿಸಿಲ್ ]

**ಚೆಂಬಿಸಿಲ** (ನಾ). ಕೆಂಪಾದ ಬೆಳಕಿನಿಂದ ಕೂಡಿದವನು ; ಸೂರ್ಯ : ಚೆಂಬಿಸಿಲನಂ ಪಾಲ್ಗಡಲನುರುಮುದಗಜಮಂ . . . ಕನಸಿನೊಳು ನಿಟ್ಟಿಸಿದಳಾ ಬೆಳಗಪ್ಪ ಜಾವದೊಳ್ (ಸಾಳ್ವಭಾ. ೩-೩೮). [ ಚೆಂಬಿಸಿಲ್$_1$ + - ಅ$_7$ ]

**ಚೆಂಬಿಸಿಲು** 'ಚೆಂಬಿಸಿಲ್' ನೋ.

**ಚೆಂಬು$_1$, ಚಂಬು, ಚೊಂಬು** (ನಾ). ೧. ತಾಮ್ರ ಮೊದಲಾದ ಲೋಹ ಗಳಿಂದ ಮಾಡಿದ ಬಾಯಿ ಕಿರಿದಾಗಿರುವ ಗುಂಡನೆಯ ಪಾತ್ರೆ ; ತಂಬಿಗೆ : ಸಾದಿನ ಭರಣಿ ಪನ್ನೀರ ಚೆಂಬುಗಳು . . . ತೈಲದ ಕುಪ್ಪಿಗೆ ಗಳಾ ಗೃಹದೊಳು ಬಿಡಿಬಿಡಿಯಾಗಿಹವು (ಅಂಜಿಚ. ೩-೦೦೬) ; ಪನ್ನೀರ ಚೆಂಬು ಗಂಧೋದಕ ಹೂಡೆ . . . ತಲೆಗಿಂಬಿನೊಳ್ ತಂದಿರಿಸಿದರು (ಬೋಹಚ. ೨೬-೩೫). ೨. ಗೋಪುರದ ಕಲಶ: ಯಿೂ ಹೊನು ಮಹಾದೇವರ ಚೆಂಬಿನ ಒಡಿಲು ಹೊನ್ನಕಳಶಕೆ ಮಾಡಿದ ಧರ್ಮ (ಶಾಶಾಇ. IX-ii, ೯೩೦-೨೨; 1444); ಬೆಂಮಣ ಭಂಡಾರಿಯ ಮೊಮಗಳ ಮಗಳು ಸಂಕಂಮಮೊದಲಿಶಿ ಮಹಾದೇವರ ಚೆಂಬಿನ ಕೆಲಸಕ್ಕೆ ಕೊಟ್ಟ ದೊಡವರಹ (ಶಾಶಾಇ. IX-ii, ೪೭೯-೦೯ ; 1510). ೩. ತಾಮ್ರ : 'ಚೆಂಬು' ಅಂದರೆ ತಾಮ್ರ ಮತ್ತು ತಾಮ್ರದ ಪಾತ್ರೆ (ಸಂಕೋಥ. ೮೮). 'ಚೆಂಬುಕಂಟಿಗ' ಪರ್ಯಾ. **ಚಂಬು :** ೧. ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂವವಿ. ೫-೫೫) ; ಹಸಿರು ಪೇಯದಿಂದ ತುಂಬಿದ ಕಟ್ಟಿಗೆಯ ಚೆಂಬನ್ನು ನಮಗೆ ಕೊಟ್ಟು ಕುಡಿಯ ಹೇಳಿದರು (ಮೋದಿಮು. ೦೦೨); ಅಂಬು ಬಿಡಲಿಕ್ಕೆ ತಿಳಿಯದೇ ಇದ್ದರೆ ಚಂಬು ಮುಣಗಿಸ ತಿಳಿಯದೇ (ಗಾದೆ). **ಚೊಂಬು :** ೧. ಚಂದ್ರಕಾಂತಶಿಲೆಯ ಚೊಂಬುಗಳ ಬಾಯಿ ಕಟ್ಟಿ (ಶಾಗಂಧಿ. ೨೦೫-೦೦). ಚಂಬಿನವೂಳಿಗ=ನೀರನ್ನು ತಂದು ಕೊಡುವ ಊಳಿಗ : ದೇವರಾಜ ಒಡೆಯರ್ಯೈಯ್ಯನವರ ಚವ್ಪಿನ ವೂಳಿಗದ ಚಲುವವ್ವೆಯವರ ಕುಮಾರರಾದ ದೊಡ್ಡದೇವೈಯ್ಯನವರು (ಎಕ. III ಶ್ರೀರಂಗ. ೦೪-೯೬ ; 1686).
[ ದೇ.೫ ತಮಿ. ಚೆಮ್ಬು; ಮಲ. ತುಳು. ಚೆಂಬು; ಕೊಡ. ಚೆಂಬೀ; ತೆಲು. ಚೆಂಬು ]

**ಚೆಂಬು$_2$** (ನಾ). ಸೋರೆಯ ಜಾತಿಗೆ ಸೇರಿದ ಒಂದು ಬಗೆಯ ಬಳ್ಳಿ : "ತುಂಬೀ-ಚೆಂಬು, ಸೋರೆ, ತುಂಬೆ" (ಒತಧಿ. ೭೦). [ <ಸಂ. ತುಂಬ ]

**ಚೆಂಬುಕ** 'ಚಂಬುಕ' ನೋ.

**ಚೆಂಬುಕುಟಿಗ, ಚೆಂಬುಕುಟ್ಟಿಗ, ಚಂಬುಕುಟ್ಟಿಗ** (ನಾ). ತಾಮ್ರದ ಕೆಲಸ ಮಾಡುವವನು ; ತಾಮ್ರಕಾರ : "ತಾಮ್ರಕುಟ್ಟಕ" (ನಾಚಿರಾ. ೬). **ಚೆಂಬುಕುಟ್ಟಿಗ:** "ಶೌಲ್ವಿಕಃ, ತಾಮ್ರಕುಟ್ಟಕಃ-೨ ಚೆಂಬುಕುಟ್ಟಿಗನ ಪೆಸರು ಗಳು" (ಸಿದ್ಧಾಂತಿ. ೨೬೬). **ಚಂಬುಕುಟ್ಟಿಗ:** ಚಂಬುಕುಟ್ಟಿಗನೊಬ್ಬನ ಲಯ ಬದ್ಧವಾದ ಸುತ್ತಿಗೆಯ ಏಟಿನಂತೆ ಕೇಳಿಸುತ್ತದೆ (ಜೋಮುದು. ೨).
[ ಚೆಂಬು$_1$ + - ಕುಟಿಗ$_1$ ]

**ಚೆಂಬುಗೆಂಪು** (ನಾ). ತಾಮ್ರದ ಬಣ್ಣ ; ಕೆಂಬಣ್ಣ : ನಿಜಬಿಂಬಂ ಚೆಂಬು ಗೆಂಪೇಱೆ . . . ಸಾರ್ದಂ ದಿನನಾಥನಸ್ತಗಿರಿಮಸ್ತಪ್ರಸ್ತರ ಪ್ರಾಂತಮಂ (ಅನಂಪು. ೩-೬೬). [ ಚೆಂಬು$_1$ + ಕೆಂಪು$_1$ ]

**ಚೆಂಬುಡಿ** (ನಾ). ಕೆಂಪುಹುಡಿ,-ದೂಳು : ಭೂರಮೆಯ ಸಸಿಂಧೂರ ಸೀಮಂತ ರೇಖೆಯಂತೆ ಚೆಂಬುಡಿ ತಳ್ತು ಕಂಗೊಳಿಪ ಘಂಟಾಪಥದ ಪರಿ ಸರದಲ್ಲಿ (ರಾಜಶೇ. ೫-೨೦ ವ). [ ಚೆಂ$_1$ + ಪುಡಿ ]

**ಚೆಂಬುರುಳ್** (ನಾ). ಸೊಗಸಾದ ಅರ್ಥ ; ಪರಮಸತ್ವ : ಹುಟ್ಟೆಂಬ ಹೆದ್ದತನ ಹರಿಯೆ ಹಿರಿದೆಂಬ ಚೆಂಬುರುಳ ಕಾಣುವುದೆ ಅಱಿವು (ಕುಱಳ್. ೧-೩೬-೪). [ ಚೆಂ$_3$ + ಪುರುಳ್ ]

**ಚೆಂಬುಳುಕಾಯಿ** (ನಾ). ಒಂದು ಬಗೆಯ ಮರ : ದೇವದಾರಿ, ಗಂಧಗಿರಿ, ಗ್ಯಾದಾರಿ, ಚೆಂಬುಳುಕಾಯಿ (ಪ್ರುಕಿಗಿ. ೩೫-೬೮೩). [ ? ]

**ಚೆಂಬೂ** (ನಾ). ಕೆಂಪು ಬಣ್ಣದ ಹೂ : ಇಳಾತಳದ ತಾರಗೆಯಂತುಪಹಾರ ಮಾದ ಚೆಂಬೂಗಳಳುಂಬಮಾಗೆ ನಯನೋತ್ಸವಮಾದುದು ತತ್ಪುರೋ ತ್ಸವಂ (ಚಂದ್ರಪು. ೩-೯೬). [ ಚೆಂ$_1$ + ಪೂ$_2$ ]

**ಚೆಂಬೂತ** 'ಚೆಂಬೋತ' ನೋ.

**ಚೆಂಬೆಣ್ಣೆಗರುಗ** (ನಾ). ಗರುಗದಲ್ಲಿ ಒಂದು ಬಗೆ: "ಬಲಾ, ವಾಟ್ಯಾಲಕಃ ಈ ೨ ಚೆಂಬೆಣ್ಣೆಗರುಗ" (ನಾಚಿರಾ. ೧೦೦). [ ಚೆಂ$_1$ + ಬೆಣ್ಣೆಗರುಗ ]

**ಚೆಂಬೆರಲ್** (ನಾ). ಕೆಂಪನೆಯ ಬೆರಳು : ಸರ್ವಪುರುಷಾರ್ಥಕ್ಕಂ ಏಧಿ ಸ್ಥಾನಮಿಾ ಪದಮೆಂಬಂತಿರೆ ಚೆಂಬೆರಲ್ಗಡಿಗಳಂ ಕೀಲ್ಕಾಡಿ ಸಸ್ನೇಹಹಸ್ತದೆ ಶೇಷಾದ್ರಿಯ ಮುನ್ನಮುಪ್ಪೆಡೆಗಳೊಳ್ ಪಾದಾಬ್ಜಮಂ ತೋಱುವೈ (ವಸ್ತವಂ. ೦೨-೮೮). 'ಕೆಂಬೆರಲ್' ಪರ್ಯಾ. [ ಚೆಂ$_1$ + ಬೆರಲ್ ]

**ಚೆಂಬೆಲರ್** (ನಾ). ದಕ್ಷಿಣದ ಗಾಳಿ; ತೆಂಗಾಳಿ: ವನಲಕ್ಷ್ಮಿಯ ನರ್ತಕಿಯಂತೆ ಚೆಲ್ವನಾಳ್ದುದು ಫಲಭಾರಕುಂಬುಲತೆ ಚೆಂಬೆಲರ್ವೊಯ್ಲಿನ ಲೋಲ ವೃತ್ತಿಯಿಂ (ಜಾತೀಶ್ವ. ೦೦-೮೯). [ P ಇದು 'ತೆಂಬೆಲರ್' ಎಂಬುದರ ಅಪಲಿಪಿತವಿರಬಹುದು. ]

**ಚೆಂಬೆಳಕು** 'ಚೆಂಬೆಳಗು' ನೋ.

**ಚೆಂಬೆಳಗು, ಚೆಂಬೆಳಕು** (ನಾ). ಕೆಂಪುಬಣ್ಣದ ಕಾಂತಿ,-ಪ್ರಭೆ,-ಪ್ರಕಾಶ: ಪಡುಗಡಲ ತಡಿಯ ಯೆಡೆಯೊಳಿಡಿದ ವಿದ್ರುಮಲತೆಯ ಕುಡಿಯ ನಿಡು ಚೆಂಬೆಳಗೊ (ಪಂದಿಮಾ. ೧೮-೧೮). **ಚೆಂಬೆಳಕು:** ಅಂಬುಜಸಖಂ ಬಂದನಂ ಬರದಲಿ ತುಂಬಿದ್ದ ಬಲು ಕತ್ತಲೆಂಬ ಕಂಬಳಿ ಕಳಚಿ, ಚೆಂಬೆಳಕು ಹಾಸಿ ನಿಂದುಪ್ಪವಡಿಸಿ (ಕಎಪು. ೩೬-೪). 'ಕೆಂಬೆಳಗು' ಪರ್ಯಾ.
[ ಚೆಂ$_1$ + ಬೆಳಗು$_2$ ]

**ಚೆಂಬೊಂಗಟ್ಟು** (ನಾ). ಚಿನ್ನದಿಂದ ಮಾಡಿದ ಕಟ್ಟು,-ಚೌಕಟ್ಟು : ಭಟಶ್ರೇಣಿಯ ಚೆಂಬೊಂಗಟ್ಟು ತಳ್ತಡ್ಡಣದ ಪೊಳೆಪು ಕೆಂದೂಳಿಯಿಂದೊಂದಿ ಕೆಂಬಟ್ಟೆಯ ಮೇಲ್ಗಟ್ಟಾದುದು (ಅನಂಪು. ೧೩-೭೪).

[ ಚೆಂಬೊನ್ + ಕಟ್ಟು$_2$ ]

**ಚೆಂಬೊಂಗಳಸ** (ನಾ). ಚಿನ್ನದ ಕಲಶ : ಒಪ್ಪಂಬೆತ್ತ ಚೆಂಬೊಂಗಳಸದಳವಿಸಿಲ್ ಸಂತತಂ ವ್ಯೋಮಗಂಗಾಬ್ಜದ ಪೆರ್ಚಂ ಮಾಡೆ (ಜಗವಿ. ೯-೯೩); ಚೆಂಬೊಂಗಳ ಸಜ್ಜಗಳಂ ಹರಿಹರ ಶ್ರೀಗೇಹಮಂ ಕೂಡೆ ಮಾಡಿಸಿದಂ (ಎಕ. XI, ದಾವಣ. ೨೩-೭೨ : 1224). [ ಚೆಂಬೊನ್ + ಕಳಸ$_1$(=ಕಲಸ) ]

**ಚೆಂಬೊಗರ್** (ನಾ). ಕೆಂಪು ಬಣ್ಣದ ಕಾಂತಿ : ಬಂದುಗೆಪೂವಿನ ಪರಾಗಮಂ ಕಳೆಚಿ ಪೊರಳ್ದು ಚೆಂಬೊಗರನಾಂತು . . . ಚರಿಸುವಂ ಮೆಲ್ಲಮೆಲ್ಲನೆ ಮಂದಮಾರುತಂ (ನಂದಿಮಾ. ೩-೨೬) ; ಚೆಂಬೊಗರಿಂ ರಂಗೇರಿಹ ಜಲದಾಬ್ಜಮುಖಿ ತುಸ ತುಟಿತೆರೆದು ಶಿಶುಚಂದ್ರನ ನಗೆ ನಗುವಳು(ಗಹಿಕ. ೩೧-೨). ‘ಕೆಂಬೊಗರ್’ ಪರಾ. [ ಚೆಂ$_1$ + ಪೊಗರ್ ]

**ಚೆಂಬೊನ್**, ಚಂಬೊನ್, ಚೆಂಬೊನ್ನು (ನಾ). ೧. ಚಿನ್ನ ; ಬಂಗಾರ ; ಅಪರಂಜಿ : “ಸೊನ್ನೆ, ಕಸವರಂ, ಚೆಂಬೊನ್, ವಿಸುನಿ–ಈ ೪ ಸುವರ್ಣಂ” (ಕಕಸಾ. ೫-೬೧) ; ಚೆಂಬೊನ್ನ ತಳಿಗೆಗಳೊಳ್ ತೆಕ್ಕನೆ ತೀವಿದ ಬಿಡು ಮುತ್ತಿನ ಸೇಸೆಗಳಂ ಬೆರಸು ಮಹತ್ತರ ದೇವಿಯರ್ ಬಂದು ಪೊಡೆಮಟ್ಟು (ಆದಿಪು. ೨-೬೭ ವ) ; ಚೆಂಬೊನ್ನ ದೋಣಿಗಳೊಳಮಳಂಕರಿಸಿದ ಪಳುಕಿನ ಪಟ್ಟವಣೆಗಳೊಳಂ (ಕಾದಂಪೂ. ೭೦) ; ಚೆಂಬೊನ್ನ ಘಟಂಗಳಿನ ವ್ಯಕ್ತಾಂಬುಧಿಯಂಬುಗಳನಾಂತು (ಪಾರ್ಶ್ವಪು. ೧೪-೮೪). ೨. ತಾಮ್ರ : ನಲ್ ಸಮೆದ ಚೆಂಬೊನ್ನ ಕೊಡಮುತ್ತಿ ಮೂಱು ತಣಿಯಱಿದು ಮುಡಿಗೆಯ್ದಳಾ ಪೊಂಕೆ (ಅಂತಿಗೂ. ೨೦-೪೧೬). ೩. ಚಿನ್ನದ ನಾಣ್ಯ : ಚೆಂಬೊಂಗಳನೋರಂತಿರೆ ಬೇಡಿಕೊಳ್ಳೆನೆನ್ನಾರ್ಪನಿತಂ (ಧರ್ಮಾಮೃ. ೦-೧೩೭) ; ತುಂಬುರನ ಕಯ್ಯಿಂದ ಹತ್ತೆಂಟು ಸಾವಿರದ ಚೆಂದೊನ್ನ ಜಾಳಿಗೆಯ ಕಡಲೆಂದು ತರಿಸೆ (ಸಾಂದಪು. ೧೩-೪೬). **ಚಂಬೊನ್** : ೨. ಚಂಬೊನ್ನ ತಾಳ ಕಿನ್ನರಿಗಳನಾಂತು ನಿತಂಬಿನಿಯರುಗಳೆಯ್ದಿದರು (ಜೀವಂಸಾಂ. ೧೧-೩೯). **ಚೆಂಬೊನ್ನು** : ೧. “ಚೆಂಬೊನ್ನನಲು ಸುವರ್ಣಂ” (ಕಕರ. ೩೬) ; ನಿನ್ನ ಕೃಪಾರಸದಿಂದ್ವೆಸೆಯಾನು ಕರ್ಬೊನ್ನು ಚೆಂಬೊನ್ನಾದಂತೆ . . . ಭಾಗ್ಯೋನ್ನತಿಯೊಡಗೂಡಿಹೆನು (ಹದಿಬ. ೧-೩೫).

[ ಚೆಂ$_1$ + ಪೊನ್./ತಮಿ. ಚೆಮ್ಪೊನ್ ]

**ಚೆಂಬೊನ್ನು** ‘ಚೆಂಬೊನ್’ ನೋ.

**ಚೆಂಬೊಳೆಪು** (ನಾ).=ಚೆಂಬೊಗರ್ : ಪೊಳೆವ ಪಳಿಕಿನ ಜಪಸರಂ ಕುಸುಮಮಾಗೆ ಚೆಂಬೊಳೆಪಾಂತ ಜಡೆಗಳೆಳದಳಿರ್ದಂಗಲಾಗೆ . . . ಮುನಿಕುಲಮೊಪ್ಪಿತಾ ಮಹಾಕಾನನದೊಳು(ನಂದಿಮಾ. ೨-೨೪). [ ಚೆಂ$_1$ + ಪೊಳೆಪು ]

**ಚೆಂಬೋತ**, ಚಂಬೋತ, ಚೆಂಬೂತ (ನಾ). ಒಂದು ಬಗೆಯ ಕೆಂಪು ಬಣ್ಣದ ಪಕ್ಷಿ ; ಕೆಂಪು ಕಾಗೆ ; ಸಂಬಾರಗಾಗೆ : “ಧೂಮ್ರುಚ್ಛದಂ ಚೆಂಬೋತ[ಪಾಠಾಂ. ಕೆಂಬೋತ] ಮೆಂದೆನಿಕ್ಕುಂ” (ಋಂಗರಾ. ೫೨-೦೦) ; ಅಂಚೆಯ ಚೆಂಬೋತನ ಚಿಲಕೂಲಿಯ ಕೊಂಚೆಯ(ಹಮ್ಮಿ್ರ. ೪-೧೨ ರಗಳೆ) : **ಚಂಬೋತ**: ಸಾಳುವ ಚಿಲಿಮಿಲಿಗ ಚಂ[ಪಾಠಾಂ. ಚೆಂ]ಬೋತ ಮಿಾನ್ಕುಲಿಗ . . . ಮೊದಲಾದಖಿಳ ಖಗಕುಲ ಬಿದ್ದುದುರಿಯೊಳಗೆ (ಕುವ್ಯಾಆ. ೨೦-೫೩); ಮರಕುಟಿಗ ಚಂಬೋತ ಶುಕ . . . ಸರಟ ಸಾರ ಸಮೂಹ ಮೇಳಗಳಿತ್ತಲಿವೆ (ಕೂರರಾ. ೩-೧-೩೨). **ಚೆಂಬೂತ** : ಓಕ್ಕಳಿಕ ಚೆಂಬೂ[ಪಾಠಾಂ. ಬೋ]ತ ಗೀಜಗ . . . ಕೆಂಡವಕ್ಕಿಗಳವಱೊಳೊಪ್ಪಿದುದು (ಸಾಳ್ವಭಾ. ೫-೨೨) ; ಕಾಗೆ ಕುಕನಂ ಚೆಂಬೂತ ಮಯೂರನಂ . . . ಮೆಚ್ಚದೊಡದೇಂ ಭಂಗಗಳೇ ಧಾತ್ರಿಯೊಳ್ (ನೀತಿಸಾ. ೭೦೨). ‘ಕೆಂಬೋತ’ ಪರಾ.

[ ದೇ.೩ ತಮಿ. ಮಲ. ಚೆಮ್ಪೋತ್ತು ]

**ಚಿಕ್** ‘ಚೆಕ್ಕು$_2$’ ನೋ.

**ಚಿಕ್ಕಂದ** ‘ಚಕ್ಕಂದ’ ನೋ.

**ಚಿಕ್ಕನೆ** (ಅ). ಥಟ್ಟನೆ ; ಬೇಗನೆ ; ಕೂಡಲೆ : “ಭೋಂಕನೆ ಚಿಕ್ಕನೆ . . . ಬೆಚ್ಚರ ಬೆಚ್ಚರಮುಂ ಕೂಡಿರೆ ತಮ್ಮೊಳೊದವುಗುಂ ಶೀಘ್ರಾರ್ಥಂ”(ಕಮದ. ೩೦೫); ಉರೋಭಾಗಮಂ ಪಾದದಿಂ ಪೋಗೊದೆಯುತ್ತುಂ ಕೋಟ್ಕಳಂ ಚಿಕ್ಕನೆ ಕಿಟ³ (ಜಗವಿ. ೬-೫೫) ; ಕೊಳದೊಳು ಕಾಲಂ ತೊಳೆಯಲ್ಪುಗೆಯಲ್ಲಿರ್ದ ನಕ್ರಂ ಚಿಕ್ಕನೆ ಚರಣಮಂ ಪಿಡಿಯೆ (ಪುಣ್ಯಾಸ್ರ. ೬-೧೪ ವ) : ಕಣ್ಬಿಟ್ಟು, ಚಿಕ್ಕನೆದ್ದು ಹೊರಟು ಹೋಗುವವನು (ಬಿಲ್ಹಣ. ೨೨-೧೦). **ಚಿಕ್ಕಚಿಕ್ಕನೆ** (ದ್ವಿರುಕ್ತಿ) : ಪಟ್ಟವನು ಚಿಕ್ಕಚಿಕ್ಕನೆ[ಪಾಠಾಂ. ಚಕ್ಕಚಕ್ಕನೆ] ಕಟ್ಟಿಯಾವರವರಕ್ಕಱಿನ ಖಾಂಡಕ್ಕಪರ ಪೆಸರಿಕ್ಕೆ (ಮದೇಪು. ೫-೬೬).

[ ದೇ.೩ ತಮಿ.ಚಿಕ್ಕೆನ್ ; ಮಲ. ಚಿಕ್ಕೆನ್ನು. ಚಿಕ್ಕನೇ ; ತುಳು. ಚಕ್ಕ ]

**ಚಿಕ್ಕವತ್ತ** ‘ಚಕ್ರವತ್ತಿ’ ನೋ.

**ಚಿಕ್ಕಿತ** (ನಾ). ಸ್ಪಷ್ಟ, ನಿರ್ದಿಷ್ಟ : ಚಿಕ್ಕಿತಹ ಮಾರ್ಗದೊಳು ಬಹು ಜನ್ಮಕ್ಕೆ ಸಾಧನವಹ ಭವಂಗಳನೊಕ್ಕಲಿಕ್ಕುವ ಭೇದವನು ಕೃಪೆಯಿಂದ ಶಿನ್ನೊಳಗೆ ವಿಕ್ಕು ಬೆರಸಲ್ಪೇಕೆನುತ ವ್ಯೈಯಿಕ್ಕಿ ಬಿನ್ನೈಸಿದರೆ ಶಿಷ್ಯಂಗಕ್ಕಱಿಂ ಬೆಸಸಿದನು ಸದ್ಗುರುನಾಥನುಚಿತದಲಿ (ಸದ್ಗುರು. ೧-೧೩); ಮಾತಿನಲ್ಲಿ ಮತ್ತು ನಡವಳಿಕೆಯಲ್ಲಿ ಚಿಕ್ಕಿತವಾಗಿದ್ದರೆ ಜೀವನದಲ್ಲಿ ಕಷ್ಟಗಳು ಬರುವುದಿಲ್ಲ (ರೂಢಿ). [ <ಖಚಿತ ? ]

**ಚಿಕ್ಕಿಸು** (ಕ್ರಿ). ಹಿಂದಕ್ಕೆ ಅಟ್ಟು ; ಹಿಮ್ಮೆಟ್ಟಿಸು : ಅದರಿಂದ ಕೈಗಾಯ್ದು ನಲ್ಲದೊಡೆ ನಿಲಿಸಿ ಬಾಜಿಯಲಿ ಚಿಕ್ಕಿಸದೆ ಬಿಡೆ (ವಂಕಾರಾ. ೬-೧೦-೪೨).

[ ಚಿಕ್ಕು$_0$ + – ಇಸು$_3$ ]

**ಚಿಕ್ಕು$_1$** ‘ಸೆಕ್ಕು$_1$’ ನೋ.

**ಚಿಕ್ಕು$_2$**, ಚೆಕ್$_2$, ಚೆಕ್ಕು$_3$, ಚೆಕ್ (ನಾ). ೧. ಚೌಕುಳಿ ಬಟ್ಟೆ ; ಚೌಕುಳಿ ಆಕೃತಿಯಾಗಿ ನೆಯ್ದ ಅಥವಾ ಅಚ್ಚೊತ್ತಿದ ಬಟ್ಟೆ : ಚೌಕುಳಿಬಟ್ಟೆ, ಪಪ್ಪಳಿಬಟ್ಟೆ ; ಚೆಕ್ಕು ಬಟ್ಟೆ (Check. ಇಂಗ್ಲಿ). **ಚೆಕ್$_2$** : ೨. ತಾಳೆ ನೋಡುವುದು ; ಸರಿ ನೋಡುವುದು : ಲೆಕ್ಕ ಚೆಕ್‌ಮಾಡಿ ಆಮೇಲೆ ಹಣ ಕೊಡು (ರೂಢಿ). **ಚೆಕ್ಕು$_3$** : ೧. ಚೆಕ್ಕು ಸೀರೆ ಈಗಿನ ಹೊಸ ಫ್ಯಾಶನ್ನು (ರೂಢಿ). **ಚೆಕ್** : ೨. ಅವರು ‘ಚೆಕ್’ ಮಾಡಿದ ಬಳಿಕ . . . ರಾತ್ರಿ ಎಂಟರ ವರೆಗೆ ಕೆಲಸ (ನಾಪೂರಿಂ. ೮೬). [ ←ಇಂ. Check ]

**ಚಿಕ್ಕು$_3$**, ಚೆಕ್ಕು$_4$ (ನಾ). ಬ್ಯಾಂಕುಗಳಿಂದ ಹಣ ಪಡೆಯಲು ಕೊಡುವ ಆದೇಶಪತ್ರ ; ದರ್ಶನಿ ಹುಂಡಿ ; ಧನಾದೇಶ : ಆರು ಸಾವಿರದ ಇನ್ನೂರೈವತ್ತು ರೂಪಾಯಿಗಳಿಗೆ ರಂಗಾಚಾರಿಯ ರುಜು ಇದ್ದ ಒಂದು ಚೆಕ್ಕು ಇತ್ತು (ಇಲದು. ೧೩೭) ; ಸಮಯಕ್ಕೆ ದೊರೆಯುವ ರೂಪಾಯಿ ಚಿಲ್ಲರೆ ನೂರರ ಚಿಕ್ಕಿಗೆ ಮಿಗಿಲು (ಚಂದ್ರಮೀ. ೧೪೯-೯೩). **ಚೆಕ್ಕು$_4$** : ಈಗ ತಾನೇ ನನಗೆ ಒಂದು ಸಾವಿರ ರೂಪಾಯಿಗೆ ಚೆಕ್ಕು ಬಂದಿದೆ (ರೂಢಿ). ‘ಚೆಕ್ಕು ಹುಂಡಿ’ ಪರಾ. [ ←ಇಂ. Cheque ]

**ಚಿಕ್ಕುದಱು**, ಚಕ್ಕುದಱು (ಕ್ರಿ). ಚೂರಾಗುವಂತೆ ಕಡಿ ; ಚೆಕ್ಕೆಯಾಗುವಂತೆ ಕತ್ತರಿಸು : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ ಚಿಕ್ಕುದಱುದಂತಾಗೆ ತಳ್ತ ಕೂರಾಳ್ಗಳಂ . . . ಬಗಿದು (ಇಹರ. ದೇ. ೪೨-೫). **ಚಕ್ಕುದಱಿ** : ಕೂರಸಿಯೆಸಕಕ್ಕೆ ಚಕ್ಕುದಱಿಯಲುಱಿ ಮಾವವನೆಂದೆನುತ್ತೆ ಗರ್ಜಿಸಿ ಜಡಿದೆಟ್ಟಿದನಾ ಯಮಸೂನು ಕರಾಗ್ರದ ಖಡ್ಗಧೇನುವಂ (ಮಹಾನೇ. ೭-೧೫). [ ಚಿಕ್ಕು$_1$(<ಸೆಕ್ಕು$_1$) + ತಱು$_1$ ]

**ಚಿಕ್ಕುಲಗುಲಿ** ‘ಚಕ್ಕಲಗುಳಿ’ ನೋ.

**ಚಿಕ್ಕುಲಿ** ‘ಚಕ್ಕುಲಿ’ ನೋ.

**ಚಿಕ್ಕೆ** ‘ಸೆಕ್ಕೆ$_1$’ ನೋ.

**ಚಿಕ್ಕೆವತ್ತ** ‘ಚಕ್ರವತ್ತಿ’ ನೋ.

**ಚಿಗಳ್**, ಚಗಳು (ನಾ). ಉತ್ಪನ್ನ ; ಫಸಲು (?) : ಪಗಲಾದಿತ್ಯಂ ಮಕರಂಬುಗುವೊಡೆ ಕರವೊಳ್ಳಿತಾಗಿ ಜೋಳಂ ಬೆಳೆಗುಂ ನೆಗಟ್ಟಂದಿರುಳುಂ ಪೊಕ್ಕೊಡೆ ಚಿಗಳಗಣಿತವಲ್ಲಿ ಜೋಳನಾಡೆಯೆಂದು ಅಟ್ಟಂ (ಅಟ್ಟರು. ೮-೨೦೪). **ಚಿಗಳು** : ಆ ಯೆರಡುತೋಟದ ಒಳಗುಳ ಹಲಸು ಮೆಣಸು ಮಾವು ಬೆಳುವೊಟೆಯ ಮೊದಲಾಗಿ ಯೇನು ಉಳಂಥಾ ಬೆಳೆಯ ಚಗಳ ನೆಲ್ಲವನು ಅಗು ಮಾಡಿಕೊಂಡು (ಎಕ. VIII, ತೀರ್ಥಹ. ೩೨-೪೩ ; 1418 ?).
[ ? ]

**ಚಿಗಿಚೆ** (ನಾ). ನುಗ್ಗೆ ಮರ ; "ಶೋಭಾಂಜನ" (ಶಂಡಿಕ).
[ ?./ಮರಾ. ಶೇಗಟ, ಶೇಗವಾ ]

**ಚಿಗತಳಿ** 'ಚಗತಿಳಿ' ನೋ.

**ಚಿಚ್ಚರ** 'ಚಚ್ಚರ' ನೋ.

**ಚಿಚ್ಚರಂ** 'ಚಚ್ಚರಂ' ನೋ.

**ಚಿಚ್ಚರಿಕೆ** (ನಾ). ಚಳಕ; ನೈಪುಣ್ಯ ; ಕೌಶಲ ; ವೇಗ : ಮೆಯ್ ಮೆಯ್ ಚಲದಿಂ ಮುಟ್ಟಿ ಪೊಣರ್ದು ತಳ್ವಿಱಿವು[ಕಿಂ] ಕೆಯ್ ಚಿಚ್ಚರಿಕೆಯ ಚಲದಿಂ ಕೆಯ್ ಚಳಿವಿನಮಿಱಿದರೆರಡು ಬಲದೊಳಮದಟರ್ (ಪಂಪಭಾ. ೧೩-೩೪).
[ ಚಿಚ್ಚರ(<ಚಚ್ಚರ) + – ಇಕೆ ]

**ಚಿಚ್ಚರಿಗ** 'ಚಚ್ಚರಿಗ' ನೋ.

**ಚಿಚ್ಚರಿತ** (ನಾ). ಜಾಗರೂಕನಾದವನು ; ಜಾಗೃತನಾದವನು : ಪೊಚ್ಚಪೊಸಗಂಪನೀಯುತುಮಚ್ಚಿಗೋಳಿಪ್ಪಮಲಧೂಪಮಂ ಶಾಂತಂಗಂ ಚಿಚ್ಚರಿತನರ್ಪಿಸುತ್ತುಂ ಸಚ್ಚಿನ್ಮಯದವಾಂತು ರಂಜಿಸಿದಂ (ಉದ್ಭಟ. ೦೦-೩೮).
[ <ಚಿಚ್ಚರ ]

**ಚಿಚ್ಚರಿಸು** (ಕ್ರಿ). ಎಚ್ಚರಿಕೆಯಿಂದಿರು ; ಜಾಗ್ರತೆಗೊಳ್ಳು : ಪನ್ನಗರಾಜನ ನೊತ್ತಿ ಕಟ್ಟಿ ಚಿಚ್ಚರಿಸಿ ಕರಾಗ್ರದೊಳ್ ನಿಱಿಪನೋ ಒಡಿದೇಱುವನೋ ಸುರೇಭಮಂ (ಧರ್ಮಾಮೃ. ೯-೧೮೨). [ಚಿಚ್ಚರ (<ಚಚ್ಚರ) + – ಇಸು₁]

**ಚಿಚ್ಚರು** 'ಚಚ್ಚರ' ನೋ.

**ಚಿಚ್ಚು₁** 'ಚಚ್ಚು₁' ನೋ.

**ಚಿಚ್ಚು₂** 'ಚರ್ಚು₁' ನೋ.

**ಚಿಜಕರ** (ನಾ). ಒಂದು ಬಗೆಯ ಜೋಳ : ಈ ಜಿಲ್ಲೆಯಲ್ಲಿ ವೊಟ್ಟಿಗೆ ೧೮ ಪ್ರಕಾರದ ಜೋಳ ಬೆಳೆಯುವದು . . . ಅವುಗಳ ಹೆಸರುಗಳು – ಮೂರ ತಿಂಗಳ ಜೋಳ . . . ಚಿಜಕರ, ಕಾಗಿಜೋಳ (ಕಥಾಗಿ. ೨೮೦). [ ? ]

**ಚಿಜ್ಜ** 'ಧಜ್ಜ' ನೋ.

**ಚಿಜ್ಜೆ₁** 'ಸೆಜ್ಜೆ₁' ನೋ.

**ಚಿಜ್ಜೆ₂** 'ಸೆಜ್ಜೆ₂' ನೋ.

**ಚಿಜ್ಜೆ₃** (ನಾ). ಒಂದು ಬಗೆಯ ವಾದ್ಯ (?) : ಚಿಜ್ಜೆದನಿ ಕೇಳಿ ಎದ್ದು ಮಜ್ಜಣ ವಿಮಾದು ರುದ್ರಾಕ್ಷಿ ತೊಟ್ಟು ಮಡಿಯುಟ್ಟು ಸಿದ್ಧರ ಊರಿಗದ ಶಿವಗುಡಿಗೆ ನೀನು ಹೋಗವ್ವ (ಚಕಚ. ೨೦). [ ? ]

**ಚಿಟಿಗೆ** (ನಾ). ಒಂದು ಬಗೆಯ ಆದಾಯ (?) : ಅರಮನೆಗೆ ತೆಱುವ ಸಂಬಳ ಸರತಿ ಕುಡಿಕೆ ಚಿಟಿಗೆ ಅಧಿಕಾರಿ ಸೇನಬೋವರ ಸಂಬಳ ಎಲ್ಲವನು ಬಿಟ್ಟೆಉ (ಎಕ. III,ಮಳವ. ೬೬-ಅ ; 1550 ?). [ <ಚಟ್ಟಿಗೆ ? ]

**ಚಿಟ್ಟ₁** 'ಚರಟ' ನೋ.

**ಚಿಟ್ಟ₂** 'ಚಟ್ಟ₃' ನೋ.

**ಚಿಟ್ಟಬೆಳಗು** (ಕ್ರಿ). ಚರ್ಮವನ್ನು ಸುಲಿ; ಹಿಂಸೆಮಾಡು : ಅವರು ಚಿಟ್ಟ ಬೆಳಗದಿದ್ದರೂ ಅವರು ಬಿಡುವ ಎಚ್ಚರಿಕೆಯ ಹುಸಿಗುಂಡಿಗೇ ತಮ್ಮಾಜ ಗತಪ್ರಾಣನಾಗುತ್ತಿದ್ದ (ದೀಪಕ. I, ೩೮).
[ ಚಿಟ್ಟ₁ (<ಚರಟ) + ಬೆಳಗು₁ ]

**ಚಿಟ್ಟಿ₁** 'ಚಟ್ಟಿ₁' ನೋ.

**ಚಿಟ್ಟಿ₂** 'ಭಟ್ಟಿ' ನೋ.

**ಚಿಟ್ಟಿ₃** (ನಾ) ಒಂದು ಬಗೆಯ ಪಕ್ಷಿ : "ಟಟ್ಟಿಭಾಃ, ಕ್ಷುದ್ರ ಪಕ್ಷಿಕಾಃ – ಈ ೨ ಚಿಟ್ಟ [ವಾಪಾ. ಚಿಟ್ಟಿ]" (ಹಠಾಯು. ೪೨.೯೯). [ ? ]

**ಚಿಟ್ಟಿಗೆ** (ನಾ). ತೊತ್ತು ; ದಾಸಿ : ಚಿಟ್ಟಿಗೆಯ ಮಗ ಮಲ್ಲನಂ ಕರೆದು ನೊಸಲಲ್ಲಿ ಕಟ್ಟುಗ್ರವಾಗಿ ರಾಜಪ ಅಗ್ನಿನೇತ್ರವನು . . . ಕೋಱಿಸಲ್ಕೆ (ಶೌರಿರಾ. ೦೪-೩೮). [ <ಸಂ. ಚೇಟಿಕಾ ]

**ಚಿಟ್ಟಿಸು** (ಕ್ರಿ). ಚೇಷ್ಟಿಸು ; ಕೆಲಸ ಮಾಡು : ತ್ರಿಜಗವನೆತ್ತುವ ವೀರ್ಯಂ ನಿಜವಾಗಿಹುದವರ್ಗೆ ಚಿಟ್ಟಿಸದೆ ತೆಪ್ಪನಿಹಂ ತ್ರಿಜಗದ ಸುಖಕಧಿಕ ಸುಖಂ ನಿಜವಾಗಿಹುದೆಂತುಟೆಂತು ನುಡಿಯಲಸಕ್ಯಂ (ತ್ರಿಲೋಕ. ೦೦೬).
[ <ಚೇಷ್ಟಿಸು ]

**ಚಿಟ್ಟಿಱಿ** 'ಚಟ್ಟಿಱಿ' ನೋ.

**ಚಿಟ್ಟು₁** 'ಚಟ್ಟು₁' ನೋ.

**ಚಿಟ್ಟು₂** 'ಚಟ್ಟು₂' ನೋ.

**ಚಿಟ್ಟು₃** 'ಚಟ್ಟು₃' ನೋ.

**ಚಿಡಿಯಕ್ಕ** (ನಾ). ಒಬ್ಬಾಕೆಯ ಹೆಸರು : ಗೋವಿನ್ದ ಮಾಧವರಸರ್ ಕೂಡಲೂರಾ ಮೂವತ್ತುಮೂಳಿ ಚಿಡಿಯಕ್ಕಂ ಪೊಯ್ದು ಮುಣ್ಣು ಇರ್ಕ್ಕಣ್ಣಾಗಂ (ಎಕ. XII, ಮಧ್ಯಗಿ. ೩೦-ಅ ; ಸು. 950 ?).
[ ಚಿಡಿ₀ + ಅಕ್ಕ₁ ]

**ಚಿಡ್ಡಿ** 'ಚಡ್ಡಿ₁' ನೋ.

**ಚಿಣತಿ** (ನಾ). ಹಿಮ್ಮೇಳದ ವ್ಯಕ್ತಿ (?) : ಇನ್ನಾಡುವೆ ಜಂಗಮ ಬಹುರೂಪ . . . ಇಲ್ಲೆನ್ನೋ ಮದ್ದಳೆಗ ಒಲ್ಲೆ ಎನ್ನೋ ಕಹಳೆಕಾಱ ಬಂದವ ಹರಿದು ನಿಂದು ಹಾಡಿರೋ ಚಿಣತಿಯರಿರಾ (ಸರ್ವಜ. ೪೮-೨೩೩) 'ಚಿಹಣಿ' ಪಠಾ.
[ ? ]

**ಚಿಣ್ಣವೂರ್** (ನಾ). ಒಂದು ಊರಿನ ಹೆಸರು : ಅವರಾಳ್ಚಿಣ್ಣವೂರೊಳೆ ಎಱಮ್ಮನಾಸನ್ನಿ ಅಳೆ (ಎಕ. VI, ಕಡೂರು. ೧೪೩-೪ ; ಸು. 750).
[ ಚಿಣ್ಣ ? + ಊರ್ ]

**ಚಿದರಿಸು** 'ಕೆದಱಿಸು' ನೋ.

**ಚಿದಱು** 'ಕೆದಱ್₁' ನೋ.

**ಚಿದುಕ** (ನಾ). ಒಂದು ಬಗೆಯ ಮರ (?) : ಚಿಟ್ಟ ಕಿಬ್ಬಿಯಲ್ಲಿ ಚಿದುಕದ ತಾಳಲ್ಲಿ ಈಶಾನ್ಯ ಮುಖವಾಗಿ ನಟ್ಟ ಕಲ್ಲು ೧ (ಎಕ. XIV, ನಂಜನ. ೨೯೫ ಪುಟ. ೦೫೦-೩೩ ; 1716). [ ? ]

**ಚಿದುರು₁** 'ಕೆದಱ್'₁ ನೋ.

**ಚಿದುರು₂** 'ಚದುರ್' ನೋ.

**ಚಿದುಱಿಸು** 'ಕೆದಱಿಸು' ನೋ.

**ಚಿದುಱು** 'ಕೆದಱ್₁' ನೋ.

**ಚಿನ್ನ**, ಚನ್ನ₁ (ನಾ). ೧. ಸುಂದರನಾದವನಂ ; ಚೆಲುವನಾದವನು : ಪೊನ್ನಳ್ಳವನೆ ಕುಲೀನಂ ಚಿನ್ನಂ ಕಲಿ ಸತ್ಯವಾದಿಯೆನಿಸುಗುಂ (ಕಾವ್ಯಾವ. ೬೦); ಚಲದಭಿರಾಮನಣ್ಣನ ತವರ್ಮನೆ ಚಿನ್ನರ ಚಕ್ರವರ್ತಿ (ಎಕ. VIII, ಸೊರಬ. ೨೬೬-೪೨ ; ಸು. 1165) ; ಎನ್ನಾನಂದಸುಧಾಬ್ಧಿವರ್ಧನ ಕಳಾ ಸಂಪನ್ನನಂ ಚಿನ್ನನಂ . . . ಕಂಡೆಂ (ಪಂಪಾಶ. ೩೩) : ಚೆಲುವರ ಚೆಲ್ವ ಚಿನ್ನಿಗರ ಚಿನ್ನ ಸುವೀರರ ವೀರ (ಅಪಶ. ೧೨೨). ೨. ಶೂರ; ಪರಾಕ್ರಮಿ: ಚಿನ್ನರನಡಿಗೊತ್ತಿ ಮಂಡಳಿಕರಂ ಬಿಸಕೆಯ್ಸಿ (ಪಂಪಭಾ. ೬-೦೮). 'ಚಿನ್ನ ಪೊಂಗ' ಪಠಾ. ೩. ಒಳ್ಳೆಯದು : ತಾನು ಒಬ್ಬ ತಳವಾರನಾಗಿದ್ದರೆ ಎಷ್ಟು ಚಿನ್ನ (ಧರ್ಮಸಾ. ೬೩). ೪. ಚೆಲುವು; ಸೌಂದರ್ಯ; ಸೊಗಸು: ಬಿಸುಗದಿರಳದಹಿಮಕಿರಣನಂತೆ ನೋಳ್ಪರ ಕಣ್ಗೆ ಚಿನ್ನಬಪವಂ ಚಿನ್ನಮಂ ತಳೆದನು (ಚಂಪು. ೩-೪೨). ೫. ಅಂದವಾದುದು ; ಮನೋಹರ

ವಾದೆಂದು : ಭೃಂಗಕೋಕಿಳ ಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ (ಆದಿಪು. ೧೧-೯೮). (ಗು). ೬. ಅಂದವಾದ ; ಚೆಲುವಾದ : ಧರಣೀನಾಥನ ಚೆನ್ನ ಹೊನ್ನ ಕರುಮಾಡಂ ಮಾಳ್ಪುದಾಶ್ಚರ್ಯಮಂ (ಶಾಂತಿಪು. ೪-೩೨). 'ಚೆನ್ನಪೂ' ಪರಾ. ಚನ್ನ₁: (ಕ). [ ಚೆನ್ನ + - ಅ₇ ]

**ಚೆನ್ನಂಗಿ,** ಚನ್ನಂಗ, ಚನ್ನಂಗಿ₁, ಚೆನ್ನಗೆ₁, ಚೌನಂಗಿ (ನಾ). ಒಂದು ಬಗೆಯ ಮರ : "ಚೆನ್ನಂಗಿ ಚಲಿಯುಕ್ಕುಂ" (ಮಂಗರಾ. ೩೭-೮೯) ; ಹಲಸಾಲಂ ತಡಸಾಸು . . . ಚೆನ್ನಂಗಿ ಬೊಬ್ಬುಲಿ (ಪಾರ್ಶ್ವಪು. ೦೨-೩೮) ; ಕರುವಿಡಿದಿರ್ಪಾ ಚೆನ್ನಂಗಿಯ ತರು ಡಾಣೆಗೆ (ಕಮಲ. ೬೨ ಪ್ರಯೋ) ; ಚೆನ್ನಂಗಿ ಬನ್ನಿ ಹೊನ್ನೆಯ ತರುಗಳ್ (ಹಮ್ಮಿರ. ೪-೬೯) ; ತೇಗ ಚೆನ್ನಂಗಿ ಬನ್ನಿ ಪಾದ್ರಿಯು . . . ಮೆರೆದವರಣ್ಯದಿ (ಗೋಪಾಲು. ೪). **ಚನ್ನಂಗ :** (ಕ). **ಚನ್ನಂಗಿ₁ :** ಹೂಲಿ ಮಾಲಿನಿ ಬನ್ನಿ ಹೊನ್ನೆ ಚನ್ನಂಗಿ [ಪಾಠಾಂ. ಸೊಗಡಗಿಲು] (ಸೋಮಶ. ೩-೨) ; ಹೊನ್ನೆ ಹೊನ್ನಯ್ಯಗಳ ಮಗನಂ ಮನ್ನಿಸಾ ಚ[ಪಾಠಾಂ. ಚೆ]ನ್ನಂಗಿಯೇ ಅ ಚೆನ್ನಯ್ಯಂಗೊಲಿದಭವನೆಂದಿಗೆ ಚೆನ್ನಮಾಡುವನು (ಬಸವು. ೪೩-೩೭) ; ಚನ್ನಂಗಿ (ಚೊಂದಾರ) . . . ಇಮಾರತಿಗೆ ಮೇಲಾದದ್ದು (ಕಥಾಗ. ೩೯). **ಚೆನ್ನಗೆ₁ :** ಎಲವದ ಬೇಲ ಚೆನ್ನಗೆಯ ಪೊನ್ನೆಯ ಕವ್ಯರದ (ಲೀಲಾವ. ೬-೨೭). **ಚೌನಂಗಿ:** ಮರಗಳು: ಹೆಸವ, ಹೆಬ್ಬಲಸು . . . ಗೊರವಿ, ಹೆಣ್ಣುಗೊರವಿ, ಚೌನಂಗಿ, ಮಡ್ಡಿ (ನಮ್ಮನು. ೨೩೬). [ ದೇ.೩ ತೆಲು. ಚೆನ್ನಂಗಿ, ಚೆನಂಗಿ ]

**ಚೆನ್ನಂಗಿಬಿದಿರು, ಚನ್ನಂಗಿಬಿದಿರು** (ನಾ). ಒಂದು ಬಗೆಯ ಬಿದಿರು : ಅಣ್ಣ ತಮ್ಮರು ಕೂಡಿ ನಿನ್ನೆ ಗುಡ್ಡವನೇರಿ ಚೆನ್ನಂಗಿಬಿದಿರ ಕಡಿದಾರ (ಕನ್ನಡಾ. ೦೮). **ಚನ್ನಂಗಿಬಿದಿರು :** ಅಣ್ಣಾ ತಮ್ಮಾ ಕೂಡಿ ನಿನ್ನೆ ಗುಡ್ಡಾ ಏರಿ ಚನ್ನಂಗಿಬಿದಿರ ಕಡಿದಾರೊ (ಹಳ್ಳಿಯ. ೩೧).

[ ಚೆನ್ನಂಗಿ₀ + ಬಿದಿರು₂ (<ಬಿದಿರ್₃) ]

**ಚೆನ್ನಕ್ಷಿ** (ನಾ). ಒಳ್ಳೆಯ ಕಣ್ಣು ; ದೋಷರಹಿತವಾದ ಕಣ್ಣು : ನಿನ್ನ ನಯನದೊಳೆನ್ನ ಚೆನ್ನಕ್ಷಿಯುನವರ್ಚುವೆನು (ಬಸವು. ೧೮-೭೦).

[ ಚೆನ್ನ + ಅಕ್ಷಿ ]

**ಚೆನ್ನಗಂಡ** (ನಾ). ಸುಂದರನಾದ ವೀರ ; ಚೆಲುವನಾದ ಸಾಹಸಿ : ಬಿದುಬುಣ್ಣ ಪುಷ್ಪಕೃತ ಶೇಖರದಂತಿರೆ ಕೊಂಡು ಪೋದರಚ್ಚರಸಿಯರಣ್ಣ ಸತ್ತ ಭಟರಂ ಕೊನೆವಿಸಾಸೆಯ ಚೆನ್ನಗಂಡರಂ (ಗದಾಯು. ೪-೨೨).

[ ಚೆನ್ನ + ಗಂಡ₁ ]

**ಚೆನ್ನಗೆ₁** 'ಚೆನ್ನಂಗಿ' ನೋ.

**ಚೆನ್ನಗೆ₂** (ನಾ). (ಕರಾ) ಬಾಯಿಕಟ್ಟಿರುವ ಚೀಲದಲ್ಲಿರುವ ಧಾನ್ಯವನ್ನು ಪರೀಕ್ಷಿಸುವುದಕ್ಕಾಗಿ ಸ್ವಲ್ಪ ಹೊರಗೆ ತೆಗೆದುಕೊಳ್ಳಲು ಸಂದಿಯಲ್ಲಿ ಚೂಪಾಗಿದ್ದು ಕೊಳವೆಯಂತಿರುವ ಕಬ್ಬಿಣದ ಸಾಧನ ; ಸಕ್ಕರೆ ಗುತ್ತಿ : ಅಕ್ಕಿ ಪರೀಕ್ಷಿಸಲು ಚೆನ್ನಗೆ ಸಾಲದೆ (ರೂಢಿ). [ ? ]

**ಚೆನ್ನಡಿ,** ಚನ್ನಡಿ (ನಾ). ೧. ಚೆಲುವಾದ ಪಾದ ; ಮನೋಹರವಾದ ಪಾದ : ತಾವರೆಗಳಡಿಯ ಥಳಥಳಿಪ ಚೆನ್ನಡಿಗಳಸಿಯಡಿಯ ಲಲಿತಾಂಗಿಯರ್ (ಚಬಪು. ೩೭-೪೦) ; ಎನ್ನ ಜನ್ಮಕ್ಕೆ ಸಾಫಲ್ಯಮಾದುದು ನಿನ್ನ ಚೆನ್ನಡಿಯೂಳಿಗದಿಂದ (ಹರಿಬ. ೧-೩೯) ; ಚೆನ್ನಡಿ ಬಣ್ಣೊಡೆ ಬಡನಡು (ಚಳವಿ. ೩-೯೦). ೨. ಮೇಲಾದ ಪಾದ ; ಶ್ರೇಷ್ಠವಾದ ಪಾದ : ಸನ್ನುತ ಕವಿ ಪಂಪರಾಜನು ಮೊದಲರ ಚೆನ್ನಡಿಗಳಿಗೆಜಗುವೆನು (ಅಂಜನ. ೦-೬೯). ೩. ಚೆನ್ನಾದ ಅಡಿಭಾಗ,- ತಳಭಾಗ : ಗೂಳಿಯ ಪಂದಿಯ ಪೊನ್ನ ಬೀರಸಂಕಲೆಯ ತೊಳಪ್ಪ ಕನ್ನಡಿಯ ಚೆನ್ನಡಿಯಡ್ಡಣ ವೆಡ್ಡಮಾಗೆ ಮೂದಲಿಸಿ ಪೊಡರ್ಪು ಪೆರ್ಚಿ ಕಿಲರುಕುರ್ಚಿಡಿಗಳ್ ತಜಿಸಂದು ಕಾದಿದರ್ (ಕಬ್ಬಿಗಾ. ೨೭೨). **ಚನ್ನಡಿ:** ೨. ಸನ್ನುತ ಚತುರ್ವಿಂಶತಿ ಜಿನರಾಜರ ಚನ್ನಡಿಗಳಿಗೆಜಗುವೆನು (ತ್ರಿಪುಷಾಂ. ೦-೬). [ ಚೆನ್ನ + ಅಡಿ₁ ]

**ಚೆನ್ನನಾಯಿ** (ನಾ). (ಕರಾ) ಒಂದು ಬಗೆಯ - ಕಾಡುನಾಯಿ ; ಹುಲಿಯನ್ನೂ ಹೆದರಿಸುವ ಒಂದು ಬಗೆಯ ನಾಯಿ.

[ ←ತುಳು. ಚೆನ್ನನಾಯಿ=ತೋಳ ]

**ಚೆನ್ನನೆ** (ಅ). ಅಂದವಾಗಿ ; ಮನೋಹರವಾಗಿ : ಸುರಹೊನ್ನೆಯ ಚೆನ್ನನಪ್ಪರಲನೊತ್ತರದೆ ಸುತ್ತಿ ತತ್ತಿಸಿದ ಕೈರವದ ಕರ್ಣಪೂರಂಗಳುಮಂ (ಜಗವಿ. ೬-೦೬ ವ).

**ಚೆನ್ನಚೆನ್ನನೆ** (ದ್ವಿರುಕ್ತಿ) : ಸನ್ನಿ ತಜಿವುಗೊಡಿ ಸಾಗಿ ಮಲ್ಲಿಗೆಯೆಂದು ಚೆನ್ನಚೆನ್ನನೆ ಸೊಲ್ಲಿಸಿದರು (ಭರತ. ೮-೯೩). [ ಚೆನ್ನ + - ಅನೆ₁ ]

**ಚೆನ್ನಪೂ** (ನಾ). ಅಂದವಾದ ಹೂವು : ವಿಳಿರ್ಪ ಕುರುಳ್ಗಳೊಳ್ ತೊಡರ್ದ ದೇಸಿಯನಾವಗವಿಷಾವ ಚೆನ್ನಪೂಗಳನವನೊಯ್ಯನೋಸರಿಸುತುಂ (ಪಂಪಭಾ. ೨-೦೭) ; ತೊಳಗುವ ಚೆನ್ನಪೂಗಳಲಕಾವಳಿಯೊಳ್ಪುಬುಗಲ್ (ಶಾಂತಿಪು. ೭೩೪). [ ಚೆನ್ನ + ಪೂ₂ ]

**ಚೆನ್ನಪೊಂಗ** (ನಾ). ೧. ಸುಂದರನಾದ ವೀರ; ಚೆಲುವನಾದ ಪರಾಕ್ರಮಿ: ಕೊಂಡು ಪೋದರಚ್ಚರಸೆಯರಣ್ಣ ಬಿಟ್ಟ ಭಟರಂ ಕೊನೆವಿಸಾಸೆಯ ಚೆನ್ನಪೊಂಗರಂ (ಕಾವ್ಯಾವ. ೭೩೪); ಕವಿ ಪಂಡಿತರೋದುವ ಕೊಂಕು ಚೆನ್ನಪೊಂಗರ ಕುಡಿಮುಂಂಜೆಜಂಗು ನಿಡುಬಯ್ಯಲೆ ಬಾರ್ತೆಯಿ (ಅನಂಪು. ೮-೪೯) ; ಮಾಧವಂ . . . ಗಾಡಿಯಿಂ ಬರ್ಪ ಚೆನ್ನಪೊಂಗನಂ ಕೈಗೊಟ್ಟು ಕೂಡಿವಂದೋಲಗದ ಸಾಲೆಯಂ ಪುಗಿಸಿ (ರಾಮಾಶ್ವ. ೩೭-೧೩) . ೨. ಉತ್ತಮನಾದ ವೀರ ; ಶ್ರೇಷ್ಠನಾದ ಕಲಿ : "ಚೆನ್ನಪೊಂಗಂ-ವೀರಂ" (ಕಮಲ. ಶಬ. ೨) ; ಕುರುಬಲದೊಳ್ ಕರಂ ನೆಗಟ್ಟ ಬೀರರ ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟ ಪಣ್ ಕೆದಜಿದಂತೆ ನಿರುಂತರಮಾಜಿರಂಗದೊಳ್ ಪರದಿರೆ (ಪಂಪಭಾ. ೮-೧೦೬) . [ ಚೆನ್ನ + ಪೊಂಗ ]

**ಚೆನ್ನಭಕ್ತಿ, ಚನ್ನಭಕ್ತಿ** (ನಾ). ಉತ್ತಮವಾದ ಭಕ್ತಿ : ಅಥವಂ ನಗುತ್ತಾ ನಿಂಬಿಯಕ್ಕನ ಚೆ[ಪಾಠಾಂ. ಚ]ನ್ನಭಕ್ತಿಗೆ ಮೆಚ್ಚಿಯಾರೋಗಿಸಿ ಮುದಂಬೆತ್ತು (ಬಸವು. ೨೪-೭೩). **ಚನ್ನಭಕ್ತಿ :** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ ಚೆನ್ನ + ಭಕ್ತಿ ]

**ಚೆನ್ನಭಾಷಿತ** (ನಾ). ಸೊಗಸಾದ ಮಾತು ; ಉತ್ತಮವಾದ ಮಾತು ; ಸುಭಾಷಿತ : ವಂಶಾವಳಿಯುಮಂ ನಿಜಾವಳಿಯುಮನೊಳ್ಳಿತ್ತಾಗಿ ಪೇಟ್ದೋ ನಿನ್ನ ಚೆನ್ನಭಾಷಿತಮದೊಳ್ಳಿತ್ತಾದುದು (ಗದಾಯು. ೨-೮ ವ).

[ ಚೆನ್ನ + ಭಾಷಿತ ]

**ಚೆನ್ನಲರ್** (ನಾ). ಅಂದವಾದ ಹೂವು : ಅಮರರು ಚೆನ್ನಲರ್ಮಳೆಯ ಕಟಿದರು (ಭರತ. ೪೭-೦೦೯). [ ಚೆನ್ನ + ಅಲರ್₂ ]

**ಚೆನ್ನಸರ** (ನಾ). ಚೆನ್ನಾಗಿರುವ ಕಂಠಹಾರ ; ಸುಂದರವಾದ ಹಾರ : ಉಳಿದಾರ ಕಂಠಿ ಖಡೆಯ ಪೊಂಗಲು ಹೊನ್ನ ಬಳೆಯುತ್ತರಿಗೆ ಚೆನ್ನಸರವಾ ಕಳುವು (ಕುಠಾಸಾಂ. ೪೨-೨೩) ; ಹರಳೋಲೆ ಕಟ್ಟಾಣಿಮುತ್ತಿನ ವಂಟೆಯ ಮಿಂಜುಗುವ ಚೆನ್ನಸರಗಳು (ಕಂಸವಿ. ೯-೭೩). [ ಚೆನ್ನ + ಸರ₂ ]

**ಚೆನ್ನಸುಗೆ** (ನಾ). ಸುಂದರವಾದ ಅಶೋಕವೃಕ್ಷ : ಚೆನ್ನಸುಗೆಯ ನೆಟಲಡಿಯ ನುಣ್ಣಟಲೊಟ್ಟಲೊಳ್ ಕೆಂದಳಿರಿಂ ನಲ್ಪಾಸುಗೆಯ್ದು (ರಾಮಾಶ್ವ. ೩೧-೨೩). [ ಚೆನ್ನ + ಅಸುಗೆ ]

**ಚೆನ್ನಳಗ** (ನಾ). ಚೆಲುವಾದ ಹವಳದ ಬಣ್ಣದ ಕುದುರೆ : ಜನ್ನ ಜಿನ್ನಾರ ಚೆನ್ನಳಗ ಚೆಲುವ ಚೇರ ತನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿ ಯನೇಜಿ ನೃಪಕುಲರನ್ನರಿಗೆಂದು ತೋಜಿದರು (ಅಂಜನ. ೬-೮೩).

[ ಚೆನ್ನ + ಅಳಗ₁ ]

**ಚೆನ್ನಾಕಳ್** (ನಾ). ಉತ್ತಮವಾದ ಹಸು ; ಒಳ್ಳೆಯ ಜಾತಿಯ ಗೋವು: ಖುತ್ತಿಜರೆಲ್ಲರ್ . . . ರನ್ನಮಂ ಪೊನ್ನ ಹೇಜಂ ಚೆನ್ನಾಕಳಂ ಪ್ರತಿಗ್ರಹಿಸಿ ತಾಮುಮನಂ ಪರಸಿ ಬೀಟ್ಕೊಂಡರ್ (ರಾಮಾಶ್ವ. ೦೬೬-೦೩). [ ಚೆನ್ನ + ಆಕಳ್ ]

**ಚೆನ್ನಾಟ** (ನಾ). ಲೀಲೆ ; ವಿಲಾಸ ; ವಿನೋದ : ಊಟವ ಮಾಡಿದು ವಧುಬಂಧುಗಳು ಚೆನ್ನಾಟದಿ ಕೃಷ್ಣ ಕೈದೋಳೆದು . . . ಕರ್ಪೂರಕೂಟ ವೀಟಿಕೆಯನು ಸವಿದು (ಮೋಹತ. ೧೪-೦೬). [ ಚೆನ್ನ + ಆಟ ]

**ಚೆನ್ನಿ, ಚನ್ನಿ** (ನಾ). ಚೆಲುವೆ ; ಸುಂದರಿ : ನಕ್ಕೊವ್ವ್ವ ಹೇಳ ಚೆನ್ನಿ ಅ ನಗಿ ಇತ್ತಿತ್ರ ಹೋಗೇತಿ ಎತ್ತೆತ್ರ (ಗರಿ. ೧೧೧-೩). **ಚನ್ನಿ** : "ಚನ್ನಿ=ಚೆಲ್ವೆ" (ಶಾಶಕ್ಕ. ೩೯) ; ಚನ್ನಿಗೆ ನಾರಿಕುಲರನ್ನಿಗೆ ಭಾಗ್ಯಸಂಪನ್ನಿಗೆ ಸಗರಕುಲ ಪಾವನೆಗೆ (ತೀರ್ಥಮು. ೧೪). [ ಚೆನ್ನ + – ಇ₂ ]

**ಚೆನ್ನಿಕೆ** (ನಾ). ಚೆಲುವು ; ಸೌಂದರ್ಯ : ಕಲಿ[ತ]ನದುರ್ಕ್ಕೆ ಜೌವನದ ಚೆನ್ನಿಕೆ ರೂಪಿನೊಳೊಲ್ಪೆ × ಳ್ದು ಮಾರ್ವ್ವಲಿದದಟರ್ದ್ದ ವೀರ್ಯ್ಯ ವಿರದಾಯದೊಳಿನ್ನು ಮನಕ್ಕೆ ಸಂಕೆಯನ್ನೊಲಗಿಸಿದಂ (ಶಾಇಇ. XI-1, ೪೦-೩೫: 969). [ ಚೆನ್ನು + – ಇಕೆ ]

**ಚೆನ್ನಿಗ, ಚನ್ನಿಗ** (ನಾ). ೧. ಚೆಲುವನಾದವನು; ಸುಂದರ; ಸ್ಫುರದ್ರೂಪಿ: ತಮ್ಮ ವಿಭೂತಿಯ ತಮ್ಮ ತಮ್ಮ ಚೆಲ್ವುಗಳ ವಿಲಾಸದುರ್ಮೆಗಳೊಳಾವೆವ ಗಾಗಿಪೆವೆಂದು ಬಂದ ಚೆನ್ನಿಗರು ಮನಾಸೆಕಾಱರು ಮನೊಲ್ಲದೆ (ಪಂಪಭಾ. ೧-೧೧೬); ಕಡುಗೂರ್ಪ ಮಡದಿಯ ಮತ್ತೊಬ್ಬ ಚೆನ್ನಿಗ ಕೊಂಬ (ಬಸವ. ೪೦) ; ಧರೆಗೆ ಕಾಮನೆ ಚೆಲ್ವ ಕಾಮನಿಂದಾ ಚಕ್ರಧರನೆ ಚೆನ್ನಿಗ ನೆನಲೆಸೆದಾ (ಭರತ. ೫೦-೬೪). ೨. = **ಚೆನ್ನಿಗರಾಯ** : ನೆಱೆ ನಂಬಿದನು ಬೇಲೂರ ಚೆನ್ನಿಗನ (ಪುರಂದ.೧-೯೦-೩). **ಚನ್ನಿಗ**: ೧. ಚ[ಪಾಠಾಂ. ಚೆ]ನ್ನಿಗನು ಮಡಿದನು ಶಿವಶಿವಾ ಎನ್ನದೆ (ಬಸಪು. ೪೮-೧೧) ; ಬನ್ನಿರೈ ನೀವ್ ಘಟ್ಟ ಬೆಟ್ಟದ ಚನ್ನಿಗರು (ತೊರೆರಾ. ೬-೧೪-೨೯). [ ಚೆನ್ನು + – ಇಗ ]

**ಚೆನ್ನಿಗತನ, ಚನ್ನಿಗತನ** (ನಾ). ಚೆಲುವು; ಸೌಂದರ್ಯ: ಗಱಿ ಕಿಟ್ಟ ಕೀತ ಬಾವಲ ತೆಱದಿಂ ಬೀಭತ್ಸಮಪ್ಪೊಡಲ್ಗೆ ಕಿಲರ್ ಬೇಸಱುತುಂ ನೆನೆವರ್ ಮುನ್ನಿನ ವೆಱಂಗನೆಯರ್ಗೆ ಮೆಱೆವ ಚೆನ್ನಿಗತನಮಂ (ವರ್ಧಪು. ೧೦-೩೯). **ಚನ್ನಿಗತನ**: ಮನಂ ವೆಱಂಗನೆಯರ್ಗೆ ಮೆಱೆವ ಚನ್ನಿಗತನಮಂ (ಶ್ರಾವಕಾ. ೨೦-೮). [ ಚೆನ್ನಿಗ + – ತನ ]

**ಚೆನ್ನಿಗರಾಯ, ಚನ್ನಿಗರಾಯ** (ನಾ). ವಿಷ್ಣುವಿನ ಒಂದು ಮೂರ್ತಿ ; (ಬೇಲೂರಿನ) ಚನ್ನಕೇಶವ : ಕಂತುಪಿತನು ವೇಲಾಪುರದ ಚೆನ್ನಿಗರಾಯ ಎಂಥಾ ಗಾಡಿಗಾಱನೆ (ಪುರಂದ. ೧-೦೬೦ ಪಲ್ಲವಿ) ; ಮದನನ ಹೆತ್ತವನು ವರಪುರದರಸ ಚೆನ್ನಿಗರಾಯ (ನಳಚ. ೨-೪೯) ; ಮಂಗಳಂ ಬೇಲೂರು ಚೆ[ಪಾಠಾಂ. ಚ]ನ್ನಿಗರಾಯ ಕೇಶವಗೆ (ಹರಿಸಾ. ೧೧೧). **ಚನ್ನಿಗರಾಯ** : ಮೇಲಿನ 'ಹರಿಸಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ಚೆನ್ನಿಗ + ರಾಯ ]

**ಚೆನ್ನಿತು** 'ಚೆನ್ನಿತ್ತು' ನೋ.

**ಚೆನ್ನಿತ್ತು, ಚನ್ನತು, ಚೆನ್ನಿತು** (ಗು). ೧. ಸುಂದರವಾದ ; ರಮಣೀಯವಾದ : "ರಯುಃ, ರಯಣಂ, ರಯ್ಯಂ, ರಯಣೀಯಂ, ಈ ೪ ಚೆನ್ನಿತ್ತು" (ಶಾಶಕ್ಕ. ೧೧೧). **ಚನ್ನತು**: ೨. ಒಳ್ಳೆಯ ; ಚೆನ್ನಾದ : ಈ ಸುದಿನ ಚನ್ನತಾಹವವೀರರೆಂಬುದನ್ನರಿಯಾ (ತುರಂಗ. ೬೩-೧೧). **ಚೆನ್ನಿತು** : ೩. ದಪ್ಪವಾದ ; ಪುಷ್ಟವಾದ : "ಮೇದಸ್–ನೆಣಂ; ಮೇದುರಂ-ಚೆನ್ನಿತು" (ಶಾಶಕ್ಕ. ೦೩೦). [ < ಚೆನ್ನು ]

**ಚೆನ್ನೀರ್** (ನಾ). ನೆತ್ತರು ; ಕೆನ್ನೀರು ; ರಕ್ತ : ಕರುಳುಗಳೊಕ್ಕು ಕಾಳಿಜ ಹಾಯ್ದು ನಿಡುನರ ಹಱಿದು ಚೆನ್ನೀರ್ಗಳು ಹರಿದು (ಕಂನವಿ. ೧೪-೮೬). 'ಕೆನ್ನೀರ್₁' ಪರಾ. [ ಚೆಂ₁ + ನೀರ್₁ ]

**ಚೆನ್ನು, ಚನ್ನು** (ನಾ). ೧. ಅಂದ ; ಸೊಗಸು ; ಚೆಲುವು : ಸೂಳೆಯಂತೆ ಚೆನ್ನ ಮೆಱೆಯದೆ (ಧರ್ಮಾಮೃ. ೩-೯೯) ; ಬಣ್ಣ ರೂಪವಹ ಚೆನ್ನುವ ಹರಿದಲ್ಲಿ ಅದನಲ್ಲಿಯೇ ಮಾಡಬಹುದು (ಮೋಕ್ಷಮಾ. ೯೩-೩೬೬) ; ಎನಗೆ ಹೊನ್ನುಂ ನೀನೆ ಎನಗೆ ಚೆನ್ನುಂ ನೀನೆ (ಅರಿರ. ಹ. ೧೨೩-೦೪); ಉಚ್ಚಾರಣೆಗೆ ಚೆನ್ನಲ್ಲವೆಂಬುದನ್ನು ಲಕ್ಷಿಸಿಯೇ . . . ಕನ್ನಡಕ್ಕೆ ಸಹಜವೆನಿಸುವಂತೆ ಅನುಸ್ವಾರವನ್ನಾಗಿ ಇಟ್ಟುಕೊಂಡರು (ಸಂಕೋಧ. ೫೦). ೨. ಸರಿಯಾಗಿರುವಿಕೆ; ನೇರ್ಪು; ಋಜುತೆ : ಚೆನ್ನೇವುದೋ ಸಚ್ಚರಿತಂ ಚೆನ್ನಲ್ಲದ ದೇಹಿಗೆ (ಸಮುಪ. ೬-೪೪) ; ಚೆನ್ನಿಂ ನಮಸ್ಕರಿಸಿ (ಪದ್ಮಾಾ. ೬-೨೨). **ಚನ್ನು**: ೧. "ಚೆಲುವಿಕೆ" (ಜಾನಕೋ. ೫೫). ೩. ನೆಟ್ಟಗಿರುವುದು: ನೇರವಾಗಿರುವುದು : ನಾಯ ಬಾಲ ಸಡೆಯುಂ ಕಟ್ಟಲ್ಕೆ ಚ[ಪಾಠಾಂ. ಚೆ]ನ್ನಪ್ಪುದೆ (ಸೋಮಶ. ೪೭).

**ಚನ್ನಹ** = ಅಂದವಾದ ; ಚೆಲುವಾದ : ಚನ್ನಹ ಮಾಡಮಂ ಬಿನ್ನಣದಿಂದಡರ್ದು (ಹಾಲಾಸ್ಯ. ೧-೦೬-೪೭). **ಚೆನ್ನಾಗಿ, ಚನ್ನಾಗಿ** = ಸೊಗಸಾಗಿ ; ಸಂಪೂರ್ಣವಾಗಿ ; ಹದವಾಗಿ : ಚೆನ್ನಾಗಿ ತಿಳಿದು ಪಾಪಾನುರಾಗವಂ ಪತ್ತುವಿಟ್ಟು (ಧರ್ಮಾಮೃ. ೨-೯೧) ; ಮುನ್ನ ಬೆಸಸಿದ ಸದಾಚಾರಗಳುಂ ಚೆನ್ನಾಗಳವಟ್ಟವು (ದೀಕ್ಷಾಬೋ. ೦೨೬-೮) ; ನಿನ್ನೊಡಪುಟ್ಟಿದರಾದಿಯಾದವರೆಲ್ಲ ಚೆನ್ನಾಗಿರ್ದಪರೀಗ (ಅಂಜನ. ೧೧-೦೫೫) ; ನಿಮ್ಮ ಊರು ಚೆನ್ನಾಗಿದೆ (ಶಾಕುಕ. ೫೦); ಜನ್ನಿಗೆಯು ಪಾಲಂ ತೆಗೆದು ಚ[ಪಾಠಾಂ. ಚೆ]ನ್ನಾಗಿ ಕಾಸಿದ ನಂತರದೊಳು (ಬಸಪು. ೦೪-೫) ; ಚ[ಪಾಠಾಂ. ಚೆ]ನ್ನಾಗಿ ನೀವನು ನಯದಿ ನೋಡಲು ರೋಗಿಯಾದವನುಂ ನಿರೋಗಿಯನಲ್ಕೆ ಬಾಳ್ಕನರಾ (ಬಸಪು. ೪೬-೬೫) **ಚೆನ್ನಾಗು**=ಅಂದವಾಗು; ಸೊಗಸಾಗು : ಅಯ್ಯಯ್ಯಾ ಚೆನ್ನಾದುದೆನೆ ಕನ್ನಡಿಗರು ರಯ್ಯಾ ಮಂಚಿದಿಯೆನೆ ತೆಲುಗ (ಭರತ. ೦-೬) ; ಚೆನ್ನಾದ ಕುಂಕುಮಗಾರಣೆಯಿಂದ ಸಂಪನ್ನತೆವಿಡಿದುದಾಸ್ಥಾನ (ಕಂನವಿ. ೮-೧೧). [ ದೇ.೩ ತೆಲು. ಚೆನ್ನು ]

**ಚೆನ್ನುಗೆಡು** (ಕ್ರಿ). ಅಂದಗೆಡು ; ಹಾಳಾಗು: ಕಣ್ಣಾವಗಾಲದ ಹೊಳೆಯಲ್ಲಿ ಮುಳುಗಿ ಚೆನ್ನುಗೆಟ್ಟರಯ್ಯಾ (ಮೋಕ್ಷಮಾ. ೨೪೪-೬೯೫).

[ ಚೆನ್ನು + ಕೆಡು₁ ]

**ಚೆನ್ನುಡಿ** (ನಾ). ಒಳ್ಳೆಯ ಮಾತು ; ಸೂಕ್ತಿ : ನಿರಹಂಕಾರಕ್ಕೆ ಭಕ್ತಿಯೇ ಶೃಂಗಾರವೆಂಬ ತನ್ನ ಚೆನ್ನುಡಿಯಂತೆ ನಿರಹಂಕಾರದ ಮೂರ್ತಿಯಾಗಿ (ಶರಚ. ೪೧೮). [ ಚೆನ್ನ + ನುಡಿ₂ ]

**ಚೆನ್ನುಡೆ** (ನಾ). ಸೊಗಸಾದ ಉಡುಗೆ : ಚೆನ್ನುಡೆಯ ಹೊಂಬಣ್ಣದ ಬಿಚ್ಚುಗೂದಲ . . . ಹೆಣ್ಣಾವಗು (ಪುನರು. ೪೪೦). [ ಚೆನ್ನ + ಉಡೆ₂ ]

**ಚೆನ್ನೆ₁, ಚನ್ನೆ** (ನಾ). ಚೆಲುವೆ ; ಸುಂದರಿ : ಚೆನ್ನೆ ಪೊನ್ನೆಯರಲಂ ಕೊಯ್ದರ್ (ಆದಿಪು. ೧೧-೧೧೨) ; ವೆಱರಂ ತನ್ನಂತು ಬಗೆದು ಲೋಗರ ಚೆನ್ನೆಯರಂ ಬಯಸಲಾಗದೞುವುಳ್ಳ ನರಂ (ಸಮುಪ. ೫-೬೨) ; ಕಜ್ಜಳದ ಕನ್ನಡಿಯ ಚೆನ್ನೆಯರ್ವರ್ರಸು ಇಚ್ಚೆಗಾರ್ತಿ ನಡೆವಾಗಳ್ (ಶಬ್ದಾಶಾ. ೩೨೪). **ಚನ್ನೆ** : ಚ[ಪಾಠಾಂ. ಚೆ]ನ್ನೆಯ ಕಣ್ಮಲರೊಳ್ ಕಾಡಿಗೆಯ ನೆಚ್ಚಿದರ್ ಮತ್ತೊರ್ವಳ್ (ಹಂರಾಮಾ. ೬-೮೫) ; ಪೊಗಳ್ಗುಂ ಭೂಮಂಡಳಂ ಸಂತತಂ ಪಿರಿದುಂ ಮಾಳಲದೇವಿಯಂ ಬಹುಕಳಾಸಂಪನ್ನೆಯಂ ಚನ್ನೆಯನ್ (ಕಇ. IV, ೦-೩೮: 1206); ವರಪತಿವ್ರತೆ ಚನ್ನೆಯರ ಗರುವೆನಿಸಿ ನಡೆದಳು (ಕುಮಾವ್ಯಾ. ಬಿ೩. ೩೩-೨೦). [ ಚೆನ್ನ + – ಎ₂ ]

**ಚೆನ್ನೆ₂** (ನಾ).=ಚೆನ್ನಂಗಿ : ಅರಳೆಯಿಂದಕ್ಕಿಯಿಂ ಕಕ್ಕೆಯಿಂ . . . ಬನ್ನಿಯಿಂ ಚೆನ್ನೆಯಿಂ (ನಂದಿಮಾ. ೦೩-೦೨) ; ಎಲವಂ ಸಂಪಗೆ ಹೊನ್ನೆ ಚೆನ್ನೆ ಕವಳಂ ಕಾರಾಟವಮಾಚಂ ಪುಲಿಂಗಿನ್ (ರಾಜಶೇ. ೫-೫೬). [ < ಚೆನ್ನಂಗಿ ]

**ಚೆನ್ನೆ₃** (ನಾ). (ಕರಾ) ಎರಡು ಸಾಲುಗಳಲ್ಲಿ ಏಳೇಳು ಗುಣಿಗೆಗಳನ್ನುಳ್ಳ ಮಣೆಯ ಮೇಲೆ ಕವಡೆ ಅಥವಾ ಹುಣಿಸೆಬೀಜಗಳಿಂದ ಆಡುವ ಒಂದು ಬಗೆಯ ಆಟ ; ಅಳ್ಳುಗುಳಿಮಣೆ ಆಟ : ಚೆನ್ನೆಯಾಡದ ಶತಮಾನವೇ ಕಳೆದುಹೋದಂತಿತ್ತು ನನಗೆ (ಕಳಮು. ೧೨); ಗೊಂಬೆಮದುವೆಯನ್ನೊಮ್ಮೆ ಮಾಡಿ. ಚೆನ್ನೆಯಕ್ಕಡಿಯೊಮ್ಮೆ ಹೂಡಿ (ಗೀವಿಂ. ೬೧-೧೪).

[ ←ತುಳು. ಚೆನ್ನೆ ]

**ಚೆನ್ನಕಾಯಿ** (ನಾ). ಚೆನ್ನ ಆಟದಲ್ಲಿ ಬಳಸುವ ಬೀಜ,-ಕಾಯಿ : ಚೆನ್ನ ಕಾಯಿಗಳು ನನ್ನ ಕೈಯಿಂದ ಮೆಲ್ಲಮೆಲ್ಲನೆ ನಡುಗಿ ನಡುಗಿ ಚೆನೆ ಗುಳಿಗೆ ಬೀಳುತ್ತಿದ್ದುವು (ಶಳಮ. ೧೨). [ ಚೆನ್ನ$_3$ + ಕಾಯಿ$_4$ (<ಕಾಯ್$_4$) ]

**ಚೆನ್ನೆಗ್ಗಿಲು**, ಚನ್ನೆಗ್ಗಿಲು (ನಾ). ಕೆಂಪು ನೆಗ್ಗಿಲುಗಿಡ ; ಕೆನ್ನೆಗ್ಗಿಲು : "ಕಪಿಪಿಪ್ಪಲಿ–ಚೆನ್ನೆಗ್ಗಿಲು, ಗಜಗಿಪ್ಪಲಿ" (ಓಷಧಿ. ೨೭) ; ಬಿಳಿಕೊಮ್ಮೆ ಬೇರನೂ ಚೆನ್ನೆಗ್ಗಿಲ ಬೇರನೂ ನೀರಲ್ಲಿ ಅರೆದು ಮುಖಕ್ಕೆ ಲೇಪಿಸಲು ಸ್ತ್ರೀಯರುಗಳ ಮುಖದ ಕರಿಬಂಗು ಶಮನವಹುದು (ವೈದ್ಯಸಾ. II, ೧೪೭). **ಚನ್ನೆಗ್ಗಿಲು** : ಕಡವದ ಬೇರು, ಚನ್ನೆಗ್ಗಿಲು, ಹಿಟ್ಟುಳುಕನ ಬೇರು ಇವಂ ಹಸುವಿನ ಹಾಲೊಳರೆದು . . . ಕೊಳ್ಳಲು ಕಲ್ಲುಕಟ್ಟು ಮೂತ್ರಕೃಚ್ಛ್ರ ಸಹ ಮಾಣ್ಗುಂ (ಸಕವ್ಯ. ೩೭೯). [ ಚೆಂ$_1$ + ನೆಗ್ಗಿಲು (<ನೆಗ್ಗಿಲ್) ]

**ಚೆನ್ನೆನಪು** (ನಾ). ಸರಿಯಾದ ನೆನಪು : (+). [ ಚೆನ್ನ + ನೆನಪು ]

**ಚೆನ್ನೆಮಣೆ**, ಚನ್ನೆಮಣೆ (ನಾ). (ಕರಾ) ಚೆನ್ನೆ ಆಟವಾಡುವ ಮಣೆ ; ಅಟ್ಟುಗುಳಿಮಣೆ : ಆ ಚೆನ್ನೆಮಣೆ ಇಲ್ಲಿ ತಾ (ಶಳಮ. ೧೨). **ಚನ್ನೆಮಣೆ**: ಚನ್ನೆಮಣೆಗೆ ಹಾಲುವಾಣದ ಕಾಳು, ಪೆಟ್ಲಗೆ ಗಜ ಒದಗಿಸುತ್ತಿದ್ದವರು ರಾಗಜ್ಜ (ಪ್ರಕ್ಕೆ. ೮೭). [ ಚೆನ್ನೆ$_3$ + ಮಣೆ ]

**ಚೆನ್ನೆಯ್ದಿಲ್**, ಚನ್ನೆಯ್ದಿಲ್, ಚನ್ನೈದಿಲು, ಚೆನ್ನೈದಿಲ್, ಚೆನ್ನೈದಿಲೆ (ನಾ). ಕೆಂಪು ನೈದಿಲೆ ; ರಕ್ತೋತ್ಪಲ : "ಸೌಗಂಧಿಕಂ, ಕಲ್ಹಾರಂ– ಈ ೨ ಚೆನ್ನೆಯ್ದಿಲ್" (ಕರ್ಣಾಟ. ೧೧೨-೫೯); ಅಲರ್ದ ಚೆನ್ನೆಯ್ದಿಲ್ಗಳೊಳ್ಗಂಪಿ ನಿಂಪನಲಂಪಿಂ ತೆಗೆದೊಟ್ಟಿಕೊಂಡು . . . ಕೀಡಿತ್ತೊಂದು ಮಂದಾನಿಲಂ (ಕಾದಂಬ. ೪೨೬). **ಚೆನ್ನೆಯ್ದಿಲ್** : "ಆವಲೆಂದುಂ ಚೆಂಗಲವೆಯೆಂದುಂ ಚ[ಪಾಠಾಂ. ಚೆ]ನ್ನೆಯ್ದಿಲ್" (ಕಕಸಾ. ೯-೧೬೭). **ಚನ್ನೈದಿಲು** : ಒಂದು ಹೂ ಮಂದಾರವುತ್ಪಲ ಒಂದು ಚನ್ನೈದಿಲು [ಪಾಠಾಂ. ಚೆನ್ನೆಯ್ದಿಲು] ಬಕುಳ ವೊಂದೊಂದು ಅರವಿಂದ (ಲಶಪು. ೧೯-೬೫). **ಚೆನ್ನೈದಿಲ್** : ಚೆನ್ನೈದಿಲ ಕಂಪ ನೆಯ್ದಿಲಾರ್ಪುವೆ ಪೂಗಳ್ (ಅದಿಪು. ೧೧-೦೨೩); ಕೆಲರಂಭೋರುಹದಿಂ ಕೆಲರ್ ಸುರಗಿಯಿಂ ಚೆನ್ನೈದಿಲಿಂದಂ ಕೆಲರ್ . . . ಪೂಜಿಸಿ (ಧರ್ಮಾಮೃ. ೫-೨೩೨) ; ಚೆನ್ನೈದಿಲಲರ ಮಾಲೆ (ಕೀವಂ. ೯೮-೪೩). **ಚೆನ್ನೈದಿಲೆ** : "ಚೆನ್ನೈದಿಲೆಯು ಚೆಂಗಲವೆಯುಮದೆನ್ನಲ್ ಸಲೆ ರಕ್ತೋತ್ಪಳಮಕ್ಕುಂ" (ಕವಿಕಂ. ೯೫). 'ಕೆನ್ನೆಯ್ದಿಲೆ' ಪರಾ. [ ಚೆಂ$_1$ + ನೆಯ್ದಿಲ್ ]

**ಚೆನ್ನೆಯ್ದಿಲ್ಗೊಳ**, ಚೆನ್ನೈದಿಲ್ಗೊಳ (ನಾ). ಕೆಂಪುನೈದಿಲೆಗಳನ್ನುಳ್ಳ ಕೊಳ : ಅಲರ್ದಂಭೋರುಹಷಂಡಮುಳ್ಳಲರ್ದ ಚೆನ್ನೆಯ್ದಿಲ್ಗೊಳಂ (ಅದಿಪು. ೦-೬೭). **ಚೆನ್ನೈದಿಲ್ಗೊಳ** : ಚೆನ್ನೈದಿಲ್ಗೊಳದವೊಲಾಯ್ತು ಸಂಜೆಗೆಂಪಿನಿಂ ಗಗನತಳಂ (ಕಾದಂಪೂ. ೫೦೦). [ ಚೆನ್ನೆಯ್ದಿಲ್ + ಕೊಳ$_2$ ]

**ಚೆನ್ನೇಸಱ್**, ಚೆನ್ನೇಸಱು (ನಾ). ಕೆಂಪು ಬಣ್ಣದ ಸೂರ್ಯ : ಚೆನ್ನೇಸಱ ಬಿಂಬಂ ಬಿಸುಪನುಳಿದು ಭೂಮಿಮಾತಳಕಂಬರದಿಂದಿಳಿತರ್ಪಂದದಿಂ (ಜಯುಕಾ. ೩-೬೭). **ಚೆನ್ನೇಸಱು** : ಚೆನ್ನೇಸಱು ಮೂಡಗಡೆ ಬೆಳವಂದದಿ ಸನ್ನುತ [ಶಿ]ವೆತ್ತು ಬೆಳೆದನು (ನೇಮಿಸಂ. ೫-೦೧೨). [ ಚೆಂ$_1$ + ನೇಸಱ್ ]

**ಚೆನ್ನೇಸಱು** 'ಚೆನ್ನೇಸಱ್' ನೋ.

**ಚೆನ್ನೈದಿಲ್** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲೆ** 'ಚೆನ್ನೆಯ್ದಿಲ್' ನೋ.

**ಚೆನ್ನೈದಿಲ್ಗೊಳ** 'ಚೆನ್ನೆಯ್ದಿಲ್ಗೊಳ' ನೋ.

**ಚೆನ್ನೊಪ್ಪು** (ಕ್ರಿ). ಚೆನ್ನಾಗಿ ಶೋಭಿಸು : ತಿರೆಯುಂ ಮಟೆಬೆಳೆಗಳಿಂ ಚೆನ್ನೊಪ್ಪಿ ಬಟಿಗಾಲವಮಂ ಕಾಣದಾಯ್ತು (ಅದ್ಭುತ. ೭-೨೧).
[ ಚೆನ್ನ + ಒಪ್ಪು$_1$ ]

**ಚೆನ್ನೌಡಲ** (ನಾ). ಒಂದಂ ಬಗೆಯ ಔಡಲ; ಕೆಂಪು ಹರಳಿನ ಗಿಡ : "ಉತ್ತಾನ(ಪತ)ಪತ್ರ – ಹೇರೌಡಲ, ಚೆನ್ನೌಡಲ" (ಓಷಧಿ. ೦೭).
ಚೆಂ$_1$ + ಔಡಲ (<ಅವುಡಲ) ]

**ಚೆಪ್ಪಗೊಡಲಿ** 'ಚಪ್ಪಗೊಡಲಿ' ನೋ.

**ಚೆಪ್ಪರಿ** 'ಚಪ್ಪರಿ' ನೋ.

**ಚೆಪ್ಪಲಿ** 'ಚಪ್ಪಲಿ' ನೋ.

**ಚೆಪ್ಪಾಳೆ** 'ಚಪ್ಪಳೆ' ನೋ.

**ಚೆಪ್ಪು** 'ಚೇಪು$_3$' ನೋ.

**ಚೆಪ್ಪೆ** 'ಚಪ್ಪೆ$_1$' ನೋ.

**ಚೆಪ್ಪೆಜಾಡ್ಯ** 'ಚಪ್ಪೆಜಾಡ್ಯ' ನೋ.

**ಚೆಪ್ಪೆವಡೆ** (ಕ್ರಿ). ಚಪ್ಪಟೆಯಾಗು : ಪೊಡವಿಯ ಪೊತ್ತ ಫಣೀಂದ್ರನ ತಲೆ ಚೆಪ್ಪೆವಡೆದುದು (ನೇಮಿಸಂ. ೨೭-೦೦೫). [ ಚೆಪ್ಪೆ (<ಚಪ್ಪೆ$_1$) + ಪಡೆ$_1$ ]

**ಚೆಪ್ಪೋಡು** 'ಚಪ್ಪೋಡು' ನೋ.

**ಚೆಬ್ಬೆ** 'ಸಬ್ಬೆ' ನೋ.

**ಚೆಮ್ಮ** 'ಚಮ್ಮ' ನೋ.

**ಚೆಮ್ಮಣಿ** (ನಾ). ಕೆಂಪು ರತ್ನ ; ಮಾಣಿಕ್ಯ ; ಪದ್ಮರಾಗ : ಕಡಲೊಡೆಯನು ನಿಟ್ಟಿಪ ಚೆಮ್ಮಣಿಗಯ್ಕು ಪಿ[ಪಾಠಾಂ. ಚೆನ್ನಮಣಿಗನ್ನ, ಚನ್ನಮಣಿ ಗೈಪಿ]ಡಿಯೆನೆ . . . ಪಗಲಾಣ್ಮನೆಸದನು (ಸೂಲಸೂ. ೯-೭).
[ ಚೆಂ$_1$ + ಮಣಿ$_3$ ]

**ಚೆಮ್ಮಣಿಗೆ** 'ಚಮ್ಮಾಳಿಗೆ' ನೋ.

**ಚೆಮ್ಮಣಿವಟ್ಟು**, ಚಮ್ಮಣಿವಟ್ಟು (ನಾ). ೧. ಬೈತಲೆಯ ಮಣಿ (?) : ಭಳಿರೆ ಜಡ ಪಾರಜಂಗುಳಿಯ ನಟ್ಟ ನಡುವಲೆಗಿಟ್ಟ ಚೆಮ್ಮಣಿವಟ್ಟೆ ಮುಟ್ಟದಿರೆನಲು ಬೆಜ್ಜರವಟ್ಟು ನಿಟ್ಟಸುತ್ತಿರಲು ತದ್ಗಿಹಗಾಂಗನೆಯು ಕೂಗುಳೆ (ಮರೀಪು. ೬-೦೫). **ಚಮ್ಮಣಿವಟ್ಟು** : ೨. ಕುಂಕುಮದ ಬಟ್ಟು; ಕೆಂಪು ತಿಲಕ: ಕಮಳದಳನೇತ್ರೆ ಕಲಧೌತಗಾತ್ರೆ ರಮಣಿಯರ ನುಣ್ಗೊಸಲ್ಗ ಮರ್ದ ಚಮ್ಮಣಿವಟ್ಟೆ ಕುಮಾರಿಯೆಂದಿಟ್ಟಸದಿರೆನ್ನನೆಂದ (ಮರೀಪು. ೮-೧೩).
[ ಚೆಮ್ಮಣಿ + ಬಟ್ಟು$_1$ (<ಬಟ್ಟ$_1$) ]

**ಚೆಮ್ಮಾವುಗೆ** 'ಚಮ್ಮವಾವುಗೆ' ನೋ.

**ಚೆಮ್ಮಾಳಿಗೆ** (ನಾ). ಚಂದವಾದ ಮಾಳಿಗೆ: ಹಣ್ಣಡಿಕ್ಕಾಸುಮಂಚ ಕುಶಲದ ತಲೆಗಿಂಬು ಚೆಮ್ಮಾಳಿಗೆಯೊಳಗೆ ತೆನೆಯಾದ ರಾಜನವ ನಿಮ್ಮ ರಾಯರು ಬಿತ್ತಿ ಬೆಳೆದರು (ನಾಪದ. ೭೫). [ ಚೆಂ$_1$ + ಮಾಳಿಗೆ ]

**ಚೆಮ್ಮೂಗು** (ನಾ). (ಗಿಳಿಯ) ಕೆಂಪಾದ ಮೂಗು,-ಕೊಕ್ಕು : ದಾಳಿಂಬ ದೊಳ್ಹಣ್ಣನೊಡೆದು ಚೆಮ್ಮೂಗಿಟ್ಟು ಹೇಟಲಳವಡದ ಸಲ್ಲೀಲೆಯೊಳಗಳ ವಟ್ಟು (ಅದ್ಭುತ. ೩-೯೫). [ ಚೆಂ$_1$ + ಮೂಗು$_1$ ]

**ಚೆಮ್ಮೊಗ** (ನಾ). ಕೆಂಪಾದ ಮುಖ : ಏದುತ್ತೇದುತ್ತ ಸೇದೆನೀರಲ್ಲಿ ಮಿಂದ ಚೆಮ್ಮೊಗವನ್ನು ಚೇಲಾಂಚಲದಿಂದ ತೊಡೆದುಕೊಂಡು (ಮುಂಕೃಶ. ೬೪-೦೫).
[ ಚೆಂ$_1$ + ಮೊಗ ]

**ಚೆಯ್$_1$** 'ಚಯ್$_2$' ನೋ.

**ಚೆಯ್$_2$** 'ಸಯ್$_2$' ನೋ..

**ಚೆಯಿಪಲ್ಲ** (ನಾ). ಒಂದಂ ಮನೆತನದ ಹೆಸರಂ (?) : ಸುಸೌಖ್ಯಸಂಗಮಂ ಕೋಮಳಗಾತ್ರ ತಮ್ಮ ಮಲ್ಲಿರಾಯನು ಸ್ವರ್ಗಮನೆಯ್ದೆ ಚೆಯಿಪಲ್ಲದಾಮ ದೀಪಂ ಮದಶೋಭಿ[ತಮ್ಮಂ]ಮನೆ ಸಂಪರಿಸಿದು (ಕಇ. I, ೩೮-೯; 1408).
[ ? ]

**ಚೆಯ್ಗುಡು**, ಚೈಗುಡು (ಕ್ರಿ). ಲಲ್ಲೆಯಾಡು ; ಮುದ್ದಾಡು ; ಪಡೆಯದ ಬಳ್ಳಿಮೋ ಸುತನ ವಕ್ತ್ರಮನೀಕ್ಷಿಪ ಲಲ್ಲೆಗೆಯ್ವ ನಣ್ಪಡಿದನುರಾಗದಿಂ ನಗಿಸುವಳ್ಕಟೊಳೊಪ್ಪುವ ನೆತ್ತಿಯೊಡ್ಡಿ ಚೆಯ್ಗ[ಪಾಠಾಂ. ಚೈಗು]ಡುವ . . . ಸೈಪು ಸರೋರುಹೇಕ್ಷಣೆ (ವೃಷವಿ. ೨-೩೩). **ಚೈಗುಡು** : ಚೈಗುಡುವ ಪೆಣ್ಮಣಿಯ ಸೈಪಿಂಗೆ ತಿಳಿವಡೆಣೆಯುಂಟೆ (ಕರೀಟೀ. ೨-೨೮).
[ ಚೆಯ್$_1$ (<ಚಯ್$_2$) + ಕುಡು$_1$ (<ಕೊಡು$_1$) ]

**ಚೆಯ್ಮುಂಡಾಡು, ಚೈಮುಂಡಾಡು** (ಕ್ರಿ). ಮಂದ್ವಾಡು ; ಲಲ್ಲೆಯಾಡು: (ಕ). **ಚೈಮುಂಡಾಡು :** ತೆಗೆದು ತಕ್ಕೈಸಿ ಬೋಳೈಸಿ ಚೈಮುಂಡಾಡಿ ಒಗು ವಿ ಗೆ ಯ ಸುಖಸುಧಾನಂದದೊಳಗೋಲಾಡಿ (ರೇಣ್ಣಕೋ. ೧೪೪-೬) ; ದಾ ಎನುತ ಚೈಮುಂಡಾಡಿ [ಪಾಠಾಂ. ಕೈಮುದ್ದಾಡಿ] ಮುಂದಲೆ ವಿಡಿದು ಕುಣಿಕುಣಿದಾಡಿ ಸೌಖ್ಯವನೀಯುತಿರ್ದಳು ಮಾಯೆ ಮೋಹಿನಿಗೆ (ಪ್ರಭುಲೀ. ೩-೨೯) ; ಒ ಸೆ ದು ಚೈಮುಂಡಾಡುತಾಲಿಂಗಿಸಿದಳನುರಾಗ ಪ್ರಪಂಚದ ಕೊಸಱಿಕೆಯ ಕ ಳ ವ ಳ ದ ಪ್ರೇಮಜಲಧಿಯಲಿ ಮುಸ್ಕಳವ (ತೊರರಾ. ೬-೧೨-೩೦). [ ಚೆಯ್$_1$ (<ಚಯ್$_2$) + ಮುಂಡಾಡು ]

**ಚೆಯ್ಯಾಕ** (ನಾ). ಒಂದು ಬಗೆಯ ತಾಳವಾದ್ಯ : ಚೆಯ್ಯಾಕಗಳು ಚೆಯ್.. ಚೆಯ್ ಎಂದು ಕುಟ್ಟುತ್ತಿರುವುವು (ಕನ್ನಡಾ. ೧೪). [ ? ]

**ಚೆಯ್ಯಾಟ** 'ಚಯ್ಯಾಟ' ನೋ.

**ಚೆಯ್ಯಾಡು** 'ಚಯ್ಯಾಡು' ನೋ.

**ಚೆರಗ** 'ಚರುಗ' ನೋ.

**ಚೆರಪು** 'ಸೆಱಪು' ನೋ.

**ಚೆರಿಗೆ** 'ಚರಿಗೆ$_1$' ನೋ.

**ಚೆರೆ** 'ಚರೆ' ನೋ.

**ಚೆರೆಮದ್ದು** (ನಾ). ಸಿಡಿಮದ್ದು ; ಚರೆ : ಅದರಲ್ಲಿ ತುಂಬಿಸುವುದು ಮಾತ್ರ ಚೆರೆಮದ್ದು (ಚಟ್ಟಕೀ. ೩೮). [ ಚೆರೆ (<ಚರೆ) + ಮದ್ದು$_1$ (<ಮರ್ದು) ]

**ಚೆಲ್, ಚೆಲು** (ಗು). ಚೆಲುವಾದ ; ಸುಂದರವಾದ. 'ಚೆಲ್ಗದಿರ್', 'ಚೆಲ್ವಡೆ' ಪರಾ. **ಚೆಲು :** ಹುಣ್ಣಿವೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬). 'ಚೆಲು ಕಾಂತಿ' ಪರಾ. [ <ಚೆಲ್ವು$_1$ ]

**ಚೆಲಂಕು** 'ಚಲಂಕು' ನೋ.

**ಚೆಲಂಗು** 'ಚಲಂಕು' ನೋ.

**ಚೆಲದಿ** 'ಸೆಲಂದಿ' ನೋ.

**ಚೆಲಪಿಳೆರಾಯ** 'ಚೆಲ್ವಪಿಳ್ಳೆರಾಯ' ನೋ.

**ಚೆಲಬಾಗೆ** (ನಾ). ಒಂದು ಬಗೆಯ ಗಿಡ: ಚೆಲಬಾಗೆ. ಚೀಲ. ಎಲೆಸುಜ್ಜಲ ಬಾಗೆ (ವೃಕ್ಷಶಿ. ೪-೬೩). [ ? ]

**ಚೆಲವೆ** 'ಚಲುವೆ$_2$' ನೋ.

**ಚೆಲು** 'ಚೆಲ್' ನೋ.

**ಚೆಲುಕಾಂತಿ** (ನಾ). ಅಂದವಾದ ಕಾಂತಿ,–ಶೋಭೆ : ಕಣ್ಣದಿರಿನ ಚೆಲು ಕಾಂತಿ ಚೆಲ್ಲುವ ಸೆರೆಗಣ್ಣು (ಸಿಮ್ಮರ್ಕ. ೩). [ ಚೆಲು(<ಚೆಲ್) + ಕಾಂತಿ ]

**ಚೆಲುಗಬ್ಬ** (ನಾ). ಸುಂದರವಾದ ಕಾವ್ಯ : 'ಕಾಲೂರ ಚೆಲುವೆ' ಒಂದು ಚೆಲುಗಬ್ಬ (ಕಾಲೂರ. ೧೧ ಹರಳ). [ ಚೆಲು (<ಚೆಲ್) + ಕಬ್ಬ$_1$ ]

**ಚೆಲುಬಿಸಿಲು** (ನಾ). ಅಂದವಾದ ಬಿಸಿಲು : ಬಂಗಾರದ ಚೆಲುಬಿಸಿಲ ಕಿರೀಟದ ಶೃಂಗಾರದ ತಲೆ ಎತ್ತುವವನು (ಕಎಪು. ೩-೩). [ ಚೆಲು (<ಚೆಲ್) + ಬಿಸಿಲು (<ಬಿಸಿಲ್) ]

**ಚೆಲುವ$_1$** 'ಚೆಲ್ವ' ನೋ.

**ಚೆಲುವ$_2$** (ನಾ). ಒಂದು ಬಗೆಯ ಪಕ್ಷಿ: ಹಲುಬುವ ಗೌಜು ಕರ್ಕಟ ಕಪ್ಪುರಸೆಟ್ಟಿ ಚೆಲುವ ಬೆಳವ ಕುಕ್ಕುಟಗ (ಮೋಹತ. ೬-೦೭). 'ಸಾಳುವ' ಪರಾ. [ ? ]

**ಚೆಲುವಳಿ, ಚಲುವಳಿ** (ಕ್ರಿ). ಅಂದಗೆಡು ; ವಿಕಾರವಾಗು : ಹೊರಟು ಪಾಂಡ್ಯನ ಚೆ [ಪಾಠಾಂ. ಚ]ಲುವಳಿದು ನೆಟಿ ಹೊರಟು ನೆಲೆಗೊಂಡಿದ್ದ ಬೆನ್ನಿನ ಹೊರಟು ಹೋಗಲು ಮಿಥ್ಯೆಯಾಯಿತು (ಬಸವು. ೫೦-೩೦). **ಚಲುವಳಿ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೆಲುವು (<ಚೆಲ್ವು$_1$) + ಅೞಿ$_1$ (<ಅೞ್$_1$) ]

**ಚೆಲುವಾನ್, ಚೆಲಂವಾನ್** (ಕ್ರಿ). ಚೆಲುವನ್ನು ಹೊಂದು ; ಅಂದವನ್ನು ಪಡೆ: ಚೆಲುವಾಂತ ರಾಜಮಂದಿರಗಳೆಸೆದಿಹ ಕೇರಿಯುಲಿ ಮೆಲ್ಲನೈತಂದು (ವೆಂಕಾರಾ. ೩-೩-೩೩). **ಚೆಲುವಾನ್ :** ಮೋಹನದೆ ಇರ್ಪುದು ಕರ್ನಾಟಕ ರಾಜ್ಯ ಚೆಲುವಾಂತುಪೊಪ್ಪುವ ಸಕಲ ಸಂಭ್ರಮದೆ (ಕಂಸವಿ. ೨-೧೧). [ ಚೆಲುವು (<ಚೆಲ್ವು$_1$) + ಆನ್$_1$ ]

**ಚೆಲುವಿಕೆ** 'ಚೆಲ್ವಿಕೆ' ನೋ.

**ಚೆಲುವು** 'ಚೆಲ್ವು$_1$' ನೋ.

**ಚೆಲುವುತನ** (ನಾ). ಅಂದಗಾರಿಕೆ : ಸೊ ಗ ಸು ತ ನ ; ಚೆಲ್ವಿಕೆ : ಚೆಲುವುತನವಿರ್ದೊಡೇನು ಬೆರೆವೆಣ್ಗೆ (ರೇವಣ. ೬೬-೨೩). 'ಚೆಲ್ವತನ' ಪರಾ. [ ಚೆಲುವು (<ಚೆಲ್ವು$_1$) + – ತನ ]

**ಚೆಲುವೆ$_1$** 'ಚೆಲ್ವೆ' ನೋ.

**ಚೆಲುವೆ$_2$** 'ಚಲುವೆ$_2$' ನೋ.

**ಚೆಲುವೆಣ್ಣು** (ನಾ). ಸುಂದರಿ ; ಚೆಲುವೆ : ಅಣ್ಣಾವಳಿಯುದೆ ಬಣ್ಣಗುಂದದೆ ಹುಣ್ಣಿವೆಯ ಶಶಿಯಂತೆ ಚೆಲು ಚೆಲುವೆಣ್ಣುಗಳು ಸಹ ಬಂದನೆಂದೀಕ್ಷಿಸಿತು ಪುರಜನವು (ಸಾಳ್ವಭಾ. ೧೮-೯೬). [ ಚೆಲು (<ಚೆಲ್) + ಪೆಣ್ಣು (<ಪೆಣ್) ]

**ಚೆಲ್ಗದಿರ್** (ನಾ). ಸುಂದರವಾದ ತೆನೆ : ಉಬ್ಬಿದೊಡಲೇಂ ಪೊಲಂ ಚೆಲ್ಗದಿರ್ ಪಾಲ್ ಪಡೆದು ತುಂಬಿ ಬೆಳೆದಿದೆ (ಕಾಲೂರ. ೪೧-೩೧). [ ಚೆಲ್ + ಕದಿರ್$_1$ ]

**ಚೆಲ್ನಡೆ** (ನಾ). (?): ಸೋರ್ಮುಡಿ ಪದಿರ್ಮುಡಿ ಸೋಗೆಗೆ ಪುರ್ವು ಕೊರ್ವು ಚೆಲ್ನಡೆಗೆ ನಖಂ ಮುಖಂ ಪತಿಗೆ ತೋಳ್ ಕರವಾಳ್ ಮದನಂಗೆ ಕಾಂತೆಯಾ (ಪುಷ್ಪಪು. ೯-೯೩). [P ಇದು 'ಬೆಲ್ನಡೆ' ಎಂಬುದರ ಅಪ ಲಿಖಿತವಿರಬಹುದು.] [ ಚೆಲ್ + ನಡೆ$_2$ ]

**ಚೆಲ್ಲ$_1$** 'ಚಲ್ಲ$_1$' ನೋ.

**ಚೆಲ್ಲ$_2$** 'ಸೆಳ್ಳ' ನೋ.

**ಚೆಲ್ಲಂಗೆಯ್** (ಕ್ರಿ). ಸರಸವಾಡು ; ವಿನೋದವಮಾಡು : ಕಳವಾಳಿ ಯುಸೆದುವಲ್ಲಲ್ಲಿ ಚೆಲ್ಲಂಗೆಯ್ಯುತುಂ ಕಾಯ್ದು ವಲ್ಲವಿಯರಿಂ (ಪದ್ಮರಾ. ೮-೦೪). [ ಚೆಲ್ಲ$_1$ (<ಚಲ್ಲ$_1$) + ಕೆಯ್$_1$ ]

**ಚೆಲ್ಲಂದೋಱು** (ಕ್ರಿ). ವಿನೋದವನ್ನು ತೋರು ; ಸ ರ ಸ ವಾ ಡು : ಇಲ್ಲಿ ವಲವುಂ ಚೆಲ್ಲಂದೋಱುವೆಂ ನಿಲ್ಲಿಂ (ಜೀವಿ. ೬-೦೩೩ ವ). [ ಚೆಲ್ಲ$_1$ (<ಚಲ್ಲ$_1$) + ತೋಱು ]

**ಚೆಲ್ಲಂಬೀಱು** (ಕ್ರಿ). ವಿಲಾಸವನ್ನು ಬೀರು ; ಒಯ್ಯಾರ ಮಾಡು : ಚೆಲ್ಲಂಬೀಱುವವೊಲಿರ್ದುವವಯವವನಿತುಂ (ಧರ್ಮಾಮೃ. ೦೩-೦೦೨). [ ಚೆಲ್ಲ$_1$ (<ಚಲ್ಲ$_1$) + ಬೀಱು ]

**ಚೆಲ್ಲಂಬೆರಸು** 'ಚಲ್ಲಂಬೆರಸು' ನೋ.

**ಚೆಲ್ಲಕಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಕೇತನ** (ನಾ). ಒಂದು ಬಿರುದು: ವಿಜಯಲಕ್ಷ್ಮೀನಿವಾಸಿತ ಚೆಲ್ಲಕೇತನ ಶ್ರೀಮತ್ ಬಂಕೆಯರಸ (ಕಇ. I, ೦೩-೫ ; ?). 'ಚಲ್ಲಧ್ವಜ' ಪರಾ. [ ಚೆಲ್ಲ$_2$ + ಕೇತನ ]

**ಚೆಲ್ಲಗಣ್** 'ಚಲ್ಲಗಣ್' ನೋ.

**ಚೆಲ್ಲಗಣ್ಪೊಣರ್** (ನಾ). ವಿಲಾಸವನ್ನು ಬೀರುವ ಕಣ್ಣುಗಳ ಜೊತೆ : ತನ್ನಯ ಚೆಲ್ಲಗಣ್ಪೊಣರ ಲೀಲೆಯನೇಟಿಪ ಬಾಳೆಮೀನ್ಗಳಂ (ಪುಷ್ಪಪು. ೯-೯೯). [ ಚೆಲ್ಲಗಣ್ (<ಚಲ್ಲಗಣ್) + ಪೊಣರ್$_2$ ]

**ಚೆಲ್ಲಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲಗಾರ್ತಿ** 'ಚಲ್ಲಗಾರ್ತಿ' ನೋ.

**ಚೆಲ್ಲಣ** 'ಚಲ್ಲಣ' ನೋ.

**ಚೆಲ್ಲನೆ** (ಅ). ಶೀಘ್ರವಾಗಿ ; ಕೂಡಲೆ : ನೆಲ್ಲಿ ಬೆಳುಹೂಲಿಗಳ ಬೇರಿಲ್ಲಣ ಮುಳುಗೆಗ್ಗಿಯಿಂಬಿನಿತ್ತುಱ ಪುಡಿಯಂ ಚೆಲ್ಲನೆ ಮುಱಗಿನೊಳುಡಿದೊಡೆಲ್ಲಾ ಪಾವಿನ ವಿಷಕ್ಕೆ ತವಿಲದೆ ಸಾಲ್ಗುಂ(ಖಮುರ. ೭-೩೩). [ಚೆಲ್$_0$ + – ಅನೆ$_1$]

**ಚೆಲ್ಲಪಯ್ಯ** (ನಾ). ಒಬ್ಬಾತನ ಹೆಸರು : ಇವರುಭಯ ಸನ್ಮಥದೊಳ್ ಬರೆದೊಂ ಚೆಲ್ಲಪಯ್ಯಂ (ಎಕ. XI, ಹೊಳಲ್ಕೆ. ೩೦-೧೫ ; 964).

[ ಚೆಲ್ಲಪ$_0$ + ಅಯ್ಯ$_1$ ]

**ಚೆಲ್ಲಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲವತ್ತ** 'ಚಲ್ಲವತ್ತ' ನೋ.

**ಚೆಲ್ಲವಾಡು** 'ಚಲ್ಲವಾಡು' ನೋ.

**ಚೆಲ್ಲವೆರು** (ಕ್ರಿ). ವಿಲಾಸವನ್ನು ಪಡೆ ; ಸರಸದಿಂದ ಕೂಡಿರು : ಚೆಲ್ಲವೆತ್ತೋರನೋಟಕ್ಕೆಡೆಯಾಗೇಕಾಂತಮಂ ಪೇಳ್ವವೊಲೆ ಜನುಗುತಿರ್ದಪ್ಪೆ ಕರ್ಣಾಂತದೊಳ್ (ಶಾಕುಂತ. ೧೧-೨೪).

[ ಚೆಲ್ಲ$_1$ (<ಚಲ್ಲ$_1$) + ವೆರು (<ಪೆಱು$_1$) ]

**ಚೆಲ್ಲವೊತ್ತ** 'ಚಲ್ಲವತ್ತ' ನೋ.

**ಚೆಲ್ಲಾಟ$_1$** 'ಚಲ್ಲಾಟ$_1$' ನೋ.

**ಚೆಲ್ಲಾಟ$_2$** 'ಚಲ್ಲಾಟ$_2$' ನೋ.

**ಚೆಲ್ಲಾಡಿಸು** (ಕ್ರಿ). ಚದರಿಸು : ಇರಲಿ ನೋಡುವೆ, ಚಂಗಾಳ್ವರನ್ನು ಚೆಲ್ಲಾಡಿಸುತ್ತೇನೆ ಎಂದರು (ಚಂಗಾಳ್ವ. ೨೫).

[ ಚೆಲ್ಲಾಡು$_1$ (<ಚಲ್ಲಾಡು$_1$) + – ಇಸು$_3$ ]

**ಚೆಲ್ಲಾಡು$_1$** 'ಚಲ್ಲಾಡು$_1$' ನೋ.

**ಚೆಲ್ಲಾಡು$_2$** 'ಚಲ್ಲವಾಡು' ನೋ.

**ಚೆಲ್ಲಾಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿ** 'ಚಲ್ಲಿ$_3$' ನೋ.

**ಚೆಲ್ಲಿಪಿಲ್ಲಿ** 'ಚಲ್ಲಾಪಿಲ್ಲಿ' ನೋ.

**ಚೆಲ್ಲಿಸು$_1$** 'ಚಲ್ಲಿಸು$_1$' ನೋ.

**ಚೆಲ್ಲಿಸು$_2$** 'ಚಲ್ಲಿಸು$_2$' ನೋ.

**ಚೆಲ್ಲು$_1$** 'ಚಲ್ಲು$_1$' ನೋ.

**ಚೆಲ್ಲು$_2$** 'ಚಲ್ಲ$_1$' ನೋ.

**ಚೆಲ್ಲುತನ** 'ಚಲ್ಲುತನ' ನೋ.

**ಚೆಲ್ಲುಮಲ್ಲಿ**(ನಾ). ಗಾಂಭೀರ್ಯವಿಲ್ಲದವಳು ; ಚೆಲ್ಲಗಾತಿ : ಈ ಹುಡುಗಿ ಶುದ್ಧ ಚೆಲ್ಲುಮಲ್ಲಿ (ನಿಂಡಿಸ. ೭೦). [ ಚೆಲ್ಲು$_2$ (<ಚಲ್ಲ$_1$) + ಮಲ್ಲಿ ]

**ಚೆಲ್ಲೆ, ಚೆಲ್ಲೆ$_1$** (ನಾ). ೧. ಉದ್ದ ; ನೀಳ ; ದೀರ್ಘತೆ: "ಚೆ[ಪಾಠಾಂ. ಚ]ಲ್ಲೆಯನೆ ನಿಡಿದು" (ಕಬ್ಬಿಪಾಂ. ೫೦). (ಗು). ೨. ಉದ್ದವಾದ ; ದೀರ್ಘವಾದ. 'ಚೆಲ್ಲೆಗಣ್' ಪರಾ. ಚೆಲ್ಲೆ$_1$ : ೧. "ಚಲ್ಲೆಯನೆ ನಿಡಿದು" (ಕರ್ನಾಟ. ೫೦). 'ಚೆಲ್ಲೆಗಣ್' ಪರಾ.

**ಚೆಲ್ಲೆಗಣ್, ಚಲ್ಲೆಗಣ್** (ನಾ). ನೀಳವಾದ ಕಣ್ಣು ; ಅಗಲವಾದ ಕಣ್ಣು : ಬಂದರ್ ನಗೆಗಣ್ಣಳ ಚೆಲ್ಲೆಗಣ್ಣಳಲರ್ಗಣ್ಣಳ ವಿಡುಗಣ್ಣಳ ಬೆಡಂಗಿಯರ್ (ಜಗವಿ. ೪-೦೩೪) ; ಮಡದಿಯರ ಚೆಲ್ಲೆಗಣ್ಣಳವಿಂಚಿನಂತಿರಲು (ಸಂದಿಕೆ. ೦೫-೭೭) ; ನಲ್ಲರರೂಪಿಲ್ಲೆಂದಡೀಕ್ಷಿಸು ಚೆಲ್ಲೆಗಂಗಳಿಂ (ಬಸವು. ೪೦-೧೪). **ಚಲ್ಲೆಗಣ್** : ಚಲ್ಲೆಗಣ್ಣ ತುಱುಗೆವೆಯ ವಿಶಾಲಗಂಡಸ್ಥಳದ . . . ವಾರನಾರೀಕದಂಬಂ (ಧರ್ಮಾಮೃ. ೮-೧೯೩) ; ಆತನ ಚಲ್ಲೆಗಣ್ಣಳಾತನ ಬಗೆಗೊಳ್ವ ಪೆರ್ದೊಡೆಗಳ್ (ಜಗವಿ. ೧೧-೦೫) ; ಶ್ರುತಿಯುವತಿ ಸೂಸುವ ಚಲ್ಲೆಗಂಗಳ ಮೊನೆಗೆ ಮಿಸಲುಗುಡದ ಮೈಸಿರಿಯ (ಕುಮಾರ.ಅ. ೪-೪೦).

[ ಚೆಲ್ಲೆ + ಕಣ್ ]

**ಚೆಲ್ಲೆಗಾತಿ** 'ಚಲ್ಲಗಾರ್ತಿ' ನೋ.

**ಚೆಲ್ಲೆನೋಟ** 'ಚಲ್ಲೆನೋಟ' ನೋ.

**ಚೆಲ್ಲೆಯ** 'ಸೆಲ್ಲೆಹ' ನೋ.

**ಚೆಲ್ಲೆಹ** 'ಸೆಲ್ಲೆಹ' ನೋ.

**ಚೆಲ್ಲೆಹೋಗು** (ಕ್ರಿ.) ಚೆಲ್ಲಾಟಕ್ಕೆ ಹೋಗು (?) : ಚನ್ನ್ರವನದಲ್ಲಿ ಕೋಣಪ್ಪಚಟ್ಟಿಯೊಡನೆ ಚೆಲ್ಲೆಹೋಗಿಯಿದ್ದು ರಾತ್ರಿ ಕಾವಲಿದ್ದದ್ದಕ್ಕೆ (ಚಿಟ್ಟಿ.ಅ. ೫೭-೦). [ <ಚೆಲ್ಲೆ$_1$ + ಹೋಗು$_1$ (<ಪೋಗು$_1$) ]

**ಚೆಲ್ವ, ಚಲುವ, ಚಲ್ವ, ಚೆಲುವ$_1$** (ನಾ). ೧. ಅಂದವಾದಂದು ; ಸುಂದರವಾದುದು ; ಚೆನ್ನಾದುದು ; ಉತ್ತಮವಾದುದು : ಮತ್ತಾ ಪುರಂ ಚೆಲ್ವನಾಪುರಮಿಂಬಾಪುರವೊಳ್ಳಿತಾಪುರಂ (ಅನಂಪು. ೧-೧೨೦). ೨. ಅಂದ; ಚೆಲುವು; ಸೌಂದರ್ಯ: ಮೊದಲ ಪದಂ ನ್ಯೂನಾಕ್ಷರಂ . . . ಇದಱಿಂ ಛಂದೋಭಂಗಂ ಪದನಱಿದದನಿಂತು ಸಮಱಿ ಪೇೞ್ದೊಡೆ ಚೆಲ್ವಂ (ಕವಿರಾ. ೦-೯೨). ೩. ಸುಂದರನಾದವನು ; ಸ್ಫುರದ್ರೂಪಿ : ಚೆಲ್ವರ್ಕಳಭಿಜನರ್ಕಳ್ಗುಣಿಗಳ್ (ಕವಿರಾ. ೨-೨೭) ; ಪುಷ್ಪಸಂಕುಳದೊಳ್ ನೀನೇ ವಿಳಾಸಿಯೈ ಮಿಡಿಗಳೊಳ್ ನೀಂ ಚೆಲ್ವನೈ (ಆದಿಪು. ೧೧-೯೮) ; ಕರ ಚೆಲ್ವ[ಪಾಠಾಂ. ಚಲುವ] ಶ್ರೀಶೈಲಚನ್ನಮಲ್ಲಿಕಾರ್ಜುನನ ಸಜ್ಜನ ಗಂಡನ ಮಾಡಿಕೊಂಬೆ (ಮಹಾದೇ. ಬ. ೧೪೪-೩೨೮). ೪. ಒಬ್ಬಾತನ ಹೆಸರು : ಇಪ್ಪತ್ತಿತ್ತನಪ್ಪ ಪೊಲೊಕ್ಕುಪ್ರಿಯ ಚೆಲ್ವ . . . ಚೆಲ್ವ ಸಂಪನ್ನ (ಎಕ. IX, ೭೦-೪ ; ). ೮೦೦ **ಚಲುವ** : ೧. ನಿಮ್ಮ ಕರುಣವೇ ಕರ ಚಲುವ ಸಕಳೇಶ್ವರಯ್ಯ (ಸಮಾವ. ೫-೧೮) ; ಚ[ಪಾಠಾಂ. ಚೆ]ಲುವವಹ ಮೃದುತರ ವೆನಿಪ ಪರಿಮಳವ ಪೊಸಮಿಂಡಂಗಳಂ ಸವಿಗೊಳುತ (ಬಸವು. ೧೮-೨೯). ೩. ಚಲುವ [ಪಾಠಾಂ. ಸುಜನ]ರುಚಿಗೆ ರೂಪಿನ ಮದವಂ (ಸಮುಖ. ೪-೦೦೮) ; ಸಾವಿಲ್ಲದ ಕೇಡಿಲ್ಲದ ಚ[ಪಾಠಾಂ. ಚೆ]ಲುವಂಗಾನೊಲಿದೆನವ್ವಾ (ಮಹಾದೇ. ಬ. ೧೨೨-೨೮೩). (ಗು). ೫. ಅಂದವಾದ ; ಸೊಗಸಾದ ; ಉತ್ತಮವಾದ : ಬೇಱೊಂದು ನಾತೊಡೆ ಚಲುವ ಚಂದನದ ಪಡಿಯೆನಿಸದದೆ (ಬಸವು. ೨೭-೪) ; ಚಲುವ ವಧು ಕೇಳೆಲೆ ದುರಾತ್ಮಕರಳಿವರೇ ಯೆನ್ನನು (ಕುಮಾ.ವಿ. ಒರಿಕ. ೨-೩೦). **ಚಲ್ವ** : ೧. ಚ[ಪಾಠಾಂ. ಚೆ]ಲ್ವವಹ ಮೃದುವಪ್ಪ ಗಂಧಂ ನಿಲ್ಲ . . . ಬಿಲ್ವಪತ್ರಿಯನೆಯ್ದೆ ಕೊಯ್ದು (ಬಸವು. ೪೩-೨೭). ೩. ಚಲ್ವನೇ ಹರನಂ ಮೋಹಿಸಲಾಪ್ಪರ್ನೆತುವಧಿಕಂ ಶ್ರೀವಿಷ್ಣು ಭೂಪಾಳಕಂ (ಎಕ. V, ಬೇಲೂರು. ೫೮-೩೯; 1117). **ಚೆಲುವ$_1$** : ೧. ಪರಿಣಾಮದೊಳಗೆ ಮನದ ಪರಿಣಾಮವೆ ಚೆಲುವ ಸಂಗದೊಳಗೆ ಶರಣರ ಸಂಗವೆ ಚೆಲುವ (ಅವಚ. ೦೧೯-೫೩೮). ೩. ನೀಲೋತ್ಪಲನಿಭಾಂಗದ ಮುದ್ದುವದನದ ಚೆ[ಪಾಠಾಂ. ಚ]ಲುವ ದೇವರ ದೇವನೆಸೆದನು ಬಾಲ ಕೇಳಿಯಲಿ (ಕೃಷ್ಣರಾ. ೦-೪-೮೦) ; ಚೆಲುವರರೆಸನರ್ಚನಾದ್ರುವ್ಯವೆರಸಿ ನಿರ್ಮಳಯೋಗಿಪಥಕ್ಕೆದಿದನು (ಭರತ. ೩-೭). ೫. ಪೂಸಿದ ವಿಭೂತಿ ಕರ್ಯ್ಯೊಳು ಪಾತ್ರಯೇಕ ಜಡೆ ಭಾಸುರದ ಪುಲಿದೊವಲು ಲಾಕುಳಂ ಚೆಲುವ ನಡೆ (ತಿರುಕ. ದೀ. ೦೦-೧೦).

**ಚೆಲುವಾನೆಗಳ್ಳ**=ಒಳ್ಳೆಯ ಆನೆಗಳನ್ನು ಹಿಡಿಯುವವನು; ಒಂದು ಬಿರುದು : ಕೋಡೂಪ್ಪುರ್ರವರೇಶ್ವರಂ ಚೆಲುವಾನೆಗಳ್ಳಂ ವೈರಿ [ಹೃತ್ಶೆಲ್ಲಂ] (ಕಇಶ. ೦೨೭-೩೭-೯ ; 1107).

[ ದೇ.೩ ತಮಿ. ಚೆಲ್ವ ; ತೆಲು. ಚಲುವ, ಚೆಲ್ವ ]

**ಚೆಲ್ವಕಾಱ** (ನಾ). ಅಂದಗಾರ ; ಚೆಲುವ ; ಸುಂದರ : ಚೆಲ್ವಕಂಗಳ ಚೆಲ್ವ ಕಾಱ ನೋಡ ಬಂದೆ ನಿನ್ನ ಬಳಿಸಾರ ಬಂದೆ (ಕನಕ. ೧೨೫ ಪಲ್ಲವಿ).

[ ಚೆಲ್ವ + – ಕಾಱ ]

**ಚೆಲ್ವಡೆ** (ಕ್ರಿ). ೧. = ಚೆಲ್ವುವಡೆ : ತೆಳ್ವಡೆ ಕಡು ಚೆಲ್ವಡೆದುದು (ಅನಂಪು. ೭-೫). ೨. ಅಂದವನ್ನುಂಟು ಮಾಡು : ಕರಮ ಚೆಲ್ವಡೆದು ಸಿಂಗರಮಾಡಿ ವಾಮೇತರಹಸ್ತದೊಳು ಖಡ್ಗಮಿತ್ತು (ಶ್ರೀಪಾಂ. ೮-೩೮).

[ ಚೆಲ್ + ಪಡೆ$_1$ ]

**ಚೆಲ್ವತನ,** ಚಲುವತನ (ನಾ). ಅಂದಗಾರಿಕೆ ; ಸೊಗಸುಗಾರಿಕೆ ; ಚೆಲುವಿಕೆ : ಪುರುಷನ ಭಾವಂ, ಪುರುಷತನಂ, ಏವಂ ವೀರತನಂ, ಶೂರತನಂ, ಬಲ್ಲತನಂ, ಚೆಲ್ವತನಂ (ಶಬ್ದಾನು. ೪೩೦ ಪ್ರಯೋ). **ಚಲುವತನ :** ಚಲುವತನವನು ತೋಱಿ ರಾಮನನೊಲಿಸಲ್ಕೆದಿದ ಶೂರ್ಪಣಖಿಯನು ಕಲಿಸುಮಿತ್ರಾಸೂನು ಹಿಡಿದಿಳುಹಿದನು ನಾಸಿಕವ (ತೊರರಾ. ೩-೪ ಸೂಚನೆ). [ ಚೆಲ್ವ + – ತನ ]

**ಚೆಲ್ವನೆ, ಚಲುವನೆ** (ಗು). ಸುಂದರವಾದ; ಸೊಗಸಾದ: ಪೊನ್ನೋಲೆಯಂ ತೊಡಿಸಿ ಚೆಲ್ವನಪ್ಪ ಪೂಮಾಲೆಯಂ ಮುಡಿಯಿಸುತ್ತುಂ (ಧರ್ಮಾಮೃ. ೩-೯); ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮುಟ್ಟಿರೆ ಮುಗಿಲಂ (ಚಂದ್ರಪ್ರ. ೧-೧೧೪). **ಚಲುವನೆ :** ಹಲವನಱಿದಂತೊರೆದುದಕೆ ಕರಚ[ಪಾಠಾಂ. ಚೆ]ಲುವನಾಯಿತ್ತು (ಬಸವ. ೫೧-೯೧). [ ಚೆಲ್ವು$_1$ + – ಅನೆ$_2$(< –ಆನೆಯ್ಯ$_2$) ]

**ಚೆಲ್ವಪಿಳ್ಳೆ** (ನಾ). ಮುದ್ದಾದ ಮಗಂ ; ಸುಂದರನಾದ ಬಾಲಕ ; ಬಾಲಕೃಷ್ಣ : ಡಿಳ್ಳಿಯೊಳೊಂದುಗೂಡಿರೆ ದೇವರು ಚೆಲ್ವಪಿಳ್ಳೆ ಬಾರೆನೆ ನಿನ್ನ ಬೆಂಬಳಿಯ ಬರಲು (ಗೀತಗೋ. ೪೬). ಈ ತಮಿಳಿನಲ್ಲಿ ಈ ಪದವನ್ನು ವಿಶೇಷವಾಗಿ ಸ್ಕಂದನಿಗೆ ಅನ್ವಯಿಸುತ್ತಾರೆ. [ ←ತಮಿ. ಚೆಲ್ವಪ್ಪಿಳ್ಳೈ ]

**ಚೆಲ್ವಪಿಳ್ಳೆರಾಯ, ಚೆಳ್ಳೆಪಿಳ್ಳೆರಾಯಂ, ಚೆಲಪಿಳೆರಾಯಂ** (ನಾ). (ಮೇಲುಕೋಟೆಯ) ಚೆಲುವರಾಯಸ್ವಾಮಿ : ಉಲ್ಲಾಸದಿಂ ಯಾದವಾದ್ರಿಗೈದಿಸಿ ಚೆಲ್ವಪಿಳ್ಳೆರಾಯಗೆ ನೀ ಪಿತನೆಂದೆನಿಸಿದೆ(ಗೀತಗೋ. ೪೬). **ಚೆಳ್ಳೆಪಿಳ್ಳೆರಾಯ:** ಮೇಲ್‌ಕೋಟೆಯಲ್ಲಿ ಕೃಷ್ಣನ (ಚೆಳ್ಳೆಪಿಳ್ಳೆರಾಯನ) ಗುಡಿಯನ್ನು ಕಟ್ಟಿಸಿ (ಮುಂಬಯಿ. ೬-೦೧೬). **ಚೆಲಪಿಳೆರಾಯ :** ಶ್ರೀ ಚೆಲಪಿಳೆರಾಯರಿಗೆ ನಿತ್ಯಸಂದಿ ತಪ್ಪ ತಿರುನಾಳು ಚೆಱವು (ಎಕ. XIV, ಶ್ರೀರಂಗ. ೯೫-೨ ; 1585). [ ಚೆಲ್ವಪಿಳ್ಳೆ + ರಾಯ ]

**ಚೆಲ್ವರಾಯ, ಚಲುವರಾಯಂ** (ನಾ). ೧. = ಚೆಲ್ವಪಿಳ್ಳೆರಾಯಂ : ಈ ಪರಿಯಲಿ ಮೇಲುಕೋಟೆ ಇಂದಿರೆವರ . . . ತಾಪತ್ರಯಗಳ ಬಿಡಿಸಿ ಚೆಲ್ವರಾಯ ಗೋಪಾಲ ಮೂರುತಿ ಪುರಂದರವಿಠಲ (ಪುರಂದ. ೨-೯-೩). **ಚಲುವರಾಯ :** ೧. ಮೇಲುಕೋಟೆಯ ಚಲುವರಾಯಸ್ವಾಮಿಯ ಗುಡಿ ಸೊಗಸಾಗಿದೆ (ರೂಢಿ). ೨. ಚೆಲುವರಲ್ಲಿ ಮಿಗಿಲಾದವನು ; "ಕುಮಾರರಾಮ" (ಜಾನಕೋ. ೫೫). [ ಚೆಲ್ವ + ರಾಯ ]

**ಚೆಲ್ವಿಕೆ, ಚಲುವಿಕೆ, ಚಲ್ವಿಕೆ, ಚೆಲುವಿಕೆ** (ನಾ). ಅಂದ; ಚೆಲುವು ; ಸೊಗಸು ; ಸೌಂದರ್ಯ : ಎಱೆದೀವುದುಮಜನೀಕೆಯ ನೀತೋಳಂ ಗೊಲ್ದು ತಮ್ಮ ಚೆಲ್ವಿಕೆಯಂ ಕಂಡೆಳಲತೆಗಳ್ಪೂವುಗಳಂ ತಳೆದಿರ್ದುಂ ತಳೆಯದಿರ್ದುವಾ ಫಲಿನತೆಯಂ (ಧರ್ಮಾಮೃ. ೩-೦೫೩) ; ನೋಡು ಮೈಥಿಲಿ ವಿಶ್ವಕರ್ಮನು ಮಾಡಿಹುದ ಲಂಕಾತ್ರಿಕೂಟದ ಕೋಡುಗಲ್ಲಿನ ನಡುವೆ ಚೆಲ್ವಿಕೆಯಿಂದ ಮೆಱೆಯುವುದ (ಕೌಶಿರಾ. ೪೪-೦೬); ಅವನ ಚೆಲ್ವಿಕೆ ಗಂಡು ಪೆಣ್ಗಳ ಕಂಗಳ ಸೆಱೆವಿಡಿದಿಹುದು (ಭರತ. ೦-೫೦). **ಚಲುವಿಕೆ :** ಆವಳಿವಳೂರ್ವಶಿಯೊ ರಂಭೆಯೊ ದೇವವಧುಗಳ ಸುಳಿವೊ ತಾನೆನಲಾವ ಚ[ಪಾಠಾಂ. ಚೆ]ಲುವಿಕೆ ಶಿವಶಿವಾಯೆಂದರಸ ಬೆಱಗಾದ (ಕುಮಾವ್ಯಾ. ೫-೧೧) ; ಚಲುವಿಕೆಗೆ ಹಿಮವಂತಸುತೆಗಗ್ಗಳೆ . . . ಎನಗ್ಗಳೆಯೊ ಶಿವಶಿವ ಸೀತೆರೂಪಿನೊಳು (ತೊರರಾ. ೩-೭-೧೮) ; ಚಕ್ರೇಶ ಚಲುವಿಕೆಯಾಗಿ ಪೂಜೆಯ ಮಾಳ್ಪೆನೆಂದು ತನ್ನೊಳಗಿಂತು ನೆನೆದನು (ಭರತ. ೭೩-೨೪). **ಚಲ್ವಿಕೆ :** "ಚಲ್ವಿಕೆಯೆನಲ್ ಸೌಂದರ್ಯದೊಳು" (ಕಕರ. ೧೨೩). **ಚೆಲುವಿಕೆ :** ಮಿಸುನಿಗಳ ಗಂಟೆಯಿಂದೆಸೆವ ಚೆಲುವಿಕೆಯನವನೀಶ ನೋಡುತ ಬಂದನು ಹದಳಾ. ೪-೪೦) ; ಮಡದಿಯೊರ್ವಳು ಬಾಗಿಲಲಿ . . . ಕಡು ಚೆಲುವಿಕೆಯ ಬೀಱಿದಳು (ಕುಂನವಿ. ೬-೧೦೦). [ ಚೆಲ್ವು$_1$ + – ಇಕೆ ]

**ಚೆಲ್ವಿಕೆದಾಳು** (ಕ್ರಿ). ಸೌಂದರ್ಯವನ್ನು ಪಡೆ ; ಚೆಲುವಾಗು : ಸುಲೋಚನೆಯುಂ ಲಕ್ಷ್ಮೀಮತಿಯುಂ ಸಂಜನಿಯಿಸಿ ಪಿರಿದುಂ ಚೆಲ್ವಿಕೆದಾಳಿದರು (ಜಯನೃ. ೩-೧೯). [ ಚೆಲ್ವಿಕೆ + ತಾಳು$_1$(<ತಾಳ್$_1$) ]

**ಚೆಲ್ವಿಡಿ** (ಕ್ರಿ). ಚೆಲುವಿನಿಂದ ಕೂಡಿರು; ಸೌಂದರ್ಯದಿಂದ ತುಂಬಿರು : ಪಳಂಚಲೆವ ಪಂಚಜಡೆ ನೊಸಲೊಳೊಡಂಬಡುವರಳೆಲೆಯಿವಱಿಂ ಚೆಲ್ವಿಡಿದಿರ್ದುದು ಬಾಳಕೇಳಿ ಧರ್ಮಾತ್ಮಜನಾ (ಪಂಪಭಾ. ೨-೪) ; ಚೆಲ್ವಿಡಿದ ಸರೋರುಹಾಂತರಕೆ ಮಾನಿತ ಮಾನಸರಾಜಹಂಸಿಯುಂ ನಡೆಯಿಸುವಂತೆ (ಶಾಂತಿಪು. ೫-೧೧೩) ; ಮೃಡನಾಗಳ್ ಗಿರಿಜೆಯ ಚೆಲ್ವಿಡಿದ ಮೊಗಂಗಂಡು (ಗಿರಿಜ. ೧೦-೯೨). [ ಚೆಲ್ವು$_1$ + ಇಡಿ$_2$ ]

**ಚೆಲ್ವು$_1$, ಚಲುವು, ಚಲ್ವು, ಚೆಲುವು** (ನಾ). ೧. ಅಂದ ; ಚಂದ ; ಸೊಗಸು ; ಸೌಂದರ್ಯ : "ಚೆ[ಪಾಠಾಂ. ಚ]ಲ್ವೆಂಬುದಂದವೆನಿಕ್ಕು" (ಕಬ್ಬಿಗ. ೩೧) ; ಚೆ[ಪಾಠಾಂ. ಚ]ಲ್ವ ಪಾಂಗಱಿಯ[ದ]ಂತಿದನಿಂತಿರೆ ಪೇೞ್ಗೆ ವಿಕಲ್ಪಮಂ (ಕವಿರಾ. ೧-೧೩೫) ; ಚೆಲ್ವಿನಿಂ ದೇವಾಸುರರ್ಕಳಂ ಗೆಲ್ವರೂಪನೊಡೆಯಂ (ವರ್ಧಮಾ. ೫೩-೧೪) ; ಕೊಂಕಿದ ಕೊಂಕು ತದ್ವಿಷಯಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ (ಆದಿಪು. ೧-೬೦) ; ಇದಾರ ಪುಣ್ಯದ ಪುಂಜವಿದಾರ ಚೆಲ್ವಿನಂಕುರಂ(ನಂಬಿರ. ೨-೫೦). ೨. ಸುಂದರವಾದುದು ; ಮನೋಹರವಾದುದು : ಅೞಿ ಬಿರಿದಿರ್ದ ಜಾದಿಯೊಳೆ ಪಲ್ಮೊರೆಯುತ್ತಿರೆ . . . ಸಾರೆ ಚಕೋರಮಿಂದುಮಂಡಳಗಳಿತಾಮೃತಾಸವಮನುಂಡುಸಿರುತ್ತಿರೆ ಚೆಲ್ವು ಶಾರದಂ (ಪಂಪಭಾ. ೭-೭೦). **ಚಲುವು :** ೧. ಚ[ಪಾಠಾಂ. ಚೆ]ಲುವು ಮಿಗೆ ಪೂಜಾಪ್ರಬಂಧಗಳನಭಿನಯಿಸುವಂ (ಬಸವ. ೪೧-೨೨) ; ರಾಯನ ಚಲುವನೀಕ್ಷಿಸಿ ನಲಿದು ಕೊಂಡಾಡಿದರು ಮವಮೊಲಿದು (ನಳಚ. ೩-೧೬). **ಚಲ್ವು :** ೧. ಕಂಪಿನ ಕಾರಾಗಾರಮುಂ ಚ[ಪಾಠಾಂ. ಚೆ]ಲ್ವಿನ ಕುಲಗೃಹಮುಮಿರ್ಪಂತಿರ್ದ ವಸಂತಗೃಹಮಂ ಪೊಕ್ಕು (ಚಂದ್ರಪ್ರ. ೭-೯೫ ವ) ; ೨. ಮನ್ನೆಪೇಟದಿ ತೆಂಕ ನಿನ್ನ ದೇಗುಲ ಚಲ್ವು (ಎಕ. VIII, ನಗರ.೭೨-೪ ; ಸು. 800). **ಚೆಲುವು :** ೧. ಗಾನದೊಳು ವಿದ್ಯದೊಳು ಪ್ರಾಯದೊಳು ಚೆಲುವಿನೊಳು . . . ಪ್ರತಿಯಿಲ್ಲ(ಸಿದ್ಧರಾ. ೧-೨೪); ಲಲನೆಯೊಳು . . . ಚೆಲುವಿನೊಳು ದಶರಥಾತ್ಮಜನೊಳತಿ ಕಚ್ಚಿನೊಳು ಬಳುದಿನೊಳು ರಾಮವೆನಿಸಿಕ್ಕು(ಮಂಗರಾ. ೧೪೭-೪೦) ; ಉಸುರಿಲ್ಲದೊಡಲಿನ ಚೆಲುವಿನಂತಿರೆ ನಮ್ಮ ಬಲ (ಕುಮಾವ್ಯಾದ್ರೋ. ೯-೫೨). ೨. ಚೆಲುವೆನಿಸಿರ್ದೀ ಕುಸುಮಾವಳಿಯಂ ಕೊಯ್ದು ವನಿಸುತೆಯ ಕರತಳರಾಗಂ ಬಳಸಿದುದೆಂಬಿನ ಮಸೆದುವು . . . ಪಲ್ಲವ ಪ್ರಕರಂಗಳ್ (ಕಾದಂಪೂ.೦೦೮).

**ಚೆಲ್ವಾಗು, ಚಲುವಾಗು** = ಸುಂದರವಾಗು; ಮನೋಹರವಾಗು : ತಂತಮ್ಮ ಠಾಣಾಂತರಂಗಳೊಳಿರ್ದಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ (ಆದಿಪು. ೧೧-೯೬) : ಸಾಸನಮನ್ನಿದೆ ಚೆಲ್ವಾಗೆ ಸಾಮಿಯಣ್ಣಂ ಬರೆದೋಂ (ಸೌಇಇ. XI-I, ೯೧-೫೭ ; 969) ; ಪೃಥುಳೋನ್ನತಕರಾಂಬುಜಯುಗಂ ಚ[ಪಾಠಾಂ. ಚೆ]ಲುವಾಯಿತಯ್ಯಂಗೆ(ಬಸವ. ೩೮-೪೦). [ ದೇ.ಔ ತಮಿ. ಚೆಲ್ವು : ತೆಲು. ಚೆಲುವು, ಚೆಲ್ವು ]

**ಚೆಲ್ವು$_2$** (ನಾ). ಒಂದು ಬಗೆಯ ಮರ : ಪಾವಕನ ಶರೀರದಂತಿರುಡಿಸುಂಕಿಗನಂತಿರೆ ಚೆಲ್ವು ಸಂದ ಲಾವಕನ ನಿಯೋಗದಂತೊಗೆದ ಬೊಬ್ಬುಲಿ ಪರ್ವಿದಟವ್ಯಮದ್ಭುತಂ (ಪುಣ್ಯಾಸ್ರ. ೮-೯೪). [ ? ]

**ಚೆಲ್ವುದೋಱು**(ಕ್ರಿ). ಅಂದವನ್ನು ಕಾಣಿಸು; ಸೊಗಸನ್ನುಂಟುಮಾಡು: ಆಮ್ರಭೂಷಿತಕಮನಾಮ್ರಪಕ್ವಫಳದೊಳ್ ಶುಕಕಾಮಿನಿ ಚೆಲ್ವುದೋಱಿದಳ್ (ಆದಿಪು. ೦೦-೯೯). [ ಚೆಲ್ವು$_1$ + ತೋಱು ]

**ಚೆಲ್ವುವಡೆ** (ಕ್ರಿ). ಅಂದವನ್ನು ಪಡೆ ; ಸುಂದರವಾಗು : ರಂಗ ನಿನ್ನಯ ಚೆಲ್ವುವಡೆದೊಳುದೊಡೆಯ ಬೆಡಂಗಿಯ ಬಗೆಯ ಬಣ್ಣವೊಡೆ ಕಂಗಳಿಂ ಕೇಳ್ವಂಗರಿದು ಗಡ (ಕಕಸಾಂ. ೧-೪). [ ಚೆಲ್ವು$_1$ + ವಡೆ$_1$ ]

**ಚೆಲ್ವುವರಿ** (ಕ್ರಿ). ೧. ಅಂದವಾಗಿ ಓಡು,-ಮುಂದುವರಿ : ಇನ್ನಪ್ಪ ಚಕ್ರವರ್ತಿಗಳನ್ನೀ ಮಾರ್ಗದೊಳೆ ನಡೆಯಿಮೆಂದಱುವವೋಲ್ ತನ್ನ ರಥಾಂಗಾಹತಿಯಿಂ ಮುನ್ನಮೆ ನೀರ್ ತಳರೆ ಚೆಲ್ವುವರಿದತ್ತು ರಥಂ (ಆದಿಪು.೧೨-೬೪). ೨. ಚೆಲುವನ್ನು ಹರಡಂ,-ಸೂಸು : ಗುರುವಿಕೆಯನಾಂತ ಸಾಂತಂಗಂ ಚೆಲ್ವುವರಿವ [ಪಾಠಾಂ. ಚೆಲ್ವರಿವಪ್ಪ] ಬಲ್ಲವ್ವೆಗವೊಪ್ಪುವ ಲೆಕ್ಕಿಗರರಸನೊಗೆದನೆಸೆವಾಂಡಯ್ಯಂ (ಕಲ್ಪಿಶಾ. ೧೧). [ ಚೆಲ್ವು$_1$ + ಪರಿ$_2$ ]

**ಚೆಲ್ವುವೀಱು** (ಕ್ರಿ). ಅಂದವನ್ನು ಸೂಸು; ಸೊಗಸನ್ನು ಬೀರು: ನಿರವಧಿ ಸೌಷ್ಠವದಿಂ ತನ್ನಿರವಧಿಕಂ ಚೆಲ್ವುವೀಱೆ (ಜಗವಿ. ೧೦-೪೭)

[ ಚೆಲ್ವು$_1$ + ಬೀಱು ]

**ಚೆಲ್ವುವೆಱು**, ಚಲುವೆಱು (ಕ್ರಿ). ಅಂದವನ್ನು ಪಡೆ ; ಸುಂದರವಾಗು : ವಿನಯಮಾವೆಡೆಗಾವುದು ಚೆಲ್ವುವೆತ್ತು ರಂಜಿಸುಗುಮದರ್ಕದಂ ಸಮಱೆ ನಿಚ್ಚಲುಮಾ ಬಿಯಮಾ ವಿನೋದಮಾ ಪಸದನಮಾ ವಿಳಾಸದೊಳೊಡಂಬಡೆ ಭೋಗಿಸಿದಂ ಗುಣಾರ್ಣವಂ (ಪಂಪಭಾ. ೧೪-೩೮) ; ಪೊಗಮಿಸೆ ಬಾರದಿರ್ದುಂ ಸೊಗಯಿಪ ತನ್ನುನಿಕುಮಾರವದನಾಬ್ಜಂ ದಿಟ್ಟಿಗೆ ಚೆಲ್ವುವೆತ್ತು ಮಱದುಂಬಿಗಳೆಱಗದ ಕನಕಕಮಲಮಂ ನೆನೆಯಿಸುಗುಂ (ಕಾದಂಪೂ. ೭೩೪). **ಚಲುವೆಱು :** ನೋಟಂ ನೋಟದೊಳು ಸಲೆ ಹೊಕ್ಕು ಯಿಬ್ಬರ ಕಂಗಳೆರಡೆರಡಕ್ಕಜಂ ಮಿಗೆ ಏಕವಾಗಿಂತೆಯ್ದೆ ಚ[ಪಾಠಾಂ. ಚೆ]ಲುವೆತ್ತು (ಬಸವು. ೧೮-೮೩). [ ಚೆಲ್ವು$_1$ + ಪೆಱು$_1$ ]

**ಚೆಲ್ವೆ**, ಚಲುವೆ$_1$, ಚಲ್ವೆ, ಚೆಲುವೆ$_1$ (ನಾ). ಸುಂದರಿ; ರೂಪವತಿ: ಅವರಿರ್ವರ್ಗಂ ಪ್ರಿಯನಂದನನೆ ಗುಣಗಣಾಭರಣೆಯನಂತಮತಿಯೆಂಬಳ್ ಆ ಚೆಲ್ವೆ (ಧರ್ಮಾಮೃ. ೩-೭) ; ಚೆಂದುಟಿಯ ಚೆಲ್ವೆ (ಉದ್ಭಟ. ೫-೫೩) ; ಮಂಡಾಲದೊಳು ಚೆಲ್ವೆ ಕೊರವಂಜೀ ನಿನ್ನ ಗಂಡನಿನ್ನೆಂತೆಂದ್ರೋನೆ (ಕೃಪಿಡಿ. ೧೩೨). **ಚಲುವೆ$_1$:** ತಾನೇ ಚಲುವೆಯೆಂದು ಅವಳು ತಿಳಿದಿದ್ದಾಳೆ (ರಂಗಗೊೀ. ೧೭೩). **ಚಲ್ವೆ:** ಇವನ ವಧು ಚಲ್ವೆ ರೂಪಿನೊಳ್ (ಸಮಹ. ೫-೨೮). **ಚೆಲುವೆ$_1$:** ಚಾರುಚರಣದಿಂದ ಚೆಲುವೆ ಗಂಗೆಯ ಪಡೆದ (ಪುರಂದ. ೦-೨೩೩-೨) ; ಚೆಲುವೆಗೆ ತಕ್ಕ ಸಿಂಗರವ ನಿರ್ಮಿಸಿ (ಮೋಹತ. ೨೩-೫೩) ; ಚೆಗರಿಗಂಗಳ ಚೆಲುವೆ ಚೆದರಿ ನಿಂತಾಳೆ (ಜನಗೀ. ೦೦೦-೧). [ ಚೆಲ್ವು$_1$ + - ಎ$_2$ ]

**ಚೆಲ್ವೆಸೆ** (ಕ್ರಿ). ಚೆನ್ನಾಗಿ ಶೋಭಿಸು : ಕತ್ತುರಿಯ . . . ಸೊವಡೊಳ್ ಕಡುಸೊರ್ಕು ಸೊರ್ಕಿಗಾವರಿಸುವ ತುಂಬಿ ಚೆಲ್ವೆಸೆಯೆ ಕಣ್ಗೆಸೆದತ್ತು ಖಗೇಂದ್ರನೋಲಗಂ (ಆದಿಪು. ೨-೫) ; ತೊಳಪ್ಪ ಕನ್ನವುರಂ ಚೆಲ್ವೆಸದಿರೆ (ಕಾವ್ಯಾವ. ೪೪೦); (ಶಮದ. ೬೫ ಪ್ರಯೋ. ನೋ). [ ಚೆಲ್ವು$_1$ + ಎಸೆ$_2$ ]

**ಚೆಲ್ವೆಳವೆ** (ನಾ). ಅಂದವಾದ ಹೊಸಪ್ರಾಯಂ: ಚೆಲ್ವೆಳವೆ ಬಾವನ್ನದಿಂದೆದೆ ತುಂಬುತಿಹುದು (ಕಾಲೂರ. ೦೪೮-೩೨೪).

[ ಚೆಲ್ವು$_1$ + ಎಳವೆ (<ಎಳಮೆ$_1$) ]

**ಚೆಲ್ವೆಳಸು** (ನಾ). ಸೊಂಪಾಗಿ ಬೆಳೆದ ಬೆಳೆ : "ಪಿರಿದಾಗಿ ಬೆಳೆದ ಬೆಳೆಯೆಂದುಱೆ ಚೆಲ್ವೆಳಸನ್ನಲಕ್ಕು" (ಕವಿಕಂ. ೨೫೭). [ ಚೆಲ್ + ಬೆಳಸು$_2$ ]

**ಚೆಲ್ವೆಱು** (ಕ್ರಿ). = ಚೆಲ್ವುವೆಱು : ಮುತ್ತಿನಕ್ಷತೆಯುಟ್ಟು ದೇವಿ ನೃಪನ ಚೆಲ್ವೆತ್ತು ನೋಡಲು ಕಣ್ಣಕಾಂತಿ ಬಿತ್ತರಿಸಿದುದು (ಶ್ರೀಪಾಲ. ೧೦-೧೦೦).

[ ಚೆಲ್ + ಪೆಱು$_1$ ]

**ಚೆಲ್ವೊಂದು** (ಕ್ರಿ). ಸೌಂದರ್ಯವು ಒಟ್ಟುಗೂಡು,-ಸೇರು : ಸುಡುಮ್ಮೆಯ ಚೆಲ್ವೊಂದಿ ಬಿಡದಿರ್ದೊಡಂ ಬಾಡಿ (ಕಾಲೂರ. ೧೭೭-೩೭೦).

[ಚೆಲ್ವು$_1$ + ಒಂದು$_1$ ]

**ಚೆಲ್ವೊಗೆ** (ಕ್ರಿ). ಚೆಲುವಾಗು; ಶೋಭಿಸಂ: ಚೆಲ್ವೊಗೆದ ಮಲ್ಲಿಗೆಗಾರ್ತಿಯನೆ ಸುತ್ತಿ ಬರ್ಪಾಕೆ (ಕಲ್ಪಿಕೃ. ೨೭). [ ಚೆಲ್ವು$_1$ + ಒಗೆ$_1$ ]

**ಚೆಲ್ವೊಡರಿಸು** (ಕ್ರಿ). ಚೆಲುವನ್ನುಂಟುಮಾಡು ; ಅಂದಗೊಳಿಸು : ಕಡುಗಾಡಿ ನಾಡೆಯುಂ ಕಣ್ಗೆಡಱೆ ಮನಂ ಬೆರ್ಚೆ ಸುತನ ಬರ್ಪಂದುಂ ಚೆಲ್ವೊಡರಿಸಿ ಬಲ್ಪಿಡಿವಿಡಿದುದು ತೊಡರ್ದಳಿಪಿ ನೋಟ್ಟ ನೋಟಕರ್ಕಳ ಮನಮಂ (ಕಾವ್ಯಾವ. ೨೦೦) ; ಸಮಂತೊಡನೆ ಮಹೇಶನಂ ಪ್ರಿಯದೊಳಪ್ಪಿದರ್ ಗಿರಿಜಾತೆಯಾಹ ಚೆಲ್ವೊಡರಿಸಿತಾಹ ದಂಪತಿಗಳಾಹ ಜಗತ್ಪ್ರಭುಗಳ್ ಸುಭಾಗ್ಯರೆನ್ನೊಡೆಯರೆನುತ್ತೆ ಕೆಯ್ಮುಗಿದು ಬಣ್ಣಿಸುತಿರ್ದಳತಿ ಪ್ರಮೋದದಿಂ (ಗಿರಿಕ. ೧೦-೧೦೩).

[ ಚೆಲ್ವು$_1$ + ಒಡರಿಸು ]

**ಚೆಲ್ವೊರೆ** (ಕ್ರಿ). ಸೊಗಸಿನಿಂದ ತುಂಬು ; ಸುಂದರವಾಗಿರು : ನೀಱನ ಚೆಲ್ವೊರೆದ ಸವಿದುಟಿಯನೊಲವಿಂ ಬರೆ ಪೀರ್ದುವು ನೋಡುವಿಟ್ಟಿಗಾರ್ತಿಯ ಕಣ್ಗಳ್ (ಕಲ್ಪಿಶಾ. ೩೪೯). [ ಚೆಲ್ + ಪೊರೆ$_2$ ]

**ಚೆಲ್ವೋಡು** (ಕ್ರಿ). ಸೌಂದರ್ಯ ಹೋಗು ; ಅಂದಗೆಡು : ಬಾಡಿದ ಬಾಸಿಗವುಡಿ ಚೆಲ್ವೋಡಿದ ದಿವ್ಯಾಂಬರಂ ಮನಂಗೊಳೆ (ಆದಿಪು. ೩-೪೦).

[ ಚೆಲ್ವು$_1$ + ಓಡು$_1$ ]

**ಚೆವಕೊಳ್ಗಂಡ** (ನಾ). ಒಂದು ಬಿರುದು : ಮಹಾರಾಜನೊಳ್ಪಾದಿ ಸತ್ತ ಕೆಲ್ಲಗಾವುಣ್ಡ ಚಾವೊಣ್ನಚೂಡಮಣಿ ಚೆವಕೊಳ್ಗಣ್ಡ ಸಮರೈಕಪಾತ್ರ (ಮ್ಯಆರಿ. ೧೯೩೨,೩೭-೮ ; ಸು. ೯೫೦). [ ? ]

**ಚೆವು**, ಚವ$_1$, ಚವು$_2$, ಚೆವ್ವು, ಚೌವು (ನಾ). ಮುತ್ತುರತ್ನಗಳನ್ನು ತೂಗುವ ಒಂದು ಬಗೆಯ ತೂಕದ ಪ್ರಮಾಣ,-ತೂಕಕಟ್ಟಳೆ : ಹವಳಕ್ಕೆ ಕಣಜುಗಟ್ಟಳೆ ಭುವನದೊಳಂ ಚೆವು ಅಡಹು ಮುತ್ತಿನ ಮಣಿಗಂ (ವ್ಯವಹಾ. ಅನು. ೧, ೩-೧೫). **ಚವ$_1$ :** ಚವದ ಮೇಲೆ ಕಿಮ್ಮತ್ತು ಆಗತಕ್ಕ ಜೀನಸಗಳು . . . ೧೦೦ ದೋಕಡೆ . . . ೧ ಚವ ಮತ್ತು ಟಕ್ಕಾ (ಮುಂಬವ್ಯಾ. ೧೩೭). **ಚವು$_2$ :** ಮುತ್ತಿನ ಚವು ಕತ್ತಿಗೆ ತಿಳಿದೀತೇ (ಗಾದೆ). **ಚೆವ್ವು :** ಮುತ್ತಿನ ಮಣಿಗಳಿಗೆ ತೂಕಕಟ್ಟಳೆ ಚೆವ್ವುಗಳೆಂದುವುಂಟು (ವ್ಯವಹಾ. ಅನುಬಂಧ. ೧, ೦-೪ ಟೀಕು ). **ಚೌವು :** ಚೌವ ಗುಣಿಸುವ ವಿವರಾ : ಮಣಿಯೇಸು ತೂಕವಿದೆಯೆಂಬದ ನೋಡಿಕೊಂಡು ಆ ತೂಕವನು ೪ ಪಾಲು ಮಾಡಿ . . . ಅದರಲಿ ಮಣಿ ಎಷ್ಟುಂಟು ಅಷ್ಟರಿಂ ಭಾಗಿಸಲು ಬಂದದ್ದು ಚೌವು (ಭಾಸ್ಕರ. ೭೮-೨).

[ ದೇ.॥ ತಮಿ. ಚೆವ್ವು; ತೆಲು. ಚವಿ. / ಮರಾ. ಚವ್ ]

**ಚೆವ್ವು** 'ಚೆವು' ನೋ.

**ಚೆವ್ವೆಣ್ಣೆ** (ನಾ). ಮಗು ಹುಟ್ಟಿದೊಡನೆ, ಜೇನುತುಪ್ಪದೊಂದಿಗೆ ಬೆರಸಿ ಚೀಪಿಸುವ ಹರಳೆಣ್ಣೆ,-ಕೈಯೆಣ್ಣೆ,-ಔಡಲೆಣ್ಣೆ : ಚೆವ್ವಣ್ಣೆ : ಚೆವ್ವು ತಮಿಳಿನಲ್ಲಿ ಕೆಂಪು; ಮಗು ಹುಟ್ಟಿದೊಡನೆ ಕುಡಿಸುವ ಕೈಯೆಣ್ಣೆ (ನಮ್ಮನು. ೧೦೭). [ ←ತಮಿ. ಚೆವ್ವೆಣ್ಣೈ ]

**ಚೆಳ** (ನಾ). ಒಂದು ಕ್ಷುದ್ರದೇವತೆಯ ಹೆಸರು : ಮಾರಿ, ಮಸಣಿ, ಬಳಹರಿ, ಚೌಡಿ, ಚೆಳ ಇತ್ಯಾದಯೋಪಿ ಶಬ್ದಾಃ ಉಪಸಂಗ್ರಾಹ್ಯಾಃ (ಶಬ್ದಾನು. ೧೦೫ ವ್ಯಾಖ್ಯಾ). [ ? ]

**ಚೆಳ್ಳ** 'ಸೆಳ್ಳ' ನೋ.

**ಚೆಳ್ಳಕಾಯಿ** 'ಚೆಳ್ಳಗಾಯ್' ನೋ.

**ಚೆಳ್ಳಮರ** (ನಾ). ಒಂದು ಬಗೆಯ ಮರ; ಚಳ್ಳೆಮರ ; ಶ್ಲೇಷ್ಮಾತಕ : ತೆಂಕಣ (ಲು) ಪುತ್ತು ಚೆಳ್ಳ (ಚೀಳ) ಮರದಿಂ ಬಡಗಲ್ ಪ (ಪ್ಪ)ಗಳಾದವಾಱು ಕೆಯ್ಯನಾದಂ ಕುಟುಮಾಟ್ಟಿದು (ಎಟ್ಟಿಮ. ೧೧-೨೩).

[ ಚೆಳ್ಳ (<ಸೆಳ್ಳ) + ಮರ$_1$ ]

**ಚೆಳ್ಳು$_1$** 'ಸೆಳ್ಳ' ನೋ.

**ಚೆಳ್ಳು$_2$** 'ಸೆಳ್ಳು$_1$' ನೋ.

**ಚೆಳ್ಳುಗುರ್** 'ಸೆಳ್ಳುಗುರ್ ನೋ.

**ಚೆಳ್ಳುಗುರು** 'ಸೆಳ್ಳುಗುರ್' ನೋ.

**ಚೆಳ್ಳೆ** 'ಸೆಳ್ಳ' ನೋ.

**ಚೆಳ್ಳಿಗಾಯ್**, ಚಲ್ಲಗಾಯ್, ಚೆಳ್ಳಿಕಾಯಿ (ನಾ). ಉಪ್ಪಿನಕಾಯಿಗೆ ಉಪಯೋಗಿಸುವ ಚಳ್ಳೆಮರದ ಕಾಯಿ : ಗಾವಟೆ ಚೆಲ್ಲವತ್ತ ವರ ಮಾದಲವಂಬಟೆ ಚಿಲ್ಲು ಚೆಳ್ಳಿಗಾಯ್ [ಪಾಠಾಂ. ಚೆಳ್ಳಿ ಚಿಲ್ಲಕಾಯ್] ಮಾವಿನ ಕಾಯ್ಗಳೊಪ್ಪುವರಗಪ್ಪುರ ಮಾಗುಳಿಗಳ್ (ಸೂಕ್ತಿಸು. ೧೧-೮೭) ; (ನಳಚಂ. ೪೬೨ ನೋ). **ಚಲ್ಲಗಾಯ್** : ಒಪ್ಪುಲಿ ಚ[ಪಾಠಾಂ. ಚೆ]ಲ್ಲಗಾಯ್ ಮೆಣಸು ಮಾಗುಳಿವೇವರ್ೞಳಿಯಲ್ಲವೇಲೆ . . . ಆದಿಯಾದುಪ್ಪಿನಕಾಯ್ಗಳಂ ಮಗಮಗಿಪ್ಪುವನಿಕ್ಕಿದನಬ್ಬ ಪತ್ರದೊಳ್ (ಲೀಲಾವ. ೫-೭೧). **ಚೆಳ್ಳಿಕಾಯಿ** : "ದ್ವಿಕುತ್ಸಿತಃ–ಚೆಳ್ಳಿಕಾಯಿ" (ಒಷಧಿ. ೭೬). [ಚೆಳ್ಳಿ (<ಸೆಳ್ಳಿ)+ಕಾಯ್$_4$]

**ಚೆಜಪು** 'ಸೆಜಪು' ನೋ.

**ಚೇಗಿ** 'ಚೇಗೆ' ನೋ.

**ಚೇಗು$_1$** 'ತೇಗಂ$_4$' ನೋ.

**ಚೇಗು$_2$** (ನಾ). ೧. ಗಿಡ ಮರಗಳ ಮಧ್ಯದ ತಿರುಳು ; ಕೆಚ್ಚು : "ಕೆಚ್ಚು ತಂತುವಾಯಕ್ರಿಯಾಯಾಂ (ನೇಯ್ಗೆಯ ಕೆಲಸ) ತರುಸಾರೇ ಚ (ಚೇಗು)" (ಕಮುಥಾ) : "ಸಾರಃ ಮಜ್ಜಾ – ೨ ಗಿಡದಲ್ಲಿರುವ ಚೇಗಿನ ಹೆಸರು ; ಚೇಗು ಅಂದರೆ ಬಲಿತಿರುವಿಕೆ" (ಸಿದ್ಧಾಂತಿ. ೯೯). ೨. ಸಾರ ; ಸತ್ತ್ವ ; ಗಟ್ಟಿಯಾದುದು ; ಸತ್ತ್ವಯುತವಾದುದು: ಕೂತದ್ದು ಕುಟ್ಟೆ, ಗೇದದ್ದು ಚೇಗು (ಗಾದೆ). 'ಚೇಗೇರು' ಪರಾ. ೩. ಪಾತ್ರೆಯ ತಳಕ್ಕೆ ಅಂಟಿಕೊಂಡಿರುವ ಕಪ್ಪು ವಸ್ತು : ಈ ಬಾಣಲೆಯ ತಳಕ್ಕೆ ಚೇಗು ಏರಿಬಿಟ್ಟಿದೆ. ಉಜ್ಜಲಿಕ್ಕೆ ಆಗುವುದಿಲ್ಲ (ರೂಢಿ). ೪. ಒಂದು ಬಗೆಯ ಹಲ್ಲು (?) : ಆ ವಿಶಾಲವಾದ ಹಣೆಯಂಚಿನ ಹುಬ್ಬುಗಳು ಚೇಗಿನಂತೆ ಬಳೆದು ಪುಷ್ಟವಾಗಿ ಇಳಿದುಬಿದ್ದು ಕಣ್ಣಗಡ್ಡವಾಗುತ್ತಿದ್ದ ಕಾರಣ . . . ಎತ್ತಿಕಟ್ಟಿರುತ್ತಿದ್ದನು (ಸವತಿ. ೫೨). 'ಚೇಗಂಗಡ್ಡೆ' ಪರಾ.

[ದೇ.೫ ತಮಿ. ಚೇಗು, ಚೇಗ; ತೆಲು. ಚೇಗ, ಚೇವ]

**ಚೇಗು$_3$** 'ಚೇಗೆ' ನೋ.

**ಚೇಗುಗಡ್ಡೆ** (ನಾ). ಒಂದು ಬಗೆಯ ಮೂಲಿಕೆ : ಚೇಗುಗಡ್ಡೆ, ಅಚೂರ ಮುಳ್ಳು (ಮೃಷಿಗಿ. ೭೭-೦೫೭೪). [ಚೇಗು$_2$ + ಗಡ್ಡೆ]

**ಚೇಗೆ**, ಚಾಗೆ, ಚೇಗಿ, ಚೇಗು$_3$, ಛೇಗಿ, ಛೇಗೆ (ನಾ). ಕೇಡು ; ಭಂಗ ; ನಷ್ಟ ; ನಾಶ : ಆಗಿಗೆ ಮನಗೊಡದೆ ಚೇಗೆಗೆ ದುಃಖಿತನಾಗದೆ ಕಂಡ ಕಂಡವರಲ್ಲಿ ಬಂಡುಗೆಲಿಯದೆ (ಪೋಲಿಮೂ. ೦೧೯-೪೬೭) ; ಆಗುಮಾಡಿದ ಸುಕೃತವಂ ನೆಱೆ ಚೇಗೆಯಾಗಲು ಬಗೆದೆ ಶಿವಶಿವ (ಬಸಪು. ೨೪-೨೫) : ಆಗು ಹೋಗು ಚೇಗೆಗಳೆಂಬ ಕುಳಿ ತೆವರು ನೋಡಾ (ಸಿದ್ಧವ. ೧೮೧–೫೪೮) : ಮಹೇಶ್ವರನ ತಿರುಪಿನೊಳುರು ಭುಜೋದ್ಭೂತ ವಾಯುವಿಂದೆ ಚೇಗೆಯಾದುವು [ಪಾಠಾಂ. ಡೋಗಿಯಾದಂ] ಚರಾಚರವು (ಕಲಪು. ೧೨-೨೦). 'ಆಗುಚೇಗೆ' ಪರಾ. **ಚಾಗೆ** : ಭಕ್ತಂಗೆ ಆಗೂ ಇಲ್ಲ ಚಾಗೆ[ಪಾಠಾಂ. ಚೇಗೆ]ಯೂ ಇಲ್ಲ (ಚನ್ನವ.ಶ. ೬೩೩-೦೯೦೮). **ಚೇಗಿ**: 'ಆಗುಂಚೇಗಿ' ಪರಾ. **ಚೇಗು$_3$**: ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯಾ ತನಗಾದ ಆಗೇನು ಅವರಿಗಾದ ಚೇಗೇನು (ಬಸವ. ೨೪೮). **ಛೇಗಿ**: ಈಗ ಬಹುವಿಧ ದುರ್ನಿಮಿತ್ತಗಳಾಗುತಿದೆ ನಿಜಪತಿಯನಿಂದೇಕಗಲಿದೆನೊ ತಾನು ಛೇಗಿಯಾಗದೆ ಬಿಡದು ಬಱಿದೇ ಹೋಗದೆನ್ನಯ ಬಯಕೆ (ಉತ್ತರಾ. ೨೯-೩೫). **ಛೇಗೆ** : ಆಗಿಗೆ ಮುಯ್ಯಾಂತು ಛೇಗೆಗೆ ಹಲುಬುತ್ತ ಸುಖದುಃಖವೆಂಬ ಉಭಯವ ಸರಿಗಾಣದೆ (ಬಿಲೇಶ್ವ. ೪೭) : ಆಗಾವುದು ಬಿಡದಿದ್ದಡೆ ಛೇಗೆಯಾವುದು (ಕಲ್ಯಾಣಾಂ. ೪೯); ಆಗಿಗೆ ಮುಯ್ಯಾಂತು ಛೇ[ಪಾಠಾಂ. ಚೇ]ಗೆಗೆ ಮನಗುಂದುವವನಲ್ಲ (ಅಂಬಿವ. ೩೮೭-೧೪೫೩). 'ಆಗುಛೇಗೆ' ಪರಾ.

**ಚೇಗೆಮಾಡು** = ಕೆಡಿಸು ; ಬಿಟ್ಟುಬಿಡು : ಸುವ್ರತವನು ಚೇಗೆಮಾಡದೆ ಪಲಕಾಲ ತಪಸುಗೆಯ್ದು ನೀಗಿದನಾ ಮುನಿ ತನುವ (ನೇಮಿಸಂ. ೭-೭೮).

[<ಪ್ರಾ. ಛೇಅ./ಸಂ. ಛೇದ]

**ಚೇಗೇರು** (ಕ್ರಿ). ಸತ್ತ್ವ ಹೆಚ್ಚಾಗು; ಹುರಿಗೊಳ್ಳು: ಕಷ್ಟಗಳು ಹೆಚ್ಚಿದಷ್ಟೂ ಅವನ ಕೆಚ್ಚೆದೆಯು ಚೇಗೇರಿತು (ಪ್ರಕುಹ. ೪೦).

[ಚೇಗು$_2$ + ಏರು$_1$ (<ಏಱ್$_1$)]

**ಚೇಗೊಡತಿಸೊಪ್ಪು** (ನಾ). ಒಂದು ಬಗೆಯ ಸೊಪ್ಪು : ಆಡುಸೋಗೆ ಸೊಪ್ಪಿನ ರಸ, ಬಳ್ಳಿಸೊಂಡೆ ಕಷಾಯ . . . ಚೇಗೊಡತಿಸೊಪ್ಪಿನ ರಸ (ಸಕವ್ಯ. ೨೨೭). [ಚೇಗೊಡತಿ$_0$ + ಸೊಪ್ಪು$_3$]

**ಚೇಟ** (ನಾ). ಸೇವಕ ; ಆಳು ; ದಾಸ : "ಚೇಟಃ, ಭುಜಿಷ್ಯಃ, ಕಿಂಕರಃ– ಈ ೩ ಭಂಟು" (ಹಲಾಯು. ೬೦-೨೦೦) ; ನಿಮ್ಮ ಚೇಟರು ಇಬ್ಬರೊಳಗೆ ಕಲಹ ಇದೆ (ದೀವಮು. ೧೧೧). [ಸಂ.]

**ಚೇಟಕ** (ನಾ). = ಚೇಟ. [ಸಂ.]

**ಚೇಟಿ** (ನಾ). ಹೆಣ್ಣಾಳು ; ದಾಸಿ ; ಸೇವಕಿ : "ಚೇಟೀ ಸಮಾಪ್ಯೆ ದಾಸಿ ದಲಕ್ಕುಂ" (ವಸ್ತುಕೋ. ೫೪-೦೨) : ದ್ರೌಪದಿಯ ಕೆಲದೊಳಿರ್ದ ಸುಂದರ ಮಾಲೆಯೆಂಬ ಚೇಟಿ (ಪಂಪಭಾ. ೩-೫೩ ವ): ದಾಸೋಹವನಲರ್ಚುವ ಚೇಟಿ (ಬಸಪು. ೬-೦೦) ; ಪಾಡಿನೊಳ್ಪಂ ಕೇಳ್ದು ಅಗಣಿತ ಚೇಟಿಯರ್ ನೆರೆದರ್ (ಅದ್ಭುತ. ೧೯-೧೫). [ಸಂ. ಚೇಟೀ]

**ಚೇಟಿಕೆ** (ನಾ). = ಚೇಟಿ : ಮುಂದೆ ಬಂದೇಱಿದ ಚೆನಗನಡಿಯ ಚೇಟಿಕೆ (ಪಂಪಭಾ. ೯-೦೦೦). [ಸಂ. ಚೇಟಿಕಾ]

**ಚೇಡಿ** 'ಚೇಡೆ' ನೋ.

**ಚೇಡಿಸು** 'ಛೇಡಿಸು' ನೋ.

**ಚೇಡುಬೀರ** (ನಾ). ಒಂದು ಬಗೆಯ ಗಿಡ: ಸಿತ್ತುಂಡೆ ಗಿಡ, ಸಿಡಿಗೋಲಿ, ಹನುಮಂತ ತೊಪ್ಪಲು, ಚೇಡುಬೀರ (ಮೃಷಿಗಿ. ೨೧-೩೯೩). [?]

**ಚೇಡೆ, ಚೇಡಿ** (ನಾ). ೧. ಮಾಟ, ಮಂದ್ದು ಮುಂತಾದ ಕ್ಷುದ್ರ ಕರ್ಮಗಳ ಅಧಿದೇವತೆ ; ಬೇತಾಳ : (೬). **ಚೇಡಿ** : ೨. ಮಾಟ ; ಮಂತ್ರ ; ಯಕ್ಷಿಣೀವಿದ್ಯೆ : ಸುಡುಗಾಡ ಸಿದ್ಧನ ನಾಡಾವದು ಗೊತ್ತಿಲ್ಲ ಓಡಿಸಿ ಒಯ್ದಾನ ಹಸಗೂಸು ಅವನಂಥ ಚೇಡಿ ಬಲ್ಲವನಿರಬೇಕು (ಸಿದ್ಧಪು. ೪-೫೮). [←ಮರಾ. ಚೇಡಾ]

**ಚೇಣ, ಚಾಣ, ಚಾನ** (ನಾ). ಕಲ್ಲು ಮೊದಲಾದುವನ್ನು ಒಡೆಯುವ ಉಳಿ; ಟಂಕ: ಜನರ ನೆರವಿಯೆಂಬ ಚೇಣದಿಂ ದೇವಗತಿಯೆಂಬ ನಿಗಳಮಂ ಛೇದಿಸದೆ (ಧರ್ಮಾಮೃ. ೭-೯೭) : ಉಕ್ಕಿನ ಘಟ್ಟಿಯ ಮೃತ್ತಿಕೆಯ ಚೇಣ ಕಡಿಯಿತ್ತು (ಬಿಲ್ಹಣಾ. ೬೦-೨೨೫) : ಉಕ್ಕಿನ ಬಲು ಚೇಣವೊ ಸಿಡಿದ ಕಾಡುಹುಗಳೊ (ಸೂಬಸೋ. ೭-೪೩). **ಚಾಣ** : ಅಱೆಯಂ ಸೀಳುವೊಡಾನೆ ಮೆಟ್ಟಲಹುದೇ ಚಾಣಂಗಳಿಂದಲ್ಲವೇ (ಸೋಮೇಶ. ೭೬); ಕೇವಲ ಕಲ್ಲಾಗಿದ್ದ ಅದನ್ನು ಯಾವ ಚಾಣವು ಕಲೆಯ ನೆಲೆವನೆ ಮಾಡಲಿತ್ತೋ (ಶಾಬಲ. ೯೯). **ಚಾನ** : ದಾನವೇಂದರೆ ತಲೆಯ ಚಾನದಲಿ ಕಡಿದಂತೆ (ಸರ್ವಜ್ಞ. ೬೭೨) : ಆ ಕಲ್ಲುಗಳನ್ನು ದೊಡ್ಡ ಸುತ್ತಿಗೆಯಿಂದ ಚಾನಗಳಿಂದ . . . ಒಡೆದು (ಕೃಷಿಪ್ರ. ೪೦). [ದೇ.೫ ತುಳು. ಚೇಣು, ಚೇನು ; ತೆಲು. ಸೇನ]

**ಚೇಣಪಟ್ಟಸು** (ನಾ). ಜಟ್ಟಿಕಾಳಗದಲ್ಲಿ ಒಂದು ವರಸೆ : ಸಂದ ಕೊಕ್ಕಸ ಗುಂಡು ಗೋಣಿಯು ವಿಂದೆಪಟ್ಟಸು ಚೇಣಪಟ್ಟಸುವೆಂದೆನಿಪ ವಿಂದಾಣದಲಿ ಕಾದಿದರು ಜಟ್ಟಿಗಳೂ (ಸಾಳ್ವಭಾ. ೨೨-೭೨). [?]

**ಚೇಣ್$_1$** (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಗಟ್ಟಿಯಾದ ಹುಲ್ಲು : ಚೇಣೀಯ ಹುಲ್ಲು ತುಳಕೊಂಡು ಮಾದೇವ ಈದ್ದುಲಿಯ ಬೇಟೆ ಹೊರಟಾನೊ (ಹಳ್ಳಿಯು. ೩೦); ನದಿಯ ದಡದಲ್ಲಿದ್ದ ಚೇಣೆಯಲ್ಲಿ ಹಕ್ಕಿಗಳು ಕುಳಿತಿದ್ದವು (ಮುಡಿಸ. ೫೦); ಚೇಣೆಯ ಚಾಪೆಗಳು ಸಾಲದುದರಿಂದ ಹಜಾರದ ಒಂದು ಕಡೆಗೆ . . . ಈಚಲು ಚಾಪೆಗಳನ್ನು ಹಾಸಿದ್ದರು (ಗರುಡಾ. ೭೨). ೨. ಒಂದು ಬಗೆಯ ಕಬ್ಬು. 'ಚೇಣೆಕಬ್ಬು' ಪರಾ. [?]

**ಚೇಣ್$_2$** 'ಕೇಣ್$_2$' ನೋ.

**ಚೇಣಿ₃** (ನಾ). (?) : ಹತ್ತೂ್ರಕಾಲೇಣಿ ಮುತ್ತಿನ ಚೇಣಿ ಮತ್ತಾ್ರಗೆ ಹೂವ ಕುಯ್ಯಾಯೊ ನೀನು (ಹಳ್ಳಿಹಾ. ೫೦). [? ]

**ಚೇಣಿಕಬ್ಬು** (ನಾ). ಒಂದು ಬಗೆಯ ಕಬ್ಬು : ರಸದಾಳಿ ಮತ್ತು ಪಟ್ಟಾಪಟ್ಟಿ ಮತ್ತು ಚೇಣಿಕಬ್ಬಲ್ಲದೆ ಈಚೆಗೆ ಅನೇಕ ತಳಿ ಕಬ್ಬುಗಳನ್ನು ಪ್ರಚಾರಕ್ಕೆ ತಂದಿರುತ್ತಾರೆ (ವ್ಯವಮ. ೫೦). [ ಚೇಣಿ₁ + ಕಬ್ಬು₂ (<ಕರ್ವು₁) ]

**ಚೇಣಿಮಂದಲಿಗೆ** (ನಾ). ಚೇಣಿಹುಲ್ಲಿನಿಂದ ಮಾಡಿದ ಚಾಪೆ: ಒಳಗಿನಿಂದ ಒಂದು ಚೇಣಿಮಂದಲಿಗೆಯನ್ನು ತಂದು ಜಗುಲಿಯ ಮೇಲೆ ಹಾಕಿದಳು (ಕಂಗಾಳ್ಯ. ೯೯). [ ಚೇಣಿ₁ + ಮಂದಲಿಗೆ ]

**ಚೇತ** (ನಾ). ಮನಸ್ಸು ; ಚೇತಸ್ಸು : "ಮನಮಾಶಯಮಂತಃಕರಣ ನಾಮಮಂದೆ ಚಿತ್ತಮಂತೆ ಚೇತಂ ಸ್ವಾಂತಂ ಮನದಿಡುವಟಿಯೊಳೆ ವರ್ತಿಕುಂ" (ವಸ್ತುಕೋ. ೬೦-೨೫) ; ಸುಚರಿತ್ರತೆಯಿಂ ಸಮನಿಸಂದ ಸೌಷ್ಠವಂ ಚೇತದೊಳುಣ್ಮೆ ಕನ್ನೆ ತಳೆದಳ್ ಕಿಲಿಕಿಂಚಿತಭಾವಚೇಷ್ಟೆಯಂ (ಚಂದ್ರಪ್ರ. ೫-೦೨೨) ; ಪ್ರಭುದೇವದೇವನನಿಶಂ ರಾಜಿರ್ಕೆ ಮಚ್ಚೇತದೊಳ್ (ಚಮ್ಮಿಶ್ರ. ೦-೦೧). [ <ಸಂ. ಚೇತಸ್ ]

**ಚೇತಕಿ** (ನಾ). ಅಳಲೆಕಾಯಿ ; ಹರೀತಕಿ : "ಚೇತಕಿ ಶಿವ ಹೈಮವತಿ ಹರೀತಕಿ" (ವಸ್ತುಕೋ. ೩೫-೦೨). [ ಸಂ. ಚೇತಕೀ ]

**ಚೇತನ** (ಗು). ೧. ಇಂದ್ರಿಯಗ್ರಹಣಶಕ್ತಿಯುಳ್ಳ ; ಪ್ರಜ್ಞೆಯುಳ್ಳ. ೨. ಜೀವಂತವಾದ ; ಸಜೀವವಾದ. 'ಚೇತನ ಪ್ರತಿಮೆ' ಪರಾ. ೩. ಸ್ಪಷ್ಟವಾದ ; ಪ್ರಮುಖವಾದ ; ಉತ್ತಮವಾದ. (ನಾ). ೪. ಮನಸ್ಸು ; ಬುದ್ಧಿ ; ಪ್ರಜ್ಞೆ : ಅವನಾಡುವ ಮಾತುಗಳನ್ನು ಆ ನಿರ್ಮಲ ಚೇತನದಿಂದ ಹೊರಬರುವ ಅನುಭವಪೂರಿತ . . . ಮಾತುಗಳನ್ನು ಸುಮ್ಮನೆ ಆಲಿಸಬೇಕು (ಕುಕುಸಂ. ೦೦೦). ೫. ಆತ್ಮ ; ಜೀವ : "ಕ್ಷೇತ್ರಜ್ಞಂ ಚೇತನನಾತ್ಮಂ" (ವಸ್ತುಕೋ. ೦೮-೩) ; ಓ ನನ್ನ ಚೇತನ ಆಗು ನೀ ಅನಿಕೇತನ (ಅನಿಕೇ. ೬೦-೦). ೬. ಪರಮಾತ್ಮ : ವಿಶ್ವಮಂ ಸರ್ವತ್ರ ತುಂಬಿ ದಂತರ್ಯಾಮಿ ಚೇತನಂ ತಾ ಪ್ರೇಮಾತ್ಮವಾಗಿರ್ಪುದು (ಶ್ರೀರಾಮಾ. ೧೦-೨೯೯). ೭. ಚೈತನ್ಯವುಳ್ಳದು ; ಜೀವಿ ; ಪ್ರಾಣಿ. ೮. ಚಟುವಟಿಕೆ ; ಚೈತನ್ಯ. ೯. ಶಕ್ತಿ ; ಸಾಮರ್ಥ್ಯ : ನಷ್ಟಹೊಂದಿದ ಮಿದುಳಿನ ಭಾಗದಿಂದ ಚೇತನವನ್ನು ಪಡೆಯುವ ದೇಹದ ಅಂಗಗಳು ನಿಸ್ತೇಜವಾಗಿ ನಿರುಪಯೋಗವಾಗಬಹುದು (ಕುಸೋತಸಂ. ೦೦೦) ; ನಿಮ್ಮನ್ನು ಮಾತ್ರವಲ್ಲ ನಿಮ್ಮ ಹೆಂಡತಿ ಮಕ್ಕಳನ್ನು ಕೂಡಾ ಸಾಕುವಷ್ಟು ಚೇತನ ನನಗಿದೆ (ಛ್ರಮೂಹ.೦೯೬). [ ಸಂ. ]

**ಚೇತನಂಗುಂದು, ಚೇತನಗುಂದು** (ಕ್ರಿ). ಶಕ್ತಿಗುಂದು ; ಚೈತನ್ಯ ಉಡುಗು : ಅರುಮರುಹಿನಿಂ ಚೇತನಂಗುಂದಿ ಭ್ರಮಣೆಯೊಳೊಂದಿ ಮಲಗುತ್ತೆ (ನವಕೋ. ೦೫-೬). **ಚೇತನಗುಂದು:** ಅಹಿನಾಥ ಮೂರ್ಛೆಯ ನಾಂತ ತಳಕೆ ಚೇತನಗುಂದಿ ದಿಗ್ದಂತಿ ಮಂಡಿಸಲಾಗ ಭೂತಲವೆಲ್ಲ ಕಂಪಿಸಿತು (ಮೋಹತ. ೩೮-೬೨). [ ಚೇತನ + ಕುಂದು₁ ]

**ಚೇತನಂಗೆಡು, ಚೇತನಗಿಡು** (ಕ್ರಿ). ಚೈತನ್ಯವಿಲ್ಲದಂತಾಗು ; ಜಡವಾಗು ; ಪ್ರಜ್ಞೆತಪ್ಪು ; ಶಕ್ತಿಗುಂದು : ನಿಂದಳಯ್ ಪ್ರಕೃತಿ ಕಾಂ ಜನಕಜಾ ಹೃತ್ಕೃತಿಯನಲ್ ಪ್ರತಿಯನಲ್ ಚೇತನಂಗೆಟ್ಟು ! (ಶ್ರೀರಾಮಾ. ೨೯೯-೪೩೯). **ಚೇತನಗಿಡು :** ಚೇತನಗಿಡದೆ ಮುಷ್ಟಿಕನಾಗಿ ನಿಲ್ಲೆಂದಾತನ ಕರೆದು ದೊಬ್ಬಿಚಿದ (ಮೋಹತ. ೦೨-೮೩). [ ಚೇತನ + ಕೆಡು₁ ]

**ಚೇತನಂಬಡೆ, ಚೇತನವಡೆ** (ಕ್ರಿ). ಚೇತರಿಸಿಕೊಳ್ಳು ; ಚೈತನ್ಯವನ್ನು ಪಡೆ : ಆತನರಮನೆವೊಗಲ್ ಬಸವನುಸಿರಾಡಿದುದು . . . ಸವಿಪಾಪಕೆ ಬರಲ್ ತನು ಚೇತನಂಬಡೆದುದು (ಚಬಪು. ೬-೨೬). **ಚೇತನವಡೆ:** ದನುಜನ ಮಾಯೆಯೊಂದಿನಿಸು ಬೇಗದಿನೊರ್ಮೆಯ ಮಾಯಮಾಗೆ ಚೇತನ[ಪಾಠಾಂ. ನೆ]ವಡೆದು (ಚಂದ್ರಪ್ರ. ೫-೬). [ ಚೇತನ + ಪಡೆ₁ ]

**ಚೇತನಗಿಡಿಸು** (ಕ್ರಿ). ಚೈತನ್ಯಗುಂದಿಸು ; ಶಕ್ತಿಗುಂದಿಸು : ಚೇತನಗಿಡಿಸಿ ಕೊಲ್ಲುತೆ ಕೊಂಡು ಪೋಪೆಮದೂತರ ನೋಡುತೆಯ್ದಿದರ್ (ಮೋಹತ. ೨೯-೧೪). [ ಚೇತನ + ಕಿಡಿಸು (<ಕೆಡಿಸು) ]

**ಚೇತನಗಿಡು** 'ಚೇತನಂಗೆಡು' ನೋ.

**ಚೇತನಗುಂದು** 'ಚೇತನಂಗುಂದು' ನೋ.

**ಚೇತನತ್ವ** (ನಾ). ಚೈತನ್ಯ : ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು (ಹಿಂದಸಾ. ೨೩೯). [ ಸಂ. ]

**ಚೇತನದಪ್ಪು** (ಕ್ರಿ). ಚೈತನ್ಯ ಉಡುಗು ; ಮೈಮರೆ ; ಜಡವಾಗು : ಅಸಹಾಯರಾಗಿದ್ದ ಗಂಡಂದಿರನ್ನು ದ್ರೌಪದಿಯು ನೋಡುತ್ತ ಚೇತನದಪ್ಪಿ ದಂತಿರಲು (ವಚಭಾ. ೯೮). [ ಚೇತನ + ತಪ್ಪು₋₁ ]

**ಚೇತನದಾಯಕ** (ಗು). ೧. ಚೈತನ್ಯವನ್ನು ಕೊಡುವ ; ಉತ್ಸಾಹಕರವಾದ. (ನಾ). ೨. ಚೈತನ್ಯವನ್ನು ಕೊಡುವಂತಹುದು : ಇವು ಆಹಾರ ವಸ್ತುಗಳಲ್ಲ ; ಚೇತನದಾಯಕಗಳು (ಆಡುಶಾ. ೫೦). [ ಸಂ. ]

**ಚೇತನಧರ್ಮ** (ನಾ). ಚೈತನ್ಯವುಳ್ಳ ಅಥವಾ ಸಜೀವವಾದ ವಸ್ತುಗಳ ಗುಣ : ಅನುಗತಮಪ್ಪಂತಿರೆ ಚೇತನಧರ್ಮಂಗಳನಚೇತನಾರ್ಥಂಗಳೊಳಂ . . . ವಿವರ್ಣಿಪರರೆಬರ್ (ಕಾವ್ಯಾವ. ೯೩೨). [ ಚೇತನ + ಧರ್ಮ ]

**ಚೇತನಪ್ರತಿಮೆ** (ನಾ). ಸಜೀವವಾದ ಬೊಂಬೆ,-ಪ್ರತಿಮೆ : ಶ್ರೀತರುಣ ವಲ್ಲಭಗೆ ಜೀವರು ಚೇತನಪ್ರತಿಮೆಗಳು (ಹರಿಕ. ೨೪-೧೬). [ ಚೇತನ + ಪ್ರತಿಮೆ ]

**ಚೇತನಭಾವ** (ನಾ). ಚೈತನ್ಯವಿರುವಿಕೆ : ತನಮಿಕೆಯುಮೆಂದಿವುಂ ಚೇತನ ಭಾವದೊಳಕ್ಕುಂ (ಕಾವ್ಯಾವ. ೩೪೩) ; ಪ್ರಕಟಂ ಚೇತನಭಾವದೊಳಿಕೆ ತನಮುಮಯಕ್ಕುಂ (ಕಮಪ. ೨೦೦). [ ಚೇತನ + ಭಾವ₁ ]

**ಚೇತನವಡೆ** 'ಚೇತನಂಬಡೆ' ನೋ.

**ಚೇತನಾಚೇತನ** (ಗು). ಸಜೀವವಾದ ಮತ್ತು ನಿರ್ಜೀವವಾದ : ಮರ, ಗಿಡು, ಬಳ್ಳಿ . . . ಕನ್ನಡಿ, ಕಳಸ ಇಂತಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮ (ಕಮಪ. ೯೦ ವೃತ್ತಿ) ; ಚೇತನಾಚೇತನಾತ್ಮಕವಾದ ಪ್ರಪಂಚದಲ್ಲಿ ಇಪ್ಪತ್ತೈದು ತತ್ತ್ವಗಳಿವೆ (ಭಾರದ. ೧೨೫). [ ಚೇತನ + ಅಚೇತನ ]

**ಚೇತನಿಸು** (ಕ್ರಿ). ಚೈತನ್ಯವನ್ನು ಪಡೆ ; ಜೀವತುಂಬಿಕೊಳ್ಳು : ಚಿತ್ರದ ಬೊಂಬೆಯ ಹಾಗೆ ಎಲ್ಲಕ್ಕೆ ಅತ್ತನಿಂದ ಚೇತನಿಸಿ ನಡೆವುತ್ತಿವೆ (ಮರೀವ. ೨೬೬-೩೦). [ ಚೇತನ + -ಇಸು₃ ]

**ಚೇತನೆ** (ನಾ). ೧. ಪ್ರಜ್ಞೆ ; ಎಚ್ಚರ : ಎಷ್ಟೋ ಹೊತ್ತಿನವರೆಗೆ ಪ್ರಯತ್ನಿಸಿದ ಬಳಿಕ ಫಾಕ್ಸನಿಗೆ ತುಸು ಚೇತನೆಯುಂಟಾಯಿತು (ಅಂಬಿಕ. ೧೬೦). 'ಚೇತನೆಗೊಳ್', 'ಚೇತನೆವಡೆ' ಪರಾ. ೨. ಗ್ರಹಣಶಕ್ತಿ ; ಬುದ್ಧಿ ; ಆಲೋಚನಾ ಸಾಮರ್ಥ್ಯ. ೩. ಚೈತನ್ಯ ; ಶಕ್ತಿ : "ಚೇತನೆ ಚೈತನ್ಯಂ" (ವಸ್ತುಕೋ. ೧೦೫-೨೬) ; ವಿಷಧಕ್ಕಿಂತಲೂ ಅವಳ ಹಸನ್ಮುಖದ ಅಂತಃಕರಣದ ನೋಟವೇ ಅವರಲ್ಲಿ ಚೇತನೆಯನ್ನು ತುಂಬುತ್ತಿತ್ತು (ಕುಂಕುಮ. ೮೪). [ ಸಂ. ಚೇತನಾ ]

**ಚೇತನೆಗೊಳ್** (ಕ್ರಿ). ಚೈತನ್ಯವನ್ನು ಪಡೆ ; ಜಾಗ್ರತವಾಗು : ಯಾವನನು ಕಂಡೊಡನೆ ಜೀವ ಚೇತನೆಗೊಂಡು ಭಾವಭಕ್ತಿಯ ಪುಷ್ಪವಾಯಿತವನ ಸನದಿ (ಕೃಷ್ಣಾಕು. ೯-೦). [ ಚೇತನೆ + ಕೊಳ್₁ ]

**ಚೇತನೆವಡೆ** (ಕ್ರಿ). = ಚೇತನಂಬಡೆ: ದನುಜನ ಮಾಯೆಯೊಂದಿನಿಸು ಬೇಗದಿ ನೊರ್ಮೆಯ ಮಾಯಮಾಗೆ ಚೇತನೆ[ಪಾಠಾಂ. ನ]ವಡೆದು (ಚಂದ್ರಪ್ರ. ೫-೬). [ ಚೇತನೆ + ಪಡೆ₁ ]

**ಚೇತರಣೆ** (ನಾ). ಚೈತನ್ಯ ; ಪ್ರಜ್ಞೆ ; ಎಚ್ಚರ : ಬಟ್ಟಬೆ ಮೆಯ್ಗೆ ಚೇತರಣೆಯಲರ್ಚೆ (ಚಂದ್ರಪ್ರ. ೮-೬೦). [ <ಸಂ. ಚೇತಸ್ ]

**ಚೇತರಾಶಿ, ಚಾತರಾಸಿ, ಜಾತರಾಸಿ** (ನಾ). ಒಂದು ಬಗೆಯ ಮೂಲಿಕೆ : ಚೇತರಾಶಿ, ನೈದಿಲಗೆಡ್ಡೆ, ತುರುಚನ ಬೇರು, ಕೊತ್ತಂಬರಿ ಬೀಜ . . . ಹಿಪ್ಪಲಿ ಇಷ್ಟನ್ನು ಕಷಾಯವ ಕಾಸಿ ಕೊಡಿಸಲು ವಾತ, ಪಿತ್ತ, ಶ್ಲೇಷ್ಮಂಗಳಿಂದುಂಟಾದ ವಿಸರ್ಪ ಶಮನವಹುದು (ವೈದ್ಯಸಾ. I, ೩೩೩). **ಚಾತರಾಸಿ:** ಹಾವುಮೆಕ್ಕೆ ಬೇರು, ಚಾತರಾಸಿ, ಗೊರಟೆ, ನೆಲಗುಳ್ಳ ಈ ಬಗೆಗಳ ರಸವ . . . ಪಾಕಿ (ಸಕವೈ. ೧೫೩). **ಜಾತರಾಸಿ:** ಜಾತರಾಸಿ, ಸಹಮೂಲ . . . ಕಷಾಯವನಿಕ್ಕಿ ತೆಗೆದುಕೊಳ್ಳಲು ಶೀತಜ್ವರ ಪರಿಹಾರವಾಗುವುದು (ಸಕವೈ. ೬೫). [ ←ತೆಲು. ಚೇತರಾಸಿ, ಚೇದರಾಸಿ ]

**ಚೇತರಿಸು** (ಕ್ರಿ). ೧. ಚೈತನ್ಯವನ್ನು ಪಡೆ ; ಎಚ್ಚೆತ್ತುಕೊಳ್ಳು ; ಜಾಗ್ರತನಾಗು : ಕಿಡಿದು ಬೇಗಮನಿರ್ದು ತನ್ನಿಂ ತಾನೆ ಚೇತರಿಸಿ (ಪಂಪಭಾ. ೫-೧೫ವ); ಸೀತಾದೇವಿ ಕೇಳ್ದು ಮೂರ್ಛೆವೋಗಿ ಕಿಡಿದಂ ಬೇಗದಿಂ ಚೇತರಿಸಿ (ಪಂರಾಮಾ. ೧೫-೬೫ ವ) ; ವಾತಜನ ಮೂಲಿಕೆಗೆ ಕಪಿಬಲ ಚೇತರಿಸಿದುದು (ತೊರೆರಾ. ೩೬-೨೦). ೨. ಎಚ್ಚರಿಸು ; ಜಾಗ್ರತೆಗೊಳಿಸು ; ಚೈತನ್ಯವನ್ನು ತುಂಬು: ಸಂಸಾರಾಸಾರತೆಯನರಿದನುಂ ಮಹಾಸತ್ತ್ವನುಮಪ್ಪುದರಿಂ ತನ್ನಂ ತಾನೆ ಸಂತೈಸಿಯುಂ ಚೇತರಿಸಿಯುಂ (ಪಂಪಭಾ. ೧೩-೨೦ ವ): ಪ್ರಪಂಚವನ್ನು ನಿನ್ನ ಹೃದಯದೊಲುಮೆಯಿಂದ ಚೇತರಿಸಿ ಬದುಕಿಸಿ ಬೆಳೆಯಿಸಬಲ್ಲ ಸೃಷ್ಟಿಯ ಮಾಯೆ ನೀನು ! (ಕಮನೆ. ೨೦೩).

**ಚೇತರಿಸಿಕೊಳ್ಳು** = ಎಚ್ಚೆತ್ತುಕೊಳ್ಳು ; ಪುನಃ ಚೈತನ್ಯವನ್ನು ಪಡೆ; ಮತ್ತೆ ಶಕ್ತಿಯನ್ನು ಪಡೆ : ಆ ತಳೋದರಿ ಬಳಿಕ ಮೆಲ್ಲನೆ ಚೇತರಿಸಿಕೊಂಡೆದ್ದು (ತೊರೆರಾ. ೫-೩-೬೮). [ ಚೇತರಣೆ + -ಇಸು$_3$ ]

**ಚೇತಸ್ಸು** (ನಾ). ೧. ಪ್ರಜ್ಞೆ ; ಬುದ್ಧಿಶಕ್ತಿ. ೨. ಮನಸ್ಸು ; ಚಿತ್ತ. ೩. ಜೀವ ; ಆತ್ಮ. [ ಸಂ. ಚೇತಸ್ ]

**ಚೇತೋಜಾತ** (ನಾ). ಮನಸ್ಸಿನಲ್ಲಿ ಹುಟ್ಟಿದವನು ; ಮನ್ಮಥ : ಚೇತೋಜಾತನ ಮೂರ್ತಿಗಾತನೆ ಮಿಗಿಲ್ (ಶಾಂತೀಶ. ೨-೩೪). 'ಚೇತೋಜಾತವೈರಿ', 'ಚೇತೋಜಾತಹರ' ಪರಾ. [ ಸಂ. (ಚೇತಸ್ + ಜಾತ) ]

**ಚೇತೋಜಾತವೈರಿ** (ನಾ). ಮನ್ಮಥನ ವೈರಿ : ಶಿವ : ಅಂತಾತಗಂ ಬದುಕಂಟೆ ಚೇತೋಜಾತವೈರಿಯ ಬಾರಿಯಲಿ (ಬಸವು. ೫೪-೪೭).
[ ಚೇತೋಜಾತ + ವೈರಿ ]

**ಚೇತೋಜಾತಹರ** (ನಾ). ೧. ಮನ್ಮಥನನ್ನು ಸಂಹರಿಸಿದವನು ; ಶಿವ. ೨. [ಛಂದ] ಗುರು ಅಕ್ಷರದ ಸಂಜ್ಞೆ : ಶೀತಕರಾಗ್ನಿ ಚೇತೋಜಾತಹರರ್ಕಳೆರ್ದಿಂದು . . . ವಿನಿಮ್ಮಂ (ಛಂದೋಂಬು. ೨-೮೪). [ ಸಂ. ]

**ಚೇತೋನಂದನ** (ನಾ). ಮನಸ್ಸಿಗೆ ಆನಂದದಾಯಕವಾದುದು : ಜನಚೇತೋನಂದವಂ ನಂದನಂ ಲಳಿತ ಶ್ರೀಪರಿರಂಜನಂ ಜನಮನರ್ ಚೆಲ್ವಾದು ದುರ್ವಿನೀತಳಂ (ಆಗಪು. ೨-೨). [ ಸಂ. (ಚೇತಸ್ + ನಂದನ) ]

**ಚೇತೋರಥ** (ನಾ). ಮನೋರಥ ; ಬಯಕೆ ; ಅಭೀಷ್ಟ : ಲೋಕಮಂ ರಕ್ಷಿಸುತಿರ್ಕ್ಕೆಪೂರ್ಣ್ಣಂ ಚೇತೋರಥಯುತಂ ಕಮಳಾಕಲ್ಪವಲ್ಲೀವಿಳಾಸಾವಸಥಂ ಶ್ರೀವಿಷ್ಣುದಂಡಾಧಿಪ ದಿವಿಜಕುಜಾತಂ (ಎಕ. V; ಬೇಲೂರು. ೧೬-೨೩ ; 1136). [ ಸಂ. (ಚೇತಸ್ + ರಥ) ]

**ಚೇತೋವೃತ್ತಿ** (ನಾ). ಮನಸ್ಸಿನ ವ್ಯಾಪಾರ ; ಚಿತ್ತವೃತ್ತಿ : ಕೋಟಿದ ಚೇತೋವೃತ್ತಿಯಂ ಕೊರಗುವೆ (ಪುಷ್ಪದ. ೩-೧೦೦).
[ ಸಂ. ( ಚೇತಸ್ + ವೃತ್ತಿ) ]

**ಚೇತೋಹಾರಿ** (ಗು). ಮನಸ್ಸನ್ನು ಸೂರೆಗೊಳ್ಳುವ ; ಮನೋಹರವಾದ ; ಸುಂದರವಾದ : ಸೊಗಯಿಕುಂ ಶೋಭಾವಹಂ . . . ಸಮಸ್ತಜನಚೇತೋಹಾರಿ ಶಯ್ಯಾಗೃಹಂ (ಪಂಪಶಂ. ೧೨೩-೭) ; ತನ್ನೆದುರಾಗಿ ಕೆಳಗೆ ಪರ್ವಿರ್ದ ಚೇತೋಹಾರಿ ದೃಶ್ಯಮಂ ದರ್ಶಿಸುತ್ತಿರೆ (ಶ್ರೀರಾಮಾ. ೨೮೪-೧೬೮).
[ ಸಂ. ಚೇತೋಹಾರಿನ್ ]

**ಚೇತ್ರ** (ನಾ). ಪುಣ್ಯಸ್ಥಳ ; ಕ್ಷೇತ್ರ : ಪುಣ್ಯಗ್ರಹಂಗಳ ನಡುವಣ ಪಿತ್ರಮಂಡಲದಂತೆ ಸುಕ್ಷೇತ್ರದೊಳ್ಕಾಶಿಚೇತ್ರದಂತೆ (ಕಬಪು. ೨೯-೮).
[ <ಸಂ. ಕ್ಷೇತ್ರ ]

**ಚೇದಿ** (ನಾ). ಒಂದು ದೇಶದ ಹೆಸರು : ಮರುವಂಗಾಂಗ ಕಳಿಂಗ . . . ಲಾಟ ಕರಹಾಟಚ್ಚೇದಿ ಕಾಶ್ಮೀರ ಗುರ್ಜ್ಜರ . . . ಪ್ರಸಿದ್ಧಾವನೀಶ್ವರರಂ ಸಾಧಿಸಿ (ಎಕ. XI, ದಾವಣ. ೩-೧೦ : 1121) : ಸರ್ವವಿತ್ತವನಡಕಿತನಿಲ ಜನಾಳು ಮುಂದಣ ಚೇದಿ ದೇಶದಲಿ (ಕುವ್ಯಾಸ. ೪-೨). [ ಸಂ. ]

**ಚೇದಿಯ** (ನಾ). ಬಸದಿ ; ಚೈತ್ಯ : ಪರಲೂರಾ ಚೇದಿಯದ ಬಟ್ ಪ್ರಭಾಚನ್ದ್ರ ಗುರಾವರ್ ಪಡೆದಾ[ರ್] (ಇಆ. XI, ೭೦-೨೦; ಸು. ೮ನೆಯ ಶತ) ; ಚೇಟುಳಗೇರಿಗೆ ಕಲಿಯಮ್ಮಗಾಮುಣ್ಡುಗೆಯ್ದಾ ಚೇದಿಯಮಾನ್ಮಾಡಿಸಿದಾನ್ (ಸೌಇಇ. XI-1, ೫-೯; ?).
[ <ಪ್ರಾ. ಚೇಇಅ./ ಪಾಲಿ. ಚೇತಿಯ./ಸಂ. ಚೈತ್ಯ ]

**ಚೇಪರಿಸಿನ** (ನಾ). ಒಂದು ಬಗೆಯ ಅರಿಸಿನ ; ಕೆಂಪು ಅರಿಸಿನ : ಕಡೆದ ಚೇಪರಿಸಿನ ಕಸ್ತೂರಿ ಕುಂಕುಮವು (ಜಗೀತೆ. ೬೨). [ ಚೇಪು$_3$ + ಅರಿಸಿನ ]

**ಚೇಪದರ್ು** (ನಾ). ಒಂದು ಬಗೆಯ ಹದ್ದು ; ಕೆಂಪು ಹದ್ದು : ಕರಿಯ ಪದರ್ುಚೆಪದರ್ು ಚೇಪದರ್ು[ಪಾಠಾಂ. ಚೆಂಬದರ್ು]ರಾತರದ ಹಡೆಹದರ್ು ಪೆರ್ವದರ್ುವೆಟ್ಟೂಳಿಯೊಟ್ಟಿರದಪ್ಪ (ಸುಕ್ತಿಧ. ೫-೨೩). [ ಚೇಪು$_3$ + ಪದರ್ು ]

**ಚೇಪಿಡು** (ಕ್ರಿ). ಅರಿಸಿನವನ್ನು ಇಡು : ಆ ಪಾಪಿಯಾ ಪರುಷಾಕ್ಷರವಾಲಾಪಕ್ಕೆ ಕಿನಿಸ್ಸನಗೇಳ್ದು ಚೇಪಿ[ಪಾಠಾಂ. ಜೇಪೆ, ಜೇವ, ಜೇ]ಡೆಯುದುಗು ಉರಗನಂತೆ ನಡುಗಾತ ನಾ ಪಕ್ಕದೊಳು ತಲೆಯುಡುಗಿದೆ(ಕೊಬಸೋ. ೧೯-೪೫) ; ಚಂಪಕದ ವೈಯವರ್ ಚೇಪಿಟ್ಟ ಚಿತ್ತಿನಿಯರೂ(ಹರಿಕು. ೮-೬).
[ ಚೇಪು$_3$ + ಇಡು$_1$ ]

**ಚೇಪು$_1$** 'ತೇಪು' ನೋ.

**ಚೇಪು$_2$, ಸೇಪು** (ನಾ). ಕೆಚ್ಚಲಿನ ಹಾಲು ತೊರೆಯುವುದು,-ಹೊರಚಿಮ್ಮುವುದು. 'ಚೇಪುಬಿಡು' ಪರಾ. **ಸೇಪು:** 'ಸೇಪುಬಿಡು' ಪರಾ.
[ ದೇ.: ಕೊಡ. ತೆಲು. ಚೇಪು ]

**ಚೇಪು$_3$, ಚೆಪ್ಪು** (ನಾ). ೧. ಒಂದು ಬಗೆಯ ಅರಿಸಿನ; ಕೆಂಪು ಅರಿಸಿನ: ಚಿನ್ನದ ಓಲೆಗಳ ಕಾಂತಿಗಳಿಂದ ಹೊಳೆಯುತಲಿರುವ ಕೆನ್ನೆಗಳಲ್ಲಿ ಚೇಪನ್ನು ತೊಡಕೊಂಡು (ಶಿವದ. ೩೦-೮) ; ತಿಗಳರುಡುಗೆಯುಟ್ಟು ಸೊಗಸು ಚೇಪುಗಳಿಟ್ಟು ಅಗಿಲು ಚಂದನ ಗಂಧ ಧರಿಸಿ (ಸೌಂದರ. ೩-೨೫). ೨. ಕೆಂಪು. 'ಚೇಪದರ್ು' ಪರಾ. **ಚೆಪ್ಪು:** ೨. ಕೆಂಪು ಚೆಪ್ಪು ಅರಿಸಿನ ಗಂಧ ಇಂಪಾದ ಹರಿನಾಮದ ಬಟ್ಟು (ನಾಹರ. ೨೦೪). [ ←ತಮಿ. ಚೇಪ್ಪು ]

**ಚೇಪುಬಿಡು, ಸೇಪುಬಿಡು** (ಕ್ರಿ). (ಎಮ್ಮೆ, ಹಸು ಮೊದಲಾದುವು) ಹಾಲಿನ ಧಾರೆಯನ್ನು ಬಿಡು ; ಸೊರಬಿಡು : (ಪ್ರ). **ಸೇಪುಬಿಡು:** ಈವತ್ತು ಎಮ್ಮೆ ಯಾಕೋ ಸೇಪುಬಿಡಲೇ ಇಲ್ಲ (ರೂಢಿ).
[ ಚೇಪು$_2$ + ಬಿಡು$_1$ ]

**ಚೇಪೆ$_1$** 'ಚಾಪೆ' ನೋ.

**ಚೇಪೆ$_2$** 'ಸೀಬೆ' ನೋ.

**ಚೇಪೆಕಾಯಿ** 'ಸೀಬೆಕಾಯಿ' ನೋ

**ಚೇರ** (ನಾ). ೧. ಒಂದು ದೇಶದ ಹೆಸರು; ಪ್ರಾಚೀನ ಪಾಂಡ್ಯ, ಚೋಳ ಮತ್ತು ಚೇರ ಎಂಬ ಮೂರು ತಮಿಳು ರಾಜ್ಯಗಳಲ್ಲಿ ಒಂದು; ಈಗಿನ ಕೇರಳ : ಗೌಳ ಲಾಟ ಚೋಟ ಚೇರ ಪಾಂಡ್ಯ ಕಳಿಂಗಾದಿವಿಷಯಂಗಳಂ ಸಾಧಿಸಿ (ಧರ್ಮಾಮೃ. ೧೦-೬೧). ೨. ಚೇರದೇಶದ ರಾಜ : ಚೋಳನ ಜೂಟು ಘಾಳವನ ಗೋಣ್ಮುರಿ ಚೇರನನಟ್ಟಿ ತಿಂಬ ಮಾರಿ (ಎಕ. VII, ಶಿವಮೊ. ೫-೭: 1218); ಚೇರಂ ವಾರುವಕೋಟಿಯಂ . . . ಕಳಿಪಿದಂ (ದಶಕು. ೮-೬೧). ೩. ಚೇರದೇಶದ ಜನ. ೧, ೩: ವೈವಾಹಗೇಹದ

ಸಿರಿಯವೊಲು ಮಂಗಳಮಯವು ಮಲೆಯಾಳ ಜನಪದದ ಅರಸಿನಂತಿರೆ ಚೇರಮಯವೆನಲುರವಣಿಸಿ ನೂಕಿದರು ನಿಡುವಕ್ಕರಿಕೆಗಳ ಗರುವಾಯಿಗಳ ಘನಮದದ ತೇಜಿಗಳ (ಕುವ್ಯಾ.ಛೀ. ೪-೩೦). 'ಕೇರಲ' ಪರಾ. ೪. ಚೇರ ದೇಶದ ಕುದುರೆ; ಮಾಸಲುಗೆಂಪು ಬಣ್ಣದ ಒಂದು ಬಗೆಯ ಕುದುರೆ: "ಅರುಣಂ ಮಾಸ ಚೇರನಕ್ಕುಂ" (ಮಂಗರಾ. ೫೧-೧೪); ಜನ್ನನಂ ನೀಲನನಳಗನಂ ತನ್ನಿ . . . ಚೇ[ಪಾಠಾಂ. ದೇ]ರನನು ತನ್ನಿ (ಬಸಪು. ೫೯-೪೦); ಬೀದಿಯವು ಬಾಲದ ಮೊಳೆಗಳ್ ಬೆಳರ್ಗವಿಲಂ ಮೆಯ್ಯ ಬಣ್ಣ ಮಾದೊಡೆ ಚೇರಂ (ಅಶ್ವಶಾ. ೨-೧೦). [ಸಂ.]

**ಚೇರಟೆ** 'ತೇರಂಟೆ' ನೋ.

**ಚೇರಡಿ** (ನಾ). ಕಟ್ಟಡದಲ್ಲಿ ಕಂಬಗಳ ಮೇಲಿನ ಭಾಗ; ಲೋವೆ (?): ಇಂಗೆಸಲ್ಲಳ ಸೊಗಯಿಪ್ಪ ತೊಲೆಗಳಿಂ ತೆಂಗಿನ ಸುಟಿಯಲೆಯಚ್ಚ ನೆರೆಗಳಿಂ ಮಂಜು ಶಿರೀಷದ ಚೇರಡಿಯಿಂದಂ ಚೆಂಜಾಜಿಯ ಗೊಂಚಲ ಗುಡಿಯಿಂದಂ (ಉದ್ಭಟ. ೫ ೨೦): ಕೀರಣಗೆಲಸದ ಹದಿನಾಱು ಕಂಭ ಗಳ್ಚೇರಡಿ ಮದನಕೈಯಿಂದ ಸೇರಿದ ಮುತ್ತಿನ ಗಡಗೆ ಬೋದಿಗೆಯಿಂದ ಸಾರಸಿಂಗರದೊಳೊಪ್ಪಿದಪು (ನಾಗಕು. ೨೭-೧೩). [?]

**ಚೇರಣಿಗ** (ನಾ). ಕೇರಳದೇಶದವನು: "ಕೇರಳನೆನಲ್ ಚೇರಣಿಗ [ಪಾಠಾಂ. ಚೇರಡಿಗ]ನಕ್ಕು" (ನಾಗರಾ. ೧೧೨-೭).

[ಚೇರಣ₀ (<ಕೇರಳ) + – ಇಗ]

**ಚೇರಮಾನಿ** (ನಾ). ಒಂದು ಬಗೆಯ ಕುದುರೆ; ಚೇರದೇಶದ ಕುದುರೆ: "ಸಾಂಬ್ರಾಣಿ ಕಲಹತಿ ಚೇರಮಾನಿಯೆಂಬೀಸಟೊಳು ಪುಟ್ಟಲಾ ದೇಶ ವಶದಿಂದಲಾ ಕುದುರೆಗಭಿಧಾನಮಕ್ಕುಂ" (ಮಂಗರಾ. ೮೩-೨೦). [<ಚೇರ]

**ಚೇರಿ** 'ಕೇರಿ' ನೋ.

**ಚೇರಿಸು** 'ಸೇರಿಸು' ನೋ.

**ಚೇರು** (ನಾ). ಗುಹ್ಯರೋಗದಿಂದ ಉಂಟಾದ ತರುಡಿನ ಬಾವು,–ಊತ: "ಚೇರು = ತರುಡು ಊದುವುದು" (ಕಾಶಕೈ. ೨೧೦).

ಚೇರುಇಳಿ = ಗುಹ್ಯರೋಗದಿಂದ ತರುಡು ಊದಿಕೊಂಡು ಜೋಲು: (೬). [←ತೆಲು. ಚೇರು, ಚೇಱು]

**ಚೇರುಕುಟಿ** (ನಾ). ಚೇರು ರೋಗದಿಂದ ಬರುವ ಬೊಕ್ಕೆ; ಚೇರುಕುಟಿಗೆ:– ಗಜ್ಜುಗದ ತಿರುಳು ನಾಲ್ಕು ತೂಕ . . . ಹಾಲಲ್ಲಿ ತೇದು ಉದಯದಲ್ಲಿ ದಿನಂಪ್ರತಿಯೂ ತೆಗೆದುಕೊಳ್ಳುವುದು ಚೇರುಕುಟಿ ಮಾಣ್ಗುಂ (ವಿಶ್ವವಿ. ೧೨೩). [ಚೇರು + ಕುಟ್ಟ₁./ತೆಲು. ಚೇಱುಕುಟ್ಟು]

**ಚೇರೆ** 'ಚಹರೆ' ನೋ.

**ಚೇಲ₁, ಚೇಳ** (ನಾ). ೧. ಬಟ್ಟೆ; ವಸ್ತ್ರ: "ಚೇಲಂ, ಚೇರಂ, ವಾಸಃ, ಕರ್ಪಟಂ . . . ವಸ್ತ್ರಂ, ಸಿಚಯಃ, ಪಟಃ–ಈ ೧೦ ಸೀರೆ" (ಹಲಾಯು. ೯೦-೩೯೪), ನೀಲಚೇಲದುಡೆಯುಂ ಮೇಲ್ಪೊಂದ ಪೊಂಬಟ್ಟೆಯುಂ . . . ಚೆಲ್ವಾಗೆ (ಜಗವಿ. ೩-೦೩); ನೀಲಾಭರಣಭೂಷಿತನಾಗಿ ಕಾಗಿನ ಚೇಲವ ಹೊದ್ದು (ಮೋಹತ. ೧೮-೨೦). 'ಚೇಲಾಂಚಲ' ಪರಾ. ಚೇಳ: ೧. "ಚೇರಂ ಚೇಳಂ ಕರ್ಪಟಂ" (ವಸ್ತುಕೋ. ೭೮-೨೦). ೨. ಕೆಟ್ಟುದು; ಕೀಳಾದುದು: "ಅರ್ವಾಣಾಂ, ಅಣಕಂ . . . ಅಧಮಂ, ಚೇಳಂ, ಕಾಂಡು . . . ಈ ೧೩ ಹೊಲ್ಲಹ ವಸ್ತು" (ಹಲಾಯು. ೫೭-೧೮೨); "ಅವಮಂ . . . ಚೇಳವವದ್ಯಂ ಕುತ್ಸಿತಂ ಕುಪೂಯಂ ಯಾಪ್ಯಂ" (ವಸ್ತುಕೋ. ೧೦೮-೫೯). [ಸಂ.]

**ಚೇಲ₂, ಚೇಲಾ, ಚೇಲಿ₂, ಚೇಲೆ** (ನಾ). ೧. ಶಿಷ್ಯ; ವಿದ್ಯಾರ್ಥಿ: ಗವಯಿಗಳ ಹಿಂದೆ ಚೇಲ ಇರುವಂತೆ (ಯಕ್ಷಲ. ೯೩). 'ಚೇಲವಾಡಿ' ಪರಾ. ೨. ಅನುಯಾಯಿ; ಸೇವಕ; ತೈನಾತಿ: ನಡುವೆ ನಡುವೆ ಚೇಲರು ಹತ್ತಿಸಿಕೊಟ್ಟ ಭಂಗಿ ಚಿಲುಮೆಯನ್ನು . . . ಸೇದಿ (ಜಯ್ಯಮು. ೧೦); ಕಣಿವೆಯ ಕೆಳಗಿನವರ ಚೇಲನಾಗಿ ಕುಣಿಯುತ್ತ ಉಂಡಮನೆಗೆರಡು ಬಗೆಯುವ ಅವನ ದ್ರೋಹವರ್ತನೆ (ರಾಗಿಚ. ೧೨೨). ೩. ಬಲಾತ್ಕಾರ ದಿಂದ ಎಳೆವಯಸ್ಸಿನಲ್ಲಿಯೆ ಮುಸಲ್ಮಾನನಾಗಿ ಮಾಡಲ್ಪಟ್ಟವನು; P ಇಂತಹ ಬಾಲಕರನ್ನು ದೊಡ್ಡವರಾದ ಮೇಲೆ ಚೇಲ ಎಂಬ ಹೆಸರಿನೊಂದಿಗೆ ಸೈನ್ಯಕ್ಕೆ ಸೇರಿಸಿಕೊಳ್ಳಲಾಗುತ್ತಿತ್ತು (ಕ್ರೈ. ಸ್ ಗ. II, ೫೪೩). **ಚೇಲಾ:** ೨. ಉದವರಲ್ಲ ಅವರ ಚೇಲಾ ಆಗಿಯೇ ಇರಬೇಕೆಂಬುದು ಅವನ ಸಿದ್ಧಾಂತವಾಗಿತ್ತು (ನ್ಯಾಮಾಯ. ೪೫೯); ಅದರಲ್ಲಿರುವವರು ಆಡಳಿತಗಾರರ ಚೇಲಾಗಳು (ಕಾಮಿಲಾಂ. ೭೫). **ಚೇಲಿ₂:** ೩. ಉತ್ತಮವಾದ ಎಲ್ಲಾ ಜಾತೀ ಜನಗಳನ್ನು ತನ್ನ ಜಾತಿಗೆ ಸೇರಿಸಿಕೊಳ್ಳ ಬೇಕೆಂದು ಕೆಲವು ಜನರನ್ನು ಚೇಲಿಗಳನ್ನಾಗಿ ಮಾಡಿಕೊಂಡನು (ಹಾಮಿಪಂ. ೨೩೪). **ಚೇಲೆ:** ೩. ಕೊಡಗು ಜನರನ್ನೆಲ್ಲಾ ಮುಂಜಿ ಮಾಡಿ ಕುಲಗೆಡಿಸಿ ಚೇಲೆಯರ ಮಾಡಿ ಇಟ್ಟುಕೊಂಡು (ಬಾಕೇಂದ್ರ. ೧೭).

[←ಹಿಂ. ಮರಾ. ಚೇಲಾ. / ಪ್ರಾ. ಚಿಲ್ಲ]

**ಚೇಲ₃** (ನಾ). ಒಂದು ಬಗೆಯ ಗಿಡ: ಚಿಲಬಾಗೆ, ಚೇಲ, ಎಲೆಸುಜ್ಜಲ ಬಾಗೆ (ವೃಜಿಗಿ. ೪-೭೩). [?]

**ಚೇಲವಾಡಿ** (ನಾ). ವಿದ್ಯಾರ್ಥಿನಿಲಯ: ವಿದ್ಯಾನಿಕೇತನದ ಚೇಲವಾಡಿಯನ್ನು ವಿಸ್ತಾರಗೊಳಿಸುವುದಕ್ಕೆ ನೂರು ಹೊನ್ನು . . . ಕಳುಹಿಸಿದ್ದೇನೆ (ಸಶ್ವಕ. VIII, ೨೦). [ಚೇಲ₂ + ವಾಡಿ₁ (<ವಾಡಿ₁)]

**ಚೇಲಾ** 'ಚೇಲ₂' ನೋ.

**ಚೇಲಾಂಚಲ** (ನಾ). ವಸ್ತ್ರದ ತುದಿ; ಸೆರಗು: "ಸಜಿಂಗೆಂದು ಚೇಲಾಂಚಲಂ" (ಶಶಸಾ. ೨೦-೩೯೭); ದೇವ ನಿಮ್ಮ ದಯೆಗೆಯ್ದ ಫಳಂ ಕೇವಲ ಶುಭ ಸೂಚಕಮೆಂದಾ ವಧು ಗುಡಿಗಟ್ಟಿ ಚೀನಚೇಲಾಂಚಲವಮಂ (ಮಲ್ಲಪು. ೪-೩೫).

[ಚೇಲ₁ + ಅಂಚಲ]

**ಚೇಲಾಚಾರ** (ನಾ). ಹೀನ ನಡವಳಿಕೆ: ಎಲ್ಲಾ ಒಂದಾದರೆ ಶಾಲ್ಯನ್ನ ಉಂಬುವರು ಹುಲ್ಲನೇತಕೆ ಮದ್ದು ಬದುಕರು ಸುವ್ವಿ ಹುಲ್ಲನೇತಕೆ ಮದ್ದು ಬದುಕರು ಚೇಲಾಚಾ[ಚಾ]ರಾ ಜಲದೊಳಾಚರಿಸಿ ಆಳುವುದೇಕೆ ಸುವ್ವಿ (ಬಾದೀಸ. ೧೫೩-೧೭). [ಚೇಲ₁ + ಆಚಾರ]

**ಚೇಲಿ₁** (ನಾ). ಕೆಟ್ಟ ಹೆಂಗಸು; ದುಷ್ಟೆ. [ಸಂ. ಚೇಲೀ]

**ಚೇಲಿ₂** 'ಚೇಲ₂' ನೋ.

**ಚೇಲಿಕ, ಚೇಳಿಕ** (ನಾ). ಬಟ್ಟೆ ಹೊಲಿಯುವವನು; ಚಿಪ್ಪಿಗ; ಸಿಂಪಿಗ; ದರ್ಜಿ: "ಚಿಪ್ಪಿಗನು ಚೇಲಿ[ಪಾಠಾಂ. ಳಿ]ಕಂ ಸೂಚಿಕಂ ತುನ್ನವಾಯನೆನಿಕ್ಕು" (ಮಂಗರಾ. ೧೧೧-೨). **ಚೇಳಿಕ:** ಮೇಲಿನ ಪ್ರಯೋಗದ ಪಾಠಾಂತರ ವನ್ನು ನೋಡಿ. [ಚೇಲ₁ + – ಇಕ]

**ಚೇಲಿಕೆ, ಚೇಳಿಕೆ** (ನಾ). ಪುನುಗು: "ಚೇಲಿ[ಪಾಠಾಂ. ಳಿ]ಕೆಯೆನಲ್ ಪುಣುಗು" (ಮಂಗರಾ. ೯೯-೨೨). **ಚೇಳಿಕೆ:** ಕುಸುಮ ಮೃಗಮದದ ಗಂಧ ಚೇಳಿಕೆಯು (ಮದೀಕಾ. ೨-೪೪). [?]

**ಚೇಲೆ** 'ಚೇಲ₂' ನೋ.

**ಚೇಷ್ಟಾಕೃತ** (ನಾ). [ನಾಟ್ಯ] ಮೂರು ಬಗೆಯ ಆಂಗಿಕಾಭಿನಯಗಳಲ್ಲಿ ಒಂದು: "ಆಂಗಿಕಾಭಿನಯವು ಶಾರೀರ, ಮುಖಜ, ಚೇಷ್ಟಾಕೃತ ಎಂದು ಮೂರು ವಿಧ; ಕೈ ಕಣ್ಣು ಮುಂತಾದ ಅಂಗೋಪಾಂಗಗಳ ಚಲನೆಗಳು ಶಾರೀರ ಮತ್ತು ಮುಖಜ; ನೃತ್ತ ವಿಶೇಷಗಳು ಚೇಷ್ಟಾಕೃತ" (ಸಂನಾಟ. ೧೧). [ಸಂ. (ಚೇಷ್ಟಾ + ಕೃತ)]

**ಚೇಷ್ಟಾಲು** (ನಾ). ಕೀಟಲೆ ಅಥವಾ ಕುಚೇಷ್ಟೆ ಮಾಡುವ ಸ್ವಭಾವ ದವನು; ವಿನೋದಪ್ರಿಯ: "ನಿನಗೆ ಮನೆಯ ಹಂಬಲಿದ್ದರೆ, ನೀನು ಹೋಗು" ಎಂದು ಚೇಷ್ಟಾಲುವೊಬ್ಬನು ಉತ್ತರಕೊಟ್ಟನು (ಯದುರಾ. ೭೧).

[P ಇದು 'ಕೃಪಾಲು' ಎಂಬ ಪದದ ಅನುಕರಣೆಯಿಂದಾದುದು]

**ಚೇಷ್ಟಿತ** (ಗು). ೧. ಕೆಲಸ ಮಾಡಿದ.-ಮಾಡಲ್ಪಟ್ಟ. ೨. ಕದಲಿಸಿದ ; ಚಲಿಸುವಂತೆ ಮಾಡಿದ. ೩. ಯತ್ನಿಸಿದ ; ಯತ್ನಿಸಲ್ಪಟ್ಟ. (ನಾ). ೪. ಕಾರ್ಯ ; ಕೆಲಸ ; ನಡೆವಳಿಕೆ : ಸೃಷ್ಟಿಸಮಯದೊಳಿರ್ದ ಚೇಷ್ಟಿತಮೆಂದಖಿಳ ಜಾತಿಯೊಳ್ ಕಲ್ಪಿಸೆ ನೀಂ ದುಷ್ಟತೆ ನಿಸರ್ಗಮಾಯ್ತು (ಜಗದಿ. ೩-೧೧೨) ; ತೊಱೆವುದು . . . ನಿರ್ಹೇತುಕವಪ್ಪ ಪೇದಮನಿದಲ್ತು ಕೃಪಾವತಿಯರ್ಗೆ ಚೇಷ್ಟಿತಂ (ಚಂದ್ರಪ್ರ. ೩-೬೫) ; ಚೀ ಕಷ್ಟಮಿಾ ಚೇಷ್ಟಿತಂ (ಪುಷ್ಪಪು. ೦೬-೩೧). ೫. ಗತಿ ; ಸಂಚಾರ. [ ಸಂ. ]

**ಚೇಷ್ಟಿಸು** (ಕ್ರಿ). ೧. ಚಲಿಸು ; ಅಲುಂಗಾಡು. ೨. ಉದ್ಯೋಗಿಸು ; ಆಚರಿಸು ; ಕೆಲಸಮಾಡು : ಇಲ್ಲಿಗೆ ತಕ್ಕುದೇನುಮಂ ಚೇಷ್ಟಿಪಂ (ಚಂದ್ರಪ್ರ. ೩-೬೮) : ವಿಾಕ್ಕಿನ ಸರ್ವಾಂಗಂಗಳುಂ ನಿವ್ಮುಯ ದೆಸೆಗೆ ಕರಂ ಚೇಷ್ಟಿಸುತ್ತೊರ್ವೆಯುಂ ನಿಲ್ವಿನಂ (ರಕ್ಷಾಕ. ೬೬) ; ಧರ್ಮದೊಳ್ ಚೇಷ್ಟಿಸಿ ಶಾಸ್ತ್ರದೊಳ್ ತಿಳಿದು (ದಕಳು. ೦೪-೨೪). ೩. ಚಲನೆಯುಂಟುಮಾಡು ; ಚೈತನ್ಯವನ್ನು ತುಂಬು : ಆ ಸಂಸಾರ ಪ್ರಪಂಚಕವನೆಲ್ಲವಂ ಚೇಷ್ಟಿಸಿ ಜಗತ್ತ್ರಯವನೊಕ್ಕಲಿಕ್ಕಿ ಕೊಲ್ಲುತ್ತಿಪ್ಪುದೆಲ್ಲವು ಮಾಯೆ (ಗಣಭಾ. ೪೪) : ನೀನು ಚೇಷ್ಟಿಸದಿರಲ್ ಕಾಲ್ನಡೆಯುಬಲ್ಲವೆ (ಬಸವೇಶ. ೦೪-೯೮). ೪. ಚೇತರಿಸಿಕೊಳ್ಳು ; ಜಾಗ್ರತವಾಗು: ವನಮೃಗರಾಜಗಳ್ ತೃಷೆಯ ಕೋಟಲೆಯಿಂ ವನವೆಲ್ಲಮಂ ತೊಟಲ್ದಿನಕಿರಣಂಗಳಿಂ ಕಿಡೆದು ಚೇಷ್ಟಿಸಿ ಕಂಡು ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ (ದಕಳು. ೪-೨೬) ; ಷೋಡಶ ಘಟಿಕೆ ಸಂದುದು . . . ಶಿವಾರ್ಚನೆಯ ಮಾಡಬೇಕೆಂದು ಕಟ್ಟಿಗೆಕಾಱರು ಕೊಂಡಾಡಲ್ಕೆ ಕ್ಷಣದೆ ಚೇಷ್ಟಿಸಿದ (ಷೋಡಶ. ೨೦-೫೦). ೫. ಕೆಣಕು; ಚಲ್ಲಾಟವಾಡು: ಚೇಷ್ಟಿಪ ವೇಶ್ಯಾಭುಜಂಗರ ಮಧುಪಾನ ಗೋಷ್ಠಿಯ ಸೊಬಗನೀಕ್ಷಿಸಿದ (ಷೋಡಶ. ೧೮-೯೬). [ಚೇಷ್ಟೆ+ – ಇಸು$_3$]

**ಚೇಷ್ಟೆ** (ನಾ). ೧. ಅಂಗಾಂಗಗಳ ಚಲನೆ ; ಸಂಜ್ಞೆ ; ಚಲನವಲನ: ದರ್ಪಣದ ಪ್ರತಿಬಿಂಬಕ್ಕೊಂದು ಚೇಷ್ಟೆಯುಂಟೆ (ಆದಪ. ೨೮-೮೦) ; ಆಯತನೇತ್ರೆಯಿಾಕ್ಷಿಸಿದ ರೀತಿ ತದಾಸ್ಯದ ಚೇಷ್ಟೆಯಿಂ . . . ಅಱಿಯಲಾಯ್ತನಗಂದಿದಿರಲ್ಲಿ ನಿಶ್ಚಯಂ (ದಕಳು. ೦೩-೫೮). ೨. ಉದ್ಯೋಗ ; ಕ್ರಿಯೆ; ಕಾರ್ಯ: ಧೈರ್ಯಂಗೆಟ್ಟು ಮೇಲ್ವಾಯ್ದ ಚೇಷ್ಟೆಗೆ ಪೌಲಸ್ತ್ಯನು ಮೊತ್ತಗೊಟ್ಟನೆನಲಾಱಂ ದರ್ಪಕಂ ದಂಡಿಸಂ (ಶಂಕಾಮಾ. ೯-೦೪೮) : ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೆ ಬೀಜ (ಮಹಾದೇ. ಬ. ೨೪-೪೬). ೩. ವರ್ತನೆ ; ನಡವಳಿಕೆ : ಪರವೆಯರ ವಾರ್ತೆಯಂ ಕೊಂಡು ಚಿಟ್ಟರದಿಂದೆ ಬರಲವನ ಚೇಷ್ಟೆಯಂ ಕಾಣುತೆರ್ದೆ ಹಡಿದೆಱೆದು (ನಂಬಿರ. ೧೬-೦೦೯). ೪. ಚಾಲನೆ; ಪ್ರೇರಣೆ; ಸಂಚಲನೆ: ತತ್ಕಳಿಂಗಕನ್ನಿಕೆಯ ಗರಂ ನೆಲೆಯಲ್ತದಲ್ಲದಿರ್ದೊಡೆ ನೆಲೆಯಾಕೆಗೆ ಕಡೆಗೆ ಗರದ ಚೇಷ್ಟೆ ನಿತಾಂತಂ (ದಕಳು. ೧೩-೬೦); ಬಲುಭೂತ ಸೋಂಕಿತೋ ಗ್ರಹದ ಚೇಷ್ಟೆಯೋ ವೈತ್ಯ ತಲೆಗಡದರ್ದೊ (ನವಮೋ. ೨೫-೪೯). ೫. ಹುಡುಗಾಟ; ತಮಾಷೆ : ಅವನ ಮಿತ್ರರನೇಕರು ಚೇಷ್ಟೆ ಮಾಡಿದಾಗಲೆಲ್ಲ ಅವನು ನಕ್ಕು ಅದನ್ನು ತೇಲಿಸಿಬಿಡುತ್ತಿದ್ದ (ಭಾರತಿ. ೦): ಕುಂಟನಿಗೆ ಎಂಟು ಚೇಷ್ಟೆ ಕುರುಡನಿಗೆ ನಾನಾ ಚೇಷ್ಟೆ (ಗಾದೆ). ೬. ಸರಸ ; ಚೆಲ್ಲಾಟ. 'ಚೇಷ್ಟಿಸು' ಪರಾ. ೭. ತುಂಟತನ ; ತುಂಟಾಟ ; ಕೀಟಲೆ : ಆ ಹುಡುಗನದು ಬಹಳ ಚೇಷ್ಟೆ (ರೂಢಿ). [ ಸಂ. ಚೇಷ್ಟಾ ]

**ಚೇಷ್ಟೆಕೋರ, ಚೇಷ್ಟೆಖೋರ** (ನಾ). ಹುಡುಗಾಟದ ಸ್ವಭಾವದವನು ; ತಮಾಷೆಗಾರ : ಇತ್ತೀಚೆಗೆ ಈ ಮುದುಕರ ಗದ್ದಲ ಒಂದಿನಿತು ಕಡಿಮೆಯಾಗಿದೆ: ನಾನು ಚೇಷ್ಟೆಕೋರನಾದ್ದರಿಂದ ಹಾಗಾಗಿರಬೇಕು (ಚಂದುಟಿ. ೯೨). **ಚೇಷ್ಟೆಖೋರ** : ಸೃಷ್ಟಿಯೊಳಗೆ ಇಂಥ ಚೇಷ್ಟೆಖೋರನ ಕಾಣೆ (ಪುರಂದ. ೦-೬೫ ಅನುಪಲ್ಲವಿ) : ಇದೆಲ್ಲ ಚೇಷ್ಟೆಖೋರರ ಹಾರಿಕೆಯ ಸುದ್ದಿ (ಗಂಗಾಸಾ. ೦೦೯). [ ಚೇಷ್ಟೆ + – ಕೋರ$_3$ ]

**ಚೇಷ್ಟೆಖೋರ** 'ಚೇಷ್ಟೆಕೋರ' ನೋ.

**ಚೇಷ್ಟೆಗಾರ** (ನಾ). = ಚೇಷ್ಟೆಕೋರ : (೬).
[ ಚೇಷ್ಟೆ + – ಗಾರ(<–ಕಾಱ) ]

**ಚೇಷ್ಟೆಗೆಡು** (ಕ್ರಿ). ಚಲನೆ ನಿಂತುಹೋಗು ; ಚೈತನ್ಯ ಉಡುಗು : ಈ ದೇಹದೊಳಿಂದೀ ಪ್ರಾಣಮುಳ್ಳನ್ನೆಗಮೆ ತಡೆಯದಾತ್ಮೇಶನಂ ಕಾಣ್ಬೆನೋ ಪುಣ್ಯದಿನೆಂದಾಂ ಚೇಷ್ಟೆಗೆಟ್ಟಂದವಳನೆ ಒಡಿದಲ್ಲಿಂದಮಂತಾನುಮೆಟ್ದಿಂ (ಕಾದಂಪೂ. ೫೫೬) : ಕರಣ ಬಲ ಪ್ರಾಣದ ಚೇಷ್ಟೆಗೆಟ್ಟು ಭರತಂ ವದಾನತಂ ವಿಕಲನಾಗಿ ಮೂರ್ಛೆಗೆ ಸಂದಂ (ಶಂಕಾಮಾ. ೬-೧೫). [ಚೇಷ್ಟೆ + ಕೆಡು$_1$]

**ಚೇಹರಾ** 'ಚಹರೆ' ನೋ.

**ಚೇಳ್** (ನಾ). ಒಂದು ಬಗೆಯ ವಿಮಾನ: ಚೇಳ್ಪಸಿಗಂ ಸಟಿಲ್ಗೊದಳೆ ವಿಮಾನ್ . . . ಬಣ್ಣಮಿಾನೆನಿಪಿವೆಲ್ಲಂ ಬಳ್ದುವಾ ತಾಣದೊಳ್ (ರಾಜಶೇ. ೫-೦೦೫).
[ ←ತಮಿ. ಚೇಲ್ ]

**ಚೇಳ** 'ಚೇಲ$_1$' ನೋ.

**ಚೇಳಿಕ** 'ಚೇಲಿಕ' ನೋ.

**ಚೇಳಿಕೆ** 'ಚೇಲಿಕೆ' ನೋ.

**ಚೇಳು$_1$** 'ತೇಟ್$_2$' ನೋ.

**ಚೇಳು$_2$** (ನಾ). ಒಂದು ಬಗೆಯ ಗಿಡ : "ಗಂಧವೃಕ್ಷ – ಚೇಳು" (ಒಷಧಿ. ೪೬). [ ? ]

**ಚೇಳುಕೊಂಡಿ** (ನಾ). ಚೇಳಿನ ಬಾಲದ ತುದಿಯಲ್ಲಿರುವ ಮುಳ್ಳು. 'ಚೇಳುಕೊಂಡಿಗಿಡ' ಪರಾ. [ ಚೇಳು$_1$(<ತೇಟ್$_2$) + ಕೊಂಡಿ$_1$ ]

**ಚೇಳುಕೊಂಡಿಗಿಡ** (ನಾ). ೧. ಚೇಳು ಕೊಂಡಿಯಂತಹ ಕೊಂಡಿಯಿರುವ ಬಣ್ಣಬಣ್ಣದ ಹೂವುಗಳನ್ನು ಬಿಡುವ ಒಂದು ಬಗೆಯ ಸಣ್ಣ ಗಿಡ ; ಕರ್ಣಕುಂಡಲ: ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಶಿಗಿ. ೪೨-೮೩೩). ೨. "ನಾಗದಂತಿ" (ಶಂಡಕ). ೩. ಒಂದು ಬಗೆಯ ಮುಳ್ಳುಪೊದೆ: "ವೃಶ್ಚಿಕಃ–ಮುಳ್ಳುಹುಳ, ಚೇಳು, ಚಾರದಿಂದ . . . ಚೇಳುಕೊಂಡೀಗಿಡ" (ಸಿದ್ಧಾಂತಿ. ೩೨೦). [ ಚೇಳುಕೊಂಡಿ + ಗಿಡ (<ಗಿಡು) ]

**ಚೇಳುಬಾಣ** (ನಾ). ಒಂದು ಬಗೆಯ ಮದ್ದಿನ ಬಾಣ : ಉರಿಬಾಣ ಚೇಳುಬಾಣಗಳ ಬಿಡುತ ಪರಿಪರಿಯಲ್ಲಿ ಪುಷ್ಪಬಾಣಗಳಾ ಸುರಿವುತ ಬರುತಿರ್ದರರ್ತಿಕಾಱರು (ಭರತ. ೨೦-೬೨) ; ಚೇಳುಬಾಣಗಳ ಜಾಟಳಪುರಿ ಪೊಟ್ಟಣವೇಳುವ ಜಂತ್ರದ ದಗಳು . . . ಪಟ್ಟಣದಾಳುವೇರಿಯ ತುಂಬಿಹುವು (ಕಂಠವಿ. ೬-೨೦). [ ಚೇಳು$_1$(<ತೇಟ್$_2$) + ಬಾಣ ]

**ಚೇಳುಬಾಲ** 'ಚೇಳುವಾಲ' ನೋ.

**ಚೇಳುಮಣಿ** (ನಾ). ಚೇಳಿನ ವಿಷವನ್ನು ಇಳಿಸತಕ್ಕ ಒಂದು ಬಗೆಯ ಮಣಿ : (೬). [ ಚೇಳು$_1$(<ತೇಟ್$_2$) + ಮಣಿ$_3$ ]

**ಚೇಳುಮಣಿಗಿಡ** (ನಾ). = ಚೇಳುಕೊಂಡಿ ಗಿಡ ೧ : ಚೇಳುಮಣಿಗಿಡ, ಚೇಳುಕೊಂಡಿಗಿಡ (ಮೃಶಿಗಿ. ೪೨-೮೩೩). [ಚೇಳುಮಣಿ + ಗಿಡ(<ಗಿಡು)]

**ಚೇಳುರಿಗಿಡ** (ನಾ). ಒಂದು ಬಗೆಯ ಗಿಡ ; ತುರುಚೆ : ಅಂಟು ಸುರುಸುರಿಗೆ ಬಳ್ಳಿ, ತುರಚಿಬಳ್ಳಿ, ಚೇಳುರಿಗಿಡ (ಮೃಶಿಗಿ. ೬೫-೦೫೩೨).
[ ಚೇಳು$_1$ (<ತೇಟ್$_2$) + ಉರಿ$_2$ + ಗಿಡ (<ಗಿಡು) ]

**ಚೇಳುವಾಲ, ಚೇಳುಬಾಲ** (ನಾ). ೧. ಚೇಳಿನ ಬಾಲ. ೨. = ಚೇಳುಕೊಂಡಿಗಿಡ ೨ : "ಯುಗಫಲ–ಕೊಡಸಿಗೆ, ಚೇಳುವಾಲ" (ಒಷಧಿ. ೦೩೨); ಚೇಳುವಾಲದ ಗಿಡುವಿನ ಬೇರು, ಗಂಟುಭಾರಂಗಿ ಇಷ್ಟನು ಸಮಾಂಶವಾಗಿ ತೆಗೆದುಕೊಂಡು (ವೈದ್ಯಸಾ. I, ೦೫೦). **ಚೇಳುಬಾಲ** : ೨. "ಅಹಿದಂಷ್ಟ್ರಾ–ಚೇಳುಬಾಲ" (ಅಕಾನಿ. ೨-೧೧) ; ತಗಚೆಸೊಪ್ಪಿನ ರಸ, ಚೇಳುಬಾಲದ ಸೊಪ್ಪಿನ ರಸ . . . ಪ್ರಾತಃಕಾಲದಲ್ಲಿ ಗ ೪ ತೂಕವಂ ಸೇವಿಸುವುದು (ಸಕವೈ. ೨೦೬). [ ಚೇಳು$_1$(<ತೇಟ್$_2$) + ಬಾಲ$_1$ ]

**ಚೇಳುವಾಲಿ, ಚೇಳಂವಾಳಿ** (ನಾ). = ಚೇಳುವಾಲ ೨: "ಉಷ್ಣಧೂಮ–ಚೇಳುವಾಲಿ" (ಓಷಧಿ. ೦೭): "ವೃಶ್ಚಿಕಾಹ್ವಾ–ಚೇಳುವಾಲಿ" (ಓಷಧಿ. ೦೩೭). **ಚೇಳುವಾಳಿ**: "ಭೂವೃಶ್ಚಿಕಾಳಿ – ಚೇಳುವಾಳಿ" (ಓಷಧಿ. ೧೧೩). [ <ಚೇಳುವಾಲ ]

**ಚೇಳುವಾಳಿ** 'ಚೇಳಂವಾಲಿ' ನೋ.

**ಚೇಟ್** 'ತೇಟ್$_{2}$' ನೋ.

**ಚೈ** 'ಚಯ್$_{2}$' ನೋ.

**ಚೈಕೋಲ್** (ನಾ). ಒಂದು ಪ್ರದೇಶದ ಹೆಸರು (?) : ಅದಟ ತದನನ್ತರ ಚೈಕೋಲ ತಾಟಮರ ಅದಟ ತದನಾನ್ತರ ಮಟ್ಟಜೆಯ ಕುರಟಿಗೊಣ್ಡ (ಸೌಇಇ. IX-1, ೪೧–೨೩ ; ?). [ ? ]

**ಚೈಗುಡು** 'ಚೆಯ್ಗುಡು' ನೋ.

**ಚೈತ** (ಗು). ಚಿತೆಗೆ ಸಂಬಂಧಿಸಿದ. 'ಚೈತಾಗ್ನಿ' ಪರಾ. [ ಸಂ. ]

**ಚೈತನ್ಯ** (ನಾ). ೧. ಜೀವದ ಲಕ್ಷಣ ; ಜೀವಂತಿಕೆ. ೨. ಗ್ರಹಣಶಕ್ತಿ ; ಬುದ್ಧಿಶಕ್ತಿ; ಅರಿವು ; ಪ್ರಜ್ಞೆ : "ಚೇತನೆ ಚೈತನ್ಯಂ" (ಪಸುತ್ತಕೋ. ೧೧೩–೨೭): ಮುನಿಯ ಮಾತಿನ ಬಳಿಗೆ ಸಿಲುಕಿತು ಜನಪತಿಯ ಚೈತನ್ಯವ್ಯಾಗ (ಕುವ್ಯಾಸ. ೦–೯೩). ೩. ಜೀವ ; ಆತ್ಮ ; ಚಿತ್‌ಶಕ್ತಿ : ಭೂತಚತುಷ್ಟಯ ಸಂಭೂತಚೈತನ್ಯಂ ಪಿಷ್ಟೋದಕಗುಡಧಾತಕ್ಯಾದಿಯತ್ತಣಿಂ ಮದಶಕ್ತಿ ಪುಟ್ಟುವಂತೆ ಪುಟ್ಟುಗುಂ (ಶಾಂತಿಪು. ೮–೧೨೮ ವ) ; ಜಡವಸ್ತುಗಳಲ್ಲಿ ಚೈತನ್ಯವು ಪೂರ್ಣವಾಗಿ ತಿರೋಹಿತವಾಗಿರುವುದು (ಶತ್ರಿ. ೯) : ಎಲ್ಲಾ ಪ್ರಾಣಿಗಳಲ್ಲಿಯೂ ದೇವರ ಚೈತನ್ಯ ಇದೆ ಎಂದು ತಿಳಿಯಬೇಕು (ನೀತಿಚಿಂ. I, ೦೨). ೪. ಚಟುವಟಿಕೆ ; ಚಲನ ; ಎಚ್ಚರ : "ಮಿಡುಕು, ಮಿಡುಂಕು– ಚೈತನ್ಯೇ (ಚೇತರಿಸು)" (ಕಮಧಾ) ; ಕತ್ತಲೆಗೆ ಕಾಠಿಣ್ಯವನು ಚೈತನ್ಯವನು ಗಿರಿಗಳಿಗೆ . . . ಕೊಟ್ಟರೆ ಲೇಸು ಬಳಿಕೇನು (ಕುವ್ಯಾಆ. ೩–೭) : ಇಂಥ ಸಣ್ಣಪುಟ್ಟ ಇಂಧನವನ್ನೇ ಸಾಧನವನ್ನಾಗಿಸಿಕೊಂಡು ಮಹಾಚೈತನ್ಯಾಗ್ನಿಯೊಂದು ದೇಶದಲ್ಲೆಲ್ಲ ಏಳುವದಿತ್ತು (ಸಮುಚೀ. ೭೧೯). ೫. ಶಕ್ತಿ ; ಸಾಮರ್ಥ್ಯ : ಒಬ್ಬ ಹಣಗಾರನು ಸಾವಿರಾರು ವರಹಗಳ ಚೈತನ್ಯವುಂಟಾದವನಾಗಿದ್ದು (ಕಥಾಮಂ. IV, ೦೩). 'ಚೈತನ್ಯಗೆಡು', 'ಚೈತನ್ಯದಾಯಕ' ಪರಾ. ೬. ಬಂಗಾಳದಲ್ಲಿ ಭಕ್ತಿಪಂಥವನ್ನು ಪ್ರಚುರಪಡಿಸಿದ ಒಬ್ಬ ಸಂತ; ಗೌರಾಂಗಪ್ರಭು: ತನ್ನ ಭಕ್ತಿಭಾವನೆಯಿಂದ ಉತ್ತರಭಾರತವನ್ನು ಚೇತನಗೊಳಿಸಿದವನು ಚೈತನ್ಯದೇವ (ಭಾಕರ. ೨೮೯). [ ಸಂ. ]

**ಚೈತನ್ಯಂಬಡೆ, ಚೈತನ್ಯವಡೆ** (ಕ್ರಿ). ೧. ಜೀವಂತವಾಗು ; ಜೀವದುಂಬಿಕೊಳ್ಳು : ಮೊದಲ್ತೋಱಿದ ಚಿತ್ರವೆ ಚೈತನ್ಯಂಬಡೆದಂತೆ ಮನುದೇಶ್ವರನೊರ್ವಂ ಮನೆಯುಂ ಪೊಕ್ಕು (ಅಯುಕಾ. ೯–೨೩). **ಚೈತನ್ಯವಡೆ**: ೧. ಹೇಮಗಂಭಂಗಳ್ ಚೈತನ್ಯವಡೆದು ಮುಂಬರಿದೆಡೆಯಾಡುವಂತೆ ತತ್ತುವರಿಯ ಹೊಂಬಾಳೆದೊಡೆಗಳೊಪ್ಪಿದುವು (ಕೋಹಕ. ೨೩–೦೭). ೨. ಚೇತರಿಸು ; ಎಚ್ಚರು : ಅನ್ನವರ ಹನುಮಂತ ನಸು ಚೈತನ್ಯವಡೆದನು (ಕಾಶಿರಾ. ೨೩–೨೭). [ ಚೈತನ್ಯ + ಪಡೆ$_{1}$ ]

**ಚೈತನ್ಯಗೆಡು** (ಕ್ರಿ). ಸಾಮರ್ಥ್ಯಗುಂದು ; ಉತ್ಸಾಹವಿಲ್ಲದಂತಾಗು : ತೂಕಡಿಕೆಯುಂಟಾಗಿ ವ್ಯಕಾಂತಿಗುಂದಿ ಚೈತನ್ಯಗೆಟ್ಟು ನುಡಿಯಿಲ್ಲದೆ . . . ಕಷ್ಟವುಂಟಾಗಿರ್ಪುದೆ ಅಭಿನ್ಯಾಸ ಸನ್ನಿಪಾತಲಕ್ಷಣವೆಂದು ಅರಿದುಕೊಳ್ವುದು (ಸಳವೈ. ೧೭೭). [ ಚೈತನ್ಯ + ಕೆಡು$_{1}$ ]

**ಚೈತನ್ಯದಾಯಕ** (ಗು). ಸಾಮರ್ಥ್ಯವನ್ನು ಕೊಡುವ; ಉತ್ಸಾಹವನ್ನು ನೀಡುವ: ವನ್ಯಮೃಗನ ಧ್ವನಿಯೂ ಗಾಡಿಯ ಧ್ವನಿಯೂ ಮಾತ್ರ ಆಗಾಗ್ಗೆ ಅವನ ಚೈತನ್ಯದಾಯಕವಾದ ಯವ್ವನದ ನಿದ್ರೆಯನ್ನು ಕೆಡಿಸುತ್ತವೆ (ಮುಳಿನಾ. ೦೩). [ ಸಂ. ]

**ಚೈತನ್ಯದಾಯಿ** (ಗು). = ಚೈತನ್ಯದಾಯಕ: ಚೈತನ್ಯದಾಯಿಯಾದ ಹೊಸಗಾಳಿಯನ್ನು ಸೇವಿಸಿದನು (ಪುನರು. ೧೩೩). [ ಸಂ. ಚೈತನ್ಯದಾಯಿನ್ ]

**ಚೈತನ್ಯಭಾವಿ** (ನಾ). ೧. ಆತ್ಮಸ್ವರೂಪಿ ; ಚಿತ್‌ಸ್ವರೂಪನಾದವನು : ಅಪರಿಮಿತ ಸೂಕ್ಷ್ಮದೊಳಖಿಳಮಂ ಕಪಟನಾಟಕಸೂತ್ರವಿಧ್ಯಾನಿಪುಣದಿಂ ಪ್ರಕಟಸುವ ತತ್ ಚೈತನ್ಯಭಾವಿ ಶಿವಂ (ಬಸವು. ೫೧–೩೧). ೨. ಬುದ್ಧಿವಂತನಾದವನು ; ಪ್ರಜ್ಞಾವಂತ. [ ಸಂ. ಚೈತನ್ಯಭಾವಿನ್ ]

**ಚೈತನ್ಯವಡೆ** 'ಚೈತನ್ಯಂಬಡೆ' ನೋ.

**ಚೈತನ್ಯವಡೆಸು** (ಕ್ರಿ). ಉತ್ಸಾಹವನ್ನು ತುಂಬು ; ಪ್ರೋತ್ಸಾಹಿಸು : ತೋರದಾಸೆಯನಿಕ್ಕಿ ಚೈತನ್ಯವಡೆಸಿದಳಾ ರಾಜಮುಖಿ ತನ್ನ ಸಖಿಯ (ಪಶೋಹಕ. ೨೮–೩). [ ಚೈತನ್ಯವಡೆ ( <ಚೈತನ್ಯಂಬಡೆ) + – ಸು$_{1}$ ]

**ಚೈತನ್ಯವಾದ** (ನಾ). "ಇಂದ್ರಿಯ ಗೋಚರವಾಗುವ ಬಾಹ್ಯವಸ್ತುಗಳು ವಾಸ್ತವವಾಗಿ ಭಾವನಾಮಯವಾದವು ಎಂಬ ವಾದ" (Idealism. ಇಂಳಿನಿ) : ಚೈತನ್ಯವಾದಕ್ಕೆ ಪುಷ್ಟಿಕೊಡುವ ೨೦ನೇ ಶತಮಾನದ ಜೀವಶಾಸ್ತ್ರಜ್ಞರ ಕಾಣಿಕೆ . . . ಸಹಾಯ್ಯಕವಾಗಿದೆ (ಮುಕ್ಯಾರ. ೩೮ ಟೀಕೆ). [ ಚೈತನ್ಯ + ವಾದ$_{3}$ ]

**ಚೈತನ್ಯಸ್ಥ** (ನಾ). ೧. ಪ್ರಜ್ಞಾಶೀಲ ; ಬುದ್ಧಿವಂತ : ಅತುಳಿತಾನಂದಿತ ಪರವಶೀಯುತ ಮಹಿಮ ತತ್ತ್ವಸ್ಫುರಣಗತಿಮತಿ ಸಕಾಯ ಸಕರ್ವ ಚೈತನ್ಯಸ್ಥ ರತಿಮಿತಿ ಸತತಮುಂ ನಿಮ್ಮಲ್ಲಿರಲು ಸಮ್ಮತಿಸಿ ಕರುಣಿಸು (ಬಸವು. ೬೦–೫೯). ೨. ಹಣವಂತ ; ಶ್ರೀಮಂತ. [ ಸಂ. ]

**ಚೈತನ್ಯಾತುಮ** (ನಾ). ಚೈತನ್ಯಸ್ವರೂಪವಾದ ಆತ್ಮ ; ಪರಮಾತ್ಮ : ಪ್ರೀತಿ ಮಿಗಲಾ ಹರಿಯ ಚೈತನ್ಯಾತುಮನು ತಾನೆಂಬ ನಿಜಧ್ಯಾನಾತಿಶಯಮಳವಡಲು ವ್ಯಷ್ಟಿಸಮಾಧಿಯೆನಿಸುವದು (ಗಗಿಶಾ. ೦೩–೩೭). [ <ಚೈತನ್ಯಾತ್ಮ ]

**ಚೈತನ್ಯಾತ್ಮ** (ನಾ). = ಚೈತನ್ಯಾತುಮ: ಹರಿಯಂತಿರಲಿ ಚೈತನ್ಯಾತ್ಮನಾತನ ಮಾತದೇಕೆಂದ (ಕುವ್ಯಾದರ್ಶ. ೦೩–೫೪). [ ಚೈತನ್ಯ + ಆತ್ಮ ]

**ಚೈತಾಗ್ನಿ** (ನಾ). ಚಿತೆಯ ಬೆಂಕಿ : ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷದ್ಬಲಮಂ ಸುಟ್ಟನುದಾತ್ತಪುಣ್ಯನವನಂ ಚೈತಾಗ್ನಿಯಿಂ ಸುಟ್ಟನಿಲ್ಲ (ಶಂಕಥಾ. ೧೩–೬೦). [ ಚೈತ + ಅಗ್ನಿ ]

**ಚೈತ್ತ** (ಗು). ಚಿತ್ತಕ್ಕೆ ಸಂಬಂಧಿಸಿದ : ಲೋಕದಲ್ಲಿ ಜ್ಞಾನ ಸುಖ ದುಃಖ . . . ಮೊದಲಾದ ಭಾವಗಳು ಸರ್ವಜನ ಪ್ರಸಿದ್ಧಗಳಾಗಿರುತ್ತವೆ. ಇವುಗಳಿಗೆ ಮೂಲವಾಗಿರುವುದನ್ನು ಚಿತ್ತವೆಂದೂ. ಇವುಗಳನ್ನು ಚೈತ್ತವೆಂದೂ ಸಾಮಾನ್ಯವಾಗಿ ವ್ಯವಹರಿಸುವರು (ಹಿಂದಸಾ. ೦೦೯). [ ಸಂ. ]

**ಚೈತ್ಯ** (ಗು). ೧. ಚಿತೆಗೆ ಸಂಬಂಧಿಸಿದ. (ನಾ). ೨. ಚಿತಾಭಸ್ಮವನ್ನು ಹೂಳಿದ ಜಾಗದಲ್ಲಿ ಕಟ್ಟಿದ ಸ್ಮಾರಕ : ಚೈತ್ಯ ಎಂದರೆ ಶವದಹನಾನಂತರ ಭಸ್ಮವನ್ನು ಇಡುವ ಸ್ಥಳ (ಸೌಂದಸ. ೦೨೦). ೩. ಯಜ್ಞಶಾಲೆ. ೪. (ಬೌದ್ಧ ಅಥವಾ ಜೈನ) ದೇವಾಲಯ : ಒಪ್ಪಂಬೆತ್ತುವಂ ಮಾಡಿಸಿದರತುಲ ಚೈತ್ಯಂಗಳಂ ಭಕ್ತಿಯಿಂದಂ (ಚಂದ್ರಪು. ೩–೮೦); ಏನೊಳ್ಪುರ್ವೊ ಪೋಲ್ತು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨–೭೪); ಬುದ್ಧನು ಚರ್ಚೆ ನಡೆಸಿದ ಸ್ಥಳದಲ್ಲಿ ಅರವತ್ತು ಮೊಳ ಎತ್ತರದ ಚೈತ್ಯವನೆತ್ತಿ (ಪ್ರವಾಇ. I, ೧೭೯). ೫. ಜೀವಾತ್ಮ. ೬. ಅರಳಿಮರ. 'ಚೈತ್ಯಕ್ಷಿತಿಜಾತ' ಪರಾ. [ ಸಂ. ]

**ಚೈತ್ಯಕ** (ನಾ). ಸ್ಮಾರಕ ಶಿಲೆ ; ಸ್ಮಾರಕ : ಪ್ರೀತ್ಯಾಶೈಲಮಿದಂ ಸ್ವಯಂ ನೃಪತಿನಾ ಸಂಸ್ಥಾಪಿತಂ ಚೈತ್ಯಕಂ (ಎಇ. XXVII, ೧೩೨–೨ ; ೬ನೆಯ ಶತ) ; ಅವಳ ಮರಣದ ಸ್ಮಾರಕವಾಗಿ ಮತ್ತು ತನ್ನ ಪ್ರೀತಿಯ ಸ್ಮಾರಕವಾಗಿ ಅವಳ ಗಂಡನು ಶಿಲೆಯ ಚೈತ್ಯಕವನ್ನು ನಿಲ್ಲಿಸುತ್ತಾನೆ (ಕಶಾಅ. ೪೨೦). [ ಸಂ. ]

**ಚೈತ್ಯಕ್ಷಿತಿಜಾತ** (ನಾ).ಅರಳಿಮರ; ಅಶ್ವತ್ಥವೃಕ್ಷ: ತುಂಗಶಾಖಾಚ್ಛದಚ್ಛನ್ನ ತರುಚ್ಛಾಯಾವನೀಭಾಗದೊಳಳವಡೆ ಕೈಯಿಕ್ಕಿ ಕೊಂಡಿರ್ದು ಚೈತ್ಯಕ್ಷಿತಿಜಾತ ಪ್ರಾಂತದೇಶಸ್ಥಿತ ಕನಕಮಯ ಪ್ರಾತಿಹಾರ್ಯಾಷ್ಟಕಾರ್ಹತ್ಪ್ರತಿಬಿಂಬಭ್ರಾಂತಿಯಂ ಮಾಡಿದಂ (ಚಂದ್ರಪ್ರ. ೨-೬೨). 'ಚೈತ್ಯವೃಕ್ಷ' ಪರಾ. [ ಚೈತ್ಯ + ಕ್ಷಿತಿಜಾತ ]

**ಚೈತ್ಯಗೃಹ** (ನಾ). ಜಿನಾಲಯ; ಬಸದಿ: ಭಕ್ತಿಭರಾವನತನಪವರ್ಗಲಕ್ಷ್ಮಿಯ ಮನಮಂ ಪುಗುವಂತೆ ಚೈತ್ಯಗೃಹಮಂ ಪೊಕ್ಕಂ (ಮಲ್ಲಿಪು. ೧೧-೧೧೪). [ ಚೈತ್ಯ + ಗೃಹ ]

**ಚೈತ್ಯಗೇಹ** (ನಾ). = ಚೈತ್ಯಗೃಹ: ಅನಿಶಂ ಪೊಂಪುಟಿವೋಪುದಾ ಪುರದ ಚಂಚಚ್ಚೈತ್ಯಗೇಹೋತ್ಕರಂ (ಚಂದ್ರಪ್ರ. ೧೧-೬೩). [ ಚೈತ್ಯ + ಗೇಹ ]

**ಚೈತ್ಯಪುರುಷ** (ನಾ). ಜೀವಾತ್ಮ: ಚೇತನವೂ ಮನವೂ ನಮ್ಮಲ್ಲಿ ಹಣಿಕೆ ಹಾಕುತ್ತ ಪ್ರತಿವ್ಯಕ್ತಿಯೊಳಗಿನ ಚೈತ್ಯಪುರುಷನು (Psyche) ಈ ಪೃಥ್ವಿಯಲ್ಲಿ ಹೇಗೆ ಮುಂದುವರಿಯುತ್ತಿದ್ದಾನೆಂಬುದರ ಒಳನೋಟವನ್ನು ನಮಗೆ ತೋರಿಸಿಕೊಡುವವು (ಮಹಾಯೋ. ೧). [ ಚೈತ್ಯ + ಪುರುಷ ]

**ಚೈತ್ಯಭವ** (ಗು). ಚೈತ್ಯಗೃಹದಲ್ಲಿ ಉದ್ಭವಿಸಿದ,-ಉಂಟಾದ: ಗಗನದ ತೆಱಪಂ ತೀವಿತ್ತು ಚೈತ್ಯಭವ ಶಂಖರವಂ (ಚಂದ್ರಪ್ರ. ೮-೯೯). [ ಚೈತ್ಯ + ಭವ ]

**ಚೈತ್ಯರಾಜಿ** (ನಾ). ಬಸದಿಗಳ ಸಾಲು: ನೀಮೆರಡುವರೆ ದ್ವೀಪದ ಚೈತ್ಯರಾಜಿಗೊಯ್ದುದೆ ಬೆಸಂ ಬೆಸಂ ವಿಜಿತುಂಟೇ (ಶಾಂತಿಪು. ೯-೬೨). [ ಚೈತ್ಯ + ರಾಜಿ$_1$ ]

**ಚೈತ್ಯವೃಕ್ಷ**(ನಾ). = ಚೈತ್ಯಕ್ಷಿತಿಜಾತ: "ಚೈತ್ಯದ್ರುಮ – ಚೈತ್ಯವೃಕ್ಷು ಇದ. ಅರಳಿಯ ಮರಕ್ಕಂ (ಅಪ್ಪುದು)?" (ಒಷಧಿ.೩೮); ಶ್ರೀಮದಶೋಕ ಪ್ರಾಸಾದಾಮರತರು ಚೈತ್ಯವೃಕ್ಷ ಸಿದ್ಧಾರ್ಥ ಮಹಾಸಾಮಜ ರಿಪುವಿಪ್ಪರ ಲಕ್ಷ್ಮೀಮಂಟಪ ಗಂಧಕುಟಿಯದೇನೊಪ್ಪಿದುದೋ (ಅಜಿಪು. ೬-೨೦); ದೇವಾಲಯವು ಪವಿತ್ರವಾದ ತೀರ್ಥವಾದುದರಿಂದ ಸ್ನಾನಕ್ಕಾಗಿ ಕೊಳ (ಕಲ್ಯಾಣಿ); ಚೈತ್ಯವೃಕ್ಷ . . . ಮುಂತಾದುವನ್ನು ನಿರ್ಮಿಸಬೇಕು (ಹೊಯ್ಸಳವಾ. ೦೨). [ ಚೈತ್ಯ + ವೃಕ್ಷ ]

**ಚೈತ್ಯಸಂಪ್ರಜ್ಞೆ** (ನಾ). ಚೈತ್ಯದ ಅರಿವು: ತನ್ನ ಭೀಪ್ಸಾ ದೂತನಂ ಮೃಣ್ಮಯದ ಜಡಕೆ ಸಂವಾದಿಯಾಗಿರ್ಪ ಸುಪ್ತಚಿತ್ತದ ಗುಪ್ತತಿಮಿರದ ಸೆರೆಯ ಚೈತ್ಯಸಂಪ್ರಜ್ಞೆಯಂ ಪುಡುಕಿ ಕಂಡ್ಯತರಲ್ ಕಳುಹುವಧ್ಯಾತ್ಮದೋಲ್ ಶ್ರೀರಾಮನಟ್ಟಿದಾ ಸುಗ್ರೀವದೂತೋತ್ತಮಂ ಪೊಕ್ಕನೈಸಲೆ ಲಂಕೆಯಂ (ಶ್ರೀರಾಮಾ. ೪೩೩-೬). [ ಚೈತ್ಯ + ಸಂಪ್ರಜ್ಞೆ ]

**ಚೈತ್ಯಾಲಯ, ಚೈತ್ಯಾಳಯ** (ನಾ). ಜೈನ ಅಥವಾ ಬೌದ್ಧ ದೇವಾಲಯ: ಚೈತ್ಯಾಲಯ ನಿರ್ಮಾಣ ನಿರ್ಮಾಪಣ ಶಾಸನಾರೋಪಿತ ಗ್ರಾಮಕ್ಷೇತ್ರ ವಿತರಣಮುಂ (ಆದಿಪು. ೧೩-೦೩ ವ); ಮಂದರಾಚಲದ ಕೃತ್ರಿಮ ಚೈತ್ಯಾಲಯಂಗಳಿಲ್ಲಂ ಸೌಧಾಲಯಂಗಳೆನಿಸೆಯುಂ (ಅಜಿಪು. ೯-೬೬ ವ); ಚೈತ್ಯಾಲಯಗಳು ಬುದ್ಧನನ್ನು ಪೂಜಿಸುವ ಸ್ಥಳಗಳು (ಪ್ರಾ ಪಾ ಸು. ೨೪). **ಚೈತ್ಯಾಳಯ:** ಸಿಂಹಣನನ್ದ್ಯಾಚಾರ್ಯರ್ ಮುಡಿಪೆವೆದೆ[ಯೊಳ್] ಬೆಡಂಗಂ ಪಡೆದಿರೆ ಮಾಡಿಸಿ ಜನೇನ್ದ್ರಚೈತ್ಯಾಳಯಮಂ (ಕಇಅ. ೬೨-೮-೦೦; 1008). [ ಚೈತ್ಯ + ಆಲಯ ]

**ಚೈತ್ಯಾವಸಥ** (ನಾ). = ಚೈತ್ಯಗೃಹ: ರಸವತ್ಸಂಗೀತ ನಾನಾ ಪಟುಪಟಹ ನಿನಾದಂಗಳಿಂ ತೀವೆ ಚೈತ್ಯಾವಸಥಂಗಳ್ (ಸುಕುಮಾ. ೧೧-೫೩). [ ಚೈತ್ಯ + ಅವಸಥ ]

**ಚೈತ್ಯಾವಾಸ** (ನಾ). = ಚೈತ್ಯಗೃಹ: ಅಮರನಿಕಾಯಾನ್ವಿತಂ ವಿಶ್ರುತಾಕೃತ್ರಿಮ ಚೈತ್ಯಾವಾಸಪೂಜೋತ್ಸವದಿನಗಲನಲ್ಲಿಂದಮೆಂದುಂ ಸುರೇಂದ್ರಂ (ಸುಕುಮಾ. ೯-೪೦). [ ಚೈತ್ಯ + ಆವಾಸ ]

**ಚೈತ್ಯಾಳಯ** 'ಚೈತ್ಯಾಲಯ' ನೋ.

**ಚೈತ್ಯಾಳಿ** (ನಾ). ಜಿನಗೃಹಗಳ ಸಾಲು: ಎರಡುಂ ವಿದ್ಯಾಧರಶ್ರೇಣಿಯೊಳೆಡೆಯೆಡೆಯೊಳ್ ಜೈನಚೈತ್ಯಾಳಿ ತಳ್ತಂಬರಮಂ ತಟ್ಟೈಸಿ (ಶಾಂತಿಪು. ೨-೦೧೬). [ ಚೈತ್ಯ + ಅಳಿ$_4$ (=ಆಲಿ$_4$) ]

**ಚೈತ್ಯೇಶ** (ನಾ). = ಚೈತ್ಯಪುರುಷ: ಅಂತರ್ಯದೊಂದು ಚೈತನ್ಯ ನಿನ್ನ ಕೈಂಕರ್ಯ ಕರ್ತೃವಾಗಿ ಕ್ಷೇತ್ರಜ್ಞ ಬರಲಿ ಚೈತ್ಯೇಶನಾಗಿ ಮಧುಬೋಧ ಮೋದವಾಗಿ (ಅರಳು. ೩-೧೧). [ ಚೈತ್ಯ + ಈಶ ]

**ಚೈತ್ರ** (ನಾ). ಚಿತ್ರಾನಕ್ಷತ್ರದಲ್ಲಿ ಪೂರ್ಣಚಂದ್ರನಿರುವ ತಿಂಗಳು; ಚಾಂದ್ರಮಾನ ಸಂವತ್ಸರದ ಮೊದಲನೆಯ ತಿಂಗಳು; ವಸಂತ ಋತುವಿನ ಮೊದಲ ತಿಂಗಳು; ಮಧುಮಾಸ: ಮಂದಾನಿಲಂ ತೆಂಕಣಂ ಬರೆ ಚೈತ್ರಂ ಕುಡುಪರ್ಪಲಾಜತತಿಯೋ (ಕಾದಂಪೂ. ೭೯೦); ನವಚೂತಂ ತಳಿರ್ವಂದದಿಂ ತಳಿರ್ಗುಮೇ ಸ್ಥಾಣೂತ್ಕರಂ ಚೈತ್ರದೊಳ್ (ಆಗವಿ. ೧-೧೩); ಚೈತ್ರನಾಗಮವಾಯ್ತು ಮಂಥರೆಯ ಶಿಶಿರಕ್ಕೆ (ಶ್ರೀರಾಮಾ. ೨೩-೬೦೪). [ ಸಂ. ]

**ಚೈತ್ರದೂತ** (ನಾ). ವಸಂತಾಗಮನವನ್ನು ತಿಳಿಸುವ ಹಕ್ಕಿ; ಕೋಗಿಲೆ: ನಳನಳಿಪ ಮಾಮರದ ಕೆಂದಳಿರನುಂಡು ಕುಕಿಲುವಾ ಚೈತ್ರದೂತನ ದುಃಸ್ಥಿತಿಯ ಕಂಡು (ಕೋಗಿಲೆ. ೩-೬೩). [ ಚೈತ್ರ + ದೂತ ]

**ಚೈತ್ರದೂತಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಹೂವು; ಅದಿರ್ಗಂತಿ; ಅವಿಮುಕ್ತಿ; ವಸಂತದೂತಿಕೆ: ವನಪಾಲಂ ಕಾಣ್ಕೆಗೈದಂ ವಿಚಕಿಲದರಲಂ ಪಚ್ಚೆಯಂ . . . ಚೈತ್ರದೂತೀಘನಗುಚ್ಛವ್ರಾತಮಂ (ರಾಜಶೇ. ೦೦-೨). [ ಚೈತ್ರ + ದೂತಿ ]

**ಚೈತ್ರಪವಿತ್ರ** (ನಾ). ಚೈತ್ರಮಾಸದಲ್ಲಿ ಆಚರಿಸುವ ಒಂದು ಉತ್ಸವ: ಶ್ರೀಕಣ್ಠೇಶ್ವರದೇವರ ಅಂಗಭೋಗಕ ರಂಗಭೋಗಕ ಚೈತ್ರಪವಿತ್ರಕ್ಕ ತಪೋಧನರಾಹಾರದಾನಕ್ಕ (ಎಕ. VIII, ಸೊರಬ. ೪೬೬-೧೮; 939); ಶ್ರೀಮೂಳೇಸ್ವರದೇವರ ಗ(ಂ)ನ್ಧಪುಷ್ಪಧೂಪದೀಪನಿವೇದ್ಯಕ್ಕಂ ಚೈತ್ರಪವಿತ್ರಕ್ಕಂ ಖಣ್ಡಸ್ಫುಟಿತ ಜೀರ್ಣ್ಣೋದ್ಧಾರಕ್ಕಂ (ಸೌಇಇ. XI-ii,೧೬೨-೨೬; 1112); ಚೈತ್ರಪವಿತ್ರಂಗಳೊಳು ಗಾಣದಲ್ಲಿ ವೀಸವೈದು (ಎಇ. XX, ೧೨-೦೦೬; 1167). [ ಸಂ. ]

**ಚೈತ್ರಮಾಸ** (ನಾ). = ಚೈತ್ರ: ಚೈತ್ರಮಾಸಂ ಪೋದುದು (ಕ ವಿ ಪಾ. ೫-೧೮). [ ಚೈತ್ರ + ಮಾಸ$_2$ ]

**ಚೈತ್ರಮಿತ್ರ** (ನಾ). ವಸಂತ ಋತುವಿನ ಗೆಳೆಯ; ಮನ್ಮಥ: ತುಂಬಿಯಿಂದಂ ಗಿಳಿಯಿಂದಂ ಬೀರಮಂ ಪಾಡಿಸಿ ಪೊಗಟಿಸುವಂ ಚೈತ್ರದೊಳ್ ಚೈತ್ರಮಿತ್ರಂ (ಆಗವಿ. ೧೪-೪೦). [ ಚೈತ್ರ + ಮಿತ್ರ ]

**ಚೈತ್ರರಥ** (ನಾ). ಅಲಕಾನಗರದ ವನ; ಕುಬೇರನ ಉದ್ಯಾನವನ: ಅಂತಾ ಚಿತ್ರರಥನಿಂ ಚೈತ್ರರಥಮೆಂಬ ಬನಮು ಮಚ್ಛೋದಮೆಂಬ ಸರೋವರಮುಮಾದುದಲ್ಲದೆಯುಂ (ಕಾದಂಪೂ.೬೧೧); ಅದು ಮೆಚ್ಚದು ಚೈತ್ರರಥದ ಚಿತ್ರಾಸ್ಪದಮನೆನಲ್ವೀತಶೋಕ ಪುರವರಮೆಸೆಗುಂ (ಮಲ್ಲಿಪು. ೨-೩೨). [ ಸಂ. ]

**ಚೈತ್ರಾಗಮ** (ನಾ). ವಸಂತಋತುವಿನ ಪ್ರಾರಂಭ: ಈ ಕೋಮಳ ಕಾಮಕ್ಲಿಪ್ತ ಚಿತ್ರಕ್ಕಳಲನೊಲವುಮಂ ಪುಟ್ಟಿಪಲ್ ನೋಡೆ ಪತ್ರಾವಳಿ ಶೋಭಾಂಚಿತ್ರ ಚೈತ್ರಾಗಮಪವನಪರಿಸ್ಪೃಷ್ಟ ವಾಸಂತಿಯಾವೋಲ್ (ಶಾಳುಂತ. ೩೫-೬೦). [ ಚೈತ್ರ + ಆಗಮ ]

**ಚೈತ್ರಾದೀಪ** (ನಾ). (?): ಶ್ರೀಪೌಲೋಮಿಶ ಭೂಭೃತ್ಸಮುದಯವಿನುತಂಗಳ್ ತಮಸ್ತೋಮ ಚೈತ್ರಾದೀಪಂಗಳ್ . . . ಪುಷ್ಪದಂತ ಶ್ರೀಪಾದಂಗಳ್ ಸಮುತ್ಪಾದಿಸುಗೆಮಗೆ ಹೃದಿಂದೀವರಾನಂದದೊಳ್ಪಂ (ಪುಷ್ಪಪು. ೧-೧). [ P ಇದು 'ಚೈತ್ಯಾದೀಪ' ಎಂದಿರಬಹುದೆ ? ]

**ಚೈತ್ರಾನಿಲ, ಚೈತ್ರಾನಿಳ** (ನಾ). ಚೈತ್ರಮಾಸದ ಗಾಳಿ; ವಸಂತ ಋತುವಿನ ಗಾಳಿ: ಮಳಯಾವನೀಧರಚರಂ ತಾಂ ಬಂದುದಾ ದಾನ ಬಂಧುರ ಗಂಧಾಕುಳ ಭೃಂಗಮುಂಗಜಗಜಂ ಬರ್ಪಂತೆ ಚೈತ್ರಾನಿಲಂ [ಪಾಠಾಂ. ಳಂ] (ಚಂದ್ರಪ್ರ. ೬-೩೮). **ಚೈತ್ರಾನಿಳ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಚೈತ್ರ + ಅನಿಲ ]

**ಚೈತ್ರಾನಿಳ** 'ಚೈತ್ರಾನಿಲ' ನೋ.

**ಚೈತ್ರಿ** (ನಾ).=ಚೈತ್ರ. [ ಸಂ. ಚೈತ್ರೀ ]

**ಚೈತ್ರಿಕ** (ನಾ).=ಚೈತ್ರ. [ ಸಂ. ]

**ಚೈದ್ಯ** (ಗು). ೧. ಚೇದಿದೇಶಕ್ಕೆ ಸಂಬಂಧಿಸಿದ. (ನಾ). ೨. ಚೇದಿದೇಶದ ರಾಜ; ಶಿಶುಪಾಲ: ಸೋತನ್ನ ಹರಿಯಿಂದು ಚೈದ್ಯನ ಬೂತುಗಳು ಬಣ್ಣಿಸಿದರು (ಕುಮಾ.ಸ. ೧೦-೬೯); ಶಿವಶಿವಯೆನುತ ಚೈದ್ಯನನು ಚೈವುತ ನೆರೆದ ಸುರ ಮುನಿಜನವಿರಲು (ನಿಶಾಗ. ೧೦-೬೦-೧೧). [ ಸಂ. ]

**ಚೈನಿ, ಚೈನು₁** (ನಾ). (ಉಕ) ವಿಲಾಸ; ಸುಖಭೋಗ; ಮಜ; ಷೋಕಿ: ಕಾಲೇಜಿಗೆ ಹೋಗಿ ಚೈನಿ ಮಾಡುವ ಸಂಧಿ ದೊರೆಯುವದೆಂದು ಮೊದಲಿನಿಂದ ಅಭ್ಯಾಸದಲ್ಲಿ ತೊಡಗಿದ್ದೆ (ಅನ್ನ. ೧೯೦); ರೈತಾಪಿ ಕಸುಬು ಬಿಟ್ಟು, ಚೈನಿ ಮಾಡಿಕೊಂಡು ತಿರುಗಿದವರು ಯಾರು ಉದ್ಧಾರವಾದರು ಹೇಳಿ (ಬೆಳುಮು. ೩೦೧). **ಚೈನು₁**: ಇತ್ತೀ ದಿನವೂ ಅವಳ ಮನಸ್ಸಿಗೆ ಚೈನೆಂಬುದು ಇರಲಿಲ್ಲ(ಕಾಗೆಳ. ೬೮).

**ಚೈನಿಹೊಡೆ**=ಷೋಕಿಮಾಡು; ಮಜಾಮಾಡು: ಕಾಲೇಜು ಅಂದರೆ ಚೈನಿ ಹೊಡೆಯುವದೆಂದು ಬಂದಿರಬೇಕು (ಭೂಮಿತಾ. ೫೩).

[ ←ಹಿಂ. ಮರಾ. ಚೈನ್ ]

**ಚೈನು₁** 'ಚೈನಿ' ನೋ.

**ಚೈನು₂** (ನಾ). ೧. ಸರಪಣಿ. ೨. ಕೊರಳಿನಲ್ಲಿ ಅಥವಾ ಕಾಲಿನಲ್ಲಿ ಧರಿಸುವ ಆಭರಣ: ಕಾಲಿಗೆ ಬೆಳ್ಳಿಯ ಚೈನು (ಪಡದಾ. I, ೩೫೫); ಕುತ್ತಿಗೆ ಚೈನಿಗೆ ಯಾರೋ ಕೈಹಾಕಿದಂತೆ ಭಾಸವಾಯಿತು (ಸಾವಿತ. ೧೦). [←ಇಂ. Chain]

**ಚೈಮುಂಡಾಡು** 'ಚೆಯ್ಮುಂಡಾಡು' ನೋ.

**ಚೈರಂತನ** (ಗು). ಪುರಾತನವಾದ; ಪ್ರಾಚೀನವಾದ: ಇಂತು ಕವೀಂದ್ರ ಸಮಯಮಂ ಚೈರಂತನಮಾರ್ಗದೊಳೊಂದೆ ತಿಳಿಯೆ ಪೇಟ್ಟಂ . . . ನಾಕಿಗಂ (ಕಾವ್ಯಾವ. ೯೫೯); ಚೈರಂತನ ಯೋಗಿನಾಯಕಯಶಸ್ಸಮಕೀರ್ತಿ . . . ಮಾಘಣಂದಿ ಸೈದ್ಧಾಂತಿಕಚಕ್ರವರ್ತಿ (ಚಂದ್ರಪ್ರ. ೧-೩೨). [ ಸಂ. ]

**ಚೈರಂತನಕ್ರಮ** (ನಾ). ಪ್ರಾಚೀನ ಸಂಪ್ರದಾಯ: ಮಳಲೊಂದನಲ್ಲಿ ಕುಜಿಪಂ ಮಾಡಿಟ್ಟು ಚೈರಂತನಕ್ರಮದಿಂದಾ ಮಣಲೆಲ್ಲಮಂ ಮುಗುಟ್ ಪಾರಾವಾರದೊಳ್ ಪೊಯ್ದು ಮತ್ತಮದಂ ನೋಡಿಸಿ ಕಾಣ್ಬಪೊಲ್ (ಸುಕುಮಾ. ೫-೩೩). [ ಚೈರಂತನ + ಕ್ರಮ ]

**ಚೊಂಕು** (ನಾ). (?) : ಅಲ್ಲಿ ಜಡೆಮುಡಿ ಚೊಂಕು ಮಂಡೆಯಲಿ ರುದ್ರಾಕ್ಷಿಯಲ್ಲಿ ರಚಿಸಿದ ಟೋಪಿ (ಕೋರಬು. ೪-೧೬). [ ? ]

**ಚೊಂಗೆ** (ನಾ). ರೊಟ್ಟಿಯಂತಹ ಒಂದು ಬಗೆಯ ಸಿಹಿ ಖಾದ್ಯ; "ಒಂದು ಸೀ ತಿನಿಸು" (ಜಾನಕೋ. ೫೦). [ ←ಮರಾ. ಚೋಂಗಾ ]

**ಚೊಂಚ** (ನಾ). ಸೊಟ್ಟಗೈಯವನು; ಚೊತ್ತ: ಚೀಲ ಚೀಲ ಬೋನವ ಬಸಿದು ಚೊಂಚರಿಗೆ ನೀಲವ್ವ ಉಣಿಸಿ ಬರುವಳು (ಸಿದ್ಧಪು. ೫-೨೩); ಗುಳ್ಳಗಣ್ಣ, ಗುಜ್ಜ, ಚೊಂಚ ಎಂದು ನಿಂದಿಸುವುದು ಅನ್ಯಾಯ (ದಾಬಾತ್ರಿ. ೩೦). [ ಚೊಂಚು + -ಅ₇ ]

**ಚೊಂಚು** (ನಾ). ಡೊಂಕುತನ; ವಕ್ರತೆ. 'ಚೊಂಚುಗೈ' ಪರಾ. [?]

**ಚೊಂಚುಗೈ** (ನಾ). ಡೊಂಕಾದ ಕೈ; ಸೊಟ್ಟಗೈ: ಆ ಚೊಂಚುಗೈ ಹೆಣ್ಣು ಮಗಳಿಗೆ ಜೀವನದಲ್ಲಿ ಇಷ್ಟಾದರೂ ಸಮಾಧಾನ ಬೇಡವೆ (ಸಮುಜೀ. ೯೭೭).

[ ಚೊಂಚು + ಕೈ₂ (< ಕೆಯ್₃) ]

**ಚೊಂಟ** 'ಸೊಟ್ಟ' ನೋ.

**ಚೊಂತತಟಾಕ** (ನಾ). ಒಂದು ಕೊಳದ ಹೆಸರು: ಚೊಂತ ತಟ(ಟಾ)ಕವು ವಟವೃಕ್ಷಮ (ಇಳ. VIII, ೨೦೪-೩೭; ಶು. 10ನೆಯ ಶತ).

[ ಚೊಂತ₂ + ತಟಾಕ ]

**ಚೊಂದಕಪ್ಪೆ** (ನಾ). ಬಾಲದ ಕಪ್ಪೆ; ಗೊದಮಟ್ಟೆ: ಚೊಂದಕಪ್ಪೆ ಇಲ್ಲವ ಬಾಲಕಪ್ಪೆಗಳು ತಮ್ಮ ತಮ್ಮ ಅಂಗಿಯನ್ನು ಕಳಚಿ ಕಪ್ಪೆಯಾಗುವುವು (ಬಾಲಪ್ರ. III, ೧೩೨೦). [ ←ತುಳು. ತೊಂದಪ್ಪೆ ]

**ಚೊಂಬು** 'ಚೆಂಬು₁' ನೋ.

**ಚೊಂಯ್** (ನಾ). ಒಂದು ಅನುಕರಣ ಪದ: ಚೊಂಯ್ ಚೊಂಯ್ ಅನ್ನೋ ಸಮ್ಮ ಎಣಿಸುತ್ತ . . . ಕೂತಿರುತ್ತಾರೆ ಆರೇಳು ಮಂದಿ (ಚಂಗಾಲಿ. ೧೩೬).

**ಚೊಕ್**(ನಾ). ಒಂದು ಅನುಕರಣ ಶಬ್ದ: ಝೂಳಿಂಬ ಝುಮ್ಮೆಂಬ ಚಕ್ಕೆಂಬ ಚೊ[ಪಾಠಾಂ. ಧೊ]ಕ್ಕೆಂಬ . . . ಕೂರಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಹರ. ಹ. ೧೩೯-೭).

**ಚೊಕ್ಕ, ಚೊಕ್ಕು₂, ಚೋಖ** (ಗು). ೧. ಶುದ್ಧವಾದ; ಸ್ವಚ್ಛವಾದ: ಸಕ್ಕರೆ ಬೆರಸಿದ ಚೊಕ್ಕ ಪಾನಕಕನ್ನು ಮಿಕ್ಕಿ ಮರೆಯುತಲಿದೆ ರಕ್ಕಸಾರಿಯ ಧ್ಯಾನ (ಜಗದಾ. ೧೦೧). 'ಚೊಕ್ಕಚಿನ್ನ' ಪರಾ. (ನಾ). ೨. ಸುಂದರವಾದುದು; ಮನೋಹರವಾದುದು: "ನಿಗರ, ಸೆಟ್ಟಿ, ಕೆನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆ ಪಂದುದು, ಪರಿವಡೆದುದು – ಈ ೧೪ ಮನೋಹರಂ" (ಕಕಸಾ. ೧೧-೨೦೦); "ಚೊಕ್ಕವೆನಲೊಳ್ಳಿತ್ತು" (ಕರ್ಣಾನಿ. ೧೩); ಒಕ್ಕಲಿಗಂ ಚೊಕ್ಕಲೆಗಳಂ ತಂದು ಪೂಟ್ಟಿರ್ದ ಕರಗದ ನೀರಂ ಕಟ್ಟಿ ದೋಗರದ ಪೊಟ್ಟೆಯಂ ತೆಗದು (ಪುಣ್ಯಾಸ್ರ. ೧೨-೧೬ ವ); ಸುಗಂಧದ ಪುಷ್ಪಸಮೂಹದ ಮಾಲೆಯಿಂ ಚೊಕ್ಕಮಾದ ಮೇಲ್ಕಟ್ಟಸೆವುತಿರಲಾಗಿ (ಮನೋಲಿ. ೧-೩೬ ಟೀಕು). ೩. ಸ್ವಚ್ಛವಾದಂದು; ಶುದ್ಧವಾದುದು; ಕಲಂಕವಿಲ್ಲದುದು; ದೋಷರಹಿತವಾದುದು: ಈ ಪಂಥದವರು ಚೊಕ್ಕಾದ ಮರಾಠಿಯಲ್ಲಿ ವಿಪುಲಸಾಹಿತ್ಯವನ್ನು . . . ನಿರ್ಮಿಸುತ್ತಾ ಬಂದಿದ್ದಾರೆ (ಮಹಾಹಿ. ೧೦). ೪. ಉತ್ತಮನಾದವನು; ಶ್ರೇಷ್ಠನಾದವನಂ; ದೋಷರಹಿತನಾದವನು: ಯಜನ ಯಾಜನವಧ್ಯಯನಾಧ್ಯಾಪನ . . . ಮಾಡುವ ಚೊಕ್ಕ ದ್ವಿಜಮಹಾರಾಜರೊಪ್ಪಿದರು (ವೋಹಕ. ೩-೩೮); ಚೋದ್ಯಪುರುಷನೆ ಚೊಕ್ಕನೆ ಜಯ ಭವರೋಗವೈದ್ಯ ಚಿದಂಬರಪುರುಷ (ಧರಕ. ೬೪-೧೦೮); ಅಕ್ಕನ ರೂಪಿಗೆ ತಕ್ಕ ಚೆನ್ನಿಗನಿವ ಚೊಕ್ಕನಾದೊಡೆ ವೀಣೆಯಲಿ ಸಕ್ಕರೆ ಪಾಲೊಳು ಬೆರೆದಂದವೆಂದು (ನಾಗಕು. ೧೨-೮೫). ೫. ಪರಿಶುದ್ಧತೆ; ಸ್ವಚ್ಛತೆ. **ಚೊಕ್ಕು₂**: ೩. ಕಳವು ಆಗ್ಯಾವೇನೋ ಅಂತ ಲೆಖ್ಖಪತ್ರದ ಕಾಗದಾ ತಗದು ನೋಡತೇನಿ, ಲೆಖ್ಖ ಎಲ್ಲಾ ಚೊಕ್ಕು (ಗಂಮಾಯು. ೧೩೮). 'ಚೊಕ್ಕತನ' ಪರಾ. ೬. ಸೌಂದರ್ಯ; ಚೆಲುವು: ಅಕ್ಕನಾ ಗಾಂಧಾರಿ ವಿಪಹಕೆ ತೆಕ್ಕೆಯೊಳಗೈದಿರ್ದ ಭಾವನ ಚೊಕ್ಕ ನೋಡೀತನಿಗೆ ಬೇಡಿದರಮ್ಮ ನಿನ್ನುವನು (ಜಿನಭಾ. ೪-೧೦೮). **ಚೋಖ**: ೩. ಆಚಾರ್ಯರು . . . ಎಷ್ಟು ಚೋಖಾಗಿ ಪಾಲು ಮಾಡಿಟ್ಟರು. ಇದಕ್ಕನಬೇಕು ನ್ಯಾಯ ಪಕ್ಷಪಾತಿ ಅಂತ! (ಸಮುಜೀ. ೧೪೦).

**ಚೊಕ್ಕಮಾಡು**=ಶುದ್ಧಮಾಡು; ಸ್ವಚ್ಛಮಾಡು: ನಾವೇ ಬೇಗ ತೆಗೆದು ಒಳಗೆಲ್ಲ ಗುಡಿಸಿ ಚೊಕ್ಕಮಾಡ್ತೇವೆ (ರಂಗಳ. ೩೦).

[ ದೇ.೩ ತಮಿ. ಚೊಕ್ಕ, ಚೊಕ್ಕು; ಮಲ. ಚೊಕ್ಕ, ಚೊಜ್ಜು; ತುಳು.ತೆಲು. ಚೊಕ್ಕ. / ಪ್ರಾ. ಚೋಕ್ಖ. / ಸಂ. ಚೋಕ್ಷ ]

**ಚೊಕ್ಕಕಾಲ** (ನಾ). ಉತ್ತಮವಾದ ಕಾಲ; ಸುಖದ ಕಾಲ: ಸೊಕ್ಕೀಟು ತಿದ್ದುದು ಸುಖತೃಪ್ತಿ ತೋಱುವ ಚೊಕ್ಕಕಾಲವನೇನನೆಂಬೆ(ಭರತ. ೪೧-೯೭).

[ ಚೊಕ್ಕ + ಕಾಲ ]

**ಚೊಕ್ಕಚಿನ್ನ** (ನಾ). ಶುದ್ಧವಾದ ಚಿನ್ನ; ಅಪ್ಪಟ ಬಂಗಾರ; ಅಪರಂಜಿ: ಚೆನ್ನಾಗಿ ಪುಳಿದೊಡೆದೊಪ್ಪವಿಕ್ಕಿದ ಚೊಕ್ಕಚಿನ್ನದ ಪತುಮೆಗಳಂತೆ (ಮೋಹತ. ೧೮-೩೬). [ ಚೊಕ್ಕ + ಚಿನ್ನ$_1$ ]

**ಚೊಕ್ಕಟ, ಚೊಕ್ಕಟ್ಟ, ಚೊಕ್ಕಣ, ಚೊಕ್ಕಳ** (ನಾ). ೧. ಅಂದ; ಸೊಬಗು; ಸೌಂದರ್ಯ: "ಗರಗರಿಕೆ ಚೊಕ್ಕಟಂ" (ಚತುನಿ.೯೦); "ಸುಭಗತೆಗೆ ಚೊಕ್ಕಟಂ ಬುದಕ್ಕುಂ" (ಶತರ. ೩೬). ೨. ಸ್ವಚ್ಛವಾದುದಂ; ಪರಿಶುದ್ಧವಾದಂದಂ: ಚೊಕ್ಕಟಹ ಸುರಧೇನುವಿಂಗೆಣೆಯ ಪಾರಿಜಾತಕ್ಕೆಣೆಯೆ (ಹರಿಲ. ೩-೫). ೩. ಕುಂದಿಲ್ಲದಿರುವಿಕೆ; ಅಚ್ಚುಕಟ್ಟು; ಓರಣ: ಮಕ್ಕಳನು ಬಯಸಿ ದೈವದ ಮುಂದೆ ನೋಂಪಿಯು ಚೊಕ್ಕಟದಿ ಮಾಡಿತಿಲ್ಲ (ಸಮ್ಯಕ್. ೫-೦೫); ಚೊಕ್ಕಟವಾಗಿ ರಾಜ್ಯವನಾಳು ದ್ವಾರಕೆ ಹೊಕ್ಕು ಬರುವೆನು ಬೇಗದಲಿ (ಮೋಹತ.೦೩-೮); ಚರಲಿಂಗಕೊಲವಿನಿಂ ಚೊಕ್ಕಟದೆ ಮಾಡಿಸಿದ ಪರಿವರಿಯ ಪರಿಕರಂಗಳನಿರದೆ ತರಿಸಿ (ಚಂಬಪು. ೬೨-೧೧); ಅಕ್ಕಡಿಯೊಳಗೆ ಬಹು ಬಗೆಯ ಧಾನ್ಯಗಳನು ಚೊಕ್ಕಟವಾಗಿಯೆ ಬೆಳೆದು (ಕಂಸವಿ. ೬-೫೨). **ಚೊಕ್ಕಟ್ಟ**: ೨. ಕಿಟ್ಟಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಚೊಕ್ಕಟ್ಟ[ಪಾಠಾಂ.ಉತ್ಕೃಷ್ಟ] ಬಂಗಾರದೊಳು ಎನ್ನ ಸೇರಿಸೊ (ಪುರಂದ. ೨-೨೩-೩). **ಚೊಕ್ಕಣ**: ೧. ತನುವಿಂ ನರುವಂ ದೆಸೆಗಳ್ಗೆ ಕೊಟ್ಟು ಸಂಪನ್ನತೆವೆತ್ತು ನೆಟ್ಟಗೊಳೆ ಚೊಕ್ಕಣ ಮಾದೆಣೆಗಂಟು ಕಟ್ಟು (ಕಮಾ. ೦೫-೩೯). **ಚೊಕ್ಕಳ**: ೧. ತೊಳಪ್ಪ ಬೆರಲುಂಗುರಮಿಂಚರವಿಾವ ನೇವುರಂ ಚೊಕ್ಕಳವಪ್ಪ ಚೆಲ್ವನೊಳಕೊಂಡಿರೆ (ಕಬ್ಬಿಕಾ. ೩೦೪); ಚೊಕ್ಕಳವಪ್ಪಳ ರೂಪಿಂ ರತಿಯಂ ಮಿಕ್ಕಳಂ (ಉದ್ಭದೀ. ೨-೪೮): ಇಕ್ಕೆಲದರಸುಗಳೋಳಿ ಸಭಾಲಕ್ಷ್ಮಿಯಿಕ್ಕಿದ ಕಂಠಿಕೆಯೆನಲು ಚೊಕ್ಕಳವಾಗೆ (ನಾಗಕು. ೩೨-೦೦೮). ೨. ಚೊಕ್ಕಳವಮಣಿಯೋಲೆವೆಳಗು ಸೊಗಸಿದುದವಳಾ (ಉದ್ಭಟ. ೫-೪೫): ಚೊಕ್ಕಳದ ನೀರ್ದಾಣವಂ ಬನಮಂ ದೇಗುಲಮಂ ಕಂಡು (ರಾಮಾಶ್ವ. ೫೪-೨೭); ಮುಕ್ಕಣ್ಣನಡಿ ಗೊಪ್ಪಿಸುತ್ತ ತದ್ದೇಹಮಂ ಚೊಕ್ಕಳವ ಮಾಡಿದಂ (ಲಿಂಗಪು. ೬-೩೧). ೪. (ಅರಿವಿನಿಂದ)ಪರಿಶುದ್ಧನಾದವನಂ; ತಿಳಿವು ಪಡೆದವನಂ: ಚೊಕ್ಕಳ ನೆನಿಪಂ ನಿಜವಧು ಮಕ್ಕಳ್ವಡೆದಂದು ಭೋಗಿಸಲ್ ವೇಸಿಯೆ ಪಿಂತಿಕ್ಕುವ ತೆಜದಿಂದಂ ಪಿಂತಿಕ್ಕಿದನಾ ರಾಜ್ಯವನಿತೆಯಂ ತತ್ತ್ವವಿದಂ(ಪಾರ್ಶ್ವಪು. ೪-೯೦). [ <ಚೊಕ್ಕ./ತುಳು. ತೆಲು. ಚೊಕ್ಕಟ./ಮರಾ. ಚೋಖಟ, ಚೋಖಟಾ ]

**ಚೊಕ್ಕಟಂಬಡೆ** (ಕ್ರಿ). ಸೊಗಸಾಗು; ಅಚ್ಚುಕಟ್ಟಾಗು: ಚೊಕ್ಕಟಂಬಡದೆ ಸಂಭಾರಮಂ ಬಗೆಯನಱಿದೊಡವೆರಸಿ ಕಲಸಿ (ಸೂಪಶಾ. ೪-೩). [ ಚೊಕ್ಕಟ + ಪಡೆ$_1$ ]

**ಚೊಕ್ಕಟಗೊಳಿಸು** (ಕ್ರಿ). ಸ್ವಚ್ಛಮಾಡಂ: ಮಿಕ್ಕ ಮಾಂಸವ ಬಲು ಕೈಗೆಲಸ ಗಳಿಂದ ಚೊಕ್ಕಟಗೊಳಿಸಿ . . . ರಕ್ಕಸರಾಯಗಾತಿಥ್ಯವ ಗೆಯ್ದಳು (ಮೋಹತ. ೦೧-೪೮). [ ಚೊಕ್ಕಟ + ಕೊಳ್$_1$ + - ಇಸು$_3$ ]

**ಚೊಕ್ಕಟ್ಟ** 'ಚೊಕ್ಕಟ' ನೋ.

**ಚೊಕ್ಕಣ** 'ಚೊಕ್ಕಟ' ನೋ.

**ಚೊಕ್ಕಣಿಕೆ**(ನಾ). ಒಂದು ಬಗೆಯ ಮೂಲಿಕೆ: "ತುಲಪೋಟಃ-ಚೊಕ್ಕಣಿಕೆ, ಅವರೆ, ಬಲುಗುಣಿಕೆ, ಎಲಚಿ, ನೆಲದಾಳು" (ಒಶಧಿ. ೬೫); ಸಣಬಿನ ವಿಷಕ್ಕೆ ಕುಡು ಚೊಕ್ಕಣಿಕೆಯ ಕೂಡಮೃತಲತೆಯಂ (ಖಮುದ. ೨-೪೯). [ ? ]

**ಚೊಕ್ಕತನ, ಚೊಕ್ಕುತನ** (ನಾ). ಅಚ್ಚುಕಟ್ಟುತನ; ಒಪ್ಪ; ಓರಣ: ಆಕೆ ಚೊಕ್ಕತನದಿಂದ ಸಂಸಾರ ಮಾಡಿಕೊಂಡು ಇದ್ದಾಳೆ (ರೂಢಿ). **ಚೊಕ್ಕುತನ**: ಮಾದ್ರಿಯ ಒರಲಿಕೆ 'ಕಟ್ಟಿಂ' ಎಂಬುದರಿಂದ ಮೊದ ಲಾದುದೂ ಮುಂದೆ ಬರುವ ಓಕಾರದ ಅಂತ್ಯಪ್ರಯೋಗವೂ ಪಂಪನ ದೇಸಿಯ ಚೊಕ್ಕುತನವನ್ನು ಒಕ್ಕಣಿಸುತ್ತವೆ (ಹವಿ. ೬೪); ಕೆಲಸದ ಚೊಕ್ಕು ತನದಿಂದ ಆಗದಿದ್ದರೆ ಇನ್ನಾವುದಾದರೂ ರೀತಿಯಿಂದ ಆದರೂ ಈ ಬೈಗಳು ತಪ್ಪಿಸಿಕೊಳ್ಳಬೇಕು (ಗಂಮಾಯ. ೨೭). [ ಚೊಕ್ಕ + - ತನ ]

**ಚೊಕ್ಕದಂಬುಲ** (ನಾ). ಉತ್ತಮವಾದ ತಾಂಬೂಲ; ರುಚಿಕರವಾದ ವೀಳೆಯಂ: ಎತ್ತಿ ಪೊನ್ನ ಬಟ್ಟಲೊಳೆಱೆದೀವ ಕುಂಕುಮರಸಂ ಪಿಡಿಹಾರದಿ ನೀವ ಚೊಕ್ಕದಂಬುಲಮುಸೆವನ್ನೆಗಂ ಮೆಱೆದಳೆಂದು ವಿಲಾಸಿನಿ ತದ್ವಿಲಾಸವಂ (ಚಂದ್ರಪು. ೮-೪೬). [ ಚೊಕ್ಕ + ತಂಬುಲ ]

**ಚೊಕ್ಕನೆ** (ಅ). ಚೆನ್ನಾಗಿ; ಅಂದವಾಗಿ: ಚೊಕ್ಕನೆಸೆವ ಜವ್ವನಾಯುಷ್ಯ ಭೋಗಗಳಕ್ಕ ವ್ಯರ್ಥಗಳೆಂದಳವಳು (ಚಂಪ್ರಸಾಂ. ೩-೧೦೪); ಸೊಕ್ಕುಜವ್ವನೆ ಯರ ವೊತ್ತದೊಳು . . . ನೃಪತಿ ಚೊಕ್ಕನಾನಂದಿಸುತಿರ್ದನು ಮದಗಜ ಪೊಕ್ಕು ನೀರಾಟವಾಡುವೊಲು (ಭರತ. ೬೫-೭೭).

**ಚೊಕ್ಕಚೊಕ್ಕನೆ** (ದ್ವಿರುಕ್ತಿ): ಚೊಕ್ಕಚೊಕ್ಕನೆ ತಾನಗಳ ತಂದು ಕೊರಳಲ್ಲಿ ಜಕ್ಕುಲಿಸಿದರು ಜಾಣೆಯರು (ಭರತ. ೫-೬೨). [ ಚೊಕ್ಕ + - ಅನೆ$_1$ ]

**ಚೊಕ್ಕಬಂಗಾರ, ಚೊಕ್ಕುಬಂಗಾರ** (ನಾ). = ಚೊಕ್ಕಚಿನ್ನ: ಚೊಕ್ಕ ಬಂಗಾರವೇ ಬೇಕೆಂಬ ಹಟವೇಕೆ ನಿನಗೆ (ನಲಿಮು. ೨೭-೫). **ಚೊಕ್ಕು ಬಂಗಾರ**: ಇಲ್ಲಿ ಬಂದ ಹರಟೆಗಳಲ್ಲಿ ಎಲ್ಲವೂ ಹರಟೆಯ ಹದಿನಾರಾಣೆ ಚೊಕ್ಕುಬಂಗಾರವೇ ಆಗಿರಲಿಕ್ಕಿಲ್ಲ (ಮುಂಗಾಪು. ೭). [ಚೊಕ್ಕ + ಬಂಗಾರ]

**ಚೊಕ್ಕಬೆಳ್ಳಿ** 'ಚೊಕ್ಕವೆಳ್ಳಿ' ನೋ.

**ಚೊಕ್ಕಭೋಜನ** (ನಾ). ೧. ಸೊಗಸಾದ ಊಟ. ೨. ಮಾಂಸವಿಲ್ಲದ ಆಹಾರ; ಸಸ್ಯಾಹಾರ (ಎಸಿಮ್ಯ. II, ೦೭). [ ಚೊಕ್ಕ + ಭೋಜನ ]

**ಚೊಕ್ಕಮಾತು** 'ಚೊಕ್ಕವಾತು' ನೋ.

**ಚೊಕ್ಕಮುತ್ತು** (ನಾ). ಶ್ರೇಷ್ಠವಾದ ಮುತ್ತು; ಕುಂದಿಲ್ಲದ ಮುತ್ತು: ಅರಳ ಕುಲಕಂ ಬೈತಲೆಯ ಚೊಕ್ಕಮುತ್ತನಿಪ ಮಲ್ಲಿಗೆಗಳೇಂ ಬಿರಿದುವೋ (ಚಬಪು. ೪೫-೦೬). [ ಚೊಕ್ಕ + ಮುತ್ತು$_6$ ]

**ಚೊಕ್ಕಯ್ಯ** (ನಾ). ಒಬ್ಬಾತನ ಹೆಸರು: ಚೊಕ್ಕಯ್ಯಙ್ಗಂ ಆಚಬ್ಬೆಗಂ ಪುಟ್ಟಿದಂ ಬಿಕ್ಕಿಯಣಂ (ಎಕ. XII, ತಿಪ. ೩೫-೫; ೪೬೮). [ ಚೊಕ್ಕ$_0$ + ಅಯ್ಯ$_1$ ]

**ಚೊಕ್ಕರೆಯ** (ನಾ). ೧. ಚೊಕ್ಕ ಹರೆಯ; ಒಳ್ಳೆಯ ಪ್ರಾಯ. ೨. ಚೊಕ್ಕಹರೆಯಂವುಳ್ಳವನಂ; ಏರುಜವ್ವನಿಗ: ವರ ವರೂಥದಿ ಸ್ಥಾಣು ಗಿರಿಜೆಯರಿರವಿನೊಳಗೊಪ್ಪಿರ್ದನವ ಚೊಕ್ಕರೆಯನೀ ಬ್ರಾಹ್ಮಣಗೆ ಮುನ್ನಾ ಚರಣೆ ಫಲ ವದಗೀ ದೊರೆದಳಾಹಾ ಜಾತಿವಾಜಿಯು ಕುರುಡನಿಗೆ ಸಫಲಾದ ವೋಲ್ (ಜಿನಭಾ. ೨೦-೨೨). [ ಚೊಕ್ಕ + ಹರೆಯ (<ಪರಯ) ]

**ಚೊಕ್ಕವಾತು, ಚೊಕ್ಕಮಾತು** (ನಾ). ಅಚ್ಚುಕಟ್ಟಾದ ಮಾತು; ಜಾಣ್ಮೆಯಂ ನುಡಿ: ಬಿಡುಮುತ್ತಿಗೆಣೆಯಹ ಚೊಕ್ಕವಾತುಗಳನು ನುಡಿವು ತಿರ್ದುದು ತಾನೀಗ ಕಡುಚಿಂತೆವಡೆದಂದವೇನು (ನಾಗಕು. ೩-೦೦೫). **ಚೊಕ್ಕಮಾತು**: ಅಕ್ಕ ನಿನ್ನೀ ನುಡಿ ನನ್ನ ಚಿತ್ತಕೆ ಬಾರದಕ್ಕಟ ಬಂದರು ಸುರನ ಪಕ್ಕಿಗೇತಕೆ ಬಹುದೀ ಜಾಣ್ಮೆಯೆಂದುದು ಚೊಕ್ಕಮಾತಿನ ರಾಜಕೀರ (ಭರತ. ೬-೯೯). [ ಚೊಕ್ಕ + ಮಾತು$_1$ ]

**ಚೊಕ್ಕವೆಳ್ಳಿ, ಚೊಕ್ಕಬೆಳ್ಳಿ** (ನಾ). ಶುದ್ಧವಾದ ಬೆಳ್ಳಿ: ದಿವಿಜವರನೀಶ ನೊರ್ವನೇ ಪತಿಯೆಂದು ಮೇದಿನಿಗಱಿಪೆ ಚೊಕ್ಕವೆಳ್ಳಿಯೊಳ್ ಸಮೆದು ನಭದಲ್ಲಿಯೊಂದಱ ಲೆಕ್ಕಮಂ ಸಾದರದಿನಮರೆ ಪತ್ರಿಸಿದನೋ . . . ಎನಲ್ಕಾಗಳರೆವೆಱೆಯೊಗೆದುದು (ಪದ್ಮರಾ. ೮-೭೩); ಚಾರುಮುದ್ರಾಪುರದ ಚೊಕ್ಕವೆಳ್ಳಿಯ ಕೋಂಟೆ (ಬಸೋಪು. ೪-೩). **ಚೊಕ್ಕಬೆಳ್ಳಿ**: ಅದು ಕಂದು ಬೆಳ್ಳಿಯದಲ್ಲ; ಚೊಕ್ಕ ಬೆಳ್ಳಿಯದು (ರೂಢಿ). [ ಚೊಕ್ಕ + ಬೆಳ್ಳಿ ]

**ಚೊಕ್ಕಳ** 'ಚೊಕ್ಕಟ' ನೋ.

**ಚೊಕ್ಕಳಕಾತಿ** (ನಾ). ಅಣೆಗಾತಿ; ಓರಣಗಾತಿ: ತಕ್ಕೈಸಿ ಬಾಯ್ಗೆ ತಂಬುಲವಾ ಇಕ್ಕಿದನೊಡನೆ ಥೂಥೂಯೆನುತುಗುಳ್ವುದು ಚೊಕ್ಕಳಕಾತಿ ಭಾವೆಂದ (ಭರತ. ೪೩-೭೩). [ ಚೊಕ್ಕಳ (<ಚೊಕ್ಕಟ) + - ಕಾತಿ$_6$ ]

**ಚೊಕ್ಕಳತನ** (ನಾ).=ಚೊಕ್ಕತನ : ಚೊಕ್ಕಳತನದಿಂ ಮಿಕ್ಕಲರ್ಗೆ ಮೊಗಸದಿರುಳುಣ್ಣದೊಡಲ ಪಸಿವಿಂಗೆ ಪಾಯ್ದು . . . ಬೀಸರವಾಗದೊಸಗೆ ಗಂಪನುಣ್ಬ ಬಾಕುಳಿದುಂಬಿಗಳ(ಲೀಲಾವ.೩-೨೧೪); ಚೊಕ್ಕಳತನದಿಂ ಸವಿದಂ ಮೊಕ್ಕಳಂ (ವೃಷವಿ. ೪೦-೬೩). [ ಚೊಕ್ಕಳ(<ಚೊಕ್ಕಟ) + – ತನ ]

**ಚೊಕ್ಕಳವೆಳಗು** (ನಾ). ಶುಭ್ರವಾದ ಬೆಳಕು ; ಬೆಳುದಿಂಗಳು : ಚೊಕ್ಕಳವೆಳಗಾವರಿಸುವವನಿತಳವಕ್ಕಜಗೊಂಬ ವಿರಹಿಗಳ್ ನೆಯ್ದಿಲ ತಕ್ಕನುದಯಗಿರಿಶಿಖರಮನೇಱಲ್ ಪರಿದುಂ ಸೊಗಸಿದುದು (ಜಯಲಾ. ೧೦-೫೯).
[ ಚೊಕ್ಕಳ (<ಚೊಕ್ಕಟ) + ಬೆಳಗು$_2$ ]

**ಚೊಕ್ಕಳಿಕೆ, ಚೊಕ್ಕಳಿಕ್ಕೆ** (ನಾ). ೧. ಸೊಗಸು ; ಚೆಂದ ; ಅಚ್ಚುಕಟ್ಟು ; ಮನೋಹರತೆ : "ನಿಗರ, ನೆಟ್ಟಿ, ಕೆನೆ, ಚೊಕ್ಕಳಿಕೆ, ಚೊಕ್ಕ . . . ಕಣ್ಗೆ ವಂದುದು, ಪರಿವಡೆದುದು ಈ ೧೪ ಮನೋಹರಂ" (ಶಶಶಾ. ೧೦-೨೦೦); ಸಕ್ಕದಮಂ ಮಱಗೊಳ್ಳದೆ ಚೊಕ್ಕಳಿಕೆಯಿನಚ್ಚಗನ್ನಡಂ ಬೆಟ್ಟರ ಕಯ್ಯೊಕ್ಕನಿಧಿಯನಿಪಪಭ್ರಂಶಕ್ಕಂ ದೇಶೀಯ ಪದಕಮುಂಟು ಸಮಾಸಂ (ಶಮದ. ೨೯೯) ; ಚೊಕ್ಕಳಿಕೆಯ ನವಚಂದ್ರಿಕೆಯನೆ ಹೃದಯಕ್ಕೆ ವಿಲಾಸಮನೀವುದು ಸತ್ಸ್ಪ್ರಭುರಾಜನ ಸವಿಮಾತು (ಜಯಲಾ. ೧-೨೪); ಉಳುಗಂ ಬಿತ್ತ್ರುತೆ ನಾಡೆ ಚೊಕ್ಕಳಿಕೆಯಿಂ ಸ್ಫುಟ್ಟಂದನಾಮೋದವಂ ತಳೆದೋರಂತೆಸೆದಿರ್ಪ ಸೂಳೆಯರ ಪೆರ್ಮೊಲೆಗಳಿಂದಂ (ವೀರವಿ. ೬-೯೪) ; ರಕ್ಕಸಮಾಣಂತಿಯರು ತಲೆಬುರುಡೆಯೊಳಕ್ಕಜು ಮಿಗೆ ಮೊಗೆಮೊಗೆದು ಲೆಕ್ಕವಿಲ್ಲದೆ ಬಿಸಿನೆತ್ತರ ಮಿಂದೊಂದು ಚೊಕ್ಕಳಿಕೆಯನೇನೆಂಬೆ (ನಾಗಳು. ೧೦-೧೨೩) ; ಉನ್ನತಕುಶಲನಲ್ಲಮೆಂಬೊಡಂ ನೀನೀಗಳೆನ್ನ ಸವಿನುಡಿಯ ಚೊಕ್ಕಳಿಕೆಯಿಂ ತಿಳಿಯದಲ್ಲೆನ್ನ ಸತ್ಪ್ರೌಢಿಗೇಳು (ಜಾಕೋಳು. ೭-೯೬) ; ಸಲ್ಲದ ನಿನ್ನಂಕದ ಬಿಂಕದ ಮೈಸಾಸದ ಸಡಗರದ ಬಿಡುನುಡಿಯ ಚೊಕ್ಕಳಿಕೆಯಿಂ ಒಲ್ಲದೆ ನಿಲ್ಲದೆ ಮರಲ್ಪುದೆಂದಂ (ಜಯಲಾ. ೪೦-೧೧). ೨. ಪ್ರಸಿದ್ಧಿ : "ಚೊಕ್ಕಳಿಕೆ ಪ್ರಸಿದ್ಧದೊಳ್" (ಕರ್ಣಾನಿ. ೪೦).
**ಚೊಕ್ಕಳಿಕ್ಕೆ** : ೨.ಅಂಗುಸರಾಯನ ಗಂಡುಬೀರಮಂ ಕಂಡಿಸಿ ಚೊಕ್ಕಳಿಕ್ಕೆಯೊಡನೊಂದಿದ ಪಟ್ಟದ ಭೋಜರಾಜನಂ ಕೊಂಡನೆನಲ್ಕೆ ಚಂಡಿಸುವ ಗಂಡರದಾರ್ಗಳ ಚಾಮರಾಜನೊಳ್ (ಚಳವಿ. ೨-೬೩).
[ ಚೊಕ್ಕಳ (<ಚೊಕ್ಕಟ) + – ಇಕೆ ]

**ಚೊಕ್ಕಳಿಕೆವಡೆ** (ಕ್ರಿ). ಅಂದವನ್ನು ಹೊಂದು ; ಮನೋಹರವಾಗು : ಚಿಕ್ಕಹರೆಯದೊಳು ಚಿನ್ನದ ಬೊಂಬೆಯಂತೆ ಕಡು ಚೊಕ್ಕಳಿಕೆವಡೆದ ಚೆಲ್ವು (ಹಮ್ಮೀಳಾ. ೦೨-೨೭). [ ಚೊಕ್ಕಳಿಕೆ + ಪಡೆ$_1$ ]

**ಚೊಕ್ಕಳಿಕ್ಕೆ** 'ಚೊಕ್ಕಳಿಕೆ' ನೋ.

**ಚೊಕ್ಕಳೆ** (ನಾ). ಸೊಗಸುಗಾತಿ ; ಚೆಲುವೆ : ಹಸನಹ ರೂಪು ತಕ್ಕ ಹರೆಯಂ ಕಡು ಚೊಕ್ಕಳೆ ಜಾಣೆ ಹಕ್ಕಿವೊಲ್ ಕೊಸರುವ ಲಾಗು ಕೂಡಿ ತಣಿವಿಲ್ಲದ ಬಾಕುಳಿ . . . ಬಸನದ ಬಿತ್ತ್ರನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ (ಸೂಕ್ತಿಸು. ೮-೪೦೧). [ ಚೊಕ್ಕಳ + – ಎ$_2$ ]

**ಚೊಕ್ಕು$_1$** (ಕ್ರಿ). ಕುಗ್ಗು ; ಪರಿತಪಿಸು : ನೀನೆ ಬೇಡೆನಲ್ಪುರವಂದ್ಯ ನಕ್ಕುವಾಹನನಾಗು ತನಗೆನಲ್ಕೀ ತಲೆಗುಕ್ಕಿದಂ ಹೋ ಹೋ ಕೋಳ್ಪಡಿದ ತನ್ನನುಮಹಂಕಾರದಿಂ ಕೆಟ್ಟೆನೆಂದು ಚೊಕ್ಕಿದಂ ಬಳಿಕ ಹರುಷವ ತಾಳ್ದು ಮನದೊಳಗೆಯುಕ್ಕಿದಂ ಹರಿಪದಕೆ ತನುವನೀಡಾಡಿ ಜನ್ಮಕ್ಕೆ ಸಫಲವಿದಾಯ್ತು ನಿನ್ನ ಪೊತ್ತುದರಿಂದ ಸುಖಿಯಾದೆ ನಾನೆಂದನು(ತುರಂಗ.೪-೩೪).
[ <ಸುಕ್ಕು$_1$ ? ]

**ಚೊಕ್ಕು$_2$** 'ಚೊಕ್ಕ' ನೋ.

**ಚೊಕ್ಕುತನ** 'ಚೊಕ್ಕತನ' ನೋ.

**ಚೊಕ್ಕುಬಂಗಾರ** 'ಚೊಕ್ಕಬಂಗಾರ' ನೋ.

**ಚೊಕ್ಕೆಯ, ಚೊಕ್ಕೆಹ, ಜೊಕ್ಕೆಯ** (ನಾ). ೧. ಬಿನ್ನಾಣ; ಚಾತುರ್ಯ : ಪ್ರಥಮಾಲಿಂಗನದೊಳೆ ಸಫಲವಾಗೆ ಮತ್ತೆ ಮತ್ತುಜ್ವಲಿಸುವ ಚೊಕ್ಕೆ[ಪಾಠಾಂ. ಬೊದ್ದೆ]ಯದನುಭವಕ್ಕೆ ಸಿರಿಮಂಚಂ ಸುಖದುಕ್ಕಡವಾಗೆ (ಸಂಬಿರ. ೧೦-೯೮). ೨. ಮಲ್ಲಯುದ್ಧದಲ್ಲಿ ಒಂದು ಪಟ್ಟು : ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡಪಿ ಕೊಪ್ಪರದೊಳ್ ಕುಮ್ಮಿ ಮಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯದಾಸೆಗೆ ಪೊಕ್ಕ ಮಲ್ಲನನಿಕ್ಕಿ ಮೆಟ್ಟಿ (೧೧ಶ. ೨-೧೦೩ ಪ); ಇಕ್ಕಿದರು ಗಳಹತ್ತದಲಿ ಸಲೆ ಮಿಕ್ಕು ಸತ್ರಾಣದಲಿ ಮಿಗೆ ಸಂಪೊಕ್ಕು ಹಿಡಿದರು ಬಿನ್ನಣದ ಚೊ[ಪಾಠಾಂ. ಜೊ]ಕ್ಕೆಯದ ಜೋಡಿಯಲಿ (ಶಬ್ದ್ಯಾಸ. ೨-೯೬). ೩. ಸಂದೇಹ ; ಅನುಮಾನ (?): ಅವರವರೆಂದಂತೆ ಎನ್ನದೆ ತನ್ನಿರವ ಭಿನ್ನವ ಮಾಡದೆ ಮೂಢಸಾಧನೆಯವನೊಡನೆ ಕಾಡುವ ತೆಱದಂತೆ ಅವನಿಗೆ ಚೊಕ್ಕೆಯ [ಪಾಠಾಂ.ಹ] ಇವನಿಗೆ ನಿಶ್ಚಯ ಉಭಯವ ನೀವೇ ಬಲ್ಲಿರಿ (ಪೋಲೀಮಾ. ೦೪೯-೫೬೪). **ಚೊಕ್ಕೆಹ:** ೧. ಸೊಕ್ಕುಗರೆಗಳ ಸೋಲಕ್ಕೆ ಮೈಗೊಟ್ಟು ಮೇಲಿಕ್ಕಿ ಲಲ್ಲೆಯ ಭಾವಕಿಯಾ ಚೊಕ್ಕೆಹದನುಭಾವದಕ್ಕರಗಳಿಗೆ ಸಂಯುಕ್ತಾಗಿ ತೋರ್ಪುದೀ ಕಾವ್ಯ(ಶೃಂಗಾರ. ೧-೦೯). ೩. ಮೇಲಿನ 'ಪೋಲೀಮಾ' ಪ್ರಯೋಗದ ಪಾಠಾಂತರವನ್ನು ನೋಡಿ. ೪. ಯುಕ್ತಿ : ಭಕ್ತನಾಗಿದ್ದಲ್ಲಿ ಉಭಯದ ಮಾರ್ಗವ ಗುರುವಿನ ಚೊಕ್ಕೆಹವ [ಪಾಠಾಂ. ಚೊಕ್ಕವಹ] ಆ ಜಂಗಮದ ಅಪೇಕ್ಷೆಯ ಇದಿರಿಟ್ಟು (ಅಕ್ಕಮಾ. ೦೨೯-೯೨); ವಾದಿಯ ಚೊಕ್ಕೆಯ ವಾಗ್ಮಿಯ ಬೇತನ (ಚರೂಮ್ಮು. ೨೬೯-೪೮). **ಜೊಕ್ಕೆಯ:** ೨. ಗಾಯವುಂಟೇ ತೋಱು ನಿನಗದುಪಾಯವೊ ಬಿಡು ಜೊಕ್ಕೆಯವನೆನುತಲಿ (ಕುಮಾ. ಅ. ೬-೩೧) ; ಜೊಕ್ಕೆಯದೊಳಗೆ ಮುಂದಲೆವಿಡಿದು (ಮ್ಮಿರಾಶಾ. ೪-೭೬).

**ಚೊಕ್ಕೆಯತನ** (ನಾ). ಚಾತುರ್ಯ ; ಜಾಣ್ಮೆ : "ಚೊಕ್ಕೆಯತನಮ ನಾಡೆ ಬಿನ್ನಾಣಮೆಂಬರ್" (ಛಾರನಿ. ೬೪). [ ಚೊಕ್ಕೆಯ + – ತನ ]

**ಚೊಕ್ಕೆಹ** 'ಚೊಕ್ಕೆಯ' ನೋ.

**ಚೊಗಟೆ** 'ಚಗಟೆ' ನೋ.

**ಚೊಗರು$_1$** 'ತೊಪರು' ನೋ.

**ಚೊಗರು$_2$** 'ತೊಗರು$_1$' ನೋ.

**ಚೊಗೆ, ಚೋಗೆ** (ನಾ). ಪಾದದವರೆಗೆ ಇರುವ ಉದ್ದವಾದ ಅಂಗಿ ; ನಿಲುವಂಗಿ : ಕಾಗಿನ ಚೊಗೆಯಾಂತು ಬಲರಾಮದೇವನಂತಾಗಿರ್ಪ ಜನರ ಕಣ್ಮನಕೆ (ಮೋಹತ. ೦೭-೭೬) ; ಮೃಗಶತ್ರುಚರ್ಮದಿಂ ಮಾಡಿದ ಚೊಗೆ ಮೆರೆಯಲ್ (ಹಾಲಾಶ್ಯ. ೪-೨-೩೨) ; ಸೊಗಸಿಂದ ನಿದ್ರೆಗೈದಿಂದುಹಾಸನು ತೊಟ್ಟ ಚೊಗೆಯ ಕುಪ್ಪಸದ ಕೊನೆಯಲ್ಲಿ ಬಿಗಿದು ಕಟ್ಟಿರ್ದ ಪತ್ರಿಕೆಯನ್ನು ಮೆಲ್ಲನೆ ತೆಗೆದುಕೊಂಡಳು ಮಂತ್ರಿತನುಜೆ (ಚಂದ್ರಹಾ. ೩-೨೦); ಬಾಲ ಬಂಗಾರು ಚಲ್ ಪಟ್ಟೆದುಕೂಲ ಚೊಗೆಯಿಂ (ಕಳುಭಾ. ೦೯-೩). **ಚೋಗೆ:** ಉಟ್ಟ ಚಲ್ಲಣ ಜಟ್ಟಿ ಚೋಗೆ ಕುಲ್ಲಾಯಿಗಳಿಟ್ಟ ಕಸ್ತುರಿಬೊಟ್ಟು ಮಱಿವ ಕಟ್ಟಾಳುಗಳಂತೆ . . . ಇಟ್ಟಾಡಿದರು ತುಂಬಿ ಜಲವ (ಗೋಮಟೇ. ೦೭-೦೪೪). [ ←ಹಿಂ. ಮರಾ. ತುರ್ಕಿ, ಚೋಗಾ ]

**ಚೊಚ್ಚ** (ಗು). ಸ್ವಚ್ಛ ; ನಿರ್ಮಲ ; ಶುದ್ಧ : ಸುಧರ್ಮರೆಂಬ ದಿಗಂಬರರ ಪೂರ್ದಿ ಚೊಚ್ಚ ಧರ್ಮವ ಕೇಳ್ದು (ಶಾಳಿಭಾ. ೨೦-೭೬).
[ <ಸಂ. ಸ್ವಚ್ಛ ]

**ಚೊಚ್ಚನೆ** (ಗು). ಶುಭ್ರವರ್ಣದ ; ಸ್ವಚ್ಛವಾದ ; ಬಿಳುಪಾದ : ಮೃದುವಾಕ್ಯನಸ್ಪಕ್ಸಾರಂ ಸುದೃಷ್ಟಿ ಮೇಧಾವಿ ನಿಡಿಯನಸಿಲಕಘಾತ್ಮಂ ಸದಯಂ ಚೊ [ಪಾಠಾಂ. ಶೆ]ಚ್ಚನೆ ಮೈ ಬಟ್ಟದನತಿಚಪಳಂ ಸಖಪ್ರಿಯಂ ಸಸಿಯನಿಕುಂ (ಜಾತಕ. ೨-೨೦). [ ಚೊಚ್ಚ + – ಅನೆ$_2$ (<–ಅನೆಯ$_2$) ]

**ಚೊಚ್ಚಲ್** 'ಚೊಚ್ಚಲ್' ನೋ.

**ಚೊಚ್ಚಲು** 'ಚೊಚ್ಚಲ್' ನೋ.

**ಚೊಚ್ಚಲ್** 'ಚೊಚ್ಚಲ್' ನೋ.

**ಚೊಚ್ಚಲು** 'ಚೊಚ್ಚಲ್' ನೋ.

ಛಡಿಯವರು = ವೇತ್ರಧಾರಿಗಳು ; ಕೋಲುಕಾರರು : ಶಾಸ್ತ್ರಿಗಳು ೬, ಪಂಡಿತರು ೮, ಛಡಿಯವರು ೨೫, ಪೌಜುದಾರ್ರು ೫ (ಗುರುದ. ೧೧). [ ←ಹಿಂ. ಮರಾ. ಛಡೀ ]

**ಛಡಿಕೆ** 'ಚಡಿಕೆ' ನೋ.

**ಛಡಿತ್ರ$_1$** 'ಚಡಿತ್ರ$_2$' ನೋ.

**ಛಡಿತ್ರ$_2$** 'ಚಡಿತ್ರ$_1$' ನೋ.

**ಛತ್ತರಿಗೆ** 'ಚತ್ತರಿಗೆ' ನೋ.

**ಛತ್ತೀಸ** (ನಾ). ಮೂವತ್ತಾರು : ನಿಲವಿನ ಪದಿನೆಂಟು ಕೋಟಿಗೆ ಛತ್ತೀಸ ಕೋಟಿ ಬಾಹತ್ತರಕೋಟಿಗಳಿಂ ಏಗಿಲನಿಸಿ (ಬಸರ. ೮-೧೨೫) ; ಮುನ್ನ ಕೊಂಡೊಯ್ಯನೆ ಮಹಾದೇವನ ಪುರಕೆ ಛತ್ತೀಸ ನಗರಿಗಳಾ ಸಾವುವೇದಿಗಳು (ಬಸವು. ೫೬-೪). [ <ಪ್ರಾ. ಛತ್ತೀಸ./ಸಂ. ಷಟ್ತ್ರಿಂಶತ್ ]

**ಛತ್ತು, ಚತ್ತು** (ನಾ). ಪಲ್ಲಕ್ಕಿ, ಪಲ್ಲಂಗ, ಮಂಟಪ ಮೊದಲಾದುವುಗಳಿಗೆ ಕಟ್ಟುವ ವಸ್ತ್ರದ ಮೇಲ್ಕಟ್ಟು ; ವಿತಾನ : ಆಕಾಶವು ನೀಲವರ್ಣದ ಛತ್ತಿನಂತಿದೆ (ಚೀನಬಾ. ೫) ; ಬಾಳೆಯ ಕಂಬ ತಳಿರು ತೋರಣ ಜುಮುರು ಮೇಲ್ಹಾಸು (ಛತ್ತು)ಗಳಿಂದ ಆ ಭಾಗವೆಲ್ಲ ಅಲಂಕೃತವಾಗಿದ್ದಿತು (ಮುಲಕಿ. ೧೪). [←ಹಿಂ. ಮರಾ. ಛತ್./ಸಂ. ಛದಿ ]

**ಛತ್ರ$_1$** 'ಚತ್ರ' ನೋ.

**ಛತ್ರ$_2$** (ನಾ). ೧. ಕೊಡೆ ; ಚತ್ತರಿಗೆ ; ಆತಪತ್ರ: "ಆತಪತ್ರಂ, ಛತ್ರಂ—ಈ ೨ ಕೊಡೆ" (ಹಲಾಯು. ೬೦-೨೬೯) : "ಸತ್ತಿಗೆಯೇ ಛತ್ರ" (ಶವಿಶಂ. ೨೬೧). ೨. ಗೌರವಸೂಚಕವಾಗಿ ದೇವರಿಗೆ ಹಾಗು ರಾಜರಿಗೆ ಹಿಡಿಯುವ ಬಿಳಿಯ ಕೊಡೆ: ಮನ್ಮಥಗೆ ವರವಸಂತಕನೆತ್ತಿ ಹಿಡಿದ ಮುತ್ತಿನ ಛತ್ರದಿರವೆನಿಸಿತು ಚಂದ್ರಬಿಂಬ (ಜೀವಂಧಾಂ. ೦೬-೪೩). ೩. ನಾಯಿಕೊಡೆ; ಅಣಬೆ. ೪. [ಜ್ಯೋತಿ] ಒಂದು ಯೋಗ. 'ಛತ್ರಯೋಗ' ಪರಾ. [ ಸಂ. ]

**ಛತ್ರಕ** (ನಾ). ೧. ಕೊಡೆ ; ಛತ್ರಿ : "ಛತ್ರಕಂ—ಸತ್ತಿಗೆ" (ಶಾಕಳ್ಯ. ೨೫೬). ೨. ಅಣಬೆ ; ನಾಯಿಕೊಡೆ. [ ಸಂ. ]

**ಛತ್ರಚ್ಛಾಯೆ** (ನಾ). ೧. ಕೊಡೆಯ ನೆರಳು. ೨. (ಅಲಂ) ರಾಜನ ಆಡಳಿತಕ್ಕೆ ಒಳಪಟ್ಟುದು; ಪ್ರಭುತ್ವ: ಈ ನಮ್ಮ ಪುರಾತನದೇಶವನ್ನು ಒಬ್ಬ ಸಾರ್ವಭೌಮರಾಜನ ಛತ್ರಚ್ಛಾಯೆಯುಲ್ಲಿ ಏಕೈಕರಾಜ್ಯವನ್ನಾಗಿ ಕಟ್ಟಬೇಕೆಂಬ ಮನಸ್ಸಂಕಲ್ಪ . . . ತೋರಿಬರುತ್ತದೆ (ರಾಜ್ಯಶಾ. ೯). 'ಏಕಚ್ಛತ್ರಚ್ಛಾಯೆ' ಪರಾ. [ಸಂ. ಛತ್ರಚ್ಛಾಯಾ (ಛತ್ರ + ಛಾಯಾ) ]

**ಛತ್ರಧಾರಕ** (ನಾ). (ರಾಜನ ತಲೆಯ ಮೇಲೆ) ಕೊಡೆಯನ್ನು ಹಿಡಿಯುವವನು ; ಛತ್ರಿಯನ್ನು ಹಿಡಿಯುವ ಸೇವಕ : ಬಳಿವಿಡಿದು ಭೂಭುಜರ ಯಾನಂಗಳೊಳಗಳುಕದೆ ಢಗೆಯ ಸೈರಿಸಿ ಬಳಸುವವನೇ ಛತ್ರಧಾರಕನು (ಕುಮಾ.ಸ. ೧-೭೪) ; ಅರಸನಭ್ಯುದಯವನು ನೀನಧಿಕರಿಸಿ ಗೆಲುವಡೆ ನಿನ್ನ ಹಂಗೇಕರಿಗಳನು ಜಯಿಸುವರು ನವಿಪ್ಪಾ ಛತ್ರಧಾರಕರು (ಕುಮಾ.ಕ. ೯-೩೪). [ ಸಂ. ]

**ಛತ್ರಪತಿ** (ನಾ). ೧. ರಾಜತ್ವದ ಸೂಚಕವಾಗಿ ಛತ್ರವನ್ನು ಹಿಡಿಸಿಕೊಳ್ಳುವ ಪ್ರಭು ; ರಾಜ. ೨. ಶಿವಾಜಿಗೆ ಅನ್ವಯಿಸುವ ಒಂದು ಬಿರುದು : ೧೬೭೪ರಲ್ಲಿ ಶಿವಾಜಿ ಶಿವಛತ್ರಪತಿ ಎನಿಸಿಕೊಂಡನು (ಭಾರರ. ೪೨೩). [ ಛತ್ರ$_2$ + ಪತಿ$_2$ ]

**ಛತ್ರಪ್ರಸರ** (ನಾ). ರಾಜ ಚಿಹ್ನವಾದ ಛತ್ರಿಗಳ ಸಮೂಹ,—ಕೊಡೆಗಳ ಸಾಲು : ದೆಸೆಯಂ ಛತ್ರಪ್ರಸರದೆ ಮುಸುಂಕಿ ಕಟ್ಟಿಲೆಯನೊರ್ಮೆ ಮಣಿಭೂಷಣರುಗ್ಪ್ರಸರದೆ ಮುಸುಂಕಿ ಸಂಜೆಯ ಬಿಸಿಲಂ ಮತ್ತೊರ್ಮೆ ಮಾಡಿದುದು ತದ್ಯಾನಂ (ಚಂದ್ರಪು. ೭.೫೧). [ ಛತ್ರ$_2$ + ಪ್ರಸರ ]

**ಛತ್ರಭಂಗ** (ನಾ). ೧. ಕೊಡೆಯು ಮುರಿದುಬೀಳುವಿಕೆ. ೨. (ಅಲಂ) ಅರಸೊತ್ತಿಗೆ ತಪ್ಪಿಹೋಗುವುದು : ಕೇಳಿಕೆಯ ಮನ ಛತ್ರಭಂಗದ ಮೇಲೆ ಮುಖಿಯದೆ ಛಲವದದ ಪರಿವಾಳಿಯಿಂದುಪ್ಪವಡಿಸಿದನುಪ್ಪರದ ಗರ್ವದಲಿ (ಕೊರಂ. ೬-೧೧-೧) ; ಮಂಗಳೇಶನ ಮರಣಾನಂತರದಲ್ಲಿ ಚಲುಕ್ಯರ ಛತ್ರಭಂಗವಾದುದರಿಂದ ಪುಲಿಕೇಶಿಯು ಉನ್ಮತ್ತರಾದ ರಾಜರನ್ನು ಸೋಲಿಸಿ ವಾತಾಪಿಪುರವನ್ನು ಪ್ರವೇಶಿಸಿದನು (ಕರ್ನಾಇ. ೫೭). [ ಛತ್ರ$_2$ + ಭಂಗ ]

**ಛತ್ರಭವ** (ನಾ). [ಜ್ಯೋತಿ] ಛತ್ರಯೋಗದಲ್ಲಿ ಹುಟ್ಟಿದವನು : ಹಿತಕರನಾತ್ಮಬಾಂಧವಗೆ ಛತ್ರಭವಂ (ಜಾತಕ. ೧೪-೧೮). [ ಸಂ. ]

**ಛತ್ರಯೋಗ** (ನಾ). [ಜ್ಯೋತಿ] ಜನನ ಕಾಲದಲ್ಲಿ ಸಪ್ತಮಸ್ಥಾನದಿಂದ ಲಗ್ನದವರೆಗೆ ಏಳುರಾಶಿಗಳಲ್ಲೂ ಗ್ರಹಗಳು ಇರುವ ಒಂದು ಯೋಗ: ಛತ್ರಯೋಗದಲ್ಲಿ ಹುಟ್ಟಿದವನು ತನ್ನ ಬಂಧುಗಳಿಗೆ ಅನುಕೂಲಮಾಡುತ್ತಾನೆ (ಜಾತಕ. ೧೪-೧೮ ಅಡಿ). [ ಛತ್ರ$_2$ + ಯೋಗ ]

**ಛತ್ರರತ್ನ** (ನಾ). [ಜೈನ] ಚಕ್ರವರ್ತಿಗೆ ದೊರೆಯುವ ಏಳು ಅಜೀವರತ್ನಗಳಲ್ಲೊಂದು : ತನ್ನ ನೆಟಲೊಳೆ ಕಾವ ಸೂರ್ಯಪ್ರಭಮೆಂಬ ವಿಚಿತ್ರಮಣಿಮಯೂಖಚಿತ್ರಿತಚ್ಛತ್ರರತ್ನಮುಂ (ಆದಿಪು. ೧೧-೩ ವ) ; ಲೀಲಾಸನಾಳಧವಳಶತಪತ್ರಮೆನಿಪ ಸೂರ್ಯಪ್ರಭಮೆಂಬ ವಿಚಿತ್ರಚ್ಛತ್ರರತ್ನಮುಂ (ಚಂದ್ರಪು. ೬-೧೧೧ ವ). 'ಚರ್ಮರತ್ನ' ಪರಾ. [ ಛತ್ರ$_2$ + ರತ್ನ ]

**ಛತ್ರರೇಖೆ** (ನಾ). [ಸಾಮುದ್ರಿ] ಒಂದು ಬಗೆಯ ಸಾಮುದ್ರಿಕ ಲಕ್ಷಣ ; (ಕೈಯಲ್ಲಿಯ) ಕೊಡೆಯಾಕಾರವಾದ ರೇಖೆ : ಶತ್ರುಪಕ್ಷಹಾನಿಯು ರಾಜಮನ್ನಣೆಯು ನಿತ್ಯದಲ್ಲಿಯೂ ಅನ್ನದಾನವೂ ಛತ್ರರೇಖೆಗೆ ಫಲ (ಸಾಮುಲ. ೧೧೧-೧೧). [ ಛತ್ರ$_2$ + ರೇಖೆ ]

**ಛತ್ರವಳಯ** (ನಾ). (ಅಲಂ) ಅರಸುತನ ; ಪ್ರಭುತ್ವ : ಇಹಲೋಕ ಪರಲೋಕ ತಾನಿದ್ದಲ್ಲಿ . . . ಉತ್ತರೋತ್ತರಚ್ಛತ್ರವಳಯ [ಪಾಠಾಂ. ಚತುರ್ವಳಯ] ತಾನಿದ್ದಲ್ಲಿ (ಅವಕಂ. ೮೨-೩೬೦). [ ಛತ್ರ$_2$ + ವಳಯ ( = ವಲಯ) ]

**ಛತ್ರಾಕಾರ** (ನಾ). ವರ್ತುಲಾಕಾರ: ಛತ್ರಾಕಾರದೆ [ಪಾಠಾಂ. ಚತ್ರಾಕಾರದ] ಗದೆಯಂ ಚಿತ್ರವಿಧಂ ಬೀಸೆ ಗಗನದೊಳ್ (ಗದಾಯು. ೮-೨೫). [ ಛತ್ರ$_2$ + ಆಕಾರ ]

**ಛತ್ರಾಕಿ** (ನಾ). (ಮುಂಗುಸಿಗಳಿಗೆ ಇಷ್ಟವಾದ) ಒಂದು ಬಗೆಯ ಗಿಡ ; ಹಾವಿನ ವಿಷಕ್ಕೆ ಔಷಧಿಯಾಗುವ ಈಶ್ವರೀಹಂಬು ; ಹಾವುಕಣ್ಣಿನ ಗಿಡ ; ಸರ್ಪಾಕ್ಷಿಗಿಡ : "ನಾಕುಲೀ . . . ಛತ್ರಾಕೀ, ಸುವಹಾ—ರ ಸರ್ಪಾಕ್ಷಿ ಗಿಡದ ಹೆಸರು" (ಸಿದ್ಧಾಂಕಿ. ೦೨೧). [ ಸಂ. ಛತ್ರಾಕೀ ]

**ಛತ್ರಿ$_1$** (ನಾ). ಕೊಡೆಯನ್ನು ಹಿಡಿದುಕೊಂಡಿರುವವನು; ಛತ್ರಿಯನ್ನು ಹೊಂದಿರುವವನು : ಛತ್ರಿಗಳ್ ನಡೆದಪರೆಂದಿಂತು ಅಚ್ಛತ್ರಿಗಳೊಳ್ ಛತ್ರಿವ್ಯವಹಾರಂ ವರ್ತಿಸುವಂತೆ ಸೂತ್ರದಲ್ಲಿ ಮಿಶ್ರಗ್ರಹಣವಿಲ್ಲದೊಡಂ ಸಾಹಚರ್ಯದಿಂ ಮಿಶ್ರಗ್ರಹಣಂ ಘಟಿಯಿಸುಗುಂ (ಶಶ್ಮ್ರ. ೨೨೦). [ ಸಂ. ಛತ್ರಿನ್ ]

**ಛತ್ರಿ$_2$, ಚತ್ತರಿ, ಚತ್ರಿ** (ನಾ). ಕೊಡೆ ; ಚತ್ತರಿಕೆ : ಎದ್ದು ವಸ್ತ್ರ ಜಾಡಿಸಿಕೊಂಡು . . . ಛತ್ರಿ ಮಡಿಚಿ ತಯಾರಾಗುತ್ತಾನೆ (ಎತ್ತಿಳ್ಳಿ. ೬೨).

**ಚತ್ತರಿ :** (+). **ಚತ್ರಿ :** ಮಳೆಗಾಲಕ್ಕೆ ಚತ್ರಿ ಬೇಕು (ರೂಢಿ). [ ←ಮರಾ. ಛತ್ರೀ. / ಸಂ. ಛತ್ರ ]

**ಛತ್ರಿಕೆ** (ನಾ). ೧.=ಛತ್ರಕ ೧ : "ಛತ್ರಿಕಾ—ಸತ್ತಿಗೆ" (ಕಮುದ. ೨೫೬ ಪ್ರಯೋ) ; "ಸತ್ತಿಕೆ ಛತ್ರಿಕೆಯೆಂಬುದು" (ಕಚುನಿ. ೩೩). ೨. ಅಣಬೆ; ನಾಯಿಕೊಡೆ: "ಕೆಸವು ಛತ್ರಿಕೆಯಕ್ಕು" (ಮಂಗರಾ. ೪೪-೪೭). [ ಸಂ. ಛತ್ರಿಕಾ

ಛತ್ರಿ (ನಾ). ೧. ಅಣಬೆ; ನಾಯಿಕೊಡೆ: "ಛತ್ರಾ, ಅತಿಛತ್ರಃ, ಪಾಲಘ್ನಃ –೩ ಕೊಡೆಹುಲ್ಲಿನ ಹೆಸರುಗಳು" (ಸಿದ್ಧಾಂತಿ. ೦೩೨). ೨. ಸಬ್ಬಸಿಗೆ. ೩. ಕೊತ್ತುಂಬರಿ. [ ಸಂ. ಛತ್ರಾ ]

ಛತ್ವ (ನಾ). = ಛ ೧: ಖತ್ವಕ್ಕಂ ಬಹುಳತೆಯಿಂ ಗತ್ವಂ ಛತ್ವಂ ದ್ವಿರುಕ್ತಿಯಿಂ ಕೂಡಿರೆ ಮೇಣ್ ಯತ್ವಾನ್ವಿತಮಿರೆ ಚತ್ವಂ (ಶಮದ. ೨೫೬). [ ಸಂ. ]

ಛತ್ವರ (ನಾ). ೧. ಮನೆ. ೨. ಲತಾಗೃಹ ; ಬಳ್ಳಿಮಾಡ. [ ಸಂ. ]

ಛದ (ನಾ). ೧. ಗವುಸು ; ಮುಸುಕು ; ಆಚ್ಛಾದನೆ. 'ದಂತಚ್ಛದ' ಪರಾ. ೨. ಹಕ್ಕಿಗಳ ರೆಕ್ಕೆ, –ಗರಿ : "ತನೂರುಹಂ . . . ಛದಃ, ಪಿಂಛಂ, ವಾಜಃ, ಪಕ್ಷಃ–ಈ ೯ ಎಜ(೦)ಕೆ" (ಹಲಾಯು. ೪೦–೮೬) ; ರಾಜಕೀರಚ್ಛದಾನಿಳಲೋಲತ್ಕಣಿಶಾಲಿಶಾಳಿ ಜನಚೇತೋನಂದನಂ ನಂದನಂ . . . ಚಲ್ವಾದುದುರ್ವೀತಳಂ (ಜಗನ್ನಿ. ೨–೨). ೩. ಎಲೆ ; ಪರ್ಣ : "ಬರ್ಹಂ, ಪರ್ಣಂ, ದಳಂ, ಪತ್ರಂ, ಪಲಾಶಂ, ಛದನಂ, ಛದಃ–ಈ ೭ ಮರದ ಎಲೆ" (ಹಲಾಯು. ೩೧–೩೧) ; ಶಿಶಿರಪಯಃಕಣಪರಿಸಿದ ಕುಶೇಶಯಚ್ಛದಮನಕ್ಕಿಗಳ್ ಬಾಷ್ಪಜಲಪ್ರಶಮಿತ ರುಚಿಗಳ್ ಪೋಲ್ತಿರೆ (ಜಗನ್ನಿ. ೩–೮೬); ಆಸವಸದ ಬಿಸಿಲ್ಗೆತ್ತು ಜೀರ್ಣಚ್ಛದಂಗಳ್ ಮೇಳಂಗೊಂಡೊಪ್ಪೆ ಶಾಖಾಗ್ರದೊಳದರ್ದಲುಗಲ್ಪೂಸೆ (ರಾಜಶೇ. ೯–೨೯). [ ಸಂ. ]

ಛದನ (ನಾ). ಮುಸುಕು; ಆಚ್ಛಾದನೆ: ಅದು ಬಳಿಕ ಲೋಕಾಯತಾಂಗಚ್ಛದನಪರನಾರಾಚ ನಿರ್ವಾಣದಲಿ ಭಂಗಿತವಾಯ್ತು ಪಾರ್ಥನ ಬಾಣದೊಡ್ಡವಣೆ (ಕುವ್ಯಾ. ೩೦–೨೯). ೨. ರೆಕ್ಕೆ; ಗರಿ: "ತನೂರುಹಂ, ಗರುತ್, ಪತ್ರಂ, ಪತತ್ರಂ, ಛದನಂ, ಛದಃ, ಪಿಂಛಂ, ವಾಜಃ, ಪಕ್ಷಃ–ಈ ೯ ಎಜ(೦)ಕೆ" (ಹಲಾಯು. ೪೦–೮೬); ಕಾಕಗೃಧ್ರನಿಕಾಯಚ್ಛದನಾವಗೂಹಿತಮೆನಲ್ ಬಿಟ್ಟಿರ್ದನಂ ಗೆಲ್ದು (ಜಗನ್ನಿ. ೪–೫೮). ೩. ಎಲೆ ; ಪರ್ಣ : "ಛದನಂ ಪತ್ರಂ ಪರ್ಣಂ ಛದಂ ಪಳಾಶಂ ದಳಂ ಸಮಮವೇಕಾರ್ಥಂ" (ವಸ್ತುಕೋ. ೩೦–೫) ; "ಪತ್ರಂ ದಳಂ ಛದನಂ[ಪಾಠಾಂ. ಛತ್ರದಳಂ]ಪಲಾಶಮೆನೆ ಪರ್ಣಮಕ್ಕುಂ" (ಮಂಗರಾ. ೩೨–೩). [ ಸಂ. ]

ಛದಿ (ನಾ). (ಮನೆ ಮೊದಲಾದುವುಗಳ) ಮೇಲ್ಭಾವಣಿ; ಮಾಡು; ಮುಸುಕಂ ; ಹೊದಿಕೆ; ಆಚ್ಛಾದನೆ : "ಪೊದಯಿಸಿದಾಚ್ಛಾದನಮುಂ ಛದಿಯುಂ ಪಟಳಮುಮೆನಿಪ್ಪುದು" (ವಸ್ತುಕೋ. ೪೭–೦೫) ; "ಪಟಲಂ, ಛದಿಃ – ೨ ಮನೆಯ ಮೇಲುಹೊದಿಕೆಯ ಹೆಸರು: ಮನೆಯ ಮೇಲುಮುಚ್ಚಳ" (ಸಿದ್ಧಾಂತಿ. ೯೧). [ ಸಂ. ]

ಛದೆ (ನಾ). = ಛದಿ : "ಮನೆಗೇಱಿಸಿದ ಹೊದಿಕೆ ವಳಭಿಚ್ಛದೆಯೆನಿಕ್ಕು" (ಮಂಗರಾ. ೫೯–೦೩). [ ಸಂ. ಛದ ]

ಛದ್ಮ (ನಾ). ೧.=ಛದ ೧. ೨. ವೇಷವನ್ನು ಮಾರ್ಪಡಿಸುವುದು; ವೇಷಾಂತರ: ಗೋಪ್ಯ, ಛದ್ಮಗಳು ಕೀಟಗಳಲ್ಲಿ ಚೆನ್ನಾಗಿವೆ (ಕೀಟಜಿ. ೨೨). 'ಛದ್ಮವೇಷ' ಪರಾ. ೩. ಮೋಸ ; ಕಪಟ; ವಂಚನೆ. ೪. ಕಾರಣ; ನೆಪ ; ವ್ಯಾಜ : "ಕೈತವಂ . . . ಛದ್ಮ . . . ವ್ಯಪದೇಶಃ–ಈ ೧೦ ನೆವಂ" (ಹಲಾಯು. ೧೧೬–೨೪). [ ಸಂ. ಛದ್ಮನ್ ]

ಛದ್ಮಚಮು (ನಾ). ವೇಷಾಂತರಗೊಂಡ ಸೈನ್ಯ : ಬಂಧು ಬಳಗವು ಮಂತಕನ ಚಮುವೊ, ಛದ್ಮಚಮು ದಂದುಗದ ಬಾಗಿನಗಳವರ ನಲುಮೆಗಳು (ಮಂಕುಕ. ೦೬೩). [ ಛದ್ಮ + ಚಮು ]

ಛದ್ಮನೆ (ನಾ). ೧. ಮುಸುಕಂ; ಮರೆ; ಆಚ್ಛಾದನೆ: ನಿಂತುದಾ ಜೀಮೂತಛದ್ಮನೆಯನಾಂತ ರಾವಣರಥಂ ನಿಶ್ಚಲಂ (ಶ್ರೀರಾಮಾ. ೨೩೦–೬೬). ೨. ಮೋಸ ; ಕಪಟ; ವಂಚನೆ : ಭೀಮವಿಕ್ರಮವಿಹಗೇಂದ್ರನಂ ವೀಕ್ಷಿಸುತ ಶಂಕೆ ಪುಟ್ಟಿತ್ತು ನಿಶಾಚರರೊಂದು ಛದ್ಮನೆಯ ಭಯಕೆ (ಶ್ರೀರಾಮಾ. ೦೯೪–೬); ಈಗ ನಮ್ಮ ಭೇಟಿ ಮಾಡಬೇಕೆಂದು ಅಪೇಕ್ಷಿಸುವ ಛದ್ಮನೆಯೂ ನಮಗೆ ತಿಳಿಯಿತು (ಚಿತ್ರಪಾ. ೮೩). [ <ಸಂ. ಛದ್ಮನ್ ]

ಛದ್ಮಬಾಲಿಶ (ನಾ). ವೇಷಾಂತರವನ್ನು ಹೊಂದಿ ಹುಡುಗಾಟ ಮಾಡುವವನು ; ರೂಪ ಮರೆಸಿ ಲೀಲೆಯಾಡುವವನು : ಅರ್ಗಲ್ವರೀ ಛದ್ಮಬಾಲಿಶನಂ ದೈವವಿಸೂತ್ರಮುಂ ಪುರುಷಕಾರಂ ಮಾಜಲೇನಕ್ಕುಮೋ (ಜಗನ್ನಿ. ೩–೦೯). [ ಛದ್ಮ + ಬಾಲಿಶ ]

ಛದ್ಮರೂಪ (ನಾ). ವೇಷಾಂತರಗೊಂಡ ರೂಪ; ಮರೆಸಿದ ಆಕಾರ: ಇಳೆಗಿಳಿದು ಪವಡಿಸಿಹ ಚಂದ್ರನೆಯ ಅಕಳಂಕ ಛದ್ಮರೂಪದೊಲಿಂತು (ಚಂದ್ರಹ. ೭೮–೮). [ ಛದ್ಮ + ರೂಪ ]

ಛದ್ಮವೇಷ (ನಾ). ನಿಜವಾದ ಸ್ವರೂಪವನ್ನು ಮುಚ್ಚಲು ಧರಿಸಿದ ಬೇರೆ ರೂಪ; ವೇಷಾಂತರ : ಈ ಪ್ರಪಂಚ ಏನೋ ಒಂದು ಛದ್ಮವೇಷ ತಾಳಿ ನಮ್ಮನ್ನು ಮೋಸಗೊಳಿಸುತ್ತಲಿದೆ (ದೇಶನ್ನ. ೨) ; ಛದ್ಮವೇಷವನ್ನು ಕಿತ್ತೊಗೆದು ತನ್ನ ನಿಜಸ್ವರೂಪವನ್ನು ಏಕೆ . . . ತೋರದು? (ದೇಶನ್ನ. ೫). [ ಛದ್ಮ + ವೇಷ ]

ಛದ್ಮವೇಷಧಾರಿ (ನಾ). ನಿಜವಾದ ಸ್ವರೂಪವನ್ನು ಮುಚ್ಚಿ ಬೇರೆ ರೂಪ ಧರಿಸಿದ ವ್ಯಕ್ತಿ ; ವೇಷಾಂತರ ಮಾಡಿಕೊಂಡವನು: ಛದ್ಮವೇಷಧಾರಿಯಾದ ಅರ್ಜುನನ ಗುರುತನ್ನು ಯಾರೂ ಹಿಡಿಯಲಾರದಿದ್ದರು (ಭೀಷ್ಮಕ. ೮೦); ಛದ್ಮವೇಷಧಾರಿಯಾದ ಗೂಢಚಾರನೋ ? (ಚಾಂಡ. ೮). [ ಸಂ. ಛದ್ಮವೇಷಧಾರಿನ್ ]

ಛದ್ಮಸ್ಥ (ನಾ). ೧. ಮರೆಯಲ್ಲಿರುವವನು ; ಅಡಗಿಕೊಂಡಿರುವವನು. ೨. [ಜೈನ] ಕೇವಲಜ್ಞಾನಿಯಾಗುವುದಕ್ಕೆ ಹಿಂದಿನ ಅವಸ್ಥೆಯಲ್ಲಿರುವವನು : ಪ್ರಥಮಶುಕ್ಲಧ್ಯಾನಪರಿಣತಿಯಿಂ ಕ್ಷೀಣಕಷಾಯವೀತರಾಗ ಛದ್ಮಸ್ಥ ಗುಣಸ್ಥಾನ ವ್ಯವಸ್ಥಿತನಾಗಿ (ಸುಕುಮಾ. ೮–೬೨ ವ) ; ಸಾಕಾರಂ ಜ್ಞಾನಮನಾಕಾರಂ ದರ್ಶನಂ ತದುಭಯಂ ಛದ್ಮಸ್ಥರೊಳ್ ಕ್ರಮದಿಂ ನಿರಾವರಣರೊಳಕ್ರಮದಿಂ ವರ್ತಿಸುಗುಂ (ತತ್ತ್ವಾರ್ಥ. ೮೬). [ ಸಂ. ]

ಛದ್ಮಸ್ಥಕಾಲ (ನಾ). [ಜೈನ] ಛದ್ಮಸ್ಥಾವಸ್ಥೆಯಲ್ಲಿರುವ ಕಾಲ : ಪದಿನಾಲ್ಕು ವರ್ಷಂ ಛದ್ಮಸ್ಥಕಾಲಂ ಪೋಗೆ ಸಹೇತುಕವನದೊಳ್ ಷಷ್ಠೋಪವಾಸಂಗೆಯ್ದು (ಜಾಪುಂಪು. ೦೩೦) ; ಚಂದ್ರಪ್ರಭಮುನಿಪ್ರಭು ಪರಮಪಂಚಮಜ್ಞಾನ ಸಂಜನನಕರಣಾತ್ಯಂತಶುದ್ಧಧ್ಯಾನೋದ್ಯೋಗ ಸಂಸಕ್ತಚಿತ್ತಂ ಛದ್ಮಸ್ಥಕಾಲಂ ಮಾಸತ್ರಯಪ್ರಮಿತಮಾದುದೆಂಬಂದಿಂಗೆ (ಚಂದ್ರಪು. ೦೪–೫೬ ವ). [ ಛದ್ಮಸ್ಥ + ಕಾಲ ]

ಛದ್ಮಿಸು (ಕ್ರಿ). ಮರೆ ಮಾಡು; ಅಡಗಿಸು: ತಮ್ಮ ಕುಲಂಗಳಂ ಛದ್ಮಿಸಿಯುಂ ಜಾತಿಸಂಕರಂ ಮೊದಲಾದ ದೋಷಂಗಳ್ವೆರಸಿ ಸತ್ಪಾತ್ರಕ್ಕೆ ದಾನಮುಂ ಮಾಡಿದವರುಂ . . . ಮೊದಲಾದವರ್ಗೆ ಕುಮನುಷ್ಯತ್ವದಾಸ್ರವಮಕ್ಕುಂ (ಷಟಾರ. ೯೨–೦೬). [ ಛದ್ಮ + – ಇಸು ]

ಛನ್ (ನಾ). ಒಂದು ಅನುಕರಣ ಶಬ್ದ : ಮೊಗಮಂ ನೆಱೆ ಚುರ್ಚುತ್ತುಂ ಛನ್ನೆಂದಱುಗುಱುಗಳ ನೆರವನಱಿದು ಪೋಗದೆ ಪೆಣೆವರ್ (ಧರ್ಮಾಮ್ಮ. ೩–೦೯೦).

ಛನ್ನ (ಗು). ೧. ಮುಚ್ಚಿದ; ಹೊದಿಸಿದ ; ಆವೃತವಾದ ; ಉನ್ನತಧವಳಚ್ಛತ್ರಚ್ಛನ್ನವಿಯತ್ತಳನಂ . . . ಪಟುವಿನೊಳಿನ್ನರಸನನಿಂತು ಬಿದಿಯತಂದಿಕ್ಕುವುದೇ (ಶಂಶಭಾ. ೨–೨೨) ; ಶಯ್ಯಾಶ್ರಿತ ಸಿತಮೃದುಳಪ್ರಚ್ಛದಚ್ಛನ್ನಶಯ್ಯಾತಳದೊಳ್ (ಕಾದಂಪೂ.೮೦). (ನಾ). ೨. ಅಡಗಿರುವುದು ; ರಹಸ್ಯವಾದುದು: ಛನ್ನವಾ ಋಣಮಾರ್ಗ (ಮಂಕುಕ. ೫೦೦). [ ಸಂ. ]

ಛನ್ನವೀರ (ನಾ). ಒಂದು ಬಗೆಯ ಕೊರಳ ಹಾರ, –ಸರ : ಅಭಯ ತ್ರಿಶೂಲ ಮಾಲೆ ಯಜ್ಞೋಪವೀತ ಉದರಬಂಧ ಛನ್ನವೀರಗಳನ್ನು ಹೊಂದಿ ಎಡಗೈಯಿಂದ ನಿಂತಿರುವ ಪಾರ್ವತಿಯನ್ನಾಲಿಂಗಿಸುತ್ತಿರುವನು (ಹೊಯ್ಸಳಾ. ೨೨೬). [ ಸಂ. ]

**ಛಪಾಯಿಸು** (ಕ್ರಿ). ಮರೆಮಾಡು; ಅಡಗಿಸು: ಅವನ ಕಾಗದವನ್ನೂ ರತ್ನವನ್ನೂ ಸಹ ಕೊಡದೆ ಛಪಾಯಿಸಿ ಬಿಟ್ಟನು (ಕಥಾಮಂ. IV, ೪೯): ನಾವು ಮಾಡೂದು ಖೂನಿ ಛಪಾಯಿಸುವ ಗುನ್ಹೇನ ಸರಿ (ಗ್ರಾಮಾಯ. ೩೩).
[ ಛಪಾವಣೆ + – ಇಸು₃ ]

**ಛಪಾವಣೆ** (ನಾ). ಮರೆಮಾಚುವುದು; ಬಚ್ಚಿಡುವುದು: ಶಿರಸ್ತೆದಾರ ವಗೈರೆ ಜನಗಳ ಖುರ್ದು ಬರ್ದು, ಛಪಾವಣೆ ವಿಚಾರಗಳಲ್ಲಿ ನಡೆಸತಕ್ಕ ಕ್ರಮ (ಮಹಾವಂ. II, ೩೭): ಕಚೇರಿಯಲ್ಲಿ ಒಂದು ಸಣ್ಣ ಛಪಾವಣೆ–ಅದರ ಗೊಂದಲಕ್ಕೆ ಸಿಕ್ಕಿಬಿದ್ದೆ (ನಟಸಾ. ೩೭೭).
[ ←ಮರಾ. ಛಪಾವಣೀ, ಛಪವಣೀ ]

**ಛಪ್ಪನ್ನ, ಚಪ್ಪನ್ನ** (ನಾ). ಐವತ್ತಾರು: ಚೌಷಷ್ಟಿ ಪಟ್ಟಣ ಛ[ಪಾಠಾಂ. ಚ]ಪ್ಪನ್ನ ವೀಥಿಗಳ ದಾಂಟಿ (ಅವಕಂ. ೬೧–೨೬೭). ಚಪ್ಪನ್ನ. ‘ಚಪ್ಪನ್ನದೇಶ’ ‘ಚಪ್ಪನ್ನಭಾಷೆ’ ಪರಾ.
[ ←ಮರಾ. ಛಪ್ಪನ್ನ್, ಛಪನ್ನ್; ಹಿಂ. ಛಪ್ಪನ್ ]

**ಛಪ್ಪನ್ನದೇಶ, ಚಪ್ಪನ್ನದೇಶ** (ನಾ). ಐವತ್ತಾರು ದೇಶಗಳು: ಛಪ್ಪನ ದೇಶಗಳು: ಮತ್ತಮಾ ಭರತವರುಷದಲ್ಲಿಯೇ ಅಂಗ ವಂಗ ಕಳಿಂಗ ತೆಲುಂಗ ಕೊಂಗ ಲಾಟ ಬಂಗಾಳ ಚೋಳ ಕೇರಳ ಗೌಳ ಪಾಂಚಾಳ ಸಿಂಹಳ ಕುಂತಳ ನೇಪಾಳ ಮಳಯಾಳ ತುಳವ ಸೈಂಧವ ಕೊಂಕಣ ಕುರು ಮಗಧ ಮತ್ಸ್ಯ ವಿದರ್ಭ ಕೋಸಲ ಶೂರಸೇನ ಕಾಶ್ಮೀರ ಮಹಾರಾಷ್ಟ್ರ ಕರ್ಣಾಟ ಕಿರಾತ ತುರುಷ್ಕ ಶಂಕರ ಬರಮ ತ್ರಿಗರ್ತ ನಿಷಧ ಮಧ್ಯ ಜೈನ ಬರ್ಬರ ಬಾಹ್ಲೀಕ ಲಾಟ ಚೈನ ಕರಾಳ ಓಢ್ರ ಘೂರ್ಜರ ಕಾಂಭೋಜ ಸೌರಾಷ್ಟ್ರ ಸೌವೀರ ಪಾಂಡ್ಯ ಹೂಣ ಯವನ ಮ್ಲೇಚ್ಛ ಹೈಹಯ ಆರ್ಯಾವರ್ತ ಭೋಜ ದ್ರಾವಿಡ ಅಮರುಕ ಉತ್ತರಕುರು ಗ್ರೈಟಗಳೆಂಬೈವತ್ತಾರು ಬಗೆಯ ಜನರಿಂದ . . . ನಿರೂಢವಾದೈವತ್ತಾರು ಪ್ರಾಂತಂಗಳಪ್ಪವಾ ದೇಶಂಗಳಲ್ಲಿ (ವಿವೇಕ. ೨೯೩); ಸಂದಣಿಸಿದರು ಛಪ್ಪನ್ನದೇಶದ ಜನವೃಂದ ಜೂದಿನ ವಿಷಯದಲಿ (ಪ್ರೋಹತ. ೨೦–೨೦); ಛಪ್ಪನ್ನ ದೇಶದ ನೃಪರು ಪೇಚರರಿಹರೊಪ್ಪವ ಮಾಡು ಹೋಗೆಂದಾ (ಭರತ. ೩೩–೬೦). ಚಪ್ಪನ್ನದೇಶ: ಚಪ್ಪನ್ನದೇಶಾಧಿಪರ ಚಿತ್ರಗಳ ದೂಷಣೆಗೆಯ್ದು ನಿಟ್ಟಿಸಲೊಲ್ಲ ದವಳಾಯಾಸವ ಕಂಡಳು ಕುವರಿ (ಪ್ರೋಹತ. ೩೦–೦೯); ಚಪ್ಪನ್ನದೇಶದೊಳ್ಳನಗೆ ಮಲೆತಿದಿರಾಗಿ ಬಪ್ಪ ಭೂಮಿಪರಿಲ್ಲ (ಕೃಮಿಥಾ. ೨೩–೧೨). [ ಛಪ್ಪನ್ನ + ದೇಶ ]

**ಛಪ್ಪನ್ನಭಾಷೆ, ಚಪ್ಪನ್ನಭಾಷೆ** (ನಾ). ಐವತ್ತಾರು ಭಾಷೆಗಳು: ಛಪ್ಪನ್ನ ಭಾಷೆಯು ಸುಲಿಪಿಯಲ್ಲವಿದನು ಬಹುಮುಪ್ಪದವ್ವುಗರೋದಿದರೆಯೋದುವರು (ಶ್ರೀಭಾಪು. ೬–೦೭). ಚಪ್ಪನ್ನಭಾಷೆ: ಚಪ್ಪನ್ನಭಾಷೆಯಱಿವ ಧೀರರೀಗಳೆ ನೋಡಿಯೆಂದು ಬಿಜ್ಜಳನೃಪಂ ಸಾಱಿಸಿದಂ ಡಂಗುರವಂ (ಲಶಿಪಂ. ೩೦–೪೯). [ ಛಪ್ಪನ್ನ + ಭಾಷೆ ]

**ಛಪ್ಪನ್ನೈವತ್ತಾರು, ಚಪ್ಪನ್ನೈವತ್ತಾರು** (ನಾ).=ಛಪ್ಪನ: ಛಪ್ಪನ್ನೈವತ್ತಾರು, ಕುಡುವೊಕ್ಕಲಿಗ ಇವೆ ಮೊದಲಾದ ಶಬ್ದಪ್ರಯೋಗಗಳು ಕಾಲಕ್ರಮದಲ್ಲಿ ಮೂಲಶಬ್ದಾರ್ಥದ ಮರೆವು ಹೆಚ್ಚಾದುದರ ದ್ಯೋತಕಗಳಾಗಿವೆ (ಕನ್ನಸು. ೦–೬). ಚಪ್ಪನ್ನೈವತ್ತಾರು: ಚಪ್ಪನ್ನೈವತ್ತಾರು ದೇಶಗಳು ಹಿಂದೆ ಪ್ರಸಿದ್ಧವಾಗಿದ್ದಾವು (ರೂಢಿ).
[ಛಪ್ಪನ್ನ + ಐವತ್ತು (<ಅಯ್ವತ್ತು) + ಆರು₃ (<ಆಱು₃)]

**ಛಪ್ಪರಿಸು** ‘ಚಪ್ಪರಿಸು’ ನೋ.

**ಛಪ್ಪಳೆ** ‘ಚಪ್ಪಳೆ’ ನೋ.

**ಛಪ್ಪಳೆಯಿಡು** (ಕ್ರಿ). ಚಪ್ಪಾಳೆತಟ್ಟು,–ಹೊಡೆ: ಜನನಿ ಛಪ್ಪಳೆಯಿಟ್ಟು ಕರೆಯಲಪ್ಪುವನಾ ಜಿನನಾಟ ಕಡುಚೆಲುವಾಯ್ತು (ಅನಂತ. ೬–೧೦).
[ ಛಪ್ಪಳೆ (<ಚಪ್ಪಳೆ) + ಇಡು₁ ]

**ಛಪ್ಪಿಸು, ಛರ್ಪಿಸು** (ಕ್ರಿ). ಮೇಲೆ ಬೀಳು; ಮಂತ್ತು; ಆಕ್ರಮಿಸು: ವರ್ಗದ್ವಿತೀಯಾಕ್ಷರಂಗಳ್ಗೆ . . . ಛರ್ಪಿಸಿದಂ (ಛಪ್ಪಿಸಿದಂ) (ಶಮದ. ೦೩ ವೃತ್ತಿ). ಛರ್ಪಿಸು: ಮೇಲಿನ ‘ಶಮದ’ ಪ್ರಯೋಗವನ್ನು ನೋಡಿ.
[ ಛಪ್ಪ₀ (P <ಪ್ರಾ. ಚಪ್ಪ) + – ಇಸು₃ ]

**ಛಪ್ಪೆ** ‘ಚಪ್ಪೆ₁’ ನೋ.

**ಛಪ್ರಾಸಿ** ‘ಚಪರಾಸಿ’ ನೋ.

**ಛಮ್**(ನಾ). ಒಂದು ಅನುಕರಣ ಶಬ್ದ: ಅನುಕರಣ ಸಂಧಿಗೆ–ಛಮ್ಮೆಂಬ, ಛಟಛಟೆಂಬ (ಶಮದ. ೬೦ ವೃತ್ತಿ).

**ಛಮ್ಮನೆ** (ಅ). ಛಮ್ಮೆಂಬ ಶಬ್ದದೊಡನೆ: ಅನುಕರಣಕ್ಕೆ – ಖಣಿಲ್ಲನೆ, ಖಟಾಲನೆ, ಛಮ್ಮನೆ, ಧುಮ್ಮನೆ (ಶಮದ. ೧೪ ಪ್ರಯೋ).
[ ಛಮ್ + – ಅನೆ₁ ]

**ಛರು** (ನಾ). ಕತ್ತಿಯ ಹಿಡಿ,–ಹಿಡಿಕೆ: “ಛರುವಡಾಯುಧಗಳ ಹಿಡಿ [ಪಾಠಾಂ. ತ್ಸರುವೆನಲ್ಪಿಡಿ]” (ಮಂಗರಾ. ೮೮–೩೭); “ಛರು–ತ್ಸರು=ಆಯುಧಗಳ ಹಿಡಿಕೆ” (ಕದ್ರಕೋ. ೧೩). [ <ಪ್ರಾ. ಛರು. / ಸಂ. ತ್ಸರು ]

**ಛರ್ದಿ** (ನಾ). ಕಾರುವಿಕೆ; ವಾಂತಿ; ವಮನ: ಚರಿಗೆವೊಕ್ಕೊಡಾರುಂ ನಿಱಿಸುವೊರಿಲ್ಲಮೂಱಿತ್ತು ನಿಱಿಸಿದೊಡಂ ಛರ್ದಿಯಕ್ಕುಂ (ವಡ್ಡಾರಾ. ೧೬೦–೯); ಎಳೆಗಱುಕೆಯನಕ್ಕಿಗರ್ಚನೊಳ್ ಕುಡಿಯೆ ಛ[ಪಾಠಾಂ.ತ]ರ್ದಿಯಂ ಮಾಣಿಸುಗುಂ (ಲೋಕೋಪ. ೯–೩೪); ತಾರೆಕಾಯಿ, ಸಕ್ಕರೆ, ಬಿಸಿನೀರಲ್ಲಿ ಕುಡಿಸಲು ಛರ್ದಿ ಮಾಣ್ಗುಂ (ವಿವೈವಿ. ೦೦೯). [ ಸಂ. ]

**ಛರ್ದಿಗೆಯ್**(ಕ್ರಿ). ಕಾರು; ವಾಂತಿಮಾಡು; ವಮನಮಾಡು: ಸುವ್ರತೆಯ ರಂಬ ಕಂತಿಕೆಯರ್ಗನ್ನದಾನಂ ಕೊಟ್ಟೊಡವರುಪವಾಸಶ್ರಮದಿಂ ಛರ್ದಿಗೆಯ್ಯೆ (ಜಾವುಂಪು. ೨೦೩); ತಾನಲ್ಲಿ ಛರ್ದಿಗೆಯ್ಯಲು ನೀನು ಸಮ್ಯಕ್ತ್ವಹೀನದಿಾ ಜುಗುಪ್ಸೆಗೆಯ್ದುದಱಿಂ (ಶಾಂತೀಶ. ೩–೩೯). [ಛರ್ದಿ + ಕೆಯ್₁]

**ಛರ್ದಿಸು** (ಕ್ರಿ).=ಛರ್ದಿಗೆಯ್: ನಿರವದ್ಯಾಹಾರಮನಿಕ್ಕಲುಂಡಿರ್ದು ಛರ್ದಿಸುವುದುಂ (ನೇಮಿಪು. ೬–೧೮೩ ವ); ಕೊಳ್ಳಿರೆ ನಿಮ್ಮ ಕೂಟನೆನುತಂ . . . ಛರ್ದಿಸಿದಾಗಳ್ ಮನೆ ಪೂಟಿ ಕೂಟ್ ಕಷಿವುದಂ ಕಂಡು (ಬಂಹರಿ. ೯–೩೦).
[ ಛರ್ದನ₀ + – ಇಸು₃ ]

**ಛರ್ಪಿಸು** ‘ಛಪ್ಪಿಸು’ ನೋ.

**ಛಲ₁** ‘ಚಲ₁’ ನೋ.

**ಛಲ₂, ಛಳ** (ನಾ). ೧. ನೆಪ; ವ್ಯಾಜ: ಅನ್ನಿಗವಿತ್ತ ಲಾಂಛನಚ್ಛಲದಿಂ ಶೋಕಾನಲದಗ್ಧಮಪ್ಪ ಮಹಾಶೋಕಾಹೃದಯಮುಮಂ ವಿಡಂಬಿಸುವಂತೆಯುಂ ಮುನಿಕುಮಾರವಧಮಹಾಪಾತಕಮಂ ತಾಳ್ದಿದಂತೆಯುಮಾಗಿ (ಕಾದಂಪೂ. ೯೪೨); ಸುಧಾಸೂತಿ ಧಾತ್ರಿಯೊಳ್ ಶಿಶುರೂಪಚ್ಛಲದಿಂ ನೆರೆ ಪಡೆದವೊಲುಜ್ವಲತನು ರೋಹಿಣಿಗನಂತನಾದುದಯಿಸಿದಂ (ಆಗವಿ.೨–೮೮). ೨. ಮೋಸ; ವಂಚನೆ; ಕಪಟ. ‘ಛಲಿಸು’ ಪರಾ. ೩. [ನ್ಯಾಯ] ನ್ಯಾಯವಿಚಾರಕ್ಕೆ ಬೇಕಾದ ಹದಿನಾರು ಪದಾರ್ಥಗಳಲ್ಲಿ ಒಂದು; ವಾದಿಯು ಹೇಳಿದ ಶಬ್ದಕ್ಕೆ ಬೇರೆ ಅರ್ಥವನ್ನು ಕಲ್ಪಿಸಿ ಪ್ರತಿವಾದಿಯು ಹೇಳುವ ದೂಷಣೆ: ಗೌತಮೋಕ್ತ ನ್ಯಾಯವು ಪ್ರಮಾಣ ಪ್ರಮೇಯ . . . ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲೀ ಪ್ರಪಂಚಕ್ಕೆ ಪರಮೇಶ್ವರ ಕರ್ತೃಕತ್ವಮಂ ನಿಶ್ಚಯಿಸುವದು (ವಿವೇಕ.೧೦); ವಾಕ್ಯಗಳಿಗೆ ಅಪಾರ್ಥವೆಂಬುದು ಛಲ (ಹಿಂದಸಾ. ೧೧೮). ೪. [ಕಾವ್ಯಮೀ] ದಶರೂಪಕಗಳಲ್ಲಿ ಒಂದಾದ ವೀಥಿಯ ಒಂದು ಅಂಗ; ಪ್ರಿಯವಾಗಿರುವಂತೆ ತೋರುವ ಅಪ್ರಿಯ ವಾಕ್ಯಗಳಿಂದ ಮೋಸಗೊಳಿಸುವುದು. ಛಳ: ೧. ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ತದ್ವಿಷಯದಧ್ವನ್ಯರ್ ಮನಂ ಬೆರ್ಚುವರ್ (ಚಂದ್ರಪು. ೧–೯೯). [ ಸಂ. ]

**ಥಲಗಾರ** 'ಚಲಗಾರ' ನೋ.

**ಥಲಗಾರ್ತಿ** (ನಾ). ಹಟಸ್ವಭಾವದವಳು: ಎಂಕಮ್ಮನೂ ಒಳ್ಳಿಯ ಥಲ ಗಾರ್ತಿಯೇ ಸೈ (ಒಡ್ಡಿಉ. ೩೨). [ ಥಲಗಾರ (< ಚಲಗಾರ) + – ತಿ$_1$ (< –ಇತ್ತಿ) ]

**ಥಲಗೆಡು** (ಕ್ರಿ). ಹಟವನ್ನು ಬಿಡು: ಲಜ್ಜೆಗೆಟ್ಟನು ನಾಣುಗೆಟ್ಟನು ಕುಲ ಗೆಟ್ಟನು ಥಲಗೆಟ್ಟನು (ಬಸವ. ೩೨೨). [ ಥಲ$_1$ (< ಚಲ$_1$) + ಕೆಡು$_1$ ]

**ಥಲಗೇಡಿ** (ನಾ). ಹಟಮಾರಿತನದಿಂದ ಕೇಡನ್ನು ಅನುಭವಿಸುವವನು: ಆಡಲೇಕಿನ್ನು ನಿಮ್ಮಡಿಗೆ ಕೌರವನು ಥಲಗೇಡಿ ವಾತಜನೊಡನೆ ದ್ವೇಷಮಂ ಮಾಳ್ಪನು (ತುರಂಗ. ೭೫-೩೩). [ ಥಲ$_1$ (< ಚಲ$_1$) + ಕೇಡಿ$_1$ ]

**ಥಲಗ್ರಾಹಕ** (ನಾ). ಹಟಹಿಡಿಯುವಿಕೆ; ಹಟಮಾರಿತನ; ಮೊಂಡುತನ: ಸಾಹಸಿಗನೆಂದಿನ ಪರಿಯ ದಾಸೋಹದಿಂ ಬಿಡದಗೆಯಲುಂ ಥಲ ಗ್ರಾ[ಪಾಠಾಂ. ಗಾ]ಹಕದಿನವರೆಯ್ದು ವಿಳಿಯಂ ಪಱಿದು ಬಿಸುಡಿಸಲು (ಬಸಪು. ೪೯-೪೫). [ ಥಲ$_1$ (< ಚಲ$_1$) + ಗ್ರಾಹಕ ]

**ಥಲಚೇತನ** (ನಾ). ಹಟಸ್ವಭಾವದವನು; ಚಲಗಾರ: ಥಲಚೇತನನು ಸರಿ ಚಂಡಿಯಾದನು ಕಳನ ಚೌಕದಲಿ (ಕುವ್ಯಾಗ. ೩-೧೫). [ ಥಲ$_1$ (< ಚಲ$_1$) + ಚೇತನ ]

**ಥಲನೆ** (ನಾ). ಕಾಟ; ಪೀಡೆ; ಹಿಂಸೆ: ಇದು ನನ್ನ ಥಲನೆ ಮಾಡಲೆಂದೂ? (ಮುಕ್ತ್ಯ.ದ. ೬೦): ಹೆಣ್ಣಾದವಳಿಗೆ ಇಷ್ಟೊಂದು ಥಲನೆಯ ಆವಶ್ಯಕತೆ ಉಂಟು (ಇಪ್ಪಳ. ೨೦೨). [ ←ಮರಾ. ಥಲನಾ ]

**ಥಲಮದ** (ನಾ). ಹಟದಿಂದ ಉಂಟಾಗುವ ಗರ್ವ: ಕುಲಮದ ಥಲಮದ ವಿದ್ಯಾಮದದವರ ತೋಱದಿರಾ (ಅವಕಂ. ೧೧೨-೯೬೪): ಥಲಮದ ವಿದೇನಯ್ಯಾ ದರುಶನಭ್ರಾಂತಿ ಇದೇನಯ್ಯಾ (ಬಸವ. ೮೯೪). [ ಥಲ$_1$ (< ಚಲ$_1$) + ಮದ ]

**ಥಲವಾದಿ** 'ಚಲವಾದಿ$_1$' ನೋ.

**ಥಲವಿಡಿ** 'ಚಲಂಬಿಡಿ' ನೋ.

**ಥಲವೇಳು**(ಕ್ರಿ). ಮೊಂಡಾಟ ಮಾಡು; ಹಟಹಿಡಿ: ರಾಮನಾಥನುಱುಬೆಯ ನಿಲಿಸುವ ವೀರರಿಲ್ಲೆನುತ ಬಂದನು ಬೇಗ ಥಲವೆದ್ದು ಮಗ ಹೊಯ್ಸಳನು (ಕುರಾಸಾಂ. ೧೩-೯೧). [ ಥಲ$_1$ (< ಚಲ$_1$) + ಏಳು$_1$ (< ಎೞ್$_1$) ]

**ಥಲಿ** 'ಚಲಿ$_2$' ನೋ.

**ಥಲಿಪದ** (ನಾ).ಹಟಗಾರನ ಸ್ಥಾನ; ಹಟಮಾರಿತನ: ಕೇಳಿಕೆಯ ಮನ ಥತ್ರ ಭಂಗದ ಮೇಲೆ ಮುರಿಯದ ಥಲಿ[ಪಾಠಾಂ. ಲ]ಪದದ ಪರಿಪಾಲಿಯಿಂದುಪ್ಪ ವಡಿಸಿದನುಪ್ಪರದ ಗರ್ವದಲಿ (ತೊರವೆ. ೬-೧೧-೧). [ ಥಲಿ (< ಚಲಿ$_2$) + ಪದ$_2$ ]

**ಥಲಿಸು, ಥಳಿಸು$_2$** (ಕ್ರಿ). ೧. ವಂಚಿಸು; ಮೋಸಮಾಡು: ಮಾತುಮಾತಿ ಗವನು ಅವ್ವನವರ ಆಣೆ ದೇವರ ಆಣೆ ಮಾಡಿ ನನ್ನನ್ನು ಥಲಿಸಿದನು (ಕಥಾ. II, ೩೦೪). ೨. ಪೀಡಿಸು; ಕಾಡು: ಆದರೆ ಒಬ್ಬ ಮಂಬಾಜಿ ಯಲ್ಲದೆ ಬೇರೆ ಯಾವ ಕ್ರಿಸ್ತೀಯನೂ ಟಿಳಕರನ್ನು ಥಲಿಸಲಿಲ್ಲ (ಸ್ಮೃತಿಚಿ. ೪೪೧); ಸರ್ಪಗಳ ತಾಯಿಯಾದ ಕದ್ರುವು ಗರುಡನ ತಾಯಿಯಾದ ವಿನತೆಯನ್ನು ಥಲಿಸಿ ಥಲಿಸಿ ಹಣ್ಣುಮಾಡಿದ ಸಂಗತಿಯು ನಿಮಗೆ ಗೊತ್ತಿಲ್ಲವೆ? (ತುಳಸಿ. ೧೧೯): ಸುರಪತಿಯ ಥಲಿಸಿದ ನಿವಾತ ಕವಚರನ್ನೆಲ್ಲ ಲೀಲೆಯಲಿ ನಿರ್ನಾಮಮಾಡಿದನು (ಭಾಸನಾ. ೪೪). **ಥಳಿಸು$_2$**: ೨. ಬಹಳ ವಾಗಿ ಹಿಂಸಿಸಿ. ಥಳಿಸಿದ ಕಥೆಯನ್ನು ಅವಳಿಗೆ ಹೇಳಿದನು (ಬಾಳಕ. ೬೮). [ ಥಲ$_2$ + – ಇಸು$_3$ ]

**ಥಲೋಕ್ತಿ** (ನಾ). ಹಟದ ಮಾತು; ಮೊಂಡುತನದ ನುಡಿ: ನೀವೇ ನಿಮ್ಮ ಶಿಷ್ಯನ ಥಲೋಕ್ತಿಯಂ ಬಿಡಿಸೆಂದು ಸಂತೈಸಲು (ತುರಂಗ. ೭೫-೩೩). [ ಥಲ$_1$ (< ಚಲ$_1$) + ಉಕ್ತಿ ]

**ಥಲ್ಲಣ** 'ಚಳಣ' ನೋ.

**ಥಲ್ಲಿ$_1$** 'ಚಲ್ಲಿ$_2$' ನೋ.

**ಥಲ್ಲಿ$_2$** (ನಾ). ೧. ಮರದ ಸಿಪ್ಪೆ,–ತೊಗಟೆ: ಅಲರಂ ಬಸಂತದೊಳ್ ತತ್ಫಲಮಂ ಗ್ರೀಷ್ಮದೊಳೆ . . . ಪ್ರಾವೃಡ್ದಿನಂಗಳೊಳ್ ಥಲ್ಲಿ [ಪಾಠಾಂ. ಝಲ್ಲಿ, ಬಳ್ಳಿ, ವಲ್ಲಿ]ಗಳಂ . . . ಸಾಧಿಪುದು ಮಹಾಮಯ ಹಾಲಾಹಳಕ್ಕೆ ಸಂಗ್ರಹಕಾಲಂ (ಖಮದ. ೧-೬೯). ೨. ಬಳ್ಳಿ; ಲತೆ. ೩. ಒಂದು ಬಗೆಯ ಹೂವು. ೪. ಗಡ್ಡೆ: ಮರದರಾಸಿನದ ಕಟುತ್ರದ ವರುಣದ ವದ್ಮಕದ ಥಲ್ಲಿಯೊಳ್ ಸಮನಿಪುದಂ ಪರಿಶೋಷಿಸಿ (ಲೋಕೋಪ. ೭-೫೭). ೫. ಸಂತತಿ; ಸಂತಾನ. [ ಸಂ. ಥಲ್ಲೀ ]

**ಥವಿ** (ನಾ). ೧. ಕಾಂತಿ; ಹೊಳಪು; ಶೋಭೆ: ಹರಗಳ ತಮಾಳ ನೀಳ ಚ್ಛವಿಯಿಂ (ಪಂಪಭಾ. ೩-೩೪): ಪಕ್ಷಂಗಳ ಶಾದ್ವಲಚ್ಛವಿ ಮನಂಗೊಳೆ ಪಾಱುವ ಕೀರಮಾಲೆ . . . ರಂಜಿಕುಂ (ಜಗವಿ. ೪-೬೭): ಥವಿಕೋಟಿ ಯೆರಚರ್ ಪ್ರತಿಚ್ಛಾಯೆ ವಿಲಸಿಪುದು (ಮಂಕುಳ. ೧೨೭). ೨. ಚರ್ಮ; ತೊಗಲು. ೩. ಬಣ್ಣ. ೪. ಅಂದ. [ ಸಂ. ]

**ಥವಿಕಲ್ಯಾಣ** (ನಾ). [ಬೌದ್ಧ] ಚರ್ಮದ ಸೌಂದರ್ಯ; ಹೆಂಗಸಿಗೆ ಇರಬೇಕಾದ ಕೇಶಕಲ್ಯಾಣ, ಮಾಂಸಕಲ್ಯಾಣ, ಅಸ್ಥಿಕಲ್ಯಾಣ, ಥವಿಕಲ್ಯಾಣ ಮತ್ತು ವಯೋಕಲ್ಯಾಣ ಎಂಬ ಐದು ಕಲ್ಯಾಣಗಳಲ್ಲಿ ಒಂದು: ಚಂದನವನ್ನಾಗಲಿ ಇತರ ವರ್ಣಕಗಳನ್ನಾಗಲಿ ಲೇಪಿಸದಿದ್ದರೂ ಚರ್ಮವು ನೀರೋತ್ಪಲದ ಹಾರದಂತೆ ನುಣುಪಾಗಿರಬೇಕು, ಕರ್ಣಿಕಾರ ಪುಷ್ಪದ ಹಾರದ ಹಾಗೆ ಶುಭ್ರವಾಗಿರಬೇಕು. ಇದು ಥವಿಕಲ್ಯಾಣವೆಂಬುದು (ಹತ್ತುಮು. ೨೧). 'ಕೇಶಕಲ್ಯಾಣ' ಪರಾ. [ ಥವಿ + ಕಲ್ಯಾಣ ]

**ಥವಿವಡೆ** (ಕ್ರಿ). ಕಾಂತಿಯನ್ನು ಹೊಂದು; ಶೋಭೆಯನ್ನು ಪಡೆ: ಪೊಡವಿಯೊಳಗೆಂದುಂ ಪ್ರಭವಿಸದ ಗಿಡುವಿನೊಳು ಥವಿವಡೆದು ನವಕಂಬಡೆದ ನವ್ಯಸಹಸ್ರದಳಶತದಳಮನರ್ಚಿಸುತ(ಬಸಪು. ೩೫-೧೩). [ ಥವಿ + ಪಡೆ$_1$ ]

**ಥಳ** 'ಥಲ$_2$' ನೋ.

**ಥಳಕು** 'ಚಳಕು$_1$' ನೋ.

**ಥಳಥಳಿಸು**(ಕ್ರಿ). ಲಕಲಕಿಸು; ಹೊಳೆ: ಉತ್ತಮಶುಕ್ತಿಯೊಳಗೆ ಥಳ ಥಳಿಸುತ ಮುತ್ತಿನ ಮಣಿ ಬೆಳೆವಂತೆ (ಪಂಪ್ರಸಾಂ. ೨೪-೬೦). [ ಥಳಥಳ$_6$ + – ಇಸು$_3$ ]

**ಥಳಯ** 'ಚಳೆಯ$_1$' ನೋ.

**ಥಳಿ** 'ಚಳಿ$_2$' ನೋ.

**ಥಳಿಗಾಣ್** (ಕ್ರಿ). ನಡುಕಹೊಂದು; ಹೆದರು: ಥಲವೆತ್ತು ಥದ್ಮನೆಯಿಂ ತುಚ್ಛಭೂಪರು ಥಳಿಪ ಕೂರ್ಗಣೆಗಣೆಯಾಗೆ ಥಳಿಗಂಡಪೊಲು ಮೂರ್ಛೆ ಗೈಸಿ ವಧಿಸಿದತಿ ಥಲವಾದಿ ಥಂದವಿಡನ್ನ (ಕಕಸಾಂ. ೬೯-೪೯). [ ಥಳಿ (< ಚಳಿ$_2$) + ಕಾಣ್ ]

**ಥಳಿಗಾಲ** 'ಚಳಿಗಾಲ' ನೋ.

**ಥಳಿಜ್ವರ** 'ಚಳಿಜ್ವರ' ನೋ.

**ಥಳಿತು** (ನಾ). (?): ಎಂತು ಮೋಸವ ಗೈದಿರೊಳೆತೆಂದು ಥಳಿತೆಂದು ಇಂತಿದಲ್ಲವ ಭರ್ತನಗ್ರುದೋಳ್ ಶೀಘ್ರದೋಳ್ ನೀಂ ತೋರಿವೆಂದತ್ತ ಪರಿದಲ್ ಸಾರಿದಲ್ (ಜನಮು. ೩೪-೨೦). [ ? ]

**ಥಳಿಯೊತ್ತು** (ಕ್ರಿ). ಚಳಿಯಿಂದ ಪೀಡಿತವಾಗು; ತಣ್ಣಗಾಗು: ಹಿಮದ ಧಾಳಿಗೆ ವಡಬ ಥಳಿಯೊತ್ತುವುದೆ (ಕೌಶಿರಾ. ೩೫-೨೭). [ ಥಳಿ (< ಚಳಿ$_2$) + ಒತ್ತು$_1$ ]

**ಥಳಿಲ್** 'ಥಟಿಲ್' ನೋ.

**ಥಳಿವೆಟ್ಟು** 'ಚಳಿವೆಟ್ಟು' ನೋ.

**ಥಳಿಸು$_1$** 'ತಳಿಸು$_1$' ನೋ.

**ಛಳಿಸು₂** 'ಛಲಿಸು' ನೋ.
**ಛಳುಕು** 'ಚಳಕು₁' ನೋ.
**ಛಳಿಯ₁** 'ಚಳಿಯ₁' ನೋ.
**ಛಳಿಯ₂** 'ಚಳಯ₂' ನೋ.
**ಛಳಿಯಂಗೊಡು** 'ಚಳಿಯಂಗೊಡು' ನೋ.
**ಛಟಿಲ್, ಛಳಿಲ್** (ನಾ). ಒಂದು ಅನುಕರಣ ಶಬ್ದ.
**ಛಟಿಲ್‌ಛಟಿಲ್, ಛಳಿಲ್‌ಛಳಿಲ್** (ದ್ವಿರುಕ್ತಿ) : ಪಟುಪಟುಯುಂ ತಗುಳ್ದೆಳರ್ವ ಬೇಗೆವೊರೆಚ್ಚ ಶರಾಳಿಗಳ್ ಛಟಿಲ್‌ಛಟಿಲೆನೆ ಪಾಯೆ (ಪಂಪಭಾ. ೮-೧೦೩); ಛಳಿಲ್‌ಛಳಿಲೆಂದು ಕೊಳ್ವ ಬಡಿಗಂ ಚೆಳೆತು (ಧರ್ಮಾಮೃ. ೬-೮೮).
**ಛಾಂದಸ** (ಗು). ೧. ವೇದಕ್ಕೆ ಸಂಬಂಧಪಟ್ಟ,-ಸೇರಿದ. ೨. [ಛಂದ] ಛಂದಸ್ಸಿಗೆ ಸೇರಿದ. (ನಾ). ೩. ವೇದವನ್ನು ಓದಿದವನು; ಶ್ರೋತ್ರಿಯ: "ಛಾಂದಸ-ವೇದವನೋದಿದಾತನು" (ನಾಚಿರಾ. ೬): ಮತದಿಂ ಪೊಱಮಟ್ಟು ನಿಂದ ಛಾಂದಸ ಬ್ರಾಹ್ಮಣನಂ ಕಂಡು (ಪಂಚತಂ. ೧೮೭-೧೯) ; ದಾಮೋದರಭಟ್ಟಂ ಮೊದಲಾದ ಛಾಂದಸರು . . . ನೆರೆದರವು ನೆಗೆ ಬಂದು (ಬಸರ. ೧೦-೨೩); ಛಾಂದಸನದೊರ್ಬನು ಭೂಸುರೇಂದ್ರನು ಭಿಕ್ಷವಂ ಬೇಡಿ . . . ಮನೆಗಯ್ತರಲರಿಯವಂ ಒಸೆದು ತಾನೇ ತಂದು ಭಿಕ್ಷವನಿಕ್ಕಲೊಡಂ (ಬಸಪು. ೩೬-೩೯). ೪. ಛಂದಸ್ಸನ್ನು ಅರಿತವನು; ಛಂದಶ್ಶಾಸ್ತ್ರಜ್ಞ: ಕ್ರಿಯಾಶಾಲಿಯಾದ ಕವಿ ವೈಯಾಕರಣ ಯನ್ನಾಗಲಿ ಛಾಂದಸನನ್ನಾಗಲಿ ಮೆಚ್ಚಿಸುವುದಕ್ಕೆ ಬರೆಯ ಹೊರಡುವುದಿಲ್ಲ (ಸಾಶಾಪ್ರ. ೨೩೨). ೫. (ಅಲಂ) ಹಳೆಯ ಸಂಪ್ರದಾಯಗಳಿಗೆ ಅಂಟಿಕೊಂಡಿರುವವನು; ಕಂದಾಚಾರದವನು: ಅತಿಜಡಂ ಛಾಂದಸಂ ಪದ್ಮಜಂ ನಿಕ್ಕುವಮಲ್ಲಂ ಕರ್ತೃವಾದುದನಿತತಿಶಯಮುಮಂ ತಾಳ್ದುದೇ ಕನ್ನೆಯಂದಂ (ಕಾವ್ಯಾವ. ೧೨); ಬರುಬರನ್ನು ಬಲ್ಲವರೆಂದೂ, ಸಕಲ ಶಾಸ್ತ್ರಕೋವಿದರನ್ನು ಛಾಂದಸರೆಂದೂ ಅವರು ಹೆಸರಿಟ್ಟು ಕರೆಯುತ್ತಾರೆ (ಸಂಜುಂಡ. ೦೬೬). ೬. (ಅಲಂ) ಸೋಮಾರಿ; ಜಡ: ಛಾಂದಸನಧಿಕ ದರಿದ್ರಂ ಮುಂದಂ ಜಿಹ್ವಾನಲಂಪಟಂ ಗತಭಾಗ್ಯಂ (ದಶಕು. ೩-೨೪) ; ಅಣ್ಣಂ ದೊಡ್ಡಹೊಟ್ಟೆಯುತಿಛಾಂದಸಂ ಪರಿಕಿಸಲ್ಕೆ ಭಾರಿಯುಂಗಂ (ವೀಕ್ಕಪು. ೩-೧೮-೭). [ಸಂ.]
**ಛಾಂದಸಿಕ** (ನಾ). ವೇದಾಧ್ಯಯನದಲ್ಲಿ ನಿರತನಾದವನು; ವೇದಾಭ್ಯಾಸದಲ್ಲಿ ಪ್ರವೀಣ. [ಸಂ.]
**ಛಾಂದಸಿಕೆ** (ನಾ). ಮುಂದಾಲೋಚನೆಯಿಲ್ಲದಿರುವುದು; ಚಾಂದಸಿಕೆ; ದಡ್ಡತನ: ನಿನ್ನನಟ್ಟಿರೊಳಾಂ ಮುದ್ದಾಡಿಸೆ ಮುನಿಸನ್ನಿಧಿಯೊಳ್ಮಾಡಿದುದಂ [ದುಂ] ಛಾಂದಸಿಕೆಯೊಂದೊದವಿಂದಂ (ಧರ್ಮಾಮೃ. ೩-೨೫೭).
[ಛಾಂದಸ + - ಇಕ್ಕೆ₂ (< - ಇಕೆ)]
**ಛಾಂದಸಿಗ, ಚಂದಸಿಗ, ಛುಂದಸಿಗ** (ನಾ). ೧. = ಛಾಂದಸಿಕ: ದೇಗುಲಿಗಂ, ಅಕ್ಕರಿಗಂ, ಛಾಂ[ಪಾಠಾಂ. ಚಂ, ಛಂ]ದಸಿಗಂ (ಶಮದ. ೦೯೭ ಪ್ರಯೋ). **ಚಂದಸಿಗ:** ೧. ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. ೨. (ಅಲಂ) ಚುರುಕಿಲ್ಲದವನು; ಮಂದ; ಜಡ: ಅಯ್ಯೋ, ಆ ಚಂದಸಿಗನಿಂದ ಈ ಕೆಲಸ ಆಗುವುದುಂಟೇ? (ಜಾ). **ಛಂದಸಿಗ:** ೧. ಮೇಲಿನ 'ಶಮದ' ಪ್ರಯೋಗದ ಪಾಠಾಂತರವನ್ನು ನೋಡಿ.
[< ಸಂ. ಛಾಂದಸಿಕ]
**ಛಾಂದೋಗ್ಯ** (ನಾ). ಸಾಮವೇದಕ್ಕೆ ಸೇರಿರುವ ಒಂದು ಉಪನಿಷತ್ತು: ಛಾಂದೋಗ್ಯ . . . ಮೊದಲಾದುವೇ ಶತೋಪನಿಷತ್ತುಗಳು (ವಿವೇಕ. ೪); ಛಾಂದೋಗ್ಯೋಪನಿಷತ್ತು ಸಾಮವೇದದ ಕೌಥುಮಶಾಖೆಗೆ ಸೇರಿದ (ಛಾಂದ. ೩೮). [ಸಂ.]
**ಛಾಂದೋಗ್ಯಸೂತ್ರ** (ನಾ). ಸಾಮವೇದದ ಒಂದು ಅಂಗ: ಸಾಮವೇದ ಕಲ್ಪಸೂತ್ರಗಳಿಗೆ ಛಾಂದೋಗ್ಯಸೂತ್ರಗಳೆಂದು ಹೆಸರು (ಸುಜ್ಞಾತಂ. ೧ ಪ್ರಕೇಶ). [ಛಾಂದೋಗ್ಯ + ಸೂತ್ರ]
**ಛಾಕಾರ**(ನಾ). (?): ಬಂದನಾ ಪುರಕೆ ಸೆಟ್ಟಿಯು ದೇಹ ತಾನಂದದಿಂದಲ್ಲೆತಂದು ವಂದಿಸಿ ದೇವರ್ಗೆ ಕುಳ್ಳಿರೆ ಸೆಟ್ಟಿಯುಂ ಬಂದಿ ಛಾಕಾರವಿತ್ತು (ತರಳೆಶಾ. ೧೧-೨೨). [?]
**ಛಾಗ**(ನಾ). = ಛಗ: "ಅಜಃ, ಸ್ತಬಃ, ಬಸ್ತಃ, ಛಾಗಃ, ಛಗಳಕಃ, ಛಗಃ-ಈ ೬ ಹೋತು" (ಹಲಾಯು. ೪೬-೧೨೨); ಛಾಗದ ತೋವಲಕ್ಕೆ ಕಡುಕರ್ಪವೆಟ್ಟಿನ ಗಂಗೆದೋವಲಕ್ಕೆ (ಲೋಕೋಪ. ೬-೪೧). [ಸಂ.]
**ಛಾಗರಿ** (ನಾ). (?): ಮೂಡಲೆಕೆ ಗದೆಯ ವಿವರ ಬಳಕಂಡ ಕಡುವುಂಣ್ಣ ಕೊಡಗೆ ಛಾಗರಿ ಗದೆ ಯ ಕೊಡಂಗೆ ದಾಖು ಮಾದಳಿಕ ಕೊಡಂಗೆ (ಕಇ. I, ೩೦-೦೩ : 1432 ?). [?]
**ಛಾಗಲ** (ನಾ). = ಛಗ: ಛಟ್ಟಂಗೆ ಭ್ರಾಂತಿ ಪುಟ್ಟ ನಿಂದು ಪೆಗರೊಳಿರ್ದ ಛಾಗಲಮಂ ಭೂಭಾಗದೊಳಿಟ್ಟಿ (ಪಂಚತಂ. ೧೯೭-೧). [ಸಂ.]
**ಛಾಗಿ** (ನಾ). ಹೆಣ್ಣಾಡು; ಮೇಕೆ: "ಅಜಾ, ಛಾಗೀ-೨ ಆಡು" (ನಿಘಂಟು. ೨೩೪). [ಸಂ. ಛಾಗೀ]
**ಛಾಟಿ** 'ಚಾಟಿ₁' ನೋ.
**ಛಾಡ** 'ಚಹಡ' ನೋ.
**ಛಾಡಿ** 'ಚಹಡ' ನೋ.
**ಛಾತ** (ಗು). ೧. ಕತ್ತರಿಸಿದ; ಹರಿದ; ವಿಭಾಗಿಸಿದ; ಹೋಳುಮಾಡಿದ. (ನಾ). ೨. ಮಾಂಸಪುಷ್ಟಿಯಿಲ್ಲದವನು; ದುರ್ಬಲ; ಕೃಶವಾಗಿರುವವನು: "ಅಮಾಂಸಃ, ದುರ್ಬಲಃ, ಛಾ[ಪಾಠಾಂ. ಶಾ]ತಃ-೩ ಬಡಬಡಕಲುಮೈಯುಳ್ಳವನು, ನರವೇತಲವನು, ಬಲವಿಲ್ಲದವನು, ಅಶಕ್ತನು" (ನಿಘಂಟು. ೧೫೭). [ಸಂ.]
**ಛಾತಿ** (ನಾ). ೧. ಎದೆ; ವಕ್ಷಸ್ಥಳ. ೨. ಧೈರ್ಯ; ಸಾಹಸ; ಕೆಚ್ಚು: ನಿಮ್ಮಲ್ಲಿ ಯಾರಲ್ಲಾದರೂ ಆಯುಧಗಳಿದ್ದರೆ; ನಿಮಗೆ ಛಾತಿಯೂ ಇದ್ದರೆ, ಇಷ್ಟವಿದ್ದರೆ ಮಾತ್ರ ಬರಬಹುದು (ಸಕಕ. ೯೦); ಅವಳಿಗೆ ಸಿಟ್ಟು ಮಾಡುವ ಛಾತಿ ಇವರೊಬ್ಬರಿಗೂ ಇಲ್ಲಾ (ಮೂರುದಾ. ೪೮). ೩. ದಕ್ಷತೆಯಿಂದ ಕೆಲಸ ಮಾಡುವುದು: ಛಾತಿಯುದ್ದ ನಾಲ್ಕು ಜನ ಮಿತವ್ಯಯ ಮಾಡಿ ಲಾಭಗಳಿಸಿದರೆ ಸಾಲದೆ? (ಶಿಲ್ಪನಾ. ೦೭೮). [←ಹಿಂ. ಛಾತೀ]
**ಛಾತ್ರ** (ನಾ). ಶಿಷ್ಯ; ವಿದ್ಯಾರ್ಥಿ: "ಶಿಷ್ಯಃ, ಅಂತೇವಾಸಿನ್, ಛಾತ್ರಃ, ಶೈಕ್ಷಃ, ಪ್ರಾಥಮಕಲ್ಪಿಕಃ-ಈ ಐದು ಶಿಷ್ಯಂ" (ಹಲಾಯು. ೬೬-೨೪೬); ಪರ್ವತನುಂ ಛಾತ್ರಸಹಿತಂ ಸಾಕೇತನಮಂ ಪೊಕ್ಕು (ಚಾವುಂಪು. ೩೦೪-೨೭); ಪೊಣ್ಮೆತುಚ್ಛ್ಯಂಖಲಂ ಗೋತ್ರಗಿರಿಚ್ಛಾತ್ರಾನುವಾದಾಧ್ಯಯನ ಗುರು ಜರಾಸಂಧಭೇರೀನಿನಾದಂ (ಜಗಪು. ೭-೩೯). [ಸಂ.]
**ಛಾತ್ರಪಾಲಕ** (ನಾ). ಶಿಷ್ಯರನ್ನು ನೋಡಿಕೊಳ್ಳುವವನು; ವಿದ್ಯಾರ್ಥಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುವವನು: ಆದರೆ ಸಾಹೇಬಕುಮಾರಿಗೆ, ಅಖಂಡಜ್ಞಾನಸತ್ರವಿಡುವ, ನಮ್ಮಂಥ ಛಾತ್ರಪಾಲಕನ ಅಗತ್ಯವಿತ್ತು (ದೀಪಕ. II, ೦೯). [ಛಾತ್ರ + ಪಾಲಕ]
**ಛಾತ್ರಾಲಯ** (ನಾ). ವಿದ್ಯಾರ್ಥಿಗಳ ವಸತಿ ಮತ್ತು ಊಟಕ್ಕೆ ಏರ್ಪಾಡು ಮಾಡಿರುವ ಆಲಯ; ವಿದ್ಯಾರ್ಥಿನಿಲಯ: ಸಮೀಪದಲ್ಲಿಯೇ ಮಾಯಾಶಂಕರನ ಮಿತ್ರಭವನವಿತ್ತು. ಅದೊಂದು ಚಿಕ್ಕ ಛಾತ್ರಾಲಯವೇ ಆಗಿತ್ತು (ಪ್ರೇಮಾಶ್ರ. ೨೧೩). [ಛಾತ್ರ + ಆಲಯ]
**ಛಾದ** (ನಾ). = ಛಾದನ. [ಸಂ.]
**ಛಾದನ** (ನಾ). ಮುಚ್ಚುವುದು; ಮರೆಮಾಡುವುದು. [ಸಂ.]
**ಛಾದರು** 'ಚಾದರ' ನೋ.

**ಭಾದಿತ** (ಗು). ಮುಚ್ಚಿದ ; ಮರೆಮಾಡಿದ. [ ಸಂ. ]

**ಭಾದ್ಯ** (ಗು). ೧. ಮುಚ್ಚಿಡುವ ; ಮರೆಮಾಡುವ. (ನಾ). ೨. ಮೇಲ್ಹೊದಿಕೆ ; ಮೇಲ್ಕಟ್ಟು ; ವಿತಾನ : ಮುಕ್ತಾಮಣಿಗಣರಚಿತಂ ಭಾದ್ಯ ಹೃದ್ಯಂ . . . ಕಾಯಮಾನಂ ನವೀನಂ (ಚಂದ್ರಪ್ರ. ೧೨-೧೦೭). [ ಸಂ. ]

**ಭಾನಸ** 'ಚಾಂದಸ' ನೋ.

**ಭಾನಸಗಾರ** (ನಾ). ನಿಧಾನಸ್ವಭಾವದವನು ; ಜಡಪ್ರವೃತ್ತಿಯವನು ; ಸೋಮಾರಿ : (ಕ). [ಭಾನಸ (<ಚಾಂದಸ) + - ಕಾರ, (<-ಕಾರ)]

**ಭಾನಸತನ** (ನಾ). ನಿಧಾನಸ್ವಭಾವ ; ಸೋಮಾರಿತನ : ಇವರ ಭಾನಸತನದ ಕಾಲಾಗ ನಮ್ಮ ಕೈ ಹೋಗತಾವು (ನಡುಮ. ೧೦೦). [ ಭಾನಸ (<ಚಾಂದಸ) + - ತನ ]

**ಭಾಪ** 'ಭಾಪು' ನೋ.

**ಭಾಪಖಾನೆ** (ನಾ). ಅಚ್ಚುಮಾಡುವ ಸ್ಥಳ ; ಮುದ್ರಣಾಲಯ : ಭಾಪಖಾನೆಗಳಲ್ಲಿ ಮೊಳೆ ಜೋಡಿಸುವವರು ಬೇರೆ (ಮುಂಬಯಿ. ೫-೨೩೩) ; ಭಾಪಖಾನೆಗಳು ಹೆಚ್ಚಿದ ಬಳಿಕಂತು, ಸಾವಿರಾರು ಜನರಿಗೆ ಭಾಷೆಯ ಸುಖವನ್ನು ಸವಿಯಲು ಅವಕಾಶವಾಗಿದೆ (ಚಾಲಕ್ರ. I, ೮೭) ; ಬಳ್ಳಾರಿಯಲ್ಲಿ ಒಂದು ಭಾಪಖಾನೆಯನ್ನು ಸುಮಾರು ೧೮೨೦ರಲ್ಲಿ ಸ್ಥಾಪಿಸಿದ್ದೇ ಕನ್ನಡನಾಡಿನಲ್ಲಿ ಮೊದಲನೇದಾಗಿದೆ (ಪಾಶ್ಚಾವಿ. ೨೬೬). [ ಭಾಪ (<ಭಾಪು) + ಖಾನೆ. / ಹಿಂ. ಮರಾ. ಭಾಪಖಾನಾ ]

**ಭಾಪಾಕಾಗದ** 'ಭಾಪೆಕಾಗದ' ನೋ.

**ಭಾಪಿಸು, ಚಾಪಿಸು** (ಕ್ರಿ). ಮುದ್ರಿಸು ; ಅಚ್ಚುಹಾಕು : ಭಾಪಖಾನೆಗಳಲ್ಲಿ ಮೊಳೆ ಜೋಡಿಸುವವರು ಬೇರೆ . . . ಭಾಪಿಸುವವರು ಬೇರೆ (ಮುಂಬಯಿ. ೫-೨೩೩) ; ಅವನ್ನು ಹಿಂದೀಭಾಷೆಗೆ ಅನುವಾದಿಸಿ ಭಾಪಿಸಿಯೂ ಆಗಿದೆ (ಪೂರಾಚಿ. ೧೦೦). **ಚಾಪಿಸು:** ಈ ಪುಸ್ತಕವನ್ನು ಸರಕಾರಿ ಮುದ್ರಣಾಲಯದಲ್ಲಿ ಚಾಪಿಸಲಾಯಿತು (ರೂಢಿ). [ ಭಾಪು + - ಇಸು ]

**ಭಾಪು, ಚಪ್ಪೆ, ಭಾಪ, ಭಾಪೆ** (ನಾ). ೧. ಅಚ್ಚು ; ಮುದ್ರೆ : ಗೊರೂರವರ ಕಲೆಯು ಎಲ್ಲಿಂದಲೋ ರಫ್ತಾಗಿ ಬಂದ ಸೀಮೆ ಭಾಪಿನ ಸರಕಲ್ಲ (ಗರುಡಾ. ೭ ಮುನ್ನುಡಿ) ; ಸರ್ಕಸ್ಸನ್ನು ಸೇರಿದ ಕೂಡಲೆ ಪ್ರತಿಯೊಬ್ಬನಿಗೂ ನಂಬರು ಹಾಕಿ ತಮ್ಮ ಸರ್ಕಸ್ಸಿನ ಭಾಪುಳ್ಳ ಒಂದು ತಾಮ್ರದ ಬಿಲ್ಲೆಯನ್ನು ಕೊಡುತ್ತಿದ್ದರು (ಮೇಲಿಮು. ೬೭). ೨. (ಅಲಂ) ಪ್ರಭಾವ ; ವರ್ಚಸ್ಸು : ಅಪ್ಪರಾಯಭಟ್ಟರಿಗೆ ಅಂದು ಪಾದ್ರಿ ಸೋಜನು ದಂಬನ ಮೇಲೆ ಒಗೆಯಲು ಹೋದ ಭಾಪು ಯಾವುದೆಂದು ಸಾಕಷ್ಟು ವಿದಿತವಾಗಿತ್ತು (ದಂಬನಾ. ೫೦). **ಚಪ್ಪೆ:** ೧. ಚಪ್ಪೆ, ಭಾಪಾ – ಸುಂಕದ ಕಟ್ಟೆಯಲ್ಲಿ ಸರಕಿನ ಮೇಲೆ ಒತ್ತುವ ಮುದ್ರೆ (ಕಿಸಂಗ್ರಾ. ೦೯೬). **ಭಾಪ:** ೧. 'ಭಾಪಖಾನೆ' ಪರಾ. **ಭಾಪೆ :** ೧. 'ಭಾಪೆಕಾಗದ' ಪರಾ.

**ಭಾಪುಹಾಕು** = (ಅಲಂ) ಪರಿಣಾಮಕಾರಿಯಾಗುವ ರೀತಿಯಲ್ಲಿ ಪ್ರಭಾವ ಬೀರು : ನಿಮ್ಮಂಥವರ ಮ್ಯಾಲೆ ಭಾಪುಹಾಕಲಿಕ್ಕೆ ಹೇಳೋ ಮಾತವು (ಗ್ರಾಮಾಯ. ೩೪೬).

[ ←ಹಿಂ. ಭಾವ್, ಭಾಪಾ ; ಮರಾ. ಭಾವ್, ಭಾಪಾ, ಛಪ್ಪಾ ]

**ಭಾಪೆ** 'ಭಾಪು' ನೋ.

**ಭಾಪೆಕಾಗದ, ಭಾಪಾಕಾಗದ** (ನಾ). ಸರ್ಕಾರದ ಭಾಪೆಯನ್ನು ಮುದ್ರಿಸಿರುವ ಕಾಗದ ; ವ್ಯವಹಾರದ ದಾಖಲೆಗಾಗಿ ಉಪಯೋಗಿಸುವ ಸರ್ಕಾರದ ಅಧಿಕೃತ ಮುದ್ರೆಯಿರುವ ಕಾಗದ : ಸರಕಾರದವರು ಭಾಪೇಕಾಗದ ನೋಂದಣಿ ಮುಂತಾದ ಕಾಯಿದೆಗಳನ್ನು ಮಾಡಿದರು (ಮುಂಬಯಿ. ೬-೦೦೦). **ಭಾಪಾಕಾಗದ :** ಈ ಐವಜಿಗಾಗಿ ಭಾಪಾಕಾಗದದಲ್ಲಿ ಪತ್ರ ಬರೆದುಕೊಡುತ್ತೇನೆ (ಕಥಾಮಂ. IV, ೪). [ಭಾಪೆ (<ಭಾಪು)+ಕಾಗದ]

**ಭಾಯ** (ನಾ). ೧. ನೆಳಲು ; ನೆರಳು : ತಾಯಿ ಭ್ರಮರಾಂಬೆಯ ಗಾಯಗೊಂಡೆನವ್ವ ಭಾಯದ ತಂಪು ಬೀಸವ್ವ (ಸಿದ್ಧಪು. ೫-೮೪). ೨. ಪ್ರತಿಬಿಂಬ ; ಪಡಿಯಚ್ಚು : ಬಹುವರ್ಣದ ಧಾತ್ರಿಯಲ್ಲಿ ಅವಚವಚ ವರ್ಣಭಾಯ ನಿಂದಿತ್ತು (ಚೋಳಮಾ. ೬-೧೯). [ ಸಂ. ಛಾಯಾ ]

**ಭಾಯಗಾರಿಕೆ** (ನಾ). ಗ್ರಹಗಳಿಗಿರುವ ಒಂದು ಶಕ್ತಿವಿಶೇಷ ; ನೆರಳನ್ನು ಹಿಡಿದು ಆಯಾಯ ವ್ಯಕ್ತಿಯ ಮೇಲೆ ಪ್ರಭಾವವನ್ನು ಬೀರುವಿಕೆ : ಭಾಯಗಾರಿಕೆಯಿಂದ ದುಷ್ಟಗ್ರಹಗಳ ಸಮುದಾಯ ಪೀಡಿಸಿ ಭಯಾತೋರುತವೇನಯ್ಯಾ (ಚೋಳ್ಗಡೀ. ೩೭-೧). [ ಭಾಯ + ? ]

**ಭಾಯರಂಗ** (ನಾ). ವಜ್ರದಲ್ಲಿ ಒಳಗೆ ಬೆಳಕು ಹೊಳೆಯುವ ಸ್ಥಳ : ಬಾಲಾರ್ಕನಿದಿರಿನೊಳು ಹಿಡಿಯೆ ರತ್ನದ ಮಧ್ಯೆ ತಾ ತೋರುತಿರಲು ಪಾಲಿಸದ ಭಾಯರಂಗವುದೆಂದು ಪೇಳ್ವರದನಾಲಿಸೈ ಮಾಣಿಕಕೆ ಕಾಂತಿ ರಂಗುಗಳನ್ನು ಮೇಲೆ ಶಿರದೊಳು ನೋಡಿ (ರತ್ನಶಾ. ೧೦-೧೩). [ ಭಾಯ + ರಂಗ ]

**ಭಾಯಾಕರಣ** (ನಾ). (ಚಿತ್ರಕಲೆಯಲ್ಲಿ) ವಸ್ತುಗಳ ಮೇಲೆ ಬೀಳುವ ಕತ್ತಲೆ ಬೆಳಕನ್ನು ತೋರಿಸುವುದು : ಮೊಗಲ ಚಿತ್ರಗಳ ಭಾಯಾಕರಣವು (Shading) ಸಹ ಅತಿ ಸೂಕ್ಷ್ಮವಾದುದು (ಭಾಚಿತ್ರ. ೩೨). [ ಸಂ. ]

**ಭಾಯಾಗೌಳ** (ನಾ). [ಸಂಗೀತ] ಒಂದು ರಾಗದ ಹೆಸರು : ಕರ್ನಾಟಗೌಳ . . . ಭಾಯಾಗೌಳ . . . ದ್ರಾವಿಡಗೌಳವೆಂಬೀಳುಂ ಉಪಾಂಗ ಗೌಳ ರಾಗಂಗಳು (ವಿವೇಕ. ೨೩೪). [ ಸಂ. ]

**ಭಾಯಾಗ್ರಹ** (ನಾ). ೧. ಪ್ರತಿಬಿಂಬವನ್ನು ಗ್ರಹಿಸುವುದು ; ಕನ್ನಡಿ. ೨. [ಜ್ಯೋತಿ] ಸೂರ್ಯಚಂದ್ರರಿಗೆ ಕತ್ತಲೆಯನ್ನು ತರುವ ಗ್ರಹ ; ರಾಹು ಮತ್ತು ಕೇತು : ವಿವಾಹದಲ್ಲೂ ಉಪನಯನದಲ್ಲೂ ಭಾಯಾಗ್ರಹಗಳಾದ ರಾಹುಕೇತುಗಳ ದೋಷವಿಲ್ಲ (ರೂಢಿ). [ಸಂ. (ಛಾಯಾ + ಗ್ರಹ)]

**ಭಾಯಾಗ್ರಹಣ** (ನಾ). ೧. ನೆರಳನ್ನು ತಡೆಹಿಡಿಯುವುದು ; ತನ್ನಲ್ಲಿರುವ ಪ್ರಭಾವವಿಶೇಷದಿಂದ ವ್ಯಕ್ತಿಯ ಗಮನವನ್ನು ನಿರೋಧಿಸಲು ಅವನ ನೆರಳನ್ನು ಹಿಡಿಯುವಿಕೆ. 'ಭಾಯಾಗ್ರಹಣಂಗೆಯ್' ಪರಾ. ೨. ಭಾವಚಿತ್ರವನ್ನು ತೆಗೆಯುವುದು ; ಫೋಟೋ ತೆಗೆಯುವುದು. ೩. (ಅಲಂ) ಸ್ಥೂಲವಾಗಿ ತಿಳಿದುಕೊಳ್ಳುವುದು : ಇಂತಹ ಉಪಕರಣಗಳಿಂದ ವಿಶ್ವತತ್ವದ ಭಾಯಾಗ್ರಹಣವನ್ನು ಮಾಡಲು ಮಾತ್ರ ಸಾಧ್ಯ (ಜುಶ್ವಾರ. ೪೦ ಪೀಠಿಕೆ). [ ಸಂ. (ಛಾಯಾ + ಗ್ರಹಣ) ]

**ಭಾಯಾಗ್ರಹಣಂಗೆಯ್** (ಕ್ರಿ). ವ್ಯಕ್ತಿಯ ಚಲನವನ್ನು ನಿರೋಧಿಸಲು ಅವನ ನೆರಳನ್ನು ತಡೆಹಿಡಿ : ವಿಮಾನಾರೂಢಂ ರಣಕ್ರೀಡೆಗೊಡರಿಸುವುದುಂ ಶ್ರೀಶೈಲಂ ತದ್ವಿಮಾನಮಂ ಭಾಯಾಗ್ರಹಣಂಗೆಯ್ಯೆ ನೆಲಕ್ಕೆವರ್ಪುದುಂ (ಹಂರಾಮಾ. ೧೦-೩೨ ವ). [ ಭಾಯಾಗ್ರಹಣ + ಕೆಯ್, ]

**ಭಾಯಾಗ್ರಹಣಯಂತ್ರ** (ನಾ). ಭಾವಚಿತ್ರವನ್ನು ತೆಗೆಯಲು ಉಪಯೋಗಿಸುವ ಯಂತ್ರ ; ಫೋಟೋ ತೆಗೆಯುವ ಯಂತ್ರ ; ಕ್ಯಾಮರಾ : ಆ ದೂರದರ್ಶಕಯಂತ್ರಕ್ಕೆ ಒಂದು ಭಾಯಾಗ್ರಹಣಯಂತ್ರ(Camera)ವನ್ನು ಜೋಡಿಸಿ ಭಾಯಾಚಿತ್ರ ಹಿಡಿದರೆ (ಅಕಾಶ. ೬). [ ಭಾಯಾಗ್ರಹಣ + ಯಂತ್ರ ]

**ಭಾಯಾಗ್ರಾಹಿ** (ಗು). ೧. ನೆರಳನ್ನು ಹಿಡಿಯುವ : ಬರ್ದಿಲವಟ್ಟೆಯೊಳ್ಪೆತರುತಲಿರ್ದ ಹನುಮನಂ, ದೂರದಾಕಾಶದೊಳ್ ಚುಕ್ಕಿಯೋಲಿರ್ದನಂ ತಿಳಿದಳಾ ಸಿಂಹಿಕೆ, ದಶಗ್ರೀವನಾಜ್ಞೆಯಿಂ ಕಡಲ ಕಾವಲಾಗಾರ್ತಿ, ಕಾಮರೂಪಿಣಿ, ಕಾಳಿ, ಭಾಯಾಗ್ರಾಹಿ ದನುಜೆ (ಶ್ರೀರಾಮಾ. ೪೦೦-೨೦೮). (ನಾ). ೨. ಭಾವಚಿತ್ರವನ್ನು ತೆಗೆಯುವವನು : 'ಅವರ ಮದುವೆಯಲ್ಲಿ ಪ್ರಸಿದ್ಧ ಭಾಯಾಗ್ರಾಹಿಯನ್ನು ಕರೆಸಿದ್ದರು (ರೂಢಿ). [ ಸಂ. ಛಾಯಾಗ್ರಾಹಿನ್ ]

**ಛಾಯಾಚಿತ್ರ** (ನಾ). ೧. ನೆರಳಿನ ಚಿತ್ರ. ೨. ಛಾಯಾಗ್ರಹಣಯಂತ್ರದ ಸಹಾಯದಿಂದ ತೆಗೆದ ಚಿತ್ರ ; ಭಾವಚಿತ್ರ ; ಫೋಟೋ : ಛಾಯಾ ಚಿತ್ರಗಳು, ತೈಲಚಿತ್ರಗಳು, ನೀರು ಬಣ್ಣದಿಂದ ಬರೆದ ಚಿತ್ರಗಳು, ಇವೆಲ್ಲವೂ ಹಾಫ್‌ಟೋನ್ ಪಡಿಯಚ್ಚಿಗೆ ಯೋಗ್ಯವಾದ ಮೂಲಪ್ರತಿಗಳು (ಮುದ್ರಣ. ೬೦) ; ಛಾಯಾಚಿತ್ರ ತೆಗೆದುಕೊಳ್ಳುವುದಕ್ಕೆ ಮೊದಲು, ದೂರದರ್ಶಕ ಯಂತ್ರವನ್ನು . . . ಸಿದ್ಧಗೊಳಿಸಿಕೊಳ್ಳುವುದು ಅಗತ್ಯ (ಅಕಾಶ. ೭). [ ಸಂ. (ಛಾಯಾ + ಚಿತ್ರ) ]

**ಛಾಯಾಚಿತ್ರಗಾರ** (ನಾ). ಭಾವಚಿತ್ರಗಳನ್ನು ತಯಾರುಮಾಡುವವನು; ಫೋಟೋ ತೆಗೆಯುವವನು : ಚಿತ್ರಗಾರ, ಶಿಲ್ಪಿ, ಛಾಯಾಚಿತ್ರಗಾರ, ಮೊ.ರು ತಕ್ಕ ಬೆಳಕಿನ ಅನುಕೂಲವಿರುವಂತೆ ಏರ್ಪಡಿಸಿಕೊಂಡಿರುವ ಕೆಲಸದ ಕೋಣೆ (Studio. ಇಂಕನಿ).
[ ಛಾಯಾಚಿತ್ರ + – ಗಾರ (< – ಕಾಱ) ]

**ಛಾಯಾಚಿತ್ರಲೇಖನ** (ನಾ). ಒಂದು ಬಗೆಯ ಚಿತ್ರಕಲೆ : ಛಾಯಾಚಿತ್ರ ಲೇಖನ ಒಬ್ಬನ ನೆರಳನ್ನು ಕಂಡು ಅವನ ಚಿತ್ರವನ್ನು ಬರೆಯುವ ಕಲೆ (ಛಾಚಿತ್ರ. ೨೦). [ ಛಾಯಾಚಿತ್ರ + ಲೇಖನ ]

**ಛಾಯಾತನಯ** (ನಾ). ಛಾಯಾದೇವಿಯ ಮಗ ; ಸೂರ್ಯನ ಮಗ ; ಶನಿ. [ ಸಂ. (ಛಾಯಾ + ತನಯ) ]

**ಛಾಯಾತೋಡಿ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾ ತೋಡಿ ತುರುಷ್ಕತೋಡಿಯೆಂಬೆರಡುಂ ಉಪಾಂಗತೋಡಿರಾಗಂಗಳು (ವಿವೇಕ. ೨೩೪). [ ಸಂ. ಛಾಯಾತೋಡೀ (ಛಾಯಾ + ತೋಡೀ) ]

**ಛಾಯಾದೇವಿ** (ನಾ). ಸೂರ್ಯನ ಹೆಂಡತಿ,–ಪತ್ನಿ : ಸೂರ್ಯವಿಗ್ರಹ ಆರು ಅಡಿ ಎತ್ತರವಿದೆ . . . ಎರಡು ಪಕ್ಕಗಳಲ್ಲಿ ಛಾಯಾದೇವಿಯರು ಬಾಣಗಳನ್ನು ಬಿಡುತ್ತಿರುವರು (ಹೊಯ್ಸಳ. ೧೪೮).
[ ಸಂ. ಛಾಯಾದೇವೀ (ಛಾಯಾ + ದೇವೀ) ]

**ಛಾಯಾನಂದನ** (ನಾ). = ಛಾಯಾತನಯಂ.
[ ಸಂ. (ಛಾಯಾ + ನಂದನ) ]

**ಛಾಯಾನಟ** (ನಾ). [ಸಂಗೀತ] ಒಂದು ರಾಗದ ಹೆಸರು : ಛಾಯಾನಟ ರಾಗದ ಆಲಾಪನೆ ಮೃದು ಮಧುರವಾಗಿ ಮೂರ್ತೀಭವಿಸತೊಡಗಿತು (ರೂಪಸಿ. ೨೨೨). [ < ಸಂ. ಛಾಯಾನಾಟ ]

**ಛಾಯಾನಾಟಕ** (ನಾ). ೧. ಪಾತ್ರ ಅಥವಾ ಬೊಂಬೆಯ ನೆರಳು ಮುಂದಿನ ತೆರೆಯ ಮೇಲೆ ಬೀಳುವಂತೆ ಮಾಡಿ ಪ್ರದರ್ಶಿಸುವ ನಾಟಕ ; ನೆರಳಿನಾಟಕ. ೨. ರೂಪಕದ ಕೆಲವು ಲಕ್ಷಣಗಳು ಮಾತ್ರ ವಿರುವ ನಾಟಕ : ಇದು ಒಂದು " ಛಾಯಾನಾಟಕ " (ಸಂನಾಟ. ೨೮೦).
[ ಸಂ. (ಛಾಯಾ + ನಾಟಕ) ]

**ಛಾಯಾನುವಾದ** (ನಾ). ಮುಖ್ಯಾಂಶಗಳನ್ನು ಮಾತ್ರ ತಿಳಿಸುವ ಅನು ವಾದ : ಸಂಸ್ಕೃತ ಸಾಹಿತ್ಯದ ಅನೇಕ ಕೃತಿಗಳ ಭಾವಾನುವಾದ, ಛಾಯಾನುವಾದ ಮತ್ತು ಅನುವಾದಗಳೂ ಬಂದವು (ಶಾರದ. ೪೬೩).
[ ಸಂ. (ಛಾಯಾ + ಅನುವಾದ) ]

**ಛಾಯಾಪತಿ** (ನಾ). ಛಾಯಾದೇವಿಯಂ ಗಂಡ ; ಸೂರ್ಯ : ಛಾಯಾ ಪತಿಯನೌಕುವ ತವೋನಿಧಿಯ ಬಹಳಕೆಯ ಭಣಿತೆಯಲಿ (ತೊರಾ. ೫-೧-೧೭). [ ಸಂ. (ಛಾಯಾ + ಪತಿ) ]

**ಛಾಯಾಪಥ** (ನಾ). ಆಕಾಶದಲ್ಲಿ ಕಾಣುವ ಬಿಳಿಯ ರಸ್ತೆಯಂತಿರುವ ಪಥ ; ಆಕಾಶಗಂಗೆ : ಛಾಯಾಪಥ (ಆಕಾಶಗಂಗೆ Milky-Way) ಎಂದು ಹೆಸರುಳ್ಳ, ಆಕಾಶದಲ್ಲಿನ ಬಿಳಿಯ ರಸ್ತೆಯು ಅನೇಕ ನಕ್ಷತ್ರಗಳು ಒತ್ತಾಗಿರುವುದರಿಂದ ಹಾಗೆ ತೋರುವುದೆಂದು ಅವನು ಕಂಡುಹಿಡಿದನು (ವಿಜ್ಞಾಕ. ೩೬). [ ಸಂ. (ಛಾಯಾ + ಪಥಿನ್ + –) ]

**ಛಾಯಾಯಂತ್ರ** (ನಾ). ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಸಾಧನ.–ಯಂತ್ರ : ಚಾಂದ್ರಮಾನದ ಪಂಚಾಂಗ, ಏಳುದಿನಗಳ ವಾರ, ಛಾಯಾಯಂತ್ರ (Sun-dial) ಇವನ್ನು ಬಳಕೆಗೆ ತಂದರು (ಶಿಲ್ಪನಾ. ೬೧).
[ ಸಂ. (ಛಾಯಾ + ಯಂತ್ರ) ]

**ಛಾಯಾಲಕ್ಷಣ** (ನಾ). (ಕುದುರೆಗಳಲ್ಲಿ) ಬಣ್ಣದ ಲಕ್ಷಣ : ಲಕ್ಷಣಮನಿ ತನಿತಱಿಸಿಕೊಳುವಲಕ್ಷಿಸಿ ವಿವಿಧಪ್ರಕಾರದಿಂದಂ ಛಾಯಾಲಕ್ಷಣಮನಱಿದು ನೋಡಿಯಪೇಕ್ಷಿಸುವುದು ಪಂಚವಿಧದಿನಭಿನವಚಂದ್ರಾ (ಅಶ್ವಶಾ. ೩-೪೩).
[ ಸಂ. (ಛಾಯಾ + ಲಕ್ಷಣ) ]

**ಛಾಯಾಲಕ್ಷ್ಯ** (ನಾ). (ಒಂದು ವಸ್ತುವಿನ) ನೆರಳನ್ನು ನೋಡಿ ಹೊಡೆಯ ಬೇಕಾದ ಗುರಿ : ಛಾಯಾಲಕ್ಷ್ಯಮನೊಡ್ಡಿಯುಮಾಯದ ನೀರೊಳಗೆ ತನ್ನ ನಡಸಿದ ನೆಗಟಂ ಬಾಯುಟಿವಿನವಿಸಿಸಿಯುಮರೆ ಹೋಯಜ ಬಾಪ್ಪೆಂದು ಹರಿಗನಂ ಗುರು ಪೊಗಟ್ಟಂ (ಪಂಪಭಾ. ೨-೬೦).
[ ಸಂ. (ಛಾಯಾ + ಲಕ್ಷ್ಯ) ]

**ಛಾಯಾವಿದ್ಯೆ** (ನಾ). ನೆರಳಿನಿಂದ ಕಾಲವನ್ನು ಕಂಡುಹಿಡಿಯುವ ಕಲೆ: "ಸೂರ್ಯ, ಚಂದ್ರ, ನಕ್ಷತ್ರ, ಮೊ.ಗಳಿಂದಾದ ನೆರಳಿನಿಂದ ಹೊತ್ತು ಕಂಡುಹಿಡಿಯುವ ವಿದ್ಯೆ: ಛಾಯಾವಿದ್ಯೆ; ಛಾಯಾ ಕಾಲನಿರ್ಣಯ(ವಿದ್ಯೆ)" (Sciagraphy. ಇಂಕನಿ). [ ಸಂ. ಛಾಯಾವಿದ್ಯಾ (ಛಾಯಾ + ವಿದ್ಯಾ) ]

**ಛಾಯಾವೇರು** 'ಚಾಯಬೇರು' ನೋ.

**ಛಾಯಾಶರೀರ** (ನಾ). ೧. ದೇಹದ ನೆಳಲು. ೨. (ಆಲಂ) ನೆರಳಿನಂತೆ ಯಾವಾಗಲೂ ಅನುಸರಿಸುವವನು : ಭರತಂಗೆ ಛಾಯಾಶರೀರವೆನೆ ಶತ್ರುಘ್ನನಿರ್ದನು (ಶ್ರೀರಾಮಾ. ೨೬-೬೯೯). [ ಸಂ. (ಛಾಯಾ + ಶರೀರ) ]

**ಛಾಯೆ** (ನಾ). ೧. ನೆಳಲು; ನೆರಳು : ಮೇಯುವಲ್ಲದ ಮಹಿಮೆ ಛಾಯೆಯಾ ಬ್ರಹ್ಮನದು (ಮಂಕುಕ. ೦೪೩) ; ಮಂಟಪದ್ವಾರದ ಛಾಯೆ ಯಲ್ಲಿ ಕೆಲವು ದುರ್ದೈವಿಗಳು ನಿಂತುಕೊಂಡು ಆರ್ತಧ್ವನಿ ಹೊರಡಿಸುತ್ತ ಭಿಕ್ಷೆ ಬೇಡುತ್ತಿದ್ದರು (ಅಕ್ಕಮ. ೨೩). ೨. ಪ್ರತಿಬಿಂಬ ; ಪಡಿಯಚ್ಚು ; ಸಂಪೂರ್ಣವಾಗಿ ಮೂಡುವಿಕೆ : ಇಲ್ಲದಿದ್ದರೆ ಪ್ರತಿಯಲ್ಲಿ ಛಾಯೆಯು ಒಂದೇ ಸಮನಾಗಿರುವುದಿಲ್ಲ (ಮುದ್ರಣ. ೨೩). ೩. ವರ್ಚಸ್ಸು ; ಪ್ರಭಾವ: ಮಹಾಭಾರತದಲ್ಲಿ ಕಾವ್ಯದ ಛಾಯೆಯಂತೆಯೇ ಶಾಸ್ತ್ರದ ಛಾಯೆಯೂ ಅನ್ವಯಿಸುತ್ತದೆ (ಧ್ವನ್ಯಾಲೋ. ೨೪೭) : ಸಾಧನೆಯ ಛಾಯೆ ಕಲೆ ; ವಿಶ್ವಾತ್ಮವದಕೆ ನೆಲೆ(ಕೋಗಿಲೆ.೮೪-೭); ನಮ್ಮ ದೇಶದಲ್ಲಿ ಆಚಾರ್ಯರುಗಳು . . . ಮತದ ಛಾಯೆಯಲ್ಲಿ ಸ್ವಲ್ಪಮಟ್ಟಿಗೆ ಏಕಮತ್ಯವನ್ನು ಸಾಧಿಸಿರುತ್ತಾರೆ (ಶಾರದ. ೨೬೮). 'ಛತ್ರಚ್ಛಾಯೆ' ಪರಾ. ೪. ಹೊಳಪು; ಪ್ರಕಾಶ : ಅಲ್ಪವಾದ ಛಾಯೆಯುಳ್ಳ ಕಣ್ಣಿನಲ್ಲಿಯೂ . . . ಹೆಚ್ಚಾಗಿ ಚಾರುಗಟ್ಟಿದ ಕಣ್ಣಿನಲ್ಲಿಯೂ ಅಂಜನಕ್ರಿಯೆ ಪ್ರಯೋಗಿಸುವುದು (ಸಕವ್ಯ. ೨೬) ; ಶಾಂತವಾದ ವಿಶಾಲವಾದ ನೀಲಿಯ ಛಾಯೆಯು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿಕೊಂಡಿತು (ಮುಳಿನಾ. ೬೯). ೫. ಸೂಚನೆ; ಗುರುತು ; ಸುಳಿವು : ಮಳೆಯ ಛಾಯೆ ಕಾಣಿಸುತ್ತಿದೆ (ರೂಢಿ). 'ಛಾಯೆಗಾಣಿಸು' ಪರಾ. ೬. ಬಣ್ಣ. 'ಛಾಯೆಗೆಡು' ಪರಾ. ೭. = ಛಾಯಾದೇವಿ. [ ಸಂ. ಛಾಯಾ ]

**ಛಾಯೆಗಾಣಿಸು** (ಕ್ರಿ). ಸೂಚನೆಯನ್ನು ಕೊಡು ; ಸುಳಿವು ತೋರು : ಕಾಯ ನೀನೇತಕೆಳಸಿದೆ . ೯ . ರಥಂ ವಣ್ಣ ಬಂದಿದೆ ಕೊ ಬಿಜಯಂಗೈವು ದೆಂದು ಮಱುಗಿ ಛಾಯೆಗಾಣಿಸಿ ಸುಮಿತ್ರಾಪುತ್ರಜಂ ನುಡಿದಭಿಪ್ರಾಯಮಂ ತಿಳಿಯದೆ (ಕೃಮಿಭಾ. ೦೮-೬೧). [ ಛಾಯೆ + ಕಾಣಿಸು ]

**ಛಾಯೆಗೆಡು** (ಕ್ರಿ). ಬಣ್ಣಗೆಡು ; ಬಣ್ಣಗುಂದು : ರಕ್ತವಣುಮಾತ್ರ ಅಂಗವೊಡೆದುಕ್ಕಿದಡೆ ಮುನ್ನಿನ ಹಾಂಗಿರದೆ ಹೊಗೆ ಛಾಯೆಗೆಟ್ಟಡೆ ಇಂಗಳಂ ಕೊಳದಿದ್ದಡಂ (ಬಸವು. ೪೪-೨೭). [ ಛಾಯೆ + ಕೆಡು$_1$ ]

**ಛಾರಾಕ್ಕಿಮುರಸಕೆಲ್ಲ** (ನಾ). ಒಬ್ಬಾತನ ಹೆಸರು : ಛಾರಾಕ್ಕಿಮುರಸಕೆಲ್ಲ ಪುತ್ರೋ ಮಾತ್ರಿವರ್ಮ್ಮಣವ್ (ಮೈಆರಿ. ೧೯೧೫, ೧೪-೨೫ ; 400 ಕ್ರಿ.ಶ). [ ? ]

**ಛಾರ್ಜು** 'ಚಾರ್ಜು' ನೋ.

**ಛಾವಟ** 'ಚಾಟ$_1$' ನೋ.

**ಛಾವಡಿ** 'ಚಾವಡಿ' ನೋ.

**ಛಾವಣಿ, ಚಾವಣಿ, ಛಾವನಿ** (ನಾ). ೧. ಸೈನ್ಯದ ಪಾಳೆಯ ; ದಂಡಿನ ಬಿಡಾರ ; ಸೇನಾಶಿಬಿರ : ಆ ಬಳಿಕ ಟೀಪುಸುಲ್ತಾನರು ಬೆಟ್ಟ ಕೋಟೆ ತೆಗೆದುಕೊಳ್ಳಬೇಕು ಯಂಬದಾಗಿ ಅಲ್ಲಿ ಛಾವಣಿ ಮಾಡಿಕೊಂಡು ಸನ್ನದ್ಧ ರಾಗುತ್ತ ಇದ್ದರು (ರಾಜೇಂದ್ರ. ೨೮). ೨. ಮನೆಯ ಮೇಲಿನ ಮಚ್ಚು ; ಮಾಡು; ಮಾಳಿಗೆ: ಕನ್ನಡಿಯ ಛಾವಣಿಯನ್ನು ಬಹು ಎತ್ತರವಾಗಿ ಹಾಕಿದ್ದಾರೆ (ಮುಂಬಯಿ. ೬-೫೭) : ಛಾವಣಿಯನ್ನು ಹೊದಿಸಿ ಅಲ್ಲೇ ಮಳೆ ಗಾಲವನ್ನು ಕಳೆಯುವುದು ಎಂದು ನಿರ್ಧರಿಸಿದ (ಅನಾಥ. ೦೫೨). ೩. ಮನೆ: ಆ ಪ್ರಕರಣವೀಗ ತುಳಸಿಯ ವಿರುದ್ಧ ರೂಪಚಂದನ ಛಾವಣಿಯಲ್ಲಿ ಕಳವು ಮಾಡಿದನೆಂದು ಅಲ್ಲ (ಜಮೀನ್ದಾ. ೧೪೯). **ಚಾವಣಿ** : ೨. ಊರ ಕಾಮನ ಕಟ್ಟೆಯ ಚಾವಣಿಯ ಹಂದರದಲ್ಲಿ ಬಲು ಡೌಲಿನಿಂದ ಕಾಮನನ್ನಿಡುವ ವಾಡಿಕೆಯಿದೆ (ಕನ್ನಡ. ೧೬೨); ಆಮೇಲೆ ನಿಯಾಸ್ ಚಾವಣಿಯ ಮೇಲಕ್ಕೆ ಹೋಗಿ ತಂಗಾಳಿಯಲ್ಲಿ ಮಲಗಿಕೊಂಡನು (ನಗಹೊ. ೧೩೪) ; ಚಾವಣಿಯಲ್ಲಿ ಸಮೃದ್ಧವಾದ ನೈದಿಲೆ ತುಂಬಿದ ಕೊಳ . . . ಚಿತ್ರಿತವಾಗಿದೆ (ಭಾರತ. ೫೨೭). **ಛಾವನಿ** : ೧. ಸ್ವಾತಂತ್ರ್ಯಸಮರಕ್ಕೆ ಎರಡು ಚಿಹ್ನೆಗಳು ಕಾಣಿಸಿಕೊಂಡವು–ತಾವರೆ ಮತ್ತು ದವಸಧಾನ್ಯ. ಭಾರತದ ಪ್ರತಿಯೊಂದು ಛಾವನಿಯಲ್ಲೂ ತಾವರೆಹೂವುಗಳು ಹರಡಿದವು (ಝಾರಾಣಿ. ೨೩೫).

**ಛಾವಣಿಮಾಡು**=ಸೇನಾಶಿಬಿರವನ್ನು ಹೂಡು; ಸೈನ್ಯದ ಡೇರೆ ಹಾಕು: ಟೀಪುಸುಲ್ತಾನರು . . . ಕೊಯಮತ್ತೂರಿಗೆ ಹೋಗಿ ಛಾವಣಿಮಾಡಿ ಜಗಳಕ್ಕೆ ಬೇಕಾದ ಸನ್ನಾಹ ಮಾಡುತ್ತ ಇದ್ದರು (ರಾಜೇಂದ್ರ. ೨೯). [ ←ಮರಾ. ಛಾವಣೀ, ಛಾವನೀ ; ಹಿಂ. ಛಾವನೀ./ ಪ್ರಾ. ಛಾಯಣೀ./ಸಂ. ಛಾದನೀ ]

**ಛಾವಣಿಹೊಡೆ** (ಕ್ರಿ). ವಸತಿ ಮಾಡು; ಗುಡಾರಹಾಕು; ಬೀಡುಬಿಡು: ಸುತ್ತಮುತ್ತಲಿನ ಹಳ್ಳಿಯ ಜನರೂ ಬಂದು ನಮ್ಮ ಊರಲ್ಲಿಯ ಛಾವಣಿ ಹೊಡೆದರು (ಜನಜೀ. ೮). [ ಛಾವಣಿ + ಹೊಡೆ$_1$(<ಪೊಡೆ$_1$) ]

**ಛಾವನಿ** 'ಛಾವಣಿ' ನೋ.

**ಛಿಂದಕ** (ನಾ). ಒಂದು ಬಗೆಯ ಬಳ್ಳಿ: ಓರೊಂದೆಡೆ ಛಿಂದಕ ಸುರದಾರು ಲವಂಗಾಸನದ್ರುಮಂಗಳಿನೆಸೆಗುಂ (ವರ್ಧಮಾ. ೫-೪೯) : "ಅಮರದವಳ್ಳಿ" (ವರ್ಧಮಾ. ಕೋಶ). [ ? ]

**ಛಿಂದಿಸು** (ಕ್ರಿ). ಚೂರುಮಾಡು; ನಾಶಮಾಡು : ಕೊಂದು ಕೂಗುವ ಕರ್ಮಂಗಳನು ಛಿಂದಿಸಿ ಮೋಕ್ಷಕೆ ತೆರಳುವ ಮಾತನಾನೊಂದನಾಡುವೆ ಕೇಳು ಚದುರ (ಜ್ಞಾನಸಿ. ೨೨-೯೮). [ <ಚೇದಿ$_1$ + – ಇಸು$_3$ ]

**ಛೀ, ಛೀ** (ನಾ). ಜುಗುಪ್ಸೆ, ತಿರಸ್ಕಾರ ಮುಂತಾದುವುಗಳನ್ನು ಸೂಚಿಸುವ ಒಂದು ಶಬ್ದ : ಲಾಂಛನಕ್ಕೆ ತಕ್ಕ ಆಚರಣೆಯಿಲ್ಲದಿದ್ದರೆ ಕೂಡಲಸಂಗಮದೇವಾ ನೀ ಸಾಕ್ಷಿಯಾಗಿ ಛೀ ಎಂಬೆನು (ಬಸವ. ೬೫೭). **ಛೀ** : ಬಡಿಯದಿರ್ಬಾಲಮುಂ ಸುಡು ನಾಯ ಛೀಯೆಂದು (ಸಿಂಹೋರ. ಹ. ೩೦೪-೫) ; ಕೊನೆಗೆ ಇಬ್ಬರಿಂದಲೂ ಛೀ ಅನಿಸಿಕೊಂಡರು (ಆಳಿ. ೦೩೮).

**ಛೀಪೆಟ್ಟು ಹಾಕು** = ಛೀಹಾಕು : ಅವನಿಗೆ ಚೆನ್ನಾಗಿ ಛೀಪೆಟ್ಟು ಹಾಕು (ರೂಢಿ). **ಛೀಹಾಕು**=ಆಕ್ಷೇಪಣೆ ಮಾಡು ; ತೆಗಳು ; ಛೀಮಾರಿಹಾಕು : ದಿನಾ ಒಂದಿಷ್ಟು ಅವನಿಗೆ ಛೀಹಾಕು (ಮುಗಿಮ. ೪೪) : ಅಣ್ಣಪ್ಪನವರು ತುಂಗಳಮಾಸ್ತರರನ್ನು ಒಳಿತಾಗಿ ಛೀಹಾಕಿದರು (ರಂಗರೋ. ೫೨).

**ಛಿಕ್ಕಾರ** (ನಾ). ಒಂದು ಬಗೆಯ ಜಿಂಕೆ. [ ಸಂ. ]

**ಛಿಟಿಲ್** (ನಾ). (ಬೆಂಕಿ ಉರಿಯುವಾಗ ಉಂಟಾಗುವ) ಒಂದು ಅನುಕರಣ ಶಬ್ದ. 'ಛಿಳಿಛಿಟಿಲ್' ಪರಾ.

**ಛಿದುರ** (ಗು). ೧. ಕತ್ತರಿಸುವ ; ಸುಲಭವಾಗಿ ಒಡೆಯುವ ; ಭಂಗುರವಾದ : ಮದವದರಿಹಸ್ತಿಮಸ್ತಕಛಿ[ಪಾಠಾಂ. ಭಿ]ದುರಂ [ಭಯ]ವಿಧುರನ ನನ್ಮಬಾಣಾಚ್ಛಿದುರಂ . . . ವೃಷಸೇನಂ (ಗದಾಯು. ೮-೬೩); ಪ್ರಾಲೇಯಾದ್ರಿನವಪ್ರಸೂನಛಿ[ಪಾಠಾಂ. ಭಿ]ದುರಂ . . . ಮಾರುತನೊಯ್ಯನೂದಿ ಕಳೆದತ್ತಾ ದಂಪತಿಶ್ರಾಂತಿಯಂ (ಕಾವ್ಯಾವ. ೪೪೭). (ನಾ). ೨. ಶತ್ರು. [ ಸಂ. ]

**ಛಿದ್ರ** (ನಾ). ೧. ತೂತು; ಬಿರುಕು; ರಂಧ್ರ; ಕನ್ನ: "ನಿಮ್ನಂ, ಅಗಾಧಂ . . . ಛಿದ್ರಂ . . . ಕುಹರಃ, ದರಃ – ಈ ೧೫ ಕುಬಿ" (ಹಲಾಯು. ೧೦೩-೨) : ಕುಹರಕರುವೆಯನಿಡುಕಿ ಛಿದ್ರಮಂ ಮುಚ್ಚಲಿಕ್ಕೆಳಸಲು (ಶ್ರೀರಾಮಾ. ೭೭-೬೧೭) : ಬಾಗಿಲಿಗಿರುವ ಛಿದ್ರಗಳ ಮೂಲಕ ಕಿರಣಗಳು ಕಾಣಿಸುವಂತೆ ಅವನ ವಿಶಾಲನೇತ್ರಗಳಿಂದ ಪ್ರಕಾಶ ಹೊರಚಿಮ್ಮುತ್ತಿತ್ತು (ಆಶ್ರಮ. ೫೨). ೨. ಕೊರತೆ ; ದೌರ್ಬಲ್ಯ ; ನ್ಯೂನತೆ: ಛಿದ್ರಮನೆ ಪಾರ್ವರ್ ಬೇಗಂ ಕೂರ್ತಂತೆ ಭಕ್ತಿಯಂ ಪೊಸಯಿಪರ್ (ಮುದತಿ. ೧೦-೭೫). 'ಛಿದ್ರಾನ್ವೇಷಿ' ಪರಾ. ೩. (ಆಲಂ) ವಿರಸ ; ಮನಸ್ತಾಪ : ಅಮ್ಮ ಚಿಕ್ಕಮ್ಮನ ನಡುವೆ ಛಿದ್ರ ದೊಡ್ಡದಾಗಿ ಮನೆ ಪಾಲಾಯಿತು (ಹೊಸಹ್ಗ. ೨೪೯). ೪. [ಜ್ಯೋತಿ] ಲಗ್ನದಿಂದ ಎಂಟನೆಯ ಸ್ಥಾನ : ಛಿದ್ರಮದು ಲಗ್ನಕ್ಕಷ್ಟಮಸ್ಥಾನಕಂ (ಜಾತಕ. ೧-೩೫). [ ಸಂ. ]

**ಛಿದ್ರಕ** (ನಾ). = ಛಿದ್ರ ೧. 'ಛಿದ್ರಕದ್ವಾರ' ಪರಾ. [ ಸಂ. ]

**ಛಿದ್ರಕದ್ವಾರ** (ನಾ). (ನೀರು ಹೊರಗೆ ಹೋಗಲು ಮಾಡಿರುವ) ತೂತು; ನೀರುಗಂಡಿ ; ತೂಬು: ಛಿದ್ರಕದ್ವಾರದ ತೂಂತನುರ್ಚಿ ನೀರಂ ಕಳೆದಾಗಳ್ (ವಡ್ಡಾರಾ. ೩೭-೨೦). [ ಛಿದ್ರಕ + ದ್ವಾರ ]

**ಛಿದ್ರಗೊಳಿಸು** (ಕ್ರಿ). ಚೂರುಮಾಡು ; ಒಡೆ : ಸಮಾಜವನ್ನು ಛಿದ್ರಗೊಳಿಸುತ್ತಿರುವ ಜಾತೀಯ, ಮತೀಯ . . . ಭಿನ್ನತೆಗಳನ್ನು ಮರೆಸಿ ಭಾರತೀಯತೆಯ ಸಮಗ್ರ ದೃಷ್ಟಿಯಲ್ಲಿ ಜನಾಂತದ ಐಕ್ಯತೆಯನ್ನೂ ರಾಷ್ಟ್ರದ ಭದ್ರತೆಯನ್ನೂ ಪೋಷಿಸಬೇಕು (ಶಿಕ್ಷಣ. ೭೭೭). [ ಛಿದ್ರ + ಕೊಳ್$_1$ + – ಇಸು$_3$ ]

**ಛಿದ್ರನಿವಾಸ** (ನಾ). ೧. ಬಿಲದಲ್ಲಿ ವಾಸಿಸುವುದು; ಹಾವು. ೨. ಇತರರ ದೌರ್ಬಲ್ಯವನ್ನು ದುರುಪಯೋಗ ಮಾಡಿಕೊಳ್ಳುವವನು. ೧, ೨ : ಛಿದ್ರನಿವಾಸರಂ ಪದವಿಹೀನರನಶ್ರುತರು ದ್ವಿಜಿಹ್ವರಂ . . . ಕೃತಘ್ನರು ರೌದ್ರತರಾಸ್ಯರಂ ಬೆರಸುವಾತನನೀತಿಯ ಸೇತುವಲ್ಲವೇ (ನಳಕಂ. ೬೦೧). [ ಛಿದ್ರ + ನಿವಾಸ ]

**ಛಿದ್ರಪಾಷಾಣ** (ನಾ). ಒಂದು ಬಗೆಯ ವಿಷ : ಇಲಿಪಾಷಾಣ, ಛಿದ್ರಪಾಷಾಣ, ಕೆಂಪಿನ ಪಾಷಾಣ . . . ಇಷ್ಟನ್ನೂ ಸಮಾನತೂಕ ವಸ್ತ್ರಗಾಳಿತಮ ಮಾಡಿ (ವಿವೃವಿ. ೬೮). [ ಸಂ. ]

**ಛಿದ್ರಾನ್ವಿತ** (ನಾ). ೧. ರಂಧ್ರದಿಂದ ಕೂಡಿಕೊಂಡಿರುವುದು ; ಒಡಕು ಇರುವುದು. ೨. ದೋಷದಿಂದ ಕೂಡಿರುವುದು ; ನ್ಯೂನತೆಯುಳ್ಳುದು. ೧. ೨: ಮತಿ ಕಂಭಂ ಘನಮಾಗುವ ಧೃತಿ ಕೇರ್ ಗುಪ್ತಿಗಳೆ ಪಡಿಗಳಾಗಿರ್ದ ಮಹಾವ್ರತಗೃಹಮನಿಸುಂ ಛಿದ್ರಾನ್ವಿತ [ಪಾಠಾಂ. ರಂಧ್ರಾನ್ವಿತ ]ಮಾದೊಡೆ ವಸ್ತುವೆಲ್ಲಮುಂ ಕೋಟ್ಟಡದೇ (ಜೀವಸಂ. ೦೫೯-೨೦). [ ಛಿದ್ರ + ಅನ್ವಿತ ]

**ಛಿದ್ರಾನ್ವೇಷಣ** (ನಾ). ದೋಷವನ್ನು ಹುಡುಕುವುದು : ಈಗಿನ ಕಾಲದಲ್ಲಿ ವ್ಯಕ್ತಿಗಳಲ್ಲಿ ಗುಣ ಹುಡುಕುವುದಕ್ಕಿಂತ ಛಿದ್ರಾನ್ವೇಷಣ ಮಾಡುವುದೇ ಹೆಚ್ಚು (ರೂಢಿ). [ ಛಿದ್ರ + ಅನ್ವೇಷಣ ]

**ಛಿದ್ರಾನ್ವೇಷಿ** (ಗು). ೧. ರಂಧ್ರವನ್ನು ಹುಡುಕುವ: ಛಿದ್ರಾನ್ವೇಷಿ ನಿಶಾಟಂ ರೌದ್ರತ್ವಮನುಳಿದು ಗೋಪ ವೇಷದೆ ಬಂದಂ (ಜಗವಿ. ೪-೪೯). ೨. ಲೋಪದೋಷವನ್ನರಸುವ. (ನಾ). ೩. ತಪ್ಪನ್ನು ಹುಡುಕುವವನು; ದೋಷಗ್ರಾಹಿ : ಆಷಾಢಭೂತಿ ತಾಂ ಛಿದ್ರಾನ್ವೇಷಿಯಪ್ಪುದಱಿಂ ತನಗಿದುವೆ ಪದನೆಂದು ಬಗೆದು (ಶಂಪಶಂ. ೬೧-೧೩). [ ಸಂ. ಛಿದ್ರಾನ್ವೇಷಿನ್ ]

**ಛಿದ್ರಿತ** (ಗು). ತೂತುಮಾಡಿದ ; ಕೊರೆದ. [ ಸಂ. ]

**ಛಿದ್ರಿಸು** (ಕ್ರಿ). ೧. ಭೇದಿಸು ; ಚೂರುಮಾಡು : ಉದ್ರೇಕದಿಂದವನ್ನ ಸೇನೆಯ ಭಟಾಳಿಯಂ ಛಿದ್ರಿಸುತೆ ಮುಂಬರಿದು ಬರ್ಪ ವೀರಂ ವೀರಭದ್ರನೋ (ಆಲಪು. ೪೩-೪೨). ೨. ವಿರಸವನು ಉಂಟುಮಾಡು; ಮನಸ್ಸು ಒಡೆಯುವಂತೆ ಮಾಡು : ರಸದಾನಾದಿಗಳೊಳ್ ಛಿದ್ರಿಸುವವಪ್ಪೊಡವರಾಪ್ತವಂತರುಂ ಬುದ್ಧಿವಂತರುಮಾಗಿ ನೆಗಟ್ದರಿನ್ನಾವ ಮಾಟಕ್ಕೆಯೊಳ್ ಪಗೆಯಂ ಕೆಯ್ಗೆ ಮಾಡುವಂ (ಶಂಪಥಾ. ೬-೬೬ ವ) ; ಪೆಱರಂ ಛಿದ್ರಿಸುವವರಂ ಕೊಱೆಕೊಱೆದಿರ್ದೆರ್ಗಬ್ಬಲಪ್ಪಿನಂ ಛಿದ್ರಿಸುವರ್ (ಸುಕುಮಾ. ೧೧-೪೬). ೩. ಅವಮಾನ ಮಾಡು : ಒಂದು ದಿವಸಂ ದುರ್ಯೋಧನನ ಮಯ್ದುನಂ ಸಿಂಧುದೇಶಾಧೀಶ್ವರಂ ಸೈಂಧವನವರಂ ಛಿದ್ರಿಸಲೆಂದು ಮೆಯ್ಗಱಿದು ಬಂದು (ಶಂಪಥಾ. ೬-೩೦ ವ). ೪. ಮೋಸಮಾಡು ; ವಂಚಿಸು : ಹೆಱರ ಛಿದ್ರಿಸುವುದು ತನು ಕೆಡುವನ್ನಕ್ಕ ಮಾಣದು (ಬಸವ.೧೧). ೫. ಕದಿ ; ಕನ್ನಹಾಕು: ಪರರ ಕಾವ್ಯಾರ್ಥಮುಮಂ ಛಿದ್ರಿಸುವಂಗತಿ ಶಬ್ದದರಿದ್ರಂಗಕ್ಕುಮೆ ನವೀನ ಕಾವ್ಯಾರಂಭಂ (ಗಿರಿಶ. ೧-೩೬). [ ಛಿದ್ರ + – ಇಸು₃ ]

**ಛಿನಾಲಿ, ಚಿನಾಲಿ, ಚಿನ್ನಾಲಿ, ಚೀನಾಲಿ** (ನಾ). ಕುಲಟೆ ; ಹಾದರಗಿತ್ತಿ : ಆಕಿ ಛಿನಾಲಿ, ಊರ ಬಸವಿಯ ಹಂಗ . . . ಮಾನಾ ಮಾರಾಕ ಹತ್ತ್ಯಾಳ (ಮುಖ್ಯಾ. ೯೧) ; ಹೇಗಿದ್ದಳು, ಈಗ ಹೇಗಾಗಿ ಬಿಟ್ಟದಾಳೆ. ಛಿನಾಲಿ! (ಸಾಹೇಬ್. ೧೯೪). **ಚಿನಾಲಿ :** ಜಯ ಅದೆಂಥ ಚಿನಾಲಿ ಅಂತೀರಿ (ಕಾಮಿಕಾಂ. ೨೦೭). **ಚಿನ್ನಾಲಿ:** ಈಗ ಒಬ್ಬಳು ಚಿನ್ನಾಲಿ ಬಂದವ್ಳ (ಛೀಮುಕಾ. ೧೩೩) ; ಇದೆಲ್ಲಾ ಕಲ್ಯಾಣಿಯ ತಾಯಿ ಆ ಚಿನ್ನಾಲಿಯ ಮಾಟ (ಶಿವರಾ. ೧೧೧). **ಚೀನಾಲಿ :** ಯಾಲಕ್ಕೀಗೌಡನ ಮಗಳು ಎಂತ ಚೀನಾಲಿ ಹೆಣ್ಣು (ನಾಪದ. ೧೩೨).

[ ←ಮರಾ. ಛಿನಾಲೀ ; ಹಿಂ. ಛಿನಾಲ್. / ಪ್ರಾ. ಛಿಣ್ಣಾಲೀ ]

**ಛಿನ್ನ** (ಗು). ೧. ಕತ್ತರಿಸಿದ ; ತುಂಡುಮಾಡಿದ ; ವಿಭಾಗಿಸಿದ. ೨. ಒಡೆದ ; ನಾಶಗೊಳಿಸಿದ. (ನಾ). ೩. ಶ್ವಾಸರೋಗಗಳಲ್ಲಿ ಒಂದು ವಿಧ : ಈ ಶ್ವಾಸರೋಗವು ಕ್ಷುದ್ರಕವೆಂದೂ, ತಮಕವೆಂದೂ, ಛಿನ್ನವೆಂದೂ, ಮಹಾನೆಂದೂ . . . ಐದು ವಿಧವಾಗಿರ್ಪುದು (ಸಕವೈ. ೨೨೮). ೪. [ನಾಟ್ಯ] ನೂರೆಂಟು ಕರಣಗಳಲ್ಲಿ ಒಂದು : ಅಲಪಂಕಜದ ಕರಂಗಳ್ ನಿಲೆ ಕಟಿಯೊಳ್ ಕ್ರಮದೆ ಛಿನ್ನಕಟಿಯಂ ಮಾಡಲ್ . . . ಛಿನ್ನಾಖ್ಯಮೆಂಬ ಕರಣಮೆನಿಕ್ಕುಂ (ಲಾಸ್ಯರಂ. ೪-೯೦). ೫. ನೃತ್ಯದಲ್ಲಿ ಉಪಾಂಗವೆನಿಸಿದ ಹಲ್ಲಿನ ಭೇದಗಳಲ್ಲಿ ಒಂದು ; ಹಲ್ಲುಗಳನ್ನು ಕಚ್ಚಿರುವಿಕೆ: ಕುಟ್ಟನ, ಖಾದನ, ಛಿನ್ನ . . . ನಿಷ್ಕರ್ಷ–ಈ ಎಂಟು ಹಲ್ಲಿನ ಭೇದಂಗಳ್ (ಲಾಸ್ಯರಂ. ೩-೮೮ ವ).

**ಛಿನ್ನಛಿನ್ನ** (ದ್ವಿರುಕ್ತಿ) : ಎನ್ನ ಬಾಧೆಯೊಳೆಂತು ಬದುಕುವೆ ಛಿನ್ನಛಿನ್ನಂ ಮಾಡುವೆನು ನಾನಿನ್ನನೆನುತತಿಕೋಪದಿಂದಱೆಯಟ್ಟಿ ಬರೆ (ಬಸಪು. ೧೯-೩೦); ಚಿನ್ನಮಗನಂ ಪಿತನ ಕೈಯಲಿ ಛಿನ್ನಛಿನ್ನಂಗೆಯ್ಸಿದೆಡೆಯಲಿ ಪನ್ನಗೇಂದ್ರಾಭರಣ ಕರುಣದಿನಶ್ರುಜಲವಿಲ್ಲ ( ಬಸಪು. ೧೮-೩೩). **ಛಿನ್ನಛಿನ್ನವಾಗು**= ಚೂರುಚೂರಾಗು ; ಕತ್ತರಿಸಿಹೋಗು : ಅರ್ಜುನನು . . . ಮೊಸಳೆಗೆ ಹೊಡೆದನು. ಮೊಸಳೆಯು ಛಿನ್ನಛಿನ್ನವಾಗಿ ದ್ರೋಣನ ಕಾಲನ್ನು ಬಿಟ್ಟಿತು (ವಚಭಾ. ೨೦). [ ಸಂ. ]

**ಛಿನ್ನಪ್ಪಬಾಪ್ಪು** (ನಾ). ಒಬ್ಬಾತನ ಹೆಸರು : ಶ್ರೀಮತ್‌ಛಿನ್ನಪ್ಪ ಬಾಪ್ಪುಯರು ಬಪ್ಪುಗೆ ಕೊಟ್ಟ ಕಟ್ಟುಗೊಡಗೆ ಸಸನ ಕ್ರಮ (ಮೈಆರಿ. ೧೯೩೩, ೧೪-೨ : ೭). [ ? ]

**ಛಿನ್ನಭಕ್ತ** (ನಾ). [ದ್ವೈತ] ಸ್ವಲ್ಪಕಾಲ ಬಿಟ್ಟು ಮತ್ತೆ ಭಕ್ತಿತೋರುವವನು ; ನಿರಂತರಭಕ್ತಿ ಇಲ್ಲದವನು : ಛಿನ್ನಭಕ್ತರು ಎನಿಸುತಿಪ್ಪರು ಸುಪರ್ಣ ಶೇಷಾದ್ಯಮರರೆಲ್ಲಾ (ಹಸಾರ. ೨೩-೧೪). [ ಛಿನ್ನ + ಭಕ್ತ ]

**ಛಿನ್ನರುಹೆ** (ನಾ). ಒಂದು ಬಗೆಯ ಬಳ್ಳಿ ; ಅಮೃತವಳ್ಳಿ : " ವತ್ಸಾದನೀ, ಛಿನ್ನರುಹಾ . . . ಮಧುಪರ್ಣೀ ೯ ಅಮೃತಬಳ್ಳಿ ಹೆಸರು " (ಸಿದ್ಧಾಂತಿ. ೧೧೩). [ ಸಂ. ಛಿನ್ನರುಹಾ ]

**ಛಿಲ್** (ನಾ). ಒಂದು ಅನುಕರಣ ಶಬ್ದ : ಖಮ್ಮನೆ, ಫಟಿಲೆನೆ, ಛಿಲ್ಲನೆ, ಪಱಿಲೆನೆ (ಭಾಷಾಭೂ. ೧೧ ಉದಾ) : ಛಿಲ್ಲೆಂದು ರಕ್ತವು ಬಂತು (ದೌಲತ್. ೧೧೩).

**ಛಿಳಿಛಿಟಿಲ್** (ನಾ). ಒಂದು ಅನುಕರಣಶಬ್ದ : ಭುಗುಭುಗಿಲ್ ಛಿಳಿಛಿಟಿಲ [ಪಾಠಾಂ. ಚಗಿಲ್‌ಭುಗಿಲ, ಭುಗುಲ್‌ಭುಗಿಲ]ನೊಗೆದುದು ಮಹಾವಿಷಂ (ನಂಚರ. ೦-೧೩) ; ಅಱೆಯಟ್ಟ ಕುಟ್ಟ ಛಿಳಿಛಿಟಿಲೆಂಬ ಸಿಡಿಲ್ಗಳಿಂ (ಸಾನಂಚ. ೪-೧೯೯).

**ಛೀ** 'ಛೀಃ' ನೋ.

**ಛೀಗುಟ್ಟು** (ಕ್ರಿ). ತಿರಸ್ಕರಿಸು ; ಧಿಕ್ಕರಿಸು ; ಛೀಮಾರಿ ಹಾಕು : ದೇವದತ್ತನು ಅಜಾತಶತ್ರುವನ್ನು ಛೀಗುಟ್ಟಿದನು (ಹತ್ತುಮ. ೬೬) ; ದುರ್ಯೋಧನನು ಈ ಮಾತುಗಳನ್ನು ಕೇಳಿ ದರ್ಪದಿಂದ ವಿದುರನನ್ನು ಛೀಗುಟ್ಟಿ ಪ್ರಾತಿಕಾಮಿಯನ್ನು ಕರೆದು . . . ಎಂದನು (ವಚಭಾ. ೯೬).

[ ಛೀ (<ಛೀಃ) + ಕುಟ್ಟು₁ ]

**ಛೀಮಾರಿ** (ನಾ). ತೆಗಳಿಕೆ ; ತಿರಸ್ಕಾರ ; ಧಿಕ್ಕಾರ : ಛೀಮಾರಿ ಪುರಾಣದ ಕಥೀ ಏನು ಸತಿಪತಿಗೆ ನುಗ್ಗಿದಾ ಗತಿ ( ಮೂಕಿಕಾ. ೩೦-೪).

**ಛೀಮಾರಿಮಾಡು**=ತೆಗಳು ; ಧಿಕ್ಕರಿಸು : ಗಂಡನಿಗೆ ದಿನಕ್ಕೊಂದೆರಡು ಸಲವಾದರೂ ಛೀಮಾರಿ ಮಾಡದಿದ್ದರೆ ಅವರಿಗೆ ತೃಪ್ತಿಯಿಲ್ಲ (ತಾಯಿಳ. ೭); ನಾಲ್ಕು ದಿವಸ ಕಂಪೆನಿಯಲ್ಲಿಟ್ಟುಕೊಂಡು ಛೀಮಾರಿ ಮಾಡಿ ಆಚೆಗಟ್ಟಬೇಕೂಂತ ಯಜಮಾನ್ರು ಇರಾದೆ (ನಟಸಾ. ೦೦೯). **ಛೀಮಾರಿಹಾಕು** = **ಛೀಮಾರಿಮಾಡು** : ಏನಾದರೊಂದು ನೆಪ ತೆಗೆದು ಯಾರಿಗಾದರೂ ಛೀಮಾರಿಹಾಕುತ್ತಾ ಪಠಾರದ ಉದ್ದಗಲಕ್ಕೂ ಅವರು ಓಡಾಡಿದರು (ರಂಗವ. ೩೬) ; ನೆರೆದ ಕೇರಿಯ ಹೆಂಗಸರು ಛೀಮಾರಿ ಹಾಕಿದಾಗ . . . ಹರಿಹಾಯ್ದನಂತೆ (ಹೊಸಕ್ಕ. ೧೬೮). [ಛೀ (<ಛೀಃ)+ಮಾರಿ₅ (<ಮೋಱೆ)]

**ಛುಚ್ಛುಂದರ** (ನಾ). ಮೂಗಿಲಿ. [ ಸಂ. ]

**ಛುಮ್** (ನಾ). ಒಂದು ಅನುಕರಣ ಶಬ್ದ : ನಿಶಾಟರನುಂಡನಗ್ನಿ ಛುಮ್ಮೆಂಬ ಛಟಚ್ಛಟೆಂಬ . . . ಛಟ್ಟುಪೊಟ್ಟೆಂಬ ರವಂ ಕಱುತ್ತದಸಿ (ಕಾವ್ಯಾವ. ೩೮).

**ಛುಮ್‌ಛುಮ್** (ದ್ವಿರುಕ್ತಿ) : ಮೊನೆಯಂಬುಗಳ್ ಮಹಾಮಸಕದ ಛುಮ್‌ಛುಮ್ಮೆನೆ ವಿರೋಧಿಭಟರ್ಕಳ ಮೆಯ್ಗಳಲ್ಲಿ ತೆತ್ತಿಸಿ ಪೊಱಪಾಯ್ದು (ಮಹಾನೇ. ೧೨-೨೯).

**ಛುರಣ** (ನಾ). ಹರಡುವಿಕೆ ; ವ್ಯಾಪನೆ : ನಂದನ ಹರಿಚಂದನಚ್ಛಟಾಚ್ಛುರಣದೊಳಮೆಡವಱಿಯದೆ ಪುಡಿಗುಟ್ಟಿದ ಮುತ್ತಿನ ಮಳಲ್ಗೆದಱಿದ ಮಣಿಕುಟ್ಟಿಮದೊಳಂ ಮಾಣದ . . . ವಾರಿಧಾರೆಗಳಿಂ ತಳ್ಪೊಯ್ಯುತ್ತ ದಂತಂತೆ ಸಿಡಿಲ ಕಿಚ್ಚಿನವೊಲುಗ್ಗಳಮುರಿವುದು (ಕಾದಂಉ. ೩೨೬). [ ಸಂ. ]

**ಛುರಿಕೆ** (ನಾ). ೧. ಚೂರಿ ; ಸಂಗಿಗೆ ; ಬಾಕು : ಛುರಿಕೆಯಿಂ ಕುಯ್ದು ಪೋಳಿಸಗದೆ ನರಂಗೆ ತಿನ್ನಲ್ ಸುಲಭವಲ್ಲ ತೆಗೆ ಪನಸಫಲಗಳ (ಮಲ್ಲಅ. ೯-೧೬) ; ತುಪ್ಪುಳ್ ಮಾಸಗಳ ಬಿಂಕಗೊಂಕುಗಳ್ ಕಾವಲಿರ್ದುವು . . . ವದನದುರ್ಗದ್ವಾರಪಾಲಕ ಕರಪ್ರಖರ ಛುರಿಕೆಗಳವೋಲ್

(ಶ್ರೀರಾಮಾ. ೩೭೭-೪೨೩). ೨. [ನಾಟ್ಯ] ದೇಶೀಯ ಭೌಮಂಚಾರಿಗಳಲ್ಲಿ ಒಂದು ; ಸಮಪಾದದಿಂದ ಮುಂದಕ್ಕೆ ನಡೆಯುವುದು : ರಥಚಕ್ರ . . . ಭುರಿಕೆ . . . ಸಮಸ್ಖಲಿತ: ಈ ಮೂವತ್ತೈದು ದೇಶಿಯ ಸಂಬಂಧದ ಭೌಮಚಾರಿಗಳು (ಲಾಸ್ಯರಂ. ೬-೧೭ ವ). [ ಸಂ. ಭುರಿಕಾ ]

**ಭುರಿತ** (ಗು). ಒಂದಕ್ಕೊಂದು ಬೆರಸಿದ, – ಕೂಡಿದ : ಉತ್ಪಾತಾಸಿಚ್ಛುರಿತ ಭುಜಪರಿಘರೊಂದೊರ್ವರ ಸೆಣಸಿಂ ಲಗ್ಗೆಗೆಯ್ದು ಪಾಯಿಸೆ ಜವದಿಂ (ಶಾಂತಿಪು. ೪-೧೩). [ ಸಂ. ]

**ಭುಟಿಚ್** (ನಾ). ಒಂದು ಅನುಕರಣ ಶಬ್ದ: ಭುಟಿಚ್ಚೆಂದೆಣ್ಣೆಯೊಳಿಕ್ಕಿಯುಂ ತ್ವರಿತದಿಂ ಕೈಗಾಯದೊರೊರ್ವರಂ ಗಿಟಿಚ್ಚೆಂದಾರ್ದಿದಿರಾಗಿ ಬಂದು ತಲೆ ಜೀಟೀಟೆಂ ಪೊಯ್ದುಗ್ರದಿಂ (ಧರ್ಮಾಮೃ. ೬-೧೮೯).

**ಭೂ** (ನಾ). ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಹೇಳುವ ಮಾತು. 'ಭೂಬಿಡು' ಪರಾ.

**ಭೂಬಾಣ** (ನಾ). ೧. (ಆಲಂ) ವಿಡಂಬನೆಯಿಂದ ಕೂಡಿದ ಚುಚ್ಚುವ ಮಾತು. ೨. ಅಂತಹ ಮಾತಿನಿಂದ ಕೂಡಿದ ಬರಹ: 'ಪ್ರಜಾವಾಣಿ' ದಿನಪತ್ರಿಕೆಯ ಭೂಬಾಣ ಪ್ರಸಿದ್ಧವಾಗಿದೆ (ರೂಢಿ). [ ಭೂ + ಬಾಣ ]

**ಭೂಬಿಡು** (ಕ್ರಿ). ೧. ನಾಯಿಯನ್ನು ಇತರರ ಮೇಲೆ ನುಗ್ಗುವಂತೆ ಮಾಡು : ಯಾರಾದರೂ ಭಿಕ್ಷೆಗೆ ಬಂದರೆ ಅದನ್ನು ಅವರ ಮೇಲೆ 'ಭೂ' ಬಿಡುತ್ತಿದ್ದ (ಹೇಮುಕೊ. ೧೨). ಸಂಕಟವು ಭಯವು–ಭೂಬಿಟ್ಟ ವಿಧಿಯ ಕ್ರೂರಾತ್ಮ ಕರ್ಮಶುನಕ (ಅರಳು. ೧೬೯-೭). ೨. (ಆಲಂ) ವಿರುದ್ಧವಾಗಿ ನಿಲ್ಲಿಸು ; ಚುಚ್ಚಿಕೊಡು : ಸಂಪತ್ತುಗೆ ಅವರ ಮಾತಿನಿಂದ ರೇಗಿತ್ತು. ನೀವೂ ಭೂಬಿಟ್ಟಿವು (ಅಂಕೂ. ೨೯) : ಪ್ರಭಾವಶಾಲಿಗಳ ವಿರುದ್ಧ ಅಲ್ಪರನ್ನು ಭೂಬಿಡುವುದು ಕಷ್ಟ (ರೂಢಿ). [ ಭೂ + ಬಿಡು₁ ]

**ಭೂಮಂತ್ರ** (ನಾ). ದೆವ್ವ ಬಿಡಿಸುವ ಮಂತ್ರ.

**ಭೂಮಂತ್ರಗಾಳಿ** = ದೆವ್ವ, ಭೂತ, ಪಿಶಾಚಿ ಮೊದಲಾದಂವುಗಳ ಪೀಡೆಯನ್ನು ಪರಿಹರಿಸುವುದಕ್ಕಾಗಿ ಮಾಡುವ ಒಂದು ಬಗೆಯ ಮಂತ್ರ ಪ್ರಯೋಗ : ಇಂತಹ ಮಿಥ್ಯಾಜ್ಞಾನವು ಭೂಮಂತ್ರಗಾಳಿಯಿಂದಾಗಲಿ, ಕಿವಿಕಚ್ಚುವ ಉಪದೇಶದಿಂದಾಗಲಿ ಹೋಗತಕ್ಕದ್ದಲ್ಲ (ಜೀವಾತ್ಮ. ೨೭೪) ; ಸೋಮಣ್ಣ ಅಜ್ಜಿಗೆ ಯಾರೋ' ಭೂಮಂತ್ರಗಾಳಿ ಹಾಕಿ ಎಲ್ಲಿಗೆ ತೆಗೆದುಕೊಂಡು ಹೋದರು ? (ಹೊಸಕ್ಷ. ೦೨೧). [ ಭೂ + ಮಂತ್ರ ]

**ಭೂರಿ** (ನಾ). = ಭುರಿಕೆ ೧ : ನಾಯರರು . . . ಮುಂಜಿಗೆ ಬದಲಾಗಿ ೧೬ನೇ ವರ್ಷದ ವಯಸ್ಸಿನಲ್ಲಿ ಹುಡುಗರ ನಡುವಿಗೆ ಭೂರಿಯನ್ನು ಕಟ್ಟುವರು (ಕಥಾಗಿ. ೦೦೬). [ ಸಂ. ಭೂರೀ ]

**ಭೇ** (ಅ). ಮುಂದಲಿಕೆ, ತಾತ್ಸಾರ, ನಿರಾಕರಣ, ನಿಷೇಧ ಮೊದಲಾದ ಭಾವಗಳನ್ನು ಸೂಚಿಸುವ ಒಂದು ಶಬ್ದ : ಭೇ, ಆದಾಗದು. ನೀವು ಕೊಡಲೇ ಬೇಕು (ಎತ್ತಿಕ್ಕ. ೭೦).

**ಭೇಭೇ** (ದ್ವಿರುಕ್ತಿ) : ಭೇಭೇ. ನನಗೆ ಅದೇನೂ ಬೇಡ (ರೂಢಿ).

**ಭೇಕ** (ನಾ). ೧. ಮನೆಯಲ್ಲಿ ಸಾಕಿದ ಮೃಗ, ಪಕ್ಷಿ ಮೊದಲಾದ ಸಾಧು ಪ್ರಾಣಿ; ಸಾಕುಪ್ರಾಣಿ. ೨. ಜಾಣ ; ಬುದ್ಧಿವಂತ. ೩. ಪಟ್ಟಣಿಗ ; ನಾಗರಿಕ. ೪. ರಸಿಕ ; ವಿದಗ್ಧ. [ ಸಂ. ]

**ಭೇಕಾನುಪ್ರಾಸ** (ನಾ). [ಕಾವ್ಯಮಿ] ಅನುಪ್ರಾಸಗಳಲ್ಲಿ ಒಂದು ಬಗೆ ; ಒಂದು ಬಗೆಯ ಶಬ್ದಾಲಂಕಾರ : ಒಂದು ಪದ್ಯದೊಳೆರಡೆರಡುಮಕ್ಕರಂ ಜತೆಜತೆಯಾಗಿ ಪಲವುಂ ಬಟಿಯೊಳ್ಬರೆಯುದು ಭೇಕಾನುಪ್ರಾಸಮೆನಿಪುದು. ಎಂತೆನೆ :– ಕಂದಂ ಕವಿಕೋಕಿಲಮಾಕಂದಂ ಕೋಮಲವಿಕಾಸಿ ಕೃತಿಕಲ್ಪಲತಾ ಕಂದಂ ವಿಸ್ಮಯಮರ ರಸದುಕ್ಕಂದಂ ಚಿಕದೇವರಾಯಚಂದನ ಚಂದಂ (ಅಪ್ರತಿ. ೨೯-೭). [ ಭೇಕ + ಅನುಪ್ರಾಸ ]

**ಭೇಕಾಪಹ್ನುತಿ** (ನಾ). [ಕಾವ್ಯಮಿ] ಅರ್ಥಾಲಂಕಾರದಲ್ಲಿ ಒಂದು ಪ್ರಭೇದ ; ಅಪಹ್ನುತಿ ಅಲಂಕಾರದ ಆರು ಭೇದಗಳಲ್ಲಿ ಒಂದು ; ಮತ್ತೊಬ್ಬರಿಗೆ ಉಂಟಾದ ಸಂಶಯವನ್ನು ನಿವಾರಿಸಲು ಜಾಣತನದಿಂದ ನಿಜವನ್ನು ಮರೆಮಾಚುವುದು : ಒಂದು ವಸ್ತುವನಿರ್ದಿದ ನಿರ್ದಂತೆ ತಿಳಿಯಲೆಳಸಿದರ್ಗೆ ಅದಂ ಮಱಸಿ ಪೇಟ್ದುದು ಭೇಕಾಪಹ್ನುತಿಯೆನಿಪುದು. ಎಂತೆನೆ:– ಪಲ್ಲೇಂ ಪೆಬಾಳಿಯ ಪುಯಲಲ್ಲಿಯ ಮುಱಿದುದಿರ್ದುದೆಂದು ಕೇಳ್ವನೆಗಂ ತಾಂ ತಲ್ಲಣಿಸಿ ಚನ್ನಬಸವಂ ಸೂಲ್ಗಿಸಿ ಯಳಿನೆತ್ತಿ ತನ್ನದೆಂದಳವಟ್ಟಿದಂ(ಅಪ್ರತಿ. ४೮-೧೪). [ಭೇಕ+ಅಪಹ್ನುತಿ]

**ಭೇಕೋಕ್ತಿ** (ನಾ). [ಕಾವ್ಯಮಿ] ಅರ್ಥಾಲಂಕಾರಗಳಲ್ಲಿ ಒಂದು ; ಲೋಕಪ್ರಸಿದ್ಧವಾದ ನಾಣ್ಣುಡಿಗೆ ಬೇರೆ ಅರ್ಥವನ್ನು ಕಲ್ಪಿಸುವುದು : ಈ ನಾಣ್ಣುಡಿಗೆ ಪ್ರಸಿದ್ಧಮಾದರ್ಥಮಲ್ಲದ ಪೆಜತೊಂದರ್ಥಮಂ ಕಲ್ಪಿಸಿ ಪೇಟ್ಟಿಯದು ಭೇಕೋಕ್ತಿಯೆನಿಪುದು. ಎಂತೆನೆ :– ಕತ್ತರಿಸಿ ನೆತ್ತಿದೊಪಲಂ ಪತ್ತಿಸಿ ಪೊಸಮೂಗುಗೆಯ್ವುಮನಲೆಸವಂತಂ ಸತ್ತಾಂ ಸಗ್ಗಂ ಬಡೆವೇಂ ಮತ್ತೆ ವಿರಕ್ತಂಗೆ ಮೂಗದೇತಕ್ಕೆಂದು (ಅಪ್ರತಿ ೧೩೧-೩). [ ಭೇಕ + ಉಕ್ತಿ ]

**ಭೇಗಿ** 'ಚೇಗೆ' ನೋ.

**ಭೇಗೆ** 'ಚೇಗೆ' ನೋ.

**ಭೇಡಿಸು, ಚೇಡಿಸು** (ಕ್ರಿ). ಕುಚೇಷ್ಟೆ ಮಾಡಿ ರೇಗಿಸು ; ಕೆರಳಿಸು ; ಚುಡಾಯಿಸು: ಸ್ಫೂರ್ತಿ ಬಂದಾಗ ಹರಟೆ ಹೊಡೆಯಬೇಕೆಂದು ಗೆಳೆಯನ ಮನೆಗೆ ಹೋದರೆ, 'ಮೊದಲೇ ಕಾರ್ಯಕ್ರಮವನ್ನೇಕೆ ತಿಳಿಸಲಿಲ್ಲ' ಎಂದು ಅವನು ಭೇಡಿಸಿದರೆ ? (ಮುಂಗಾಪು. ೬೬) ; ಯಾವಾಗಲೂ ಆಕೆ ಅವನನ್ನು ಭೇಡಿಸುತ್ತಿರುತ್ತಾಳೆ (ಬನಸಿ. ೩) ಚೇಡಿಸು : ಆದರೂ ಈ ಅಯಾಚಿತ ಜತನಕ್ಕಾಗಿ ಸ್ನಿಗ್ಧವಾಗಿ ಚೇಡಿಸದಿರುವುದು ಅವಳಿಂದಾಗಲಿಲ್ಲ (ಅರಗಿ. ೧೭೩). [ ಭೇಡ್₀ (P ← ಹಿಂ. ಭೇಡನಾ) + – ಇಸು₁ ]

**ಭೇದ** (ನಾ). ೧. ಕತ್ತರಿಸುವುದು ; ನಾಶಮಾಡುವುದು : ಭೂಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ (ಜಗವಿ. ೧-೧). ೨. ತುಂಡು; ಚೂರು. ೩. [ಗಣಿತ] ಭಿನ್ನರಾಶಿಯಲ್ಲಿ ಭಾಜಕವಾದ ಅಂಕಿ : "ಭಿನ್ನರಾಶಿಯಲ್ಲಿ ಅಡ್ಡಗೆರೆಯ ಕೆಳಗಿನ ಅಂಕಿ : ಭೇದ" (Denominator. ಇಂಶಿನಿ). 'ಅಂಶ' ಪರಾ. ೪. [ನಾಟ್ಯ] ನೃತ್ಯದಲ್ಲಿ ಹೇಳಿರುವ ಇಪ್ಪತ್ತು ಹಸ್ತಭೇದಗಳಲ್ಲಿ ಒಂದು : ಧೂನನ . . . ಭೇದ, ಭೇದ . . . ಆಹ್ವಾನ, ತರ್ಜನ–ಈ ಇಪ್ಪತ್ತು ಕರಕರ್ಮಭೇದಂಗಳ್ (ಲಾಸ್ಯರಂ. ೪-೧೩ ವ). ೫. [ಜೈನ]ಒಂದು ಆಚಾರದ ಕ್ರಮದಲ್ಲಿ ಭಂಗ : ವಿನಿಮಾಳೆ ತಪಸ್ಯೋಪಸ್ಥಾಪನದ್ವಂದ್ವದೊಳ್ ನಿರುತಂ ಛೇದವಿಕಲ್ಪದೊಳ್ ನಿಬಿಡ ಕಾಯೋತ್ಸರ್ಗದೊಳ್ ಶುದ್ಧಿ ತಳ್ತಿರೆ ದೋಷಪ್ರತಿಕಾರ ಸಾರತಪಮುಂ ತತ್ಸಾಪಸಂ ತಾಳ್ದಿದಂ (ಸುಕುಮಾ. ४-೧೩). [ ಸಂ. ]

**ಭೇದನ** (ನಾ). = ಭೇದ ೧ : ಅಯ್ಯಾ ನಿಮ್ಮ ಅನುಭಾವದಿಂದ ಎನ್ನ ಕರ್ಮಭೇದನವಾಯಿತ್ತು (ಬಸವ. ೫೧೦) ; ಘನಮೋಹಪಾಶಾಭೇದನಂ ಮಾಳ್ಪ ದಂಡಿಯುಳ್ಳನ್ನಪ್ಪ ಬಾರಾ (ಬಸಪು. ೨೪-೩೯) : "ಭಂತೇ, ಮನಸಿಕಾರದ ಲಕ್ಷಣವೇನು ? ಪ್ರಜ್ಞೆಯ ಲಕ್ಷಣವೇನು ?". ಎಂದನು. "ಮಹಾರಾಜ, ಮನಸಿಕಾರದ ಲಕ್ಷಣ ಊಹನ. ಭೇದನವು ಪ್ರಜ್ಞೆಯ ಲಕ್ಷಣ" (ಬುದ್ಧಪ. ೪೩ ಮಿಲಿಂದ). [ ಸಂ. ]

**ಭೇದಿ** (ಗು). ೧. ಕತ್ತರಿಸುವ ; ಚೂರುಮಾಡುವ. (ನಾ). ೨. ಕತ್ತರಿಸುವ ಸಾಧನ ; ಕತ್ತರಿ : "ಕರ್ತರಿಚ್ಛೇದಿಯಕ್ಕುಂ" (ಮುಂಗರಾ. ೧೧೧-೨). ೩. ಕತ್ತರಿಸುವ ವ್ಯಕ್ತಿ ; ಭಂಗಗೊಳಿಸುವವನು : ಸುಖಚ್ಛೇದಿಗಳು ಕಪಟಿಗಳು (ಬಸಪು. ४೦-೬೩). [ ಸಂ. ಭೇದಿನ್ ]

**ಭೇದಿಸು** (ಕ್ರಿ). ೧. ಕತ್ತರಿಸು; ತುಂಡುಮಾಡು : ಮರನಂ ಭೇದಿಸುವುವು ಷಟ್ಚರಣಂ ಗಂಧಕ್ಕೆ ಸೋಲ್ತು ತಾವರೆಯೆಸಟುಂ ಭರದಿಂ ಭೇದಿಸಲಾಱದೆ ಪಿರಿದಪ್ಪತಿಮೋಹದಿಂದಮಟಿವುವು ಧರೆಯೊಳ್ (ಧರ್ಮಾಮೃ. ೩-೨೪). ೨. ಸೋಲಿಸು ; ನಾಶಮಾಡು : ಮದ್ವಿರೋಧಿಯಂ ಭೇದಿಸಲಾನೆ ಸಾಲ್ವೆಂ (ಪಂಪಭಾ. ೦೩-೪೩) ; ಕಕ್ಕಸ ನಿನಗಿದು ಹವಣಲ್ಲ ಭೇದಿಸೆ ಪೆಕ್ಕಸ ವಹುದು (ಮೋಹತ. ೩೩-೨೦). [ ಭೇದನ + – ಇಸು₁ ]

**ಭೇದೋಪಸ್ಥಾಪನ** (ನಾ). [ಜೈನ] ಏಳು ಬಗೆಯ ಸಂಯಮಗಳಲ್ಲಿ ಒಂದು ; P ಪ್ರಮಾದದಿಂದ ದೋಷವುಂಟಾದರೂ ಅದನ್ನು ದೂರೀಕರಿಸಿ ಶ್ರೇಷ್ಠವಾದ ವಿಕಲ್ಪರಹಿತವಾದ ಸಾಮಯಿಕದಲ್ಲಿರುವುದು : ಸಾಮಾಯಿಕಚ್ಛೇದೋಪಸ್ಥಾಪನಾ ಪರಿಹಾರವಿಶುದ್ಧಿ . . . ಸಂಯಮಂ ಸಪ್ತವಿಧಂ (ತತ್ತ್ವಸೂ. ೦೭).

[ ಭೇದ+ಉಪಸ್ಥಾಪನ ]

**ಭೇದ್ಯ**(ಗು).೧.ಕತ್ತರಿಸಲ್ಪಡುವ;ತುಂಡುಮಾಡಲ್ಪಡುವ. ೨.ಕತ್ತರಿಸಲು ಯೋಗ್ಯವಾದ ; ತುಂಡುಮಾಡಲು ಸಾಧ್ಯವಾದ. [ ಸಂ. ]

**ಭೊಳ್ಳೆ** (ನಾ). ಒಂದು ಪ್ರದೇಶದ ಹೆಸರು (?): ನೀರ್ಗುಂಧ ಭೊಳ್ಳೆಯ ಪೊಳ್ಗೊಳದ ಸೇಂದ್ರಕ ಯೋಧ ಮಹಾಮಾತ್ರ (ಮೈಎಂ. ೧೯೨೪, ೭೪-೨೭ ; ?). [ ? ]

**ಭೋಕರ** (ನಾ). ಹುಡುಗ ; ಬಾಲಕ ; ಪೋರ; ಆ ಭೋಕರಾನ ಮಾರಿ ಚಪಾತಿ ಹಾಂಗ ಆಗಿತ್ತಂತ (ಶರಿಲ. ೧೩).

[ ←ಹಿಂ. ಭೋಕರಾ, ಭೋಕಡಾ ]

**ಭೋಟೀನಿಗೂಹನ** (ನಾ). [ಕಾಮಶಾ] ರತಿಕ್ರೀಡೆಗಳಲ್ಲಿ ಒಂದು : ಬಳಿಕ ಸಂಯುತೋರುಕರಣ . . . ಭೋಟೀನಿಗೂಹನ . . . ಮಣಿತೋನ್ಮುಖರವೆಂಬ ಕ್ರಿಯಾವಿಶೇಷಗಳಿಂದಾದಿಮಧ್ಯಾಂತರತಿತಂತ್ರ ಚತುರರಿಂ (ವಿವೇಕ. ೨೩೦). [ ? ]

❋

# ಜ

**ಜ** (ನಾ). ೧. ಕನ್ನಡ ವರ್ಣಮಾಲೆಯ ಇಪ್ಪತ್ತೆಂಟನೆಯ ಅಕ್ಷರ; ಜಕಾರ. ೨. [ಗಣಿತ] ಎಂಟು ಎಂಬ ಸಂಖ್ಯೆಯ ಸಂಕೇತ : "ಜದಹ ಮೆಂಟು" (ಮುಂಗರಾ. ೦೦೪-೦೦). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ನಡುವೆ ಗುರುವಿರುವ ಗಣ ; ಜಗಣ (ᴗ–ᴗ).

**ಜಂಕಣೆ, ಝುಂಕಣೆ, ಝುಂಕಣೆ** (ನಾ). ೧. ಗದರಿಕೆ ; ಬೆದರಿಸುವಿಕೆ ; ಜಬರ್ : "ಜರ್ವೆಂದು ಜಂ [ಪಾಠಾಂ. ಝುಂ]ಕಣೆಯು "(ಶಬ್ದಮಂ. ೪೦) ; ವೈಶ್ವಾನರಂ ಈ ಪುರ್ಬಿನೊಂದು ಜಂಕಣೆಗೆ ಬೆದಱಿ ನಡುಗಿ (ರಾಮಾಶ್ವ. ೩೪-೨೪): ತಾಯ ಲಲ್ಲೆಯೊ ತಂದೆಯಕ್ಕರೆಯ ಝಂಕಣೆಯೊ (ಗೊಲ್ಲಥಾ. ೩-೭೬). ೨. (ಪಕ್ಷಿಗಳ) ಕೂಗು ; ಕಾಕಲು ; ಚಪ್ಪರಣೆ : "ಬಗ್ಗೆನಲ್ಝಂ [ಪಾಠಾಂ. ಲ್ಝುಂ]ಕಣೆ " (ಚತುನಿ. ೨೨). ೩. ಹೀಯಾಳಿಸುವಿಕೆ. 'ಜಂಕಿಸು' ಪರಾ..ಝುಂಕಣೆ: ೩. "ಝುಂಕಣೆಯು ಹೀಯಾಳಿಪುದು " (ಕಶರ. ೪೦). ಝುಂಕಣೆ: ೧. ಗುಣಕೆಱಗುವನಹುದಣ್ಣನೆಂದೂಮ್ಮೆ ಝುಂಕಣೆಗೆಱಗುವನೆ ತಾನೀಗ (ಭರತ. ೪೮-೪೦). ೨. "ಚಪ್ಪರಣೆಯುಂಮೆನ್ನೆ ಝುಂಕಣೆಯು ತಾನಕ್ಕುಂ" (ಕವಿಕಂ. ೦೨೩) : ಉಲಿವ ಕೋಗಿಲೆಯ ಝುಂಕಣೆಗೆ ನಿಲಲಾಱದಳವಳಿದದಂ ಸಖಿಯರಿಂ ತೆವರಿಸುತ (ಸೌಂದಪು. ೧೪-೯). ೪. ಗದಾಯುದ್ಧದಲ್ಲಿ ಒಂದು ವರಸೆ: ಝಾಡಿ ಝುಂಕಣೆ ಝುಡವು ಖಾಡಾಖಾಡಿ ದೃಢಗತಿ ದೃಷ್ಟಿಪಾತಾಲೀಢ ಗೋಮೂತ್ರಿಕ ಪರಿಭ್ರಮಣ . . . ಘಲ್ಲಣೆಗಳಲಿ ಗದೆ ಕುಣಿದಾಡಿದವು (ಕೂರರಾ. ೭-೦೪-೦೬).

[ ಜಂಕಿಸು + – ಅಣೆ₄ ]

**ಜಂಕಿಸು, ಝುಂಕಿಸು** (ಕ್ರಿ). ೧. ಗದರಿಸು ; ಬೆದರಿಸು : ಬಿಸುಗದಿರಿನ ಕಡುಗಾಯ್ಪಂ ಮಸುಳಿಸಿದುವು . . . ಮುಳಿದರಂ ಜಂಕಿಸಿದುವು ಬಿಡದಾರ್ದು ಕಾವನೆಚ್ಚಲರ್ಗಣೆಗಳ್ (ಕಬ್ಬಿಕಾ. ೩೦೧) ; ಸೀರೆಗಳ ಮೊಟ್ಟೆಯನು ಸೋಂಕಿದವದಿರನಿಱುವೆನೆನುತಂ ಜಂ[ಪಾಠಾಂ. ಝುಂ]ಕಿಸುತ (ಬಸವು. ೨೧-೧೩) ; ಅಂತು ಕಾಯಿಖ್ದಾಕ್ಷಿಸಿ ಸಪ್ತಶತಸಂಖ್ಯಾಕರಂ ಜಡಿದು ಜಂ[ಪಾಠಾಂ. ಝುಂ]ಕಿಸಿ ನುಡಿದು (ವೃಷವಿ. ೩೯-೪೩ ವ) ; ಪರರ ಬೆಳಕ ನಳುಪುವಿರೇಂ ? ಸುಡದೆ ನಿಮ್ಮ ಗರಿಯೆ ? ಜಂಕಿಸಿತಿಂತುಡುಸಂಕುಳ ಹೊಂಚುವ ಮಿಂಚುಹುಳಂಗಳ ಬೇಸಗೆ ಕೊನೆವರಿಯೆ (ಗೀವಿಂ. ೯೩-೩). ೨. ಹೀಯಾಳಿಸು ; ತಿರಸ್ಕರಿಸು : ಕೊಂಕಿದ ಪುರ್ಬು ನೀಳ್ದ ನಗೆಗಣ್ಮಳೆವೆತ್ತ ಮುಖೇಂದು ಶಂಖಮಂ ಜಂ[ಪಾಠಾಂ. ಝುಂ]ಕಿಪ ನುಣ್ಗೊರಲ್ತೊಳ ಪುರಸ್ಥಳ. . . . ರಂಜಿಕುಮಾ ಕುಮಾರನಾ(ರಾಜಶೇ. ೮-೪೭). ೩. ಕಿರಿಚು; ಕಿರಲು ; ಚೀರು : ದಾಂಟಲನುಗೆಯ್ಯುತೆ ತೂಗುತೆ ಜಂ[ಪಾಠಾಂ. ಝುಂ]ಕಿಸುತ್ತೆ . . . ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ (ಗಿರಿಕ. ೩-೨೦). **ಝುಂಕಿಸು** : ೧. ಬಿಜ್ಜಳಭೂಪಂ ಮೆಲ್ಲಮೆಲ್ಲನೆ ಮಾತುಮಾತಿಂ ಲೆಕ್ಕದ ಮಾತಂ ತೆಗೆದು ಕರಣಿಕರ ಝುಂಕಿಸಿ ಭಂಡಾರದ ಆದಾಯ ಬೀಯಮಂ ನೋಡೆ(ಬಸರ. ೮-೦೧೨); ಘುಡುಘುಡಿಸಿ ಕೋಪಾಟೋಪದಿಂ ಜಱಿದು ಝುಂಕಿಸಿದನವನಿಪನನಾವಿಕನನು (ಹಠಕಾ. ೦೧-೦೯) ; ಬಡಿವನಲ್ಲಿಯ ಮಕ್ಕಳನು ತಲೆಯೊಡೆವನರೆಬರನವರ ತಾಯ್ವಿರು ಜಡಿದು ಝುಂಕಿಸಿ ಪೊಡೆಯ ಬಂದಡೆ ಕಾಲುವಿಡಿವಂತೆ ಅಡಿವಿಡಿದು ಪೊಡವಿಗೆ ಕೆಡಹಿತಾ ಹಿಡಿದೆಳೆವನು (ಸಾಳ್ವಭಾ. ೨೧-೩೪) ; ಸತ್ಪ್ರಣವಭರಿತ ಚಮ್ಮಟಿಗೆಯಿಂ ವೇದಮಯ ವಾಜಿಗಳನಿರದೆ ಝುಂಕಿಸಲೊಡಂ ರಥಸಹಂ ಹಯಮಭ್ರಮಂಡಲವನಂಡಲೆದುವು (ಜೈಬಪು. ೪೧-೪೩). ೨. ಸಲೆ ಕೊರಲ್ ಜಡಜಾತ ಶಂಖಮುಂ ಝುಂಕಿಸೆ (ಪದ್ಮರಾ. ೩-೨೯). [ ಜಂಕು + – ಇಸು₁ ]

**ಜಂಕು** (ಕ್ರಿ). ಬೆದರು ; ಹಿಂಜರಿ ; ಹೆದರು : ಇದಕ್ಕೆಲ್ಲ ಜಂಕುವನೇ (ಕಾಬಝೂ. ೦೪).

[ ದೇ.೩ ತಮಿ. ಚಙ್ಕು ; ತೆಲು. ಜಂಕು. ; ಕುವಿ. ದಂಗ್ ; ಕುರುಖ್. ಜಂಕ ; ಮಾಲ್ತೊ. ಜಂಖ್ ]

**ಜಂಕೆ, ಝಂಕೆ$_1$** (ನಾ). ೧. ಗರ್ಜನೆ; ಅಬ್ಬರ; ಆರ್ಭಟ : ಪೊಡೆವ ಬೀರರ ಜಂಕೆಗೆ ಗೊಂಟನಾನೆಗಳ್ ಕೋಡುವಿನಂ (ಕಬ್ಬಿಗ. ೨೦೫) ; ಝಕಾರಕ್ಕೆ ಜಕಾರಂ . . . ಝಂಕಾ – ಜಂಕೆ ; ಝಂಝಾ – ಜಂಜು (ಶಮದ. ೨೫೫ ವೃತ್ತಿ) ; ಮದವೇದಂಡಂ ಡೆಂಡಣಿಸಿ ಚಂಡನಂಕೆಗೆ ಜಂಕೆಗನುವಾಗ ದಿರುತ್ತಿರೆ (ಹಮ್ಮೀರ. ೯-೫೦ ವ). ೨. ಕೂಗು ; ಧ್ವನಿ : ಪಕ್ಕಿ ಸೋವ ಪಾಮರಿಯರ ಜಂ[ಪಾಠಾಂ. ಝಂ]ಕೆಗಲ್ಲಿ ಗಿಳಿಯಂಜದೆ ಬೆರ್ಚದೆ ನಿಲ್ಕು ಮಾವಗಂ(ಗಿರಿಜಾ. ೨-೧೫). **ಝಂಕೆ$_1$** : ೧. ನಿಮ್ಮ ಅಂಕೆಗೆ ಝಂಕೆಗೆ ಶಂಕಿಸಿದೆ ನಾದರೆ ಎನ್ನ ಲೆಂಕತನಕ್ಕೆ ಹಾನಿ (ಬಸವ. ೬೨೮) ; ರೋಷಭಯಂಕರಾನನ ನೆದ್ದ . . . ಝಂಕೆ ವಿಗಲೇಱಿದನು ಮದನಿಶ್ಶಂಕ ಗಜವನು (ನಿಭಾಗ. ೧೧-೬೯-೨೨). ೨. ಉಲಿವ ತೇಜಿಯ ಝಂಕೆಗಳ ಗೊಂದಳದ ಕರಿಘಟೆ ಗಜಜುಗಳ . . . ಕೌರವಸೈನ್ಯಶರಧಿಯಲಿ(ಕುಮಾವ್ಯಾ. ಓಡಿಪ. ಪರಿ. ೨೬೬); ಮೂದಲೆವಾತುಗಳ್ ಗಡ ಮಹಾನಿಗವೋಕ್ತಿಗತೀತನೊಳ್ ಜಯಾಹ್ಲಾದದ ಝಂಕೆಗಳ್ ಗಡ (ಕಲಶಂ. ೪-೧೩೧). [ < ಜಂಕು ]

**ಜಂಖಾನ** 'ಜಂಬುಖಾನ' ನೋ.

**ಜಂಗಟ** (ನಾ). (?) : ಘಟ ಕುಂಭದಲ್ಲಿ ಜೀವನೆಂಬ ಜಂಗಟ ಬಂದಿತ್ತು ದೃಷ್ಟವ ಇಪ್ಪದಲ್ಲಿ ಕಟ್ಟಲಾಗಿ ವೊಳೆ ಮುಱಿದು ಒಡಲಾಯಿತ್ತು (ಸರ್ವವ. ೦೪೧-೬೯೫). [ ? ]

**ಜಂಗಡೆ** (ನಾ). ಮಾಂಸ ; ಖಂಡ : ಬಸೆ ನೆಣನ ಸುಂಟಿಗೆಯು ಹರಹಿದ ಹಸಿಯ ತೊಗಲಿನ ತಳಿತ ಖಂಡದ ಹಸರದುಱುಗಲ ಕಾಳಿಜದ ಜಂಗಡೆಯ ಗಳಗೆಗಳ . . . ಕುಸುರಿದೆಲುವಿನ ಕೋದ ಮಿನಂಗಡಿಯಲ್ಲೈತಂದ (ಕುವ್ಯಾ.ಅ. ೧೫-೮). [ < ಸಂ. ಜಂಗಲ ]

**ಜಂಗಮ$_1$** (ಗು). ೧. ಚಲಿಸುವ ; ಸಂಚರಿಸುವ ; ಚೈತನ್ಯವುಳ್ಳ ; ಜೀವಿಸಿರುವ : ಲತೆಗಳ್ ಜಂಗಮರೂಪದಿಂ ನೆರೆದುವೋ(ಶಂಪಭಾ. ೪-೬೯); ಮುನಿಯೋ ಜಂಗಮ ಜೈನಬಿಂಬನನವದ್ಯಾಚಾರನೇ (ಶಿಲಾಶಾ. ೦೯೪೪, ಬಂಕಾಪುರ. ೦-೨೫ ; 1046). (ನಾ). ೨. ಜೀವವುಳ್ಳುದು ; ಚಲನೆ ಯುಳ್ಳದಂ ; ಸಂಚಾರವುಳ್ಳುದು : ಸ್ಥಾವರಕ್ಕಳಿವುಂಟು ಜಂಗಮಕ್ಕಳಿ ವಿಲ್ಲ (ಬಸವ. ೮೨೦) ; ಸ್ಥಾವರಕೆ ಜಂಗಮಕೆ ನೀನೇ ಜೀವಚೇಷ್ಟಕನು (ಕುವ್ಯಾ.ಆ. ೭-೦೦). ೩. [ವೀಶೈ] ಮಠಮಾನ್ಯಗಳಿಲ್ಲದ ಲೋಕಸಂಚಾರಿ ಯಾದ ವಿರಕ್ತ ; ಅಯ್ಯ : ಜಂಗಮವ ಕೂಡಿಕೊಂಡು ಲಿಂಗಾರ್ಚ ನೆಯ ಮಾಡುವುದು ಲೇಸಯ್ಯಾ ಭಕ್ತಂಗೆ (ಬಸವ. ೫೨೪) ; ನಿಚ್ಚ ಸಾವಿರ ಜಂಗಮಂಗಳಿಗೆ ಪಂಚ ವಿಧ ಪಕ್ವಾನ್ನಪಾನಾದ್ಯಂಚಿತಿಪ್ಪಾರ್ಥಂಗಳಂ . . . ನೀಡುತ (ಬಸಪು. ೨೪-೩) ; ಜೋಗಿ ಜಂಗಮ ದರವೇಸಿಗಳಿಗೆ ನೆಱೆ ಮೂಗ ಬಧಿರರಂಧಕರಿಗೆ ಬೇಗದೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂನವಿ.೨೦-೪೬). ೪. ಹಾವು ಮೊದಲಾದ ಪ್ರಾಣಿಗಳಿಂದ ಉಂಟಾಗುವ ವಿಷ : ಸರ್ಪ, ಚೇಳು ಮೊದಲಾದ ಪ್ರಾಣಿಗಳಿಂದ ಉಂಟಾದ ವಿಷ ಜಂಗಮವೆನಿಸಿಕೊಂಬುದು (ವೈದ್ಯಸಾ. II, ೦೬೫).

ಜಂಗಮವಾಗು = ಜೀವ ತಾಳು ; ಚೈತನ್ಯವನ್ನು ಪಡೆ : ಸಿಡಿಲು ಜಂಗಮವಾಯ್ತೊ ಪ್ರಳಯದ ಮೃಡನು ಬಾಲಕನಾದನೋ ಕೊಲೆಗಡಿ ಕನಹುದೋ ಕಂದ (ಕುವ್ಯಾದ್ರೋ. ೬. ೪೮). [ ಸಂ. ]

**ಜಂಗಮ$_2$** (ನಾ). ಒಂದು ಬಗೆಯ ಔಷಧಿ ಸಸ್ಯ : ಗುರುವಾಡೆ, ಜಂಗಮ, ವಾಡೆಮಡಿಗೆ (ಮ್ಯಾಕಿಗ. ೩೯-೬೮೦). [ ?. / ತುಳು. ಜಂಗಮೆಮರ ]

**ಜಂಗಮಗಿತ್ತಿ** (ನಾ). ಜಂಗಮನ ಹೆಂಡತಿ : (೬). [ಜಂಗಮ$_1$+ – ಗಿತ್ತಿ]

**ಜಂಗಮತಿ** (ನಾ).=ಜಂಗಮಗಿತ್ತಿ : (೬). [ಜಂಗಮ$_1$+ –ತಿ$_1$ (<–ಇತ್ತಿ)]

**ಜಂಗಮತೆ** (ನಾ). ಚಲಿಸುವಿಕೆ ; ಚಲನೆ : ಜಗದೀ ದೈನಂದಿನ ಜಂಗಮತೆ ನನ್ನೊಳು ಜನಿಯಿಸಿತೇತಕೆ ಮಮತೆ ? (ಸೌಂದಸ. ೦೦).
[ ಸಂ. ಜಂಗಮತಾ ]

**ಜಂಗಮಪ್ರಾಣ** (ನಾ). [ವೀಶೈ] ಜಂಗಮರನ್ನೇ ಜೀವವನ್ನಾಗಿ ಭಾವಿಸುವ ಸ್ವಭಾವ : ತ್ರಿವಿಧಭಕ್ತಿನಿಯುಕ್ತ ರಾಜ್ಯೋತ್ಸವದೊಳಾ ಬಸವಣ್ಣನಿರಲೊಂದೆವಸವಾತನ ಜಂಗಮಪ್ರಾಣವನಱಿಯಲೆಂದು ಶಿವನು . . . ಎಯಿತಂದು (ಬಸಪು. ೩೭-೧). [ ಜಂಗಮ$_1$ + ಪ್ರಾಣ ]

**ಜಂಗಮಪ್ರಾಣಿ** (ನಾ). [ವೀಶೈ] ಜಂಗಮರೇ ಪ್ರಾಣವಾದವನು : ಗುರುಲಿಂಗಜಂಗಮಪ್ರಸಾದಪಾದೋದಕಸ್ವರೂಪ ನೀನೆಯಾದ ಕಾರಣ ಜಂಗಮಪ್ರಾಣಿಯಾಗಿ ಸದಾಚಾರಿಯಾದೆ (ಅವಶಂ. ೨೪೧-೧೦೯೫). ಶರಣರಂ ಸಂಗನೆಂದಲ್ಲದೆ ಕಾಣೆ . . . ಜಂಗಮಪ್ರಾಣಿಯಾಗಿಪ್ಪೆ (ಬಸರ; ೮-೪೩). [ ಜಂಗಮ$_1$ + ಪ್ರಾಣಿ ]

**ಜಂಗಮಪ್ರೇಮಿ** (ನಾ). ಜಂಗಮರನ್ನು ಪ್ರೀತಿಸುವವನು : ದುರ್ವ್ಯಸನಿ ದುರಾಚಾರಿಯೆಂದೆನಿಸದಿರಯ್ಯಾ ಎನ್ನ ಲಿಂಗವ್ಯಸನಿ ಜಂಗಮಪ್ರೇಮಿ ಯೆಂದೆನಿಸಯ್ಯಾ (ಬಸವ. ೨೬೦). [ ಸಂ. ಜಂಗಮಪ್ರೇಮಿನ್ ]

**ಜಂಗಮಲಾಂಛನ** (ನಾ). ೧. [ವೀಶೈ] ಜಂಗಮರ ಗುರುತು,–ಲಕ್ಷಣ. ೨. ಜಂಗಮವೇಷವನ್ನು ತೊಟ್ಟವನು : ಅಯ್ಯಾ ನೀನೆನ್ನ ಭವವ ಕೊಂದಹೆನೆಂದು ಜಂಗಮಲಾಂಛನನಾಗಿ ಬಂದೊಡೆ ನಾನು ಭಕ್ತನೆಂಬ ವಾಹನವಾಗಿರ್ದೆ (ಬಸವ. ೩). [ ಜಂಗಮ$_1$ + ಲಾಂಛನ ]

**ಜಂಗಮಲಿಂಗ** (ನಾ). ೧. [ವೀಶೈ] ಜಂಗಮನ ರೂಪದಲ್ಲಿರುವ ಲಿಂಗ,– ಶಿವ : ನಾನೊಬ್ಬನೆ ಭಕ್ತನು ಮರ್ತ್ಯಲೋಕದೊಳಗಣ ಭಕ್ತರೆಲ್ಲರೂ ಜಂಗಮಲಿಂಗ ನೀನೆ ಅಯ್ಯಾ (ಬಸವ. ೮೯೩) ; ಒಲಿದ ವೃಷಭಾಧಿಪತಿ ದರುಶನದೊಳಗೆ ಜಂಗಮಲಿಂಗರೂಪಂದಳೆದು . . . ಬೆಸಸಿದನು (ಬಸಪು. ೩-೧೮). ೨. [ವೀಶೈ] ಆರು ಬಗೆಯ ಲಿಂಗಗಳಲ್ಲಿ ಒಂದು : ಆಚಾರ ಲಿಂಗವ ಅಂಗೈಯೊಳಳವಡಿಸಿ . . . ಆ ಕರದಲ್ಲಿ ಜಂಗಮಲಿಂಗ ನೆಲೆ ಗೊಂಡಿತ್ತು (ಘನವ. ೩೪) : ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ (ಇವು ಆರು, ಷಟ್‌ಸ್ಥಲದ ಷಡ್ಲಿಂಗಗಳು) (ಶಿವಾಸೂ. ೧-೪ ಅಡಿಟಿ). [ ಜಂಗಮ$_1$ + ಲಿಂಗ ]

**ಜಂಗಮವಾಡಿ** (ನಾ).ಜಂಗಮರ ಮಠ : ಜಂಗಮವಾಡಿ-ಕಾಶಿ, ಪ್ರಯಾಗ, ರಾಮೇಶ್ವರಗಳಲ್ಲಿರುವ ಜಂಗಮರ ಮಠಗಳ ಹೆಸರು (ಶರಸಾ. ೨೪-೮).
[ ಜಂಗಮ$_1$ + ವಾಡಿ$_1$ ]

**ಜಂಗಮವಿಕಾರಿ** (ನಾ). = ಜಂಗಮಪ್ರಾಣಿ : ಲಿಂಗವಿಕಾರಿಗೆ ಅಂಗವಿಕಾರ ವೆಂಬುದಿಲ್ಲ ಜಂಗಮವಿಕಾರಿಗೆ ಧನವಿಕಾರವೆಂಬುದಿಲ್ಲ ಪ್ರಸಾದವಿಕಾರಿಗೆ ಮನವಿಕಾರವೆಂಬುದಿಲ್ಲ (ಬಸವ. ೬೯೫). [ ಸಂ. ಜಂಗಮವಿಕಾರಿನ್ ]

**ಜಂಗಮವಿಷ** (ನಾ). ೧. ಹಾವು ಮೊದಲಾದ ಪ್ರಾಣಿಗಳಿಂದಾಗುವ ವಿಷಬಾಧೆ : ಸ್ಥಾವರವಿಷ, ಜಂಗಮವಿಷ, ಕುಷ್ಠ . . . ಮುಂತಾದ ರೋಗಗಳು ಕಾಣಿಸಿದಲ್ಲಿಯೇ ಪ್ರತೀಕಾರವಂ ಮಾಡಬೇಕು (ಸೌವೈ. ೨೨). ೨. ನಡೆದಾಡುವ ವಿಷ ; ಕೇಡುಕ : ನಿನ್ನಂ ಜಂಗಮವಿಷಮಂ ಪಿಡಿದಾವಂ ಗಡ ಪಿತೃವನಕೆ ತಂದು ತುಡಿಸಿದ ಬಂಟಂ (ಅರ್ಧನೇ. ೫-೩೪).
[ ಜಂಗಮ$_1$ + ವಿಷ ]

**ಜಂಗಮಸ್ವಾಯತ** (ನಾ). [ವೀಶೈ] ಜಂಗಮ ಭಾವದ ಸಾಕ್ಷಾತ್ಕಾರ : ಬ್ರಹ್ಮರಂಧ್ರದಲ್ಲಿ ಲಿಂಗಸ್ವಾಯತ ಭ್ರೂಮಧ್ಯದಲ್ಲಿ ಜಂಗಮಸ್ವಾಯತ (ಅವಶಂ. ೪೭-೨೦೦). [ ಜಂಗಮ$_1$ + ಸ್ವಾಯತ ]

**ಜಂಗಮಿಸು** (ಕ್ರಿ). ನಡೆ ; ಹೋಗು : ಕಂಗಳು ಬಂಭ್ರಮಿಸಿ ಹಮ್ಮುಕ್ಕಿ ಜಂಗಮಿಸಿ ಎದೆ ಮೊಗ ಕೆಳಗಿಳಿಸಿ ನೋಡುತಿರೆ (ಸಕೀಗೀ. ೪೪-೯೦೪).
[ ಜಂಗಮ$_1$ + – ಇಸು$_3$ ]

**ಜಂಗಮೇತರ** (ನಾ). ಅಚಲವಾದುದು ; ಸ್ಥಾವರ.
[ ಜಂಗಮ$_1$ + ಇತರ ]

**ಜಂಗಲ್$_1$** 'ಜಂಗಾಲ್$_1$' ನೋ.

**ಜಂಗಲ್₂**, ಜಂಗಲು (ನಾ). ಅರಣ್ಯ ; ಕಾಡು. 'ಜಂಗಲ್‌ಬಾದಾಮಿ' ಪರಾ. **ಜಂಗಲು :** ಆ ಭೂಖಂಡಗಳಲ್ಲಿ ಜಂಗಲಿನ ಜಾನವಾರುಗಳು ಮೇಯುವುದನ್ನು ಸಹಿಸುವರೆ ಹೊರತು (ಜಗಸಂ. ೧೬).. [ ←ಫಾರ. ಹಿಂ. ಮರಾ. ಜಂಗಲ್./ಸಂ. ಜಂಗಲ ]

**ಜಂಗಲ್‌ಬಾದಾಮಿ** (ನಾ). ಔಷಧಕ್ಕೆ ಬಳಸುವ ಒಂದು ಬಗೆಯ ಗಂದಿಗೆ ಸಾಮಾನು: ಧೂಪ-ಮಹಿಷಾಕ್ಷಿ, ಗುಗ್ಗುಳು, ಗೋರೋಜನ, ಬಿಳಿಸಾಸುವೆ, ವಾಯುವಿಳಂಗ, ಜಂಗಲ್‌ಬಾದಾಮಿ . . . ಹೋಮ ಇವನ್ನೆಲ್ಲಾ ಚೂರ್ಣಮಾಡಿ ಹೊಗೆಹಾಕಲು ಬಿಕ್ಕಳಿಕೆ ನಿಲ್ಲುವುದು (ಸಕವೈ. ೪೪೯ ಪು.). [ ಜಂಗಲ್₂ + ಬಾದಾಮಿ ]

**ಜಂಗಲ** (ನಾ). ೧. ಕಾಡು ; ಅರಣ್ಯ. ೨. ಬಂಜರುಭೂಮಿ ; ಮರಳುಗಾಡು. [ ಸಂ. ]

**ಜಂಗಲಿ** (ಗು). ಅರಣ್ಯಕ್ಕೆ ಸಂಬಂಧಿಸಿದ ; ಕಾಡಿಗೆ ಸುಬಂಧಪಟ್ಟ. 'ಜಂಗಲಿಜ್ವರ' ಪರಾ. [ ←ಹಿಂ. ಮರಾ. ಜಂಗಲೀ ]

**ಜಂಗಲಿಜ್ವರ** (ನಾ). ಅರಣ್ಯದಲ್ಲಿ ವಿಷಗಾಳಿಯಿಂದುಂಟಾಗುವ ಜ್ವರ : "(ಕಾಡಿನಲ್ಲಿಯ ವಿಷಗಾಳಿಯಿಂದ ಬರುವ) ಜಂಗಲಿಜ್ವರ" (Jungle fever. ಇಂಕನಿ). [ ಜಂಗಲಿ + ಜ್ವರ ]

**ಜಂಗಲು** 'ಜಂಗಲ್₂' ನೋ.

**ಜಂಗಳ** (ನಾ). ೧. ಬಿಗಿಯಲ್ಲದುದು ; ಸಡಿಲವಾದಂದು : "ಜಂಗಳ ಬಟಲು ಸೋರ್ ಸಡಿಲ್ವುದಕ್ಕುಂ" (ಶಬ್ದಮಂ. ೩೦) ; "ಜಂಗಳವೆಂದು ಸಡಿಲ್ವುದೆ[ದೆ]" (ಕವಿಕಂ. ೨೨೪) : ಕಠಾರಿಯ ಕೋಲಿಂ ಮುಂದಣ ರತ್ನಸ್ತಂಭಮಂ ಕಿಱಿಹಿ ಸೋಂಕುತುಂ ಒಂದೆರಡು ಲಾಗಿಂ ಜಂಗಳಮಂ [ಪಾಠಾಂ. ಜಂಗಳಂ] ಸರಳಿಸುತುಂ (ನಂಬಿರ. ೪-೯೬). ೨. ಸುರಿಯುವಿಕೆ; ಹೊರಹೊಮ್ಮುವಿಕೆ : ಬಿಡುದಲೆಯ ಸಿಡಿಲಿಂಗಳದ ಜಂಗಳ[ಪಾಠಾಂ. ಣ] ದಕ್ಷಿಯುಗಳಗಳ . . . ವಿಲಯಭೈರವನಂತೆ ಮುಂದಕೆ ಸುಳಿಯಲಾಚರಿಸಿ ದಳು ಕಂಡು ಕುಮಾರಿ ಕುಂಭಿನಿಯ (ತೊರರಾ. ೩-೧-೯). ೩. ಕೃಶವಾಗುವಿಕೆ (?) : ಭಾರಿಯ ತೋಳು ಗುತ್ತಿನ ಜಯಲಕುಮಿ ಜಂಗಳವ ಜಾಱಿದಡೆ ಭಾಳಲಿಪಿಗಳ ಲೆಕ್ಕವನು ಪ್ರತಿಕೂಲವಿಧಿ ಪಲ್ಲಟಿಸಿ ಬರೆದಡೆ ಹೇಳಿ ಫಲವೇನು (ಕುವ್ಯಾಗ. ೩-೨೮) : ಅಳಲದಿರಿ ನೀವಿನ್ನು . . . ನಿಮ್ಮಡಿಯರ ಸನನು ತಿಂಗಳಿಗೆ ತಾರದಿರೆ ಬಳಿಕ ತಾ ಡಿಂಗರಿಗನೇ ಜಂಗಳದ ಜಾಡ್ಯವ ಹಾಱಬಿಡಿ (ತೊರರಾ. ೩-೩-೧೦೧). [ ? ]

**ಜಂಗಳಂಬರಿ** (ಕ್ರಿ). ತುಂಬಿ ಸೂಸಿ ಹರಿ ; ಪ್ರವಾಹವಾಗಿ ಹರಿ : ಹಿಂಗಿದಸುವಿನ ದುಂದುಭಿಯ ಮೈ ಜಂಗಳಂಬರಿ [ಪಾಠಾಂ. ಜಂಗಳವ ಬರಿ] ದರುಣಜಲ ಮುನಿಯಂಗಲತೆಯಲಿ ಸಿಡಿಯ ಕಿಡಿಕಿಡಿಯೋದನಾ ಮುನಿಪ (ತೊರರಾ. ೪-೨-೩೮). [ ಜಂಗಳ + ಪರಿ₁ ]

**ಜಂಗಳಿಸು** (ಕ್ರಿ). ಸಡಿಲಿಸು ; ಕಳಚು : "ಭೃಶತೇ-ಜಂಗಳಿಸಿದಪಂ" (ಕಾಕಕ್ಕ. ೧೩೨). [ ಜಂಗಳ + – ಇಸು₃ ]

**ಜಂಗಾಲ್₁**, ಜಂಗಲ್₁ (ನಾ). ಹಲಗೆಗಳನ್ನು ಜೋಡಿಸಿ ಕಟ್ಟಿದ ಜೋಡಿದೋಣಿ ; ಜೋಡುತೆಪ್ಪ : (+). **ಜಂಗಲ್₁ :** ಪುಣ್ಯಕ್ಕೆ ಒಂದು ಕಾರು ಹೊತ್ತುಕೊಂಡು ಆಚೀ ಕಡೆಯಿಂದ 'ಜಂಗಲ್' ಬರ್ತಿತ್ತು (ತಳರು. ೯೧). [ ←ಪೋರ್ಚ್. ಜಂಗಡ./ತುಳು. ಜಂಗಾಲ್, ಜಂಗಲ್, ಜಂಗಾರ್./ಮರಾ. ಸಾಂಗಡ ]

**ಜಂಗಾಲ್₂**, ಜಂಗಾಲ (ನಾ). ಒಂದು ಬಗೆಯ ಹಸಿರು ಬೆರೆತ ನೀಲಿ ಬಣ್ಣ: "ಪಾಲಾಶಃ-ಪಲಾಶಃ-ಹರಿತಃ-ಹರಿತ್ ಎಲೆಪಚ್ಚೆಬಣ್ಣದ ಹೆಸರುಗಳು, ಅಂದರ ಜಂಗಾಲ್" (ಸಿದ್ಧಾಂತಿ. ೪೩). **ಜಂಗಾಲ :** ಜಂಗಾಲಬಣ್ಣ (ಹಸರಬಣ್ಣ) . . . ಗುಲಾಬನೀರು ಮುಂತಾದವುಗಳು (ಮುಂಬಾಪ್ಯಾ. ೧೦೦). [ ←ಫಾರ. ಜಂಗಾರ್; ಹಿಂ. ಜಂಗಾಲ್, ಜಂಗಾರ್ ]

**ಜಂಗಾಲ** 'ಜಂಗಾಲ್₂' ನೋ.

**ಜಂಗಿ** (ಗು). ೧. ಯುದ್ಧಕ್ಕೆ ಸಂಬಂಧಿಸಿದ. 'ಜಂಗೀಸಾಮಾನು' ಪರಾ. ೨. ಹೇರಳವಾದ ; ಅತಿಶಯವಾದ ; ಹೆಚ್ಚಿನ ; ವಿಶೇಷವಾದ : ಅಂಗಳದ ಬೈಲ್ನಾಗ, ಜಂಗಿ ಚಂಡಿನ ಆಟದಂಗ . . . ರತ್ನಾಲಿ ಕಂಗೆಟ್ಟು ಸೋತು ನೋಡ್ಯಾಳ (ಜನಗೀ. ೬೮); ಇಷ್ಟೆಲ್ಲ ಘಟಾಟೋಪ ನಡೆದ ಮೇಲೆ ಪಾತರದವರ ನಾಚಿನ ವ್ಯವಸ್ಥೆಯಾದರೂ ಜಂಗೀ ಇರಬಹುದು (ದೇಯೂನಿ. ೧೩೩) ; ಆ ದಿವಸ ಒಂದು ಜಂಗೀ ಮಾರಾಮಾರಿ ಚಿತ್ರಪಟ ಬಂದಿತ್ತು (ಭೂಮಿಕಾ. ೩೭) ; ಹೊರಟಾವೆಲ್ಲೊ ಜಂಗಿ ಜಾತ್ರಿಗೇನೊ (ಹಾಡುಪಾ. ೨೨-೭). [ ←ಅರ. ಹಿಂ. ಮರಾ. ಜಂಗೀ ]

**ಜಂಗಿಡು** (ಕ್ರಿ). ೧. ಗೆಜ್ಜೆಸದ್ದಿನೊಡನೆ ಹೆಜ್ಜೆಯಿಡು,-ನಡೆ: ಕಂಗಳು ಮುನ್ನೂಱು ಘನಪಕ್ಷಿಯು ಜಂಗಿಟ್ಟು ನಡೆವ ಕಾಲುಗಳು ಹನ್ನೆರಡು (ಅಪಜಂ. ೩೦೨-೧೩೦೯); ಎಸಕದಿಂ ಜಂಗಿಡುತ ಬಂದರು ಶಬರನಾರಿಯರು (ಅನಂರಾ. ೩-೩-೪). [ ಜಂಗು₂ + ಇಡು₁ ]

**ಜಂಗಿಸರಂಜಾಮು** (ನಾ). ಯುದ್ಧದ ಸಲಕರಣೆ ; ಯುದ್ಧಸಾಮಗ್ರಿ: ಅಲ್ಲಿ ಜಂಗಿಸರಂಜಾಮು ಬಹಳವಾಗಿದೆ (ಚಿತ್ರಪಾ. ೭೭). [ ಜಂಗಿ + ಸರಂಜಾಮು ]

**ಜಂಗಿಸು** 'ಚೆಂಗಿಸು' ನೋ.

**ಜಂಗೀಕುಸ್ತಿ** (ನಾ). ಭಾರೀ ಕುಸ್ತಿ; ದೊಡ್ಡ ಮಲ್ಲಯುದ್ಧ: ಬೀದಿಯಲ್ಲಿ ಹುಡುಗರೆಲ್ಲ ಗುಂಪು ಕಟ್ಟಿಕೊಂಡು ನೋಡಿದ್ದೊಂದು ಜಂಗೀಕುಸ್ತಿ (ರಂಗವ. ೯) ; ಹಲ್ಲಿನ ಬುಡದಲ್ಲಿ ದೋಷವಿರಬಹುದು . . . ಎಂದು ನುಡಿಯುವಾಗಲೆ ಹಲ್ಲಿನೊಡನೆ ಜಂಗೀಕುಸ್ತಿ ಹಿಡಿದೇ ಬಿಟ್ಟರು (ಹುಚ್ಚುಹು. ೩೦). [ ಜಂಗಿ + ಕುಸ್ತಿ ]

**ಜಂಗೀಲಢಾಯಿ** (ನಾ). ದೊಡ್ಡ ಹೋರಾಟ ; ಭಾರೀ ಹೊಡೆದಾಟ: ಹತ್ತು ಹದಿನೈದು ನಿಮಿಷಗಳವರೆಗೆ ಜಂಗೀಲಢಾಯಿಯೇ ಆಯ್ತು ನೋಡಿರಿ (ಜರಕಾ. ೧೫೬). [ ಜಂಗಿ + ಲಢಾಯಿ (<ಲಡಾಯಿ) ]

**ಜಂಗೀಸಾಮಾನು** (ನಾ). ಯುದ್ಧದ ಸಾಮಗ್ರಿ : ಈ ಮೇರೆ, ಯಾರಡು ಜನಕ್ಕೂ ಜಂಗೀಸಾಮಾನು ಕೊಟ್ಟು ತಯಾರುಮಾಡಿ . . . ಕಳುಹಿದಲ್ಲಿ (ರಾಜೇಂದ್ರ. ೫೬); ನಿಂತ ಕಡೆಯಲ್ಲಿ ನಿಲ್ಲದೆ ಬೇಕಾದ ಜಂಗೀಸಾಮಾನುಗಳನ್ನು ಒದಗಿಸುತಾ ಸೇನೆಯವರಿಗೆ ಧೈರ್ಯವನ್ನು ಹೇಳುತಾ ಬಂದನು (ಮುಸುಗ. ೧೬). [ ಜಂಗಿ + ಸಾಮಾನು ]

**ಜಂಗೀಸಿಪಾಯಿ** (ನಾ). ಯುದ್ಧದ ಸಿಪಾಯಿ ; ಸೈನಿಕ : ಕೆಲವು ರಾಜಸ ಸ್ವಭಾವದ ಜನ ಮೆಚ್ಚುವುದು "ಜಂಗೀಸಿಪಾಯಿ" ಯನ್ನೇ (ಬಂಕಿಮು.೨೦೯). [ ಜಂಗಿ + ಸಿಪಾಯಿ ]

**ಜಂಗು₁** (ಕ್ರಿ). ತುಕ್ಕುಹಿಡಿ ; ಕಿಲುಬು : ನನ್ನ ತಂಬಿಗೆ ಎಲ್ಲಿ ಜಂಗುತ್ತದೆ (ಮುಂಬಯಿ. ೧-೨೫). [ ←ಮರಾ. ಜಂಗಣೇ ]

**ಜಂಗು₂**, ಜೆಂಗು (ನಾ). ೧. ತುಕ್ಕು ; ಕಿಲುಬು ; ಕಿಟ್ಟ : ಹವೆಯೊಳಗಿನ ಆಮ್ಲಜನ್ಯ ಕಬ್ಬಿಣಕ್ಕೆ ಕೂಡಿ ಜಂಗು ಹುಟ್ಟುತ್ತದೆ (ಮುಂಬಯಿ. ೬-೭) ; ನೇಗಿಲು ಮಾತ್ರ ಜಂಗು ಹತ್ತಿ ಬಲು ಕೆಟ್ಟಿರುವುದು (ಬೃಹ್ಮಜೀ. ೦೯೪). ೨. ಜಂಗಮರು ಕಣಕಾಲಲ್ಲಿ ಕಟ್ಟಿಕೊಳ್ಳುವ ಒಂದು ಬಗೆಯ ದಪ್ಪನಾದ ಹಿತ್ತಾಳೆಯ ಗೆಜ್ಜೆ : ಜಂಗಮದ ಸರ್ವಸಂಗವ ಮಾಡುವ ಜಂಗು ಜಂಘೆಯ ಮುಱಿದು (ದಾಸೋಸಂ. ೩೬) ; ಜಂಗಮ ಜಂಗುಕಟ್ಟಿ ಹಿಂಗದೆ ತಿರುಗಲು ಸಂಗನ ಶರಣರಿಗೇನು!ಫಲ (ಶರೀಫ.೭೦ ಕವಿಕಾವ್ಯ ಪರಿಚಯ); ಶಿವ ಕುಣಿದ ಹಂಬಲಿಸಿ ಜಂಗ ಕಟಿಗೊಂಡು(ಕನ್ನಪಾ. ೩೧೩).೩. ಎತ್ತು, ಕುದುರೆ ಮುಂತಾದುವುಗಳ ಕೊರಳಿಗೆ ಕಟ್ಟುವ ಗಂಟೆ,-ಗೆಜ್ಜೆ : ಕೋಡಣಸು ಮುಖರಂಭ ಜಂಗು ಘಂಟೆಯು . . . ಶೃಂಗರವ ಮಾಡಿ ನಿಂದಿರ್ದ (ನವಮೋ. ೨೧-೩೦); ಕತ್ತಿಗೆ ಹಾಕಿರುವ ಸಾಮಾನು . . . ೨೬

ಜಂಗು ೨೫ ದೊಡ್ಡದು ಜಂಗು ೧ ಸಹಾ ೨ಯಾ ಜಂಗಿನ ಹಗ್ಗದ ಪಟ್ಟಿ (ಎಕ್. XIV, ನಂಜನ. ೨೯೯-೧ನಯು ಕಲಂ; 1847): ಸಾವಿರೆತ್ತಿನ ಮುಂದೆ ಹೋಗೋದು ನಮ್ಮೆತ್ತು ಪಾದಕ್ಕೆ ಜಂಗು ಮೊಕರಂಬೆ (ಹಳ್ಳಿಯ. ೩೦). ೪. ಯುದ್ಧ; ಕಾಳೆಗ: (ಕ). ೫. ಸೈನ್ಯ; ಸೇನೆ: ಶ್ರೀಮತು ರಾಚಮಲ್ಲದೇವರ ಜಂಗಿನ ಸೇನಬೋವ ಸುಭಕರಯ್ಯ ಬನ್ದಿಸಿದ (ಎಕ್. II, ೧೩೪-೧ : 1000). ಜೆಂಗು: ೩. ಕರಿಯು ಸಾರಂಗ ಮೇಲ್ಕೆರವ ಹಲ್ಲಣ ಚೆಲ್ಲಿ ತರಗೋದ ಗೊಂಡೆ ಜೆಂಗು ಬಿರಿದೀನ ಕಾಲಪೆಂಡೆಯು ಬೆಳ್ಳಿ ಸರಪಣಿ ಕೊರಳ ಕಂದರದ ಮೇಲ್ಗಳಸಾ (ಸೌಂದಕಾ. ೩-೬೯). ೬. ಯಕ್ಷಗಾನ, ಬಯಲಾಟದ ಪಾತ್ರಗಳು ಕಣಕಾಲಿಗೆ ಕಟ್ಟುವ ಗೆಜ್ಜೆ : ಜೆಂಗು (ಚೆಂಗು) ಅಥವಾ ಜೆಂಗೆಜ್ಜೆ (ಚೆಂಗೆಜ್ಜೆ)-ರಾಜವೇಷ ರಾಕ್ಷಸವೇಷಾದಿಗಳಲ್ಲಿ ಮೊಣಕಾಲ ಮುಂಗಡೆಗೆ ಕಟ್ಟುವ ಒಂದು ಬಗೆಯ ಗೆಜ್ಜೆ (ಪಾರ್ತಿಸು. ೪೭).

ಜಂಗುತಿನ್ನು = ತುಕ್ಕುಹಿಡಿ: ಕಿಡಿಕಿಯ ಜಂಗು ತಿಂದ ಸರಳುಗಳ ಮೇಲೆ ಬೆರಳಾಡಿಸುತ್ತ ಬಾಯಲ್ಲಿ ತುಂಬಿಬಂದ ಕವಳದ ಎಂಜಲವನ್ನು . . . ಉಗುಳಿದ (ಮೂಕಜ್ಜಿ. ೧೩೭). ಜಂಗುಹಿಡಿ = ೧. ಜಂಗುತಿನ್ನು : ಜಂಗು ಹಿಡಿದ ತಗಡಿನ ಡಬ್ಬಿಗಳು (ಸ್ಮೃತಿಶೇ. ೩೧೯). ೨. (ಅಲಂ) ಜಡವಾಗು ; ನಿಷ್ಕ್ರಿಯವಾಗು: ಕಳೆದ ಆರುವರ್ಷದಿಂದ ರಾಷ್ಟ್ರೀಯಸಭೆಗೆ ಜಂಗು ಹಿಡಿದಿತ್ತು (ಕಾಂಗ್ರೆಸ. ೯). [ ←ಪಾರ. ಹಿಂ. ಮರಾ. ಜಂಗ್ ]

ಜಂಗು₃ 'ಚೆಂಗು₄' ನೋ.

ಜಂಗು₄ (ನಾ). ತೆಕ್ಕೆ ; ಹಿಡಿತ. 'ಜಂಗುಜರಿ' ಪರಾ. [ ? ]

ಜಂಗುಜರಿ (ಕ್ರಿ). ಹಿಡಿತ ತಪ್ಪು ; ತೆಕ್ಕೆ ಸಡಿಲು ; ಕುಸಿದು ಬೀಳು : ಜೈನರೆಲ್ಲ ಜಂಗುಜರಿದು ಋಷಿಗಳೆಲ್ಲ ಮಟ್ಟುವಾಗೆ (ಪ್ರಆರ. ಹ. ೨೬೯-೧೭); ಜಾರೆಯರು ನಲಿಯಲು . . . ಪೂರ್ಣವರ್ಣಿಕ್ಕಿಗಳ ಜಂಗು[ಪಾಠಾಂ. ಜಗ್ಗು] ಜರಿಯೆ . . . ತರಣಿ ಪಶ್ಚಿಮಪಯೋರಾಶಿಗೈತಂದನು (ಹರಿಕಾ. ೯-೩೭) ; ಜಂಗುಜರಿದವನಿಜೆಯನೆಡದ ಕರಂಗಳಲಿ ಬಿಡದವಚಿ ಖೇಚರರಂಗದಲಿ ನೆಲ ಕೀಳಿಯಲು (ತೊರರಾ. ೩-೧೦-೧೭). [ ಜಂಗು₄ + ಜರಿ₁ (<ಸರಿ₁) ]

ಜಂಗುಡಿ (ನಾ). ಹೆಗಲು ; ಭುಜಪ್ರದೇಶ: "ಜಂಗುಡಿಯೆನೆ ಭುಜದೇಶಂ" (ಭಾರನಿ. ೪೭). [ ? ]

ಜಂಗುಲಿ 'ಜಂಗುಳಿ' ನೋ.

ಜಂಗುಳಿ, ಜಂಗುಲಿ (ನಾ). ೧. ಸಮೂಹ ; ಮೊತ್ತ; ಗುಂಪು; ರಾಶಿ: "ಬಂಬಲ್, ತುಱುಗಲ್ . . . ಜಂಗುಳಿ, ದೊಂಮುಳಿ . . . ಗೊಂದಣಿ, (ಉಂದಲ್)—ಈ ೪೦ ಸಮೂಹಂ" (ಕಶಾ. ೧೧-೨೨೨) ; ಸಿಂಗದ ಜಂಗುಳಿ ಯಂತಿರಸುಂಗೊಳೆ ಪೊಱಮಟ್ಟು ಕಾದೆ ವರುಣಕುಮಾರರ್ (ಪಂರಾಮಾ. ೧೧-೨೦೭) ; ಸಿಂಗದ ಜಂಗುಳಿಯೊಳಾಂತ ಮಾತಂಗ ಸಂಘಾತದಂತೆಯುಂ (ಪಂಪಭಾ. ೧೧-೬೭ ವ) ; ಇತ್ತಲಿದು ಕಲ್ಪಾಂತರುದ್ರನ ಮೊತ್ತ ಕಾಳೋರಗನ ಜಂಗುಳಿ ಮೃತ್ಯುವಿನ ಮೋಹರ ಕೃತಾಂತನ ಥಟ್ಟು (ಕುಮಾವ್ಯಾ. ೨-೧೭); ಪೊಸಬಳ್ಳಿಯ ಜಂಗುಳಿ ಪೊಂಗಳಸದ ಸಂದಣಿಯಲರ್ದಂಬುಜದ ಕದಂಬಮೆ ನಡೆವಂತೆ (ಜಯುಕಾ. ೩-೪೧). ೨. ನಾಡಾಡಿಗಳ ಗುಂಪು; ಜನಸಾಮಾನ್ಯರ ಗುಂಪು. 'ಜಂಗುಳಿಜಸ', 'ಜನಜಂಗುಳಿ' ಪರಾ. ೩. ದನದ ಮಂದೆ,— ಹಿಂಡು: ಜಂಗುಳಿಯ ಕಾವ ಗೋವ ಹಲವು ಹಸುವ ನಿವಾಡಿ [ಪಾಠಾಂ. ೦]ಸುವಂತೆ ತನು ಭಕ್ತನಾಯಿತ್ತು (ಬಸವ. ೨೧೪) ; ಜವನ ಕೈಲಿ ಜಂಗುಳಿ ಕಾಯಿಸುವರು (ಪುರಂದ. ೧-೧೪೩-೦). ಜಂಗುಲಿ : ೧. ಮುರಿದುದು ತುಂಬುರಬಲ . . . ಪೆರ್ಬುಲಿಗಂಡು ಬೆದಱಿದ ಮಱಿವುಲ್ಲೆಗಳ ಜಂಗುಲಿಯಂತೆ (ತ್ರಿಭುತಿ. ೦೮-೩೧).

ಜಂಗುಳಿದೇವರು = ಹಿಂಡುದೇವತೆಗಳು ; ಅನೇಕ ದೇವತೆಗಳು : ಜಂಗುಳಿದೇವರನೊಂದಱಿದಿಂಗಳ್ ಕುಳ್ಳಿರ್ದು ಪೂಜಿಸುತ್ತಿರದೆ . . . ಜನನ ಪದಂಗಳನರ್ಚಿಪುದು (ಸಮಹ. ೧-೧೨೭). ಜಂಗುಳಿಮನ್ನೆಯ ಬೇಂಟೆಕಾಱ= ಒಂದು ಬಿರುದು : ಅಳಿಂ ಮುಂನಿಱಿವಂ ಶೌರ್ಯ್ಯಮುಂ ಮೆಱೆವಂ ಜಂಗುಳಿಮಂನೆಯ ಬೇಂಟೆಕಾಱಂ ಮಾರ್ತಣ್ಡದೇವನಂಕಕಾಱಂ (ಸೌಇಇ. XI-II, ೧೭೩-೧೧ ; 1113). [ ದೇ.೩ ತೆಲು. ಜಂಗಿಲಿ. / ಸಂ. ಸಂಕುಲ ]

ಜಂಗುಳಿಕ 'ಜಂಗುಳಿಗ' ನೋ.

ಜಂಗುಳಿಗ, ಜಂಗುಳಿಕ (ನಾ). ೧. ಹಾವಾಡಿಗ; ಗಾರುಡಿಗ; ವಿಷವೈದ್ಯ: ಜಂಗುಳಿಗಗೇರಿಗಳೊಳಗೆ ಠಳಾಡಿಸಿದನು ಶಿವಾಳಿಗಳ (ತೊರರಾ. ೩-೮-೩೩). ಜಂಗುಳಿಕ : ೨. ಐಂದ್ರಜಾಲಿಕ : "ಜಂಗುಳಿಕ–ಜಾಂಗುಲಿಕ = ಐಂದ್ರಜಾಲಿಕ, ಗಾರುಡಿಗ" (ತದ್ಭಕೋ. ೧೪). [ <ಸಂ. ಜಾಂಗುಲಿಕ ]

ಜಂಗುಳಿಗದಿರ್ (ನಾ). ಗುಂಪಾದ ಕಿರಣ : ಅಂಗುಲಿಯ ಮಾಣಿಕ್ಯದುಂಗುರಂಗಳೊಳೊಗೆದ ಜಂಗುಳಿಗದಿರ್ಪಡಿದ ಕೈದೀವಿಗೆಗಳ ಪೊಳಪಂ ಗೆಲಲು (ಸೌಂದಪು. ೮-೮೩). [ ಜಂಗುಳಿ + ಕದಿರ್₂ ]

ಜಂಗುಳಿಜಸ (ನಾ). ಜನಸಾಮಾನ್ಯರಿಂದ ಬಂದ ಯಶಸ್ಸು ; ಅಗ್ಗದ ಕೀರ್ತಿ : ಬಜ್ಜರಕ್ಕಿದ್ವಿಲಿನ ಸಾಣೆಯಿಂ ಒಡಿವ ಗಾಂಪಿಗೆ ಜಗುಳ್ದೊಂದು ಜಂಗುಳಿಜಸಕೆ ಬಾಯ್ಬಿಡುವ ನೀರಳ್ಕೆಯೆನ್ನೆದೆ ಸುಳಿಯದಿರ್ಕೆ (ಶ್ರೀರಾಮಾ. ೩೭೦-೪೯೨). [ ಜಂಗುಳಿ + ಜಸ₁ ]

ಜಂಗುಳಿಮೋಹಿ (ನಾ). ನಾಡಾಡಿಗಳನ್ನು ಮೋಹಿಸುವ ವ್ಯಕ್ತಿ : ತಳರಡಿಯ ತರಳೆ ಕಿಂಚಿತ್ಕಾಮಿ ಕೋಪಿ ಜಂಗುಳಿಮೋಹಿ ಶೀಘ್ರಗಾಮಿನಿ ರಕ್ತವಸನೆ ಬಾಗಿಲ ದಾಂಟಿ ನಿಂದಿರ್ಪಳಿವಳೆ ಶಂಖಿನಿಯೆಂದು ವಿಟನುಸಿರ್ದನ ವಳಿರವನು (ಚಪು. ೧೧-೨೪). [ ಜಂಗುಳಿ + ಮೋಹಿ ]

ಜಂಗುಳಿಸು (ಕ್ರಿ). ಗುಂಪಾಗಿ ನುಗ್ಗು : ಜಲಧಿಯಲಿ ಜಂಗುಳಿಸಿ ಕುಧರಕೆ ಕುಲಿಶಭೀತಿಯ ಬೀಱೆ ಕಣೆ ಬಳಿಸಲಿಸಿ ಹರಿದಾಡಿದವು ಸುಭಟರ ಗೋಣ ಗುಱಿಮಾಡಿ (ಕುಮಾವ್ಯಾ. ೯-೧೯). [ ಜಂಗುಳಿ + – ಇಸು₃ ]

ಜಂಗುಱ್ (ಕ್ರಿ). = ಜಂಗುಜರಿ : ಮದಸೇವೆಗೆಱಗುವ ಮಧುಕರ ಝಣಾತ್ಕಾರಮುಂ ಮಧುಸಖನ ಧನುಜ್ಯಾರುತಿಯೆಂದು ಜಂಗುಱ್ [ಪಾಠಾಂ. ೦]ಯುತುಂ (ಶಾಂತೀಶ್ವ. ೧೧-೬೩ ವ). [ ಜಂಗು₄ + ಉಱ್₁ ]

ಜಂಗೆ (ನಾ). ೧. = ಜಂಘೆ : ಜಾನು ಜಂಗೆ[ಪಾಠಾಂ. ಘೆ]ಯಲ್ಲಿ ಹುಟ್ಟಿ ಜಂಗಮವೆನಿಸಿಕೊಳಬಹುದೆ (ಅವಚ. ೧೧೪-೪೭೦). ೨. ದಾಪು ; ಹೆಜ್ಜೆ. 'ಕುಱುಜಂಗೆ' ಪರಾ. [ <ಸಂ. ಜಂಘಾ ]

ಜಂಘಚಾರಣ (ನಾ). [ಜೈನ] ಎಂಟು ಬಗೆಯ ಚಾರಣ ಶಕ್ತಿಯುಳ್ಳವರಲ್ಲಿ ಒಬ್ಬ ; ನೂರಾರು ಯೋಜನದವರೆಗೆ ನೆಲಕ್ಕೆ ಕಾಲೂರದೆ ನಡೆಯುವವನು ; P ಜಲ, ಜಂಘೆ, ಅಗ್ನಿ, ಧೂಮ, ಮೇಘ, ತಂತು, ವಾಣಿ ಮತ್ತು ಶ್ರೇಣಿ ಎಂಬುವು ಎಂಟು ಚಾರಣಗಳು. ಈ ವಿವರಗಳಲ್ಲಿ ಫಲ, ಪತ್ರ, ಪುಷ್ಪ ಮತ್ತು ಬೀಜವನ್ನು ಕೆಲವರು ಸೇರಿಸುತ್ತಾರೆ : ಆತನ ತಂದೆವಿರಪ್ಪ ಶತಬಾಹುಗಳೆಂಬ ಜಂಘಚಾರಣರ್ ಧರ್ಮವಾತ್ಸಲ್ಯದಿಂ ಬರ್ಪುದುಂ ದಶಮುಖನಿದಿರೆಟ್ಟು ಭಕ್ತಿಭರದಿಂ ವಂದಿಸಿ (ಪಂರಾಮಾ. ೧೧-೧೪೧ ವ). [ <ಸಂ. ಜಂಘಾಚಾರಣ ]

ಜಂಘಾಕರಿಕ (ನಾ). ೧. ಜೋರಾಗಿ ಓಡುವವನು ; ಚುರುಕು ಕಾಲಿನವನು. ೨. ಓಡುವ ಉದ್ಯೋಗದಿಂದ ಜೀವಿಸುವವನು ; ದೂತ ; ವಾರ್ತಾಹರ: "ಜಂಘಾಕರಿಕಃ, ಜಾಂಘಿಕಃ -೨- ದೂರವಾಗಿ ವೇಗದೊಡನೆ ಹೋಗಿ ಅಲ್ಲಿಯಣ ಸುದ್ದಿಯನ್ನೂ ವಾರ್ತೆಯನ್ನೂ ಬೇಗ ತಿಳಿದು ತಂದು ಹೇಳಿ ಅದರ ಮೆಹನತ್ತಿನಿಂದ ದ್ರವ್ಯವನ್ನು ಪಡೆದು ಜೀವನ ಮಾಡುವವನು" (ಸಿದ್ಧಾಂತಿ. ೨೨೧). [ ಸಂ. ]

ಜಂಘಾಬಲ (ನಾ). ಕಾಲುಗಳಲ್ಲಿಯ ಶಕ್ತಿ; ನಡೆಯುವ ಶಕ್ತಿ ; ಚಲನ ಶಕ್ತಿ : ಹೆಡ್‌ಮಾಸ್ಟರರಿಗೂ ಜಂಘಾಬಲವೇ ಉಡುಗಿಹೋಗಿತ್ತು (ನಟಶಾ. ೧೯೮) ; ಆ ಘರ್ಜನೆ ಕೇಳಿಯೇ ವೆಂಕಟರಮಣನ ಅರ್ಧ ಜಂಘಾಬಲ ಉಡುಗಿಹೋಯಿತು (ಮೂಕಜ್ಜಿ. ೧೭೭). [ ಸಂ. (ಜಂಘಾ + ಬಲ) ]

**ಜಂಘಾಲ, ಜಂಘಾಳ** (ಗು). ೧. ಓಡುವ ; ವೇಗವಾದ ; ಚುರುಕಾದ. (ನಾ). ೨. ವೇಗದಿಂದ ನಡೆಯಬಲ್ಲವನು; ಚೆನ್ನಾಗಿ ಓಡುವವನು: ಅತಿ ಜಂಘಾಲಂ ಭಯಕಂಪಿತತನು ನಿಜಪತಿಯನಿಂದ್ರನಂ ಕಂಡು ಪದಾನತನೆಂದಂ (ಪಂರಾಮಾ. ೧೦-೦೬೩) : ಕಡುವುನದ ಕರ್ಣಾದಿಗಳು ಕೈದುಡುಕಿದೊಡೆ ಕೈಗಾಯ್ದು ಧರ್ಮದ ತಡಿಗೆ ಜಾರಿ ಜಯಾಧ್ವದಲಿ ಜಂಘಾಲರಹಿರೆಂದ (ಕುವ್ಯಾ.ಅ. ೧೩-೨೯). **ಜಂಘಾಳ :** ೧. ಚಂಡಾಜಿ ವಿಕ್ರಾಂತ ಮರ್ತ್ಯನಿಳಾಕ್ರಾಂತಹಯೌಘಮೂರ್ಜಿತಜಯಪ್ರಖ್ಯಾತ ಜಂಘಾಳ ಪತ್ತಿನಿಕಾಯಂ (ಆದಿಪು. ೪-೯೦). ೨. ತಿವಳಿವಿಡಿದುಗ್ರೇಭಂ ಪೋದತ್ತು ಮಾಣದೆ ಪೋಗಿ . . . ವಾರ್ತೆಯನೊಂದೆರಡ್ದಿವಸದೊಳೆ ತನ್ನಿಂ ನೀಮೆಂದಟ್ಟಿದಂ ಸಮಕಟ್ಟಿ ಕಟ್ಟುವಧಿಗವನೀನಾಥಂ ಜಂಘಾಳಮಂ ಚರಜಾಳಮಂ (ಚಂದ್ರಪು. ೯-೦೦೨) : ಮನೋವೇಗವನ್ನೂ ಮೀರಿ ಮಿಂಚಿ ಸಂಚರಿಸಬಲ್ಲ ಪ್ರಯಾಣಸಾಮರ್ಥ್ಯದ ಕಟ್ಟುರದ ಜಂಘಾಳ–ಆತನಾಗಿರಲೇಬೇಕು (ಚಿಟ್ಕಅ. ೨೦೩-೨೩). [ಸಂ.]

**ಜಂಘಾಲಂಘಿತ** (ನಾ). [ನಾಟ್ಯ] ಕುಂಚಿತಪಾದವನ್ನು ಇನ್ನೊಂದು ಕಾಲಿನಿಂದ ದಾಟುವುದು : ದಂಡಪದಮಂಘ್ರಿತಾಡಿತಮಂಡಿತಮೆಂದೆನಿಸಿ ತೋರ್ಪ ಜಂಘಾಲಂಘಿತ ಮಂಡಲಿ ಪಲಾತಕಂಗಳ್ . . . ಕೇಳ ಜಂಘಾವರ್ತಂ (ಲಾಸ್ಯರಂ. ೬-೧೩). [ ಸಂ. (ಜಂಘಾ + ಲಂಘಿತ) ]

**ಜಂಘಾವರ್ತ** (ನಾ). [ನಾಟ್ಯ] ಅಂಗಾಲನ್ನು ಒಳಕ್ಕೆ ತಿರುಗಿಸಿ ಮತ್ತೊಂದು ಮೊಳಕಾಲಿನ ಹಿಂಭಾಗದಲ್ಲಿರಿಸಿ ಹೊರಪಾರ್ಶ್ವದಿಂದ ಮೊಳಕಾಲ ಪಕ್ಕಕ್ಕೆ ತರುವುದು : ದಂಡಪದಮಂಘ್ರಿತಾಡಿತಮಂಡಿತಮೆಂದೆನಿಸಿ ತೋರ್ಪ ಜಂಘಾಲಂಘಿತ ಮಂಡಲಿ ಪಲಾತಕಂಗಳ್ . . . ಕೇಳ ಜಂಘಾವರ್ತಂ (ಲಾಸ್ಯರಂ. ೬-೦೩). [ ಸಂ. (ಜಂಘಾ + ಆವರ್ತ) ]

**ಜಂಘಾಳ** 'ಜಂಘಾಲ' ನೋ.

**ಜಂಘಾಳತನ** (ನಾ). ಓಡಿಹೋಗುವಿಕೆ ; ಪಲಾಯನಪಟುತ್ವ : ಜಾಳಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱೆದು . . . ಚೂಣಿಯ ಚರರ ಚಪ್ಪರಿಸಿ ಆಳುತನದಲಿ ಬೆರೆವ ನಿನಗವ ಸೋಲಲಱಿಯನು (ಕುವ್ಯಾ.ಕ. ೦೬-೨೧). [ ಜಂಘಾಳ ( = ಜಂಘಾಲ) + – ತನ ]

**ಜಂಘಾಳಿ** (ನಾ). (?) : ಘೋಳಿಡುವ ಹಾಹಾರವದ ಜಂಘಾಳಿ ಮುಸುಗೆ ದಿಗಂತರವ (ಅನಂರಾ. ೪-೦-೬೩).

[ P ಇದು 'ಜಂಗುಳಿ' ಯ ಅಪಲಿಖಿತವಿರಬಹುದು ]

**ಜಂಘೆ** (ನಾ). ೧. ಕೆಳದೊಡೆ; ಕಿರುದೊಡೆ : "ಕಿಱುದೊಡೆ ಪ್ರಸೃತಮಾ ಜಂಘೆಯಕ್ಕು" (ಮಂಗರಾ. ೯೮-೦೮); ಪರಿವೃತ್ತ ಮನೋಹರ ಜಂಘೆ ಹಸ್ತಿಹಸ್ತವನಿಟಿಸುತ್ತವಿರ್ಪ ತೊಡೆಗಳ್ (ಲೋಕೋಪ. ೧೧-೩) ; ರುದ್ರ ಮುಖದಲ್ಲಿ ವಿಷ್ಣು ಭುಜದಲ್ಲಿ ಜಂಘೆಯಲ್ಲಿ ಅಜ ಜನನವು (ಬಸವ. ೩೩೪). ೨. ಮಿಣಿಕಂಡ; ಕಣಕಾಲು. [ ಸಂ. ಜಂಘಾ ]

**ಜಂಚಾಲು** 'ಜಂಜಾಲು' ನೋ.

**ಜಂಜಡ, ಜಂಜಾಟ, ಜಂಜಾಲ, ಜಂಜಾಳ, ಜೊಂಜಾಟ, ಝುಂಝಾಟ** (ನಾ). ೧. ತೊಂದರೆ ; ಕ್ಲೇಶ ; ಕಷ್ಟ : ಎನ್ನ ಜೀವದ ಜಂಜಡವ ಬಿಡಿಸಯ್ಯ (ಮುಹಾದೇ. ಬ. ೦೯-೨೯) ; ಹೋಮದ ಜಪದ ಜಂಜಡದೊಳಗೆ ಸಿಲುಕಿ ಜನಾರ್ದನನ ಮಱೆವ ಅಪಸದರು ನಾವ್ (ಕುವ್ಯಾ.ಅ. ೦೪-೧೩). ೨. ತೊಡಕು; ಸಿಕ್ಕು: ಪ್ರೀತಿವಿರಹಿತ ದುಃಖ ಸುಖದ ಜಂಜಡವಿಲ್ಲದಾ ತಪೋವನದೊಳಗೆ ಋಷಿವಧುಗಳೊಡನೆ ವೈದೇಹಿ ಮದುಳದೊಳಿರ್ದಳು (ಕೃಮಿಥಾ. ೦೯-೪೩). **ಜಂಜಾಟ:** ೧. ನೀನೊರ್ವನು ಹಲಬರ ಹೋರಾಟ ಜ್ಞಾನೋತ್ತರ ಮಾರ್ಗಕ್ಕೆ ಜಂಜಾಟ (ಅವಧೂ. ೦೦). ೨. ಕೊರಳಲ್ಲಿ ವಿಶೇಷಾಭರಣಗಳ ಜಂಜಾಟ ಕಟ್ಟಿಕೊಂಡಿರಲಿಲ್ಲ (ನೂರಜ. ೨೮). **ಜಂಜಾಲ :** ೧. ಈಗ ಈ ಒಣ ಜಂಜಾಲವಿಲ್ಲ (ಕುರಿಹಿಂ. ೧೧೩). **ಜಂಜಾಳ:** ೨. ದೇವಬಲಿ–ಯಜ್ಞಕರ್ಮ ಮುಂತಾದ ಧಾರ್ಮಿಕ ಜಂಜಾಳವು ಅಂದು ಅತ್ಯಂತ ಅವಶ್ಯವಿತ್ತು (ಮಾವಾದ. ೬೩). **ಜೊಂಜಾಟ:** ೧. ಈ ಜೊಂಜಾಟದಲ್ಲಿ ನಿಮ್ಮ ಅಭ್ಯಾಸಕ್ಕೆ ತೊಂದರೆಯಾಗಬಾರದು (ಮುಕ್ತ್ಯದ. ೬೧); ಅದೆಲ್ಲ ಜೊಂಜಾಟ ನಿನಗಿಲ್ಲ (ಪೋಡಶಿ. ೦೬). **ಝುಂಝಾಟ :** ೧. ಈ ಸಂಸಾರದ ಝುಂಝಾಟವೇ ನನಗೆ ಹಿಡಿಸುವುದಿಲ್ಲ ! (ಗಂಸಮ. ೨೧೦).

[ ←ಮರಾ. ಜಂಜಾಲ್ ; ಹಿಂ. ಝುಂಝುಟ್./ಸಂ. ಜಂಜ ]

**ಜಂಜಣ** (ನಾ). ಒಂದು ಅನುಕರಣ ಶಬ್ದ. 'ಜಂಜಣಿಸು' ಪರಾ.

**ಜಂಜಣಿಸು** (ಕ್ರಿ). ಜಂಜಣ ಎಂದು ಶಬ್ದ ಮಾಡು : (+).

[ ಜಂಜಣ + – ಇಸು$_3$ ]

**ಜಂಜರ$_1$, ಜಂಜರಿ, ಜಂಜುರಿ, ಜಿಂಜಿರಿ** (ನಾ). ೧. ಸಂಕೋಲೆ ; ಬೇಡಿ ; ಶೃಂಖಲೆ : ಆಶೆ ಪಾಶಗಳೆಂಬ ಹಲವು ಜಂಜರಗಳ ನಾನೊಲ್ಲೆ (ಕನಕ. ೨೧೦-೩). **ಜಂಜರಿ:** ೧. ಕೋಳ ಜಂಜರಿ[ಪಾಠಾಂ. ಜಿಂಜಿರಿ]ಸಂಕೋಲೆಯು ಸೆಱೆ ನಿಮ್ಮ ಆಳುವ ದೊರೆಗಳೆಂಬವರ ಕಾಲು ಕೈಯಿಗೆ ಹವಣಾಗಲಾಮೆವೆ (ಅಮುಸಾಂ. ೨-೪೮). **ಜಂಜುರಿ:** ೧. ಎನ್ನ ಧನ ಎಂಬವಂಗೆ ರುದ್ರನಿಕ್ಕಿದ ಆಸೆ ರೋಷ ಜಂಜುರಿ [ಪಾಠಾಂ. ಜಂಜರಿ, ಜಿಂಜಿಱ] ಹೊಡಿತ್ತು (ಹನ್ನವ. ಕ. ೨೪೩-೩೩೧). **ಜಿಂಜಿರಿ:** ೧. ಸೊಕ್ಕಾನೆಗೆ ಜಿಂಜಿರಿಗಳ ಹೊಡಿಸುವಾ ಸಂಜೆಯ ಕೂಳನಿಕ್ಕಿಸುವ ಚೋದರ (ಶ್ರೀಪಾಂ. ೧೩-೧೦೯); ಕಡಿಯಾಣವನು ಸೂತ್ರ ಗೋಲುಗಳಿಂದಿಕ್ಕಿ ಕಡಿಯಲವರು ಜಿಂಜಿರಿಯ ಕಿಡಿ ಸೂಸೆ (ನಾಗಕು. ೮-೩). ೨. ಸಿಕ್ಕು ; ತೊಡಕು ; ಬಂಧನ : ಹಾಳೂರಿನೊಳಗೊಬ್ಬ ಕೋಳ ಜಿಂಜಿರಿಯೊಳು ಕಾಲು ಮೊದಲು ಸಿಕ್ಕಿದಂತೆ (ಅಮುಸಾಂ. ೪-೧೩೩).

[ ←ಪಾರ. ಜಂಜೀರ್ ; ಹಿಂ. ಜಂಜರ್, ಜಂಜೀರ್ ]

**ಜಂಜರ$_2$, ಜಂಜರು** (ಗು). ಸಾಧಾರಣವಾದ ; ಸಾಮಾನ್ಯವಾದ ; ಕ್ರಮವಾದ : (+). **ಜಂಜರು :** 'ಜಂಜರುನಂಬರು' ಪರಾ.

[ ←ಪಾರ. ಜಂಜೀರಾ ]

**ಜಂಜರಬಂದಿ** (ನಾ). ವಿಷಯಗಳನ್ನು ವಿಭಾಗಿಸದೆ, ಸಾಧಾರಣವಾಗಿ ಒಂದಾದ ಮೇಲೊಂದರಂತೆ ಜೋಡಿಸಿ ಬರೆದ ಕ್ರಮ ; ಸಾಧಾರಣವಾದ ಆನುಪೂರ್ವಿಯಲ್ಲಿ ಬರೆದುದಂ: (+). [←ಪಾರ.ಜಂಜೀರಾಬಂದೀ]

**ಜಂಜರಿ** 'ಜಂಜರ$_1$'ನೋ.

**ಜಂಜರು** 'ಜಂಜರ$_2$' ನೋ.

**ಜಂಜರುನಂಬರು** (ನಾ). ಕ್ರಮವಾಗಿ ಬರುವ ಅಂಕಿ ; ಕ್ರಮಸಂಖ್ಯೆ : ಬಾರಾ ನಮೂನೆ ಲೆಕ್ಕಗಳನ್ನೆಲ್ಲ ಅವರು ಬರದದ್ದೇ ಇಲ್ಲ. ಎತ್ತಿಕೊಳ್ಳುತ್ತ ನೋಡಿದರೆ ಜಂಜರುನಂಬರನ್ನೇ ಸರಿಯಾಗಿ ಹಾಕುತ್ತಿರಲಿಲ್ಲ (ನನ್ನೂರು. ೦೩೨). [ ಜಂಜರು(<ಜಂಜರ$_2$) + ನಂಬರು ]

**ಜಂಜಾಟ** 'ಜಂಜಡ' ನೋ.

**ಜಂಜಾಲ** 'ಜಂಜಡ' ನೋ.

**ಜಂಜಾಲು, ಜಂಚಾಲು** (ನಾ). ತಿರುಗಣೆಯ ಮೇಲೆ ತಿರುಗಿಸಲು ಅನುಕೂಲವಾದ ಒಂದು ಬಗೆಯ ಉದ್ದವಾದ ನಳಿಕೆಯುಳ್ಳ ದೊಡ್ಡ ಫಿರಂಗಿ : ಆ ಸಮಯದಲ್ಲಿ ಅವನ ದಂಡನ್ನು ಶ್ರೀರಂಗಪಟ್ಟಣದ ಕೋಟೆ ಮೇಲಿನಿಂದ ಕೋವಿ ಫಿರಂಗೀಗುಂಡು ಜಂಜಾಲು ತುಪಾಕಿ ಮಕರಡಿಬ್ಬಿ ಜಬರಜಂಗಿ ಬಾಣ ಮುಂತಾದವುಗಳಿಂದ ಹೊಡೆಯುತ್ತಲಿದ್ದರು (ಪಾಮವಂ. ೦೩೧): ಕೋಟೆಯ ಮೇಲಿನಿಂದ ಕೋವಿ, ಫಿರಂಗಿ . . . ಜಂಜಾಲು, ತುಪಾಕಿ . . . ಮುಂತಾದುವುಗಳಿಂದ ಮೈಸೂರಿನ ಸೈನಿಕರು ಹೊಡೆಯುತ್ತಿರಲು (ಒಡಕ. ೩೩). **ಜಂಚಾಲು :** ಜಂಚಾಲುಗಳು ಬಚ್ಚುಗಳು ಜವರುಜಂಗಿಗಳು ಮಕರದಿಬ್ಬಿ ಮೊದಲಾದ ಯಂತ್ರವಿಶೇಷಗಳು (ಕೃವಾಅ. ೧೬೪).

[ ← ಹಿಂ. ಜಂಜಾಲ್ ]

**ಜಂಜಾಳ** 'ಜಂಜಡ' ನೋ.

**ಜಂಜಿರ** (ನಾ). = ಜಂಝಾನಿಲ ೨ : ಜಂಜಿರ ಮಳೆ ಶೀತವಾಯು ಸಿಡಿಲು ಮಿಂಚು . . . ಮಂಜು ಮುಸುಕಿ (ಶಾಂತೀಶ. ೪-೮೩). [ ? ]

**ಜಂಜು** (ನಾ). ಬೀಸುವ ಗಾಳಿಯ ಅಥವಾ ಬೀಳುವ ಮಳೆಯ ಶಬ್ದ : ಝಕಾರಕ್ಕೆ ಜಕಾರಂ . . . ಝಂಝಾ-ಜಂಜಾ, ಝಂಪ-ಜಂಪ (ಶಮದ. ೨೩೩ ಪ್ರಯೋ). [ <ಸಂ. ಝಂಝಾ ]

**ಜಂಜುರಿ** 'ಜಂಜರ₁' ನೋ.

**ಜಂಜೂರಿ** (ನಾ). ಗೊಂಡೆ ; ಕಂಚ್ಚು (?) : ಕೆಂದ ಬಣ್ಣದ ಬಸವ ಮಂದ್ಯಾಗ ಬಂದರ ಜಂಜೂರಿಬಾಲ ಮ್ಯಾಲೆತ್ತಿ ನಂ ಬಸವಗ ಕಂದವ್ವ ತಾಯಿ ಕೈಮುಗಿದು (ಲೋಕಗೀ. ೧೯೭). 'ಜಂಡೆ₂' ಪರಾ. [ ? ]

**ಜಂಝಪೂಗ** (ನಾ). ಜಪ ಮಾಡುವವನು; ಭಕ್ತ; ಉಪಾಸಕ; ಮುನಿ: ಸಾಲ ಕುಟಾದಟಾಹಿಗಳ ಕರ್ಮದ ಕೂಲಿಗರ ಜಡ ಜಂಝಪೂಗರ ಜಾಲ ಸಿರಿಯುಸಮಿಷರ ಪುರಿ ವಶವಾಯ್ತು ನಿನಗೆಂದ (ಕುವ್ಯಾಅ. ೬-೧೩). [ <ಸಂ. ಜಂಜಪೂಕ ]

**ಜಂಝರ** (ನಾ). ಶಿಥಿಲನಾದವನು ; ಜರ್ಜರನಾದವನು : ಪಂಜರದರ ಗಿಳಿಯಾ ಮಂಜೀರನಾ ಕಯ್ಯಾ ಭಂಜನಿಗಾದಂತೆ ಜಂಝರ ನಾನಾದ (ಪೋಲೀಸದೀ. ೧೨೦-೨). [ ? ಇದು 'ಜರ್ಜರದ' ಛಂದಸ್ಸಿಗಾಗಿ ಮಾಡಿಕೊಂಡ ರೂಪವಿರಬಹುದು]

**ಜಂಝಾಡಿ** (ನಾ). ಮೇಲಂಗಿ (?) : ತುರುಕರ ಹುಡುಗನಿಗೆ ತುದಿಗಾಲು ಪಾಪಾಸು ಹರಕಂಗಿ ಮೇಲೆ ಜಂಝಾಡಿ ಹಾಕ್ಕೊಂಡು ಹರಸ್ಯಾಡುತಾನೆ ಹುಡುಗೀರ (ಹಳ್ಳಿಯ. ೪೩). [ ? ]

**ಜಂಝಾನಿಲ, ಜಂಝಾನಿಳ** (ನಾ). ೧. ಮಳೆಹನಿಯೊಡಗೂಡಿದ ಗಾಳಿ: ಕೈವಲ್ಯಾಂಗನಾಲೋಲ ಕಮನೀಯಗುಣಸದನ ಸಂವಿತ್ಸದಾಪಾನ ವದನಾಭ್ರಜಂಝಾನಿಲ (ಬಕೋ ೯ ಪು. ೧-೨). ೨. ಬಿರುಗಾಳಿ : ಯಿಂದು ನಿನ್ನೊಡನಿಹುದೆ ಸಾಕು . . . ಮನ್ಮಥನೆನ್ನ ಕೊಂದು ನೆಟೆ ಸುಟ್ಟು ಹುಡಿಯಾದ ಭಸಿತವನೂ ಜಂಝಾನಿಲನೊಳೆತ್ತಿಬಿಡು ಗಂಧವಾಹನ ಕೂಡಿ ಬಯಲ ಭಸ್ಮಾಂಗಕ್ಕೆ (ಗುಭಶ. ೨-೧೩). ಜಂಝಾನಿಳ : ೧. ಧಾರಾಳಿಗಳ್ ಸೂಸುವಿನಂ ತಳ್ಳೊಯ್ಯ ಜಂಝಾನಿಳಂ . . . ಚೆಲ್ವಾದುದು (ಆಗವಿ. ೪-೨೭). ೨. ಜಂಝಾನಿಳನಂತೆ ದೈತ್ಯಪಟ್ಟಣ ಪೊಕ್ಕು ಕಂಜಮುಖಿ ಗೋಸುಗ ಸಂಚರಿಸಿದ ಚರಣ (ವಿದಾಕ್ಕ. ೨೬-೨) : ಜಂಝಾನಿಳನಿಂ ತಿಟ್ಟೆಂದು ಬಾನೊಳ್ ತಿರುಗಿದಂ (ಪಸ್ಪಪಂ. ೯-೭೦). [ <ಸಂ. ಝಂಝಾನಿಲ ]

**ಜಂಝಾನಿಳ** 'ಜಂಝಾನಿಲ' ನೋ.

**ಜಂಝಾಪ್ರಭಂಜನ** (ನಾ). = ಜಂಝಾನಿಲ ೨: ಬರ್ಪ ರಿಪುಬಲಬಲಾಹಕ ಪುಬಲಜಂಝಾಪ್ರಭಂಜನನಂ ಕಂಡು (ರಾಜಶೇ. ೬-೮೧ ವ). [ <ಸಂ. ಝಂಝಾಪ್ರಭಂಜನ ]

**ಜಂಝಾಮಾರುತ** (ನಾ). = ಜಂಝಾನಿಲ ೨: ಅಂಥ ಸಂಗೀತದ ಜಂಝಾಮಾರುತದಲ್ಲಿ ಭಾವಕನ್ಕೂ ರಸಕನ್ಕೂ ಭ್ರಾಂತಿಪಟ್ಟು ಬಂದ ರಸಿಕರಿಗೆ ಬೇಸರವಲ್ಲದೆ ಇನ್ನೇನು ಬಂದೀತು ? (ಗಾನಕ. ೨೩). [ <ಸಂ. ಝಂಝಾಮಾರುತ ]

**ಜಂಝಾರ** 'ಜುಜ್ಝಾರ' ನೋ.

**ಜಂಝಾವಾತ** (ನಾ). = ಜಂಝಾನಿಲ ೨: ಆತನ ಕುವರ . . . ಈತನಾರಾತಿಜೀಮೂತ ಪ್ರಹರ ಜಂಝಾರಾ[ವಾ]ತಭಿನವಭೀಮರಾಜಾ (ಭೃರವೇ. ೧-೨೪೭);ಲಕ್ಷ್ಮೀಶನ ನಾದಧಾರೆ ಭಾವತೀವ್ರತೆಯ ಜಂಝಾವಾತವನ್ನು ಶೀನಪ್ಪನ ಮನಸ್ಸಿನಲ್ಲಿ ಸೃಷ್ಟಿಸಿತ್ತು (ಅನಾಥ. ೧೧). [ <ಸಂ. ಝಂಝಾವಾತ ]

**ಜಂಟಿ** (ನಾ). ೧. ಸೇರುವಿಕೆ; ಒಟ್ಟುಗೂಡುವಿಕೆ : ಕಂಗರಿಯ ಕೋಲ್ಗಳಂ ಜಂಟಿನಿಂ[ಯಿಂ]ದೈನೂರು ಬಿಲ್ಗಳಿಂ ತೂರಲಂದಾಗಸಂ ತೂಗಿತೊಡನೆ (ಪರಕು. ೧೦-೯): ಉಂಟು ಒಬ್ಬೊಬ್ಬರಿಗೆ ಬೆನ್ನಲಿ ಎಂಟು ಕೋಟಿ ಪ್ರಮಥರು ಟೆಂಟೆಣಿಸಿ ನಿಂದಿಹರು ಗಣಸಭೆ ಜಂಟಿಯಾಗಿ (ಶರಲೀ. ೪೧-೨). ೨. ಒಂದು ವಸ್ತುವು ಮತ್ತೊಂದು ವಸ್ತುವಿಗೆ ಸೇರ್ಪಡೆಯಾಗಿರುವಿಕೆ ; ಜೋಡಣೆ; ಜೊತೆ; ಜೋಡಿ: ತಂಟೆ ನಂಟನು ಸಲ್ಲ ಒಂಟಿ ಪಯಣವು ಸಲ್ಲ ಜಂಟಿಯು ಸಾಲವೆ ಸಲ್ಲ (ಇಂದಾಪ. ೧೬೦-೪೩).

ಜಂಟಿದೇವರ್ = ಅವಳಿಜವಳಿ ದೇವತೆಗಳು; ಅಶ್ವಿನೀದೇವತೆಗಳು: ಜಂಟಿದೇವರ್ಗೆ ಎಂದು ಸುರರೊಳ್ ಪಂತಿಗೊಟ್ಟನೇಕೆ ? (ರಾಮಾಕ್ಷ. ೬೪-೧೪). ಜಂಟಿಹಾಕು = ಜೊತೆಗೆ ಸೇರಿಸು ; ಜೋಡಿಸು : (✻). [ ದೇ.॥ ತೆಲು. ಜಂಟ, ಜಮಟ ]

**ಜಂಟಿಕಲ್ಲು** (ನಾ). ಎಲ್ಲೆಯ ಗುರುತನ್ನು ಅಥವಾ ಸೀಮಾರೇಖೆಯನ್ನು ಸೂಚಿಸುವುದಕ್ಕಾಗಿ ಸಾಲಾಗಿ ಇಟ್ಟ ಮೂರು ಕಲ್ಲುಗಳು (ಕೃಶಗೆ. II, ೩೩೦). 'ಮುಗ್ಗುಡ್ಡೆ' ಪರಾ. [ ಜಂಟಿ + ಕಲ್ಲು(<ಕಲ್₃) ]

**ಜಂಟಿಕಾರ್ಯದರ್ಶಿ** (ನಾ). ಕಾರ್ಯದರ್ಶಿಯ ಜೊತೆ ವ್ಯವಹರಿಸುವ ಮತ್ತೊಬ್ಬ ಕಾರ್ಯದರ್ಶಿ : ಜಂಟಿಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು (ರೂಢಿ). [ ಜಂಟಿ + ಕಾರ್ಯದರ್ಶಿ ]

**ಜಂಟಿಗಾರ**(ನಾ). ೧. ಜೊತೆಗಾರ. ೨. ಪಾಲುಗಾರ ; ಪಾಲುದಾರ : (✻). [ ಜಂಟಿ + -ಗಾರ(< -ಕಾಱ) ]

**ಜಂಟಿಚೌರಿ** (ನಾ). ಜೋಡಿಚವರಿ ; ಚಾಮರಗಳ ಜೊತೆ : ಕಾಲ ಗಗ್ಗರಗೆಜ್ಜೆಯ, ನೊಸಲ ಜಂಟಿಚೌರಿಯ . . . ಕಾರೊಡಲ ಪೇರಾನೆಗಳ (ರಾಮಾಶ್ವ. ೯೪-೬). [ ಜಂಟಿ + ಚೌರಿ₁ (<ಚವರಿ) ]

**ಜಂಟಿಪಟ್ಟಿ** (ನಾ). ಇಬ್ಬರ ಹೆಸರಿನಲ್ಲಿ ಒಟ್ಟಿಗೆ ಇರುವ ಹಕ್ಕುದಾರಿಕೆಯ ಪತ್ರ : (✻). [ ಜಂಟಿ + ಪಟ್ಟಿ₃ ]

**ಜಂಟಿಪಟ್ಟೆದಾರ** (ನಾ). ಜಮೀನಿನಲ್ಲಿ ಜೊತೆ ಹಕ್ಕುದಾರ : ಜಾಯಿಂಟ್ ಪಟ್ಟಾದಾರನು . . . ತನ್ನ ಜಂಟಿಪಟ್ಟೆದಾರನಿಂದ ಹಣ ವಸೂಲ್ಮಾಡ ಬೇಕೆಂದು . . . ನೋಟಿಸು ಕೊಟ್ಟಲ್ಲಿ (ಗ್ರಾಮಾಕ. ೭೩). [ ಜಂಟಿಪಟ್ಟೆ + -ದಾರ₄ ]

**ಜಂಟಿವರಸೆ** (ನಾ). [ಸಂಗೀತ] ಸಂಗೀತಶಾಸ್ತ್ರದ ಶಿಕ್ಷಣದಲ್ಲಿ ಹೇಳಿ ಕೊಡುವ ಜೋಡಿ ಸ್ವರಗಳ ಒಂದು ಕ್ರಮ ; ಜೊತೆಜೊತೆಯಾಗಿ ಬರುವ ಸ್ವರಗಳ ವರಸೆ : ಸ್ವರಾವಳಿ, ಜಂಟಿವರಸೆ, ಅಲಂಕಾರಗಳು ಮತ್ತು ಗೀತೆಗಳು-ಅವು ಸಂಗೀತ ಶಿಕ್ಷಣತ್ರಯದ ಪ್ರಥಮಪಾಠಗಳಷ್ಟೆ (ಹೇಮಕೂ. ೧೧೪). [ ಜಂಟಿ + ವರಸೆ (<ವರಿಸೆ) ]

**ಜಂಟಿಸು** (ಕ್ರಿ). ಸೇರಿಸು ; ಹೊಂದಿಸು ; ಮೇಳಿಸು : ಭೇರಿಯಾರ್ಭಟಿಸೆ ಕಹಳೆಗಳು ಜಂಟಿಸಿಯೆ ಮೊರೆವುತ್ತ . . . ಆಕಾಶ ತುಂಬಿ ಪೊರಸೂಸು ಪೋಲ್ಕೆರೆಯಲೊಡನೆ (ಚೋರಬ. ೪-೨೯): ಜಂಟಿಸಿದ ಹಲವು ಕಂಟಕಗಳೆದು ಮುಕ್ತಿಪಥವಂಟಿಸಿದ (ಜಿನಮು. ೪೩-೪೩) ; ಜಂಟಿಸಿ ವೀಣೆ ಪಿಟೀಲನು ನುಡಿಸುತ ಎಂಟುಜನ ಹುಡುಗಿಯರು (ಬಿನ್ನಹ. ೬೨). [ಜಂಟಿ+ -ಇಸು₃]

**ಜಂಡರಿಗೆ** (ನಾ). ಒಂದು ಬಗೆಯ ಸಸ್ಯ : ಕಾಡುಅಡಿಕೆ, ಜಂಡರಿಗೆ (ವೃಜಿಗಿ. ೬೨-೧೨೪೭). [ ? ]

**ಜಂಡು** 'ಜೊಂಡು₁' ನೋ.

**ಜಂಡೆ₁** 'ಝಾಂಡ' ನೋ.

**ಜಂಡೆ₂** (ನಾ). ಗೊಂಡೆ ; ಕುಚ್ಚು : ಕೋಡ ಚಿಮ್ಮಾಡುತ ಕೊಳಗ ನಲ್ದಾಡುತ ಜಂಡೇದ ಬಾಲ ಎಳವುತಾ ಬರುವಾಗ ರಂಬೇರಾರುತಿ ಬೆಳ್ಗ್ಯಾರೋ (ಕಹಾಗೀ. ೩೨) ; ಕಾಲು ಕಂಕಣ ರುಳಿ ಗೆಜ್ಜೆ ಜಂಡೆಗಳು, ತೋಳಿಗೊಂಕಿ ಬಾಜುಬಂದು ಗೊಂಡೆಗಳು (ಕನಾಕ. ೨೦೭). [ ? ]

**ಜಂತ₁** (ನಾ). ೧. ಹಲ್ಲು ; ದಂತ : "ದಂತ – ಜಂತ" (ಶಮದ. ೨೩೬ ಪ್ರಯೋ) ; "ಪಲ್ಲು ಜಂತವೆನೆ ರದನವಕ್ಕುಂ" (ಶಬ್ದಮಂ. ೬೧). ೨. ಆನೆಯ ಕೋರೆ ; ಹಸ್ತಿದಂತ : ಕೋಪಾನಳನಿಂ ಕಣ್ಗಾಣದೆ ಕೆಲದೋಳ್ದ ಜಂತದ ಪಾವುಗೆಯಿಂದಮಿಟ್ಟು(ಧರ್ಮಾಮೃ. ೨-೧೨೦) ; ಜಂತದಿಂ ಕಡೆದು ಕಂಡರಿಸಿದ ಪುತ್ರಳಿಯಂತಿರ್ಪಳ್ (ಕಬ್ಬಿಗಕಾ. ೩೦೫) ; ಜಂತದ ಚಾವಡಿಯೊಳಗೆ ಸಂತತ ಸಿಂಹವಿಷ್ಟರದಲ್ಲಿ ಲಕ್ಷ್ಮಿಯ ಕಾಂತನೊಲಿದು ಕುಳಿತಿರ್ದ (ವಿಷ್ಣುಹಕ. ೩-೭೦) ; ಪೀಲಿಯುಡೆಯ ಜಂತದೋಲೆಯ ಪುಲಿಯುಗುರ ಬಾವುಲಿಯ . . . ಪುಳಿಂದಿಯರ್ (ರಾಮಾಶ್ವ. ೮೩-೨೭).

[ <ಸಂ. ದಂತ ]

**ಜಂತ₂** (ನಾ). ಅಗಲ ; ಪನ್ನ : ಜಂತವಿಲ್ಲದ ಭಾವಿ, ಜಂತವಿಲ್ಲದ ಸೀರೆ, ಸಂತೋಷವಿಲ್ಲದ ಸತಿ ಪುರುಷ ಕೈಹಿಡಿದು ಚಿಂತೆ ಮಾಡಿದರೆ ಫಲವೇನು ? (ಹಳ್ಳಿಪಾ. ೬೬). [ ? ]

**ಜಂತಗುಂಟೆ** (ನಾ). ವ್ಯವಸಾಯದ ಒಂದು ಉಪಕರಣ ; ಹಲುಬೆ ; ನೇಗಿಲು,ಜಂತಗುಂಟೆ, ರಾಪೋಲು ಮೊದಲಾದ ಉಪಕರಣಗಳನ್ನು ಹೊತ್ತು (ಕನ್ನಡಜಾ. ೧೩೫). [ ಜಂತ₁ + ಕುಂಟೆ₁ ]

**ಜಂತಣಿಗೆ** 'ಜಂತವಣಿಗೆ' ನೋ.

**ಜಂತರ** 'ಜಂತ್ರ' ನೋ.

**ಜಂತಲ, ಜಂತಾಲ, ಜಂತಾಳ** (ನಾ). ಒಂದು ಬಗೆಯ ಮರ : ಮರಗಳು : – ಹೊಸವ, ಹೆಬ್ಬಲಸು . . . ಜಂತಲ, ಸಾಂಬ್ರಾಣಿ (ನಮ್ಮನು. ೨೩೬). **ಜಂತಾಲ** : ಸಪ್ತಪರ್ಣ, ಜಂತಾಲಮರ . . . ಬಂತಲೆ (ವೃಶಿಗಿ. ೫-೮೩). **ಜಂತಾಳ** : ಕಣಗಿಲೆ (ಕಾಶಿ, ದೇವ) ಜಂತಾಳ, ನಂದೀಬಟ್ಟಲು . . . ಜಂಡು, ಬದಿರು (ನಮ್ಮನು. ೨೩೪). [ ? ]

**ಜಂತವಣಿಗೆ,ಜಂತಣಿಗೆ**(ನಾ).ಹಸ್ತಿದಂತದ ಬಾಚಣಿಗೆ: ಚದುರೆಯೊರ್ವಳ್ ನವಿರನೊಳ್ಗೆಯ್ಕೆ ಜಂತವಣಿಗೆಯನೆತ್ತಿ ಬಾಚಿ ಪೂಜಿಟಳ್ (ಶ್ರೀರಾಮ. ೪-೧೧).**ಜಂತಣಿಗೆ** : ಜಂತಣಿಗೆಯೊಂದನ್ನು ತೆಗೆದುಕೊಂಡು ತಲೆಯನ್ನು ಬಾಚಿಕೊಂಡಳು (ಒಡ). [ ಜಂತ₁ + ಪಣಿಗೆ ]

**ಜಂತಾಲ** 'ಜಂತಲ' ನೋ.

**ಜಂತಾಳ** 'ಜಂತಲ' ನೋ.

**ಜಂತಿ** 'ಜಂತೆ' ನೋ.

**ಜಂತಿಗ**(ನಾ). ಹಸ್ತಿದಂತದ ವ್ಯಾಪಾರಿ: ಜಂತಿಗರ್ [ಟಾಕಾಂ. ದಂತವಳಿಯರ್] ಸಂತತಿಗೆಟ್ಟರಂತಟಲೆ . . . ಚೊಲ್ಲಿಯರ್ ಗಲ್ಲೆಯಂಬಲಿಯಂತೆ ನೆಲನಂ ಪತ್ತೆ ಸರ್ವಾಂಗದ್ರೋಹರಂ ಕವರ್ವಂತೆ ಸರ್ವಸ್ವಾಪಹರಣಂ ಮಾಡಿ (ಧರ್ಮಾಮೃ. ೨-೬೯). [ ಜಂತ₁ + – ಇಗ ]

**ಜಂತು** (ನಾ). ೧. ಜೀವವನ್ನುಳ್ಳುದು ; ಪ್ರಾಣಿ ; ಜೀವಿ : "ಪ್ರಾಣಿ ಜಂತು ದೇಹಿಯೆನಿಕ್ಕುಂ" (ವಸ್ತುಕೋ. ೧೮-೩). ೨. ಸಣ್ಣ ಕ್ರಿಮಿ : ಅಮಿಬಾ ಎಂಬುದು ಒಂದೇ ಕೋಷ್ಠದಿಂದ ಕೂಡಿದ ಆದಿ ಜಂತು(ಜೀವಶಾಸ್ತ್ರ. ೨೩೩). ೩. ಕರುಳಿನಲ್ಲಿ ಹುಟ್ಟುವ ಒಂದು ಬಗೆಯ ಹುಳು : ಜಂತಿನಂತೆ ಬಸಿಱಂ ತಿಂಬರ್ ಪಂದಿಯಂತೆತ್ತುವರ್ (ಧರ್ಮಾಮೃ. ೩-೭೩) ; ಜಂತಿನ ಜನ್ಮಭೂಮಿ ಕ್ರಿಮಿಯ ಗೂಡು . . . ಅದಿವ್ಯಾಧಿಯ ವಾಸ ಇಂತಿದಱೊಳಗೆ ನಿನ್ನ ಕುಲಗೋತ್ರಂಗಳಾವುದು ಹೇಳಾ (ಅದವ. ೧೪೬).

ಜಂತಿನ ಪುಡಿ = ಹೊಟ್ಟೆಯಲ್ಲಿರುವ ಜಂತುಗಳನ್ನು ನಾಶಮಾಡಲು ಸೇವಿಸುವ ಪುಡಿ : ಜಂತು ಆಗಿರಬಹುದು ಅಂದು ಜಂತಿನ ಪುಡಿ ತಗೊಂಡನಂತ (ಗಂಗಾಸಾ. ೪). [ ಸಂ. ]

**ಜಂತುಫಲ** (ನಾ). ಒಳಗೆಲ್ಲ ಹುಳು ತುಂಬಿರುವ ಹಣ್ಣುಳ್ಳ ಮರ ; ಅತ್ತಿ, ಉದುಂಬರ: "ಉದುಂಬರಃ, ಜಂತುಫಲಃ. ಯಜ್ಞಾಂಗಃ, ಹೇಮದುಗ್ಧಕಃ—ಳ ಅತ್ತಿಮರದ ಹೆಸರು" (ಸಿದ್ಧಾಂಕಿ. ೧೦೨). [ ಸಂ. ]

**ಜಂತುರೋಗ** (ನಾ). ಕರುಳಿನಲ್ಲಿ ಜಂತುಹುಳುಗಳು ಹೆಚ್ಚಿ ಆಗುವ ಕಾಯಿಲೆ : ಚವ್ವಾದಿಲೇಹ್ಯ . . . ನಿತ್ಯವೂ ಕರ್ಷಪ್ರಮಾಣಂ ಸೇವಿಸಲು ಬಹುದಿವಸದ ಕ್ಷಯರೋಗ . . . ಹೊಟ್ಟೆಯೊಳಿರ್ದ ಜಂತುರೋಗ, ಜಲೋದರ ಸಹ ಗುಣಮಕ್ಕು (ಸಕವೈ. ೨೫೬).

[ ಜಂತು + ರೋಗ ]

**ಜಂತುಹುಳು**(ನಾ).(ಮನುಷ್ಯರ)ಕರುಳಿನಲ್ಲಿ ಬೆಳೆದು ತೊಂದರೆಕೊಡುವ ಒಂದು ಬಗೆಯ ಹುಳು : ಜಂತುಹುಳು, ಕೊಕ್ಕರೆಕಾಲು . . . ಪಾಸ್ ಬಂಗಲೆ ಖಾಯಿಲೆಗಳೆಲ್ಲಾ ನಮ್ಮ ಮನೇಲೇನೆ! (ಕುಟುಮಿ. ೨೯) : ನಿಮೆ ಟೊಡಾ . . . ಈ ವರ್ಗಕ್ಕೆ ಜಂತುಹುಳು, ನಾರುಹುಣ್ಣಿನ ಹುಳು . . . ಮುಂತಾದವು ಸೇರುತ್ತವೆ (ಶರಜೀ. ೪೯).

[ ಜಂತು + ಹುಳು₂ (<ಪುಟು₁) ]

**ಜಂತೆ, ಜಂತಿ**(ನಾ). ಮೇಲ್ಚಾವಣಿಗಳಿಗೆ ಆಧಾರವಾಗಿ ತೊಲೆಗಳ ಮೇಲೆ ಹಾಕುವ ಸಣ್ಣ ಅಡ್ಡಪಟ್ಟಿ; ಹಲಗೆ ಸೇರುವೆಗಾಗಿಯೋ, ತಟ್ಟಿಯಾದ ಮೇಲ್ಚಾವಣಿಗಾಗಿಯೋ ಆಧಾರವಾಗಿ ಹರಡುವ ಪಟ್ಟಿ : ಅಗಳ್ದು ಪದಂ ಪಚ್ಚೆಯ ನೆಲಗಟ್ಟನೊಳಂ ಪವಳದ ಜಂತೆಯೊಳಂ ಪದ್ಮರಾಗದ ಬೋದಿಗೆಯೊಳಂ . . . ಒಪ್ಪುವ ವಿವಾಹಗೇಹಮಂ ಸಮೆಯಿಸಿ (ಶಂಕಥಾ. ೩-೭೪ ವ) ; ಆ ಲಲಿತಪಚ್ಚೆಗಳ ತೊಲೆ ರನ್ನಬೋದುಗೆಗಳಾ ಪ್ರವಾಳಂಗಳಿಂದೆ ಮೇಲೆಸೆವ ಜಂತೆಗಳ್ (ಕಬಪು. ೫-೪೮) ; ಬಜ್ಜರದ ಜಂತೆಯಿಂ, ರನ್ನದೊಳ್ಗಂಬದಿಂ . . . ಮದನಗೃಹದ ಬಾಗಿಲ್ವಾಡದ ಸಿಂಗರದೊಂದು ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೫೪-೨೦) ; ಉಂಡ ಮನೆ ಜಂತೆ ಎಣಿಸಿದರಂತೆ (ಗಾದೆ). **ಜಂತಿ** : ಉಪ್ಪರು ಕಣ್ಗೆಸೆವ ಪಚ್ಚೆಜಂತಿಯ ಮೇಲೆ . . . ರನ್ನಬುರುಡೆಗಳ್ ಸಾಲ್ಗೊಂಡುವಡೆಯಡೆಯೊಳು (ಶ್ರೀರಾಮ. ೪-೫೦); ಹಳೆ ಮನೆಯ ಮುರುಕು ಜಂತಿ (ನಡಬಂ. ೬೫-೧೬): ಜಂತಿಯ ಹತ್ತಿರ ಒಂದೆರಡು ಚಿಕ್ಕ ಕಿಡಕಿಗಳಿದ್ದವು (ಕಳ್ದ. ೫೬).

[ ದೇ.ಶ ತುಳು. ಜಂತೆ, ಜಂತಿ ; ತೆಲು. ದಂತಿಯ, ದಂತೆ ]

**ಜಂತೆತ್ತು** (ಕ್ರಿ). ಕರುಳಿನಲ್ಲಿ ಜಂತುಗಳು ಹೆಚ್ಚಾಗು,–ವೃದ್ಧಿಯಾಗು: ಜಂತೆತ್ತಿದರಂತೋಕರಿಸುತ್ತುಂ (ಧರ್ಮಾಮೃ. ೪-೬೬). [ಜಂತು + ಎತ್ತು₁]

**ಜಂತೆವಲಗೆ** (ನಾ). ಜಂತೆಗೆ ಜೋಡಿಸುವ ಹಲಗೆ : ಮಹಾಮನೆಯ ಕಟ್ಟಿದನಯ್ಯ ಸಂಗನ ಬಸವಣ್ಣನು . . . ಅದಕ್ಕೆ ಕಂಭವೊಂದು ತೊಲೆ ಯಾಱು ಜಂತೆವಲಗೆ ಮುವ್ವತ್ತಾಱು (ಅವಕಂ. ೨೨೨-೦೦೦೮).

[ ಜಂತೆ + ಪಲಗೆ ]

**ಜಂತ್ರ, ಜಂತರ, ಯಂತರ** (ನಾ). ೧. ಯಂತ್ರ ; ಯಾಂತ್ರಿಕರಚನೆ ; ಯಂತ್ರ ಸಹಿತವಾದ ವಸ್ತು : "ಆವರಣೆಯನೆ ಜಂತ್ರವಕ್ಕು"(ಶುಂಗರಾ. ೩೦-೨೦) ; ಆ ಬಿಲ್ಲನೇಱಿಸಿ ಆ ಸರಲ್ಗಳಿಂದಾತನ ಮನೆಯ ಮುಂದೆ ನಭದೊಳ್ ನಲಿನಲಿದಾಡುವ ಜಂತ್ರದ ಮಿಸಾನನೆಚ್ಚನುಮಾಕೆಗೆ ಗಂಡನಕ್ಕುಂ (ಶಂಕಥಾ. ೩-೩೨ ವ) ; ನಮ್ಮ ಬಲಂ ಕೀಲ್ಕಳೆದ ಜಂತ್ರದಂತೆ ಕಟಕುಟಮಾಗಿರ್ದಪುದು (ಶಂಕಕಂ. ೨೦೬-೨೦) ; ತೊಱೆಯಂ ಜಂತ್ರಂಗಳಿಂ ಕಟ್ಟಿ ನಿಜಾಂತಃಪುರಸಹಿತಂ ನೀರಾಟವಾಡಿ ಜಂತ್ರಂಗಳ್ಗಂ ಕಳೆಯ (ಶಂರಾಮಾ. ೧೦-೧೫೦ ವ); ಪ್ರಣವಂ ಶೃಂಖಲೆ . . . ಸ್ಮೃತಿ ಜಂತ್ರಮಾಗಮಮೆ ಬೆಳ್ಳಾರಂ . . . ನಾರಾಚಂ ತಪೋವಿಸ್ತರಂ (ಶಬಕಂ. ೩-೨೫). ೨. ಒಂದು ಬಗೆಯ ತಂತಿವಾದ್ಯ : ವೀಣೆ ಜಂತ್ರದ ನಾದಭೇದಸ್ವರಂಗಳಂ ಕಾಣಿಸದೆ ಪ್ರಾಣತಾನಾಗಿಯಂಗುಲಿಯೊಳಂ (ದೀಕ್ಷಾಬೋ. ೦೩೨-೧೦) ; ವರರುದ್ರವೀಣೆ ಧನುರ್ವೀಣೆ ಜಂತ್ರ ತುಂಬುರುವೀಣೆ ಕೂರ್ಮವೀಣೆಗಳ ಸ್ವರಮಂಡಲ ಮುಖ್ಯ ತಂತ್ರೀವಾದ್ಯದ ಹೆಣ್ಣು ನೆರೆದುದು ಕುವರಿಯೋಲಗದಿ (ಪ್ರಭುಹಕ. ೨೭-೧೧); ಚೆಂಗು ದಂಡಿಗೆ ತಿತ್ತಿ ಮುಖವೀಣೆ ಜಂತ್ರವುಪಾಂಗ ಮುಂತಾದುವ ನಾಂತು ಅಂಗಜನೋಲಗಕಡಿಯಿಡುತಿದ್ದ ಗಾನಾಂಗನೆಯರ ನೋಡುತಿರ್ದಾ

(ಛರಜ. ೪೭-೪೭). ೩. ರಾಟೆ ; ನೂಲು ತೆಗೆಯುವುದು, ನೀರೆತ್ತುವುದು ಮೊದಲಾದುವನ್ನು ಮಾಡುವ ಯಂತ್ರ : ಚೆಲುವೆತ್ತು ರಾಟಿಸುವ ತದ್ಗೃಹದ ಮಧ್ಯ ವಿದ್ರುಮದ ಜಂತ್ರದ ಕಾಲ್ಗಳಿಂ (ನವಮೋ. ೦೪-೦೩) : ಗಾಂಧಿಯುಗವು ಪ್ರಾರಂಭವಾದಂದಿನಿಂದ ಅಲ್ಲೊಂದು ಇಲ್ಲೊಂದು ಜಂತ್ರ (ರಾಟ)ಗಳು ಕಾಣಿಸಿಕೊಳ್ಳುತ್ತವೆ (ನಾಡ್ನುಡಿ. ೪೧). ೪. ಬೊಂಬೆ. 'ಗಿಡಿಗಿಡಿಜಂತ್ರ' ಪರಾ. ಜಂತರ: ೧. ಅಂತ್ಯಕಾಲಕೆ ನೆನಸಿ ಅಂತಕನ ಎಡೆಯಾಗಿ ಎಂತು ಮಾರುಗಿದರೆ ಏನುಂಟು ಎಲೆ ಮನುಜ ಜಂತರದ ಇರಸು ಮುರಿದಂತೆ (ಕನ್ನಡಾ. ೨೭೮). ಯಂತರ: ೧. ಜಾಟವಳ ಸೂತ್ರದ ಯಂತರಗಳ ಬಿತ್ತರವನು ಕಂಡರಾಗ (ಕಂನವಿ. ೦೪-೨೬). [ <ಸಂ. ಯಂತ್ರ ]

**ಜಂತ್ರಗೊಳಿಸು** (ಕ್ರಿ). ಕೀಲುಗೊಳಿಸು ; ಜೋಡಿಸು : ಸೇರಿಸು : ನಳಿನಭವನಂಭೋಜ ಬೆಳ್ಪಟ್ಟವಂ ಜಂತ್ರಗೊಳಿಸಿ (ನಂದಿಮಾ. ೧೮-೨೬). [ ಜಂತ್ರ + ಕೊಳ್$_1$ + - ಇಸು$_3$ ]

**ಜಂತ್ರದೇವತೆ** (ನಾ). ವಾದ್ಯದ ದೇವತೆ ; ಸಂಗೀತದೇವತೆ : ಜಾಣಿನ ಜಂತ್ರದೇವತೆಗಳೊ ನೂತನ ವಾಣಿಯರುಗಳೆಂತೆನಲು ಕ್ಷೋಣಿಗೆ ನಾನಾ ಬಗೆಯ ವಿದ್ಯೆಗಳ ಪ್ರವೀಣೆಯರೆಸೆದರೇವೇಳ್ವೆ (ಕಂನವಿ. ೨೪-೦೩). [ ಜಂತ್ರ + ದೇವತೆ ]

**ಜಂತ್ರಬಿಜ್ಜೆ** (ನಾ). ವಾದ್ಯವಿದ್ಯೆ : ಜಾಣಂ ವೀಣೆಯನೀ ಕುಮಾರ ಚಿಕದೇವಂ ಬಾಜಿಸುತ್ತಿರ್ಪನಂ ಪ್ರಾಣಂ ಬಂದುದು ಜಂತ್ರಬಿಜ್ಜೆಗೆ (ಚಿಕವಿ. ೪-೧೦೦). [ ಜಂತ್ರ + ಬಿಜ್ಜೆ$_2$ ]

**ಜಂತ್ರವಾಹ** (ನಾ). (ಯುದ್ಧದ ಸಮಯದಲ್ಲಿ) ಯಂತ್ರವನ್ನು ನಡೆಸತಕ್ಕವನಂ : ಕೋಟೆಯು ಜಂತ್ರವಾಹ ಹೊಲ್ಲಾಜಂಗೆ ಕಾರುಣ್ಯಂಗೆಯ್ದು ಜೀವಿತಮಾರ್ಗ್ಗದಿಂ ಶಾಸಾನವೃತ್ತಿಯಾಗಿ ಕೋಟೆಯ ಕಾಲ್ಗಳ್ಗಳ . . . ಮೂಡಲು ಬಿಟ್ಟ ಎರೆ ಮ ೧೦ ಮನೆ ಮಾನ್ಯ (ಸೌಇಇ. VIII, ೩೬೦-೦೦; 1124). [ <ಸಂ. ಯಂತ್ರವಾಹ ]

**ಜಂತ್ರಿ** (ನಾ). ೧. ಕೋಷ್ಟಕ ; ಸಿದ್ಧಗಣಕ ; ಎಣಿಕೆಗಾಗಿ ಬಳಸುವ ಕೋಷ್ಟಕ (ಕೃಸಗ. II, ೩೩೦). ೨. (ಉಕ) ಕ್ರಮವನ್ನು ತಿಳಿಸುವ ಪಟ್ಟಿ ; ತಪಶೀಲು ಪಟ್ಟಿ : ಗಿರಣಿಯ ಕೆಲಸವೆಂದರೆ ಒಂದು 'ಜಂತ್ರಿ' ಇದ್ದಂತೆ ಎಂದು ಗಟ್ಟಿಮಾಡಿಕೊಂಡನು (ಅಹವಾ. ೦೦೩). [ ←ಮರಾ. ಜಂತ್ರೀ ]

**ಜಂತ್ರಿಸು** (ಕ್ರಿ). ಯಂತ್ರದಲ್ಲಿ ಕಡೆ ; ಸಾಣೆ ಹಿಡಿದು ಮೆರಗುಕೊಡು : ಅದರಾಗ್ರ ಒಸೆದು ಜಂತ್ರಿಸಿದ ಕಾರ್ಮಣಿಯು ಕೀಲಿಸಿದಂತೆ ಕುಚಚೂಚುಕಂ ಮೆರೆದವು (ನವಮೋ. ೨೩-೨೪). [ ಜಂತ್ರ + - ಇಸು$_3$ ]

**ಜಂಪ$_1$** 'ಜೊಂಪ$_1$' ನೋ.

**ಜಂಪ$_2$** (ನಾ). ನೆಗೆತ ; ಕುಪ್ಪಳಿಸುವಿಕೆ ; ಹಾರುವಿಕೆ : ಝಕಾರಕ್ಕೆ ಜಕಾರಂ- ಝಂಪ – ಜಂಪ (ಕಮಧ. ೨೩೩ ಪ್ರಯೋ.). [ <ಸಂ. ಝಂಪ ]

**ಜಂಪತಿ** (ನಾ). ಗಂಡಹೆಂಡಿರು ; ದಂಪತಿ : ಆ ಜಂಪತಿಗಗ್ರುಸುತಂ ಭ್ರಾಜಿಷ್ಣು . . . ವಾವಣಾರ್ಕನ್ನೆಗಟ್ಟಿಂ (ಎಇ. XII, ೨೯೦-೦೪೭; 1077); ಆ ಜಂಪತಿಗಳ ವದನಾಂಭೋಜಂಗಳನಾತ್ಮದೃಕ್ಸಹಸ್ರಭ್ರಮರೀರಾಜಿಗೆಡೆ ಮಾಡಿ ನೋಡಿ (ಪುಷ್ಪಪು. ೦೨-೦೦) ; ಕರುಣದಿಂದವ್ವ ಬಾರೆಂದು ಪಲುಬಿದರಾಗ ಜಂಪತಿಗಳು (ವಂಕಾರಾ. ೨-೨೩-೪೨). [ ಸಂ. ಜಂಪತೀ ]

**ಜಂಪತಿವಕ್ಕಿ** (ನಾ). ಜೋಡಿಹಕ್ಕಿ ; ಎಣೆವಕ್ಕಿ ; ಚಕ್ರವಾಕ : ಆ ವೇಳೆಯೊಳ್ ರಾಮರಾಜ್ಯದೊಳಿಂತನುಚಿತಮಾಗಿ ಅಡಂಗೆಟ್ಟುದೆಂದು ಬೆದಱ ತಾರೆಗಳ್ ದೆಸೆಗೆಟ್ಟುವು ; ಚಂದ್ರಮಂ ಕಳೆಗೆಟ್ಟಂ ; ಜಂಪತಿವಕ್ಕಿ ಕಂಗೆಟ್ಟುವು (ರಾಮಾಶ್ವ. ೨೬-೨೭). [ ಜಂಪತಿ + ಪಕ್ಕಿ$_1$ ]

**ಜಂಪರ್** 'ಜಂಪರು' ನೋ.

**ಜಂಪರು, ಜಂಪರ್, ಝಂಪರು** (ನಾ). ಒಂದು ಬಗೆಯ ಕುಪ್ಪಸ ; ರವಿಕೆ : ಗೋಡೆಯ ಮಗ್ಗುಲಿಗೆ ಹರಿಯ ಮಗಳು ಶಾಂತಳ ಲಂಗ, ಜಂಪರು (ಬೀಜೀ. ೦೭೦) ; ಹುಡುಗನ ಅಂಗಿಗೆ ಎರಡು ಜೋಬುಗಳನ್ನೂ ಹುಡುಗಿಯ ಜಂಪರಿಗೆ ಒಂದು ಜೋಬನ್ನೂ ಬರೆದೆ (ಶಾಲಮ. ೧೦೦). ಜಂಪರ್ : ಚಿಕ್ಕಹುಡುಗಿಯರಿಗೆ ಅವರ ತಾಯಿ, ಅಕ್ಕಂದಿರುಗಳು ಕುಳ್ಳಿರಿಸಿ ಲಂಗ ಉಡಿಸಿ, ಜಂಪರ್ ತೊಡಿಸಿ, ವಿಧವಿಧದ ಅಲಂಕಾರ ಮಾಡುತ್ತಿದ್ದರು (ಮೂಲಾನ. ೦೨೩) ; ಅಪ್ಪಾ, ಹಬ್ಬಕ್ಕೆ ನಂಗೆ ಒಂದು ಜಂಪರ್ (ನಾಡಿಗೇ. ೯೦). ಝಂಪರು : ನೀಲಿಬಣ್ಣದ 'ಶೇಟನ್' ಝಂಪರು ಟ್ರಂಕಿನ ಬಾಯಲ್ಲಿ ಸಿಕ್ಕು ಒದ್ದಾಡುತ್ತಿತ್ತು (ಮುತ್ತೈದೆ. ೨೩) ; ಒಬ್ಬಳ ಪರಕಾರವಾದರೆ ಇನ್ನೊಬ್ಬಳ ಪೋಲಕ, ಮತ್ತೊಬ್ಬಳ ಝಂಪರು ಆದರೆ ಮಗದೊಬ್ಬಳ ಝಗಾ, ಹೀಗೆಲ್ಲರ ಕಡೆಯಿಂದ ಒಂದೊಂದು ಅರಿವೆಗಳನ್ನು ಇಸಿದುಕೊಂಡು (ಹೂಬಿಸಿ. ೨೨). [ ←ಇಂ. Jumper ]

**ಜಂಪಳ** 'ಝುಂಪಾಳ' ನೋ.

**ಜಂಪಳವಿಡು** (ಕ್ರಿ). ಮೇಲ್ಮುಸುಕು ಹಾಕು ; ಮುಚ್ಚು ; ಆವರಿಸು : ಮಟ್ಟ ಮರಕತಶಿಲೆಯ ನೀಲದ ಬೆಟ್ಟದಿರವೆಂಬಂತೆ ಜಂಪಳವಿಟ್ಟು ಝಡಿದುದು ಕಾರ್ಮುಗಿಲು ಕತ್ತಲಿಸೆ ಕುಂಭಿನಿಯ (ತೊರರಾ. ೪-೬-೩). [ ಜಂಪಳ (<ಝುಂಪಾಳ) + ಇಡು$_1$ ]

**ಜಂಪಳಿಸು** (ಕ್ರಿ). ಮಾತನಾಡಂ ; ಜಲ್ಪಿಸಂ (?) : ಜಂಪಿನ ಕಡ್ಡಿಯ ಮೇಲೆ ಕುಳಿತ ಗಿಳಿ ಜಂಪಳಿಸುತ್ತಿರ್ದಿತ್ತು ತನ್ನ ತಾನು ಅಕ್ಕಟಾ ಅಕ್ಕಟಾ ಎಂದು ತನ್ನ ಪೂರ್ವಾಶ್ರಯದ ಅಕ್ಕನೆಂಬಾ ಅಕ್ಕನ ಕರೆಯುತ್ತ (ಜನ್ನವ. ೪. ೩೮೦-೦೨೪೬) : "ತೊಕಡಿಸು" (ಜನ್ನವ. ೪. ಕೋಶ). [ <ಜಲ್ಪನ ? + - ಇಸು$_3$ ]

**ಜಂಪಿಸು** 'ಜೊಂಪಿಸು$_2$' ನೋ.

**ಜಂಪು$_1$** 'ಜೊಂಪು$_1$' ನೋ.

**ಜಂಪು$_2$** 'ಜೊಂಪು$_1$' ನೋ.

**ಜಂಪು$_3$** (ನಾ). ಒಂದು ಬಗೆಯ ಕಿವಿಯ ಆಭರಣ : ತೂಗುವತಿ ಹೊನ್ನೋಲೆ ಮುತ್ತಿನಮೋಘ ಜಂಪಿನ ರತ್ನಬುಗಡಿಯ ನಾಗಹೆಡೆ ಮಾಣಿಕ್ಯ ಕೀಲಿತ ತಾಳಿ ಪದಕಗಳ (ಅಂಬಿಕಾ. ೯೪-೨೨). [←ತೆಲು. ಜಂಪು]

**ಜಂಪು$_4$** (ನಾ). ಸೊಗಸು ; ವೈಭವ ; ರಮ್ಯತೆ ; ಮನೋಹರತೆ ; ಆಕರ್ಷಣೆ : ಈ ಜಗ್ಗು ಯಾ ನಿಗ್ಗು . . . ಯಾ ಜಂಪು ಯಾ ಯಿಂಪುವಿಾ ಹದುರು ಚದುರುಗಳು . . . ಅರಿಗಳವಡದು (ವಂಕಾರಾ. ೩-೯-೦೦). [?]

**ಜಂಪು$_5$** (ನಾ). ೧. ಪಂಜರ : ಜಂಪಿನ ಕಡ್ಡಿಯ ಮೇಲೆ ಕುಳಿತ ಗಿಳಿ (ಜನ್ನವ. ೪. ೩೮೦-೦೨೪೬). ೨. ಬೋನು : ತಳಿದ ಸೂಸಲಿಗೆ ಬಂದಿಲಿ ಜಂಪಿನಲಿ ಬೀಳುವೊಲು (ಭೋಕೀಪು. ೩-೦೦). [ ? ]

**ಜಂಪೆ$_1$** (ನಾ). [ಸಂಗೀತ] ಒಂದು ಬಗೆಯ ತಾಳ ; ಐದು ಮಾತ್ರೆಗಳ ತಾಳ : ಬಳಿಕ ಧ್ರುವ . . . ಜಂಪೆ . . . ಏಕವೆಂಬ ಸಪ್ತತಾಳಭೇದಂಗಳುಂ (ವಿವೇಕ. ೨೩೮) ; ಝಂಪೆ, ಜಂಪೆ (ಕಬ್ಬಾಸು. ೧೯೩ ವೃತ್ತಿ) ; ಸೊಂಪಾಗಿರುವ ಜಂಪೆತಾಳದಿಂದ ದಂಪತಿಗಳ ಆಟವನಾಡಿಸುತ್ತಿರುವ ವಿದೂಷಕನ ಹಾಸ್ಯರಸದಿಂದ ಆನಂದವನ್ನೈದಿ (ಸೌಗಂಧಿ. ೩೦೩-೦೩). [ <ಸಂ. ಝಂಪಾ ]

**ಜಂಪೆ$_2$** (ನಾ). ಮನೆ ಅಥವಾ ನಿವಾಸದಲ್ಲಿ ಒಂದು ವಿಭಾಗ : ತಿವುರಿ ಗುಡಿ ಗೂಡಾರಂ ಝುಂಪಾಳಿ ಚೌಕಿಗೆ ಜಂಪೆ ಮಂಡವಿಗೆ . . . ಮಾಡಿತ್ತು ಕಣ್ಣನುರಾಗವಂ (ಅನಂಪು. ೦೩-೭೩). [ ? ]

**ಜಂಪೆ$_3$** (ನಾ). (?) : ಜೊಳ್ಳುಮತಿಯ ಕೊಡುವ ಜಂಪೆ ಜಡದೈವ (ವಿಶಾಸು. ೩೮-೨). [ ? ]

**ಜಂಪೆತಾಳ** (ನಾ). =ಜಂಪೆ$_1$ : ಐದು ಮಾತ್ರೆಗೆ ಜಂಪೆತಾಳ (ಸಂಕೋಧ. ೦೨೦). [ ಜಂಪೆ$_1$ + ತಾಳ$_1$ (=ತಾಲ) ]

**ಜಂಬ₁** 'ದಂಬ' ನೋ.

**ಜಂಬ₂** (ನಾ). ಒಂದು ಬಗೆಯ ಕುದುರೆ ; ಮೈಯಲ್ಲಿ ಚುಕ್ಕೆಗಳಿರುವ ಕುದುರೆ: "ತುರಗವರ್ಣಂ ಬಿಳಿಯದಾಗೆ ಕರ್ಕನೆನಿಕ್ಕು . . . ನೀಲಂ ತುಂಬಿ ಚಬ್ಬುದೋಱರಲು ಜಂಬಂ" (ಮಂಗರಾ. ೮೧-೧೪) ; ಜನ್ನವಂ ನೀಲನನಳಗನಂ ತನ್ನಿ ಕತ್ತಳವಮೌಹಳಿಗನಂ ತನ್ನಿ ಜಂಬನನಾ ಕಯಿರನಂ ತನ್ನಿ (ಬಸಕು. ೩೯-೪೦). [ ? ]

**ಜಂಬ₃** (ನಾ). "ದಟ್ಟ" (ಗರತಿ. ಕೋಶ): ತಂದೆ ನನ ಹಡೆದಪ್ಪ ಉಂಡು ಹೊರೆಯಕ ಹೊಂಟ ಜಂಬ ಹಾಸೀದ ಜಮುಖಾನಿ ನನ ಮನಿಯು ಗೊಂಬ ಬೀಸ್ಯಾವ ಸುಳಿಗಾಳಿ (ಗರತಿ. ೫೩). 'ಜಂಬುಳಿ' ಪರಾ. [ ? ]

**ಜಂಬಕೊಚ್ಚು** (ಕ್ರಿ). ತನ್ನನ್ನು ತಾನು ಹೊಗಳಿಕೊಳ್ಳು ; ಆಡಂಬರದ ಮಾತುಗಳನ್ನಾಡು : ತಾನು ದಾರ್ಶನಿಕನೆಂದು ಆತ ಜಂಬಕೊಚ್ಚಿ ಕೊಳ್ಳುತ್ತಿದ್ದ (ಅಶ್ರಮ. ೬೭). [ ಜಂಬ₁ (<ದಂಬ) + ಕೊಚ್ಚು₁ ]

**ಜಂಬಗಾರ** 'ಡಂಬಗಾರ' ನೋ.

**ಜಂಬಗಿತ್ತಿ** (ನಾ). ಜಂಬವುಳ್ಳವಳು ; ಬಿಂಕಗಾತಿ : ಒಳ್ಳೆ ಜಂಬಗಿತ್ತಿ ಕಾಣಿತಿ ನೀನು (ಹೊಸಂಸಾ. ೧೪೬). [ ಜಂಬ₁ (<ದಂಬ) + - ಗಿತ್ತಿ ]

**ಜಂಬರ, ಜಮರ** (ನಾ). ಕೆಲಸ ; ಉದ್ಯೋಗ : ಅತ್ತ ಮೇಲೆ ಕಣ್ಣು ತೆರವ ದೇವನೆಂಬ ತಂದೆಯನ್ನು ಮುಗಿಲಿನಾಚೆಯಿಂದ ಬರುವ ಜಂಭ ಜಂಬರಂಗಳಿಲ್ಲ (ನಾದಲೀ. ೭೧-೧೧): ಸೈನ್ಯದ ಸಿದ್ಧತೆಗಾಗಿ ಊರಲೆಲ್ಲ ದೊಡ್ಡ ಜಂಬರ ನಡೆದಿತ್ತು (ಯುದುರಾ. ೧೦೨) : ಅಣ್ಣಯ್ಯ ನಿನಗೆ ಬೇರೆ ಜಂಬರವಿಲ್ಲ (ಮರವು. ೬೭): ಜಂಬರದವನಿಗೆ ತಂಬೂರವೋ (ಗಾದೆ). **ಜಮರ:** ನೇರವಾಗಿ ಮನೆ ಕಡೆಗೋ, ಅಡ್ಡ ಜಮರ ಏನಾದರೂ ಉಂಟೋ! (ರುದ್ರಿಮ. ೫೦). [ ದೇ.॥ ತುಳು. ಜಂಬರ, ಜಂಬಾರ, ಜಂಬ್ರ ]

**ಜಂಬಾಲ, ಜಂಬಾಳ** (ನಾ). ೧. ಕೆಸರು ; ಬದಿ ; ರಾಡಿ : ಬಾಲಕಂ ಧನುವ ಮಿಡಿಯಲ್ ಬೆದಱತವನಿ ಜಂಬಾಲವಾಯ್ತುಬುಧಿ(ಚಬಪು.೩೯-೩೬); ಧೂಳಿ ಮಸಗಲು ವಾರಿನಿಧಿ ಜಂಬಾಲವಾಯ್ತು (ಅನಂರಾ. ೧-೧೪-೧೧) : ಅಂಗದನ ಮಕುಟತಟವನಪ್ಪಳಿಸಲಂದೊಡೆದು ಬಿಸಿರಕುತ ಸುರಿದುದು ಧರಾತಳವೆಲ್ಲ ಜಂಬಾಲವಪ್ಪಂದದೆ (ವಂಕಾರಾ. ೬-೩೧-೨೦). ೨. ಹಾವಸೆ; ಪಾಚಿ : ಭೀಷ್ಮಾಕಲಿತಲಲಾಟೇಕ್ಷಣಶಿಖಾವಟುತರೋಷ್ಮಾವಶೇಷ . . . ಜನ್ಮಾಂತರೋಪಚಿತ ವೃಜನಜಂಬಾಲಜಾಲಗ್ರೀಷ್ಮಾಗಮಾಭ (ಉದ್ಭರೇ. ೧-೩೦). **ಜಂಬಾಳ:** ೧. "ಜಂಬಾಳ ನಿಷದ್ವರ ಕರ್ದಮ ಶಾದ" (ವಸ್ತುಕೋ. ೨೫-೨೦). ೨. ಜಳಮಾತ್ರಂ ಪುದಿದಿರ್ದ ಪಲ್ವಲ ಮಹಾಜಂಬಾಳ ದೊಳ್ಕೇಸರಾವಳಿಯಗ್ರಂ ನಸುದೋಱದಂತೆ (ಶಾಂತೀಶ್ವ. ೧೨-೩೫). [ಸಂ.]

**ಜಂಬಾಲತೆ** (ನಾ). ಕೆಸರಾಗುವಿಕೆ ; ರಾಡಿ ; ತರಳ ಸುಕುಮಾರನಂಗದ ಮಹಾಶೋಕದಿಂ ಧರಣಿಯೊಳ್ ಕೆಡೆದು ಪೊರಳುವ ಪರಿಯ ಕಂಬನಿಯ ನಿರದೆರೆದು ಜಂಬಾಲತೆಯನೆಸಗೆ ತಾರೆ ತ ಜ್ಜ ಳ ದಿ ಮುಳುಗಿರುವಳು (ವಂಕಾರಾ. ೪-೮-೨೫). [ ಸಂ. ಜಂಬಾಲತಾ ]

**ಜಂಬಾಳ** 'ಜಂಬಾಲ' ನೋ.

**ಜಂಬಿ** (ನಾ). ಬನ್ನಿಮರ ; ಶ ಮೀ ವೃ ಕ್ಷ : "ಜಂಬಿ – ಶಮಿ" (ಶಬ್ದಕೋ. ೧೪). 'ಜಂಬಿಸಾರಿ' ಪರಾ.

[ ದೇ.॥ ತೆಲು. ಜಂಬಿ, ಜಮ್ಮಿ. / ಸಂ. ಶಮೀ ]

**ಜಂಬಿಟ್ಟಗೆ, ಜಂಬಿಟ್ಟಿಕೆ, ಜಂಬಿಟ್ಟಿಗೆ, ಜಮ್ಮಿಟ್ಟಿಗೆ** (ನಾ). ಗಟ್ಟಿಯಾದ ಕೆಂಪುಮಣ್ಣಿನ ನೆಲದಿಂದ ಅಗೆದು ತೆಗೆಯುವ ಇಟ್ಟಿಗೆ: ಕಟ್ಟಿ ಕಟಲ್ಲು ಭಿತ್ತಿಯರೆ ಬಿರ್ದು [ × × × ] ಸಡಿಲ್ದು ದಿರ್ದ ಜಂಬಟ್ಟಗೆ ಕಂಬವೊಗಱಡಿಸಿ ನೆಟ್ಟನೆ ಬಿರ್ದಪುದು (ನಳಚಂ. ೫೩೫). **ಜಂಬಿಟ್ಟಿಕೆ:** ಶಿವಮೊಗ್ಗಾ ಮತ್ತು ಬೆಳಗಾಂವಿ ಜಿಲ್ಲೆಗಳಲ್ಲಿ ಕೆಲವು ಕಡೆ ಜಂಬಿಟ್ಟಿಕೆಯಿರುವ ಸ್ಥಳಗಳಲ್ಲಿ ಈ ಮಣ್ಣು ದೊರೆಯುತ್ತದೆ (ವ್ಯವಮ. ೫). **ಜಂಬಿಟ್ಟಿಗೆ:** ಅವನ ಮೊಣಕಾಲು ಮಂಡಿ ಮೊಣಕೈಗಳು ಹಾದಿಯ ಜಂಬಿಟ್ಟಿಗೆ ಕಲ್ಲಿಗೆ ತೀಡಿ ಗಾಯವಾಗಿ . . . ಅಳುತ್ತಿದ್ದನು (ಮರಮ. ೪೯೯). **ಜಮ್ಮಿಟ್ಟಿಗೆ :** ಮಲೆನಾಡಿನಲ್ಲಿಯೂ ಕನ್ನಡಜಿಲ್ಲೆಗಳಲ್ಲಿಯೂ ವಿಶೇಷವಾಗಿ ದೊರೆಯುವ ಜಮ್ಮಿಟ್ಟಿಗೆಯಲ್ಲಿ (Laterite) ಮಣ್ಣೂ ಕಬ್ಬಿಣವೂ ವಿಶೇಷವಾಗಿ ಬೆರೆದಿರುತ್ತವೆ (ಶಿಲ್ಪನಾ. ೨೬೮). [ ಜಂಬು₃ + ಇಟ್ಟಿಗೆ₁ ]

**ಜಂಬಿಟ್ಟಿಕೆ** 'ಜಂಬಿಟ್ಟಗೆ' ನೋ.

**ಜಂಬಿಟ್ಟಿಗೆ** 'ಜಂಬಿಟ್ಟಗೆ' ನೋ.

**ಜಂಬಿಯಾ** (ನಾ). ಕಠಾರಿ ; ಕಿರುಗತ್ತಿ : ಫಾತೀಮಾ ದಿವಾಣಖಾನೆಗೆ ಧುಮುಕಿ ಜಂಬಿಯಾ ಒಂದನ್ನು ಒರೆಯಿಂದ ಹಿರಿದುಕೊಂಡು ಬಂದು ಉಪ್ಪರಿಗೆಯ ಬಾಗಿಲಿಗೆ ನಿಂತಳು (ನೂರಜ. ೭೧).

[ ←ಪಾರ. ಜಂಬಿಯಾ ; ಮರಾ. ಜಂಬಿಯಾ, ಜಂಬ್ಯಾ ]

**ಜಂಬಿಸಾರಿ** (ನಾ). = ಜಂಬೂಸವಾರಿ ೧: ಧಾರಿಣೀಶ್ವರನರಮನೆ ಬಾಗಿಲಿಂ ಜಂಬಿಸಾರಿ ವಂಟಪ ಪರಿಯಂತ ಮೇರೆಯಿಲ್ಲದ ರತ್ನತೋರಣ ಕುರುಜು ಗಳ್ ಸೇರಿ ಕಟ್ಟಿದುವರ್ತಿಯಲ್ಲಿ (ಕಂಸವಿ. ೨೨-೭೪). [ ಜಂಬಿ + ಸಾರಿ₁ ]

**ಜಂಬೀರ** (ನಾ). ೧. ನಿಂಬೆಗಿಡ ಮತ್ತು ಅದರ ಹಣ್ಣು : "ಕರಣಃ, ಜಂಬೀರಃ–೨ ನಿಂಬೆ" (ಹಲಾಯು. ೩೨-೪೦): "ಜಂಬೀರಮೆನೆ ನಿಂಬೆ" (ಮಂಗರಾ. ೩೪-೧೦) ; ವಿಳಾಲುಂಗಲವಂಗಭೂರ್ಜಲವಲೀನಾರಂಗ ಜಂಬೀರಹಿಂತಾಳಾನೋಕಹಸಂಕುಳಂ (ಶಾಂತಿಪು. ೯-೧೪೩): ಮಿಸುನಿಯ ವಣ್ಣಾತೆ ನಾನಾಬಗೆ ವಟಕ ಸುಭೈಷಜ್ಯಕ ನರರ ರಸನೆಯ ಸವಿಗೆ ನಾವೆಂದಾಗ ಫಲ ಸಹಿತೆಸೆವ ಜಂಬೀರಗಳೆಸೆಹುವು (ಕಂಸವಿ. ೫-೮೪). ೨. ಒಂದು ಬಗೆಯ –ಸುವಾಸನೆಯ ಸಸ್ಯ ; ಮರುಗ. [ ಸಂ. ]

**ಜಂಬೀರಕ** (ನಾ). = ಜಂಬೀರ ೧: ಕಂಕೆಲ್ಲಿ ಕರ್ಮಾರನಾಮ್ರಂ ಬೆಳಲಿಂಗುಳಂ ಪನಸು ನಿಂಬಂ ಜಂಬು ಜಂಬೀರಕಂ (ಕಾವ್ಯಸಾ. ೧೧೪೦ ಕೂದ್ರಳ). [ಸಂ.]

**ಜಂಬು₁** (ನಾ). ಒಂದು ಬಗೆಯ ಜವುಗು ಸಸ್ಯ ; ಜೊಂಡು. 'ಜಂಬುಹುಲ್ಲು' ಪರಾ.

[ ದೇ.॥ ತಮಿ. ಚಮ್ಬು ; ತೆಲು. ಜಂಬು, ಜಮ್ಮು ]

**ಜಂಬು₂** (ನಾ). ೧. ನೇರಳೆಮರ ಮತ್ತು ಅದರ ಹಣ್ಣು : "ಜಂಬೂ ನಾಮಂ ನೇಱಲ್" (ವಸ್ತುಕೋ. ೩೪-೧೦): "ಜಂಬುವೆನೆ ನೇಱಲು" (ಮಂಗರಾ. ೩೫-೧೩): ಕಾರ್ತಸ್ವರಪ್ರಾಕಾರದಿಂದೊಳಗೆ ಅಶೋಕವಕುಳತಿಲಕ ಹಿಂತಾಲತಮಾಲಜಂಬುಜಂಬೀರಲವಂಗನಾರಂಗಾದ್ಯನೇಕಾನೋಕಹಾನೀಕ ಕಮನೀಯಮುಂ (ಅಜಿಪು. ೭-೨೦ ವ) : ಕುರವಕ ಬಿಲ್ವ ಜಂಬು ಸುರದಾರು ನಮೇರು ತಮಾಲ ತಾಲಬಂಧುರ (ಶ್ರೀಮಹಾ. ೧-೪೬). ೨. ಸಪ್ತದ್ವೀಪ ಗಳಲ್ಲಿ ಒಂದು. 'ಜಂಬುದ್ವೀಪ' ಪರಾ. [ ಸಂ. ]

**ಜಂಬು₃** (ನಾ). ಒಂದು ಬಗೆಯ ಕೆಂಪು ಗಟ್ಟಿ ಮಣ್ಣು. 'ಜಂಬಿಟ್ಟಗೆ' ಪರಾ. [ ←ಮರಾ. ಜಾಂಬಾ ]

**ಜಂಬುಕ** (ನಾ). ೧. ನರಿ : "ಶಿವೆ ಮೃಗಧೂರ್ತಂ . . . ಜಂಬುಕಂ ಸೃಗಾಲಂ ನರಿ" (ವಸ್ತುಕೋ. ४೦-೩) : ಜಂಬುಕ ಶಂಭುಧ್ಯಾನದಲ್ಲಿ ಸೈವೆಬಗಪ್ಪುದೇ (ದೇದಾವ. ೪೭-೯೪) : ನಾಳೆ ಹೆಣದೌತಣದಲುಣ ಬಡಿಸುವೆನು ಜಂಬುಕ ಕಾಕಸಂತತಿಗೆ (ಕುವ್ಯಾಕ. ೫-೮) : ಜಂಬುಕಂ ಜನಿಸುವುದೆ ಸಿಂಗದುದರದಲಿ (ಜೈಮಿಭಾ. ೧೭-೫೪). ೨. ವರಣ, ೩. ನೇರಳೆಮರ. [ ಸಂ. ]

**ಜಂಬುಕಾನ, ಜಂಖಾನ, ಜಂಬುಖಾನ, ಜಮಖಾನ, ಜಮಖಾನೆ** (ನಾ). ದಪ್ಪನೂಲಿನಿಂದ ಮಾಡಿದ ಹಾಸು ; ನೂಲುಗಂಬಳಿ : ಜಂಬುಕಾ[ಪಾಠಾಂ. ಪಾ]ನದ ಗದ್ದುಗೆಯೊಪ್ಪುವ ರತ್ನಕಂಬಲ ಮಲಗು ಮಂಚಗಳ . . . ಕಳುಹಿದನು (ರಾಮವಿ. ೭-೧೫) ; ಬಂದು ಕಾಣ್ಕೆಯನಿಕ್ಕಿ ಜಂಬುಕಾನದೊಳೋಲೆಯಿಂದ ಭದ್ರಾಸನಾದಿಗಳ ಮುಂದೆ ಪಾಗುಡವಿತ್ತು

ಕೈಮುಗಿದರು (ಧರಣಿ. ೩೫-೩೯) ; ಬಂದ ದಿಬ್ಬಣಿಗರಿಗೆ ಚಂದದಿ ಚಪ್ಪರವೂ ಜಂಬುಕಾನವು ಸಕಲಾತಿಗಳಾಸಿ ಚಂದವ ನುಡಿಯೆ ಬಂದ ಬೀಗರು ಸಂಭ್ರಮದಿ ಬಂದು ಕುಳಿತಾರೆ (ಕಜಾಗೀ. ೮೮).. **ಜಂಖಾನ**: ಸಾಲ್ ಹಿಪ್ಪೆಯಮರದ ನೆರಳಾಗೆ ಕೆಂಗಪ್ಪ ಸಣ್ಣ ಜಂಖಾನ ಕೊಡವ್ಹಾಸೊ ಜಾಣ (ನಾಪದ. ೩೭) : ಉಪ್ಪಾರದ್ದೆಣ್ಣೆ ನೀ ತುರುಬು ನೆಟ್ಟಗೆ ಮಾಡು . . . ಜಾಡಿ ಜಂಖಾನ ಒದರ್ಹಾಸು (ಹಳ್ಳಿಯ. ೬೧). **ಜಂಬುಖಾನ**: ಕಾಗೆಯ ಪಟ್ಟೆ ಒಂದಕ್ಕಂ ವೀಸ ರತ್ನಗಂಬಳಿ ಜಂಬುಖಾನದ ಮಳವೆ ಒಂದಕ್ಕಂ ಹಾಗ ಓಲೆಯ ಮಳವೆ (ಎಕ. V, ಬೇಲೂರು. ೬೫-೯೦ ; 1382) ; ಮುಂದು ಗಡೆಯಲ್ಲಿರುವ ಜಂಬುಖಾನದ ಮೇಲೆ, ಸಂಕಣ್ಣ ಕುಳಿತಿದ್ದಾನೆ (ದೇವಮ. ೨೨). **ಜಮಖಾನ**: ತನ್ನ ಜಮಖಾನವು ಹರಿದಿರುವೆಡೆಯೊಳೆ ಕುಳಿತು ಕೊಳ್ಳನು ಯಜಮಾನ (ಚಂದ್ರವೀ. ೧೫೩-೯) ; ಜಮಖಾನ ಹಾಸಿದ ಮೆಟ್ಟಲುಗಳ ಮೂಲಕ ಜಗಲಿ ದಾಟ ಮೆಟ್ಟಲಿಳಿದು ಬಂದಿದ್ದನು (ಪುನರು. ೨೪೬) ; ನೆಲಕ್ಕೆ ಹಾಕಿದ್ದ ಜಮಖಾನದ ಒಂದು ಕಡೆ ತಿಂಡಿಗಳು ತುಂಬಿದ್ದ ಚಿಕ್ಕ ಚಿತ್ರದ ಪೆಟ್ಟಿಗೆ (ರಂಗಕ. ೬೦). **ಜಮಖಾನೆ**: ಆ ಬಟ್ಟೆ ಬೇಗ ಕಳೆಯಲಿಕ್ಕೆ ಬಾರದಿದ್ದರೆ, ನೆಲದ ಮೇಲೆ ಬಿದ್ದು ಹೊರಳಾಡಬೇಕು ; ಇಲ್ಲವೆ ಜಮಖಾನೆಯನ್ನಾಗಲಿ ಕಂಬಳಿಯನ್ನಾಗಲಿ ಗಟ್ಟಿಯಾಗಿ ಸುತ್ತಿ ಕೊಂಡು ಮೇಲಿಂದ ಗಸಗಸ ತಿಕ್ಕಬೇಕು (ಮುಂಬಯಿ. ೪-೬೦) ; ಒಂದು ಜಮಖಾನೆ ಒಂದು ಚಾದರನ್ನು ತೆಗೆದುಕೊಂಡು ಅಡಿಗೆಮನೆಯ ಕಡೆಗೆ ಹೊರಟಳು (ಕಮನ. ೩೭).

[ ←ಪಾರ. ಜಮ್‌ಖಾನಾಹ್ ; ಮರಾ. ಜಮ್‌ಖಾನ್, ಜಮ್‌ಖಾಣ್, ಜಮಖಾನಾ ]

**ಜಂಬುಕಿ** (ನಾ). ೧. ಹೆಣ್ಣುನರಿ. ೨. (ಅಲಂ) ಉಪಾಯಗಾತಿ ; ತಂತ್ರಗಾತಿ : ಒಂದು ವೇಳೆ ಚಿಕ್ಕವರು ತಾತ್ಸಾರವಾಗಿದ್ದರೂ, ಮನೆಯಲ್ಲಿರುವ ವೃದ್ಧ ಜಂಬುಕಿಯರು ಅವರನ್ನು ಸುಮ್ಮನೇ ಬಿಟ್ಟಾರೆ ? (ಮುಸುಗ. ೪).

[ ಸಂ. ಜಂಬುಕೀ ]

**ಜಂಬುಖಾನ** 'ಜಂಬುಕಾನ' ನೋ.

**ಜಂಬುದ್ವೀಪ** (ನಾ). = ಜಂಬೂದ್ವೀಪ. [ ಸಂ. ]

**ಜಂಬುನಾಯ್ಗ** (ನಾ). ಒಬ್ಬಾಕೆಯ ಹೆಸರು: ಸ್ವಸ್ತಿಶ್ರೀ ಜಮ್ಬುನಾಯ್ಗರ್ ತೀರ್ಥದೊಳ್ನೋನ್ತು ಮುಡಿಪ್ಪಿದರ್ (ಎಕ. II, ೧೮ ; ಸು. 700).

[ ಜಂಬು ? + ನಾಯ್ಗ$_1$ (<ನಾಯಿಗ) + – ಇ$_2$ ]

**ಜಂಬುನೇರಳೆ** 'ಜಂಬುನೇಱಿಲೆ' ನೋ.

**ಜಂಬುನೇರಿಲು** 'ಜಂಬುನೇಱಿಲೆ' ನೋ.

**ಜಂಬುನೇರಿಲೆ** 'ಜಂಬುನೇಱಿಲೆ' ನೋ.

**ಜಂಬುನೇಱಿಲೆ, ಜಂಬುನೇರಳೆ, ಜಂಬುನೇರಿಲು, ಜಂಬುನೇರಿಲೆ** (ನಾ). ಉತ್ತಮಜಾತಿಯ ನೇರಳೆಮರ ಮತ್ತು ಅದರ ಹಣ್ಣು ; ಅರನೇರಳೆ : ಅಂಬರಚರಿಯರ ತನುಗಂಪಿಗೆಱಗುವ ತುಂಬಿಯ ಬಳಗದಂದದಲಿ ಮುಂಬರಿದೆಸೆವ ಕಪ್ಪಿಡಿದ ಫಲಾಳಿಯಿಂ ಜಂಬುನೇಱಿಲೆ ಗಳೊಪ್ಪಿದುವು (ಶಂಕವಿ. ೨-೪೪). **ಜಂಬುನೇರಳೆ** : ಜಂಬುನೇರಳೆ, ನೇರಳೆ (ಮೃಶಿಗ. ೬೩-೦೪೯೪). **ಜಂಬುನೇರಿಲು** : ಚಿಕ್ಕನೇರಿಲು ಜಂಬುನೇರಿಲು ಗಳರುಟಾಳ (ರುಕ್ಮಾಂಗ.೧೦-೩). **ಜಂಬುನೇರಿಲೆ** : ಕೊಕ್ಕನು ತೆರವುದು ಗಿಣಿಯದನುಣಲೆಂದು ಜಂಬುನೇರಿಲೆಯೆಂದು ನಂಬಿ (ಇಂಪಾಪ. ೧೬೪-೩೮).

[ ಜಂಬು$_2$ + ನೇಱಿಲ್$_1$(<ನೇಱಿಲ್) ]

**ಜಂಬುಮಣ್ಣು** (ನಾ). ಒಂದು ಬಗೆಯ ಕೆಂಪುಮಣ್ಣು : "ರಸ್ತೆ, ಮೊ. ಗಳಿಗಾಗಿ ಉಪಯೋಗಿಸುವ, ಕಬ್ಬಿಣ ಸಂಯುಕ್ತ ಪದಾರ್ಥಗೂಡಿದ, ಪುಡಿಪುಡಿಯಾಗುವ ಕೆಂಪು ಜೇಡು ಮೇಲ್ಮಣ್ಣು ; ಜಂಬುಮಣ್ಣು" (Laterite. ಇಂಕನಿ). [ ಜಂಬು$_3$ + ಮಣ್ಣು(<ಮಣ್) ]

**ಜಂಬುಮಿಾನು** (ನಾ). ಒಂದು ಬಗೆಯ ವಿಮಾನಂ : "ನಲವಿಮಾನಃ, ಚಲಿಚಿಮಃ, ಹುಲ್ಲಿನೊಳು ತಿರುಗುವ ಮಿಾನಿನ ಹೆಸರುಗಳು—ಅಂದರೆ, ಜಂಬುಮಿಾನು, ಹುಲ್ಲುಮಿಾನು" (ಸಿದ್ಧಾಂತಿ. ೬೩).

[ ಜಂಬು$_1$ + ಮಿಾನು$_3$ (<ಮಿಾನ್$_3$) ]

**ಜಂಬುರಿ** (ನಾ). ಜಂಬುಹುಲ್ಲಿನಿಂದ ಮಾಡಿದ ಹುರಿ,-ಹಗ್ಗ : ಎಮ್ಮ ಬಸವಣ್ಣನ ಕಾಲಿಗೆ ಜಂಬುರಿಯಂ ಹಾಕಿ (ಕಾಲಸಂ. ೧೩೪-೨).

[ ಜಂಬು$_1$ + ಹುರಿ$_3$(<ಪುರಿ$_3$) ]

**ಜಂಬುವಾವಿಕೆ** (ನಾ). ಒಂದು ಗ್ರಾಮದ ಹೆಸರು : ಯಸ್ಯಾಘಾಟನಾನಿ ಪೂರ್ವತೋ ಜಮ್ಬುವಾವಿಕಾಗ್ರಾಮ (ಇಕ. XII, ೧೬೦-೪೭; 812).

[ ? ]

**ಜಂಬುಹುಲ್ಲು** (ನಾ). ಒಂದು ಬಗೆಯ ಹುಲ್ಲು : "ಕಾಶಂ ಇಕ್ಷುಗಂಧಾ ಪೋಟಗಳಃ–ಇ ಜಂಬುಹುಲ್ಲು, ಗೊರೆಸುಹುಲ್ಲು" (ಸಿದ್ಧಾಂತಿ. ೧೩೧).

[ ಜಂಬು$_1$ + ಹುಲ್ಲು(<ಪುಲ್) ]

**ಜಂಬುಳಿ** (ನಾ). "ಹಾಸಿಗೆ" (ಕನ್ನಜಾ. ೨೦೦) : ಜಾಡಿ ಜಂಬುಳಿ ಹಾಸಿ ಬೆಳ್ಳಿಹರಿವಾಣವಿಟ್ಟು (ಕನ್ನಜಾ. ೩೩೪). [ ? ]

**ಜಂಬೂಘೃತ** (ನಾ). ನೇರಳೆಮರದ ತೊಗಟೆಯ ನಾರಿನಿಂದ ತಯಾರಿಸಿದ ಒಂದು ಬಗೆಯ ಔಷಧ: ಜಂಬೂಘೃತ–ನೇರಿಲ ಒಳನಾರಂ ೧ ಕೊಳಗದಷ್ಟು ನಾಗಳ ನೀರಿನಲ್ಲಿ ಚಾತುರ್ಭಾಗಾವಶೇಷವಾಗಿ ಕಾಸಿ . . . ಪಾಕವಂ ಮಾಡುವಾಗ (ಸಕವೈ. ೧೮೯). [ ಸಂ.(ಜಂಬೂ + ಘೃತ) ]

**ಜಂಬೂದ್ರುಮ** (ನಾ). ನೇರಳೆಮರ : ಜಂಬೂದ್ರುಮೋಪಲಕ್ಷಿತ ಜಂಬೂದ್ವೀಪದ ಮಂದರದ ಅಪರವಿದೇಹದ ಸೀತೋದಾನದಿಯ ಬಡಗಣ ತಡಿಯೊಳ್ (ಚಾಪುಂಪು. ೧೨-೩೧). [ ಸಂ.(ಜಂಬೂ + ದ್ರುಮ) ]

**ಜಂಬೂದ್ವೀಪ** (ನಾ). ಪುರಾಣಪ್ರಸಿದ್ಧವಾದ ಜಂಬೂ, ಪ್ಲಕ್ಷ, ಶಾಲ್ಮಲೀ, ಕುಶ, ಕ್ರೌಂಚ, ಶಾಕ ಮತ್ತು ಪುಷ್ಕರ ಎಂಬ ಸಪ್ತದ್ವೀಪಗಳಲ್ಲಿ ಒಂದು; ಭಾರತ ಹಾಗು ಅದರ ಸುತ್ತಮುತ್ತಲಿನ ಪ್ರದೇಶ : ಅತಿವೃತ್ತದೆ ರವಿಬಿಂಬಾಕೃತಿಯೋಜನ ಶತಸಹಸ್ರವಿಷ್ಕಂಭಂ ವಿಶ್ರುತ ಜಂಬೂವೃಕ್ಷ ಮಹಾಪ್ರತೀತಿಯಂ ನೆಗಟ್ಟುದಿಳೆಗೆ ಜಂಬೂದ್ವೀಪಂ (ಆದಿಪು. ೧-೪೯); ನಾನಾ ದ್ವೀಪದೊಳಗ್ರಿಮಂ ನೆಗಟ್ಟ ಜಂಬೂದ್ವೀಪಮ್ (ಸೌಇಇ. XX,೪೭-೧೨ ; 1074) : ಇರೆ ಜಂಬೂದ್ವೀಪಮಲ್ಲಿಂ ಪೊಱಗಿರೆ ಲವಣಾಂಭೋಧಿ (ಪುಷ್ಪಪು. ೧-೯೧). [ ಸಂ.(ಜಂಬೂ + ದ್ವೀಪ) ]

**ಜಂಬೂಫಲ, ಜಂಬೂಫಳ** (ನಾ). ನೇರಳೆಹಣ್ಣು : ಮಾಕಂದಂ ಫಲಹೀನವಾದ ಪದದೊಳ್ ಜಂಬೂಫಲಾಸ್ವಾದನಸ್ವೀಕಾರೋತ್ಸವದಿಂದದಂ ಮಱಿದ ಕೀರಪ್ರೌಢಿಯಂ ಕಾಣ್ಬುದಲ್ತೆ (ಮಲ್ಲಿಪು. ೮-೯೮). **ಜಂಬೂಫಳ**: ಜಳಜಂ ಬಾಳಂ ಜಂಬೂಫಳಮೆಂಬಿನಿತಱ ಕಷಾಯತೋಯ ಮನೆಱ ಬಂದೆಳಮಾವಿನ ಮೊದಲೊಳ್ ತತ್ಫಳಚಯಮಮೋದ ಸುರುಭಿಗಂಧಮನಾಳ್ಗುಂ (ಲೋಕೋಪ. ೬-೨೭); ಕಂದಮೂಲಮಂ ನವಜಂಬೂಫಳಮಮ್ರಫಳಂ ಕದಳೀಫಳಂಗಳಂ ತೀವಿ ತಂದು ಮುಂದಿಳು ಪುತ್ತುಂ (ಗಿರಿಕ. ೯-೯೧). [ಸಂ. (ಜಂಬೂ + ಫಲ) ]

**ಜಂಬೂಫಳ** 'ಜಂಬೂಫಲ' ನೋ.

**ಜಂಬೂಮೊಡವೆ** (ನಾ). ಒಂದು ಬಗೆಯ ಮೊಡವೆ; ಕೆಂಪು ಮೊಡವೆ (?) : ಸುಣ್ಣ, ಅರಿದಳ, ಆಲದ ಹಣ್ಣೆಲೆ . . . ಅರಿಸಿನ ಇವಂ ಸಮಾನಂಗೊಂಡು ಅರೆದು ಎಣ್ಣೆಯಲ್ಲಿ ಕಲಸಿ ಪೂಸಲು ಬಂಗು, ಜಂಬೂಮೊಡವೆ ಇವೆಲ್ಲಾ ಮಾಣ್ಗುಂ (ವಿಪ್ರವಿ. ೧೩೦). [ ಜಂಬು$_3$ + ಮೊಡವೆ]

**ಜಂಬೂರ್** (ನಾ). ಒಂದು ಊರಿನ ಹೆಸರು : ಇದಕ್ಕೆ ಸಕ್ಕಿ ಜಮ್ಬೂರ ಪೆಮ್ಮಾಡಿಗಾವುಣ್ಣನು ಬಾಗೆಯೂರ ಕಮ್ಮಾಱಗಾವುಣ್ಣನು (ಎಕ. V, ಚನ್ನರಾ. ೨೩೦-೧೨ ; ಸು. 926). [ ? + ಊರ್ ]

**ಜಂಬೂರಿ** (ನಾ).=ಜಂಬುವಣ್ಣು : ಬೆಳಗಾವಿ, ಕಾರವಾರ, ಮಂಗಳೂರು ಮುಂತಾದ ಕಡೆಯಲ್ಲಿ ಜಂಬೂರೀ ಇಟ್ಟಿಂಗಿಗಳ ಮನೆಗಳನ್ನು ಕಟ್ಟುವರು (ಮುಂಬಯಿ. ೪-೨೩೦). [ < ಜಂಬು₃ ]

**ಜಂಬೂವಿಟಪ** (ನಾ). = ಜಂಬೂದ್ರುಮ : ತೋರ್ಪ ತೊಂಗಲೆ ಜಂಬೂ ವಿಟಪಪ್ರಹಾರರುಚಿಯಂ ವಕ್ತ್ರಾರುಣಂ ಸಂಜೆಯಂ ಗೆಲೆ ಪೋಲ್ತತ್ತು (ಕಾವ್ಯಸಾ. ೩೨೩ ಕೊರ್ಪ್ಯ೪). [ ಸಂ. (ಜಂಬೂ + ವಿಟಪ) ]

**ಜಂಬೂಸವಾರಿ**(ನಾ). ೧. ಬನ್ನಿಮಂಟಕ್ಕೆ ಆನೆಯ ಮೇಲೆ ಹೊರಡುತ್ತಿದ್ದ ಮೆರವಣಿಗೆ. P ಮೈಸೂರುದೇಶದ ಅರಸರು ಸಾಂಪ್ರದಾಯಿಕವಾಗಿ ನಾಡಹಬ್ಬದ ಉತ್ಸವದ ಅಂಗವಾಗಿ ಆನೆಯ ಮೇಲೆ ಬನ್ನಿಮಂಟಕ್ಕೆ ಹೊರಡುತ್ತಿದ್ದ ಮೆರವಣಿಗೆ: ನಾನೊಬ್ಬನೇ ಜಂಬೂಸವಾರಿಗೆ ಹೊರಡುವುದೇ ಸರಿ ಎಂದು ನಿರ್ಧರಿಸಿದೆ (ವೃದ್ಧವಿ. ೯೨). ೨. ಮೆರವಣಿಗೆ: ಭರತನು ರಾಮಪಾದುಕೆಯನ್ನು ತಲೆಯ ಮೇಲಿಟ್ಟುಕೊಂಡು ಜಂಬೂಸವಾರಿ ಹೊರಟನು (ಹುಟ್ಟಿಹ. ೦೩೬). [ಜಂಬೂ₀ (P ←ಇಂ. Jumbo) + ಸವಾರಿ]

**ಜಂಬೆ** (ನಾ). ಒಂದು ಬಗೆಯ ಧಾನ್ಯ: ವಿರೋಧಿಸಂವತ್ಸರದಲು ಹೆಚ್ಚಿದ ಜಂಬೆಯಿಂದ ವಿಶ್ವನಾಥಪುರದ ಸ್ವಾಸ್ಥ್ಯಯಿಂದ ಬಿಜ ಖ ೧೦೬ ಭತ (ವ್ಯಾಆರಿ. ೧೯೪೩, ೪೪-೩೩; 1711). [ ? ]

**ಜಂಭ₁** 'ದಂಬ' ನೋ.

**ಜಂಭ₂** (ನಾ). ೧. ನಿಂಬೆಯ ಗಿಡ ಮತ್ತು ಅದರ ಹಣ್ಣು ; "ಜಂಬೀರಃ, ದಂತಶಠಃ, ಜಂಭಃ, ಜಂಭೀರಃ, ಜಂಭಲಃ ಈ ನಿಂಬೇಗಿಡದ ಹೆಸರುಗಳು" (ಸಿದ್ಧಾಂಶಿ. ೧೦೩); ಪೊಂಗುತಿಹ ಕ್ರಮುಕಾವಳಿ ಬಿಲ್ವ ಜಂಭ ನಾರಂಗ ಫಲ (ಬಲಪು. ೧೦-೨೦). ೨. ದವಡೆ. ೩. ಬಾಯಿ. ೪. ಹಲ್ಲು; ದಂತ; ಕೋರೆ. ೫. ಬಾಯಿಂದ ಕಚ್ಚುವುದು; ತಿನ್ನುವುದು. ೬. ಇಂದ್ರನಿಂದ ಹತನಾದ ಒಬ್ಬ ರಾಕ್ಷಸನ ಹೆಸರು : ತಾರಕನ ಕೈಟಭನ ಮಹಿಷನ ವೀರಜಂಭನ ಕಾಲನೇಮಿಯ ತಾರಕಾಕ್ಷನ . . . ಜಜ್ಜೂರತನವಿವ ನೊಬ್ಬನಲಿ (ಕುವ್ಯಾದ್ರೋ. ೦೬-೩೭) ; ಬರಹೇಳ್ ನಿಕುಂಭನಂ ಶುಂಭನಂ ಜಂಭನಂ ಬರಹೇಳ್ ಸಶಬಲನಂ ಪ್ರಬಲನಂ (ಜಲಪು. ೪೬-೨೧). [ ಸಂ. ]

**ಜಂಭದ್ವಿಷ್ಟ** (ನಾ).= ಜಂಭದ್ವೇಷಿ: "ಸುತ್ರಾಮಾಖ್ಯಂ . . . ಪಾಕನಮುಚಿ ಜಂಭದ್ವಿಷ್ಟಂ" (ವಸ್ತುಕೋ. ೬-೩೪). [ ಸಂ. ]

**ಜಂಭದ್ವೇಷಿ** (ನಾ). ಜಂಭ ಎಂಬ ರಾಕ್ಷಸನ ಶತ್ರು ; ಇಂದ್ರ : ದೋಷಿ ಬಂದನೆನುತ್ತ ಜಂಭದ್ವೇಷಿಯುಂ ಬೆನ್ನಟ್ಟಿ ಕರವಂ ರೋಷದಿಂ ಕಡಿದಮರ ಜನನಿಯ ಗೋಣಮಂ ಕೊಯ್ದು (ಬಸಪು. ೩೪-೩೨). [ಸಂ. ಜಂಭದ್ವೇಷಿನ್]

**ಜಂಭರಿಪು** (ನಾ). = ಜಂಭದ್ವೇಷಿ : "ಗಿರಿನಮುಚಿಬಲವೃತ್ರಜಂಭರಿಪುವೆನೆ . . . ಶಚೀಪಾಲನೆಂದರೆ ಶಕ್ರನಕ್ಕುಂ" (ಮಂಗರಾ. ೦೨-೨).

[ ಜಂಭ₂ + ರಿಪು ]

**ಜಂಭರಿಪುನಾಥ** (ನಾ). ಇಂದ್ರನಿಗೆ ಪ್ರಭು; ಶಿವ: ಜಯ ಜನಾರ್ದನವಂದ್ಯ . . . ಜಯ ಜಂಭರಿಪುನಾಥ (ಹಹಳಾ. ೧೦-೪೦). [ಜಂಭರಿಪು + ನಾಥ ]

**ಜಂಭಲ** (ನಾ). = ಜಂಬೀರ ೧ : ತಿಲಕಾಶೋಕ ರಸಾಲ ಸಾಲವಕುಳಾಶ್ವತ್ಥಾರ್ಜುನಪುಷ್ಪಜಂಭಲ ಜಂಬೂಬದರಿ ತಮಾಲ ಕದಳಿ ಬಂಧೂಕ . . . ಕಣ್ಗೊಪ್ಪಿತು (ವಂಕಮ. ೩-೩). [ ಸಂ. ]

**ಜಂಭಾರಿ**(ನಾ).=ಜಂಭದ್ವೇಷಿ: ಜಂಭಾರಿ ವಿಕೃತಮಾಡುವ ರಂಭಾನಟಿಯಂತೆ ಲಾಸ್ಯದೊಳ್ ತಾಂಡವಮುಜ್ಜೃಂಭಿಸೆ (ಶಾಂತಿಪು. ೦೦-೬೪); ಆರು ಕೊಟ್ಟರು ಶರವನಿದ ಮದನಾರಿಯೋ ನಿಮ್ಮಯ್ಯನಹ ಜಂಭಾರಿಯೋ (ಕುವ್ಯಾದ್ರೋ. ೧೪-೦೩). [ ಜಂಭ₂ + ಅರಿ₂ ]

**ಜಂಭೀರ** (ನಾ). ೧. ನಿಂಬೆಯ ಗಿಡ ಮತ್ತು ಅದರ ಹಣ್ಣು : ಜಂಬೀರಃ . . . ಜಂಭೀರಃ, ಜಂಭಲಃ ಈ ನಿಂಬೇಗಿಡದ ಹೆಸರುಗಳು " (ಸಿದ್ಧಾಂಶಿ. ೦೦೩). ೨. ಮರುಗ ; ಮರುವಕ. [ ಸಂ. ]

**ಜಂಭೆ** (ನಾ). ಒಂದು ಬಗೆಯ ಮರ : ಕೆಲವು ಕಡೆಗಳಲ್ಲಿ ತೇಗ, ನಂದಿ, ಹೆಬ್ಬಲಸು, ಬಲಿಗೆ, ದೂಪ, ಜಂಭೆ . . . ಮುಂತಾದ ಗಗನ ಚುಂಬಿತ ವೃಕ್ಷಗಳು (ಶಂಚಪಂ. ೨). [ ? ]

**ಜಕಂ** 'ಜಖಂ' ನೋ.

**ಜಕಜಕನೆ** (ಅ). ಗಾಬರಿಯೊಡನೆ; ಹೆದರಿಕೆಯಿಂದ ಕೂಡಿ : ಪ್ರಜೆಯು ಜಕಜಕನೆ ಜರದು ಗಜಬಜೆಯಾಗೆ (ಗುರುಚಾ. ೧೩-೯೮).

[ ಜಕಜಕ₀ + – ಅನೆ₁ ]

**ಜಕಣಿ** 'ಜಕ್ಕಿಣಿ' ನೋ.

**ಜಕಮಿ** 'ಜಖಮಿ' ನೋ.

**ಜಕಾತಿ, ಜಕ್ಕಾತಿ** (ನಾ). ೧. ಸರಕುಗಳಿಗೆ ಉಕ್ಕಡದ ಬಳಿ ಕೊಡುವ ತೆರಿಗೆ ; ಸುಂಕ : ಸರಕಾರದವರು ಉಪ್ಪಿನ ಜಕಾತಿ ಕೊಡ್ರಿಸಿದ್ದರಿಂದ ಈಗ ಸ್ವಲ್ಪ ಸ್ಥಳಗಳಲ್ಲಿ ಮಾತ್ರ ಉಪ್ಪು ಹುಟ್ಟುತ್ತದೆ (ಕಥಾಗ. ೨೮) : ನಮ್ಮಲ್ಲಿಯ ' ಜಕಾತಿ ' ಹೈದರಾಬಾದ ನಿಜಾಮಶಾಹಿಯಲ್ಲಿ 'ಕರೋಡಗಿರಿ' ಯಾಗುತ್ತದೆ (ಧಾಕಾಶಾ. ೧೨). ೨. "ಸುಂಕದ ಕಟ್ಟೆ"(ಜಾನಕೋ. ೩೮). **ಜಕ್ಕಾತಿ:** ೨. ಹಕ್ಕಿ ಹಾರಿದರೆ ಬೆದರ್ಯಾವ ನಗರದ ಜಕ್ಕಾತಿ ಮಿರಿ ಬರತಾವ (ಹಳ್ಳಿಹು. ೧೦೯)

[ ←ಅರ. ಹಿಂ. ಮರಾ. ಜಕಾತ್ ]

**ಜಕಾತಿಕಟ್ಟೆ** (ನಾ). ಸುಂಕದ ಕಟ್ಟೆ ; ತೆರಿಗೆ ವಸೂಲಿಯ ಉಕ್ಕಡ : ಜಕಾತಿಕಟ್ಟೆಯವರಿಗೆ ಸಿಗುವದೆಂದರೆ ಒಂದೇ–ಜಕಾತಿ ತಪ್ಪಿಸಿ ಮಾಲು ಸಾಗಿಸುವವರಿಂದ ಸಿಗುವ ಲಂಚ (ಪಾತರ. ೦೪೩). [ ಜಕಾತಿ + ಕಟ್ಟೆ₁ ]

**ಜಕಾರ** (ನಾ). = ಜ ೧ : ಚಕಾರಕ್ಕೆ ಜಕಾರಂ–ಕಾಚ–ಗಾಜು (ಶಮದ. ೨೩೩ ವೃಯೋ). [ ಸಂ. ]

**ಜಕೀರ, ಜಕೀರಿ, ಜಕೇರ, ಜಖೀರು** (ನಾ). ದಾಸ್ತಾನು ; ಸಂಗ್ರಹ : ಸಾರಿಪೆ ವರಮನೆಯಾಳ್ಕೆಯ ದೊಡ್ಡ ಜಕೀರಗೆಂದು ಸರ್ವರಿಗಾ ರಾಯನರಮನೆವಾರಕದೊಳಗುತ್ತಮರೆನಿಸುವೊಬ್ಬೊಬ್ಬ ಮರಾಳನಿತ್ಯಂತೆ (ಭಕ್ತಿಸ. II, ೦೦-೧). **ಜಕೀರಿ :** ಬಿದುರೂರ ಪರಿಸ್ತರಣಮಂ ವೇಢೈಸಿ ಜಕೀರಿ ರಸ್ತು ಮುಸ್ತೈದಿಗಳೊಳಪೊಗದಂತು ಕಂಡಿ ಕಣಿವೆ ಪಥಂಗಳಂ ಕಟ್ಟಿ (ಕೆಳನೃ. ೩-೪೪). **ಜಕೇರ:** ಎರಡನೇದು. ಅರಮನೆ ಜಕೇರವಂತು ಕಂಡು ಇದೆ (ರಾಜೇಂದ್ರ. ೩೭). **ಜಖೀರು :** ಚಿತ್ರದುರ್ಗದ ಪೂರ್ವದ ದೊರೆಗಳು ತಯಾರ್ಮಾಡಿಸಿ ಹಾಕಿರುವ ಮದ್ದುಗುಂಡು ತೋಪುಖಾನೆ ಬಾಣ ಮುಂತಾದರ ಜಖೀರು ಬಹಳವಾಗಿದೆ (ಚಿತ್ರಪಾ. ೬೩).

[ ←ಮರಾ. ಜಕೀರ್ ; ಅರ. ಪಾರ. ಜಖೀರಾ ]

**ಜಕೀರಿ** 'ಜಕೀರ' ನೋ.

**ಜಕೇರ** 'ಜಕೀರ' ನೋ.

**ಜಕ್ಕ₁** 'ಚಕ್ಕ₁' ನೋ.

**ಜಕ್ಕ₂** (ನಾ). ೧. ಕುಬೇರನ ಪ್ರಜೆಗಳಲ್ಲಿ ಒಬ್ಬ ; ಯಕ್ಷ : ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ ತಡೆಯದಿಂದ್ರಪ್ರಸ್ಥಪುರಕ್ಕೆ ಬಂದಂ (ಪಂಪಭಾ. ೬-೩೨ ವ); ಜಕ್ಕರ್ ಪೂಜಿಸಿ ಪೋದ ಬಟಿಕ್ಕಂಗದ ನೇಜ಼ಿ ಬಾರಿಸುತ್ತಂಕುಶದಿಂ ದಿಕ್ಕರಿಯನಧಃಕರಿಸುವ ತಕ್ಕಿನ ಕಿಷ್ಕಿಂಧಮೆಂಬ ನಿಜವಾರಣಮಂ (ಪಂರಾಮಾ. ೧೪-೯೩). ೨. ಒಬ್ಬಾತನ ಹೆಸರು : ಅನಿತುಯೊಳ್ಗುಣಮುಮಜಿವು ಧರ್ಮ್ಮಮುಂ ಜಕ್ಕ ನಿನಗಲ್ಲದಿಲ್ಲ ಭುವನದೊಳ್ (ಎಕ. VIII, ನಗರ. ೬೨-೨ ; ಸು. 800) ; ಅವರ ಮಗನ ಮಗಂ ಜಕ್ಕ ಪೆಣ್ದಿರುಡೆಯುಟ್ಟುವ ಪುಯ್ಯಲಂ ತುಱುಯ್ಯಲುವ ಕೇಳ್ದು ತಾಗಿ ಕಾದಿ (ಎಕ. XII, ಶಿರಾ. ೪೩-೩ ; ಸು. 1000). ೩. (ಆಲಂ) ನವೆಯುತ್ತಿರುವವನು; ಕ್ಷೀಣದೇಹದವನು; ಸೊರಗಿ ಹೋಗುತ್ತಿರುವವನು: ದಿನ ಹೋದ ಹಾಗೆಲ್ಲ ಜಕ್ಕನಾಗುತ್ತಿ. ಉಂಡದ್ದೆಲ್ಲಾ ಎಲ್ಲಿ ಹೋಗುತ್ತದೆ? (ರೂಢಿ). [ < ಪ್ರಾ. ಜಕ್ಖ / ಸಂ. ಯಕ್ಷ ]

**ಜಕ್ಕಂಜಱ್** (ಕ್ರಿ). ಅತಿಯಾಗಿ ನಿಂದಿಸು ; ನಿರ್ದಾಕ್ಷಿಣ್ಯವಾಗಿ ಜರ್ರಿ-ಹೀಯಾಳಿಸು: ಈ ಪೆರ್ಮೆಗೆ ನೋಂತಳೀ ಹರೆಯಮಿಾ ಪಡಪೀ ಸೊಬಗೀ ವಿಳಾಸಮೇಂ ಕಾರ್ಮುಗಿಲ್ಯೊಳ್ ಬಸಂತನಿವಳಂಗದೊಳ್ ನೆಲೆಗೊಂಡು ದಕ್ಕುಮೇಂ ಅಂತು ಜಕ್ಕಂಜಱಿವ ಕಜ್ಜಮಂ ಕೇಳ್ದು (ಅನಂಪು. ೮-೧೯ ವ). [ ಜಕ್ಕನೆ$_0$ + ಜಱ್$_1$ (<ಜಱ್) ]

**ಜಕ್ಕಂದೊಳ** 'ಜಕ್ಕಂದೊಟಲಿ' ನೋ.

**ಜಕ್ಕಂದೊಳಲಿ** 'ಜಕ್ಕಂದೊಟಲಿ' ನೋ.

**ಜಕ್ಕಂದೊಳಲಿದೇರ** 'ಜಕ್ಕಂದೊಟಲಿದೇರ' ನೋ.

**ಜಕ್ಕಂದೊಟ** (ನಾ). ಚಕ್ರಾಕಾರವಾಗಿ ಸುತ್ತುವ ಉಯ್ಯಾಲೆ ; ಗಿರಕಾಲೆ : ಸುಟಿಗಾಳಿಯ ತೂಲದಂತೆ ಜಕ್ಕಂದೊಟದಂತೆ ಜಾಟಣದ ಗುಂಡಿಗೆಯಂತೆ ಕುಳಾಳಚಕ್ರದಂತಿಂದುವರಂ ತೊಟಲ್ತುರುತುಮಿರ್ದುದೆ ಸಾಲದೆ ಕರ್ಮಯೋಗದಿಂ (ಚಂದ್ರಪು. ೧೩-೯೦); ದೇವಕಾಂತೆಯರಲ್ಲಾಡದೆ ಸಂದ ಸೆಳ್ಳುಗುರ ಸೂಚೀನರ್ತನಂ ಬಾಹುಶೋಭೆಯ ಜಕ್ಕಂದೊಟ ವಂಶಮಂಡಲದ ಲಾಸ್ಯಂ ತನ್ನ ಮೆಯ್ಯುದ್ದಮಂ (ಅನಂಪು. ೩-೯೭). [ <ಸಂ. ಚಕ್ರಾಂದೋಲ ]

**ಜಕ್ಕಂದೊಟಲಿ, ಜಕ್ಕಂದೊಳ, ಜಕ್ಕಂದೊಳಲಿ, ಜಕ್ಕಂದೋಟ** (ನಾ). ಕೋಣ ; ಮಹಿಷ : ಜವನೇಱಿದೊಂದು ಜಕ್ಕಂದೊಟಲಿಯಂತೆ ಕಣ್ಗೆಸೆದುದೇಱಿದಿಭಂ ಚಲದಂಕರಾಮನಾ (ಕಮದ. ೧೭೨ ಪ್ರಯೋ); ಏಂ ಮಲೆಪ್ಪೆ ಜಕ್ಕಂದೊಟಲಿಯ (ಚಳವಿ. ೬-೨೭೪): ಜವಹುರದ ಜಕ್ಕಂದೊಟಲಿಯಂ ಗೆಲೆವರ್ಪ ಕಾಟ್ಕ್ಯೋಣವಳಗದಿಂದೆಯುಂ (ರಾಮಾಶ್ವ. ೩-೨೫). **ಜಕ್ಕಂದೊಳ :** ಜವನೇಱಿದೊಂದು ಜಕ್ಕಂದೊಳದಂತೆ ಸೇವುಣಘರಟ್ಟನ ವೀರವಿಳಾಸಸಿಂಧುರಂ (ಎಕ. VI, ತರೀಕ. ೪೫-೪೭; 1196). **ಜಕ್ಕಂದೊಳಲಿ:** ಜವನ ಜಕ್ಕಂದೊಳಲಿಯಂತೆ ಮಾರಿಯ ಮಸಕದಂತೆ ಪಸರಿಸಿ ನಿಂದ ರಥಿಕಪ್ರತಾನದೊಳಂ (ಗಿರಿಕ. ೬-೫೫ ವ); ಜವನ ಜಕ್ಕಂದೊಳಲಿಯಂತಿರ್ದ ಗಜಸಮಾಜದಿಂ (ಹರಿಶ್ಚ. ೩-೩೩ವ) : ಕಾರ್ಮುಡುವಣ್ಣ ಜಕ್ಕಂದೊಳಲಿಯ ತಾ ನನ್ನಿಯಿಂದೇರುತ್ತ (ಅರ್ಜುವಿ. ೮-೧೮). **ಜಕ್ಕಂದೋಟ:** ಜವನ ಜಕ್ಕಂದೋಟದೊಡ್ಡೈದೆ ಮುಮ್ಮಟಿ ಯಪ್ಪಂತಿದಿರೇಱಿ ತಳ್ತುವು ರಥಾನೀಕಂ ರಥಾನೀಕದೊಳ್ (ಅನಂಪು.೧೪-೫). [ ? ]

**ಜಕ್ಕಂದೊಟಲಿದೇರ, ಜಕ್ಕಂದೊಳಲಿದೇರ**(ನಾ). ಕೋಣವನ್ನು ವಾಹನವಾಗುಳ್ಳವನು ; ಯಮ : "ಜಕ್ಕಂದೊಟಲಿದೇರನನೆ ಯಮುನಕ್ಕುಂ" (ಕವಿಕಂ. ೩೭). **ಜಕ್ಕಂದೊಳಲಿದೇರ :** ಈಯೊಡಲ್ಗಿಟದೆ ಜಕ್ಕಂದೊಳಲಿ ದೇರನಾಲಯಮ (ಸಿದ್ಧೇಪು. ೫-೨೮). [ ಜಕ್ಕಂದೊಟಲಿ+ತೇರ್$_2$+ – ಅ$_7$ ]

**ಜಕ್ಕಂದೋಟ** 'ಜಕ್ಕಂದೊಟಲಿ' ನೋ.

**ಜಕ್ಕಜವ್ವನ** (ನಾ). ಪೂರ್ಣ ಯೌವನ ; ತುಂಬು ಯೌವನ : ಅವರೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ರಾಮಾಶ್ವ. ೫೦-೧೪) : ಮತ್ತಮೊಂದೆಡೆಯೊಳೊರ್ವಳ್ ಜಕ್ಕಜವ್ವನದ ಚೆಲ್ಲಗಾರ್ತಿ (ಚಂದ್ರಚ್ಛ್ಯ. ೦೪-೧೪೨ ವ). [ <ಜಕ್ಕನೆ + ಜವ್ವನ ]

**ಜಕ್ಕಡಿ, ಚಕ್ಕಡಿ$_1$, ಜಕ್ಕುಡಿ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ಜಕ್ಕಡಿ ಚಿಂದು ಮೊದಲಾದ ಠಾಯವು (ರೇವಣ. ೩೦-೩೮) : ಅದಿರ್ದ ಜಕ್ಕಡಿಯ ಕೊಂಡರು ಜನಸ್ತುತಿಗೈದರು (ಭರತ. ೧೨-೧೦೫); ಅನುಗೊಳಿಸಿ ಚಿಂದು ಜಕ್ಕಡಿ ಕೋಲಚಾರಿಗಳ್ . . . ಉಳ್ಳನಿತು ಭೇದಂಗಳಿಂ ನರ್ತಿಸುವ ನೃತ್ಯದಬಲಾಜನಂ ಕಣ್ಗೆಸೆದುದು (ಚಬಪು. ೨-೨೯). **ಚಕ್ಕಡಿ$_1$ :** ಉರುವ ನೇರಗಳ ಚಕ್ಕಡಿ ಚಿಂತು ಮೊದಲಾದ ಪರಿಪರಿ ನಾಟ್ಯದೋಱಿದನು (ಭರತ. ೭೪-೯೧). **ಜಕ್ಕುಡಿ :** ಗುಡಿಗುಡಿಗಳ ನರ್ತನಗಾತಿಯರೊಳು ಪೆರ್ಬಡಿಸುವ ಗೀತಶಬ್ದಗಳ ವಡಿತಪ್ಪದೆ ಕೋಲಚಾರಿಗಳಿಂದ ಜಕ್ಕುಡಿ ಮೆಱೆದುವು ದೇವಾಲಯದಿ (ಮೋಹತ. ೧೮-೭). [ <ಸಂ. ಜಕ್ಕರೀ ]

**ಜಕ್ಕಣಿ** 'ಜಕ್ಕಿಣಿ' ನೋ.

**ಜಕ್ಕಣಿತಾಳ** (ನಾ). [ಸಂಗೀತ] ಒಂದು ಬಗೆಯ ತಾಳ: ರಾಗ ಮಧ್ಯಮಾವತಿ.-ಜಕ್ಕಣಿತಾಳ (ಪ್ರಸಭಃ. ೬೦) [ ಜಕ್ಕಣಿ$_0$ (<ಜಕ್ಕಡಿ) + ತಾಳ$_1$ (= ತಾಲ) ]

**ಜಕ್ಕನೆ** (ಅ). ಸಂಪೂರ್ಣವಾಗಿ: ಕೊಳಗೊಳಂಗಳೊಳ್ ತೊಟಲ್ದು ಬಟಲ್ದು ಬೆಂಡಾಗಿ ಬಿಟ್ಟು ಜಕ್ಕನೆ ಜಱಿವ ಜಕ್ಕವಕ್ಕಿಗಳ (ಲೀಲಾವ. ೩-೨೧). [ ? + – ಅನೆ$_1$ ]

**ಜಕ್ಕಬ್ಬೆ** (ನಾ). ಒಬ್ಬಾಕೆಯ ಹೆಸರು : ಜಕ್ಕಬ್ಬೆ ತಂಗೆ ಜಾಬೆ ಕಲ್ಲ ನಿಱಿಸಿದಳ್ (ಎಕ. II, ೪೫೭-೭ ; 972). [ ಜಕ್ಕ$_2$ + ಅಬ್ಬೆ$_1$ ]

**ಜಕ್ಕವಕ್ಕಿ** 'ಚಕ್ಕವಕ್ಕಿ' ನೋ.

**ಜಕ್ಕಸರ** (ನಾ). ಒಂದು ಬಗೆಯ ಕಂಠಾಭರಣ : ಆ ಜಕ್ಕಸರಂ ನಿನ್ನರಸಿಗೆ (ರಾಮಾಶ್ವ. ೩೮-೧೮) ; ಆ ಯೆಕ್ಕಸರಂ ತರಳಿಕೆಗೆ ಜಕ್ಕಸರಮಿಾ ಹರಿಣಕೆಗೀ ಓಂಡುಗಂಕಣಂ ನಿನಗಾಯತ್ತು (ಚಂದ್ರಚ್ಛ್ಯ. ೫-೮೯) [ ಜಕ್ಕ ? + ಸರ$_6$ ]

**ಜಕ್ಕಾತಿ** 'ಜಕಾತಿ' ನೋ.

**ಜಕ್ಕಿ** (ನಾ). ಯಕ್ಷಸ್ತ್ರೀ ; ಯಂಕ್ಷಿ : "ಕನ್ನಿಕೆಯರು ಜಲಾಶ್ರಿತೆಯರೆನಲ್ಕೆ ಜಕ್ಕಿಯರೆನಿಕ್ಕು" (ಮಂಗರಾ. ೫-೧೫) ; ಜಕ್ಕಿಯರೂಟಮೆ ಕೂಟದೇಟ್ಗಿಯೊಳ್ ಸುರುಕೆನಬಾರದೆಂಬ ಚೆಲೆವೆಣ್ಗಳ ಕೂಟಮನಿಕ್ಕು ಕಿಟ್ಟಿನೊಳ್ (ಅನಂಪು. ೮-೫೭) ; ಶರೀರಿಯಿಂ ನೆಮ್ಮಿದ ಕುತ್ತಮೊತ್ತಿದೊಡೆ ಗಾಳಿ ಗರಂ ನೆಲಮುಕ್ಕಿ ಜಕ್ಕಿಯಬೆರ್ಮ್ಮಯನೆಂದು ಜೀವಪಥೆಗೆಯ್ದೊಡೆ (ಹಾಸ್ಯಟೀ. ೨೪.೩); ಶಿರಸ್ಸರಸೀಜದಿಂಡೆಯುಂ ಜಾನಿಸದಾಗಳಾಂ ಜಲದ ಜಕ್ಕಿಯರ್ಗೇಱಿಸಿದೆಂ ನಿರಂತರಂ (ದಶಕು. ೧೩-೫೧) ; ಜಕ್ಕಿಯ ತೆರೆಯ ತೆಱೆದು ಮ್ಮೆಯ ತೋರ್ಪಾಗ ಚಿಕ್ಕಮಾತೇಕೆಂದಳಾಕೆ (ಭರತ. ೪೨-೧೭). [ <ಸಂ. ಯಕ್ಷೀ ]

**ಜಕ್ಕಿಕೊಳಗ** (ನಾ). ಯಕ್ಷಿಗೆ ಮಿಾಸಲಾದ ಕೊಳಗದಷ್ಟು ಧಾನ್ಯ : ಆ ಊರಹಳ್ಳಿ ಸಹಿತ ಜಕ್ಕಿಕೊಳಗ ಧರ್ಮ್ಮಗೊಳ ದಾನಗೊಳಗ ಕಳದು (ಎಕ. IV, ಚಾಮರಾ. ೮೩-೩೦ : 1117). [ಜಕ್ಕಿ + ಕೊಳಗ$_1$]

**ಜಕ್ಕಿಣಿ, ಜಕಣಿ, ಜಕ್ಕಣಿ, ಜಿಕ್ಕಿಣಿ** (ನಾ). ೧. ಯಕ್ಷಿಣಿ; P ಮುತ್ತೈದೆಯಾಗಿ ತೀರಿಕೊಂಡವಳು ತಾಳುವಳೆಂದು ನಂಬಲಾದ ದೇವತಾ ರೂಪ : ಜಕ್ಕಿಣಿಯನ್ನು ನಿಮ್ಮಪ್ಪನಾದರೂ ನೋಡಿದ್ದಾನೇನು ? (ನಲದ.೮೭). ೨. = ಜಕ್ಕಡಿ: ಓರಿದು ಪ್ರಬಂಧ ಜಕ್ಕಿಣಿ ರಾಜಕೀರನ ಮೆಱೆವ ಕಟ್ಟಳೆಯಾಟಗಳ ದೊರೆ ರಾಯ ನರಸರಾಜೇಂದ್ರಗೆ ಸಂತಸದೊರೆಯಲಾಡಿದ ರಂಗನೆಯರು (ಕಂನವಿ. ೮-೬೭). **ಜಕಣಿ :** ೧. ಜಕಣಿಯು ಜಲದೇವರು ಮೊದಲಾದ ಭಿಕಾರಿದೈವಗಳ ಪೂಜಿಸರವರು (ಪುರಂದ. ೦-೧೪೫-೩) ; ಒಂದು ಜಕಣಿ ಹಿಡಿದರೂ ತಡೆಯಬಹುದು. ನಿಮ್ಮ ವರಾತ ತಡೆಯಲಿಕ್ಕಿಲ್ಲ (ಮರಮ, ೦೩೭) ; ಅದು ಬಾದಾಗಿಂದ ಒಂದು ಥರಾ ಮಂಕಾಗಿ ಕೂತು ಬಿಟ್ಟಿದೆ. ಜಕಣಿ ಹಿಡಿದು (ಸಂಸ್ಕಾರ. ೧೦೦). **ಜಕ್ಕಣಿ :** ೧. ಇದು ಜನನ ಭಾಗಂಗಳಿದು ಮಾಣಿಭದ್ರನೊಡಕಿದು ಜಕ್ಕಣಿ [ಪಾಠಾಂ. ಜಕ್ಕಿಣಿ, ರಝುಕ್ಕಣಿ, ರಝುಕ್ಕಿಣಿ]ಯ ಸೆಕ್ಕೆಯಿದು ಬೊಮ್ಮಯನ ಚೂರ್ಣವಿದು(ಸೋಮಶ. ೪-೮೪); ನೆವ್ವ, ಭೂತ, ಜಕ್ಕಣಿ, ಪಂಜೊರ್ಳಿ ಮೊದಲಾದ ಅಂತರ ಬೆಂತರಗಳಿಗೆಲ್ಲ ಕೋಳಿಗಳನ್ನು ಬಲಿ ಕೊಟ್ಟಿದ್ದಾನೆ (ಕಾನೂರು. ೮೫). **ಜಿಕ್ಕಿಣಿ :** ೧. ಈ ಜಿಕ್ಕಿಣಿ ಹೆಂಡತಿಯಾದೇ ಚಾತೆ (ಮೊಮಗು. ೨೩). [ <ಪ್ರಾ. ಜಖ್ಖಿಣೀ. / ಸಂ. ಯಕ್ಷಿಣೀ ]

**ಜಕ್ಕಿಯಬ್ಬೆ** (ನಾ). ಒಬ್ಬಾಕೆಯ ಹೆಸರು : ಜಕ್ಕಿಯಬ್ಬೆ ನಾಟ್ಗಾವುಣ್ಡುಗೆಯ್ಯುತ್ತಿರೆ (ಎಕ. VII, ಶಿಕಾರಿ. ೨೧೯-೧೧ ; 918). [ ಜಕ್ಕಿ + ಅಬ್ಬೆ$_1$ ]

**ಜಕ್ಕಿಯೋವೈಜ್ಜ** (ನಾ). ಒಬ್ಬಾತನ ಹೆಸರು : ಜಕ್ಕಿಯೋವೈಜ್ಜರ ಮಗ ಚನ್ದ್ರಸೇಕರ ಮಾಡಿ × × × (ಎಕ. XII, ಪಾವುಗ. ೪೫-೩ ; ಸು. 900). [ ಜಕ್ಕಿ ? + ಓವೈಜ್ಜ$_0$ (<ಓವರು) ]

**ಜತಿಗೆ** 'ಜೊತ್ತಗೆ' ನೋ.

**ಜತಿಗೊಡು, ಜತಿಗುಡು** (ಕ್ರಿ). [ಸಂಗೀತ] ಹಾಡಿನೊಂದಿಗೆ ಸರಿಗೂಡು; ಶ್ರುತಿಗೆ ಹೊಂದಿಕೆಯಾಗು : ಜತಿಗೊಡೆ ನೂಪುರಧ್ವನಿ . . . ನಡೆ ನೋಡಿದಳಾ ವೃಷೇಂದ್ರನಂ (ವೃಷವಿ. ೫-೯). **ಜತಿಗುಡು:** ಮಂಜು ಮಂಜೀರ ಸಂಜನಿತಧ್ವನಿ ಪದನಖಮಯೂಖಮಾಲಾನರ್ತನಕ್ಕೆ ಜತಿಗುಡೆ ಮಂದಯಾನದಿಂ ನಡೆತಂದು (ರಾಜಶೇ. ೪-೧೪ ವ); ಮರ್ದಳೆಯ ತಾಳದ ಲಯಂ ಜತಿಗುಡೆ (ರಾಮಾಶ್ವ. ೨೩-೧೯). [ ಜತಿ₁ + ಕೊಡು₁ ]

**ಜತಿಮೆಟ್ಟು** (ಕ್ರಿ). [ನಾಟ್ಯ] ನೃತ್ಯದಲ್ಲಿ ಲಯಕ್ಕನುಸಾರವಾಗಿ ಹೆಜ್ಜೆ ಹಾಕು : ಲತೆ ತೆಂಬಲಗೊರ್ಳ್ಯನೆ ನರ್ತಿಪಂದದಿಂ ಸೊಗಯಿಸೆ ಗೋಟಿ ಡಕ್ಕೆಯ ಲಯಕ್ಕೆ ಪೆಬಲ್ ಜತಿಮೆಟ್ಟುತಾಡಿದರ್ (ಜಗವಿ. ೫-೧೫).
[ ಜತಿ₁ + ಮೆಟ್ಟು₁ ]

**ಜತಿರಾಯ** (ನಾ). ಮುನಿಶ್ರೇಷ್ಠ ; ಯತಿರಾಜ : ವಾಣಿದೇವಿಗೆಯೋದಂ ಕಲಿಸುವ ಜತಿರಾಯನೆಸೆದನಲ್ಲಿ (ಜಯಕಾ. ೨-೨೬). [ ಜತಿ₁ + ರಾಯ ]

**ಜತಿವಗೆ** (ನಾ). ೧. ಯತಿಗಳ ಶತ್ರುತ್ವ. 'ಜತಿವಗೆಯ' ಪರಾ. ೨. ಯತಿಗಳಿಗೆ ಶತ್ರುವಾದವನು ; ಕಾಮ: " ಕುಡುವಿಲ್ಲ ಜತಿವಗೆ ಒರಿದಿಂ ಗೋಲ್ವಿಲ್ಲ ಕಾವ " (ಕವಿಶಂ. ೨೬). [ ಜತಿ₁ + ಪಗೆ₂ ]

**ಜತಿವಗೆಯ** (ನಾ).=ಜತಿವಗೆ ೨ : "ಇಂಗೋಲ್ವಿಲ್ಲಂ . . . ಜತಿವಗೆಯಂ, ಕುಡುವಿಲ್ಲಂ, ಅಯ್ಸರಳಂ, ಗಿಳಿದೇರಂ—ಇವು ೧೩ಕಾಮದೇವಂಗೆ ಪೆಸರ್" (ಕಶಸಾ. ೪೬-೧೩). [ ಜತಿವಗೆ + – ಅ₇ ]

**ಜತಿವೆಱು** (ಕ್ರಿ). ೧. [ನಾಟ್ಯ] ನೃತ್ಯದಲ್ಲಿ ಜತಿಯನ್ನು ಹೊಂದು. ೨. [ಛಂದ] ಕಾವ್ಯವಾಚನದಲ್ಲಿ ನಿಲುಗಡೆಯನ್ನು ಹೊಂದು,— ಯತಿಯನ್ನು ಪಡೆ. ೧, ೨ : ಜತಿವೆತ್ತೊಪ್ಪುವ ಮೃದು ಪದಗತಿಯುಂ . . . ತಳ್ತಿರೆ ವಿಳಸತ್ಕೃತಿಯುಂ ಪೋಲ್ತಬಳೆ ರಸಿಕರಂ ಮೆಚ್ಚಿಸಿದಳ್ (ರಾಜಶೇ. ೦೨-೧೩). [ ಜತಿ₁ + ಪೆಱು₁ ]

**ಜತಿಸ್ವರ** (ನಾ). [ನಾಟ್ಯ] ನೃತ್ಯಕ್ಕೆಂದು ನಿರ್ಮಿಸಿದ ಸ್ವರಯೋಜನೆ : ಪದವರ್ಣ ಜತಿಸ್ವರ ಮುಂತಾದ ಹಲವು ಬಾಬುಗಳನ್ನು ಅವರು ರಚಿಸಿದರು (ಭಾರದ. ೫೫೫) ; ಸಂಗೀತದ ಹಿನ್ನೆಲೆಯಲ್ಲಿ ಸಮ್ಮಿಳಿತವಾಗಿ ತಾಳಬದ್ಧವಾದ ಸರಳ ಸ್ಪಷ್ಟ ನರ್ತನವೇ ನೃತ್ತವು. ಈಗ ನಾವು ನೋಡುತ್ತಿರುವ ಜತಿ ಸ್ವರಗಳು ನೃತ್ತಕ್ಕೆ ಸೇರಿದುವುಗಳು (ಅಭಾನ್ಸ. ೨೬) ; ಸಾಹಿತ್ಯರಹಿತವಾದ ಈ ರಚನೆ ಜತಿಸ್ವರ ಎನಿಸಿಕೊಂಡಿದೆ. ಜತಿಸ್ವರಕ್ಕೆ ನೃತ್ಯದಲ್ಲಿ ಪ್ರಾಧಾನ್ಯವಿದೆ (ಸಂಗೀಶಂ. ೬೧). 'ಸ್ವರಜತಿ' ಪರಾ. [ ಜತಿ₁ + ಸ್ವರ ]

**ಜತು₁** (ನಾ). ಅರಗು ; ಲಾಕ್ಷ : ಶಿವಸಾನ್ನಿಧ್ಯದಿರವಿನಿಂದಗ್ನಿಯೋಳ್ಪೆತು ಕ ರ ಗು ವ ಂ ತೆ ಭಾಸುರವಾರಿಯೊಳುವ್ವು ತವಿಪಂತೆ (ಅರಾದ. ೦೦-೪೬) : ಶಂಬರವಿಂಬುಮೆತ್ತ ಚಮರಂ ಜತು ಪೇರುಡ ಪೀಲಿಯೆಂಬಿವಂ . . . ತಳೆದದೇಂ ತಳರ್ದತ್ತೊ ಪುಳಿಂದಸಂಕುಳಂ (ರಾಜಶೇ. ೫-೧೦೪). [ ಸಂ. ]

**ಜತು₂** (ನಾ). (?): ತೆಂಗಿನ ಮರ ಜತು ಆದ ಹನಮಲ್ಲ ಗದ್ದೆಯ (ಸಾಇಅ. ೧೯೩೨, ಉಡುಪಿ. ೩೩೮-೬ ; ?). [ ? ]

**ಜತುಕ** (ನಾ). ೧. ಹಿಂಗು; ಇಂಗು: "ಜತುಕ—ಇಂಗು" (ಗಂಗಾಮ. ೧೩೭). ೨. ಅರಗು. ೩. ಬಾವಲಿ ; ಕಣ್ಣುಕಪ್ಪಡಿ : ಒಂದೊಂದೆಡೆಯೊಳೊಗೆವ ದಾವಶಿಖಿಯ ಪೊಗೆಗೆ ಬೆಗಡುಗೊಂಡು ಪುಟುಗಳ್ ಬಿಟ್ಟುಪೋದ ಸಟ್ಟ ಗೊಂಬಿನ ಜೇನಪುಟ್ಟಿಯಂ ಸಾರ್ದು ಪೀರ್ವ ಜತುಕನಿಕರಂಗಳುಂ (ಚಂದ್ರಪು. ೫-೬೫ ವ). [ ಸಂ. ]

**ಜತುಕೃತ್ತು** (ಗು). ೧. ಅರಗನ್ನು ಮಾಡುವ. (ನಾ). ೨. ಅರಗನ್ನುಂಟು ಮಾಡುವ ಒಂದು ಬಗೆಯ ಸುವಾಸನೆಯ ಮರ ; ಅರಗಿನ ಹುಳು ಗೂಡು ಕಟ್ಟಿಕೊಳ್ಳುವ ಒಂದು ಬಗೆಯ ಸುವಾಸನೆಯ ಮರ ; ಮುಳ್ಳುಗಸೆ. [ ಸಂ. ಜತುಕೃತ್ ]

**ಜತುಕೆ** (ನಾ). ೧. ಅರಗು. ೨. ಮಯಣ; ಮೇಣ ; ಒಂದು ಬಗೆಯ ಗೋಂದು. ೩. ಬಾವಲಿ. ೪. ಒಂದು ಬಗೆಯ ಸುಗಂಧದ್ರವ್ಯ : " ಜತುಕೆ ವಾಪಟಿಯೆನಿಕ್ಕುಂ " (ಮಂಗರಾ. ೪೨-೩೯).
[ ಸಂ. ಜತುಕ ]

**ಜತುಗೃಹ** (ನಾ). ಅರಗಿನ ಮನೆ ; ಲಾಕ್ಷಾಗೃಹ : ಕನಕನೆಂಬಂ ಬಂದು ಪಾಂಡವರಂ ಕಂಡೇಕಾಂತದೊಳ್ . . . ಜತುಗೃಹ ಕವಾಟಪುಟಸಂಧಿ ಗಳೊಳ್ಳುರಂಗವಂ ಗಂಗೆಯೊಳ್ಮೂಡುವಂತಾಗೆ ಸ ಮ ದು ಪೇಟ್ದು ಪೋಪುದುಂ (ಪಂಪಭಾ. ೩-೪ ವ); ಅಂದು ಕುಶಸ್ಥಲಂ ಜತುಗೃಹಜ್ವಲನಕ್ಕೆ . . . ವಾರಣಾವತಂ ಸಂದ ಸಭಾಪ್ರತಾರಣಕೆ ಕಾರಣಮೆಂದಱಿವಲ್ಕೆ ಬೇಡಿದರ್ (ಗದಾಯು. ೩-೨೧). [ ಜತು₁ + ಗೃಹ ]

**ಜತುಗೇಹ** (ನಾ). = ಜತುಗೃಹ : ಜತುಗೇಹಾನಲ ಬೀಜಮುಗ್ರವಿಷ ಸಂಜಾತಾಂಕುರಂ (ಗದಾಯು. ೫-೫೭) , ಸ್ವೈ ರಿ ಸಿ ದ ರೇ ಪಾಂಡುಸುತ ರಂಭೋರುಹಾಕ್ಷಿ ರಜಸ್ವಲೆಯ ಸುಲಿಸೀರೆಯಲಿ ತತ್ಪೂರ್ವಕೃತ ಜತುಗೇಹ ದಾಹದಲಿ (ಕುವ್ಯಾಗ. ೧೧-೪). [ ಜತು₁ + ಗೇಹ ]

**ಜತುಭವನ** (ನಾ). = ಜತುಗೃಹ : ಕೃತಕದ್ಯೂತೋದ್ಯುಕ್ತಂ ಜತುಭವನವ ಚುರ್ಚಿದಾತನುದ್ಧತಗರ್ವಂ (ಧ್ವನ್ಯಾಲೋ.೨೩೧).
[ ಜತು₁ + ಭವನ ]

**ಜತುಮುದ್ರೆ** (ನಾ). ೧. ಅರಗಿನ ಮುದ್ರೆ. ೨. (ಅಲಂ) ಮುಚ್ಚಿಡುವಿಕೆ; ರಹಸ್ಯ : ಮನವನೊರೆಯನೆ ನಿನಗೆ, ಮನದನ್ನ ಕೋರ್ದುದಂ ಕೊಡುವೆ ನೆಂದಾಣೆಯಿಟ್ಟಾಡಿದೊಡೆ, ಚುಂಬನದ ಜತುಮುದ್ರೆಯೊತ್ತಿ (ಶ್ರೀರಾಮಾ. ೬೯-೪೦೩). [ ಜತು₁ + ಮುದ್ರೆ ]

**ಜತುರಸ** (ನಾ). ಅರಗಿನ ರಸ ; ಅಲತಿಗೆ : ಸುದತಿಯ ಕೇಸಡಿಯನೂಡಿ ದಳ್ ಜತುರಸದಿಂ (ಜಗವಿ. ೧೦-೧೦೮). [ ಜತು₁ + ರಸ ]

**ಜತೂಕೆ** (ನಾ). " ಸಾರಣೆಗಿಡ, ಮುಳ್ಳುಗಸೆ " (ಅಮರ. ೮೮೪) : " ಜನೀ, ಜತೂಕಾ, ಜನನೀ, ಜತುಕೃತ್, ಚಕ್ರವರ್ತಿನೀ, ಸಂಸ್ಪರ್ಶಾ—ಓ ಕೋರಿಂದೇ ಗಿಡದ ಹೆಸರು ಚಕ್ರವರ್ತೀಸೊಪ್ಪು " (ಸಿದ್ಧಾಂಶಿ. ೧೨೯).
[ ಸಂ. ಜತೂಕಾ ]

**ಜತೆ** 'ಜೊತೆ₁' ನೋ.

**ಜತೆಕಟ್ಟು** 'ಜತೆಗಟ್ಟು' ನೋ.

**ಜತೆಗಟ್ಟು, ಜತೆಕಟ್ಟು** (ಕ್ರಿ). ೧. ಜೊತೆಗೂಡಿಸು ; ಒಟ್ಟುಗೂಡಿಸು : ಸತತ ನಿರ್ಮಾಲ್ಯಪುಷ್ಪವನು ಪೊಸಕುಸುಮಕ್ಕೆ ಜತೆಗಟ್ಟುವರೆ (ನವಮೋ. ೨೬-೭೪). **ಜತೆಕಟ್ಟು:** ೨. ಸ್ನೇಹಮಾಡು; ಗೆಳೆತನ ಮಾಡು : ಮಾತು ಬಿಟ್ಟಿದ್ದ ಅವರಿಬ್ಬರೂ ಈಗ ಜತೆಕಟ್ಟಿದರು (ರೂಢಿ). 'ಜತೆಬಿಡು' ಪರಾ.
[ ಜತೆ (<ಜೊತೆ₁) + ಕಟ್ಟು₁ ]

**ಜತೆಗಾತಿ** 'ಜೊತೆಗಾರ್ತಿ' ನೋ.

**ಜತೆಗಾರ** 'ಜೊತೆಗಾರ' ನೋ.

**ಜತೆಗಾರ್ತಿ** 'ಜೊತೆಗಾರ್ತಿ' ನೋ.

**ಜತೆಗೂಡು** 'ಜೊತೆಗೂಡು' ನೋ.

**ಜತೆಬಿಡು** 'ಜೊತೆಬಿಡು' ನೋ.

**ಜತ್ರ₁** 'ಯಾತನ' ನೋ.

**ಜತ್ರ₂** (ನಾ). ಒಬ್ಬಾತನ ಹೆಸರು (?) : ಜತ್ರ ತಳವಾರ ಪೊಗುಣ್ಡ ಕಾಳೆ ಗದುಳ ಎಟಿದು ಸತ್ತ (ಎಕ. IX, ನೆಲಮಂ. ೩೪-೩ ; ಸು. 750 ?). [ ? ]

**ಜತ್ರ₃** (ನಾ).ಬತ್ತ ಮೊದಲಾದ ಧಾನ್ಯಗಳ ಅಳತೆಯ ಒಂದು ಪ್ರಮಾಣ (?) : ಗದ್ದೆಯಿಂ ಭತ್ತ ಮು ಳ ಬ ೧೫ ಕು ಜತ್ರಂ ಬೆಟ್ಟಿನ ಕುಂ ಜತ್ರವನ ಬಾಳಿಕೆಯಿಂದ(ಸಾಇಅ. ೧೯೩೦, ಮಂಗಳೂರು. ೫೨೬-೨೬ ; 1375). [ ? ]

**ಜತ್ರಕ₁** 'ಜತ್ರುಕ' ನೋ.

**ಜತ್ರಕ್ಕ₂** (ನಾ). ಮನೋಹರನಾದವನು ; ಚೆಲುವ : ತತ್ರನೆಯಂ ಸಕಳ ಮಹೀಪೋತ್ತಮನನವರತದಾನಿ ವೈರಿನ್ರಿಪಾಳೋನ್ಮತ್ತಗಜಸಿಂಹನಬಳಾ ಜತ್ರಕನೆಱೆಯಜ್ಜ ಪೊಯ್ಸಳಂ ಭೂವಿನುತ (ಎಕ. V, ಅರಸೀ. ೦೦೨-೦೨ ; 1100 ?) ; ಜತ್ರಕರಂ ಸುತ್ತಿಂದೊಳಗುಮಾಟ್ಟ ವಾತ್ಸ್ಯಾಯನನಂ ಪೊಱ ಪೊರಸು ಮಾಟ್ಟ (ಜಗವಿ. ೨-೨೦ ಅಡಿಟಿ): "ಜತ್ರಕನೆಂದು ವೇಶ್ಯಾವರಂ" (ಅಭ್ಯಾ,ಶಾ). [ ? ]

**ಜತ್ರಕಿ** (ನಾ). ಮನೋಹರೆ ; ಚೆಲುವೆ : ತನುವಂ ತೆತ್ತಿ ಸಲ್ಕವರಕಾಂತಾ ಜತ್ರಕಿಯರುಯ್ಯೆ ದೇಕಂ ನಾಕಕ್ಕೋದಂ (ಎಕ. XII, ಚಿಕ್ಕನಾ. ೧೮-೪೦ ; 1149) ; ಪೊಸಯಿಪ ಬೇಟವಮಂ ಬೆಳಸುವಿಚ್ಚೆಯ ಜತ್ರಕಿ ತಾನೆ ಲೋಕದೊಳ್ ಬಸನದ ಬಿತ್ತನಿಪ್ಪಳೊಡಗೂಡಿದೊಡಲ್ಲದಲಂಪು ಪೋಪುದೇ (ಸೂಕ್ತಿಸು. ೮-೪೦೦). [ ಜತ್ರಕ್ಕ₂ + - ಇ₂ ]

**ಜತ್ರಕುಱ** 'ಜತ್ತುಕಱು' ನೋ.

**ಜತ್ರಕುೞಾಡು** 'ಜತ್ತುಕುೞಾಡು' ನೋ.

**ಜತ್ರಕುೞು** 'ಜತ್ತುಕಱು' ನೋ.

**ಜತ್ರಗನ್ನಡಿ** (ನಾ). ಜೋಡಿಗನ್ನಡಿ (?) : ನಿಲುವಗನ್ನಡಿ ಹಿಡಿದು ಮುಕ ನೋಡಿ ಅರಸರು ಜತ್ರಗನ್ನಡಿ ಎದಿರೆದುರು ಹಿಡಿಹಿಡಿದು ಸುತ್ತ ನೋಡಾಡಿ ಬಲು ತಿದ್ದಿ (ಸೂಕೆಗೀ. ೨೦೦). [ P ಇದು 'ಜೊತೆಗನ್ನಡಿ' ಇರಬಹುದು]

**ಜತ್ರನ** 'ಯತನ' ನೋ.

**ಜತ್ರರಟ್ಟ** (ನಾ). ಯುದ್ಧದಲ್ಲಿ ಬಳಸುತ್ತಿದ್ದ ಒಂದು ಬಗೆಯ ಯಂತ್ರ: ರಣರಂಗನೀಲಬಿನುಂ ಬಿಲ್ಲಂಕಕಾಱನುಂ ಆಹವಜತ್ರರಟ್ಟ . . . ಶರಣಾಗತ ವಜ್ರಪಂಜರನುಂ ವೈರಿದಿಕ್ಕುಂಜರನುಂ (ಎಕ. VI, ಕಡೂರು. ೧೪೮-೯೭ ; 1202) ; ತರಿಸಿ ಲೋಹದ ಜತ್ರರಟ್ಟವ [ಪಾಠಾಂ. ಜಂತ್ರರಾಟವ, ಜತ್ರಗಂಟವ] ಹರಹಿದರು ಸೂಲಿಗೆಯ ಬಂಡಿಯನಿರಿಸಿವರು (ಕುಮಾ,ಕ. ೨-೧೦). [ ? ]

**ಜತ್ರರಟ್ಟೆ** (ನಾ). [ಛಂದ] ಒಂದು ಬಗೆಯ ವೃತ್ತ : ಆದ್ಯಂತ ಪ್ರಾಸಯಮಕಮುಂ ಜತ್ರರಟ್ಟೆಯುಮೆಂಬುದಕ್ಕುಂ (ಮದತಿ. ೧-೯೩). [ ? ]

**ಜತ್ರವಟ್ಟ** (ನಾ). (?) : ಶಕ್ರನೃತ್ಯದೊಳೊಡಂಬಡೆ ನರ್ತಿಸುವಲ್ಲಿ ಜತ್ರವ [ಪಾಠಾಂ. ಲ]ಟ್ಟದ ಮಣಿಯಂತದೇಂ ಪದುಳಮಾದುದೊ ದಿವ್ಯವಧೂಕದಂಬಕಂ (ಆದಿಪು. ೭-೦೨೪). [ ? ]

**ಜತ್ರಾಯತ, ಜತ್ರಾಯಿತ** (ನಾ). ಅಧಿಕವಾದ ಜೋಕೆ,-ಜೋಪಾನ,-ಎಚ್ಚರಿಕೆ : ಇತ್ತ ನಾವೀ ಶರಣರೊಳಗೆ ಕೆಲಬರ್ ಸಹಿತೆ ಜತ್ರಾಯತದೊಳಾನೆ ಕುದುರೆ ಕಾಲಾಳುಗಳ ಮೊತ್ತಸಹಿತತಿಜತನವಾಗಿ ನಮ್ಮರಮನೆಯನೇ ಕಾದುಕೊಂಡಿರ್ಪವು (ಜಬಪು. ೬೨-೨೨) ; ಮೈಸೂರವರೆತ್ತಿದ ಬಿರುದಿನ ಭಟರು ಕತ್ತಲೆ ಹಗಲಂತಿರುವುದವರಿಗೆ ನೀವು ಜತ್ರಾಯತದ ತೆರಳಿಂದ (ಕಂನವಿ. ೧೧-೦೦೮). **ಜತ್ರಾಯಿತ** : ಅಲ್ಲಿ ಮಾಱಾಂಕದವನೊಪ್ಪೆ ಸಿಂಗರಿಸಿ ಭರದಿಂದೆ ಜತ್ರಾಯಿ[ಪಾಠಾಂ. ಯ]ತಂ ಮಿಗಲು ತರಹರಿಸಿ ಗಳಿಯೊಡ್ಡೆ ಸರಸರನೆ ನಡುಗಳಕೆ ನಡೆತರಲು (ಜಿಚಾರ. ದೇ. ೧೦೮-೨) ; ದೂರಗತಿ ಚಿತ್ರಗತಿಗಳಂ ತೋಱೆ ಜತ್ರಾಯಿತಂ ಮಿಕ್ಕು ಹಲಗೆಯ ಹಲ್ಲಣೆಯಂ ತೆಱೆದು . . . ನಾಲ್ಕು ತೆಱದ ಧಾರೆಯಂ ಮೂಱು ತೆಱದ ನಿವಾರಣೆಯಂ ನಾಲ್ಕು ತೆಱದ ಪೊಯ್ಲಂ ಬಿತ್ತರಿಸಿ (ಶ್ರೀಪುವಿ. ೨೩-೧೪ ವ). [ ಜತ್ರ₁ (<ಯತನ) + ಆಯತ₄ ]

**ಜತ್ರಾಯತವಡೆ** (ಕ್ರಿ). ಎಚ್ಚರಿಕೆಯಿಂದ (ಪೂರ್ವ) ಸಿದ್ಧತೆಯನ್ನು ಹೊಂದು,-ಸನ್ನಾಹಗೊಳ್ಳು,-ಸಜ್ಜಾಗು : ಬಾಣಾಸುರ ಬರ್ಪ ಸಮಯಕ್ಕೆ ನವ ಪಂಚಬಾಣ ಹರ್ಮ್ಯವನಡರ್ದೊಡನೆ ಬಾಣನಂದನೆಯ ಕುಸ್ತರಿಸಿ ಬಂದನು ಬಿಲ್ಲು ಬಾಣ ಜತ್ರಾಯತವಡೆದು (ಮೋಹತ. ೩೩-೦೦). [ ಜತ್ರಾಯತ + ಪಡೆ₁ ]

**ಜತ್ರಾಯತವೆಱು** (ಕ್ರಿ). ಅಧಿಕವಾದ ಎಚ್ಚರಿಕೆ ಹೊಂದು; ವಿಶೇಷ ಗಮನ ಇಡು ; ತುಂಬ ಜೋಪಾನವಾಗಿರು : ಒತ್ತರಿಸಿದ ಸಂಜೆಗೆಂಪು ನುಂಗಿದ ಕರ್ಗತ್ತಲೆಯೊಳು ನಿಶಾಚರನು ಜತ್ರಾಯತವೆತ್ತು ನಡೆತಂದು ಕಂಡ ದೇವೋತ್ತಮನಿರ್ದ ಪಟ್ಟಣವ (ಮೋಹತ. ೦೦-೦೮). [ ಜತ್ರಾಯತ + ಪೆಱು₁ ]

**ಜತ್ರಾಯಿತ** 'ಜತ್ರಾಯತ' ನೋ.

**ಜತ್ರಿ** (ನಾ). ಜಟ್ಟಿ; ಮಲ್ಲ : ಮಱುವಕ್ಕದ ಜತ್ರಿಭಟರ್ಕಳ ಪಲರುಮಂ ಕೊನ್ದು (ಎಕ. VIII, ಸೊರಬ. ೨೨-೪; ಸು.800). [ <ಜಟ್ಟ₁ ]

**ಜತ್ರಿಗೆ** 'ಜೊತ್ತಗೆ' ನೋ.

**ಜತ್ರಿಳ** (ನಾ). ಕಾಡಿನಲ್ಲಿ ಬೆಳೆಯುವ ಎಳ್ಳು ; ಕಾಡೆಳ್ಳು : "ಜತ್ರಿಳ ಮೆಂಬುದು ಕಾಡೆಳ್ಳು" (ಹಲಾಯು. ೯೩-೮೨೯). [< ಸಂ. ಜರ್ತಿಲ ]

**ಜತ್ತು** 'ಜೊತ್ತು₁' ನೋ.

**ಜತ್ತುಕ, ಜತ್ರಕ₁** (ನಾ). ೧. ಮೋಸ ; ಕಪಟ ; ವಂಚನೆ : 'ಜತ್ತುಕ ಮೆನೆ ಕೈತವಂ' (ಚತುನಿ. ೦೨) ; "ಕೈದವಂ ಕೈತ ಜತ್ತುಕಮೆಂದು ಕಪಟಕ್ಕೆ ಐದಿರ್ಪ ನಾಮ" (ಕಬ್ಬಮಂ. ೫೩) ; ಜತ್ತುಕದ ಮಾರಣದ ಹೋಮಧಿ ಹೊತ್ತಿ ದಳ್ಳುರಿ ನಭವನಡರಿತು (ಕೌಶಿರಾ. ೦೯-೩೭) ; ಎತ್ತಣ್ಣು ವರದನಾಥನ ಜತ್ತುಕದಲ್ಲಾಟವೆಂದು ಬಿತ್ತರಗರಂ ಬಲ್ ಬಿತ್ತರಿಸಿ (ಹಮ್ಮಿ,ಕ. ೭-೩) ; ಇಂದಿನೀ ವಿಸಸನದೊಳಾಟಿಯ ಜತ್ತುಕದ ನಿಶಟ ನುಬ್ಬಿನ ಬಲಮಂ ಗೋಣ್ಮುಱಿದು (ರಾಮಾಕ್ಷ. ೦೧೧-೦೨). **ಜತ್ರಕ₁** : ೧. "ಜತ್ರಕಮೆಂದು ಕೈತವಂ" (ಕಕಸಾ. ೭೦-೫೬೨) ; ವ್ಯತ್ಯುಹರ ನಿನ್ನಾಜ್ಞೆ ಪೊತ್ತು ಬೊಮ್ಮಾಳಿಯಂ ತುತ್ತುವೆನಗಘವೇಕೆ ಪೊರ್ದದೆಂದು ಹತ್ತಿತೇ ನಿನಗೆ ಬಿಡು ಜತ್ರಕವಿದೇಕೆಂದು ವ್ಯತ್ಯು ನಗುತೆಂದುದು (ಸಾನಂಚ. ೨-೨೩) ; ಆಸೆಯ ಪಳ್ಳಿ ಪಳಾಳದ ವಾಸಂ ಜತ್ರಕದ ಜನ್ಮಭೂಮಿ . . . ಎನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬); ಈ ಇವನ ವಿಸ್ಪಷ್ಟ ಕಲ್ಪನೆಯ ಜತ್ರಕವನ್ನು ಭೇದಿಸಿ (ಮಂತ್ರಕ. ೯೩-೦೭) . ೨. ವಂಚನೆಯ ಮಾತು : ಈ ದೂದವಿ ಜತ್ರಕಮಂ ನುಡಿದು ಜವಕವಿಲ್ಲದೆ ಕೊಡಿದಳೆಂದು ನುಡಿಯುತ್ತುಂ ಪೋಗೆ(ಅನಂಪು. ೮-೨೯ ವ). ೩. ಕಪಟಿ ; ಮೋಸಗಾರ: ಜತ್ರಕನ ನುಡಿಗೆ ತೆಕ್ಕಿದನೆ ತೆರಳಿದನೆ ತಲೆಗುತ್ತಿದನೆ (ಹಕಕಾ. ೮-೫೫). [ ದೇ.II ತಮಿ. ಮಲ. ಚತಿ ; ಕೊಡ. ಚದಿ ; ತೆಲು. ಜಿತ್ತು ]

**ಜತ್ತುಕಱು, ಜತ್ರಕುಱ, ಜತ್ರಕುೞು, ಜತ್ತುಕುಱು** (ನಾ). ಚೇಷ್ಟೆ; ಲೀಲೆ ; ವಿನೋದ : ತೆತ್ತುತನಕ್ಕೆ ತೆತ್ತುತನಮಂ ಪುಸಿನಲ್ಗೆ ಮೋದಿ ನಲ್ಮೆಯಂ ಜತ್ತುಕಱುಂಗೆ ಜತ್ತುಕಱನಾಸೆಗಮಾಸೆಯನಾದಲಂಪಿನಿಂ . . . ಪೊಣರ್ಚುತ್ತುಂ (ಕಾವ್ಯಸಾ. ೯೮೫ ಕೂದ್ರಕ). **ಜತ್ರಕುಱ** : ಕಾದಿದ ಕಾಳೆಗಂ ಜವನ ಜತ್ರಕುಱಕ್ಕೆ ಸಮಾನಮಾದುದು (ಅನಂಪು. ೧೦-೭೮). **ಜತ್ರಕುೞು** : ಕೊಲ್ವುದಱ ಮುಂ ತಪ್ಪಿತ್ತೆನೆ ಪೊಡೆವುದು ಬೞಸಿಡಿಲೆತ್ತಿದು ಮಾನವರ್ಗೆ ಜವನ ಜತ್ರಕುೞಿಲ್ಲೇ (ಚಂದ್ರಪು. ೯-೦೩) ; ಜವನ ಜತ್ರಕುೞುಮಂ ಪೇಟ್ಪೊಡೆ (ಅನಂಪು. ೩-೭೦ ವ). **ಜತ್ತುಕುಱು** : 'ಜತ್ತುಕುೞಾಡು' ಪರಾ. [ ? ]

**ಜತ್ತುಕುಱು** 'ಜತ್ತುಕಱು' ನೋ.

**ಜತ್ತುಕುೞಾಡು, ಜತ್ರಕಂೞಾಡು** (ಕ್ರಿ). ಚೇಷ್ಟೆಮಾಡು ; ವಿನೋದ ಮಾಡು ; ಲೀಲೆಯಾಡು : ಜಡಿವಂ ಜತ್ತು[ಪಾಠಾಂ. ತ್ರ]ಕುೞಾಡುವಂ ಬಳಸುವಂ ಬೆನ್ನಟ್ಟುವಂ ಮುಟ್ಟುವಂ ಪಿಡಿವಂ ಮಕ್ಕಳನೇಂ ಕರಂ ವಿಕರಿಯೊ ಕೂಸಾಟದೊಳ್ ಕೇಶವಂ(ಅರ್ಧನೇ. ೭-೮೫). **ಜತ್ರಕುೞಾಡು:** ಜತ್ರಕಟ್ಟೋ[ಕುೞಾ]ಡಿ ಕಾಡೆ ಮದನಂ . . . ತಳರದಿರ್ದುದು[ರಾಜ] ಕುಮಾರನಂಗದೊಳ್ (ವರ್ಧಮಾ. ೦೦-೨೦). [ ಜತ್ತುಕುಱು (<ಜತ್ತುಕಱು) + ಆಡು₁ ]

**ಜತ್ರುಗ** (ನಾ). ಚಂದ್ರ. 'ಜತ್ರುಗದಲೆಯಂ' ಪರಾ. [<ಸಂ. ಜೈವಾತೃಕ]

**ಜತ್ರುಗದಲೆಯ** (ನಾ). ಚಂದ್ರಶೇಖರ; ಶಿವ: "ಎಲುಗೈಯ . . . ಜತ್ರು [ಪಾಠಾಂ. ಜೈತು]ಗದಲೆಯನೆನೆ ಸತ್ಯವೀಂದ್ರರ್ ಸಲೆ ಪೇಳ್ವರ್ ಸ್ಮರಹರಂಗೆ ನಾಮವಿದೆನುತುಂ" (ಕವಿಶಿ. ೧೮). [ಜತ್ರುಗ + ತಲೆ$_1$ + - ಅ$_7$]

**ಜತ್ರುಗೊಳ್ಳು** (ಕ್ರಿ). ಜೊತೆಯಾಗಿರು ; ಕೂಡಿಕೊಂಡಿರು : ಚಿತ್ರಭವ ರತಿ ದೇವಿಯರು ತಮ್ಮ ವಾಸದಲ್ಲಿ ಜತ್ರುಗೊಂಡಿರಲು (ನಮುಮೀ. ೩೩-೩೭). [ಜತ್ರು (<ಜೊತ್ರು$_1$) + ಕೊಳ್ಳು$_1$ (<ಕೊಳ್$_1$)]

**ಜತ್ರುವೆ** (ನಾ). ಒಂದು ಬಗೆಯ ಸಸ್ಯ : ಯಿಕ್ಕಿ, ಜತ್ರುವೆ, ಹಂಬುಕಳ್ಳಿ, ನಂಜಿನ ಕೊರಡು, ಸಮುದ್ರಪಾಲ, ಕಾಟಿ (ನಮ್ಮಸು. ೨೩೮). [ ? ]

**ಜತ್ರುಳ$_1$** (ನಾ). ಕಪಟ; ಮೋಸ; ಠಕ್ಕು: ಅತ್ರಲಾ ಸೆರಗಾಳ್ಗಳಿದನೆಲ್ಲವಂ ನೋಡಿ ಜತ್ರುಳವಿದೆಂದೊರೆದು ನಗೆ ಹೊಗೆಯೊಳಿಹರು (ಕಾಲೂರ. ೧೬೮-೩೭೪). [<ಜತ್ರುಕ]

**ಜತ್ರುಳ$_2$** (ನಾ). ನೊರೆ : "ಜತ್ರುಳಮೆಂದು ಫೇನಂ" (ಕಕಶಾ. ೩೩-೧೪೪) : "ಜತ್ರುಳಮೆಂದು ಪೆಸರಕ್ಕು ನೊರೆಗೆ" (ಕಬ್ಬಿಕ್ಕಿ. ೧೨) : "ಜತ್ರುಳವೆನಲ್ ನೊರೆಯಕ್ಕು" (ಕಬ್ಬಮಂ. ೩೭) : ನಗೆ ಜತ್ರುಳಂ ಜಠರದೊಳ್ ತೊಪ್ಪಳ್ಪು ಪಾತಾಂಡಸಂಕುಳಮೇ ಬುದ್ಬುದವಾಗೆ ವಿಷ್ಣುವೆನೆ ಕಣ್ಗೊಪ್ಪಿತ್ತು ನೀರಾಕರಂ (ಉದ್ಭಟ. ೦-೩೮). [ ? ]

**ಜತ್ರೆ** (ನಾ). ಜೊತೆ (?) : ನೋಡಲಿಬಾರದ ಆಡಲಿಬಾರದ ಈಡೆಂಬುದು ಅದಕ್ಕಿಲ್ಲದುದಾ ಕೂಡದ ಮನ ಬುದ್ಧಿಯ ಯಿಂದ್ರಿಯಗಳ ತ್ರಿಪುಡಿಯ ವೆಳಗಿನ ಜತ್ರೆ ಆದಾ (ಚಿದಾಕೋ. ೧೨೧-೩). [ ? ]

**ಜತ್ರು** (ನಾ). ಕೊರಳಿನ ಎಲುಬು : ಸುಭಟನುನ್ನತವಕ್ಷನುದಾರಂ ನೆಟ್ಟನೆ ಸಂಗತಜತ್ರುವಿಂ ವಿಭವದೈಶ್ವರ್ಯಹೀನನೆನಿಕ್ಕುಂ ನೋಟ್ಕೊಡಡಂಗಿದ ಜತ್ರುವಿಂ (ಲೋಕೋಪ. ೧೧-೮) ; ಕಂಠದ ಕೆಳಗಂ ಜತ್ರುವೆ ತಾನೆಂಬ ಪೆಸರುಂ (ಅಶ್ವಶಾ. ೯-೩೦); ಶ್ವಾಸದ ಕೋಶವೆಯು ತ್ವಚೆಯಿಂದ ಹುಟ್ಟಿ ಆ ರಂಧ್ರದಿಂದ ಜತ್ರುಗಳವರೆಗೆ ನೆಟ್ಟಗೆ ಕೆಳಗಿಳಿದಿದೆ (ಮುಂಬಯಿ. ೬-೩೧೭). [ಸಂ.]

**ಜತ್ವ** (ನಾ). ಜ ಎಂಬ ವರ್ಣ : ಇರೆಯಲರಹಿತ ವ್ಯಂಜನ ಪರಮಾಗಿ ಸಕಾರವಮಲ್ಲಿ ಬಹುಳಂ ಚತ್ವಂ ಅರೆಎಡೆಯೊಳ್ ಜತ್ವಂ ಮೇಣರೆಎಡೆಯೊಳ್ ಸಂಖ್ಯೆಯಾಗೆ ನಿಯತಂ ಛತ್ವಂ (ಶಬ್ದಮ. ೬೮). [ಸಂ.]

**ಜದುಗೂರ್** (ನಾ). ಒಂದು ಊರಿನ ಹೆಸರು : ನಾಯರ್ಖಣ್ಡಾಮುಂ ಜದುಗೂರಾಳ್ಗೆಯನಾಳುತ್ತು (ಇಅ. XIX, ೦೯೬-೪: 7ನೆಯ ಶತ). [ ? + ಊರ್ ]

**ಜನ** (ನಾ). ೧. ವ್ಯಕ್ತಿ; ಮನುಷ್ಯ: ಜನ ನೋಡಿ ಬೇಡಬೇಕು ಪಾಗ ನೋಡಿ ಉಗುಳಬೇಕು (ಗಾದೆ). ೨. ಮನುಷ್ಯರ ಸಮುದಾಯ; ಪ್ರಜೆ : "ಲೋಕಂ ಜನಮುಂ ಜಗಮುಂ" (ವಸ್ತುಕೋ. ೧೨೧-೨೦) ; "ಜನಃ, ಲೋಕಃ, ಪ್ರಜಾಃ–ಈ ೩ ಪ್ರಜೆ" (ಹಲಾಯು. ೪೭-೧೨೯) ; ಪೊಟಲ ಜನಂಗಳೆಲ್ಲಂ ಕೇಳ್ವು (ವಡ್ಡಾರಾ. ೮೩-೪) ; ಜನಮಿನಿತದೇಕೆ ಭಯದಿಂ ತನ ತನಗೋಡುತ್ತುಮಿರ್ಪುದು (ಕಾಸುಮಾ. ೧೧-೭) ; ಜನ ಮರುಳೊ, ಜಾತ್ರೆ ಮರುಳೊ (ಗಾದೆ). ೩. ಏಳು ಊರ್ಧ್ವಲೋಕಗಳಲ್ಲಿ ಒಂದು; ಭೂಮಿ ಯಿಂದ ಮೇಲೆ ಐದನೆಯ ಲೋಕ ; ಮಹರ್ಲೋಕದ ಮೇಲಿನ ಲೋಕ ; ಜನಲೋಕ : "ಬಿತ್ತರದ ಭೂರ್ಭುವಂ ಸ್ವರ್ಮಹಂ ಜನ ತಪಂ ಸತ್ಯಮೆಂದೇಳು ಮೇಲಣ ಲೋಕಮಕ್ಕು" (ಮಂಗರಾ. ೧೧-೩೨). [ಸಂ.]

**ಜನಂಗಮ** (ನಾ). ಹೊಲೆಯ; ಚಾಂಡಾಲ: "ಅಂತಾವಸಾ[ಶಾ]ಯೀ, ಚಂಡಾಳಃ, ನಿಷಾದಃ, ಜನಂಗಮಃ – ಈ ೪ ಪೊಲೆಯಂ" (ಹಲಾಯು. ೯೮-೪೪೪) : "ನಿಷಾದಂ ಜನಂಗಮನು ದುಷ್ಕರ್ಮನೆನೆ ಹೊಲೆಯ" (ಮಂಗರಾ. ೧೧೨-೬). [ಸಂ.]

**ಜನಕ** (ಗು). ೧. ಹುಟ್ಟಿಸುವ; ಉತ್ಪತ್ತಿಮಾಡುವ; ಉಂಟುಮಾಡುವ. (ನಾ). ೨. ಉತ್ಪತ್ತಿಗೆ ಕಾರಣವಾದುದು; ಹುಟ್ಟಿಸುವುದು: "ಜನಿಯಿಸೆ ಮುನ್ನಂ ಜನ್ಯಂ ಜನಕದಿನದು ಪೂರ್ವಮೆಂಬುದಕ್ಕುಂ" (ಕಾವ್ಯಾವ. ೬೪೦). 'ಸಾರಜನಕ', 'ವಿದ್ಯುಜ್ಜನಕ' ಪರಾ. ೩. ತಂದೆ ; ಅಪ್ಪ : "ವಪ್ತಾ, ತಾತಃ, ಜನಕಃ, ಪಿತಾ – ಈ ೪ ತಂದೆ" (ಹಲಾಯು. ೮೩-೩೩೦) ; ಜನಕನೆ ನಾಂ ನಿನಗೆನಗಾ ದನುಜಹರಂ ಜನಕಂ (ಜಗವಿ. ೧-೩೪) ; ಜನಕಾದೇಶದೆ ಬಂದನಲ್ಲಿಗೆ ಕುಮಾರಂ (ಪುಷ್ಪಪು. ೪-೮೦). ೪. ವಿದೇಹರಾಜ ; ಸೀತೆಯ ತಂದೆ : ಮುನಿಪತಿಯ ಬಳಿಗೆ ಬಂದರು ಜನಕಭೂಪನ ಬಳಿಯ ಮಣಿ ಹಾಜರು (ತೊರರಾ. ೦-೧೨-೨) ; ರನ್ನ ಸೀತೆಯೆತ್ತಪೋದಳ್ ? ಜನಕಂ ಜನಕಂ ಕರೆದುಯ್ಯುದರ್ನೇಂ (ರಾಮಾಕ. ೧೭-೧೪). [ಸಂ.]

**ಜನಕರಾಗ** (ನಾ). [ಸಂಗೀತ] ಸಂಪೂರ್ಣರಾಗ ; ಮೇಳಕರ್ತರಾಗ : "ಜನಕರಾಗ – ಸಪ್ತಸ್ವರಗಳು, ಆರೋಹಣ ಅವರೋಹಣ ಕ್ರಮದಲ್ಲಿ, ಕ್ರಮವಾಗಿ ಮೇಳೈಸಿದರೆ ಜನಕ ಅಥವಾ ಮೇಳಕರ್ತರಾಗವಾಗುತ್ತದೆ" (ಸಂಗೀತಂ. ೩೦). [ಜನಕ + ರಾಗ]

**ಜನಕುಕ್ಕಲು** (ನಾ). ಜನರ ನಿಂದೆ,-ಮೂದಲಿಕೆ : ಜನಕುಕ್ಕಲನ್ನು ಕೇಳ ದೆಯೂ ಬ್ರಾಹ್ಮಣ ಹಾಳಾಗುವನಲ್ಲ! ಎಂಬ ಭಾವನೆಯಿಂದಲೂ ಎಷ್ಟೋ ಜಗಳವಾಡುವವರು (ಬಾಗಿನ. ೫೨). [ಜನ + ಕುಕ್ಕಲು$_1$]

**ಜನಕೂಟ** (ನಾ). ಜನ ಸಮುದಾಯ: ಕರ್ಣನು ಅರ್ಜುನನನ್ನು ಯುದ್ಧಕ್ಕೆ ಕರೆದ ಕೂಡಲೆ ಜನಕೂಟ ಕುತೂಹಲಗೊಂಡು ಎರಡು ಕಕ್ಷಿಯಾಗಿ ಒಡೆ ಯಿತು (ವ್ಯಾಸಜಿ. ೪೯). [ಜನ + ಕೂಟ$_1$]

**ಜನಕೆ** (ನಾ). ತಾಯಿ; ಜನನಿ: ಕ್ಷೀರಾವಾರಿಧಿಕನ್ನಿಕೆ ಮಾರಜನಕೆ ಈರೇಳು ಲೋಕನಾಯಿಕೆ (ವಿದಾಕ್ಕಿ. ೫೫ ಪಲ್ಲವಿ). [<ಸಂ. ಜನಿಕಾ],

**ಜನಕೋಟಿ** (ನಾ). ಕೋಟ್ಯಂತರ ಜನ ; ಅಸಂಖ್ಯಾತ ಜನ; ಜನಸಮು ದಾಯ : ತಮ್ಮ ಸಾತ್ವಿಕಪ್ರಭಾವದಿಂದ ಜನಕೋಟಿಯನ್ನು ದೈವದ ಕಡೆಗೆ ಸೆಳೆಯುತ್ತಿರುವ ಮಂತ್ರಾಲಯದ ಶ್ರೀ ರಾಘವೇಂದ್ರಸ್ವಾಮಿಗಳು (ಭಾರದ. ೨೯೩). [ಜನ + ಕೋಟಿ$_1$].

**ಜನಗಣತಿ** (ನಾ). ಜನರ ಎಣಿಕೆ; ಖಾನೇಷುಮಾರಿ; ಸೆನ್ಸಸ್ಸು: ಕೊನೆಯ ಸಾರಿ ನಡೆದ ಜನಗಣತಿಯ ಮೇರೆಗೆ . . . ಏರ್ಪಡಿಸತಕ್ಕುದು (ಭಾರಾಸ. ೪೦); ೧೯೬೧ರ ಜನಗಣತಿಯ ವರದಿಯ ಅನುಸಾರವಾಗಿ ಸುಮಾರು ೧೫೩ ದ್ರಾವಿಡಭಾಷೆ – ಉಪಭಾಷೆಗಳಿವೆ (ದ್ರಾವಿವಿ. ೧ ಹಿನ್ನೆಲೆ). [ಜನ + ಗಣತಿ$_2$]

**ಜನಗಣನೆ** (ನಾ).=ಜನಗಣತಿ: (Census. ಪತ್ರಿನಿ. ೦೪). [ಜನ+ಗಣನೆ]

**ಜನಗಿ$_1$** 'ಜನ್ನಿಗೆ' ನೋ.

**ಜನಗಿ$_2$** (ನಾ). ಒಂದು ಬಗೆಯ ಮರ: ಜನಗಿ–ಮಧ್ಯಮ ವೃಕ್ಷ, ಹಳದೀ ಬಣ್ಣದ ಫಲಗಳಾಗುತ್ತವೆ. ಅರದಾಳದಂಥ ಅಂಟು ಅವುಗಳಿಂದ ಸೋರುತ್ತದೆ (ಕಥಾಗಿ. ೩೯). [ ? ]

**ಜನಜಂಗುಳಿ** (ನಾ). ಜನಸಮೂಹ,-ಸಮುದಾಯ : ಸುದ್ದಿ ಕಿಚ್ಚಿನಂತೆ ಜನಜಂಗುಳಿಯಲ್ಲಿ ಪಸರಿಸಿತು (ಹುಲಿಹಾ. ೧೨೮); ಪ್ರತಿಯೊಂದು ನಿಲ್ದಾಣ ದಲ್ಲಿಯೂ ಜನಜಂಗುಳಿ ವಿಶೇಷವಾಗಿ ನೆರೆದಿತ್ತು (ಮೂಲಾನ. ೫). [ಜನ + ಜಂಗುಳಿ]

**ಜನಜನಿತ** (ಗು). ೧. ಜನರಿಂದ ಉತ್ಪತ್ತಿಯಾದ,-ಲಭಿಸಿದ: ಅವನಿಯಲ್ಲಿ ಜನಜನಿತ ಧನಧಾನ್ಯವನು ಕಳಹಲಗೈದು . . . ಒಂದಕೆ ನೂರುಮಡಿಯಾಗಿ ಲವಲವಿಕೆ ಮಿಗಲಿತ್ತು ಸಪ್ತಾಂಗವನು ಸಲಹುತ್ತಿರಲುಬೇಹುದು(ಕುವ್ಯಾಉ. ೩-೧೨೫). ೨. ಜನರಲ್ಲಿ ಹಬ್ಬಿರುವ; ಎಲ್ಲರಿಗೂ ತಿಳಿದಿರುವ; ಪ್ರಸಿದ್ಧ ವಾದ : ಲೋಕಗುರು ಶಂಖಚಕ್ರಗದಾಕರನತಿಶಯ ಚತುರ್ಭುಜಂ ಜನ ಜನಿತ ವ್ಯಾಕುಳದೆ ಬಂದಂ (ಶಂಶಭಾ.೯-೩೦). (ನಾ). ೩. ಎಲ್ಲರಿಗೂ

ತಿಳಿದಿರುವ ಸಂಗತಿ; ಪ್ರಸಿದ್ಧವಾದ ವಿಷಯ: ಕೌರವಕುಲಕೆ ಕಣು ಗತಿಮತಿಯೆನಿಸಿ ನೀ ಕರ್ಣನೆಂಬುದು ಸಕಲ ಜನಜನಿತ (ಕುಮಾ.ಕ. ೧೯-೬೧); ನಿನ್ನವ್ವೆ ತೊತ್ತಲ್ಲವೆಂದೆನಿಸಿ ಜನಜನಿತವಂ ಮಾಡಿಸಿ (ತುರಂಗ. ೪-೪೬); ಅವರ ಚರಿತ್ರೆ . . . ಸುತ್ತಮುತ್ತ ಹಳ್ಳಿಗಳಲ್ಲೆಲ್ಲ ಜನಜನಿತವಾಗಿತ್ತು (ಮುರಳಿ. ೪). ೨. ಸಾಮಾನ್ಯವಾದ ಜನ: ಲಿಂಗಧಾರಿಗಳುಳಿದು ಜನಜನಿತಂಗಳಲಿ ಸದ್ಗತಿಯ ಕಾಣ್ಬುತ್ತುಂಗರರಿದೀ ಲೋಕರೊಳಗೆಂದಾಡಿಸಲ್ಲರಲಿ (ಬಿಜ್ಜಳ. ೪೮-೩೦).

ಜನಜನಿತಂಮಾಡು = ಎಲ್ಲರಿಗೂ ತಿಳಿಸು; ಪ್ರಕಟಪಡಿಸು: ಇನಿಯನ ಮೊಗಮಂ ಕಾಣಾತ ಮುತ್ತುಗಳನಿವಿಷದೊಳ್ ಸಂಜನಿಸುವುದುಂ ಜನಜನಿತಂಮಾಡುವ ತೆಱದಿಂ ಕಣ್ಗಳೊಳಶ್ರು ಜನಿಸಲಾಗ (ಜಯನೃ. ೨-೪೪). ಜನಜನಿತವಾಗು = ಜನರಲ್ಲಿ ಹರಡಂ,-ಪ್ರಚಲಿತವಾಗು: ಅವರನ್ನು ಒಂದೆರಡು ವಾರಗಳಲ್ಲಿ ಬಿಡುಗಡೆ ಮಾಡಬಹುದೆಂಬ ಸುದ್ದಿ ಜನಜನಿತವಾಗಿತ್ತು (ಪುನರು. ೩೩೯). [ ಜನ + ಜನಿತ ]

**ಜನಜಾಗೃತಿ** (ನಾ). ಜನಸಾಮಾನ್ಯರಲ್ಲಿ ಉಂಟಾಗುವ ಎಚ್ಚರ,-ಪ್ರಜ್ಞೆ: ಏಷಿಯಾಭೂಖಂಡವೆಲ್ಲ ಜನಜಾಗೃತಿಯಿಂದ ತಳಮಳಗುಟ್ಟುತ್ತಿತ್ತು (ರಾಜ್ಯಶಾ. ೧೫): ಭಕ್ತಿಪಂಥ ಪ್ರಚಂಡ ಜನಜಾಗೃತಿಯನ್ನುಂಟುಮಾಡಿತು (ಕರ್ನಾಟಕ. ೪೨): ಜನಜಾಗೃತಿ ಹೆಚ್ಚಿದ ಹಾಗೆಲ್ಲಾ ಲೋಪದೋಷಗಳು ಕ್ರಮೇಣ ಕಡಮೆಯಾಗುತ್ತಾ ಹೋಗುತ್ತವೆ (ಹಂಜಹಂ. ೧೮೫).
[ ಜನ + ಜಾಗೃತಿ ]

**ಜನಜಾತ್ರೆ** (ನಾ). ಬಹಳ ಜನ ಒಂದೆಡೆ ಸೇರಿರುವ ಗುಂಪು,-ಜಾತ್ರೆ: ಜನಜಾತ್ರೆಗೆ ಹೋದವನಂತೆ ಕೂಟದಲ್ಲಿ ಗೋಷ್ಠಿ ಹರಿದಲ್ಲಿ ತಮ್ಮ ತಮ್ಮ ಮನೆಯ ಇರವಿನ ಹಾದಿ (ಮೋಳಮೂ. ೭-೨೪); ಜನಜಾತ್ರೆಯಾಗಿ ಕವ್ವರೆಗೊಂಡು ಆ ನಾಡ ಜನವೆಲ್ಲವು ನೋಡುತಿರೆ (ಶ್ರೀಪಾಂ. ೭-೧೩೦); ಒಂದು ಲೋಕಲ್ ಗಾಡಿ ಬಂದು ಜನಜಾತ್ರೆಯೆಲ್ಲವೂ ಬಯಲಾಯಿತು (ಕಮುಕ.೦).
[ ಜನ + ಜಾತ್ರೆ ]

**ಜನಜಾಲ** (ನಾ). ಜನಸಮೂಹ: ಸುರಿವ ಬಿಸುರಕ್ತದಿಂದಾ ಜನಜಾಲ ವೈದಿತು ದೆಸೆದೆಸೆಗೆ (ಕಂಪಿ. ೧೧-೩೦). [ ಜನ + ಜಾಲ₂ ]

**ಜನತಂತ್ರ** (ನಾ). "ಪ್ರಜಾರಾಜ್ಯ; ಪ್ರಜಾಸತ್ತೆ; ಪ್ರಜಾಪ್ರಭುತ್ವ" (Democracy. ಪತ್ರಿನಿ. ೩೦). [ ಜನ + ತಂತ್ರ ]

**ಜನತಾಧಾರ** (ನಾ). ಪ್ರಜೆಗಳಿಗೆ ಆಧಾರವಾದವನು,-ಆಶ್ರಯವಾದವನು; ಒಂದು ಬಿರುದು: ಜನತಾಧಾರನುದಾರನನ್ಯವನಿತಾದೂರಂ (ಎಕ. II, ೬೩-೮; 1148). [ ಸಂ. (ಜನತಾ + ಆಧಾರ) ]

**ಜನತಾಧೀಶ** (ನಾ). ಅರಸ; ರಾಜ: ಜನತಾಧೀಶನ ಕಾರ್ಯಮಂ ಬರಿಸಮಂ . . . ಪ್ರಯೋಜನಮಂ ತಾನಱಿದಲ್ಲಿಯುಂ ಬರೆದವಂಗೊಳ್ಪಕ್ಕುಂ (ಸೂಕ್ತಿಸು. ೧೬-೨೩). [ ಸಂ. (ಜನತಾ + ಅಧೀಶ) ]

**ಜನತಾಧೀಶ್ವರ** (ನಾ). = ಜನತಾಧೀಶ: ಜನತಾಧೀಶ್ವರ ಬಿನ್ನಪಂ (ಕಾದಂಪೂ. ೨೪). [ ಸಂ. (ಜನತಾ + ಅಧೀಶ್ವರ) ]

**ಜನತಾಶಯ** (ನಾ). ಜನರ ಮನಸ್ಸು,-ಚಿತ್ತ: ಮದಮದಿರಾಪ್ರಮತ್ತ ಜನತಾಶಯದಂತೆ ಜಡಾಶಯಂ ಕಲಂಕಿದುದು (ಹಂಪಾಮಾ. ೭-೧೫೩).
[ ಸಂ. (ಜನತಾ + ಆಶಯ) ]

**ಜನತೆ** (ನಾ). ಜನಸಮೂಹ; ಜನ; ಮಾನವ ಸಮಾಜ: "ಜನತೆ ಜನಸಮಿತಿ" (ವಸ್ತುಕೋ. ೧೦೩-೩೦); ಪರಮಬ್ರಹ್ಮಶರೀರವೃಷ್ಟಿ ಜನತಾಂತರ್ದೃಷ್ಟಿ . . . ಸರ್ವಾಂಗಸುಂದರಿ ವಿದ್ಯಾನಟಿ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೊಳ್ (ಹಂಪಾಮಾ. ೧-೬): ವಿವೇಕಾನಂದರು ತಮ್ಮ ಪುಟ್ಟದಾದ ಆಶುಭಾಷಣದಿಂದ ಅಮೇರಿಕೆಯ ಜನತೆಯನ್ನು ಗೆದ್ದರು (ಧರ್ಮಶಾ. ೩೦).
[ ಸಂ. ಜನತಾ ]

**ಜನದಟ್ಟಣೆ** (ನಾ). ಕಿಕ್ಕಿರಿದ ಜನಸಂದಣಿ: ಜನದಟ್ಟಣೆಯು ವಿಶೇಷವಾಗಿತ್ತು (ಬಂಗಾಹ. ೬೬). [ ಜನ + ದಟ್ಟಣೆ ]

**ಜನದ್ರೋಹಿ** (ಗು). ೧. ಜನರಿಗೆ ದ್ರೋಹಮಾಡುವ: ಆ ಜನದ್ರೋಹಿ ವಂಚಕರನ್ನು ವಿಚಾರಣೆಯಿಲ್ಲದೆ ಸೆರೆಮನೆಗೆ ತಳ್ಳಿರಿ (ರೂಪಸಂ. ೨೩). (ನಾ). ೨. ಜನರಿಗೆ ದ್ರೋಹ ಮಾಡುವವನು. [ ಜನ + ದ್ರೋಹಿ ]

**ಜನನ** (ಗು). ೧. ಹುಟ್ಟಿಸುವ; ಸೃಷ್ಟಿಸುವ; ಉಂಟುಮಾಡುವ. (ನಾ). ೨. ಹುಟ್ಟಿಸುವುದು; ಉತ್ಪತ್ತಿಮಾಡುವುದು. ೩. ಹುಟ್ಟುವುದು; ಹುಟ್ಟು; ಉತ್ಪತ್ತಿ: "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥವಿವಿಂಶಿನಿತುಂ" (ವಸ್ತುಕೋ. ೧೮-೩); ಜನನ ಜರಾಮೃತಿಗೊಳಗಾಯ್ತಿನಿತು ಜಗಂ (ಮಲ್ಲಿಪು. ೧೩-೫೫); ವೃಥ್ವಿಯಿಂದ ಸಕಲ ಜನನವು (ಬಸವ. ೯೫೬); ರಸವೆ ಜನನ ವಿರಸ ಮರಣ ಸಮರಸವೇ ಜೀವನ (ಗರಿ. ೦೦೪-೪); ಜೀವನು ಶರೀರವನ್ನು ಧರಿಸುವುದೇ ಜನನ (ಜೀವಾತ್ಮ. ೦೫೮). ೪. ವಂಶ: "ಸಂತತಿ ವಂಶಂ ಗೋತ್ರ ಸಂತಾನಂ ಜನನಮನ್ವಾಯಂ ಕುಲಂ" (ವಸ್ತುಕೋ. ೫೬-೨೯). ೫. ಜನ್ಮ; ಭವ: ಹಿಂದಣ ಜನನವೇನಾದಡಾಗಲಿ ಇಂದಿನ ಭೋಗವು ಕೆಯ್ಯ ಮೇಲೆ (ಬಸವ. ೦೭೦).
[ ಸಂ. ]

**ಜನನಪತ್ರಿಕೆ** (ನಾ). ಮಗು ಹುಟ್ಟಿದ ಕಾಲದ ಗ್ರಹಗತಿಯನ್ನು ವಿವರಿಸಿ ಬರೆಯುವ ಪತ್ರಿಕೆ; ಜನ್ಮಪತ್ರ; ಜಾತಕ. [ ಜನನ + ಪತ್ರಿಕೆ ]

**ಜನನಬೀಜ** (ನಾ). ಹುಟ್ಟಿನ ಮೂಲ,-ಕಾರಣ: ಜನನವೇ ಲಯಬೀಜ ಮರಣವೆ ಜನನಬೀಜವು ತೋಱಿ ಕೆಡುವೀ ತನುವಿನಭಿರಂಜನೆಯ ಸೌಖ್ಯಕೆ ಮಾಡಿದಿರು ಮನವ (ಕುಮಾ.ದ್ರೋ. ೭-೧೩). [ ಜನನ + ಬೀಜ ]

**ಜನನಮರಣದೂರ** (ನಾ). ಹುಟ್ಟುಸಾವುಗಳಿಲ್ಲದವನು; ಪರಮಾತ್ಮ: ಜಯ ಜಯ ಜನನಮರಣದೂರ ಜಗದೀಶ (ಶತಸಾಂ. ೬೨-೮).
[ ಜನನ + ಮರಣ + ದೂರ ]

**ಜನನಮರಣವರ್ಜಿತ** (ನಾ). = ಜನನಮರಣ ದೂರ: ಅಮಮ ಬಂದಂ ಜನನಮರಣವರ್ಜಿತಂ (ಸಂಬಿರ. ೭-೧೦೬). [ ಜನನ + ಮರಣ + ವರ್ಜಿತ ]

**ಜನನರಹಿತ** (ನಾ). ಜನ್ಮವಿಲ್ಲದವನು; ಹುಟ್ಟಿಲ್ಲದವನು; ಪರಮಾತ್ಮ: ಜನನರಹಿತನ ಕರುಣವಿಲ್ಲದ ಮನುಜರಿಗೆ ದೊರಕುವುದೆ ಕಾನಿಂತು (ಬಸಪು. ೦೨-೩೦). [ ಜನನ + ರಹಿತ ]

**ಜನನಸೂತಕ** (ನಾ). ಮಗು ಹುಟ್ಟಿದಾಗ ತಂದೆ, ತಾಯಿ ಮೊದಲಾದವರಿಗೆ ಉಂಟಾಗುವ ಮೈಲಿಗೆ; ಪುರುಡು; ವೃದ್ಧಿ: ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಚಿಷ್ಟಸೂತಕ ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು (ಅಬಂಡೀ. ೮೭-೯೦). [ ಜನನ + ಸೂತಕ ]

**ಜನನಸ್ಥಳ** (ನಾ). ಹುಟ್ಟಿದ ಊರು,-ಪ್ರದೇಶ: ಬಾಕ್ . . . ಪಾರಸಿ ಮತವನ್ನು ಕಂಡುಹಿಡಿದ ಜೋರಾಷ್ಟರ್ ಎಂಬವನ ಜನನಸ್ಥಳವೆಂದು ಎಣಿಸೋಣವಾಗಿದೆ (ಭೂಗೋಳ. ೯೯). [ ಜನನ + ಸ್ಥಳ(=ಸ್ಥಲ) ]

**ಜನನಹರ** (ನಾ). (ಮರಳಿ) ಹುಟ್ಟುವುದನ್ನು ತಪ್ಪಿಸುವವನು; ಸಂಸಾರದ ಬಂಧನದಿಂದ ಪಾರಂಮಾಡುವವನು: ಜನನಹರ ಮುನಿ ದೊದ್ದೊಡಂ ಹಾಸಿನ ನಡುವೆ ಬಿದ್ದಂದವಾಯಿತ್ತೆನಗೆ (ಬಸಪು. ೯೩-೭೦).
[ ಸಂ. ]

**ಜನನಾಂಗ** (ನಾ). = ಜನನೇಂದ್ರಿಯ: ಕೀಟದ ಬಗೆಗಳನ್ನು ವರ್ಗೀಕರಿಸಲು ಬಾಹ್ಯ ಜನನಾಂಗಗಳು ಗಣನೆಗೆ ಬರುತ್ತವೆ (ಕೀಟಬಿ. ೬೦).
[ ಜನನ + ಅಂಗ₂ ]

**ಜನನಾಂಧ** (ನಾ). ಹುಟ್ಟಿನಿಂದಲೂ ಕುರುಡನಾದವನು; ಹುಟ್ಟುಗುರುಡ: ಸರಸೀಜಾತಸಖಂ ನಿಜಗ್ರಹಣಕಾಲಂ ಕೂಡೆ ಲಗ್ನಸ್ಥನಾಗಿರೆ ಮರ್ತ್ಯಂ ಜನನಾಂಧನಕ್ಕುಂ (ಜಾತಕ. ೨೦-೦೯). [ ಜನನ + ಅಂಧ ]

**ಜನನಾಥ** (ನಾ). ಜನರ ಒಡೆಯ ; ಅರಸ ; ರಾಜ : ತೂಗಿ ತರೆಯಂ ಜನನಾಥಂ ವಿಸ್ಮಯಸ್ಮಿತಂಬೆರಸು (ಆದಿಪು. ೪-೭೦) ; ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ (ಚಂದ್ರಪು. ೬-೧೧ ವ). [ ಜನ+ನಾಥ ]

**ಜನನಾಥಸ್ಥಾನ** (ನಾ). ಅರಸನಿರುವ ಸ್ಥಳ,- ನಗರ; ರಾಜಧಾನಿ: "ಜನನಾಥಸ್ಥಾನಂ . . . ಶಿಬಿರನಿವೇಶಂ ಪತ್ತನ ನಿಗಮ ನಗರ ಪುಟಭೇದನ ನಗರೀ ಪುಃ ಸಮಾಹ್ವಯಂ ಪುರಮಕ್ಕುಂ" (ಪಶ್ವ್ಕೋ. ೯೬-೫). [ ಜನನಾಥ + ಸ್ಥಾನ ]

**ಜನನಿ₁** (ಗು). ೧. ಉಂಟುಮಾಡುವ ; ಕೊಡುವ. (ನಾ). ೨. ಹೆತ್ತವಳು ; ತಾಯಿ : "ಜನನಿ ಸವಿತ್ರಿ ಮಾತೃ ಸುಹು ತಾಯ್" (ಪಶ್ವ್ಕೋ. ೫೪-೦೭); ಎಲೆ ಮಾಯಾದೇವಿ ಲೋಕತ್ರಯಜನನಿ (ಜಗಿವಿ. ೩-೫೮) ; ಜನನಿಗೆನಗತ್ತಿಗೆಗೆ ನಿನ್ನಯ ತನುಜರಿಗೆ ಮತವಲ್ಲ ಬಲ್ಲೆನು (ಕೌಶಿರಾ. ೦೪-೨೪)..೩. ಒಂದು ಬಗೆಯ ಸಸ್ಯ ; ಕಳವಿಗೆ : "ಜನನಿ ಕಳವಿ[ಶಾಕಾಂ. ಲ]ಗೆಯೆನಿಕ್ಕುಂ" (ಮಂಗರಾ. ೪೨-೪೯). [ ಸಂ. ]

**ಜನನಿ₂** (ನಾ). = ಜನ್ನಿ : (ಪ್ರುಎಐ. ೦೯೩೧, ೩೫೯, ೩೩೦; 1398) ; (ಟೋಳಿಸ. ೫೮, ೭೩). [P ಇದು 'ಜನ್ನಿ'ಯ ಅಪಲಿಖಿತವಿರಬಹುದು].

**ಜನನಿಬಿಡ** (ಗು). ಜನರಿಂದ ಕಿಕ್ಕಿರಿದು ತುಂಬಿದ : ಜನನಿಬಿಡವಾಗಿದ್ದ ಮೂರು ಅಂತಸ್ತುಗಳನ್ನು ದರ್ಪದಿಂದ ಏರಿ ಹೋಗಿ ಜರಾಸಂಧನನ್ನು ಕಂಡರು (ವಚಛಾ. ೭೮). [ ಜನ + ನಿಬಿಡ ]

**ಜನನೀಚರ** (ಗು). [ಜೈನ] ಹಿಂದಿನ ಜನ್ಮದಲ್ಲಿ ತಾಯಿಯಾಗಿದ್ದ : ಎನಗಿ ನಿವಿರಿದು ಸುಖಂ ಮಜ್ಜನನೀಚರದಿವಿಜನಿಂದಮಾಯ್ತೆಂದು ಕೃತಂ ಮನ ದೊಳ್ ಪುದಿದು (ಆದಿಪು. ೩-೫೮). 'ಮಾತೃಚರ' ಪರಾ. [ ಸಂ. ]

**ಜನನೀರಾಗ** (ನಾ). ೧. ತಾಯಿಯ ಪ್ರೀತಿ. ೨. ಜನರ ಬೇಸರ,- ಬೇಜಾರು. ೧, ೨ : ಚರಣವಿನ್ಯಾಸದೊಳಪ್ರಗಲ್ಭನು ತಾನು ಜನನೀರಾಗ ಕಾರಣನು . . . ಕುಕವಿಯು ಬಾಲಕನಿವನು (ಇಂಚಾಪ. ೧೭೩-೫೫). [ ಸಂ. (ಜನನೀ + ರಾಗ ; ಜನ + ನೀರಾಗ) ]

**ಜನನುತ** (ಗು). ೧. ಜನರಿಂದ ಸ್ತುತ್ಯವಾದ ; ಪ್ರಸಿದ್ಧವಾದ : ಇದು ಜನನುತ ಶೋಭೆ ಗಡ(ಅಜಿಪು. ೫-೬೦) ; ಜನನುತ ಶಾಂತಿಭೂಷನ ಜಗಜ್ಜನ ವಂದ್ಯನ (ರಾಜಶೇ. ೧-೬೭). (ನಾ). ೨. ಜನರಿಂದ ಸ್ತುತ್ಯನಾದವನು : ನಿನ್ನ ಜನ್ಮದಿಂ ಜನನುತರಾದೆವಾವಮೊಳವೌತ್ಕಿಕರತ್ನಕೆ ಜನ್ಮಭೂಮಿಯಾ ದನುಪಮ ಶುಕ್ತಿಸಂಪುಟದವೋಲ್(ಪುಷ್ಪಪು. ೧೨-೯೨). [ ಜನ + ನುತ ]

**ಜನನೇಂದ್ರಿಯ** (ನಾ). ಸಂತಾನೋತ್ಪತ್ತಿಗೆ ಕಾರಣವಾಗುವ ಇಂದ್ರಿಯ: ಕೀಟಕಗಳ ಹೊಟ್ಟೆಯ ಹಿಂಭಾಗದ ತುಂಡುಗಳಲ್ಲಿ ಚುಚ್ಚುವ ಮುಳ್ಳಾಗಲಿ ಇಲ್ಲವೆ ಜನನೇಂದ್ರಿಯಗಳ ಕಾರ್ಯಗಳಲ್ಲಿ ನೆರವಾಗುವ ಅಂಗಗಳಾಗಲಿ ಇರುತ್ತವೆ (ಕೀಟಟು. ೫). [ ಜನನ + ಇಂದ್ರಿಯ ]

**ಜನನೋತ್ಸವ** (ನಾ). ಮಗು ಹುಟ್ಟಿದಾಗ ಮಾಡುವ ಉತ್ಸವ ; ಜನ್ಮೋತ್ಸವ : ಕಂದಂಗೆ ರಾಜ್ಯಚಿಹ್ನಮನೊಂದೆರಡುಮನುಟಿಸಿ ಮುಂದಿ ಗೆರೆದರ್ಥಮನಾ ಮಂದಾರಂ ಕೆಯ್ಯಂದಪೊಲೆಂದಿತ್ತೆಸಗುವನೊ ನೃಪತಿ ಜನನೋತ್ಸವಮಂ (ಪುಷ್ಪಪು. ೩-೯೦). [ ಜನನ + ಉತ್ಸವ ]

**ಜನಪ** (ನಾ). ದೊರೆ ; ಅರಸ ; ರಾಜ : ಜನಪನ ಕಾದು ರಕ್ಷಿಸುವ ನೀತಿ . . . ಏಂ ಪಿರಿದೊ (ಅನಂಪು. ೧-೯೭) ; ಇನಿತು ವೃತ್ತಾಂತವನಱಿದು ತಜ್ಜನಪನದಱಿಂ ಮುನ್ನ ತನ್ನಾನನದ ಹಾಸ್ಯರಸಂ ಬಱತು (ಬಸಪು. ೨೧. ೪೭) ; ಜನಪ ಮೆಚ್ಚಿದರೀವ ಧನವಾಹನ ವಿಭೂಷಣ ವಸನ ಭೂಮಿಯ ತನುಮನಗಳಿತ್ತಾದರಿಪರುಂಟೇನೊ ಲೋಕದೊಳು(ಹಸಾರ. ೨-೧೭). [ಸಂ.]

**ಜನಪತನ** (ನಾ). ದೊರೆತನ ; ರಾಜಪದವಿ : ವನನಿವಾಸ ಧರಾಧಿಪತ್ಯದ ಜನಪತನದುಡುಗೊಱಿಯದೀಗೆಂಥನುತ . . . ಹರಸಿದಳು (ಕೊರಾ. ೨-೩-೪೫). [ ಜನಪ + - ತನ ]

**ಜನಪತಿ** (ನಾ).=ಜನಪ : ಬುಧಭೌಮರ್ ದ್ವಿತೀಯದೊಳಿರೆ ಜನಪಸೂನು ಜನಪತಿಯಕ್ಕುಂ (ಜಾತಕ. ೧೨-೨೫) ; ತನಯರ್ ಪಲರುಳ್ಳೊಡಮಾ ಜನ ಪತಿ ರಂಜಿಸುವನಾ ಕುಮಾರಕನಿಂ(ಚಂದ್ರಪು. ೩-೨೭) ; ರೂಢಿ ಮಿಗೆ ಬರೆದಾ ಜನಪತಿಗೆ ನೀಡಲೆರಡುಮನೀಸಿಕೊಂಡು (ಬಸಪು. ೫೦-೩೭). [ ಜನ + ಪತಿ₂ ]

**ಜನಪಥ** (ನಾ). ಜನರು ಓಡಾಡುವ ದಾರಿ,-ಮಾರ್ಗ : ಸಂಸಾರವೆಂಬ ಹೇರಡವಿಯ ಅಂಧಕಾರವೆಂಬ ಜನಪಥದ . . . ಅಹಂ ಮಮತೆಯ ಹೊತ್ತು ನಡೆವ ನರಗುಱಿಗಳಾದ ಜೀವರಿಗೆ ಭವಬಂಧನ ಹಱಿದು ಗುರು ಪಥವಪ್ಪುದು (ಶರ್ವವ. ೧೬೧-೮೦೭). [ ಜನ + ಪಥ ]

**ಜನಪದ** (ನಾ). ೧. ಜನ ; ಜನತೆ ; ಜನಾಂಗ : ಕೇವಲ ಶಾಸನದೃಷ್ಟಿ ಯಿಂದ ಯಾವುದು ರಾಜ್ಯವೋ ಅದೇ ಸಂಸ್ಕೃತಿಯ ದೃಷ್ಟಿಯಿಂದ ಜನ ಪದ ಅಥವಾ ಜನಾಂಗ (ರಾಜಶಾ. ೧೦೯). ೨. ದೇಶ ; ರಾಜ್ಯ ; ರಾಷ್ಟ್ರ : "ನಿವೃತ್, ಜನಪದಃ, ದೇಶಃ, ಉಪವರ್ತನಂ-ಈ ೪ ನಾಡು "(ಹಲಾಯು. ೪೭-೧೨೯) ; ಕಾವೇರಿಯಿಂದಮಾ ಗೋದಾವರಿವರಮಿರ್ಪ ನಾಡದಾ ಕನ್ನಡ ದೊಳ್ ಭಾವಿಸಿದ ಜನಪದಂ ವಸುಧಾವಳಯ ವಿಲೀನ ವಿಶದ ವಿಷಯ ವಿಶೇಷಂ (ಕವಿರಾ.೧-೩೭) : ಜನಪದಂಗಳನ್ನೆರೆದ ಮಾಡಿ ಪುರಂಗಳಂ ಸಮ ಕಟ್ಟಿ (ಆದಿಪು. ೮-೬೫) ; ಧೃತರಾಷ್ಟ್ರ ವಿದುರರ್ಕಳ್ಗೆ ಬೇಱಿವೇಱಿ ವಿಸ್ತರದ ಜನಪದಂಗಳಂ ನಿರೂಪಿಸಿ (ನೇಮಿಪು. ೧೨-೨೭೦) ; ತಜ್ಜನಪದದ ಧನವ ಕುಂದಿಸದೆ ನೃಪಮಂತ್ರಿಗಳು ಸಾನಂದದಲಿ ರಕ್ಷಿಸಲು ಬಳಿಕವರಿಂದ ಸಕಲೈಶ್ವರ್ಯಪದವಹುದು (ಕುವ್ಯಾಉ. ೩-೨೪). ೩. ಗ್ರಾಮಪ್ರದೇಶ. 'ಜನಪದಸಾಹಿತ್ಯ' ಪರಾ. [ ಜನ + ಪದ₂ ]

**ಜನಪದಕಜ್ಜ** (ನಾ). ರಾಜ್ಯದ ಕಾರ್ಯ: ಜನಪದಕಜ್ಜಮಂ ಕೆಡಿಸಿ ಕೊಳ್ಪದ ನೆಂದೊಡೆ ಕೊಳ್ವನನ್ಯಕಾಮಿನಿ ತನಗೊಲ್ದಳೆಂದೊಡದನಾರಿಸಿಯಾಳ್ದನಿನಿಪ್ಪ ಪಾಯಮುಂಟೆನೆ ಬೆದಱಂ . . . ಇಂತುಟುಪಥಾಪರಿಶುದ್ಧನಮಾತ್ಯ ನಕ್ಕುಮೆ (ಸೂಕ್ತಿಸು. ೧೬-೫೧). [ ಜನಪದ + ಕಜ್ಜ ]

**ಜನಪದಸಾಹಿತ್ಯ** (ನಾ). ಹಳ್ಳಿಗರು ತಾವಾಡುವ ಭಾಷೆಯಲ್ಲಿ ರಚಿಸಿ, ಉಳಿದಂ ಬಂದಿರುವ ಸಾಹಿತ್ಯ: ಸಾಹಿತ್ಯಚರಿತ್ರೆಯಲ್ಲಿ ಜನಪದಸಾಹಿತ್ಯಕ್ಕೆ ಮೇಲಾದ ಸ್ಥಾನವಿದೆ (ಕಸಾಚ. ೧) : ಜನಪದಸಾಹಿತ್ಯದ ಬಹುಭಾಗ ತ್ರಿಪದಿಯಲ್ಲಿಯೋ ಸಾಂಗತ್ಯದಲ್ಲಿಯೋ ಇರುತ್ತದೆ (ಇಂಚಾಪ. iii, ಅರಿಕೆ) : ಈಶ್ವರ ಮದನರ ಯುದ್ಧದ ಕಥೆಯ ಮೂಲವು ಎಲ್ಲಿಯೋ ಜನಪದಸಾಹಿತ್ಯ ದಲ್ಲಿ ಅಡಗಿರಬೇಕು (ಸಾಹಿಸ. ೦೩೩). [ ಜನಪದ + ಸಾಹಿತ್ಯ ]

**ಜನಪದಾಧಿಕಾರ** (ನಾ). ರಾಜ್ಯದ ಅಧಿಕಾರ ; ಅರಸೊತ್ತಿಗೆ : ಜನ ಪದಾಧಿಕಾರಂ ದೊರೆಕೊಳ್ಗುಂ ಧನಮುಮಕ್ಕು (ಜಾತಕ. ೯-೨೯). [ ಜನಪದ + ಅಧಿಕಾರ ]

**ಜನಪಲ್ಲಯಪೇಱು** (ನಾ). ಒಂದು ಬಗೆಯ ಸುಂಕ(?): ಪನ್ನಾಯದಲುಂ ಪೆಜ್ಜುಂಕದಲುಂ ಕೂಡಿ ಸಮುದಾಯದಲುಂ ತಿಂಗಳಿಗೆ ಜನಪಲ್ಲಯಪೇಱಿನ ಸುಂಕಮನಾಚಂದ್ರಾರ್ಕತಾರಂಬರಂ ಬಿಟ್ಟರು(ಕೊಲ್ಲಾಶಾ. ೪-೧೩; 1083). [ ? ]

**ಜನಪಸೂನು** (ನಾ). ಅರಸನ ಮಗ ; ರಾಜಪುತ್ರ : ಜನಪಸೂನು ಜನ ಪತಿಯಕ್ಕುಂ (ಜಾತಕ. ೧೨-೨೫). [ ಜನಪ + ಸೂನು ]

**ಜನಪಾಧ್ವರ** (ನಾ). ರಾಜಸೂಯಯಾಗ : ಇವರ ಜನಪಾಧ್ವರವನದ ಹಾಯ್ದುವನನಾಗಳೆ ದೇವಕೀಸುತ ಸವಱಿದನು (ಕುವ್ಯಾಸ. ೧೩-೭೭). [ ಜನಪ + ಅಧ್ವರ ]

**ಜನಪಾಲ** (ನಾ). ಜನರನ್ನು ಸಂರಕ್ಷಿಸುವವನಂ ; ದೊರೆ ; ರಾಜ : ಜನ ಪಾಲಂ ಮಿಗೆ ಭೀತಿವಟ್ಟು ನಡೆತಂದು (ವ್ಯಹವಿ. ೧೨-೬೭). [ ಸಂ. (ಜನ+ ಪಾಲ) ]

**ಜನಪಾಲಾಗ್ರಣಿ** (ನಾ). ಅರಸರಲ್ಲಿ ಶ್ರೇಷ್ಠನಾದವನು : ಜನಪಾಲಾಗ್ರಣಿ ಪಂಚಾಕ್ಷರಮನಮಮ ಜಪಿಸಿದನಾಗಳ್ (ರಾಜಶೇ. ೦೩-೫೬).
[ ಜನಪಾಲ + ಅಗ್ರಣಿ ]

**ಜನಪ್ರಿಯ** (ಗು). ೧. ಜನರಿಗೆ ಪ್ರಿಯವಾದ ; ಎಲ್ಲರಿಗೂ ಬೇಕಾದ. (ನಾ). ೨. ಜನರಿಗೆ ಪ್ರಿಯವಾದಂದು : ವೇಮನನ ಪದ್ಯಶತಕ ಜನಪ್ರಿಯವಾಗಿದೆ (ಭಾರಠ. ೪೦೩) ; ಡೋಳ್: ದಕ್ಷಿಣ ಹಿಂದೂಸ್ಥಾನದಲ್ಲಿ ಅಷ್ಟೊಂದು ಜನಪ್ರಿಯವಾಗಿಲ್ಲ (ಆಧುಸಾ. ೭೫). [ ಜನ + ಪ್ರಿಯ ]

**ಜನಪ್ರಿಯತೆ** (ನಾ). ಜನರ ಮೆಚ್ಚಿಕೆಗೆ ಪಾತ್ರವಾಗಿರುವಿಕೆ : ಆತನ ಪ್ರತಿಭೆ ಮತ್ತು ಜನಪ್ರಿಯತೆಗಳಿಗೆ ಬೇರೆ ಸಮರ್ಥನೆಯೇ ಅಗತ್ಯವಿಲ್ಲ (ಸಂಗೀತ. ೬) : ವಿದ್ಯಾರ್ಥಿಗಳಂತೆ ಕುಣಿದು ಗಳಿಸುವ ಜನಪ್ರಿಯತೆ ನನಗೆ ಬೇಡ (ರಂಗರೂ. ೫೮). [ ಸಂ. ಜನಪ್ರಿಯತಾ ]

**ಜನಬಲ** (ನಾ). ೧. ಜನರ ಶಕ್ತಿ : " ಕೆಲಸಕ್ಕೆ ಒದಗಬಹುದಾದ, ಆಳುಬಲ, ಜನಶಕ್ತಿ, ಜನಬಲ " (Man-power. ಶಕ್ತಿನಿ. ೫೨). ೨. ಜನರ ಬೆಂಬಲ,-ಸಹಾಯ : ಒಂದು ಮಹತ್ಕಾರ್ಯ ನೆರವೇರಬೇಕಾದರೆ ಜನಬಲ ಧನ ಬಲ ಎರಡೂ ಬೇಕು (ರೂಢಿ). [ ಜನ + ಬಲ ]

**ಜನಬಳಕೆ** (ನಾ). ಜನರು ಬಳಸುವುದು,-ಉಪಯೋಗಿಸುವುದು : ಜನಬಳಕೆಯಲ್ಲಿಯ ಅಂಕಿಗಳನ್ನು ಉಪಯೋಗಿಸಿ . . . ವರ್ಗೀಕರಿಸಲು ಕ್ಲಿಷ್ಟವೆನಿಸಲಾರದು (ಗ್ರಂಥಾಲ. ೦೮). [ ಜನ + ಬಳಕೆ ]

**ಜನಬಾಹುಳ್ಯ** (ನಾ). ಜನರು ಹೆಚ್ಚಾಗಿರುವುದು ; ಜನಸಂದಣಿ : ಐಶ್ವರ್ಯದಲ್ಲಿಯೂ, ಜನಬಾಹುಳ್ಯದಲ್ಲಿಯೂ ವಿಸ್ತೀರ್ಣದಲ್ಲಿಯೂ ಇಂಡ್ಯದ ಯಾವ ಭಾಗವೂ ಬಂಗಾಳದ ಕೆಳಗಿನ ರಾಜ್ಯಗಳಿಗೆ ಸಮಾನವಾಗಿಲ್ಲ (ಭೂಗೋಳ. ४೦). [ ಜನ + ಬಾಹುಳ್ಯ ( = ಬಾಹುಲ್ಯ ) ]

**ಜನಭರಿತ** (ನಾ). ಹೆಚ್ಚಾದ ಜನಸಂಖ್ಯೆಯಿಂದ ಕೂಡಿದುದು ; ಜನ ನಿಬಿಡವಾದುದು: ಬೇಹಾರ್‌ದೇಶವು ಇಂಡಿಯಾದಲ್ಲಿ ಅತ್ಯಂತ ಜನಭರಿತ ವಾದುದು (ಭೂಗೋಳ. ४೯). [ ಜನ + ಭರಿತ ]

**ಜನಮನ** (ನಾ). ಜನತೆಯ ಮನಸ್ಸು : ಹುಟ್ಟುಮೂಕನೆಂದು ದಟ್ಟೇಶು ಜನಮನ (ಸಿದ್ಧಪು. ४-೫೭) ; ಹರಿಹರನ ಕಾಲಕ್ಕಾಗಲೆ ಈ ಧ್ವನಿಯ ವಿಚಾರದಲ್ಲಿ ಜನಮನದಲ್ಲೂ ಕವಿಕಾವ್ಯಗಳಲ್ಲೂ ಗೊಂದಲ ಗಾಬರಿಗಳು ಪ್ರಾರಂಭವಾಗಿದ್ದುವು (ದ್ರಾವಿವಿ. ೩೨೭). [ ಜನ + ಮನ ]

**ಜನಮನ್ನಣೆ** (ನಾ). ಜನರ ಆದರಣೆ : ಮೇಳವು ಗಳಿಸಿತು ಜನಮನ್ನಣೆ ಯನು (ಇಂದಾಪ. ೧೧-४४). [ ಜನ + ಮನ್ನಣೆ ]

**ಜನಯಿತ್ರಿ** (ನಾ). ಜನನಿ; ತಾಯಿ: "ಜನನೀ, ಜನಯಿತ್ರೀ ಈ ೨ ತಾಯಿ" (ಕಾಶಕ್ಕ. ೦೯೯). [ ಸಂ. ಜನಯಿತ್ರೀ ]

**ಜನಯಿಸು**(ಕ್ರಿ).=ಜನಿಸು ೨: ಸಂಸರ್ಗಂ ಜನಯಿಸುಗುಂ ಗುಣದೋಷೋಭನ ತತ್ವಮನೆಲ್ಲಿಯುಂ ಮಹೀಮಂಡಳದೊಳ್ (ಶಾಂತಿಪು. ೩-೭೯).
[ ಜನನ + - ಇಸು₃ ]

**ಜನರಂಜನ** (ನಾ). ಜನರನ್ನು ಸಂತೋಷಪಡಿಸುವುದು,-ಮೆಚ್ಚಿಸು ವುದು : (೬). [ ಜನ + ರಂಜನ ]

**ಜನರಂಜನಿ** (ಗು). ೧. ಜನರನ್ನು ರಂಜಿಸುವ. (ನಾ). ೨. [ಸಂಗೀತ] ಒಂದು ರಾಗದ ಹೆಸರು : ಜನರಂಜನೀರಾಗದಲ್ಲಿ ಅವರು ರಚಿಸಿರುವ ಸಂಸ್ಕೃತಕೀರ್ತನೆ "ಪಾಹಿಮಾಂ ಶ್ರೀ ರಾಜರಾಜೇಶ್ವರಿ"ಯಲ್ಲಿ ಸೊಗಸಾದ ಚಿಟ್ಟೆಸ್ವರಗಳಿವೆ (ಸಂಗೀತ. ೦४). [ ಸಂ. ಜನರಂಜನೀ ]

**ಜನರಂಜಿನಿ** (ನಾ). = ಜನರಂಜನಿ ೨ : ಜನರಂಜಿನಿ-೨೯ನೇ ಮೇಳಕರ್ತ ಧೀರಶಂಕರಾಭರಣದಲ್ಲಿ ಜನ್ಯ (ಸಂಗೀತಂ. ೧೫೦). [ ಸಂ. ಜನರಂಜಿನೀ ]

**ಜನರಮಣ** (ನಾ). ಅರಸ ; ರಾಜ : ಜನರಮಣ ಯಾ ವಿಪ್ರರಚಿಯರೆ ಯೆಂದೆನಲು ಕೇಳ್ದು (ಬಸವು. ೫೭-೭೩). [ ಜನ + ರಮಣ ]

**ಜನರಲ್** 'ಜನರಲ್ಲು' ನೋ.

**ಜನರಲ್ಲು, ಜನರಲ್, ಜನರಾಲ್** (ನಾ). ಸೇನಾಧಿಪತಿ; ದಂಡನಾಯಕ: ನಾವೀ ವಿಭುವಿನಿದಿರೋಳ್ ಸಾಹಸವ ತೋರ್ವೆವೆಂದಾವರಿಸಿ ಜನರಲ್ಲು ಕರ್ನಲ್ಲು ಮೊದಲಾದ ಸರಕಾರರೈತಂದರು (ಅರ್ಜಾಗವಿ. ೨४-೫४). **ಜನರಲ್:** ಆಹ್ಲಾದದಿಂದ ಜನರಲ್ಸುರುಟ ನೋಡಲ್ಕೆ ಪೊರಮಟ್ಟನು (ಅರ್ಜಾಗವಿ. ೨४-४೬). **ಜನರಾಲ್:** ಜನರಾಲ್ ಮೆತ್ತ್ಯಸರವರು ಬಂದು (ರಾಜೇಂದ್ರ. ೧೬).
[ ←ಇಂ. General ]

**ಜನರಾಗ** (ನಾ). ಪ್ರಜೆಗಳ ಪ್ರೀತಿ: ನೀತಿವಿಡಿದರಸಂಗೆ ಬಹಳ ಖ್ಯಾತವದು ಜನರಾಗ ರಾಗವ್ರಾತದಿಂ ಧನ ಧನದಿ ಪರಿಕರ ಪರಿಕರದಿ ಜಯವು (ಶಿವಾಸ. ೦-४೮). [ ಜನ + ರಾಗ ]

**ಜನರಾಲ್** 'ಜನರಲ್ಲು' ನೋ.

**ಜನರೌದ್ರ** (ನಾ). ಜನರಿಗೆ ಭಯಂಕರನಾದವನು : ಶ್ರೀವೀರಭದ್ರನಂ ಕರುಣಾಂಬುರಸಮಯಸಮುದ್ರನಂ ಜನರೌದ್ರನಂ (ವೀಕೃಪು. ೩-೫-೩೨).
[ ಜನ + ರೌದ್ರ ]

**ಜನರ್ಲೋಕ** (ನಾ). ಏಳು ಊರ್ಧ್ವಲೋಕಗಳಲ್ಲಿ ಐದನೆಯ ಲೋಕ : ವಕ್ಷದಲ್ಲಿ ಮಹರ್ಲೋಕ ಕಂಠದಲ್ಲಿ ಜನರ್ಲೋಕ (ಅಖಂಡೇ. ೧४೨-೦೨४).
[ ಸಂ. (ಜನರ್ + ಲೋಕ) ]

**ಜನಲೋಕ** (ನಾ). = ಜನರ್ಲೋಕ : (೬). [ ಜನ + ಲೋಕ ]

**ಜನವಡೆ** (ನಾ). ಜನಸಮುದಾಯ : ಈ ಜನವಡೆಯೊಳಾರಾನುವಿಾ ಬಿಲ್ಲನೇಱಿಸಲಾರ್ಪೊಡೆ ಬನ್ನಿಮೆಂದು ಸಾಱುವುದುಂ (ಪಂಪಭಾ. ३-೬೦ ವ).
[ ಜನ + ಪಡೆ₄ ]

**ಜನವರ** (ನಾ). ರಾಜ ; ಅರಸ : ಜನವರನೆ ಕೇಳನ್ಯದೈವದ ಮನೆಗದೇತಕೆ ಬಾರರವರೆಂದೆನಲಹುದೆ (ಬಸವು. ೫३-३೫). [ ಜನ + ವರ₃ ]

**ಜನವಶ್ಯ** (ಗು). ೧. ಜನರನ್ನು ವಶಪಡಿಸಿಕೊಳ್ಳುವ. 'ಜನವಶ್ಯ ಚೂರ್ಣ' ಪರಾ. (ನಾ). ೨. ಕನ್ನಡದಲ್ಲಿ ಕಲ್ಲರಸನಂ ಬರೆದ ಒಂದು ಕಾಮಶಾಸ್ತ್ರಗ್ರಂಥ : ಚತುರಿಂ ನವೀನಪದ್ಧತಿಯಿಂ . . . ವಿರಾಜಿಸುಗೆ ರತಿಯುವೊಲ್ ಜನವಶ್ಯಮಾತಾರಕಂ (ಜನವ. ೦३-೮೦). [ಜನ + ವಶ್ಯ]

**ಜನವಶ್ಯಚೂರ್ಣ** (ನಾ). ಜನರನ್ನು ವಶಪಡಿಸಿಕೊಳ್ಳುವ ಒಂದು ಬಗೆಯ ಚೂರ್ಣ,-ಪುಡಿ : ಕಂತುನಿರ್ಮಿತ ಜನವಶ್ಯಚೂರ್ಣಮೆನೆ ಪಾಂಸುಗಳಂ ಕೆದಱುತ್ತೆ ವೀಕ್ಷಣಾಮೃತಮಯ ಕಂದಳಂ ಪೊಸತರಲ್ವಾದು ಕೇದಗೆ ಮೇಘಕಾಲದೊಳ್ (ಮಲ್ಲಿಪು. ೮-೬೦). [ಜನವಶ್ಯ + ಚೂರ್ಣ₃]

**ಜನವಾಣಿ** (ನಾ). ಜನರು ಆಡುವ ಮಾತು ; ಆಡುನುಡಿ : ಪಂಪನಿಗೆ ಜನಜೀವನದ ಮತ್ತು ಜನವಾಣಿಯ ಪರಿಚಯವು ಎಷ್ಟು ಯಥಾರ್ಥವೂ ಗಾಢವೂ ಆಗಿತ್ತು (ಕವನಿ. ೬೬). [ ಜನ + ವಾಣಿ₁ ]

**ಜನವಾದ** (ನಾ). ೧. ಜನರಾಡುವ ಮಾತು : ಲೋಕದಲ್ಲಿ ಕೆಲವರು ಸ್ನೇಹಾತಿಶಯದಿಂದಲೂ ಕೆಲವರು ದಾನಾಪೇಕ್ಷೆಯಿಂದಲೂ ಕೆಲವರು ವಿಚಾರಿಸದೆಯೂ ಕಾರ್ಯಸ್ವರೂಪವನ್ನು ಹೇಳುವರು, ಜನವಾದವು ಹೀಗೆ ಬಹುಪ್ರಕಾರವಾಗಿ ಪ್ರವರ್ತಿಸುವುದು (ಕೃಪಾಸ. ೨३). ೨. ಜನರಲ್ಲಿ ಪ್ರಚಾರವಾದ ಮಾತು ; ವದಂತಿ ; ಗಾಳಿಸುದ್ದಿ ; ಸಮಾಚಾರ : " ಜನವಾದಂ ಕಿಂವದಂತಿ ವಾರ್ತೆಯದಕ್ಕುಂ " (ವಸ್ತುಕೋ. ೬೦-३२) ; ಜನಮಱಿಯದನ್ನೆಗಂ ಮುನ್ನಂ ನಯಮಱಿದಱಿಪಲಾರ್ಪೊಡದು ಮಂತ್ರಿ ಗುಣಂ ಜನವಾದಂ[ಪಾಠಾಂ. ದಾ]ನೆಗಱೆ ನಗಧ್ವನಿವೋಲನುಕರಣವಾರ್ತೆ ಮಂತ್ರಿಯ ಗುಣಮೇ (ಕವಿರಾ. ३-೧४३): ವಿಕೃತಕ್ಕೆ ಸಂದ ನಾಗ್ನ್ಯಮುಮ ವಹಿಂಸೆಯೆಂಬ ಜನವಾದಮುಮಲ್ಲದೆ ಪೇಱ ಜೀವತತ್ತ್ವಮುಮನಜೀವ ತತ್ತ್ವಮುಮನೆತ್ತಱೆವರ್ ಜನತತ್ತ್ವತಾತ್ತ್ವಿಕರ್ (ಶಾಂತಿಪು. ೮-೧३२). ೩. ಜನಾಪವಾದ ; ಲೋಕನಿಂದೆ. [ ಜನ + ವಾದ₄ ]

**ಜನವಾರ್ತೆ** (ನಾ). ಜನರ ಆಡಿಕೆ ಮಾತು ; ಜನವದಂತಿ. [ ಜನ + ವಾರ್ತೆ ]

**ಜನಶಕ್ತಿ** (ನಾ). = ಜನಬಲ ೧ : (ಕೆಲಸಕ್ಕೆ ಒದಗಬಹುದಾದ) ಆಳುಬಲ, ಜನಶಕ್ತಿ, ಜನಬಲ (Man-power. ಪಕ್ರಿನಿ. ೫೨). [ ಜನ + ಶಕ್ತಿ ]

**ಜನಶ್ರುತಿ** (ನಾ). = ಜನವಾರ್ತೆ : "ಕಿಂವದಂತೀ, ಜನಶ್ರುತಿಃ, ಕೌಲೀನಂ, ಲೋಕವಾದಃ–ಈ ೪ ಜನವಾರ್ತೆ" (ಹಲಾಯು. ೨೪–೧೪೬) : ರಾವಣನು ಆರ್ಯದೇವತೆಗಳನ್ನು ಸೋಲಿಸಿದ್ದನೆಂದು ಜನಶ್ರುತಿ (ನಿಬಂಧ. I. ೧೦೪); ಆ ದೇವರ ಹೆಸರಿನಿಂದ ಆ ಊರಿಗೆ ಆ ಹೆಸರು ಉಂಟಾಯಿತೆಂದು ಜನಶ್ರುತಿಯಾಗಿದೆ (ಲಕ್ಷ್ಮೀಶ. ೦). [ ಜನ + ಶ್ರುತಿ ]

**ಜನಸಂಕೀರ್ಣ** (ಗು). ೧. ಜನರಿಂದ ತುಂಬಿದ. (ನಾ). ೨. ಜನರ ಗುಂಪು: ಪ್ರಾಸಾದದ ಮೇಗಿರ್ದು ಜನಸಂಕೀರ್ಣದ ನಡುವೆ ನಾಲ್ಕು ಪೊಟ್ಟಳೆಗೆಯ ನೀಡಾಡಿದೊಡೆ (ವಡ್ಡಾರಾ. ೦೫–೬). [ ಜನ + ಸಂಕೀರ್ಣ ]

**ಜನಸಂಗ** (ನಾ). ಒಂದು ಬಗೆಯ ಮರ ; ಮೇಷಶೃಂಗಿ : ಜನಸಂಗ (ಖರಸಿಂಗ)–ದೊಡ್ಡ ಮರ ಕಟ್ಟಿಗೆ ನುಣುಪು ಶೋಭೆಯುಳ್ಳದ್ದು. ಇಮಾರತಿಗೂ ಶೋಭೆಯ ಸಾಮಾನುಗಳಿಗೂ ಬರುತ್ತದೆ (ಕಭಾಗ. ೩೯). [ ? ]

**ಜನಸಂಧಿ** (ನಾ). ಜನರ ಸಮೂಹ: ಬಂದ ಎದೆ ಬಾಮ್ಮಂದದಲಿ ಇಳಿತಂದು ಜೋಲುವ ಕರಡಿಗೆಯ ಜನಸಂಧಿಯೊಳಗೆಲ್ಲೂ ರಕೊಬ್ಬ ಹನವನ ಲೋಚಕ (ಬಿಜ್ಜಪು. ೬೮–೨೦). [ ಜನ + ಸಂಧಿ ]

**ಜನಸಂಮರ್ದ** (ನಾ). ಜನರ ಗುಂಪು,–ಸಮೂಹ : ಜನಸಂಮರ್ದೋತ್ಥ ಕೋಳಾಹಳ ಕುಪಿತ ಹಯಸ್ಕಂಧಮೂಲಸ್ಥಕಾಸ್ಪಾಳನಲೀಲಂ ತಾಂ ಕುಮಾರಂ (ಜಂದ್ರಪು. ೬–೯೬) : ಜನಸಂಮರ್ದವನು ತಡೆಯಲು ಶಾಂತ ಗೊಳಿಸಲು . . . ನಾಲ್ಕು ಮಾತು ಹೇಳುತ್ತಾರೆ (ಧರ್ಮಸಾ. ೫೦). [ ಜನ + ಸಂಮರ್ದ ]

**ಜನಸಂಮೋಹನ** (ಗು). ಜನರನ್ನು ಮೋಹಗೊಳಿಸುವ,–ಮರುಳುಗೊಳಿಸುವ : ಜನಸಂಮೋಹನವಿದ್ಯೆ ತನ್ನ ಮಧುವಿಂ ಪುಟ್ಟಿತ್ತು (ಮಲ್ಲಿಪು. ೬–೫೦). [ ಜನ + ಸಂಮೋಹನ ]

**ಜನಸಾಂದ್ರತೆ** (ನಾ). ಜನರ ದಟ್ಟಣೆ : ಚೀನ ಮತ್ತು ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಜನಸಾಂದ್ರತೆ ಬಹಳ ಹೆಚ್ಚು (ಭೂವಿವ. ೦೬೨). [ ಜನ + ಸಾಂದ್ರತೆ ]

**ಜನಸೂಡಿಗ** (ನಾ). ಲೋಕವನ್ನು ಸುಡುವವನು ; ಪ್ರಳಯಂಕಾರಿ ; ರುದ್ರ : ತನಗಿಂದ ಬಲ್ಲಿದರೊಳು ಕಾದಿ ಕೈಸೋತು ಕನಲುವ ದುಃಖ ವಂಕಿರಲಿ ಜನಸೂಡಿಗನ [ಪಾಠಾಂ. ಗೆಯ] ಸೈರಿಸಬಲ್ಲರಾರೆಂದು ಮನಸಿಜ ನುಡಿದ ಜೀವನೊಳು (ಷೋಡಶ. ೫–೪೬). [ ಜನ + ಸೂಡು + – ಇಗ ]

**ಜನಸ್ಥಾನ** (ನಾ). ಪ್ರಾಚೀನ ದಂಡಕಾರಣ್ಯದಲ್ಲಿ ಒಂದು ಭಾಗದ ಹೆಸರು ; ಜನರು ವಾಸಮಾಡುವ ದಂಡಕಾರಣ್ಯಪ್ರದೇಶ : ಬಳಿಕ ಹಾಹಾರವದ ರವಳಿಯಲಾ ಜನಸ್ಥಾನವನು ಹೊಕ್ಕಳು ಸಾರಿದಳು ಸಭೆಯನು ಖರಾಸುರನ (ತೊರರಾ. ೬–೫–೨) : ಬಲ್ಮೆಯಿಂ ನಾಂ ಕಳುಹಿದೊಡೆ ಜನಸ್ಥಾನದಿಂ ಹೋದೆ ರಾಘವನ ಬಳಿಗೆ (ಜೈಮಿಭಾ. ೦೯–೨೦) : ನರ್ಮದಾ ಗೋದೆಯರ ನಡುವಣ 'ಜನಸ್ಥಾನ'ವು ಮೂಲ 'ದೇಶಿ'ಗೆ ಪೂರ್ಣ ಎರವಾಗಿತ್ತು (ಕಣಾಟ. ೯೬). [ ಜನ + ಸ್ಥಾನ ]

**ಜನಹರಲೆ** (ನಾ). ಜನಾಪವಾದ ; ನಿಂದೆ : ಬಂಜೆಗೆ ಬಂಜೆತನದ ಚಿಂತೆ ; ಜನಹರಲೆಯ ಚಿಂತೆ (ಕನ್ನಜಾ. ೧೦೩) : ಗಂಡನು ಸೂಳೆಯ ಸೋಬತಿ (ಸಹವಾಸ) ಮಾಡಿರುವನೆಂದು ಹೆಂಡತಿಯು ಸಂಶಯದಿಂದ ಜನಹರಲೆ ಬರುವುದೆಂದು ಹೇಳಿ (ಕನ್ನಜಾ. ೧೧೨). [ ಜನ + ಹರಲೆ ]

**ಜನಹಿತ** (ನಾ). ಜನರ ಹಿತ; ಲೋಕ ಕಲ್ಯಾಣ: ಜನಹಿತದ ಎಲ್ಲ ಕಾರ್ಯಗಳಿಗೆ ಅವರು ಮುಂದಾಳಾಗಿ ದುಡಿಯುತ್ತಿದ್ದರು (ಕಪಪು. ೫–೬೦). [ ಜನ + ಹಿತ ]

**ಜನಾಂಗ** (ನಾ). ೧. ಒಂದು ದೇಶಕ್ಕೆ ಅಥವಾ ಪಂಗಡಕ್ಕೆ ಸೇರಿದ ಜನವರ್ಗ,– ಜನತೆ ; ಬುಡಕಟ್ಟು : ಯೆಹೂದ್ಯರು, ಮುಸಲ್ಮಾನರು ಮತ್ತು ಕ್ರೈಸ್ತರು ಇವರ ವಿನಹ ಉಳಿದ ಎಲ್ಲಾ ಜನಾಂಗದವರಲ್ಲೂ ಈ ಸಿದ್ಧಾಂತ ಪ್ರಚಾರದಲ್ಲಿತ್ತು (ಜೀವಾತ್ಮ. ೧೬೪). ೨. ಪೀಳಿಗೆ; ತಲೆಮಾರು; ಹಿಂದಿನಿಂದಲೂ ಬಂದ ಹಲವು ಶಾಸ್ತ್ರಸಾಹಿತ್ಯವನ್ನೂ ಆಚಾರ ವ್ಯವಹಾರಗಳನ್ನೂ ಮಕ್ಕಳಿಗೆ ಕಲಿಸಿ ಆ ಮೂಲಕ ಅವು ಮುಂದಿನ ಜನಾಂಗಕ್ಕೂ ಸಾರೋದ್ಧಾರವಾಗಿ ಬರುವಂತೆ ಮಾಡುವುದೇ ಮೂಲ ಉದ್ದೇಶವಾಗಿತ್ತು (ಶಿಕ್ಷದ. ೩೬) ; ಇಂದಿನ ಮಕ್ಕಳೇ ಮುಂದಿನ ಜನಾಂಗ (ಕ್ರಿಯಾಶಿ. ೧). [ ಜನ + ಅಂಗ೨ ]

**ಜನಾಂತ** (ನಾ). ೧. ಜನರು ವಾಸಮಾಡದೆ ಇರುವ ಸ್ಥಳ ; ನಿರ್ಜನ ಪ್ರದೇಶ. ೨. ಜನರಿರುವ ಪ್ರದೇಶ,–ಪ್ರಾಂತ್ಯ,–ದೇಶ : ಅರಿಂಜಯ ಜನಾಂತದ ವಿಪುಳ ನಗರಾಧಿಪತಿ ಜಯವರ್ಮನೆಂಬೊಂ ಜನನಾಥಂ(ಚಂದ್ರಪು. ೬–೧೦ ವ): ತಿಂತಿಣಿಗೊಂಡೆಸೆವೈವತ್ತಾಱು ಜನಾಂತಂ ನೆಲೆಸಿಹುವು (ಜಯುಸಾ. ೧–೩೫). [ ಸಂ. (ಜನ + ಅಂತ) ]

**ಜನಾಂತಿಕ** (ನಾ). ೧. ಜನರ ಸಮೀಪ. ೨. ಗುಟ್ಟು ; ರಹಸ್ಯ : ಆತನಂ ಜನಾಂತಿಕದೊಳಾ ತಳೋದರಿ . . . ಇನ್ನಿರಲಾಗದೆಂದು ಕಳುಹಿದಳ್ (ಅನಂತಪು. ೮–೪೪ ವ). ೩. [ನಾಟ್ಯ] ನಟನಟಿಯರು ಮುಖಕ್ಕೆ ಕೈಯನ್ನು ಅಡ್ಡವಾಗಿಟ್ಟುಕೊಂಡು ಪಕ್ಕದಲ್ಲಿದ್ದವರಿಗೆ ತಿಳಿಯದಂತೆ ಮಾತನಾಡುವುದು; "ಒಬ್ಬರನ್ನು ಮರೆಮಾಡಿಕೊಂಡು ಮತ್ತೊಬ್ಬರೊಡನೆ ಮಾತನಾಡುವುದು" (ಸಂನಾಟ. ೦೫). [ ಜನ + ಅಂತಿಕ ]

**ಜನಾಕೀರ್ಣ** (ನಾ). ಜನರಿಂದ ತುಂಬಿದುದು ; ಜನಸಮೂಹ: ನೋಡೆ ರಹಸ್ಯದೊಳ್ ಬಳಕೆವೆತ್ತೀ ಚಿತ್ರದಭ್ಯಾಸದಿಂ ದಹನಾಕ್ರಾಂತಮನಿಪ್ಪ ಮಂದಿರದವೋಲ್ ಕಾಣ್ಕುಂ ಜನಾಕೀರ್ಣಮಾಂ (ಶಾಕುಂತ. ೬೪–೫). [ ಜನ + ಆಕೀರ್ಣ ]

**ಜನಾಚಾರ** (ನಾ). ಜನರಲ್ಲಿ ರೂಢವಾಗಿರುವ ಆಚಾರ,–ಸಂಪ್ರದಾಯ: ಧರ್ಮದ ತಂತು ಬಹುಸೂಕ್ಷ್ಮವಾದದ್ದು . . . ಜನಾಚಾರವನ್ನನುಸರಿಸಿಯೇ ಅದನ್ನು ತಿಳಿಯುವುದಕ್ಕಾಗೊಲ್ಲ (ವಂಶವೃ. ೪೬೬). [ಜನ + ಆಚಾರ]

**ಜನಾಧಿಪ** (ನಾ). ಅರಸ ; ರಾಜ : ಜನವಚನರಸಾಯನಮಂ ಜನಾಧಿಪಂ ಶ್ರೋತ್ರಪಾತ್ರದೊಳ್ ತೀವಿ (ಶಾಂತಿಪು. ೯–೬೦). [ ಜನ + ಅಧಿಪ ]

**ಜನಾನ** 'ಜನಾನಾ' ನೋ.

**ಜನಾನಂದನ** (ನಾ). ಜನರಿಗೆ ಆನಂದವನ್ನುಂಟುಮಾಡುವವನು : ಎಮ್ಮಯ್ಯನುಮಿಂದಾನುಮೊಡವೋಗಿ ಕಂಡು ಜನಾನಂದನರುರ್ವರಾಸ್ಯತಿಲಕರಂ (ಶಾಂತಿಪು. ೬–೫೦) : ತಂದಿರಿಸಿದ ಜೀವರಾಶಿಯಂ ಬಿಡಿಸಿ ಜನಾನಂದನರಂ ತನ್ನನುಜೆಯ ನಂದನರಂ ಮಾಡಿದತ್ತವಿಭು ಲಾಲಿಸಿದಂ (ಯಶೋಚ. ೪–೬೪). [ ಜನ + ಆನಂದನ ]

**ಜನಾನಖಾನೆ, ಜನಾನಾಖಾನೆ, ಝನಾನಖಾನೆ** (ನಾ). = ಜನಾನಾ : ನೀವು ಶತ್ರುಗಳನ್ನು ಹಣಿದು ಅವರು ಸಾಗಿಸಿಕೊಂಡು ಹೋಗುತ್ತಿರುವ ಜನಾನಖಾನೆಯನ್ನು ಹಿಡಕೊಂಡು ಬರಬೇಕು (ಮಾಧವ. ೩೦೯). **ಜನಾನಾಖಾನೆ** : ಅವರನ್ನು ಕೃಷ್ಣ ತನ್ನ ಜನಾನಾಖಾನೆಗೆ ಸೇರಿಸಿಕೊಳ್ಳುವುದು ಅತ್ಯಂತ ಕ್ರಮಪ್ರಾಪ್ತವಾಗುತ್ತದೆ (ಕೃಹಾರ. ೮೯). **ಝನಾನಖಾನೆ**: ವರಿಷ್ಠನನ್ನು ಸುಲ್ತಾನನ ಸ್ಥಾನಕ್ಕೇರಿಸಿ ನವಕರರನ್ನೆಲ್ಲ ಅವನ ಝನಾನಖಾನೆಗೆ ಸೇರಿಸಿಬಿಟ್ಟೆನೆಂದು ನವಕರರ ಪೌರುಷ ನೊಂದುಕೊಳ್ಳದಿರಲಿ (ಗಾಳಿಪ. ೫೯). [ ←ಪಾರ. ಹಿಂ. ಜನಾನಖಾನಾ ]

**ಜನಾನಾ, ಜನಾನ, ಜನಾನಿ, ಝನಾನಾ** (ನಾ). ಅಂತಃಪುರ ; ರಾಣೀವಾಸ : ಮುಸಲ್ಮಾನ ಅಧಿಕಾರಿಗಳಂತೆ ಜನಾನಾ ಪಡಗರವಿರಲಿಲ್ಲ (ಕಥಾವಿ. II, ೨೪೨) : ಲುತ್ಫುಉನ್ನೀಸೆಯನ್ನು ತನ್ನ ಜನಾನಾಕ್ಕೆ ಸೇರಿಸಲು ಹಿಂಜರಿದಿದ್ದನು (ಕಪಾಳುಂ. ೬೪). **ಜನಾನ** : ಜನಾನಕ್ಕೆ ತೆರಳಿ ನೂರುನ್ನೀಸಾಬೇಗಂ ಸಾಹೇಬರಿಗೆ . . . ತಿಳಿಸು (ಅಸ್ಮಾಪ. ೨೯): ಬಲಿಷ್ಠ ಗಂಡುಗಳು ತಮ್ಮ ಕೊಂಬಿನ ಬಲದಿಂದ ಕೆಲವೊಂದು ಹೆಣ್ಣುಗಳ 'ಜನಾನ'ವನ್ನೇ ಕೂಡಿಸುವುದುಂಟು (ದಾಂಪ್ರ. III, ೧೭೪೨). **ಜನಾನಿ**: ಜನಾನಿ ಸಂಬಂಧದ ಕೆಲಸಗಳನ್ನೆಲ್ಲಾ ಇವರೇ ನೋಡಿಕೊಳ್ಳುತಾ ಇದ್ದರು (ಕುರಾಜ. ೪೮) : ಒಳಗೆ ಹೋದರೆ ರಾಣಿವಾಸದವರ ಜನಾನಿ, ಹೊರಗೆ ಬಂದರೆ ಶಿವನ್ನೈಯ್ಯನವರ ಮರದಾನಿ (ಮುಕುಗ. ೪೬). **ಝನಾನಾ**: ರುಸ್ತುಮನು ಝನಾನಾದ ಗೋಡೆಯನ್ನೇರಿ ಬಂದದ್ದೇ ನಿಜವಾಗಿದ್ದರೆ (ಜಿರಂಗ. ೨೦).

[ ←ಹಿಂ. ಜನಾನಾ; ಪಾರ. ಜನಾನ್ ]

**ಜನಾನಾಖಾನೆ** 'ಜನಾನಖಾನೆ' ನೋ.

**ಜನಾನಿ** 'ಜನಾನಾ' ನೋ.

**ಜನಾನುರಾಗ** (ನಾ). ಜನರ ಪ್ರೀತಿ,–ಮಮತೆ; ಜನಪ್ರಿಯತೆ: ಜನಾನುರಾಗವಿಲ್ಲದ ಪೊಟಲತ್ಮುದಾತ್ತಗುಣವಿಲ್ಲದ ಮಾನವರಿಲ್ಲದೆಲ್ಲಿಯುಂ (ಪುಷ್ಪಪು. ೨-೧೦). [ ಜನ + ಅನುರಾಗ ]

**ಜನಾನುರಾಗಿ** (ನಾ). ಜನರ ಪ್ರೀತಿಯನ್ನು ಹೊಂದಿದವನು; ಜನಪ್ರಿಯನಾದವನು : ರಾಯರು ಬೇಗ ಜನಾನುರಾಗಿಗಳಾಗಿ ದಕ್ಷಶಿಕ್ಷಕರೆನಿಸಿದರು (ಇಂಜಾಪ. ೮-೨೬). [ ಸಂ. ಜನಾನುರಾಗಿನ್ ]

**ಜನಾಪವಾದ** (ನಾ). ಜನರಿಂದ ಬರುವ ಅಪನಿಂದೆ; ಲೋಕಾಪವಾದ: ಜನಾಪವಾದಮುಮಂ ಪೆಱಗಿಕ್ಕಿ ಕುಲೋದ್ಭೂತರುಂ ತತ್ತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೪-೮೨ ವ) : ನಿಜನಾಥಭೀತೆ ಸುಚರಿತ್ರೆ ಗುಣವತಿ ಮಾನಿನಿ ಜನಾಪವಾದವಿರಹಿತೆಯೆನಿಪ ನಾರಿ (ಕ್ರಿಮಿಥಾ. ೫-೫೦). [ ಜನ + ಅಪವಾದ ]

**ಜನಾಬ್, ಜನಾಬು** (ನಾ). ೧. ಧನವಂತ ; ಸ್ವಾಮಿ; ಮಹಾಶಯ: ದಯಮಾಡಿಸಬೇಕು ಜನಾಬ್ (ರೂಢಿ). **ಜನಾಬು**: ೨. ಸನ್ನಿಧಿ; ಸಮಕ್ಷ: ತಮ್ಮ ಜನಾಬಿಗೆ ಕೆಲವು ಸಮಾಚಾರಗಳನ್ನು ತಿಳಿಸಬೇಕೆಂಬುದಾಗಿ ಅರ್ಜಿದಾರನು ಬಹಳ ವಿನಯದಿಂದ ಬೇಡಿಕೊಳ್ಳುವದೇನೆಂದರೆ (ಜಾಮುವಂ. ೨೩೯); ಯಜಮಾನರ ಜನಾಬಿನಲ್ಲಿ ನಾನು ದುರ್ನಿರತನೆಂಬ ಅನ್ವಯವಾಗುವ ಅಪವಾದಕ್ಕೆ ಬೀಳುವ ಸಂಭವ ಒದಗಿರುವದೆಂದು . . . ಬೆಂಡಾಗಿರುತ್ತೇನೆ (ವಾಗ್ಮೀವಿ. ೧೮೮). [ ←ಅರ. ಪಾರ. ಹಿಂ. ಜನಾಬ್ ]

**ಜನಾಬು** 'ಜನಾಬ್' ನೋ.

**ಜನಾಮಳಪಳಿ** (ನಾ). (?) : × × × ಏಳದಿತ ಜನಾಮಳಪಳಿ ಕಣ್ನಾಗ ಮುವತ್ತಮೂಱೀಸಯುಮನ್ನಿಟ್ಟು ಸರ್ವ್ವ ಪರಿಹಾರಂ ಕೊಟ್ಟಾರ್ (ಎಕ. VI, ಕೊಪ್ಪ. ೪೦-೧೨ : ಕು. 1090). [ ? ]

**ಜನಾರ್ದನ** (ನಾ). ೧. ಜನರನ್ನು ಕೊಲ್ಲುವವನು; ಲಯಕರ್ತ; ರುದ್ರ: "ಜನಾನರ್ದಯತಿ=ಜನರಂ ಕೊಂದಪಂ; ಜನಾರ್ದನಃ = ಕಾಲಾಗ್ನಿರುದ್ರಂ" (ಕಾಶಕ್ಕ. ೨೯೮). ೨. ವಿಷ್ಣು; ಕೃಷ್ಣ: "ಜನಾರ್ದನಂ . . . ಕೇಶವನಚ್ಯುತಂ ಮುರಹರಂ ವೈಕುಂಠನಬ್ಜೋದರಂ" (ವಸ್ತುಕೋ. ೪-೨೦) : ಮುಂದೆ ನಿಂದಿರ್ದ ಜನಾರ್ದನಂಗೆ ಬದ್ಧಾಂಜಲಿಯಾಗಿ (ಜಗವಿ. ೩-೪ ವ): ಜಯ ಜನಾರ್ದನವಂದ್ಯ ಜಯ ಜಲಜಭವಪೂಜ್ಯ (ಹದಕಾ. ೧೧-೪೦). ೩. [ಜೈನ] ವಾಸುದೇವ (ಲಕ್ಷ್ಮಣ) : ಪುರ್ಬನೇಱಿಸುವ ಮಾಟ್ಕೆಯಿನಶ್ರಮದಿಂ ಪೊಡರ್ಪು ಕೈಮಿಗೆ ರಿಪುಮರ್ದನಂ ಧನುವನೆತ್ತಿದನೇಱಿಸಿದಂ ಜನಾರ್ದನಂ (ಪಂರಾಮಾ. ೩-೧೦೦). ೪. ಜನ್ನಕವಿ: ಕವಿ ಭಾಳಲೋಚನ ಜನಾರ್ದನದೇವ ವಿರಚಿತಮಪ್ಪ (ಅನಂಪು. ೧-೧೨೦ ವ). [ ಸಂ. ]

**ಜನಾವರ** 'ಜಾನುವಾರು' ನೋ.

**ಜನಾಶ್ರಯ** (ನಾ). ಮಂಟಪ; ಚಪ್ಪರ; ಸಭಾಮಂಟಪ: "ಜನಾಶ್ರಯಃ, ಮಂಡಪಃ–ಈ ೨ ಸಭಾಮಂಟಪಂ" (ಹಲಾಯು. ೫೦-೧೪೬): "ಮಂಟಪಂ ಜನಾಶ್ರಯಂ" (ವಸ್ತುಕೋ. ೪೮-೧೯). [ ಜನ + ಆಶ್ರಯ ]

**ಜನಿ₁** (ಕ್ರಿ). ಜಿನುಂಗು ; ಒಸರು ; ಸ್ರವಿಸು ; ಸೋರು ; ಹರಿ : ಸ್ಕನ್ನಂ, ರೀಣಂ, ಸ್ರುತಂ, ಸ್ನುತಂ–೪ ಸೋರಿಹೋದುದು, ಜನಿದು ಹೋದುದು (ಸಿದ್ಧಾಂತಿ. ೨೯೯) ; ಶ್ಚ್ಯೋತಃ, ಪ್ರಾಘಾರಃ – ೨ ಸೋರಿಹೋಗುವಿಕೆ ಸೋರುವಿಕೆ, ಜನಿಯುವಿಕೆ (ಸಿದ್ಧಾಂತಿ. ೩೦೮); ಧಾತುಪಾಠದಲ್ಲಿ ಮಾತ್ರವಲ್ಲ ದರ್ಪಣದ ಇತರ ಭಾಗಗಳಲ್ಲಿಯೂ ಇಲ್ಲವೆಂದು ಕಿಟ್ಟೆಲ್‌ರ ನಿಘಂಟಿನಿಂದ ಎಣಿಸಬಹುದಾದ ಕೆಲವು ಸಿದ್ಧಧಾತುಗಳನ್ನು ಕೆಳಗೆ ಕಾಣಿಸಿದ್ದೇನೆ–ಇಣಿಕು, . . . ಸೆಂದು, ಜನಿ, ತಲವು (ಕಸಾಪ. I, ೨೯೦). [ <ಜಿನುಂಗು₁ ]

**ಜನಿ₂** (ನಾ). ೧. ಹುಟ್ಟು ; ಉತ್ಪತ್ತಿ ; ಜನನ: ಮೂಜಗದ ಜನಿಸ್ಥಿತಿನಾಶಕರ್ಮದ ಹೊಱಗೆ ನಿನ್ನಲಿ ತೋರ್ಪ ಗುಣ ಮೂಱಱ ವಿಕಾರವ ಪೊದ್ದದು (ನಿಥಾಗ. ೧೦-೫೦-೨೬); ಜಗದೊಡೆಯನ ಚರಣಾಂಬುಜಯುಗಮಂ ಮರವೊಕ್ಕರ್ ದಾಂಟಿದಪರ್ ಜನಿಯೆಂಬಗಾಧಸಾಗರಮಂ (ನೇಮಿಮಂ. II, ೧೦) : ಜನಿ ಮೊದಲಾಗಿರೆ ಮೋಸವನಿನಿಸುಂ ಕಾಣದರ ನುಡಿಯಸತ್ಯಂ ಪರವಂಚನೆ ವಿದ್ಯೆ (ಪಾಳುಂತ. ೭೦-೧೨೫). ೨. ಹೆಂಗಸು; ಸ್ತ್ರೀ. ೩. ಸೊಸೆ: "ಸ್ನುಷಾ, ಜನೀ, ಪುತ್ರವಧೂಃ, ವಧೂಃ – ಈ ೪ ಸೊಸೆ" (ಹಲಾಯು. ೮೩-೩೫೦). ೪. ಒಂದು ಬಗೆಯ ಸುಗಂಧದ ಸಸ್ಯ ; ಕಳವಿಗೆ : (+).

[ ಸಂ. ಜನಿ, ಜನೀ ]

**ಜನಿಕ** (ನಾ). ಜೀವಾಣುವಿನಲ್ಲಿರುವ ಎರಡು ಅಂಶಗಳಲ್ಲಿ ಒಂದು ; ವಂಶವಾಹಿ: ಗೊತ್ತಾದ ಜಾಗದಷ್ಟು ದೂರದಲ್ಲಿರುವ ಜನಿಕಗಳು(ಜೇನ್ಸ್) ಇರುವ ದಾರದಂಥ ಬಣ್ಣದಂಡಗಳು (ಕ್ರೋಮೊಸೋಮ್ಸ್) ಇದರ ನಬ್ಬೀಜದಲ್ಲಿ ಇರುತ್ತವೆ (ಕವಿಕೋ. I, ೩೦). [ ಸಂ. ಜನಿಕಾ ]

**ಜನಿಗೆ** 'ಜನ್ನಿಗೆ' ನೋ.

**ಜನಿತ** (ಗು). ೧. ಹುಟ್ಟಿದ ; ಉತ್ಪತ್ತಿಯಾದ; ಸೃಷ್ಟಿಸಿದ : ಜನಿತ ಪುನಸ್ಸ್ವಯಂವರದ ವಾರ್ತೆಯನಾಗಳೆ ಕೇಳ್ದು (ನಳಚಂ. ೬೯೯). (ನಾ). ೨. ಉತ್ಪತ್ತಿ; ಹುಟ್ಟು: ಜನಿತಕ್ಕೆ ತಾಯಾಗಿ ಹೆತ್ತಳು ಮಾಯೆ (ಬಸವ.೦೫): "ಜನ್ಮಸಂಬಂಧ" (ಬಸವ. ಕೋಶ). ೩. [ನಾಟ್ಯ] ನೃತ್ಯದ ನೂರೆಂಟು ಕರಣಗಳಲ್ಲಿ ಒಂದು: "ತಲಪುಷ್ಪಪುಟ . . . ನೀವೇಶ ವಿಲಾಕ್ರೀಡಿತ ಜನಿತ . . . ಗಂಗಾವತರಣ–ಈ ನೂಱೆಂಟು ಕರಣಂಗಳ್" (ಲಾಸ್ಯರಂ. ೪-೪೨ವ). ೪. ನೃತ್ಯದ ಹದಿನಾರು ಭೌಮಚಾರಿಗಳಲ್ಲಿ ಒಂದು : "ಸಮಪಾದ, ಸ್ಥಿತಾವರ್ತ . . . ಜನಿತ ಊರೂದ್ವೃತ್ತ ಈ ಹದಿನಾಱು ಮಾರ್ಗ ಭೌಮಚಾರಿಗಳು" (ಲಾಸ್ಯರಂ. ೬-೧೭ವ); ಚರಣವೊಂದಗ್ರತಲ ಸಂಚರಮಂ ಮಾಡುತ್ತಮೆರ್ದೆಯೊಳೊಲ್ದುಂ ಮುಷ್ಟಿಯ ಕರವಿರಿಸುತನ್ಯಕರ ಪದಮಿರೆ ಶೋಭೆಯಿನೊಪ್ಪಿ ತೋಱೆ ಜನಿತಮೆನಿಕ್ಕುಂ (ಲಾಸ್ಯರಂ. ೬-೩೫).

[ ಸಂ. ]

**ಜನಿತವಿಭಾಗ** (ನಾ). ಉಂಟಾದ ಭಾಗ,–ಪ್ರಭೇದ : ಜನಿತವಿಭಾಗಂಗಳ್ ವಾಙ್ಮನಸಾತೀತಂಗಳಿಂತು ಮಾರ್ಗೋಕ್ತಿಗಳೊಳ್ ನೆನೆದಱಿಪಲಾರ್ಪರಾರ ದನನಿಶ್ಚಿತಕ್ರಮ ವಿಶೇಷಗುಣಯುಕ್ತಕ್ರಮಂ (ಕವಿರಾ. ೨-೪೮).

[ ಜನಿತ + ವಿಭಾಗ ]

**ಜನಿಯಿಸು** 'ಜನಿಸು' ನೋ.

**ಜನಿವಾರ** 'ಜನ್ನವಿರ' ನೋ.

**ಜನಿಸಿತು** (ನಾ). ಹುಟ್ಟಿದುದು ; ಜನಿಸಿದುದು : ಮಹಿಮಾಕರಂ ಸಿದ್ಧಪತಿಯುಂ ಜನಿಸಿತಕ್ಕೆ ಭೂಲೋಕದ ಸಮಸ್ತ ಜೀವಾಳಿಗಪವರ್ಗಮಂ ತೋರ್ಪನೆಂದನುಗೆಯ್ದನು (ಸಿದ್ಧರಾ. ೪-೦೬). [ <ಜನಿಸು ]

**ಜನಿಸು, ಜನಿಯಿಸು** (ಕ್ರಿ). ೧. ಹುಟ್ಟು ; ಉದ್ಭವಿಸು : ಕರ್ಣದೊಳಗೆ ಜನಿಸಿದವರುಂಟೆ ಜಗದೊಳಗೆ (ಬಸವ. ೩೮೯) : ಶುಕ್ಲ ಶೋಣಿತದಿಂದ ತನುವಿನ ಜನಿಸಿತ್ತು (ಅದಪ. ೨೭-೮೦) : ಆತನ ಶಾಂತಿಯಿಂದ ಶಶಿ ಚಾರಿತ್ರದಿಂ ಗಂಗೆ . . . ಉದಾರತ್ವದಿಂ ಸುರಕುಜಂ ಜನಿಸದಿರವೆಂದು ಕೊಂಡಾಡುತಿರ್ದಂ (ಹಚಕಾ. ೬-೪೩) : ದೇವಕೀಸುತನೇನು ಬಂಡಿಯ ಬೋವಗುಲದಲಿ ಜನಿಸಿದನೆ (ಕುವ್ಯಾಸ. ೩-೩೪) : ಶಿಲಾಯುಗದ ಕೆಲವು ಗುರುತುಗಳ ಬಳಕೆಯಿಂದ ಬ್ರಾಹ್ಮೀಲಿಪಿ ಜನಿಸಿತೆಂದು ಒಬ್ಬಿಬ್ಬರು ತಿಳಿಸಿದ್ದಾರೆ (ದ್ರಾವಿವಿ. ೩೨). ೨. ಹುಟ್ಟಿಸು ; ಉಂಟುಮಾಡು : ತಿನಸು ಗೂಳಿಯ ಬಾಳು ಕನಸಿನಲಿ ಉಂಡಂತೆ ತೊನಸಿ ಮುದಿ ಎತ್ತು ಹರಿ ತಿಂದು ಹುಳಗಳನು ಜನಿಸಿ ಬಿಟ್ಟಂತೆ (ಸರ್ವಜ್ಞ. ೧೯೫೭). **ಜನಿಯಿಸು** : ೧. ಜನಿಯಿಸಿ ದಂದು ತೊಟ್ಟಗಲದಾತನನಿಂತಿರಗಲ್ದು ಪಾಪಕರ್ಮನಂ (ಕಾದಂಉ. ೪೫೨) : ಅಲ್ಲಿ ಜನಿಯಿಸಿ ಬಳಿಕ್ಕಂದು ಬಪ್ಪಂ ದೇವ (ಬಸರ. ೬-೭೩) : ಅನುಕೂಲಪವನನಿಂ ಜೀವನಿಷ್ಪದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೋಲ್ ಶಬ್ದದ್ರವ್ಯಂ ಜನಿಯಿಸುಗುಂ (ಶಮದ. ೨) : ವರಸೋಮಪ್ರಭ ರಾಜೇಂದ್ರಂಗಂ ತರುಣಿಗೆ ಸೌಂದರಿಗಂ ಜನಿಯಿಸಿ (ಜಯಕಾ. ೨ ಸೂಚನೆ). ೨. ಜನಕಂಗೆ ಹರ್ಷದೊದವಂ ಜನಿಯಿಸಿ (ಪಂರಾಮಾ. ೪-೩೩) : ನಭೋಂತಕ್ಕೊಗೆದಿರ್ದ ಸುಭಟತತಿ ಖಚರಬಲಭ್ರಾಂತಿಯನಿನಿಸಂ ಜನಿಯಿಸೆ (ಜಗವಿ. ೭-೩೬) : ಏನೇನುಣಿಸನುಣಲ್ಕೀಹಾರಂ ಜನಿಯಿಸಿದವ್ಯೃತಾನ್ನವನೀವ ಮಣಿಪಾತ್ರಿಯುಮಂ ನೆನೆದು (ಜಯಕಾ. ೩-೭೦). ೩. ಒದಗು ; ಉಂಟಾಗು ; ಆಗು : ಪುನರುಕ್ತಮೆಂಬುದಕ್ಕಂ ನೆನೆಯದೆ ಪದಾರ್ಥಮದಱಿದೀ ಪೂರ್ವೋದಿತಾರ್ಥ ಪದಪದ್ಧತಿಗೊಂದಿನಿಸುಂ ವಿಶೇಷಮಿಲ್ಲದೆ ಜನಿಯಿಸಿದ ದೃಷ್ಟಾಂತಂ (ಕವಿರಾ. ೦-೮೩) ; ಕೊಲ್ ಮೆಲ್ ಎನೆ ಬಗೆದು ಬಗೆದು ಮನದೊಳ್ ಜನಿಯಿಸುಗುಮಿವಂಗೆ ಖಳವಿಭಂಗ ಜ್ಞಾನಂ (ಆದಿಪು. ೩-೮೩) ; ನನಮಯಗಣಮಿಂತೀ ನಾಲ್ಕುಮೆತ್ತಂ ಜನಿಯಿಸೆ ಯತಿಸಪ್ತಸ್ಥಾನದಿಂದಂ ನಿನಗಱಿಪುವೆನಿಂತೀ ಪಾಂಗಿನೊಳ್ಮಾಮಿನಿ ಬಗೆ ಘಟಂ (ಛಂದೋಂಬು. ೨-೦೩೬) ; ಇನಿವಿರಿದಟ್ಟುಲನ್ಕರೊಳಂ ಜನಿಯಿಸಿತು (ಕಾದಂಉ. ೪೬೩) ; ಶತ್ರುವಿಂ ಜನಿಸಿದ ಕಟ್ಟಲೆಯೆಂಬುದು ರತ್ನದ ಬೆಳಗಿಂದಂ ಬಿಸಿಲಿಂದಂ ಕಿರ್ಚಿಂದಂ ಕಿಡುವುದಲ್ಲ (ಪಂಚತಂ. ೦೬೯-೧) ; ಗೀತವಂ ಮುದಂ ಜನಿಯಿಸೆ ಪಾಡುವಲ್ಲಿ (ಚಂದ್ರಪು. ೨-೭). ೪. ಗೋಚರಿಸು ; ಸ್ಫುರಿಸು : ಎನಲೊಡಮಾ ಭವದೊಳ್ ತೊಟ್ಟನಿತುಂ ವೃತ್ತಾಂತಮಂತರಂಗ ದೊಳಾಗಳ್ ಜನಿಯಿಸೆ (ಸುಕುಮಾ. ೭-೩೦). [ ಜನ್ಮ + – ಇಸು₃ ]

**ಜನುಮ, ಜಲ್ಮ** (ನಾ). ೧. ಹುಟ್ಟು ; ಜನ್ಮ : ಪರಮನ ಹಾದಿಯನು ಅಱಿದು ಸುಖಿಯಾಗು ಜನುಮದ ಹಾದಿಗೊಳಬೇಡ (ಸರ್ವಜ್ಞ. ೪೭೭). ೨. ಜೀವನ ; ಬಾಳುವೆ : ನೆರಳಿನಂತಿದೆ ಜನುಮ ನಮಗೆ ಧರೆಯೊಳಗೆ (ಕಏಪು. ೧೨-೭) : ಚಂದ್ರನ ಬೆಳುದಿಂಗಳಿನ ತಣ್ಪನರಿಯದ ತಾವರೆ ಜನುಮವೆ ವ್ಯರ್ಥ (ಇಂಚಾಪ. ೧೪೯-೩೩). **ಜಲ್ಮ** : 'ಜಲ್ಮಾಂತ' ಪರಾ. [<ಸಂ. ಜನ್ಮನ್ ]

**ಜನುಸ್ಸು** (ನಾ). ಹುಟ್ಟು ; ಜನ್ಮ : "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ವಸ್ತುಕೋ. ೦೮-೩). [ ಸಂ. ಜನುಸ್ ]

**ಜನೆ** 'ತನೆ' ನೋ.

**ಜನೇಶ** (ನಾ). ಅರಸ ; ರಾಜ : ಜನೇಶನಿಂತೇಕೆ ಕಟಿದು ಪೋದನೊ ಪೇೞಿಂ (ಕವಿರಾ. ೨-೩೧). [ ಜನ + ಈಶ ]

**ಜನೇಶ್ವರ** (ನಾ). = ಜನೇಶ : ಜಯವರ್ಮ ಜನೇಶ್ವರನಲ್ಲಿಗೆ . . . ಉದ್ಧವನೆಂಬ ದೂತಮುಖ್ಯನನಟ್ಟಿದೊಡೆ (ಚಂದ್ರಪು. ೬-೧೮ ವ). [ ಜನ + ಈಶ್ವರ ]

**ಜನೋಕ್ತಿ** (ನಾ). ೧. ಜನರು ಆಡುವ ಮಾತು : ಮುನ್ನಮೆಂಬ ಬಟ್ಕೆಂಬ ಜನೋಕ್ತಿಯೊಳಾಯ್ತು ಸೂಚಿಶಕ್ತಿಗೆ ನೃಪರಾನೆ ದಾರದವೊಲಾದುವು ರಾಜಕುಮಾರರಾನೆಗಳ್ (ಗದಾಯು. ೧-೧೬) ; ಆತನ ಪೂಣ್ದ ಪೂಣ್ಕೆ ಶಿಲಾತಳಾಕ್ಷರಮೆನಿಸಿರ್ಪ ಜನೋಕ್ತಿಯುಂ ಪುಸಿ ಮಾಟ್ಪನೇ (ಗದಾಯು. ೦-೭೦). ೨. ಗಾದೆ ; ನಾಣ್ಣುಡಿ ; ಲೋಕೋಕ್ತಿ. [ ಜನ + ಉಕ್ತಿ ]

**ಜನೋದಯ** (ನಾ). ೧. ಜನತೆಯ ಏಳಿಗೆ,–ಅಭಿವೃದ್ಧಿ. ೨. [ಛಂದ] ಪ್ರತಿಯೊಂದು ಪಾದದಲ್ಲಿ ನಾಲ್ಕು ಅಕ್ಷರಗಳಿರುವ ಒಂದು ಅಕ್ಷರ ವೃತ್ತದ ಹೆಸರು : ದಿನೇಶ ರುದ್ರ ನಿಶ್ಚಿತಂ ಜನೋದಯಂ ತನೂದರೀ (ಛಂದೋಂಬು. ೨-೦೨). [ ಜನ + ಉದಯ ]

**ಜನೋಪಕಾರ** (ನಾ). ೧. ಜನಕ್ಕೆ ಮಾಡುವ ಉಪಕಾರ. ೨. ಜನಕ್ಕೆ ಹಿತಕರವಾದುದು ; ಜನರಿಗೆ ಕಲ್ಯಾಣಮಾಡುವಂಥದು : ಲೋಕ ಕಲ್ಯಾಣವಾಗಬೇಕೆಂಬುದು ಈ ಕವಿಯ ಹಿರಿಯ ಉದ್ದೇಶ. ಕಿರಾತಾರ್ಜು ನೀಯ ಜನೋಪಕಾರವಾದ ಕಾವ್ಯ (ಧಾರದ. ೪೩೨). [ಜನ+ಉಪಕಾರ]

**ಜನೋಲೋಕ** (ನಾ). = ಜನಲೋಕ : ಜನೋಲೋಕವೆಂದು ತಿಳಿಯ ಬೇಕು (ಉತ್ತಟೀ. ೪೩-೧೨). [ ಸಂ. (ಜನಸ್ + ಲೋಕ) ]

**ಜನ್ನ₁** (ನಾ). ಯಜ್ಞ ; ಯಾಗ : "ಯಜ್ಞಂ ಜನ್ನಮೆಂದಕ್ಕು" (ಶಬ್ದಕೈ. ೪೭) ; ಜನ್ನಮಲ್ಲದೆ ಬನ್ನವಿಲ್ಲ (ಅಜಿಪು. ೧-೨೭ವ) ; ಜನ್ನಕ್ಕೆ ತಂದ ಕನ್ನೆ ಯಾಡು ಶ್ರುತಿಯಿಂದ ಹೊಱಗು (ಜನ್ನವ. ಕ. ೨೪೯-೩೪೨) ; ಸಾಮವೇದಿಯ ಜನ್ನಕಾವುದ್ದಾಮನಂದಿಯನೇಱಿ ಹೋದ್ಯೆ (ಬಸಪು. ೨೪-೭೪) ; ಜನ್ನಕ್ಕೆ ಕರ್ತನಮರೇಂದ್ರ ವೇದಕ್ಕೆ ಕರ್ತಂ ನಾಲ್ಮೊಗಂ (ಸೌಂದಪು. ೬-೩).

ಜನ್ನವನುಣ್ಬಣ್ಣರ್ = ದೇವತೆಗಳು : ಜನ್ನವನುಣ್ಬಣ್ಣರನಾದುರ್ಕೊಂದು (ಶಬ್ದಕಾ. ೦೩೮). [ <ಪ್ರಾ. ಜನ್ನ, ಜಣ್ಣ. / ಸಂ. ಯಜ್ಞ ]

**ಜನ್ನ₂** (ನಾ). ೧. ಒಬ್ಬಾತನ ಹೆಸರು : ಶ್ರೀಜನ್ನ ಕಲ್ಲ ನಿಱಿಸಿ ಪನ್ನಿರ್ಚ್ಛ್ಣುಗ ಬೆದೆ ಮಣ್ಗೊಟ್ಟಾರ್ (ಮ್ಯಆರಿ. ೧೯೪೪, ೬-೩ ; ಸು. 808) ; ಶ್ರೀನೆಕುಣ್ದರಾ ವಾಜುಪೇಯಾಜಿಯಾ ಮಗನ್ ಜನ್ನನ್ಕೊಟ್ಟದು ಸ್ಥಲಿ ಆಚನ್ದ್ರತಾರಕಂ (ಎಕ. VII, ಶಿಕಾರಿ. ೪೩-೫೯ ; ಸು. 890). ೨. ಕನ್ನಡ ಸಾಹಿತ್ಯದಲ್ಲಿ ಪ್ರಸಿದ್ಧನಾದ ಒಬ್ಬ ಕವಿಯ ಹೆಸರು : ಜನ್ನನ ದೇಸೆ ಪಂಪನ ಗುಣಂ ಗುಣನಂದಿಯ ತೊಂಡು (ಸೂಕ್ತಿಸು. ೧-೨೬) ; ಮನ್ನಿಸಿ ಸಲಹುಗೆ ಸತ್ಕವಿ ಜನ್ನಂ ಜಾಣೆಸೆಯಲಿತ್ತು ನುಡಿಗಳನೆನ್ನಂ (ಧರ್ಮನಾ. ೧-೪೦). [<ಸಂ. ಜನಾರ್ದನ ]

**ಜನ್ನ₃** (ನಾ). ಒಂದು ಬಗೆಯ ಕುದುರೆ ; ಬಿಳುಪಿನಿಂದ ಕೂಡಿದ ಕೆಂಬಣ್ಣದ ಕುದುರೆ: "ಬಿಳಿದುಮಾಗೊರೆದ ಕೆಂಪಿರೆ ಜನ್ನಂ" (ಮಂಗರಾ. ೮೦-೦೪) ; ಜನ್ನ ಚೆನ್ನಾರ ಚಿನ್ನಳಗ ಚೆಲುವ ಚೀರ . . . ಸನ್ನುತ ಸಾಂಬ್ರಾಣಿಯನೇಱಿ ನೃಪಕುಲರನ್ನರಿಗಂದು ತೋಱಿದರು (ಅಂಜಚ. ೬-೮೩) ; ಜನ್ನನಂ ನೀಲನನೆಳಗನಂ ತನ್ನಿ ಕತ್ತಳ ಮೌಹಳಿಗನಂ ತನ್ನಿ . . . ವಾಹಕರಿರಾ ನೀವು (ಬಸಪು. ೫೯-೪೦) ; ಪೊಳವಳಗ ತಿಳಗ ಕೊಂಗ ಸವಳ ಚಿಂಬೆಯ ನೀಲ ಜನ್ನ ಜಂಬ . . . ಎನಿಪ್ಪಗ್ಗಳಿಕೆಯ ಹಯಮಂ ತುರಂಗಿಗಳ್ ಕೈಗೆಯ್ದರ್ (ತ್ರಿಪುವಿ. ೨೪-೨೯೪). [ ? ]

**ಜನ್ನ₄** (ನಾ). ಮಾನ್ಯ ; ದಾನ ಕೊಟ್ಟ ಭೂಮಿ (?) : ಕುಂದಾಪುರದ ಪುರೋಹಿತ ಅಧಿವಾಸದ ಜಂನಿ ನಾರಾಯಣ ಕಾರಂತರ ಮಗ ಜಂನಿ ನಂದಿಕಾರಂತರ ಮೂಲದ ಜಂನ ಸರ್ವಸ್ವದ ಚತುಸೀಮೆಯ ವಿವರ (ಸೌಇಇ. IX-ii, ೪೬೩-೩೭ ; 1472) ; ಆ ಕುದುರವೊಳಗೆ ಅರ್ಧ ಅರುವಾರ ಮೂಲಾದಿ ಮಯಿಸಾಲ ಜಂನ ಸರ್ವಸ್ವ ಎಲ್ಲವನೂ . . . ಬರಸಿಕೊಟ ಶಾಸನ (ಸೌಇಇ. IX-ii, ೪೭೧-೩೮ ; 1482) ; ಯಿ ಜಂನಕ್ಕೆ ಉಂಟಾದ ಉಡುಗರೆ ಉತ್ತರ ಸೀಮೆ ಸಾಮ್ಯವೇನುಂಟದು ಸಹ ಬಿಡಾರು ವಾರವ ಬಿಟ್ಟು (ಸೌಇಇ. IX-ii, ೬೨೦-೨೦ ; 1546). 'ಜಮ್ಮ' ಪರಾ. [ ? ]

**ಜನ್ನಂಗೆಯ್**, ಜನ್ನಂಗೈ (ಕ್ರಿ). ಯಜ್ಞಮಾಡು : ಜನ್ನಂಗೆಯ್ವುದು ಶಂಭು ಭಕ್ತತತಿಗಂ ಸಂತೃಪ್ತಿಯಂ ಮಾಳ್ಪುದೌ (ಹಾಲಾಸ್ಯ. ೩-೭-೨೮). **ಜನ್ನಂಗೈ:** ಜನ್ನಂಗೈವ ಜಾಣ್ಗಡರ್ ದಕ್ಷನಂ ತುಡುಕಿ . . . ಗೋಣ್ಗೊರೆದ ವೀರಭದ್ರಂ (ನಂದಿಮಾ. ೧-೮). [ ಜನ್ನ$_1$ + ಕೆಯ್$_1$ ]

**ಜನ್ನಂಗೈ** 'ಜನ್ನಂಗೆಯ್' ನೋ.

**ಜನ್ನಕೊಂಡ** 'ಜನ್ನಗೊಂಡ' ನೋ.

**ಜನ್ನಗುದಿರೆ** 'ಜನ್ನಗುದುರೆ' ನೋ.

**ಜನ್ನಗುದುರೆ**, ಜನ್ನಗುದಿರೆ (ನಾ). ಯಜ್ಞಾಶ್ವ : ಅಗ್ಗಳಿಕೆಯನ್ನು ತಲೆಯಲ್ಲಾಂತು ಜನ್ನಗುದುರೆ ತಿರುಗಲು ಹೊರಟಿತು (ಬಿದುರೆ. ೩೪). **ಜನ್ನಗುದಿರೆ :** ಸುಡುಸುಡು ನಿನ್ನ ಜನ್ನಗುದಿರೆಯಂ (ರಾಮಾಶ್ವ. ೩೯-೧೫). [ ಜನ್ನ$_1$ + ಕುದುರೆ ]

**ಜನ್ನಗೂಳ** 'ಜನ್ನಗೂಟ ನೋ.

**ಜನ್ನಗೂಟ**, ಜನ್ನಗೂಳ (ನಾ). ಯಜ್ಞದಲ್ಲಿ ಅರ್ಪಿತವಾಗುವ ಹವಿಸ್ಸನ್ನೇ ಆಹಾರವಾಗಿ ಉಳ್ಳವನು ; ದೇವತೆ : "ಅಮರ್ದುಣಿಸುಗಳ್, ಕನಸಿಲ್ಲದರ್ . . . ಜನ್ನಗೂಟರ್, ಬಿಜ್ಜೋದರರ್, ಗಾಳಿವಟ್ಟಿಗರ್, ಅಚ್ಚರರ್ (ಬೋಳೆಯರ್) – ೯ ದೇವರ್ಕಳ ಪೆಸರ್" (ಕಶಸಾ. ೩-೧೯). **ಜನ್ನಗೂಳ :** ಜನ್ನಗೂಳರ್ಕಳೆರೆಯಂ ಮಹಾಭೀತಿಯಿಂ ರನ್ನಮಂ ಕೊಟ್ಟು ಸಂತೈಸಿದನೊಯೆನೆ ರತ್ನಶೃಂಗಂಗಳೆಸೆದಿರ್ದವು(ವಂಕಾರಾ. ೩-೨೯-೯). [ ಜನ್ನ$_1$ + ಕೂಟ್$_1$ + – ಅ$_7$ ]

**ಜನ್ನಗೊಂಡ**, ಜನ್ನಕೊಂಡ (ನಾ). "ಯಜ್ಞಕುಂಡ" (ಪ್ರಕಾ$_2$). **ಜನ್ನಕೊಂಡ :** ಬೇಳ್ವ ಬೇಳಂಬದಿಂ ಜನ್ನಕೊಂಡಂ ಬಳಸಿ . . . ಹವಿಯನರ್ಪಿಸುತಿರ್ದಂ (ಶ್ರೀರಾಮಾ. ೧೨-೩೦೨). [ ಜನ್ನ$_1$ + ಕೊಂಡ$_2$ ]

**ಜನ್ನಣೆ** (ನಾ). ಯಜ್ಞಶಾಲೆ ; "ಯಾಗಶಾಲೆ" (ಜತುನಿ. ೬. I, ೭೦). 'ಜನ್ನವನೆ' ಪರಾ. [ ? ]

**ಜನ್ನದಾರ** (ನಾ). ಜನಿವಾರ ; ಯಜ್ಞೋಪವೀತ : ಜನ್ನದಾರದ ಪನ್ನಗ ಭೂಷಣಾ ಪವಿತ್ರದ ಪರಮಾತ್ಮಂ (ಗಿರಿಜ. ೦೦-೭೯ ವ) ; ಮೂಜಿಟಿಯ ಜನ್ನದಾರದಾಣೆ (ರಾಮಾಶ್ವ. ೧೧೭-೩೪). [ ಜನ್ನ$_1$ + ದಾರ$_1$ ]

**ಜನ್ನಲು** (ನಾ). ಕಿಟಕಿ: "ಕಿಟಕಿ, ಜನ್ನಲು, ವಾತಾಯನ" (Window. ಇಂಕನಿ). [ ←ಪೋರ್ಚ್. Janella. / ತಮಿ. ಜನ್ನಲ್ ]

**ಜನ್ನವಗೆಯ** (ನಾ). ೧. ಯಜ್ಞಕ್ಕೆ ಶತ್ರುವಾದವನು; ದಕ್ಷಯಜ್ಞವನ್ನು ಧ್ವಂಸಮಾಡಿದವನು ; ವೀರಭದ್ರ : "ಜನ್ನವಗೆಯಂ, ಎಂಟಡಿವರಿಜಂ, ಬೀರಂ, ಬಿಸುಗಣ್ಣಮಗಂ, ಅರೆವಾನಿಸವಗೆಯಂ – ಈ ೫ ವೀರಭದ್ರಂಗೆ ಪೆಸರ್" (ಕಶಸಾ. ೧-೬); "ಎಂಟಡಿವರಿಜ ಜನ್ನವಗೆಯ ಬಿಸುಗಣ್ಣಣುಗನು ಬೀರನರೆವಾನಿಸವಗೆಯನೆಂದು ಸಲ್ವುದಾ ವೀರಭದ್ರನ ನಾಮ "(ಶಬ್ದಮಂ. ೫) : ಜನ್ನವಗೆಯಂಗೆ ಸುಗ್ರೀವಂ ಬಿಗುವರ್ಗರಿಜಂಗಂಗದಂ ನಂದಿಗೆ ನೀಲಂ ಮಸಗಿ ಮಾಱಾಂತರ್ (ರಾಮಾಶ್ವ. ೧೩೨-೧೭). ೨. ಈಶ್ವರ ; ಶಿವ : "ಕಪರ್ದಿ ಜನ್ನವಗೆಯಂ" (ಕರ್ಣಾನಿ. ೬). [ಜನ್ನ$_1$ + ಪಗೆ$_2$ + – ಅ$_7$]

**ಜನ್ನವನೆ** (ನಾ). ಯಜ್ಞಶಾಲೆ ; ಯಾಗಮಂಟಪ : ಆ ಹರಕೆ ಜನದ ಹೃದಯದಿಂ ಜನ್ನವನೆಯಿಂದೆಳ್ವ ಹೋಮಧೂಮಂಬೋಲೆ ವ್ಯೋಮಾಂತರಕೆ ಪರ್ಬಿದತ್ತು (ಶ್ರೀರಾಮಾ. ೦೧-೨೮೮). [ ಜನ್ನ$_1$ + ಮನೆ ]

**ಜನ್ನವರ** 'ಜನ್ನವಿರ' ನೋ.

**ಜನ್ನವಳ** (ನಾ). ಯಜ್ಞದ ಹವಿಸ್ಸನ್ನು ಬಯಸುವವನು ; ಇಂದ್ರ : "ಪಲಗಣ್ಣನಿಂದಿರಂ ಮಂಗಿಲ್ದೇರನುಱಿ ಜನ್ನವಳನು ಸಗ್ಗಿಗರಾಣ್ಮನೆನೆ ಸುರಪ" (ಶಬ್ದಕೈ. ೧೦೨). [ ಜನ್ನ$_1$ + – ವಳ ( < – ವಾಳ್$_1$) ]

**ಜನ್ನವಿರ್** (ಕ್ರಿ). ಯಜ್ಞದಲ್ಲಿ ತೊಡಗು : ಯಜ್ಞಮಾಡು : ಯಮುನಾ ಜಳೋದ್ಗಮಮ್ ಮಿಗೆ ಜನ್ನವಿರ್ಪ್ಪ ಭೂವಳೆ[ಯ]ವಿನೂತ ವಿಪ್ರವರರಿಂದೆಸೆದಿರ್ಪುದೆತ್ತ ನೋಳ್ಪ ರ್ಡ೦ (ಎಕ. XIII, ೪೪-೩೮ : 1112) : (ಶಾಶಮಂ. ೨೦೭ ನೋ). [ ಜನ್ನ$_1$ + ಇರ್$_1$ ]

**ಜನ್ನವಿರ**, ಜನಿವಾರ, ಜನ್ನವರ, ಜನ್ನಿವರ, ಜನ್ನಿವಾರ, ಜನ್ನುರ (ನಾ). ಯಜ್ಞೋಪವೀತ ; ಬ್ರಹ್ಮಸೂತ್ರ : ಕಾಸೆಯನುಟ್ಟು ಜನ್ನವಿರಮಂ ಪೆಗಲೊಳ್ ತೆಗೆದಿಕ್ಕಿ ವೇದದಭ್ಯಾಸಮನುಂಟುಮಾಡಿ (ಕಾವ್ಯಸಾ. ೫೩೫ ಕೂದ್ರಕ): ತಾವರೆಯ ಸೂತ್ರದೊಳಾದ ಜನ್ನವಿರಂ ದುಕೂಲದ ಕೋವಣಂ ಕರಮೊಡಂಬಡೆ (ಶಂಕರಾ. ೬-೮); ಒಳ್ಪುವೆತ್ತ ಜನ್ನವಿರಮುಂದಂಶುಕುಂಡಳಯುಗಂ (ಪರ್ವಪು. ೦೬-೪). **ಜನಿವಾರ:** ಜನಿವಾರವ ಹೆಸರಿಗೆ ಹಾಕಿಹನು ಜೇನಗಾರನುಯೆಂದೆಂಬೆ (ಬಿದಾವ. ೧೪-೬) : ಎದೆಯ ಮೇಲೆ ಹೊತ್ತ ಉತ್ತರೀಯದ ಸಂದಿನಿಂದ ಜೋಲಾಡುವ ಜನಿವಾರ (ಕಳಹು. ೨) : ಜನಿವಾರದೊಳಗಿನ ಕೃಷ್ಣಾಜಿನ ಆಗಾಗ ಕೊರೆಯುತ್ತಿತ್ತು (ವೈನಿ. ೧೮೩). **ಜನ್ನವರ :** ನೇರಿತೆನಿಪ್ಪ ಜನ್ನವರದಿಂ ಕರಯುಗ್ಮದೊಳಾಂತ ದರ್ಭೆಯಿಂ ಚಾರು ಶಿಖಾಕಮಂಡಲುಗಳೊಪ್ಪಿರೆ ವಾಮನರೂಪುವೆತ್ತ ಗಂಭೀರನುದಾತ್ತನಾ ಬಲಿಯ ಬೇಟ್ಪುದುಂ (ನೇಮಿಪು. ೫-೨೧) : ಗಿಳಿವಿಂಡು ದರ್ಭೆ ಮಲ್ಲಿಗೆ ಜನ್ನವರ ಕಾಸೆ ತಳಿರಾಗೆ ಕುಸುಮಾಕ್ಷತೆಯಿತ್ತು ಅಲರಂಬನ ಪರಸುವ ವಿಪ್ರನಂದದೆ ಚಲುವಾದುದೊಂದು ಚೂತಕುಜಾತ (ತ್ರಿಪುರ. ೧೪-೩೮). **ಜನ್ನಿವರ :** ಅವನ ಜನ್ನಿವರಮಂ ಸಾಭಿಜ್ಞಾನದುಂಗುರಮಂ ನಗೆಯೊಳೊತ್ತೆಯೆಂದು ಕೊಂಡು (ಚಾವುಂಪು. ೩೫-೧೫) : ಅಬ್ಜತಂತುವಿನ ಜನ್ನಿವರಂ ಸುರಭೂಜವಲ್ಕಮೊಪ್ಪಿರೆ ಪೂಜಮಟ್ಟನಾ ಕೊಳದಿನಾಗಳ ದೊರ್ಪ ಕುಮಾರತಾಪಸಂ (ಕಾದಂಬ. ೬೦೭): ಓಜೆವೆತ್ತಿರೆ ಬೆಳ್ಳಿಯುತ್ತರಿಗೆ ಜನ್ನಿವರಂ ಬೆಡಂಗಳವಟ್ಟು ಬಾಲದಿನೇಶನಂತಿರೆ (ಧರ್ಮಾಮೃ. ೫-೨೦೭) : ಒಡಲೊಳೆಸವುದ್ಧೂಳನ ತ್ರಿಪುಂಡ್ರಗಳೆನೊಪ್ಪಿಡಿ ಜನ್ನಿವರದಿಂದೆ . . . ದೇಸೆವಡೆದಿಹ ತಪೋಧನರು (ರಾಘಶ. ೦೭-೫೮). **ಜನ್ನಿವಾರ:** "ಜನ್ನಿವಾರಂ ಬ್ರಹ್ಮಸೂತ್ರಮುಪವೀತಮೆನಿಕ್ಕು" (ತುಂಗರಾ. ೭೫-೮) : ಏಟುಸರದ ಜನ್ನಿವಾ[ಪಾಠಾಂ. ವಿ]ರಮನಿಕ್ಕುವುದುರೋಲಿಂಗಂ (ಚಾವುಂಪು. ೬೨) ; ಕರ್ಪೂರಲತೆಯಂತಿರ್ದ ಜನ್ನಿವಾರಮಂ ಕಳೆದು ಬಿಸುಟು (ಲಸರ. ೨-೪೨) : ಕಳೆದು ಮುನಿಪತಿ ಜನ್ನಿವಾರವ ಧರೆಗೆ ಬಿಸುಡುತಲಿ (ಕೌಶಿರಾ. ೩-೦೯). **ಜನ್ನುರ :** ಕತ್ತುರಿಯ ಕಂಪು ಕೈಸುರಿಗೆ ಹೊಂನೊಱಿ ಹಟ್ಟಿಗೆ ಸಣ್ಣಗಗ್ಗರಂ ಮುತ್ತಿನ ದಂಡೆ ತೋಳಮಣಿ ಬೈತಲೆ ನೆಯ್ದಲೆ ತೂಲ ಜನ್ನುರಂ . . . ಮೆಯಿವೆತ್ತಿರೆ (ಎಕ. V, ಅರಸೀ. ೮೮-೨ : 1184). [ ಜನ್ನ$_1$ + ?. / ಪ್ರಾ. ಜಣ್ಣೋವಈಯ, ಜಣ್ಣೋವವೀಯ. / ಸಂ. ಯಜ್ಞೋಪವೀತ ]

**ಜನ್ನವಿರವಂತ**(ನಾ).ಯಜ್ಞೋಪವೀತವನ್ನು ಧರಿಸಿದವನು;ಬ್ರಾಹ್ಮಣ: ಜನ್ನವಿರವಂತಂ ಪಾರ್ವಂ (ಶಬ್ದಾನು. ४೦೨ ಪ್ರಯೋ). [ ಜನ್ನವಿರ + – ವಂತ ]

**ಜನ್ನಶಾಲೆ** (ನಾ). ಯಜ್ಞಶಾಲೆ ; ಯಾಗಮಂಟಪ: ಭಸ್ಮಭಾವನೆ ಬೇಡ ನಡೆವುದು ಜನ್ನಶಾಲೆಗೆ ನೀವು (ನಿಭಾಗ. ೧೦-೨೦-೨೯). [ಜನ್ನ$_1$+ಶಾಲೆ$_3$]

**ಜನ್ನಿ** (ನಾ). ಗ್ರಾಮದ ಮಹಾಜನ ; ಧರ್ಮದರ್ಶಿಗಳ ಸಭೆ : ಶ್ರೀಪಾರಿಸ್ವದೇವರಿಗೆ ನಾಡೇಳುಮಂದಿ ಜಂನಿಗಳು ಇಪ್ಪತನಾಲ್ಕು ಬಳಿಯ ಸಮಸ್ತನಾಡು . . . ಅರ್ತ್ಥವ ಕೊಟು (ಕಇ. I, ೫೦-೪ : 1482) : ಧಾರಾಪೂರ್ವಕವಾಗಿ ಬಾಳಿಯೆಂದು ಬರಸಿಕೊಟ್ಟ ಶಿಲಾಶಾಶನ . . . ಹಾಬುನಾಡು ಸಮಸ್ತರ ವೊಪ ಬೆಲತೂರ ಜಂನಿಗಳ ವೊಪ (ಸೌಇಇ. IX-ii, ४೭೯-೦೫ : 1610) : ಕೋಟ ಅಧಿವಾಸದ ಉ[ರ]ನಾಲ್ವರು ಜಂನಿಗಳು ವೊಪ್ಪ (ಸೌಇಇ. IX-ii, ೫೨೦-೩೦ : 1626). [ ? ]

**ಜನ್ನಿಗ** (ನಾ). ಯಜ್ಞ ಮಾಡುವವನು ; ಅಧ್ವರ್ಯು : "ಜನ್ನಿಗ (ಗೆ)–ಯಾಜ್ಞಿಕ = ಅಧ್ವರಿ" (ಶಬ್ದಕೋ. ೦೯). [ <ಸಂ. ಯಾಜ್ಞಿಕ ]

**ಜನ್ನಿಗೆ, ಜನಗಿ$_1$, ಜನಿಗೆ** (ನಾ). ೧. ದೇವರ ನೈವೇದ್ಯದ ಹಾಲಿಗಾಗಿ ಮೀಸಲು ಬಿಟ್ಟ ಗೋವು, – ಆವು : ದೆಯ್ವದ ಜನ್ನಿಗೆಯುಮನಾ ದೆಯ್ವದ ಬಣ್ಣಮುಮನಚ್ಚುಮಾ ಕಳ್ಳರ್ಕೊಂಡೊಯ್ವಲ್ಲಿ ಕಾಯಲಾಱದ ದೆಯ್ವಂಗಳ್ಗಮಗೆ ಭಕ್ತರಂ ಕಾ ದ ಪ ವೆ (ಸಮಶ. ೯-೦೦೭) : ಜಂಗುಳಿ ದೈವಕ್ಕೆ ಜನ್ನಿಗೆ ಬಿಟ್ಟಾರು ಕೇಡ ನೋಡಿ (ಕಾಂಸಂ. ೮೩-೫) : ಕಾಂತೆ ಮಡಗಿದ ಜನ್ನಿಗೆಯ ಪಾಲಂ ತೆಗೆದು ಚೆನ್ನಾಗಿ ಕಾಸಿದನಂತರದೊಳ್ (ಬಸವು. ೦೪-೫): ಕುನ್ನಿಗಳು ಮ ನೆ ಪೊ ಕ್ಕು ಮಡಿಕೆಯ ಜನ್ನಿಗೆಯ ಮೀಸಲನು ಕುಡಿದುಂತಾಯ್ತು (ನಿಭಾಗ. ೧-೦೩-೦೦). ೨. ಜನಿವಾರ ; ಯಜ್ಞೋಪವೀತ: ಕಟ್ಟಿದನೊಱೆಯ ಬಿಟ್ಟ ಜನ್ನಿಗೆಯ ಓದದಿರೋದದಿರು ಶರಣರ ಮನೆಯ ಬಿರುದಿನಂಕಕ್ಕೆ ಹಿಮ್ಮೆಟ್ಟದಿರೆಲೆ ದೇವ (ಬಸರ. ೦೩-೨೦) : ಮೀಸಲ ಪಾರವ ಮರೆಯು ಜ ನ್ನಿ ಗೆ ಯ ಕಿತ್ತೊಗೆಯು . . . ಅಜ್ಞಾನ ಕಳೆಯು (ಅದಾವ. ೦೦೦-೯). **ಜನಗಿ$_1$ :** ೧. ಮೇಲಾಗಿ ದೇವರಿಗೆ ಜನಗಿ ಬಿಟ್ಟದ್ದು (ಅಕೋಶ. ೮೪). **ಜನಿಗೆ:** ೧. "ದೇವರಿಗೆ ಬಿಟ್ಟ ಆಕಳು" (ಜಾನಕೋ. ೫೯). [ <ಪ್ರಾ. ಜಣ್ಣಯ./ಸಂ. ಯಾಜ್ಞಿಕ ]

**ಜನ್ನಿಗೆಯ** (ನಾ). ಯಜ್ಞ ಮಾಡುವವನು ; ಬ್ರಾಹ್ಮಣ : ಕಟ್ಟಿದ ಒಱೆಯ ಬಿಟ್ಟ ಜನ್ನಿಗೆಯರ ಮುಟ್ಟ ಬಂದಿಱೆದರೆ ಒಸರಿಸುವನಲ್ಲ (ಬಸವ. ೭೦೦). [ ಜನ್ನಿಗೆ + – ಅ$_6$ ]

**ಜನ್ನಿಗೆಯಾವು** (ನಾ). = ಜನ್ನಿಗೆ ೧ : ಜನ್ನಿಗೆಯಾವಂ ಪರಸಿದ ಪೊನ್ನಂ ಪರಿಯಳಿವಮನೊಯ್ವ ಕಳ್ಳರನಂತಿಂತೆನ್ನದು ಗಡ ಮನೆದೈವದ ಸನ್ನಿಧಿಕೆಯ ನೋಡೆ ಮನೆಯ ಕುನ್ನಿ ವಿಶೇಷಂ (ಪಶಾರ. ೪೬೫). [ ಜನ್ನಿಗೆ + ಆವು ]

**ಜನ್ನಿವರ** 'ಜನ್ನವಿರ' ನೋ.

**ಜನ್ನಿವಾರ** 'ಜನ್ನವಿರ' ನೋ.

**ಜನ್ನಿವಾಸ, ಜಾನ್ವಾಸ, ಜಿನ್ನೀವಾಸ** (ನಾ). ೧. ಬಿಡದಿಯ ಮನೆ ; ದಿಬ್ಬಣದ ಮನೆ : ಮಾಡಿದರಮನೆ ಜ ನ್ನಿ ವಾ ಸ ದ ಬೀಡಿಕೆಗಳಾದವು (ಕೊರರಾ. ೦-೦೬-೦೬). **ಜಾನ್ವಾಸ:** ೨. ಮದುವೆಗೆ ಮುಂಚೆ ಬೀಗರನ್ನು ಸ್ವಾಗತಿಸುವ ಉತ್ಸವ : ರಾಯರ ಮನೆ ಜಾನ್ವಾಸ ಬಲು ಭರ್ಜರಿಯಾಗಿತ್ತು (ಕೂಡಿ). **ಜಿನ್ನೀವಾಸ:** ೧. ಬಂದು ಭೂಮೀಶ್ವರರು ನಳನೃಪಗಂದು ನಿ ಬ್ಬ ಣ ವಾ ಯ್ತು ಪೊಸಗೆಯ ದುಂದುಭಿಯ ರಭಸದಲಿ ಜಿನ್ನೀವಾಸ ಕೆಸಗಿದರು (ಅಂದಿಕಾ. ೪೮-೪೮).

[ <ಸಂ. ಜನ್ಯವಾಸ./ಮರಾ. ಜಾನ್ವಸಾ, ಜಾನವಸಾ ]

**ಜನ್ನುರ** 'ಜನ್ನವಿರ' ನೋ.

**ಜನ್ಮ** (ನಾ). ೧. ಹುಟ್ಟು ; ಜನನ : "ಜನನಂ ಜನ್ಮಂ ಪ್ರಸವಂ ಜನಿ ಜನುರುತ್ಪತ್ತಿ ಸೂತಿಯೇಕಾರ್ಥಮಿವಿಂತಿನಿತುಂ" (ಶಬ್ದಕೋ. ೦೮-೩) : ಎನ್ನ ಜನ್ಮವ ತೊಡೆದ ನೀ ಧರ್ಮಿ (ಬಸವ. ೪೮೦) : ಅಱೆವಾವೆಲೆ ದೇವ ಹತ್ತಕೆ ಮಾಱುಱಿಯಲುಳಿದಿರ್ದ . ಜನ್ಮಕ್ಕೆ ಮಾಱುಱು ಜನ್ಮವೆ ಸಾಕು (ಕೊರರಾ. ೦-೮-೨೦) ; ಪರತರಾಕುಂಚನೆಯ ಬಲ್ಲವ ಮರಳಿ ಜನ್ಮಕೆಯೂ ಪರವು ಪರತರ ಬ್ರಹ್ಮವಾಗಿಯೇ ನೆರೆ ವಿರಾಜಿಸುತಿರುವನು (ಗಗಶಾ. ೨೦-೭೩): ಜನ್ಮ ಕುಲ ಧನ ಜಾತಿ ವರ್ಣಪ್ರಭೇದಮಂ ಗಣಿಸದೆಯೆ . . . ಪಾಲಿಸಿರ್ದನು ತನ್ನ ರಾಜ್ಯಮಂ(ಶ್ರೀರಾಮಾ.೭-೦೮೦): ಜನ್ಮವೆಂದರೆ ಆತ್ಮನಿಗೆ ಶರೀರ ಇಂದ್ರಿಯ ಬುದ್ಧಿ ಇವುಗಳ ಸಂಘಾತಸಂಬಂಧ (ಹಿಂದಶಾ. ೧೨೨). ೨. ಜೀವಮಾನ ; ಜೀವಿತ ; ಬಾಳ್ವೆ ; ಇರುವಿಕೆ: ವಿದ್ಯೆಯಿಲ್ಲದ ನರನು ನರಪಶುವವನ ಜನ್ಮ ನಿರರ್ಥಕರವೆಂದ (ಕುವ್ಯಾಉ. ೩-೦೦೫): ಜನ್ಮ ಇರುವ ವರೆಗೂ ತಮ್ಮ ಉಪಕಾರ ನೆನಸುವೆನು (ಮುಂಬಯಿ. ೪-೫೦) : ಜ ನ್ಮ ಕ್ಕೆ ಹತ್ತಿದ ಶನಿಯಾಗಿ ನೊಣೆದು ನುಂಗಿ ಬಿಡುತ್ತದೆ (ಬಂಕಿಮ. ೦೦೮).

**ಜನ್ಮಕೊಡು**=ಹೆರು ; ಹಡೆ : ಜನ್ಮ ಕೊಟ್ಟ ತಾಯಿ ಪರಮಪೂಜ್ಯಳು (ಕೂಡಿ). **ಜನ್ಮನೀಗು** = ಜೀವನವನ್ನು ನೂಕು, –ಸಾಗಿಸು : ಯಾರು ಯಾರನ್ನೋ ಇದಿರುಹಾಕಿಕೊಳ್ಳುವುದರಲ್ಲೇ ಜನ್ಮನೀಗಿದ ಹುಡುಗಿ ಸಾವಿನಲ್ಲೂ ಯಾರನ್ನೋ ಇದಿರುಹಾಕಿಕೊಂಡುತಿತ್ತು (ಮೂರುದಾ. ೩೪೪).

[ ಸಂ. ಜನ್ಮನ್ ]

**ಜನ್ಮಕಲ್ಯಾಣ** (ನಾ). [ಜೈನ] ಪಂಚಮಹಾಕಲ್ಯಾಣಗಳಲ್ಲಿ ಒಂದು ; P ಜಿನಶಿಶು ಹುಟ್ಟಿದ ಕೂಡಲೆ ದೇವೇಂದ್ರನು ತ ನ್ನ ಪ ರಿ ವಾ ರ ದೊಂದಿಗೆ ಬಂದು ನಡೆಸುವ ಒಂದು ಉತ್ಸವ ; ಜನ್ಮಾಭಿಷೇಕ ಎಂಬ ಕಲ್ಯಾಣ: ತೀರ್ಥಕರ ಜನ್ಮಕಲ್ಯಾಣಾರ್ಥಂ ಬಂದಿಂತೆ ನೆಲಸಿದವುವಿಲ್ಲಿ (ಚಂದ್ರಪು. ೦೦-೭೬). [ ಜನ್ಮ + ಕಲ್ಯಾಣ ]

**ಜನ್ಮಕುಂಡಲಿ** (ನಾ). [ಜ್ಯೋತಿ] ಜನನಕಾಲದ ಗ್ರಹಗಳ ಸ್ಥಿತಿಯನ್ನು ಸೂಚಿಸುವ ಪತ್ರ ; ಜನ್ಮಪತ್ರಿಕೆ ; ಜಾತಕ : ಜನ್ಮಕುಂಡಲಿ ತಂದ ಹೊರತು ಕೊಡುವಳಿ ನೋಡುವುದಕ್ಕಾಗುವುದಿಲ್ಲ (ಕೂಡಿ).

[ ಜನ್ಮ + ಕುಂಡಲಿ$_2$ ]

**ಜನ್ಮಕುಂಡಲಿಕ** (ನಾ). = ಜನ್ಮಕುಂಡಲಿ: ಶ್ರೀ ರಾ ಮ, ಶ್ರೀಕೃಷ್ಣರ ಕುಂಡಲಿಗಳಿಗೆ ಸರಿಹಚ್ಚಿ ನೋಡಲಾಗಿ ನನ್ನ ಜನ್ಮಕುಂಡಲಿಕವು ಅವುಗಳಿಗಿಂತ ದೊಡ್ಡದಾಗಿ ಕಂಡುಬಂದೀತು (ನಿರಾಳ. ೧೨೮).

[ ಸಂ. ಜನ್ಮಕುಂಡಲಿಕಾ (ಜನ್ಮ + ಕುಂಡಲಿಕಾ) ]

**ಜನ್ಮಕ್ಷೇತ್ರ** (ನಾ). ಹುಟ್ಟುವ ಸ್ಥಳ ; ಯೋನಿ : ಮಾತೃನಿವಾಸಂ ಜನ್ಮಕ್ಷೇತ್ರಂ ಗಡ ಶುಕ್ಲಶೋಣಿತಂ ಬಿತ್ತು ಗಡೀಂ ಪಾತ್ರಂ ದೇಹಂ ದೇಹಿಗೆ ಮೈತ್ರೀಭಾವಮನೊಡರ್ಚಲುಂ ಮೋಹಿಸಲುಂ (ಮಲ್ಲಿಪು. ೯-೭೭).

[ ಜನ್ಮ + ಕ್ಷೇತ್ರ ]

**ಜನ್ಮಚಕ್ರ** (ನಾ). ಪುನಃ ಪುನಃ ಹುಟ್ಟುವುದು ; ಭವದುಃಖವೆಂಬ ಕ್ರೂರ ಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ ಮಱೆದು . . . ಮುಳುಗಾಡುತಿಪ್ಪ ಅಜ್ಞಾನಿಜೀವಿಗಳು ನಿಮ್ಮನೆತ್ತ ಬಲ್ಲರಯ್ಯಾ (ಮೋಳಿಮಾ. ೨೮೭-೬೫).

[ ಜನ್ಮ + ಚಕ್ರ$_1$ ]

**ಜನ್ಮಜನ್ಮಾಂತರ** (ನಾ). ಅನೇಕ (ಹಿಂದಿನ ಅಥವಾ ಮುಂದಿನ) ಜನ್ಮಗಳು : ಜನ್ಮಜನ್ಮಾಂತರದೊಳಾದೊಡಂ ಪೇಳ್ವೆನೋ ನಿನಗೆ ಬೆಸನಂ ಮಗನೆ (ಹ್ಮಮಿಥಾ. ೦೩-೫೪) ; ಮತ್ತೆ ಋಣಸೂತಕವು ಜನ್ಮಜನ್ಮಾಂತರಕೆ ಎತ್ತೆತ್ತಲೂ ಬೆನ್ನುಹತ್ತಿಕೊಂಡಿಹುದು (ಕವಿಪು. ೨೩-೪) : ಜನ್ಮಜನ್ಮಾಂತರ ದಾವುದೂ ಕರ್ಮವು ಕಾಡುತಲಿಹುದೆನ್ನನಿರದೆ (ಇಂದಾಪ. ೯೯-೮೩).

[ ಜನ್ಮ + ಜನ್ಮಾಂತರ ]

**ಜನ್ಮತಾರೆ** (ನಾ). ೧. [ಜ್ಯೋತಿ] ಜನ್ಮಕಾಲದ ನಕ್ಷತ್ರ; ಜನ್ಮನಕ್ಷತ್ರ: ನವ ಪರಿಶೋಧ್ಯಂ ಸ್ಥಿರರಾಶಿ ದಾನಶೋಭನ ವಿರಹಿತಮಾ ಜನ್ಮತಾರೆಯಂ ತರ್ಪೆಡೆಯೊಳ್ (ಜಾತಕ. ೨೪-೨೪). ೨. ತಾ ರಾ ಬ ಲ ಗ ಣ ನೆ ಯ ಲ್ಲಿ ಮೊದಲನೆಯದು : ಆ ದಿನ ವರನಿಗೆ ಜನ್ಮತಾರೆಯಾಗುತ್ತದೆ. ಬೇರೆಯ ಲಗ್ನ ಹುಡುಕಿ (ಕೂಡಿ). [ ಜನ್ಮ + ತಾರೆ$_2$ ]

**ಜನ್ಮದಾತ** (ನಾ). ಜನ್ಮ ಕೊಟ್ಟವನು ; ತಂದೆ : ನಾನು ಜನ್ಮದಾತನನ್ನು ತಬ್ಬಿಕೊಂಡು . . . ಮೆಲುವಾತಿನಿಂದ ನುಡಿದೆನು (ಮಹಸ. ೩).

[ ಜನ್ಮ + ದಾತ$_1$ ]

**ಜನ್ಮದಿನ** (ನಾ). ೧. ಹುಟ್ಟಿದ ದಿನ; ಜನನದ ತಿಥಿ: ಸರಸಿರುಹಬಾಂಧವಂ ನಿಂದ ರಾಶಿಯೊಳ್ ಭುಕ್ತಭಾಗಮಿತಿಯಿಂ ಸಾಂವತ್ಸರಿಕಂ ಪೇಳ್ವುದು ಪೃಚ್ಛಕ ನರಂಗೆ ತಜ್ಜನ್ಮದಿನಮನತಿಪರಿಣತಿಯಿಂ (ಜಾತಕ. ೨೪-೯). ೨. ಹುಟ್ಟುಹಬ್ಬ ; ವರ್ಧಂತಿ ; ಜಯಂತಿ : ಗಾಂಧೀಜಿಯ ಜನ್ಮದಿನವಾದ ಐದುದಿನಗಳಲ್ಲಿ . . . ಲಾಹೋರ್ ಮೊಕದ್ದಮೆಯ ತೀರ್ಪು ಪ್ರಕಟವಾಯಿತು (ಆತ್ಮಾರ್ಶ. ೦೪೪). [ ಜನ್ಮ + ದಿನ ]

**ಜಲದವರ್ಣ** (ನಾ). ೧. ಮೇಘವರ್ಣ ; ಕಪ್ಪುಬಣ್ಣ. ೨. ವಿಷ್ಣು : ಜಲನಿಧಿತಲ್ಪನುಂ . . . ಜಲದವರ್ಣನುಂ (ಜಗವಿ. ೧೭-೭೬).
[ ಜಲದ + ವರ್ಣ ]

**ಜಲದಾಗಮ, ಜಳದಾಗಮ** (ನಾ). ಮೋಡಗಳು ಬರುವ ಕಾಲ ; ಕಾರ್ಗಾಲ ; ಮಳೆಗಾಲ : "ಕಾರ್–ಪ್ರಾದನೇ (ಕಚ್ಚು), ಜಲದಾಗಮೋ ಚ(ವರ್ಷಾಕಾಲ), ವಮನೇ ಚ"(ಶಮಧಾ); ಜಲದಾಗಮದಿಂ ಚಿತ್ತಸ್ಖಲಿತಂ ಕೇಕಿನರ್ತನಂ ಜಲದಾಗಮದಿಂ ಚಿತ್ತಸ್ಖಲಿತಂ ಕೇಳ ನಲ್ಲನಂ (ಕವಿರಾ. ೨-೦೨೬) ; ಕಾರ್ಮುಗಿಲಿಂ ಜಲಲವತತಿ ಕಾರ್ಮುಕದಿಂ ಸ್ಮರಶರಂ . . . ಬಿಡುತಂದುವ್ವದೆ ಜಲದಾಗಮದೊಳ್ (ಚಂದ್ರಪು. ೪-೩೯). **ಜಳದಾಗಮ:** ಎಸೆದತ್ತು ರಾಜ್ಯವಿಭವಂ ಜಳದಾಗಮಚಕ್ರವರ್ತಿಯಾ (ಜಗವಿ. ೪-೩೩) : ಜಳದಾಗಮ ಭೈರವ ಕರತಳದೊಳ್ ಥಳಥಳಿಸಿ ಪೊಳೆವ ಕೂರಸಿ (ತ್ರಿಪುವಿ. ೮-೨೪). [ ಜಲದ + ಆಗಮ ]

**ಜಲದಾಧ್ವ, ಜಳದಾಧ್ವ** (ನಾ).=ಜಲದಮಾರ್ಗ: ಜಲದಾಧ್ವಂಬರ ಮೆತ್ತಿ ದಂಷ್ಟ್ರಿಯ ನಕ್ಷಾಂಶುಶ್ರೇಣಿ ತಾರಾಗಣಚ್ಛಲದಿಂದಿರ್ದಿನಂ (ಜಗವಿ. ೦-೫೯). **ಜಳದಾಧ್ವ:** ಜಳದಾಧ್ವಂ ಸ್ವರ್ಧುನೀಫೇನನೆವದೆ ಪೆಜಾತಿರ್ದುದೋ ತಾನದಭ್ರಾವುಳ ಶುಭ್ರಜ್ಯೋತಿಯಂ (ಕು ಸು ಮಾ. ೯-೫೨).
[ ಜಲದ + ಅಧ್ವ ]

**ಜಲದಾನ, ಜಳದಾನ** (ನಾ). = ಜಲತರ್ಪಣ. 'ಜಲದಾನಕ್ರಿಯೆ' ಪರಾ. **ಜಳದಾನ :** ಕಳೇವರಂಗಳಂ ಸಂಸ್ಕರಿಸಿ ಜಳದಾನಾದಿ ಕ್ರಿಯೆಗಳಂ ಮಾಡಿ (ಪಂಪಭಾ. ೩-೮ ವ). [ ಜಲ₂ + ದಾನ ]

**ಜಲದಾನಕ್ರಿಯೆ, ಜಳದಾನಕ್ರಿಯೆ** (ನಾ). = ಜಲತರ್ಪಣ : ರಾಮ ಲಕ್ಷ್ಮಣರ್ವೆರಸು ಪದ್ಮ ಸರೋವರದೊಳ್ ಜಲದಾನಕ್ರಿಯೆಯಂ ನಿರ್ವರ್ತಿಸಿ (ಪಂಪರಾಮಾ. ೧೪-೨೦೪ ವ). **ಜಳದಾನಕ್ರಿಯೆ :** ಜಳದಾನಕ್ರಿಯೆಯಂ ವಾಗ್ನಳದಿಂ ಕೋಪಾಗ್ನಿಯಿಂದೆ ದಹನಕ್ರಿಯೆಯಂ ಕೆಳೆಯಂಗೆ ಮಾಡಿದ್ಯ (ಗದಾಯು. ೩-೩೨). [ ಜಲದಾನ + ಕ್ರಿಯೆ ]

**ಜಲದಾರು** 'ಜರದಾಲು' ನೋ.

**ಜಲದಾವಳಿ** (ನಾ). ಮೋಡಗಳ ಸಮೂಹ : ಬಳಸುವ ತುಂಬಿವಿಂಡು ಜಲದಾವಳಿ ಸೂಸುವ ಬೆಳ್ಮುಗುಳ್ ಘನೋಪಳತತಿ (ಪುಷ್ಪಪು. ೨-೭೮).
[ ಜಲದ + ಆವಳಿ₁ (=ಆವಲಿ) ]

**ಜಲದಿ** 'ಜಲ್ದಿ₁' ನೋ.

**ಜಲದಿವ್ಯ** (ನಾ). = ಜಲಓ : ಮನುವು ಎರಡು ದಿವ್ಯಗಳನ್ನೂ (ಅಗ್ನಿದಿವ್ಯ ಮತ್ತು ಜಲದಿವ್ಯ) . . . ಬೃಹಸ್ಪತಿ ಮುಂತಾದವರು ಒಂಬತ್ತನ್ನೂ ಹೇಳುತ್ತಾರೆ (ಕಪಾಅ. ೧೯೫). [ ಜಲ₂ + ದಿವ್ಯ ]

**ಜಲದು** 'ಜಲ್ದಿ₂' ನೋ.

**ಜಲದುರ್ಗ, ಜಳದುರ್ಗ** (ನಾ). ನೀರಿನ ನಡುವೆ ಇರುವ ದುರ್ಗ,–ಕೋಟೆ : ಜಾನುದಘ್ನಜಲದುರ್ಗಸುವಾಗಿ ನಡೆದು (ಆದಿಪು. ೦೪-೩೨ ವ); ಕಾನನದುರ್ಗಕ್ಕೆ ಮಹಾದವಾಗ್ನಿ ಜಲದುರ್ಗಕ್ಕುರ್ವಿದೌರ್ವಾಗ್ನಿ (ಪುಷ್ಪಪು. ೩-೩೦). **ಜಳದುರ್ಗ:** ಬಂಧು ಚಿಂತಾಮಣಿ ಸುಜನ ರಕ್ಷಾಮಣಿ ಜಳದುರ್ಗ್ಗ ಬಡವಾನಳಂ ವನದುರ್ಗ್ಗದಾವಾನಳಂ (ನಾಂದೇಡ್. ೩-೨೨ ವ ; 1047) ; ಅನ್ಯೋನ್ಯ ಸೈನ್ಯ ರಜೋವ್ರಾತ ಸವಿಷಾಕ್ತತಾನ್ಯಜಳದುರ್ಗವ್ರಾತಂ (ಚಂದ್ರಪು. ೪-೨೭). [ ಜಲ₂ + ದುರ್ಗ ]

**ಜಲದೇವತೆ, ಜಳದೇವತೆ** (ನಾ). ನೀರಿನ ಅಭಿಮಾನಿ ದೇವತೆ ; ನದಿ ಮೊದಲಾದಂವುಗಳ ಅಧಿದೇವತೆ: ಜಲದೇವತೆಗಳ್ ತಡೆಯದಿದಿರ್ವಂದು ನೃಪನೊಡನೊಡನೆ ಸರೋವರಮನೊಸೆದು ಪುಗುವಂತಾಗಲ್ (ಶಾಂತಿಪು. ೮-೨೭); ಗಂಗೆಯೊಳ್ಜಲದೇವತೆಯನರ್ಚಿಸಿದ (ಕೃಮಿಭಾ. ೩೯-೦). **ಜಳದೇವತೆ :** ಜಳದೇವತೆಗಳ್ಗೆ ಪೊಡೆವಟ್ಟು ಜಳಮಂತ್ರಾಕ್ಷರಂಗಳಿಂ ಸರೋವರಮನಭಿಮಂತ್ರಿಸಿ (ಪಂಪಭಾ. ೧೩-೭೩ ವ); ಜಳದೇವತೆ ಕೋಡುವ ತಿಳಿಗೊಳದೊಳಗಿರ್ಪಂತೆ ಶೀಲವತಿ ಸೀತೆ ವಿನಿಶ್ಚಳವಿರೆ ಮನದೊಳ್ ಜನಪತಿಚಳಣಂ ದಳ್ಳುರಿಯ ನಡುವೆ ಕೋಡುತ್ತಿರ್ದರ್ಳ್ (ಪಂಪರಾಮಾ.೦೩-೨೮).
[ ಜಲ₂ + ದೇವತೆ ]

**ಜಲದೋಷ** (ನಾ). ಒಂದು ಬಗೆಯ ರೋಗ : ಧೂಮಪಾನ ಮಾಡಲು ಶ್ವಾಸ, ಕಾಸ . . . ಅಗ್ನಿಮಾಂದ್ಯ, ಉದರವ್ಯಾಧಿ, ಜಲದೋಷ, ಪಾಂಡುರೋಗ . . . ಇವಿಷ್ಟು ಗುಣವಹುದು (ಸಳಪ್ಪ. ೨೭).
[ ಜಲ₂ + ದೋಷ ]

**ಜಲದ್ರೋಣಿ**(ನಾ). ನೀರು ತುಂಬುವ ತೊಟ್ಟಿ,-ದೋಣಿ : "ಅವಗಾಹಃ, ಜಲದ್ರೋಣೀ – ಈ ೨ ನೀರ ದೋಣಿ" (ಹಲಾಯು. ೦೨೪-೭೯).
[ ಜಲ₂ + ದ್ರೋಣಿ ]

**ಜಲಧರ, ಜಳಧರ** (ನಾ). ೧. ಮೋಡ ; ಮುಗಿಲು ; ಮೇಘ : ಆಗಳಕಾಲಜಲಧರಂಗಳಂತೆ ನಿಖಿಲ ನೃಪಸುತರ್ ಸುತ್ತಿ ಮುತ್ತಿ ಶರವರ್ಷಮಂ ಕಱೆಯೆ (ಪಂಪರಾಮಾ. ೩-೩೦ ವ); ಜಲಧರ ಬಲಿದು ಅತಿಬೇಗ ಘೋಷದಿಂದಾಲಿಕಲ್ ಸಹಿತ ಬಹು ಮಳೆಗಱೆಯೆ (ಪ್ರಾಡಲಾ. ೨೦-೨೫). **ಜಳಧರ :** ೧. ಜಳಧರದೊಳಗಿಂದಂ ತಶಿಕಳೆ ಪೊಱಮಡುವಂತೆ . . . ಘಳಿಲನೆ ಪೊಱಮಟ್ಟಳ್ (ಗಿರಿಕ. ೯-೬೬); ಕೊಳಗುವ ರವಿಯಂ ಮುಸುಳಿಪ ಜಳಧರಮದಱಂತೆ ಜಗಮನೇಂ ಬೆಳಗುಗುಮೇ (ರಾಜಶೇ. ೦-೯೮). ೨. ಚಿಲುಕೀರೆ ಸೊಪ್ಪು : "ತಂಡುಳೀಯಕಂ ಜಳಧರನಾಮಂ" (ಪಸ್ತುಕೋ. ೩೭-೨೮). [ ಸಂ. ]

**ಜಲಧರಪಟಲ**(ನಾ). ಮೋಡಗಳ ಹಿಂಡು,–ಗುಂಪು: ಜ್ಯೋತಿರ್ಲೋಕಂಗಳ ವಿಮಾನಂಗಳ್ ತೊಲಗೆಯುಮಿದಿರಾದ ಜಲಧರಪಟಲಂಗಳರಲೆಯುಂ (ಶಾಂತಿಪು. ೦೦-೨೪ ವ) ; ಲುಳಿತ ಜಲಧರ ಪಟಲ ಜಠರದೊಳಿರ್ದ ರವಿ ಮಂಡಲದವೋಲರೆಘಳಿಗೆ ಕರ್ಣನ ಕಾಣೆನೈ (ಕುಪ್ರಾಳ. ೧೦-೨೨).
[ ಜಲಧರ + ಪಟಲ₂ ]

**ಜಲಧರಪಥ, ಜಳಧರಪಥ** (ನಾ). = ಜಲದಮಾರ್ಗ : ಜಲಧರಪಥ ಪರ್ಯಟನಕ್ಕಲಸಿ ಸುಧಾಸೂತಿ ಧಾತ್ರಿಯೊಳ್ ಶಿಶುರೂಪಚ್ಛಲದಿಂ ನೆಲೆವಡೆದವೊಲ್ (ಜಗವಿ. ೨-೮೮). **ಜಳಧರಪಥ :** ಅತಿಧವಳ ಜಳದ ಜಳಧರಪಥಮುಂ ತೊಳಪೆಳವೆಱೆಯುಂ ಕಳೆದುವು ಮುಳಿಸಂ ಕಾಮಿಗಳ ಚಿತ್ತದೊಳ್ ನೆಲಸಿದುದು (ಕವಿರಾ. ೩-೦೭೭). [ ಜಲಧರ + ಪಥ ]

**ಜಲಧರಮಾರ್ಗ, ಜಳಧರಮಾರ್ಗ** (ನಾ). = ಜಲದಮಾರ್ಗ. **ಜಳಧರಮಾರ್ಗ :** ನಾಲ್ಕುಂ ತೆಱದ ದಿವಿಜ ಜೀಮೂತಕುಳಂ ಬರೆ ಕೀರಿಲ್ಲದ ಚಿತ್ರದ ವಿರಚನೆಯಿಂ ಪೋಲ್ತುದಮಳ ಜಳಧರಮಾರ್ಗಂ (ಶಾಂತಿಪು. ೧೧-೯೯) ; ಜಳಮಯಮಿಳೆ ಜಳದಮಯಂ ಜಳಧರಮಾರ್ಗಂ (ರಾಜಶೇ. ೮-೦೧೯).
[ ಜಲಧರ + ಮಾರ್ಗ ]

**ಜಲಧಾರೆ, ಜಳಧಾರೆ** (ನಾ). ನೀರಿನ ಧಾರೆ : "ತಟತಟ–ಜಲಧಾರೆ" (ಶಾಲಕ್ಕ. ೨೫೮). **ಜಳಧಾರೆ :** ಅನೇಕ ನೃಪತಿ ಮಕುಟತತಘಟಿತ ಮಣಿಗಣ ಕಿರಣ ಜಳಧಾರಾಧೌತಾವದಾತ ಪೂತ ಚರಣಾರವಿನ್ದರು[ಂ] (ಸ್ಕಾಇಇ. XX, ೪೬–೨೬ : 1072) ; ಕೂರಸಿಯಂ ಪೊರ್ದಿದ ಜಳಧಾರೆಯುಮತಿತೀಕ್ಷ್ಣಮಪ್ಪ ಪೊಲ್ಗಂಡಗುಣಂ ವೀರಶ್ರೀಗಾದುದು ನೃಪವೀರಭುಜೋನ್ನಪವೀರಭುಜೋತ್ಖಾತ ಖಡ್ಗಧಾರಾಶ್ರಯದಿಂ (ಮಲ್ಲಿಪು. ೩-೦೩).
[ ಜಲ₂ + ಧಾರೆ ]

**ಜಲಧಿ, ಜಳಧಿ**(ನಾ). ೧. ಕಡಲು ; ಸಮುದ್ರ :" ಕಡಲುಂ ಮುನ್ನೀರೆಂದು ಜಲಧಿನಾಮಂ " (ಅಬ್ಬಿಮಂ. ೨೭) ; ಜಲಧಿತರಂಗ ತಾಟಿತಧರಾತಲ ಭಾರಮಿದೆತ್ತ ಬಾಲನೆತ್ತ(ಆದಿಪು.೪-೮೪); ಜಲಧಿಯೊಳಿರ್ದಮರ್ದಿನ ಮುಕ್ಕುಳಿನುಗುಟುತ್ತಿಳಿಗೆವಂದುದು (ಕಾದಂಪೂ. ೪೩೪) ; ಅವರದ್ದಿದರ್ಭಯುಜಲಧಿಯಲಿ

(ತ್ರಿಪುಸಾಂ. ೦೮೪). ೨. ನಾಲ್ಕು ಎಂಬ ಸಂಖ್ಯೆಯ ಸಂಕೇತ : " ಜಲಧಿ – ಸಂಖ್ಯೆ ನಾಲ್ಕು " (ಜಾತಕಿ. ೩೬೨ ಪರಿ. ೩). ಜಳಧಿ: ೧. ಜಳಧಿ ದ್ವೀಪ ರಸಾತಳಾಂಬರ ಕುಲಾದ್ರೀಂದ್ರಂಗಳ್ (ಹಂಪಭಾ. ೧೪-೩೪); ಜಳಧಿ ತರಂಗತಾಟಿತ ಮಹೀತಳದೊಳ್ ನೆಗಳ್ದಿತ್ತು ವೆಂಗಿಮಂಡಲಂ (ಅಜಿಪು. ೦-೨೪); ಜಳಧಿ ಜಂಬೂದ್ವೀಪಮಂ ಸುತ್ತಿ ಸೌಂದರಮಾಗಿರ್ಪವೊಲ್ (ಪುಷ್ಪಪು. ೨-೬೨). ೨. ಚೌ ಚತು ಜಲನಿಧಿ . . . ಜಳಧಿ ಸಮುದ್ರ ಕಷಾಯ ಇಂತಿನಿತುಂ ೪ಕ್ಕೆ ಹೆಸರು (ವ್ಯವಹಾ. ೧೦-೧೯). [ಸಂ.]

**ಜಲಧಿತಲ್ಪ** (ನಾ). ಸಮುದ್ರವನ್ನು ಹಾಸಿಗೆಯಾಗುಳ್ಳವನು ; ವಿಷ್ಣು : ಚತುರಾಸ್ಯೇಂದ್ರಾದಿ ದೇವರ್ ನಡೆದು ಜಲಧಿತಲ್ಪಂಗೆ ದೈತ್ಯೇಂದ್ರ ರುದ್ವೃತ್ತತೆಯುಂ ಪುಯ್ಯಲ್ಚೆ (ಜಗವಿ. ೨-೪೪). [ಜಲಧಿ + ತಲ್ಪ]

**ಜಲಧಿಪ** (ನಾ). ಸಮುದ್ರರಾಜ; ವರುಣ: ಜಲಧಿಪ ಸಾರ್ವ ವಹ್ನಿಯನೆ ಸಾರ್ದಂ . . . ಇಂತೊಗೆದ ಮಾಗೆಯ ವಿಶ್ರುತ ಶೀತಪಾತದೊಳ್ (ಕುಸುಮಾ. ೬-೧೧). [ಸಂ.]

**ಜಲನದಿ** (ನಾ). ಪೂರ್ಣಪ್ರವಾಹದಿಂದ ಕೂಡಿದ ನದಿ ; " ಸೂಸಿ ಹರಿಯುವ ಹೊಳೆ " (ಪೋರ್ಚು. ಕೋಶ) : ಜಲನದಿಯಲ್ಲಿ ಹೋಹ ಬಲು ಮರನಂತೆ ಇವರ ನೆಲೆ ಇಲ್ಲವೆಂದೆ (ಮೋಹನಮಾ. ೩೦-೦೨೨).

[ಜಲ್ಯ + ನದಿ]

**ಜಲನಾಡು** (ಕ್ರಿ). ನೀರಾಟವಾಡು ; ಜಲಕ್ರೀಡೆಯಾಡು : ಶೋಧಿಸಿ ಕೊಂಡು ಬರುತಲಿ ಜಲನಾಡುವ ಪ್ರಭಂಜನನ (ಪ್ರಭಂಜ. ೨-೧೪೫) ; ಆತನ ಲೋಚನಪುತ್ರಿಕೆಗಳ್ . . . ಹೊರ್ಕುಟ ತಿಳಿಗೊಳದೊಳಗೆಳಸಿ ಮುಳುಂಗಿ ವಿನೋದದಿ ಜಲನಾಡಿದವು (ಆಯುಕಾ. ೫-೫೬). [ಜಲ್ಯ + ಆಡು₁]

**ಜಲನಿಧಿ, ಜಳನಿಧಿ** (ನಾ). ೧.=ಜಲಧಿ ೧ : ಜಲನಿಧಿ ಮೇಖಲಾವಲಯಿತಾಂಗಿ ಕರಂ ಸೊಗಯಿಪ್ಪುದಾಯ್ತು ಭೂಲಲನೆ (ಕವಿರಾ. ೨-೧೦೮) ; ನೆಗಳ್ದದನಿದನಾಂ ಪಾತಾಳಕ್ಕೞಿಪುವೆನೆಂಬೀ ತೆಱದೊಳೆ ದಿನಪನಪರ ಜಲನಿಧಿಗಿೞಿದಂ (ಹಂಪಭಾ. ೦೦-೦೨೪); ಜಲನಿಧಿ ಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದತ್ತಮಿತ್ತ ನದೀ ನಿರ್ಮಲಸಲಿಲಂ ದೊರೆದುದು ಗಡ (ರಾಜಶೇ. ೦-೯೬). ೨. = ಜಲಧಿ ೨: ಚೌ ಚತು ಜಲನಿಧಿ ವಿಷನಿಧಿ . . . ಕಷಾಯ ಇಂತಿನಿತುಂ ೪ಕ್ಕೆ ಹೆಸರು (ವ್ಯವಹಾ. ೦೦-೧೮), **ಜಳನಿಧಿ**: ೧. ಪೂರ್ವಾಪರ ಜಳನಿಧಿ ವೇಳಾತರಂ ಗೋಚ್ಚಳದ್ರತ್ನ ವಿನಿದ್ರ ಪ್ರಾಂತದೇಶಂ ಸೊಗಯಿಪುದು (ಕಾದಂಪೂ. ೯೩) ; ಜಳನಿಧಿಗೆ ನೀರನಡಸುವ . . . ಮಾ[ಟ್ಕೆಯದು](ವರ್ಧಮಾ. ೧೩-೫);ನೆಲವನಳೆವಂದು . . . ಈ ಜಳನಿಧಿಗಳೀ ಗಗನವೀ ಬ್ರಹ್ಮಾಂಡ ಪವಣಿಸಿದವಿಲಸಿತದ ವಿಭುವಿಂಗೆ(ತೊರರಾ. ೧-೮-೬೬).

[ಜಲ್ಯ + ನಿಧಿ]

**ಜಲನಿಧಿತಲ್ಪ** (ನಾ). ಸಮುದ್ರದ ಮೇಲೆ ಮಲಗಿರುವವನು ; ವಿಷ್ಣು : ಜಲನಿಧಿತಲ್ಪನುಂ ಜಲರುಹೋದರನುಂ . . . ಜಲದವರ್ಣನುಮೆಂಬುದನೀ ನಿದಾಘಮಂ ಕಳೆಯಲೆ ಪಣ್ಣಿಕೊಂಡನಸುರಾರಿ (ಜಗವಿ. ೬-೬೬).

[ಜಲನಿಧಿ + ತಲ್ಪ]

**ಜಲನಿರ್ಗಮ** (ನಾ). ನೀರು ಹರಿದು ಹೋಗುವುದಕ್ಕೆಂದು ಮಾಡಿದ ಹಾದಿ ; ಮೋರಿ : " ಭ್ರಮಾಃ, ಜಲನಿರ್ಗಮಾಃ – ೨ ನೀರು ಹರಿಯುವುದಕ್ಕೆ ತಕ್ಕಹಾಗೆ ಕಟ್ಟಲ್ಪಟ್ಟ ತೂಬು, ಬಚ್ಚಲು, ಮೊಹರಿ, ನಾಲೆ, ಕೋಡಿ ಮುಂತಾದವುಗಳ ಹೆಸರುಗಳು " (ಸಿದ್ಧಾಂತಿ. ೬೯).

[ಜಲ್ಯ + ನಿರ್ಗಮ]

**ಜಲನಿಲಯ** (ನಾ). ನೀರನ್ನು ಮನೆಯಾಗಿ ಹೊಂದಿರುವವನು; ನೀರೇ ನೆಲೆಯಾದವನು : ಅಂತು ಕುರುಕುಲಮಹೀಪಾಲಂ ಮಧ್ಯಮಲೋಕ ಪಾಲಕ ನಾಗಿಯುಂ ಪಶ್ಚಿಮ ಲೋಕಪಾಲಕನಂತೆ ಜಲನಿಲಯನಾಗಿ (ಗದಾಯು. ೬-೧೪ ವ). [ಜಲ್ಯ + ನಿಲಯ]

**ಜಲನೀಲಿ** (ನಾ). ಪಾಚಿ; ಹಾವಸೆ. [ಸಂ. ಜಲನೀಲೀ]

**ಜಲನೀಲಿಕೆ, ಜಳನೀಳಿಕೆ** (ನಾ). = ಜಲನೀಲಿ : ಸಾಮಾನ್ಯವಾಗಿ ಹಾವುಟಿ, ಜಲನೀಲಿಕಾ, ಶಿಲಾವಲ್ಕಗಳು ಇಲ್ಲಿ ಬೆಳಯುತ್ತವೆ (ಭೂವಿವ. ೦೬೬). **ಜಳನೀಳಿಕೆ**: " ಶೈವಾಳಂ ಜಳನೀಳಿಕೆ ಶೈವಳಮದು ನೀರೊಳಾದ ಪಾವಸೆ ಯೆನಿಕುಂ " (ವಸ್ತುಕೋ. ೨೫-೧೮). [ಜಲ್ಯ + ನೀಲಿಕೆ]

**ಜಲಪಕ್ಷಿ, ಜಳಪಕ್ಷಿ** (ನಾ). ನೀರುಹಕ್ಕಿ; ಸಾರಸ : "ಪುಷ್ಕರಾಹ್ವಃ, ಸಾರಸಃ ೨ ಸಾರಸಹಕ್ಕಿ ಹೆಸರು.ನೀರುಹಕ್ಕಿ, ಜಲಪಕ್ಷಿ, ತಾವರೇಹಕ್ಕಿ, ಕೊಳದ ಹಕ್ಕಿ" (ಸಿದ್ಧಾಂತಿ. ೧೪೦). **ಜಳಪಕ್ಷಿ**: ಜಳಪಕ್ಷಿವ್ರಾತ ಕೋಳಾಹಳಮೊಗೆವಿನೆಗಂ (ಲೀಲಾವ. ೦೩-೧೦೫) ; ಜಳಪಕ್ಷಿಗಳುಲಿಯಿಂದಂ . . . ಇಳೆಯರಸನೇಳ್ದಂ (ರಾಜಶೇ. ೪-೨೬). [ಜಲ್ಯ + ಪಕ್ಷಿ]

**ಜಲಪಥ** (ನಾ). ನೀರಿನ ಮಾರ್ಗ ; ಕಾಲುವೆ ; ಜಲಮಾರ್ಗ : ಹಾಯ್ಗಡಗಳನ್ನೂ ವಿಮಾನಕ್ಷೇತ್ರಗಳನ್ನೂ ರಸ್ತೆಗಳನ್ನೂ ಜಲಪಥಗಳನ್ನೂ ಸ್ಥಾಪನೆ ಮಾಡಬಹುದು (ಭಾಧಾನ. ೨೬೬). [ಜಲ್ಯ + ಪಥ]

**ಜಲಪದ್ಧತಿ, ಜಳಪದ್ಧತಿ** (ನಾ). ಕಟ್ಟಡಗಳ ಮೇಲಿನಿಂದ ಮಳೆನೀರು ಹರಿದು ಹೋಗುವಂತೆ ಮಾಡಿರುವ ಹರಿ ; ದೋಣಿ ; ಹರಿನಾಳಿಗೆ. **ಜಳಪದ್ಧತಿ**: " ಪ್ರಣಾಳೀ, ಜಳಪದ್ಧತಿಃ – ಈ ೨ ಹರಿನಾಳಿ " (ಹಲಾಯು. ೧೧೩-೬೩). [ಜಲ್ಯ + ಪದ್ಧತಿ]

**ಜಲಪನ** (ನಾ). = ಜಲ್ಪನ : ಈ ಜಲಪನ ನನಗೆ ಮರೆತು ಹೋಗಿದ್ದರೂ ನಮ್ಮ ಕಾಕಂದಿರು ಇದನ್ನು ನೆನೆನೆನೆದು ನಗುವರು (ಕಲಿನೆ. ೩೪೪).

[<ಸಂ. ಜಲ್ಪನ]

**ಜಲಪರ್ಯಟನ** (ನಾ). ನೀರಿನ ಮೇಲೆ ಸಂಚಾರ : ಎರಡು ಹಡಗುಗಳು ಇಂದು ನಸುಕಿನಲ್ಲಿ ಜಲಪರ್ಯಟನ ಕೈಕೊಂಡವು (ಇಪ್ಪಳ. ೩೨೩).

[ಜಲ್ಯ + ಪರ್ಯಟನ]

**ಜಲಪಾತ** (ನಾ). ೧. ನೀರು ಧುಮುಕುವುದು. ೨. ನೀರು ಧುಮುಕುವ ಸ್ಥಳ; ನೀರ್ಬೀಳು ; ತಡಸಲು ; ಧಬಧಬೆ (ಉಕ) : ಭೀಷ್ಮವಹ ಜಲಪಾತವ್ರಾತಂಗಳಿಂ ಭೀಕರಮರಣ್ಯಂ (ಶ್ರೀರಾಮಾ. ೮೮-೨೯೧).

[ಜಲ್ಯ + ಪಾತ]

**ಜಲಪಾತ್ರೆ** (ನಾ). ನೀರಿನ ಪಾತ್ರೆ ; ಕಮಂಡಲು : " ಜಲಪಾತ್ರೆಯೆ ಕಮಂಡಲಂ " (ಮುಂಗರಾ. ೬೩-೨೫) : " ಗುಂಡಿಗೆಯೆನಲ್ ಜಲಪಾತ್ರೆಯ [ಪಾಕಾಂ. ತ್ರಮ]ಕ್ಕುಂ (ಕರ್ಣಾಕ್ಕ. ೩೧). [ಜಲ್ಯ + ಪಾತ್ರೆ]

**ಜಲಪಿಪ್ಪಲಿ** (ನಾ). ಒಂದು ಬಗೆಯ ಹಿಪ್ಪಲಿ. 'ಜಲಹಿಪ್ಪಲಿ' ಪಠಾ.

[ಜಲ್ಯ + ಪಿಪ್ಪಲಿ]

**ಜಲಪಿಸು** (ಕ್ರಿ). ಅಸಂಬದ್ಧವಾಗಿ ಮಾತನಾಡು ; ಹರಟು ; ಗಳಹು : ಕುಲಗೆಡುಕರಾಗಿರುವ ಹೊಲತಿಯರ ನುಡಿಗಳನು ಜಲಪಿಸದಿರೆನ್ನೊಳಗೆ ಲಲಿತದೊಳು ಮುನಿಯೆ (ಹಮಚ. ೬೫). [<ಜಲ್ಪ + – ಇಸು₂]

**ಜಲಪುರುಷ** (ನಾ). ನೀರಿನಲ್ಲಿ ವಾಸಮಾಡುವ ಮನುಷ್ಯ ; ಅರ್ಧ ಮಾನವ, ಅರ್ಧ ಮೀನು–ಈ ಆಕಾರದ ವ್ಯಕ್ತಿ : ವಿಮಲ ಜಲಕನ್ಯೆಯರ ಮೊತ್ತದಿಂ . . . ಕ್ರಮದಿ ಜಲಪುರುಷರುಗಳಿಂದೊಪ್ಪುವ ಬಿಲ ಪುರುಷರು (ಬಸವು. ೦೯-೮೩). 'ನೀರ್ಮಾನಸ' ಪಠಾ. [ಜಲ್ಯ+ಪುರುಷ]

**ಜಲಪುಷ್ಪ** (ನಾ). ೧. ನೀರಿನಲ್ಲಿ ಬೆಳೆಯುವ ಹೂವು ; ನೀರುಹೂವು; ಕಮಲ, ನೈದಿಲೆ ಮುಂತಾದುವು. ೨. ಮೀನು : (ಶ).

[ಜಲ್ಯ + ಪುಷ್ಪ]

**ಜಲಪೊಟ್ಟಣ** (ನಾ). ಮೋಡ ; ಮೇಘ : ಕುಂಭದೆ ಕುಲಾಲಜ್ಞಾನಮೊಗೆವಂತನಂತ ಜಲಪೊಟ್ಟಣದೆ ಮಳೆಜ್ಞಾನಮೆಸೆವಂತೆ ಸಂತತಂ ಶಾಸ್ತ್ರ ದರ್ಶನ ದಿಂದೆ ನಾಕನರಕಂಗಳು ಸಲೆ ಸಿದ್ಧವು (ಅರಾಚ. ೬-೨೨). 'ನೀರ್ವೊಟ್ಟಣ' ಪಠಾ. [ಜಲ್ಯ + ಪೊಟ್ಟಣ]

**ಜಲಪ್ರಣಾಲ** (ನಾ). ನೀರು ಹರಿದು ಹೋಗುವುದಕ್ಕಾಗಿ ಕಟೆಗೆ ಮಾಡಿರುವ ತೂಬು ; ನೀರಗಂಡಿ : "ಜಲಪ್ರಣಾಲ [ಪಾಠಾಂ. ವಾಣ] ದೊಳು . . . ವ್ಯಂತದೊಳು ತುಂಬು" (ಶಬ್ದಮಂ. ೦೦೨). [ ಜಲ್$_2$ + ಪ್ರಣಾಲ ]

**ಜಲಪ್ರಲಯ, ಜಲಪ್ರಳಯ** (ನಾ). ನೀರಿನಿಂದಾಗುವ ಪ್ರಳಯ ; ಯುಗಾಂತರದಲ್ಲಿ ನೀರು ಉಕ್ಕಿ ಜಗತ್ತನ್ನೆಲ್ಲಾ ಮುಳುಗಿಸುವುದು. ಜಲಪ್ರಳಯ : ಬಳಿಕಂ ಜಲಪ್ರಳಯಮಾದಲ್ಲಿ ತಾಂ ಮೇಲೆ ತೊಳತೊಳಗಿ ಸೆಗೆದು ತೇಂಕಾಡುತಿರ್ದುದು (ನಂಬಿಕ. ೯-೫) : ಬಾರಿಬಾರಿಗೆ ಜಲಪ್ರಳಯಂಗಳಾಗಲ್ಕೆ ಭೂರಿಶಾಖೆಗಳಿಂದೆ ತಳಿತಿಸವುದೊಂದು ವಟ ಭೂರುಹವದರದೊಂದೆಲೆಯ ಮೇಲೆ . . . ಮಲಗಿಕೊಂಡಿಹನೊರ್ವ ಬಾಲಕಂ (ಕೃಮಿಭಾ. ೩೨-೩೨). [ ಜಲ್$_2$ + ಪ್ರಲಯ ]

**ಜಲಪ್ರಸರ, ಜಳಪ್ರಸರ** (ನಾ). ನೀರಿನ ಹಬ್ಬುಗೆ,-ವಿಸ್ತಾರ : ಪಸರಿಸಿ ದುಗ್ಧಾಬ್ಧಿ ಜಲ[ಪಾಠಾಂ. ಳ]ಪ್ರಸರಮನೊಡವೇಟ ಬಂದು ಕಟಿವುವು ಮೇಘಪ್ರಸರಂಗಳಲ್ಲಿಯೆನೆ ರಸವೊಸರ್ವುವು ಪುಂಡ್ರೇಕ್ಷುವಾಟ ಕೋಟಿಗಳದಟಿಂ ಳ್ (ಆದಿಪು. ೦-೫೯). **ಜಳಪ್ರಸರ :** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ಜಲ್$_2$ + ಪ್ರಸರ ]

**ಜಲಪ್ರಳಯ** 'ಜಲಪ್ರಲಯ' ನೋ.

**ಜಲಪ್ರಾಂಗಣ** (ನಾ). ಒಂದು ದೇಶಕ್ಕೆ ಹೊಂದಿಕೊಂಡು, ಆದರ ಆಧಿಪತ್ಯಕ್ಕೆ ಒಳಪಟ್ಟ ಜಲಪ್ರದೇಶ,-ಸಮುದ್ರ : "ದೇಶೀಸಮುದ್ರ, (ಸೀಮೆ);(ಪಾರಿ) ಸಮುದ್ರಸೀಮೆ, ಜಲಪ್ರಾಂಗಣ" (Territorial Waters. ಪತ್ರಿನಿ. ೬೪) : ಭಾರತದ ಜಲಪ್ರಾಂಗಣದಲ್ಲಿನ ಸಮುದ್ರದ ಕೆಳಗಿರತಕ್ಕ ಎಲ್ಲ ಭೂಮಿಗಳೂ, ಖನಿಜಗಳೂ . . . ಸಂಘದ ವಶದಲ್ಲಿ ನೆಲಸತಕ್ಕುದು (ಭಾಧಾನ. ೧೭೧). [ ಜಲ್$_2$ + ಪ್ರಾಂಗಣ ]

**ಜಲಪ್ರಾಂತ** (ನಾ). ನೀರಿನ ಸಮೀಪದ ಪ್ರದೇಶ ; ನೀರಿನ ಅಂಚು; ತಟ ; ತೀರ. [ ಜಲ್$_2$ + ಪ್ರಾಂತ ]

**ಜಲಪ್ರಾಣಿ** (ನಾ). ನೀರಿನಲ್ಲಿ ವಾಸಮಾಡುವ ಪ್ರಾಣಿ : "ಜಲೇಶಯಃ-ಜಲಪ್ರಾಣಿ" (ಒಷಧಿ. ೭೦). [ ಜಲ್$_2$ + ಪ್ರಾಣಿ ]

**ಜಲಪ್ರಾಯ** (ಗು). ೧. ನೀರು ಸಮೃದ್ಧಿಯಾಗಿರುವ; ನೀರನ್ನುಳ್ಳ. (ನಾ). ೨. ನೀರಿನಿಂದ ತುಂಬಿದ ಪ್ರದೇಶ; "ನೀರು ಬಹಳವಾಗಿರುವ ದೇಶ" (ಅಮರ. ೮೬೪). [ ಸಂ. ]

**ಜಲಫಣಿ** (ನಾ). ಒಂದು ಬಗೆಯ ನೀರಂಹಾವು : "ಅಳಗರ್ತ [ಪಾಠಾಂ. ಅಲಗರ್ದ]ನೆನಲು ಜಲಫಣಿಯಕ್ಕು" (ಮಂಗರಾ. ೦೦೯-೩). [ ಜಲ್$_2$ + ಫಣಿ$_2$ ]

**ಜಲಬಂಧ** (ನಾ). ಹಡಗುಗಳು ಅಥವಾ ದೋಣಿಗಳು ಸಂಚರಿಸಬೇಕಾದ ಕಾಲುವೆ ಒಂದೇ ಮಟ್ಟದಲ್ಲಿ ಇಲ್ಲದಿರುವಾಗ ನೀರಿನ ಮಟ್ಟವನ್ನು ತಕ್ಕಂತೆ ಎತ್ತರಿಸಲು ಮತ್ತು ಕಡಮೆ ಮಾಡಲು ಏರ್ಪಡಿಸಿದ ವ್ಯವಸ್ಥೆ; ಮಟ್ಟ ಬದಲಾವಣೆಯ ವ್ಯವಸ್ಥೆ: ಈ ರೀತಿಯ ಕಾಮಗಾರಿಗೆ 'ಜಲಬಂಧ'(Locks)ವೆನ್ನುತ್ತಾರೆ (ಹಾಂಪ್ರ. II. ೭೭೦). [ ಜಲ್$_2$ + ಬಂಧ ]

**ಜಲಬರಿದಾನ** (ನಾ). ಧಾರಾಪೂರ್ವಕವಾದ ದಾನ : ಕಟ್ಟೇರಿ ಗ್ರಾಮ ಕಾರ್ಯ್ಯಮಂ ಮೊದಲಾದ ಮಾವುಳುದ ಕೃತ್ತುದೊಳು ಜಲಬರಿದಾನವಂ ಕೊಡಳಾಗಮುವ ನಿಮಿತ್ಯದಿಂದ ಬಹುತ್ತಲೆಕ್ಕದಿಂ (ಎಕ. VI, ತರೀಕ. ೭-೩ ; ಸು. 1260 ?). [ ಜಲ್$_2$ + ಪರಿ$_2$ + ದಾನ ]

**ಜಲಬಾಧೆ** (ನಾ). ಮೂತ್ರ ವಿಸರ್ಜನೆ; ಮೂತ್ರಶಂಕೆ: ಪಾಳು ಪ್ರದೇಶಕ್ಕೆ ಜಲಬಾಧೆಗಾಗಿ ಹೋದೆ (ಕಲಿನೆ. ೨೫೬). [ ಜಲ್$_2$ + ಬಾಧೆ ]

**ಜಲಬಿಂದು** (ನಾ). ನೀರಿನ ಹನಿ ; ತುಂತುರು : ಪದ್ಮಪತ್ರದ ಜಲಬಿಂದುವಿನಂತೆ ಚಲಿತಮಾದುದು ಚಿತ್ತಂ (ಪಂರಾಮಾ. ೯-೭೩) ; ಆಕಾಶಕ್ಕುಚ್ಚಳಿ ಪಭಿಷೇಕದ ಜಲಬಿಂದುಮಾಲೆ ಮುಕ್ತಾನೀಕದ ತೆಜದಿಂ . . . ಪಡೆದು ದಿರ್ಮಡಿ ಚೆಲ್ವಂ (ಪುಷ್ಪಪು. ೧೦-೩೨). [ ಜಲ್$_2$ + ಬಿಂದು ]

**ಜಲಬುದುಬುದ** (ನಾ). = ಜಲಬುದ್ಬುದ : (+). [ < ಜಲಬುದ್ಬುದ ]

**ಜಲಬುದ್ಬುದ, ಜಳಬುದ್ಬುದ** (ನಾ). ನೀರಿನ ಗುಳ್ಳೆ ; ಬೊಬ್ಬುಳಿಕೆ : ಸಲಿಲದ ಹೊಱಗೆ ಬೊಬ್ಬುಳಿಕೆಗಳ ತೆರೆ ನೊರೆದುಱುಗಿದವು ಘುಳುಘುಳಿಸಿ ಜಲಬುದ್ಬುದದ ಚೂಣಿಯಲಿ (ಕುವ್ಯಾಗ. ೫-೩೨). **ಜಳಬುದ್ಬುದ:** ಜಳಬುದ್ಬುದಮಂ ಕರ್ಬೊನ್ನೊಳೆ ಕಟ್ಟಿಪೆನೆಂಬ ಮರುಳ ಗುರುವಾಗದಿಱು ವಿಳಯಸ್ವಭಾವಮಂ ಸಲೆ ತಳೆದೊಡಲಂ ನಿಟ್ಟಿಮಾಡಲುಜ್ಜುಗಿಪಾತಂ (ಚಂದ್ರಪು. ೪-೫೭). [ ಜಲ್$_2$ + ಬುದ್ಬುದ ]

**ಜಲಬ್ರಾಹ್ಮಿ** (ನಾ). ಒಂದು ಬಗೆಯ ಔಷಧಿ ಸಸ್ಯ : ನೆಗ್ಗಿಲುಬೇರು, ಜಲಬ್ರಾಹ್ಮೀ, ಸೊಗದೆಬೇರು ಆಷಾಡೀಬೇರು (ಸಕಪ್ರ. ೪೩೬ ಪರಿ). [ ಜಲ್$_2$ + ಬ್ರಾಹ್ಮಿ ]

**ಜಲಭಂಗ** (ನಾ). ನೀರಿನ ತೆರೆ,-ಅಲೆ : "ಜಲಭಂಗಂ ವಿರಹಂ ಕಮಂಡಲು ಚಣಂಗಂ ಕೋರಕಾವಲ್ಲಿಯುತ್ಕಲಿಕಾಖ್ಯಂ" (ನಾನಾರ. ೧೦೩). [ ಜಲ್$_2$ + ಭಂಗ ]

**ಜಲಭೃಚ್ಚಾಪ** (ನಾ). ಕಾಮನ ಬಿಲ್ಲು ; ಇಂದ್ರಚಾಪ : ಆ ಪುರದ ರತ್ನಭವನ ಕಳಾಪದ್ಯುತಿ ನೆಗಟಿ ಗಗನತಳದೊಳ್ ಜಲಭೃಚ್ಚಾಪರುಚಿಗೆತ್ತು (ಅಜಿಪು. ೨-೦೭). [ ಸಂ. (ಜಲಭೃತ್ + ಚಾಪ) ].

**ಜಲಭೃತ್ತು** (ನಾ). ಮೋಡ; ಮೇಘ : ಜಲನಿಧಿ ಜಲಮಂ ಜಲಭೃತ್ಕುಲಕ್ಕೆ ನಲಿದಿತ್ತುದು (ರಾಜಶೇ. ೧-೯೭). [ ಸಂ. ಜಲಭೃತ್ ]

**ಜಲಭ್ರಮ** (ನಾ). ನೀರಿನ ಸುಳಿ,-ಆವರ್ತ : "ಆವರ್ತಂ ಜಲಭ್ರಮಂ ಸುಟಿಯೆನಿಕ್ಕುಂ" (ಮಂಗರಾ. ೦೨೩-೧೨). [ ಜಲ್$_2$ + ಭ್ರಮ ]

**ಜಲಮಂತ್ರ, ಜಳಮಂತ್ರ** (ನಾ). ಜಲಸ್ತಂಭನ ಮಂತ್ರ : ಜಲಮಂತ್ರಮನೇನುಮಂ ಬಗೆಯದೆ ಕೋಪೋದ್ರೇಕಮನೆ ಬಗೆದು (ಗದಾಯು. ೭-೨೨ ವ). **ಜಳಮಂತ್ರ :** ಎನ್ನ ಪೇಟ್ದ ಜಳಮಂತ್ರೋಪದೇಶಮಂ ಕೆಯ್ಕೊಂಡು . . . ವೈಶಂಪಾಯನ ಸರೋವರದೊಳ್ ಮುಳುಗಿ (ಪಂಪಭಾ. ೦೩-೭೦ ವ). [ ಜಲ್$_2$ + ಮಂತ್ರ ]

**ಜಲಮಂದಿರ** (ನಾ). ಕಾರಂಜಿಗಳಿರುವ ಮನೆ ; ಧಾರಾಗೃಹ : ಉದ್ಯಾನವನದ ಮಧ್ಯ ಭಾಗದಲ್ಲಿ ಏಳು ಅಂತಸ್ತುಗಳುಳ್ಳ ವಿಸ್ತೀರ್ಣವಾದ ಜಲಮಂದಿರವಿದ್ದು (ಮಂಜುಳ. ೪). [ ಜಲ್$_2$ + ಮಂದಿರ ]

**ಜಲಮಣಿ** (ನಾ). ನೀರಿನ ಹನಿ; ಜಲಬಿಂದು : ಜಲಮಣಿಯ ಬೆಡಗನಿಕ್ಕಬಹುದೆ ಬಯಲ ಬಂಧಿಸಬಹುದೆ (ಕೋಲಮಾ. ೧೧೬-೪೭೪). [ ಜಲ್$_2$ + ಮಣಿ$_3$ ]

**ಜಲಮಯ** (ಗು). ನೀರಿನಿಂದ ಕೂಡಿದ; ನೀರಿನಿಂದಾದ: ಪೃಥಿವೀಮಯ ಶರೀರದ ಹಾಗೆ ಜಲಮಯ ತೇಜೋಮಯ ವಾಯುಮಯ ಶರೀರಗಳೂ ಆಯಾ ಜೀವ ಕರ್ಮಾನುಸಾರ ಉಂಟು (ಹಿಂದಸಾ. ೫೯). [ ಸಂ. ]

**ಜಲಮಲಿ** (ನಾ). ಒಂದು ಬಗೆಯ ಸಸ್ಯ; "ಮುಕ್ತವರ್ಚೆ" (ಪಂಡಿತ. ೩೩೭). [ ? ]

**ಜಲಮಾನುಷಿ** (ನಾ). = ಜಲಕನ್ಯೆ : ಉದಧಿಯ ತೋರ ಮುತ್ತನಿಸೆ ತಾರಗೆ ಶೀತಮರೀಚಿ ಶಂಖದಂದದಿನಿರೆ ನೀರ ಮೇಲೆ ನಲಿವಚ್ಚರಿಯರ್ಜಲಮಾನುಷೀಪ್ರಕಾರದಿನಿರೆ (ಮಲ್ಲಿಪು. ೧೨-೧೫೩). [ ಜಲ್$_2$ + ಮಾನುಷಿ ]

**ಜಲಮಾರ್ಗ** (ನಾ). ೧. ಸಮುದ್ರ ಮಾರ್ಗ; ನದೀಮಾರ್ಗ : ನಾಗರಿಕವಾದ ಪ್ರತಿಯೊಂದು ಜನಾಂಗದವರೂ ತಮ್ಮ ದೇಶದ ಭೂಮಾರ್ಗ ಜಲಮಾರ್ಗಗಳನ್ನು ವೃದ್ಧಿಪಡಿಸಿಕೊಳ್ಳುತ್ತಿರುವರು (ಭೂರಚ. ೯೨).

೨. ಕೊಳಾಯಿ; ನಲ್ಲಿ. ೩. ಹರಿ; ಕಾಲುವೆ; ಚರಂಡಿ: "ಭ್ರಮಾಃ, ಜಲನಿರ್ಗಮಾಃ—೨ ನೀರು ಹರಿಯುವುದಕ್ಕೆ ತಕ್ಕಹಾಗೆ ಕಟ್ಟಲ್ಪಟ್ಟ ತೂಬು, ಬಚ್ಚಲು, ಮೋರಿ, ನಾಲೆ, ಕೋಡಿ ಮುಂತಾದವುಗಳ ಹೆಸರುಗಳು. ಚಕ್ರಾದಿಗಳು – ೪ – ಪದಗಳೂ ಜಲಮಾರ್ಗಕ್ಕೆ ಹೆಸರು ಅಂದರೆ ನೀರು ಹರಿಯುವ ಹಾದಿ, ನೀರು ದಾರಿ" (ಸಿದ್ಧಾಂತಿ. ೬೯). [ ಜಲ್೨ + ಮಾರ್ಗ ]

**ಜಲಮುಕ್ಸಮಿತಿ** (ನಾ). ಮೋಡಗಳ ಗುಂಪು,–ಸಮೂಹ: ದೃಕ್ಸುಭಗ ಮೂರ್ತಿ ರಿಪುಜಲಮುಕ್ಸಮಿತಿಸಮೀರ (ವಿಷ್ಣುಪು. ೧–೭). [ ಸಂ. (ಜಲಮುಚ್ + ಸಮಿತಿ) ]

**ಜಲಮುಚ** (ನಾ). ಮೋಡ; ಮೇಘ: ಮಳೆಯ ಕಾಲದ ಜಲಮುಚದ ರುಚಿ ತಳೆದ ಭ್ರಮರಗಳಿಂದ (ರಘುವಂ. ೯–೪೪). [ <ಸಂ. ಜಲಮುಚ್ ]

**ಜಲಯಂತ್ರ, ಜಳಯಂತ್ರ** (ನಾ). ೧. ಜೀರ್ಕೊಳವೆ; ಪಿಚಕಾರಿ; ಚಿಮ್ಮಲು: "ಜೀರ್ಕೊಳವೆ = ಜಲಯಂತ್ರಂ" (ಕಮುದ. ಹರಿ. ೧); ರಾಜಕುಮಾರನೆತ್ತಿದ ಜಲಯಂತ್ರ ಪಯೋಭಿಘಾತದಿಂದಮರಸಿಯರ ತೊಟ್ಟ ಪೂದುಡಿಗೆಗಳೆಲ್ಲಂ ಬಟಲ್ತು ಕಟಲ್ದು (ಶಾಂತಿಪು. ೮–೩೧ ವ); ಚಿತ್ರರದಿಂ ಜಲ[ಪಾಠಾಂ. ಳ]ಯಂತ್ರಮನೊತ್ತುವ ಕಾಂತಾಳಿ ಪುತ್ರಿಕಾಸಂತತಿ ಯಂತೆತ್ತಮಿರೆ ಸರಸಿ ಪೋಲ್ತುದು ಚಿತ್ರಜನ ನಿಯಂತ್ರ ಯಂತ್ರಧಾರಾ ಗೃಹಮಂ (ಚಂದ್ರಪ್ರ. ೭–೧೪೪). ೨. ನೀರನ್ನು ಎತ್ತುವ ಯಂತ್ರ; ರಾಟಳ: ಅಂಧಕಾರಮಯವಾದ ತೋಟದ ಕಡೆಗೆ ನೋಡುತ್ತ, ಜಲ ಯಂತ್ರದ ಶಬ್ದವನ್ನೂ ಬುಲ್‌ಬುಲ್ ಪಕ್ಷಿಯ ಹಾಡನ್ನೂ . . . ಕೇಳಿಸಿಕೊಳ್ಳುತ್ತ (ಪುನರು. ೩೯೭). **ಜಳಯಂತ್ರ**: ೧. ಅದೇಂ ನಿಮಿರ್ದುವೊ ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊತ್ತೆ ಕುಂಕುಮಜಳ ಚಂದನೋದಕ ಮೃಗೋದ್ಭವ ವಾರಿ ನಿಯುಕ್ತಧಾರೆಗಳ್ (ಚಂದ್ರಪ್ರ. ೭–೧೩೩). [ ಜಲ್೨ + ಯಂತ್ರ ]

**ಜಲಯಾತ್ರೆ, ಜಳಯಾತ್ರೆ** (ನಾ). ನೀರಿನ ಮೇಲೆ ಮಾಡುವ ಪ್ರಯಾಣ; ಸಮುದ್ರಯಾನ: ಜಲಯಾತ್ರೆಗೆ ಪೋಗಿ ತನ್ನ ಪಡೆದ ರತ್ನಂಗಳಂ ಕೊಂಡು (ಚಾವುಂಪು. ೧೭೨); ಆ ಪರದನೊರ್ವ ಜಲಯಾತ್ರೆಗೆ ಪೋಗಿ ಪಿರಿದಪ್ಪರ್ಥಲಾಭಮಾಗಿರ್ಪುದುಂ (ಧರ್ಮಾಮೃ. ೧೨–೧೯೨); ನಾನು ಈಗ ದೀರ್ಘ ಜಲಯಾತ್ರೆಯನ್ನು ಕೈಗೊಳ್ಳಲಿರುವುದರಿಂದ (ಬೆಂಜನ್. ೬೦). **ಜಳಯಾತ್ರೆ**: ಜಳಯಾತ್ರೆಗೆ ಪೋಪವರ್ಗಳ್ . . . ಜಳಮಂ ಪೊಗೆ ದೊಯ್ವರ್ (ಸಮುಪ. ೨–೪೯). [ ಜಲ್೨ + ಯಾತ್ರೆ ]

**ಜಲಯಾನ** (ನಾ). ೧. ಜಲಮಾರ್ಗವಾಗಿ ಪ್ರಯಾಣ ಮಾಡುವ ಸಾಧನ; ನಾವೆ; ಹಡಗು: ಉರಗಾವೃತಂ ಸುವರ್ಣಾಭರಣಂ ಜಲಯಾನವಾಸಿತಂ ಜಟಿಟಾಸ್ಯಂ . . . ಕುಳೀರದಂತ್ಯತ್ರ್ಯಂಶಂ (ಜಾತಕ. ೧೯–೧೨). ೨. = ಜಲಯಾತ್ರೆ: ರಾಜಕುಮಾರನು ಮೊದಲು ನೀಲನದಿಯಲ್ಲಿ ಜಲಯಾನ ಮಾಡಿದನು (ಮಹಿಸ. ೪೪). [ ಜಲ್೨ + ಯಾನ ]

**ಜಲಯುದ್ಧ, ಜಳಯುದ್ಧ** (ನಾ). ನೀರಿನಲ್ಲಿ ನಿಂತು ನೀರನ್ನು ಎರಚಿ ಮಾಡುವ ಕಾಳಗ: ಬಾಹುಬಲಿ ಭರತನಂ ದೃಷ್ಟಿಯುದ್ಧ ಜಲಯುದ್ಧ ದೊಳ್ಗೆಲ್ದು (ಚಾವುಂಪು. ೪೪–೨೨). **ಜಳಯುದ್ಧ**: ಭರದಿಂದಂ ತುಳುಕಿದ ನೀರುರದೊಳ್ ಹಾರಾಂಶು ರುಚಿಯನಿರ್ಕುಟಿಗೊಳೆ ದುರ್ಧರ ಜಳ [ಪಾಠಾಂ. ಲ]ಯುದ್ಧಮುಮಾದಮೆ ಪರಿಭವಮಂ ಚಕ್ರವರ್ತಿಗಿತ್ತತ್ತಾಗಳ್ (ಆದಿಪು. ೦೪–೦೦೮). [ ಜಲ್೨ + ಯುದ್ಧ ]

**ಜಲರಂಕು, ಜಳರಂಕು** (ನಾ). ಒಂದು ಬಗೆಯ ನೀರುಹಕ್ಕಿ; ನೀರು ಕಾಗೆ. **ಜಳರಂಕು**: "ದಾತ್ಯೂಹಃ, ಜಳರಂಕುಃ— ಈ ೨ ಜಾಮಹಂ" (ಹಲಾಯು. ೪೨–೯೬); "ಜಳರಂಕು ಕಾಳಕಂಠಂ" (ವಸ್ತುಕೋ. ೪೨–೦೩): "ಜಳರಂಕು ದಾತ್ಯೂಹಮೆನಲಾ ನಿರುಗನಕ್ಕು" (ಮಂಗರಾ. ೫೨–೦೦). [ ಸಂ. ]

**ಜಲರಾಶಿ, ಜಳರಾಶಿ** (ನಾ). ಕಡಲು; ಸಮುದ್ರ: ಜಲಮಯಮೆನಿಸಳ್ ಸಾಲ್ದುದು ಜಲರಾಶಿ ನಭಕ್ಕೆ ನೆಗೆದ ಪೆರ್ಚುಗೆಯಿಂದಂ (ಸೂಕ್ತಿಸು. ೨–೩೪): ಜಲರಾಶಿ ಜಡರಾಶಿಯಲ್ತೆ (ಇಂಪಾಹ. ೧೬೮–೩೦). **ಜಳರಾಶಿ**: "ರತ್ನಾಕರಃ . . . ಜಳರಾಶಿಃ, ಸಾಗರಃ, ಸಮುದ್ರಃ—ಈ ೧೨ ಸಮುದ್ರಂ" (ಹಲಾಯು. ೦೦೭–೩೦): ಜಳರಾಶಿ ಶ್ರೇಣಿಯೊಳ್ ಪಾಲ್ಗಡಲಮರ ಕುಜ ಶ್ರೇಣಿಯೊಳ್ ಪಾರಿಜಾತಂ(ಶಾಪಮಂ. ೬೩): (ಎಇ. XV, ೮೬; 1060 ಸೊ.) [ ಜಲ್೨ + ರಾಶಿ ]

**ಜಲರಾಶಿಪ್ರಭವೆ** (ನಾ). ಸಮುದ್ರದಲ್ಲಿ ಹುಟ್ಟಿದವಳು; ಲಕ್ಷ್ಮಿ: ಜಲರಾಶಿಪ್ರಭವೆಯಂ . . . ಲಕ್ಷ್ಮೀ ಲಲನೆಯನಾಂತು ವಕ್ಷಸ್ಥಲದೊಳ್ಪೇ ಟಿಂತುದಾರಚರಿತನೆ ಅಪ್ಪೈ (ಕವಿರಾ. ೩–೦೬೧). [ ಸಂ. ಜಲರಾಶಿಪ್ರಭವಾ (ಜಲರಾಶಿ + ಪ್ರಭವ + –) ]

**ಜಲರಾಸಿ** (ನಾ).=ಜಲರಾಶಿ: ಇತ್ತಲು ಸಂದಣಿಸಿತರಿರಾಯದಳ ಜಲರಾಸಿ ಜರಿವಂತೆ (ಕುಮಾರವ್ಯಾ. ೨–೧೯). [ <ಜಲರಾಶಿ ]

**ಜಲರಿ** 'ಝಾಲರಿ' ನೋ.

**ಜಲರುಹ, ಜಳರುಹ** (ನಾ). ನೀರಿನಲ್ಲಿ ಹುಟ್ಟಿದುದು; ತಾವರೆ; ಕಮಲ: ಜಲರುಹ ಬೀಜರಾಜಿಗಳನಾಜಿಪ (ಕಾದಂಪೂ. ೨೨೪); ಆಲಿಗಳ ಸೋಂಕಿಂ ಪ್ರಾತರ್ಜಲರುಹಮಲರ್ವಂತೆ (ಜಗವಿ. ೩–೩೨): **ಜಳರುಹ**: 'ಜಳರುಹ ಕಾಂಡ', 'ಜಳರುಹಪತ್ರ' ಪರಾ. [ ಸಂ. ]

**ಜಲರುಹನಾಭ ಜಳರುಹನಾಭ** (ನಾ). ಕಮಲನಾಭ; ವಿಷ್ಣು: ಜಲರುಹನಾಭನ ನಾಭಿಯೊಳಗುಟ್ಟಿದರ್ ನಿನ್ನ ಮಂತ್ರಬಲದಿಂ ಬ್ರಹ್ಮರ್ (ಗದಾಯು. ೭–೫೭). **ಜಳರುಹನಾಭ**: ಜಳರುಹನಾಭನ ನಾಭಿಯ ಜಳಬುದ್ಬುದದೊಳಗೆ . . . ಒಗೆದಂ ಹಿರಣ್ಯಗರ್ಭ ಬ್ರಹ್ಮಂ (ಪಂಪಭಾ. ೧–೫೯). [ ಸಂ. (ಜಲರುಹ + ನಾಭಿ + –) ]

**ಜಲರುಹರಿಪು, ಜಳರುಹರಿಪು** (ನಾ). ತಾವರೆಯ ವೈರಿ; ಚಂದ್ರ. **ಜಳರುಹರಿಪು**: ಜಳರುಹರಿಪುವಮೌಳಿ ತಾಪಸಂಗಿಂತೆಂದಂ (ಕಬಿಕಂ. ೨–೦೧೪). [ ಜಲರುಹ + ರಿಪು ]

**ಜಲರುಹಾಕ್ಷ** (ನಾ). ಕಮಲದಂತೆ ಕಣ್ಣುಳ್ಳವನು; ಕೃಷ್ಣ: ಬಲನ ವಧ್ರುನ ಕಾಲನೇಮಿಯ ಜಲರುಹಾಕ್ಷನ ರಾವಣನ ರಘುಕುಲನ ದಕ್ಷ್ಯಾದಿಪ್ಪಿ ಜೋಡಿಸಿತಾತನೀತನಲಿ (ಕುಮಾರವ್ಯಾ. ೩೦–೨೨). [ಸಂ.(ಜಲರುಹ+ಅಕ್ಷಿ + –)]

**ಜಲರುಹಾಹಿತ** (ನಾ). = ಜಲರುಹರಿಪು: ಜಲರುಹಾಹಿತಬಿಂಬಮಂ ಸಾರ್ದಲರ್ವ ತಾರಕೆಯಂತೆ ಮಿಟುಗುವುದು . . . ಮೂಕುತಿಯ ಮುತ್ತು (ಲಸಪು ೪–೩೯). [ ಜಲರುಹ + ಅಹಿತ ]

**ಜಲರುಹೋದರ** (ನಾ). ಕಮಲನಾಭ; ವಿಷ್ಣು: ಜಲನಿಧಿತಲ್ಪಂ ಜಲರುಹೋದರನುಂ ಜಲಜಾತನೇತ್ರನುಂ (ಜಗವಿ. ೭–೬೪). [ ಜಲರುಹ + ಉದರ ]

**ಜಲಲವ** (ನಾ). ನೀರಿನ ಹನಿ,–ಬಿಂದು: "ಜಲಲವವಂದು ಬಿಂದು" (ವಸ್ತುಕೋ. ೩೪–೦೪): ಕಾರ್ಮುಗಿಲಿಂ ಜಲಲವತತಿ ಕಾರ್ಮುಕದಿಂ ಸ್ಮರಶರಂ . . . ಬಿಡುತಂದುವೈದೆ ಜಲದಾರವದೊಳ್ (ಚಂದ್ರಪ್ರ. ೪–೩೯). [ ಜಲ್೨ + ಲವ ]

**ಜಲಲಿಪಿ** (ನಾ). ೧. ನೀರಿನ ಮೇಲೆ ಬರೆದುದು. ೨. (ಆಲಂ) ಸ್ವಲ್ಪ ಹೊತ್ತಿನಲ್ಲಿಯೆ ನಶಿಸಿ ಹೋಗುವಂಥದು; ಕ್ಷಣಭಂಗುರವಾದುದು: ಆರುಂ ಕೊಲಲಾರ್ವರೆ ಸಾಯದರಂ ಲಲಾಟದೊಳ್ ವಿಧಿಯ ಬರೆದ ಲಿಪಿ ಜಲಲಿಪಿಯೇ (ಪಂಚಾಮಾ. ೩–೩೧); ಗಣಿಕೆಯ ಸ್ನೇಹವು ಜಲಲಿಪಿಯಂತೆ (ಕಾವ್ಯಸ. ೦೯): ಜಲಲಿಪಿಯು ತೆರದೆ ಈ ಮಾತನೊರೆದೆ (ಮುಕ್ತಿಕಂ. ೧೫–೮). ೩. ಒಂದು ಬಗೆಯ ಲಿಪಿ: ಗಗನಲಿಪಿ, ಧೂಮಲಿಪಿ, ಜಲಲಿಪಿ, ಪಿಶಾಚಲಿಪಿ (ಭಾಸ್ಕರ. ೭೭–೪). [ ಜಲ್೨ + ಲಿಪಿ ]

**ಜಲಲೇಖ** (ನಾ). = ಜಲಲಿಪಿ: ಕರ್ಮ, ಜ್ಞಾನ, ಭಕ್ತಿ ಇವು ಮೂರು ಕ್ರಮವಾಗಿ ಶಿಲಾಲೇಖ, ಸ್ಥಲಲೇಖ, ಜಲಲೇಖಗಳಾಗಿರುವವು (ಶಿವಾಸೂ. ೦೬೦). [ ಜಲ್$_2$ + ಲೇಖ ]

**ಜಲವಟಿ** (ನಾ). ಒಂದು ಬಗೆಯ ಕಂಠಾಭರಣ ; **ಜಳವಟ್ಟಿಗೆ**: ಬಿಗಿದ ಟಿಂಚೆಯ ಹೊಮ್ಮಿಣಿಯ ಹೊರಡೆಗಳ ಜೋಡಿಯ ಪಕ್ಕಘಂಟೆಯ ರಘುಗೆಯ ಮೊಗರಂಬದ ನವಾಯಿಯ ಮಣಿಯ ಜಲವಟಿಯ ಬಿಗಿದ ಕೂರಂಕುಶದ (ಕುವ್ಯಾಸ. ೦೨-೯೭). [ ? ]

**ಜಲವರ್ಣ** (ನಾ). ನೀರಿನಲ್ಲಿ ಕಲಸಿ ಲೇಪಿಸುವ ಬಣ್ಣ : ಅಜಂತದ ಗೋಡೆಗಳ ಮೇಲೆ ಬರೆದ ಜಲವರ್ಣ ಚಿತ್ರಗಳು ದೊಡ್ಡ ಪ್ರಮಾಣದವು (ಬಾಲಪ್ರ. I, ೨೦೭). 'ತೈಲವರ್ಣ' ಪರಾ. [ ಜಲ್$_2$ + ವರ್ಣ ]

**ಜಲವಸತಿ** (ನಾ). ನೀರು ಇರುವಿಕೆ; ನೀರಿನ ಅಸ್ತಿತ್ವ : ಭೂಮಿಯ ಒಳಭಾಗದಲ್ಲಿ ಎಲ್ಲೆಲ್ಲಿ ಜಲವಸತಿ ಇದೆಯೋ ಅಲ್ಲೆಲ್ಲಾ ಓಯಸಿಸ್‌ಗಳು ಇರುತ್ತವೆ (ಭೂವಿವ. ೪೪೭). [ ಜಲ್$_2$ + ವಸತಿ ]

**ಜಲವಾಯಸ**, ಜಳವಾಯಸ (ನಾ). ನೀರುಕಾಗೆ. **ಜಳವಾಯಸ**: "ಮದ್ಗುಃ, ಜಳವಾಯಸಃ–ಈ ೨ ನೀರ ಕಾಗೆ" (ಹಲಾಯು. ೪೨-೯೭). [ ಜಲ್$_2$ + ವಾಯಸ ]

**ಜಲವಾಹ** (ನಾ). ಮೋಡ ; ಮೇಘ. [ ಸಂ. ]

**ಜಲವಿಕಳ** (ನಾ). ನೀರಿಲ್ಲದುದು ; ಬತ್ತಿದುದಂ : ಜಲವಿಕಳಮಾಗಿರ್ದ ಜಲಾಶಯದೊಳ್ ಶಿಶುಕಾಳೀರಂ ನೀರಂ ಪಡೆಯದೆ ಮಲುಮಲನೆ ಮಱುಗುತ್ತಿರ್ದುದಂ ಕಂಡು ಕರುಣಿಸಿ (ಪಂಚತಂ. ೨೯೮-೧೭). [ ಜಲ್$_2$ + ವಿಕಳ(=ವಿಕಲ) ]

**ಜಲವಿಡಿ** (ಕ್ರಿ). ನೀರು ತುಂಬು: ಜಲವಿಡಿ[ಹಾಗಾಂ. ೪]ದವಕ್ಷಿಯಲಿ ಕರುಣಾ ಜಲನಿಧಿಗೆ (ಕೂರಚಾ. ೪-೫-೨೩). [ ಜಲ್$_2$ + ಇಡಿ$_2$ ]

**ಜಲವಿದ್ಯುತ್ತು** (ನಾ). ಜಲಶಕ್ತಿಯಿಂದ ಉತ್ಪಾದಿಸಿದ ವಿದ್ಯುಚ್ಛಕ್ತಿ : ದಕ್ಷಿಣ ಭಾರತದ ನದಿಗಳು ಸಾಕಷ್ಟು ಜಲವಿದ್ಯುತ್ತನ್ನು ಒದಗಿಸುತ್ತವೆ (ರೂಢಿ). [ ಜಲ್$_2$ + ವಿದ್ಯುತ್ತು ]

**ಜಲವಿಹಂಗ**, ಜಳವಿಹಂಗ (ನಾ). ನೀರುಹಕ್ಕಿ; ಜಲಪಕ್ಷಿ. **ಜಳವಿಹಂಗ**: ಕತ್ತರಿವಾಣಿಯೊಳಿಱಿಗುವ ಚಿತ್ರದೆ ಕವಿತರ್ಪ ಜಳವಿಹಂಗಂಗಳವೋಲ್ ಎತ್ತಂ ಕವಿತಂದುವು . . . ಖಚರರೆಚ್ಚ ಶರಂಗಳ್ (ಚಂದ್ರಪ್ರ. ೬-೩೨). [ ಜಲ್$_2$ + ವಿಹಂಗ ]

**ಜಲವೈದ್ಯ** (ನಾ). ನೀರಿನಿಂದ ಮಾಡುವ ರೋಗಚಿಕಿತ್ಸೆ ; ಜಲಚಿಕಿತ್ಸೆ: ದೊಡ್ಡ ಸ್ನಾನಗೃಹವಂತೂ ಜಲವೈದ್ಯದ ಭಾರಿ ವ್ಯವಸ್ಥೆಗೆ ಸೇರಿದ ಒಂದು ಈಜುವ ಕೊಳ (ಭಾರದ. ೩೭೭). 'ಜಲಚಿಕಿತ್ಸೆ' ಪರಾ. [ ಜಲ್$_2$ + ವೈದ್ಯ ]

**ಜಲವ್ಯಾಲ**, ಜಳವ್ಯಾಳ (ನಾ). ನೀರುಹಾವು ; ಒಳ್ಳೆ. **ಜಳವ್ಯಾಳ**: "ಅಲಗರ್ದಃ, ಜಳವ್ಯಾಳಃ–ಈ ೨ ನೀರ್ವಾವು" (ಹಲಾಯು. ೦೦೭-೨೧) ; ಜಳಮೃಣಾಳನಾಳಮಂ ಜಳವ್ಯಾಳಮೆಂದು ಕೆಲದ ಬಲದಿಂ ಪಿಡಿಯಲೆಂದು ಧೀಂಕಿಡುವ ವಿಷಾಪಹಾರ ಶಾಲೂರ ಜಾಲಂಗಳೊಳಂ (ಚಂದ್ರಪ್ರ. ೫-೪೦ವ). [ ಜಲ್$_2$ + ವ್ಯಾಲ ]

**ಜಲಶಂಕೆ** (ನಾ). ೧. ನೀರಿನಿಂದಾಗುವ ಭಯ. ೨. ಮೂತ್ರ ವಿಸರ್ಜನೆ: ಜಲಶಂಕೆಗೆ ಹೋಗಬೇಕಾಗಿತ್ತು (ರೂಢಿ). [ ಜಲ್$_2$ + ಶಂಕೆ ]

**ಜಲಶಯನ** (ನಾ). ನೀರಿನಲ್ಲಿ ಮಲಗಿರುವವನು ; ವಿಷ್ಣು: "ವಿಷ್ಣುಃ, ಕೃಷ್ಣಃ . . . ಜಲಶಯನಃ, ಚತುರ್ಭುಜಃ . . . ಈ ೪೫ ನಾರಾಯಣನ ಪೆಸರ್" (ಹಲಾಯು. ೫-೨೩): ಜಲಶಯನೋದರಾಂತರದಿನೀ ತ್ರಿಜಗಂ ಪೊಱಮಟ್ಟುದೀಗಳೆಂಬುಲಿ ಸಲೆ (ಪಂಪಭಾ. ೧೦-೫೨). [ ಜಲ್$_2$ + ಶಯನ ]

**ಜಲಶಿಲೆ** (ನಾ). ನೀರಿನ ತಳದಲ್ಲಿ, ನೀರಿನ ಒತ್ತಡದಿಂದಾದ ಶಿಲೆ; ಪ್ರಸ್ತರ ಶಿಲೆ; ಅವಸಾದನ ಶಿಲೆ: ಭೂಮಿಯಲ್ಲಿ ದೊರೆಯುವ ಯಾವತ್ತೂ ಶಿಲೆಗಳಲ್ಲಿ ಅಗ್ನಿಶಿಲೆ, ವಿಕೃತಶಿಲೆ, ಜಲಶಿಲೆ ಎಂಬ ಮೂರು ಮುಖ್ಯ ವರ್ಗಗಳಿರುತ್ತವೆ (ಮುಂಬಯಿ. ೬-೨೩೮) : ಜಲಶಿಲೆಗಳು ಕೆಲವು ನಿಯಮಿತ ಪ್ರದೇಶಗಳಲ್ಲಿ ಮಾತ್ರ ಸಿಕ್ಕುತ್ತವೆ (ಳಭಾಗ. ೨೫). [ ಜಲ್$_2$ + ಶಿಲೆ ]

**ಜಲಶಿಲ್ಪಿ** (ನಾ). ಬಾವಿಯನ್ನು ಅಗೆಯಬೇಕಾದರೆ ಎಲ್ಲಿ ಚೆನ್ನಾಗಿ ನೀರು ಬರುತ್ತದೆ ಎಂಬುದನ್ನು ತಿಳಿಯಬಲ್ಲ ವಿಜ್ಞಾನಿ: ಉದಕವು ಹೊರಡವ ಹಾಗಿದ್ದರೆ ಅದನ್ನು ಜಲಶಿಲ್ಪಿಯ ಪ್ರಮಾಣದಿಂದ ಪರೀಕ್ಷಿಸಿ . . . ಬಾವಿಯನ್ನು ಅಗಿಸಬೇಕು (ಕೃಷಿಪ್ರ. ೯೮): ಈ ಎರಡು ಸಮಸ್ಯೆಗಳಿಗೂ ಕಾರಣವನ್ನೂ ನಿವಾರಣೆಯನ್ನೂ ಜಲಶಿಲ್ಪಿಯು ತಿಳಿದಿದ್ದಾನೆ (ಶಿಲ್ಪನಾ. ೪೨೭). [ ಜಲ್$_2$ + ಶಿಲ್ಪಿ ]

**ಜಲಶೀಕರ** (ನಾ). ನೀರಿನ ತುಂತುರು,–ತುಂಷಾರ: ಸುಯ್ಯೆಲೊಡಂ ಪುಷ್ಕರದಿನೊಗೆದತಿವಿಶದ ಜಲಶೀಕರಮೆನಿಸಿದುದುದಯಿಪಮಳ ತಾರಕನಿಕರಂ (ಚಂದ್ರಪ್ರ. ೮-೨೨). [ ಜಲ್$_2$ + ಶೀಕರ ]

**ಜಲಶುಕ್ತಿ** (ನಾ). (ನೀರಿನೊಳಗಿರುವ) ಕಪ್ಪೆಚಿಪ್ಪು ; ಸಿಂಪು. [ ಜಲ್$_2$ + ಶುಕ್ತಿ ]

**ಜಲಶೂಕ**, ಜಳಶೂಕ (ನಾ). ನೀರಿನ ಮೇಲೆ ಬೆಳೆಯುವ ಒಂದು ಬಗೆಯ ಸಸ್ಯ ; ಪಾಚಿ ; ಹಾವಸೆ ; ಅಂತರಗಂಗೆ. **ಜಳಶೂಕ**: "ಶೈವಾಳಂ, ಶೈವಳಂ, ಜಳಶೂಕಂ, ನೀಳಿಕಾ–ಈ ೪ ಪಾವಸೆ" (ಹಲಾಯು.೧೦೩-೬೧). [ ಜಲ್$_2$ + ಶೂಕ ]

**ಜಲಶೇಖರ** (ನಾ). ಗಂಗೆಯನ್ನು ತಲೆಯಲ್ಲಿ ಧರಿಸಿದವನು; ಗಂಗಾಧರ; ಶಿವ : ಜಲಶೇಖರನ ಉದಕವನೆಚಿದರೆ ಆಸೆ ಎಂಬ ಹೂಗಳು ಹುಟ್ಟಿದವು ನೋಡಾ (ಸರ್ವವ. ೩೨-೧೬೩). [ ಜಲ್$_2$ + ಶೇಖರ ]

**ಜಲಸ** 'ಜಲಸಾ' ನೋ.

**ಜಲಸಂದು** (ನಾ). =ಜಲಸಂಧಿ: ಆಗ ಏಷ್ಯ ಅಮೇರಿಕವನ್ನು ಪ್ರತ್ಯೇಕಿಸುವ ಬೇರಿಂಗ್ ಜಲಸಂದುವು ಆ ಕಾಲದಲ್ಲಿ ಇದ್ದಿರಲಿಲ್ಲ (ಬಾಲಪ್ರ. I, ೯೮) ; ಮುಂದೆ ಹಾದಿಯಲ್ಲಿ ಒಂದು ಜಲಸಂದು ಸಿಗುವುದು (ಮುಚಸ. ೮೦). [ <ಸಂ. ಜಲಸಂಧಿ ]

**ಜಲಸಂಧಿ** (ನಾ). ಎರಡು ಸಮುದ್ರಗಳನ್ನು ಅಥವಾ ವಿಸ್ತಾರವಾದ ಜಲಭಾಗಗಳನ್ನು ಕೂಡಿಸುವ ಇಕ್ಕಟಾದ ಜಲಪ್ರದೇಶ : ಜಲಸಂಧಿ ಅಥವ ಸ್ಟ್ರೇಟ (Strait) ಅಂದರೆ ಎರಡು ಸಮುದ್ರಗಳನ್ನು ಜೋಡಿಸುವ ಇಕ್ಕಟ್ಟಾದ ನೀರು (ಭೂಗೋಳ. ೦೨); ೩೦ ಮೈಲಿ ಅಗಲವಿರುವ ಜಲಸಂಧಿಯೊಂದು ಈ ದ್ವೀಪವನ್ನು ಚೀನಾದೇಶದಿಂದ ಪ್ರತ್ಯೇಕಿಸಿದೆ (ಭೂವಿವ. ೪೨೨). [ ಜಲ್$_2$ + ಸಂಧಿ ]

**ಜಲಸಮಾಧಿ** (ನಾ). ನೀರಿನಲ್ಲಿ ಮುಳುಗಿ ಹೋಗುವುದು; ನೀರಲ್ಲಿಯೆ ಮುಳುಗಿ ಸಾಯುವಿಕೆ.

**ಜಲಸಮಾಧಿಯಾಗು** = ನೀರಿನಲ್ಲಿ ಮುಳುಗಿ ಸಾಯು: ಗಂಗಾ ಪ್ರವಾಹದ ಮಧ್ಯದಲ್ಲಿ . . . ಕಪಾಲಕುಂಡಲೆಯೂ ನವಕುಮಾರನೂ ಜಲಸಮಾಧಿಯಾಗಿ ಹೋದರು (ಕಪಾಕುಂ. ೧೩೦). [ಜಲ್$_2$ + ಸಮಾಧಿ]

**ಜಲಸಾ**, ಜಲಸ (ನಾ). ೧. ಸಂತೋಷ ಕೂಟ : ಅಲ್ಲೊಂದ್ ಜಲಸಾ, ಇಲ್ಲಿ ಖುಲಾಸಾ, ಮದರಸ, ಮೀಟಂಗ, ಫಂಕ್‌ಶನ್ (ಚಿಂತನ. ೫೯-೦೦). ೨. ನೃತ್ಯ, ಸಂಗೀತ ಮೊದಲಾದುವುಗಳ ಪ್ರದರ್ಶನ ಸಭೆ; ಬೈಠಕ್ಕು: ಸುಮಾರು ನೂರು ಜನ ಕುಳಿತು ಜಲಸಾ ಕೇಳುವಷ್ಟು ಸಭಾಂಗಣ ವಿಸ್ತಾರವಾಗಿತ್ತು (ರಾಗಿಣಿ. ೨೫೪). **ಜಲಸ**: ೨. ಒಂದು ಕಡೆಯಲ್ಲಿ ಕೆಲವು ತರುಣರು ಸೇರಿ ಒಂದು ಸಂಗೀತ ಜಲಸವನ್ನು ಜರುಗಿಸುತ್ತಿರುವರು (ಕನ್ಯಾಬ. ೭).

**ಜಲಸಾಹೊಡೆ**=ಖುಷಿಪಡು ; ಸಂತೋಷಕೂಟದಲ್ಲಿ ಪಾಲ್ಗೊಳ್ಳು : ಜಲಸಾ ಹೊಡೀಲಿಕ್ಕೆ ಹೊರಟೇ ಬಿಟ್ಟಿದಾನೋ (ಮರಳಿ. ೦೬೬). [ ←ಅರ. ಹಿಂ. ಜಲಸಾ ; ಫಾರ. ಜಲಸ್ಹಾ ; ಮರಾ. ಜಲಸಾ, ಜಲ್ಸಾ ]

**ಜಲಸೂತ್ರ** (ನಾ). ನೀರಿನ ಧಾರೆ.

**ಜಲಸೂತ್ರದ ಮನೆ**= ಧಾರಾಗೃಹ: ಎಲೆ ಕದಳಿ, ನವಿಲ ಮರಿಗಳನು ಜಲಸೂತ್ರದ ಮನೆಯಲ್ಲಿರಿಸು (ವಡಳಾ. ೩೦). [ ಜಲ₂ + ಸೂತ್ರ ]

**ಜಲಸೇಕ, ಜಳಸೇಕ** (ನಾ). ನೀರನ್ನು ಸಿಂಪಡಿಸುವಿಕೆ ; ಜಲಸೇಚನ : ಆ ತ್ರಿಮೂರ್ತಿಗಳಾ ಮಂತ್ರಿತ ಜಲಸೇಕ ಮಾತ್ರದೆ . . . ಅತ್ರಿಯ ಸತಿಗನಸೂಯಾದೇವಿಗೆ ಪುತ್ರರಾದರು ಪೂರ್ವದೊಳು (ಹರಿಬ. ೨-೪೬). **ಜಳಸೇಕ**: ಜಳಸೇಕಂ ಪೂಗೆ ಜೊನ್ನಂ ಕೊರಗಿದ ಸಸಿಗೆ . . . ಅಶಾನುಬಂಧಂ ವಿರಹಿಗೆ ಪಿರಿದುಂ ಜೀವನಾಧಾರಮಲ್ತೇ (ಲೀಲಾವ. ೧೦-೮೩). [ ಜಲ₂ + ಸೇಕ₂ ]

**ಜಲಸೇಚನ** (ನಾ). = ಜಲಸೇಕ : ವಿಶ್ವಕ್ಕೆ ಕರುಣೆಯ ಜಲಸೇಚನ ಮಾಡಿ ಸತ್ಯ, ಶಾಂತಿ, ಅಹಿಂಸೆಯ ಮಹಾತತ್ತ್ವಗಳನ್ನು ಬೋಧಿಸಿದ ಭಗವಾನ್ ಬುದ್ಧನು (ಆತ್ಮಾರ್ಪ. ೨). [ ಜಲ₂ + ಸೇಚನ ]

**ಜಲಸೇವಂತಿಗೆ** (ನಾ). ಸೇವಂತಿಗೆಯಲ್ಲಿ ಒಂದು ಬಗೆ: "ಶೇವಾಲಂ–ಜಲಸೇವಂತಿಗೆ" (ಓಷಧಿ. ೦೬೦). [ ಜಲ₂ + ಸೇವಂತಿಗೆ ]

**ಜಲಸ್ತಂಭ, ಜಳಸ್ತಂಭ** (ನಾ). ೧. = ಜಲಸ್ತಂಭನ ೨ : ಎತ್ತಣಗ್ನಿ ಸ್ತಂಭವಾ ಜಲಸ್ತಂಭವಾದತ್ತವಂಗೆ (ವೀಶೈಪು. ೨-೩-೪೨) ; ಜಲಸ್ತಂಭದಿಂ ಗೆಲ್ವವಾವಿಂದು ಜೈನರ್ . . . ಬಂದಿರ್ಪನಂ (ಹಾಲಾಸ್ಯ. ೪-೦೫-೩೬). ೨. ಕಂಬದ ಆಕಾರವಾಗಿ ನಿಂತ ನೀರು: ಭಯಂಕರವಾದ ಬಿರುಗಾಳಿ ಸಮುದ್ರದಲ್ಲಿ ಕಾಣಿಸಿಕೊಂಡಾಗ . . . ಆಲಿಕೆಯ (Funnel) ಆಕಾರದ ಮೇಘಗಳು ಕೆಲವು ವೇಳೆ ನೀರಿನ ಮಟ್ಟಕ್ಕೂ ಇಳಿದು ನೀರನ್ನು ಸೆಳೆದುಕೊಂಡು ಹೋಗಿ ಮೇಘಮಂಡಲಕ್ಕೆ ಮುಟ್ಟಿಸುತ್ತವೆ. ಹೀಗೆ ಉಂಟಾಗುವ ನೀರಿನ ಧಾರೆಗೆ (Waterspout) ಜಲಸ್ತಂಭ ಎನ್ನುತ್ತಾರೆ (ಭೂವಿವ. ೬೬). **ಜಳಸ್ತಂಭ** : ೧. 'ಜಳಸ್ತಂಭವಮಂತ್ರ' ಪರಾ. [ ಜಲ₂ + ಸ್ತಂಭ ]

**ಜಲಸ್ತಂಭನ** (ನಾ). ೧. ನೀರನ್ನು ತಡೆಯುವುದು. ೨. ನೀರಿನಲ್ಲಿದ್ದೂ ನೀರಿನ ಬಾಧೆ ತಟ್ಟದಂತೆ ತಡೆಯುವ ಮಂತ್ರವಿದ್ಯೆ : ಶಸ್ತ್ರವಿದ್ಯೆ ಮಲ್ಲವಿದ್ಯೆ ಧನುರ್ವಿದ್ಯೆ ಅಗ್ನಿಸ್ತಂಭನ ಜಲಸ್ತಂಭನ ವಾಯುಸ್ತಂಭನ . . . ಇವೆಲ್ಲವ ಕಲಿತಿಡೇನೋ (ಮಡಿಮಾ. ೪೩-೬೦); ಒಂದು ಮಡುವಿನೊಳಗೆ ಜಲಸ್ತಂಭನ ವಿದ್ಯೆಯಿಂದ ಮುಳುಗಿಕೊಂಡಿದ್ದನು (ವಚಭಾ. ೩೦೩). [ ಜಲ₂ + ಸ್ತಂಭನ ]

**ಜಲಸ್ಪರ್ಶ** (ನಾ). ಕೈಕಾಲು ತೊಳೆದುಕೊಳ್ಳುವುದು ; ಮೂತ್ರವಿಸರ್ಜನೆ ; ಜಲಶಂಕೆ. [ ಜಲ₂ + ಸ್ಪರ್ಶ ]

**ಜಲಹರಿ** (ನಾ). ೧. ನೀರಿನ ಜರಿ,–ಪ್ರವಾಹ : ಉಗುಮದಲಿ ತೋಡುವದು ಯಾವುದೊ ಎದೆಯ ಆಳದ ಜಲಹರಿ (ಹೃದಸ. ೩೮-೩). ೨. ಲಿಂಗಕ್ಕೆ ಅಥವಾ ವಿಗ್ರಹಕ್ಕೆ ಅಭಿಷೇಕ ಮಾಡಿದ ನೀರು, ಪಾಣಿವಟ್ಟಲಿನಿಂದ ಹರಿದು ಹೋಗುವುದಕ್ಕಾಗಿ ಮಾಡಿರುವ ದಾರಿ: ಶಿವಶಿವ ಕರುಣಿ ಮಹಾದೇವಾ ಎಂದು ಮನವೊಡೆಯಲೊಟ್ಟಿ ಒಟಲೆ ಜಲಹರಿಯಿಂದೊಂದೂಜುಗೋಲು ಪೊಜಮಡಲದು ಕೊಂಡು (ನಂಬಿರ. ೦೪-೦೦೪) ; ದನಿಯಾಗದ ತೆಲಿದಿ ಜಲಹರಿಯ ದಿಕ್ಕಿಂಗಾಗಿ ತೊಲಗುತ್ತ (ಬಸಪು. ೨೬-೨೬). [ ಜಲ₂ + ಹರಿ₃ (<ಪರಿ₃) ]

**ಜಲಹಿಪ್ಪಲಿ** (ನಾ). ಜಲಪಿಪ್ಪಲಿ ; "ನೀರುಹಿಪ್ಪಲಿ" (ಅಮರ. ೮೬೪) : "ಲಾಂಗಲೀ ಶಾರದೀ, ತೋಯಪಿಪ್ಪಲೀ, ಶಕುಲಾದನೀ ಈ ೪ ಜಲಹಿಪ್ಪಲಿ" (ನಾಚಿರಾ.೦೦೦); "ಮತ್ಸ್ಯಾದನೀ–ಜಲಹಿಪ್ಪಲಿ ಕಟುಕರೋಹಿಣಿ" (ಓಷಧಿ. ೦೦೪). [ ಜಲ₂ + ಹಿಪ್ಪಲಿ ]

**ಜಲಾಂಜಲಿ, ಜಳಾಂಜಳಿ** (ನಾ). = ಜಲತರ್ಪಣ : ಸತ್ತರೊಡನಾಯಿದೆ ನಿಂದೊಡೆ ಮಾಡಲಕ್ಕುಮಿತ್ರವರ್ಗೆ ಜಲಾಂಜಲಿ ಪ್ರಭೃತಿ ದಾನವಿಶೇಷ ಮಹೋಪಕಾರಮಂ (ಕಾದಂಪೂ. ೯೬೨). **ಜಳಾಂಜಳಿ** : ಧರಾತಳಮಂ ಕೊಟ್ಟನಿವಂ ಜಳಾಂಜಳಿಯುಮಂ ನಾಂ ಕೊಟ್ಟೆನಿಲ್ಲ (ಗದಾಯು. ೫-೩೦). [ ಜಲ₂ + ಅಂಜಲಿ ]

**ಜಲಾಂತರ್ನೌಕೆ** (ನಾ). ಸಮುದ್ರದ ಒಳಗಡೆ ಸಂಚರಿಸುವ ಹಡಗು : ಡ್ರೆಬ್ಬೆಲ್ . . . ಜಲಾಂತರ್ನೌಕೆಯನ್ನು (Submarine) ನಿರ್ಮಿಸಿ ಥೇಮ್ಸ್ ನದಿಯಲ್ಲಿ ಪ್ರದರ್ಶನ ಮಾಡಿದನು (ಶಿಲ್ಪನಾ. ೦೩೨). 'ಜಲಗರ್ಭನಾವೆ' ಪರಾ. [ ಸಂ. ಜಲಾಂತರ್ನೌಕಾ (ಜಲ + ಅಂತರ್ + ನೌಕಾ) ]

**ಜಲಾಕರ** (ನಾ). ೧. ಸರೋವರ ; ಕೊಳ ; ಜಲಾಶಯ : ಅಂಗೀಕೃತ ಕುಟಜಶೋಭಾಪ್ರಭಾವಮಾಗಿಯುಂ ಸಂಶೋಷಿತ ಜಲಾ[ಪಾಠಾಂ. ಡಾ] ಕರವಮಲ್ತು (ಚಂದ್ರಪು. ೪-೪೨ ವ). ೨. ಚಿಲುಮೆ ; ಊಟೆ : (೩). [ ಜಲ₂ + ಆಕರ₂ ]

**ಜಲಾಕರ್ಷಣಯಂತ್ರ** (ನಾ). (ಬಾವಿಯಿಂದ) ನೀರನ್ನು ಎತ್ತುವ ಯಂತ್ರ ; ರಾಟಳ : "ರಾಟಾಳಃ – ಜಲಾಕರ್ಷಣಯಂತ್ರಂ" (ಅಶಕ್ಕ. ೦೬). [ ಜಲ₂ + ಆಕರ್ಷಣ + ಯಂತ್ರ ]

**ಜಲಾಕಾರ** (ನಾ). (?) : ಕಳಾಬಿಂದು ವಟಾಮುಖಿಯೆಂಬ ಹೆಂಗೂಸಿನ ಕೈಯಲು ಜಳಾಕಾರವೆಂಬ ಗಡಿಗೆ ಇದ್ದಿತ್ತು, ಆ ಗಡಿಗೆಯಲ್ಲಿ ಚನ್ನಬಸವಣ್ಣ ನೀರು ತಂದ ಮಡಿವಾಳಯ್ಯ ಸಯದಾನವ ತಂದ (ಬಸವ. ೮೮೪). 'ಜಲತ್ಕಾಲ' ಪರಾ. [ ? ]

**ಜಲಾಗಮ** (ನಾ). ನೀರನ್ನು ತರುವುದು,–ತರುವಿಕೆ: ಆನೆಗಳ ಮೇಲೆ ಕುವರಿಯರಿರ್ದು ಮುತ್ತುಗಳ ಸೋನೆಗಳನಡಿಗಡಿಗೆ ಸೂಸುತಿರೆ . . . ಜಲಾಗಮಕೆ ಹರಿ ತಾನೆ ಬರೆ ಮೊಳಗಿದುವು ದೇವದುಂದುಭಿ ಕಟಿ[?]ದುದರಳ ಮಳೆ ಗಗನದಿಂದ (ಜೈಮಿಭಾ. ೩೩-೪೩). [ ಜಲ₂ + ಆಗಮ ]

**ಜಲಾಧಾರ** (ನಾ). ಜಲಾಶಯ ; ಕೆರೆ : "ತಟಾಕಂ ಜಲಾಧಾರಮನೆ ಕೆಟಿ" (ಮಂಗರಾ. ೧೨೩-೦೪). [ ಜಲ₂ + ಆಧಾರ]

**ಜಲಾಧಿದೈವತ** (ನಾ). ನೀರಿನ ಅಭಿಮಾನಿ ದೇವತೆ; ವರುಣ; "ವರುಣಃ . . . ಜಲಾಧಿದೈವತಂ, ಪ್ರತ್ಯಗಾಶಾಪತಿಃ – ಈ ೬ ವರುಣನ ಪೆಸರ್" (ಹಲಾಯು. ೦೩-೬೪). [ಜಲ₂ + ಅಧಿದೈವತ]

**ಜಲಾಧಿವಾಸ** (ನಾ). ದೇವತಾ ವಿಗ್ರಹವನ್ನು ಪ್ರತಿಷ್ಠೆ ಮಾಡುವ ಮೊದಲು ನೀರಿನಲ್ಲಿ ಮುಳುಗಿಸಿ ಇರಿಸುವ ವಿಧಿ: ಚೈತ್ರಶುದ್ಧ ಪಂಚಮಿ ಸ್ಥಿರವಾರದಿಂದ ತ್ರಯೋದಶಿವರೆಗೂ ಜಲಾಧಿವಾಸ ಮುಂತಾದ ಕರ್ಮಗಳು ನಡೆದ ಮೇಲೆ . . . ಕೇಶವಪ್ರತಿಷ್ಠೆ ಮಾಡಿಸಿದರು (ಹೊಯ್ಸಳಾ. ೨೦). [ ಜಲ₂ + ಅಧಿವಾಸ₁ ]

**ಜಲಾಧಿವಾಸನ** (ನಾ). = ಜಲಾಧಿವಾಸ : ಜಲಾಧಿವಾಸನವೆಂಬ ಮಹೋತ್ಸವಮಂ . . . ಮಾಡುವುದು (ಪ್ರತಿಷ್ಠಾ. ೩-೦). [ ಜಲ₂ + ಅಧಿವಾಸನ ]

**ಜಲಾಧೀಶ್ವರ** (ನಾ). = ಜಲಾಧಿದೈವತ : ಭೂಮಿಗಧಿಪನೇ ಶರ್ವನೆಂಬಾ ಪೆಸರಿನಿಂ ರಾಮಣೀಯಕ ಜಲಾಧೀಶ್ವರಾ ರುದ್ರಾಖ್ಯದಾಮಹಿತವಹ್ನಿಗಧಿಪನೆ (ವೀಶೈಪು. ೬-೧-೪೪). [ ಜಲ₂ + ಅಧೀಶ್ವರ ]

**ಜಲಾನಯನ** (ನಾ). ನೀರನ್ನು ತರುವುದು,–ಒದಗಿಸುವುದು. 'ಜಲಾನಯನ ಪ್ರದೇಶ' ಪರಾ. [ ಜಲ₂ + ಆನಯನ ]

**ಜಲಾನಯನಪ್ರದೇಶ** (ನಾ). ನದಿಗೆ ಅಥವಾ ಕೆರೆ ಕೊಳಗಳಿಗೆ ಸೇರುವ ನೀರು ಹರಿದು ಬರುವ ಪ್ರದೇಶ : "ಜಲಾನಯನಪ್ರದೇಶ (ನದಿಗೆ ಬರುವ ಮಳೆನೀರು ಬಿದ್ದ ಪ್ರದೇಶ) ; ಇಳಿಮೇಡು" (Catchment area. ಇಂಕನಿ). [ ಜಲಾನಯನ + ಪ್ರದೇಶ ]

**ಜಲಾಯತಾಸ್ತ್ರ** (ನಾ). ಜಲವನ್ನು ಸುರಿಸುವ ಅಸ್ತ್ರ; ವರುಣಾಸ್ತ್ರ: ನಾರಾಯಣನ ನುಡಿಯಿಂದ ಮುನ್ನ ಜಲಾಯತಾಸ್ತ್ರವನರ್ಜುನನು ಗಾಂಡಿವದಲುಗುಳಿಸಿದ (ಕುಮಾ.ದ್ರೋ. ೧೯-೯೬).
[ ಜಲ್ಲ + ಆಯತ್ತ + ಅಸ್ತ್ರ ]

**ಜಲಾಯಿಸು** (ಕ್ರಿ). ಸುಡು; ದಹಿಸು: (+).
[ ಜಲಾಯ್ಸ್ (P ←ಹಿಂ. ಜಲಾನಾ) + -ಇಸು ]

**ಜಲಾರಿ** (ನಾ). ನೀರು ಹರಿಯುವ ಮಾರ್ಗ: "ಜಲಾರಿ=ನೀರ ಮಾರ್ಗಂ" (ಶಾಶಕ್. ೦೪೬). [ <ಜಲಹರಿ ]

**ಜಲಾರ್ದ್ರ** (ಗು). ನೀರಿನಲ್ಲಿ ನೆನೆದ,-ಒದ್ದೆಯಾದ: ಸಮಂತು ಸೂಸುವ ಜಲಾರ್ದ್ರಲಸದ್ದಳಾಕ್ಷತಂಗಳೊಳ್ಪೆರಸಿದ ತಣ್ಣನೆತ್ತಿ (ಶಂಶಭಾ. ೨-೯೫).
[ ಜಲ್ಲ + ಆರ್ದ್ರ ]

**ಜಲಾಲಿ** (ನಾ). ಮೊಹರಂ ಹಬ್ಬದಲ್ಲಿ ಹಾಕುವ ಒಂದು ವೇಷ: (+).
[ ←ಫಾರ. ಜಲಾಲೀ ]

**ಜಲಾವತಾರ** (ನಾ). ನದಿಗಳಲ್ಲಿ ನೀರಿಗಾಗಿ ಇಳಿಯುವ ಸ್ಥಳ; ನದಿಯ ಘಟ್ಟ; ನದಿಗಳ ದಡದಲ್ಲಿರುವ ಸೋಪಾನಮಾರ್ಗ.
[ ಜಲ್ಲ + ಅವತಾರ ]

**ಜಲಾವರ್ತ** (ನಾ). ನೀರಿನಲ್ಲಿಯ ಸುಳಿ: "ಸುಟು=ಕೆಲಸಗಳ್ಳಂ; ಸಸಿಯ ಸುಟು; ಸುಟುವ ಭಾವಂ; ಜಲಾವರ್ತಂ" (ಶಮದ. ಶಠಿ. ೦). 'ಜಲಾವರ್ತಾಕ್ಷರ' ಪರಾ. [ ಜಲ್ಲ + ಆವರ್ತ ]

**ಜಲಾವರ್ತಾಕ್ಷರ** (ನಾ). = ಜಲಲಿಪಿ ೨: ಪರಿವೃತ್ತಿರ್ಪ ಮರೀಚಿಕಾಜಲ ಜಲಾವರ್ತಾಕ್ಷರಂ ತೋರುಮ್ಮೆಸಿರಿ ಪುಲ್ಲಗ್ರುದ ತುಂತುರ್ಕೆ (ಸೋಮೇಶ. ೯೦).
[ ಜಲಾವರ್ತ + ಅಕ್ಷರ ]

**ಜಲಾವು** (ಗು). ಉರಿಸುವ; ಉರಿಸುವುದಕ್ಕೆ ಯೋಗ್ಯವಾದ: ಇಲ್ಲಿ ಜಲಾವು ಕಟ್ಟಿಗೆ ದೊರೆಯುತ್ತದೆ (ರೂಢಿ). [ ←ಹಿಂ. ಜಲಾಊ ]

**ಜಲಾಶಯ, ಜಳಾಶಯ** (ನಾ). ೧. ನೀರಿಗೆ ಆಶ್ರಯವಾದುದು; ಕೊಳ, ಸರೋವರ ಮೊದಲಾದುದು: ಆಧುನಿಕ ಕಾಲದಲ್ಲಿ ದೊಡ್ಡ ಜಲಾಶಯಗಳನ್ನು ನಿರ್ಮಿಸಿ ನಾನಾವಿಧಗಳಲ್ಲಿ ಪ್ರಯೋಜನ ಪಡೆಯುತ್ತೇವೆ (ನನಿ.೪). ೨. ಲಾಮಂಚ; ಬಾಳದ ಬೇರು. ೩. ವಿಾನು. **ಜಳಾಶಯಂ**: ೧. ಕಳಶಜನುದಯದೊಳೊದವಿದ ಜಳಾಶಯಂ ತಿಳಿದುವೊಡನೆ ಕದಡಿದು ವವನೀತಳಪತಿಯು ಪಡೆಯೊಳರಿನೃಪಜಳಾಶಯಂ ಶರದೆ ಮೇವಿರುದ್ಧಾರ್ಥಕಮೋ (ಶಾಂತಿಪು. ೦೦-೧೩೯). [ ಜಲ್ಲ + ಆಶಯ ]

**ಜಲಾಶ್ರಯ** (ನಾ). = ಜಲಾಶಯ. [ ಜಲ್ಲ + ಆಶ್ರಯ ]

**ಜಲಾಶ್ರಿತೆ** (ನಾ). ನೀರಿನಲ್ಲಿ ವಾಸವಾಗಿರುವವಳು; ಯಕ್ಷಿಣಿ: "ಕನ್ನಿಕೆಯರು, ಜಲಾಶ್ರಿತೆ[ಪಾಠಾಂ. ತ]ಯರೆನಲ್ಕೆ ಜಕ್ಕಿಯರೆನಿಕ್ಕುಂ" (ಮಂಗರಾ. ೩-೦೫). [ ಸಂ. ಜಲಾಶ್ರಿತಾ (ಜಲ + ಆಶ್ರಿತ + -) ]

**ಜಲಾಸ್ತ್ರ** (ನಾ). ನೀರನ್ನು ಸುರಿಸುವ ಅಸ್ತ್ರ; ವರುಣಾಸ್ತ್ರ: ಉರಿಯ ವಿಶಿಖವನಿವರು ನಂದಿಸಿದರು ಜಲಾಸ್ತ್ರದಲಿ (ಕುಮಾ.ಭೀ. ೯-೪೪).
[ ಜಲ್ಲ + ಅಸ್ತ್ರ ]

**ಜಲಿಕ, ಜಲಗ** (ನಾ). ೧. ಮೋಸಗಾರ; ಮಾಯಾವಿ; ಕುಹಕಿ: "ಧೂರ್ತನಾ ವ್ಯಂಸಕಂ ಜ[ಪಾಠಾಂ. ಜ]ಲಿಕನೆನೆ ಮಾಯೆಗೈವವನಕ್ಕು" (ಮಂಗರಾ. ೬೬-೬). **ಜಲಗ**: ೨. ವಿಾನುಗಾರ; ಬೆಸ್ತ: ಅಂಗೈಯಗಲದ ಪಟ್ಟಣದೊಳಗೆ ಆಕಾಶದುದ್ದ ಎತ್ತು ತಪ್ಪಿತ್ತು . . . ಜಲಗರ ಕರಸಿ ಜಲವ ತೊಳಯಿಸಿ . . . ಅಬಸಿಕೊಂಡು ಬಾರಯ್ಯ (ಸರ್ವವ. ೨೦೩-೯೨೦); ಸಾಗರದೊಳಗಿರ್ದ ಜಲಗನ ಬಲೆಯೊಳಗಾಗಬರ್ಪುದೆ (ಮೋಹತ. ೦೮-೩೯).
[ <ಸಂ. ಜಾಲಿಕ ]

**ಜಲಿಕೆ** (ನಾ). ಜಿಗುಳೆ; ಜಿಗಣೆ. [ ಸಂ. ಜಲಿಕಾ ]

**ಜಲಿಸು** (ಕ್ರಿ). ೧. ಸುಡು; ಜ್ವಲಿಸು: ಬಲವಾಗಿ ಒದಗಿರ್ದ ಜಲಿವ ಕಂಟಕವು . . . ಕಳೆದುಪೋಯಿತು (ಹಮುಕ.೬೩). ೨. ಹೊಳೆ; ಮಿರುಗು; ಪ್ರಕಾಶಿಸು: ಜಲಿವಸಿಮಯ್ಯನು ಕಲಕಿಸಿ ಕೂಗೆ ವಲಕಿಸಿ ಮುಖವನು ಕುಲಿಕಿಸಿ ಸಾಗೆ (ಹಮುಜ. ೨೨). [ <ಜ್ವಲಿಸು ]

**ಜಲುಕೆ** (ನಾ). = ಜಲಿಕೆ. [ ಸಂ. ಜಲುಕಾ ]

**ಜಲುಗು** (ನಾ). ನೀರು ಜಿನುಗುವ ಅಥವಾ ಹನಿಯುವ ಸ್ಥಳ: ಗುಹೆ ದೊಣೆ ಮೊರಡಿ ಪಳ್ಳ ಕೊಳ್ಳ ಜರಿ ಸರಿ ಜಲುಗು ಗಹನ ಗಹ್ವರದ ವಿಂಧ್ಯಾದ್ರಿಯಂ ಫಲುಗುಣನ ಸೇನೆ ತುಳಿದಸಿಯರೆದುದು (ಕ್ರಮಿಭಾ. ೧೦-೮). 'ಜವುಗು' ಪರಾ.
[ ದೇಪ್ರ ಪರ್ಜಿ. ಜಲುಗ್, ಜಲುಬ್; ಕುವಿ. ಜಲ್ಲ = ಸೂಟೆ ]

**ಜಲೂಕ, ಜಳೂಕ** (ನಾ). = ಜಲಿಕೆ: ಮಂಡೂಕ ಮಕರ ವ್ಯಾಳಕುಲವು ಜಲೂಕ ಕರ್ಕಟ ತಿಮಿ ತಿಮಿಂಗಿಲ (ಕಂಳದಾ. ೦-೩೦). **ಜಳೂಕ**: ಮಯ್ಯಂ ಜಳೂಕಾವಳಿಗಳ್ ಪೀರ್ವಲ್ಲಿ (ಸುಕುಮಾ. ೪-೯); ತಿಮಿತಿಮಿಂಗಿಳೋತ್ಕರ ಜಳೂಕ ವ್ಯಾಳಕೋಳಾಹಳಧ್ವಾನವೆರಸಿ ಜಲನಿಧಿ ಮೊಳೆದುದು (ಹಕಾ. ೧-೩೩); ಜಳೂಕ—ಜಿಗುಳೆ (ಶಮದ. ೨೬೯ ಪ್ರಯೋ). [ಸಂ. ಜಲೂಕಾ]

**ಜಲೂಕೆ, ಜಳೂಕೆ** (ನಾ). = ಜಲಿಕೆ. **ಜಳೂಕೆ**: "ಜಳೂಕಾ, ಜಳೌಕಾಃ— ಈ ೨ ಜಿಗುಟು" (ಕ್ಷರಾಯು. ೦೦೯-೩೯). [ಸಂ. ಜಲೂಕಾ]

**ಜಲೂಟಿ** (ನಾ). ಜೂಲು; ಗೌಸು (?): ವಿಳಸಿತಾಭ್ರೋತ್ತುಂಗ ಮಾತಂಗ ಕಮರಿಸಿದ ಮುತ್ತಿನ ಜಲೂಟಿಯರವೋ (ಸಂದಿಮಾ. ೦೮-೨೬). [ ? ]

**ಜಲೇಶ, ಜಳೇಶ** (ನಾ). ನೀರಿನ ಅಧಿಪತಿ; ವರುಣ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮೆಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೬). **ಜಳೇಶ**: ಸುರಪತಿ ಶಿಖಿ ದಂಡಧರಂ ನಿರುತಿ ಜಳೇಶಂ ಸಮೀರಣಂ ಧನದನುಮೀಶ್ವರನೆಂಬ ಲೋಕಪಾಲರನಿರವೇಟ್ಟು (ಶಾಂತಿಪು. ೦೦-೩೦). [ ಜಲ್ಲ + ಈಶ ]

**ಜಲೋಕೆ** (ನಾ). = ಜಲಿಕೆ. [ ಸಂ. ಜಲೋಕಾ ]

**ಜಲೋಚ್ಛ್ವಾಸ, ಜಳೋಚ್ಛ್ವಾಸ** (ನಾ). ೧. ಕೆರೆ ಮೊದಲಾದುವುಗಳಲ್ಲಿ ಹೆಚ್ಚಾದ ನೀರನ್ನು ಹರಿಯಬಿಡಲು ಮಾಡಿರುವ ಮಾರ್ಗ; ಕೋಡಿ; ಕಡೆಗೋಡಿ: "ಪರಿವಾಹಮೆನೆ ಜಲೋಚ್ಛ್ವಾಸಮೆನೆ ಕಡೆಗೋಡಿ" (ಮಂಗರಾ. ೦೨೩-೦೫). ೨. ಸಮುದ್ರದ ಉಬ್ಬರ; ಭರತ: ಜಲೋಚ್ಛ್ವಾಸವಿದ್ದ ಕಾಲದಲ್ಲಿ ಹಡಗು ದಡದಲ್ಲಿದ್ದರೆ ಅಲೆಗಳ ಹೊಡೆತದಿಂದೊಡೆದು ಚೂರಾಗಿ ಹೋಗುತ್ತದೆಂದು ಅವರು ತಿಳಿದಿದ್ದರು (ಕಪಾಕುಂ. ೭). **ಜಳೋಚ್ಛ್ವಾಸ**: ೧. "ಪರೀವಾಹಃ, ಜಳೋಚ್ಛ್ವಾಸಃ— ಈ ೨ ಕಡೆಗೋಡಿ" (ಹಕಾಯು. ೦೦೨-೫೫). [ ಜಲ್ಲ + ಉಚ್ಛ್ವಾಸ ]

**ಜಲೋದರ, ಜಳೋದರ** (ನಾ). ಹೊಟ್ಟೆಯಲ್ಲಿ ನೀರು ತುಂಬಿಕೊಳ್ಳುವ ಒಂದು ಬಗೆಯ ರೋಗ; ಉದರರೋಗ: ಹೊಟ್ಟೆಯ ಬಾವು, ಹೊಟ್ಟೆಯೊಳಿರ್ದ ಜಂತುರೋಗ, ಜಲೋದರ ಸಹ ಗುಣಮಕ್ಕು (ಸಕವ್ಯ. ೨೫೬). **ಜಳೋದರ**: ಹಿರಿದು ಹುಸಿಗಬುಧಿಪತಿ ಮುನಿದು ಮಾಡಿದ ಜಳೋದರವ ಭಾವಿಸದೆ (ಹಡಕಾ. ೨-೧೯). [ ಜಲ್ಲ + ಉದರ ]

**ಜಲೋದ್ಧತರತೆ** (ನಾ). [ಛಂದ] ಪ್ರತಿಪಾದದಲ್ಲಿ ಹನ್ನೆರಡು ಅಕ್ಷರಗಳಿರುವ ಒಂದು ಸಮವಾದವೃತ್ತ: ಗುಣಾಗ್ರಣಿ ದಿನೇಶವಾಯುಯುಗಳಂ . . . ಜಲೋದ್ಧತರತಂ (ಛಂದೋಂಬು. ೨-೧೩೪). [ ಸಂ. ]

**ಜಲೋಪಲ** (ನಾ). ಆಣೆಕಲ್ಲು; ಆಲಿಕಲ್ಲು: ಘನ ಕಾಟದುವು ಮೇಣಿಂದ್ರಗೋಪ ಜಲೋಪಲಂಗಳನು (ಕಂಳದಾ. ೫-೦೨). [ ಜಲ್ಲ + ಉಪಲ ]

**ಜಲೌಕಸ, ಜಳೌಕಸ** (ನಾ). ಜಿಗುಳೆ. **ಜಳೌಕಸ**: "ಜಳೂಕಂ ಜಳೌಕಸಮೆನಲಂ ಜಿಗುಟೆಯೆಂದೆನಿಕ್ಕು" (ಮಂಗರಾ. ೦೨೨-೮).
[ <ಸಂ. ಜಲೌಕಸ್ ]

**ಜಲೌಕೆ** (ನಾ). = ಜಲಿಕೆ. [ ಸಂ. ಜಲೌಕಾ ]

**ಜಲೌಘ** (ನಾ). ನೀರಿನ ಸಮೂಹ : ಪ್ರಕಟಂ ವಾರಿಧಿವೇಳೆ ವಾರ್ಧಿಗೆ ಜಲೌಘಸ್ಪರ್ಧೆಯೊಳ್ ಬಾಧ್ಯಬಾಧಕಭಾವಂ ನೆಗಟಲ್ಕೆ (ಜಗವಿ. ೧-೩೧). [ ಜಲ$_2$ + ಓಘ ]

**ಜಲ್ದಿ$_1$** (ನಾ). ಮೊಹರಂ ಹಬ್ಬದ ಕೊನೆಯ ದಿನದ ಉತ್ಸವ : ಹಿಂದೆ ಹೆವ್ವಳ್ಳಿಯಲ್ಲಿ ಬಾಬಯ್ಯನ ಜಲ್ದಿ ಎಂದರೆ ಹಿಂದುಗಳಿಗೆ ಒಂದು ದೊಡ್ಡ ಹಬ್ಬ (ಮುಗಮೂಂ. ೧) ; 'ಜಲ್ದಿ'ಯಲ್ಲಿ ಬೇರೆ ಊರುಗಳ ಮುಸಲ್ಮಾನರು ಕೊರಟಿಯ ಬಾಬಯ್ಯನ ಮಂಟಪ ಚನ್ನಾಗಿದೆ ಎಂದು ಹೊಗಳಿದರೆ ಅವನಿಗೆ ತಲೆಯ ಮೇಲೆ ಕೋಡು ಮೂಡಿದಷ್ಟು ಹರ್ಷವಾಗುತ್ತಿತ್ತು (ಊರುಕೆ. ೩೦). [ ←ಫಾರ. ಜಲ್ದೀ ]

**ಜಲ್ದಿ$_2$, ಜಲದಿ, ಜಲದು, ಜಲ್ದು** (ಅ). ಬೇಗನೆ ; ಶೀಘ್ರವಾಗಿ : ನಿಮ್ಮ ಕಡೆ ಮಂದಿ ಜಲ್ದಿ ಕಳುಹಿಸಿ ಕೊಟ್ಟು (ಹಾಜೀಂದ್ರ. ೨೯): ಜಲ್ದಿ ಬಂದು ಬಿಡು (ರೂಪಸಂ. ೬). **ಜಲದಿ :** (+). **ಜಲದು :** ಜವಾಬು ಜಲದು ಬರೆದು ಕಳುಹಿಸಬೇಕು (ಹಾಜೀಂದ್ರ. ೪೮) ; ಕುಮುಕು ಜಲದು ಆಗದಿದ್ದರೆ (ಹೈದರ. ೬೬). **ಜಲ್ದು :** ಈಗ ಮಾತ್ರ ಕೈ ಸ್ವಲ್ಪ ಜಲ್ದು ಬಿಟ್ಟೆ (ವೀನಾದ. ೦೦). [ ←ಅರ. ಫಾರ. ಹಿಂ. ಜಲ್ದೀ ]

**ಜಲ್ದು** 'ಜಲ್ದಿ$_2$' ನೋ.

**ಜಲ್ಪ** (ನಾ). ೧. ಮಾತು; ನುಡಿ. ೨. ಅಸ್ಪಷ್ಟವಾದ ಮಾತು,-ನುಡಿ: ಜನನಿರ್ದಂ ಮನದೊಳಗೊಂದೊಂದವ್ಯಕ್ತ ನಿಜಾಕ್ಷರ ಜಲ್ಪಮಸೆಯೆ ಮಂದರಕಲ್ಪಂ (ಅಜಪು. ೬-೦೨) ; ಬಾ ಕೆಳೆಯ ಹೋಗೋಣ ಬಾ . . . ಜಲದ ಜಲ್ಪವ ಕೇಳಿ ಕೊಳದ ತಡಿಗೆ (ಗಜೀಶ. ೬೬-೬) ; ಮಂಜು ಜಲ್ಪವ ತೋರಿ ಮುಗ್ಧ ವೀಕ್ಷಣವ ಬೀರಿ (ನಿವೇದ. ೯೦-೬) ೩. ಅಸಂಬದ್ಧವಾದ ಮಾತು ; ವ್ಯರ್ಥವಾದ ಮಾತು ; ಹರಟೆ : ಇದು ಮತ್ತೊನ್ಮತ್ತಜಲ್ಪಂ ಕುಲವಧುವರ ಮಾತಲ್ತು (ಹಿಂರಾಮಾ. ೯-೦೬೯). ೪. ವಾದ ; ಚರ್ಚೆ. ೫. ನ್ಯಾಯದರ್ಶನ ನಿರೂಪಿತವಾದ ಹದಿನಾರು ಪದಾರ್ಥಗಳಲ್ಲಿ ಒಂದು ; ಪರಮತವನ್ನು ಖಂಡಿಸಿ ಸ್ವಮತವನ್ನು ಸ್ಥಾಪಿಸುವುದು : ಆಯತಾಖಿಳ ತರ್ಕವಾದೋಪಾಯ ಜಲ್ಪವಿದಂಡತತಿಯೊಳು ಧೀಯುತಂ ಬಾಚಯ್ಯಂ (ಬಸಪು. ೫೩-೮) : ತರ್ಕ ನಿರ್ಣಯವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನಂಗಳೆಂಬ ಷೋಡಶ ಪದಾರ್ಥಂಗಳಂ ನಿರೂಪಿಸುತ್ತಲು (ವಿಕೀಳ. ೦೦); ಸ್ವಲ್ಪ ಜನರಳ್ಳಿಸುವ ಶತಕೋಟಿ ಭಟ ಸುಭಟ ಜಲ್ಪವಂಬರ ಚಲಿತರಗ್ರ ಕೊಳದಾ ಚೂಣಿ ಜಲ್ಪವುಪಹರಗೈದು ಕರ್ತುಚೀದ್ಯನ ಕೇಳ್ವ ಚಿತ್ರ ಬಲ ಚಿತ್ರಮಾಲಿ ಜಲ್ಪವಿರಿಸದೆ ವಿಜಯ ಕೀರ್ತಿ ಚರಣಾಬ್ಜಕಾ ತಲ್ಪಿಸುವೆನೆನಲು (ಜನಮು. ೨೬-೦೬). [ ಸಂ. ]

**ಜಲ್ಪಕ** (ನಾ). ೧. ಹರಟೆಮಲ್ಲ; ವಾಚಾಳ. ೨. ಹೊಗಳುಭಟ್ಟ; ವಂದಿ: ಪ್ರಕಟತರ ಬಿರುದಾಂಕಮಾಲಾ ವಿಶಾಲ ಜಲ್ಪಕ ಪಾಠಕೌಘ ಪರಿವೃತನಾಗಿ . . . ಬಂದು ಘನವಿಭವದಿಂ (ಪದ್ಮರಾ. ೯-೩೮). [ ಸಂ. ]

**ಜಲ್ಪನ** (ನಾ). ವ್ಯರ್ಥವಾಗಿ ಮಾತನಾಡುವುದು ; ಹರಟುವುದು. [ ಸಂ. ]

**ಜಲ್ಪನೆ** (ನಾ). = ಜಲ್ಪನ : ಜಲ್ಪನೆಯ ಬೇಸರಿಕೆ ಬಂತೆನಗೆ (ಸಹೀಗೀ. ೫೯-೫): [ ಸಂ. ಜಲ್ಪನ ]

**ಜಲ್ಪಾಕ** (ನಾ). = ಜಲ್ಪಕ ೧ : "ವಾಚಾಳಂ ಜಲ್ಪಾಕಂ ವಾ ಚಾ ಟ ಂ ವಾವದೂಕನಕ್ಕುಂ ಗಟಪಂ" (ವಸ್ತುಕೋ. ೦೦೦-೧೩). [ ಸಂ. ]

**ಜಲ್ಪಾಕಿ** (ನಾ). ಹರಟೆಮಲ್ಲಿ ; ಮಾತಿನ ಮಲ್ಲಿ. [ ಸಂ. ಜಲ್ಪಾಕೀ ]

**ಜಲ್ಪಿತ** (ಗು). ೧. ಮಾತನಾಡಿದ ; ಹೇಳಿದ. (ನಾ). ೨. ಮಾತು ; ಹರಟೆ : ಪರಿಹಾಸ ಜಲ್ಪಿತಂಗಳಂ ಕೇಳುತ್ತಂ ಪೋಗಲ್ (ಕಾದಂಪೂ. ೦೦೦೦). [ ಸಂ. ]

**ಜಲ್ಮ** 'ಜನುಮ' ನೋ.

**ಜಲ್ಮಾಂತ** (ನಾ). = ಜನ್ಮಾಂತರ: ಬಲ್ಮೆಯಿಂ ತನುವ ದಂಡಿಸಲು ಜಲ್ಮಾಂತದ ಬಂದ ದುರಿತ ಜೀವನ ಬಿಟ್ಟು . . . ಪೋದವುದೆ (ರಾಮವಿ. ೨೦-೦೦೮). [ <ಸಂ. ಜನ್ಮಾಂತ ]

**ಜಲ್ಲ$_1$** 'ಜಲ್ಲೆ$_1$' ನೋ.

**ಜಲ್ಲ$_2$** (ನಾ). ದೇಹದ ಕೊಳೆ ; ಒಣಗಿ ಮೈಗೆ ಅಂಟಿದ ಬೆವರು. 'ಜಲ್ಲ ಮಲ' ಪರಾ. [ <ಪ್ರಾ. ಜಲ್ಲ ]

**ಜಲ್ಲ$_3$** (ನಾ). ಒಂದು ಬಗೆಯ ತೆರಿಗೆ : ಅಲಂದೆಯ ಸ್ವಯಂಭು ಸೋಮೇಶ್ವರ ದೇವರ್ಗಾಳ್ವ ೧೨ರಡೂಗ್ಗಳಾ ಜಲ್ಲಂ ಕಳ್ಳವಳಿಕ ಸಾದಂ ಬಣ್ಣಿಗೆಯನೆ ಪರಿಹಾರಂ ಮಾಡಿ ಬಿಟ್ಟಂ· (ಎಇ. XXVIII, ೫-೩೯ ; 1082)· [ ? ]

**ಜಲ್ಲಡಿ** 'ಜಲ್ಲಡೆ' ನೋ.

**ಜಲ್ಲಡೆ, ಜರಡಿ, ಜರಡೆ$_1$, ಜಲಡಿ, ಜಲಡೆ, ಜಲ್ಲಡಿ, ಝಲ್ಲಡಿ** (ನಾ). ಒನಲಿ ; ಒಂದರಿ ; ಚಾಳನಿ ; ಸಾರಣಿ : (+). **ಜರಡಿ :** ಜರಡಿಯಲ್ಲಿ ಹಿಂಡಿ ಗಾಳಿಸಿ ಕಾಳಿನ ಹಿಟ್ಟನ್ನು ಅದರೊಡನೆ ಸೇರಿಸಿ ಕುದಿಸಬೇಕು (ಅಡುಸಾ. ೧೦೬) ; ಕಾಲನ ಜರಡಿಯಲ್ಲಿ ತೂರಿಹೋದದ್ದೆಷ್ಟೊ (ನಂಜುಂಡ. ೦೬). **ಜರಡೆ$_1$ :** (+). **ಜಲಡಿ :** 'ಜಲಡಿನಲ್ಲಿ' ಪರಾ. **ಜಲಡೆ :** (+). **ಜಲ್ಲಡಿ :** "ಚಾಲನೀ, ತಿತಉಃ-೨ ಜಲ್ಲಡಿ . . . ವಂದರಿ" (ಸಿದ್ಧಾಂತಿ. ೨೯೧); ಹಿಡಿಗೆ ಜಲ್ಲಡಿ ಪಂಚಪಾತ್ರ (ಸಿದ್ಧಕಾ. ೦೩-೯೯). **ಝಲ್ಲಡಿ:** ಝಲ್ಲಡಿಯ ನೆಳಲಂತೆ ಭವಸುಖ ತಲ್ಲಣಗೊಳಿಸುವುದು ನಿಶ್ಚಯವಲ್ಲ (ಹಸಾರ. ೨೨-೨೬).

**ಜರಡಿಯಾಡು** = ಕಾಳು ಅಥವಾ ಹಿಟ್ಟನ್ನು ಜಲ್ಲಡಿಯಲ್ಲಿ ಹಾಕಿ ಆಡಿಸು,-ಶೋಧಿಸು : ರಾಗಿ ಹಿಟ್ಟನ್ನು ಜರಡಿಯಾಡಿದ್ದೀಯಾ ? (ರೂಢಿ). **ಜರಡಿಹಿಡಿ** = ಜರಡಿಯಾಡು : ಹಿಟ್ಟು ಜರಡಿ ಹಿಡಿ (ರೂಢಿ). [ ದೇ.೩ ತಮಿ. ಚಲ್ಲಟ್ಟೈ ; ಮಲ, ಚಲ್ಲಡ ; ತೆಲು. ಜೆಲ್ಲೆಡ ]

**ಜಲ್ಲಣ** (ನಾ). ಏಟು ; ಹೊಡೆತ (?) : ಪಲ್ಲಣಿಯ ಬೆಲ್ಲಂಗೋಲ್ವಿಲ್ಲನ ವಲ್ಲಿಗೆಸರಲ ಜಲ್ಲಣಗೆ ತಲ್ಲಣಂಗೊಂಡು (ರಾಮಾಶ್ವ. ೬೩-೬) ; "ಒಂದು ಅನುಕರಣಧ್ವನಿ" (ರಾಮಾಶ್ವ. ಕೋಶ). [ ? ]

**ಜಲ್ಲನೆ** (ಅ). ಇದ್ದಕ್ಕಿದ್ದಂತೆ ; ಥಟ್ಟನೆ ; ಬೇಗನೆ : ಜಲ್ಲನೆ[ಪಾಠಾಂ ಛಲ್ಲನೆ] ತುಂಬಿಗಳ್ ಕೆದಱೆ ಬಂದುವು ಬಿಂಕದಿನಂಕದಾನೆಗಳ್ (ಕಬ್ಬಿಗಕಾ. ೨೦೩) ; ನೆರೆದ ಜನಂ ಕಲ್ಲೊಳಿಟ್ಟ ಕವಡಿಕೆಯ ರಾಶಿಯಂತೆ ಜ[ಪಾಠಾಂ. ಝ]ಲ್ಲನೆ ಕೆದಱೆ (ರಾಜಶೇ. ೬-೦೦ ವ) ; ಮೈಯೆಲ್ಲ ಜಲ್ಲನೇ ನವಿರೆದ್ದು ನಿಂತಿತ್ತು (ಕಿಪ್ರಪು. ೪-೩).

**ಜಲ್ಲಜಲ್ಲನೆ** (ದ್ವಿರುಕ್ತಿ) : ಕಲ್ಲವ್ವ ಮಾತಾಯಿ ಮೆಲ್ಲವ್ವ ರಾಗಿಯ ಜಲ್ಲಜಲ್ಲನೆ ಉದುರವ್ವ (ನಾಪದ. ೬೪). [ ಜಲ್ + -ಅನೆ$_1$ ]

**ಜಲ್ಲಮಲ** (ನಾ). = ಜಲ್ಲ$_2$ : ಉಲ್ಲಾಘತೆಯಿಂ ರೋಗಿಗಳೆಲ್ಲಂ ತಳೆವಲ್ಲಿ ಗೌಷಧಂ ಸ್ವತನುಭೃತಂ ಜಲ್ಲಮಲವಾದುದೆನೆ ಮುನಿವಲ್ಲಭನಾ ಸಕಳ ಸತ್ತ್ವ ಹಿತಕರನಾದಂ (ಚಂದ್ರಪು. ೦೪-೩೬) : ತನುವಿನೊಳಾದ ಜಲ್ಲಮಲಮಾಭರಣಂ ಪುಲಿಯಿರ್ಪುದೊಂದು ಕಾನನದ ಗುಹಾಂತರಂ ಮನೆ (ಜೀವಸಂ. ೫೦-೨೨). [ ಜಲ್ಲ$_2$ + ಮಲ$_3$ ]

**ಜಲ್ಲರಿ$_1$, ಜಲ್ಲಳಿ, ಜಲ್ಲಱಿ, ಝಲ್ಲಳಿ, ಝಲ್ಲಱಿ** (ನಾ). ೧. ಕಂಚ್ಚು ; ಗೊಂಡೆ: "ಜಲ್ಲರಿ[ಪಾಠಾಂ. ಳಿ,ಱಿ]ಯೆಂದು ಝಲ್ಲರಿ" (ಕಶಸಾ. ೨೮-೫೯೩) : ದೃಗ್ವರ ಚಪಲಗತಿಯಶ್ವಗಳ ನಿಱಿಗುರಳ ಜಲ್ಲರಿಯ ಭರದ ವೇಣೀಧ್ವಜದ (ಜೀವಂಧ. ೮-೪೦) ; ಮುತ್ತಿನ ಜಲ್ಲರಿಯಿಂ ಪುಷ್ಪಪರಾಗದ ಪೊಸಂತಿಲಿಂ (ರಾಮಾಶ್ವ. ೫೪-೨೨). ೨. ಒಂದು ಬಗೆಯ ಚರ್ಮವಾದ್ಯ ; ಹುಡುಕ್ಕ ವಾದ್ಯ ; ಬುಡಂಬುಡುಕೆ : ಅಡಿ ವೇತ್ರಾಸನದಂತಿರೆ ನಡು ಜ[ಪಾಠಾಂ. ಝ]ಲ್ಲರಿಯಂತೆ ಮೇಗು ಮುರಜ(ವ)ದ ತೆಱದಿಂದೆಡೆವಿಡದೆ ಮೂಱು

ಲೋಕವುಮೊಡನನಿಲತ್ರಯದೆ ಸುತ್ತಿ ನಿಂದತ್ತೆತ್ತಂ (ಜೀವಸಂ. ೯೪-೧).
**ಜಲ್ಲಳಿ :** ೨. "ಜಲ್ಲಳಿ–ಝಲ್ಲರಿ=ವಾದ್ಯ ವಿಶೇಷ" (ತದ್ಭಕೋ. ೧೪).
△**ಜಲ್ಲಟಿ** : ೧. "ಜಲ್ಲಟಿಯೆನೆ ಜಲ್ಲರಿಯಕ್ಕು" (ಕವಿಕಂ. ೨೪೦); ಝಲ್ಲರಿ. ಜಲ್ಲಟಿ ; ಮರಿಚಂ, ಮೆಟಸು (ಶಬ್ದಾನು. ೧೪೦ ವ್ಯಾಖ್ಯಾ). **ಝಲ್ಲಳಿ :** ೧. ಚಾಮರದ ಸುತ್ತು ಝಲ್ಲಳ[ಪಾಠಾಂ. ರಿ]ಯ ನೆತ್ತಿಯ ಬೆಳ್ಗಟಿಯ . . . ತರಂಗೊಂಡ ತುರಗಸಂಘಾತದಿಂ (ರಾಜಶೇ. ೬-೧೧ ವ). ೨. "ಝಲ್ಲಳಿ (ಜಲ್ಲಳಿ)–ಝಲ್ಲರೀ=ಒಂದು ವಾದ್ಯ" (ತದ್ಭಕೋ. ೧೬); ಪಲ್ಲವ ಸತ್ತಿಗೆ ಸಂಕಂ ಝಲ್ಲಳಿ ಜಯಮಂಗಲಂಗಳಂ ಚೋಳ ಮಾಹೀವಲ್ಲಭ ನಿತ್ತಡೆ (ಎಇ. VI, ೨೦೬-೧೦ : 1057) ; ವಿರುತ್ತಿರುವ ಬೊಂಬಾಳಿಯ ಝಲ್ಲಳಿಯ ಸಬಳಗೆಜ್ಜೆಗಳ, ತಳಾರಗೋಲ ಗಗ್ಗರಿಗಳ, ಬಾಜಣೆ(ಮಂತ್ರಶ. ೩೦-೫). △**ಝಲ್ಲಟಿ** : ೨. ರೇಫಕ್ಕೆ–ಕೂರಂ–ಕೂಟ್ ; ಝಲ್ಲರಿ–ಝಲ್ಲಟಿ (ಶಮದ. ೩೧ ಪ್ರಯೋ) : ಜಯಘಂಟೆ ಝಲ್ಲರಿಯದಾದೇಶ ವಾಳಿ ಝಲ್ಲಟಿಯಾದುದು (ಸಂಜೀವ. ೨೦).

[ <ಸಂ. ಝಲ್ಲರೀ./ತಮಿ. ಚಲ್ಲರಿ ]

**ಜಲ್ಲರಿ$_2$** (ನಾ). ಬಿದಿರಿನ ಬುಟ್ಟಿ ; ಜಲ್ಲಿ : ಸಾವಿರಾರು ಹೋಳಿಗೆಗಳಿಗೆ ಸಾಲುವ ಜಲ್ಲರಿ ಮಾರುತಿಯ ಸಮೀಪದಲ್ಲಿಯೇ ವಿರಾಜಮಾನವಾಗಿತ್ತು (ಹಬ್ಬಬ. ೫). [ <ಜಲ್ಲಿ$_3$ ]

**ಜಲ್ಲಳಿ** 'ಜಲ್ಲರಿ$_1$' ನೋ.

△**ಜಲ್ಲಟಿ** 'ಜಲ್ಲರಿ$_1$' ನೋ.

**ಜಲ್ಲಿ$_1$** 'ಚಲ್ಲಿ$_1$' ನೋ.

**ಜಲ್ಲಿ$_2$, ಜೆಲ್ಲಿ$_1$, ಝಲ್ಲಿ$_1$** (ನಾ). ೧. ಕುಂಚು ; ಗೊಂಡೆ ; ಚೌರಿ : ಪುಷ್ಪಸರದ ಜಲ್ಲಿಯುಂ[ಪಾಠಾಂ. ಕನ್ನಡಿ]ಕಮಳದ ಎಲೆಯಾಲವಟ್ಟ(ಹಕಶಾ. ೩-೪೫); ಹಳದಿಯ ಕೋಳ ಪಾವಡೆ ಹೀಲಿಯ ಜಲ್ಲಿ ಬೆಳಗಿಡುವಾಭರಣಗಳ (ಕಂನವಿ. ೦೨-೩೬) : ಸಾಲಿಡಿದು ಕೊಡರ್ಚಿದ ಜ[ಪಾಠಾಂ. ಝು] ಲ್ಲಿಗಳ ಕೀಲಿಸಿದ ಪೊನ್ನ ಬಂಗಾರಿಗಳ (ರಾಜಶೇ. ೮-೫ ವ). ೨. ಆನೆ, ಕುದುರೆ ಮೊದಲಾದುವುಗಳಿಗೆ ತೊಡಿಸುವ ಒಂದು ಆಭರಣ (?): ಕಲಾಬತ್ತಿನ ಕೆಲಸದ ಆನೆ ಜೀನು ಪ್ಯಾರಾರ ಜಲ್ಲಿ (ಎಕ. XIV, ನಂಜನ. ೨೯೨-ಪು. ೦೪೨ ; 1847). **ಜೆಲ್ಲಿ$_1$** : ೧. ಬೆಳುಮುಗಿಲೆದ್ದಂತೆ ಗಳೆಯ ತುದಿಯ ಜೆಲ್ಲಿ ಥಳಥಳಿಸುವ ದೇವನಡಿಯ ಬಳಸಿ ಕಾವೇರಿ ಕಾಲುವೆಯುಂ ಪತಾಕೆಯುಂ ಪೊಳೆವ ಸಾಲೊಡ್ಡು ಮೆರೆದವು (ಸೌಂದಕಾ. ೫-೩೩). **ಝಲ್ಲಿ$_1$**: ೧. ವರ್ಗ ಚತುರ್ಥಾಕ್ಷರಂಗಳ್ಗೆ–ಘಳಿಯಂ . . . ಝಾಳಿಸಿತು, ಝಳಪಿಸಿತು, ಝಲ್ಲಿ (ಶಮದ. ೧೫ ಪ್ರಯೋ) ; ಕನ್ನಡಿ ತೋರಣಾವಳಿ ವಿಳಿರ್ವ ಝಲ್ಲಿ ಪತಾಕೆ ಝಲ್ಲರಿ (ಸನಕು. ೧೨-೫೭); ನೆಗಳ್ದುವಲ್ಲಲ್ಲಿ ನಾನಾ ಪಟ್ಟೆ ಝಲ್ಲಿ ಕನ್ನಡಿ ಕಳಸದಿಂ ನಿಳಯ ನಿಳಯದ ಮುಂದೆ ಬಲ್ಗುರುಜುಗಳ್ (ಜಲಪು. ೫-೨). ೨. ತುರಗ ದಂಡಕೆ ಬಲು ಝಲ್ಲಿಯ ಕಟ್ಟಿದ ಬಿರುದುಳ್ಳ ರಾವುತ ನಿಮ್ಮ ಹಿರಿಯಯ್ಯ (ಕುರಾಸಾಂ. ೧-೭೦) ; ಇಕ್ಕಿದ ಪಕ್ಖರಕ್ಕೆ ನಿಡುಝಲ್ಲಿ ತೊಡಂಕುವ ತೋರ ಗೊಂಡೆಯಂ (ಚಕವಿ. ೨-೯೬). ೩. ಚಾಮರ : ಫೇನಪೂರ್ಣ ಘಟೋದಕದಲಿ ನವೀನ ಝಲ್ಲಿಗಳಿಕ್ಕಿ ತೋದವಧಾನದಲಿ ಬೀಸಲ್ಕೆ ಜಲಕಣ ಕೆದರಿಲಾ ಸಭೆಗೆ (ಸನಕು. ೦೬-೩೧).

ಜಲ್ಲಿಯ ಬಿಲ್ಲು = ಕೊಪ್ಪಿಗೆ ಕುಂಚು ಕಟ್ಟಿದ ಬಿಲ್ಲು : ಜವದಾಡೆ ಜಲ್ಲಿಯ ಬಿಲ್ಲು ಕೈಗತ್ತಿಯ ಬವರಿಗರತಿಹರುಷದಲಿ . . . ಸುವಿಲಾಸದೊಳೊಪ್ಪಿಹರು (ಕಂನವಿ. ೧೧-೦೪೬); ಜಲ್ಲಿಯಬಿಲ್ಲವರು ಸಲ್ಲಿಸುತಲೆಲ್ಲವನು (ಸರ್ವಜ್ಞ. ೧೦೪೮). ಜಲ್ಲಿಯ ಮೃಗ, ಝಲ್ಲಿಯ ಮೃಗ = ಜಲ್ಲಿಮಿಗ : ಗೆಲ್ಲವಟಿಯ ಗತಿಗೋಲಾಡಿ ಬಂದರು ಜಲ್ಲಿಯ ಮೃಗ ಬೆಚ್ಚಿದಂತೆ(ಭರತ. ೨೩-೨೦) ; ಝಲ್ಲಿಯ ಮೃಗಗಳ ಗಲ್ಲಿಸಿ ಹಿಡಿಯುತ್ತ . . . ವಿಪಿನದೊಳು (ಹಮಚ. ೦೬). [ ದೇ. ೩ ತಮಿ. ಚಲ್ಲಿ ; ತೆಲು. ಜಲ್ಲಿ ]

**ಜಲ್ಲಿ$_3$, ಜಲ್ಲೆ$_2$, ಜೆಲ್ಲಿ$_2$** (ನಾ). ಬಿದಿರಿನ ದೊಡ್ಡ ಬುಟ್ಟಿ : ಕನ್ನಡ ರಸಿಕರ ಪಂಕ್ತಿಗೆ ಬಡಿಸಲು ನಮ್ಮನ್ನು ಕರೆದು ಈ ಪಕ್ವಾನ್ನದ ಜಲ್ಲಿಯನ್ನು ಕೈಗಿತ್ತು (ಬಾಣಲೆ. ೧, ನಿವೇದನೆ); ಒಮ್ಮೆ ನಮ್ಮ ಮನೆಯಲ್ಲಿ ಮೂರು ಜಲ್ಲಿ ತುಂಬ ನೇರಲಹಣ್ಣುಗಳನ್ನು ಇಡಲಾಗಿತ್ತು (ಸ್ಮೃತಿಚಿ. ೦೮). **ಜಲ್ಲೆ$_2$**: ಮತ್ತ ವಯ್ಯೂವ್ವರ್ ಬಾಡುಕಾಯ ಮಾಡುವ ಜಲ್ಲೆಗೆರಡು ಸೂಡು ಹೇಜುಂಗೆ ನಾಲ್ಕುಕಾಯ ಕೊಟ್ಟರ್ (ಮುಂಬರಾ. X, ೨೭೦-೭೫: 1229); ಜಲ್ಲೆ ಹಿಡಿದು ಕಣಕಣವನ್ನೂ ತಿರುಗಿ ಹುಲ್ಲು ಹೊಟ್ಟು ಎತ್ತಿ ಬಣವೆ ಹಾಕಿಕೊಂಡಿದ್ದಾನೆ (ಬೆಳುಮ. ೮೬). **ಜೆಲ್ಲಿ$_2$** : "ಬುಟ್ಟಿ, ಪುಟ್ಟಿ, ಜೆಲ್ಲಿ, ಕೆರಸಿ" (ಕಂಸುಹು. ೮೮).

[ ದೇ.೩ ತೆಲು. ಜಲ್ಲ ]

**ಜಲ್ಲಿ$_4$** 'ಜಲ್ಲೆ$_1$' ನೋ.

**ಜಲ್ಲಿ$_5$, ಜೆಲ್ಲಿ$_3$** (ನಾ). ೧. ಚರ್ಮ ಅಥವಾ ಮೂಳೆಯನ್ನು ಬೇಯಿಸಿ ತಯಾರಿಸಿದ ಒಂದುಬಗೆಯ ಪಾಕ: ಕಾಯಿಲೆಬಂದಾಗ . . . ಬೆಲೆಯಾದ ಚರ್ಮ ಮತ್ತು ಎಲುಬುಗಳನ್ನು ಬೇಯಿಸಿ ತಯಾರಿಸಿದ ಜಲ್ಲಿಯನ್ನೋ ಕೊಂಡು ಉಪಯೋಗಿಸುತ್ತಾರೆ (ಪ್ರಪಾಇ. I, ೨೮೮). ೨. ಮೆತ್ತಗಿರುವ, ಪಾರದರ್ಶಕವಾದ ಒಂದು ಬಗೆಯ ಮೀನು; ಲೋಳೆಮೀನು : ಶಂಖ ಅಥವಾ ಎಲುಬುಗಳಿಲ್ಲದ ಜಲ್ಲಿಯಂತಹ ಮೆತ್ತಗಿನ ವಸ್ತುಗಳ ಭೂಮಿ ತಣ್ಣಗಾದ ಕೂಡಲೆ ಹುಟ್ಟಿದ ಜೀವವುಳ್ಳ ಮೊದಲನೆ ಪದಾರ್ಥಗಳೆಂದು ತೋರುತ್ತದೆ (ಮತಂಒ. ೦೪). **ಜೆಲ್ಲಿ$_3$**: ೩.ಹಣ್ಣಿನಿಂದ ತಯಾರಿಸಿದ ಪಾಕ: ಪೇರಳೆ ಜೆಲ್ಲಿ . . . ಜೆಲ್ಲಿಯ ಪಾಕ ಸರಿಯಾಗುವವರೆಗೆ ಕುದಿಸುವುದು (ಆಡುಸೌ. ೦೧೮). [ ←ಇಂ. Jelly ]

**ಜಲ್ಲಿಕಲ್ಲು** (ನಾ). ರಸ್ತೆ ಮೊದಲಾದುವನ್ನು ಗಟ್ಟಿಮಾಡುವುದಕ್ಕಾಗಿ ಹಾಕುವ ಸಣ್ಣ ತುಂಡು ಕಲ್ಲು,–ಕಲ್ಲಿನ ಚೂರು : ಮಾರ್ಗಕ್ಕೆ ಹಾಕಿದ ಜಲ್ಲಿಕಲ್ಲಿನ ಘರ್ಷಣೆ ಅವಳ ಪಾದದಡಿಗೆ ಸಹಿಸದಾಯಿತು (ಶಕ್ತಕೂ. ೬೦); ಜಲ್ಲಿಕಲ್ಲುಹಾಕಿ ದಮ್ಮಸು ಮಾಡಿದ ರಸ್ತೆಯಾದರೂ ಒಂದೊಂದು ಕಡೆ . . . ಒರಟೊರಟಾಗಿತ್ತು (ಸಾಹೇಬ್. ೬೭).

[ ಜಲ್ಲಿ$_1$ (<ಚಲ್ಲಿ$_1$) + ಕಲ್ಲು (<ಕಲ್$_2$) ]

**ಜಲ್ಲಿಕಾಗದ** (ನಾ). ನಾಜೂಕಾದ ವಸ್ತುಗಳನ್ನು ರಕ್ಷಿಸುವುದಕ್ಕಾಗಿ ಉಪಯೋಗಿಸುವ ನವುರಾದ ಕಾಗದ,–ಪೊರೆಯಂತಹ ಕಾಗದ : ಜಲ್ಲಿಕಾಗದದಲ್ಲಿ ಓಲೆಯನ್ನು ಸುತ್ತಿಡು (ರೂಢಿ). [ ಜಲ್ಲಿ$_5$ + ಕಾಗದ ]

**ಜಲ್ಲಿಗಾರೆ** (ನಾ). "ಕಟ್ಟಡದಲ್ಲಿ ಉಪಯೋಗಿಸುವ ಜಲ್ಲಿ ಕಲ್ಲು, ಸಿಮೆಂಟು, ಮೊ.ಗಳ ಸಂಮಿಶ್ರಣ; ಜಲ್ಲಿಗಾರೆ" (Concrete. ಇಂಕವಿ).

[ ಜಲ್ಲಿ$_1$ (<ಚಲ್ಲಿ$_1$) + ಗಾರೆ$_1$ ]

**ಜಲ್ಲಿದುಂಬಿ** (ನಾ). ಚಿಕ್ಕದುಂಬಿ; ಮರಿದುಂಬಿ; ಪರಮೆಯಮರಿ : ಅಲ್ಲಿ ಗಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆ ಮಲ್ಲಿಗೆ ಹೊಗರೇಟಿದುವು ಜಲ್ಲಿದುಂಬಿಗಳ ಝುಂಕಾರಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಪ್ರೋಹತ. ೭-೧೧).

[ ಜಲ್ಲಿ$_1$ (<ಚಲ್ಲಿ$_1$) + ತುಂಬಿ$_1$ ]

**ಜಲ್ಲಿಪಟ್ಟೆ, ಝಲ್ಲಿಪಟ್ಟೆ** (ನಾ). ಅಂಚುಗಳಲ್ಲಿ ಕುಚ್ಚುಗಳುಳ್ಳ ಮೇಲ್ಕಟ್ಟಿನ ರೇಷ್ಮೆಬಟ್ಟೆ : ಷಡಂಗಂಗಳೆಂಬ ಮೊಳೆಗಳಂ ಬಲಿದು ಸಪ್ತಧಾತುವೆಂಬ ಜ[ಪಾಠಾಂ.ಝು]ಲ್ಲಿಪಟ್ಟೆ [ಪಾಠಾಂ.ಟ್ಟೆ]ಯನಲಂಕರಿಸಿ (ಅವಚಂ.೨೩೧-೦೦೫೭): ನೀಲದ ರನ್ನದ ಸುತ್ತ ಮೆಟಿವ ಲಂಬಣಗಳ ಮೊತ್ತಕಟ್ಟಿದ ಜಲ್ಲಿಪಟ್ಟೆ ರಾಜಿಸಲ್ (ಕುರಾಸಾಂ. ೨೦-೧೦); ಮೇಲುವರಿವ ಜಲ್ಲಿಪಟ್ಟೆಯ ಮೇಲ್ಕಟ್ಟು ಸಾಲುಗೊಂಡೆಸೆವ ಪೂಮಾಲೆ (ಕಂನವಿ. ೨೨-೭೨). **ಝಲ್ಲಿಪಟ್ಟೆ**: ನೆಲನಗಲದೊಳು ಝಲ್ಲಿಪಟ್ಟೆಯ[ಪಾಠಾಂ. ದಲಿ] ಕಟ್ಟಿ ಕೇರಿಯನಳವಡಿಸಿದರು (ಕುವ್ಯಾವಿ. ೦೦-೪೪) : ಸಿಂಗರಿಸಿದ ಝಲ್ಲಿಪಟ್ಟೆ ಪೂಮಾಲೆ ಬೆಡಂಗಾದ ಮಂಟಪದಲ್ಲಿ . . . ವಸಂತರಾಜಂಗೆಸೆಯಾದನಾ ಸೊಬಗಾ (ಭರತ. ೩-೨೮).

[ ಜಲ್ಲಿ$_2$ + ಪಟ್ಟೆ$_2$ ]

ಜಲ್ಲಿಬೇರು (ನಾ). ಕೋಮಲವಾದ ಎಳೆಯ ಬೇರು, - ಚಿಕ್ಕಬೇರು : ನೀರು ಹೆಚ್ಚಾದರೆ ಜಲ್ಲಿಬೇರು ಕೊಳೆತುಹೋಗುತ್ತವೆ (ಕರಜ. ೬). [ ದೇ.॥ ತಮಿ. ಚಲ್ಲಿವೇರ್ ; ತೆಲು. ಜಲ್ಲಿವೇರು ]

ಜಲ್ಲಿಮಿಗ, ಝಲ್ಲಿಮಿಗ (ನಾ). ಬಾಲದಲ್ಲಿ ಕುಚ್ಚುಳ್ಳ ಒಂದು ಬಗೆಯ ಪ್ರಾಣಿ ; ಚಮರೀಮೃಗ : ಪೊದಱಿದ್ದ ಜಲ್ಲಿಮಿಗ ಕಾಳ್ಕೋಣ . . . ಮೆಱೆದವದ್ರಿಯಲ್ಲಿ (ಪ್ರಭ್ವಾಹ. ೪-೧೩); ಎಳ್ತರದ ಕುರುಳ್ಗಳಿಂ ಪರೆವ ಜಲ್ಲಿಮಿಗಕ್ಕೆ ವರಾಹಯೂಥಮಳ್ತರೆ ಮಣಿಕಾಲ್ಗಳಿಂ ಮಡಿದು ತೋಱಿದ ರೊಯ್ಯನೆ ಸನ್ನೆವೇಂಟೆಯೊಳ್ (ಶಬರ. ೩-೪೭). ಝಲ್ಲಿಮಿಗ : ಮರಿಹುಲ್ಲೆ ಝಲ್ಲಿಮಿಗ ಮುಸು ತೋಳಗಳರಲೊಪ್ಪಿತಾ ಕಾಡು (ಶ್ರೀಪಾಲ. ೭-೦೩). [ ಜಲ್ಲಿ₃ + ಮಿಗ ]

ಜಲ್ಲಿಮೃಗ, ಝಲ್ಲಿಮೃಗ (ನಾ). = ಜಲ್ಲಿಮಿಗ : ಜಲ್ಲಿಮೃಗ ವೀಥಿಯಂ ಕಸ್ತೂರಿಯ ವೀಣೆಯಂ ಚೆಲ್ಲಿರ್ದ ಸಾಮಜದ ಮಸ್ತಕದ ಮುತ್ತಿನಿಂ (ಲಿಂಗಪು. ೬-೦೪). ಝಲ್ಲಿಮೃಗ: ಝಲ್ಲಿಮೃಗ ಜವ್ವಾಜಿಮೃಗವು . . . ಪಕ್ಷಿಗಳು ಗುಂಪುಗುಂಪಾಗಿ ಯಿನ್ನು ಲಕ್ಷ ಲಕ್ಷವು ಯಿಹವು (ಯನಳ. ೭೦) ; ಕಪಿಲೆ ಗೂಳಿಗಳೆರಳೆಯು ಹರಿಣ ಸಾರಂಗ ಝಲ್ಲಿಮೃಗವೂ(ನವಮೋ. ೮-೦೦). [ ಜಲ್ಲಿ₃ + ಮೃಗ ]

ಜಲ್ಲಿಸು₁ (ಕ್ರಿ). ೧. ಜಲ್ಲಡಿಯಲ್ಲಿ ಹಾಕಿ ಶೋಧಿಸು ; ಜರಡಿ ಹಿಡಿ ; ಒಂದರಿಯಾಡು : ಹಿಟ್ಟು ಜಲ್ಲಿಸುವ ಸಾಣಗೆಯಲ್ಲಿ ಹಾಕಿ ಜಲ್ಲಿಸಿದರೆ (ಕೃಷಿಪ್ರ. ೬೯). ೨. (ಅಲಂ) ಕೊಲ್ಲು; ಸಂಹರಿಸು : ಕಟ್ಟದಿರ ಪುಲಿಯಂ ತೊಟ್ಟನೆ ಕಂಡು ಭೋಂಕನೆಳ್ಕು . . . ಪಾಯ್ದು ಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟಟ್ಟು . . . ಪಲವೋತ್ಕರದಿಂ ಪೊಱಮಟ್ಟ ಕಾಳರಕ್ಕಸರಂತಿರ್ದ ಕಾಳ್ಕೋಣಂಗಳಿಂ (ರಿರಿಕ. ೦-೦೨೮ ವ). [ ←ತೆಲು. ಜಲ್ಲಿಂಚು ]

ಜಲ್ಲಿಸು₂ (ಕ್ರಿ). ಹೊಳೆ ; ಪ್ರಕಾಶಿಸು : ಚಿತ್ರ ಸಲ್ಲಲಿತಾತ್ಮಭಾವಕನು ಜಲ್ಲಿಸುತಿದ್ದುದು ತನುಕಾಂತಿಯದಱಿಂದಲಲ್ಲವೆ ಧ್ಯಾನಸಾಮರ್ಥ್ಯ (ಭರತ. ೩೦-೬೩). [ <ಜಲ₁ + - ಇಸು₃ ]

ಜಲ್ಲಿಱ್ (ಕ್ರಿ). ಜಲ್ಲೆಂದು ಸೂಸು, - ಹರಡು, - ಚೆಲ್ಲು : ಮತ್ತಮತಂಗ ಮದಂಗದವೊಲೊಜ್ಜರಿಸುತ್ತ ನೆಲಕೆ ಜ[ಪಾಠಾಂ. ಜ]ಲ್ಲಿಱಿದುಗುತಹ ಬಿಸುನೆತ್ತರ ಪೊನಲೆಸೆದುದು (ಜಯುಕಾ.೭-೨೨); ಉಗುಳ್ವಾ ಸೀರ್ಪನಿ ಸಿರಿಮೊಗದಿಂ ಸೂಸಿತು ಮೃಗಲಕ್ಷ್ಮೀದರದಿಂ ಜನಿಯಿಸಿ ಜಲ್ಲಿಱಿವೆಳಗದಿರ್ದೊಂಗಲಿ ವೆಂಬಂತೆ (ಜಯುಕಾ. ೦೦-೨೨). [ ಜಲ್ + ಇಱ್₁ ]

ಜಲ್ಲು₁ (ಕ್ರಿ). ಕುಟ್ಟು ; ಪುಡಿಮಾಡು (?) : ಕರಿಯ ಎಳ್ಳು ಹುಣಸೆ ಅಂಕೋಲೆ ಅವರೆ ಇವಱ ಜಲ್ಲಿ ಅಂಬಿಲದಲ್ಲಿ ಅರೆದು ಕುಡಿಸಿ ಶಾಖವ ಮಾಡುವುದು (ಅಶ್ವಚಿ. ೦೮೦-೪). [ ? ]

ಜಲ್ಲು₂ 'ಜಲ್ಲೆ₁' ನೋ.

ಜಲ್ಲು₃ 'ಜೊಲ್ಲು' ನೋ.

ಜಲ್ಲು₄, ಝಲ್ಲು₁ (ನಾ). ೧. ಸಂಕೋಚ : ನಿನ್ನಿಷ್ಟವುಂ ನಿಲ್ಲದಿತ್ತಪೆನು ಕರಿಮುಖನಾಣೆ ನಿನ್ನೆದೆಯ ಜಲ್ಲಳಿದು ಪೋಲಿಯೆಂದು ಕಲ್ಲಣಾಗಿ ನುಡಿಯಲ್ಕೆ (ಪ್ರಾಭಲಾ. ೬-೩೪) ; ಆ ಸಪ್ಪಳದ ಗೊಂದಲದಲ್ಲಿ ಜಲ್ಲು ಬಿಟ್ಟು ಕೆಮ್ಮಲು ಅವಕಾಶ ಸಿಕ್ಕಿತೆಂದು . . . ಸಡಿಲು ಬಿಟ್ಟು ಜೋರಾಗಿ ಕೆಮ್ಮುತ್ತಾನೆ (ಜೀವಾಪಾ. ೦೫). ೨. ಚಿಂತೆ : ಮಗನ ಜಲ್ಲು ಹತ್ತಿ ಇಷ್ಟು ಲಗೂ ತೀರಿಕೊಂಡ ಸಾವುಕಾರ (ನೀನಮು. ೦೨೭). ಝಲ್ಲು₂ : ೩. ಗಾಬರಿ ; ಭಯ : ಖುಲ್ಲ ಮಾನುಜಬರಿ ಝಲ್ಲಿನೊಳೇನ್ ಫಲ (ರತ್ನಕಾ. ೨೩). 'ಝಲ್ಲುಗೊಳ್' ಪರಾ. [ ? ]

ಜಲ್ಲುಗೋಡಿ (ನಾ). "ಕೆರೆ ತುಂಬಿ ನೀರು ಕೋಡಿಯ ಮೇಲಿಂದ ಕೆಳಕ್ಕೆ ತೆಳ್ಳಗೆ ಬೀಳುವುದು" (ನಮ್ಮೂರು. ಟಿಪ್ಪಣಿ) : ಕೆರೆ ತುಂಬಿ ಜಲ್ಲು ಗೋಡಿ ಬಿದ್ದಿತ್ತು (ನಮ್ಮೂರು. ೦೯೦). [ <ಜಲುಂಗು + ಕೋಡಿ₁ ]

ಜಲ್ಲುಪಾಗು (ನಾ). ಒಂದು ಬಗೆಯ ಪಾಗು, - ರುಮಾಲು : ತುಂಡು ಚೊಗೆಯಂ ತೊಟ್ಟು ಜಲ್ಲುಪಾಗಂತಿಂತು ಸುತ್ತಿಕೊಂಡು (ಅರ್ಜುಪಿ. ೩೦-೩೭). [ ಜಲ್ಲು ? + ಪಾಗು₂ ]

ಜಲ್ಲೆ₁, ಜಲ್ಲ₁, ಜಲ್ಲಿ₄, ಜಲ್ಲು₂ (ನಾ). ೧. ಗಳೆ; ಕೋಲು : ಕಬ್ಬಿನ ಜಲ್ಲೆಯು ಸ್ವಲ್ಪ ಹೆಚ್ಚು ಕಡಿಮೆ ಮೊಳ ಅಜಮಾಸು ಬೆಳೆಯುವದು (ಕೃಷಿಪ್ರ. ೦೮೨); ಕಬ್ಬಿನ ಜಲ್ಲೆಯನ್ನು ತುಂಡು ತುಂಡಾಗಿ ಕತ್ತರಿಸಿ (ವೃಪಮು. ೪೮) ; ಒಂದು ಕಬ್ಬಿನ ಜಲ್ಲೆ ಹಿಡಿದುಕೊಂಡು ಹೋದರೆ ಯಜಮಾನನಿಗೆ ಬಲು ಸಂತೋಷ (ಹುಟ್ಟಿಹ.೨೯). ೨. ದೋಣಿ ಮೊದಲಾದುವನ್ನು ನಡಸುವಾಗ ಹುಟ್ಟು ಹಾಕುವ ಕೋಲು ; ಹುಟ್ಟು : ಜಲ್ಲೆಯ ಹಿಡಿದು ಎಲ್ಲೆಯ ಹಾಯಿಸುವನಂತೆ ಇವರೆಲ್ಲರು ಬಲ್ಲರೆ (ಮೋಕ್ಷಮಾ. ೪೦-೦೬೮) ; ನಾನು ಜಲ್ಲೆ ಊರಿ ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ (ಮೃಂಮೂ. ೩೩) ; ಜಲ್ಲೆಯನ್ನು ಹಿಡಿದು . . . ಬಾಲಿಕೆಯೊಬ್ಬಳು ಹರಿಗೋಲನ್ನು ನಡೆಸುತ್ತಿದ್ದಳು (ಶ್ರೀರಾಮ. ೨). ಜಲ್ಲ₁: ೨. ದೂಮ ಪೂಜಾರಿ ಜಲ್ಲ ಬೇಗ ಬೇಗನೇ ಒತ್ತುವುದಕ್ಕೆ ಆರಂಭಿಸಿದ (ಕಳಕು. ೯೯). ಜಲ್ಲಿ₄ : ೧. ಜಡಿದ ಕಬ್ಬಿನ ಜಲ್ಲಿಗಳ ಕನ್ನಡಿ ಕಳಸ ಪೊಂಬಾಳೆ ಪಲ್ಲವವಿಡಿದು ಸಿಂಗರವಾಗಿ (ಶಂಕರಾ. ೩-೨೫). ಜಲ್ಲು₂ : ೨. ಜಲ್ಲು ತಗಲದಾಳವೆಲ್ಲಿ ಓಡಪೋದಿತು (ಗೀಪಿಂ. ೭೮-೮೩) ; ಒಡಕು ದೋಣಿಗೆ ಗಿಡ್ಡ ಜಲ್ಲು (ಗಾದೆ). [ ದೇ.॥ ಮಲ. ಚಲ್ಲ ; ತುಳು. ಜಲ್ಲ, ಜಳ್ಳ ; ಕೊಡ. ಜಲ್ಲೆ ]

ಜಲ್ಲೆ₂ 'ಜಲ್ಲಿ₃' ನೋ.

ಜಲ್ಲೆಗೋಡು (ನಾ). (ಜಲ್ಲೆಯಂತೆ) ಉದ್ದವಾದ ಕೋಡು₁, - ಕೊಂಬು : ಜಲ್ಲೆಗೋಡಿನ ಬಸವ ಇಲ್ಲೇಕೆ ನೀವು ನೆಲೆಸಿದಿರಿ (ಜಗೀಕ. ೯೧). [ ಜಲ್ಲೆ₁ + ಕೋಡು₂ ]

ಜಲ್ಲೆನ್, ಜಲ್ಲೆನ್ನು (ಕ್ರಿ). ಭಯದಿಂದ ಹೃದಯದ ಬಡಿತ ಹೆಚ್ಚಾಗು : ಎದೆ ಹೊಡೆದುಕೊಳ್ಳು ; ಗಾಬರಿಯಾಗು : ಭ್ರುಮಂಗವಿದೆದೆಗಳುಱೆ ಜ[ಪಾಠಾಂ. ಝ]ಲ್ಲೆನುತ್ತೇಗುವೆನೆನುತ್ತಂ ತನುಗಳಸುಗಳು ಧಿಗಿಲು ಧಿಗಿಲೆನುತ (ಬಸಪು. ೯-೩) ; ಇಕ್ಕೆಲದೊಳಿರ್ದ ಮುಗ್ಧೆಯರ್ ಜಲ್ಲೆನುತ ಕೆಟ್ಟೋಡೆ (ಜೀಮು. ೨-೩೨). ಜಲ್ಲೆನ್ನು : ಅಲ್ಲದವರ ತಡವಿ ಜಲ್ಲೆಂದು ನನ ಮನವ ಕಲ್ಲಾಗ ಕಡ್ಡಿ ಬಡಿದ್ಹಾಂಗ (ಕನ್ನಜಾ. ೦೦೦).

ಜಲ್ಲನೆ = ಒಮ್ಮಿಂದೊಮ್ಮೆಲೆ ; ಇದ್ದಕ್ಕಿದಂತೆ ; ರಭಸವಾಗಿ : ಅದಟ ಕರ್ಣಾಟಮರದ ಝಲ್ಲಿಯಂತೆ ಜಲ್ಲನೊಳ್ಕಿ ಧಾರೆಗೆದಱೆ ಪೇರ್ಕೈಸಿ ಸೂಸುವುಭಯಕಟದ ಸೊರ್ಕು ಕದಡಿನ ತೆರ್ಕೆಗಡಲ್ಗಳೊಕ್ಕೈಸಿ (ಅನಂಪು. ೦೩-೨೦ ವ). [ ಜಲ್ + ಎನ್₁ ]

ಜಲ್ಲೆನ್ನು 'ಜಲ್ಲೆನ್' ನೋ.

ಜಲ್ಲೆವಲೆ (ನಾ). ಒಂದು ಬಗೆಯ ಬಲೆ : ಎರಳೆವಲೆ ಹಂದಿವಲೆ . . . ಮರೆವಲೆಗಳಾ ಗೂಡುವಲೆ ಜಲ್ಲೆವಲೆ ಕೊಲ್ಲಿವಲೆ (ಸಾಳ್ವಭಾ. ೩-೦೯). 'ಕೋಲ್ವಲೆ' ಪರಾ. [ ಜಲ್ಲೆ₁ + ಬಲೆ₁ ]

ಜಲ್ಲೊಡೆ(ಕ್ರಿ). ಎದೆಹಾರು; ಗಾಬರಿಗೊಳ್ಳು; ಹೌಹಾರು; "ಜಲ್ಲೊಡೆದು =ಎದೆಯೊಡೆದು ; ಗಾಬರಿಯಾಗಿ; ಹೌಹಾರಿ" (ಜಾನಕೋ. ೩೯). [ಜಲ್ಲು₄ + ಒಡೆ₁ ]

ಜವ₁ 'ಜವು' ನೋ.

ಜವ₂ (ನಾ). ೧. ವೇಗ; ರಭಸ: "ರಂಹಃ, ತರಃ . . . ಜವಃ, ವಾಜಃ—ಈ ೮ ಕುದಿರೆಯ ವೇಗಂ" (ಹಲಾಯು. ೭೩-೨೮೯); ಮಸಕಂ ಕಾಯ್ಪು ಜವಂ ಜವಂಗಮಿದಿರೊಳ್ ನೋಡಲ್ಕಗುರ್ವಾಗೆ (ಶಂಪಥಾ. ೮-೩೭); ಬೋಧಿಸವೆ ಪೆಱೆವು ಜಿನಗೃಹಕ್ಕಾಧಿಕ್ಯಮದಿಲ್ಲೆನಿಪ್ಪುದಂ ಸನ್ಯಸನಾರಾಧನೆಯ ಜವದಿ ಸನ್ನ ನಿಶೀಧಿಗೆಯುದ್ದಣೆಗೆ ತಳಗೆ ಪಟ್ಟವಿವಿವಿ[ನಿ]ತುಂ . . . ರಕ್ಷಿಸುವರ್ (ಸೌಇಇ. XI-1, ೩೨-೭೯ : 1007) ; ಜವದ ಜಗಟಕ್ಕೆ ಪುರುಡಿಸುವ

ಗರುಡನಂ ಗಜಜುವಂತೆ ದುಂದುಭಿಗಭೀರ :ಹೇಷಾರವಂಗಳೊಗೆಯೆ (ಪುಷ್ಪಪು. ೨-೯೦ ವ) ; ಸೂಜಿಗಲ್ಲಿದಿರ ಕಾಬೊರ್ನ್ನಂತೆ ತಿರುಗಿದೆಡೆಗಾ ಜವದೊಳೊಡದಿರುಗಿ (ಜಿಲಪು. ೨೦-೨೦). ೨. ಶಕ್ತಿ ; ಸಾಮರ್ಥ್ಯ; ಸತ್ತ್ವ: ಸವತಿ ನೂಕಿದಳೆನ್ನನಡವಿಗೆ ಜವವುಳಿವುತ್ಕೈತಂದೆನಜಿಸುತ ನಿನ್ನ ಸನ್ನಿಧಿಗೆ (ನಿಘಾಗ. ೪-೭-೪೩). 'ಜವಂಗಿಡಿಸು', 'ಜವಂಗೆಡಂ' ಪರಾ. ೩. ಹೆಚ್ಚಾದ ವೇಗದಿಂದ ಕೂಡಿದವನು: "ಜವನುಂ ತಾಂ ವಾಯುವೇಗಯುತನುಂ ಯಮನುಂ" (ವಸ್ತುಕೋ. ೦೦೮-೩).

ಜವಂಜವ (ದ್ವಿರಂಕ್ತಿ) : ಪಜ್ಜಳಿಸುತರಿಲೊಂದು ಬಾನ್‌ಪಟದೊಳುರಿದುರಿದು . . . ಜವಂಜವದಿಂದೆ ಮರೆಯಾಯ್ತು ಮುಳುಗಿ (ಶ್ರೀರಾಮಾ. ೦೦೩-೮೮). [ ಸರಿ. ]

**ಜವಂಗಿಡಿಸು, ಜವಗಿಡಿಸು, ಜವಗೆಡಿಸು** (ಕ್ರಿ). ಸತ್ತ್ವವನ್ನು ಕುಗ್ಗಿಸು ; ಶಕ್ತಿಗುಂದಿಸು ; ಸೋಲಿಸು : ತೆಱಪಱಿದೋಪನಪ್ಪಿದೊಡೆ ಮೆಯ್ಮಱೆವಪ್ಪ ಸಡಿಲ್ಪುದಕ್ಕೆ ಮೆಯ್ಮಱಿವ ಪೊದಟ್ಟು ಬಾಯುಗಿಗೆ ಮೆಯ್ಮಱೆವಂತದು ಮೆಲ್ಲನಾಗೆ ಮೆಯ್ಮಱಿವ ಜವಂ ಜವಂಗಿಡಿಸೆ ಮೆಯ್ಮಱಿವಾಸನಪಲ್ಲಟಕ್ಕೆ ಮೆಯ್ಮಱಿವೆಡೆ ಸಾವ ಪುಟ್ಟುವೆಡೆಯಾದುದವಳ್ಗೆ ರತಾತಿರೇಕದೊಳ್ (ಲೀಲಾವ. ೧೩-೨೦) ; ಜವನ ಬಲ್ಪಂ ಜವಂಗಿಡಿಸುವೆಂ (ಅದ್ಭುತ. ೯೯-೬). **ಜವಗಿಡಿಸು** : ಅಡಸಿದರು ಚತುರಂಗಬಲವನು ಕಡಿದು ಕುರಹ ವಿರಾಟನನು ಜವಗಿಡಿಸಿ (ಕುಮಾರವ್ಯಾ. ೦೭-೩೩) ; ಅವರ ಲಾವಣ್ಯಾಬ್ಧಿ ವಿಟರ ಕಣ್ಮೀಂಗಳ ಜವಗಿಡಿಸಿದುವು ಗೋಪ್ಯದಲಿ (ಮೋಹತ. ೨೪-೨೭) ; ಜವನು ಜವಗಿಡಿಸುವ ಕುಳಿಕನಂ ಗುಳಿಗೆಗಟ್ಟುವ ಪೆರ್ಣಳಿದ ಕಾಳ್ಗಾಳ್ಗಳ ಪಡೆಯ (ರಾಮಾಶ್ವ. ೯೪-೧೭). **ಜವಗೆಡಿಸು**: ತೇಜಿಯು ಜವಗೆಡಿಸಿ ತಲೆಯಾರ ತಡೆದರು ತುಡುಕಿದ್ದರು ನೊಗನ (ಕುಮಾರ. ೦೪-೦೪); ಜವಗೆಡಿಸಿ ಸೇನೆಯುಂ ಮುತ್ತಿದುವು ಕುತ್ತಿದುವು . . . ಸುಭಟರಂ ಬಾಣಂಗಳು (ಜಿಲಪು. ೨೩-೯೯) ; ಕೃತವರ್ಮ ಸಾಂಬಾನುಸಾಲ್ವರಂ ಜವಗೆಡಿಸಿ (ಜೈಮಿಭಾ. ೦೪-೩).

[ ಜವ$_{2}$ + ಕಿಡಿಸು ( <ಕೆಡಿಸು) ]

**ಜವಂಗಿಡು** 'ಜವಂಗೆಡು' ನೋ.

**ಜವಂಗುಂದಿಸು** (ಕ್ರಿ). =ಜವಂಗಿಡಿಸು: ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮). [ ಜವ$_{2}$ + ಕುಂದಿಸು ]

**ಜವಂಗುಂದು, ಜವಗುಂದು** (ಕ್ರಿ). ಶಕ್ತಿಗುಂದು ; ಸತ್ತ್ವವಳಿ : ಅಮಿತಬಲದೆರಡು ಕಡೆಗಂ ನಿಮಿರ್ವ ಜಮುಗುಂದಿ ಪಾಯ್ದು ಕಳವೆಳದು ತುರಂಗಮು ಸಮಿತಿಯೊಳೆಯೊಳಂ (ಕಾವ್ಯಸಾ. VLL ಚೂದ್ರಳ) ; ಒಂದು ಗೊಳ್ಳೆರಡುಗೊಳ್ಳೆಂದುರ್ವಿ ಪೊಯ್ಪೊಂದು ಪೊಯ್ಗೆ ಜವಂಗುಂದಿ ಸಿಡಿಲ್ದು . . . ಬೀಟ್ ದಿಗ್ಗಜವಂ ಪೋಲ್ವ ಗಜಂಗಳಂ ಪಲವುಮಂಕೊಂದಂ ಮಾರುನ್ನಂದವಂ (ಜಂಪಭಾ. ೦೭-೦೦೨). **ಜವಗುಂದು**: ಮಧ್ಯಾಹ್ನದುರಿಬಿಸಿಲೊಳಿದೆ ಬಿರಿಯೆ ಜವಗುಂದಿ ತಲೆ ಕುಸಿದು ನಡೆಗೆಟ್ಟು ಬಾಯಾಱಿ (ಹಚಕಾ. ೧೨-೭) ; ಎಲ್ಲಿಯದು ಹೆಬ್ಬಂದಿ ಮುನಿವಧೆಯಲ್ಲಿ ಕೂಡಿತೊಯೋಗವೆಂದೆದೆ ರಘುಲ್ಲಿನಲು ಜವಗುಂದಿ ಲಕ್ಷ್ಮಣನೊಲದನವಯವವ (ತೊರರಾ. ೩-೩-೨೨). [ ಜವ$_{2}$ + ಕುಂದು$_{1}$ ]

**ಜವಂಗೆಡು, ಜವಂಗಿಡು, ಜವಗಿಡು, ಜವಗೆಡು** (ಕ್ರಿ). ೧. = ಜವಂಗುಂದು: ಭಯಮನೆಡಗಲಿಸಿ ಬೆಳ್ಳೋಟವೋಡಿ ಜವಂಗೆಟ್ಟು ಕಾಲ್ವೆಡಂಗಲಸೆ ಬೀಳುತ್ತುಮೇಳುತ್ತುಮಂತಾನುಮೆಯ್ದಿ (ಶಾಂತಿಪು. ೭-೯೦ ವ) ; ಇನ್ನೆತ್ತಂ ಪೋಪೆಂ ಕುದುರೆಯುಂ ಜವಂಗೆಟ್ಟುದು (ಪಂಚತಂ. ೦೦೭-೯) ; ಅಂತು ಪಲವು ಸೂಟ್ ಕಾದಿ ನಾಡೆಯುಂ ಬಟಲ್ದು ಕಡೆಯ ಸೂಟೊಳೆ ಜವಂಗೆಟ್ಟು (ನೇಮಿಪು. ೪-೦೦೭ ವ). **ಜವಂಗಿಡು**: ೧. ಜವಂಗಿಡದ ಮುಟ್ಟಿ ಬರ್ಪ ಜವನಂ ಜವಂಗುಂದಿಸಲ್ ಜವಂಗೆ ಜವನಾಗಲಿಂ ಪೆಱರ್ಗೆ ತೀರ್ಗುಮೇ (ಆದಿಪು. ೦೩-೮೮) ; ಇನ್ನಿವಱ ಪೋರ್ದು ಜವಂಗಿಡದೆ ಪಪ್ಪಕವಾದಂದವುಮಂ ಕೇಳ್ (ಶಾಂತಿಪು. ೯-೪೯ ವ). **ಜವಗಿಡು** : ೧. ಜವಗಿಡದೆನ್ನೊಳು ಕಡಿದಾಡಬಪ್ಪುದೆಂದವಗಡಿಸಿದನಾರ್ಭಟದಿ (ಮೋಹತ. ೩೯-೩). **ಜವಗೆಡು**: ೧. ರವಿರಶ್ಮಿಗಾಱದೆ ಜವಗೆಡುವ ಹಿಮುವನ್ನಗೇಂದ್ರದ ಘನತರವದೆನಿತು (ಬಸಪು. ೦೯-೨೭). ೨. ವೇಗ ಕುಗ್ಗು,-ಮಂದವಾಗು; ತಡವಾಗು: ಪೊಳ್ತಂ ಸನ್ನೆಯುಂ ಜಾತಿಯುಂ ಜವಗೆಡ [ಪಾಠಾಂ. ಜವಂಗೆಡ] ದಱಿವ ಬಿನ್ನಣಂಬಡೆದ ಬೇಡರೊಡವರೆ (ರಾಜಶೇ. ೩-೦೦೪ ವ).

[ ಜವ$_{2}$ + ಕೆಡು$_{1}$ ]

**ಜವಂಜವ** (ನಾ). ಹುಟ್ಟುಸಾವುಗಳ ಪರಂಪರೆ ; ಸಂಸಾರ : "ಭವ ಸಂಸೃತಿ ಸಂಸರಣಂ ಜವಂಜವಂ ಜನ್ಮಮೆಂಬುದದು ಸಂಸಾರಂ" (ವಸ್ತುಕೋ. ೧೮-೧); ಜವನಂ ಜವಂಗುಂದಿಸಲ್ . . . ಪೆಱರ್ಗೆ ತೀರ್ಗುಮೇ ತೀರದಾ ಜಪಂ ಜವಜವಾಗಿ ಮುಟ್ಟುಗಿಡುವನ್ನಮಿನ್ನು, ಜವಂಜವ ವ್ಯಸನಪುಂಜಮುಂ ಕಿಡಿಪುದಾದಿತೀರ್ಥೇಶ್ವರಾ (ಆದಿಪು. ೦೩-೮೮) ; ತನ್ನಂ ನಿರ್ದಾಟಿಸಿ ಕಳೆಯೆ ಪೋಗಿ ಸತ್ತು ವಿವಿಧ ಜವಂಜವ ಚಕ್ರಾಕ್ರಮಣದಿಂ ಬಂದು (ಶಾಂತಿಪು. ೭-೪೨ ವ). 'ಅಜವಂಜವ' ಪರಾ. [ ? ]

**ಜವಂಬೆಱು** (ಕ್ರಿ). ವೇಗಗೊಳ್ಳು ; ತ್ವರಿತವಾಗು : ಪೊದಳ್ದ ದೇಶಿಮ್ಯವೆತ್ತಿರೆ ತೇನತೇನವೊದಗುತ್ತಿರೆ ತಾನರವಂ ಲಯಂ ಜವಂಬೆತ್ತಿರೆ ಮೂರ್ಛನಾಪ್ರಸಾರವೊಂದಿರೆ (ವ್ಯಪವಿ. ೧೦-೮). [ ಜವ$_{2}$ + ಪೆಱು$_{1}$ ]

**ಜವಕ** (ನಾ). ತಡ ; ನಿಧಾನ (?) : ಸಾಹಿತ್ಯ ಸಾರೋದಯಂಗೀ ದೂದವಿಜತ್ರಕವಂ ನುಡಿದು ಜವಕಮಿಲ್ಲದೆ ಕೂಡಿದಳೆಂದು ನುಡಿಯುತ್ತುಂ ಪೋಗೆ (ಅನಂಪು. ೮-೨೯ ವ). [ <ಸಂ. ಯಾಪಕ ]

**ಜವಕಣೆ** (ನಾ). ಒಂದು ಬಗೆಯ ತಂತೀವಾದ್ಯ : (ಎಸಕ್ಯ. XVII, ೩೦).

[ ? ]

**ಜವಕಾರ** (ನಾ). ಒಂದು ಬಗೆಯ ಉಪ್ಪು; ಯವಕ್ಷಾರ : "ಜವಕಾರ - ಯವಕ್ಷಾರ" (ತದ್ಭಕೋ. ೦೪). [ <ಸಂ. ಯವಕ್ಷಾರ ]

**ಜವಗ** (ಗು). ವೇಗವಾಗಿ ಓಡುವ : ಜವಗ ಚತುರೀಕಲಕ ಪ್ರವಿಮಳ ಶೃಂಗಾರಸಾರ ಜಾತ್ಯಶ್ವಂಗಳ್ (ಹಮ್ಮೀರ. ೩-೦೦). [ ಸಂ. ]

**ಜವಗತಿ** (ನಾ). ವೇಗವಾದ ನಡಗೆ ; ಓಟ : ಮದದೆಕ್ಕಲನ ಕುಕ್ಕುರಿಪ ಲುಳಿಯ ಜಂಘೆಯ ಜವಗತಿಯ . . . ನಾಯ್ತುಡುಕಿದವು ತಡೆದಖಿಳ ಮೃಗಕುಲವ (ತೊರರಾ. ೩-೩-೧೪). [ ಜವ$_{2}$ + ಗತಿ ]

**ಜವಗಾತಿ** (ನಾ). ಬಹಳ ವೇಗವುಳ್ಳವಳು; ವೇಗದಿಂದ ನಡೆಯುವವಳು: ಪವನವೇಗವ ಕೀಳ್ಪಡಿಸಿ ದೂವಾಳಿಪ ಜವಗಾತಿಯ ಬೆನ್ನೊಳಿರ್ದು ಕುವರ ಕಂಗೆಟ್ಟು ತಕ್ಕೆಗೊಂಡವಳ ನುಣ್ಮೊಲೆಯ ಬಲ್ಪಿಡಿದ (ಮೋಹತ. ೩೦-೨೭).

[ ಜವ$_{2}$ + - ಕಾತಿ$_{2}$ ]

**ಜವಗಿಡಿಸು** 'ಜವಂಗಿಡಿಸು' ನೋ.

**ಜವಗಿಡು** 'ಜವಂಗೆಡು' ನೋ.

**ಜವಗುಂದು** 'ಜವಂಗುಂದು' ನೋ.

**ಜವಗೆಡಿಸು** 'ಜವಂಗಿಡಿಸು' ನೋ.

**ಜವಗೆಡು** 'ಜವಂಗೆಡು' ನೋ.

**ಜವಚರ** (ನಾ). ಓಡುತ್ತ ಹೋಗಿ ಸಮಾಚಾರವನ್ನು ತಿಳಿಸುವ ಸೇವಕ; ಹರಿಕಾರ : ಬಹರಾಗಮನವನರಿದು ಜವಚರರಿಂದ ಶ್ರೀವರ್ಮನಾಗಗಿರಿಪುರಕಪ್ಪಮಂಗಲವ ರಚಿಯಿಸಿದ (ಜಿನಮು. ೩-೨೨).

[ ಸಂ. ]

**ಜವಜವ** (ನಾ). ೧. ಶಿಥಿಲವಾದುದು ; ಶಕ್ತಿಗುಂದಿದುದು. ೨. ಮಂದವಾದುದು. 'ಜವಜವಾಗು' ಪರಾ. [ ? ]

**ಜವಜವನೆ** (ಅ). ದುರ್ಬಲವಾಗುವಂತೆ ; ಕುಗ್ಗುವಂತೆ.

ಜವಜವಜವನೆ (ದ್ವಿರುಕ್ತಿ) : ಜವನಟ್ಟಿ ಕೊಲ್ವ ಕೊಲೆಗಾ ಜವಂಜವ ಸ್ಥಿತಿಗೆ ಮೆಯ್ಮ ನೀರ್ಗೆಗವನ್ನಂ ಜವಜವಜವನಂಜಿಸಿದುವು ಜವನಾಳ್ಗಳ ತೆಱದಿನೆನ್ನ ಕೆನ್ನೆಯ ನರೆಗಳ್ (ಅಜಿತ. ೨-೬೯). ಜವಜವನಾಗು = ಜವಜವಾಗು : ಬಟ್ಟೆಯ ಕಱುಗಲ್ಲ ಬಡಿಯು ಕೋಟಿಂದಂ ಕಾಲ್ ಕೆಟ್ಟುವು ಜವಜವನಾದುವು ನೆಟ್ಟನೆ ಮೆಯ್ (ಧರ್ಮಾಮೃ. ೬-೮೯).

[ ಜವಜವ + – ಅನೆ$_1$ ]

ಜವಜವಾಗು (ಕ್ರಿ). ೧. ದುರ್ಬಲವಾಗು ; ಜರ್ಜರಿತವಾಗು : ಆ ಜವಂ ಜವಜವಾಗಿ ಮುಟ್ಟುಗಿಡುವನ್ನವಿನ್ನಾ ಜವಂಜವವ್ಯಸನವುಂಜವಮಂ ಕಿಡಿಪುದಾದಿ ತೀರ್ಥೇಶ್ವರಾ (ಆದಿಪು. ೧೩-೮೮) ; ಕುರವದಿಂ ಕೂಡೆ ನೆತ್ತರ್ ತೆರಳ್ದುಣ್ಮುವಿನಂ ಮೆಯ್ಯೆಯಲ್ಲವಂ ಜರ್ಜರಿಸಿ ಜವಜವಾಗಿರ್ದನಂ ಗುರ್ದಿ (ಸುಕುಮಾ. ೬-೩೩). ೨. ಆಲಸ್ಯವಾಗು ; ಮಾಂದ್ಯವಾಗು : ಬಳುವಳ ಬಳೆಯ ತೆಳುವಸಿರ್ಕೊಗ್ಗೀಮಳಾಂಗವುಂ ಜವಜವಾಗೆ ಬೆಳದುದು ಗರ್ಬ್ಬಂ (ಕೊಲ್ಲಾ.ಶಾ. ೦೩-೩೦ ; 1186). [ ಜವಜವ + ಆಗು$_1$ ]

ಜವಣ 'ಜೀವಣ' ನೋ.

ಜವಣ 'ಜೀವಣ್ಣೆ' ನೋ.

ಜವಣಿಗೆ (ನಾ). ಉದ್ದವಾದ ಬಿದಿರಿನ ಕೋಲು; ಜಲ್ಲೆ: ಜವಣಿಗೆಯನ್ನು ತೆಗೆದುಕೊಂಡು ಅನುಭವಶಾಲಿಗಳಾದ ಬೆಸ್ತರು ನಡುಗೆರೆಯನ್ನೆಲ್ಲ ಕೆದಕಿದರು (ದೂರಸ. ೨೬೮). [ <ಜವಣೆ ]

ಜವಣೆ 'ಜಳವೆ' ನೋ.

ಜವತುರಂಗ (ನಾ). ವೇಗವಾಗಿ ಓಡುವ ಕುದುರೆ : ಸಾಸಿರ ಗೋವುಗಳ ಜವತುರಂಗವ ಬ್ಯಾಸರಿಯದೆ ತಂಗಿಗಿತ್ತ (ಕನಾಳ. ೨೮೨).

[ ಜವ$_2$ + ತುರಂಗ$_1$ ]

ಜವತೂಣ (ನಾ). ಯಮನನ್ನು ಹಿಂಸಿಸಿದವನು; ಶಿವ : ಏಣಾಂಚಿತಧರ ಜವ ತೂಣಾ ಶರಣಜನ ಪ್ರಾಣಾ . . . ಜಿತಸೌರಭಬಾಣಾ ರಕ್ಷಿಸು (ಉದ್ಭಟ. ೯-೩) [ ಜವ$_1$ (<ಜಮ) + ತೂಣ$_4$ ]

ಜವತ್ಸವಡಿ (ನಾ). ಮಲ್ಲಯುದ್ಧದ ಒಂದು ವರಸೆ: ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ . . . ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್ (ತ್ರಿಷುವಿ. ೨೬-೦೮). [ ? ]

ಜವದಂಡ 'ಜಮುದಂಡ' ನೋ.

ಜವದಂಡೆ 'ಜಮುದಂಡೆ' ನೋ.

ಜವದಾಡೆ 'ಜಮುದಾಡೆ' ನೋ.

ಜವನ (ನಾ). ೧. ವೇಗ; ರಭಸ. ೨. ವೇಗವುಳ್ಳದು ; ವೇಗಶಾಲಿಯಾದಂದು ; ಚುರುಕಾದುದಂ: ಜವನಮನಿಸಿರ್ದ ನಿಜದಶ ಜವನರಥಃ ಕರಿಸೆ ವಿಳಯಜಳಧರಕುಳಭೈರವರವಮನಿಳಿಸೆ (ಪಾರ್ಶ್ವಪು. ೯-೦೦೩). ೩. ವೇಗವಾಗಿ ಓಡಬಲ್ಲವನು; ಹರಿಕಾರ: "ಜಂಘಾಳಃ, ಜವನಃ, ವೇಗೀ– ಈ ೩ ಹರಿಕಾರಂ" (ಚೆಲಾಯು. ೩೯-೨೦೩). ೪. ವೇಗವುಳ್ಳ ಕುದುರೆ.

[ ಸಂ. ]

ಜವನಿಕೆ (ನಾ). ೧. ತೆರೆ ; ಕಾಂಡಪಟ : ಪರದೆ : "ಅಪಟೀ ಪ್ರತಿಸೀರಾ ಕಾಂಡಪಟಿ ತಿರಸ್ಕರಿಣಿಕಾಖ್ಯ ಜವನಿಕೆಯಕ್ಕುಂ " (ವಸ್ತುಕೋ. ೯೯-೨೩) ; "ಜವನಿಕೆ ಮುಸುಕುಂ" (ಭಾರಸಿ. ೦೩) ; ಅನಂಗಜಂಗಮಲತೆವೊಲ್ ನಿಲ್ವ ಜವನಿಕೆಯ ಮಱೆಯೊಳ್ ಪೊಲ್ತಳವಳ್ ಮುಗಿಲ ಮಱೆಯ ವಿದ್ಯುಲ್ಲತೆಯಂ (ಆದಿಪು. ೯-೨೦) ; ಹರನ ಶಾಂತಿಯ ಜವನಿಕೆಯನೋಸರಿಸುವಂತೆ (ಸೀದಿರ. ದೇ. ೬೬-೧೨); ಮೇರೆ ಜವಸಿಕೆಯಂ ಓಡಿದು ಸಮ್ಮೇಳನದೊಳಿಯ್ತಂದು (ಬಸವು. ೦೨-೯೯). ೨. ಮರೆ ; ಮುಚ್ಚು ಮರೆ: ಜೀಯ ಜವನಿಕೆಯೇಕೆ ನೀವೆಂದೀಯ ಶೇಷಗುಣಂಗಳಾ ಕಾತ್ಯಾಯಿನೀಪತಿಗುಂಟು (ತೊರರಾ. ೯-೦೨-೦೦). ೩. (ಅಲಂ) ಮಿಥ್ಯೆ ; ನಟನೆ ; ಮಾಯೆ : ಇದು ಕಣಾ ಜಗದೀಶ್ವರನ ಜನನದ ಜಗದ್ವ್ಯಾಪಾರ ಜವನಿಕೆಯಿಂದಿಸಿ ತೋಱದನೆಂಬುದಿದು ಮಿಥ್ಯಾಪ್ರಪಂಚವರೆ (ತೊರರಾ. ೦-೮-೬೨). ೪. ಕತ್ತಲೆ (?) : ಜವನಿಕೆಯೋಡಲಿರ್ವ್ವಲದ ವೀರ ಭಟಾವಳಿ ನೋಡೆ ಖಳ್ಗದಿಂದವೆ ಕಲಿರತ್ನಪಾಳಿನ ಶಿರೋಂಬುಜಮಂ ಜಯಲಕ್ಷ್ಮಿಗಿತ್ತು ತಜ್ಜವನಿಕೆಗೊಂಡ ಗಂಡಪೆರುಮಾಳೆ ಚವುಂಡಪತಿಗಿಂತು ಸಾದ್ರ್ಯದಾ ಜವನಿಕಾರಣಾಂಕ ವಿದುರಾಉತರಾಯನುದಗ್ರ ದೋರ್ವ್ವಳಂ (ಎಕ. XI, ಚಿತ್ರದು. ೧೨-೯ ; 1286).

[ < ಪ್ರಾ. ಜವಣಿಆ./ಸಂ. ಯವನಿಕಾ ]

ಜವನಿಕೆಗಳೆ (ಕ್ರಿ). ಮುಸುಕನ್ನು ತೆಗೆ ; ತೆರೆಯನ್ನು ಸರಿಸು : ಆ ಜಯಸೇನೆ ರಂಗಂಬೊಕ್ಕನಂಗಶಸ್ತ್ರಾಧಿದೇವತೆಯ ಮುಖವಸ್ತ್ರಂಗಳೆದುವೆನಿಸಿ ಜವನಿಕೆಗಳೆದು . . . ನರ್ತಿಸೆ (ನೇಮಿಜಿ. ೩-೦೫೦ ವ).

[ ಜವನಿಕೆ + ಕಳೆ$_1$ ]

ಜವನಿಕೆದೆಗೆ (ಕ್ರಿ). = ಜವನಿಕೆಗಳೆ : ಮೊಗದ ಜವನಿಕೆದೆಗದು ನೆತ್ತಿಯ ಬಗಿದು (ಕುಮಾರವ್ಯಾ. ೩-೦೩) ; ಸುರುಚಿರ ಸೂತ್ರಧಾರಕ ತತ್ತ್ವಕಾರವ ವಿರಚಿಸಿ ಜವನಿಕೆದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂಸವಿ. ೮-೬೦). [ ಜವನಿಕೆ + ತೆಗೆ$_1$ ]

ಜವಪುರ (ನಾ). ಯಮನ ಪಟ್ಟಣ : ಜವಪುರಕೆ ಬಿದ್ದವರಿಗಹುದ್ಯೆ ಅವಧರಿಸಲಾ ಪಿಂಡಶ್ರಾದ್ಧವು (ಕುಮಾರವ್ಯಾ. ೩-೦೩).

[ ಜವ$_1$ (<ಜಮ) + ಪುರ$_3$ ]

ಜವಪುರಿ (ನಾ). = ಜವಪುರ : ಎಂದಾನುಎಂದರ ಜೀವ ಧುಮ್ಮಿಕ್ಕಿದುದು ಜವಪುರಿಗೆ [ಪಾಠಾಂ. ರಕೆ] (ಕುಮಾರವ್ಯಾ. ೩-೦೦).

[ ಜವ$_1$ (<ಜಮ) + ಪುರಿ$_3$ ]

ಜವಪ್ರಸರ (ನಾ). ವೇಗದ ಹೆಚ್ಚಳ : ಪವಮಾನಾತ್ಮಜನಂ ಜವಪ್ರಸರದಿಂ . . . ಎಂಗುವ ಜಾತ್ಯಶ್ವಂಗಳ್ (ಪುಷ್ಪದ. ೨-೩೮). [ ಜವ$_2$ + ಪ್ರಸರ ]

ಜವರಕ್ಕೆ (ನಾ). ಕವಚ ; ಚಿಲುಖತ್ತು : " ಕವಚಕಂತೊಪ್ಪುವುದು ಜವರಕ್ಕೆ [ಪಾಠಾಂ. ಕಂಚಕಂತೊಪ್ಪುವುದು ಚವರವಂ] ಅವುತೆಯಂಬೀ ಪೆಸರ್ " (ಅಭಿಧಾ. ೯೩). [ P 'ಜೀವರಕ್ಕೆ' ಎಂಬುದರ ಅಪಲಿಖಿತ ]

ಜವರಾಜ (ನಾ). ಯಮರಾಯ : ಕೋಪಕ್ಕೆ ಯಮರಾಜ ಪಾಪಕ್ಕೆ ಜವರಾಜ ಕೋಪಪಾಪಗಳ ಅಳಿದಂಗೆ ಯಮನು ತಾ ಕೂಪನಾಗಿಹನು (ಸರ್ವಜ್ಞ ೯೬೮). [ ಜವ$_1$ (<ಜಮ) + ರಾಜ ]

ಜವರಾಯ (ನಾ). = ಜವರಾಜ : ಮಿಗೆ ದೀರ್ಘಾಯುಮಿರೆ ಮುನಿದು ಕಲಿ ಜವರಾಯಂ ಕೊಲಲಾಱಂ (ಹಮ್ಮೀರ. ೮-೨೮) ; ಸಾಯುವನ ಕಣ್ಣಿಗೆ ಸುಳಿದವನೇ ಜವರಾಯ (ಗಾದೆ). [ ಜವ$_1$ (<ಜಮ) + ರಾಯ ]

ಜವರುಜಂಗಿ 'ಜಬರುಜಂಗಿ' ನೋ.

ಜವವಳಿ (ಕ್ರಿ). ಕಸುವು ಕಡಮೆಯಾಗು ; ಶಕ್ತಿಗುಂದು ; ದುರ್ಬಲವಾಗು ; ಜವವಳಿಯಲೆಂತಾದೊಡಂ ಶಿವಶಿವಯೆನುತ ನಡೆಯಂ ನಡೆವೆ ನಾನವನಿಯೊಳಗೆ (ಬಸವು. ೯೯-೦೨) ; ಪವನಸುತನವತರಿಸೆ ಪಾರ್ಥಿವನಿವಹ ನಡುಗಿತು ದೈತ್ಯಗಣವುಱೆ ಜವವಳಿಯ (ಸಂಭಶ. ೦೫-೩೬).

[ ಜವ$_2$ + ಅಳಿ$_1$ (<ಅಱ್$_1$) ]

ಜವವೇಳು (ಕ್ರಿ). ಒತ್ತರಿಸಿ ಬರು ; ತೀವ್ರವಾಗಿ ಬರು : ಬಲಿದ ತೂಕಡಿಕೆಗಳ ನಸು ಬೆದಱಿಲಹುಗಳ ಜವವೆದ್ದ ರೆಘೂಮ್ಮಿನ ಬಲೆಗೆ ಸಿಲುಕಿದ ಬಲವನರ್ಜುನದೇವನೀಕ್ಷಿಸಿದ (ಕುಮಾರವ್ಯಾ. ೦೭-೯).

[ ಜವ$_2$ + ಎಳು$_1$ (<ಎೞ್$_1$) ]

ಜವಪೊಳಲ್ (ನಾ). = ಜವಪುರ : ಈ ಸನ್ನಿಪಾತಂ ಮುಟ್ಟಿದ ಪುರುಷನು ಜವಪೊಳಲ್ಗೈದುವನೆಂದು ಪೇಳಿಹುದು (ಸಕಪ್ರ. ೦೬೩).

[ ಜವ$_1$ (<ಜಮ) + ಪೊಳಲ್ (<ಪೊೞಲ್) ]

**ಜವಹೀನ** (ನಾ). ವೇಗವಿಲ್ಲದುದು; ವೇಗವಾಗಿ ಓಡಲಾರದುದು: × × × ಅಧಿಕವಲ್ಲಮುಲಮಪ್ಪೊಡಂತು ನೊಸಲಸಿದಾಗುವುದುಮದು ಕಳೆಯಲಾಗದು ಜವಹೀನಂ ವಾಜಿ ನಾಲ್ಕು ಸಂವತ್ಸರವಮಂ (ಅಶ್ವಶಾ. ೬-೫). [ ಜವ₂ + ಹೀನ ]

**ಜವಹುರ** (ನಾ).=ಜವಪುರ : ಎರಡು ಪದಂಗಳಿವಭ್ರಂಶಕ್ಕೆ—ಅಚ್ಚಸ್ಫಟಿಕ—ಅಚ್ಛವೀಕು . . . ಯಮಪುರ—ಜವಹುರ (ಶಮದ. ೩೮೯ ಪ್ರಯೋ) ; ಆ ಜವಹುರಕೆಯಿಂಬುಮಾಡುವ ನಿಷ್ಠುರಪರಿಗ್ರಹವನ್ನು ನಂಬಿದೆನಾನಿಂದುವರ (ಶ್ರೀಪಾಲ. ೦೪-೪೨) ; ಜವಹುರದ ಜಕ್ಕಂದೊಟಲಿಯಂ ಗೆಲೆವರ್ಪ ಕಾಟ್ಯೋಣವಳಗದಿಂದೆಯುಂ (ರಾಮಾಶ್ವ. ೩.೨೫).
[ <ಸಂ. ಯಮಪುರ ]

**ಜವಹುರಿ** (ನಾ).=ಜವಪುರ : ಜವದಿಂದಂ ಜವಹುರಿಗೆ ಗಳಿಪುವವೊಲಾದವೆ ಕಾಳಿಕೆ ತೆಂಕದೆಸೆಯ ಮೊಗವಾಗಿಪ್ಪರ್ಗಳು (ಜಾಸಚ. ೮೮).
[ <ಸಂ. ಯಮಪುರೀ ]

**ಜವಳ₁** 'ಜಮಳ' ನೋ.

**ಜವಳ₂** (ನಾ). ತೂಕದ ಒಂದು ಪ್ರಮಾಣ.—ಅಳತೆ: ಧಾರಾಪೂರ್ವಕವಾಗಿ ಕೊಟ್ಟಾಯಮಂತೆಂದೊಡೆ ಅಡಕೆ ಹೇಱಿಂಗೆ ಅಯ್ವತ್ತು ಜವಳಕ್ಕಿಪ್ಪತ್ತು . . . ಹತ್ತಿ ಮಳವೆಗಯ್ವಲಂ ಭಂಡಿಯ ಕರುಸೆಯ ಮಳವೆಗೆರಡು ಬೀಸಿಗೆ ಜವಳಕ್ಕೆ ಪಲಂ ಪತ್ತು (ಎಇ. XIX, ೩೩-೨೬ ; 1186); ಸು(ಶು)ಕ್ರವಾರದ ಸಂತೆಯಂ ಮಾಡಿ ಬಿಟ್ಟಾಯಮಂತೆ[ಂ]ದೊಡೆ ಮಾಱಿದ ಅಡಕೆಯ [ಜವ]ಳಕ್ಕಡಕೆಯಿಪ್ಪತ್ತು . . . ಎತ್ತಿನ ಜವಳಮಂ ಬಿರಿಚಿದಲ್ಲಿಯಡಕೆಯ ಯ್ವತ್ತು (ಎಇ. XIX, ೪೮-೨೨, ; 1144) ; ಮೆಳಸಿನ ಹೇಱಿಂಗೆ ಮೆಳಸೊಮ್ಮಾನಂ ಆ ಜವಳಕ್ಕೆ ಅರೆವಾನಂ (ಎಇ. XIII, ೨೦-೩೫ ; 1204) ; ಬಿಟ್ಟ ಜವಳಕ್ಕ ಹತ್ತಡಕೆ ಅರಸಿನ ಆಲ ಸಕ್ಕರೆ ಬಿಟ್ಟ ಜವಳಕ್ಕೆ ಅಯ್ವಲ ಹತ್ತಿಯ ಮಳವೆಗಯ್ವಲಂ (ಸೌಇಇ. XX, ೨೯೯-೯; 12ನೆಯ ಶತ). [ ? ]

**ಜವಳಂಗೊಳ್, ಜವಳಿಗೊಳ್** (ಕ್ರಿ). ಬೆರೆ ; ಕೂಡಿಕೊಳ್ಳು ; ಸೇರು : ಗರುಗ, ಹುರುಳಿ, ನೀಲಿ, ಈ ಮೂರರನ್ನು ಜವಳಂಗೊಳ್ಳೆ ಕಳರಿ ಎಂಟು ಹಲ ನೀರಿಂದ ನೆನೆಯಲಿಡುವುದು (ವಿಶ್ವವಿ. ೨೦೮). **ಜವಳಿಗೊಳ್** : ಬಂದರಂದು ಬಲ್ಪೋಕಿವಡೆದು ಸಿಂಗರದಿಂಗಡಲ ತೆರೆಯ ಸಾಲ್ವ ಜವಳಿಗೊಂಡ ವೊಲ್ (ಅಭ್ಯಪೀ. ೫-೨೬). [ ಜವಳ₁ (<ಜಮಳ) + ಕೊಳ್₁ ]

**ಜವಳಂಬು** (ನಾ). ಬಾಣಗಳ ಜೊತೆ ; ಎರಡು ಬಾಣ : ಕಾದುವಲ್ಲದ ಕಲಹವಲ್ಲದೀಕ್ಷಣವೆಂದು ಜವಳಂಬನಿಟ್ಟು ಲವನು ಪಾದಕೊಂದನೆಗೈದು (ಜೈಜಮು. ೩೯-೯೪). [ ಜವಳ₁ (<ಜಮಳ) + ಅಂಬು₂ ]

**ಜವಳಗೆಯ್** (ನಾ). ಒಂದು ಪ್ರದೇಶದ ಹೆಸರು (?) : ಮಣ್ಣಾಳಕಂ ಕಾಟಿಯಣಂ ಜವಳಗೆಯ ಮೂಡವೊಲದಲು ಬೆಂಕೊಳ್ವನ ಕೋಲಲು ಬಿಟ್ಟ ಕೆಯಿ ಮತ್ತರ್ನಲವತ್ತು (ಎಇ. XXVII, ೬೩-೩೦; 1114). 'ಜವಳಿ₅' ಪರಾ. [ ಜವಳ? + ಕೆಯ್₄ ]

**ಜವಳಾಗು** (ಕ್ರಿ). ಜೊತೆಯಾಗು ; ಕೂಡು : ಧವಳ ಸರೋಜಾಕ್ಷ ತಾನಲ್ಲ ದನ್ಯರೊಳ್ ಜವಳಾಗದಂತೆ ವೈಸಿಕದ ಕವಳವ ಕುಡುವಂತೆ ರತ್ನಸಂಬಳಿಗೆ ದಾಳ್ದವರ್ದಳತಿಸಮ್ಮುದದಿ (ಕೋಹಕ. ೪-೬). 'ಜವಳಂಗೊಳ್' ಪರಾ.
[ ಜವಳ₁ (<ಜಮಳ) + ಆಗು₁ ]

**ಜವಳಿ₁, ಜವುಳಿ₁, ಜೌಳಿ** (ನಾ). ಬಟ್ಟೆ ; ಅರಿವೆ ; ವಸ್ತ್ರ : "ಸೀರೆಗಂ ಜುಗದೊಳಂ ಜವಳಿ" (ಶಬ್ದಮಂ. ೦೦೩) ; ಮೆಟ್ಟುವೆಡೆಗಳೊಳೆಲ್ಲಂ ಪಾಸಿ ಕಾರೋಹಣದ ಕಕ್ಕರವಟಯಿಗೆಯ ಚಿತ್ರಾವಟಿಯ . . . ಬಣ್ಣದ ಕಣದ ಬಣ್ಣವಣ್ಣಗೆಯ ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ) ; ತುಡುವ ತೊಡಿಗೆಗಳುಂ ಉಡಲ್ಕುಡುವ ಜವಳಿಗಳುಂ . . . ಪೂಜಿಸುವ ಕಣಶಂಗಳುಮೆಸೆಯ (ಲೀಲಾವ. ೬-೩೮ ವ) ; ಮಂಗಳಾರತಿಗಳೆತ್ತಿದರು ನಿವಾಳಿಯ ಮಂಗಳ ಜವಳಿ ಚೆಲ್ಲಿದವು (ಕುಮಾರಾಂ. ೪೦-೮೦) ; ಎತ್ತುವಾರತಿ ನಿವಳಿವ ಜವಳಿಯ ದಿಂಡು ಮುತ್ತುರತ್ನಗಳ ಕಾಣಿಕೆಯ ಇತ್ತು (ಪೂಚಕ. ೨೫-೪೩). **ಜವುಳಿ₁** : ಮಂಗಳ ಜವುಳಿ ರಘುಳಂಬ ಮನಂಗುರಮಾ ಕರ್ಣಶೋಭೆಯಂ ಪ್ರಿಯದಿಂ ವೈದ್ಯಂಗಿತ್ತು (ಅಶ್ವಶಾ. ೮-೩೦) ; ವಿಶೇಷವಾಗಿ ಜವುಳೀವ್ಯಾಪಾರವು ನಡಿಯುತ್ತದೆ (ಭೂಗೋಳ. ೪೪). **ಜೌಳಿ** : ಜನಿಸಿ ಜೌಳಿ ಮುಂನ್ನಾದರಿಂದ (ಎಕ. I, ೦೬-೨೪ ; 1820); ಅಡೋನಿ (ಆದಿವಾನಿ) ಎಂಬ ಊರು ಜೌಳೀವ್ಯಾಪಾರದಿಂದ ಪ್ರಸಿದ್ಧವಾದದ್ದು (ಭೂಗೋಳ. ೮೪).

**ಜವಳಿಯ ಮಳಿಗೆ** = ಬಟ್ಟೆಯಂ ಅಂಗಡಿ : ನಾನಾವರ್ಣದ ಜವಳಿಯ ಮಳಿಗೆಗಳೆಸೆದುವರ್ತಿಯಲಿ (ಕಂಸವಿ. ೬-೭೦). **ಜವಳಿಯರು** = ವಸ್ತ್ರದ ವ್ಯಾಪಾರಿಗಳಂ : ಹೊಳೆವ ಹೊಂಬಣ್ಣದ ಹೊದಕೆಯ ಮಾರುವ ಜವಳಿಯರಿರ್ದರೊಂದೆಸೆಯ (ಅಭ್ಯಲೂ. ೩-೭೯).
[ ದೇ.: ತಮಿ. ಮಲ. ಚವಳಿ ; ತುಳು. ಜವಳಿ, ಜವುಳಿ, ಜೌಳಿ ; ತೆಲು. ಜವಳಿ ]

**ಜವಳಿ₂** 'ಜವುಳು' ನೋ.

**ಜವಳಿ₃** 'ಜಮಳ' ನೋ.

**ಜವಳಿ₄** 'ಚವಳಿ' ನೋ.

**ಜವಳಿ₅** (ನಾ). ಒಂದು ಬಗೆಯ ಭೂಮಿ (?) : ಹೊಂನ ಜವಳಿಯಾಗಿ ಹತ್ತು ಕೇರಿ ಕಟ್ಟಳೆಯು × × (ಸೌಇಇ. ೦೯೩೨, ಉಡುಪಿ. ೩೦೩-೦೨; 1397); ಅಣ್ಣಸಟಿಯ ಹಿರಿಯ ಗದ್ದೆಯಿಂದಂ ಪಡುವಲು ತೆಂಕಲು ಹೆಗ್ಗಡಿತಿಯ ಮೂಲದ ಜವಳಿಯ ಕಾಟ ಗಡಿಯಿಂದಂ ಬಡಗಲು (ಸೌಇಇ. IX-ii, ೪೨೯-೨೪ ; 1401); ಮೂಂನ್ನ ಹೊಂನ ಜವಳಿಯೆಂದು ಪಾಲಿಸಿದು (ಸೌಇಇ. ೦೯೩೦, ಉಡುಪಿ. ೫೯೫-೦೬ ; ?). [ ? ]

**ಜವಳಿಅಂಗಡಿ** 'ಜವಳಿಯಂಗಡಿ' ನೋ.

**ಜವಳಿಕ** (ನಾ). ಬಟ್ಟೆಯ ವ್ಯಾಪಾರಿ ; "ದೂಸಿಗ" (ಕಕುನಿ. ೪. I, ೮೩).
[ ಜವಳಿ₁ + -ಕ₃ ]

**ಜವಳಿಕಾಯಿ** 'ಚವಳಿಕಾಯಿ' ನೋ.

**ಜವಳಿಕಾರ** (ನಾ).=ಜವಳಿಕ: (೪). [ ಜವಳಿ₁ + -ಕಾರ₁ (< -ಕಾಱ) ]

**ಜವಳಿಗ** (ನಾ). = ಜವಳಿಕ : ಹೊಂಬಣ್ಣದ ಹೊದಕೆಯ ಮಾರುವ ಮಳಿಗೆಯೊಳ್ ಜವಳಿಗರಸೆಯ[ಪಾಠಾಂ. ಜವಳಿಯರಿರ್ದರೊಂದೆಸೆಯ] (ಅಭ್ಯಲೂ. ೩-೭೯). [ ಜವಳಿ₁ + -ಗ₃ ]

**ಜವಳಿಗಟ್ಟು** (ನಾ). ಎರಡನ್ನು ಕೂಡಿಸಿ ಕಟ್ಟಿದ ಕಟ್ಟು ; ಜೊತೆಕಟ್ಟು : ಪುರ್ವಂಬ ಜವಳಿಗಟ್ಟಿನ ಕರ್ವಿನ ವಿಲ್ಲಳ್ಕೆ ಭಿಗಿದ ಮಧುಕರಮಾಲಾ ಮೌರ್ವಿಯೆನೆ . . . ಮೆಱೆದುದವರ ತಳ್ವೆಮೆದುಟಂಗಲ್ (ಮುಕೂಚ. ೨-೨೬). [ ಜವಳಿ₃ (<ಜಮಳ) + ಕಟ್ಟು₂ ]

**ಜವಳಿಗದ** 'ಜವಳಿಗದವು' ನೋ.

**ಜವಳಿಗದವು, ಜವಳಿಗದ, ಜವಳಿಗದಹು** (ನಾ). ಎರಡು ಪಡಿ ; ಜೋಡಿ ಕದ : ಒಂದು ಶಿವಲಿಂಗವಮಂ ತಂದನೆರಡೆವೆಯಿಂಬ ಜವಳಿಗದವಿನ ಬೀಯಗದ ಕೈಯ ತರ್ಪಂತಿರೆ (ಸೋಮಕ. ೦-೮೮). **ಜವಳಿಗದ**: ಜವನಿಕೆಯ ಸೆಱಗು ಸರಿವಂತೆ ಘಳಘಳಿಲೆಂದು ಜವಳಿಗದದೆಗೆಯೆ (ಸೋಮಪುಚ. ೫-೩೫) ; ಜವಳಿಗದವಂ ದ್ವಾರವಟ್ಟದ ಹವಣಿಗಾ ಬಾಗಿಲೊಳಮರ್ಚಿಸಿ (ಬಸಪು. ೦೬-೯) ; ಎನ್ನಧರ ಜವಳಿಗದ ಎನ್ನ ನಾಸಾಪುಟವು ನನ್ನಿಯಿಂ ಸೌರಭ್ಯ ರಸಘಟಿತವು (ಸುಸಾರ. ೦೬-೩). **ಜವಳಿಗದಹು** : ಅಲರ್ಗಣ್ಣವೆಯ ಜವಳಿಗದಹುಗಳನುಗಿದದ್ದು ನಿಂದು (ಸಾಂಡಪು. ೦೨-೪೨). 'ಅಮಳ್ಗದ' ಪರಾ.
[ ಜವಳಿ₃ (<ಜಮಳ) + ಕದವು₁ ]

**ಜವಳಿಗದಹು** 'ಜವಳಿಗದವು' ನೋ.

**ಜವಳಿಗವಾಟ** (ನಾ).=ಜವಳಿಗದವು : ಜವಳಿಗವಾಟದ ಬೀಯಗದ ಬಲು ಲಾಳವಿಂಡಿಗೆಯ ಹುಲಿಮುಖದ ಹರಿಯುಗವ ಸುತ್ತಲು ನಿಲಿಸಿ . . . ರಾಜಾಲಯದ ಬಲ್ಮೆಯ ನೋಡೆ ಬೆಱಗಾದ (ಪ್ರಾಚಾ. ೩-೩೧). [ಜವಳಿ₃ (<ಜವುಳ) + ಕವಾಟ]

**ಜವಳಿಗಹಳೆ, ಜವಳಿಗಾಳೆ** (ನಾ). ಜೋಡಂಕಹಳೆ : ಧವಳಶಂಖಂ ಕರೆವ ಜವಳಿಗಹಳೆಗಳಲ್ಲಿ . . . ನೆರೆದುದು ಚಾತುರಂಗಬಲ (ಇಹರ. ದೇ. ೩೫-೧). **ಜವಳಿಗಾಳೆ:** ಪಟಹದ ಢಕ್ಕೆಯ ಧವಳಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ . . . ಕೋಲಾಹಳಂ ನೆಗಳೆ (ಗಿರಿಕ. ೬-೬೩ ವ). [ಜವಳಿ₃ (<ಜವುಳ) + ಕಹಳೆ]

**ಜವಳಿಗಾಳೆ** 'ಜವಳಿಗಹಳೆ' ನೋ.

**ಜವಳಿಗುಳ** (ನಾ). ಎರಡು ಬಗೆಯ ಕೆರಿಗೆ : ಧರ್ಮ್ಮಗುರುಗಳಲ್ಲಿ ಜವಳಿ [ಗು]ಳವಂ ಮನ್ನಣೆ ಪ್ರತಿಪತ್ತಿವೆರಸು ಬ್ರಹ್ಮಪುರಿಗೆ ಕೇರಿಯ[ಕೆ]ಯ್ಯುವಂ . . . ಪಡೆದು (ಸೌಇಇ. XI-¹. ೩೪-೦೬ ; 1028). [ಜವಳಿ₃ (<ಜವುಳ) + ಕುಳ₂]

**ಜವಳಿಗೊಡೆ** (ನಾ). ಜೋಡು ಕೊಡೆ.–ಛತ್ರಿ : ಲಲನೆಯ ಬಾಸೆಯ ಕರ್ಪೇಂ ಗೆಲೆವಂದುದೊ . . . ಮೊಲೆಯೆಂಬ ಜವಳಿಗೊಡೆಗಳ್ಗಲರಂಬು ತಿರ್ದಿ ಪಿಡಿದ ನೀಲದ ಕಾವಂ (ಅನಂಪು. ೧೨-೭೪). 'ಅವಳ್ಗೊಡೆ' ಪರಾ. [ಜವಳಿ₃ (<ಜವುಳ) + ಕೊಡೆ₂]

**ಜವಳಿಗೊಳ್** 'ಜವಳಂಗೊಳ್' ನೋ.

**ಜವಳಿಗೊಳಿಸು** (ಕ್ರಿ). ಜೊತೆಗೂಡಿಸಂ ; ಸೇರಿಸಂ : ಸಜ್ಜೆಯ ಮನೆಯ ಸಿರಿಮಂಚದ ಹಂಸತೂಳತಳ್ಪದೊಳ್ಜವಳಿಗೊಳಿಸಿ ತಾನುಂ ಸಖೀಜನವುಮಂ ಜಾಣಂ ಜಾಱಿರ್ (ಮಲುಕ. ಹ. ೧೬೯-೨೪) ; ಅಗಲ್ದೋರ್ಪರ್ಗಿದು ಜವಳಿ ಗೊಳಿಪ ಮಂತ್ರದ ಸದನಂ (ಧೀರಪಿ. ೦-೩೪). [ಜವಳಿಗೊಳ್ + –ಇಸು₃]

**ಜವಳಿಜಂತ್ರ** (ನಾ). ಜೋಡಿ ಯಂತ್ರ ; ಅವಳಿಯಾಗಿರುವ ಯಂತ್ರ : ಸಾನಂದದಿಂದೆ ನೆರೆದವರ್ಗಿನಾನಾಂಕನ ಜವಳಿಜಂತ್ರವೆಂಬಿನಮಿನಿಯರ್ (ಉದ್ಭಟ. ೮-೧೧೬) ; ಸೂಳೋಸರಿಸೆ ಕೆಡಪಿದ ಜವಳಿಜಂತ್ರದ ಬೊಂಬೆ ಯೆನಲೀರ್ವರು ಮಱೆದರೊಡಲ (ಸಾಳ್ವಭಾ. ೦೮-೩೬). 'ಅವಳ್ಜಂತ್ರ' ಪರಾ. [ಜವಳಿ₃ (<ಜಮಳ) + ಜಂತ್ರ]

**ಜವಳಿಜೀವ** (ನಾ). ಒಂದೇ ಬಗೆಯಾದ ಎರಡು ಜೀವ ; ಅವಳಿಜೀವ : ಹವಣಿಗೆ ನಿಲ್ಲುವದೇ ಕೊನರಿ ಕೊಬ್ಬಿದ ಸ್ನೇಹದವಳನು ತೊರೆಯೆಂದರೆನಗೆ ಜವಳಿಜೀವಗಳಂತೆ ಸುರತದೊಳಿರ್ದೆಲ್ಲದಿವತಿಯನೆಂತು ಪೊಲಿಸುವೆ (ಸೌಂದಕಾ. ೪-೬೩). [ಜವಳಿ₃ (<ಜಮಳ) + ಜೀವ]

**ಜವಳಿಝಣಂಬ** (ನಾ). ಒಂದು ಬಗೆಯ ಜೋಡಿ ವಸ್ತ್ರ.–ಗೌರವದ ಉಡಂಗೊರೆ : ಜವಳಿಝಣಂಬವುಮಂ ಕೊಡೆಯುಮನನ್ನಳವುಮಂ ಚಮರೀ ರುಹಂಗಳಂ (ಬೊಂಕಶಾ. ೦೯೩೪, ಹಿರೇಕೆರೂರ್. ೨೦–೨೪ ; 1121). [ಜವಳಿ₃ (<ಜವುಳ) + ಝಣಂಬ (<ಜಳಂಬ)]

**ಜವಳಿದಟ್ಟಿ** (ನಾ). ತಟ್ಟಿಗಳ ಜೊತೆ ; ಎರಡು ತಬಕ : ಜವಳಿದಟ್ಟಿಗಳು ಗೋಮುಖವು ದೀವಸ್ತಂಭ ಚವುರಿಸತ್ತಿಗೆಗಳು (ಕೃಷ್ಣವಿ. ೨-೪೩). [ಜವಳಿ₃ (<ಜವುಳ) + ತಟ್ಟಿ]

**ಜವಳಿದಲೆ** (ನಾ). ಜೋಡಿತಲೆ ; ಎರಡುತಲೆ : ಬೇರೊಂದಱಿನೆರಡಾದ ಲತಿಕೆಯೋ ಮಾರಾನಲನ ಜವಳಿದಲೆಯೋ . . . ಎಂಬಂತೆ (ಜಯಶಾ. ೨-೯). 'ಜವಳಿದಲೆಗ', 'ಜವಳಿದಲೆವಕ್ಕಿ' ಪರಾ. [ಜವಳಿ₃ (<ಜವುಳ)+ ತಲೆ₁]

**ಜವಳಿದಲೆಗ** (ನಾ).=ಜವಳಿದಲೆವಕ್ಕಿ : ಜವಳಿದಲೆಗನಳಲಿಸಿ ಬಂದು ತಾಂ ಗಜದ ಮೆಯ್ಯೊಳಲ ಸಾರ್ದು ಸೈತಳಿಸುವುವು (ನಂದಿಮಾ. ೨-೨೫). [ಜವಳಿದಲೆ + –ಗ₂]

**ಜವಳಿದಲೆವಕ್ಕಿ** (ನಾ). ಎರಡು ತಲೆಯ ಹಕ್ಕಿ ; ಗಂಡಭೇರುಂಡ : ಜವಳಿದಲೆವಕ್ಕಿಗಳನೇಳ್ಗೆವೆತ್ತುದು (ಶೀವಣ. ೩೬-೬). 'ಅವಳ್ದಲೆವಕ್ಕಿ' ಪರಾ. [ಜವಳಿದಲೆ + ಪಕ್ಕಿ₁]

**ಜವಳಿದುಂಬಿ** (ನಾ). ತುಂಬಿಗಳ ಜೋಡಿ:ಎಕ್ಕಲದುಂಬಿಯಿಂ ಜವಳಿದುಂಬಿ ಯಿಂ . . . ಬಗೆಗೊಂಡುದು ಕೂಡೆ ಬನಂ ಬಸಂತದೊಳ್ (ಸೂಕ್ತಿಸು. ೦೧-೧೦). [ಜವಳಿ₃ (<ಜವುಳ) + ತುಂಬಿ₁]

**ಜವಳಿದುಮ್ಮಾನ** (ನಾ). ಇಮ್ಮಡಿಯಾದ ದುಃಖ – ಚಿಂತೆ : ದುರ್ಯೋಧನನ ಜನನಿಯು ಜವಳಿದುಮ್ಮಾನವನು ಬಣ್ಣಿಸಲಱಿಯೆ (ಕುಮ್ಮಾಅ. ೭-೪೬). [ಜವಳಿ₃ (<ಜವುಳ) + ದುಮ್ಮಾನ]

**ಜವಳಿದೆಗೆ** (ಕ್ರಿ). ದ್ರವವಿಲ್ಲದಂತಾಗು ; ಒಣಗಿಹೋಗಂ : ತವಕ ತಗ್ಗಿತು ಭಟರ ತಾಳಿಗೆ ಜವಳಿ[ಪಾಠಾಂ. ದ್ರವವ]ದೆಗೆದುದು ಮನಕೆ ಭೀತಿಯ ಗವಸಣಿಗೆ ಘಾಡಿಸಿತು ಜಾಳಿಸಿತದಟರ ಪಸರಣ (ಕುಮ್ಮಾದ್ರೋ. ೧೫-೩೦). [ಜವಳಿ₂ (<ಜವುಳು) + ತೆಗೆ₁]

**ಜವಳಿನುಡಿ** (ನಾ.) ೧. ಎರಡು ಮಾತಂ ; ಎರಡು ಶಬ್ದ : ಅವಿರತಂ ಕಲ್ಯಾಣದೊಳಗೆಣಿಸುವರೆ ಜನನುಂ ಬಸದಿಯೆಂಬೀ ಜವಳಿನುಡಿಯುಲ್ಲಿನಲು ಹುಡಿಹುಡಿಮಾಡಿ . . . ಅತಿಶೌರ್ಯ ಗುಣವರ್ಧನನೆನಿಸಿದ(ಬಸಪು. ೫೨-೪೪). ೨. ಇಬ್ಬಗೆಯಾದ ಮಾತಂ; ಮೊದಲು ಆಡಿದುದನ್ನು ಅಲ್ಲಗಳೆಯುವ ಎರಡನೆಯ ಮಾತು : ಜವಳಿನುಡಿಗಂಜುವೆನು ಘನ ಪಾಪವನು ಪೂಡಿ ದವಂಗೆ ಮಗಳನು ಜವದಿ ಕುಡುವಾ ಭಾಷೆ ತನ್ನದು (ರಾಮಾಸಂ. ೧-೪-೨೩). [ಜವಳಿ₃ (<ಜವುಳ) + ನುಡಿ₂]

**ಜವಳಿಪಡಿ** 'ಜವಳಿವಡಿ' ನೋ.

**ಜವಳಿಮದ್ದಳೆ** 'ಜವಳಿವದ್ದಳೆ' ನೋ.

**ಜವಳಿಯಂಗಡಿ,ಜವಳಿಅಂಗಡಿ** (ನಾ).ಬಟ್ಟೆಯಂಗಡಿ: ಚಕಚಕಿಸುತಿರ್ದವಾ ಜವಳಿಯಂಗಡಿಗಳತಿ ಸಿಂಗರಿಸಿ ಸೊಬಗುವೆರಸಿ (ಗುರು ಚಾ. ೦-೩೨). **ಜವಳಿಅಂಗಡಿ:** ಝಗಝಗಿಸುವ ಜವಳೀಅಂಗಡಿ ಸಾಲುಗಳಿಂದಲಿಹ (ಸಾಗಂಧಿ. ೫೦೯-೦೨). [ಜವಳಿ₁ + ಅಂಗಡಿ (<ಅಂಗಾಡಿ)]

**ಜವಳಿವಡಿ, ಜವಳಿಪಡಿ** (ನಾ).=ಜವಳಿಗದವು : ಎಳದಂಗಿನೆಳೆಯೆಲೆ ಯನವರ್ಕವಡೆಯ ಪೆಣೆದು ಸಂಪಗೆಯ ಮುಗುಳ ನಗೆ[ನೆ]ಗಳಂ ಕೆತ್ತಿಸಿ ಬಿತ್ತರುಬಡೆದ ಜವಳಿವಡಿಗಳೊಳಂ (ಚಂದ್ರಪ್ರ. ೭-೯೫ ವ). **ಜವಳಿಪಡಿ:** ಪಚ್ಚೆಯ ಲೋವೆ ಪವಳದ ಪೊಳೆವ ಜವಳಿಪಡಿಯಿಂದ . . . ಇಳೆಗತಿ ಚೆಲುವಾಗಿಹುವು (ಅಂಜಿಚ. ೩-೦೦೨). [ಜವಳಿ₃ (<ಜವುಳ) + ಪಡಿ₂]

**ಜವಳಿವದ್ದಳೆ, ಜವಳಿಮದ್ದಳೆ** (ನಾ). ಜೋಡಿಮದ್ದಳೆ ; ಮದ್ದಳೆಗಳ ಜೊತೆ : ಯಮಳವರ್ದಳ – ಜವಳಿವದ್ದಳೆ (ಕಮುದ. ೨೯೫ ಪ್ರಯೋ). **ಜವಳಿಮದ್ದಳೆ:** ಬೀಣೆಯ ಜವಳಿಮದ್ದಳೆಯ ಕಂಸಾಳೆಯ ಸಂಕಿನ ಕಾಳೆಯದ ಮೇಳದವರ್ (ರಾಮಾಕ್ಷ. ೭೮-೦೯). [ಜವಳಿ₃ (<ಜಮಳ) + ಮದ್ದಳೆ (<ಮದ್ದಲೆ)]

**ಜವಳಿವಸರ** (ನಾ).=ಜವಳಿಯಂಗಡಿ: ನಮ್ಮಂತೆ ಧರೆಯೊಳಗೆ ಪೆಣ್ಣೀಡುಗಳ ಲಜ್ಜೆಯಂ ಕಾಯ್ವ ಪಿರಿಯತನಮೆಲ್ಲಿಯುದೆನಿಪ್ಪ ಪೆರ್ಮೆಯೊಳಲ್ಲಿ ಜವಳಿವಸರಗಳೆಸೆದುವು (ಜಲಪು. ೧೦-೪೫). [ಜವಳಿ₁ + ಪಸರ]

**ಜವಳಿವಾತು** (ನಾ). = ಜವಳಿನುಡಿ ೨ : ಬಿಡು ಜಾಳುನುಡಿಗಳ ಜವಳಿ ವಾತನೆನುತ್ತ ನರನೆಚ್ಚ (ಕುಮ್ಮಾಕ. ೨೨-೨೪). [ಜವಳಿ₃ (<ಜಮಳ) + ಮಾತು₁]

**ಜವಳಿವಿಡಿ** (ಕ್ರಿ). ಜೊತೆಯಾಗಿ ಹಿಡಿ; ಜೋಡಿಸಿ ಹಿಡಿ: ಹರಿ ನಗುತೆರಡು ಕೈಯಲಿ ಜವಳಿವಿಡಿದಿಬ್ಬರನು ವರಕೈಲಾಸಪರ್ವತಕೆ ಅವದಿರನು ತಿರಿಹಿಟ್ಟಡೆ . . . ಬಿದ್ದರು (ನಿಳಾಗ. ೦೦-೫೬-೦೩). [ಜವಳಿ₃ (<ಜಮಳ) + ಪಿಡಿ₁]

**ಜವಳಿವೆಟ್ಟು** (ನಾ). ಎರಡು ಬೆಟ್ಟ; ಬೆಟ್ಟಗಳ ಜೋಡಿ: ಜವಳಿವೆಟ್ಟುಗಳ ಮೇಲೆ ಮಳೆಗರೆವ ಮೇಘಗಳಂತೆ ಕರ್ಣದುರ್ಯೋಧನರ ಮೇಲೆ ಬಾಣದ ಮಳೆಯಂ ಕರೆವುತ್ತಂ (ಭಾರತಾಂ. ೪). [ಜವಳಿ$_2$ (<ಜವಳ) + ಬೆಟ್ಟು$_2$]

**ಜವಳಿವೆಳ್ಗು** (ನಾ). ಚಂದ್ರರ ಜೋಡಿ : ಜವಳಿವೆಳ್ಗು ಮನುಜರೂಪದಿ ನವನಿಯೊಳೊಗೆದಂತೆ ಕಾಂತಿ ಮೆರೆದಪುವಿಂದಿಂತಿವರ್ಗಳ ಚೆಲ್ವಿಕೆ (ಯಶೋಚ. ೧-೬೨): ಪೊಳೆವಮದ್ದಂ ಕಾಂಚನಯುಗ ಕಳಶಕ್ಕಂ ಜವಳಿವೆಳ್ಗಿಯ ಕರೆವಂತೆರಡುಂ ಬಿಳಿಯಾನೆ ಮಿಸಿಸೆ . . . ಲಕ್ಷ್ಮಿಯಂ ಸತಿ ಕಂಡಳ್ (ಅನಂಪು. ೪-೦೦೩). [ಜವಳಿ$_2$ (<ಜವಳ) + ವೆಳ್ಗು]

**ಜವಳಿಸು** (ಕ್ರಿ). ಜೊತೆಗೂಡು ; ಒಂದೆಡೆ ಸೇರು ; ಕೂಡಿಕೊಳ್ಳು : ಎಳಮುತ್ತುಗಳ ಚಂದ್ರಿಕೆ ಜವಳಿಸಿದವೊಂದೊಂದನೌಕಿದವವಿರಳಿತ ಮಣಿಕಿರಣವೇಣೀಬಂಧಬಂಧುರದಿ (ಕಾವ್ಯಸ. ೧೩-೨೬) ; ಒಸೆದೆರಡುಕಡೆಯಾನೆಗಳು ಜವಳಿಸಿ ಬರಲು ಹರವೀಥಿಯಲಿ ಈಕ್ಷಿಸುವ ಜನಗಳ ಕಣ್ಣ ಪುಣ್ಯದ ಪುಂಜವೆನಿಸಿದರು (ಶಾಳ್ವಭಾ. ೦೩-೦೦). [ಜವಳ$_1$ (<ಜವಳ)+ –ಇಸು$_2$]

**ಜವಳು** 'ಜವುಳು' ನೋ.

**ಜವಳೆ** 'ಜಳವೆ' ನೋ.

**ಜವಳೆಪಾದ** (ನಾ). ಗಳುವಿನಂತಹ ಕಾಲು ; ಉದ್ದವಾಗಿದ್ದು, ತೆಳುವಾಗಿರುವ ಕಾಲು (?): ಆವ ಸ್ತ್ರೀಯು ವಿದ್ರೂಪವು ಬೆಳ್ಳಾಗಿಯುದ್ದವಳು ಜವಳೆಪಾದವುಳ್ಳವಳು . . . ಪುರುಷಂಗೆ ವೈರಮನೆಯ್ದುವರು (ಸಾಮುಲ. ೩೬-೦೩). [ಜವಳೆ (<ಜಳವೆ) + ಪಾದ]

**ಜವಾಜಿ** 'ಜವಾದಿ' ನೋ.

**ಜವಾಜಿಮಿಗ** 'ಜವಾದಿಮಿಗ' ನೋ.

**ಜವಾದಿ, ಜವಾಜಿ, ಜವ್ವಾಜಿ, ಜವ್ವಾದಿ** (ನಾ). ಒಂದು ಬಗೆಯ ಸುಗಂಧದ್ರವ್ಯ; ಪುನುಗು : "ಪುಣುಗು ಮಾರ್ಜಾಲಿಯೆನೆ ಜವಾದಿಯೆನಿಕ್ಕು" (ಮಂಗರಾ. ೯೯-೨೨) ; ಮೃಗಮದದ ಚಂದನದ ಕರ್ಪೂರದಗಿಲು ಸಾದು ಜವಾದಿಗಳ ಸಿಂಪುಗಳಿನೆಸೆದುದು ನೋಡೆವಾರವಧೂಟಿಕಾನಿಳಯ (ಬಸಪು. ೦೨-೦೦): ವರ ಜವಾದಿ [ಪಾಠಾಂ. ಜಿ]ಯ ಶೃಂಗಗಳ ಕರ್ಪೂರದ ತವಲಾಯಿಗಳ ಸಾದಿನ ಭರಣಿಗಳ ಮೃಗನಾಭಿಗಳೆನಡಕಿದರು ಬಂಡಿಯಲಿ (ಕುಮ್ಯಾಅ. ೦೨-೦೬). **ಜವಾಜಿ :** ಅಗಿಲು ಸಾದು ಜವಾಜಿ [ಪಾಠಾಂ. ದಿ] ಚಂದನ ಮೃಗಮದಂ ಘನಸಾರ ಗಂಧಾದಿಗಳನೆಲ್ಲಂ ತೆಗೆದು ಪನ್ನೀರಿಂದ ಮೇಳಯಿಸಿ (ಬಸಪು. ೯. ೩೫) ; ಸಾಧು ಜವಾಜಿ ಕತ್ತುರಿ ಗಂಧಲೇಪದಲಿ . . . ಆಹವಕ್ಕನುವಾದನಭವನ್ನು (ಕುಮ್ಯಾರ್ದ್ರೋ. ೪-೪೪). **ಜವ್ವಾಜಿ :** ಕಪ್ಪುರಕೆ ಕರಂಡು ಎಂಬುದು ಪೊಪ್ಪುವ ಜವ್ವಾಜಿಗೆ ವಂಕಿ ಚಿನ್ನ ಬೆಳ್ಳಿಗೆ ತೊಹಂ (ಪ್ರವಹಾ. ೩-೦೬ ಅನು. ೦) ; ಶ್ರೀಗಂಧವನ್ನು ಕರಿ ಅಗರುಗಂಧದಿಂದಲೂ, ಜವ್ವಾಜಿ ಕಸ್ತೂರಿ ಮುಂತಾದವುಗಳನ್ನು ಸೇರಿಸಿ ಧರಿಸಿದಲ್ಲಿ ಹೆಚ್ಚು ವಾತಾದಿ ದೋಷಗಳು ಪರಿಹಾರವಾಗುವುವು (ಸಕಪ್ಪ.೪೦). **ಜವ್ವಾದಿ:** ಓರಣದ ಬೀದಿಯುಲಿ ತಳಿತುವು ತೋರಣಂಗಳು ಹಲವು ಪರಿಯಲಿ ಸಾರಿಸಿತು ಮುಗಿಲುಗಳು ಸಾದು ಜವ್ವಾದಿ ಕೆಸರಿನಲಿ (ಸಂಭಪ ೨೦-೯೯).

**ಜವಾದಿಕೋಲಾಹಲ, ಜವಾದಿಕೋಳಾಹಳ, ಜಾವಾದಿಕೋಳಾಹಳ** = ಜವಾಜಿಯ ಪರಿಮಳದಂತೆ ಪಸರಿಸಿದ ಕೀರ್ತಿಯುಳ್ಳವನು; ಒಂದು ಬಿರುದು : ನರಲೋಕದಲ್ಲಣಂ . . . ನೃಪತಿಕೋಲಾಹಲಃ; ಜವಾದಿಕೋಲಾಹಲಂ (ಶಬ್ದಾಮ. ೨೯೩ ವ್ಯಾಖ್ಯಾ) : ಜವಾದಿಕೋಳಾಹಳ ಪೇಸಾಳಿ ಹನುಮಪ್ಪಅರಸಂಗ ಮೊವೆಗಾಟಿ ಗೇಣಾಂಕ (ಮೈಅರಿ. ೦೯೪೬, ೨೫-೨; 1495); ಜವಾದಿಕೋಳಾಹಳ ! ಘೇಣಾಂಕ ಚಕ್ರೇಶ್ವರ! (ಬಿರುಗಂ. ೨೮-೧೮); ಶ್ರೀವೀರಘೇಣಂಕಚಕ್ರೇಶ್ವರ ಜಾವಾದಿಕೋಳಾಹಳ ಪೇಸಾಳಿ ಹನುಮಗಜಬೇಂಟೆಗಾಟಿ ಬಿರುದುಂ (ಎಕ. XIV, ಎಳಂದೂ. ೦೫-೯; ?). [←ಹಿಂ. ಮರಾ. ಜವಾದೀ ; ಪಾರ. ಜಬಾದ್; ಅರ. ಜಬ್ಬಾದ್]

**ಜವಾದಿಮಿಗ, ಜವಾಜಿಮಿಗ** (ನಾ). ೧. ಪುನುಗಿನ ಬೆಕ್ಕು. ೨. ಕಸ್ತೂರಿ ಮೃಗ: (+). **ಜವಾಜಿಮಿಗ :** (+). [ಜವಾದಿ + ಮಿಗ]

**ಜವಾಧಿಕ** (ಗು). ಹೆಚ್ಚಾದ ವೇಗವುಳ್ಳ ; ಬಲು ಚುರುಕಾದ: (+). [ಜವ$_2$ + ಅಧಿಕ]

**ಜವಾನ** (ನಾ). ಸೇವಕ ; ಆಳು ; ಚಪರಾಸಿ : ಉಡುಪಿನಿಂದಲೂ ರುಮಾಲಿನಿಂದಲೂ ಸರ್ಕಾರಿ ಜವಾನರೆಂದು ತಿಳಿಯಿತು (ಹಂಗಾಳ್ಮ. ೦೦೦); ತಮ್ಮ ಮನೆಯ ಜವಾನನಿಗೆ ಬಟ್ಟೆಗಳನ್ನು ಒಗೆದು ಇಸ್ತ್ರೀ ಮಾಡಿಕೊಡುವಂತೆ ಹೇಳಿದನು (ಕಲಾಪಾ. ೫). [←ಪಾರ. ಹಿಂ. ಮರಾ. ಜವಾನ್]

**ಜವಾನಿ** (ನಾ). ಕೆಲಸದವಳು ; ಒಕ್ಕಲಗಿತ್ತಿ : ಕುಸುಮಳ ಮನೆಯ ಜವಾನಿ ಬಂದಳು (ಜಕಾಂಗಿ. ೦೧೪). [ಜವಾನ + – ಇ$_2$]

**ಜವಾಬ್** 'ಜವಾಬು' ನೋ.

**ಜವಾಬ್‌ಸವಾಲ್, ಜಬಾಬುಸವಾಲು**(ನಾ). ಪ್ರಶ್ನೆ ಕೇಳುವುದು ಮತ್ತು ಉತ್ತರವನ್ನು ಪಡೆಯುವುದು ; ಪ್ರಶ್ನೋತ್ತರ ; ವಿಚಾರಣೆ : ಈ ಪ್ರಕಾರ ಜವಾಬ್‌ಸವಾಲ್ ಆಗುತ್ತಾ ಇರುವಾಗ್ಗೆ (ರಾಜೇಂದ್ರ. ೧೧). **ಜಬಾಬುಸವಾಲು :** ಜಬಾಬುಸವಾಲು ಮಾಡುವ ನಿಮಿತ್ತಾ ಹೈದರಲ್ಲಿ ಖಾನರು ದಿಂಡಿಗಲ್ಲಿಂದ ಪಟ್ಟಣಕ್ಕೆ ಬಂದರು (ಹೈದರ್. ೭೩). [←ಪಾರ. ಹಿಂ. ಜವಾಬ್‌ಸವಾಲ್; ಮರಾ. ಜವಾಬ್‌ಸವಾಲ್, ಜಬಾಬ್‌ಸವಾಲ್]

**ಜವಾಬದಾರ** 'ಜವಾಬುದಾರ' ನೋ.

**ಜವಾಬದಾರಿ** 'ಜವಾಬುದಾರಿ' ನೋ.

**ಜವಾಬು, ಜಬಾಬು, ಜವಾಬ್** (ನಾ). ೧. ಉತ್ತರ ; ಮರುನುಡಿ ; ಎದುರುನುಡಿ : ಆ ಮೈಸೂರವರು ಮಾಡಿದ್ದಕ್ಕೆ ಪ್ರತಿಜವಾಬು ಕೊಡುವ ಬಗ್ಗೆ . . . ನಾವು ಹಾಜರು ಇದ್ದೇವೆ (ರಾಜೇಂದ್ರ. ೩) ; ಮಾತಿಗೆ ಮಾತು ಜೋಡಿಸಿಕೊಂಡು ನನಗೆ ಜವಾಬು ಹೇಳುತ್ತಿದ್ದಳು (ಹಂಗಾಳ್ಮ. ೧೩೮). ೨. ಮೊಕದ್ದಮೆಯ ವಿಚಾರಣೆಯಲ್ಲಿ ಆರೋಪಿ ಅಥವಾ ಸಾಕ್ಷಿದಾರನು ನೀಡುವ ಹೇಳಿಕೆ: ರಾಮಪ್ಪನ ತಾಯಿ ಅಕ್ಕ ಇಬ್ಬರ ಜವಾಬನ್ನೂ ಈಗಲೇ ತೆಗದುಕೊಂಡು ಬಿಡೋಣ (ನಾಪೋಲೀ. ೨೦೨). ೩. ಹೊಣೆ ; ಜವಾಬ್ದಾರಿ. 'ಜವಾಬುದಾರಿ' ಪರಾ. ೪. ಪತ್ರ; ಕಾಗದ : ಕಾಗದ ಬರೆದು ಹತ್ತುದಿನಗಳಾದರೂ ಜವಾಬು ಬರಲೇ ಇಲ್ಲ (ರೂಢಿ). **ಜಬಾಬು :** ೧. 'ಜಬಾಬುಸವಾಲು' ಪರಾ. **ಜವಾಬ್ :** ೧. ಸಿಡಿಲಿಗೆ ಸಿಡಿಲಾಗಿ ಜವಾಬ್ ಕೊಡುವುದು ತಾನೆ (ಕೊನಪ್ಪ. ೧೮). [←ಅರ. ಪಾರ. ಹಿಂ. ಜವಾಬ್; ಮರಾ. ಜವಾಬ್, ಜಬಾಬ್]

**ಜವಾಬುದಾರ, ಜವಾಬದಾರ, ಜವಾಬ್ದಾರ** (ನಾ). ಜವಾಬುದಾರಿಯುಳ್ಳವನು ; ಹೊಣೆಗಾರ : ಮನೆಯ ಖರ್ಚಿಗೆಲ್ಲಾ ಅವನೇ ಜವಾಬುದಾರನಾಗಿದ್ದಾನೆ (ರೂಢಿ). **ಜವಾಬದಾರ :** ಇವನು ಅರಸನಿಗೆ ಜವಾಬದಾರನಾಗಿದ್ದನು (ಹಿಂದುಇ. ೧೫೦) ; ಅವನ ತರುವಾಯ ವ್ಯವಹರಿಸಿದ ಯಾವತ್ತರು ಹುಂಡಿಯ ಹಣವನ್ನು ಕೊಡಲಿಕ್ಕೆ ಜವಾಬದಾರರಿರುತ್ತಾರೆ (ಮೋಹಿನೀ. ೩೦). **ಜವಾಬ್ದಾರ :** ಇಂತಹ ಗ್ರಾಮಗಳಲ್ಲಿ ಮೊದಲನೆ ಚೀಫ್ ಕರಣೀಕರುಗಳೇ ಹಣ ವಸೂಲಿ ಲೆಖ್ಖಗಳಿಗೆ ಜವಾಬ್ದಾರರಾಗಿರುವರು (ಗ್ರಾಮಾಕ. ೩). [←ಪಾರ. ಹಿಂ. ಮರಾ. ಜವಾಬ್‌ದಾರ್]

**ಜವಾಬುದಾರಿ, ಜವಾಬದಾರಿ, ಜವಾಬ್ದಾರಿ** (ನಾ). ಹೊಣೆ ; ಹೊಣೆಗಾರಿಕೆ : ನಿಮ್ಮ ಜವಾಬುದಾರಿಯನ್ನು ತಿಳಿದುಕೊಂಡು ವರ್ತಿಸಿರಿ (ರಂಗರೋ. ೫೮). **ಜವಾಬದಾರಿ :** ನಮ್ಮ ಕಣ್ಣ ಮುಂದ ಇದ್ದ ಮ್ಯಾಲೆ ಜವಾಬದಾರಿ ಹೊತಗೊಳ್ಳಬೇಕಾಗತದ (ಪ್ರನಿ. ೩೦೨). **ಜವಾಬ್ದಾರಿ :** ಮನೆಯವರಿಗೆ ಅನ್ನ–ಪಾನಗಳನ್ನು ತಯಾರಿಸಿಕೊಡುವ ಜವಾಬ್ದಾರಿಯು ಮನೆಯ ಗೃಹಿಣಿಯದು (ಅಡುಶಾ. ೫೬). [←ಮರಾ. ಜವಾಬ್‌ದಾರೀ]

**ಜವಾಬ್ದಾರ** 'ಜವಾಬುದಾರ' ನೋ.

**ಜವಾಬ್ದಾರಿ** 'ಜವಾಬುದಾರಿ' ನೋ.

**ಜವಾಬ್ದಾರಿಕೆ** (ನಾ). = ಜವಾಬುದಾರಿ: ಒಂದೊಂದು ಸಲ ಆ ಜವಾಬ್ದಾರಿಕೆಯ ಬಿಕ್ಕಟ್ಟು ಬಂದಾಗ (ಮುಂಗಾರು. ೦೦೧); ಜವಾಬ್ದಾರಿಕೆ ಮೈಮೇಲೆ ಹಾಕಿಕೊಂಡುದುದರಿಂದ . . . ನಗಲೂ ನನಗೆ ಸಾಧ್ಯವಿಲ್ಲ (ನಡೆದಾ. II, ೯೩೦). [ ಜವಾಬ್ದಾರ (<ಜವಾಬುದಾರ) + – ಇಕೆ ]

**ಜವಾಯಿಲ, ಜವಾಯ್ಲ** (ಗು). ಚುರುಕಾದ; ವೇಗವುಳ್ಳ; ವೇಗಶಾಲಿಯಾದ. 'ಜವಾಯಿಲತನ' ಪರಾ. ಜವಾಯ್ಲ: ಜೋಡಿಸಿದನಂದು ಜವಾಯ್ಲ ಜಾಯಿಲನ (ಕುಮಾ.ಅ. ೦೩-೦೯): ಆಯುಧದ ಮಳೆಗಳಲಿ ನನೆದ ಜವಾಯ್ಲ ತೇಜಿಗಳ . . . ಕರೆಕರೆದು ಬವರಕೆ ಕಳುಹಿಸಿದನು (ಕುಮಾ.ದ್ರೌ. ೦೩-೦೬). [ ಜವ$_2$ + – ಆಯಿಲ$_2$ ]

**ಜವಾಯಿಲತನ** (ನಾ). ಚುರುಕುತನ; ಚಟುವಟಿಕೆ; ವೇಗ: ಹಾಱಿದವು ಹಂಸಾವಳಿ ಜವಾಯಿಲತನದಿ ಜಗುಳ್ದವು ಜಕ್ಕವಕ್ಕಿಗಳು (ಕುಮಾ.ಗ. ೩-೨). [ ಜವಾಯಿಲ + – ತನ ]

**ಜವಾಯ್ಲ** 'ಜವಾಯಿಲ' ನೋ.

**ಜವಾರಿ$_1$** (ಗು). ಸ್ವದೇಶದಲ್ಲಿ ಹುಟ್ಟಿ ಬೆಳೆದ; ದೇಶೀಯ; ನಾಟಿ: ಸಣಬು ಜವಾರಿ ಚಲೋ ಕಾಗದಗಳನ್ನು ಮಾಡುವದಕ್ಕೂ ಗಟ್ಟಿನ ಹದಕ್ಕೂ ಬರುತ್ತದೆ (ಕೃಷಿಶ್ರ. ೮೬)'; ಇಲ್ಲಿಯೇ ಹುಟ್ಟಿ ಬೆಳೆದ ದನಗಳಿಗೆ ಜವಾರಿ ದನಗಳೆನ್ನುವರು (ಜಳಶ. ೩೨); ಮುಂದೆ ಬಣ್ಣಬಣ್ಣದ ಸಮವೇಷದಲ್ಲಿದ್ದ ಬ್ಯಾಂಡಿನವರು, ಅವರ ಹಿಂದೆ ಜವಾರಿ ಬಜಂತ್ರಿಯವರು (ಅಸ್ತ. ೨೬೦). [ ←ಮರಾ. ಜವಾರೀ, ಜವಾರ್ ]

**ಜವಾರಿ$_2$** 'ಜವಾಹಿರಿ' ನೋ.

**ಜವಾರಿಬಟ್ಟೆ** (ನಾ). ಸ್ವದೇಶಿ ಬಟ್ಟೆ: ಕೆಲವರು ಉರುಟಾಗಲೀ ತುಟ್ಟಿಯಾಗಲಿ ಜವಾರೀಬಟ್ಟೆಗಳನ್ನೇ ಉಪಯೋಗಿಸುತ್ತಾರೆ (ಮುಂಬಯಿ. ೪-೦೬೦). [ ಜವಾರಿ$_1$ + ಬಟ್ಟೆ$_2$ ]

**ಜವಾರಿಮಂದಿ** (ನಾ). ಗ್ರಾಮೀಣ ಜನ; ಹಳ್ಳಿಯ ಜನ: ಜವಾರಿ ಮಂದಿಗೆ ಅವೆಲ್ಲ ತಿಳಿಯೋದುಲ್ಲ (ಧನಂಜ. ೩೨). [ಜವಾರಿ$_1$ + ಮಂದಿ$_1$]

**ಜವಾಹಿರ** 'ಜವಾಹಿರಿ' ನೋ.

**ಜವಾಹಿರಿ, ಜವಾರಿ$_2$, ಜವಾಹಿರ, ಜವಾಹಿರು, ಜವಾಹೀರ$_1$, ಜವಾಹೀರು** (ನಾ). ೧. ಬೆಲೆಯುಳ್ಳ ಮಣಿ; ರತ್ನ: ಇದ್ದ ನಗದು ಜವಾಹಿರಿ ಸಾಗಿದಷ್ಟು ಹಣದ ಥೈಲಿಗಳ ಕಟ್ಟಿಸಿ (ಹೃದಕ. ೧೦೪). ೨. ರತ್ನಖಚಿತವಾದ ಒಡವೆ,–ಆಭರಣ: ಮೈಸೂರಿನ ಅರಮನೆಯ ಕರ್ಮಚಾರಿಗಳು ಜವಾಹಿರಿಗಳೆಲ್ಲವನ್ನೂ ತಂದು ಹಜಾರದಲ್ಲೆಲ್ಲಾ ಅಣಿಮಾಡಿಟ್ಟಿದ್ದರು (ಶ್ರೀಕಾಮ. ೨೬೩); ಸಂಜೆ ಜವಾಹಿರಿ ಅಂಗಡಿಗೆ ಕರೆದುಕೊಂಡು ಹೋಗುತ್ತಾರೆ (ಹಂಗೂಲಿ. ೦೪೯). ಜವಾರಿ$_2$: (+). ಜವಾಹಿರ: ೧. ಮುತ್ತು ಹವಳ ಮುಂತಾದ ಜವಾಹಿರ ಮಾಲಿನ ಖರೀದಿಗೆ ಅಡತಿ ಹಾಂಗು ಧರ್ಮಾದಾಯ (ಮುಂಬಯಿ. ೩೨, ಪ್ರಸ್ತಾವನೆ). ಜವಾಹಿರು: ೨. ಖಜಾನೆ ಹಣ ಜವಾಹಿರು ದೇವಸ್ಥಾನದ ವಡವೆಗಳು ಮುಂತಾಗಿ ವಂದು ಹಿಸ್ಸೆ ಸರಿ ಮಾಡಿಕೊಟ್ಟು (ಹೃದಕ. ೬೨): ಜವಾಹೀರ$_1$: ೧. ಜವಾಹೀರ (ರತ್ನ, ಹರಳು ಮುಂತಾದವುಗಳು) (ಮುಂಬಯಿ. ೦೩೮). ಜವಾಹೀರು: (+). [←ಅರ. ಫಾರ. ಜವಾಹಿರ್, ಜೌಹರ್; ಹಿಂ. ಜವಾಹಿರ್, ಜವಾಹರ್; ಮರಾ. ಜವಾಹೀರ್, ಜವಾಹರ್]

**ಜವಾಹಿರಿಹಿಡಿ** (ನಾ). (ಕತ್ತಿಯ) ರತ್ನಖಚಿತವಾದ ಹಿಡಿ: ಇದರಲ್ಲಿದ್ದ ಜವಾಹಿರಿಹಿಡಿ ಮತ್ತು ಮಖಮಲ್ ಒರೆ ಸಹಿತವಾದ ಒಂದು ಕತ್ತಿಯು ಹೋಳ್ಕರ್ ಮಹಾರಾಜರದೆಂದು ತಿಳಿಯಬಂತು (ಮಹಾಜಂ. II, ४೯). [ ಜವಾಹಿರಿ + ಹಿಡಿ$_2$ (<ಪಿಡಿ$_2$) ]

**ಜವಾಹಿರು** 'ಜವಾಹಿರಿ' ನೋ.

**ಜವಾಹೀರ$_1$** 'ಜವಾಹಿರಿ' ನೋ.

**ಜವಾಹೀರ$_2$** (ನಾ). ೧. ರತ್ನಪಡಿ ವ್ಯಾಪಾರಿ: ಪೇಟೆಯಲ್ಲಿ ಗಂಧೀಜನರ, ಜವಾಹೀರರ . . . ಅಂಗಡಿಗಳು ಅಂದವಾಗಿ ಕಾಣುತ್ತವೆ (ಮಂಜುಳ. ೮). ೨. ರತ್ನಪರೀಕ್ಷಕ. [ ←ಫಾರ. ಜೌಹರೀ; ಹಿಂ. ಜವಾಹರೀ, ಜೌಹರೀ ]

**ಜವಾಹೀರು** 'ಜವಾಹಿರಿ' ನೋ.

**ಜವಿ$_1$, ಜವೆ$_1$, ಜವೆ$_1$** (ನಾ). ಕೂದಲು; ಕೇಶ: ಪಿಡಿದ ಗೋವಳಿಗೋಲ ಮಾಲೆಗಳ ಹಾಹೆಯಿಂ ತೊಡರ ಬಾವುಲಿಯೊಳಗೆ ಜವಿ . . . ಎಸೆವುತಿರೆ ಬಂದು ಮಹಮಾನೆಯು ಗೋವಳಂ (ಬಸವ. ೯-೯೮); ತುದಿಯ ಬಾಲದ ಜವಿಯ ಬಿಡದವರಧಟನಿಂದಟ್ಟಿದರು (ಜನಧಾ. ೫೬-೨೨); ಅವುಗಳ ಕತ್ತಿನ ಮೇಲಿನ ಕೂದಲು ಕತ್ತರಿಸಿರಲಿಲ್ಲ . . . ಆ ಜವಿಯು ಎಳೆಬಿಸಿಲಿನಲ್ಲಿ ಹೊಳೆಯುತ್ತಿತ್ತು (ಹಂಗಾಳ್. ೬೦). ಜವೆ$_1$: (+). ಜವೆ$_1$: ಈ ಗಾದಿಯೊಳಗೆ ಕುದುರೆಯ ಜವೆಯನ್ನು ತುಂಬಿರುವ ಕಾರಣ (ಮುಂಬಯಿ. ೩-೨೦೬): ಜವೆ ಕತ್ತರಿಸುವವರು ನಿನಗೆ ನೆನಪಿದೆಯೆ (ಬಾದ್ಮ.ಪ. ೪೩ ಮಿಲಿಂದ). 'ಜವೆಗೊಂಕು' ಪರಾ. [ ದೇ.೩ ತೆಲು. ಜವ್ವಿ ]

**ಜವಿ$_2$** (ಗು). ೧. ಚುರುಕಾದ; ವೇಗಶಾಲಿಯಾದ; ವೇಗವಾಗಿ ಓಡುವ. (ನಾ). ೨. ವೇಗವುಳ್ಳವನು; ವೇಗವಾಗಿ ಓಡುವವನು: ಅವನಿವಲ್ಲಭನನ್ನ ಮಕ್ಕಳ ಯುವತಿಯರ್ಕಳ ಜಯಿಸಲಱಿಯದೆ ಜವಿಗಳಪಗತಮಾನರೈದಿದರಾತ್ಮಗಳ (ಕಿಡಿಡ. ೨-೪). ೩. ಕುದುರೆ. ೪. ಒಂಟೆ. [ ಸಂ. ಜವಿನ್ ]

**ಜವಿವಲೆ** (ನಾ). ಒಂದು ಬಗೆಯ ಬಲೆ: ಜ್ಞೋಯಿಸರ ಜವಿವಲೆ[ಪಾಠಾಂ. ಜವನಿಕೆ]ಗೆ ಸಿಲುಕೆನೆನುತ್ತ ಹೊಱವಂಟ (ಕುಮಾ.ಅ. ೨೨-೪); ಕರಿಯ ಜವಿವಲೆ ಮುಸುಕುವಲೆ ಬಿತ್ತರದ ನೇಣ್ವಲೆ (ಸಾಳ್ವಭಾ. ೩-೦೯). [ ಜವಿ ? + ಬಲೆ$_1$ ]

**ಜವುಗಿಡು, ಜೌಗಿಡು**(ಕ್ರಿ). ತೇವವಾಗು; ಆರ್ದ್ರವಾಗು: ಇಟ್ಟ ಕತ್ತುರಿಯ ತಿಲಕದ ಕಪೋಲದೊಳು ಜವುಗಿಟ್ಟೊ[ಪಾಠಾಂ. ಚಲುವಿಟ್ಟ]ಸರುವಂ ತೊಟ್ಟಿಕೊಂಡ ಪುಣಾಗಿನ ಕಂಪನೊಟ್ಟೈಸಿ (ಸೋಮಕ. ೨-೧೬). ಜೌಗಿಡು: "ಜೌಗಿಡು–ಜೌಳಿಸು, ದ್ರವಿಸು, ಜಿನುಗು, ಜವುಳಿಸು" (ಶಬ್ದಮ.). [ ಜವುಗು + ಇಡು$_1$ ]

**ಜವುಗು, ಜೋಗು$_2$, ಜೌಗು** (ನಾ). ೧. ತೇವ; ಒದ್ದೆ; ಜಿನುಗು: ಉಚ್ಚೆಯ ಜವುಗಿನ ಬಚ್ಚಲ ತಂಪಿನಲ್ಲಿ ನಿಚ್ಚಕ್ಕೆ ನಿಚ್ಚ ಹೊರಳುವ ಹೀಹಂದಿಯಂತೆ (ಅವಜಂ. ೬೦-೩೦೬); ನೆಲನೆಲ್ಲ ಜವುಗಾಯ್ತು ಮೊದಲು ಮತ್ತುಱ ತೇದು ತೊಳೆದುಹೋದುವು ಬಡ ಬೆಟ್ಟ (ಕರಡ. ೩೪-೬೦); ಕೆಳಗಡೆಗೆ ಜವುಗಾಗಿ ನೀರು ಜಿನುಗಿ (ಕಲ್ಯಾ.ಡ. ೬೩). ೨. ಯಾವಾಗಲೂ ನೀರು ಒಸರುವ ಪ್ರದೇಶ; ಜಿನುಗುವ ಭೂಮಿ; ಸದಾ ತೇವವಾಗಿರುವ ನೆಲ: (+). ಜೋಗು$_2$: ೧. ಉರ್ವೀತಳಮದು ನೆಱೆ ಜೋಗಿರ್ದು ಮೆಟ್ಟಲ್ಕೆ ಬಲ್ಪೊಂದೆಡೆಯಿಲ್ಲೆಂಬಂತೆ ಪಂಕಂ ಮಸಗೆ ನೆನೆದು (ಕುಸುಮಾ. ೬-೩೫). ಜೌಗು: ೧. ಸರ್ವಾಯುಧ ಪ್ರೋಚ್ಚಳಿತ ಪ್ರದ್ಯೋತದಿಂ ಭೂತಳಮದು ನೆಱೆ ಜೌಗಾಗೆ (ಕುಸುಮಾ. ೦೫-೦೦೩); ಸುರಿವ ಕರುಳೋಳಿಯಿಂ ಮಡಿದ ತುರಗಾಳಿಯಿಂ ಬಿಡುಮಿದುಳ ಜೌಗಿನಿಂದೆ . . . ರಣಭೂಮಿ ಕಣ್ಗೆಸೆದುದು (ಜಲಪು. ४४-४०); ಅಲ್ಲಿ ಜೌಗು ಹೆಚ್ಚು, ಪಾಚಿ ಕಟ್ಟಿದೆ, ಎಚ್ಚರಿಕೆ! (ಶಾಂತಲಾ. ೨೯೭). 'ಜೌಗೇಟ್' ಪರಾ. [ದೇ.೩ ತೆಲು. ಜವುಕು, ಜೌಕು]

**ಜವುಗೇಳ್** 'ಜವುಗೇಟ್' ನೋ.

**ಜವುಗೇಟ್, ಜವುಗೇಳ್, ಜೌಗೇಳು, ಜೌಗೇಟ್** (ಕ್ರಿ). ೧. ಒಸರು; ಜಿನುಗು; ತೇವವಾಗು. ೨. ಬಗ್ಗಡವಾಗು; ರಾಡಿಯಾಗು: 'ಜವುಗೇಟಿಸು' ಪರಾ. ಜವುಗೇಳ್: ೧. ಝಲ್ಲನೆ ಸೂಸೆ ಪೂಮಳೆ

ಮರಂದರಸಂ ಜವುಗೇಳೆ ತುಂಬಿಗಳ್ ನಿಲ್ಲದೆ ರಘುಂಕೃತಿಧ್ವನಿಯನೀಯೆ (ಹಾಲಾಸ್ಯ. ೧-೩-೨೯). ೨ ಬೀದಿಬೀದಿಗೂ ತೀವಿ ಕಾಲುವೆಗಟ್ಟಿ ಹರಿಯೆ ಗಜಾವಳಿಯುವದಘಟ್ಟಣದಿ ಜವು[ಪಾಠಾಂ.ಜೌ]ಗೆದ್ದ ಕೆಸಱ್ (ಬಸವು. ೧೧-೩). ಜೌಗೇಳು : ೨. ನೆಣವಸೆ ಕರುಳ್ಗಳ್ ಸುತ್ತಲುಂ ತೀವಿ ಜೌಗೆದ್ದಡಿಯಿರ್ಕಲ್ ಬಾರದೆಂಬಂತಿರೆ (ಸಕವ್ಯ. ೩. ಪ್ರಸ್ತಾವನೆ). ಜೌಗೇಳ್ : ೨. ಬಡಹಂ ಕೈಕೊಂಡುದುರ್ವಿನೀತಳವಾದು ನೆಱ ಜೌಗೆಳ್ದು ಮೆಟ್ಟಲ್ಕೆ ಬಲ್ಕೊಂದೆಡೆ ಯಿಲ್ಲೆಂಬಂತೆ ಕಂಪಲ್ಕಸಗೆ (ಶಾಂತೀಶ್ವ. ೧೨-೩೬). [ಜವುಗು + ಏಳ್$_1$]

**ಜವುಗೇಟಿಸು,ಜೌಗೇಟಿಸು** (ಕ್ರಿ).ಬಗ್ಗಡಗೊಳಿಸು; ರಾಡಿಯಾಗುವಂತೆ ಮಾಡು: ದೆಸೆಯಂ ಖಡ್ಗಾಂಶುಜಾಲಂ ಬೆಳಗೆ ಧರಣಿಯಂ ದಾನಧಾರಾಂಬು ಜವು[ಪಾಠಾಂ. ಜೌ]ಗೇಟಿಸೆ . . . ಮಾಮಸಕಂಗೊಂಡೆತ್ತಿ ಬಂದಂ (ಚಂದ್ರಪು. ೧೧-೩೮). ಜೌಗೇಟಿಸು : ದಂತಿದಾನಪ್ಲವದಿನವನಿಯಂ ಕೂಡೆ ಜೌಗೇಟಿ ಸುತ್ತುಂ ಇಳೆ ಕಂಪನಗೊಳ್ಸಿನಂ ಸಂಭ್ರಮದಿ ನಡೆತರುತ್ತಿರ್ಪ ಸೇನೆ (ಶಾಂತೀಶ್ವ. ೧೩-೧೦೮). [ಜವುಗೇಳ್ + – ಇಸು$_3$]

**ಜವುಳಿ$_1$** 'ಜವಳಿ$_1$' ನೋ.

**ಜವುಳಿ$_2$** 'ಜವಳ' ನೋ.

**ಜವುಳಿಗ** (ನಾ). (?) : ತಳವಾರನು ಸೂಳೆಗಾರ ಜವುಳಿಗ ಭಂಗಿಗ ಕಳುಗುಡಿ ಜೂಜಿಗ (ಕರಿಕ. ೧೦೯-೧೧). [ ? ]

**ಜವುಳು, ಜವಳಿ$_2$, ಜವಳು,** (ನಾ). ೧. ತೇವ ; ಒದ್ದೆ : ಹೊಳೆ ಗಳ ದಂಡೆಗಳಲ್ಲಿಯೂ ನೀರಿನ ಜವುಳು ಆಡುವ ಸ್ಥಳಗಳಲ್ಲಿಯೂ ಮೂರು ಜಾತಿಯ ಕಬ್ಬು ಒಳಿತಾಗಿ ಬೆಳೆಯುತ್ತದೆ (ಕಥಾಗ. ೨೬೩). ೨. ತೇವ ವಾದುದು ; ಒದ್ದೆಯಾದುದು : ಜವುಳ ಅಡವಿಯಲ್ಲಿಯೂ ಕೊಬ್ಬೇರಿ ಬೆಳೆದ ಹುಲ್ಲಿನಲ್ಲಿಯೂ ಅವು ಮೇಯುವುದಿಲ್ಲ (ಮುಂಬಯಿ. ೬-೧೦); ಗುಡ್ಡದ ಓರೆಯಲ್ಲಿ ಜವುಳ ಹಳ್ಳದೊಳಗೆ ಸಾವಿರಾರು ಕಪ್ಪೆಗಳು ಇರುತ್ತಿದ್ದವು (ಕನಾಕ. I, ೧೩೮). ಜವಳಿ$_2$: ೧. 'ಜವಳಿದೆಗೆ' ಪರಾ. ಜವಳು: ೨. ನಿನ್ನ ಸೇವಕರು ಜವಳುಪ್ರದೇಶವೆಂದು ತಿಳಿದು ನಿನ್ನ ತೀರ್ಥೋದಕಗಳಿಗಾಗಿ ತೋಡಿ ಸಿದ್ಧಪಡಿಸಿರುವರು (ಹುಳಸಿ. ೨೦೦) ; ಮಡವುಗಟ್ಟಿ ಮಲೆತು . . . ಒಂದು ಅಸಹ್ಯ ಜವಳುರಾಡಿಯ ವಿಸ್ತಾರವನ್ನೇ ಉಂಟುಮಾಡಿದವು (ವಿಜಾಶಾ. ೧೬); ಜವಳು ಭೂಮಿಗಳಲ್ಲದೆ ಮಾರ್ಗದಲ್ಲಿ ಬೇರೆ ಮನೋಹರ ವಾದದ್ದು ಏನೂ ಕಾಣಲಿಲ್ಲ (ಮೇಠಿಮ. ೧೬೯). [ <ಜವುಗು ]

**ಜವುಳುಗೊಳಿಸು** (ಕ್ರಿ). = ಜವುಗೇಟಿಸು; ಶೀತಹವೆಯಲ್ಲಿ ಭಾರವಾದ ಬಂಡಿಗಳ ಚಕ್ರಗಳು ಅವುಗಳನ್ನು ಉತ್ತು ಜವುಳುಗೊಳಿಸುತ್ತಿದ್ದವು (ಬೆಂಜನ್. ೨೦೦). [ಜವುಳು + ಕೊಳ್$_1$ + – ಇಸು$_3$]

**ಜವುಳೇಳು** (ಕ್ರಿ). = ಜವುಗೇಳ್ ೨ : ಜವದಿ ಕಾರ್ಮೇಘ ಒಡ್ಡೈಸಿ ಪೆರ್ಮಳೆ ಸುರಿದು ಜವುಳೇ[ಪಾಠಾಂ. ಗೇ]ಳೆ ಮೂರುದಿನ ಬಿಡದಿರಲು ದೂಷಕರು ತವತವಗೆ ಬಂದು ಪದಾಂಬುಜಕ್ಕೆಱಗುತಿರೆ (ಗುರುಚಾ. ೧೧-೩೬).

[ಜವುಳು + ಏಳು$_1$ (<ಏಳ್$_1$) ]

**ಜವೆ$_1$** 'ಜವಿ$_1$' ನೋ.

**ಜವೆ$_2$** (ನಾ). ೧. ಒಂದು ಬಗೆಯ ಧಾನ್ಯ ; ಯವಧಾನ್ಯ : ಜವೆ ಗೋಧಿ : "ಯವೆಯೆನಲು ಜವೆ" (ಹುಂಗರಾ. ೧೧೧-೩) ; ಜವೆಯ ಡಾಗರ ದೊಳಂ ಮಲರ್ವಂಡಿನ ಜಗಲಿಯೊಳಂ (ಕಾದಂಬ. ೬೮೩) ; ಜವೆ ಜೋಳಂ ಕೊಱ ಮೊದಲಾದುವರ್ಕೆ ಗಱೆವೊಂದು ತೆನೆಗಳೆರಡಾದಂದುಂ . . . ಅಱಗೆ ತತ್ಪ್ರತಿಯಟಿವಂ (ಲೋಕೋಪ. ೪-೩೬) ; ಜವೆ ದಿವ್ಯೌಷಧಿ ಪಾರಿ ಜಾತ ಕುಸುಮಂ ಸಿದ್ಧಾರ್ಥಮಾರ್ದ್ರಾಕ್ಷತಂ . . . ಕಸ್ತೂರಿ ಕಾಶ್ಮೀರಮೆಂಬಿ ವಱಂ ತೆಕ್ಕನೆ ತೀವಿ ಪೊಂಬರಿಯಣಂ ಬೆಳ್ವಾದುವಾ ಸದ್ಮದೊಳ್ (ಜಗವಿ. ೧೧-೯೮). ೨. ಒಂದರ ಯವೆಯ ಕಾಳಿನಷ್ಟು ತೂಕ: ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ ಕೊಱತೆಯಾದರೆ ಎನ್ನನದ್ದಿ ನೀನೆದ್ದು ಹೋಗು (ಬಸವ. ೪೪೦). ೩. ಉದ್ದವನ್ನು ಅಳೆಯುವ ಒಂದು ಪ್ರಮಾಣ ; ಅಂಗುಲದ ಎಂಟನೆಯ ಒಂದು ಭಾಗ : "ಕರಿ ಸಾಸಿವೆ ಯಾಗಲೊಂದು ಜವೆಯನಿಸಿಕುರ್ಗಂ ಕರಿ ಜವೆಯಾಗಲ್ಕಂಗುಲ" (ವ್ಯವಹಾ. ೮-೩೯ ಅನು. ೧).

ಜವೆಯ ಕೆಯ್ = ಯವೆಯನ್ನು ಬೆಳೆಯುವ ಹೊಲ : "ಜವೆಯ ಕೆಯ್ ಯವ್ಯಮೆಂಬುದು" (ಹಲಾಯು. ೨೬-೮).

[ <ಪ್ರಾ. ಜವ./ಸಂ. ಯವ ]

**ಜವೆ$_3$** (ನಾ). (ಮಾಟದ) ಮಂತ್ರ ; "ಮಾಯೆ" (ಪ್ರಕಣ) : ಎವೆಯಿಟ್ಟು ಕಣ್ಮುಚ್ಚಿದಂತೆ ಮೂಲೋಕಕೆ ಜವೆಯ ಮೋಜವ ಕಲ್ಪಿಸಿದಳು (ಮೋಹತ ೨೯-೮). 'ಜವೆಬೂದಿ' ಪರಾ.

[ <ಪ್ರಾ. ಜವ./ಸಂ. ಜಪ ]

**ಜವೆಗೊಂಕು** (ಕ್ರಿ). (ಅಲಂ) ಕೂದಲು ಕೊಂಕು ; ತೊಂದರೆಯಾಗು : ರವಿಸುತನಿಂತು ರಕ್ಷಿಸಿದ ಕಾರಣದೆ ಕೌರವನಂದು ರಾಯಕುವರಿಯ ಜವೆ ಗೊಂಕದಂತಿರೆ ಸೆಱಗೊಂಡು ನಾಗಪುರವ ಪೊಕ್ಕನತಿ ಹರುಷದೊಳು (ಕರ್ಣವ್ಯ. ೩-೨೨).

[ಜವೆ$_1$ (<ಜವಿ$_1$) + ಕೊಂಕು$_1$ ]

**ಜವೆಗೋದಿ, ಜವೆಗೋಧಿ** (ನಾ). ಗೋಧಿಯಲ್ಲಿ ಒಂದು ಬಗೆ; ಯವ: "ಜವೆಗೋದಿ – ಯವಗೋಧೂಮ" (ತದ್ಭಕೋ. ೧೯). ಜವೆಗೋಧಿ ; ಜವೆಗೋಧಿ ಬಗೆಬಗೆಯ ನೆಲ, ಬಗೆಬಗೆ ವಾಯುಗುಣಗಳಿರುವ ಪ್ರದೇಶ ಗಳಲ್ಲಿ ಬೆಳೆಯುತ್ತದೆ (ಭೂವಿಷ. ೧೮೬).

[ಜವೆ$_2$ + ಗೋದಿ$_1$ (<ಗೋದುವೆ) ]

**ಜವೆಗೋಧಿ** 'ಜವೆಗೋದಿ' ನೋ.

**ಜವೆಬೂದಿ** (ನಾ). ಮಂತ್ರಿಸಿದ ಬೂದಿ ; ಮಂಕುಬೂದಿ : ಅಸುರ ಮಾಯಾಮಂತ್ರಮಂ ಜಟ್ಟು ಫಣೆಯೊಳಂ ಭಸಿತವನು ಧರಿಸಿ ದಿಗ್ಬಂಧನಂ ಗಳಗೈದು ಶಶಿಯ ಮಂಡಲಕೆ ಕಾವಳಗೈಸಿ ಗ್ರಹಗಣರ ಕಂಗಳಿಗೆ ಜವೆ ಬೂದಿಯಾ ಸಸಿನೆ ಚೆಲ್ಲುತ ದುರ್ಗಿ ಭೈರವರ ಬಲಗೊಂಡು (ನವಮೋ. ೨೬-೧೩). [ಜವೆ$_3$ + ಬೂದಿ ]

**ಜವ್ವನ, ಜೌವನ** (ನಾ). ೧. ಹರಯ; ಪ್ರಾಯ; ಯೌವನ; ತಾರುಣ್ಯ: ಕಲಿತನದುರ್ಕು ಜವ್ವನದ ಸೊರ್ಕು ನಿಜೇಶನ ನಚ್ಚು . . . ಕರ್ಣ ನಿನಗುಳ್ಳನಿತೇನೆನಗುಂಟೆ (ಪಂಪಭಾ. ೧೧-೨೩); ಸಿರಿಯೊಂದೊದವಂ ಜವ್ವನ ಭರಮಂ ನಚ್ಚಿರ್ದು ಕೆಡುವರ್ (ಧರ್ಮಾಮೃ. ೩-೨೦೨) ; ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯ (ಬಸವ. ೫೦೬) ; ಏನೆಂಬೆನುತ್ಕಟದ ಜವ್ವನಂ ಬರುತಮಿರೆ (ಸಂಬಿಕ. ೩-೨); ನೀನು ಮಿಗೆ ಮೇಲಱಿಯೆ ಜವ್ವನ ದುಬ್ಬುಗೊಬ್ಬಿನಲಿ (ಕುಮಾವ್ಯಾ. ೧-೩೬) ; ಸಿರಿಯು ಬಂದರೆ ಲೇಸು ತಿರದ ಜವ್ವನ ಲೇಸು (ಸರ್ವಜ್ಞ. ೧೨೯). ೨. ಮೊಲೆ ; ಸ್ತನ : "ಜವ್ವನಮೆಂದು ಕುಚಂ" (ಕಕಸಾ. ೨೦-೪೩೦); "ಜವ್ವನಮೆನಲ್ಕೆ ಕುಚಮಕ್ಕು" (ಕಬ್ಬಿಗ. ೩೧); ಅಚ್ಚ ಜವ್ವನಮೆಂಬ ದರ್ಪಕಪಟ್ಟಕುಂಜರಕುಂಭಮಂ ಚೆಚ್ಚರಂ ರತಿದೇವಿ ಸರ್ವಲತಾಂತಮಾಲಿಕೆಯಿಂ ಸಮಂತರ್ಚಿಪಂತೆಳವೆಣ್ಣದೊರ್ವಳಮರ್ಚಿ ದಿಳ್ಪಲರನ್ನದೊಳ್ವಚ್ಚವಂ ನಲಿದಾ ಕುಮಾರಿಯ ಪೀವರ ಸ್ತನಭಾಗದೊಳ್ (ಉದ್ಭಟ. ೮-೩೪) ; ಚುಂಬಿಸೆನ್ನಧರವ ಚುಬುಕಾಗ್ರವಿಡಿಯುತ ತುಂಬು ಜವ್ವನಕೆ ಕೈ ನೀಡಿ ನಂಬಿಸಿ (ಶಶಸಾಂ. ೩೨-೬೯). ಜೌವನ : ೧. ಪೋದುದು ಜೌವನಂ ಕ್ರಮದಿನಾದುದು ಮುಪ್ಪು (ಆದಿಪು. ೨-೩೮) ; ಉದಯಿಸಿ ಜೌವನಮಂ ತಳೆದೊದವಿದ ಮುಪ್ಪಿನೊಳೆ ಕಟಿವರಿಲ್ಲಿಂ ಬಟಿಯಂ (ಪಂಚತಮ. ೧-೮೪); ಜೌವನದೇಱ್ಗೆ ಕಯ್ಗೆ ಕನ್ನಡಿಯೆನಿಸಿತ್ತು (ಕಬ್ಬಿಗಕಾ ೪೬) ; ಜೌವನವಾದುದು ಮತ್ತನಾಡೆಗೆ (ಜಯಕಾ. ೩-೬೦).

[ <ಪ್ರಾ. ಜೋವ್ವಣ. / ಸಂ. ಯೌವನ ]

**ಜವ್ವನಂನೆಱೆ³, ಜೌವನಂನೆಱೆ³** (ಕ್ರಿ). ಯೌವನ ತುಂಬು ; ಪ್ರಾಯಕ್ಕೆ ಬರು : ಎಂತೆಂತೆಱೆಸಿಗೆಯ ಜವ್ವನಂನೆಱೆ³ಗುಮಂತಂತೆಱುಪ್ಪ ಲಾವಣ್ಯಂ (ಶಾಂತಿಪು. ೯-೧೭) ; ದಿವ್ಯವಸ್ತ್ರಭೂಷಣಮಣಿಮಾಳೆಗಳ್ವೆಱೆ³ದು ತನ್ನೊಡ ವುಟ್ಟಿರೆ ಬೇಗವೇಗಮಾ ಕ್ಷಣದೊಳೆ ಜವ್ವನಂನೆಱೆ³ಯೆ ನಟ್ಟನೆ ತೊಟ್ಟನೆ ಬಂದು ಪುಟ್ಟಿದಂ (ಸುಕುಮಾ. ೯-೧೮). **ಜೌವನಂನೆಱೆ³** : ಜೌವನಂನೆಱೆ³ದ ಪ್ರಭಾವತಿಯನಾರ್ಗೆ ಕುಡುವಮೆಂದು . . . ಆಳೋಚಿಸಿ (ಜಾವುಂಪು. ೯೦-೨೫). [ ಜವ್ವನ + ನೆಱೆ₁ ]

**ಜವ್ವನಂಬಡೆ** (ಕ್ರಿ). ತಾರುಣ್ಯವನ್ನು ಹೊಂದು: ಗೆಲ್ಲಂಪಡೆದ ಪಂದೆಯಂತೆ ಜವ್ವನಂಬಡೆದ ಮುದುಪನಂತೆ (ಧರ್ಮಾಮೃ. ೫-೦೨೫). [ಜವ್ವನ+ಪಡೆ₁]

**ಜವ್ವನವೆಱು** (ಕ್ರಿ). = ಜವ್ವನಂಬಡೆ : ತಿಣ್ಣ ಜವ್ವನವೆತ್ತ ಕೆಳದಿ ಕೇಳ್ (ಮೋಹತ. ೩೦-೨೪). [ ಜವ್ವನ + ಪೆಱು₁ ]

**ಜವ್ವನಿ** (ನಾ).=ಜವ್ವನೆ: ಕನ್ನೆವೆಟಕ್ಕೆ ತನ್ನಂ ಮಾಱುಗೊಟ್ಟ ಪಾಱುಗೆಯ್ವುದ ಜವ್ವನಿಗಿನಿಯನಿತ್ತ ನಖರದಕ್ಷತಂಗಳನೆ ತೊಡವು ಮಾಡಿ ಮೆಱೆ³ವುದನವ ಕೆಳದನಾಡಿ ನೋಡಿ ಕಂಡು (ಚಂದ್ರಪು. ೮-೫೫ ವ). [ ಜವ್ವನ + – ಇ₂ ]

**ಜವ್ವನಿಕೆ** (ನಾ). ಹರಯ ; ತಾರುಣ್ಯ ; ಯೌವನ : ತನ್ನ ಜವ್ವನಿಕೆಯ ಕಾಲದಲ್ಲಿ ಉಳ್ಳವರ ಒಕ್ಕಲಾಗಿದ್ದಳು (ದೀಶಹ. II, ೧೯೩).

[ ಜವ್ವನ + – ಇಕೆ ]

**ಜವ್ವನಿಗ, ಯುವ್ವನಿಗ** (ನಾ). ಹರಯದವನು ; ತರುಣ ; ಯುವಕ : "ದಾರಕಃ, ತರುಣಃ, ಯುವಾ– ಈ ೩ ಜವ್ವನಿಗಂ" (ಹಲಾಯು ೬೩-೩೪೯); ಪೆಸರೇನಾರ್ಗೀತನೀ ಜವ್ವನಿಗ ತವಸಿ (ಕಾದಂಪೂ. ೭೭೦) : ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು (ಗಿರಿಳ. ೨-೦೭ ವ). **ಯುವ್ವನಿಗ** : ಇವನಸುರ ಮಧುಗುಡಿಗ ಯುವ್ವನಿಗ ಮದನಗ್ರಹವ್ಯಾಧಿಗಂ (ನವಮೋ. ೯-೦೭). [ ಜವ್ವನ + – ಇಗ ]

**ಜವ್ವನಿಗಿತಿ** (ನಾ).=ಜವ್ವನೆ: ಆರೂಕಿರಿಯ ಜವ್ವನಿಗಿತಿಯರು ಇಲ್ಲವಾಗಿದೆ (ಬಟ್ಟಳ. ೧೮೧೦-೪). [ ಜವ್ವನಿಗ + – ಇತಿ₁ (< – ಇತ್ತಿ) ]

**ಜವ್ವನಿಗೆ** (ನಾ).=ಜವ್ವನೆ : ಈ ತೆಱದ ಮೆಱೆ³ವ ವಿಟಟಿಗರ ಮುಱುಕವಾ ದೊರೆಯ ಭರದ ಜವ್ವನಿಗೆಯನೆವ್ವಾ ಕೆಯ್ಸಾರಲಿತ್ತಪ್ಪುದೆ (ವರ್ಧಪು. ೯-೪೩ ವ). [ ಜವ್ವನಿಗ + - ಎ₂ ]

**ಜವ್ವನೆ, ಜೌವನೆ, ಯುವ್ವನೆ** (ನಾ). ಯುವತಿ ; ತರುಣಿ : "ವಧೂಟೀ, ಚಿರಂಟೀ – ಈ ೨ ಜವ್ವನೆ" (ಹಲಾಯು. ೬೯-೩೩೦); ಜವ್ವನೆ ಗಡವಾಡಲ್ ಪಾಡಲವಲ್ ಬಲ್ಲಳ್ (ಆಡಿಪು. ೫-೪೩) ; ಜವ್ವನೆಯ ಮೊಲೆಯಂತೆ . . . ಕಡೆಯೊಳ್ ಪೇಸುಪಥಮುಮಶೋಭೆಯುಮಾಗದೆ ಪೋಗದು (ಧರ್ಮಾಮೃ. ೭-೦೨೨); ಎನ್ನ ಮನೆಯೊಳ್ ತುಂಬಿದ ಜವ್ವನೆಯನಿರಿಸಲಣ್ಮೆಂ (ದಶಕು. ೦೧-೭೭). **ಜೌವನೆ** : "ಪಡ್ಡಾ–ಜೌವನೆ" (ಕಾಶಕ್. ೨೪). **ಯುವ್ವನೆ** : ಬಾಲಕಿಯರುಂ ಯು[ ಪಾಠಾಂ. ಯೌ ]ವ್ವನೆಯರುಂ . . . ವಯೋ ಧರ್ಮಂಗಳಂ ತಿಳಿದು (ಬಸವು. ೪೦-೦೮). [ ಜವ್ವನ + – ಎ₂ ]

**ಜವ್ವರಿಸು, ಚವ್ವಲಿಸು** (ಕ್ರಿ). ಶೋಭಿಸು ; ವಿಜೃಂಭಿಸು: ಜವ್ವನ ಜವ್ವನ ಕೊಪ್ಪುವಲಂಕಾರ ಜವ್ವರಿಸುವ [ಪಾಠಾಂ. ಚವ್ವಲಿಸುವ] ಹಾವಭಾವ ಕವ್ವರಿಸುವ ಕಾಂತಿರಸದಿಂದ ನೃಪನ ಕಣ್ಣುವ್ವಳಿಸುವವೊಲೆಸೆದರು (ಹೇರಕ. ೦೩-೫೫). **ಚವ್ವಲಿಸು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ?. / ತೆಲು. ಜುವ್ವರಿಂಚು = ವಿಜೃಂಭಿಸು ]

**ಜವ್ವಾಜಿ** 'ಜವಾದಿ' ನೋ.

**ಜವ್ವಾದಿ** 'ಜವಾದಿ' ನೋ.

**ಜಷ್ಟೆ** (ನಾ). ಉದಾಸೀನತೆ; ಆಲಸ್ಯ; ಸೋಮಾರಿತನ: ಜೇಷ್ಠ ಮೂಲ ಹಿಡಿದರೆ ಜಷ್ಟೇ ಮುಟ್ಟಿದ ಹಾಗೆ (ಎಸಿಮ್ಯ. XV, ೩೨); ಸ್ವಲ್ಪ ತಲೆ ಬಾಚು ಅಂದರೆ ಏನೋ ಜಷ್ಟೆ (ರೂಢಿ). [ <ಸಂ. ಜ್ಯೇಷ್ಠಾ ]

**ಜಸ₁, ಝಸ₁** (ನಾ). ೧. ಒಳ್ಳೆಯ ಹೆಸರು ; ಯಶಸ್ಸು ; ಕೀರ್ತಿ : "ಜಸಂ ಕೀರ್ತಿಯೆ" (ಕಹಾಗಿ. ೩೨) ; ಕುಸುಮಂಗಳೆಂಬ ಮಾತದು ಪುಸಿ ದಹನಮಯಂಗಳೆಂಬುಗಳ್ಕನಸಿಜನಾ ಜಸಮಂಟೆಯೆ ಸುಡುವುದೆ(ವೆ)ರ್ದೆಯಂ (ಕವಿರಾ. ೩-೦೮೪) ; ಕೇಸವಯ್ಯನವಾರ್ಪೂರ್ಗಗಳರ್ನೆ ಗಟ್ಟಿಗುಪಮಾಗಿ ಜಸಂ ಭುವನಾನ್ತರಾಳದೊಳ್ (ಎಕ. III, ನಂಜನ. ೭೮-೦೮; ಸು. ೯೦೦); ಒಡಲುಂ ಪ್ರಾಣಮುಮೆಂದಿವು ಕಿಡಲಾದುವು ಜಸಮ ದೊಂದೆ ಕಿಡದದನಾಂ ಬಲ್ವಿಡಿವಿಡಿದು ನೆಗಟ್ದೆಂ (ಪಂಪಭಾ. ೧೨-೦೮೧) ; ಜಸಮ ತನಗೆ ಮಯ್ಸಿರಿಯೆಂಬುದನಱೆ³ಪುವಂತೆ ಪೂಸಿದ ಬೂದಿಯೊಳಂ . . . ಚೆಲ್ವನಾಂತು (ಕಬ್ಬಿಗಾ. ೧೭೭) ; ಋಷಿವಾಕ್ಯದೊಡನೆ ವಿಜ್ಞಾನ ಕಲೆ ಮೇಳವಿಸೆ ಜಸವು ಜನಜೀವನಕೆ (ಮಂಕುಕ. ೩೨೨). ೩. ಶೋಭೆ : ವೈಭವ: ಹಸಿವು ಪೆಸನ ತೃಷೆಯಾಲಸ್ಯಮೋಹಮೆಂಬಿಸಕವುಳ್ಳುದು ನರದೇಹ ಉಸಿರಿದ ಕೃತಿಯೊಳು ಮಱೆ³ದೆಡಹಿರೆ ತಿದ್ದಿ ಜಸವ ಮೆಱೆ³ವುದು ಕೋವಿದರು (ಶಂನವಿ. ೧-೦೫) ; ವಿಸುನಿಗಿಂಬದ ವಟ್ಟಸಾಲೆ ನಾನಾ ಬಗೆಯೆಸೆವ ಮೇಲ್ಕಟ್ಟುಗಳಿಂದ ಜಸವ ಬೀಱೆ³ದುವು ನಾಟಕಶಾಲೆಯ ಬಲೆಯಾರೆಸೆದಿಹ ಮಣಿಮಯ ಭವನ (ಶಂನವಿ. ೭-೪೩). **ಝಸ₁** : ೧. ಬಿರುದಿನ ಬಿಂಕದಹದ ವಿರೋಧಿಗಳಂ ತಱೆ³ದಿಕ್ಕಿ ದಿಕ್ಕರಿಪರಿಯನ್ರಮುಂ ಝಸಮನಾರ್ಜಿಸಿ ವೀರರಸಂ ತುಳ್ಕಾಡಿ ಕಾದಿದಂ (ಶಾಸಾಇ. XX; ೧೭೯-೧೩ ; 1183).

[ <ಪ್ರಾ. ಜಸ. / ಸಂ. ಯಶಸ್ ]

**ಜಸ₂, ಝಸ₂** (ನಾ). ಮೀನು ; ಝಡಿತಿ – ಜಡಿತಿ; ಝಷ – ಜಸ (ಶಬ್ದಾನು. ೦೪೩ ಪ್ರಯೋ). **ಝಸ₂** : 'ಝಸಕೇತು' ಪರಾ.

[ <ಪ್ರಾ. ಝಸ. / ಸಂ. ಝಷ ]

**ಜಸಂದಳೆ** (ಕ್ರಿ). ಕೀರ್ತಿಯನ್ನು ಪಡೆ ; ಯಶಸ್ಸನ್ನು ಹೊಂದು : ಆವ ನರನಾವ ಕೃತ್ಯಕೆಗೆಯ್ಯಲು ಬೀಯದ ಜಸಂದ[ಪಾಠಾಂ. ಬ]ಳೆವುದಿಲ್ಲಿ ನಾರಕದ ಬಿಱುಬೀಯದ ಸುಖಂ ಪರದೊಳೆಂತು ದೊರೆಕೊಂಬುದೆಂಬೀ ಯವಸ್ಥೆಯನೆನಗೆ ವಿಸ್ತರಿಸಿ ಪೇಳ್ವುದು(ಕ್ರಮಿಭಾ. ೫-೪೮). [ಜಸ₁+ತಳೆ₁]

**ಜಸಂಬಡೆ, ಜಸವಡೆ, ಝಸಂಬಡೆ** (ಕ್ರಿ). ಹೆಸರುವಾಸಿಯಾಗು ; ಹೆಸರಾಗು ; ಪ್ರಸಿದ್ಧವಾಗು; ನಮ್ಮೊವಜರ್ ಜಸಂಬಡೆದ ಭಾರ್ಗವರ್ (ಜೈಂಪಭಾ. ೦೨-೫೭) ; ತನ್ನೊಡಮೆಯನನವರತ ದಾನದಿಂ ತವಿಸಿ ಜಸಂಬಡೆದಲ್ (ಆಡಿಪು. ೧-೦೫೧); ವಾಜಿವಂಶದಜ್ವಾಡುವಿನಂ ಜಸಂಬಡೆದ ನೆಂಬುದು ಧಾರಿಣಿ ನಾಗರಾಜನ (ಪಾಂಡೇಕ. ೨೩-೩೨ ; 1122) ; ಗುಣಾಂ ಗೊಂಡಂ, ಜಸಂಬಡೆದಂ, ಕಳಸವಿಟ್ಟಂ(ಧಾಷಾಭೂ. ೧೩೪ ಉದಾ).**ಜಸವಡೆ**: ಮೂಜಗದೊಳೆನಿಸು ಜಸವಡೆದೊಡಂ ಗುಹ್ಯಕಾಸ್ಪದಮೆನಿಪುದಳಕಾ ಪುರಂ (ಕ್ರಮಿಭಾ. ೩-೧೫) ; ಎಸೆವಾ ಕಾವೇರಿಯ ತಟದೊಳು ಬಹು ಪುಣ್ಯದೆಸಕದ ದಿವ್ಯಸ್ಥಳಗಳು ಜಸವಡೆದಿಹುವು (ಶಂನವಿ. ೨-೨೦); ಸಕಲ ವೇದಾವಳಿಯೊಳು ಜಸವಡೆದ ಪಾವನಚರಿತೆಯ . . . ವಂದಿಪೆನು (ಹದಿಬ. ೮-೨). **ಝಸಂಬಡೆ**: ಶಂಕರನಾರಾಯಣನ ಪೆಸರಿಂ ಕಡುಝಸಂಬಡೆದ ಭೂಸುರನಿಂ ಕೃತವಿದಧ್ಯಾತ್ಮರಾಮಾಯಣಂ (ಅಧ್ಯಾರಾ. ೨-೨).

[ ಜಸ₁ + ಪಡೆ₁ ]

**ಜಸಯುತ** (ನಾ). ಕೀರ್ತಿಶಾಲಿಯಾದವನು ; ಯಶೋವಂತ : ಕರಣ ತ್ರಯಂಗಳೊಳ್ ಜಸಯುತನೊಳ್ ಗೃಹೋಪಕರಣಂಗಳೊಳುತ್ತಮ ಕಾರ್ಯದಲ್ಲಿ ವರ್ತಿಸುವುದು ಸಾಧನಾಹ್ವಯ (ನಾನಾರ. ೦೦೫).

[ ಜಸ₁ + ಯುತ ]

**ಜಸವಂತ** (ನಾ). ಕೀರ್ತಿಶಾಲಿ ; ಕೀರ್ತಿವಂತ : ವಂತ ಪ್ರತ್ಯಯಕ್ಕೆ – ಸಿರಿವಂತಂ, ಜಯವಂತಂ, ಜಸವಂತಂ (ಶಮದ. ೨೦೭ ಪ್ರಯೋ) ; ಜಸಮುಂಟೀತಂಗೆ– ಜಸವಂತಂ (ಶಬ್ದಾನು. ೪೦೦ ಪ್ರಯೋ).

[ ಜಸ₁ + – ವಂತ ]

**ಜಸವಡು** (ಕ್ರಿ). ಅಂದವಾಗು; ಶೋಭಿಸು: ಮಿಸುನಿಯ ಹಡಪ ಚಾಮರ ಕುಂಚ ಕಾಳಾಂಜಿ. ಪೊಸವಟ್ಟೆಯ ಪಾವಡೆಯ ಜಸವಟ್ಟೂಳಿಗದವರ ಮೇಳದೊಳಾಗ ವಸುಧೇಶ ಸಾರಿಗೈದಿದನು (ಕಂನವಿ. ೨೨-೮೮).
[ ಜಸ$_1$ + ಪಡು$_1$ ]

**ಜಸವಡೆ** 'ಜಸಂಬಡೆ' ನೋ.

**ಜಸವೆಟು** (ಕ್ರಿ). = ಜಸಂಬಡೆ : ಜಸವೆತ್ತ ಗರುಡಬಾಣದಿ ಕೃಷ್ಣರಾಯ ಖಂಡಿಸಲದು ಬಯಲಾದುದು (ಪೋಹಕ. ೩೯-೨೮) ; ಜಸವೆತ್ತು ಪೆರ್ಮೆ ವಿಗೆ ರಂಜಿಸೆ (ರಾಜಶೇ. ೦-೩೯). [ ಜಸ$_1$ + ಪೆಟು$_1$ ]

**ಜಸೆ** 'ದಸೆ$_1$' ನೋ.

**ಜಸ್ತು** (ನಾ). ತವರ ಮತ್ತು ಸೀಸಗಳಿಂದಾದ ಒಂದು ಬಗೆಯ ಮಿಶ್ರ ಧಾತು : ಎಣ್ಣೆಯ ಪೀಪಾಯಿ ಮತ್ತು ಜಸ್ತಿನ ಡಬ್ಬಿಯಲ್ಲಿಯ ತುಪ್ಪ (ಮುಂಬಬ್ಯಾ. ೮೦). [ ←ಮರಾ. ಜಸ್ತ್ ; ಹಿಂ. ಜಸ್ತಾ/ಹ್ಯಾ. ಜಸದ. ]

**ಜಹಂಗೀರು** 'ಜಹಾಂಗೀರು' ನೋ.

**ಜಹಗೀರದಾರ** 'ಜಹಗೀರುದಾರ' ನೋ.

**ಜಹಗೀರಿ** 'ಜಹಗೀರು' ನೋ.

**ಜಹಗೀರು**, ಜಹಗೀರಿ, ಜಾಗಿರಿ, ಜಾಗೀರ್, ಜಾಗೀರಿ, ಜಾಗೀರು (ನಾ). ೧. ಮಾನ್ಯವಾಗಿ ದೊರೆತ ಭೂಮಿ, ಗ್ರಾಮ ಮೊದಲಾದುವು: ನಿನಗೆ ಹರದನ ಹಳ್ಳಿಯನ್ನು ಜಹಗೀರು ಕೊಡಿಸುತ್ತೇವೆ (ಕೃದಿಅ. ೩೪) ; ಆ ಜಹಗೀರಿನ ವಾರ್ಷಿಕ ವರಮಾನವು ಒಳ್ಳೆ ಸಾವಿರಗಳಷ್ಟು ಇದ್ದಿತು (ಕುಣಾತಿ. ೩). **ಜಹಗೀರಿ:** ೧.ಕೊಡಗರ ಭೂಮಿ ಮನೆಯನ್ನು ಆ ಮುಸಲ್ ಮಾನರಿಗೆ ಜಹಗೀರಿ ಆಗಿ ಕೊಟ್ಟು (ರಾಜೇಂದ್ರ. ೦೭). (ಗು). ೨. ಜಹಗೀ ರಿಗೆ ಸಂಬಂಧಿಸಿದ: ಶೀಮೆಯೇನಾದರೂ ಜಹಗೀರಿ ಇನಾಮಾಗಿ ಬೇಕೆಂಬ ಅಪೇಕ್ಷೆಯೂ ಇಲ್ಲಾ (ರಾಜೇಂದ್ರ. ೧೦೩). **ಜಾಗಿರಿ :** ೧. ಒಂದು ಜಾಗಿರಿ ನಲ್ಲಿಯ ಜಾಗಿರದಾರರು ತಮ್ಮ ಹಳ್ಳಿಯ ಜನರ ಮೇಲೆ ನಡೆಸುವ ಕ್ರೂರ ವಾದ ಒತ್ತಾಳಿಕೆ (ಸಾಸಮಾ. ೩೮). **ಜಾಗೀರ್ :** ೧. (ಕೃಸಗೆ. II, ೩೩೦). **ಜಾಗೀರಿ :** ೧. ಅಖಂಡ ಜಾಗರದ ಜಾಗೀರಿ ಸನದನ್ನು ಪಡೆದವರಂತೆ (ದೀಪಹ. II, ೨೨೯). **ಜಾಗೀರು :** ೧. 'ಜಾಗೀರುದಾರ' ಪರಾ.
[ ←ಮರಾ. ಜಹಾಗೀರ್, ಜಾಹಾಗೀರ್ ; ಹಾರ. ಹಿಂ. ಜಾಗೀರ್, ಜಾಗೀರಿ ]

**ಜಹಗೀರುದಾರ**, ಜಹಗೀರದಾರ, ಜಹಾಗೀರದಾರ, ಜಾಗೀರದಾರ, ಜಾಗೀರುದಾರ, ಜಾಗೀರ್ದಾರ್ (ನಾ). ಜಹಗೀರನ್ನು ಪಡೆದವನು; ಜೋಡಿದಾರ: ದೊಡ್ಡದೊಡ್ಡ ಜಹಗೀರುದಾರರು ತಮ್ಮತಮ್ಮೊಳಗೆ ಯುದ್ಧಮಾಡಿಕೊಳ್ಳುತ್ತಿದ್ದರು (ಯೋಧಕು. ೦). **ಜಹಗೀರದಾರ :** ಸಾವಿರಾರು ಜಹಗೀರದಾರರು ತಾಲೂಕುದಾರರು . . . ದುರ್ದಶೆ ಗೀಡಾಗಿದ್ದರು (ಪ್ರಬಂಧ. ೩೪). **ಜಹಾಗೀರದಾರ :** ಆ ಜಹಾಗೀರದಾರರ ಮನೆಯ ವಿಷಯವಾಗಿ ನೀನು ವಿಚಾರಿಸುತ್ತಿಯಷ್ಟೇ ? (ಪೋಹಿಸೀ. ೩). **ಜಾಗೀರದಾರ :** ಅಗರ್ಭಶ್ರೀಮಂತರು . . . ಜಾಗೀರದಾರರು !! (ಇತಿಶ್ರೀ. ೬). **ಜಾಗೀರುದಾರ:** (ಕ). **ಜಾಗೀರ್ದಾರ್:** (ಕೃಸಗೆ.II, ೩೩೦).
[ ←ಮರಾ. ಜಹಾಗಿರದಾರ್, ಜಾಗೀರ್ದಾರ್ ; ಹಾರ. ಹಿಂ. ಜಾಗೀರ್ದಾರ್ ]

**ಜಹಜು**, ಜಾಜ್ಜು (ನಾ). ಹಡಗು : ಫರಾಶೀಸರ ದೊಡ್ಡ ಜಹಜು ಹದಿ ಮೂರು ಇಂಗ್ರೇಜಿಯವರ ಜಹಜು ಹದಿಮೂರು (ರಾಜೇಂದ್ರ. ೬೦) ; ಸಮುದ್ರದಲ್ಲಿ ಒಂದು ಪ್ರಚಂಡಮಾರುತ ಪ್ರಾರಂಭವಾಗಿ ಅನೇಕ ಜಹಜು ಗಳು ಕಷ್ಟಕ್ಕೆ ಒಳಗಾದವು (ಇಬದು. ೯೦). **ಜಾಜ್ಜು :** ಅವರು ಇಳಿದು ಜಾಜು ಹತ್ತಿ ಹೋದರು (ರಾಜೇಂದ್ರ. ೧೭).
[ ←ಅರ. ಹಿಂ. ಮರಾ. ಜಹಾಜ್ ]

**ಜಹದಜಹಲ್ಲಕ್ಷಣ** (ನಾ). [ಕಾವ್ಯಮಿಾ] ಮೂರು ಬಗೆಯ ಲಕ್ಷಣಾ ವೃತ್ತಿಯ ಒಂದು ಪ್ರಕಾರ ; ವಾಚ್ಯಾರ್ಥದಲ್ಲಿ ಒಂದು ಅಂಶವನ್ನು ಬಿಟ್ಟು ಒಂದು ಅಂಶವನ್ನು ಬಿಡದಿರುವುದು: ಸೋಯಂಶಬ್ದಂಗಳಿಂದ ದೇವದತ್ತ ಗತವಾದ ಐಕ್ಯಮಂ ಲಕ್ಷಿಸಿ ಬಳಿಕೀತನೆ ಆತನು ಆತನೇ ಈತನೆಂದು ಪರಸ್ಪರಾಭೇದ ತಾದಾತ್ಮ್ಯಂ ಘಟಿಸುವಂತೆ ಬೋಧಿಪುದೇ ಜಹದಜಹಲ್ಲಕ್ಷಣ (ವಿವೇಕ. ೪೬); ವಾಚ್ಯಾರ್ಥದಲ್ಲಿ ಏಕದೇಶವ ಬಿಟ್ಟು ಏಕದೇಶದಲ್ಲಿ ಪ್ರವರ್ತಿ ಸುವದು ಜಹದಜಹಲ್ಲಕ್ಷಣವೆಂತಾ ಹೇಳಲ್ಪಡುವದು (ಕುಶ್ರೀಸ್ಕ. ೨೦-೮).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹದಜಹಲ್ಲಕ್ಷಣಾವೃತ್ತಿ** (ನಾ). = ಜಹದಜಹಲ್ಲಕ್ಷಣ : ಲಕ್ಷಣಾವೃತ್ತಿ ಯಿಂದ ಬೋಧಿತವಾಗುವ ಅರ್ಥವು ಶಕ್ಯಾರ್ಥದ ಏಕದೇಶವಾಗಿರುವ ಕಲ್ಪದಲ್ಲಿ ಆ ಲಕ್ಷಣಾವೃತ್ತಿಯು ಜಹದಜಹಲ್ಲಕ್ಷಣಾವೃತ್ತಿ ಎನ್ನಿಸುವುದು (ಭಾತತ್ತ್ವ. ೬೦೦). [ ಸಂ.(ಜಹತ್ + ಅಜಹತ್ + ಲಕ್ಷಣಾವೃತ್ತಿ) ]

**ಜಹದಜಹಲ್ಲಕ್ಷಣೆ** (ನಾ).=ಜಹದಜಹಲ್ಲಕ್ಷಣ: ಜಹದಜಹಲ್ಲಕ್ಷಣೆಯೆಂದರೆ, ಪದಗಳ ಸಹಜವಾದ ಅರ್ಥದಲ್ಲಿ ಒಂದಂಶವನ್ನು ಬಿಟ್ಟು ಒಂದಂಶವನ್ನು ಬಿಡದಿರುವುದು (ಹಿಂದಸಾ. ೨೦೬).
[ ಸಂ. ಜಹದಜಹಲ್ಲಕ್ಷಣಾ (ಜಹತ್ + ಅಜಹತ್ + ಲಕ್ಷಣಾ) ]

**ಜಹಪನಾ** 'ಜಹಾಪನಾ' ನೋ.

**ಜಹರ್** 'ಜೋಹರ್$_2$' ನೋ.

**ಜಹಲ್ಲಕ್ಷಣೆ** (ನಾ). [ಕಾವ್ಯಮಿಾ] ಲಕ್ಷಣಾವೃತ್ತಿಯ ಒಂದು ಪ್ರಕಾರ; ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಹೇಳುವುದು : "ಕೇರಿಯೆಲ್ಲ ಕಣ್ಣೀರು ಸುರಿಸಿತು" . . . "ಕೇರಿ" ಎಂಬುದರಲ್ಲಿ ವಾಚ್ಯಾರ್ಥವು ಪೂರ್ತಿಯಾಗಿ ತಿರಸ್ಕೃತವಾಗುತ್ತದೆ ; ಅದಕ್ಕೆ ಸಂಬಂಧ ಪಟ್ಟದ್ದರೂ ಅದನ್ನೊಳಕೊಳ್ಳದೆ ಬೇರೆಯಾಗಿರುವ "ಜನರು" ಎಂಬ ಅರ್ಥವು ಲಕ್ಷಿತವಾಗುತ್ತದೆ. (ಜನರು ಕಣ್ಣೀರು ಸುರಿಸಿದರೇ ಹೊರತು, ಕೇರಿ ಕಣ್ಣೀರು ಸುರಿಸಲಿಲ್ಲ.) ಈ ಬಗೆಯ ಲಕ್ಷಣೆಗೆ "ಜಹಲ್ಲಕ್ಷಣಾ" ಎಂದು ಹೆಸರು (ಭಾರಮಿಾ. ೨೩೨). [ ಸಂ. ಜಹಲ್ಲಕ್ಷಣಾ (ಜಹತ್ + ಲಕ್ಷಣಾ) ]

**ಜಹಾಂಗೀರು**, ಜಹಂಗೀರು, ಜಾಂಗೀರು (ನಾ). ಉದ್ದಿನ ಹಿಟ್ಟಿನಿಂದ ಸುತ್ತುಸುತ್ತಾಗಿ ಮಾಡಿ, ಸಕ್ಕರೆಯ ಪಾಕದಲ್ಲಿ ನೆನೆಸಿದ ಒಂದು ಬಗೆಯ ಸಿಹಿಖಾದ್ಯ : ನನಗೆ ಜಹಾಂಗೀರು ಕೊಡಿಸು (ಕೂಲ). **ಜಹಂಗೀರು:** ನೀವು ಮಾಡಿರುವ ಜಹಂಗೀರು ತುಂಬ ಚೆನ್ನಾಗಿದೆ (ಕೂಲ). **ಜಾಂಗೀರು:** ಜಲೇಬಿ . . . ಜಾಂಗೀರು, ಹೋಳಿಗೆ (ಕೂಶಸಂ.೦೬).
[ ←ಹಾರ. ಹಿಂ. ಜಹಾಂಗೀರೀ = ಒಂದು ಬಗೆಯ ಹಸ್ತಾಭರಣ ]

**ಜಹಾಗೀರದಾರ** 'ಜಹಗೀರುದಾರ' ನೋ.

**ಜಹಾದ್** (ನಾ). ಧರ್ಮಯುದ್ಧ : ನಿನ್ನ ಭಿಕ್ಷಾಪಾತ್ರವನ್ನು ಎತ್ತಿ ಹಿಡಿದು ಜಹಾದ್ ಜಹಾದ್ ಎಂದು ಕೂಗುತ್ತ ಉತ್ತರಾಭಿಮುಖವಾಗಿ ಹೋಗ ಬೇಕಾಗಿದೆ (ಕೈಲಾಸ. ೬೮). [←ಹಾರ. ಜಹಾದ್, ಜಿಹಾದ್ ]

**ಜಹಾಪನಾ**, ಜಹಪನಾ (ನಾ). ಚಕ್ರವರ್ತಿ, ಮಹಾಪ್ರಭು ಎಂಬಂತೆ ಸಾರ್ವಭೌಮರನ್ನು ಸಂಬೋಧಿಸುವಾಗ ಬಳಸುವ ಶಬ್ದ : ಜಹಾಪನಾ! [ಮಹಾಸ್ವಾಮಿ!] ಈ ದಾಸಿಯು ಶುಭಸಮಾಚಾರ ವನ್ನು ತಂದು ಹೇಳಿದಳು (ಕಪಾಕುಂ. ೬೯) ; ಹಾಗಲ್ಲ ಜಹಾಪನಾ, ಗುದಾಮಿನ ಕಾಳೆಲ್ಲ ತೀರಬೇಕೊ ಬೇಡವೊ (ಗಾಳಿಪ. ೦೨೧). **ಜಹಪನಾ :** ಜಹಪನಾ – ಇಂಗ್ರೇಜಿ ಪಿಶಾಚಿಗಳು ಪಹರ್‌ಗಂಜನ್ನು ಲೂಟಿಗೊಳ್ಳುತ್ತಿದ್ದಾರೆ (ಅನ್ನಾಪ. ೨೦). [ ←ಹಾರ. ಹಿಂ. ಜಹಾಂಪನಾಹ್ ]

**ಜಹ್ನುಜಾಂಬು** (ನಾ). ಗಂಗಾನದಿಯ ನೀರು ; ಪವಿತ್ರವಾದ ನೀರು : ಜಹ್ನುಜಾಂಬುಗಳಿಂದಂ ತುಂಬಿ ಸಹಸ್ರ ಕುಂಭದಭಿಷೇಕಮನಾಗಿಪಂ. (ರಾಜಶೇ. ೩-೨೦). [ ಸಂ. (ಜಹ್ನುಜಾ + ಅಂಬು) ]

**ಜಹ್ನುಜಾತೆ** (ನಾ). ಜಹ್ನುಮುನಿಯ ಮಗಳು ; ಜಾಹ್ನವಿ ; ಗಂಗಾನದಿ : ಜಹ್ನುಜಾತೆಯನುತ್ತರಿಸಿ, ನಾವೆಯಿಂದಿಳಿದು (ಶ್ರೀ ರಾ ಮಾ. ೧೨೬-೫೦). [ ಸಂ. ಜಹ್ನುಜಾತಾ (ಜಹ್ನು + ಜಾತಾ) ]

**ಜಹ್ನುಜೆ** (ನಾ).=ಜಹ್ನುಜಾತೆ. 'ಜಹ್ನುಜಾಂಬು' ಪರಾ.

[ ಸಂ. ಜಹ್ನುಜಾ ]

**ಜಹ್ನುಸುತೆ** (ನಾ). = ಜಹ್ನುಜಾತೆ : ಹೋವುದ ಕಿಚ್ಚು ತುಡುಕದ ಮುನ್ನ ತೆಗೆದನು ಬಿಚ್ಚುಜಡೆಗಳ ಜಹ್ನುಸುತೆಯಲಿ ನಾದಿದನ ಭಟನ (ಕುವ್ಯಾಗ. ೯-೨೩). [ ಸಂ. ಜಹ್ನುಸುತಾ (ಜಹ್ನು + ಸುತಾ) ]

**ಜಳ**$_1$ 'ಜಲ$_1$' ನೋ.

**ಜಳ**$_2$ 'ಜಲ$_2$' ನೋ.

**ಜಳಂಬ, ಝುಣಂಬ, ಝುಳಂಬ** (ನಾ). ೧. ಮೇಲ್ಮುಸುಕು ; ಹೊದಿಕೆ; ತೆರೆ : "ಮೇಲುಮುಸುಕಿಗೆ ಜಳಂಬವದು" (ಶಬ್ದಮಂ ೬೦); "ಮುಸುಕೆ ಜಳಂಬಂ" (ಶವಿಕಂ. ೧೬೪). ೨. ಬೀಸಣಿಗೆ. 'ಜಳಂಬಾಯ್ತ' ಪರಾ. **ಝುಣಂಬ:** ೧. ಇಂದ್ರಜಾಲಿಗರ ಪಾಪೆಗಳುಂ ಸೀರೆಗಳುಂ ಝುಣಂಬಮಂ ಕೊಂಡೊಂದು ಪ್ರತಿಮುಖಮಂ ಕೊಂಡು ತನ್ನ ಮುಖದೊಳಿಟ್ಟು ಪುಲಿಯ ಝುಣಂಬಮುಮಂ ತೊಟ್ಟು (ವಡ್ಡಾರಾ. ೧೯-೧೨) ; ಜವಳಿ ಝುಣಂಬಮಂ ಕೊಡೆಯನನ್ನಳವಂ (ಜೊಂಕಶಾ. ೧೯೩೪, ಹಿರೇಕೆರೂರ್. ೨೦-೨೪ ; ?). **ಝುಳಂಬ :** ೧. "ಝುಳಂಬವೆಂದು ಮೇಲ್ಮುಸುಕು" (ಕಶಸಾ. ೨೦-೩೯೮) ; ಚಿತ್ರದಣ್ಣಂ ಪಳಿಯೆಸೆವ ಝುಳಂಬಂ ಗಜೇನ್ದ್ರಂ ತುರಂಗಂ (ಎಇ. XIII, ೩೩೦-೧೩ ; ೨೨೨) ; ಬಣ್ಣದ ಸೀರೆ ಮೇಘವಣ್ಣಗೆಯ ಝುಳಂಬಮೆಂಬಿವಳವಟ್ಟಿರೆ . . . ನಡೆತಂದನಂದು ನವಯೌವನನೊರ್ವನಪೂರ್ವ ಚಿತ್ರಕಂ (ಮಲ್ಲಿಕು. ೫-೨೯); ಪಟ್ಟೆಯ ಝುಳಂಬ ಮುಜ್ಜಳಿಪ ಮುದ್ರಿಕೆ ಬಣ್ಣದ ಸೀರೆ . . . ತನ್ನೊಳ್ಕೊಳ್ಪಳವಡೆ ಬಂದಂ (ಲೀಲಾವ. ೯-೫೫) ; ಕಡಲುಡಿಗೆಗೊಂಡ ಪೊಡವಿವಣ್ಣಂಬರಾಂಬುಜನೇತ್ರನಿತ್ತ ಪೀತಾಂಬರದ ಝುಳಂಬಮೆಂಬ ಬೆಡಗನಮರ್ಚಿಯುಂ (ರಾಜಶೇ. ೧೨-೩೯ ಪ) ; (ತನ್ನ ಕಯ್ಯಾದರ ಝುಳಂಬವನ್ನು ಸುಲಿಯುತ್ತ ಎದ್ದು ಹೋಗಿ) (ಚಿಟ್ಟಿಅ. ೧೯೦-೦೪). ೨. 'ಝುಳಂಬಾಯ್ತ' ಪರಾ.

[ ?./ಮರಾ. ಝುಳಂಬ ]

**ಜಳಂಬಾಯ್ತ, ಝುಳಂಬಾಯತ, ಝುಳಂಬಾಯ್ತ** (ನಾ). ಬೀಸಣಿಗೆ ಬೀಸುವವನು; ಚಾಮರಿಗ: "ಬಿಜ್ಜಣಗೆಯವನೇ ಜಳಂಬಾಯ್ತನಕ್ಕುಂ" (ಶಬ್ದಮಂ. ೪೬): "ಜಳಂಬಾಯ್ತ ಬಿಜ್ಜಣಗೆವಿಡಿವಾತಂ" (ಶವಿಕಂ. ೧೬೧); ಅರಮನೆಯೊಳಿರಿಸುವುದು ರಾಯ ಕೀಳ್ಕುಲಪರಂಪರೆಯಿಂದೆ ಬಂದ ವಿಶ್ವಸನೀಯರಪ್ಪ ಪಡಿಯರರಂ ಜಳಂಬಾಯ್ತರಂ ಬೆಜ್ಜರಂ ಸಜ್ಜೆವಳರಂ (ಶೀಹರಾ. ೨-೩೨). **ಝುಳಂಬಾಯತ :** ಪಡಿಯಬಿರೆಕ್ಕಟಿಗರ ಲೆಕ್ಕಿಗರೆಸೆವ ಝುಳಂಬಾಯತರ . . . ಮಾಸ್ವಾರರ ಸಂದಣಿ ಸಲೆ ಸೊಗಯಿಸಿತು (ಜಯಕಾ. ೦೨-೧೯). **ಝುಳಂಬಾಯ್ತ :** "ಝುಳಂಬಾಯ್ತನೆಂದು ಬಿಜ್ಜಣಗೆ ವಿಡಿವಾತಂ" (ಕಶಸಾ. ೧೬-೩೪೨); ಅಬ್ಧಿಯ ಘೂರ್ಣಿಸುವಂತಾಯ್ತರಮನೆಯೊಳಗೆ ಪುಗುವ ಪೊಱಮಡುವ ಝುಳಂಬಾಯ್ತರ ಸೂಟಾಯ್ತರ ಕಲ್ಲಾಯ್ತರಡಂಗಾಯ್ತರಚ್ಚುಳಾಯ್ತರ ರಭಸಂ (ಶಮದ. ೧೯೮ ಪ್ರಯೋ): ತಿಂತಿಣಿಸಿ ತುಟಿಲ್ಗೆಯ್ವ . . . ಪಡೆವಳರಂ ಘೋಟಾಯ್ತರುಂ ಝುಳಂಬಾಯ್ತರಂ ಪಸಾಯ್ತರಂ ಪ್ರೇಮದಿಂದವರವರಂತರವಱಿತು ಮಧುರೋಕ್ತಿಗಳಿಂ ಸಂತಸವಡಿಸುತ್ತ (ಚಕವಂ. ೬೪-೯).

[ ಜಳಂಬ + – ಆಯ್ತ ]

**ಜಳಕ, ಜಲಕ, ಝುಳಕ**$_1$ (ನಾ). ಮೈತೊಳೆಯುವುದಂ; ಮಿಾಹ; ಸ್ನಾನ: ಜಳಕವನೇ ಮಾಡಿ ಯೋಗ ಕಂಪನಿಕ್ಕಿ ಹೋದಿಹೆನಯ್ಯ (ಸಿದ್ಧವ. ೪೧ ೨೨೦): ಬೆಡಗಡರ ಪಾಕವ್ರಯತ್ನದ ಕಡೆಯೊಳಾ ಜಂಗಮದ ಜಳಕಕೆ ಹಿಡಿದು (ಬಸವು. ೨೪-೬೦) : ಖಳಕುಲೋತ್ತಮನ ಬಾಣಾರುಣಾಂಬುವಿನಿಂದೆ ಜಳಕವಾದುದು ಕುಮಾರನಿಗೆ (ಮೋಹತ. ೩೪-೦೮) ; ಅವರನ್ನು ಜಳಕದ ಮನೆಗೆ ಕರೆದುಕೊಂಡು ಹೋಗ್ತೀಯಾ (ತುಂಗಭ. ೦೦). **ಜಲಕ:** ಪನ್ನೀರಿನಿಂ ಜಲಕವಂ ಮಾಡಿ (ಸೌಗಂಧಿ. ೧೬೬-೪). **ಝುಳಕ**$_1$ **:** ಝುಳಕಂ ಝುಳಪಿಸಿದಂ ಜೊಂಗುಳಿ ಬೊಂಬುಳಿಯಾಳಮಾಳಮಂತೆ ತಮಾಳಂ . . . ಜಟ ಸಂದೇಹಂ (ಶಮದ. ೨೫): ನಿದ್ರೆ ಪಿಂಗಿ ಎಟ್ದು ಝುಳಕ ದೇವತಾರ್ಚನೆ . . . ಜಪತಪ ಸಮಾಧಿಯುಂ ನಿರ್ವರ್ತಿಸಿ (ಧರ್ಮಪ. ೩-೧೨೧ ಪ) : ಝು[ಪಾಠಾಂ. ಜ]ಳಕವನುಲೇಪನ ವಿಭೂಷಣ ವಿಳಸದಮೃತಾಹಾರ ಮೊದಲಹ ಹಲವು ಸೇವೆಗೆ ಯೋಜಿಸಲು ನೆರೆತಂದುದೋರಂತೆ (ಸಾಳ್ವ ಭಾ. ೩೨-೧೫) : ಝುಳಕಕ್ಕೆಂದು ಇವರು ಬಚ್ಚಲ ಮನೆಗೆ ಹೋದಾಗ (ಮೂರುದಾ. ೮೩).

[ ದೇ.? ತಮಿ. ಚಲಕ, ಚಲಕ್ಕ ; ತೆಲು. ಜಲಕ, ಜಲ್ಕ ]

**ಜಳಕಂ** (ಅ). ಬೇಗನೆ; ಕೂಡಲೆ: "ಜಳಕಂ ಸುಶೀಘ್ರದಲ್ಲಿ" (ಕರ್ಣಾನಿ.೯೦). 'ಜಳಕನೆ' ಪರಾ. [ ? ]

**ಜಳಕಂಗೈ** (ಕ್ರಿ). ಸ್ನಾನ ಮಾಡು: ಜಳಕಂಗೆಯ್ದುಂಡುಟ್ಟುಂ ಬಳಿಕಂ ಕದನಕ್ಕೆ ಖಡ್ಗಫಲಕಂಗಳನಾವಿಳಮತಿಸಿದ್ಧಂ ಪಿಡಿದುಂ ಗಳಿಲನೆ ನಡೆತಂದಂ (ಹಾಲಾಸ್ಯ. ೨-೧೦-೨೩): ಸರಯೂತೀರಮಂ ಸಾರ್ದು ಜಳಕಂಗೈದು (ರಾಮಾಶ್ವ. ೨೬-೪).

[ ಜಳಕ + ಕೈ$_1$ (<ಕೆಯ್$_1$) ]

**ಜಳಕಂಬೊಗಿಸು** (ಕ್ರಿ). ಸ್ನಾನಮಾಡಿಸು ; ಮಿಾಯಿಸಂ : ಸುರಲತೆಗೆ ಸುರನಾರಿಯರ್ ಸುರಭಿಪಯಮಂ ಸುರಿವಂತೆ ಸುರಭಿಸಲಿಲದಿಂ ಜಳಕಂಬೊಗಿಸಿ (ವೃಷವಿ. ೫-೧೫ ವ). [ ಜಳಕಂಬೊಗು + – ಇಸು$_3$ ]

**ಜಳಕಂಬೊಗು, ಝುಳಕಂಬೊಗು** (ಕ್ರಿ). ಮಿಾಯು; ಸ್ನಾನ ಮಾಡು : ಚೇರಮಮಹೇಶ್ವರಂ ಜಳಕಂಬೊಗಲ್ಕೆ ತೈಲಾಭ್ಯಂಗನಂ ಮಾಡಿಕೊಳುತಿರ್ದ ಕಾಲದೊಳು (ಚೇರಮ. ೧೦-೩೧) ; ಪರಿಮಳೋದಕದಿಂ ಜಳಕಂಬೊಕ್ಕು ದಣಿಂಬಮನುಟ್ಟು (ವೃಷವಿ. ೯-೬೦ ವ). **ಝುಳಕಂಬೊಗು :** ಝುಳಕಂ ಬೊಕ್ಕಂ (=ಮಜ್ಜನವಿಡಿದಂ) (ಶಮದ. ನ. ೩೫ ಅಡಿಟಿ).

[ ಜಳಕ + ಪೊಗು ]

**ಜಳಕನೆ** 'ಜಲಕ್ಕನೆ' ನೋ.

**ಜಳಕಾಕ** 'ಜಲಕಾಕ' ನೋ.

**ಜಳಕಿಸು** (ಕ್ರಿ). ಹಿಮ್ಮೆಟ್ಟಿಸು : ಧುರದೊಳರಿಭೂಭುಜರನಂಜಿಸುವ ನಡುಗಿಸುವ ಕೊರಗಿಸುವ ಕೋಡಿಸುವ ಬಳುಕಿಸುವ ಜಳಕಿಸುವ [ಪಾಠಾಂ. ಬಾಡಿಸುವ ಬಳುಕಿಸುವ] ಬಿರುದಂಕಮಲ್ಲ ನೀ ನಡುಗಲೇತಕ್ಕೆ (ಹಡಕಾ. ೬-೫೪). [ಜಳಕು + – ಇಸು$_3$ ]

**ಜಳಕು, ಜಳುಕು** (ಕ್ರಿ). ೧. "ಬಳುಕು ; ಕಂಪಿಸು" (ಲೋಕಗೀ. ಕೋಶ) : ಕೆಂಪೀಲಿ ಚೆಲುವೇರ ಪಂಚಸರ ಕೊಪ್ಪಾರ ಒಂಕಿ ಭಾರಕ ಜ ಳ ಕೂ ರ (ಲೋಕಗೀ. ೧೨). ೨. ಹಿಂಜರಿ ; ಹಿಂದೆಗೆ ; ಹಿಮ್ಮೆಟ್ಟು : 'ಜಳಕಿಸು' ಪರಾ: ಜಳುಕು: ೩. ಎಸೆ ; ಬಿಸುಡಂ: ಅಳುಕಾದೆ ಬಳುಕಾದೆ ಕಳುಕಾದೆ ಮ ನ ದೊ ಳು ಅಳಿನೀಲಕುಂತಳೆವೃರಿಯೋಳ್ ಜಳುಕಾದೆ ತಳುಕಾದೆ ವಳಕೀಸಿ ಬೆದರಾದೆ ದಳನೇತ್ರ ಹರುಷಾದಿ ಪೊ ರ ಟು (ಹಮಡ. ೬೦): ಭರದಿ ಕೊಡಗಳ ಜಳುಕಿ ಧರೆಯಲಿ ಕರೆದು ಬಸವನ ಎಲ್ಲ ಬಿಸುಡುಲಿ ಧರೆಗೆ ಬೀಳದೆ ಒಡೆಯದಿರ್ದಡೆ ನೋಡು ಪರಿಕಿಸುತ (ಕರಲೀ. ೨೩೩-೩). 'ಜಳಿಕ' ಪರಾ. [ ? ]

**ಜಳಕೇಳಿ** 'ಜಲಕೇಳಿ' ನೋ.

**ಜಳಕೇಳಿಗೈ** (ಕ್ರಿ). ನೀರಾಟವಾಡು: ಜಳಕೇಳಿಗೈವ ಪನ್ನಗವಿಳಾಸಿನೀಜನಂ (ವೃಷವಿ. ೪-೬೦). [ ಜಳಕೇಳಿ (=ಜಲಕೇಳಿ) + ಕೈ$_1$ (<ಕೆಯ್$_1$) ]

**ಜಳಕ್ಕನೆ** 'ಜಲಕ್ಕನೆ' ನೋ.

**ಜಳಕ್ರೀಡೆ** 'ಜಲಕ್ರೀಡೆ' ನೋ.

ಜಳಖಾತಿಕೆ 'ಜಲಖಾತಿಕೆ' ನೋ.

ಜಳಗುಡಿ (ನಾ). ಒಂದು ಬಗೆಯ ಧಾರಾಗೃಹ ; ಕಾರಂಜಿಮನೆ : ಬಾಣಸಿನ ಗುಣನೆಯ ಮಜ್ಜನದ ದೇಹಾರದ ಚೌಂಟೆಯ ಕೊಂಚೆಯದ ಕೊರವದ ಕೊಟ್ಟಗೆಯ ಗುಡಿಯ ಜಳಗುಡಿಯ ಗೊಲ್ಲಣಿಗೆಯ ಮಂಡವಿಗೆಯ ವಿಳಾಸನಿವಾಸಂಗಳಿಂದಂ (ಶಾಂತಿಪು. ೧೦-೧೪೭ ವ).
[ ಜಳ₂ (=ಜಲ₂) + ಗುಡಿ₃ ]

ಜಳಚರ 'ಜಲಚರ' ನೋ.

ಜಳಜ 'ಜಲಜ' ನೋ.

ಜಳಜಂತ್ರ 'ಜಲಜಂತ್ರ' ನೋ.

ಜಳಜದಳ 'ಜಲಜದಲ' ನೋ.

ಜಳಜದಳಾಕ್ಷಿ (ನಾ). ಕಮಲದ ಎಸಳಿನಂತೆ ಕಣ್ಣುಳ್ಳವಳು : ಜಳಜದಳಾಕ್ಷಿಯ ಕಣ್ಮಲರಂದೆಂ ಪೊಟೆಜಳಮೀನಂಗಳ ಪೊಣರ್ಗಳ ಚಂದಂ (ಸುಕುಮಾ. ೫-೩೧).
[ ಸಂ. ಜಲಜದಲಾಕ್ಷೀ (ಜಲಜದಲ + ಅಕ್ಷಿ + –) ]

ಜಳಜಭವ 'ಜಲಜಭವ' ನೋ.

ಜಳಜಭವಾಂಡ (ನಾ). ಬ್ರಹ್ಮಾಂಡ: ಜಳಜಭವಾಂಡಂ ಜಂಬೂಫಳರಸದಿಂ ತೀವಿತೆಂಬಿನಂ ಜಗವಂ . . . ಪರ್ವಿದುದು ಸಾಂದ್ರಸಂಧ್ಯಾರಾಗಂ (ಶಾಂತಿಪು. ೯೬೮). [ ಜಳಜಭವ ( = ಜಲಜಭವ) + ಅಂಡ₂ ]

ಜಳಜಸಂಭವ 'ಜಲಜಸಂಭವ' ನೋ.

ಜಳಜಸಂಭವಗಣ (ನಾ). [ಛಂದ] ಅಂಶಗಣಗಳಲ್ಲಿ ಒಂದು; ಬ್ರಹ್ಮಗಣ: ಜಳಜಸಂಭವಗಣಮಕ್ಕೆ ಮೊದಲೊಳೆ '. . . ನಡುವಣಕ್ಕರಕೆ ಸಖೀ (ಛಂದೋಂಬು. ೫-೨೪೪). [ ಜಳಜಸಂಭವ ( = ಜಲಜಸಂಭವ) + ಗಣ ]

ಜಳಜಸಖ (ನಾ). ಕಮಲದ ಗೆಳೆಯ ; ಸೂರ್ಯ : ಜಳಜಸಖನನಿಲ ಸಖನೆಂದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾನಳರೋವೋ ಸಂತಮಿರ್ಪರೆ ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ (ಗಿರಿಳ. ೯-೨೭) ; ತರುಗಳಲ್ಲಿ ಹಯಖುರಹತಿಯಿಂದಲರ್ದೆಳ್ದ ಧೂಳಿ ಪರಿಣತ ಜಳಜಸಖಾಭಂ ಪತಂಗತತಿವೊಲ್ ಬೀಳ್ಗುಂ (ಜಾಳುಂತ. ೧೭-೩೨).
[ ಜಳಜ ( = ಜಲಜ) + ಸಖ ]

ಜಳಜಳಿಸು 'ಜಲಜಲಿಸು' ನೋ.

ಜಳಜಾತ 'ಜಲಜಾತ' ನೋ.

ಜಳಜಾತಸಖ 'ಜಲಜಾತಸಖ' ನೋ.

ಜಳಜಿನಿ 'ಜಲಜಿನಿ' ನೋ.

ಜಳದ 'ಜಲದ' ನೋ.

ಜಳದವೃಂದ (ನಾ). ಮೋಡಗಳ ಸಮೂಹ : ಪೊಳೆವ ಮಿಂಚುಗಳಂತಿರೆ ಕೇತುಗಳ್ ಜಳದವೃಂದದವೋಲಿರೆ ಹಸ್ತಿಗಳ್ (ಕವಿರಾ. ೧-೦೪೩).
[ ಜಳದ ( = ಜಲದ) + ವೃಂದ ]

ಜಳದಾಗಮ 'ಜಲದಾಗಮ' ನೋ.

ಜಳದಾಧ್ವ 'ಜಲದಾಧ್ವ' ನೋ.

ಜಳದಾನ 'ಜಲದಾನ' ನೋ.

ಜಳದಾನಕ್ರಿಯೆ 'ಜಲದಾನಕ್ರಿಯೆ' ನೋ.

ಜಳದುರ್ಗ 'ಜಲದುರ್ಗ' ನೋ.

ಜಳದೆ (ನಾ). ನೀರಿನಿಂದ ನೆನೆಸಿದ ಬೀಸಣಿಗೆ ; "ಬಾಳದ ಬೇರಿನ ಬೀಸಣಿಕೆ" (ಆದಿಪು. ಕೋಶ) : ಕುಳಿರ್ವ ತಿಳಿನೀರನುಡುಗದೆ ತಳಿ ತಳಿರಂ ಪಾಸು ಜಳದೆಯಿಂ ಬೀಸೆಂದುಮ್ಮಳಿಸಿ ಕಳವಳಿಸಿ ವಿರಹಾಕುಳನವೊಲಾ ಖಚರನಿಂತು ತಳವೆಳಗಾದಂ (ಆದಿಪು. ೨-೧೪).
[ <ಪ್ರಾ. ಜಲದ್ದಾ. / ಸಂ. ಜಲಾರ್ದ್ರಾ ]

ಜಳದೇವತೆ 'ಜಲದೇವತೆ' ನೋ.

ಜಳದೌಘ (ನಾ). = ಜಳದವೃಂದ : ಜಳದೌಘಶ್ಯಾಮಧೂಮಪ್ರತತಿ ಚಳತಟನ್ಮಾಳಿಕಾಲೋಲ ಕೀಲಾವಳಿ (ಚಂದ್ರಪ್ರ. ೪-೨೯).
[ ಜಳದ ( = ಜಲದ) + ಓಘ ]

ಜಳಧರ 'ಜಲಧರ' ನೋ.

ಜಳಧರಪಥ 'ಜಲಧರಪಥ' ನೋ.

ಜಳಧರಮಾರ್ಗ 'ಜಲಧರಮಾರ್ಗ' ನೋ.

ಜಳಧಾರೆ 'ಜಲಧಾರೆ' ನೋ.

ಜಳಧಿ 'ಜಲಧಿ' ನೋ.

ಜಳನಿಧಾನ (ನಾ). ನೀರಿಗೆ ಆಶ್ರಯವಾದುದು ; ಕಡಲು ; ಸಮುದ್ರ : ವಿನಯಾದಿತ್ಯಾಭಿಧಾನನಕ್ಷಿತಿನಿಧಾನಂ ವಿನತಜನಜಳನಿಧಾನಂ ಜನಿಯಿಸಿದಂ ಶತ್ರುಘಾತಶರಸಂಧಾನಂ (ಎಕ. V, ಬೇಲೂರು. ೧೯೩-೯ : 1161).
[ ಜಳ₂ ( = ಜಲ₂) + ನಿಧಾನ]

ಜಳನಿಧಿ 'ಜಲನಿಧಿ' ನೋ.

ಜಳನೀಳಿಕೆ 'ಜಲನೀಲಿಕೆ' ನೋ.

ಜಳಪಕ್ಷಿ 'ಜಲಪಕ್ಷಿ' ನೋ.

ಜಳಪದ್ಧತಿ 'ಜಲಪದ್ಧತಿ' ನೋ.

ಜಳಪಾನ (ನಾ). ನೀರು ಕುಡಿಯುವುದು : ಜಳಪಾನಚ್ಛಳದಿಂ ಪ್ರಪಾಪ್ರಣಯಿನೀಶೃಂಗಾರಲೀಲಾಸುಧಾಜಳಮಂ ಕಣ್ಗಳಿನೀಂಟಿ . . . ಭಾವರತ ಕೇಳೀಸೌಖ್ಯ ಹೀಯೂಷಸಂಕುಳಮಂ ಚಿ ತ್ತ ದಿ ನೀ ೦ ಟಿ ತದ್ವಿಷಯದಧ್ವನ್ಯರ್ ಮನಂಬೆರ್ಚುವರ್ (ಚಂದ್ರಪ್ರ. ೧-೯೯).
[ ಜಳ₂ ( = ಜಲ₂) + ಪಾನ ]

ಜಳಪಿಸು 'ಝಳಂಪಿಸು' ನೋ.

ಜಳಪು 'ಜಳುಪು' ನೋ.

ಜಳಪ್ಪ 'ಝಳಪ್ಪ' ನೋ.

ಜಳಪ್ರತ್ಯಯ 'ಜಲಪ್ರತ್ಯಯ' ನೋ.

ಜಳಪ್ರಸರ 'ಜಲಪ್ರಸರ' ನೋ.

ಜಳಪ್ಲವ (ನಾ). ನೀರಿನ ಪೂರ,–ಪ್ರವಾಹ : ಜಳಪ್ಲವದೊಳ್ ನಸು ದೇಂಕು ದೇಕೆ (ವರ್ಧಮಾ. ೮-೯೧); ಅವಳೆಸಿಯ ಬಾಸಯೆಂಬೀ ನವಯೌವನವನದ ಲತೆಯ ಲಾವಣ್ಯ ಜಳಪ್ಲವಮನೊಳಕೊಳ್ಳುದೆಂದಾಳವಾಳಮನೆ ನಿಮ್ನನಾಭಿಮಂಡಲಮೆಸೆಗುಂ (ಮಲ್ಲಿಪು. ೩-೬೨).
[ ಜಳ₂ ( = ಜಲ₂) + ಪ್ಲವ ]

ಜಳಬುದ್ಬುದ 'ಜಲಬುದ್ಬುದ' ನೋ.

ಜಳಮಂತ್ರ 'ಜಲಮಂತ್ರ' ನೋ.

ಜಳಮನುಷ್ಯ (ನಾ). ಜಲಪುರುಷ ; ನೀರುಮನುಷ್ಯ : ಮನುಜ ಜಳಮನುಷ್ಯಂ ಮಹಾ ಕೂರ್ಮಕೂರ್ಮಂ ವಿಶದಂ ತತ್ಕೀರ್ತಿ ದುಗ್ಧಾಂಬುಧಿ ಗಗನಘನಶ್ರೀಶನಂ ತಾಳ್ದಿ ತೋರ್ಕುಂ (ರಾಜಶೇ. ೫-೩).
[ ಜಳ₂ (=ಜಲ₂) + ಮನುಷ್ಯ ]

ಜಳಮಲ್ಲಿಕೆ (ನಾ). ಒಂದು ಬಗೆಯ ಗಿಡ : "ಖರಚ್ಛದಾ–ಜ (ಟ?)ಳ ಮಲ್ಲಿಕೆ" (ಒಪಧಿ. ೪೩). [ ಸಂ. ಜಲಮಲ್ಲಿಕಾ (ಜಲ + ಮಲ್ಲಿಕಾ) ]

ಜಳಯಂತ್ರ 'ಜಲಯಂತ್ರ' ನೋ.

ಜಳಯಾತ್ರೆ 'ಜಲಯಾತ್ರೆ' ನೋ.

ಜಳಯುದ್ಧ 'ಜಲಯುದ್ಧ' ನೋ.

ಜಳರಂಕು 'ಜಲರಂಕು' ನೋ.

ಜಳರಾಶಿ 'ಜಲರಾಶಿ' ನೋ.

ಜಳರುಹ 'ಜಲರುಹ' ನೋ.

**ಜಳರುಹಕಾಂಡ** (ನಾ). ಕಮಲದ ನಾಳ ; ಮೃಣಾಲ : ಹರಿ . . . ತದೀಯ ಶರೀರಕಾಂಡಮಂ ಜಳರುಹಕಾಂಡಮಂ ಒಡಿವವೊಲ್ ಒಡಿದಾಡಿದ ನಂದು ಲೀಲೆಯಿಂ (ಜಗವಿ. ೩-೯೯). [ಜಳರುಹ ( = ಜಲರುಹ)+ಕಾಂಡ]

**ಜಳರುಹನಾಭ** 'ಜಲರುಹನಾಭ' ನೋ.

**ಜಳರುಹಪತ್ರ** (ನಾ). ತಾವರೆಯ ಎಸಳು ; ಕಮಲದಳ : ಜಳರುಹಪತ್ರ ಪತ್ರಗಳ ಮೇಲೆನಸುಂ ಕುಣಿವಂಗನಾಜನಂಗಳ ನಳಿತೋಳ ತೆಕ್ಕೆ (ಪುಷ್ಪಪು. ೧೦-೪೬). [ ಜಳರುಹ ( = ಜಲರುಹ) + ಪತ್ರ ]

**ಜಳರುಹರಿಪು** 'ಜಲರುಹರಿಪು' ನೋ.

**ಜಳರೇಖೆ** (ನಾ). ೧. ನೀರಿನ ಮೇಲೆ ಎಳೆದ ಗೆರೆ. ೨. (ಅಲಂ) ಕ್ಷಣಿಕವಾದುದು ; ಭಂಗುರವಾದುದು : ಜಳರೇಖಾಸಂಚಳಂ ಜವ್ವನ ಮಮರ ಧನುರ್ಜಾಲಮಂಗಂ (ಪುಷ್ಪಪು. ೧೩-೪೪).

[ ಜಳ್$_2$ ( = ಜಲ$_2$) + ರೇಖೆ ]

**ಜಳವಟಿಗೆ** 'ಜಳವಟ್ಟಿಗೆ' ನೋ.

**ಜಳವಟ್ಟಿಗೆ, ಜಳವಟಿಗೆ, ಝಳವಟಿಗೆ, ಝುಳವಟ್ಟಿಗೆ** (ನಾ). ಒಂದು ಬಗೆಯ ಆಭರಣ : ಪೇರುರದ ಪರೆವು ಕರಿಯ ದಂಡೆಯ ಜಳವಟ್ಟಿಗೆಯ ಬೆರಕೆವೆಳಗಿಂ ಸುರಧನುವಿನ ಹೊರಜೆ ಹತ್ತಿದ್ದೈರಾವತಕ್ಕೆ ವೈರಮನೊಡರ್ಚಿ (ಅನಂಪು. ೨-೨೬ ವ). **ಜಳವಟಿಗೆ :** ತೋರಹಾರದ ಜಳವಟಿಗೆಯ ಪದಕದ ಬಾಹುಪೂರಯದ . . . ಸೊಬಗನಡಿಯಿಟ್ಟಂ (ಹಡಕಾ. ೯-೨); (ಸೋಮಚ. ೨-೧೬ ನೋ) ; ಖಡೆಯ ಸರಪಣಿ ತೋಳಬಂದಿಗೆ ಪದೆವಣಿಯ ಮಣಿವಾ ವುಗಳನಳವಡಿಸಿದನು ಜೋಡಿಸಿದ ಶೇಷನ ಜಳವಟಿಗೆ ಮೆಚಿಯ (ಕುವ್ಯಾಕ. ೭-೦೨). **ಝುಳವಟಿಗೆ :** ತರಿಸಿದನು ಭಂಡಾರದಲಿ ಪರಿಪರಿಯ ಪೆಟ್ಟಿಗೆ ಗಳನು . . . ಚರಣನೂಪುರ ಝುಳವಟಿಗೆಯುಂಗುರ ಕಿರೀಟಾಂಗದ ಸುಕರ್ಣಾಭರಣವನು ತೆಗೆಸಿದನು (ಕುವ್ಯಾಸ. ೩-೪೩) : ಜಲಕಮಲದ ಕಾಂಚಿಯ ಕಟಿಸೂತ್ರದ ಝುಳವಟಿಗೆಯ ಜೂಳೆಯದ . . . ಕಾಂತಾಬಲವೆ ಯ್ದಿತು (ಕುರಾಸಾಂ. ೪೦-೭೮); ತ್ರಿಸರವ ಪಂಚಸರವ ಝುಳವಟಿಗೆಯ ಹೊಸಮುತ್ತಿನೇಕಾವಳಿಯ . . . ಒಸೆದಿತ್ತನಾ ಸುರುತಾಳ (ಕುರಾಸಾಂ. ೪೦-೩೬). **ಝುಳವಟ್ಟಿಗೆ :** ಪ್ರಚಂಡಮಂಡಳಿಕರ ವಲಯದ ಕರ್ಣಾ ಭರಣದ ಕೇಯೂರದ ರತ್ನಹಾರದ ಝುಳವಟ್ಟಿಗೆಯ ತೊಡರ . . . ಉಣ್ಮ ಪೊಣ್ಮುವ ಝಣಝಣತ್ಕಾರದೊಳಂ (ಅನಂಪು. ೩-೯೫ ವ).

[ ಜಳ್$_1$ (<ಜಲ$_1$) + ವಟ್ಟಿಗೆ ]

**ಜಳವಾಯಸ** 'ಜಲವಾಯಸ' ನೋ.

**ಜಳವಾಸ** (ನಾ). ನೀರಿನಲ್ಲಿ ಇರುವಿಕೆ, ವಾಸಮಾಡುವುದು : ಬಳಿ ಯಲರ್ಗಣ್ಗೆ ಕಂಪನರುಣಾಧರಕೊಪ್ಪುವ ಬೆಳ್ಪನೆಯ್ದೆ ಪಜ್ಜಳಿಸುವ ದೇಹ ದೀಪ್ತಿಗೆ ಬೆಳರ್ಪಿರವಂ ಪಡೆದುಂ ನಿಕಾಮಕೋಮಳೆಯರುದಾತ್ತವೃತ್ತಿ ಕಿಡುಗುಂ ಜಳವಾಸದೊಳ್ (ಶಾಂತಿಪು. ೮-೪೦).

[ ಜಳ್$_2$ (=ಜಲ$_2$) + ವಾಸ$_2$ ]

**ಜಳವಿಹಂಗ** 'ಜಲವಿಹಂಗ' ನೋ.

**ಜಳವಿಹಗ**. (ನಾ). ನೀರಂಹಕ್ಕಿ ; ಜಲಪಕ್ಷಿ : ಜಳವಿಹಗಪಕ್ಷವಿಕ್ಷೇಪದಿಂ ಪರಿದು . . . ಮಂದಮಾದ ಪೊಂದಾವರೆಯ ರಜದೊಳಂ (ಮಲ್ಲಿಪು. ೨-೩೩) ; ಎನಿತು ಜಳವಿಹಗವಿರೆಯುಂ ವನಜವನಂ ರಾಜಹಂಸನಿಂ ರಾಜಿಪವೋಲ್ (ಚಂದ್ರಪು. ೨-೨೬). [ ಜಳ್$_2$ ( = ಜಲ$_2$) + ವಿಹಗ ]

**ಜಳವಿಹಗಿ** (ನಾ). ಹೆಣ್ಣು ನೀರುಹಕ್ಕಿ ; ಹೆಣ್ಣು ಜಲಪಕ್ಷಿ : ಜಳವಿಹಗೀಸಹಸ್ರವಿರುತಂ ಮರುತಂ (ಪುಷ್ಪಪು. ೯-೨೪).

[ ಸಂ. ಜಲವಿಹಗೀ (ಜಲ + ವಿಹಗೀ) ]

**ಜಳವೆ, ಜಣಬೆ, ಜವಣೆ, ಜವಳೆ, ಜೆವಳೆ** (ನಾ). ೧. ಬಿದಿರಿನ ಗಳು ; ಬೊಂಬು; ಕೋಲು ; ಜಲ್ಲೆ : ಮೇಲಿದ್ದವರನ್ನು ದೊಡ್ಡ ಜಳವೆಗಳಿಂದ ಕೆಳಕ್ಕೆ ಉರುಳಿಸಿಬಿಡುವರು (ಭಾರವಿ. ೦೬): ಹೊದರಿನಲ್ಲಿ ಹೊಕ್ಕವುಗಳನ್ನೂ ಜಳವೆಗಳಿಂದ ಬಡಿದು ಓಡಿಸುತ್ತಾ . . . ಹೋಗುತಿದ್ದರು (ಪೀಠಿಮಾ. ೩). ೨. ಹುಟ್ಟುಗೋಲು. **ಜಣಬೆ :** ೧. ಅತ್ತಿಮಟ್ಟೆ ಒಂದು ಕತ್ತಿಯನ್ನು ತೆಗೆದುಕೊಂಡು ಅದನ್ನು ಜಣಬೆಯಂತೆ ಬಾಗಿಸಿ ಹದವನ್ನು ಪರೀಕ್ಷಿಸಿದಳು (ದಾವಜಿಂ. ೦೨೮). **ಜವಣೆ :** ೧. ಎರಡು ಜವಣೆಯನ್ನು ತರಿಸಿ ಎರಡರ ತುದಿಗೂ ಹುಂಜಗಳನ್ನು ಕಟ್ಟಿ ಕೋಟೆ ಬಾಗಿಲ ಮೇಲೊಂದನ್ನು ನೆಡಿಸಿ ದರು (ಹುಟ್ಟಿಹ. ೭೧) ; ಬಿದಿರಿನ ಜವಣೆಯಿಂದ ಎಳನೀರನ್ನು ಕೆಡವಿ ನಮ್ಮಿಬ್ಬರಿಗೂ ಕೊಟ್ಟರು (ಧರ್ಮಶ್ರೀ. ೨೯೮). **ಜವಳೆ :** ೧. ಧಾವನ ವಾಂಛೆಯಿಂದ ಯಾತವನ್ನು ತುಳಿಸುವವನ ಕೈಯ ಜವಳೆಯಂತೆ ತದನು ಬಂಧ ಕಾರ್ಯಮಾತ್ರದಿಂದ (ಶಕ್ತಿಸ. IV, ೫೯-೩). **ಜೆವಳೆ:** ೧. ನಳಿತೋಳ ನೆತ್ತಿ ಪಾಮರಿಯರು ಸೋವುವ ಚಳಕವೊಪ್ಪಿತು ಗಿಳಿಗಳನು ಘಳಿಲಸಂಗಜ ಧೀವರ ಮೋಹ ಮಿಾನ್ಗಳ ಸೆಳೆವ ಕೈ ಜೆವಳೆ[ಪಾಠಾಂ. ಳಬೆ]ಗಳಂತೆ (ಜ್ಞಾನಸ. ೧-೧೦೭). 'ಜಲ್ಲೆ$_1$' ಪರಾ.

ಜಳವೆ ಆಡಿಸು = ಕೋಲಿನಿಂದ ಮಿಾಟಿ ತೆಪ್ಪವನ್ನು ಮುಂದೆ ತಳ್ಳು: ನಾನು ನಮ್ಮ ಹೈದ ಇಬ್ಬರೂ ಜಳವೇ ಆಡಿಸಬೇಕು(ಹುರಾಯ. ೯೫).

**ಜಳವ್ಯಾಳ** 'ಜಲವ್ಯಾಲ' ನೋ.

**ಜಳಶಯ** (ನಾ). ನೀರಿನ ಮೇಲೆ ಮಲಗಿರುವವನು ; ವಿಷ್ಣು : ಜಳ ಶಯನವತರಿಸುವುದಂ ತಿಳಿದು (ಜಗವಿ. ೨-೭೪). [ ಸಂ. ಜಲಶಯ ]

**ಜಳಶೂಕ** 'ಜಲಶೂಕ' ನೋ.

**ಜಳಸೇಕ** 'ಜಲಸೇಕ' ನೋ.

**ಜಳಸ್ತಂಭ** 'ಜಲಸ್ತಂಭ' ನೋ.

**ಜಳಸ್ತಂಭಮಂತ್ರ** (ನಾ).=ಜಲಸ್ತಂಭನ ೨ : ರಾಜರಾಜಂ ಸೈರಿಸದೆ ಚಿತ್ತ ಸ್ಖಲನೆಯಾಗೆ ಜಳಸ್ತಂಭಮಂತ್ರಮೆಲ್ಲಂ ಮಾಯಾಮಂತ್ರಮಾಗೆ (ಪಂಪಭಾ. ೧೩-೮೦ ವ). [ ಜಳಸ್ತಂಭ (= ಜಲಸ್ತಂಭ) + ಮಂತ್ರ ]

**ಜಳಾಂಜಳಿ** 'ಜಲಾಂಜಲಿ' ನೋ.

**ಜಳಾವಗಾಹ** (ನಾ). ನೀರಿನಲ್ಲಿ ಮುಳುಗಿ ಸ್ನಾನಮಾಡುವುದು; ಸ್ನಾನ: ಕೋಳ್ಗುದಿಗೊಂಡು ಜಳಾವಗಾಹಾಸೆಯಿಂ ವೈತರಣಿಯ ಪಿರಿಯ ದರಿಯಂ ಮೆಟ್ಟೆ (ಶಾಂತಿಪು. ೭-೯೧ ವ). [ ಜಳ್$_2$ ( = ಜಲ$_2$) + ಅವಗಾಹ ]

**ಜಳಾಶಯ** 'ಜಲಾಶಯ' ನೋ.

**ಜಳಿ** (ನಾ). ಹಡಗಿನ ಒಂದು ಭಾಗ : "ಆ ಜಳಿ ಕತ್ತವಕ್ಕುಂ [ಪಾಠಾಂ. ಬಳ್ಳಿ ಕರ್ತಮೆನಿಕುಂ] " (ಮುಂಗರಾ. ೦೨೦-೫). [ ? ]

**ಜಳಿಕ, ಜಳುಕ** (ನಾ). ೧. ಸತ್ತ್ವಹೀನನಾದವನು ; ದುರ್ಬಲ : "ಜಳಿಕಂ ಸತ್ತ್ವವಿಹೀನನೊಳ್ " (ಕರ್ಣಾನಿ. ೪೫) ; ನಮ್ಮ ಆಸ್ಥಾನವನ್ನು ಲಘು, ನಿರ್ಬಲ ಜಳಿಕವೆಂದಾಗುರುವನೆಂದೂ . . . ಎರಡನೆಯ ವೃತ್ತಾಂತ (ಬಿಟ್ಟಿಅ. ೭೮-೧೮) . ೨. ಸತ್ತ್ವಹೀನವಾದುದು ; ಜಳ್ಳು. (ಗು). ೩. ಸತ್ತ್ವಹೀನವಾದ ; ದುರ್ಬಲವಾದ : ಎಂತೆಂತೂ ಜಳಿಕ ರಕ್ಕಸರಂ ಗೆಲ್ದೊಂದು ಟಕ್ಕಿಸ ಬಲ್ಮೆಯನ್ನೀ ತೋಳ್ವಲಕೇಂ ಬಾರ್ತೆಯ ? (ರಾಮಾಶ್ವ. ೦೦೨-೭). **ಜಳುಕ:** ತನು ಕಲಸಕ್ಕೆಳಸಿದೊಡಂ ಮನವವಳಂ ನೆನವುತಿರ್ಪುದದು ಕಾರಣದಿಂದೆನಸುಂ ಮಾಡಿದ ಕೆಲಸಂ ಮನದಂತಿರೆ ಜಳುಕನಾ[ಪಾಠಾಂ. ಬಳಿಕವಾ]ದುದಾಕೆಯ ದೆಸೆಯಿಂ (ಧರ್ಮಪ. ೬-೦೫).

[ <ಜಾಳು$_2$ ? ]

**ಜಳಿಕತನ** (ನಾ). ಸತ್ತ್ವಹೀನತೆ ; ದೌರ್ಬಲ್ಯ : ಒಗೆದೊಡಂಬಿ ಬಳೆದು ಕೊರ್ಬಿ ನಸೆಯ ತೀರ್ಚಿ ಜಳಿಕತನದ ಕಂದಿಯಿರ್ಕುಳಾಗಿ ಸಾವ ಯನ್ತ್ರಶಾಲಿ ಧರೆಯಿದಕಟ ! (ಸಂಪಹ. ೦೫-೧). [ ಜಳಿಕ + – ತನ ]

**ಜಳಿಪಿಸು** 'ಝುಳಂಪಿಸು' ನೋ.

**ಜಳುಕ** 'ಜಳಿಕ' ನೋ.

**ಜಾತಸೂತಕ** (ನಾ). (ಹಿಂದೂಧರ್ಮಶಾಸ್ತ್ರದಂತೆ) ಮಗು ಹುಟ್ಟಿದಾಗ ಮಾತಾಪಿತೃಗಳಿಗೆ ಮತ್ತು ಜ್ಞಾತಿಗಳಿಗೆ ಉಂಟಾಗುವ ಮೈಲಿಗೆ; ಪುರುಡು ; ವೃದ್ಧಿ : ಪ್ರೇತಸೂತಕ ಜಾತಸೂತಕ ಜಾತಿ ವಿರಹಿತನಾಗಿ (ಬಸವು. ೦೮-೯೮). [ ಜಾತ + ಸೂತಕ ]

**ಜಾತಹರ್ಷ** (ನಾ). ಸಂತೋಷವುಂಟಾದವನು; ಸಂತೋಷಗೊಂಡಿರುವವನು: ಜಲಕೇಳಿಯಾಡಿ ಪೊಱಮಟ್ಟು ನಿಂದು ಜಾತಹರ್ಷನಾಗಿ ಬೆಟ್ಟುಗಳ್ ಬಿರಿಯೆ ನಿಷ್ಕುರಧ್ವಾನಂಗೆಯ್ದು (ಪಂಚತಂ. ೪೩-೨೦).
[ ಜಾತ + ಹರ್ಷ ]

**ಜಾತ್ರಾ** (ನಾ). ಒಂದು ನಿರ್ದಿಷ್ಟವಾದ ಸ್ಥಳಕ್ಕೆ ಹೊರಟಿರುವ ಜನರ ವ್ಯವಸ್ಥಿತವಾದ ತಂಡ,-ಗುಂಪು,-ಮೆರವಣಿಗೆ : ದೇಶದ ನಾನಾ ಕಡೆಯಿಂದ ಜಾತಾಗಳು ಬಂದುವು (ರೂಢಿ).

**ಜಾತಾಹೊರಡು** = ನಿರ್ದಿಷ್ಟ ಸ್ಥಳಕ್ಕೆ ಗುಂಪುಗೂಡಿ ಪ್ರಯಾಣ ಮಾಡು: ಚಳುವಳಿಕಾರರು ವಿಧಾನಸೌಧಕ್ಕೆ ಜಾತಾಹೊರಡುವಂತೆ ವ್ಯವಸ್ಥೆ ಮಾಡಿದ್ದಾರೆ (ರೂಢಿ). [ ←ಹಿಂ. ಮರಾ. ಜಥಾ ]

**ಜಾತ್ರಾ** (ಅ). ಹೋಗಲಾಗಿ ; ಕಳೆಯಲಾಗಿ ; ಬಿಡಲಾಗಿ : ಹನುಮಂತರಾಯನಿಗೆ ಈ ಮನೆ ಒಂದು ಜಾತಾ ಅವರ ಮಿಕ್ಕ ಆಸ್ತಿಯಲ್ಲವನ್ನೂ 'ಏಲ್' ಮಾಡಿಟ್ಟುಬಿಟ್ಟಿದ್ದಾರೆ (ಅವತಂ. ೦೮೩). 'ಜಾತಾಬಾಕಿ' ಪರಾ.
[ ←ಹಿಂ. ಜಾನಾ ]

**ಜಾತಾಪತ್ಯೆ** (ನಾ). ಹಡೆದವಳು ; ಹೆತ್ತವಳು ; ಬಾಣಂತಿ ; "ಸೂತಿಕೆ ಜಾತಾಪತ್ಯೆ ವಿಜಾತೆ ವಿಶಲ್ಯಾಭಿಧಾನೆ ತಾನೆನಿಕುಂ" (ವಸ್ತುಕೋ. ೩೪-೦೬).
[ ಸಂ. ಜಾತಾಪತ್ಯಾ (ಜಾತ + ಅಪತ್ಯ + –) ]

**ಜಾತಾಬಾಕಿ** (ನಾ). ಕೊಡಬೇಕಾದುದು ಕಳೆದು ಉಳಿದಿರುವುದು,-ನಿಂಕ್ಕಿರುವುದು ; ಶಿಲ್ಕು : ಹದಿನೆಂಟು ಹಣ ಜಾತಾಬಾಕಿ ಬೇರೀಜು ಕಂಠೀರಾಯಿ ೩೫೫ (ಮೈಅರಿ. ೦೯೩೯. ೪೨-೩೪ ; 1825) ; ಜಾತಾಬಾಕಿ ಇಷ್ಟು ಎಂಬುದಾಗಿ . . . ಪಟ್ಟಿ ಕಳುಹಿಸುವುದು (ಮಹಾವಂ. II, ೬೬).
[ ←ಮರಾ. ಜಾತಾಬಾಕೀ ]

**ಜಾತಾಶೌಚ** (ನಾ). = ಜಾತಸೂತಕ : ಯಾರಾದರೂ ಜನಿಸಿದರೂ ಮೃತರಾದರೂ ನಿಯಮವಾದ ಕಾಲಪರ್ಯಂತವಾಗಿರುವ ಕರ್ಮಕ್ಕೆ ಅಧಿಕಾರವಿಲ್ಲದ ಅವಸ್ಥೆ. ಇದನ್ನು ಜಾತಾಶೌಚವೆನ್ನುತ್ತಾರೆ (ಆಯು ೯ ಧ. ೯೩): ಅವರಿಗೆಲ್ಲ ಒಂದು ಜಾತಾಶೌಚ ಬಂದು ಮದುವೆ ಆ ಲಗ್ನದಲ್ಲಿ ನಡೆಯಲೇ ಇಲ್ಲ (ರೂಢಿ). [ ಜಾತ + ಅಶೌಚ ]

**ಜಾತಿ** (ನಾ). ೧. ಹುಟ್ಟು ; ಜನನ. ೨. ಹುಟ್ಟಿದ ಕುಲ; ವಂಶ; ಪೀಳಿಗೆ; ತಳಿ : ಜಾತಿಗೆ ತಕ್ಕ ಮಾತು ತೂತಿಗೆ ತಕ್ಕ ಬೆಣೆ (ಗಾದೆ). ೩. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಕುಲ ಅಥವಾ ಮತ : ಜಾತಿಯೊಳೆಲ್ಲಮುತ್ತಮದ ಜಾತಿಯ ವಿಪ್ರಕುಲಂಗೆ . . . ಜಿನೇಂದ್ರ ಧರ್ಮಮೆ ಮಲಂ ದೊರೆ ಧರ್ಮದೊಳ್(ಶಂಪಭಾ. ೦೪-೪೮). 'ಅಷ್ಟಾದಶಜಾತಿ' ಪರಾ. ೪. ಜನಾಂಗ. ೫. ವರ್ಗ ; ಗುಂಪು : ವೇದಬೋಧಿಪ ಜಾತಿಗಳು ಎರಡಾದಿಯಲಿ (ಬಸವು. ೩೩-೦೧). ೬. ರೀತಿ ; ಸ್ವಭಾವ; ತರಹ. ೭. ಉತ್ತಮವಾದುದು; ಮೇಲಾದುದು; ಒಳ್ಳೆಯ ನಡತೆಯುಳ್ಳುದು : ಭಾಸ್ಕರನು ಈ ಜಾತಿ ಸಾಧ್ವಿಯರೆಸಕದೇಳಿಗೆಯಿಂದ ತೇಜವಡೆದು ತಿರುಗುವನು (ಹರಿಬ. ೨-೮). ೮. ಸಾದೃಶ್ಯ ; ಸಮಾನತೆ : "ಜಾತಿಯೆಂಬುದು ಸಾದೃಶ್ಯಂ" (ತಸೂವ್ಯ. ೩). ೯. ಜಾಯಿಕಾಯಿ. ೧೦. ಜಾಜಿಗಿಡ ಮತ್ತು ಅದರ ಹೂವು : ಸೊಗಯಿಸಿ ಬಂದ ಮಾಮರನೆ ತಳ್ತಲೆವಳ್ಳಿಯೆ ಪೂತ ಜಾತಿ ಸಂಪಗೆಯೆ . . . ಬನವಾಸಿ ದೇಶದೊಳ್ (ಪಂಪಭಾ. ೪-೨೮) ; ತಿಲತೈಲದೊಳ್ . . . ಜಾತಿಯ ಪೊಸ ಪೂಗಳನಿಕ್ಕಿ (ಲೋಕೋಪ. ೬-೨೦). ೧೧. "ನೆಲ್ಲಿಗಿಡ" (ಗಂಗಾಮು. ೦೩೯). ೧೨. ಚಳ್ಳೆಮರ: "ಶ್ಲೇಷ್ಮಾತಕಂ ಜಾತಿ ಚೆಳ್ಳಕ್ಕು" (ಮಂಗರಾ. ೩೬-೨೨); "ಸನಯಂ ಸಾಹಿತ್ಯಭೇದಂ ಕುಲಕುಸುಮಗಳುಂ ಜಾದಿಯುಂ ಜಾತಿಯಕ್ಕುಂ" (ನಾನಾರ. ೬೬). ೧೩. ಒಲೆ. ೧೪. [ತರ್ಕಶಾ] ವ್ಯರ್ಥವಾದ ಉತ್ತರ. ೧೫. [ಸಂಗೀತ] ಸಪ್ತಸ್ವರಗಳು. ೧೬. [ಕಾವ್ಯಮೀ] ಸ್ವಭಾವೋಕ್ತಿ ಅಲಂಕಾರ : ಭಾವಿಸಿ ಸಮಸ್ತವಸ್ತು ವಿಭಾವಿತ ಜಾತಿ ಕ್ರಿಯಾಗುಣ ದ್ರವ್ಯ ಸ್ವಾಭಾವಿಕ ಗುಣಮಂ ಪೇಟ್ವುದು ಕೇವಲಮಾ ಜಾತಿಯೆಂಬ ಸದಳಂಕಾರಂ (ಕವಿರಾ. ೩-೬); ಜಾತಿಯೆನಿಕುಂ ಸ್ವಭಾವಾಖ್ಯಾತಿ ಯಥಾವಸ್ಥಿತಾರ್ಥ ವಿಷಯಾರ್ಥಕೃತೋದ್ಯೋತ ನವ ವೈಪರೀತ್ಯಂ ಜಾತಿ ದ್ರವ್ಯ ಕ್ರಿಯಾಗುಣ ಪ್ರತಿಬದ್ಧಂ (ಕಾವ್ಯಾವ. ೬೦೫). ೧೭. [ಗಣಿತ] ಹದಿನೆಂಟು ಎಂಬ ಸಂಖ್ಯೆಯ ಸಂಕೇತ : "ಜಾತಿ ಸ್ಥಳಂ ಪದಿನೆಂಟು" (ಮಂಗರಾ. ೦೦೪-೯). [ ಸಂ. ]

**ಜಾತಿಕರ್ಮ** (ನಾ). ಆಯಾ ಜಾತಿಗೆ ಸಂಬಂಧಪಟ್ಟ ಶಾಸ್ತ್ರೀಯವಾದ ಅಥವಾ ಆಚಾರದಿಂದ ಬಂದ ಕರ್ಮ,-ವಿಧಿ,-ಅನುಷ್ಠಾನ,-ಆಚರಣೆ: ಅವರವರ ಜಾತಿಕರ್ಮ ಅವರವರಿಗೆ ಹೆಚ್ಚು (ರೂಢಿ). [ ಜಾತಿ + ಕರ್ಮ ]

**ಜಾತಿಕಾರ** 'ಜಾತಿಗಾಱ' ನೋ.

**ಜಾತಿಕೂಟ, ಜಾತಿಗೂಟ**(ನಾ). ಒಂದು ಬಗೆಯ ತೆರಿಗೆ: ಮಗ್ಗಮೇಲದೆರಿಗೆ ಜಾತಿಕೂಟ ಕಾಣಿಕೆ ಕಂದಾಯ ಮದುವೆ ಸುಂಕ ಚರಾದಾಯ ತೆರಿಗೆ ಮುಂತಾದ ಯೇನು ಉಂಟಾದರೂ ನಿಮಗೆ ಸಲುವದು (ಮೈಅರಿ. ೦೯೪೦, ೪೬-೧೮ ; 1669) ; ಕುರಿದೆರಿಗೆ ಜಾತಿಕೂಟ ದೇವರಾಯಮಟ್ಟ . . . ಇವು ಮೊದಲಾದ ಸಕಲ ಸ್ವಾಮ್ಯವನು (ಎಕ. XIV, ನಂಜನ. ೨೯೩-೩೦೩; 1716).

**ಜಾತಿಗೂಟ**: ಅಕ್ಕವಣಿಗೆ ಸಲುವ ಪೈರುಸುಂಕ ಪೊಂಮು ದೇವಸ್ಥಾನಗಳಿಗೆ ಸಲ್ವ ಪೈರು ದುತ್ತುಂ ವಣಿಹಸ್ಯಕಕ್ಕೆ ಸಲುವುದು ಜಾತಿಗೂಟ (ಎಕ. III, ಶ್ರೀರಂಗ. ೦೦೦-೦೬೩ ; 1724). [ ಜಾತಿ + ಕೂಟ$_1$ ]

**ಜಾತಿಕೋಶ** (ನಾ). ಜಾಯಿಪತ್ರೆ. [ ಜಾತಿ + ಕೋಶ ]

**ಜಾತಿಕ್ಷತ್ರಿಯ** (ನಾ). ಹುಟ್ಟುಕ್ಷತ್ರಿಯ : ಪಟ್ಟಕರ್ಮನಿರತ ಜಾತಿಕ್ಷತ್ರಿಯರೆಂದುಂ ತೀರ್ಥಕ್ಷತ್ರಿಯರೆಂದುಮಿತ್ತೆಱನಪ್ಪುವು (ಚಾವುಂಪು. ೨೪೬).
[ ಜಾತಿ + ಕ್ಷತ್ರಿಯ ]

**ಜಾತಿಗ** (ನಾ). = ಜಾತಿಗಾಱ: ಜಾತಿಗರು ಕೂಡಿದರು ಕೋತಿಯಳ್ಳ ಚೌಡನಿಗೆ ನೀತಿಯಲಿ ಆಡಿ ರೂಪಗಳ ಜಗದೊಳಗೆ ಸೋತು ಪರಮತವು ಕೈಮುಗಿದು (ಕನ್ನಕಾ. ೨೪೬). [ ಜಾತಿ + – ಗ$_2$ ]

**ಜಾತಿಗತ** (ಗು). ಜಾತಿಗಳಲ್ಲಿರುವ ; ಜಾತಿಗೆ ವಿಶಿಷ್ಟವಾದ: ಈ ಬೃಹತ್ ಸತ್ವಯಲ್ಲಿ ಅದಕ್ಕಿಂತ ಸಣ್ಣ ವಿಭಾಗವಿರುತ್ತದೆ. ಅದನ್ನು ಜಾತಿಗತ ಸತ್ವೆ ಎನ್ನಬಹುದು (ನಿಬಂಧ. II, ೨೩೪). [ ಜಾತಿ + ಗತ$_2$ ]

**ಜಾತಿಗಳ್ಳ** (ನಾ). ಹುಟ್ಟುಗಳ್ಳ ; ಪಕ್ಕಾಕಳ್ಳ : ಜಾತಿಗಳ್ಳನಾದ ಹುಡುಗ ಆ ಗುಂಪಿಗೆ ಸೇರಿದವನು (ಪುನರು. ೪೦೩). [ ಜಾತಿ + ಕಳ್ಳ$_1$ ]

**ಜಾತಿಗಾದೆ** (ನಾ). [ಛಂದ] ಪ್ರತಿಸಾಲಿನಲ್ಲಿಯೂ ಇಪ್ಪತ್ತಮೂರು ಮಾತ್ರೆಗಳಿರುವ, ಮೂರು ಸಾಲಿನ ಪದ್ಯ : ಪದ(ಮುಂ) ಮೂಱಾಗಿಯುಂ ಶ್ಲೋಕದ ಲಕ್ಷಣವಾಗಿಯುಂ ವಿದಿತಂ ಜಾತಿಗಾದೆ [ಪಾಠಾಂ. ಧೆ]ಯೆಂಬುದು ಸಂದಭಿಧಾನದಿಂದಿದನೋದು ವಿಲೋಲಪಟ್ಟದ ಸನ್ನಿಭಕುಂತಳೇ (ಛಂದೋಂಬು. ೩-೨೦) : ಜಾತಿಗಾದೆ (ಸಂಸಪ. ೩೮).
[ ಜಾತಿ + ಗಾದೆ ]

**ಜಾತಿಗಾಯನ** (ನಾ). ಹದಿನೆಂಟು ಬಗೆಯ ವಿಶಿಷ್ಟರೀತಿಯ ಸ್ವರಗಳ ಹಾಡುಗಾರಿಕೆ : ಭರತನು ನಿರೂಪಿಸಿದ ಜಾತಿಗಾಯನ ಪದ್ಧತಿಯು ಫಲಭರಿತವಾಗಿ ಯಥೇಚ್ಛವಾಗಿ ಜನತೆಗೆ ಆನಂದಿಸಲನುವಾದುದೇ ಅಲ್ಲದೇ, ಇಂದೂ ಸಾರೋದ್ಧಾರವಾಗಿ ಫಲ ಬಿಡುತ್ತಲೇ ಇದೆ (ಭಾರದ. ೩೪೦).
[ ಜಾತಿ + ಗಾಯನ ]

**ಜಾತಿಗಾರ** 'ಜಾತಿಗಾಱ' ನೋ.

**ಜಾತಿಗಾಟಿ, ಜಾತಿಕಾರ, ಜಾತಿಗಾರ** (ನಾ). ಯಕ್ಷಗಾನ, ಬಯಲಾಟ, ನಾಟಕ ಮೊದಲಾದುವುಗಳಲ್ಲಿ ಅಭಿನಯಿಸುವುದೇ ವೃತ್ತಿಯಾದವನು; ನಟ: ಜಾತಿ[ಪಾಠಾಂ. ಲ,ಳೆ]ಗಾಟಿನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ ಸೂಳೆಗಾಟಿನ ಮನೆಯಲ್ಲಿ ಹೆಣ ಹೋಗಿ ಅಳುವಂತೆ (ಅವಚಂ. ೨೯-೧೨೨). **ಜಾತಿಕಾರ**: ಹೊಟ್ಟೆಯ ಪೊರೆವ ಜಾತಿಕಾರನಂತೆ ನಾನೊಬ್ಬ ವೇಷ ಧರಿಸಿ (ವಿಶಾಸು. ೬೬-೧). **ಜಾತಿಗಾರ**: ನಮ್ಮ ಹಿರಿಯರು ಜಾತಿಗಾರರಿಂದ ಇಂಥ ಆಟಗಳನ್ನು ಆಡಿಸಿ ಅವರಿಗೆ ಯೋಗ್ಯ ಬಹುಮಾನವನ್ನು ಕೊಟ್ಟು ಕಳುಹಿಸುತ್ತಿದ್ದರಂತೆ (ಬೆಳುಮು. ೨೦೩); ನೀರ, ನೇಹಿಗ, ನಂಟ, ಬಂಟ, ಸಂವಾದಿ, ಗುರು, ಶಿಷ್ಯ, ಪ್ರೀತಿಯ ಜಾತಿಗಾರ ! (ಉಯ್ಯಾಲೆ. ೦೬-೪). [ ಜಾತಿ + – ಕಾಟಿ ]

**ಜಾತಿಗೂಟ** 'ಜಾತಿಕೂಟ' ನೋ.

**ಜಾತಿಗೊಯ್ಯು** (ನಾ). ಜಾತಿಯನ್ನು ಕೆಡಿಸುವವನು, – ಹಾಳುಮಾಡುವವನಂ; "ಧರ್ಮಲಂಡ" (ಜಾನಕೋ. ೬೦). [ ಜಾತಿ + ಕೊಯ್ಯು$_2$ ]

**ಜಾತಿಗೊಲ್ಲ** (ನಾ). ಹುಟ್ಟನಿಂದಲೆ ಗೊಲ್ಲನಾದವನು: ಗೊಲ್ಲನಲ್ಲದ ಜಾತಿಗೊಲ್ಲನು ಗೊಲ್ಲನೆ ತಾನೆಲ್ಲಡೆಯೊಳಂ ಗೊಲ್ಲನಾದೊಡೆ (ಲಕಪು. ೪೦-೩೨). [ ಜಾತಿ + ಗೊಲ್ಲ$_2$ ]

**ಜಾತಿಜ** (ನಾ). ದೊಡ್ಡ ವಂಶದಲ್ಲಿ ಹುಟ್ಟಿದವನು; ಉತ್ತಮ ಕುಲದಲ್ಲಿ ಹುಟ್ಟಿದವನು. 'ಜಾತಿಜಾಂಗಣ' ಪರಾ. [ ಸಂ. ]

**ಜಾತಿಜಾಂಗಣ** (ನಾ). ದೊಡ್ಡ ವಂಶದಲ್ಲಿ ಹುಟ್ಟಿದವರ ಮನೆಯ ಪರಿಸರ; ಮನ್ನೆಯರ ಮನೆಯ ಅಂಗಳ: ಇಲ್ಲ . . . ಬಂದ ಮಾವಿಲ್ಲದ ನಂದನಂ ಕುಳಿರ್ವ ನಂದನವಿಲ್ಲದ ಜಾತಿಜಾಂಗಣಂ (ಅನಂಪು. ೩-೯). [ ಜಾತಿಜ + ಅಂಗಣ ]

**ಜಾತಿಜಾಣಕೆ** (ನಾ). ಸಹಜವಾದ ಜಾಣತನ; ಹುಟ್ಟುಗುಣವಾಗಿ ಬಂದ ಬುದ್ಧಿವಂತಿಕೆ: ಅಂದು ಎಮಗೆ ಜಾತಿಜಾಣಕೆಯಿಂದಲಭಿನವ ಪಾಡುನೋಟಗಳಿಂದ ಬಳಿಕಲ್ಲಮನ ತೋಱಿಸುತಿರ್ದಳಾ ಮಾಯೆ(ಪ್ರಭುಲೀ. ೬-೨೮). [ ಜಾತಿ + ಜಾಣಕೆ ]

**ಜಾತಿಜಾರೆ** (ನಾ) ಹುಟ್ಟು ಹಾದರಗಿತ್ತಿ; ವ್ಯಭಿಚಾರದಲ್ಲಿ ಸಹಜ ಆಸಕ್ತಿಯುಳ್ಳವಳು: ಗಂಡನ ಕೈಯಿಂದ ಕರೆಯಿಸಿಕೊಂಬರು . ಮಿಂಡನ ಜಾತಿಜಾರೆಯರು (ಶಂರಾಸಾಂ. ೨೫-೩೬). [ ಜಾತಿ + ಜಾರೆ ]

**ಜಾತಿಡೊಂಬ** (ನಾ). ಮಹಾ ಡಂಭಾಚಾರಿ; ಪಕ್ಕಾ ಮೋಸಗಾರ: ಮಾತಿನಂತೆ ಮನವಿಲ್ಲದ ಜಾತಿಡೊಂಬರ ನೋಡಿ ನಗುವ ನಮ್ಮ ಕೂಡಲಸಂಗಮದೇವ (ಬಸವ. ೬೫೦). [ ಜಾತಿ + ಡೊಂಬ$_2$ (<ದಂಬ) ]

**ಜಾತಿದ್ವೇಷ** (ನಾ). ೧. ಸ್ವಭಾವಸಿದ್ಧವಾದ ದ್ವೇಷ; ನೈಸರ್ಗಿಕವಾದ ಹಗೆತನ ೨. ವಿಭಿನ್ನಜಾತಿಗಳಲ್ಲಿ ಪರಸ್ಪರ ದ್ವೇಷ. ೩. ತನ್ನ ಜಾತಿಗೆ ಸೇರಿದವರೊಂದಿಗೆ ಹಗೆತನ. [ಜಾತಿ + ದ್ವೇಷ]

**ಜಾತಿಧರ್ಮ** (ನಾ). ೧. ಸಹಜಸಿದ್ಧ ಗುಣ; ಹುಟ್ಟುಗುಣ: ನೆಗಳದೀ ಚೌಷಟ್ಟಿಲಕ್ಷಣ ಜಾತಿಧರ್ಮದಲಿ (ಹರಿಶಾ. ೮೪): ದೊಡ್ಡ ಮೀನು ಸಣ್ಣ ಮೀನನ್ನು ನುಂಗುವುದು ಅದರ ಜಾತಿಧರ್ಮ (ರೂಢಿ). ೨. ಜಾತಿಯ ಸಂಪ್ರದಾಯ, ಪದ್ಧತಿ, –ಆಚಾರ; ಶಾಸ್ತ್ರೋಕ್ತವಾದ ಅನುಷ್ಠಾನ: ಯುದ್ಧಮಾಡುವುದೇ ಕ್ಷತ್ರಿಯನಿಗೆ ಜಾತಿಧರ್ಮ (ರೂಢಿ).
[ ಜಾತಿ + ಧರ್ಮ ]

**ಜಾತಿಪತ್ರೆ** (ನಾ). ಜಾಯಿಪತ್ರೆ: "ಜಾಯಿಫಳಮಾ ಜಾತಿಪತ್ರೆಯಕ್ಕುಂ" (ಮಂಗರಾ. ೪೩-೯೨). [ ಸಂ. ಜಾತಿಪತ್ರ ]

**ಜಾತಿಪದ್ಧತಿ** (ನಾ). ಜಾತಿಗಳಾಗಿ ವಿಭಾಗಿಸುವುದು: ಗುಣಗಳೇ ಪೂಜಾಸ್ಥಾನವೆಂಬುದು ಅಂದಿನ ತತ್ತ್ವ. ಅದಕ್ಕೆ ಭಂಗವುಂಟಾದಂದಿನಿಂದ ಜಾತಿಪದ್ಧತಿಯು ಅಸಹ್ಯವಾಯಿತು (ಭಾರದ. ೩೮೯). [ ಜಾತಿ + ಪದ್ಧತಿ ]

**ಜಾತಿಪುರುಷ** (ನಾ). ಉತ್ತಮನಾದವನು; ಶ್ರೇಷ್ಠನಾದ ಮನುಷ್ಯ: ದುಟಿದುಂಬಿತನದಿಂದೆ ಒಡಿಯ ವೆಣ್ಗಳು ಮೆಯ್ಮಱೆವರೆ ಜಾತಿಪುರುಷರು (ಶಂರಾಸಾಂ. ೩೭-೦೦). [ ಜಾತಿ + ಪುರುಷ ]

**ಜಾತಿಫಲ** (ನಾ). ಜಾಯಿಕಾಯಿ. [ ಜಾತಿ + ಫಲ ]

**ಜಾತಿಬಧಿರ** (ನಾ). ಹುಟ್ಟಿದಂದಿನಿಂದಲೇ ಕಿವಿಕೇಳದವನು: ಹುಟ್ಟು ಕಿವುಡ: ಜಾತಿಬಧಿರನಂತನ್ಯರ ಕಿವಿಯೊಳ್ ಕೇಳ್ದುದಂ ನುಡಿವನಲ್ಲಂ (ಪಂಚತಂ. ೯೩-೫). [ ಜಾತಿ + ಬಧಿರ ]

**ಜಾತಿಬೆಳ್** (ನಾ). ಹುಟ್ಟನಿಂದಲೇ ದಡ್ಡನಾದವನು; ಅತಿ ದಡ್ಡ: ಸುಹೃದ್ಬಲಮೆಲ್ಲಮನಿಕ್ಕಿ ಯುದ್ಧಮಂ ಮಾಡಿದ ಜಾತಿಬೆಳ್ ನಿನಗದೇವಿರಿದೀಯೆಡೆಱ್ (ಪಂಪಭಾ. ೧೩-೫೪). [ ಜಾತಿ + ಬೆಳ್$_2$ ]

**ಜಾತಿಬ್ರಾಹ್ಮಣ** (ನಾ). ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನು: ಜಾತಿಬ್ರಾಹ್ಮಣನಿಗಿಂತಲೂ ಗುಣಬ್ರಾಹ್ಮಣನು ಪೂಜ್ಯನೆಂದು ಸಿದ್ಧಾಂತವಿರುವುದು (ಹಿಂದಸಾ. ೧೫೭). [ ಜಾತಿ + ಬ್ರಾಹ್ಮಣ ]

**ಜಾತಿಭಂಗ** (ನಾ). ೧. ತನ್ನ ಜಾತಿಯನ್ನು ಪರಾಭವಗೊಳಿಸುವಿಕೆ. ೨. ಮಾಲತೀಪುಷ್ಪದ ನಾಶ; ಜಾಜಿಹೂವನ್ನು ಹಾಳುಮಾಡುವಿಕೆ. ೧, ೨: ಶಿಶಿರಸಮಯದಂತೆ ಜಾತಿಭಂಗಭಂಗುರಮುಂ . . . ಭದ್ರಲಕ್ಷಣ ಲಕ್ಷಿತಮುಮಪ್ಪ ಪಟ್ಟವರ್ಧನಮನೇಱಿ (ಮಲ್ಲಿಪು. ೫-೬೫ ವ).
[ ಜಾತಿ + ಭಂಗ ]

**ಜಾತಿಭೇದ** (ನಾ). ಜಾತಿಜಾತಿಗಳಲ್ಲಿರುವ ಭಿನ್ನತೆ, –ಒಡಕು: ಜಾತಿಭೇದವಿಲ್ಲ ಸೂತಕವಿಲ್ಲ ಅಜಾತಂಗೆ ಕುಲವಿಲ್ಲ (ಬಸವ. ೪೦೭): ಹಿಂದುಗಳಲ್ಲಿ ಒಗ್ಗಟ್ಟಿಲ್ಲದಿರುವುದಕ್ಕೆ ಹಿಂದೂಜನಾಂಗದಲ್ಲಿರುವ ಜಾತಿಭೇದವೂ ಒಂದು ಮುಖ್ಯ ಕಾರಣವಾಗಿದೆ (ರೂಢಿ). [ ಜಾತಿ + ಭೇದ ]

**ಜಾತಿಭ್ರಂಶಕ**(ನಾ). ಜಾತಿಯನ್ನು ಕೆಡಿಸುವುದು, –ಹಾಳುಮಾಡುವುದು; ಹತ್ತು ಬಗೆಯ ಪಾಪಗಳಲ್ಲಿ ಒಂದು: ಜಾತಿಭ್ರಂಶಕವೆಂದು ಸಂಕೀರ್ಣಕವೆಂದು . . . ಪಾಪರಾಶಿಗಳೊಳು ದಶವಿಧವಾಗಿ ಮುಖ್ಯಪಾಪಗಣಂಗಳಿರ್ಕುಂ (ವಿವೇಳ. ೧೮೩). [ ಸಂ. ]

**ಜಾತಿಭ್ರಷ್ಟ** (ನಾ). ಜಾತಿಕೆಟ್ಟವನು: ಘೋಷಾಲನು ಜಾತಿಭ್ರಷ್ಟನೆಂದು ತಿಳಿದು ಆ ಪರಿವಾರಕ್ಕೆ ಸೇರಿದ್ದ ತನ್ನ ಸೊಸೆಯನ್ನೂ ತ್ಯಜಿಸಿಬಿಟ್ಟನು (ಕಪಾಳುಂ. ೩೪). [ ಜಾತಿ + ಭ್ರಷ್ಟ ]

**ಜಾತಿಮಣಿಯ** (ನಾ). ಒಂದು ಬಗೆಯ ತೆಂಗೆ: ಮನೆದಂಗೆ ಮೊದಲಾದ ೧೯ ಬಾಬುಗಳನ್ನು ನೇಮಿಸಿದರು. ೧. ಮನೆದಂಗೆ . . . ೧೪. ಜಾತಿಮಣಿಯ (ಮಹಾಪಂ. I, ೧೨೪). [ <ಸಂ. ಜಾತಿಮಾನ್ಯ ]

**ಜಾತಿಮದ** (ನಾ). ತಾನು ಮೇಲುಜಾತಿಯವನೆಂಬ ಗರ್ವ, –ಅಹಂಕಾರ: ಕುಲಮದವೊಂದು ರೂಪಮದವೊಂದು . . ಜಾತಿಮದವೊಂದು (ಪಂಕಾಮೂ. ೬-೧೪); ಜಾತಿಮದ – ಇದೇ ಪ್ರಕಾರ ಸತ್ಪುರುಷರು ಜಾತಿಯ ಗರ್ವವನ್ನೂ ಕೂಡ ಮಾಡುವುದಿಲ್ಲ (ಶ್ರಾವಕಾ. ೮೦). 'ಕುಲಮದ' ಪರಾ. [ ಜಾತಿ + ಮದ$_1$ ]

**ಜಾತಿಮಲ್ಲಿಗೆ** (ನಾ). ಉತ್ತಮ ಬಗೆಯ ಮಲ್ಲಿಗೆ: ಮಾತಿನಲಿ ಜಾತಿಮಲ್ಲಿಗೆ, ಕೃತಿಯು ಪೂತುಮಡಕೆ (ನೆಲಮು. ೨೩-೬). [ಜಾತಿ+ಮಲ್ಲಿಗೆ]

**ಜಾತಿಮಾನ್ಯ** (ನಾ). = ಜಾತಿಮಣಿಯ: ಇವು ಪೂರ್ವಕಾಲದ ತೆಂಗೆಗಳು; ಮನತೆಂಗೆ, ಹುಲ್ಲಪಣ . . . ಜಾತಿಮಾನ್ಯ, ಮಗ್ಗಕಂದಾಯ (ನಮ್ಮನು. ೨೪೩). [ ಸಂ. ]

**ಜಾತಿಮುತ್ತು** (ನಾ). ಶ್ರೇಷ್ಠವಾದ ಮುತ್ತು; ಬಹಳ ಮೇಲುಮಟ್ಟದ ಮುತ್ತು: ಸ್ವಾತಿಯ ಹನಿ ಬಿದ್ದು ಜಾತಿಮುತ್ತಾದಂತೆ (ಸರ್ವಜ್ಞ. ೬೦೭); ಜಾತಿಮುತ್ತುಗಳೇ ಅವರಲ್ಲಿ ಅಪರೂಪವೆನ್ನಬೇಕು (ಹೇಮಕೂ. ೦೫).
[ ಜಾತಿ + ಮುತ್ತು$_6$ ]

**ಜಾತಿರತ್ನ** (ನಾ). ಉತ್ತಮವಾದ ರತ್ನ ; ಶ್ರೇಷ್ಠವಾದ ಮಣಿ : ಇವನ ಮಾತುಗಳು ಯಾವಾಗಲೂ ಜಾತಿರತ್ನಗಳಂತೆ ಅಮೌಲ್ಯವಾಗಿರುವುವು (ರಾಜಾಮ. ೧೨೬). [ ಜಾತಿ + ರತ್ನ ]

**ಜಾತಿರಸಿಕ** (ನಾ). ಹುಟ್ಟುಗುಣವಾಗಿ ಬಂದ ರಸಿಕತೆಯುಳ್ಳವನು ; ಉತ್ತಮನಾದ ರಸಿಕ : ಜಾತಿರಸಿಕನೆ ನೀನು ಹಿಡಿದುದೆ ತಿರುಳು, ನುಡಿದುದೆ ಹುರುಳು (ಉಯ್ಯಾಲೆ. ೦೬-೬). [ ಜಾತಿ + ರಸಿಕ ]

**ಜಾತಿಲಿ** (ನಾ). ಒಂದು ಬಗೆಯ ವನಸ್ಪತಿ : (ವೃಜಿಗಿ. ೨೦-೩೬೦) [ ? ]

**ಜಾತಿವಂತ** (ಗು). ಜಾತಿಗೆ ಸೇರಿದ ; ಮೇಲುಮಟ್ಟದ ; ಉತ್ಕೃಷ್ಟ ವಾದ : ನಾಲ್ವತ್ತು ಗೆಳೆಯರ ಕೈ ಉಬ್ಬಿಸಿದವನ ತಲೆಯಿಂದ ನೆತ್ತರು ಪುಟಿಯಿಸದಿದ್ದರೆ ನಾನು ಜಾತಿವಂತ ಅಂಬಿಗನಲ್ಲ (ರಂಗರೋ. ೦೨). [ ಜಾತಿ + – ವಂತ ]

**ಜಾತಿವಳ** (ನಾ). ಉತ್ತಮ ಜಾತಿಗೆ ಸೇರಿದವನು: ತವೆ ಜೀವಿಪಷ್ಪಾದಶಂ ಗಳೆಂದೆನಿಪ ಜಾತಿವಳವ[ಪಾಠಾಂ. ಗ]ರ್ ನೂಜಿ೯ಂದು ಕುಲದವರ್ (ಜಿಬಪು. ೪೬-೪೩). [ ಜಾತಿ + – ವಳ (< – ವಾಳ$_1$) ]

**ಜಾತಿವಾಚಕ** (ನಾ). [ವ್ಯಾಕ] ವರ್ಗ ಅಥವಾ ಸಮೂಹವನ್ನು ತಿಳಿಸುವ ಪದ : ಜಾತಿವಾಚಕ, ಸಂಖ್ಯೇಯ ವಾಚಕ, ವಿಧೇಯವಾಚಕಗಳ ಮೇಲೆ ಬಹುವಚನಕ್ಕೆ ಪ್ರತಿಯಾಗಿ ಏಕವಚನವು ವಿಕಲ್ಪದಿಂದ ಬರುವುದು (ಕೃಪಿಡಿ. ೫೬). [ ಜಾತಿ + ವಾಚಕ ]

**ಜಾತಿವಾಡಿಕೆ** (ನಾ). ಜಾತಿಯ ಪದ್ಧತಿ ; ಕುಲದ ಸಂಪ್ರದಾಯ ; ಕುಲಾಚಾರ : ಇದೇ ನಮ್ಮ ಜಾತಿವಾಡಿಕೆ ಆಗಬೇಕು (ಮುನಿಮಾ ೫೬). [ ಜಾತಿ + ವಾಡಿಕೆ ]

**ಜಾತಿವಾದಿ** (ನಾ). ತನ್ನ ಜಾತಿಯು ಮಾತ್ರ ಮುಖ್ಯವೆಂಬ ಭಾವನೆ ಯಿಂದ ವರ್ತಿಸುವವನು : ತಮ್ಮ ಜಾತೀಯತೆಯ ವ್ಯವಹಾರಕ್ಕೆ ಯಾರಾದರೂ ಅಡ್ಡಿಬಂದರೆ ಆ ರೀತಿ ಅಡ್ಡಿ ಬಂದವರನ್ನೇ ಜಾತಿವಾದಿ ಗಳೆಂದು ಕರೆಯುತ್ತಾರೆ (ಪಂಜಪಂ. ೦೩೬). [ ಸಂ. ಜಾತಿವಾದಿನ್ ]

**ಜಾತಿವಾಸ** (ನಾ). ಹದಿನೆಂಟು ಬಗೆಯ ಕೊಳಲುಗಳಲ್ಲಿ ಒಂದು : ಹದಿನೆಂಟಂಗುಳ ಮೊದಲಾಗಿ ಒಂದಂಗುಳ ಪರ್ಯಂತವಾದ ಪರಿಮಾಣ ಕ್ರಮವಿಡಿದು ಜಾತಿವಾಸ . . . ಭುವನಾಧಿಪವಾಸವೆಂಬ ಹದಿನೆಂಟು ತೆಱದ ವಾಸಂಗಳ ಲಕ್ಷಣವೞಿತು (ವಿವೇಕ. ೨೩೬). [ ಜಾತಿ + ವಾಸ$_1$ ]

**ಜಾತಿವೀರ** (ನಾ). ಹುಟ್ಟುವೀರ ; ಸ್ವಭಾವದಿಂದಲೇ ಶೂರನಾಗಿರು ವವನು ; ಶ್ರೇಷ್ಠವೀರ : ಜಾತಿವೀರರು ಸಾವ ಭೀತಿಗಂಜುಳಿವರೇ (ಸರ್ವಜ್ಞ. ೬೧೨). [ ಜಾತಿ + ವೀರ ]

**ಜಾತಿವೆಣ್** (ನಾ). ಉತ್ತಮಳಾದ ಮಹಿಳೆ ; ಶ್ರೇಷ್ಠನಾರಿ: ಜಾತಿವೆಣ್ಗಳ ವಾಸನೆಯಱಿಯದ‌ರಂತೆ ಅಸುರರತಿಗೆಳಸುವರೆ ವಿವೇಕವಿಲಾಸವಿಭವ ಮುಳ್ಳವರು (ಕುಠಾಸಾಂ. ೩೬-೦೦). [ ಜಾತಿ + ಪೆಣ್ ]

**ಜಾತಿವೈರ** (ನಾ). = ಜಾತಿದ್ವೇಷ : ಜಾತಿವೈರಂಗಳಿಲ್ಲದ ಪಕ್ಷಿಮೃಗದ ಸಂಘಾತದಿಂ (ಕ್ರಮಿಥಾ. ೦೯-೪೩); ಇಲ್ಲಿ ಪ್ರಾಣಿಗಳೆಲ್ಲ ತಮ್ಮ ತಮ್ಮ ಜಾತಿ ವೈರವನ್ನು ಬಿಟ್ಟಿರುವುವು (ನೀತಿಚಿಂ. XV. ೦೯); ನನಗೂ ನಿನಗೂ ಜಾತಿವೈರ (ವಚಧಾ. ೩೩೯). [ ಜಾತಿ + ವೈರ ]

**ಜಾತಿವ್ಯಾಪ್ತಿ** (ನಾ). ಒಂದು ಪದದ ಅರ್ಥದಲ್ಲಿ ಸೇರಬಹುದಾದ ಅರ್ಥವಿಸ್ತಾರ ; ಪದಗತವಾದ ಅರ್ಥಬೋಧಕಶಕ್ತಿಯ ಪ್ರಸಾರ ; ಅರ್ಥವ್ಯಾಪ್ತಿ : ಯಾವುದೇ ಸುಸಂಸ್ಕೃತ ಶಬ್ದದ ಜಾತಿವ್ಯಾಪ್ತಿ (denotation) ಮತ್ತು ಗುಣವ್ಯಾಪ್ತಿ (Connotation)ಗೆ ಪೂರ್ಣವಾಗಿ ಸರಿಹೋಗುವ ಶಬ್ದವು ಮತ್ತೊಂದು ಭಾಷೆಯಲ್ಲಿ ದೊರೆಯುವುದು ಅಸಾಧ್ಯವೇ ಆಗಿದೆ (ಸಾಹಿವಿ. ೧೨೦). ‘ಗುಣವ್ಯಾಪ್ತಿ’ ಪರಾ. [ ಜಾತಿ + ವ್ಯಾಪ್ತಿ ]

**ಜಾತಿಸಂಕರ** (ನಾ). ೧. ಜಾತಿಗಳ ಬೆರಕೆ ; ಬೇರೆ ಬೇರೆ ಜಾತಿಗಳು ಕಲಬೆರಕೆಯಾಗುವುದು; ವರ್ಣಸಂಕರ. ೨. ವರ್ಣಸಂಕರವಾದವನು: ಕುಲವನಱಸುವರೆ ಶರಣರಲ್ಲಿ ಜಾತಿಸಂಕರನಾದ ಬಳಿಕ (ಬಸವ. ೬೦೬); ಬಾಲಾಶೋಕಂ ವಿಗ್ರಹಲೀಲೆ ರಜೋವಿಕೃತಿ ಜಾತಿಸಂಕರಮನಿಲೋಲ್ಲಾಲ ತರ ಶಿಖಿಶಿಖಾಕುಳಕೋಳಾಹಳಮಿಲ್ಲ ಬನದೊಳಲ್ಲದೆ ಜನದೊಳ್ (ಪುಷ್ಪಪು. ೨-೨೮). [ಜಾತಿ + ಸಂಕರ$_2$]

**ಜಾತಿಸಂಮೋಹನ** (ನಾ). ಜಾತಿಯ ಮೇಲಿನ ಮಮತೆ,–ಪ್ರೇಮ,– ಅಭಿಮಾನ : ಪೂಣರ್ವಕ್ಕಿಗಳೆಂದೆ ಜಕ್ಕವಕ್ಕಿಗಳಗಲದೆ ಮೊಗಸಿದುವು ಜಾತಿಸಂಮೋಹನದಿಂ (ಮಲ್ಲಿಪು. ೬-೧೦೦). [ ಜಾತಿ + ಸಂಮೋಹನ ]

**ಜಾತಿಸಿಂಗರ** (ನಾ). ಸಹಜಶೃಂಗಾರ ; ಹುಟ್ಟುಗುಣವಾದ ಸೊಗಸು : ಹರೆಯದ ಕೋಮಲಾಂಗಿಯರು ಸರ[ಿ] ಸರಿಕೆಯೊಳೆಯ್ದುತಿದ್ದರು ಜಾತಿಸಿಂಗರಗೂಡಿ ಕಣ್ಗೆ ಮೋಹಿಸುತ (ಭರತ. ೪೩-೩೦). [ ಜಾತಿ + ಸಿಂಗರ (< ಸಿಂಗಾರ) ]

**ಜಾತಿಸಿಪಾಯಿ** (ನಾ). ಶ್ರೇಷ್ಠ ಸಿಪಾಯಿ ; ಉತ್ತಮನಾದ ಸಿಪಾಯಿ : ಪಾಳೆಗಾರ ಮಾತ್ರ ನಮ್ಮ ಕೈಗೆ ಜೀವಸಹಿತ ಸಿಕ್ಕುವವನಲ್ಲ, ಜಾತಿಸಿಪಾಯಿ ಯಾಗಿದ್ದಾನೆ (ಚಿತ್ರಪಾ. ೯೦). [ ಜಾತಿ + ಸಿಪಾಯಿ ]

**ಜಾತಿಸು** (ಕ್ರಿ). ಹುಟ್ಟಿಸು ; ಉತ್ಪತ್ತಿಮಾಡು : ಮಾತೆ ಕೇಳೌ ಎನ್ನ ಮಾತನು ತಾತರಿಬ್ಬರದೇನು ನಿಮ್ಮೊಳು ಜಾತಿಸಿದ ಪರಿಯೇನು ನಿಮ್ಮಲಿ ಬಂದ ಪರಿಯೇನು (ಕುವ್ಯಾಉ. ಓರಿಇ. ೦೦-೩೦ ಅಡಿಟಿ). [ ಜಾತಿ + – ಇಸು$_3$ ]

**ಜಾತಿಸೂತಕ** (ನಾ). ಪಂಚಸೂತಕಗಳಲ್ಲಿ ಒಂದು; ಹೀನಜಾತಿಯವರ ಸ್ಪರ್ಶದಿಂದ ಉಂಟಾಗುವುದೆಂದು ಭಾವಿಸಲಾದ ಮೈಲಿಗೆ; ಅಶುಚಿ: ಭಕ್ತಿಗೆಯೂ ಬೇಟಕ್ಕೆಯೂ ಜಾತಿಸೂತಕವುಂಟೆ (ಬಸವ. ೫೬೯) : ಜಾತಿ ಸೂತಕ ಜನನಸೂತಕ ಪ್ರೇತಸೂತಕ ಉಚ್ಛಿಷ್ಟಸೂತಕ ಪ್ರಜಾಸೂತಕವೆಂಬ ಪಂಚಸೂತಕಗಳನಳಿದಾತನಾಗಿ (ವಿವೇಕ. ೧೦೦). [ ಜಾತಿ + ಸೂತಕ ]

**ಜಾತಿಸ್ಮರ** (ನಾ). ಪೂರ್ವಜನ್ಮದ ನೆನಪುಳ್ಳವನು,–ಸ್ಮರಣೆಯುಳ್ಳವನು: ಆದಿನಾಥನ ಮುನಿರೂಪಮಂ ಕಾಣಲೊಡಂ ಜಾತಿಸ್ಮರನಾಗಿ ಮಾರ್ಗ ಸ್ಥಿತಿಯನಱಿದು (ಆದಿಪು. ೧೦-೮ ವ) : ಎನಿತುಂ ಜಾತಿಸ್ಮರನಪ್ಪನಿಮೇಷಂ ಜೀವಿತಾಂತ್ಯದೊಳ್ (ಯಶೋಚ. ೩-೫೧). [ ಸಂ. ]

**ಜಾತಿಸ್ಮರತೆ** (ನಾ). ಹಿಂದಿನ ಜನ್ಮದಲ್ಲಿ ನಡೆದ ಸಂಗತಿಗಳ ನೆನಪು,– ಸ್ಮರಣೆ : ಜಾತಿಸ್ಮರತೆ ವಿರಕ್ತಿಗೆ ಹೇತುವೆನುತ್ತಿರ್ಪರ್ (ಕಾದಂಉ. ೬೯೫). [ ಸಂ. ಜಾತಿಸ್ಮರತಾ ]

**ಜಾತಿಸ್ಮರತ್ವ** (ನಾ). = ಜಾತಿಸ್ಮರತೆ : ಜಾತಿಸ್ಮರತ್ವದಿಂದಂ ಭೂತಳದೊಳ್ ತಮ್ಮ ಭವಮನಱಿವರ್ ಕೆಲರುಂ (ಧರ್ಮಾಮೃ. ೯-೦೦೦); ಭೋಗಾವತೀ ನದಿಯ ಪುಳಿನಸ್ಥಳಂಗಾಣುತೆ ಒರಿದೆನಗೆ ಜಾತಿಸ್ಮರತ್ವಮುಂ ತೋಱಿತ್ತು (ಅರಾಚ. ೯-೬೧) ; ಹಿಂದಣ ಜಾತಿಸ್ಮರತ್ವ ಕೆಟ್ಟು ಮತಿ ಮಸುಳಿಸಿ ತನ್ನ ಮಲಮೂತ್ರಂಗಳಲ್ಲಿ ತಾ ಹೊರಳಾಡಿ (ಅಉಂಚೀ. ೦೦-೬). [ ಸಂ. ]

**ಜಾತಿಸ್ಮರೆ** (ನಾ). ಹಿಂದಿನ ಜನ್ಮದ ನೆನಪುಳ್ಳವಳು : ರುಷಿಯರಂ ಕಂಡು ಜಾತಿಸ್ಮರೆಯಾಗಿ (ವಡ್ಡಾರಾ. ೧೨-೨೩). [ ಸಂ. ಜಾತಿಸ್ಮರಾ ]

**ಜಾತಿಹಗಿನು** (ನಾ). ಒಂದು ಬಗೆಯ ಮೇಣ,–ಅಂಟು : “ವತ್ಸನಾಭಃ– ನಾಭಿ. ಜಾತಿಹಗಿನು ” (ಓಷಧಿ. ೦೪೮). [ ಜಾತ್ರಿ + ಹಗಿನು (< ಪಗಿನ್) ]

**ಜಾತಿಹೀನ** (ನಾ). ಜಾತಿಯಿಂದ ಕೀಳಾದವನು; ಕೀಳುಜಾತಿಯವನು: ಜಾತಿಹೀನರ ಕರ್ಮವೃತ್ತಮಜಾತಿಗಳ ಕರ್ತವ್ಯ ತಿರ್ಯಗ್ಜಾತಿಗಳ ಗತಿಧರ್ಮ ವೃತ್ತಿಯ ಸೇರುವೆಯನಱಿದು (ಕುವ್ಯಾಕ. ೫-೩೦); ಜಾತಿಹೀನರ ಮನೆಯ ಜ್ಯೋತಿ ತಾ ಹೀನವೇ (ಸರ್ವಜ್ಞ. ೯೬೬). [ ಜಾತಿ + ಹೀನ ]

**ಜಾತೀಪತ್ರ** (ನಾ). = ಜಾತಿಪತ್ರೆ : ಮಲಯಜ ಕುಂಕುಮ ಜಾತೀಫಳ ಜಾತೀಪತ್ರ . . . ಲವಂಗ ಪ್ರಮುಖ ಸುರಭಿಪರಿಕರಯುತಮಂ (ಪುಷ್ಪಪು. ೦೦-೪೫). [ ಸಂ. ]

**ಜಾತೀಫಲ, ಜಾತೀಫಳ** (ನಾ). = ಜಾತಿಫಲ : ಕಾಳಾಗರು ಕರ್ಕೋಳ ಜಾತೀಫಲ ಜಾತೀಪತ್ರ . . . ಕುಂದುರುಷ್ಕಾದಿ ಸುಗಂಧದ್ರವ್ಯ ಸಹಿತನಾಗಿ (ಅಜಿಪು. ೪-೭೦ ವ). **ಜಾತೀಫಳ** : ಮಲಯಜ ಕುಂಕುಮ ಜಾತೀಫಳ ಜಾತೀಪತ್ರ . . . ಪ್ರಮುಖ ಸುರಭಿಪರಿಕರಯುತಮಂ (ಪುಷ್ಪಪು. ೧೧-೪೫). [ ಸಂ. ]

**ಜಾತೀಫಳ** 'ಜಾತೀಫಲ' ನೋ.

**ಜಾತೀಯತೆ** (ನಾ). ೧. ಜಾತಿಗೆ ಸಂಬಂಧಪಡುವಿಕೆ. ೨. ಜಾತಿ, ಕೋಮುಗಳಿಗೆ ಪ್ರಾಶಸ್ತ್ಯವನ್ನು ಕೊಡುವಿಕೆ ; ಕೋಮುವಾರು ಭಾವನೆ : ನಮ್ಮ ದೇಶದಲ್ಲಿ ಜಾತೀಯತೆಯು ತಲೆಹಾಕಿ ರಾಷ್ಟ್ರಪ್ರಗತಿ ಯನ್ನೇ ಕುಂಠಿತಗೊಳಿಸುತ್ತಿದೆ (ರೂಢಿ). [ ಸಂ. ಜಾತೀಯತಾ ]

**ಜಾತೀಲತೆ** (ನಾ). ಜಾಜಿಬಳ್ಳಿ; ಮಾಲತಿಬಳ್ಳಿ: ಜಾತೀಲತೆಯ ಯೂಧಿಕಾ ಲತೆಯ ವಿಚಕಿಲಲತೆಯ ಮಂಡಪಂಗಳುಂ ಮನೋಹರಂಗಳೆನಿಸಿರ್ದುವು (ಚಂದ್ರಪು. ೧-೧೦೬). [ ಸಂ. ಜಾತೀಲತಾ ]

**ಜಾತುಚಿತು** (ಅ). ಎಂದಾದರೂ ; ಯಾವಾಗಲಾದರೂ : ತಾತನಾಡಿದ ನುಡಿಗೆ ಜಾತುಚಿತು ಪುಸಿಯೆಂಬ ಮಾತುಂಟೆ (ಪಂಪರಾ. ೨-೮-೧೨). [ ಸಂ. ಜಾತುಚಿತ್ ]

**ಜಾತೆ** (ನಾ). ೧. ಹುಟ್ಟಿದವಳು ; ಜನಿಸಿದವಳು. 'ಅಗಜಾತೆ' ಪರಾ. ೨. ಮಗಳು ; ಪುತ್ರಿ : ಜಾತ, ನಿಜಗುಣಗಳಿಂದೆ ಯಯಾತಿಗೆ ಶರ್ಮಿಷ್ಠೆ ಯಂತೆ ಪತಿಹಿತೆಯಾಗು (ಶಾಕುಂತ. ೫೨-೮೫). [ ಸಂ. ಜಾತಾ ]

**ಜಾತೋತ್ಸವ** (ನಾ). ಜಾತಕರ್ಮದ ಸಮಾರಂಭ ; ಹುಟ್ಟುಹಬ್ಬ : ಅಂತಮಳಂ ಪೆತ್ತು ಮಹಾವಿಭೂತಿಯಿಂ ಜಾತೋತ್ಸವಮಂ ಮಾಡಿ (ಶಂಗಾಮೂ. ೦೭-೨ ವ). [ ಜಾತ + ಉತ್ಸವ ]

**ಜಾತ್ಯ** (ಗು). ೧. ಒಳ್ಳೆಯ ಜಾತಿಯಲ್ಲಿ ಹುಟ್ಟಿದ ; ಸತ್ಕುಲ ಪ್ರಸೂತ ವಾದ. (ನಾ). ೨. ಸತ್ಕುಲದಲ್ಲಿ ಹುಟ್ಟಿದವನು ; ಕುಲೀನ. ೩. ಚೆಲುವ; ಸುಂದರ : "ಸತ್ಕುಲನೊಳು ಸೌಮ್ಯನೊಳು ಜಾತ್ಯನೆಂಬುದು" (ಮಂಗರಾ. ೦೪೨-೦೮). ೪. ಉತ್ತಮ ; ಶ್ರೇಷ್ಠ. ೫. ಪರಾಕ್ರಮ; ಶಕ್ತಿ: " ಅತಿಬಲ್ಪು ಕುಲೀನ ಸೌಮ್ಯವೊಳ್ಪೆನಿಪವು ಜಾತ್ಯಶಬ್ದಂ " (ನಾನಾರ. ೬೫). [ ಸಂ. ]

**ಜಾತ್ಯಂತರ** (ನಾ). ಬೇರೆ ಜಾತಿ,-ಗುಂಪು,-ವರ್ಗ : ಕ್ಷೀರಗುಡಾದ್ಯಂತರ ರಸಾಂತರಂ ಜಾತ್ಯಂತರಮಪ್ಪಂತನಂತಮಂತರ್ಭೇದಂ (ಕವಿರಾ. ೨-೯೫) : ಜಾತ್ಯಂತರವನ್ನು ಗ್ರಹಣಮಾಡಿ ಸಪರಿವಾರವಾಗಿ ಎಲ್ಲರೂ ಮಹಮ್ಮ ದೀಯ ಹೆಸರನ್ನು ಧಾರಣೆಮಾಡಿದರು (ಕಪಾಕುಂ. ೩೪). [ ಸಂ. ]

**ಜಾತ್ಯಂತರವಿವಾಹ** (ನಾ). ಒಂದು ಜಾತಿಗೆ ಸೇರಿದವರು, ಬೇರೆ ಜಾತಿಗೆ ಸೇರಿದವರೊಂದಿಗೆ ಮಾಡಿಕೊಳ್ಳುವ ಮದುವೆ ; ಅಂತರ್ಜಾತೀಯ ವಿವಾಹ : "ಬೇರೆ ಬೇರೆ ಮನೆತನ, ಕುಲ, ಬುಡಕಟ್ಟು, ಜಾತಿ, ಮೊ.ಕ್ಕೆ ಸೇರಿದ ಗಂಡು ಹೆಣ್ಣಿಗೆ ಮದುವೆ; ಕುಲಾಂತರ, ಜಾತ್ಯಂತರ,-ವಿವಾಹ" (Inter marriage. ಇಂಕನಿ). [ ಜಾತ್ಯಂತರ + ವಿವಾಹ ]

**ಜಾತ್ಯಂಧ** (ನಾ). ೧. ಹುಟ್ಟಿನಿಂದಲೇ ಕುರುಡನಾದವನು ; ಹುಟ್ಟು ಗುರುಡ : ಜಾತ್ಯಂಧನಂತೆ ಪೆರರ ಕಾಣ್ಕೆಯೊಳ್ ಕಂಡುದಂ . . . ನುಡಿವನಲ್ಲಂ (ಪಂಚತಂ.೯೩-೪); ಇಳೆಯೊಳಗೆ ಜಾತ್ಯಂಧನಾಗಿರ್ದಲಘುಮತಿ ಶಿವಮಜ್ಜನಾರ್ಥಕೆ ಕೊಳನನಗೆಯಲು (ಬಸಪು. ೪೯-೪೩) ; ಜಾತ್ಯಂಧಂ ಕಣ್ಪಡೆದಂತೆ ನಿರತಿಶಯ ಸಂಮದಮನೊಳಕೊಂಡು (ಕಬಕಂ. ೫-೦೪ ವ). ೨. ಜಾತಿಯ ವಿಷಯದಲ್ಲಿ ದುರಭಿಮಾನವುಳ್ಳವನು ; ಜಾತಿಯ ಅಭಿಮಾನದಿಂದ ಯುಕ್ತಾಯುಕ್ತ ವಿಚಾರಶೂನ್ಯನಾದವನು : ಈ ಜಾತ್ಯಂಧನು ದೇಶದ ಮುಖಂಡನೆನಿಸಿಕೊಳ್ಳಲು ಅರ್ಹನೇ ಅಲ್ಲ (ರೂಢಿ). [ ಜಾತಿ + ಅಂಧ ]

**ಜಾತ್ಯಂಧಕ** (ನಾ). ಹುಟ್ಟುಗುರುಡ. 'ಜಾತ್ಯಂಧಕಿ' ಪರಾ. [ ಜಾತಿ + ಅಂಧಕ ]

**ಜಾತ್ಯಂಧಕಿ** (ನಾ). ಹುಟ್ಟುಗುರುಡಿ : ದುರ್ವರ್ಣೆ ಜಾತ್ಯಂಧಕಿ ಗೋಳಾಂ ಗೂಳೆ ಲೋಳಾನನೆಯೆನಿಸಿದ ಪಾಪಕ್ಕೆ ಪಕ್ಕಾಗಿ (ಸುಕುಮಾ. ೫-೨೦). [ ಜಾತ್ಯಂಧಕ + - ಇ₂ ]

**ಜಾತ್ಯಂಧೆ** (ನಾ). = ಜಾತ್ಯಂಧಕಿ : ನೇಱಲಪಣ್ಗಳಂ ತಡವರಿಸಿ ಆಯ್ದು ತಿನ್ಬ ಜಾತ್ಯಂಧೆಯಪ್ಪ ಪೊಲೆಯರ ಕೂಸಂ ಕಂಡು (ವಡ್ಡಾರಾ. ೯-೧೭) : ಪುರುಷನಂ ಜಾತ್ಯಂಧೆಯಾದ ವಧುವಱಿವಳೇ (ವೀಶೈಪು. ೩-೬-೩೭). [ಸಂ. ಜಾತ್ಯಂಧಾ ]

**ಜಾತ್ಯತೀತ** (ಗು). ೧. ಜಾತಿಯನ್ನು ಮೀರಿದ ; ಜಾತಿಭಾವನೆಯನ್ನು ಬಿಟ್ಟ : ಪ್ರಾಚೀನ ಭಾರತದಲ್ಲಿ ಸೂತಮಂಡಲ ಜಾತ್ಯತೀತ ಸಂಸ್ಥೆಯಾಗಿತ್ತು (ಭಾರದ. ೧೩೧). (ನಾ). ೨. ಜಾತಿಯನ್ನು ಮೀರಿದವನು ; ಜಾತಿಯ ದುರಭಿಮಾನವನ್ನು ಬಿಟ್ಟವನು : ಪ್ರಭುಗಳು . . . ಜಾತ್ಯತೀತರು, ಭಗವದ್ಭಕ್ತರು (ಶಾಂತಲಾ. ೧೩೫). [ ಜಾತಿ + ಅತೀತ ]

**ಜಾತ್ಯಶ್ವ** (ನಾ). ಉತ್ತಮ ಬಗೆಯ ಕುದುರೆ ; ಶ್ರೇಷ್ಠವಾದ ಕುದುರೆ: ದಂಡಕಂ ಬಂದನೆಂಬ ವಾರ್ತೆಯಂ ಕೇಳಲೊಡಂ ಜಾತ್ಯಶ್ವಮನೇಱಿ ಓಡು ವನ ಮಂತ್ರಿ ತಗುಳ್ದೋಡಲೀಯದೆ ಮಾಣಿಸಿ (ವಡ್ಡಾರಾ. ೦೭೩-೧೨) ; ಎಲ್ಲಿ ಗಜ ಜಾತ್ಯಶ್ವವಲ್ಲಿ ವರೂಥ ಸಂದೋಹ . . . ಅಲ್ಲಿ ತನ್ನಾಧೀನಮಾಡಲು ಬಲ್ಲವನೆ ನೃಪನು (ಕುಮ್ಮಾಉ. ೩-೭೪) ; ಹರಿಹರನ ಕ್ರಮ ಕಡಿವಾಣಗಳ ಪರಿವೆಯಿಲ್ಲದೆ ದೂರದೇಶಕ್ಕೆ ಹೊರಟ ರಥದ ಜಾತ್ಯಶ್ವಗಳ ಓಟಕ್ಕೆ ಸಮಾನ ವಾಗಿರುವುದು (ಸಾಹಿಸ. ೧೯೦). [ ಜಾತಿ + ಅಶ್ವ ]

**ಜಾತ್ರೆ** (ನಾ). ೧. ಪುಣ್ಯಕ್ಷೇತ್ರದರ್ಶನವೇ ಮೊದಲಾದ ಧಾರ್ಮಿಕೋ ದ್ದೇಶದಿಂದ ಮಾಡುವ ಪ್ರಯಾಣ; ಯಾತ್ರೆ: ಜಾತ್ರೆಗಳಂ ಪೊರಮಡು ವಲ್ಲಿ (ಸಾಗಂಧಿ. ೯೯೩-೯). 'ಜಾತ್ರೆಗ' ಪರಾ. ೨. ಯಾವುದಾದರೊಂದು ದೇವತೆಯ ರಥೋತ್ಸವವೇ ಮೊದಲಾದ ವಿಶೇಷ ಕಾರ್ಯಕ್ರಮ : ಎಕ್ಕಲದೇವಿಗೆ ಮಾಮಾಲಕ್ಕನಿಗಂ . . . ಜಾತ್ರೆಯ ಮಾಟ್ಟಂ ಪೊಕ್ಕಳೆಗಂ ಜೈನನಲ್ಲಂ (ಸಮಚ. ೪-೦೨೩); ಆ ದೇವಿಯ ಜಾತ್ರೆಗೆ . . . ಬಂದುದಂದು ಬಸಂತಂ (ಯಶೋಚ. ೧-೩೩); ವರುಷ ವರುಷಕ್ಕೆ ಮಾರ್ಗಸಿರಮಾಸದೊಳ್ ಜಾತ್ರೆಯಾಗಲ್ (ಪುಣ್ಯಾಸ್ರ. ೪-೦೦ ವ) ; ವೀರಭದ್ರನ ಜಾತ್ರೆಗೆಲ್ಲಾ ನಾರಿ ಯರು ಹೋಗುತಮಿರಲು (ಬಸಪು. ೪೨-೧೦). ೩. ದೇವರ ರಥೋತ್ಸವ ಮುಂತಾದ ಸಂದರ್ಭದಲ್ಲಿ ಸೇರುವ ಜನರ ಗುಂಪು,-ಸಮೂಹ ; ಪರಿಸೆ : ಸೂಚಿಸಿದಳ್ ನೆರೆದ ಜಾತ್ರೆ ನೆಱೆ ಕೇಳ್ವಿನೆಗಂ (ಯಶೋಚ. ೪-೭೨): ವಿಸ್ಮಯವನುನೋಡುವೆವೆಂದು ಜನ ಜಾತ್ರೆಯಾದುದಾಗ (ಶಮ್ಮಕಾ. ೨-೭೪) ; ಇಂತಹ ಗಾದೆಯ ಮುಕ್ತಕಗಳನೋದೆ ಜನವೇಕೆ ಜಾತ್ರೆಯ ಮರುಳು (ಇಂಚಾಪ. ೨೨೦-೮೯): ತೇರಾದ ಮೇಲೆ ಜಾತ್ರೆ ನೆರೆಯಿತು (ಗಾದೆ). [<ಸಂ. ಯಾತ್ರಾ ]

**ಜಾತ್ರೆಗ** (ನಾ). ೧. ತೀರ್ಥಯಾತ್ರೆಗಾಗಿ ಪ್ರಯಾಣ ಹೊರಟವನು ; ಯಾತ್ರಾರ್ಥಿ: ತೋರ್ಪೀ ಸಂಗಮದೊಳ್ ಮೊದಲೊರ್ವ ವಿಪ್ರಾಯದಿರ್ಪ ಜಾತ್ರೆಗರ್ಗೆ ಬೆಟ್ಟಂ ದಿಟ್ಟಿಗೆ ಬಾರದೃಸೆ (ರಾಮಾಕ್ವ. ೮೨-೬) : ಜಾತ್ರೆಗರ ಸಂತೆಯ ಕೋಲಾಹಲ (ಬಿರುಗಂ. ೦೨-೦). ೨. ಪ್ರಯಾಣಿಕ : ಅರಿ ದರಿಯದೆಯ ಕಾವ್ಯಮಾರ್ಗದಲ್ಲಿ ನರಂ ತರಂಗಳಂ ಮಾಲಿಸುತೆ ಪೋಪ ಜಾತ್ರೆಗರಂ ಪರಿಕಿಸುತೆ (ಸಂಸಪ. ೨೦-೫೪). [ ಜಾತ್ರೆ + - ಗ₂ ]

**ಜಾತ್ರೆಮಾಳ** (ನಾ). ಜಾತ್ರೆ ನೆರೆಯುವ ಮೈದಾನ,-ಸ್ಥಳ : ಒಂದೊಂದು ಕರುವಿಗೂ ಒಂದೊಂದು ಹಾಗದ ಕಾಸು ಕೊಟ್ಟರೂ ಅದು ಸಾಲದೆಂದು ಜಾತ್ರೆಮಾಳದಲ್ಲಿ ಕಟ್ಟುವುದಕ್ಕೆ ಜಾಗ ಕೊಡದೆ (ಜಂಗಾಳ್ಕ. ೩೩೨).
[ ಜಾತ್ರೆ + ಮಾಳ್ಕ ]

**ಜಾತ್ರೆಯೋಗು** (ಕ್ರಿ). ಪ್ರಯಾಣಮಾಡು,–ಹೋಗು; ಗುಂಪುಗುಂಪಾಗಿ ಹೋಗು: ಮಲ್ಲಿಕಾರ್ಜುನನೆರಟ್ಟ್ರೋಳಾದುದಂ ಕಂಡುಗಂಡು ಸಮುಗ್ರಂ ಸಲೆ ಜಾತ್ರೆಯೋ[ಪಾಠಾಂ.ಯಾ]ಗಿ ಭರದಿಂ ಬೆಟ್ಟೇಱಿಯುಂ ಮತ್ತೆ ಪೂಜೆ ಸುವರ್ (ಸಮುಜ. ೯-೯). [ ಜಾತ್ರೆ + ಪೋಗು₁ ]

**ಜಾದಗೆ** 'ಚಾದಗೆ' ನೋ.

**ಜಾದಗೆವಕ್ಕಿ** 'ಚಾದಗೆವಕ್ಕಿ' ನೋ.

**ಜಾದಾ** (ಗು). ಹೆಚ್ಚಾದ ; ಅಧಿಕವಾದ ; ಜಾಸ್ತಿಯಾದ : ಯುಗಾದಿ ಹಬ್ಬಕ್ಕಾಗಿ ಒಂದು ಜಾದಾ ಸಂಚಿಕೆ ಹೊರಡಿಸುತ್ತೇವೆ (ರೂಢಿ).
[ ←ಮರಾ. ಜಾದಾ ; ಹಿಂ. ಜ್ಯಾದಾ ; ಅರ. ಜಿಯಾದಹ್ ]

**ಜಾದಿ, ಜಾಜಿ₁, ಜಾಯಿ₁** (ನಾ). ೧. ಜಾಜಿಗಿಡ ಮತ್ತು ಅದರ ಹೂವು; ಮಾಲತಿ : "ಜಾದಿಯೆಂದು ಮಾಲತಿ" (ಕಕಸಾ. ೯-೧೮೨) ; "ಜಾದಿ ಮಾಲತಿಯುಕ್ಕುಂ" (ಕವಿಕಂ. ೬೩) ; ಪೊದಟ್ಟ ಜಾದಿಯೊಳ್ ಮಸಗಿದ ಕಂಪು (ಪಂಪಭಾ. ೦೧-೪೪) ; ಜಾದಿ ಮೊದಲಾದನೇಕಂ ಪೂದೋಂಟಂ ಸುರಭಿ ಪರಿಮಳಾಮೋದಂಗಳ್ (ಎಕ. VIII, ಸಾಗರ. ೧೦೯-೫೦ ; 1042) ; ಅಂಡಲೆದು ಜಾದಿಯಂ ಬಂಡುಂಡಳಿಯುಂ ಮಿಕ್ಕು ಮಧುಕರಂಗಳ್ ಭರದಿಂ ಬಂಡುಣ್ಬುವೆನೆ (ಗಿರಿಕ.೨-೬೬). ೨. ಜಾಯಿಕಾಯಿ ಎಂಬ ಸುವಾಸನೆಯ ಪದಾರ್ಥ . 'ಜಾದಿಕಾಯ್' ಪರಾ. **ಜಾಜಿ₁** : ೧. "ಸುಮನಾ, ಮಾಲತೀ, ಜಾತಿಃ, ಈ ಕಿ ಜಾಜಿ" (ನಾಚಿರಾ. ೧೦೪); ಸೊದರ ಬೆಳಗಿನೊಳ್ ಕೊರಗುವ ಜಾಜಿ[ಪಾಠಾಂ.ದಿ]ಯುಂ ತುಂಬಿಯೊಳ್ ಪಗೆಗೊಂಡ ಸಂಪಗೆಯುಂ (ಅದಿಪು. ೧೦-೦೦೯) ; ಅಲ್ಲಿಗಲ್ಲಿಗೆ ಜಾಜಿ ಸುರಹೊನ್ನೆ ಸಂಪಗೆ ಮಲ್ಲಿಗೆ ಹೊಗರೇಱುದುವು (ಮೋಹತ. ೬-೧೧) ; ಕಸ್ತೂರಿ ಸೇವಂತಿಗೆ ದುಂಡುಮಲ್ಲಿಗೆ ಮೊತ್ತದ ಜಾಜಿ ಸಂಪಗೆಯು (ಕಂಸವಿ. ೬-೮೨). ೨. 'ಜಾಜಿಕಾಯಿ' ಪರಾ. **ಜಾಯಿ** : ೨. 'ಜಾಯಿಕಾಯಿ' ಪರಾ.
[ <ಸಂ. ಜಾತಿ/ಪ್ರಾ. ಜಾಇ. ]

**ಜಾದಿಕಾಯ್, ಜಾಕಾಯಿ, ಜಾಜಿಕಾಯ್, ಜಾಜಿಕಾಯಿ, ಜಾಯಿಕಾಯಿ** (ನಾ). ಅಡಿಕೆ ಮೊದಲಾದುವುಗಳ ಜೊತೆಯಲ್ಲಿ ಸೇರಿಸಲ್ಪಡುವ ಒಂದು ಬಗೆಯ ಪರಿಮಳವನ್ನು ಕೊಡುವ ಕಾಯಿಯನ್ನು ಬಿಡುವ ಮರ ಮತ್ತು ಅದರ ಕಾಯಿ ; ಜಾತಿಫಲ : ಸಿರಿಕಂಡಂ ಕುಂಕುಮಂ ಮ ಗುರುರೇಣುಕಂ ಜಾದಿಕಾಯ್ . . . ಕಶಾಂಕ ತಕ್ಕೋಲಂಗಳ್ (ಲೋಕೋಪ. ೬-೯). **ಜಾಕಾಯಿ** : ಮೆಣಸು, ಜಾಕಾಯಿ, ಲವಂಗ, ತಪಸ್ಸಿನೀಗಿಡ ಮುಂತಾದ ಬೆಲೆಯಾದ ಸಂಬಾರದ ಪದಾರ್ಥಗಳು ದೊರೆಯುತ್ತವೆ (ಪ್ರಪಾಇ. II, ೧೮). **ಜಾಜಿಕಾಯ್**: ಹುರಿದು ಪೊಸಭಂಗಿ ಹದಗೈದ ಪಿನಿ ಕೂಟದೋಳ್ಬೆರೆದಮಲ ಜಾಜಿ[ಪಾಠಾಂ. ಯಿ]ಕಾಯ್ ಪತ್ರೆ ಕಸಕಸೆಯೆಂಬ ತರತರದೊಳೆಸೆವ ಲಹರಿಗಳಂ (ಚಬಪು. ೪೭-೪೫) ; ಜಾಜಿಕಾಯ ತೋರದಿ ಕುಂಕುಮದ ಛಾಯೆ (ರತ್ನಶ. ೨೦-೦೨). **ಜಾಜಿಕಾಯಿ**: "ಜಾಜಃ–ಜಾಜಿಕಾಯಿ" (ಕಾಕಕ್ಕ. ೧೪) ; "ಜಾತಿಕೋಶಂ, ಜಾತಿಫಲಂ ೨ ಜಾಜಿಕಾಯಿಯ ಹೆಸರುಗಳು ; ಜಾಕಾಯಿ" (ಸಿದ್ಧಾಂತಿ. ೦೮೧) ; ಜಾಜೀಕಾಯಿ ಪತ್ರಿ ದಾಲಚಿನ್ನಿ ಮೊದಲಾದ ಇನ್ನೂ ಕೆಲವು ಪದಾರ್ಥಗಳನ್ನು ಬೇರೆ ಬೇರೆ ದೇಶಗಳಲ್ಲಿ ಬೆಳಸುತ್ತಾರೆ (ಕೃಷಿಪ್ರ. ೧೫೦). **ಜಾಯಿಕಾಯಿ**: ಜಾಯಿಕಾಯಿ, ಗರಿಕೆ ಎಲೆ, ರಕ್ತಚಂದನ, ಸೊಗದೆ ಇಷ್ಟನ್ನೂ ಸಮಾಂಶವಾಗಿ ಒಂದೆಲಗನ ರಸದಲ್ಲಿ ಮರ್ದಿಸಿ (ವೈದ್ಯಸಾ. I, ೪೬೬) .
[ ಜಾದಿ + ಕಾಯ್₄ ]

**ಜಾದಿಗಾಲು** (ನಾ). ಒಂದು ಪ್ರದೇಶದ ಹೆಸರಂ (?) : ಕೊಂಕಂದಿಯುಂ ಮಯಿಲುರಗಯುಂ ಮೇಲ್ಪಾಳಂ ಜಾದಿಗಾಲು ಕೋಲಿಗನ್ಕೆಱಿಕ್ಕಾಲು ಒನ್ತು (ಮ್ಯಅರಿ. ೧೯೨೫, ೧೦೬-೧೯ ; ?). [ ? ]

**ಜಾದಿಯೂರ್** (ನಾ). ಒಂದು ಊರಿನ ಹೆಸರು : ಕೆಱೆಯೂರ ಜಾದಿಯೂರ ಕೊಡಂಗನೂರ ಬಾಡದ ಮಹಾಜನಮುಂ (ಎಕ. XI, ಚಿತ್ರದು. ೭೪-೨೮ ; 964). [ ಜಾದಿ₀ + ಊರ್ ]

**ಜಾದು₁, ಜಾಜಿ₂, ಜಾಜು₁** (ನಾ). ೧. ಕೆಂಪು ಬಣ್ಣದ ಶಿಲೆ ; ಗೈರಿಕ ; ಮನಶ್ಶಿಲೆ: ಕೆಂಪೆಸೆದು ತೊಳ್ಳನೆ ಬೆಳ್ಳಿಯ ಬೆಟ್ಟಮುಲ್ಲು ಜಾದಿನ ನಗ ಮೆಂಬ ಶಂಕೆಯನೆ ಮಾಡಿದುದಾ ವಿಜಯಾರ್ಧಪರ್ವತಂ (ಶಾಂತಿಪು. ೪-೩೩); ಜಾದು ಕೆಚ್ಚನಾಗಿಯುಂ ಕುಂಕುಮಮಲ್ಲದಂತೆ (ಧರ್ಮಾಮೃ. ೦೦-೦೮೬) ; ಜಾದಿನ ಬೆಟ್ಟು ಮಗುಬ್ಬುವಂತೆ (ಕಬ್ಬಿಗಕಾ. ೨೮೪) ; ಅರೆ ಜರಿದ ಜಾದಿನ ಕೋಡುವೆಟ್ಟನೊತ್ತುಗೊಂಡು (ರಾಮಾಶ್ವ. ೬೨-೨೧). ೨. ಕಾವಿಬಣ್ಣ ; ಕೆಂಬಣ್ಣ : ಜಾದಿನ ಸೇಲೆಗಳನುಟ್ಟು ಭಗವಂತವೇಷಮಂ ಕೈಕೊಂಡು (ವಡ್ಡಾರಾ. ೧೮೬-೬); ಅದ್ವಿತ್ವ ಧಕಾರಕ್ಕೆ ಜಕಾರಂ–ಧಾತು–ಜಾದು (ಶಮದ. ೨೮೩ ಪ್ರಯೋ). **ಜಾಜಿ₂** : ೨. ಬಾವಡಿಯ ಜಾಜಿ ಒರೆದ ನೆಲದ ಮೇಲೆ ಉಸ್ಸೆಂದು ಮೈಚಾಚಿ . . . ಗೊರಕೆಹೊಡೆಯುತ್ತಾರೆ (ಮರಮ. ೬). **ಜಾಜು₁** : ೧. "ಜಾಜದು ಸಾರಾಪ್ಯಮ್ಭವಂ ಮನಶ್ಶಿಲಾದಿಗಳೆನಿಕುಂ" (ವಸ್ತುಕೋ. ೨೮-೫); ಅಂತೆರಡುಂ ಬಲದ ಕರಿಘಟೆಗಳೊಂದೊಂದಱೊಳ್ ತಾಗಿ . . . ಜಾಜಿನ ಪರ್ವತಂಗಳಂತೆ ಕೆಡೆದಟ್ಟ್ಗೆ ತಟ್ಗೆದಾಗಳ್ (ಪಂಪಭಾ. ೧೦-೯೬ ವ) ; ನನೆದ ಜಾಜಿನ ಗಿರಿಯೊಲಿರ್ದುದು ಕಳೇವರಂ ರಕ್ತಾಂಬು ಸರ್ವಾಂಗಮಂ ಮುಸುಕಲು (ಚಬಪು. ೪೦-೨೧).
[ < ಸಂ. ಧಾತು ]

**ಜಾದು₂** 'ಜಾದೂ' ನೋ.

**ಜಾದುಕಲ್** 'ಜಾದುಗಲ್' ನೋ.

**ಜಾದುಗಲ್, ಜಾದುಕಲ್, ಜಾದಂಗಲ್ಲು** (ನಾ). ಕೆಂಪುಕಲ್ಲು; ಕಾವಿಕಲ್ಲು; ಗೈರಿಕಧಾತು : "ಜಾದುಗಲ್ಲೆನೆ ಕಾವಿಕಲ್ಲು" (ಕಕರ. ೪೦) ; ಪೊಜಮಯ್ಯ ಸುಲ್ಲ ಸನ್ನಣದಂತೆ ಕೆಂಕಮಾಗೆಸೆವ ಜಾದುಗಲ್ಲ ನಿಡುಗೋಂಟೆಯಿಂದೊಳಗೆ (ರಾಮಾಶ್ವ. ೧೦೨-೪). **ಜಾದುಕಲ್**: "ಜಾದುಕಲ್ಲೆನೆ ಕಾವಿ" (ಕಬ್ಬಮಂ ೫೩); ದೇವಕೀಪುತ್ರಂ ಪೀರ್ದ ಪೂತನಿಯ ಸತ್ತ ನೆತ್ತರ ಪಲ್ಲೆಗಳಿಂ ಜಾದುಕಲ್ಲ ಕಣೆಯಿಂದಮುಂ ಮೆಱಿದು (ಅರ್ಧನೇ. ೮-೨೨ ವ). **ಜಾದುಗಲ್ಲು** : ಜಾದುಗಲ್ಲ ಜಲ್ಲರಿಗಳು, ಕೆಂಕವಿಟ್ಟಳಿಸಿದ ಕುಚ್ಚುಗಳು (ಮಂತ್ರಶ. ೦೦೯-೯).
[ ಜಾದು₁ + ಕಲ್₃ ]

**ಜಾದುಗಲ್ಲು** 'ಜಾದುಗಲ್' ನೋ.

**ಜಾದುಗಾರ** 'ಜಾದೂಗಾರ' ನೋ.

**ಜಾದುಹ** (ನಾ). ಒಂದು ಬಗೆಯ ಹಕ್ಕಿ ; ನೀರುಕಾಗೆ : "ದಾತ್ಯೂಹಃ, ಜಲರಂಕುಃ–ಈ ೨ ಜಾದು[ದು]ಹು"(ಹಲಾಯು. ೪೨-೯೬); "ಜಾದುಹ–ದಾತ್ಯೂಹ = ಒಂದು ಪಕ್ಷಿ" (ತದ್ಭಕೋ. ೧೪). [ <ಸಂ. ದಾತ್ಯೂಹ ]

**ಜಾದೂ, ಜಾದು₂** (ನಾ). ಕಣ್ಣುಕಟ್ಟು ವಿದ್ಯೆ; ಮಾಯೆ; ಇಂದ್ರಜಾಲ; ಗಾರುಡಿವಿದ್ಯೆ : ಜಂಗಮರು, ಗುರುವರ್ಗದವರು ಈ ತರದ ಶಬ್ದ ಸಮುಚ್ಚಯಗಳಲ್ಲಿ ಒಂದು ಬಗೆಯ ಜಾದೂ ಇದೆ (ಧುಕ್ಷಪ್ರ. ೧೨೯) ; ಮಾಯಾದೀಪ ಹಿಡಿದು ಜಾದೂ ಮಾಡುತ್ತಾರಲ್ಲ ಹಾಗೆ (ಬರುಹ. ೬). **ಜಾದು₂** : ಪಲ ಜಾದುಗಳವುತೆಯು ಶಂಬರನುಜ್ಜ್ವಲತಪನಾ ಮುನಿ ಗೌತಮನುಂ ತಾಂ ಲಲನೆಯರಿಂ ಓರಿದುಂ ರಜಮಾಂತರ್ (ಸೌನಂದ. ೮-೪೫) ; ಎಂಥ ಕಡುಲೋಭಿಯ ಕೈಯಿಂದಲೂ ಹತ್ತಿಪ್ಪತ್ತು ರೂಪಾಯಿಗಳ ದಕ್ಷಿಣಾದ್ರವ್ಯವನ್ನು ಕೀಳುವ ಜಾದು ಅವರಲ್ಲಿದೆ (ಅಳಸಿ. ೧೩೨).
[ ←ಪಾರ. ಹಿಂ. ಜಾದೂ]

**ಜಾದೂಕೋಲು** (ನಾ). ಮಂತ್ರಗಾರರು ತಮ್ಮ ಪ್ರಯೋಗ ,ಕಾಲದಲ್ಲಿ ಉಪಯೋಗಿಸುವ ಕೋಲು ; ಮಾಟದ ಕೋಲು : ಜಾದೂಕೋಲು ತಿರುಗಿಸುವವಳಂತೆ ಅವನ ಮೇಲೆ ವಿಚಿತ್ರ ಪ್ರಭಾವ ಬೀರಿದಳು (ಬದುಜ. ೧೭೩). [ ಜಾದೂ + ಕೋಲು$_1$ (< ಕೋಲ್$_1$) ]

**ಜಾದೂಗಾರ**, ಜಾದುಗಾರ (ನಾ). ಮಾಟಗಾರ ; ಮೋಡಿಗಾರ ; ಗಾರುಡಿಗ; ಯಕ್ಷಿಣೀವಿದ್ಯೆಯನ್ನು ಬಲ್ಲವನು: ಬ್ರಹ್ಮದೇಶದ ಜನರು ಜಾದೂಗಾರರೆಂದು ಸಿಪಾಯಿರಿಗೆ ಹೆದರಿಕೆ ಹುಟ್ಟಿತ್ತು (ಹಿಂದುಇ. ೩೨೪). **ಜಾದುಗಾರ**: ಸಾಹಿತ್ಯಪ್ರಕಾರಗಳು ಜಾದುಗಾರನ ಮಾವಿನ ಗಿಡದಂತೆ ಅರೆಕ್ಷಣದಲ್ಲಿ ಸಂಪೂರ್ಣ ವಿಕಾಸವನ್ನು ಹೊಂದುವುದಿಲ್ಲ (ಸಿಂಅಭ. ೧೯, ಮುನ್ನುಡಿ) : ಮನಸ್ಸು ಈಶ್ವರನಂತೆಯೇ ಜಾದುಗಾರವಾಗಿದೆ (ಬ್ರಹ್ಮಚೀ. ೨೭೪). [ ←ಪಾರ. ಹಿಂ. ಜಾದೂಗರ್ ]

**ಜಾದೂಗಾರಿಕೆ**, ಜಾದುಗಾರಿಕೆ (ನಾ). ಮಾಟಗಾರಿಕೆ ಮಾಯಾವಿದ್ಯೆ : ಜೀವನವನ್ನು ಆಡಾಡುತ್ತ ಕಲೆಯಾಗಿ ಮಾರ್ಪಡಿಸಬಲ್ಲ ಜಾದೂಗಾರಿಕೆ ಯಿದೆ (ಅಕೋಲೀ. IV, ಮುನ್ನುಡಿ). **ಜಾದುಗಾರಿಕೆ**: ಗುಟ್ಟಿನ ಮಾತಿನಲ್ಲಿದ್ದ ಜಾದುಗಾರಿಕೆ ಗುಟ್ಟನ್ನು . . . ತುಂಗಕ್ಕ ಅರಿಯಳ್ (ಮೂರುದಾ. ೧೩೩). [ ಜಾದೂಗಾರ + – ಇಕೆ ]

**ಜಾದೂಗಾರ್ತಿ** (ನಾ). ಮಾಟಗಾತಿ ; ಮಾಯಾವಿನಿ ; ಜಾದೂಗಾರ್ತಿ ನೀ ಅಂತ (ಹೊಸಂಸಾ. ೧೭೭).
[ ಜಾದೂಗಾರ + – ತಿ$_1$ (< – ಇತ್ತಿ) ]

**ಜಾದೂಗಿರಿ** (ನಾ). "ಜಾದುತನ, ಮೋಡಿತನ, ಗಾರುಡಿತನ" (ಜಾನಕೋ. ೭೦). [ ಜಾದೂ + – ಗಿರಿ$_2$ ]

**ಜಾನ** (ನಾ). ೧. ಚಿಂತನೆ ; ಮನಸ್ಸಿನಲ್ಲೇ ಯೋಚಿಸುವುದು; ಮನನ. ೨. ಇಷ್ಟದೇವತೆಯನ್ನು ಒಂದೇ ಮನಸ್ಸಿನಿಂದ ನೆನೆಯುತ್ತಿರುವುದು; ಧ್ಯಾನ : "ಧ್ಯಾನಂಗಳೊಳ್ ಜಾನಗಳ್" (ಶಬ್ದಾನಿ. ೪೯) : ಯಮರಾಜ ನನದ್ಭುತತೇಜನಂ ಸರೋಜಾನನೆ ಜಾನದಿಂ ಬರಿಸೆ (ಶಂಪಥಾ. ೧–೧೧೯) ; ಕಿಬ್ಬಿದುಂ ಪೊಟ್ಟು ಜಾನದಿಂ ಮೋನವಿರ್ದು (ಚಕವಿ. ೬–೧೨೬ ವ): ಸಿರಿ ಸರಸ್ವತಿ ಗೌರಿಯರು ಮಾಳ್ಪ ಜಾನಕುಂ ಸಿಲ್ಕದಿಹ ಪರಬೊಮ್ಮನು (ವೆಂಕಾರಾ. ೨–೦೯–೯೪). [ < ಸಂ. ಧ್ಯಾನ ]

**ಜಾನಪದ** (ಗು). ೧. ನಾಡಿನಲ್ಲಿರುವ; ಜನಸಾಮಾನ್ಯಕ್ಕೆ ಸಂಬಂಧಿಸಿವ ; ದೇಶಕ್ಕೆ ಸಂಬಂಧಪಟ್ಟ : ಬಂದುದು ಜಾನಪದ ಜನವ್ರಜ ಕುಂತೀ ಸೂನುವನು ದರುಶನವ ಮಾಡಿತು (ಕುವ್ಯಾಗ ೧೨–೩೪). ೨. ಗ್ರಾಮಾಂತರ ಪ್ರದೇಶಗಳಿಗೆ ಸಂಬಂಧಿಸಿದ ; ಹಳ್ಳಿಗಾಡಿನ ; ಗ್ರಾಮೀಣ : ಜಾನಪದಾಂಗನಾಜನದ ಗಾಡಿಗೆ ಸೋಲ್ತಲಿನೀ ನಿನಾದವಂ ಜಾನಿಸಿ ಕೇಳ್ದು (ಮಲ್ಲಪು. ೨–೨೮) ; ಇವರು ಚಿತ್ರಿಸಿರುವ ಸ್ತ್ರೀ ಆಕೃತಿಗಳಲ್ಲಿ ಜಾನಪದ ಕಲಾಸೌಂದರ್ಯ ಎದ್ದು ಕಾಣುವುದು (ಭಾರದ. ೩೪೩) : ಸೊಕ್ಕಿನಿಂದ ಬೆಳೆದ ತರುಣ ಜಾನಪದ ರೀತಿಯವಳು (ಅಪನಾ. ೮೩). (ನಾ). ೩. ಹಳ್ಳಿಗಾಡಿಗೆ ಸೇರಿದಂದು : ಜಾನಪದವಾದ ಕಲೆಗಳನ್ನು ಜನರು ಉಳಿಸಿಕೊಳ್ಳದಿದ್ದರೆ ಜನಪದದ ಸರಕಾರಗಳು ಅವನ್ನು ರಕ್ಷಿಸಬಹುದು (ಯುಕ್ಷಬ. ೫). ೪. ದೇಶದ ನಿವಾಸಿ ; ದೇಶದಲ್ಲಿ ವಾಸಮಾಡುವವನು; ನಾಡಿನ ಪ್ರಜೆ: ನಂದನರ ಮಣಿಗಳು ದಿಸು ವರತು ಲ ಚತುರ ಚತುರಾಸ್ಯರೆಂದುಲಿಯುತಿರೆ ಜಾನಪದರು (ವೆಂಕಾರಾ. ೦–೮–೦೪). ೫. ನಾಡು ; ದೇಶ : ಶ್ರೀರಾಮ ಪುರದರಸ ಭೂಮಿಪತಳದ ಮನುಜನುದದಿ ಜಾನಪದದಿ ಗೋಚರಿಸುತ್ತ (ವೆಂಕಾರಾ. ೬–೧೪–೩೦). 'ಜನಪದ' ಪರಾ. [ ಸಂ. ]

**ಜಾನಪದಗೀತೆ** (ನಾ). ಹಳ್ಳಿಗಾಡಿನ ಹಾಡು; ಜನಪದಗೀತೆ: ಹೀಗೆ ಅವರ ಜಾನಪದಗೀತೆಗಳನ್ನು ಕೇಳುತ್ತ ಊರನ್ನು ಸಮಿಾಪಿಸಿದೆ (ಗಾಳಿಗು. ೧೭). [ ಜಾನಪದ + ಗೀತೆ ]

**ಜಾನಪದಸಾಹಿತ್ಯ** (ನಾ). ಹಳ್ಳಿಗಾಡಿನ ಸಾಹಿತ್ಯ ; ಗ್ರಾಮೀಣ ಹಾಡುಗಳು, ಕಥೆಗಳು ಮೊದಲಾದುವುಗಳ ಸಂಗ್ರಹ ; ಜನಪದಸಾಹಿತ್ಯ : ಜಾನಪದಸಾಹಿತ್ಯದ ರಸರುಚಿಯು ವಿದ್ವಾಂಸರ ಮನ ಸೆಳೆದಿದ್ದು ಇತ್ತೀಚೆಗೆ (ಕನ್ನಜಾ. ೨, ಅರಿಕೆ). [ ಜಾನಪದ + ಸಾಹಿತ್ಯ ]

**ಜಾನಪದಿಕ** (ಗು). ನಾಡಿಗೆ ಸಂಬಂಧಿಸಿದ ; ದೇಶಕ್ಕೆ ಸಂಬಂಧಪಟ್ಟ ; ಜನಪದಕ್ಕೆ ಸಂಬಂಧಪಟ್ಟ: ಅಂಥಾತ್ಮಶೀಥುಗಳ ಸಿಂಧುವೆನಲೆಸೆವುದೀ ದೈವಸುಂದರಭಾವ ಜಾನಪದಿಕ (ಮಲೆದೇ. ४೦–೬). [ ಸಂ. ]

**ಜಾನಪದೀಯ** (ಗು) ೧.=ಜಾನಪದಿಕ. (ನಾ). ೨. ಜನಪದಕ್ಕೆ ಸಂಬಂಧಿಸಿದುದು : ವಸ್ತು, ಶೈಲಿ, ತಂತ್ರ, ಗುಣಗಳಲ್ಲಿ ಅದು ಜಾನಪದೀಯ (ಸುವರ್ಣ. ೩೯). [ ಸಂ. ]

**ಜಾನವಾರು** 'ಜಾನುವಾರು' ನೋ.

**ಜಾನಶಾಲೆ** 'ಜೇಣಶಾಲೆ' ನೋ.

**ಜಾನಸಾಲೆ** 'ಜೇಣಶಾಲೆ' ನೋ.

**ಜಾನಿ** (ನಾ). ತಿಳಿವಳಿಕೆಯುಳ್ಳವನು ; ಅರಿವುಳ್ಳವನು; ಜ್ಞಾನಿ : ಪರಬೊಮ್ಮನಂ ಕವಿತೆಯಂ ಪರಮಪ್ರೇಮವನದೆಂತೊ ನಿಕ್ಕದ ಧನ್ಯಂ ಸೊರಹನದಂ ಪೇಳ್ವಿಳಿವೆನಲರಿಯೆಂ ಬೆಸಗೊಳ್ಳದಂದೆ ಜಾನಿಯೆನೆಂಬಂ (ಸಂಕಪ. ४–೧೨). [ < ಪ್ರಾ. ಜಾಣಿ. / ಸಂ. ಜ್ಞಾನಿನ್ ]

**ಜಾನಿಸು** 'ಧೇನಿಸು' ನೋ.

**ಜಾನು$_1$** (ನಾ). ಮೊಳಕಾಲು; ಮಂಡಿ: ನಿತಂಬಿನಿ ಮೆಲ್ಲನೆ ವಾಮಜಾನುವಂ ಕರತಳದಿಂದಮೂಱ (ಕಾದಂಪೂ. ३९೭) : ಕುಮತಿಯಳಿದನು ಜಾನುಕಟಿ ಹೃತ್ಕಮಲಗಳ ಮುಖ ಮೂರ್ಧಪರಿಯಂತ (ಕುವ್ಯಾಗ. ೩–४३). [ ಸಂ. ]

**ಜಾನು$_2$** (ನಾ). (?) : ಹೊನ್ನ ಗಿಂಡಿಯಲಿ ಪನ್ನೀರ ಪಿಡಿದವರು ಕೆಲರು ಕಸ್ತೂರಿಗಂಧ ಅತ್ತರು ಹೊಸ ಚಿನ್ನಮಯ ತಬಕಿನಲಿ ಪಿಡಿದವರು ಕೆಲರು ಸಣ್ಣ ಜಾನು ಜಾಜಿಬೊಟ್ಟು ಮಲ್ಲಿಮರುಗ ಬಣ್ಣದ ಬೀಸಣಿಗೆಯ ಪಿಡಿದವರು ಕೆಲರು (ಶ್ರೀಕೃಜಾ. ४೭). [ ? ]

**ಜಾನುಗುಪ್ಪಾಳಿ** (ನಾ). ಒಂದು ಬಗೆಯ ಆಟ ; ಜಾರುಗುಪ್ಪೆ (?) : ಭಾಗವಾಡಿಯ ಬಸವಂಗೆ ಮಹಾಮೇರು ಪರ್ವತಂ ಜಾನುಗುಪ್ಪಾಳಿಯಾಡುವ ಚಿಟ್ಟದಂತೆ ಆಚರಿಸಿದವುದು (ಕಾಶಕೈ. ४೦೦). [ ? ]

**ಜಾನುದಘ್ನ** (ಗು). ೧. ಮೊಳಕಾಲು ಮುಳುಗುವಷ್ಟು ಆಳವುಳ್ಳ ; ಮಂಡಿಯವರೆಗೆ ಬರುವ ; ಮೊಳಕಾಲುದ್ದವಾದ : ಶತಸಹಸ್ರ ಮುಖ ಪ್ರವಹ ಜಾನುದಘ್ನ ದೀರ್ಘಕಾಂಭಃಕುಲ್ಯಾಪ್ರವಾಹಂಗಳಂ (ಆದಿಪು. ೮–೪೧ ವ) ; ಪೆಣ್ಪಡೆ ನಿಂದುದು ಪೊಕ್ಕು ಜಾನುದಘ್ನೋರುದಘ್ನ ಕಟಿದಘ್ನ ನಾಭಿದಘ್ನಸ್ಥಳದೊಳ್ (ಜಗವಿ. ೧೪–೯೩) ; ಇಳಿದು ಮೊನೆ ಮುಂಡೆರಗನಗ್ರಕೆ ಬಲಿದು ಹೊಕ್ಕನು ಜಾನುದಘ್ನ ಸ್ಥಳವನು (ಕುವ್ಯಾಅ. ೨३–೦೭). (ನಾ). ೨. ಮಂಡಿಯವರೆಗೂ ಬರುವುದು; ಮೊಳಕಾಲು ಮುಳುಗುವಷ್ಟು ಆಳವಾಗಿರುವುದು : ಜವನ ಡಾಮರವಾದುವು ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ.೧३–೬೦); ಸರಸ್ಸಂಕುಲಂ ಕಂಠದಘ್ನಂ ಬಿಟ್ಟಿತ್ತು ನಾಭಿದಘ್ನಂ . . . ಜಾನುದಘ್ನಂ (ಬಾಧಪು. ೧४–೨೯). [ ಸಂ. ]

**ಜಾನುಮಂಜರಿ** (ನಾ). ಕುದುರೆಯ ಮಂಡಿಯ ಕೀಲು,–ಸಂದು : ಅದಱಿಂದ ಮೇಲೆನಿಪ್ಪಾ ಮಂದಿ(ಡಿ)ಸಂದಿಗೆ ಜಾನುಮಂಜರೆಂಬಭಿಧಾನಂ (ಅಶ್ವಶಾ. ೯–३४). [ ಜಾನು$_1$ + ಮಂಜರಿ ? ]

**ಜಾನುವಾರು**, ಜನಾವರ, ಜಾನವಾರು (ನಾ). ದನ ; ಕಾಲ್ನಡೆ ; ಚತುಷ್ಪಾದಿ : ಜಾನುವಾರುಗಳಿಗೆ ಹುಲ್ಲು, ಅಕ್ಕಚ್ಚು ಇರಿಸಿ (ಬಡ್ಡಮಾ. ೧४೦): ಜಾನುವಾರುಗಳ, ವಾಹನಗಳ, ದೋಣಿಗಳ ಅಥವಾ ಮನೆಯ ಸಾಮಾನುಗಳ ಬಾಡಿಗೆ (ಗ್ರಾಮಾಕ. ೧೭४): ಕಾಡಲ್ಲಿ ಮೇಯುವ

ಎಮ್ಮೆ, ದನಕರು ಮೊದಲಾದ ಜಾನುವಾರುಗಳನ್ನು ಕಂಡು ಸಂತೋಷ ಪಟ್ಟಿತು (ಜಾನಗೀ. ೬೨). **ಜನಾವರ :** ಜನಾವರ ಮನೆಯಲ್ಲಿಟ್ಟುಕೊಂಡು ಕಷ್ಟಪಡುವುದಕ್ಕೆ ಅವರು ಅನೇಕ ಕಾರಣಗಳನ್ನು ಹೇಳುವರು (ಚಂದ್ರಶಾ. ೩೧) : ಜನರಿಗೂ ಜನಾವರಗಳಿಗೂ ತುಂಬಾ ತೊಂದರೆಯಾಗಹತ್ತಿತು (ಅನಂತ. ೬). **ಜಾನವಾರು :** ಜಾನವಾರುಗಳಿಂದ ಸಿಗುವ ಮಾಂಸವೂ ಹಾಲುಹೈನವೂ ಇಕಾಫೆ ಪ್ರದೇಶದ ಜನಗಳಿಗೆ ಸಾಲುವುದಿಲ್ಲ (ಬಿಶಿಸಂ. ೪೩)

[ ←ಪಾರ. ಹಿಂ. ಜಾನ್‌ವರ್ ; ಮರಾ. ಜನಾವರ್ ]

**ಜಾನುಶೀರ್ಷಾಸನ**(ನಾ). [ಯೋಗ] ಯೋಗಾಸನಗಳಲ್ಲಿ ಒಂದು : ಮುಖ್ಯವಾದ ಕೆಲವು ಆಸನಗಳು . . . ೬ ಜಾನುಶೀರ್ಷಾಸನ (ಎಡ – ಬಲ ೨) (ಭಾರದ. ೧೬೭). [ ಜಾನು$_1$ + ಶೀರ್ಷ + ಆಸನ ]

**ಜಾನೆ** (ನಾ). ಒಂದು ಬಗೆಯ ಗಿಡ : ಜಾಲಿ ಜಾನೆಯು ಬೋರೆ ತೆರೆಯು . . . ಬಹುಲತೆಗಳು ಕಿಕ್ಕಿಕ್ಕಿರಿ ಪ ಕಾನನದೊಳು (ನವಮೋ. ೮–೯). [ ? ]

**ಜಾಪಕ** (ನಾ). ೧. ಮಂತ್ರಗಳನ್ನು ಜಪಿಸುವವನು ; ಜಪಮಾಡು ವವನು: ಜಾಪಕರಿಗೆ ಸುಯೋಗಿಗಳಿಗೆ ಮಹಾಪೃಥುಲ ಪುಣ್ಯಂಗಳುಂಟು (ತಿಮ್ಮಶಾಂ. ೬–೬೭) ; ಅಡ್ಡ ಮಲಗಿರುತೆ ಪರ್ಯಂಕದೊಳು ವಿಮಲ ಶಿವಮಂತ್ರಮಂ ಜಪಿಸಲಾಗದು ಜಾಪಕಂ (ಶಾಘಪ. ೧೦–೧೧). ೨.=ಜಾಯಕ. ೩. ಕುಂಕುಮ : "ಕುಂಕುಮಂ . . . ಜಾಪಕಂ – ಈ ೭ ಕುಂಕುಮಂ " (ಹಲಾಯು. ೮೯–೩೮೯). [ ಸಂ. ]

**ಜಾಪತ್ಕಾಲ** (ನಾ). (ಉಕ) ಕಷ್ಟಕಾಲ ; ತೊಂದರೆಯ ಕಾಲ : ಅದ ರಂತೆಯು ಜಾಪತ್ಕಾಲ (ಅಶಕ್ತತೆಯ ಕಾಲ)ದಲ್ಲೂ ನಡೆದುಕೊಳ್ಳಬೇಕು (ಅಗರ. ೯೦). [ ಜಾಪತ್ತು + ಕಾಲ ]

**ಜಾಪತ್ತು** (ನಾ). (ಉಕ) ಕಷ್ಟ ; ಆಪತ್ತು. 'ಜಾಪತ್ಕಾಲ' ಪರಾ. [ ? ]

**ಜಾಪತ್ರಿ** (ನಾ). = ಜಾಪತ್ತು : ಜಡ್ಡು ಜಾಪತ್ರಿ ಎಂದು ರಜಾ ಬೇಡಿ (ಧನಂಜ. ೪೧). [ ? ]

**ಜಾಪತ್ರೆ** 'ಜಾಜಿಪತ್ರೆ' ನೋ.

**ಜಾಪರ, ಚೋಪಾರ್ರ$_2$, ಜಾಪಾರ** (ನಾ). ೧. ಒಂದು ಬಗೆಯ ಸುಗಂಧ ಪದಾರ್ಥ ; ಕುಂಕುಮದ ಹೂವು ; ಕೇಸರಿ : ಪರಿಪರಿ ಕೇಸರಿಯ ಬಗೆಬಗೆ ಬೆರಸಿದ ಜಾಪರವ . . . ಶ್ರೀಹರಿಯ ಶಿರದಲ್ಲಿಟ್ಟು (ಪುರಂದ. ೩–೭೯–೯). ೨. ಅಜವಾನ ; ಓಮ ; ವಾದಕ್ಕಿ. **ಚೋಪಾರ್ರ$_2$ :** (+). **ಜಾಪಾರ:** ೨. ಜಾಪಾರ ನಾಮಂ ಯವಾನಿಯೆನಲ್" (ಮಂಗರಾ. ೪೧–೩೪). [ ←ಅರ. ಹಿಂ. ಜಾಫ಼್‌ರಾನ್ ]

**ಜಾಪಾರ** 'ಜಾಪರ' ನೋ.

**ಜಾಪಾಳ, ಜಾವಾಳ** (ನಾ). ಒಂದು ಬಗೆಯ ಗಿಡ ಮತ್ತು ಅದರ ಬೀಜ; ಇದರ ಬೀಜಗಳನ್ನು ಸೇವಿಸಿದರೆ ಭೇದಿಯಾಗುತ್ತದೆ: ಸುಣ್ಣ, ಜಾಪಾಳ . . . ಅರೆದು ಗುಂಜಾಪ್ರಮಾಣ ಕೊಡಲು ಶೀತ ಜ್ವರಗಳು ಮಾಣುವುವು (ವಿಶ್ವವಿ. ೩೮) ; ಇದರಲ್ಲಿ ಜಾಪಾಳವಂ ಧೂಪವ ಹಾಕಿ (ಸಕಲವೈ. ೧೬೯). **ಜಾವಾಳ :** (+).

**ಜಾಪಾಳದ ಶತ್ರೆ** = ಜಾಪಾಳದ ಸೊಪ್ಪು : ವೃದ್ಧವೈದ್ಯರು ದಂತಿ ಯೆಂದರೆ ಜಾಪಾಳದ ಶತ್ರೆಯೆಂತಲೂ ಕೆಲರು ಕರೇಉಮ್ಮತ್ತವೆಂತಲೂ ಹೇಳುವರು (ಸಿದ್ಧಾಂತಿ. ೧೩೭) ; **ಜಾಪಾಳವನ್ನು ಕೊಡು** = ಹೆದರಿಸು ; ಶಾಸ್ತಿಮಾಡು : ಅವನಿಗೆ ಸರಿಯಾಗಿ ಜಾಪಾಳವನ್ನು ಕೊಟ್ಟಿದ್ದೇನೆ. ಈಗ ತೆಪ್ಪಗಿದ್ದಾನೆ (ರೂಢಿ). 'ಜೇಪಾಳ' ಪರಾ. [ <ಸಂ. ಜೇಪಾಲ ]

**ಜಾಪಾಳಮಾತ್ರೆ** (ನಾ). ಜಾಪಾಳದ ಬೀಜದಿಂದ ತಯಾರಿಸಿದ ಗುಳಿಗೆ ; ವಿರೇಚನವನ್ನುಂಟುಮಾಡುವ ಮಾತ್ರೆ : ಹೊಟ್ಟೆ ಸರಿ ಇಲ್ಲವಾದರೆ ಒಂದು ಸಾಸಿವೆಯಷ್ಟು . . . ಜಾಪಾಳಮಾತ್ರೆ ತೆಯ್ದು ತೆಗೆದುಕೋ (ಸರಸ. ೩೩); ಜಾಪಾಳ ಮಾತ್ರೆ ವೈಕುಂಠ ಯಾತ್ರೆ (ಗಾದೆ). [ ಜಾಪಾಳ + ಮಾತ್ರೆ ]

**ಜಾಪು** 'ಚಾಪು$_1$' ನೋ.

**ಜಾಪುಗಾಲು** 'ಚಾಪುಗಾಲು' ನೋ.

**ಜಾಪುಹಾಕು** (ಕ್ರಿ). ಮಾರುಗಾಲು ಹಾಕು ; ದಾಪುಗಾಲು ಹಾಕು : ಎರಡು ಮೂರು ಜಾಪುಹಾಕಿ ಮತ್ತೆ ತಟ್ಟೂಕುದುರೆಯು ಕುಕ್ಕೋಟದ ನಡಿಗೆಯನ್ನು ಬಿಟ್ಟನು (ಧರ್ಮಸಿ. ೩೨). [ ಜಾಪು (<ಚಾಪು$_1$) + ಹಾಕು (<ಪಾಯ್ಯು$_1$) ]

**ಜಾಪ್ಯ$_1$** (ನಾ). ೧. ಕಾಲಹರಣ; ತಡ ; ವಿಲಂಬ ; ಔದಾಸೀನ್ಯ : ಗೋಪ್ಯವೆ ಇದು ಜನಮಹಿಮೆಯೆಂದೆನುತಾಗ ಜಾಪ್ಯವ ಮಾಡದೆಯ್ದಿದರು (ಭರಜ. ೬೭–೩) ; ರೋಗಗಳು ಕಾಣಿಸಿದಲ್ಲಿಯೇ [ಜಾ]ಪ್ಯಮಾಡದೆ ಶೀಘ್ರ ದಲ್ಲಿಯೇ ಪ್ರತೀಕಾರವಂ ಮಾಡಬೇಕು (ಸಕಲವೈ. ೨೨) ; ಬೇರೆ ಮೂವರು ಯತಿಗಳು ಸಮ್ಮತಿಯನ್ನು ಕೊಡಲಿಕ್ಕೆ ಜಾಪ್ಯಮಾಡಲಿಲ್ಲ (ವಾಗ್ಮೀವಿ.೨೦೬). ೨. ಉದಾಸೀನ ಮಾಡುವವನು ; ಸೋಮಾರಿ ; ಆಲಸಿ : (+). [ <ಸಂ. ಯಾಪ್ಯ ]

**ಜಾಪ್ಯ$_2$** (ನಾ). ಜಪಿಸಲು ಯೋಗ್ಯವಾದುದು; ಜಪಮಾಡಲು ಯೋಗ್ಯ ವಾದ ಮಂತ್ರ : ಅಡಿಯಿಡುವುದೇ ಬಲವಪ್ಪುದು ಸತತಂ ನುಡಿವುದೆ ಜಾಪ್ಯಂ ಸಮತೆಯ ಮಜ್ಜನಮದರ್ವ ಸುಮನವೇ ಸುಮನಂ (ಉದ್ಧದೇ. ೨–೪೩). [ ಸಂ. ]

**ಜಾಪ್ಯಗಾರ** (ನಾ). ಉದಾಸೀನಮಾಡುವವನು ; ಆಲಸಿ: (+). [ ಜಾಪ್ಯ$_1$ + – ಕಾರ$_1$ (< – ಕಾಱ) ]

**ಜಾಫಲ** 'ಜಾಯಿಫಲ' ನೋ.

**ಜಾಬಯ್ಯೆ** (ನಾ). ಒಬ್ಬಾಕೆಯ ಹೆಸರು: ಶ್ರೀದಯಿತನ ಬಾಯಿಕನ ಮನೋದಯಿತೆಗೆ ಜಭದೊಳೆಸೆದ ಜಾಬಯ್ಯೆಗೆ ತಾವಾದರ್ ತನಯರ್ (ಎಕ. II, ೧೩೯–೪ ; 950). [ ? ]

**ಜಾಬಾದ** (ಗು). ಮಿಗಿಲಾದ; ಮೇಲಾದ; ಅತಿಶಯವಾದ: ಯಾಕಂದರೆ ರಾಮಣ್ಣ ಕಾಕಾ ರಮಾ ಕಕ್ಕಿ ಈ ಜಾಬಾದ ಜಗಳಗಂಟ ಜೋಡಿಯ ಕೂಸದು (ಚಾಂಡಾಯ. ೯). [ ←ಮರಾ. ಜಾಹಂಬಾಜ್, ಜಾಹಂಬಾದ್ ; ಪಾರ. ಜಾನ್‌ಬಾಜ್ ]

**ಜಾಬಾಲ, ಜಾಬಾಳ$_1$** (ನಾ). ೧. ಆಡುಕುರಿಗಳನ್ನು ಮೇಯಿಸಿ ಜೀವಿಸುವವನು ; ಕುರುಬ. ೨. ಉಪನಿಷತ್ತುಗಳಲ್ಲಿ ಒಂದು : ಪೋದದಿಂ ಜಾಬಾಲ ಕೈವಲ್ಯಾದಿ ಶಾಖೆಗಳೊಳ್ ಪ್ರವರ್ಧಿತವಾದ ಭಸ್ಮೈಶ್ವರ್ಯ ಪದವಿ ಸಮಗ್ರವಾಯ್ತೆನಗೆ (ಬಸವು. ೪೩–೭೩); ಜಾಬಾಲ ಮೊದಲಾದವೇ ಶತೋಪನಿಷತ್ತುಗಳು (ವಿವೇಕ. ೪). **ಜಾಬಾಳ$_1$ :** ೧. "ಜಾಬಾಳಃ, ಅಜಾಜೀವಃ-ಈ ೨ ಆಡಿನಿಂ ಬರ್ದುಂಕುವವಂ"(ಹಲಾಯು. ೬೩. ೨೨೬). [ ಸಂ. ]

**ಜಾಬಾಳ$_1$** 'ಜಾಬಾಲ' ನೋ.

**ಜಾಬಾಳ$_2$** (ನಾ). ೧. ಜಾಳುಜಾಳಾದುದು. ೨. ನೀರಸವಾದುದು; ಶುಷ್ಕವಾದುದು : ಇಂಥ ಸಂಪ್ರದಾಯಶರಣ ವರ್ಣನೆಗಳಿಂದ ಕಾವ್ಯವು ಅಲ್ಲಲ್ಲಿ ಜಾಬಾಳವಾಗಿದೆ (ಕಸಾಚ. ೧೮೪). [ ←ಮರಾ. ಜಾಬಳಾ, ಜಾಭಳಾ ]

**ಜಾಬಿಕ್ಕು** (ಕ್ರಿ). ವೇಗವಾಗಿ ಮುತ್ತಿಗೆ ಹಾಕು: ಲಾಲಾಮಹಾದೇಶಕಚ್ಯುತಂ ಜಾ[ಪಾಠಾಂ. ಚಾ]ಬಿಕ್ಕಿ ಜವಗತಿಯೊಳು ಕಂಕನೆಂಬಾ ಮಹೀಪಾಲನಂ ತುಂಡರಿಸಿ (ಪರಕು. ೩೯–೧೪). [ ಜಾಬು + ಇಕ್ಕು ]

**ಜಾಬಿತಾ, ಜಾಬಿತ್ತೆ, ಜ್ಯಾಬೀತೆ** (ನಾ). ೧. ಕಾಯಿದೆ; ಕಾನೂನು; ಕಟ್ಟಳೆ; ನಿಯಮಂ. ೨. ಪರವಾನಿಗೆ; ಅಪ್ಪಣೆಪತ್ರ; ಜ್ಞಾಪಕಪತ್ರ; ನಿವೇದನ ಪತ್ರ. ೩. ವಿವರಣೆ ಪಟ್ಟಿ; ಸರಕು ಸಾಮಾನುಗಳ ಪಟ್ಟಿ. **ಜಾಬಿತ್ತೆ** : ೧. ಈ ಜಾಬಿತ್ತೆ ಮೇರೆಗೆ ಐವಜು ವಸೂಲುಮಾಡಿಕೊಂಡು ನಿಮ್ಮ ತಾಲ್ಲೂಕಿನ ಸಾಗುವಳಿಗೆ (ಮುಹಾವಂ. II, ೬೬). **ಜ್ಯಾಬೀತೆ** : ೧. ಶ್ರಯ ಭರ್ತಿ ಆದ ಮೇಲೆ ಜ್ಯಾಬೀತೆ ಮೇರೆಗೆ ಪೂರಾ ಕಂದಾಯ ತೆಗೆದು ಕೊಳ್ಳಬೇಕು (ಮುಹಾವಂ. II, ೬೩).
[ ← ಅರ. ಜಾಬಿತಾ, ಜಾಬ್ತಾ ; ಹಿಂ. ಜಾಬ್ತಾ; ಮರಾ. ಜಾಬಿತಾ ]

**ಜಾಬಿತ್ತೆ** 'ಜಾಬಿತಾ' ನೋ.

**ಜಾಬು₁** (ನಾ). ತೆಂಗಿನ ಹೆಡೆಮೊಟ್ಟೆ ಮೇಲೆ ಬರುವ ನಾರು : ಜಾಬು ಎಬ್ಬಿ ಅದರಿಂದ ಹೊರೆಕಟ್ಟು (ರೂಢಿ). [ ? ]

**ಜಾಬು₂** (ನಾ). ಬುಡುಬುಡುಕೆಯವರು ಹೇಳುವ ಭವಿಷ್ಯ. 'ಜಾಬು ಕಟ್ಟು' ಪರಾ. [ ? ]

**ಜಾಬು₃** (ನಾ). ಸ್ಥಳ; ಗೊಂತು (?): ಹೋತ ತನ್ನ ಜಾಬಿನಲ್ಲಿ ಮಲಗಿದ್ದುದು ದೀಪವನ್ನೂ ಮನುಷ್ಯರನ್ನೂ ಕಂಡು ಎದ್ದು ನಿಂತು (ಕಾನೂರು. ೪೩೬). [ ? ]

**ಜಾಬುಕಟ್ಟು** (ಕ್ರಿ). ೧. ಹಕ್ಕಿಶಕುನ ಮೊದಲಾದ ಕ್ರಮದಿಂದ ಭವಿಷ್ಯ ವನ್ನು ನಿರ್ಧರಿಸು,–ತಿಳಿಸು. ೨. ಭವಿಷ್ಯವನ್ನು ನುಡಿ : ನೀನು ಜಾಬುಕಟ್ಟಿದಂತೆಯೇ ಆಯ್ತಲ್ಲಯ್ಯ (ರೂಢಿ). [ ಜಾಬು₂ + ಕಟ್ಟು₁ ]

**ಜಾಬೆ** (ನಾ). ಒಬ್ಬಾಕೆಯ ಹೆಸರು: ಜಕ್ಕಬ್ಬೆ ತಂಗೆ ಜಾಬೆ ಕಲ್ಲ ನಿಱಿಸಿದಳ್ (ಎಕ. VIII, ಸೊರಬ. ೪೩೬-೭ ; 972). [ <ಜಾಯಬ್ಬೆ? ]

**ಜಾಮು₁** 'ಜಾವ' ನೋ.

**ಜಾಮು₂** (ನಾ). ಸುಡುವಿಕೆ ; ದಹನ. 'ಜಾಮಿಸು' ಪರಾ.
[ < ಪ್ರಾ. ಝಾಮ ]

**ಜಾಮಾತ** (ನಾ).=ಜಾಮಾತೃ : ಗಿರಿಸಾರ್ವಭೌಮ ಜಾಮಾತ (ಪ್ರಾಥಾ. ೩-೧). [ <ಸಂ. ಜಾಮಾತೃ ]

**ಜಾಮಾತೃ** (ನಾ). ೧. ಮಗಳ ಗಂಡ; ಅಳಿಯ : "ತನ್ನ ಮಗಳ ಪತಿ ಜಾಮಾತೃವಕ್ಕುಂ" (ಮಂಗರಾ. ೯೩-೧೪) : ಅಂತಾ ಸಂಗ್ರಾಮದೊಳ್ ತನ್ನಸುಜ ತನುಜ ಜಾಮಾತೃವರ್ಗಂ ಪಡಲ್ವಟ್ಟಂತಾಗಳ್ ಮೊಟ್ಟಿ ಕಟ್ಟಿಗ್ರಪುರದಿಂ (ಶಾಂತಿಪು. ೩-೫೮) : ಪಿತೃವಿರಹದೆ ಜಾಮಾತೃವೆನ್ನಿರ್ಪನಲ್ಲಂ (ಚಂದ್ರಪು. ೬-೪೩); ಇನ್ನೆವರಮೆಮ್ಮ ಮಾತಂ ಮನ್ನಿಸಿ ಜಾಮಾತೃವಿರ್ದನಿದ ಸಾಲ್ಗುಂ (ರಾಜಶೇ. ೯-೩೭). ೨. ಸಹೋದರಿಯ ಮಗ; ಸೋದರಳಿಯ: ಕಂಸ ನಿನ್ನ ಜಾಮಾತೃಗಳೆಂದೊಡಾವ ದುರಿತಂಗಳುಮೆಮ್ಮೊಳ ಪೊರ್ದಲಂಜುಗುಂ (ಜಗವಿ. ೬-೬೦). [ ಸಂ. ]

**ಜಾಮಾರು** (ನಾ). ಅಂಚಿಲ್ಲದ ಬಣ್ಣದ ಉದ್ದವಾದ ಬಟ್ಟೆ ; ಸಾಮಾನ್ಯ ವಾಗಿ ಕೆಲವು ಕಡೆ ವಿಧವೆಯರು ಉಡುವ ಅಂಚಿಲ್ಲದ ಸೀರೆ : (ಕ).
[ ←ತೆಲು. ಜಾಮಾರು ]

**ಜಾಮಿ** (ನಾ). ೧. ಒಡಹುಟ್ಟಿದವಳು ; ಸಹೋದರಿ. ೨. ಕುಲಾಂಗನೆ ; ಪತಿವ್ರತೆ : "ಜಾಮಿ ಕುಳವಧೂ ಸ್ವಸೃನಾಮಂ" (ವಸ್ತುಕೋ. ೧೩೯-೧೨೮) ; "ಸಹಭವೆಯುಂ ಪತಿವ್ರತೆಯುಮೆಂಬಿವು ಜಾಮಿಯೆನಿಕ್ಕುಂ" (ನಾನಾರ. ೧೧೦). [ ಸಂ. ]

**ಜಾಮಿತಿ** (ನಾ). ರೇಖಾಗಣಿತ : ಸ್ಕೂಲಿನಲ್ಲಿ ವ್ಯಾಕರಣ ಸಾಹಿತ್ಯ ಜಾಮಿತಿ ಗಳನ್ನು ಓದುವುದು ವಿದ್ಯೆಯಲ್ಲ (ಬಂಕಿಮ. ೪೭೮).
[ <ಸಂ. ಜ್ಯಾಮಿತಿ ]

**ಜಾಮಿತ್ರ** (ನಾ). [ಜ್ಯೋತಿ] ಲಗ್ನದಿಂದ ಏಳನೆಯ ಸ್ಥಾನ,–ಸಪ್ತಮ ಸ್ಥಾನ: ಜಾಮಿತ್ರಮೆಂದು ಸಪ್ತಮರಾಶಿ (ಜಾತಕ. ೧-೩೩ ಅಡಿಟಿ). ೨. ಏಳನೆಯ ಸ್ಥಾನದಲ್ಲಿರುವವನು ; ಸಪ್ತಮಕೇಂದ್ರಗತ : ಹಿಮರಶ್ಮಿ ಭೃಗುಗೆ ಜಾಮಿತ್ರಮೆನಲ್ ಚಂದ್ರನನೆ ಕಾಣೆ ಶುಭಮತಿ ಶುಭದಂ (ಅಟ್ಟಮ. ೬-೫೦). [ ಸಂ. ]

**ಜಾಮಿನಿ** (ನಾ). ಸಹೋದರಿ : "ಭಗಿನಿ ಜಾಮಿನಿ ಸ್ವಸೃವೆಂದೊಡೊಡ ಹುಟ್ಟಿದಳು" (ಮಂಗರಾ. ೯೩-೧೪). [ ? ]

**ಜಾಮಿಸು** (ಕ್ರಿ). ಸುಡು ; ದಹಿಸು : ಮೂವತ್ತು ಗಾವುದ × × × ದೆವಸ ದೊಳೆಯ್ದಿ ಅರಸನಂ ಜಾಮಿಸಿ ನುರಿವೃತ್ತಿಟ್ಟುದಂ ಕಣ್ದು (ಸೌಇಇ. XI-I, ೧೧-೧೮ ; 866) ; ಉರುತರ ಹರಿಚಂದನೇಂಧನ ನಿಕಾಯದಿಂ ರೋಹಿಣೇಯಂ ಜಾಮಿಸುತ್ತಿರೆ (ನೇಮಿಪು. ೧೪-೧೦೬ ವ) ; ಇಂಧನಂಗಳಂ ತರಿಸಿ ಆ ಋಷಿ ಯರ ಶರೀರಮಂ ಸಂಸ್ಕಾರವಿಧಿಯಿಂ ಜಾಮಿಸಿ (ಜೀವಸಂ. ೧೨೧-೬೬ ವ).
[ ಜಾಮು₂ + – ಇಸು₂ ]

**ಜಾಮೀನ್** 'ಜಾಮೀನು' ನೋ.

**ಜಾಮೀನು, ಜಾಮೀನ್** (ನಾ). ೧. ಈಡು ; ಹೊಣೆ : ಖಂಡಣ ಹಣಕ್ಕೆ ಕೊಡಗಿನ ಸಂಸ್ಥಾನದ ದೊರೆಗಳ ಜಾಮೀನು ಹೇಳಿಸಿ (ರಾಜೇಂದ್ರ. ೬೩) ; ತಕ್ಕ ಜಾಮೀನು ಇಲ್ಲದೆ ಸಾಲ ಕೊಡುವುದೇ ಇಲ್ಲ (ವಿಧಿಷ್ಯ. ೯೧) ; ಇಸ್ಮಾಲಿಗೆ ಎಲ್ಲ ಬಿಟ್ಟು, ಜಾಮೀನು ನಿಲ್ಲಲೂ ಯಾರೂ ಮುಂದೆ ಬರಲಿಲ್ಲ (ಚಿಗುಲ. ೪೬). ೨. ಹೊಣೆಗಾರ ; ಜವಾಬ್ದಾರಿ ಹೊತ್ತವನು : ನನ್ನ ಅಣ್ಣಂದಿರು ತಮ್ಮ ಒಬ್ಬ ಸ್ನೇಹಿತನಿಗೆ ಜಾಮೀನಾಗಿ ನಿಂತು (ಮುಹಾಗ. ೩೩೩). **ಜಾಮೀನ್**: ೧. ದೇಣೇದಾರನು ಬರವಣಿಗೆಯ ಮೂಲಕವಾಗಿ ಸಾಕಾದಷ್ಟು ಜಾಮೀನ್ ಕೊಟ್ಟ ಪಕ್ಷದಲ್ಲಿ ಅದನ್ನು ಆತನ ಸ್ವಾಧೀನದಲ್ಲಿಯೇ ಬಿಟ್ಟಿರ ಬಹುದು (ಗ್ರಾಮೂಕ. ೩೬). [ ←ಅರ. ಮರಾ. ಜಾಮೀನ್ ]

**ಜಾಮೀನುಕರಾರು** (ನಾ). ಒಬ್ಬ ವ್ಯಕ್ತಿಯು ಒಂದು ವಿಷಯದಲ್ಲಿ ಜಾಮೀನಾಗಿರುವುದಾಗಿ ಬರೆದುಕೊಟ್ಟ ಒಪ್ಪಂದ ಪತ್ರ: (Bond of Security. ಶಾರಿನಿ. ೯) : ಜಾಮೀನುಕರಾರು ಬರೆದುಕೊಟ್ಟು ಅವನನ್ನು ಬಿಡಿಸಿಕೊಂಡು ಬಂದೆ (ರೂಢಿ). [ ಜಾಮೀನು + ಕರಾರು₁ (<ಕರಾರ) ]

**ಜಾಮೀನುದಾರ, ಜಾಮೀನ್ದಾರ** (ನಾ). ಜಾಮೀನಾಗಿರುವ ವ್ಯಕ್ತಿ ; ಹೊಣೆಗಾರ: (ಪ್ರಗತಿ.IV, ೭೬೨); ಅವನನ್ನು ಬಿಡಿಸುವಾಗ ಜೋಡಿದಾರರೇ ಜಾಮೀನುದಾರರಾಗಿದ್ದರು (ರೂಢಿ). **ಜಾಮೀನ್ದಾರ** : ಲಗ್ನಕ, ಪ್ರತಿಭೂ ೨ ಹೊಣೆಗಾರ, ಜಾಮೀನ್ದಾರ (ಸಿದ್ಧಾಂತಿ. ೨೬೫).
[ ಜಾಮೀನು + – ದಾರ₄ ]

**ಜಾಮೀನುಪತ್ರ** (ನಾ).=ಜಾಮೀನುಕರಾರು : ರಂಗಣ್ಣನ ಮುಖಾಂತರ ನನಗೆ ಜಾಮೀನುಪತ್ರವನ್ನು ಬರೆಯಿಸಿ ಕೊಟ್ಟು ಇರುತ್ತಾನೆ (ಜಾಮಿವಂ. ೧೮೦). [ ಜಾಮೀನು + ಪತ್ರ ]

**ಜಾಮೀನ್ದಾರ** 'ಜಾಮೀನುದಾರ' ನೋ.

**ಜಾಮು, ಜಾಂ** (ನಾ). ಸಕ್ಕರೆ ಪಾಕದಲ್ಲಿ ಕುದಿಸಿ ಮಾಡಿದ ಹಣ್ಣಿನ ಪಾಕ : ಕಿತ್ತಳೆಹಣ್ಣಿನ ಸಿಪ್ಪೆಯಿಂದ ಕೂಡ ಜಾಮುಗಳನ್ನು ತಯಾರಿಸ ಬಹುದು (ಅಡುಶಾ. ೧೧೬). **ಜಾಂ** : ಸಕ್ಕರೆಯಿಂದ ತಯಾರಾದ ಜಾಂ ಮತ್ತು ಜಲ್ಲಿಗಳು ಈ ಸೂಕ್ಷ್ಮಾಣುಗಳ ಹಾವಳಿಯಿಂದ ಬಹಳ ಬೇಗ ಕೆಟ್ಟು ಹೋಗುವುವು (ಗೃಹವಿ. ೫೬). [ ← ಇಂ. Jam ]

**ಜಾಮೂನ್** 'ಜಾಮೂನು' ನೋ.

**ಜಾಮೂನು, ಜಾಮೂನ್** (ನಾ). ಹಾಲುಖೋವ ಮತ್ತು ಮೈದಾ ಹಿಟ್ಟಿನಿಂದ ಉಂಡೆಮಾಡಿ ತುಪ್ಪದಲ್ಲಿ ಕರಿದು ಸಕ್ಕರೆ ಪಾಕದಲ್ಲಿ ಹಾಕಿ ಮಾಡುವ ಒಂದು ಸಿಹಿತಿಂಡಿ : ಹುಲಿಷಿಕಾರಿ ಮಾಡುವುದು ಜಾಮೂನು ತಿನ್ನುವಷ್ಟು, ಏತಕ್ಕೆ, ಅದಕ್ಕಿಂತ ಸುಲಭ ಎಂದು ಎನಿಸುತ್ತಿತ್ತು (ರಾಯಿಕ. ೦೬). **ಜಾಮೂನ್** : ಜಾಮೂನ್, ಜಲೇಬಿ (ಮುಹಾಂ. ೪೬). [ ←ಹಿಂ. ಜಾಮುನ್ ]

**ಜಾಮೇಯ** (ನಾ). ಒಡಹುಟ್ಟಿದವಳ ಮಗ; ಸೋದರಳಿಯ. [ಸಂ.]

**ಜಾಯಕ** (ನಾ). ಹಳದಿ ಬಣ್ಣದ ಅಗಿಲುಮರ ; ಶ್ರೀಗಂಧದ ಗುಂಪಿಗೆ ಸೇರಿದ ಒಂದು ಸುವಾಸನೆಯ ಮರ; ಕಾಲೇಯಕ. 'ಜಾಪಕ' ಪರಾ. [ಸಂ.]

**ಜಾಯಜಖಮಿ** (ನಾ). ಹಿಂಸೆ ; ಕೊಲೆ : ದಿನವಂದಕ್ಕೆ ಅವರ ಕಡೆ ಐವತ್ತು ಅರವತ್ತು ಜನದ ಮೇಲೆ ಜಾ ಯ ಜ ಖ ಮಿ ಮಾಡುತ್ತ ಇರಲಾಗಿ (ರಾಜೇಂದ್ರ. ೨೨). [ < ಜಾಯಾ + ಜಖಮಿ$_0$ (< ಜಖಂ) ]

**ಜಾಯಬ್ಬೆ** (ನಾ). ಒಬ್ಬಾಕೆಯ ಹೆಸರು: ನೀತಿಮಾರ್ಗ ಪೆರ್ಮ್ಮಾಡಿಯ ತಙ್ಗಿ ಜಾಯಬ್ಬೆಯೆಮ್ಬೊಳ್ (ಎಕ. XII, ಶಿರಾ. ೨೪-೦೮; ೯೦೦). [? + ಅಬ್ಬೆ$_1$]

**ಜಾಯಮಾನ** (ಗು). ೧. ಹುಟ್ಟತಕ್ಕ ; ಹುಟ್ಟಲಿರುವ ; ಉಂಟಾಗಲಿರುವ. (ನಾ). ೨. ಸ್ವಭಾವ ; ಹುಟ್ಟುಗುಣ ; ವಿಶಿಷ್ಟಗುಣ : ಪತನಕ್ಕೆ ಹೇತುವಾದ ತಪ್ಪು ಸಲಹೆಗಳನ್ನು ಕೊಡುವುದು ರಾಜನ ಜಾಯಮಾನದಲ್ಲಿ ಬಾದಿರಲಿಲ್ಲ (ನಟಸಾ. ೧೧೩) ; ಇಷ್ಟಾದರೂ ನಂಬುವ ಜಾಯಮಾನ ಅವನದಲ್ಲ (ವಿಶಾಸ. ೪); ಆದರೂ ಕನ್ನಡದ ಜಾಯಮಾನಕ್ಕೆ ಭಂಗ ಬಂದಿಲ್ಲ (ಸಮಾಲೋ. ೦೮). [ಸಂ.]

**ಜಾಯಾ** (ಗು). ೧. ಹಾಳಾದ ; ನಾಶವಾದ ; ಕೆಟ್ಟುಹೋದ ; ನಷ್ಟವಾದ. (ನಾ). ೨. ನಷ್ಟ ; ನಾಶ : ಅವನ ಆಸ್ತಿಪಾಸ್ತಿಯೆಲ್ಲಾ ಜಾಯಾ ಆಗಿ ಹೋಯಿತು (ರೂಢಿ).

**ಜಾಯಾಮಾಡು**=ನಷ್ಟಗೊಳಿಸು ; ಹಾಳುಮಾಡು : ಅವರ ಫೌಜನ್ನು ಹೊಡೆದು ಜಾಯಾಮಾಡಬೇಕು (ರಾಜೇಂದ್ರ. ೨೯).
[ ←ಅರ. ಮರಾ. ಜಾಯಾ ]

**ಜಾಯಾಜೀವ** (ನಾ). ೧. ಹೆಂಡತಿಯ ಗಳಿಕೆಯಿಂದ ಜೀವಿಸುವವನು. ೨. ನಟ : "ಶೈಲಾಲಿ ನಟಂ ತಾಂ ಭರತಂ ಶೈಲೂಷಾಹ್ವಂ ಕೃಶಾಶ್ವಿ ಜಾಯಾಜೀವಂ" (ವಸ್ತುಕೋ. ೬೪-೭೪) ; ಬಹುರೂಪಮಂ ತಳೆದು ಜಾಯಾಜೀವನೆಂತಂತೆವೋಲ್ ತಿಱಿಗುಂ . . . ಜೀವಂ ಭವಾರಣ್ಯದೊಳ್ (ವರ್ಧಮಾ. ೧೦-೫೧). [ಸಂ. (ಜಾಯಾ + ಆಜೀವ) ]

**ಜಾಯಾಜೀವಿ** (ನಾ). ನಟ: ರಸಿಕರ್ ಬಣ್ಣಿಸೆ ಭಾವುಕರ್ ಪೊಗೞೆ ಜಾಯಾಜೀವಿಗಳ್ ಕೂರ್ತು ಕೀರ್ತಿಸೆ (ಪುಷ್ಪಪು. ೧೨-೫೧). [ಸಂ. ಜಾಯಾಜೀವಿನ್]

**ಜಾಯಾಸ್ಥಾನ** (ನಾ). [ಜ್ಯೋತಿ] ಜನ್ಮಕುಂಡಲಿಯಲ್ಲಿ ಪತ್ನಿಯ ಶುಭಾಶುಭಗಳನ್ನು ತಿಳಿಸುವ ಸ್ಥಾನ ; ಜನ್ಮಲಗ್ನದಿಂದ ಏಳನೆಯ ಸ್ಥಾನ : ನನ್ನ ಭಾಗ್ಯದ ಜಾಯಾಸ್ಥಾನದಲ್ಲಿ ಮನ್ಮಥದೇವನ ಸಹಕಾರವೂ ನನಗೆ ಉಂಟೆಂದು ತಿಳಿದೆನು (ಇಪ್ಪಳ. ೪೪೯). [ಸಂ. (ಜಾಯಾ + ಸ್ಥಾನ) ]

**ಜಾಯಿ$_1$** 'ಜಾದಿ' ನೋ.

**ಜಾಯಿ$_2$**, **ಝಾಯಿ** (ನಾ). ೧. ಒಂದು ಬಗೆಯ ಚರ್ಮವಾದ್ಯ ; ಮೃದಂಗ. ೨. [ಸಂಗೀತ] ತಾಳವಿನ್ಯಾಸದಲ್ಲಿ ಒಂದು ಕ್ರಮ: ಜಾಯಿ ಅನುಜಾಯಿಗಳ ಜೋಕೆ ತಪ್ಪದೆ (ವಿರೂಪಾ. ೬೨). 'ಅನುಜಾಯಿ' ಪರಾ. **ಝಾಯಿ**: ೧. ಝುರ್ಝುರರವೆಂಬ ಝಾಯಿ (ವಿವೇಕ. ೨೩೬). [ ? ]

**ಜಾಯಿಕಾಯಿ** 'ಜಾದಿಕಾಯ್' ನೋ.

**ಜಾಯಿಕಾಯಿಮರ**, **ಜಾಕಾಯಿಮರ** (ನಾ). ರಫ್ತು ಮಾಡಲು ತಯಾರಿಸುವ ಪೆಟ್ಟಿಗೆಗಳಿಗೆ ಉಪಯೋಗಿಸುವ ಒಂದು ಬಗೆಯ ಮರ ಮತ್ತು ಅದರ ಹಲಗೆ : ಜಾಯಿಕಾಯಿಮರವು ತುಂಬಾ ಹಗುರವಾಗಿರುತ್ತದೆ (ರೂಢಿ). **ಜಾಕಾಯಿಮರ** : ಜಾಕಾಯಿಮರದ ಹಲಗೆಗಳು ಪಾರ್ಸಲ್ ಪೆಟ್ಟಿಗೆಗೆ ತುಂಬಾ ಉಪಯೋಗವಾದುವು (ರೂಢಿ).
[ ಜಾಯಿ$_0$ + ಕಾಯಿ$_4$ (< ಕಾಯ್$_4$) + ಮರ$_1$ ]

**ಜಾಯಿಪತ್ರ** (ನಾ). =ಜಾಜಿಪತ್ರೆ: "ಕಾಲಕೂಟಃ–ಜಾಯಿಪತ್ರದ ಹಗಿನು" (ಓಷಧಿ. ೩೦). [ಜಾಯಿ$_1$ (< ಜಾದಿ) + ಪತ್ರ ]

**ಜಾಯಿಪತ್ರೆ** 'ಜಾಜಿಪತ್ರೆ' ನೋ.

**ಜಾಯಿಪಳ** (ನಾ). =ಜಾಯಿಫಲ: "ಜಾಯಿಪಳಮಾ ಜಾತಿಪತ್ರೆಯಕ್ಕುಂ" (ಮಂಗರಾ. ೪೩-೪೨) ; "ಜಾಯಿಪಳ – ಜಾತಿಫಲ" (ತದ್ಭಕೋ. ೧೫).
[ ಜಾಯಿ$_1$ (< ಜಾದಿ) + ಪಳ$_2$ ]

**ಜಾಯಿಫಲ**, **ಜಾಫಲ**, **ಜಾಯಿಫಳ** (ನಾ). =ಜಾದಿಕಾಯ್ : "ಜಾತಿಕೋಶಂ, ಜಾತಿಫಲಂ-ಈ ೨ ಜಾಯಿಫಲಂ" (ನಾಚರಾ ೧೨೪); "ಜಾತಿಸಾರಂ, ಜಾತಿಕೋಶಂ, ಜಾತಿಶೂಕಂ–ಈ ಮೂಱುಂ ಜಾಯಿಫಲ" (ಓಷಧಿ. ೬೨); ಜಾಯಿಫಲ, ಸೈಂಧವ, ನಾರಂಗಿ, ಹೊಂಗರುಗ . . . ಇವನ್ನು ಸಮಾನಂಗೊಂಡು ಚೂರ್ಣಮಂ ಮಾಡಿ (ವಿಶ್ವವಿ. ೬೮). **ಜಾಫಲ** : ಆರ್ತಿಯಿಂ ಮೆಲ್ಲುವ ಕರ್ಪೂರಮಿಶ್ರ ಜಾಫಲ ಜಾಪತ್ರೆ ಸಹ ಚರ್ವಿಸಿದ (ಶಕುಧಾ. ೨-೬೦) ; ಕೊಟ್ಟು ಪನ್ನೀರ್ವೀಳ್ಯವನು ಮೆಲುಗೊಟ್ಟು . . . ಜಾಫಲ ಪತ್ರೆಯನು (ಜರಾಮಾ. ೮೫-೬). **ಜಾಯಿಫಳ**: "ಮಾಯಾಫಳಂ–ಜಾಯಿಫಳ" (ಓಷಧಿ. ೧೨೪) ; ಹಲಸಿನ ಹಣ್ಣಿನ ವಿಷಮಂ . . . ಏಳಸಜ್ಜಾಯಿಫಳ ಹಿಂಗು ತಕ್ರಂ ಕಳೆಗುಂ (ಖಮದ. ೨-೮೪). [ಜಾಯಿ$_1$ (< ಜಾದಿ) + ಫಲ]

**ಜಾಯಿಫಳ** 'ಜಾಯಿಫಲ' ನೋ.

**ಜಾಯಿಲ$_1$** (ನಾ). ನಾಯಿ; ಶುನಕ; ಸೊಣಗ: "ಜಾಯಿಲಂ ಕುಕ್ಕುರಂ" (ಶಶಸಾ. ೬-೧೦೮) : ಝುಲುಮ್ಮನಲ್ ಸೆಡೆಯೆ ಚಾಳಿಪ ಜಾಯಿಲನಂತೆ ಮೊಕ್ಕಳಂಬಡುವ ಬದಂಗನಂ ದುರ್ಬಸನಿಯಲ್ಲದಳಾತನನೊಟ್ಟೆ ಸುಟ್ಟಪಳ್ (ಲೀಲಾವ. ೨-೬೦) ; ಮತ್ತಮವಱೊಳಗೊಂದು ಜಾತಿ ಜಾಯಿಲಂ ಪೋಗದೆ ನಿಂದು (ಗಿರಿಕ. ೦-೧೦೩ ವ); ಅಂತು ಸೊಕ್ಕಿದಕ್ಕಲಂ ದಕ್ಕದೆ ಬೇಂಟೆಯ ಜಾಯಿಲಂಗಳವಿರ್ಕಡೆಗೆಯ್ದು ಪಾಯ್ದು ಪೋಗುತ್ತಿರೆ (ಹಮ್ಮಿರ. ೪-೪೭ ವ); ಜಾಯಿಲಂಗಳಂ ಕೂಡಿ ನಡೆತಂದು ನೆರೆದರು (ರಾಮಾಶ್ವ. ೮೪-೧).
[ ದೇ.॥ ತೆಲು. ಜಾಗಿಲ ]

**ಜಾಯಿಲ$_2$** (ನಾ). ಜಾತಿಯ ಕುದುರೆ; ಉತ್ತಮವಾದ ಕುದುರೆ: ಜಾಯಿಲಮೊಂದೆರಡೊಂದು ತೋಱೆ ನೆಟ್ಟನೆ ಪದಿನೆಂಟು ಕೋಟಿವರೆಗಂ ತಳರ್ದತ್ತು ತುರಂಗಸಾಧನಂ (ಆದಿಪು. ೧೧-೩೧) ; ಆಯೆಡೆಗೆ ನೀರುಣಲ್ಬರೆ ಜಾಯಿಲಂ (ಯಶೋಚ. ೩-೬೫) ; ಆಯುಧಂಗಳ ಬಿಸುಟು ಕರಿರಥ ಜಾಯಿಲಂಗಳನಿಳಿದು ಬದುಕುವುಪಾಯಮೆಂದಸುರಾರಿ ಸಾಱಿದನಂದು ಕೈನೆಗಹಿ (ಕುಮಾರವ್ಯಾ. ೧೯-೩೭). 'ಜವಾಯಿಲ', 'ಜಾತ್ಯಶ್ವ' ಪರಾ. [ ? ]

**ಜಾಯು** (ನಾ). ಔಷಧಿ; ಮದ್ದು: "ಭೇಷಜಮೌಷಧಮಗದಂ ಭೇಷಜ್ಯಂ ಜಾಯು ತಂ[ತ್ರ]ಮಂತೇಕಾರ್ಥಂ" (ವಸ್ತುಕೋ. ೬೪-೪೨) : "ಭೈಷಜ್ಯಂ, ಭೇಷಜಂ, ಜಾಯುಃ, ಅಗದಂ, ತಂತ್ರಂ, ಔಷಧಂ–ಈ ೬ ಮದ್ದು" (ಹಲಾಯು. ೦೦೦-೪೫೯). [ಸಂ.]

**ಜಾಯೆ** (ನಾ). ಮಡದಿ ; ಹೆಂಡತಿ ; ಪತ್ನಿ : ಇರ್ದುದೊಂದು ಶುಕಂ ತನ್ನಯ ಜಾಯೆವೆರಸು (ಕಾದಂಪೂ. ೧೩೨) ; ಜೀಯೆನುತ ಹರಿದೈದಿ ರಾಮನ ಜಾಯೆಗೆಱಗಿದ ಕೈಯ ಮುಗಿದು (ಕಾಶಿರಾ. ೪೩-೩); ನಿದ್ದೆ ಬಾರದೆ ಸುಮ್ಮನುರುಳಾಡುವಳು ಜಾಯೆ ಸುಖನಿದ್ರೆಗೈವುದು ಹಳ್ಳಿ (ಗಾಥಾಸ. ೮-೩೦). [ಸಂ. ಜಾಯಾ ]

**ಜಾರ** (ನಾ). ಹಾದರ ಮಾಡುವವನು; ಹಾದರಿಗ; ಮಿಂಡ; ಉಪಪತಿ: "ಉಪಪತಿ ಜಾರಂ" (ವಸ್ತುಕೋ. ೫೬-೨೫) ; "ಹಾದರಿಗನುಪಪತಿ ಜಾರನೆನಿಸಿಕ್ಕು" (ಮಂಗರಾ. ೬೨-೨೨) ; ಜಾರಚೋರವೀರರ ಕಥೆಯಂತೆ ಬಾಯ್ಸವಿಯ ಮಾತುಗಳಂ ಬಱಿಕೆಯ್ವ ಚರ್ಚೆಯಲ್ಲ (ಅನಂಪು. ೧-೩೭) ; ಚೋರನನು ಕಂಟಕನ ಹಿಸುಣನ ಜಾರನನು ಷಂಡನನು . . . ದೂರದಲಿ ವರ್ಜಿಸುವುದು (ಕುಮಾರವ್ಯಾಉ. ೯-೪೭) ; ಸರಿಯೆ ನಿನಗಿವ ಜಾರ ತೆಗೆ (ಕಾಶಿರಾ. ೨-೦೭) ; ತಸ್ಕರ ಜಾರ ವೀರವಿಟ ವೇಶ್ಯಾಕಾವ್ಯಮಂ ಕೇಳ್ದು ಮೆಯ್ ಮಱೆವರ್ ಪುಣ್ಯಪುರಾಣದತ್ತೆಳಸರಯ್ಯೋ (ರತ್ನಾಕ. ೮೭). [ಸಂ.]

**ಜಾರಕರ್ಮಿ** (ನಾ). ಹಾದರಿಗ ; ವ್ಯಭಿಚಾರಿ : ಆ ಇಂದ್ರನೇ ಜಾರಕರ್ಮಿಯಾದನೆಂದು ಹೇಳುವ ಪುರಾಣಗಳು ಹೊರಡುತ್ತವೆ (ಕರ್ಣಾಟ. ೩೭). [ ಸಂ. ಜಾರಕರ್ಮಿನ್ ]

**ಜಾರಜ** (ನಾ). ಜಾರನ ಸಂಬಂಧದಿಂದ ಹುಟ್ಟಿದವನು ; ಹಾದರದಿಂದ ಹುಟ್ಟಿದವನು. [ ಸಂ. ]

**ಜಾರಜಾತ** (ನಾ).=ಜಾರಜ : "ಉಪಪತಿ ಜಾರನವಂಗಱಿಯೆ ಪುಟ್ಟಿದಂ ಜಾರಜಾತನಾತಂ ಕುಂಡಂ" (ವಸ್ತುಕೋ. ೩೭-೨೩); ದುರ್ಜನರ ಜಾರಜಾತರ ವಿಜಾತಿಗಳ್ಗೆ ಯೋಗ್ಯಮಪ್ಪಯೋಗ್ಯಮಂ ಗೆಯ್ದಾರೆಂದು ಪಾರ್ವರ ಸಭೆಯ ನಡುವೆ ನುಡಿದೊಡೆ ವಾಯುಭೂತಿಯುಂ ಮುಳಿದು (ವಡ್ಡಾರಾ. ೮-೧೪). [ ಜಾರ + ಜಾತ ]

**ಜಾರಟೆ** (ನಾ). ಒಂದು ಬಗೆಯ ಹುಳು ; ಕಪ್ಪರಚೆಟ್ಟೆ ; ಬೆಟ್ಟಬೆನಕ (ಉಕ) : ಹೊಸ ಜೀವನವನ್ನು ವೇಗದ ಹೆಜ್ಜೆಗಳನ್ನು ಕಂಡರೆ ನಾವು ಇರುವೆಯಂತೆ ಅಲ್ಲ, ಜಾರಟೆಯಂತೆ . . . ಕಾಲಿಡುತ್ತಿದ್ದೇವಲ್ಲ (ಕನ್ನಡ. I, ೧೩೨). [ ? ]

**ಜಾರಣ** (ನಾ). ಅರಗುವುದು ; ಜೀರ್ಣವಾಗುವುದು. 'ಜಾರಣಂಗೈ' ನೋ. [ ಸಂ. ]

**ಜಾರಣಂಗೈ** (ಕ್ರಿ) ಅರಗಿಸಿಕೊಳ್ಳು ; ಜೀರ್ಣಮಾಡಿಕೊಳ್ಳು : ಎಲ್ಲರ ಭೀತಿಗೊಳಿಸಿ ಬಾಧಿಸುತ ತಿನುವ ಜಾರಣಂಗೈವ ರಾವಣನನುಜ (ಪಂಕಾರಾ. ೨-೩೭-೮). [ ಜಾರಣ + ಕೈ$_1$ (<ಕೆಯ್$_1$) ]

**ಜಾರತನ** (ನಾ). ಹಾದರ; ವ್ಯಭಿಚಾರ : ಜಾರತನದಲಿ ಸುರಪ ಧರಿಸನೆ ಸಾವಿರಾಲಿಗಳ (ಕೌಶಿರಾ. ೦೪-೦೩) ; . ಕೇವಳವು ಸಲೆ ಜಾರತನಗಳ ಕಾವಿಸಿಹರವರವರ ಮಾರ್ಗದ ಭಾವವಲ್ಲದೆಯುರದು ದುರ್ಗುಣ ದೇವರೊಳು ನಿರುತಾ (ಜನನಾ. ೦೦). [ ಜಾರ + – ತನ ]

**ಜಾರತೆ** (ನಾ). = ಜಾರತನ : ಗೋಪೀಕೃಷ್ಣನಿಗೆ ಪುರಾಣದಲ್ಲಿ ಜಾರತೆಯ ಕೋಡು ಮೂಡಿಸಿದ "ಪುಟ್ಟವಿಧವೆ" ಯ ಬಗ್ಗೆ ನಾನೇನು ಹೇಳಲಿ (ನಪೀಗೀ. ೭, ಟಿಪ್ಪಣಿ). [ ಸಂ. ಜಾರತಾ ]

**ಜಾರತ್ವ** (ನಾ). = ಜಾರತನ : ಪತ್ನಿಯ ವಿಷಯದಲ್ಲಿ ಜಾರತ್ವಶಂಕೆಯನ್ನು ಇಟ್ಟುಕೊಂಡು ಹೊಂದತಕ್ಕ ಮನೋವ್ಯಥೆಯು ಅತ್ಯಧಿಕವಾದುದು (ಕವಿಕ. ೩೭). [ ಸಂ. ]

**ಜಾರನಾರಿ** (ನಾ). ಹಾದರ ಮಾಡುವ ಹೆಣ್ಣು : ಇರುಳೊಳ್ ಜಾರನಾರೀ ಕದಂಬಂ (ಜಗವಿ. ४-೨೯). [ ಜಾರ + ನಾರಿ$_2$ ]

**ಜಾರಮುಚಟ್ಟೆ** (ನಾ). ಸೋಮಾರಿತನ; ಔದಾಸೀನ್ಯ; ಆಲಸ್ಯ: ಚೆನ್ನಣ್ಣನ ಹಸ್ತಗುಣ ಒಳ್ಳೇದು. ಅವನು ಜಾರಮುಚಟ್ಟೆಯವನು ಅನ್ನೋದು ಒಂದೇ. (ಜಂಗಾಳ್ಳ. ೦೩೦). [ ? ]

**ಜಾರಲ್ಬು** (ನಾ). ಪತನ ; ಸಾವು (?) : ನೀಂ ಪೊಗಟದೆ × × ಕೆ ಪಡಿವನ್ನ ಮ್ಮಾಡಿದಂ ಪೊಗಟ್ವೆಟಿಗನ ಜಾರಲ್ಬು ಕೀಳ ಪೆಂಜ್ಜೆಟ್ಟಿಲ್ಲಂ ಪೊಗಟಲ್ಕೆ ವೀಱನ ಸಾವು ಕತೆಯಾಗಿ ಪರೆದುದು ಮೂರುವೀಲೋಕದೊಳಗೆಲ್ಲ (ಸೌಇಇ. IX-1, ೩೦-೦೪; ೯೬೦). [ <ಜಾಱು$_1$ ]

**ಜಾರವನಿತೆ** (ನಾ). ಹಾದರ ಮಾಡುವ ಹೆಂಗಸು ; ಹಾದರಗಿತ್ತಿ ; ವ್ಯಭಿಚಾರಿಣಿ : ಮುಗುಳುನಗೆಯುಲಿ ಜಡಿದು ಜಾಱುವ ಜಾರವನಿತೆಯ ಗೊಡವೆಗೊಳಗಾಗದವರುತ್ತಮಪುರುಷರುಗಳು (ಕುಮಾವ್ಯಾಉ. ४-೪೦). [ ಜಾರ + ವನಿತೆ ]

**ಜಾರವೆಣ್** (ನಾ). = ಜಾರವನಿತೆ : ಗಂಡರ ಮನವನೊಲಿಸಿಕೊಂಬುದಿದು ಜಾರವೆಂಡಿರಿಂಗಪ್ಪರಿಯುಲ್ಲ (ಕುಂದಾಸಾಂ. ೨೫-೦೩). [ ಜಾರ + ಪೆಣ್ ]

**ಜಾರಸ್ತ್ರೀ** (ನಾ). = ಜಾರವನಿತೆ : ತಳರ್ದಾತ್ಮಾಲಯದಿಂದಿರುಳ್ ಸುಟ್ಟಿವ ಜಾರಸ್ತ್ರೀಯ ವಕ್ತ್ರೇಂದುವಂ . . . ಕಂಡು (ಜಗವಿ. ४-೨೦) ; ಜಾರಸ್ತ್ರೀಯರ ಕೂಡಿ ಅವರೊಳು ಪೋರಮಾತುಗಳಾಡಿ (ಗಗಚಾ. ೦४-೨). [ ಜಾರ + ಸ್ತ್ರೀ ]

**ಜಾರಿ** (ನಾ). ಆಚರಣೆ; ಅನುಷ್ಠಾನ; ಕಾರ್ಯರೂಪ; ಚಾಲತಿ : ಹಾಲಿ ಯಿನಾಮತ್ತಿಯಲ್ಲು ಜಾರಿಯಿರುವುದು (ಮೈಅರಿ. ೦೯೩४, ೩೨-೯ ; 1812) ; ಆಗಿನ ಕಾಲದಲ್ಲಿ ಜಾರಿಯಲ್ಲಿದ್ದ ಕೆಲವು ಗೌಣ ಸಿದ್ಧಾಂತಗಳನ್ನೆಲ್ಲಾ ವಿಮರ್ಶಿಸಿ ಖಂಡಿಸಿರುವರು (ತತ್ವಪ್ರಾ. ೩೦೩).

ಜಾರಿಗೆ ತರು=ಕಾರ್ಯಗತ ಮಾಡು:ಅದರ ಉಪಬಂಧಗಳನ್ನು ಜಾರಿಗೆ ತರುವುದಕ್ಕಾಗಿ . . . ಅವಶ್ಯವಾಗಬಹುದಾದಂಥ ಉಪಬಂಧಗಳು (ಭಾಧಾನ. ४) ; ವಿಚಾರಣಾ ಸಮಿತಿಯವರು ಕೊಟ್ಟಿರುವ ತೀರ್ಪನ್ನು ಜಾರಿಗೆ ತರಕೂಡದೆಂದು ಈಗಲೇ ಅವರಿಗೆ ಬರೆದು ಕಳುಹಿಸುತ್ತೇನೆ (ಪ್ರಕಾಶ. ६४). ಜಾರಿಮಾಡು = ಜಾರಿಗೆ ತರು : ವಾರಂಟ್ ಜಾರಿಮಾಡೇ ಮಾಡುತ್ತಾನೆ (ಜಂಗೂಳಿ. ೯೦) ; ಆಜ್ಞೆಯನ್ನು ಜಾರಿಮಾಡಕೂಡದು (ದಾಟಕ್. ೩೭४); ಈ ವಾರಂಟು ಕೊರೆಯ ಅಪರಾಧದಿಂದ ಜಾರಿಮಾಡಿದ್ದಾರೆ (ಜಮೀನ್ದಾ. ೦೫೫). ಜಾರೀಭಟಮಾನ್ಯ = (ಈಗಲೂ ಜಾರಿಯಲ್ಲಿರುವ) ಯುದ್ಧದಲ್ಲಿ ಪೌರುಷವನ್ನು ತೋರಿಸಿದ ಯೋಧನಿಗೆ ಕೊಡುವ ದತ್ತಿ,–ಮಾನ್ಯ : ಪುರ್ನಸಾಗರ ಹೋಬಳಿ ವೃಕಿ ಗೊಲ್ಲಹಳಿ ಬಳಿಯ ನವಿಗೆ ನಡಿಯುವ ಜಾರೀಭಟಮಾನ್ಯ ಹೊಲ ಕೊಟ್ಟುಯಿದೆನೆ (ಎಕ. X (8), ಚಿಕ್ಕಬ. ೬೬-೩ : ?). [ ←ಅರ. ಹಿಂ. ಮರಾ. ಜಾರೀ ]

**ಜಾರೀನಾಂ** (ನಾ). ಅಮಲಿನಲ್ಲಿರುವ ಭೂಮಿಯೇ ಮೊದಲಾದ ದತ್ತಿ,–ಇನಾಮತಿ : (ಮೈಗೆಜ. IV, ೬೬३). [ ಜಾರಿ + ಇನಾಂ ]

**ಜಾರೀನಾಂತಿ, ಜಾರೀನಾಮತಿ, ಜಾರಿಯಿನಾಮಂತಿ, ಜಾರಿಯಿನಾಮತ್ತಿ** (ನಾ). ಜಾರಿಯಲ್ಲಿರುವ (ಕಂದಾಯವಿಲ್ಲದಂತೆ) ಮಾನ್ಯವಾಗಿ ಕೊಟ್ಟಿರುವ ಜಮೀನು,–ದತ್ತಿ: (ಕೃಸ್‌ಗೆ.II,೩೫೦). ಜಾರೀನಾಮತಿ: (ಮೈಗೆಜ. IV, ೬೬३). ಜಾರಿಯಿನಾಮಂತಿ : ಜಾರಿಯನಾಮತಿ ಸದರಿ ತಪಶೀಲ ಮೇರಿಗೆ (ಮೈಅರಿ. ೦೯೩೯, ೭३-೭೫; 1825). ಜಾರಿಯಿನಾಮತ್ತಿ : ಜಾರಿಯನಾಮತ್ತಿ ೨೪ (ಮೈಅರಿ. ೦೯३೯, ೭३-೬೦ : 1825). [ ಜಾರಿ + ಇನಾಂತಿ ]

**ಜಾರೀನಾಮತಿ** 'ಜಾರೀನಾಂತಿ' ನೋ.

**ಜಾರಿಕೆ** (ನಾ). ೧. ಕೆಳಗೆ ಸುರಿಸುವ ಗುಣ,–ಬೀಳಿಸುವ ಗುಣ; ಜಾರುವುದು : "ವಿಷಣಂ, ವಿಷಣೀಯುಂ–ಈ ೨ ಜಾರಿಕೆ" (ಕಾಶಕ್ಕ. ೧३೦) ; ದಡದಲ್ಲಿ ಜಾರಿಕೆ ಇದ್ದದ್ದರಿಂದ . . . ಕೆಸರಲ್ಲಿ ಬಿದ್ದುಬಿಟ್ಟನು (ಇಪ್ಪಕ. ೫೫). ೨. ನುಣುಚಿಕೊಳ್ಳುವುದು ; ತಪ್ಪಿಸಿಕೊಳ್ಳುವುದು : ರೋಹಿಣಿ ಜಾರಿಕೆಯ ಉತ್ತರ ಕೊಟ್ಟಳು (ರಂಗರೋ. ೨೮) ; ಬೌದ್ಧಿಕತೆಯು ಆ ಎಲ್ಲಗಳ ಮೇಲಿಂದ ಒಂದು ಪ್ರಕಾರದ ಅನಿರೀಕ್ಷಿತವಾದ ಜಾರಿಕೆಯನ್ನು ಸಾಗಿಸಿರುವುದು (ಪ್ರಬಂಧ. ೧३४). [ ಜಾರು$_2$ (<ಜಾಱು$_2$) + – ಇಕೆ ]

**ಜಾರಿಗೆ** (ನಾ). ಹುಳಿಹಣ್ಣು ಬಿಡುವ ಒಂದು ಬಗೆಯ ಮರ : (ಪ). [ ←ತುಳು. ಜಾರೆ ]

**ಜಾರಿಣಿ** (ನಾ) = ಜಾರವನಿತೆ : ಮುನ್ನ ತಾ ಜಾರಿಣಿಯಾಗಿ ಕುಲಧರ್ಮವನೀಗಿ (ಕರ್ಣಾಕಿ. ೩೯); ಜಾರಿಣಿ ಸಂಕೇತಸ್ಥಾನಕ್ಕೆ ಹೋಗುವಂತೆ ಹೊರಟೇ ಬಿಡುತ್ತೇನೆ (ಭಾರದ. ೨೫). [ ಸಂ. ಜಾರಿಣೀ ]

**ಜಾರಿಯಿನಾಮತಿ** 'ಜಾರೀನಾಂತಿ' ನೋ.

**ಜಾರಿಯಿನಾಮತ್ತಿ** 'ಜಾರೀನಾಂತಿ' ನೋ.

**ಜಾರಿಸು** 'ಜಾಱಿಸು' ನೋ.

**ಜಾರು$_1$** 'ಜಾಱು$_1$' ನೋ.

**ಜಾರು$_2$** 'ಜಾಬು$_2$' ನೋ.

**ಜಾರು$_3$** (ನಾ). ಕಣ್ಣಿನ ಕೊಳೆ ; ಪಿಚ್ಚು ; ಪಿಸುರು : ಕಿವಿಯಲ್ಲಿ ಗುಗ್ಗೆ ಕಣ್ಣಿನಲ್ಲಿ ಜಾರು ಮೂಗಿನಲ್ಲಿ ಸುರಿವ ಸಿಬುಳು ಸಿಂಬಳ (ಸಿದ್ಧೇವ. ೩೦-೧೪೨) ; ಒಂದು ದಿವಸ ಬಿಸಿಲೊಳು ಪೋಗಿ . . . ಮಿಗೆ ಮಲವುಣ್ಣಲಾ ಕಣ್ಣಿಂದ ಸುರಿವ ಜಾರಿನಿಂದ (ನೇಮಿಷಂ. ೭-೧೦೨). [ ? ]

**ಜಾರುಕವಾಟ** (ನಾ). "ಅಡ್ಡಲಾಗಿ ಸರಿದು ಕಂಡಿಯನ್ನು ಮುಚ್ಚುವ ಅಥವಾ ತೆರೆಯುವ ಕವಾಟ" (Slide-valve. ಇಂಳಸಿ) : ಉಗಿಯನ್ನು ಕೋಶದೊಳಕ್ಕೆ ಪ್ರವೇಶಿಸಲು ಬಿಡುವ ದ್ವಾರಗಳನ್ನು ಮುಚ್ಚಿ ತೆರೆಯುವ ಕೆಲಸ ಜಾರುಕವಾಟದ್ದಾಗಿರುತ್ತದೆ (ವಿಜ್ಞಾವಿ. ೪೮).
[ ಜಾರು$_1$ (<ಜಾಬು$_1$) + ಕವಾಟ ]

**ಜಾರುಗಣ್ಣು** (ನಾ). ಪಿಸುರು ತುಂಬಿರುವ ಕಣ್ಣು ; ಕೊಳೆಯಿಂದ ಕೂಡಿರುವ ಕಣ್ಣು ; ಪಿಚ್ಚುಗಣ್ಣು : ಕರಕಷ್ಟ ಜಾರುಗಣ್ಣಂ ಜಲಜದಳ ವೆಂಬರೆಲೆ ಗುರುವೆ ಕವಿಗಿವಿಗಳು (ಷತಿಲ. ೩-೩೪) ; ಕಾವುಗಣ್ಣು, ಉಷ್ಣ ಗಣ್ಣು, ನೀರುಗಣ್ಣು, ಜಾರುಗಣ್ಣು, ಸಂಜೆಗಣ್ಣು (ಶುಕಸ. ೩೨೮).
[ ಜಾರು$_3$ + ಕಣ್ಣು (<ಕಣ್) ]

**ಜಾರುಗಲ್ಲು** 'ಜಾಬುಂಗಲ್' ನೋ.

**ಜಾರುಗಾಡಿ** (ನಾ). ಹಿಮಾವೃತವಾದ ಸ್ಥಳಗಳಲ್ಲಿ ಜಾರಿಕೊಂಡು ಹೋಗುವ, ಚಕ್ರವಿಲ್ಲದ ಬಂಡಿ ; ಜಾರುಬಂಡಿ : ಹಳ್ಳಿಯೊಂದಕ್ಕೆ ಹೋಗುವ ಸಲುವಾಗಿ ಜಾರುಗಾಡಿಯೊಂದನ್ನು ಬಾಡಿಗೆಗೆ ತೆಗೆದುಕೊಂಡು ದಾರಿ ಅವನು ತಿಳಿಸಿದನು (ಪುನರು. ೩೦೮).
[ ಜಾರು$_1$ (<ಜಾಬು$_1$) + ಗಾಡಿ$_3$ ]

**ಜಾರುಗುಂಡಿ** (ನಾ). ಒಂದು ಬಗೆಯ ಮಕ್ಕಳಾಟ; ಇಳಿಜಾರು ಕಲ ಮೇಲೆ ತೆವಳುತ್ತಾ ಜಾರುವ ಆಟ : ಕೆರೆಯ ಒಡ್ಡಿನ ಮೇಲೆ ಕುಳಿತು ಜಾರುಗುಂಡಿ ಆಡುವರು (ಅಲ್ಪವಿ. ೧೦೨) ; ಜಾರುಗುಂಡಿ ಆಡುವ ಮಕ್ಕಳಂತೆ ನುಸುಳಿಕೊಂಡು ಕೆಳಗೆ ಹೋದಂತೆ ಸೊಗಸು ಹೆಚ್ಚು (ಗಾಳಿಪ. ೩೮).
[ ಜಾರು$_1$ (<ಜಾಬು$_1$) + ಕುಂಡಿ$_1$ (<ಕುಂಡೆ$_1$) ]

**ಜಾರುಗುಪ್ಪೆ** (ನಾ). ೧. ಮಕ್ಕಳ ಆಟಕ್ಕಾಗಿ ಕಟ್ಟಿರುವ ಜಾರುಬಂಡೆ : ಪುಷ್ಪಶರನ ಕಾಂತೆ ನಲಿದಾಡುವ ಜಾರುಗುಪ್ಪೆಯಂದದಲಿ ರಂಜಿಸುತ ಒಪ್ಪುವ ಪೊಜವಾಜಿ ನೀಜಿನ ಕರೆ ಬಿಗಿಯಪ್ಪಿಕೊಂಬೆನು (ಕಂಪನವಿ. ೯-೧೦೮) ; ಕಾಮನ ಬಿಲ್ಲಿನ ಜಾರುಗುಪ್ಪೆಯೊಳು ಜಾರುತ ಬಂದಳು ಮುಗಿಲಿಂದ (ಅಹಲ್ಯ. ೪-೧೧). ೨. ಜಾರುಬಂಡೆಯ ಆಟ : ಜಾರುಗುಪ್ಪೆ ಆಡುವುದು, ಓಡುವುದು–ಇವೇ ಮುಂತಾದವುಗಳನ್ನು ಮಾಡಲು ಪ್ರೋತ್ಸಾಹಿಸಬೇಕು (ಶಿಕ್ಷಣ. ೧೦೮). [ ಜಾರು$_1$ (<ಜಾಬು$_1$) + ಕುಪ್ಪೆ$_1$ ]

**ಜಾರುಗೊರಡು** (ನಾ). "ಭಾರವಸ್ತುಗಳನ್ನು ಸಾಗಿಸಲು ಉಪಯೋಗಿಸುವ ಉರುಳೆ" (Runner. ಇಂಳಸಿ).
[ ಜಾರು$_1$ (<ಜಾಬು$_1$) + ಕೊರಡು$_1$ (<ಕೊಱಡು) ]

**ಜಾರುದಾರಿ** (ನಾ). ಹೆಜ್ಜೆಯ ಹಿಡಿತ ತಪ್ಪಿಸುವ ಹಾದಿ : ಮೊದಲ ಮಳೆಗಾಲ, ಬೆಟ್ಟದ ಜಾರುದಾರಿಯಲ್ಲಿ ಹೋಗುವುದು ಕಷ್ಟ (ರೂಢಿ). ೨. (ಅಲಂ) ಅಪಾಯಗಳನ್ನುಳ್ಳ ವ್ಯವಹಾರಮಾರ್ಗ : ಆದರೆ ಈ ದಾರಿ ಜಾರುದಾರಿ ಎಂಬ ಎಚ್ಚರು ಮಾತ್ರ ಬೇಕು (ತವನಿ. ೨೯).
[ ಜಾರು$_1$ (<ಜಾಬು$_1$) + ದಾರಿ ]

**ಜಾರುನಡಿಗೆ** (ನಾ). ಕುದುರೆಯ ಒಂದು ಬಗೆಯ ನಡಿಗೆ,–ಗತಿ : "ಬಿಗುನಡೆ, ಜಾರುನಡಿಗೆ, ನಿಡುನಡಿಕೆ, ವಲ್ಗಿತಂ, ಪ್ಲುತಂ ಈ ನಡಿಕೆಗಳ್ಳೆದೂ ಅಶ್ವಧಾರೆಗಳು" (ಸಿದ್ಧಾಂತಿ. ೩೦೩).
[ ಜಾರು$_1$ (<ಜಾಬು$_1$) + ನಡಿಗೆ$_1$ (<ನಡಗೆ) ].

**ಜಾರುಬಂಡಿ** (ನಾ). =ಜಾರುಗಾಡಿ : ಜಾರುಬಂಡಿಗಳ ಪಂಕ್ತಿ . . . ಗಿಡ್ಡನೆಯ ಫರ್‌ಮರಗಳ ನಡುವೆ ಬಿರುಬಿರನೆ ಉರುಳುತ್ತಿದೆ (ಪುನರು. ೨೨೦).
[ ಜಾರು$_1$ (<ಜಾಬು$_1$) + ಬಂಡಿ ]

**ಜಾರುಬಂಡೆ** (ನಾ). =ಜಾರುಗುಪ್ಪೆ ೧ : ಜಾರು ಬಂಡೆಯ ಮೇಲೆ ಕುಳಿತು ಜಾರಿದೆ (ನಲಮು. ೬೪-೩). [ ಜಾರು$_1$ (<ಜಾಬು$_1$) + ಬಂಡೆ ]

**ಜಾರುಮೆಟ್ಟು** (ನಾ). ಹಿಮದ ಮೇಲೆ ಜಾರಿಕೊಂಡು ಹೋಗುವಾಗ ಹಾಕಿಕೊಳ್ಳುವ ಪಾದರಕ್ಷೆ : ನೀರ್ಗಲ್ಲ ಮೇಲೆ ಜಾರುಮೆಟ್ಟುಗಳಿಲ್ಲದೆ ಓಡಿ ಬಂದು ಎರಡೂ ಕಾಲುಗಳ ಮೇಲೆ ಜಾರಿಕೊಂಡು ಹೋಗು (Slide. ಇಂಳಸಿ). [ ಜಾರು$_1$ (<ಜಾಬು$_1$) + ಮೆಟ್ಟು$_2$ ]

**ಜಾರುಹೊಡೆತ** (ನಾ). ೧. ಜಾರಿ ಬೀಳುವ ಏಟು. ೨. "(ಕ್ರಿಕೆಟ್) ಓರೆಯಾಗಿ ತಗಲುವಂತೆ ದಾಂಡನ್ನು ಓಲಿಸಿ ಹೊಡೆದ ಹೊಡೆತ" (Glance. ಇಂಳಸಿ). [ ಜಾರು$_1$ (<ಜಾಬು$_1$) + ಹೊಡೆತ (<ಪೊಡೆತ) ]

**ಜಾರೂಲ** (ನಾ). ಒಂದು ಬಗೆಯ ಮರ : ಜಾರೂಲ, ಮುತ್ತುಗ, ಗಜನಿಂಬೆಗಳಲ್ಲಿ ಸ್ಪರ್ಧೆ ನಡೆಯುತ್ತಿದೆ (ನಿಬಂಧ. II, ೧೬೩). [ ? ]

**ಜಾರೆ$_1$** (ನಾ). = ಜಾರವನಿತೆ : "ಪುಂಶ್ಚಲೀ . . . ಸ್ವೈರಿಣೀ, ಪಾಂಸುಲಾ, ಜಾರಾ–ಈ ೯ ಜಾರೆಯ ಪೆಸರು" (ನಾಚಿರಾ. ೧೧೭) ; ಬೆದೆಗಾರ್ತಿಯು ಪಾಣ್ಬೆಯೆನಲು ಜಾರೆಯರಕ್ಕಂ" (ಕವಿಕಂ. ೧೬೮) ; ಜಾರೆಯ ಮಗನಂ ಗಡಿಯು ನಾಯಕನಂ ನಂಬಿಸಿ ಕೊಲ್ವವನಂ (ಧರ್ಮಾಮೃ. ೩-೧೨೩) ; ನಲಿವ ಜಾರೆಯರೊಸರ್ವ ಪಳುಕು ಮೂಡುವ ತಾರೆ . . . ಸಂಜೆಯೊಳೆಸೆದುವು (ಹರಿಕಾ.೩-೬೩) ; ಸೊಗಸು ಬೇಜೊಬ್ಬರಲಿ ನೇಹದ ತಗಹು ಬೇಜೊಬ್ಬರಲಿ ಸತಿಯರ ವಿಗಡತನವಿದು ಸಹಜ ಜಯವಧು ಜಾರೆ ನೋಡೆಂದ (ಕುಮಾ.ಳ. ೨೪-೨೦). [ ಸಂ. ಜಾರಾ ]

**ಜಾರೆ$_2$** 'ಝಾರಿ' ನೋ.

**ಜಾರೇಟು** (ನಾ). ೧.=ಜಾರುಹೊಡೆತ. ೨. "ವೇಗವಾದ ಮತ್ತು ಓರೆಯಾದ ಚಲನೆ, ಹೊಡೆತ, ಓರೆಹೊಡೆತ" (Glance. ಇಂಳಸಿ).
[ ಜಾರು$_2$ (<ಜಾಬು$_2$) + ಏಟು$_2$ ]

**ಜಾರ್ಜೆಟ್** (ನಾ). ನಯವಾದ ರೇಷ್ಮೆಯ ತೆಳುಬಟ್ಟೆ : ಸ್ಯಾಟೀನ್, ಜಾರ್ಜೆಟ್‌ಗಳನ್ನು ಈ ನೇಯ್ಗೆಯನ್ನುಪಯೋಗಿಸಿ ತಯಾರು ಮಾಡುವರು (ಗೃಹವಿ. ೬೪) : ನಿಮ್ಮಣ್ಣಯ್ಯ ನಿನಗೆ ಒಂದು ಮೈಸೂರು ಜಾರ್ಜೆಟ್ ಸೀರೇನೂ ಉಡುಗೊರೆಯಾಗಿ ಕಳುಹಿಸಿದ್ದಾನೆ (ನಿಶಿಉ. ೭).
[ ←ಇಂ. Georgette ]

**ಜಾರ್ರುಮರ** (ನಾ). ಒಂದು ಬಗೆಯ ಮರ : (ವೃಕ್ಷಣಿ. ೩೩-೬೯೬).
[ ? + ಮರ$_1$ ]

**ಜಾಲ$_1$, ಜಾಳ$_2$** (ನಾ). ೧. ಮೃಗಪಕ್ಷಿಗಳನ್ನು ಹಿಡಿಯಲು ಉಪಯೋಗಿಸುವ ನೂಲು ಅಥವಾ ಹುರಿಯಿಂದ ಮಾಡಿದ ಸಣ್ಣ ಸಣ್ಣ ಕಂಡಿಗಳುಳ್ಳ ಒಂದು ಬಗೆಯ ಸಾಧನ; ಬಲೆ : ಒಂದು ದಿವಸಮಾ ವಿಪಾನ ನೊರ್ವ ಜಾಲಗಾಱಂ ಜಾಲದೊಳ್ಪಿಡಿದು (ಪಂಚತಾ. ೧-೬೮ ವ) ; ಮತ್ತ ಸಿಂಗಕ್ಕೆ ತನ್ನ ಕೇಸರಮೆ ಜಾಲಮಾಗಿ ಪರಿಣಮಿಸೆ (ರಾಮಾಶ್ವ. ೪೨-೨೩) ; ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ (ನಾದರೀ. ೮೪-೯). ೨. ಹೆಣೆದು ಮಾಡಿರುವ ಸರಪಳಿಯ ಕವಚ,–ಅಂಗಿ ; ಚಿಲಖತ್ತು. ೩. ಕಿಂಡಿ; ಕಿಟಕಿ; ಜಾಲಂದ್ರ; ಗವಾಕ್ಷ. ೪. ಕಪಟ; ಮೋಸ; ಸುಳ್ಳು; ಕಣ್ಕಟ್ಟು : ಬಾಲೆಯರ ಜಾಲಕೊಳಬೀಳದಾ ಜ್ಞಾನಿ ಶೂಲಿಯಂತಕ್ಕು (ಸರ್ವಜ್ಞ. ४००) ; ಎಷ್ಟೋ ಸದ್ಗುಣಿಗಳು ಅವರ ಜಾಲದಲ್ಲಿ ಸಿಲುಕಿ ತಮ್ಮ ಶೀಲವನ್ನು ಮಾರಿಕೊಂಡಿರುವರು (ತೂಲಮಿ. ೨೦೯). ೫. ಗರ್ವ ; ಕೊಬ್ಬು ; ಹಮ್ಮು ; ಅಹಂಕಾರ. ೬. ಮೊತ್ತ ; ರಾಶಿ ; ಗುಂಪು : ದರಹಾಸಾಮೃತವಾರಿ ಮಜ್ಜನಜಲಂ ದೇಹಪ್ರಭಾ

ಜಾಲಮಂಬರಶೋಭಾವಹಂ (ಅಜಿಪು. ೨-೪೩); ಕರೆಕರೆ ಸಮಸ್ತ ಬೇಂಟೆಯ ಶಬರಜಾಲವಂ (ಹಚಶಾ. ೫-೧) ; ಗಾನವ ಮಾಡೆ ಅರಸನತಿ ಮೆಚ್ಚಿ ವನಿತಾ ಜಾಲದೊಳು ಕಾಣೆನೆನುತಂ (ಪ್ರಾಢರಾ. ೧೦-೧೩). ೭. ಒಂದು ಬಗೆಯ ಮರ; ಕದಂಬವೃಕ್ಷ: ಆಲಂ ಜಾಲ[ಪಾಠಾಂ. ತಿ,ಲಿ]ಬೇಲಂ ಬಿಳಲರಳಿಯೆರಂ ಕಕ್ಕೆ ಹೂರಂ ಬೆಳಲ್ (ಗಿರಿಕ. ೦-೬೨) ; ನರುಗುಪ್ಪ ನೆಳಲಾಂತ ಜಾಲ ದಿಂದಾಲದಿಂದೆ (ರಾಘಚ. ೧೮-೫೪) ; ಅತ್ತಿಯಾಲವು ಜಾಲ ಹಾಲೆ ತಾಳೆ ಬಾಳೆ . . . ಮುಂತಾದ ಹೆಮ್ಮರಗಳು (ಸಾಗಂಪ. ೨೩೪). ೮. ಹಂಚಿಕೆ; ಉಪಾಯ: ಇದೇ ಸಮಯವೆಂದು ನಾನು ಒಂದು ಹೊಸ ಜಾಲವನ್ನು ಪಸರಿಸಿದ್ದೇನೆ (ಪ್ರಕಾಶ. ೫೧). ೯. (ಜಾಲರಿಯಂತೆ) ಓತಪ್ರೋತವಾಗಿರುವುದು; ಹಾಸುಹೊಕ್ಕಾಗಿ ಕೂಡಿರುವುದು: ಸತ್ಯವಿಗಳಲ್ಲಿ ರುಷಿಗಳಲ್ಲಿ ಪಾತಿವ್ರತಾಂಗನೆಯರಲಿ ವಿಷ್ಣು ಜಾಲನಾಗಿರ್ದು (ಲಕ್ಷ್ಮಿಭಾ. ೫-೨-೩೫). ೧೦. ಗೋವುಗಳ ಗುಂಪು. ೧೧. ಮುಚ್ಚಳ; ಪಟಲ. ೧೨. ಹೂವಿನ ಮೊಗ್ಗು. ೧೩. ಒಡವೆ; ಆಭರಣ. ೧೪. ಇಂದ್ರಿಯ. ೧೫. ಆಕಾಶ: "ಆಕಾಶಂ ಬಲೆ ಪಟಲಂ ಪೋಕಂ ಶೃಂಗಾರ ಗೋವುಸಭೆಯೋಳಕ್ಕುಂ ತಾಕಿರೆ ಜಾಲಾಹ್ವಯ ಸಲೆ" (ನಾನಾಕಂ. ೬೬); "ಇಂದ್ರಿಯದೊಳಾಗಸದೊಳ್ಬಲೆಯೊಳ್ ಸಮೂಹದೊಳ್ ಸಿಂಗರ ಗೋನಿಕಾಯ ಪಟಲಂಗಳೊಳಿಂತವು ಜಾಲವಾಚಕಂ" (ನಾನಾರ. ೩೫); ೧೬. ಒಂದು ಬಗೆಯ ಕಣ್ಣಿನ ರೋಗ. 'ಜಾಲಪಟಲ' ಪರಾ. ಜಾಳ$_{2}$: ೧. ಪಾಸಿದ ನಿರ್ಮಳ ಜಾಳವೆಂದು ಪಾಲ್ದನೆಗಳ ದೆಸೆಗಂ ಸಾರವಂಜಿ ಕೆಲವರಗಿಳಿಗಳ್ (ಪುಷ್ಪಪು. ೨-೦೮); ಅರ್ಧೇಂದು ಸಮ್ಮೇಳಕ್ಕೆ ಬರುವ ತಾರಕೆಯ ಜಾಳವೆಂಬಂತೆ (ಮೋಹತ. ೨೩-೩೧). ೨. ಮೇಲೆ ಮಣಿ ಪೊಕ್ಕವನ ದೃಢದಲಿ ಜಾಳ ಬಗೆಯಲಿ ನಂಬಿ ಮಣಿವೊಗು ಪಾಲಿಸುವ ತಿರುವೇಂಕಟೇಶನ ಚಕ್ರದುರುಬೆಯನು (ಕೋಗಘು. ೬-೨೩). ೬. ಇಬಾಂಕಿ ನಿಟಿಯಂ ಲುಳಿತಾಳಕ ಜಾಳತುಂ ಕೊಡಂಕೆಗೆ ತೆಗೆದು (ಕಾದಂಪೂ. ೬೧)

[ ಸಂ. ]

ಜಾಲ$_{2}$ 'ಜಲ$_{3}$' ನೋ.

ಜಾಲಂದರ, ಜಾಳಂದರ, ಜಾಳಾಂದರ, ಜಾಳಾಂದ್ರ, ಜಾಳಾಂಧರ (ನಾ). ೧. ಬಲೆಯಂತೆ ಕಿಂಡಿಗಳನ್ನು ಉಳ್ಳ ರಚನೆ; ಕಿಂಡಿಗಳ ಚೌಕಟ್ಟು: ಮುತ್ತಿನ ಮಲಕಿನ ಜಾಲಂದರದ ಗವಾಕ್ಷದೊಳ್ ಮೆಲ್ಲಮೆಲ್ಲನೆ ನೋಡುತ್ತ (ಸಾಗಂಧಿ. ೩೩೯-೬); ಕಿಟಕಿಯ ಜಾಲಂದರಗಳ ಮೂಲಕ ಕಾಣುತ್ತಿದ್ದ ಪ್ರದೇಶಗಳಲ್ಲಿ ದೃಷ್ಟಿಯಿಟ್ಟು ಸ್ವಲ್ಪಕಾಲ ತನ್ನಲ್ಲೇ ಲೋಚನೆ ಮಾಡುತ್ತಾ ಕುಳಿತಿದ್ದಳು (ಛಾರವೀ. ೩೦). ಜಾಳಂದರ: ೧. ಜಾಳಂದರದ ಬಾಗಿಲುಗಳಿಂದ ಬರುವ ಕೆಂಪಿನ ರತ್ನದ ಬೆಳಕಿಗೆ ಬಿಸಿಲೆಂದು ಕೈಮಣಿಯ ಮಾಡಿಕೊಳುತಲಿದ್ದ (ವಠಶಾ. ೫೧). ೨. ಕಿಟಕಿ; ಗವಾಕ್ಷ: ಕಾಳಮೇಘ ಮಂದಿರದ ಜಾಳಂದರದ ಮನೆಯಲ್ಲಿ ಪೊಬ್ಬ ಸೂಳೆಯ ಬಾಗಿಲಲ್ಲಿ (ಕಲ್ಯಾಶಾಂ. ೦೦೮-೧೬). ಜಾಳಾಂದರ: ೨. ಚಮರನಾಡಿಸುವ ಕತದಿಂದ ಬಂದು ಜಾಳಾಂದರದ ಪೊಜಿಗೆ ತನುಲತೆಯನ್ನೆದೆ ತೆಂಗಾಳಿಗೊಡ್ಡುವ ಕೋಮಲಾಂಗಿಯರನು (ಹಚಶಾ. ೪-೩೯ ವಠಿ) ; ಕರುಮಾಡದಿ ಖಂಡರಿಸಿದ ಜಾಳಾಂದರದೊಳು ರಾಜಾಂಗನೆಯರು ತರಹರಿಸದೆ ಬಂದು ನೋಡಿದರಂದು (ಕುರಾಸಾಂ. ೪೦-೬೩). ೩. ತೂತಂತೂತಾಗುವುದು: ವೀರದಧಿ ಮುಖನುರವನೊಂದಂಬಿಂದ ಜಾಳಾಂದರವ ಮಾಡಿದನು (ಕೌಶಿರಾ. ೩೨-೩೬). ಜಾಳಾಂದ್ರ: ೨. "ಜಾಳಾಂದ್ರ (ಜಾಳಂದ್ರ) – ಜಾಲಂಧರ=ತೂತುಗಳುಳ್ಳ ಕಿಟಕಿ; ಕಿಂಡಿ" (ಶಬ್ದಕೋ. ೫೧); ಬಳಸಿಕೊಂಡಿಹ ರತ್ನ ಜಾಳಾಂದ್ರ ಭಿತ್ತಿಯೊಳೊಳವಟ್ಟು ಮೋಹವ ಬೀರ್ವ ವಿಲಸಿತ ಪ್ರತಿಮೆಗಳಿಂದಾಗ ಸೌಂದರ್ಯನಿಳಯ ರಾಜಿಸಿದುದು (ಕಂನವಿ. ೬-೪೦); ಇಂಪುಗರೆವ ಇಂದುವಿನ ಕಿರಣ ಜಾಳಾಂದ್ರದಿಂದ ಸುರಿಯೆ (ಪೋಘದೂ. ೨೫). ೪. ಒಂದು ದೇಶದ ಹೆಸರು; ತ್ರಿಗರ್ತ: ಜಾಳಾಂದ್ರ ದೇಶದ ಅರಸು ಆನೆಯನೇಱಿ (ಸರ್ವವ. ೨೦೫-೯೩೦). ಜಾಳಾಂಧರ: ೨. ಸುಪುತ್ರ ಮಾಕಯ್ಯನು ಮಾಡಿಸಿದ ದೇವರ ಪೀಠ ಜಾಳಾಂಧರ, ದಾರವಂದ (ಎಕ. XII, ಚಿಕ್ಕನಾ. ೨೫-೬ ; 1312).

[ <ಸಂ. ಜಾಲಂಧರ ]

ಜಾಲಂದ್ರ, ಜಾಳಂದ್ರ (ನಾ). =ಜಾಲಂಧ್ರ: ಸುರಿವ ಕಂಬನಿಗಳಲಿ ಬಾಹುಕ ಮಱುಗುತಿರಲಂದು ಮಣಿಯ ಜಾಲಂದ್ರದಲಿ ಕಂಡಳು ತರುಣಿ (ನಳಚ. ೮-೪೯) ; ಈ ದೇವಾಲಯದ ಜಾಲಂದ್ರಕ್ಕೆ ಸೇರಿರುವ ಗೋಡೆಯ ಮೇಲೆ ವಿಷ್ಣುವರ್ಧನನ ದರ್ಬಾರನ್ನು ಕೆತ್ತಿದೆ (ಛಾರಚ. ೫೦೪). ಇವುಗಳ ಮೇಲೆ ದೊಡ್ಡ ವಿಗ್ರಹಗಳೂ ಜಾಲಂದ್ರಗಳೂ ಇವೆ (ಹೊಯ್ಸವಾ. ೧೬). ಜಾಳಂದ್ರ. 'ಜಾಳಂದ್ರಗೆಯ್' ಪರಾ. [<ಸಂ. ಜಾಲಂಧ್ರ]

ಜಾಲಂಧರ, ಜಾಳಂಧರ (ನಾ). ೧.=ಜಾಲಂಧ್ರ. ೨. ಒಂದು ದೇಶದ ಹೆಸರು; ಭರತಖಂಡದ ವಾಯುವ್ಯ ಪ್ರಾಂತ; ತ್ರಿಗರ್ತದೇಶ. ೩. ತ್ರಿಗರ್ತದೇಶಕ್ಕೆ ಸಂಬಂಧಿಸಿದುದು. ೪. [ಯೋಗ] ಒಂದು ಬಗೆಯ ಬಂಧ. 'ಜಾಲಂಧರಬಂಧ' ಪರಾ. ಜಾಳಂಧರ: ೩. ಕಾಂಬೋಜ ಜಾಳಂಧರು ತುರಗಂ ಮೂಡಣ ಕೊಂಗ ಕೋಶಲ ವರಾಳಂ ಬರ್ಬರಂ (ಅಶ್ವಶಾ. ೬-೬೬). [ ಸಂ. ]

ಜಾಲಂಧರಬಂಧ (ನಾ). [ಯೋಗ] ಹಠಯೋಗದ ಒಂದು ಬಂಧ: ಕಂಠಸ್ಥಾನದ ಬಂಧಗಳ ಸಂಕೋಚವನೆಸಗಿ ತನ್ನ ಚುಬುಕವನಿಳುಹಿ ಹೃದಯ ತಾಣದೊಳಗಿಟ್ಟು ಚಲಿಸದಿರಲು ಜಾಲಂಧರಬಂಧ (ಶಿವಲ್ಯ. ೫-೧೫-೩) ; ಆದರೆ ಪೂರಕವಾದ ನಂತರ ಜಾಲಂಧರಬಂಧವನ್ನೂ ಮಾಡಬೇಕು (ಛಾರದ. ೧೬೧). [ ಜಾಲಂಧರ + ಬಂಧ ]

ಜಾಲಂಧ್ರ (ನಾ). ಬಲೆಯಂತೆ ಕಂಡಿಗಳನ್ನು ಒಳಗೊಂಡಿರುವ ಕಿಟಕಿ,– ಗವಾಕ್ಷ: "ಜಾಲಂಧ್ರಂ ಬೆಳಕಿಂಡಿ" (ಕಾಶಕ್ಕ. ೧೪೬) ; ನೋಡುತಿರ್ದರು ಪುರಜನರು ನೆಲೆಮಾಡದುಪ್ಪರಿಗೆಯಲಿ ಮಿಗೆ ಕರುಮಾಡದೆಡೆಯಲಿ ಸೌಧಗಳ ಜಾಲಂಧ್ರಶಿಖರದಲಿ (ನಳಚ. ೯-೬೧). [ ಸಂ. ]

ಜಾಲಕ, ಜಾಳಕ (ನಾ). ೧. ಬಲೆ; ಹೆಣಿಕೆ: ಬಿಸಿಲೆಲ್ಲಂ ಬಿಸನಾಳಜಾಲಕದಿನಾಗಳ್ಕೂಡೆ ಪೀತರ್ಗೆಂದುದು (ಕಾದಂಬು. ೧೦೩) ; ಕುರುಡು ನಂಬುಗೆಯ ಕುರುಡುವಿಚಾರದ ಜಾಲಕಗಳ ನೀಗಿ (ಚಿಂತನ. ೫೬-೧). ೨. ಕಿಟಕಿ; ಗವಾಕ್ಷ; ಕಂಡಿ: ಕನಕಹರ್ಮ್ಯಂಗಳೆಡೆಯೊಳಾಲೋಕಿಪರು ಕೆಲರು ಜಾಲಕದೆಡೆಗಳೊಳು ಕೆಲರು (ಭಾವಚಿಂ. ೮-೧೫). ೩. ಜೇಡನ ಬಲೆ. ೪. ಮೊಗ್ಗು. ೫. ಗುಂಪು; ಸಮೂಹ: ವಿಚಕಿಲ ನಲಿನೀಜಾಲಕಂ ಜಾಲಕಂ (ಅನಂಪು. ೮-೨೮). ಜಾಳಕ: ೫. ಅಹಿತೋದ್ಯದ್ಬಳ ಜಾಳಕಂ ಕದನದೊಳ್ ಮಾಱಾನ್ತು ತಾಗಲ್ ಮಹಾಮಹಿಮಂ ಸೂಲಿಗೆಗೊಣ್ಡು (ಎಕ. XX, ೧೨-೧೧ ; 1167) ; ಅರ್ಚಿಸಿದಂ ಭೂಪಾಳಂ ನಿರ್ಭರಭಕ್ತಿಯ ಜಾಳಕಮೆನೆ ಮೆಯ್ಯೊಳೊಗೆದ ರೋಮಾಂಚಂಗಳ್ (ಮಲ್ಲಿಪು. ೮-೫). ೨, ೫: ಎಸೆಯಲ್ ಜಾಳಕ ಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾಣಸು . . . ಮಾಡಿಸಿದನೀ ಬಲ್ಲಾಳ ಭೂಪಾಳಕಂ (ಎಕ. V, ಬೇಲೂರು. ೬೨-೨೬೬ ; 1186). ೬. ಒಂದು ಬಗೆಯ ಶಿರೋಭೂಷಣ. ೭. ಮೋಸ; ವಂಚನೆ; ಮಾಯಾವಿತನ. ೨, ೫, ೬, ೭: ಜಾಳಕದರ್ಶನ ವಧುಗಳ ಜಾಳಕವಂ ನೋಡಿ ನಡೆಯೆ ಮುಂದೊಂದೆಡೆಯೊಳ್ ಜಾಳಕ ಜನದೊಳ್ಪೆಣ್ಗಳ ಜಾಳಕಮಂ ನೋಡಿನೋಡಿ ನಡೆದಂ ಭೂಪಂ (ಹಮ್ಮೀರ. ೨-೯೦). ೮. ಅಂಕುರ: ಅನ್ಯೋನ್ಯ ಪ್ರೀತಿ ಬೀಜದಿಂ ಜನಿಸಿದ ನಿರ್ಭರಸ್ವೇದಸಲಿಲಸೇಚನದಿಂ ನಯಂಬಡೆದ ಪುಳಕಜಾಳದಿಂ ಜಾಳಕಮನಪ್ಪುಕೆಯ್ದು (ಜಗವಿ. ೨-೫೨ ವ). ೯. ಬಲೆಯಲ್ಲಿ ಸಿಕ್ಕಿಕೊಂಡವನು: ಅಲ್ಲಿ ರವಿ ನಿತ್ಯದೊಳ್ ಜಾಲಕನು ಗಿಡಮರಗಳೆಲ್ಲ ಮಂಜಿನ ಮೊತ್ತಗಳು (ತುರಂಗ. ೯೫-೨). [ ಸಂ. ]

**ಜಾಲಕಾಱ** 'ಜಾಲಗಾಱ' ನೋ.

**ಜಾಲಗಟ್ಟ** (ನಾ). ಒಂದು ಪ್ರದೇಶದ ಹೆಸರು: ಆಗ್ನೇಯಕ್ಕೆ ಕಲ್ಲಪುಂಜಿಗೆ ತೆಂಕಲು ಲಿಂಗದ ಕಲ್ಲು ನೈರಿತ್ಯಕ್ಕೆ ಕಲ್ಲಗುತ್ತಿ ಪಡುವ ಜಾಲಗಟ್ಟದ ಕೆಱೆಯೋ ಶೀಮೆ (ಕಇ. I, ೧೭-೪೨; 1065). [ ಜಾಲ$_0$ + ಗಟ್ಟ$_1$ ]

**ಜಾಲಗಾತಿ** 'ಜಾಲಗಾರ್ತಿ' ನೋ.

**ಜಾಲಗಾರ$_1$** 'ಜಲಗಾರ$_2$' ನೋ.

**ಜಾಲಗಾರ$_2$** 'ಜಾಲಗಾಱ' ನೋ.

**ಜಾಲಗಾರನಹಕ್ಕಿ** (ನಾ). ಒಂದು ಬಗೆಯ ಹಕ್ಕಿ ; ಬಿಳಿಯ ಬಣ್ಣದ ಎದೆರೋಮವುಳ್ಳ ಮಿಂಗುಲಿಗಹಕ್ಕಿ ; ಮಿಂಚುಳ್ಳಿ : (+). [ ಜಾಲಗಾರ$_2$ (<ಜಾಲಗಾಱ) + ಹಕ್ಕಿ$_1$ (<ಪಕ್ಕಿ$_1$) ]

**ಜಾಲಗಾರ್ತಿ**, ಜಾಲಗಾತಿ (ನಾ). ೧. ಬೆಸ್ತರ ಜಾತಿಯ ಹೆಂಗಸು ; ಅಂಬಿಗಿತ್ತಿ ; ಮೀನುಗಾರ್ತಿ : ಒಗೆದಂ ವ್ಯಾಸಂ ಗಡ ಜಡೆಗಳ್ವೆರಸು' ಜಾ ಲ ಗಾ ರ್ತಿ [ಪಾಠಾಂ. ಱಿತಿ]ಯ ಬಸಿಱೊಳ್ (ಸಮಭಾ. ೧೦-೧೩೦) ; ಸಮಾಸ ಲಕ್ಷಣಕ್ಕೆ — ಜಾಲಗಾರ್ತಿ, ಬಳೆಗಾರ್ತಿ (ಶಮದ. ೨೦೯ ಪ್ರಯೋ). **ಜಾಲಗಾತಿ :** ೨. ಮೋಟಗಾತಿ ; ಮಾಯ, ಮಂತ್ರ ಮಾಡುವ ಹೆಂಗಸು : (+). [ ಜಾಲಗಾಱ + – ತಿ$_1$ (< – ಇತ್ತಿ) ]

**ಜಾಲಗಾಱ**, ಜಲಗರ$_2$, ಜಲಗಾರ$_1$, ಜಲಗಾಱ, ಜಾಲಕಾಱ, ಜಾಲಗಾರ$_2$, ಜಾಲರ (ನಾ). ೧. ಮೀನು ಹಿಡಿಯುವ ವೃತ್ತಿಯನ್ನು ಅವಲಂಬಿಸಿರುವವನು; ಬೆಸ್ತ; ಅಂಬಿಗ: "ಕೈವರ್ತಃ, ದಾಶಃ, ಧೀವರಃ ಈ ಮೂರು ಜಾಲಗಾಱನ ಪೆಸರು " (ನಾಚಿರಾ. ೦೦೦): ಆ ಮೀನನೊರ್ವಂ ಜಾಲಗಾಱಂ ಜಾಲದೊಳ್ ಪಿಡಿದು (ಪಂಪಭಾ. ೦-೬೮ ವ) ; ಅಲ್ಲಿಗೊಂದು ದಿವಸಂ ಜಾಲಗಾಱರ್ ಬಂದು . . . ಜಾಲಮಂ ಬೀಸಿ ಮತ್ಸ್ಯಂಗಳಂ ಪಿಡಿವ ಮೆಂದು (ಪಂಪಶಂ. ೧೩೮-೦೯) ; ಮುಂದೊಪ್ಪುತಿಹ ಮಲ್ಲ ಜಾಲಗಾಱರ ಗೃಹ ಚೆಂದದಿಂದೊಪ್ಪುದುವಾಗ (ಶಂಸವಿ. ೬-೩೪). **ಜಲಗರ$_2$ :** ೧. ಝಷ ನುಂಗಲದನು ಜಲಗರನು ತಂದಿತ್ತಡೆ (ನವಕೋ. ೧೨-೩೦); ℙ ಇದಂ ಛಂದಸ್ಸಿಗಾಗಿ ಬಳಸಿಕೊಂಡ ರೂಪವಿರಬಹುದು. **ಜಲಗಾರ$_1$ :** ಜಲಗಾರರು ಮೀನು ಹಿಡಿಯುತ್ತಿದ್ದರು (ಪೌಲಕ್. ೩೬೦). **ಜಲಗಾಱ :** ೧. ಮಾಣಿಕ ಮೆಯ್ವಣ್ಣದ ಚಾಯಮೀನ ಕಂ ಡಾ ಣಿ ಕಾ ಱಿ ಕೆ ಜಲಗಾಱ ಕ್ಷೋ ೀ ಣೀ ಶ್ವ ರ ನಾ ಸ್ಥಾ ನ ಕೆ ತಂದು ಕೈಗಾಣಿಕೆ ಕೊಟ್ಟ ರಕ್ಕಸಗೆ (ಕೋಹಕ. ೦೦-೩೪) : ವರನಾವೆಯುಲಿ ಜನ ದಾಟಿಪ ಜಲಗಾಱರಿರವ ನಾನೇನ ಬಣ್ಣಿಸುವೆ (ಶಂಸವಿ. ೫-೫೯). **ಜಾಲಕಾಱ :** ೧. ಕೈವರ್ತಕನ ಮನೆಗೆ ಬಂದಂ ಬೇಗಂ ತುಹಿನಗಿರಿನಂದನಾಪತಿ . . . ಜಾಲಕಾಱನಾಗುತಂ (ಹಾಲಾಸ್ಯ. ೪-೯-೪೪). **ಜಾಲಗಾರ$_2$:** ೧. ಮಲ್ಲರು, ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ನಾಜ. ೧೩೭). ೨. ಮೋಸಗಾರ ; ವಂಚಕ ; ಧೂರ್ತ : ನೂಲೆಳೆಯಿಂದ ಕೊರಳನೆ ಕೊಯ್ಯುವ ಜಾಲಗಾರ ಬೇಡ (ಚಿಂತನ. ೫೭-೯) ; ಕಕ್ಕಿ, ನೀನು ಊರಿಗೆ ಹೋಗದಿದ್ದರೆ ನಾನು ಆ ನನ್ನ ಜಾಲಗಾರ ಅಣ್ಣನ ಸಂಗಡ ಹೊರಟು ಬಿಡುವೆ (ಇಷ್ಯಳ. ೨೧೮). **ಜಾಲರ:** ೧. ವ್ಯಾಧನಂತೆ ಜಾಲರನಂತೆ ಹೇಮಚೋರನಂತೆ (ಸರ್ವವ. ೧೦೯-೫೮೩). [ ಜಾಲ$_1$ + – ಕಾಱ ]

**ಜಾಲತನ** (ನಾ). ಮೋಸ ; ವಂಚನೆ ; ಕಪಟ : ಅವಳಾ ಜಾಲತನವಾ ನೋಡುವೆನೂ ಜಾಹ್ನವೀಜನಕಾ (ಶ್ರೀಕೃಪಾ. ೧೦೯). [ ಜಾಲ$_1$ + – ತನ ]

**ಜಾಲತೋರು** (ಕ್ರಿ). ಜಾಲವನ್ನು ತೋರಿಸು ; ಮಾಯೆಯನ್ನು ತೋರಿಸು (?) : ಬಾಲ ನಾನೆಲೆ ನೆಲಜಲದ; ಸಲೆ ಲೀಲೆಯಾಡುವ ಗಗನದಿ ಜಾಲ ತೋರುವೆ ; ಅಡಗಿ ಸಾರುವೆ; ಕಾಲವೆಂಬುದನರಿಯನೈ (ಕಎಪು. ೩೦-೦೨). [ ಜಾಲ$_1$ + ತೋರು (<ತೋಱು) ]

**ಜಾಲದುಪ್ಪ** (ನಾ). ಒಂದು ವಿಧವಾದ ಔಷಧೋಪಯೋಗಿ ದ್ರವ್ಯ : ಕೆಲವು ಜಿನಸಗಳ ಹೆಸರು :– ಲೋಭಾನ ಕಾಚು . . . ಬೇರೋಜಾ (ಜಾಲದುಪ್ಪ), ಪತ್ರಿ (ಮುಂಬವ್ಯಾ. ೧೦೦). [ ? ]

**ಜಾಲಪಟಲ** (ನಾ). ಕಣ್ಣಿನಲ್ಲಿರುವ ಒಂದು ಬಗೆಯ ಪೊರೆ : ನಮ್ಮ ಕಣ್ಣಿನ ಹಿಂಭಾಗದಲ್ಲಿ ರೆಟಿನಾ ಅಥವಾ ಜಾಲಪಟಲವೆಂಬ ನರಗಳಿಂದಾದ ಪೊರೆಯಿದೆ (ಭೌತವಿ. ೦೫೩). [ ಜಾಲ$_1$ + ಪಟಲ$_2$ ]

**ಜಾಲಪಾದ** (ನಾ). ೧. ಈಜಲು ಅನುಕೂಲವಾಗಿ ಬೆರಳುಗಳ ನಡುವೆ ತೆಳುವಾದ ಪೊರೆಯು ಅಂಟಿಕೊಂಡಿರುವ ಕಾಲು : ಬಾತುಕೋಳಿಯಂತೆಯ ಜಾಲಪಾದಗಳಿವೆ (ಒಂದೇಶಾ. ೦೭) ; ಅದರ ಹಿಂಗಾಲುಗಳಲ್ಲಿ ಜಾಲಪಾದವಿದ್ದರೂ ಮುಂಗಾಲಿನ ಉಗುರುಗಳು ಬೇರೆಯಾಗಿ ಕಾಣಿಸುತ್ತಿದ್ದುವು (ಪಾಂಪ್ರ. III, ೦೩೪೬). ೨. ಹಂಸಪಕ್ಷಿ. ೩. ಬಾತುಕೋಳಿ. [ ಜಾಲ$_1$ + ಪಾದ ]

**ಜಾಲಪಾದಿ** (ನಾ). "ಜಾಲಪಾದವುಳ್ಳ (ಪಕ್ಷಿ)" (Palmiped. ಇಂಕನಿ). [ ಸಂ. ಜಾಲಪಾದಿನ್ ]

**ಜಾಲಮಂಗಲ** (ನಾ). ಒಂದು ಊರಿನ ಹೆಸರು : ಇಡಿಗೂರ್ವಿಷಯ ಮಧ್ಯವರ್ತಿನ ಜಾಲಮಂಗಲಂ ನಾಮಧೇಯ ಗ್ರಾಮಂ (ಇಆ. XII, ೧೧೬-೭ ; 813). [ ಜಾಲ$_0$ + ಮಂಗಲ ]

**ಜಾಲರ** 'ಜಾಲಗಾಱ' ನೋ.

**ಜಾಲರಿ** 'ಝಾಲರಿ' ನೋ.

**ಜಾಲರಿತಾಳ** (ನಾ). ಒಂದು ಬಗೆಯ ಕಂಚಿನ ತಾಳ : ಹೋಲಿಯ ರಾತ್ರಿ ಹಿಂದುಸ್ಥಾನಿ ದರವಾನರ ಜಾಲರಿತಾಳದಂತೆ, ಗಾಳಿಯ ಲಯವು ಕ್ರಮವಾಗಿ ದ್ರುತಕ್ಕೆ ಏರುತ್ತ ಬಂತು (ನಿಬಂಧ. II, ೦೮೨). [ ಜಾಲರಿ (<ಝಾಲರ) + ತಾಳ$_1$ (= ತಾಲ) ]

**ಜಾಲರಿಬಟ್ಟೆ** (ನಾ). ಜಾಲರಿಯಂತೆ ರಂಧ್ರಗಳನ್ನು ಒಳಗೊಂಡಿರುವ ಬಟ್ಟೆ: (ಟೋಪಿ, ಮುಖಪರದೆ ಮೊದಲಾದುವುಗಳಿಗೆ ಉಪಯೋಗಿಸುವ) ಒಂದು ಬಗೆಯ ಹತ್ತಿಯ ಜಾಲರಿಬಟ್ಟೆ (Leno. ಇಂಕನಿ). [ ಜಾಲರಿ (<ಝಾಲರಿ) + ಬಟ್ಟೆ$_2$ ]

**ಜಾಲರಿಸೌಟು** (ನಾ). ಎಣ್ಣೆ ತುಪ್ಪಗಳಲ್ಲಿ ಕರಿಯಲು ಉಪಯೋಗಿಸುವ ರಂಧ್ರಗಳನ್ನು ಹೊಂದಿರುವ ಸೌಟು : " ಕನೆ ಮೊದಲಾದುವುಗಳನ್ನು ಬಾಚಿ ತೆಗೆಯುವ ಸೌಟು ; ಗೋರುಸೌಟು, ಜಾಲರಿಸೌಟು" (Skimmer. ಇಂಕನಿ) ; ಅಕ್ರೂರನು ಹುರಿದ ಬೋಂಡಾಗಳನ್ನು ಜಾಲರಿಸೌಟಿನಲ್ಲಿ ಎತ್ತಿ ಎತ್ತಿ ಹಾಕುತ್ತಾ ಇರುವಾಗ (ಸಾಹೇಬ್. ೪) [ ಜಾಲರಿ (<ಝಾಲರಿ) + ಸೌಟು (<ಸಟ್ಟುಟು) ]

**ಜಾಲವಾತಾಯನ** (ನಾ). ತಂತಿಯ ಬಲೆಯುಳ್ಳ ಕಿಡಿಕೆ,–ಗವಾಕ್ಷ ; ಜಾಳಂದರವಿರುವ ಕಿಡಿಕೆ. [ ಜಾಲ$_1$ + ವಾತಾಯನ ]

**ಜಾಲಾಂತರ** (ಗು). "ಕಿಟಕಿಯಿದ್ದಂತೆ ಸಣ್ಣಸಣ್ಣ ರಂಧ್ರಗಳಿರುವ; ಕಣ್ಣುಕಣ್ಣಾದ" (Fenestrate. ಇಂಕನಿ). [ ಜಾಲ$_1$ + ಅಂತರ ]

**ಜಾಲಾಡು** (ಕ್ರಿ). ೧. ಒಂದರಿಯಲ್ಲಿ ಶೋಧಿಸು ; ಜರಡಿಹಿಡಿ : ಬಾನ ಜಾಲಾಡುತ್ತ ತಾರೆಗಳನಳೆವರಿವು (ಮಲೆದೇ. ೪೮-೩). ೨. ಕೊಳೆ ಹೋಗುವಂತೆ ನೀರಿನಲ್ಲಿ ಚೆನ್ನಾಗಿ ಅಲ್ಲಾಡಿಸು ; ಅಲುಬು : ಗಡ್ಡ ತೊಳೆಯುವುದಕ್ಕೆ ಇಲ್ಲಿ ನೀರಿಲ್ಲ. ಅಲ್ಲೇ ಹೋಗಿ ನದಿಯ ಪ್ರವಾಹದಲ್ಲಿ ಜಾಲಾಡಿಕೊಳ್ಳಿ (ಗರುಡಾ. ೫೩). ೩. ಪರೀಕ್ಷಿಸು ; ಒರೆ ಹಚ್ಚು : ಅವನ ಯೋಗ್ಯತೆಯನ್ನು ತಮಗೆ ತೃಪ್ತಿಯಾಗುವಷ್ಟು ಮಟ್ಟಿಗೆ ಜಾಲಾಡಿದರು (ರಾಗಿತ. ೧೨೦). ೪. ತಪ್ಪನ್ನು ತೋರಿಸಿ ಮೂದಲಿಸು; ತರಾಟೆಗೆ ತೆಗೆದುಕೊಳ್ಳು : ಆಕೆ ಜನ್ಮ ಜಾಲಾಡಿ ಬಿಡ್ತೀನೆ (ಚಂದಕೋ. ೦೨೭). 'ಜಾಲಿಸು' ಪರಾ. [ ಜಾಲ$_1$ + ಆಡು$_1$ ]

**ಜಾಲಾದ** (ನಾ). ಒಂದು ಬಗೆಯ ವನಸ್ಪತಿ : ಜಾಲಾರಿ, ಜಾಲಾದ (ವೃಶಿಗಿ. ೬೦-೧೪೩೬). [ ? ]

**ಜಾಲಾರಿ** (ನಾ).=ಜಾಲಾದ : ಜಾಲಾರಿ, ಜಾಲಾದ (ವೃಶಿಗಿ. ೬೦-೧೪೩೬); ವರ ಪಾರಿಜಾತ ಬಂಧೂಕ ತಾವರೆಯು ಚಂದ ಜಾಲಾರಿ ಇಂದ್ರವಾಣಿಯು ಬಿಲ್ವ (ಹಮಹ. ೬೮). [ ? ]

**ಜಾಲಿ$_1$** (ನಾ). ಮುಳ್ಳುಗಳಿಂದ ಕೂಡಿದ ಒಂದು ಬಗೆಯ ಮರ ; ಬೊಬ್ಬುಳಿ ಮರ ; ಗೊಬ್ಬುಳಿಮರ : ಜಾಲಿ ಜೇನೊಡವಿಷ್ಟ ಪಿಪ್ಪಲ ಮಾಲೆಯಿವ ನೋಡಬಲೆ (ಕೊರಶಾ. ೩-೦-೨೮); ಜಾಲಿಯು ಮರದಂತೆ ಧರೆಯೊಳು ದುರ್ಜನರು (ಪುರಂದ. ೦-೧೧೬-೧); ಆಲಕ್ಕೆ ಹೂವಿಲ್ಲ ಸಾಲಕ್ಕೆ ಕೊನೆಯಿಲ್ಲ ಜಾಲಿಯು ಮರವು ನೆರಳಲ್ಲ ಹೆಣ್ಣಿಗೆ ತಾಯಿಯ ಮನೆಯು ಸ್ಥಿರವಲ್ಲ (ಜಗೀತ. ೮೮) ; ಜಾಲಿ ಬಿತ್ತಲು ಕಾಲಿಗೆ ಮೂಲ (ಗಾದೆ).

[ ದೇ.॥ ತಮಿ. ಚಾಲಿ ; ತುಳು. ಜಾಲಿ ]

**ಜಾಲಿ$_2$** (ನಾ). ಪಡವಲ ಬಳ್ಳಿ : "ಜ್ಯೋತ್ಸ್ನೀ, ಪಟೋಲಿಕಾ, ಜಾಲೀ-ಷಿ ಪಡವಲದ ಗಿಡದ ಹೆಸರು" (ಸಿದ್ಧಾಂಶಿ. ೧೨೩). [ ಸಂ. ಜಾಲೀ ]

**ಜಾಲಿ$_3$** (ನಾ). ೧. ಮೋಸಗಾರ ; ಮಾಯಾವಿ; ವಂಚಕ : ಹಿಸುಣರ ಜಾಲಿಗಳ[ಪಾಠಾಂ. ಚಾಳಿಗಳ, ಜಾಳಿಗರ]ಚದುರೋಕ್ತಿ ನಮಗೇಕೆ (ಕೊರಶಾ. ೨-೦-೨೬). ೨. ಬೆಸ್ತರವನು; ಮೀನು ಹಿಡಿಯುವವನು; ಬಲೆಗಾರ: "ಜಾಲಿ—ಬಲೆಗಾರನಲ್ಲಿಯೂ . . . ಸೂತಾಖ್ಯ—ಸೂತ ಎಂದಾಗುವುದು" (ನಾನಾರ. ೩೩ ಟೀಕು). [ ಸಂ. ಜಾಲಿನ್ ]

**ಜಾಲಿಕ$_1$, ಜಾಳಿಕ$_1$** (ನಾ). ೧. ಬಲೆ : "ಜಾಲಿಕಂ ವಾಗುರಂ ಬೆಳ್ಳರವೆಸಿಕ್ಕು" (ಮಂಗರಾ. ೦೦೨-೫). **ಜಾಳಿಕ$_2$** : ೨. ಕವಚ ; ಚಿಲಖತ್ತು : "ಜಾಳಿಕಂ ಮಾರಿ ವರ್ಮಂ ಕವಚಂ" (ಮಂಗರಾ. ೮೬-೩೦).

[ ಸಂ. ಜಾಲಿಕಾ ]

**ಜಾಲಿಕ$_2$, ಜಾಳಿಕ$_2$** (ನಾ). ೧. ಬಲೆಗಾರ ; ಬೆಸ್ತ : "ಜಾಲಿಕಂ ಧೀವರಂ ಕೈವರ್ತನೆಂದೆನಲು ಜಾಲಗಾಱಂ" (ಮಂಗರಾ. ೦೧೧-೩). ೨. ಜೇಡ ; ಜೇಡರ ಹುಳು. ೩. ಮಂತ್ರವಾದಿ ; ಜಾದೂಗಾರ ; ಮಾಯಾವಿ ; ಐಂದ್ರಜಾಲಿಕ : "ಜಾಲಿಕನೆನೆ ಕಾಪಟಿಕಂ" (ವಸ್ತುಕೋ. ೩೪-೬೬) : "ಜಾಲಿಕಃ, ಕೌಸೃತಿಕಃ, ಧೂರ್ತಃ, ವ್ಯಂಸಕಃ, ಮಾಯಾವೀ, ಮಾಯಿಕಃ, ಮಾಯೀ—ಈ ೧೧ ಮಾಯಾವಿ" (ಹಲಾಯು. ೫೮-೦೯೪) ; ಗಗನತರಂಗಿಣೀ ವಿಭವಮಂ ಸುರಕಾಂತೆಯುಮಂ ನಿರೀಕ್ಷಿಸಿಲ್ಲಿಗೆ ತರಲಾರ್ಪನೆನ್ನಧಿಕ ವಿದ್ಯೆಯಿನೆಂದೊಱಲ್ದು ಜಾಲಿಕಂ (ದಶಕು. ೬-೦೩೩). ೪. ಒಂದು ಜಿಲ್ಲೆಯ ಅಥವಾ ಪ್ರಾಂತ್ಯದ ಅಧಿಪತಿ. **ಜಾಳಿಕ$_1$** : ೧. "ಧೀವರ ಜಾಳಿಕದಾಶನಾಮ ಮೀಂಗುಲಿಗಂ" (ವಸ್ತುಕೋ. ೬೬-೮೪). [ಸಂ.]

**ಜಾಲಿಗ** (ನಾ). =ಜೇಡರ ಹುಳು. 'ಜಾಲಿಗಕೀಟಕ' ಪರಾ.

[ <ಸಂ. ಜಾಲಿಕ ]

**ಜಾಲಿಗಕೀಟಕ** (ನಾ). ಜೇಡರ ಹುಳು : ಬಾಲಂ ಬೀಸದು ಸಂತಾಪಾಲಸನಾಗಿರ್ಕುಮಿಕ್ಕುಗುಂ ಮೆಯ್ಯುಂ ಕಣ್ಣಾಲಿಗಳಂ ಬಿಟ್ಟಿರ್ಕುಂ ಜಾಲಿಗಕೀಟಕಮನಡಸಿ ಮೆಲ್ಲ ತುರಂಗಂ (ಅಶ್ವಶಾ. ೧೧-೩೦). [ ಜಾಲಿಗ + ಕೀಟಕ$_2$ ]

**ಜಾಲಿಗುಱುವ** (ನಾ). ಜಾಲಿಮರದಿಂದ ಕೂಡಿದ ದ್ವೀಪ : ಒಂದು ದಿನ ಕೆರೆಯ ನಡುವಣ ಜಾಲಿಗುಱುವಕ್ಕೆ ಬಂದು ಪದ್ಮಾಸನದಿ ಕುಳ್ಳಿತ್ತು ಶಿವಯೋಗದಿಂದಿರಲು (ರಾಘಚ. ೧೫-೨೯). [ ಜಾಲಿ$_1$ + ಕುಱುವ$_1$ ]

**ಜಾಲಿಗೆ** (ನಾ). ಕೋವಿಯನ್ನು ಹಾರಿಸುವಾಗ ಹತ್ತಿಸಲು ಉಪಯೋಗಿಸುವ ಬತ್ತಿ : ಮಾವಿನ ಚಿಗುರೆಂಬ ಜಾಲಿಗೆಯ ಬತ್ತಿಯಂ ಹತ್ತಿಸಿ (ಸೌಗಂಧಿ. ೧೬೭-೦೩) : ಈರಣ್ಣ . . . ಜಾಲೀಗೆ ಬತ್ತೀ ಬಲಗೈಲಿ ಹಿಡ್ಕೊಂಡು ಒಬ್ಬಾನೆ ಹೊಡೆದಾನೋ ದೊರೆಮಗಾ (ಹುಟ್ಟುಹ. ೪೪). 'ಜಾವುಗೆ' ಪರಾ. [ ? ]

**ಜಾಲಿಜಪ್ಪಟೆ** (ನಾ). ಒಂದು ಬಗೆಯ ಮರ: ಅಂಡ್ರಿಕೆ ಹುಲ್ಲು, ಕಡಗೋಲು ಗಿಡ, ಮುಳ್ಳುಮುತ್ತ, ಜಾಲಿಜಪ್ಪಟೆ—ಇಂಥ ನೂರಾರು ಕಾಡು ಜಾತಿಯ ಹುಲ್ಲು ಹೊದರು ಗಿಡಮರ ಬಳ್ಳಿ (ಕೆಳದಿಚು. ೫೩). [ಜಾಲಿ$_1$ + ಜಪ್ಪಟೆ$_2$]

**ಜಾಲಿನಿ, ಜಾಳಿನಿ** (ನಾ). ಒಂದು ಬಗೆಯ ಬಳ್ಳಿ ಮತ್ತು ಅದರ ಕಾಯಿ; ಹೀರೆ: "ಪೀರೆ ಜಾಲಿನಿ" (ವಸ್ತುಕೋ. ೩೬-೨೧). ಜಾಳಿನಿ: "ಹೀರೆ ಮೃಡಂಗಿ ಫಲಿನಿ ಜಾಳಿನಿಯಕ್ಕು" (ಮಂಗರಾ. ೪೪-೪೪). [ ಸಂ. ಜಾಲಿನೀ ]

**ಜಾಲಿಬಂಕೆ** (ನಾ). ಒಂದು ಬಗೆಯ ಮರ: ಜಾಲಿಬಂಕೆ, ಇಟಿಕಾಕುನ್ನ (ವೃಶಿಗಿ. ೬೫-೧೩೧೬). [ ? ]

**ಜಾಲಿಮ, ಜಾಲೀಮ, ಜಾಲೀಮು**(ಗು).೧.ಉಗ್ರವಾದ;ದಾರುಣವಾದ; ತೀಕ್ಷ್ಣವಾದ : ಆದರೆ ಆ ಜಾಲಿಮ ವಿಷದಿಂದ ಅವನ ಹಲ್ಲುಗಳು ಕೂಡ ಗಿಟಕಿರಿದಿದ್ದವಾದ್ದರಿಂದ ಆ ಔಷಧವು ಅವನ ಹೊಟ್ಟೆಯಲ್ಲಿ ಹೋಗಲಿಲ್ಲ (ಅಂಬಿಕೆ. ೧೬೦). **ಜಾಲೀಮ**: ೧. ಮಕ್ಕಾದ ಕಡೆಗೆ ಮುಖಮಾಡಿ. ನಮಾಜು ಬೀಳುವಾಗಲೇ ಜಾಲೀಮ ಪಣವನ್ನು ಪುಕಾರಿಸಿದರು (ದೀಪಹ. II, ೪೦). **ಜಾಲೀಮು**:(ನಾ).೨. ಉಗ್ರವಾದುದು; ದಾರುಣವಾದುದು: ಕೊಟ್ಟ ಮದ್ದು ತುಸು ಜಾಲೀಮು ಮಾತ್ರ ಇತ್ತೆಂದು ಅದರ ಪರಿಣಾಮದಿಂದ ಅವನು ಕಂಡುಕೊಂಡನು (ಕಾಬಂ. ೮೪). [ ←ಅರ. ಮರಾ. ಜಾಲೀಮ್ ]

**ಜಾಲಿಸು, ಜಾಳವಿಸು$_1$, ಜಾಳಿಸು$_2$, ಜಾಳೈಸು** (ಕ್ರಿ). ೧. (ಅಕ್ಕಿ ಮೊದಲಾದವುಗಳಲ್ಲಿ ಕಸಕಡ್ಡಿ ಹೋಗುವಂತೆ) ನೀರಿನಲ್ಲಿ ತೊಳೆ : ಮಿದಿದಕ್ಕಿಗಳ ಮಾಡಿ ತೂಗಿ ಜಾಲಿಸಿ (ಗೋಮುಟೀ. ೪-೭೭). ೨. ಕಲಕು; ಅಲ್ಲಾಡಿಸು; ಕ್ಷೋಭೆಗೊಳಿಸು : ಜಗಾ ಜಾಲಿಸುವ ಬಡ್ಡಿ ಮಗು ತೂಗಲಾರಳೊ (ಗಾದೆ). ೩. ಶೋಧಿಸು ; ಪರಿಶುದ್ಧಿಗೊಳಿಸು : ಜಾಲಿಸಬೇಕೊ ಜಾಲಸಾಗರನಾಗಿ ಪಾಪಜಾಲಂಗಳ ಕಸ ಪೋಗುವಂತೆ (ವಿದಾಕ್ಕ. ೦೫೨-೦) ; ಅದರಲ್ಲಿ ಮನಸ್ಸನ್ನು ಜಾಲಿಸಿ ತೊಳೆದು (ಶಂಯಾತ್ರ. ೬೯). **ಜಾಳವಿಸು$_1$**: ೪. ಮೋಸ ಮಾಡು; ವಂಚಿಸು. 'ಜಾಳವಣೆ' ಪರಾ. **ಜಾಳಿಸು$_2$**: ೧. ಕಲ್ಮಷವೆಂಬ ಶೌಡಂ ಹಾಱಿಸಿ ಸಮತೆಯೆಂಬ ಸಲಿಲದಲ್ಲಿ ಜಾಳಿಸಿ (ಅವಷಂ. ೨೭೭-೧೨೭೦); ಜಾಲಗಾರನು ಉಸುಕು ಜಾಳಿಸುವ ಹಾಗೆ (ಉಯ್ಯಾಲೆ.೦೧-೯). ೫.ಕೊಡವು; ಒದರು: ಆರ್ದ್ರವಮಂ ಜಾಳಿಸಿ ಜಾಲಮಂ ಬಿಸಿಲೊಳಿಕ್ಕುವ . . . ಶಬರರ್ಕಳಿನಿಂತೆಸೆದತ್ತು ಪೆಕ್ಕಣಂ (ಶಾಂತೀಶ್ವ. ೩-೬೪). ೬. ಸೋಲಿಸು; ಜಳ್ಳುಮಾಡು: "ಜಾಳಿಪುದೆಂದು ಸೋಲಿಪುದು" (ಕಶಸಾ. ೩೦-೬೫೪) : "ಜಾಳಿಪುದೆನೆ ಸೋಲಿಪುದು" (ಕವಿಕಂ. ೨೪೪); ಜಾಳಿಸಿದನಾ ಕಾಶಿರಾಜನ ಧಾಳಿಯಲಿ (ಕುವ್ಯಾಸ. ೪-೫) : ನಿಮ್ಮ ಬಲ ಜಾಳಿಸಲ್ಕೀರ ವೃಷಸೇನ ಬೊಬ್ಬಿರಿದು . . . ನುಡಿದನು (ತುರಂಗ. ೬೭-೧). ೭. ಒಂದರಿಯಾಡು; ಜರಡಿಹಿಡಿ: ಹಾಲಿನ ಹುಡಿಯನ್ನು ನಯವಾಗಿ ಅರೆದು ಸರಿಗೆಯ ಜರಡಿಯಲ್ಲಿ ಎರಡು ಮೂರು ಸಲ ಜಾಳಿಸಬೇಕು (ಆಹಾಸಾ. ೧೧೧). **ಜಾಳೈಸು**: ೮. ತಗ್ಗಿಸು; ಅಧೀನದಲ್ಲಿಡು : ಗಾಳಿ ಬೆಂಬಲವಾಗಲುರಿಯ ಧಡಾಳವನು ಜಾಳೈಸಬಹುದೆ (ಕುವ್ಯಾಆ. ೩೪-೧೫). [ಜಾಲ$_1$+ –ಇಸು$_3$]

**ಜಾಲೀಮ** 'ಜಾಲಿಮ' ನೋ.

**ಜಾಲೀಮು** 'ಜಾಲಿಮ' ನೋ.

**ಜಾಲೆ$_1$, ಜಾಳ$_2$, ಜಾಳೆ** (ನಾ). ಬೆಂಕಿ ; ಉರಿ ; ಜ್ವಾಲೆ : "ಜಾಲೆಯುರಿಯೆನಲ್ ಜ್ವಾಲೆಯೊಳು ಸಲೆ ವರ್ತಿಸುಗು" (ಶಬ್ದಮಂ. ೧೨); ಜಾಲೆಯಿಂ ಮರ ಕೆಡುಗು ಮೋಳೆಯಿಂ ಕೆಱೆ ಕೆಡುಗು ಆಳು ಇಲ್ಲದನ ಹೊಲ ಕೆಡುಗು (ಸರ್ವಜ್ಞ. ೧೯೫೩) ; ಶೂಲದ ಪೆಣನುಂ . . . ಜಾಲೆಯ ಬಿಸಿಗಂ ಬೆರ್ಚುತೆ (ಹಾಲಾಸ್ಯ. ೧-೭-೨೩) : ಕೂರಂಬಿನ ನನೆಯೊಂದು ಕುತ್ತೆಸಳ ಜಾಲೆಗೆ ಸೀಕರಿವೋಗದೇಂ ಮಾಣ್ಗುಂ (ರಾಮಾಶ್ವ. ೫೬-೧೪). **ಜಾಳ$_2$**. 'ಜಾಳವಿಸು' ಪರಾ. **ಜಾಳೆ** : ವತ್ಸಲೋಪಕ್ಕೆ—ಜ್ವಾಲಾ—ಜಾಳೆ (ಶಮದ. ೨೮೧ ಪ್ರಯೋ).

[ <ಪ್ರಾ. ಜಾಲಾ / ಸಂ. ಜ್ವಾಲಾ ]

**ಜಾಲೆ$_2$** (ನಾ). ಮಾಟಗಾತಿ ; ಥಳಕುಬೆಳಕಿನಿಂದ ಜನರನ್ನು ವಶಪಡಿಸಿಕೊಳ್ಳುವವಳು ; ಧೂರ್ತೆ : ನುಡಿಗಳಿಂ ನಡೆಗಳಿಂ ಜಾಲೆಯರ ಕೊನಬುಗಾಱಿಕೆ ಸುಳುಹು ತಾಪಸರಿಗಂ ಪ್ರಾಣಗುಂದಿರ್ದು (ತುರಂಗ. ೮೦-೪೦). [ ಜಾಲ$_1$ + - ಎ$_2$ ]

**ಜಾಲೆ$_3$** (ನಾ). = ಜಾಲ$_1$. 'ಜಾಲೆಗಾಱ' ಪರಾ. [ ಸಂ. ಜಾಲ ]

**ಜಾಲೆ$_4$** (ನಾ). ೧. ಒಂದು ಬಣ್ಣ : ಒಂದು ಪೂರ್ವಕ್ಕೆ ಹೊಂಟರೆ, ಮತ್ತೊಂದು ಉತ್ತರಕ್ಕೆ, ಇನ್ನೊಂದು ಮರಳಿ ಮನೆಗೆ ಓಡುವ ಜಾಲೆಯ ಜಾನುವಾರುಗಳು (ದಂಬಸಾ., ೧೮). ೨. ಒಂದು ಬಗೆಯ ಬಣ್ಣದ ಹಸು : ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ ನೆಟ್ಟಕೊಂಬಿನ ಕಾರಿ ಜಾಲೆ ದಿಟ್ಟಿಸಿ ನೋಡುವ ಪಸುಗಳು ಎಸೆದುವು ಪಟ್ಟೆಯ ಸೀರೆಯಂದದಲಿ (ಮಾದೇಸಾಂ. ೧-೪೧). 'ಜಾಲೆಯಾಡು' ಪರಾ. ೩. ಒಂದು ಬಗೆಯ ವನಸ್ಪತಿ ; ಶೂಲಿಕೆ : " ಶೂಲಿಕೆಯೆನಲ್ ಜಾಲೆ " (ಮಂಗರಾ. ೪೩-೩೭). ೪. (?) : ಅಲ್ಲದ ನೆಲನು ಬೆಳವುದಕೆ ಹುಲ್ಲಲ್ಲದೆ ಜಾಲೆಯುಂಟೇ ? (ಮೋಳಿಮಾ. ೧೭೩-೬೫೧). [ ? ]

**ಜಾಲೆಗಾಱ** (ನಾ).=ಜಾಲಗಾಱ : ಏಗೆ ಬಸನದಿಂದ ಕೊಲೆಕೊಂದು ಗಡಂ ಸಗ್ಗಕ್ಕೆ ಪಾಪಿ ಸಲುವಡೆ ಮತ್ತೀ . . . ಸೊನೆಗಾಱನುಂ ಜಾಲೆ[ಪಾಠಾಂ. ಲ] ಗಾಱನುಂ ಮಾಣ್ದಪರೆ (ಸಮುಪ. ೧೪-೮೭): ಜಾಲೆಗಾಱನ ಕಾಲು ಮುಳ್ಳು ತಾಗಿ ನೊಂದಿತ್ತೆಂಬಂತೆ . . . ಠಕ್ಕನ ಪೂಜೆಗೆ ಮೆಚ್ಚುವನೆ ನಮ್ಮ ಗುಹೇಶ್ವರನು (ಅವಚಂ. ೩೯-೧೩೩): ಮಾಲಿಕ ವ್ಯವಹಾರ ಕಮ್ಮಡಿವಾಳ . . . ತಳವಾಱ ಜಾಲೆಗಾಱ ಕಳಾಕುಶಲ ತಾಂಬೂಲಿಕರ . . . ಆಳಬೇಹೊದು ಚದುರ ಕುಶಲರಿಗೆಂದು ಏಟ ನುಡಿದ (ಜೀವಂಚ. ೧೭-೮೭). [ ಜಾಲೆ$_3$ + - ಕಾಱ ]

**ಜಾಲೆಯಾಡು** (ನಾ). ಒಂದು ಬಗೆಯ ಆಡು : ತನ್ನ ಕಟ್ಟಿದ ಗೇಣಂ ಪರದನಂ ಜಾಲೆಯಾಡಂ ಕೊಲ್ವಂತೆ ಪೊರಟ್ಟಿ ಕೊಂದು (ಧರ್ಮಾಮೃ. ೧೩-೮೦) : ಏಳನೆಯ ಭವದೊಳುಕ್ಕದೇಶದಲ್ಲಿ ಜಾಲೆಯಾಡಾಗಿ ಜನಿಸಿರ್ದ (ಪುಣ್ಯಾಸ್ರ. ೫-೩೯ ವ). [ ಜಾಲೆ$_4$ + ಆಡು$_3$ ]

**ಜಾಲ್ಮ** (ಗು). ೧. ಕ್ರೂರವಾದ ; ದಯಾಹೀನ. ೨. ಪಾಮರವಾದ ; ನೀಚವಾದ ; ತುಚ್ಛವಾದ. (ನಾ). ೩. ನೀಚನಾದವನು ; ದುಷ್ಟನಾದವನು: ಎಲೆ ಜಾಲ್ಮ ಎತ್ತ ಪೋದಪೆ (ಕಾಂಭಾ. ೯-೪೬). ೪. ವಿಚಾರ ಮಾಡದೆ ಕಾರ್ಯಮಾಡುವವನು ; ಹಿಂದು ಮುಂದು ನೋಡದೆ ಕೆಲಸ ಮಾಡುವವನು; ದುಡುಕುಗಾರ. ೫. ತಿಳಿಯದವನು; ದಡ್ಡ ; ಮೂಢ : " ವೃಧೇಯಃ, ಬಾಲಿಶಃ, ಬಾಲಃ, ಜಡಃ, ಜಾಲ್ಮಃ . . . ಮಾತೃಶಾಸಿತಃ–ಈ ೧೧ ಅಱಿಯದವಂ" (ಹಲಾಯು. ೫೬-೧೮೧); ಜಡನೊ ಜಾಲ್ಮನೊ ವ್ಯರ್ಥಜನ್ಮನೊ ಕಡುಮರುಳೊ ಕಾಕನೊ ವಲಂ ಬಾಯ್ಬಡಿಕನೊ (ಪ್ರಭ್ಯಾಕ. ೭-೩೩). [ ಸಂ. ]

**ಜಾಲ್ಮಜಲ್ಪ** (ನಾ). ದಡ್ಡತನದ ಮಾತು; ಅವಿವೇಕದ ಮಾತು: ಇಂತಹ ಜಾಲ್ಮಜಲ್ಪಗಳನ್ನು ಶ್ರೀಮನ್ಮಹಾರಾಜಾಸ್ಥಾನದಲ್ಲಿ ನೀವು ಪುನಃ ಕೇಳಿಸದಿರಬೇಕು (ಮಂತ್ರಶ. ೧೧-೧೮) [ ಜಾಲ್ಮ + ಜಲ್ಪ ]

**ಜಾಲ್ಮತೆ** (ನಾ). ಕ್ರೂರತೆ ; ಕ್ರೌರ್ಯ ; ಹಿಂಸೆ : ಜಾಲ್ಮತೆಗೆ ಜಾಲ್ಮತೆಯ ನೊಡ್ಡಿ ಸೆಣಸುವ ರೂಢ ರಾಜನೀತಿಯನೊಡೆದನೀ ಸಾಹಸಿ (ಅಮುತಂ. ೫೪-೩). [ ಸಂ. ಜಾಲ್ಮತಾ ]

**ಜಾಲ್ವರಿ** (ಕ್ರಿ). ಗುಂಪು ಚೆದರಿಸು (?) : ಪಳ್ಳಿಪುರಗಳ ಪೊಕ್ಕು ಕೊಳ್ಳೆಯಾಡಲ್ಕೆ ಬಲ್ಲಿದನು ಅವ ತನ್ನ ಬಲವೆಲ್ಲಗೂಡಿ ತಾಗಿ ಚೂಣಿಯ ಬಲವ ತಟ್ಟಿ ಜಾಲ್ವರಿದು ನೂಕಿ ಬಹುಜನರುಗಳ ಮುಕ್ಕಿರಿಯಲಿಕ್ಕಿದನು (ಕರಿಳ. ೧೭-೫). [ <ಜಾಲ$_1$ + ಪರಿ$_2$ ]

**ಜಾವ$_1$**, **ಜಾಮು$_1$**, **ಜಾವು**, **ಝಾಮು**, **ಝಾವ** (ನಾ). ದಿವಸದ ಎಂಟನೆಯ ಒಂದು ಭಾಗದಷ್ಟು ಕಾಲ ; ಏಳೂವರೆ ಗಳಿಗೆ ; ಒಂದು ಪ್ರಹರ ; ಮೂರುಗಂಟೆಗಳಷ್ಟು ಕಾಲ : " ಪ್ರಹರಃ, ಯಾಮಃ–ಈ ೨ ಜಾವಂ " (ಹಲಾಯು. ೧೮-೧೦೬) : " ಪ್ರಹರಮೆನಲು ಯಾಮವೆನೆ ಜಾವಂ " (ಮಂಗರಾ. ೩೦-೭) : ಬೆಳಗಪ್ಪ ಜಾವದಯ್ಯಲ್ ಕೊಳೆ ಶೀತಕ್ಕಾಱದಳ್ಕಿ (ಕಾವ್ಯಸಾ. ೬೯೪ ಕೊದ್ರುಕ): ಅಂತಾಯಿರುಳ ನಾಲ್ಕು ಜಾವಮುಂ . . . ಕೆಂದಿನೊಳೆ ಬೆಳಗಾಗೆ (ಪಂಪಭಾ. ೩-೮೩ ವ) : ಇರುಳ್ ನಾಲ್ಕುಂ ಜಾವಮುಂ ಮೌಹೂರ್ತಿಕನಂತೆ ಪೊತ್ತಿನಳವಿಯುಂ ನೋಡುತ್ತುಂ (ಧರ್ಮಾಮೃ. ೧-೧೬೦) : ಒಂದರೆಗಳಿಗೆಯನೊಂದು ಬರಿಸದಂತೊಂದು ಜಾವವ ಯುಗದಂತೆ . . . ಎಣಿಪಳು (ಹದಿಬ. ೭-೩೭): ಚೇಳಿಗೆ ಪಾರುಪತ್ಯ ಕೊಟ್ಟರೆ ಜಾವಕ್ಕೊಂದು ಸರ್ತಿ ಮುಟ್ಟಿಸಿತು (ಗಾದೆ). ೨. ಜಾವಜಾವದಲ್ಲೂ ಮಾಡುವ ನಗರ ಮೊದಲಾದುವುಗಳ ಕಾವಲು; ಪಹರೆ; ಗಸ್ತು: ಬಲಿದು ಕಾಲ್ಗಾಪಿನಣಿವೆರಸು ನಿಂದ ಜಾವದ ಪಾದಗಜಂಗಳುಮಂ (ವರ್ಧಪು. ೯-೫೭ ವ). ೩. ಕಾವಲಿನ ಎಡೆ,–ಸ್ಥಾನ ; ಪಹರೆಯವರು ಕಾವಲಿಗಾಗಿ ಇರುವ ನೆಲೆ ; ಕಾವಲುಗಾರರ ಠಾಣೆ : ಅಲ್ಲಲ್ಲಿ ಜಾವ ಮುಕ್ಕಡ(ಗ)ರವಟಿಗೆ ತಳವ(ಱಿಕೆ)ಯ(ಮ)ಕ್ಕಕ್ಕೆಯೊಳಂ ಠಾಣಾಂತರಮಂ ನಿರವಿಸೆಯುಂ (ಪುಷ್ಪಪು. ೭-೬೯ ವ) : ಹೃದಯಪ್ರಿಯರಂತೊಱಗಿದ ಪದದೊಳ್ ಗರಟಿಗೆಯ ಜಾವದುಕ್ಕಡದುಲಿ ಮೞ್ಗಿದ ಪೊತ್ತು (ಯಶೋಧ. ೩-೩೭). ಜಾಮು$_1$ : ೧. ಆ ಪುಲಿಯ ಕೊಲ್ವೆನೆನ್ದು ಪ್ರತಿಜ್ಞೆ ಕಡಿದು ಜಾಮದಿನ್ದೊಳಗೆ ಕೊನ್ದಂ (ಎಕ. X, ಮುಳಬಾ. ೧೭೩-೪ : 950) : ಬುಧವಾರ ಮೂರನೆಯ ಜಾಮದಲು ಕಾದಿ (ಎಕ. VIII, ಸೊರಬ.೦೬೭-೯: 1464) ; ರಾತ್ರಿ ಮೊದಲನೆಯ ಜಾಮದ ಗಂಟೆ ಆಗತಾನೆ ಹೊಡೆದಿತ್ತು (ಕೃಷ್ಣಭೂ. ೪೯). ಜಾವು : ೧. ಕಲ್ಲುಮಂಟಪದ ನೆರಳಿನಲ್ಲಿ ಮಲಗಿದಿರಿ ಒಂದು ಜಾವು (ಹೃದಸ. ೭೫-೭). ಝಾಮು: ೧. ಬೆಳಗಿನ ಝಾಮಕ್ಕೆ ಬಂದು ಮಲಗಿದೆನಲ್ಲ (ಲೀವೀಶಾ. ೪೧). ಝಾವ : ೧. ಘಳಿಗೆಯೆಂಟಾಗಲೊಂದು ಝಾವವಹುದು (ವಿವೇಕ. ೩೩೦) : ಎಂಟು ಝಾವಗಳಲ್ಲಿ ಒಮ್ಮೆ ಹರಿಯ ಕೊಂಡಾಡೊ (ವಿದಾಳ್ಕ. ೯೫-೭) : ಒಂದು ಝಾವ ರಾತ್ರಿ ಇದ್ದದ್ದು ಅವಳಿಗೆ ತಿಳಿಯಲಿಲ್ಲ (ಅನಾಥ. ೨೮೮).

**ಜಾವದವರ್**, **ಜಾವದವರು** = ಕಾವಲಿನವರು ; ರಕ್ಷಕರು : ಅಯಾವಿಕಸ್ಯ=ಜಾವದವರಿಲ್ಲದೊಂಗೆ (ನೀತಿವಾ. ೧೩-೭);ಕರೆದು ತಂದವೃತಾನ್ನ ಪೂಡುವರಿರುಳು ಪಗಲದಗಲದೆಯು ಜಾವದವರು ಮಹಾ ಸುವಿಧಾನದಿಂ ಬಿಡ ರಂಗ ರಕ್ಷಕರು (ಸಾಳ್ವಭಾ. ೩೩-೧೧೫). **ಜಾವದಾನೆ** = ಕಾವಲಿನ ಕೆಲಸಕ್ಕಾಗಿ ಉಪಯೋಗಿಸಿಕೊಳ್ಳುವ ಆನೆ : ರಾಜಾಂಗಣದ ಬಯಲ ಬಾಳ್ಗಂಬಂಗಳೊಳ್ ಸೆಱೆಗೆಯ್ದಿರ್ದ ಜಾವದಾನೆಗಳ ಮೇಲೆಡೆಗೆಡೆದು (ಚಂದ್ರಪು. ೮-೪೩ ವ). **ಜಾವಮಿರ್** = ಕಾವಲಿರು : ನಿದ್ರಾಭರ ಪರವಶರಾಗಿರೆ ಭೀಮಂ ಜಾವಮಿರ್ದು (ಪಂಪಭಾ. ೩-೧೦ ವ). **ಜಾವಮಿರಿಸು** = ಕಾವಲಿಗೆ ಇರಿಸು ; ರಕ್ಷಣೆ ಏರ್ಪಡಿಸು : ಸಾಹಸಭಟರಪ್ಪ ಸುಭಟರ್ಗೆ ನಾಲ್ಸಾಸಿರ ಪೊನ್ನಂ ನುಡಿದು ಜಾವಮಿರಿಸಿ (ಸುಕುಮಾ. ೭-೮ವ). [ <ಪ್ರಾ. ಜಾವ. / ಸಂ. ಯಾಮ ]

**ಜಾವ$_2$**(ನಾ). ಒಂದು ಬಗೆಯ ವನಸ್ಪತಿ: ಮಧುಪಿಪ್ಪಲಿ ಮೂಲದ ಭಲ್ಲಾತಕದರುಗದ ಜಾವದ ಪುಡಿಯಂ ಕುದಿಯಿಸಿ (ಲೋಕೋಪ. ೯-೦೪೫). [ ? ]

**ಜಾವಕ್** (ಗು). ಹೊರಕ್ಕೆ ಕಳಹಿಸುವ. 'ಆವಕ್' ಪರಾ. [ ←ಮರಾ. ಜಾವಕ್ ]

**ಜಾವಕ** (ನಾ). ೧. ಒಂದು ಬಗೆಯ ಧಾನ್ಯ ; ಅಲಸಂದೆ; ತಡಂಗುಣಿ. ೨. ಅರಗು : "ಜಾವಕ–ಯಾವಕ = ಅರಗು " (ಶಬ್ದಕೋ. ೦೫). ಯಾವಕ, ಜಾವಕ (ಶಬ್ದಾನು. ೧೪೧ ಪ್ರಯೋ). [ <ಸಂ. ಯಾವಕ]

**ಜಾವಗಹಳೆ** (ನಾ). ಕಾವಲುಗಾರರು ಊದುವ ಕಹಳೆ; ಪಹರೆಯವರು ಜನರನ್ನು ಎಚ್ಚರಿಸುವುದಕ್ಕಾಗಿ ಊದುವ ಕಹಳೆ: ಹೊಡೆವ ಹೆಬ್ಬರೆ ಜಾವಗಹಳೆ ತಂಬಟೆಗಳ ಕಡುರವವೊಳಬುಗುದಿಗೆಯು ಜಡಿವ ದನಿಗಳಿಂದ (ಶಂಸವಿ. ೧೧-೧೪೦). [ ಜಾವ$_1$ + ಕಹಳೆ ]

**ಜಾವಗುತ್ತಿಗೆ** (ನಾ). ಕಾವಲು ಕಾಯುವ ಗುತ್ತಿಗೆ: ನಿತ್ಯಪೂಜೆಯನು ಮಲ್ಲಯ್ಯಂಗೆ ಮಾಡಿನೋಡುತ್ತ ತೋಟವನು ಕಟಿಯನು ಜಾವಗುತ್ತಿಗೆಯನಿತ್ತು ತಾಂ ಹರುಷದಿಂ ಕವಿಲೆಗಳ ಕಱುವ ನೋಡುತ್ತ (ಸಿದ್ಧರಾ. ೫-೧೭); [ ಜಾವ$_1$ + ಗುತ್ತಿಗೆ (<ಗುತ್ತಗೆ) ]

**ಜಾವಟೆ**(ನಾ). ಚಪಲತೆ; ಚಾಪಲ್ಯ (?): ಶೀವಿದರು ಭಂಡಿಯಲಿ ಮುಂದಣ ಜಾ[ಪಾಠಾ. ಚಾ]ವಟೆಯು ಚಪಲರಿಗೆ ಹರಿಯ ನೃಪಾವಳಿಗಳಲ್ಲಲ್ಲಿ ತೆತ್ತರು ಕಂಡ ವಸ್ತುಗಳ (ಕುವ್ಯಾಸ. ೬-೬): ರಾವುತರು ಸಮತಳಿಸಿ ಮುಗ್ಗಲು ಮಾವುತರು ತಲೆದೋರಿತಿತ್ತಲು ಜಾವಟೆಯ ಚಾವಲ್ಲ (ಮೂಲರಾ. ೪-೧೭). [ ? ]

**ಜಾವಡಿ$_1$** 'ಜಾವಳಿ$_1$' ನೋ.

**ಜಾವಡಿ$_2$** (ನಾ). (?): ಮುಮುಕ್ಷು ಮಧ್ಯದಿ ನಿಂದ ಕಾಲಭ್ರುವಿನ ತರ ಅಮಮ ಶಿವನ ಜಾವಡಿಗಳು ರಮಣೀಯ ಪಂಚಬ್ರಹ್ಮಗಳೆ ಭಿತ್ತಿಗಳಾಗಿ ವಿಮಲವೇದದ ಸಾಲಗಂಬ (ದೇವಾಂಪು. ೨-೩೮). [ P ಇದು 'ಚಾವಡಿ' ಎಂಬುದರ ಅಪಲಿಖಿತವಿರಬಹುದು ]

**ಜಾವಡಿಕಾರ** (ನಾ). ಜಾವಡಿಗೀತೆಗಳನ್ನು ರಚಿಸುವವನು: ಜಾವಡಿಕಾರರು, ತುಮ್ರಿಕಾರರು ನಿತ್ಯಜೀವನದ ಲೀಲಾವಿಲಾಸವನ್ನು ಬಣ್ಣಿಸಿದ್ದಾರೆ (ಭಾರರ. ೫೮೦). [ ಜಾವಡಿ$_1$ (<ಜಾವಳಿ$_1$) + - ಕಾರ$_1$ (< - ಕಾಱ) ]

**ಜಾವನಿಗಾಲೆ** (ನಾ). ಒಂದು ಬಗೆಯ ವನಸ್ಪತಿ: ಜಾವನಿಗಾಲೆ, ಸಣ್ಣ ಸಲ್ಲೆ, ಕಾಯೋರಿ, ಕರಿಸಲ್ಲಿ, ಕಾಡುಪತಂಗ, ಮುರಿಗೆ (ವ್ಯಕಿಗಿ. ೪೦-೬೯೯). [ ? ]

**ಜಾವಯಿ** (ನಾ). ಮಗಳ ಗಂಡ; ಅಳಿಯ; ಜಾಮಾತ: ನಮ್ಮ ಜಾವಯಿನ್ನ ಆಶೀರ್ವದಿಸಿರಿ, ಸ್ವಾಮಿಜಿ (ಐಶೀ., ೬೦೭); ನಮ್ಮ ಜಾವಯೀ ಅಂಥಾವಲ್ಲ ತಗೀರಿ (ಗ್ರಾಮಾಯ. ೬೮). [ ←ಮರಾ. ಜಾವಯೀ./ಪ್ರಾ. ಜಾಮ್ಮಾಉ./ಸಂ. ಜಾಮಾತೃ ]

**ಜಾವರಿ** (ನಾ). (?): ವಳ್ಳಿಯ ಪುರದ ಭೂಪದೇವರ ಜಾವರಿ ಗೊಬ್ಬರ ಸಿಣಿಂಡಿವಾಡಿ x x x ದಿವಾಳಿ ಸತ್ಯನಾತ (ಕಕುಂ. ೩-೫; 1071). [ ? ]

**ಜಾವಳ$_1$** 'ಚಾವಲ' ನೋ.

**ಜಾವಳ$_2$** (ನಾ). ೧. ಸಾಮಾನ್ಯ; ಸಾಧಾರಣ: "ಜಾವಳವೆಂದು ಸಾಮಾನ್ಯಮುಂ ಚಾಪಲಮುಮಪ್ಪುದು" (ಕಬ್ಬಿಗೈ. ೫೫); ಇಳೆಯೊಳು ತ್ರಿಮಕೀರ್ತಿಗಳು ಜಾವಳದ ಪುರುಷರೆ ಧರ್ಮಪುತ್ರನ ಗೆಲುವ ಪರಿಯೆಂತೈ (ಕುವ್ಯಾಶ. ೩-೧೩೦): ಸುಂದರಿಯರನೊಲ್ಲದಿಪ್ಪುದದು ಜಾವಳಮೋ (ಹಮ್ಮಿರ. ೬-೪೦). ೨. ಸಾಮಾನ್ಯ ಮನುಷ್ಯ; ನಾಡಾಡಿ: ಭೂವಳಯದೊಳಗುಳ್ಳ ಸರ್ವಜೀವಾಳಿಗಳ ಪಾವನಂಮಾಡಲೆಂದನುಗೆಯ್ದ ಶಿವ ಸಿದ್ಧ ಜಾವಳನೆ (ಸಿದ್ಧರಾ. ೦ ಸೂಚನೆ): ಬಸವನೇಂ ಜಾವಳನೆ ಭಕ್ತರೊಳು (ಬಸಪು. ೧-೨೮); ಬಾಲರಾದಡೆ ಭಂಗವೇ ಜಾವಳನೆ ಅಭಿಮನ್ಯು (ಕುವ್ಯಾಕ. ೪-೧೪): ಸತಿಯ ಮಚ್ಚು ಜಾವಳರ್ಗೆಂತು ದೊರಕುವುದು ಮುನ್ನೀಶನಂ ಭಜಿಸಿದಂಗಲ್ಲದೆ (ರಾಘಚ. ೭-೩೪). ೩. ಕೀಳಾದವನು; ಹೀನ: ಮುನಿದೊಡೆ ನಲ್ಲನೋಪಳ ಪದಾಂಬುರುಹಕ್ಕೆ ವಿನಮ್ರನಾಗೆ ಜಾವಳ ಮೊಱೆಯಲ್ಲು ನೀನೆನಗೆ ಮುಟ್ಟದೆ ಪೋಗೆನೆ (ಶೃಂಗಾರ. ೩-೯೮): ಈ ಮಹಿಯೊಳ್ ಜಾವಳನುಂ ಕರಂ ಕುಪಥದೊಳ್ ಶಾಲಿಕ್ಕಂ (ಶಾಕುಂತ. ೬೪-೧೧೧). [ ? ]

**ಜಾವಳ$_3$**, ಜಾವುಳ (ನಾ). (ಉಕ). ೧. ಜುಟ್ಟು; ಕೂದಲು. ೨. ಮಂಡೆಗೂದಲು; ಹುಟ್ಟುಗೂದಲು: ಶಿರಿಮಾಗುತೀ ಸಣ್ಣನಾಮಾ ಶಿರದ ಜಾವಳ ಜಡೆ ಕಡೆಗೋಲು ನೇಣುಸಹಿತ (ವಾದಿಕೀ. ೬೩-೭); ಹುಟ್ಟಿದ ಕೂಸಿನ ಜಾವಳವನ್ನು ತೆಗೆಯುವಾಗ (ಕಭಾಗಿ. ೧೧೧); ಐದನೆಯ ವರುಷಕ್ಕೆ ಅವನ ಜಾವಳವನ್ನು ಕೋಟೆಯ ಮೇಲೆ ತೆಗಸುವದೆಂದೂ ಬೇಡಿಕೊಂಡಿದ್ದರು (ಸ್ಮೃತಿಚಿ. ೧೦೩). ೩. ಷೋಡಶ ಸಂಸ್ಕಾರಗಳಲ್ಲಿ ಒಂದು; ಮೊದಲನೆಯ ಸಲ ಕೂದಲು ತೆಗೆಸುವ ಸಂಸ್ಕಾರ; ಚೌಲ; ಚೂಡಾಕರ್ಮ: ಇವರಲ್ಲಿ ಜನ್ಮ, ಜಾವಳ, ಲಗ್ನ, ಮರಣ ಇಷ್ಟರ ಸಂಸ್ಕಾರಗಳು ಮಾತ್ರ ಉಂಟು (ಕಭಾಗಿ. ೧೩೪); ತನ್ಮಧ್ಯೆ ಒಮ್ಮೆ ಶಾಮರಾಯ ತೃತೀಯ ಕುಮಾರನ ಜಾವಳಕ್ಕೆಂದು ಊರಿಗೆ ಬಂದರು (ದೀಪಕ. I, ೪೩). **ಜಾವುಳ:** ೧. "ಜಾವುಳ=ನವಿರು,ಕೂದಲು, ಜಡೆ" (ಶಂಸುಹು. ೯೭); ಕರಿಯಂಗಿ ಕಸೂತಿ ತಲೆತುಂಬ ಜಾವುಳ (ಹಳ್ಳಿಯ. ೭೦). [ ← ಮರಾ. ಜಾವಳ./ಸಂ. ಜಾತವಾಲ ]

**ಜಾವಳದವಸಿ** (ನಾ). ಹೀನನಾದ ತಪಸ್ವಿ; ನಾಡಾಡಿಯಾದ ಋಷಿ: ಜಾವಳದವಸಿಯ ಕವಡುಮಾಯೆಗೊಳಗಪ್ಪರೇಂ (ರಾಮಾಶ್ವ. ೬೭-೧೧) [ ಜಾವಳ$_2$ + ತವಸಿ$_1$ ]

**ಜಾವಳಿ$_1$**, ಜಾವಡಿ$_1$ (ನಾ). [ಸಂಗೀತ] ಶೃಂಗಾರ ಗೀತೆ; ಕಾಮ ಪ್ರಧಾನವಾದ ಗೀತೆ: ಪದವರ್ಣಗಳು ತಿಲ್ಲಾನಗಳು ಮತ್ತು ಜಾವಳಿಗಳನ್ನು ರಚಿಸಿದರು (ಸಂಗೀತ. ೨೮); ಶೃಂಗಾರಭಾವದಿಂದ ಕೂಡಿದ ಪದಗಳನ್ನೂ ಜಾವಳಿಗಳನ್ನೂ . . . ಅಳವಡಿಸಿಕೊಂಡಿದ್ದಾರೆ (ಅಧಾನ್ನ. ೫೭). **ಜಾವಡಿ$_1$**: "ಶೃಂಗಾರ ಕಾವ್ಯ; ಪ್ರಣಯಗೀತೆ; ಜಾವಡಿ" (Erotic. ಇಂಕನಿ); ಜಾವಡಿಗಳನ್ನು ಹಾಡುತ್ತಿದ್ದರು (ಮಾಮರಾ. ೧೨೯); ಮೋಹನ ರಾಗದಲ್ಲಿ ಒಂದು ಜಾವಡಿಯನ್ನೂ ರಾಗಮಾಲಿಕೆಯಲ್ಲಿ ಯಾವುದಾದರೂ ಒಂದು ಸಂಸ್ಕೃತ ಶ್ಲೋಕವನ್ನೂ ಹಾಡಬಹುದು (ಇಬದು. ೧೨೧). [ ದೇ.೫ ತಮಿ. ಜಾವಳಿ; ತೆಲು. ಜಾವಳಿ ]

**ಜಾವಳಿ$_2$** (ನಾ). ಕಿವಿಗೆ ಹಾಕಿಕೊಳ್ಳುವ ಮುತ್ತಿನ ಒಡವೆ; ಚೌಕಳಿ; ನಾಲ್ಕು ಮುತ್ತುಗಳ ಹತ್ತಕಡುಕು: ನೋವ ಗುರು ಇದಕ್ಕಂಜಿ ಹೇಳದ ಶಿಷ್ಯ ಕಿವಿಮೂಳ ಮೌಕ್ತಿಕದ ಜಾವಳಿಯ ಥಳಿಸಿದಂತೆ ನಾರಾಯಣ ಪ್ರಿಯ ರಾಮನಾಥ (ಗುಪ್ತಮಂ. ೯೬). [ <ಚೌಕಳಿ ]

**ಜಾವಳಿಗ** (ನಾ). ಸಾಮಾನ್ಯ ವ್ಯಕ್ತಿ; ಸಾಧಾರಣ ಮನುಷ್ಯ: ದೇವಿಯನು ನೀ ಮರುಳು ಮಾಡಿದೆ ಜಾವಳಿಗನಲ್ಲ (ಪ್ರಭುಲೀ. ೫-೩೯); ಜಾವಳಿಗರೊಳು ಲಿಂಗಸಂಗ ಸುಖಾವಳಿಯನಱುಹಿದೆನೊ (ಮದೀಪು. ೩-೨೬); ಈ ಜವ್ವನಂ ಬಱಿದೆ ಬಂದುದುಂಟೆ ರಾಯಕುವರಿಯಂ ಮರುಳಗೊಳಿಸಿದೆ ಜಾವಳಿಗ (ಪ್ರಭುಪು. ೫-೫೨). [ ಜಾವಳ$_2$ + - ಇಗ ]

**ಜಾವಳಿಸು** 'ಚಾವಲಿಸು' ನೋ.

**ಜಾವಳೆ** (ನಾ). ಚಂಚಲೆ; ಹೀನೆ: ಗಾಡಿಯ ಮೋಡಿಯ ಕವಡು ವಲೆಯನೊಡ್ಡಿ ಮಿಡುಕಿನ ಸೆಡಕುಗಾರ್ತಿ ಜಾವಳೆ ಸೀತೆ ತಾನೆ ತನಗೊಲ್ದು ನೀಱನಂ ರಾವಣನಂ ಕೆಯ್ಯಾಱೆ ಕೊಂದು ಕುಡಿದಳ್ (ರಾಮಾಶ್ವ. ೧೧೩-೨). [ ಜಾವಳ$_1$ (<ಚಾವಲ) + - ಎ$_2$ ]

**ಜಾವಾಳ** 'ಜಾಪಾಳ' ನೋ.

**ಜಾವಿಗೆ** 'ಜಾವುಗೆ' ನೋ.

**ಜಾವಿಗೆಬತ್ತಿ** (ನಾ). = ಜಾವುಗೆ: (ಸುಡುಮದ್ದಿನ ಬಾಣವನ್ನೂ) (ಗಣೆ ಮೊದಲಾದವುಗಳಲ್ಲಿ) ಸಿಡಿಮದ್ದನ್ನೂ ಹೊತ್ತಿಸಲು ಉಪಯೋಗಿಸುವ ಒಂದು ಬಗೆಯ ಜಾವಿಗೆ ಬತ್ತಿ (Port-fire. ಇಂಕನಿ). 'ಜಾಲಿಗೆ' ಪರಾ. [ ಜಾವಿಗೆ (<ಜಾವುಗೆ) + ಬತ್ತಿ ]

**ಜಾವು** 'ಜಾವ$_1$' ನೋ.

**ಜಾವುಗೆ, ಜಾವಿಗೆ** (ನಾ). ಸುಡುಮದ್ದುಗಳನ್ನು ಹತ್ತಿಸಲು ಉಪಯೋಗಿಸುವ ಸಾಧನ,–ಬತ್ತಿ : ಹಿಂದು ಮುಂದಾಗಿ ಕೋವಿಯನಾಂತು ಕೆಲಬರು ತಂದು ಎದೆಗೆ ಜಾವುಗೆಯ (ಜ್ಞಾನಜ. ೧೩-೪೦). **ಜಾವಿಗೆ.** 'ಜಾವಿಗೆಬತ್ತಿ' ಪರಾ. [ ←ಮರಾ. ರಖಾವ ]

**ಜಾವುಳ** 'ಜಾವಳ$_3$' ನೋ.

**ಜಾಸುದ್ದಾರ** (ನಾ). = ಜಾಸೂದು : ಸರ್ಕಾರಿ ಕಾಗದಗಳನ್ನು ತಲಪಿಸುವುದಕ್ಕೂ ಬೇಹುಗಾರರು, ಜಾಸುದ್‌ದಾರರು. ವರದಿಯವರು ಎಂದು ನೇಮಕವಾಗಿದ್ದರು (ಶಾಳೆಗಾ. ೫೫). [ <ಜಾಸೂದು + – ದಾರ್$_4$ ]

**ಜಾಸೂದ** 'ಜಾಸೂದು' ನೋ.

**ಜಾಸೂದು, ಜಾಸೂದ** (ನಾ). ಗೂಢಚಾರ; ಗುಪ್ತಚಾರ ; ಬೇಹುಗಾರ; ಹೇರಿಗ : "ಜಾಸೂದು ವೇಷಧಾರಿಗಳು=ಗೂಢಚಾರರು" (ಚಿತ್ರಶಾ. ೨, ಅನು). **ಜಾಸೂದ :** ಯುದ್ಧ ಜರುಗುತಾ ಇರುವಲ್ಲಿ ಇಬ್ಬರು ಜಾಸೂದರ ವೇಷಾ ಹಾಕಿಕೊಂಡು ದುರ್ಗದ ಸಮೀಪಕ್ಕೆ ಬರುತ್ತಿದ್ದರು (ಚಿತ್ರಶಾ. ೮೬). [ ←ಮರಾ. ಜಾಸೂದ್ ; ಅರ. ಹಿಂ. ಜಾಸೂಸ್ ]

**ಜಾಸ್ತಿ** (ನಾ). ಹೆಚ್ಚು ; ಅಧಿಕ ; ಅತಿಶಯಂ : ಯಾದವರಲ್ಲಿ ಯೆಷ್ಟು ಜಾಸ್ತಿ ಹುಟ್ಟುವಳಿಮಾಡಿಕೊಂಡಾಗ್ಯು (ಮೈಅರಿ. ೧೯೩೯, ೪೨-೧೧೨ :1825); ಕಮ್ಮಿ ಜಾಸ್ತಿಯ ಲೆಕ್ಕವಿದ್ದರಹಿತರು ಸಹಿತ ಫೈಸಲಿಗೆ ಬರುವಂತೆ ಕರಣಿಕರಿಗುಸುರು ನೀನೂ (ಅರ್ಜಿವಿ. ೩೦-೩೮) ; ಸಭೆಯಲ್ಲಿ ಗಲಾಟೆ ಜಾಸ್ತಿಯಾಯಿತು (ರಾಯುಳ. ೬೦) : ನವಾಬ್ರು ಸುತ್ತ 'ಕಿರುಬನ ಕಾಟ ಜಾಸ್ತಿ (ಚಂಗೂಲಿ. ೨೦). [ ←ಹಿಂ. ಮರಾ. ಜಾಸ್ತೀ ]

**ಜಾಹಕ** (ನಾ). ಇಲಿಯನ್ನು ಹಿಡಿಯಲಂ ಹೊಂಚು ಹಾಕುವ ಬೆಕ್ಕು : "ಜಾಹಕಃ, ಗಾತ್ರಸಂಕೋಚೀ, ಮಂಡಲೀ–ಈ ೩ ಇಲಿಯಂ ಹಿಡಿಯಲನುಗೆಯ್ವ ಬೆಕ್ಕು" (ಹಲಾಯು. ೪೦-೮೪). [ ಸಂ. ]

**ಜಾಹಿರಾತು** 'ಜಾಹೀರಾತು' ನೋ.

**ಜಾಹಿರು** 'ಜಾಹೀರು' ನೋ.

**ಜಾಹಿರ್ನಾಮು** 'ಜಾಹೀರುನಾಮೆ' ನೋ.

**ಜಾಹೀರನಾಮೆ** 'ಜಾಹೀರುನಾಮೆ' ನೋ.

**ಜಾಹೀರಾತಿ** 'ಜಾಹೀರಾತು' ನೋ.

**ಜಾಹೀರಾತು, ಜಾಹಿರಾತು, ಜಾಹೀರಾತಿ** (ನಾ). ಬಹಿರಂಗಪಡಿಸುವುದು; ಸಾರ್ವಜನಿಕರಿಗೆ ತಿಳಿಸುವುದು; ಪ್ರಕಟನೆ: ಕಣ್ಣು ಕೋರೈಸುವಂತೆ, ಬಣ್ಣಬಣ್ಣದ ದೀಪಗಳ ಪ್ರಕಾಶದಡಿ ಹೊಳೆಯುವ ಜಾಹೀರಾತುಗಳು (ವಾತ್ಸಲ್ಯ.೫೯); ಪತ್ರಿಕೆಗಳು ಬಾಳಿ ಬದುಕಿ ಜನ ಸೇವೆ ಮಾಡಬೇಕಾದರೆ ಜಾಹೀರಾತುಗಳು ಅವಶ್ಯ (ಗಾಳಿಗು. ೨೬) ; ಪ್ರತಿಭೆಯೊಂದಿರಬೇಕು ವ್ಯುತ್ಪನ್ನಮತಿಬೇಕು . . . ಕವಿಗೆ ಜಾಹೀರಾತು ಬೇಕು (ಇಂಚಾಪ. ೧೬೮-೬೮). **ಜಾಹಿರಾತು :** ತಾವಾಗಿ ಮೆರೆವುವು ಸುಜನರ ಗುಣಗಳು ಅದಕೆ ಜಾಹಿರಾತು ಬೇಕೆ? (ಇಂಚಾಪ. ೨೦೯-೮೩) ; ಪತ್ರಿಕೆ ಪುನಃ ಆರಂಭವಾಗುವುದು ಎಂಬ ಸುದ್ದಿಯನ್ನು ಬೇರೆ ಬೇರೆ ಪೇಪರುಗಳ ಜಾಹಿರಾತುಗಳಲ್ಲಿ ಪ್ರಕಟಿಸಿದ (ಅಪನಾ. ೧೬). **ಜಾಹೀರಾತಿ :** ಹಣದಿಂದ ಮಂದಿಯ ಮಾನಮಟ್ಟವನ್ನು ಅಳೆಯುವ ನೀತಿ ಜಾಹೀರಾತಿಯ ಜಗತ್ತು (ಮೂವಾದ. ೧೦೩). [ ←ಅರ. ಮರಾ. ಜಾಹೀರಾತ್ ]

**ಜಾಹೀರು, ಜಾಹಿರು** (ನಾ). ಪ್ರಸಿದ್ಧಪಡಿಸುವಿಕೆ ; ಪ್ರಕಟನೆ : ಅವನ ಉತ್ತರಾಧಿಕಾರಿಗಳಾಗಿ ಮಕ್ಕಳಿಬ್ಬರು ಇರುವುದರಿಂದಲೂ . . . ಒಂದು ಪ್ರಕಟನೆಯ ಜಾಹೀರು ಕೊಡಬೇಕು (ತ್ಯಾಗಮ. ೬೨) : ಹೊಲೆಯರ ಕೆಂಚ ಪದ್ಧತಿಯಂತೆ ಈ ಸುದ್ದಿಯನ್ನು ತಮಟೆ ಹೊಡೆದು ಊರಿಗೆಲ್ಲ ಜಾಹೀರು ಮಾಡಿದ (ಊರುಕ. ೫). **ಜಾಹಿರು :** ಟೀಪುಸುಲ್ತಾನರಿಗೆ ಫಿರಿಯಾದಿಯಾಗಿ ಜಾಹಿರು ಮಾಡಿದ್ದರಿಂದ (ರಾಜೇಂದ್ರ. ೨೦).

**ಜಾಹೀರುಮಾಡು** = ಜಾಹೀರುಪಡಿಸು : ಆತನ ರೋದನ ನಾರಾಯಣಿಯ ಸಾವನ್ನು ಜಾಹೀರು ಮಾಡಿತು (ರಂಗವ. ೧೦) ; ನಗರಕ್ಕೆ ಮತ್ತೊಮ್ಮೆ ಪ್ಲೇಗು, ಇಲಿಗಳು ಜಾಹೀರುಮಾಡಿದವು (ಸ್ವಕೀಜಿ. ೩೦೮). [ ←ಮರಾ. ಜಾಹೀರ್; ಅರ. ಹಿಂ. ಜಾಹಿರ್ ]

**ಜಾಹೀರುನಾಮೆ, ಜಾಹಿರ್ನಾಮೆ, ಜಾಹೀರನಾಮೆ** (ನಾ). ಪ್ರಸಿದ್ಧ ಪತ್ರಿಕೆ ; ಪ್ರಕಟನಪತ್ರ : ಈ ಎಲ್ಲಾ ಜಾಹೀರುನಾಮೆಗಳಲ್ಲಿ ಇಂಗ್ಲಿಷ್ ಶಬ್ದಗಳನ್ನು ತುಂಬಿದ್ದು ನೋಡುವಾಗ (ಪಾಶ್ಚಾವಿ. ೪೪೪). **ಜಾಹಿರ್ನಾಮೆ:** (ಮೈಗಜ. IV, ೬೬೧) ; (ಕೈಪಗೆ. II, ೫೫೦). **ಜಾಹೀರನಾಮೆ:** ಮಾಂಟಗೊಮ್ರಿ ಸಾಹೇಬರು ೧೯೧೭ರಲ್ಲಿ ಒಂದು ಜಾಹೀರನಾಮೆಯನ್ನು ತೆಗೆದರು (ಕಾಂಗ್ರೆಸ್. ೦೦) ; ಟ್ರಾಡರ ಅರಸರು ತಮ್ಮ ಮಂತ್ರಿಗಳ ಸಲ್ಲಾ ತೆಗೆದುಕೊಂಡು ಜಾಹೀರನಾಮೆಗಳನ್ನು ತೆಗೆಯುತ್ತಿದ್ದರು (ಇಂಗ್ಲಜ. ೦೮೬). [ ←ಹಿಂ: ಮರಾ. ಜಾಹೀರನಾಮಾ ]

**ಜಾಹೀರುಪಡಿಸು** (ಕ್ರಿ). ಪ್ರಸಿದ್ಧಪಡಿಸು ; ಎಲ್ಲರಿಗೂ ತಿಳಿಯಪಡಿಸು : ಹೆಮ್ಲಟ್ ನಾಟಕವೆಂದು ಜಾಹೀರುಪಡಿಸಿರುವದು (ಶ್ಯಾಮುಕಾ. ೨೩). [ ಜಾಹೀರು + ಪಡು$_1$ + – ಇಸು$_3$ ]

**ಜಾಹೆ$_1$** (ನಾ). ಜಾಗರ (?) : ಅರ್ಚಿತ ಅವಧಾನವನಱಿದ ಸತ್ಯನ ನಿತ್ಯನ ಇರವು ಮಯೂರನ ಜಾಹೆಯಂತೆ ಪಟುಭಟನ ಎಚ್ಚಱಿಕೆಯಂತೆ (ಶಿವಮಂ. ೯೬). [ ? ]

**ಜಾಹೆ$_2$, ಜಾಹ್ಯೆ** (ನಾ). ನಿದ್ರೆ ; ನಿದ್ರಾವಸ್ಥೆ ; ಸುಷುಪ್ತಿ ; ಜಡತೆ : ಜಾಹೆಯಲ್ಲಿ ಮಱೆದೊಱಗಿರಲಾಗಿ ತನುವ ತಟ್ಟದಡೆ ಅತ್ಮನೆಚ್ಚಱುವಂತೆ (ಶಿವಮಂ. ೬೯) ; ಕಾಲ ಪಸರಿಸಿ ಕಟ್ಟಿಕೊಳ್ಳುತ್ತ ಜಾಹೆಯಾಗಿ ಸುಮ್ಮನೆ ತಲೆಯ ಕುತ್ತುತ ಧನಹೀನನಾಗಿ (ಅಶ್ವಪ್ಯ. ೪-೨ ಟೀಕೆ). **ಜಾಹ್ಯೆ:** ದಿನದಲ್ಲಿ ಚಲನೆ ರಾತ್ರಿಯಲ್ಲಿ ಜಾಹ್ಯೆಗೊಳಗಪ್ಪುದು ಜೀವನೋ ಪರಮನೋ (ಪಾಬೊಮ್ಮ.೨೯); ಪೂರ್ವದಿಂದ ಉತ್ತರಕ್ಕೆ ಬಂದ ಸೂರ್ಯನಂ ಅಸ್ತಮಯವಾಯಿತ್ತೆಂದು ಜಾಹ್ಯೆಗೆ ಒಡಲಾಗಿ (ಅಪರೀ. ೬೬). [ ? ]

**ಜಾಹ್ನವಿ** (ನಾ). ಜಹ್ನುಮುನಿಯ ಮಗಳು ; ಜಹ್ನುಮುನಿಯ ಕಿವಿಯಿಂದ ಹೊರಕ್ಕೆ ಬಂದ ನದಿ ; ಗಂಗಾನದಿ : ಏದೊರೆ ಪೆಂಪೊ ಲಕ್ಷ್ಮಿ ನಿಜವಲ್ಲಭೆ ಜಾಹ್ನವಿ ತನ್ನ ಪಾದಪದ್ಮೋದಕಂ (ಜಗವಿ. ೦-೨೦) ; ಜಾಹ್ನವಿಯೇ ತೀರ್ಥದೊಳುತ್ತಮಂ (ಸೋಮೇಶ. ೪) ; ದಿವ್ಯರೂಪನಳವಡಿಸಿ ಜಗದಂಬೆ ಜಾಹ್ನವಿ ಸಲಿಲಮಧ್ಯದಿಂದೆದ್ದು ಬಂದು (ಕೃಮಿಥಾ. ೯-೨೮). [ ಸಂ. ಜಾಹ್ನವೀ ]

**ಜಾಹ್ನವೀಧರ** (ನಾ). ಗಂಗೆಯಂನ್ನು ತಲೆಯಲ್ಲಿ ಧರಿಸಿರುವವನಂ ; ಗಂಗಾಧರ ; ಶಿವ : ನರಶರದ ಜೋಡಿನ ಜುಂಜುವೊಳೆಯಲಿ ಜಾಹ್ನವೀಧರ ಜಾಱುವನೆ (ಕುಮ್ಯಾಅ. ೬-೪೦). [ ಸಂ. ]

**ಜಾಹ್ನವೀಮಕುಟ** (ನಾ). ಗಂಗಾನದಿಯಂನ್ನು ತಲೆಯಲ್ಲಿ ಧರಿಸಿರುವವನು ; ಗಂಗಾಧರ : ಜಯ ಜಾಹ್ನವೀಮಕುಟ ಜಯ ಜರಾಮರಣದೂರ (ಹಚಕಾ. ೧೦-೪೦). [ ಸಂ. (ಜಾಹ್ನವೀ + ಮಕುಟ) ]

**ಜಾಹ್ಯೆ** 'ಜಾಹೆ$_2$' ನೋ.

**ಜಾಳ$_1$** 'ಜಾಲೆ$_1$' ನೋ.

**ಜಾಳ$_2$** 'ಜಾಲ$_1$' ನೋ.

**ಜಾಳಂದರ** 'ಜಾಲಂದರ' ನೋ.

**ಜಾಳಂದ್ರ** 'ಜಾಲಂದ್ರ' ನೋ.

**ಜಾಳಂದ್ರುಗೆಯ್** (ಕ್ರಿ). ತೂತುಮಾಡು ; ಚುಚ್ಚು ; ಜರ್ಜರಿತವಾಗುವಂತೆ ಮಾಡು : ವಕ್ರೋಕ್ತಿನಖದಿಂ ನೃಸಿಂಹಾವತಾರಮಂ ಪುನರಭಿನಯಿಸುವಂತೆ ಕೋಮಲೆಯ ಹೃದಯಮಂ ಜಾಳಂದ್ರುಗೆಯ್ಯೆ (ಶ್ರೀರಾಮಾ. ೮೪೩-೪೩೫). [ ಜಾಳಂದ್ರ (<ಜಾಲಂದ್ರ) + ಕೆಯ್$_1$ ]

**ಜಾಳಂಧರ** 'ಜಾಲಂದರ' ನೋ.

**ಜಾಳಕ** 'ಜಾಲಕ' ನೋ.

**ಜಾಳಗಪ್ಪೆ** (ನಾ). ಒಂದು ಬಗೆಯ ಕಪ್ಪೆ: ಮೊದಲು ಕೋಳಿಯಂತೆ ನಡೆದು ಒಡನೆ ಜಾಳಗಪ್ಪೆಯಂತೆ ನಡೆದರೆ ವಾತಶ್ಲೇಷ್ಮನಾಡಿಯೆಂದರಿವುದು (ವಾಶಾಚಿ. ೭೫-೫). [ ಜಾಳ್₀ + ಕಪ್ಪೆ₁ ]

**ಜಾಳಗೆ** (ನಾ). ಹೆಣೆದು ಮಾಡಿದ ಚೀಲ; ಬಲೆಚೀಲ; ಕಲ್ಲಿಚೀಲ: ಕಿಲಜಗಲಿಯೊಳಿದರ್ೂಟಿಗದವನಿಂದೊಂದು ಜಾಳಗೆಯಂ ಕೊಂಡು (ಚಕವಿ. ೬-೨೬೬ ವ). 'ಜಾಳಿಗೆ' ಪರಾ. [ <ಸಂ. ಜಾಲಕ ]

**ಜಾಳತಿಯೋಗು** (ಕ್ರಿ). ಜರ್ಜರಿತವಾಗು; ತೂತಾಗು: ಅನೇಕ ಶಸ್ತ್ರ ಮುಖದಿಂ ತನು ಜಾಳತಿಯೋದ ನೋವಿನೊಳ್ ಕೂಗಿದೆ (ಅನಂಪು. ೯-೨೯). [ P ಇದು 'ಜಾಳರಿಯೋಗು' ಎಂಬುದರ ಅಪಲಿಖಿತವಿರಬಹುದು. ]

**ಜಾಳಮಾರ್ಗ** (ನಾ). ಕಿಟಕಿ; ಗವಾಕ್ಷದ ಕಿಂಡಿ: ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗಪ್ರಣಯಿನಿಯರಪಾಂಗ ಶ್ರೇಣಿಯೊಳ್ ಮಾಱು ಬಣ್ಣಂ ಪೆಣೆದೊದವೆ (ಆದಿಪು. ೧೦-೨೩) : ಚಿನ್ನದ ಕಂಬದ ರಮ್ಯ ಜಾಳಮಾರ್ಗದ ವಿಳಸತ್ಕವಾಟದ ವಿಚಿತ್ರ ವಿಭೂತಿಗೆ ಜನ್ಮಮಂದಿರಂ (ಪುಷ್ಪಪು. ೨-೯೩). [ ಜಾಳ್₂ (=ಜಾಲ₁) + ಮಾರ್ಗ ]

**ಜಾಳರ** 'ಝಾಲರಿ₂' ನೋ.

**ಜಾಳರಂಬೋಗು** (ಕ್ರಿ). ಜಾಲರದಂತಾಗು; ತೂತುತೂತಾಗು: ನಿಶಿತಾಸ್ತ್ರಹತಿಯಿನಾ ಮುನಿಯ ಶರೀರಂ ಕೂಡೆ ಜಾಳರಂಬೋಗಿರೆ . . . ಕಂಡು (ಪಾರ್ಶ್ವಪು. ೧೨-೮೫). [ ಜಾಳರ (<ಝಾಲರಿ) + ಪೋಗು₁ ]

**ಜಾಳರಿಗೆ** (ನಾ). ಜಾಲರಿಯಿಂದ ಕೂಡಿದ ಕಿಡಿಕೆ: ಇಂದ್ರನೀಲದ ಭದ್ರದೊಳಂ ಕರ್ಕೇತನದ ಜಾಳರಿಗೆಯೊಳಂ (ಶಂಪಘಾ. ೩-೭೪ ವ) :
[ <ಸಂ. ಝಲ್ಲರಿಕಾ ]

**ಜಾಳರಿಗೆಪೋಗು** (ಕ್ರಿ). = ಜಾಳರಂಬೋಗು: ಅಂಗೋಪಾಂಗಗಳೆಲ್ಲಂ ಶರಜಾಳಂಗಳ್ ಜಾಳರಿಗೆಪೋಗೆ ನಟ್ಟವು ಪಲರಂ (ವರ್ಧಮಾ. ೪-೫೮).
[ ಜಾಳರಿಗೆ + ಪೋಗು₁ ]

**ಜಾಳವಣೆ** (ನಾ). ಮೋಸ; ಕಪಟ; ಮಾಟ; ಮಾಯೆ: ಹುರುಡು ಜಾಣುಮೆ ಜಾಳವಣೆ [ಪಾಠಾಂ. ಚಳಬಳಿಕೆ, ಚಾಳವಣೆ] ಚಪ್ಪರಣೆ ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರಶಾ. ೦-೫-೩೨). [ ಜಾಳವಿಸು₁ (<ಜಾಲಿಸು) + – ಅಣೆ₄ ]

**ಜಾಳವಿಸು₁** 'ಜಾಲಿಸು' ನೋ.

**ಜಾಳವಿಸು₂** (ಕ್ರಿ). ಹೊತ್ತಿಸಂ; ಪುಟವಿಡು; ಉರಿಗೊಳಿಸಂ: ಚಪಳರು ಜಾಳವಿಸಿದರು ಹವ್ಯವಾಹನನ (ನಿಘಾಗ. ೭-೪-೪೮).
[ ಜಾಳ್₁ (<ಜಾಲ್₂) + – ಇಸು₃ ]

**ಜಾಳಾಂದರ** 'ಜಾಲಂದರ' ನೋ.

**ಜಾಳಾಂದ್ರ** 'ಜಾಲಂದರ' ನೋ.

**ಜಾಳಾಂಧರ** 'ಜಾಲಂದರ' ನೋ.

**ಜಾಳಿ** (ನಾ). (ಕುದುರೆಗಳಿಗೆ ಬರುವ) ಒಂದು ಬಗೆಯ ರೋಗ: ಆ ತಿರುಳಂ ನಾರುವ ಬೇಳೆಯುಮಿರದಳ್ಳಿಣ್ಣೆಯೊಳಗೆಯಿಕ್ಕೆ ಜಾಳಿಗಳಳಿಗುಂ (ಅಶ್ವವೈ. ೦೩-೦೬). [ ?./ಸಂ. ಜಾಲ = ಕಣ್ಣಿನ ಒಂದು ರೋಗ ]

**ಜಾಳಿಕ₁** 'ಜಾಲಿಕ₁' ನೋ.

**ಜಾಳಿಕ₂** 'ಜಾಲಿಕ₂' ನೋ.

**ಜಾಳಿಗೆ₁** (ನಾ). ೧. ಬಲೆ; ಜಾಲ ಎಲುವಿನ ಪಂಜರ ಕರುಳಿನ ಜಾಳಿಗೆ (ವಚಸಂ. ೪೫-೬೨) ; ಹೇಳು ಹೇಳೆನ್ನಾಣೆ ಮಾತಿನ ಜಾಳಿಗೆಯ ಮಱೆ ಬೇಡ (ಕುವ್ಯಾಕ. ೦-೦೧); ನಾನಿರುವ ಸ್ಥಳವು ದುಃಖವೆಂಬ ಜಾಳಿಗೆಯಿಂದ ತುಂಬಿದೆ (ಮುಂಜುಕ. ೦೦೯) ; ಅದರ ಜೊತೆಗಾರ ಹಕ್ಕಿ ಬಲೆಯ ಬಳಿ ಬಂದು ತನ್ನ ಚಂಚುವಿನಿಂದ ಜಾಳಿಗೆಯನು ಕಡಿದೆಸೆಯುವದರಲ್ಲಿ ತೊಡಗಿತ್ತು (ಅಶ್ರಮ. ೦೩). ೨. ಜೇಡನ ಬಲೆ,–ಗೂಡು: ಅದು (ಜೇಡ) ತನ್ನ ಆಹಾರದ ಜಂತುಗಳನ್ನು ಹಿಡಿಯುವುದಕ್ಕಾಗಿ ಒಂದು ತರದ ಸೂಕ್ಷ್ಮವಾದ ಜಾಳಿಗೆಯನ್ನು ಮಾಡುತ್ತದೆ (ಮುಂಬಯಿ. ೪-೦೦೮); ದೂರದರ್ಶಕ ಯಂತ್ರದ ನಳಿಕೆಯಲ್ಲಿ ಜೇಡವೊಂದು ಜಾಳಿಗೆ ಕಟ್ಟಿದರೆ (ವಿಜಾವಾ. ೭೯). ೩. ಜಾಳು ಜಾಳಾಗಿರುವ ಬಟ್ಟೆ,–ವಸ್ತ್ರ; ಜೀರ್ಣವಸ್ತ್ರ: ಬಟ್ಟೆಗಳೊಳು ಜಾಳಿಗೆಗಳು ಬಿದ್ದಿರೆ ಮುಟ್ಟಲಮ್ಮವು ಗದ್ದಲುಗಳು (ನಾಗಕು. ೨-೯೬). ೪. ಮುತ್ತು ಅಥವಾ ಮಣಿಗಳ ಸರಗಳಿಂದ ಮಾಡಿದ ಕುಚ್ಚು: ಸಾಲು ಮುತ್ತಿನ ಜಾಳಿಗೆ ಗೊಂಡ್ಯ ಶಿರದಲ್ಲಿ (ವಿದಾಳ್ಯ. ೧೧-೩) : (ಕೊಂಕಣಿಗರು)-ಲಗ್ನದಲ್ಲಿ ಇವರು ಮದುಮಗನ ಬಾಸಿಂಗಕ್ಕೆ ಬಿಳೀನೂಲಿನ ಜಾಳಿಗೆಯನ್ನು ಕಟ್ಟುವರು (ಕಥಾಗ. ೮೬). ೬. ಮಂಟಪ ಮೊದಲಾದುವುಗಳನ್ನು ಸಿಂಗರಿಸುವಾಗ ಕಟ್ಟುವ ಕುಚ್ಚು: ರಘುಗೆಯ ಲಹರಿಯ ಜಾಳಿಗೆಯ ಪಚ್ಚೆಗಳ ಪಾಗಾರದ ಸುರತ್ನಾಳಿಗಳಲೆಸೆದುದು ರಾಜಸಭೆ (ಕುವ್ಯಾಸ. ೦೩-೨೫) ; ಸಾಲ ರತುನಸ್ತಂಭನಿಕರದ ಜಾಳಿಗೆಯ ಮುತ್ತುಗಳ ಭಿತ್ತಿ (ನಿಘಾಗ. ೧೦-೯೭-೨೦). ೭. ಗುಂಪು; ಸಮೂಹ: " ಜಾಳಿಗೆ, ಕಿಕ್ಕಿಂದು . . . ಈ ೪೦ ಸಮೂಹಂ " (ಕಶಸಾ. ೦೦-೨೨೨) ; " ಜಾಳಿಗೆ ತೆಮ್ಮೆಲ್ ಗುಂಡೊಗ್ಗು ಗೊಬ್ಬೆಪೊಟ್ಟೆಲ್ ಪಂಡಿತರಿಂ ಗಡಣಮಂಗಡಂ ಕಿಕ್ಕಿಂದಂ " (ಕವಿಕಂ. ೦೦೬). ಹೇಳಲೇನದನುಬ್ಬಸದ ಬಲುಗೋಳದಲಿ ತನು ಸಿಲುಕಿ ಕ್ರಿಮಿಗಳ ಜಾಳಿಗೆಗೆ ತುತ್ತಾಗಿ (ನಿಘಾಗ. ೩-೦೪-೨೦). ೮. ಹೆಣಿಕೆಯಂ ಚೀಲ; ಕಲ್ಲಿ: ಕಳ್ಳನ ಜಾಳಿಗೆಯಂತೆ ಒಳ್ಳೆಯ ಮುದ್ರೆಯನಿಕ್ಕಿದಡೆ ಸುರಿದಲ್ಲಿಯು ಕಾಣಬಂದಿತ್ತು (ಬಿಕೀಶ್ಮ. ೨೫) : ಕಾಯಿಪಲ್ಲೆಗಳ ಜಾಳಿಗೆಗಳಿಗೆ ಎಣಿಕೆಯಿಲ್ಲ (ಕಟ್ಮಹೂ. ೨). ೯. ಹಣದ ಚೀಲ; ಥೈಲಿ; ಹಮ್ಮಿಣಿ: ಆರಾಧನೆಗೆ ಚಿತ್ರವುರವಣಿಸಿ ಜಾಳಿಗೆಗಳಂ ತರಿಸುತಂ ಮುದ್ರೆಗಳನೊಡೆದು (ಲಶರ. ೮-೨೦) ; ಧನವಿಲ್ಲವೆಂದು ಜಾಳಿಗೆಗಳಂ ಹೇಳದಿರಿಸಿಯೆ ಪೋಗಲ್ (ಲಶಿಚಂ. ೩೭-೬೫); ಮಾಳಿಗೆ ಮನೆಯೂ ಇರಲಿ ಜಾಳಿಗೆ ತುಂಬಿ ಹೊನ್ನಿರಲಿ (ಪುರಂದ. ೨-೫೧-೮) ; ನಿಡುಬೊಂಬೆ ಪಟ್ಟೆ ಪಚ್ಚಡವಿತ್ತು ವೀಳೆಯಗೊಡುತ ಜಾಳಿಗೆ ನೂಱಗೊಟ್ಟು (ಭರಹ. ೨-೯೯) ; ಅರಸುಗಳೆಲ್ಲರು ಜಾಳಿಗೆ ಜಾಳಿಗೆ ಸುರಿದು ಸೇಸೆಯನಿಕ್ಕಿದರು (ಜಿನಶಾ. ೯-೬೩). ೧೦. (ಉಕ) ಬುಗುರಿಯನ್ನು ಆಡಿಸಲು ಉಪಯೋಗಿಸುವ ಹುರಿ,–ಚಾಟಿ: ಬೆಲ್ಲವತ್ತದ ಕಾಯ ಬುಗುರಿಯಲಿ ಜಾಳಿಗೆಯ ಸುತ್ತಿ ಬಿಚ್ಚಲು ನಾದ ಭೋಂಕಾರವು (ಭಾವಜೀ. ೪-೬೫). ೧೧. (ಆಲಂ) ತಂತ್ರ; ಕಪಟ; ವಂಚನೆ: ಅನೇಕ ಅಬಲೆಯರನ್ನು ಜಾಳಿಗೆಯಲ್ಲಿ ತೊಡಗಿಸಿ ಅವರ ಸತ್ವವನ್ನು ಹರಣಮಾಡಿದ (ಸ್ವಾಮಿ. ೦೮೬).
[ <ಸಂ. ಜಾಲಿಕಾ ]

**ಜಾಳಿಗೆ₂** (ನಾ). ೧. ಜಾಲಿಸುವಿಕೆ; ಚೆನ್ನಾಗಿ ಕೊಳೆಹೋಗುವಂತೆ ನೀರಿನಲ್ಲಿ ಜಾಲಾಡುವಿಕೆ. ೨. (ಆಲಂ). ಶುಚಿತ್ವ; ಪರಿಶುದ್ಧಿ: ವಿಜಯವಿಠಲನ ಸನ್ನಿಧಿಯಲ್ಲಿ ಜಾಳಿಗೆಯಿಂದ ಜನನ ನೀಗಲಿಬೇಕೋ (ವಿದಾಳ್ಯ. ೧೫೦-೬). [ <ಜಾಳಿಸು₁ + – ಗೆ ]

**ಜಾಳಿನಿ** 'ಜಾಲಿನಿ' ನೋ.

**ಜಾಳಿಯೂರು** (ನಾ). ಒಂದು ಊರಿನ ಹೆಸರು: ತಸ್ಯಪೂರ್ವ್ವತಃ ಜಾಳಿಯೂರು ನಾಮಗ್ರಾಮಃ (ಮೈಆರಿ. ೦೯೩೫, ೪೦-೫೮ : 951).
[? + ಊರು₃ (<ಊರ್) ]

**ಜಾಳಿಸು₁** (ಕ್ರಿ). ೧. ಚಲಿಸು; ನಡೆ; ಹೋಗು: ಶಕುಂತಪಾಳಿಕೆಯುರ್ ಪೊಱಗೆ ವಾಸಯಷ್ಟಿಗಳೊಳ್ ನಿಱಿದ ಪೊನ್ನ ಪಂಜರದ ಪುಗಿಲ್ಗಳಿಂ ಜಾಳಿಸಿ ಪೊಕ್ಕು (ಚಂದ್ರಪು. ೮-೪೩ ವ); ಕುಣಿವುತುಂ ಕೂಗುತುಂ ಜಾ[ಪಾಠಾಂ. ಚಾ]ಳಿಸುತ್ತುಂ ಜರಿವುತುಂ ನೋಡಿ ಹಿಗ್ಗುತುಂ (ನಂಬಿರ. ೧೧-೬೮) : ಜಾಳಿಸಿದ ಜಯಕಾಮಿನಿಯ ಜಂಘಾಳತನವನ್ನು ನಿಲಿಸಿ ನಿನ್ನಯ ತೋಳಿನಲಿ

ತೋಱುವೆವು (ಕುಮ್ಯಾ.ಗ. ೪-೩೪) : ಪಿಸುಣರಿಂದಾರೈಶ್ವರಿಯ ಜಾಳಿಸದು ಜಗದಲಿ (ತೊರಠಾ. ೨-೦-೪೦) : ಜಾಳಿಸಿದನಿಂದ್ರನನಲಂ ಪೋದನಂತಕಂ ಕಾಲ ಬೇಗಂದೋಱಿದಂ (ಚಬಪು. ೩೯-೩೬). ೨. ಹರಿ ; ಸುರಿ : ನೆರೆದ ಪೌರಜನ ಜಾಳಿಸುವ ಕಂಬನಿಗಳಲಿ ಬಱುನಾಲಿಗೆಯು ಬೈಗುಳಲಿ ಮುನಿಯನು ಕೀಳುನುಡಿಯಲಿ ಜಱಿವುತಿರ್ದುದು (ತೊರಠಾ. ೧-೯-೪೩) : ಜಾಳಿಸುವ ರಕ್ತಪ್ರವಾಹದೊಳ್ ಕೌರವನೃಪಾಲ ಭೂಶಯನಮಂ ಕಾಳರಲ್ (ತುರಂಗ. ೭೬-೧). ೩. ಅಲುಗು ; ಕಂಪಿಸು ; ನಡುಗು : ತೋಳ ತೊವಲುಗಳೀಳ್ದು ನೀಳದಿಂ ಜೋಲುತಿರೆ ಜಾಳಿಸುತ ಕಾಲುಡುಗಿ ಕೋಲೂಱಿ ನಿಲ್ಲುತಿರೆ (ಬಿಠಡೀಠ. ಹ. ೩೦೩-೧೬). ೪. ಸೇರು ; ಕೂಡು ; ಬೆರೆ: ತುಂಬಿಗಳ ನುಣ್ಬರದೊಡನೆ ಜಾ[ಪಾಠಾಂ. ಜೋ]ಳಿಸಿ ಮಾಣವಾಣತಿಗೊಡುವ ಗಾಯಕರ (ಮಾಉರ. ೧೦೬-೨೦) : ಜಾ[ಪಾಠಾಂ. ಚಾ]ಳಿಸಿದು ದಪಕೀರ್ತಿಯಕಟಾ ವಿಟ್ಠಾಳಿಸಿತು ಯದುವಂಶವೆನೆ (ಕುವ್ಯಾ.ಆ. ೧೯-೪೦). ೫. ಬೀಸು ; ಜಳಪಿಸು : ತೋಳಡವಿಯೊಳು ಪೊಕ್ಕು ಕೊಡಲಿಯ ಜಾಳಿಸಿಯೆ ತಱಿದೊಟ್ಟಿ ಸವಿಧೆಯ ಮಾಳಿಗೆಯ ಮಾಡಿದನು (ಕುವ್ಯಾ.ಆ. ೬ಠಿ೩. ೨೬-೩೨). ೬. ಅಟ್ಟು ; ಕಳುಹಿಸಂ : ತಡೆದ ರಕ್ಕಸ ತಳವಱರ ಜವನೆಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನ ಸಂಕುಲವ (ತೊರಠಾ. ೫-೨-೦೬). ೭. ನೀಗು ; ಹೋಗಲಾಡಿಸು ; ಕಳೆ ; ನಿವಾರಿಸು : ಅಸುವಿದ್ದೇನಿದ್ದೇನು ಫಲವೆಂದುಸುರಲಾ ಜಾಬಾಲಿ ಮುನಿ ಜಾಳಿಸಿದನಂತಸ್ತಾಪವನು ಬಳಿಕಾ ನೃಪಾಲಕನ (ತೊರಠಾ.೩-೨-೬); ಆ ಸೈಂಧವನ ನಾಳೆ ಕೊಲ್ಲದೊಡುರಿಗೆಂಡದೊಳಗೆ ಬಿಳ್ದು ಜಾಳಿಸುವೆನು ದೇಹವನು (ನೇಮಿಸಂ. ೨೮-೧೪೮). ೮. ಇಳಿ ; ಕುಗ್ಗು : ನಸ್ಯವಿಾಯಲ್ ಜಾಳಿಸುಗುಂ ಸರ್ಪವಿಷಂ (ಖಮುದ. ೭-೧೭). ೯. ನಿಂದಿಸು ; ಬಯ್ಯು : ವ್ಯಥೆಗಿದನು ಮನದೊಳಗೆ ವಿಧಿಯನು ಜಱಿದು ಜಾಳಿಸಿ[ಪಾಠಾಂ. ಧ್ಯಾನಿಸಿ] ಯಕ ಕಟ್ಟಾಸರು ಮಹಾತಾಪರಿಗೆ ಬಂದುದೆ ಶಿವಶಿವಾಯೆಂದ (ತೊರಠಾ. ೪-೨-೫). ೧೦. ಜೋಡಿಸು ; ಕೂಡಿಸು; ಸೇರಿಸು: ಜಾ[ಪಾಠಾಂ. ಚಾ]ಳಿಸಿದ ಹದವಿಲ್ಲುಗಳ ಬಡಿಕೋಲುಗಳ ಸಂಕಲೆಯ ನಾಯ್ಗಳ (ಕುವ್ಯಾ.ಆ. ೫-೩೩) : ಅಖಿಳ ವೇದವಮಂ ಜಾಳಿಸಿಯೆ ಕದ್ದು ಪೊಕ್ಕಂಬುಧಿಯೊಳ್ (ಅಶಿಜಂ. ೭-೧). [ <ಚಾಲಿಸು ]

ಜಾಳಿಸು$_2$ 'ಜಾಲಿಸು' ನೋ.

ಜಾಳು$_1$ (ನಾ). ೧. ಹುರುಳಿಲ್ಲದಂದು ; ಪೊಳ್ಳಾದುದು ; ನಿಸ್ಸತ್ತ್ವವಾದುದು : "ಜಾಳಿನ ಪೊಳ್ಳಿನ ತಾಂ ನಿಷ್ಪ್ರಯೋಜನಾರ್ಥವುದಕ್ಕುಂ" (ಧಾರವಿ. ೫೭) ; ಶ್ರೀರಾಮನಾಳೀಕ ವೇಗದಿಂ ಪೋಪೆನಗೆ ಜಳರಾಶಿ ಜಾಳಿನಿಸದಿದಿರಾಗಲೆನಿತುಂಟು (ತೊಠಾ. ೫-೧-೧೮). ೨. (ಆಲಂ) ಕೈಲಾಗದವ; ಹೇಡಿ ; ನಿಷ್ಪ್ರಯೋಜಕ : ಜಾಳ ಜಱಿದು ಜಡಾತ್ಮರಿಗೆ ಜಂಘಾಳತನವನು ಮೆಱಿದು (ಕುವ್ಯಾ.ಕ. ೧೬-೨೧) ; ಕಾಳಗಕೆ ಮೈದೋಱ ಬಾರದೆ ಭೀಮಫಲುಗುಣರು ಜಾ[ಪಾಠಾಂ. ಚಾ]ಳ ನೂಕಿಸಿ ಹೊತ್ತುಗಳೆವರು ಹೇಳ ಫಲವೇನಿನ್ನು (ಕುವ್ಯಾ.ಭೀ.೯-೧೬); ಜಾಳುಗಳೊಳಗುಗಾಣಿಸುವುದಲ್ಲದೆ ತತ್ತ್ವಶೀಲನೊಳಗ ಕಾಣ್ಬರಾರು (ಛರಪ. ೫-೦೦೩).

ಜಾಳಾಗು = ದೃಢಭಾವವಿಲ್ಲದವನಾಗು ; ಯಾವ ಕಾರ್ಯಕ್ಕೂ ಬಾರದವನಾಗು : ಇಹದಲ್ಲಿ ಪರದಲ್ಲಿ ಪರಿಣಾಮಿಗಳಗಲಿ ಇಂತಿವಕ್ಕೆ ದೂರವಾಗಿ ಬಾಳುಗೆಟ್ಟು ಬೀಳಾದೆ ಜಾಳಾದೆ (ಪೋಳಮಾ. ೯೬-೩೭೯).

ಜಾಳುಬೋಳು = ಬೆಲೆಯಿಲ್ಲದ ವ್ಯಕ್ತಿ : (ಕ). [ <ಜಳ್ಳು ]

ಜಾಳು$_2$ (ನಾ). ನೆಯ್ಗೆಯಲ್ಲಿ ಎಳೆಗಳು ಒಂದಕ್ಕೊಂದು ದೂರವಾಗಿರುವುದು ; ಒತ್ತೊತ್ತಾಗಿ ಇಲ್ಲದಿರುವುದು : ಜಾಳಾಗಿ ನೆಯ್ದ ಬಟ್ಟೆಗಳು ಹೆಚ್ಚುದಿನ ಬಾಳಿಕೆ ಬರುವುದಿಲ್ಲ (ಗೃಹವಿ. ೭೯) ; ಆ ಪಾಣಿಪಂಚೆ ಎಷು ಜಾಳಾಗಿತ್ತೆಂದರೆ (ಮಲಆ. ೯೮).

ಜಾಳುಜಾಳು (ದ್ವಿರುಕ್ತಿ) : ಅಂಥ ಸಂದರ್ಭದಲ್ಲಿ ಅವನ ನುಡಿವುಗ್ಗ ಜಾಳುಜಾಳಾಗಿ ಕಾಣುತ್ತದೆ (ಸಂಜುಂಡ. ೧೦೭). [ <ಜಾಲ$_1$ ]

ಜಾಳುಗೊಳಿಸು (ಕ್ರಿ). ಹೀನಗೊಳಿಸು ; ಹಾಳುಮಾಡು : ಖಳ ಮಾತಾಕೃತ್ಯ ಕುಲದ ಸಚ್ಚರಿತೆಯಂ ಜಾಳುಗೊಳಿಸಿದುದು (ವಂಕಾರಾ. ೨-೨೭-೧). [ ಜಾಳು$_1$ + ಕೊಳ್$_1$ + – ಇಸು$_3$ ]

ಜಾಳುಜೀವ (ನಾ). ಉಪಯೋಗವಿಲ್ಲದ ಪ್ರಾಣಿ ; ಯಾವ ಪುರುಷಾರ್ಥವನ್ನೂ ಸಾಧಿಸಲಾಗದವನು ; ಬಣಗು ಮನುಷ್ಯ : ಕೇಳಿದ್ಯ ಶ್ರುತಿ ವಾಕ್ಯವಾದುದ ಜಾಳುಜೀವರು ಹಲರು ಹರಿಯಲಿ ಕೀಳುಗಳು ಬ್ರಹ್ಮಾದಿ ದೇವಪರೆಂಬ ಶ್ರುತಿಕೋಟಿ (ಸಂಛಪ. ೮-೭೩). [ ಜಾಳು$_1$ + ಜೀವ ]

ಜಾಳುದಕ (ನಾ). ಸೋಸಿದ ನೀರು (?) : ನೀಳವಾಗುತ್ತರಿಸಿ ಲವಣಿಸುತ ವಚನಿಸುತ ಜಾಳುದಕಮಂ ತೆಗೆದು ಗುಡಮನಿಡುತಲಱಿದು ಮೇಳವಿಸಿ ತಿಲಕುಟಜಗಂಧಕೃಚ್ಛ್ರವಣವಣ ಜವಾಳುಕಮರೀಚರಜವ ಬಾಳುಕದೊಡನೆ ತಳಿದು ಹದವಡವುದನುಗ್ಗೈದು (ಲಿಂಗಪು. ೮-೩೭).

[ <ಜಾಳಿಸು$_2$ + ಉದಕ$_2$ ]

ಜಾಳುದೈವ (ನಾ). ಕ್ಷುದ್ರದೇವತೆ: ಜಾಳುದೈವದ ಪಾಳೆಯವನು ಸದೆಬಡಿದು ಕಾಲನ ಪುರಕೀಡಾಡಿದ ಜ್ವಾಲಾಮಾಲಿನಿಗಾನೆಱಗುವೆನು (ಅಂಜಿಕ. ೧-೩೯).

[ ಜಾಳು$_1$ + ದೈವ ]

ಜಾಳುನುಡಿ, ಜಾಳ್ನುಡಿ (ನಾ). ೧. ಪೊಳ್ಳುಮಾತು ; ಕೆಲಸಕ್ಕೆ ಬಾರದ ಮಾತು ; ವ್ಯರ್ಥಾಲಾಪ : ಬಿಡು ಜಾಳುನುಡಿಗಳ ಜವಳಿವಾತನೆನುತ್ತ ನರನೆಚ್ಚ (ಕುವ್ಯಾ.ಕ. ೨೨-೨೪). ೨. ಸುಳ್ಳು : ನಾಳೆ ನಾಳಿದ್ದು ಬರುತ್ತಾರೆಂದು ಜಾಳುನುಡಿಗಳಿಂದ ಸಾರಿ ಸಾರಿ ವ್ಯರ್ಥವಾಗುವುದು ಸರಿಯಲ್ಲ (ಕಾಂಸಂ. ೦೩, ಪ್ರಸ್ತಾವನೆ); ಜಾಳ್ನುಡಿ: ೧. ಮನಬಂದಂತೆ ಬೋಧ ಜಾಳ್ನುಡಿಗಳಿಂದ ಖಿಲರಾಡುತಮಿರ್ದರ್ (ವಂಕಾರಾ. ೪-೦೮-೨೮). [ ಜಾಳು$_1$ + ನುಡಿ$_2$ ]

ಜಾಳುಮನುಜ (ನಾ). ಕ್ಷುದ್ರ ಮನುಷ್ಯ ; ಕೈಲಾಗದವನು : ಗಾಳಿ ಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ ಬೇಗ . . . ಜಾಳ[ಳು] ಮನುಜರಿರಾ (ಅಜಂಡೀ. ೬೪-೨೨). [ ಜಾಳು$_1$ + ಮನುಜ ]

ಜಾಳುಮಾತು (ನಾ). = ಜಾಳುನುಡಿ ೧ : ಕೂಳು ಪ್ರಸಾದವೆಂದು ನುಡಿವ ಜಾಳುಮಾತ ಕೇಳಿ ಕೂಳಿಂಗೆ ಆಳಾಗಿ (ಅದವ. ೨೪-೭೦) : ಹಾಳುಗುಡಿಯಲಿ ಕುಳಿತು ಜಾಳುಮಾತುಗಳಾಡಿ ಮೇಳಗಳ ಬಿಡದ ಶಿವಯೋಗಿ ಶಿವನಾಗಿ ಬಾಳುವನೆ (ಸರ್ವಜ್ಞ. ೫೮೬). [ ಜಾಳು$_1$ + ಮಾತು$_1$ ]

ಜಾಳುವಲೆ (ನಾ). ಒಂದು ಬಗೆಯ ಬಲೆ : ಕಾಲಸುಭಟರು ದೋಣೆದಲೆಗಳ ತೋಳ ಖಂಡಿಯ ಜಾಳುವಲೆಗಳಪೋಲಿಯೇರಿನ ದೋರಿವಲೆಗಳಲೈದೆ ಕೂಡಿದರು (ಸಂಛಪ. ೮-೦೦೩). [ ಜಾಳು$_2$ + ಬಲೆ$_1$ ]

ಜಾಳುವೆಣ್ (ನಾ). ದುರ್ಬಲಳಾದ ಹೆಂಗಸು; ಕೈಲಾಗದ ಹೆಣ್ಣು: ಜಾಳುವೆಣ್ಣುಗಳುಪವಾಸವ ಮಾಡಿವರೇಳಲಾಱರು (ಛರಪ. ೧೮-೧೩೫).

[ ಜಾಳು$_1$ + ಪೆಣ್ ]

ಜಾಳಿ 'ಚಾಲಿ$_1$' ನೋ.

ಜಾಳೆದೆ (ನಾ). ಪೊಳ್ಳಾದ ಹೃದಯ ; ಹೇಡಿ ಮನಸ್ಸು : ಜಾಳೆದೆ [ಪಾಠಾಂ. ಲೆ] ಧೈರ್ಯದಲಿ ಸರ್ಪನ ಹೇಳಿಗೆಯ ಶಾಂತಿಯಲಿ . . . ಖಳ ತನ್ನೋಲಗಕೆ ನಡೆತಂದು ಮಂತ್ರಿಪ್ರಕರಕಿಂತೆಂದ (ಅಳ್ರೂಪ. ೭-೮).

[ ಜಾಳು$_1$ + ಎದೆ (<ಎರ್ದೆ) ]

ಜಾಳ್ಕಿಸು 'ಜಾಲಿಸು' ನೋ.

ಜಾಳ್ಕೆ (ನಾ). (?) : ಮಾಯಮಂ ಪರಿದೊಡನೆ ಶಿಖರಾಗ್ರದಲ್ಲಿರ್ಪ ಪೀಯೂಷ ಫೇನಮಂ ಜಿಹ್ವಾಗ್ರದಲ್ಲುಣಬೇಕವಂ ನೆರೆ ಜಾಳ್ಕೆನು (ಶಠಟು. ೯-೫). [ ? ]

ಜಾಳ್ನುಡಿ 'ಜಾಳುನುಡಿ' ನೋ.

**ಜಾಱಾಗು** (ಕ್ರಿ). ತಪ್ಪಿಹೋಗು ; ಇಲ್ಲದಂತಾಗು ; ನಷ್ಟವಾಗು : ಜಯಸಮರ ಜಾಱಾಯ್ತು ತೆಗೆ ಪಾಳಯಕೆ ಮರಳಿಚು ರಥವನು (ಕುಮ್ಯಾ.ಕ. ೧೯-೩). [ ಜಾಱು₃ + ಆಗು₁ ]

**ಜಾಱಿಸು, ಜಾರಿಸು** (ಕ್ರಿ). ೧. ಹೋಗುವಂತೆ ಮಾಡು; ಕಳೆದುಬಿಡು: ಜವ್ವನಮಂ ಜಾಱಿಸಿ ಸುಖಮಂ ಸೂಱೆಗೆಳೆದು (ಸಂಬಿರ. ೦೬-೫೮). ೨. ಬಿಟ್ಟುಕೊಡು ; ಹೋಗಗೊಡು ; ಸೋಲು : ಕೋಱ ನುಡಿದರೆ ಭೀಷ್ಮದ್ರೋಣರು ಜಾಱಿಸಿದ ರಣವಮಗೆ ಸದರವೆ ದೂಱುವವರಾವಲ್ಲವೆಂದನು ಭಾನುಸುತ ನಗುತ (ಕುಮ್ಯಾ.ಕ. ೦-೨೪). ೩. ಎಸೆ ; ಬಿಸುಡು : ಪಾಳೆಯವ ಸೂಱೆಯನಾಡಿ ಗೂಡಾರಗಳನು ಕಿತ್ತು ಜಾಱಿಸಿದರು ದೆಸೆದೆಸೆಗೆ (ಕಂನವಿ. ೧೭-೮೦). ೪. ಸರಿಸು ; ಕದಲಿಸು ; ಓಸರಿಸು : ಹೇಳಿಗೆಯ ಮುಚ್ಚುಳ ಜಾಱಿಸಿದ ಫಣಿಯಂತೆ ಭುಲ್ಲವಿಸಿತ್ತು ಕುರುಸೇನೆ (ಕುಮ್ಯಾ.ಕ. ೨೩-೩೮) ; ಮಱೆದು ಮಲಗಿದಳೆವಳು ಮಗ್ಗುಲ ಸೆಱಗ ಮೆಲ್ಲನೆ ಜಾಱಿಸುತಲಾಗರಸ ವಸನವ ಕೊಂಡು ಮಲಗಿದ ಸತಿಯನೀಕ್ಷಿಸುತ ಮಱುಗಿದನು (ನಳಚ. ೩-೧೭) ; ಸುರತಾಂತದ ಶ್ರಮವಳಿವೊಡೆ ಮೈದಿಲ ಸೆಱಗ ಜಾಱಿಸಲಂಗನೆಯ ಮಿಱುಗುವ ಬಡ ಬಾಸೆಯೊಪ್ಪಿತು ಮುಖಚಂದ್ರಗುರವಣೆಸುವ ರಾಹುವೆನಲು (ಕಂನವಿ. ೬-೧೨೪). ೫. ಹಿಮ್ಮೆಟ್ಟಿಸು ; ಹಿಂದಕ್ಕೆ ತಳ್ಳು : ಹಿಮದಿಂದೆ ತಣ್ಣಸಂ ಬಡೆದಿರ್ದ ಮಾಗಿಯಂ ಕ್ರಮದಿಂದೆ ಜಾಱಿಸಿ ವಸಂತರ್ತು ತಲೆದೋರ್ದ ಸಮಯದವೊಲು (ಜೈಮಿಭಾ. ೩೦-೦೬). **ಜಾರಿಸು:** ೧. ಪ್ರೀತಿಕರ ನುಡಿಗಳು ಬೀರಿ ಜಾರಿಸಿದನಶ್ಯಾತುರದ ದುಃಖಮಂ (ವಂಶಾಂಶ. ೨-೨೨-೩೭). ೪. ಕುಕ್ಕೆಗಳನ್ನು ಒಂದಾದಮೇಲೆ ಒಂದನ್ನು ಹೆಗಲ ಮೇಲಕ್ಕೆ ಜಾರಿಸಿ ಕೊಳ್ಳುತ್ತಿದ್ದೆ (ಹಂಗಾಳ್ಕ.೫೦). ೬. (ಆಲಂ) ಲಪಟಾಯಿಸು; ಅಪಹರಿಸು: ಮನೆಯಜನರೆಲ್ಲ ಬೇರೆ ಬೇರೆ ಕಾಮಗಾರಿಕೆಯಲ್ಲಿ ಮಗ್ನರಾಗಿದ್ದಾಗ . . . ಒಂದು ರೂಪಾಯಿ ಜಾರಿಸಿಯೇ ಬಿಟ್ಟಿದ್ದನು (ಕಲಳ. ೨೪).

[ ಜಾಱು₃ + – ಇಸು₃ ]

**ಜಾಱು₁, ಜಾರು₁** (ಕ್ರಿ). ೧. ಜಗುಳು ; ನುಣುಚಿಕೊಳ್ಳು ; ಕಳಚಿಕೊಳ್ಳು ; ತಪ್ಪಿಸಿಕೊಳ್ಳು : "ವೈಸರಿಸಿತನಲ್ಕೆ ಜಾಱಿತಂದಱಗೆ" (ಛಾಲಿವಿ. ೩೩) ; "ಜಗುಳಿತೆನಲ್ ನುಣ್ಚಿತೆನಲು ಜಾಱಿದುದದು ತಾಂ" (ಕವಿಕಂ. ೨೩೭); ತನ್ನ ಭೀಕರ ಗದಾಘಾತದೊಳಂ ಜಾಱಿ ಪಱಪಱದು ತೊಱುಪಾಱಾದ . . . ತುರಂಗಮಂಗಳಡಿಯೊಳಡಂಗಿದನೆ ಗೆತ್ತು (ಗದಾಯು. ೬-೨೮ ವ) ; ಪರಬಲಕೆ ಜಾಱುವ ಜಯಸಿರಿಯ ಮುಂದಲೆಯ ಹಿಡಿಹಿಡಿಯೆನುತ ಹೆಕ್ಕಳಿಸಿದನು ಕುರುರಾಯ (ಕುಮ್ಯಾ.ಕ. ೨-೫೦) ; ಜಾಱಿತು ಜಾಣ್ಮೆ ಬಿಂಕಮರಗೊಂಕಿತು (ಚಿಳವಿ. ೬-೨೦೯). ೨. ಹೆಜ್ಜೆಯ ಹಿಡಿತ ತಪ್ಪು : ಬಾವಿಯ ಸೋಪಾನಮನಡರುತ್ತುಂ ಜಾಱುವಂದು (ಜಾಪುಂಪು. ೨೦-೨೪). ೩. ಮೇಲಿನಿಂದ ಕೆಳಗೆ ಸರಿ : ಜನಬಸದಿಗಳನೇಱ ಯಲ್ಲಿಂದಿಳಿಯ ಜಾಱುತ (ಬಸಪು. ೫೨-೦೩) ; ಕೈಪಱಗುಟ್ಟುವಂಡಲಗೆ ತೇಲ್ದು ಮೇಲುದು ಜಾಱ (ಜೈಮಿಭಾ. ೩-೬). ೪. ತಪ್ಪು ; ಹಾಳಾಗು : ನುಡಿದ ನುಡಿ ಜಾಱದಡೆ ಮನಕ್ಕೆ ಮನ ನಾಚಬೇಕು (ಬಸವ. ೬೬೭). ೫. ಕಳ್ಳ ಹೆಜ್ಜೆಯಲ್ಲಿ ಹೋಗು; ಕದ್ದುಹೋಗು: ಜಾಱ ನಿಜ ಜಾಱ ಸೋರ್ಮುಡಿ ಜಾಱ ಬೆಮರ್ದಾಱ ಮೇಲುದಂ ಮುಡಿದಲರ್ಗಳ್ ಜಾಱ ಮುದಂ ಜಾಱ ಮದಂ ಜಾಱ ಪದಂಜಾಱ ಜಾರೆ ಜಾಱದ ಕೊರ್ವರ್ (ರಾಜಶೇ. ೦೨-೯). ೬. ಹಿಮ್ಮೆಟ್ಟು ; ಹಿಂಜರಿ : ಸರಳಿಂಗೆ ತಮ್ಮನ ನೀಡಿ ತೋಱಿಸಿ ಜಾಱುತದೆಯಣ್ಣಂದಿರಾದವರು (ಕುಮ್ಯಾ.ಕ. ೨೪-೦೮) ; ಜಾಱಿತು ಮಹದಾದಿ ಶೀತ ಬೇಸಗೆ ಮಯ್ದೋಱಿತು (ಮೋಹತ. ೪-೪೮). ೭. ಮೀರು : ಜಾಱದೆನೆ ದಿನದಿನಕೆ ನಿಯಮಾಚಾರ ಭಾಷೆಗಳ (ಬಸಪು. ೪೪-೦೮). **ಜಾರು₁ :** ೧. ಹೊರಬರುವಳು ಶಿವನೆಡದಿಂ ಜಾರಿ ಜಗನ್ಮಾತೆ ರುದ್ರಜಾಯೆ ಗೌರಿ (ಗಣೇಶ. ೦೩-೪೨೦) : ಜವಾನನ ಮುಖಾಂತರ ನನಗೆ ತಿಳುಹಿ ಜಾರಿ ಬಿಟ್ಟಿದ್ದಳು (ಮಧುವ. ೪೮): ಏಳೇಳು ರಾಜಕುವರ, ಶುಭಗಳಿಗೆ ಜಾರುತಿದೆ (ಸ್ವರ್ಣಿ. ೯). ೩. ಮಕ್ಕಳು ಜಾರುಬಂಡೆಯ ಮೇಲಿಂದ ಜಾರುತ್ತಿದ್ದಾರೆ (ರೂಢಿ). ೪. ಜೀವನದಲ್ಲಿ ಒಮ್ಮೆ ಜಾರಿಬಿಟ್ಟರೆ ಎಚ್ಚತ್ತುಕೊಳ್ಳುವುದು ಕಠಿಣ (ರೂಢಿ).

**ಜಾರಿಕೊಳ್ಳು** = ತಪ್ಪಿಸಿಕೊಳ್ಳು ; ಪಾರಾಗು : ಹಿಂದಕ್ಕೆ ಮುನಿಗಳ ಕೋಪದ ಶಾಪಗಳಿಂದ ಅನೇಕರು ಅಳಿದುಳಿದು ಬನ್ನಬಟ್ಟಿದ್ದಾರೆ ; ನಾನೊಲ್ಲೆ ಎಂದು ಅಗ್ನಿ ಜಾರಿಕೊಂಡ (ಬದುಕಿ. ೩೨). **ಜಾಱಗೆಡಹು**=ಜಾರಿಬೀಳುವಂತೆ ಮಾಡು ; ಉರುಳಿಸು : ಎಱುವುದು ನಿಮ್ಮವರ ಬಲವದ ಜಾಱಗೆಡಹು ವರವರು (ತೊರವೆ. ೬-೦೦-೦೦). **ಜಾಱಬೀಳು, ಜಾರಿಬೀಳು** = ಕಾಲುತಪ್ಪಿ ಕೆಳಗೆ ಬೀಳು; ಪತನಹೊಂದು; ಭ್ರಷ್ಟನಾಗು: ಸೌರಾಷ್ಟ್ರ ಸೋಮೇಶ್ವರ ಲಿಂಗವ ಹಿಡಿದು ನಿಲಲಱಯದೇಱದವರು ಜಾಱಬಿದ್ದು ಸೂಱೆ ಹೋದರು ಕಾಲಂಗೆ (ಅಡವ. ೨೭-೬೬): ಗವಯ ಗತಿಗೆಟ್ಟು ಜಾಱ ಬಿದ್ದನು ವನಸ (ಕಾಶಿರಾ. ೩೫-೦೭): ಜಾರಿ ಬಿದ್ದು ಉಣ್ಣೆಯಂಥ ನೆಲ ಅಂದ (ಗಾದೆ). **ಜಾಱವರಿ** = ಜಾರುವಂತೆ ಓಡು : ಪರಿವಾತಂ ಪಾಪೀಸೋಪಾನ ಮನಡರುತ್ತುಂ ಜಾಱವರಿದು ಕೆಡೆದು (ಆದಿಪು. ೨-೦೯ ವ).

[ ದೇ.ಶ ತಮಿ. ಚಾಱು; ಮಲ. ಚಾರು; ತುಳು. ಜಾರು; ತೆಲು. ಜಾಱು ]

**ಜಾಱು₂, ಜಾರು₂** (ನಾ). ೧. ಜಾರುವಿಕೆ ; ಸರಿಯುವಿಕೆ ; ತಪ್ಪುವಿಕೆ : ಅಱುಂ ಗುಣಂಗಳಿಂದಂ ಜಾಱಲ್ಲದೆ ಸಂದ ತುಱಲಸಂದರ್ (ನೇಮಿಪು. ೦೦-೦೦೪): ಹೇಳಿರೇ ಭೀಷ್ಮಾದಿ ಹಿರಿಯರು ಮೇಲುದಾಯವ ಬಲ್ಲವರು ಹೆಚ್ಚಾಳುತನದಲಿ ಹಿಗ್ಗಿ ಕಂಡಿರೆ ಜಯದ ಜಾಱುಗಳ (ಕುಮ್ಯಾ.ಕ. ೦-೦). ೨. ಇಳಿಜಾರಾದ ಪ್ರದೇಶ ; ನುಣುಚಿ ಬೀಳುವ ಜಾಗ : ಪಾಱುವ ಪಕ್ಕಿಗೆ ಸಂಚರಮುಂ ಜಾಱನೊಳೆ ನೆರೆವರ್ಪಲರುಂ . . .ಪಾಱುಗಳಂ ಮಿಗೆ ನಂಬುವದೆ (ಮದತಿ. ೦೦-೭೦) ; ಬಲೆದೊಡಕುಗಳು ಕರ್ಮವಾರ್ಗಂಗಳ ವೊಳೆಗಳುಗ್ರಂಗಳಾಶಾಮಳಯಿತಂಗಳು ಜಾಱುಗಳು ಬೀಱುಗಳು ರವಣೆಗಳು (ಬಸಪು. ೪೦-೫೭). ೩. ಹಿಮ್ಮೆಟ್ಟುವ ಗುಣವುಳ್ಳುದು ; ಅಪಸರಣವುಳ್ಳುದು : ಪಾಱುವ ಪಾಱುಂಬಲ ಕೊಳೆ ಜೀಱಟ್ಟಂಬರಕೆ ತಲೆ ಸಿಡಿಲ್ದೊಡಮಾ ಕಾಯ್ಪಾಱದೆ ಹರಣಂಗೆಯ್ದುವು ಜಾಱಲ್ಲದೆ ಜೋದರಟ್ಟೆಗಳ್ ಕೆಲವಾಗಳ್ (ಶಂಪರಾ. ೦೦-೯೫). ೪. ಮಾಯೆ : ಕಪಟ : ಮಾಱಾಂತ ದಾನವರ್ಕಳ ಜಾಱಂದರ್ಪಿಸುವ ಬಳಮನೊರ್ವನೆ ರಣದೊಳ್ ಪಾಱಿಸಿದಂ ವಿದ್ಯೆಗಳಿಂ (ನೇಮಿಪು. ೦೨-೨೪). ೫. ಸಂಶಯ ; ಸಂದೇಹ: ಕುಲಿಶಂ . . . ಮತ್ಸ್ಯಮೆಂದಿಂತಿವು ತಳದೊಳ್ ಪಾದದೊಳ್ ತೋಱೆ ಜಾಱೀಂ . . . ಪುಣ್ಯಾವಹಂ ತಾನೆನಿಕ್ಕುಂ (ಲೋಕೋಪ. ೦೦-೦೪): ನೀಱಯರ ಮನಮನೆಱಗಿಸೆ ಜಾಱೀಂ ಜವ್ವನದಿನಮರನೆಸೆದಂ ನಿಸದಂ (ಪಾರ್ಶ್ವಪು. ೫-೦೦೨): ಜಾಱಲ್ಲದ ಕೇಳ್ (ಅಭಿಮ. ೮-೨೦). **ಜಾರು₂ :** ೨. 'ಇಳಿಜಾರು' ಪರಾ. [ <ಜಾಱು₁ ]

**ಜಾಱುಂಗಲ್, ಜಾರುಗಲ್ಲು, ಜಾಱುಕಲ್, ಜಾಱುಗಲ್ಲು** (ನಾ). ೧. ಜಾರುವ ಕಲ್ಲು ; (ಪಾಚಿ ಕಟ್ಟಿರುವ) ನುಣುಪಾದ ಕಲ್ಲು. ೨. ಇಳಿಜಾರಾದ ಕಲ್ಲು; ಜಾರುಗುಪ್ಪೆಯಂತಿರುವ ಕಲ್ಲು: ಸಂದಣಿ ಬರ್ಪ ಸೊರ್ಕಾನೆಗಳ ಕಾಲ್ತೊಱಗೆ ನೆಲನೊಂದೆಸೆಗೊಲೆದು ಜಾಱುಂಗಲ್ಲಂತೆ ತೋಱಯುಂ (ಕರ್ನಾ. ೨೮೮). **ಜಾರುಗಲ್ಲು:** ೧. ಕೆರೆಯ ಕೋಡಿಯ ಜಾರುಗಲ್ಲಿನ ಮೇಲೆ ಜಾರಿಬಿದ್ದನು(ರೂಢಿ). **ಜಾಱುಕಲ್:** ೧. ಜಾಱುಕಲ್ಪರಿ ವಂತಾಸೆಯ ಪೈಸರಂ ಮೆಱವ ಚೆಲ್ವಂ ದೇವ ನೀವೇಱ ನೋಡಿರೆ ಚಿತ್ರಂಬಡೆದಪ್ಪುವೆಂದು ಮೆಱದರ್ ವಾಹಂಗಳಂ ವಾಹಕರ್ (ಅನಂಪು. ೨-೩೦). **ಜಾಱುಗಲ್ಲು:** ೧. ಹುಲ್ಲುಗಳ್ ಬೆಳೆದಾಗ ದಾರಿಬಿಡದೆ ಜಾಱುಗಲ್ಲ ಮಱಿಸಿಕೊಂಡಿಹುವು (ಕಂನವಿ. ೧೮-೩೯). [ಜಾಱು₂+ಕಲ್₂ ]

**ಜಾಜುಕಲ್** 'ಜಾಜುಂಗಲ್' ನೋ.

**ಜಾಜುಗಲ್ಲು** 'ಜಾಜುಂಗಲ್' ನೋ.

**ಜಾಜುವಲೆ** (ನಾ). ಒಂದು ಬಗೆಯ ಬಲೆ: ಹಾಜುವಲೆ ಜಾ[ಪಾಠಾಂ. ಬೀ] ಜುವಲೆ ಬಡಿಗೆವಲೆ . . . ಮಂದಸಿನವಲೆಯ ಹೊಱೆಗಳ ಬೇಡವಡೆ ನೆರೆದುದು (ಹಕಾ. ೩-೮). [ ಜಾಜು₂ + ಬಲೆ₁ ]

**ಜಾಜುವೊಯ್ಲು** (ನಾ). ಒಂದು ಬಗೆಯ ಏಟು; ಓರೆಯಾದ ಹೊಡೆತ : ಜಾಜುವೊಯ್ಲುಡವೊಯ್ಲು . . . ಉಬ್ಬೇಱುವೊಯ್ಲುನಲೊದಗಿದರು ಭಟ ರಸಮುಸಮರದಲಿ (ತೊರಕಾ. ೯-೯-೨೪). [ ಜಾಜು₂ + ವೊಯ್ಲು ]

**ಜಾಜುವೋಗು** (ಕ್ರಿ). ಹಿಮ್ಮೆಟ್ಟು : ಜಾಱಿಬಿದ್ದನು ಪನಸ ದಧಿವುುಖ ರೂರುಗೆಡಿಸಿದ ನಳನು ಮುಗ್ಗಿದ ಜಾ[ಜಾ]ಜುವೋದನು ನೀಲನು (ಕೌಶಿರಾ. ೩೩-೦೭). [ ಜಾಜು₂ + ಪೋಗು₁ ]

**ಜಾಟಿಗೆ** 'ಸಾಟಿಗೆ' ನೋ.

**-ಜಿ** (ಪ್ರ). ಗೌರವಾರ್ಥವಾಗಿ ನಾಮವಾಚಕಗಳ ಕೊನೆಯಲ್ಲಿ ಸೇರುವ ಪ್ರತ್ಯಯ. 'ಅಕ್ಕಾಜಿ', 'ಅಣ್ಣಾಜಿ', 'ಜೀಯ' ಪರಾ.

[<ಪ್ರಾ. ಜಇ./ಸಂ. ಜಯಿನ್ ]

**ಜಿಂಕರ** (ನಾ). ಒಂದು ಬಗೆಯ ವಾದ್ಯ : ಪೊಯ್ವಕ್ಕವದ್ದಳೆಯ ದನಿಯುಂ ಊದುವ ಜುಂಜೆಯ ರವಮುಂ ಬಾಱಿಪ ಜಿಂಕರವುಂ ರವಳಿಯಂ ನೆರವೆ (ಆದಿಪು. ೮-೭೩ ವ). [ ? ]

**ಜಿಂಕರಿಸು** 'ಜೀಂಕರಿಸು' ನೋ.

**ಜಿಂಕು** (ನಾ). ಒಂದು ಅನುಕರಣ ಶಬ್ದ : ಪೆಣ್ದುಂಬಿಯ ಜಿಂಕು ತುಂಬಿ ಗಟಪಂ ಕೈಸಾರ್ಕೆ ಕೈವರ್ಪ ಚೆಲ್ವನೆ ಪೋಲ್ತಿರ್ದುವು ನಂದನಾವಳಿಗಳೊಳ್ ಮಾಕಂದವಮಾ ಕಂದನಂ (ಸೂಕ್ತಿಸು. ೧೦-೨೭).

**ಜಿಂಕುವರಿ** (ಕ್ರಿ). (ನೊಣಗಳು ಮುತ್ತಿ) ಝೇಂಕಾರಮಾಡು ; ಮೊರೆ : ಪೊಲೆ ಮಸಗಿ ಜಿಂಕುವರಿವಂ[ಪಾಠಾಂ. ದಿಕ್ಕುವರೆಗಂ]ತಲಸದೆ ಭಾರತ ಮನೆಯ್ದೆ ಕಿಡೆವೇಟ್ಟುದಱಿಂ ಪೊಲೆಯರ ಬಸಿಱೊಳ್ಪಂದಮ್ಮೆಳನಾತ್ಮಂ ವ್ಯಾಸನೆಂಬರ್ (ಸಮಾಹಿ. ೦೦-೧೭೪). [ ಜಿಂಕು + ಪರಿ₂ ]

**ಜಿಂಕೆ** (ನಾ). ಚಿಗರೆ ; ಎರಳೆ ; ಹರಿಣ : ಉಬ್ಬನೇರ್ದುದೆ ಜಿಂಕೆ ? ಕೂಡೆ ಎಬಿದನದಂ (ಶ್ರೀರಾಮಾ. ೨೩೩-೨೦೭).

[ ದೇ. ೫ ತುಳು. ಜಿಂಕೆ; ತೆಲು. ಜಿಂಕ ]

**ಜಿಂಗಿ₁** (ನಾ). ಮಂಜಿಷ್ಠೆಯೆಂಬ ಗಿಡ ಮತ್ತು ಅದರಿಂದ ತಯಾರಿಸುವ ಒಂದು ಬಗೆಯ ಔಷಧ : "ಮಂಜಿಷ್ಠಾ ವಿಕಸಾಖ್ಯಂ ತಾಂ ಜಿಂಗಿ" (ವಸುಕೋ. ೩೭-೨೩). [ ಸಂ. ಜಿಂಗೀ ]

**ಜಿಂಗಿ₂** (ನಾ). (ಉಕ) ಮಾದಕದ್ರವ್ಯದ ಸೇವನೆಯಿಂದುಂಟಾಗುವ ಮೈಮರೆವು,–ಮಾದಕತೆ. [ ←ಮರಾ. ಝಿಂಗೀ ]

**ಜಿಂಜರಗಿ** (ನಾ). ಒಂದು ಬಗೆಯ ಗಿಡ : ಕೆಲವು ಕಡೆಗಳಲ್ಲಿ ಗುರಗಿ, ಬದಿರು . . . ಜಿಂಜರಗಿ, ಮುಕ್ಕಡಕ ಮುಂತಾದ ಗಿಡ ಬಳ್ಳಿ ಪೊದೆಗಳಿದ್ದವು (ಶಂಬಶಂ. ೨). [ ? ]

**ಜಿಂಜಿ** (ನಾ). ಒಂದು ಅನುಕರಣ ಶಬ್ದ : ಪದಿರ ಪಱೆ ಮುಂದೆ ಗುಡಿ [ಯ]ಗ್ಗದ ಬಂಧು ತಗುಳ್ದು ಪೊಗಟ್ಟುಗೇಳ್ವರ್ ಪೆಱಗಂ ಪುದಿದೊದವಿದ ಜಿಂಜಿ ಕರಂ ಹೃದಯಂಗಮಮಾಗೆ ನಾಯಕರ್ ನಡೆಗೊಂಡರ್ (ವರ್ಧಮಾ. ೮-೯೭).

**ಜಿಂಜಿಣಿ** (ನಾ). ತೊಂದಿಕೆ ; ಸಂಬಂಧ (?) : ಕೆಂದಳಿರ ಸೆಜ್ಜೆಯ ಜಿಂಜಿಣಿ[ಪಾಠಾಂ. ಸಿಂಜಿನಿ] ಪೋಕೆ ನಿನ್ನ ಕೂಟದೊಳಿನಿದಕ್ಕೆ ಮತ್ತಮಿಗೆ (ಶಂಪಧಾ. ೩-೦೮) : ನನ್ನ ಅಸ್ತಿಗಳನೆ ನನ್ನ ಹೆಸರಿನಿಂದ ಲಿಂಗವಾಗಿ ಪೂಜೆ ಗೊಳ್ಳಿ, ನನ್ನ ಚರ್ಮವನೆ ಜಿಂಜಿಣಿಯಾಗಿ ಉಟ್ಟು (ಭೈರಸೂ. ೦೨೦).

[ ? ]

**ಜಿಂಜಿತ** (ನಾ). "ಕಾಮಚೇಷ್ಟೆ" (ಪ್ರಭುಪು. ಕೋಶ). 'ಜಿಂಜಿತಂಗೆಯ್' ಪರಾ. [ ? ]

**ಜಿಂಜಿತಂಗೆಯ್** (ಕ್ರಿ). ಕಾಮಚೇಷ್ಟೆ ಮಾಡು : ಚಿಂದುಟಿಯ ಕರ್ದುಕುತ ಭರದಿಯಿಂಬಿನಿಂ ಜಿಂಜಿತಂಗೆಯ್ವುತಂ ಕೊರಲ್ಕುಚಂ ಎದೆ ಪಾರ್ಶ್ವಗಳೊಳು (ಪ್ರಭುಪು. ೩-೬೦). [ ಜಿಂಜಿತ + ಕೆಯ್₁ ]

**ಜಿಂಜಿರ** (ನಾ). ಮೂಳೆಮಾತ್ರ ಉಳ್ಳವನು ; ಜೀರ್ಣನಾದವನು : ಕರವಂ ಜಿಂಜಿರಾಗಿ ಮರುಳ ರೂಪಿನೊಳ್ ಸಮಾನರಂ . . . ಕನ್ನಡಿಯೊಳ್ ಕಂಡು ಬೆರ್ಚಿ (ಬಂಹರಿ. ೦೩-೩೩). [ ? ]

**ಜಿಂಜಿರಿ** 'ಜಂಜರ₁' ನೋ.

**ಜಿಂಜಿರಿಸಂಕಲೆ** (ನಾ). ಸರಪಳಿಯ ಬೇಡಿ,–ಸಂಕೋಲೆ : ಕಂಡಾಕ್ಷಿ ಕಾಲಸಂಕಲೆ ಮಕ್ಕಳಾದರೆ ಗುಂಜಿನ ಕೊರಳ ಸಂಕಲೆಯು ಜಿಂಜಿರಿಸಂಕಲೆ ಯೊಳಗಾರು ಬಾಳ್ವರೆಂದಂಜಿದರವರು ದಂದುಗಕೆ (ಭರತೇ. ೭೩-೨೯).

[ ಜಿಂಜಿರಿ (<ಜಂಜರ₁) + ಸಂಕಲೆ ]

**ಜಿಂಟಾಕ** (ನಾ). (?) : ಎಱಗಲಱಿಯದೆ ಜಣ್ಪುಕಮ್ಮುಗುಟ್ಟುಂ ಬರಲಣ ಮಱಿಯದೆ ತಪ್ಪಂ ಪಿನ್ದಂ ತೆಱನನಱಿಯದೆ ಭಂಗಮನಿಕ್ಕಿಯುಂ (ಎಕ. II, ೦೩೩-೦೩೭ : ೪೪೨). [ ? ]

**ಜಿಂಡು** (ನಾ). (?) : ತಲೆಗಳ್ ಸೆಂಡುವೊಯ್ದಂತೆ ಪಾರುತ್ತಿರೆ ಮುಂಡಂ ಜಿಂಡು ಮುಂದಾಗುರುಳುತ್ತಿರೆ ರಣಕ್ಷೋಣಿಯೊಳ್ (ಎಕ. VIII, ಸೊರಬ. ೦೩೮-೨೭ ; ಸು. 1145).

[ P ಇದು 'ಹಿಂದು' ಎಂಬುದರ ಅಪಲಿಖಿತವಿರಬಹುದು ]

**ಜಿಂದಗಾನಿ** (ನಾ). = ಜಿಂದಗಿ : (ಕ). [ ←ಪಾರ. ಹಿಂ.ಮರಾ. ಜಿಂದಗಾನೀ ]

**ಜಿಂದಗಿ, ಜಿಂದಿಗಿ, ಜಿಂದಿಗೆ** (ನಾ). ೧. ಒಬ್ಬ ವ್ಯಕ್ತಿಗೆ ಸೇರಿದ ದನಕರು ಮೊದಲಾದ ಚರಾಸ್ತಿ ಹಾಗೂ ಜಮೀನು ಮುಂತಾದ ಸ್ಥಿರಾಸ್ತಿ : ಜಪ್ತಮಾಡಿದ ಜಿಂದಗಿಯ ಬೆಲೆ ೧೩೫ ರೂ. ಇದ್ದರೆ ಪಂಚನಾಮೆಯಲ್ಲಿ ಕಾಣಿಸಿದ್ದು ೨೪ ರೂ. (ಕಲಿವೀ. ೯೩); ಮಿಕ್ಕುಳಿದ ತತ್ವಗಳನ್ನು ಮನ್ನಿಸದ ವರನ್ನು ಕುರಿತು ೧ನೆಯ ತಪ್ಪಿಗೆ ಅವರ ಜಿಂದಗಿಯನ್ನು ಜಪ್ತಮಾಡು ವದು (ಇಂಗ್ಲ.ಇ. ೩೩); ಚರ ಜಿಂದಗಿ ವಿಷಯವಾದ ಹಕ್ಕು ಅಥವಾ ಅಂಥಾ ಜಿಂದಗಿಯ ಮೌಲ್ಯವನ್ನು ಕುರಿತ ದಾವೆ (ಗ್ರಾಮೂಳ. ೩೦). ೨. ಬದುಕು ; ಜೀವನ. **ಜಿಂದಿಗಿ** : ೧. ಸಾಹೇಬನ ಜಿಂದಿಗೆಲ್ಲ ಚೆನ್ನಮ್ಮನ ಪಾಲಿಗೆ (ಜೋಳಗೀ. ೨೨೨); ತಮ್ಮ ಜಿಂದಿಗಿಯನ್ನೆಲ್ಲ ಸುರಕ್ಷಿತವಾಗಿ ಇಟ್ಟು ಕೊಳ್ಳುವುದಕ್ಕೆ ಎಂಥದೇ ಆದರೂ ಸರಿ, ಒಂದು ಬಾಗಿಲುಳ್ಳ ಮನೆಯಾದರೆ ಸಾಕು (ಕಾಳಕಾ. ೨೫). **ಜಿಂದಿಗೆ** : ೧. ಇಲ್ಲಿ ಯಾವತ್ತೂ ಜಿಂದಿಗೆಯನ್ನು ನಾನು ಸ್ವತಃ ಸಂಪಾದಿಸಿರುತ್ತೇನೆ (ಶಿಕ್ರಮ. ೩೮) ; ನನ್ನ ಜಿಂದಿಗೆಯು ಬರಿದಾಗುತ್ತ ಬಂದಿದೆ (ಅಚಿತ. ೦೭); ಸಾಯುವ ಪೂರ್ವದಲ್ಲಿ ಅವನು ಮನೆ ಯಲ್ಲಿ ತಕ್ಕಮಟ್ಟಿಗೆ ಜಿಂದಿಗೆಮಾಡಿದ್ದನು (ಉತ್ತಗ್ಗ. ೩೨).

[ ←ಪಾರ. ಹಿಂ. ಮರಾ. ಜಿಂದಗೀ ]

**ಜಿಂದಾಬಾದ್** (ನಾ). ಜಯವಾಗಲಿ, ಗೆಲುವಾಗಲಿ ಎಂಬುದನ್ನು ಸೂಚಿಸುವ ಒಂದು ಶಬ್ದ : ಇಂಕ್ವಿಲಾಬ್ ಜಿಂದಾಬಾದ್ (ಅಕ್ಕಾರ್ಶ. ೦೨೪). [ ←ಹಿಂ. ಜಿಂದಾಬಾದ್ : ಪಾರ. ಜಿಂದಹ್‌ಬಾದ್ ]

**ಜಿಂದಿಗಿ** 'ಜಿಂದಗಿ' ನೋ.

**ಜಿಂದಿಗೆ** 'ಜಿಂದಗಿ' ನೋ.

**ಜಿಂಭಳಿ** (ನಾ). (?) : ಸಂಭಳಮಂ ಕಟ್ಟಿ ಭಯದಾ ಬಟ್ಟೆಯಂ ಹೊಗದೆ: ಪುಂಭುರಿಗರಯನಿಕ್ಕದೇ ಜಿಂಭಳಿ ಅಪತ್ತಿನಲ್ಲೇ ಬಂದರೆ ಸಾಕೇ (ಗುಭಕ. ೯-೫೦). [ ? ]

**ಜಿಂಹ** (ನಾ). ಆಲಸ್ಯ ; ಜಡತೆ. 'ಜಿಂಹಭಾವ' ಪರಾ.

[ <ಸಂ. ಜಿಹ್ಮ ]

**ಜಂಹಭಾವ** (ನಾ). ಆಲಸ್ಯ ; ಮಾಂದ್ಯ : ಮಸುಳೆ ನಿಜಾಂಗು ಮಂದ ಮಂದಾಯುಮಾನಂ ತರುತಿರೆ ಮುಖ ಜೃಂಭಾರಂಭಮಂ ಜಂಹಭಾವಂ (ಶಾಂತಿಪು. ೬-೩೮). [ ಜಂಹ + ಭಾವ₂ ]

**ಜಕವಕ್ಕಿ** (ನಾ). (?) : ಕುಂಕುಮ ಜಕವಕ್ಕಿನಂಕಿಸು ಕೆಳದಿ ಅಂಕವಾಲೆಯ ಬುಡ ಮೇಲಿನ್ನು ಕೆಳದಿ (ಗುರುಳ. ೩೬-೦೪). [ ? ]

**ಜಕಿಜಕಿ** (ನಾ). (ಉಕ) ಖರ್ಚುಮಾಡುವಾಗ ಹಿಂದು ಮುಂದು ನೋಡುವುದು; ಜಿಪುಣತನ: ಮಲ್ಲಪ್ಪ ಜಕಿಜಕಿ ಮಾಡಿದ (ನಿಸರ್ಗ.೦೩೦). [ ←ಮರಾ. ಜಗಜಗ ]

**ಜಕೀರಿ, ಜಿಕೇರಿ, ಜಿಖೇರಿ** (ನಾ). (ಉಕ) ಚೌಕಾಸಿ : ಕೊನೆಗೆ ಜಕೀರಿ ಯಿಂದ ಐದು ರೂಪಾಯಿ ಕೊಟ್ಟರು (ಅನ್ನ. ೪೦) , ವಿನಾಕಾರಣ ಜಕೀರಿಯ ಪತ್ರವ್ಯವಹಾರ ನಡೆಯಲಿಕ್ಕಿಲ್ಲ (ಮುಂಬಯಿ. ೮ ಕೃಷ್ಣಾವನ). **ಜಿಕೇರಿ :** ಶೇಷಣ್ಣ ಟಾಂಗಾದವನೊಂದಿಗೆ ಜಿಕೇರಿ ಮಾಡಲಿಲ್ಲ (ವ್ಯಾಸಿ. ೨೬೦); ಆಚಾರ್ಯರು ಜಿಕೇರಿ ಮಾಡಿ ಐದಾಣೆ ಕೊಟ್ಟು ನಡೆದರು (ಶಾವಿಉ. ೮೪). **ಜಿಖೇರಿ :** ಒಂದು ಮಾತು ಹೇಳಪ್ಪಾ, ಜಿಖೇರಿ ಬ್ಯಾಡ (ಅಸ್ಮಿತ. ೧೬೦).
[ ←ಹಿಂ. ಮರಾ. ಜಿಕೇರ್; ಪಾರ. ಜಿಕರ್ ; ಅರ. ಜಿಕ್ರ ]

**ಜಕೇರಿ** 'ಜಕೀರಿ' ನೋ.

**ಜಕ್ಕಿಣಿ** 'ಜಕ್ಕಿಣಿ' ನೋ.

**ಜಕ್ಕು** (ನಾ). ಚಿಕ್ಕದು ; ಎಳೆಯದು : ಬಾಳೆಯ ಕಾಯಿ ಎಳೆಯ ಜಕ್ಕು; ಈಗ ಹಣ್ಣಾಗುವ ಹಾಗಿಲ್ಲ (ರೂಢಿ). [ <ಚಿಕ್ಕ₁ ]

**ಜಖೇರಿ** 'ಜಕೀರಿ' ನೋ.

**ಜಗಟ** (ನಾ). ೧. ಬೆನ್ನು ಹಿಡಿದರೆ ಬಿಡದವನು : ಅವನೊಬ್ಬ ಜಗಟ, ಅವನ ಸಹವಾಸ ಕಷ್ಟ (ರೂಢಿ). ೨. ಜಿಪುಣ : ಹಣದ ವಿಚಾರದಲ್ಲಿ ಅವನು ತುಂಬಾ ಜಗಟ (ರೂಢಿ). [ ಜಗಟು₂ + -ಅ₇ ]

**ಜಗಟು₁** 'ಚಿವುಂಟು' ನೋ.

**ಜಗಟು₂, ಜಗುಟು₂, ಜಗುಡು** (ನಾ). ೧. ಜಿಡ್ಡು ; ಅಂಟು ; ಜಿಗಿ : ನಾಯಿಡಗು ನರಕನಿಳಯಂ ಮಾಯೆಯು ಕಣಿ ಬಿಡದ ಜಗ[ಪಾಠಾಂ. ಗು]ಟು ಪಾಪದ ಪುಂಜಂ (ಶ್ರಾವಕಾ. ೦೨೨-೮); ಆ ಕೆಸರು ತುಳಿದು ತುಳಿದು ಜಗಟು ಆದ ಮೇಲೆ (ಮುಂಬಯಿ. ೧-೯). ೨. ಹಕ್ಕಿಗಳ ಶಿಕಾರಿಯಲ್ಲಿ ಬಳಸುವ ಒಂದು ಬಗೆಯ ಅಂಟು (ಎಸಕ್ಕು. XIII, ೨೨). ೩. ಅಂಟುಸ್ವಭಾವ; ಗಟ್ಟಿಯಾಗಿ ಅಂಟಿಕೊಳ್ಳುವುದು: ಅಂಥ ಜಗಟು ರಿಪಿಜಿಡ್ಡು ಹುಡುಗರಿಗೆ ಕೂಡ ಎಷ್ಟು ಪ್ರಯತ್ನಮಾಡಿದರೂ ಅವರ ಕೈಯಿಂದ ಒಂದು ಕಪರ್ದಕ ವನ್ನೂ ಉಚ್ಚಿಕೊಳ್ಳಲು ಸಾಧ್ಯವಾದ್ದಿಲ್ಲ (ಇಕ್ಕಳ. ೨೯೯). **ಜಗುಟು₂:** ೧. ಮದುವೆ ಸಂಭ್ರಮದಲ್ಲಿ ಹಸಿ ಜಗುಟಾದ ವ್ಯಕ್ತಿಗೆ ಸೋಸಿ ತಂದರು (ಕರಿಲೀ. ೧೩೨-೪) ; ತಲೆಯ ಕೂದಲುಗಳಿಗೆ . . . ಜಗುಟನ್ನು ತೊಡೆದು ಬಾವಾಜಿ ಗಳಂತೆ ಜಟಾಧಾರಿಯಾದನು (ಇಂದುಮು. ೮೨). ೪. ಕೆಚ್ಚು ; ಧೈರ್ಯ : ಕುಮ್ಮಟದುರ್ಗವನ್ನು ಸಂರಕ್ಷಿಸುವ ಜಗುಟುಳ್ಳ ಶೂರರಾರೂ ಇಲ್ಲವೆಂದು ನೇಮಿಖಾನನು ಸ್ವಸ್ಥಚಿತ್ತದಿಂದಿದ್ದನು (ಕವೀರ. ೯೬) ; ಕೆಲವು ದಿನಗಳ ಹಿಂದೆ ನಿಂತೆ ಹೋಗಲಿರುವ ಪತ್ರಿಕೆ ಮತ್ತೆ ಹೊಸ ಜಗುಟಿನಿಂದ ಪ್ರಾರಂಭ ವಾಗಲಿದೆ (ಅಪನಾ. ೯). **ಜಗುಡು :** ೧. ಜಿಡ್ಡೆಂಬ ಜಗುಡು ಹಜೆದು ಶೂನ್ಯವೆಂಬ ಸುಳುಹು ಸತ್ತು ಮತ್ತಾವುದೂ ತಲೆದೋಱದೆ (ಮಾಧೂಕ. ೪೬೦-೩೬); ಜಿಡ್ಡು ಜಗುಡೆಂಬ ಸಂದೇಹವ ತಾನುಂಡು ತೇಗಿದಂತೆ (ಸರ್ವಪ. ೦೪೦-೬೯೨) ; ಉಪಮೆ ನಿರುಪಮೆಗಳೆಂಬ ಜಗುಡಿನ ಜಿಡ್ಡುಗಳ ಚಿತ್ರರಂಗ ನಿಸ್ಸರಂಗಳೆಂಬ ಭಾವದ ಸೂತಕವಳಿದು (ಆದವ. ೬೬-೦೦೬).

**ಜಗಟಾಗು** = ಬಲವಾಗು ; ಹೆಚ್ಚು ಗಟ್ಟಿಯಾಗು : ತಮ್ಮದೇ ಆದ ಸಣ್ಣ ಗುಂಪುಗೂಡಿಕೊಂಡಿರುವಿಕೆಯು ಮಾತ್ರ ಇನ್ನೂ ಜಗಟಾಗುತ್ತಿದೆ (ದೂರಸ. ೦೬೯). [ ←ತೆಲು. ಜಗಟ. / ಮರಾ. ಚಿಕಟ್ ]

**ಜಗಟುಮಣ್ಣು** (ನಾ). ಜೇಡಿಮಣ್ಣು ; ಅಂಟಂಟಾಗಿರುವ ಮಣ್ಣು : ಪಾತ್ರಗಳನ್ನು ಹುಟ್ಟಿಸಲಿಕ್ಕೆ ತಾಮ್ರ, ಹಿತ್ತಾಳಿ, ಕಾಜು, ಜಗಟುಮಣ್ಣು ಮುಂತಾದ ಮೂಲದ್ರವ್ಯಗಳು ಬೇಕು (ಮುಂಬಯಿ. ೫-೨೫೦); ಒಂದು ಮೂಲೆಯಲ್ಲಿ ಹದಮಾಡಿದ ಜಗಟುಮಣ್ಣು ಇತ್ತು (ಕಪಕೃ. ೩-೬೦).
[ ಜಗಟು₂ + ಮಣ್ಣು (<ಮಣ್) ]

**ಜಗಣ** 'ದಿಗಣ' ನೋ.

**ಜಗಣೆ₁** 'ಜಗಂಟೆ' ನೋ.

**ಜಗಣೆ₂** (ನಾ). ಕಸೂತಿ ಕೆಲಸದಲ್ಲಿ ಬಳಸುವ ಹೊಳೆಯುವ ವಸ್ತು ; ನಕ್ಕಿ : ಸೀರೆಯ ಜಗಣೆ ಕೆಲಸ ಸೊಗಸಾಗಿದೆ (ರೂಢಿ). [ ? ]

**ಜಗಳಿ** 'ಜಗುಟಿ' ನೋ.

**ಜಗಳು** 'ಜಗುಳು' ನೋ.

**ಜಗಳೆ** 'ಜಗುಟಿ' ನೋ.

**ಜಗಿ₁** 'ಚಿಗಿ₁' ನೋ.

**ಜಗಿ₂** (ನಾ). ೧. ಅಂಟು ; ಸರಿ ; ಜಗುಟು : ಸಂಜಯುನು ಬರಬರಲು ಕಂಡನು ದೂರದಲಿ ನಿಜಾಗರುಳ ಕಾಲ್ತೊಡಕುಗಳ ಖಂಡದ ಜಗಿಯ ಜಾಡುಗಳ (ಕುಮ್ಯಾಗ. ೩-೮) ; ರಕುತದ ಜ[ಪಾಠಾಂ. ಚಿ]ಗಿಯ ಜೋರಿನಲೆ ಸೆದುವಾ ಹೋಳೆರಡು ರಕ್ಕಸಿಯಾ (ತೊರರಾ. ೫-೦-೨೩) ; ಪರಿವ ನೆತ್ತರ ಬಸೆಯ ಜಗಿಯ ದಾರುಣಮಯಂ . . . ಸಲೆ ಭಯಂಕರಮಾದುದಂದು ರಣರಂಗಂ (ಜೈಮಿಭಾ. ೨೨-೨೩) ; ಮಣ್ಣನೊಳಗೆ ಜಗಿಯ ಪ್ರಮಾಣವು ತಕ್ಕಷ್ಟಕ್ಕಿಂತ ಹೆಚ್ಚಿದ್ದರೆ ಹಸಿ ಬಹಳವಾಗಿ ಬೆಳೆಕೊಳೆಯುವುದು (ಮುಂಬಯಿ. ೬-೨೯೧). ೨. ಹತ್ತಿಗಿಡಕ್ಕೆ ಬರುವ ಒಂದು ಬಗೆಯ ರೋಗ; ಕಾಡಿಗೆ ರೋಗ : (+). 'ಕರಿಜಗಿ' ಪರಾ.

**ಜಗಿಜಗಿ** (ದ್ವಿರುಕ್ತಿ) : ಎಣ್ಣೆಯಿಂದ ಅಲ್ಲಲ್ಲಿ ಜಗಿಜಗಿಯಾಗಿವೆ (ಗಂಗಾಸಾ. ೭). **ಜಗಿಬೀಳು** = ಅಂಟಿಕೊಳ್ಳು ; ಭದ್ರವಾಗಿ ಹಿಡಿದು ಕೊಳ್ಳು : ನತದೃಷ್ಟ ನಾಣ್ಯ ಜಗಣೆಯಂತೆ ಕಂಡವರ ಕೈಹಿಡಿದು ಜಗಿ ಬೀಳುತ್ತದೆ (ಗಾಳಿಪ. ೦೫೪). [ ದೇ.॰ ತೆಲು. ಜಗಿ ]

**ಜಗಿತ** (ನಾ). ನೆಗೆತ ; ಹಾರುವಿಕೆ : ಅಲ್ಲೇ ಕೂಡಲಿಕ್ಕೆ ಹೇಳಿ ಒಂದೆರಡು ಜಗಿತದಲ್ಲಿ ಪೊದೆಯನ್ನು ಹೊಕ್ಕಳು (ಮೋದಿಮು. ೯೪).

**ಜಗಿತಕೊಡು** = ಪರಾರಿಯಾಗು ; ಓಡು : ಹೇಣ್ತೆನ್ನ ಕಟಗೊಂಡು ಕೊಪ್ಪಳಕ್ಕ ಜಗಿತಾ ಕೊಟ್ಟಂತ (ಸಶೂರ. ೨೬). [ಜಗಿ₁(<ಚಿಗಿ₁) + -ತ₂]

**ಜಗಿದೋಱು** (ಕ್ರಿ). ಜಗುಟಾಗು ; ಅಂಟಂಟಾಗು : ಏಱುಗಳು ಬುದು ಬುದಿಸಿ ರಕುತವ ಕಾಱೆ ಕಾಳಿಜ ಖಂಡ ನೆಣ ಜಗಿದೋಱೆ ಬೆಳುನೊರೆ ಮಸಗಿ ನಸುಬಿಸಿರಕುತ ಹೊನಲಿಡಲು (ಕುಮ್ಯಾದ್ರೋ. ೧೧-೬).
[ ಜಗಿ₂ + ತೋಱು ]

**ಜಗಿಬಾಲ** (ನಾ). ಬಾಲದ ಆಧಾರದಿಂದ ಮುಂದಕ್ಕೆ ಹಾರುವ ಒಂದು ಬಗೆಯ ಕೀಟ: ಬೆಳ್ಳಿಹುಳು (Silver-fish), ಜಗಿಬಾಲ (Spring-tail) ರೆಕ್ಕೆರಹಿತ ಕೀಟಗಳ ಉದಾಹರಣೆ (ಕೀಟಬಿ. ೧೮).
[ ಜಗಿ₁ (<ಚಿಗಿ₁) + ಬಾಲ₁ ]

**ಜಗಿಬಗಿ** (ನಾ). ಒತ್ತೊತ್ತಾಗಿರುವಿಕೆ (?) : ಸೊಗಸಿನಿಂ ಮಘಮಘಿಸಿ ಮರಿದುಂಬಿಗಳನುಯ್ಯಲೆಯಾಡಿಸುತ ಜಗಿಬಗಿಯೊಳೊಲದಾಡಿದವು ಚರ ಮಾಂಗದಲಿ ಮಯುಸುತೆಯ (ಅನಂರಾ. ೬-೬-೭).

**ಜಗಿಬಗಿಯಾಗು** = ಒತ್ತೊತ್ತಾಗು ; ಹತ್ತಿರವಾಗು : ಇಕ್ಕಟ್ಟಾದ ಹಂತದ ಮೇಲೆ ಜಗಿಬಗಿಯಾಗಿ ನಿಂತುಕೊಂಡರು (ಧಾರವೀ. ೮೦).
[ ಜಗಿ₂ + ಬಗಿ₃ ]

**ಜಗಿಲ್, ಚಿಗಿಲ್** (ಕ್ರಿ). ೧. ಜಿಡ್ಡಾಗು ; ಅಂಟಾಗು : "ಜಗಿಲ್-ಸ್ನಿಗ್ಧ (ಜಿಡ್ಡಾಗು) ಸಂಶ್ಲೇಷಯೋಃ" (ಶಮದ). ೨. ಅಂಟಿಕೊಳ್ಳು ; ತಗುಲಿ

ಕೊಳ್ಳು ; ಹತ್ತಿಕೊಳ್ಳು : ನೆತ್ತರ ಕೆಸಱೊಳ್ ಗಾಲಿಗಳೆತ್ತಂ ತಳರದೆ ಜಗಿಲ್ದು ನಿಲೆ (ಪಂಪಭಾ. ೧೧-೯೦); ಮದಕರಿಕ್ರೀಂಟಿಗೊಲ್ದೊರಸೆ ಭೂರುಹ ಕಂಧರದೊಳ್ ಜಗಿಲ್ದು ಪತ್ತಿದ ಮದ ಸೌರಭಕ್ಕೆ ಸುಟಿಗೊಳ್ವಳಿ ಮಾಲೆಯನೆಯ್ದೆ ಕಂಡು (ಕುಸುಮಾ. ೧೪-೧೨೦); ಮರದ ನಿಡುಗೋಡೊಳಱಿಯದೆಱಗಿ ಮಱಿವೆರಸಿ ಕುಳ್ಳಿರ್ದ್ದ ಪಕ್ಷಿಯ ಪಗಿನದೊಳ್ ಕಾಲ್ ಜಗಿಲ್ದು ತಳ್ಪಂಕಂಗೊಳ್ವ ಸಮಯದೊಳ್ (ರಾಜಶೇ.೩-೩೩ ವ). ೩. ಸ್ನೇಹಪೂರ್ಣವಾಗು; ಆರ್ದ್ರವಾಗು: ನೆನೆವಂದಾನಂದದಿಂ ತಣ್ಣನೆ ತಣಿದು ಜಗಿಲ್ಕುಂ ಮನಂ (ಪುಷ್ಪಕ. ೧-೨ ಪರಿ): ತೊಡೆ ತೊಡೆಯೊಳ್ ಜಗಿಲ್ದಡರೆ (ಕಾವ್ಯಸಾ. ೬೩೭) ೪. ಕಪ್ಪಕ್ಕೊಳಗಾಗು ; ತೊಂದರೆಪಡು : ಮೇಲಿನ 'ಶಮಧಾ' ಪ್ರಯೋಗವನ್ನು ನೋಡಿ. ಜಗಿಲ್: ೨. "ಜ[ಪಾಠಾಂ. ಜ] ಗಿಲ್ದುದೆಂದು ಸಱಿಗೊಂಡುದು" (ಶಶಪಾ. ೯-೧೮); ಶಿವನ ನಿಷ್ಕ್ರಿಯಾತ್ಮಕ ನಿರುಪಾಧಿಕ ನಿರಾವರಣ ಸ್ವಾನುಭವ ಸಂವೇದ್ಯ ಸ್ವಯಂಪ್ರಕಾಶಮಂ ಸುತ್ತಿಮುತ್ತಿ ಪತ್ತಿ ಜ[ಪಾಠಾಂ. ಜ]ಗಿಲ್ದು ಬಿಡದಿರೆ (೧೦೧೪. ೮-೪೩ ವ). 'ಜಗ್ಗಿ' ಪರಾ.

ಜಗಿಲ್ದಿರು=ಅಂಟಿಕೊಂಡಿರು: ಚಿತ್ತದೊಳೀಶಂ ನೆಱಿ ಪತ್ತಿ ಜಗಿಲ್ದಿಪ್ಪಂ ಮನದೊಳು (ತಿರುನಾ. ದೀ. ೨೨೬-೮).

ಜಗಿಲು (ನಾ). ೧. ಅಂಟಾದುದು ; ಜಗಿಜಗಿಯಾದುದು : ಹಾಸುವಲೆ ಕಟ್ಟುವಲೆ . . . ದಡಿವಲೆಗಳಿಂದ ಜಗಿಲಿನ ಕೋಲ್ಗಳಿಂ (ಜಕುಪು. ೨-೦-೧೮). ೨. ಸ್ನೇಹ; ಪ್ರೀತಿ : ಚೊಕ್ಕಳಮಪ್ಪಂತುಸಿರ್ದಂ ಜಗಿಲಿಂ ಲಾಲಿಸಿ ಸದ್ವುಧರು (ಪ್ರಭುಪು. ೦-೫೦). [ <ಜಗಿಲ್$_1$ ]

ಜಗೀಷು (ಗು). ೧. ಜಯವನ್ನು ಹೊಂದಲು ಅಥವಾ ಪಡೆಯಲು ಬಯಸುವ. (ನಾ). ೨. ಜಯದ ಅಪೇಕ್ಷೆಯುಳ್ಳವನು ; ಜಯಿಸಲು ಅಪೇಕ್ಷೆಯುಳ್ಳವನು : ನಮ್ಮಾ ಬೃಹದ್ಧ್ವಜನೀಸಂಕುಳಮಾ ಜಗೀಷುವ ನಿದೇಂ ಸಂಗ್ರಾಮದೊಳ್ ಗೆಲ್ಗುವೇ (ಆದಿಪು. ೧೩-೫೭) ; ಒಳಿಯೊಳಿರ್ದ ಮಹೀಭೃನ್ಮಾಳಿಯೊಳೆಸೆದಾ ನಕಾರಿ ಸೊಗಯಿಸುಗುಂ ತಾರಾಳಿಯೊಳೆಸೆವ ಹಿಮದ್ಯುತಿಮಾಳೆಪೊಲಿನಿತಿಲ್ಲದಂ ಜಗೀಷುವೆ ನೃಪರೊಳ್ (ಶಾಂತಿಪು. ೨-೪೪): ಜಗೀಷುಗಳಾದ ವೈರಿಗಳ ಮುಂದೆ ನಿನ್ನ ಪ್ರತಾಪವನ್ನು ತೋರಿಸು (ಭೀಷ್ಮಪ. ೨೫). [ಸಂ.]

ಜಗೀಷೆ (ನಾ). ೧. ಜಯವನ್ನು ಹೊಂದುವ ಅಥವಾ ಗೆಲ್ಲುವ ಅಪೇಕ್ಷೆ. ೨. ಜೀವನದ ಉದ್ಯೋಗ,-ಹವ್ಯಾಸ,-ವೃತ್ತಿ. [ಸಂ. ಜಗೀಷಾ]

ಜಗುಟು$_1$ 'ಚಿವುಟು' ನೋ.

ಜಗುಟು$_2$ 'ಜಗಟು$_2$' ನೋ.

ಜಗುಟುತನ (ನಾ). ೧. ಅಂಟುವಿಕೆ ; ಅಂಟಿಕೊಳ್ಳುವ ಗುಣ; ಹಿಡಿದುದನ್ನು ಬಿಡದ ಗುಣ: ಈ ಜಗುಟುತನವು(Plasticity)ಅವುಗಳ ಅಣುರಚನೆಯನ್ನು ಹೊಂದಿದೆ (ಬಾಲಕ್ರ. III, ೦೯೬೬). ೨. ಜಿಪುಣತನ; ಕೃಪಣತನ: ಅವನದು ವಿಪರೀತ ಜಗುಟುತನ (ರೂಢಿ). [ಜಗುಟು$_2$(<ಜಗಟು$_2$)+-ತನ]

ಜಗುಡು 'ಜಗಟು$_2$' ನೋ.

ಜಗುಣೆ 'ಜಗುಟಿ' ನೋ.

ಜಗುಪ್ಸೆ (ನಾ). ೧. ಅಸಹ್ಯತೆ : ಆ ತಪೋನಿಧಿ ಕುಷ್ಠರೋಗ ಪರೀತ ಜಗುಪ್ಸೆಯಲಿ ಹುದುಗಿರಲೀ ತಳೋದರಿ ಭಜಿಸುತಿರ್ದಳು ಭಾವ ಶುದ್ಧಿಯಲಿ (ಕುಮಾ.ಅ. ೦೬-೪೪) ; ಸುಮತಿಗೆ ಇತ್ತೀಚೆ ಮದುವೆಯೆಂದರೇ ಒಂದು ಬಗೆ ಜಗುಪ್ಸೆ ಹುಟ್ಟಹತ್ತಿದೆ (ಅಮೋಘ. ೭೩) ; ಜೀವನದಲ್ಲಿ ಅವರಿಗೆ ಜಗುಪ್ಸೆಯುಂಟಾಗಿದೆ (ರೂಢಿ). ೨. [ಕಾವ್ಯಮಿ] ಬೀಭತ್ಸರಸದ ಸ್ಥಾಯಿಭಾವ : ಜಗುಪ್ಸೆ . . . ಶೃಂಗಾರಾದಿ ನವರಸಂಗಳಿಗೆ ಬೀಜಭೂತಂಗಳಾದ ಸ್ಥಾಯಿಭಾವಂಗಳು (ವಿವೇಕ. ೨೨೬).

[ <ಸಂ. ಜುಗುಪ್ಸಾ ]

ಜಗುಪ್ಸೆಪಡು (ಕ್ರಿ). ಅಸಹ್ಯಪಡು : ಮೊದಲಿನಿಂದಲೂ ಸರಕಾರೀ ನೌಕರೀ ಎಂದರೆ ಜಗುಪ್ಸೆಪಡುವವ (ಅವನಾ. ೯). [ಜಗುಪ್ಸೆ + ಪಡು$_1$]

ಜಗುರ್ (ಕ್ರಿ). ಅಂಟಿಕೊಳ್ಳು ; ಸೇರಿಕೊಳ್ಳು : ಅಪ್ಪುಗೆ ಬೆಂಗೆ ಮೂಡ ಲುಂಟು ಸಡಿಲದೊತ್ತಿ ಪತ್ತಿದಿನಿದಕ್ಕೆ ಮನಂಗೊಳೆ ತಾಂ ಜಗುರ್ತು ರಂಜಿಸಿದುದು ಭೋಗಿರಾಜಿ (ಉದ್ಭಟ. ೪-೩೮). 'ಜಗಿಲ್' ಪರಾ. [ ? ]

ಜಗುರು (ನಾ). ಬೇಡರು ಹಕ್ಕಿಗಳನ್ನು ಹಿಡಿಯಲು ಮರದ ಕೊಂಬೆಗಳ ಮೇಲೆ ಬಳಿಯುವ ಅಂಟು : ಬಿಡುವಲೆಯು ಕಡುವಲೆಯು ಕಣ್ಣುವಲೆ ಕರ್ತರಿಯ ತೊಡರುವಲೆ ಬೀಸುವಲೆ ಸೊಕ್ಕು ಜಗುರಿಕ್ಕುಗಳ ತುಡುಕಿರುವ ಗಾಳ ಮತ್ತೀಣ ಗಿಡುಗಾದಿಗಳ ಪರಿಪರಿಯ ಸಾಧನಗಳ ಸಡಗರಿಸಿ (ಪಂಚಾರಾ. ೩-೬-೨೩).

[ <ಜಗುರ್. / ತೆಲು. ಜಗುರು, ಜೀಗುರು ]

ಜಗುಳಿಗಂಟು 'ಜಗುಳಂಗಂಟು' ನೋ.

ಜಗುಳು, ಜಗಳು (ನಾ). ಸಣ್ಣ ಕಾಲುವೆ : (ಶ). ಜಗಳು : (ಶ). [ ? ]

ಜಗುಳುಗಂಟು, ಜಗುಳಿಗಂಟು (ನಾ). ಜಾರುಗಂಟು ; ಸರಿಗಂಟು ; ಜೀರ್ಗುಣಿಕೆ : ಒಂದು ತಾರಗಂಟು ಒಂದು ಜಗುಳುಗಂಟು ಒಂದು ಕುಱುಹುಗಂಟು ಮೂಱಱ ಮುದ್ರೆಯ ಮಾಱಿ ಹಾಱಿತ್ತು ಹಕ್ಕಿ (ಮನುಗುಂ. ೨೫೯-೫೦) ; ಮುಂದೊಬ್ಬ ರಾವುತ ತನ್ನಂಗಕಿಕ್ಕಿದ ಹೊಂದೊಡಿಗೆಯ ತೆಗೆದಿತ್ತಾ ಚಂದಿಯ ತೆಗೆದು ಜಗುಳೊ[ಳು] ಗಂಟನಿಕ್ಕಿದ (ಭರತೇ. ೫೦-೭೧). ಜಗುಳಿಗಂಟು : ಬಿಗಿದು ಕಟ್ಟಿದ ಬಾಕು ಜಗುಳಿಗಂಟನ ಕುಲಾಯಿ (ಜನರಾ. ೫-೧೨೦).

[ <ಜಗುಳ್ + ಗಂಟು ]

ಜಗುಳೆ 'ಜಗುಂಟಿ' ನೋ.

ಜಗುಱು 'ಸಿವುಱು$_1$' ನೋ.

ಜಗುಟಿ, ಜಗಣೆ$_1$, ಜಗಳಿ, ಜಗಳೆ, ಜಗುಣೆ, ಜಗುಳೆ (ನಾ). ೧. ಜಲವಾಸಿಯಾದ ರಕ್ತ ಹೀರುವ ಒಂದು ಬಗೆಯ ಹುಳು : ಜಗುಟಿಯಂತೆ ನೆತ್ತರನೆ ಪೀರ್ವ ಡಾಕಿನಿಯರಿಂ (ಕಾವ್ಯಸಾ. ೫೨೯ ಕೂರ್ಮಕ); ಪರಬಲದ ನೆತ್ತರ ಕಡಲೊಳಗಣ ಜಗುಟಿ ಬಳೆವ ತೆಱದೊಳ್ ಬಳೆದಂ (ಪಂಪಭಾ.೦-೪೬); ಜಗುಟಿಯ ಮಾಟ್ಕೆಯಂ ತಳೆದ ಕೆಯ್ (ಲೋಕೋಪ. ೦೦-೬೨) ; ಜಗುಟಿಯಂತೆ ನೆತ್ತರಂ ಕುಡಿವರ್ (ಧರ್ಮಾಮೃ. ೩-೬೩) ; ಕನ್ನೆತ್ತರನೆ ಜಗುಟಿ ಪೀರ್ವಂದದಿಂ ಪೀರ್ದು (ಅರ್ಧನೇ. ೭-೬೦). ೨. ನೇಗಿಲ ಗುಳವನ್ನು ಭದ್ರವಾಗಿ ಹಿಡಿಯುವ ಒಂದು ಸಾಧನ,-ಕೊಂಡಿ : "ವಶಿಯೆನಲು ಜಗುಟಿದೋಳಂ ಕೂಂಟಿಹರಿಕೆ ಕೋಟಿಶಮುಕ್ಕು" (ಮಂಗರಾ. ೧೦೯-೧). ಜಗಣೆ$_1$: ೧. "ದುರ್ನಾಮಾ, ದೀರ್ಘಕೋಶಿಕಾ-೨ ಆನೆಗಳ ರಕ್ತವನ್ನು ಹೀರಲುಳ್ಳದೊಡ್ಡ ಜಗಣೆ ಪೆಸರು"(ಸಿದ್ಧಾಂತಿ. ೭೫);ಜಗಣೆ ಹಾವು ಚೇಳು ಕಚ್ಚಿದರೆ ಪುತ್ರಲಾಭ (ಸಾಗಂಧಿ. ೫೯೦-೦೭); ಎಲ್ಲರೂ ಜಗಣೆಗಳೆ ನನ್ನ ನೆತ್ತರಿಗೆ (ಕೋಗಿಲ. ೦೫-೪) ; ಜಗಣೇ ಉಪದ್ರಾ ನೋಡಲೋ ಜಟಿಯ ಹಾವಳಿ ನೋಡಲೋ?(ಗಾದೆ). ೨: ಜಗಣೆಗಾಗುವಷ್ಟು ಕಬ್ಬಿಣ ಇಲ್ಲ(ರೂಢಿ). ಜಗಳಿ: ೨. ನಾಲ್ಕು ಕಾಸು ಹೆಚ್ಚಿಗೆ ಬಿದ್ದರೂ ಮೇಡಕ್ಕಿಂತ ಜಗಳಿಯೇ ಉತ್ತಮ (ರೂಢಿ). ಜಗಳೆ: ೧. ನೆತ್ತರವ ಹೀರುವೀ ಹೇಡಿ ಜಗಳೆಯ ಕುಲವ ಕೊಲ್ಲಬೇಡ (ಅರಳೂ. ೭೧) ; ಜಗಳವಿಲ್ಲದೆ ಜಾಹೊತ್ತಿದ್ದರೆ ಜಗಳೆ ಬಂದು ಕಚ್ಚಿದ ಹಾಗೆ ಆಗುತ್ತದೆ (ಗಾದೆ). ಜಗುಣೆ : ೧. ನಿಮ್ಮ ಹೊಗಳ ದವನನಾಲಿಗೆ ಭವಿಯ ನಾಲಿಗೆ ಬೆಟ್ಟಲ ತಂಪಿನ ಜೌಗಿನಲ್ಲಿ ಹುಟ್ಟಿದ ಜಗುಣೆಯಯ್ಯಾ (ಗಣಭಾ. ೬೫-೧). ಜಗುಳೆ: ೧. ಳಕಾರಕ್ಕೆ ಗಕಾರಂ—ಜಳೂಕಾ—ಜಗುಳೆ (ಶಮದ. ೨೬೬ ಪ್ರಯೋ);ರೀತಿಕದ ಜಗುಳೆ ನೀ ನಿನ್ನೊಡಲ ನಿಗುಚುವೆ (ಕುಮಾ.ಳ. ೨೦-೪) ; ಜಗುಳೆ ಕಂಜಿಗ ಕಟ್ಟಿಱುಹಯೋತಿಯು ಗೊದ್ದ ನೆಗೆವ ಹಾವರಣೆ ಕೆಂಜೇಳು (ಕಂಸವಿ. ೦೮-೪೦).

**ಜಿಗ್ಗು** (ನಾ). ಮರದಿಂದ ಉದುರಿ ಬೀಳುವ ಸಣ್ಣ ಸಣ್ಣ ಒಣಕಡ್ಡಿ ; ಪುಳ್ಳೆ ; ಪುರಲೆ : ಬೆಂಕಿಯನ್ನು ಹೊತ್ತಿಸಿ ಅದಕ್ಕೆ ಜಿಗ್ಗು, ಒಣಗಿದ ಸೌದೆ–ಇವನ್ನು ಹಾಕಿ ಕ್ರಮೇಣ ಅಗ್ನಿಯನ್ನು ಬಳಕೆಮಾಡಿಕೊಂಡಿದ್ದಾನೆ (ಶಿಲ್ಪನಾ. ೦೩) ; ಬಾವಾಜಿ ಒಲೆಯ ಬೆಂಕಿಗೆ ಒಣಗಿದ ಜಿಗ್ಗನ್ನು ಮುರಿದು ಹಾಕಿದ್ದರಿಂದ ಭುಗಿಲ್ ಎಂದ ಕೆಂಪು ಜ್ವಾಲೆ (ಮೂರುದಾ. ೨೯೪): ಒಂದು ಸಣ್ಣ ಕೊಳ್ಳಿಯನ್ನೂದಿ, ಜಿಗ್ಗು ಕಟ್ಟಿ, ಬೆಂಕಿ ಮಾಡಿದಳು (ಮಲಿಮ. ೩೬೮). [ ? ]

**ಜಿಘತ್ಸು** (ನಾ). ಹಸಿದವನು ; ಕ್ಷುದ್ಬಾಧೆಯುಳ್ಳವನು : "ಕ್ಷುಧ್ವಾನ್, ಬುಭುಕ್ಷಿತಃ, ಶ್ರಾಂತಃ, ಜಿಘತ್ಸುಃ, ಕ್ಷುಧಿತಃ – ಈ ೫ ಹಸಿದಾತಂ" (ಹಲಾಯು. ೫೯-೨೦೫). [ ಸಂ. ]

**ಜಿಘತ್ಸೆ** (ನಾ). ಹಸಿವು; ಕ್ಷುಧೆ : "ಅಶನಾಯಾ . . . ಜಿಘತ್ಸಾ, ಕ್ಷುತ್, ಕ್ಷುಧಾ–ಈ ೬ ಹಸಿವು" (ಹಲಾಯು. ೫೯-೨೦೬). [ ಸಂ. ಜಿಘತ್ಸಾ ]

**ಜಿಘಾಂಸು** (ಗು). ೧. ಕೊಲ್ಲಲು ಬಯಸುವ. ೨. ಮತ್ಸರವಿಡುವ ; ಹಗೆಕಾರನಾದ ; ದ್ವೇಷ ಸಾಧಿಸುವ. (ನಾ). ೩. ಶತ್ರು ; ಹಗೆ ; ದ್ವೇಷಿ: "ಜಿಘಾಂಸುಃ, ಪರಿಪಂಥೀ, ಪರಃ . . . ದ್ವಿಷತ್–ಈ ೨೪ ಹಗೆ" (ಹಲಾಯು. ೬೫-೩೦೦). [ ಸಂ. ]

**ಜಿಜಿಯಾ** (ನಾ). ಹಿಂದೆ ಕೆಲವು ಮುಸಲ್ಮಾನ ದೊರೆಗಳು ಮುಸಲ್ಮಾನರಲ್ಲದವರ ಮೇಲೆ ವಿಧಿಸುತ್ತಿದ್ದ ತಲೆಗಂದಾಯ : "ಜಿಜಿಯಾ" ಎಂಬ ಹಿಂದೂಗಳ ಮೇಲೆ ಹಾಕಿದ್ದ ತೆರಿಗೆಯನ್ನೆತ್ತುವುದರಲ್ಲಿ ಅನೇಕವೇಳೆ ಅವನು ವಿಶೇಷ ಪರಾಕ್ರಮವನ್ನು ತೋರಿದನು (ಕೋಹಿನೂ. ೦೦). [ ←ಹಿಂ. ಜಿಜಿಯಾ ; ಮರಾ. ಝಿಜಿಯಾ ; ಅರ. ಜಿಯಹ್ ]

**ಜಿಜ್ಞಾಸು** (ನಾ). ತಿಳಿದುಕೊಳ್ಳುವ ಅಪೇಕ್ಷೆಯುಳ್ಳವನು; ತಿಳಿವಿಗಾಗಿ ಹಾತೊರೆಯುವವನು : ಅಂಧಶ್ರದ್ಧೆ ಮತ್ತು ಸ್ವಾರ್ಥಪರತೆಗಳು ಜಿಜ್ಞಾಸುಗಳ ಕಟುವಾದ ಅವಹೇಳನಕ್ಕೆ ಪಾತ್ರವಾದುವು (ಹುಚ್ಚಾರ. ೦೯ ಪೀಠಿಕೆ) : ಧರ್ಮ ಎಂದರೇನು ಎಂದು ಕಾಲಕಾಲಕ್ಕೆ ಸಾಧಕರು, ಜಿಜ್ಞಾಸುಗಳು ಕೇಳುತ್ತ ಬಂದಿದ್ದಾರೆ (ಧರ್ಮಸಾ. ೦) : ಜಿಜ್ಞಾಸುಗಳು ಕುತೂಹಲಪೂರ್ಣವಾದ ಬುದ್ಧಿಯಿಂದ ಅದರ ಕಡೆಗೆ ನೋಡುವುದು ಸ್ವಾಭಾವಿಕ (ಸಾಹಿಸ. ೦೦೩) [ ಸಂ. ]

**ಜಿಜ್ಞಾಸೆ** (ನಾ). ೧. ತಿಳಿಯುವ ಬಯಕೆ ; ಅರಿತುಕೊಳ್ಳುವ ಇಚ್ಛೆ : ಜಿಜ್ಞಾಸೆಯೆಂದರೆ ಅರಿಯಬೇಕೆಂಬ ಇಚ್ಛೆ (ಬ್ರಹ್ಮಘ. ೦೯). ೨. ಸಂಶೋಧನೆ; ಪರಿಶೀಲನೆ; ಈಸು ವಿಗ್ಗಳರಾರೆನಿಪ ಜಿಜ್ಞಾಸೆ ಬೇಡಾ (ಕುವ್ಯಾಅ. ೬-೦೭); ಪ್ರಾಚೀನಗ್ರಂಥಗಳಲ್ಲಿ ಬಗೆಬಗೆಯ ಜಿಜ್ಞಾಸೆ ನಡೆದಿದೆ (ದ್ರಾವಿವಿ. ೩೩); ಮಾನವನು ಜೀವನದಲ್ಲಿ ಮಾಡಬೇಕಾದ ಕರ್ತವ್ಯ ಹಾಗೂ ಹೊಂದಬೇಕಾದ ಗುರಿಯ ವಿಚಾರವಾಗಿ ಸಾಕಷ್ಟು ಜಿಜ್ಞಾಸೆ ಸಮಾಧಾನಗಳೂ ಬಂದಿವೆ (ಭಾರದ. ೦೦೩); "ನಾನು" ಎಂಬುದರ ಶುದ್ಧಸ್ವರೂಪದ ಜಿಜ್ಞಾಸೆಯು "ನನ್ನ" ಎಂಬುದರ ಜಿಜ್ಞಾಸೆಗಿಂತ ಅತ್ಯಂತ ಕಷ್ಟತಮವಾಯಿತು (ಜೀವಾತ್ಮ. ೩೯). [ ಸಂ. ಜಿಜ್ಞಾಸಾ ]

**ಜಿಜ್ಞಾಸ್ಯ** (ನಾ). ಜಿಜ್ಞಾಸೆಗೆ ತಕ್ಕುದು ; ತಿಳಿಯಲು ಅರ್ಹವಾದುದು : ಜಿಜ್ಞಾಸ್ಯವೆಂದು ಪರಿಕಿಸತೊಡಗೆ ವಿಜ್ಞಾನಿ ಸ್ವಜ್ಞಪ್ತಿಶೋಧಿ ಮುನಿ (ಮಂಕುಕ. ೦೦೭). [ ಸಂ. ]

**ಜಿಟಜಿಟ** (ನಾ). ಒಂದು ಅನುಕರಣ ಶಬ್ದ : ಮನೆಯನ್ನು ಸಮೀಪಿಸುವ ಸಮಯಕ್ಕೆ ಜಿಟಜಿಟ ಮಳೆ ಆರಂಭವಾಯಿತು (ಅಲ್ಪವಿ. ೩೩).

**ಜಿಟ್ಟಿ**$_1$ 'ಚಿಟ್ಟೆ$_4$' ನೋ.

**ಜಿಟ್ಟಿ**$_2$ (ನಾ). ಚರ್ಮದಲ್ಲಿ ಉಂಟಾಗುವ ಕೀವುತುಂಬಿದ ಬೊಕ್ಕೆ : (+). 'ಕಣ್ಣಿಟ್ಟಿ' ಪರಾ. [ ? ]

**ಜಿಟ್ಟೆ** 'ಚಿಟ್ಟೆ$_4$' ನೋ.

**ಜಿಡಿ**$_1$ 'ಜಿಡಿ$_5$' ನೋ.

**ಜಿಡಿ**$_2$ (ನಾ). ಒಂದು ಬಗೆಯ ಸಸ್ಯ : ಗೋಡಂಬಿ, ಗೇರುಪಪ್ಪು, ಮುಂದಿರಿಪಪ್ಪು, ಜಿಡಿ (ವೃಕ್ಷಶಿ. ೬-೦೦೫). [ ? ]

**ಜಿಡಿಮಳೆ** 'ಜಡಿಮಳೆ' ನೋ.

**ಜಿಡುಕು** (ನಾ). ಕಿರಿಕಿರಿ ; ಹಿಂಸೆ ; ಕಿರುಕುಳ : ಅವರ ಮನಸ್ಸು ತುಂಬಾ ಜಿಡುಕಿಗೆ ಬಲಿಯಾಯಿತು (ಮಠಮ. ೧೨೭) ; ಸಂಸಾರದ ಸಮಸ್ಯೆ ಅನೇಕ ಮಾನಸಿಕ ಜಿಡುಕುಗಳಿಗೆ ಕಾರಣವಾಗುತ್ತಿದೆ (ಒಂಟಿದ. ೨೨೩) : ಇಂಥ ವಾದದ ಜಾಡ್ಯ ಇಲ್ಲವೇ ಜಿಡುಕು ಭೌತಿಕ ತತ್ತ್ವಜ್ಞಾನದ ಜಾಡಾಗಲಾರದು (ಮಾವಾದ. ೪೭). [ ? ]

**ಜಿಡ್ಡಳಿಗೆ** 'ಜಿಡ್ಡುಳಿಗೆ' ನೋ.

**ಜಿಡ್ಡಿ** (ನಾ). ಗಂಟುಹಾಕಿದ ಎರಡು ತೆಂಗಿನಕಾಯಿಗಳ ಜೊತೆ : ಗೌಡರ ಮನೆಯ ಅಟ್ಟದಲ್ಲಿ ಸಾಕಷ್ಟು ಜಿಡ್ಡಿ ಸೇರಿತ್ತು (ರೂಢಿ). [ ? ]

**ಜಿಡ್ಡು**$_1$, **ಜಡ್ಡು**$_3$, **ಸಿಂಡು** (ನಾ). ೧. ಎಣ್ಣೆ, ತುಪ್ಪ ಮುಂತಾದುವುಗಳ ಜಿಗಿ,–ಜಿಗುಟು: ಘೃತಂ ಪೊರೆಯ ಕೈ ಜಿಡ್ಡಹುದು (ಜೀರಮು. ೬-೦೩). ೨. ದುರ್ವಾಸನೆ ; ಕಮಟುವಾಸನೆ ; ಗಬ್ಬುನಾತ : ದೊಡ್ಡನಾಗಿ ಬೆಳೆದ ಜಿಡ್ಡಹೋತುಗಳಿಗೆ ಗಡ್ಡದ ವೃದ್ಧ ವೈಶಿಕರ ಮೆಚ್ಚ ಮಹಾದೇವ (ಸರ್ವವ. ೦೭೩-೭೭೫) : ನಿಮ್ಮರಸನ ಜಾಣ್ಮೆ ತೊಳೆದು ಲೋಕದ ಜಿಡ್ಡ ಕಮ್ಮನೆ ಮಾಡುತಿದ್ದವುದು (ಧರಣ. ೨೦-೨೪). ೩. (ಅಲಂ) ಸೊಕ್ಕು ; ಕೊಬ್ಬು ; ಅಹಂಕಾರ : ಬಿಟ್ಟಡೆ ಸಮಯವಿಲ್ಲ ಜಿಡ್ಡಹಿಡಿದಡೆ ಜ್ಞಾನವಿಲ್ಲ (ಅಂಬಿವ. ೩೯೩-೫೮); ಉಭಯ ಶುದ್ಧವಾದಲ್ಲಿ ಆಚಾರವೆ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ ಜಿಡ್ಡು ಹಱಿಯಿತ್ತು(ಐರಕ್ಕ. ೬೬); ಹೆಡ್ಡ ಹೆಂಗಳೊಳಂತು ದೊರೆ ಸೋತುನುಡಿದರೆ ಜಿಡ್ಡುಬ್ಬಿ ಮಂಡೆಗೇಱುವರು(ಭರತ. ೦೦-೦೫); ಇನ್ನೊಮ್ಮೆ ನನಗೆ ಹಾಗೆ ಅಂದು ನೋಡು ನಿನ್ನ ತಲೆಯೊಳಗಿನ ಜಿಡ್ಡನ್ನೆ ಬಿಡಿಸುತ್ತೇನೆ (ರಂಗಕೊ. ೩೦). **ಜಡ್ಡು**$_3$: ೨. ಗೊಡ್ಡುಸಾರಿಗೆ ಜಡ್ಡುತುಪ್ಪ (ಗಾದೆ). **ಸಿಂಡು** : ೨. "ಸಿಂಡು–ದುರ್ಗಂಧ" (ಗುವಿಮೋ. ೧೭೦). ೪. "ಹುರುಪು ; ಹಗರು ; (ಮು.) ತಲೆಯಹೊಟ್ಟು, ಸಿಬ್ಬು, ಸಿಂಡು" (ಕಿಟ್ಟೆಲ್. ಇಂಕನ್).

**ಜಿಡ್ಡುಹತ್ತು** = ಬೇಸರ ಉಂಟಾಗು : ನನಗೆ ಬಹಳ ಜಿಡ್ಡುಹತ್ತಿ ಹೋಗಿದೆ (ಕೃಲಾಕ. ೬೨). **ಜಿಡ್ಡುಹಿಡಿ** = ಜಿಡ್ಡುಗಟ್ಟು.

[ ದೇ.೫ ತುಳು. ಜಿಡ್ಡ್, ಜಿಡ್ಡ ; ಕೊಡ. ಸಿಂಡೀ ; ತೆಲು. ಜಿಡ್ಡು ]

**ಜಿಡ್ಡುಗಂಬ** (ನಾ). ಎಣ್ಣೆ ಅಥವಾ ಜಿಡ್ಡು ಲೇಪಿಸಿದ ಕಂಬ ; ಎಣ್ಣೆಗಂಬ : (ವ್ಯಾಯಾಮದ ಆಟಗಳಲ್ಲಿ . . . ಇಟ್ಟಿರುವ) ಜಿಡ್ಡು ಬಳಿದಿರುವ ಕಂಬ ; ಜಿಡ್ಡುಗಂಬ (Greasy Pole. ಇಂಕನ್).

[ ಜಿಡ್ಡು + ಕಂಬ$_1$ (<ಕಂಭ) ]

**ಜಿಡ್ಡುಗಟ್ಟು** (ಕ್ರಿ). ಜಿಗುಟಾಗು ; ಕೊಳೆಯಿಂದ ಅಂಟಂಟಾಗು : ಮೈಮೇಲೆಲ್ಲ ಜಿಡ್ಡುಗಟ್ಟಿದ ಬಟ್ಟೆ–ಬರೆಗಳು (ಜನಜೀ. ೦೦೦).

[ ಜಿಡ್ಡು + ಕಟ್ಟು$_1$ ]

**ಜಿಡ್ಡುಮುಳ್ಳು** (ನಾ). ಒಂದು ಬಗೆಯ ಮುಳ್ಳಿನ ಗಿಡ : ಆಸಿನಗೊಟ್ಟೆಮುಳ್ಳು, ಗಜಗೊಟ್ಟೆಮುಳ್ಳು, ಜಿಡ್ಡುಮುಳ್ಳು (ವೃಕ್ಷಶಿ. ೭೯-೦೩೨೬).

[ ಜಿಡ್ಡು ? + ಮುಳ್ಳು (<ಮುಳ್$_2$) ]

**ಜಿಡ್ಡುಳಿಗೆ, ಜಿಡ್ಡಳಿಗೆ, ಜಿಡ್ಡುಬಾಗೆ** (ನಾ). ಒಂದು ಪ್ರದೇಶದ ಹೆಸರು: ಜಿಡ್ಡುಳಿಗೆ ೭೦ ರ ಬಳಿಯ ರಾಜಧಾನಿ ಬಳ್ಳಿಗಾವೆಯ ಪುಲ್ಲೆಯ ಬಯಲೊಳ್ (ಎಕ. VII, ಶಿಕಾರಿ. ೧೨೦-೦೫ : 1048). **ಜಿಡ್ಡಳಿಗೆ** : ಜಿಡ್ಡಳಿಗೆಯೆಪ್ಪತ್ತರ ಅರಸುಮಯ್ಯಂ (ಎಕ. VII, ಶಿಕಾರಿ. ೮೩-೦೩ : 1068). △ **ಜಿಡ್ಡುಬಾಗೆ** : ಜಿಡ್ಡುಬಾಗೆಯ ಕಂಪಣದ ಬಱಿಯ ಬಾಡಂ (ಎಕ. VII, ಶಿಕಾರಿ. ೯೬-೩೦ : 1170). [ ? ]

△ **ಜಿಡ್ಡುಬಾಗೆ** 'ಜಿಡ್ಡುಳಿಗೆ' ನೋ.

**ಜಡ್ಡೂರ್** (ನಾ). ಒಂದು ಪ್ರದೇಶದ ಹೆಸರು : ಜಡ್ಡೂರಾಳ್ಗೆಟ್ಟತ್ತಿ ನಾಟ್ಟಾವುಣ್ಣಂ × × × ಕಲಿವಿಟ್ಟನೊಳೆ ವಿರೋಧವಾಗಿ (ಎಕ್. VIII, ಸೊರಬ. ೮೮-೫ ; 912) ; ಶ್ರೀ ಬಿಟ್ಟಿಗಂ ಮೌಳಿಕೋಸಿಗರಾಣ್ಮಂ ನೆಗರ್ಳ್ದನಣುವಂ ಜಡ್ಡೂರಾಳ್ಗೆಯ ಟ್ಟಪ್ಪತ್ತಕ್ಕ೯ಂ ಬಳ್ಳಿಗಾವೆಯ ಬಾಟಿಗೆ ಸಹಿತ ನಾಟ್ಟಾವುಣ್ಣುಗೆಯ್ಯ (ಮ್ಯಆರಿ. ೦೯೫೯,೬೮-೬ ; ೯೬೪).

[ ಜಡ್ಡು ? + ಊರ್ ]

**ಜಿಡ್ಡೆಣ್ಣೆ** (ನಾ). ಕಚ್ಚಾಎಣ್ಣೆ ; ಶೋಧಿಸದ ಎಣ್ಣೆ : ತೀರ ದಪ್ಪವಾದ ಜಿಡ್ಡೆಣ್ಣೆ(Crude oil)ಯನ್ನು ಉಪಯೋಗಿಸುವ ತೈಲಎಂಜಿನುಗಳೂ ಚಿಮಣಿಎಣ್ಣೆಯನ್ನು ಉಪಯೋಗಿಸುವ ಎಂಜಿನುಗಳೂ ಸಿದ್ಧವಾದುವು (ಕಾಲಶ್ರ. I, ೩೫೦). [ ಜಿಡ್ಡು + ಎಣ್ಣೆ ]

**ಜಿಣುಗು** 'ಜಿನುಗು₃' ನೋ.

**ಜಿಣುಗುಗೆರೆ** (ನಾ). ಸಪೂರಾದ ಗೆರೆ; ತೆಳುವಾದ ಗೆರೆ: ಐದೈದು ಜಿಣುಗುಗೆರೆಗಳು ಅಂತರದಿಂದ ಒಂದೊಂದು ಹಚ್ಚಿಗೆ ಉದ್ದಾದ ಗೆರೆಯುಂಟು (ಮುಂಬಯಿ. ೩-೦೦೭).

[ ಜಿಣುಗು (<ಜಿನುಗು₃) + ಗೆರೆ (<ಗೆಱೆ³) ]

**ಜಿಣುಗುನಸ್ಯ** (ನಾ). ನಯವಾದ ನಸ್ಯ : ನಸ್ಯಗಾರರು . . . ಕರೆವುಡಿಯೆಂಬ ಉರುಟುನಸ್ಯವನ್ನೂ ಜಿಣುಗುನಸ್ಯವನ್ನೂ ಮಾಡುವರು (ಕಥಾಗ. ೪೫೩). [ ಜಿಣುಗು (<ಜಿನುಗು₃) + ನಸ್ಯ ]

**ಜಿತ** (ನಾ). ೧. ಜಯಿಸಲ್ಪಟ್ಟುದಂ ; ಗೆಲ್ಲಲ್ಪಟ್ಟುದಂ ; ಕೈವಶ ಮಾಡಿಕೊಂಡುದು. 'ಜಿತಕರ್ಮ' ಪರಾ. ೨. ಸಂಪಾದಿಸಲ್ಪಟ್ಟುದು ; ಪಡೆದುದಂ ; ಗಳಿಸಿದುದಂ. ೩. ಸ್ಥಿರವಾದುದಂ; ಅಚಲವಾದುದು; ದೃಢವಾದುದು : ಈ ಕಲಿಕಲುಷಂಗಳೆಲ್ಲಮುಮಡಂಗಿ ಕೃತಂ ಜಿತಮಾಗಿ ರಂಜಿಕುಂ (ಚಿಳವಿ. ೪-೧೫). [ ಸಂ. ]

**ಜಿತಕರ್ಮ** (ನಾ). ಕರ್ಮವನ್ನು ಗೆದ್ದವನು; ಕರ್ಮಮುಕ್ತ: ಜಿತಕರ್ಮಂ ಸಮುಪಾತ್ತ ತತ್ತ್ವಚಯಮುಮರ್ಮಂ ಶುದ್ಧರತ್ನತ್ರಯಿಸಾಧ್ಯತಧರ್ಮಂ (ಚಂದ್ರಪ್ರ. ೦-೮). [ ಜಿತ + ಕರ್ಮ ]

**ಜಿತಕಾಮ** (ನಾ). ೧. ಮನ್ಮಥನನ್ನು ಗೆದ್ದವನು: ಸತತ ಜಪಕಾಮರಿಗೆ ಜಾಗ್ರ ತಪ್ಪದ ರತಿಯು ಜಿತಕಾಮರೆನಿಸುವವರ್ಗೆ ಸತಿಯರತಿಶಯ ರೂಪು ನೋಡಿ ಯೆಳಸದ ರತಿಯು (ನವಮೋ. ೧೩-೫೦). ೨. ಯತಿ ; ಮುನಿ ; ತಪಸ್ವಿ. ೩. ಬುದ್ಧ. ೪. ಅರ್ಹಂತ. ೫. ಶಿವ; ಶಂಕರ: ಜಿತಕಾಮನ ಲಂಪಿನೊಳಗಸುತೆಯೊಳ್ಸೆರೆಯಲ್ಕೆ ಬಲ್ಲನೆನೆ ಪಾವನಮಂ ಹುತವಹನ ಮುಖದೊಳಿಡುವನೆ (ಸಮುಕ. ೮-೬೮) ; ಜಿತಕಾಮ . . . ಪಂಪಾಧಿಪತಿ ವಿರೂಪಾಕ್ಷ ಕರುಣಿಸುವುದೆಮಗೆ (ಹಕಕಾ. ೦-೩) : "ಯತಿಬುದ್ಧಂ ಶಂಕರಾರ್ಹಂ . . . ಜಿತಕಾಮಾಹ್ವಯಂ" (ನಾನಾರ. ೪೫). [ಜಿತ+ಕಾಮ]

**ಜಿತಕಾಮೆ** (ನಾ). ಪತಿವ್ರತೆ ; ಸಾಧ್ವಿ ; ಸುಶೀಲೆ : "ವರವಧು ಜಿತಕಾಮಾಹ್ವಯಂ" (ನಾನಾರ. ೪೫). [ ಸಂ. ಜಿತಕಾಮಾ (ಜಿತ + ಕಾಮ+-) ]

**ಜಿತಕಾಶಿ** (ನಾ). ವಿಜಯದಿಂದ ಶೋಭಿಸುವವನು ; ಜಯಹೊಂದಿದವನಂ: "ಜಿತಕಾಶೀ, ಜಿತಾಹವಃ-ಈ ೨ ಗೆಲ್ದವಂ" (ಚಲಾಯು.೭೯-೩೨೫).

[ ಸಂ. ಜಿತಕಾಶಿನ್ ]

**ಜಿತತ್ರಿತಾಪ** (ನಾ). ಆಧಿದೈವಿಕ, ಆಧಿಭೌತಿಕ, ಆಧ್ಯಾತ್ಮಿಕವೆಂಬ ಮೂರು ತಾಪಗಳನ್ನು ಗೆದ್ದವನು : ಅತಿಭಕ್ತಿವಶೀಕೃತಶೈಲಚಾಪ ನಾತ್ತದಯ ಜಿತತ್ರಿತಾಪ ಬಸವೇಶ್ವರನೀಗೆಮಗೀಶಭಕ್ತಿಯಂ (ರಾಜಶೇ. ೦-೦೧). [ ಜಿತ + ತ್ರಿತಾಪ ]

**ಜಿತಪಂಚಬಾಣ** (ನಾ). ಕಾಮನನ್ನು ಗೆದ್ದವನು ; ಶಿವ: ಶ್ರೀ ಬಾಣಾಸುರೇಂದ್ರನತಿತಪದಿಂದ ಜಿತಪಂಚಬಾಣನಂ ಮಲಿಸಿ (ನವಮೋ. ೨೦-೫).

[ ಜಿತ + ಪಂಚಬಾಣ ]

**ಜಿತಪಡಿಸು** (ಕ್ರಿ). ಸ್ಥಿರಗೊಳಿಸು ; ನೆಲೆಯೂರಿ ನಿಲ್ಲುವಂತೆ ಮಾಡು : (೬). [ ಜಿತಪಡು + -ಇಸು₃ ]

**ಜಿತಪಡು** (ಕ್ರಿ). ಸ್ಥಿರವಾಗು ; ದೃಢವಾಗು : (೬). [ ಜಿತ + ಪಡು₁ ]

**ಜಿತಬುದ್ಧಿ** (ನಾ). ಮನೋನಿಗ್ರಹವುಳ್ಳವನಂ ; ದೃಢಚಿತ್ತ.

[ ಜಿತ + ಬುದ್ಧಿ ]

**ಜಿತಮದ** (ನಾ). ಅಹಂಕಾರವನ್ನು ಗೆದ್ದವನು : ಅಪರಾಜಿತಂ ಜಿತಮದಂ ಕೊಟ್ಟಟ್ಟಿದಂ ಗಾಯಿಕಾನವರತ್ನಂಗಳನಿತ್ತ ನೋಟ್ಟುದು (ಶಾಂತಿಪು. ೩-೫೨) ; ಜಿತಮದ ಬಸವೇಶಂಗಂ ನುತನಲ್ಲಮನೆಯ್ದೆ ಪೇಳ್ದನ ನಿಮಿಷನಿರವಂ (ಹಮ್ಮೀರ. ೦-೩೨). [ ಜಿತ + ಮದ₁ ]

**ಜಿತಮನಸ್ಕ** (ನಾ). ಮನಸ್ಸನ್ನು ಜಯಿಸಿದವನಂ ; ಮನೋನಿಗ್ರಹಿ : ಎಲ್ಲರುಂ ಜಿತಮನಸ್ಕರೆ ದೈವ ವಿಧಿವಶಾಯೆ ಚೆಲ್ವರೂಪಿಂ ಬಂದು ಕಣ್ಣುಕಕ್ಕುವನಕ (ಮಂಕುಳ. ೨೬೬). [ ಸಂ. ]

**ಜಿತಮಾಯ** (ನಾ). ಮಾಯೆಯನ್ನು ಗೆದ್ದವನು: ನುತಕಾಯ ಜಿತಮಾಯ . . . ಗಿರಿಜೇಶ (ಹಕಕಾ. ೦-೫) ; ಜಿತಮಾಯಂ ನಿರಪಾಯಂ . . . ಅಲ್ಲಮಪ್ರಭುವರಂ (ವೃಷವಿ. ೦-೦೦). [ ಸಂ. (ಜಿತ + ಮಾಯಾ + -) ]

**ಜಿತಮಾರ** (ನಾ). (ರೂಪಿನಲ್ಲಿ) ಮನ್ಮಥನನ್ನು ಸೋಲಿಸಿದವನಂ ; ಬಹಳ ಸುಂದರ : ಇಱಿದೆಯಲಾ ಎನ್ನನು ಸುಕುಮಾರಾ ಕೊಱೆದಯಲಾ ಕೊರಳನು ಜಿತ[ಪಾಠಾಂ. ಸುಕು]ಮಾರಾ (ಹಕಕಾ. ೧೨-೩೦ ರಗಳೆ) ; ಸಂತಂ ಬಳೆಯುತಿರ್ದಾರಾ ಜಿತಮಾರರ್ ಕುಮಾರರ್ (ರಾಮಾಶ್ವ. ೧೫೦-೨೩).

[ ಜಿತ + ಮಾರ ]

**ಜಿತಶತ್ರು** (ನಾ). ಹಗೆಗಳನ್ನು ಗೆದ್ದವನಂ ; ಶೂರ ; ಕಲಿ : ಜಿತಶತ್ರು ವೃದ್ಧರಾಜ್ಯೋನ್ನತಿಯಿಂದಜಿತೇಂದ್ರನಾದಿರಾಜ್ಯೋನ್ನತಿಯಿಂ ಸುತನೆಸೆದು (ಅಜಿಪು. ೬-೩೩); ಮತ್ತಿತ್ತಲ್ ಜಿತಶತ್ರುವೆಂಬ ಪೆಸರಾಯ್ತನ್ವರ್ಥಮೆಂಬನ್ನಂ (ಶಂರಾಮಾ. ೦೦-೭೩). [ ಜಿತ + ಶತ್ರು ]

**ಜಿತಶ್ರಮ** (ನಾ). ಶ್ರಮವನ್ನು ನಿಗ್ರಹಿಸುವವನಂ ; ಧೈರ್ಯಶಾಲಿ : ಜಿತಶ್ರಮನರಿಕಟಕಭೇದಕನ ನಾನಾಯುಧವಿಶಾರದನ ಭರಿತಧೈರ್ಯನ . . . ಸೇನಾಪತಿಯ ಮಾಡುವುದು (ಕುಮಾ.ಉ. ೩-೮೫). [ಜಿತ+ಶ್ರಮ]

**ಜಿತಸಂಗ್ರಾಮ** (ನಾ). ಯುದ್ಧವನ್ನು ಗೆಲ್ಲುವವನಂ ; ರಣಧೀರ ; ಸುಭಟ : ಶಿವನ ನೊಸಲಂದದಲಿ ಮೆಱೆವವನಿವನು ಜಿತಸಂಗ್ರಾಮ ನಶ್ವತ್ಥಾಮ ನೋಡೆಂದ (ಕುಮಾ.ವಿ. ೬-೫೫). [ ಜಿತ + ಸಂಗ್ರಾಮ ]

**ಜಿತಸಂಸಾರಿ** (ನಾ). ಸಂಸಾರವನ್ನು ಗೆದ್ದವನಂ ; ಹುಟ್ಟುಸಾವುಗಳನ್ನು ಜಯಿಸಿದವನಂ : ಚಿತ್ತಂ ನಟ್ಟು ನಟ್ಟಯನು ಸಾರಲಿಟ್ಟಾಡುವನು ಜಿತಸಂಸಾರಿ (ಬಸಪು. ೪೩-೬). [ ಸಂ. ಜಿತಸಂಸಾರಿನ್ ]

**ಜಿತಾಂತಕ** (ನಾ). ಯಮನನ್ನು ಗೆದ್ದವನಂ ; ಶಿವ : ಜಿತಾಂತಕನೊಳ್ ಮಿಗೆ ಮುಷ್ಟಿಯುದ್ಧದಿಂ ಕಾದುವ ಕಜ್ಜಮುಂ ಗಡ ನಿರಂಗನೊಳಿಂತಿದು ಚಿತ್ರಮಲ್ಲವೇ (ಕಬಕಿಂ. ೪-೦೩೦). [ ಜಿತ + ಅಂತಕ ]

**ಜಿತಾಕ್ಷ** (ನಾ). ೧. ಇಂದ್ರಿಯಂಗಳನ್ನು ಗೆದ್ದವನಂ ; ಜಿತೇಂದ್ರಿಯ : "ಜಿತಾಕ್ಷ-ಇಂದ್ರಿಯಗಳನ್ನು ಗೆದ್ದವನು, ಯತಿ" (ಗಂಗಾಮು. ೦೯೦). ೨. ಅಕ್ಷಕುಮಾರನೆಂಬ ರಾಕ್ಷಸನನ್ನು ಗೆದ್ದವನು; ಹನುಮ. [ಜಿತ+ಅಕ್ಷ]

**ಜಿತಾಕ್ಷರ** (ನಾ). ಮೋಕ್ಷವನ್ನು ಪಡೆದವನು ; ಋಷಿ : ಚೆಲುವಿಂದಿರುಗಳ ನೆಲೆಮೊಲೆಗಳಂಗಜನ ಮರ್ಮಲೆಗಳ್ಬಿಟರ ತಲೆಯ ಬೆಲೆಗಳ್ ಜಿತಾಕ್ಷರರ ಗೊಲೆಗಳ್ (ಉದ್ಭಟೀ. ೪-೨೦). [ ಜಿತ + ಅಕ್ಷರ ]

**ಜಿತಾತ್ಮ** (ನಾ). ಮನಸ್ಸನ್ನು ಗೆದ್ದವನು ; ಆತ್ಮಸಂಯಮಿ : ಉಭಯಕುಲವಿಶುದ್ಧರ್ ನ್ಯಾಯವಂತರ್ ಜಿತಾತ್ಮರ್ ಪ್ರಭುಗಳಧಿಕಪುಣ್ಯರ್ (ಶಾಂತಿಪು. ೩-೭೬) : ಸಮಸ್ತಾಧಿಕಾರಿ ಜಿತಾತ್ಮಂ . . . ವಿದ್ವಜ್ಜನಾಳಂಕೃತಂ (ಸುಕುಮಾ. ೨-೩೯). [ ಜಿತ + ಆತ್ಮ ]

**ಜತಾಹವ** (ನಾ). = ಜಿತಸಂಗ್ರಾಮಂ : "ಜತಕಾಶೀ, ಜತಾಹವ – ಈ ೨ ಗೆಲ್ದವಂ" (ಹಲಾಯು. ೭೯-೩೨೫). [ ಜಿತ + ಆಹವ ]

**ಜಿತೇಂದ್ರಿಯ** (ನಾ).=ಜಿತಾಕ್ಷ ೧: ಜಿತೇಂದ್ರಿಯರೆಂದು ಯೋಗಪಂಕರುಹ ದಿನೇಶರೆಂದು . . . ಕೂರ್ತು (ಸೌಇಇ. XX, ೪೯-೫೭ : 1076); ಎಳಸು ವಬಲೆಯರ ನಡುವಿರ್ದಾತಿಜಿತೇಂದ್ರಿಯಾಮಳನೆನಿಪುದರಿಲ್ಲದಕಟ ನಿರ್ಜರ ಭೂಮಿಯೊಳಗಿರ್ದು ನಾಂ ಜಿತೇಂದ್ರಿಯನೆಂಬುದೇನರಿದು (ಹಹಕಾ. ೭-೪೯); ಜಿತೇಂದ್ರಿಯಂ ತಾನಂತಸೆಗುವೋಲೆಸಗಿದತ್ತಾ ವಜ್ರವಿಧಿ (ಶ್ರೀರಾಮಾ. ೦೭೦-೫೦೭). [ ಜಿತ + ಇಂದ್ರಿಯ ]

**ಜಿತೇಂದ್ರಿಯತ್ವ** (ನಾ). ಇಂದ್ರಿಯನಿಗ್ರಹ; ಆತ್ಮಸಂಯಮಂ : ಎಲ್ಲಿತ್ತೊ ಧೈರ್ಯಮು ವಶ ಮು ಮೆ ಲ್ಲಿ ತ್ತೊ ಜಿತೇಂದ್ರಿಯತ್ವಗುಣಮೆಲ್ಲಿತ್ತೋ (ಕಾದಂಪೂ. ೭೭೩). [ ಸಂ. ]

**ಜಿತ್ಯ** (ನಾ). ೧. ನೇಗಿಲಿನ ಗುಳ. ೨. ಕುಂಟೆ ; ಹಲುಬೆ. [ ಸಂ. ]

**ಜಿತ್ವರ** (ನಾ). ಜಯಂಶಾಲಿ ; ವಿಜಯಿ: "ಜೇತ, ಜಿಷ್ಣು, ಜಿತ್ವರಃ ೩ ಗೆಲ್ಲುವ ಸ್ವಭಾವವುಳ್ಳವನು. ಜಯದಲ್ಲಿ ಒಳ್ಳೇ ಅದೃಷ್ಟಶಾಲಿಯೆಂದು ಭಾವ" (ಸಿದ್ಧಾಂತಿ. ೨೨೩) : ಜಿತ್ವರಸಾತ್ರವೇದಿ ಗಮಕಿತ್ವಮುಮಂ [ವರವಾ]ದಿಭೇದಿ ವಾದಿತ್ವಮುಮಂ . . . ನೃಪಾಲಸಭೆ ಮೆಚ್ಚೆ (ಪಾರ್ಶ್ವಪು. ೧-೦೭). [ ಸಂ. ]

**ಜಿದ್ದು** (ನಾ). ೧. ಬದ್ಧಮಾತ್ಸರ್ಯ ; ದುರಾಗ್ರಹ : ಮೊದ್ದು ಸಂಗಕೆ ಸಲ್ಲ ಸದ್ದು ಧ್ಯಾನಕೆ ಸಲ್ಲ ಜಿದ್ದು ಬೋಧಕನಿಗೆ ಸಲ್ಲ (ಇಂಜಾಶ. ೧೯೦-೪೬). ೨. ಪೈಪೋಟಿ ; ಪೇಲಾಟ; ಸ್ಪರ್ಧೆ: ನವ್ಮ ಜಿದ್ದಿನೊಳಗೆ . . . ಕರಾರ ಇದ್ದಿದ್ದಿಲ್ಲ (ಕಳ್ಳರ್ಧ. ೯): ಮರಣದೊಡನೆ ಜಿದ್ದೆಸಗಿ ಅವರನ್ನು ನೋಡಿಯೇ ತೀರುವೆನೆಂದು ಪಟೇಲನು ಒಂದು ವರ್ಷದ ಮೇಲೆ ತನ್ನ ಅಸ್ಥಿ ಪಂಜರಕ್ಕೆ ಅಂಟಿಕೊಂಡಿದ್ದ (ಸಮುಜೀ. ೯೭೭). ೩. ಪಣ ; ಪಂಥ : ಧರ್ಮರಾಜನು . . . ದ್ರೌಪದಿಯನ್ನು ಜಿದ್ದಿಗೆ ಹಚ್ಚಿರುವನು (ಮಭಾರ.೯೭).

ಜಿದ್ದಾಜಿದ್ದಿ = ತೀವ್ರವಾದ ಪೇಲಾಟ,-ಪೈಪೋಟಿ : ಜಿದಾಜಿದ್ದಿ ಕುಸ್ತಿಯನ್ನು ನೋಡಲು ಬಹಳ ಜನ ನೆರೆದಿದ್ದರು (ಬೂಧಿ). ಜಿದ್ದಿಗೆ ಬೀಳು = ಪಣಕಟ್ಟು ; ಹಟಕ್ಕೆ ಬೀಳು: ನಾನು ಸಹ . . . ಜಿದ್ದಿಗೆಬಿದ್ದು, ಸ್ನಾನ, ಆಹ್ನಿಕ, ವ್ರತ, ಉಪವಾಸ ಮಾಡಿ ಗಂಗಾತೀರದಲ್ಲಿ ಸದ್ಗತಿ ಲಾಭ ಹೊಂದಬಹುದಾಗಿತ್ತು (ಇಪ್ಪಳ. ೪೭೩); ಜಿದ್ದಿಗೆ ಬಿದ್ದು ಕಾಫೀ ಕುಡಿಯು ವುದನ್ನು ತ್ಯಜಿಸಿದ್ದಾನೆ (ಚಂದುಟಿ. ೫೫). ಜಿದ್ದುಮಾಡು=ದ್ವೇಷಸಾಧಿಸು : ಇತರರ ಸ್ನೇಹವೇ ಹೊರತು ಜಿದ್ದುಮಾಡುವುದಿಲ್ಲ (ಜಿತ್ರಪಾ. ೯೭) : ವಂದಕ್ಕೊಂದು ಜಿದ್ದುಮಾಡುವಂಥಾದ್ದು ವಿಹಿತವಲ್ಲ (ರಾಜೇಂದ್ರ. ೦೨೪). [←ಅರ. ಹಿಂ. ಮರಾ. ಜಿದ್ ]

**ಜಿದ್ದುಕಟ್ಟು** (ಕ್ರಿ). ಪಣತೊಡು; ಪಂಥ ಕಟ್ಟು; ಬಾಜಿಕಟ್ಟು: ರಣಹಲಗೆ ಸದ್ದಿನಲಿ ಜಿದ್ದುಕಟ್ಟಿದ್ದಿರುವ ಜಡಿಮಳೆಯ ರುದ್ರಾವತಾರ (ನಲಮು. ೦೪-೮) ; ಇದಕ್ಕೆ ಬೇಕಾದಷ್ಟು ಜಿದ್ದುಕಟ್ಟುತ್ತೇನೆ (ವೋಹಿನೀ. ೦೧೭) : ವಾದದ ಭರದಲ್ಲಿ ಕೊರಳಿಗೊಂದು ಜಿದ್ದುಕಟ್ಟಿಕೊಂಡೆ (ದಾಸಕು. ೯೪). [ ಜಿದ್ದು + ಕಟ್ಟು$_1$ ]

**ಜಿದ್ದುತೀರಿಸು** (ಕ್ರಿ). ಹಗೆ ತೀರಿಸು ; ದ್ವೇಷ ಸಾಧಿಸು : ಪ್ರತಿ ಯೊಬ್ಬರೂ ತನ್ನ ಮೇಲೆ ಜಿದ್ದುತೀರಿಸಿಕೊಳ್ಳಲು ಹವಣಿಸುತ್ತಿದ್ದಂತೆ ಅವನಿಗೆ ತೋರಿತು (ಪುನರು. ೦೨೯). [ ಜಿದ್ದು + ತೀರಿಸು ]

**ಜಿನ$_1$** 'ಚಿನ್ನ$_2$' ನೋ.

**ಜಿನ$_2$** (ಗು). ೧. ವಿಜಯಿಯಾದ; ಜಯಶಾಲಿಯಾದ. ೨. ಸ್ಥಿರವಾದ; ಅಚಲವಾದ.(ನಾ). ೩. ಬೌದ್ಧ ಅಥವಾ ಜೈನ ಗುರು. ೪. ಅರ್ಹಂತ: ಜಿನನ ಪೂಜಿಸಿ ಬತ್ತಲೆಯಿಪ್ಪುದ ಕಂಡೆ (ಬಸವ. ೫೬೪); ಉದ್ಭವಿಸಿದಂ ತ್ರೈಲೋಕ್ಯನಾಥಂ ಜಿನಂ (ಪುಷ್ಪಪು. ೦೦-೨): ಕಿಡಿಸಲ್ಪಡುಗೆವ್ಮ ದುಃಖ ಸಂತತಿ ಜಿನನಿಂ (ಶಮದ. ೨೫೧ ಪ್ರಯೋ): ದೇಗುಲಂ ಬಸತಿಯ ಜಿನನೆ ತಾಂ ಮೇಗೆ ದೈವವು (ಬಸಪು. ೪೯-೦೨). ೫. ಬುದ್ಧ : "ಜಿನಃ ಷಡಭಿಜ್ಞಃ . . . ಮುನೀಂದ್ರಃ – ೧೮ ಬುದ್ಧದೇವರ ಹೆಸರುಗಳು" (ಸಿದ್ಧಾಂತಿ.೧೫). ೬. ಇಂದ್ರಿಯಗಳನ್ನು ಗೆದ್ದವನು; ಮನೋನಿಗ್ರಹಿ: "ಅರುಹಂ ಬುದ್ಧ ಧೀರಂ ಜಿನಾಖ್ಯಂ" (ನಾನಾರ. ೬೩). ೭. ವಿಷ್ಣು. ೮. [ಗಣಿತ] ಇಪ್ಪತ್ತು ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಜಿನವುದಿಪ್ಪತ್ನಾಲ್ಕು" (ಮಂಗರಾ. ೦೦೪-೯). [ ಸಂ. ]

**ಜಿನಂಗಿ** 'ಜೀನಂಗಿ' ನೋ.

**ಜಿನಕ** (ನಾ). ಒಂದು ಬಗೆಯ ಔಷಧಿದ್ರವ್ಯ : ಜಿನಕ, ಕರ್ಪೂರ, ಯಷ್ಟಿ ಮಧುಕ . . . ಇವುಗಳನ್ನು ಅಕ್ಕಿಗಚ್ಚಿನಿಂದರೆದು ಮೊಲೆಹಾಲಿನಿಂದ ನಸ್ಯಂಗೆಯಲು ದಾಹಜ್ವರ ಮಾಣುವುದು (ಸಕಪ್ಪ. ೮೭). [ ? ]

**ಜಿನಗಹಳೆ** 'ಚಿನ್ನಂಗಾಳೆ' ನೋ.

**ಜಿನಗಾಳೆ** 'ಚಿನ್ನಂಗಾಳೆ' ನೋ.

**ಜಿನಗೃಹ** (ನಾ). ಜೈನದೇವಾಲಯ ; ಬಸದಿ : "ಜಿನಗೃಹದಲ್ಲಿಯುಂ ವಸತಿಯೆಂಬುದು" (ಹಲಾಯು. ೧೬೪-೨೦) ; ಜಿನಗೃಹಮಂ ಮನೋ ಮುದದೆ ಮಾಡದನಾಪ್ತ ಗೃಹಂಗಳಂ ಮಹಾಜನಮನೆ ನೋಡಿ ಮಾಡಿಸುವವಂ (ಸಮುಶ. ೪-೧೨೭). [ ಜಿನ$_2$ + ಗೃಹ ]

**ಜಿನಗೇಹ** (ನಾ). = ಜಿನಗೃಹ: ಜಿನಗೇಹಾಳಿಯೊಳುನ್ನತ ಮುನಿವರರೊಳ್ ಭವ್ಯತತಿಯೊಳ್ . . . ಜಿನಮತವಂ ಕೇಳ್ದೆ ಸೌಖ್ಯಮಂ ಬಯಸುವವಂ (ಧರ್ಮಾಮೃ. ೭-೨೦೭) ; ಜಿನಪೂಜೋತ್ಸವಕ್ಕೆ, ಜಿನಕಥಾಲಾಪಗಳಿಗೆ, ಜಿನ ಮುನಿಗಳಿಗೆ ಜಿನಗೇಹಗಳಿಗೆ ನೀನು ವೆಚ್ಚಮಾಡುವುದಕ್ಕೆ ಲೆಕ್ಕ ಉಂಟೆ (ಶಕಾರ. ೨೨೨). [ ಜಿನ$_2$ + ಗೇಹ ]

**ಜಿನಚರಿತ** (ನಾ). ತೀರ್ಥಂಕರನ ಚರಿತ್ರೆ: ಕೇವಣಿಸು ವಾಕ್ಸುವರ್ಣ ದೊಳೊಲವಿಂ ಸಂದ ಜಿನಚರಿತರತ್ನಮಂ (ಚಂದ್ರಪು. ೧. ೬೦). [ ಜಿನ$_2$ + ಚರಿತ ]

**ಜಿನಚರಿಯೆ** (ನಾ). ಜೈನಯತಿಗಳ ಆಚಾರ,-ವ್ಯವಹಾರ : ಜನರ ನುಡಿ ಯುಕ್ತಿಯುಕ್ತಂ ಜನರ ನೆಗಟ್ತೆಗಳುವಂತೆ ದೋಷವಿವಿಕ್ತಂ ಜಿನಚರಿಯೆ ಪೆಣ್ಗೆ ಕೂಡದು ವಿನಯೋಲ್ಲಂಘನದೆ ಕೆಲರದಂ ಪ್ರಕಟಿಸುವರ್ (ಶಸಾರ ೧೦೦೦-೧). [ ಜಿನ$_2$ + ಚರಿಯೆ ]

**ಜಿನಚೈತ್ಯ** (ನಾ). ಜೈನ ದೇವಾಲಯ; ಬಸದಿ: ವಿನೂಪ್ನಿರ್ಪುವೊ ಪೋಲು ದಿವ್ಯ ಜಿನಚೈತ್ಯಂಗಳ್ ಬಹಿತ್ರಂಗಳಂ (ಪುಷ್ಪಪು. ೨-೭೪). [ ಜಿನ$_2$ + ಚೈತ್ಯ ]

**ಜಿನತಾಪಸ** (ನಾ). ಜೈನ ಮುನಿ,-ತಪಸ್ವಿ : ಜಿನತಾಪಸರದನೀಕ್ಷಿಸಿ ಮನ ದೊಲವಿಂ ಕರಿಗೆ ಕಟ್ಟುಮಾಡಿದರಾಗಳ್ (ಹಾಲಾಸ್ಯ. ೨-೬-೨೨). [ ಜಿನ$_2$ + ತಾಪಸ ]

**ಜಿನದಾಸಿ** (ನಾ). ಒಬ್ಬಾತನ ಹೆಸರು (?) : ಭಂಗಿಯಿನ್ನೊಳಗುಳ್ಳಂಗನೆ ಯರ ಪುತ್ರಂ ಗಂಗೆಯಂಗೆರಡಲ್ಲಾಳ್ದೀ ಜಿನದಾಸಿ ತುಂಗ ಪರಾಕ್ರಮಂ . . . ವಾಮದೇವಂ (ಸೌಇಇ. XX, ೨೪-೨೪ ; 1034). [ ? ]

**ಜಿನದೀಕ್ಷಿತ** (ನಾ). ಜಿನದೀಕ್ಷೆಯನ್ನು ಹೊಂದಿದವನು ; ಜೈನಸಂನ್ಯಾಸಿ: ಜಿನದೀಕ್ಷಿತನಂತ್ಯದೊಳಮರನಾಗಿ ಮುನ್ನಿನ ನಿದಾನದಿಂದಶ್ವಗ್ರೀವನಖಶ್ಚರ ನಣ್ಣೆ (ಶಾಂತಿಪು. ೭-೬೪). [ ಜಿನ$_2$ + ದೀಕ್ಷಿತ ]

**ಜಿನದೀಕ್ಷೆ** (ನಾ). ಜೈನಸಂನ್ಯಾಸ ದೀಕ್ಷೆ: ದುರ್ಧರ ಜಿನದೀಕ್ಷೆಯನಘಕುಳಕರ ಚಂಡಂ ಮೂಜು ಪಾವದಾಗಳ್ ಕೊಂಡಂ (ಆದಿಪು. ೯-೭೯) ; ಆ ಮಹಾತ್ಮಂ ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ (ಸುಕುಮಾ. ೦೦-೩೦) ; ಜಿನದೀಕ್ಷೆಯನ್ನು ಸ್ವೀಕರಿಸಿ, ಮಾಘ ಬಹುಳ ಚತುರ್ದಶಿಯ ದಿವಸ ಮೋಕ್ಷವನ್ನೈದಿದನು (ಭಾರದ. ೧೭೨). [ ಜಿನ$_2$ + ದೀಕ್ಷೆ ]

**ಜಿನದೇವಣ** (ನಾ). ಒಬ್ಬಾತನ ಹೆಸರು: ಜಿನದೇವಣನಜಿತಸೇನ ಮುನಿಪರ ಗುಡ್ಡಂ (ಎಕ. II, ೧೨೦-೨; ೯೯೬). [ಜಿನ್ನ + ದೇವ+ಅಣ್ಣಂ (<ಅಣ್ಣ$_1$)]

**ಜಿನಧರ್ಮ** (ನಾ). ಜೈನಧರ್ಮ: ನಿಮಗಮುಮಗಮಾಮ್ನಾಯದಿಂ ಬಂದು ದಿಂತೀ ಜಿನಧರ್ಮಂ (ಆದಿಪು. ೨-೨೦); ಜಿನಧರ್ಮದ ಪೆಂಪಂ ಮೇದಿನಿ ಗಱಪುವ ತೆಱದಿನಮರರ್ . . . ಧಾತ್ರಿಯಂ ಬಲವಂದರ್ (ಧರ್ಮಾಮೃ. ೯-೨೪೦). [ಜಿನ್ನ + ಧರ್ಮ]

**ಜಿನನಾಥ** (ನಾ). ತೀರ್ಥಂಕರ: ಜಿನನಾಥಸ್ನಪನಾಂಬು ತಜ್ಜನತನು ಶ್ರೀ ಸಂಗದಿಂ ತಾನೆ ಪಾವನಮಾಯ್ತೇ (ಆದಿಪು. ೬-೯೫); ತೀರ್ಥೇಶ್ವರ ಪಾದಾರ ವಿಂದ ಸಮಕ್ಷದೊಳ್ ಜಿನನಾಥರೂಪಮಂ ತಾಳ್ದಿ (ಶಾಂತಿಪು. ೪-೦೦೮ ವ); ಜಿನನಾಥನನಱಯದನುಂ ಜಿನನಾಥನ ಮಾರ್ಗದಲ್ಲಿ ರುಚಿಯಿಲ್ಲದನುಂ . . . ಬಹಿರಾತ್ಮಂ (ಪರಮಾ. ೫೬-೦೭). [ಜಿನ್ನ + ನಾಥ]

**ಜಿನನಿಕೇತ** (ನಾ). = ಜಿನಗೃಹ: ರತ್ನಚ್ಛವಿಯಿಂ ದಿಗ್ಭಿತ್ತಿಯಂ ಚಿತ್ರಿಸುವ ಜಿನನಿಕೇತಂಗಳಂ ಮಾಡಿಸುತ್ತುಂ (ಆದಿಪು. ೧೫-೪೬). [ಜಿನ್ನ + ನಿಕೇತ]

**ಜಿನನುತಿ** (ನಾ).=ಜಿನಸ್ತುತಿ: ಜಿನನುತಿಗಲ್ಲದೆ ಪರಮಶ್ರೀವಿಭವಮೆಯ್ದದು (ಪುಷ್ಪಪು. ೧-೪೪). [ಜಿನ್ನ + ನುತಿ]

**ಜಿನಪ** (ನಾ).=ಜಿನನಾಥ: ಜಿನಪಂ ತ್ರಿಸಾಕ್ಷಿಕಂ ತಾನೆನಿಸಿ ತಪಂಗೊಂಡ ಪದ ದೊಳ್ (ಪಾರ್ಶ್ವಪು. ೦೬-೬೨); ಹರಿಯೊಳು ಮನೋಜನೊಳು ಜಿನಪನೊಳು ಶಾಲಿಯೊಳು . . . ಹೋತಿನೊಳು ನಿಯತದಿಂದಲಜನಾಮಮಕ್ಕುಂ (ಮಂಗರಾ. ೧೫೨-೬೦). [ಸಂ.]

**ಜಿನಪತಿ** (ನಾ).=ಜಿನನಾಥ: ಬಗೆಗೊಂಡು ಜಿನಪತಿಯಂ ಪೂಜಿಸು ಪಡೆವೆ ಯಿನಿಯನಂ ಮಱುಭವದೊಳ್ (ಆದಿಪು. ೬-೦೭); ನಿಜೈಶ್ವರ್ಯಪದವಿ ಗೆಱಗಿದರ್ . . . ಜಿನಪತಿಗೆ ಭವ್ಯರೆಱಗುವ ತೆಱದಿಂ (ಚಂದ್ರಪು. ೬-೩೦); ಮಾಡಲ್ಪಡುಗೆಮಗೆ ಸಂಪದು ಜಿನಪತಿಯಿಂ (ಶಮುದ. ೨೫೦ ಪ್ರಯೋ). [ಜಿನ್ನ + ಪತಿ$_2$]

**ಜಿನಪ್ರತಿಮೆ** (ನಾ). ಜಿನನ ವಿಗ್ರಹ,–ಮೂರ್ತಿ: ಪಸರಿಪ ಚಂದ್ರಿಕೆ ಯಿಂದಿರುಳೊಸರ್ದ ಸಲಿಲಾಭಿಷೇಕಮಂ ತಮ್ಮೊಳ್ ರಂಜಿಸುವ ಜಿನಪ್ರತಿ ಮಾಳಿಗೆ ಪೊಸಯಿಪುವವಱಂದುಕಾಂತಮಣಿಕೂಟಂಗಳ್ (ಚಂದ್ರಪು. ೦-೧೨೨). [ಜಿನ್ನ + ಪ್ರತಿಮೆ]

**ಜಿನಪ್ರಬುದ್ಧಿ** (ನಾ). ಜೈನ ತತ್ತ್ವ,–ಸಿದ್ಧಾಂತ: ಓಲಗಿಸಲಾ ಮುನಿಗಳಿಲ್ಲಕೆ ಮೇಲೆನಿಪ ಗುರುವೊಬ್ಬನಾ ಭೂಪಾಲಕಂಗಾಚಾರ್ಯನಾಗಿ ಜಿನಪ್ರಬುದ್ಧಿ ಯಲಿ ಮನುಜರಂ ಬೋಧಿಸುತಿರಲ್ಕೆ (ಬಸಪು. ೫೦-೦). [ಜಿನ್ನ + ಪ್ರಬುದ್ಧಿ]

**ಜಿನಬಸದಿ** (ನಾ). = ಜಿನಗೃಹ: ಹಾಱ ಕೆಡೆವುತ ಜಿನಬಸದಿಗಳನೇಱ ಯಲ್ಲಿಂದಿಳಿಯ ಜಾಱುತ (ಬಸಪು. ೫೨-೦೬). [ಜಿನ್ನ + ಬಸದಿ]

**ಜಿನಬಿಂಬ** (ನಾ).=ಜಿನಪ್ರತಿಮೆ: ಜಿನಬಿಂಬಮಚೇತನಮೆಂತು ನಿಗ್ರಹಾನು ಗ್ರಹಕ್ಕೆ ನಾಯಕಮಕ್ಕುಂ (ಪಾರ್ಶ್ವಪು. ೦೩-೧೨); ಈ ಧರ್ಮಶಾಸನಕ್ಕಾವ ನೊಬ್ಬ ಜೈನನಾದವ ತಪ್ಪಿದರೆ ಬೆಳಗುಳದ ಗೊಮ್ಮಟನಾಥ . . . ಮೊದ ಲಾದ ಜಿನಬಿಂಬಂಗಳನೊಡೆದ ಪಾಪಕ್ಕೆ ಹೋಹರು (ಎಕ. XX, ೯೪-೬೫; ೧೬೬೮); ಒಂದು ಸಾವಿರದ ಐನೂರು ಜಿನಬಿಂಬಗಳನ್ನು ಚೊಕ್ಕಬಂಗಾರದಲ್ಲಿ ಈಕೆ ಮಾಡಿಸಿ (ದಾನಚಿಂ. ೦೬೪). [ಜಿನ್ನ + ಬಿಂಬ]

**ಜಿನಭವನ** (ನಾ). = ಜಿನಗೃಹ: ಆ ಜಂಬೂದ್ವೀಪದ ನಟ್ಟನಡುವೆ . . . ರತ್ನತೋರಣಾಂಚಿತ ಜಿನಭವನವಪರಿವೃತಮುಂ (ಆದಿಪು. ೧-೪೯ ವ); ಪೊಳಲೊಳೆಲ್ಲಕೆ ಹಿರಿಯ ಬಸದಿಯೆನಲು ಮೆಱಪ ಘನ ಜಿನಭವನವದು (ಬಸಪು. ೫೨-೩೨). [ಜಿನ್ನ + ಭವನ]

**ಜಿನಮಂದಿರ** (ನಾ).=ಜಿನಗೃಹ: ಜಿನಮಂದಿರಂಗಳಂ ಬಂದಿಸಿ (ಶಾಂತಿಪು. ೯-೬೪ ವ). [ಜಿನ್ನ + ಮಂದಿರ]

**ಜಿನಮತ** (ನಾ). ಜೈನಧರ್ಮ: ನಿಮ್ಮಾದುದನಪ್ಪಂ ದುರ್ಜನನಾದುದ ನಪ್ಪಂತು ಕಲ್ತೆನೇ ಜಿನಮತಮಂ (ಶಾಂತಿಪು. ೬-೫೮). [ಜಿನ್ನ + ಮತ]

**ಜಿನಮಹಾಕಲ್ಯಾಣ** (ನಾ). ತೀರ್ಥಂಕರನ ಜೀವನದಲ್ಲಿಯ ಐದು ಕಲ್ಯಾಣಗಳಂ: ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಭಿಷೇ ಕೋತ್ಸವಂ . . . ಜಿನಮಹಾಕಲ್ಯಾಣಮಯ್ದುಂ ಸವಿಸ್ತರದಿಂದಿರ್ಪುವು (ಅಜಿಪು.೦-೯೭). [ಜಿನ್ನ + ಮಹಾಕಲ್ಯಾಣ]

**ಜಿನಮಾರ್ಗ** (ನಾ). = ಜಿನಮತ: ಜಿನಮಾರ್ಗಂ ಸ್ವೈರಮಾರ್ಗಂ ಜಿನ ಮತಮೆ ಮತಂ (ಸುಕುಮಾ. ೧-೪೯); ತತ್ಪುರದ ಜನವೆಲ್ಲ ಧರಣಿಯೊಳು ಜಿನಮಾರ್ಗವಾಗಿಯೆ ಚರಿಸಲು (ಬಸಪು. ೫೨-೧). [ಜಿನ್ನ + ಮಾರ್ಗ]

**ಜಿನಮುದ್ರೆ** (ನಾ). ಜಿನೇಶ್ವರನ ರೂಪ: ಆದಾರ್ಗೆ ಜಿನಮುದ್ರೆ ಮಾಡಿ ಸದೊ ಮುದದೊದವಂ (ಚಂದ್ರಪು. ೬-೯). [ಜಿನ್ನ + ಮುದ್ರೆ]

**ಜಿನಮುನಿ** (ನಾ). ೧. ಜೈನ ಸಂನ್ಯಾಸಿ,–ಯತಿ: ಜಿನಮುನಿಗಳೆಂದರು ಶಿವಕುಮಾರಂಗೆ (ಬಸಪು. ೫೦-೩೩). ೨. ತೀರ್ಥಂಕರ; ಅರ್ಹಂತ: ಪೂಜಿ ಸಿದಂ . . . ಜಿನಮುನಿ ಪದಾಂಬುಜಯುಗಂಗಳಂ (ಪುಷ್ಪಪು. ೯-೫). [ಜಿನ್ನ + ಮುನಿ$_3$]

**ಜಿನಯತಿ** (ನಾ). = ಜಿನಮುನಿ ೧: ಸತಿಯ ನಿನಗಿಲ್ಲಿಯ ಗುರುಗಳೀ ಗತಿ ಯನುಳಿದವರಂ ಕಳುಹು ಜಿನಯತಿಗಳಱದಡೆ ಮೇಲೆ ವಿಪರೀತಂಗಳಹ ವಿನ್ನು (ಬಸಪು. ೫೦-೬). [ಜಿನ್ನ + ಯತಿ]

**ಜಿನಯೋಗಿ** (ನಾ). ಜೈನ ತಪಸ್ವಿ: ಇನನಿಂದಂ ಗೊರವಂ . . . ಶನಿಯಿಂದಂ ಜಿನಯೋಗಿಯಪ್ಪ ತಪಮಂ ಕೆಯ್ಕೊಳ್ಗುಮಾ ಮಾನವಂ (ಜಾತಿತಿ. ೦೬-೨). [ಜಿನ್ನ + ಯೋಗಿ]

**ಜಿನರಾತ್ರಿ** (ನಾ). ಆದಿತೀರ್ಥಂಕರನು ಮೋಕ್ಷವನ್ನು ಪಡೆದ ರಾತ್ರಿ: ವೃಷಭಸ್ವಾಮಿಯು . . . ಮಾಘ ಬಹುಳ ಚತುರ್ದಶಿಯ ದಿವಸ ಮೋಕ್ಷ ವನ್ನೆದಿದನು . . . ಆ ರಾತ್ರಿಯನ್ನು ಜಿನರಾತ್ರಿಯೆಂದೂ ಶಿವರಾತ್ರಿ ಯೆಂದೂ ಕರೆದು ನಲಿದಾಡಿದರು (ಭಾರಿದ. ೦೬೨). [ಜಿನ್ನ + ರಾತ್ರಿ]

**ಜಿನರೂಪ** (ನಾ). [ಜೈನ] ಐವತ್ತು ಮೂರು ಗರ್ಭಾನ್ವಯ ಕ್ರಿಯೆಗಳಲ್ಲಿ ಒಂದು: (ತಪಸ್ವಿಗಾಗಿ ಹೊಂದುವ) ನಗ್ನತೆ; ದಿಗಂಬರತ್ವ: ಗೃಹತ್ಯಾಗದೀಕ್ಷಾಜಿನರೂಪಮೌನಾಧ್ಯಯನ . . . ಎಂಬಯ್ವತ್ತು ಮೂಱು ಗರ್ಭಾದಿನಿರ್ವಾಣ ಪರ್ಯಂತಂಗಳಪ್ಪ ಗರ್ಭಾನ್ವಯಕ್ರಿಯೆಗಳಂ (ಆದಿಪು. ೧೫-೧೫ ವ): ವಾನಪ್ರಸ್ಥನು ವಸ್ತ್ರಾದಿಗಳಂ ತ್ಯಜಿಸಿ ಜಾತರೂಪ ನಾಗಿ ನಿಸ್ಸಂಗತ್ವಮಂ ಪಡೆವುದೇ ಜಿನರೂಪಮೆಂಬ ೨೪ನೆಯ ಕರ್ಮವು (ಪುರುಚ. ೨೦೦). [ಜಿನ್ನ + ರೂಪ]

**ಜಿನರೂಪು** (ನಾ). = ಜಿನಪ್ರತಿಮೆ: ಜಿನಮುನಿಗಳ ತಲೆಗಳಂ ಹೊಡೆದು ಕೆಡಹುತ ಮುಳಿದು ಜಿನರೂಪುಗಳ ತಲೆಗಳನರಿದು ಹುಡಿಗುಟ್ಟಿ (ಬಸಪು. ೫೦-೬೨). [ಜಿನ್ನ + ರೂಪು]

**ಜಿನವರ್ತನ** (ನಾ). ಜೈನಧರ್ಮಾಚರಣೆ: ಅಮಳಶ್ರೀ ಜಿನವರ್ತನಂ ಕಿಡದು . . . ಅಭೀಷ್ಟವೃಷ್ಟಿ ಕಱಯುತ್ತಿರ್ಕುಂ (ಪುಷ್ಪಪು. ೨-೩). [ಜಿನ್ನ + ವರ್ತನ]

**ಜಿನವೃಂದಾರಕ** (ನಾ). ಜಿನದೇವ; ತೀರ್ಥಂಕರ: ಜಿನವೃಂದಾರಕರಿರ್ಪತ್ತು ನಾಲ್ವರಾ ತೀರ್ಥನಾಥ ಸಮುದಾಯದ ಶಾಸನದೇವಿಯರ್ಕಳಿರ್ಪತ್ತು ನಾಲ್ವರೀಗೆಮಗೆ ಯಕ್ಷರಕ್ಷೆಯಸುಖಮಂ (ಅಜಿಪು. ೧-೬). [ಜಿನ್ನ + ವೃಂದಾರಕ]

**ಜಿನಶಾಸನ** (ನಾ). ಜೈನ ಸಿದ್ಧಾಂತ,–ಧರ್ಮ: ಜಿನಶಾಸನದೀಪಕನುಂ ಮುನಿವೈರೋಚನನುಮಪ್ಪ ಜಿನಚಂದ್ರಮುನೀಂದ್ರಂ (ಶಾಂತಿಪು. ೧-೫೫): ಜಿನಶಾಸನಲಕ್ಷ್ಮಿಗೆ ಲೋಚನಯುಗಳರ್ ವೀರಸೇನಜಿನಸೇನಾಖ್ಯರ್ (ಚಂದ್ರಪು. ೧-೦೬). [ಜಿನ್ನ + ಶಾಸನ]

**ಜಿನಶಿ** 'ಜಿನಸು' ನೋ.

**ಜಿನಶಿಕಛೇರಿ** (ನಾ). ಹದಿನೆಂಟು ಕಚೇರಿಗಳಲ್ಲಿ ಒಂದು: ಕಛೇರಿಗಳು–೧. ದಿವಾನ್‌ಕಛೇರಿ . . ೧೫. ಜಿನಶಿಕಛೇರಿ (ಮಹಾವಂ. II, ೩೯). 'ಅರಾರಾಕಚೇರಿ' ಪರಾ. [ಜಿನಶಿ (<ಜಿನಸು) + ಕಛೇರಿ (<ಕಚೇರಿ)]

**ಜಿನಸಪರ್ಯೆ** (ನಾ). ತೀರ್ಥಂಕರನ ಪೂಜೆ,–ಸೇವೆ: ಪುಣ್ಯದ ಬಂಧಮಂ ನಾವರಿಸುವ ಜಿನಸಪರ್ಯೆ ತೊಡರ್ದುದು ಬಗೆಯೊಳ್ (ಆದಿಪು. ೩–೨೮). [ಜಿನ + ಸಪರ್ಯೆ]

**ಜಿನಸಮಯ** (ನಾ). ೧. ಜೈನಧರ್ಮ,–ಮಾರ್ಗ: ವಿಭುಸದ್ಮಂಗಂಡು ಬಂದಂ ಜಿನಸಮಯಸರಸ್ಸಾರಕೇಳೀಮರಾಳಂ (ಚಂದ್ರಪು. ೬–೧೫೩). ೨. = ಜಿನಸಮಯಿ: ಕ್ಷಯವ್ಯಜನಂ ಜಿನಸಮಯಂ ಸ್ವಯರಹಿತಂ . . . ಸರಸ್ವತೀ ಮುಖ ಮುಕುರಂ (ಸುಕುಮಾ. ೦–೩೦). [ಜಿನ + ಸಮಯ]

**ಜಿನಸಮಯಿ** (ನಾ). ಜೈನಮತೀಯ: ಜಿನಸಮಯಿಗಳಿಟ್ಟರೆ ತನ್ನನೊತ್ತಿಯಿಟ್ಟಪೊಡಂ . . . ಜೈನನಿಕ್ಕುಗುಮನವರತಂ ಪೆಱರೆಂತು ಮುಱಲಿಕ್ಕುವರೆ (ಸಮಪ. ೪–೩೦): ಜೈನರು ಭೂತಳೇಶಂಗಱುಹಲಾತನು ಜಿನಸಮಯಿಯಾಗಿ ಪಾತಿಗೊಳುತಿಂತೆಂದನು (ಬಸವಪು. ೩೦–೫). [ಸಂ. ಜಿನಸಮಯಿನ್]

**ಜಿನಸವನ** (ನಾ). ಜಿನನ ಅಭಿಷೇಕ; ತೀರ್ಥಂಕರನ ಅಭಿಷೇಕ: ಜಿನಸವನ ಮಂಗಳಕ್ಕಾನೆ ನೋಂತೆನೆಂಬಂತೆ ಶಿಖರಿ ನಿಜಶಿಖರದ ಪೆಂಪನೆ ಮೆಱೆದು (ಆದಿಪು. ೬–೬೪): ಸಿಡಿಲ್ದಡರ್ದಿಂಬಾದುವು ಜಿನಸವನ ಜನಿತ ಜಲಲವಮವರೊಳ್ (ಪುಷ್ಪಪು. ೦೦–೩೪). [ಜಿನ + ಸವನ]

**ಜಿನಸಿದ್ಧ** (ನಾ). ಸಿದ್ಧಿಯನ್ನು ಹೊಂದಿದ ಜಿನದೇವ. P 'ದೇವದೇವ', 'ಶಿವಶಿವ' ಎಂಬಂತೆ ಇದರ ಪ್ರಯೋಗವುಂಟು: ಜಿನಸಿದ್ಧ ವರ್ಷ ತಾನಪ್ಪಾಯ್ತು ಅಮ್ಮಾಜಿ (ಭರತ. ೪೬–೩೦): ಜಿನಸಿದ್ಧ ದೇವರಿಂತುಟು ನಿರೂಪಿಸಲಾಗದು (ಭರತ. ೫೯–೨೯). [ಜಿನ + ಸಿದ್ಧ]

**ಜಿನಸು, ಜಿನಶಿ, ಜಿನಿಸು, ಜಿನ್ನಸು, ಜೀನಸು, ಜೀನಿಸು, ದಿನಸಿ, ದಿನಸು, ದಿನಿಸು, ದೀನಸು** (ನಾ). ೧. ಸಾಮಾನು; ಸರಕು; ಪದಾರ್ಥ; ಸಾಮಗ್ರಿ: "ಜಿನಸು–ಅನೇಕ ತರ ಒಡವೆ, ಸಾಮಾನು" (ಕಾನಕೋ. ೬೦): ಗೋಧಿ ಕಡಲೆ ಬೆಲ್ಲಂ ಬೇಳೆ ಭತ್ತುದ್ದು ಪೆಸಱು ಘೃತ ಮುಂತಾದ ಜಿನಸುಗಳ (ಸಿದ್ಧಕಾ. ೧೦–೯); ಆತ ಸನಿಯದಲ್ಲಿ ಜಿನಸಿನ ಅಂಗಡಿ ಇಟ್ಟಿದ್ದ (ತ್ಯಾಗಮ. ೫೫). ೨. ಕಾಳು; ಧಾನ್ಯ: ಜಿನಸುಗಳೆಲ್ಲಾ ಹುಳಿತು ಕೊಳೆತು ಹಾಳಾಗಿ ಹೋಗುತ್ತಿವೆ (ಮುದ್ರಾಮಂ. ೦೧೬). ೩. ಪ್ರಕಾರ; ಬಗೆ: ನಾನಾ ಜಿನಸಿನ ವ್ಯವಹಾರಿಗಳು (ಬಿಜ್ಜರಾ. ೦೨–೨೩). **ಜಿನಶಿ**: ೨. ಭಟವಮಾನ್ಯ ಯಿಸಂ ಶಿಕೆ ಗ್ರಾಮದಲ್ಲಿ ಜಿನಶಿಯಿಂದ ಸಹಾ (ಮೈಅರಿ. ೦೯೩೯, ೪೨–೪೬: 1825). **ಜಿನಿಸು**: ೧. ಅಲ್ಲಾವುದ್ದೀನನ ಅದ್ಭುತದೀಪ ದಂತಹ ಆಶ್ಚರ್ಯಕರ ಅನುಕೂಲವುಳ್ಳ ಜಿನಿಸು ಇನ್ನೊಂದಿಲ್ಲ (ನಿಬಂಧ. I, ೩೦೪). ೨. ಜಿನಿಸು ಅಡಕೆ ಮೆಣಸು ರಘಲ್ಲಿಪಟ್ಟಿ . . . ಜವಳಿ ಮುಂತಾಗಿ (ಎಕ. VII, ಶಿವಮೊ. ೨೮–೧೫: 1670): ಮಾನ್ಯದ ಯೆತ್ತು ನಡೆ ೨ರ ಮೇಲೆ ಅಡಕೆ ಮೆಣಸು . . . ಮುಂತಾದ ಫಡಿಸಿನ ಸರಕು ಹೊರತಾಗಿ ಹೇರಿಕೊಂಬ ಜಿನಿಸು ಅಕ್ಕಿ ಭತ್ತ ರಾಗಿ (ಮೈಅರಿ. ೦೯೩೬, ೨೬–೩೫: 1708). ೩. ಜಿನಿಸು ಜಿನಿಸಿನ ಕಾಮಕ್ರೋಧವು (ಜ್ಞಾನಸಿಂ. ೦೯–೬). ೪. ಬೆಲೆಬಾಳುವಂತಹುದಂ; ಅಮೂಲ್ಯವಾದುದಂ: ಮಣಿಭೂಷಣಗಳ ಜಿನಿಸಿನ ಕರಂಡಗಳ ನೂತನಾಂಕುರಗಳ ವನಜ ಕುಸುಮಂಗಳಿಂದಲಿ ಪುದಿದ ಭಾಜನಗಳನುಪಿಡಿದು ಕೆಲರು . . . ಐತಂದರು (ವೆಂಕಾರಾ. ೦–೨೨–೬). **ಜಿನ್ನಸು**: ೧. ಅಲ್ಲಿಯ ಜನರಿಗೆ ಯಾವ ಜಿನ್ನಸು ಹೆಚ್ಚಾಗಿದೆಯೋ ಅದನ್ನು ನಮಗೆ ಪ್ರತಿಯಾಗಿ ಕಳುಹಿಸಲು ಒಪ್ಪಬೇಕು (ಕುಮಾಕಾ. ೦೫೯). **ಜೀನಸು**: ೧. ಆಡಲು ಅವರಿಗೆ ಗೊಂಬೆ ಮೊದಲಾದ ಜೀನಸುಗಳೂ ಬೇಕು (ಕನ್ನಡಾ. ೩೭): ಏನಾದರು ತಿನ್ನುವ ಜೀನಸು ತೆಕ್ಕೊಂಡು ಬರುವಾ (ಮುಂಬಯಿ ೩–೯೭): ಬಾಬಣ್ಣನಿಗೆ ಎಣ್ಣೆಯಲ್ಲಿ ಕರಿದ ಜೀನಸೆಂದರೆ ತುಂಬ ಪ್ರೀತಿ (ಅಭೋಳ. ೫೦). ೩. ಕಾಂಚನಕ್ಕೆ ಕಯ್ಯೊಡ್ಡುತ ಕಂಚಗಾಜಿನಂತೆ ನಾನಾ ಜೀನಸಿನ ಕಂಚ ನೆರಹಿ ಹರವಿಕೊಂಡು (ಮುಡಿಮಾ. ೩೯–೩೪). ೫. ವರ್ತನೆ; ವ್ಯವಹಾರ: ಸೋನನ ಸೂಳೆಯು ಜೀನಸೆರಡೊಂದಯ್ಯ ಕಾನನದ ಹೆಣನ ಹಱಿತಿಂದು ಹಂದರವ ತಾನು ಬಿಟ್ಟಂತೆ (ಸರ್ವಜ್ಞ. ೦೮೭೪). **ಜೀನಿಸು**: ೨. ಆ ನಳಂ ಸ್ನಾನವಂ ಮಾಡಿ ಹಸಿಯಾಗಿರ್ದ ಜೀನಿಸಿನ ಸೋಪಸ್ಕರಂಗಳಂ ಕಣೆನೋಳ್ ತಾ ನೋಡಲಾಗಿ ನಳಪಾಕದಿಂದಡಿಗೆ ಭೋಜನಗಳಂ ಮಾಡ್ವರೆಂದು . . . ಉಸುರಲ್ಕೆ (ತುರಂಗ. ೩೨–೦೫). **ದಿನಸಿ**: ೨. ಕಣದ ಕೆಲಸವೂ ಮುಗಿದು ಹುಲ್ಲನ್ನೂ ದಿನಸಿಗಳನ್ನೂ ಅಲ್ಲಿಂದ ಸಾಗಿಸಿ ಆಗಲೇ ಎರಡು ತಿಂಗಳು ಕಳೆದಿತ್ತು (ದೂರಸ. ೧೦೬): ಅದಕ್ಕೆ ಮೊದಲು ಬಟವಮಾನ್ಯವೆಂದು ಬೆಳೆದಿದ್ದರಲ್ಲಿ ಅರ್ಧ ದಿನಸಿಯು ವೃತ್ತಿವಂತರಿಗೆ ಬರುತ್ತಿತ್ತು (ಹುಟ್ಟಿಹ. ೪): ಒಳಗೆಲ್ಲ ದಿನಸಿ ತುಂಬೋಕೆ ಜಾಗಾ, ಗಡಂಗು (ಹಂಗೂಲಿ. ೬೬): ದಿನಸಿಯ ಜವಳಿಯ ಅಂಗಡಿ ತೆರೆಯಿತು (ಇಂಜಾಪ. ೬–೨೪). **ದಿನಸು**: ೧. ಅಕ್ಕಿ ಅರಳೆಯು ಬಿಲ್ವಪತ್ರೆಯು ಮತ್ತೆ ಪರಿಮಳ ದಿನಸು (ಕಠಿಣೀ. ೦೬೦–೨): ಪೆಟ್ಲುಉಪ್ಪು, ಪಟಿಕಾರ, ತುರಶೀ ಯಾ ಮೂರು ದಿನಸನ್ನು ಪುಡಿಮಾಡಿ (ಗಂಧಕ್ರ. ೦–೨). ೨. ದಿನಸುಗಳೆಲ್ಲ ತರಿಸಿ ಇಂಗನು ಸಹಿತ ಅರಸಿರೆ ಖಾರವಂ ಅಂಗನೆಯರು (ಸೌಗಂಧಿ. ೧೮–೫): ಅಂಗಡಿಗಳಲ್ಲಿ ದವಸ ದಿನಸುಗಳನ್ನು ಮಾರುವಂತೆ ಸಂಗೀತವನ್ನು ಕೆಲವರು ಮಾರುತ್ತಾರೆ (ಕನ್ನಸು. I, ೦೧). **ದಿನಿಸು**: ೧. ನಿಜಸುತೆಗಬಳುವಳಿಯಾಗಿದಿ[ಹಾಕಾಂ. ಮಿ]ನಿಸಿನಾಭರಣಗಳ ಧೇನು ಹಯ ರಥಗಜಾಂದೋಳಿಕಂಗಳ(ನು)...ಬಿನದದಿಂ ತಹುದು(ವೆಂಕಾರಾ. ೦–೨೩–೦೮); ಅತಿಮನೋಹರವಾದ ದಿನಿಸುಗಳ ಸಂತಸವ ಪೆರ್ಚಿಸುವ ನಂದನಕೆ ಬರ್ಪಳು (ವೆಂಕಾರಾ. ೫–೬–೦೯). ೩. ಪರುಷವೇ ಬಂದು ಮುಟ್ಟಿದ ಮೇಲೆ ಕೀಟುವೋಲೆರಡು ದಿನಿಸಹುದೆ(ಕವಿಚ. III, ೬೩ ತಿರುವೇಂಗಡಾಚಾರ್ಯ ಶತಕ). ೫. ದಾನವರ ದಿನಿಸೆನ್ನೊಳಿಲ್ಲ (ವೆಂಕಾರಾ. ೬–೪೨–೩೮) ೬. ಗುರುತು; ಚಿಹ್ನೆ: ಪಾತಕಂಗಳು ದಿನಿಸಿಗಿಲ್ಲದೆ ಸುಟ್ಟುಹೋಹವು (ಜ್ಞಾನಸಿಂ. ೦–೨೩). **ದೀನಸು**: ೨. ಮೂಟೆಲಾಗಿ ದೀನಸು ಪಾನಸು ತರುವದಕ್ಕೆ ಹೋಗುವಂಥವರಿಗೆ ರಹದಾರಿ ಕೊಡುವ ಜಂಬ್ರುವಿದೆ (ರಾಜೇಂದ್ರ. ೦೪೫). [ ←ಅರ. ಹಿಂ. ಜಿನ್ಸ್; ಮರಾ. ಜಿನಸ್, ಜಿನ್ನಸ್ ]

**ಜಿನಾಂಗ** (ನಾ).=ಜಿನಬಿಂಬ: "ತ್ರಿದಶಾವಾಸ ಜಿನಾಂಗ ಚಿತ್ರಮಿನಿತುಂ ಚೈತ್ಯಾಹ್ವಯಂ" (ನಾನಾರ. ೦೩೫). [ಜಿನ + ಅಂಗ]

**ಜಿನಾಂಬಿಕೆ** (ನಾ). ಅರ್ಹಂತನ ತಾಯಿ; ತೀರ್ಥಂಕರನ ತಾಯಿ: ಜಗದ್ಗುರು ಜನಕಂ ನೃಪಾಂಗನೆ ಜಿನಾಂಬಿಕೆ ಬಣ್ಣಿಸಲಾರ್ಪೊನಾವೊಂ (ಶಾಂತಿಪು. ೯–೦೫೮). [ಜಿನ + ಅಂಬಿಕೆ]

**ಜಿನಾಗಮ** (ನಾ). ಜೈನಧರ್ಮ: ಆ ಯತಿನಾಥರ ಶಿಷ್ಯರಜೇಯ ಜಿನಾಗಮ ಪಯೋಧಿ ಪಾರೋತ್ತೀರ್ಣಕ್ಷಾಯಿಕ ಸಮ್ಯಗ್ದೃಷ್ಟಿಗಳ್ (ಶಾಂತಿಪು. ೦–೨೦). [ಜಿನ + ಆಗಮ]

**ಜಿನಾಗಾರ** (ನಾ). = ಜಿನಗೃಹ: ಜಿನಾಗಾರಂಗಳ್ ತನ್ನ ಜಸದವೊಲ್ ವಸುಧೆಗೆಳಂಕಾರಂಗಳಾಗೆ (ಆದಿಪು. ೦೬–೦). [ಜಿನ + ಆಗಾರ]

**ಜಿನಾಭಿಷವಣ** (ನಾ).=ಜಿನಸವನ: ನೆಗಬ್ದನಿಸ್ಪೃಹನಮಂ ಜಿನಾಭಿಷವಣ ಕ್ಕೊಯ್ದಮ್ಮ ಜನ್ಮಕ್ಕೆ ಮಾಡುಗೆ ಸಾಫಲ್ಯಮನಿಂದ್ರನೆಂದೆಱೆದು ಗಂಗಾದೇವಿ ಪೇಟ್ದು (ಪುಷ್ಪಪು. ೦೦–೨೪). [ಜಿನ + ಅಭಿಷವಣ]

**ಜಿನಾಭ್ಯಂಜನ** (ನಾ).=ಜಿನಸವನ: ಜನಧರ್ಮ್ಯಪ್ರತಿಪಾಲನಂ ಜನಕಳಾಲಾಪಂ ಜಿನಾಭ್ಯಂಜನಂ . . . ಜಿನಮಹಾಸ್ತೋತ್ರಂ (ಸೌತಿಇ. XI–II ೦೨೦–೪೩: 1044). [ಜಿನ + ಅಭ್ಯಂಜನ]

**ಜನಾರ್ಭಕ** (ನಾ). ಜನಶಿಶು ; ಶಿಶುವಾಗಿರುವ ತೀರ್ಥಂಕರ : ಮಾಯಾರ್ಭಕನನಿರಿಸಿ ಜನಾರ್ಭಕನನೆತ್ತಿಕೊಂಡು ಬರೆ (ಶಾಂತಿಪು. ೧೧-೯ ವ): ತಿಳಕಮನಿಟ್ಟು ಕಜ್ಜಳಮನೆಚ್ಚಿ . . . ಕೆಯ್ಗೆಯ ಕಣ್ಗೆಸೆದಂ ಜನಾರ್ಭಕಂ (ಪುಷ್ಪಪು. ೧೧-೬೩). [ ಜನ$_2$ + ಅರ್ಭಕ ]

**ಜನಾಲಯ** (ನಾ).=ಜಿನಗೃಹ: ಜನಾಲಯಗಳಲ್ಲಿ ಬರೆಸಿ ಶ್ರವಣಬೆಳಗುಳದ ಯಾತ್ರೆಯ ವಿಷಯವನ್ನು ಪ್ರಕಟಪಡಿಸಿದಳು (ದಾನಚಿಂ. ೧೫೪).

[ ಜನ$_2$ + ಆಲಯ ]

**ಜನಾವಸಥ** (ನಾ).=ಜಿನಗೃಹ : ಜನಾವಸಥಮಂ ಗುಣಾವಸಥನೆಯ್ದಿದಂ ಭೂಭುಜಂ (ಮಲ್ಲಿಪು. ೧೦-೧೧೩). [ ಜನ$_2$ + ಅವಸಥ ]

**ಜನಾವಾಸ** (ನಾ).=ಜಿನಗೃಹ : ಕಳಶಂ ಕನ್ನಡಿ . . . ಲತಾಮಂಟಪವೆಂಬಿವಿಲ್ಲದ ಜನಾವಾಸಂಗಳಿಲ್ಲೆಲ್ಲಿಯುಂ (ಪುಷ್ಪಪು. ೨-೬೩). [ಜನ$_2$+ಆವಾಸ]

**ಜನಿಗಿಸು** (ಕ್ರಿ). ಅಲ್ಲಾಡದಂತೆ ಮಾಡು; ಚಲನವಿಲ್ಲದಂತಾಗಿಸು : ನಿಶ್ಚೇಷ್ಟವಾಗಿಸು: "ಜನಿಗಿಸು–ನಷ್ಟಚೇಷ್ಟಾಯಾಂ (ಚಲನವಿಲ್ಲದೆ ಆಗು, ಮಾಡು)" (ಶಮಧ). [ ಜನಿಗು? + – ಇಸು$_3$ ]

**ಜನಿಜನಿ** (ನಾ). ಒಂದು ಬಗೆಯ ಮೂಲಿಕೆ : ಇನವಾರದಂದು ತಪ್ಪದು ಜನಿಜನಿಯಂ ಹಸ್ತಿಕರ್ಣಿಯಂ ತೊಳಸುಗೆ (ಖಮದ. ೧೪-೩೬). [ ? ]

**ಜನಿಸು** 'ಜನಿಸು' ನೋ.

**ಜನುಂಗು$_1$, ಜನುಗು$_1$** (ಕ್ರಿ). ೧. ಸೋನೆಯಿಡು ; ಹನಿಹನಿಯಾಗಿ ಬೀಳು ; ತೊಟ್ಟಿಕ್ಕು : "ಜನುಗು, ಜನುಂಗು–ಅವ್ಯಕ್ತಧ್ವನೌ, ವರ್ಣಭೇದೇ ಚ" (ಶಮಧ). ೨. ಅಸ್ಪಷ್ಟವಾಗಿ ಧ್ವನಿಮಾಡು; ಝೇಂಕರಿಸು; ಮೊರೆ : "ಜನುಗು, ಜನುಂಗು–ಅವ್ಯಕ್ತ ಧ್ವನೌ, ವರ್ಣಭೇದೇ ಚ" (ಶಮಧ) : ಮಧುಕರಮದು ಝೇಂಕನೆ ಪಾಯ್ದಱಂಕೆ ನಾಂದೊಡೆ ಜನುಂಗಿ ನೆಲಸಿದುದು ವಿಕಚ ಕನಕಾಬ್ಜಿನಿಯೊಳ್ (ಆದಿಪು. ೧೦-೬೨) : ಪಿಸುಣನಂತೆ ಜನುಂಗುವ ನೊಣಗಳಿಂ (ಧರ್ಮಾಮೃ. ೦೩-೧೦೦); ಮಧುವ್ರತ ಪ್ರತಾನದಿನೆಸೆವುತ್ಪಳಪ್ರಕರದೊಳ್ ನೆಱೆ ಸಿಲ್ಕಿ ಜನುಂಗುತಿರ್ಪ ಷಟ್ಪದ ಶಿಶುವೃಂದದಿಂ (೧ರಿಳ. ೪-೦೬) : ತೋಱೆ ಚೋದ್ಯಮಂ ಸುದತಿಯರ್ಗೀವುದಲ್ಲಿ ನಡೆದುಂ ಜಡಿದುಂ ನುಡಿದುಂ ಜನುಂಗಿಯುಂ (ಅನಂಪು. ೧೦-೨೩). **ಜನುಗು$_1$**: ೧. ವ್ಯಥೆ, ಶೋಕ, ಅಪಮಾನ . . . ಹೃದಯದೊಳಗಿನಿಂದ ಜನುಗುತ್ತಲೇ ಇದ್ದವು (ಕೀಲುಗೊಂ. ೪೬). ೨. ಕೋಗಿಲೆಯಿರ್ಕೆದಾಣದೊಳ್ ಜನುಗುವ ತುಂಬಿ (ಆದಿಪು. ೧-೬೩) : ಪೂವಲಿಯಲ್ಲಿ ಜನುಗುತಿರ್ದುದು ಬಲವಂದಳಿ ಮಾಲೆ ಮಧುರಮಂದ್ರಧ್ವನಿಯಿಂ (ಕಾದಂಬ. ೨೦೦) : ಮುನಿವುತುಂ ಜನುಗುತಂ ಜೀವಿಸುತೆ ನಡೆ ನೋಡಿ (ಅನೀರ. ಹ. ೬೨-೨೦). ೩. (ಬೆಲ್ಲ ಮೊದಲಾದುವು) ಕರಗಿ ನೀರು ಬಿಡು ; ದ್ರವಿಸು ; ಜೋನೆಯಾಗು: ಬಿಸಿಲಿಗೆ ಬೆಲ್ಲವೆಲ್ಲ ಜನುಗಿ ಹೋಯಿತು (ರೂಢಿ). ೪. ಕರಗು ; ನಾಶವಾಗು : ನೆನೆದರಖಿಳಭವಾಂತರಂಗಳ ನೆನೆಯಬಾರದ ಘೋರಪಾತಕ ಜನುಗುವವು ತಾನೆಂಬ ಶ್ರುತಿಮತ ಸಿದ್ಧವಾಯಿತಲ (ತೊರರಾ. ೧-೦೨-೨೦); ಜನುಗದಿರು ಪರನಾರಿಗಳಿಸಿ (ನವಮೋ. ೯-೧೩). ೫. ಮತ್ತೆ ಮತ್ತೆ ಹೇಳು; ಅನೇಕಸಲ ಹೇಳು: ಮಂತ್ರ ಪದಾಕ್ಷರಂಗಳಂ ಜ[ಪಾಠಾಂ. ಮಿ]ನುಗುತು ಮಿರ್ದನಾ ಪರಮಯೋಗಿಯ ಪೋಲ್ಪಣರಾಜಕೇತನಂ (ಗದಾಯು. ೬-೦೩): ತಾಪಸರು ಜಪಗುಟ್ಟಿ ಜನುಗಿದಡವರನುಜ್ಜೀವಿಸಿದ ಠಾವು (ಕುವ್ಯಾ.ಉ. ೧-೨೦). ೬. ಪಿಸುಮಾತನಾಡು : ಏಕಾಂತಮಂ ಪೇಳ್ವವೊಲೆ ಜನುಗುತಿರ್ದಪ್ಪೈ ಕರ್ಣಾಂತದೊಳ್ (ಶಾಕುಂತ. ೧೦-೨೪).

[ ದೇ.॥ ತಮಿ. ಚಿಣುಜ್ಕು, ಚಿಣುಕ್ಕು ; ಮಲ. ಚಿನಕ್ಕು ; ತೆಲು. ಸನುಗು, ಸಣುಗು ]

**ಜನುಂಗು$_2$, ಜನ್ನುಗು$_2$** (ನಾ). ೧. ಸೋನೆಮಳೆ ; ಜಡಿಮಳೆ : ಸಣ್ಣಗೆ ಹನಿಯುವ ಮಳೆ : ಸೋನೆಗಳ ಜನುಂಗಿಗಂ ಬಱಗಾಳಿಯ ಗಾಸಿಗಂ (೧ರಿಳ. ೯-೩೮ ವ) : ಹಗಲುಮಿರುಳುಂ ಸುರಿವ ಬಲ್ಸೋನೆಯ ಜನುಂಗಿನತ್ತಣಿನೆನ್ನ ಬಗೆಯುಂಬೇಸತ್ತುದು (ರಾಮಾಶ್ವ. ೪-೦೩). ೨. ಅಸ್ಪಷ್ಟವಾದ ಧ್ವನಿ : "ಅವ್ಯಕ್ತರವ ವೃಷ್ಟಿಗಳೊಳು ಜನುಂಗು ಶಬ್ದಂ" (ಶಬ್ದಮಂ. ೫೪); **ಜನುಗು$_2$** : ೧. ಜನುಗಿನಲಿ ಬಲುಮಳೆಗಳಲಿ ನೆನೆನೆನೆದು ಸಾಗರ ತೀರದಲಿ ಬಂದನು ಕಿರೀಟಿ (ಕುವ್ಯಾ.ಆ. ೧೯-೨೦) : ಜಡಿ ಜನುಗು ಜುಂಜು ತುಂತುರ್ ಬಿಡದಡಿಯಿಡಗೊಡದೆ ಕಱೆದುವು (ತ್ರಿಪುವಿ. ೮-೩೯). ೩. (ಅಲಂ) ಕ್ಲೇಶ ; ತೊಂದರೆ : ಜನ್ಮದ ಜನುಗಿಗಾನಿನ್ನಾಱೆನೆಂಬಾ ಮನುಜನೇ ಕೃತಕೃತ್ಯನಹನೈ (ಪ್ರಭುಲೀ. ೧೬-೧೧) : ಪುರಾಣದ ಗಾದೆಗಳ ಜಂಜಡದ ಜಾಡ್ಯದ ಜನುಗು ತಾನಲ್ಲ (ಸದ್ಗುರು. ೧-೬); ಹೊರಳಿದನು ಸಹಜಾತ ಶೋಕಜ್ವರದ ಜಾಡ್ಯದ ಜನುಗಿನಲಿ (ತೊರರಾ. ೬-೨೯-೪) : ಏಕೀಕರಿಸಿದ ಜನುವನ ಜನುಗ ನಿರಾಕರಿಸುತ ವಿಮಲಾದ್ವಯನೆನಿಸಿ (ಕಲ್ಯಾಣೇ. ೪೬).

[ <ಜನುಂಗು$_1$ ]

**ಜನುಗು$_1$** 'ಜನುಂಗು$_1$' ನೋ.

**ಜನುಗು$_2$** 'ಜನುಂಗು$_2$' ನೋ.

**ಜನುಗು$_3$, ಜಣುಗು** (ನಾ). (ಉಕ) ೧. ಬಹಳ ಸೂಕ್ಷ್ಮವಾದುದು ; ತೆಳ್ಳಗಿರುವುದು ; ನವುರಾದುದು ; ನಯವಾದುದು : ಅವರು ಜನುಗಾದ ನೂಲ ಬಟ್ಟೆಗಳನ್ನು ಧರಿಸುತ್ತಾರೆ (ಮುಂಬಯಿ. ೪-೦೪೦). ೨. ನಯವಾದ ಕೆಲಸ ; ಕುಸುರಿಗೆಲಸ: ಮಳೆಗಾಲದ ಮುಗಿಲುಗಳಿಗಿಂತಲೂ ಬಣ್ಣದಲ್ಲಿ ಮಿಗಿಲಾದ ನಿನ್ನ ಕಣ್ಣು ನೋಡುತ್ತಲೆ ಕಾಣುವುದು ಜೇನುಗಾರರ ಜನುಗಿನ ಗೊತ್ತು (ಉಯ್ಯಾಲೆ. ೯೬-೬). (ಗು). ೩. ಸೂಕ್ಷ್ಮವಾದ; ತೆಳುವಾದ ; ನವುರಾದ. 'ಜನುಗುದಾರ' ಪರಾ. ೪. ಅತ್ಯಲ್ಪವಾದ; ತುಚ್ಛವಾದ. 'ಜನುಗುವಾಸನೆ'ಪರಾ. ಜಣುಗು: ೩. ಆ ಪ್ರಕಾಶದಲ್ಲಿ ಜಣುಗು ಅಕ್ಷರವುಳ್ಳ ಪುಸ್ತಕವನ್ನು ಓದಬಹುದು (ಮುಂಬಯಿ. ೪-೩೪೮).

[ದೇ.॥ ತೆಲು. ಜನುಂಗು, ಜಿಲುಂಗು, ಜಿಲುವು, ಜಿಲು ]

**ಜನುಗುದಾರ** (ನಾ). ತೆಳುವಾದ ದಾರ,–ನೂಲು : ಆ ಕೊಕ್ಕೆಗಳಲ್ಲೊಂದಕ್ಕೆ ಜನುಗುದಾರ ಕಟ್ಟಿ ಆದನ್ನು ಬದಿಯ ಕೋಣೆಯಲ್ಲಿಒಯ್ದಿದ್ದರು (ಸ್ವಶಿಚ. ೩೯೯). [ ಜನುಗು$_3$ + ದಾರ$_1$ ]

**ಜನುಗುದುಂಬಿ** (ನಾ). ಮೊರೆಯುತ್ತಿರುವ ದುಂಬಿ ; ಧ್ವನಿಮಾಡುತ್ತಿರುವ ದುಂಬಿ : ಜನುಗುದುಂಬಿ[ಪಾಠಾಂ. ಬೆ]ಯ ಜಾಳಿಗೆಯ ತನಿಮಿನುಗು ಮೋಱೆಯ ಕಣ್ಣ ಕೆಂಪಿನ ಘನ ಭಯಂಕರರೂಪ ಭೀಮನ ಕಂಡನವನೀಶ (ಕುವ್ಯಾ.ಅ. ೧೧-೪).

[ ಜನುಗು$_1$ (<ಜನುಂಗು$_1$) + ದುಂಬಿ (<ತುಂಬಿ$_1$) ]

**ಜನುಗುನೀರು** (ನಾ). ತೊಟ್ಟಿಕ್ಕುವ ನೀರು; ಹನಿಯುತ್ತಿರುವ ನೀರು ಹೀಗೆ ಜನುಗುವ ನೀರನ್ನು ಜನುಗುನೀರು (ವ್ಯಾಡೋಸ್‌ವಾಟರ್) ಎನ್ನುತ್ತಾರೆ (ಕವಿಕೋ. I, ೬೩).

[ ಜನುಗು$_1$ (<ಜನುಂಗು$_1$) + ನೀರು$_1$ (<ನೀರ್$_1$) ]

**ಜನುಗುಬೆಲ್ಲ** (ನಾ). ಕರಗಿ ದ್ರವವಾದ ಬೆಲ್ಲ ; ಜೋನಿಬೆಲ್ಲ.

[ ಜನುಗು$_1$ (<ಜನುಂಗು$_1$) + ಬೆಲ್ಲ ]

**ಜನುಗುಮತಿ** (ನಾ). ತುಚ್ಛವಾದ ಬುದ್ಧಿಯುಳ್ಳವನು ; ಅಲ್ಪಬುದ್ಧಿಯವನು : ಜನುಗುಮತಿಗಳ ಸಿದ್ಧ ಸಾಧಕ ಮುನಿಗಳೆಂಬವದಿರುಗಳನು ನಾ ಮುನಿದು . . . ದಂಡಿಸುವೆನು (ಪ್ರಭುಲೀ. ೬-೩೬).

[ ಜನುಗು$_3$ + ಮತಿ ]

**ಜನುಗುವಳೆ** (ನಾ). ಸೋನೆಮಳೆ ; ಸಣ್ಣಹನಿಗಳಿಂದ ಕೂಡಿದ ಮಳೆ; ತುಂತುರುಮಳೆ : ಜನುಗುವಳೆಯಲಿ ಪರ್ವತದ ಶಿಲೆ ನೆನೆವುದೇ (ಕುವ್ಯಾ.ಗ. ೧-೩೩). [ ಜನುಗು$_2$ (<ಜನುಂಗು$_2$) + ಮಳೆ (<ಮೞೆ)]

**ಜಿನುಗುವಾತು** (ನಾ). ಅಸ್ಪಷ್ಟವಾದ ಮಾತು ; ಮೆಲುದನಿಯ ನುಡಿ ; ಪಿಸುಮಾತು : ಜಿನುಗುವಾತಿನ ಹೊತ ಹರುಷದ ಹೊಂಗಿದುತ್ಸವದ . . . ರಾಗರಸದುಬ್ಬಿನಲಿ ಹೊಂವ್ರೀಹೋದನು (ಕುವ್ಯಾ.ಅ. ೦೬-೬೨). [ ಜಿನುಗು$_1$ (<ಜಿನುಂಗು$_1$) + ಮಾತು$_1$ ]

**ಜಿನುಗುವಾಸನೆ** (ನಾ). ಹೇಯವಾದ ಸಂಸ್ಕಾರ; ತುಚ್ಛವಾದ ಅಭೀಪ್ಸೆ: ಜನನಕಾರಣವಾದ ವಿದ್ಯೆಯ ಜಿನುಗುವಾಸನೆಯಿಂದವವನಾ ವನಜನಾಭನ ನೆನಹಿನಿಂ ಕೇಡಹುದೆ (ನಿಭಾಗ. ೧೧-೬-೦೩). [ ಜಿನುಗು$_3$ + ವಾಸನೆ ]

**ಜಿನುಗುಸಿರು** (ನಾ). ಸೂಕ್ಷ್ಮವಾದ ಉಸಿರು : ಭೂಮಿಯ ಬದಿಯಲಿ ವ್ಯೋಮದ ತುದಿಯಲಿ ಆಡುವುದಾವನ ಜಿನುಗುಸಿರೊ (ಪಾಸಿಗ. ೦-೦೦). [ ಜಿನುಗು$_3$ + ಉಸಿರು$_2$ (<ಉಸಿರ್$_2$) ]

**ಜಿನುಗುಸುಖ** (ನಾ). ಅಲ್ಪಸುಖ ; ಕ್ಷಣಿಕಸುಖ : ತಾಮಸ ತನುಗಳ ದುಃಖ ಬೆರಸಿದ ಜಿನುಗುಸುಖಗಳ ಕೂಡಿಕೊಂಡಿಹವು (ನಿಭಾಗ. ೦೦-೨೦-೯) [ ಜಿನುಗು$_3$ + ಸುಖ ]

**ಜಿನುಮಿನುಗು** (ಕ್ರಿ). ಮಂದವಾಗಿ ಪ್ರಕಾಶಿಸು : ನಟ್ಟಿರುಳು ಮೆತ್ತಗೆ ಹಾಸಿ ಮೈ ಮರೆಸಿ, ಸಣ್ಣಗೆ ದೀಪ ಜಿನುಮಿನುಗೆ (ನಲಮು. ೬೪-೬). [ <ಜಿನುಗು$_3$ + ಮಿನುಗು$_1$ ]

**ಜಿನುವ** (ನಾ). (?) : ಏಕೀಕರಿಸಿಹ ಜಿನುವನ ಜಿನುಗ ನಿರಾಕರಿಸುತ ವಿಮಲಾದ್ವಯನೆನಿಸಿ (ಕಲ್ಯಾಕೀ. ೪೬).
[ ☞ ಇದು 'ಜಿನುಮ' ಎಂಬುದರ ಅಪಲಿಖಿತವಿರಬಹುದು ]

**ಜಿನೆ, ಜಿನ್ನೆ$_1$** (ನಾ). (ಉಕ)ಮೆಟ್ಟಿಲುಗಳ ಸಾಲು; ಸೋಪಾನಮಾರ್ಗ : ಈ ಕೊತ್ತಳಗಳ ಬಳಿಯಲ್ಲಿ ಪೊಳಲ್ಮೈಯಲ್ಲಿ ಮಲಸೂತ್ರದಂಥ ಜಿನೆಯಲ್ಲಿ ಮೇಲೆಯೇರಲಿಕ್ಕೆ ಪಾವಟಿಗೆಗಳಿರುತ್ತವೆ. ಈಗ ಮೂರು ಜಿನೆಗಳನ್ನು ಇಕ್ಕಿದ್ದಾರೆ; ನಾಲ್ಕನೇದೊಂದೇ ತೆರೆದಿರುತ್ತದೆ (ಕಛಾಗ. ೩೩೦) ; ಅನಿಲ ಎದ್ದು ಅಟ್ಟದ ಜಿನೆಗೆ ಬಂದು ನೋಡಿದ (ಅಪಾನಾ. ೧೮೪). **ಜಿನ್ನೆ$_1$** : ಕೈಯೊಳಗೆ ಕಸದ ಪೊರಕೆ ಹಿಡಿದುಕೊಂಡು ಇನ್ನೊಂದು ಹಾದಿಯಾದ ಅಡಿಗಿಮನೆಯ ಜಿನ್ನೆಯಿಂದ ಮೇಲೆ ಹತ್ತಿದ (ವ್ಯನಿ. ೦೬) : ಕೋಣೆಯ ನೆಲಮನೆಗೆ ಇಳಿಯುವ ಜಿನ್ನೆಯ ಬಾಗಿಲು (ದೀಪಹ. II, ೯೩).
[ ←ಮರಾ. ಜಿನಾ; ಪಾರ. ಜೀನಾ ]

**ಜಿನೇಂದ್ರ** (ನಾ). ಅರ್ಹಂತ ; ತೀರ್ಥಂಕರ : "ಜಿನೇಂದ್ರಃ, ವೀತರಾಗಃ, ಅರ್ಹನ್ . . . ತ್ರಿಕಾಲವಿತ್—ಈ ೮ ಜಿನೇಶ್ವರನ ಪೆಸರ್" (ಹಲಾಯು. ೦೩-೬೬) ; ಇದು ಜಿನೇಂದ್ರಚರಣಸರಸೀರುಹ ಶಿಲೀಮುಖಾಯಮಾನ ಶ್ರೀಮದುಭಯ ಕವಿಚಕ್ರವರ್ತಿ ನಿರ್ವರ್ತಿತಮುಂ (ಶಾಂತಿಪು. ೬-೦೨೬ ವ): ಜಿನೇಂದ್ರನಂ ಜಗನ್ಮಂಗಳ ವಸ್ತುವಿಂದಧಿಕಭಕ್ತಿಯಿನರ್ಚಿಸಿ (ಪುಷ್ಪಪು. ೩-೦೨೦). [ ಜಿನ$_2$ + ಇಂದ್ರ ]

**ಜಿನೇಶ್ವರ**(ನಾ). = ಜಿನೇಂದ್ರ: ಜನನಿಗೆ ಅರ್ಹನ್, ಜಿನೇಶ್ವರ, ತೀರ್ಥಂಕರ, ಪರಮೇಷ್ಠಿ, ವೀತರಾಗ, ಪರಮಾತ್ಮಾ ಮೊದಲಾದ ಹೆಸರುಗಳುಂಟು (ಛಾತತ್ತ್ವ. ೨೨೬). [ ಜಿನ$_2$ + ಈಶ್ವರ ]

**ಜಿನ್ನ$_1$, ಜೀರಣ$_1$** (ಗು). ೧. ಜೀರ್ಣವಾದ ; ಶಿಥಿಲವಾದ ; ಹಳೆಯದಾದ: "ಜಿನ್ನಮೆಂದು ಜೀರ್ಣ" (ಕಶಸಾ. ೨೩-೪೭೦) : ಮೇಲಣ ಣತ್ವಕ್ಕೆ ನತ್ವಂ . . . ಜೀರ್ಣ—ಜಿನ್ನ (ಶಮದ. ೨೬೫ ಪ್ರಯೋ). **ಜೀರಣ$_1$**: (ನಾ). ೨. ಜೀರ್ಣವಾಗುವಿಕೆ ; ಅರಗುವಿಕೆ : ತಿಂದುಕೊಂಬೆನೆ ಜೀರಣಕೆನಲು ಸುವರ್ಣಬಿಂದು ವಿಜಯ ವಿಠ್ಠಲನೆಂದೆಂದಿಗೆ ಎನ್ನಿಂದಾಗದು ದೇವ (ಮೋಹ್ವದೀ. ೮-೩). [ <ಪ್ರಾ. ಜಿಣ್ಣ, ಜೀರಣ. / ಸಂ. ಜೀರ್ಣ ]

**ಜಿನ್ನ$_2$, ಜಿನ್ನೆ$_1$** (ನಾ). ಅರ್ಹಂತ ; ಜಿನ ; ತೀರ್ಥಂಕರ : ಕ್ಷಪಣರಸಗಿದ ವಿಪತ್ತಿನನುಗೆಡದವರ ಜಿನ್ನ ಸಹ ಭಂಗಿಸನೆ ವಾಗೀಶನೆಲವೊ ಜೈನರ (ಮದೀಪು. ೨೩-೩). **ಜಿನ್ನೆ$_1$**. 'ಜಿನ್ನೆದೇವ' ಪರಾ. [ <ಸಂ. ಜಿನ ]

**ಜಿನ್ನ$_3$** (ನಾ). (?): ಮುದುವರ್ತಿ ಗ್ರಾಮ ೧ಕ್ಕೆ ಅದಾಯ ಕಾಟಿ ೧೨೬೦ಕ್ಕೆ ಕಕ್ಕುಂಜಿಯಲ್ಲು ಕಾಟ್ಟಿ ೩೬ ಜಿಂನಿಗಳ ಉಡುಗರೆಯಂಟ್ಟು ಜಿಂನ ಸಹಾ ಕಾಟ್ಟಿ ೨೨ (ಮ್ಯಆರಿ. ೧೯೩೪, ೨೮-೦೪ : 1459). [ ? ]

**ಜಿನ್ನದೇವ, ಜಿನ್ನೆದೇವ** (ನಾ). ಅರ್ಹಂತ ; ಜಿನ : ಜಿನ್ನದೇವರು (ರೂಢಿ). **ಜಿನ್ನೆದೇವ**: ಜಿನ್ನೇದೇವರ ಮನೆಗೆ ಭೈರೇದೇವರು ಹೋಗಿ ಅಣ್ಣಾ ಧಳಗೆ ಅದುರುತ್ತೀನೆ. ಹಚ್ಚಡವಾದರೂ ಕೊಡಬಾರದೇ (ಕಥಾಮಂ. IV, ೨೦) : ಜಿನ್ನೇದೇವರ ಮನೆಗೆ ಭೈರವದೇವರು ಬಂದ ಹಾಗೆ (ಗಾದೆ).
[ ಜಿನ್ನ$_2$ + ದೇವ ]

**ಜಿನ್ನಸು** 'ಜಿನಸು' ನೋ.

**ಜಿನ್ನಾರ** (ನಾ). ಒಂದು ಬಗೆಯ ಕುದುರೆ : ಜನ್ನ ಜಿನ್ನಾರ ಚೆನ್ನಳಗ ಚೆಲುವ ಚೀರ ಕನ್ನೀಲ ಭೈರ ಕಂಕರಿಗಂ ಸನ್ನುತ ಸಾಂಬ್ರಾಣಿಯನೇಜಿ ನೃಪಕುಲರನ್ನರಿಗಂದು ತೋಱಿದರು (ಅಂಚಿ. ೬-೮೩). [ ? ]

**ಜಿನ್ನಿ** (ನಾ). (?) : ಮುದುವರ್ತಿ ಗ್ರಾಮ ೧ಕ್ಕೆ ಅದಾಯ ಕಾಟಿ ೧೨೬೦ಕ್ಕೆ ಕಕ್ಕುಂಜಿಯಲ್ಲು ಕಾಟ್ಟಿ ೩೬ ಜಿಂನಿಗಳ ಉಡುಗರೆಯಂಟ್ಟು ಜಿಂನ ಸಹಾ ಕಾಟ್ಟಿ ೨೨ (ಮ್ಯಆರಿ. ೧೯೩೪, ೨೮-೦೪ : 1459). [ ? ]

**ಜಿನ್ನೀವಾಸ** 'ಜನ್ನಿವಾಸ' ನೋ.

**ಜಿನ್ನು, ಜೀನು$_3$** (ನಾ). ಹತ್ತಿಯಿಂದ ಬೀಜವನ್ನು ಬೇರ್ಪಡಿಸುವ ಯಂತ್ರ ಮತ್ತು ಅದರ ಕಾರ್ಖಾನೆ : ನಮ್ಮ ಮನೆ ಹತ್ತಿರ ಒಂದು ಜಿನ್ನು ಇದೆ (ರೂಢಿ). **ಜೀನು$_3$** : ಈ ಜೀನು(ಗಾಣ)ಗಳ ಕಬ್ಬಿಣದ ಹೊರಳುಗಳ ಎಡೆಯಲ್ಲಿ ಹತ್ತಿಯನ್ನು ಕೊಡುವರು (ಬಾಲಪ್ರ. I, ೪೦೬) : ಇದನ್ನು ಊರ ಹತ್ತಿರ ಜೀನಿನ (Ginning factory) ಬಳಿ ಎಳಸಿ ತಂದು ಬಿಟ್ಟಿದ್ದರು (ಪಾಸಪ. ೩೯). [ ←ಇಂ. Gin ]

**ಜಿನ್ನೆ$_1$** 'ಜಿನ್ನ$_2$' ನೋ.

**ಜಿನ್ನೆ$_2$** 'ಜಿನೆ' ನೋ.

**ಜಿನ್ನೆದೇವ** 'ಜಿನ್ನದೇವ' ನೋ.

**ಜಿಪರಿ** 'ಜುಪರಿ' ನೋ.

**ಜಿಪುಣ** (ನಾ). ಲೋಭಿ ; ಕೃಪಣ : ಬೋಳನಂ ಕಡುಜಿಪುಣನೆಂದೂರವಡೆಯಿಲರ್ಟಗೆದು (ಕಾಲೂರ. ೦೩೩-೨೮೯) ; ಸೋಮಾರಿಯಾದ ತಂದೆ; ಜಿಪುಣಳಾದ ತಾಯಿ (ಅಕ್ರಮ. ೪೬) : ತಂದೆ ಮಹಾಜಿಪುಣ, ಕೃಪಣ. (ಬಂಕಿಮ. ೨೯೦).

**ಜಿಪುಣತನ** (ನಾ). ಕೃಪಣತ್ವ ; ಲೋಭ : ಕೈಲಿ ಕಾಸು ಹಿಡಿತ ಮಾಡುವುದೇನೋ ಸರಿಯಾದರೂ ನನಗೆ ಇಷ್ಟು ಜಿಪುಣತನ ಹಿಡಿಸುವುದಿಲ್ಲ (ಪಾಡಿಬ. ೦೦೦). [ ಜಿಪುಣ + – ತನ ]

**ಜಿಪುಣಾಗ್ರೇಸರ** (ನಾ). ಜಿಪುಣರಲ್ಲಿ ಹೆಚ್ಚಿನವನು ; ಅತಿಲೋಭಿ : ಮಹಾಕೃಪಣ : ಶ್ರೀನಿವಾಸನಾಯಕ ಜಿಪುಣಾಗ್ರೇಸರನಾಗಿದ್ದವನು . . . ಪುರಂದರದಾಸನಾದದ್ದು ವಿಠೋಬನಾದ ಪಾಂಡುರಂಗನ ಅನುಗ್ರಹದಿಂದ (ಧಾರದ. ೨೯೩). ☞ ಇದು ಅಸಾಧು ರೂಪ.
[ ಜಿಪುಣ + ಅಗ್ರೇಸರ ]

**ಜಿಪುಣೆ** (ನಾ). ಲೋಭಿಯಾದ ಹೆಣ್ಣು ; ಜಿಪುಣತನವುಳ್ಳವಳು : ಅವಳು ಎಲ್ಲ ಹಂಗಸರಂತೆ ಜಿಪುಣೆಯಲ್ಲ (ಬಂಕಿಮ. ೯೯). [ ಜಿಪುಣ + – ಎ$_2$ ]

**ಜಿಪ್ಪು** (ನಾ). ಪಾದ; ಕಾಲಿನ ಅಡಿಯ ಭಾಗ ; "ಹೆಜ್ಜೆ" (ಜಾನಕೋ. ೬೦)
[ ? ]

**ಜಿಬಟ** (ನಾ). ಜಿಪುಣ ; ಲೋಭಿ : ಜಿಬಟ ಹೇಮಜಿಯೇ ಅವರಿಗೆ ಇಪ್ಪತ್ತೆರಡು ಸಾವಿರ ಸಾಲ ಕೊಟ್ಟಿದ್ದ (ನಿರಾಶ. ೧೦೩).
[ ಜಿಬಟು + – ಅ$_7$ ]

**ಜಿಬಟಿಗ** 'ಚಿಬಟಿಗ' ನೋ.

**ಜಬಟು, ಜಬಡು** (ನಾ). ಅಂಟುಸ್ವಭಾವ ; ಜಿಪುಣತನ ; ಲೋಭ : ನಮ್ಮವ್ವ ಬರೇ ಜಬಟು (ತಿಹುಗು. ೬೪). **ಜಬಡು**. 'ಜಬಡುತನ' ಪರಾ. [ <ಜಗಟು₂ ]

**ಜಬಡು** 'ಜಬಟು' ನೋ.

**ಜಬಡುತನ** (ನಾ). ಹಿಡಿದ ಕೆಲಸಬಿಡದಿರುವಿಕೆ ; ಅಂಟುಸ್ವಭಾವ ; ಜಿಗುಟುತನ : ಇವನ ಸ್ವಭಾವದಲ್ಲಿ ಮೊದಲಿನಿಂದಲೂ ಒಂದು ಬಗೆಯ ಹಟವಾರಿತನ ಜಬಡುತನ ಇದ್ದುವು (ಮೂರುದಾ. ೬೪).
[ ಜಬಡು (<ಜಬಟು) + – ತನ ]

**ಜಬರು, ಜಬರೆ, ಜಬುರು** (ನಾ). ಕಣ್ಣಿನ ಅಂಚಿನಲ್ಲಿ ಶೇಖರವಾಗುವ ಪಿಸರು ; ಕಣ್ಣಿನ ಕೊಳೆ ; ಪಿಚ್ಚು ; ನೇತ್ರಮಲ : ಆಕೆಯ ಕಣ್ಣಲ್ಲಿ ಸದಾ ಜಬರು ಕಟ್ಟಿರುತ್ತದೆ (ಕೂಡಿ). **ಜಬರೆ** : ಅವಳ ತೊಡೆಯ ಮೇಲೆ ವರ್ಷದ ಕೂಸೊಂದು ; ಅದರ ತಲೆಗೆ ಒಂದು ಮೇಣಗಟ್ಟಿದ ಕುಲಾವಿ ; ಕಣ್ಣಿನಲ್ಲಿ ಜಬರೆ (ರಾಮಾನ. ೧೦೦). **ಜಬುರು**: ಕಣ್ಣಿನಿಂದ ನೀರು, ಜಬುರು ಸೋರುತ್ತಿತ್ತು (ಅಜಾ. ೬). [ ? ]

**ಜಬರೆ** 'ಜಬರು' ನೋ.

**ಜಬಳ, ಜಬ್ಬಳ** (ನಾ). ಅಂಟು ; ಜಿಗುಟು: (ಉ). **ಜಬ್ಬಳ**. 'ಜಬ್ಬಳಿಕೆ' ಪರಾ.
ಜಬಳಡಿಕೆ=ಉಂಡೆ ಅಡಕೆಯನ್ನು ಹದವಾಗಿ ಬೇಯಿಸಿ ಎರಡು ಹೋಳಾಗಿ ಕತ್ತರಿಸಿ ಮಾಡಿದ ಮೆದುವಾದ ಅಡಿಕೆ; ಹೋಳಡಿಕೆ:(ಉ).
[ ←ತುಳು. ಜಬಳು, ಜಬುಲು, ಜಬುಳು=ಬೇಯಿಸಿದ ಹದವಾದ ಅಡಿಕೆ ]

**ಜಬಿ** 'ಜಬ್ಬು' ನೋ.

**ಜಬಿಲಿ, ಜಬ್ಲಿ** (ನಾ). (ಕರಾ) ಒಂದು ಬಗೆಯ ಆಟ ; ಕುಂಟುಬಿಲ್ಲೆ: ಆ ಕಟ್ಟೆಯ ಎದುರುನೆಲದಲ್ಲಿ ಜಬಿಲಿ ಕಣಗಳನ್ನು ಬರೆದು, ಹಲ್ಲೆಯ ಕಾಯನ್ನು ಎಸೆದು ಒಂಟಿಗಾಲಿನಿಂದ ಒಂದೆರಡು ತಾಸುಗಳನ್ನು ಆಟ ವಾಡುತ್ತ ಕಳೆಯಬಹುದು (ಸ್ಮೃತಿಹೂ. ೩೬). **ಜಬ್ಲಿ**: ಹಳ್ಳಿಯ ಆಟಗಳಾದ ಚಿಣಿಕೋಲು, ಜಬ್ಲಿ, ಗೊಡ್ಡು (ಒಂದು ಬಗೆಯ ಕ್ರಿಕೆಟ್), ಹುಲಿದನ ಇವು ನಮ್ಮ ವಿನೋದಗಳು (ಹುಮುಜ. ೨೦).
[ ←ತುಳು. ಜಬಲಿ, ಜಬುಳಿ ]

**ಜಬುರು** 'ಜಬರು' ನೋ.

**ಜಬ್ಬ** (ಗು). ಒಡೆದ; ಜಜ್ಜಿಹೋದ (?): ಹಬ್ಬವನು ಹೂಡಿದನು ಉಬ್ಬ ಉಳಿಗಕಲ್ಲ ಜಬ್ಬ ಕವಡೊಂದು ಬಳಿಯಿಲ್ಲ ಚೌಡನಿಗೆ ನಬ್ಬುನಸಕಿನಲಿ ಮನೆಬಿಟ್ಟ (ಕನ್ನಜಾ. ೨೯೩). [ <ಜಬ್ಬು ? ]

**ಜಬ್ಬಳ** 'ಜಬಳ' ನೋ.

**ಜಬ್ಬಳಿಕೆ** (ನಾ). ಅಂಟಂಟು; ಜಿಗಿಜಿಗಿ : 'ಜಬ್ಬಳಿಕೆ ಆಗ್ತದೆಯೋ!' ಎಂದೆಷ್ಟು ಹೇಳಿದರೂ ಬಿಡದೆ (ಮಳಿಮ. ೨೦೪). [ ಜಬ್ಬಳ (<ಜಬಳ) + – ಇಕೆ ]

**ಜಬ್ಬಿ** 'ಜಬ್ಬು' ನೋ.

**ಜಬ್ಬು, ಜಬಿ, ಜಬ್ಬಿ, ಜಬ್ಬೆ** (ನಾ). ೧. ಅಂಟಾಗಿರುವಿಕೆ; ಮೆತ್ತಿಕೊಳ್ಳುವಿಕೆ. ೨. ಮಾವಿನ ಅಂಟು ಅಥವಾ ಸೊನ್ನೆ. ೩. ಅಂಟು; ಲೋಳೆ : ಈ ಪುರಾತನ ಜಬ್ಬನ್ನು (ಸ್ಲೈಮ್) ಶೋಧನೆ ಮಾಡಿ, ವಿವರಿಸಿದವನು ಫೆಲಿಕ್ಸ್ ಡುಜಾರ್ಡಿನ್ (ಕವಿಕೋ. I, ೩೦). **ಜಬಿ**: ೪. ಕಳಿತ ಹಣ್ಣಿನಂತೆ ತುಂಬ ಮೆದುವಾಗಿರುವಿಕೆ. **ಜಬ್ಬಿ**: ೫. ಅಜಿಗಿಜಿಯಾದುದು; ನುಗ್ಗಾದ ಸ್ಥಿತಿ ; ಜಜ್ಜಿಹೋಗಿರುವಿಕೆ ; ಮೆತ್ತಗಾಗಿರುವಿಕೆ: ಬೀಳೂ ಮಗನೆ, ಜಬ್ಬಿ ಆಗಿ ಸಾಯಿ (ಟೀನಟಾ. ೨೦೨). **ಜಬ್ಬೆ**: ೫. ಹನುಮಂತನು ಇಂತಹ ಅನೇಕ ವಿಚಾರಗಳ ಸುಳಿಗೆ ಸಿಕ್ಕು ಜಬ್ಬೆಯಾದನು (ಮುಗಿಮ. ೦೮೩);
ಜಬಜಬ, ಜಬ್ಬೆಜಬ್ಬೆ (ದ್ವಿರುಕ್ತಿ): "ಜಬಜಬ–ಅಂಟಂಟು" (ಶಾಸಕೋ. ೬೦): ಈ ಭೈರವಿಯ ತೊತ್ತಳದುಳಿತಕ್ಕೆ ಪರಕೀಯ ಸೊತ್ತಿನ ನೊಗ ಜಬ್ಬೆಜಬ್ಬೆಯಾಯಿತು (ಸುವರ್ಣ. ೨೨೬). ಜಬ್ಬಡಿಕೆ=ಅಂಟಂಟಾದ ಅಡಕೆ : (ಉ). ಜಬ್ಬಿಯಾಗು, ಜಬ್ಬೆಯಾಗು=ಹಣ್ಣಾಗು; ಮೆತ್ತಗಾಗು; ನುಗ್ಗಾಗು: ಕಚೇರಿ ಕಟ್ಟೆಯ ಪಟ್ಟದೊಳಗೆ ಮನುಷ್ಯ ಜಬ್ಬಿಯಾಗಿ ಹೋಗುತ್ತಾನೆ (ಪ್ರೇಮಾಶ್ರ. ೯೦) : ನೀಲನು ತುಸು ಅಲಕ್ಷ್ಯಮಾಡಿದ್ದರೆ ಅವನೂ ಅವನ ಕುದುರೆಯೂ ದನಗಳ ಕಾಲಲ್ಲಿ ಸಿಕ್ಕು ಅವುಗಳ ತುಳಿದಾಟದಿಂದ ಜಬ್ಬಿ ಯಾಗುತ್ತಿದ್ದರು (ಬಂಗಾಹ. ೩೮) ; ಹೆಂಡತಿ ಈ ಸಾಂಪ್ರದಾಯಿಕ ಭಾವದ ಮೂಢರ ಮಧ್ಯೆ ಸಿಕ್ಕಿ ಜಬ್ಬೆಯಾಗಲು ತೊಡಗಿರುವಳು (ರಾಮೂಕ. ೪೬).
[ ದೇ.; ತೆಲು. ಜಬ್ಬು ]

**ಜಬ್ಬೆ** 'ಜಬ್ಬು' ನೋ.

**ಜಬ್ಲಿ** 'ಜಬಿಲಿ' ನೋ.

**ಜಮಕಿ** 'ಜಾಮಕಿ' ನೋ.

**ಜಮಿಗುಡು** (ಕ್ರಿ). ಕೊಚ್ಚೆಯಾಗು ; ಅಜಿಗಿಜಿಯಾಗು : ರಸ್ತೆಯ ಜಮಿಗುಡುವ ಕೆಸರು ಕವಿದು ಮಳೆಯ ಮುಸುಗಿನೊಳಗೆ ದೂರದೃಶ್ಯ ಗಳೆಲ್ಲ ಸರಿದು ನಿಂತಿದ್ದವು (ಹೊಸಕ್ಷಿ. ೦೦೩).
[ ಜಮಿ₀ + ಕುಡು₁ (<ಕೊಡು₁) ]

**ಜಮ್ಮಂಡೆ** 'ಚಮ್ಮಂಡೆ' ನೋ.

**ಜಮ್ಮಿ** (ನಾ). ಒಂದು ಬಗೆಯ ಸಸ್ಯ : ತೇಜಫಲ, ಜಮ್ಮಿ, ತುಂಬುರು (ಮೃಶಿಗಿ. ೬೯–೦೬೨೦). [ ? ]

**ಜಮ್ಮೆ, ಜುಮ್ಮೆ** (ನಾ). ಅಧೀನ ; ವಶ ; ಸ್ವಾಧೀನ : ಶ್ರೀಮುಖ ಸಂವತ್ಸರದಾರಭ್ಯ ಗ್ರಾಮವನ್ನು ಆಚಾರ್ರಿ ಜಂಮೆಮಾಡಿ ಕೊಟ್ಟು ವರುಷಂಪ್ರತಿಯಲೂ ಐದುವರಹದ ಮೇರೆಗೆ ಜೋಡಿ ತೆಗೆದುಕೊಳ್ಳುತ್ತಾ (ಮೈಆರಿ. ೧೯೨೪, ೯೪–೩೬ : 1813): ಒಂದು ಡಿಸ್ಟ್ರಿಕ್ಟಿನ ರೆವಿನ್ಯೂ ಆಡಳಿತದ ಜಮ್ಮೆಯಲ್ಲಿರುವ ಮುಖ್ಯವಾದ ಸ್ಥಳೀಯ ಅಧಿಕಾರಿ (ಗ್ರಾಮೂಕ. ೩೬). **ಜುಮ್ಮೆ** : ಗಡಿಗಳ ಬದುಕೆಲ್ಲಾ ಮಾರಸಾಬರ ಕೈದಲ್ಲಿ ವೆಂಕವ್ವಯ್ಯನವರ ಜುಮ್ಮೆಮಾಡಿದರು (ಹೃದರ. ೦೦೯). [ ←ಅರ. ಹಿಂ. ಜಮ್ಮಾ ]

**ಜಯಚಾಯ** (ನಾ). ಒಬ್ಬಾತನ ಹೆಸರು : ಮೋದೂರ ಜಯಚಾಯರುಂ ನರಸಾಕ್ಷಿ (ಮೈಆರಿ. ೧೯೨೬, ೧೧೮–೯೩ : 726). [ ? ]

**ಜರಗುಟ್ಟು** (ಕ್ರಿ). ಜರ್‍ರೆಂದು ಶಬ್ದಮಾಡು: ಜರಗುಟ್ಟುವ ದುರಗುಟ್ಟುವ ಕತ್ತಲೋ ಕತ್ತಲೇ (ಹೃದಸ. ೩೬–೬). [ ಜರ₀ + ಕುಟ್ಟು₁ ]

**ಜರಲೆ** 'ಜಿರಲೆ' ನೋ.

**ಜರಳೆ** 'ಜಿರಲೆ' ನೋ.

**ಜರಾ** (ನಾ). ಚಿಲಖತ್ತು ; ರಕ್ಷಾಕವಚ : ಸಕಲಾಯುಧಗಳಂ ತೆಗೆದು ಕೊಂಡು ಅಂಗಿ ಪಾಗು ಜರಾ ಮೊದಲಾದ ವಸ್ತ್ರಗಳನ್ನು ಧರಿಸಿ (ಶಿವದ. ೯೩–೦೧). [ ←ಪಾರ. ಜರಹ್ ; ಮರಾ. ಜರಾ ]

**ಜರಾತಿ** 'ಜಿರಾಯಿತು' ನೋ.

**ಜರಾಪತಿ** 'ಜರಾವರ್ತಿ' ನೋ.

**ಜರಾಫೆ** (ನಾ). ಒಂಟೆಯ ಜಾತಿಗೆ ಸೇರಿದ ತುಂಬಾ ಉದ್ದವಾದ ಕೊರಳುಳ್ಳ, ಮೈಮೇಲೆ ಕರಿಯ ಮಚ್ಚೆಗಳುಳ್ಳ ಒಂದು ಬಗೆಯ ಪ್ರಾಣಿ : ಜರಾಫೆ ಎಂಬುದು ಬಹಳ ವಿಚಿತ್ರವಾದ ಒಂದು ಪ್ರಾಣಿಯ ಹೆಸರು (ಪ್ರಾಚಿತ್ರ. ೩೦).
[ ←ಅರ. ಜರಾಫಾ ; ಪಾರ. ಸುನಾರ್ಫ್./ಇಂ. Giraffe ]

**ಜರಾಯತ** 'ಜಿರಾಯಿತು' ನೋ.

**ಜರಾಯತಿ** 'ಜಿರಾಯಿತು' ನೋ.

**ಜರಾಯಿತ** 'ಜಿರಾಯಿತು' ನೋ.

**ಜರಾಯಿತದಾರ** 'ಜಿರಾಯಿತುದಾರ' ನೋ.

**ಜರಾಯಿತಿ** 'ಜಿರಾಯಿತು' ನೋ.

**ಜಿರಾಯಿತು,** ಜರಾಯಂತ, ಜಿರಾತಿ, ಜಿರಾಯಂತು, ಜಿರಾಯಂತಿ, ಜಿರಾಯಿಂತ, ಜಿರಾಯಿತಿ (ನಾ). ೧. ವ್ಯವಸಾಯ; ಬೇಸಾಯ. 'ಜಿರಾಯಿಂತುದಾರ' ಪರಾ. ೨. ವ್ಯವಸಾಯಕ್ಕೆ ಅರ್ಹವಾದ ನೆಲ,-ಭೂಮಿ. **ಜರಾಯತ:** ೧. ಜರಾಯತ ಮಾಡಬೇಕೆಂದು ದೂರ ದೇಶಕ್ಕೆ ಹೋಗಿ ಇದ್ದಂಥಾ ರೈತರನ್ನು ಕರೆಸಿ (ರಾಜೇಂದ್ರ. ೪೮). ೨. ನೀಲಿಯ ಬೀಜವನ್ನು ಜರಾಯತ ಪೈಕಿ ಯಾವ ಭೂಮಿಯಲ್ಲಾದರೂ ಬಿತ್ತಿದರೂ ಬೆಳೆಯುತ್ತದೆ (ಕೃಷಿಶ್ರ. ೯೩). **ಜಿರಾತಿ:** ೩. ತೋಟಗಾರಿಕೆ: (ಮ್ಯಗೆಜ. IV, ೬೯೦). **ಜಿರಾಯತ:** ೨. ಜಿರಾಯತದಲ್ಲಿ ಎರಿಯ ಭೂಮಿಯೋ ಉತ್ತಮವು (ಕೃಷಿಶ್ರ. ೧೬೩). **ಜಿರಾಯತಿ:** ೧. ಮತ್ತೆ ಕೆಲವರು ವಂಶಪಾರಂಪರ್ಯವಾಗಿ ಬಂದ ಜಿರಾಯತಿಯಿಂದಲೂ . . . ಲಾಭದಾಯಕ ಬೇಸಾಯದಿಂದಲೂ ಸಾಕಷ್ಟು ಅನುಕೂಲವಾಗಿದ್ದರು (ಊರುಳ. ೪೦). **ಜಿರಾಯಿತ:** ೧. ಒಂದೆಕರೆ ಗದ್ದೆಯೂ ಜಿರಾಯಿತ ಆಗುತ್ತಿದೆ. (ನಾಲ್ಕುಮ. ೮). **ಜಿರಾಯಿತಿ:** ೧. ಯುದ್ಧವಿಲ್ಲದ ಕಾಲದಲ್ಲಿ ಜಿರಾಯಿತಿ ಕೆಲಸಗಳನ್ನು ಮಾಡಿಕೊಳ್ಳುತ . . . ಹಾಜರಾಗುತ್ತಿದ್ದರು (ಮಹಾವಂ. II, ೪೮); ಆಚಾರಿಗಳು . . . ಜಿರಾಯಿತಿಗೆ ಉಪಯುಕ್ತವಾದ ಉಪಕರಣಗಳನ್ನು ಮಾಡುತ್ತಿದ್ದರು (ಸರ್ವಮಂ. ೩೪೯).

**ಜಿರಾಯಿತುಜನ** = ರೈತಾಪಿಜನ; ಬೇಸಾಯಗಾರರು; ಒಕ್ಕಲ ಮಂದಿ: ದೊಡ್ಡ ದೊಡ್ಡ ಸರದಾರರು, ಮತ್ತು ಎಕ್ಕಂಡೆ ಸಿಪಾಯಿ, ಜಿರಾಯಿತು ಜನ, ಖಾಸಾಬಾರು, ಕಂದಾಚಾರ ವಗ್ಗೈರೆ ಜನರಿಗೆ ಸೇರಿಸಿ ಕೊಂಡು ನಿಂತರು (ಚಿತ್ರಪಾ. ೬೪).

[ ←ಅರ. ಜಿರಾಅತ್; ಹಿಂ. ಜಿರಾಯತ್ ]

**ಜಿರಾಯಿತುದಾರ,** ಜಿರಾಯಿಂತದಾರ (ನಾ). ವ್ಯವಸಾಯವನ್ನು ವೃತ್ತಿ ಯನ್ನಾಗಿ ಹೊಂದಿರುವವನು; ಬೇಸಾಯವನ್ನೇ ಕಸುಬಾಗಿ ಉಳ್ಳ ವನು; ಬೇಸಾಯಗಾರ; ಒಕ್ಕಲಿಗ: ಹಣಗಾರರು ಹುಳ ಸಾಕುವ ಜಿರಾಯಿತುದಾರರಿಗೆ ಸಾಲ ಸೋಲ ಕೊಟ್ಟುಕೊಂಡು ಸಾಹುಕಾರರು ಎಂಬ ಬಿರುದನ್ನು ಪಡೆದು (ಕಲಿಸಿ. ೩೦೧). **ಜಿರಾಯಿತದಾರ:** ತಮ್ಮ ದನಗಳಿಗೆ ಅಲಂಕಾರಮಾಡಿ ಊರಿನ ಸುತ್ತ ಓಡಿಸಿ ಆನಂದಪಡುವದೇ ಜಿರಾಯಿತ ದಾರನ ಸಂತೋಷ (ಭೀಮಕಾ. ೧೨೯). [ ಜಿರಾಯಿತು + – ದಾರ್$_4$ ]

**ಜಿರಾವರ್ತಿ,** ಜಿರಾಪತಿ (ಗು). ಹೆಚ್ಚಾದ; ಪ್ರಬಲವಾದ; ಜೋರಾದ: ಗಾಳಿಮಳೆ, ಹನಿಹನಿಮಳೆ, ಜಡಿಮಳೆ, ಜಿರಾವರ್ತಿ ಮಳೆಯೂ ಸುರಿಯ ತೊಡಗಿತು (ಬಾಳಗಿ. ೩೩). **ಜಿರಾಪತಿ:** ಆ ಜಿರಾಪತಿ ಮಳೆಯಲ್ಲಿ ವಾಲಗದ ವರು ಬರದಿದ್ದ ಪ್ರಯುಕ್ತ (ಮಳಿಮ. ೬೩೨); ಅಂಥಾ 'ಜಿರಾಪತಿ' ಮಳೆ ಯಲ್ಲಿ ಮನೆಬಿಟ್ಟು . . . ಮದುವೆಗೆ ಹೊರಡುವ ಮನುಷ್ಯ ಯಾರು (ಮರಮ. ೨). [ ? ]

**ಜಿರಿ** (ನಾ). ಹಳೆಯದಾಗಿ ಶಿಥಿಲವಾದುದು; ಜೀರ್ಣವಾದುದು: ಮುಪ್ಪಾಗಿ ಜಿರಿಯಾದ ಬಟ್ಟೆಯನು ಬೀಸಾಡಿ (ಸಹೀಗೀ. ೬೭-೯); ನೋವು ಗಳ ಜಾಲದಲಿ ಜಿರಿಯಾದ ಜೀವಕ್ಕೆ ನಿತ್ಯದಾ ಗಾಯತ್ರಿ "ಮರಣವೇ ಶರಣ" (ಬಿಪಾಸಿ. ೩-೧೯). [ <ಪ್ರಾ. ಜೀರ ]

**ಜಿರಿಕೆ** (ನಾ). ಜೀರಂಗಂಟ್ಟುವಿಕೆ; ಶಬ್ದಮಾಡುವಿಕೆ: ಕರಿಯ ಘೋಷಣೆ ರಥದ ತುರಗ ಗರ್ಜನೆ ಜಿರಿಕೆ ಮೊರೆವ ವಾದ್ಯಬ್ಬರದ ಬಿರಿದು ಬೊಬ್ಬಿರಿವ ರವ ಧುರದ ಧನು ಝೇಂಕಾರನಾದವಾ ಯಮಲೋಕಮಂ ತುಂಬಿತು (ತುರಂಗ. ೪೬-೨೬). [ ಜಿರ್ + – ಇಕೆ ]

**ಜಿರುದುಂಬಿ** 'ಜೀರ್ದುಂಬಿ' ನೋ.

**ಜಿರ್ಕರೆ** (ನಾ). ಜಿರ್ ಎಂದು ಶಬ್ದಮಾಡು: ತಿಳಿಯದೆನೆ ಕಾರ್ಮುಗಿಲ್ ಜಿರ್ಕರೆಯುತಿಹುದು (ಕಾಲೂರ. ೫೦-೬೩). 'ಜೀರ್ಗರೆ' ಪರಾ. [ ಜಿರ್ + ಕರೆ$_1$ ]

**ಜಿಲ್** (ನಾ). ಒಂದು ಅನುಕರಣ ಶಬ್ದ. 'ಜಿಲ್ಲಿಚು' ಪರಾ.

**ಜಿಲ್ಲೆನ್ನು**=ಚಳಿಯಿಂದ ಜುಮ್ಮೆನ್ನು: (+).

**ಜಿಲಿಬಲಿ** 'ಜಿಲೇಬಿ' ನೋ.

**ಜಿಲಿಬಿಲಿಗ** (ನಾ). ಒಂದು ಬಗೆಯ ಪಕ್ಷಿ; "ಹಾಲುಹಕ್ಕಿ" (ನಳಚ. ಟೀಕು): ಶುಕ ನವಿಲು ಜಿಲಿಬಿಲಿಗ ಗೀಜುಗ ಬಕ ಹಸುಬ . . . ಮಿಂಚುಲಿಗ ಹಕ್ಕಿಗಳು ರಂಜಿಸಿತು (ನಳಚ. ೧-೪೨). 'ಚಿಲಿಪಿಲಿಹಕ್ಕಿ'. 'ಚಿಲಿಮಿಲಿಗ' ಪರಾ.

**ಜಿಲಿಬಿಲ್ಲಿ** (ನಾ). ಒಂದು ಬಗೆಯ ಆಟ: ಗುಲಗಂಜಿ ಗುಪ್ಪಂದೆ ಬಿಲ್ಲ್ಯಹರಳು ಬಿಲ್ಲು ಜಿಲಿಬಿಲ್ಲಿ ಜಿಂಕೆ ಭೋಗರಿ ಚೆಂಡು (ವಿಸೂತ್ರಸು. ೧೯-೩).

[ <ಜಬಿಲಿ ? ]

**ಜಿಲೀಪು** 'ಜಿಲೀಬಿ' ನೋ.

**ಜಿಲೀಬಿ,** ಜಿಲೀಪು (ನಾ). ಊಳಿಗ; ಚಾಕರಿ. 'ಜಿಲೀಬಿದಾರ' ಪರಾ. **ಜಿಲೀಪು:** ಊರೊಳಗೆ ಬರುವಾಗ ನೇಮದ ಜಿಲೀಬಿನವರೂಳಿಗದ ಹರಿಕಾರರನ್ನು ಕಳುಹಿ (ಕೃಷ್ಣವಿ. ೩-೩).

[ ←ಮರಾ. ಜಿಲೀಬ್; ಪಾರ. ಜಿಲಬೀ ]

**ಜಿಲೀಬಿದಾರ** (ನಾ). ಸೇವಕ; ಚಾಕರ: ನ್ಯಾಯಾಧಿಪತಿಯು ಈ ಒಕ್ಕಲಿಗ ನನ್ನು ಹಿಂಗಟ್ಟುಮುಂಗಟ್ಟು ಕಟ್ಟಿಸಿ, ಜಿಲೀಬಿದಾರಾ ಇವನಿಗೆ ನೂರಿಪ್ಪತ್ತು ಕೊರಡಾ ಹೊಡಿ . . . ಎಂದನು (ಕಥಾಮಂ. IV, ೪೧).

[ ಜಿಲೀಬಿ + – ದಾರ್$_4$ ]

**ಜಿಲೆಯ** (ನಾ). ಲೋಹದ ಕವಚ; ಚಿಲಖತ್ತು; ಸವಂಗ: ಆ ಬೊಕ್ಕಸಿಗನ ಕ್ರೂರಾಸಿಘಾತಿಯಿಂ ಸದಾಶಿವನಾಯಕಂ ತೊಟ್ಟಿರ್ದ ಜಿಲೆಯಂ ಪರಿದು . . . ಮಸೆದೋಱಲಾಗಳಾ ಗಾಯಮಂ ಸೈರಿಸಿ (ಕೆಳನೃ. ೨-೮); ದಂತದ ಸೂನಗೆ ಸೊಂಡಿಲೊಳಾಂತಸಿ ಮೃಗಮರ್ದ ಜಿಲೆಯ ಬಕತರ ಚೂಡಾಲು . . . ಇದಿರಾಂತಂ (ಕೆಳನೃ. ೨-೨೬). 'ಜಿರಾ' ಪರಾ. [ ← ಪಾರ. ಜಿರಹ್ ]

**ಜಿಲೇಬಿ,** ಜಿಲಿಬಿಲಿ (ನಾ). (ಮೈದಾಹಿಟ್ಟಿನಿಂದ ತಯಾರಿಸಿ) ಕರಿದು ಸಕ್ಕರೆಯ ಪಾಕದಲ್ಲಿ ನೆನೆಸಿದ ಒಂದು ಬಗೆಯ ಚಕ್ಕುಲಿಯಾಕಾರದ ಸಿಹಿತಿಂಡಿ: ಏನು ಕೊಡಲಿ ಸಾರ್, ಜಾಮೂನ್, ಜಿಲೇಬಿ (ಮಹಾಂ. ೯೬); ಒಂದು ಜಿಲೇಬಿ ಮಾಡಿಸಿ ಬಿಟ್ಟರೆ ಸಾಕಲ್ಲ ? (ತಿಡುಗು. ೫೪). **ಜಿಲಿಬಿಲಿ:** ಕಸಕಸಿ ಕೊಬ್ಬರಿ ಹಸನುಳ್ಳ ಜಿಲಿಬಿಲಿ ಬಿಸಿಯ ಹೂರಣಗಡಬ ಬಿಳಿಯ ಬೆಲ್ಲ . . . ಮುಂದಿಟ್ಟರ ಇಸಮಾಡಿ ಒಂದು ತುತ್ತ ತಿಂದೇನ (ಮಲ್ಲಗ. ೮೩-೦). [ ←ಹಿಂ. ಜಿಲೇಬೀ, ಜಲೇಬೀ; ಮರಾ. ಜಿಲಬೀ, ಜಿಲೀಬೀ ]

**ಜಿಲೇವು** (ನಾ). (ಉಕ) ಹೊಳಪು; ಕಾಂತಿ; ಮೆರುಗು; ಪ್ರಕಾಶ: (+).

[ ←ಅರ. ಜಿಲಾ; ಪಾರ. ಜಿಲ್ವಈ ]

**ಜಿಲ್ಲದಿ** (ನಾ). ಎಕ್ಕದಗಿಡ: (ಎಸಮ್ಮ. I, ೩೦). [ ? ]

**ಜಿಲ್ಲಾ,** ಜಿಲ್ಲೆ, ಜಿಲ್ಹೆ (ನಾ). ಹಲವು ತಾಲ್ಲೂಕುಗಳನ್ನೊಳಗೊಂಡ ದೇಶದ ಒಂದು ಭಾಗ; ಪರಗಣೆ: ಇವರಿಗೆ ಬೊಂಬೈ ಜಿಲ್ಲಾದಲ್ಲಿ ನಾಡು ಪಟೇಲ ಹೆಗ್ಗಡೆ ಎಂತಲೂ ಹೆಸರುಂಟು (ಗ್ರಾಮಾಳ. ೦). **ಜಿಲ್ಲೆ:** ಕರ್ನಾಟಕದ ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಮುಖ್ಯವಾದ ಸ್ಥಳ ನಿಟ್ಟೂರು (ನಿಟ್ಟೂಶಾಂ. ೩); ಕೇರಳದ ಕಾಸರಗೋಡು, ದಕ್ಷಿಣಕನ್ನಡ ಜಿಲ್ಲೆಗಳ ಹವ್ಯಕರ ಕನ್ನಡ – ಇವು ಈ ಗುಂಪಿಗೆ ಸೇರಿದ ಉಪಭಾಷೆಗಳು (ದ್ರಾವಿವಿ. ೧೩೫). **ಜಿಲ್ಹೆ:** ಸನ್‌ಲಾಯಿ ಈ ಜಿಲ್ಹೆಯ ಮುಖ್ಯಸ್ಥಳ (ಬಂಗಾಹಿ. ೩೭).

[ ←ಅರ. ಜಿಲಅ; ಹಿಂ. ಜಿಲಾ; ಮರಾ. ಜಿಲ್ಹಾ ]

**ಜಿಲ್ಲಾಧಿಕಾರಿ** (ನಾ). ಜಿಲ್ಲೆಯ ವರಿಷ್ಠಾಧಿಕಾರಿ: ಅಂದು ಜಿಲ್ಲಾಧಿಕಾರಿಗಳು ಮುಖ್ಯ ಅತಿಥಿಗಳಾಗಿ ಬಂದಿದ್ದರು (ರೂಢಿ).

[ ಜಿಲ್ಲಾ + ಅಧಿಕಾರಿ ]

**ಜಿಲ್ಲಾಮಂಡಲಿ** (ನಾ). ಜಿಲ್ಲೆಯ ಆಡಳಿತಕ್ಕೆ ಸಂಬಂಧಿಸಿದ ಸಭೆ,–ಸಮಿತಿ : ನಗರಪಾಲಿಕೆಗಳ ಜಿಲ್ಲಾ ಮಂಡಲಿಗಳ . . . ಸದಸ್ಯರುಗಳಿಂದ ಕೂಡಿ (ಭಾಧಾನ. ೯೦). [ ಜಿಲ್ಲಾ + ಮಂಡಲಿ ]

**ಜಿಲ್ಲಿ** (ನಾ). ಮಣ್ಣಿನ ಪಾತ್ರೆಗೆ ಬಿದ್ದ ಅಥವಾ ಮಾಡಿದ ಸಣ್ಣ ತೂತು : (ಕ). [ ದೇ.॥ ತಮಿ. ಇಲ್ಲಿ ; ಮಲ. ತೆಲು. ಚಿಲ್ಲಿ ]

**ಜಿಲ್ಲಿದುಂಬಿ** (ನಾ). ಮರಿ ದುಂಬಿ : ಮಲ್ಲಿಗೆಯಲರ್ದಂಡೆಯಿಡಿಯೆ ಬಂದೆಬಗುವ ಜಿಲ್ಲಿದುಂಬಿಗೆ ಬೆರ್ಚಿ ನಿಂದು ಸೊಲ್ಲಿಪ ಪೂಮಾಲೆಗಾರ್ತಿ (ಪೋಹತ. ೬-೦೬). [P ಇದು 'ಜಲ್ಲಿದುಂಬಿ' ಎಂಬುದರ ಅಪಲಿಖಿತವಿರ ಬಹುದು]

**ಜಿಲ್ಲಿಟು**[2] (ಕ್ರಿ). ಜಿಲ್ ಎಂದಂ ಚಿಮ್ಮು : ಮತ್ತಮತಂಗಮದುಂಗದೊಳೊ ಜ್ಜರಿಸುತ್ತ ನೆಲಕ್ಕೆ ಜ[ಪಾಠಾಂ. ಜ]ಲ್ಲಿಟುದುಗುತಹ ಬಸೂನೆತ್ತರ ಪೊನಲ್ (ಜಯುಕಾ. ೭-೨೨). [ ಜಿಲ್ + ಇಡು[2]1 ]

**ಜಿಲ್ಲು** (ಕ್ರಿ). ಸಂತ್ರಮಯುತ್ತ ಹಾರು ; "ಸುತ್ತಲೂ ಸಿಡಿ" (ಜಾನಕೋ. ೬೦). [ ? ]

**ಜಿಲ್ಲೆ** 'ಜಿಲ್ಲಾ' ನೋ.

**ಜಿಲ್ಲೆದಾರ** (ನಾ). ಗ್ರಾಮಾಧಿಕಾರಿ : ಮಾಮಲೇದಾರನ ಕೈಕೆಳಗೆ ಮೂವರಾಗಲಿ ನಾಲ್ವರಾಗಲಿ ಜಿಲ್ಲೇದಾರರೆಂಬ ಕಾರಕೂನರಿರುತ್ತಿದ್ದರು (ಕಥಾಗಿ. ೩೬೬). [ ←ಅರ. ಹಿಂ. ಜಿಲೇದಾರ್ ]

**ಜಿಲ್ಹೆ** 'ಜಿಲ್ಲಾ' ನೋ.

**ಜಿವಸ್ನಾನ** (ನಾ). (?) : ಪತಿತನ ಭಿನ್ನಭಾರ್ಯಾದವನಾ ಜಿವಸ್ನಾನ ವಿವರ್ಜಿತನಾದವನ ವೇದಶಾಸ್ತ್ರವಿಹೀನನಾದವನ ನಿಮಂತ್ರಣಕ್ಕೆ ಹೇಳಬಾರದು (ಶೀಪಧ. ೦೬). [ P ಇದು 'ದಿವಾಸ್ನಾನ' ಎಂಬುದರ ಅಪಲಿಖಿತ ವಿರಬಹುದು ]

**ಜಿವಿ** 'ಜುಂಮ್ಮು₂' ನೋ.

**ಜಿವಿರು** 'ಸಿವುಟು₁' ನೋ.

**ಜಿವಿಹಿಡಿ** 'ಜುಮ್ಮುಹಿಡಿ' ನೋ.

**ಜಿವುಳಿ** 'ಚಿಗುಳಿ' ನೋ.

**ಜಿವುಳಿದುಟು**[2] 'ಚಿಗುಳಿದುಟು' ನೋ.

**ಜಿಷ್ಣು** (ನಾ). ೧. ವಿಜಯಿ ; ಜಯಶಾಲಿ ; ಗೆದ್ದವನು : ಪರಭೂಪಾಲಕ ಜಿಷ್ಣು ಶತ್ರುದಹನಂ ದುಷ್ಟಾರಿಕಾಳಂ (ಎಳ. V, ಅರಸೀ. ೦೬೨-೩೦; 1163); ಲೋಕತ್ರಯೀಜಿಷ್ಣುವನೆನ್ನಂ ಭೂಪನಂದಂ ತೃಣ[ವೆನೆ]ಲಘುವಂ ಮಾಡಿತು (ಕುಷ್ಕಪು. ೩-೨೩) : ಸತ್ಯ ಪರಾಕ್ರಮನಾಗಿರುವುದರಿಂದ ಜಿಷ್ಣುವೆಂದು ಹೆಸರು (ಭಾರತಾಂ. ೯೩). ೨. ಕಾಮಂನೆಗಳನ್ನು ನಿಗ್ರಹಿಸಿದವನು ; ಜಿನ; ಅರ್ಹಂತ. ೩. ಸ್ವರ್ಗಾಧಿಪತಿ; ದೇವೇಂದ್ರ; ಅಂತು ವಿಷ್ಣು ಜಿಷ್ಣುಗಳ್ ಪರಸ್ಪರಂ ಶರವರ್ಷಮಂ ಕಱೆಯೆ (ಜಗವಿ. ೦೩-೯೩ ವ) : ಎಲೆ ಜಲಧಿ ಜಿಷ್ಣು ಚಕಿತಾಚಲಪಾಲಕ ಕಾವುದೆಮ್ಮಂ (ರಾಜಶೇ. ೦-೯೩). ೪. ವಿಷ್ಣು ಅಥವಾ ಕೃಷ್ಣ. ೫. ಶಿವ ; ಈಶ್ವರ. ೬. ಅರ್ಜುನ ; ಧನಂಜಯ : ನಸುನಗುತರ್ಜುನನು ಫಲುಗುಣ ಧನಂಜಯ ಜಿಷ್ಣು . . . ಸವ್ಯಸಾಚಿ ಗಳೆನಿಪ ಪೆಸರನು ತಿಳುಹಿ (ಉತ್ತರ.ವಿ. ೬-೪೬) : "ಅನಂತ ಗಿರಿಜೇಶ ಧನಂಜಯ ವೀತರಾಗ ಜಂಭಾರಿ ವಿರೋಧಿಮರ್ದನರೊಳೊಪ್ಪುವುದಿಂತಿವು ಜಿಷ್ಣುವಾಚಕಂ" (ನಾನಾರ. ೩೯). [ ಸಂ. ]

**ಜಿಷ್ಣುಚಾಪ** (ನಾ). ಕಾಮನ ಬಿಲ್ಲು ; ಇಂದ್ರಚಾಪ : ಘನಾಗಮದಂತೆ ಜಿಷ್ಣುಚಾಪಶರಕರಕೋದಂಚಿತಮುಂ (ರಾಜಶೇ. ೬-೦೬ ವ).
[ ಜಿಷ್ಣು + ಚಾಪ ]

**ಜಿಷ್ಣುಸಾರಥಿ** (ನಾ). ಅರ್ಜುನನ ಸಾರಥಿಯಾದವನು ; ಕೃಷ್ಣ : ಜಿಷ್ಣುಸಾರಥಿ ರಾಮ ಅಚ್ಯುತಾಧೋಕ್ಷಜ ಸೃಷ್ಟಿಗೊಡೆಯ ಭಾರ್ಗವಮೂರುತಿ (ವಿದಾಶ್ಚ. ೬೬-೬). [ ಜಿಷ್ಣು + ಸಾರಥಿ ]

**ಜಿಹಾಸೆ** (ನಾ). ೧. ತ್ಯಜಿಸಂವ ಅಪೇಕ್ಷೆ ; ಬಿಟ್ಟುಕೊಡಂವ ಬಯಕೆ : ಇನ್ನು ಬೇಡ ಈ ನಿರಾಶೆ, ಮನವೆ; ಬೇಡ ಈ ಜಿಹಾಸೆ (ಸುನೀತ. ೬೪-೨). ೨. ಬೇಸರ ; ನಿರುತ್ಸಾಹ; ಜಂಗುಪ್ಸೆ: ಯುಧಿಷ್ಠಿರನಿಗೆ ತುಂಬ ಜಿಹಾಸೆಯುಂಟಾಗಿಬಿಟ್ಟಿತ್ತು (ವಚಥಾ. ೩೩೮) ; ಸರ್ವವಿಷಯದಲ್ಲಿಯೂ ಅವನಿಗೆ ಜಿಹಾಸೆ (ರಾಜಸೂ. ೬೮). [ ಸಂ. ಜಿಹಾಸಾ ]

**ಜಿಹ್ಮ** (ನಾ). ೧. ವಕ್ರವಾದುದಂ; ಕುಟಿಲವಾದುದಂ; ಡೊಂಕಾದುದಂ: "ವೇಲ್ಲಿತಂ ಜಿಹ್ಮಂ ವೃಜಿನಮೆನಲು ಪೊರೆದ ಕೊಂಕಕ್ಕು" (ಮಂಗರಾ.೦೨೬-೬). ೨. ಜಡ ; ಸೋಮಾರಿ ; ಆಲಸಿ : "ಅಲಸಃ, ಶಿಥಿಲಃ, ಮಂದಃ, ಜಡಃ, ಜಿಹ್ಮಃ, ಮಂಥರಃ–ಈ ೬ ಸೋಂಬಂ" (ಹಲಾಯು. ೬೯-೨೩೩); ಲೊಡಕ ಲೊಡಕ ಜಿಹ್ಮರ ಕೆಟ್ಟ ಸಂಸಾರವು ನೋಡಮ್ಮಮ್ಮ (ಪುರಂದ. ೫-೦೦೦-೦). [ಸಂ. ]

**ಜಿಹ್ಮಗ** (ನಾ). ವಕ್ರವಕ್ರವಾಗಿ ಚಲಿಸುವ ಪ್ರಾಣಿ ; ಹಾವು ; ಸರ್ಪ : "ಹಿಂಡಲಂ . . . ಜಿಹ್ಮಗಂ ಕುಂಡಲಯೆನಿಕು" (ಮಂಗರಾ. ೦೦೯-೨). [ಸಂ.]

**ಜಿಹ್ಮೆ₁** (ನಾ). ೧. ಕಪಟ ; ಮೋಸ : ಜಗದೊಳು . . . ಕರಿ ತೇರುವಾಜಿಯಾಳುಗಳವರಿಂದ ಜಂಹ[ಜಿಹ್ಮೆ]ಗಳನೊಡ್ಡಿ ಜಯದ್ರಥನಲ್ಲಿ ಪೊಕ್ಕು (ಕೊಕಿಳಂ. ೩೦). ೨. [ನಾಟ್ಯ] ವ್ಯಭಿಚಾರಿ ಭಾವಯಂಕ್ತವಾದ ದೃಷ್ಟಿ ಭೇದಗಳಲ್ಲಿ ಒಂದು ; ಅಸೂಯೆ, ನಿಗೂಢಾರ್ಥ, ಜಡತ್ವ, ಆಲಸ್ಯ ಇವುಗಳನ್ನು ತೋರಿಸಂವಾಗ ಅರೆಗಣ್ಣಿನಿಂದ ಪಕ್ಕವನ್ನು ನೋಡುವಿಕೆ: ಪೊಳೆವರೆಗಣ್ಣಂ ಕೆಲದೊಳ್ ಕಳಲ್ಚಿ ಬೀಳ್ವಾಲಿಯಾಗೆ ಜಿಹ್ಮೆಯೆನಿಕ್ಕುಂ (ರಾಸ್ಯರಂ. ೩-೩೦). [ ಸಂ. ಜಿಹ್ಮ ]

**ಜಿಹ್ಮೆ₂** (ನಾ). ಶರೀರದ ಹದಿನಾಲ್ಕು ಮುಖ್ಯನಾಡಿಗಳಲ್ಲಿ ಒಂದು : ತರಳತಿಳಿ ನಾಡಿಗಳ ಚೌದಶಗಳಿಗೆ ನಾಮಗಳಾಯುರು ಸುಷುಮ್ನೆ . . . ಜಿಹ್ಮೆಯಾ ಅಶ್ವಿನಿ (ಗಗಶಾ. ೯-೦೦). [ ಸಂ. ಜಿಹ್ವಾ ]

**ಜಿಹ್ವೆ** (ನಾ). ನಾಲಗೆ ; ರಸನೇಂದ್ರಿಯ : ಮಾಣದ ಮಮ ಜಿಹ್ವದಿ ನೆಲೆಗಾಣಿಸೆ ದಯದಿಂದಲೀಗೆನಗೆ ಸನ್ಮತಿಯಂ (ಸೀಲಧ್ಯ. ೭). [ ಸಂ. ಜಿಹ್ವಾ ]

**ಜಿಹ್ವಕ** (ನಾ). ೧. ಹದಿಮೂರು ವಿಧವಾದ ಸನ್ನಿಪಾತ ಜ್ವರಗಳಲ್ಲಿ ಒಂದು ; ಶ್ವಾಸ, ಕೆಮ್ಮು, ಮೈಯುರಿತ, ಕಂಗೆಡಿಕೆ, ನಾಲಿಗೆಯಲ್ಲಿ ಬಿರುಸು ಮುಂತಾದ ಲಕ್ಷಣವುಳ್ಳ ಸನ್ನಿಪಾತ: ಮತ್ತಮಾ ತ್ರಯೋದಶ ಸನ್ನಿಪಾತಮಾವುದೆಂದೊಡೆ:-ಸಂಧಿಗ, ಅಂತಕ . . . ಜಿಹ್ವ[ಪಾಠಾಂ. ಹ್ವಾ]ಕ, ಅಭಿನ್ಯಾಸ, ಪ್ರಳಾಪಗಳು (ಕಳವ್ಯ. ೦೩೦). ೨. [ಕಾಮಶಾ] ನಿಮಿತ್ತಕ, ಸಂಘಟಕ, ಸ್ಫುರಿತಕ, ಭ್ರಾಂತಕ, ತಿರ್ಯಗಾಯಿತಕ, ಅತಿದೃಷ್ಟಕ, ಉತ್ತರ, ಸಂಘಟ್ಟಿತಕ, ಜಿಹ್ವಾವೇಳನಕ, ಜಿಹ್ವಕ, ಅತಿಜಿಹ್ವಾಯೋಗ, ಸೀತ್ಕಾರ, ದಂಶನಕ ಎಂಬ ಚುಂಬನದ ಹನ್ನೆರಡು ವಿಧಗಳಲ್ಲೊಂದು : ರಸನೆಯಿಂದೊಯ್ಯನಲೆದು . . . ಜೀವೇಶಂ ಚುಂಬನಮನೊಡರ್ಚೆ ಜಿಹ್ವಕಮೆನಿಕುಂ (ಮನ್ಮವಿ. ೦೨-೯) ; ಜಿಹ್ವಕ . . . ಸೀತ್ಕಾರ ದಂಶನಕವೆಂಬ ದ್ವಾದಶವಿಧ ಚುಂಬನ ಸಂಭ್ರಮಗಳಿಂ (ವಿವೇಕ. ೨೨೯). [ ಸಂ. ]

**ಜಿಹ್ವಾಗ್ರ** (ನಾ). ನಾಲಗೆಯ ತುದಿ; ತಂದಿನಾಲಗೆ: ವಾಣಿ ಬಂದು ಸಮಂತಿರ್ಕೆ ನವೀನ ಸೌರಭದವೋಲ್ ಜಿಹ್ವಾಗ್ರದೊಳ್ ರುದ್ರನಾ (ಜಗವಿ. ೦-೬); ಎನ್ನ ಜಿಹ್ವಾಗ್ರದೊಳಾವಗಂ ಸರಸತಿಯಿರ್ಪುದಿಲ್ಲಂ (ಅದ್ಭುತ. ೧೬-೦೨).
[ ಸಂ. (ಜಿಹ್ವಾ + ಅಗ್ರ) ]

**ಜಿಹ್ವಾಚಾಪಲ್ಯ** (ನಾ). ೧. ಕಂಡುದನ್ನೆಲ್ಲಾ ತಿನ್ನಬೇಕೆಂಬ ಆಸೆ; ನಾಲಗೆಯ ಚಪಲತೆ. ೨. ಮನಸ್ಸಿನಲ್ಲಿ ಇರುವುದನ್ನೆಲ್ಲಾ ಆಡಿಬಿಡಬೇಕೆಂಬ ಆಸೆ ; ಮಾತನಾಡುವ ಚಪಲ : ಅವರ ಜಿಹ್ವಾಚಾಪಲ್ಯ ನನ್ನ ಶ್ರವಣ ಚಾಪಲ್ಯಕ್ಕೆ ಒಗ್ಗಿ ಸಿಹಿಯಾಗಿತ್ತು (ಹೊಸಕ್ಷ. ೦೬೫).
[ ಸಂ. (ಜಿಹ್ವಾ + ಚಾಪಲ್ಯ) ]

**ಜುಲಿಪೆ₂** (ನಾ). ಒಂದು ಬಗೆಯ ಮರ : ಜುಲಿಪೆ, ಆಲಿವ್ ಎಣ್ಣೆ (ಮೃಶಿಗಿ. ೩೮-೧೦೩೭). [ ? ]

**ಜುಲುಂ** 'ಜುಲುಮೆ' ನೋ.

**ಜುಲುಪಿ** 'ಜುಲಿಪೆ₁' ನೋ.

**ಜುಲುಪೆ₁** 'ಜಂಲಿಪೆ₁' ನೋ.

**ಜುಲುಪೆ₂** (ನಾ). ವೇಶ್ಯೆಯ ಮಗಳು ಮೈನೆರೆದ ಮೇಲೆ ಆಕೆಯನ್ನು ಒಬ್ಬನಿಗೆ ಸ್ವಾಧೀನಪಡಿಸುವ ಸಮಾರಂಭ ; ಗೆಜ್ಜೆಪೂಜೆ : ಮೊನ್ನೆ ಅಕ್ಕಸಾನಿ ಮಗಳ ಜುಲುಪೆಯ ಕಾಲಕ್ಕೆ ನಿಮ್ಮ ಶ್ರೇಯಾಂಸನೇ ಅವರ ಮನೆಯಲ್ಲಿ ಕಾಗದದ ಮಲ್ಲಿಗೆಯ ಬಳ್ಳಿ ತಯಾರಿಸಿದ್ದನಂತೆ (ಶ್ರೇಯಾಂಸ. ೬೯).

[ ←ಮರಾ. ಝುಲವಾ ]

**ಜುಲುಮಾನೆ** 'ಜಂರ್ಮಾನೆ' ನೋ.

**ಜುಲುಮು** 'ಜುಲುಮೆ' ನೋ.

**ಜುಲುಮೆ,** ಜುಲುಂ, ಜುಲುಮು, ಜುಲ್ಮೆ (ನಾ). ೧. ಒತ್ತಾಯ ; ಬಲವಂತ ; ಬಲಾತ್ಕಾರ ; ಆಗ್ರಹ : ಕರ್ತವ್ಯಗಳೆಂದರೆ ಜುಲುಮೆಯಿಂದ ಮಾಡಬೇಕಾದ ಕೆಲಸಗಳೆಂದು ನಾವೇಕೆ ತಿಳಿದುಕೊಳ್ಳಬೇಕು (ಜೀವಾಕ. ೨೩). **ಜುಲುಂ:** ೨. ಆಕ್ರಮಣ ; ಅತ್ಯಾಚಾರ : ಸರಕಾರದವರ ಮೇಲೆ ಜುಲುಂ ನಡೆಸೋಣ(ಗ್ರಾಮಾಕ. ೧೭೯). **ಜುಲುಮು:** ೨.ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡಿದವರಿಗೆ ಚೆನ್ನಾಗಿ ಶಿಕ್ಷೆಮಾಡಿ (ಮಹಾಪಂ. II, ೬೩); ಬ್ರಿಟಿಷ್‌ಸರಕಾರದ ಆಡಳಿತದಲ್ಲಿ ನಾವು ಹೆಚ್ಚಾದ ಜುಲುಮನ್ನು ಅನುಭವಿಸುತ್ತಿಲ್ಲ (ದಾದಾಸ. ೨೩). **ಜುಲ್ಮೆ:** ೧. ಬರಿ ಮೈಮೇಲೆ ಬಡಿಯುವುದು, ಜುಲ್ಮೆಯಿಂದ ಸಲಾಂ ಮಾಡಲು ಹಚ್ಚುವುದು (ಕಾಂಗ್ರೆಸ. ೧೨). ೨. ಗೆದ್ದ ಬಳಿಕತ್ತಲು ಯುಧಿಷ್ಠಿರನ ಜುಲ್ಮೆಯಿಂ ಗೆದ್ದು ಮಾದ್ರೇಶ ನಿರಲ್ (ಕುರಂಗ. ೪೩-೧೬) ; ಜುಲ್ಮೆಯಿಂ ಮುತ್ತಿರ್ದ ಪಟುಭಟರು ದ್ರೋಣನಂ ಬಲ್ಮೆಯಿಂ . . . ಅಡ್ಡಗಟ್ಟಲು (ಕುರಂಗ. ४९-೦೪).

ಜುಲುಮೆ ಮಾಡು, ಜುಲುಂ ಮಾಡು = ಒತ್ತಾಯ ಮಾಡಂ ; ಬಲಾತ್ಕರಿಸು : ತಾನು ಆಗ ಚಹಕ್ಕಾಗಿ ತಾಯಿಗೆ ಹೆಚ್ಚು ಜುಲುಮೆ ಮಾಡಲಿಲ್ಲ (ಗಂಮಾಯಿ. ೦೩) ; ಜುಲುಂಮಾಡಿ ಎರಡು ತುತ್ತು ನುಂಗಿದರೆ ಮರುಕ್ಷಣದಲ್ಲೇ ವಾಂತಿಯಾಗಿಬಿಡ್ತಿತ್ತು (ಮನೋಣಂ. ೭೩).

[ ←ಅರ. ಜುಲ್ಮ್; ಹಿಂ. ಜುಲ್ಮ್ ; ಜುಲುಮ್; ಮರಾ. ಜುಲೂಮ್ ]

**ಜುಲ್ಪಿ** 'ಜಂಲಿಪೆ₁' ನೋ.

**ಜುಲ್ಪು** 'ಜಂಲಿಪೆ₁' ನೋ.

**ಜುಲ್ಮಾನೆ** 'ಜಂರ್ಮಾನೆ' ನೋ.

**ಜುಲ್ಮೆ** 'ಜಂಲುಮೆ' ನೋ.

**ಜುವ್ವಾಕೋರ** (ನಾ). ಜೂಜುಗಾರ : ಹೋಗಲಿ, ನೇರವಾಗಿ ಆದರೂ ಇದ್ದಾನಾ ? ಶುದ್ಧ ಜುವ್ವಾಕೋರ (ಮುಲ್ಲಿ. ೮೪).

[ ←ಹಿಂ. ಜುವಾಖೋರ್ ]

**ಜುವ್ವಾರೆ** (ನಾ). ಒಂದು ಬಗೆಯ ಮರ ; ಹಬ್ಬೆಮರ ; ವಂಶ್ರಿಮರ : ವೇತಸ್ವಾನ್ ಬಹುವೇತಸೇ ಬಹಳ ಮತ್ತೀಮರಗಳುಳ್ಳದ್ದು. ಪ್ರಬ್ಬಲಿಗಿಡಗಳುಳ್ಳದ್ದು. ಇದನ್ನು ಜುವ್ವಾರೇಕಾಡೆಂದು ಕೆಲವರಾರಣ್ಯಕರನ್ನುವರು (ಸಿದ್ಧಾಂತಿ. ೮೪). [ ? ]

**ಜುವ್ವಿ** (ನಾ). ಒಂದು ಬಗೆಯ ಮರ : "ಪ್ಲಕ್ಷಃ, ಜಟೀ, ಪರ್ಕಟೀ ೩ ಜುವ್ವೀಗಿಡ, ಬಸರೀಗಿಡ, ಕಬ್ಬಸರೀಗಿಡ" (ಸಿದ್ಧಾಂತಿ. ೧೦೪).

[ ದೇ.॥ ತಮಿ. ಚುವಿ ; ಮಲ. ಚುವನ್ನಾಲ್ ;
ತೆಲು. ಜುವ್ವಿ ; ಕೋಲಾ. ಜುವಿ ]

**ಜುಹು** (ನಾ). ಅರ್ಧಚಂದ್ರಾಕಾರದ ಹೋಮದಲ್ಲಿ ಬಳಸುವ ಮಂತ್ರ್ಯಗದ ಸೌಟು : "ಧ್ರುವಾ, ಉಪಭೃತ್, ಜುಹೂಃ, ಸ್ರುವಃ ೪ –ಸ್ರುಚಃ ಭೇದಾ ಸ್ರುಕ್ಸ್ರುಯೆಂಬ ಆಜ್ಯಗ್ರಹಣಪಾತ್ರದ ಆಯಾ ನಾಮಗಳು" (ಸಿದ್ಧಾಂತಿ. ೧೯೦): ವಿಹಿತಸಂಸ್ಥಾಪಿತ ಮಹಾವಳಿಗಳಿಂದೆ ಶತ ಜುಹುಗಳಿಂ ವೈಕಂಕತದ ಪಟ್ಟಿಸ್ರುಕ್ಸ್ರುವನಿವಹದಿಂದೆ (ಜೈಮಿಭಾ. ೩೩-೩೮).

[ ಸಂ. ಜುಹೂ ]

**ಜುಳಿಗೆ** 'ಜೂಳಿಗೆ' ನೋ.

**ಜುಳುಕು₁** 'ಝುಳುಕು' ನೋ.

**ಜುಳುಕು₂** (ನಾ). ಸಂದೇಹ ; ಶಂಕೆ : ಇಕ್ಕುವಾತನು ಮನದಲಿ ಅಳುಕು ಜುಳುಕಿಲ್ಲದೆ ಇಕ್ಕುವುದು (ಗಂಭಾ. ೨೬೩-೨) . [ ? ]

**ಜುಳುಜುಳು** (ನಾ). ಒಂದು ಅನುಕರಣ ಶಬ್ದ ; ನೀರು ಹರಿಯುವಾಗ ಉಂಟಾಗುವ ಶಬ್ದ : ಜುಳುಜುಳು ಹರಿಯುತ್ತಿರುವ 'ಅಗಸರ ಘಡಿ' ಯಲ್ಲಿ ನೀರಿನೊಡನೆ ಚೆಲ್ಲಾಟವಾಡುತ್ತಿದ್ದನು (ರಂಗರೋ. ೩೩).

**ಜುಱ್**, ಜುರ್, ಜುರು (ನಾ). ಒಂದು ಅನುಕರಣ ಶಬ್ದ : ಬಿಸಿನೆತ್ತರ ಜುಱ್ಱೆಂದು ಪೀರಿಯಾನಂದಿಸುತ ಪಲಿದು (ಜೀರಮು. ೪-೧೩). **ಜುರ್:** 'ಜುರ್ರನೆ' ಪರಾ. **ಜುರು:** (೬).

**ಜುಱುಜುಱ್,** ಜುರುಜುರು (ದ್ವಿರುಕ್ತಿ): ಅವಧಾನ ಚಿತ್ರದೊಳೊಂದಿ ಯಾರೋಗಿಸುತ ಜುಱುಜುಱ್ಱೆಂದು ಸುಱಿವುತ ಘಟ್ಟುಘಟ್ಟನೆ ತೇಗುತೊಲೆವುತ್ತ (ಬಸಪು. ೫೯-೧೯) ; ರಕ್ಕಸನ ರಕ್ತವ ಕುಡಿದು ಗರ್ರೆಂದು ತೇಗಿದವ ನೊಡಲಿಂದಲ್ಲಲ್ಲಿ ಜುರುಜುರ್ರನುತ ನೆತ್ತರ್ . . . ಸುರಿಯಲು (ವೀಕ್ಷಪು. ೩-೬-೩೪) ; ಬಾಯಲ್ಲಿ ಬೆಟ್ಟಟ್ಟರೂ ಜುರುಜುರು ಚೀಪುವ . . . ಪ್ರಾಣಿಯಾಗಿದ್ದ (ದೀಪಹ. II, ೦೪).

**ಜುಱಿ** 'ದುಱಿ' ನೋ.

**ಜುಱುಜುಱಿಸು** 'ದುಱುದುಱಿಸು' ನೋ.

**ಜುಱುಜುಱು** (ನಾ). ಹೊರಸೂಸುವಿಕೆ : ಕಱಿಯ ಮಾಂಸದ ಕೋಳಿ ಕೋಣನ ಮುಱಿದಲೆಯ ಪ್ರಿಸಲಿನ ರಕುತದ ಜುಱುಜುಱಿನ ದೊಂಡೆಯಲಿ ಕಲಸಿದ ಕೂಳ ಮುದ್ದೆಗಳ (ಕುಮಾರವ್ಯಾ. ೭೦೩. ಶಲಿ. ೨೮೩).

[ ? ]

**ಜೂ₁** (ನಾ). ಒಂದು ಅಳತೆಯ ಪ್ರಮಾಣ ; ಅಂಗುಲದ ಒಂದು ಭಾಗ : ಎಂಟು ಲಿಕ್ಷಾಗಳಿಂದ ಒಂದು ಜೂ, ಎಂಟು ಜೂಗಳಿಂದ ಒಂದು ಯವ (ಯವ-ಮಧ್ಯ), ಎಂಟು ಯವಗಳಿಂದ ಒಂದು ಅಂಗುಲವಾಗುತ್ತದೆ (ಜೈನಪ. ೩೦೪). [ <ಪ್ರಾ. ಜೂಆ / ಸಂ. ಯೂಕಾ ]

**ಜೂ₂** (ನಾ). ಪ್ರಾಣಿ ಸಂಗ್ರಹಾಲಯ: ಅದೊಂದು ಕಟಕಟೆಯಿಲ್ಲದ ಜೂ, ಆ ಕಾಡುಮೃಗಗಳೊಂದಿಗೆ ನಾನೊಂದು ಕಾಡುಮೃಗ (ನಾಡಿಗೇ. ೬).

[ ←ಇಂ. zoo ]

**ಜೂಂಟ,** ಜೂಟ₁ (ನಾ). ೧. ಮೋಸಗಾರ ; ವಂಚಕ : ನಿನಗಾವೆಡೆಯೊಳಮಲ್ಲದ ಜೂಂಟರಂ ನಂಟರೆಂದು ನಂಬಿ ಮೋಹಮನುಂಟು ಮಾಡಲುಂ ಧರ್ಮಮಂ ಗೆಂಟುಮಾಡಲುಂ ಬೇಡ (ಜೀವಸಂ. ೪-೧೧ ವ). **ಜೂಟ₁** : ೨. ಸುಳ್ಳು ; ಸಟೆ : (೬).

[<ಪ್ರಾ. ಜುಟ್ಟ./ಮರಾ. ಝೂಟ್ ; ಹಿಂ. ಝೂಠ್, ಝೂಠಾ ]

**ಜೂಕ** (ನಾ).[ಜ್ಯೋತಿ] ತುಲಾರಾಶಿ : ತರಣಿಸುತ ಜೂಕದಲಿ ಮೆಱೆದಿರ ಪರರ ಮನೆಗಳನುಳಿದು ಚಂದ್ರನುಯಿರಲು ಪುತ್ರೋದಯಗಳಾದವು ಭೂಪ ದಶರಥಗೆ (ತೊರಿರಾ. ೧-೬೬). [ ಸಂ. ]

**ಜೂಕರಿಸು** 'ಜುಂಗರಿಸು' ನೋ.

**ಜೂಗ₁** (ನಾ). ಒಂದು ಬಗೆಯ ಪಕ್ಷಿ: ಉರಿಗಣ್ಣ ಬೆಳ್ಳಕ್ಕಿ ಪಲಿಯಂ ಚಿಟ್ಟಿಜೂಗ ಹದ್ದೆಂಬಿವಂ ಸಾಳುವಂಗಳು ನೆಗೆದು ತಾಗಿ ಹೊಡೆಹೊಡೆದಿಳೆಯೊಳಿಕ್ಕಿದಡೆ ಹಕ್ಕಿಗಳ ಮಳೆಗಱೆಯುವಂತಾದುದು (ಹರಿಶಾ. ೩-೪೩).

[ ? ]

**ಜೂಗ್ಗ$_2$, ಜೋಗ್ಗ$_3$** (ನಾ). ಒಂದು ಬಗೆಯ ನಾಯಿ: ತರವೇಟ್ ಸಾಳುವ ವೇಗನಂ ತೊಗರನಂ ಹೆಗ್ಗಾಳನಂ ಜೂಗನಂ (ನಳಚಂ. ೬೬) : ಹಂದಿಗೆ ಸಾಳುವಂ ಮರೆಗೆ ಜಾಯಿಲನೇಣಕುಲಕ್ಕೆ ಚಂಚುವಾಲಂ ದಣಿದಿರ್ದ ಕೊಂಡಗುಱಿಗೀ ತೊಗರಂ ರುರುಸಂಕುಳಕ್ಕೆ ಜೂಗಂ ದಿಟಮಲ್ತು ಮಾರಿಯಲೆ (ದಕಳು. ೨-೦೦೯). **ಜೋಗ್ಗ$_3$:** ಸಾಳುವನ ರಘುಂಕಿಸಿ ಜೋಗನ ದಾಯ ಬಾಡುವಂ ಸಲೆ ನಿಲೆ ಕೋದು ಚಂದ್ರನ ವೊಲಕ್ಕೆಣೆಯಪ್ಪಿನ ಮಾಱಿಪೋಯ್ತು . . . ಠಕ್ಕಿನದೊಂದು ಪೆರ್ವೊಲಂ (ಸೂಕ್ತಿಸು. ೩-೨೨೨) : ಸರಳು ಕವಲಂಬುಗಳು ಬಡಿಗೋಲುರುವ ಸಾಳುವ ಡೇಗೆ ಸಿವ್ವಂಗಿಗಳು ಜೋಗಗಳಾ ಥರಥರದಿ ಒಡಿಒಡಿದು (ಅನಂರಾ. ೩-೩-೬). [ ? ]

**ಜೂಗ್ಗರ, ಜೂಗಳ** (ನಾ). ೧. ತೂಕಡಿಕೆ. 'ಜೂಗರಿಸು' ಪರಾ. ೨. ಜಡತನ ; ಆಲಸ್ಯ : ಎಚ್ಚರವಾಯಿತು. ಆದರೆ ಕಣ್ಣು ಬಿಡಲು ಜೂಗರ (ಕುರಾಯಿ. ೫೮). **ಜೂಗಳ:** ೧. 'ಜೂಗಳಿಸು' ಪರಾ. [ ? ]

**ಜೂಗರಿಸು, ಜೂಕರಿಸು, ಜೂಗಳಿಸು, ಸೂಗುರಿಸು$_2$** (ಕ್ರಿ). ೧. ತೂಕಡಿಸು : ಸರ್ವಕಾಲದಲ್ಲಿಯೂ ಜೂಗರಿಸುವ ನಿದ್ರೆಯಂ ಮಾಡುತ ಲಿರುವವು ಪಿತ್ತ ಪ್ರಕೃತಿಗಳು (ಸೌಗಂಧಿ. ೩೦೯-೦೬): ಮಿಕ್ಕೆಲ್ಲರಂತೆ ನಾನು ಹಾಯಾಗಿ ಕೊನೆಯ ಪಕ್ಷ ಆರುಘಂಟೆಯವರೆಗಾದರೂ ಜೂಗರಿಸುತ್ತ ಸುರುಟಿಕೊಂಡಿರಬಹುದಾಗಿತ್ತು (ನಿಬಂಧ. II, ೩೨೬); ನಾವಿನ್ನೂ ಹಾಸಿಗೆಯ ಮೇಲೆ ಜೂಗರಿಸುವದನ್ನು ನೋಡಿ . . . ಲಕ್ಷಣವಾಯ್ತು ಎಂದಳು (ಮುಕ್ತಿಚಾ. ೨). ೨. ನಿಧಾನವಾಗಿರು ; ಆಲಸ್ಯದಿಂದ ಕೂಡಿರು ; ಜಡತೆಯಿಂದ ಕೂಡಿರು: ಹಗಲಿನ ಕೆಲಸ ವಿಧಿಯಿಲ್ಲದೆ ಹೇಗೋ ಜೂಗರಿಸಿ ಕೊಂಡು ಸಾಗುತ್ತಿತ್ತು (ರಂಗನಾ. ೯೦); ಇವನು ಹಗಲೆಲ್ಲಾ ಜೂಗರಿಸುತಾ ಯಾವ ಕೆಲಸವನ್ನೂ ಮಾಡದೆ ಜಡನಾಗಿ ಕೂತಿರುತಿದ್ದ (ಘುಮಟ. ೩೨). **ಜೂಕರಿಸು :** ೨. ಬಂಧನಕ್ಕೆ ಬಂದಾನೆಯಂತೆ ಜೂಕರಿಸಿ (ಧರ್ಮಾಮ್ಮ. ೦-೧೬೮). **ಜೂಗಳಿಸು :** ೧. ಕಾವಲಿನ ರೋಮುಕಶತಾಧಿಪತಿ ಕುದುರೆಯಲಿ ಜೂಗಳಿಸೆ (ಗೂಢೂಥಾ. ೦೩-೩೯೫). **ಸೂಗುರಿಸು$_2$ :** ೨. ಸೂಗುರಿಸಿ ರ್ಥೊವ್ಮಿನಲಿ ಮುಂದಕೆ ಬಾಗಿ ಬಿದ್ದನು . . . ನಕುಳನು (ಕುವ್ಯಾಕ. ೪-೦೫); ತೂಗುವೊಡಲರೆಮುಚ್ಚುಗಂಗಳ ಸೂಗುರಿಸುವಂಗದಲಿ . . . ರವಿಸೂನು ಮೈಮಱೆದ (ಕುವ್ಯಾಕ. ೦೧-೩೦). [ ಜೂಗರ + – ಇಸು$_3$ ]

**ಜೂಗಳ** 'ಜೂಗರ' ನೋ.

**ಜೂಗಳಿಸು** 'ಜೂಗರಿಸು' ನೋ.

**ಜೂಗಾಡು** 'ತೂಗಾಡು' ನೋ.

**ಜೂಗಾಯಿ** (ನಾ). ಒಂದು ಬಗೆಯ ಖಾದ್ಯ,–ಭಕ್ಷ್ಯ: ಮಿಗೆ ಪಾಲೋಗರ ಬೋನವಿದ್ದಲಿಗೆಯಂ ಜೂ[ಪಾಠಾಂ. ಜೋ]ಗಾಯಿ ಪಾಲುಂಡೆ ಮಂಡಗೆ . . . ಭಕ್ಷ್ಯಚಯವಂ ತಂದಿಕ್ಕಿದರ್ಕಾಂತೆಯರ್ (ಧರ್ಮಾಪ. ೨-೫೪). [ ? ]

**ಜೂಗು** 'ತೂಂಕು$_1$' ನೋ.

**ಜೂಜಕ್ಕಿ** (ನಾ). ಒಂದು ಬಗೆಯ ಮೂಲಿಕೆ : ಜೂಜಕ್ಕಿ ಸಮೂಲವನ್ನು ಮಜ್ಜಿಗೆಯಲ್ಲಿ ತೆಗೆದುಕೊಳ್ಳೆ ಬಿಳಿದು ಹೋಗುವುದು ಮಾಣ್ಗುಂ (ವಿಶ್ವವಿ.೪). [ ? ]

**ಜೂಜಲು** (ನಾ). ಸುಕ್ಕು (?) : ಹಣೆಯ ಜೂಜಲ[ಪಾಠಾಂ. ಜೂಬಿನ] ಜೂಲುಗೂದಲ ಕಣುಗಿಡಿಯ ಕಡು ಕಾಹುರದ ಸಿಂಗಣಿಕಗಳನರ್ಬುದವ ನಶಿಬಲ ತಾರ ತೋಱಿಸಿದ (ತೊರರಾ. ೪-೭-೨೩). [ ? ]

**ಜೂಜಾಟ** 'ಜೂದಾಟ' ನೋ.

**ಜೂಜಾಟಿಕೆ** (ನಾ). = ಜೂದಾಟ : ಜೂಜಾಟಿಕೆ ಸೂಳೆಬಂಟಿಕೆ ರುಣದ ಸಂವಾಜ ಪೆರ್ಗುಡಿಗಳ ಚರ್ಚೆ ರಾಜವೀಧಿಯೊಳಿಱಿದಾಡುವ ಸಂದಣಿ ಮಾಜದು ನಿತ್ಯಕೃತ್ಯದಲಿ (ಪೋಹಚ. ೨೦-೨೬). [ ಜೂಜಾಟ (<ಜೂದಾಟ) + – ಇಕೆ ]

**ಜೂಜಾಡಿಗ** (ನಾ). ಜೂಜಂ ಆಡುವವನು ; ಜೂಜುಕೋರ : ಯುಧಿಷ್ಠಿರನು ಪುಣ್ಯಾತ್ಮನೆಂದು ಎನಿಸಿಕೊಂಡಿದ್ದರೂ ಜೂಜಾಡಿಗನಿದ್ದನು (ಶ್ರಾಚೀಹಿಂ. ೫೫). [ ಜೂಜು$_1$ (<ಜೂದು) + – ಆಡಿಗ$_2$ ]

**ಜೂಜಾಡಿಸು** (ಕ್ರಿ). ಜೂಜಾಡುವಂತೆ ಮಾಡು; ಜೂಜಾಟವನ್ನಾಡಿಸು: (*). [ ಜೂಜಾಡು (<ಜೂದಾಡು) + – ಇಸು$_3$ ]

**ಜೂಜಾಡು** 'ಜೂದಾಡು' ನೋ.

**ಜೂಜಾಳಿ** 'ಜೂದಾಳಿ' ನೋ.

**ಜೂಜಿಗ** (ನಾ). = ಜೂದುಗ : ಕಳುಗುಡಿ ಜೂಜಿಗ ಸುಂಕಿಗ (ಕರಿಕ. ೦೦೪-೦೦). [ ಜೂಜು$_1$ (<ಜೂದು) + – ಇಗ ]

**ಜೂಜು$_1$** 'ಜೂದು' ನೋ.

**ಜೂಜು$_2$** (ನಾ). ಭೀಕರನಾದವನು, ಭಯವುಂಟುಮಾಡುವವನು (?): ಮೂವಡಿ ಜೂಜು (ಬೊಂಕಶಾ. ೦೯೩೮, ಹಾನಗಲ್. ೬೩-೦೩; 1053) ; ಗಣ್ಡರ ಜೂಜು ಶ್ರೀಮತ್ ಸತ್ಯಾಶ್ರಯದೇವರ್ (ಎಇ. XIII, ೧೭೨-೩೮ : 1055) : ಮೂವಡಿ ಗಂಡರ ಜೂಜು ನಾಮಾದಿ ಸಮಸ್ತ ಪ್ರಶಸ್ತಿ ಸಹಿತ (ಎಇ. XVI, ೩೫೪-೧೪: 1068): ಎಡಱುವವರಿದೇಂ ಬರ ಸಿಡಿಲಡಸುವ × × ವಾರಿಜವನ ಚಾರಿಯ ಸೂಲಂ ಕುಡುದಾಡೆಯು ರಕ್ಕಸ ನಾಗಡುಮಾಳ್ಪಿಪ ಜೂಜು ಪಡವಳೆಱಿಗಂ ಜಗದೊಳ್ (ಎಕ. VIII. ಸಾಗರ. ೮೦-೨೨ : 1092). 'ಜೂಬು' ಪರಾ. [ ? ]

**ಜೂಜುಂಗಾಱ** 'ಜೂದುಂಗಾಱ' ನೋ.

**ಜೂಜುಕಟ್ಟು** (ಕ್ರಿ). ಪಂದ್ಯವನ್ನು ಒಡ್ಡು ; ಪಣ ಕಟ್ಟು : (*). [ ಜೂಜು$_1$ (<ಜೂದು) + ಕಟ್ಟು$_1$ ]

**ಜೂಜುಕಟ್ಟೆ** (ನಾ). ಜೂಜಾಡುವ ಸ್ಥಳ : ಪೋಲೀಸರು ಜೂಜುಕಟ್ಟೆಯ ಮೇಲೆ ಧಾಳಿ ಮಾಡಿದರು (ಕೂಥ). [ ಜೂಜು$_1$ (<ಜೂದು) + ಕಟ್ಟೆ$_1$ ]

**ಜೂಜುಕೋರ** (ನಾ). = ಜೂದುಂಗಾಱ : ಮಾರಾಟಕ್ಕೆ ಬಂದ ಮುದಿ ಕುದುರೆಯ ಹಾಗೆ ಜೂಜುಕೋರನಿಂದ ಯಾರಿಗೂ ಯಾವ ಪ್ರಯೋಜನವೂ ಇಲ್ಲ (ಭಾರದ. ೨೫). [ ಜೂಜು$_1$ (<ಜೂದು) + – ಕೋರ$_3$ ]

**ಜೂಜುಗಾರ** 'ಜೂದುಂಗಾಱ' ನೋ.

**ಜೂಜುಗಾರ್ತಿ** (ನಾ). ಜೂಜಾಡುವವಳು ; ಜೂಜಾಡುವ ಸ್ವಭಾವ ದವಳು : ಮಾಲೆಗಾರ್ತಿ, ಬಳೆಗಾರ್ತಿ, ಜೂಜುಗಾರ್ತಿ (ಶಬ್ದಾನು. ೨೦೦ ಪ್ರಯೋ). [ ಜೂಜುಗಾಱ (<ಜೂದುಂಗಾಱ) + – ತಿ$_1$ (< – ಇತ್ತಿ) ]

**ಜೂಜುಗಾಱ** 'ಜೂದುಂಗಾಱ' ನೋ.

**ಜೂಜುದೋಣಿ** (ನಾ). ಪಂದ್ಯಕ್ಕಾಗಿ ನಿರ್ಮಿಸಿದ ದೋಣಿ : ಹಡಗಿ ನಲ್ಲಿಟ್ಟಿರುವ, ಹುಟ್ಟು ಹಾಕಿಯೊ ಪಟ ಕಟ್ಟಿಯೊ ನಡಸಬಹುದಾದ (ಒಂದು ಬಗೆಯ)ಹಗುರವಾದ ಕಿರಿದು ದೋಣಿ ; (ಹುಟ್ಟು ಹಾಕಿ ನಡಸುವ) ಜೂಜು ದೋಣಿ (ಐಇ. ಇಂಕನಿ). [ ಜೂಜು$_1$ (<ಜೂದು) + ದೋಣಿ$_3$ ]

**ಜೂಟ$_1$** 'ಜೂಂಟ' ನೋ.

**ಜೂಟ$_2$** (ನಾ). ಜಡೆಗಟ್ಟಿದ ಕೂದಲು ; ಜಡೆ ; ಜಟೆ ; ಜಡೆಮುಡಿ : ಗಿರಿಶ ಚಂಚಜ್ಜಟಾಜಾಲ ಜೂಟ ವ್ಯೋಮಪ್ರೋದ್ವ್ಯಾಪಿ ಚಂದ್ರಂ ತ್ರಿಭುವನ ಜನಕಾನಂದವಂ ಮಾಡುಗೆಂದುಂ (ಕಾದಂಪೂ. ೦): ಶಿವನ ಜೂಟದ ಶಶಿಯ ಬೆಳುದಿಂಗಳಿಳಿದಂತೆ (ಚಂಡೇರ. ದೇ. ೨೪೬-೨೦) ; ವಿಯನ್ನದೀಜೂಟನಂ ಕುಱಿತು ನುತಿಗೆಯ್ದು ಮಳೆವಡೆದು ಕೆಱೆದುಂಬಿಸಿದ ಮಹಿಮ (ಪದ್ಮರಾ. ೦-೨೩). 'ಜಟಾಜೂಟ' ಪರಾ. [ ಸಂ. ]

**ಜೂಟ$_3$** 'ಜೂಟು'$_2$ ನೋ.

**ಜೂಟಬಂಧ** (ನಾ). ಜಡೆಗಳ ಕಟ್ಟು,–ರಚನೆ: ಉಪನಿಟಲ ಕುಟಿಲ ಘಟಿತ ಜೂಟಬಂಧಮುಂ . . . ಅತಿ ಸುಭಟಮದೋತ್ಕಂಠಮಿದು ಕರ್ಣಾಟಬಲಂ (ಆದಿಪು. ೧೩-೪೫ ವ). [ ಜೂಟ$_2$ + ಬಂಧ ]

**ಜೂಟಾಟ** 'ಚೊಟಾಟ' ನೋ.

**ಜೂಟು₁** (ನಾ). ಚಾತುರ್ಯ; ಚಮತ್ಕಾರ: ಚೇತನಾತ್ಮಕಿಯನಂಜಿಸು ತೊಡನೆ ಜೂಟನಿಂ ಘಾತಿಸುವೆನೆಂಬನಿತರೊಳು (ದೇವೀಪು. ೩೨). 'ಜೂಟಂ ನುಡಿ' ಪರಾ. [ದೇ.। ತೆಲು. ಜೂಟ = ಸಮರ್ಥ]

**ಜೂಟು₂, ಜೂಟ್₂** (ನಾ). ೧. ಗೋಣಿನಾರು : ಪ್ರಪಂಚದಲ್ಲಿ ಬೆಳೆಯುವ ಜೂಟಿನ ನೂರಕ್ಕೆ ೯೮ರಷ್ಟು ಭಾಗವು ಕೇವಲ ಅಖಂಡ ಹಿಂದೂಸ್ಥಾನ ದೊಳಗೆ ಬೆಳೆಯುತ್ತಿತ್ತು (ಸಸ್ಯಶಾ ೦೩೫). ೨. "ರೇಷ್ಮೆಯ ಗೂಡಿನಿಂದ ದಾರವೆಲ್ಲ ತೆಗೆದು ಸುತ್ತಿದ ಮೇಲೆ ಉಳಿಯುವ ರೇಷ್ಮೆಯ ಕಳಪೆ" (Oppadine. ಇಂಕೆನಿ). **ಜೂಟ್₂:** ೧. ಬಂಗಾಲದೇಶದಿಂದ ಎಣ್ಣೆಯ ಕಾಳೂ ಜೂಟ ಎಂಬುದೊಂದು ತರದ ನಾರೂ . . . ಇಂಗ್ಲೆಂಡಕ್ಕೆ ಹೋಗುತ್ತವೆ (ಮುಂಬಯಿ. ೪-೦೫೯); ಕಲಕತ್ತೆಯು ವಿಶ್ವದ ಜೂಟದ ದೊಡ್ಡ ಕೇಂದ್ರವು (ಅನ್ನದಾ. ೧). [←ಇಂ. Jute]

**ಜೂಟುನುಡಿ** (ನಾ). ಚಾತುರ್ಯದ ನುಡಿ; ಚಮತ್ಕಾರದಿಂದ ಕೂಡಿದ ಮಾತು : ಈ ಜೂಟುನುಡಿ ಸರಸಗಳಿವು ಮಕರಂದಾಜಿಯ ತಂತ್ರವೆಂದ ಱಿದು ಆ ಜಾಣ್ಮೆಗರಸ ಮೆಚ್ಚಿದನು (ಭರತ. ೯-೩೦). [ಜೂಟು₁ + ನುಡಿ₂]

**ಜೂಟುರೇಷ್ಮೆ** (ನಾ). "ಸಣ್ಣ ಎಳೆಯ ನೂಲು ಬೆರಕೆಯ,–ಕಳಪೆ ರೇಷ್ಮೆ" (Spun-silk. ಇಂಕೆನಿ). [ಜೂಟು₂ + ರೇಷ್ಮೆ (<ರೇಶ್ಮೆ)]

**ಜೂಡಿ** 'ಜೋಡಿ₂' ನೋ.

**ಜೂಡಿದಾರ** 'ಜೋಡಿದಾರ₂' ನೋ.

**ಜೂಡೆ** (ನಾ). ಸಮೂಹ; ಗೊಂಚಲು : ಹಾಲ್ಮಕ್ಕೀ ಒಕ್ಕಲಿಗರು . . . ಹೆಂಗಸರು . . . ಕರಿಮಣಿಯ ಸರಗಳ ಜೂಡೆಗಳಿಂದ ಯೆದೆಯನ್ನು ಮುಚ್ಚಿ ಕೊಳ್ಳುವರು (ಕಥಾಗಿ. ೧೩೪); ಹೆಂಗಸರು ಹಾಲ್ಮಕ್ಕೀ ಒಕ್ಕಲಿಗರಂತೆ ಕೊರಳಲ್ಲಿ ಕರಿಮಣಿಗಳ ಜೂಡೆಗಳನ್ನು ಹಾಕಿಕೊಳ್ಳುವರು (ಕಥಾಗಿ. ೧೫೦). [←ಮರಾ. ಜುಡಾ, ಜುಡೀ]

**ಜೂತಿ₁** (ನಾ). ೧. ಶೀಘ್ರತೆ; ತ್ವರೆ. ೨. ವೇಗ; ರಭಸ.೩. ಉದ್ವೇಗ; ಆವೇಗ : ಮತಿ ಮನೀಷಾ ಜೂತಿ (ದುಃಖಸ್ವಭಾವ) . . . ಈ ಹದಿನಾರು ಮನಸ್ಸಿನ ವಿಕಾರಗಳೆಂದಿರುವವು (ಅಮೃತ. ೬-೨೬ ಟೀಕು). [ಸಂ.]

**ಜೂತಿ₂** (ನಾ). ಚಪ್ಪಲಿ; ಪಾದರಕ್ಷೆ : ಜಾತೀ ಬಾಯಲ್ಲಿ ಜೂತಿ ಅಂದರೆ ಅಳಿಗೆ ಒಂದು ದುಡ್ಡು ತೂಕ (ಗಾದೆ). [←ಹಿಂ. ಜೂತೀ, ಜೂತಾ]

**ಜೂದ** 'ಜೂದು' ನೋ.

**ಜೂದಾಟ, ಜೂಜಾಟ** (ನಾ). ಜೂಜಿನ ಆಟ; ಜದ್ದಿನ ಆಟ; ಜೂಜಾಟಿಕೆ. 'ಜೂದಾಡು' ಪರಾ. **ಜೂಜಾಟ:** 'ಜೂಜಾಟಿಕೆ' ಪರಾ. [ಜೂದು + ಆಟ]

**ಜೂದಾಡು, ಜೂಜಾಡು** (ಕ್ರಿ). ಜೂಜನ್ನು ಆಡು; ದ್ಯೂತವನ್ನು ಆಡು: ವರಸೇನನೆಂಬೊಂ ಜೂದಾಡಿ ಯಕ್ಷಧೂರ್ತನೆಂಬೊಂಗೆ ಸಾಸಿರ ದೀನಾ ರಮಂ ಸೋಲ್ತು (ವಡ್ಡಾರಾ. ೦೪-೪); ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯಂ ಕೊಟ್ಟು (ಪಂಪಭಾ. ೭-೦೮); ಧರ್ಮಪುತ್ರಂ ಜೂದಾಡಿ ಮೇದಿನಿಯಂ ಸೋಲ್ತು (ಪಂಪಭಾ. ೨೦೮-೦೦); ಜೂದಾಡಿ ಸೋಲ್ತುದಂ ತಾಂ ಸೌಧರ್ಮಿಕೆ ಬಗೆಯದಿರ್ಪುದು (ಬಂಪಿರಾ. ೦೦-೨೪). **ಜೂಜಾಡು:** ಅರಿಗಳೊಳು ಕಾದಿ ಜೂಜಾಡಿ ಸೋಲದೆ (ಹರಿಶಾ. ೦೦-೦೨); ಎಲವೊ ಕೌರವ ಹಿಂದೆ ವಂಚಿಸಿ ಕಳವಿನಲಿ ಜೂಜಾಡಿ ರಾಜ್ಯವ ಗೆಲಿದ ಗರ್ವವನುಗುಳು (ಕುಮಾರವ್ಯಾ. ೦೦-೪೯); ಪಾಂಡವರ ಸಂಗಡ ಕೌರವರು ಪಗಡೆ ಆಟದ ಜೂಜಾಡಿದರು (ನೀತಿಚಿಂ. I, ೧೦). [ಜೂದು + ಆಡು₁]

**ಜೂದಾಳಿ, ಜೂಜಾಳಿ** (ನಾ). ಜೂಜಾಡುವ ಪ್ರವೃತ್ತಿಯುಳ್ಳವನು,– ಸ್ವಭಾವದವನು : "ಜೂದಾಳಿ ದ್ಯೂತಶೀಲಂ" (ಕರ್ಣಾನಿ. ೫೦) : ಶಾಸ್ತ್ರ ಕುಶಲಂ ಜೂದಾಳಿ ಬೆಲ್ಲಂ ನಿಕುಂಚಿತಕೇಶಂ (ಜಾತಕ. ೦೭-೩); ನೀಚಂ ಜೂದಾಳಿ ಕರಂ ನೀಚಂ ಮಾತಾಳಿ ಕರೆಯೆ ಸಿಗ್ಗಾಳಿಯಿಪುವರ್ (ಶಬ್ದಾವ. ೩೫೩); ಅನಂತರ ಜೂದಾಳಿಯು ಅರ್ಚಕನಿಲ್ಲದಿರುವುದಂ ಕಂಡು (ಮುದಮೋ. ೯೨). **ಜೂಜಾಳಿ:** ಬಾಲಕಿಯ ಬೇಳಂಬವನು ಜೂಜಾಳಿಗಳ ಜಪ್ಪಾರ ತನವನು ಕೇಳಿ ಬೈದುದು ಸೇನೆ(ಕುಮಾರವ್ಯಾ.ಸ. ೦೬-೦). [ಜೂದು + –ಆಳಿ₂]

**ಜೂದು, ಜೂಜು₁, ಜೂದ** (ನಾ). ದ್ಯೂತ; ಪಣವನ್ನಿಟ್ಟು ಆಡುವ ಆಟ; ಪಂದ್ಯವನ್ನು ಒಡ್ಡಿ ಆಡುವ ಆಟ; ಪಂಥದ ಆಟ: "ಜೂದೆಂದುಂ ದ್ಯೂತನಾಮಂ" (ಕರ್ಣಾನಿ. ೫೦) : ದಾಯಿಗಂಗೆ ನೆಲಂ ಜೂದಿನೊಳೊತ್ತೆ ಪೋಗೆ (ಪಂಪಭಾ. ೮-೫); ಗುರುವನಿದಿರಿಪುದೆ ನಿಜಪ್ರಭುತೆ ಜೂದು ವಿನೋದಂ ಕಳ್ಳುಡಿಪುದೆ ವಿಲಾಸಂ (ಕಾದಂಪೂ. ೫೭೭); ನಾರಿಕೇಳ ಫಲವ ಕಟ್ಟಿ ತೂಗಿ ಬೀಳಲಿಱಿದು ಕೊಲುವಂತೆ ತೆಂಗಿನಕಾಯ ಹೋಳ ಮಾಡಿದರು ಜೂದಿನಲಿ (ಮೋಹತ. ೨೦-೨೨). **ಜೂಜು₁:** ನಗರಾಭ್ಯಂತರ ದೇವತಾ ಭವನದೊಳ್ ಚೌವಟ್ಟದೊಳ್ ಬೀದಿಬೀದಿಗಳೊಳ್ ಜೂಜಿನ ದಿಂಡೆಯೊಳ್ . . . ನೀತಿಗೆಟ್ಟಾಡುವರ್ (ಸುಕುಮಾ. ೨-೭); ಜೂಜುಂ ಬೇಂಟೆಯುಂ ಕಳ್ಳುಂ . . . ಕಳವುಮೆಂಬ ಸಪ್ತವ್ಯಸನಂಗಳಂ ಪೊರ್ದದಿರ್ಪುದುಂ (ಧರ್ಮಾಮೃ. ೫-೧೨೫); ಜೂಜಿನ ವೇಧೆಯುಂಟು ಜಾಗರದ ಬಲವಿಲ್ಲ ಆಗಳೂ ಗೆಲುಂಟೆ ಪ್ರಾಣಪದತನಕ (ಆದಿಪು. ೧೨೮-೫೮೩) : ಜೇಯವೆನಿಸಿದ ಜೂಜಿನಲಿ ರಣಜೇಯನಹನೀ ಕೌರವನು (ಕುಮಾರವ್ಯಾ.ಶ. ೩-೩೦). **ಜೂದ:** ಜೂದದಲಿ ಬಹುದುಷ್ಪಸಂಗದಿ ವಾದವಿದ್ಯೆ ಕುತರ್ಕ ಪರರಪವಾದ ಕಥನ . . . ಬೀದಿ ವರಿದರ್ಶಿಯಲಿ ಕೇಳ್ವುದು ಮೇದಿನೀಜನ (ಕೌಶಿರಾ. ೦-೭).

**ಜೂದ ಕಟ್ಟು=ಜೂದನಿಕ್ಕು:** ಕೆಲಬರು ಕೃಷ್ಣನೆಂಬರು ಕೃಷ್ಣನಲ್ಲೆಂದು ಕೆಲಬರು ಜೂದ ಕಟ್ಟುವರು (ಮೋಹತ.೦೩-೨೨). **ಜೂದನಿಕ್ಕು=ಪಣವಿಡು;** ಪಂದ್ಯವನ್ನೊಡ್ಡು : ಎನಿತಾನುಮಂದದಿಂ ಜೂದನಿಕ್ಕಿಯುಂ ದ್ರುಪದ ಸುತೆಯನಟೆ'ದುಯ್ಯೆಯುಮಿಂತಿನಿತೊಂದಾದುದು (ಪಂಪಭಾ. ೭-೨೦). [<ಪ್ರಾ. ಜೂಅ. / ಸಂ. ದ್ಯೂತ]

**ಜೂದುಂಗಾಱ, ಜೂಜಂಗಾಱ, ಜೂಜುಗಾರ, ಜೂಜುಗಾಱ, ಜೂದು ಗಾರ, ಜೂದುಗಾಱ** (ನಾ). ಜೂಜಾಡುವವನು ; ಜೂದಾಳಿ: ಎಱ್ ಬರಗೊಂಡ ಜೂದುಂಗಾಱನವೊಲ್ ಲಗ್ಗೆ ಮಾಡಲೊಲ್ಲದೆ (ಅನಂಪು. ೦೨-೨೭) : ಓದುಂಗಾಱಂ, ಜೂದುಂಗಾಱಂ (ಶಮದ. ೨೦೦ ಪ್ರಯೋ) : ಪಾಡುಂಗಾಱಂ,ಜೂದುಂಗಾಱಂ(ಶಬ್ದಾನು.೩೯೪ ಪ್ರಯೋ). **ಜೂಜುಂಗಾಱ:** ಕಳೆದ ಪಲ್ಗಳ ಕವಡೆಯ ಗುಪ್ಪೆಯ ಮಾಡಿ . . . ಆಡುವಜೂಜುಂಗಾಱ ಮರುಳ್ಗಳ ಬಳಗವಲ್ಲಲ್ಲಿಯೊಪ್ಪಿದುದು (ನೇಮಿಸಂ. ೮-೯೩): ನೀಂ ಕಾಮಿ ಸಂಸಾರಿ ಭೂಪನುಗ್ಗಡದ ಜೂಜುಂಗಾಱ ನರಲೋಕಚರ (ವೀರಪು. ೮-೫-೩೦). **ಜೂಜುಗಾರ :** ಅಲ್ಲಿ ಕುಡುಕರು, ಜೂಜುಗಾರರು, ಕಳ್ಳರು ಎಲ್ಲರೂ ಇದ್ದರು (ದಾಅಳ. ೦೫೨) ; ನಾನು ಜೂಜುಗಾರನಾಗಿದ್ದರೂ ನನ್ನ ಪತ್ನಿಯು ನನ್ನ ಮೇಲೆ ಕೋಪಗೊಳ್ಳಲಿಲ್ಲ (ಋಗ್ವಾ.ರ. ೩೦೪). **ಜೂಜು ಗಾಱ :** "ದ್ಯೂತಕರನೆನೆ ಕಿತವನೆನೆ ಜೂಜುಗಾಱ" (ಮಂಗರಾ. ೬೨-೨೪) : ಜೂಜುಗಾಱನ ಮಾತು . . . ಓಡಿನೊಳಗೆ ಅಗೆಯ ಹೊಯ್ದಂತೆ (ಬಸವ. ೬೩೪); ಚವಳರ್ ಚೋರರು ಜೂಜುಗಾಱರು ವಿಟರ್ ತಾರಾ ಶ್ರೇಷ್ಠ ರೆಂದೆನ್ನುವರ್ (ಸೋಮೇಶ. ೫೯) : ಪರಮೇಶ್ವರಂ ಜೂಜಂಗಾಱನ ವಾಟ್ಕೆಯಿಂ ನಡೆತಂದು (ಉದ್ಭಟ. ೧೨-೯೩): ಜೂಜುಗಾಱರ ಕುಲ ಶಿರೋಮಣಿ ತಾನೆಯೆಂದನು ಶಕುನಿ ಕೌರವಗೆ (ಕುಮಾರವ್ಯಾ.ಸ. ೦೨-೦೮) : ಬಿಸಿನೀರ ಕೇಣಿಗರ್ ಜೂಜುಗಾಱರ್ ಮುಖ್ಯರೊದಗಿ ಬರುತಿರ್ದರು (ಕಬಪು. ೪೭-೪೦). **ಜೂದುಗಾರ:** "ಜೂದುಗಾರ–ದ್ಯೂತಕಾರ" (ಕರ್ಣಕೋ. ೦೫). **ಜೂದುಗಾಱ:** "ಕಿತವಃ, ದ್ಯೂತಕಾರಃ – ಈ ೨ ಜೂದುಗಾಱಂ" (ಹಲಾಯು. ೩೪-೨೩೪). [ಜೂದು + –ಕಾಱ]

**ಜೂದುಗ** (ನಾ). = ಜೂದುಂಗಾಱ : ಪಾಡುಗಂ, ಜೂದುಗಂ (ಶಬ್ದಾನು. ೩೮೪ ಪ್ರಯೋ). [ ಜೂದು + – ಗ$_2$ ]

**ಜೂದುಗಾರ** 'ಜೂದುಂಗಾಱ' ನೋ.

**ಜೂದುಗಾಳೆಗ** (ನಾ). ಜೂಜು ಕಟ್ಟಿ ಆಡಿಸುವ ಕಾಳಗ,–ಪಂದ್ಯ : ಮಿಕ್ಕ ಪೊಟ್ಟಂ ಕೋೞಿ ತಗರ್ಗಳ ಜೂದುಗಾಳೆಗದೊಳ್ ಕಳೆದು (ಚಿಕವಂ. ೬–೧೬). [ ಜೂದು + ಕಾಳೆಗ ]

**ಜೂದುಗಾಱ** 'ಜೂದುಂಗಾಱ' ನೋ.

**ಜೂದುಜಾಣ** (ನಾ). ಜೂಜಿನಲ್ಲಿ ಜಾಣ; ದ್ಯೂತಪ್ರವೀಣ : ಜೂದಿನೊಳ್ ಜಾಣಂ ಜೂದುಜಾಣಂ (ಶಬ್ದಾನು. ೩೦೫ ಪ್ರಯೋ).
[ ಜೂದು + ಜಾಣ ]

**ಜೂದುಬೆಸನಿ**(ನಾ).ಯಾವಾಗಲೂ ಜೂಜಿನಲ್ಲಿ ಕಾಲ ಕಳೆಯುವವನು: ಜೂದುಬೆಸನಿ ನೀನಾತನೀಶ್ವರಾರ್ಚನವ್ಯಸನಿ ಸಂಸಾರಿ ನೀನು ಅಲಘುತರ ಸಂಸ್ಕೃತಿ ವಿರಕ್ತನಾತಂ ನಿಜಂ (ಪಾಸೋಕು. ೭–೬೬).
[ ಜೂದು + ಬೆಸನಿ ]

**ಜೂದೋಡು** (ನಾ). ಜೂಜಿನಲ್ಲಿ ಓಡುವಂಥದು ; ಜೂಜಿನ ಕುದುರೆ: ಉಚ್ಚೈಃಶ್ರವಸ್ಸನ್ನು ಜೂದೋಡುಗಳ ಹೊರಸಾಲಿಂದ ಪಟ್ಟದಕುದುರೆಯ ಮನ್ನುರಕ್ಕೆ ಏರಿಸಿ ಮುದ್ರಿಸಬಾರದಾಗಿದ್ದಿತು (ಚಿಟ್ಟಿಅ. ೧೯೦–೩).
[ ಜೂದು + ಓಡು$_1$ ]

**ಜೂಪರ** 'ತೂಪರು' ನೋ.

**ಜೂಬ$_1$** 'ಜೂಬು' ನೋ.

**ಜೂಬ$_2$** (ನಾ). ಒಂದು ಬಗೆಯ ವಾಹನ (?): ಜೂಬಂಗಳಗ್ಗದ ಪ್ರಯಾಣ ಪ್ರಕಾರದಿಂದ ಭೃತ್ರಸಂದೋಹ ಸ್ಯಂದನಗಳಿಂದುಱೆ ಗುರಾಬಂಗಳತ್ಕಂತ ಘೋ ೯ ಟ ಕ ಗ ಳಿ ೦ . . . ಓಲೈಸಲು (ಮದೇಕು. ೦–೨೨); "ತುಂತುರು" (ಮದೇಕು. ಕೋಟ). [ ? ]

**ಜೂಬು**, ಜೂಬ$_1$, ಜೂಭು (ನಾ). ೧. ಪಿಶಾಚಿ; ದೆವ್ವ; ಸೈತಾನ: (+). ೨. ಹೆದರಿಕೆಯನ್ನು ಹುಟ್ಟಿಸುವಂತಹದು ; ಭಯಾನಕವಾದುದು: ಒಂದಕ್ಕಂಜುವೆ ಒಂದಕ್ಕಳುಕುವೆ ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ (ಬಸವ. ೪೪೬) ; ಅಸುರರ ಶಿರೋಮಾಲೆಯ ಕೊರಳಲ್ಲಿ ಉರದಲ್ಲಿ ಹಾರವಾಗಿ ಧರಿಸಿ ಜಗಕ್ಕೆ ಜೂಬಾಗಿಪ್ಪಲ್ಲಿ ಶಂಕೆಯಿಲ್ಲದೆ ನಿ ಶ್ಶಂ ಕ ನೆಂ ಬ ಗಣೇಶ್ವರನಾಗಿರ್ದನು (ಚನ್ನಬ. ಕ. ೯–೦೪) ; ಯಮನನಳಿಕಿಪ ಜೂಬು ಯಮಮೃಗದ ಬೇಸ್ತಾರವಮಮ ಯಮಹರಿಣಿಗಿಕ್ಕಿದ ಬೆಚ್ಚದು (ಸಾಹಿಂಚ. ೧–೪೨).' ೩. ಹೆದರಿಕೆಯನ್ನು ಹುಟ್ಟಿಸುವವನು : ಚೋಳನ ಜೂಬು ಮಾಳವನ ಗೌಳನ ಗೋಳ್ಸುರಿ (ಎಕ. VII, ಶಿವಮೊ. ೮೭–೮ : 1246) : ಗಾಯಿಗೋವಾಳ ಗಣ್ಣಾಪೆಣ್ಣಾರ ಮಣ್ಣಳಿಕ ಜೂಬು ಸೋ ೯ ಮ ಯ ದಣ್ಣಾಯಕರಳಿಯ (ಎಕ. XIV, ಮಂಡ್ಯ. ೩೦–೨೬ ; 1261). **ಜೂಬ$_1$** : ೩. ಮಾಳವರಾಯರಾಜ್ಯವಭನಂ ಮಲೆವಾಳ ಮಹೀಸ ಜೂಬ (ಕೂಲ್ಡಾ.ಶಾ. ೧೮–೦೫ : 1236) : ಗೋತ್ರಪವಿತ್ರಮಂ ಮಂಡಳಿಕಜೂಬಂ ಗಾಯಗೋವಳಂ ಗಂಡಪೆಂಡಾರಂ ಸ್ವಾಮಿವಂಚಕರ ಗಂಡಂ (ಎಕ. XI, ದಾವಣ. ೩೬–೮೩ : 1268). **ಜೂಭು** : ೧. ನಮ್ಮ ಪ್ರಾಣಕ್ಕೆ ಬಂದಡೆ ಬರ್ಕೆ ಭವಿ ದೊರೆಯ ನೆಮ್ಮಿ ಕುವರಿಯ ಕೊಟ್ಟಡಂ ಮಹದೇವನತಿಹೆಮ್ಮೆಯಿಂ ಹಕ್ಕಳಿಪ ಜೂಭ ನರಕದೊಳು ಬೀಳಿಸುವನೆನಲ್ (ಪ್ರಭುಕು. ೮–೫೬).

**ಜೂಬು ಮಾಡು** = ಹೆದರಿಕೆಯನ್ನುಂಟುಮಾಡು; ಹೆದರಿಸು: ತನಗೆ ಮಗುಟ್ಟುಮಾತ್ರ ಪರಿವೃಢಪ್ರತಾಪಮನತಿಶಯಿಸಿ ಜೂಬುಮಾಟ್ಟ ಚರನಂ ಜ್ವಳನಜಟ ಕಟಾಕ್ಷಿಸಿ (ವರ್ಧಕು. ೭–೫೭ ವ).

**ಜೂಭು** 'ಜೂಬು' ನೋ.

**ಜೂರತ್** 'ಜೂರತ್ತು' ನೋ.

**ಜೂರತ್ತು**, ಜೂರತ್ (ನಾ). ಸಾಹಸ; ಧೈರ್ಯ; ಕೆಚ್ಚು : ಆ ಬಡಕಲಗೆ ಎಲ್ಲಿ ಬಂತು ಜೂರತ್ತು, ಶಕ್ತಿ ಬೇಸಾಕೆ ? (ಮುಳಮ. ೫೭೫). **ಜೂರತ್** : ಮುಖ್ಯವಾಗಿ ಪೋಲಿಸ್‌ಆಫೀಸರಿಗೆ ಇರಬೇಕಾದ ' ಜೂರತ್ ' ಅಷ್ಟೇನೂ ಇರಲಿಲ್ಲ (ಕಲಿಸ. ೨೦೬). [ ←ಅರ. ಜುರಅತ್ ]

**ಜೂರಿ** 'ಜುರ್ರಿ$_2$' ನೋ.

**ಜೂರ್ತಿ** (ನಾ). ೧. ಜ್ವರ : "ಜ್ವರಃ, ಜೂರ್ತಿಃ ೨ ಜ್ವರವು, ಅಜೀರ್ಣದಿಂದ ಮೈ ಬಿಸಿಯಾಗುವಿಕೆ" (ಸಿದ್ಧಾಂತಿ. ೩೦೬). ೨. ಆತಂಕ ; ಕ್ಲೇಶ : ವಾಚಸ್ಪತಿಪ್ರಣುತವಾಗ್ವಿಲಾಸಸ್ಫೂರ್ತಿಶಮಿತಸಂಸಾರಜೂರ್ತಿ (ಪದ್ಮರಾ. ೯–೨೭) : ಜೂರ್ತಿವಿರಹಿತನೇ ಜೋ ಮಾಯಾವಿದೂರ ಜೋ (ಬಶಿಚಂ. ೩೦–೩೯) ; ಜೂರ್ತಿ ಹಱೆವುದು ಜ್ಞಾನಸ್ವಾರ್ಥ ಕೈಸಾರುಗು ಯಥಾರ್ಥ ಚಿತ್ತ್ರಭುವರನ ಕೃತಿಗೇಳಲು (ಪ್ರಭುಕು. ೨–೬) ; ಕಾರುಣ್ಯರಸ ಪೂರ್ತಿಯವಧೂತಭವಜೂರ್ತಿ (ಗುರುಚಾ. ೫–೧); ಆ ಪುರದ ಸತ್ಕೀರ್ತಿ ಸೂರ್ಯನಂದನಜೂರ್ತಿ ಆ ಪುರದ ಸುವಿಲಾಸ ರಸಿಕ ಜನಕಾವಾಸವೆನಿಸಿ ರಾಜಿಸುತಿರ್ಪುದು (ಬಕೋಕು. ೩–೬೬). [ ಸಂ. ]

**ಜೂಲ** 'ಜೂಲು$_2$' ನೋ.

**ಜೂಲು$_1$** (ನಾ). ೧. ಕುದುರೆ, ನಾಯಿ ಮುಂತಾದ ಪ್ರಾಣಿಗಳ ಕುತ್ತಿಗೆಯ ಮೇಲಿನ ಕೂದಲು; ಅಯಾಲು. 'ಜೂಲ್ನಾಯಿ' ಪರಾ. ೨. ಉದ್ದವಾದ ಕೂದಲು. 'ಜೂಲುಗೂದಲು' ಪರಾ. ೩. ಹರಿದು ಹೋದ ಬಟ್ಟೆ; ಚಿಂದಿ. 'ಜೂಲುಬಟ್ಟೆ' ಪರಾ.
[ ದೇ.೫ ತಮಿ. ಚುವಲ್ ; ತೆಲು.ಜೂಲು ]

**ಜೂಲು$_2$**, ಜೂಲ, ಜೋಲಿ$_2$, ಝೂಲ, ಝೂಲು (ನಾ). (ಆನೆ, ಕುದುರೆ ಮುಂತಾದ ಪ್ರಾಣಿಗಳ ಮೈಮೇಲೆ) ಅಲಂಕಾರಕ್ಕಾಗಿ ಹೊದಿಸುವ ಬಟ್ಟೆ,–ಹೊದಿಕೆ ; ಸಬರ: ಮೇಲುತರದ ಪಟ್ಟೆ ಪರಸೂಪು ಸಕಲಾತಿ ಜೂಲುಗಳಿಂದೆ ರಂಜಿಸುವ . . . ಕಿರಾತರು ಸಾಲಿಟ್ಟು ನಡೆದರಗ್ಗಿನಲಿ (ಮೋಹತ. ೧೯–೧೧) : ಆನೆಗೆ ಹಳದೀ ಬನಾತಿನ ಬಬ್ರೀ ಜೂಲುರೇಶ್ಮೆ ಜಾಲರು ಸಹ ೧ (ಎಕ. XIV, ನಂಜನ. ೨೯೨–೪೦ : 1847). **ಜೂಲ** : ನಾಲನು ಬಡಿಸದ ಜೂಲವ ಹೊದಿಸದ (ಕ ಪ ಕು. ೧–೫೦). **ಜೋಲಿ$_2$** : ಕಟ್ಟಿದ ಮೊಗದ ಮಾಸರಣ ಬೆಪ್ಪೊಳಗಳವಟ್ಟು ಪಟ್ಟೆಯ ಜೋಲಿಯಸೆಯೆ . . . ಕುದುರೆಗಳು ಎಯ್ದಂದುವಾಗ (ಪ್ರಭಂಜ. ೨–೧೨೪): ರನ್ನದ ಗಗ್ಗರ ಬಣ್ಣ ಬಗೆಯ ಜೋಲಿ ಹೊನ್ನ ಹೂವೆಸೆವ ಬಾಸಿಗದಿ ಮನ್ನೆಯರೊಡೆಯನ ತೇಜಿಯಿದ್ದುವು (ಭರತ.೨೦–೫೦). **ಝೂಲ**: ಝೂಲ ಹಾಕಿದ ಮೂವತ್ತು ಎತ್ತಿನ ಜೋಡಿಯ ಬಂಡಿಯನ್ನು ಸಿದ್ಧಗೊಳಿಸಿದ್ದ (ಸಮುಜೀ. ೧೨೩೫). **ಝೂಲು** : ಮದ್ದಾನೆಗಳಿಗೆ ಕನಕಾಭರಣಗಳಿಂದಲೂ ಝೂಲುಗಳಿಂದಲೂ ಅಲಂಕಾರ ಮಾಡಿ (ಕೃವಾವಿ. ೫೭) : ಎತ್ತುಗಳನ್ನು ಝೂಲು ಗೆಜ್ಜೆಗಳಿಂದ ಸಿಂಗರಿಸಿದ್ದರು (ಅಹೋಕ. ೨೦೨).
[ ←ಹಿಂ. ಝೂಲ್, ಝೂಲೀ ; ಮರಾ. ಝೂಲಾ ]

**ಜೂಲು$_3$** (ನಾ). ಆಫ್ರಿಕದ ಒಂದು ಜನಾಂಗ ಮತ್ತು ಆ ಜನಾಂಗಕ್ಕೆ ಸೇರಿದ ವ್ಯಕ್ತಿ : ಆಫ್ರಿಕದ ಜೂಲುವೂ ಯುದ್ಧಕ್ಕೆ ಹೋಗುವ ಮೊದಲು ನ ರ್ತಿ ಸು ವ ನು (ಬಾಂಪ್ರ. II, ೯೧೭) ; ಅವನು ನಿಜಕ್ಕೂ ಫ್ರೆಂಚ್ ನಾಗರಿಕನೆ ? ಅವನೊಬ್ಬ ಜೂಲು (ಪುನರು. ೨೫೨). [ ← ಇಂ. Zulu ]

**ಜೂಲುಕೂದಲು** 'ಜೂಲುಗೂದಲು' ನೋ.

**ಜೂಲುಗೂದಲು**, ಜೂಲುಕೂದಲು (ನಾ). ಉದ್ದವಾದ ಕೂದಲು: ಹಣೆಯ ಜೂಟಿನ ಜೂಲುಗೂದಲ ಕಣುಗಿಡಿಯ ಕಡುಕಾಹುರದ ಸಿಂಗಣಿಕಗಳನರ್ಬುದವನತಿಬಲ ತಾರ ತೋಱೆಸಿದ (ತೊರವೆ. ೪–೭–೨೩). **ಜೂಲುಕೂದಲು** : ಅದರ ಮೈತುಂಬ ಜೂಲುಕೂದಲಿದೆ (ಬಾಂಪ್ರ. III, ೦೪೪೨).
[ ಜೂಲು$_1$ + ಕೂದಲು (<ಕೂಂದಲ್) ]

**ಜೂಲುನಾಯಿ** 'ಜೂಲ್ನಾಯ್' ನೋ.

**ಜೂಲುಬಟ್ಟೆ** (ನಾ). ಹರಿದು ಹೋದ ಬಟ್ಟೆ ; ಚಿಂದಿ ಚಿಂದಿಯಾದ ಬಟ್ಟೆ; ಎಳೆ ಬಿಟ್ಟು ಹೋಗಿರುವ ಬಟ್ಟೆ: ಸುಧಾಮನು ಹರಕು ಬಟ್ಟೆಯನ್ನುಟ್ಟು ಜೂಲುಬಟ್ಟೆಯನ್ನು ಹೊದ್ದು ಬಡತನದಿಂದ ಬಹು ಕಷ್ಟಪಡುತ್ತಿದ್ದನು (ನೀತಿಚಿಂ. VIII, ೨೮). [ ಜೂಲು$_1$ + ಬಟ್ಟೆ$_2$ ]

**ಜೂಲ್ನಾಯ್, ಜೂಲುನಾಯಿ, ಜೂಲ್ನಾಯಿ** (ನಾ). ಮೈಮೇಲೆ ಉದ್ದವಾದ ಕೂದಲನ್ನುಳ್ಳ ಒಂದು ಬಗೆಯ ನಾಯಿ : ಕೆಲಸಾರ್ ಪೋಗದಿರಿತ್ತ ಬಾ ತುಡುಕದಿರ್ ಜೂಲ್ನಾಯ್ಗಳಂ ಬಿಟ್ಟು (ನಳಚಂ. ೬೫). **ಜೂಲುನಾಯಿ:** ಜೂಲುನಾಯಿಗೆ ಉದ್ದಕೂದಲು ಇರುವವು (ಮುಂಬಯಿ. ೩-೩೯); ಹೆಣ್ಣುಮುದುಕನನೆಳೆವ ಜೂಲುನಾಯಿ (ಶಿಕಾರಿ.೬೯-೧೦);ಜೂಲುನಾಯಿ ರೂಬಿಯು ಬಾಗಿಲಲ್ಲಿ ಕಾಣಿಸಿಕೊಂಡಿತು (ಸಾವಿಸ. ೨೧). **ಜೂಲ್ನಾಯಿ:** ಮೇಲ್ಮಿಕವ ಹಿಡಿವ ಜೂಲ್ನಾಯಿಗಳ ತರಿಸು (ರಾವಣ. ೨೮).

[ ಜೂಲು$_1$ + ನಾಯ್ ]

**ಜೂಲ್ನಾಯಿ** 'ಜೂಲ್ನಾಯ್' ನೋ.

**ಜೂವ** (ನಾ). ಒಂದು ದುರ್ಗದ ಹೆಸರು (?): ಸಂಧ ಜಳದುರ್ಗ್ಗಂ ಜೂವವುಂ ಕೊಣ್ಡು ಗಣ್ಡಗುಣಕ್ಕಾಸ್ಪದಮಾದ ಚೆಟ್ಟಿಗನಿವಂ ಗೋವಿನ್ದ ದಣ್ಡಾಧಿಪ (ಸೌಇಇ. XX, ೮೬-೯೩ ; ?). [ ? ]

**ಜೂಳಯ** 'ಚೂಳೆಯ' ನೋ.

**ಜೂಳಿ, ಜೂಳೆ, ಜೋಳಿ$_4$** (ನಾ). (ಮುಚ್ಚಳವನ್ನುಳ್ಳ) ಪಾತ್ರೆಯ ಅಥವಾ ಗಿಂಡಿಯ ಸೊಂಡಿಲಿನಾಕಾರದ ಕೊಳವೆ,–ನಳಿಕೆ : ಒಂಭತ್ತು ಜೂಳಿಯ ತಣ್ಣೀರ ಕಣಿಕೆಯಂ ಹೊತ್ತು ತಿತ್ತಿಗೆ ನೀರ ಕಾಣದ (ಗುಪ್ತಮಂ. ೧೩-೧೮೭) : ಕಾರ್ಪಣ್ಯದಿಂ ನುಡಿಯಲ್ಕಾ ನುಡಿಗಂಜಿ ಶಾನರರೆ ಕಾರುಣ್ಯಕರಂ ಜೂಳಿಯಿಂ ಕುಡಿದಂ (ಹಂಪಾಶ. ೬೭); ಗಿಂಡಿಯ ಬಾಯೊಳಗೆ ಹೊಕ್ಕು ಜೂಳಿಯೊಳು ಹೊಱಡುವೆನೆಂಬ ಮಾಯಾವಿ (ಚೀರಮ. ೨-೧೦) : ತನ್ನ ಶಿಷ್ಯಂ ಕೆಡುವನೆಂದು ಜೂಳಿಗೆ ಮೊಗವನಿಟ್ಟು (ವೀಶೈಪು. ೩-೧೪-೦೨) : ಸೂಳೆಯ ತುಟಿ ಶುದ್ಧ ಏಳ್ಗೆಯಿಂ ಹರಿವ ಜಲ ಶುದ್ಧ ಸಗ್ಗಳೆಯ ಜೂಳಿ ತಾ ಶುದ್ಧ (ಸರ್ವಜ್ಞ. ೧೯೦೮). **ಜೂಳೆ :** ತುಂಬುವ ಘಟವೊಂದು ಸೂಸುವ ಜೂಳೆ ಬೇಱಾದಂತೆ (ಚಡೊಮ್ಮ. ೨೩೮-೬೭). **ಜೋಳಿ$_4$ :** ಅಱಿದು ವಾಮನ ವಿಪ್ರನುದಕವೀ ಜೋಳಿಯಿಂ ಪೊಱಮಡದೆನುತ್ತ (ವೀಶೈಪು. ೩-೧೪-೦೩). [ ? ]

**ಜೂಳಿಗಿಂಡಿ** (ನಾ). ಸೊಂಡಿಲಿನಾಕಾರದ ನಳಿಗೆಯನ್ನುಳ್ಳ ಗಿಂಡಿ ; ಜೂಳಿಯ ಗಿಂಡಿ : ತಿಳಿ – ನೈವರ್ಗಲ್ಕೇ, ಜ್ಞಾನಪ್ರಸನ್ನಭಾವಯೋಃ ಕಾಂಜಿಕೇ[ಪಾಠಾಂ. ಚಷಕೇ] ಚ ಜೂಳಿಗಿಂಡಿ (ಕಮಧಾ. ನ. ಅ೭೮).

[ ಜೂಳಿ + ಗಿಂಡಿ ]

**ಜೂಳಿಗೆ, ಜುಳಿಗೆ** (ನಾ). = ಜೂಳಿ : ಕಂದಲೊಳಗಣ ಹಾಲು ಜೂಳಿಗೆಯೆರಡು ಬಹುದೆನಲು . . . ಕೊಂದುಕೊಂಡಿರಿ ನಿಮ್ಮನೇ ನೀವೆಂದ ನಸುರಾರಿ (ನಿಭಾಗ. ೧೦-೬೩-೯). **ಜುಳಿಗೆ:** ತೆರೆ ತಳಿರಡೆಯೊಳಿರ್ದ ಮಾವಿನ ತೋರತನಿವಣ್ಣ ಗಿಳಿ ಕರ್ದುಂಕಿದೊಡೆ ರಸಮೊಸರಿ ಸೋರ್ವಂತೆ ಹೆಂಗಳ ಕರತಳದ ಪೊಂಗಳಸದ ಜುಳಿಗೆಯೊಳಿಟ್ಟ ಬೆರಳಂ ತೆಗೆದು ಬಿಡಲ್ಕೆ . . . ಕೆಂಪಿಡಿದ ಜಳಧಾರೆ ಕಂಗೊಳಿಸುತಿರ್ಪುದು (ಕೃಮಿಥಾ. ೩-೧೧).

[ <ಜೂಳಿ ]

**ಜೂಳೆ** 'ಜೂಳಿ' ನೋ.

**ಜೂಳೆಯ** 'ಚೂಳೆಯ' ನೋ.

**ಜೃಂಭ** (ನಾ). ೧. ಆಕಳಿಕೆ ; ಆಗುಳಿಕೆ : "ಜೃಂಭಃ, ಜೃಂಭಣಂ – ಈ ೨ ಆಗುಳಿಕೆಯ ಪೆಸರು" (ನಾಚಿರಾ. ೯೮). ೨. (ಹೂವಿನಂತೆ) ಅರಳುವಿಕೆ. ೩. ಊದುವಿಕೆ. ೪. ವಿಸ್ತಾರಗೊಳ್ಳುವಿಕೆ; ಹೆಚ್ಚುವಿಕೆ. [ ಸಂ. ]

**ಜೃಂಭಕ** (ನಾ). ೧. (ನಿದ್ದೆಯನ್ನುಂಟುಮಾಡುವ) ಒಂದು ಬಗೆಯ ಮಂತ್ರಾಸ್ತ್ರ : ಇವು ಜೃಂಭಕಾದಿ ಮಂತ್ರಾಸ್ತ್ರಗಳು (ಉತ್ತರಾ. ೮). ೨. ಶಕ್ತಿ ಮಂತ್ರಗಳಲ್ಲಿ ಒಂದು : ಜೃಂಭಕ ಪ್ರಸ್ವಾಪನ ಅಪ್ರತಿಹತ ನಿಶ್ಶೇಷೀಕರಣ ಜೀವಗ್ರಾಹಗಳೆಂಬ ಪಂಚಶಕ್ತಿ ಮಂತ್ರಂಗಳಂ (ವಿವೇಕ. ೪೧).

[ ಸಂ. ]

**ಜೃಂಭಕಾಸ್ತ್ರ** (ನಾ). ಒಂದು ಬಗೆಯ ದಿವ್ಯಾಸ್ತ್ರ : ನೆರೆ ಸಂಪಾದಿಸಿದರ್ ಮಹಾಮಹಿಮೆಯುಳ್ಳೀ ಜೃಂಭಕಾಸ್ತ್ರಂಗಳಂ (ಉರಾಚ. ೦೨-೧೩).

[ ಜೃಂಭಕ + ಅಸ್ತ್ರ ]

**ಜೃಂಭಣ** (ನಾ). ೧. ಆಗುಳಿಕೆ: ಅನಾಲಸ್ಯನೆಂಬೆಂ ನಾಸ್ತಿಕ್ಯ ದೈನ್ಯ ನಿದ್ರಾದಿ ನಿರೀಕ್ಷಣ ಜೃಂಭಣ ವಿವರ್ಜಿತಂ (ಚಾವುಂಪು. ೬). ೨. ಹಿಗ್ಗುವಿಕೆ ; ಹೆಚ್ಚಾಗುವಿಕೆ. 'ಜೃಂಭಿಸು' ಪರಾ. [ ಸಂ. ]

**ಜೃಂಭಾಸ್ತ್ರ** (ನಾ). = ಜೃಂಭಕಾಸ್ತ್ರ : ಜೃಂಭಾಸ್ತ್ರದಿನಸೆ ಸೈನ್ಯಂ ಸ್ತಂಭಿಸೆ (ಆಗವಿ. ೧೩-೩೪). [ ಸಂ. ]

**ಜೃಂಭಿತ** (ಗು). ೧. ಹೆಚ್ಚಾದ ; ಅಧಿಕವಾದ : ಸಂಭಿನ್ನಮಹಾಮತಿಗಳ್ ಗಂಭೀರನಿಗೋದದೊಳ್ ತಮೋಮಯದೊಳ್ ದುಃಖಾಂಭೋಧಿಯ ಕಡೆಗಾಣದೆ ಜೃಂಭಿತ ದುಷ್ಕರ್ಮದಿಂದೆ ನಮೆದಪರಿನ್ನುಂ (ಆದಿಪು. ೫-೬೬). ೨. ಅರಳಿದ ; ವಿಕಸಿತ. (ನಾ). ೩. ಆಕಳಿಕೆ : ಗುರು ಕಂಪ ನಿನಗೇಕೆ ಬಲಭೇದಿ ಜೃಂಭಿತವು (ಧ್ಯಾಕೋ. ೯೯) . [ ಸಂ. ]

**ಜೃಂಭಿನಿ** (ನಾ). ಒಂದು ಬಗೆಯ ಚೋರವಿದ್ಯೆ ; ಪ್ರತ್ಯಕ್ಷವಾಗುವ ಮತ್ತು ಮಾಯವಾಗುವ ವಿದ್ಯೆ : ವಿದ್ಯುಚ್ಚೋರನೆಂಬೊಂ ಕಳ್ಳನಾತಂ ಜೃಂಭಿನಿ ಸ್ತಂಭಿನಿ ಮೋಹಿನಿ . . . ಘುಟಕಾಂಜನಮೆಂದಿವು ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನಂ ಕುಶಲಂ (ವಡ್ಡಾರಾ.೦೨೨-೧೬).

[ <ಸಂ. ಜೃಂಭಿಣೀ ]

**ಜೃಂಭಿಸು** (ಕ್ರಿ). ಅತಿಶಯವಾಗು; ವಿಜೃಂಭಿಸು: ಕಾಳಗದೊಳು ಬೊಮ್ಮ ಜಟ್ಟಿಗ ಬೀರ ಭೇತಾಳ ಶಾಕಿನಿ ಡಾಕಿನಿಯರ ತೂಳದೆ ಹೊಯ್ದಾಡಿ ಜೃಂಭಿಸಿ ಗಗನಾಂತರಾಳದಿ ಬೊಬ್ಬಿಕ್ಕುತಿಹರು (ಮೋಹತ. ೨೯-೧೦).

[ ಜೃಂಭಣ + – ಇಸು$_3$ ]

**ಜೃಂಭೆ** (ನಾ). ಆಗುಳಿಕೆ. [ ಸಂ. ಜೃಂಭಾ ]

**ಜೃಂಭೆಗೆಯ್** (ಕ್ರಿ). ಆಕಳಿಸು : ನೀಳ್ದಾಲಾನೆಗಳಂದು ಸೊಪ್ಪಳಿಸದಾ ಶಬ್ದಂಗಳಂ ಕೇಳುತಂ ಬೀಳ್ಕೇಡಂ ಪಡೆಯಲ್ ಸಮಂತುಳಿದ ಸಿಂಹಂ ಜೃಂಭೆಗೆಯ್ಯುತ್ತಿರಲ್ (ಹಾಲಾಸ್ಯ. ೩-೮-೯). [ ಜೃಂಭೆ + ಕೆಯ್$_1$ ]

**ಜೆಂಗು** 'ಜಂಗು$_2$' ನೋ.

**ಜೆಂಗೆಜ್ಜೆ** (ನಾ). ಯಕ್ಷಗಾನದಲ್ಲಿ ಬರುವ ರಾಜ ಅಥವಾ ರಾಕ್ಷಸಾದಿ ವೇಷಧಾರಿಗಳು ಮೊಳಕಾಲಿನ ಬಳಿ ಕಟ್ಟುವ ಗೆಜ್ಜೆ : ಜೆಂಗು (ಚೆಂಗು) ಅಥವಾ (ಜೆಂಗೆಜ್ಜೆ) ರಾಜವೇಷ, ರಾಕ್ಷಸವೇಷಾದಿಗಳೆಲ್ಲ ಮೊಣಕಾಲ ಮುಂಗಡೆಗೆ ಕಟ್ಟುವ ಒಂದು ಬಗೆಯ ಗೆಜ್ಜೆ (ಪಾರ್ತಿಸು. ೪೭)

[ ಜೆಂಗು (<ಜಂಗು$_2$) + ಗೆಜ್ಜೆ$_1$ ]

**ಜೆಂದ್‌ಅವಸ್ತ** (ನಾ). ಜೆಂದ್ ಎಂಬ ಭಾಷೆಯಲ್ಲಿ ರಚಿತವಾಗಿರುವ ಪಾರಸಿಜನರ ಅತ್ಯಂತ ಪ್ರಾಚೀನವಾದ ಧರ್ಮಗ್ರಂಥ : ಇವರು ಖೊರಾನನ್ನು ಜೆಂದ್‌ಅವಸ್ತವನ್ನು ಒಪ್ಪಿ ಅರಿತರು (ಹೊಂಗಳು. VI, ೬೮೩).

[ ←ಪಾರ. ಜಂದ್‌ಅವಸ್ತ ]

**ಜೆಂಬಾಳಿ** (ನಾ). ಜೋಳದ ಬೆಳೆಯನ್ನು ನಾಶಮಾಡುವ ಒಂದು ಬಗೆಯ ಹಸಿರು ಬಣ್ಣದ ಹುಳು,–ಕೀಟ : (ಕ). [ ? ]

**ಜೆಂಬುದೀವಿ** (ನಾ). ಜಂಬೂದ್ವೀಪ : ಈ ಜೆಂಬುದೀವಿಯೊಳ್ ತೆಂಕಲ್ಗೆ ಅಲ್ಲಿಗಲ್ಲಿಗೆ ಸಂಚರಿಪ ಕೇರಳಿಯರ ತಳಿರಡಿಯ ಲೆಪ್ಪದಲತಿಗೆವೊನ್ನಿಂ ಕೊರ್ವಿ ಬೆಳೆದ ಕೆಯ್ದೊಲನಿಂ (ರಾಮಾಶ್ವ. ೭೪-೧೪). [ <ಸಂ. ಜಂಬೂದ್ವೀಪ ]

**ಜಿಕರ್ಮದ** (ನಾ). ಒಂದು ಬಗೆಯ ಮೂಲಿಕೆ : ಯವಚಿತ್ರ, ಜಿಕರ್ಮದ ಈ ಎರಡನ್ನು ಜೇನುತುಪ್ಪದಲ್ಲಿ ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿವ್ಯವಿ. ೩೩). [ ? ]

**ಜಿಚ್ಚು** ‘ಚಚ್ಚು$_1$’ ನೋ.

**ಜಿಝ್ಝಾರ** ‘ಜುಜ್ಝಾರ’ ನೋ.

**ಜಿಟಿಗ** ‘ಜಟ್ಟಿಂಗ’ ನೋ.

**ಜಿಟ್ಟಿ** ‘ಜಟ್ಟಿ$_1$’ ನೋ.

**ಜಿಟ್ಟಿಂಗ** ‘ಜಟ್ಟಿಂಗ’ ನೋ.

**ಜಿಟ್ಟಿಕೋಟಿ** (ನಾ). ಪಂದ್ಯದ ಕೋಳಿ ; ಕಾಳಿಗಮಾಡುವುದಕ್ಕೆ ತರಬೇತಾದ ಕೋಳಿ : ಜಿಟ್ಟಿಕೋಟಿಗಳ ಮೇಲೆ ತವ್ಮ ವಿದ್ಯೆಗಳಂ ಸಂಕ್ರಮಿಸಿದರ್ (ಜಾವುಂಕು. ೨೨೪). [ಜಿಟ್ಟಿ$_1$ (<ಜಟ್ಟಿ$_1$)+ಕೋಟಿ$_1$ ]

**ಜಿಟ್ಟಿಗ** ‘ಜಟ್ಟಿಗ$_1$’ ನೋ.

**ಜಿಟ್ಟಿದೆಱಿ** (ನಾ). ಒಂದು ಬಗೆಯ ತೆರಿಗೆ : ಮುಕುಡಿದೆಱಿ ಜಿಟ್ಟಿದೆಱಿ ಕೂನೆದೆಱಿ . . . ಯಲ್ಲವನೂ ಕೊಟ್ಟರು (ಎಕ. VI, ಕಡೂರು. ೪೯-೯೨ ; 1291). [ ಜಿಟ್ಟಿ$_1$ (<ಜಟ್ಟಿ$_1$) + ತೆಱಿ$_3$ ]

**ಜಿಟ್ಟಿಶರ್ಮ** (ನಾ). ಒಬ್ಬಾತನ ಹೆಸರು : ಸರ್ವ್ವಶಮ್ಮಣ ಪುತ್ರ ಜಿಟ್ಟಿಶಮ್ಮ್ಮಂ (ಇಕ. VII, ೪೨-೨೬ ; 668). [ ಜಿಟ್ಟಿ ? + ಶರ್ಮ ]

**ಜಿಟ್ಟಿ, ಜೇಟಿ, ಜೇಷ್ಟ್ರಿ, ಜೇಷ್ಟ** (ನಾ). = ಜ್ಯೇಷ್ಠ : ಜ್ಯೇಷ್ಠಾ – ಜಿಟ್ಟಿ ; ಸೃಷ್ಟಿ – ಸುಟ್ಟಿ (ಶಬ್ದಾನು. ೦೬೦ ಪ್ರಯೋ). ಜೇಟಿ: ಷಕಾರಕ್ಕೆ ಅದ್ವಿತ್ವಟಕಾರಂ – ಜ್ಯೇಷ್ಠಾ – ಜೇಟಿ (ಶಮದ.೨೮೩ ಪ್ರಯೋ). ಜೇಷ್ಟ್ರಿ : "ಜೇಷ್ಟ್ರಿ ಜೇಷ್ಟ್ರಯೊಳ್" (ಕಕರ. ೪೦) ಜೇಷ್ಟ : ಮೇಲಿನ ‘ಕಶರ ಳಳ’ರ ಪ್ರಯೋಗವನ್ನು ನೋಡಿ. [ <ಸಂ. ಜ್ಯೇಷ್ಠಾ ]

**ಜಿಟ್ಟಿಮುಗೊಳ್** (ನಾ). ಒಂದು ಪ್ರದೇಶದ ಹೆಸರು: ಪುತ್ರೂರಾ ಜಿಟ್ಟಿಮುಗೊಳುತ್ತಿಟ್ಟು ಪುತ್ರೂರಕ್ಕಾಣಗೆ ಅಯ್ಯೂಂಬು ಕಟನಿಯಂ . . . ಕೊಟ್ಟರ್ (ಎಕ. X, ಕೋಲಾರ. ೨೨೯-೪ ; 750). [ ? ]

**ಜಿಡೆ** ‘ಜಡೆ$_1$’ ನೋ.

**ಜಿಡೆಕಳ್ಳಿ** ‘ಜಡೆಗಳ್ಳಿ’ ನೋ.

**ಜಿಡೆಗಟ್ಟು$_1$** ‘ಜಡೆಗಟ್ಟು$_1$’ ನೋ.

**ಜಿಡೆಗಟ್ಟು$_2$** ‘ಜಡೆಗಟ್ಟು$_2$’ ನೋ.

**ಜಿಡೆಗೊಳ್** ‘ಜಡೆಗೊಳ್’ ನೋ.

**ಜಿಡೆದಲೆ** ‘ಜಡೆದಲೆ’ ನೋ.

**ಜಿಡೆದುಱುಗಲ್** ‘ಜಡೆದಂಱುಗಲ್’ ನೋ.

**ಜಿಡೆದೆರೆ** (ನಾ). ಒಂದು ಬಗೆಯ ತೆರಿಗೆ : ಜೋಲಕಾರುಣ್ಯ ಜಿಡೆದೆರೆ ೯ ವ ೩ ೫ ಬಟ್ಟೆಯಧಂ ೧ಕ್ಕಂ ಗ ೨ ಎತ್ತಿಲು ಪೊತ್ತರ ಪ ೫ (ಎಕ. XVI, ಚಿಕ್ಕನಾ. ೬೦-೨೦ ; 1330). [ ಜಿಡೆ? + ತೆರೆ$_2$ (<ತೆಱಿ$_3$) ]

**ಜಿಡೆವುಡಿ** ‘ಜಡೆವಂಡಿ’ ನೋ.

**ಜಿಡ್ಡು** ‘ದಡ್ಡು$_1$’ ನೋ.

**ಜಿಡ್ಡುಗಟ್ಟು** ‘ದಡ್ಡುಗಟ್ಟು’ ನೋ.

**ಜಿಡ್ಡುಬೆತ್ತ** (ನಾ). ಒಂದು ಬಗೆಯ ಸಸ್ಯ : ಜಿಡ್ಡುಬೆತ್ತ, ಕುಮಂಬೆತ್ತ (ಪ್ರಸ್ತ್ರಕಿಗ. ೦೫-೨೯೦). [ ಜಿಡ್ಡು ? + ಬೆತ್ತ ]

**ಜಿಪ್ಪು** ‘ಜರ್ವು$_1$’ ನೋ.

**ಜಿರ್ಕು$_1$** ‘ಜರ್ಕು’ ನೋ.

**ಜಿರ್ಕು$_2$** ‘ಜಕ್ಕು’ ನೋ.

**ಜಿರ್ಕು$_3$** (ನಾ). ಪತನ (?) : ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೊರ್ಕುಂ ಜಿರ್ಕುಂ ನಿಮ್ಮವರ ತರಣದ ನೆಲೆಯಂ ಪೇಟವೆ! (ರಾಮಾಶ್ವ. ೦೦೨-೦೯). [ ? ]

**ಜಿಲಕೊಂಜೋಳ** (ನಾ). ಒಂದು ಬಗೆಯ ಜೋಳ : ಪಟ್ಟಣಸಾಳಿ . . . ಜಿಲಕೊಂಜೋಳ ಈ ಎಂಟು ಜಾತಿಗಳನ್ನು ಮುಖ್ಯ ಪೈರುಗಳಾಗಿ (ಕಥಾಗ. ೨೬೦). [ ? + ಜೋಳ ]

**ಜಿಲ್ಲನೆ** (ಅ). ಜಿಲ್ಲೆಂದು ; ರಭಸದಿಂದ ಕೂಡಿ : (*). [ಜಿಲ್$_n$ + – ಅನೆ$_1$]

**ಜಿಲ್ಲಿ$_1$** ‘ಜಲ್ಲಿ$_2$’ ನೋ.

**ಜಿಲ್ಲಿ$_2$** ‘ಜಲ್ಲಿ$_3$’ ನೋ.

**ಜಿಲ್ಲಿ$_3$** ‘ಜಲ್ಲಿ$_4$’ ನೋ.

**ಜಿವಳಿ** ‘ಜಳವೆ’ ನೋ.

**ಜಿಳುಗೂರ್** (ನಾ). ಒಂದು ಊರಿನ ಹೆಸರು : ಸೇನ್ದ್ರಕ ಮಹಾರಾಜನ್ರಾಯಖರ್ಣ್ಣಮಂ ಜಿಳುಗೂರಾಳ್ಗೆಯಾನಾಳುತ್ತು, ಕಾನ್ದರ್ಲೊರಧಿಕಾರಿಗಳಾಗೆ (ಎಕ. VII, ಶಿಕಾರಿ. ೧೫೪-೪ : 685). [ ? + ಊರ್ ]

**ಜಿಟಿ** (ನಾ). (?) : ಮಟಿ, ವೊಟಿ, ಕಟಿ . . . ಜಿಟಿ [ಶಾಕಾಂ. ಚಿಟಿ] ಕಟತ್ರಿ, ಬಾಟತ್ರಿ . . . ಇತಿ ಅವಗಟಾಯಾದಯಃ (ಶಬ್ದಾನು. ೧೯೦ ವ್ಯಾಖ್ಯಾ). [ ? ]

**ಜೇ$_1$** ‘ಜೈ’ ನೋ.

**ಜೇ$_2$** (ನಾ). ಬಿಲ್ಲಿನ ಹಗ್ಗ ; ಹೆದೆ : "ಜೇ – ಜ್ಯಾ=ಹೆದೆ" (ಕರ್ನ್ನಕೋ. ೦೫) : ಜೇಯನೇಱಿಸಿ ಬಿಲ್ಲಜೇಯ ಹರಿಸೂನು ಸಹಸಾಯುತಿಕೆಯಿಂದೆ ನಿಜಸಾಯಕವನುಗಿಯುತಡಹಾಯಿದಂ (ಕೃಮಿಥಾ. ೦೨-೨೮). [<ಸಂ. ಜ್ಯಾ]

**ಜೇಂಕರ** (ನಾ). ಪ್ರಶಂಸೆ ; ಹೊಗಳಿಕೆ ; ಸ್ತುತಿ. ‘ಜೇಂಕರಿಸು’ ಪರಾ. [ ? ]

**ಜೇಂಕರಿಸು** (ಕ್ರಿ). ಹೊಗಳು; ಪ್ರಶಂಸಿಸು; ಕೊಂಡಾಡು: "ಜೇಂಕರಿಸು– ಪ್ರಶಂಸಾಯಾಂ (ಕೊಂಡಾಡು)" (ಕಮಥಾ): ಕಾವಗುಣಂಗಳೆ ಸಾಜವೆಂದು ಕೇಳ್ದಗ್ರ್ಗದೆಗೊಣ್ಡು ಜೇಂಕರಿಸೆ (ಎಕ. VII, ಶಿವಮೊ. ೦೦-೪೧ : 1085) : ಪಿರಿದುತ್ಸವದಿಂದುಱಿ ಜೇ ಂ ಕ ರಿ ಸೆ ಬುಧರ್ನಾಚ್ಚಿ ಮೆಚ್ಚಿ ಬಣ್ಣಿಸೆ (ಧರ್ಮಾಮೃ. ೩-೨೫). [ ಜೇಂಕರ + – ಇಸು$_3$ ]

**ಜೇಂಕಾರ** (ನಾ). = ಝುಂಕಾರ. [ <ಸಂ. ಝುಂಕಾರ ]

**ಜೇಂಗುಟ್ಟು** (ಕ್ರಿ). ಝೇಂಕಾರಮಾಡು (?) : ದಣದ ಜೀವದ ಪ್ಯಾಲಿ ಜೇನಿನ ಸುರಿಮಳಿ ಜೇಂಗುಟಿ ಹನಿಹನಿ ಇಳಿದಾಂಗ (ಸಖೀಗೀ. ೪೬-೪). [ ಜೇನ್$_0$ + ಕುಟ್ಟು$_1$ ]

**ಜೇಂಗೊಡ** ‘ಜೇನ್ಗೊಡ’ ನೋ.

**ಜೇಂಜರಿ** (ನಾ). ಜೇನುತುಪ್ಪದ ಧಾರೆ : ಪೊಚ್ಚ ಪೊಸ ಜೇನ್ಗೊಡನಂ ಪಿಟಿವಂದು ಸೋರ್ವ ಜೇಂಜರಿ (ಚಿಕವಿ. ೪-೦೦೬). [ ಜೇನ್$_1$ + ಸರಿ$_2$ ]

**ಜೇಂಬನಿ** (ನಾ). ಜೇನುತುಪ್ಪದ ಹನಿ; ಜೇನುಹನಿ: ಜೇಂಬನಿಯನ್ನು ಪಟಲಗಳಲ್ಲಿ ತುಂಬಿಸಿ (ನಾಡೋಜ. ೩೪೮). [ ಜೇನ್$_1$ + ಪನಿ$_2$ ]

**ಜೇಂಬಾಲು** (ನಾ). ಜೇನು ಬೆರಸಿದ ಹಾಲು ; ಹಾಲ್ಜೇನು : ಆರೋಗಿಸು ನನ್ನ ಚಿಣ್ಣಾ, ನಿನ್ನ ಮೆಚ್ಚಿನ ಜೇಂಬಾಲು (ಬಿಟ್ಟಿಷ. ೯೨-೨೩). [ ಜೇನ್$_1$ + ಪಾಲು$_1$ (<ಪಾಲ್$_1$) ]

**ಜೇಂಬುಳು** ‘ಜೇಂಬುಟು’ ನೋ.

**ಜೇಂಬುಟು, ಜೇಂಬುಳು, ಜೇನುಂಬುಳು, ಜೇನುಹುಳು** (ನಾ). ಹೂವಿನ ರಸವನ್ನು ಹೀರಿ ಜೇನುಮಾಡಿ ಕೂಡಿಡುವ ಒಂದು ಬಗೆಯ ಹುಳು; ಜೇನ್ನೊಣ: ಮುಸುಱಿತು ಕೋಂಟೆಯಂ ಮುಸಗಿ ಜೇಂಬುಟುಗಳ್ ಪೊಸವುಟ್ಟಿಯಂತೆ (ಚಿಕವಿ. ೨-೧೦೬). ಜೇಂಬುಳು : ಲಕ್ಕಲಕ್ಕದಲಿ ಕಿಕ್ಕಿರಿದಿರೆ ಜೇಂಬುಳು ಮೇಣ್ ದುಂಬಿ (ಕೋಗಿಲೆ. ೮೬-೨೦). ಜೇನುಂಬುಳು: ಹೂವಿನ ಮರದಲಿ ಜೇನುಂಬುಳುಗಳು ಮೊರೆವುದು ರಾಜನ ಭಯದಿಂದಲ್ಲ (ಪಾ ೦ ಚ ಜ. ೩೬-೩). ಜೇನುಹುಳು : ಜೇನುಹಲ್ಲೆಗೆ ಜೇನುಹುಳು ಕವಿಯುವಂದದಲಿ (ಅಗ್ನಿಹಂ. ೮೦-೨೮). [ ಜೇನ್$_1$ + ಪುಟು$_1$ ]

**ಜೇಂಬೊರೆ** (ನಾ). ಜೇನಿನ ಗೂಡು : ಅ ವರ್ಣನಾದಿಗಳಿಂದ ಪುಷ್ಟವಾಗಿ ಪಾಕವಡೆದ ಕಾವ್ಯವೆಂದರೆ ಜೇಂಬೊರೆಯಂತೆ ರಸನಿಷ್ಯಂದಿಯಾಗಿರ ಬೇಕು (ನಾಡೂಜ. ೩೬೩). [ ಜೇನ್$_1$ + ಪೊರ್ೆ$_4$ ]

**ಜೇಕಿರ** (ನಾ). ಒಂದು ಬಗೆಯ ವಾದ್ಯ (?): ಪಳವದ ತಿವಳಿಯ ಜುಂಕದ ವೊಳಸಿನ ಜೇಕಿರದ ಸಿವಿರ ಸಿಪ್ಪಿನ ಲಯದಿಂದೆಬಲದೆ ಕುಣಿದರ್ (ಅಜಿಪು. ೫-೩೨). 'ಜಿಂಕರ' ಪಠಾ. [ ? ]

**ಜೇಕು** 'ಗೇಕು' ನೋ.

**ಜೇಗ** (ನಾ). (?) : ಅಲ್ಲಿಯ ಸಿದ್ಧಾಯವುಂ[ಜೇ]ಗ ಮೂಲೋಪಭೋಗಿ . . . ಗಣ್ಣಾಯ್ಯ ಜೇಗಮಂ (ಇಎ. ೧೯೯೭, ಕರೀಂನ. ೦೭೨-೬೨; ೯೬೬). [?]

**ಜೇಗಂಟೆ**, ಜಗ್ಗುಟೆ, ಜಾಂಗಟೆ, ಜಾಗಂಟೆ, ಜಾಗಟ, ಜಾಗಟೆ, ಜೇಗಟ, ಜೇಗಟೆ, ಜೇಗಳೆ, ಜೇಘಂಟೆ, ಝಾಂಗಟೆ, ಝಾಗಟೆ (ನಾ). (ದೇವಸ್ಥಾನಗಳಲ್ಲಿ ಬಾರಿಸುವ) ಒಂದು ಬಗೆಯ ವರ್ತುಲಾಕಾರದ ಲೋಹವಾದ್ಯ: (೬). **ಜಗ್ಗುಟೆ:** ಜಗ್ಗುಟೆ ಜರ್ಝರಿಗಳಿಂ ಕುಂಭ ಕುಕ್ಕುಟಾದಾರ್ದಳುಂಬವಾಗಿರೆ ಗಿರಿನಿತಂಬದೊಳು ರಾಕ್ಷಸರು ನೆರೆದಿರ್ದರು (ಕುಮುರಾ. ೬-೫೬). **ಜಾಂಗಟೆ:** ಗಂಟೆ ಜಾಂಗಟೆ ಮೊದಲಾದುವನ್ನು ಬಾರಿಸಿ (ಕನ್ನಡಾ. ೦೬೦) ; ಇನ್ನು ಮುನ್ನೂಕೋಟಿ ಜಾಂಗಟೆಯ ಬಡಿದಿಹವು (ನಲಮು.೦೯-೯). **ಜಾಗಂಟೆ:** ಮದ್ದಳೆ ಜಾಗಂಟೆ[ಪಾಠಾಂ. ಜಾಗಂಟ, ಜಾಗಟ] ತಾಳ ದಂಡಿಗೆ ಭೇರಿ ತದ್ವಿಮಿದಿಮಿಕೆಂದು ರಭಸಗಳು (ಪುರಂದ. ೪-೪-೦). **ಜಾಗಟ:** ಜಾಗಟ[ಪಾಠಾಂ. ಜೇಗಟ]ದೊಳಗಣ ಧ್ವನಿ ಜಾಗಟ[ಪಾಠಾಂ. ಜೇಗಟ]ವ ನುಂಗಿತ್ತು (ಮೋಳಮಾ. ೨೦೨-೬೬೬). **ಜಾಗಟೆ:** ನಿನ್ನ ನೆರೆಮನೆಯವರ ಭಾಗ್ಯಮಂ ಪಂಟಿ ಕೊಡುವೆನೆಂದು ಒಂದು ಜಾಗಟೆ [ಪಾಠಾಂ. ಜಯಘಂಟೆ]ಯಂ ಕೊಟ್ಟನದಂ ನೀನೇನಾದೊಡದಾಗಲಿಯೆಂದು ಬಾರಿಸಿಯಾಕ್ಷಣದೊಳೆ ಬಕ್ಕರ್ಮವುದರರ್ಧಂ ನೆರೆಮನೆಯವರ್ಗೆ ಬರ್ಕುರ್ (ಧರ್ಮಪ. ೪-೦೩ ವ): ಘುಡಿಘುಡಿಪ ಹೆಗ್ಗಾಳೆ ಮೊಳಗುವ ಬೆಡಗು ಜಾಗಟೆ ಬೊಬ್ಬೆಯಲಿ ಜಗ ನಡುಗೆ ಗಜಪುರದಿಂದ ಬಂದರು ವಯಣಗತಿಗಳಲಿ (ಕುಮ್ಯಾವಿ. ಓರಿ೩. ೪-೦೮) ; ಈ ಶ್ರೀರಂಗಪಟ್ಟಣಕಳವಡದ ಪುರ ಶ್ರಿಜಗದ ನೆಲದೊಳಗಿಲ್ಲೆಂದು ಗಡಿಯಾರ ಜಾಗಟೆಯುಲಿವುದು ಗೋಪುರದೊಳಗೆ (ಕಂಠವಿ. ೬-೧೧೩) ; ಪೂರ್ವದಿಶಾನಾಥ ಸಂಮುದದಿ ಡಂಗುರಿಸಲೆತ್ತಿದ ವೆಳ್ಳಿ ಜಾಗಟೆಯ ಮಾಳ್ಕೆಯಿಂ ಸಸಿಬಿಂಬಮುದಯಿಸಿದುದು (ನಂದಿಮಾ. ೦೯-೦೬) ; ಗಂಟೆ ಜಾಗಟೆಗಳಿಂ ಬಡಿದು ಕುತ್ತಿಗೆ ಹಿಡಿದು ಕಡಲಡಿಗೆ ತಳ್ಳಿರೈ (ಪಾಂಚಜ. ೩೯-೯). **ಜೇಗಟ:** ಜೇಗಟ[ಪಾಠಾಂ. ಜಾಗಟ]ದೊಳಗಣ ಧ್ವನಿ ಆ ಜೇಗಟ [ಪಾಠಾಂ. ಜಾಗಟ]ವ ನುಂಗಿತ್ತು (ಮೋಳಮಾ. ೨೦೨-೬೬೬). **ಜೇಗಟೆ:** "ಡಿಂಡಿಮಃ, ಜೇಗಟೆಯ ಪೆಸರು" (ನಾಚಿರಾ. ೯೬) ; ತನ್ನ ದಶಶತಕರದಿ ಗಗನವೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಯಲೆಂದಂದು ನಿಂದಿರ್ದನೋ (ಸಿದ್ಧರಾ. ೨-೮) : ವೀರರಿಂ ಪೊಡೆವ ಜೇಗಟೆಯಿಂ (ರಕಳು. ೮-೧೧೨) : ಭಟರು ಸೂಡುತ ಬಾಸಿಂಗ ಡೌಡೆ ಜೇಗಟೆ ದನಿಮಾಡಿಸು ತೈದಿದರ್ (ಮೋಹತ. ೩೩-೩೪); ಜೇಗಟೆ ಮೊಳಗಿತು (ಸವತಿ. ೨). **ಜೇಗಳೆ:** ಮಸಣೋಜಂಗೆ ಧೂಪ ಜೇಗಳೆಯಂ ಬಾರಿಸಲು ಬಿಟ್ಟ ಮತ್ತರು ಅಱುವತ್ತು (ಕಇ. II, ೦೬-೫೫ ; 1122). **ಜೇಘಂಟೆ:** ಗೌಡುಗಳು . . . ಜೇಘಂಟೆಯಂ ತಾಗಿಸಿ ಕಾಲಂ ತೊಳದು ಧಾರಾಪೂರ್ವಕವಾಗಿ ಕೊಟ್ಟರು (ಎಕ. VIII, ಸೊರಬ. ೨೩೬-೨೦; 1221). **ಝಾಂಗಟೆ:** ತಾಳ ತಂಬೂರಿ ಝಾಂಗಟೆ ಮದ್ದಳೆ ಸಮ್ಮೇಳನದಿಂದ ಕೂಡಿ (ವಿದಾಕ್ಕ. ೯೬-೫): ಅಲ್ಲಿ ಎಲ್ಲೆಡೆ ತಾಳ, ಮದ್ದಲೆ, ಭೇರಿ, ಝಾಂಗಟೆ, ಗಂಟೆ ಇತ್ಯಾದಿ ವಾದ್ಯಗಳು ಬಾರಿಸ ಲಾಗುತ್ತವೆ (ಪರಪ. ೦೯೨). **ಝಾಗಟೆ:** ಒಡಲ ಝಾ[ಪಾಠಾಂ. ಜಾ]ಗಟೆಯ ಮಾಡಿ ನುಡಿವ ನಾಲಗೆಯ ಪಿಡಿದು ಬಿಡದೆ ಢಣಢಣರೆಂದು ಬಡಿದು ಚಪ್ಪಳಿ ಕ್ಕುತ್ತಾ (ಪುರಂದ. ೦-೫೩-೦). [ <ಸಂ. ಜಯಘಂಟಾ ]

**ಜೇಗಟ** 'ಜೇಗಂಟೆ' ನೋ.

**ಜೇಗಟೆ** 'ಜೇಗಂಟೆ' ನೋ.

**ಜೇಗಳೆ** 'ಜೇಗಂಟೆ' ನೋ.

**ಜೇಗೆಯ್**, ಜೇಗೈ (ಕ್ರಿ). ಬಿಲ್ಲಿನ ಹೆದೆಯನ್ನು ಧ್ವನಿಮಾಡು; ಧನುಷ್ಟಂ ಕಾರವಮಾಡು : ನಿಮಿಷದೊಳ್ ಚಾಪಮಂ ಜೇಗೆಯ್ದುರುಭಯು ವೀರರ್ (ಜಬಪು. ೧೬-೨೩) : ನಿನ್ನಶ್ವಮಂ ತಡೆದೆ ನಾಂ . . . ಬಿಡಿಸಿಕೊಳ್ವ ಬಗೆಯಾವುದಿನ್ನಳವಿಯೊಳ್ಕಾಣಬಹುದೆನುತೆ ಬಿಲ್ದೆಗೆದು ಜೇಗೆಯ್ಯೆ(ಜೈಮಿಭಾ. ೦೬-೯). **ಜೇಗೈ:** ಹತ್ತಿಸಿದ ಚಾಪಮಂ ಜೇಗೈದು ಕೂಡೆ ಮಸೆವೆತ್ತ ಕೂರಂಬುಗಳನಾರ್ದಿಸಲ್ಸೇನೆ ಮುಚಿದತ್ತವನ ಬಾಣಘಾತಿಗೆ (ಜೈಮಿಭಾ. ೪-೩೦). [ ಜೇ$_2$ + ಕೆಯ್$_1$ ]

**ಜೇಗೈ** 'ಜೇಗೆಯ್' ನೋ.

**ಜೇಘಂಟೆ** 'ಜೇಗಂಟೆ' ನೋ.

**ಜೇಟಿ** 'ಜೆಟ್ಟಿ' ನೋ.

**ಜೇಟಿಗಾಱ** (ನಾ). (?) : ಸಾಜಗುಣವುಲ್ಲದಱಿಯದ ಮುಗ್ಧೆಯರ್ ಬಳಕ್ಕೀ ಜೇಟಿಗಾಱ[ಪಾಠಾಂ. ಜಗಾಧಾರ, ಜಟ್ಟಿಗಾಱ]ನಂ ಕಂಡು ಮರುಳಪ್ಪುದಿದು ಸೋಜಿಗಮೆ (ಜಬಪು. ೨೦-೨೦). [ಜೇಟಿ? + -ಗಾಱ]

**ಜೇಡ**, ಜಾಡ$_1$, ಜೇಡುವ (ನಾ). ೧. ನೇಯುವವನು; ನೆಯ್ಗೆಯವನು; ನೇಕಾರ : ಗಿರಿಜೇಶಂ ತಱಿದಂ ಜೇಡರ ದಾಸಿಗೆ ಪಡಿಯನೊರ್ಮೆ (ಸಮಪ. ೯-೨೮) : ಬೇಡ ಕಾಯದೆ ಕೆಟ್ಟ ಜೇಡ ನೇಯದೆ ಕೆಟ್ಟ (ಸರ್ವಜ್ಞ. ೦೨೦೦). ೨. ಬಲೆ ನೇಯುವ ಹುಳು ; ಜೇಡರಹುಳು : "ಲೂತಾ, ತಂತುವಾಯಃ, ಊರ್ಣನಾಭಃ, ಮರ್ಕಟಕಃ – ಈ ೪ ಜೇಡನ ಹುಟು" (ನಾಚಿರಾ. ೦೦೩) ; "ಗುಣಪ್ಯಕ್ತಮೆನೆ ಜೇಡನೆನಿಸಿಕ್ಕು" (ಮಂಗರಾ. ೪೯-೧೪) : ವಲ್ಲಭಂ ಬಿಸಿಲೊಳಗೋಣಗಿದಹನೆನುತವಾ ಜೇಡ ಪರಿವಿಡಿಗಳಿಂ ತನ್ನ ನೂಲಿಂ ತೆರೆಯುಮೊಲು ಮೇಲ್ಕಟ್ಟ (ಬಸಪು. ೦೬-೩೬). **ಜಾಡ$_1$:** ೧. ಪ್ರಿಯಪುತ್ರರುಮಪ್ಪ ಸಕಲ ಜಾಡಗೊತ್ರಳಿಗಳ ಕುಲದೇವ ದೇವನಪ್ಪ ಗೊಜ್ಜೇಶ್ವರದೇವರ ಪೂಜೆ (ದೇಡಾಶ್ರ. ೬) ; ಪಂಜು ಇರುಳಲಿ ಲೇಸು ಪಂಜರವು ಲೇಸು ಅರಗಿಳಿಗೆ ಜಾಡಂಗೆ ಗಂಜಿ ಲೇಸೆಂದ (ಸರ್ವಜ್ಞ. ೦೦೩೪): ಬಣ್ಣ ಬಳಿದಂ ನೇಯ್ವ ಜಾಡರುಂ ಲಾಡರುಂ ಚೆನ್ನಾಗಿ ಹೊಲಿವುತಿಹ ಚಿಪ್ಪಿಗರು (ನವಮೋ. ೨-೪೬) : ಗಾಣಿಗ, ಈಡಿಗ, ಜಾಡ, ಬೇಡರೇ ಮುಂತಾದ ಕಸುಬುದಾರರಲ್ಲಿ (ಕಬ್ಬವಿ.೦೦). ೩. ಜೇಡರ ಹುಳುವಿನ ಬಲೆ: ಕೆಲವರು . . . ತೊಲೆಗಳವರೆಗೆ ಬಂಡಬಂಡವಾಗಿ ನೇಲು ಬಿದ್ದ ಇಲ್ಲಣ ಜಾಡಗಳನ್ನು ಸವರಿದರು (ರಕ್ತರ್ಧ. ೨೬೦). **ಜೇಡುವ:** ೧. ಪಱಾಯದ ಜೇಡುವರ ಎಱಿಯಂಗ ಗಾವುಣ್ಣನುಂ (ಮ್ಯಆರಿ. ೦೯೩೫, ೦೬-೦೦ ; 1010 ?). [ ದೇ.II ತುಳು. ಜಾಡೆ, ಜಾಡ್ಯ ; ತೆಲು. ಜೇಂಡ್ರು, ದೇಂಡ್ರು ]

**ಜೇಡಬುಡ** 'ಜಾಡಬುಡ' ನೋ.

**ಜೇಡಿ** (ನಾ). ೧. ಒಂದಂ ಬಗೆಯ ಮೃದುವಾದ ಜಿಗುಟುಮಣ್ಣು ; ಮಡಕೆ ಮೊದಲಾದುವನ್ನು ಮಾಡಲು ಉಪಯೋಗಿಸುವ ಅಂಟು ಮಣ್ಣು : ಕೆಂಪು ಮಣ್ಣಿನಲ್ಲಿ ಜೇಡಿ, ಗೋಡು, ಮರಳು, ಮಣ್ಣುಗಳೂ ಇರುವುವು (ಪ್ರಪಮ. ೩). ೨. ಗೋಡೆಗಳಿಗೆ ಬಳಿಯುವ ಒಂದು ಬಗೆಯ ಬಿಳಿಯ ಮಣ್ಣು ; ಬಿಳಿಯ ಆವೆಮಣ್ಣು : ಗೋಡೆಗಳಿಗೆ ಜೇಡಿಯನ್ನು ಬಳಿದಿದ್ದರು (ಚಾಳಕ. ೦೦).

[ ದೇ.IIಮಲ. ಚೀಟ ; ತುಳು. ಜೇಡಿ, ಸೇಡಿ./ಮರಾ. ಶೇಡೀ, ಶೇಡೂ, ಶಾಡೂ ]

**ಜೇಡಿಪದರಕಲ್ಲು** 'ಜೇಡಿಪದರಗಲ್ಲು' ನೋ.

**ಜೇಡಿಪದರಗಲ್ಲು**, ಜೇಡಿಪದರಕಲ್ಲು (ನಾ). ಸುಲಭವಾಗಿ ಒಡೆದು ತೆಳುಪದರಗಳಾಗುವ ಒಂದು ಬಗೆಯ ಕಲ್ಲು: (ಸುಲಭವಾಗಿ ತೆಳುಪದರ

ಗಳಾಗಿ ಒಡೆಯುವ) ಸ್ಲೇಟು ಕಲ್ಲಿನಂತಿದ್ದು ಅದಕ್ಕಿಂತಲೂ ಮೃದುವೂ ಕಡಮೆ ಗಟ್ಟಿಯೂ ಆದ, ಹಲವು ಬಗೆಯು ಜೇಡಿಪದರಗಲ್ಲು (Shale. ಇಂಕನಿ). **ಜೇಡಿಪದರಕಲ್ಲು :** ಇವ್ವರಲ್ಲೇ ಕಲ್ಲಿದ್ದಲು ಹಾಗೂ ಜೇಡಿ ಪದರಕಲ್ಲು (ಸುಲಭದಲ್ಲಿ ತೆಳು ಪದರಗಳಾಗಿ ಒಡೆಯುವ ಕೆಲವು ಬಗೆಯ ಕಲ್ಲು)ಗಳಿಂದ ಪೆಟ್ರೋಲನ್ನು ತಯಾರಿಸುವ ನೂತನ ವಿಧಾನಗಳೂ ಕಂಡುಹಿಡಿಯಲ್ಪಟ್ಟಿವೆ (ವಿಜ್ಞಾವಿ. ೬೩).

[ ಜೇಡಿ + ಪದರ (<ಪದರು₃) + ಕಲ್ಲು (<ಕಲ್₃) ]

**ಜೇಡಿಮಣ್ಣು** (ನಾ).=ಜೇಡಿ ೧ : ಹುಣ್ಣಾದ ಕಾಲಿಗೆ ಜೇಡಿಮಣ್ಣನ್ನಾಗಲಿ ಅಥವಾ ರಾಗಿಹಿಟ್ಟಿನ ಪೋಟ್ಲೀಸನ್ನಾಗಲಿ ೪-೫ ದಿವಸಗಳು ಕಟ್ಟಿದರೆ ನೋವು ಕಡಿಮೆಯಾಗುವುದು (ಗ್ರಾಮೂಳ. ೦೯೩) : ಈ ಮಣ್ಣೂ ಜೇಡಿ ಮಣ್ಣೂ ಸೇರಿ ಬೆಟ್ಟದಿಂದ ನದಿಗಳ ಜತೆಯಲ್ಲಿ ಇಳಿದು ಬರುವುವು (ಪಾಲಕ್ರ. I. ೦೮೬). [ ಜೇಡಿ + ಮಣ್ಣು (<ಮಣ್) ]

**ಜೇಡು** 'ಜಾಡಂ' ನೋ.

**ಜೇಡುವ** 'ಜೇಡ' ನೋ.

**ಜೇಣ, ಜೇನ** (ನಾ). ಉಣ್ಣೆಯ ಬಟ್ಟೆ; ಕಂಬಳಿ : "ಮೇಷಕಂಬಲಃ, ಊರ್ಣಾಯುಃ=ಕಂಬಳಿಯ ಜೇಣ" (ನಾಚಿರಾ. ೬). **ಜೇನ :** (೬).

[ ?./ಮರಾ ಜೇನ್ ]

**ಜೇಣಶಾಲೆ, ಜಾನಶಾಲೆ, ಜಾನಸಾಲೆ, ಜೇನಶಾಲೆ, ಜೇನಸಾಲೆ** (ನಾ). ಆಯುಧಗಳ ಶಾಲೆ ; ಆಯುಧಾಗಾರ : ಆ ರಮಣ ಬಾಲೆಯೊ ಕಾಮನ ಜೇಣಶಾಲೆಯೊ (ಪುಷ್ಪ. ೯-೪೩). **ಜಾನಶಾಲೆ :** ಭಂಡಾರ ಜಾನಶಾಲೆ ಯುಗ್ಯಾಣ ಪಟ್ಟದಾನೆಯ ಮಹಲು . . . ನಿರ್ವಾಣಂಗೈಸಿ (ಕಕನ. ೩-೬೦). **ಜಾನಸಾಲೆ :** ಜಾನಸಾಲೆ ಶ್ಯಾನಭಾಗರ ಜ ೨ ಕೆ (ಮೃಅರಿ. ೦೯೩೭, ೩೦-೩೩ ; 1669) : ಈ ಪಟ್ಟಣದಲ್ಲಿ ಗುಡಿ, ಹಳಿಯ ಮನೆ, ಜಾನಸಾಲೆ ಮದ್ದಿನ ಮನೆ . . . ಒಂದೊಂದನ್ನುವೆ ನಾವು ಕಂಡು ಕೊಂಡಿದ್ದೇವೆ (ಮುಂಕ್ರಕ. ೩೩-೬) : ಶ್ರೀರಂಗಪಟ್ಟಣದ ಕೋಟೆಯೊಳಗೆ ಕಟ್ಟಿಸಿರುವ ಜಾನಸಾಲೆ (ಮಹಾವಂ. I, ೦೨೮). **ಜೇನಶಾಲೆ:** "ಶಸ್ತ್ರಾಜೀವಾ ವಾಸಮನೆ ಜೇನಶಾಲೆ" (ಮುಂಗರಾ. ೩೮-೮). **ಜೇನಸಾಲೆ:** ಮಾಲೆಗಾರ್ತಿಯ ರಿಸೆದೊಪ್ಪೆ ಪುಂಜಿಸಿದ ಕಾಮನ ಕೆಯ್ದುಗೆಳೆರ್ವ ಜೇನಸಾಲೆಯ ನವಸಾಲ ಭಂಜಿಕೆಗಳೆಂದು (ಶಾಂತಿಪು. ೮-೭೩) : ಒದವಿದಗಣಿತ ಗೋಮೃಗಂಗಳ ಸದನ ಶಾಲೆಯ ಜೇನಸಾಲೆಯ ವಿದಳಧಾನ್ಯದ ಕಣಜಗಳನೀಕ್ಷಿಸುತ ನಡೆತಂದ (ಮೃಚಾಕಾ. ೨-೩೭). [ <ಜಯನಶಾಲೆ ]

**ಜೇತಾರ** (ನಾ). ಗೆಲ್ಲುವವನು ; ಜಯಿಸುವವನು ; ಜಯಶೀಲ : ತರುಣರ ಹೆಂಡಿರೂ ಕೂಡ ಈ ವಿಶ್ವಜೇತಾರನ ಕೀರ್ತಿಗೆ ಮರುಳಾಗಿ ಸನ್ನೆಮಾಡಿದಷ್ಟಕ್ಕೆ ಅವನ ಮಡಿಲಿಗೆ ಬಂದು ಬೀಳುತ್ತಿದ್ದರು (ಸಾಕ್ರ. VIII, ೮೦) : ಕ್ರಿಸ್ತಶಕ ಪ್ರಾರಂಭದಿಂದ ಕೂಡ, ಅನೇಕ ಸಲ ದ್ರಾವಿಡರು ವಂಗರಾಜ್ಯದ ಮೇಲೆ ಅಭಿಯೋಗಮಾಡಿ ಜೇತಾರರಾಗಿದ್ದಾರೆ (ಭಾಷಾಶಾ. ೨೨೭). [ <ಸಂ. ಜೇತೃ ]

**ಜೇನ್₁, ಜೇನು₁, ತೇನು** (ನಾ). ೧. ಜೇನುಹುಳ ಹುಟ್ಟಿಯಲ್ಲಿ ಕೂಡಿಡುವ ಮಧು ; ಜೇನುತುಪ್ಪ : ಜೇನ ಮಟಿಕೊಂಡಮರ್ದಿನ ಸೋನೆಯೆ ಸುರಿದತ್ತು (ಆದಿಪು. ೬-೦೭) : ಜೇನ ನೊಣಂಗಳ್ ತುಪ್ಪವ ನಿರಿಸಿದೊಡೆ ಲೋಗರ್ ಕೊಂಡು ಪೋಪರ್ (ಪಂಚತಂ. ೬೨-೮); ಚಂದ್ರಾದಿತ್ಯಗ್ರಹಂಗಳ್ ಕಳ್ಳಡಗುಂ ಜೇನುಂ ಗಿಣ್ಣಣಂಬೆ ಮೊದಲಾದುವಲ್ಲದ ಶುದ್ಧಮಪ್ಪಾಹುತಿಯಂ ಕೊಳ್ಳವು (ಧರ್ಮಾಮೃ. ೯-೦೦೦) ; ಜೇನ ಹುಟ್ಟಿನ ಹುಳುವ ಬಡಿದ ಸಗಾನತನ ಕಾನೇನು ಚೂಣಿಯ ಸೇನೆಗೀನೆಯ ಸವಟಿ ಲಾಯಿತೆ ಶೌರ್ಯ ಸಿರಿ ನಿನಗೆ (ಕುವ್ಯಾಭೀ. ೮-೩೪). **ಜೇನು₁:** ಕೊಡದೊಳ್ ತುಂಬಿರೆ ಜೇನು (ಸೋಮೇಶ. ೬೩): ಜೇನು ಸವಿಯಂತ ಮೇಣ ಸಹ ತಿಂದ ಹಾಗೆ (ಗಾದೆ). ೨. ಜೇನುಹುಳುವಿನ ಗೂಡು: ಮುತ್ತಿದವು ಶರಜಾಲ ಜೇನಿನ ಹತ್ತುಗೆಯ ನೊಣದಂತೆ (ಕೂರಗಾ. ೩-೬-೨೦) : ಜೇನು ಬೇಕೆ ಬೇಕು (ಕಪಪು. ೪-೧). **ತೇನು :** ೧. ಇನಿಯಳ ನುಡಿ ಜೇನಿನೊಳ್ ಗೆಳೆಯನ ನುಡಿ ತೇನಿನೊಳ್ ನಿನ್ನ ನನೆಯ, ಕೊನೆಯ ಮನೆಯ ನಾನು ಕಾಂಬೆನು (ಪಯಣ. ೧೩-೮).

**ಜೇನ ದಸಿ = ಜೇನುಗೂಡು:** ಜೇನದಸಿಯನು ಹಾಯ್ದು ಪಾಡಾಯ್ತು ಏನ ಹೇಳುವೆ (ಕೌಶಿಕ. ೧೨-೨೦). **ಜೇನ ಪುಟ್ಟಿ, ಜೇನ ಹುಟ್ಟಿ = ಜೇನು ಪುಟ್ಟಿ:** ತಲೆಗಳ್ ತೊರ್ದಿರ್ದರ್ ಜೇನ ಪು[ಶಾಸಾಂ. ಗ]ಟ್ಟಿಗಳೆನೆ ಪೋಲ್ವುವು (ಪಂಪಭಾ. ೧೦-೮೦) : ಜೇನ ಹುಟ್ಟಿಯ ಬಸಿವ ವಿಷದಲಿ ಬಂದುದುರಗಾಸ್ತ್ರ (ಕುವ್ಯಾಕ. ೨೫-೦೮). **ಜೇನ ಹಳಿ=ಜೇನ ದಸಿ:** ಉರಿದೋಟಿ ಜೇನ ಹಳಿಯ ಬಿಟ್ಟಾ ನೊಣನಿರದ ತೆರಳುವ ತೆಜದೊಳು ಸರಿದುದು ಸುರುತಾಳ ಲಗ್ಗೆ ದುರ್ಗವ ಬಿಟ್ಟು (ಕುಶಾಕಾಂ. ೩೯-೨೮).

[ ದೇ.॥ ತಮಿ. ಮಲ. ತೇನ್; ಕೊಡ. ತೇನಿ ; ತೆಲು. ತೇನೆ ; ಗಡಬ. ತೀನ್, ತೀನು ; ಮಲ್ತೊ. ತೆನಿ ]

**ಜೇನ್₂, ಜೇನು₂, ಜೇನೆ** (ನಾ). ಒಂದು ಬಗೆಯ ಹಣ್ಣಿನ ಮರ: ಜಾಲಿ ಜೇನೊಡವಿಪ್ಪೆ ಪಿಪ್ಪಲ ಹಾಲೆಯಿವ ನೋಡಬಲೆ (ತೊರೆರಾ. ೩-೦-೨೮). **ಜೇನು₂:** ಭದ್ರಾಕ್ಷ ಮರ, ಜೇನುಮರ, ರುದ್ರಾಕ್ಷಿಮರ (ಮೃಶಿಗಿ. ೯೦-೬೦೦). **ಜೇನೆ :** ನೇಬಿಯ ಹಣ್ಣಳತ್ತಿಯ ಹಣ್ಣು ಹುಣಸೆಯ ಹಣ್ಣು ಜೇನೆಯ ಹಣ್ಣುಯಿಪ್ಪೆಯ ಹಣ್ಣದಟಿ ಹೂ ಮಧುರ ಮಧುವುಂಟು(ಬಸಪು. ೦೮-೦೬).

[ ? ]

**ಜೇನ** 'ಜೇಣ' ನೋ.

**ಜೇನವರೆ** (ನಾ). ಒಂದು ಬಗೆಯ ಉತ್ತಮ ಜಾತಿಯ ಅವರೆ : (೬).

[ ಜೇನು₁ (<ಜೇನ್₁) + ಅವರೆ₁ ]

**ಜೇನಸಾಲೆ** 'ಜೇಣಶಾಲೆ' ನೋ.

**ಜೇನಿಡು** (ಕ್ರಿ). (ಜೇನು ಹುಳು) ಗೂಡನ್ನು ಕಟ್ಟು: ಪುಟ್ಟಿದುವಲ್ಲಿಗಲ್ಲಿಗೆ ಶಿಲೀಂಧ್ರಚಯಂ ಕರುವಮಾಡದಲ್ಲಿ ಜೇನಿಟ್ಟುದು (ಜಗವಿ. ೧೨-೪).

[ ಜೇನ್₁ + ಇಡು₁ ]

**ಜೇನು₁** 'ಜೇನ್₁' ನೋ.

**ಜೇನು₂** 'ಜೇನ್₂' ನೋ.

**ಜೇನುಂಡೆ, ಜೈನುಂಡೆ** (ನಾ). ಒಂದು ಬಗೆಯ ಪಟಾಕಿ : ಪಟಾಕಿ ಜೇನುಂಡೆ ಗರ್ನಾಲುಗಳನ್ನು ಸುಡುವುದು ಮಕ್ಕಳಿಗೆ ತುಂಬಾ ಸಂತೋಷ (ನಿಜ್ಞಾಮು. ೧೧೪). **ಜೈನುಂಡೆ :** ದಿಬ್ಬಣ ಹೋಗುವಾಗ ಜೈನುಂಡೆ ಹೊಡೆಯಲು ಚಟ್ಟಪ್ಪನೇ ಮುಂದಾಳು (ಊಕಥ. ೪೨). [ ? ]

**ಜೇನುಂಬುಳು** 'ಜೇಂಬುಟು' ನೋ.

**ಜೇನುಕಡ್ಡಿ** ನಾ). ಒಂದು ಬಗೆಯ ಸಸ್ಯ : ಜೇನುಕಡ್ಡಿ, ತುರಿಕಡ್ಡಿ (ಮೃಶಿಗಿ. ೧೩-೨೩೮). [ ಜೇನು₂ + ಕಡ್ಡಿ ]

**ಜೇನುಕಾತಾಳ** (ನಾ). ಒಂದು ಬಗೆಯ ಮರ : ಜೇನುಕಾತಾಳ, ಹುಲಿ ತೊರಡು ಮರ (ಮೃಶಿಗಿ. ೬೨-೦೯೬೬). [ ? ]

**ಜೇನುಕಿಟ್ಟಲು** (ನಾ). ಒಂದು ಬಗೆಯ ಮರ: ಮರಗಳು: ಹೆಸವ . . . ಅಶೋಕ, ಜೇನುಕಿಟ್ಟಲು, ಚಿಲ್ಲು (ನವ್ಯಾಸು. ೨೩೭). [ ? ]

**ಜೇನುಕೃಷಿ** (ನಾ). ಜೇನುಸಾಕಣೆ ವ್ಯವಸಾಯ : "ಜೇನುಕೃಷಿ" (Apiculture. ಇಂಕನಿ.). [ ಜೇನು₁ (<ಜೇನ್₁) + ಕೃಷಿ ]

**ಜೇನುಕೃಷಿಕ** (ನಾ). ಜೇನು ಸಾಕುವವನು; ಜೇನುಸಾಕಣೆ ವ್ಯವಸಾಯವನ್ನು ನಡೆಸುವವನು : "ಜೇನುಕೃಷಿಕ" (Apiarist. ಇಂಕನಿ.).

[ ಜೇನು₁ (<ಜೇನ್₁) + ಕೃಷಿಕ ]

**ಜೇನುಗನಸು** 'ಜೇನ ನಸು' ನೋ.

ಜೇನುಗೂಡು (ನಾ). ೧. ಜೇನುಹುಳುವಿನ ಗೂಡು; ಜೇನುಹುಟ್ಟು : ಜೇನುಗೂಡಿಗೆ ಬೆಂಕಿ ಇಟ್ಟು ಜೇನುನೊಣಗಳನ್ನು ಚೆದರಿಸುತ್ತಾರೆ (ರೂಢಿ). ೨. ಜೇನುಕೃಷಿ : ಜೇನುಗೂಡು: ಇದುಬಹಳ ಸುಲಭವಾದ ಮತ್ತು ವೆಚ್ಚವಿಲ್ಲದ ಕೆಲಸ (ವ್ಯವಕು. ೬೯). ೩. ಭತ್ತದಲ್ಲಿ ಒಂದು ಬಗೆ: ಈ ಸಾರಿ ಗದ್ದೆಗೆ ಜೇನುಗೂಡನ್ನು ಹಾಕಿಸಿದ್ದಾರೆ (ರೂಢಿ).

[ ಜೇನು$_1$ (< ಜೇನ್$_1$) + ಗೂಡು ]

ಜೇನುಗೊಳಿಸು (ಕ್ರಿ). ಜೇನುತುಪ್ಪವನ್ನಾಗಿ ಮಾಡು ; ಜೇನಾಗಿಸು ; ಸಿಹಿಯಾಗಿಸು: ಜೇನುಗೊಳಿಸುವವೀಗ ಹೂರಸ ಜೀವದಾ ಜೇನ್ನೊಣಗಳು (ಮುಕ್ತಕಂ. ೪೧-೦೫). [ ಜೇನು$_1$ (< ಜೇನ್$_1$) + ಕೊಳ್$_1$ + - ಇಸು$_3$ ]

ಜೇನುಣಿ (ನಾ).=ಜೇನ್ನೊಣ: ಮುಗಿದಿಹ ಬಾಯ್ದೆರೆಯದುರಲು ಹಲುಬುತೆ ದೆಸೆಗೇರಿತು ಜೇನುಣಿಯೊಂದು (ಕವಿಕಾ. ೭೧-೪). [ ಜೇನ್$_1$ + - ಉಣಿ ]

ಜೇನುತುಪ್ಪ (ನಾ). = ಜೇನ್$_1$ ೧ : ಜೇನುತುಪ್ಪ ಹೊತ್ತು ಮಾಱುವವಳ ಮಡಕೆಯ ಮೇಲೆ ಮೂಱು ತುಂಬಿ (ಅಕ್ಕಮಾ. ೬೪-೩೦); ಜೇನುತುಪ್ಪಕ್ಕೆ ಸಕ್ಕರೆ ಸಲ್ಲುವುದು (ಕಮದ. ೦೩೦ ಪ್ರಯೋ) ; ಮಾಧವನ ಅಪ್ಪವಣೆಡದು ಬಿತ್ತರಿಸುವ ಕೃತಿ ಜೇನುತುಪ್ಪದ ತೊಱೆಯಾಗಲೆಱೆಯಾ (ಮೋಹತ. ೧೮-೧) ; ಪುಲಿದೊಗಲ ಪೊಱೆ ಜೇನುತುಪ್ಪದ ನಳಿಗೆ ಮೇಣದ ಮುದ್ದೆ (ಸಾಳ್ವಭಾ. ೦೭-೭೯). [ ಜೇನು$_1$ (< ಜೇನ್$_1$) + ತುಪ್ಪ ]

ಜೇನುನೊಣ 'ಜೇನ್ನೊಣ' ನೋ.

ಜೇನುಪೆಟ್ಟಿಗೆ (ನಾ). ಜೇನು ಹುಳುವನ್ನು ಸಾಕಲು ಮಾಡಿದ ಪೆಟ್ಟಿಗೆ : ನಮಗೆ ಒಂದು ಜೇನುಪೆಟ್ಟಿಗೆಯನ್ನು ಮಾಡಿಕೊಡು (ಕಜಪು. ೪-೯).

[ ಜೇನು$_1$ (< ಜೇನ್$_1$) + ಪೆಟ್ಟಿಗೆ ]

ಜೇನುಮೇಣ (ನಾ). ಜೇನುಹುಟ್ಟಿನಿಂದ ಸಿಗುವ ಮೇಣ : ಮುಲ್ತಾನ್ ಡಿಸ್ಟ್ರಿಕ್ಟಿನಲ್ಲಿ . . . ಜೇನೂ,ಜೇನುಮೇಣವೂ ವಿಶೇಷವಾಗಿ ತಯಾರಾಗುತ್ತವೆ (ಭೂಗೋಳ. ೩೯) ; ಕೆಳಗಡೆ ಜೇನುಮೇಣದಂತಹ 'ಲಿಪಿಡ್' ಕಣಗಳಿಂದಾದ ಮೇಣದ ಪದರ (ಕೀಟಬಿ. ೮).

[ ಜೇನು$_1$ (< ಜೇನ್$_1$) + ಮೇಣ (< ಮಯಣ) ]

ಜೇನುಪುಟ್ಟಿ, ಜೇನುಹುಟ್ಟಿ$_1$, ಜೇನುಹುಟ್ಟು (ನಾ). ೧.=ಜೇನುಗೂಡು: ವನತರುಗಳೊಂದೊಂದನೊರಸೆ ಪುಟ್ಟಿದನಲನಳವಿಗಳಿದೊಗೆದ ಪೆರ್ಪೊಗೆಗೆ ಪುಳುಗಳ್ಪೋಗೆ ನಟ್ಟಗೊಂಬಿನೊಳ್ ವಿಸುಪ ಜೇನುಪುಟ್ಟಿ [ಶಾಶಾಂ. ಟ್ಟ,ಟ್ಟಿ] ಗಳ ಮಧುರಸಮಂ ಬಳಿಯನಡರ್ದು ಪೀರ್ವ ಮರವಾವುಗಳಂ (ರಾಜಶೇ. ೩-೩೩ ವ). ಜೇನುಹುಟ್ಟಿ$_1$ : ೨. = ಜೇನುಪೆಟ್ಟಿಗೆ : ಹುಲ್ಲು, ಅಪ್ಪ ಮೊ.ಗಳಿಂದ ಮಾಡಿದ ಜೇನುಹುಟ್ಟಿ (Skep. ಇಂಕನಿ). ಜೇನುಹುಟ್ಟು : ೨. ನಿನ್ನ ಜೇನುಹುಟ್ಟಿನಲ್ಲಿರಿಸುವುದಕ್ಕೆಂದು . . . ಜೇನ್ನೊಣವೊಂದನ್ನು ತಂದಿದ್ದೇನೆ (ಅಶ್ವಮ. ೧೨೫). [ ಜೇನು$_1$ (< ಜೇನ್$_1$) + ಪುಟ್ಟಿ$_3$ ]

ಜೇನುಸಾಕಣೆ (ನಾ). ಜೇನುಹುಳುಗಳನ್ನು ಸಾಕುವಿಕೆ ; ಜೇನುಕೃಷಿ : ರಾಜ್ಯಸರ್ಕಾರವು ಜೇನುಸಾಕಣೆಯನ್ನು ಪ್ರೋತ್ಸಾಹಿಸುತ್ತಿದೆ (ರೂಢಿ).

[ ಜೇನು$_1$ (< ಜೇನ್$_1$) + ಸಾಕಣೆ ]

ಜೇನುಹಲ್ಲೆ (ನಾ). ಜೇನುಗೂಡು; ಜೇನುಹುಟ್ಟಿ: ಜೇನುಹಲ್ಲೆಗೆ ಜೇನು ಹುಳು ಕವಿಯುವಂದದಲಿ (ಅಗ್ನಿಹಂ. ೮೦-೩೮).

[ ಜೇನು$_1$ (< ಜೇನ್$_1$) + ಹಲ್ಲೆ$_2$ ]

ಜೇನುಹುಟ್ಟಿ 'ಜೇನುಪುಟ್ಟಿ' ನೋ.

ಜೇನುಹುಟ್ಟು 'ಜೇನುಪುಟ್ಟಿ' ನೋ.

ಜೇನುಹುಳು 'ಜೇಂಬಂಬು' ನೋ.

ಜೇನೂಡು (ಕ್ರಿ). ೧. ಜೇನನ್ನು ತಿನ್ನಿಸು,-ಉಣಿಸು. ೨. (ಆಲಂ) ಸವಿಯನ್ನು ತುಂಬು: ಅಂದಿನಿಂದವರೇಕರೀತಿಯೊಳಿರುವರು ಬಾಳಿಗೆ ಜೇನೂಡುತಿಹರು (ಇಂಚಾಪ. ೨೩-೧೨) [ಜೇನು$_1$ (< ಜೇನ್$_1$) + ಊಡು$_1$]

ಜೇನೆ 'ಜೇನ್$_2$' ನೋ.

ಜೇನೆಯ್ 'ಜೇನ್ನೆಯ್' ನೋ.

ಜೇನ್ನೆ 'ಜೇನ್ನೆಯ್' ನೋ.

ಜೇನೊಣ 'ಜೇನ್ನೊಣ' ನೋ.

ಜೇನ್ಗಜ್ಜ (ನಾ). ಸವಿಯಾದ ಕೆಲಸ ; ಪ್ರಿಯವಾದ ಕೆಲಸ : ಬೈಗು ಗೆಂಪೋಕುಗಳಿಗೆ ಮುನ್ ಪೂವಿಂಪಿನಾ ಜೇನ್ಗಜ್ಜಮಂ ಪಣ್ಗೊಳಿಸವೇಳ್ಕುಂ (ಬಿಗಾಳಿ. ೬೦). [ ಜೇನ್$_1$ + ಕಜ್ಜ$_1$ ]

ಜೇನ್ಗಱೆ (ಕ್ರಿ). ಜೇನನ್ನು ಕರೆ,-ಸುರಿ : ಬಿಟ್ಟನಾರ್ಜುನಿ ಮತ್ತೆ ಮಧುಶರವನಾ ಕ್ಷತಂಗಳ ಮೇಲೆ ಜೇನ್ಗಱೆವೊಲು (ಜೈಮಿಭಾ. ೨೪-೨೪).

[ ಜೇನ್$_1$ + ಕಱೆ$_1$ ]

ಜೇನ್ಗನಸು, ಜೇನುಗನಸು (ನಾ). ಸವಿಯಾದ ಕನಸು : ಆ ಅದೆಂತಪ್ಪ ಜೇನ್ಗನಸಿನಿಂದೆಳ್ಚರ್ತೆ ನಾಂ (ಚಂದ್ರಸ. ೮೦). ಜೇನುಗನಸು: ಜೇನುಗನಸು! ಕನಸಂದರೆ ಬರಿಯ ಕನಸಲ್ಲ, ಒಂದು ಸುಂದರ ಸ್ವಪ್ನ (ಜೇಮುಕೊ. ೪).

[ ಜೇನ್$_1$ + ಕನಸು ]

ಜೇನ್ಗೊಡ, ಜೇಂಗೊಡ (ನಾ). ೧. ಜೇನು ತುಂಬಿದ ಕೊಡ,-ಪಾತ್ರೆ : ಮಡದಿಯ ಮಂಡೆಮಾಣಿಕವ ಸೀಳೊಸರ್ವ ಜೇನ್ಗೊಡದಂತೆ ಮತ್ತಾವ್ಯ ರುಚಿಯು (ಮೋಹತ. ೨೩-೨) ; ಬಲು ಗಜದಂತ ಜೇನ್ಗೊಡನು . . . ಪುಳಿಂದಿಯರ್ಪೊತ್ತು ನಡೆಯ (ಅಭ್ಯಲಾ. ೩-೪೦). ೨. ಒಂದು ಬಗೆಯ ಖಾದ್ಯ,-ಭಕ್ಷ್ಯ: ಸಣ್ಣಸೇವಗೆ ಹಾಲುಂಡೆ ಜೇನ್ಗೊಡ ಶುಭ್ರವಣ್ಣದುದ್ದಿನ ಸವಿಗಡುಬು (ಕಂಸವಿ. ೮-೮೭). ಜೇಂಗೊಡ : ೧. ಪಾಲ್ಗಡಲ ತೆರೆಯ ಬೊಂಬಲ್ಗಳೆಲಿ ಜೇಂಗೊಡನ ಸಾಲ್ಗಳಂ (ವೀಶೈಪು. ೩-೦-೦); ಫಣಿಮಣಿಯ ನಮರ್ದ ಜೇಂಗೊಡಮಂ ಕಂಪೂತ್ತರಿಸುವ ಬಾವನ್ನಮನಿತ್ತಂ . . . ಪುಳಿಂದಂ (ರಾಜಶೇ. ೩-೨೫). ೩. ಜೇನಿನ ಹುಟ್ಟು,-ಗೂಡು: ಜೇಂಗೊಡದಿಂಬನಿ ವರ್ಷವಾಗಲಗ್ಗಲಿಸಿದುದಾ ಮಹೀಂದ್ರವಿಭು ನೀರದಕಾಲಮದೆಂಬ ಮಾಟ್ಕೆಯಿಂ (ಉದ್ಭಟ. ೨-೪೭).

[ ಜೇನ್$_1$ + ಕೊಡ$_2$ ]

ಜೇನ್ದುಂಬಿ (ನಾ). ಜೇನುಹುಳು ; ಜೇನ್ನೊಣ : ಜೇನ್ದುಂಬಿಯ ಮೊರೆ, ಹಕ್ಕಿಯ ಇಂಚರ (ಅನಿಕೇ. ೨೭-೯).

[ ಜೇನ್$_1$ + ತುಂಬಿ$_1$ ]

ಜೇನ್ನುಡಿ (ನಾ). ಜೇನಿನಂತಹ ನುಡಿ; ಇಂಪಾದ ಮಾತು; ಸವಿಮಾತು ಸ್ವಕಾರ್ಯಮಾತ್ರೋಚಿತಮಪ್ಪ ಜೇನ್ನುಡಿಗಳಂ (ಧ್ವನ್ಯಾಲೋ. ೦೬೦) ; ಅಕೆಯುಂ ತೋಳ್ಗಳಿಂದವರ್ದಪ್ಪಿ ಮುಂಡಾಡಿ ಮುದ್ದಿಸುತ ಜೇನ್ನುಡಿಗರೆದ ನಿಂತು (ಶ್ರೀರಾಮಾ. ೬೮-೩೭೯).

[ ಜೇನ್$_1$ + ನುಡಿ$_2$ ]

ಜೇನ್ನೆಯ್, ಜೇನೆಯ್, ಜೇನ್ನೆ (ನಾ). = ಜೇನ್$_1$ : ಒಂದು ಕೊಡ ಜೇನ್ನೆಯ್ಯುಮಂ (ಪಂಪಾರ.೬೩-೭); ಆ ಮಹಾಪರ್ವತಪ್ರಾಂತದುತ್ತಮವನಂ . . . ಸೋಮಾದಿವಲ್ಲಿಗಳನಖಿಳ ತೃಣನಿಚಯದಿಂ ಜೇನ್ನೆಯ್ಯ ತಂದಲ್ಗಳಿಂ . . . ರಾಜಿಸುತಿರ್ದುದು (ವೀಶೈಪು. ೩-೯-೭). ಜೇನೆಯ್ : ಮಧುಮದ್ಯ ಮಾಂಸಗಳುಮಯ್ದು ಪಾಲ್ಮರದ ಪಣ್ಗಳುಂ ಜೇನೆಯ್ಯುಂ [ಪಾಠಾಂ. ಮಾಳಂಬಿಯುಂ] . . . ಸೇವಿಸುವರಂ (ಪದ್ಮಾರಾ. ೦೨೭-೧೮) ; ಕರಡಿಯ ತೊಗಲುಂ ಕಜ್ಜಲ ಪರಾಗದಿಂ ಪೊರೆದು ಪಿರಿದು ಜೇನೆಯ್ಗೊಳ್ ತಂದಿರಿಸಿದ ಪೊಲ್ (ಶಾಂತಿಪು. ೮-೧೨೭) ; ಆ ತಿರುಳಂ ಜೇನೆಯ್ಯುಂ ಕಪ್ಪುರವಂ ಬೆರಸೆಚ್ಚೆ ಕಣ್ಣ ಪೂಗಳ್ ಕಿಡುಗುಂ (ಲೋಕೋಪ. ೯-೭೭); ಖಡ್ಗಧಾರೆಯ ಜೇನೆಯ್ಯಂ ನೆಕ್ಕುವಂತೆ (ಪಂಚಾಮಾ. ೨-೧೮). ಜೇನ್ನೆ : ಮೃದುಸ್ಮೇರ ಮಿಂಗಡಲಂ ತುಳ್ಕಿದ ಮಾಳ್ಕೆಯಿಂದೊಗೆಯೆ ಜೇನ್ನೆಸೋನೆಯಂ ಸೂಸೆ ಮೆಲ್ನುಡಿ (ರಾಜಶೇ. ೭-೦೩). [ ಜೇನ್$_1$ + ನೆಯ್$_2$ ]

**ಜೇನ್ನೊಣ, ಜೇನುನೊಣ, ಜೇನೊಣ**(ನಾ).=ಜೇಂಬುಟು: ಭೋಂಕರಿಸು ತೊಗ್ಗಿದರ್ಕವಿದು ಜೇನ್ನೊಣದಂತೆ (ಕ್ರಮಿಥಾ. ೮-೩೨): ಪುಷ್ಪಗಳಿಲ್ಲದ ಕಡೆ ಹಾರಾಡುತ್ತಿದ್ದ ಜೇನ್ನೊಣವೊಂದನ್ನು ತಂದಿದ್ದೇನೆ (ಅಶ್ರಮ. ೦೨೩). **ಜೇನುನೊಣ**: "ಸರಘಾ, ಮಧುಮಕ್ಷಿಕಾ – ಈ ೨ ಜೇನುನೊಣ" (ನಾಚಿರಾ. ೧೧೩): ಜೇನುನೊಣದ ಮಧೂಪಚಯವವಕಿಲ್ಲಲೇ ಸರ್ವಾವ ಹಾರವು ಪರರಿಗಾ ಕೌರವನ ಸಿರಿ (ಕುವ್ಯಾ.ಆ. ೪-೧೧). **ಜೇನೊಣ**: ಜೇನೊಣ ಕಡಿದಂತೆ ಮಂಡೆಯ ಕೊಡಹುವರು (ಭರಚ. ೬೦-೩೦).
[ ಜೇನ್$_1$ + ನೊಣ ( <ನೊಟ) ]

**ಜೇನ್ಮಳೆ** (ನಾ). ಜೇನಿನ ಮಳೆ: ತಾನರವಂ ಲಯಂ ಜವಂಬೆತ್ತಿರೆ ಮೂರ್ಛನಾಪ್ರಸರವೊಂದಿರೆ ಜೇನ್ಮಳೆ ಸೂಸಿದಂತೆ (ವೃಷವಿ. ೧೧-೮).
[ ಜೇನ್$_1$ + ಮಳೆ ( <ಮಟೆ$^3$) ]

**ಜೇನ್ಸೊಗ** (ನಾ). ಜೇನಿನಂತೆ ಮಧುರವಾದ ಸುಖ: ಜನಕಜೆಗೆ ನಾಳನಾಳದಿ ದುಮುಕುತಿರೆ ಜೇನ್ಸೊಗಂ (ಶ್ರೀರಾಮಾ. ೩೦೩-೦೩೬).
[ ಜೇನ್$_1$ + ಸೊಗ ]

**ಜೇಪಾಳ** (ನಾ). ಒಂದು ಬಗೆಯ ಔಷಧ ಗಿಡ: "ಜ್ವರಾಂತಕಃ – ಕಕ್ಕೆ, ಬೇವು, ಜೇಪಾಳ" (ಓಷಧಿ. ೬೧): ಜೇಪಾಳ – (ಜಮಾಲಗೋಟಾ) ಇದೊಂದು ಗೋವೇದ ಔಡಲ ಜಾತಿಯ ಬೀಜವದ (ಗೃಹವೈ. ೭): ಇಂಗಲೀಕ ೩, ಜೇಪಾಳ ೪ ಇವ ಕೂಡಿ ಜೇಪಾಳದ ಕಷಾಯದಲ್ಲಿ ಎರಡು ಜಾವ ಮರ್ದಿಸಿ (ವಿಷ್ವವಿ. ೦೩೬). 'ಜಾಪಾಳ' ಪರಾ. [ಸಂ. ಜೇಪಾಲ]

**ಜೇಬು, ಜೋಬು** (ನಾ). ತೊಡುವ ಬಟ್ಟೆಗಳಲ್ಲಿ ಹಣವೇ ಮೊದಲಾದಂವನ್ನು ಇಟ್ಟುಕೊಳ್ಳಲು ಅನುಕೂಲವಾಗುವ ಹಾಗೆ ಮಾಡಿದ ಚೀಲದಂತಹ ಭಾಗ; ಕಿಸೆ; ಬೊಕ್ಕಣ: ಖಾಲಿ ಜೇಬಿನ ಜ್ಞಾಪಕ ನನ್ನ ಮೆದುಳಿನಲ್ಲಿ ಮಿಂಚಿತು (ಮುಗಮೂಂ. ೪೯): ಜೇಬಿನಲ್ಲಿಯ ಪೆಪ್ಪರುಮೆಂಟುಗಳನ್ನೆಲ್ಲ ಕಸಿದುಕೊಂಡು (ರಂಗರೋ. ೩೦). **ಜೋಬು**: ಅವೇಲೆ ಹಣ್ಣುಗಳನ್ನು ಅವರಿಬ್ಬರೂ ತಮ್ಮ ಜೋಬುಗಳಲ್ಲಿ ತುಂಬಿ ಕೊಂಡಿರಬೇಕು ಎನ್ನಿಸಿತು (ಚಾರಮ. ೦೦೬): ಪೆಟ್ಟಿಗೆಯಲ್ಲಿದ್ದ ಹಣವನ್ನೆಲ್ಲಾ ಜೋಬಿನ ಒಳ ಸೇರಿಸಿದ (ಪದ್ಮಸ. ೨೦೩).

**ಜೋಬಿಗೆ ಹಾಕಿಕೊಳ್ಳು** = ೧. ಜೇಬಿನಲ್ಲಿ ಇಡು,-ಸೇರಿಸು: ೨. (ಆಲಂ) ವಶಪಡಿಸಿಕೊಳ್ಳು; ಅಧೀನಪಡಿಸಿಕೊಳ್ಳು: ಇಂಜಿನಿಯರು ಗಳನ್ನೂ ದೊಡ್ಡ ದೊಡ್ಡ ಅಧಿಕಾರಿಗಳನ್ನೂ ತನ್ನ ಜೋಬಿಗೆ ಹಾಕಿಕೊಳ್ಳುವ ಉದ್ದೇಶದಿಂದ ಆ ಅತಿಥಿಗೃಹವನ್ನು ಕಟ್ಟಿಸಿದ್ದನು (ಹಂಜಹಂ. ೧೧೧).
[ ←ಪಾರ. ಅರ. ಹಿಂ. ಮರಾ. ಜೇಬ್ ]

**ಜೇಬುಗಳ್ಳ** (ನಾ). ಜೇಬಿನಿಂದ ದುಡ್ಡನ್ನು ಕದಿಯುವವನು; ಕಿಸೆಗಳ್ಳ: ಅಹಮ್ಮದ್ . . . ಒಬ್ಬ ಜೊತೆಗಾರನೊಡನೆ ಸೇರಿ ಜೇಬುಗಳ್ಳನಾಗಿದ್ದ (ಮುಂಗಾಮು. ೯). [ ಜೇಬು + ಕಳ್ಳ$_1$ ]

**ಜೇಬುಳಗೇರಿ** (ನಾ). ಒಂದು ಊರಿನ ಹೆಸರು: ಜೇಬುಳಗೇರಿಗೆ ಕಲಿಯಮ್ಮಗಾಮುಣ್ಣುಗೆಯ್ಯಾ ಚೇದಿಯವಮಾನ್ ಮಾಡಿಸಿದೊನ್ (ಎಇ. XXI, ೨೦೬-೬: 751). [ ಜೇಬುಳ$_0$ + ಕೇರಿ ]

**ಜೇಮಣ** 'ಜೇವಣ' ನೋ.

**ಜೇಮನ** (ನಾ). ೧. ಊಟಮಾಡುವುದು. ೨. ಆಹಾರ; ಊಟ: "ಆ ಜೇ[ಪಾಠಾಂ. ಚೇ] ಮನಂಸ್ವಾದನವಾಹಾರಮಶನಮೆನಲ್"(ಮಂಗರಾ. ೬೩-೭). ೩. ಗ್ರಾಸ; ತುತ್ತು. [ ಸಂ. ]

**ಜೇಯ** (ನಾ). ೧. ಗೆಲವು: "ಜೇಯಂ, ಜಯನಂ, ಜಯ್ಯಂ, ಜೇತವ್ಯಂ, ಜಯನೀಯಂ ಈ ೫ ಗೆಲ್ವು" (ಕಾಶಕ್ಕ. ೬೮). ೨. ಗೆಲ್ಲಲು ಶಕ್ಯ ವಾದುದು,-ಸಾಧ್ಯವಾದುದು. 'ಅಜೇಯ' ಪರಾ. [ ಸಂ. ]

**ಜೇರು$_1$** (ನಾ). ಗೋಡೆ: (ಪ್ರ). 'ಜೇರುಗಂಡಿ' ಪರಾ. [ <ಕೇರ್$_1$ ]

**ಜೇರು$_2$** (ನಾ). ೧. ಅಶಕ್ತಿ; ದುರ್ಬಲತೆ; ನಿತ್ರಾಣ. ೨. ಬೇನೆ; ಕಾಯಿಲೆ: ಹುಮಾಯುನನಿಗೆ ಜೇರು ಆದಾಗ ಬಾಬರನು . . . ಅವನ ಹಾಸಿಗೆಯ ಸುತ್ತಲೂ ಮೂರು ಪ್ರದಕ್ಷಿಣೆ ಮಾಡಿದನು (ಚರಿಸಂ.೭): ಆದರೆ ಅವಳ ಅಜ್ಜ ಆಯತ್ತ ವೇಳೆಯಲ್ಲಿ ಜೇರಾದವಳು . . . ಇನ್ನೂ ಜೀವ ಕಣ್ಣಲ್ಲಿ ಹಿಡಿದುಕೊಂಡಿದ್ದಳು (ದೀಪಹ. I, ೧೯). ೩. ಇಕ್ಕಟ್ಟು; ಕಷ್ಟ; ಸಂಕಟ: ಆದ್ದರಿಂದ ಸರ್ವಾಧಿಪತಿಯು ನಿಜಾಮನನ್ನು ಜೇರಿಗೆ ತಂದು ಸಹಾಯ ಸೇನಾಪದ್ಧತಿಗೆ ಒಡಂಬಡಿಸಿದಂತೆ (ಚರಿಸಂ. ೦೯೨): ತೋಫಿನ ಗುಂಡುಗಳನ್ನು ಹಾರಿಸುತ್ತಲೂ ಅವರನ್ನು ಜೇರಿಗೆ ತರುತ್ತಿದ್ದ (ಹಂಸಾ. ೨೩).

**ಜೇರಿಗೆ ಬರು** = ಕಂಗ್ಗು: ದುರ್ಬಲನಾಗು: ಕೂಡಲೇ ತ್ರಿಯಂಬಕ ರಾಯನು ಬೆನ್ನಟ್ಟಿ ಹೋಗಿದ್ದರೆ ಹೈದರನು ತುಸುದಿವಸದಲ್ಲೇ ಜೇರಿಗೆ ಬರುತ್ತಿದ್ದನು (ಚರಿಸಂ. ೧೯೦). **ಜೇರು ಮಾಡು** = ಜೇರುಗೆಯ್: ಅಲ್ಲಿಯ ನಿಜಾಮನನ್ನು ಜೇರು ಮಾಡಿದ್ದರಿಂದ ಅವನು ಬಾಬರನಿಗೆ ಶರಣು ಬಂದು ಬಿಯಾನದ ಕೋಟೆಯನ್ನು . . . ಒಪ್ಪಿಸಿದನು (ಪೋರ್ಚಾದ. ೨೩).
[ ←ಪಾರ. ಹಿಂ. ಮರಾ. ಜೇರ್ ]

**ಜೇರುಗಂಡಿ, ಜೇರಗಂಡಿ** (ನಾ). ೧. ಕೋಟೆಯ ಗೋಡೆಯಲ್ಲಿ ಬಂದೂ ಕನ್ನು ತೂರಿಸಿ ಹೊಡೆಯಲು ಮಾಡಿದ ರಂಧ್ರ,-ಕಿಂಡಿ; ಅಂಬುಗಂಡಿ: (ಕೋಟೆಯ)ಕೈಪಿಡಿ ಗೋಡೆಯಲ್ಲಿ, ಒಳಗಡೆಯಿಂದ ಅಗಲವಾಗುತ್ತ ಬರುವ ಫಿರಂಗಿ(ಬಂದೂಕು)ಗಂಡಿ, ಜೇರುಗಂಡಿ; ಫಿರಂಗಿಜಾಲಕ (Embrasure ಇಂಕನಿ). **ಜೇರಗಂಡಿ**: ೨. ಬೆಳಕಿಂಡಿ: ನನಗೆಲ್ಲಾ ಗೊತ್ತಾಯ್ತು, ನಾ ಜೇರಗಂಡಿ ಹತ್ತಿರವೇ ನಿಂತಿದ್ದೆ (ತುಂಗಭ. ೯): ಆ ಯುವತಿಯು . . . ಜೇರಗಂಡಿಯ ಬಳಿಗೆ ಹೋಗಿ ನಿಂತಳು (ಅಂಬಿಕ. ೨೯). [ಜೇರು$_1$ + ಕಂಡಿ$_1$]

**ಜೇರುಗಿಂಡಿ** (ನಾ). ಗವಾಕ್ಷ: ಕಮಲೆ ಕುತೂಹಲದಿಂದ ಜೇರುಗಿಂಡಿಯ ಕಡೆಗೆ ನೋಡಿದಳು . . . ಗೋವರ್ಧನರಾಯರು ಜೇರುಗಿಂಡಿಗೆ ಮುಚ್ಚಳ ಹಾಕಿದರು (ರಕ್ತಧ್ವ. ೦೮೯). [ ಜೇರು$_1$ + ಕಿಂಡಿ ]

**ಜೇರುಗೆಯ್** (ಕ್ರಿ). ಇಕ್ಕಟ್ಟಿಗೆ ಸಿಲುಕಿಸು; ದುರ್ಬಲಗೊಳಿಸು: ಜಕೀರಿ ರಸ್ತುಮುಸ್ತೈದೆಯೊಳಪುಗದಂತು ಪಥ ಪೈಕ ಕಂಡಿ ಕಣಿವೆಗಳಂ ಕಟ್ಟಿ ಕೋಟೆಯಂ ಜೇರುಗೆಯ್ಯಲೊಳಗೆ ನಿತ್ತರಿಸಲಮ್ಮದೆ ಪೊರಗಣ್ಗೈದಿ (ಕಳನ್ನ. ೩-೫೯). [ ಜೇರು$_2$ + ಕೆಯ್$_1$ ]

**ಜೇರುಬಂದ** 'ಜೇರುಬಂದು' ನೋ.

**ಜೇರುಬಂದು, ಜೇರುಬಂದ** (ನಾ). ೧. ಕುದುರೆ ಜೀನನ್ನು ಬಿಗಿದು ಕಟ್ಟುವ ನಡುಪಟ್ಟಿ: ಉಚ್ಚೈಶ್ರವಸ್ಸೆಂಬ ಅಶ್ವರತ್ನದ ಆಭರಣದ ಲೆಖ್ಖಾ . . . ಜೇರುಬಂದು ಕಂಚ್ಚು (ಎಕ. XIV, ನಂಜನ. ೨೯೩-೨೭; 1847). ೨. ಚಾವಟಿ; ಚಬುಕಂ: (ಪ್ರ). **ಜೇರುಬಂದ**: ೧. ಸಮ್ಮ ಜೇರುಬಂದ ಪಟ್ಟೆಹಂಗಳಂ ವಲಂ ಮೊತ್ತದಿಂದೆ ತಾಳ್ದು . . . ಸೇನೆಯಯ್ದುತು (ಹಾಲಾಸ್ಯ. ೨-೦೪-೩೩). [ ←ಪಾರ. ಹಿಂ. ಮರಾ. ಜೇರ್‌ಬಂದ್ ]

**ಜೇರುಮುತ್ತಿಗೆ** (ನಾ). ಇಕ್ಕಟ್ಟಿಗೆ ಸಿಕ್ಕಿಸುವ ಮುತ್ತಿಗೆ; ಪ್ರಬಲವಾದ ಮುತ್ತಿಗೆ: ಕಂಡಿ ಕಣಿವೆ ಪಥಂಗಳಂ ಕಟ್ಟಿ ಜೇರುಮುತ್ತಿಗೆಯಂ ರಚಿಸಲ್ (ಕಳನ್ನ. ೩-೪೪). [ ಜೇರು$_2$ + ಮುತ್ತಿಗೆ ]

**ಜೇರೈಸು** (ಕ್ರಿ). ನೋವನ್ನುಂಟುಮಾಡು; ಸಂಕಟಪಡಿಸು: ಅಯ್ಯನನರಿವೆ ನೆಂದೆನುತ ಸಾನುರಾಗದೆ ಹಠದ ಭಕ್ತಿಯಿಂ ನಿಶ್ಚೈಸಿ ತಾನಿರುತ್ತಿರೆ ಕಾಲ್ಗೆ ನಾರಾಗಿ ಜೇರೈಸಿ ಬಾತಿರ್ದುದು (ದುರಪು. ೨೪-೬).
[ <ಜೇರು$_2$ + – ಇಸು$_3$ ]

**ಜೇಲಖಾನೆ** (ನಾ).=ಜೇಲು: ಇಂದಿನ ಜಗತ್ತಿನಲ್ಲಿ ನಾರಿಯರಿಗೆ ಇದೊಂದು ಜೇಲಖಾನೆಯಾಗಿರುತ್ತದೆ (ಅಗರ. ೨೭).
[ ←ಹಿಂ. ಜೇಲ್‌ಖಾನಾ, ಜೇಹಲ್‌ಖಾನಾ ]

**ಜೀಲು** 'ಜೈಲು' ನೋ.

**ಜೇವಡಿಸು** (ಕ್ರಿ). ಬಿಲ್ಲಿನ ಹೆದೆಯೇರಿಸಿ ಧ್ವನಿಯನ್ನುಂಟುಮಾಡು ; ಧನುಷ್ಟಂಕಾರಮಾಡು : ಸುರರಾಯನಂದನನೊಲವಿನಲಿ ಗಾಂಡೀವವ ಜೇವಡಿಸಿ (ಕುವ್ಯಾ.ವಿ. ೬-೫೦). [ ಜೇವಡೆ₁ (<ಜೇವೊಡೆ₁) + – ಇಸು₃]

**ಜೇವಡೆ₁** 'ಜೇವೊಡೆ₁' ನೋ.

**ಜೇವಡೆ₂** 'ಜೇವೊಡೆ₂' ನೋ.

**ಜೇವಡೆಗೆಯ್** 'ಜೇವೊಡೆಗೆಯ್' ನೋ.

**ಜೇವಡೆಗೈ** 'ಜೇವೊಡೆಗೆಯ್' ನೋ.

**ಜೇವಣ, ಜವಣ, ಜೇವಂಣ, ಜೇವಣಿ₁, ಜೇವಳಿ** (ನಾ). ೧. ಊಟ ; ಆಹಾರ ; ಭೋಜನ : ಅಂಬುಜಸೌರಭಂ ತನಗೆ ಗಾವಣ ಜೇವಣಮತ್ತ ಪೂರ್ವಮಾಸ್ಕಾಂಬುಜಗಂಧಮೆಂದೆಣಿಗಿ ಬಗ್ಗಿಸೆ (ಶಾಂತಿಪು. ೮-೮೭) : ಹಯ ದಂತಿಶಾಲೆಗೆ ಪೋಗಿ ಭಿಕ್ಷವೆನೆ ಕುದಿವ ಜೋಳದ ಜೇವಣವ ಪೊಯ್ಯಲು (ಪ್ರಭುಪು. ೪-೪೯) ; ಎಲ್ಲಾದರೂ ಔತಣ, ಜೇವಣ ಇದ್ದುಬಿಟ್ಟರಂತೂ ಅವಳ ತಾಯಿಗೆ ಇಲ್ಲದ ಭಯವಾಗಿ ಬಿಡುತ್ತಿತ್ತು (ಇಪ್ಪಶ. ೧೬೭). ೨. ತುತ್ತು ; ಗ್ರಾಸ : "ಜೇವಣಂ, ವಳಿಗೆ, ಕವಳಂ—ಈ ೩ ತುತ್ತಿಂಗೆ ಪೆಸರ್" (ಕಶಸಾ. ೨೨-೪೭೩) ; "ಜೇವಣಮೆಂದೆನೆ ಜೇಮನಾರ್ಥದಲ್ಲಿ" (ಕರ್ಣಾನಿ.೯೦). **ಜವಣ:** ೧. ಎರಡು ಪದಂಗಳಪಭ್ರಂಶಕ್ಕೆ—ಅವನಜೇಮನ-ಅವಣಜವಣ (ಶಮದ. ೨೮೯ ಪ್ರಯೋ). **ಜೇವಂಣ :** ೧. ತಿಂಗಳಿಗೊಮ್ಮೆ ಜೇವಂಣವ ಸೇವಿಸುತ ತೊಂಬತ್ತು ವತ್ಸರಂ ಕಾಮವಿಧ್ವಂಸ ಸುಜ್ಞಾನ ವೊಳಗಿರಲು (ಪ್ರಭುಪು. ೯-೧೯). **ಜೇವಣಿ₁ :** ೨. ನಂದೋಪನಂದರು ಜವಗೆ ಜೇವಣಿ [ಪಾಠಾಂ. ಣೆ]ಯಾದರೇ ಕಲಿಭೀಮನಿದಿರಿನಲಿ (ಕುವ್ಯಾಕ. ೧೩-೧೯). **ಜೇವಳಿ:** ೧. 'ಜೇವಳಿಗೆಯ್' ಪರಾ. [<ಪ್ರಾ. ಜೇಮಣ./ಸಂ.ಜೇಮನ]

**ಜೇವಣಶಾಲೆ** (ನಾ). ಊಟದ ಮನೆ ; ಭೋಜನಗೃಹ : ಓಲಗಶಾಲೆ ಪೂಗಿಡುಗಳೋಳಿಗೆ ಜೇವಣಶಾಲೆ ಮತ್ತ ಭೃಂಗಾಳಿಗೆ . . . ಎನಲೊಪ್ಪುವು ವಲ್ಲಿಯ ಪುಷ್ಪವಾಟಿಗಳ್ (ಪುಷ್ಪಪು. ೨-೫೦) ; ಋತುಗಳ ಸೆಜ್ಜೆ ತುಂಬಿಗಳ ಜೇವಣಶಾಲೆ (ವಿರೂಪಾ. ೩೭): ಸಾರಮೇಯಗಳ ಜೇವಣಶಾಲೆಯೆಂದೆನಲಾ ರುದ್ರಭೂಮಿಯೊಪ್ಪಿದುದು (ಶ್ರೀಪಾಂ. ೮-೧೧) ; ಧರೆಯ ಮಹಾರಣ್ಯವಲ್ಲ ಜೇವಣಶಾಲೆ ಶರಧಿ ವಾಪಿಗಳೇ ಭೃಂಗಾರಂಗಳು (ಕೃಕಪ. ೫-೭೩-೩).

[ ಜೇವಣ + ಶಾಲೆ₁ ]

**ಜೇವಣಸಾಲೆ** (ನಾ). = ಜೇವಣಶಾಲೆ : ನೆರೆದ ತುಂಬಿಯ ಜೇವಣಸಾಲೆ ಜಕ್ಕವಕ್ಕಿಯ ಸುರತಾಲಯಂ (ಲೀಲಾವ.೩-೯೩): ಇದು ಮನಸಿಜ ಮೋಹನ ಮಂತ್ರಾಲಯಮಿದು ಗಾಳಿಯ ಗುಣದಾಗರಮಿದು ತುಂಬಿಯ ಜೇವಣಸಾಲೆ (ಜಯಕಾ. ೪-೩). [ ಜೇವಣ + ಸಾಲೆ₃ ]

**ಜೇವಣಿ₁** 'ಜೇವಣ' ನೋ.

**ಜೇವಣಿ₂, ಜವಣಿ** (ನಾ). ಸತ್ತವರನ್ನು ಬದುಕಿಸುವುದೆಂದು ಹೇಳಲಾಗುವ ಒಂದು ಬಗೆಯ ಸಸ್ಯ ; ಸಂಜೀವಿನಿ : (+). **ಜವಣಿ:** ಅದರೊಳಂ ಕಲ್ಪಲತೆ ಸುರತರುವು ಸುರಧೇನು ಪುದಿದಿಹವು ಜವಣಿಗಿಡಗಳಮಳ ಚಿಂತಾಮಣಿಯ ಬಹುಗುಂಡುಗಳ್ (ನವಮೋ. ೨-೦೫). 'ಮಜಾಜೇವಣಿ' ಪರಾ. [ ? ]

**ಜೇವಣಿಕೆ** 'ಜೇವಣಿಗೆ₂' ನೋ.

**ಜೇವಣಿಗೆ₁** (ನಾ). = ಜೇವಣ : ದಾವಣಿಗಟ್ಟಿದ ಕುದುರೆಗುತ್ತಮಮಪ್ಪ ಜೇವಣಿಗೆಯನಿಕ್ಕಿ (ಶ್ರೀಪಾಲ. ೧೩-೧೦೦) : ಭಿಕ್ಷವಂ ಬೇಡಿ ಬರೆ ಜೇವಣಿಗೆ ಲಾಯದೊಳ್ ಕುದಿವುದಂ ತಂದಿಕ್ಕಿ (ಲಶಿಜಿಂ. ೩೨-೪೯).

[ ಜೇವಣಿ₁ (<ಜೇವಣ) + – ಗೆ ]

**ಜೇವಣಿಗೆ₂, ಜೇವಣಿಕೆ** (ನಾ). ಒಂದು ಬಗೆಯ ಮರ ; ಸಿಹಿಹಾಲೆ : "ಜೇವಣಿಗೆ[ಪಾಠಾಂ. ಕೆ]ಮಾಧುರ್ಯೆಯಕ್ಕು" (ಮಂಗರಾ. ೯೨-೩೭). ನೆಲ್ಲಿ ಕೇವಣಿಗೆ ಜೇವಣಿಗೆ . . . ಪೇರ್ಮರ್ಳೆಗಳೊಳು ವಲ್ಲರಿಗಳುಂ ಪರ್ವಿ ಜರ್ರಂಬ ಕಾನನವ ಕಂಡು ವಿಸ್ಮಿತರಾದರು (ಪ್ರಭುಪು. ೩-೧೩೦). ೨. = ಜೇವಣಿ₂: ಒಡಲಿನೊಳು ಮುಳಿದಿದ್ದ ಸಬಳವನುಡಿಯಲೀಯದೆ ಕೀಳ್ವ ಮದ್ದನು ಗಿಡಿವ ಜೇವಣಿಗೆಯೊಳು ಸಪ್ರಾಣಿಸುವ ದುರ್ವ್ರಣವ ತೊಡೆದು ಕಟ್ಟುವ ಹಸ್ತಿವೈದ್ಯರ ಗಡಣ (ಕುವ್ಯಾ ಭೀ. ೫-೪೦). **ಜೇವಣಿಕೆ :** ಮೇಲಿನ 'ಮಂಗರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ <ಸಂ. ಜೀವನಿಕಾ ]

**ಜೇವಣಿಗೆಗೊಳ್** (ಕ್ರಿ). ಊಟಮಾಡು; ತುತ್ತುಗೊಳ್ಳು : ಗುಣಮಯದ ಗರುವಾಯಿಯಲಿ ಜೇ[ಪಾಠಾಂ. ರ್ಘೀ]ವಣಿಗೆಗೊಂಬನು ಭೂತದಿಂದ್ರಿಯ ಗಣದೊಡನೆ (ಕುವ್ಯಾಸ. ೯-೧೫). [ ಜೇವಣಿಗೆ₁ + ಕೊಳ್₁ ]

**ಜೇವಳಿ** 'ಜೇವಣ' ನೋ.

**ಜೇವಳಿಗೆಯ್** (ಕ್ರಿ). ಉಣಬಡಿಸು; ಊಟಹಾಕು: ಪೊರೆವಳಿಕಳಭಗಳಿಗೆ ಜೇವಳಿಗೆಯ್ವ ಮರುತನ ಮೈಗೆ ಕಂಪಿಡುವ ಅರಲ ವಲ್ಲರಿ ಹಬ್ಬಿಬಿಡುವಾ ಇವಮ್ಮಾವನೊರೆವೆನೇನದಱ ವರ್ಣನವ (ನೇಮಿಸಂ. ೧-೭೧).

[ ಜೇವಳಿ (<ಜೇವಣ) + ಕೆಯ್₁]

**ಜೇವೊಡೆ₁, ಜಯವೊಡೆ, ಜೇವಡೆ₁** (ಕ್ರಿ). ಬಿಲ್ಲಿನ ಹೆದೆಯೇರಿಸಿ ಠೇಂಕಾರ ಮಾಡು ; ಧನುಷ್ಟಂಕಾರ ಮಾಡು : ವಜ್ರಕಾಂಡಮೆಂಬ ನಿಜವಿಜಯ ಕಾರ್ಮುಕಕ್ಕೆ ಸುರಕರಿಕರಾನುಕಾರಿಯಪ್ಪ ನಿಜಭುಜಾದಂಡಮಂ . . . ನೀವಿ ಜೇವೊಡೆದಾಗಳ್ (ಆದಿಪು. ೧೨-೮೭ ವ) ; ಬಿಲ್ಲನಪ್ರತಿಮಲ್ಲಂ ಏಱಿಸಿ ನೀವಿ ಜೇವೊಡೆಯೆ (ಶಾಂತಿಪು. ೪-೪) ; ಘನಜ್ಯಾನಿನದಂ ಭಯಂಗೊಳಿಸೆ ಜೇವೊಡೆದಂ ನಿಜಚಾಪದಂಡಮಂ (ಪಂಪರಾಮಾ. ೩-೫೦) ; ಬಾಲನೆನ್ನದಿರೆನುತ ರಿಪುಭಟಭಾಳಲೋಚನನೆನಿಸುವರ್ಜುನ ಬಾಳುಗೆನುತುದ್ದಂಡ ಕೋದಂಡವನು ಜೇವೊಡೆಯೆ (ಕುವ್ಯಾದ್ರೋ. ೪-೫೭) ; ಕಬ್ಬಿನ ಬಿಲ್ಲು ಜೇವೊಡೆದಂತೆ ಪಾಡಿದರೊಬ್ಬರಿಬ್ಬರಿಂಪು ನುಂಪಿನೊಳು (ಭರತ. ೧೩-೨೯). **ಜಯವೊಡೆ :** ಬೆಮರ್ವರಂ ಜಯವೊಡೆದ ರವಕ್ಕದ್ಭುತಂ ಕಂಸಚಾಪಂ (ಜಗವಿ. ೬-೩೦). ☞ ಇದು ಛಂದಸ್ಸಿಗಾಗಿ ಮಾಡಿಕೊಂಡ ವ್ಯತ್ಯಾಸ. **ಜೇವಡೆ₁ :** "ಜೇವಡೆ (ಜೇ+ಪಡೆ) (ಜೇವೊಡೆ)-ಶಿಂಜಿನೀ ಪ್ರಹರಣೇ (ಬಿಲ್ಲಿನ ಹೆದೆಯನ್ನು ಶಬ್ದಮಾಡಿಸು)" (ಶಮಧಾ): ವೀರಕೋದಂಡವನು ನೀಡಿದಡಾರಿತಿತ್ತಲು ಕಪಿ ಭಟಾವಳಿ ನಾರಿಯನು ಸರಳಿಂಗೆ ತೊಡಿಸಿದ ತೀವಿ ಜೇವಡೆದ (ಕಾಶಿರಾ. ೧೭-೩೦) : ಪಿಡಿದು ಚಾಪವನೇಱಿಸಿಯೆ ಜೇವಡೆಯೆ . . . ಗಿರಿ ಕೆಡೆದುರುಳಿದವು (ಸಾಳ್ವಭಾ. ೧೮-೬೯) ; ಬಿಲ್ಗಳ ಜೇವಡೆದು ತಿರುವಿನಲಿ ಶರಗಳನೋವಿ (ಕೋಗಯು. ೨೦-೬). [ ಜೇ₂ + ಪೊಡೆ₁ ]

**ಜೇವೊಡೆ₂, ಜೇವಡೆ₂** (ನಾ). ೧. ಬಿಲ್ಲಿಗೆ ಹೆದೆಯೇರಿಸಿ ಮಾಡುವ ಧ್ವನಿ; ಧನುಷ್ಟಂಕಾರ : "ಜೇವೊಡೆಯೆಂದು ಜ್ಯಾರವಂ" (ಕಶಸಾ. ೬-೧೨೦) : "ಜೇವೊಡೆ ಬಿಲ್ಲಾಲಿಯೆಂದೆನಲ್" (ಕವಿಕಂ. ೮೨) ; ಮದನನ ಬಿಲ್ಲ ಜೇವೊಡೆ ವಿಪಂಚಿಯ ಬಂಚದ ನುಣ್ಪು . . . ಎನೆ ನೇವುರದಿಂದುಡೆನೂಲ ತೊಂಗಲಿಂ ಮೃದುರವಮುಣ್ಮೆ (ಅನಂಪು. ೪-೫೦) ; ಜೇವೊಡೆಯ ರಭಾಡಿಯ ತೆಬ್ಬುಗಳ ತೆಗೆವೆರಳುಗೋಲಿನ ಕೊಬ್ಬಿನಾಳೆಟ್ಟಾಡಿತು (ಕುವ್ಯಾಭೀ. ೪-೧೨). **ಜೇವಡೆ₂ :** ೧. ಆತನ ಕುಡುಬಿಲ್ಲ ಜೇವಡೆಗೆ ಬಿಗುರ್ತಂತೆ ಕಣ್ಮುಕುಳಿಸಿದುವು (ಕಾದಂಉ. ೭೭೦) ; ಪಡೆ ಪೆಟಲ್ ಸರಿದುದಾ ಜೇವಡೆಯ ಪಟುಧ್ವನಿಗೆ (ಕುಸುಮಾ. ೧೧-೬೯); ಇದೆ ಕಿರೀಟಿಯ ಬಿಲ್ಲ ಜೇವಡೆಯಿದೆ ಸಿತಾಶ್ವನ ಸಿಂಹಗರ್ಜನೆಯಿದೆ ಮುರಾರಿಯ ಮನಕೆ ಮುಂಚುವ ಹಯದ ಖುರನಿನದ (ಕುವ್ಯಾದ್ರೋ. ೧೧-೯) ; ಬೊಬ್ಬೆಯಾರ್ಭಟೆ ಬಿಲ್ಲ ಜೇವಡೆ ಹಯಗಳ ಕೊಬ್ಬಿನ ಬಲು ಹೇಷಿತದಾ ಅಬ್ಬರ (ಶಂಪವಿ. ೦೭-೩೦). ೨. ಬಿಲ್ಲಿನ ಹೆದೆಯ ಹೊಡೆತ ; ಸಿಂಜನಿಯ ಪ್ರಹರಣ : ಜೇವಡೆಗಳ ಪುಙ್ಖಂ ತೂರಿವ ನೆತ್ತರ ಕೆಯ್ (ಕಾದಂಪೂ. ೧೮೩). [ <ಜೇವೊಡೆ₁ ]

**ಜೇವೊಡೆಗೆಯ್, ಜೇವಡೆಗೆಯ್, ಜೇವಡೆಗೈ** (ಕ್ರಿ). = ಜೇವೊಡೆ$_1$: ಕಡಿಖಂಡಂ ಮಾಡುವೆಂ ಚಕ್ರಮನೆಡೆಯೊಳಿನುತ್ತುಂ ಧನುರ್ದಂಡಮಂ ಜೇವೊಡೆಗೆಯ್ದು (ಶಂರಾಮಾ. ೦೪-೭೬) ; ಭೀಕರಮೂರ್ತಿ ಶಿಂಜನಿಗೊಳಿಸಿರ್ದ ಪಿನಾಕವ ಜೇವೊಡೆಗೆಯ್ಯೆ (ಮೋಹತ. ೩೪-೨೨) ; ನಳಿನಲೋಚನನಾರ್ದು ಶಾರ್ಙ್ಗವ ಬಲಿದು ಜೇವೊಡೆಗೆಯ್ಯೆ ಲೋಕವನಳಿಸುವ ದನಿ ಮಾಯವಾದುದು (ಸಾಳ್ವಭಾ.೨೪-೬೩). **ಜೇವಡೆಗೆಯ್**: ಮದಗಜವಿಂಡು ಬಂದುದ ಕಂಡು ಸ್ಮರಸುತ ಹದವಿಲ್ಲ ಜೇವಡೆಗೆಯ್ದು (ಮೋಹತ. ೩೪-೭). **ಜೇವಡೆಗೈ**: ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ ಸಮತೆಯೆಂಬ ತಿರುವ ಮೆಟ್ಟಿ ಜೇವಡೆಗೈದು (ವಸ್ವವ. ೪. ೭೪೭-೦೪೫೦) ; ಒದಱೆ ಜೇವಡೆಗೈದು ಬಾಣವ ಕೆದಱೆದನು (ಕುಮಾ.ಭೀ. ೦೦-೨). [ ಜೇವೊಡೆ$_2$ + ಕೆಯ್$_1$ ]

**ಜೇವೊಡೆವೊಯ್** (ಕ್ರಿ). = ಜೇವೊಡೆ$_1$: ದಿಶಾದಶ ಪ್ರಕರಣಂ ತಾನೆಂಬಿನಂ ನೀವಿ ಜೇವೊಡೆವೊಯ್ದಂ ವೈರಿಕುಲ ಚಿತ್ತಾ ಭಂಗಮಂ ಶಾರ್ಙ್ಗಮಂ (ಅನಂಪು. ೦೯-೦೬). [ ಜೇವೊಡೆ$_2$ + ಪೊಯ್$_1$ ]

**ಜೇಷ್ಟಮಧು** (ನಾ). ಒಂದು ಬಗೆಯ ಸಸ್ಯ ; ಅತಿಮಧುರ ; ಮಧುಕ : ಜೇಷ್ಟಮಧು ಅತಿಮಧುರ (ಪ್ರುಕಿಗಿ. ೩೪-೭೭೯). [ <ಸಂ. ಯಷ್ಟಿಮಧು ]

**ಜೇಷ್ಟೆ** 'ಜೆಟ್ಟಿ' ನೋ.

**ಜೇಷ್ಠ** (ಗು). ೧.' ಹಿರಿಯ ; ದೊಡ್ಡ: ಜೇಷ್ಠಪುತ್ರ (ರೂಢಿ). (ನಾ). ೨. ಚಾಂದ್ರಮಾನ ವರ್ಷದ ಮೂರನೆಯ ತಿಂಗಳು : ವೈಶಾಖದಲಿ ಲಾಭವು ಜೇಷ್ಠದಲ್ಲಿಯು ಲೇಸು (ಗಗಶಾ. ೪-೬೩). [ <ಸಂ. ಜ್ಯೇಷ್ಠ ]

**ಜೇಷ್ಠಾಂಸ** (ನಾ). ಹಿರಿಯ ಮಗನಿಗೆ ಕೊಡುವ ಹೆಚ್ಚಿನ ಪಾಲು,–ದೊಡ್ಡ ಪಾಲು : ಮೂಡಲು ಪಳ್ಳವಾಯ್ಕಾಲು ತೆಂಕಲುದ್ದಿಯಕಾಲು ಪಡುವಲು ನಾರಾಯಣಯ್ಯನ ಜ್ಯೇಷ್ಠಾಂಶದ ಭೂಮಿ (ಕಇಅ.೭೯-೦೩-೨೯: 1088). [ <ಸಂ. ಜ್ಯೇಷ್ಠಾಂಶ ]

**ಜೇಷ್ಠೆ** 'ಜೆಟ್ಟಿ' ನೋ.

**ಜೇಹಣೆ** 'ಚಿಹಣೆ' ನೋ.

**ಜೈ, ಜೇ$_1$** (ನಾ). ಜಯಜಯಕಾರ; 'ಜಯವಾಗಲಿ' ಎಂಬ ಹಾರೈಕೆಯ ನುಡಿಯ ಸಂಕ್ಷಿಪ್ತರೂಪ. 'ಜೈಗುಡು' ಪರಾ. **ಜೇ$_1$**: ಹರುಷದಿಂ ಜೇಯೆಂದು ವಿದ್ವಾಂಸರುಗಳನುವತಮದಿಂದೆ ಪೇಳ್ವೆನು ಪರಮ ನೇಮೀಶ್ವರನ ಚರಿತವನು (ಸಾಳ್ವಭಾ. ೦-೩೩). [ <ಸಂ. ಜಯ ]

**ಜೈಗುಡು** (ಕ್ರಿ). ೧. ಜಯಜಯಕಾರ ಮಾಡು : ಜನಮಂಡಳಿ ಜೈಗುಡುತ್ತಿತ್ತು (ರೂಢಿ). ೨. ಧ್ವನಿಮಾಡು: ಪಟಹ ಭೇರಿಗಳ್ ಜೈಗುಡಲ್ಕಾ ದನಿಗೆ ದನಿಗೊಟ್ಟು ದಿಕ್ಕರಿಗಳೋಂಕಾರಗೈದುವಾಗಳ್ (ಭರಥ. ೦-೦೬). [ ಜೈ + ಕುಡು$_1$ (<ಕೊಡು$_1$) ]

**ಜೈತ್ರ** (ಗು). ಗೆಲವನ್ನು ಪಡೆದ; ಜಯಶಾಲಿಯಾದ; ಯಶಸ್ವಿಯಾದ: ರಾಜಪುತ್ರಿಸ್ಮಿತಮಧುಮಧುರಾಪಾಂಗಜೈತ್ರಾಂಗಜಾಸ್ತ್ರಂಗಳ ಕೋಳಂ ನೂತನ ಪ್ರೇಮದೆ ನಿಮಿರ್ವೆಡೆಯೊಳ್ ದೃಷ್ಟಿಯಂ ಕಾವನಾವಂ (ಆದಿಪು. ೪-೫೦). (ನಾ). ೨. ಗೆದ್ದವನು ; ವಿಜಯಿಯಾದವನು. ೩. ಗೆಲವು; ಜಯ. 'ಜೈತ್ರಕಥೆ' ಪರಾ. [ ಸಂ. ]

**ಜೈತ್ರಕಥೆ** (ನಾ). ಗೆಲವಿನ ಕಥೆ : ತೀವಿದೊಲವಿನ ದಂಪತಿಗಳಾಗೆ ಮನ ಬುದ್ಧಿ ಜೀವಿತವು ಜೈತ್ರಕಥೆ (ಮುಂಕುಳ. ೩೪೩). [ ಜೈತ್ರ + ಕಥೆ ]

**ಜೈತ್ರಧ್ವಜ** (ನಾ). ಜಯದ ಗುರುತಾದ ಧ್ವಜ,–ಬಾವುಟ: ನಿನ್ನ ವಿಜಯ ಪ್ರಾರಂಭದೊಳ್ ತೋರ್ಕೆಗೆತ್ತಿದ ಜೈತ್ರಧ್ವಜಮೆಂದು ತೋರ್ಪ ತಿಱದಿಂ (ಆದಿಪು. ೦೦-೦೭). [ ಜೈತ್ರ + ಧ್ವಜ ]

**ಜೈತ್ರಯಾತ್ರೆ** (ನಾ). ವಿಜಯಯಾತ್ರೆ : ಪುಷ್ಪಾಕರ ಬಲವಿಜಯೋದ್ದಪರ್ಕಂದರ್ಪ ಲೀಲಾಕರನಾದಂ ಜೈತ್ರಯಾತ್ರೋತ್ಸವದೊಳಖಿಲ ಪಟ್ಟಂಡಭೂಮಂಡಲೇಶಂ (ಆದಿಪು. ೦೩-೭) ; ಮುಂದೆ ಶಾಂತೀಶ್ವರನ ದಿಗ್ವಿಜಯ ವರ್ಣನೆಯಲ್ಲಿ ರಘುಮಹಾರಾಜನ ಜೈತ್ರಯಾತ್ರೆಯನ್ನು ಅನುಸರಿಸುತ್ತಾನೆ (ಕಸಾಚ. ೦೦೪) ; ಅಗಾಧ ಸಂದಣಿಯೊಂದಿಗೆ ರಾಯ ಜೈತ್ರಯಾತ್ರೆ ಹೊರಟವನು (ಅಳಿಳ. ೨೦). [ ಜೈತ್ರ + ಯಾತ್ರೆ ]

**ಜೈತ್ರರಥ** (ನಾ). ಜಯವನ್ನು ಸಾಧಿಸಿ ಕೊಡುವ ರಥ ; ಗೆಲ್ಲುವ ರಥ : "ಗೆಲ್ವ ರಥವಮಾಳೋಚಿಸಲು ಜೈತ್ರರಥಮಕ್ಕು" (ಮಂಗರಾ. ೫೪-೨೪). [ ಜೈತ್ರ + ರಥ ]

**ಜೈತ್ರಲಕ್ಷ್ಮಿ** (ನಾ). ಜಯದ ದೇವತೆ ; ಜಯಲಕ್ಷ್ಮಿ : ಮಹೀಚಕ್ರಸಂಸ್ತುತದೋರ್ದ್ದಂಡಳ . . . ದಿಗ್ವರ್ತಿತ ಜೈತ್ರಲಕ್ಷ್ಮಿ ಭರತ ಶ್ರೀಮಚ್ಚಮೂವಲ್ಲಭಂ (ಎಳ. VI, ಚಿಕ್ಕಮ. ೧೬೦-೮೭ ; 1187). [ ಜೈತ್ರ + ಲಕ್ಷ್ಮಿ ]

**ಜೈತ್ರಾಸ್ತ್ರ** (ನಾ). ಜಯವನ್ನು ಸಾಧಿಸಿ ಕೊಡುವ ಅಸ್ತ್ರ; ಗೆಲ್ಲುವ ಅಸ್ತ್ರ: ಜೈತ್ರಾಸ್ತ್ರವಿನ್ನಿನಗೀ ಚಕ್ರರತ್ನದಿಂ ಪೆಱತುಂಟೇ (ಆದಿಪು. ೦೪-೦೨). [ ಜೈತ್ರ + ಅಸ್ತ್ರ ]

**ಜೈತ್ರೋರ್ವರೆ** (ನಾ). ಜಯದ ಭೂಮಿ : ಮಳಯಾನಿಳಂ ಸುಳಿದು ಕಾಲಕ್ಷೇಪಮಂ ವಿಷ್ಣುಭೂಪನ ಜೈತ್ರೋರ್ವರೆಯಲ್ಲಿ ಮಾಡುವುದು ಕಾವೇರೀನದೀತೀರದೊಳ್ (ಎಳ. V, ಹಾಸನ. ೫೩-೯ ; 1170). [ ಜೈತ್ರ + ಉರ್ವರೆ ]

**ಜೈದ** (ನಾ). ಒಂದು ವಂಶದ ಹೆಸರು (?) : ದಕ್ಷಿಣಸ್ಯಾಂ ದಿಶಿ ಬೆಳ್ಗಲ್ಲಿ ಗೆಱೆಯಾ ಒಳಗೆಱೆಯಾ ಪಳ್ಳದಾ ಕೂಡಲ್ದಕ್ಷಿಣ ಪಶ್ಚಿಮಾಯಾನ್ದಿಶಿ ಜೈದರಾ ಕೆಯ್ಯಾ ಬೆಳ್ಗಲ್ಲೊಱಡು (ಎಳ. IV, ನಾಗಮಂ. ೮೫-೬೨ ; 776). [ ? ]

**ಜೈನ** (ಗು). ೧. ಜಿನನಿಗೆ ಸಂಬಂಧಿಸಿದ,–ಸೇರಿದ. (ನಾ). ೨. ಜಿನಮತದ ಅನುಯಾಯಿ ; ಜೈನಮತಕ್ಕೆ ಸೇರಿದವನು: ಜೈನನನುಪೇಕ್ಷಿಪೊಡಂತವ ಜೈನನೆ (ಸಮುಪ. ೪-೬೩): ಪಿನಾಕಿಭವನವನೊಬ್ಬ ಜೈನನು ಕೆರಹುಗಾಲ್ವೆರಸಿ ನೀಕರಿಸಿ ಹುಗಲೊಳಗೆ (ಬಸಪು. ೪೮-೮): ಹಿಂದು ಜೈನ ಮುಸ್ಲಿಮ ಕ್ರೈಸ್ತರಾವೊಂದೇ ಬಾಂಧವರು (ಗೀವಿಂ. ೪೭-೪). ೩. ಜೈನ ಗುರು : "ಜೈನರ್ ದಿಗಂಬರರ್ ಜೀವಕರ್ ಮಲಧರರ್ ತಾನಜೀವರ್ ಕ್ಷಪಣರೆನೆ ಗುರುಗಳಕ್ಕು" (ಮಂಗರಾ. ೬೬-೦). ೪. ಜಿನ ; ಅರ್ಹಂತ. 'ಜೈನಗೃಹ', 'ಜೈನಬಿಂಬ' ಪರಾ. ೫. ಜೈನಮತ ; ಜೈನಮತದ ಅಥವಾ ಜೈನ ಧರ್ಮದ ತತ್ತ್ವ: ಪುರುಳಿಲ್ಲದಂಗೆ ಜೈನಂ ದೊರೆಕೊಂಡುಂ ದುಶ್ಚರಿತ್ರಮಂ ಬಿಡದುದಱಿಂ ಚಿರಕಾಲಂ ನಿಲಲಱಿಯದು (ಸಮುಪ. ೪-೩೦) ; ಜೈನವೇ ಸಿದ್ಧ ಬದ್ಧ ನಾರಕಿಗಳು ಎಂಬ ಪುರುಷತ್ರಯಲಕ್ಷಣಂಗಳಂ . . . ಪ್ರತಿಪಾದಿಸುವುದು (ವಿವೇಳ. ೮). [ ಸಂ. ]

**ಜೈನಗೃಹ** (ನಾ). ಜಿನ ದೇವಾಲಯ ; ಜಿನಾಲಯ ; ಬಸದಿ : ದೆಸೆಗಳ್ ಪೆರ್ಚದೆ ಪೊಟ್ಟನಾದುವಗಲಕ್ಕೆಂಬನ್ನೆಗಂ . . . ವಸುಧೆಗಾ ಕಲ್ಪಾಂತಮಂಬಂತು ಮಾಡಿಸಿದಂ ಜೈನಗೃಹಂಗಳಂ (ಆದಿಪು. ೦೫-೪೭). [ ಜೈನ + ಗೃಹ ]

**ಜೈನಗೇಹ**(ನಾ).=ಜೈನಗೃಹ: ಗಿರಿರಾಜಂಗೊಟ್ಟಜಂಗೊಟ್ಟಪೊಲೆಸೆದುದದೇಂ ದಿವ್ಯಮೋ ಜೈನಗೇಹಂ (ಶಾಂತಿಪು. ೨-೦೦೭): ನವರತ್ನ ವಿನಿರ್ಮಿತನೂತ್ನ ಜೈನಗೇಹಮನತಿಭಕ್ತಿಯಿಂದೆ ಬಲವಂದು (ಪುಷ್ಪಪು. ೩-೭೫). [ ಜೈನ + ಗೇಹ ]

**ಜೈನಜನ** (ನಾ). ಜೈನಮತದ ಜನ : ಜಯಶ್ರೀಗೊಲವನೀಯೆ ನೆಗಟ್ಟಂ ಭೂಗಧಿಪತಿ ಜೈನಜನಮನೋಹರಚರಿತಂ (ಚಂದ್ರಪು. ೨-೦) : ಕಾಣದೆ ಮುಂದಂ ದೆಸೆಗೆಟ್ಟ ಜೈನಜನಕೆಲ್ಲಂ ಲೋಚನಂ ತಾನೆನಲ್ಕುದಯಂಗೆಯ್ದನ್ (ಎಳ. VIII, ಸೊರಬ. ೨೮-೯೫ ; 1208). [ ಜೈನ + ಜನ ]

**ಜೈನತನ** (ನಾ). ಜೈನಪದ್ಧತಿಯನ್ನು ಅನುಸರಿಸುವಿಕೆ ; ಜೈನನಾಗಿರುವಿಕೆ : ಅವನ ಮಕ್ಕಳ್ಗಡ ಮಾರ್ತಾಂಡಂಗೆ ಭಕ್ತರೆನಿಪಾ ಭಂಡಂಗಂ ಜೈನತನದ ಪೆಸರೆಂತೆಸೆಗುಂ[ಪಾಠಾಂ. ಉತ್ತಮದ ಜೈನವೆಸರೆಂತೆಸೆಗುಂ] (ಸಮುಕ. ೯-೧೨೩). [ ಜೈನ + -ತನ ]

**ಜೈನದೀಕ್ಷಿತ** (ನಾ). ಜೈನದೀಕ್ಷೆಯನ್ನು ಹೊಂದಿದವನು,-ಪಡೆದವನು: ನಾನಾ ವಿಧದಿಂದಮೇಂ ನಮದು ನಾರುಗಿದಿರ್ವರೋ ಜೈನದೀಕ್ಷಿತರ್ (ಶಾಂತಿಪು. ೮-೧೨೯). [ ಜೈನ + ದೀಕ್ಷಿತ ]

**ಜೈನದೀಕ್ಷೆ** (ನಾ). ೧. ಜೈನ ಸಂನ್ಯಾಸದ ದೀಕ್ಷೆ,-ವೈರಾಗ್ಯದ ದೀಕ್ಷೆ : ಜಗನ್ನುತ ಸ್ವಯಂಪ್ರಭಗುರುಪಾದಮೂಲದೊಳ್ ಕೊಂಡನಖಂಡಿತ ಜೈನದೀಕ್ಷೆಯಂ (ಆದಿಪು. ೨-೩೯). ೨. (ಆಲಂ). ಅಹಿಂಸಾವ್ರತ: ಜೈನದೀಕ್ಷೆಯ ಹಿಡಿದುದೆನ್ನ ಸಮಾನ ಸುಭಟರು ಜಯಸಿರಿಯ ಸಂಧಾನ ಮುಱಿದುದು (ಕುಮಾ.ಭಾ. ೫-೦೪). [ ಜೈನ + ದೀಕ್ಷೆ ]

**ಜೈನಧರ್ಮ** (ನಾ). ಜಿನನಿಂದ ಬೋಧಿಸಲ್ಪಟ್ಟ ಧರ್ಮ: ಎಲ್ಲ ಧರ್ಮಗಳಿಗಿಂತಲೂ ಜೈನಧರ್ಮವು ಅಹಿಂಸೆಗೆ ಹೆಚ್ಚು ಮಹತ್ತ್ವವನ್ನು ಕೊಡುತ್ತದೆ (ಜೈಸಹ. ೬): ಜೈನಧರ್ಮವು ವಿಶ್ವದ ಅತ್ಯಂತ ಪ್ರಾಚೀನ ಧರ್ಮಗಳಲ್ಲೊಂದಾಗಿದೆ (ಭಾರಶ. ೦೬೯). [ ಜೈನ + ಧರ್ಮ ]

**ಜೈನಬಸ್ತಿ** (ನಾ). ಜೈನರ ಬಸದಿ,-ದೇವಾಲಯ ; ಜಿನಾಲಯ: ಹಲಸಿಯಲ್ಲಿರುವ ಜೈನಬಸ್ತಿಯು ಕದಂಬರ ಕಾಲದ ಅತ್ಯಂತ ಪುರಾತನ ಕಟ್ಟಡವೆಂದು ಹೇಳಬಹುದು (ಭಾರಶ. ೫೦೦). [ ಜೈನ + ಬಸ್ತಿ (<ಬಸದಿ) ]

**ಜೈನಬಿಂಬ** (ನಾ).=ಜಿನಪ್ರತಿಮೆ : ಪೊಸಮುತ್ತಿನ ಮಂಡವದೊಳಗೆಸೆವ ಕನತ್ಕನಕ ಪೀಠದೊಳ್ ವಿಧಿಸಹಿತಂ ಮಿಸಿಸಿ ಬಟ್ಟೆಕ್ಕೆರ್ಚಿಸಿ ಪೂಜಿಸಿ ಮಣಿಮಯ ಜೈನಬಿಂಬಮಂ (ಶಾಂತಿಪು. ೬-೩೦). [ ಜೈನ + ಬಿಂಬ ]

**ಜೈನಮತ** (ನಾ). = ಜಿನಮತ : ಜಿನರು ಪ್ರತಿಪಾದಿಸಿದ ಮತವು ಜೈನಮತವು (ಜೈನಧ. ೧). [ ಜೈನ + ಮತ ]

**ಜೈನಮುನಿ** (ನಾ).=ಜಿನಮುನಿ : ಜೈನಮುನಿ ಸಂಕುಲವಿದೆವ್ಯೊಡನಟ್ಟಲೂರೊಳು ಮಲೆವುತಂ ಪ್ರತಿದೋಱಿಯಾಡಲು (ಬಸಪು. ೫೦-೩೦). [ ಜೈನ + ಮುನಿ₃ ]

**ಜೈನವೃತ್ತಿ** (ನಾ). ಜೈನಧರ್ಮದ ಆಚರಣೆ,-ವ್ಯವಹಾರ : ಮಹೇಂದ್ರಜಾಲಾಪರಿಮಿತಾದ್ವಯಶೂನ್ಯಮಾಯಾಕರಣವಿದ್ವಿಷ ಜೈನವೃತ್ತಿಯೊಳಿಂತು ತರ್ಕಿಸಲು (ಬಸಪು. ೫೦-೧೧). [ ಜೈನ + ವೃತ್ತಿ ]

**ಜೈನಶಾಸನ** (ನಾ).=ಜಿನಶಾಸನ : ತದನಂತರದೊಳ್ ಜೈನಶಾಸನ ಚೂಡಾಮಣಿ ಶ್ರೀದೇವಂ ಸೌಧರ್ಮೇಂದ್ರನಿಂದ್ರಾಣಿವೆರಸಂ ತನ್ನ ವಿಮಾನಕ್ಕೆ ಬರ್ಪುದನಱಿದು (ಶಾಂತಿಪು. ೬-೩೦). [ ಜೈನ + ಶಾಸನ ]

**ಜೈನಸಮಯ** (ನಾ).=ಜಿನಸಮಯ : ಶ್ರೀಮದಶೇಷ ಜೈನಸಮಯೈಕಶಿರೋಮಣಿ ಸರ್ವಜೀವರಕ್ಷಾಮಣಿಯೆಂದು ಭವ್ಯತತಿ ಬಿಚ್ಚಳಿಸುತ್ತಿರೆ (ಶಾಂತಿಪು. ೧-೦ ಪಠಿ). [ ಜೈನ + ಸಮಯ ]

**ಜೈನಸ್ತವ** (ನಾ). ಅರ್ಹಂತನ ಸ್ತುತಿ; ಜಿನಸ್ತುತಿ: ದೇವತೂರ್ಯನಗದೇವೀಗೀತ ಜೈನಸ್ತವ ಸಮುಪಹಿತಾತ್ಮೀಯಚಿತ್ತಂ ವಿಲಾಸಂ ಮಿಗೆ . . . ಮಹೋತ್ಸಾಹದಿಂ ಬಂದನಾಗಳ್ (ಆದಿಪು. ೮-೯೩). [ ಜೈನ + ಸ್ತವ ]

**ಜೈನಾಗಮ** (ನಾ). ಜೈನಸಿದ್ಧಾಂತ : ಸೂಕ್ಷ್ಮಂ ಭವ್ಯಜನ ಪ್ರವ್ಯಕ್ತಂ ಜೈನಾಗಮೋಕ್ತಮಿಂ ನಿನಗೆ ಮದೀಯೋಕ್ತಮಿವೆರ್ದೆಯೋಳ್ ನೆಲಸುಗೆ (ಆದಿಪು. ೫-೬೧). [ ಜೈನ + ಆಗಮ ]

**ಜೈನಾಗಮವಿದ** (ನಾ). ಜೈನಸಿದ್ಧಾಂತವನ್ನು ಬಲ್ಲವನು,-ತಿಳಿದವನು: ಜೈನಾಗಮವಿದರಂ ಸಾರದೆ ಪೋಗಿ ಕುಲಿಂಗಿಗಳನೀ ಜನಂ ಸೇವಿಸುಗುಂ (ಆದಿಪು. ೧೫-೩೫). [ ಸಂ. ಜೈನಾಗಮವಿದ್ ]

**ಜೈನಾಗ್ರಹಾರ** (ನಾ). ಜೈನರ ಅಗ್ರಹಾರ ; ಜೈನರ ಉಪಾಧ್ಯಾಯರು ವಾಸಮಾಡುವ ಗ್ರಾಮ: ಪಲವು ಜೈನಾಗ್ರಹಾರಂಗಳನಾಗಳ್ ಕೊಟ್ಟನಲ್ಲಿ ರತ್ನತ್ರಯ ಮಂಜುಳ ಜೈನೋಪಾಧ್ಯಾಯರ ಬಳಗಕ್ಕೆ (ರಾಧಪು.೧೬-೩೮೦). [ ಜೈನ + ಅಗ್ರಹಾರ ]

**ಜೈನಾಚಾರ್ಯ**(ನಾ). ಜೈನರ ಆಚಾರ್ಯ,-ಗುರು: ತಿರುವಾಕರೀಶನೆನಿಪ್ಪ ಜೈನಾಚಾರ್ಯನೊರ್ಬನು ಜಿನಸಮಯಭುಮುಖ್ಯನು (ಬಸಪು. ೯೯-೨೬). [ ಜೈನ + ಆಚಾರ್ಯ ]

**ಜೈನಾಲಯ** (ನಾ). = ಜೈನಗೃಹ : ಮುನೀಂದ್ರರಿಲ್ಲದಗಮಿಲ್ಲಾತೋದ್ಯದುದ್ಯೋಗವಿಲ್ಲದ ಜೈನಾಲಯಮಿಲ್ಲ ನೋಡದಱೊಳ್ (ಶಾಂತಿಪು. ೯-೧೩೩). [ ಜೈನ + ಆಲಯ ]

**ಜೈನುಂಡೆ** 'ಜೇನುಂಡೆ' ನೋ.

**ಜೈನೋಕ್ತಿ** (ನಾ). ಜಿನನ ಮಾತು; ಅರ್ಹಂತನ ವಚನ: ಸೌಧರ್ಮಕಲ್ಪಕ್ಕೆ ಭಾವನೆ ಜೈನೋಕ್ತಿಯೊಳಾಗೆ ದುರ್ಗತಿಗವಾ ಜೀವಕ್ಕಮೇಂ ಸಮ್ಮುದಂ (ಶಾಂತಿಪು. ೬-೦೨). [ ಜೈನ + ಉಕ್ತಿ ]

**ಜೈಮಿನೀಯ** (ಗು). ೧. ಜೈಮಿನಿಮುನಿಗೆ ಸಂಬಂಧಿಸಿದ. (ನಾ). ೨. ಜೈಮಿನಿಮುನಿಯಿಂದ ರಚಿತವಾದ ಧರ್ಮಮೀಮಾಂಸೆ; ಆರು ಆಸ್ತಿಕ ದರ್ಶನಗಳಲ್ಲಿ ಒಂದು ; ಪೂರ್ವ ಮೀಮಾಂಸೆ: ಈ ಮೂಲ ತತ್ತ್ವಾನ್ವೇಷಣರೂಪದಲ್ಲಿ . . . ಯೋಗ, ಜೈಮಿನೀಯ, ಔಪನಿಷದಗಳೆಂಬ ಆರು ಆಸ್ತಿಕ ದರ್ಶನಗಳೂ ಆವಿರ್ಭವಿಸಿರುತ್ತವೆ (ಭಾರಶ. ೨೨೯). ೩. ಜೈಮಿನಿ ಮುನಿಯ ಅನುಯಾಯಿ ; ಮೀಮಾಂಸಕ. [ ಸಂ. ]

**ಜೈಲು, ಜೇಲು** (ನಾ). ಸೆರೆಮನೆ ; ಬಂದಿಖಾನೆ ; ಕಾರಾಗೃಹ : ಹದಿಮೂರು ವರ್ಷದವನು ಕಳ್ಳನಾದರೆ ಅವನಿಗೆ ಜೈಲಾಗುವುದಿಲ್ಲ (ಜೀವಾತ್ಮ. ೨೬೫): ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ . . . ಮುಂದಿಟ್ಟ ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿ (ಪಾಂಚಜ. ೨೦). ಜೇಲು : ಜೇಲಿನ ವಾತಾವರಣ ನಿಜವಾಗಿಯೂ ಉಸಿರುಕಟ್ಟುವ ವಾತಾವರಣ (ಆತ್ಮಾರ್ಪ. ೯). ಜೇಲಿನ ಗೋಡೆ ಹಾರಲಿಕ್ಕಾಗಲಿಲ್ಲ (ಭಾರತಿ. ೮೦). [ ←ಇಂ. Jail ]

**ಜೈವ** (ಗು). ಜೀವಕ್ಕೆ ಸಂಬಂಧಿಸಿದ. 'ಜೈವಕ್ರಿಯೆ' ಪರಾ. [ ಸಂ. ]

**ಜೈವಕ್ರಿಯೆ** (ನಾ).ಜೀವಕ್ಕೆ ಸಂಬಂಧಿಸಿದ ಕ್ರಿಯೆ: ಜೈವಕ್ರಿಯೆಯಿಂದಾಗುವ ಅಂಗವೃದ್ಧಿ, ಒಂದುಗೂಡಿಕೆ (Accretion. ಇಂಕೆನಿ.). [ ಜೈವ + ಕ್ರಿಯೆ ]

**ಜೈವಾತೃಕ** (ನಾ). ೧. ದೀರ್ಘಾಯುಸ್ಸನ್ನು ಉಳ್ಳವನು; ದೀರ್ಘಾಯು: "ಜೈವಾತೃಕನುಮಾಯುವಂತನೆನಿಸಿಕ್ಕು" (ಮಂಗರಾ. ೬೧-೦೮). ೨. ಚಂದ್ರ: "ಇಂದು ಜೈವಾತೃಕಂ . . . ದ್ವಿಜರಾಜನೆನೆ ಸುಧಾಂಶುವೆನಿಕ್ಕು" (ಮಂಗರಾ. ೧೧-೪): ಶರಧಿಯೊಳು ಜೈವಾತೃಕಂ ಪುಟ್ಟಿ ಜಗಕೆ ಪ್ರಭೆಮೆಱೆವಂತೆ (ಪ್ರಾಭರಾ. ೧-೨೨). ೧, ೨ : ನಾಡಿಗರೊಳೆಲ್ಲರುಂ . . . ಜೈವಾತೃಕರ್ ದೋಷಾಕರರಲ್ತು (ರಾಮಾಶ್ವ. ೬-೨೪). [ ಸಂ. ]

**ಜೈಸು** 'ಜಯಿಸು' ನೋ.

**ಜೊ** 'ಜೋ' ನೋ.

**ಜೊಂಗುಳಿ** (ನಾ). ಬವಳಿ ; ಮೂರ್ಛೆ ; ಮೈಮರೆವು : "ಮುಚ್ಚಿ ಜೊಂಗುಳಿ[ಪಾಠಾಂ. ಜಂಗುಳಿ]ಹರವಸಂ ಮೂರ್ಛೆ ತಾನಕ್ಕು" (ಕಬ್ಬಮಂ. ೫೬) ; ಝುಳಕಂ ಝುಳಿಪಿಸಿದಂ ಜೊಂಗುಳಿ ಬೊಂಬುಳಿಯಾಳಮಾಳಮಂತೆ . . . ಗೋಳಿ ಪೇಳಿ ಜಿಟ ಸಂದೇಹಂ (ಶಮದ. ೩೫) ; ನಡುಗುತಿಹು ದೊಡಲು ತೆಪ್ಪತ್ತು ತಲೆಯೆತ್ತಿ ಹೊತ್ತಿಕ್ಕೆ ಜೊಂಗುಳಿಗೆ ಬೆಪ್ಪಳಿಸುವಾಸರಿಂ ಬೆಳ್ಪು ಬರುತಿಹಳು (ಕಾಲೂರ. ೧೩೬-೩೬೩). [ ? ]

**ಜೊಂಗೆ** 'ತೊಂಗೆ' ನೋ.

**ಜೊಂಜಾಟ** 'ಜಂಜಡ' ನೋ.

**ಜೊಂಡಗರ್ಬು** 'ಜೊಂಡೆಗರ್ಬು' ನೋ.

**ಜೊಂಡಿಂಗ** 'ತೊಂಡಂಗಿ' ನೋ.

**ಜೊಂಡಿಗ** 'ತೊಂಡಂಗಿ' ನೋ.

**ಜೊಂಡು$_1$** (ನಾ). ೧. ತಲೆಯ ಹಗರು,-ಹೊಟ್ಟು : (+).
[ ದೇ.॥ ತಮಿ. ಚುಣ್ಣು ; ತೆಲು. ಚುಂಟು. ]

**ಜೊಂಡು$_2$**, ಜಂಡು (ನಾ). ೧. ನೀರಿನಲ್ಲಿ ಬೆಳೆಯುವ ಒಂದು ಬಗೆಯ ಹುಲ್ಲು; ಹೊಡಕೆ; ಆಪು: ಆಗ ಜೊಂಡುಗಳ ನಡುವೆ ಅವಿತುಕೊಂಡಿದ್ದ ಡಕಾಯಿತರು ತಟ್ಟನೆ ಕಾಣಿಸಿಕೊಂಡು . . . ಬಂದರು (ಜಗಜ್ಯೋ. ೯): ಕೊಳದಲ್ಲಿ ಜೊಂಡು ಬೆಳೆದು ನೀರನ್ನು ಮುಚ್ಚಿರುವಂತೆ (ವಚಳ. ೧೫೭) : ಆನೆಯಾಗಿ ಜೊಂಡು ತಿನ್ನುವುದಕ್ಕಿಂತ ಇರುವೆಯಾಗಿ ಸಕ್ಕರೆ ತಿನ್ನುವುದು ಮೇಲು (ಗಾದೆ). ೨. ನೀರಲ್ಲಿ ಕೊಳೆತು ನಾರುವ, ಕೆಸರುಗಟ್ಟಿದ ಕಸ ; ನೀರಿನ ಮೇಲೆ ತೇಲುವ ಕೊಳೆತು ನೊರೆಗಟ್ಟಿದ ಸೊಪ್ಪುಸದೆ ಮೊದಲಾದವು: ಏಸೋ ಈಶರು ದಾಸರಾಗಿ ಕೈಂಕರ್ಯದಲಿ ಜನದ ಬದುಕನು ತಿದ್ದಿ ಹಸನುಗೊಳಿಸಿ . . . ಮಲಗಿಹರು ನಾವು ನೊರೆ ತೆರೆಗಳೋ ಜೊಂಡು ಪಾಚಿ (ಭಾವಜೀ. ೧೩-೨೫೨). **ಜಂಡು:** ೨. ಮನೆ ಎಂದರೆ ಜಂಡಿನ ಕೆರೆ. ಮಸಣಕ್ಕಿಂತಲೂ ಹೊಲಸಾಗಿದೆ (ಹದ್ಯಸ. ೨೬೪).

**ಜೊಂಡು$_3$** 'ದೊಂಡೆ$_1$' ನೋ.

**ಜೊಂಡುಮಿಾಸೆ**(ನಾ). ಜೊಂಡಿನಂತೆ ಬೆಳೆದ ಮಿಾಸೆ. [ಜೊಂಡು$_2$+ ಮಿಾಸೆ]

**ಜೊಂಡೆ** 'ದೊಂಡೆ$_1$' ನೋ.

**ಜೊಂಡೆಗರ್ಬು**, ಜೊಂಡಗರ್ಬು (ನಾ). ಒಂದು ಬಗೆಯ ಕಬ್ಬು : ತೋರಣಸ್ತಂಭಂಗಳಾಗಿ ಪೊಱಗಟ್ಟಿ ನಿಱಸಿದ ಜೊಂಡೆಗರ್ಬಿನ ತೆನೆಗಳ್ (ಲೀಲಾವ. ೧೦-೫೫ ವ). **ಜೊಂಡಗರ್ಬು :** ಮಗಮಗಿಪ ಧೂಪದಿಂ ಜೊಂಡಗರ್ಬಿನಿಂ ಪಣ್ಪಲಂಗಳಿಂ . . . ಬಗೆಗೊಳಿಕುಂ ಚಿತ್ರಶಾಲೆ (ಮದತಿ. ೧೦-೨೭). [ ಜೊಂಡೆ? + ಕಬ್ಬು (< ಕರ್ಬು$_1$) ]

**ಜೊಂಡೇಳ್** (ಕ್ರಿ). ಮುದ್ದೆ ಮುದ್ದೆಯಾಗು ; ಗಿಜಿಗಿಜಿಯಾಗು : ತೋಳು ತೊಡೆ ಜೊಂಡೆದ್ದು ರಕುತದ ಸಾಲುಗೊಳಚೆಯ . . . ಮಂಚದ ಮೇಲೆ ರಣದಲಿ ಭೀಷ್ಮ ಪವಡಿಸಿದ (ಕುಬ್ರಾಭೀ. ೧೦-೧೧) : ಪಿಂಡುಗೊಂಡು ಜೊಂಡೇಳ್ದ ಕಾಳ್ಕಿದುಳ ಕೊಳ್ಕೆಸಱ್ (ರಾಜಶೇ. ೫-೧೨೦ ವ).
[ ಜೊಂಡು$_3$ (< ದೊಂಡೆ$_1$) + ಏಳ್$_1$ (< ಏೞ್$_1$) ]

**ಜೊಂಡೊಡೆ** (ಕ್ರಿ). = ಜೊಂಡೇಳ್ : ಜೊಂಡೊಡೆದುದು ರಕ್ತಾಂಬು ರಾಸಿಯು ದಂಡೆಗಟ್ಟಾಯ್ತು (ಅಂಬಿಕಾ. ೧೭-೫೭).
[ ಜೊಂಡು$_3$ (< ದೊಂಡೆ$_1$) + ಒಡೆ$_1$ ]

**ಜೊಂಪ$_1$**, ಜಂಪ$_1$, ಜಂಪು$_2$, ಜೊಂಪು$_2$, ಜೊಂಪೆ, ಜೋಂಪ, ಜೋಂಪು$_2$ (ನಾ). ೧. ಗೊಂಚಲು; ಗುಚ್ಛ: "ಪದೆದು ತೊಂಗಲ್ . . . ಜೊಂಪಂ ತೊಂಗೆ ಗುಚ್ಛಮೆಂದಿರದೊಪ್ಪಿ ಪದೆದ ನಾಮಂ" (ಕಬ್ಬಿಗ. ೧೯). ೨. ಸಮೂಹ ; ಮೊತ್ತ ; ರಾಶಿ : ಉರಗನ ಜೊಂಪದಂತೆ ಸುರಿಯುತ್ತಿರೆ ಪೆರ್ಮುಱ್ (ಅನಂಪು. ೪-೧೯) : ಮೊಗಸಱಿಯಿಂ ಪಸರಿಪ ಜೊನ್ನದ ಜೊಂಪದಂತೆಯುಮೆಸೆವ . . . ಮೆಯ್ಸಿರಿವಡೆದಿರ್ದಂ (ಆಳವಂ. ೧೯-೨೦). ೩. ಬಳ್ಳಿಮಂಟಪ : ಕಾವಣ ; ಕುಂಜ : ಅಲ್ಲಿಯ ಸುರತರುಗಳ ತಣ್ಣೆಲಲ್ಗಳೊಳಂ ಕಲ್ಪಲತೆಯ ಜೊಂಪಂಗಳೊಳಂ (ಆದಿಪು. ೨-೦೪ ವ) : ಚಂದನವೀಧಿ ಸಂಪಗೆಯ ಜೊಂಪಂ ಮಾಧವೀ ಮಂಡಪಂ (ಹಂರಾಮಾ. ೦-೧೦೦): ಎಳವಳ್ಳಿಯ ಬಳಸಿಂಗೊಳಗಾದಸುಗೆಯ ಜೊಂಪಂಗಳೊಳ್ ಕೋಗಿಲೆಯಂತೆ ಕೂಟಮನೊಡರ್ಚಿಯುಂ (ಕಬ್ಬಿಗಾ. ೧೨೫). ೪. ಪೊದೆ ; ಹೊದರು : ಸುತ್ತುಂ ನೀಳ್ದ ಪೊಱದುಂಗೆಯ ಜೊಂಪಮುಂ ವಿರಾಜಿಸೆ (ರಾಮಾಶ್ವ. ೩೦-೨೦). **ಜಂಪ$_1$:** ೨. ಹಣಿನ ಜಂಪ [ಪಾಠಾಂ. ಜಂತ, ಜೊಂಪ]ದ ನಿಟ್ಟೆಲುವಿನುಬ್ಬಣದ ತೊಂಗಲುಗರುಳ . . . ಸಂದಣಿಯ (ತೊರರಾ. ೬-೪೬-೪೯). **ಜಂಪು$_2$ :** ೧. ಉಳ್ಳಿಗಳ ಜಂಪಂ[ಪಾಠಾಂ. ಪ್ಪು]ಶಿರೋಮಾಲೆಗಳನಿಕ್ಕಿ ಉಳ್ಳಿಗಳ ಬಾಹುಬಳೆ ಕಂಠಮಾಲೆಯನಿಕ್ಕಿ (ಬಸರ. ೧೧-೦೨೦). **ಜೊಂಪು$_2$ :** ೧. ಅರಿಸಿನವಂ ಪೇಸದೆ ಪೂಸಿ ಕಟ್ಟಿ ಬಾಸಿಗವಂ ಜೊಂಪಂ [ಪಾಠಾಂ. ಕೋಲಂ] ಪಿಡಿದು ಕುಣಿವರ್ (ಸಮಪ. ೯-೯೩). **ಜೊಂಪೆ :** ೧. "ತೊಂಗಲ್ . . . ಜೊಂಪೆ ನೀಡುಂ ಕೊಡಂಬೆಯುದು ಗುಚ್ಛ ತಾನಕ್ಕುಂ" (ಶಬ್ದಮಂ. ೨೫); ಪ್ರಭುಗಳು ಮುತ್ತಿನ ಜೊಂಪೆಗಳಿಂದ ಕೂಡಿದ ನವರತ್ನ ಖಚಿತವಾದ . . . ತೋಡವನ್ನು ಕುವರನ ಬಲಗಾಲಿಗೆ ಬಹುಮಾನಿಸಿದರು (ಶಾಂತಲಾ. ೨೦೬); ಬೀಗದ ಕೈ ಜೊಂಪೆಯನ್ನು ತೆಗೆದುಕೊಂಡು ಹೊರಡಿ (ಮುಸುಗ. ೧೨೪) : ಶಂಖವೋ ಪದ್ಮವೋ, ಹುಲ್ಲೆಯೋ, ಹೂವಿನ ಜೊಂಪೆಯೋ ಅವುಗಳ ಕೈಯಲ್ಲಿ ಮೈಯಲ್ಲಿ ಇರುತ್ತದೆ (ಸೌಂದಸ. ೦೩೪). **ಜೋಂಪ:** ೧.ದಂಪತಿಯುಪ್ಪ ಜೋಂ[ಪಾಠಾಂ. ಜೊಂ]ಪಮಂ ಜಳಲವದಿಂದೆ ಸಿಂಪಿಸುತುಮಿರ್ಪ ಸುಧಾಕರಕಾಂತ ನಿರ್ಝರಾವಳಿ ಬಗೆಗೊಪ್ಪೆ (ಜಗವಿ. ೯-೯೨). ೨. ಮರುಸ್ಥಳದ ಮಾಳದೊಳ್ ನಡುಪಗಲ್ಪರಂ ಗ್ರೀಷ್ಮದೊಳ್ . . . ಬೇವವರ್ಗೆ ಜೋಂಪವಿಮ್ಮಾವು ನಿರ್ಝರಾಂಬು ದೊರೆಕೊಳ್ವವೊಲ್ (ಆದಿಪು. ೦೩-೮೬). **ಜೋಂಪು$_2$ :** ೧. ಕುಡಿವಡೆದ ಮಾಮರಗಳೊಪ್ಪಿಹ ಜೋಂಪು ಕುಸುಮಗಳ (ಅಂಬಿಕಾ. ೩-೩). 'ತೊಂಬೆ$_1$' ಪರಾ.

**ಜೊಂಪ$_3$** 'ಜೊಂಪು$_1$' ನೋ.

**ಜೊಂಪಡಿ**, ಜೋಪಡಿ (ನಾ). ಗುಡಿಸಲು ; ಕುಟೀರ : ಗಂತ್ರಿಗಾರ ಜೊಂಪಡಿಯಲ್ಲಿ ಕರಿಯನು . . . ದಿನಗಳೆಯುತ್ತಿದ್ದನು (ಮುಂಗಾರು. ೧೨೫) : ಮುದಿಕೂಲಿಯು ನಮ್ಮನ್ನು ತನ್ನ ಜೊಂಪಡಿಯಲ್ಲಿ . . . ಕೂತುಕೊಳ್ಳಿಸುತ್ತಿದ್ದನು (ಕಲಿಕ. ೨೨). **ಜೋಪಡಿ :** ಆಹ್ವಾನಿತರ ಆನೆ, ಕುದುರೆ, ಒಂಟೆ, ಎತ್ತು ಇವುಗಳಿಗೆ ಜೋಪಡಿಗಳೂ, ಮೇವು, ನೀರು . . . ಎಲ್ಲಾ ಏರ್ಪಾಡುಗಳೂ ಸಮರ್ಪಕವಾಗಿ ಆದವು (ಶಾಂತಲಾ. ೯೯) : ತೆಂಗುಗರಿ ಜೋಪಡಿಯ ಜಾಡಮಾಲಿಯ ಬದುಕು ತಪ್ಪಲಿಲ್ಲ (ನಡದಾ. I. ೩೬೨) : ಮುರಕಲು ಹುಲ್ಲು ಜೋಪಡಿಗಳೂ, ಬಡಕಲು ಎತ್ತುಗಳೂ, ಈ ಜನರ ವಿಶಿಷ್ಟ ಆಸ್ತಿ (ಹಂಜಹಂ. ೦೪೫).
[ < ಪ್ರಾ. ಝುಂಪಡಾ./ಹಿಂ. ಝೋಂಪಡೀ, ಝೋಪಡೀ ; ಮರಾ. ಝೋಂಪಡೀ ]

**ಜೊಂಪಲು** (ನಾ). ಗುಂಪು ; ಸಮೂಹ : ಪೂರ್ಣಚಂದ್ರನ ಕಿರಣದ ಜೊಂಪಲು ಬಿದ್ದು ಪೂರ್ಣಪೂರ್ಣಗೌರವದಿಂದ ಪ್ರಕಾಶಗೊಂಡಾ ಸುಂದರ ರಮಣಿಯ ವದನವು (ಕೋಹಿನೂ. ೪೦).
[ ಜೊಂಪ$_1$ + – ಅಲು (< – ಅಲ್$_2$) ]

**ಜೊಂಪಿಸು$_1$**, ಜೋಂಪಿಸು$_1$, ಝುಂಪಿಸು$_1$, ಝೊಂಪಿಸು$_1$, ಝೋಂಪಿಸು$_1$ (ಕ್ರಿ). ೧. ಮತ್ತಿನಿಂದ ಎಚ್ಚರ ತಪ್ಪು ; ಅಮಲೇರಿ ಮೈಮರೆ: ಕರ್ಣದಲ್ಲಿ ಕೇಳಿ ಜೊಂಪಿಸಿ ತಲೆದೂಗುವುದು ಅದೇನು ಹೇಳಾ (ಮೂಢೂಳ. ೬೫) : ಬಳಲುತ ಜೊಂಪಿಸುತ್ತವೆ ಬಳಿಯಲ್ಲೈದುವ ಮರುಳುತಂಡಪ ಜಱವೃತ (ಭಾಶಿರಾ. ೨೯-೧೮). ೨. ತೂಗಾಡು ; ತೊನೆದಾಡು ; ಹೊಯ್ದಾಡು ; ಜೋಲು : ಕಂಠದ ಬಿಣ್ಪಂ ಜೊಂಪಿಸುತ್ತುಂ ನಡೆದು ದಡವಿಯೊಳ್ ದೀರ್ಘದೇಹಂ ವರಾಹಂ (ಸೂಕ್ತಿಸು. ೩-೩೯) : ಕಂಪಂ ಕೆಯ್ಕೊಳುತಂ ಮೆಯ್ ಜೊಂಪಿಸಿ ಬೀಳ್ವಳಿನೀ ನಿಕಾಯ ಸಹಿತಂ . . . ಸಂಪಿಗೆಯಲರ್ದೊಂಗಲಂ ರತೀಶಂಗಿತ್ತಂ (ಗಿರಿಕ. ೬-೪) : ನಿರ್ಜರೇಂದ್ರನ ಸೂನು . . . ಜೊಂಪಿಸುತೆ ಮೈಮಱದು ಬಿದ್ದನಿಳೆಯೊಳು (ಕೃಮಿಥಾ. ೨೫-೩೫) : ಮುಂಜಾನೆಯಿಂದ ಸಂಜೆಯ ತನಕವೂ ಕಳ್ಳಿನ ಅಮಲಿನಲ್ಲೇ ಜೊಂಪಿಸತೊಡಗಿದ (ಒಡ್ಡಉ. ೦೨೩). ೩. ಮರುಳಾಗು ; ಮೋಹಗೊಳ್ಳು ; ಬಯಸು : ವಸ್ತ್ರದ ಹುಯ್ಯಲಿಗೆ ಹೂವತ್ತಿಗಳ ಜಂಜಡಕೆ ಜೊಂಪಿಸದೆ (ಕೃಭಾಂ. ೧೬-೧೫). **ಜೋಂಪಿಸು$_1$ :** ೧. ಎಸಳ ಡಿಗೆತ್ತು

ತಾವರೆಗಳೋವರಿಯೊಳ್ ಸುಖನಿದ್ರೆಯಿಂದೆ ಜೋಂಪಿಸುವಳಿಯಂ (ವರ್ಧಪು. ೮-೩೩) ; ಜೋಂಪಿಸುತುಂ ಬಿಟ್ಟೊಡ್ಡಳಿಯುತ್ತೆ ಹುಲ್ಲೆ ಕಳೆದತ್ತಾ ಭಾವದಿಂ ಜೀವವಂ (ಕುಸುಮಾ. ೧೪-೪೧) ; ಜೊಂಪಿಸುತೆ ನಿದ್ದೆಗದ್ದುದು ಚೇತನಂ (ಶ್ರೀರಾಮಾ. ೪೬೮-೪). ಝಂಪಿಸು$_1$ : ೧. ತಲೆದೂಗಿ ಝಂಪಿಸಿ ಅಂತಃಕರಣ ಕದಡಿ ಆನಂದಿಸುವದು ಭಾವಭಕ್ತಿ (ಮೋಕ್ಷಮಾ. ೦೬-೬೩). ಝೊಂಪಿಸು$_1$ : ೧. ಮೆಯ್ ಮರವಡೆ . . . ಝೊಂಪಿಸೆ ನಿಡುಸುಯ್ದು ಹಯಂ ಕರಂ ಜ್ವರಾರ್ತನೆನಿಕ್ಕುಂ (ಲೋಕೋಪ. ೯-೨೩೪). ೨. ನಡೆ ತಡವಾಗೆ ನುಣ್ಣುಡಿ ತೊದಳ್ಗೊಳೆ ಝೊಂಪಿಸೆ ಕೆಂಪನಾಳ್ದು ಕಣ್ಗುಡಿ . . . ಪೊಳಪೇಱೆ ಕದಂಪು (ಸೂಕ್ತಿಸು. ೦೩-೫) ; ನೋಟದ ಮೊನೆ ಮುಱಿದು ಝೊಂಪಿಸುತ ಮುಂದಣಿಗೊನೆದು ಬಿದ್ದನು (ಕುಮಾ.ಕ. ೩-೨೬). ಝೋಂಪಿಸು$_1$ : ೧. "ಝೋಂ[ಪಾಠಾಂ. ಜೊಂ]ಪಿಸಿತೆಂದು ಮಱಿವೆ" (ಕಶಸಾ. ೨೧-೪೨೨) : ಇರುಳೋರಂತಿರೆ . . . ಝೋಂಪಿಸೆ ನಿದ್ರಾತುರನಾಗಿ ಪಕ್ಕ ಸಾರ್ವಂತಿರೆ ಸಾರ್ದಂ (ಕಾದಂಬ. ೦೬೨) ; ಕೆಟ್ಟರೆ ನಿದ್ರೆ ಝೋಂಪಿಸುತ್ತೊಲೆವಡೆ ಸನ್ನಿಪಾತ ವಿದಿತ ಜ್ವರಂ (ಕಲ್ಯಾ.ಕ. ೩-೦೩). ೩. ತರುಣಿಗೆ ಝೋಂಪಿಸಿದೊಡೆ ಬೊಮ್ಮರಕ್ಕಸಂ ದಾರುವರ್ವರ್ಣನಂ ಮುಳಿಸಿಂ ಸಂಹರಿಸಿದನಂ (ದಶಕು. ೪-೦೦೫). [ ಜೊಂಪು$_1$ + – ಇಸು$_2$ ]

**ಜೊಂಪಿಸು$_2$**, ಜಂಪಿಸು, ಜೊಂಬಿಸು, ಜೋಂಪಿಸು$_2$, ಝಂಪಿಸು$_3$, ಝೊಂಪಿಸು$_2$, ಝೊಂಬಿಸು, ಝೋಂಪಿಸು$_2$ (ಕ್ರಿ). ೧. ನಡುಗಿಸು; ಕಂಪನಗೊಳಿಸು ; ಅಲುಗಾಡಿಸು : (+). ೨. ಇಡುಗು ; ತುಂಬು ; ಆವರಿಸು ; ವ್ಯಾಪಿಸು : ಜಯಸಬುದ ಜೊಂಪಿಸಿ[ಪಾಠಾಂ. ಝೋಂಪಿಸಿ]ದು ದಂಬರವ (ಕುಮಾ.ಸ. ೦೩-೦೦) : ಕನ್ನೊಳು ಜೊಂಪಿಸುವ ಮನವೆಂಬ ತುಂಬಿಯ ಭಾವ ಏಗೆ ತುಂಬಿ (ಪ್ರಭುಲಿ. ೦೬-೩). ೩. ನಡುಗು ; ಕಂಪಿಸು: "ನಡುಕಮನೆ ಜೊಂ[ಪಾಠಾಂ. ಝೊಂ]ಪಿಸಿತ್ತು" (ಕಲ್ಯಮಂ. ೭೭): ಸಂಪತ್ತು ತೋಱೆ ತೊಲಗಿತೆಂದು ನೃಪನೆದೆ ಜೊಂಪಿಸೆ ಹಳವಳಿಸಿದರು (ಭರತ. ೭೧-೮೫). ಜಂಪಿಸು : ೧. ಅಗಳು ಮದಿಲುದ್ದದಿಂದಂ ಜಗವಂ ಜಂಪಿಸೂದೀಗಳೀತನ ಕೋಟೆ (ಮ್ಯಆರಿ. ೦೯೪೦, ೩೧-೪; ?). ಜೊಂಬಿಸು : ೨. ಅಂಬುಜಾಕ್ಷನ ಮುಡಿಯ ಸರಿಸಕೆ ಜೊಂಬಿಸಲು[ಪಾಠಾಂ. ಬೊಂಬಿಸಲು, ಝೊಂಬಿಸಲು]ಝಡಿತೆಯಲಿ . . . ಹೊಱಕ್ಕೆಯಿಂದ ಝಾಡಿಸಿದ (ತೊರರಾ. ೩-೪-೨೫). ಜೋಂಪಿಸು$_2$ : ೩. ಜೋಂಪಿಪಂಗಂ ವಿಲುಪ್ತಾಕ್ಷರ ವಾಕ್ಯಂ . . . ಕರವೊಪ್ಪಲ್ ಪಾಡುತ್ತಾಡುತ್ತೆಸೆದುದಸದಳಂ ಮದ್ಯಪಾನಾಂಗ ಸೌಘಂ (ಉದ್ಭಟ. ೫-೮೫). ಝಂಪಿಸು$_3$ : ೨. ಜಗವಂ ಝಂಪಿಸುತಿರ್ಪ್ಪ ಕೀರ್ತಿ ಮುಗಿಲಂ ಮುಟ್ಟಿರ್ಪ ಪೆಂಪು (ಎಕ. XI, ದಾವಣ. ೨೫-೬೬; 1224). ಝೊಂಪಿಸು$_2$ : ೨. ವಿಕ್ರಮದ ಝಳ ಜಗವಳುಕೆ ಝೊಂಪಿಸಿತು (ಕುಮಾ.ದ್ರೋ. ೦೮-೩೦). ೩. ಕಡುಶೋಕದಿಂದೆ ತನು ಝೊಂಪಿಸಲ್ (ಕ್ಯಮಿಭಾ. ೦೯-೫೮). ಝೊಂಬಿಸು : ೨. ಶೋಕಾಡಂಬರದ ಡಾವರ ವಿವೇಕವ ಝೊಂಬಿಸಿತು (ಕುಮಾ.ಗ. ೪-೦೬). ಝೋಂಪಿಸು$_2$ : ೧. ದಿನದಿನಕೆ ಹೆಚ್ಚುತಲಿ ಮಾಯಾವನಿತೆಗಂ ಜವ್ವನ ಜಗವ ಝೋಂಪಿಸುತ (ಪ್ರಭುಲಿ. ೩-೩೩); ವಿರಾಧನು . . . ಝಂಕಿಸುತ ಝೋಂ[ಪಾಠಾಂ. ಝೊಂ]ಪಿಸಿದನು ವಿದೇಹಜೆಯ (ತೊರರಾ. ೩-೦-೯). ೪. ನಿವಾರಿಸು ; ಕಳೆ : ಝಳವ ಝೋಂಪಿಸಿ ಬೀಸಿದವು ತಂಬೆಲರ ಬೀಸಣಿಗೆಗಳು (ಕುಮಾ.ಆ. ೧೨-೦೫). [ ? + – ಇಸು$_3$./ಪ್ರಾ. ಝಂಪ=ಆಕ್ರವಿಸುವಂತೆ ಮಾಡು ]

**ಜೊಂಪು$_1$**, ಜಂಪು$_1$, ಜಮ್ಮು, ಜುಮ್ಮು$_1$, ಜೊಂಪ್ಪ$_2$, ಜೊಮ್ಮು$_1$, ಜೋಂಪು$_1$, ಜೋಮು$_1$, ಝಂಪು, ಝೊಂಪು, ಝೊಮ್ಮು$_1$, ಝೋಂಪು (ನಾ). ೧. ಮತ್ತು; ಅಮಲು; ಮೈಮರೆವು: ಪಿತನ ಕಣ್ಗಳ ಸೊಂಪು ಆತುರದೆ ಪಾಡುತಲಿಹರ ಜೋಗುಳ ಜೊಂಪು (ಬಸರ. ೧-೦೪೦) ; ಚಿತ್ರದ ಬವಣೆ ಬೀತುದು ಮನದ ಜೊಂಪಿಳಿ[ಪಾಠಾಂ. ಜೊಮ್ಮಳಿ]ದುದು (ಕುಮಾ.ಶ. ೨೦-೧). ೨. ತೂಕಡಿಕೆ ; ಮಂಪರು : ಕಣ್ಣಿಗೆ ನಿದ್ದೆಯ ಜೊಂಪು ಹಿಡಿದಂತಾಗಿ ಅವಳು ಗಂಭೀರ ಭಾವ ತಾಳಿದಳು (ಪುನರು. ೨೦೩) ; ನಿದ್ದೆಯ ಜೊಂಪು ಹತ್ತಿದ ಹೊತ್ತಿಗೆ ರೈಲು ಬಂದಿತು (ಮುನಿಮಾ. ೬). ಜಂಪು$_1$ : ೨. ಜಂಪು ಹತ್ತುವುದು ಬೆಳತನಕ (ಕನ್ನಡಾ. ೧೯೪) ; ಕಣ್ಣಿಗೆ ನಸು ಜಂಪು ಬಂದಂತಾಗಿತ್ತು (ಅಕೋಕ. ೩೬) ; ದಣಿದಿದ್ದರಿಂದ ಅವನಿಗೆ ಚೆನ್ನಾಗಿ ಜಂಪು ಹತ್ತಿತು (ಸಮುಜೀ. ೦೯೪). ಜಮ್ಮು : ೧. ಮದನ ವಿಕಾರದ ಜಮ್ಮು ಜಕ್ಕುಲಿಸಿ ಹಮ್ಮುದಂಬೋಗಿ (೧೦ಕ. ೬-೦೦ ಪ). ಜುಮ್ಮು$_1$: ೧. ಸೌಂದರ ಸಂಕಿಲೆಯರು ನಿದ್ರೆಗೆಯ್ದುರಾನಂದರಸದ ಜುಮ್ಮು ತಲೆಗೇಱೆ (ಶ್ರೀಧಾತಿ. ೨೪-೯). ಜೊಂಪ್ಪ$_2$ : ೧. ಇರದೆ ಮನಕ್ಕೆ ಸೊಕ್ಕಡರೆ ಪೊಂಪುಳಿ ವಕ್ತ್ರದೊಳುಣ್ಕೆ ಜೊಂಪಮಾವರಿಸೆ . . . ಎಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೦೦-೧೬೦). ಜೊಮ್ಮು$_1$ : ೧. ಸುಗ್ಗವ್ವೆ ಕಡುಸುಖದ ಸೊಗಸಿನ ಜೊಮ್ಮು ತಿಳಿದು ಮೈ ಮುರಿದೆದ್ದಳು (ಸಿದ್ಧರಾ. ೦-೬೦); ಸುರೆಗುಡಿದು ಜೊಮ್ಮುಹತ್ತಿ ಕಣ್ಣರೆಮುಚ್ಚುತಂ (ಪಾಸೋಪು. ೦೩-೫೦). ೨. ಕುಸಿದು ಜೊಮ್ಮಿನ ಜಾತ್ಯದಲಿ ಝೊಂಪಿಸಿದ ರಿಬ್ಬರು (ಕುಮಾ.ಗ. ೯-೪). ಜೋಂಪು$_1$ : ೨. ಅರೆಗಣ್ಣು ಮುಚ್ಚಿ ನಿದ್ದೆಯ ಜೋಂಪವನ್ನು ಅನುಭವಿಸುತ್ತಾ (ನಡದಾ. III, ೧೪೩೩) : ಸೀತಕ್ಕ ಮಲಗಿದ ಕೊಂಚ ಹೊತ್ತಿಗೆಲ್ಲ ಅವರಿಗೆ ಜೋಂಪು ಹತ್ತಿಬಿಟ್ಟಿತು (ದಾಡಿಬ. ೦೨೬). ಜೋಮು$_1$: ೨. ಕಣ್ಣಿಗೆ ಜೋಮು ಬರುತ್ತಿದೆ (ಕೊತಕಾ. ೮). ಝಂಪು$_1$: ೨. "ನಿದ್ದೆ, ಝಂಪು (ಝೋಂಪು), ಮರವೆ, ಮರಸು" (ಕಂನುಹು. ೮೬). ಝೊಂಪು : ೧. ವಿಘಾತಿಯ ಝೊಂಪಿನಲಿ ಹುದುಗಿದ ಮಹೀಶನ ಕಂಡನು (ಕುಮಾ.ಕ. ೦೬-೫). ಝೊಮ್ಮು$_1$ : ೨. ನಿದ್ರಾಸಮುದ್ರವ ಮುಳುಗಿ ಝೊಮ್ಮಿನ ಝಾಡಿಯಲಿ ಝೊಂಪಿಸಿದುದರೆಜಾವ (ಕುಮಾ.ದ್ರೋ. ೦೬-೦೨): ನುಡಿ ತಡಂಬಡುಗುಟ್ಟೆ ಮಯ್ಯಲ್ಲಿ ದೆಮರಿಡಲ್ ತನು ಝೊಮ್ಮಿ ನೊಳ್ಸೇರಲು (ಅರಾಜ. ೧೦-೧೬). ಝೋಂಪು : ೧. ತನು ಬಳಲಿಕೆಯ ಭಾರಣೆಯ ಕಡುಜೋಡಿಸಿದ ಝೋಂಪಿನಲಿ (ಕುಮಾ.ಆ. ೯-೫). ೨. ನವಕುಮಾರನು ಚಿಂತಿಸುತ್ತಿದ್ದ ಹಾಗೇ ಕಣ್ಣಿಗೆ ಝೋಂಪು ಹತ್ತಿತು (ಕಪಾಳಕುಂ. ೧೨). [ ದೇ.॥ ತಮಿ. ಚೋಮ್ಪು : ತೆಲು. ಜೋಮು ]

**ಜೊಂಪು$_2$** 'ಜೊಂಪ್ಪ$_1$' ನೋ.

**ಜೊಂಪೆ** 'ಜೊಂಪ್ಪ$_1$' ನೋ.

**ಜೊಂಬಿಸು** 'ಜೊಂಪಿಸು$_2$' ನೋ.

**ಜೊಕ್ಕಿರ್** (ಕ್ರಿ). ಕುಗ್ಗಿರು ; ಕುಂದಿರು : ಮೊಗದ ಸಿರಿ ಜೊಕ್ಕಿರ್ದುದಂ ಕಂಡು (ತುರಂಗ. ೭೪-೮). [ ಜೊಕ್ಕು + ಇರ್$_1$ ]

**ಜೊಕ್ಕು**, ಜೊಗ್ಗು$_1$ (ಕ್ರಿ). ಕುಗ್ಗು ; ಕುಂದಿಹೋಗು : ಕೌರವನ ಬಲದೊಳಗೆ ಸಿಕ್ಕಿದನು ಜೊಕ್ಕಿದೆ ಪುರಾಣಪುರುಷೋತ್ತಮ ಜನಾರ್ದನನೆ ರಕ್ಷಿಸೈ (ತುರಂಗ. ೨೪-೨೯). ಜೊಗ್ಗು$_1$ : ಎಲೆ ಮರುಳೆ ಜೊಗ್ಗಿದನ ತಂದು ಸೇನಾಪಟ್ಟವಂ ಕಟ್ಟಿ ಹರಿಪಿಸುವೆ (ತುರಂಗ. ೪೩-೦೬). 'ಚೊಕ್ಕು$_1$' ಪರಾ. [ <ಜಗುರ್ ]

**ಜೊಕ್ಕೆ** (ನಾ). (?) : ವಿಕ್ಕ ಅವಲಕ್ಕಿಯನು ತನ್ನಯ ಜೊಕ್ಕೆಯಿಕ್ಕುಡಿತೆಯಲಿ ಪಿಡಿದುರೆಯಕ್ಕರೆಯಿಂದಲಿ ಒಕ್ಕುಡಿತೆಯಾ ಮುಖಕೆ ನೆಗಹಿ (ಕುಚೇಲೋ. ೦೦೮). [ ? ]

**ಜೊಕ್ಕೆದ** (ನಾ). ಚತುರ (?) : ಋತುಪರ್ಣರಾಯನಿದ ನೋಡಿಕೊಂಡನು ಸಚಿವರ ಜೊಕ್ಕೆದರ ಕರೆದನಾಳೋಚನೆಗೆ (ತುರಂಗ. ೩೨-೦೦). [ ? ]

**ಜೊಕ್ಕೆಯ** 'ಚೊಕ್ಕೆಯ' ನೋ.

**ಜೊಗಟ** (ನಾ). ಸಿಪ್ಪೆ ; ಹಿಪ್ಪೆ : ಕಬ್ಬಿನ ಜೊಗಟಿಯು ಸಾಮಾನ್ಯವಾಗಿ ತನ್ನ ತೂಕದಷ್ಟೇ ರಸವನ್ನು ಇರಿಸಿಕೊಳ್ಳುವುದು (ಜಾಂಕೃ. II, ೬೩೦). [ ? ]

**ಜೊಗ್ಗು$_1$** 'ಜೊಕ್ಕು' ನೋ.

**ಜೊಗ್ಗು$_2$** (ನಾ). ಕುಗ್ಗುವಿಕೆ; ಕ್ಷೀಣತೆ : (ಪಿತ್ತಪ್ರಕೃತಿ ತನು) ನರೆ ಜೊಗ್ಗು ಹಸುರಾದ ನರೆ ಉಳ್ಳವನಾಗಿ . . . ಪಾನ ದ್ರವ್ಯಾಸನಗಳಲ್ಲಿ ಇಚ್ಛೆಯುಳ್ಳವನಾಗಿಹನು (ವೈದ್ಯಸಾ. I, ೦೬). [ <ಜೊಗ್ಗು$_1$ ]

**ಜೊಟ, ಜೊಟ್ಟ** (ನಾ). ತುಂಬ ಹುಳಿ ; ಬಹಳ ಹುಳಿ : "ಹುಳಿ ಜೊಟ್ಟ; ಜೊಟಜೊಟ ಹುಳಿ" (ಕಂಸುಹು. ೦೦೪). **ಜೊಟ್ಟ:** ಮೇಲಿನ ಪ್ರಯೋಗವನ್ನು ನೋಡಿ. [ ? ]

**ಜೊಟಜೊಟನೆ**(ಅ). ಜೊಟಜೊಟ ಎಂಬ ಶಬ್ದದೊಡನೆ: ಜೊಟಜೊಟನೆ ಮೈಯಲ್ಲಿ ಕ್ರಿಮಿ ಸುರಿದ ಕಾಲಕ್ಕು (ಮೋಕ್ಷದೀ. ೪೯-೩).
[ ಜೊಟಜೊಟ$_0$ + - ಅನೆ$_1$ ]

**ಜೊಟ್ಟ** 'ಜೊಟ' ನೋ.

**ಜೊಟ್ಟ** (ನಾ). ಗಟ್ಟಿಯಲ್ಲದುದು ; ಜೊಳ್ಳು : ಜೊಳ್ಳೋ ಜೊಟ್ಟ, ಟೊಳ್ಳೆನೆ ಪೊಟ್ಟ ಹುರುಳಿಲ್ಲದ ಬರಿ ಶಬ್ದವು ಹುಟ್ಟ (ಹೃದಶ. ೬೩-೭).
[ ದೇ.॥ ಮಲ. ಜೊತ್ತ ]

**ಜೊಣೆ** 'ದೊಣೆ$_1$' ನೋ.

**ಜೊತಕ** 'ಜೊತ್ತಗೆ' ನೋ.

**ಜೊತಗ** 'ಜೊತ್ತಗೆ' ನೋ.

**ಜೊತೆ$_1$**, ಜತೆ (ನಾ). ೧. ಕೂಡಿರುವಿಕೆ; ಕೂಟ ; ಸಹವಾಸ : "ಜೊತೆ (ಜತೆ)–ಯುತ" (ಶಬ್ದಕೋ. ೦೫). ೨. ಜೋಡು ; ಜೊತೆಯಾಗಿರುವ ಮತ್ತೊಂದು ಜೀವ, ವಸ್ತು ಮೊದಲಾದುವು: ಗೂಡಿನೊಳಗಿಹ ಹಕ್ಕಿಗಿಳಿಗೊಂದು ಜೊತೆಯಿಲ್ಲ (ಚಂದ್ರಸ. ೬೨). ೩. ಎರಡರ ಜೋಡಿ ; ಯುಗಲ ; ಯುಗ್ಮ : ಈ ಹೃದಯಂಗಮವಾದ ಜೊತೆಯನ್ನು ಸಣ್ಣದೊಂದು ದೂರದರ್ಶಕದಲ್ಲಿ ನೋಡಿದರೆ (ಜ್ಯೋತಿವಿ. ೬೮). ೪. ಜೋಡಣೆ; ಸಿದ್ಧತೆ; ತಯಾರಿ : ಫೌಜು ಜೊತೆಯಾಯಿತೋ ಇಲ್ಲವೋ (ಮುದ್ರಾಮಂ. ೧೬೨). **ಜತೆ:** ೨. ಹೂವಿಗೆ ಸಹ ಜತೆ ಆದ (ಗಂಗಾಸಾ.೧೧೯). ೫. ಸಮಾನ; ಎಣೆ : ದ್ವಾದಶಗತಿಯಲಿರುತಿಹ ಭಾನುವಿಗೆ ಸರಿ ಜತೆಯದಾರೆಂದ (ಗಗಿಶಾ. ೩-೪೩). ೬. [ಸಂಗೀತ] ಸುಳಾದಿಯ ನುಡಿಗಳಾದ ಮೇಲೆ ಬರುವ ಕೊನೆಯ ಎರಡು ಸಾಲು : ಜತೆ ಕೊಡಬ್ಯಾಡ ಕೋಳಬ್ಯಾಡ ಸಿರಿ ವಿಜಯವಿಠಲನ್ನ ಅಡಿಗಳರ್ಥಾ ನಿಮಿಷಾ ನಂಬಲು ಕೈವಲ್ಯ (ವಿಸಾಸು.೬-೬).

**ಜೊತೆಕಟ್ಟು** = ಸಹವಾಸಮಾಡು ; ಗೆಳೆತನಮಾಡು : ನೀನು ನನ್ನ ಜೊತೆಕಟ್ಟುತ್ತೀಯೋ ಇಲ್ಲವೋ ? (ರೂಢಿ). **ಜೊತೆಮಾಡು, ಜತೆಮಾಡು**= ೧. ಜೋಡಿಸು ; ಕೂಡಿಡು ; ಸಂಗ್ರಹಿಸು : ವ್ಯಾತವಪ್ಪುದೆಂದು ಕರುವಿಗೆ ಗೋವು ಹುಲ್ಲೆದೆಯು ಜೊತೆಮಾಡುವುದ ? (ಕವಿಪು. ೫೦). ೨. ಕೂಡಿಸು; ಹೊಂದಿಸು: ಪ್ರಯಾಣಿಕರು ನಾಲ್ಕೈದು ಹಡಗುಗಳನ್ನು ಜತೆಮಾಡಿಕೊಂಡು ಪ್ರಯಾಣ ಮಾಡುವುದು ಪದ್ಧತಿಯಾಗಿದ್ದಿತು (ಕಪಾಕುಂ.೦); ಮನದ ಹಂಬಲು – ಕಿಟ್ಟಿಗೆ ಸುಸ್ವರೂಪಿ ಹೆಂಡತಿಯನ್ನು ಜತೆಮಾಡಿಕೊಟ್ಟು ತಾನು ಕಣ್ಣುಚ್ಚುವುದು (ಗಂಮಾಯಿ. ೦). [ <ಸಂ. ಯುತ ]

**ಜೊತೆ$_2$** (ಅ). ಸಹಿತವಾಗಿ ; ಸಂಗಡ : ನಿಪುಣೆಕೆಯ ಜೊತೆ ನಾನು ಬಾಗಿಲ ಬಳಿಗೆ ಬಂದೆ (ಕಾಡಿಳ. ೭೦); ವೆಂಕಮ್ಮ ಅಡಿಗೆ ಮನೆಯಲ್ಲಿಯೇ ಜನ್ನಯ್ಯನ ಹೆಂಡತಿಯ ಜೊತೆ ಮಲಗಿದರು (ಶದ್ಮಸ. ೨೩೨). [ <ಜೊತೆ$_1$ ]

**ಜೊತೆಗಾರ**, ಜತೆಗಾರ (ನಾ). ಜೊತೆಯಲ್ಲಿರುವವನು ; ಸಂಗಡಿಗ ; ಒಡನಾಡಿ : ಗಾನದ ಉತ್ಸಾಹದಲ್ಲಿ ಅವನಿಗೆ ದೇವರು ಒಡೆಯನೇ ಅಲ್ಲದೆ ಜೊತೆಗಾರನೇ ಆಗುವನು (ಧರ್ಮಸಾ. ೯೩) ; ತಮ್ಮ ತಮ್ಮ ಜೊತೆಗಾರರೊಡನೆ ಮುಂದಿನ ಪದ್ಯಗಳನ್ನು ಹೇಳಿಕೊಂಡು (ಹುಟ್ಟುಹ.೨೪). **ಜತೆಗಾರ:** ನೀನೂ ನಿನ್ನ ಜತೆಗಾರನೂ ಕೂಡಿಬಂದರೆ ಹಣ ದೊರೆಯುವುದು (ಮುಂಬಯಿ. ೪-೭). [ ಜೊತೆ$_1$ + - ಗಾರ (<-ಕಾಱ) ]

**ಜೊತೆಗಾತಿ** 'ಜೊತೆಗಾರ್ತಿ' ನೋ.

**ಜೊತೆಗಾರ್ತಿ**, ಜತೆಗಾತಿ, ಜತೆಗಾರ್ತಿ, ಜೊತೆಗಾತಿ (ನಾ). ಜೊತೆಯಲ್ಲಿರುವವಳು ; ಸಂಗಾತಿ : ಆಕೆಯು ಜೊತೆಗಾರ್ತಿಯರು ಅನ್ಯೋನ್ಯ ಸುಖದಲ್ಲಿ ಸಂಸಾರ ಸಾಗುಹಾಕುತ್ತಿರುವ ಕಾಲ (ಜೀವನ. ೦೩). **ಜತೆಗಾತಿ :** ಸ್ವಲ್ಪ ಹೊತ್ತಿನಲ್ಲಿಯೇ ನವಕುಮಾರನು ಜತೆಗಾತಿಯನ್ನು ಕರೆದುಕೊಂಡು ಬಂದು ಊರನ್ನು ಸೇರಿದನು (ಕಪಾಕುಂ. ೪೨). **ಜತೆಗಾರ್ತಿ :** (?). **ಜೊತೆಗಾತಿ :** ತನ್ನ ಮಗಳ ಜೊತೆಗಾತಿಯಾಗಿರಲೆಂದು ಅವಳನ್ನು ಆ ವಿಪ್ರನು ಮಥುರೆಗೆ ಕರೆದೊಯ್ಯಬೇಕೆಂದು ತಿಳಿಯಿತು (ಕಪನಿ. ೫೦) ; ಜೊತೆಗಾತಿಯಿಲ್ಲದೆ ತಾನೊಂಟಿಯಾಗಿದ್ದಾಗ ಅದನ್ನು . . . ಕಣ್ಣಿನ ತಣಿಯುವ ತನಕ ನೋಡುತ್ತಿದ್ದಳು (ಪುನರು. ೩೨೩).
[ ಜೊತೆಗಾರ + - ತಿ$_1$ (< - ಇತ್ತಿ) ]

**ಜೊತೆಗೂಡು**, ಜತೆಗೂಡು (ಕ್ರಿ). ೧. ಕೂಡು ; ಸೇರು ; ಹೊಂದಿಕೊಳ್ಳು : ಜೊತೆಗೂಡಿ ಬಾಳಲಾಗದಿದ್ದರೆ ಮದುವೆಯಿಂದ ಪ್ರಯೋಜನವೇನು ? (ಪುನರು. ೨೫೦). ೨. ಸಂಭೋಗಿಸು: ಅಪೂರ್ವವಾಗಿ ಉಭಯಲಿಂಗಿಗಳು ಜೊತೆಗೂಡಿದ (ಜೀವ...) ಗಂಡಿನ ರೇತ್ರಾಣುಗಳಿಂದ ಗರ್ಭಾದಾನ ಪಡೆಯುತ್ತವೆ (ಕೀಟಟಿ. ೦೦೫). **ಜತೆಗೂಡು:** ೧. ಹಕ್ಕಿಯು ಜತೆಗೂಡಿ ಹಾಡನು ಹಾಡುತ ಮುದವೂಡು ಮನಕೆ (ಇಂಚಾಪ. ೨೦೨-೪೮).
[ ಜೊತೆ$_1$ + ಕೂಡು$_1$ ]

**ಜೊತೆಗೊಳಿಸು** (ಕ್ರಿ). ಸೇರಿಸು ; ಕೂಡಿಸು ; ಹೊಂದಿಸು : ಸೈನ್ಯವನ್ನು ಜೊತೆಗೊಳಿಸಿ . . . ಯುದ್ಧಸನ್ನಾಹ ಮಾಡತೊಡಗಿದರು (ಪ್ರಮುಹ. ೯೬).
[ ಜೊತೆ$_1$ + ಕೊಳ್$_1$ + - ಇಸು$_3$ ]

**ಜೊತೆಬಿಡು**, ಜತೆಬಿಡು (ಕ್ರಿ). ಸ್ನೇಹವನ್ನು ಬಿಡು ; ಗೆಳೆತನವನ್ನು ತೊರೆ : ಜೊತೆ ಬಿಟ್ಟರೂ ವ್ಯಥೆ ಬಿಡಲಿಲ್ಲ (ಗಾದೆ) ; ಅವರಿಬ್ಬರೂ ಜೊತೆ ಬಿಟ್ಟಿದ್ದಾರೆ, ಅದಕ್ಕೆ ಮಾತನಾಡುವುದಿಲ್ಲ(ರೂಢಿ). **ಜತೆಬಿಡು:** ಅವರಿಬ್ಬರೂ ಯಾವಾಗಲೂ ಜತೆಬಿಟ್ಟಿಲ್ಲ (ರೂಢಿ). [ ಜೊತೆ$_1$ + ಬಿಡು$_1$ ]

**ಜೊತೆವಾಡು** (ನಾ). ಮೇಳದ ಹಾಡು : ಅಂಬಿಕೆ ಜೊತೆವಾಡಂ ಶಾಂಬೆಂಬಿಡದಡಿಗಡಿಗೆ ಪಾಡೆ (ಹಾಲಾಸ್ಯ. ೦-೬-೦೯). [ ಜೊತೆ$_1$ + ಪಾಡು$_2$ ]

**ಜೊತೆಹಾಕು** (ಕ್ರಿ). ೧. ಇನ್ನೊಬ್ಬರನ್ನು ಜೊತೆಗೆ ಹೊಂದಿಸು: ಅವನೊಡನೆ ಕುಸ್ತಿಗೆ ಜೊತೆಹಾಕಲು ಯಾರೂ ಸಿಗಲಿಲ್ಲ (ರೂಢಿ). ೨. ಮದುವೆಮಾಡು:ಅವನಿಗೆ ಜೊತೆಹಾಕದಿದ್ದರೆ ಬುದ್ಧಿ ಬರುವುದಿಲ್ಲ(ರೂಢಿ).
[ ಜೊತೆ$_1$ + ಹಾಕು (<ಪಾಯ್ಕು$_1$) ]

**ಜೊತ್ತಗ** 'ಜೊತ್ತಗೆ' ನೋ.

**ಜೊತ್ತಗಲ್** (ಕ್ರಿ). ಸಹವಾಸದಿಂದ ದೂರವಾಗು ; ಜೊತೆಬಿಡು : ಸುಂದರನೊಲವಿಂ ಜೊತ್ತಗಲದೆ ವರಸಹಾಯಮುಮಂ ನಿಮಗೀವಂ (ಹಾಲಾಸ್ಯ. ೨-೦೪-೨೬). [ ಜೊತ್ತು$_1$ + ಅಗಲ್$_1$ ]

**ಜೊತ್ತಗಾಱ** 'ಜೊತ್ತುಗಾಱ' ನೋ.

**ಜೊತ್ತಗೆ**, ಚೊತ್ತಿಗೆ, ಜತಿಗೆ, ಜತ್ತಿಗೆ, ಜೊತಕ, ಜೊತಗ, ಜೊತ್ತಗ, ಜೊತ್ತಿಗೆ (ನಾ). ನೊಗವನ್ನು ಎತ್ತಿನ ಕೊರಳಿಗೆ ಸೇರಿಸಿ ಕಟ್ಟುವ ಹಗ್ಗ : "ಆಬಂಧಃ, ಯೋತ್ರಂ, ಯೋಕ್ತ್ರಃ ಎಂದೊಡೆ ಮಿಳಿ; ಜೊತ್ತಗೆ ಎಂದೂ ಎಂಬರು" (ನಾಚಿರಾ. ೬) ; "ಜೊತ್ತಗೆ – ಯೋಕ್ತ್ರಕ = ಮಿಳಿ (ಜತ್ತಿಗೆ, ಚೊತ್ತಿಗೆ)" (ಶಬ್ದಕೋ. ೦೫) : ಕೊರಳ ಜೊತ್ತಗೆ ಸುರುಚಿರ ಬೆನ್ನ ಮಿಣಿ ಮತ್ತುರದೊಳು ಪೊನ್ನ ಘಂಟೆಗಳು (ಅಂಜಿಚ. ೬-೯೮) ; ಬಿಗಿದ ಬಲುಹೋರಿಯ ಕೊರಳ ಜೊತ್ತ[ಪಾಠಾಂ. ತ್ರಿ]ಗೆಗಳಂ ಪಱಿ ಪಱಿ ನಿಮಿಷದರಲಿ ಬಗೆಯದಿನ್ನಿರದೆಯ್ದುಸುತ್ತಂ ಮುತ್ತಿ ಕೈಕೊಳ್ಳಿ (ಬಸಪು. ೫೬-೨೮) : ರಥಹಯದ ವಾಘೆಯ ಜೀನಗೆಲಸದ ಹಕ್ಕರಿಕೆಗಳ ನೊಗನ ಜೊತ್ತಗೆಯ ಭಾನುಸುತ ಮುಱಿಯೆಚ್ಚು (ಕುಮ್ಯಾಕ. ೨೪-೪) : ಹರಿದ

ಕೂರಂಬುಗಳು ಸಿಂಹಗಳೆರಡು ಜೊತ್ತ್ರಗೆಗಡಿಯ ಹರಿಗಳು ಹರಿದವತ್ತಿತ್ತ್ರಲು (ಸಾಳ್ವಭಾ. ೧೯-೦೬). ಚೊತ್ತ್ರಿಗೆ: ಮೇಲಿನ 'ತದ್ಭ ಕೋ' ಪ್ರಯೋಗವನ್ನು ನೋಡಿ. ಜತಿಗೆ: ಎತ್ತಿನ ಕೊರಳಿಗೆ ಕಟ್ಟಿದ್ದ ಜತಿಗೆ ಹರಿಯಿತು (ಕಪತು. ೪-೦೬): ಬಂಡಿ ಹೊಡೆಯುವ ಒಕ್ಕಲಿಗ ಎತ್ತಿನ ಕೊರಳಿನ ಜತಿಗೆಗಳನ್ನುಚ್ಚಿ ಮೆಲ್ಲನೆ 'ನಗ'ವನ್ನು ನೆಲಕ್ಕಿಟ್ಟ (ಅರಿಯೂ. ೮). ಜತ್ತ್ರಿಗೆ: ಎತ್ತಿನ ಜತ್ತ್ರಿಗೆಯ ಬಿಟ್ಟು ಚಕ್ಕಡಿಯ ಭಂಡಿಗಳ ಈಸಿನ ಮೋಕು ಹಿಡಿದು ಮೇಲಕ್ಕೆ ಎತ್ತಿ (ಕೃಷಿಪ್ರ. ೩೩). ಜೊತಕ: ಹಗಲೊಳು ನೇಗಿಲು ಜೊತಕವ ಹೊತ್ತು ಮುಂದೆ ನಡೆಯುತಿರೆ ಜೋಡಿಯ ಎತ್ತು ರೈತನು ಗದ್ದೆಯ ಸೇರುವನು (ಕದಳಿ. ೭-೨೦). ಜೊತಗ: ನಾನು ಜೊತಗ ಮಿಣಿ ತೆಗೆದುಕೊಂಡು ಗದ್ದೆಗೆ ಹೋಗುತ್ತೇನೆ (ಗಂಗಾಳ. ೮೮). ಜೊತ್ತ್ರಗ: ಮಹಾಗಜದಂಗೋಪಾಂಗಗಳೋಳ್ತೊಡರ್ಚಿದ ಮಿಳಿ ಪೊರಜೆ ಜೊತ್ತ್ರಗಂಗಳುಮಂ ನಿಲುನಿಲುಕಿ ಪೊಯ್ವೊಯ್ದು ಕತ್ತರಿಸಿ (ಕಕನ್ನ. ೨-೩೮). ಜೊತ್ತ್ರಿಗೆ: ಹೊನ್ನ ನೇಣಿನ ಜೊತ್ತ್ರಿಗೆಯ ಪಿಡಿದಂದದಿಂದಡರಿದರು ಮಾವುತರು (ಸಂಭಹ. ೨೦-೧೧); ಕೊರಳಿಗೆ ಬೀಳುವ ಜೊತ್ತ್ರಿಗೆ ಮೆಱೆದು ಮರ್ತಿಯಲಿ (ಕಂನವಿ. ೧೧-೦೩೫). [ <ಸಂ. ಯೋಕ್ತ್ರಕ, ಯೋತ್ರಕ ]

**ಜೊತ್ರಾಯ** (ನಾ). ರುಜುಮಾತು; ಪ್ರಮಾಣ: ಶ್ರುತಿಯ ಮಾತಂ ಧರೆಗೆ ಜೊತ್ರಾಯಗೈದು ತೋರಿದ (ಪಂಕಾರಾ. ೨-೩೩-೨೪). [ಜೊತ್ತು₁+ಆಯ ?]

**ಜೊತ್ರಿಗೆ** 'ಜೊತ್ರಗ' ನೋ.

**ಜೊತ್ರಿಸು** (ಕ್ರಿ). ೧. ವಂಚಿಸು ; ಮೋಸಗೊಳಿಸು : ಎತ್ತಿಪೆವೆಂದು ದೇಗುಲವ ಸುತ್ತಿನ ಮಾತನೆ ತೋಱಿ ಲೋಗರಂ ಜೊತ್ರಿಸಿ ದ್ರವ್ಯಮಂ ಕಳೆದುಕೊಂಬರೊಳೀಂ (ಎಕ. VI, ಕಡೂರು.೦೨೭-೨೮; 1202). ೨. ಮರುಳು ಮಾಡು; ಮೋಹಗೊಳಿಸು: ಮುತ್ತಿನ ಪೊಸದುಡಿಗೆ ತಳಿರ ಸೋಮರ್ಪುಡಿ ಪನವಮಂ ಪತ್ರಿಸಿ ಜೊತ್ರಿಸೆ (ಪಂಪಭಾ. ೫-೩೯); ನಿತಂಬಿನಿ ನಾನಾಪ್ರಕಾರದ ತತ್ತ್ರಮಣಂಗಳಿಂ ಜೊತ್ರಿಸಿ ವಶೀಕೃತಂ ಮಾಡಿ (ಸುಕುಮಾ. ೭-೦೩ ವ); ಕೂಸುಗಳಂ ಮುದ್ದಾಡಿಸಿ ದೇಸಿಯ ಮಾತುಗಳನಾಡಿ ಪೆರ್ಚಿಸಿ ಪೆಱರಂ ಲೇಸಾಗಿ ತನಗೆ ಜೊತ್ರಿಸುವಾಶಾಪರಂ (ಧರ್ಮಾಮೃ. ೫-೯೦).

[ ಜೊತ್ತು₃ + – ಇಸು₃ ]

**ಜೊತ್ತು₁, ಜತ್ತು** (ನಾ). ಜೊತೆ ; ಜೋಡಿ: ಜವ್ವನದ ಜೊತ್ತೊ ಸವಿವೆಡಂಗಿನ ಬಿತ್ತೊ ನವ ಪರಿಮಳದ ಮುತ್ತೋ (ಗುರುಳ. ೭-೦೬). ಜತ್ತು: ಜತ್ತು ಹೆಂಡತಿ ಮೇಲೆ ಮತ್ತೆ ಸೂಳೆಯು ಏಕೆ (ಸರ್ವಜ್ಞ. ೧೯೪೬).

**ಜೊತ್ತಾಗು, ಜತ್ತಾಗು** = ಜೊತೆಯಾಗು ; ಜೋಡಿಯಾಗು : ಕೂಗಿ ಬೊಬ್ಬಿಱಿದರುಬ್ಬರ ಸಿಡಿಲ್ಕೋಟಿ ಜೊತ್ತಾಗಿ ಗರ್ಜಿಸುವಂತೆ ಬಲರು (ಮೋಹತ. ೩೫-೧೯): ಒತ್ತಿ ಹಿಡಿದ ಕಂಭ ವ್ಯರ್ಥವಾದ ಮೇಲಿನ್ನೇನಿನ್ನೇನು ಜತ್ತಾದ ಜನರೆಲ್ಲ ಜರಿದು ಪೋದ ಮೇಲಿನ್ನೇನಿನ್ನೇನು (ಪುರಂದ. ೪-೦೨೪-೨); ಮುತ್ತು ಮಾಣಿಕದ ರಥದ ಮೇಲೆ ಮುರಹರನು ಬಾಲೆ ಜತ್ತಾಗಿ ಕುಳ್ಳಿರೆ (ಶ್ರೀಕೃಪಾ. ೯೯); ರಂಗೊಂದು ದಂಗೊಂದು ಗುಂಗೊಂದು ಒಂದಕ್ಕೊಂದು ಹತ್ತಾಗಿ ಜತ್ತಾಗಿ ಸುಳಿಧಾಂಗ (ಸೂಳಗೀ. ೫೨-೬).

[<ಪ್ರಾ. ಜುತ್ತ. / ಸಂ. ಯುಕ್ತ ]

**ಜೊತ್ತು₂** (ನಾ). ೧. ನೆಲೆ; ಆಶ್ರಯಸ್ಥಾನ; ಗೊತ್ತು: ಬಹುವಿಧ ಕರ್ಮ ನಿಕರದ ಜೊತ್ತು ತನುವಿದನಾರು ನಂಬುವರವ್ವ (ನಿಭಾಗ. ೩-೧೪-೩೫): ಶಿವನ ಬಯಕೆಯ ಗೊತ್ತು ಶಿವನ ತನುವಿನ ಜೊತ್ತು (ಚಬಪು. ೩೪-೯). ೨. ಸಾಲು; ಶ್ರೇಣಿ: ಹೊಳೆಹೊಳೆವ ಬೈತಲೆಯ ಮುತ್ತುಗಳ ಜೊತ್ತುಗಳ ಫಲಫಲನೆ ಮೊರೆವಂದುಗಾವಳಿಯ . . . ಗಿರಿಜಾತೆ ರಂಜಿಸಿದಳು (ಚಿದಪು. ೩೭-೨೩): ಜೊತ್ತಿನ ಸೂಳುವಾಳಿಯೊಳಂಗನೆಯರ್ಯೆದಿದರು ಗೋಪತಿಯ (ಅಕ್ರೂಚ. ೪-೧೫). [ ? ]

**ಜೊತ್ತು₃** (ನಾ). ೧. ವಂಚನೆ ; ಮೋಸ ; ಕುಯುಕ್ತಿ ; ತಂತ್ರ : ನಿಮ್ಮ ಜೊತ್ತ್ರನ್ನನೇನಂ ಮಾಡಲಾರ್ಪುದು (ನಂಬಿರ. ೭-೮೩). ೨. ಮರುಳುಗೊಳಿಸುವಿಕೆ ; ಮೋಹಗೊಳಿಸುವಿಕೆ (?) : ಹುರುಡು ಹೋರಟೆ ಹೊತ್ತು ಜೊತ್ತು ಗನ್ನಂ ಗತಕ ಪರಿರಂಭಣಂ . . . ರತಿಪ್ರಾರಂಭದೊಳು ಪಸರಿಸೆ (ಹದಕಾ. ೪-೩೫) ; ಪುರುಡುಂ ಪೋರಟೆವೆತ್ತು ಜೊತ್ತು ಗತಕಂ ಗನ್ನಂ . . . ಪಿರಿದುಣ್ಮಲ್ ವಧು ನಲ್ಲನೊಳ್ ನೆರೆವುತಿರ್ದಳು (ಶ್ರೀಪುವಿ. ೨೪-೧೮೦). [ ? ]

**ಜೊತ್ತುಗಾಱ, ಜೊತ್ತ್ರಗಾಱ** (ನಾ). ಜೂಜಾಡುವವನು ; ದ್ಯೂತಕಾರ: ಸದರದೆ ದಾಯಮಂ ಪಿಡಿವ ಎತ್ತ್ರಮನೊಡ್ಡುವ ಜೊತ್ತುಗಾಱರಿಂ (ದಶಕು. ೮-೮೯). ಜೊತ್ತ್ರಗಾಱ : ಗುಪ್ತದಿ ಮಂಚಿಗನ ಜೊತ್ತ್ರಗಾಱರು ಗಳ್ಳಿದೆ ಬಂದು (ಸಿಂಗಿರಾ. ೧೯-೧೧). [ <ಸಂ. ದ್ಯೂತಕಾರ ]

**ಜೊನ್ನ** (ನಾ). ೧. ಚಂದ್ರನ ಬೆಳಕು ; ಬೆಳುದಿಂಗಳು : ಒಂದೆಡೆಯೊಳ್ ನೆಲಸಿರ್ದ ಕಾಳಮುಮಂ ಜೊನ್ನಮುಮಂ (ಅಜಿಪು. ೯-೨೧) : ಪುದಿಯೆ . . . ಜೊನ್ನದ ಸಿರಿ ಕಾರ ಕಾರಿರುಳ ಮೆಯ್ಸುರಿ ತಪ್ಪದೆನಲ್ ದಿಗಂತಮಂ (ಪಂಪಾಮಾ. ೯-೪೪) : ಇಳೆಯೊಳ್ ಪಾರ್ವತಿ ಜನಿಯಿಸೆ ಕಳೆಯೇಱಿದನಿಂದು ಜೊನ್ನಮಲರ್ದುದು (ಗಿರಿಕ. ೩-೪೬) : ಥಳಥಳಿಪ ನಗೆಮೊಗದ ಬೆಳಗಿನ ಬೆಳಪ ಜೊನ್ನವ ಹಸರಿಸುತ (ಸಾಳ್ವಭಾ. ೩೨-೧೬) ; ಪೆಱೆಮೊಗದ ನಗೆ ಜೊನ್ನಮಂ ಕೂಡಿ ಸುಯ್ಯೆಲರ ನಱುಗಂಪನೂಡಿ (ರಾಮಾಶ್ವ. ೯-೧೬). ೨. ಪಾಡ್ಯದಿಂದ ಪೌರ್ಣಿಮೆವರೆಗಿನ ಕಾಲ; ಶುಕ್ಲಪಕ್ಷ: ಅಟವಿಶ್ರೀಯುಂ ಜೊನ್ನದ ಪಾಡಿವದೊಳಂ ಕಾಲದಷ್ಟಮಿಯೊಳಮೈದು ವರ್ಷಂಬರಂ ನೋಂಪ ಪ್ರವೃದ್ಧ ಕಲ್ಯಾಣಮನೆತ್ತಿಕೊಂಡಳ್ (ಚಾವುಂಪು. ೮೭-೨೦) ; ಸೌಮ್ಯಗಣಂ ಜೊನ್ನದೊಳನ್ಯರುಂ ಬಹುಳದೊಳ್ ನಿವ್ಯಾಜದಿಂ ಬಲ್ಲಿದರ್ (ಜಾತಕತಿ. ೨-೧೧) ; ಜೊನ್ನದಂದಿನ ಪೆಱೆಯಂದದೆ ನೊಕ್ಕಮತ್ತ್ರರೋತ್ತ್ರರಮಾದಂ (ಎಕ. VII, ಶಿವಮೊ. ೧೧-೪೪ ; 1085 ?) : ಮುದದಿಂದಾಶ್ವಯುಜದ ಜೊನ್ನದ ದಸಮಿಯೊಳಿಂದ್ರಧನುವಿನೊಳ್ . . . ಮುಟ್ಟೆ ಕೊಳ್ಗುಂ (ಅಟ್ಟಮ. ೮-೦೭೦). [ <ಪ್ರಾ. ಜೋಣ್ಹಾ. / ಸಂ. ಜ್ಯೋತ್ಸ್ನಾ ]

**ಜೊನ್ನಪಾಡಿವ** (ನಾ). ಶುಕ್ಲಪಕ್ಷದ ಪಾಡ್ಯ; ಪ್ರತಿಪದೆ: ಅಟವಿಶ್ರೀಯುಂ ತನ್ನ ನೋಂಪಿಯ ಜೊನ್ನಪಾಡಿವದೊಳುಪವಾಸಂಗೆಯ್ದು (ಚಾವುಂಪು. ೫೭).

[ ಜೊನ್ನ + ಪಾಡಿವ ]

**ಜೊನ್ನರಸ** (ನಾ). ಬೆಳುದಿಂಗಳ ಒಡೆಯ ; ಚಂದ್ರ : ಜ್ಯೋತಿಸ್ವರೂಪ ಜೊನ್ನರಸನ ಪಗಲಾಣ್ಮನಾತತತೇಜೋಭಿರಾಮ (ಭರತ. ೪೫-೧).

[ ಜೊನ್ನ + ಅರಸ₁ ]

**ಜೊನ್ನವಕ್ಕಿ** (ನಾ). ಬೆಳುದಿಂಗಳನ್ನು ಸೇವಿಸಿ ಜೀವಿಸುವುದೆಂದು ಭಾವಿಸಲಾದ ಹಕ್ಕಿ ; ಚಕೋರ : "ಜೊನ್ನವಕ್ಕಿ = ಚಕೋರಂ" (ಕಮದ. ಶಬ್ದ. ೨) : "ತಣ್ಗದಿರವಕ್ಕಿ ಜೊನ್ನವಕ್ಕಿಯು ಚಕೋರಂ" (ಶಬ್ದಮಂ. ೨೯) ; ಜೊನ್ನವಕ್ಕಿಗೆ ಬೆಳ್ದಿಂಗಳ ಸಾರಮಂ ಕಱೆಯುತುಂ . . . ಮೆಯ್ದೋಱಿದಂ ಚಂದ್ರಮಂ (ದಶಕು. ೮-೨೫೯) : ಮುತ್ತಿನ ಪಳುಕಿನ ಧವಳವರ್ಣಗಳ ಬೆಳುದಿಂಗಳಿಂದಾಗ ಜೊನ್ನಪಕ್ಕಿಗಳೈದಿ ನೆಲಸಿದುವತಿಮುದದಿಂದ (ಕಂನವಿ. ೭-೩) : [ ಜೊನ್ನ + ಪಕ್ಕಿ₁ ]

**ಜೊನ್ನೊಡಲ** (ನಾ). ೧. ಬೆಳುದಿಂಗಳು ಹೊಮ್ಮುವ ಒಡಲುಳ್ಳವನು ; ಚಂದ್ರ : "ಚಳಿಗದಿರಂ . . . ಜೊನ್ನೊಡಲನ್ಯಕಿಲ್ವೆಳಗಂ ತಣ್ಗದಿರ ಮಂಜುಗೈಯಂ ಚಾದಂ" (ಕವಿಕಂ. ೪೩) ; ಜೊನ್ನೊಡಲನ ತಿರಸ್ಕರಿಸುವ ಕೊರ್ವಳು ಕರ್ನೆಯ್ದಿಲ ಕಣ್ಣ ಕಾಂತೆ (ಮೋಹತ. ೯-೧೪) : ಜೊನ್ನೊಡಲಂ ನಿಮಿರ್ಚಿದಪನಗ್ನಿಯ ತಣ್ಗದಿರಿಂದಂ (ಶಾಕುಂತ. ೩೨-೭). ೨. (?): ಮುಗಿಲಂ ಕಂಡ ಜೊನ್ನೊಡಲನಂತೆ ಪೊಂಗಿ ಪೊಱೆಯೋಱೆ (ಉದ್ಭಟ. ೧೧-೫೫ ವ).

ಜೊನ್ನೊಡಲನಳಿಯ = ಚಂದ್ರನ ಸೋದರಳಿಯ ; ಮನ್ಮಥ ; ಕಾಮ : "ಅಲರ್ಗಣೆಯ ಜೊನ್ನೊಡಲನಳಿಯಂ ದಪ್ಪಕಂ ಮಯಣನೆಂಬಿ ವಿಂತೊಡನೆ ಮನ್ಮಥ ನಾಮವು" (ಶಬ್ದಮಂ. ೮).

[ ಜೊನ್ನ + ಒಡಲ್ + – ಅ$_7$ ]

**ಜೊನ್ನೊಡಲವಚ್ಚ** (ನಾ). ಚಂದ್ರನನ್ನೇ ಆಭರಣವಾಗುಳ್ಳವನು; ಶಿವ: ಮುದ್ದಿಸುವ ಜೊನ್ನೊಡಲವಚ್ಚಂಗೆ ಬೆಚ್ಚುತ್ತೆ ಮಣಿದು (ಕೊಟ್ಟೂಬ. ೧-೮೦). [ ಜೊನ್ನೊಡಲ + ವಚ್ಚ$_2$ ]

**ಜೊಬ್ಬ** (ನಾ). (?) : ಹಬ್ಬದಲು ದೇವತೆಗಳುಂಬರು ಜೊಬ್ಬದಲು ದಾನವ ರುಂಬರು ಸಬ್ಬದಿನದಲು ಮನುಜರುಂಬರದೆಂದು ಋಷಿ ನುಡಿದ (ಸಂಭಪ. ೩-೩೨). [ ? ]

**ಜೊಮ್ಮನೆ, ಚೊಮ್ಮನೆ, ಝೊಮ್ಮನೆ** (ಅ). ಆಯಾಸದಿಂದ ಕೂಡಿ ; ಬಳಲಿ; ಸೋತು: ಜೊಮ್ಮನೆ ಜೋವೇಱಿದ ತೋಳ್ಗಳಂ ನಿಮಿರ್ವ ವೋಲ್ (ಶಿಲಾವ. ೪-೧೧೧). **ಚೊಮ್ಮನೆ:** ಅಬ್ಬಱಿಂ ಚೊಮ್ಮನೆ ಜೊಲ್ಲಂ ತಪ್ಪಿಕೊಂಡು (ಧರ್ಮಾಮೃ. ೬-೧೬೫). **ಝೊಮ್ಮನೆ:** ಮೂಡಿ ಮನ್ಮಥ ವಾರಿ ವಿಗೆ ತುಳ್ಕಾಡಿ ಝೊಮ್ಮನೆ ಬೆಮರಿ ನಾಣ್ಗೆಟ್ಟೋಡಿ (ಜಾಳ್ಕಿಥಾ. ೨೬-೩೪).

**ಜೊಮ್ಮನೆವೋಗು, ಜೊಮ್ಮನೆವೋಗು**=ಚಲನೆಯಿಲ್ಲದಿರು; ಜಡವಾಗು: ಮೆಯ್ ಪಸಿದು ಜೊಮ್ಮನೆ [ಪಾಠಾಂ. ಜೋಂಪನೆ] ಪೋದವುದು (ಶಂಕರಾ. ೩-೭೦); ಆ ದಂಪತಿಗಳ್ ಜೊಮ್ಮನೆವೋದಂತಿರ್ದವರ . . . ಬೆಡಂಗಂ ನೋಡಿದರ್ (ಆದಿಪು. ೩-೬೩): ಚಕಿತಮೃಗಾಕ್ಷಿ ನೀನೆಳಸಿ ಕೆಮ್ಮನೆ ಜೊಮ್ಮನೆವೋಗಿ ಭಾವದಿಂ ಪ್ರಕಟಸಲೇಕೆ ಪಾಱುತನಮಂ (ಪುಷ್ಪಪು.೩-೩೪).

[ ಜೊಮ್ಮು$_1$ (<ಜೊಂಪು$_1$) + – ಅನೆ$_1$ ]

**ಜೊಮ್ಮಿಡು** (ಕ್ರಿ). ಆಯಾಸಪಡು ; ಬಳಲು : ಜೊಮ್ಮಿಡುತ ಜೋಲುತ್ತ (ಅನಾರ. ದೇ. ೧೮೨-೨೦). [ ಜೊಮ್ಮು$_1$ (<ಜೊಂಪು$_1$) + ಇಡು$_1$ ]

**ಜೊಮ್ಮು$_1$** 'ಜೊಂಪು$_1$' ನೋ.

**ಜೊಮ್ಮು$_2$** 'ಜುಮ್ಮು$_3$' ನೋ.

**ಜೊಮ್ಮುತಟ್ಟು** (ಕ್ರಿ).=ಜೊಮ್ಮುವಿಡಿ : ರಕ್ತಸಂಚಾರವಿಲ್ಲದಾಗ ಕೈಕಾಲು ಗಳಿಗೆ ಜೊಮ್ಮುತಟ್ಟುವಂತೆ (ಬಳುಮ. ೨೫೭).

[ ಜೊಮ್ಮು$_1$ (<ಜೊಂಪು$_1$) + ತಟ್ಟು$_1$ ]

**ಜೊಮ್ಮುಮೈ** (ನಾ). ಮರಗಟ್ಟಿದ ದೇಹ: ಶಕ್ತಿಸಂಚಾರವಿಲ್ಲದ ಇವನಿಗೆ 'ಜೊಮ್ಮುಮೈ' ಬಂದಿದೆ (ಬಳುಮ. ೨೫೭).

[ ಜೊಮ್ಮು$_2$ (<ಜುಮ್ಮು$_3$) + ಮೈ (<ಮೆಯ್) ]

**ಜೊಮ್ಮುವಿಡಿ** (ಕ್ರಿ). ಮೈಮರೆವನ್ನು ಹೊಂದು: ಅತಿಚಿಂತೆಯೊಳು ಮುಱಿದ ತನು ಜೊಮ್ಮುವಿಡಿದ ಪುರ್ಬಿಭಾರವಾಗಿ (ಹರಿಕಾ. ೬-೫೯).

[ ಜೊಮ್ಮು$_1$ (<ಜೊಂಪು$_1$) + ಪಿಡಿ$_1$ ]

**ಜೊಮ್ಮೆನ್ನು** (ಕ್ರಿ). ಜೊಮ್ ಎಂದು ಶಬ್ದಮಾಡು ; ನೊಣ, ಜೇನೊಣ ಮೊದಲಾದುವು ಗುಂಪಾಗಿ ಆವರಿಸುವಾಗ ಅವುಗಳ ರೆಕ್ಕೆಗಳಿಂದ ಶಬ್ದವುಂಟಾಗು : ಜೊಮ್ಮೆಂದು ನೊಣ ಮುತ್ತಿದುವು (ರೂಢಿ).

[ ಜೊಮ್$_0$ + ಎನ್ನು (<ಎನ್$_1$) ]

**ಜೊಮ್ಮೇಱು, ಜುಮ್ಮೇರು** (ಕ್ರಿ). ಮಂಕಾಗು; ಮೈಮರೆ: ತಾಱಿಮಱಗೆ ಜಯಂ ಜೊಮ್ಮೇಱುವ ಟೆಂಟಣಿಸುವರಸನರಸನೆ ವಿರಸಂ (ಶಾಂತಿಪು. ೨-೪೦). **ಜುಮ್ಮೇರು:** ಸಂತಾಪದುರಿ ಪೆರ್ಚಿ ಹೃದಯ ತಲ್ಲಣಿಸಿ ಜುಮ್ಮೇರಿ (ನವಮೋ. ೨೩-೮೦). [ಜೊಮ್ಮು$_1$ (<ಜೊಂಪು$_1$)+ಏಱು$_1$ (<ಏಱ್$_1$)]

**ಜೊಯ್ಗಱಿ** (ಕ್ರಿ). (?) : ಕರಿಕೋಡನಗುಳ್ದ ಬೇತಾಳರ ಬಳಗದಂತೆ ನೆರದು ಜೊಯ್ಗಱಿವ ದಾರಿದ್ರ್ಯದಾರವೆಯಂತೆ ತಲೆದಱಿಸಿಕೊಂಡು ಜೋನೆಗರ ಜಂಗುಳಿಯಂತೆ (ವಾಗೀರ. ದೇ. ೨೩೪-೦೪). [ ಜೊಯ್$_0$ + ಕಱಿ$_1$ ]

**ಜೊಲ್ಲಯ** 'ಚೊಲ್ಲೆಯ$_1$' ನೋ.

**ಜೊಲ್ಲಿಕೆ** (ನಾ). ಒಂದು ಬಗೆಯ ಭಕ್ಷ್ಯ: ಸೇವಗೆಯು ಕರಮೆಸೆವ ಸಜ್ಜಿಗೆಯು . . . ಹೂರಣದ ಜೊಲ್ಲಿಕೆಯ ಕರಿವುಗಳ (೦ಂಗಪು. ೬-೪೬). [ ? ]

**ಜೊಲ್ಲು, ಜಲ್ಲು$_3$** (ನಾ). ಬಾಯಿಂದ ಊರುವ ನೀರು ; ಲಾಲಾರಸ : ಜೊಲ್ಲು ಸುರಿವ ಮುದ್ದುಮೊಗದಲ್ಲಿ ನಗೆಯಾಂತು ಸೊಲ್ಲಿಸುವನು ತೊದಳ್ನುಡಿಯ (ಪೋಹಚ. ೧೬-೬೫) ; ಪೊಳೆವಲ್ಲು ಜೊಲ್ಲಂ ಪೊಳೆಯೆ ನಸುನಗುತ್ತುಂ ಬಾಲಲೀಲೆಯಂ ತೋಱಿಸಿದನು (ಹಲಪು. ೩-೪೦) ; ಮುಂದಲೆಯ ಕಂಪನಾಘ್ರಾಣಿಸಿ ತೊಱೆದ ಜೊಲ್ಲ ಚೆಂದುಟಿಯ ಬಾಯ್ದೆಱೆ ಯನ್ನದೆ ಚುಂಬಿಸಿ (ಕೃಮಿಥಾ. ೧೮-೨೦); ಮಾಸಿದ ಸೀರೆ ಮುಸಿಯ ತಿಲಕದ ಹೊಱಸೂಸುವ ಬಾಯ ಜೊಲ್ಲಿಂದ . . . ಮುದಿವೇಶಿಯರೆಡೆಯಾಡು ತಿಹರು (ಕಂಸವಿ. ೬-೦೯೧). **ಜಲ್ಲು$_3$ :** ಕೆಲರ ಬಾಯೊಳು ಜಲ್ಲು ಜೋರಿ ದುತಾ ಬಲಿತ ದೃಷ್ಟಿಯ ತೆಗೆವ ಚೇತನಗೊಳದೆ (ಜನಥಾ. ೧೯-೩೨) ; ನಗುತೋಲಾಡುವರ ನೋಡುತ ಮಾನವೇಶರು ನಾಂಚಿ ಜಲ್ಲೊರಸಿ (ಜನಮು. ೪-೪೦).

[ ದೇ.೩ ತಮಿ. ಚೊಳ್ಳು; ತುಳು. ಜೊಲ್ಲೆ, ದೊಲ್ಲೆ, ದೊಳ್ಳೆ ; ತೆಲು. ಜೊಲ್ಲು, ಚೊಲ್ಲು ]

**ಜೊಲ್ಲುತನ** (ನಾ). ೧. ಜೊಲ್ಲಂ ಸುರಿಸುವಿಕೆ. ೨. (ಆಲಂ) ಲಂಪಟತೆ: ಶೃಂಗಾರಪ್ರಧಾನವಿದ್ದರೆ ಅದರ ಬಲಿಗೆ ಬೀಳದೆ ಎಸರೊಸೆವ ಜೊಲ್ಲುತನ ಗೆದ್ದು ರಸಿಕರಾಗಿ ಹಾಡಿದ್ದಾರೆ (ಕನ್ನಕಾ. ೯೬).

[ ಜೊಲ್ಲು + – ತನ ]

**ಜೊಲ್ಲುವಾಯ್, ಜೊಲ್ಲುವಾಯಿ** (ನಾ). ಜೊಲ್ಲು ಸುರಿಯುತ್ತಿರುವ ಬಾಯಿ : ತೆರೆ ಮುಸುಂಕಿದ ಮುಖಂ ಮುಱಿದ ಬೆನ್ ಜೊಲ್ಲುವಾಯ್ [ಪಾಠಾಂ. ಬೆನ್ನೊಲ್ವಾಯ] ಒರಿದು ಕಂಪಿಸುವ ಪಲ್ (ಸಮ್ಯಕೌ. ೧೦-೪೬). **ಜೊಲ್ಲುವಾಯಿ :** ಮುಕ್ಕುಳಿಸುವ ಜೊಲ್ಲುವಾಯಿಗೆ ಕಡುನೇಹ ಸೊಕ್ಕಾಂತು ಮುತ್ತನಿಕ್ಕುವಳು (ಪೋಹಚ. ೧೬-೬೭).

[ ಜೊಲ್ಲು + ಬಾಯ್ ]

**ಜೊಲ್ಲುವಾಯಿ** 'ಜೊಲ್ಲುವಾಯ್' ನೋ.

**ಜೊಲ್ಲುಸುರಿಸು** (ಕ್ರಿ). ಬಾಯಲ್ಲಿ ನೀರು ಸುರಿಸು : ಸ್ವಾಭಾವಿಕವಾಗಿ ಆಹಾರ ಕಂಡೊಡನೆ ನಾಯಿಯೊಂದು ಜೊಲ್ಲುಸುರಿಸುತ್ತದೆ (ಶಿಕ್ಷಂ. ೪೨೮).

[ ಜೊಲ್ಲು + ಸುರಿಸು ]

**ಜೊಲ್ಲೆ** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_1$** 'ಚೊಲ್ಲೆಯ$_1$' ನೋ.

**ಜೊಲ್ಲೆಯ$_2$** (ನಾ). ಒಂದು ಸ್ಥಳದ ಹೆಸರು (?): ಪಾವುಳ ಪರಿವಾರದ ಮನೆಯುಂ ದೇವರೊಡಮೆ ನಿವೇದ್ಯಕ್ಕೆ ಜೊಲ್ಲೆಯದಲು ಗರ್ದ್ದೆ ಕೋಲ ಮತ್ತರು ೧ (ಪಾಂದೇಶ್. ೩-೨೨ ವ ; 1047). [ ? ]

**ಜೊಲ್ಲೆಹ** 'ಚೊಲ್ಲೆಯ$_1$' ನೋ.

**ಜೊಸೆ** 'ಜೋಸೆ' ನೋ.

**ಜೊಳಜೊಳ** (ನಾ). ಒಂದು ಅನುಕರಣ ಶಬ್ದ; ಜೋಳವೆಲ್ಲಾ ಚೀಲದಿಂದ ಜೊಳಜೊಳ ಎಂದು ಸುರಿದುಹೋಯಿತು (ರೂಢಿ).

**ಜೊಳಿಪಿಳಿ** (ನಾ). (ಉಕ) ಸಡಿಲವಾಗಿರುವುದು ; ದೊಗಲೆ ; ಅಳ್ಳಕ ವಾದುದು : ಆಕೆಯ ಹೊಸಬಗೆಯ ಉಡುಪು ಬಹಳ ಜೊಳಿಪಿಳಿಯಾಗಿದೆ (ರೂಢಿ). [ ? ]

**ಜೊಳ್ಳು** 'ಜಳ್ಳು' ನೋ.

**ಜೊಳ್ಳುಗಾಳು** 'ಜಳ್ಳುಕಾಳು' ನೋ.

**ಜೊಳ್ಳೆ** (ನಾ). ತಿರುಳಿಲ್ಲದುದು ; ನಿಸ್ಸಾರವಾದುದು; ಜೊಳ್ಳಾದುದು. 'ಅಳ್ಳೆಜೊಳ್ಳೆತನ', 'ಅಳ್ಳೆಜೊಳ್ಳೆಯ' ಪರಾ. [ <ಜೊಳ್ಳು ]

**ಜೊಬ್** (ನಾ). ಒಂದಂ ಅನುಕರಣ ಪದ : ಜೊಬ್ಬೆಂಬ ಧುಮ್ಮೆಂಬ . . . .ಭೋರೆಂಬ ಕೂರಸಿಗಳುರವಣೆಯ ದನಿಯಡಸುತಂ ಪುಟ್ಟೆ (ಇಹರ.ದೀ. ೪೦-೨೪) ; ಧಳಧಳಂ ಜೊಬ್ಬೆಂ[ಪಾಠಾಂ. ಜೋಬೆಂ]ಬ . . . ಧ್ವನಿಗಳವನಿಗೆ ಭಯವನೀವುತಿರೆ (ಶಾನಂಪ. ೮-೧೩).

**ಜೋ, ಜೊ** (ನಾ). ಮಕ್ಕಳನ್ನು ತೊಟ್ಟಿಲಲ್ಲಿಟ್ಟು ತೂಗುವಾಗ ಹೇಳುವ ಮಾತು; ಜೋಗುಳದ ಧ್ವನಿ: ತೂಗಿದರಚ್ಯುತ ಜೋ ಮಹಾತ್ಮ ಜೋ ಸದಮಲಬೋಧ ಜೋ . . . ಎನುತಂ ಲತಾಂಗಿಯರ್ (ಜಗವಿ. ೩-೨೮): ಜೋ ಸಂಪದೆ ಜೋ ವಿಶಾಲೆ ಜೋ ಶಿವೆ (ಗಿರಿಕ. ೩-೬೮) ; ಸಸಿಯ ಕೊರಗಿಸಿ ರಸವ ಹಿಳಿದುಕೊಂಡಿಳೆಗೊಗುವ ಹಸುಳೆ ಜೋ ಒಡಹುಟ್ಟಿದರ ನಗಲ್ಬ ನಿರ್ವೋಹಿ ಜೋ (ಸಿದ್ಧರಾ. ೦-೩೯). **ಜೊ :** ಕಂದ ಜೊ ಸೋಮವಂಶಾಂಬುಧಿ ಪರಿಪೂರ್ಣೇಂದು ಜೊ . . . ಎಂದು ಪಾಡಿದರು (ಕಂನವಿ ೪.೬೪).

**ಜೋಜೋ** (ದ್ವಿರುಕ್ತಿ): ಜೋಜೋ ಶ್ರೀಕೃಷ್ಣ ಪರಮಾನಂದ ಜೋಜೋ (ಪುರಂದ. ೧-೧೨೮ ಪಲ್ಲವಿ) ; ನಳಿನಲೋಚನ ಕಂದ ಜೋಜೋ ಚೆಲುವ ಚೆನ್ನಿಗ ಕಬುವೆ ಜೋಜೋ (ಶಾಳ್ವಭಾ. ೦೧-೨೫) : ಜೋಜೋ ಮಹಾವೀರ ಶೈವೋದ್ಧರಣ ಕೀರ್ತಿ ಜೋಜೋ (ಚಬಪು.೫-೨೯); ಜೋಜೋ ಮೂಲೋಕದ ಶಿರೋಮಣಿಯ ಜೋಜೋ (ನವಪೋ. ೦೫-೪೦).

[ ದೇ.೩ ತುಳು. ತೆಲು. / ಮರಾ. ಜೋ ]

**ಜೋಂಕೆ** (ನಾ).(?): ಎಚಿಗದರಾತಿರಾಯ × × × ಪರಜೋಂಕೆಯಬ್ಬಿನಂ ಕಿಚ್ಚಿಟ ಭುಜಾಸಿಯಂ ಜಸಮನೆಣ್ದೆಸೆಯಾನೆಯ . . . ಸಮಗ್ರ ಸಾಹಸಮನೀ ಧರೆಯೊಳ್ಮೆಚ್ಚಿಯುತ್ತುಂ (ಎಕ. XII, ತುಮಕೂ. ೩೮-೧೩ ; 1160). [ ? ]

**ಜೋಂಟಿಗ** 'ಜಟ್ಟಿಂಗ' ನೋ.

**ಜೋಂಪ** 'ಜೊಂಪ$_1$' ನೋ.

**ಜೋಂಪಿಸು$_1$** 'ಜೊಂಪಿಸು$_1$' ನೋ.

**ಜೋಂಪಿಸು$_2$** 'ಜೊಂಪಿಸು$_2$' ನೋ.

**ಜೋಂಪು$_1$** 'ಜೊಂಪು$_1$' ನೋ.

**ಜೋಂಪು$_2$** 'ಜೊಂಪ$_1$' ನೋ.

**ಜೋಕಣ್ಣ** (ನಾ). ಒಬ್ಬಾತನ ಹೆಸರು: ಜೋಕಣ್ಣಂ ಮೂಲಣ್ಣಂ × × × ನಂಬ್ಯನ್ವರ ಸಿದ್ಧಿ ಪಡೆದರ್ (ಎಕ. VIII, ಸೊರಬ. ೫೦೦-೮ : 958).

[ ಜೋಕ$_0$ + ಅಣ್ಣ$_1$ ]

**ಜೋಕರಿಸು** (ಕ್ರಿ). ಜೋತುಬೀಳು ; ಅಂಟಿಕೊಳ್ಳು (?): ಗುರು ಕೊಟ್ಟುದಿಲ್ಲ ನೀವಾದರು ವ್ರತವೆಂದು ಸ್ಮರಿಸಿತಿಲ್ಲರ್ತಿಯೊಳಾದ ಪರಿಣತಿ ಗೇತಕೆ ವ್ರತವ್ರತವೆಂದು ಜೋಕರಿಸಿಕೊಂಬಿರಿ ಬನ್ನಿರೆಂದಾ (ಭರತ. ೪-೪೨); ಕೋಡಿ ಬಾಡಿ ಜೋ[ಪಾಠಾಂ. ಬೋ]ಕರಿಪೆನಗೆತ್ತ ನಿರ್ಜರೆಯ ಮಾತು (ಅಪಕ. ೨೦); ರೆಕ್ಕೆಗಳ ಕೆಡಹಿಯಿಳೆಗಾಕರಿಸಿ ಜೋಕರಿಸಿ ಖಂಡತುಂಡಾಗಳ ಗೈದೆ (ಜಿನಮು. ೨೮-೩೫). [ ? + – ಇಸು$_3$ ]

**ಜೋಕಾಲಿ, ಜೋಕಾಲೆ** (ನಾ). ಉಯ್ಯಾಲೆ : ಬಾಲೆಯರು ಜೋಕಾಲಿಯಾಡುವ ಕಾಲದಲಿ ತಮ್ಮಿನಿಯರನು ಕಣ್ಣಾಲಿಯಿಂ ನೆರೆ ನೋಡಿ (ರಘುವಂ. ೯-೪೬) ; ಎಡಗಣ್ಣೂ ಬಲಗಣ್ಣೂ ಹಾರಿ ಹಾರಿ ಆಶೆ ನಿರಾಶೆಗಳ ಜೋಕಾಲಿಯನ್ನು ಜೀಕುತ್ತಿದ್ದುವು (ಮೂವಿಕೋ. ೬): ಜೋಕಾಲಿಯ ಮೇಲೆ ಕುಳಿತುಕೊಂಡು ಸಮುದ್ರವನ್ನು ಹಾರುವಾಗ ಜೋಕಾಲಿಯ ಹಗ್ಗ ಹರಿದು, 'ಜೋ' ಎಂದು ನಡುಸಮುದ್ರದಲ್ಲಿ ಧುಮುಕಿ ಬಿಟ್ಟ (ಮುಂಗಾಪು. ೯೭) : ಅವನ ಜೀವನವೇ ಜೋಕಾಲಿಯಾಗಿ ತೂಗಹತ್ತಿತು (ಬಂಗಾಹೆ. ೨೭). **ಜೋಕಾಲೆ:** ಮಕ್ಕಳು ಜೋಕಾಲೆಯ ಮೇಲೆ ಕುಳಿತು ಆಡುತ್ತಿದ್ದಾರೆ (ರೂಢಿ). [ ? ]

**ಜೋಕಾಲೆ** 'ಜೋಕಾಲಿ' ನೋ.

**ಜೋಕಾಟಿ** (ನಾ).=ಜೋಕುಮಾರ ೧: ಮನೆಯೊಳ್ ಕಾಲ್ ನೆಲೆಗೊಂಡು ನಿಂದಟ್ಟಿಮನೀ ಜೋಕಾಟಿಯಂತಿರ್ಕೆ (ಸೂಕ್ತಿಸು. ೮-೪೫೭). [ ? ]

**ಜೋಕು$_1$, ಜೋಕೆ$_2$, ಝೋಕು$_1$** (ನಾ). ೧. ಗೀತವಾದ್ಯವನ್ನು ಬಾರಿಸುವುದರಲ್ಲಿ ಒಂದು ಕ್ರಮ : ಮರ್ದಳೆಯಂ . . . ಜಾತಿ ಜೋಕು ತುಡುಕು . . . ಕೌತುಕಳಿಕೋತ್ತರಂಗಳಿಂ ಕೌತುಕದ ಬಾಜನೆಯೊಳಸಗಿದುವೆನಿಸಿ ಬಾಜಿಸುತ್ತಿರೆಯುಂ (ಶಾಂತೀಶ್ವ. ೭-೯೩ ವ). ೨. ಠೀವಿ ; ಬೆಡಗು ; ಡೌಲು : ಮಾತಾಡಿದೊಡವನ ಧನಾಕರ್ಷಣವನು ಮಾಳ್ಪ ಜೋಕಿನ ನಾಯಕಿಯರಿರ್ದರು (ಕಂನವಿ. ೬-೧೦೮) ; ಈ ಹಾಡಿನಲ್ಲಿರುವ ಕಥೆ ಹೇಳುವ ಜೋಕು (ಕರ್ಣಾಸಂ. ೪೩). ೩. ಮಲ್ಲಯುದ್ಧದ ಒಂದಂ ಬಗೆಯ ವರಸೆ (?): ಪೇತು ಸಾಧನೆಗಳ ಜೋಕಿನ ಪಟವನ್ನು ರೀತಿ ತಿಳಿದು ವರಸೆಗಳ ನೂತನ ಕತ್ತಿ ಕಠಾರಿ ದೊಣ್ಣೆಯ ಸಾಧಕೋತ್ತಮ ರಾಜಕುವರರು (ಕಂನವಿ. ೬-೦೮). ೪. ತಂತ್ರ ;ಕಪಟೋಪಾಯಂ : (*). **ಜೋಕೆ$_2$ :** ೧. ಗೀತಿ ಜತಿ ಜೋಕೆ ನಯಂ . . . ಎಂಬಿವಂ ಮೆಚ್ಚಿದು ಬಾಜಿಸಿದಂ ಮುರವೈರಿ ವಾಸವಂ (ಜಗವಿ.೫-೩) : ತುಡುಂಕೊತ್ತು ಜೋಕೆ [ಪಾಠಾಂ. ಜಂಕೆ]ಯಂತರಿ ಜತಿ ರಿಗವಣೆ ಪಹರಣೆಯೆನಿಪ್ಪೀ ಪ್ರಬಂಧಮಂ (?) ಶ್ರೋತ್ರಬಂಧುವೆನೆ ಬಾಜಿಸಿದರ್ (ಪಾರ್ಶ್ವಪು. ೧೨-೨೧) ; ಜತಿ ಜೋಕೆ ತುಡುಕು . . . ಸಂಗತಿವಡೆಯೆ ವಾದನಕಳಾವತಿ ಬಾಜಿಸುತಿರ್ದಳಿಂತು ಮುರಜಮಂ(ಶಾಂತೀಶ್ವ. ೦೩-೨೨೭): ಜಾಣುಣ್ಮೆ ಜೋಕೆಯಿಂ . . . ಕೇಳಿಸಿದರವರು (ಕೃಮಿಧಾ. ೨೧-೫೭). **ಝೋಕು$_1$ :** ೨. ಆ ಕುಲವತಿಯು ಕಿರಿಯ ತನುಜೆಯನು ರಮಿಸಿ ಬಹ ಝೋಕು ನೋಡಲೆ (ಚಂದ್ರಾವ. ೫೦-೪೦೫) ; ಉದಯರಾಗಗಳನ್ನು ಪೇಳ ತೊಡಗಿದೆ. ಮನಸ್ಸು ಅಷ್ಟು ಝೋಕಾಗಿತ್ತು (ಸುಳಿವು. ೦೧೫) ; ಇಂತಹ ನಾಟಕ ಎಲ್ಲಿ ನಡೆದರೂ ಎಷ್ಟು ಸಲ ನಡೆದರೂ ಆಡುವವರಿಗೆ ಬೇಸರವಾಗುವುದೇನು ? ಎಂದಿಗೂ ಇಲ್ಲ. ಅದೇ ಅದರ ಝೋಕು (ಮಲ್ಲ. ೧೨).

[ ? / ಅರ. ಝೋಕ್ ]

**ಜೋಕು$_2$, ಝೋಕಂ$_2$**(ನಾ). ೧. (ಉಕ)ಪೆಟ್ಟು; ಹೊಡೆತ: ಅವರಲ್ಲಿ ಒಬ್ಬ ದೊಡ್ಡ ಹುಡುಗ ಬಂದು ನನ್ನನ್ನು ಕೆಳಕ್ಕೆ ನೂಕಿಬಿಟ್ಟು ಓಡಿಹೋದನು, ನಾನು ಜೋಕು ತಿಂದು ಮುಂದಕ್ಕೆ ಮುಗ್ಗರಿಸಿ ಬಿದ್ದೆ (ಸುಮಚ. ೬೭): ಜರಕ್ ಜರಕ್ ಎಂಬ ಸೊಕ್ಕಿನ ಮಾತುಗಳೊಡನೆ ಆ ಗಿರಿಯ ಮೇಲೆ ಜೋಕು ಹೊಡೆಯುತ್ತಿತ್ತು (ಕಗದ್ಯ. ೨-೩೫). **ಝೋಕು$_2$ :** ೨. ಪ್ರತಿಸ್ಪಂದನ; ಚಲನೆ ; ಓಲಾಟ : ಮೊಣಕಾಲು ಕುಟ್ಟಿದಾಗ ಸರಿಯಾಗಿ ಝೋಕು ಹೊಡೆಯಿತು (ಮನೋಸಂ. ೧೦೫). [ ←ಮರಾ. ಝೋಕ್ ]

**ಜೋಕುಗಾರ** (ನಾ). ಬೆಡಗುಗಾರ : ಒನಪುಗಾರ; ಆಡಂಬರದ ನಡವಳಿಕೆಯಂನ್ನುಳ್ಳವನು : (*).

[ ಜೋಕು$_1$ + – ಗಾರ ( < – ಕಾಱ) ]

**ಜೋಕುಗಾರ್ತಿ** (ನಾ). ಒನಪುಗಾತಿ ; ಆಡಂಬರದ ನಡವಳಿಕೆಯನ್ನುಳ್ಳವಳು : (*). [ ಜೋಕುಗಾರ + –ತಿ$_1$ ( < –ಇತ್ತಿ) ]

**ಜೋಕುಮಾರ, ಜೋಕುವರ, ಜೋಕೊವರ, ಜೋಕೋರ** (ನಾ). ೧. ಒಬ್ಬ ದೇವತೆಯ ಹೆಸರು. P ಉತ್ತರಕರ್ಣಾಟಕದ ಜನಪದದಲ್ಲಿ ಜೋಕುಮಾರನ ಕಥೆ ಪ್ರಚಲಿತವಿದೆ. ಮಣ್ಣಿನ ಬೊಂಬೆಯನ್ನು ಮಾಡಿ ಬುಟ್ಟಿಯಲ್ಲಿರಿಸಿ ಬೇವಿನ ಎಲೆಗಳಿಂದ ಅಲಂಕರಿಸಿ ಅದನ್ನು ಹೊತ್ತು ಮನೆಮನೆಗೆ ಸುತ್ತುತ್ತಾರೆ. ಅದಕ್ಕೆ ಅಂಬಲಿ ನೈವೇದ್ಯ ಮಾಡುತ್ತಾರೆ : ಚಾಮುಂಡಿಣ ಹಳ್ಳಿನ ಜೋಕುಮಾರ . . . ಜೊಳ್ಳು ಮತಿಯ ಕೊಡುವ ಜಂಪೆ ಜಡದೈವ (ವಿಶಾಸು. ೫೮-೨): ಜೋಕುಮಾರನೆಂಬ ಅಭದ್ರವಾದ ಗೊಂಬೆಯನ್ನು ಬುಟ್ಟಿಯೊಳಗೆ ಇಟ್ಟು . . . ಭಿಕ್ಷೆ ಬೇಡುತ

ತಿರುಗುವವರು (ಶಭಾಗ. ೦೮೩) ; ನಾಳೆ ಬರದಿದ್ದರೆ? ಜೋಕುಮಾರನ ಆಣೆ (ರತ್ನಕ್ಕ. ೩೦೦). ೨. (ಅಲಂ) ಚೆಲುವ; ಸುಂದರ : ಈಗ ಈ ಜೋಡು ರಿಪೇರಿಯ ಜೋಕುಮಾರ (ವ್ಯದ್ಧಿ. ೦೦೪). ಜೋಕುವರ: ೧. ನಿಟ್ಟಸಿರ ಲಾಗದ ಮಾನಿ(ನ)ಸವಾಟ್ಗೆ ನಾಡೆ ಜೋಕು[ಪಾಠಾಂ. ಕೊ]ವರನ ಬಾಟ್ಕೆ ಲೇಸು ಗಡಂ (ಜೀವಸಂ. ೮-೬). ಜೋಕೊವರ : ೧. ದೇವತೆ . . . ತನ್ನ ಪೆಮ್ಮಗಂ ಜೋಕೊವರಂ[ಪಾಠಾಂ. ಜೋಕಾರಂ]ಸಾವಾಗ ಕಾಯಲಾಱದ ಕೇಎಲು ಪೇಳ್ವೆಏರ್ಗೆ ಮಾಡಲಾರ್ಪಳೆ ಸುಖಮಂ (ಸಮ ಪ. ೯-೧೦೦); ಜೋಕೊ[ಪಾಠಾಂ. ಕು]ವರಂ ನೆಗಟ್ದಂ ಸುರಲೋಕವಿರುದ್ಧಮನೆ (ಪಾರ್ಶ್ವಪು. ೩-೩೪). ಜೋಕೋರ: ೧. ನವಪಂಚಮದೊಳ್ ಪುಟ್ಟಿದ ಕುವರಂ ಜೋಕೋರನಂತೆ ಪಲದಿವಸವಿರಂ (ಜಾತಕ. ೬-೭); ಬಲೆ ಜೋಕೋ[ಪಾಠಾಂ. ಕಾ]ರನಂತೀರೇಟು ದಿವಸದರಸುತನಮಂ ಬೇಡಿ ಪಡೆದೆ (ಅರ್ಧನೇ. ೬-೦೯ ಪ).

[ ಜೋ ? + ಕುಮಾರ ]

ಜೋಕುವರ 'ಜೋಕುಮಾರ' ನೋ.

ಜೋಕೆ$_1$ (ನಾ). ೧. ಜೋಪಾನ; ಲಕ್ಷ್ಯ; ಜಾಗರೂಕತೆ: ದುರ್ಜನಿಕೆಯಂ ಬಿಟ್ಟು ನೀಂ ಜೋಕೆಯಿಂ ಸಜ್ಜನನ ಮಾರ್ಗದಿಂ ನಡೆಯಲಿಹಲೋಕ ಪರಲೋಕಸುಖ (ವೀಕ್ಕಪು. ೬-೦೬-೪೩) : ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ (ಪುರಂದ. ೦-೦೩೨-೪). ೨. ಸೊಗಸು ; ಚೆಲುವು : ಜಯಯೆಂದು ಪೊಗಳುತಿಹ ಜೋಕೆಯಿಂ ಮೆಱೆವ ಜಗದೀಶನಂ ನಿಟ್ಟಿಸಿದನು (ಹರಿಕಾ. ೦೦-೯೦); ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟ ವೆಸೆಯಲು (ಬಸಪು. ೪-೭); ಸಾರತರ ಸತ್ಕಿದ ಜೋಕೆ . . . ಎನಿಸಿರ್ಪುದು ಕಾಶಿಯ ದೇಶಂ (ವೀರವಿ. ೦-೪೭) ; ತೊನೆವುತಿಹ ಚಿತ್ರದ ಪತಾಕೆಗಳ ಜೋಕೆಗಳ ಕೋಟಾವಳಿಯುಮೆಸೆದುದು (ಹಲಪು. ೪೨-೨೦). ೩. ರೀತಿ ; ಕ್ರಮ : ಮುನ್ನ ಬೇಂಟೆಯ ಜೋಕೆಯಱಿದ ಬೇಡರು ಮಡಿದ ಚನ್ನ ನಚ್ಚಿನ ನಾಯ್ಗಳೆಳೆದಳಲು ಬೆರಸಿ . . . ತಮ್ಮೊಳಗೆ ಕೈವೊಯ್ದು (ಹರಿಕಾ. ೬-೨೪); ಏಕಾತ್ಮವಕ್ಷದೊಳನೇಕ ಭೋಗಂ ಘಟಿಪ ಜೋಕೆಯಿಲ್ಲ (ಅನುಸಾ. ೩-೨-೦೦) ; ಏಕೆ ನೂತನ ಪರಿಯಿದೇತಱ ಜೋಕೆ (ಕಣೀಗಯು. ೯-೫೯). ೪. ಸಾಲು ; ಶ್ರೇಣಿ : ತೆಕ್ಕೆಯಿಂದೊತ್ತರಿಪ ಜೋದ ಜೋಕೆಗಳಲ್ಲಿ ಇಂತು ನೆರೆದುದು ಚಾತುರಂಗಬಲ (ಅಹರ. ದೇ. ೩೬-೪); ಆ ಮೋಹರದ ಜೋಕೆಯ ಹಿಂದೆ ಲಕ್ಷ ಕಳಿಂಗಘಟೆಗಳು ಸಂದಣಿಸಿದವು (ಕುಮಾರವ್ಯಾ. ೨-೨೨); ಮ್ಮೆಮಱೆದಳೊಂದೆರಡೆಂಬವಸ್ಥೆಗಳ ಜೋಡಣೆಯ ಜೋಕೆಗಳ. ರಝಿಡಿತೆಯ ರಝಾಡಣೆಯ ರಷೊಪ್ಪಿನಲಿ ಬಳಕೀಡಾಡಿದಳು (ತೊರರಾ. ೩-೪-೪). ೫. ಹಿಡಿತ; ವಶ: ಶಿವನ ಜೋಕೆಯನಱಿಯದೆ ಮಾತನಾಡುವ ಪಾತಕಲ್ಲವು ಮಾತಿನ ಮಾಲೆ (ಶರಗೋ. ೨೨೯-೦೦೨) ; ಜೋಕೆಯಾಗಿಹ ರೆಲ್ಲರೆನಗೆ ನಿನಗೆ ಚಿಂತೆಯೇಕೆ (ಕುರಾಸಾಂ. ೨೬-೦೪೩). ೬. ಸಿದ್ಧತೆ; ತಯಾರಿ : ನಿನಗಿದಿರಾಗಬೇಕೆಂದನೇಕ ಬಲವನು ಜೋಕೆಯ ಮಾಡಿ ಕೊಂಡಿರ್ದಪನು (ಕುರಾಸಾಂ. ೩೦-೨೨). ೭. ಕಣ್ಣಾರಿಕೆ ; ಎಚ್ಚರಿಕೆ : ಮಂಗಳಮಯ ಮುಹೂರ್ತದ ಜೋಯಿಸರ ಜೋಕೆಯಲಿ ನಿರ್ಗಮ ನಿರತನಾದನು ಕೃಷ್ಣನು (ಕುಮಾ. ಉ. ೭-೪) : ರಥರಾಜಿ ಮುಂಗುಡಿ ವರಿದುದವನೀಪತಿಯ ಚೂಣಿಯ ನೃಪರ ಜೋಕೆಯಲಿ (ಕುಮಾರವ್ಯಾ. ೧-೪೬). ೮. ಚಾತುರ್ಯ ; ಕೌಶಲ : ಜೋಕೆ ಜವಗಡೆ ಮುಱಿವಡೆದು ಬಲದಾಕೆವಾಳರು ಸರಿಯೆ (ಕುಮಾ. ಶ. ೨-೯); ಈ ಕುಮಾರರೊಳಗೆ ನೀನೇ ಜೋಕೆಯುಳ್ಳವನಹೆ (ಕುಮಾ. ಶ. ೦೯-೩೯). ೯. ಎಚ್ಚರಿಕೆಯನ್ನು ಸೂಚಿಸುವ ಒಂದು ಪದ : ತಿಳಿವನು ಕೊಡಲಾರದಾತನು ಜಗದೊಳು ಕೇಡಿಗನಾದಾನು ಜೋಕೆ (ಇಂಜಾಪ. ೦೯೨-೪೬) : ಜೋಕೆ ಮ್ಮೆಮೇಲೆ ಎಚ್ಚರವನ್ನಿಟ್ಟುಕೊಂಡು ಮಾತಾಡು (ಅಮುಗಾಂ. ೦೪).

ಜೋಕೆಮಾಡು = ೧. ಜೋಪಾನ ಮಾಡು; ಕಾಪಾಡು ; ರಕ್ಷಿಸು : ಜೋಕೆಮಾಡದೆ ಮೇಲ್ವಾಯಿದು . . . ಪಱಿದಿಡಲು (ಅಂಜಿಪ. ೬-೦೦೮) : ನಿಮ್ಮತಾಯಿಯೇ ನನ್ನ ಮಕ್ಕಳನ್ನು ಜೋಕೆಮಾಡಿದಳು (ಮುಂಬಯಿ. ೪-೦೯೬). ೨. ಎಚ್ಚರಿಕೆಯನ್ನು ತೆಗೆದುಕೊಳ್ಳು: ಜೋಕೆಮಾಡಿ ಪೋದವು ಹಂಸೆಗಳು ನಮಗೇಕೆ ನಡೆಯ ಸೊಬಗೆಂದು (ಅಂಜಿಪ. ೯-೦೬೬). ೩. ಸಿದ್ಧ ಪಡಿಸು; ಏರ್ಪಾಟು ಮಾಡು: ಜಲಕೇಳಿಗೀಸರಸಿಗಳ ಜೋಕೆ ಮಾಡು ವುದು (ಪದ್ಮರಾ. ೮-೪೩) : ತೊಳಗುವಾಭರಣವ ಜೋಕೆಮಾಡುವ ಜಾಣ (ಕಂನವಿ. ೨೩-೭೪). [ ದೇ.೩ ತುಳು. ಕೊಡ. ಜೋಕೆ ; ತೆಲು. ಜೋಕ ]

ಜೋಕೆ$_2$ 'ಜೋಕು$_1$' ನೋ.

ಜೋಕೆ$_3$ (ನಾ). ನೆಯ್ಗೆಯ ಸರಕು : "ಜೋಕೆ-ನೇಕಾರರ ಮಗ್ಗದ ಮಾಲು" (ಜಾನಕೋ. ೬೦). [ ? ]

ಜೋಕೆಗಾಱ (ನಾ). ಜೋಪಾನಮಾಡುವವನು ; ರಕ್ಷಕ : ಬೋಧೆ ಗಾಱರ ಜೋಕೆಗಾಱನು ಜಾಣನಹನೆಂದ (ನಿಘಾಗ. ೩-೮-೩೬).

[ ಜೋಕೆ$_1$ + - ಕಾಱ ]

ಜೋಕೆಗುಟ್ಟು (ಕ್ರಿ). ಎಚ್ಚರಿಕೆಯನ್ನು ಕೊಡು ; ಎಚ್ಚರಿಸು : ಅರಸನ ಸಮ್ಮುಖ ಬಂತು ಎಂದು ಅವರವರೆ ಪರಸ್ಪರ ಜೋಕೆಗುಟ್ಟಿದರು (ಮಾಮಲ್ಲ. ೧೦). [ ಜೋಕೆ$_1$ + ಕುಟ್ಟು$_1$ ]

ಜೋಕೆಗೊಳ್ (ಕ್ರಿ). ಸಾಲುಗೊಳ್ಳು ; ಓರಣವಾಗಿರು : ಆ ಕೋಟೆಯಡಿ ಮುಟ್ಟ ಕೆಳಗಣ ರಜತಾದ್ರಿಗೇಕಹಸ್ತವ ಬಿಟ್ಟು ಮೇಲೆ ಜೋಕೆಗೊಂಡ್ಯೆದು ಸಾವಿರಮಾರಿನೆಡೆಯೊಳನೇಕ ಸೋಪಾನಗಳಿಹುವು (ಭರತ. ೬೬-೯).

[ಜೋಕೆ$_1$ + ಕೊಳ್$_1$ ]

ಜೋಕೆವಿಡಿ (ಕ್ರಿ). ೧. ಎಚ್ಚರಿಕೆಯನ್ನು ತೆಗೆದುಕೊಳ್ಳು : ಬಹಳ ಜೋಕೆ ವಿಡಿದು ಕೈಯಲ್ಲಿ ಪಂಜು ಹಿಡಿದುಕೊಂಡು ಸಾಗುತ್ತ . . . ತಲುಪಿದನು (ಇಶ್ಕಶ. ೩೪೨). ೨. ಅಚ್ಚುಕಟ್ಟಾಗಿರು ; ಸೊಗಸಾಗಿರು : ಜೋಕೆ ವಿಡಿದು ನೀಡುವೆಳೆಯ ಫಳಿಗೆಯ ಪರಾಕಿನೊಳಗೆ ಕೈಕೊಳುತ ಏಕೆ ನುಡಿ ಯನೋ ಇನ್ನೊಮ್ಮೆಯೆಂಬಂತೊಂದು ತೂಕದೊಳೆಸೆದನು (ಭರತ. ೦-೩೮).

[ ಜೋಕೆ$_1$ + ಪಿಡಿ$_1$ ]

ಜೋಕೆವೆಱು (ಕ್ರಿ). ಚಾತುರ್ಯದಿಂದ ಕೂಡಿರು ; ಕೌಶಲ್ಯದಿಂದ ಕೂಡಿರು : ನಾಕನಾಯಕನ ನರ್ತನದ ನೀಱೆಯರ ನಿರಾಕರಿಸುವ ನೃತ್ಯ ದಿಂದ ಜೋಕೆವೆತ್ತೆಸೆವ ನಚ್ಚಣಿಯರು (ಕುರಾಸಾಂ. ೩-೨೪).

[ ಜೋಕೆ$_1$ + ಪೆಱು$_1$ ]

ಜೋಕೊವರ 'ಜೋಕುಮಾರ' ನೋ.

ಜೋಕೋರ 'ಜೋಕುಮಾರ' ನೋ.

ಜೋಗ$_1$, ಜೋಗು$_1$ (ನಾ). ೧. ತಪಸ್ಸು ; ಧ್ಯಾನ : ದೇವರಂ ಬಂದಿಸಿ ನಿಯಮಂಗೆಯ್ದು ಜೋಗ ಭಕ್ತಿಯಿಂದಿರ್ದರ್ (ವಡ್ಡಾರಾ. ೦೩೬-೮) : ನಿಜಾರಿ ತಳೆ[ಯ]ಲು ಹೃದ್ರೋಗವಮಂ ಜೋಗವಮಂ ತತು ಪುತ್ರಂ ನೆಗಳ್ದಂ (ಕಇಅ. ೭೪-೦೨-೮: 1170) ; ಜೋಗಗೆಳೆಯರಣ್ಬರೇಱುವರ್ಪನ್ನಮಱುವಗೆ ಗಳಱಿಪೋದ ನಿಚ್ಚಣಗೆಯಂಬಂತಿರಿರ್ಬದಿಯೊಳಮೆಲ್ಲಗಳ ಸಾಲ್ಗಳ್ ತ್ಕೋಱಿ (ರಾಮಾಶ್ವ. ೪೦-೨೬). ೨. ಸಂಪರ್ಕ; ಹೊಂದಿಕೆ ; ಸೇರಿಕೆ. ೩. ಉಪಯೋಗ. 'ಜೋಗಯಿಸು' ಪರಾ. ೪. ದೋಣಿ ; ನಾವೆ : "ಜೋಗಂ ಪರೀತಂ ನಿಮುಂಜರಂ ದುಗ್ಗಿಯೋಡಂ ದೋಣಿಯೆಂದನಲ್ ನಾವೆಯಕ್ಕುಂ" (ಮಂಗರಾ. ೦೨೦-೪). ಜೋಗು$_2$ : ೧. ಎನ್ನ ದ್ರೋಹ ಮರಸನ ಕಿವಿಯಂ ಮುಟ್ಟದಂತಾಗೆ ಮಾಟ್ಪೆನೆಂದುಪಾಯದಿಂ ಜೋಗಂ ಕೈಕೊಂಡು (ಧರ್ಮಾಮ್ಮ. ೯-೦೩೪). 'ಜೋಗುಗೊಳ್' ಪರಾ. ೪. ಸಂಬುಕ ಪಡಗು ಜೋಗು[ಪಾಠಾಂ. ಗ]ಗಳಗೆ ಸುಂಕವ ಕೊಂಬ ರಾಜೇಂದ್ರನ (ಕುರಾಸಾಂ. ೦೦-೨೦). [ <ಸಂ. ಯೋಗ ]

**ಜೋಗ$_2$** (ನಾ). ಒಂದುಂ ಬಗೆಯ ವಸ್ತ್ರ: ಚೀನದ ಧವಳಪಟ್ಟದ ಜೋ[ಪಾಠಾಂ. ಜೊಂ]ಗದ ದೇವಾಂಗದ ಸಕಳಪಟ್ಟೆಗಳುಮಂ . . . ಜವಳಿಗಳನೆ ಮೊಗಂ ನೋಡದೆ ಸೂಸಿದಾಗಳ್ (ಆದಿಪು. ೪-೩೪ ವ). [?]

**ಜೋಗ$_3$** 'ಜೂಗ$_2$' ನೋ.

**ಜೋಗಂಬೋಗು, ಜೋಗವೋಗು** (ಕ್ರಿ). ಮೈಮರೆ ; ಪರವಶವಾಗು: ಪೊಸದಳಿರ ಪೊಸಸಿರಿಯ ಭಾರದಿಂ ಜೋಗಂಬೋದಂತೆ ಮಲಂಗಿದ ಜಾಗಂಗಳುಮಂ (ಲೀಲಾವ. ೦೧-೩೮ ವ): ತೂಗಾಡುತ ಮಡಕೆಗಳಂ ಬಾಚಿಸಿ ಜೋಗಂ[ಪಾಠಾಂ. ಜಾಗಂ]ಬೋಗುತ್ತುಂ (ಕುಂಬಾ.ಹ. ೨೩೩-೦೨); ಪಾರ್ವ ನೆರ್ದೆಯೊಳ್ ಕಿರ್ಚು ಬಿಟ್ಟಂತಾಗೆ ಜೋಗಂಬೋಗಿ (ಜೀವಸಂ. ೩೯-೨೪ ವ): ಆಗುಳಿಸುವ ತಳಮಳಿಸುವ ಜೋಗಂಬೋಪಲಸುವಗಿವ . . . ಕಂಟಳಿಸುವಖಿಳವಿಕೃತಿಗೆ ಸಲ್ಲಂ (ಪುಷ್ಪಪು. ೧೨-೮೪). **ಜೋಗವೋಗು:** ಸೂಗ್ರುರಿಸಿ ರ್ಷೊಮ್ಮಿನಲಿ ಮುಂದಕೆ ಜೋಗವೋದನು ಸಾರಥಿಯ ಕೈಲಾಗಿನಲಿ ತಿರುಗಿದನು (ಕುವ್ಯಾಕ. ೪-೦೩).

[ ಜೋಗು$_1$ (<ಜುಮ್ಮು$_3$) + ಪೋಗು$_1$ ]

**ಜೋಗಣೆ** (?) (ನಾ). (?): ಒಂದು ಫಲವೆನಿಸಿದಡಿನಿವಣ್ಣಿಂದ ಕುಂದಿಲ್ಲದಿನ ಜೋಗಣೆಯಯೆಂದು ತಾಳಿದುದಿಲ್ಲವೆಂಬಂತೆ ಹೊಂಬಾಳೆ ಮರದ ಸಾಲಿನಿಂದೆಸೆಯೆ (ತರ್ಕಕಾ. ೧-೪೬). [ ? ]

**ಜೋಗತಿ** 'ಜೋಗಿತಿ' ನೋ.

**ಜೋಗಪ್ಪ** (ನಾ). ಜೋಗಿತಿಯರ ಸಂಗಾತಿಯಾದವನು : (ಕ).

[ ಜೋಗ$_1$ + ಅಪ್ಪ$_1$ ]

**ಜೋಗಬ್ಬೆ**(ನಾ).ಒಬ್ಬಾಕೆಯ ಹೆಸರು: ಪೆರ್ಮ್ಮಾಡಿಯ ಸುಳಿಜೋಗಬ್ಬೆಯ ಮಗಳ್ . . . ಚಾವುಂಡಬ್ಬೆ (ಮೈಅರಿ. ೦೯೩೦, ೧೪-೬ : 882).

[ ಜೋಗ$_0$ + ಅಬ್ಬೆ$_1$ ]

**ಜೋಗಮರಸ** (ನಾ). ಒಬ್ಬಾತನ ಹೆಸರು: ಶ್ರೀಮನ್ಮಹಾಮಣ್ಡಳೇಶ್ವರಂ ಜೋಗಮರಸರ್ಮ್ಮಂಗಳಿವೇಡದೊಳು ರಾಜ್ಯಂಗೆಯ್ಯುತ್ತುಮಿರೆ (ಕಇ. II, ೦೧-೧೨ : 1092). [ ಜೋಗಮ$_0$ + ಅರಸ$_1$ ]

**ಜೋಗಮಾಯಿ** (ನಾ). ಒಬ್ಬ ದೇವತೆಯ ಹೆಸರು: ಎಕ್ಕಲದೇವಿ ! ಜೋಗಮಾಯಿ! ಉಧೋ! ಉಧೋ! (ಅರಳು. ೩೦೮-೧).

[ ಜೋಗ$_1$ + ಮಾಯಿ$_2$ ]

**ಜೋಗಮ್ಮ** (ನಾ). = ಜೋಗಿತಿ : (ಕ). [ ಜೋಗ$_1$ + ಅಮ್ಮ$_1$ ]

**ಜೋಗಯಿಸು, ಜೋಗವಿಸು, ಜೋಗೈಸು$_1$** (ಕ್ರಿ). ೧. ಸೇರಿಸು ; ಹೊಂದಿಸು : ಹಬುಗೋಲನೆ ಜೋಗಯಿಸಿ [ಪಾಠಾಂ. ಜೋಗೈಸಿ] ಕೊಳುತಲೆ ತೊಟಿಯ ದಾಂಟುವರ್ (ಪ್ರಭುಲೀ. ೧೨-೧೪). **ಜೋಗವಿಸು:** ೧. ಮಾಯಾಂಗನೆಯ ಲಾಸ್ಯದ ಕೇಳಿಯೊಳಗವ ಜೋ[ಪಾಠಾಂ.ಭೋ]ಗವಿಸುತಿರುತಿರ್ದ ಭಕ್ತಿಯ ಭಾಗೆಯಲಿ (ಪ್ರಭುಲೀ. ೫-೬೨). **ಜೋಗೈಸು$_1$ :** ೧. ಇಂತಿವರು ದಂಪತಿಸಹವಾಗಿ ಯುಗಜುಗಂಗಳ ಜೋಗೈಸುತ್ತಿದ್ದರು (ಮನುಗುಂ. ೨೬೭-೮೨); ಆದರಿಸಿಯಾ ತನುವ ಲಿಂಗೋಪಾಧಿಯಲಿ ಜೋಗೈಸಿಕೊಳುತಲಿ ಸಾಧಿಸುವುದು ಸಮಾಧಿಯನು (ಪ್ರಭುಲೀ. ೧೮-೧೩). ೨. ಬಳಸು ; ಉಪಯೋಗಿಸು : ಒಡೆಯರು ಜೋಗೈಸುವ ಚಮ್ಮಾವುಗೆಯ ಮಾಡಯ್ಯಾ (ಬಸವ. ೩೬೦). [ ಜೋಗ$_1$ + - ಇಸು$_3$ ]

**ಜೋಗಯ್ಯ** (ನಾ). ೧.=ಜೋಗಿ೧ : ಜೋಗಯ್ಯನೆನಬೇಡ ತ್ಯಾಗಿ ನಿಂದಿಸಬೇಡ ನಾಗಭೂಷಣನ ಹಳಿದ ದಕ್ಷನ ತಲೆಯು ಹೋಗಿಹುದು ನೋಡ (ಸರ್ವಜ್ಞ. ೫೨೩). ೨. ಶೈವಪಂಥದ ಜೋಗಿಗಳಲ್ಲಿ ಒಂದುಪಂಗಡ : (ಎಸಮ್ಮ. ೪, ೬). ೩. ಒಬ್ಬಾತನ ಹೆಸರು : ನಂಗಮ್ಮನ ಮಗ ಜೋಗಯ್ಯಂಗೆ ದಯೆಗೆಯ್ದು ಕೊಟ್ಟ ಸ್ಥಿತಿ (ಎಕ. VIII, ಸೊರಬ. ೪೬೬-೦೮ : 901). [ ಜೋಗಿ$_1$ + ಅಯ್ಯ$_1$ ]

**ಜೋಗರ** (ನಾ). ಬಿಂಕ ; ಬಿಗುಮಾನ (?) : ಎಲಗೆ ಜೋಗರವಿಷ್ಟು ಸಲ್ಲದೆಮ್ಮರಸನೆಂಜಲು ಸೋಂಕಿದಾಗಳೆ ನಿನ್ನ ಕುಲಕೋಟಿ ಪಾವನವೆಂದಳು ಕುಸುಮಾಜಿ (ಭರತ. ೯-೮೦). [ ? ]

**ಜೋಗರಿಸು** (ಕ್ರಿ). ಜೋಪಾನಮಾಡು; ಸಲಹು: ತಾಯಿ ಮಗುವನ್ನು ಜೋಗರಿಸುವಷ್ಟೇ, ಅಷ್ಟೇಕೆ ಅದರ ಹಿರಿಯಕ್ಕನಷ್ಟು ಕೂಡಾ ತಂದೆ ಲಾಲಿಸಿ ಪಾಲಿಸುವುದು ಎಲ್ಲಿ ಕಂಡು ಬರುತ್ತದೆ ? (ಕಾಗಳ. ೬೬) ; ನಿನಗೆ ಒಬ್ಬಾಕಿಗೆ ಜೋಗರಿಸೋದು ಆಗೋದಿಲ್ಲಾ (ವೈನಿ .೨೨೪).

[ ಜೋಗರ$_0$ (P ←ಮರಾ. ಜೋಗಲಣೇ) + - ಇಸು$_3$ ]

**ಜೋಗವಟ್ಟಿಗೆ** (ನಾ). ಧ್ಯಾನಕಾಲದಲ್ಲಿ ಕುಳಿತುಕೊಳ್ಳಲು ಅನುಕೂಲವಾಗುವಂತೆ ಯೋಗಿಯು ಬೆನ್ನು ಮತ್ತು ಮೊಳಕಾಲುಗಳನ್ನು ಸೇರಿಸಿ ಸುತ್ತಿಕೊಳ್ಳುವ ಬಟ್ಟೆ : "ಜೋಗವಟ್ಟಿಗೆಯೆನ್ನರೊಡನದು ಯೋಗವಟ್ಟಿಗೆ" (ಕವಿಕಂ. ೧೮೪) : "ಜೋಗವಟ್ಟಿಗೆ – ಯೋಗಪಟ್ಟಿಕಾ = ಯೋಗಿಗಳ ಹೊದಿಕೆ" (ತದ್ಭಕೋ. ೧೩) : ಅಲ್ಲಿ ನೇಲಿದುದದು ಜೋಗವಟ್ಟಿಗೆ ಕಮಂಡಲವಂತದು . . . ಎಂದು ನೋಡಿದನತಿವಿಸ್ಮಯಂ ಬೆರಸು ತದ್ಗೃಹೆಯಂ (ಕಾದಂಪೂ. ೬೯೨) : ಮಧುಕೇಶ್ವರದೇವರಾಚಾರ್ಯ್ಯರಂ ಬರಿಸಿ ಪೂಜೆಯಂ ಕೊಟ್ಟು ಜೋಗವಟ್ಟಿಗೆಯನಿಕ್ಕಿಸಿ (ಎಕ. VIII, ಸೊರಬ. ೨೬೨-೪೫ : 1077) ; ಪುಲಿದೊವಲ ಜೋಗವಟ್ಟಿಗೆ ತೊಳಗುವ ಸೆಳ್ಳುಗುರ ಮಿಂಚು . . . ರಂಜಿಸೆ ನಲವಿಂ ಮಾಯಾವಿಯೆಯ್ದುದಂ ನೃಪಸಭೆಯಂ (ದಕಳು. ೬-೦೩೦) : ಜೋಗವಟ್ಟಿಗೆಯಾಣೆ ! ರಾಘವನಾಣೆ ! ಮಗಳೆಂದೆ ನಿನ್ನಂ ಸಲವುವೆಂ (ರಾಮಾಶ್ವ. ೪೨-೬). [ <ಸಂ. ಯೋಗಪಟ್ಟಿಕಾ ]

**ಜೋಗವಟ್ಟೆ$_1$** (ನಾ). ಯೋಗಮಾರ್ಗ : ನೂಱುಂ ಜನ್ಮದೊಂದು ಬಲ್ಮೆಯಿಂ ಸಗ್ಗದೊಳ್ ಬಾಟ್ಸಿಂದಿರನುಮಿಾಜೋಗವಟ್ಟೆಯಂ ಕಂಡಿರಂ (ರಾಮಾಶ್ವ. ೫೬-೩). [ ಜೋಗ$_1$ + ಬಟ್ಟೆ$_1$ ]

**ಜೋಗವಟ್ಟೆ$_2$** (ನಾ). = ಜೋಗವಟ್ಟಿಗೆ : "ಜೋಗವಟ್ಟೆಯೆಂದು ಯೋಗಪಟ್ಟಿಕೆ" (ಕಶಸಾ. ೨೨-೪೪೯) : ಇಂಬಾದ ನಗರಸಿದ್ಧನ ಜೋಗವಟ್ಟೆಯೆಂದೆಂಬಂತೆ (ಪ್ರಭಂಜ. ೦-೬೨). [ ಜೋಗ$_1$ + ಬಟ್ಟೆ$_2$ ]

**ಜೋಗವಡ್ಡಿಗೆ,ಜೋಗವದ್ದಿಗೆ** (ನಾ). (?): ಹೊಂಗನೂರ ಶಾನ್ತಿದೇವರ ಜೋಗವಡ್ಡಿಗೆಯ ಬಸದಿ (ಮೈಅರಿ. ೦೯೪೨ ; ೨೫-೯ ; 1300). **ಜೋಗವದ್ದಿಗೆ:** ಕ್ರಮದಿನಸಂಖ್ಯಾತ ನಾಲ್ಕು ಮಹಾಮನೆ ಸಹಿತ ಜೋಗವದ್ದಿಗೆಯ ಚಂದ್ರ ಮಹೀತಳ ಉಳ್ಳನೆಗವಮಾಳಗುಣಕ್ಕರ್ಮಳಸೇನ ದೇವಗೊರ್ಗ್ಗಂಡರು (ಸೌಇಇ. XX, ೨೦೨-೯೭ ; 1124). [ ? ]

**ಜೋಗವದ್ದಿಗೆ** 'ಜೋಗವಡ್ಡಿಗೆ' ನೋ.

**ಜೋಗವಾವುಗೆ** (ನಾ). ಜೋಗಿಯು ಹಾಕಿಕೊಳ್ಳುವ ಹಾವುಗೆ,- ಪಾದುಕೆ: "ಯೋಗಪಾದುಕಾ–ಜೋಗವಾವುಗೆ" (ಶಮದ. ೨೯೨ ಪ್ರಯೋ); ಜೋಗವಾವುಗೆಯ ಮೆಟ್ಟಿಯ್ದುತಿಹ ಮುನಿಯ ಕಂಡು (ಪಾಸೋಪು.೫-೬೯).

[ ಜೋಗ$_1$ + ಪಾವುಗೆ ]

**ಜೋಗವಿಸು** 'ಜೋಗಯಿಸು' ನೋ.

**ಜೋಗವೋಗು** 'ಜೋಗಂಬೋಗು' ನೋ.

**ಜೋಗಳ$_1$** 'ಜೋಗುಳ' ನೋ.

**ಜೋಗಳ$_2$** (ನಾ). (?) : ಆಗದೆನ್ನಲಿ ತನ್ನಲಾ ನಿರ್ಭಾಗಧೇಯರ ವಿಜಯವೇತಕೆ ಜೋಗಳನು ಮಾಡುವಿರಿ ತನ್ನನು (ನಿಭಾಗ. ೯-೬-೬). [ ? ]

**ಜೋಗಳಿವಾಡು** 'ಜೋಗುಳವಾಡು$_2$' ನೋ.

**ಜೋಗಳೆ** 'ಜೋಗುಳ' ನೋ.

**ಜೋಗಳೆವಾಡು** 'ಜೋಗುಳಂಬಾಡು' ನೋ.

**ಜೋಗಾಯಿ** (ನಾ). = ಜೋಗಮಾಯಿ : ಅಲ್ಲಾದ ಮಹದೇವಿ ತುಳಜಾ ಭವಾನಿ . . . ಹಳ್ಳದ ಜೋಗಾಯಿ (ವಿಸಾಸು. ೫೮-೨). [ಜೋಗ$_1$+ಆಯಿ$_2$]

**ಜೋಗಿ$_1$** (ನಾ). ೧. ಯೋಗಿ ; ತಪಸ್ವಿ ; ಋಷಿ : "ಕಿತ್ತಡಿ, ಜತಿ, ಜೋಗಿ, ತವಸಿ, ರಿಸಿ–ಔ ಋಷಿ" (ಶಶಸಾ. ೨೧-೪೪೫) : "ಜೋಗಿ ಕಿತ್ತಡಿ ಯೆನುತುಂ ತಾಂ ತವಸಿ ರಿಸಿಯುಮೆನೆ ಋಷಿಯಕ್ಕುಂ" (ಶವಿಕಂ. ೧೮೭) : ಜೋಗಿಗೆ ಜೋಗಿಣಿಯಾಗಿಹಳು ಮಾಯೆ (ಮಹಾದೇ. ಬ. ೯೮-೨೨೭) : ಪುಲಿದೊವಲೆಸೆದುದು ಜೋಗಿಗೆ (ಲೀಲಾವ. ೪-೬೮) : ತರಳೆ ರನ್ನೆ ಕಪ್ಪು ಮಯ್ಯವ ಯಾತಅ ಚಲುವನೆ ಕರಿಯ ಜಡೆಯ ಜೋಗಿಗಿಂತ ಉತ್ತಮನೇನೇ (ಪುರಂದ. ೨-೬೩-೧) : ಬೆಸಗೊಂಬಳು ಜೋಯಿಸರ ಜೋಗಿ ಪುರುಷರ(ಹರಿಬ. ೬-೩೪); ಜೋಗಿ ಜೋಗಿಯುನ್ನು ತಬ್ಬಿಕೊಂಡರೆ ಮೈಯೆಲ್ಲ ಬೂದಿ (ಗಾದೆ). ೨. ನಿಂತಲ್ಲಿ ನಿಲ್ಲದೆ ಅಲೆಯುಂವ ಭಿಕ್ಷು,–ಬೈರಾಗಿ ; ಗೋಸಾವಿ : ಆ ಕೋಡಗವನಾಡಿಸಿ ಕೊಂಡುಂಬ ಜೋಗಿಗಳಿಗೇಕೆ ಆರೂಢನ ಸುದ್ದಿ (ಮೋಳಿಮಾ. ೨೦೦-೬೬೪) ; ಮಹಾದೇವನೆತ್ತಲೈ ಸುರೆ ಗುಡುಹಿ ಜೋಗಿಗಳು ನೀವೆತ್ತಲೆಂದು ನುಡಿವುತಿರ್ದನು (ವೀಕ್ಕಪು. ೪-೧೧-೧೪); ಜೋಗಿ ಜಂಗಮ ದರವೇಸಿಗಳಿಗೆ . . . ಅನ್ನವನೀವ ರಾಗದ ಭವನವೊಪ್ಪಿದುವು (ಕಂಸವಿ. ೨೦-೪೭). [ <ಸಂ. ಯೋಗಿನ್ ]

**ಜೋಗಿ$_2$** (ನಾ). ಒಂದಂ ಬಗೆಯ ವಿಷಸರ್ಪ : ಬೇರೆ ವಿಷಯುಕ್ತ ಸರ್ಪಗಳು . . . ಸುಂಕಪಾಳ, ಜೋಗಿ, ಸುಗಂಡ (ಕಥಾಗಿ. ೬೭).

[ ←ಮರಾ. ಜೋಗೀ ]

**ಜೋಗಿಗ** (ನಾ). ಮಣಿಗಾರ ; ಮಣಿಯಂನ್ನು ಮಾರುವವನು (?) : ತಾಳಧಾರಿಗ ಮದ್ದಳೆಗ . . . ನಟುವಿಗರ ಹೇಳಲಳವೆ ಜೋಗಿಗ ಮುಟ್ಟಿಗರ ಗೃಹ ಸಾಲುವಿಡಿದು ರಾಜಿಪುವು (ಕಂಸವಿ. ೬-೫೭).

[ ಜೋಗಿ ? + – ಇಗ ]

**ಜೋಗಿಜೆಡೆ ಜೋಳ** (ನಾ). ಒಂದು ಬಗೆಯ ಜೋಳ : ಪಟ್ಟಣಸಾಳಿ, ಗೌರೀ ಕಲ . . . ಜಲ ಕೊಂಜೋಳ ಅಥವಾ ಜೋಗಿಜಡೀಜೋಳ . . . ಈ ಎಂಟು ಜಾತಿಗಳು (ಕಥಾಗಿ. ೨೬೦). [ ? + ಜೋಳ ]

**ಜೋಗಿಣಿ** (ನಾ). ತಪಸ್ವಿನಿ ; ಯೋಗಿನಿ : ತೆಗೆದುಟ್ಟ ಸೋಗೆ ಕರವೊಪ್ಪಿರೆ ಜೋಗಿಣಿ ಬರ್ಪಳೊಪ್ಪಿದಳ್ (ಲೀಲಾವ. ೪-೮೫) ; ಪಾವಿನ ಪಚ್ಚೆದಿನಚ್ಚರಿವಡೆದ ಜೋಗಿಣಿಯಂತಿರ್ಪಳ್ (ಕಬ್ಬಿಕಾ. ೩೦೫); ಜೋಗಿಗಂ ಜೋಗಿಣಿಯುದಾಯ್ತು ನಿನ್ನಯ ಮಾಯೆ (ಮುದೀಕ. ೭-೯೫); ಬಿಂಗಿಯಂತಾಡುವ ಕಂಥೆಯ ಜೋಗಿಣಿಯಂಗದಾಟವೆ ನಮ್ಮ ನೃತ್ಯ (ಭರಕ. ೦೪-೫೨) : ಜೋಗಿಣಿಯಂತೆ ಮಧುದೂತಿಗೆಳಸಿದರ್ . . . ಬನದೊಳಾ ಪೆಣ್ಗಳ್ (ಚಬಪು. ೪೫-೪೦) ; ಉದಯದಿಗ್ವಧುವೆನಿಪ ಜೋಗಿಣಿಯ ಕೈಯಲೊಪ್ಪಿದ ಪದ್ಮರಾಗ (ಸಂದಿಮಾ. ೧೯-೧೦).

[ <ಪ್ರಾ. ಜೋಗಿಣೀ, ಜೋಯಿಣೀ./ಸಂ. ಯೋಗಿನೀ ]

**ಜೋಗಿಣಿತಿ** (ನಾ). = ಜೋಗಿಣಿ : ಇಂತೆಂದೊರೆದಳೆಲೆ ಜೋಗಿಣತಿ ಸುರುಚಿರಮೆನಿಪೆನ್ನ ಸುವ್ರತಕೆ ಭಂಗಮಿರದಾಯ್ತು (ಪ್ರಭುಂಜ. ೩-೧೧೩)

[ ಜೋಗಿಣಿ + – ಇತಿ$_1$ (<–ಇತ್ರಿ) ]

**ಜೋಗಿತಿ, ಜೋಗತಿ** (ನಾ). ೧. = ಜೋಗಿಣಿ : ಒಕ್ಕಲಿತಿ, ಸಟ್ಟಿತಿ, ಗಣಿತಿ, ಜೋಗಿತಿ (ಶಬ್ದಾನು. ೨೦೨ ಪ್ರಯೋ) ; ಈ ರಗಳೆಯ ಹರಿಹರ ಜೋಗಿಯಂತೆ ! ಆ ಹೆಣ್ಣುಗಳು ಜೋಗಿತಿಯರಂತೆ ! (ತುಂಗಭ. ೧೦೮). ೨. ಎಲ್ಲಮ್ಮ ದೇವತೆಯ ಭಕ್ತೆ ; ಜೋಗಮ್ಮ : ಜೋಗಿತಿಯ ದನಿ ಕೇಳಿದಾಗಲೇ ಅವರಿಗೆ ಈ ಲೋಕದ ಸ್ಮೃತಿ ಬಂದುದು (ಬನಸಿ. ೬೫); ಜೋಗಿತಿ ನಿನ್ನ ಮದುವೆ ಆಗಲೇ ಇಲ್ಲವೇ ? (ಸ್ವಪ್ನಹೊ. ೨೯೨). **ಜೋಗತಿ** : ೨. ಸಂತೆಯಂಗಡಿ ಸೂಳೆ ಮುಂತೊಲಿವ ಡೊಂಬತಿಯು ಎಂತು ಗಂಡಸಿಯು ಜೋಗತಿಯು ಹೋದವನ ಸಂತಾನ ಕೆಡುಗು (ಸರ್ವಜ್ಞ. ೧೯೪೭) : ಮುಪ್ಪಿನ ಕಾಲಕ್ಕಾದರೂ ಜೋಗತಿಯ ವೇಷ ಬೇಡವೇ (ಹ ೪, ಹಾ. ೯೦) : ಜೋಗಯ್ಯನಾಗಲಿ, ಜೋಗತಿಯಾಗಲಿ ಹೆಜ್ಜೆಗಳನ್ನು ಹಾಕಿ ಕುಣಿಯುವ ದೃಶ್ಯವು . . . ಆಕರ್ಷಿಸದಿರದು (ಕನ್ನಹಾ. ೧೩) ; ಹಾದಿ ಮುಪ್ಪಾಗಿ ಹಳ್ಳವಾಯಿತು. ಸೂಳೆ ಮುಪ್ಪಾಗಿ ಜೋಗತಿಯಾದಳು (ಗಾದೆ).

[ ಜೋಗಿ$_1$ + – ಇತಿ$_1$ (<–ಇತ್ರಿ) ]

**ಜೋಗಿಯರಳೆ** (ನಾ). ಒಂದು ಬಗೆಯ ಸಸ್ಯ : ಹೂವರಿಸಿ, ಜೋಗಿಯರಳೆ, ಬುಗರಿ (ಪ್ರುಶಿಗಿ. ೬೪-೧೫೨೧). [ ? ]

**ಜೋಗಿವರಾಳಿ** (ನಾ). [ಸಂಗೀತ] ಒಂದು ಮಿಶ್ರರಾಗದ ಹೆಸರು : ಶೋಕವರಾಳಿ ವಸಂತವರಾಳಿ ಜೋಗಿವರಾಳಿ . . . ನಾಗವರಾಳಿಯೆಂಬ ವರಾಳೀಸಪ್ತಕವೇ ಶುದ್ಧವರಾಳಿಗೆ ಮಿಶ್ರಂಗಳು (ವಿವೇಳ. ೨೩೫).

[ ಜೋಗಿ? + ವರಾಳಿ ]

**ಜೋಗಿಸು** 'ಜೋಗೈಸು$_2$' ನೋ.

**ಜೋಗು$_1$** 'ಜುಮ್ಮು$_3$' ನೋ.

**ಜೋಗು$_2$** 'ಜವುಗು' ನೋ.

**ಜೋಗು$_3$** 'ಜೋಗ$_1$' ನೋ.

**ಜೋಗುಗೊಳ್** (ಕ್ರಿ). ಧ್ಯಾನಮಾಡು ; ತಪಸ್ಸನ್ನು ಕೈಗೊಳ್ಳು ; ತಪಸ್ಸುಮಾಡು : ಇರ್ವರುವೊಂದೆ ಗುಹೆಯೊಳ್ ಜೋಗುಗೊಂಡು ನಾಲ್ಕು ತಿಂಗಳಿರ್ವರುಮುಪವಾಸಂಗೆಯ್ದು (ಪದ್ಮಾಚಾ. ೪೮-೭) ; ವಿಷ್ಣುಗಳೆಂಬಾಚಾರ್ಯರ್ ಸಮುದಾಯಂಬೆರಸಲ್ಲಿ ಜೋಗುಗೊಂಡಿರ್ಪುದುಂ (ಧರ್ಮಾಮೃ. ೯-೧೭೫) : ಕಾಂತಾರಮಧ್ಯದೊಳಾ ವರ್ಷಕಾಲಮಾಸನ್ನಮಾಗೆ ಜೋಗುಗೊಂಡಿರ್ಪುದುಂ (ಪುಣ್ಯಾಸ್ರ. ೦೨-೨ ವ).

[ ಜೋಗು$_3$ (<ಜೋಗ$_1$) + ಕೊಳ್$_1$ ]

**ಜೋಗುಳ, ಜೋಗಳ$_1$, ಜೋಗಳೆ, ಜೋಗುಳಿ, ಜೋಗುಳೆ** (ನಾ). ಮಕ್ಕಳನ್ನು ಮಲಗಿಸುವಾಗ ಹೇಳುಂವ ಹಾಡು; ಜೋ ಎಂಬ ಪಲ್ಲವಿಯಿಂದ ಕೂಡಿರುವ ಹಾಡು; ಲಾಲಿಪದ : ಜಗದಾತ್ಮ ಜೋ ಜರಾಮರಣವಿದೂರ ಜೋ ಎನುತೆ ಜೋಗುಳವಂ ಶ್ರುತಿಗೂಡಿ ಪಾಡಿದರ್ (ಅನಂಪು. ೬-೩) : ಆತುರದೆ ಪಾಡುತ್ತಲಿಹರ ಜೋಗುಳ ಜೊಂಪು (ಲಸರ. ೧-೧೪೦); ಆದ್ಯರ ಗೀತದೊರೆಯನಾಲಿಸುವಂತೆ ಜೋಗುಳವನಾಲಿಸುವನು (ಹದ್ಯರಾ. ೨-೬೦) ; ನುಡಿಗಗೋಚರದಮಳ ಬೊಮ್ಮದ ಕಡುಹು ನಿಂದುದು ಜೋಗುಳದಲವಗಡೆಯ ದೇವತ್ವಕೆ ಶಿಶುತ್ವದೊಳಾಯ್ತು ನಿರ್ವಾಹ (ತೊರರಾ. ೧-೮-೬೩); ಅಂಗನೆಯರೊಲ್ದು ಪಾಡಿದರು ಜೋಗುಳ (ಮಹಾವಿ. ೩-೨೦) : ಬೆಟ್ಟ ಬೆಟ್ಟಕೆ ಕಟ್ಟಿ ಜೋಗುಳದ ತೊಟ್ಟಿಲನು ತೂಗಿದತ್ತು ! (ಅನಿಳೇ. ೫೩-೫). **ಜೋಗಳ$_1$** : ಮನೆಯಲ್ಲಿ ತಾಯಿಯು ಜೋಗಳವೆತ್ತಿ ಲಾಲಿಗಳನ್ನು ಹಾಡಿ(ಕನ್ನಹಾ. ೩೭): ಕೂಸು ಕಾಸ ಹಡೆಯದು, ಜೋಗಳ ಮುಗಿಲು ಮುಟ್ಟಿತು (ಗಾದೆ). **ಜೋಗಳೆ** : ಸೋಮರ್ಡಿಯ ಸೊಬಗೆಯರು . . . ಜೋಗಳೆಯನು ಪಾಡಿದರು (ಅಂಜಕ. ೪-೪೭) **ಜೋಗುಳಿ** : ತೊಟ್ಟಿಲ ಶಿಶುವಿಂಗೆ ಜೋಗಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳಿಯುಂಟೇ (ಸರ್ವವ. ೨೭-೦೨೪) : ವಿಮಲಾಗಾರದ ಬಲಾಜನದ ಜೋಗುಳಿ[ಹಾಕಾಂ. ೪ಗೆ]ಯರಸ ಜೋಯೆನುತ . . . ನಾರಿಯರು ಸ್ವರವೆತ್ತಿ ತೂಗಿದರು (ತೊರರಾ. ೬-೨೨-೧೨). **ಜೋಗುಳೆ**: ತೊಟ್ಟಿಲ ಶಿಶುವಿಂಗೆ ಜೋಗುಳೆಯಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳೆಯುಂಟೇ (ಸರ್ವವ. ೨೭-೧೨೪): ತೊಟ್ಟಿಲ ಮಚಿಗೆ ಜೋಗುಳೆಯಂತೆ ಗಳಪಿದವಲ್ಲಿ ಚಕೋರಿ (ಶ್ರೀಹಾಂ .೨-೨೩): ತೊಟ್ಟಿಲೊಳಗಾಬಾಲ ನೊಱಗುವನಳ್ತಿಯಿಂ ಜೋಗುಳೆಯನಾಲಿಸುತ (ಸಾಳ್ವಭಾ. ೪-೧); ಹಸುಳೆ ಜೋಗುಳೆಗೆ ಸರ್ಪ ಸುನಾಗಸರಕೆ . . . ಗುಂಡಾಕ್ರಿಗೆ ಶಿಲೆವೊಸರುವುದಿದು ಘನವೆ (ಭರತ. ೦-೮೮).

[ ದೇ. ೩ ತುಳು. ಜೋಗುಳ; ತೆಲು. ಜೋಗಡ, ಜೋವಡ, ಜೋಲ ]

**ಜೋಗುಳಂಪಾಡಿಸು** (ಕ್ರಿ). ಲಾಲಿಯನ್ನು ಹಾಡಿಸು : ಬಾಯಿನವನೊಡನಿರ್ದ ರುದ್ರಕುಮಾರಿಯರ್ಗಿಕ್ಕಿ ತೊಟ್ಟಿಲೊಳು ಪಟ್ಟಿರಿಸಿ ಜೋಗುಳಂಪಾಡಿಸಿದಳು (ಸಿದ್ಧರಾ. ೧-೫೮).
[ ಜೋಗುಳಂಪಾಡು (<ಜೋಗುಳಂಬಾಡು) + – ಇಸು$_3$ ]

**ಜೋಗುಳಂಪಾಡು** 'ಜೋಗುಳಂಬಾಡು' ನೋ.

**ಜೋಗುಳಂಬಾಡು, ಜೋಗಳೆವಾಡು, ಜೋಗುಳಂಪಾಡು, ಜೋಗುಳಪಾಡು, ಜೋಗುಳವಾಡು$_1$, ಜೋಗುಳೆವಾಡು** (ಕ್ರಿ). ಜೋಗುಳವನ್ನು ಹಾಡು ; ಲಾಲಿಯನ್ನು ಹಾಡು : ಮಗನಂ ತೊಟ್ಟಿಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ (ಅನಂಪು. ೧೨-೫೦) : ಪುರಾತನರ ಗೀತದಿಂ ಜೋಗುಳಂಬಾಡಿ ಭಕ್ತಿಯ ಮಱಯಂ ಸಲಹುವಂತೆ . . . ಓವುತ್ತಿರಲು (ಬಸರ.೧೦-೧೦೨). **ಜೋಗಳೆವಾಡು** : ನಾಡೆ ನಲಿನಲಿದಾಡಿ . . . ಜೋಗಳೆವಾಡಿ ಕಂದನ ನೋಡಿ (ಸಾಳ್ವಭಾ. ೨೭-೩೨). **ಜೋಗುಳಂಪಾಡು** : ಅರವಿಂದಮುಖಿಯರೊಲ್ದು ಜೋಗುಳಂಪಾಡುತಿರ್ದರ್ (ಹಮ್ಮಿರ. ೨-೨೫ ವ). **ಜೋಗುಳಪಾಡು** : ಜೋಗುಳಪಾಡಿ ತಾಯಿ ಹೊತ್ತಳು ಲೋಕಹಿತಕೆ (ಸೌಂದಕಾ. ೭-೨). **ಜೋಗುಳವಾಡು$_1$**: ತೊಟ್ಟಿಲ ತೂಗುವ ಜೋಗುಳವಾಡುವ (ಕೊನ್ನಸಂ. ೮-೦೭) : ಜೋಗುಳವಾಡಿ ಮಕ್ಕಳಂ ತೂಗುವೀ ನೆವದಿಂದೆ . . . ಪಾಡಿದರು (ಜಲಪು. ೯-೦೦) : ತೊಟ್ಟಿಲೊಳಿಟ್ಟು ಸಾಲ್ದ ಸ್ನೆಹಿಂದೆ ಜೋಗುಳವಾಡಿ ತೂಗುವಳು (ಕೃಮಿಧಾ. ೦೮-೨೧). **ಜೋಗುಳೆವಾಡು**: ತೊಟ್ಟಿಲ ಕಟ್ಟಿ ಗವರೇಶ್ವರ ಲಿಂಗಕ್ಕೆ . . . ಜೋ ಗು ಳೆ ವಾ (ಯಾ) ಡಿ ದೆ (ಸರ್ವಪ. ೪೧-೨೦೯).
[ ಜೋಗುಳ + ಪಾಡು$_1$ ]

**ಜೋಗುಳಗೀತ** (ನಾ). = ಜೋಗುಳ : ಆ ಜೋಗುಳಗೀತದಲ್ಲಿ ಬರುವ 'ಬರ್ತಾನ ನಿನ ಮಾವಾ' . . . ಎನ್ನುವುದೂ ಕಥೆಯ ಒಂದು ರೀತಿಯೇ (ಕಥಳ. ೦). [ ಜೋಗುಳ + ಗೀತ ]

**ಜೋಗುಳಗೀತೆ** (ನಾ). = ಜೋಗುಳ : ಅನುಪಮವಾದ ಅನೇಕ ಜೋಗುಳಗೀತೆಗಳು ಇವುಗಳ ಗುಂಪಿನಲ್ಲಿ ಸೇರುತ್ತವೆ (ಭಾವಗೀ. ೫೧).
[ ಜೋಗುಳ + ಗೀತೆ ]

**ಜೋಗುಳಪಾಡು** 'ಜೋಗುಳಂಬಾಡು' ನೋ.

**ಜೋಗುಳವಾಡು$_1$** 'ಜೋಗುಳಂಬಾಡು' ನೋ.

**ಜೋಗುಳವಾಡು$_2$, ಜೋಗಳಿವಾಡು** (ನಾ). = ಜೋಗುಳ : ತೂಂಕಡಿಪ ಜೋಗುಳವಾಡು (ಸಂಸಪ. ೩೧-೮). **ಜೋಗಳಿವಾಡು** : ಕಡುನೇಹದಿಂದ ಜೋಗಳಿವಾಡ ಪಾಡುತ ಸಡಗರಗೊಂಡರಾಳಿಯರು (ಜಂಪ್ರಸಾಂ. ೪-೬೦).
[ ಜೋಗುಳ + ಪಾಡು$_2$ ]

**ಜೋಗುಳಿ** 'ಜೋಗುಳ' ನೋ.

**ಜೋಗುಳೆ** 'ಜೋಗುಳ' ನೋ.

**ಜೋಗುಳೆವಾಡು** 'ಜೋಗುಳಂಬಾಡು' ನೋ.

**ಜೋಗೆತ್ತು$_1$** (ಕ್ರಿ). ಜವುಗು ಆಗು ; ಕೆಸರಾಗು : ಧರಿತ್ರಿ ವಾರಣ ಘಟಾತಟ ದಾನಜಳಂಗಳಿಂದೆ ಜೋಗೆತ್ತೆ (ಮಹಾನೇ. ೦೦-೯೦).
[ ಜೋಗು$_3$ (<ಜವುಗು) + ಎತ್ತು$_1$ ]

**ಜೋಗೆತ್ತು$_2$** (ಕ್ರಿ). ಧ್ಯಾನವನ್ನು ಬಿಟ್ಟು ಏಳು ; ತಪಸ್ಸಿನಿಂದ ಬಹಿರ್ಮುಖನಾಗು : ಜೋಗೆತ್ತಿ ಮುನಿಶಿಖಾಮಣಿ ಪೋಗುತ್ತಿರೆ (ಪುಣ್ಯಾಸ್ರ. ೩-೭೩). [ ಜೋಗು$_3$ (<ಜೋಗ$_1$) + ಎತ್ತು$_1$ ]

**ಜೋಗೇಱು** (ಕ್ರಿ). ಜೋವಂ ಹಿಡಿ; ಜೋಮು ಹತ್ತು : ಪಾದಗಳು ಜೋಗೇಱಿಕೊಂಡು ಚುಮುಚುಮುಗುಟ್ಟುತ್ತಾ . . . ಇಹವು (ವೈದ್ಯಸಾ. I, ೪೦೯). [ ಜೋಗು$_1$ (<ಜುಮ್ಮು$_3$) + ಏಱು$_1$ (<ಏಱ್$_1$) ]

**ಜೋಗೈಸು$_1$** 'ಜೋಗಯಿಸಂ' ನೋ.

**ಜೋಗೈಸು$_2$, ಜೋಗಿಸು** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ರತಿದೇವಿ ತನ್ನಯಯಾತ್ಮತನಯನಂ ಪ್ರಾಣವಾದಾಗಿ ಜೋಗೈಸುತಿರೆ (ನವಮೋ. ೧೫-೪೮). **ಜೋಗಿಸು** : ಅನಿರುದ್ಧನಂ ಕೊಲದೆ ಜೋಗಿಸುವೆನು (ನವಮೋ. ೨೯-೨೨). 'ಜೋಗರಿಸು' ಪರಾ.
[ <ಜೋಪಾನ + ಕೈಸು (<ಕೆಯ್ಸು) ]

**ಜೋಡ** (ನಾ). ಹಾದರಿಗ ; ಜಾರ: "ಸಿತಗಂ, ಜೋಡಂ, ಪರಳಿಗಂ, ಪಾಣ್ಬಂ –ಳ್ ಜಾರಂಗೆ ಪೆಸರ್" (ಕಕಸಾ. ೦೯-೩೮೭) : "ಜೋಡಂ = ಸಿತಗಂ ; ಪಾಣ್ಬಂ" (ಕಮದ. ಶರಿ. ೨) : "ಜೋಡಂ ಪರಳಿಗನು ಪಾಣ್ಬ ಸಿತಗಂ ಜಾರಂ" (ಕವಿಕಂ. ೧೬೦) ; ದನಿಗೆಟ್ಟುಲಿ ಹೊದ್ದಿಯುು ಹೊದ್ದದ ಹೊಯಿಲೆಸದವು ಜೋಡರ ಸುಸಿಲೊಳ್ (ಉದ್ಯದೀ. ೪-೦೭). [ಜೋಡು + – ಅ$_7$]

**ಜೋಡಂಗಿ** (ನಾ). ಎರಡು ಅಂಗಿ ; ಒಂದು ಜೊತೆ ಅಂಗಿ : ಬಿದ್ದಾನೊ ಬಿದ್ದಾನೊ ಬಿಳಿಅಂಗಿ ಮೋಲಾಗೆ ರುದ್ರ ಜೋಡಂಗಿ ಕಳಚ್ಯಾವ (ಜೋಕಗೀ. ೨೧೭). [ಜೋಡು + ಅಂಗಿ$_2$ ]

**ಜೋಡಗಲ್, ಜೋಡಗಲು** (ಕ್ರಿ). ಜೊತೆಯನ್ನು ಬಿಡು ; ಸಹವಾಸದಿಂದ ದೂರವಾಗು : ಜೋಡಗಲ್ದುವು ಜಕ್ಕವಕ್ಕಿ (ಸಮ್ಯಕ್ತ್. ೧೦-೨೪). **ಜೋಡಗಲು** : ರಾವು ಜೋಡಗಲಿ ಸೀತೆಯಂ ಬನಕೆ ಗವಿಸಿದನೆಂಬ ರೂಢಿ (ವಂಕಾರಾ. ೨-೧೦-೨೩). [ ಜೋಡು + ಅಗಲ್$_1$ ]

**ಜೋಡಗಲು** 'ಜೋಡಗಲ್' ನೋ.

**ಜೋಡಗಿರಿ** (ನಾ). ಮರದ ತುಂಡುಗಳನ್ನು ಜೋಡಿಸುವಿಕೆ,-ಹೊಂದಿಸುವಿಕೆ: ಜೋಡಗಿರಿಯ ಕೆಲಸದಲ್ಲಿಯೂ ಮಾಟಿನ ಕೆಲಸದಲ್ಲಿಯೂ ಕೊಂಕಣದ ಬಡಿಗಿಗಳು ಮೇಲಾದವರು (ಕಥಾಗ. ೩೦೮). [←ಮರಾ. ಜೋಡಗಿರೀ]

**ಜೋಡಣೆ, ಜೋಡವಣೆ** (ನಾ). ೧. ಸೇರುವೆ ; ಹೊಂದಾಣಿಕೆ ; ಸಾಂಗತ್ಯ : ಅಸುರರಲಿ ಮರ್ತ್ಯರಲಿ ಸುರರಲಿ ಯೆಸಕವುಳ್ಳವನೆನಿಸಿದನು ಸಾಹಸದ ಜೋಡಣೆ ಜಡಿದುದವನಿಯಲಿ (ಕುಮ್ಯಾಸ. ೨-೪೯): ನೋಡಿದನು ಜಾಂಬವನು ಜಲಧಿಯ ರಘಾಡಣೆಯ ಜಂಘಾಯ್ಲ ರಭಸದ ಜೋಡಣೆಯ (ತೊರರಾ. ೪-೦೨-೩) ; ಜೀವತ್ವದಿಂ ನಾಡೆ ಪಲತೆಱನಾಗಿ ಸಕಲ ಸುಖದುಃಖಗಳ ಜೋಡಣೆಗೆ ಮೈಗೊಟ್ಟಿರುತ್ತೆ ಲೋಕಪ್ರಪಂಚಿನೊಳೆಸೆದು ತೋಱುತಿರ್ಪಂ (ಸಿದ್ಧೇಪು. ೨೨-೧೦): ಎರಡು ಜೀವಗಳ ಎರಡು ಭಾವಗಳ ಜೋಡಣೆಯನ್ನು ಸಾಧಿಸಿತು ಕ್ಷಣಕಾಲದ ಮೌನ (ಬಕಾಂಗಿ. ೩). ೨. ಮೇಳ; ಗುಂಪು; ಸಮುದಾಯ: ಚೂತವೃಕ್ಷಂಗಳಾ ಜೋಡಣೆಯ ಸುಚ್ಛಾಯ ಶೈತ್ಯದಿಂದಿರ್ದಸೆಯ ಪಾಥಯಿಸಿಕೊಂಡಿರಲು (ಶರಕು. ೪-೦೯). ೩. ಒಟ್ಟೈಸುವುದಂ ; ರಾಶಿಹಾಕುವುದು : (೬). ೪. ಸಿದ್ಧತೆ ; ಸಜ್ಜು ; ಸನ್ನಾಹ : ರಾಜೋಪಕರಣದ ಜೋಡಣೆಯ ಪಸರಿಕೆಯ ಪಾಳಯ ತೆರಳಿತಗಲದಲಿ (ತೊರರಾ. ೨-೩-೫೦). **ಜೋಡವಣೆ**: ೪. ಸಕಲ ಜೋಡವಣೆ ಸರಳ ಹೊದೆಗಳಲಿ ಸೈನ್ಯ ಕೂಡಿದುದು (ಪಾಂಡಕ. ೫೭-೫) ; ತದ್ದೀಪ್ತ ಜೋಡವಣೆ ಯುುಕ್ತದಿಂದಾ ನೃಪನ ಕಾಣಲ್ಕೆ (ಶರಕು. ೭-೩೨).
[ ಜೋಡಿಸು$_1$ + – ಅಣೆ$_4$ ]

**ಜೋಡಣೆಗೆಯ್** (ಕ್ರಿ). ಸಿದ್ಧಮಾಡಂ; ಸಜ್ಜುಗೊಳಿಸು: ಜೋಡಣೆಗೆಯ್ದ ಸುವರ್ಣಮಂಟಪ (ಮೋಹತ. ೦೪-೨೮). [ ಜೋಡಣೆ + ಕೆಯ್$_1$ ]

**ಜೋಡತನ** (ನಾ). ಹಾದರ; ಜಾರತನ: ಪಗಲ್ನಿದ್ದೆಗಂ ಜೂದಿಗಂ ಜೋಡತನಕ್ಕಂ . . . ಇಂಬುಗೊಡದೆ (ಚಳಪಂ. ೬೨). [ ಜೋಡ + – ತನ ]

**ಜೋಡವಣೆ** 'ಜೋಡಣೆ' ನೋ.

**ಜೋಡಾಟ** (ನಾ). ಒಂದೇ ಸ್ಥಳದಲ್ಲಿ ಅಕ್ಕಪಕ್ಕದ ಎರಡು ರಂಗಸ್ಥಳಗಳಲ್ಲಿ ಒಂದೇ ಕಥಾಪ್ರಸಂಗವನ್ನು ಆಡಿ ತೋರಿಸುವ ಬಯಲಾಟ: ಒಂದು ರಾತ್ರೆ ನಾಲ್ಕುಮೈಲು ದೂರದಲ್ಲಿ ಒಂದು ಜೋಡಾಟ ನೋಡಲು . . . ನಿಶ್ಚಯಿಸಿದಾಗ (ಪಾತ್ರಲ್ಕೊ. ೮). [ ಜೋಡು + ಆಟ ]

**ಜೋಡಾಡು** (ಕ್ರಿ). ಹಾದರವನ್ನು ಮಾಡು : ತಾಂ ಜೋಡಾಡಲ್ ಬಗೆದು ಮನೆಯಾಣ್ಮಂ ಬಾರದನ್ನಂ . . . ತನ್ನಾತನಂ ಸಂಕೇತನಿಕೇತನಕ್ಕೊಡಗೊಂಡು ಬರ್ಪುದೆಂದು ಪೇಳ್ದಟ್ಟೆ (ಪಂಚತಂ. ೭೯-೧). [ಜೋಡು + ಆಡು$_1$]

**ಜೋಡಾಣಿಕೆ** (ನಾ). = ಜೋಡಣೆ ೧ : ಪರದೆಯ ಜೋಡಾಣಿಕೆ, ಸನ್ನಿವೇಶಕ್ಕೆ ಹೊಂದಿಕೆಯಾಗುವ ವಸ್ತ್ರಾಭರಣಗಳನ್ನು ಆರಿಸುವುದು ಎಲ್ಲವೂ ಬಲದೇವನ ಕಾರ್ಯವೇ (ಕಲಾಸಾ. ೯೩). [ <ಜೋಡಣೆ + – ಇಕೆ ]

**ಜೋಡಿ$_1$** (ನಾ). ೧. ಜೊತೆ; ಜೋಡಂ : ರೂಢಿಯಲಿ ಸಮತಳದಲಂಘ್ರಿಯ ಜೋಡಿಗಳ ಮೆಲುದಳವದೊಪ್ಪಿರೆ (ನಿಭಾಗ. ೪-೦೩-೪೦); ಕಿಂಖಾಪಿನ ಛತ್ರಿ ಚವರೀ ಜೋಡಿ (ಎಕ. XIV, ಸಂಜನ. ೨೮೯-೭ನೇ ಕಲಂ; 1847); ಆಕೆಯನ್ನು ತನ್ನ ತಂದೆಗೆ ಜೋಡಿಯಾಗಿ ಮಾಡಿದನು (ನೀಗಟ್ಟು. ೩೩). ೨. ಗುಂಪು; ಸಮೂಹ : ಗಾಂಡೀವಿ ಚಾಪವ ಮಿಡಿದ ನಿಷ್ಠುರರಾವ ತಿವಿದುದು ಜರಿದವಡಕಿಲು ಜಗದ ಜೋಡಿಗಳ (ಕುಮಾವ್ಯಾ. ೯-೩೭); ಸಾರಿದರೆ ಪೊಗೊಳನನಾ ಚಂಡಾಂಶುವಿನ ಮೈ ಝಳದ ಝಾಡಿಯ ಜೋಡಿಯಧ್ವಶ್ರಮದ ಭಾರದಲಿ (ತೊರೆರಾ. ೨-೭-೩): ಜಗದ ಜೋಡಿಯನುರುಹುವುರಗಾಧಿಪಮುಖಾನಲನೆರಡು ರೂಪಾಗಿ ಧರೆಯಲವತರಿಸಿತ್ತೊ (ನಿಭಾಗ. ೩-೮-೮). ೩. ಸಂಘಟನೆ; ಒಗ್ಗಟ್ಟು : ಕೂಡೆ ತಳಪಟವಾಯ್ತು ಸುಭಟರ ಜೋಡಿ ಜರಿದುದು (ಕುಮಾವ್ಯಾ. ೨-೩೮). ೪. ಒಡನಾಟ; ಸಹವಾಸ : ಹತ್ತಿರದ ಜೋಡಿಗೋರ್ವರು ಮಿಲ್ಲ (ಮುಲ್ಲಕ. ೧೭-೯). ೫. ಕಾಗದದ ಹಾಳೆ : (ಕ). 'ಜೋಡು' ಪರಾ.

**ಜೋಡಿ$_2$**, ಜೂಡಿ (ನಾ). ೧. ಕೊಡುಗೆಯಾಗಿ ಕೊಟ್ಟ ಭೂಮಿಗೆ ಸರ್ಕಾರ ತೋರಿಸುವ ಕಂದಾಯದ ಸವಲತ್ತು. ೨. ಕೊಡುಗೆ: ಮಲ್ಲಿಗೆ ಹಳ್ಳಿ ೪೨ ಬ್ರಾಹ್ಮಣರಿಗೆ ಜೋಡಿಯಾಗಿದೆ (ಗರುಡಾ.೧೧೩): ಬೈಲಹಳ್ಳಿಯನ್ನು ನಿಮಗೆ ಜೋಡಿ ಹಾಕಿಕೊಟ್ಟಿದ್ದೇನೆ (ಬೃಹತ್ಕ. ೦೪). ೩. ಕಪ್ಪ; ವಳಿತ: "ಜೋಡೀ-ಕಪ್ಪಂ" (ಶಾಕಶ್. ೨೬೬); ಒಸಗೆ ಜೋಡಿಯವೆಲ್ಲವನೂ ಆ ಮೂಲಿಗರೇ ನಡೆಸಿ (ಇಕಣಾ. IX-ii, ೪೦೭-೦೦; 1377); ಕಪ್ಪ ಜೋಡಿ ಬೇಡಿಗೆ ತಳವಾಡಿಕೆ . . . ಇವು ಮೊದಲು ಸರ್ವಮಾನ್ಯವಾಗಿ (ಎಕ. V, ಹಾಸನ. ೨-೦೭; 1563); ಕೊಡಗರು ನಮಗಳ್ಳಿ ಜೋಡಿಯ ತೆಱು ತಿಹರೀಗ( ಕಂನವಿ. ೦೮-೨೩); ಚರಾದಾಯ ಜೋಡಿ ಬೇಡಿಕೆ ಹುಲ್ಲುಹಣ . . . ಮುಂತಾದ ಆ ಸಕಲ ಸ್ವಾಮ್ಯವು (ಬಿಟ್ಟಳ. ೨೯೦-೨೪). **ಜೂಡಿ** : ೩. ಊರೊಳಗಿನ ಇನಾಮದಾರರು ಸರಕಾರಕ್ಕೆ ಜೂಡಿಯನ್ನೂ ಸಹ ಕೊಡುವುದಿಲ್ಲ (ಮೋಹಿನೀ. ೦೧): ಸರಕಾರದವರು 'ಜೂಡಿ' ಯೆಂದು ಕೆಲವು ಹಣವನ್ನು ಕಿತ್ತುಕೊಳ್ಳತೊಡಗಿದರೂ, ದೇಸಾಯಿಯವರಿಗೆ ಆದೊಂದು ಭಾರವೆನಿಸಲಿಲ್ಲ (ಜನಜೀ. ೦೩೭). [ ?. / ಮರಾ. ಜುಡೀ ]

**ಜೋಡಿ$_3$** (ಅ). ಜೊತೆಯಲ್ಲಿ: ದನದ ಜೋಡಿ ಇದ್ದೊಂಡು ನಿನ್ನ ಬುದ್ಧೀನೂ ದನದ ಬುದ್ಧಿ ಆಯ್ತೇನೊ (ಕಮ್ಮಟ. ೦೭). [ <ಜೋಡಿ$_1$ ]

**ಜೋಡಿಕೆ** (ನಾ). ಜೊತೆಯಾಗಿರುವಿಕೆ : ಆದಲೇನದ ಜೀಯ ಲೋಕದ ಜೋಡಿಕೆಯ[ ಯ ][ಪಾಠಾಂ. ಜೋಡಣೆಯ, ಜೋಡೆಯೇ]ಜಾನಕಿ ಜಗತ್ರಯ ಗಾಥಪತಿಭಕ್ತಿಯರಿಗೀ ಸತಿ ಮಾತೃಭವನವಲ (ತೊರೆರಾ. ೩-೩-೯೨). [ ಜೋಡು + – ಇಕೆ ]

**ಜೋಡಿಗ** (ನಾ). ಜೊತೆಗಾರ; ಸಂಗಾತಿ: ಕೀಱು ವೈಗರೆದು ಜೋಡಿಗನ ಬರವನೆ ಪಾರ್ವ ಪೆಣ್ಬಕ್ಕಿಗಳ ತಂಡದಿಂದೆಯುಂ (ರಾಮಾಶ್ವ. ೯-೨).

[ ಜೋಡು + – ಇಗ ]

**ಜೋಡಿಗಲಹ** (ನಾ). ಸಾಟಿಯಾದ ಕಾಳಗ; ಸಮಾನವಾದ ಯುದ್ಧ : ಆದಲೇನದನಿಂದ್ರ ಜಂಭರ ಜೋಡಿಗಲಹವಿದೆನಲು ಗಗನವ ಥಾಡಿಸಿತು ರಣರಭಸ (ತೊರೆರಾ. ೩-೦೦-೨೦). [ ಜೋಡಿ$_1$ + ಕಲಹ ]

**ಜೋಡಿಗೆ** (ನಾ). ಜೋಡಣೆ : ಸ್ವಲ್ಪ ಹಳೆಯ ಕುರ್ಚಿ ಸ್ವಾಮಿ ! ಒಂದು ಕಾಲು ಮುರಿದಿತ್ತು, ಅಲ್ಲಿಂದಿಲ್ಲಿಗೆ ಜೋಡಿಗೆ ಹಾಕಿ ಗಟ್ಟಿಮಾಡಿದ್ದೇನೆ (ದೇವಮ. ೪೦). [ <ಜೋಡಿಕೆ ]

**ಜೋಡಿಗೆಡೆ** (ಕ್ರಿ). ಗುಂಪಾಗಿ ಬೀಳು; ಒಟ್ಟಾಗಿ ಉರುಳು : ನೂಱಾನೆ ಭೀಮನ ಗದೆಯ ಗಾಳಿಯಲಿ ಜೋಡಿಗೆಡೆದವು (ಕುಮಾವ್ಯಾಗ. ೦-೩೯).

[ ಜೋಡಿ$_1$ + ಕೆಡೆ$_1$ ]

**ಜೋಡಿಗೆದಱು** (ಕ್ರಿ). ಗುಂಪಾಗಿ ಚೆದರು,–ಬೇರೆಬೇರೆಯಾಗು : ಸುರಪಮಂದಿಗಳು ಮಗಧರು ಜೋಡಿಗೆದಱಿತು ನಿಜ ನಿಜಾಂಗದ ವಿದ್ಯೆಯಲಿ ನಲಿದು ಪಾಡಿದರು ಹರಿಮಹಿಮೆಗಳನು (ನಿಭಾಗ. ೩-೯-೩೬).

[ ಜೋಡಿ$_1$ + ಕೆದಱು$_1$ (<ಕೆದಱ್$_1$) ]

**ಜೋಡಿಗ್ರಾಮ** (ನಾ). ಕೊಡುಗೆಯ ಗ್ರಾಮ : ನಾಲ್ಕಾರು ವರ್ಷಗಳಲ್ಲೇ ಒಂದು ನಾಲ್ಕು ಜೊತೆ ಜೋಡೀಗ್ರಾಮ ತೆಗೆದು ಹಾಕಿಬಿಡಬೇಕು (ಮೂಂಗಲ್ಮ. ೩೨). [ ಜೋಡಿ$_2$ + ಗ್ರಾಮ ]

**ಜೋಡಿಗ್ರಾಸ** (ನಾ). ಒಂದು ಬಗೆಯ ತೆರಿಗೆ(?): ಕ್ರಯ ಕಡ್ಡಾಯ ಬಿಟ್ಟಿ ಬೀಡಾರ ಸೇಸೆ ಮರನ ಬಿಟ್ಟಿ ಜೋಡಿಗ್ರಾಸ ಆ ಗ್ರಾಮದ ತೋಟಗಾರಿಕ . . . ಮುಂತಾಗಿ ಸರ್ವಬಾಧಾ ಪರಿಹೃತವಾಗಿ (ಮೈಆರಿ. ೧೯೪೦, ೩೬-೪೪; 1399). [ ? ]

**ಜೋಡಿತೆಂಗು** (ನಾ). ಒಂದು ಬಗೆಯ ಸಸ್ಯ: ಜೋಡಿತೆಂಗು, ಕಡಲ್ತೆಂಗು (ಪ್ರಜಾಗಿ. ೩೦-೦೦೦೭). [ ? ]

**ಜೋಡಿದಾರ$_1$** (ನಾ). ಜೊತೆಗಾರ; ಜೋಡಿಯವನು: ಇವರ ಜೋಡಿದಾರನು 'ಕೋಟ್' ಎಂದು ಒದರಿದಾಗ ವಿರುದ್ಧಪಕ್ಷದವರ ದಿವಾಳಿಯಾಗಿ ಬಿಟ್ಟಿತ್ತು (ಮೂರುದಾ. ೮). [ ಜೋಡಿ$_1$ + – ದಾರ$_4$ ]

**ಜೋಡಿದಾರ$_2$**, ಜೂಡಿದಾರ (ನಾ). ಜಮೀನು ಅಥವಾ ಗ್ರಾಮಗಳನ್ನು ಜೋಡಿಯಾಗಿ ಪಡೆದಿರುವವನು : ನನ್ನ ಸ್ನೇಹಿತ ಒಬ್ಬ ಭಾರೀ ಜೋಡಿದಾರ (ನಾಡಿಗೇ. ೩೪). **ಜೂಡಿದಾರ** : ಖಾಲಸಾತ ಭೂಮಿ ಜೂಡಿದಾರರಿಂದಾ (ಬೊಂಕಶಾ. ೧೯೩೪, ರಾಜಕೆನ್ಸ್ಯೂರ್. ೮೨-೬ : ?).

[ ಜೋಡಿ$_2$ + – ದಾರ$_4$ ]

**ಜೋಡಿದಾರಿ** (ನಾ). ಕೊಡುಗೆಯಾಗಿ ಬಂದ ಗ್ರಾಮದ ಅಧಿಕಾರ : ಶಾನುಭೋಗರಿಗೆ ಆ ಹಳ್ಳಿಗಳ ಜೋಡಿದಾರಿ ಇದೆ (ಕೂಥಿ).

[ <ಜೋಡಿದಾರ$_2$ ]

**ಜೋಡಿಸು$_1$** (ಕ್ರಿ). ೧. ಸೇರಿಸು; ಕೂಡಿಸು; ಹೊಂದಿಸು : ಅವನಿಪಾಲನ ಗವಿಯ ಥಾಡಿಕೆ ಜೋಡಿಸಿತು ಗೀರ್ವಾಣಠಾಲಿಗಳ (ಕುಮಾವ್ಯಾಕ. ೦೩-೦೬): ನೋಡಿದೊಡೊಂದೇ ದಿವಸದ ದಿನ ನಾಲ್ಕು ಜೋಡಿಸಿ ವೈವಾಹವಿಧಿಯ ಮಾಡಿದರು (ಮೋಹತಕ. ೦೩-೬೩); ಜೋಡಾಗಿ ಪೂಡುವೊಡೆ ಸಾಲದೇಳೇ ಹಯಂ ಜೋಡಿಸುವೆನೀ ತುರಗವಂ ತನ್ನ ತೇರ್ಗೆಂದು (ಜೈಮಿಥಾ. ೪-೦೪); ಅವಳು ತನ್ನ ಪುಟ್ಟ ಕೈಗಳೆರಡನ್ನು ಎತ್ತಿ ಜೋಡಿಸಿ ಕರೆದಳು (ಹಂಗಾಳ್ಕ. ೩೩). ೨. ಸೇರು; ಜೊತೆಯಾಗಂ : ಘಟೆಯೊಳ್ ಘಟೆ ಜೋಡಿಸಿ ದಂತಜಾಲದೊಳ್ ಭೋಂಕನೆ ಪೊಣ್ಣೆ ತೋರ ಕಿಡಿ ಸೂಸೆ (ಗಿರಿಕ. ೬-೭೨); ಪೆಣ್ಣವಿಲೆಂದು ಕೇಕಿ ಬಂದಾ ಲಲಿತೋಲ್ಲಸತ್ಕಬರಿಗೊಯ್ಯನೆ ಜೋಡಿಸೆ ಕಂಡು (ಉದ್ಭಟ. ೨-೯೮). ೩. ಜೊತೆಮಾಡು : ನೋಡುವುದಕ್ಕೆ ಹುಲ್ಲೆಯ ಹೆಣ್ಣುಮಱಿಗಳ ಜೋಡಿಸಿ ಕೊಟ್ಟರುತ್ಸವದಿ (ಮೋಹತಕ. ೦೯-೭೭) : ಎನ್ನೊಳಾಹವಕ್ಕನುಗುಣನಂ ಜೋಡಿಸು (ಶಬಶಂ. ೪-೨೮). ೪. ಅಣಿಮಾಡು; ಸಜ್ಜುಗೊಳಿಸು : ಜೋಡು ಹಕ್ಕರಿಕೆ ಹಲ್ಲಣ. . . ಜೋಡಿಸಿ ತುರಗವನೇಱಿ ರಾವುತರೊಡಗೂಡಿ ಬಂದರು ಭೂವರೆಡೆಗೆ (ಅಂಜಿಕ. ೩-೮೦) : ಮಾಧವನ ಮರ್ದಿಸಿ ನಿನಗೆ ಜೋಡಿಸುವೆನು ಮಹಾನಳನ (ಕುಮಾವ್ಯಾಸ. ೦೦-೩೩); ಮುಱಿದು ಹಱಿಹಂಚಾದ ನಿಜಮೋಹರವ ನೆಱ

ಸಂತೈಸಿ ಜೋಡಿಸಿ . . . ವಿರೋಧಿವ್ರಜದ ಘಟ್ಟಣೆಯ ಮುಱಿದು(ಶುಪ್ಪಾ.ಳ. ೦೬-೨೪); ಆಗ ಮದನನು ತನ್ನ ಬಲವನು ಬೇಗದಲಿ ಜೋಡಿಸಲು (ನಳಚ. ೧-೩೭); ಮನ್ನೆಯ ಮಂಡಲೇಶ್ವರರು ಜೋಡಿಸಿದ ಕರಿ ತುರಗ ರಥವೆಡೆಯಾಡಿದವು (ತೊರಗಾ. ೨-೭-೯); ಪದಾತಿ ಮೂಹುರ್ಬುದು ಜೋಡಿಸಿದರಾಹವಪ್ರೌಢರ್ಸುಬುದ್ಧಿ ಮೊದಲಾದ ಭಟರು (ಜೈಮಿಭಾ. ೨೨-೨). ೫. ಸಿದ್ಧವಾಗು; ಅಣಿಯಾಗು; ಅನುವಾಗು: ಕಳವೆಯಕ್ಕಿಯ ಕೂಳರಾಶಿಯ ಬಂಡಿ ಜೋಡಿಸಿತು (ಶುಪ್ಪಾ.ಆ. ೧೦-೨೩): ಆಡಿದ ಬೆಳಗಾಗದ ಮುನ್ನ ಬಹೆನೆಂದು . . . ಜೋಡಿಸಿ ನೀ ಬರ್ವ ವೇಳೆಗೆ ಭಾಸ್ಕರ ಮೂಡಿದ ನೆಂದಳಾ ಕುವರಿ (ಮೋಹತ. ೨೯-೫೯). ೬. ಒದಗು; ಉಂಟಾಗು; ಲಭಿಸು: ಜಗದಳಿವು ಜೋಡಿಸಿತೆನುತ ನಡುಗಿದನಬುಜಭವನಂದು (ಶುಪ್ಪಾ.ಛಿ. ೬-೩೦). ೭. ತಿಳಿಸು; ಹೇಳಿಕೊಡು: ಬುದ್ಧಿಯಂ ಜೋಡಿಸಿದ ಕೊರ್ವಳಣಾಗಿಗೆ (ಜೈಮಿಭಾ. ೬-೨೭): ನೀನೆ ಬುದ್ಧಿಯ ಜೋಡಿಸೆನಲು ಸುಬುದ್ಧಿ ಪೇಳ್ದನು ನೀತಿ ಸಭೆಯಲಿ (ಬಿಜ್ಜಪು. ೩೦ ಸೂಚನೆ).

[ ಜೋಡು + – ಇಸು₃ ]

**ಜೋಡಿಸು₂** (ಕ್ರಿ). ಹೊಡೆ; ಜಡಿ: (ಕ).

[ ಜೋಡಣೆ (P ← ಮರಾ. ಝೋಡಣೇ) + –ಇಸು₃ ]

**ಜೋಡು** (ನಾ). ೧. ಜೊತೆ; ಜೋಡಿ: "ಜೋಡೆನಲು ಜೋಳಿ" (ಕಕಠ. ೪೦): ಪಕ್ಕ ಪಕ್ಕಗೆ ಸಾರೆ ಜಜ್ಜರಿಯ ಜಕ್ಕವಕ್ಕಿಯ ಜೋಡು (ಸಮ್ಯಳಾ. ೧-೩೭). ೨. ಸಮಾನ; ಸಾಟಿ; ಸರಿ: "ಜೋಡು, ಸರಿಸ, ತೋಡು . . . ಸಂಗಡಂ – ಈ ೧೮ ಸಮಾನಕ್ಕೆ ಪೆಸರ್" (ಕಕಸಾ. ೦೩-೨೯೦): ಶ್ರೀಪಾಣ್ಡ್ಯರಾಜನೂರ್ಜ್ಜಿತತೇಜಂ[ವಿದ್ವಿ]ಷ್ಪಾರಾತಿಗೆ ವಿಂಗೆ ಜೋ[ಡೆನಿಸಿ] (ಸೌಇಇ. IX-1, ೦೩೪-೦೬; 1085): ಹರನ ಜೋಡು ಮುರಾಂತಕನ ಸಮ (ಶುಪ್ಪಾ.ಸ. ೦೬-೬೯). ೩. ಎತ್ತಿನ ಜೊತೆ: ಮೂಡು ಬೈಲನು ಮಾಡಿಕೊಂಡೆನು; ಜೋಡು ಹತ್ತನು ಕಟ್ಟಿದೆ (ಕಎಪು. ೦೮-೧೨). ೪. ಸಹಚರ; ಸಂಗಡಿಗ: ಕಳೆಯ ಬೇಡುವ ಎದೆಗೆ ಯಾರು ಜೋಡು (ಉದ್ಯ್ಮ.ರ. ೩೭-೪). ೫. ಹಾದರ; ವ್ಯಭಿಚಾರ. 'ಜೋಡಾಡು' ಪರಾ. ೬. ಕಟ್ಟು; ಕಂತೆ: ಓಡುವಾಕಳಿಗೆಳೆಯ ಹುಲ್ಲಿನ ಜೋಡ ತೋರಿಸಿ ನಿಲಿಸಿ (ವಿವೇಛ. ೬-೨೯): ಬಲವಂತ ಶೇಣ್ವಯು ಇಸ್ಪೇಟಿನ ಜೋಡನ್ನು ಹೊರಹೊರಡಿಸಿದ್ದನು (ಅಂಬಿಕ. ೩). ಜೊತೆಗಾರರು ಯಾರೂ ಇರಲಿಲ್ಲ. ಇಸ್ಪೇಟು ಜೋಡಂತೂ ಮೊದಲೇ ಇರಲಿಲ್ಲ (ಮುಂಗಾಪು. ೩೯). ೭. ಗುಂಪು; ಸಮುದಾಯ: ನರಶರದ ಜೋಡಿನ ಜುಂಜುವೋಳಿಯಲಿ ಜಾಹ್ನವೀಧರ ಜಾಱುವನೆ (ಶುಪ್ಪಾ.ಆ. ೬-೦೧): ಜೋಡು ಜೋಡಿಲಿ ನಿಂದು ನೋಡಿದರಾ ಪುರಪತಿಯ (ಸೌಂದರಾ. ೩-೬). ೮. ಮೆಟ್ಟು; ಪಾದರಕ್ಷೆ: ಜೋಡು ಕಿತ್ತುಹೋದರೆ ತಾನೇ ಅದನ್ನು ಸರಿಮಾಡಿಕೊಳ್ಳುತ್ತಿದ್ದನು (ಕೈಗಂಬ. ೦೦೧): ಆರೂ ಕಾಲಿಗೆ ಜೋಡನ್ನು ಮೆಟ್ಟಿರಲಿಲ್ಲ (ದೇವೀಚಾ. ೦೩೭): ಜೋಡು ಕಂಡ ಕಾಲುಗಳು ನಮ್ಮೂರಿನಲ್ಲಿ ಎಲ್ಲೋ ನೂರ ಕ್ಕೊಂದು (ಹುಟ್ಟಿಹ. ೬). ೯. ನೆಲೆ; ಆಶ್ರಯ: ಪವಳದ ಬೀಡು ಕಂಬುಗಳ ನಾಡು ಜಲೇಶನ ಜೋಡು . . . ಮಣಿಗಳಾಗರಮಂದೆಸೆದತ್ತು ಸಾಗರಂ (ಸೂಕ್ತಿಸು. ೨-೩೭). ೧೦. ಕವಚ; ಅಂಗರಕ್ಷೆ; ಉಕ್ಕಿನ ಅಂಗಿ: "ಜೋಡೆನೆ ಸವಗಮದಕ್ಕುಂ" (ಛಾರನಿ. ೩೯): ಘನತರವಾದ ಪಂಚಾಕ್ಷರಿಯ ಜೋಡಂ ತೊಟ್ಟು (ಚನ್ನವ. ೭೬-೦೩): ಕಿಬುವುಲಿಯ ಜೋಡಂ ತೊಟ್ಟಂತಿರಿಟ್ಟಳ ವಾಗೆಯುಂ (ಅನಂಪು. ೨-೨೯ ವ): ಬೋಳೆಯುಂಬೈದಱಲೆ ರಾಯನ ತೋಳನೆಚ್ಚನು ಜಡಿವ ಜೋಡಿನ ಮೇಲೆ ಮುಱಿದವು ಬಾಣ (ಶುಪ್ಪಾ.ಳ. ೦೦-೨೭). ೧೧. ಒಂದು ಅಳತೆ: ನೆಲ್ಲ ಕಾಳು ೬೪ ಯೆಂಬುದು ಕರ್ಣಾಟಕದ ಜೋಡುವೊಂದು ಎನಿಸುವುದು ಯಿಂಥಾ ಜೋಡು ೧೨॥ ಗೆ ನೆಲ್ಲಕಾಳು ೮೦೦ (ವ್ಯವಹಾ. ಅನುಬಂಧ. ೦-೭-೯).

**ಜೋಡಾಗು** = ಜೊತೆಯಾಗು; ಒಂದಾಗು: ಅಂಬಿನ ಬಂಬಲೊಳಂ ಜೋಡಾಗಿ ಕೋಡನೂಱ ಕೆಡೆದ ಗಜವ್ರಜಂಗಳ ಡೊಣೆವುಗಳಿಂದೊಱಿತು ಪರಿವ ನೆತ್ತರ ಕಡಲ್ಗಳುಂ (ಪಂಪಭಾ. ೦೦-೦೦೬ ವ). **ಜೋಡುಮಾಡು** = ೧. ಜೊತೆಗೂಡಿಸು; ಸೇರಿಸು; ಹೊಂದಿಸು: ಸಂಧಿಮಾಡಿ ಕುರುಪುತ್ರರೊಳೆನ್ನನೆ ಜೋಡುಮಾಟ್ಪಿರೇ (ಪಂಪಭಾ. ೯-೨೪): ರಸಮಯಮಂ ಕೃತಿಯಂ ಸೇವಿಸಿ ವಿರಸಮನೆಯ್ದೆ ಜೋಡುಮಾಡುವ ವಿಬುಧಪ್ರಸರಂ (ಪುಷ್ಪಪು. ೧-೩೭). ೨. ಸೇರು; ಕೂಡು; ಒಟ್ಟಾಗು: ಕೂಡೆ ಗಱ ಗಟ್ಟಿತು ಚತುರ್ಬಲ ಜೋಡುಮಾಡಿತು ರಾಯನಿದಿರಲಿ (ಶುಪ್ಪಾ.ಳ. ೪-೩೭). ೩. ಸಮವೆಂದಂ ಪರಿಗಣಿಸು; ಹೋಲಿಸು.

[ ದೇ.೩ ತುಳು. ತೆಲು. ಜೋಡು ]

**ಜೋಡುಕಟ್ಟು₁** (ಕ್ರಿ). ಜೊತೆಮಾಡು; ಜೊತೆಗೊಳಿಸು: ಅವರಿಬ್ಬರೂ ದಸರೀಹಬ್ಬದಲ್ಲಿ ಕಾಳಗಕ್ಕೆ ಜೋಡುಕಟ್ಟಲ್ಪಟ್ಟರು (ಕಥಾಮಂ. IV, ೧).

[ ಜೋಡು + ಕಟ್ಟು₁ ]

**ಜೋಡುಕಟ್ಟು₂** (ನಾ). ಹೊಂದಾಣಿಕೆ; ಜೋಡಣೆ: ದಾಸಸಾಹಿತ್ಯದಲ್ಲಿ ಶಬ್ದಗಳ ಜೋಡುಕಟ್ಟು ಬಹು ಸುಂದರವಾಗಿದೆ (ಆಗದಾ. ೬೧).

[ ಜೋಡು + ಕಟ್ಟು₂ ]

**ಜೋಡುಕಾರ್ತಿ** (ನಾ). ಜೊತೆಗಾತಿ; ಸಂಗಾತಿ; ಗೆಳತಿ; ಸಖಿ: ತನ್ನ ಹೆವರೆಯದ ಗೆಡೆಯ ಜೋಡುಕಾರ್ತಿಯರೊಡನಾಡುತಾಡುತ (ರಾಮಾಶ್ವ. ೬೩-೨೮). [ ಜೋಡು + – ಕಾಱ + – ತಿ₁ (<–ಇತ್ತಿ) ]

**ಜೋಡುಖಾತೆ** (ನಾ). ಜಂಟಿ ಖಾತೆ; ಇಬ್ಬರು ಅಥವಾ ಹೆಚ್ಚು ಜನರು ಒಟ್ಟಾಗಿ ಇಟ್ಟ ಖಾತೆ: ಜೋಡುಖಾತೆ (Joint account) ವ್ಯವಹಾರಕ್ಕೆ ಅನುಕೂಲವಾಗುವಂತೆ ಒಬ್ಬರಕ್ಕಿಂತ ಇಬ್ಬರಾಗಲೀ ಹೆಚ್ಚಾಗಲಿ ಜನರು ಕೂಡಿಕೊಂಡು . . . ಜೋಡುಖಾತೆಗಳನ್ನಿಡಬಹುದು (ಬ್ಯಾಂಕಿಕ್ಕೆ. ೪೮).

[ ಜೋಡು + ಖಾತೆ₂ ]

**ಜೋಡುಗವಣೆ** (ನಾ). ಜೋಡಿಸಿದ ಕವಣೆ; ಜಂಟಿಯಂ ಕವಣೆ: ಜೋಡು[ಪಾಠಾಂ. ಕೋಡು, ತೋಡು]ಗವಣೆಯು ತೂಱುಗಲ್ಲಿನ ಝಡಿ ಝುಮ್ಮಿಡಿಸಿದವು ಗಗನವನು (ತೊರಗಾ. ೬-೦೧-೩).

[ ಜೋಡು + ಕವಣೆ₁ ]

**ಜೋಡುಗೂಡು** (ಕ್ರಿ). ಒಟ್ಟಿಗೆ ಸೇರು; ಜೊತೆಗೂಡು: ಗಾಡಿಕಾತಿಯರು ಗಣನೆಯಿಲ್ಲದೆ ಜೋಡುಗೂಡಿರುವರು ಕೂರ್ಮೆಯೊಳು (ಹದಿಬ. ೦-೦೬).

[ ಜೋಡು + ಕೂಡು₁ ]

**ಜೋಡುಗೊಡು** (ಕ್ರಿ). ಜೊತೆಕೊಡು; ಜೋಡಿಯಾಗು: ಇಷ್ಟ ಮಿತ್ರರಿಲ್ಲದ, ಬಂಧು ಬಾಂಧವರಿಲ್ಲದ, ಪರದೇಶವಾಸದಲ್ಲಿ ಸದಾ ನಾನು ಅವಳಿಗೆ ಜೋಡುಗೊಡಬೇಕೇ? (ಇಶ್ವ.ಳ. ೨೯೪). [ಜೋಡು + ಕೊಡು₁]

**ಜೋಡುದಗಲೆ** (ನಾ). ಜೊತೆಯಾದ ಕವಚ: ಇಱಿದರು ತಱಿದರು ಕೊಱಿದರು ಮೂಗನು ಜರಿಟೋಪಿ ಜೋಡುದಗಲೆಯ ಪರಿವಟ್ಟ ಮಾಡಿ (ಕಂನವಿ. ೩-೬೮). [ ಜೋಡು + ದಗಲೆ₁ ]

**ಜೋಡುದೀವಟಿಗೆ** (ನಾ). ಜೊತೆಯಾದ ದೀವಟಿಗೆ; ಜೋಡಿಯಾದ ದೀವಟಿಗೆ: ನೋಡ ಬನ್ನಿರೋ ಜನರು ಶ್ರೀಕೃಷ್ಣನ ಜೋಡುದೀವಟಿಗೆ ಸೇವೆ (ಪುರಂದ. ೨-೪೨ ಪಲ್ಲವಿ). [ ಜೋಡು + ದೀವಟಿಗೆ ]

**ಜೋಡುಮೇಳ** (ನಾ). ಜೊತೆ ಮೇಳ; ಜಂಟಿಮೇಳ: ಜೋಡುಮೇಳದ ಓಲಗದವರನ್ನು ಕರೆಸಬೇಡವೇ? (ಬಿಳುಮು. ೩೭).

[ ಜೋಡು + ಮೇಳ ( = ಮೇಲ)]

**ಜೋಡುವಕ್ಕಿ** (ನಾ). ಜೊತೆಯಾಗಿರುವ ಪಕ್ಷಿ; ಎಣೆವಕ್ಕಿ; ಚಕ್ರವಾಕ: "ಜಕ್ಕವಕ್ಕಿ . . . ಜೋಡುವಕ್ಕಿಯು ಶಾನದಕ್ಕುಮಾ ಚಕ್ರವಾಕಂ" (ಕಬ್ಬಮಂ. ೨೯): "ಪೊಣರ್ವಕ್ಕಿ . . . ಜೋಡುವಕ್ಕಿ, ಗೆಡೆವಕ್ಕಿ,

ಅವುಳ್ವಕ್ಕಿ — ಈ ೭ ಚಕ್ರವಾಕಂ " (ಕಕಸಾ. ೦೦-೨೦೦) ; ಕುಕಿಲ್ವ ಪಕ್ಕಿ ಗಾವರಿಪ ಮದಾಳಿಯಂಕುರಿಪ ಮೆಲ್ಲೆಲರೊಂದುವ ಜೋಡುವಕ್ಕಿ(ವ್ರಷಿ. ೯-೨೪): ಜೋಡುವಕ್ಕಿಗಳಿಲ್ಲೆಯಗಲದೆ ಕೂಡಿಯೊಂದಕ್ಕೊಂದು ಪ್ರೇಮದ (ರಘುವಂ. ೧೩-೩೧). [ ಜೋಡು + ಪಕ್ಕಿ$_1$ ]

**ಜೋಡುವಲೆ** (ನಾ). ಜೋಡಿಯಾಗಿ ಹೆಣೆಯಲ್ಪಟ್ಟ ಒಂದು ಬಗೆಯ ಬಲೆ: ತಿಣ್ಣವಲೆ ಜೋಡುವಲೆ ಹೊಸದಿಕ್ಕಣ್ಣವಲೆ . . . ವಿಂಧ್ಯಕನ ಕೂಡೆ (ಸಾಳ್ವಭಾ. ೩-೧೮). [ ಜೋಡು + ಬಲೆ$_1$ ]

**ಜೋಡುಶಬ್ದ** (ನಾ). ಜೊತೆ ಜೊತೆಯಾಗಿ ಬಳಸುವ ಶಬ್ದ: ಅರಿವೆ ಅಂಚಡಿ, ಕುಂದುಕೊರತೆ ಮುಂತಾದುವು ಜೋಡುಶಬ್ದಗಳು (ರೂಢಿ). [ ಜೋಡು + ಶಬ್ದ ]

**ಜೋಡುಸನಾದಿ** (ನಾ). ಜೋಡಿ ಓಲಗ ; ಜಂಟಿಯಾಗಿರುವ ನಾಗಸ್ವರ: ಹಳ್ಳಿಗಳ ವಾದ್ಯಗಳಾದ ಕರಡಿಮಜಲು, ಜೋಡು ಸನಾದಿ, ಕಾಳೆ ಮೊದಲಾದವುಗಳ ಘೋಷಣೆಗೂ ಅಲ್ಲಿ ಸ್ಥಾನವಿತ್ತು. (ಜಾಕ್ಕಮ. ೦೩). [ ಜೋಡು + ಸನಾದಿ ]

**ಜೋಡುಸವಗ** (ನಾ). ಎರಡು ಕವಚ ; ಜೋಡಿಕವಚ : ತಂತವ್ಮ ಕರಿತುರಗರಥಸಂತತಿಯನಿಳಿದು ಸೀಸಕ ಜೋಡುಸವಗಮಂ ತೊಟ್ಟು ಕೊಂಡು (ಸಮ್ಯಕ್ತ್ವ. ೮-೩೧). [ ಜೋಡು + ಸವಗ ]

**ಜೋಡೆ**(ನಾ).ಹಾದರಗಿತ್ತಿ; ಜಾರೆ: "ಸಿತಗೆ,ಜೋಡೆ, ಪಾಚ್ಚ, ಬೆದಗಾರ್ತಿ-ಈ ೪ ಜಾರೆಗೆ ಪೆಸರ್" (ಕಕಸಾ. ೧೯-೩೮೭); "ಜೋಡೆಯೆನೆ ಜಾರೆ" (ಕಕಶ. ೪೧) : ಅಲರ್ಗಣ್ಣೊಳ್ ಸ್ಮರನಿರ್ದನಕ್ಕುಮೆಡಪೋಪಾ ಜೋಡೆ ಕಾಮಂಗೆ ಕಾದಲೆಯಕ್ಕುಂ (ಪಂಪಭಾ. ೪-೮೪) ; ತನ್ನ ಪೆಂಡತಿ ಜೋಡೆಯೆಂದು ಸಂದೇಹಂಬಡುವಾತನವಳ . . . ಸಾಯೆ ಸದೆಬಡಿದು (ಪಂಚತಂ. ೭೪-೨೦); ಮಳಲೊಳಂ ನೀರ್ಮಾಡುವರ್ ಜೋಡೆಯರ್ (ಧರ್ಮಾಮೃ. ೩-೦೩೪); ಈ ಜೋಡೆ ಕನಲ್ದು ಬಂದು ತಪವಂ ತಳೆವಳ್ (ದಶಕು. ೮-೧೩) [ ಜೋಡ + - ಎ$_2$ ]

**ಜೋಡೆಗೆಯ್ತ** (ನಾ). ಜಾರೆಯ ನಡವಳಿಕೆ ; ಹಾದರ ; ವ್ಯಭಿಚಾರ : ನೋಡಿ ನಾಡಾಡಿಯಲ್ಲದಾಕೆಗಳ ಜೋಡೆಗೆಯ್ತಂಗಳಂ ಕಂಡು ಮುಗುಳ್ನಗೆ ನಗುತಂ (ಪಂಪಭಾ. ೪-೮೧ ವ). [ ಜೋಡೆ + ಕೆಯ್ತ$_1$ ]

**ಜೋಡೆತ್ತು** (ನಾ). ಒಂದು ಜೊತೆ ಎತ್ತು : ಮರುದಿನ ಜೋಡೆತ್ತಿನ ಬಂಡಿಯು ಆನೆಕುಪ್ಪಿ ಕಾಡಿಗೆ ಹೊರಟಿತು (ಕಶಕು. ೪-೩೦). [ ಜೋಡು + ಎತ್ತು$_2$ (<ಎಟ್ಟು$_1$) ]

**ಜೋಡೆಲುಬು** (ನಾ). ೧. ಜೋಡಿ ಎಲುಬು ; ಜೊತೆಯಾಗಿರುವ ಮೂಳೆ. ೨. ದಷ್ಟಪುಷ್ಟವಾದ ಮೈಕಟ್ಟು: ಹೊಸತಾಗಿ ಕಸುಬಿಗೆ ಇಳಿದುದು. ಜೋಡೆಲುಬಿನ ಹುಡುಗಿ (ಚಂಗಬ. ೦೭೪). 'ಒಂಟೆಲುಬು' ಪರಾ. [ ಜೋಡು + ಎಲುಬು (<ಎಲ್ವು) ]

**ಜೋತ** (ನಾ). ಕೈಜೋಡಿಸುವಿಕೆ ; ನಮಸ್ಕಾರ : ಮದನಾರಿಯುಪ್ಪತಿರಿಸಲವೂರ್ಗೆ ತಾಂ ಬಂದು ನಿಂದು ಕಿವಿವಿಡಿದು ಕೈಮುಗಿದು ಜೋತಂ [ಪಾಠಾಂ. ಜೊತ್ರಂ]ಪೊತ್ತು ತಂದೆ ನೀಂ ಹೆಚ್ಚು ಬಾಳೆಂದು ಹರಕೆಯನಿತ್ತು (ಅರಿರ. ದೇ. ೦೭೩-೦); ಮರಿ, ಸ್ವಾಮಿಗೆ ಜೋತ ಮಾಡಮ್ಮ (ರೂಢಿ). [ ←ತೆಲು. ಜೋತ ]

**ಜೋತಿ** (ನಾ). ೧. ದೀಪ ; ಬೆಳಕು : ಯತ್ವಲೋಪಕ್ಕೆ . . . ಜ್ಯೋತಿ–ಜೋತಿ (ಶಮದ. ೨೮೧ ಪ್ರಯೋ) ; ಜೋತಿ ಇದ್ದಲ್ಲಿ ಭೀತಿಯಿಲ್ಲ (ಗಾದೆ). ೨. ಆರತಿ : ಪ್ರೀತಿಯಲಿ ಲಿಂಗಂಗಳಿಗೆ ಹೊಸ ಜೋತಿ[ಪಾಠಾಂ. ಜ್ಯೋತಿ] ಗಳನೆತ್ತುವ (ಬಸಪು. ೧೯-೭೦). ೩. [ಯೋಗ] ಯೋಗಿಗಳಿಂ ಕಾಣುವ ಅಂತರಂಗದ ಬೆಳಕು : ಜೋತಿಯ ಧ್ಯಾನಬಲದಿಂದ ಸಕಲ ಸಿದ್ಧಿಗಳ ಪಡೆವನು ಯೋಗಿಯಾದವನು (ಗಗಚಾ. ೧೯-೩). [<ಸಂ. ಜ್ಯೋತಿಸ್]

**ಜೋತಿಕಾಷ್ಠ** (ನಾ). ಒಂದು ಬಗೆಯ ಮೂಲಿಕೆ : ಚಿತ್ರಮೂಲ ತಳಕ ಜೋತಿಕಾಷ್ಠ . . . ಯಿವ ಸಮಾನಂಗೊಂಡು ಲೇಪವಂ ಮಾಡಲ್ (ವಾಚಾಚಿ. ೧೩-೧). [ ಜೋತಿ$_1$ + ಕಾಷ್ಠ$_2$ ]

**ಜೋತಿಷ್ಕ** (ನಾ). [ಜೈನ] ಭವನವಾಸಿ, ವ್ಯಂತರ, ಜ್ಯೋತಿಷ್ಕ ಮತ್ತು ಕಲ್ಪವಾಸಿ ಎಂಬ ನಾಲ್ಕು ಬಗೆಯ ದೇವತೆಗಳಲ್ಲಿ ಒಂದು ಪಂಗಡ ; ಸೂರ್ಯ, ಚಂದ್ರ ಗ್ರಹಗಳೇ ಮೊದಲಾದ ಜ್ಯೋತಿಷ್ಕಲೋಕದಲ್ಲಿರುವ ದೇವತೆಗಳು : ವಾನಬ್ಯಂತರರುಂ ಚಂದ್ರಾದಿತ್ಯರೆಂಬಿರ್ಬ ಜೋತಿಷ್ಕರುಂ . . . ಚತುರ್ನಿಕಾಯ ದೇವನಾಯಕರುಮಲ್ಲವೊಂದಾಗಿ (ಸುಕುಮಾ. ೮-೬೬ ವ). [ <ಸಂ. ಜ್ಯೋತಿಷ್ಕ ]

**ಜೋತಿಷ್ಮತಿ** (ನಾ). ೧. ಬೆಳಕುಳ್ಳುದು. ೨. ಒಂದು ಬಗೆಯ ಸಸ್ಯ ; ಕಂಗುಂಗೆ : ಬೆಕ್ಕಿನ ಬುಡ್ಡೆಗಿಡ . . . ಜೋತಿಷ್ಮತಿ, ಚಿಟಕಿಹಂಬು, ಮಿಂಚುಬಳ್ಳಿ, ಕನಕಾಯ (ಮೃಶಿ. ೦೭-೩೦೮). [ <ಸಂ. ಜ್ಯೋತಿಷ್ಮತೀ ]

**ಜೋತೀಶ್ವರ** (ನಾ). ಬೆಳಕಿನ ಒಡೆಯ; ಜ್ಞಾನದ ಅಧಿಪತಿ: ಯೋಗಿಗಳ ಮನದ ಕೊನೆಯ ಜೋತೀಶ್ವರನಂ ವೃಷಭನ ರೂಪಾಗಿ ಯಜಮಾನನಂ ಆಚಾರ್ಯನಂ ತಾನೆಯಾಗಿ (ಎಕ. XXIII, ೩೦-೬ : 1265). [ ಜೋತಿ + ಈಶ್ವರ (<ಈಸರ) ]

**ಜೋತು$_1$** 'ಜೋಲ್$_1$' ಪರಾ.

**ಜೋತು$_2$** (ನಾ). ನೇತಾಡುವಂತೆ ತೂಗುಬಿಟ್ಟಿರುವ ವಸ್ತು; ಲೋಲಕ: ಈ ರೀತಿಯ ಸಾಮಗ್ರಿಗೆ ಜೋತು (pendulum) ಎನ್ನುತ್ತಾರೆ (ಪಾಲಶ್ರ. I, ೩೨೦). [ <ಜೋಲ್$_1$ ]

**ಜೋದ$_1$**(ನಾ). ಹೋರಾಟ ಮಾಡುವವನು; ಸೈನಿಕ: ಜೋದರಿಸುವಂಬಿನ ಬಲ್ಸರಿ ತಿಣ್ಣಮಾಗಿ (ಪಂಪಭಾ. ೧೦-೯೨) ; ಜೋದರ ಬಾಣಮಗ್ನಿಬಾಣಂ ಕರಚಕ್ರ ತಮೋರಿಚಕ್ರಮೆನಿಸಿದುದು (ಗದಾಯು. ೪-೩೭) ; ಪೋರ್ವ ಪದದೊಳ್ ಜೋದರ್ಕಳೆಕ್ಕೆಯಿಂ ತೆಗೆದಾರ್ದೆಚ್ಚ ಬಹೂಗ್ರ ನಿಷ್ಠುರ ಮಹಾನಾರಾಚಮುರ್ಚುತ್ತಿರಲ್ (ನೇಮಿಪು. ೧೦-೦೭೪) : ಜೋದರುಜಿಕ್ಕಿಮುಜಿದು ಕದನದ ಗಾಯದಲಿ ನೊಂದೊಜಲಿ ಬಾಯಲಿ ಬೆರಳನಿಟ್ಟುದು ವೈರಿ ಪಾಯದಳ (ನಳಚ. ೯-೩೪) ; ಪಾಂಡವರ ಕಡೆಯ ಜೋದರು ಭೀಷ್ಮನ ಮೈಗಾವಲ ದಳವನ್ನು ಮುತ್ತಿ ಭಂಜಿಸಿದರು (ಭೀಷ್ಮಚ. ೦೮೧). [ <ಸಂ. ಯೋಧ ]

**ಜೋದ$_2$** (ನಾ). ಆನೆಯ ಸವಾರ; ಮಾವಟಿಗ : "ಜೋದನೆಂದು ಮಾವಂತಂ" (ಕಕಸಾ. ೦೭-೩೪೦) ; "ಜೋದರ್ಕಳೊಳ್ ಮಾವತರ್" (ಕರ್ಣಾನಿ. ೪೯) : ಜೋದರ್ ಜೋದರೂಳಾನೆಯಾನೆಯೊಳಗುರ್ವಪ್ಪನ್ನೆಗಂ ಕಾದೆ (ಪಂಪಭಾ. ೦೦-೯೩) ; ಮುರರಿಪುರಾಮರ್ ಸುಟಿದರ್ ಕರಿಶಿಕ್ಷಕರಶ್ವಶಿಕ್ಷಕರ ಜೋದರ ಮಲ್ಲರ ಮಾವಂತರ . . . ಕೇರಿಗಳೊಳ್ (ಜಗವಿ. ೬-೨೭) ; ಏಜಿದ ಸಾರಥಿಯ ಮಿಜಿ ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ (ಗಿರಿಕ. ೬-೩೩ ವ) ; ಕರಿ ಕೆಡೆಯ ಕಾಲಿನಲಿ ಜೋದರು ತೆರಳದೆಚ್ಚಾಡಿದರು (ಕುವ್ಯಾಳ. ೦೩-೨೮) ; ದಂತಿಶಿರವ ವಿಭಾಗಿಸಿ ಕೊರ್ಗಣೆಯಿಂದೆ ತಾಗಿಸಿ ಜೋದರ ತಲೆಯನಾಗಸಕಾಗಿ ಸಾಗಿಸಿದನು (ಮೋಹತ. ೩೪-೭) : ಜೋದರ ಗೋಟಾಯಿಲರ ರಥಿಕರ . . . ಗಡಣಂ ನೆರೆದಿರೆ (ಅಮೂಕ್ಕ. ೩೦-೯): [ <ಸಂ. ಯೋದ ? ]

**ಜೋದಕ** (ನಾ). ಯುದ್ಧ ಮಾಡುವ ವೀರ : "ಜೋದಕ-ಯೋಧಕ = ಕಾದಾಡುವವ" (ತದ್ಭಕೋ. ೩೦). [ <ಸಂ. ಯೋಧಕ ]

**ಜೋದಗಾಳೆಗ** (ನಾ). ಆನೆಯ ಸವಾರರ ಕದನ ; ಮಾವಟಿಗರ ಹೋರಾಟ : ಜೋದಗಾಳೆ[ಪಾಠಾಂ. ಳ] ಗದಿಂದೆ ಬಳಿಕಿರದು ಸೀಳಾಗಿ ಮೇದಿನಿಗೆ ಬೀಳ್ವಂತಿಭವನೆಚ್ಚವನ ಧನುಶ್ಛೇದಮಂ ಮಾಡಲು (ಜೈಮಿಭಾ. ೨೦-೨೭). [ ಜೋದ$_2$ + ಕಾಳೆಗ ]

**ಜೋದಸಂತತಿ** (ನಾ). ಮಾವಟಿಗರ ಸಮೂಹ: ಕುದುರೆರಾವುತರು ಜೋದ ಸಂತತಿ ಮದಗಜವ್ರಜವತಿರಥಾವಳಿ ಪ ದ ಚ ರ ರು ಚತುರಂಗಬಲ ವೊಂದುಳಿಯದಿದಱೊಳಗೆ (ಶಬ್ದಾಗ. ೨-೪೦). [ ಜೋದ$_2$ + ಸಂತತಿ ]

**ಜೋದಾವಳಿ** (ನಾ).=ಜೋದಸಂತತಿ: ಬಳಿಕ ನಂಬುಗೆಗೊಂಡು ಜೋದಾವಳಿ ಬೇಗ ತಳುವದೋಡಿತು ದೆಸೆದೆಸೆಗೆ (ಶಂಸವಿ. ೧೫-೦೦೧).
[ ಜೋದ$_2$ + ಆವಳಿ$_1$ (= ಆವಲಿ) ]

**ಜೋದಾಳ್** (ನಾ). ಯುದ್ಧಮಾಡುವವನು: ಮೇಲೆ ಕವಿಕವಿದೆಸುವ ಜೋದಾಳಾಳಿವಿಲು ಕೆದಱಿದವು ಬೀಸರಿಗೋಲನದ್ಭುತ ಸಮರವಾಯಿತು ಮತ್ತೆ ಪಾರ್ಥಂಗೆ (ಕುವ್ಯಾದ್ರೊ. ೬೦೩. ೨೮೯ ಪ.). [ ಜೋದ$_1$ + ಆಳ್$_3$ ]

**ಜೋನಗ** 'ಜೋನೆಗ' ನೋ.

**ಜೋನಾಯ್** (ನಾ). ಒಂದು ಬಗೆಯ ನಾಯಿ ; ಜೊಲುನಾಯಿ (?): ಕೊರಳೊಳಗಿಕ್ಕಿದ ಮಾಲೆ ಚಂದನದಣ್ಪುವೆರಸಿ ರನ್ನದ ವಿಷ್ಟರದೊಳು ಸ್ಥಿರವಾಗಿ ಕುಳಿತುಸಿರುವ ಜೋನಾಯುನು ಧ ರ ಣೀ ಶ ಕಂಡುದಱಿಂದ (ಗೋಮಟೇ. ೧೫-೫೮). [ ಜೋ? + ನಾಯ್ ]

**ಜೋನಿ** 'ಜೋನೆ' ನೋ.

**ಜೋನಿಗರೆ** (ಕ್ರಿ). ರಸವನ್ನು ಒಸರು: ಫೇನ ಪಿಂಡೆಡೆಗೊಂಡ ಜಾಹ್ನವಿಯೊ ತನಿಬಿಂಕ ಜೋನಿಗರೆದುಕ್ಕಿಳಿವ ಸುರತರುವೋ (ಪಠಕು. ೩-೩೫).
[ ಜೋನಿ (< ಜೋನೆ) + ಕರೆ$_2$ (< ಕಱೆ$_1$) ]

**ಜೋನಿಬೆಲ್ಲ** 'ಜೋನೆಬೆಲ್ಲ' ನೋ.

**ಜೋನುಗ** 'ಜೋನೆಗ' ನೋ.

**ಜೋನೆ, ಜೋನಿ** (ನಾ). (ಬೆಲ್ಲ ಮುಂತಾದ ವಸ್ತುಗಳು) ಕರಗಿ ದ್ರವ ರೂಪಕ್ಕೆ ಬಂದಿರುವ ಸ್ಥಿತಿ ; ಜಿನುಗಿರುವ ಸ್ಥಿತಿ : ಬೆಲ್ಲ ಜೋನೆಯಾಗಿದೆ (ರೂಢಿ). **ಜೋನಿ**: ಆ ಬಿಸಿ ಜಾಗದಲ್ಲಿ ಬೆಲ್ಲದ ಜೋನಿಯನ್ನು ಇಟ್ಟು, ನಾಯಿಯನ್ನು ಕಂಬದಿಂದ ಬಿಚ್ಚಿ ಅದರ ಬಳಿ ಕಟ್ಟಿದನು (ಮುಳಿಮ. ೧೫೦) : ಮೊಸರಿಗೆ ಸ್ವಲ್ಪ ಸಕ್ಕರೆ, ಜೇನು ಅಥವಾ ಬೆಲ್ಲದ ಜೋನಿಯನ್ನು ಸೇರಿಸಿ ಊಟವಾದ ಮೇಲೆ ಕುಡಿಯಲು ಚೆನ್ನಾಗಿರುತ್ತದೆ (ಅಡುಶಾ. ೮೨) : ಅದರಲ್ಲಿನ ಕಶ್ಮಲವನ್ನು ಆರಿಸಬೇಕು, ಅದನ್ನು ಜೋನಿಯಾಗಿ (Syrup) ಮಾಡಬೇಕು (ಬಾಲಪ್ರ. II, ೬೪೯).
[ ದೇ.I ತುಳು. ತೆಲು. ಜೋನೆ ]

**ಜೋನೆಗ, ಜೋನಗ, ಜೋನುಗ** (ನಾ). ೧. ಒಂದು ದೇಶದ ಹೆಸರು: ಜಿನ ಜೋನೆಗ ಅರಿವಾಣ ಕೊಂಕಣ . . . ಘೋಡಾಮುಖವೆಂದು ಹೇಳಲು ಪಡುತ್ತಂವಿದ್ದಂಥಾ ರಾಷ್ಟ್ರಾಂತರಗಳಲ್ಲಿ (ಎಕ. V, ಬೇಲೂರು. ೩-೯೨ : 1397) : ಲಾಳ ಜೋನೆಗ ಜೇನ . . . ವರಾಳ ವರದೇಶಾಧಿಪತಿಗಳು ಬಂದರೊಗ್ಗಿನಲಿ (ಶಬ್ದಾಸ. ೬-೨) ; ನಡೆದುದು ಭೂರಿಬಲ . . . ಜೋನೆ [ಪಾಠಾಂ. ನ]ಗ ವಿಂಧ್ಯ ಬೋಟಕ ಪಾರಶಿಕ ಸಾಂಬ್ರಾಣಿ ಹುರುಮಂಜಿಗಳ ಬ ಳಿ ವಿ ಡಿ ದು (ತೊರರಾ. ೪-೯-೪) ; ಬಂಗಾಳ ಚೈನ ಜೋನೆಗ[ಪಾಠಾಂ. ಜೋಗಿ] ಸಗರ . . . ಕಾಂಬೋಜದೇಶದ ಸಕಲ ಶರಣರೈತರುತಿರ್ದರು (ಚಬಪು. ೬-೪೯). ೨. ಆ ದೇಶದ ನಿವಾಸಿ : ತಲೆದಱಿಕೊಂಡ ಜೋನೆಗರ ಜಂಗುಳಿಯಂತೆ ಎಲೆಗಳೆದು ಬತ್ತಲಿಸಿ ನಿಂದ ತ ರು ಕು ಲ ದ ಂ ತೆ (ವಾಗೀರ. ದೇ. ೨೫೪-೧೫). ೩. ತುರುಕ: "ಜೋನೆಗ–ಯವನಕ=ತುರುಕ" (ಕದ್ಯಕೋ. ೧೫). **ಜೋನಗ**: ೨. ಲೋಹಿತನೆಂಬ ವೀರನಂ ಗೆದ್ದು ಜೋನಗ ಜೀನಬೊಂಟರಂ ಅಪ್ಪಳಿಸಿ (ತುರಂಗ. ೦೯-೩೦). **ಜೋನುಗ**: ೨. ಜಾಣಾನ ಕಿನ್ನಾರಿ ಜಾತ್ರೆಗೆ ನಿಲುಭಾರ ಜಾಣ ನನ್ನಯ್ಯ ಮರುವಿನ ಕಿನ್ನಾರಿ ಜೋನುಗರಂಗಡಿಗೆ ನಿಲುಬಾರ (ಹಳ್ಳಿಯು. ೯೦).
[ < ಪ್ರಾ. ಜೋಣಯ./ಸಂ. ಯವನಕ ]

**ಜೋನೆಗಪಳಿ** 'ಜೋನೆಗವಳಿ' ನೋ.

**ಜೋನೆಗವಳಿ, ಜೋನೆಗಪಳಿ** (ನಾ). ಯವನರಿಂದ ತಯಾರಿಸಲ್ಪಟ್ಟ ಬಟ್ಟೆ : ಪಳದಿಯ ಜೋನೆಗವಳಿಯ ಪಲ ಬಗೆಯ ಪಲ್ಲಣದ ಪಕ್ಕಜಲ್ಲಿಯ . . . ಪರುಠವಣೆ ಪಸರಿಸೆ (ರಾಜಶೇ. ೬-೦೧ ವ). **ಜೋನೆಗಪಳಿ**: ಹಳದಿ ಪಾರಿಯ ಪಚ್ಚೆ ಜೋನೆಗಪಳಿ ಸುವರ್ಣಾವಳಿಯ ಸಂಧ್ಯಾವಳಿಯುದಯರಾಗದಲಿ ರಚಿಸಿದ ಹಕ್ಕರಿಕ್ಕೆಗಳ (ಶಬ್ದಾಭೀ. ೪-೪೯).
[ ಜೋನೆಗ + ಪಳಿ$_5$ (< ಪಟ$_7$) ]

**ಜೋನೆಬೆಲ್ಲ, ಜೋನಿಬೆಲ್ಲ** (ನಾ). ನೀರೊಡೆದು ಜಿಗಿಯಾದ ಬೆಲ್ಲ ; ಜಿನುಗುಬೆಲ್ಲ; ದ್ರವರೂಪದಲ್ಲಿರುವ ಬೆಲ್ಲ: ಜೋನೆಬೆಲ್ಲದ ರುಚಿ ಸ್ವಲ್ಪ ಹುಳಿ (ರೂಢಿ). **ಜೋನಿಬೆಲ್ಲ**: (+).
[ ಜೋನೆ + ಬೆಲ್ಲ ]

**ಜೋಪಕ** (ನಾ). ರಹಸ್ಯ; ಗುಟ್ಟು: ಆ ಪರಮಗುರುಲಿಂಗ ಜಂಗಮಾರ್ಚನೆಗೈವ ಜೋಪಕವುದೆಂತೆನೆ ವಿಲಾಸಮನನಾಗುತಂ ವ್ಯಾಪಕ ವಿರುದ್ಧನಾಗಿರಬೇಕು ಭಕ್ತಕುಲವೀ ಪರಿ ವಿರಕ್ತಿವಡದು (ಲಿಂಗಪು. ೧೪-೯).
[ < ಸಂ. ಗೋಪಕ ]

**ಜೋಪಡಿ** 'ಜೊಂಪಡಿ' ನೋ.

**ಜೋಪನ** 'ಜೋಪಾನ' ನೋ.

**ಜೋಪಾನ, ಜೋಪನ** (ನಾ). ೧. ಆರೈಕೆ; ಸಲಹುವಿಕೆ; ಕಾಪಾಡುವಿಕೆ; ರಕ್ಷಣೆ: "ಜೋಪಾನ – ಗೋಪನ = ಕಾದಿಡುವಿಕೆ" (ಕದ್ಯಕೋ. ೧೫); ಅಟ್ಟವಾತದ ತೈಲವಂ ತಾಂ ಬೊಟ್ಟಿಡಿಸಿ ಲೇಪಿಸುತ ಪಥ್ಯಂಗೊಟ್ಟದಕೆ ತಕ್ಕನಿತು ಜೋಪಾನವನದಾಚರಿಸಿ [ಪಾಠಾಂ. ಜೋಪಾಸನವನಾಚರಿಸಿ] (ಬಸಪು. ೧೫-೮) ; ಚಂದ್ರಣ್ಣ . . . ಕಕ್ಕನ ಜೋಪಾನದಲ್ಲಿ ಬೆಳೆದ (ಚಿನ್ನುಹಿಂ. ೨೨). ೨. ಎಚ್ಚರಿಕೆ ; ಅವಧಾನ ; ಜೋಕೆ ; ಜಾಗರೂಕತೆ : ಜೋಪಾನ ತಪ್ಪದೆ ರಾಜಮಂದಿರವ ಸರ್ಪ ನಿಧಾನವ ಕಾಯ್ವಂತೆ ಕಾದಿರೆಂದಪ್ಪಣೆಗೊಟ್ಟ ರಕ್ಕಸಗೆ (ಕೋಹಶ. ೧೩-೦೦) ; ಅಡವಿ ಗಿಡಗಳ ಕಡಿವ ಕೊಡಲಿಯ ಮಡಗಿ ಫಲವೇನೆಂದು ಅಲ್ಲಲ್ಲಿಡದೆ ಜೋಪಾನದಲಿ ಮಡಗುವುದಿನ್ನೂ ಧೇನುವನೂ (ಪಚುಥಾ. ೫-೪೭) : ದವಸ ಧಾನ್ಯ ಮುಂತಾದ ಸಾಮಾನವನ್ನು ಜೋಪಾನದಲ್ಲು ಇರಿಸತಕ್ಕ ಬಗ್ಗೆ (ರಾಜೇಂದ್ರ. ೩೯). ೩. ಎಚ್ಚರಿಕೆಯನ್ನು ಸೂಚಿಸುವ ಪದ : ಬಯಸಿ ನೆನೆದುದಿದಱೊಳಗಿರ್ಪುದು ಜೋಪಾನ ಜೋಪಾನ ಜೋಪಾನವಿನ್ನು ನಾಂ ಪೋಪೆನು (ಸಿದ್ಧೇಪು. ೧೪-೩೨): ಜೋಪನ ಜಾರಿ ಬಿದ್ದೀಯ (ರೂಢಿ). **ಜೋಪನ**: ೧. ದೇವಿಯನು ಜೋಪನವ ಗೈಯುತ ದೇವ ಬಿಲುದುಡುಕೇಳು (ರಾಮಾಸಂ. ೨-೪-೩೯).

**ಜೋಪಾನಮಾಡು** = ಸಲಹು ; ಪೋಷಿಸು ; ಸಾಕು : ನನ್ನನ್ನು ನಮ್ಮಪ್ಪನ ಸೋದರತ್ತೆಯೋ . . . ಜೋಪಾನಮಾಡಿದ್ದಳು (ಮೇದಿಮ. ೨).
[ < ಸಂ. ಗೋಪನ./ತುಳು. ಜೋಪಾನ, ಜೋಪನೆ ]

**ಜೋಪಾನಗೆಯ್** (ಕ್ರಿ). ಜೋಪಾನ ಮಾಡು ; ಎಚ್ಚರಿಕೆಯಿಂದ ನೋಡಿಕೊಳ್ಳು : ಈ ಪಾಟಿಯ ಚಕ್ರಶಕ್ತಿಯಿಂದಸುರಚಮೂಪರ ಶಿರವ ಸಂಡಾಡಿ ಜೋಪಾನಗೆಯ್ದು ಜಗವ ರಕ್ಷಿಸುವ ಮಹೀಪತಿ ಶರಣು (ಮೋಹಶ. ೨೯-೩೧). [ ಜೋಪಾನ + ಕೆಯ್$_1$ ]

**ಜೋಪಾಪಿ** (ನಾ). ಕೈಲಾಗದವನು; ನಿಷ್ಪ್ರಯೋಜಕ: ಆ ಗೆಳೆಯನ ಹತ್ತಿರ ನಾಲ್ಕು ದುಡ್ಡು ಬಿಕ್ಕೆ ಬೇಡಿ ಈ ಗೆಳೆಯನ ಹತ್ತಿರ ಒಂದಿಷ್ಟು ಬೇಡಿ, ಈ ಜೋಪಾಪಿಗಾಗಿ ಬೇಕಾಗುವ ಜೀನಸು ತರಬೇಕಾಗಿದೆ (ಚೀನಥಾ. ೨೯೭): ನಮ್ಮ ಬಾಬೂ . . . ಜೋಪಾಪಿಯಾಗಿದ್ದಾನೆ (ಕಳ್ತಧ್ವ. ೨೩೭).
[ ?./ ತೆಲು. ಜೋಪಾಪ ]

**ಜೋಪಾಯನ** (ನಾ).=ಜೋಪಾನ ೨ : ಕುಚಗಳ್ಗೆ ತಾಪಸರ ದಿಟ್ಟಿ ಬಳಿ ಕಾದವುದೆನುತ್ತೊಡನೆ ಜೋಪಾಯನಂಗೊಳಿಸಿ ದೈಚಿಟ್ಟಳು (ಪಠಕು. ೮-೦೭).
[ < ಸಂ. ಗೋಪಾಯನ ]

**ಜೋಪಾಸನ, ಜೋಪಾಸನೆ** (ನಾ). ಜೋಪಾನ ; ಆರೈಕೆ ; ಪೋಷಣೆ : ಯಾವ ನಾರೀಮಣಿಯು ಜೋಪಾಸನದಿಂದಾಗಿ, ಅನುಗ್ರಹದಿಂದಾಗಿ ಈ ನಮ್ಮ ಕುಮಾರನು ಪುನರ್ಜನಿಸಿ ಬರಲಿರುವನೋ (ನಾಗಕಾ. ೬೮) ; ಮಕ್ಕಳನ್ನು ನನ್ನ ಪ್ರಾಣವಿರುವ ತನಕ ಜೋಪಾಸನ ಮಾಡುತ್ತೇನೆ (ಒಡ್ಡಿಉ. ೬೫). **ಜೋಪಾಸನೆ:** ಇದುವರೆಗೂ ಜನರು ಹುಟ್ಟಿದ ಮಕ್ಕಳ ಜೋಪಾಸನೆಯನ್ನು ಅಷ್ಟು ಲೆಕ್ಕಿಸಿರಲಿಲ್ಲ (ಸಾಹಿಸಂ. ೦೩೦); ಈ ರೀತಿಯಾಗಿ ಆಕೆಯ ಜೋಪಾಸನೆಯಲ್ಲಿ ನಮ್ಮ ದಿನಗಳು ಚೆನ್ನಾಗಿ ಕಳೆದುವು (ಶ್ರೀಕಾಂತ. ೩೦). [←ಮರಾ. ಜೋಪಾಸನಾ, ಜೋಪಾಸಣೇ./ತುಳು. ಜೋಪಾಸನ]

**ಜೋಪಾಸನೆ** 'ಜೋಪಾಸನ' ನೋ.

**ಜೋಬ** 'ಸೋಂಬ' ನೋ.

**ಜೋಬದ್ರ** (ನಾ). ಸೋಮಾರಿ ; ಆಲಸಿ : ಅವನೊಬ್ಬ ಜೋಬದ್ರ (ಜಾಮ). 'ಜೋಬದ್ರತನ' ಪರಾ. [ <ಜೋಬ ]

**ಜೋಬದ್ರತನ** (ನಾ). ಸೋಮಾರಿತನ; ಆಲಸ್ಯ : ಅವನ ಬೋರ್ಡ್ ಸ್ಕೂಲು ವಿದ್ವತ್ತು ಎಂದರೆ, ಒಂದು ತರಹದ ಜೋಬದ್ರತನ (ಸ್ವಾಮಿಸ್ನೇ. ೧೨೮). [ ಜೋಬದ್ರ + – ತನ ]

**ಜೋಬದ್ರೆ** (ನಾ). ಆಲಸ್ಯದಿಂದ ಕೂಡಿರುವವಳು : ಜೋಬದ್ರ ಥರ ಕೂತಿರಬೇಡ (ಜಾಮ). [ ಜೋಬದ್ರ + – ಎ$_2$ ]

**ಜೋಬು** 'ಜೇಬು' ನೋ.

**ಜೋಮಾಲೆ** (ನಾ). ಕೊರಳಲ್ಲಿ ಧರಿಸುವ ಒಂದು ಬಗೆಯ ಉದ್ದವಾದ ಸರ : "ಲಂಬನಂ . . . ಲಲಂತಿಕಾ – ಕೊರಳಲ್ಲಿ ನೇತಾಡುವ ಒಡವೆ. ಜೋಮಾಲೇ ಸರ, ಕಂಠೀಸರ, ಮಣಿಗಳ ಹಾರ ಮುಂತಾದದ್ದು" (ಸಿದ್ಧಾಂತಿ. ೦೭೩); ಕನಕನಿಮ್ಮಗೆಯುಂ ಮನೋಹರ ಕನಕಜೋಮಾಲೆಗಳ ರೂಪವನನುಕರಿಸಿ . . . ತೋರ್ಪಂತೊಪ್ಪಿತು (ಅಜಾಪಿ. ೧೬-೨೧); ಸಣ್ಣ ಕಂದಮ್ಮಗಳ ಕಣ್ಣೀನ ಕವಡೀಯ ತಣ್ಣಾನ್ನ ಜೋಮಾಲೆ ಕೊರಳೊಳಗಿತ್ತೋ (ನಾದಲೀ· ೩೮-೯) ; ಬಹಲೆ ಭರ್ಜಿಯಿಂದ ಹೊಡೆದವರಿಗೆ ಕಾಲುಗಗ್ಗರ, ಜೋಮಾಲೆ, ಈ ಮೇರೆಗೆ ಇನಾಂ ಕೊಡುತ್ತೇವೆ (ಚಿತ್ರಪಾ. ೮೦). [ <ಜೋಲ್$_1$ + ಮಾಲೆ ]

**ಜೋಮಾಲೆಸರ** (ನಾ). = ಜೋಮಾಲೆ : ಆಕೆಯ ಕೊರಳಿಗೆ ಕೊಕ್ಕೆತಾತಿ, ಸರಪಣಿ, ಕರಿಮಣಿಸರ ಮತ್ತು ಜೋಮಾಲೆಸರಗಳನ್ನು ಸೂಡಿದಳು (ಹುರಿಹಾ. ೨೦೦). [ ಜೋಮಾಲೆ + ಸರ$_6$ ]

**ಜೋಮು$_1$** 'ಜೊಂಪು$_1$' ನೋ.

**ಜೋಮು$_2$** 'ಜುಮ್ಮು$_3$' ನೋ.

**ಜೋಮುಹಿಡಿ** 'ಜುಮ್ಮುಹಿಡಿ' ನೋ.

**ಜೋಯಿಸ, ಜೋಇಸ** (ನಾ). ೧. ಗ್ರಹಗತಿಗಳನ್ನು ತಿಳಿಸುವ ಶಾಸ್ತ್ರ; ಜ್ಯೋತಿಶ್ಶಾಸ್ತ್ರ : ಗಣಿತಂ ಜೋಯಿಸಚ್ಛನ್ದ . . . ಬಲ್ಲ ಶಬ್ದ ಸಂಸ್ಕಾರವುಳ್ಳಾತ ನಾಗದೇಸಿಗಗ್ಗೆ . . . ಮತ್ತರಿರ್ಪ್ಪತ್ತೈದು (ಎಇ. XX, ೬-೨೫ ; 1012) : ಶಕುನಂ ಜೋಯಿಸಮಾದಿಯಾಗಿ ಪೆಱವುಂ ವಿಜ್ಞಾನ ವಿದ್ಯಾವಿಶೇಷ ಕಳಾಕಳಾಪದೊಳಾಂ ಸಮಗ್ರನೆನೆ (ಸುಕುಮಾ· ೩-೨೧) : ಜೋಯಿಸಮನೋದುವಂ ಜೋಯಿಸಿಗಂ (ಶಬ್ದಾನು. ೨೯೨ ಪ್ರಯೋ) : ಹರಿಶರ್ಮನ ಜೋಯಿಸವನ್ನು ಎಲ್ಲರೂ ಹೊಗಳಿದರು (ಕಸವಿ. ೪). ೨. ಜ್ಯೋತಿಷ್ಯವನ್ನು ಬಲ್ಲವನು; ಜ್ಯೋತಿಷಿ: "ಜೋಯಿಸ (ಜೋತಿಸ, ಜೊಯಿಸ) – ಜ್ಯೋತಿಷ" (ತದ್ಭಕೋ. ೦೬) : ಮಟಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯ ನೀರನಡಕಿ ನೀರ್ವೊಯ್ದನೆಂಬ ಕಥೆಯಂತೆ (ಪಂಚತಂ. ೦೨೭-೨) : ಜೋಯಿಸನ ಮಗಳ್ [ಪಸೆಯ ಮೇಲೆ] ರಂಡೆಯಾದಳ್ (ಧರ್ಮಾಮೃ. ೦೨-೨೮) : ನೆಲೆದಪ್ಪಿದುದು ಗ್ರಹಮಾಲೆ ತಾ ರಾ ರಾ ಸಿ ಜೋಯಿಸ[ಪಾ ಕಾಂ. ತಿಷ]ರೋದು ಹುಸಿಯಾಯ್ತು (ಕುಮಾರವ್ಯಾ. ೧೯-೦೯) : ಬಿಸರುಹಗಂಧಗಂಧಿನಿ ಕರೆಸಿದಳು ಜೋಯಿಸರ (ಮೋಹತ. ೨೩-೫೭) : ಬಳಿಕ ಜೋಯಿಸರಂದು ಸುಮುಹೂರ್ತದೊಳು ಲಗ್ನಗಳ ಪೇಳೆ (ಕಂನವಿ. ೨೦-೭). **ಜೋಇಸ :** ೨. ಜೋಇಸ ಗೋವಿಂದ ದೇವಂಗೆ ಆಲೂರಲ್ಲಿ ಕೊಂಡಿಱುವನ ಮತ್ತ ೪ (ಕಶಾಲ್ಶಾ. ೨೦೬-೩೧ : 1278). [ <ಸಂ. ಜ್ಯೋತಿಷ ]

**ಜೋಯಿಸಚಕ್ರಿ** (ನಾ). ಜ್ಯೋತಿಶ್ಶಾಸ್ತ್ರಜ್ಞರಲ್ಲಿ ಶ್ರೇಷ್ಠನಾದವನು,– ಅಗ್ರಗಣ್ಯ : ಎಸೆವ ಮಟಗಾಲವಂ ಜೋಯಿಸಚಕ್ರಿಯೊಳ್ . . . ಭಾವಿಸಿ ಪೇಳ್ದಂ (ಅಭಿಮ. ೦-೩೫). [ ಜೋಯಿಸ + ಚಕ್ರಿ ]

**ಜೋಯಿಸಮಾತು** (ನಾ). ಜ್ಯೋತಿಶ್ಶಾಸ್ತ್ರಜ್ಞನ ನುಡಿ ; ಜೋಯಿಸನ ಮಾತು : ಜೋಯಿಸಮಾತ ಕೇಳ್ದಿನ್ನ ತಂದೆತಾಯ್ಗಳು . . . ಕರೆದರು (ಶ್ರೀಪಾಲ. ೫-೮೨). [ ಜೋಯಿಸ + ಮಾತು$_1$ ]

**ಜೋಯಿಸಿಗ** (ನಾ). =ಜೋಯಿಸ ೨ : "ಸಾಂವತ್ಸರಃ, ಜ್ಯೋತಿಷಿಕಃ . . . ಈ ೮ ಜೋಯಿಸಿಗಂ" (ಹಲಾಯು. ೬೭-೨೪೯); ಆ ಪೊತ್ತುಂ ಜೋಯಿಸಿಗರ್ ಪಾಪಗ್ರಹಮೆಂದು ಪೆಸರನಿಡೆ (ಸಮಶ. ೮-೧೬೨); ಮಾಂದರಿಗಂ, ಜೋಯಿಸಿಗಂ, ಪಂದಱಕೆಯ ಕಬ್ಬಿಗಂ ಸಮಂಜಸನೊಳನೇ (ಶಮದ. ೧೯೭ ಪ್ರಯೋ) : ಜೋಯಿಸಮನೋದುವಂ ಜೋಯಿಸಿಗಂ (ಶಬ್ದಾನು. ೨೯೨ ಪ್ರಯೋ) : ನವಲಕ್ಷ್ಮಿಯರ ವಿಲಸಿತೋತ್ಸವ ಪೂಜೆಗೆ ಶುಭಲಗ್ನವ ಸಲೆ ಜೋಯಿಸಿಗರುಸಿರಿದರು (ಕಂನವಿ. ೨೨-೦). [ ಜೋಯಿಸ + – ಇಗ ]

**ಜೋರ್** (ನಾ). ಒಂದು ಅನುಕರಣ ಶಬ್ದ. 'ಜೋರನೆ' ಪರಾ.

**ಜೋರನೆ** (ಅ). ಒಂದೇ ಸಮನೆ: ನೆತ್ತರು ಬಿಡದೆ ಜೋರನೆ ಸುರಿಯೆ (ಬಸವು. ೩೮-೨೮) ; ಆ ಬೆಳಕಿನ ರಭಳಕ್ಕೆ ತಮ್ಮನ ಮೈ ಜೋರನೆ ಬೆವತಿತ್ತು (ಹೊಸಕ್ಕ. ೨೦೦) : ಜೋರನೆ ಬಿಟ್ಟ ಬೆವರಿನಿಂದ ಸೀರೆಯೆಲ್ಲ ತೊಯ್ದು ಹೋಗಿತ್ತು (ಗ್ರಾಮಾಯ. ೦೩೪). [ ಜೋರ್ + – ಅನೆ ]

**ಜೋರಾವರಿ** (ನಾ). ಒತ್ತಾಯ; ಬಲಾತ್ಕಾರ; ಜುಲುಮೆ; ಜಬರದಸ್ತಿ : ನೀವು ಫೌಜು ಸಮೇತ ಜೋರಾವರಿಯಿಂದ ಆ ಶೀಮೆ ವಶನುಗ್ಗಿದ್ದೇ ಆದರೆ (ಹಾಜೇಂದ್ರ. ೯೦). [ ← ಪಾರ. ಹಿಂ. ಮರಾ. ಜೋರಾವರೀ ]

**ಜೋರಿಡು** (ಕ್ರಿ). ಸ್ರವಿಸು ; ಹೊರಸೂಸು ; ಪ್ರವಹಿಸು : ಸೂಳು ಮಿಗೆ ಸಂಗರದ ರವದುಬ್ಬಾಳಿನಲಿ ತಿರುಹಿಟ್ಟನರುಣಜಲಾಳಿ ಜೋ[ಪಾಠಾಂ. ರ್ಝೋ]ರಿಡೆ ಋಷ್ಯಮೂಕ ಮಹಾಮಹೀಧರಕೆ (ತೊರರಾ. ೪-೨-೩೭) : ಧವಳ ವಸನದಿ ವೀಳ್ಯ ಜೋರಿಟ್ಟು ತನಿಯರುಣ ಕಾಣಿಪುದು (ಜಿನಭಾ. ೫೮-೫೭). [ ಜೋರು$_2$ (<ಸೋರ್$_2$)+ ಇಡು$_1$ ]

**ಜೋರಿಸು** 'ಸೋರಿಸು' ನೋ.

**ಜೋರು$_1$** ಸೋರ್$_1$' ನೋ.

**ಜೋರು$_2$** 'ಸೋರ್$_2$' ನೋ.

**ಜೋರು$_3$, ರ್ಝೋರು** (ನಾ). ೧. ವೇಗ ; ರಭಸ : ಜೋರಿನಿಂದೋಡಿಸಲು ಪದನದೆ ಸೋರುತಿಹ ನೊರೆಯಾಂತ ಕುದುರೆ (ಶ್ರೀರಾಚ. ೭೨, ಟೀಕೆ): ಸ್ವಲ್ಪ ತಡೆದು ಸಿಟ್ಟಿನಿಂದ ಉರುವಲ ಕಟ್ಟಿಗೆಯನ್ನು ಒಲೆಯಲ್ಲಿ ಜೋರಿನಿಂದ ತಿವಿದಳು (ಅಕೋಳ. ೨); ಮೋಹದ್ದೀನ ಸಾಹೇಬನು . . . ಕೈಯಲ್ಲಿ ದೊಣ್ಣೆಯನ್ನು ಹಿಡಿದುಕೊಂಡು ಹೊರಡುವ ಜೋರಿನಲ್ಲಿದ್ದನು (ರಂಗರೋ. ೨೦). ೨. ಒತ್ತಾಯ ; ಬಲಾತ್ಕಾರ : ಜೋರು ಜುಲುಮೆ ಮಾಡದ ಹೊರತು ಜನರು ಕಷ್ಟ ಸಹಿಸುವುದಿಲ್ಲ (ಜನನಾ. ೧೨). ೩. ಪ್ರಾಬಲ್ಯ ; ಜರಬು ; ದರ್ಪ : ಆದರೆ ಈ ಮೂರು ತಂಡಗಳಿಗಿಂತ ಇನ್ನೊಂದು ಜಾತಿಯದೇ ಜೋರು ಹೆಚ್ಚು (ಆಲಹೂ. ೦೦): ಈ ದಾದಿಯ ಜೋರು ಜಾಸ್ತಿಯಾಗಿದೆಯಲ್ಲಾ (ಮೊಗ್ಗು. ೮೧). ೪. ಹೆಚ್ಚು ; ಅಧಿಕ: ಬಿಸಿಲು ಬಹಳ ಜೋರಾಗಿದೆಯಲ್ಲವೇ (ಅಳನಿ. ೫೨) ; ಅವರ ಅಳಿಯನಿಗೆ ಜಡ್ಡು ಜೋರು (ಗಂಗಾಸಾ. ೨). ೫. ಬಲವಾದದಂ; ತೀವ್ರವಾದುದಂ:

ನಿನಗೆ ಜೋರಾದ ಪೆಟ್ಟು ಬಿದ್ದಂತೆ ಇದೆ (ಘೂರಾಹಿ. ೦೪): ಜೋರಾಗಿ ಬರೆಯಲಿಕ್ಕೆ ಒಂದು ವಿಷಯು ಆಯ್ತು ಅವನಿಗೆ (ಅಶ್ವಮೇ. ೩೦). ರ್‍ಝೋರು: ೧. ಅದು ಬರುವ ಝೋರಿಗೆ ಗುಂಡಾದ ಕಲ್ಲುಗಳು ಕಟಕಟನೆ ಪುಟ ನೆಗೆಯುತ್ತಿದ್ದವು (ಹುಟ್ಟಿಹ. ೩೭): ಅದಕ್ಕೆ ಅಭ್ಯಾಸ ಒಳ್ಳೇ ಝೋರಿನಿಂದ ಮಾಡಬೇಕಾಗಿದೆ (ಶಿಲ್ಪಮ. ೧೭). ೩. ನಿಂದೇನೋ ಝೋರ ಇದ್ಹಾಂಗ ಕಾಣತದ (ಚಂದುಟಿ. ೫೦).

ಜೋರಾಗಿ = ೧.ವೇಗವಾಗಿ; ತೀವ್ರವಾಗಿ: ಎದೆ ಜೋರಾಗಿ ಬಡಿದು ಕೊಳ್ಳುತ್ತಿತ್ತು (ಅಲಹೂ. ೩೪); ಹಳಿಯ ಮೇಲೋಡುತಿದೆ ರೈಲು ಜೋರಾಗಿ (ಚಂದ್ರವೀ. ೦೦೫-೦೪); ರಾಯರು ಜೋರಾಗಿ ತಲೆ ಅಲ್ಲಾಡಿಸುದುದರಿಂದ . . . ತಿಳಿಯಿತು (ರಾಯಳ. ೪೭). ೨. ದರ್ಪದಿಂದೊಡಗೂಡಿ : ನೀನು ನಿಜವಾಗಿಯೂ ಈ ಕೊಡದಲ್ಲಿದ್ದ ಭೂತವಲ್ಲ . . . ಎಂದು ಕೊಂಚ ಜೋರಾಗಿ ಹೇಳಿದನು (ಷಂಜಾಮ್ಮ. ೧೧). ಜೋರಾಗು = ವೇಗವಾಗು ; ಬಲವಾಗು : ಮಳೆ ಜೋರಾಯಿತು (ರೂಢಿ). ಜೋರುಮಾಡು = ೧. ವೇಗಗೊಳಿಸು; ತೀವ್ರಗೊಳಿಸು: ಹೊತ್ತುಕೊಂಡು ಹತ್ತಬಲ್ಲ ತ್ರಾಣವಿದೆ ಬನ್ನಿ ಎಂದು ನನ್ನ ಕಾಲು ಜೋರುಮಾಡಿದೆ(ಚಂಗಾಳ್ಕ.೩೪೯). ೨.ಬಲಾತ್ಕಾರ ಮಾಡು: ನೀನು ಜೋರುಮಾಡಿ ಹಡಗಿನ ಮೇಲೆ ಹತ್ತುತ್ತಿ(ಜೀವಿಜಾ.೦೪೫). ೩. ದರ್ಪತೋರು; ಜಬರುಮಾಡು: ಮೊದಲು ನನಗೆ ಕೊಟ್ಟಿದ್ದೀಯೋ ಎಂದು ನಾನು ಜೋರುಮಾಡಿದೆ (ಕಾಳಿಮು. ೪೧); ಅರಸರ ಬಳಿ ಹೆಚ್ಚು ಜೋರು ಮಾಡಬೇಕಾದರೆ ದೂರದೃಷ್ಟಿ ಇದ್ದು ಮಾಡಬೇಕು (ಬಿಸ್ಮಿರು. ೦).

[ ←ಪಾರ. ಹಿಂ. ಮರಾ. ಜೋರ್ ]

ಜೋರುಗಟ್ಟು 'ಸೋರುಗಟ್ಟು' ನೋ.

ಜೋರುದಾರ (ನಾ). ಶಕ್ತಿವಂತ ; ಬಲವುಳ್ಳವನು : ಇಬ್ಬರೂ ಕಸ್ತಿನಲ್ಲಿ ದ್ದಾರೆ, ಜೋರುದಾರರು (ಭೀಮಸೇ. ೪). [←ಪಾರ. ಹಿಂ. ಜೋರ್‌ದಾರ್]

ಜೋರುದಾರಿ (ನಾ). ದರ್ಪವುಳ್ಳ ಹೆಣ್ಣು; ಜರಬುಳ್ಳವಳು; ಜಬರ್ದಸ್ತಿ ನವಳು: ಅವನು ಶ್ರೀಮಂತ ಕುಟುಂಬದ ಜೋರುದಾರಿ ಹೆಣ್ಣೊಬ್ಬಳನ್ನು ಮದುವೆಯಾಗಿದ್ದನು (ಪುನರು. ೨೨೨). [ ಜೋರುದಾರ + – ಇ₃ ]

ಜೋರುಮುಡಿ (ನಾ). ದರ್ಪ ಠೀವಿಗಳನ್ನು ಎತ್ತಿ ತೋರಿಸುವಂತಹ ಒಂದು ಬಗೆಯ ಕೇಶಶೃಂಗಾರ: ಸೋರುಮುಡಿಗಳು, ಜೋರುಮುಡಿ, ಬಾದಾಮಿ ಬೊಂಬಾಯಿ ಮುಡಿಗಳು (ಗಣೇಶ. ೭೩-೦೦).

[ ಜೋರು₃ + ಮುಡಿ₃ ]

ಜೋರುವರಾತ (ನಾ). (ಸಾಲ ತೀರಿಸಬೇಕೆಂದು ಮಾಡುವ)ಒತ್ತಾಯದ ತಗಾದೆ : (+). [ ಜೋರು₃ + ವರಾತ ]

ಜೋರೆ (ನಾ). ಕೆಸರು ; ರಾಡಿ ; ಜವುಗು : ತಲೆ ಮುಂಡ ಕರುಳು ನೆತ್ತರು ಜೋರೆಯೇಳ್ವಂತಲ್ಲಸದೆ ಕಾದಿ ಮಡಿದರು (ನೇಮಿಸಂ. ೩೦-೦೨); ದಾರಿಯಲ್ಲಿ ಒಂದು ಕಳ್ಳಬದಿಯ ಜೋರೆ ಸಿಕ್ಕಿತು (ಸುಮಿಹ. ೨೫೦). [?]

ಜೋಲ್₁, ಜೋಲು₁ (ಕ್ರಿ). ಜೋತು, ಜೋಲ್ದು(ಭೂತನ್ಯೂ). ೧. ನೇತುಬೀಳು ; ಇಳಿಬೀಳು ; ಕೆಳಬಾಗು : "ಜೋಲ್ – ಅಲಂಬನೇ (ತೂಗಬಿಡು)" (ಶಮಧಾ) : ಜೋಲ್ದ ಪುರ್ವನೆತ್ತಿ ಕಟ್ಟಿದ ಲಲಾಟಪಟ್ಟ ದೊಳ್ (ಪಂಪಭಾ. ೦೦-೫೨ ವ) : ಕಯ್ಯ ಕೊಡೆಯಿಂ ಮಯ್ಯ ತೆರೆಯಿಂ ಜೋಲ್ವ ಪುರ್ವಿಂ (ನಂಬಿರ. ೬-೨೩); ಅಸಿಯಳ್ ಕಾಣದೆ ನಿನ್ನನೆನ್ನ ಕೊರಲಂ ಜೋಲ್ದತ್ತಳುದ್ವೇಗದಿಂ (ಅನಂಪು. ೮-೪೦); ಅಳಕಂ ಜೋಲ್ದಿರೆ ಹಾರವೊರ್ಗುಡಿಸೆ (ದಕಳು. ೦೨-೨೭): ಫಲವಿತತಿ ಜೋತೊಱಗಿದುದು ಬನಬನಂಗಳೊಳ್ (ಜಬಪು. ೪೫-೦೦). ೨. ತೂಗಾಡು ; ತೊನೆದಾಡು ; ಅಲ್ಲಾಡು ; ಹೊಯ್ದಾಡು : ಮುಯ್ಯಿಂದಾವಗಂ ಸಂಭ್ರಮದೆ ರುಚಿರ ವಲ್ಲ್ಕೋತ್ತರೀಯಾಂಚಲಂ ಜೋಲ್ದಿರೆ (ಕಾದಂಅಉ.೭೯೭); ಆಕಂಪದಿಂ ಜೋಲೆ ಕರ್ಣೋತ್ಪಳಮಾಲಿಪ್ಪಾಂಗರಾಗಂ ಮಸುಳೆ ಪುಳಕದಿಂ . . . ಎಸೆದಳ (ವರ್ಧಪು. ೬-೦೪) : ಮದಿರಾಪಾನವುಂ ಮಾಡಿ . . . ಕುಣಿಯುತುಂ ಮಣಿಯುತುಂ ಮಾಲುತುಂ ಜೋಲುತುಂ (ಉದ್ಭಟ. ೫-೯೦ ವ): ಹಚ್ಚಡದ ಸೆಱಗಂ ಪಿಡಿದು ಕೈಯಿಂದ ಸೆಳೆಸೆಳೆದು ಜೋಲುತ್ತ ತೆಗೆವಂ (ಬಸಪು. ೪೭-೪೭). ೩.ಸಡಿಲವಾಗು; ಅಳ್ಳಕವಾಗು: ಮಿಸುಗುವ ತೋರ ಮಲ್ಲಿಗೆಯ ಜೋಲ್ವ ಬಟಲ್ಮುಡಿ ತೊಟ್ಟ ಮೌಕ್ತಿಕಪ್ರಸರ ವಿಭೂಷಣಾಳಿ (ಸುಕುಮಾ. ೯-೧೦೪); ೪. ಕುಸಿಬೀಳಂ ; ನಿಸ್ಸತ್ತ್ವವಾಗು : ಮಱಸೊಂದಿದಂದದೊಳೆ ಜೋಲ್ದ ನಿಜೇಶನನಾ ಲತಾಂಗಿ ತೊಟ್ಟಗೆ ಕೊಳೆ ನೋಡಿ (ಪಂಪಭಾ. ೨-೦೪): ಮೂರ್ಛಾವೇಗದಿಂದಿಕ್ಕುವಟ್ಟನವೊಲ್ ಝೊಂಪಿಸಿ ಜೋಲ್ದು ನೇಲ್ದು (ಕಾದಂಅ. ೪೪೪): ತಲೆ ಪಱಿದು ಜೋಲ್ದು ತೊಪ್ಪನೆ ನೆಲದೊಳ್ ತನು ಬೀೞ (ಧರ್ಮಾಮೃ. ೦೩-೦೬೨); ತೆತ್ತಿಸಿದಂಬಿನ ಗಱ ಮಿಱುಗುತ್ತಿರೆ ಬಾಯ್ಬಿಟ್ಟ ಪುಣ್ಗಳಿಂ ಜೋಲ್ವ ಭಟಂ (ವರ್ಧಪು. ೮-೫೫); ಒಱಲ್ದುಪಡೆ ಗೋಳಿಟ್ಟುದಾನೆ ಕುದುರೆಗಳೊರೆವ ಕಂಬನಿ ಬಳಲ್ಗಿವಿಗಳಿಂ ಜೋಲ್ದುವು (ಪ್ರಮಿಥಾ. ೦೩-೬೦). ೫. ಮನಸೋಲು ; ಪರವಶವಾಗು : ಮನ ದೊಳೊಱಲ್ದು ಜೋಲ್ದಳಿಪಿ ನೋಡಲೊಡಂ (ಪಂಪಭಾ. ೨-೪೦).

ಜೋಲು₁ : ೧. ಕುಣಿವ ಕುಂತಾಗ್ರದಲಿ ಜೋಲುವ ಹಿಣಿಲುಗರುಳೊಪ್ಪಿ ದುವು (ಕುಪ್ಪಾಭೀ. ೪-೪೪); ಕಟಿಯೊಳು ಜೋಲುವ ಪೀತಾಂಬರದ ಮೇಲುದಟ್ಟಿಯೊಳೊಪ್ಪುವ ಸುರಗಿಯು ಬಿಲ್ಲ ಕಾಲಪಾಯಕರೊಪ್ಪುತಿಹರು (ಕಂಸವಿ. ೦೯-೬೩); ತಾಳೆಗಳು ಬೆಳೆದು, ಖರ್ಜೂರದಲಿ ಹಣ್ಣು ಜೋಲುತಿಹ, ಬಿಸಿಲ ಸೀಮೆಯಲಿ ನೆಲಸಿಹುದೆ (ಕಎಪು. ೪೭-೩). ೨. ಲೋಹದಾ ಗುಂಡು ಗಳು ತಲೆಯನೆದೆ ಬೆನ್ನ ಜೋಲುತ್ತ ಹೊಡೆವುತಿರೆ (ವೀರಶೈಪು. ೪-೦೪-೩೦).

ಜೋತಾಡು = ೧. ಜೋಲಾಡು ; ತೂಗಾಡು : ಗಿಳಿಗಿಂತ ಚೆನ್ನಾಗಿ ಮಾತಾಡಬಲ್ಲ, ದೊಡ್ಡದರ ಬಾಲಕ್ಕೆ ಜೋತಾಡಬಲ್ಲ (ನಲಮಾ. ೨೯-೨೦); ನೀಳವಾದ ಹೆಳಲು ಆಕೆಯ ಹೆಗಲ ಮೇಲೆ ಜೋತಾಡುತ್ತಿದ್ದಿತು (ಕೃಡಿಶ. ೦). ೨. ತುಳುಕಾಡು : ಸ್ವಾತಿಯ ಮಳೆ ಹುಯ್ದು ಸೀತೆಯ ಕೆರೆ ತುಂಬಿ ಜೋತಾಡುತ್ತಿತ್ತೆ ಕುಣಿಗಲು (ಹಳ್ಳಿಹಾ. ೩೨). ಜೋತುಗೊಳ್ಳು = ಅಂಟಿಕೊಳ್ಳು ; ಜೋತುಬೀಳಂ : ಅವನು ಆದರ್ಶಕ್ಕೆ ಜೋತುಗೊಂಡಿ ದ್ದಾನೆ (ರೂಢಿ). ಜೋತುಬೀಳು = ಅಂಟಿಕೊಳ್ಳು ; ಅವಲಂಬಿಸು ; ಆಧರಿಸು : ಜೀವಕ್ಕೆ ಜೋತುಬಿದ್ದ ಈ ಜಂತುಗಳಿಗೆ ಈಗ ಅನುಭವ ಬರುತ್ತಲಿದೆ (ಅಶ್ವಮೇ. ೫೦); ಭಾವಜೀವಿಯಾದ ನೆಕ್ಲದೋವ . . . ಹೊಸ ಜೀವನವಿಧಾನಕ್ಕೆ ನಿಸ್ಸಂಕೋಚವಾಗಿ ಜೋತುಬಿದ್ದನು (ಪುನರು. ೬೧); ಆದರೆ ಜೀವ ಅಷ್ಟಕ್ಕೇ ಸೋಲಲೊಪ್ಪದೆ ಯಾವುದೋ ದೂರದ ಆಸೆಗೆ ಜೋತುಬಿದ್ದಿತ್ತು (ರೂಪಸ. ೬೪). ಜೋತುಹಾಕು=ನೇತುಹಾಕು; ತೂಗುಹಾಕು : ನಿನ್ನನ್ನು ಸೀಳಿ ನಾಲ್ಕು ಭಾಗಮಾಡಿ ನಾಲ್ಕು ಬಾಗಿಲು ಗಳಿಗೆ ಜೋತುಹಾಕುತ್ತೇನೆ (ಹಳ್ಳಿಹಾ. ೦೦೪). ಜೋಲವಿಡು=ಜೋತಾಡು ವಂತೆಮಾಡು ; ನೇತುಬಿಡು : ಕಯ್ಯೊಳ್ ಸೋರೆಯ ಕಾಯಂ ಕೊಟ್ಟು ಬಾವಿಯೊಳಗೆ ಜೋಲವಿಡೆ (ಪುಣ್ಯಾಸ್ರ. ೪-೨೫ ವ).

[ ದೇ.೫ ಮಲ. ಓಲ್ ; ಗೊಂಡಿ. ಹೋಲ್ ]

ಜೋಲ್₂, ಜೋಲು₂ (ನಾ). ೧. ಜೋತುಬೀಳಂವಿಕೆ ; ಇಳಿಬಿದ್ದಿರು ವಿಕೆ : ಚೆಲ್ವ ಪಣೆ ಕುರುಳ ಜೋಲಂಬೆಗಾಲು . . . ಸೊಗಯಿಸುವ ವರ ಶಿಶು (ಪ್ರಮಿಥಾ. ೨೯-೦೮). ೨. ಸಡಿಲ ; ಅಳ್ಳಕ : (+). ೩. ಹೊಯ್ದಾಟ; ತೂರಾಟ (?) : ಜಗುಟ್ದ ನಿಱ ಕರಂ ಜೋಂಪಿಪಂಗಂ ವಿಲಾಪ್ಯಾಕ್ಷರ ವಾಕ್ಯಂ ರೋಮಹರ್ಷಂ ಬಿಡದೆಸೆವಳೆ ಜೋಲ್ ಹೂಂಕೃತಂ ತೋರ್ಪ ಚೆಲ್ಲಂ ಕರವೊಪ್ಪಲ್ . . . ಎಸೆದುದಸದಳಂ ಮದ್ಯಪಾನಾಂಗನೌಘಂ (ಉದ್ಭಟ. ೫-೦೫). ಜೋಲು₂ : ೪. ಜೋತುಬಿಟ್ಟುದು : ಬೆಂಡೆಯನಿಕ್ಕಿ ಪಾವಡೆಯ ಜೋಲಿನೊಳಗರದಿಕ್ಕಿ . . . ಗುಡಪಾಕವೆಂದು ಹೆಸರು ಕರೆ ವುದು (ಸೂಪಶಾ. ೨-೨೪). [ <ಜೋಲ್₁ ]

**ಜೋಲಕಾರುಣ್ಯ** (ನಾ). ಒಂದು ಬಗೆಯ ತೆರಿಗೆ : ಜೋಲಕಾರುಣ್ಯ ಜೆಡೆದರ್ಗೆ ಪ ೩॥ ಬಟ್ಟೆಯ ಭಂ ೧ಕ್ಕಂ ಗ ೨ (ಎಕ. XVI, ಚಳ್ಳನಾ. ೬೦-೨೦ ; ೭). [ ? ]

**ಜೋಲಾಡು** (ಕ್ರಿ). ನೇತಾಡಂ; ತೂಗಾಡು: ಆಡುವರು ಲತೆಯುಯ್ಯಲವ ಜೋಲಾ[ಪಾಠಾಂ. ಳಾ]ಡುವರು ಲತೆಗಳನು (ನಿಥಾಗ. ೧೦-೦೮-೯) : ಶಕ್ತಿ ಹೆಚ್ಚಿ ಅವೆಲ್ಲವೂ ಅರ್ಧನಿಮಿಷದ ತನಕ ಜೋಲಾಡಲು ಶಕ್ತವಾದವಂತೆ (ಜೀವಾತ್ಯ. ೦೬೮). [ ಜೋಲ್$_1$ + ಆಡು$_1$ ]

**ಜೋಲಿ$_1$, ಜೋಲೆ$_1$** (ನಾ). ೧. ಕೆಲಸ ; ಕಾರ್ಯ : ತೀರಿತೆಲ್ಲಾ ಜೋಲಿಯಂದಿನ ಮಾಬುದಿನ ವೀರಕಟಕದ ಲಗ್ಗೆಯೊಳು (ಭರತ. ೭೪-೩೪) : ಆನು ವೊಂದಿನಿಸು ಜೋಲಿಯಂ ತೀರಿಸಿ ಬೇಗದಿಂ ಬಂದಪೆಂ (ಮಿತ್ರಗೋ. ೩೯) : ಜೋಲಿಗಳು ಸಣ್ಣವಿರಲಿ ದೊಡ್ಡವಿರಲಿ ಅವುಗಳಿಗೆ ಕಾಲವು ಸಮಾನವೆ ಹತ್ತುತ್ತದೆ (ಮುಂಬಯಿ. ೩-೨೦೨). ೨. ಗೋಜು; ಗೊಡವೆ; ಸಂಬಂಧ: ನಿನಗೆಯಿನ್ನೇಕಿಳಿಯ ಜಾರರ ಜೋಲಿ [ಪಾಠಾಂ. ಕೆ] ಬಿಡು ಜಾನಕಿಯ (ತೊರಕಾ. ೬-೨-೨೫) : ಸೌಜನ್ಯದೊಳು ಮುಂದೆ ಕಾರ್ಯವ ಕೊಂಚೆ ನಾನೀ ಜೋಲಿ ಬೇಡೆಂದೆಳಿಂದು (ಭರತ. ೪೨-೩೫) : ಈ ಜೋಲಿ ನಮಗೇಕೆಂದು ಸುಮ್ಮನಿರಬೇಕೆ ? (ಸಾಹಿತ್ಯ. ೪೨). **ಜೋಲೆ$_1$** : ೨. ಲೋಲುಪ ಭವದ ಲೀಲೆ ಹಗಲು ಇರಳು ಜೋಲೆಯೊಳಗೆ ಬಿದ್ದು ವ್ಯಾಳ್ಯೆ ತಿಳಿಯದೆಲೆ (ಮೋಕ್ಷದೀ. ೪೮-೨). [ ದೇ.॥ ತಮಿ. ಮಲ. ಚೋಲಿ ; ತೆಲು. ಜೋಲಿ ]

**ಜೋಲಿ$_2$** 'ಜೂಲು$_2$' ನೋ.

**ಜೋಲಿ$_3$, ಝೋಲಿ** (ನಾ). ೧. ತೂಗಾಟ ; ತೊನೆದಾಟ ; ಹೊಯ್ದಾಟ : ಮನದ ಆರಡಿ ಅದರ ಮಧುರಸ ಕುಡಿದು ಹೊಡೆಯಲಿ ಜೋಲಿಯ (ಮಾನಸ. ೩೫-೨೦) : ತೂಗುತಿದೆ ನಿಜ ಬೈಲಲಿ ಜೋಕಾಲಿ – ಜೋಲಿ – ಲಾಲಿ (ಶರೀಫ. ೩೧ ಪಲ್ಲವಿ). ೨. ತಡ ; ಸಾವಕಾಶ : ಓಲಗವಾಗದ ಮುನ್ನ ಬಂದೈ ನಸು ಜೋಲಿಯಾಯ್ತುದಱಿಂದ ನಿನ್ನ ಆಲಸ್ಯ ಗಂಡರೆಂದೆನ್ನದಿರು (ಭರತ. ೪೬-೩೩) : ಕೈವಲ್ಯಚೋಳನಹಿತರ ಮೇಲೆ ಪೋಗಿ ಮೂಱಬ್ಬವಂ ಜೋಲಿಯಾಗಲ್ ತನ್ನ ರಾಜ್ಯಕೆ ಬರನೈದೆ ಸಿರಿವಂತ ಸೆಟ್ಟಿ (ಚಬಪು. ೩೫-೨೬); ವಿವಾಹಮನಂದು ತಾಂ ಜೋಲಿಯಾಗದೆ ಮಾಡಿ (ಹಾದಾಸ್ಯ. ೨-೩-೪೧). ೩. ಸಮತೂಕ ; ಆಯ ; ಏಕೋ ಏನೋ ಅವರಿಗೆ ಸ್ವಲ್ಪ ಜೋಲಿ ಹೋಯಿತು (ಶರಣ. ೮೦೮). 'ಜೋಲಿತಪ್ಪು' ಪರಾ. ೪. ಥಟ್ಟನೆ ಚಲಿಸುವುದು. 'ಜೋಲಿಕೊಡು' ಪರಾ. **ಝೋಲಿ.** 'ಝೋಲಿತಪ್ಪು' ಪರಾ.

**ಜೋಲಿಮಾಡು** = ತಡಮಾಡಂ ; ಸಾವಕಾಶವಾಗು : ಜೋಲಿ ಮಾಡದೆ ಜೋಕೆವಿಡಿದುಱೆ ಪ್ರಾತಃಕಾಲದ ರಾಗವನಱಿದು ಆಲಾಪಿಸಿದರು (ಭರತ. ೦-೬೨) ; ಕಾಲವ ಚುತಿಸಲು ಸಲ್ಲಾ ಜೋಲಿಮಾಡಲು ಕಾರ್ಯ ಕೆಡುವುದು (ಜಿನರಾ. ೩-೧೦). [ ← ಮರಾ. ಝೋಲ, ಝೋಲಾ ]

**ಜೋಲಿ$_4$, ಜೋಲೆ$_2$** (ನಾ). ಮೊಂಡುತನ; ಹಟ; ಚಂಡಿತನ. **ಜೋಲೆ$_2$:** ಕಾಂತೆಯು ಪುರುಷರೇಕಾಂತದೊಳಗಿರ್ದು ಇಂತು ಜೋಲೆ ಮಾಡಲೇನು ಕಾರಣವು (ಸಾರಂಗ. ೧೦).

**ಜೋಲಿ ಮಾಡು** = ಮೊಂಡುತನ ಮಾಡು ; ಹಟಹಿಡಿ : ಬೇಡವೆಂದರೆ ಕೇಳರಕಟ ನೀವೇ ಜೋಲಿಮಾಡಿದಿರಿ (ಭರತ. ೪-೪೮). [ ? ]

**ಜೋಲಿಕೊಡು** (ಕ್ರಿ). ಚಲಿಸುವಂತೆ ಮಾಡು; ಜೀಕ ಕೊಡು : ನಿರ್ಮಲೆ ಏರಿ ಕೂತ ಜೋಕಾಲಿಗೆ ಜೋಲಿಕೊಟ್ಟಳು (ದುಃರುದಾ. ೨೩೯).
[ ಜೋಲಿ$_3$ + ಕೊಡು$_1$ ]

**ಜೋಲಿಗಾರ** (ನಾ). ತಿರುಗಾಡುವವನು ; ಅಲೆಮಾರಿ : ಜೋಲಿಗಾರನ ಬೇಲಿ ಮುರಿದರೆ ಹೊಲವೆಲ್ಲಾ ಜಾಲಿ (ಗಾದೆ).
[ ಜೋಲಿ$_3$ + – ಗಾರ (< – ಕಾಱ) ]

**ಜೋಲಿಡು** (ಕ್ರಿ). ತೂಗಾಡು ; ಓಲಾಡಂ : ಝೊಮ್ಮಿಡುತ ಜೋಲಿಡುತ [ಪಾಠಾಂ. ಜೋಲುತ್ತ]ಒಂದನೊಂದಂ ನೆಮ್ಮಿ ಸುಮ್ಮಾನವೇಱ ಮೆಯ್ಮಿಮಿಱಿಯೆ ಸುಖಂ ಹೊಮ್ಮಿ (ಅನಾರ. ದೇ. ೧೮೨-೨೩).
[ ಜೋಲ್$_1$ + ಇಡು$_1$ ]

**ಜೋಲಿತಪ್ಪು, ಝೋಲಿತಪ್ಪು** (ಕ್ರಿ). ಆಯ ತಪ್ಪು ; ತೂಕ ತಪ್ಪು : ಮಂಗವು ಜೋಲಿತಪ್ಪಿ ನೆಲದ ಮೇಲೆ ಅಂಗಾತವಾಗಿ ಬಿದ್ದುಕೊಂಡಿತು (ಹೇಮಂತ. ೩೦೦); ಜೋಲಿತಪ್ಪಿ ಬೀಳುತ್ತಿದ್ದೆಯಲ್ಲಾ (ಮೂರುದಾ. ೨೪೪). **ಝೋಲಿತಪ್ಪು:** ಒಳಗೆ ನಿಂತವರೆಲ್ಲ ಝೋಲಿತಪ್ಪಿ ಒಬ್ಬರ ಮೇಲೊಬ್ಬರು ಬಿದ್ದುಬಿಟ್ಟರು (ಹೊಸಕ್ಷ. ೦೮೧). [ ಜೋಲಿ$_3$ + ತಪ್ಪು$_1$ ]

**ಜೋಲಿತಿನ್ನು** (ಕ್ರಿ). = ಜೋಲಿತಪ್ಪು : ಜೋಲಿತಿನ್ನುತ್ತ ಯಾಮಿಯಾನ ಒರೆಯಿಂದ ಖಡ್ಗ ಹಿರಿದ (ಸೂರಜ. ೬೦). [ ಜೋಲಿ$_3$ + ತಿನ್ನು (< ತಿನ್) ]

**ಜೋಲಿಸು** (ಕ್ರಿ). ಜೋತಾಡಿಸು ; ನೇತುಬಿಡು : ಕಣ್ಗಳನರೆಮುಚ್ಚಿ ತೋದ ಗಱಿಯಂ ನಸು ಜೋಲಿಸಿ ಪಕ್ಕಿಗಳ್ . . . ದನಿಗೆಯ್ಯುತು ಮಿರ್ದುವು (ಜಗವಿ. ೦೪-೧೦) ; ತನುವನೊಲೆದವು ದಡದಡಸಿ ಕಿವಿಗೊನೆಯ ಜೋಲಿಸಲಲ್ಲಿ ಮಡಿಗಾಲಿನಲಿ ಕುಸಿದವು (ಕುವ್ಯಾವಿ. ೮-೮೩); ರೆಕ್ಕೆಗಳನಾಱ ಜೋಲಿಸುತ್ತ ಜೊಂಪಿಪುದೊಮ್ಮೆ (ಚಬಪು. ೪೬-೬). [ಜೋಲ್$_1$+ –ಇಸು$_1$]

**ಜೋಲಿಹಿಡಿ** (ಕ್ರಿ).=ಸಮತೂಕವನ್ನು ಕಾಯ್ದುಕೊಳ್ಳು ; ತೂಕಹಿಡಿ : ತಮಗೆ ಜೋಲಿಹಿಡಿಯಲು ಆಧಾರವೇನಾದರೂ ಬೇಕಾಗುವದು (ಹೇಮಂತ. ೩೩೨) ; ಕಾಮಿನಿ ರೇಲ್ವೆ ಹಳಿಯ ಮೇಲೆ ಜೋಲಿಹಿಡಿಯುತ್ತ ನಡೆಯತೊಡಗಿದಳು(ಮುಕ್ತ. ೦೨೫). [ ಜೋಲಿ$_3$ + ಹಿಡಿ$_1$ (< ಪಿಡಿ$_1$) ]

**ಜೋಲಿಹೊಡೆ, ಝೋಲಿಹೊಡೆ** (ಕ್ರಿ). ೧. = ಜೋಲಿತಪ್ಪು : ಎಂಥ ಭಾರಕು ಜೋಲಿಹೊಡೆಯದಿಹ ತೂಗುತೊಲೆ (ನಲಮು. ೩೦-೬). ೨. ತೂಗಾಡು ; ಹೊಯ್ದಾಡಂ ; ಒಲೆದಾಡು : ಶ್ರೀನಗರ ಸರಸಿಯಲಿ ನೌಕೆ ನೂರು ತೇಂಕಾಡಿ ಜೋಲಿಹೊಡೆಯೆ (ಕರುಣ್ಯಾ. ೩೬-೧); ಆ ಬೀದಿಯ ಮೇಲೆ ಒಬ್ಬ ಯುವಕ ಜೋಲಿ ಹೊಡೆಯುತ್ತ ಹೊರಟಿದ್ದಾನೆ (ಹಾಡುಹು. ೬೫) ; ಶಕ್ತಿ ಇಲ್ಲದ ಅವನ ಕಾಲುಗಳು ನಿಲ್ಲಲು ಬಾರದೆ ಜೋಲಿಹೊಡೆಯುತ್ತ . . . ಬೀಳುವಂತಾಯಿತು (ಬಂಗಾಶಿ. ೮). **ಝೋಲಿಹೊಡೆ :** ೨. ಸುರೇಶ . . . ಅತ್ತ ಇತ್ತ ಝೋಲಿಹೊಡೆಯುತ್ತ ಹೊರಗೆ ಬಂದ (ಜೀವರಂ. ೦೯). [ ಜೋಲಿ$_3$ + ಹೊಡೆ$_1$ (< ಪೊಡೆ$_1$) ]

**ಜೋಲಿಹೋಗು** (ಕ್ರಿ). = ಜೋಲಿತಪ್ಪು : ಪಾಪ ಮುದುಕರು ಜೋಲಿ ಹೋಗಿ ಬಿದ್ದಾರು (ಪೋಹಿನೀ. ೦೦೪) ; ಜೋಲಿಹೋಗಿ ಪಕ್ಕದಲ್ಲಿರುವ ಚಿಕ್ಕ ಸ್ಟೂಲಿನ ಮೇಲೆ ಬಿದ್ದ (ಮುಂಗಾರು. ೧೦೩) ; ಆದರೆ ಎಚ್ಚರದಪ್ಪಿ ಜೋಲಿ ಹೋಗುವಾಗ ತಿಮ್ಮಯ್ಯನವರು ಕೂಡಲೇ ಸಾವರಿಸಿ ಹಿಡಿದರು (ಕಾಗೆಕ. ೨೮). [ ಜೋಲಿ$_3$ + ಹೋಗು$_1$ (< ಪೋಗು$_1$) ]

**ಜೋಲು$_1$** 'ಜೋಲ್$_1$' ನೋ.

**ಜೋಲು$_2$** 'ಜೋಲ್$_2$' ನೋ.

**ಜೋಲುಗಡ್ಡ** (ನಾ). ಇಳಿಬಿದ್ದ ಗಡ್ಡ; ಉದ್ದವಾದ ಗಡ್ಡ ; ಹಾಗಾದರೆ ಈತನು ಈ ಚಿತ್ರಪಟದಲ್ಲಿ ಜೋಲುಗಡ್ಡದ ಋಷಿಗಳ ಗುಂಪನ್ನು ಬರೆದು ಮುಗಿಸಬೇಕು (ಚಾಕುಂತ. ೯೦-೩). [ಜೋಲು$_1$ (< ಜೋಲ್$_1$)+ಗಡ್ಡ$_1$]

**ಜೋಲುಗರುಳು** (ನಾ). ನೇತಾಡುವ ಕರುಳು : ಅಳ್ಳೆಗಳ ಘಾಯದ ಜೋಲುಗರುಳಿನಲೊಱಗುವುವು ಕೆಲವು (ತೊರರಾ. ೩-೩-೦೬).
[ಜೋಲು$_1$ (< ಜೋಲ್$_1$) + ಕರುಳು (< ಕರುಳ್) ]

**ಜೋಲುಗಾಲು** (ನಾ). ಸ್ಥಿರವಾಗಿ ನಿಲ್ಲದ ಕಾಲು; ನಿಶ್ಶಕ್ತವಾದ ಕಾಲು: ಹೈಮಾವತಿ ಎದ್ದು ಜೋಲುಗಾಲುಗಳನ್ನು ಎಳೆದೆಳೆದು ಮುಂದಿಡುತ್ತ ನಡೆದು, ಕಿಡಕಿಯ ಮಾರ್ಗವಾಗಿ ಮನೆಯನ್ನು ಸೇರಿದಳು (ಎರಡು. ೮೬).
[ ಜೋಲು$_1$ (< ಜೋಲ್$_1$) + ಕಾಲು$_1$ (< ಕಾಲ್$_1$) ]

**ಜೋಲುಗಿವಿ** (ನಾ). ೧. ಜೋತುಬಿದ್ದ ಕಿವಿ: ಜೋಲುಗಿವಿಯ ಆ ನಾಯಿ ಬಹಳ ಚುರುಕಾಗಿದೆ (ಜನ). ೨. (ಅಲಂ) ಚಾಡಿಯನ್ನು ಕೇಳುವವನು: ಅವನೊಬ್ಬ ಜೋಲುಗಿವಿಯವನು (ಜನ). 'ಇಳಿಗಿವಿ' ಪರಾ.
[ ಜೋಲು$_1$ (<ಜೋಲ್$_1$) + ಕಿವಿ$_3$ ]

**ಜೋಲುಗೊಂಬೆ** (ನಾ). ಕೆಳಕ್ಕೆ ಬಾಗಿರುವ ಕೊಂಬೆ,-ರೆಂಬೆ : ಮೇಲು ದನು ಮಧ್ಯಕ್ಕೆ ಸುತ್ತಿ ಕಾಸಿಯ ಬಿಗಿದು ಜೋಲುಗೊಂಬೆಯನೆರಡು ಕರ ಗಳಲ್ಲಿ ಹಿಡಿದು (ನವಮೋ. ೨೪-೫೪).
[ ಜೋಲು$_1$ (<ಜೋಲ್$_1$) + ಕೊಂಬೆ$_1$ ]

**ಜೋಲುಜಡೆ** (ನಾ). ಜೋತಾಡುವ ಜಟೆ ; ಇಳಿಬಿದ್ದಿರುವ ಜಡೆ : ಆಲದ ಬಿಳಲಂತೆ ಜೋಲುಜಡೆಗಳ ಬಿಟ್ಟು (ಸರ್ವಜ್ಞ. ೫೮೨).
[ ಜೋಲು$_1$ (<ಜೋಲ್$_1$) + ಜಡೆ$_1$ ]

**ಜೋಲುತೊಗಲು, ಜೋಲುದೊಗಲು** (ನಾ). ಸಡಿಲವಾಗಿ ಇಳಿಬೀಳುವ ಚರ್ಮ : ಗೋಳುಮೋರೆಯ, ಜೋಲುತೊಗಲಿನ, ಜೂಲುಅರಿವೆಯ ತಿರುಕ (ಕಗದ್ಯ. ೭೪). **ಜೋಲುದೊಗಲು** : (ಕ).
[ ಜೋಲು$_1$ (<ಜೋಲ್$_1$) + ತೊಗಲು$_1$ (<ತೊಲ್$_1$) ]

**ಜೋಲುದುರುಬು** 'ಜೋಲ್ದುರುಬು' ನೋ.

**ಜೋಲುದೊಗಲು** 'ಜೋಲುತೊಗಲು' ನೋ.

**ಜೋಲುಬಾವಲಿ** (ನಾ). ಕಿವಿಯಲ್ಲಿ ಧರಿಸುವ ಜೋತಾಡುವ ಒಂದು ಬಗೆಯ ಆಭರಣ,-ಬಾವುಲಿ : (ಕ).
[ ಜೋಲು$_1$ (<ಜೋಲ್$_1$) + ಬಾವಲಿ$_2$ (<ಬಾವುಲಿ$_2$) ]

**ಜೋಲುಬಿಡು** (ಕ್ರಿ). ಇಳಿಬಿಡು; ನೇತುಬಿಡು : ಅಳಿಯ ಮುತ್ತಿಗೆಗಳನು ಬೀಸದೆ ನೆಲಕೆ ಕಿವಿಯನು ಜೋಲುಬಿಡುವುದು ಬಲುಕಣೆಯ ಹಿಡಿಹಂಗೆ ಲಾಗಿಸುತಿರ್ದುದಾ ದಂತಿ (ಕುಮಾ.ದ್ರೋ. ೩-೩೭).
[ ಜೋಲು$_1$ (<ಜೋಲ್$_1$) + ಬಿಡು$_1$ ]

**ಜೋಲುಬೀಳು** 'ಜೋಲ್ಬೀಳು' ನೋ.

**ಜೋಲುಮನಸ್ಸು** (ನಾ). ಉತ್ಸಾಹವಿಲ್ಲದ ಮನಸ್ಸು ; ಸ್ಥಿರವಾಗಿರದ ಮನಸ್ಸು : ಈ ಜೋಲುಮನಸ್ಸನ್ನು ತ್ಯಜಿಸು : ಇದು ನಿನಗೆ ತಕ್ಕದ್ದಲ್ಲ (ಪಡಧಾ. ೨೪೨). [ ಜೋಲು$_1$ (<ಜೋಲ್$_1$) + ಮನಸ್ಸು ]

**ಜೋಲುಮುಖ** (ನಾ). ಇಳಿಬಿದ್ದ ಮುಖ ; ಬಾಡಿದ ಮುಖ ; ಮ್ಲಾನವಾದ ಮುಖ : ಸಟ್ರು ಜೋಲುಮುಖ ತೋರಿ, 'ಹೌದು' ಎಂಬ ಭಾವಕ್ಕೆ ಸರಿಯಾಗಿ ಕೈ ಹೊಸಕಿಕೊಂಡರು (ಒಡ್ಡಿ.ಕಾ. ೧೦).

**ಜೋಲುಮುಖ ಹಾಕು**=ಮುಖ ಇಳಿಬಿಡು; ನಿರುತ್ಸಾಹ ಹೊಂದು : ಮನೆಯ ಮೂಲೆಯಲ್ಲಿ ಜೋಲುಮುಖ ಹಾಕಿಕೊಂಡು ಕುಳಿತಿರುವ ಸ್ಥಿತಿಗಿಂತ . . . ಓಡಾಡಿಕೊಂಡು ಬಂದ ನಂತರ ನಮ್ಮ ಸ್ಥಿತಿಯೇ ಬೇರೆ (ಜೀವಾಶ್ಮ. ೮); ರಾಜಮಂಡಲವು ಜೋಲುಮುಖ ಹಾಕಿಕೊಂಡಿತು (ಪಕಭಾ. ೫೨) : ಆದ್ದರಿಂದ ಅದು ಜೋಲುಮುಖ ಹಾಕಿಕೊಂಡು ಬೀದಿಬೀದಿಗಳಲ್ಲೂ ಅಲೆಯುತ್ತಿತ್ತು (ಕಿಂಕಥ. ೦೩೦).
[ ಜೋಲು$_1$ (<ಜೋಲ್$_1$) + ಮುಖ ]

**ಜೋಲುಮೋರೆ** (ನಾ). = ಜೋಲುಮುಖ : ಈ ನಿಸ್ಸ ಮಾಧವನು ಜೋಲುಮೋರೆಯಿಂದ ಕುಳಿತಿದ್ದಾನೆ (ಉದಪ್ಪ. ೭೭).

**ಜೋಲುಮೋರೆ ಹಾಕು**=ಮುಖಇಳಿಬಿಡು; ನಿರುತ್ಸಾಹ ಹೊಂದು: ಆದರೆ ಜೋಲುಮೋರೆ ಹಾಕಿಕೊಂಡು ಅವರೆಲ್ಲ ಹಿಮ್ಮೆಟ್ಟಬೇಕಾಯಿತು (ತತ್ತ್ವತ್ರ. ೫೭೪) : ಇನ್ನಷ್ಟು ಜೋಲುಮೋರೆ ಹಾಕಲು ಕೊತವಾಲನು ಪ್ರಯತ್ನ ಮಾಡಿದ (ಕೊತಕಾ. ೩); ಮಾಧವ ಜೋಲುಮೋರೆ ಹಾಕಿಕೊಂಡೇ ಒಳಗೆ ಬಂದ (ಪಾತ್ರಂ. ೭೭).
[ ಜೋಲು$_1$ (<ಜೋಲ್$_1$) + ಮೋರೆ (<ಮೋಱ್) ]

**ಜೋಲೆ$_1$** 'ಜೋಲಿ$_1$' ನೋ.

**ಜೋಲೆ$_2$** 'ಜೋಲಿ$_4$' ನೋ.

**ಜೋಲೆಗ** (ನಾ). ಜೋತುಬೀಳುವವನು ; ಮೋಡನಾದ ವಿಟ (?) : ಬೆನ್ನನೆ ಬರ್ಪ ಜೋಲೆಗರ ಬರವಂ ನಿರುಕಿಸುತುಂ ನಿಲ್ವ ಪೋಪ ದೇವಾಂಗನೆಯರುಂ ಕಣ್ಗೆವರ್ಪರ್ (ರಾಮಾಶ್ವ. ೭೩-೧೯).
[ಜೋಲೆ$_2$ (<ಜೋಲಿ$_4$) + -ಗ$_2$]

**ಜೋಲ್ಗಿಚ್ಚಲ್** (ನಾ). ನೇತಾಡುವ ಕಿಚ್ಚಲು ; ದೊಡ್ಡ ಕಿಚ್ಚಲು : ಪಾಲ್ಗೋಡಿನ ಜೋಲ್ಗಿಚ್ಚಲ ತೋರಮೊಲೆಯ ಎಳಗಂದಿ (ರಾಮಾಶ್ವ. ೧೦೦-೩೦). [ ಜೋಲ್$_1$ + ಕಿಚ್ಚಲ್ ]

**ಜೋಲ್ಗೈಯ** (ನಾ). ನೃತ್ಯ ಭಂಗಿಯಲ್ಲಿ ಕೈಯನ್ನು ಜೋತು ಬಿಟ್ಟಿರುವವನು ; ನಟರಾಜ ; ಶಿವ : ವಿಸುಪ ಸುಲಿಪಲ್ಗಳಿಂ ಜಸವೆತ್ತ ಜೋಲ್ಗೈಯ್ಯ ನೀವೆಮ್ಮ ಪಾಲ್ಗಕ್ಕಱಿಂ ಬಹುದು (ವೀಶ್ವಪು. ೩-೧-೧).
[ ಜೋಲ್$_1$ + ಕೈ$_2$ (<ಕಯ್$_2$) + -ಅ$_7$ ]

**ಜೋಲ್ದಂಟೆ** (ನಾ). ಇಳಿಬಿದ್ದ ತಂಟೆ ; ಜೋತಾಡುವ ತಂಟೆ : ನೊರೆವಾಯ್ಜೋಲ್ದಂಟೆ ಪೆಮೂರ್ಗರಲ್ದ ಕೆಮ್ಮಿಸೆ ಕೆದರ್ದ ಪಱಿಗಡ್ಡಂ (ವೃಷವಿ. ೧೧-೬೧). [ ಜೋಲ್$_1$ + ತಂಟೆ$_2$ ]

**ಜೋಲ್ದುರುಬು, ಜೋಲುದುರುಬು** (ನಾ). ೧. ಸಡಿಲವಾದ ಕೂದಲ ಗಂಟು; ಅಳ್ಳಕವಾದ ತುರುಬು: ಜೋಲ್ದುರುಬನೊಂದಿಸುವ ನೆವದಿಂದೆ ಕೈನೆಗಪಿ (ಕೃಮಿಥಾ. ೫-೬೦). **ಜೋಲುದುರುಬು**: ೨. ಒಂದು ಬಗೆಯ ಕೇಶಾಲಂಕಾರ : ಗ್ರೀಕ್ ಹೆಂಗಸರ ಒಂದು ತೆರದ ಜೋಲುದುರುಬು (Greek-Knot. ಇಂಕನ್ನ.). [ಜೋಲ್$_1$ + ತುರುಬು$_2$ (<ತುರುಂಬು$_2$)]

**ಜೋಲ್ನವಿರ್** (ನಾ). ಇಳಿಬಿದ್ದಿರುವ ಕೂದಲು : ಜೋಲ್ನವಿರ ಕಪ್ಪು ಬೆಳ್ಪುಗಳ ಪೊಂದೊಗರ ನೇವರಿಸಿ (ಕಾವೂರ. ೯೪-೦೮೭).
[ ಜೋಲ್$_1$ + ನವಿರ್ ]

**ಜೋಲ್ಬೀಳು, ಜೋಲುಬೀಳು** (ಕ್ರಿ). ಇಳಿಬೀಳು ; ಕೆಳಗೆಬೀಳು : (ಕ). **ಜೋಲುಬೀಳು** : ನಿದ್ದೆಯ ಹೊತ್ತಾಯಿತೆಂದರೆ . . . ಎವೆಗಳ ಕಾರ್ಯವು ಮಂದವಾಗುತ್ತದೆ; ಗದ್ದವು ಜೋಲುಬೀಳುತ್ತದೆ (ಮುಂಬಯಿ. ೯-೧೩೦) ; ಗದ್ದ ಜೋಲುಬಿದ್ದಿರಲಿಲ್ಲ (ಮುಹಾಕಾ. ೦೯).
[ ಜೋಲ್$_1$ + ಬೀಳು$_1$ (<ಬೀೞ್$_1$) ]

**ಜೋಲ್ಮುಡಿ** (ನಾ). ೧. = ಜೋಲ್ದುರುಬು: ಬಳಲುಮುಡಿ ಬಲ್ಮುಡಿಯು ಸೋಲ್ಮುಡಿಯು ಜೋಲ್ಮುಡಿಯು (ನವಮೋ. ೨೫-೦೮) ; ಎನ್ನೀ ಜೋಲ್ಮುಡಿಯ ಪೂಸರದಾಣೆ (ರಾಮಾಶ್ವ. ೮೯-೩೦). ೨. ಕಟ್ಟದೇ ಇರುವ ಕೂದಲು; ಮುಕ್ತಕೇಶ; ಬಿಡುಮುಡಿ; ಕಪ್ಪಗೆ ಅಲೆಅಲೆಯಾಗಿದ್ದ ಅವಳ ಜೋಲ್ಮುಡಿಯನ್ನು ಹಿಡಿದುಕೊಂಡನು (ಪಕಧಾ. ೯೮).
[ ಜೋಲ್$_1$ + ಮುಡಿ$_3$ ]

**ಜೋವ** (ನಾ). ಅಸಹಾಯಕತೆ (?): ಬೆಂಬಲಮಿಲ್ಲದ ಕನ್ನಗಳ್ಪನಂತೆ ಜೋವಂಬೊಕ್ಕಿರ್ಪಿನಂ ಪರಪರಿವಾರ ಸ್ತಿಮಿತಂ ಸ್ತಿಮಿತಸಾಗರ ತನೂಜನಿಸೆ (ಶಾಂತಿಪು. ೪-೩೦ ವ) ; ಭಾವಿಸುತುಂ ತನಗೆ ಮಹಾದೇವಂ ತಾನಿಷ್ಟದೆಯ್ದ ಮೆಂಬರ್ ಮಾತ್ರಂ ಜೋವ[ಪಾಠಾಂ. ಬೋವ]ದೆ ದೇವತೆಗಳುಮಂ ಸೇವಿಪನೆಂದಂದು ನಗಿಸಿಕೊಳ್ಳನೆ ತನ್ನಂ (ಸಮಪ. ೯-೯೭).
[ <ಜೋವಮು ? ]

**ಜೋವಿಸ** 'ಜೋಯಿಸ' ನೋ.

**ಜೋವು** 'ಜಂಮ್ಮು$_3$' ನೋ.

**ಜೋವೆಳಗ** (ನಾ). (?) : ಇಂತು ವಿನಯಮುಮಂ ಮಾಡಿ ತಣ್ಣದಿರನಂ ಜೊನ್ನವೆಳಗಿಂ ಬನ್ನವಟ್ಟು ಜೋವೆಳಗನಂ ಕುರಿತು (ಕಮುಮಾ. ೨-೭೭ ವ).
[ ? ]

**ಜೋವೇಱು** (ಕ್ರಿ). ವಂರಗಟ್ಟಿದಂತಾಗು; ಜೊಮ್ಮುಹಿಡಿ : ಮದನಶಿಖಿ ಪರ್ವಿದುದೆಂದಿರದೆ ಬಿದಿರ್ವಳ್‌ಕದಟಿನ ಭರದಿಂ ಜೋವೇಱಿದೊಂದು ಕರಕಿಸಲಯಮಂ (ಕಾದಂಉ. ೩೩೨) : ಪಯಃಕುಂಭಂಗಳಂ ಪೊತ್ತು ಜೊಮ್ಮನೆ ಜೋವೇಱಿದ ತೋಳ್ಗಳಂ ನಿಮಿರ್ಚಿ ಪೋಲಿಂದ್ರುಂ ಸುರಾದ್ರೀಂದ್ರದೊಳ್ (ಲೀಲಾವ. ೯-೦೦೦) : ಲಜ್ಜೆಯ ಬಿಡೆಯದಲಿ ಜೋವೇ[ಪಾಠಾಂ. ಝೊಮ್ಮೇ]ಱಿದಂತವೆ ಮಿಡುಕದಿರೆ (ಕುಮ್ಮಾಅ. ೮-೩೦). [ಜೋವು (<ಜುಮ್ಮು$_3$) + ಏಱು$_1$ (<ಏಱ್$_1$)]

**ಜೋಶಿ, ಜೋಸಿ** (ನಾ). =ಜೋಯಿಸ: ಜೋಶಿಯರ ಕೇಳ್ಕಾರ ಜೋತಿಷ್ಯ (ಸಿದ್ಧಪು. ೯-೬೮); ಲಗ್ನ ಮುಹೂರ್ತಗಳಿಗಾಗಿ ಜೋಶಿ ಜಾತಿಯವರನ್ನು ಕರೆಯುವರು (ಕಛಾಗ. ೦೩೬). ಜೋಸಿ : ಶ್ರೀಮದಾಪುರ ಜೋಸಿ ನೇಮಯ್ಯಂಣನ ರಾಗಲ ಹೊಲ (ಎಕ. IX (ಕ), ಕಾನಕಾ. ೦೧೨-೯ ; 17ನೆಯ ಶತ). [<ಸಂ. ಜ್ಯೋತಿಷಿನ್]

**ಜೋಷ** (ನಾ). ತೃಪ್ತಿ ; ಸಂತೋಷ ; ಮೆಚ್ಚಿಗೆ. [ಸಂ.]

**ಜೋಷವಾಕ್ಯ** (ನಾ). ಸಂತೋಷದ ಮಾತು : ಜೋಷವಾಕ್ಯದೊಳಿದ್ದ ಮಕ್ಕಳ ನೋಡಿ ಸಂಭಾಷಣೆಗೈದನಾ ತಂದೆ (ಭರತ.೫೮-೮೦). [ಜೋಷ + ವಾಕ್ಯ]

**ಜೋಸ** (ನಾ). = ಜೋಷ : ಜೋಷಂ – ಜೋಸಂ (ಶಮದ. ಮ. ೨೬೬ ಪ್ರಯೋ). [<ಸಂ. ಜೋಷ]

**ಜೋಸಿ** 'ಜೋಶಿ' ನೋ.

**ಜೋಸೆ, ಜೊಸೆ** (ನಾ). ಹೆಂಗಸು ; ಹೆಣ್ಣು ; ಸ್ತ್ರೀ : "ಪೆಣ್ಗಳ್ ಜೋಸೆಯರಪ್ಪರ್" (ಕರ್ಣಾನಿ. ೯) : "ಜೋಸೆ – ಯೋಷಾ = ಸ್ತ್ರೀ" (ಶಬ್ದಕೋ. ೦೬): ಬಿಡುಜಡೆಯ ನಿಡುಬಾಸೆಯ ಜೋಸೆಯರ್ ನಳಿದೋಳ ಸುಟಿಪೊರ್ಕುಟ ಚೆಲ್ವೆಯರ್ (ರಾಮಾಶ್ವ. ೦೨೨-೨೯); ನಾಡಿಗರ ಗೊಂದಣಂ ಜೋಸೆಯರ ನೆರವಿ . . . ಅಲ್ಲಲ್ಲಿ ನೆರೆಗೊಂಡಿರ್ದುವು (ಶ್ರೀರಾಮಾ. ೯೩-೯೯). ಜೊಸೆ: "ಪೆಣ್ಗಳ್ ಜೊಸೆಯರ್" (ಕವಿಕಂ. ೨೫೬). [<ಸಂ. ಯೋಷಾ]

**ಜೋಹ, ಚೋಹ** (ನಾ). ೧. ತೋರಿಕೆಯ ರೂಪ ; ವೇಷ ; ಸೋಗು: "ಜೋಹ (ಚೋಹ)– ಯೋಗ" (ಶಬ್ದಕೋ. ೦೬); ಆತಂ ಗಡ ಹರಿ ಪಲವುಂ ಜೋ[ಪಾಠಾಂ. ಚೋ]ಹಂಗಳನಿದು ಯುಕ್ತಮಾಗಲಱಿಗುಮೆ ಪೇಳಿಂ (ಸಮುಪ. ೦೦-೯೦) ; ರವಿಕುಲನನಾಮಿಕರ ಜೋ[ಪಾಠಾಂ. ಚೋ]ಹಮಂ ತಳೆದಂ (ಹಡಿಕಾ. ೦೦-೯೦) ; ಹೊತ್ತು ಜೋಹಕೆ ಚಾಳಿ[ಪಾಠಾಂ. ಚೋಹಕೆ ಚಾಳಿ, ಜೋಹದ ಚಾಳಿ] ಲೇಸಾಯಿತ್ತು (ತೊರರಾ. ೪-೪.೪೦) : ಪೋಗಸಣೆಯ ಗರುವಾಯ ಗೂಳೆಯದ ಜೋಹಮಂ ಬಿಡು(ರಾಮಾಶ್ವ.೯೨-೨೩). ೨. ನಟ ; ಪಾತ್ರಧಾರಿ : ನೋಡಿಮಿತ್ತೊಂದು ಪಗರಣದ ಜೋಹಂ ಬಂದಿರ್ದುದೆನೆ (ಶಮಿಪು. ೩-೦೦೩ ವ); ಪೆಱರ ಬಳಿಸಂದು ತನ್ನಂ ಮೆಱೆವಂ ಕವಿಯಲ್ಲವಾಟಕಾಱರ ಜೋಹಂ (ಮಲ್ಲಿಪು. ೦-೩೨). ೩. ಆಕಾರ; ರೂಪ: ಪಾಳ್ಪಸದಿಯ ಪೆಣ್ಣು ಜೋಹದವೊಲೊಪ್ಪಿದಳೊರ್ವಳನಂಗರಾಗದಿಂ (ಶಾಂತಿಪು. ೮-೮೮) ; ವಿನಯಾನ್ವಿತ ತಪ್ಪದ ಮಣಿಕ ಲೆಪ್ಪದ ಪೆಣ್ಣಾ ಜೋಹಮೆಂಬಂತಿರ್ದಳ್ (ಸುಕುಮಾ. ೯-೬); ಪೊದಱೊಳಗಣ ಬೆನಕನ ಜೋಹದಂತೆ (ಚಂದ್ರಪು. ೯-೦೦೦ ವ) ; ಕುಕ್ಕುಱಿಸಿರ್ದುದು ಮದಕರಿ ಬೆನಕನ ಜೋಹದಂದದಿಂದಾಹವದೊಳ್(ಶಾಂತೀಶ್ವ.೮-೮೮); ಕಿಱುವಿದಿರಿನ ಬಲ್ಸೊದಱೊಳು ಕಣ್ಗಿಱಿ ಮೆಱೆವಂತೆ ಬೆನಕನ ಜೋಹೆ (ನಾಗಕು. ೬-೩೨) : ಪಲವಣ್ಣ ಜೋಹಮಂ ಪಣ್ದಿ ಪಳಂಚಿ ಸಂಚರಿಸಿ ನೋಡುತಿ . . . ಕೀಡಿತೊಂದೆಳೆಯಲರ್ ನನೆಯುಂಬನ ಚಾರನೆಂಬನಂ (ಚಿಕವಿ. ೬-೩೯). **ಚೋಹ** : ೧. "ಚೋಹಮೆನಲ್ ವೇಷ" (ಭಾರನಿ. ೩೩) : ಹಗರಣದ ಚೋಹದಂತಾಯ ತ್ರೆನ್ನ ಭಕ್ತಿ (ಬಸವ. ೮೯೦) ; ಆಹ ಇಳಿಯಿಳಿ ಗೊರವ ನಿನಗೀ ಚೋಹ ವೇಕೆನ್ನೆನಗೆ ಸಿಕ್ಕಿದೆ (ಬಸಪು. ೩೨-೦೩); ಸಾಹಸಿಕರ್ಕೈ ದ್ರುಪದರಿಪದಿರ ಚೋಹ ದೋಲೆಯಕಾಱತನ ಮನಗಾಹಿನಲಿ ಹೆಮ್ಮಕ್ಕಳಿಪದಿರು (ಕುಮಾ.ಭೀ. ೮-೩೦): ಶ್ವಾನಗೇಕೆ ಆನೆಯ ಚೋಹವಯ್ಯ (ಸಿದ್ಧೇವ. ೦೩೬-೪೦೨) : ಜಟ್ಟಿಗನ ಚೋಹದಿಂ . . . ಗೂಢವಾಗಿ ಪಯಣಂಬೋಗಿ (ಮರಾಟ. ೨-೩೦ ವ). ೩. ಹೊಗದ ಮನೆಯಂ ಹೊಕ್ಕು ಲಲನೆಯರ ನುಣ್ಣನೆಯ ಚೋಹಕ್ಕೆ ಮನವೊಕ್ಕು (ಬಿಂಡೂರ. ೦-೨೦). [?. / ಸಂ. ಯೋಗ]

**ಜೋಹಡಿಗ** (ನಾ). ನಟ ; ಪಾತ್ರಧಾರಿ : ನುಡಿಯಿಪಂ ಮಾರ್ದಂಗಿಕಂ ಬೊಲ್ಪಿಸುಳ್ಪಿಡುವಂ ಜೋಹಡಿಗಂಬೋಲೇಂ ಕುಶಲನೋ (ರತ್ನಾಶ. ೯). [ಜೋಹ + – ಅಡಿಗ$_2$]

**ಜೋಹರ$_1$, ಜೋಹಾರ$_1$, ಜೋಹಾರು** (ನಾ). ೧. ನಮಸ್ಕಾರ ; ಪ್ರಣಾಮ : ಹಾರುವ ಹಕ್ಕಿಗೆ ಜೋಹರೆಂಬರ್ (ಸೂಕ್ತಿಸು. ೦೩-೩೦) ; ಕರಮೆತ್ತಿ ಜೋಹರೆನುತುಂ ವಂದಿಸಲ್ಕೋಡಿ ವರರಥಾರೂಢನಂ ನೃಪತಿಯಂ ಕಂಡು (ಅರಾಚ. ೯-೫) ; ಇಲ್ಲದಿದ್ದರೆ, ಬಗೆ ಮುಟ್ಟಿಯೇ ಈ ಜೋಹದ ಜೋಹರವೋ (ಮಂತ್ರಶ. ೬೩-೪). ೨. ವಿಜ್ಞಾಪನೆ ; ಬಿನ್ನಹ: ಜನಪನೆಂದನು ಕೇಳನೇಕೈಯೆನ್ನ ಜೋಹರವ (ಬಸಪು. ೪೬-೭). **ಜೋಹಾರ$_1$** : ೧. ಆತನು ಕಂಡು ಜೋಹಾರೆಂದು ಪೊಡಮಡಲ್ (ಬಸಪು. ೪೬-೫) ; ನೆಟ್ಟನೆ ಶಿವಭಕ್ತ ಜೋಹಾರ ಎಂದಡೆ (ಗಣಭಾ. ೦೪೦-೬); ಕಾಮಿನಿ ಸಹಿತ ಬರುತೆ ಕಂಡು ಜೋಹಾರೆನುತೆ ಭೂಮಿಯೊಳ್ವಂದಿಸೆ (ಪಾಸೋಪು. ೭-೬೪) ; ಅಲ್ಲಿಯ ಭಿಲ್ಲ ಜನರು ಕಂದಮೂಲ ಫಲಾದಿಗಳನ್ನು ಕಾಣಿಕೆಯಾಗಿ ಇತ್ತು ಜೋಹಾರ ಮಾಡಿ . . . ಆ ಸುಂದರಮೂರ್ತಿಗಳನ್ನು ನೋಡುವರು (ತುಳಸಿ. ೧೫೦). **ಜೋಹಾರು**: 'ಜೋಹಾರುಗೈ' ಪರಾ. [← ತೆಲು. ಜೋಹಾರು. / ಪ್ರಾ. ಜೋಹಾರ]

**ಜೋಹರ$_2$, ಜಹರ್, ಜೋಹಾರ$_2$**(ನಾ). ರಜಪೂತ ಸ್ತ್ರೀಯರು ಯುದ್ಧ ಕಾಲದಲ್ಲಿ ಶತ್ರುವಶವಾಗಬಾರದೆಂದು ಅಗ್ನಿಪ್ರವೇಶದ ಮೂಲಕ ಪ್ರಾಣತ್ಯಾಗ ಮಾಡುತ್ತಿದ್ದ ಪದ್ಧತಿ : ರಜಪೂತ ಸ್ತ್ರೀಯರು ಈ ರೀತಿಯಾಗಿ ಪ್ರಾಣಕೊಡುವ ಪದ್ಧತಿಗೆ 'ಜೋಹರ' ಅನ್ನುವರು (ಹಿಂಮುಸ. ೫೬). **ಜಹರ್**: ಬಹುಕಾಲ ಪ್ರಚಲಿತವಾಗಿದ್ದ 'ಜಹರ್' ವ್ರತವನ್ನು ಮಾಡತೊಡಗಿದರು (ಆಯುರ್ಕೀ. ೩೩). **ಜೋಹಾರ$_2$** : ರಾಜಪೂತ ರಮಣಿಯರು ಜೋಹಾರವನ್ನಾಚರಿಸಿದರು (ಅಲ್ಪವಿ. ೩). [←ಹಿಂ. ಜೋಹರ್, ಜೋಹಾರ್, ಜೌಹರ್; ಮರಾ. ಜೋಹಾರ್, ಜೌಹರ್; ಪಾರ. ಜೌಹರ್]

**ಜೋಹರಿ** (ನಾ). [ಸಂಗೀತ] ರಾಗಗಳಲ್ಲಿ ಒಂದು ಬಗೆ: ನೀಲೋತ್ಪಲಿನಿ, ಏಕಚ್ಛವಿ ಜೋಹರಿ . . . ವಸಂತಬಂಗಾಳವೆಂಬಿಪ್ಪತ್ತೆರಡು ರಾಗಗಳುಂ ಕ್ರಿಯಾಂಗದಿಂದ ಪುಟ್ಟಿದವು (ವಿವೇಕ. ೨೩೯). [?]

**ಜೋಹರಿಸು** (ಕ್ರಿ). ನಮಸ್ಕರಿಸು ; ವಂದಿಸು : ಜನಸಮುದಾಯವು ಹೊಸನ್ನ! ಹೊಸನ್ನ ! (ಜಯಜಯಾ !) ಎಂದು ಜೋಹರಿಸುತ್ತಿರಲು (ಗೂರ್ಜುಭಾ. v, ಮುನ್ನುಡಿ). [ಜೋಹರ$_1$ + – ಇಸು$_3$]

**ಜೋಹಾರ$_1$** 'ಜೋಹರ$_1$' ನೋ.

**ಜೋಹಾರ$_2$** 'ಜೋಹರ$_2$' ನೋ.

**ಜೋಹಾರು** 'ಜೋಹರ$_1$' ನೋ.

**ಜೋಹಾರುಗೈ**(ನಾ). ನಮಸ್ಕಾರಮಾಡು; ವಂದಿಸು: ಸಾರಿ ದಧಿಮುಖನ ನಿತಱೊಳು ಜೋಹಾರುಗೈದಮರೇಂದ್ರಪೌತ್ರ . . . ಅಚ್ಚರಿಯನುಸುರಿದನು (ಅನಂರಾ. ೪-೬-೦೦). [ಜೋಹಾರು (<ಜೋಹರ$_1$) + ಕೈ$_1$ (<ಕೆಯ್$_1$)]

**ಜೋಹು** (ನಾ). ಭಲೆ, ಭೇಷ್ ಎಂಬ ಹೊಗಳಿಕೆಯ ಮಾತು: ಜೋಹು ಬಿರುಬಿರು ಕಣ್ಣ ಕೆಂಪಿಗೆ ಜೋಹು ನಿನ್ನೀ ಬಾತ ಬಸುಱಿಗೆ ಜೋಹು ಜೋಹೀ ಬಡಿವ ಕೈಕಾಲುಬ್ಬಸಂಗಳಿಗೆ (ಕಾಶಿರಾ. ೩೪-೪೨). [?]

**ಜೋಳ** (ನಾ). ೧. ಒಂದು ಬಗೆಯ ಧಾನ್ಯ : "ಜೋಳಂ ಕಳಿಕಂ ಯವ ನಾಳಂ" (ವಸ್ತುಕೋ. ೯೪-೦೬) : ಕಾಯ್ದೋಡಿನ ಜೋಳದಂತಲರ್ದೊಡಾ ಕಂಪುಂ ಮನಸ್ಸಾಪವುಮಂ ಪುದಿದೆತ್ತಂ ಬರೆ (ಕಾವ್ಯಸಾ. ೫೮೮ ಕುಂದ್ರಳ); ಹುರಿಗಡಲೆಯಂತಾನುಂ ಕಾಯ್ವಾಱದೋಡಿನ ಜೋಳದೊಳ್ಕರಲ ಲರುವಂತಾನುಂ (ಶಾಂತಿಪು. ೭-೯೨) ; ಕಸಱೊಳ್ ನೆಲ್ ಬೆಳೆಗುಮಲ್ಲದೆ ಜೋಳಂ ಬೆಳೆಯಲಱಿಯದು (ಧರ್ಮಾಮೃ. ೧೦-೧೪೦) ; ಮಣಸು ಹುಳಿ ತೊಡೆ ಜೋಳದಿಂ ಕುಂದೆ (ಹಡಕಾ. ೧೦-೧೯) ; ಜೋಳದಾ ಬೋನಕ್ಕೆ ಬೇಳೆಯಾ ತೊಗೆಯಾಗಿ (ಸರ್ವಜ್ಞ. ೦೬೦೭); ಒಮ್ಮತ್ತರ್ಗೆ ಇರ್ಕ್ಕೊಳ ಜೋಳಂ ಕುಡುವುದು (ಇಆ. X, ೦೬೭-೪; 7ನೆಯ ಶತ). ೨. ಅನ್ನದ ಹಂಗು; ಉಪ್ಪಿನ ಋಣ : ತಳ್ತಱಿಯದಿರ್ದೊಡೆ ಜೋಳಮನೆಂತು ನೀಗುವೆಂ (ಪಂಪಭಾ. ೦೦-೪೨) ; ಜೋಳದೊಳಾದ ಪಾಟಿಗಂ ಪತಿಹಿತವೃತ್ತಿಗಂ ಜಸಕಮಿನ್ನೆನಗಾಸೆವಡಲ್ಕೆ ಬರ್ಕುಮೇ (ಶಾಂತಿಪು. ೩-೭೦); ಜೋಳದ ಲೆಕ್ಕಮಂ ಕಳೆದೆ ನಾಂ (ಬಂಹರಿ. ೦೨-೧೯). ೩. ವೇತನ; ಸಂಬಳ : ತೋಳೊಂದಕೆ ಹನ್ನೆರಡು ಸಾವಿರ ಹೊನ್ನ ಜೋಳವ ಕೊಂಬ ರಾವುತರ ಮೇಳದಿಂದವಳೊಡನೆಯ್ತಂದರು ಸುರುತಾಳನ ಮೆಯ್ಗಾವಲವರು (ಕುರಾಸಾಂ. ೪೨-೪೭).

**ಜೋಳಕ್ಕೆ ತಪ್ಪು**=ಋಣ ತೀರಿಸದಿರು ; ಕೃತಘ್ನನಾಗು: ಪಾಟಿಯ ನೊಕ್ಕಾಳ್ದನ ಗೆಯ್ದ ಸತ್ಕೃತಮುಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಮಿಂ ಬಾಪ್ಪುದೆ (ಪಂಪಭಾ. ೯-೬೪). **ಜೋಳದ ಪಾಟಿ, ಜೋಳದ ಪಾಳಿ**=ಅನ್ನದ ಋಣ ; ಅದಕ್ಕಾಗಿ ಸಲ್ಲಿಸುವ ಸೇವೆ ; ಉಪ್ಪಿನ ಹಂಗು : ಜೋಳದ ಪಾಟಿ ನಿಜಾದಿನಾಥನಾಹವದೊಳರಾತಿನಾಯಕರ ಪಟ್ಟನೆ ಪಾಱಿಸೆ (ಪಂಪಭಾ. ೦೪-೫೦) ; ತಾವಿರ್ವರುಂ ಕಯ್ದುವಂ ಬಿಸುಟರ್ ಜೋಳದ ಪಾಟಿಯಂ ಬಗೆದುದಿಲ್ಲಾ ದ್ರೌಣಿಯುಂ ದ್ರೋಣನುಂ (ಗದಾಯು. ೨-೦೧); ನಿರುತಂ ಜೋಳದ ಪಾಟಿಗೆನ್ನಸುವನಿತ್ತಾ ಖ್ಯಾತಿಯಂ ತಾಳ್ದುವಂ (ನೇಮಿಪು. ೦೨-೦೪೫); ಜೋಳದ ಪಾಳಿಯ ಬಗೆದು . . . ಘೋಳಾಯಿಲರು ಪೋಯಂದೇಱಿದರಂದಾಳಿ ತುರಗ ವೋಹರದೊಳು (ಕುರಾಸಾಂ. ೦೨-೦೯); ರಾಜಭಕ್ತಿ, ಜೋಳದ ಪಾಳಿ, ಆತ್ಮಾಭಿಮಾನ ಇತ್ಯಾದಿಗಳೊಂದೂ ನಿಮಗೆ ಇಲ್ಲವೇ ಇಲ್ಲವೆ (ಮಂತ್ರಶ. ೦೩-೫). **ಜೋಳದ ಬರ**=ದೊಡ್ಡ ಬರ: ಮೂರು ವರ್ಷದ ಬರ ಅಥವಾ ದೊಡ್ಡ ಬರ, ಜೋಳದ ಬರಗಳನ್ನು ಕಂಡಿದ್ದರು (ನನ್ನೂರು. ೦೯೨). **ಜೋಳದ ಹಂಗು** = ಜೋಳದ ಪಾಳಿ : ವಿವೇಕಭ್ರಷ್ಟನಾದ ಪ್ರಭುವಿನ ಜೋಳದ ಹಂಗಿಗಾಗಿ ಅವನ ಮೇಲೆ ಕನಿಕರಿಸಿ (ನಂಜುಂಡ. ೮೫). [ದ್ರಾ. ತಮಿ. ಮಲ. ಚೋಳ್ ; ತುಳು. ಜೋಳ ; ತೆಲು. ಜೊನ್ನ ; ಕೊಡ. ಜೋಳ ; ಕೋಲಾ. ಸೊನ್ನ ; ಪರ್ಜಿ. ಜೆನ್ನ ; ಗಡಬ. ಜೋನೆಲ್. / ಸಂ. ಯವನಾಲ ]

**ಜೋಳಗಳ್ಳ** (ನಾ). ಅನ್ನದ ಋಣ ತೀರಿಸದವನು; ಕೃತಘ್ನನಾದವನು: ನಿಜಾಧಿಪಂ ಬೆಸಸಿದೇರ್ಚ್ಚಿಗಸನಂ ಕುಸಿದಿರ್ಮ್ಮಿ ಕೇಳ್ದು ಬಾಳ್ವಱಿಪನವ್ವ ಸ್ಥಿತನನೊರ್ಬ್ಬಿಗಸಕಳ್ಕುವ ಜೋಳಗಳ್ಳರಂ ಪಱಿಯಡೆಯಲ್ಲದೊಳ್ಪರೆಯು ತಿರ್ಪ್ಪುದು ಮಾವನ ಗನ್ಧಹಸ್ತಿಯಂ (ಎಕ. II, ೧೩೪-೩೨ ; 982).

[ ಜೋಳ + ಕಳ್ಳ$_1$ ]

**ಜೋಳಗೆ** 'ಜೋಳಿಗೆ' ನೋ.

**ಜೋಳಪರಿ** (ನಾ). ಒಂದು ಬಗೆಯ ಶಿಬಿರ,-ಗುಡಾರ (?) : ಆಪ್ಪುದ ಕೊಂಚೆಯಂ ತವಾಳದ ಪರಿವೆತ್ತ ಜೋಳಪರಿ ತಳ್ತದಿರ್ಮುತ್ತಿಯ ಕುಪ್ಪ ವೊಪ್ಪಿ ತೋಱದವು ಮನೋಜರಾಜ ಶಿಬಿರಂಗಳೆಂಬಿನಂ (ಚಂದ್ರಪು. ೭-೬೨) ; "ಕೂಡಿಕೆಯ ಅಂದ, ರಚನಾರೀತಿ" (ಪ್ರಭಪ್ಪ). [ ? ]

**ಜೋಳವ್ಯೆಲಿ** (ನಾ). ಜೋಳದ ಕಾಳಿನಂತೆ ಗುಳ್ಳೆಗಳೇಳುವ ಒಂದು ಬಗೆಯ ಸಿಡುಬು ರೋಗ; ಸೀತಾಳೆ ಸಿಡುಬು: (ಕ). [ಜೋಳ+ವ್ಯೆಲಿ$_1$]

**ಜೋಳಯ** 'ಚೂಳಿಯಂ' ನೋ.

**ಜೋಳವಾಳಗೆ** (ನಾ). ಅನ್ನದ ಋಣಕ್ಕಾಗಿ ಸಲ್ಲಿಸುವ ಸೇವೆ: ರಾಮಯ ನಾಯಕನ ಜೋಳವಾಳಗೆಗೆ ಮೆಚ್ಚಿ (ಎಕ. VIII, ಸಾಗರ. ೨೭-೦೩; 1241 ?).

[ <ಜೋಳವಾಟಿ ]

**ಜೋಳವಾಳಿ** 'ಜೋಳವಾಟಿ' ನೋ.

**ಜೋಳವಾಳಿತನ** (ನಾ).=ಜೋಳವಾಳಗೆ: ನಿರುತದಿಂ ಜೋಳವಾಳಿತನಕ್ಕೆ ನಿನ್ನನಾಂ ಸೇವಿಸಿದೊಡೆ (ಅರಾಚ. ೯-೨೫).

[ ಜೋಳವಾಳಿ (<ಜೋಳವಾಟಿ) + – ತನ ]

**ಜೋಳವಾಟಿ, ಜೋಳವಾಳಿ, ಜೋಟವಾಳಿ** (ನಾ). ೧. ಒಡೆಯನ ಋಣ ; ಉಪ್ಪಿನ ಹಂಗು; ಅನ್ನದ ಋಣ : ಸೆರಗಂ ಬೆರಗಂ ಬಗೆಯದೆ ಪೊರೆದಾಳ್ದನ ಜೋಳವಾಟಿ ನಿಲೆ . . . ಪರಿದುಪುಭಯ ಬಲದ ಹಯಂಗಳ್ (ಪಂಪರಾಮಾ. ೦೩-೫೭) ; ಜೋಳವಾಟಿಯು ನಿರ್ವಹಣದ ನಿಬ್ಬಣಕ್ಕೆ ಬೀರಸಿರಿ ಪೊತ್ತ ಪೊಂಗಳಸದಂತೆ (ಅನಂಪು. ೧೧-೭೪ ಪ). **ಜೋಳವಾಳಿ**: ಕಾಲಾಳಿರ್ಪ್ಪರನಿಱಿದು ಜೋಳವಾಳಿಯನೆಱಿದ ಬಾಸಿ . . . ಜೀವಿತವಾಗಿ ನಿಲಿಸಿದ (ಮ್ಯಆರಿ. ೦೯೩೪, ೦೨-೭ ; 1117) ; ಸಿರಿವಳಲ ಬಾಕಗಾಉದ ಜೋಳವಾಳಿಗಂ ವಾ[ ವೇ ? ]ಳೆವಾಳಿಗಂ ಸುರಲೋಕ ಪ್ರಾಪ್ತನಾದ (ಮ್ಯಆರಿ. ೦೯೩೭, ೨೨-೯; ಕು. 1560); ಕವಡೆಯ ಬಿಂವಂ ಜೋಳವಾಳಿ ವಳ ವಾಳಿಯಂ ಮೆಱದಿದಿರಾಂತು . . . ಸುರಲೋ[ಕ] ಪ್ರಾಪ್ತನಾದ (ಎಕ. VIII, ಸಾಗರ. ೦೨೫-೦೨ ; 1216) ; ಸಲಹಿದೊಡೆಯನ ಜೋಳವಾಳಿಗೆ ತಲೆಯ ವಾಱುವುದೊಂದು ಪುಣ್ಯದ ಫಲವು (ಕುವ್ಯಾಕ. ೨೭-೯) ; ಜೋಳ ವಾಳಿಯು ಹೊಲ್ಲ ಕೀಳಿನೊಳು ಇರ ಹೊಲ್ಲ (ಸರ್ವಜ್ಞ. ೦೪೫೩) ; ಕರ್ಣನ ಜೋಳವಾಳಿಯೋ ನಿರತಿಶಯ ಜಾಗವೊ ಮನಂಬುಗೆ (ಗಿಲವಿಂ. ೯೯-೦೪). ೨. ಧಣಿಯ ಋಣವನ್ನು ತೀರಿಸುವವನಂ: ಜೋಳವಾಳಿಯಾನಲ್ಲ ವೇಳೆ ವಾಳಿಯವ ನಾನಯ್ಯ (ಬಸವ. ೬೯೮). △ **ಜೋಟವಾಳಿ** : ೧. ತಳಿತ್ತಿಱಿದು ದೊಡೆಯನ ಜೋಟವಾಳಿಯಂ ಬಾಂಗಿಸಿ (ಚೂಂಕಪಾ. ೧೯೪೦, ಸಿರಸಿ. ೫೬-೯ ; ?). [ ಜೋಳ + ಪಾಟಿ ]

**ಜೋಳವಿಸು** 'ಜೋಳಿಸು' ನೋ.

**ಜೋಳಿ$_1$** (ನಾ). ೧. ಸಮಾನ ; ಸಾಟಿ : "ಸರಿ, ದೊರೆ, ಪಡಿ . . . ಜೋಳಿ, ಹೊಯ್ಕೆಯ್, ಹೋಟಿ, ಸಂಗಡಂ ಈ-೧೮ ಸಮಾನಕ್ಕೆ ಪೆಸರ್" (ಕಕಸಾ. ೦೫-೨೯೦) ; "ಜೋಳಿ ಬುಧರಿನಕ್ಕುಂ ಸಮನುಂ" (ಕವಿಕಂ. ೦೩೭). ೨. ಜೊತೆ ; ಜೋಡು ; ಯುಗಲ : "ಜೋಳಿಯನೆ ಯುಗ್ಮ" (ಕಕಶ. ೧೪). ೩. ಗುಂಪು ; ಸಮೂಹ : ನಾಟಕದ ಪಾತ್ರದ ಪೇರಣೆಯ ಜೋಳಿಗಳ ಜೋಕೆಗಳ ಪ್ರಕಟವೆಸೆಯಲು (ಬಸಪು. ೪-೭): ಜೋಳಿ ಜೋಳಿಯೊಳು ಜ್ಯೋತಿಷ್ಮಕಾಂತೆಯರ್ . . . ಲೀಲೆಯೊಳೊಪ್ಪಿ ದರಲ್ಲಿ (ಶ್ರೀಪಾಲ. ೧೪-೭೬) ; ಜೋಳಿ ಜೋಳಿಯೊಳೆಱಗುವ ಸಕಲರ ಮಕುಟಾಳಿ ಮಾಣಿಕ್ಯ ದೀಪ್ತಿಗಳ (ಮೋಹತ. ೩೦-೭೦).

[ <ಜವಳಿ$_2$ ]

**ಜೋಳಿ$_2$** (ನಾ). ಬೈತಲೆಮಣಿ : ಪೂವಿನ ಜೋಳಿಯಂ ಪೊಳೆವ ಪೂವಿನ ಚೌಕಳಿಯಂ ವಧೂಜನಂ . . . ಅಂತುದರ್ಥಿಯಿಂ (ಚಾಥಪು. ೦೪-೦೦೨).

[ <ಚೂಳಿಯ ]

**ಜೋಳಿ$_3$, ಝೋಳಿ** (ನಾ). = ಜೋಳಿಗೆ : ಕಂಬಳಿಗೋಳ ಕಲ್ಲಿಯ ಜೋಳಿಗಳ ಗೋಪಾಲಕರು ಬಂದೆಱಗಿ ಬಿನ್ನೈಸಿದರು (ಜೀವಂಚ. ೭-೫). **ಝೋಳಿ**: ಆಗ ಚರರೂ ಝೋಳಿ ಕಿತ್ತುಕೊಂಡಾರು ಬಿಚ್ಚಿ ನೋಡಲು (ಶನಿಮಾ. ೨೫).

[ ←ಮರಾ. ಝೋಳೀ ; ಹಿಂ. ಝೂಲೀ./ತಮಿ. ಚೋಳಿ ; ತುಳು. ಜೋಲಿ, ಜೋಳಿ ]

**ಜೋಳಿ$_4$** 'ಜೂಳಿ' ನೋ.

**ಝುಂಪಿಸು$_3$** 'ಜೊಂಪಿಸು$_2$' ನೋ.

**ಝುಂಪು** 'ಜೊಂಪು$_1$' ನೋ.

**ಝುಂಪೆ** (ನಾ). [ಸಂಗೀತ] ಒಂದು ತಾಳದ ಹೆಸರು: ತ್ರಿವಿಡಿ ಚಚ್ಚರಿ ಝುಂಪೆಯಟಿಯೇಕತಾಳಮಂ ವಿವರವಱಿತುಂ ತಾಳಧಾರಿಗಳು ನುಡಿಸೆ (ಪ್ರಭುಪು. ೨-೬೭) ; ಆದಿತಾಳದಿಂದ . . . ಝುಂಪೆ, ತ್ರಿವುಡೆ, ಅಷ್ಟ, ಏಕ ತಾಳಗಳು ಹುಟ್ಟಿದವು (ಯಕ್ಷಗಾ. ೨೩). [ ಸಂ. ಝಂಪಾ ]

**ಝುಂಪೆಯ** (ನಾ). = ಝುಂಪೆ ೧ : ರಚ್ಚೆಯ ಮಟ್ಟೆಯ ಪಡಿಮಟ್ಟೆಯ ಝುಂಪೆಯುಮಡ್ಡತಾಳರೂಪಕಮೆಕ್ಕತಾಳಂಗಳೆಂಬ ಸಪ್ತ ತಾಳಂಗಳಂ ನಿವರ್ತನಗೆಯ್ದು (ಧಾಧಪು. ೯-೧ ವ). [ <ಝುಂಪೆ ]

**ಝುಕಾರ** (ನಾ). = ಝು ೧ : ಝುಕಾರಕ್ಕೆ ಜಕಾರಂ—ಝುಗಟಾ – ಜಗಳೆ (ಶಮದ. ೨೫೫ ಪ್ರಯೋ). [ ಸಂ. ]

**ಝುಕಾಸ** (ಗು). (ಉಕ) ೧. ಚೆನ್ನಾಗಿರುವ ; ಸುಂದರವಾದ : ಆಕೆಗೆ ಝುಕಾಸ ಸೀರಿ ತಂದಿನು (ಸುವರ್ಣ. ೩೨೭). ೨. ಉತ್ತಮ ; ಪ್ರಶಸ್ತ : ಮಾವನ ಆಯಾರಕೀತ ಝುಕಾಸ ಏತಿ ಏಳ (ವಿಸರ್ಗ. ೨೭೦).

[ ←ಮರಾ. ಝುಕಾಸ್ ]

**ಝುಕ್ಕಿಸು** (ಕ್ರಿ). ಸೋಲೊಪ್ಪು ; ಕೀಳಾಗು : ಇವರ ಅಗ್ನಿಸೇವೆಗೆ ಯಾವ 'ಪುರೋಹಿತ'ನೂ ಝುಕ್ಕಿಸಿದನೆಂದುಕೊಂಡ (ಸಮುಜೀ. ೨೯೮); ಬಣ್ಣಾ ಒಂದು ಇದ್ದಿದ್ರ, ನಿಮ್ಮ ತರಹದ ಹುಡುಗಿಯರು ಅವಳ ಮುಂದೆ ಝುಕ್ಕಿಸಿದರು (ತೇರು. ೫೮).

**ಝುಕ್ಕಿಸಿ ಹೋಗು** = ಸೋತುಹೋಗು ; ಪರಾಜಯ ಹೊಂದು : ಈ ಟ್ರಾಜಿಡಿ ಮುಂದೆ ಷೇಕ್ಸ್‌ಪಿಯರಿನ ಟ್ರಾಜಿಡಿ ಕೂಡ ಝುಕ್ಕಿಸಿ ಹೋಯಿತು (ಹುಡ್ಯಾಟ. ೫೦).

[ ಝುಕ್ಕ್$_0$ (P ←ಮರಾ. ಜಕ್ಕತ್) + – ಇಸು$_3$]

**ಝುಕ್ಕುಳಿಸು** 'ಜಕ್ಕುಲಿಸು' ನೋ.

**ಝುಗ** 'ಝುಗ್ಗೆ$_2$' ನೋ.

**ಝುಗಝುಗಿಸು, ಝುಗಿಝುಗಿಸು** (ಕ್ರಿ). ಹೊಳೆ ; ಪ್ರಕಾಶಿಸು : ಝುಗ ಝುಗಿಸಿ ಹೊಳೆಹೊಳೆವ ಬಾಯ್ಮಾರೆಗಳ ಬೆಳಗಿನ ಧಾಳಿ ಧೀಂಕಿಡೆ (ಕುಮ್ಯಾಭೀ. ೮-೫೦) : ಯೋಗಿಗಳ ಹೃದಯದೊಳು ಝುಗಝುಗಿಪ ದೇವಿಯರು (ವೀಶ್ಯಪು. ೨-೭-೫೭) ; ಬಗಿದ ಡವಾಣದಲೊಂಟೆಗಳಗಣಿತ ಝುಗ ಝುಗಿಸುವ ಕಾಂತಿಯಿಂದ (ಕಂಸವಿ. ೦೦-೩೭). **ಝುಗಿಝುಗಿಸು** : ರುದ್ರ ವಿಷ್ಣು ಬ್ರಹ್ಮಾದಿಗಳ ಪತ್ತನಂಗಳನಾಂತ ಪೆರ್ಮೆಯಿಂ ಝುಗಿಝುಗಿಸುವಾ ಮಹಾಕನಕಗಿರಿಯು (ಹಲಪು. ೨-೯); ಝುಗಿಝುಗಿಪ ಮಕುಟಧರ (ವಿದಾಕ್ಯ. ೩೦-೨). [ <ಝುಗ + – ಇಸು$_3$ ]

**ಝುಗನೆ** (ಅ). ಹೊಳಪಿನಿಂದ ಕೂಡಿ; ಕಾಂತಿಯುಕ್ತವಾಗಿ : ಝುಗನೆ ಬೆಳಗುವ ತನ್ನ ವಜ್ರಾಯುಧವನಬ್ಬರದೆ (ರಘುವಂ. ೨-೩೦).

[ ಝುಗ (<ಝುಗ್ಗೆ$_1$) + – ಅನೆ$_1$ ]

**ಝುಗಳೆ** 'ಜಗಳೆ' ನೋ.

**ಝುಗಾ, ಝುಂಗೆ$_1$** (ನಾ). ೧. ಸ್ತ್ರೀಯರ ಒಂದು ಬಗೆಯ ಉಡುಪು ; ಕೊರಳಿನಿಂದ ಕಾಲಿನವರೆಗೂ ಬರುವ ಲಂಗ: ನೀ ಮುಂದಿನ ಜಲ್ಮಕ್ಕ ಬರೋದರೊಳಗ, ಪೋಲಕಾ, ಝುಗಾ ಬಂದಿರತಾವೇಳು (ಹೊಸಂಸಾ. ೭೦). **ಝುಗೆ$_1$** : ೧. ಆಕೆ ಹೊಸ 'ಝುಗೆ' ಉಟ್ಟುಕೊಂಡರೆ . . . ಬಯಕೆ ಕೆರಳುತ್ತದೆ (ಬನಸಿ. ೦೯). ೨. ಹೊದಿಕೆ; ಆವರಣ: ಹರಿಗೆ ಕೆಂಪಿನ ಝುಗೆ ಸುರಾಂಗನೆಯರಿಗೆ ಸುಭಟವ್ರಜಕೆ ಕುಂಟಣಿ ವರದಿಗಂಗನೆಯರಿಗೆ ಬೈತಲೆಗೆ ಸೇಸಿಂದೂರ (ಕುಮ್ಯಾಭೀ. ೪-೭); ಲೋಹಸೀಸಕವಡಸಿ ಬಲ್ಲೆಹ ಬಗಿದು ನಟ್ಟುದು ಸರಪಣಿಯ ಝುಗೆಯು (ಕುಮ್ಯಾಭೀ. ೪-೫೯).

[ ←ಮರಾ. ಝುಗಾ ]

**ಝುಗಿಝುಗಿಸು** 'ಝುಗಝುಗಿಸು' ನೋ.

**ಝುಗಿಸು** (ಕ್ರಿ). = ಝುಗಝುಗಿಸು : ರದನಗಳು ಝುಗಿಪ ರನ್ನಗಳಾಳಿಯಂದದಿ ಸೊಗಯಿಸಲು (ಕವಿಚ. III, ೨೧೪. ಹರಿಲೀಲಾಮೃತ ಸಾರ) ; ಮುಗಿಲೆ ಮುಗಿಲೇ . . . ಝುಗಿಸಿ, ಗದರಿಸಿ ಜಗವ ಬೆದರಿಸಿ, ಮುಗಿಲೆ! ನೀನೇಂ ಮಾಡುವೆ ? (ಕಎಕು. ೨೯-೦).

[ ಝುಗ (<ಝುಗ್ಗೆ$_2$) + – ಇಸು$_3$ ]

**ಝುಗೆ$_1$** 'ಝುಗಾ' ನೋ.

**ಝುಗೆ$_2$, ಝುಗ** (ನಾ). ಹೊಳಪು ; ಪ್ರಕಾಶ : ಅಂಬಿನ ಝುಗೆಯ ಝುಳದಲ್ಲಿ ಮುಳುಗಿ ಮೋನದೊಳಿರ್ದನಾ ಕರ್ಣ (ಕುಮ್ಯಾಕ. ೪-೦೩) : ಬಂಧುಗಳಿಗೊಲಿದಿತ್ತನ್ . . . ಸೆಂದುರ ಹಳದಿ ಬೂದಿ ಪಚ್ಚೆಯ ಝುಗೆಗಳಂಬರವ (ಅಕ್ರೂಚ. ೮-೪೩). **ಝುಗ** : 'ಝುಗಿಸು' ಪರಾ.

ಝುಗಝುಗ (ದ್ವಿರುಕ್ತಿ): 'ಝುಗಝುಗಿಸು' ಪರಾ. [ ? ]

**ಝುಗ್ಗನೆ** (ಅ). ರಭಸವಾಗಿ ; ತಟ್ಟನೆ ; ಕೂಡಲೆ : ರಾಜರುಗಳೆಲ್ಲ ಭಯಭಕ್ತಿಗಳಿಂದ ಝುಗ್ಗನೆ ಎದ್ದು (ಸೌಗಂಧಿ. ೨೩೯-೭). [ಝುಗ್$_0$ + – ಅನೆ$_1$]

**ಝುಗ್ಗೆನ್ನು** (ಕ್ರಿ). ೧. ಝುಗ್ ಎಂದು ಶಬ್ದಮಾಡು. ೨. (ಆಲಂ) ಒಮ್ಮೆಲೆ ಅಂಜು ; ತಟ್ಟನೆ ಬೆಚ್ಚು ; ಗಾಬರಿಗೊಳ್ಳು : ಗೌಡರನ್ನು ಕಂಡತಕ್ಷಣವೇ ಮಲ್ಲಮ್ಮನ ಮನಸ್ಸು ಝುಗ್ಗೆಂದಿತು (ಗೋಪುರ. ೦೫೫).

[ ಝುಗ್$_0$ + ಎನ್ನು (<ಎನ್$_1$) ]

**ಝುಜ್ಜರ** 'ಜಜ್ಜರ' ನೋ.

**ಝುಜ್ಜರಂಪೋಗು** (ಕ್ರಿ). ಶಿಥಿಲವಾಗು; ಜರ್ಜರಿತವಾಗು: ಎಲುವಡದು ಮನವು ಝುಜರಂಬೋಗಿ ಲಿಂಗದಲ್ಲಿ ನೀರು ನೀರಾಗಿ ಬೆರಸಬೇಕು (ಶದಗೋ. ೦೬೭-೦೪). [ ಝುಜ್ಜರ (<ಜಜ್ಜರ) + ಪೋಗು$_1$ ]

**ಝುಟತಿ** 'ಝುಡಿತಿ$_1$' ನೋ.

**ಝುಟಪಟ, ಜಟಪಟ** (ಅ). ಬೇಗನೆ; ತಟಕ್ಕನೆ; ಚಟ್ಟನೆ : ಜೀವನದೀ. ಚಿತ್ರಪಟ ತೆರೆಮರೆಗಳ ಆಟದಲ್ಲಿ ಉರುಳುತಿಹುದು ಝುಟಪಟ (ಅರಳು. ೩೫-೨೦). **ಜಟಪಟ**: "ತಟಕ್ಕನೆ, ಚಟ್ಟನೆ" (ಜಾನಕೋ. ೫೮).

[ ←ಹಿಂ. ಮರಾ. ಝುಟ್‌ಪಟ್. / ಪ್ರಾ. ಝುಡಪ್ಪಡ ]

**ಝುಟಿ** (ನಾ). ಗಿಡ ; ಪೊದರು. [ ಸಂ. ]

**ಝುಟಿತೆ** 'ಝುಡಿತಿ$_1$' ನೋ.

**ಝುಟಿಲ್** (ನಾ). ಒಂದು ಅನುಕರಣ ಶಬ್ದ : ಕಟಿಗಣ್ಣು ಝುಟಿಲೆಂದು ಪಾವುಗೆಗಳ ದನಿ ನಟಿಸಿ ಮೆಲ್ಲನೆ ಪೆಜ್ಜೆಯಿಡುವ (ಭರತ. ೪-೪).

**ಝುಟಿ** (ನಾ). ಕಿರುನೆಲ್ಲಿಗಿಡ : "ಝುಟಾ, ಅಮಲಾ . . . ತಾಮಲಕೀ–೭ ಕಿರುನೆಲ್ಲಿಗಿಡದ ಹೆಸರು" (ಸಿದ್ಧಾಂತಿ. ೧೨೪). [ ಸಂ. ಝುಟಾ ]

**ಝುಟ್ಟನೆ** (ಅ). ಕೂಡಲೆ ; ತಕ್ಷಣ : ಝುಟ್ಟನೆ ತೀರಿಸಿ ಬಂದು ಬಿಡು (ದೀಪಹ. II, ೭). 'ಜಟ್ಟನೆ' ಪರಾ. [ ಝುಟ್$_0$ + – ಅನೆ$_1$ ]

**ಝುಟ್ಟಿ** 'ಜಟ್ಟಿ$_1$' ನೋ.

**ಝುಟ್ಟಿಂಗ** 'ಜಟ್ಟಿಂಗ' ನೋ.

**ಝುಡತಿ, ಜಡತಿ, ಜಡ್ತಿ, ಝುಡಿತಿ$_2$, ಝುಡ್ತಿ** (ನಾ). ಹುಡುಕುವುದು ; ತಪಾಸಣೆ ; ಶೋಧನೆ ; ತನಿಖೆ : ಮತ್ತೆ ಮನೆಯ ಝುಡತಿಗೆ ಸುರುವಾಯಿತು (ಸಂಟಗ. ೨); ಬೇಕಾದರೆ ನಮ್ಮ ಚೀಲಗಳನ್ನೆಲ್ಲ 'ಝುಡತಿ' ಮಾಡಿ ನೋಡಿರಿ (ರಂಗರೋ. ೫); ಅವಳೇ ಜೇಬನ್ನು ಝುಡತಿ ಮಾಡುತ್ತಾಳೆ (ಸಮಾಲೋ. ೫೭). **ಜಡತಿ** : ಹಾಗೆ ಮಾಡುವ ಮುಂಚೆ ನಮ್ಮ ಸಾಮಾನುಗಳನ್ನೆಲ್ಲ ಜಡತಿಮಾಡಲಾರಂಭಿಸಿದರು (ಪ್ರವಾಶ. II, ೭೩); ಇನ್ಸಪೆಕ್ಟರನು ಮನೋಹರನನ್ನು ಜಡತಿ ಮಾಡಿದ (ಕೊತಶಾ. ೫೯). **ಜಡ್ತಿ** : ಸೊಗಸಾಗಿ ಬರೆದಿರ್ದ ಲೆಕ್ಕದಾ ಜಡ್ತಿ[ಪಾಠಾಂ. ಜಡತಿ]ಗತಿಮಿಗಿಲಾಗಿ ತೋರಿಸಲು (ಪ್ರಾರ್ಥರಾ. ೧೭-೭) ; ಲೆಕ್ಕಪತ್ರ ಮುಂತಾದನ್ನು ಜಡ್ತಿ ತೆಗೆದುಕೊಳ್ಳುತ್ತ

(ಎಶ್. I, ೦೭-೨೭; 1820); ಮನೆಗೆ ಹೋಗಿ . . . ಜಡ್ತಿಮಾಡಹತ್ತಿದರು (ಕೊತಕಾ. ೫೯). ಝುಡಿತಿ₂: ಕಾಳಕಡಿ ಕಿರಾಣಿ ಅರಳಿ ಮುಂತಾದ ಮಾರಾಟಕ್ಕೆ ಬಂದ ಜಿನಸುಗಳ ಮತ್ತು ಬಾರದಾನೆಯು ಝುಡಿತಿ ಇಡುವುದು (ಮುಂಬವ್ಯಾ. ೨೭೯). ಝುಡ್ತಿ: ಲಿಂಗನ ಮನೆಯನ್ನು ಝುಡ್ತಿ ಮಾಡಲಾಗಿ ಅದರಲ್ಲಿ ಅಡಿಗೆ ಉಗ್ರಾಣದ ಸಾಮಾನುಗಳ ಹೊರತು ಮತ್ತೇನೂ ಇರಲಿಲ್ಲ (ಕಲಿಸ. ೦೦೬); ಅದ್ದಬಂದು ಜೇಬನ್ನೇ ಝುಡ್ತಿ ಮಾಡುತ್ತವೆ (ದಿಲ್ಲಿಪ. ೬೨). [ ←ಹಿಂ. ಮರಾ. ಝುಡತೀ ]

**ಝುಡಪ, ಜಡಪ** (ನಾ). ೧. ಹೆಚ್ಚಾದ ವೇಗ ; ಶೀಘ್ರತೆ : ಪಡಿಮುಖ ದಲೊದಱುವ ಕಿಡಿಯ ಘಂಟಾರವದ ರಭಸದ ಝುಡಪದಲಿ ಜೋಡಿಸಿದ ಶಕ್ತಿಯಲಿಟ್ಟನವನೀಶ (ಕುವ್ಯಾ.ಕ. ೩-೬೬). ೨. ಗದಾಯುದ್ಧದಲ್ಲಿ ಒಂದು ಪಟ್ಟು,-ವರಸೆ : ಬಿಡುವ ಬಿಡಿಸುವ ಪರರ ಘಾಯವ ತಡೆವ ಗೋಮೂತ್ರಕದ ಚಿತ್ರದ ಝುಡಪದವಧಾನದ .. . . ಕುಶಲದಲಿ ಕಾದಿದರು ಸಮರದಲಿ (ಕುವ್ಯಾ.ಗ. ೬-೨೯). ಜಡಪ: ೩. ಚಳಕವುಳ್ಳವನು; ವೇಗಶಾಲಿ : ಕಡುಗಲಿಗಳೇಱಾಟದಲಿ ಮಿಗೆ ಜಡಪರಾದರು ಖಡ್ಗ ಹಸ್ತದಿ ಬಿಡುವವರ ರೇವಂತರಗ್ಗಳರಾದರ್ಶೆಯವರು (ಸಂಭಪ. ೦೮-೨). [ <ಪ್ರಾ. ಝುಡಪ್ಪ ]

**ಝುಡಪಿಸು** 'ಝುಳಂಪಿಸು' ನೋ.

**ಝುಡಪು** 'ಝುಳಪು' ನೋ.

**ಝುಡಾವು** (ನಾ). ರತ್ನದ ಹರಳಂಗಳನ್ನು ಕೂಡಿಸಿದುದು ; ರತ್ನ ಖಚಿತವಾದುದು : ಮಾತೃಶ್ರೀಗಳು ಬಹಳ ಹರುಷಿತರಾಗಿ ಆಶೀರ್ವಾದ ವನ್ನು ಮಾಡಿ ಝುಡಿತ ಝುಡಾವು ನವರತ್ನ ಸುವರ್ಣಪುಷ್ಪ ಮೊದಲಾದು ವನ್ನು ನಿವಾಳಿಸಿ (ಬಖೈರು. ೦೦). [ ←ಮರಾ. ಜಡಾವ್ ]

**ಝುಡಿ₁** 'ಜಡಿ₁' ನೋ.

**ಝುಡಿ₂** 'ಜಡಿ₂' ನೋ.

**ಝುಡಿ₃** 'ಜಡಿ₃' ನೋ.

**ಝುಡಿತ** 'ಜಡಿತ' ನೋ.

**ಝುಡಿತಿ₁, ಜಡಿತಿ, ಜಡಿತೆ, ಝುಟತಿ, ಝುಂಟತೆ, ಝುಡಿತೆ** (ನಾ). ಬೇಗ ; ತ್ವರೆ : ಕೆಳದಿಯರು ಝುಡಿತಿಯಾಗಿ ಮಂದಿರದ ಬಾಗಿಲೊಳ್ ಬಂದು ಕಾದಿರ್ದು (ಸಾಗಂಧಿ. ೩೪೧-೦೦): ಝುಡಿತಿಯೊಳಗೆ ಯನ್ನವಡನೆಯಲೆ ಬಾಲ ನೀನು ನುಡಿಯಾದಿಹುದು ಧರ್ಮವೇನೊ (ಹಮುಚ. ೦೭೩); ಝುಡಿತಿಯಿಂ ಪಿಂತಗಸ್ತ್ಯನೀತಂಗಿತ್ತ ಸಾಯಕವೊಂದಂ ತೂಣೀರದಿಂ ತೆಗೆದು (ಅದ್ಭುತ. ೫೦-೦೧). ಜಡಿತಿ: "ಝಕಾರಕ್ಕೆ ಜಕಾರಂ . . . ಝುಡಿತಿ–ಜಡಿತಿ" (ಶಮದ. ೨೫೫ ಪ್ರಯೋ). ಜಡಿತೆ: ಕೌರವ ರಾಜಕಾರ್ಯದ ಘನವನಱುಹಿ ದನವರೊಡನೆ ಸಾಧನವ ಸೂಚಿಸಿ ಜಡಿತೆಯಲ್ಲಿ[ಪಾಠಾಂ. ಜೋಡಿಸಿಕೊಟ್ಟು] ಕಳುಹಿದನು ಗುಪ್ತದಲಿ (ಕುವ್ಯಾ.ಉ. ಓರಿಕ. ೨೧-೬೮). ಝುಟತಿ : ಚದರಿ ಹೋದ ಚಮೂಪತಿಗಳು ಮತ್ತೆ ಏರಿ ಬಂದು, ಪೂತ್ಕರಿಸಿ ಮೈಗೆ ಮೈಗೊಟ್ಟು ಚಿಮ್ಮಿ ಝುಟತಿಯಿಂದ ಕಾದಿದರು (ಕವೀಶ. ೫೮). ಝುಟತೆ : ಕಟುವರ ಪಿಪ್ಪಲಿಯಂ ಮೇಣ್ ಝುಟತೆಯೊಳಿಕ್ಕಲ್ಕದೞಿಯದೇ ತದ್ವಿಷಮಂ (ಖಮದ. ೨-೪೪). ಝುಡಿತೆ : ಕಳಿಂಗ ಕರೂಷ ಕೌರವರರಸ ಮೊದಲಾದಖಿಳಬಲ ಜೋಡಿಸಿತು ಝುಡಿತೆಯಲಿ (ಕುವ್ಯಾ.ಕ. ೦೩-೦೨) : ಅಮರರೆದೆ ಜಜ್ಜರಿತವಾಗಲು ಝುಡಿತೆಯಲಿ ಹೊಕ್ಕನು ದಶಗ್ರೀವ (ತೊರರಾ. ೬-೨೦-೨೩); ಝುಡಿತೆಯಿಂದುರುಬಿದರ್ ಬಿಡದೆ ಮಾಯಾಶಬರರು (ಜಬಪು. ೫೩-೨೬). [ <ಸಂ. ಝುಟತಿ = ಜಾಗ್ರತೆಯಾಗಿ ]

**ಝುಡಿತಿ₂** 'ಝುಡತಿ' ನೋ.

**ಝುಡಿತಿ₃** (ನಾ). ಲಾವಣಿಗಳಲ್ಲಿ ಒಂದು ಭೇದ: ಇದರಲ್ಲಿ ಝುಡಿತಿಯೆಂಬ ಇನ್ನೊಂದು ಉಪಜಾತಿಯುಂಟು (ಕರ್ನಾಸಂ. ೩೨). [ ? ]

**ಝುಡಿತೆ** 'ಝುಡಿತಿ₁' ನೋ.

**ಝುಡಿಸು** 'ಜಡಿಸು' ನೋ.

**ಝುಡುಪು** 'ಝುಡುಪು' ನೋ.

**ಝುಡ್ತಿ** 'ಝುಡತಿ' ನೋ.

**ಝುಣ್**(ನಾ). ಒಂದು ಅನುಕರಣ ಶಬ್ದ.

ಝುಣ್‌ಝುಣ್ (ದ್ವಿರುಕ್ತಿ) : ಪರಿಪರಿಯಿಂದ ಬಾರಿಸಿದಲ್ಲಿ ಝುಣ್ ಝುಣ್ ಎಂಬ ಧ್ವನಿಯು ಶಿವಪ್ರಸಾದಿಗೆ ಕೊಡುತಿರ್ಪುದೆಂಬುದೀಗ ಘಂಟಾ ನಾದವೆಂಬ ಶಬ್ದಕ್ಕರ್ಥ (ವಚಜಾ. II, ೨೦೬).

**ಝುಣ** (ನಾ). ಒಂದು ಅನುಕರಣ ಶಬ್ದ :

ಝುಣಝುಣ (ದ್ವಿರುಕ್ತಿ): ತೊಡರ ಝುಣಝುಣ ರವದ ಸುರರುಗ್ರಹದ ಬಿರುದಿನ ಬಾವುಲಿಯ . . . ರಾಯರಕ್ಕಸನೈದಿದನು (ತೊರರಾ. ೧-೦೫-೦೧).

**ಝುಣಂಬ** 'ಜಳಂಬ' ನೋ.

**ಝುಣಕ** (ನಾ). ೧. ಚುರಂಕು ; ಚಾತುರ್ಯ ; ಚಳಕ : ಝುಣಕವ ತೋರುತ ಕಣೆಗಳ ಬೀರುತ . . . ಕಣೆವೆಯ ದಾಟುತಲಿ (ಹಮುಚ. ೦೭). ೨. ಬೇಗ ; ಜಾಗ್ರತೆ : ಕ್ಷಣವು ನಿಲ್ಲದೆ ನೀವು ಹಣವ ಕೊಟ್ಟರೆ ಯೆನಗೆ ಝುಣಕದೊಳು ನಾ ಪೋವೆ (ಹಮುಚ. ೦೨೦). [ ? ]

**ಝುಣಝುಣತ್ಕಾರ** (ನಾ). ಝುಣಝುಣ ಎಂಬ ಧ್ವನಿ. 'ಝುಣಝುಣ ತ್ಕಾರಿಸು' ಪರಾ. [ ಸಂ. ]

**ಝುಣಝುಣತ್ಕಾರಿಸು** (ಕ್ರಿ). ಝುಣಝುಣ ಎಂದು ಶಬ್ದಮಾಡು.- ಉಲಿ : ಝುಣಝುಣತ್ಕರಿಸುವ ಕಂಕಣದ ಹುಲಿಯುಗುರ . . . ಬಾಲ ದೊಡಿಗೆಯು ಮಾಯೆಗಿಕ್ಕಿದರು (ಪ್ರಭುಲೀ. ೩-೨೫).

[ ಝುಣಝುಣತ್ಕಾರ + – ಇಸು₁ ]

**ಝುಣಝುಣಾಟ** (ನಾ). ಝುಣಝುಣ ಎಂಬ ಶಬ್ದ: ರೊಕ್ಕದ ಝುಣ ಝುಣಾಟವು ಕೇಳಬರುತ್ತಿದೆ (ತಿರುಗು. ೧೯೩). [ <ಝುಣ + ಆಟ ]

**ಝುಣಝುಣಿತ** (ನಾ). = ಝುಣಝುಣತ್ಕಾರ : ಯುವತಿ ಕಂಕಣ ಕಿಂಕಿಣೀ ಝುಣಝುಣಿತ ಘೋಷಣವು (ಬಸವು. ೫-೨೯). [ ಸಂ. ]

**ಝುಣಝುಣಿಸು** (ಕ್ರಿ). ಝುಣಝುಣ ಎಂಬ ಧ್ವನಿಯನ್ನುಂಟುಮಾಡು: ಝುಣಝುಣಿಸುವಂದುಗೆಗಳಂ ಘಣಘಣಯೆನಿಪ ಘಂಟಿಗಳಂ (ಬಸವು. ೫೬-೫) ; ತೆಳುಕು ಕಡಗ ಕಂಕಣ ಝುಣಝುಣಿಸಲು (ಮೋಹತ. ೦೯-೫೦) ; ಕರಕಟಕ ಝುಣಝುಣಿಸಲು (ಅನಂರಾ. ೦-೩-೪೦). [<ಝುಣ + – ಇಸು₁]

**ಝುಣತುಕೃತಿ** (ನಾ). = ಝುಣತ್ಕಾರ : ಭೂರಿಭೂಷಣ ಝುಣತುಕೃತಿ ಘಂಟಾರವದ ರಭಸದಲಿ (ನಿಭಾಗ. ೪-೨-೬). [<ಸಂ. ಝುಣತ್ಕೃತಿ]

**ಝುಣತ್ಕಾರ** (ನಾ). ಝುಣ ಝುಣ ಎಂಬ ಶಬ್ದ : ದಕ್ಷಿಣಕರಕಲಿತ ಕನಕ ಕಂಕಣ ಝುಣತ್ಕಾರನುಂ (ಚಂದ್ರಪ್ರ. ೮-೮೨ ವ); ಹಾರ ನೂಪುರ ಕಂಕಣಾದಿ ಭೂಷಣ ಝುಣತ್ಕಾರ ಧ್ವನಿಗಳು (ಜೈಮಿಭಾ. ೬-೪೬). [ ಸಂ. ]

**ಝುಣತ್ಕೃತಿ** (ನಾ). = ಝುಣತ್ಕಾರ : ಕನಕಮಯ ದಿವ್ಯಸಿಂಹಾಸನದಿಕ್ಕೆಲ ದೊಳ್ ಬಿಂಕದಿಂ ಕೊಂಕಿ ನಿಂದು ಕಂಕಣ ಝುಣತ್ಕೃತಿ ಪೊಣ್ಮೆ (ರಾಜಶೇ. ೫-೦೯ ರಗಳೆ). [ ಸಂ. ]

**ಝುಣನ್ನೂಪುರ** (ನಾ). ಉಲಿಯುತ್ತಿರುವ ಕಾಲ್ಗಡಗ ; ಝುಣಝುಣ ಎಂದು ಧ್ವನಿಮಾಡುತ್ತಿರುವ ಅಂದುಗೆ : ಕ್ವಣತ್ಕಂಕಣ ; ಝುಣನ್ನೂ ಪುರ (ಶಮದ. ೫೦ ಪ್ರಯೋ). [ ಸಂ. (ಝುಣತ್ + ನೂಪುರ) ]

**ಝುಣಮಣ** (ನಾ). ಒಂದು ಅನುಕರಣ ಶಬ್ದ. 'ಝುಣಮಣಿಸು' ಪರಾ.

**ಝುಣಮಣಿಸು** (ಕ್ರಿ). ಝುಣಮಣ ಎಂದು ಸದ್ದುಮಾಡು ; ಗದ್ದಲ ಮಾಡು : ಝುಣಮಣಿಸದೆ ಶಂಬರಾಸುರವರ ಸಮೀರಣನಾಗಿ ಪೊಕ್ಕ ದ್ವಾರಕೆಯ (ಮೋಹತ. ೧೦-೨೨). [ಝುಣಮಣ + – ಇಸು₁ ]

**ಝಣರು** (ನಾ). ಒಂದು ಅನುಕರಣ ಶಬ್ದ : ಕಿಣಿಕಿಣಿಕಿಣಿರೆಂಬ ಕರದ ಕಂಕಣ ಬಳೆ ಝಣರಝಣರೆಂಬ ನಡುವಿನ ಗಂಟೆ (ಪುರಂದ. ೨-೬೨-೨) : ಕಡಗ ಕಂಕಣ ಬಳೆಗೈ ಝಣರೆನೆ (ಕಂನವಿ. ೧೦-೪೫).

**ಝಣು** (ನಾ). ಭಲೆ, ಭೇಷ್ ಎಂಬಂತೆ ಒಂದು ಕೊಂಡಾಟದ ನುಡಿ : ಝಣಾ ವಿರೋಧಿವಿಭಾಡ ಝಣು ಝಣಾ ಝಣು (ಕುವ್ಯಾಸ. ೨-೧೦೬). ಝಣುಝಣು (ದ್ವಿರುಕ್ತಿ) : ಜಗತ್ರಯ ಜಟ್ಟಿ ಝಣುಝಣು . . . ಎಂಬಬ್ಬರಣೆ ಮಸಗಿದುದೆರಡು ಬಾಹೆಯಲಿ (ಕುವ್ಯಾಸ ೨-೧೦೬). 'ಧಣ್ಣು$_2$' ಪರಾ.

**ಝನಾನಾ** 'ಜನಾನಾ' ನೋ.

**ಝನಾನಾಖಾನೆ** 'ಜನಾನಖಾನೆ' ನೋ.

**ಝಪಝಪ** (ಅ). (ಉಕ) ಬೇಗನೆ ; ಜಾಗ್ರತೆಯಾಗಿ ; ಚುರುಕಾಗಿ : ಗುರಿಯ ಕಡೆಗೆ ಝಪಝಪ ಕಾಲುಹಾಕಲು ಅಡ್ಡಿ ಇಲ್ಲವೆಂದಾಯಿತು (ದೀಪಹ. II, ೨೨೬). [ ←ಮರಾ. ಝಪ್‌ಝಪ್ ]

**ಝಪಾಟಿ, ಜಪಾಟಿ** (ನಾ). ೧. ಆವೇಗ ; ಭರ ; ರಭಸ : ತನ್ನದು ನಡದರ ಸಾಕು ಅಂತ ಕೆಲಸದ ಝಪಾಟಿಯೊಳಗ ಇದ್ದಾಳ (ಹೊಸಂಸಾ. ೧೫೬). ೨. ಸರದಿ ; ಸಲ : ಇಲ್ಲಿ ಹೊಡೀರಿ ಕುಲಕರ್ಣೇರೆ ಒಂದು ಝಪಾಟ (ಹನ್ನೊಂದ. ೯). ಜಪಾಟಿ : ೨. "ಸಾರೆ" (ಜಾನಕೋ. ೫೯). [ ←ಹಿಂ. ಮರಾ. ಝಪಾಟಾ ]

**ಝಬರಿ** (ನಾ). ತೆಳುವಾದ ಕೋಲು ; ಸೆಳೆ : ಆತ ಮತ್ತೊಮ್ಮೆ ಅದರ ಮೇಲೆ 'ಝಬರಿ' ಬೀಸಿದ (ಬನಸಿ. ೬೪). [ ←ತೆಲು. ಜಬರ ]

**ಝಮ್** (ನಾ). ಒಂದು ಅನುಕರಣ ಶಬ್ದ : ಝಮ್ಮೆಂದು ಸಮಿಧಾವಳಿಗಳಬ್ಬರಿಸಿದವು ಘಟ ಘಟ ಘಟ ನಿನಾದದಲಿ (ಕೊರಶಾ. ೧-೬-೪೯).

**ಝಮಕು** (ನಾ). ಶೋಭೆ; ಸೊಗಸು : ತಿಲಕವ ತಿದ್ದುತ ಕಜ್ಜನಲಿ ವೀಳ್ಯದ ಝಮಕಿನಲಿ ಸುಲಲಿತಾಂಗ ಶೃಂಗಾರದ ಸೊಬಗಿನಲಿ . . . ಬರುತಿರೆ ಬೆಡಗಿಲಿ (ಚಂದ್ರಾವ. ೨೨) : ರುಮಾಲ ಸುತ್ತ್ಯಾನೆ ಹದಿನಾರು ಮಡಿಕೇಲಿ ಚುಂಗ ಬಿಟ್ಟ್ಯಾನೆ ಝಮಕೀಲಿ (ಹಳ್ಳಿಪ. ೧೨೦). [ ←ಹಿಂ. ಝಮಕ್ ]

**ಝಮ್ಮಗೆ** (ಅ). = ಝಮ್ಮನೆ : ಅಟಿಯಲ್ಕೆವಂದುದು . . . . ಚಂದ್ರಕಾಂತವುತ್ರಿಕೆಯೊಸರ್ವಂತೆ ಝಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ಶಾಂತಿಪು. ೮-೯೬). [ ಝಮ್ + – ಅಗೆ$_2$ ]

**ಝಮ್ಮನೆ** (ಅ). ಒಂದು ಅನುಕರಣಾವ್ಯಯ : ಝ[ಪಾಠಾಂ. ಝು]ಮ್ಮನೆ ಬೆಮರ್ತು ಭೀತಿಯ ಪರಮಕಾಷ್ಠೆಯಿಂ ಝೊಮ್ಮಿಡುತ ಕರೆದನೀಶನನೇಕನಿಷ್ಠೆಯಿಂ (ಕುಹರ. ದೇ. ೬೪-೧೯) : ತನು ಶೋಭವೋಟೆ ಮೆಯ್ ಝಮ್ಮನೆ ಬೆಮರುತ್ತಿರ್ಕುಮಪ್ಪೊಡಂ . . . ಹಯಕ್ಕೆ ತಪ್ಪದು ಮರಣಂ (ಅಶ್ವಶಾ. ೬-೫೨). [ ಝಮ್ + – ಅನೆ$_1$ ]

**ಝರ** (ನಾ). ಬೆಟ್ಟದಲ್ಲಿ ಹರಿದು ಬರುವ ಪ್ರವಾಹ; ಝರಿ ; ಗಿರಿನದಿ. [ ಸಂ. ]

**ಝರಣಿ** (ನಾ). = ಝರ : ಅಲ್ಲಿಯ ನರಸಿಂಹ ಝರಣಿಯಲ್ಲಿ ಸ್ನಾನಮಾಡಿ ವಿಭೂತಿ ಧರಿಸಿ (ಕಗದ್ಯ. ೧೨೨). [ ←ಹಿಂ. ಝರನೀ ]

**ಝರತಿ** (ನಾ). = ಝರ : ಝರತಿಯ ಮೃಗಗಳ ಪರಿಕಿಸಿ ನೋಡುತ (ಹಮುಜ. ೧೬) ; ಸರಿಯ ರಾತ್ರಿಯೊಳಗೆ ಕರದಿ ಹಿಂಡಿವ ಪಂಜ ಪಿಡಿದು ಬೇಗ ಝರತಿ ಹಳ್ಳ ಕೊಳ್ಳ ಕೂಪ ಕೆರೆಯ ಹುಡುಕುತ (ಹಮುಜ. ೦೮೪). [ ? ]

**ಝರಿ$_1$** 'ಜರಿ$_4$' ನೋ.

**ಝರಿ$_2$** (ನಾ). = ಝರ : ಸುಶಾಂತಿಯ ಸುಂದರ ಬೆಟ್ಟದಿಂದ ನಿರಂತರವಾಗಿ ಸುರಿಯುತ್ತಿರುವ ಅಮೃತ ಝರಿಯಿದು (ಧರ್ಮಸಾ. ೧) ; ಉಗಮಸ್ಥಾನದಿಂದ ದೂರಾಗುವ ಝರಿಯಂತೆ (ಹೇಮುಂತ. ೨೯೦). [ ಸಂ. ]

**ಝರಿ$_3$** 'ಜರಿ$_6$' ನೋ.

**ಝರಿಪಟ್ಟೆ** (ನಾ). ಜರಿಯಿಂದ ಕೂಡಿದ ರೇಷ್ಮೆಬಟ್ಟೆ (?) : ಅಡಕೆ ಮೆಣಸು ಝರಿಪಟ್ಟೆ ಕವಾಡ ಮುಂತಾದ ಘಡಿಸಿನ ಸರಕು ಹೊರತ್ತಾಗಿ (ಮೈಅರಿ. ೦೯೩೬; ೨೬-೩೪ ; 1708). [ ಝರಿ$_3$ (<ಜರಿ$_6$) + ಪಟ್ಟೆ$_2$ ]

**ಝರಿಸೀರೆ** 'ಜರಿಸೀರೆ' ನೋ.

**ಝರಿಸು** (ಕ್ರಿ). ಹರಿ ; ಪ್ರವಹಿಸು : ಮಣ್ಣೆದೆಯಲಿ ಝರಿಸುವ ನೀರ ಸೆಲೆಯಂತೆ (ಸಹೀಗೀ. ೦೯-೩೦೦). [ಝರಿ$_2$ + – ಇಸು$_3$ ]

**ಝರ್ಝರ$_1$** 'ಜುಜ್ಝುರ' ನೋ.

**ಝರ್ಝರ$_2$** (ನಾ). ಒಂದು ಬಗೆಯ ವಾದ್ಯ : ಝರ್ಝರವೆಂಬ ಝಾಯಿ . . . ಇತ್ತೆಱದ ದಶವಾದ್ಯಂಗಳಂ ಬಾರಿಸಲಾಳ್ವ ವಿಚಕ್ಷಣರಿಂ ವಿನುತರಾಗಿ (ವಿವೇಕ. ೨೩೬). [ ಸಂ. ]

**ಝರ್ರನೆ** (ಅ). ಕೂಡ್ಲಲೆ; ತಟ್ಟನೆ : ಆಕೆಯ ಉತ್ಸಾಹ ಝರ್ರನೆ ಇಳಿದು ಹೋಯಿತು (ಬರಹಾ. ೧೭); ರಮಾಬಾಯಿಯರ ಮುಖವು 'ಝರ್ರನೇ' ಇಳಿಯಿತು (ಬೀಳಕ ೪). [ ಝರ್$_0$ + – ಅನೆ$_1$ ]

**ಝಲ್, ಝಲ್ಲ$_1$** (ನಾ). ೧. ಒಂದು ಅನುಕರಣ ಶಬ್ದ : ಮಿಕ್ಕು ತನ್ನಯ ಮೇಲೆ ನೂಂಕುವ ಗಜಂಗಳಂ ಬಗಿದು . . . ಮುತ್ತು ಝಲ್ಲೆನಲು ಸೂಸುತ್ತೆ (ಇಹರ. ದೇ. ೪೨-೯). ಝಲ್ಲು$_1$ : ೧. ಗದೆಗುದುಗೆಯ ಝಲ್ಲು ಝಲ್ಲೆಂದು ತಳವಾರರಿದೆ ಬಂದರೆಂದು ಕಾತರಿಸಿ (ಮೋಹತ. ೦೮-೨೫). ೨. "ಧಕ್ಕೆ, ಆಘಾತ" (ಜಾಸಿಗ. ೯೨೯೪) : ತರವೇನೆ ಕ್ಷಣದೊಂದು ಝಲ್ಲಿನಲಿ ಜೀವಹಿಂಸೆ (ಜಾಸಿಗ. ೩೬-೨೦). 'ಜಲ್' ಪರಾ.

**ಝಲಕು** 'ಝಳಕ$_2$' ನೋ.

**ಝಲಿರು** (ನಾ). ಒಂದು ಅನುಕರಣ ಶಬ್ದ : ಝಲಿರಝಲಿರು (ದ್ವಿರುಕ್ತಿ): ಅಂದುಗೆಗಳ ಗೆಜ್ಜೆಗಳ ದನಿ ಝಲಿರಝಲಿರೆಂದೆನೆ ಪಂತಿ ಪಂತಿಯೊಳು (ಭರಜ. ೪-೬೯).

**ಝಲಿ** (ನಾ). ಶೋಭೆ ; ತೇಜಸ್ಸು ; ಪ್ರಕಾಶ. [ ಸಂ. ಝಲಾ ]

**ಝಲ್ಲ$_1$** (ನಾ). ೧. ಹುಚ್ಚು ; ಭ್ರಮೆ ; ಮನೋದೌರ್ಬಲ್ಯ : ರಾಜನ ಝಲ್ಲ ಬಿಟ್ಟಿತು (೭೯೭ನಿ. ೪೪). ೨. ಚಿಂತೆ; ಭಯ. 'ಜಲ್ಲು$_4$' ಪರಾ. [ ←ಹಿಂ. ಝಲ್ಲ ]

**ಝಲ್ಲ$_2$** (ನಾ). ಒಂದು ಬಗೆಯ ಸಕ್ಕರೆ : "ಝಲ್ಲ – ಖಂಡಸಕ್ಕರೆ" (ಅಕಾನಿ. ೦೦-೨) [ ? ]

**ಝಲ್ಲಡಿ** 'ಜಲ್ಲಡೆ' ನೋ.

**ಝಲ್ಲನೆ** (ಅ). ಒಂದು ಅನುಕರಣಾವ್ಯಯ : ಅನುಕರಣಕ್ಕೆ. . .ಝಲ್ಲನೆ, ಧುಘುಮ್ಮನೆ, ಧಟಮ್ಮನೆ (ಶಮದ. ೦೪ ಪ್ರಯೋ). [ಝಲ್ + – ಅನೆ$_1$]

**ಝಲ್ಲರಿ** (ನಾ). ೧. ಡಮರುಗದಂತಹ ಒಂದು ಬಗೆಯ ಚರ್ಮವಾದ್ಯ : ಲೋಕತ್ರಯಮದನುಕ್ರಮದೊಳ್ ವೇತ್ರಾಸನ ಝಲ್ಲರೀ ಮೃದಂಗ ಸಮಾನಂ (ಆದಿಪು. ೧-೪೬); ನುತವೇತ್ರಾಸನ ಝಲ್ಲರೀ ಮೃದುಮೃದಂಗಾಭಂ (ಸುಕುಮಾ. ೦೧-೪೦) : ಪಟುಪಟಹ ರಣಂ ಝಲ್ಲರೀ ಶಬ್ದರಮ್ಯಂ (ಎಕ. VIII, ನಗರ. ೫೬-೬೦ : ಸು. 1077) ; ವೇತ್ರಾಸನ ಝಲ್ಲರೀ ಮೃದಂಗ ಸಮಾನ ಅಧೋ ಮಧ್ಯೋರ್ಧ್ವ ಭೇದ ಭಿನ್ನಮುಂ (ಶತ್ರುಪ್ರ. ೨೭೫). ೨. ಕಂಚಿನ ಅಥವಾ ಹಿತ್ತಾಳೆಯ ದೊಡ್ಡ ತಾಳ : ಪಟುಪಟಹ ತುಣವ ಭಂಭಾ ಮರ್ದಳೆ ಝಲ್ಲರಿ ಮುಕುಂದ ತಾಳ ಕಾಹಳ ಶಂಖ ವಂಶ ವೀಣಾಸ್ವರಂಗಳೆಸೆಯೆ (ಪದ್ಮರಾ. ೬೬-೨೯); ತಳಿತ ಝಲ್ಲರಿಯ ಬಹಳ ವಾದ್ಯದ ನಡುವೆ ನಡೆದು (ಸಿದ್ಧರಾ. ೪-೦೮) ; ಮೃದಂಗ ಝಲ್ಲರಿ ತಾಳ ಪಳಂಚಿ (ಗಣೇಶ. ೦೮-೪೬೨). ೩. ಛತ್ರಿ ಮೊದಲಾದವುಗಳ ಅಂಚಿನಲ್ಲಿ ಜೋಲಾಡುತ್ತಿರುವ ಜಾಲರಿ,–ಕುಚ್ಚು ; ಉತ್ಸವಗಳಲ್ಲಿ ಎತ್ತಿಹಿಡಿಯುವ ಮಂಕರತೋರಣ : ಬರುದಿನ ಕತ್ತರಿಯ ಹಿಲೀಗಳ ಝಲ್ಲರಿ ಮುಸುಕಿದವು ಗಜವ (ಕುವ್ಯಾದ್ರೋ. ೩-೬) : ತಳಿತ ಪಲ್ಲವ

ಸತ್ತಿಗೆಯ ಹೊದರೆದ್ದ ಝಲ್ಲರಿಗಳ ವಿಚಿತ್ರಾಂಬರದ ಮುತ್ತಿನ ಮೇಲುಗಟ್ಟುಗಳ (ತೊರಂಶಾ. ೧-೭-೦೪) ; ಕುಸುಮಗಳ ಝಲ್ಲರಿಯ ಮುಸುಕಿನಿಂದ ಹಸನಾಗಿ ಯಿರುವ ಹೊಸ ಹಂಸತೂಲಿಕಾತಲ್ಪದೊಳ್ ಪವಳಿಸಿ (ಸೌಗಂಧಿ. ೦೯೬-೨೦). ೪. ಛತ್ರಿ ; ಕೊಡೆ : ರಾಯನಾಯಕರ ಸಂದಣಿಯೊಳ್ ಎತ್ತಿದ ಝಲ್ಲರಿಗಳ ಮುತ್ತುವ ಕೈವಾರಿಗಳ ಕೋಲಾಹಳದಿಂ (ನಂಜಿಕ. ೨-೪೫) ; ತುಂಬಿಗಳುಂ ನಭದಲ್ಲಿ ಮಂಡಳೀಕರಿಸಿ ನಿಳಂಪಕಾಂತೆಯರಿಗೆತ್ತಿದ ಹೀಲಿಯ ಚೆಲ್ವುವೆತ್ತ ಝಲ್ಲರಿಗಳ ವೆಂಬಿನಂ ಬಿಡದೆ ಬಂದುವು ಲೀಲೆಯನಂದು ಮಾಡುತುಂ (ಬಾಧಪು. ೬-೨೩) ; ಕರಿಘಟೆಯ ಕುಜುವದಲಿ ಹಯ ಮೋಹರದ ತೆರೆಮಾಲೆಯಲಿ ಬಲು ಝಲ್ಲರಿಯ ಬುದ್ಬುದತತಿಯಲಸ್ತದ ಕಿಡಿಯ ವಡಬನಲಿ (ಕುವ್ಯಾಭೀ. ೩-೨೩).

[ ಸಂ. ಝಲ್ಲರೀ ]

**ಝಲ್ಲಳಿ** 'ಜಲ್ಲರಿ₁' ನೋ.

△**ಝಲ್ಲಟಿ** 'ಜಲ್ಲರಿ₁' ನೋ.

**ಝಲ್ಲಿ₁** 'ಜಲ್ಲಿ₂' ನೋ.

**ಝಲ್ಲಿ₂** (ನಾ). ದಾಲ್ಚಿನ್ನಿ (?) : ಲವಂಗದ ಝಲ್ಲಿಯಂ ಕಬ್ಬಿಣಮಂ . . . ಪುಡಿಮಾಡಿ ಸಮಾನಭಾಗಂಗೊಂಡು ಮಾಡಿದ ಅಂಜನಂ (ವಿಶ್ವವಿ. ೦೬೦).

[ <ಪ್ರಾ. ಭಲ್ಲೀ = ತೊಗಟೆ ]

**ಝಲ್ಲಿಡಿ** (ಕ್ರಿ). ಗೊಂಚಲುಗಳಿಂದ ತುಂಬಿಕೊಂಡಿರು ; ಗರಿಗಳಿಂದ ತುಂಬಿರು(?):ಬಾಳೆಗಳ್ಬೆಳೆಯಲಾವ್ರು ಮದಾಳಿಗಳ ಮುಚಿಗೊಂಡುದರ್ದೆ ನಿರಾಳವಾದುದು ಝಲ್ಲಿಡಿದು ತೆಂಗಿನಲಿಳಿಯ ಬಗಿದು ಕೀಳಿಗಿಳಿದವು (ಮದೀಪು. ೨-೩೧). [ ಝಲ್ಲಿ₁ (<ಜಲ್ಲಿ₂) + ಇಡಿ₂ ]

**ಝಲ್ಲಿಪಟೆ** (ನಾ). ಒಂದು ಸಂಬಾರ ಪದಾರ್ಥ ; ದಾಲ್ಚಿನ್ನಿ (?) : ಎತ್ತಿನಲ್ಲಿ ಅಡಕೆ ಮೆಣಸು ಝಲ್ಲಿಪಟೆ ಕೊಬರಿ ಕವಾಡ ಹೊರತಾಗಿ ಹೆರಿಕೊಂಬ ಜ್ಜನಿಸೂ (ಪ್ತಂಆರಿ. ೦೯೪೩, ೩೭-೨೦: 1643).

[ ಝಲ್ಲಿ₂ + ಪಟಿ? ]

**ಝಲ್ಲಿಪಟ್ಟ** (ನಾ).=ಝಲ್ಲಿಪಟೆ : ಅಡಕೆ, ಮೆಣಸು, ಝಲ್ಲಿಪಟ್ಟ ಕೊಬರಿ ಕವಾಡ ಮಿಡಿಸಿನ ಸರಕು ಹೊರತಾಗಿ (ಎಕ. VIII, ಸಾಗರ. ೩೩-೩೦; 1674).

[ ಝಲ್ಲಿ + ಪಟ್ಟ? ]

**ಝಲ್ಲಿಪಟ್ಟೆ** 'ಜಲ್ಲಿಪಟ್ಟೆ' ನೋ.

**ಝಲ್ಲಿಮಿಗ** 'ಜಲ್ಲಿಮಿಗ' ನೋ.

**ಝಲ್ಲಿಮೃಗ** 'ಜಲ್ಲಿಮೃಗ' ನೋ.

**ಝಲ್ಲಿಸು₁**(ಕ್ರಿ). ಬೆದರಿಸು; ಜಂಕಿಸು: ಝಲ್ಲಿಸಲು ಬಲನಹುದುಮಯಂಬಿನ್ನಿಲ್ಲಿ ಸತ್ಕಾರ್ಮುಖವನದರಿಂ ಬಲ್ಲಿದೆನಿಸು ಪ್ರಹಸ್ತನೆನುತಾ ನೀಲ ಸರಳೆಳೆದಾ (ತೊರಾಮಾ. ೬೦-೩೦) ; ನೀ ಪೆಣನ ಕೊಂಡು ಪೋಪುದುಯೆನುತಂ ಝಲ್ಲಿಸಿ ಸುಡಿಯಲು (ಹಮಚ. ೦೬೬).

[ ಝಲ್ಲು₂(<ಜಲ್ಲು₄) + - ಇಸು₃ ]

**ಝಲ್ಲಿಸು₂** (ಕ್ರಿ). ದ್ರವಿಸು; ಸ್ರವಿಸು: ಕಲ್ಲಲ್ತೇ ಶಶಿಕಾಂತಂ ಝಲ್ಲಿಸುವುದು ಚಂದ್ರಕಿರಣಮಂ ತಾಗಲೊಡಂ (ಅನುಮು. ೮೯): ಝಲ್ಲಿಸುತ್ತಿಹುದ್ಯ ಮುಖದಿ ಬರುವಲ್ಲಣವ ಹೊತ್ತಂತೆ (ಸ್ವರೂಪಾ. ೦-೨೨) ; ಶಶಿಕಾಂತದ ಜಜ್ಝರಿಯೊಳು ಝಲ್ಲಿಸಿ ಪರಿವ ತಣ್ಣೀರಗಾಲುವೆಗಂಡು ನಿಲ್ಲದೆಯ್ದಿದನಾ ಭೂಪ (ಶ್ರೀಪಾಂ ೪-೬೨). [ ? + - ಇಸು₃ ]

**ಝಲ್ಲಿಜು** (ಕ್ರಿ). ಝಲ್ಲೆನ್ನುವಂತೆ ಹೊರಹೊಮ್ಮು : ಎಲ್ಲಾ ಮೈ ತುಂಬಿ ತೋಱುವನೊಮ್ಮೆಯಿದೆವೊಗದಲ್ಲಿ ಗರ್ಭದೊಳೊಮ್ಮೆ ಬೆಳಗು ಝಲ್ಲಿಜುವುದು (ಭರಚ. ೬೦-೨೫). [ ಝಲ್ + ಇಜು₁ ]

**ಝಲ್ಲು₁** 'ಝಲ್' ನೋ.

**ಝಲ್ಲು₂** 'ಜಲ್ಲು₄' ನೋ.

**ಝಲ್ಲುಗೊಳ್** (ಕ್ರಿ). ತಳಮಳಗೊಳ್ಳು ; ಗಾಬರಿಯಾಗು ; ಹೆದರು : ಮಲ್ಲನಾರ್ಭಟದಿ ಮುನಿವಲ್ಲಭರು ಭಯಗೊಂಡು . . . ಝಲ್ಲುಗೊಂಡುರೆ ವನದಿ ಕಲ್ಲುತರುಗಳ ಕಂಡು ಮಲ್ಲನೆಂದೇ ಬಗೆವರು (ಮಲ್ಲಾರಿ. ೦-೨೩).

[ ಝಲ್ಲು₂ (<ಜಲ್ಲು₄) + ಕೊಳ್₁ ]

**ಝಲ್ಲೆನ್** (ಕ್ರಿ). ಭಯಗೊಳ್ಳು ; ಹೌಹಾರು : ಹಗೆಯದೆ ಝಲ್ಲೆನಲು ಕಾಳಗಕೆ ಕವಿದವು ಕಟಕವೆರಡರಲಿ (ಕುವ್ಯಾದ್ರೋ. ೦೮-೩); ಎದೆ ಝಲ್ಲೆನಲು ಜವಗುಂದಿ ಲಕ್ಷ್ಮಣನೊಲಿದನವಯವವ (ತೊರಾರಾ. ೩-೩.೨೨).

[ ಝಲ್ + ಎನ್₁ ]

**ಝಷ** (ನಾ). ೧. ಮೀನು ; ಮತ್ಸ್ಯ : "ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಶಾರಂ ಮತ್ಸ್ಯಂ ಮೀನವೆಸರ್" (ಪಕ್ಷುಕೋ. ೨೨-೫); ನಡು ಮಡು ಲೋಕಲೋಚನರುಝಷಕ್ಕೆ (ಪುಷ್ಪಪು. ೯-೪೨); ತರಂಗಸಂಘ ಸಂಭವ ರವ ವಾದ್ಯಕಾಡಿದುದು ಕೊಡೆ ಝಷಂ ಪೊಸದೊಂಬವೆಂಬಿನಂ (ರಾಜಶೇ. ೨-೬೨). ೨. [ಜ್ಯೋತಿ] ಮೀನರಾಶಿ: ರವಿ . . . ಝಷದೊಳಿರೆ ವಧೂಪ್ರೀತನಬ್ದ್ರವ್ಯಪಣ್ಯಂ (ಜಾತಕ. ೦೭-೦೭). [ ಸಂ. ]

**ಝಷಕೇತನ** (ನಾ). ೧. ಮೀನಿನ ಗುರುತುಳ್ಳ ಧ್ವಜ; ಮನ್ಮಥನ ಧ್ವಜ: ಪೂವಿನ ಬಿಲ್ಲ ಪುರ್ವು ಕುಸುಮೇಷುಗೆ ಕಣ್ ಝಷಕೇತನಕ್ಕೆ ಚೆಲ್ವಾವಗ ಮಾದ ಸೋಮುರ್ಖಿ ರತಿಪ್ರಿಯಗಾಗೆ (ಶಾಂತಿಪು. ೮-೮೩); ನನೆಗಣೆಯಿಲ್ಲದ ಝಷಕೇತನಮಿಲ್ಲದ ಕುಸುಮಚಾಪಮಿಲ್ಲದ . . . ಮನಸಿಜನೆನೆ ಸಂದನಾ ಖಗೇಂದ್ರಕುಮಾರಂ (ವರ್ಧಮಾ. ೬-೬೭). ೨. ಮೀನನ್ನು ಧ್ವಜದಲ್ಲಿ ಗುರುತಾಗುಳ್ಳವನು ; ಮನ್ಮಥ : ಶಶಧರಬಿಂಬಾನನೆಯಂ ಝಷಕೇತನ ಕೇತನಾಭತನುತನುವಂ . . . ಕಂಡೊಸೆದಂ ಬನದೊಳಗೆ ಜನಕತನಯುಳ ನಣುವಂ (ಕವಿರಾ. ೨-೩೮) ; ಝಷಕೇತನಂ ವಸಂತಾಗಮುಮಿಲ್ಲದೇನೊ ಲಿಸಲಾರ್ತಪನೇ ವಧುವಂ (ಮದತಿ. ೦೦-೩೩). [ ಝಷ + ಕೇತನ ]

**ಝಷಕೇತು** (ನಾ). ೧.=ಝಷಕೇತನ ೧ : ಮೇಲುದು ಝಷಕೇತುವಂ ಮಿಗೆ ಮನೋಜವಮನೋಹರಿಯೇಱ ಬರ್ಪವೊಲ್ (ಚಂದ್ರಪು. ೦೦-೬). ೨.=ಝಷಕೇತನ ೨ : ಜಿತರಝಷಕೇತುರೂಪನೆನಿಸಿದ ಮಲ್ಲನಂಗೆ ಲೋಕಾಪ್ತ ಭಾರವಿಗೆಱಗುವೆಂ (ಪದ್ಮರಾ. ೦-೦೪) ; ಸಿಡಿಲ್ದ ಸೀರ್ವನಿಗಳೊಪ್ಪಿರೆ . . . ತುಪಾಕದಿಂ ನೆಗೆವ ಗುಂಡಿನವೋಲ್ ಝಷಕೇತು ವೀರನಾ (ರಾಜಶೇ. ೫-೬೪). [ ಝಷ + ಕೇತು ]

**ಝಷಧ್ವಜ** (ನಾ).=ಝಷಕೇತನ. [ ಝಷ + ಧ್ವಜ ]

**ಝಷನೇತ್ರ** (ನಾ). ಮೀನಿನಂತಹ ಕಣ್ಣು : ಎಳಸಿರಿಸಿತ್ತವಳ್ದಿರ ಲಸಜ್ಝಷನೇತ್ರವನೇಣನೇತ್ರವುಂ (ಪುಷ್ಪಪು. ೫-೨೫). [ ಝಷ + ನೇತ್ರ ]

**ಝಷಪತಾಕೆ** (ನಾ).=ಝಷಕೇತನ ೧ : ಮೀನಕೇತುವೆತ್ತಿಸಿದ ಸಮುಲ್ಲಸಜ್ಝಷಪತಾಕೆಯನಿಪ್ಪವೊಲಾಂತಕಾಕೆಯಾ ಘಸದನದೊಳ್ (ಚಂದ್ರಪು. ೬-೬೭). [ ಝಷ + ಪತಾಕೆ ]

**ಝಷಾ** (ನಾ). ಹೀರೆಗಿಡ : "ಗಾಂಗೇರುಕೀ, ನಾಗಬಲಾ, ಝಷಾ, ಹ್ರಸ್ವಗವೇಧುಕಾ ೪ ಹೀರೆಗಿಡದ ಹೆಸರು. ಇವು ಹೀರೆ, ತುಪ್ಪಹೀರೆ, ಕಾಡುಹೀರೆ ಇವುಗಳೆಲ್ಲಕ್ಕೂ ಹೆಸರು" (ಸಿದ್ಧಾಂತಿ. ೦೨೦). [ ಸಂ. ಝಷಾ ]

**ಝಸ₁** 'ಜಸ₁' ನೋ.

**ಝಸ₂** 'ಜಸ₂' ನೋ.

**ಝಸ₃** (ನಾ). ಬೇಗ ; ತ್ವರೆ : ಮಸಣದೊಳು ಸಂಸ್ಕಾರಮಾಡಬೇಕೆಂದು ಝಸದಿಂದ ನಾ ಬಂದೆ ಪ್ರೇತನೆಲಕಾಗ (ಹಮಚ. ೦೯೯). [ ? ]

**ಝಸಂಬಡೆ** 'ಜಸಂಬಡೆ' ನೋ.

**ಝಸಕೇತು** (ನಾ). = ಝಷಕೇತನ ೨ : ಪಂಕೇಜಚರಣ ಝಸಕೇತುದೇಹಕ್ಷಮಾಭೃದ್ಧ್ವಜ ವಿರೂಪಾಕ್ಷ ಪಾಲಿಪುದು (ರಾಘಚ. ೨-೦೬).

[ <ಸಂ. ಝಷಕೇತು ]

**ಝುಳ** 'ಜಲ್ಲ$_1$' ನೋ.

**ಝುಳಂಪಿ** (ನಾ). ಕಂದುರೆಯ ಆರು ಲಕ್ಷಣಗಳಲ್ಲಿ ಒಂದು (?): ಭಂಜಳ ಮುರಳಿ ಝುಳಂಪಿ ವಾಹಿಣಿ ರೀಪು ರಂಜಪ ರೇಪೆಯೆಂದೆಂಬ ಮಂಜುಳ ಮಾದ ಷಡಂಗದೊಳಾ ಹಯ ರಂಜನೆವಡೆದುದು (ಶ್ರೀಪಾಂ. ೪-೧೦).

[ ? ]

**ಝುಳಂಪಿಸು**, ಜಳಪಿಸು, ಜಳಿಪಿಸು, ಜಳಂಪಿಸು, ಝುಡಪಿಸು, ಝುಳಪಿಸು, ಝುಳುಂಪಿಸು, ಝುಳುಪಿಸು(ಕ್ರಿ).೧.ನಡುಗಿಸು; ಅಳ್ಳಾಡಿಸು; ಬೀಸು : ಝೋಂಪಿಸಿ ಮುಂಬರಿದಾರ್ದು ಝುಳಂಪಿಸಿದೊಳ್ಳಾಳ್ಗಳೊಡನೆ ಕಂಪಿಸೆಯರ್ದೆಯಂ (ಜಳವಿ. ೨-೯೯). ೨. ಹೆದರಿಸು ; ಭಯಪಡಿಸು : ಜಸಮೆಳೆಯಲ್ಲಮಂ ಬಳಸೆ ಬಲ್ಪು ನೆಗಟ್ತೆಯ ಬೀರರಂ ಝುಳಂಪಿಸೆ (ಚಳ್ಳಿಪು. ೪೬). **ಜಳಪಿಸು :** ೧. ಕೆಯ್ಯ ಖಡ್ಗವ ಜಳಪಿಸಿ ದೈತ್ಯ ನುಡಿದ ಕಠೋರವಾಕ್ಯಗಳ (ಮೋಹತ. ೧೨-೧೦) ; ಬೆತ್ತವನ್ನು ಜಳಪಿಸುತ್ತಾ ಕೇಳಿದ (ಕೊತಳಾ. ೨೮). **ಜಳಿಪಿಸು :** ೧. ಹಿರಿಯುಬ್ಬಣವ ಜಳಿಪಿಸಿ ಏನಾಸೆಯ ಮೇಲೆ ಬೆರಳಿಡುತ (ಕಂನವಿ. ೦೩-೩೮). **ಜಳುಪಿಸು :** ೧. ಬೇಡಿದೊಡೆ ಬೀಳುವುದು ದಾಯವು ನಾಡೆ ಜಳುಪಿಸೆ ಹೊಳೆವ ದಾಳದ ರೂಢಿಗಚ್ಚರಿಯಾಗೆ (ನಳಚ. ೯-೪೪). **ಝುಡಪಿಸು :** ೧. ಖಡುಗ ಬರಲು ಕೈಕೊಂಡು ಝುಡಪಿಸಿ ನೋಡಿ ವೊಡೆದನಾ ಶಂಭುಕನಡಗಿರ್ದ ಬದಿರ ಪಿಂಡಿಲನು (ಅಂಜಿದ. ೦೩-೩೩). **ಝುಳಪಿಸು :** ೧. ಆಯುಧವ ಹಿಡಿದೊಱೆಯ ನುಗಿದನಡಾಯುಧವ ಝುಳಪಿಸುತ (ಕುವ್ಯಾಳ. ೦೬-೨): ಕರಾಳ ರೋಷಾವೇಶನೀದನು ಸಿಂಹವಿಷ್ಟರವ ಬಾಳ ಝುಳಪಿಸಿ ಕೆಂಪೊಗುವ ಕಣ್ಣಾಲಿಗಳಲಿ (ಕೊರಡಾ. ೩-೩-೯). **ಝುಳಂಪಿಸು:** ೧. ಜಡಿದಸಿಯಂ ಝುಳುಂಪಿಸಿ ಕರಾಗ್ರದೊಳೆತ್ತಿ ಕಡಂಗಿ ಸಾರ್ದು (ರಾಜಶೇ. ೩-೦೨೩). **ಝುಳುಪಿಸು :** ೧. ಕೈದುಗಳ ಝುಳುಪಿಸಿ ವಾಹನಂಗಳನೇರಿ ನಡೆತರಲೂ (ದೇವೀಮ. ೩-೩೨) . ೩. ಫಳಫಳಗುಟ್ಟು ; ಮಿರುಗು : ಆ ಸುವರ್ಣದ ಮಧ್ಯದಿಂದ ವಜ್ರ ಮುಂತಾದ ರತ್ನಗಳು ಝುಳುಪಿಸುತ್ತಿದ್ದವು (ಅಪಾಳು. ೪೯). [ ಝುಳಂಪು$_2$ (<ಝುಳಪು) + – ಇಸು$_3$ ]

**ಝುಳಂಬ** 'ಜಳಂಬ' ನೋ.

**ಝುಳಂಬಾಯುತ** 'ಜಳಂಬಾಯ್ತು' ನೋ.

**ಝುಳಂಬಾಯ್ತು** 'ಜಳಂಬಾಯ್ತು' ನೋ.

**ಝುಳಕ$_1$** 'ಜಳಕ' ನೋ.

**ಝುಳಕ$_2$**, ಝುಲಕು, ಝುಳಿಕು, ಝುಳುಕು (ನಾ). ಹೊಳಪು; ಪ್ರಕಾಶ; ಕಾಂತಿ : ಲುಳಿಯ ಮಿಂಚಿನ ಮುಂದೆ ಸುಗತಿಯ ಝುಳಕದನಿಲನ ಥಟ್ಟು . . . ಬಳಸಿದೆ (ಕುವ್ಯಾಳ. ೩-೦೬). **ಝುಲಕು :** ಶಾಯಿತನದ ಹೊಸ ಝುಲಕು ಅವಳ ಮೊಗದಲ್ಲಿ ಕೂಡಿಕೊಂಡಿತ್ತು (ಸಿವಭಾ. ೦೦೯). **ಝುಳಿಕು :** ವಳುಕಿನೋಲ್ ಬಳುಕಿವೋಲ್ ನಳುಕಿನೋಲ್ ಝುಳಿಕಿನೋಲ್ ಶೋಭಿಸುವಳಾ ಸೌಂದರಿ (ಜಿನಮು. ೪೨-೪೨). **ಝುಳುಕು :** ಇಂತಹದಕ್ಕೆ ಮರ್ಯಾದೆ ಅಥವಾ ಸುಧಾರಣೆಯ ಝುಳುಕು ತಾಗದೇಡವೆ ? (ಗೋಯಾತ್ರ. ೩೨). [ ←ಮರಾ. ಝುಳಕ್; ಹಿಂ. ಝಲಕ್ ]

**ಝುಳಕಂಬೊಗು** 'ಜಳಕಂಬೊಗು' ನೋ.

**ಝುಳಕು** (ಕ್ರಿ). ೧. ಆತುರಪಡು ; ದಂಡುಕಂ. ೨. ತಳಮಳಗೊಳ್ಳು ; ಆವೇಗಗೊಳ್ಳು : ಝುಳಕದಿರು ಜಾಣ ಸುಭದ್ರೆಯನು ಕೊಡಿಸುವೆ (ಕನಾಳ. ೩೦೫). [ ←ಮರಾ. ಝುಳಕಣೇ ]

**ಝುಳಪ** (ನಾ). ಹೊಳಪು ; ಕಾಂತಿ : ಮಿಗೆ ನೋಯಿಪಾಸೆಯೆಂಬಲಗಿನ ಝುಳಪದಿಂ ಮೞಿವ ಮನಮಂದೆಂಬ ಮಾಸಾಳ (ಮೊನಿರ. ೧೪೦-೧೯) ; ಝುಳಪದಲಿ ಬೊಬ್ಬಿಡುವಡಾಯುಧ ಹೊಳಪುಗಳ (ಕುವ್ಯಾಳ. ೨-೬).

[ <ಝುಳಪು ]

**ಝುಳಪಿಸು** 'ಝುಳಂಪಿಸು' ನೋ.

**ಝುಳಪು**, ಝುಡಪು (ನಾ). ಕಾಂತಿ ; ಪ್ರಕಾಶ. 'ಝುಳಪುಗೊಳ್ಳು' ಪರಾ. **ಝುಡಪು :** ಝುಡಪುಗಳ ೧೧೨ರದ ನೆಗಹಿನ ಕಿಡಿಯಲಂಬರ ತುಂಬಿದುದು ಬೇರುಡಿಯ ಮರದಾಗುಗಳಲಾದಿಸಿದ ಧೂತ ಧೂಮ ಶಿಖಿ (ಕೊರಡಾ. ೪-೬-೧೦).

**ಝಾಂಝುಡಪು** (ದ್ವಿರುಕ್ತಿ) : ಗದಬದರೆನ್ನುತ ರಥ ಝಂಝುಡಪುಗಳ್ ವೂದುತಿರುವ ಶಂಖ ತಮ್ಮಟೆ ಭೇರಿಗಳ್ (ಪಾಪಾಳ. ೦೯).

[ ಝುಳ (<ಜಲ್ಲ$_1$) + – ಪು$_2$ ]

**ಝುಳಪುಗೊಳ್ಳು** (ಕ್ರಿ). ಹೊಳೆ ; ಪ್ರಕಾಶಿಸು ; ಬಳ್ಳಿ ಮಿಂಚಿನಂತೆ ಝುಳಪುಗೊಂಡು (ವಿಗದ. ೪೬-೧).

[ ಝುಳಪು + ಕೊಳ್ಳು (<ಕೊಳ್$_1$) ]

**ಝುಳಪ್ಪ**, ಜಳಪ್ಪ (ನಾ). ೧. ಮೇಲೆರಗಿ ಹೊಡೆಯುವವನು ; ಶೂರ . ೨. ಹೆದರಿಸುವವನು ; ಸೋಲಿಸುವವನು ; ಒಂದು ಬಿರುದು . 'ರಾಯಝುಳಪ್ಪ' ಪರಾ. **ಜಳಪ್ಪ :** 'ರಾಯಜಳಪ್ಪ' ಪರಾ.

[ <ತ್ಯಾ. ಝುಡಪ್ಪ ]

**ಝುಳವಟಿಗೆ** 'ಜಳವಟ್ಟಿಗೆ' ನೋ.

**ಝುಳವಟ್ಟಿಗೆ** 'ಜಳವಟ್ಟಿಗೆ' ನೋ.

**ಝುಳವೂಡು** (ಕ್ರಿ). ಕಾಂತಿಯನ್ನು ಹೊಂದು : ಬಾಡಿದವು ತಾವರೆಗಳುಱೆ ಝುಳವೂಡಿದವು ನೈದಿಲುಗಳು . . . ಸಾಂದ್ರಚಂದ್ರಿಕೆಯಲಿ (ಕುವ್ಯಾಳ. ೦೬-೦೪). [ ಝುಳ (<ಜಲ್ಲ$_1$) +ಊಡು ]

**ಝುಳಿಕು** 'ಝುಳಕ$_2$' ನೋ.

**ಝುಳಿಸು** (ಕ್ರಿ). ಹೊಳೆ; ಪ್ರಕಾಶಿಸು : ತಗ್ಗಿನಲ್ಲಿ ನೀರು ಧುಮುಕಿ ತರಂಗವು ಒಡೆದುಹೋದ ಕಡೆಯಲ್ಲಿ ಝುಲತ್ಕಾರವಾಗಿ ಝುಳಿಸುವುದು (ದೇವೀಪಾ. ೬೩). [ ಝುಳ (<ಜಲ್ಲ$_1$) + – ಇಸು$_3$ ]

**ಝುಳುಂಪಿಸು** 'ಝುಳಂಪಿಸು' ನೋ.

**ಝುಳುಂಬಕ** (ನಾ). ಕುಚ್ಚು ; ಗೊಂಚಲು : ಪುನ್ನಾಗದ ಸೂಸಕಂಗಳೊಳಂ ನಾಗದ ಝುಳುಂಬಕಂಗಳೊಳಂ . . . ಕಾಮದೇವನನತಿಪ್ರೀತಿಯಿಂ ದರ್ಚಿಸಿ (ಕಾದಂಬ. ೬೮೩). [ ?. /ಮರಾ. ಝುಳುಂಬಾಕಾ ]

**ಝುಳುಕು** 'ಝುಳಕ$_2$' ನೋ.

**ಝುಳುಪಿಸು** 'ಝುಳಂಪಿಸು' ನೋ.

**ಝುಳ್ಳಿಸು** 'ಜಳ್ಳಿಸು' ನೋ.

**ಝುಟಿಸು** (ಕ್ರಿ). (?) : ವರ್ಗ ಚತುರ್ಥಾಕ್ಷರಂಗಳ್ಗೆ . . . ಝುಟಿಸಿತು, ಝಾಳಿಸಿತು (ಶಮುದ. ೦೩ ಪ್ರಯೋ). [ ? ]

**ಝಾಂಕೃತ** (ನಾ). ೧. ಝಣ ಝಣ ಎಂದು ದನಿಗೆಯ್ಯುವ ಕಾಲಿಗೆ ಹಾಕಿಕೊಳ್ಳುವ ಆಭರಣ ; ಕಾಲುಂಗುರ ಅಥವಾ ಕಾಲ್ಗಡಗ: ೨. = ಝಂರೆಷು "ಝಾಂ[ಪಾಠಾಂ. ಝಾಂ,ಯಿಂ]ಕೃತಂ ಮಾತನೊಳು" (ಮಂಗರಾ. ೨೬-೬). 'ಝಾಂಕೃತ' ಪರಾ. [ ಸಂ. ]

**ಝಾಂಗಟೆ** 'ಜೇಗಂಟೆ' ನೋ.

**ಝಾಂಡ**, ಜಂಡೆ$_1$, ಜಾಂಡೆ, ಜಾಂಡೇಯ, ಝುಂಡಾ, ಝಾಂಡಾ(ನಾ). ೧. ಬಾವುಟ ; ಧ್ವಜ. ೨. (ಅಲಂ) ತಂಗುವಿಕೆ ; ಮೊಕ್ಕಾಂ : ನಾರಾಯಣನ ಝಾಂಡ ಈವತ್ತು ಕೋಡೀಬಾಗದಲ್ಲೇ ಎಂದು ಕೋರುತ್ತದೆ (ಮೂರುದಾ. ೩೦೪) ; ಎಲ್ಲಾ ಕಡೆಯೂ ಮಕ್ಕಳ ಝಾಂಡ (ಸುಪಸಂ. ೪೮). **ಜಂಡೆ$_1$:** (೬). **ಜಾಂಡೆ:** ೧.ಅಂಬಾರ ತಾಗುವಂದದಲಿ ಡೊಂಬನಾಟದಗಳಯಂತೆ ಜಾಂಡೆಗಳಲ್ಲಿ ರಂಬಾಣದೋರಿ ಮೆರೆದರು (ಸೌಂದಳಾ. ೩-೨೯) : ಕೋಟೆ ಮೇಲೆ ಇಂಗ್ರೇಜ ಬಹಾದ್ದರರ ಜಾಂಡೆ ಹಾಕಿಸಿಕೊಳ್ಳುತ್ತೇನೆ (ರಾಜೇಂದ್ರ. ೨೯). **ಜಾಂಡೇಯ :** ೧. ಮೞಿದಿರಲ್ಕಿಂತುಮಾ ಗುರುವರಂ

. . . ಡಾಂಡೇಯಮಂ ನಿಲಿಸಿದಂ ವೈಭವವಿಂಡೆಂಬ ತೆಱದಿ (ಮುಕಾಶಿ. ೨೯-೦೦). **ಝುಂಡಾ** : 'ಝೆಂಡಾಊರು' ಪರಾ. **ಝಾಂಡಾ** : ೨. ಮೂರು ವಂಟಿ ಪಾದುಷಹರು ತಮ್ಮ ತಮ್ಮ ಬೇಮುಖಾನೆ ಸಂಗಡ ಝಾಂಡಾವನ್ನು ಹೊರಗೆಹಾಕಿಸಿದರು (ಐಕ್ಯರು. ೬).

[ ←ಹಿಂ. ಝಂಡಾ, ಝೇಂಡಾ ; ಮರಾ. ಝೇಂಡಾ ]

**ಝಾಂಡಹೊಡು**, (ಕ್ರಿ). ೧. ಬಾವುಟವನ್ನು ನೆಡು. ೨. (ಆಲಂ) ತಳ ವೂರು; ನೆಲಸು; ವಾಸಿಸು: ಯಾವುದೋ ಬೂಷ್ಟ್ಸ್ ಒಂದು ತಟ್ಟೆಯಲ್ಲಿ ಝಾಂಡಹೊಡಿತು (ಮುನೋಸಂ. ೨೬೦).

[ ಝಾಂಡ + ಹೊಡು (<ಪೊಡು) ]

**ಝಾಂಡಾ** 'ಝಾಂಡ' ನೋ.

**ಝಾಂಡಾಊರು**, ಝಂಡಾಊರು (ಕ್ರಿ). = ಝಾಂಡಹೊಡು ೨ : ಎಲ್ಲರೂ ಎಲ್ಲಿ ಬಂದು ಝಾಂಡಾ ಊರಿಬಿಡುವರೋ ಎಂಬ ದಿಗಿಲು (ನಾಡಿಗೇ. ೦೬೬). **ಝಂಡಾಊರು** : ಹಳ್ಳಿಗಾಡುಗಳಿಗೆ ಸರ್ಕೀಟಿಗೆ ಬಂದುಬಿಟ್ಟರೆ ಅಧಿಕಾರಿಗಳು ಝಂಡಾಊರುವುದು ಇಲ್ಲೇನೆ (ರೂಹಸಂ. ೬೦).

[ ಝಾಂಡಾ (<ಝಾಂಡ) + ಊರು$_1$ (<ಊಱು$_1$) ]

**ಝಾಂಡಾಹಾಕು** (ಕ್ರಿ). = ಝಾಂಡಹೊಡು ೨ : ಮಾವನಮನೆಯಲ್ಲಿ ಹೋಗಿ ಝಾಂಡಾ ಹಾಕಿದ್ದಾನೆ (ರೂಢಿ).

[ ಝಾಂಡಾ (<ಝಾಂಡ) + ಹಾಕು (<ಪಾಯ್ಕು$_1$) ]

**ಝಾಕಣಿ**, **ಜಾಕಣಿ** (ನಾ). (ಉಕ) ಪಾತ್ರೆಗಳ ಮೇಲೆ ಮುಚ್ಚುವ ಮುಚ್ಚಳ: ಅನ್ನದ ತಪ್ಪೇಲಿ ಮ್ಯಾಲಿನ ಝಾಕಣಿ ಸುದ್ಧಾ ತಗದಿಲ್ಲಾ (ಕೃಸಿ. ೨೨೦). **ಜಾಕಣಿ** : ಹಿಂದೂಸ್ಥಾನೀ ದಾಸಿ ಜಾಕಣಿಯಲ್ಲಿ ಕಂಡ ತೆಗೆದುಕೊಂಡು ಬಂದಳು (ಅಠಗಿ. ೨೨೩). [ ←ಮರಾ. ಝಾಕಣೇ ]

**ಝಾಗಟೆ** 'ಜೇಗಂಟೆ' ನೋ.

**ಝಾಟ** (ನಾ). ೧. ಪೊದರು ; ಹೊದೆ. ೨. ಲತಾಗೃಹ ; ನಿಕುಂಜ.

[ ಸಂ. ]

**ಝಾಟಣಿ** 'ಝಾಡಣಿ' ನೋ.

**ಝಾಟಲ** (ನಾ). ಮೊಕ್ಕವಂರ : "ಗೋಲೀಢಃ, ಗೋಲೀಹಃ, ಝಾಟಲಃ . . . ಮೊಕ್ಕಪಮರದ ಹೆಸರು" (ಸಿದ್ಯಾಂತಿ. ೦೦೬). [ ಸಂ. ].

**ಝಾಡಣಿ**, ಜಾಡಣಿ, ಜಾಡಣೆ, ಝಾಟಣಿ (ನಾ). ೧. ಅಳ್ಳಾಡಿಸು ವುದು ; ಕೊಡಹುವುದು ; ಜಳಪಿಸುವುದು : ಕೊನರ್ವ ಕೋಪದ ಖಂಡೆಯದ ಝಡಪುಗಳ ಝಾಡಣೆಯ (ತೊರರಾ. ೬-೯-೩). **ಜಾಡಣೆ** : ೧. 'ಜಾಡಣಿ ಹೊಡೆ' ಪರಾ. **ಜಾಡಣೆ** : ೧. ಝಡಪುಗಳ ಜಾ [ಪಾಠಾಂ. ಝಾ]ಡಣೆಯ ಮಿಂಚಿನ ಖಡುಗಗಳ (ತೊರರಾ. ೯-೬-೪). ೨. ಎಸೆಯುವುದು ; ತೆಗೆದು ಹಾಕುವುದು. ೩. ಭೇದಿಯಾಗುವುದು ; ಅತಿಸಾರ : ನಿನ್ನೆ ದಿನವೆಲ್ಲಾ ಜಾಡಣೆ, ಈಗ ಬಹಳ ಸುಸ್ತು (ರೂಢಿ). **ಝಾಟಣಿ** : ೧. ಒಂದು ಝಾಟಣಿಯಿಂದ ಕಾಲ ಅಧಾರವನ್ನು ಪಡೆಯ ಲೆತ್ನಿಸಿದಳು (ರಕ್ತಧ್ವ. ೩೦೩). [←ಮರಾ. ಝಾಡಣೇ; ಹಿಂ. ಝಾಡನಾ]

**ಝಾಡಮಾಲಿ**, ಜಾಡಮಾಲಿ, ಝಾಡುಮಾಲಿ (ನಾ). ಕಸಗುಡಿಸುವ ಕೆಲಸಮಾಡಿ ಜೀವಿಸುವವನು; ಬೀದಿಗುಡಿಸುವವನು ; ಜಲಗಾರ : ಊರಿನ ಝಾಡಮಾಲಿಗಳ ಮಧ್ಯೆ . . . ವಾಸ (ದಿಲ್ಲಿಹ. ೨೩) ; ನಂಜುಂಡ ಝಾಡಮಾಲಿಯಾದ ನಂತರ (ಬೆಸ್ತಳ. ೦೩೦) ; ಝಾಡಮಾಲಿಗಳ ಗುಡಿಸಲುಗಳ ಮುಂದೆ ಹುಡುಗ ಹುಡುಗಿಯರು ಆಟವಾಡುತ್ತಿದ್ದಾರೆ (ಸಾಹೇಬ್. ೬೩). **ಜಾಡಮಾಲಿ** : ಜಾಡಮಾಲಿಗಳ ಕೆಲಸದಲ್ಲಿ ತೊಡಗಿದ್ದ ಹೈದಿಗಳು (ಪುನರು. ೨೦೬). **ಝಾಡುಮಾಲಿ** : ಸಾಹೇಬರ ಝಾಡು ಮಾಲಿಯು ಕೂಡ ಧರಿಸದಂಥ ಹೊಲಸು ಬಟ್ಟೆಗಳು ಅವರ ಮೈಮೇಲಿದ್ದವು (ನಾಳಥ. ೩೨). [ ? /ಹಿಂ. ಮರಾ. ಝಾಡೂ = ಕಸಪರಕೆ ]

**ಝಾಡಿ$_1$**, ಜಾಡಿ$_1$ (ನಾ). ೧. ಸಂದಣಿ ; ದಟ್ಟಣೆ ; ಸಮೂಹ : ಪಲ್ಲವ ಸತ್ತಿಯ ಝಾಡಿಗಳೊಳಗೆ ಕೈಗಾಯ್ದು ನಿಂದನು ಕರ್ಣ (ಕುವ್ಯಾದ್ರೋ. ೭೮೩. ಪಠಿ. ೨೬೩). ೨. ಹೆಚ್ಚಳ ; ಆಧಿಕ್ಯ : ಝಳದ ಝಾಡಿಗೆ ಬೆವರಿ ವಸನಾಂ ಚಲದ ಗಾಳಿಗೆ ಮೊಗವನೆತ್ತಿದರು (ಕುವ್ಯಾದ್ರೋ. ೦೯-೦೮) ; ಅಕ್ಷಿಗಳಲು ಬ್ಬುವ ತೋರಗಿಡಿಗಳ ದಾಡೆಗಳ ವಿಷದುರಿಯ ಝಾಡಿಗಳ (ತೊರರಾ. ೬-೧೩-೩೩). **ಜಾಡಿ$_1$** : ೧. ಹೊಡಿದಂಬಿನ ಹೊದೆಯ ಬಂಡಿಯ ಕೋಟೆ ಕಡಿದನು ಛತ್ರಚಮರದ ಜಾ[ಪಾಠಾಂ. ಝಾ]ಡಿಗಳ ಕಱದೊಟ್ಟಿದನು ಕಲಿಪಾರ್ಥ (ಕುವ್ಯಾಕ. ೨೬-೯). ೨. ಪವನತನಯನ ಖತಿಯ ಜಾ[ಪಾಠಾಂ. ಝಾ]ಡಿಯ ಹವಣ ಕಂಡರು (ಕುವ್ಯಾಸ. ೦೦-೨೩); ಕಣ್ಗಳ ಕಿಡಿಯ ಕಳಲದ ಜಾಡಿಯ ಭೀಷಣಧ್ವನಿಗಳ ಘೋರ ರಾಕ್ಷಸರು (ಜಲಕು. ೯೨-೯೩) ; ಜಳದ ಜಾಡಿಯ ಬಿಂಕದಿಂದೆ ಸಲೆ ಗಮನಿಸುತಂತಾ ಬಾಣವೂ (ಘೋರಾಖು. ೯೨).

[ ←ಹಿಂ. ಮರಾ. ಝಾಡೀ = ಪೊದೆ, ಪೊದರು ]

**ಝಾಡಿ$_2$** 'ಜಾಡಿ$_2$' ನೋ.

**ಝಾಡಿ$_3$** 'ಝಡೆ' ನೋ.

**ಝಾಡಿ$_4$** 'ಜಾಡಿ$_4$' ನೋ.

**ಝಾಡಿ$_5$** (ನಾ). ಗದಾಯುದ್ಧದಲ್ಲಿ ಒಂದು ವರಸೆ : ಝಾಡಿ ಝಂಕಣೆ ಝಡಪು ಖಾಡಾಖಾಡಿ . . . ಘಲ್ಲಣೆಗಳಲಿ ಗದೆ ಕುಣಿದಾಡಿದವು (ತೊರರಾ. ೬-೦೯-೦೬). [ ? ]

**ಝಾಡಿಕೆ** (ನಾ). = ಝಾಡಿ$_1$ ೨ : ಎಲಯಾಗ್ನಿ ಜಿಹ್ವೆಯ ಝಾಡಿಕೆಯ ಕುಡಿ ಯಂತೆ ಕಿಡಿಗೆದಱದವು ಕೈದುಗಳು (ತೊರರಾ. ೬-೨೦-೨೯).

[ ಝಾಡಿ$_1$ + -ಇಕೆ ]

**ಝಾಡಿಗಿಡಿ** (ನಾ). ಗುಂಪುಗೊಂಡ ಕಿಡಿ : ವೈಷ್ಣವ ಬಾಣವನು ಬೆಸಸೆ ಝಾಡಿಗಿಡಿಗಳ ಝಳದ ದಳ್ಳುರಿ . . . ಅಡಗಿಸಿತಾ ಶಿರತ್ರಯವ (ತೊರರಾ. ೩-೬-೨೩). [ ಝಾಡಿ$_1$ + ಕಿಡಿ$_1$ ]

**ಝಾಡಿಗೆದಱು$_1$**, ಜಾಡಿಗೆದಱು (ಕ್ರಿ). ೧. ಅಧಿಕವಾಗಿ ಹರಡು, -ವಿಸ್ತಾರ ಗೊಳ್ಳು : ಝಾಡಿಗೆದಱುವ ಗೌರಾಗಹಳೆಗಳ ತೂಳುವಱಗಳ . . . ಘೋಷವವನಿಯ ಸೀಳೆ (ಕುವ್ಯಾಕ. ೨-೨). **ಜಾಡಿಗೆದಱು** : ೨. ದಟ್ಟವಾಗಿ ನಿವಿರು ; ಗುಂಪುಗುಂಪಾಗಿ ಕೆದರು : ಮೈಯಲಿ ಜಾ[ಪಾಠಾಂ. ಝಾ]ಡಿಗೆದಱತು ರೋಮ ಝಳಪಿಸಿತರುಣಮಯ ನಯನ (ಕುವ್ಯಾಸ. ೦೩-೦೩).

[ ಝಾಡಿ$_1$ + ಕೆದಱು$_1$ (<ಕೆದಱ್$_1$) ]

**ಝಾಡಿಗೆದಱು$_2$** (ನಾ). ಅಧಿಕವಾಗಿ ಹರಡುವಿಕೆ; ವಿಸ್ತಾರಗೊಳ್ಳುವಿಕೆ: ತುಡುಕು ಚಮರಿಯ ಝಾಡಿಗೆದಱನ ಗಡಣಿಸುವ ಝಲ್ಲರಿಯ ದಳ ಬಱಸಿಡಿಲ ಮೇಳವದಂತೆ ನೆರೆದುದು (ಕುವ್ಯಾಕ. ೦೮-೦೦).

[ ಝಾಡಿ$_1$ + ಕೆದಱು$_2$ (<ಕೆದಱ್$_2$) ]

**ಝಾಡಿಮಸಗು** (ಕ್ರಿ). ಅಧಿಕವಾಗಿ ಹರಡು; ಅತಿಶಯವಾಗು: ಆಹವದ ಖಯಖೋಡಿಯಿಲ್ಲದೆ ಸುಭಟರಬ್ಬರ ಝಾಡಿಮಸಗಿತು ಕದನದಲಿ (ಕುವ್ಯಾಕ. ೮-೦೩). [ ಝಾಡಿ$_1$ + ಮಸಗು$_1$ ]

**ಝಾಡಿಯೆಸುಗೆ** (ನಾ). ವೇಗದಿಂದ ಬಿಡುವುದು; ರಭಸದಿಂದ ಪ್ರಯೋ ಗಿಸುವುದು : ಶರಜಾಳ ಕವಿದುದು ಗಜದ ಜೋಧರ ಝಾಡಿಯೆಸುಗೆಯಲಿ (ಕುವ್ಯಾಕ. ೦೦-೦೬). [ ಝಾಡಿ$_1$ + ಎಸುಗೆ ]

**ಝಾಡಿವೆಳಗು** (ನಾ). ಅಧಿಕವಾದ ಬೆಳಕು ; ಪ್ರಸರಿಸುವ ಕಾಂತಿ : ಈಡಿಱದ ಮಣಿಮಯದ ಕಳಶದ ಝಾಡಿವೆಳಗಿನ ಹೇಮರಸದಲಿ . . . ನಿಕೇತನವೆಸೆದವಲ್ಲಲ್ಲಿ (ತೊರರಾ. ೩-೨-೨೩) ; ಮಣಿಗಣದ ಜೋಡಿನ ಝಾಡಿವೆಳಗಿನಲಿ ಥಾಳಿಸಿತು ಥಳಥಳನೆ (ತೊರರಾ. ೬-೦೮-೬).

[ ಝಾಡಿ$_1$ + ಬೆಳಗು$_2$ ]

**ಝಾಡಿಸು** 'ಜಾಡಿಸು' ನೋ.

**ಝಾಡು** (ನಾ). ಪೊದರಂ; ಪೊದೆ; ಪೆಳೆಗಳ ಗುಂಪು : ಅದರ ಸುತ್ತ ಗಿಡದ ಝಾಡಿದೆ (ಕನಕ. ೨೦); ಎದುರಿಗಿರುವ ಝಾಡಿನಲ್ಲಿ ಒಂದು ಭಯಂಕರವಾದ ಹುಲಿಯು ಮಲಗಿ ನಿದ್ದೆಮಾಡುತ್ತಿರುವದು (ಕೀಚಕ. ೦೦). [ ← ಹಿಂ. ಮರಾ. ಝಾಡ್./ಸಂ. ಝಾಟ ]

**ಝಾಡುಮಾಲಿ** 'ಝಾಡವಮಾಲಿ' ನೋ.

**ಝಾಡೆ**, ಜಾಡ$_2$, ಜಾಡಿ$_3$, ಜಾಡೆ$_3$, ಝಾಡಿ$_3$ (ನಾ). ೧. ಲೆಕ್ಕಾಚಾರವನ್ನು ತೀರಿಸಂವುದು ; ಫೈಸಲ್ ಮಾಡುವುದಂ : ಝಾಡೆಯಾಗಿ ವಸೂಲು ಮಾಡಬೇಕು (ಮಹಾಪಂ. II, ೬೩). **ಜಾಡ$_2$**: ೧. ಆವನು ತನಗೆ ಮೊದಲು ದೊರೆತ ಹಣವನ್ನು ಸಾಲವನ್ನು ಜಾಡಮಾಡುವುದಕ್ಕೆ . . . ವಚನ ಕೊಟ್ಟು (ಕಂಜಿನ್. ೩೬). **ಜಾಡಿ$_3$**: ೨. ಮಂಗಿದು ಹೋಗುವಿಕೆ; ನಿಶ್ಶೇಷವಾಗುವುದು: ಕಾಳುಕಡಿ, ತುಪ್ಪ, ಎಣ್ಣೆ ಎಲ್ಲಾ ಜಾಡಿ ; ಏನೇನೂ ಉಳಿಯಲಿಲ್ಲ(ಕೂತ). **ಜಾಡೆ$_3$**: ೩. ಒಂದು ಗ್ರಾಮದಲ್ಲಿರುವ ಮನೆಗಳ, ದನಕರಂಗಳ ಅಂಗಡಿ ಮುಂಗಟ್ಟುಗಳ ಹಾಗೂ ರಾಟೆ, ನೇಗಿಲು ಮೊದಲಾದುವುಗಳ ಸಂಖ್ಯೆಯನ್ನೂ ಜನಸಂಖ್ಯೆಯನ್ನೂ ಬರೆದಿಡುವ ದಾಖಲೆ ಪುಸ್ತಕ: (ಮ್ಯಗೆಜಿ. IV, ೭೭೩). **ಝಾಡಿ$_3$**: ೨. ಬಿಟ್ಟಿಟನ ಪೊಟ್ಟಣ . . . ಎಲ್ಲರಿಗೂ ಕೊಡಬೇಕು. ಒಂದು ದಿವಸದಾಗ ಎಲ್ಲ ಝಾಡಿ (ಕೃಲಾಜಿ. ೨೩).

ಜಾಡಾ ರಶೀದಿ = ಲೆಕ್ಕಾಚಾರವು ಫೈಸಲಾಯಿತೆಂದು ಬರೆದು ಕೊಡುವ ರಶೀದಿ,–ದಾಖಲೆಪತ್ರ: ಹಿರಣ್ಣನ ಹೆಸರಿನಲ್ಲಿ ಒಂದು ಜಾಡಾ ರಶೀದಿ ಮಾಡು (ಕಟುಕ. ೯೩). [ ←ಮರಾ. ಝಾಡಾ ]

**ಝಾಣಾಸು** (ಕ್ರಿ). ಖಚಿತವಾಗಿ ಹೇಳು ; ಖಡಾಖಡಿಯಾಗಿ ತಿಳಿಸು : "ನಾಳೆ ನಾ ಕಾವಲಕ್ಕ ಇದ್ರ ಒಂದ ಕಾಯಿ ಬಿಡಾಕಿಲ್ಲಾ ಹೊರಗ!" ಯಾಯಾ ಝಾಣಾಸಿ ಹೇಳಿದಳು (ಜಾಬಂ. ೨೬). [ಝಾಣ್ಣ$_0$ + – ಇಸು$_3$]

**ಝಾಪು** 'ಚಾಪು$_1$' ನೋ.

**ಝಾಪುಗಾಲು** 'ಚಾಪುಗಾಲು' ನೋ.

**ಝಾಬುಕ** (ನಾ). ಒಂದು ಬಗೆಯ ಮರ ; ದೂದೀಮರ ; "ಕಕ್ಕೆಗಿಡ" : (ಅಮರ. ೬೪೮) [ ಸಂ. ]

**ಝಾಮು** 'ಜಾವ$_1$' ನೋ.

**ಝಾಯಿ** 'ಜಾಯಿ$_3$' ನೋ.

**ಝಾರಿ**, ಜಾರೆ$_4$, ಝಾರೆ (ನಾ). ತೂತುಗಳುಳ್ಳ ಸೌಟು ; ಜಾಲರಿ : ಚಂದ್ರವ್ವ ಕಾಳು ಕರಿಯುತ್ತಿದ್ದಳು. ಝಾರಿಯಿಂದ ತೆಗೆಯುತ್ತಿದ್ದಳು (ಅಕೋಳ. ೨೮). **ಜಾರೆ$_4$**: ಕುದಿದ ಅರಿಷಿಣವನ್ನು . . . ಜಾರೆಯ ಸವುಟ ನಿಂದ ತೆಗೆಯಬೇಕು (ಕೃಷಿಪ್ರ. ೦೬೯). **ಝಾರೆ**: ಮುಂಬಾಯಿ ಶಹರದಲ್ಲಿ ಆಗುವ ಜೀನಸಗಳ ವಿವರವು . . . ೩೭ ಝಾರೆಗಳು (ಝಾರಿಸವುಟು) (ಮುಂಬಮ್ಮಾ. ೦೦೨). [ ←ಮರಾ. ಝಾರೀ, ಝಾರಾ ]

**ಝಾರೆ** 'ಝಾರಿ' ನೋ.

**ಝಾರೇ** (ಅ). ಒಂದು ಕೊಂಡಾಟದ ಮಾತು ; ಹೊಗಳಿಕೆಯ ನುಡಿ : ಝಾರೇ ಜರಝಾರೇ . . . ಎಂಬುಲಿ ನೆಗೆವನೆಗಂ ಬಿಟ್ಟು ಮಾಟಾಂತ ಮೇಲಾಳ್ಗಳನಾಗಳ್ ತಳ್ತು ಪೊಯ್ದು (ಕಬ್ಬಿಗಾ. ೨೭೯).

**ಝಾಲರ** 'ಝಾಲರಿ' ನೋ.

**ಝಾಲರಿ**, ಜಲರಿ, ಜಾಲರಿ, ಜಾಳರ, ಝಾಲರ (ನಾ). ೧. ಮೇಲ್ಕಟ್ಟು; ತೂಗಾಡುವ, ಬಲೆಯಂತಹ ಸಿಂಗಾರ ವಸ್ತ್ರ : ಬಳಸಿ ಕಟ್ಟುತ ಸುತ್ತ ಪವಳ ಝಾಲರಿಯಾ ಥಳಕುಗೊಡುತಿಹ ಕನಕಕಲಶಗಳನಿಟ್ಟು (ಯಜ್ಞೋರ. ೯೮); ಸುತ್ತಲೂ ಮುತ್ತಿನ ಝಾಲರಿಗಳು ಕಂಗೊಳಿಸುತ್ತಿದ್ದವು (ಶ್ರೀರಾಮ. ೦೨೮). **ಜಲರಿ**: ೨. ತಂತಿಯ ಬಲೆ; ತೂತುಗಳಿರುವ ರಚನೆ : ಒಂದೇ ಸೆಳೆತದ ನೋಟದಲ್ಲಿ ತನ್ನ ಜಲರಿಯ ಬಲೆಯಲ್ಲಿ ಕೆಡವಿಕೊಂಡಳು (ಕಾವೇರಿ. ೬). **ಜಾಲರಿ**: ೩. ತೂತುಗಳಿರುವ ಸೌಟು. 'ಜಾಲರಿಸೌಟು' ಪರಾ. ೪. ಅಗಲವಾದ ಕಂಚಿನ ತಾಳ. 'ಜಾಲರಿತಾಳ' ಪರಾ. **ಜಾಳರ**: ೨. 'ಜಾಳರಂಬೋಗು' ಪರಾ. **ಝಾಲರ**: ೧. ಮುತ್ತು ರತ್ನಗಳ ಝಾಲರಗಳಿಂದ ಅದು ಅಲಂಕೃತ (ನಿಬಂಧ. I, ೨೩೭). 'ಜಲ್ಲರಿ$_1$' ಪರಾ. [ ←ಹಿಂ. ಮರಾ. ಝಾಲರ್ ]

**ಝಾವ** 'ಜಾವ$_1$' ನೋ.

**ಝಾವುಕ** (ನಾ). ಒಂದು ಬಗೆಯ ಮರ; ದೂದೀಮರ; ಬೂರುಗ: ಕಕ್ಕೆಗಿಡ. [ ಸಂ. ]

**ಝಾಳಿಸು** (ಕ್ರಿ). (?) : ವರ್ಗಚತುರ್ಥಾಕ್ಷರಂಗಳ್ಗೆ . . . ಝುಟಿಸಿತು, ಝಾಳಿಸಿತು (ಶಮದ. ೦೫ ವೃತ್ತಿ). [ ? ]

**ಝಾಳೆಯ** (ನಾ). ೧. ಸ್ವೀಕಾರ ; ತೆಗೆದುಕೊಳ್ಳುವುದಂ (?). ೨. ಅಪಹಾರ ; ಕಿತ್ತುಕೊಳ್ಳುವುದಂ. 'ಝಾಳೆಯಂಗೊಳ್' ಪರಾ. [ ? ]

**ಝಾಳೆಯಂಗೊಳ್** (ಕ್ರಿ). ೧. ಸ್ವೀಕರಿಸು ; ತೆಗೆದುಕೊಳ್ಳು (?) : ಪೆಱರ ಪಲವುಂ ಜೀವಧನಂಗಳನರಸರ ಕಾಪಿನ ಪೊಲನಂ ಪೊಕ್ಕುಮೆಂದುಡಿಗೆ ಯೊತ್ತಿಕೊಳುತ್ತು ಪೊಱಗವಾದೆಡೆಗಳೊಳ್ ಝಾಳೆಯಂಗೊಳುತ್ತುಮನಿತ ಱಿಂ ಳಂ ತಣಿಯದೆ (ಸುಕುಮಾ. ೬-೩೩ ವ). ೨. ಅಪಹರಿಸು ; ಕಿತ್ತು ಕೊಳ್ಳು (?) : ತಣಿಯದೆ ಮತ್ತಂ ಯತಿಕಾಂಕ್ಷೆಯಿಂ ಲೋಗರೊಡವೆಯಂ ಝಾಳೆಯಂಗೊಂಡು (ಸುಕುಮಾ. ೬-೩೭ ವ). [ ಝಾಳೆಯ + ಕೊಳ್$_1$ ]

**ಝಿಂಟಿ** (ನಾ). ಒಂದು ಬಗೆಯ ಗಿಡ ; ಕರಿಯ ಗೋರಂಟಿ : "ನೀಲಿ. ಝಿಂಟೀ, ಬಾಣಾ—ಈ ೩ ಕರಿಯ ಗೋರಂಟಿ" (ಹೆಗಾಡಹು. ೩೮-೩೨). [ ಸಂ. ಝಿಂಟೀ ]

**ಝಿರಿಝಿರಿ** (ನಾ). ಒಂದು ಅನುಕರಣ ಶಬ್ದ ; ಮಳೆಯನ್ನು ಅನುಕರಿಸುವ ಶಬ್ದ.

ಝಿರಿಝಿರಿ ಹತ್ತು = ಒಂದೇ ಸಮನೆ ಸುರಿ ; ಧಾರಾಕಾರವಾಗಿ ಸುರಿ : ಮಳೆ ಝಿರಿಝಿರಿ ಹತ್ತಿದರೆ . . . ಚೀಲ ಕಡಿಮೆ (ಮುಂಬಮ್ಮಾ. ೨೭೬).

**ಝಿಲ್ಲಿ** (ನಾ). = ಝಿಲ್ಲಿಕೆ : ಸೀದು ಸೀಕರಿಹೋಗಿ ತಾರದೊಳಳುವೊಲು ಕೂಗುತಲಿಹವು ಝಿಲ್ಲಿಗಳು (ಗಾಥಾಸ. ೫-೯೪); ಮರಗಳಲ್ಲಿ ಝಿಲ್ಲಿಗಳು ರೀ ರೀ ರೀ ಎಂದು ಕೂಗುತ್ತಿದ್ದುವು (ಹೀಕಥ. ೦೦೨). [ ಸಂ. ಝಿಲ್ಲೀ ]

**ಝಿಲ್ಲಿಕಾನಾದ** (ನಾ). ಜೀರುಂಡೆಹುಳುಗಳ ಶಬ್ದ,–ಧ್ವನಿ: ಝಿಲ್ಲಿಕಾನಾದ ಘರ್ಘರ ಘೋರಕರ್ಕಶಂ (ಶ್ರೀರಾಮೂ. ೦೮೦-೦೦೯). [ ಸಂ. (ಝಿಲ್ಲಿಕಾ + ನಾದ) ]

**ಝಿಲ್ಲಿಕೆ** (ನಾ). ಜೀರುಂಡೆಹುಳು : "ಝಿಲ್ಲಿಕೆಯೆನಲ್ ಜಿಮ್ಮುಂಡೆಗಕ್ಕು ನಾಮಂ" (ಮುಂಗರಾ. ೫೨-೧೦) ; ಕಟುವಾದುದ್ದೈ ಝಿಲ್ಲಿಕಾಕಂಠಕೃತಿ ಕರ್ಕಶಂ (ಶ್ರೀರಾಮೂ. ೨೬೩-೭). [ ಸಂ. ಝಿಲ್ಲಿಕಾ ]

**ಝಿಲ್ಲೀಕೆ** (ನಾ).=ಝಿಲ್ಲಿಕೆ. [ ಸಂ. ಝಿಲ್ಲೀಕ ]

**ಝಿಝಾರುಕೆ** (ನಾ).=ಝಿಲ್ಲಿಕೆ. [ ಸಂ. ಝಿಝಾರುಕಾ ]

**ಝುಡುಪು**, ಜುಡುಂಪು, ಝುಡುಪು (ನಾ). ೧. ಪೊದೆ ; ಪೊದರಂ : ಎಲ್ಲಾದರೂ ಗಿಡದ ಝುಡುಪಿನಲ್ಲಿ ಅಡಗಿಕೊಂಡಿರಬಹುದು (ಶ್ರೀಕಾಂತ. ೬೩).**ಜುಡುಪು**: ೨. ಕುಚ್ಚು ; ಗುಂಪು : ಅವುಗಳಿಗೆ ಕಟ್ಟಿದ್ದ ಹಗ್ಗಗಳ ಜುಡುಪುಗಳೂ ಪಟಗಳೂ ವಿಚಿತ್ರವಾದ ಎಲೆಯ ಜಾಡಿನಂತೆ ಒಪ್ಪುತ್ತಿದ್ದವು (ಚೀನಚಾ. ೨೦೦). **ಝುಡುಪು**: ೧. ಸುತ್ತಲೂ ಗಿಡಗಳ ಝುಡುಪು, ಮನಸ್ಸಿನಲ್ಲಿ ಹಿಂಸ್ರಪಶುಗಳ ಭಯ(ಸ್ಮೃತಿಚಿ. ೮೦) ; ಪಕ್ಕದಲ್ಲಿಯೇ ಗಿಡಗಳ ಝುಡುಪಿನಲ್ಲಿ ಒಂಟಿಯಾಗಿ ನಡೆಯುತ್ತಿದ್ದ (ನೀಲಕ. ೩೮). [ ←ಮರಾ. ಝುಡಪ್, ಝುಡೂಪ್ ]

**ಝುಣಕ** 'ಜುಣಕ' ನೋ.

**ಝುಮಕಿ** 'ಜುಮಕಿ' ನೋ.

**ಝುಮರು** 'ಜುಮುರು' ನೋ.

**ಝುಮ್ಮಿಡು** (ಕ್ರಿ). ೧. ನಡುಗು; ಕಂಪಿಸು: ವರ ರಾಜೀವಸಂಭವ ಶರವ ಹೂಡಿದನಾ ವಿಬುಧರಸು ಝಡಿಯೆ ಝುಮ್ಮಿಡೆ ತನು ತ್ರಿಯಂಬಕನ (ತೊರವ. ೩-೬-೨೮). ೨. ಝುಂವೆಂದು ಎನ್ನು: ದೈತ್ಯನೆದೆ ಜರ್ಜರಿತವಾಯಿತು ನೆತ್ತಿ ಝುಮ್ಮಿಡೆ ತಿರುಗಿ ಬಿದ್ದನು (ಕೌ ತಿ ಶಾ. ೩೨-೪೦); ಅದ್ರಿಗಳು ಮಾರ್ದನಿಗೊಡಲ್ದಿಗ್ಗಜಂಗಳ ಕರ್ಣದಲ್ಲಿ ಝು[ಪಾಠಾಂ. ಝು]ಮ್ಮಿಡೆ ಕರ್ಣನೆಂಬಾ ಮಾತನು ಕಳವುತ (ವೀರೈಕು. ೨-೭-೪೩).

[ ಝುಮ್$_0$ (<ಜುಂ) + ಇಡು$_1$ ]

**ಝುರಮತ್ತು** 'ಜುರತ್ತು' ನೋ.

**ಝುರಕಿ** 'ಜುರಿಕೆ' ನೋ.

**ಝುರಿಕಿ** 'ಜುರಿಕೆ' ನೋ.

**ಝುರಕಿ** 'ಜುರಿಕೆ' ನೋ.

**ಝುರುಕಿ** 'ಜುರಿಕೆ' ನೋ.

**ಝುಲುಮ್ಮನೆ** (ಅ). ತಟ್ಟನೆ; ಒಡನೆ; ಕೂಡಲೆ: ಅನುಕರಣಕ್ಕೆ . . . ಝುಲುಮ್ಮ[ಪಾಠಾಂ ಮ್ಮೆ]ನೆ ಪರಿಲ್ಲನೆ (ಶಮದ. ೧೪ ಪ್ರಯೋ).

[ ಝುಲುಮ್$_0$ + – ಅನೆ$_1$ ]

**ಝುಳಕು** 'ಝುಳುಕು' ನೋ.

**ಝುಳುಕು, ಜುಳುಕು$_1$, ಝುಳಕು** (ನಾ). ೧. ಅಸ್ಪಷ್ಟವಾಗಿ ಕಾಣುವಿಕೆ; ಸ್ವಲ್ಪ ತೋರುವುದು; ಛಾಯೆ: ತಿಪ್ಪನ ಪ್ರಣಯದಲ್ಲಿ . . . ಗಾಂಧರ್ವಪದ್ಧತಿಯ ಝುಳುಕಿದೆ (ಸಮಜೀ. ೪೦, ಟಿಪ್ಪಣಿ). ೨. ಕಾಂತಿ; ಹೊಳಪು: ಸಾಲಿನಲ್ಲಿ ನಿಂತ ಜನರ ಮುಖದ ಮೇಲೆ ಗೆಲುವಿನ ಝುಳುಕೊಂದು ಹಾಯ್ದುಹೋಯಿತು (ಪ್ರಜಾಸ. ೩೩). ಜುಳುಕು$_1$: ೧. ಹಾವಭಾವಗಳ ಜುಳುಕಿನಲ್ಲಿ ತಾಳಲಯಗಳ ಸಮ್ಮೇಳನವಾಗಿ ಮನಸ್ಸಿಗೆ ಶ್ರಮವೆನಿಸದ (ಕನ್ನಡಾ. ೩೩). ಝುಳಕು: ೧. ಹೆದರಿಕೆಯ ಒಂದು ಝುಳಕು ಮೈಯನ್ನು ನಡುಗಿಸಿತು (ಮೇದಿನು. ೦೬)

[ ←ಮರಾ. ಝುಳಝುಕ್, ಝುಳಕ್ ]

**ಝೂರಿ** 'ಜುರಿ$_2$' ನೋ.

**ಝೂಲ** 'ಜೂಲು$_2$' ನೋ.

**ಝೂಲಹಾಕು** (ಕ್ರಿ). ಮೇಲು ಹೊದಿಕೆಯನ್ನು ಹೊದಿಸು; ಅಲಂಕಾರದ ಗೌಸುಹಾಕು; ಗೌಸನ್ನು ಹೊದಿಸು: ಅವಳು ಝೂಲಹಾಕಿದ ಗೋವಿನಂತೆ, ಬಂಗಾಲೀ ಸ್ತ್ರೀಯರಂತೆಯೇ ಸೀರೆಕುಪ್ಪಸಗಳನ್ನು . . . ಧರಿಸಿಕೊಂಡಿರುತ್ತಿದ್ದು (ಹೇಮಂತ. ೪೨೩).

[ ಝೂಲ (<ಜೂಲು$_2$) + ಹಾಕು (<ಪಾಯ್ಕು$_1$) ]

**ಝೂಲು** 'ಜೂಲು$_2$' ನೋ.

**ಝೆಂಡ** (ನಾ). ಆರ್ಯಭಾಷಾವರ್ಗಕ್ಕೆ ಸೇರಿದ ಒಂದು ಪುರಾತನ ಭಾಷೆ: ಏಸಿಯದ ಭಾಗದಲ್ಲಿ ಸಂಸ್ಕೃತ, ಝೆಂಡ, ಇವರಡು ಪುರಾತನದ ಭಾಷೆಗಳುಂಟು (ಮುಂಬಯಿ. ೩-೨೩೮). [ ? ]

**ಝೇಂಕರಿಸು** (ಕ್ರಿ). ೧. ಮೊರೆ; ಝೇಂಕಾರವನ್ನು ಮಾಡು: ಕುಸುಮಕುಲಮಂ ಮುತ್ತಿ ಝೇಂಕರಿಪ ತುಂಬಿಯಿಂ . . . ಮೆಱೆವುದು (ತಿರುಕ.ದೀ. ೨-೦೩); ತನುಗಂಧಕೆಱಗಿ ತುಂಬಿಗಳು ಝೇಂಕರಿಸಲು (ಭರತ. ೯-೩೦); ಷಟ್ಪದಿಗಳೆಡೆವಿಡದೆ ಝೇಂಕರಿಸದಿರ್ಪುವೆ ಬಂದು ನೆರೆದ ವಿದ್ವತ್ಸಭಾನೀರೇರುಹಾಕರದೊಳು (ಜೈಮಿಭಾ. ೧-೮೨). ೨. ಬಿರುನಂಡಿಗಳನ್ನಾಡು; ಆರ್ಭಟಿಸು: ಗೆಡವರ್ಚಿರ್ವರ್ ಮನಗೊಂಡೊಡನೊಡನೋರಂತು ತಗುಳ್ದು ಝೇಂಕರಿಸಿದೊಡೆ (ಹಂಪಭಾ.೨-೭೩); ಪ್ರತಿಪಕ್ಷದವರು:- (ಕುಪಿತರಾಗಿ ಝೇಂಕರಿಸುವರು) (ಬಿರುಗಂ. ೦೩-೦೪). [ ಝೇಂಕರಣ$_0$+ – ಇಸು$_3$ ]

**ಝೇಂಕಾರ** (ನಾ). ದುಂಬಿ ಮೊದಲಾದುವುಗಳ ಧ್ವನಿ.–ಮೊರೆತ: ಇಂಬಸಿಂ ಕಳ್ಳಿರ್ದ ಮಱಿದುಂಬಿಗಳ ಝೇಂಕಾರದಿಂ (ಜಾಥವು ೦-೨೦೯೮).

[ ಸಂ. ]

**ಝೇಂಕೃತ** (ನಾ).=ಝೇಂಕಾರ: ಝೇಂಕೃತಂ ತುಂಬಿಯೊಳು (ಮುಂಗಡಾ. ೨೭-೬). [ ಸಂ. ]

**ಝೇಗೈ** (ಕ್ರಿ). (ವೀಣೆ ಮೊದಲಾದುವನ್ನು) ನುಡಿಸು; ಬಾರಿಸು: ಕೋಣನಿದಿರಲಿ ಪಾಡಿ ತುಂಬುರವೀಣೆಯಂ ಝೇಗೈದ ಪರಿ (ಗಗಕಾ. ೦೨-೪). [ ಝೇ$_0$ + ಕೈ (<ಕೆಯ್$_1$) ]

**ಝೊಂಪಿಸು$_1$** 'ಜೊಂಪಿಸು$_1$' ನೋ.

**ಝೊಂಪಿಸು$_2$** 'ಜೊಂಪಿಸು$_2$' ನೋ.

**ಝೊಂಪು** 'ಜೊಂಪು$_1$' ನೋ.

**ಝೊಂಬಿಸು** 'ಜೊಂಪಿಸು$_2$' ನೋ.

**ಝೊಟ್ಟಿಂಗ** 'ಜಟ್ಟಿಂಗ' ನೋ.

**ಝೊಮ್ಮಿಡು** 'ಜುಮ್ಮಿಡು' ನೋ.

**ಝೊಮ್ಮಿಸು** (ಕ್ರಿ). = ಜುಮ್ಮಿಡು: ಸವಿಯೇಱಿ ಸರ್ವಾಂಗವುಣ್ಣೆ ಝೊಮ್ಮಿಸುತ [ಪಾಠಾಂ. ಝುಮ್ಮಿಡುತ್ತ, ಝೊಂಪಿಸುತ]ಮಿರೆ (ಇಡಕ.ದೀ. ೩೦-೧೬). [ ಝೊಮ್$_0$ (<ಜುಂ)+ – ಇಸು$_3$ ]

**ಝೊಮ್ಮು$_1$** 'ಜೊಂಪು$_1$' ನೋ.

**ಝೊಮ್ಮು$_2$** 'ಜುಂ' ನೋ.

**ಝೊಮ್ಮನೆ** 'ಜೊಮ್ಮನೆ' ನೋ.

**ಝೋಂಟಿಗ** 'ಜಟ್ಟಿಂಗ' ನೋ.

**ಝೋಂಪಿಸು$_1$** 'ಜೊಂಪಿಸು$_1$' ನೋ.

**ಝೋಂಪಿಸು$_2$** 'ಜೊಂಪಿಸು$_2$' ನೋ.

**ಝೋಂಪು** 'ಜೊಂಪು$_1$' ನೋ.

**ಝೋಕು$_1$** 'ಜೋಕು$_1$' ನೋ.

**ಝೋಕು$_2$** 'ಜೋಕು$_2$' ನೋ.

**ಝೋಮು** 'ಜಮ್ಮು$_3$' ನೋ.

**ಝೋಮ್ಮಿಡು** 'ಜುಮ್ಮಿಡು' ನೋ.

**ಝೋರ್** (ನಾ). ಒಂದು ಅನುಕರಣ ಶಬ್ದ: ಎಡೆಗಿಡದು ಚೆಂದಂಗಿನೆಳಗಾಯೊಡೆದು ಝೋರೆನೆ ಪೊಸರ್ವ ಪೊನಲಿಂ (ಸಾಳ್ವಭಾ. ೧-೩೦).

**ಝೋರು** 'ಜೋರು$_3$' ನೋ.

**ಝೋಲಿ** 'ಜೋಲಿ$_3$' ನೋ.

**ಝೋಲಿತಪ್ಪು** 'ಜೋಲಿತಪ್ಪು' ನೋ.

**ಝೋಲಿಹೊಡೆ** 'ಜೋಲಿಹೊಡೆ' ನೋ.

**ಝೋಳಿ** 'ಜೋಳಿ$_3$' ನೋ.

**ಝೌಲಿಕ** (ನಾ). ವೀಳೆಯದೆಲೆ ಮತ್ತು ಅಡಿಕೆಯ ಚೀಲ; ಸಂಚಿ.

[ ಸಂ. ]

**ಞ** (ನಾ). ಕನ್ನಡ ವರ್ಣಮಾಲೆಯ ಮೂವತ್ತನೆಯ ಅಕ್ಷರ.

**ಞಕಾರ** (ನಾ).=ಞ. [ ಸಂ. ]

# ಟ

**ಟ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೊಂದನೆಯ ಅಕ್ಷರ. ೨. [ಗಣಿತ] ಒಂದು ಎಂಬ ಸಂಖ್ಯೆಯ ಸಂಕೇತ: "ನಿರುತದಿಂ ಕಟಪ[ಯ]ಮೆನಲ್ಕೊಂದು" (ಮಂಗರಾ. ೧೦೪-೧೦).

**ಟಂಕ**(ನಾ).೧.ಕಲ್ಲುಕುಟಿಗನ ಒಂದು ಉಪಕರಣ: ಕಲ್ಲುಳಿ; ಚಾಣ: "ಟಂಕ ಮೆನಲುಳಿಯಕ್ಕುಂ" (ಮಂಗರಾ. ೦೧೩-೮) ; ತುರಂಗಮ ವೇಗಬಲಪತಿತ ಖರಖುರಟಂಕ ಪರಿಸ್ಖಲನ ಕಳಿತವಿಷಮಸಮರಭೇರೀನಿಸ್ವನಮುಂ (ಪಂಪಭಾ. ೦೩-೫೦ ಪ) : ಕಟ್ಟೆಂಬ ನುಡಿ ಮಾಲೆಗಾರ್ತಿಯರೊಳುನೆಜ ಪೆಟ್ಟೆಂಬ ನುಡಿ ಟಂಕದೊಳಗೆ (ಕಂಪವಿ. ೨-೦೫). ೨. ನಾಣ್ಯವನ್ನು ಅಚ್ಚುಮಾಡುವ ಸಾಧನ ; ಅಚ್ಚು. ೩. ತಾಳೆಯೋಲೆಯಲ್ಲಿ ತೂತು ಕೊರೆಯುವ ಒಂದು ಬಗೆಯ ವೃತ್ತಾಕಾರದ ಮೊಳೆ : "ಟಂಕ=ಕಲ್ಲುಳಿಯುಂ, ಹೊನ್ನ ಅಚ್ಚಿನ ಮೊಳೆಯುಂ, ಓಲೆಯಂ ತೂತಂ ಕೊರೆವ ಉಂಗುರದ ಮೊಳೆಯುಂ" (ಶಾಕಶ್ಚ. ೨೬೩). ೪.=ಟಂಕನ. 'ಟಂಕಸಾಲೆ' ಪರಾ.೫. ಮುದ್ರೆಯೊತ್ತಿದ ನಾಣ್ಯ ; ಚಲಾವಣೆಯ ನಾಣ್ಯ: "ಉಳಿಯಭಿಮಾನ ನಾಣೆಯಗಳೆಂಬಿವು ಟಂಕಮೆನಿಕ್ಕು" (ನಾನಾಥ. ೦೩೦). ೬.=ಟಂಕಸಾಲೆ : ಆಣೆಗಪಜಯವಿಲ್ಲಲೇ ಕೀಳಾಣಿ ಟಂಕದೊಳಿಲ್ಲಲೇ (ಕುಮ್ಮಾಸ. ೦-೪೪). ೭. ಒಂದು ಬಗೆಯ ತೆರಿಗೆ ; ನಾಣ್ಯ ಮುದ್ರಿಸುವವರ ಮೇಲೆ ಹಾಕುವ ತೆರಿಗೆ : ಚತುಸ್ಸೀಮಾಭ್ಯಂತರ ಕವಿಳಾಸಪುರದಲ್ಲಿ ಸುಂಕಸಾದ ತಳಸಾರಿಗೆ . . . ಅಂಕೆ ಟಂಕ ಆಣೆ ಗೋಸನೆ ಮುದ್ರೆ ನಾಗೇಶ್ವರಕ್ಕೆ ಮಲ್ಲೇಶ್ವರಕೆ (ಎಇ. XXI, ೨-೭೩ ; 1260). ೮.=ಟಂಕಣ ೯. ಪಾತ್ರೆ ಮೊದಲಾದುವು ಗಳ ಸಂದನ್ನು ಸುತ್ತಿಗೆಯಿಂದ ಬಡಿದು ಕೂಡಿಸುವಿಕೆ: ಬಿಂದಿಗೆ ಬಿರುಕು ಬಿಟ್ಟಿದೆ. ಸ್ವಲ್ಪ ಟಂಕ ಹಾಕಿಸಿಕೊಂಡು ಬಾ (ರೂಢಿ). ೧೦. ಬೆಟ್ಟದ ಇಳಿಜಾರು ಪ್ರದೇಶ;ತಪ್ಪಲು ಪ್ರದೇಶ: ಮಾಧ್ಯದ್ಗಜಗಂಡಭಿತ್ತಿ ಕಷಣಪ್ರೋದ್ಯೇದದಿಂ ಸಾರ್ದು ಬಂದಿದಿರೊಳ್ ಕೂಡುವುದಿಲ್ಲಿ ಚಂದನರಸಂ ಕೆಂದೊನ್ನ ಟಂಕಂಗಳೊಳ್ (ಪಂಪಭಾ. ೪-೨೨). ೧೧. ಅಭಿಮಾನ; ಹೆಮ್ಮೆ ; ಗರ್ವ : "ಅಭಿಮಾನ, ಉಳಿ—ಈ ೨ ಟಂಕಮೆಂಬುದು" (ಹಲಾಯು. ೦೩೭-೩೫) : ಮಸಕಂ ಟಂಕಂ ಕಣೆ ಪುಸಿ ನಸೆ ಬಂಚನೆ ಕುಸುರಿಯೆ ಚಿತ್ರಂ ದ್ರಿಡವಂ ವಸುಧೆಯೊಳ್ ಪಸುಗೆಗೊಳ್ಗಂಡಂ ಕಡುಜಾಣಂ (ಎಕ. VI, ಚಿಕ್ಕಮ. ೯೪-೧೮ ; ಸು. 1060 ?). 'ಕಂಟ' ಪರಾ. [ಸಂ.]

**ಟಂಕಕ್ಷತ** (ಗು). ೧. ಕಲ್ಲುಳಿಯಿಂದ ಕೊರೆದ. (ನಾ). ೨. ಕಲ್ಲುಳಿಯ ಪೆಟ್ಟು,-ಹೊಡೆತ : ಗಿರಿಯ ಟಂಕಕ್ಷತವು ಘೋರ ಭಿದುರ ಹತಿಗೆ ಸರಿ ಬರ್ಪುದೇ (ವಿವೇಕ. ೦೧-೬೦). [ಟಂಕ + ಕ್ಷತ]

**ಟಂಕಣ** (ನಾ). ಲೋಹವನ್ನು ಶುದ್ಧಿಗೊಳಿಸಲು ಉಪಯೋಗಿಸುವ ಒಂದು ಬಗೆಯ ಖನಿಜ ಲವಣ; ಬೆಳುಗಾರ; ಬಳಿಗಾರ: "ಟಂಕಣಂ ಬಳುಗಾರವೆಂದು" (ಮಂಗರಾ. ೩೦-೭) ; ವಿಸರಿಪ ಟಂಕಣಪೋಲೆಯ ಮಸಿಯೆಂಬಿವನೊರಸಿ ಮಾತುಲುಂಗದ ಪಣ್ಣಂ ಬಿಸಿಲೊಳ್ ಪಸರಿಸೆ ಶದ್ರವಮೊಸರ್ಗುಮಶೇಷಂ (ಲೋಕೋಪ. ೮-೩೪); ಟಂಕಣಂ ರಜನಿ ನವ ಕುಂಕುಮಮಗಿಲು ನೆಲ್ಲಿಯಂಕೋಲೆಯೊಳ್ಪೆತ್ತಿನಿಂ ಮರ್ದಿಸಿ (ಜನವ. ೦೩-೭೦); ಕೃಷ್ಣಾಭ್ರಕವನ್ನು ಧಾನ್ಯಾಭ್ರಕವ ಮಾಡಿ ಎಕ್ಕೆಹಾಲಿನಲ್ಲಿ ಚತುಷ್ಕಶಃ ಟಂಕಣವನ್ನಾಗಲೀ ಪುಟಿಕೆಯನ್ನಾಗಲಿ ಹಾಕಿ ಮರ್ದಿಸಿ ಗಜಪುಟವನ್ನು ೨೦ ಕೊಟ್ಟರೆ ಭಸ್ಮವಹುದು (ವಿಷ್ಣ.ವಿ. ೨೨) : ಶಾಪವಿಲ್ಲದ ಚಿನ್ನ ಟಂಕಣ ರೂಪದಿಂ ಬೆಚ್ಚುವದೆ (ವಿವೇಕ. ೦೧-೬೪). [ಸಂ.]

**ಟಂಕಣಕಾರ, ಟಂಕಣಖಾರ** (ನಾ).=ಟಂಕಣ : ಕಾಸಂಟ ಕೊಡಿಗೆಗೆ ವಿ ೫ ತವರದಡೆಗೆ ವಿ ೨॥ ಟಂಕಣಕಾರ ಬಿಸಿಗೆಗೆ ವಿ ೭॥ (ಕಳಾಆ. ೧೧೪-೮-೩೦ : 1076) ; ಬೋರಾನೆಂಬ ದುರ್ಮಿಲವಾದ ಅಧಾತುರೂಪಮೂಲತತ್ವದಿಂದ ಟಂಕಣಕಾರ (ಬಿಳಿಗಾರ) ಹುಟ್ಟುತ್ತದೆ (ಮುಂಬಯಿ. ೪-೦೫) : ಟಂಕಣ ಕಾರವನ್ನು ತಂದು ಒಂದು ಚೂರನ್ನು ಚಮಚೆಯಲ್ಲಿಟ್ಟು ಕಾಯಿಸಿದರೆ ಅದು ಕರಗಿ ಅರಿ ಅರಳಾಗುವುದು (ಮ ನ ಖ. ೦೯). **ಟಂಕಣಖಾರ:** ಟಂಕಣಖಾರಂ ಓಲೆಯ ಮಸಿಯುಮಂ ಕೂಡಿಕೊಂಡು ತೊಡೆದು ಬಿಸಿಲಲ್ಲಿ ಇಡಲ್ . . . ರಸಮಾಗಿರ್ಪುದು (ಲೋಕೋಪ. ೮-೩೪ ಟೀಕು).
[ಟಂಕಣ + ಕಾರ್ರ]

**ಟಂಕಣಖಾರ** 'ಟಂಕಣಕಾರ' ನೋ.

**ಟಂಕನ** (ನಾ). ನಾಣ್ಯಗಳನ್ನು ಮಾಡುವುದು ; ನಾಣ್ಯಮುದ್ರಣ : ಚಲಾವಣೆ, ಟಂಕನ ಮತ್ತು ವಿಧಿಮಾನ್ಯ (ಭಾಧಾನ. ೨೮೦). [ಸಂ.]

**ಟಂಕಮುದ್ರೆ** (ನಾ). = ಟಂಕನ : ಟಂಕಿಸುವ ಕಾರ್ಯ . . . ಟಂಕಮುದ್ರೆ (Mintage. ಇಂಕನಿ.). [ಟಂಕ + ಮುದ್ರೆ]

**ಟಂಕರಿಸು** (ಕ್ರಿ). ೧. ಬಿಲ್ಲಿನ ಹೆದೆಯನ್ನು ಮಿಡಿದು ಧ್ವನಿಮಾಡು. 'ಟಂಕಾರ' ಪರಾ. ೨. (ವೀಣೆ ಮೊದಲಾದ ವಾದ್ಯಗಳ ತಂತಿಗಳು) ಟಂ ಟಂ ಎಂಬ ಶಬ್ದವನ್ನು ಮಾಡು : 'ಅಮರ್ದಿನ ಮಳೆ' ನಿಂತು ಮರದ ಹನಿಗಳಂತೆ ತಂತಿಯ ಮಿಡಿದನಿಗಳು ಟಂಕರಿಸುತ್ತಿದ್ದವು (ಕಗದ್ಯ. ೦೩೦). [<ಟಂಕಾರ + - ಇಸು₃]

**ಟಂಕಶಾಲೆ** (ನಾ).=ಟಂಕಸಾಲೆ ೧ : ಸುಮಬಾಣನ ಬಾಣದ ಶಾಲೆ ಮಂಜರೀಯುದರದ ಟಂಕಶಾಲೆ . . . ಮಾಮರಂ (ಹಾಲಾಸ್ಯ. ೦-೪-೦೭).
[ಟಂಕ + ಶಾಲೆ₂]

**ಟಂಕಸಾಲೆ** (ನಾ). ೧. ನಾಣ್ಯವನ್ನು ಮುದ್ರಿಸುವ ಕಾರ್ಖಾನೆ,-ಸ್ಥಳ : ತುಂಬಳಬೀಡಿನ ಶ್ರೀ ಪಂಚಲಿಂಗದೇವರಂಗಭೋಗಕ್ಕಂ ನಿವೇ × × × ಗಾಣ ೨ ಅಚ್ಚಿನ ಟಂಕಸಾಲೆಯಲು ದಳಕ್ಕೆ ವೀಸ ೨ (ಸೌಇಇ. IX-1, ೨೨೮-೦೦ ; 1133) ; ರೂಪ್ಯಾಧ್ಯಕ್ಷಃ, ನೈಷ್ಕಿಕಃ – ಈ ೨ ಟಂಕಸಾಲೆಯ ಅಧಿಕಾರಿಯ ಹೆಸರು (ನಾಚಿರಾ. ೦೩೦) ; ಪದಗಳು ಜನಮನದ ಟಂಕಸಾಲೆ ಯಲ್ಲಿ ಭಾವದ ಮುದ್ರೆಯನ್ನು ತಳೆದು ಚಲಾವಣೆಗೆ ಬರುವ ನಾಣ್ಯ ಗಳಿದ್ದಂತೆ (ಸಾಂಪಸ. ೪೨). ೨. ಒಂದು ಬಗೆಯ ತೆರಿಗೆ ; ಟಂಕಸಾಲೆಯ ಮೇಲಿನ ತೆರಿಗೆ: ಅಂಕ ಸುಂಕ ಟಂಕಸಾರೆ ತಳವಾಟಿಕೆ... ಎಂಬಷ್ಟ ಭೋಗ ಸರ್ವಸ್ವಾಮ್ಯ ಸರ್ವಾದಾಯಪ್ರಾಪ್ತಿ ಸಹಿತವಾಗಿ (ಎಕ. VIII, ಸಾಗರ. ೦೬೩-೨೩ ; 1488). [ಟಂಕ + ಸಾಲೆ₂]

**ಟಂಕಾರ** (ನಾ). ಬಿಲ್ಲಿನ ಹೆದೆಯನ್ನು ಮಿಡಿದರೆ ಹುಟ್ಟುವ ಶಬ್ದ ; ಧನುಸ್ಸಿನ ಶಬ್ದ ; ಸಿಂಜಿನಿ ಧ್ವನಿ: ಬಿಲ್ಲನೇಱಿಸಿ ಟಂಕಾರವಗುರ್ವಡೆಯ ಜೇವೊಡೆದು . . . ನಡೆದಂ (ಪಂರಾಮಾ. ೯-೫೭) : ಚಾಪಟಂಕಾರಂ ಜಗತ್ರಯದೊಳಿಲ್ಲಿಯುಂ ವ್ಯಾಪಿಸಲ್ಕೆ (ಕೃಷಿಭಾ. ೭೦-೧೨): ಪೂವಿಲ್ಲನೇರಿಸಿ ಕಾವನು ಕಣೆಗೊಂಡು ಟಂಕಾರ ಮಾಡಿದನಲ್ಲ (ಇಂಚಾಪ. ೦೪೪-೯). [ಸಂ.]

**ಟಂಕಾರಿಸು** (ಕ್ರಿ). ಟಂಕದಿಂದ ಕೆತ್ತು ; ಉಳಿಯಿಂದ ಸೀಳು : ಮೇರುವಿನ ಹೆಳಗಳೇಂ ಭಂಡಾರಕೆನ್ನಾಣೆ ವಜ್ರಧಾರೆಗಳಂ ಟಂಕಾರಿಸಿ ಸಲಿಸದೊಡೆಂ [ಸಲಿಸೊಡನಂ]ದು ಬಲಾರಿಗೆ ದಿವಿಜಾರಿ ರಾಯಸಂ ಬರೆಯಿಸುವಂ (ಅನಂಪು. ೦೩-೮). [<ಟಂಕ + - ಇಸು₃]

**ಟಂಕಾಹತಿ** (ನಾ). ಉಳಿಯ ಏಟು : ಕರಿಸೇನಾಕರಲೂನವೈರಿವನದುರ್ಗವ್ರಾತನಶ್ವಾವಳೀಖುರ ಟಂಕಾಹತಿ ಪಾತಿತಾರಿಗಿರಿದುರ್ಗವ್ರಾತಂ . . . ದಿಗ್ವಿಜಯಯಾತ್ರಾಕ್ರೀಡೆಯಂ ಮಾಡುವಂ (ಚಂದ್ರಪ್ರ. ೪-೨೭).
[ಟಂಕ + ಆಹತಿ]

**ಟಂಕಿ₁** (ನಾ). (ಪ್ರಯಾಣದ ಮಧ್ಯದಲ್ಲಿ ಒಂದು ಕಡೆ) ತಂಗುವುದು; ನಿಲ್ಲುವುದು : ಬರುತ್ತಿರುವಾಗ ಅಡವಿಯಲ್ಲಿ ಛತ್ರದಲ್ಲಿ ಒಂದು ರಾತ್ರಿ ಟಂಕಿ ಮಾಡಬೇಕಾಯಿತು (ಕಥಾಮಂ. IV, ೬೪). [←ತೆಲು. ಟಂಕಿ=ಮನೆ]

**ಟಂಕಿ₂** ಟೆಂಕಿ, ಟೆಂಕೆ (ನಾ). ೧. ಮುದ್ರೆಯೊತ್ತಿದ ನಾಣ್ಯ. 'ರಾಮಟಂಕಿ' ಪರಾ. ಟೆಂಕಿ : ೨. ರೂಪಾಯಿಯಲ್ಲಿ ಮೂರನೆಯ ಒಂದರಷ್ಟು (⅓) ಬೆಲೆಬಾಳುವ ಒಂದು ನಾಣ್ಯ ; ಹದಿನಾರು ಗಟ್ಟಿ ದುಡ್ಡು ಬೆಲೆಯ ಒಂದು ನಾಣ್ಯ: ರೂಪಾಯಿಗೆ ಗಟ್ಟಿದುಡ್ಡು ೪೮ ಅಥವಾ ಮೂರು "ಟಂಕಿ" (ಕಛಾಗಿ. ೨೯೦) ; ಟಂಕಿ ಗಿಂಕಿ ವ್ಯವಹಾರ ನನಗೆ ಬೇಡ (ಗಾಳಿಪ. ೦೮೩). ಟೆಂಕಿ: ೨. ಒತ್ತಿಗೆ ಸೇರಿ ಮೈದಡವಿದ ಸಹಣಿಗೆ ಹತ್ತು ಸಾವಿರ ಟೆಂಕಿಯನ್ನು ಇತ್ತಪೆವು (ಕುಂತಾಸಾಂ. ೯-೬೦); ಟೆಂಕಿ ೧೭ಕ್ಕೆ ದುಡ್ಡು ೧೬ (ಭಾಸ್ಕರ. ೭೬-೧).

ಟೆಂಕಿಯ ಪೆಟ್ಟಿಗೆ = ನಾಣ್ಯಗಳನ್ನು ತುಂಬಿದ ಪೆಟ್ಟಿಗೆ : ಕೊಟ್ಟಿಗೆ ಕೆಂಪ್ಲಾರದ ಬಂಡಿ ಟೆಂಕಿಯ ಪೆಟ್ಟಿಗೆ ಗುಡಿಗಳ ಹೊಱುವ ಒಂಟೆವೆರಸು ತೆರಳಿದನು (ಕುಂತಾಸಾಂ.೦೯-೯). ಟೆಂಕಿಯ ಬಿಂದಿಗೆ=ನಾಣ್ಯಗಳನ್ನು ತುಂಬಿದ ಬಿಂದಿಗೆ,-ಕೊಡ : ತರುಣಿಯರನು ಟೆಂಕಿಯ ಬಿಂದಿಗೆಗಳನ್ನು ತೆರಳಿಸಿ ಮುಂದೆ ಬೇಗದೊಳು . . . ತುರಗವೆರಸು ತೆರಳಿದನು (ಕುಂತಾಸಾಂ. ೦೯-೦೨೪). [ <ಸಂ. ಟಂಕ ]

**ಟಂಕಿ₃** (ನಾ). [ದ್ವೈತ] ಜೀವಿಗಳ ಬಲದ ತೊಡೆಯ ಸಂದಿಯಲ್ಲಿ ಅಭಿಮಾನದೇವತೆಯಾಗಿ ನೆಲಸಿರುವ ಭಗವಂತನಾದ ಶ್ರೀಹರಿಯ ರೂಪ: ಟಂಕಿ ತರ ಮೊದಲಾದ ನಾಮದಿ ಸಂಧಿಗಳಲೀರೈದು ರೂಪದಲಿದ್ದು ಸಂತತ ನಡದು ನಡಿಸುತಲಿ (ಹಕಾರ. ೮-೧) ; ಬಲದ ತೊಡೆಯ ಸಂಧಿ, ಮೊಣಕಾಲು ಸಂಧಿ, ಪಾದಗತ ಸಂಧಿ, ಬೆರಳುಗಳ ಸಂಧಿ, ಬೆರಳುಗಳ ಕೊನೆಯ ಭಾಗ ಈ ೫ ಸ್ಥಳಗಳಲ್ಲಿ ಟಂಕಿ ಮೊದಲಾದ ೫ ಅಂದರೆ ಮಾತ್ರ ಕಾನ್ಯಾಸ ಕ್ರಮದಲ್ಲಿ ಹೇಳಿದಂತೆ ಟಂಕಿ, ತಕಲ, ಡರಕ, ಧರೀ, ಹಾತ್ರ ಎಂಬ ೫ ರೂಪಗಳಿಂದಲೂ . . . ಆ ದೇಹಗತನಾಗಿ (ಹಕಾರ. ೮-೧ ಹಾತ್ಪರ್ಯ). [ ಸಂ. ]

**ಟಂಕಿಸು** (ಕ್ರಿ). ಗರ್ವಿಸು (?) : ಟೊಂಕಿಸಿ ಟೌಂಕಿಸಿ ಟಂಕಿಪ ಟಕ್ಕರದೇಕೆ ವುಟ್ಟಿದರೊ ಶ್ರೀಹರಿಯ (ಕಕಸಾಂ. ೭೩-೮೩); "ಡಂಗುಮಾಡು" (ಕಕಸಾಂ. ಕೋಶ). [ ? + – ಇಸು₃ ]

**ಟಂಕೃತ** (ನಾ). ಬಿಲ್ಲಿನ ಹೆದೆಯ ಶಬ್ದ ; ಟಂಕಾರ: ಟಂ[ಹಾಕಾಂ. ಠಂ]ಕೃತಂ ಬಿಲ್ಲಿನೊಳು (ಮುಂಗರಾ. ೨೭-೬). [ ಸಂ. ]

**ಟಂಕೃತಿ** (ನಾ).=ಟಂಕೃತ : ಟಂಕೃತಿ ಏಗೆ ಜೇವೊಡೆಯುತ್ತುಂ (ಜಗವಿ. ೯-೦೦೪); ಅತಿಮೃದುಪುಷ್ಪಚಾಪದಳಿನೀಗುಣಟಂಕೃತಿರಾವಮಾಗಮಾವೃತವರಿಪೂರ್ಣಕರ್ಣಯುಗನಂ ಸಲೆ ಕೇಳಿಸದು (ಚಂದ್ರಪ್ರ. ೦-೨೬) ; ಟಂಕೃತಿ ಶ್ರವಣದಿಂದಖಿಳಮರ್ತ್ಯಾಮರ್ತ್ಯಹುಂಕೃತಿಯ ನೀಗಿ ಮದ್ಯಶವರ್ತಿಗೈದ ಬಿಲ್ (ವಂಶಾಭಾ. ೦-೨೨-೩೨). [ ಸಂ. ]

**ಟಂಕೆ₁**, ಟೆಂಕೆ₂, ಠಂಕೆ (ನಾ). (ಕಬ್ಬಿಣದಿಂದ ಅಥವಾ ಮರದಿಂದ ಮಾಡಿದ) ಗುಂದಿಗೆ ; ದೊಣ್ಣೆ ; ಬಡಿಗೋಲು : "ಬಡಿಕೋಲು ಡಂಕೆ ಟಂಕೆ" (ಶಬ್ದಮಂ. ೩೩) ; "ಬಡಿಗೋಲಿನೊಳ್ ಟಂಕೆ" (ಕಕಠ. ೪೨). ಟೆಂಕೆ₂ : ಕಂಗಳು ಮೂರು ಕರಗಳು ನಾಲ್ಕು ಆಯುಧ ಹಿಂಗದೆ ಗದೆ ಶೂಲ ಡಮರುಗ ಕಂಗೊಳಿಸುವ ಟೆಂಕ ಖಟ್ವಾಂಗ (ಶರಲೀ. ೨೯-೧೭). ಠಂಕೆ : "ಬಡಿಗೋಲಿನೊಳ್ ಟಂಕೆ ಠಂಕೆಯೆಂಬೀ ಎರಡು ನುಡಿಯು" (ಕಕಠ. ೪೨). 'ಡಂಗೆ₁' ಪರಾ. [ ದೇ.॥ ಮಲ. ಟಙ್ಙ ]

**ಟಂಕೆ₂** (ನಾ). ಕಲ್ಲುಳಿ ; ಟಂಕ : "ಟಂಕೆ–ಟಂಕ=ಕಲ್ಲುಳಿ" (ಶಬ್ದಕೋ. ೦೬).
[ ಸಂ. ಟಂಕ ]

**ಟಂಕೆ₃** (ನಾ). ಮೊಳಕಾಲು. [ ಸಂ. ಟಂಕಾ ]

**ಟಂಕೋತ್ಕೀರ್ಣ** (ನಾ). ಉಳಿಯಿಂದ ಕೊರೆದುದು,-ಕಂಡರಿಸಿದುದು,-ಕೆತ್ತಿದುದು : ವೃಷಭಾಚಲನಿಕಟಂಗಳೊಳಂ ಅಪ್ರತಿಹತದಿಗ್ವಿಜಯ ಪ್ರಶಸ್ತಿಯಂ ಟಂಕೋತ್ಕೀರ್ಣಂ ಮಾಡಿ (ಆದಿಪು. ೦೪-೫೯ ವ).
[ ಟಂಕ + ಉತ್ಕೀರ್ಣ ]

**ಟಂಗು** 'ತಂಗು₁' ನೋ.

**ಟಂಟಣಿಸು₁** (ಕ್ರಿ). ಟಣ್‌ಟಣ್ ಎಂಬ ಶಬ್ದ ಮಾಡು.
[ <ಟಣ್ + – ಇಸು₃ ]

**ಟಂಟಣಿಸು₂** 'ಟೆಂಟಣಿಸು' ನೋ.

**ಟಂಠಣಿಸು** 'ಟೆಂಟಣಿಸು' ನೋ.

**ಟಂಬ್ಲರು** (ನಾ). ಲೋಟ ; ಬಟ್ಟಲು : ಶರಬತ್ತು ತುಂಬಿಸಿದ ಎರಡು ಟಂಬ್ಲರುಗಳನ್ನು ಒಂದು ತಟ್ಟೆಯಲ್ಲಿ ತಂದಿಟ್ಟರು (ನಿಷ್ಕಾಮ. ೦).
[ ←ಇಂ. Tumbler ]

**ಟಕ್** (ನಾ). ಒಂದು ಅನುಕರಣ ಶಬ್ದ : 'ಟಕ್' ಎಂದು ಶಬ್ದವಾಯಿತು (ರೂಢಿ) ; 'ಟಕ್' ಎಂದು ಕಡ್ಡಿ ಮುರಿಯಿತು (ರೂಢಿ).

ಟಕ್‌ಟಕ್ (ದ್ವಿರುಕ್ತಿ): ಟಕ್‌ಟಕ್ ಎಂದು ಶಬ್ದ ಕೇಳಿಸುತ್ತದೆ (ರೂಢಿ).

**ಟಕಟಕನೆ** (ಅ). ಟಕ್‌ಟಕ್ ಎಂಬ ಶಬ್ದ ಉಂಟಾಗುವಂತೆ : ಟಕಟಕನೆ ಸದ್ದುಮಾಡಿಕೊಂಡು ಹಾಸುಗಲ್ಲುಗಳ ಮೇಲೆ ನಡೆಯುತ್ತ ರಂಗವ್ವ ಅಲ್ಲಿಗೆ ಬಂದರು (ರಂಗವ. ೩೦). [ <ಟಕ್ + – ಅನೆ₁ ]

**ಟಕಮಕ₁** (ನಾ). ಆಶ್ಚರ್ಯ ; ಕಕಮಕ : ಆಪಳು ನನ್ನ ಕೈಹಿಡಿದಂತೆಯೇ ಟಕಮಕವಾಗಿ ನಾವು ಒಬ್ಬರೊಬ್ಬರ ಮುಖದೃಷ್ಟಿಗಳನ್ನು ಅವಲೋಕಿಸುತ್ತಿದ್ದೆವು (ಹೇಮಂತ. ೦೯೭); ಕೂಡಲೆ ಅವನು ಟಕಮಕವಾಗಿ ನೋಡಿದನು (ಅಂದುಮು. ೬೩). [ ←ಮರಾ. ಟಕ್‌ಮಕ್ ]

**ಟಕಮಕ₂** (ಅ). ಎವೆ ಬಡಿಯದೆ ; ಅನಿಮೇಷವಾಗಿ ; ನಿಶ್ಚಲದೃಷ್ಟಿಯೊಡನೆ: ಸೂಪರಿಂಟೆಂಡೆಂಟನು ಕುರ್ಚಿಯೊಂದರ ಮೇಲೆ ಇಬ್ಬರನ್ನೂ ಟಕಮಕ ನೋಡುತ್ತ ಕುಳಿತುಕೊಂಡಿದ್ದನು (ತುಬ್ಬದ. ೩೦) ; ಒಬ್ಬರನ್ನೊಬ್ಬರು ಟಕಮಕ ನೋಡುವದೆಷ್ಟು ಹೊತ್ತು (ಹು ಹಾ ಟಿ. ೪೦); ಚಿಕ್ಕಿಗಳು ಟಕಮಕ ಹಣಿಕಿಹಾಕಿ ನನ್ನನ್ನು ಅಣಕಿಸಿದವು (ಮೇಲಿದು. ೩೦).
[ <ಟಕಮಕ₁ ]

**ಟಕಳಿ** 'ತಕಲಿ' ನೋ.

**ಟಕಾಯಿಸು**, ಠಕಾಯಿಸು (ಕ್ರಿ). ಮೋಸಮಾಡು ; ವಂಚಿಸು ; ದಗಾ ಕೊಡು : (೬). ಠಕಾಯಿಸು : ಕಿನ್ನರರನ್ನು ಠಕಾಯಿಸಿ ಬಲಿಯನ್ನು ಕಿತ್ತುಕೊಂಡ (ಪಾಲಕ್ಷ. I, ೩೦೨) ; ಯಾರು ನಂಬಲು, ಆನಂದಪಡಲು ಬಂದಿದ್ದರೋ ಅವರನ್ನು ಇಷ್ಟು ಠಕಾಯಿಸುವ ಆಲೋಚನೆ ಏಕೆ (ನಿಬಂಧ II, ೪೦೨); ಏ ಘಟಿಂಗ! ನನ್ನನ್ನು ಠಕಾಯಿಸಿದೆಯಲ್ಲ! (ದೇವಮು. ೭೬). [ ಟಕಾ₀ (P ←ಮರಾ. ಠಕವಿಣೇ) + – ಇಸು₃ ]

**ಟಕಾರ** (ನಾ). 'ಟ' ಎಂಬ ವರ್ಣ,-ಅಕ್ಷರ : ಕೃತಿಮಾರ್ಗದೊಳುಂಟು ಟಕಾರ ತಕಾರ ಠಕಾರ ರೇಫದೆಡೆಗಂ . . . ಜಟಡಾದೇಶಂ (ಶಮದ. ೨೧)
[ ಸಂ. ]

**ಟಕಾರಿ** (ನಾ). ತೋರಣದಂತಹ ಒಂದು ರಚನೆ (?) : ಅಳ್ಳಿವಾಱ ಬಂದೆಱಗುವುವಲ್ಲಿ ಚಂಚುಗಳ ಲೋವೆಗಳೊಳ್ ಕಡೆಯಿಕ್ಕಿಸಾ[ದಾ]ರಮಂ ಕಱುಮಿಡಿಗೆತ್ತು ಸಾರಿಕೆ ಟಕಾರಿಯ ಮಾಣಿಕವಟ್ಟೆಯಂ ಪಿಕಂ ನಿಱುದಳಿಗೆತ್ತು ಲಂಬಣದ ಮುತ್ತುಗಳಂ ಮಱುಗೆತ್ತು ಚಾತಕಂ (ಅನಂಪು. ೬-೪೩).
[ ? ]

**ಟಕ್ಕ, ಠಕ, ಠಕ್ಕ** (ನಾ). ೧. ವಂಚಕ; ಮೋಸಗಾರ ; ಧೂರ್ತ : ನೀನಿಂದೆನ್ನ ಮನೆಗೆ ಬಾರದಂದು ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಱಿಯದು (ಪಂಪಭಾ. ೦೨೫-೦೮) : ತಕ್ಕನಿವನಲ್ಲ ನೞಿಪಂ ಟಕ್ಕಂ ಖಳನೆಂದು ಪೊರ್ದರ್ (ಧರ್ಮಾಮೃ. ೬-೩೬). **ಠಕ** : ೧. ಠಕ ನೞಿಪನೇೞಿದಂ ವಂಚಕನುದ್ಧತನನೃತವಾದಿ ಪಂಚಮಹಾಪಾತಕನೆನಿಸುವಂ (ಜಿನಾಕ್ಷ. ೦೩). **ಠಕ್ಕ** : ೧. ಕಿವ್ಮಗೆ ಕೊಳಲಾಟಿಪಂ ದೊರೆಯೊ ಠಕ್ಕನೊ ಕಳ್ಳನೊ ಬಂದಿಕಾಱನೋ (ಗದಾಯು. ೧-೩೬) ; ಮಾಯಾವಿಯಂ ಪಡು ವೆಡೆಯೊಳ್ಕಾಣದೆ ಠಕ್ಕನೆಂದಱಿದು (ಧರ್ಮಾಮೃ. ೬-೮೮) ; ಅಂತಕನೆಂಬ ಠಕ್ಕನತಿಭೀಕರಸಂಸೃತಿಯೆಂಬ ಕಾನನಾಭ್ಯಂತರದಲ್ಲಿಗೊಯ್ದುರಿಸಿ (ಜೀವಸಂ. ೩೦-೪) : ಠಕ್ಕರಿವರು ಸ್ವಾಮಿ ಮೇಘರಾಜಗೆ ಮಾಲೆಯಿಕ್ಕಿದಳಾಕೆ ಚೊಕ್ಕ ವೆಣ್ಣೆಂದಾಣ್ಮಗಿರಲೆಂದು ನೆನೆದರೆಂದುಕ್ಕಿ ಸನ್ಮತಿ ಮಂತ್ರಿ ನುಡಿದಾ (ಭರತೇ. ೫೬-೫೦). ೨. ಕಳ್ಳ : ಠಕ್ಕ ಬಿಟ್ಟರೆ ಸಿಕ್ಕ (ರೂಢಿ). (ಗು). ೩. ಮೋಸ್ಗದ; ವಂಚನೆಯಂ ; ಧೂರ್ತತನವುಳ್ಳ : ಒಂದು ಊರಲ್ಲಿ ಠಕ್ಕವೇದಾಂತಿಯು ಇದ್ದನು (ಕಗದ್ಯ. II, ೩೬). [ ಟಕ್ಕು$_1$ + – ಅ$_7$ ]

**ಟಕ್ಕಿ** (ನಾ). ಮೆಲ್ಲಗೆ ತಟ್ಟುವುದಂ,–ಬಡಿಯುವುದು: ಒಬ್ಬರ ಕೈಯಲ್ಲಿರುವ ಕೋಲಿಗೆ ಇನ್ನೊಬ್ಬರು ಟಕ್ಕಿ ಹೊಡೆಯುತ್ತಾ ಹಾಡುವರು (ಹುಟ್ಟುಹ. ೩೧).
[ ←ಮರಾ. ಟಾಕೀ ]

**ಟಕ್ಕಿಗ** (ನಾ).=ಟಕ್ಕ ೧ : ತಾಣ್ಮಕ್ಕಿಗರ್, ತಾಂ ಟಕ್ಕಿಗರ್ (ಶಬ್ದಾನು. ೮೦ ಪ್ರಯೋ). [ ಟಕ್ಕು$_1$ + – ಇಗ ]

**ಟಕ್ಕಿಸು, ಠಕ್ಕಿಸು** (ಕ್ರಿ). ಮೋಸಗೊಳಿಸಂ ; ವಂಚಿಸು : ಟಕ್ಕಿಪನಂ ತುಟಿ ಮೇಕುದೋರ್ವನಂ ಮಾಳಬೆಗಿಕ್ಕ ಪೂಟ್ ಪುಸಿವನಂ (ಲೀಲಾವ. ೨-೦೦೬): ಟ[ಪಾಠಾಂ. ಠ]ಕ್ಕಿಪ ನಲ್ಲನ ಟ[ಪಾಠಾಂ. ಠ]ಕ್ಕಿಪ ತೆಱನನು ಚದುರೆ ಚದುರಿಸದೆ ನೀನುಸುರಾ (ಉಶಿವ. ೨೯-೦೦); ಹದಿರಿನೊಳು ಟಕ್ಕಿಸುವ ಬಯಲ ಮಾತಿನ ಮಾಲೆಯಿಂ ಅನುಮಾನಗಳ ಬಿಟ್ಟು . . . ಎನ್ನ ಮನಸಿಜನ ಬಾಣಕ್ಕೆ ಬಲಿಯನಿಕ್ಕನುತೆ ಕೈ ಮುಗಿಯೆ (ಪ್ರಭುಪು. ೮-೬೨). **ಠಕ್ಕಿಸು** : ವರ್ಗ ದ್ವಿತೀಯಾಕ್ಷರಂಗಳ್ಗೆ – ಠಾವು, ಠಾಣಂ, ಠಕ್ಕಿಸಿದಂ (ಠೆಕ್ಕಿಸಿದಂ) (ಕಮುದ. ೦೫ ಪ್ರಯೋ); ಠಕ್ಕಿಸುವ ತನ್ನ ನಿಜಗುಣವನೇಕೆ ಮಾಣ್ಬಂ (ಪದ್ಮರಾ. ೦೩-೬); ಅಂಧಕಾದ್ಯರ ಠಕ್ಕಿಸಿಯ ಇಂದ್ರಾದಿದೇವರಿಗಿತ್ತನಾ ಸುಧೆಯ (ಸಂಭಕ ೬-೫೩); ಮಗನ ಠಕ್ಕಿಸಿ ತಾಯಿ ಮಲಗಿರಲಾ ಶಿಶುವು ಮಗುಳೆ ಕ್ರಮಗೆಟ್ಟು ಕಂಡಲ್ಲಿ ಅರಸಿ ಕಣ್ಣಿಗೆ ಬೀಳದಿರೆ (ವಿಪ್ರಸು. ೦೮-೪). [ ಟಕ್ಕು$_1$ + – ಇಸು$_3$ ]

**ಟಕ್ಕು$_1$, ಠಕ್ಕು$_3$, ಡಕ್ಕು, ತಕ್ಕು$_3$** (ನಾ). ೧. ಮೋಸ ; ವಂಚನೆ ; ಕಪಟ ; ತಂತ್ರ: ಮಾಯದ ಟಕ್ಕಿನ ಕಪಟದ ವಾಯದ ಕೃತ್ರಿಮದ ಮಱುಕದೆಱಕದ ಕಪಟೋಪಾಯದ ಕಣೆಗಳ್ ಸಂದ ಸ್ತ್ರೀಯರ್ಕೇವಲಮ ಸರ್ವಜನವಂಚಕಿಯರ್ (ಧರ್ಮಾಮೃ. ೬-೦೫೬) ; ಪೋ ಬರ್ಕದಂತುಂ ಹರಿಬವನಿನಿತುಂ ಟಕ್ಕನಾಂತಲ್ಲಿ ನೋಟ್ಟುಂ (ಚಂದ್ರಪು. ೬-೨೫ ವ) ; ದೂರ್ವಾಸ ಬರಲು ವಂದಿಸುತ ಟಕ್ಕಿನಿಂದೊರ್ವ ವನಿತೆಯ ಪೊಡೆಯೊಳೊಂದೊನಕೆಯಂ ಕಟ್ಟಿ ಗರ್ಭದೊಳಗಿರ್ಪುದೇನೆಂದು ಬೆಸಗೊಳಲ್ (ಸೌಂದಪು. ೪-೫೪) ; ಟಕ್ಕಿಂ ಟಾಳಿಸಿ ಕನ್ನಂಗೊಱಿದು (ಪ್ರಭುಪು. ೪-೦೪೬) ; ನಿನ್ನ ಮಗ ಭೀಷ್ಮನನ್ನು ಅರ್ಜುನ ಟಕ್ಕಿನಿಂದ ಕೊಂದ (ಬಿದುರ. ೪೨). ೨. ತೋರಿಕೆ; ಬೂಟಾಟಿಕೆ: ಧನಮಿತ್ರನೊಳ್ ಟಕ್ಕಿನ ಜಗಳವನಂದಂದಿಂಗೆಸಗೆಂದು ಪೇಟ್ದು (ದಶಕು. ೮-೧೫೨ ವ). **ಠಕ್ಕು** : ೧. ಉತ್ತಮರ ಮುಂದಾವ ಠಕ್ಕಿರಲಾಪುದು (ಹಕಲಾ. ೦೦-೨೬) ; ಅನಿಲಸುತ ಘಡ ಮರಳು ಠಕ್ಕಿನ ವಿನಯವೇ ನಮ್ಮೊಡನೆ (ಕುಮಾರವ್ಯಾ. ೦೩-೮) : ಠಕ್ಕು ವಿನೋದ . . . ವಂಚನೆ ನೇಹವೆಂಬೀ ಪರಿಯ ಮಾಯಾಮಯದ ಮಹಿಳಾಜನ ವಿರಾಜಿಸಿತು (ತೊರರಾ. ೦-೫-೩೨); ಠಕ್ಕು ಪಳಿವು ಬೆಳುಗವತೆ . . . ಗಳಹತನಮವಿವೇಕಮುಸಿರಲೇನಾ ಚೆನ್ನಬಸವನಿಹ ರಾಜ್ಯದೊಳ್ ಮಿಸುಕವು (ಚಬಪು. ೬-೪೦); ಠಕ್ಕಿನ ಪಟ್ಕಿ ಕಾಳಿಯ ತವರ್ ಕವಡಿಂಗೆಡೆ (ಚಕವಿ.೬-೬೪). ೩. ಮಾಯೆ; ಮಾಟ: ಸಭೆ ಠಕ್ಕುಕವಿದಂತೆ ನೋಡುತಿರೆ (ತಿಪ್ಪರ. ದೀ. ೦೬-೦೩). ೪. ಮರುಳು ; ಮೋಹ. 'ಠಕ್ಕುಗೊಳ್' ಪರಾ. **ಡಕ್ಕು** : ೫. ಮರುಳುಗೊಳಿಸುವ ಮದ್ದು ; ಎಚ್ಚರ ತಪ್ಪಿಸುವ ಮದ್ದು. 'ಡಕ್ಕುಗೊಳ್' ಪರಾ. **ತಕ್ಕು$_3$** : ೧. ಕುನಿಕುನಿದು ವನದ ಗಿಡುಗಿಡುವಿನ ಮಱೆಮಱೆಯಲ್ಲಿ ಸುೞಿದು ಸುೞಿದೋಡುವ ತ[ಪಾಠಾಂ. ಟ]ಕ್ಕಿನ ಹರಿಣನನತಿಭರದಿಂ ತನತನಗೆ ಪುಳಿಂದರಟ್ಟಿ ಮುಟ್ಟುತ್ತೆಚ್ಚರ್ (೧ರಿಳ. ೦-೯೨). 'ತಕ್ಕುಗೊಡು' ಪರಾ.

**ಟಕ್ಕನಿಕ್ಕು, ಠಕ್ಕನಿಕ್ಕು**=ಮರುಳುಗೊಳಿಸುವ ಮದ್ದಿಡು ; ಎಚ್ಚರ ತಪ್ಪಿಸುವ ಮದ್ದನ್ನುಣ್ಣಿಸು ! ಶ್ರೀಧರಮುನಿನಾಥನವರ ಕಪಟವೃತ್ತಿಯನಱಿಯದುಂಡು ಸೊಕ್ಕಿ ಮೆಯ್ಮಱಿಯದೆ ಟಕ್ಕನಿಕ್ಕಿದಂತು ಕೆಡೆದು ನಿದ್ರೆಗೆಯ್ದುದುಂ[ಪಾಠಾಂ. ಟಕ್ಕುಗೊಂಡಂತೆ ತೂಂಕಡಿಸಿ ಕೆಡೆದರ್] (ಧರ್ಮಾಮೃ. ೦೦-೦೨೬) ; ಮನಸಿಜರಾಜಂ ನೋಟಕಜನಕ್ಕೆ ಲೇಸಾಗಿ ಠಕ್ಕನಿಕ್ಕಿದನೆಂಬಂತನವರತಂ ರಂಜಿಸಿದುವು ಜನಪತಿಯೋಲಗದೊಳಾದ ಪಲವುಂ ನೃತ್ಯಂ (ಧರ್ಮಾಮೃ. ೪-೦೫೦) ; ಕಡು ಮುಳಿದೆಯ್ದಿ ಪಿಡಿದು ಮೊಗಮಿಕ್ಕಿದೊಡೆ ಪೊಳೆದು ಪೋಗಿ ಠಕ್ಕನಿಕ್ಕಿದಡೆ ನಿರ್ವರ್ತಿಸಿ ಕಳೆದು (ಬಂಹರಿ. ೨-೫೦ ವ). **ಟಕ್ಕು ತಿನಿಸು** = ವಂಚಿಸಂ ; ಮೋಸಗೊಳಿಸು : ಮುದ್ದಾಂನನಗೆ ಟಕ್ಕು ತಿನಿಸಲಿಕ್ಕೆ ಅಂತ ಅವ ಮಾಡೋ ಅವನ (ಗಂಮಾಯಿ. ೦೦೬). **ಠಕ್ಕಿನ ಬೂದಿ** = ವಂಕಂಬೂದಿ : ಮದನಾಂಜನ ಚೋರ ಮೋಹಿಜನದ ಮೇಲೆ ಕೆದರ್ವ ಠಕ್ಕಿನ ಬೂದಿಯಂತೆ (ಶ್ರೀಪಾಲ. ೪-೦೦೯). **ಠಕ್ಕು ಸುಂಡೆ** = ವಂಕುಗೊಳಿಸುವ ತಿಂಡಿ ; ಮದ್ದು ಹಾಕಿರುವ ಉಂಡೆ : ಸ್ಪಂದನಮಿಲ್ಲದಕ್ಷಿಗಳಿನೀಕ್ಷಿಸುತಿರ್ದುದು ಠ[ಪಾಠಾಂ. ಟ]ಕ್ಕಿನುಂಡೆಯಂ ತಿಂದವೊಲಾಗಳೊಂದಿನಿತು ಪೊಟ್ರಿನೊಳಾ ಸಭೆ (ವರ್ಧಪು. ೩-೫೪). **ಠಕ್ಕು ಬಿಕ್ಕು**=ಮೋಸ; ವಂಚನೆ : ಠಕ್ಕುಬಿಕ್ಕಿನ ಮಾತುಗಳಾಡಲು ಯುಕುತಿಯನಾ ಕೇಳೆನೆಲವೊ (ವಿದಾಕ್ಷ. ೩೫ ಅನುಪಲ್ಲವಿ). **ಠಕ್ಕುಮಾಡು**=ಮೋಸಮಾಡು; ವಂಚಿಸು : ಆಚಾರ್ಯರೆ ನಿಜವಾಗಿ ನಿಮಗೆ ಮರವೆ ಹೆಚ್ಚಾಗಿದೆ. ಇಲ್ಲವೆ ಇನ್ನೂ ಠಕ್ಕುಮಾಡುತ್ತೀರಿ (ವಾಗ್ಮೀವಿ. ೩೬).
[ ದೇ.೫ ತಮಿ. ತುಳು. ತೆಲು. ಟಕ್ಕು ]

**ಟಕ್ಕು$_2$** (ನಾ). ಆತಂಕದಿಂದ ಕೂಡಿದ ಚಿಂತೆ,–ವ್ಯಥೆ : ವೇಣೂಬಾಯಿ ತನ್ನ ಚಿಕ್ಕಮಗ ಶ್ರೀಪಾದನನ್ನು ಎದೆಗೆ ಅವಚಿಕೊಂಡು ಒಂದೇ ಟಕ್ಕಿನಲ್ಲಿ ಮಲಗಿದ್ದಳು (ಗಂಮಾಯಿ. ೬೦) ; ಟಕ್ಕು ಹಿಡಿದ ಠಕ್ಕಿ . . . ಕಿಟಿಕಿಯ ಬಳಿ ಸಾರಿದಳು (ದೀಪಹ. II, ೨೪೩). [ ←ಮರಾ. ಠಕ್ ]

**ಟಕ್ಕು$_3$** (ನಾ). ವಂಡಿಕೆ ಹಾಕಿ ಹೊಲಿದ ಹೊಲಿಗೆ; ಟಾಕಿ: ಲಂಗ ಬಹಳ ಉದ್ದವಾಗಿದೆ; ಟಕ್ಕು ಹಿಡಿಸಬೇಕು (ರೂಢಿ). 'ಟಾಕು$_1$' ಪರಾ.
[ ←ಇಂ. Tuck ]

**ಟಕ್ಕುಟವಳಿ, ಟಕ್ಕುಟೌಳಿ, ಠಕ್ಕುಠವಣೆ, ಠಕ್ಕುಠವಳಿ, ಠಕ್ಕುಠವುಳಿ** (ನಾ). ಮೋಸ ; ವಂಚನೆ ; ಕಪಟ : ಟಕ್ಕುಟವಳಿ ತಟವಟವಟ ಮಟವ ಬಿಟ್ಟುಕ್ಕಱಿಂ ದಿಟವುಟವೆತ್ತು ಜಪಿಸಲೆಂಟಕ್ಷರಕಾಗಿ ಮೆಯ್ದೋರ್ಪ (ಶತಸಾಂ. ೭೦-೫೩). **ಟಕ್ಕುಟೌಳಿ** : ಟಕ್ಕುಟೌಳಿಯಸಗುವ ಕೋಟಲೆ ಸಾಕು (ಗೀತಗೋ. ೨೬-೪೬). **ಠಕ್ಕುಠವಣೆ** : ಸಾಹಸದಿಕ್ಕೆ ಸಕಲ ಠಕ್ಕುಠವಣೆಯ ಬೇಹ ಪತ್ತನ ಬಹು ಕಲೆಯ ಗೇಹವೆನಿಪ ಬೆಲೆವೆಣ್ಗಳ ಕೇರಿಗಳೂಹಾತೀತವಾಗಿಹವು (ಅಂಜನ. ೩-೯೫). **ಠಕ್ಕುಠವಳಿ** : ಪುಸಿ ಠಕ್ಕುಠವಳಿಗಳಲ್ಲಿ ಕಟ್ಟಿ ಎಸೆದು ಕೊಲ್ಲುವರೋ ನಿನ್ನವರು ಕೇಳಲ್ಲಿ (ಪುರಂದ. ೨-೩೯-೪). **ಠಕ್ಕುಠವುಳಿ** : ವಿಂಗೆ ಠಕ್ಕುಠವುಳಿ ವಂಚನೆ ದುರ್ಜನತ್ವ ಸಂಯುಗ ವಿಕೃತಿ ರೋಗ ಸಂತಾಪ ಬಲ್ಮುನಿಸು ಹಾನಿಗಳುದಿಸಿದುವು (ಚಬಪು. ೦೪-೨೪). **P** ಒಂದೇ ಅರ್ಥದ ಈ ಜೋಡಿಶಬ್ದಗಳಂ ಪ್ರತ್ಯೇಕವಾಗಿಯೂ ಬಳಕೆಯಾಗುತ್ತವೆ. [ ಟಕ್ಕು$_1$ + ಟವಳಿ ]

**ಡಾಕಿನಿ** (ನಾ). ೧. ಹೆಣ್ಣು ದೆವ್ವಗಳಲ್ಲಿ ಒಂದು ಬಗೆ ; ಒಂದು ಬಗೆಯ ಹೆಣ್ಣು ಪಿಶಾಚಿ : ಡಾಕಿನಿ ಪಿಶಾಚ ವೇತಾಳ ಭೂತಂಗಳಿಂ ಭೀಕರದೊಳಂ ಜಸಿದವಾರ್ದುರ್ ರಿಂಗಣಗುಣಿವ ಕಲಿಗಳ ಕಪಾಲಂಗಳು (ಕ್ರಿಮಿಥಾ. ೦೨-೪೫); ಸೀತಾರಾಮನು ಒಬ್ಬ ಡಾಕಿನಿಯ ವಶವಾಗಿಬಿಟ್ಟಿದ್ದ (ಬಂಕಿಮು. ೩೦೮). ೨. ಕಾಳಿಕಾದೇವಿಯ ಪರಿಚಾರಿಕೆಯರ ಒಂದು ವರ್ಗಕ್ಕೆ ಸೇರಿದವಳು. ೩. ರಕ್ಕಸಿಯ ಕತ್ತಿ,–ಖಡ್ಗ : "ಡಾಕಿನಿಯೆನಲು ರಕ್ಕಸಿಯ ಕತ್ತಿಗಿರದಪ್ಪ ನಾಮಂ" (ಶಬ್ದಮಂ. ೪೪). ೪. (ಅಲಂ) ಕಠೋರಹೃದಯದವಳು; ಕೆಟ್ಟ ಹೆಂಗಸು : ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡು ಗಚ್ಚಿದನು (ಗ್ರಾಮಾಯ. ೪೬೨). [ಸಂ. ಡಾಕಿನೀ. ]

**ಡಾಕಿನಿದೋಷ** (ನಾ). ಡಾಕಿನಿಯ ಆವೇಶದಿಂದುಂಟಾಗುವ ಬಾಧೆ ; ಭೂತೋಪದ್ರವ : ಇಪ್ಪೆಯ ಬೇರ ಆಡಿನ ಮೂತ್ರದಿಂದ ಏಳುಬಾರಿ ಭಾವನೆಯ ಕೊಟ್ಟು ಅರಿಸಿ ಸೈಂಧವ, ಬಜೆ, ತ್ರಿಕಟುಕ, ಇದರಿಂದ ನಸ್ಯ ಮಾಡೆ, ಭೂತ, ಶಾಕಿನಿ, ಡಾಕಿನಿದೋಷ, ಸನ್ನಿಪಾತ ಜ್ವರಂಗಳು ಬಿಟ್ಟು ಹೋಗುವುವು (ವಿಶ್ವವಿ. ೦೩೯). [ಡಾಕಿನಿ + ದೋಷ]

**ಡಾಕಿನೀತಂತ್ರ** (ನಾ). [ತಂತ್ರಶಾ] ಒಂದು ಬಗೆಯ ತಾಂತ್ರಿಕ ಸಿದ್ಧಿ ಮಂತ್ರ : ಡಾಕಿನೀತಂತ್ರ ಕೂಚಿಮಾರತಂತ್ರ ಶಲ್ಯತಂತ್ರ . . . ವಚನ ತಂತ್ರಾದಿ ತಾಂತ್ರಿಕಸಿದ್ಧಿಮಂತ್ರಂಗಳಂ (ವಿವೇಕ. ೮೧). [ಸಂ. ]

**ಡಾಕು$_1$, ಧಾಕು** (ನಾ). ೧. ಮುತ್ತಿಗೆ ; ಮೇಲೆಬೀಳುವಿಕೆ ; ಆಕ್ರಮಣ ; ಆಘಾತ : ನೂಕಿದೊಡೆ ಕರ್ಣಾದಿ ದೊರೆಗಳ ಡಾ[ಪಾಠಾಂ. ಧಾ]ಕನಾನು ವನಾರು ದಿವಿಜಾನೀಕದಲಿ (ಕುವ್ಯಾಅ. ೧೯-೦೩). ೨. ಸತ್ತ್ವ ; ಬಲ ; ಪರಾಕ್ರಮ : ಭೀಷ್ಮದ್ರೋಣರಿಂಗೆ ಸರಿಮಿಗಿಲೆನಿಸಿ ತೋರುವೆನು ಕೈಗುಣವನು ಡಾಕನರಿಯದೆ ತನ್ನ ವಿಕ್ರಮದ ಸಿರಿಯನವಿವೇಕಿಗಳು (ಕುರಂಗ. ೭೨-೨೩); ಭೀಕರಬಲ ಶಿವಭೂಷನ ಡಾಕಿಂಗಗಿದಖಿಲ ರಾಜರಗಣಿತ ಧನವಂ ಬೇಕಾದ ವಸ್ತುಚಯವನನೇಕವನಿತ್ತರಗಿ ತದನುಚರರಾಗಿರ್ದರ್ (ಕೆಳನೃ. ೭-೦೬). ೩. ಪ್ರಭೆ; ತೇಜಸ್ಸು; ಕಾಂತಿ: ತರುಣಿಯರುಗಳಿಟ್ಟಣಿಸಿ ಮೈಮೈಸೋಂಕಲುರು ಹೇಮದೊಡವುಗಳ್ಮಿಸೆದು ವರರಜವಿಳೆಯೊಳೊಪ್ಪಿತು ಬಾಲಸೂರ್ಯನ ಕಿರಣದ ಡಾ[ಪಾಠಾಂ.ಧಾ]ಕ ತೋಱಸುತ (ಕೆಂನವಿ. ೨೪-೪೮); ರಥವೆರಸಿ ಡಾಕಿನಿಂ ಥಳಕಿಡುವ ಸಿಂಧ ಸೀಗುರಿ ಛತ್ರಚಾಮರ ಚಮೂಪಂಗಳ (ಷಠಬು. ೬-೨೦). ೪. ಜವ; ವೇಗ; ತ್ವರೆ: ಈ ಕಥೆಯ ಧರ್ಮಜಂಗೊರೆದು ಮತ್ತಲ್ಲಿಂದ ಡಾಕಿಲಿ ಪ್ರಭಾಸಕಂ ಬರಲು (ಕುರಂಗ. ೩೧-೦೪). ೫. ಲೂಟಿ ; ಕೊಳ್ಳೆ ; ದರೋಡೆ. **ಧಾಕು** : ೩. 'ಧಾಕುಗೆಡಿಸು' ಪರಾ.

**ಡಾಕಳಿ**=ಸತ್ತ್ವಗುಂದು; ತೇಜಸ್ಸು ನಾಶವಾಗು; ಪ್ರಭಾವ ಕುಗ್ಗು: ಸುರಬಲದಾಕಿವಾಳ ಮೃಗೇಂದ್ರನ . . . ಡಾಕಳಿದುದಾ ಸತ್ತ್ವದಲ್ಲಿರ್ದಾ ಕುಠಾರ ಕೃತಾಂತನವ (ಅಂಬಿಕಾ. ೩೬-೨೨). [ ←ತೆಲು. ಧಾಕ ]

**ಡಾಕು$_2$** 'ಡಾಗು$_1$' ನೋ.

**ಡಾಕ್ಟರಿಕೆ** (ನಾ). ಡಾಕ್ಟರನ ಉದ್ಯೋಗ ; ವೈದ್ಯವೃತ್ತಿ : ಅತ್ತ ಡಾಕ್ಟರಿಕೆ ಕೆಲಸಕ್ಕೆ ಪುರುಸೊತ್ತಿದೆಯೇ ಅಂದರೆ, ಬೆಳಗ್ಗೆದ್ದು ಹೋದರೆ ಹೊತ್ತು ವಿಾರಿದ ಮೇಲೆಯೇ ಬಂದು ಊಟಮಾಡುವುದು (ಜಾರುದಾ. ೩೩೫) : ಅವನು ಉಡುಪಿಯಲ್ಲಿ ಡಾಕ್ಟರಿಕೆ ಮಾಡಲಾರಂಭಿಸಿದ ಮೇಲೆ ಮತ್ತೆ ಮತ್ತೆ ಅದರ ಪ್ರಸ್ತಾಪ ಬರುತ್ತಿತ್ತು (ಕೃಹಿಕಾ. ೩೭) ; ಡಂಬನಿಗೂ ಈಗ ತನ್ನ ಮಗನ 'ಡಾಕ್ಟರಿಕೆಯ' ಬಗ್ಗೆ ಸಾಕಷ್ಟು ಹೆಮ್ಮೆಯೆನಿಸಿತು (ದಂಬನಾ. ೬೦). [ಡಾಕ್ಟರು + – ಇಕೆ ]

**ಡಾಕ್ಟರು, ಡಾಗದೊರೆ, ದಾಕುಂದಾರ, ದಾಕ್ತಾರ, ದಾಗ್ದಾರು** (ನಾ). ೧. ರೋಗಿಗಳಿಗೆ ಮದ್ದುಕೊಡುವವನು ; ವೈದ್ಯ ; ಚಿಕಿತ್ಸಕ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮುದ್ರಮು. ೧೬೫) : ಆ ಆಫೀಸರವರು ಕೂಡಲೇ ಆ ವಿಷಯವನ್ನು . . . ದನಕರುಗಳ ಡಾಕ್ಟರಿಗೆ ತಿಳಿಯಪಡಿಸುವರು (ಗ್ರಾಮೂಕ. ೧೧೬). ೨. ಗೌರವಾನ್ವಿತವಾದ ಉನ್ನತಪದವಿಯನ್ನು ಪಡೆದವನು ; ವಿಶ್ವವಿದ್ಯಾನಿಲಯಗಳು ಕೊಡುವ ಗೌರವಪ್ರಶಸ್ತಿ ಪಡೆದವನು; ವಿದ್ವಾಂಸ. **ಡಾಗದೊರೆ** : ೧. ಡಾಗದೊರೆ ಕೇಮಲ್ ಸಾಹೇಬರ ಬಂಗಲೆ ಎಲ್ಲಿದೆ ಬಲ್ಲೆಯ (ಮುಸುಗ. ೦೩೦). **ದಾಕುದಾರ**: ೧. ಕೊನೆಗೆ 'ದಾಕುದಾರ'ರನ್ನು ಬರಮಾಡಬಹುದಿತ್ತು (ಮುಂಗಾಮು. ೧೩೦). **ದಾಕ್ತಾರ** : ೧. ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ ಎಂದೆ ನಾನು (ಪ್ರುಂಪೂ. ೨೫). **ದಾಗ್ದಾರು** : ೧. ಅವರನ್ನು ಗಾಂಧೀಜನ, ಓದಿಸೋ ಅಯ್ನೋರು, ದಾಗ್ದಾರು, ಗೋಸಾಯಿಗಳು ಏನೆಂದಾದರೂ ಕರೆದುಕೊಳ್ಳಿ (ಸುವಸಂ. ೧). [ ←ಇಂ. Doctor ]

**ಡಾಗ** 'ಡಾಗು$_2$' ನೋ

**ಡಾಗದೊರೆ** 'ಡಾಕ್ಟರು' ನೋ.

**ಡಾಗಾನ್** (ಕ್ರಿ). ಮುದ್ರೆಯನ್ನು ಪಡೆ ; (ಕಾದ ಕಬ್ಬಿಣದ ಗುಳದ) ಬರೆಯನ್ನು ಹೊಂದು: ತತ್ಪಶುವು ಮೇಣವನಲ್ಲದುರೆ ಭಿಕ್ಷುಕನ ಡಾಗಾಂತ ಮನೆಯಾಕಳೆ (ಷಠಬು. ೨೨-೨೫). [ಡಾಗು$_1$ + ಆನ್$_1$ ]

**ಡಾಗೀನು** 'ದಾಗೀನು' ನೋ.

**ಡಾಗು$_1$, ಡಾಕು$_2$, ದಾಕ, ದಾಕು$_1$** (ನಾ). ೧. ಕಾದ ಕಬ್ಬಿಣ ಮೊದಲಾದ ಲೋಹಗಳ ಸಾಧನದಿಂದ ಒತ್ತುವ ಮುದ್ರೆ,–ಗುರುತು : ಬ್ರಹ್ಮನ ಡಾಗು ಬೆನ್ನಮೇಲೆ ವಿಷ್ಣುವಿನ ಡಾಗು ಕೈಯ್ಯ ಮೇಲೆ (ಪೋಲಿಮೂ. ೦೦೨-೪೦೭) : ಬುಂದಿಯ ಅರಸರ ಕುದುರೆಗಳಿಗೆ ಮೊಗಲರ ಡಾಗನ್ನು ಎಂದಿಗೂ ಹಾಕಕೂಡದು (ಅಕ್ಬರ. ೯೦). ೨. ಕಪ್ಪುಕಲೆ,–ಗುರುತು ; ಕರೆ : ರಿಪೋರ್ಟ್. ಸಾಹೇಬರ ಮಸಿಯ ಕಲೆಯ ಡಾಗು ಇಲ್ಲದೆ ಮೇಲೆ ಹೋಗುವಂತೆ ದಕ್ಷತೆ ವಹಿಸುತ್ತಿದ್ದರು (ದೀಶಹ. II, ೨೩೨). ೩. ಮೈಲಿರೋಗ ; ಸಿಡುಬು : ಸಂಸಾರವೆಂಬ ಡಾಗು ಎನ್ನ ಮತ್ತತನದಲ್ಲಿ ಕೊಂದಿತ್ತು (ಪೋಲಿಮೂ. ೪೭-೦೯೩). **ಡಾಕು$_1$**: ೨. "ಕಲೆ" (ಜಾನಕೋ. ೬೩). ೪. ದೇವಿಹಾಕಲು ಬಳಸುವ ಒಂದು ಬಗೆಯ ರಸಿಕೆ ; ಮುಂದೆ ಸಿಡುಬುರೋಗ ತಗುಲದಂತೆ ದೇಹದೊಳಕ್ಕೆ ಹೊಗಿಸಿದ ಸಿಡುಬಿನ ರಸಿಕೆ : (+). ೫. ದೇವಿಹಾಕಿದ ಗುರುತು ; ಮೈಲಿ ಕಲೆ : ಈ ಹುಡುಗನ ಕೈಯಲ್ಲಿ ಡಾಕು ಬಹಳ ಚೆನ್ನಾಗಿ ಕಾಣಿಸುತ್ತಿದೆ (ರೂಢಿ). **ದಾಕ** : ೬. 'ಕಾಲರಾ' ಮುಂತಾದ ಕೆಲವು ರೋಗಗಳು ತಗುಲದಂತೆ, ಅವುಗಳನ್ನು ಪ್ರತಿಭಟಿಸುವ ಶಕ್ತಿಯುಳ್ಳ ಸೂಕ್ಷ್ಮರೋಗಾಣುಗಳನ್ನೊಳಗೊಂಡ ರಸಿಕೆ ; ರೋಗವಿಷ: ಇತ್ತೀಚೆಗೆ ಹೊಸ ದಾಕಗಳ ಶೋಧನೆಯಾಗಿದೆ (ಜೀವದೂ. ೨೫೨). **ದಾಕು** : ೬. ಮಗುವು ಹುಟ್ಟಿದ ನಾಲ್ಕು ತಿಂಗಳಿನಿಂದ ಹಿಡಿದು ಒಂದು ವರುಷದೊಳಗೆ ಕಡ್ಡಾಯವಾಗಿ, ಮೈಲಿಗೆ, ಕಾಲರಾ, ಟೈಫಾಯ್ಡ್ ಇತ್ಯಾದಿ ೧೮ ಬೇನೆಗಳಿಗಾಗಿ ದಾಕು ಹಾಕುವ ಯೋಜನೆಯೂ ನಡೆದಿದೆ (ಜೀವದೂ. ೨೫೨).

**ಡಾಗನೊತ್ತು** = ಮುದ್ರೆಯೊತ್ತು ; ಗುರುತು ಮಾಡು ; ತನ್ನದೆನಿಸಿಕೊಳ್ಳು: ಹರಿಯೆದೆಯೊಳು ದೊಮ್ಮನ ಬಾಯೊಳು ಪುರಹರನ ವಾಮಾಂಗದೊಳು ಅರಲಸರಲ ಡಾಗನೊ[ಪಾಠಾಂ. ಠಾಗಲೊ]ತ್ತಿದಂಗಜ ವೀರ ಬರಲಂಜಿದನು ರಾಮನೆಡೆಗೆ (ಕುರಾಸಾಂ. ೩೬-೦೦) ; ನಾಗಭೂಷಣನಂತಿರಲಿ ನಿರ್ಜರರೊಳು ಭೋಗದೇವೇಂದ್ರನ ಮೇಲೆ ಡಾಗನೊತ್ತಿದೆ ನೋಡು (ಪೋಹತ. ೩೮-೧೧); ಸುರಪನಂಗದಲಿ ತಮ್ಮಯ ಡಾಗನೊತ್ತಿದೆವು ಧರೆಯೊಳಿನ್ನುಳಿದ ಮಾನವರೆಮ್ಮ ಪೆಣ್ತನಕೆ ಸರಿಯೆಯೆಂದೆಂಬ ಬಿರುದಿನ ವಾರನಾರಿಯರು ಪುರದಲ್ಲಿ ಕಣ್ಗೆಸೆದರು (ಭಿಕ್ಷಾಟ. ೨-೦೨) ; ಧಾತನ ಜಿಹ್ವೆಪೀಠದೊಳು ನಿಂದೆಯಾಖಂಡಲಗೆ ಡಾಗನೊತ್ತಿದೆ (ಪ್ರಭುಪು. ೫-೧೫೦).

ಡಾಗಿನ ಪಶು = ಮುದ್ರೆಯೊತ್ತಿದ ಪಶು : ಡಾಗಿನ ಪಶುಗಳೆಲ್ಲರೂ ಭೇದವನರಿಯಬಲ್ಲರೇ (ಅಂಬಿಪ. ೩೯೯-೮೬) ; ಡಾಗಿನ ಪಶುಗಳಿಗೆ ಅನಾಗತನ ಸುದ್ದಿ ಏಕೋ (ಮೋಳಿಮಾ. ೧೦೨-೪೦೭); ಇಂತಿವರೆಲ್ಲರು ಡಾಗಿನ ಪಶುಗಳು ವೇಷಧಾರಿಗಳು (ಮೋಳಿಮಾ. ೦೮೩-೬೯೨).

[ ←ಮರಾ. ಡಾಗ್. ದಾಗ್ ; ಪಾರ. ಹಿಂ. ದಾಗ್./ತಮಿ. ಡಾಕು : ತೆಲು. ಡಾಗು ]

**ಡಾಗು$_2$, ಡಾಗ** (ನಾ). ೧. ಸಾಮಾನು ; ಗಂಟು; ಮೂಟೆ ; ಭಾಂಗಿ : ಮಜೂರಿಯು ಡಾಗಿನ ಆಕಾರದಂತೆ ಮತ್ತು ಬದುಕಿನ ಮಹತ್ತ್ವ ಇದ್ದಂತೆ (ಮುಂಬವ್ಯಾ. ೧೯, ಪ್ರಸ್ತಾವನೆ); ರಾಶಿರಾಶಿಯಾಗಿ ಪಾರ್ಸಲ್ಲ "ಡಾಗು" ಗಳು ಬಿದ್ದಿದ್ದವು (ನಡಿದಾ. II, ೧೨೬೭). ೨. (ಒಬ್ಬ ಮಾಲೀಕನ) ಅಂಶ ; ಪಾಲು ; ಭಾಗ ; ಹಿಸ್ಸೆ : ನಾಲ್ವತ್ತು ಎಕರೆಯ ಏಕ ಡಾಗನ್ನು ಮಾಡಿಕೊಂಡು (ದೀಪಹ. II, ೨೮೮). **ಡಾಗ :** ೧. ಕಿರಾಣಿಯ ಬದುಕು ಒಂದು ಡಾಗದ ಒಳಗೆ ಒಂದೇ ತರದ್ದು ತರಿಸಿಕೊಳ್ಳುವವರಿಗೆ ಮಜೂರಿಯ ದರ (ಮುಂಬವ್ಯಾ. ೧೬, ಪ್ರಸ್ತಾವನೆ).

[ ←ಮರಾ. ಡಾಗ್ ]

**ಡಾಗೋಬ** (ನಾ). (ಬೌದ್ಧರ) ಸ್ತೂಪ ; ಪಗೋಡ ; ಸ್ತೂಪದ ಆಕಾರದಲ್ಲಿರುವ ಬಹಳ ಎತ್ತರವಾದ ಕಟ್ಟಡ ; ಸಮಾಧಿ : ಅನಂತರ ಬುದ್ಧನ ಅಸ್ಥಿ ಮೊದಲಾದ ಅವಶೇಷಗಳನ್ನು 'ಡಾಗೋಬ' ಗಳಲ್ಲಿ ಇರಿಸುತ್ತಿದ್ದರು (ಭಾಲಪ್ರ. II, ೮೨೬) ; ಗುಹೆಯೊಳಗೆ ಸೂರ್ಯನ ಕಿರಣವು ಪ್ರಾತಃಕಾಲದಲ್ಲಿ ನೇರಾಗಿ ಡಾಗೋಬದ ಮೇಲೆ ಬೀಳುವಂತೆ, ಕಮಾನುಳ್ಳ ಕಿಟಕಿಗಳನ್ನು ಕೊರೆದಿರುತ್ತಾರೆ (ಭಾಲಪ್ರ. III, ೦೬೬೦). 'ಪಗೋಡ' ನೋ. [←ಪಾಲಿ. ಡಾಬೆಗ; ಮರಾ. ಡಾಗೊಬಾ./ಸಂ. ಧಾತುಗರ್ಭ ]

**ಡಾಡಿಮ** 'ದಾಳಿಂಬ' ನೋ.

**ಡಾಣ** 'ದಾಣ$_3$' ನೋ.

**ಡಾಣಾಡಂಗರ** 'ಢಣಾಡಂಗುರ' ನೋ.

**ಡಾಣಾಡಂಗುರ** 'ಢಣಾಡಂಗುರ' ನೋ.

**ಡಾಣಾಡಾಣೆ** (ನಾ). ದೊಣ್ಣೆಯಿಂದ ಪರಸ್ಪರ ಹೊಡೆದಾಡಿ ಮಾಡುವ ಜಗಳ,-ಯುದ್ಧ : ಡಾಣಾಡಾಣೆ, ಖಾಡಾಖಾಡಿ (ಶಬ್ದಸು. ೩೩೦ ಪ್ರಯೋ). [ <ಡಾಣೆ$_2$ + ಡಾಣೆ$_2$ + – ಇ$_3$ ]

**ಡಾಣೆ$_1$** 'ದಾವಣಿ$_1$' ನೋ.

**ಡಾಣೆ$_2$** 'ಥಾಣೆ$_1$' ನೋ.

**ಡಾಣೆ$_3$** 'ದಾಣ$_2$' ನೋ.

**ಡಾಣೆಗ** (ನಾ). ದಪ್ಪನಾಗಿರುವವನು ; ದಡಿಯ ; ಧಾಂಡಿಗ : ದುರಹಂಕಾರಿ ಹಮ್ಮಿನ ಹಗರಣಿಗನು ಡಂಬದ ಡಾಣೆಗರೆರೆಯ (ಕೋರಬ. ೯-೬೪). [ ಡಾಣೆ$_2$ (<ಥಾಣೆ$_1$) + – ಇಗ ]

**ಡಾಣೆ$_1$** 'ದಾಣ$_2$' ನೋ.

**ಡಾಣೆ$_2$** 'ಥಾಣೆ$_1$' ನೋ.

**ಡಾಬು, ದಾಬು** (ನಾ). ಸ್ತ್ರೀಯರು ನಡುವಿನಲ್ಲಿ ಧರಿಸುವ, ಚಿನ್ನದ ಅಥವಾ ಬೆಳ್ಳಿಯಿಂದ ಮಾಡಿದ ನಡುಪಟ್ಟಿ ; ಒಡ್ಯಾಣ : ಮಣಿಯಡ್ಡುಗೆಯ ಡಾಬಿನ ಮೇಖಲಾಂಚಿತ (ಅನಂರಾ. ೦-೩-೩೨); ಕಿರೀಟವನ್ನು ಡಾಬಿನ ಉಡುದಾರವನ್ನು . . . ಬಾಹ್ಮಣನಿಗೆ ಕೊಟ್ಟು (ಕೃಪಾಳ. ೨೦೦); ಕಡಗ ಪಟ್ಟಿಯು ಡಾಬು, ಬುಗುಡಿ ಗೀರ್ಬಳೆ ಸರಿಗೆ (ಸಿದ್ಧಕಾ. ೮-೦೨) ; ಸಂಕ್ಷುಭಿತಪಕ್ಷಿಶ್ರೇಣಿಯೇ ಡಾಬು (ಧ್ವನ್ಯಾಲೋ. ೬೭) ; ಕಟಿಪ್ರದೇಶದಲ್ಲಿ ವಜ್ರದ ಡಾಬು ವಿರಾಜಿಸುತ್ತಿತ್ತು (ದೌಂತ್. ೩೬೮). **ದಾಬು :** "ಡಾಬು (ದಾಬು)–ದಾಮನ್ = ಒಡ್ಯಾಣ" (ತದ್ಭಕೋ. ೦೬).

[ ದೇ.॥ ತಮಿ. ತೆಲು. ಡಾಪ್ಪು./ಸಂ. ದಾಮನ್ ]

**ಡಾಮರ$_1$** (ಗು). ೧. ಭಯಂಕರವಾದ ; ಆಶ್ಚರ್ಯಕರವಾದ. (ನಾ). ೨. ದಂಗೆ; ಮುತ್ತಿಗೆ; ಲಗ್ಗೆ ; ಆಕ್ರಮಣ; ಸೂರೆ: ಆ ಮಾಧವೀಲತಾ ಮಂಟಪಮಂ ಕಾಮನ ಡಾಮರಕ್ಕಳ್ಕಿ ವನದುರ್ಗಂಬುಗುವಂತೆ ಪೊಕ್ಕು (ಪಂಪಭಾ. ೫-೬ ವ) ; ತೋಮರಂ ಜವನ ಡಾಮರವಾದುವು (ಪಂಪಭಾ. ೧೩-೬೧) ; ಕಾಮನ ಡಾಮರಮಲ್ಲಿ . . . ಪಲ್ಮೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ (ಕಾವ್ಯಾವ. ೩೬೭) ; ತನಗುಣಲಿಲ್ಲದುದಂ ಪಸವೆನ್ನದೊಡಂ ತನ್ನಂ ಕೋಟ್ಟಟ್ಟುದಂ ಡಾಮರಮೆನ್ನದೊಡಂ . . .ಬಂಧಹೇತುಗಳಂ ಪೆರ್ಚಿಸುವ ಮ್ಲೆಯ್ಯಂ ಪಾಪದ ರೂಪೆನ್ನದೊಡಂ ನೀಮರಿವಿರ್ (ಜೀವಸಂ. ೭೩-೫). ೩. ರೋಗರುಜಿನಗಳ ಬಾಧೆ ; ವ್ಯಾಧಿ ; ಪೀಡೆ : ಪಾಂಡ್ಯರಾಜ್ಯದಲ್ಲಿ ಎರಡು ವರ್ಷಗಳಿಂದಲೂ ವೀರಕ್ಷಾಮವು ಆವರಿಸಿದ್ದಿತು. ಈ ಯುದ್ಧವು ಸಂಭವಿಸಿದ ಮೇಲೆ ಡಾಮರಕ್ಕೂ ಆರಂಭವಾಯಿತು (ಶ್ರೀಹಯು. ೩೫೯). ೪. ತೊಂದರೆ ; ಕೋಟಲೆ ; ಉಪದ್ರವ : "ಉಪಸರ್ಗಮರಿಷ್ಟಂದುಷ್ಟಪೀಡೆ ಡಾಮರಮಜನ್ಯವಿಪಾತಿಪ್ರಕರಂ" (ಪಬ್ಬುಕೋ. ೯೬-೦) ; ಅರಿಷ್ಟಮುಪಸರ್ಗ ಮುತ್ಪಾತಮುಪಲಿಂಗಮಜನಂ ಡಾಮರಂ ವಿಡಂಬರಿ ವಿಪ್ಲವವೆನಲ್ಕುಪದ್ರವಮಕ್ಕು (ಶುಂಗರಾ. ೫-೨೬) ; ಮನೋಜಂ ಮುಯ್ವಂ ನೋಡಿ ವಿಯೋಗಿಗೆ ಕಯ್ವೊಸಿದನಾಯ್ತು ಡಾಮರಂ ಮಾಮರದಿಂ (ಮಲ್ಲಿಪು.೫-೦೦). ೫. ಬರಗಾಲ ; ಕ್ಷಾಮ ; ದುರ್ಭಿಕ್ಷ : ಡಾಮರ ಆಗಿದ್ದರೂ ವಿಗತಾಗಿ ತ್ರಿವಾಚ್ಯವಾಗಿ ಸರ್ವವೃತ್ತಿಯ ನಡೆಸಬೇಕೆಂದು ಶಿವಾರ್ಪಿತವೆಂದು ಕೊಟ್ಟೆವಾಗಿ (ಪ್ಯಾಆರಿ ೦೯೨೮ ; ೬೫-೩೨ ; 1509). ಕ್ಷಾಮ ಡಾಮರಂಗಳುಂ ಬೇರುಡಿದು ಪಾಟ್ಸೋಕಂ ಪೊಟಲೆರ್ (ರಾಮಾಶ್ವ. ೦೪-೨೯). ೬. ಗಲಿಬಿಲಿ ; ಗದ್ದಲ ; ಗೊಂದಲ. ೭. ಯಾವುದಾದರೂ ಆಶ್ಚರ್ಯಕರವಾದ ವಸ್ತು, ನೋಟ ಅಥವಾ ಘಟನೆ.

**ಡಾಮರಮಲ್ಲ** = ಆಕ್ರಮಣವನ್ನು ಎದುರಿಸಬಲ್ಲ ಶೂರ ; ಶತ್ರುಗಳನ್ನು ಆಕ್ರಮಿಸುವುದರಲ್ಲಿ ದಿಟ್ಟನಾದವನು ; ಒಂದು ಬಿರುದು : ಸಿನ್ನನಾರಾಯಣ ನಲ್ಲಗ್ಗ್ ನಲ್ಲ ಡಾಮರಮಲ್ಲ ಏಕಾಂಗಶೂದ್ರಕ ಶ್ರೀಪುಲಿಕಾಲ (ಎಇ. III, ೨೩೨-೯ ; 1070). [ ಸಂ. ]

**ಡಾಮರ$_2$, ಡಾಂಬರ, ಡಾಂಬರು, ಡಾಮರು, ದಾಂಬರು** (ನಾ). = ಡಾಂಬರೆಣ್ಣೆ : ಪಟಗರದ ಪೀಪಗಳೂ, ಡಾಮರದ ಪೀಪಗಳೂ, ರಾಂಜಾ ಪೀಪಗಳೂ (ಮುಂಬವ್ಯಾ. ೯) ; ಆ ಗಳಿಗೆಯಲ್ಲಿ ಆರಂಭವಾಗಿತ್ತು . . . ರಸ್ತೆಯ ಹೊದಿಕೆ ಡಾಮರ ಕಳಚಿ ಚೂಪುಕಲ್ಲು ಕಾಲಿಗೆ ಮುಳ್ಳಾಗುವುದಕ್ಕೆ (ಬಳಜೀ. ೦೩೫). **ಡಾಂಬರ :** ನೀರು ಬಟ್ಟ ಮೇಲೆ ತೆರೆದಿರುವ ಕಟ್ಟಿಗೆಗಳು ಹುಳಹತ್ತಿ ಕೆಡದ ಹಾಗೆ ಅವುಗಳಿಗೆ ಎಣ್ಣೆರಾಳ . . . ಹಚ್ಚಬೇಕು. ಡಾಂಬರವನ್ನಾಗಲಿ ರೋಗಂಧವನ್ನಾಗಲಿ ಹಚ್ಚಿದರೂ ಬರುತ್ತದೆ (ಕೃಷಿಪ್ರ. ೦೦೨) ; ಡಾಂಬರದಲಿ ಮೈಮೆತ್ತಿದೆ (ನವ್ಯಧ್ವ. ೦೫-೦೦) ; ಸುತ್ತೂ ಕಡೆಗೆ ಡಾಂಬರ ಸುಟ್ಟ ವಾಸನೆ ಬರಹತ್ತಿತ್ತು (ಸ್ವಗತಿಚಿ. ೯೩೭) ; ಇಧರ ಜೊತೆಗೆ ಒಬ್ಬರ ಮುಖಕ್ಕೊಬ್ಬರು ಡಾಂಬರವನ್ನು ಬಳಿಯುತ್ತಿದ್ದರು (ರಂಗರೋ. ೪೮). **ಡಾಂಬರು :** ಡಾಂಬರಿನೊಳಗೆ ಇದ್ದಲೀ ತೆಯ್ದು ಬಯಾಕೀ ತೀರಿಸಿಕೊಳ್ಳಲಿಕ್ಕೆ ಕುಡಧಾಂಗ ಕಾಣ್ತದ (ತಿಹುಗು. ೦೫). **ಡಾಮರು :** ಮಾರ್ಗವೇನೋ ಡಾಮರು ಹಾಕಿದ ಮಾರ್ಗ ಆದರೆ ಅಲ್ಲಲ್ಲಿ ಡಾಮರು ಎದ್ದು ಹೋಗಿ ದೊಡ್ಡ ದೊಡ್ಡ ಹೊಂಡಗಳು ಹುಟ್ಟಿದ್ದವು (ಸೀತಾರ. ೯೪) ; ದಾರಿ ಡಾಮರು ಹಾಕಿದ ಒಳ್ಳೆಯ ರಸ್ತೆ (ಅಬೂಬ. ೭). **ದಾಂಬರು :** ವಾಹನದ ಗಾಲಿ ಅದರುಸಿರು ಕಪ್ಪು ದಾಂಬರಿನ ಬೀದಿ ಕಪ್ಪು ಈ ಕಪ್ಪು ಪ್ರಿಯವು, ಅಪ್ರಿಯವದೇಕೆ ಹೇಳೆನ್ನ ಮೈಯ ಕಪ್ಪು? (ಕರುಣ್ಯ. ೭೩-೦೫).

[ ←ಹಿಂ. ಮರಾ. ಡಾಮರ್ ]

**ಡಾಮರರಸ್ತೆ, ಡಾಂಬರರಸ್ತೆ** (ನಾ). ಡಾಮರ ಹಾಕಿದ ರಸ್ತೆ : ಈ ಮಧ್ಯಾಹ್ನದ ಉರಿಬಿಸಿಲಿಗೆ ಎಕ್ಕಡವಿಲ್ಲದೆ ಡಾಮರರಸ್ತೆಯಲ್ಲಿ ನಡೆಯು ವಂತಿಲ್ಲ (ಒಡೆ). **ಡಾಂಬರರಸ್ತೆ** : ಅವನು ಡಾಂಬರರಸ್ತೆಗುಂಟ ಒಂದೇ ಸವನೇ ಸಾಗತೊಡಗಿದ (ಮುಕ್ತ್ಯ.ದ. ೬೬) ; ಆ ಕಪ್ಪು ಡಾಂಬರರಸ್ತೆಯನ್ನು ನೋಡುತ್ತಿದ್ದಂತೆ ಏಕೋ ಅರ್ಥವಾಗದ ಸಮಾಧಾನ ಶಾಂತಿಗಳು ಸುರೇಶನ ಮನಸ್ಸಿನಲ್ಲಿ ನೆಲಸಹತ್ತಿದವು (ಅಕೋಲೆ. ೦೦೬). [ ಡಾಮರ$_2$ + ರಸ್ತೆ ]

**ಡಾಮರು** 'ಡಾಮರ$_2$' ನೋ.

**ಡಾಮರ್ಬಂಕೆ** (ನಾ). ಒಂದು ಬಗೆಯ ಸಸ್ಯ : ಬಿಳೀಭೋಗಿ, ಆಸಿನ ಮರ, ಅಶ್ವಕರ್ಣ, ಡಾಮರ್‌ಬಂಕೆ (ಮ್ಯಾಕಿಗಿ. ೭೦- ೦೯೨೩). [ ? ]

**ಡಾಯಿಮ** (ನಾ). ಒಬ್ಬಾತನ ಹೆಸರು : ರಟ್ಟರ ಮೇರು ಡಾಯಿಮ ಮಹೀಪಾಳಂ ನೃಪಾಳೋತ್ತಮಂ (ಸೌಇಇ. XX, ೨೯೭-೯ ; 1087). [?]

**ಡಾಲರು** (ನಾ). ಅಮೇರಿಕಾದಲ್ಲಿ ಬಳಕೆಯಲ್ಲಿರುವ ಒಂದು ನಾಣ್ಯ : ಈ ಮನೆಯ ಮುಂಗಡ ಬಾಡಿಗೆ ೨೫ ಡಾಲರು (ಸಮುಸ. ೦೨೪); ಟಿಕೇಟಿನ ಬೆಲೆ ಒಂದು ಡಾಲರು (ಬಿಹಾಕ್ಯ. ೦೦೩) : ಹೂವಿಲ್ಲ ಹಣ್ಣಿಲ್ಲ ಡಾಲರನು ಪಡೆಯುವ ಭಾಗ್ಯವಿಲ್ಲ (ಅರಕೋ. ೦೦). [ ←ಇಂ. Dollar ]

**ಡಾಲಿಬಾರು** (ನಾ). ಚರ್ಮದ ಪಟ್ಟಿ (?) : ತುರುಕರ ಡಾಲಿಬಾರಿನ ಪಟ್ಟಿ ತಿಂಬರು ಹೇರಿ ಪೈಜರವ (ಕಾಲಸಂ. ೨೩-೦೦). [ ? ]

**ಡಾಲಿಮ** 'ದಾಳಿಂಬ' ನೋ.

**ಡಾಲಿಯಾ** 'ಡೇಲಿಯಾ' ನೋ.

**ಡಾಲು$_1$** 'ಡಾಳ$_1$' ನೋ.

**ಡಾಲು$_2$, ಡಾಳ$_2$, ಡಾಳು, ಥಾಲು$_2$, ಧಾಳ** (ನಾ). ೧. ಗುರಾಣಿ : "ಡಾಲು–ಥಾಲ=ಅಡ್ಡಣ" (ಕದ್ಯಕೋ. ೦೬); ಬಿರುದಿನ ಡಾಲ ರಾವುತರೆಂಟು ಸಾವಿರ ತುರಗವನೇಱಿಯೈತರಲು (ಕಂಸವಿ. ೧೦-೮೬) ; ಗರುಡಹನುಮ ಮಕರದ ಟೆಕ್ಕೆಯ ಡಾಲಬಿರುದಿನ ದೊರೆರಾಯನಾರೊ (ಕಂಸವಿ. ೦೩-೩೬); ಅವನ ಡಾಲು ಡಮಾಮಿ ಸತ್ತಿಗೆ ಕೆಂಪಿನ ನಿಶಾನಿಯುಮಂ . . . ಕೈಸೆಱ ತಂದು ರಾಯರಿಂಗೊಪ್ಪಿಸಲ್ (ಕೆಳನೃ. ೨-೪೯) ; ಆದರಿಂದ (ಗಂಡಕದ ತೊಗಲಿನಿಂದ) ಬಹಳ ಬೆಲೆಯುಳ್ಳ ಡಾಲುಗಳು ಆಗುತ್ತವೆ (ಮುಂಬಯಿ. ೪-೪೮) ; ಕಾಲ್ದಳದವರು ಎಡಗೈಯಲ್ಲಿ ಹದಮಾಡಿದ ಎತ್ತಿನ ಚರ್ಮದ ಡಾಲುಗಳನ್ನು ಹಿಡಿದಿರುತ್ತಾರೆ (ಪ್ರಪಾಇ. I, ೪೦ ಅಡಿಟಿ). **ಡಾಳ$_2$** : " ಖೊಪ್ಪರ ದಂಡೆ ಡಾಳ ಕಳಾಸ[ಪಾಠಾಂ. ಡೋಳಳ್ಕು ಕಳಾಸ]ಜಾಳೆಯ ಮಂಡಿ ಸೀರಣಂ ಹೆಕ್ಕೆಯಕ್ಕುಂ(ಬುಂಗಳಾ.೮೮-೩೮): ಬಿರುದಿನ ಡಾಳ ಹಯದ ಮೊತ್ತದಲಿ ತಮಾಸುರನಂತೆ ಮೆಱೆವವನಾರು (ಕಂಸವಿ. ೦೨-೪೩) ; ಬಿರುದಿನ ಡಾಳ ದರ್ಪದೆ ಸೆಳೆತಂದು ಭೂಪಾಲನಿದಿರಿನಲಿ ತಪ್ಪದೆ ಮೆರೆಯ ನೊಟ್ಟಿದರು (ಕಂಸವಿ. ೦೫-೦೧೬). **ಡಾಳು** : ೧. ಬಿರುದಿನ ಡಾಳು ಡಮಾಮಿ ಮಕರಟೆಕ್ಕೆಯುರುತರ ರಾಜಚಿಹ್ನೆಗಳ ಪರಿಯ ತೋರಾತ(ಕಂಸವಿ.೩-೩೬): ಅಂಕೆಯಿಲ್ಲದೆ ನಾನಾ ಬಗೆ ಚಿತ್ರಗಳಂಕಿತವಹ ಡಾಳುಗಳ ಅಂಕುಶಖಾನನ ಕೇಜಿ ಸಾವಿರಮಾಗ ಮುಂಕೊಂಡು ಬಂದುವು (ಕಂಸವಿ. ೦೮-೮೪). **ಥಾಲು$_2$** : ೧.ಬೆಳ್ಳಿ ಥಾಲು ಚಿನ್ನದ ಮುಲಾಮಿನ ಗುಬ್ಬಿ (ಎಕ. XIV, ಪಂಜಿನ. ೨೯೨-೯ : 1847) ; ಕೈಯೊಳಗಿನ ಕತ್ತಿ ಥಾಲುಗಳನ್ನು ನೋಡಿರಿ (ಮಾಹಿನೀ. ೬೭) ; ನಾಯಕನು ಚಾತುರ್ಯದಿಂದ ಖಡ್ಗಕ್ಕೆ ತನ್ನ ಥಾಲನ್ನೊಡ್ಡಿ ಹೊಡತವನ್ನು ತಪ್ಪಿಸಿಕೊಂಡನು (ಉಮುದ. ೦೬) : ಒಂದು ಕೈಯಲ್ಲಿ ಎತ್ತಿನ ತೊಗಲಿನ ಥಾಲನ್ನು ಜೋತುಬಿಟ್ಟು . . . ಇಪ್ಪತ್ತೈದು ಹುಡುಗರು ಬಂದರು (ಮೇದಿಮ. ೦೦೦). ೨. ಪಂದ್ಯಗಳಲ್ಲಿ ಗೆದ್ದಿರುವ ತಂಡಕ್ಕೆ ಕೊಡುವ ಗುರಾಣಿಯಾಕಾರದ(ಬೆಳ್ಳಿಯ)ಪಾರಿತೋಷಕ,– ಬಹುಮಾನ : ಗೆದ್ದವರಿಗಿದ್ದೆಯಿದೆ ಬೆಳ್ಳಿಯ ಥಾಲು (ನಂಮು. ೩೩-೨೪). **ಧಾಳ** : (೧). [ <ಸಂ. ಥಾಲ ]

**ಡಾಲು$_3$** (ನಾ). ಒಂದು ಬಗೆಯ ರಣವಾದ್ಯ : ಕೊಂಬುಕಹಳೆ ತಮ್ಮಟೆ ಡಾಲು ಡಮಾಲು ರಾಯಭಟಿ ಮುಂತಾದ ರಣವಾದ್ಯಗಳು ತಟ್ಟನೆ ನಿಂತವು (ರೂಲೀಜಾ. ೫). [ ? ]

**ಡಾಲುಹೊಡೆ** (ಕ್ರಿ). ಪ್ರಕಾಶವನ್ನು ಬೀರು ; ಥಳಥಳಿಸು : ಅವಳು ಕಿವಿಯಲ್ಲಿ ಹಾಕಿಕೊಂಡಿದ್ದ ಕೆಂಪಿನೋಲೆಗಳು ನಾಲ್ಕು ಕಡೆಗೂ ತಳತಳನೆ ಡಾಲುಹೊಡೆಯುತ್ತಿದ್ದುವು (ಭಾರವಿ. ೦೦೦).

[ ಡಾಲು$_1$ (<ಡಾಳ$_1$) + ಹೊಡೆ$_1$ (<ಪೊಡೆ$_1$) ]

**ಡಾಲ್ಮರ** (ನಾ). ಒಂದು ಬಗೆಯ ಮರ : ಕಲ್‌ಗರಿಕೆ, ಡಾಲ್‌ಮರ, ಗವುಡ, ಮದಗಿರಿಬೇವು (ಮ್ಯಾಕಿಗಿ. ೨೦-೩೮೦). [ ? + ಮರ$_1$ ]

**ಡಾವ್** 'ಡಾವು' ನೋ.

**ಡಾವಣ** 'ದಾವಣಿ$_1$' ನೋ.

**ಡಾವಣಿ** 'ದಾವಣಿ$_1$' ನೋ.

**ಡಾವಣಿಕಟ್ಟು** 'ದಾವಣಗಟ್ಟು$_1$' ನೋ

**ಡಾವಣೆ** 'ದಾವಣಿ$_1$' ನೋ.

**ಡಾವಣೆನೇಣ್** (ನಾ). ದನ ಮೊದಲಾದುವನ್ನು ಸಾಲಾಗಿ ಕಟ್ಟುವ ಉದ್ದವಾದ ಹಗ್ಗ : ವಾರುವಗಳ ಡಾವಣೆನೇಣ್ಗಳ ಬಲು ಜೀರುಗುಣಿಕೆಗಳ ಪರಿದು ಕೇರಿಕೇರಿಯೊಳು ತಮ್ಮಿಚ್ಛೆಯೊಳಗೆ ಸಲೆ ತಾಜುಮಾಜಾಗಿ ಯೋಡಿದವು (ಕಂಸವಿ. ೧೫-೯೦). [ ಡಾವಣೆ (<ದಾವಣಿ$_1$) +ನೇಣ್$_1$ ]

**ಡಾವಪೇಚು, ಡಾವುಪೇಚು** (ನಾ). ೧. ಉಪಾಯ ; ತಂತ್ರ : ಗೊತ್ತದ ನನಗ, ನಿಮಗೇನು ಖಾಸಗೀ ಮಾತಾಡೋದದ ಎಂದೋದು.ಮುತ್ಸದ್ದಿಗಿರೀ ಡಾವಪೇಚು ನಡಸೋದದ (ಜೂಜು. ೦೬). **ಡಾವುಪೇಚು** : ೨. ಪಟ್ಟು : ನೋಡಿದ ಹಿಡಿತಗಳನ್ನೂ ಡಾವುಪೇಚುಗಳನ್ನೂ ಬಣ್ಣಿಸುವ ರಭಸದಲ್ಲಿ . . . ಅವನನ್ನು ನೆಲಕ್ಕೆ ಅಪ್ಪಳಿಸುವರು (ಗಾಳಕ. ೬೫).

[ ←ಮರಾ. ಡಾವಪೇಚ್ ]

**ಡಾವರ, ಡಾವರಿ, ಡಾವುರ, ಡಾಹರ, ದಾವರ** (ನಾ). ೧. ಬರಗಾಲ ; ಕ್ಷಾಮ ; ದುರ್ಭಿಕ್ಷ : "ಡಾವರಮಾ ಕ್ಷಾಮಮದಕ್ಕುಂ" (ಕವಿಕಂ.೨೬೯); ಇಂಚೆಯ ಪಸವಿನ ಬಱದ ಕಳಂಚಿನ ಡಾವರದ ಬಾಧೆಯಿಲ್ಲದ ಪದದೊಳ್ ಮುಂಚದೆ ಪಿಂಚದೆ ಬಳೆದು ಏರಿಂಚಿಯ ಕೆಯ್ವಿಡಿವೊಲಾದುವಾ ನಾಡೂರ್ಗಳ್ (ಹಂಪಥಾ. ೮-೫೦) ; ಗೋಪ್ರವೇಶಲಕ್ಷಣ (ನಿಮಿತ್ತ) ಬಿಡಂ ಪೊಕ್ಕೊಡೆ ಚಿತ್ರವೃಷ್ಟಿ . . . ಸೇಡಂ ಪೊಕ್ಕೊಡೆ ಡಾವರಂ (ಅಟ್ಯಕು. ೪-೬). ೨. ಕೊಳ್ಳೆ ; ಸೂರೆ ; ಲೂಟಿ : ದಳವುಳ ದೆಳುಗವತೆಯನ್ಯಾಯ ಡಾವರ [ಪಾಠಾಂ. ಪರಿಭವ] ಕಕ್ಕು ಡೊಕ್ಕಾಸ . . . ನಿನ್ನೊಳಿಲ್ಲಲೆ ರಾಯ ಕೇಳೆಂದ (ಕುವ್ಯಾಸ. ೦-೪೫) ; ಕರುಬುತನ ದುರ್ಭಿಕ್ಷ ಡಾವರ ಪೊರಿಗೆ ಲಂಚ . . . ಸ್ವಪ್ನದೊಳಗಿಲ್ಲಾಳ್ಕೆಯೊಳು ಸಳನ (ಅಂಬಿಕಾ. ೪೮-೯೦). ೩. ಬಾಧೆ ; ಹಿಂಸೆ ; ಕೋಟಲೆ ; ಉಪ ದ್ರವ : ಪುಂಡರೀಕ ಭೋಂಕನೆ ನಿನಗೀಗಳಿಂದ್ರಿಯದ ಡಾವರವೆತ್ತಣಿನೆತ್ತ ಬಂದುದೋ (ಕಾದಂಪೂ. ೭೭೪) ; ಡಕ್ಕೆಯ ಡಾವರಕ್ಕೆ ಸಿಕ್ಕಿ ನೊಂದೆನು (ಡಕೊಮ್ಮ. ೨೨೦-೭) : ಕಾಮನ ಡಾವರಂ ಕೊಳ್ಳದುಳಿದ ಮಾಯೆಯ ಮಾತು ಬೇಡ (ಹಕಳಾ. ೮-೫೯); ಸಾವು ತಪ್ಪದು ತನಗೆ ಕಾಮನ ಡಾವರವು ಘನ (ಕುವ್ಯಾವಿ. ೨-೨೭) : ರಕ್ತಬೀಜಜನ ಡಾವರಕೆ ಬೆಚ್ಚದಿರಿ (ಅಂಬಿಕಾ. ೩೮-೯). ೪. ತೀವ್ರತೆ ; ರಭಸ ; ಅತಿಶಯ : ಬತ್ತಿದ ಬತ್ತು ಪೃಥ್ವಿಯು ಕೂಟ ಅವ್ವುದಿನ ದ್ರವದಿಂದ ಮಸ್ತಕ ಒಡೆದುದಲ್ಲದೆ ಉಷ್ಣದ ಡಾವರಕ್ಕೆ ಬೆಂಕಿಯ ಬೇಗೆಗೆ ಮಸ್ತಕ ಒಡೆದುದುಂಟೇ (ಶೋಲಸೂ. ೨೮೦-೪೬); ಉಗಿದು ಹಾಯ್ಕುವ ಖಳನ ನಿಡುದೋಳುಗಳು ಬಳಲಿದವಲ್ಲಿ ಹೊಯ್ದವು ಥಗೆಯ ಡಾವರವಾಯ್ತು ಬಹಳ ಸ್ವೇದಜಲ ಜಡಿಯ (ಕುವ್ಯಾಸ. ೦೫-೨). ೫. ಕಾವು; ದಗೆ; ತಾಪ : ಉರಿಯ ಡಾವರವೆಳೆಯ ಬಾಳೆಯ ಬೆರಸುವಂತಿರೆ

ರಾಯಕುವರನ ಮರಣವಾರ್ತೆಯನಾ ಸುಭದ್ರಾದೇವಿ ಕೇಳಿದಳು (ಕುಮಾ.ದ್ರೋ. ೭-೧೧) ; ಬಿಸಿಲಿನ ಡಾವರವು ಅತಿಯಾಗಿದ್ದರೂ ಆತನು ತಲೆಗೆ ಟೋಪಿಯನ್ನೂ ಹಾಕಿರಲಿಲ್ಲ (ಕಾನೂರು. ೧). ೬. ಪ್ರತಾಪ ; ಶಕ್ತಿ ; ಸಾಮರ್ಥ್ಯ : ಆ ವಿವಿಧ ಮಂತ್ರಾಸ್ತ್ರವನು ಶತಸಾವಿರವನಾ ಬ್ರಹ್ಮದಂಡದ ಡಾ[ಪಾಠಾಂ. ಥಾ]ವರದಲೇ ಗೆಲಿದನೊಬ್ಬ ವಸಿಷ್ಠ ಮುನಿಯೆಂದ (ಕುಮಾ.ಆ. ೧೧-೪೩) : ಆವುದಂತರ ವನಕಳಭಕೈರಾವತಕೆ ಮಾರ್ಪು ಭಾವು ದ್ರೋಣನ ಡಾವರಕೆ ಪಾಂಚಾಲನೈಸಲವನು (ಕುಮಾ.ಭೀ. ೮-೩೨). ೭. ಗದ್ದಲ ; ಗಲಿಬಿಲಿ ; ಸಡಗರ : ಧೂರ್ಜಟಿಯ ಡಾವರದ ಡಮರುಧ್ವನಿಯೊ ವಿಲಯದ ಬಲುಸಿಡಿಲ ಬೊಬ್ಬಾಟವೋ (ಕುಮಾ.ಕ. ೨೧-೧೬). ೮. ಬಯಕೆ ; ಉತ್ಕಟವಾದ ಇಚ್ಛೆ : ಮಹಾವಾರ್ಧಿಜಲವನೊಂದೇ ಸಾರಿ ಸುಟಿಗೊಂಬ ಡಾವರದೊಳಿದ್ದ ವಡಬಾಗ್ನಿಯೋ . . . . ಎಂದೆಂಬೊಲಾದುದು ಧನಂಜಯನ ಪಾವಕಾಸ್ತ್ರಂ (ಜೈಮಿಥಾ. ೧೩-೧೮) : ಆಳ್ದನೊಟ್ಟಿಗಮನಿತುಮಂ ತಾನೊರ್ವನೆ ಗೆಯ್ವ ಡಾವರದಿಂ (ಚಿಕದೇ. ೮೩-೨೧). ೯. ಭಯಂಕರವಾದುದು ; ಭೀಷಣತೆ ; ಕರಾಳತೆ : ಆವ ಕೌಳಿಕಮಂತ್ರತಂತ್ರದ ಡಾವರದ ಡೊಳ್ಳಾಸವಿಕ್ಕಿದ ದೀವಸದ ಬೇಳುವೆಯ ಬೇನೆಂಬೆನು (ಕುಮಾ.ಸ. ೦೩-೬೦) ; ಜಲಧಿ ಜಲಧಿಯ ಹಳಚಲಗಿದವ್ವಳಿಪ ವಾದ್ಯಧ್ವನಿಯ ಡಾವರ ಸೆಳೆದುದಸುರರ ಧುರದ ಧೈರ್ಯವನು (ಕುಮಾ.ಆ. ೧೨-೦೨). ೧೦. ಆವರಿಸುವಿಕೆ; ಸುತ್ತಲೂ ವ್ಯಾಪಿಸುವಿಕೆ. 'ಡಾವರಿಸು' ಪರಾ. ಡಾವರಿ : ೪. ಅತ್ತಲರ್ಜುನನುರಿಯ ಡಾವರಿಯನು[ಪಾಠಾಂ. ಡಾವರವನು]ಭಂಗಿಸಿದನೆಚ್ಚು ನಾರಾಯಣಾಸ್ತ್ರದೊಳು (ಜೈಮಿಥಾ. ೮-೪೩). ಡಾವುರ: ೮. "ಡಾವುರವೆನಲಪೇಕ್ಷೆಯು" (ಭಾರನಿ. ೩೨). ಡಾಹರ: ೬. ಡಾಹರದೊಳಿಱಿಗಿದೆಕ್ಕಲನದಟುವಂ ಮುಱಿಯೆ ನೇಹದಿಂ ಹರಿ ತನ್ನ ಕುವರಿಯಂ ಕೊಡೆ (ಅಂಗಪು. ೧-೦೬).ದಾವರ : ೧೧. ಬಾಯಾರಿಕೆ ; ದಾಹ; ನೀರಡಿಕೆ; ಸೇದೆ : ಬಳಸಿ ಬಂದಿಹ ನವಗೆ ಇಷ್ಟು ದಾವರವಾಗೆ ಏರಿಬಳುವವನಿಗೆಷ್ಟು ದಾವರವೊ (ಅರುಣ. ೩೯-೨೦); ಉಪ್ಪು ತಿಂದಷ್ಟೂ ದಾವರವಾಗಿ ಒಣಗಿ ಹೋದೀಯೋ, ಬೆಲ್ಲವೇ ತಿನ್ನು (ಕಥಾಮಂ. IV,೯೨). 'ಡವರ' ಪರಾ. [ <ಸಂ. ಡಾಮರ ]

ಡಾವರಿ 'ಡಾವರ' ನೋ.

ಡಾವರಿಗ (ನಾ). ೧. ಕೊಳ್ಳೆಹೊಡೆಯುವವನು ; ದಂಗೆಮಾಡುವವನು; ಸೂರೆಕಾರ ; ದರೋಡೆಗಾರ : ಅಱಿವಿನ ಗರ್ವದಿಂದಿಳಿಸದೀ ತ್ರಿಜಗಂಗಳನೊತ್ತಿ ಮೋಹವೆಂಬಱಿಕೆಯ ಸಂದ ಡಾವರಿಗನುಂ ಪಗೆ ತನ್ನೊಳಗಿರ್ದೊಡೆಂತುಮೇತೆಱದೊಳವೊಳ್ಳಿಕೆಯುಗ್ಗಮ (ಜೀವಸಂ. ೦೩೮-೦೬); ಡೊಂಬಗರ ಡಾವರಿಗರಿವದಿರ ತಿಂಬೆನೀಗಳೆ (ಕುಮಾ.ಸ. ೧೩-೩೫). ೨. ಶೂರ; ಸಮರ್ಥ; ವೀರ : ಕಂಸನಾನೆಯನಸುಬಡಿದ ಗಡ ಮಲ್ಲರನು ಮರ್ದಿಸಿದನೇ ಡೊಳ್ಳಾಸದಲಿ ಡಾವರಿಗನಹನೆಂದ (ಕುಮಾ.ಸ. ೦೦-೧೭). ೩. ಗದ್ದಲವಮಾಡುವವನು ; ಕೋಲಾಹಲವನ್ನುಂಟುಮಾಡುವವನು ; ಆರ್ಭಟಿಸುವವನು : (೬). [ ಡಾವರ + -ಇಗ ]

ಡಾವರಿಗತನ (ನಾ). ಸಾಮರ್ಥ್ಯ ; ಶೌರ್ಯ ; ಪರಾಕ್ರಮ : ಕರ್ಣ ಗಳಹದಿರು ಡಾವರಿಗತನವಾರ ಕೂಡೆ ವ್ಯಥಾ ವಿಲಾಸಿಗಳೆಲವೊ ಸುಭಟರೆ ನೀವು (ಕುಮಾ.ದ್ರೋ. ೦೩-೨೩). [ ಡಾವರಿಗ + -ತನ ]

ಡಾವರಿಗವಿದ್ಯೆ (ನಾ). ಕೊಳ್ಳೆಹೊಡೆಯುವುದು ; ಲೂಟಿ ; ಸೂರೆ : ಆವ ಸೇರಿಕೆ ಜವಕೆ ಪಾವಕರಾವಳಿಗೆ ಶಮೆ ದಮೆಗೆ ಖಡ್ಗಕೆ . . . ಆವುದಿದರಭಿಧಾನ ತಪವೋ ಡಾವರಿಗವಿದ್ಯಾಸಮಾಧಿಯೊ ನೀವಿದೆಂತಹ ಋಷಿಗಳು (ಕುಮಾ.ಆ. ೪-೯೩). [ ಡಾವರಿಗ + ವಿದ್ಯೆ ]

ಡಾವರಿಸು, ಧಾವರಿಸು, ದಾವರಿಸು (ಕ್ರಿ). ೧. ಸುತ್ತು ; ತಿರುಗಾಡು ; ತ್ವರೆಯಿಂದ ಆಚೀಚೆಗೆ ಚಲಿಸು ; ರಭಸದಿಂದ ಮುನ್ನುಗ್ಗು : ರಥಿಕರ್ ಕಡುಪಿಂ ರಥಂಗಳಿಂ ಡಾವರಿಸುತ್ತೆ (ದಶಕು. ೭-೭೩) ; ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ . . . ದಿಶಾಚಕ್ರದೊಳ್ ಡಾವರಿಸಲ್ (ಎಕ. V, ಬೇಲೂರು. ೩-೭೯; 1897) : ತೀವಿ ತೆಗೆದನು ವಜ್ರಶರದಲಿ ಡಾವರಿಸಿದನು ಕಳನೊಳು (ಕುಮಾ.ದ್ರೋ. ೦೦-೨೮) : ನೂಱಾನೆಯಲಿ ಡಾವರಿಸಿದನು ಧರ್ಮಜನ ದಳದಲಿ ಧೀರ ಕುರುರಾಯ (ಕುಮಾ.ಗ. ೨-೩೫): ನೆಲ ಹಱಿಯೆ ಹರಿದವು ತೇರುಗಳು ತೇರವದ ತೋಳುಗಳ ಉರುಕೃಪಾಣದ ದಂತಿಗಳು ಡಾವರಿಸಿದವು (ತೊರರಾ. ೫-೫-೧೬). ೨. ಬಾಯಾರಿಕೆಯಾಗು: ನರನ ತೇರಿನ ಕುದುರೆಗಳು ಡಾವರಿಸಿದುವು ಡಗೆಹೊಯ್ದು ಮಿಗೆ ದಳ್ಳುರಿಯ ಸಸಿಯಂತಾದನರ್ಜುನದೇವ ನಿಮಿಷದಲಿ (ಕುಮಾ.ಭೀ. ೭-೩೪) : ತೀವಿದ ಪಾಲ್ಗೊಲೆಯಂ ತಳಿರ್ವಾಯಿಂ ಡಾವರಿಸುತ ಕರ್ಚುವ ಕಂದನ ಸದ್ಭಾವವಮನೀಕ್ಷಿಸದಾಕೆಯು ಕಣ್ಗಳ್ ಪೀಲಿಯ ಕಣ್ಣೆಸೆ (ಜಯುಕಾ. ೨-೩೭). ೩. ಹಬ್ಬು; ಆವರಿಸು ; ವ್ಯಾಪಿಸು : ಅವಿರಳಾಸ್ತ್ರಾನೀಕ ಡಾವರಿಸಿದವು ದಿಗುತಟವ (ಕುಮಾ.ಭೀ. ೮-೩೬); ಉರಿಯ ಕರಡಿಗೆಯಂತೆ ಶಿಖಿ ಡಾ[ಪಾಠಾಂ. ಸಿಡಿದಾ]ವರಿಸಿತಬುಜಭವಾಂಡಭವನವನು (ತೊರರಾ. ೬-೪-೩೨); ವಿಷಜ್ವಾಲೆ ಮಿಗೆ ಡಾವರಿಸಿತು . . . ಪರಬಲದೊಳು (ಜೈಮಿಥಾ. ೨೪-೩೦) ; ಆತನ ಕೀರ್ತಿಯು ದಶದಿಕ್ಕುಗಳಲ್ಲಿ ಡಾವರಿಸುತ್ತಿತ್ತು (ಕವೀರ. ೦೨೦). ೪. ಚುಚ್ಚು ; ತಿವಿ; ಹೊಡೆ; ಹಿಂಸಿಸು; ನೋಯಿಸು: ನೀವು ಕಂಡಿರೆ ನಾಭ ಜಂಘೆಗೆ ಡಾವರಿಸಿದನು ಹಲವು ಬಾರಿ ಜಯಾವಲಂಬನವೆಂತು ಕೃಪೆಮಾಡೆಂದನಾ ಪಾರ್ಥ (ಕುಮಾ.ಗ. ೭-೪೩). ೫. ಉರಿ ; ಪ್ರಜ್ವಲಿಸು : ಝಳದ ಡಗೆ ಡಾವರಿಸೆ ಹೊಕ್ಕರು ಕೊಳನ (ತೊರರಾ. ೨-೪-೨೨) : ಭುಗಿಲ್ಭುಗಿಲ್ಭುಗಿಲೆಂದು ಡಾವರಿಸೆ . . . ಎಲ್ಲರಂ ದಹಿಸತೊಡಗಿದುದು ದಳ್ಳುರಿ (ಜೈಮಿಥಾ. ೮-೫೯): ಕಂಬನಿಯ ಕಡಲೊಳಗೆ ಡಾವರಿಪ ವಡಬಶಿಖಿ (ಜೈಮಿಥಾ. ೦೩-೫೯). ೬. ಅತಿಯಾಗಿ ಬಯಸು ; ಉತ್ಕಟವಾಗಿ ಆಸೆಪಡು ; ಆಸೆಯಿಂದ ಹಾತೊರೆ : ವಿಷಯವ ಡಾವರಿಸುವವ ಸ್ಮೃತಿನಿಂದೆಯ ಬಲ್ಲನೆ (ಸರ್ವ. ೩೫-೧೮೮) : ಆವರಿಸುವ ಮನ ಭಕ್ತಿಗೆ ಡಾವರಿಸುವ ಮನ ಶಿವಾರ್ಚನೆಗೆ . . . ದೊರಕಿದೊಡಾವುದಸಾಧ್ಯಂ (ಶಂಕಳಂ. ೨೦). ೭. ಆರ್ಭಟಿಸು ; ಅಬ್ಬರಿಸು : ಕಡುಲುಳಿ ಮಸಗಿ ಡಾವರಿಸಿ . . . ಕಾಗಿದರು (ಕುಮಾ.ಸ. ೨-೦೦೩) ; ಪಾವಿನಂತಾವಿನಂತಡಿಗಡಿಗೆ ಮೊರೆದೆದ್ದು ಡಾವರಿಸಿ ಸೀವರಿಸಿ ಮನೆಗೆಲಸವಂ ಗೆಯ್ಯದಾ ವನಿತೆ ಸಾವನಿತೆ ಲೇಸು (ಜೈಮಿಥಾ. ೫-೫೪): "ಹಟಮಾರಿತನ ಮಾಡು; ಮೊಂಡಾಟಮಾಡು"(ಪ್ರಶಂ).ಧಾವರಿಸು: ೬. ಆವುದಱ ದೆಸೆಯಿಂದ ಮನವಿದು ಧಾವರಿಸುತಿಹುದದು ಕಣಾ ಭವಧಾಮತಿಗೆ ಕಾರಣವು (ಸ್ವರೂಪಾ. ೦-೪). ದಾವರಿಸು : ೪. ಆನೊಲಿದು ಬಂದರೆ ನಿಮ್ಮ ಬಿಱುನುಡಿಯಲಗಿನಲಿ ದಾ[ಪಾಠಾಂ. ಡಾ]ವರಿಸಿದಿರಿ ಡೊಳ್ಳಾಸವಿದ್ಯೆಯಲಿ (ತೊರರಾ. ೩-೪-೨೦). ೮. ನೋಯು; ಹಿಂಸೆಗೊಳ್ಳು; ಯಾತನೆಯನ್ನನುಭವಿಸು : ಆತುರದಲ್ಲಿ ಕಳವಳಿಸಿ ವ್ಯಾಕುಲದಲ್ಲಿ ದಾವರಿಸುತಿಪ್ಪುದೀ ಮನವು (ವಚಶಾ. II, ೪೪೯) ; ಮಗ್ಗಲದ ಮರಿಯುಳೀ ಯೇಸುವಿಗೆ ಮನಸೋತು . . . ಬೆಂದು ಮನನೊಂದು ಭುಗಿಭುಗಿಲ್ಲ ಕಾವರಕೆ ದಾವರಿಸಿ (ಗೊಲ್ಗೊಥಾ. ೩-೬೦). 'ಡವರಿಸು' ಪರಾ.

[ ಡಾವರ + - ಇಸು₃ ]

ಡಾವಳಿ 'ಧಾವಳಿ' ನೋ.

ಡಾವು, ಡಾವ್, ಡಾವೆ (ನಾ). ೧. ಹೊಟ್ಟೆಕಿಚ್ಚು ; ಡಂಕಂ ; ದ್ವೇಷ ; ವೈರ : ಆ ಹಾವು ಡಾವು ಇಟ್ಟುಕೊಂಡು ಒಂದು ವರ್ಷದ ನಂತರ ಅವನನ್ನು ಕಚ್ಚಿದೆ (ರೂಢಿ). ೨. ಕುಸ್ತಿಯಲ್ಲಿ ಒಂದು ಬಗೆಯ ಹಿಡಿತ : ಇಂತಹ ಹಿಡಿತಗಳಿಗೆ ಭಾರತ ಪ್ರತಿ ಡಾವು ಮಾಡುವಷ್ಟು ಸಾಧನೆ ಪಡೆದಿದೆ (ಎಡ್ಕಸಾ. ೦೪೮). ೩. ಆಟ ; ಕುಸ್ತಿಯಾಟ : 'ಡಾವುಪೇಚು' ಪರಾ. ೪. ಹಂಚಿಕೆ ; ಉಪಾಯ ; ಯುಕ್ತಿ : ಮುದ್ದಾಂ ಮಳ್ಳತನವನು

ಪ್ರದರ್ಶಿಸುವ ಡಾವಿನಿಂದ ನಾನೂ . . . ಅವನ ತಲೆ ಚಿಟ್ಟುಹಿಡಿಸುವಂತೆ ಬಾತವಿಸಾ ಒಕ್ಕಿಸಿದ್ದೆ (ದೀಪಹ. II, ೦೪). ಡಾವ್ : ೧. ಸಾಹೇಬರ ಡಾವ್ ಶ್ಯಾಮರಾಯರಿಗೆ ಹೊಳೆದಿತ್ತು (ದೀಪಹ. II ೩೦). ಡಾವೆ : ೧. ಕಾವಳಂ ಮರೆಗೊಂಡು ತಸ್ಕರರ್ ಬಳಿಕಿಂದು ಡಾವೆಯಿಂ ಪರಶುಧೀರಧರನಿಲ್ಲದಿಹ ಸಮಯದೊಳ್ ಪೋವಿಶಿನ್ನಾರ್ ಕಾವರೆಮ್ಮನೆಂದೊಳಗೊಳಗೆ (ಪರಶು. ೩೩-೦೪). [ ←ಹಿಂ. ಮರಾ. ಡಾವ್ ]

ಡಾವುತೀರಿಸು (ಕ್ರಿ). ಹಗೆತನವನ್ನು ಸಾಧಿಸಿಕೊಳ್ಳು ; ಮುಯ್ಯಿ ತೀರಿಸಿಕೊಳ್ಳು : (೪). [ ಡಾವು + ತೀರಿಸು ]

ಡಾವುಪೇಚು 'ಡಾವಪೇಚು' ನೋ.

ಡಾವುರ 'ಡಾವರ' ನೋ.

ಡಾವೆ 'ಡಾವು' ನೋ.

ಡಾಶೇರು (ನಾ). ಒಂದಂ ತೂಕದ ಅಳತೆ ; ಎರಡೂವರೆ ಸೇರು ; ಅಡೀಸೇರು : ವಂದು ಮಣುವಿಂಗೆ ದಡಯ ನಾಲ್ಕುಂ ಪಂಚೇರು ಭಂದದೊಳಿಂಟು ಡಾಶೇರು ಷೋಡಶಮಕ್ಕುಂ (ಧಾಶ್ಯರ. ೭೩-೭).

[ ಡಾ₀ (P ←ಹಿಂ. ಧಾಈ) + ಶೇರು₁ (<ಸೇರು₂) ]

ಡಾಹ, ದಾವು₁ (ನಾ). ೧. ಸುಡುವಿಕೆ; ದಹಿಸುವಿಕೆ : ತೋಟಿ ಯಂತೆ ಮಳಮಂ ತೋಟಿ ಬೀರ್ಚಿಸದೆ ಕೀರ್ಚನಂತೆ ಅಡಕವಂ ತೋಟಿ ನಂಬಿಸದೆ ದಾಟಿಯಂತೆ ಡಾಹಮಂ ಮಾಡಿ ಕಿಡಿಸದೆ (ಧರ್ಮಾಮೃ. ೩-೯೯). ೨. ಸೆಕೆ ; ದಗೆ; ತಾಪ : ಮನುಷ್ಯ ಲೋಕದೊಳಾದ ಸುಖಮೆಲ್ಲಂ ಡಾ[ಪಾಠಾಂ. ದಾ]ಹಕ್ಕೆ ಶೀತಲಕ್ರಿಯೆಗೆಯ್ವಂತೆ ನೋವನಾಱಿಸುವ ಸುಖಂ ಅದು ಸುಖಮೆ (ಜೀವಸಂ. ೩೦-೨೪ ವ). ೩. ನೀರಡಿಕೆ ; ಬಾಯಾರಿಕೆ. ದಾವು₁ : ೨. ಬಿಸಿಲಿನ ದಾವು ತಗ್ಗಿತ್ತು (ಹಳಮು. ೨೦).

[ <ಪ್ರಾ. ಡಾಹ./ಸಂ. ದಾಹ ]

ಡಾಹರ 'ಡಾವರ' ನೋ.

ಡಾಹಿಣಿ 'ಡಾಕಿಣಿ' ನೋ.

ಡಾಹಿಸು (ಕ್ರಿ). ದಾಹಗೊಳ್ಳು ; ಅತಿಯಾದ ತಾಪದಿಂದ ಕೂಡಿರು ; ಉತ್ಕಟವಾಗಿ ಕುದಿ : ಮೋಹ ಮದ ಸಮೂಹದಿಂದ ಡಾ[ಪಾಠಾಂ. ದಾ]ಹಿಸುತ್ತಮಿರ್ದನಯ್ಯ ದೇಹದಿಚ್ಛೆ ಹೆಚ್ಚಿ ಮಚ್ಚರಕ್ಕೆ ವೇಳೆಯಾದೆನಯ್ಯ (ಹಂಪರ. ಹ. ೫೦೦-೨೦). [ ಡಾಹ + - ಇಸು₂ ]

ಡಾಳ್₁, ಡವಳ್₁, ಡಾಲ್ವು₁, ಧವಳ, ಧಾಲು, ಧಾಳ್₁, ಧಾಳು (ನಾ). ೧. ಹೊಳಪು ; ಪ್ರಭೆ ; ಕಾಂತಿ : "ತೊಳಗು, ಬೆಳಗು . . . ಡಾಳಂ, ಪೊಗರ್, ತೊಳಪಂ, ಮಸೆ- ಈ ೧೪ ಕಾಂತಿ" (ಕಶಾಪ. ೦೦-೨೦೨) : "ಡಾಳ ಹಬೆ ಪೊಗರೆಂದೆನೆ ಕಳೆ ಪೊಳಪು . . . ಕಾಂತಿಯೆನಿಕ್ಕುಂ" (ಕಬಿಕಂ. ೦೦೦) ; ವಮಾಪೊರ್ಣಿಳೆದುವಾಕೆಯ ಡಾಳವನಾಂತ ದಿಟ್ಟಿಗಳ್ (ಕಬ್ಬಿಗಾ. ೩೩೦); ಕನಸಿನ ಸಿರಿ ಕಾರ್ಮುಗಿಲೊಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನ ಡಾಳಂ ಜನಪತಿಯ ಕೂರ್ಮೆ ಯೌನರಾತನ್ನೊಳಾಯ್ತಾ ಜನ ಸೌಖ್ಯಂ (ದಶಕು. ೫-೩೪) ; ಮಿಸುನಿಯೋಲೆಯ ಡಾ[ಪಾಠಾಂ. ಧಾ]ಳ ಕದಪಿನೊಳೆಸೆಯೆ (ನಳಚ. ೩-೭); ವ್ಯಾಲೋಲ ಖಡ್ಗಗಳ ಡಾಳದಿಂ ಮೇಳದಿಂ . . . ಪಡೆ ಪಡೆಪಿನಿಂ ನಡೆದುದು (ಜಿಂಪು. ೪೭-೦೦). ೨. ಅಂದ ; ಚಂದ ; ಸೊಬಗು : "ಡಾಳಮನೆ ಲಾವಣ್ಯಂ" (ಧಾರಿನಿ. ೩೩) ; ಡಾಳದ ಕಣ್ಣ ನೀರ್ವನಿಗಳುಂ ಪೊಸಮುತ್ತುಗಳುಂ ನಭೋಂತದೊಳ್ ಸಾಲಿಡಲ್ (ದಶಕು. ೦೨-೦೮೬) ; ತೋರಮೊಲೆಗಳ ಡಾಳದಲಿ ಮಣಿಹಾರ ಮೆಱೆಯಲು (ಜೀವಂಚ. ೮-೯); ಥಳಥಳಿಸುವೆಳೆಯಾನ ಡಾಳವ ಗೆಲುವ ಕಂಗಳ (ಅಕ್ರೂರ. ೯-೨೪). ೩. ರೀತಿ ; ಕ್ರಮ ; ಪದ್ಧತಿ ; ತರಹ : ಕಾಲದೇಶಾಗಮದ ನಿಗಮದ ಡಾಳವಱಿದ್ಯೆಹಿಕಪರತ್ರವಿಟಾಳಿಸದೆ ನಡೆ ಕಂದ (ಕುವ್ಯಾಸ. ೦೫-೬೨). ೪. ಕುಂದು ; ಹಾನಿ ; ಭಂಗ : ಅಜ್ಜ ಮುತ್ತರ ತೆಱದಿ ನಡತೆಗಳೆಳ್ಳವಿರದೊಜ್ಜರದೊಲು ನಡೆತರು ತೆಜ್ಜ ಸಾಸಿರ ಬಿದ್ದು ಡಾಳಗಳಾದವರಿಗೆ (ಬಿಜ್ಜ. ೬೭-೦೭). ೫. ಉಜ್ಜಿ ಹೊಳಪುಗೊಳಿಸುವುದು. 'ಡಾಳವಿಡಿ' ಪರಾ. ೬. ತೋರಿಕೆ ; ಥಳುಕು ; ಠಕ್ಕು. 'ಡಾಳಿ' ಪರಾ. ೭. ಥಳುಕಿನವನು ; ಡಾಂಭಿಕ ; ಮೋಸಗಾರ; ವಂಚಕ: ಕುಡದೆ ಕಾಡುವವಂ ರಸಬೋನವತ್ತು ಮಾಳಾಗೆ ಡಾ[ಪಾಠಾಂ. ಕಾ, ಗಾ]ಳನಂ ನೆಗವು ಟಕ್ಕಿವನಂ ತುಟಿ (ಲೀಲಾವ. ೨-೦೦೭) ; ಡಾಳಂಗವ್ವಯಿಸಿದುದು ಬಿಡಾಳಕ್ಕಂ ಪಾಲ ಕಾಪನತ್ರವೋಲಾಯ್ತೆಂದೀ ಲೋಕ ಮು ಲಿ ಯ ನೀತಿನುತಾಲೋಕನರಹಿತನಹಿತಚರಿತದೆ ನೆಗಟ್ಟಂ (ಪಾರ್ಶ್ವಪು. ೬-೦೦೨). ಡವಳ್₁ : ೭. ಧಾಳರನು ಡ[ಪಾಠಾಂ. ಧ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ಡಾಲ್ವು₁: ೧ 'ಡಾಲುಹೊಡೆ' ಪರಾ. ಧವಳ : ಮೇಲಿನ 'ಕುವ್ಯಾಗ. ೫-೧೧'ರ ಪ್ರಯೋಗದ ಪಾಠಾಂತರವನ್ನು ನೋಡಿ. ಧಾಲು₁: ೮. [ಸಂಗೀತ] ದಾಟುಸ್ವರಗಳ ಪ್ರಯೋಗ : ಧಾಲು – ಸಪಾ, ಸಮಾ, ಸಗಾ, ಸರೀ ಎಂದು ಅನುಕ್ರಮಿಸುವ ದಾಟುಸ್ವರಗಳ ಪ್ರಯೋಗ (ಸಂಗೀತಂ. ೨೮). ಧಾಳ್₁: ೧. ಸರ್ವಾಂಗದೊಳ್ ಧಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡುವಂತಾಡಿದರ್ (ಪಾರ್ಶ್ವಪು. ೦೯-೦೩೪) : ಎಳೆಯ ಮುತ್ತಿನ ಧಾಳವನು ಮುಕ್ಕುಳಿಸಿದಂಗಚ್ಛವಿಯ (ಕುವ್ಯಾಅ. ೬-೭೩) ; ಭ್ರೂಲತೆಯ ಲಾವಣ್ಯನಿಧಿಯ ವಿಶಾಲ ಭಾಳದ ಧಾಳದಲಿ (ವಿಠಲಗ. ೨-೦-೨೬); ಸುಲಿಪಲ್ಲ ಧಾಳದಿ ಕರ್ಣಕುಂಡಲದಿ (ಕಂಕಣಾ. ೫-೬೭); ಚೆಲ್ವ ಕಂಗಳ ಧಾಳ (ಅಂಬಿಕಾ. ೩೯-೬೦). ೭. ಧಾಳರನು ಡ[ಪಾಠಾಂ. ಧ]ವಳರನು ಠಕ್ಕಿನ ಠೌಳಿಕಾಱರನು (ಕುವ್ಯಾಗ. ೫-೦೦). ೯. ಅಶುಚಿವಂತ ; ಶೀಲಗೇಡಿ (?) : ಖುಳರಿಲ್ಲ ಜಾಣರುಂಟು ಗೆಳ್ವರಿಲ್ಲ ಒಳ್ಳರುಂಟು ಧಾಳರಿಲ್ಲ ಶುಚಿಗಳುಂಟು ಹುಸಿವರಿಲ್ಲ ಸತ್ಯರುಂಟು (ಮುಕರ. ಹ. ೨೨೦-೨೩). ೧೦. [ನಾಟ್ಯ] ಒಂದು ಬಗೆಯ ನೃತ್ಯ: ರೂಪು ರೇಖೆ ಧಾವಣೆ ತೂಕವಣೆಯಂಕೆ ರಘುಂಕೆ ಧಾಳ ದಿಸ್ಯಾಯ ಚಂಡಣೆ ಚಳಬಳಿಕೆ ಉಲ್ಲಾಸದಚ್ಚರಿವಡೆಯ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೦೬-೬೭ ವ). ಧಾಳು : ೧. ನೂರು ಬಣ್ಣದ ಹೊಳಪನೊಳಗಾಂತು ಇದರ ತೆರವಿಂಥದೆನೆ ಮತ್ತೊಂದು ಧಾಳಿನಿಂದ ಕಂಗಳನು ಕೋರೈಸು ವಚ್ಚರಿಯ ಹೀರದಂತಿವನ ಬಗೆಗೆನ್ನ ಬಗೆಯಚ್ಚರಿಪುದು (ಗೋಕಾಸ್ವಿ. ೨೦-೨) : ಚಂದಕೆ ಮರುಳಾಗೆ ಕಣ್ಣುಮುಚ್ಚಿಸಿತವ್ವ ನಿನ್ನ ಪರಿವಾರದ ಸುರರ ಧಾಳು (ಹಂಪರ. ೦೬೩-೦೬).

ಡಾಳಾಗು, ಧಾಳವಾಗು, ಧಾಳಾಗು = ೧. ಉಜ್ವಲವಾಗು ; ಪ್ರಕಾಶಮಾನವಾಗು; ಚೆನ್ನಾಗಿ ಪ್ರಕಾಶಿಸು;ಪ್ರಜ್ವಲಿಸು: ದೀಪಿಗೆಯು ಡಾಳಾಗಿ ಉರಿಯುತ್ತಿರಲಿಕ್ಕೆ ಬೇಕು (ಮುಂಬಯಿ. ೫-೦೬೨) ; ಬರಬರುತ್ತ ಆ ಬೆಳಕು ಧಾಳವಾಗಿ ಖಿಂಡಿಯಿಂದ ಹೊರಚೆಲ್ಲಿ (ಗೀಚುಗ. ೦೦) ; ಅವನ ಕಣ್ಣಲ್ಲಿ ಸತ್ಯದ, ಬಂಧುತ್ವದ ದಿವ್ಯಜ್ಯೋತಿಯೊಂದು 'ಧಾಳಾಗಿ' ಉರಿಯುತ್ತಿತ್ತು (ಬರಹಾ. ೯೪); ವಿಶ್ವವಿದ್ಯಾನಿಲಯದ ಕೋಣೆಯಲ್ಲಿ ಇನ್ನೂ ದೀಪ ಧಾಳಾಗಿ ಉರಿಯುತ್ತಿದ್ದುದು . . . ಕಾಣುತ್ತಿತ್ತು (ದೀಪಹ. II, ೦೦೬). ೨. ಎದ್ದು ಕಾಣಂ; ಸುಸ್ಪಷ್ಟವಾಗು : ಭವ್ಯಮಂದಿರಗಳು ಮದರಾಸಿನಲ್ಲಿ ಬೀಚಿನ ಹತ್ತಿರವೇ ಧಾಳವಾಗಿ ಕಾಣುತ್ತಿವೆ (ಹೂಅರ. ೦೬) ; ಕೊರಳಿಗೆ ವಿಭೂತಿಯನ್ನು ಬಳಿದು ಧಾಳವಾಗಿ ಕುಂಕುಮ ಲೇಪಿಸಿದರು (ಮುಕ್ತಮು. ೩೩೬).

[ ದೇ.೩ ತೆಲು. ಡಾಲ./ಮರಾ. ಧಾಳ ]

ಡಾಳ್₂ 'ಡಾಲ್ವು₂' ನೋ.

ಡಾಳ್₃ (ನಾ). (ಚಾಮರ ಮೊದಲಾದವನ್ನು) ಬೀಸುವಿಕೆ ; ಗಾಳಿ ಹಾಕುವಿಕೆ.

ಡಾಳಹಾಕು = ಬೀಸು ; ಇಕ್ಕು : ಡಾಳಹಾಕುವ ಚಾಮರದ ಪೊಡೆವ ಡೌಡೆಯ (ಹಮ್ಮೀರ. ೩-೩೩ ವ).

[ <ಪ್ರಾ. ಧಾಲ ]

**ಡಾಳಕ, ಢಾಳಕ** (ನಾ). ೧. ತೋರಿಕೆಯ ನಡೆನುಡಿಯುಳ್ಳವನು ; ಡಾಂಭಿಕ ; ಮೋಸಗಾರ : ಬೋಳೆಯನೆಂದು ನಂಬಬೇಡ ಡಾ[ಪಾಠಾಂ. ಢಾ]ಳಕನವನು ಜಗದ ಬನ್ನಾಣಿ (ಮುಹಾದೇ. ೫. ೦೦೯-೨೪೭) : ನೆಟ್ ಡಾಳಕನಂ ತಗುಳ್ದು ಕೂರ್ತಂಗಜಕೇಳಿಯೊಳ್ ತೊಡರ್ದು (ಮನ್ಮವಿ. ೭-೩) : ಮಾಲಿಯನೊಬ್ಬಗಿಕ್ಕಿದಳೆಂದರಾ ಹೆಣ್ಣ ಮೇಲಾಸೆ ನೃಪಗಾಗದೆಂದು ಡಾಳಕನಾ ಮಂತ್ರಿ ಮತ್ತೊಂದು ತಂತ್ರದಿ ಚಾಳಿಸಿ ಮಡಿದನೇನೆಂಬೆ (ಭರತ. ೩೭-೩). ೨. ಕಪಟ ; ವಂಚನೆ ; ಮೋಸ. 'ಡಾಳಕವಂತ' ಪರಾ. **ಢಾಳಕ :** ೧. ಢಾಳಕರಿಗರ್ಥಾರ್ಥಿಗಳಿಗೆ ಪೇಳದಿರನುಭವಾವ್ಯುತವ (ಅಮೃತ. ೦೦-೨). ೨. ನಿರುದಯವು ನಿಷ್ಠುರವು ದುರುಳತ್ವ ಢಾಳಕವು (ಸುಗುಣಿ. ೦೨-೨). [ ಡಾಳ್₁ + – ಕ₃ ]

**ಡಾಳಕತನ, ಢಾಳಕತನ** (ನಾ). ಥಳುಕು ; ವಂಚನೆ ; ಮೋಸ : ಕಾಳಗ ಕಿದಿರಾಗಿ ನಿಲ್ಲಲಾಱದೆ ಚಿಣ್ಣ ಡಾಳಕತನದೊಳೋಡುವವನು (ಬಸವಪು. ೧೨-೩೧). **ಢಾಳಕತನ :** ನಾವು ನಮ್ಮಯ ಸೇವಕಾಂಗದ ಭಾವದಿಂದಿರ ಬೇಕೆನುತ ನಾನಾ ವಿಧದ ಢಾಳಕತನಂಗಳ ನುಡಿದನಲ್ಲಮನು (ಪ್ರಭುಲೀ. ೩-೩೭) : ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂ ಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩) : ಠಕ್ಕು ಢಾಳಕತನ ಬಟುಬೋಸರಣೆ ಬೇಳಕ್ಕೆ ವ್ಯಸಿಕಗಳೆಂಬಿವಕೆ ಸಿಕ್ಕುವರೇ ಕೋವಿದರು (ಕುಂದಾಸಾಂ. ೨೮-೭೦). [ ಡಾಳಕ + – ತನ ]

**ಡಾಳಕವಂತ** (ನಾ). ತೋರಿಕೆಯ ನಡೆನುಡಿಯುಳ್ಳವನು ; ಮೋಸಗಾರ ; ವಂಚಕ : ನೇಣು ಕೊಂದಿತ್ತಂದಾ ದಾಯಗಾರಿಕೆಯಲ್ಲಿ ಹೋಹ ದರ್ಶನ ಡಾಳಕವಂತಂಗೆ (ಸರ್ವವ. ೧೩೧-೭೭೦). [ ಡಾಳಕ + – ವಂತ ]

**ಡಾಳಕಿ, ಢಾಳಕಿ** (ನಾ). ಗಯ್ಯಾಳಿ ; ಮೋಸಗಾತಿ : ಸಗ್ಗಂಬಡದು ಬಂದ ಪ್ರತ್ಯಕ್ಷಮಿಲ್ಲೆನಬಹುದೆ ಈ ಡಾಳಕಿ (ಸಮ್ಯಕ್ತ್ವ. ೪-೭೩). **ಢಾಳಕಿ :** ಕರ್ಕಶದಿಂ ಕಠಿಣನೆ ಯಮರಾಟ್ ಜನನಾದಿಯ ಢಾಳಕತನದಿಂ ಢಾಳಕಿಯ ದಿಟ ಮಾಯೆ (ಯೋಗಾಂವಿ. ೨-೩೩). [ ಡಾಳಕ + – ಇ₃ ]

**ಡಾಳಯಿಸು₁, ಡಾಳಯ್ಸು, ಡಾಳವಿಸು, ಡಾಳಿಸು₁, ಡಾಳ್ಯಿಸು₁, ಢಾಳವಿಸು, ಢಾಳಿಸು₁, ಢಾಳ್ಯಿಸು** (ಕ್ರಿ). ೧. ಮಿಂಚು ; ಹೊಳೆ ; ಮಿನುಗು ; ಥಳಥಳಿಸು. **ಡಾಳಯ್ಸು :** ೧. ಕದಪುಗಳು ನಿರ್ಮಳವೊದಗಿ ಡಾಳಯ್ಸು[ಪಾಠಾಂ. ಢಾಳ್ಯಿಸು]ತಿಪ್ಪವು ಲೋಲಲೋಚನೆಯ (ಬಸವಪು. ೪-೨೩). **ಡಾಳವಿಸು :** ೧. ಡಾ[ಪಾಠಾಂ. ಢಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖಪ್ರಸನ್ನತೆ (ಬಸವಪು. ೩-೨೭). **ಡಾಳಿಸು₁ :** ೧. ನೀಲದ ಸರ ಮಾಣಿಕದ ಕುಚ್ಚು ವಜ್ರದ ಮೇಲುಗೊಂಚಲು ವೈಡೂರ್ಯ ಡಾಳಿಸುತಿಹ ಬಲು ಪಸರದಂಗಡಿಗಳು ಸಾಲುಗೊಂಡೆಸೆದುವು (ಕಂಸವಿ. ೬-೬೮) : ಲೀಲೆಯಿಂ ನರಸಿಂಹನಂತ್ಯದಿದ ರತ್ನ ಡಾಳಿಪೋಲಗದ ಚಾವಡಿಗೆ (ಕಂಸವಿ. ೧೦-೦೨೩) : ಭಾಸುರ ವೇದವಮಾತೆ ಗಾಯತ್ರಿ ಡಾಳಿಸೆ ತಾಳ್ದು (ಕುಮಾಪು. ೦-೭೦). **ಡಾಳ್ಯಿಸು₁ :** ೧. ಕದಪುಗಳು . . . ಡಾಳ್ಯಿಸು[ಪಾಠಾಂ. ಡಾಳಯ್ಸು, ಢಾಳ್ಯಿಸು]ತಿಪ್ಪವು ಲೋಲಲೋಚನೆಯ (ಬಸವಪು. ೪-೨೩); ಎಳಲಿಟ್ಟು ಡಾಳ್ಯಿಸುತಿಹ ಹಾರವೆಲ್ಲವುಂ ಸಂತೋಷದಿಂ ಪರಿದು ಪಸರಿಸಲು (ವೀರಶೈಪು. ೩-೦೩-೭). **ಢಾಳವಿಸು :** ೧. ಢಾ[ಪಾಠಾಂ. ಡಾ]ಳವಿಪ ಸುಲಿಪಲ್ ಮುಗುಳ್ನಗೆ ಮೇಳವಿಸುವ ಮುಖ ಪ್ರಸನ್ನತೆ (ಬಸವಪು ೩-೨೭). **ಢಾಳಿಸು₁ :** ೧. ಶಾಲಿಯ ತೆರೆಯ ತಟ್ಟುಬ್ಬಿ ದೀವದ ಕಾಂತಿ ಢಾಳಿಸುವಂತೆ ಲೋಕದೊಳು ಆ ಲಲಿತಾಂಗನ ತನುಕಾಂತಿ ಪೊದೆದದುಕೂಲದ ಹೊಜಿಗೆ ರಂಜಿಸಿತು (ಭರತ. ೦-೪೨) : ಮೇಲಿಪ್ಪ ಚಿನ್ನದ ಕಳಶದಿಂ ಗೋಪುರ ಢಾಳಿಸಿ ತುಡುಕಿತಂಬರವ (ಕಂಸವಿ. ೭-೮೪). ೨. ಪ್ರಕಾಶಗೊಳಿಸು; ಹೊಳಪುಮಾಡು; ಬೆಳಗಿಸು : ಬಾಲಶಶಾಂಕನಂದದ ಪುಲಿಯುಗುರನು ಢಾಳಿಪ ಬಂದಿ ರಂಜಿಸಿತು (ಅಂಜನ. ೪-೪೪). ೩. ಉಜ್ಜಿ ಹರಿತವಾಗಿಸು ; ಮಸೆ ; ಸಾಣೆಹಿಡಿ : ಕುಂತದ ಧಾರೆಗಳ ಢಾಳಿಸುವ ನೆಟ್ ಸೊಪ್ಪಾದ ಹಿಲುಕಿನ ಗಱಿಯ ಕೀಲಿಸುವ . . . ವೀರಭಟರೆಷ್ಟಿದರು (ಕುಮಾರ್ಥ. ೫-೩೮). **ಢಾಳ್ಯಿಸು :** ೧. ನೀಲಗಿರಿಯೊಳಗಾಡುವ ಶಿಖಿಗಳೆರಡಾಲಿಂಗಿಸಲು ಭೂಮಿಯು ಢಾಳ್ಯಿಸುತಡರ್ದುರಿಗಳಿಂ ನಕ್ಷತ್ರಮಾಲೆ ಪಗಲೊಳೆ ತೋರ್ಪುದು (ಶೃಂಗರ. ೮೯-೩). [ ಡಾಳ್₁ + – ಇಸು₃ ]

**ಡಾಳಯಿಸು₂** 'ಡಾಳಿಸು₂' ನೋ.

**ಡಾಳಯ್ಸು** 'ಡಾಳಯಿಸು₁' ನೋ.

**ಡಾಳವಿಡಿ** (ಕ್ರಿ). ಉಜ್ಜಿ ಬೆಳಗಿಸು ; ಮೆರುಗುಕೊಡು : ಬಗೆಗೊಳಿಪ ಡಾಳವಿಡಿದಿರ್ದ ಕಟ್ಟಾಣಿಮುತ್ತಿನ ಕಂಠಮಾಲೆ (ಸೌಂದಪು. ೪-೨೨).

[ ಡಾಳ್₁ + ಪಿಡಿ₁ ]

**ಡಾಳವಿಸು** 'ಡಾಳಯಿಸು₁' ನೋ.

**ಡಾಳಾಹಿ** (ಕ್ರಿ). ಹೊಳೆಯುವ ಮೈಯನ್ನುಳ್ಳ ಹಾವು; ಕೃಷ್ಣಸರ್ಪ (?) : ಮೊಲೆಪುತ್ತುಗಳ ಬಳಿಯೊಳು ಡಾಳಾಹಿ ಕಣ್ಗೊಳಿಸದೆಯುವು ನಿಕ್ಷೇಪ ನೆಲೆಯೆಂದು ವಿಟರು ಸೆಳ್ಳುಗುರ್ಗಳಿಂ ತೋ[ ತೋ ]ಡುವರೆಳಸಿ ಗಣಿಕೆಯರ ಕುಚವ (ಗೂರ್ಜ್ಮಕ. ೨-೯೩).

[ P ಇದು 'ಡಾಳಾಹಿ'ಯ ಅಪಲಿಖಿತವಿರಬಹುದು ]

**ಡಾಳಿ₁** (ನಾ). = ಡಾಳೆ : ಪ್ರಾಣೇಶನಂ ನೆರೆದಂತೆ ಕಳುಪಿ ತತ್ ಕಾಲರತಿ ಚಿಹ್ನಮಂ ಮತ್ತೊರ್ವನೊಳ್ ಪುಸಿದು ಡಾಳಿಯೊಲಿದಿಂತಿರ್ದಳು (ಹುಪು. ೦೦-೭೪). [ ಡಾಳ್₁ + – ಇ₂ ]

**ಡಾಳಿ₂** 'ದಾಟಿ' ನೋ.

**ಡಾಳಿಂಬ** 'ದಾಳಿಂಬ' ನೋ.

**ಡಾಳಿಂಬೆ** 'ದಾಳಿಂಬ' ನೋ.

**ಡಾಳಿಂಬ್ರ** 'ದಾಳಿಂಬ' ನೋ.

**ಡಾಳಿಮ** 'ದಾಳಿಂಬ' ನೋ.

**ಡಾಳಿಸು₁** 'ಡಾಳಯಿಸು₁' ನೋ.

**ಡಾಳಿಸು₂, ಡಾಳಯಿಸು₂, ಡಾಳ್ಯಿಸು₂, ಢಾಳಯಿಸು, ಢಾಳಿಸು₂** (ಕ್ರಿ). ೧. (ಚಾಮರ, ಬೀಸಣಿಗೆ ಮುಂತಾದುವನ್ನು) ಬೀಸು ; ಗಾಳಿ ಹಾಕು : ಅಂಗಜನ್ನವಂಗೆ ಬನಮಂಬಂಗನೆ ಡಾಳಿಸುವ ಚಾರುಚಾಮರಮ ದೆನಲ್ . . . ಎಸೆದುದಲ್ಲಿ ಪೂಗಮಹೀಜಂ (ಅದ್ಭುರ. ೯-೦೬) ; ಚಕಚಕಿತಮಾಗಿ ಡಾಳಿಪ ಚಾಮರಂಗಳಿಂ (ಚನ್ನ. ೩-೩೦) : ಗಾಯತ್ರಿ ಸಾವಿತ್ರಿಯರು ರಂಜಿಸಿದರಾ ಮಹಾದೇವನೆಡಬಲದಲ್ಲಿ ಡಾಳಿಸುತ ಚಾಮರವನೆಸಕದಿಂದ (ಸೌಂದಪು. ೦-೩೩) : ನೀಲಗಿರಿಯ ಮೇಲೆ ಮುಸುಕಿದ ಸಿತಮೇಘಜಾಲವೆಂದೆನೆ ಡಾಳಿಸುವ ಮೇಲುಪ್ಪವರಗಳು ಮೆಱೆದವು (ಕುಂದಾಸಾಂ. ೪೨-೪೪) ; ಬೆರಳ ಮುದ್ರಿಕೆಯ ಹೊಳಹು ದೋಱುತ ಶುಭ್ರಚಮರವ ಡಾಳಿಸುತಲೆಮಂಗಳೆಸೆದರರ್ತಿಯಲಿ (ಕಂಸವಿ. ೮-೨೪). ೨. ಸುತ್ತಲೂ ಬೀರು ; ಹರಡು ; ವ್ಯಾಪಿಸು : ಗಾಳಿಯಲಿ ಬೆಳಕು ಬಣ್ಣಗಳಲೆಯನೊಡಸಿ ಕಣ್ಮಟ್ಟು ಮೋಹನವ ಡಾಳಿಸುವ ನಾಡು (ದ್ಯಾಶ್ರೀರಾ. ೫-೫). ೩. (ಪಗಡೆಯ ದಾಳವನ್ನು) ಬೀಸಿ ಹಾಕು; ಎಸೆ ; ಉರುಳಿಸು : ಶಾಲೋಚಿತ ಕಿತವರನನ್ಯತಾಲಯರಂ ಪೊರೆಗೆ ಕರೆದು ಪಾಬಂದವನೊಲ್ದಾಳೋಚಿಸಿ ಡಾಳಿಸಿದಂ ಸೋಲಕ್ಕಿರ್ದಕ್ಷಯುಗಳವಂ ನಳಭೂಪಂ (ನಳಚಂ. ೫೦೫). **ಡಾಳಯಿಸು₂ :** ೧. ಇಕ್ಕೆಲದಾಲವಟ್ಟಂ ಚವರ ಕುಂಚಂ ಡಾ[ಪಾಠಾಂ. ಢಾ]ಳಯಿಸೆ ಗದ್ದುಗೆಯ ಮೇಲಿಹ ಬಿಜ್ಜಳನ ಕಂಡು (ಬಸವಪು. ೬೦-೩೦) : ಡಾಳಯಿಸುತಿಹ ಕನಕ ಚಾಮರದೋಳಿ (ಕಂಕಕದಾ. ೯-೨೨). **ಡಾಳ್ಯಿಸು₂ :** ೧. ಬಾಲೆಯರು ಬಣ್ಣಿಸಿ ಚಮರವ ಡಾಳ್ಯಿಸುತ ಬಂದರು (ಶ್ರೀಶಾಂ. ೦೩-೦೮೭). **ಢಾಳಯಿಸು :** ೧. ಚವರ ಕುಂಚಂ ಢಾ[ಪಾಠಾಂ. ಡಾ]ಳಯಿಸೆ (ಬಸವಪು. ೬೦-೩೦). **ಢಾಳಿಸು₂ :** ೧. ಢಾಳಿ

ಸುವ ಚವರಿ ಸೀಗುರಿಗಳೊಗ್ಗಿನ ಕುಚುಹುಪಿಡಿದು ನಡೆದು (ಚಕಗಾ. ೬-೭೦) ; ಲೋಚನವೃತ್ತಿಗಳು ಢಾಳಿಸುತಿರ್ಪ ಚಮರಗಳೆಂಬಂತೆ ಖೇಚರ ಭೂಚರಸತಿಯರ ಕಣ್ಣ ಮರೀಚಿಯೊಪ್ಪಿದುವೀಶ್ವರಗೆ (ಶ್ರೀಪಾಂ. ೧೯-೬೦) ; ನಳಿನಮುಖಿಯರು ಚವರಗಳನೆಡಬಲದೊಳಗೆ ಢಾಳಿಸುತೆಯ್ತರಲು (ಶುರಾಸಾಂ. ೧೦-೭೦) ; ಎತ್ತುವಾರತಿ ಸೇಸೆ ಇಡುವ ನಿವಾಳಿ ಢಾಳಿಸುವ ಚಾಮರಂಗಳಿಂ (ಭರತ. ೩-೮೦): ಚಂದ್ರಾದಿತ್ಯರುಭಯಚಾಮರಗಳಂ ಪಿಡಿದು ಢಾಳಿಸೆ (ಚಿಪು. ೨-೩೦). ೪. ಅಲುಬು ; ತೊಳೆ ; ಜಾಲಾಡಿ ಹೊಳೆಯುವಂತೆ ಮಾಡು : ಅಱಿವೆಂಬ ಮೂಸೆಯೊಳಗಿಟ್ಟು ಪರಮ ಜ್ಞಾನದಿಂ ಕರಗಿಸಿ ಸುಮನವೆಂಬ ನಿರ್ಮಲೋದಕದಲ್ಲಿ ಢಾಳಿಸಿದ ಶುದ್ಧ ಸುವರ್ಣ (ಅದಪ. ೦೩೮). [ ಢಾಳ್₂ + – ಇಸು₂ ]

**ಢಾಳು** 'ಡಾಲು₂' ನೋ.

**ಡಾಳೆ, ಢಾಳೆ** (ನಾ). ಮೋಸಗಾತಿ ; ವಂಚಕಿ ; ಥಳುಕುಗಾತಿ ; ಗಯ್ಯಾಳಿ : ಮಯ್ಯನೆ ಮಾಱುವಾಕೆ ಭವವಂ ಪೇೞ್ ಮಾೞಳೇ ಸಂತೆಯೊಳ್ ಧನಕಾನಾಱನಿವಳ್ಗೆ ದೈವವೞಿಗಿನ್ನೀ ಸೂಳೆಯಂ ಡಾಳೆಯಂ (ರೀಪಾವ. ೨-೧೦೩) ; ಚಂಡಪ್ರದ್ಯೋತನೆಂಬರಸಂ ಆಕೆಯನೆೞೆದುಕೊಳ್ವೆನೆಂದು . . . ತನ್ನ ಪೆರ್ಗಡೆಗಳಂ ಡಾ[ಪಾಠಾಂ. ತಾ] ಳೆಯರಪ್ಪ ಸಖ್ಯವದ ಪೆಂಡಿರುಮಂ ಪ್ರಭಾವತಿಯಲ್ಲಿಗಟ್ಟಿ (ಆರಾಸಂ. ೨೨೭-೩೫ ಪ) ; ಆಟ ನೇಹವಂ ಮಱೆದು ಹೊಳ್ಳಿಸಿ ಬಟ್ಟವೆನೆಂಬ ಡಾಳೆಯಂ ಸುಡುವುದು ಸುಟ್ಟು ತೂಱುವುದು ತೂಱಿದ ಬೂದಿಯ ಹಿಟ್ಟುಗುಟ್ಟಿ ದೊಟ್ಟಡುವುದು (ಅನಂಪು. ೮-೫೭) ; ಕರಾನೆ . . . ದಾಂಟುವುದಿಡುಗುಡ್ಡಗಳ ಗಿರಿಗಳನಿಕ್ಕಿ ದಾಂಟುವ ಡಾಳೆಯಂದದೊಳು (ಭರತ. ೩೭-೭೫). ಢಾಳೆ: ಇಳೆಯುದು ಹೊಳ್ಳಿಸಿ ತಿಂಬ ಢಾಳೆಯಂ (ಡಾಧಪು. ೦೫-೧೦೭) ; ಪುಸಿಯಳಿಪಂ ನಿಮಿರ್ಚೆ ತಮಗಿಲ್ಲದ ದೇಂಟಮನುಂಟುಮಾಡಿ . . . ಮುಟ್ಟದ ಮುನ್ನಮೆನ್ನರಂ ದೆಸೆವಲಿಗೆಯ್ದರೇನೋ ಕಡು ಢಾಳೆಯರೊಂದಿರುಳಲ್ಲಿ ಸೂಳೆಯರ್ (ಧರ್ಮಾಪಾ. ೨-೧೦೩) ; ಮುತ್ತಿನ ಹಾರವ ಕಳ್ದರೆಂದಮಗಾಪತ್ರನೆನೆಸಿದ ಢಾಳೆಯನು ಅತ್ತಿತ್ತ ಹೋಗದಂದದಿ ಕಾದುಕೊಂಡಿರಿ (ಪ್ರಭಂಜ. ೦-೮೭೯).

[ ಡಾಳ್₁ + – ಎ₂ ]

**ಡಾಳೆವೆಂಡತಿ** (ನಾ). ಧೂರ್ತಳಾದ ಹೆಣ್ಣು ; ಹಾದರಗಿತ್ತಿ : ತೊಡಿಗೆ ಸುಸರ ಹಾರದ ಮುತ್ತಿನಂತೆ ಸರದೊಳಳವಡುವ ಡಾಳೆವೆಂಡತಿಯಂತೆ ಕೈಸನ್ನೆಯಱಿವ ಜಾತಿ ಜಾಯಿಲಂಗಳಂ (ಅನಂಪು. ೨-೩೦ ಪ).

[ ಡಾಳೆ + ವೆಂಡತಿ (<ಪೆಂಡತಿ) ]

**ಡಾಳೈಸು₁** 'ಡಾಳಯಿಸು₁' ನೋ.

**ಡಾಳೈಸು₂** 'ಡಾಳಿಸು₂' ನೋ.

**ಡಿಂಕಿಸು** (ಕ್ರಿ). (?) : ಉತ್ತರಗುಣಂಗಳವನಲ್ಪಮನಾಂ ಡಿಂಕಿಸದೆ ನೆನಪದಿಕೆ ನನಾಚಾರಂಗಳಂ (ರತ್ನಶ. ೨-೦೫) . [ ? ]

**ಡಿಂಗರ** (ನಾ). ೧. ಸೇವಕ ; ಅಡಿಯಾಳು ; ಕಿಂಕರ ; ಭಕ್ತ : ಪಾರ್ವರೆಂದೊಡೆ ಪಾಪಂ ಬಿಡೆ ಪೋಪಂತದು ಪೇೞಾ ತುಡುಗುಣಿಯೋ ಶಿವ ಗೊರವನೋ ಡಿಂಗರನೋ [ಪಾಠಾಂ. ಪೇೞೆಮದಂ] (ಸಮುಪ. ೧೧-೮೮) ; ಹರಶರಣೆಂಬಂ ಭಕ್ತರ ಕರುಣಾವೆ ಶರಣೆಂಬ ಶಿವನ ಡಿಂಗರನೆಂಬಂ ಹಿರಿಯಣ್ಣ ಸಾಮಿದೇವನ ಪರಮಾನುಜ್ಞೆಯನೆ ತಾಳ್ದಿದಂ ಮುದ್ದರಸಂ (ಶಾಚಿ. IX-1, ೨೯೭-೬೦ ; 1177) ; ಕುಲವಂಳ್ಳ ನರಂ ಪೆಱರೆಂಜಲನುಂಡುಂದೆಲ್ಲಮವನ ಡಿಂಗರನೆಂಬರು ಸಲೆಯಡಗುಂ ನಾಯೆಂಜಲ ನಲಿದಲಸದೆ ತಿಂದೆಂದು ನಾಯ ಡಿಂಗರನಲ್ತೆ (ಪಸಾರ. ೫೯೮-೧೪). ೨. ವಂಚಕ ; ಮೋಸಗಾರ; ಠಕ್ಕ. ೩. ನೀಚ ; ಅಲ್ಪಮನುಷ್ಯ ; ಕ್ಷುದ್ರ. ೪. ಬೊಜ್ಜು ದೇಹವುಳ್ಳವನು ; ದಪ್ಪವಾದ ಶರೀರವುಳ್ಳವನು ; ಸ್ಥೂಲಕಾಯ ; ಕೊಣಪ. [ ಸಂ. ]

**ಡಿಂಗರಿಗ** (ನಾ). = ಡಿಂಗರ ೧ : ನಿಮ್ಮ ನಂಬಿದ ಶರಣರ ಡಿಂಗರಿಗ ನಾನಯ್ಯ (ಬಸವ. ೪೩೪) ; ಶಿವನ ಡಿಂಗರಿಗನಡಗಿರ್ದ ಗುಹೆಯಾದು ನೋಡ (ಜಿದರ. ೦೩೩-೨೨) ; ಸಕಲಕ್ಕೆ ರಾಜಾಧಿರಾಜನಾ ತ್ರ್ಯಂಬಕಂ ತ್ರಿಪುರಾರಿಯಾತಂಗೆ ಡಿಂಗರಿಗರಂಬುಜಭವಾಚ್ಯುತ-ದ್ಯವಿಲರು (ಪದ್ಮರಾ. ೧೮-೪೦) ; ಕೊಲುವ ಮನವೇ ಬಿಸುಡು ಚಕ್ರವನೆನ್ನ ಕಾಯದಲಿ ಅಳುಕಿ ಕೊದಲು ಹೞಿದುದಾದರೆ ಬಳಿಕ ನಾ ಡಿಂಗರಿಗನಲ್ಲ (ಕುವ್ಯಾಭೀ. ೬-೪೩) ; ಡಂಗುರವ ಸಾಱೆ ಹರಿಯು ಡಿಂಗರಿಗರೆಲ್ಲರು ಭೂಮಂಡಲಕೆ ಪಾಂಡುರಂಗವಿಟ್ಠಲ ಪರದೈವವೆಂದು (ಪುರಂದ. ೦-೫೩-೦) ; ಸಂಗೀತಲೋಲ ಶಿರಿ ವಿಜಯವಿಠಲರೇಯನ ಡಿಂಗರಿಗನಾಗದೆ ಸಕಲ ಸೌಖ್ಯ ಬಾರದು (ವಿಪಾಸು. ೮೭-೦); ಇಲ್ಲದ್ದರಲ್ಲಿ ಬಾಯಿಹಾಕುವ ಊರ ಡಿಂಗರಿಗ ಅವ (ಸಂಕುಸ. ೪೩); 'ಶನಿಯ' ಎಂಬ ಅರ್ಥವಾನುಷ ಕಿಂಕರನೂ ಕಿನ್ನರವರ್ಗಕ್ಕೆ ಸೇರಿದ ಒಬ್ಬ ಅತಿಮಾನುಷ ಡಿಂಗರಿಗನೂ ಇದ್ದರು (ಬಿಗಾಳಿ. ೭).

[ ಡಿಂಗರ + – ಇಗ ]

**ಡಿಂಗಿ** (ನಾ). ದೋಣಿ ನಡೆಯಲು ಹಾಯಿಬಟ್ಟೆಯನ್ನು ಹಗ್ಗಗಳಿಂದ ಬಿಗಿಯಲು ಉಪಯೋಗಿಸುವ ಕೂವೆಮರ ; ಕೂಪಕ. 'ಡಿಂಗಿ ದೋಣಿ' ಪರಾ. [ ←ಪಾಠ. ಡಿಂಗೀ ]

**ಡಿಂಗಿದೋಣಿ** (ನಾ). ಹಾಯಿ ಕಟ್ಟಿದ ದೋಣಿ; ಕೂವೆಮರವುಳ್ಳ ದೋಣಿ : ನದಿಯ ಮಧ್ಯ ಸರಿಯಾಗಿ ಒಂದು ಡಿಂಗಿದೋಣಿ ವೇಗ ಪ್ರವಾಹದಲ್ಲಿ ಓಡುತ್ತಿದೆ (ನಿಬಂಧ. II, ೨೦೭). [ ಡಿಂಗಿ + ದೋಣಿ₂ ]

**ಡಿಂಗು₁** (ನಾ). ಒಂದು ಕ್ಷುದ್ರ ದೇವತೆ: ಗಾಡಿಗ ಡಿಂಗು [ಪಾಠಾಂ. ಬು] ಗಂಗೆ ಭಕ್ಕು ಮುಟ್ಟಿಗೆ ಹಸುರಂಬಲಿ ಮುಟ್ಟಿಗೆ ಹುರಿಬುತ್ತಿಯ ಬೇಡಿ ಮನುಷ್ಯರ ಹಿಡಿದು ಪೀಡಿಸಿ ತಮ್ಮ ಬಸುರ್ಗೆ ಕಾಣದೆ ಈಡಾಡಿದ ಕೂಳಂಬಲಿಯನಾಯ್ದು ಕುಱುಕುವ ಹೇಸಿದೈವಂಗಳ ಬೇಡಿ ಬೇಡಿ ನಿರರ್ಥಕ ಕೆಡಬೇಡ (ಬಸವ. ೫೫೭). [ ? ]

**ಡಿಂಗು₂** 'ಧಿಂಗು' ನೋ.

**ಡಿಂಡ** 'ದಿಂಡ₄' ನೋ.

**ಡಿಂಡಲ** 'ದಿಂಡ₁' ನೋ.

**ಡಿಂಡಿಗ** 'ದಿಂಡ₁' ನೋ.

**ಡಿಂಡಿಮ** (ನಾ). ೧. (ಡಿಮ್, ಡಿಮ್ ಎಂಬ ಶಬ್ದಮಾಡುವ) ಒಂದು ಬಗೆಯ ಚರ್ಮವಾದ್ಯ ; ಡಮ್ರುಡೆ : "ಡಿಂಡಿಮವೆನಲು ಮೊರೆವ ಡೌಡೆಯನಿಕ್ಕು" (ಮಂಗರಾ. ೨೪-೭); ಡಿಂಡಿಮರವದೊಳ್ ಮನವೇತಂ ಡಮನೆಚ್ಚರಿಸುತಿರ್ಪವೊಲ್ (ಕಾದಂಪೂ. ೦೪೭); ಎಱಗನ ಗಂಡ ಡಿಂಡಿಮದ ಡಂಬರವೊಪ್ಪುವುದೀ ಧರಿತ್ರಿಯೊಳ್ (ಎಕ. V, ಅರಸೀ. ೦೩೮-೩೦; 1176); ಕೋಟಿ ಡಿಂಡಿಮಗಳನು ಬಾರಿಸೆ ಗೋಟು ತುಂಬಿತು ಜಗದ ಕಿವಿಗಳ ಪಾಟಿ ಹೊಟ್ಟಿತು (ಜಾಶಿರಾ. ೨೪-೪). ೨. [ಛಂದ] ಒಂದು ವೃತ್ತದ ಹೆಸರು : (೬). [ ಸಂ. ]

**ಡಿಂಡೀರ** (ನಾ). ಕಡಲನಾಲಗೆ ; ನೊರೆ ; ಫೇನ ; ಬುರುಗು: "ಘನತರ ಫೇನಂ ಡಿಂಡೀರ ನಾಮಂ" (ಕಬ್ಬಕೋ. ೨೨-೪). "ಡಿಂಡೀರಮನೆ ಫೇನಮನೆ ನೊರೆಯುಕ್ಕು" (ಮಂಗರಾ. ೦೨೬-೦೨): "ಡಿಂಡೀರಃ, ಅಬ್ಧಿಕಫಃ, ಫೇನಃ – ಸಮುದ್ರದ ನೊರೆ" (ಶಿದ್ಯಾಂಶಿ. ೨೬೨) ; ಡಿಂಡೀರಾವಳಿ ಶಂಖ ವಲ್ಲರಿಯಿಂ . . . ವಿದ್ರುಮಂ ಚಂಡೌರ್ವಾನಲದೀಪ್ತಿಯಿಂ ದ್ವಿಗುಣಿಸುತ್ತಿರ್ಪ ಮಹಾಂಭೋಧಿಯಂ ಕಂಡು (ಜಗವಿ. ೭-೦೭) ; ಸಚರಾಚರವ್ರಾತ ತೋಱೆ ತೋಱೆಯುಡಂಗುವುವು ಡಿಂಡೀರನಿಕರದ ಪೋಲು (ನಿಭಾಗ. ೦೦-೦೪-೨೫); ಡಿಂಡೀರ ಪಿಂಡೌಘ ಮಂಜುಳೆಯಂ ಪೊಂಚಿನ ಲಂಪನಾಳ್ದ ಪೊಳೆಯಂ ಪೇಳ್ಪಣ್ಣಸಲ್ಬರ್ಕುಮೋ (ರಾಜಶೇ. ೨-೯).

[ ಸಂ. ]

**ಡಿಂಡೀರಪಾಂಡುರ** (ಗು). ನೊರೆಯಂತೆ ಬೆಳ್ಳಗಿರುವ,-ಬಿಳುಪಾದ : ನಿರವದ್ಯಾನ್ವಯನುದ್ಧೃಮುದ್ಧತ ಮಹಾಕ್ಷೀರಾಬ್ಧಿ ಡಿಂಡೀರಪಾಂಡುರಂ . . . ನೆರೆಗೊಳ್ಗಾಚಂದ್ರತಾರಂಬರಂ (ಕವಿರಾ. ೩-೨೩೬). [ ಡಿಂಡೀರ + ಪಾಂಡುರ ]

**ಡಿಂಡೀರಪಿಂಡ** (ನಾ). ನೊರೆಯ ಮುದ್ದೆ,-ಉಂಡೆ ; ಫೇನರಾಶಿ : ವಿಕಾವಳೀವಿಲಾಸಾವಹಸಿತಾವ್ಯಾವೃತ ಡಿಂಡೀರಪಿಂಡಪಾಂಡುರಂ (ಶಾಂತಿಪು. ೬-೦೩ ವ): ಕಂಡರಿಸಿ ವಳುಕಿನಿಂದಮಖಂಡಿತಶೌಚಗುಣ ಸುರನದೀಸಮಾಪ ಚಿತಂ ಡಿಂಡೀರಪಿಂಡಮೆನಿಸಿ ಕಮಂಡಲು ಸೊಗಯಿಪುದು ಬಾಳಚಂದ್ರವ್ರತಿಯಾ (ಮಲ್ಲಿಪು. ೧೧-೧೩೬). [ ಡಿಂಡೀರ + ಪಿಂಡ ]

**ಡಿಂಬ** (ಗು). ೧. ಅಲ್ಪವಾದ ; ಸಣ್ಣದಾದ. 'ಡಿಂಬಾಹವ' ಪರಾ. (ನಾ). ೨.ಮೈ ; ದೇಹ; ಶರೀರ: ಸಂಸಾರ ಮಾಯಾಪಾಶವ ಬಿಡಲೊಲ್ಲದೆ ಡಿಂಬವ ನೆಚ್ಚಿ ಕೆಟ್ಟೆಯಲ್ಲಾ ಹಂಸಾ (ಬಸವ. ೧೦-೨೫); ಕುಂತೀ ಮಕ್ಕಳಿಂದೊಡೆ ಹರಹಿಕೊಂಬಿರಿ ಡಿಂಬವೆಮ್ಮಲಿ ಜೀವವವದಿರಲಿ (ಕುಮಾ.ಭಾ. ೫-೧೮) ; ಎವೆ ವಿಡುಕದವನಿವರು ಪೀಠಾವಳಿಯೊಳಿರ್ದರು ಬಳಿಯ ಡಿಂಬದೊಳು (ಜೀವಂಧ. ೮-೬೦) ; ಕಂಬ ಮುಱಿದು ಡಿಂಬ ಬಿದ್ದು ಅಂಬರಕೆ ಹಾಱಿಹೋಯಿತು (ಪುರಂದ. ೧-೧೧೨-೬) ; ಈಸು ಪೊತ್ತೀಕೆ ಪವಡಿಸಿದನೆಂದೆಬ್ಬಿಸಲ್ ಶ್ವಾಸವಿಲ್ಲದ ಡಿಂಬವಿರೆ--ಕಂಡು (ಜಬಪು. ೬-೨೩) ; ವಿಷಯಂಗಳಿಗೆ ಕಿವಿ ಜೋತುಬಿದ್ದು ಈ ಡಿಂಬವನ್ನು ಪೋಷಿಸದಿರಲೂ ಪ್ರಾಣ (ವಿಜಾಶ್. ೪೮-೭). ೩. ಎಳೆವಯಸ್ಸಿನ ಮಗು ಅಥವಾ ಪ್ರಾಣಿ ; ಶಿಶು. ೪. ವಿಪ್ಲವ ; ದಂಗೆ ; ಲೂಟಿ. 'ಡಿಂಬಯುದ್ಧ' ಪರಾ. ೫. ಅತಿವೃಷ್ಟಿ, ಅನಾವೃಷ್ಟಿ, ಇಲಿಹೆಗ್ಗಣಗಳ ಕಾಟ, ಮಿಡಿತೆ, ಹಕ್ಕಿ ಮೊದಲಾದುವುಗಳ ಹಾವಳಿ ಮತ್ತು ಪರ ರಾಜರ ಮುತ್ತಿಗೆಗಳಿಂದಾಗುವ ತೊಂದರೆ ; ಈತಿಬಾಧೆ ; ಡಾಮರ: (ಶ). ೬. ಗೋಲಾಕಾರದ ವಸ್ತು ; ಉರುಳಿ; ಚೆಂಡು. ೭. ಮೊಟ್ಟೆ; ತತ್ತಿ. ೮. ದಿಬ್ಬ ; ತಿಟ್ಟು (?): ತಲೆ ಕಾಮನಗುಡ್ಡದ ಬೊಂಬೆಗಲ್ಲ ಮಂತ್ರು ಡಿಂಬದ ಮೇಲೆ ಬಗುತನ ಕಟ್ಟೆಗೆ ಬ (ಎಕ. III, ತಿರುಮ. ೬೩-೪೫೯; 1748). [ ಸಂ. ]

**ಡಿಂಬಯುದ್ಧ** (ನಾ). ೧. ಸಣ್ಣ ಕದನ ; ಕ್ಷುಲ್ಲಕ ಕಲಹ : "ಸಣ್ಣ ಸಣ್ಣ ಅಥವಾ ಹೊರವಳಯದಲ್ಲಿರುವ ಸೈನಿಕ ಪಂಗಡಗಳಿಗೆ ಅನಿಯತವಾಗಿ, ಮುನ್ನಿರೀಕ್ಷೆಯಿಲ್ಲದೆ, ನಡೆಯುವ ಹೋರಾಟ; ಡಿಂಬಯುದ್ಧ; ಸಣ್ಣಕಾದಾಟ, ಅಲ್ಪ ಕದನ, ಹೊಡೆದಾಟ; (ಬುದ್ಧಿವಂತಿಕೆ, ತರ್ಕ,ಮೊ. ಗಳ) ವಾಗ್ಯುದ್ಧ" (Skirmish. ಇಂಕಂವಿ.). ೨. ದಂಗೆ ; ಲೂಟಿ ; ಕೊಳ್ಳೆ. 'ಡಿಂಬಾಹವ' ಪರಾ. [ ಡಿಂಬ + ಯುದ್ಧ ]

**ಡಿಂಬಾಹವ** (ನಾ). = ಡಿಂಬಯುದ್ಧ ೨ : (ರೀಜ್). [ ಡಿಂಬ + ಆಹವ ]

**ಡಿಂಬು** (ನಾ). ೧. ಮೈ ; ದೇಹ ; ಶರೀರ : ಕುಂಭಿನಿಪತಿ ನಮ್ಮ ವಿಜಯವಿಠಲರೇಯ ಡಿಂಬಿನೊಳಗೆ ನಿಂದು ಪಾಲಿಸುವನು ನಿತ್ಯ (ವಿಜಾಸು. ೩೦-೪). ೨. ಸ್ವಲ್ಪ ಎತ್ತರವಾದ ಸ್ಥಳ ; ದಿಬ್ಬ ; ತಿಟ್ಟು : ಆ ಮಹಾ ರಭಸಕ್ಕೆ . . . ಪರ್ವತದಾ ಮಹಾಡಿಂಬಿನಲ್ಲಿ ಪಾಂಡುವಿನರಸಿ ನಡುಗಿದಳು (ಸಂಭವ ೧೫-೭೩). ೩. ದೀಪದ ಆಧಾರ ; ದೀಪವನ್ನಿಡುವ ಸಣ್ಣ ಪೀಠ : (ಶ). [ <ಸಂ. ಡಿಂಬ ]

**ಡಿಂಬೆ** (ನಾ). ಮೂಗಿನ ಹೊರಳೆಗಳ ನಡುವಿನ ಸಿಂಬೆ (?) : ತುಂಬಿದ ಕಾನಗಳಿರ ಬನ್ನಿ ರಾಯನ ತುಂಬಿದ ಬವರಿಗಳಂತೆ ಕೆಂಬಲ್ಲ ಥಾಳದಂತರಸನ ಮೂಗಿನ ಡಿಂಬೆಯಂತೆಂದು ಪಾಡಿದಳು (ಭರತ. ೧೧-೭೦). [ ? ]

**ಡಿಂಭ** (ನಾ). ೧. ಆಗ ತಾನೆ ಹುಟ್ಟಿದ ಕೂಸು ಅಥವಾ ಪ್ರಾಣಿಗಳ ಮರಿ: ಒಗರು ಚಿಗುರುಗಳುಂಡ ಪಿಕ ಡಿಂಭಗಳು ಚದುರುತ ನುಡಿವವೋಲ್ (ಅನಂತಾ. ೨-೧-೩೮). ೨. ಮೈ ; ದೇಹ ; ಶರೀರ : ಅಕ್ಕ ಮರುಳೌ ಚಿತ್ರವವಳಲಿ ಸಿಕ್ಕ ಬೇರ್ವರಿಯಾತ್ತು ಬರಿದೇ ಮಿಕ್ಕ ಡಿಂಭ[ಪಾಠಾಂ. ಬ]ಕೆ ಮದುವೆಯುಂಟೇ ಮನವ ಬೇಱರಿಸಿ (ಕುಮಾ.ವಿ. ೨-೪೬) : ಡಿಂಭದೊಳು ಶಬ್ದ ವಾಗಾದಿ ಶ್ರೋತ್ರಗಳಲ್ಲಿ ಇಂತಾಗಿ ತತ್ತ್ವೇಶರೆಲ್ಲ ತುಂಬಿಹರೊ (ಪುರಂದ. ೧-೨೧೫-೯) : ಡಿಂಭದೊಳು ಕಾಂಬುದೆಂದಸಮಾಗ್ರವೆಲ್ಲವಿದು ಕುಂಭದೊಳ ಗಡಗಿದ್ದರೂ ಅಲ್ಪವಲ್ಲ (ಮಹದೇ. ೩೭-೦). ೩. ತಿಳಿಗೇಡಿ ; ದಡ್ಡ ; ಮೂರ್ಖ. ೪. ಗರ್ಭಾಶಯ ; ಗರ್ಭಕೋಶ : ಡಿಂಭಗಳನೊಡೆದು ಬನ್ನಿ ಕಂಭಗಳನೊಡೆದುಬನ್ನಿ (ಗರಿ. ೩೩-೧೧). [ ಸಂ. ]

**ಡಿಂಭಕ** (ನಾ). = ಡಿಂಭ. [ ಸಂ. ]

**ಡಿಂಭೆ** (ನಾ). ಮಗು ; ಶಿಶು. [ ಸಂ. ಡಿಂಭಾ ]

**ಡಿಕಮಲಿ, ಡಿಕ್ಕಮಾಲೆ, ದಿಕಾಮಲಿ, ದಿಕ್ಕಾಮಲ್ಲಿ** (ನಾ). ಒಂದು ಬಗೆಯ ಮರ ಮತ್ತು ಆ ಮರದಿಂದ ತೆಗೆದ ಒಂದು ಗಂದಿಗದ್ರವ್ಯ: ಸೂಠಿ ಚವಾಳಾ ಮಣದ ಮೇಲೆ ಕಿಮ್ಮತ್ತು ಇರತಕ್ಕ ಜೀನಸಗಳು ೧ ಅಕ್ಕಲಕಾರ . . . ಡಿಕಮಲಿ (ಕಾರಿಂಗ) (ಮುಂಬವ್ಯಾ. ೬೨೫). **ಡಿಕ್ಕಮಾಲೆ:** ಕಡಲೆಕಾಳಿನಷ್ಟು ಡಿಕ್ಕಮಾಲೆಯನ್ನು ಹಾಲಲ್ಲಿ ತೇದು ಕುಡಿಸುವುದು (ಬುಣಮು. ೮). **ದಿಕಾಮಲಿ :** ಬಿಕ್ಕಿಗಿಡ, ದಿಕಾಮಲಿ, ಕಂಬಿಮೇಣ (ಮೈಶಿಗಿ. ೩೮-೭೬೦). **ದಿಕ್ಕಾಮಲ್ಲಿ :** (ಶ). [ ←ಹಿಂ. ಡಿಕಾಮಾಲೀ; ಮರಾ.ಡಿಕಾಮಾಲೀ, ಡಿಕೇಮಾಲೀ, ಡಿಂಕೇಮಾಲೀ ]

**ಡಿಕರಿ** 'ಡಿಕ್ರಿ' ನೋ.

**ಡಿಕಾವು** 'ದಿಹಾವು' ನೋ.

**ಡಿಕ್ಕಿ, ಢಿಕ್ಕಿ** (ನಾ). ೧. ತಲೆಯಿಂದ ತಲೆಯನ್ನು ತಾಟಿಸುವಿಕೆ. 'ಡಿಕ್ಕಿಹೊಡೆ' ಪರಾ. ೨. ಒಂದು ವಸ್ತುವು ಇನ್ನೊಂದು ವಸ್ತುವನ್ನು ಜೋರಾಗಿ ತಾಗುವುದು, - ಅಪ್ಪಳಿಸುವುದು, - ಘಟ್ಟಿಸುವುದು : ಮುಂಬಯಿಯಲ್ಲಿ ಇಂತಹ " ಡಿಕ್ಕಿ "ಗಳು ದಿನಾಲೂ ನೂರಾರು ಆಗುತ್ತವೆ (ಎಚಹ. ೧). ೩. (ಆಲಂ) ಮಾತಿನಲ್ಲಿ ಹೊಂದಾಣಿಕೆಯಿಲ್ಲದಿರುವುದು; ವಿರೋಧದ ಮಾತು : ಬೆಳಗಿನ ಹೇಳಿಕೆಯು ಸಂಜೆಯ ಹೇಳಿಕೆಗೆ ಡಿಕ್ಕಿಯಾಗಲೇಬೇಕು (ಹನ್ನೊಂದ. ೬೬). **ಢಿಕ್ಕಿ :** 'ಢಿಕ್ಕಿಹೊಡೆ' ಪರಾ. [ < ಡೀ ]

**ಡಿಕ್ಕಿಕೊಡು** (ಕ್ರಿ). ೧. ಜೋರಾಗಿ ತಲೆಯಿಂದ (ಇನ್ನೊಬ್ಬನ) ತಲೆಯನ್ನು ಹಾಯು,-ತಾಗು,-ತಾಟಿಸು: ಅವನು ಓಡಿಬಂದು ನನ್ನ ತಲೆಗೆ ಡಿಕ್ಕಿಕೊಟ್ಟನು (ರೂಢಿ). ೨. ಇನ್ನೊಂದು ವಸ್ತುವನ್ನು ಜೋರಾಗಿ ತಾಗು,-ಅಪ್ಪಳಿಸು,-ಘಟ್ಟಿಸು : ನೋಡ ನೋಡುತ್ತಿದ್ದಂತೆ ವಾಹನಗಳೆರಡು ಡಿಕ್ಕಿಕೊಟ್ಟು ಕೆಳಕ್ಕೆ ಉರುಳಿದವು (ರೂಢಿ).

ಡಿಕ್ಕಾಡಿಕ್ಕಿಕೊಡು (ದ್ವಿರುಕ್ತಿ) : (ಶ). [ ಡಿಕ್ಕಿ + ಕೊಡು$_1$ ]

**ಡಿಕ್ಕಿಮಾಲೆ** 'ಡಿಕಮಲಿ' ನೋ.

**ಡಿಕ್ಕಿಹೊಡಿಸು** (ಕ್ರಿ). ತಲೆಯನ್ನು ಜೋರಾಗಿ ತಾಗುವಂತೆ ಮಾಡು ; ಘಟ್ಟಿಸುವಂತೆ ಮಾಡು: ಅವರು ಸಂತೋಷದಿಂದ ಆಡುತ್ತಿದ್ದಾಗ . . . ಜುಟ್ಟುಹಿಡಿದು ತಂದು ತಲೆತಲೆಗೆ ಡಿಕ್ಕಿಹೊಡಿಸುವನು (ವಚಭಾ. ೧೬). [ ಡಿಕ್ಕಿ + ಹೊಡಿಸು (<ಪೊಡೆಯಿಸು) ]

**ಡಿಕ್ಕಿಹೊಡೆ, ಢಿಕ್ಕಿಹೊಡೆ** (ಕ್ರಿ). ೧. = ಡಿಕ್ಕಿಕೊಡು ೧. 'ಡಿಕ್ಕಿಹೊಡಿಸು' ಪರಾ. ೨. = ಡಿಕ್ಕಿಕೊಡು ೨: ಒಂದು ದಿನ ಓದುತ್ತ ಹೋಗುತ್ತಿರುವಾಗ ದಾರಿಯಲ್ಲಿನ ಲೈಟು ಕಂಬಕ್ಕೆ ಡಿಕ್ಕಿ ಹೊಡೆದು ಹಣೆಯಲ್ಲಿ ಬೋರೆ ಬರಿಸಿಕೊಂಡ (ಶಾಲಮ. ೨೧೮) ; ನನ್ನ ಮುಖ ನೋಡ್ತಾ ಬಂದರೆ ಯಾರಿಗಾದರೂ ಡಿಕ್ಕಿಹೊಡೆಯುತ್ತೀರ (ದೂಟಟ್ಟ. ೪೪). **ಢಿಕ್ಕಿಹೊಡೆ :** ೧. ಢಿಕ್ಕಿಹೊಡೆದೆನು ಪಂಜರದ ಕಂಭ ಮಾಡಕ್ಕೆ (ನವ್ಯಧ್ಯ. ೮೫). ೨. ಮೇಲ್ವಾಯ್ದುದಟ್ಲಾಂಟಿಕಾಂಭೋಧಿ ಪೆಸಿಫಿಕಂಬುಧಿಯೊಡನೆ ಢಿಕ್ಕಿಹೊಡೆದುಕ್ಕಿ (ಶ್ರೀರಾಮಾ. ೧೬೫-೩೫೭). [ ಡಿಕ್ಕಿ + ಹೊಡೆ$_1$ (<ಪೊಡೆ$_1$) ]

**ಡಿಕ್ರಿ, ಡಿಕರಿ** (ನಾ). (ನ್ಯಾಯಾಲಯದ) ತೀರ್ಪು,- ತೀರ್ಮಾನ : ಆದರೆ ಡಿಕ್ರಿಯು ಬೆಂಚಿನ ೩ ಜನ ಮೆಂಬರ ಹೆಸರಿನಲ್ಲಿಯೂ ಕೊಡಲ್ಪಡ ತಕ್ಕದ್ದು (ಗ್ರಾಮಾಕ. ೧೮). ಅಂತೂ ಕೋರ್ಟಿನಲ್ಲಿ ನಾಡಿದ್ದು ಅದು ಡಿಕ್ರೀ ಆಗಿಬಿಟ್ಟರೆ, ನನ್ನ ಹಣ ಪುನಃ ಸೆಟ್ಟಿ ಪೆಟ್ಟಿಗೇಲಿ ಸುರಕ್ಷಿತವಾಗಿರುತ್ತೆ (ಮಾಂಗಲ್ಯ. ೪೪); ಕೋರ್ಟಿನಲ್ಲಿ ವ್ಯಾಜ್ಯಮಾಡಿ ಡಿಕ್ರಿಮಾಡಿ ಸಾಲಿಗನ ಸರ್ವಸ್ವವನ್ನು ಸುಲಿದುಬಿಡುತ್ತಾರೆ (ಕು ರು ಕಾ. ೩೪) ; ಕೋರ್ಟಿನಲ್ಲಿ ವಿವಾಹವಿಚ್ಛೇದನವಾಗುವಂತೆ ಅರ್ಜಿದಾರರ ಪರ ಡಿಕ್ರಿ ಬಗ್ಗೆ ಪ್ರಾರ್ಥನೆ- ಅಂತ ಅರ್ಜಿಯಲ್ಲಿದೆ. (ಐಕಾಂಗಿ. ೨೦೪). **ಡಿಕರಿ :** ಮೋಸದಿಂದ ತನಗೆ ಬರಬೇಕಾಗಿಲ್ಲದ ಹಣಕ್ಕೆ ಡಿಕರಿ ಆಗುವಂತೆ ಮಾಡಿದರೂ (ಗ್ರಾಮಾಕ. ೬೪).

[ ←ಇಂ. Decree ]

**ಡಿಕ್ರಿದಾರ** (ನಾ). (ನ್ಯಾಯಸ್ಥಾನದಲ್ಲಿ) ತನ್ನ ಕಡೆಗೆ ತೀರ್ಪನ್ನು ಪಡೆದಿರುವ ವ್ಯಕ್ತಿ : ಸದರೀ ಸ್ವತ್ತನ್ನು ಹಿಡಿದು ಡಿಕ್ರೀದಾರನಿಗೆ ಒಪ್ಪಿಸು ವುದರ ಮೂಲಕ ಡಿಕ್ರಿಯನ್ನು ಜಾರಿಮಾಡಬಹುದು (ಗ್ರಾಮಾಕ. ೩೩).

[ ಡಿಕ್ರಿ + - ದಾರ$_4$ ]

**ಡಿಗರು** 'ದಿಗರು' ನೋ.

**ಡಿಗುರು** (ನಾ). ಸ್ತ್ರೀಯ ಜನನೇಂದ್ರಿಯ ; ಯೋನಿ : (+).

[<ಡೊಗರು ]

**ಡಿಗ್ರಿ** (ನಾ). ೧. (ಉಷ್ಣಮಾಪಕಯಂತ್ರದಲ್ಲಿ ಅಳೆಯುವ) ಉಷ್ಣದ ಅಳತೆ,-ಮಾನ : ನನ್ನ ತಮ್ಮನಿಗೆ ನೂರೆರಡು ಡಿಗ್ರಿ ಜ್ವರವಿದೆಯೆಂದು ಡಾಕ್ಟರು ಹೇಳಿದರು (ಮಧ್ಯಮ. ೧೬೩); ಜ್ವರ ಅಪರೂಪವಾಗಿ ೧೧೩ ಡಿಗ್ರಿಗಳಿಗಿಂತ ಹೆಚ್ಚಾಗಿ ಹೋಗುತ್ತದೆ (ಕಂರೋ. ೪೨). ೨. [ಗಣಿತ] ಕೋನಮಾನ ; ಅಳತೆ ; ವೃತ್ತಪರಿಧಿಯ $\frac{೧}{೩೬೦}$ ನೆಯ ಭಾಗ : ಅವುಗಳ ಮೇಲೆ ಅಕ್ಷಾಂಶಗಳಂತೆ ಗುರುತು ಮಾಡಿರುವ ರೇಖೆಗಳು ಆಯಾ ಭಾಗಗಳ 'ಡಿಗ್ರಿ'ಯನ್ನು ಸೂಚಿಸುತ್ತವೆ (ಸೌಂದರ. ೦೮). ೩. ವಿಶ್ವವಿದ್ಯಾ ನಿಲಯಗಳು ಕೊಡುವ ಪಾಂಡಿತ್ಯಪದವಿ; ವಿದ್ಯಾಪ್ರಶಸ್ತಿ: ನಮ್ಮ ಹುಡುಗ ಕಾಲೇಜಿನಲ್ಲಿ ಓದಿ ಡಿಗ್ರಿ ಪಡೆದಿದ್ದಾನೆ (ರೂಢಿ). [←ಇಂ. Degree]

**ಡಿಟ್ಟಂ ಜಮಾಬಂದಿ, ದಿಟ್ಟಂಜಮಾಬಂದಿ** (ನಾ). "ಹುಜೂರು ಜಮಾ ಬಂದಿಗೆ ಮುನ್ನ ತಾಲ್ಲೋಕು ಅಮಲ್ದಾರರು (ತಹಸೀಲ್ದಾರರು) ಪೂರ್ವಭಾವಿಯಾದ ಲೆಕ್ಕಗಳ ತನಿಖೆಮಾಡಿ ಹುಜೂರು ಜಮಾಬಂದಿ ಲೆಕ್ಕಗಳನ್ನು ತಯಾರಿಸುವುದು" (ನನ್ನೂರು. ಕೋಶ) : ಡಿಟ್ಟಂ ಜಮಾ ಬಂದಿಯಲ್ಲಿ ಮತ್ತು ಹುಜೂರು ಜಮಾಬಂದಿಯಲ್ಲಿ ಎಲ್ಲಾ ಶಾನು ಭೋಗರ ಲೆಕ್ಕ ಚೆಕ್ಕಾದರೂ ನನ್ನೂರಿನ ಲೆಕ್ಕ ಇನ್ನೂ ಬಾಕಿ (ನನ್ನೂರು. ೧೩೨). **ದಿಟ್ಟಂಜಮಾಬಂದಿ:** ಚುಂಚನಕಟ್ಟೆ ಜಾತ್ರೆ, ಸ್ಪಾರ್ಕ್ಸ್ ಸಾಹೇಬರ ಆಗಮನ, ಕಸಬ ಹೋಬಳಿ ದಿಟ್ಟಂಜಮಾಬಂದಿ, ಇವುಗಳೆಲ್ಲಾ ಮುಗಿದ ಮೇಲೆ ನಾನು ಸಾಲಿಗ್ರಾಮಕ್ಕೆ ಹೋದೆ (ಕಲಿಸಿ. ೦೫೧)

[ ಡಿಟ್ಟಂ$_9$ + ಜಮಾಬಂದಿ ]

**ಡಿತ್ಥ** (ನಾ). ೧. ಮರದಿಂದ ಮಾಡಿದ ಆನೆ ; ಮರದಾನೆ. ೨. ಒಂದು ಸಂಜ್ಞಾಶಬ್ದ; ಒಬ್ಬ ವ್ಯಕ್ತಿಯನ್ನು ಕುರಿತು ಹೇಳುವ, ಅವ್ಯುತ್ಪನ್ನ ವಾದ ಸಂಕೇತ ಶಬ್ದ: ಇವನು ಹೋಗುವವನು ಇವನು ಡಿತ್ಥನು ಎಂಬ ಅನುಭವಗಳಿಗೆ ಅನುಸಾರವಾಗಿ ಕ್ರಮವಾಗಿ ಜಾತಿವಿಕಲ್ಪ, ದ್ರವ್ಯವಿಕಲ್ಪ, ಗುಣವಿಕಲ್ಪ, ಕ್ರಿಯಾವಿಕಲ್ಪ ಮತ್ತು ನಾಮವಿಕಲ್ಪ ಎಂದು ಐದು ವಿಧ (ಭಾತತ್ತ್ವ. ೩೮೬). [ ಸಂ. ]

**ಡಿಪೊ** (ನಾ). (ಮಾರಲಿರುವ) ವಸ್ತುಗಳನ್ನು ಸಂಗ್ರಹಿಸಿರುವ ಮಳಿಗೆ,- ಉಗ್ರಾಣ : ರೇಷನ್ ಡಿಪೋಗಳಲ್ಲಿನ ಜನಸಂದಣಿಯಂತೆ ಜನಗಳ ನೂಕು ನುಗ್ಗಲು ನೋಡಿದರೆ ನಮ್ಮ ಎದೆ ಒಡೆದು ಚೂರುಚೂರಾಗುತ್ತದ (ಸಾಡಿಗೇ. ೩೧). [ ←ಇಂ. Depot ]

**ಡಿಫ್ತೀರಿಯ** (ನಾ). (ಸಾಮಾನ್ಯವಾಗಿ ಮಕ್ಕಳಿಗೆ ಬರುವ) ಒಂದು ಬಗೆಯ ರೋಗ; ಗಳಚರ್ಮರೋಗ; ಲೋಳೆ ಸಂಕೋಲೆ. ೯ಗಂಟಲಿನಲ್ಲಿಯ ಶ್ಲೇಷ್ಮ ಚರ್ಮವು ಉದ್ದೀಪನಗೊಂಡು ಅದರಿಂದ ಹೊರಟ ಸ್ರಾವವು ಕೃತಕ ಚರ್ಮದಂತೆ ಪರಿವರ್ತನೆ ಹೊಂದುವ ಒಂದು ಭಯಂಕರ ವ್ಯಾಧಿ :- ಡಿಫ್ತೀರಿಯದಿಂದ ನರಳುವ ಮಕ್ಕಳಿಗೆ ಧ್ವನಿ ಬದಲಾಯಿಸಿ, ಅವು ಏನೋ ವಿಚಿತ್ರವಾಗಿ ಅಳುತ್ತವೆ (ಗೃಹವಿ. ೦೪೫) : ಡಿಫ್ತೀರಿಯ ಮತ್ತು ಟೈಫಾಯ್ಡ್‌ಗಳಂತಹ ರೋಗಗಳು ಮೊಟ್ಟಮೊದಲನೆಯ ಬಾರಿ ಕಂಡ ರೋಗಿಗಳ ಮನೆಯ ವಾತಾವರಣವನ್ನು ಪರೀಕ್ಷಿಸಬೇಕು (ಕಂರೋ. ೪). [ ←ಇಂ. Diphtheria ]

**ಡಿಮ** (ನಾ). [ಕಾವ್ಯವಿಮ] ಹತ್ತು ವಿಧವಾದ ರೂಪಕಗಳಲ್ಲೊಂದು : ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಕಾರ, ವೀಥಿ, ಅಂಕ, ಈಹಾಮೃಗ - ಎಂದು ರೂಪಕಗಳು ಹತ್ತುವಿಧ (ಸಂನಾಟ. ೨೮) ; ಡಿಮ - ಇದರ ವಸ್ತು ಪ್ರಖ್ಯಾತ ; ಮಾಯ, ಇಂದ್ರಜಾಲ, ಗ್ರಹಣ, ಯುದ್ಧಾದಿಗಳಿಂದ ತುಂಬಿರುತ್ತದೆ. (ಭಾರದ. ೫೬೨). [ ಸಂ. ]

**ಡಿಮುಕಿ** 'ಡುಮುಕ್ಕಿ' ನೋ.

**ಡಿಯ್ಯನಹಕ್ಕಿ** (ನಾ). ಒಂದು ಬಗೆಯ ಪಕ್ಷಿ ; ಟಿಟ್ಟಿಭ : "ಕೋಯಷ್ಟಿಕಃ, ಟಿಟ್ಟಿಭಕಃ - ಈ ೨ ಡಿಯ್ಯನಹಕ್ಕಿ" (ನಾಚಿರಾ. ೧೦೫).

[ ? + ಹಕ್ಕಿ$_1$ (<ಪಕ್ಕಿ$_1$) ]

**ಡಿಲ್ಲ** 'ಢಿಳ್ಳ' ನೋ.

**ಡಿಲ್ಲಿ** (ನಾ). ದಿಬ್ಬ : ಹತ್ತಿನೋಡ್ಯಾಳೇ ಡಿಲ್ಲೀಯಾ (ಹುಟ್ಟಿಹ. ೫೬). [ ? ]

**ಡಿವಿಡಿವಿ** (ನಾ). ೧. ಒಂದು ಬಗೆಯ ಮರ ; ಸುವಾಸನೆಯ ಹೂವನ್ನು ಬಿಡುವ ಒಂದು ವೃಕ್ಷ : (+). ೨. ಒಂದು ಬಗೆಯ ಸಸ್ಯ : ಸೀಮ ಅಳಲೆಕಾಯಿ, ಡಿವಿಡಿವಿ (ವೃಜೀ. ೧೫-೨೬೮). [ ? ]

**ಡಿಳ್ಳ** 'ಢಿಳ್ಳ' ನೋ.

**ಡಿಳ್ಳಯಿಸು** 'ಡಿಳ್ಳಿಸು' ನೋ.

**ಡಿಳ್ಳವಾಜು** (ಕ್ರಿ). ತಳಮಳದಿಂದ (ಎದೆ)ಹಾರು,-ಡವಡವ ಬಡಿದು ಕೊಳ್ಳು ; ಎದೆಗುಂದು : ಕಟಿಗಂದಿದಾನನಂ ರಸಮಜಿತಧರಂ ಡಿಳ್ಳ [ಪಾಠಾಂ. ಳ್ಳ]ವಾಜಿದದೆ ಬಿಸುಪಿಂದಂ ಪೊಜಪಾಯ್ತು ಸುಯ್ಗಳ್ (ವೃಷವಿ. ೨೮-೨೬). [ ಡಿಳ್ಳ (<ಢಿಳ್ಳ) + ಪಾಜು$_1$ ]

**ಡಿಳ್ಳಪೋಗು, ಡಿಳ್ಳುಹೋಗು** (ಕ್ರಿ). ಗಾಬರಿಗೊಳ್ಳು ; ಬೆದರು ; ಗಾಸಿ ಪಡು ; ಹೆದರಿಕೆಯಿಂದ ಎದೆ ಡವಡವನೆ ಬಡಿದುಕೊಳ್ಳು : ತಲ್ಲಣಿಸಿ ಹೋಗುತ ಬರುತ್ತದೆ ಡಿಳ್ಳಪೋ[ಪಾಠಾಂ. ಪಾ]ಗುತ್ತಿರನೆ ಲಕ್ಷ್ಮೀವಲ್ಲಭಂ ನಂದೀಶ್ವರನ ಪೇರುಸುರೊಳಗೆ ತೊಡಕಿ (ಬಸಪು. ೫೪-೯೦) ; ತಳ್ಳವಾಜಿಸಿ ರಾಮನ ತಂದುಕೊಡುವವನು ಡಿಳ್ಳಪೋ[ಪಾಠಾಂ. ಡಿಳ್ಳಿಯೋ]ಗದಿರೆಹೆ ಯೊಳಗೆ (ಕುರಾಸಾಂ.೨೫-೩೩). **ಡಿಳ್ಳುಹೋಗು:** ಅಳ್ಳೆದೆಯವಳು ರೂಪಾಣಿ ಯೊಬ್ಬಳು ಲಜ್ಜೆಯಿಲ್ಲದೆ ನಿನಗೆ ಎರಗಿದಳೆಂದರೆ ಈ ಪದ್ಮಿನಿ ಡಿಳ್ಳುಹೋಗು ವಳೇ (ಮೂಮಲ್ಲಿ. ೦೦೬). [ ಡಿಳ್ಳ (<ಢಿಳ್ಳ) + ಪೋಗು$_1$ ]

**ಡಿಳ್ಳಸ** (ನಾ). ದುರ್ಬಲತೆ ; ದೀನತೆ : ಕಳವಳವೊಳಗೆ ಹೊಜಿಗೆ ನವಾಯಿ ಡಿಳ್ಳಸವೊಳಗೆ ಹೊಜಗೆ ಸಘಾಡಮದ . . . ಮಹೀಶ ಹದನಿದು ನಿನ್ನ ನಂದನನ (ಕುಬ್ಬಾಸ. ೨-೧). 'ಡೊಳ್ಳಾಸ' ಪರಾ. [ <ಢಿಳ್ಳ ]

**ಡಿಳ್ಳಾಯ$_1$, ಢಿಳ್ಳಾಯ** (ನಾ). [ನಾಟ್ಯ] ಒಂದು ಬಗೆಯ ನೃತ್ಯ : ತಾಳವಟ್ಟನಂ ನುಡಿವ ಮೆಲ್ಲಡಿಗಳೊಡನೊಡನೆ ಡಿಳ್ಳಾಯದಿಂ ಡೆಂಡಣಿಸ ತೊಡಗಿತು (ಸೌಂದಪು. ೮-೦೫) ; ಡಿಳ್ಳಾಯದುರುಕಾಲರವೆಯ[ ರವದ ] ಚೆಲ್ವಡರೆ (ರೇವಣ. ೩೨-೪೮). **ಢಿಳ್ಳಾಯ:** ರಭುಂಕೆ ಥಾಳ ಢಿಳ್ಳಾಯ[ಪಾಠಾಂ. ಡಿಳ್ಳಾಯ]ಚಂಡಣೆ . . . ಉಲ್ಲಾಸದಚ್ಚರಿವಡೆಯೆ ನರ್ತಿಸುತ್ತುಮಿರೆಯುಂ (ಶಾಂತೀಶ್ವ. ೧೬-೬೬ ಪ). [ <ಸಂ. ಡಿಲ್ಲಾಯಾ ]

**ಡಿಳ್ಳಾಯ$_2$** (ನಾ). ಮೋಸಗಾರಿಕೆ ; ವಂಚಕತನ ; ಠಕ್ಕು : ನುಸುಳು ನೆರೆ ಡಿಳ್ಳಾಯು [ಪಾಠಾಂ. ಡಿಳ್ಳಾಯ್ತು, ಡಿಳ್ಳಾಸ]ವೈಸರ ಬೆಸುಗೆ ಬಿಗುಹುಳು ಕೊತ್ತು ಕಲೆಗಳ ರಸದ ವಸರವನಱಿಯಬಾರದು ಏಗಡ ಏಟರುಗಳ (ಶಬ್ದಾ.ಅ. ೧೫-೨೫). [ ? ]

**ಡಿಳ್ಳಾಯಿ** (ನಾ). = ಡಿಳ್ಳಾಯ$_1$ : ನುಣ್ದೋಳ ಡಿಳ್ಳಾಯಿಯಿಂ ಮೃದು ಹಸ್ತಾಯತದಿಂ . . . ಸಲೆ ರಾಗಮಂಜರಿ ಕರಂ ಮೇಳೈಸಿದಳ್ ಲಾಸ್ಯಮಂ (ದಕಳು. ೮-೧೬೪) ; ಪಯಪಾಡು ನಿಜ್ಜವಣಿ ಚಾಳಯ ಮುಲ್ಲಾಸಂ ತಿರುಂಪು ತಡವಿತ್ತುಡ ಮುನ್ನಯನವಿಶೇಷಂ ಡಿಳ್ಳಾ[ಪಾಠಾಂ. ಲ್ಲಾ]ಯಿಯ ಲುಳಿವುರಿ ದುಸುರಮೆಸೆವಿನಂ ನರ್ತಿಸಿದಳ್ (ಧರ್ಮಾಪ ೨-೨೬).

[ ಸಂ. ಡಿಲ್ಲಾಯಾ ]

**ಡಿಳ್ಳಿತ** (ನಾ). ಭಯಂಗೊಳಿಸಿದುದು ; ಬೆದರಿಸಿದುದಂ ; ಕುಗ್ಗಿಸಿದುದು: ಡಮರುಗಧ್ವಿತ ಡಾಮರನರ್ದಡಿಳ್ಳಿತ ತ್ರೈವಾಲಡೀಂಣಾಂಧಕ (ಪ್ರಭುಪು. ೩-೧೬೪). [ <ಢಿಳ್ಳ ? ]

**ಡಿಳ್ಳಿಸು, ಡಿಳ್ಳಯಿಸು, ಡಿಳ್ಳೈಸು, ದಿಳ್ಳಿಸು** (ಕ್ರಿ). ೧. ನಡುಗು; ಕಂಪಿಸು; ಹೆದರು; ಭಯಪಡು: ನುಣ್ಗೂರಳಂ ಕಂಡು ವಿಳಾಸದಿಂದೆ ಸರಿಯೂಯ್ತು ಳ್ಳೆಂಬ ಲಜ್ಜಾಭರಾತುರದಿಂದಂದೊಳಗೆಯ್ದು ಡಿಳ್ಳಿಸಿ ಜಲಂ ಪೊಕ್ಕಿರ್ದುದು . . . ಆ ಕಂಬು (ಚಾಧಪು. ೯-೭೦) ; ಡಿಳ್ಳಿಸಿದವಂ ಸ್ಖಲಿತನಾ ಪ್ರಸ್ಯಂದನಕ್ಕು (ಮಂಗರಾ. ೮೯-೩೯); ಕಳ್ಳನೊಳಗು ಡಿಳ್ಳಿಸಿ ಸರಿಯಲಾವ ಕಡೆಯೊಳು ಪೋಪ ಪಾಯವಟ್ಟೆಗಳಱಿಯದೆ (ಸಿಂಗಿರಾ. ೧೦-೧೨) ; ಜಲ್ಲಿದುಂಬಿಗಳ ಝುಂಕಾರಕ್ಕೆ ಮುನಿಜನ ಡಿಳ್ಳಿಸಿತೇನ ಹೇಳುವೆನು (ಕೋಹಕ. ೭-೧೧) ; ಹುಸಿಯಲ್ಲ ನನ್ನನಾಗಿನಿಸಪ್ಪುವಾಗ ಡಿಳ್ಳಿಸಿತೆದೆ ಜುಮ್ಮನೊಸರಿಸಿ (ಭರತ. ೯-೧೧೧). ೨. ಭಯದಿಂದ ನಡುಗಿಸು ; ಗಾಬರಿಗೊಳಿಸು ; ಎದೆಗುಂದಿಸು ; ಗಾಸಿ ಪಡಿಸು : ದಿಗಿಲು ಡಿಳ್ಳಿಸಿಯನ್ನ ಚಿಕ್ಕದೇವನೃಪನ ಬಗೆಯಲಿ ತಾಳ್ದ ಶ್ರೀರಂಗ ಬಲ್ಲಹನನಗಲದೆ ನೆರೆದಿರೆಂದವೃದಿಃ ಹದನ (ಮುದಿಕಾ. VI, ೧೬೫ ಶೃಂಗಾರ ಸೂಕ್ತ್ಯುದಾಹರಣ). ೩. ದುರ್ಬಲಗೊಳಿಸು;ಶಕ್ತಿಹೀನವಾಗಿಸು; ಕುಗ್ಗಿಸು. **ಡಿಳ್ಳಯಿಸು** : ೧. ರಾಜೇಂದ್ರ ಶಿಖಾಮಣಿ ತನ್ನಯ ಭೂರಿ ಬಳಂದೆರಸು . . . ಧಾರಿಣಿ ಡಿಳ್ಳಯಿಸುವವೊಲ್ ಬಡಗಣ ದಾರಿವಿಡಿದು ನಡೆತಂದು (ಜಯನೃಕಾ. ೯-೬). **ಡಿಳ್ಳೈಸು** : ೧. ಅವಯಕಂಬಡೆದೆನೊಂದಕಿ ನಯಂಗುಂದಿ ಕಂದಿತ್ತಲೆರ್ದ ಡಿಳ್ಳೈಸಿ ಗುರುಪದೋಚಿತ ಸಲಿಲವಂ ಅತಿಶಯದೊಳಾಂತು (ಕೊಟ್ಟೂಬ. ೧೫-೬೨). **ದಿಳ್ಳಿಸು** : ೧. ಮೇಲಣ ಲೋಕ ದಿಳ್ಳಿಸುತಿಹುದಾ ಮಹಾವ್ಯಾಳ ತುಡುಕೆ ಬಿಲ್ಲ ಕೋಲ (ನಾಗಳು. ೧೫-೬). [ ಡಿಳ್ಳ (<ಢಿಳ್ಳ) + – ಇಸು$_3$ ]

**ಡಿಳ್ಳು** 'ಢಿಳ್ಳ' ನೋ.

**ಡಿಳ್ಳುಹೋಗು** 'ಡಿಳ್ಳವೋಗು' ನೋ.

**ಡಿಳ್ಳೈಸು** 'ಡಿಳ್ಳಿಸು' ನೋ.

**ಡೀ** (ನಾ). ಒಂದು ಅನುಕರಣ ಶಬ್ದ ; ಡಿಕ್ಕಿ. 'ಡೀಕೊಡು' ಪರಾ.

**ಡೀಕಾಡು** (ನಾ). ಸೇಡನ್ನಿಟ್ಟುಕೊಳ್ಳುವುದಂ ; ಜಿದ್ದು ; ಮಾತ್ಸರ್ಯ; "ಜಿದ್ದಾಟ" (ಜಾನಕೋ. ೬೩). [ ಡೀಕು$_1$ + ಆಡು$_2$ ]

**ಡೀಕು** 'ದೇಕು$_1$' ನೋ.

**ಡೀಕೊಡು** (ಕ್ರಿ).=ಡಿಕ್ಕಿಕೊಡು ೧ : ತಗರುಗಳು ಮಹಾರಭಸದಿಂದ ತಲೆ ತಲೆಗೆ ಡೀಕೊಟ್ಟು ಕಾದಿದುವು (ಭಾರವೀ. ೧೧೮). [ ಡೀ + ಕೊಡು$_1$ ]

**ಡೀಕೊಳ್ಳು** (ಕ್ರಿ). ಡಿಕ್ಕಿಹೊಡೆಸಿಕೊಳ್ಳು ; ತಿವಿಸಿಕೊಳ್ಳು: (+).

[ ಡೀ + ಕೊಳ್ಳು$_1$ (<ಕೊಳ್$_1$) ]

**ಡೀಗು** 'ಢೀಗು' ನೋ.

**ಡೀನ** (ಗು). ೧. ಆಕಾಶದಲ್ಲಿ ಹಾರಾಡಿದ,–ಸಂಚರಿಸಿದ. (ನಾ). ೨. ಹಾರುವಿಕೆ ; ಹಾರಾಟ. [ ಸಂ. ]

**ಡೀಲ** 'ಢಿಳ್ಳ' ನೋ.

**ಡೀಲಿ** 'ಡೇಲಿಯಾ' ನೋ.

**ಡೀಲು** 'ಢಿಳ್ಳ' ನೋ.

**ಡೀಹೊಡೆ** (ಕ್ರಿ).=ಡಿಕ್ಕಿಕೊಡು : (+).

[ ಡೀ + ಹೊಡೆ$_1$ (<ಪೊಡೆ$_1$) ]

**ಡುಂಡುಕ** (ನಾ). ೧. ಎರಡು ತಲೆಯ ಹಾವು ; ಡುಂಡುಭ. ೨. ವಿಷವಿಲ್ಲದ ನೀರುಹಾವು; ಒಳ್ಳೆ: ಭಾನುತೇಜವ ರಾಹು ಕೊಂಡಲ್ಲಿ ಸೋನೆಯ ಡುಂಡುಕ ತನ್ನಯ ಕೇಣವನೆತ್ತಿದಂತೆ (ಸುಂಕಬಂ. ೩೪). ೩. "ಹೆಮ್ಮರ ; ತಿಗಡುಮರ" (ಅಚುಕ. ೮೮೪). ೪. ದುರ್ಗಸಿಂಹನ ಪಂಚತಂತ್ರದಲ್ಲಿ ಬರುವ ಒಂದಂ ತಿಗಣೆಯ ಹೆಸರು : ಡುಂಡುಕನೆಂಬ ತಿಗುಣೆ ಮಾಡಿದ ದೋಷದಿಂ ಮಂದವಿಸರ್ಪಿಣಿಯೆಂಬ ವಸ್ತ್ರಮೃಗಂ ಕೆಟ್ಟುದು (ಪಂಚತಂ. ೦೨೨-೦೬). [ ಸಂ. ]

**ಡುಂಡುಕೆ** (ನಾ). = ಡುಂಡುಕ : "ಡುಂಡುಭಃ – ಡುಂಡುಕೆ" (೬ಪರಿ. ೩೪).

[ ಸಂ. ಡುಂಡುಕ ]

**ಡುಂಡುಚಿ** (ನಾ). ಒಂದು ಬಗೆಯ ಚರ್ಮವಾದ್ಯ ; ಗೊರವರಂ ಬಾರಿಸುವ ವಾದ್ಯ; ಡಮರು: ಪಂಡಿತರುಂ ವಿವಿಧ ಕಳಾಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್ ಕಂಡರೆ ಕೇಳ್ಗೊಡೆ ಗೊರವರ ಡುಂಡುಚಿ[ಪಾಠಾಂ. ಡುಂಡುಂಚಿ]ಯೇ ಬೀದಿವಱಿಯ ಬೀರನ ಕತೆಯೇ (ಧರ್ಮನಾ. ೦-೩೬) : 'ಗೊರವರ ಡುಂಡುಚಿ' ಯು ಪುರಾತನ ಕಾಲದಿಂದ ಹೆಸರಾಗಿದೆ (ಕರ್ನಾಪೂ. ೨೬).

[ ? ]

**ಡುಂಡುಬ** (ನಾ). ಒಂದು ಬಗೆಯ ನೀರು ಹಾವು ; ಒಳ್ಳೆ : "ಡುಂಡುಬ – ವಳ್ಳೆಹಾವು" (ಅಕಾನಿ. ೧೧-೧೧). 'ಡುಂಡುಕ' ಪರಾ.

[ <ಸಂ. ಡುಂಡುಭ ]

**ಡುಂಡುಭ** (ನಾ). ೧. ಎರಡು ತಲೆಯ ಹಾವು ; ಇರ್ತಲೆಗುಯ್ಯ : ಉರಿಶಿಂಗಿ : "ರಾಜಿಲಃ, ಡುಂ[ಪಾಠಾಂ. ದುಂ]ಡುಭಃ–೨ ಎರಡು ತಲೆಗಳುಳ್ಳ ಶಿಖುಂಡಿಯೆಂಬ ಸರ್ಪಭೇದದ ಹೆಸರುಗಳು. ಎರಡುತಲೆ ಉರಿಶಿಂಗಿ" (ಸಿದ್ಧಾಂತಿ. ೬೫). ೨. ನೀರುಹಾವು ; ಒಳ್ಳೆ: "ರಾಜಿಳಃ, ಡುಂಡುಭಃ – ಈ ೨ ಒಳ್ಳೆ" (ಹಲಾಯು. ೦೦೩-೨೦) : ಒಂದು ಕೃಷ್ಣತರುಣೋರಗಂ ಬಂದು ಕೊರ್ಬಿಯಾಡುವ ಡುಂಡುಭಂಗಳಂ ಕಂಡು (ಪಂಚತಂ. ೦೨೩-೨೦). 'ದುಂಡುಭ' ಪರಾ. [ ಸಂ. ]

**ಡುಗಡುಗಿ, ಡುಗುಡುಗಿ** (ನಾ). (ಉಕ) ಆತಂಕ ; ಹೆದರಿಕೆ ; ಭೀತಿ : ನನ್ನ ವ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು (ಪ್ರೇಮಾಶ್ರ. ೨೬೬). **ಡುಗುಡುಗಿ** : ನೀ ಕಬೂಲಾಗತ್ಯೋ ಇಲ್ಲೋ ಅಂತ ನನಗ ಡುಗುಡುಗಿ ಇತ್ತು (ದೀಪಹ. II, ೦೪).

[ ←ಮರಾ. ಡುಗಡುಗೀ, ಡುಗಡುಗ ]

**ಡುಗುಡುಗಿ** 'ಡುಗಡುಗಿ' ನೋ.

**ಡುಣ್ಣ** (ನಾ). ಒಂದು ಬಗೆಯಂ ನೆಲ್ಲು,–ಬತ್ತ : ಕೊಡಗು ಮಳಲಕಂಕೆ ಹರಹಿನ ಡುಣ್ಣಗೆಳೊಡನೊಪ್ಪುತಿಹ ಬೈರಾವಳಿಯ ಕಡು ಸೊಬಗಾಂತಿಹ ಚಂದ್ರೋದಯ ಶಾಲಿಯೆಡೆವಿಡದೆಸೆದುಪರ್ತಿಯಲಿ (ಕಂನವಿ. ೩-೭೦).

[ ? ]

**ಡುಬರಿ** (ನಾ). ೧. ಮೇಲಕ್ಕೆ ದುಂಡಾಗಿ ಉಬ್ಬಿರುವ ಸ್ಥಿತಿ: (+). ೨. ಒಂಟೆಯ ಬೆನ್ನಿನಲ್ಲಿರುವ ಉಬ್ಬು,–ಮೇಲಕ್ಕೆ ಎದ್ದಿರುವ ದುಂಡಗಿರುವ ಭಾಗ : ಅರಬೀ ದೇಶದ ಒಂಟೆಗಳ ಬೆನ್ನಮೇಲೆ ಒಂದೇ ಡುಬರಿ ಇರುವುದು (ಮುಂಬಯಿ. ೩-೬೪). 'ದಂಮ್ಮು$_1$' ಪರಾ.

[ ←ಮರಾ. ಡುಬರ, ಡುಬರಾ ]

**ಡುಬಲಿ** (ಗು). ಬೊಜ್ಜು ಬೆಳೆದ ; ದಪ್ಪನಾದ ಶರೀರವುಳ್ಳ ; ಸ್ಥೂಲ ದೇಹವುಳ್ಳ : ಸುತ್ತ ಮೋರೆಯ ಜನರು ನನಗೆ ಡುಬಲಿ ಅಜ್ಜ ಎಂದು ಕರೆಯುತ್ತಾರೆ (ಅಮಿನ್ನಾ. ೩೦).

[ ←ಮರಾ. ಢಬಲಾ ]

**ಡುಬಾಯಿಸು** (ಕ್ರಿ). ೧. ನೀರಿನಲ್ಲಿ ಮುಳುಗು. ೨. ನೀರಿನಲ್ಲಿ ಮುಳುಗಿಸು. ೩. ಹಾಳುಮಾಡು ; ನಾಶಮಾಡು : (ಕ).

[ ಡುಬಾ೦ (P ←ಹಿಂ. ಡುಬಾನಾ) + – ಇಸು₃ ]

**ಡುಬುಕಿ, ಡುಮಕಿ, ಡುಮುಕಿ₂** (ನಾ). ೧. ಮುಳುಗುವಿಕೆ. ೨. (ಅಲಂ) ಸೋಲು ; ತೇರ್ಗಡೆಯಾಗದಿರುವುದು ; ಅಪಜಯ. **ಡುಮಕಿ** : ೨. ಈ ಪಂದ್ಯದಲ್ಲಿಯೂ ಶಾಲೆಗೆ ಡುಮಕಿ (ಜೂ೦). **ಡುಮುಕಿ₂** : ೨. ಪರೀಕ್ಷೆಯಲ್ಲಿ ಈ ಸಲವೂ ಡುಮುಕಿಯೇ (ಜೂ೦).

**ಡುಬುಕಿಹೊಡೆ** = (ಪರೀಕ್ಷೆ ಮುಂತಾದ ವುಗಳಲ್ಲಿ) ತೇರ್ಗಡೆಯಾಗದಿರು ; ಸೋಲು ; ಫೇಲಾಗು : ರಾಮುವಿಗೆ ತೇರ್ಗಡೆಯಾಯಿತು, ವೆಂಕಟೇಶ ಡುಬುಕಿಹೊಡೆದ (ಸಂಧ್ಯಾರಾ. ೩೩).

[ ←ಹಿಂ. ಮರಾ. ಡುಬಕೀ ]

**ಡುಬ್ಬ** 'ದುಮ್ಮ್ಯ₁' ನೋ.

**ಡುಬ್ಬಕೆತ್ತು** (ಕ್ರಿ). ೧. ಬೆನ್ನಮೇಲಿನ ಚರ್ಮವನ್ನು ಸುಲಿ. ೨. (ಅಲಂ) ಸ್ವಲ್ಪವೂ ಬಿಡುವು ಕೊಡದೆ ದಂಡಿಸಿಕೊಳ್ಳು; ದೊಜ್ಜನ್ನಿಳಿಸು : ಬಡ್ಡಿಯೊಳಗೆ ಡುಬ್ಬಾ ಕೆತ್ತುವ ಸಾವಕಾರ ಏನಿರಬಹುದು (ಮನಜ. ೩).

[ ಡುಬ್ಬ (<ದುಮ್ಮು₁) + ಕೆತ್ತು₂ ]

**ಡುಬ್ಬು** 'ದುಮ್ಮ್ಯ₁' ನೋ.

**ಡುಬ್ಬುಕ** 'ದಬ್ಬುಕ' ನೋ.

**ಡುಮಕಿ** 'ಡುಬುಕಿ' ನೋ.

**ಡುಮುಕಿ₁, ಡಿಮಕಿ** (ನಾ). ಒಂದು ಬಗೆಯ ಚರ್ಮವಾದ್ಯ : ಎಲ್ಲಿಯೋ ಒಬ್ಬ ಹಳ್ಳಿಯ ಹುಡುಗನು ಡುಮುಕಿ ಬಾರಿಸುತ್ತ ಹಾಡುತ್ತಾನೆ(ಅಳ್ಳಕಂ. ೭). 'ಟುಮುಕಿ' ಪರಾ. **ಡಿಮಕಿ** : ಬುಡಬುಡಿಕೆ, ಡಿಕ್ಕಿ, ಡಿಮಕಿ, ಝಾಲ್ರಿ, ಮದ್ದಳೆ, ಗೋಮುಖಾದಿ ವಾದ್ಯಗಳೂ ಉಂಟು (ಸಿದ್ಧಾಂತಿ. ೩೩).

[ ←ಮರಾ. ಢುಮಕೀ ]

**ಡುಮುಕಿ₂** 'ಡುಬುಕಿ' ನೋ.

**ಡುಮುಕು** (ನಾ). ದಪ್ಪ ; ಡೊಳ್ಳು : ಡುಮುಕಾದ ಗಿಡ್ಡದೇಹ ; ತೆಂಗಿನ ಕಾಯಿಗೆ ಎರಡೂ ಮಗ್ಗುಲು ಮೀಸೆ ಹೊರಟದ್ದರೆ ಹೇಗೆ ಕಾಣಬಹುದೋ ಅಂತಹ ಮೋರೆ (ಕುರಿಹಿಂ. ೬೨). 'ಟುಮುಕ' ಪರಾ.

[ ←ಮರಾ. ಢುಮಕೀ ]

**ಡುಮ್ಮ** (ನಾ). ಹೊಟ್ಟೆ ಉಬ್ಬಿದವ. 'ಡುಮ್ಮಣ್ಣ' ಪರಾ.

[ಡುಮ್ಮು (<ದುಮ್ಮು₁) + – ಅ₇ ]

**ಡುಮ್ಮಣ್ಣ** (ನಾ). ಹೊಟ್ಟೆ ದಪ್ಪಾಗಿರುವವನು : ಕೈಕಾಲು ಸಣ್ಣ ಹೊಟ್ಟೆ ಡುಮ್ಮಣ್ಣ (ಗಾದೆ). [ ಡುಮ್ಮ + ಅಣ್ಣ₁ ]

**ಡುಮ್ಮಣ್ಣಿ** (ನಾ). ದಪ್ಪನಾಗಿರುವ ಹುಡುಗಿ ; "ಲಕ್ಕ್ಮವಂತ್ಮ ಹಂಡಿಗಿ" (ಚರಣಾಕಾಂ. ೨೬೬). [ ಡುಮ್ಮಣ್ಣ + – ಇ₃ ]

**ಡುಮ್ಮಿ** 'ದುಮ್ಮ್ಯ₁' ನೋ.

**ಡುಮ್ಮು** 'ದುಮ್ಮ್ಯ₁' ನೋ.

**ಡುರಕಿ** 'ಡುಂಬುಕು' ನೋ.

**ಡುರಕಿಹಾಕು** 'ಡುರುಕುಹಾಕು' ನೋ.

**ಡುರಕಿಹೊಡೆ** (ಕ್ರಿ). = ಡುರುಕುಹಾಕು : (ಕ).

[ ಡುರಕಿ (<ಡುಂಬುಕು) + ಹೊಡೆ₁ (<ಪೊಡೆ₁) ]

**ಡುರಿಕೆ** 'ಡುಂಬುಕು' ನೋ.

**ಡುರುಕಿಡು, ಡುರ್ಕಿಡು** (ಕ್ರಿ). = ಡುರುಕುಹಾಕು : ಉಭಯಕರ್ಣಂಗಳಂ ನಿಮಿರ್ಚಿ ನೆಲನ ಪಡಿನೆ ಘ್ರಾಣಿಸುತ ಡುರುಕಿಡಲಜಾಂಡದ ಘಟಂ ನಡುಗಿತ್ತು (ನವಮೋ. ೩-೪೩). **ಡುರ್ಕಿಡು** : ಇರ್ಕಿಲದ ದಾನವರನಿಱಿ ವುತುಂ ಮುಱಿವುತುಂ ಡುರ್ಕಿಡುತ್ತಸುರರಂ ಕೆಡಪುತುಂ . . . ವೃಷಭಂ ಪ್ರಹಾರಿಸಿದನು (ಚಿಪುಂ. ೪೪-೦೬). [ ಡುರುಕು (<ಡುಂಬುಕು) + ಇಡು₁ ]

**ಡುರುಕು** 'ಡುಂಬುಕು' ನೋ.

**ಡುರುಕುಹಾಕು, ಡರಿಕೆಹಾಕು, ಡುರಂಕಿಹಾಕು, ಡುರುಂಕೆಹಾಕು** (ಕ್ರಿ). (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು) ಕರ್ಕಶ ಧ್ವನಿಮಾಡು ; ಗುಟುರುಹಾಕು : ಹಂದಿ ಡುರುಕುಹಾಕಿದ ಶಬ್ದ ಕೇಳಿಸಿತು (ನಡಿದಾ. II, ೦೦೩೪). **ಡರಿಕೆಹಾಕು** : ಕಪ್ಪೆಗಳು ಎತ್ತುಗಳಗಿಂತ ಎತ್ತರವಾಗಿ ಡರಿಕೆಹಾಕಬಹುದು (ಪ್ರಪಂಚಕೋ. ೬೩). **ಡುರಕಿಹಾಕು** : ಎಮ್ಮೆಯೊಂದು ಮೈಯಲ್ಲಿ ತುಂಬಿದ್ದ ಸೊಳ್ಳೆಗಳೊಂದಿಗೆ, ಡುರಕಿಹಾಕುತ್ತ ಒಳಗೆ ನುಗ್ಗಿಬಿಟ್ಟಿತು (ಮಣಿನಾ. ೨೬) ; ಎತ್ತುಗಳು ಡುರಕಿಹಾಕುತ್ತವೆ (ಮುಂಬಯಿ. ೩-೦೬). **ಡುರುಂಕೆಹಾಕು** : ಎರಡು ಗೂಳಿಗಳು ಸೊಕ್ಕಿಗೆ ಬಂದು ಎರಡನೇ ದನಗಳನ್ನು ಇರಿಯುತ್ತ ಡುರುಕೇಹಾಕುತ್ತ (ಮುಂಬಯಿ. ೩-೯೦). [ ಡುರುಕು (<ಡುಂಬುಕು) + ಹಾಕು (<ಪಾಯ್ಯು₁) ]

**ಡುರುಕೆ** 'ಡುಂಬುಕು' ನೋ.

**ಡುರುಂಕೆಹಾಕು** 'ಡುರುಕುಹಾಕು' ನೋ.

**ಡುರ್ಕಿಡು** 'ಡರುಂಕಿಡು' ನೋ.

**ಡುರ್ಕು** 'ಡುಂಬುಕು' ನೋ.

**ಡುಲಿ, ಡುಳಿ** (ನಾ). ಹೆಣ್ಣಾಮೆ : "ಡುಲಿ[ಪಾಠಾಂ. ಧುಳಿ]ಯೆನಲು ಹೆಣ್ಣಾಮೆಯಕ್ಕುಂ" (ಮಂಗರಾ. ೦೨೦-೮). **ಡುಳಿ** : 'ಡುಳಿರಾಜ' ಪರಾ.

[ ಸಂ. ]

**ಡುಳಿ** 'ಡುಲಿ' ನೋ.

**ಡುಳಿರಾಜ** (ನಾ). ೧. ಆಮೆಗಳ ಒಡೆಯಂ ; ಕೂರ್ಮಪತಿ ; ದೊಡ್ಡ ಆಮೆ. ೨. ವಿಷ್ಣುವಿನ ಅವತಾರಗಳಲ್ಲೊಂದಾದ ಮಹಾಕೂರ್ಮ ; ಕಮಠ : ಡುಳಿರಾಜನಿಲ್ಲದೆಡೆ ಧರಣಿ ನಿಲ್ಲುವದುಂಟೆ ನಳಿನಾಪ್ತನಿಲ್ಲದಡೆ ನಡೆವುದೇ ಜಗವು (ಜಲವಿಚ್ಚು. ೩೬). [ ಡುಳಿ ( = ಡುಲಿ) + ರಾಜ ]

**ಡುಳ್ಳಿ** (ನಾ). ವಂಚನೆ ; ಸುಳ್ಳು : ತಲ್ಲಣಿಸಿ ನಿಲಲಾಱದಾ ಖಳಂ ಕೈಯೊಡನೆ ಡುಳ್ಳಿಯಿಂದಾ ಮುನಿಪನುರುಹಿರೋಲಕ್ಷ್ಮಿಯಂ ಕೊಳ್ಳೆಗೊಂಡೆಡಹುತಂ (ಹರಿಕು. ೩೩-೨೫); ಡುಳ್ಳಿಯೋ ಸತ್ಯಮೋ ಎಂಬೆನೆ (ಹಾ.ಡುಸ್ಸ. ೩-೦೦-೦೩).

[ ? ]

**ಡುಳ್ಳಿಮನ** (ನಾ). ಸುಳ್ಳುಮನಸ್ಸು ; ಕ್ಷುದ್ರಮನ (?) : ಕಳ್ಳಕನ್ನಡಿ ಸಾಯೆ. ಡೊಳ್ಳು ಕೋಮಟಿಗನಾ ಹುಳ್ಳಿ ನಯಶೂಲಯೇರಿಪಮಯಂಬಗಾದೆ ಡುಳ್ಳಿಮನವು ಯಿದು ಪಾಪವ ಮಾಡ್ಡರೆ ಸುಳ್ಳಿಗೆ ಆತ್ಮಗೆಯೆಂದು ಪೂಹಿಸುವರು (ಚಿದಾಪ. ೦೦-೮). [ ಡುಳ್ಳಿ + ಮನ ]

**ಡುಱುಕೆ** 'ಡುಂಬುಕು' ನೋ.

**ಡುಱುಕಾರವ** (ನಾ). ಡುರುಕಿನ ಗಟ್ಟಿಯಾದ ಶಬ್ದ ; ಗುಟುರು : ತೋರ ಹೋರಿಗಳ ಡುಱುಕಾರವಂ ಗಳದ ಘಂಟಾರವಂ ಪಶುಗಳಂಬಾರವಂ (ಚಿಪುಂ. ೦೦-೦೭). [ ಡುಱುಕು + ಆರವ ]

**ಡುಂಬುಕು, ಡರಕೆ, ಡರಿಕೆ, ಡುರಕಿ, ಡುರಿಕೆ, ಡುರುಂಕು, ಡುರುಂಕೆ ಡುರ್ಕು, ಡುಱುಕೆ** (ನಾ). ೧. (ಎಮ್ಮೆ, ಗೂಳಿ, ಹಂದಿ, ಗೊಂಕರುಕಪ್ಪೆ ಮೊದಲಾದ ಪ್ರಾಣಿಗಳು ಮಾಡುವ) ಒಂದು ಬಗೆಯ ಕರ್ಕಶ ಶಬ್ದ ; ಗುಟುರು. 'ಡುಂಬುಕೆನ್' ಪರಾ. **ಡರಕೆ** : ೧. ಗೂಳಿಯ ಡರಕೆ (ಗುಟುರು) ಇವು ಶಬ್ದಾನುಕೃತಿಯೇ (ಕರ್ನಾಟ. ೩೩೪). **ಡರಿಕೆ** : ೧. 'ಡರಿಕೆಹಾಕು' ಪರಾ. **ಡುರಕಿ** : 'ಡುರುಕಿಹಾಕು' ಪರಾ. **ಡುರಿಕೆ** : ೧.

ದೂರದಿಂದ ಡುರಿಕೆ ಕೇಳಿಸಿತು ಅದು ಕಾಡುಹೋರಿಯ ಡುರಿಕೆಯಾಗಿತ್ತು (ಬಂಗಾಹೆ. ೧೮). ೨. ನಿದ್ದೆಯಲ್ಲಿ ಮೂಗಿನಿಂದ ಹೊರಡುವ ಶಬ್ದ ; ಗೊರಕೆ : ಇಬ್ಬರೂ ಮಹಾ ಕುಡುಕರು . . . ವಿದ್ಯಾಬುದ್ಧಿಗಳ ಪರಿಚಯವಾದದ್ದು ಇಲ್ಲಿಯವರೆಗೆ ಇವರ ಡುರಿಕೆ ಮಾತ್ರ (ಕುರಿಹಿಂ. ೧೦೬) ಡುರುಕು : ೧. 'ಡುರುಕಿಡು', 'ಡುರುಕುಹಾಕು' ಪರ್ಯಾ. ಡುರುಕೆ : ೧. 'ಡುರುಕೆಹಾಕು' ಪರಾ. ಡುರ್ಕು : ೧. 'ಡುರ್ಕಿಡು' ಪರಾ. ಡುಬಿಕೆ : ೧. ಬಸವನಾಗವಗಡಿಸುತೆದ್ದು ಪುಟನೆಗೆದು ಡುಬಿಕೆಯನಿಕ್ಕುತವರ ಬಲವರುತ (ಗುರುಕಾ. ೧೧-೮೮).

**ಡುಬುಕೆನ್** (ನಾ). = ಡುರುಕುಹಾಕು : ಪಂದಿ ಡುಬುಕೆಂದೊಡೆ ಕಾಂ ಡುಬುಕೆಂಬುದೆ ಮಹಾವನಕರಿಯಂ ವಿದಾರಿಸುವ ಸಿಂಹಂ (ಗಿರಿಕ. ೧-೨೯) ; ಪರಪ್ರತಿಭೆಯ ಗುಣ್ಪುಟಿಯದೆ ತಾಮುಂ ಕೆಮ್ಮಗೆ ಡುಬುಕೆಂಬುವು ಕುಕವಿಕೂಪವುಂಡೂಕಂಗಳ್ (ಅನಂಪು. ೧-೯೨) ; ಪಂದಿಯೊಂದು ಡುಬುಕೆಂದೊಡೆ ಸಿಂಗವುಂಡಲೆವುದೆ (ಕಾಮಾಕ್ಕ. ೨೩-೨೩).

[ ಡುಬುಕು + ಎನ್$_1$ ]

**ಡೂಗ** (ನಾ). ೧. ಗೂನುಬೆನ್ನಿನವನು; ಗೂನ ; ಬೆನ್ನುಬಾಗಿದವನು: ೧ನೇ ವಿಷ್ಣುವರ್ಧನನು ಇವನಿಗೆ ಕುಬ್ಜ ವಿಷ್ಣುವರ್ಧನನೆಂಬ ಹೆಸರಿದ್ದ ಕಾರಣ ಇವನು ಡೂಗನಿದ್ದಂತೆ ತೋರುತ್ತದೆ (ಕಥಾಗಿ. ೩೨೯) ;- ಪಾಲ್ಲ, ಹಲ್ಲು ಬಿದ್ದಾವೆ, ಮೇಲಾಗಿ ಡೂಗನಿದ್ದಾನೆ (ದೇಯೂವಿ. ೧೩೨). (ಗು). ೨. ಬೆನ್ನು ಬಗ್ಗಿದ ; ಗೂನುಬೆನ್ನಿನ : ಆ ಡೂಗ ಹೆಂಗಸು ಅಂದಿನಿಂದಲೂ ಇಲ್ಲಿಯೇ ಇದ್ದಾಳೆ (ಹೊಸಕ್ಕ. ೧೮೯). [ ಡೂಗು$_2$ + - ಅ$_7$ ]

**ಡೂಗು$_1$** (ಕ್ರಿ). ಬಾಗು; ವಕ್ರವಾಗು; ಗೂನಾಗು.

**ಡೂಗಿಕೊಳ್** = ಬಗ್ಗಿಕೊಳ್ಳು ; ಬೆನ್ನನ್ನು ಬಗ್ಗಿಸು : ಅವರ ತಾಯಿ ವೆಂಕಮ್ಮ ಡೂಗಿಕೊಂಡೇ ಅಲ್ಪ ಸ್ವಲ್ಪ ಕೆಲಸಮಾಡುತ್ತ ಹೊರಗೇ ಇದ್ದಳು (ದಂಬಸಾ. ೨). [ ? ]

**ಡೂಗು$_2$** (ನಾ). ಬೆನ್ನು ಬಗ್ಗಿರುವಿಕೆ ; ಗೂನು ; ಕುಬ್ಜತೆ.

**ಡೂಗಾಗು** = ಗೂನುಬೆನ್ನಿನಿಂದ ಕೂಡಿರು ; ಗೂನಾಗು : ಅದೇ ಹೆಂಗಸು ಇನ್ನೂ ಅಷ್ಟೇ ಡೂಗಾಗಿ ಬಿಲ್ಲಿನಂತೆ ಬಾಗಿ ನಡೆಯುತ್ತಿದ್ದಾಳೆ (ಹೊಸಕ್ಕ. ೧೮೮) ; ಯಾವಾಗಲೂ ಡೂಗಾಗಿ ಕೈಯೂರಿ ಇಲ್ಲವೇ ಗಾದಿ, ಗೋಡೆ ಕಂಬಳಿಗಾತು ಕುಳಿತದ್ದೇ ಕಂಡುಬರುವದು (ಬ್ರಹ್ಮಜೀ. ೨೪).

[ < ಡೂಗು$_1$ ]

**ಡೆಂಕ** 'ಡಕ್ಕೆ' ನೋ.

**ಡೆಂಕಣ** 'ಡೆಂಕಣಿ' ನೋ.

**ಡೆಂಕಣಿ, ಡೆಂಕಣ, ಡೆಂಕಣೆ, ಡೆಂಕಳಿ, ಡೇಂಕಣೆ, ಢೆಂಕಣ, ಢೆಂಕಣಿ, ಢೇಂಕಣಿ, ಢೇಂಕಣೆ** (ನಾ). ೧. ಕೋಟೆಗಾಳಗದಲ್ಲಿ ಉಪಯೋಗಿಸುತ್ತಿದ್ದ ಒಂದು ಯಂತ್ರ; ಕಲ್ಲುಗುಂಡುಗಳನ್ನು ತೂರುವ ಯಂತ್ರ: ಪುದಿದಿರ್ದಟ್ಟಳೆ ಪೆಚ್ಚದಾಳ್ವೆಟಿಯಾಗುವಾರ್ಗಿರ್ದ ಮೇಲ್ಗೊತ್ತಳಂ ಕದನಕ್ಕದ್ಭುತಮಪ್ಪ ಡೆಂಕಣಿ (ಎಕ. V, ಅರಸೀ. ೫೦೨ ; 1194) : ಎತ್ತಿಡುತಿರ್ಪ ಡೆಂಕಣಿಗಳಾರ್ದುಬಿ ಪಾಯುವ ಗೆಗ್ಗ . . . ಪೊಯ್ಯ ಲಗ್ಗೆವಱ ಬೊಬ್ಬೆಟಿವಬ್ಬರಮಾಗಳದ್ಭುತಂಬೆತ್ತುದು (ಕುಸುಮಾ. ೧೧-೪೦) : ಗೆಗ್ಗಡೆಂಕಣಿ ಗುಮ್ಮಂ ಪಡಿಗೋಂಟೆಯೆಂಬ ಬಹು ಕೋಟಾಯಂತ್ರ ಸಾಮಗ್ರಿ ತಿಂತಿಣಿಗೊಂಡಾಂತಿರೆ (ಅನಂಪು. ೧೧-೮೩); ತೂಳ್ದಿಡುವ ಡೆಂಕಣಿ ಪೊಯ್ಯುರಿಯಣ್ಣೆ ಕಾಸಿ ಸೂಸುವ ಮಳಲೆಂಬಿವೆತ್ತಲುಮಾಗುರ್ವಿಸೆ (ಪುಷ್ಪಪು. ೬-೬೪): ಸಡೆಡೆಂಕಣಿ ಸೂಸುಡೆಂಕಣಿ ಬಲುಗುಂಡನಿಡುವ ಡೆಂಕಣಿ ತೋಟಿದೆಡೆಗೆ ಸಿಡಿವಡೆಂಕಣ ರಾಯಡೆಂಕಣಿಗಳ ಸಾಲು ಬಿಡದೊಪ್ಪಿದುವು (ಕುಮಾರಾಂ. ೯೨-೩೯) : ತರತರದೊಳಿರಿಸಿರ್ದ ಬಲ್ದೊಲೆಯ ಡೆಂಕಣಿಯು . . . ಪೊತ್ತಂಗಳಾಳ್ವೇರಿಯೊಳ್ ಪಸರಿಸಿದುವು (ಜಬಪು. ೯೨-೧೧). ೨. ಕೊತ್ತಳಗಳ ಮೇಲೆ ಪೊದರಿನಂತೆ ಒತ್ತೊತ್ತಾಗಿ ಅಳವಡಿಸಿ ನಿಲ್ಲಿಸುವ ಉದ್ದವಾದ ಸಬಳದಂತಹ ಒಂದು ಆಯುಧ ವಿಶೇಷ : ನಟ್ಟ ಡೆಂಕಣಿಗಳೋಹಗೆಗಳನು ದುರ್ಗವಬಿಯಟ್ಟಲೆತ್ತಿದ ಹಲವು ಕೈಯೊ (ಹಕಕಾ. ೧-೩೭) : ಅಟ್ಟಳೆಯಾಳ್ವೇರಿ ಕೊತ್ತಲಂಗೊಳಳಪಟ್ಟಡೆಂಕಣಿ ಸಬಳಗಳು ನಟ್ಟರಂತೆಯದ ಕಂಭಗಳಿಂದಾ ದುರ್ಗ ಸೃಷ್ಟಿಗೆ ಪೊಸತಾಗಿಹುದು (ಜೀವಂಸಾಂ. ೮-೦೩); ದೇವತೆಗಳ ಮುಟ್ಟ ತಿವಿದ ಸಬಳಗಳೊಯೆಂದೆನಲಲ್ಲಿ ನೆಟ್ಟ ಡೆಂಕಣಿಗಳೆಸೆದವು (ಕುಮಾರಾಂ.೦೭-೦೪); ಕನ್ನಡದಲ್ಲಿಯು ಕೋಶಕಾರರೆಲ್ಲರೂ ಧ್ವಜಸ್ತಂಭ ಎಂಬ ಅರ್ಥ ಹೇಳಿರುವರು. ಆದರೆ ಕೋಟೆಗಾಳಗದಲ್ಲಿ "ಮಾರಿಮೊಗದಡೆಂಕಣಿ" ಮೂಡುವ ಹಿಂಸಾಕಾರ್ಯವನ್ನು ನೋಡಿದರೆ, ಅದೊಂದು ಭವ್ಯವಾದ ಆಯುಧ ವಿಶೇಷ (ಕರ್ಣಾಟ. ೫೭). 'ಡೊಂಕಣಿ' ಪರಾ. ೩. ಕೋಟೆಯ ಮೇಲಿಸಬುರುಜು; ಬತ್ತೇರಿ: ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರವಾಗಿಯಗ್ಗಳಿಸುವ ಗೋಪುರಂ (ಗಿರಿಕ. ೨-೬೯); ಅಗಟಾಪ್ರಾಕಾರದಿಂ ಡೆಂಕಣಿಯಿನನುಪಮದ್ವಾರದಿಂ ಸತ್ಪತಾಕಾವಳಿಯಿಂದಾಳ್ವೇರಿಯಿಂ . . . ಬಗೆಗೊಳ್ಪಂ ಬೀಟಿ (ದಶಕು. ೬-೯) : ಇತ್ತರದೊಳುದ್ದಕ್ಕೆ ಕೋಂಟೆಯಕೊತ್ತಳಂಗಳ ಸಂದಿಸುಂದಿಯೊಳೆತ್ತಿಸಿದನಟ್ಟಣೆಗಳಂ ಡೆಂಕಣಿಗಳಂ (ಬಸಪು. ೦೭-೯); ಸಿದ್ಧ ಕಂಡನು ಮುಂದೆ ಮಾರ್ಗವ ಹೊದ್ದಿಕೆನೆ ಕೊತ್ತಳವ ಡೆಂಕಣಿ ಚಿತ್ರಕಲಸದಿ ಪಚ್ಚೆಲೋಹದಯೆಸೆವ ಕದಗಳನು (ದೇವಕಾ.೨-೫); ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು ಬಿಗಿದಟ್ಟಣಗಳಿಂದೆ . . . ಝಗಝಗಿಸುತೊರ್ಪುದುದು (ಜೀರಪು. ೧-೩೨) ; ಗಗನಲಂಬಿತ ನೀಲದಟ್ಟಳೆಯ ಕಟ್ಟಳೆಯ ಮಣಿಮಯದ ಡೆಂಕಣಿಗಳ (ರುಕ್ಮಾಂಗ. ೩-೪) ; ಕ್ರಮದ ಡೆಂಕಣಿ ಕೋಟೆ ಗೋಪುರಗಳಿಂದ ಆಶ್ಚರ್ಯವಾದಂಥ ಅರಮನೆಗಳಿಂದ (ಯಸಳ. ೯). ೪. ಕೋಟೆಯಂ ಮೇಲಿನ ಬುರುಜುಗಳ ಮೇಲೆ (ಸಾಮಾನ್ಯವಾಗಿ ಎಂಟು ಕಡೆಗಳಲ್ಲೂ) ನೆಟ್ಟಿರುವ ನಿಶಾನಿಯೊಡನಿರುವ ಅಥವಾ ನಿಶಾನಿಯಿಲ್ಲದ ಧ್ವಜಸ್ತಂಭ : ಕಂಣಿವ ಪಲ್ಲವ ಝಲ್ಲರಿಯ ಡೆಂಕಣಿಯ ತಲೆ ಚಮರಿಗಳ ಗಗನಾಂಗಣವನಣೆವ ಪತಾಕೆಗಳ . . . ಲಗ್ಗೆವಱಗಳಲೆಸೆದುದಾ ದುರ್ಗ (ತೊರಟಾ. ೬-೭-೦೭) ; ಎತ್ತಿದ ಛತ್ರ ಚಾಮರ ಚೌಕ ಡೆಂಕಣಿ ಮತ್ತು ಕಾಲಾಳ ಘರ್ಜನೆಯು (ದೇವಾಂಪು. ೩-೦೯೩) : ಹಮ್ಮಿನಲಿ ಸಗ್ಗಿಗರ ಕರೆವಂತೆ ಕೈಯೆತ್ತಿ ಗಮ್ಮನೆಯ ಡೆಂಕಣಿಗಳೆಸೆಯೆ (ಪ್ರಾಥರಾ. ೧-೩೭) : ನೋಟಕರ ಕಣ್ಗೆ ಕಾಣಿಸಿದುಮಣ್ಗೆಸೆಯ ಡೆಂಕಣಿಯ ಪಳವಿಗೆಗಯ್ಗಳು (ಕೃಮಿಥಾ. ೦೭-೯); ಕುಂಭಿನಿ ಕೈನೀಡಿ ಕರಪೋಲು ಡೆಂಕಣಿ ಮುಂಬರಿದೆಸೆದುವರ್ತಿಯಲಿ (ಕಂಸವಿ. ೬-೮) : ಅಗಣಿತೋನ್ನತ ಹರಿಮಯದ ಡೆಂಕಣಿಗಳೊಪ್ಪಿದುವು (ಕೋಗಯ. ೩-೮) ; ಜೀವಮಾನದ ಕಟ್ಟಡದಲ್ಲಿ ಆ ಒಂದು ಕ್ಷಣದ ಬಾಳು ಗೋಪುರದ ತುದಿಯ ಕಳಶದ ಚಿನ್ನದ ಡೆಂಕಣಿಯಾಗಿ ಸ್ವರ್ಗದೊಡನೆ ಸರಸವಾಡಿತು (ಮುತಿಮು. ೫೨). **ಡೆಂಕಣ** : ೧. ಇಡಿಸುವ ಡೆಂಕಣಕ್ಕೆ ವೆಲವಾಳಿಗೆ ಕೊತ್ತಳದಂಬುಗುಂಡಿಯಂದುಡುಗದೆ . . . ಗಡಣಿಸೆ ಕಾದುತಿರ್ದುದು ಮಹೇಂದ್ರಪದಾತಿನಿ ಮುತ್ತಿ ಸುತ್ತಲುಂ (ಚಂದ್ರಪು. ೫-೧೧೬). ೩. ಇರಲಿಯಿತ್ತೊಳಗೇಳುಕೋಟೆಯ ತೆರನು ಮರಕತ ಸುತ್ತು ಮೇಲುರುತರದ ಕೆಂಪಿನ ಸುತ್ತು ಕೆನೆಗಳು ಡೆಂಕಣಟ್ಟಣೆಯೂ (ಜಿರಾಮಾ. ೨೪-೨೬). **ಡೆಂಕಣೆ** : ೧. ನಿಟಿಸಿದ ಬಸಿಯೊಳಂ ಪೂಸಿದ ಡೆಂಕಣೆಯೊಳಂ . . . ಮೊನೆಯಂ ಪೂಣಿಸಿದ ಕೊಂತದೊಳಂ ಕೈಗೆಯ್ದು ಕಟ್ಟಾಸುರಮಾಗೆ (ಅನಂಪು. ೧೧-೮೨ ಪ) ; ಡೆಂಕಣೆ[ಪಾಠಾಂ. ಣಿ]ಯ ಗವಣೆಗಳ ಕೋಟೆಯ ಕೊಂಕುಗಳ ಕೊತ್ತಳದ ತೆನೆಗಳ . . . ದುರ್ಗವನೀಕ್ಷಿಸುತ (ನಿಭಾಗ. ೧೧-೩೬-೩೫); ಡೆಂಕಣೆ ಕವಣೆ ಧ್ರುವಲೋಕವ ಹಾಯಲಿಡುವ ಮಕರಡಿಬ್ಬೆ ಕವಿದ ದುರ್ಗದೊಳಿಹವು (ಸೌಂದಳಾ. ೫-೩೪). **ಡೆಂಕಳಿ** : ೪. ಪಳಹರದ ಪಲ್ಲವದ ಸತ್ತಿಗೆಯಗಳ ವಿಡಾಯಿಯಲರಿಬಿರುದ ಡೆಂಕಳಿಯ ಸೀಗುರಿ ಪೊದರುಗಳ ತೋಮರದ

ಸಂದಣಿಯು (ಕುಮಾ.ರಾ.ಪ್ರೇ. ಒರಿಶ. ಪು. ೨೦೭). **ಡೇಂಕಣೆ:** ೩. ಮೂರು ಸುತ್ತಿನ ಪರಿಧಿ ತಾಂಬ್ರದಿ ತೋರೆ ತೆನೆ ಡೇಂಕಣೆಗಳಟ್ಟಣೆ (ಬಿಜ್ಜ.ಪು. ೨೦-೨೦).
**ಢೆಂಕಣ:** ೧. ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣೆ, ಢಂಕಣ [ಪಾಠಾಂ. ಣ]ಅಧಾರಂ (ಧಾರಂ) (ಶಮದ. ೦೫ ಪ್ರಯೋ). **ಢೆಂಕಣೆ:** ೧. ಇಟ್ಟಿಡುವ ಢೆಂಕಣ ಶಿಲೋಚ್ಚಿರಮನಿಕ್ಕು (ಮಂಗರಾ. ೩೭-೫). **ಢೇಂಕಣೆ:** ೧. ಆತುರದಿಂ ಢಗ್ಗೆ ಢೇಂಕಣೆ ನೆಲಗುವುವು ಮಾತೇನು ಗಗನದಟ್ಟಳೆಯು (ಅನಂತ. ೧೮-೫೨). **ಢೇಂಕಣೆ:** ೧. ಕಲ್ಲ ಹಗ್ಗೊಬಿದುಜುಯಣ್ಣ ಕಯ್ದು ವಣಲಗ್ಗದ ಢೇಂಕಣೆ (ಸೌಇ. XX, ೦೩೭-೪ ; 1186).

ಡೆಂಕಣಿಯ ಗುಂಡು = ಡೆಂಕಣಿಯಂ ಯಂತ್ರದಿಂದ ಚಿಮ್ಮಿಸುವ ಇಡುಗುಂಡು : ಉಟ್ಟ ವಸ್ತ್ರವು ಬಳಸಿದ ಕೋಂಟೆಯಗುಟೆ . ಕಟ್ಟಿದ ಕಟಸೂತ್ರವೆಸೆಯ ಬಟ್ಟವೊಲೆಯ ಡೆಂಕಣಿಯ ಗುಂಡಿಂದಳವಟ್ಟ ಜಂಗಮ ದುರ್ಗದಂತೆ (ಅಂಜಚ. ೮-೮೪).

**ಡೆಂಕಣೆಕಾಱ** (ನಾ). ಡೆಂಕಣೆಯನ್ನು ಬಳಸುವುದರಲ್ಲಿ ನಿಯುಕ್ತನಾದವನು : ಕಾಳಗದಲಿ ಡೆಂಕಣೆಕಾಱ ಡಾವುದ (ಬೊಂಕಾ. ೦೯೯೦, ಸರಸಿ. ೪೨-೮ ; ?). [ ಡೆಂಕಣ + - ಕಾಱ ]

**ಡೆಂಕಣೆಕುಲ** (ನಾ). ಡೆಂಕಣೆಗಳ ಸಮೂಹ,–ಗುಂಪು ; ಇಡುಗುಂಡು ಮೊದಲಾದುವನ್ನು ಚಿಮ್ಮುವ ಯಂತ್ರಗಳ ಸಮೂಹ : ಬೆಲೆಗೆಯ್ ಲಲನೆಯನೆಂಬುದು ವೇಶ್ಯಾವಲಿಯೊಳ್ ಕೊರೆಗ್ಗೆಯೆಂಬುದು ಡೆಂಕಣ ಕುಲದೊಳ್ (ಅದ್ಯದೇ. ೨-೦೩).

[ ಡೆಂಕಣ + ಕುಲ ]

**ಡೆಂಕಣೆಕ್ಕೆ** 'ಡೆಂಕಣೆಗ್ಗೆ' ನೋ.

**ಡೆಂಕಣೆಗ್ಗೆ, ಡೆಂಕಣಕ್ಕೆ, ಡೆಂಕಣೆಗ್ಗೆ** (ನಾ). ಗುಂಡನ್ನು ಚಿಮ್ಮಿಸಲು ಡೆಂಕಣೆಯಂತ್ರಕ್ಕೆ ತುದಿಯಲ್ಲಿ ಜೋಡಿಸಿರುವ ಮೊರಿಮೊಗದ ಅಥವಾ ಹಂದಿ ಮೊದಲಾದ ಪ್ರಾಣಿಗಳ ತಲೆಯ ರಚನೆ ಇರುವ ತೋಳಿನ ಆಕಾರದ ಕೈ ; ಡೆಂಕಣೆಯಲ್ಲಿ ಅಳವಡಿಸಿರುವ ಚಿಮ್ಮು ಗೋಲು : ಬಲಿವ ಪಟಲ ಬೆಣೆ ಡೆಂಕಣೆ[ಪಾಠಾಂ. ಣೆ]ಗ್ಗೆ ಪಂದಿದಲೆ ತಿರುಗುಣಿ ಭೀಮಗದೆಯು ಬಲಿದು ಕೆತ್ತುವ ಬಡಗಿ (ಕುರಾಸಾಂ. ೩೭-೫೮). **ಡೆಂಕಣೆಕ್ಕೆ:** ಒಡಿಗುಂಡಿಟ್ಟು ಕವಣೆಯಾಂತ ಸತಿಯರ ನಿಡುದೋಳ್ಗಳೆಸೆದುವಾ ಕಂತು ಕಡುಮುಳಿಸಿಂ ಪಾಂಥರೆರ್ದೆಗೋಂಟೆಯ ಮುತ್ತಿಯಿಡುವ ಡೆಂಕಣೆಕ್ಕೆಗಳಂತೆ (ಶ್ರೀಪಾಂ. ೦-೫೨) ; ಡೆಂಕಣಕ್ಕೆ ಡೆಗ್ಗೆವರೆ ಪಾರೆ . . . ಶರಗಳ ಸಂಕುಳವೃದಿತು (ಕುರಾಸಾಂ. ೪೦-೫೦). **ಡೆಂಕಣೆಗ್ಗೆ:** ಮೇಲಿನ 'ಕುರಾಸಾಂ. ೩೭-೫೮'ರ ಪ್ರಯೋಗದ ಪಾಠಾಂತರವನ್ನು ನೋಡಿ.

[ ಡೆಂಕಣ + ಕೈ₂ (<ಕೆಯ್₂) ]

**ಡೆಂಕಣೆಜಂತ್ರ** (ನಾ). ಇಡುಗುಂಡುಗಳನ್ನು ಚಿಮ್ಮಿಸುವ ಯಂತ್ರ : ಗಿರಿಯ ಡೆಂಕಣೆಜಂತ್ರವನು ತರಹರಿಸುವವರಾರರಸ (ಕುಮಾ.ಕ. ೨೩-೩೭).

[ ಡೆಂಕಣ + ಜಂತ್ರ ]

**ಡೆಂಕಣೆ** 'ಡೆಂಕಣಿ' ನೋ.

**ಡೆಂಕಣೆಗ್ಗೆ** 'ಡೆಂಕಣೆಗ್ಗೆ' ನೋ.

**ಡೆಂಕಳಿ** 'ಡೆಂಕಣಿ' ನೋ.

**ಡೆಂಕೆ₁** 'ಡಕ್ಕೆ' ನೋ.

**ಡೆಂಕೆ₂** (ನಾ). ಗೋಡೆಗಳ ಮೇಲೆ ಅಥವಾ ಕಂಬಗಳ ಮೇಲೆ ಮನೆಯ ಮಾಡನ್ನು ಹೊರಲು ಹಾಕಿದ ಮರದ ಅಡ್ಡೆ ; ಜಂತೆ : ಮೃಗಲಕ್ಷ್ಮನುದಯದೊಳ್ ನಿಲಿಸುಗೆ ಕಂಬವುನಿಂದುಸುತನ ಲಗ್ನಂಬರೆ ಬಿಟ್ಟುಗೆ ಡೆಂಕೆ[ಪಾಠಾಂ. ಜಂತೆ]ಗಳಂ (ಲೋಕೋಪ. ೩-೨೭) ; ಢಕಾರಕ್ಕೆ ಡಕಾರಂ– ಗಾಢ–ಗಾಡ ; ಢಕ್ಕಾ–ಡಕ್ಕೆ ; ಢೆಂಕಾ–ಡೆಂಕೆ (ಶಮದ. ೨೫೫ ಪ್ರಯೋ).

[ <ಪ್ರಾ. ಢೆಂಕಾ = ಬಾವಿಯ ಮೇಲಿನ ಅಡ್ಡತೊಲೆ ]

**ಡೆಂಕೆಬರ** (ನಾ). ಭಯಂಕರವಾದ ಕ್ಷಾಮ ; ಬರಗಾಲ : ಭರಮಪ್ಪ ನಾಯಕನ ಆಳಿಕೆಯಲ್ಲಿ ವೀರಕ್ಷಾಮ ಪ್ರಾಪ್ತವಾಯಿತು. ಇದಕ್ಕೆ 'ಡೆಂಕೆಬರ' ವೆನ್ನುತ್ತಾರೆ (ಚಿತ್ರ.ಪಾ. ೮, ಉಪೋದ್ಘಾತ). 'ಡೋಗಿಬರ' ಪರಾ.

[ ಡೆಂಕೆ₀ + ಬರ₁ (<ಬಱ) ]

**ಡೆಂಗಿಜ್ವರ** (ನಾ). "ಮೈ ಮೇಲೆ ಗುಳ್ಳೆಗಳೆದ್ದು ಜ್ವರಬಂದು ಕೀಲುಗಳಲ್ಲಿ (ಸಂಧಿಗಳಲ್ಲಿ) ತೀವ್ರಯಾತನೆಯಾಗುವ ಸೋಂಕುರೋಗ: 'ಡೆಂಗಿಜ್ವರ'" (Dengue. ಇಂಕಸಿ.). [ ಡೆಂಗಿ₀ + ಜ್ವರ ]

**ಡೆಂಚಾ** (ನಾ). ಒಂದು ಬಗೆಯ ಗಿಡ : ಸಣಬು (Sunhemp), ಕಳಲಿ, ಡೆಂಚಾ ಮೊದಲಾದ ಗಿಡಗಳನ್ನು ಬೆಳೆಯಿಸಿ ಅವುಗಳನ್ನು ನೆಲದೊಳಕ್ಕೆ ಉತ್ತುಬಿಟ್ಟರೂ ಆಯಿತು (ಪಾಂಪ್ರ. I. ೨೯೦). [ ? ]

**ಡೆಂಚೆಯ** (ನಾ). ಆನೆಯ ಬೆನ್ನ ಮೇಲೆ ಕುಳಿತುಕೊಳ್ಳಲು ಹಾಕುವ ಮಂಟಪ ; ಅಂಬಾರಿ ; ಹೌದ : ವಿಕ್ರಮಪಾಳಪಾವುಸ ಶಿರಃಕಂಜಂಗಳಲ್ಲಾಡುತಿರ್ದುವು ತನ್ನಾನೆಯ ಹೊನ್ನ ಡೆಂಚೆಯದ ಚಂಚತ್ಕೇತುದಂಡಂಗಳೊಳ್ (ಎಕ. XI, ದಾವಣ. ೨೫-೩೯; 1224); ಡೆಂಚೆಯನವರಿದೇಣಿಯೊಳ ಮೆಟ್ಟಿಗಡಿಯಿಟ್ಟನು . . . ಕರಿಯಿಂದ ಧರೆಗೆ (ಸಿಂಗಿರಾ.. ೨೭-೮).

[ P ಇದು 'ಜೇಂಚಿಯ' ಎಂಬುದರ ಅಪಲಿಖಿತವಿರಬಹುದು ]

**ಡೆಂಡಣಿಸು** 'ಟೆಂಟಣಿಸು' ನೋ.

**ಡೆಂಡೆಣಿಸು** 'ಟೆಂಟಣಿಸು' ನೋ.

**ಡೆಂಡೆಲಿ** (ನಾ). ೧. ಆನೆಯ ಮೇಲೆ ಹಾಕುವ ಪಕ್ಷರಕ್ಷೆ ; ಹಕ್ಕರಿಕೆ ; ಜೂಲು. ೨. ಮದಿಸಿದ ಆನೆ: ಡೆಂಡಲಿಯೆಂಬ ಶಬ್ದಂ – ಗುಡದಲ್ಲಿಯುಂ, ಮತ್ತವಾರಣದಲ್ಲಿಯುಂ (ಶಮದ. ಮು. ೩೦೭). [ ? ]

**ಡೆಂಢಣಿಸು** 'ಟೆಂಟಣಿಸು' ನೋ.

**ಡೆಂಢಳಿಸು** 'ಟೆಂಟಣಿಸು' ನೋ.

**ಡೆಂಢೆಣಿಸು** 'ಟೆಂಟಣಿಸು' ನೋ.

**ಡೆಂಬಕ** (ನಾ). (?) : ದಿಟವುಟಥಕುತಿಸಂಪುಟ ನೆಲೆಗೊಳ್ಳದಾಗಿ ಡಂಬಕ [ಪಾಠಾಂ. ಟಂಬಕ, ಟಂಬನ, ಟೆಂಬಕ ]ನನಾಡಿಸುತ್ತಿದ್ದಿತಯ್ಯಾ ನಿನ್ನ ಮಾಯೆ (ಬಸವ. ೧೮). [ ? ]

**ಡೆಕ್ಕು** (ನಾ). ಹಡಗಿನ ಹೊರಮೈಯಲ್ಲಿರುವ ವೇದಿಕೆ,–ಅಂತಸ್ತು: ಡೆಕ್ಕಿನ ಮೇಲೆ ಒಬ್ಬಳೇ ನಿಂತು ಮಂದಾಕಿನಿ ಸಮುದ್ರದ ತೆರೆಗಳನ್ನು . . . ನೋಡುತ್ತ ನಿಂತಿದ್ದಾಳೆ (ಹೊಸಕ್ಷ. ೦೩೩). [ ←ಇಂ. Deck ]

**ಡೆಕ್ಕೆರಿಕ್ಕೆ** (ನಾ). ಒಂದು ಬಗೆಯ ಜಟ್ಟಿವರಸೆ; ಮಲ್ಲಯುದ್ಧದಲ್ಲಿ ಒಂದು ಪಟ್ಟು : ಮೈಲಾಗಿನಲಿ ತೆಕ್ಕೆಯಲಿ ಸವಡಿಯ ಡೆಕ್ಕೆರಿಕ್ಕೆಯಲಿ . . . ಭೀಮಜೀಮೂತಗಳು ಹಳಚಿದರು (ಕುಮಾ.ವಿ. ಒರಿಶ. ೪-೭೭). 'ಡೊಕ್ಕರ₁' ಪರಾ. [ ? ]

**ಡೆಗ್ಗೆ, ಡಗ್ಗೆ** (ನಾ). ಕಾಳಗದಲ್ಲಿ ಕೋಟೆಯ ತೆನೆಗಳನ್ನು ದೂಡಿ ಉರುಳಿಸಲು ಬಳಸುತ್ತಿದ್ದ ಉದ್ದವಾದ ಮರದ ದಿಮ್ಮಿ : ನಡಸಾರಂ ನೆಲವಾಳಿಗೆ ಪಡಕೆಡವುವ ಡೆಗ್ಗೆ ಬದ್ದಿರಂಗಳ್ (ತ್ರಿಪುವಿ. ೫-೦೦) ; ನಡೆ ಚಪ್ಪರದ ಮರ ಬದ್ದರ ಡೆಂಕಣೆ ಸುಡುವ ಪೆಟಲು ಕೋಟೆಯನು ಕೆಡವುವ ಡೆಗ್ಗೆ[ಪಾಠಾಂ. ಗೆ] (ಕುರಾಸಾಂ. ೩೭-೭೭); ಕೋಟೆಯ ತೆನೆಗಳನು ಕೆಡವಲು ನಿಡುವ ಡೆಗ್ಗೆಗಳಿಂದ (ಜಂಪ್ರಸಾಂ. ೮-೪) ; ಡೆಗ್ಗೆಯಿಂದುದಿರ್ದವು ಕಲ್ಲ ಕೋಟೆಯ ಗುಂಡು ವೆಗ್ಗಳ ಬಿದ್ದುದು ಪಟಲ (ಅನಂತ. ೦೮-೬೦). 'ಡೆಗ್ಗವರ' ಪರಾ. **ಡಗ್ಗೆ:** ತಳ ನಡೆ ಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು (ಕುರಾಸಾಂ. ೪೫-೨) ; ಡಗ್ಗೆ ನೆಲಗುಮ್ಮಗಳ ತರಹೇಳಿ (ಪ್ರಪ್ಲಾ.ಕ. ೫-೯೦). [ ? ]

**ಡೆಗ್ಗವರ** (ನಾ).=ಡೆಗ್ಗೆ : ನಡೆಚಪ್ಪರವನು ನಡೆಯಿಸಿ ಡೆಗ್ಗವರಗಳಂ ಜಡಿದು ಹೊಯಿಸುವ ಭರವಸಕ್ಕೆ ಬದ್ದರಗಳೊಳಗಡಗಿ ಗುದ್ದಲಿಹಾರೆಯಿಂದಗೆವ

ರಭಸಕ್ಕೆ (ಸತ್ಯ. ಶಾ. ೮-೩೭): ತುಡುಕಲೆಂದೆನುತ ಮಾತುಸಹದಿಂ ಬಹುರೂಪುವಡೆದು ತಾಗುವ ರಾಹುಕೇತುವೋ ಯೆಂಬಂತೆ ಗಡಿಯಿಲ್ಲದಲ್ಲಿ ಹಾಯಿಸುವ ಡೆಗ್ಗೆವರನತಿಭೀಕರಂಬಡೆದವು (ಸುಮ್ಮ. ಶಾ. ೮-೪೦).

[ ಡೆಗ್ಗೆ + ಮರ$_1$ ]

**ಡೆಬ್ಬೆ$_1$** 'ದಬ್ಬೆ$_1$' ನೋ.

**ಡೆಬ್ಬೆ$_2$** 'ದಬ್ಬೆ$_2$' ನೋ.

**ಡೆಮ್ಮಿ** (ನಾ). ಬರೆಯುವ ಮತ್ತು ಗ್ರಂಥಗಳ ಮುದ್ರಣಕ್ಕೆ ಉಪಯೋಗಿಸುವ ಕಾಗದದ ಅಳತೆಯ ಒಂದು ಪ್ರಮಾಣ; (ಬರೆಯುವ ಕಾಗದ, ೧೫½" × ೨೦"; ಮುದ್ರಣಕಾಗದ, ೧೭½" × ೨೨½": ಡೆಮ್ಮಿ ೧೮ ಪೌಂಡು ಎಂದರೆ, ಡೆಮ್ಮಿ ಅಳತೆಯ ಐನೂರು ಹಾಳೆಗಳುಳ್ಳ ಒಂದು ರೀಮಿನ ತೂಕ (ಮುದ್ರ. ೪೩). [ ←ಇಂ. Demy ]

**ಡೆಳ್ಳೆ** (ನಾ). ಬಿದಿರಿನ ಬುಟ್ಟಿ: ಕಳಶಂ ಶುಕ್ತಿಕೆ ವರ್ತುಳಂ ಪಟಲಕಂ ವ್ಯಸ್ತಾಳಿ ನೀರಾಜನಂ ವಿಳಸತ್ ಕುಂಡಿಕೆ ಡೆಳ್ಳೆ ಯೆಂಬೆಡೆಗಳೊಳ್ ಸಂಪೂರ್ಣ ತೋಯಾದಿ ಮಂಗಳವಸ್ತುಪ್ರಕರಕ್ಕದೇಂ ಶಚಿಯು ಕೆಯ್ಯಿಂ ಕಣ್ಣುಮೋರಂದನಗ್ಗಲಿಸುತ್ತಿರ್ದುದು ಪೂಜೆಗುಜ್ಜುಗಿಸಿ ತನ್ನಂ ನೋಡೆ ಸಕ್ರಂದನಂ (ಆದಿಪು. ೧೦-೯೭); ನಾನಾ ನವೀನ ಕೋಮಳ ಪಕ್ವಫಳಂಗಳಿಂ ತುಂಬಿದ ಡೆಳ್ಳೆಗಳ ಬಳಗಂಗಳಂ ತಂದಮುಟ್ಟಯಿಸಿ ನೀಡುವುದುಂ (ಜಾತಪು. ೧೭-೨೩೯ ವ). [ <ಪ್ರಾ. ಡಲ್ಲ, ಡಲ್ಲಗ ]

**ಡೇಂಕಣೆ** 'ಡಂಕಣಿ' ನೋ.

**ಡೇಕು** 'ದೇಕು$_1$' ನೋ.

**ಡೇಗು$_1$** 'ತೇಗು$_2$' ನೋ.

**ಡೇಗು$_2$** 'ತೇಗು$_3$' ನೋ.

**ಡೇಗೆ** (ನಾ). ೧. ಹದ್ದಿನ ಜಾತಿಗೆ ಸೇರಿದ ಒಂದು ಬಗೆಯ ಪಕ್ಷಿ; ಗಿಡುಗ: ಒಂದು ದಿನ ಡೇಗೆಯಂ ಪಾರಿಸುತ್ತಿರೆ ಪಾರಿ ಬಂದು ಕಿರಿಯಮ್ಮನರ ಮನೆಯಂ ಪೊಗಲ್ಕೆ (ಗುರುಚಾ. ೦೩-೯೦); ಈಟಿ ಭಲ್ಲೆಯ ಸರಳು ಕವಲಂಬು ಗಳು ಬಡಿಗೋಲುರುವ ಸಾಳುವ ಡೇಗೆ ಸಿಪ್ಪಂಗಿಗಳು (ಅನಂತಾ. ೩-೩-೬): ಡೇಗೆಯದುರೊಳು ಕಂಡ ಲಾವುಗೆ ಬಾಗುವೋಲ್ (ಜನಪ. ೭೨-೯); ಮರಗಳ ಮೇಲೆ . . . ಗಿಳಿ, ಕೋಗಿಲೆ, ಡೇಗೆ ಮತ್ತೊಂದು ಎಂದು ಸಾವಿರ ಜಾತಿಗಳಿವೆ (ಕೃಷ್ಣಹೂ. ೦೨). [ ದೇ.॥ ತೆಲು. ಡೇಗ ]

**ಡೇಗೆಕಣ್ಣು** (ನಾ). ೧. ಗಿಡುಗನ ಕಣ್ಣು. ೨. (ಅಲಂ) ಸೂಕ್ಷ್ಮದೃಷ್ಟಿ; ತೀಕ್ಷ್ಣದೃಷ್ಟಿ: ಅದರ ಡೇಗೆಕಣ್ಣಿಗೆ ಮೀನು ಕಾಣಿಸಿದೊಡನೆಯೇ ಬಾಣದಂತೆ ನೀರೊಳಗೆ ನುಸುಳಿ ಕೊಕ್ಕಿನಲ್ಲಿ ಅದುಮಿ ಬಂಡೆಗಲ್ಲಿನ ಮೇಲೆ ಕುಳಿತು ನುಂಗುತ್ತದೆ (ಹಾಗಿ. ೮೩); ಆದಕ್ಕಾಗಿ ಬೀರನೊಡನೆ ಸುಬ್ಬನೂ ಬಂದು ಡೇಗೆಕಣ್ಣು ಮಾಡಿ ಕುಳಿತುಕೊಳ್ಳುವನು. (ಮುಂಗಾರು. ೫೮).

[ ಡೇಗೆ + ಕಣ್ಣು (<ಕಣ್) ]

**ಡೇಗೆಬೇಗ** (ನಾ). ಗಿಡುಗನ ರಭಸ; ಬಹಳ ವೇಗ; ಅತಿರಭಸ: ಹೊಲದ ಹೆಪದರೊಳು ಹುದುಗಿ ಹೊಂಚುತಿಹ ಹೊರಸಿಗೆರಗುವ ಡೇಗೆಬೇಗದಲಿ (ಶ್ರೀರಾಮಾ. ೫೯೫-೩೧೦). [ ಡೇಗೆ + ಬೇಗ ]

**ಡೇರ** 'ಡೇರೆ$_1$' ನೋ.

**ಡೇರಾ$_1$** 'ಡೇರೆ$_1$' ನೋ.

**ಡೇರಾ$_2$** 'ಡೇಲಿಯಾ' ನೋ.

**ಡೇರಿ** 'ಡೈರಿ$_2$' ನೋ.

**ಡೇರೆ$_1$, ಡೇರ, ಡೇರಾ$_1$** (ನಾ). ಬಟ್ಟೆಗಳನ್ನು ಹೊದಿಸಿ ತಯಾರಿಸಿದ ತಾತ್ಕಾಲಿಕ ವಸತಿಗೃಹ; ಗುಡಾರ; ಬಿಡದಿ: ಜಗವು ಸರ್ಕಸ್ಸಿನ ಡೇರೆ (ಕಂದ್ರವಿ. ೦೯-೫೯); ಈ ರಾತ್ರಿ ಕಳೆಯಲು ಒಂದು ಡೇರೆ ಸಿಕ್ಕಿದ್ದರೆ ಚೆನ್ನಾಗಿತ್ತು (ಮತಿಕ. ೨೯): ಈ ಬಯಲಾಟದವರು, ಡೇರೆ ಹಾಕಿಕೊಂಡು ಟಿಕೇಟಿನ ಮೂಲಕ ಆಟವಾಡುವ ರೂಢಿಯು ಬಂದಿದೆ (ಯಕ್ಷ. ೨೦). **ಡೇರ:** ಮುಂದೆ ನೋಡು ದಾರಿ ಸಾವಿರಾರು ಮೈಲಿದೂರ, ಸಾಲುಸಾಲು ಡೇರ (ನಡಬಂ. ೨-೨). **ಡೇರಾ:** ದೂಳುತುಂಬಿದ ಡೇರಾ ಬಟ್ಟೆಯ ಮೇಲ್ಛಾವಣಿ ಕಟ್ಟಿದಂತೆ . . . ಆಕಾಶದಲ್ಲಿ ಮೋಡಕಟ್ಟುವುದು (ಚಾಂಶ್ರ. II, ೦೦೩೦). [ ←ಹಿಂ. ಡೇರಾ ]

**ಡೇರೆ$_2$** 'ಡೇಲಿಯಾ' ನೋ.

**ಡೇಲಿಯಾ, ಡಾಲಿಯಾ, ಡೀಲಿ, ಡೇರಾ$_2$, ಡೇರೆ$_2$, ಡ್ಯಾಲಿಯಾ** (ನಾ). ಒತ್ತೊತ್ತಾಗಿ ಎಸಳುಗಳುಳ್ಳ, ಬಣ್ಣಬಣ್ಣದ ದುಂಡಗಿನ ಹೂವುಗಳನ್ನು ಬಿಡುವ ಒಂದು ವಿಧದ ಗಿಡ ಮತ್ತು ಅದರ ಹೂವು: (ಕೃಷಿ. ೨೮-೫೪೪). **ಡಾಲಿಯಾ:** ಮೂಡಿದೀ ಡಾಲಿಯಾ ಗಿಡದ ಹಸುರು ಕೈಯಲ್ಲಿ ಜಗದ ಅಮ್ಮ ಬಿಸಿಲು ಗಾಳಿಯನಿಡಲು ಮೆಲ್ಲನೆಯೆ (ಅನೀ. ೩೯-೦). **ಡೀಲಿ:** "ಬಣ್ಣಬಣ್ಣದ ಸುತ್ತು ಹೂವುಗಳು ಬಿಡುವ ಮೆಕ್ಸಿಕೊ ತವರಿನ ಒಂದು ಜಾತಿಯ ಗೆಡ್ಡೆಯ ಗಿಡ: ಡೀಲಿ" (Dahlia. ಇಂಕಿವಿ.). **ಡೇರಾ:** ಮನೆಯ ಮುಂದೆ ಚಮನ್, ರೋಜಾ, ಡೇರಾ ನಂದಿಬಟ್ಟಲು ಗಿಡಗಳ ಮಧ್ಯೆ ಪನ್ನೇರಿಳೆ ಹಣ್ಣಿನ ಮರ (ಹೂಸಕ್ಕ. ೦೨೩). **ಡೇರೆ:** ಡೇರೆಯ ಗಿಡದಿಂದ ಹೂದೋಟಕ್ಕೆ ಕಳೆ ಹೆಚ್ಚುತ್ತದೆ (ರೂಢಿ). **ಡ್ಯಾಲಿಯಾ:** ತೊಳಗುತ್ತಿವೆ ತೋಟದಲಿ ತರತರ ಗುಲಾಬಿಹೂ ಡ್ಯಾಲಿಯಾ ಬೋಗೇನವಿಲಿಯ (ಸುನೀತ. ೩-೬). [ ←ಇಂ. Dahlia ]

**ಡೈನಮೊ, ಡೈನಾಮೊ** (ನಾ). "ತಾಮ್ರದ ತಂತಿಯ ಸುರುಳಿಗಳನ್ನು ಕಾಂತ ಕ್ಷೇತ್ರದಲ್ಲಿ ವೇಗವಾಗಿ ತಿರುಗಿಸುವುದರಿಂದ ಯಾಂತ್ರಿಕಶಕ್ತಿಯನ್ನು ವಿದ್ಯುಚ್ಛಕ್ತಿಯನ್ನಾಗಿ ಮಾರ್ಪಡಿಸುವ ಯಂತ್ರ" (Dynamo. ಇಂಕಿವಿ.): ಆ ತಂತಿಯ ಮತ್ತೊಂದು ಅಂಚನ್ನು ಒಂದು ಡೈನಮೋವಿನ ಋಣಧ್ರುವಕ್ಕೆ ಲಗತ್ತಿಸಬೇಕು (ಮುದ್ರ. ೫೯). **ಡೈನಾಮೊ:** ತಿರುಗುವ ಚಕ್ರಗಳಿಗೆ ವಿದ್ಯುತ್ತನ್ನು ಹೊರಡಿಸುವ ಡೈನಾಮೋವನ್ನು ಜೋಡಿಸುವರು (ಚಾಂಶ್ರ. I, ೪೦). [ ←ಇಂ. Dynamo ]

**ಡೈನಾಮೊ** 'ಡೈನಮೊ' ನೋ.

**ಡೈನಾಮೈಟ್** (ನಾ). ಪ್ರಬಲವಾದ ಸಿಡಿಮದ್ದು; ತೀವ್ರ ಸ್ಫೋಟಕ: ಬಾವಿ ತೋಡುವಾಗ ಸಿಕ್ಕ ಬಂಡೆಯನ್ನು ಡೈನಾಮೈಟ್ ಉಪಯೋಗಿಸಿ ಒಡೆಸಿದರು (ರೂಢಿ). [ ←ಇಂ. Dynamite ]

**ಡೈರಿ$_1$** (ನಾ). ದಿನಚರಿ ಬರೆಯುವ ಪುಸ್ತಕ: ಕುಳಿತ ಕುರ್ಚಿಯ ಮೇಲೆ ತೆರೆದು ಹಳೆ ಡೈರಿಯನ್ನು ಮುಗುಚುತ್ತ ನಡೆದ ಒಂದೊಂದೆ ಪುಟವ (ಮೋಹಂ. ೯೩): ಓ, ಅದೇ ಡೈರಿ ಬರೆದಿದ್ದೇನಮ್ಮ (ಜಾಡಮು. ೨೩-೨೦).

[ ←ಇಂ. Diary ]

**ಡೈರಿ$_2$, ಡೇರಿ** (ನಾ). ಹಾಲು, ಮೊಸರು, ಬೆಣ್ಣೆಗಳನ್ನು ತಯಾರಿಸುವ ಸ್ಥಳ; ಹೈನುಶಾಲೆ: ಬೆಂಗಳೂರು ಡೈರಿಯ ಹಾಲನ್ನು ಕೊಳ್ಳುತ್ತಿದ್ದೇವೆ (ರೂಢಿ). **ಡೇರಿ:** ಸಹಕಾರಿಸಂಘಗಳು ಡೇರಿಗಳನ್ನು ನಡೆಸುತ್ತಿವೆ (ರೂಢಿ).

[ ←ಇಂ. Dairy ]

**ಡೊಂಕ$_1$** (ನಾ). ೧. ವಕ್ರವಾದುದು; ಕೊಂಕಿದುದು: ಕರ್ಕಂದುಮುರುಚಿ ನಿತು ಮುಳ್ಳೆಂಬುದು ಡೊಂಕನೊ ಸಸಿನಮೊಯೆಂಬುದಂ (ಪುಣ್ಯಾಸ್ರ. ೩-೦೫ ವ). ೨. ಬಾಗಿಸುವವನು (?): ತೂರ್ದರ್ಧರ ಡೊಂಕ . . . ಸೆಟ್ಟಿಪ್ಪಕಗಂ (ಎಕ. IX (8), ಚಾನಕಾ. ೬೮-೮: 1810). (ಗು). ೩. ಕೊಂಕಿದ; ಬಾಗಿದ; ವಕ್ರವಾದ. [ ಡೊಂಕು$_2$ + -ಅ$_7$ ]

**ಡೊಂಕ$_2$** (ನಾ). ಒಂದು ಕುಲದ ಹೆಸರು (?): ಶರಣಾಗತಜನಮುಂ ನಿತ್ಯರಿವೆಡೆಯೊಳ್ ವಜ್ರಪಂಜರಂ ಕಾನೆನೆ ಡೊಂಕರ ಮಾದಿರಾಜವಿಭು ತೊಡರ್ದರ ಡೊಂಕಿಯೆನಿಪ್ಪ ಬಿರುದನಿರದಿತ್ತಿಸಿದಂ (ಮುಂಬರಾ. X, ೨೩೪-೨೭; 1229).

[ ? ]

**ಡೊಂಕಣ** 'ಡೊಂಕಣಿ' ನೋ.

**ಡೊಂಕಣಿ, ಡೊಂಕಣ, ಡೊಂಕಳಿ, ಢೊಂಕಣಿ** (ನಾ). ಒಂದು ಬಗೆಯ ಆಯುಧ ; ಸಬಳ : "ಕೊಂತಂ, ಡೊಂಕಣಿ—ಈ ೨ ಸಬಳಂ" (ಕಕಸಾ. ೧೪-೨೬೬) ; "ಡೊಂಕಣಿಯುಂ ಕೊಂತ ಸಬಳಮನಿಕ್ಕುಂ" (ಕವಿಕಂ. ೦೨೮) ; ಕರ್ಣನ ಡೊಂಕಣಿಯಲ್ಲಿ ಜುಂಜಿನಂತಿರೆ ಮಿಳಿರ್ದಾಡುತಿರ್ಪ ಪೊಸಚೌರಿಯ ದಿಟ್ಟಿಗಳುಕ್ಕೆ (ಕಬ್ಬಿಗ. ೨೬೩) ; ಹೆಣನ ಹೋಳಿನ ಸಿಡಿದಡಗು ಡೊಂಕಣಿಯೊಳೆಸೆದುವು ಕಾಲನಾರೋಗಣೆಗೆ ಮಿಗೆ ಪಡಿಸಾದ ನೋಡದೆ ಮಾಣ ವೆಂಬಂತೆ (ಕುಮಾ.ಭಾ. ೪-೪೪) : ಪರಶು ಗದೆ ಚಕ್ರ ಡೊಂಕಣಿ . . . ಮೊದಲಾಗಿರ್ದ ಕೈದುಗಳ ಪರಿವಿಡಿಯೊಳುರವಣಿಸಿ ಪೊಯ್ದಂ (ಶ್ರೀಮಿಥಾ. ೦೨-೨೪). **ಡೊಂಕಣ :** ಡೆಂಕಣಿಕ್ಕೆ ಡಗ್ಗವರ ಪಾರೆ ಗುದ್ದಲಿ ಡೊಂಕಣ ಸಬಳ ಶರಗಳ ಸಂಕುಳವೆಯ್ದುತು (ಕುಮಾಸಾಂ. ೪೧-೩೦). **ಡೊಂಕಳಿ :** "ಡೊಂಕಳಿ = ೧. ಬತ್ತಳಿಕೆ. ೨. ಈಟಿಯ ಗಣೆ" (ಗಂಗಾಹು. ೧೪೩). **ಢೊಂಕಣಿ :** "ವರ್ಗಚತುರ್ಥಾಕ್ಷರಂಗಳ್ಗೆ . . . ಢೊಂಕಣಿ, ಢೆಂಕಣ ಅಥಾಳಂ (ಥಾಳಂ) (ಶಮದ. ೦೩ ಪ್ರಯೋ). 'ಡೆಂಕಣಿ' ಪರಾ.

[ ←ತೆಲು. ಡೊಂಕನಿ ]

**ಡೊಂಕಣಿಕಾರ** 'ಡೊಂಕಣಿಕಾಱ' ನೋ.

**ಡೊಂಕಣಿಕಾಱ, ಡೊಂಕಣಿಕಾರ** (ನಾ). ಸಬಳವನ್ನು ಹಿಡಿದು ಯುದ್ಧ ಮಾಡುವವನು ; ಭರ್ಜಿಯವನು : ಕಡುನಿಮಿರ್ದು ಪೊಳೆವ ಪೊಸ ಪೊಗುಡಿಯೆಂಬಗ್ಗಳಿಕೆವಡೆದ ಸಬಳಮನೊಲವಿಂ ಪಿಡಿದು ಬರುತಿರ್ದುದೆತ್ತಂ ಕಡು ಸೊರ್ಕಿದ ತುಂಬಿಯೆಂಬ ಡೊಂಕಣಿಕಾಱರ್ (ಕಬ್ಬಿಗ. ೨೧೩); ಧುರ ದೊಳಗೆ ಬಿಲುಗಾಱರೊಗ್ಗಿನ ಹಲಗೆಕಾಱರು ಹಲಗೆಯವರುಬ್ಬರದ ಡೊಂಕಣಿಕಾಱರಂತು ಕೃತಾಂತನಾಲಯವ ಥರಥರದಿ ತೀವಿದರು (ಕುಮಾ.ಭಾ. ೪-೪೬). **ಡೊಂಕಣಿಕಾರ:** ಧುರದೊಳಗೆ ನಿಂದರ್ಕೆ ಹರಿಗೆಕಾರರು ಹಲಗೆಯವರು ಡೊಂಕಣಿಕಾರರು (ತುರಂಗ. ೩೨-೩). 'ಡೆಂಕಣಿಕಾಱ' ಪರಾ. [ ಡೊಂಕಣಿ + – ಕಾಱ ]

**ಡೊಂಕತನ** 'ಡೊಂಕುತನ' ನೋ.

**ಡೊಂಕಬಂಕ** (ನಾ). ೧. ಬಹಳ ಕುಟಿಲಸ್ವಭಾವದವನು; ಅತಿವಕ್ರ. (ಗು). ೨. ಅಂಕುಡೊಂಕಾದ : ಕೃತ್ರಿಮವಾದ ಅವಯವಗಳಿಂದ ಸ್ತ್ರೀಪಾತ್ರವನ್ನು ಡೊಂಕಬಂಕನಾಗಿ ಅಭಿನಯಿಸುವವನನ್ನು ನೋಡಿ (ಸಾಹಿಜೀ. ೨೦). [ ಡೊಂಕ₁ + ಬಂಕ₃ ]

**ಡೊಂಕಳಿ** 'ಡೊಂಕಣಿ' ನೋ.

**ಡೊಂಕಿ₁** (ನಾ). ೧. ಬಾಗಿಸುವವನು: ಕಾವೇರೀವಲ್ಲಭ ಕರದೇವ ದಾನಿ ಮಱೆ ಹೊಕ್ಕರೆ ಕಾವ ತೊಡೆದರ ಡೊಂಕಿ ಬಿರಿವರ ಬಾಯ ಬೊಂದಿಗೆ . . . ಮಾದಿಗದೇವನೊಡನೆ (ಎಕ. IX, ಕಾನಕಾ. ೦೦೭-೩ ; 1298). ೨. ಗಾಳದ ಮುಳ್ಳಿನ ತುದಿಯ ಕೊಕ್ಕೆ; ಗಾಳದ ತುದಿಯಲ್ಲಿ ಅಳವಡಿಸಿದ ಕೊಕ್ಕೆ—ಮುಳ್ಳು (?): ಗಾಳದ ಡೊಂಕಿಯುಗ್ರಮನೆ ಬಾಳರನಂ ಪಿಡಿದಿರ್ದ . . . ಶಬರರ್ಕಳಿನೊಪ್ಪಿದುದೊಂದು ಪಕ್ಕಣಂ (ಕುಸುಮಾ. ೦೦-೦೪೮). [ ಡೊಂಕು₂ + – ಇ₃ ]

**ಡೊಂಕಿ₂** (ನಾ). ಒಂದು ಬಗೆಯ ತೆರಿಗೆ : ದೇವರಗಾಣಕ್ಕೆ[ತ]ಱಬಣ್ಣಗೆ ಡೊಂಕಿ ಬೀರವಣ ಸರ್ವ್ವಬಾಧಪರಿಹಾರಮಾಗಿ ಬಿಟ್ಟರು (ಸೌಇಇ. XI-II, ೦೫೮-೨೬ ; 1109). [ ? ]

**ಡೊಂಕಿವಣ, ಡೊಂಕೆವಣ** (ನಾ). ಡೊಂಕಿಯ ತೆರಿಗೆಯ ಹಣ : ನನ್ನಾದೀವಿಗೆಗೆ ಡೊಂಕಿವಣ ಮಾನೆಣ್ಣೆಸಹಿತಂ ಬಿಟ್ಟ ಗಾಣವೊಂದು (ಎಇ. II, ೧೦-೩೭ ; 1181). **ಡೊಂಕೆವಣ :** ವರ್ಷಸಂಪ್ರತಿಯಾಗಿ ನಡಸುವ ಗದ್ಯಾಣವೆರಡು ಒಂದು ಗಾಣದ ಡೊಂಕಿವಣ ಕಾರುಕದೆಱೆ . . . ಕೊಟ್ಟರು (ಎಇ. IV, ೧೩-೬೩ : 1165). [ ಡೊಂಕಿ₂ + ವಣ₃ ]

**ಡೊಂಕಿಸು** (ಕ್ರಿ). ಓರೆಯಾಗು; ವಕ್ರವಾಗು : ಬಡಗಣ ಹಿಮಗಿರಿಯೊಳು ಹುಟ್ಟಿ ತೆಂಕ ಬಂದೊಡನೆ ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆ (ಭರತ. ೨೩-೩೯). [ ಡೊಂಕು₁ + – ಇಸು₃ ]

**ಡೊಂಕು₁** (ಕ್ರಿ). ಓರೆಯಾಗು ; ವಕ್ರವಾಗು ; ಬಾಗು : ಡೊಂ [ಹಾಕಾಂ. ಕೊಂ]ಕಿದ ದೇಹವನುರುಗಿಸಿ ನಡೆವುತೆ (ಶೃಂಗಾರ. ಹ.೪೭೩-೨೪); ಆಗುಳಿಸುತೆದ್ದೊಂದು ಕಾಲಲಿ ಡೊಂಕಿ ನಡೆವುತ್ತೆ (ಬಸಪು. ೩೯-೨೨); ನಗುವರಾರಾನೊಂದು ಬಿನದವ ಮಾಡಲ್ಕೆ ಮೊಗಗಳು ಡೊಂಕುವವು (ಭರತ. ೪೬-೦೪೦) : ಮಧುವಾಣಿಯ ಮೋಱೆ ಚಟ್ಟರದಿ ಡೊಂಕಿತು (ಭರತ. ೪೬-೧೪೨). [ ದೇ.೩ ತೆಲು. ಡೊಂಕು, ಟೊಂಕು ]

**ಡೊಂಕು₂** (ನಾ). ೧. ಬಾಗಿರುವಿಕೆ; ನೆಟ್ಟಗಿಲ್ಲದಿರುವಿಕೆ; ಸೊಟ್ಟಾಗಿರುವಿಕೆ ; ಓರೆಯಾಗಿರುವಿಕೆ ; ವಕ್ರತೆ : ತೆಂಗಿನ ಪೊಸನೇಣಿಂದಱು ದಿಂಗಳ್ವರಮಡಸಿ ಕಂಬಿಯಿಂ ಕಟ್ಟಿದೊಡಂ ತಾಂ ಗಡ ಬಿಟ್ಟೊಡೆ ಮತ್ತಂ ಪಿಂಗದು ಡೊಂಕೆಂಬ ನಾಯ ಬಾಲದ ತೆಱದಿಂ (ಧರ್ಮಾಮೃ. ೨-೯೨) ; ಹಾವಿನ ಡೊಂಕು ಹುತ್ತಕ್ಕೆ ಸಸಿನ (ಬಸವ. ೦೪೪): ಕಬ್ಬಿಗೆ ಡೊಂಕಲ್ಲದೆ ಮಧುರಕುಂಟೆ ಡೊಂಕು (ನಗಮಾ. ೬೦) ; ನರಪತಿಗಿದಿರಾಗಿ ನಲಿದು ತಿರುಗಿದರಾಗಲೆ ಡೊಂಕನಳಿದು ಗಂಗೆ ಹರಿವಂತೆ ನೇರದೊಳಿತ್ತ (ಭರತ. ೦೩-೯೭); ಡೊಂಕು ಹಣ್ಣುಗಳಲ್ಲಿ ಡೊಂಕು ಬಾಳೆಯ ಹಣ್ಣು ಡೊಂಕುಂಟು ಒಳಗೆ ರುಚಿಯುಂಟು ಸಜ್ಜನರ ಡೊಂಕು ಲೇಸು (ಸರ್ವಜ್ಞ. ೮೦೨). ೨. ಓರೆಯಾದುದು ; ಸೊಟ್ಟಾಗಿರುವುದು ; ವಕ್ರತೆಯುಳ್ಳುದು : ನೋಡುವ ಡೆಂಟೆಡೆ ಡೊಂಕು (ಪುಣ್ಯಾಸ್ರ. ೩-೨೦) ; ಕತ್ತಿಯ ಬಾಯ ತಾ ಡೊಂಕಾದ ಮಾತ್ರಕ್ಕೆ ಕತ್ತರಿಸಿದ ಕಬ್ಬು ಡೊಂಕೆ (ಇಂದಾವ. ೭೧-೪೭) ; ಬಿಂಬಾಧರವು ಡೊಂಕು ಚುಂಬನವದು ಡೊಂಕೆ ರಸಿಕಾ ಪೇಳೊ (ಗರಿ. ೩೨-೦೦) ; ಒಂದು ಎಲೆಯಂತೆ ಇನ್ನೊಂದಿಲ್ಲ . . . ಕೆಲವು ಸೊಟ್ಟು, ಡೊಂಕು (ದಾಮೂನ. ೧೦೩) ; ಕಬ್ಬು ಡೊಂಕಾದರೆ ಸವಿ ಡೊಂಕೇ ? (ಗಾದೆ). ೩. ಬಾಗಿರುವ ಸ್ಥಳ ; ಸೊಟ್ಟಾಗಿರುವ ಪ್ರದೇಶ : ಡೊಂಕಿಸಿ ಮೂಡ ಹರಿದು ಕಡಲ ಕೂಡಿದ್ದುದಾ ಗಂಗೆಯುದಱ ಡೊಂಕಿನೆಡೆಯೊಳು ಬಿಟ್ಟನಾ ಚಕ್ರಿ (ಭರತ. ೨೩-೩೯). ೪. ಅಡ್ಡಿ ; ಅಡಚಣೆ ; ತೊಂದರೆ : ಬೆಂಕಿಯನುರುಹು ಕಟ್ಟಿಗೆಯ ಹಾಕಿವರವರಂ ಕರೆಯಾಗಾಗಲೆಂಬ ಡೊಂಕಿಲ್ಲ (ಭರತ ೨೩-೮೮). ೫. (ಅಲಂ) ನೇರವಲ್ಲದ ಮಾತು ; ಕೊಂಕುಮಾತು : ಸಜ್ಜನರ ಡೊಂಕು ಲೇಸೆಂದ (ಸರ್ವಜ್ಞ. ೮೦೨). ೬. (ಅಲಂ) ಕೊಂಕು ನಡತೆ ; ಅವಗುಣ ; ವಕ್ರಸ್ವಭಾವ ; ದೋಷ : ಲೋಕದ ಡೊಂಕ ನೀವೇಕೆ ತಿದ್ದುವಿರಿ . . . ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ (ಬಸವ. ೦೨೪) ; ಎನ್ನ ಮನದ ಡೊಂಕ ತಿದ್ದಿಸೊ (ಪುರಂದ. ೬-೦೦೩ ಪಲ್ಲವಿ) ; ಬಿಂಕದ ಕಡಲೊಳಿಪ್ಪವರೊಳು ಪೊಡವಿಯ ಡೊಂಕನಿಂತುಸುರ್ವುದು ಸೊಕ್ಕೆ (ಭರತ. ೨೪-೪೭); ತನ್ನ ಡೊಂಕನು ತನಗೆ ತಿಳಿಯದೆ ಅನ್ಯರಿಗೆ ಆಡಿಕೊಳುವಗೆ ಶುನಕ ಬುದ್ಧಿಯೊಳು ಬೆರೆದಗೆ ಭಕ್ತಿಯೋಗ್ಯವಲ್ಲೆಂದ (ಕಾಕನಿ. ೨-೩) ; ಅವನ ನುಡಿಯಲ್ಲಿ ಎರಡಿರಲಿಲ್ಲ ನಡೆಯಲ್ಲಿ ಡೊಂಕಿರಲಿಲ್ಲ (ಮತಿಪ. ೬೨). ೭. ವಕ್ರಸ್ವಭಾವವುಳ್ಳುದು ; ಕೀಳುವರ್ತನೆಯುಳ್ಳುದು : ಮನೆ ಡೊಂಕು ಮನಸು ಡೊಂಕಾದರು ನಿಮ್ಮ ಶಿಷ್ಯನ ಮೇಲಣ ಪ್ರೀತಿಯಿಂದ ಜನಕಲ್ಪರಿರ ಬಿಡಯಂಗ್ಯದಿರಿ (ಭರತ. ೩-೭೦). (ಗು). ೮. ಕೊಂಕಾದ; ವಕ್ರವಾದ ; ನೇರವಲ್ಲದ; ಕುಟಿಲವಾದ: ಡೊಂಕುದಾಲದ ನಾಯಕರ ನೀವೇನೂಟವ ಮಾಡಿದಿರಿ (ಪುರಂದ. ೨-೯೦ ಪಲ್ಲವಿ) ; ಯೋಗಿ ಹಳದಿಯ ಚಿಂದಿಬಟ್ಟೆಯನ್ನು ಧರಿಸಿದ್ದ ಕೈಯಲ್ಲಿ ಒಂದು ಡೊಂಕುಕೋಲಿತ್ತು (ದಾಂಪ. ೩೮೭). 'ಡೊಂಕುಗೋಣು' ಪರಾ.

**ಡೊಂಕುಡೊಸುಕು** = ಓರೆಕೋರೆ : (ಆ). **ಡೊಂಕುಬಂಕು** = ಡೊಂಕು ಡೊಸುಕು : (ಆ). [ <ಡೊಂಕು₁ ]

**ಡೊಂಕುಗ** (ನಾ). ವಕ್ರಸ್ವಭಾವದವನು; ವಂಚಕ: "ಕುಟಿಲಂ=ಡೊಂಕುಂ; ಡೊಂಕುಗನುಂ" (ಶಾಶಕ್ಷ. ೨೨೭) [ ಡೊಂಕು$_2$ + – ಗ$_2$ ]

**ಡೊಂಕುಗಾಲು** (ನಾ). ಡೊಂಕಾದ ಕಾಲು ; ಸೊಟ್ಟಗಾಲು : ಕುಸಿದ ನಡುವಿನ ಹೊರಟ ಬೆನ್ನಿನ ಬೀಸುಗೈಗಳ ಡೊಂಕುಗಾಲುಗಳ . . . ತೋಳ ಕಾರೊಡಲ ಕುಟುಬನು (ಬಸಪು. ೨೦-೧೦).
[ ಡೊಂಕು$_2$ + ಕಾಲು$_1$ (<ಕಾಲ್$_1$) ]

**ಡೊಂಕುಗೋಣು** (ನಾ). ಓರೆಯಾದ ಕುತ್ತಿಗೆ ; ಸೊಟ್ಟ ಕತ್ತು ; ವಕ್ರವಾದ ಕಂಠ : (೬). [ ಡೊಂಕು$_2$ + ಗೋಣು (<ಗೋಣ್) ]

**ಡೊಂಕುತನ, ಡೊಂಕತನ** (ನಾ). ೧. ಬಾಗಿರುವಿಕೆ; ಓರೆಯಾಗಿರುವಿಕೆ; ವಕ್ರತೆ : (೬). ೨. ವಕ್ರಸ್ವಭಾವ. **ಡೊಂಕತನ** : ೧. "ನಮ್ರತೆ" (ಗುವಿಕೋ). [ ಡೊಂಕು$_2$ + – ತನ ]

**ಡೊಂಕುನಡೆ** (ನಾ). ಓರೆಯಾಗಿ ನಡೆಯುವಿಕೆ ; ವಕ್ರಗಮನ ; ಸೊಟ್ಟನಡಿಗೆ : "ಸರ್ಪಣಾಂ=ಡೊಂಕುನಡೆ" (ಶಾಶಕ್ಷ. ೭೭) ; "ಕುಟಿಲಾಯಾಂ ಗತೌ, ಡೊಂಕುನಡೆಯೊಳ್" (ಶಾಶಕ್ಷ. ೦೩೪). [ ಡೊಂಕು$_2$ + ನಡೆ$_2$ ]

**ಡೊಂಕುವೆಱು** (ಕ್ರಿ). ಓರೆಯಾಗು ; ವಕ್ರತ್ವವನ್ನು ಪಡೆ : ಬಿಗಿದ ಡೊಂಕುವೆತ್ತ ಬೆರಲೋಳೆಯು ಪೇರ್ದೊಡೆ ವಕ್ರಮಧ್ಯಮುಬ್ಬರಿಸಿದ ಪೇರ್ಬಸಿಱ್ (ವ್ರಹವಿ. ೧೦-೬೦). [ ಡೊಂಕು$_2$ + ಪೆಱು$_1$ ]

**ಡೊಂಕುಹೋಗು** (ಕ್ರಿ). ಬಾಗು ; ಸೊಟ್ಟಾಗು ; ವಕ್ರವಾಗು : ಈ ಯೊಡಲು ಕೈಕಾಲು ಶಿರವಯ್ಯೋಯಿವೀಗಳೆ ಡೊಂಕುಹೋಹವು (ಬಸಪು. ೦೭-೪). [ ಡೊಂಕು$_2$ + ಹೋಗು$_1$ (<ಪೋಗು$_1$) ]

**ಡೊಂಕಿವಣ** 'ಡೊಂಕಿವಣ' ನೋ.

**ಡೊಂಗಱು, ಡೊಂಗುಱು, ಡೊಕ್ಕರ್$_1$, ಡೊಗರು, ಡೊಗಱು, ಡೋಱು, ಡೋಱು, ದೊಂಗರ, ದೊಗರು, ದೋಱು** (ನಾ). ೧. (ಗುಹೆ, ಮರ ಮೊದಲಾದುವುಗಳ ಒಳಗಿನ) ರಂಧ್ರ; ಬಿಲ; ಪೊಟರೆ: ಪರಿವಿಡಿಯಿಂದಯ್ದು ಗುಹೆಯ ಸಾರ್ದದಱ ಡೊಂಗಱದಲ್ಲಿ ಸೊಸೆಯರ ಕುಕುತ ಬರಲೇಕೆ (ಧರಚ. ೪೪-೪೩). ೨. ಹಳ್ಳ ; ಕುಳಿ ; ತಗ್ಗು : ಕರಿಯೊಳೊರ್ಗುಡಿಸಿ ಡೊಂಗಱನನೀಱ್ ಸರವುಗಳೋಳಿಂದದಟುಗೆಟ್ಟು ಬೆಂಡಾದಸುಖಿಗಳನು (ಹರಕಾ. ೯-೩೩) ; ಇಡುಕುಟು ಡೊಂಗಱ ಘಟ್ಟಬೆಟ್ಟದ ಸಿಕ್ಕು ತಡೆಕಟ್ಟು ಸಮತಳವಾಗೆ (ಧರಚ. ೨೮-೩೮). **ಡೊಂಗುಱು** : ೨. ಬಳ್ಳಿಗುರುವಿನ ಕೈ ಬಳ್ಳಿಗುರುಡ ಪಿಡಿದಾ ಕಾಣದೆ ಡೊಂಗುಱವ ಬಿದ್ದಂತೆ ಗುರುಶಿಷ್ಯರೆಂಬುಭಯರು ಯಮಗೊಂಡದಲ್ಲಿ ಬೀಳುವರು (ವಚಸಂ. ೦೨೭-೧೧೭). **ಡೊಕ್ಕರ್$_1$** : (೬). **ಡೊಗರು** : ೧. ಡೊಗರಿನಿಂದ ಆಹಾರಾನ್ವೇಷಣೆಗಾಗಿ ಆಗ ತಾನೆ ಹೊರಗೆ ಬಂದಿದ್ದ ಕಾರೇಡಿಯೊಂದು ತನ್ನ ಬಳಿಗೆ ಕರಿಯ ಕೋಲು ಬರುತ್ತಿದ್ದುದನ್ನು ಕಂಡು ಬೆದರಿ . . . ಡೊಗರಿನ ಕಡೆಗೆ ಓಡತೊಡಗಿತು (ಕಾಮೂರು. ೨೦) ; ಬಹಳ ಹೊತ್ತು ಹುಡುಕಿದ ಮೇಲೆ ಒಂದು ಡೊಗರು ಸಿಕ್ಕಿತು (ಕಂಜಾಮ್ಮ. ೧೦೧): ಇಕ್ಕಟ್ಟಾದ ಬಂಡೆಯ ಡೊಗರಿನಲ್ಲಿ ಒಬ್ಬರ ಹಿಂದೆ ಒಬ್ಬರು ಮೇಲೆ ಹತ್ತಲಾರಂಭಿಸಿದರು (ಭಾರವೀ. ೦೦೩). ೨ : ಮುದುಕಿ ಬಿದ್ದವಳೆ ಡೊಗರಲ್ಲಿ (ಹಳ್ಳಿಯ. ೧೬೭). **ಡೊಗಱು** : ೧. ಒಂದು ದಿವಸದೊಳು ತಾನಿರ್ಪ ನೆಲದ ಡೊಗಱೊಳಗೆ ಹೊಕ್ಕಗೆಯುತ್ತುವಿರೆ (ಸಮ್ಮಳಾ. ೨-೪೩). **ಡೋಱು** : ೨. ಸುಳಿದಲೆಯ ಕೆಮ್ಮಾಸೆಗಳಮಿಗೆ ಬೆಳೆದ ಮುಡುಗುಗಳೊಡ್ಡು ದುರದುಚ್ಚಳಿತ ರೋಮದ ನೊಸಲ ಡೋಱಿಯ. . .ಕದನ ಪ್ರಚಂಡರ ಕಂಡು ಬೆಱಗಾದ (ಕುವ್ಯಾಅ. ೨-೩೦) ; ಮುಱಿದ ಮೂಗುಗಳ ನೊಸಲ ಡೋಱಿಯ. . . ಯಮದೂತರಂದಾಗಸಕೆ ನೆಗಹಿದ ಪಾಶಹಸ್ತರು ಬಂದರಾಕ್ಷಣಕೆ (ನಿಭಾಗ. ೬-೦-೦೯). **ಡೋಱು** ೧. ಮದಹಸ್ತಿಯಿಱಿದ ಘಾಯಂಗಳ ವರಾಹನೆತ್ತಿದ ಡೋಱು[ಪಾಠಾಂ. ಣ]ಗಳ . . . ಕಡವ ತುಳಿದ ಹೆಜ್ಜೆಗಳ ಚಿಹ್ನದ ಬೇಡನಾಯಕರು ನೆರೆದರು (ಹರಕಾ. ೩-೩); ಮಾದ್ರವತಿಯದೆಡೋಱಿನಲಿ ಡಾವರಿಸಿದವು ರಕ್ತಾಂಬುಧಾರೆಗಳು (ಕುವ್ಯಾಅ. ೩-೬೮) ; ಆರಾಘ ಶರಂಗಳಿಂದೆಚ್ಚವರ ತನುಗಳಂ ಡೋಱಿನಿಸಿ (ಹರಿಪು. ೪೯-೨೨). 'ಡೋಱುಗಳೆ', 'ಡೋಱುವೋಗು' ಪರಾ. **ದೊಂಗರ** : ೨. ಸಿದ್ಧನ ಹಳ್ಳಿಯ ಬಳಿ ಒಂದು ದೊಡ್ಡ ದೊಂಗರವಿತ್ತು. ಅದನ್ನು ಹಾದರೆ ಮುನೇಶ್ವರನ ಗುಡಿಯವರೆಗೂ ನಿರ್ಜನವಾದ ದಿನ್ನೆ, ಕೊರಕಲು ಪ್ರದೇಶ (ಊರುಳ. ೦೩೦). **ದೊಗರು** : ೧. ಅಷ್ಟರಲ್ಲಿ ನಾಯಿ ದೊಗರಿನ ಬಾಯಿಗೆ ಮೂತಿಯನ್ನು ತುರುಕಿ ಉಸಿರು ಎಳೆಯುತ್ತಾ ತನ್ನ ಮುಂಗಾಲುಗಳಿಂದ ಬಿಲದ ಬಾಯಿಯನ್ನು ಪರಪರನೆ ಕೆರೆಯತೊಡಗಿತು (ಮುಗಮಾಂ. ೩೭). **ದೋಱು** : ೧. 'ದೋಱುವೋಗು' ಪರಾ.
[ ದೇ.೩ ತಮಿ. ಟೊಱು ; ತೆಲು. ಡೊಂಗು, ದೊಂಗು ]

**ಡೊಂಗು** (ಕ್ರಿ). "ಕಂಪಿಸು ; ನಡುಗು" (ಬಾರಪು. ಕೋಶ) : ರವಿಬಿಂಬಂ ಪ್ರತಿಬಿಂಬಿಸಿರ್ದದಱೊಳಂ ತೋಱುತ್ತಿರಲ್ ಕಂಡು ಮದ್ಯಮುಖಾಸ್ವಾದಿಸುತಿರ್ದವಳ್ . . . ಪೋಗುಪೋಗೆಂದು ಡೊಂಗುವ ಕೈಯಂ, ಮಿಗೆ ನೀಡಿ ಮತ್ತೆ ಬಲಿದೌದಂ ಕಚ್ಚುತಂ ನೂಂಕಿದಳ್ (ಬಾರಪು. ೧೦-೦೩೩).
[ <ಡೊಂಕು$_1$ ? ]

**ಡೊಂಗುಱ** 'ಡೊಂಗಱ' ನೋ.

**ಡೊಂಡೊಂಡೆ** (ನಾ). ದಿಂಡುರುಳಿಕೆ (?) : ಡಂಭಕ ಭಕ್ತಿಗೆ ಮೆಚ್ಚಿ ಕೊಡನು ಕೃಷ್ಣ ಡೊಂಬಲಾಗವು ಹಾಕಿ ಡೊಂಡೊಂಡೆ ಹೊರಳಿದರಿಲ್ಲ (ಪುರಂದ. ೩-೦೩೮ ಅನುಪಲ್ಲವಿ). [ ? ]

**ಡೊಂಬ$_1$** 'ದೊಂಬ' ನೋ.

**ಡೊಂಬ$_2$** 'ದಂಬ' ನೋ.

**ಡೊಂಬಕಾಗೆ** (ನಾ). ಒಂದು ಬಗೆಯ ಕಾಗೆ; "(ಕಪ್ಪು ಗರಿಗಳೂ ಒರಟು ಧ್ವನಿಯೂ ಉಳ್ಳ, ಮುಖ್ಯವಾಗಿ ಮಾಂಸವನ್ನು ತಿಂದು ಜೀವಿಸುವ, ಅನೇಕ ವೇಳೆ ಸಾಕಿ ಪಳಗಿಸಿದ ಮತ್ತು ಜನಬಳಕೆಯಲ್ಲಿ ದುಶ್ಶಕುನ ಸೂಚಕವೆಂಬ ಭಾವನೆಯುಳ್ಳ) ಕಾಗೆಜಾತಿಯ ಒಂದು ದೊಡ್ಡ ಹಕ್ಕಿ" (Raven. ಇಂಕಿನಿ.) : ಮೊಲ ಮತ್ತು ನರಿಗಳನ್ನು ನಾಯಿಗಳಿಂದ ಬೇಟೆಯಾಡದೆ, ಡೊಂಬಕಾಗೆ, ಡೇಗೆ, ಕಾಗೆ ಮತ್ತು ರಣಹದ್ದುಗಳಿಂದ ಬೇಟೆಯಾಡುತ್ತಾರೆ (ಪ್ರವಾಇ. I, ೦೩).
[ ಡೊಂಬ$_1$ (<ದೊಂಬ) + ಕಾಗೆ ]

**ಡೊಂಬಕಾಣಿಕೆ** (ನಾ). ಒಂದು ಬಗೆಯ ತೆರಿಗೆ (?) : ಯಿವಿರ್‍ಗೆ ಛಪರ ಕಾಣಿಕೆಯಿಲ್ಲ ಮರ್ರಿಕಾಣಿಕೆಯಿಲ್ಲ ಡೊಮ್ಮಕಾಣಿಕೆಯಿಲ ಲಿಂಗಕಾಣಿಕೆಯಿಲ (ಎಕ. XVI, ಗುಬ್ಬಿ. ೬೪-೩೩ ; ?).
[ ಡೊಂಬ$_1$ (<ದೊಂಬ) + ಕಾಣಿಕೆ (<ಕಾಣ್ಕೆ) ]

**ಡೊಂಬತಿ** 'ದೊಂಬಿತಿ' ನೋ.

**ಡೊಂಬರಗೆ** (ನಾ). (ಉಕ) ಎತ್ತಿನ ಗಾಡಿಯ ತೋಳು ; ಗುಜ್ಜುಗಳ ಮೇಲ್ಭಾಗದಲ್ಲಿ ಕೂಡಿಸಿದ ಬಿದಿರಬೊಂಬು. [ ? ]

**ಡೊಂಬವಱ$^3$** (ನಾ). ಡೊಂಬರು ತಮ್ಮ ಆಟದಲ್ಲಿ ಬಾಜಿಸಲು ಬಳಸುವ ಒಂದು ಬಗೆಯ ಚರ್ಮವಾದ್ಯ ; ದಡ್ಡಸ : "ದಡ್ಡಸ-ಡೊಂಬವಱ$^3$" (ಶಮದ. ಷರಿ. ೨): "ದಡ್ಡಸವೆಂದು ಡೊಂಬವಱ$^3$" (ಶಬ್ದಾನಿ. ೦೪).
[ ಡೊಂಬ$_1$ (<ದೊಂಬ) + ಪಱ$^3_1$ ]

**ಡೊಂಬವಿದ್ದೆ** (ನಾ). ಯಕ್ಷಿಣೀ ವಿದ್ಯೆ ; ಬೇರೆಬೇರೆ ವೇಷವನ್ನು ಧರಿಸುವ ಮಾಯಾ ವಿದ್ಯೆ ; ಮೋಸಗಾರಿಕೆ ; ವಂಚಕತನ : ಏನಾನಾವ ಪಂದಿಯಂದೆನಿತಾನುಂ ತೆಱವಾಗಿ ಡೊ[ಪಾಠಾಂ. ದೊ]ಂಬವಿದ್ದೆಯನಾಡಲ್ ನೀನಱವೆಯುಱದಿರ್ದ ದೊಡಾನಱವೆಂ ನಿನ್ನನಿಲ್ಲಿ ದೆಸೆವಲಿಗೆಯ್ಮಲ್ (ಪಂಪಭಾ. ೬-೩೭). [ ಡೊಂಬ$_2$ (<ದಂಬ) + ವಿದ್ದೆ ]

**ಡೊಂಬಿ$_1$** 'ದೊಂಬಿ' ನೋ.

**ಡೊಂಬಿ$_2$** 'ದಂಬ' ನೋ.

**ಡೊಂಬಿಗ$_1$** 'ದೊಂಬಿಗ' ನೋ.

**ಡೊಂಬಿಗ$_2$** (ನಾ). ಒಣಹೆಮ್ಮೆಯನ್ನು ತಾಳಿದವನು ; ಆಡಂಬರಕಾರ ; ಡಾಂಭಿಕ : 'ರಣಡೊಂಬಿಗ' ಪರಾ. [ಡೊಂಬು$_2$ (<ದಂಬ) + – ಇಗ]

**ಡೊಂಬಿಗಾರ** 'ದೊಂಬಿಗಾರ' ನೋ.

**ಡೊಂಬಿಗೈ** (ಕ್ರಿ). ಗುಂಪುಸೇರು ; ಒಟ್ಟಾಗು : ಡೊಂಬಿಗೈದಲ್ಲಲ್ಲಿ ದನಿಗೈವ ಕಾರಂಡಚಕ್ರದಿಂ (ಪಂಚತಂ. ೨-೧೪-೨೩). [ಡೊಂಬಿ$_1$ (<ದೊಂಬಿ) + ಗೈ (<ಕೆಯ್$_1$)]

**ಡೊಂಬಿತಿ$_1$** 'ದೊಂಬಿತಿ' ನೋ.

**ಡೊಂಬಿತಿ$_2$** (ನಾ). ಮಾಯಾವಿನಿ ; ಕೆಟ್ಟವಳು ; ಧೂರ್ತೆ : ಪಂಬಿನಾಲದ್ದುಗೆಯಂ . . . ಡೊಂಬಿತಿ ಜೋಡೆ ಸೋಲದಿಂ ಬದ್ದಿಸಿದಪ್ಪಳೆಂದು ನೆಱೆ ದೂಱುವರೆನ್ನನವಳ್ಗಿಯಿಂ ಪೆಱರ್ (ಧರ್ಮಾಮೃ. ೧೦-೨೦೨). [ಡೊಂಬು$_2$ (<ದಂಬ) + – ಇತಿ$_1$ (<– ಇತ್ರಿ)]

**ಡೊಂಬಿದೈವ** (ನಾ). ವಂಚನೆಯ ದೈವ ; ಮೋಸಗಾರ ದೇವರು : ಕೊಂಬು ಹೋತ ಕುಱಿ ಕೋಣನ ಬಲಿಗೊಂಬ ಡೊಂಬಿದೈವಗಳ ಭಜಿಸದಿರು ಮನವೆ (ಕನಕ. ೧೭೩-೨). [ಡೊಂಬು$_2$ (<ದಂಬ) + ದೈವ]

**ಡೊಂಬಿಬೀಸು** (ನಾ). ಕತ್ತಿವರಸೆಗಳಲ್ಲೊಂದು ; ಖಡ್ಗ ಬೀಸುವಿಕೆಗಳಲ್ಲಿ ಒಂದು ವಿಧಾನ (?) : ಆ ಸ್ಥಾನದಲ್ಲಿ ದೇಹಭ್ರಮಣಉ ಅಲ್ಪವಾಗಿ ಯಿದ್ದಂಥಾ ಪಾದಗಳ ಗಮನಉ ಬಂಡಿಕೋಲಿನ ಭ್ರಮಣವು ಅವದು ಅದು ಡೊಂಬಿಬೀಸುಯೆಂದು ತಿಳಿವರು (ಅಶ್ವಶಾ. ೩-೨೫). [ಡೊಂಬಿ$_2$ + ಬೀಸು$_2$]

**ಡೊಂಬಿಮಾಡು** 'ದೊಂಬಿಮಾಡು' ನೋ.

**ಡೊಂಬಿವರಿ** (ಕ್ರಿ). ಗುಂಪಾಗಿ ನುಗ್ಗು ; ಒಟ್ಟಿಗೆ ಧಾವಿಸು ; ಮೊತ್ತವಾಗಿ ಮುಂದೆ ಸಾಗು: ಡೊಂಬಿವರಿದಿಱಿದಾಡಿ ಸೂತ್ರದ ಬೊಂಬೆಯಂದದಿ ಕೆಡೆದರರಥರು (ಶಾಕ್ಮಭಾ. ೨೩-೨೪). [ಡೊಂಬಿ$_1$ (<ದೊಂಬಿ) + ವರಿ$_2$]

**ಡೊಂಬಿಸು** (ಕ್ರಿ). ಮೋಸಮಾಡು ; ವಂಚಿಸು : ಜನಮುಳ್ಳನಂ ಕರು ಡೊಂಬಿಸಿ ತಿಂಬರ್ (ಜೀವಸಂ. ೭೯-೧೪). [ಡೊಂಬು$_2$ (<ದಂಬ) + – ಇಸು$_3$]

**ಡೊಂಬು$_1$** 'ದೊಂಬಿ' ನೋ.

**ಡೊಂಬು$_2$** 'ದಂಬ' ನೋ.

**ಡೊಂಬುಮಾಡು** 'ದೊಂಬಿಮಾಡು' ನೋ.

**ಡೊಂಬೆ$_1$** 'ದೊಂಬಿ' ನೋ.

**ಡೊಂಬೆ$_2$** (ನಾ). ಮೋಸಗಾತಿ ; ವಂಚಕಿ : ಒಡದನೊಳ್ ಪರಾಂಗನೆಯೊಳೋತೊಡಗೂಡಿದನೊಳ್ ಸರಾಗದಿಂ ಕೂಡುವಳೆಂಬ ಡೊಂಬೆ ಸಿರಿ ಪಾತಕಿ ನಾಣಿಲಿ ಕೆಟ್ಟ ಬೂತು ನಾಲ್ಕೊಡೆಯವಳ್ಗದಕ್ಕುಮುಬ್ಬಿದಾವಳು ಮೊಲ್ಲಳೆ ಕೀರ್ತಿಯೆಂಬವಳ್ಗೀಡಳು ನಿಂದು ಬೀರಸಿರಿ ಕೇಳಳವಂದಿರ ಮಾತನಪ್ಪಡಂ (ಬಂಹರಿ. ೧೧-೦೦೪). [ಡೊಂಬು$_2$ (<ದಂಬ) + – ಎ$_2$]

**ಡೊಕ್** (ನಾ). (ಆಯುಧದಿಂದ ತಿವಿಯುವುದು ಮೊದಲಾದ ಸಂದರ್ಭದಲ್ಲಿ ಬಳಸುವ ಒಂದು ಅನುಕರಣ ಶಬ್ದ : 'ಡೊಕ್ಕನೆ' ಪರಾ.

**ಡೊಕ್ಕನೆ** (ಅ). ಡೊಕ್ ಎಂಬುದಾಗಿ : ಡೊಕ್ಕನೆ ಸುರಿಗೆಯೊಳುರವಂ ಬಿಕ್ಕನೆ ಬಿರಿಯಿಱಿದು (ಪಂಪಭಾ. ೦೨-೦೫೩). [ಡೊಕ್ + – ಅನೆ$_1$]

**ಡೊಕ್ಕರ$_1$** 'ದೊಂಗಟ' ನೋ.

**ಡೊಕ್ಕರ$_2$**, ಡೊಕ್ಕರೆ, ಢಕ್ಕರ, ಢೊಕ್ಕರ, ದೊಕ್ಕರಿ (ನಾ). ೧. ಬಲವಾದ ಹೊಡೆತ; ಒದೆತ; ಮುಷ್ಟಿಯ ಪೆಟ್ಟು; ಗುದ್ದು : "ಡೊಕ್ಕರ[ಪಾಠಾಂ. ಳ] ಗುದ್ದುಂ" (ಭಾಱಿ. ೫೬). ೨. ಮಲ್ಲಯುದ್ಧದ ಒಂದು ಪಟ್ಟು. P ಪ್ರತಿಮಲ್ಲನ ಕೊರಳ ಹಿಂಭಾಗವನ್ನು ಒಂದು ಕಂಕುಳಲ್ಲಿ ಇರಿಸಿಕೊಂಡು, ಕುತ್ತಿಗೆಯನ್ನು ಮುಂಗೈಯಿಂದ ಅದುಮುತ್ತ ಇನ್ನೊಂದು ಕೈಯಿಂದ ಮೊಣಕಾಲ ಸಂಧಿಗಳನ್ನು ಗಟ್ಟಿಯಾಗಿ ಹಿಡಿದೆಳೆದು ದೇಹವನ್ನು ಹುದುಗಿಸಿ ಕಾಲುಗಳೆಡೆಗೆ ಹೊಟ್ಟೆಯನ್ನು ಎರಡು ತೊಡೆಗಳಿಂದ ಒತ್ತಿಡಿಸುತ್ತ ಅವನಿಗೆ ಪ್ರಾಣಾಂತಕವಾದ ನೋವನ್ನೊದಗಿಸುವ ಜಟ್ಟಿಕಾಳಗದ ಒಂದು ಪಟ್ಟು: ಸ್ಫುರಿತ ಕೃಪಾಣ ಪಾಣಿಗದಿರಂ ನಡೆದಟ್ಟುಱೆ ತೊಟ್ಟುಪಾಯ್ದು ಡೊಕ್ಕರದೊಳೆ ಮಿಕ್ಕ ದಿಕ್ಕರಿಯನಿಕ್ಕುವವೊಲ್ ನೆಲಕಿಕ್ಕಿ (ಪಂಪಭಾ. ೧೧-೧೧೪); ತಗುಳ್ದು ಪತ್ತಿಸುವ ಮಾನಸಗೋಳಮೆನಿಪ್ಪ ಡೊ[ಪಾಠಾಂ. ಢ]ಕ್ಕರಕೆಕ್ಕಿದ ವಜ್ರಲೇಪವೆನೆ (ಚಂದ್ರಪ್ರ. ೫-೮೦); ಆಂ ಪಿಡಿದುದೆ ಕತ್ತರಂ ಕರವಳಂ ಸರವಟ್ಟಣೆ ಹತ್ತೆ ಡೊಕ್ಕರಂ . . . ಮುಹಡಂ ದಣಾವಟ್ಟೆ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ (ಅನಂತಪು. ೨-೨೭) ; ಸಿಕ್ಕಿದವು ಹೆದ್ದೊಡೆಗಳುರಗನ ತೆಕ್ಕೆಯಲಿ ಡೆಂಡಣಿಸಿ ಫಣಿಪತಿ ಡೊಕ್ಕರಕೆ ಹಬ್ಬಿದನು ಬಿಗಿದನು ಭಟನ ಪೇರುರವ (ಕುಮಾ.ಅ. ೦೩-೩೩) ; ಅಧಟಿಂದಂ ಮೂಱುಂ ಲಗ್ಗದ ನಾಲ್ಕು ಸ್ಥಾನಮಯ್ದು ಡೊಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲತೆಱದ ಪಾತವಂ ನೆಱೆ ಮೆಱೆದರ್ (ತ್ರಿಷಷ್ಟಿ. ೨೭-೧೭) ; ಆಯತಿಕೆ ಬಂಧಂ ಡೊಕ್ಕರಂ (ಕಬಕಂ. ೪-೭೭) ; ಜಟ್ಟಿಗರ ಡೊಕ್ಕರಂ ಗಳಹತ್ತಂ ಮೊದಲೆನಿಸಿದ ಪಲವುಂ ಪಟ್ಟುಗಳ್ (ಮುಕಾಚ. ೨೦೭-೪೯). **ಡೊಕ್ಕರೆ : ೨.** ವೀರ ಚಿಕದೇವಂ ನೋಟಕರ್ ಮೆಚ್ಚೆ ಮಲ್ಲಗೆಯೊಳ್ಡೊಕ್ಕರೆಯೊಂಟೆ ಮಂಡಿ ಕರಲಂ . . . ಮಗುಟ್ಟಂತೀ ಗತಿಭೇದದಿಂ ತೊಡಕಿ ತೋರ್ಕುಂ ಸಾಧಕಪ್ರೌಢಿಯಂ (ಚಿವಿ. ೪-೦೪೬). **ಢಕ್ಕರ: ೨.** ನಾಲ್ಕುಂ ಸ್ಥಾನದೊಳಂ ಮೂಱುಂ ಲಗ್ಗದೊಳಂ ಐದುಂ ಢ[ಪಾಠಾಂ. ಡೊ]ಕ್ಕರದೊಳಂ . . . ಪಲತೆಱದ ಪಾತಂಗಳೊಳಂ ನೆಱೆದು (ಚಂದ್ರಪ್ರ. ೫-೭೭ ವ). **ಢೊಕ್ಕರ : ೨.** ವರ್ಗ ಚತುರ್ಥಾಕ್ಷರಂಗಳ್ಗೆ. . .ಢಂಕೆ, ಢೊಕ್ಕರಂ (ಕಮದ.೦೫ ಪ್ರಯೋ). ಕತ್ತರಂ ಕರವಡಂ ಸೀವಟ್ಟಣಂ ಢೊಕ್ಕರಂ ಪಸರಂ ಸಂದಣಾವಟ್ಟ . . . ಎಂದು ಮಲ್ಲವಾತುಮಂ ನುಡಿದು (ಪಾರಪು. ೧೬-೧೪). **ದೊಕ್ಕರಿ :** 'ದೊಕ್ಕರಿಗೊಳ್' ಪರಾ. [?. / ತೆಲು. ಡೊಕ್ಕರ]

**ಡೊಕ್ಕರ$_3$**, ಡೊಕ್ಕಾರ (ನಾ). ಒಂದು ದೇಶದ ಹೆಸರು : ಕ್ಷಾರಕರ ಹೊಣಕರ ಡೊಕ್ಕರಪಾರಕರ ಬಾರಸಹಣ ಭೂಪರೊಳಾರುಭಟೆಯಲಿ ಕಾದಿ (ಕುಮಾ.ಸ. ೩-೨೮). **ಡೊಕ್ಕಾರ :** ಅಂಗ ವಂಗ ಕಳಿಂಗ . . . ಡೊಕ್ಕಾರ ತುರುಷ್ಕ ಮರುಪ್ರಭೃತಿಭೂಪಾಲಕರಿಂ ಭಯಾನಕರಸಮುಂ . . . ನೆಗಟುತ್ತುಮಿರೆಯಿರೆ (ಜಗವಿ. ೨-೫೯ ವ). [?]

**ಡೊಕ್ಕರಂಗೊಳ್**, ದೊಕ್ಕರಿಗೊಳ್ (ಕ್ರಿ). ೧. ಒದೆತದಿಂದ ಅಥವಾ ಮುಷ್ಟಿಯ ಪೆಟ್ಟಿನಿಂದ ನಜ್ಜುಗುಜ್ಜಾಗು : ಅಂತಿಕ್ಕಿ ಡೊಕ್ಕರಂಗೊಂಡುರಸ್ಥಳ ಪರಿವಿಷ್ಟರನಾಗಿರ್ದ ಕೃಷ್ಣನಂ ದಕ್ಷಿಣದಿಕ್ಪಾಲಕಂ ನಿರೀಕ್ಷಿಸಿ (ಜಗವಿ. ೭-೨೫ ವ). ೨. ಡೊಕ್ಕರವೆಂಬ ಮಲ್ಲಯುದ್ಧದ ಪಟ್ಟನ್ನು ಹಾಕು; ಡೊಕ್ಕರಪಟ್ಟಿನಿಂದ ಆಕ್ರಮಿಸಿ ಹಿಡಿ : ಕೋಡ ಕೆಯ್ಯ ಕಾಲೆಡೆಗಳೊಳ್ ಬಿಣ್ಪುಮಂ ಪೆಣೆವಂದದಿಂದೇರ್ದು ಡೊಕ್ಕರಂಗೊಂಡು ಕುರುಕ್ಷೇತ್ರದಿಂದತ್ತ ಪನ್ನೆರಡುಯೋಜನಬರಮೊತ್ತುವುದುಂ (ಪಂಪಭಾ. ೧೦-೭೪ ವ). **ದೊಕ್ಕರಿಗೊಳ್: ೨.** ಭುವನೈಕಮಲ್ಲಂ ಮೋಹಮಲ್ಲನಕ್ಕ ತುಳದಿಂದಕ್ಕುಳಿಸದೆ ದೊ[ಪಾಠಾಂ. ಡೊ]ಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದು (ಪಾರ್ಶ್ವಪು. ೦೬-೧೦ ವ). [ಡೊಕ್ಕರ$_2$ + ಕೊಳ್$_1$]

**ಡೊಕ್ಕರಣೆ** (ನಾ). = ಡೊಕ್ಕರ$_2$ ೨ : ಲಗಡಿಯುಲಿ ಅಟಕಟಸುವಂತರ ಲಗಡಿಯಲಿ ಲಾಲಿಸುವ ಡೊಕ್ಕರಣೆಗಳ ಬಿಗುಹಿನ ಬಿಡೆಯ ಬಿನ್ನಾಣದಲಿ ಹೆಣಗಿದರು (ಕುಮಾ.ಭ. ೧೯-೪೩). [ ಡೊಕ್ಕರ$_2$ + – ಅಣೆ$_4$ ]

**ಡೊಕ್ಕರಪಟ್ಟು** (ನಾ). = ಡೊಕ್ಕರ$_2$ ೨ : ಒಂದೇ ಸಮನಾಗಿ ಭೀಮ ಜರಾಸಂಧರು ಡೊಕ್ಕರಪಟ್ಟು, ಲಗಡಿ, ಕತ್ತರಿಪಟ್ಟು, ನಾಗಬಂಧ ಮುಂತಾದ ಹಲವು ಪಟ್ಟುಗಳನ್ನೊಡ್ಡಿ ಕಾಳಗ ನಡೆಸಿದರು (ರಾಜಸೂ. ೨೩). [ ಡೊಕ್ಕರ$_2$ + ಪಟ್ಟು$_1$ ]

**ಡೊಕ್ಕರವಾಯ್** (ಕ್ರಿ). ೧. (ಕುತ್ತಿಗೆಯನ್ನು) ತೋಳುಗಳಿಂದ ಬಳಸಿ ಬಿಗಿಯಾಗಿ ಹಿಡಿದುಕೊಳ್ಳು : ಕೊರಳ ಡೊಕ್ಕರವಾಯ್ದು ಹಣೆ ಯಿಂದೊರಸಿ ಹಣೆಯನು . . . ಮೋಹದಲೊಸೆದು ಮುಂಡಾಡಿ (ತೊರವೆ. ೨-೩-೪೦). ೨. = ಡೊಕ್ಕರಂಗೊಳ್ ೨ : ಹಾವು ಹದ್ದಿನ ಪದಹತಿಗೆ ನೆಲೆ ನೋವವೊಲು ನೆಲಕೊಱಗಿ ರಕ್ಕಸನಾ ವಿಘಾತಿಯೊಳೆದ್ದು ಡೊಕ್ಕರ ವಾಯ್ದು ನಗ್ಗಿಜನ (ತೊರವೆ. ೬-೧೯-೬೦). [ ಡೊಕ್ಕರ$_2$ + ಪಾಯ್$_1$ ]

**ಡೊಕ್ಕರವಿಕ್ಕು** (ಕ್ರಿ). = ಡೊಕ್ಕರಂಗೊಳ್ ೨ : ಹೊಯ್ದು ತುಱುಬನು ಹಿಡಿದು ತಡೆಗಾಲೊಯ್ದು ಕೆಡಹಿದನಸಬಡಿದು ಹೊಯ್ ಹೊಯ್ದು ಬಿಡೆ ಮೊಪ್ಪರಿಸಿ ಡೊಕ್ಕರವಿಕ್ಕಿ ರಾಘೆಯಲಿ (ಕುಮಾ.ಭ. ೧೯-೪೪). [ ಡೊಕ್ಕರ$_2$ + ಇಕ್ಕು ]

**ಡೊಕ್ಕರಿ** (ನಾ). ಜಲಕ್ರೀಡೆಯಲ್ಲಿ ವಿನೋದಕ್ಕಾಗಿ ಒಬ್ಬರ ಮೇಲೊಬ್ಬರು ನೀರನ್ನೆರಚಲು ಬಳಸುವ (ವಿವಿಧಾಕಾರದ) ಜಲಯಂತ್ರ ; ಜೀರುಕೊಳವೆ ; ಪಿಚಕಾರಿ : ಡೊಕ್ಕರಿಗಳಂ ಮೊಗೆದೊರ್ಬರೊರ್ಬ ರಾಗಳ್ . . . ಪೊಯ್ದರೊಲವಿಂ ವಿಜಯಾವತಿಯುಂ ನರೇಂದ್ರನುಂ (ಕು ಸು ಮಾ. ೩-೦೩೩) ; ಸುಧಾಂಶುಕಳೆಗಳವೆನೆ ಚಂದ್ರೋಪಲಿಂದುಶಿಲೆಯ ಡೊಕ್ಕರಿಗಳನಾಗಳೆ ಕೊಂಡು (ಶಾಂತೀಶ್ವ. ೧೦-೧೬೧). [ ? ]

**ಡೊಕ್ಕರಿಸು, ದೊಕ್ಕರಿಸು** (ಕ್ರಿ). ೧. ಹೊಡೆ; ಒದೆದು ಕೆಳಕ್ಕೆ ಅಪ್ಪಳಿಸು; ಗುದ್ದು : ಮಚ್ಚರಂ ಬೇಡೆಱಿಗಂ ನೀವೆಂಜಪೊಲ್ ಡೊಕ್ಕರಿಸಿ ದಿಗಿಭಹಸ್ತಂಗಳಂ (ಅರ್ಧನೇ. ೮-೯೦) ; ಧಿಕ್ಕರಿಸಿ ಡೊಕ್ಕರಿಸಿ ಝುಂಕಿಸಿ, ಸ್ತುರವನಗ್ಗಿ . . . ಧನದನೀಶಾನ್ಯರೆಂಬಕರ (ಹರಿಶ್ಚ. ೦-೪೩) ; ಹರಿ ಮದೋತ್ಕಟ ದಂತಿಯನು ಡೊಕ್ಕರಿಸಿ ಡಾವರಿಸುವವೊಲು (ಕುಮಾ.ಭ. ೦೯-೪೯) ; ವಾಮಚರಕಳದೆರಡು ಬೆರಳಿಂದ ಡೊಕ್ಕರಿಸುತಸುರೆಯಂ (ಶಂಕರಾ. ೩-೩-೦೬). ೨. ಹಿಸುಕು ; ನಜ್ಜುಗುಜ್ಜು ಮಾಡು ; ಸದೆಬಡಿ ; ಸಾಯಿಸುವಂತೆ ಬಡಿ : ಕುರುಸೂನುವನಿರದಿಕ್ಕಿ ಮೆಟ್ಟಿ ಡೊಕ್ಕರಿಸಿದಪೆಂ (ಗದಾಯು. ೬-೨೩) ; ಪೊಡೆವಂ ಕಾಲನನಿಕ್ಕಿ ಡೊಕ್ಕರಿಸುವಂ ದೈತೇಯನಂ (ಜಗವಿ. ೩-೨೦) ; ಇಕ್ಕಿ ಕೆರಳ್ದು ಡೊಕ್ಕರಿಸಿ (ವಿಷ್ಣುಪು. ೩-೩-೬೪). ೩. ಡೊಕ್ಕರಪಟ್ಟನಿಂದ ಬಿಗಿಹಿಡಿ : ಒರೊರ್ವರನುರವಣೆಯಿಂದಿಕ್ಕುವೋರೊರ್ವರಂ ಡೊಕ್ಕರಿಸುತ್ತೋರೊರ್ವರಂ ಚಾಳಿಸುವ ಪದದೊಳ್ (ಜಗವಿ. ೬-೬೪) ; ಬೊಕ್ಕೆಯುದನುಮಾನದೊಳು ಡೊಕ್ಕರಿಸಿ ಒಡಿವರಿದಿರುದಿಸೆ ಕಲ್ಲಮಾನಿಸರಂತಿರ್ಪ ಮಲ್ಲರ ನೆರವಿಗಳೊಳಂ (ಗಿರಿಜ. ೨-೦೦೫ ಪ) ; ತಡೆದರೆ ತಡೆದೊದ್ದ ಲೊದ್ದೆ ಬಿಕೆಯೊಟ್ಟು ಹೊಡೆದರೆ ಹೊಡೆದು ಡೊಕ್ಕರಿಸಿ ಕೆಡೆದರೆ ಕೆಡೆದು ಗುರ್ಗೆಳೊಲೊತ್ತಿ ಭೀಕರವಡೆದು ಹೊಯ್ದಾಡಿದುವೆರಡು (ಮೋಹತ. ೩೪-೨೮). ೪. (ಅಲಂ) ಕೊರಳನ್ನು ಬಿಗಿ ಹಿಡಿ; ಉಸಿರಾಟವನ್ನು ತಡೆ: ಬಿಕ್ಕುಳಿಯ ತಾಳಿಗೆಯ ಮೂಗಿನೊಳೊಕ್ಕು ರುಧಿರದ ಧಾರೆ ಬಿಗಿದುಬ್ಬಿ ಡೊಕ್ಕರಿಸಲಸು ನೀಗಿತಸುರನ ತನುವ ನಿಮಿಷದಲಿ (ಕುಮಾ.ಭ. ೬೦-೩೪). **ದೊಕ್ಕರಿಸು** : ೧. ಮರಳಿ ಸುಗ್ರೀವನು ರಿಪುವ ದೊಕ್ಕರಿಸಿ ತಿವಿದನು (ಅರಾಮಾ. ೪-೨-೩). ೩. ತುಡುಕಿ ಪಿಡಿದು ತೊಡೆಗಳಂ ನಡುವಂ ದೊಕ್ಕರಿಸಿ ಬಾಹುಗತ್ತರಿಯಿಂ ಗಳಮನೊತ್ತುವುದುಂ(ಮುಹಾಸೀ. ೬-೬೩ ಪ). [ ಡೊಕ್ಕರ$_2$ + – ಇಸು$_2$ ]

**ಡೊಕ್ಕರೆ** ' ಡೊಕ್ಕರ$_2$ ' ನೋ.

**ಡೊಕ್ಕಾರ** 'ಡೊಕ್ಕರ$_3$' ನೋ.

**ಡೊಕ್ಕು$_1$** ( ? ) (ಕ್ರಿ). (?) : ವರವೇದಮದು ಕರ್ತೃವಲ್ಲದೊಡೆ ಡೊಕ್ಕುದುರುಕರ್ಮದಿಂದೊಗೆದ ಸತ್ಪುಣ್ಯನಿಕರಮಂ ಪರವರ ಸ್ವರ್ಗಾಪವರ್ಗಮುಂ (ಅರಾಜ. ೩-೨). [ ←ತೆಲು. ಡೊಕ್ಕು = ನಾಶವಾಗು ]

**ಡೊಕ್ಕು$_2$** (ನಾ). ಒಂದು ಅನುಕರಣ ಶಬ್ದ : ಹಿಮದ ಹೊಯ್ಲಿಗೆ ಹೊದಕೆಗೊಂಬನೆ ತಮವಿರೋಧಿ ವಿಲೋಕನದಲುಭ್ರಮಿಸೆ ಹಳಚಿತು ಡೊ[ಪಾಠಾಂ. ಹೊ]ಕ್ಕು ದಡದುಡ ದೊಪ್ಪು ದಿಪ್ಪೆನಲು (ತೊರವೆ. ೬-೪೩-೩೦).

**ಡೊಕ್ಕೆ, ದೊಕ್ಕೆ** (ನಾ). ೧. ಮೈ ; ದೇಹ ; ಶರೀರ : "ಒಡಲು ಮೈ ಡೊಕ್ಕೆ" (ಕಬ್ಬಿಮಂ. ೬೨) ; ಡೊ[ಪಾಠಾಂ. ದೊ]ಕ್ಕೆ ಬೇಹಾತ್ಮ ಬೇಱೆಂದೆಡೆವಿಡದ ಕಣ್ಣಿಕ್ಕಿ ಜಾನಿಸುವ ತಾಪಸಗೆ (ಭರತ.೩-೪೨) ; ನಿನ್ನಯ ಡೊಕ್ಕೆಯಂ ಸಿಗಿದು ರಣಬಲಿಯನೀಯದೊಡಾನು ಚಕ್ಕಸದ ಬಲುಗೆಯ್ಯ ವೀರನೆ (ಕೃಷ್ಣರಾಜ. ೦೩) ; ಈ ಡೊಕ್ಕೆ ಬೀಳಲು ಸುರರ ಸೇರಿಸಲು ನೀವೆ ಗತಿಮತಿ (ತುರಂಗ. ೨೩-೨೩) ; ಶರಹತಿಯನನಿಬರ ಡೊಕ್ಕೆಗಳಂ ಪೋಱಗಳೆದನಾ ನೃಪತಿಲಕಂ (ಅಜಿತ. ೨-೦೪). ೨. ಹೊಟ್ಟೆ; ಉದರ: "ಡೊಕ್ಕೆಯೆನಲುದರ" (ಅಭಿಧಾ. ೦೨೪) ; ಮನದೊಳಗೆ ಕೌರವನ ತಿಕ್ಕಿ ತನಿಗರುಳ ರಕ್ತಂಗಳಂ ಶಾಕಿನಿಗೆ ಡೊಕ್ಕೆಯಂ ತುಂಬಿಸುವೆವೆಂದು ಭೀಮಾರ್ಜುನರು ನಿಂದಿರಲು (ತುರಂಗ. ೨೯-೨೦) ; ಭೂತಗಣಕೆ ಡೊಕ್ಕೆ ತುಂಬಿತು (ತುರಂಗ. ೪೩-೯). ೩. (ಅಲಂ) ಮನಸ್ಸು ; ಅಂತರಂಗ : ಎನಗೆ ಈತ ಮಿತ್ರನೀಯಾತ ಸೇವಕನಯಾತ ಗುಣಸಾಧುವೆಂದು ಡೊಕ್ಕೆಯೊಳಗಿರಿಸದಿರು ಬೆಳಸದಿರು ಮುಂದೆ ವಿಷವಕ್ಕು . . . ಪಾಂಡವರ ನೆಳಲಿವರು (ತುರಂಗ. ೨೩-೨೯). ೪. ಒಂದು ಬಗೆಯ ಪಾತ್ರ (?) : ಡೊಕ್ಕೆಯೊಳಗಣ ಕಸುರ ಪರುವೆನಗೆ ನೀಡೆ (ಶಿಶು. ೬೯-೯). **ದೊಕ್ಕೆ** : ೧. ಇಕ್ಕೆದಳು ಬಲೆಯ ಕೃಶತರಗಾತ್ರನಾದೆ ಬರಿ ದೊಕ್ಕೆಯನ್ನುಡಿ[ ೪ ]ಸಿ ಫಲವೇನು(ತುರಂಗ. ೨-೨೩).

[ ದೇ.ತ ತೆಲು. ಡೊಕ್ಕ; ಕುೞ. ಡಕಿ = ಎದೆ, ಎದೆಮೂಳೆ; ತುವಿ. ಡೋಕ್ಕು = ಅಸ್ಥಿಪಂಜರ ]

**ಡೊಗರು** 'ಡೊಂಗಱು' ನೋ.

**ಡೊಗರುಬೀಳು, ದೋಱುವೀೞ್** (ಕ್ರಿ). ೧. ತೂತುಬೀಳು ; ರಂಧ್ರವುಂಟಾಗು ; ಛಿದ್ರವುಂಟಾಗು. ೨. (ಅಲಂ) ಅವಿಶ್ವಾಸವುಂಟಾಗು ; ನಂಬಿಕೆಕೆಡು: ಅಂತಃಪುರದಲ್ಲಿಯೂ ಎಲ್ಲಿಯಾದರೂ ಡೊಗರುಬಿದ್ದಿದೆಯೋ . . . ಎಂಬ ಬಗ್ಗೆ ಒಮ್ಮೆಯಾದರೂ ಪರೀಕ್ಷಿಸಿ ನೋಡಬೇಕೆಂದು ಭೂಪತಿಯ ಮನಸ್ಸಿಗೆ ಹೊಳೆದಿರಲೇ ಇಲ್ಲ (ಅಶ್ವಶ. ೨೬೬). **ದೋಱುವೀೞ್** : ೧. ಪೆರ್ಬುಲಿ ಪಾಯ್ದುಗಿಯಲ್ಕೆ ದೋಱುವಿರ್ದುರದ ಸಿಪ್ಪೆ [ಪಾಠಾಂ. ಡೋಣಿವಿರ್ದುರದ ಪಿಸುಟ್ಟು] ಪೆರ್ದೊಡೆಯ ನುರ್ಗಿದ ದುಱೆಯ ಭಂಗಿ ರೌದ್ರಮಾಗಿರೆ (ಜಗವಿ. ೦೬-೨೧).

[ ಡೊಗರು (<ಡೊಂಗಱು) + ಬೀಳು$_1$ (<ಬೀೞ್$_1$) ]

**ಡೊಗರುಹಾಯು** (ಕ್ರಿ). = ಡೊಗರುಬೀಳು ೧: ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರುಹಾಯ್ದಿತ್ತು (ಜಾಲಿಲ. ೬).

[ ಡೊಗರು (<ಡೊಂಗಱು) + ಹಾಯು (<ಪಾಯ್$_1$) ]

**ಡೊಗಱು** 'ಡೊಂಗಱು' ನೋ.

**ಡೊಗೆ** 'ಡೋವಿ' ನೋ.

**ಡೊಗ್ಗಾಲಿಕ್ಕು** (ಕ್ರಿ). ೧. ಮೊಣಕಾಲನ್ನು ನೆಲಕ್ಕೆ ಊರು ; ಮಂಡಿಯೂರು: ಕ್ರೈಸ್ತರು ದೇವಮಂದಿರದಲ್ಲಿ ಡೊಗ್ಗಾಲಿಕ್ಕಿ ಪ್ರಾರ್ಥನೆ ಮಾಡುತ್ತಾರೆ (ರೂಢಿ). ೨. (ಅಲಂ) ರಭಸದಿಂದ ಬರು (?): ಕರದ ಖಂಡೆಯವನ್ನು ಜಡಿವುತ ಭರದಿ ಡೊಗ್ಗಾಲಿಕ್ಕಿ ಪ್ರಳಯದ ಶರಧಿಯೋಲ್ ದಂಡೆತ್ತಿ ಬರುವರ್ (ದೇವೀಶ್ವ. ೬೦). [ ಡೊಗ್ಗಾಲು + ಇಕ್ಕು ]

**ಡೊಗ್ಗಾಲು, ದೊಗ್ಗಾಲು** (ನಾ). ಊರಿದ ಮೊಣಕಾಲು. 'ಡೊಗ್ಗಾಲು ಸಲಾಂ' ಪರಾ. ದೊಗ್ಗಾಲು: ದೊಗ್ಗಾಲಿಟ್ಟು ಸಸಿನದಿ ಹಾರಿ ಅಂತರ ಬಟ್ಟೆಯೊಳಗಬ್ಬಿಯನು ಮುಟ್ಟಲುಯಿಳಿದು (ಜಿರಾಮಾ. ೨೬೧-೬೦).

**ಡೊಗ್ಗಾಲು ಕೃಷ್ಣ**=ಮಂಡಿಯೂರಿದ ಕೃಷ್ಣ ; ಅಂಬೆಗಾಲಿನ ಕೃಷ್ಣ. **ಡೊಗ್ಗಾಲುಹಾಕು**=(ಆಲಂ)ಬಹಳ ಶ್ರಮಪಡು: ಹಪ್ಪಳಾ ಮುರಿಯೋಕೆ ಡೊಗ್ಗಾಲು ಹಾಕಬೇಕೇ? (ಗಾದೆ). [ ಡೊಗ್ಗು + ಕಾಲು$_1$(<ಕಾಲ್$_1$) ]

**ಡೊಗ್ಗಾಲುಸಲಾಂ** (ನಾ). ೧. ಮೊಣಕಾಲನ್ನು ಊರಿಕೊಂಡು, ಬಲಗೈಯಿಂದ ಮೂರುಸಲ ಹಣೆಯನ್ನು ಮುಟ್ಟುತ್ತ ಮಾಡುವ ವಂದನೆ. ೨. ಬೀಳ್ಕೊಡುಗೆ: ಸುಬ್ರಹ್ಮಣ್ಯದ ಸೀಮೆಗೆ 'ಡೊಗ್ಗಾಲುಸಲಾಂ' ಹೊಡೆಯುತ್ತಿದ್ದ (ಚಿಟ್ಟಜೀ. ೫೮). [ ಡೊಗ್ಗಾಲು + ಸಲಾಂ ]

**ಡೊಗ್ಗಾಲೂರು, ದೊಗ್ಗಾಲೂರು** (ಕ್ರಿ). ೧. ಮೊಣಕಾಲನ್ನು ನೆಲದ ಮೇಲೆ ಊರು ; ಮೊಣಕಾಲನ್ನೂರು. ೨. (ಆಲಂ) ಸೋಲು ; ಪರಾಜಯಹೊಂದು: ಈ ಸಲ ಪರೀಕ್ಷೆಯಲ್ಲಿ ಡೊಗ್ಗಾಲೂರುವ ಪ್ರಸಂಗ ವೆಲ್ಲಿ ಬರುತ್ತದೋ ಎಂದು . . . ಚಿಂತಿಸುತ್ತಿದ್ದ(ಸಮುಜೀ. ೩೯೦) ; ಅವನು ಡೊಗ್ಗಾಲೂರಿ ಅಸಹಾಯನಾಗಿದ್ದ (ಸಮುಜೀ. ೦೨೦೫). **ದೊಗ್ಗಾಲೂರು**: ೧. ಕಿಟ್ಟನಲ್ಲಿ ಬಂಡಿಯನ್ನೆಳೆಯಲಾರದೆ ಎತ್ತುಗಳು ದೊಗ್ಗಾಲೂರಿದವು (ರೂಢಿ). [ ಡೊಗ್ಗಾಲು + ಊರು$_1$ (<ಊಱು$_1$) ]

**ಡೊಗ್ಗಿಸು** (ಕ್ರಿ). ಬಾಗುವಂತೆ ಮಾಡು ; ಬಗ್ಗಿಸು: ನೀವು ಎಲ್ಲಾರಂಗ ಸಂಸಾರ ಮಾಡಿಕೊಂಡು ಇದ್ದು ತೋರಿಸಿದರ ಸಮಾಜ ನಿಮಗ ತಲೀ ಡೊಗ್ಗಿಸಿ ಸಲಾಮು ಹೊಡಿತದ (ಅಪನಾ. ೧೯೦).

[ ಡೊಗ್ಗು + – ಇಸು$_2$ ]

**ಡೊಗ್ಗಿಱು** (ಕ್ರಿ). ಬಾಗಿ (ಬೋರಲಾಗಿ) ಬೀಳು : ಸುಖ ಜೇಸಟಿಂ ನುಡಿಪೊಡೊಬ್ಬರ ಕಾಱನೊಂದು ಹೊರಸಿನೊಳೊಬ್ಬಳೇ ಡೊಗ್ಗಿಱಿದು ಕೆಡೆವಂ (ಸಮ್ಯಕೌ. ೫-೨೨). [ ಡೊಗ್ಗು + ಇಱು$_1$ ]

**ಡೊಗ್ಗು** (ಕ್ರಿ). ೧. ಬಾಗು ; ಬಗ್ಗು: ಆಗ ನೀವು ಡೊಗ್ಗಿ ಮುಜರೆ ಮಾಡುತ್ತಿದ್ದಿರಿ (ಹಲ್ಮಿಡಿ. ೨೦೦). ೨. ವಂದಿಸು ; ನಮಸ್ಕರಿಸು: ಕ್ಷೀರಾಬ್ಧಿಗಂ ಪೋಗಿ ಡೊಗ್ಗಿದರು ಮುರವೈರಿಗಂ ಸುರರು ಪುಯ್ಯಲಿಡುತ (ತುರಂಗ. ೪-೨೬). ೩. ಜಗ್ಗು ; ಕುಗ್ಗು ; ಸೋಲು: ಡೊಗ್ಗುವನೆ ಕಲಿಪಾರ್ಥ ಸರಳುಗಳ್ಸಂಹರಿಸಿ ನುಗ್ಗಿದನು (ತುರಂಗ. ೪೬-೪೬); ಡೊಗ್ಗುವನೆ ಷಡ್ರಥರಿಗಂ ಬಾಲಂ (ತುರಂಗ. ೫೨-೦೨).

**ಡೊಗ್ಗಿ ನಡೆ** = ವಿಧೇಯವಾಗು ; ಆಜ್ಞಾವರ್ತಿಯಾಗು: ಹಿಂಗ ಡೊಗ್ಗಿನಡೆದರೆ ನನ್ನ ಗುಮಾಸ್ತಿಕೆ ನಡದ್ಹಾಂಗಾತು (ಶ್ರೀಮೂಶ್ರ. ೦೨) : ಗುರುಗಳಿಗೆ ಡೊಗ್ಗಿ ನಡೆಯಬೇಕು (ರೂಢಿ).

[ ದೇ.೫ ತುಳು. ಡೊಗ್ಗು, ದೊಗ್ಗು ; ತೆಲು. ಡೋಗು, ದೋಗು ]

**ಡೊಣಗ** 'ದೊಣ್ಣೆಗ' ನೋ.

**ಡೊಣೆ$_1$** 'ಟೊಣೆ' ನೋ.

**ಡೊಣೆ$_2$** 'ದೊಣೆ$_1$' ನೋ.

**ಡೊಣೆ$_3$** 'ತೊಣೆ$_2$' ನೋ.

**ಡೊಣೆಗಣ್ಣು** (ನಾ). (ಉಕ) ಕುಳಿಬಿದ್ದ ಕಣ್ಣು ; ಗುಳಿಗಣ್ಣು: (೬).

[ ಡೊಣೆ$_2$ (<ದೊಣೆ$_1$) + ಕಣ್ಣು (<ಕಣ್) ]

**ಡೊಣೆಗತ್ತಿ** (ನಾ). ಒಂದು ಬಗೆಯ ಕತ್ತಿ: ಡೊಣೆಗತ್ತಿ ಕೊಂಗತ್ತಿ ಧರಿಸಿ ವಾಲಗದಿ ನಿಂದಿಹರು (ಸೌಂದಕಾ. ೩-೧೦೦).

[ ಡೊಣೆ$_1$ (<ಟೊಣೆ) + ಕತ್ತಿ ]

**ಡೊಣೆಗೆ** (ನಾ). (?) : ಪಗೆಗಳ ಶೃಂಗಲಮಂ ಡೊಣೆಗೆಗೆತ್ತಿ ತತ್ಪುರವರೇಶ ನಾನಂದಲತಾಳಿಗೆಗಳ್ ಪರ್ಚಿಪುದೆಂತುಂ ಬಗೆಗೆನಿತುಂ ಬಿಂಕದಿಂದೆ ನಿಡು ಡೆಂಕಣಿಗಳ್ (ದಕಳು. ೧-೩೫). [ ? ]

**ಡೊಣೆನಾಯಕ** 'ದೊಣೆನಾಯಕ' ನೋ.

**ಡೊಣೆಯುಪ್ಪು**(ನಾ). ಒಂದು ಬಗೆಯ ಉರುಟಾದ ಉಪ್ಪು : "ಊಷರಕಂ–ಅಟ್ಟುಪ್ಪು, ಡೊಣೆಯುಪ್ಪು " (ಒಪಧಿ. ೦೬) ; "ಪಾಕ್ಯಂ, ಬಿಡಂ – ಈ ೨ ಕೃತಕ ಅಟ್ಟುಪ್ಪಿನ ಹೆಸರು. ತೊಳೆದು ಕಾಯಿಸಿ ತೆಗೆದ ಉಪ್ಪು, ಡೊಣೆಯುಪ್ಪು ಮತ್ತು ಪೆಟ್ಲುಪ್ಪು ಮುಂತಾದ ಅಡಿಗೆಯಿಳಿಸಿದ ಕೃತ್ರಿಮ ಲವಣಕ್ಕೂ ಬಿಡಾಲವಣಕ್ಕೂ ಪೆಸರುಗಳು " (ಸಿದ್ಧಾಂತಿ. ೦೪೫).

[ ಡೊಣೆ? + ಉಪ್ಪು$_1$ ]

**ಡೊಣೆವು** (ನಾ). (ಗಾಯದ) ಬಿರುಕು ; ಡೊಗರು ; ಕೋಡು (?) : ಅಂಬಿನ ಬಂಬಲೊಳಂ ಜೋಡಾಗಿ ಕೋಡನೊಱು ಕಡೆದ ಗಜವ್ರಜಂಗಳ ಡೊಣೆವು[ಪಾಠಾಂ. ಣವು, ಣೆವು]ಗಳಿಂದೊಱೆತು ಪರಿವ ನೆತ್ತರ ಕಡಲ್ಗಳುಂ (ಶಂಶಭಾ. ೧೦-೧೧೬ ವ). [ ? ]

**ಡೊಣೆವೋಗು** 'ದೊಣೆವೋಗು' ನೋ.

**ಡೊಣ್ಣಪ್ಪ** (ನಾ). ೧. ದಪ್ಪವಾಗಿರುವವನು; ಸ್ಥೂಲದೇಹದ ವ್ಯಕ್ತಿ : ಅವನೊಬ್ಬ ಡೊಣ್ಣಪ್ಪ (ರೂಢಿ). ೨. ಸೋಮಾರಿ ; ಆಲಸಿ: ಉಂಡೋಕೆ ಉಣ್ಣೋಕೆ ಅಣ್ಣಪ್ಪ, ಕೆಲಸಕ್ಕೆ ಮಾತ್ರ ಡೊಣ್ಣಪ್ಪ (ಗಾದೆ).

[ ಡೊಣ್ಣೆ$_1$ (<ದೊಣ್ಣೆ) + ಅಪ್ಪ$_1$ ]

**ಡೊಣ್ಣೆ$_1$** 'ದೊಣ್ಣೆ' ನೋ.

**ಡೊಣ್ಣೆ$_2$** 'ದೊನ್ನೆ' ನೋ.

**ಡೊಣ್ಣೆ$_3$** 'ತೊಂಡೆ$_2$' ನೋ.

**ಡೊಣ್ಣೆಕಾಟ** 'ತೊಂಡೆಕೇತ' ನೋ.

**ಡೊಣ್ಣೆಕೇತ** 'ತೊಂಡೆಕೇತ' ನೋ.

**ಡೊಣ್ಣೆಗ** 'ದೊಣ್ಣೆಗ' ನೋ.

**ಡೊಣ್ಣೆಮುಳ್ಳು** 'ದೊಣ್ಣೆಮುಳ್ಳು' ನೋ.

**ಡೊಣ್ಣೆಮೂಗು** 'ದೊಣ್ಣೆಮೂಗು' ನೋ.

**ಡೊಣ್ಣೆಸಣ್ಣಕ್ಕಿ** (ನಾ). ಮಧ್ಯಮಗಾತ್ರದ ಒಂದು ಬಗೆಯ ಅಕ್ಕಿ: (೬).

[ಡೊಣ್ಣೆ$_1$ (<ದೊಣ್ಣೆ) + ಸಣ್ಣ + ಅಕ್ಕಿ$_1$ ].

**ಡೊಣ್ಣೆಹುಳು** (ನಾ). ಸಗಣಿಯಲ್ಲಿ ಹುಟ್ಟಿ ಬೆಳೆಯುವ ಒಂದು ಬಗೆಯ ದಪ್ಪ ಹುಳು ; ಗೊಣ್ಣೆಹುಳು: (೬).

[ ಡೊಣ್ಣೆ$_1$ (<ದೊಣ್ಣೆ) + ಹುಳು$_2$ (<ಪುೞು$_1$) ]

**ಡೊಪ್ಪೆ, ದೊಪ್ಪೆ** (ನಾ). ಧಪ್ಪ ದೊನ್ನೆ$_2$ (೬). ದೊಪ್ಪೆ: (೬).

{ ದೇ.೫ ತೆಲು. ಡೊಪ್ಪ, ದೊಪ್ಪ ; ಕೋಲಾ. ಡೊಂಪಾ, ಡೊಂಪ ; ನಾಯ್ಕಿ. ಡೊಪ್ಪ ; ಪರ್ಜಿ. ಗೊಂಡಿ. ಡೊಪ್ಪೋ }

**ಡೊವಿಗೆ** 'ಡೋವಿ' ನೋ.

**ಡೊಳುಹೊಟ್ಟೆ** 'ಡೊಳ್ಳುಹೊಟ್ಟೆ' ನೋ.

**ಡೊಳ್ಳ** (ನಾ). ೧. ದೊಡ್ಡ ಹೊಟ್ಟೆಯವನು; ಬೊಜ್ಜು ಬೆಳೆದ ಹೊಟ್ಟೆಯುಳ್ಳವನು. ೨. (ಆಲಂ) ಸೋಮಾರಿ ; ಆಲಸಿ: ಕಳ್ಳರಿಗೆ ಸುಳ್ಳರಿಗೆ ಡೊಳ್ಳರಿಗೆ ಡೊಂಬರಿಗೆ ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ಎಳ್ಳಷ್ಟು ಕೊಡರು (ಸರ್ವಜ್ಞ. ೬೬೩).

[ ಡೊಳ್ಳು$_1$ (<ಟೊಳ್ಳು) + – ಅ$_7$ ]

**ಡೊಳ್ಳಾಸ, ದೊಳ್ಳಾಸ** (ನಾ). ೧. ಮೋಸ; ವಂಚನೆ; ಕಪಟ: "ಡೊಳ್ಳಾಸಮೆ ವ್ಯಸಿಕಮೆನಿಪ್ಪುದು" (ದತುಶಿ. ೨೦); "ಡೊ[ಪಾಠಾಂ. ದೊ]ಳ್ಳಾಸಮೆನಲ್ ಕಪಟ" (ಧಾರನಿ. ೩೫); ಬಹಳಾಭ್ಯಾಸಿಗಳು ಡಾವರಿಸಿಡರು ಡೊಳ್ಳಾಸವೋ ರಿಪುಸೇನೆ ಕಾಣದು ಚಿತ್ರಪಯಗತಿಯ (ಕುವ್ಯಾಗ. ೬-೮) ; ಹುಸಿ ನುಸಿಳು ಡೊಳ್ಳಾಸ ಹಿಂಸಾವ್ಯಸನವು . . . ಎಂಬಿವರೆಸಕ ಹೊದ್ದ ದಯೋಧಿಪನ ಧರಣೀತಳಾಗ್ರದಲಿ (ತೊರಾ. ೦-೩-೨೬) ; ವಂಚನೆ ಚಾಟು ಚೆಲ್ಲ ಡೊಳ್ಳಾಸ ಬೆಡಂಗು (ಯಾದವ. ೩-೯೩). ೨. ಬೆಡಗು ; ಒಯ್ಯಾರ ;

ಬಿನ್ನಾಣ; ವಿಲಾಸ.'ಡೊಳ್ಳಾಸಕಾತಿ'ಪರಾ. ೩. ವಿಸ್ತಾರ; ವ್ಯಾಪಕತೆ; ಅತಿಶಯ: ಡೊ[ಪಾಠಾಂ. ದೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮಾ.ಅ. ೩೦-೬೦); ಇಕ್ಕಡಿಯ ಬಸುಱುಚ್ಚುಗಳ ನರಸೊಕ್ಕು ಡೊ[ಪಾಠಾಂ. ದೊ]ಳ್ಳಾಸದ ಮಹಾಭಯವೆಕ್ಕಸರದಲಿ ಕಾಣಲಾದುದು ವೈರಿಬಲದೊಳಗೆ (ಕುಮಾ.ದ್ರೋ. ೦೬-೨೩). **ದೊಳ್ಳಾಸ:** ೧. ತವಕದ ತವರ್ಮನೆ ವಿಲಾಸದ ನಿವಾಸವು . . . ವೈಸಿಕದ ನಿವಹ ದೊಳ್ಳಾಸ ದಾಗರ ಪೊತ್ತಿನಿಕ್ಕೆ ಕೈತವ ಕಟಕಿಗಳ ಮಂದಿರ (ಸೌಂದಕು. ೬-೫೦); ತೊದಳ್ ದೊಳ್ಳಾಸಂ ಸುರೆಯುದ್ಭವಿಸಿದ ದೇಶವಿದೆನೆ ಸೂಳೆಗೇರಿ ಕಣ್ಗೆಸೆದಿರ್ಕುಂ (ವೀರವಿ. ೬-೯೬). ೩. ದೊ[ಪಾಠಾಂ. ಡೊ]ಳ್ಳಾಸದಲಿ ಡಾವರಿಸಿದವು ಕಿಡಿ ಧೂತ ಧೂಮದಲಿ (ಕುಮಾ.ಅ. ೩೦-೬೦).

**ಡೊಳ್ಳಾಸಕಾತಿ** (ನಾ). ಬಿನ್ನಾಣಗಾತಿ; ಬೆಡಗಿ; ಒಯ್ಯಾರ ಮಾಡುವವಳು: ಡೊಳ್ಳಾಸಕಾತಿಯರಾ ವಿಬುಧಪತಿಯೋಲಗವ ಹೊಕ್ಕರು ಸವಾಯಯಲಿ (ಕುಮಾ.ಅ. ೬-೯೦). [ ಡೊಳ್ಳಾಸ + – ಕಾತಿ$_2$ ]

**ಡೊಳ್ಳಾಸವಿದ್ಯೆ** (ನಾ). ಮೋಸದ ವಿದ್ಯೆ; ಕಪಟವಿದ್ಯೆ: ನಿಮ್ಮ ಬಿಱುನುಡಿಯಲಗಿನಲಿ ಡಾವರಿಸಿದಿರಿ ಡೊಳ್ಳಾಸವಿದ್ಯೆಯಲಿ (ಕೊರಿಶಾ. ೩-೪-೨೦). [ ಡೊಳ್ಳಾಸ + ವಿದ್ಯೆ ]

**ಡೊಳ್ಳಿಗ** (ನಾ). ಡೊಳ್ಳು ಹೊಟ್ಟೆಯವನು; ಉಬ್ಬಿದ ಹೊಟ್ಟೆಯುಳ್ಳವನು: ಮುಂದೆ ಕುಳ್ಳಿರ್ದ ಸೆಟ್ಟಿ ಡೊಳ್ಳಿಗನಪ್ಪುದಱಿಂ ಪರೀಕ್ಷಿಸದೆ ಪೋದರ್ (ಧರ್ಮಾಮೃ. ೦೨-೬೫). [ಡೊಳ್ಳು$_1$ (<ಟೊಳ್ಳು) + – ಇಗ]

**ಡೊಳ್ಳು$_1$** 'ಟೊಳ್ಳು' ನೋ.

**ಡೊಳ್ಳು$_2$** 'ಡೋಲು' ನೋ.

**ಡೊಳ್ಳುಗ** (ನಾ). ೧. = ಡೊಳ್ಳಿಗ. ೨. (ಅಲಂ) ಪರಾಕ್ರಮವಿಲ್ಲದವನು: ಅಳ್ಳಿದೆಯ ಮನ್ನೆಯರನೊಗ್ಗಿನ ಡೊಳ್ಳುಗರ ಕಟವಾಯ ಕೊಯ್ (ಕುಮಾ.ದ್ರೋ. ೩-೨೦). [ ಡೊಳ್ಳು$_1$ (<ಟೊಳ್ಳು) + – ಗ$_2$ ]

**ಡೊಳ್ಳುಹೊಟ್ಟೆ**, ಡೊಳುಹೊಟ್ಟೆ (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವ ಹೊಟ್ಟೆ; ಬೊಜ್ಜು ಬೆಳೆದಿರುವ ಹೊಟ್ಟೆ: ಡೊಳ್ಳುಹೊಟ್ಟೆಗೆ ಸಾಲದಿನ್ನುಂ ಕೊಂಡು ಬಾ.(ಬಸವು. ೫೯-೦೦);ಕುಕ್ಕುಱುಸಲೊಡನಾ ಡೊಳ್ಳುಹೊಟ್ಟೆಯುಬ್ಬುಗಿಯವಾಗಿ (ವೀಕ್ಷೈಕು. ೩-೪-೨೬); ಡೊಳ್ಳುಹೊಟ್ಟೆಯನೆತ್ತಿಕೊಂಡೋಡಲಾಱದೆ ಹಳ್ಳಕೊಳ್ಳದಲಿ ಮುಗ್ಗರಿದು (ಶಂವಿ. ೦೬-೩೫). **ಡೊಳುಹೊಟ್ಟೆ:** ಒಣಕಲು ಗೌರಿಯನಿಣಿಕಣಿಕಿ ನೋಡಿದ ನೆಮ್ಮೂರ ಡೊಳುಹೊಟ್ಟೆ ಮಾದ (ಜಂಜಾಪ. ೧೧೪-೫೯); ಡೊಳುಹೊಟ್ಟೆಗೆ ನಾಗರ ಬಿಗಿದವನೇ (ಗಣೇಶ. ೦-೦೨).

[ ಡೊಳ್ಳು$_1$ (<ಟೊಳ್ಳು) + ಹೊಟ್ಟೆ$_1$ (<ಪೊಟ್ಟೆ$_1$) ]

**ಡೊಳ್ಳುಹೊಟ್ಟೆಗ** (ನಾ). ೧. ಹೊಟ್ಟೆ ದೊಡ್ಡದಾಗಿ ಮುಂದಕ್ಕೆ ಚಾಚಿಕೊಂಡಿರುವವನು. ೨. ಲಂಬೋದರ; ಗಣಪತಿ: ನುಡಿದಂತೆ ಕೂರ್ಗೋಲ ಕೊರತೆಕೊ ಎಂದೆನುತಿಡಿದನು ಡೊಳ್ಳುಹೊಟ್ಟೆಗನು (ಮೋಹಚ. ೩೮-೫೦). [ ಡೊಳ್ಳುಹೊಟ್ಟೆ + – ಗ$_2$ ]

**ಡೊಳ್ಳೆ** 'ಟೊಳ್ಳು' ನೋ.

**ಡೊಳ್ಳೊಡಲು** (ನಾ). ದೊಡ್ಡದಾಗಿ ಮುಂದಕ್ಕೆ ಚಾಚಿದ ಹೊಟ್ಟೆ: ರಾಹುಮುಖನು ದೊಡ್ಡ ಕಂಗಳವನು ದೀರ್ಘದೇಹ ಡೊಳ್ಳೊಡಲ ಕರಿಕನು (ಭರತ. ೨೫-೫೬). [ ಡೊಳ್ಳು$_1$ (<ಟೊಳ್ಳು) + ಒಡಲು (<ಒಡಲ್) ]

**ಡೋಂಗಾ** (ನಾ). "ತಾಳೆಮರದ ತುಂಡಿನಲ್ಲಿ ತೋಡಿ ತಯಾರಿಸಿರುವ ಒಬ್ಬರು ಅಥವಾ ಇಬ್ಬರು ಹೋಗಲು ಅನುಕೂಲಿಸುವ ಸಣ್ಣ ದೋಣಿ" (ನಿಬಂಧ. I, ೩೨೩ ಅಡಿಟಿ): ಆಚೆಯ ತೀರದಲ್ಲಿರುವ ಡೋಂಗಾ ಒಂದನ್ನು ತೋರಿಸಿಕೊಡುವುದಾಗುತ್ತದೆ (ನಿಬಂಧ. I, ೩೨೩).

[ ←ಹಿಂ. ಮರಾ. ಡೋಂಗಾ ]

**ಡೋಂಗಿ** 'ಧೋಂಗಿ' ನೋ.

**ಡೋಂಗು** 'ಧೋಂಗಿ' ನೋ.

**ಡೋಕಾ** 'ಧೋಕಾ' ನೋ.

**ಡೋಕಾರಿ** (ನಾ). (ಉಕ) ೧. ಕಪಟ; ಮೋಸ; ವಂಚನೆ: ಅನ್ನವಿಲ್ಲದ ಸಾಯುತ್ತಾರಂತೆ. ಪ್ರಭೂ, ಇದೆಲ್ಲವೂ ಧೋಂಗಿ ಧೋಂಗಿ, ಡೋಕಾರಿ (ಹನ್ನೊಂದ. ೬೫). ೨. ಅಪಾಯಕ್ಕೆ ಒಳಗಾದಂತೆ ಸೋಗುಹಾಕಿ ಅಳುವ ವ್ಯಕ್ತಿ; ನೋಯಿಸದಿದ್ದರೂ ನೋವಾದಂತೆ ನಟಿಸುತ್ತ ಕೂಗಾಡುವ ವ್ಯಕ್ತಿ: ಮಾತುಮಾತಿಗೆ ಅಳುತ್ತೀಯಲ್ಲೇ ಡೋಕಾರಿ (ಅರಗಿ. ೮೫). [ ? ]

**ಡೋಕಾರಿಗ** (ನಾ). ಮೋಸಗಾರ: ಗೊಲ್ಲರ ಕೂಡಲಿ ಬೆಳದು ಆಕಳನು ಕಾಯ್ದು ಕಾಕುಲಾತಿಯಿಂದ ಡೋಕಾರಿಗನಾಗಿ ನೂಕಲು ಭಯ ಬಡದೆ (ಪುಣ್ಯದೀ. ೨೧-೨). [ ಡೋಕಾರಿ + – ಗ$_2$ ]

**ಡೋಕಾರಿತನ** (ನಾ). ನೋವಾದಂತೆ ನಟನೆಮಾಡಿ ಅಳುವಿಕೆ; ಅಪಾಯವಿಲ್ಲದೆಯೇ ಗದ್ದಲವೆಬ್ಬಿಸುವ ಸ್ವಭಾವ; ಇಲ್ಲದ ಗಾಬರಿಯನ್ನು ತೋರಿಸುವುದು: ಡೋಕಾರಿತನಮಾಡಿ, ನಿನ್ನ ಕೆಲಸ ಮಂದೀ ಮ್ಯ ಮೇಲೆ ಹಾಕುವ ಹಂಚಿಕೆ ಮಾಡುತ್ತೀ (ಮುಂಬಯ. ೪-೦೩೪); ಊರವಲದ ಹೊಗೆಯ ಜಾಣತಿ ಬಳುಬಿನಾ ಬೇನೆ; ಡೊಂಕುತನ, ಡೋಕಾರಿತನದ ತಂಬಾಕುಹೊಗೆ (ದ್ಯಾಬಾಶ್ಯ. ೬-೯); ಡೋಕಾರಿತನಕ್ಕೆ ಡಾಕ್ಟರೇನು ಔಷಧಿ ಕೊಡುತ್ತಾರೆ, ಮಣ್ಣು (ಹುಚ್ಚಾಟ. ೨೬). [ ಡೋಕಾರಿ + – ತನ ]

**ಡೋಗಿ** 'ಡೋವಿ' ನೋ.

**ಡೋಗಿಬರ**, ಡೌಗಿಬರ (ನಾ). ಆಹಾರವಿಲ್ಲದೆ ಸತ್ತ ಪ್ರಾಣಿಗಳ ಮತ್ತು ಮನುಷ್ಯರ ತಲೆಬುರುಡೆಗಳು ದಿಕ್ಕುದಿಕ್ಕುಗಳಲ್ಲಿ ಉರುಳಾಡುತ್ತಿದ್ದ ಭಯಂಕರವಾದ ಬರಗಾಲ: ಸನ್ ೧೭೯೧ನೇ ವರ್ಷದ ಬರಕ್ಕೆ "ಡೋಗೀಬರ" ವೆಂಬ ಹೆಸರು ಬಿದ್ದದೆ; ಮನುಷ್ಯರ ತಲೆ ಡೋಗಿಗಳು ದಿಕ್ಕಿಲ್ಲದೆ ಉರುಳಾಡುತ್ತಿದ್ದದರಿಂದ ಅದರ ಸ್ಮರಣೆ ಜನರೊಳಗೆ ಇನ್ನೂ ಪೂರ್ಣವಾಗಿ ಇರುತ್ತದೆ (ಕಥಾಗಿ. ೨೭೭). **ಡೌಗಿಬರ:** ಹಲವು ವರ್ಷಗಳ ಹಿಂದೆ 'ಡೌಗೀಬರ'ದಲ್ಲಿ ಅವನ ಸವಿತಾವದ ಸಂಬಂಧಿಕರೆಲ್ಲರೂ ತೀರಿ ಹೋಗಿದ್ದರು (ಹಾಕರ ೧೫); ಹಿರಿಯರು ಡೌಗಿಬರದಲ್ಲಿ ದಿನನಿತ್ಯ ಬಡವರಿಗೆಲ್ಲ ಕಾಳು ಹಂಚಿದ ಮೇಲೆ ತಾವು ಊಟ ಮಾಡುತ್ತಿದ್ದರಂತೆ (ಗ್ರಾಮಾಯ. ೦೭೫). [ ಡೋಗಿ (<ಡೋವಿ) + ಬರ$_1$ (<ಬಱ) ]

**ಡೋಣಿ$_1$** 'ದೊಣೆ$_1$' ನೋ.

**ಡೋಣಿ$_2$** 'ದೋಣಿ$_3$' ನೋ.

**ಡೋಣಿಡು** (ಕ್ರಿ). ನೀರು ತುಂಬುವ ದೋಣಿಯನ್ನು ಮುಂದೆ ಇಡು,- ಇರಿಸು: ಡೋಣಿಟ್ಟು ದನಕ್ಕೆ ನೀರೆಱೆವ ಸಂಭ್ರಮಮುಣ್ಮೆದುದೂರ ಪಕ್ಕದೊಳ್ (ಸೂಕ್ತಿಸು. ೧೦-೯೩).

[ ಡೋಣಿ$_2$ (<ದೋಣಿ$_3$) + ಇಡು$_1$ ]

**ಡೋಣಿವಟ್ಟೆ** (ನಾ). (ನಡೆದಾಟದಿಂದ ಸವೆದು) ತಗ್ಗುಬಿದ್ದ ದಾರಿ: ನಡೆನಡೆದು ಮಿಗೆ ಡೋಣಿವಟ್ಟೆ ಬಿದ್ದಿರ್ದಪ್ಪುದು (ಸೌಂದಕು. ೦೫-೬೫).

[ ಡೋಣಿ$_1$ (<ದೊಣೆ$_1$) + ಬಟ್ಟೆ$_1$ ]

**ಡೋಣಿವೀೞ್** (ಕ್ರಿ). ಡೊಗರು ಬೀಳು; ಹಳ್ಳವುಂಟಾಗು; ಕುಳಿಯಾಗು: ಕರಿ ಪೂಣರ್ದೆಕ್ಕಲಂ ಮಲೆತು ಪೆರ್ಬುಲಿ ವಾಯ್ದುಗಿಯಲ್ಕೆ ಡೋಣಿವಿೞ್ದುರದ[ಪಾಠಾಂ. ದೋಱುವಿರ್ದುರದ]ಪಿಸುಟ್ಟ ಪೆರ್ಮೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾಗಿರೆ (ಆಗವಿ. ೦೬-೨೦).

[ ಡೋಣಿ$_1$ (<ದೊಣೆ$_1$) + ಬೀೞ್$_1$ ]

**ಡೋಣಿವೋಗು** 'ದೊಣೆವೋಗು' ನೋ.

**ಡೋಬಿ** 'ಧೋಬಿ' ನೋ.

**ಡೋಬಿಕಜ್ಜಿ** (ನಾ). ಒಂದು ಬಗೆಯ ಚರ್ಮರೋಗ,-ಕಜ್ಜಿ; ೧ ಅಗಸನು ಚರ್ಮರೋಗಿಯ ಬಟ್ಟೆಯೊಡನೆ ಸೇರಿಸಿ ಒಗೆದಿರುವ ಬಟ್ಟೆಯನ್ನು ಉಪಯೋಗಿಸುವುದರಿಂದ ಅಂಟುವ ಒಂದು ಬಗೆಯ ಕಜ್ಜಿ: ಎಲ್ಲರ ಮನೆಯ ಬಟ್ಟೆಗಳನ್ನು ಒಟ್ಟಿಗೆ ಸೇರಿಸಿ ಒಗೆಯುವ ಕಾರಣ, ಕಜ್ಜಿ, ಕುರು, ಡೋಬಿಕಜ್ಜಿ (Doby's itch) ಮುಂತಾದ ಚರ್ಮರೋಗಗಳು ... ಅಗಸರ ಮನೆಯಿಂದ ಬಂದ ಮಡಿಬಟ್ಟೆಗಳಿಂದ ಒಬ್ಬರಿಂದ ಒಬ್ಬರಿಗೆ ಹರಡಬಹುದು (ಗೃಹವಿ. ೮೨). [ ಡೋಬಿ (<ಧೋಬಿ) + ಕಜ್ಜಿ ]

**ಡೋಮೆ** (ನಾ). ಒಂದು ಬಗೆಯ ದೊಡ್ಡ ಡೋಲು: "ಯಶಃಪಟಃ, ಢಕ್ಕಾ – ೨ ಢವಣೆ ಹೆಸರು, ಅಂದರೆ ಡೋಮೆ" (ಸಿ ಪ್ರಾ ೧೯. ೩೮). 'ಡವಣೆ' ಪರಾ.. [ ? ]

**ಡೋಯಿಗೆ** 'ಡೋವಿ' ನೋ.

**ಡೋರಿಗೊರೆ** 'ಡೋಜುಗೊರೆ' ನೋ.

**ಡೋರೆ** 'ದೋರೆ₁' ನೋ.

**ಡೋಲ** (ಗು). ೧. ಚಂಚಲವಾದ; ಓಲಾಡುವ. (ನಾ). ೨. [ನಾಟ್ಯ] ಹದಿಮೂರು ಸಂಯುತ ಹಸ್ತಗಳಲ್ಲೊಂದು; ಎರಡು ಕೈಗಳನ್ನೂ ಸೇರಿಸಿ ಅಭಿನಯವನ್ನು ಮಾಡುವಾಗ ಉಪಯೋಗಿಸುವ ಒಂದು ವಿಧದ ಹಸ್ತಮುದ್ರೆ; ದೋಲ : ನಾಟ್ಯಶಾಸ್ತ್ರದಲ್ಲಿ ಹೇಳಿರುವ ಸಂಯುತ ಹಸ್ತಗಳು ಯಾವುವೆಂದರೆ – ೧. ಅಂಜಲಿ . . . ೮. ಡೋಲ . . . ೧೩. ವರ್ಧಮಾನ (ಅಭಾಸ್ವ. ೯೮). [ ಸಂ. ]

**ಡೋಲಕ** (ನಾ). ಒಂದು ಬಗೆಯ ಚರ್ಮವಾದ್ಯ: ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೦). [←ಹಿಂ. ಢೋಲಕ್./ಸಂ. ಢೋಲಕ]

**ಡೋಲಪಾದ** (ನಾ). ೧. [ನಾಟ್ಯ] ಮಾರ್ಗ ಆಕಾಶಚಾರಿಗಳ ಅತಿಕ್ರಾಂತವೇ ಮೊದಲಾದ ೧೬ ಭೇದಗಳಲ್ಲೊಂದು; ಒಂದು ಕಾಲನ್ನು ಕುಂಚಿತವಮಾಡಿ, ಎತ್ತಿ, ಎರಡು ಪಾರ್ಶ್ವಗಳಲ್ಲೂ ತೂಗಿಸಿ ಹಿಮ್ಮಡಿಯನ್ನು ತನ್ನ ಪಾರ್ಶ್ವದಲ್ಲಿ ನೆಲದ ಮೇಲಿಡುವುದು: ಎತ್ತಿರೆ ಕುಂಚಿತ ಪದಮಂ ಬಿತ್ತರದಿಂದೆರಡು ಕೆಲಕೆ ಡೋಲದ ಪಾಂಗಿಂ ಮತ್ತೆ ಹಿಮ್ಮಡದ ಕಡೆ[ಪಾಠಾಂ. ತೊಡೆ]ಯುಂ ತೆತ್ತಿಸಿದೊಡೆ ಡೋಲಪಾದಚಾರಿಯೆನಿಕ್ಕುಂ (ಶಾಸ್ತ್ರಕಂ. ೬-೪೮). ೨. [ನಾಟ್ಯ] ನೂರೆಂಟು ಕರಣಗಳಲ್ಲೊಂದು; ಊರ್ಧ್ವಜಾನು ಮತ್ತು ಡೋಲಪಾದಚಾರಿಗಳನ್ನು ಮಾಡಿ ದೋಲಹಸ್ತವನ್ನೂ ಮಾಡುತ್ತ ಅಭಿನಯಿಸುವುದು: ಸಮುದೂರ್ಧ್ವಜಾನು ಪದದಿಂದಮಿ ನಿಂದುಂ ಡೋಲಪಾದಚಾರಿಯನೆಸಗಲ್ ಕ್ರಮದಿಂದೆ ಡೋಲಕರಮಂ ಸಮನಿಸಲದು ಡೋಲಪಾದಕರಣಮೆನಿಕ್ಕುಂ (ಶಾಸ್ತ್ರಕಂ. ೯-೦೧೭). [ ಡೋಲ + ಪಾದ ]

**ಡೋಲಫಲ** (ನಾ). ಒಂದು ಬಗೆಯ ಮರ ಮತ್ತು ಅದರ ಹಣ್ಣು: ಕೋಲ ಚಂಪಕ ತಿಲಕ ಮುನಿ ತಕ್ಕೋಲ ಲುಂಗ ಲವಂಗ ಧಾತ್ರೀಡೋಲಫಲ ಭಲ್ಲಾತಕೀಕುಜಗಳು ವಿರಾಜಿಪವು (ಅನಂರಾ. ೯-೪-೨೭). [ಡೋಲ್ಯ+ಫಲ]

**ಡೋಲಾಗೃಹ** (ನಾ). ಉಯ್ಯಾಲೆಯ ಮನೆ: ಇದೇ ಪದ್ಮಸರೋವರವು ಇದೇ ಡೋಲಾಗೃಹವು ಇದೇ ಕೃತಕಾದ್ರಿಯು (ಪುರುಷ. ೬-೩೬). [ ಸಂ. (ಡೋಲಾ + ಗೃಹ) ]

**ಡೋಲಿ** (ನಾ). ಮನುಷ್ಯರು ಹೊರುವ, ತೊಟ್ಟಿಲಿನಂತಹ ಒಂದು ವಿಧವಾದ ವಾಹನ: ಇವರಲ್ಲಿ ಕೆಲವರು . . . ಡೋಲಿ ಮತ್ತು ಮೇನಾಗಳನ್ನು ಸಾಗಿಸುವುದಕ್ಕೂ ನೇಮಕವಾಗಿದ್ದರು (ಮುಹಾಪಂ.II, ೨೦): ಕೊನೆಗೆ ಬೀಳಲುಗಳಿಂದ ಒಂದು ಡೋಲಿಯನ್ನು ಮಾಡಿ, ದೊಡ್ಡನನ್ನು ಮಲಗಿಸಿ ಕೆಲವರು ತಲೆಗೊಟ್ಟು ಹೊತ್ತು ಮುಂದೆ ನಡೆದರು (ಕಾಲೂರ.೭, ಕಥಾಸಾರ). [ ←ಮರಾ. ಡೋಲೀ; ಹಿಂ. ಡೋಲೀ, ಡೋಲಾ./ಸಂ. ದೋಲೀ ]

**ಡೋಲು, ಡೊಳ್ಳು₁, ಡೋಳು, ಢೋಲು, ಢೋಳು, ದೋಲು, ದೋಳು₁** (ನಾ). ಎರಡು ಮಗ್ಗುಲಲ್ಲೂ ಬಾರಿಸುವ ಒಂದು ಬಗೆಯ ದೊಡ್ಡ ಚರ್ಮವಾದ್ಯ: "ಡೋಲು (ದೋಲು)–ಢೋಲ= ಒಂದು ಮಹಾವಾದ್ಯ" (ಕದ್ಮಕೋ. ೧೬); ಆಗ ಬಡಿಯಿತು ಡೋಲು ಬಡಬಡ (ಕಪುತ್ರ. ೩೮-೬); ಡೋಲು, ಶಹನಾಯ್, ತಾಳೆಗಳು ಸೂಕ್ತ ಹಿಮ್ಮೇಳ ಒದಗಿಸುತ್ತವೆ (ಭಾರಕಾ. ೧೧೯): ನೃತ್ಯಕಾಲದಲ್ಲಿ ಒಂದಲ್ಲ ಒಂದು ಬಗೆಯ ಡೋಲು, ಡೋಲಕ, ಡಮರು, ತಮಟೆ ಮೊದಲಾದುವನ್ನು ಬಳಸುತ್ತಾರೆ (ಯಕ್ಷಬ. ೯೦). ಡೊಳ್ಳು: ಧವಲ್ಯಾಜಿ ಸಪ್ಪಳವ ಬೇಡುವದು ಡೊಳ್ಳು ಡೊಂಬರಾಟ (ಅಕಳ. ೩೪೩-೯); ಲಗ್ನದ ದಿವಸ ಗಂಡಸರೂ ಹೆಂಗಸರೂ ಸಿಂದಿಯ ಕುಡಿದು ಕೊಳಲು ಡೊಳ್ಳುಗಳೊಂದಿಗೆ ಕುಣಿದ ಬಳಿಕ ಮದುಮಕ್ಕಳ ಮೇಲೆ ಅಕ್ಕೀಕಾಳು ಹಾಕುವರು (ಕಭಾಗಿ. ೨೨೪): ಆ ಸೋಮವಾರ ಬೆಳಗಿನ ಝಾವದಲ್ಲಿ ಝುಗಂಝುಳ್ಳು ಝುಗಂಝುಳ್ಳು ಎಂಬ ಡೊಳ್ಳುಗಳ ನಿನಾದವು ಗಂಗನಹಳ್ಳಿಯನ್ನು ಜಾ ಗೃ ತ ಗೊ ೪ ಸಿ ತು (ಹಳ್ಳಿಬ. ೬೨). ಡೋಳು: ಕಹಳೆಗಳನ್ನತ ಡೌಡೆ ನಿಸ್ಸಾಳ ಸನ್ನೆ ಡೋಳು . . . ಒದಱಿದವು (ಅಂಜಕ. ೬-೭೫): ಭೇರಿ ತಂಬಟ ಡೋಳು ಮುಂತಾದ ಬಹು ವಾದ್ಯ ಭೂರಿ ಬೊಂಬಾಳ ದೀವಿಗೆಯ ಪಾಠಿಯ ಪಟುಭಟರುಗಳು (ಪೊೀಹಕ. ೧೦-೨೦); ಡೋಳಿನ ಕುದುರೆ ಡಮಾನದ ಮದಕರಿ (ಕಂನವಿ. ೦೯-೨೩); ಡೋಳು ಮೊದಲಾದಖಿಳವಾದ್ಯವ ಸೂಳವಿಸುತ (ಪ್ರಹ್ಲಾದ. ೯-೦೦); ಸಿಡಿಲನೊಂದು ಕೈಲಿ ಹಿಡಿದು ಬಾನ ಡೋಳ ಬಡಿಯುತ (ಕಾಂಚಜ. ೯-೨೦). ಢೋಲು: ಕಷ್ಟತರವಾದ ಹೆಜ್ಜೆಗಳನ್ನು ಹಾಕಿ ಢೋಲಿಗೆ ತಕ್ಕುದಾಗಿ ಕುಣಿಯುವುದುಂಟು (ಅಭಾಸ್ವ. ೦೧೬). ಢೋಳು: ಬೊಂಬುಳಿ ಢೋ[ಪಾಠಾಂ. ಡೋ]ಳು ನಿಸ್ಸಾಳೆ ಬೊಬ್ಬೆಯ ದನಿ ತುಂಬಿ ದುದೆಸ್ವೆಸೆಯನು (ಕೂಚಕೋ. ೩-೯೨). ದೋಲು: ಊದವರು ದೋಲು ಇತ್ಯಾದಿಗಳನ್ನು ಹಿಡಿದುಕೊಂಡಿದ್ದರು (ಕಿಶ್ರಕ. ೦೨): ತಾಳಬದ್ಧವಾಗಿ ಒಂದು ಕಡೆಯಿಂದ ದೋಲನ್ನೂ ಕ್ರಂತಿಣಿಯನ್ನೂ ಬಾರಿಸತೊಡಗಿದರೆ (ಶಾಂಕಕೃ. II, ೯೧೭). ದೋಳು₁: ದೋಲು ಬಡಿದು ಗೆರಸಿ ಮುಚ್ಚಿದ ಹಾಗೆ (ಗಾದೆ). [ <ಸಂ. ಢೋಲ ]

**ಡೋಲೆ** (ನಾ). ಉಯ್ಯಾಲೆ: ಝುಗಝುಗಿಪ ಡೋಳೆಯೊಳ್ ಕಾಮಿನಿಯರಾಗ ಲೀಲಾವಿನೋದದಿಂ ತೂಗಲು (ಸಾನಂಗ. ೩೩). [ ಸಂ. ಡೋಲಾ ]

**ಡೋಲೋತ್ಸವ, ಡೋಳೋತ್ಸವ** (ನಾ). ದೇವರನ್ನು ಉಯ್ಯಾಲೆ ಮೇಲೆ ಕೂಡಿಸಿ ಮಾಡುವ ಉತ್ಸವ: ಇವೊತ್ತು ಊರದೇವರ ಡೋಲೋತ್ಸವ ಇದೆ (ಋಾಧಿ). ಡೋಳೋತ್ಸವ: ಶ್ರೀಹಯಗ್ರೀವ ಲಕ್ಷ್ಮೀನಾರಾಯಣ ದೇವರವರ ಡೋಳೋತ್ಸವದ ಬಗ್ಗೆ (ಪ್ರ್ಯಾಕರ. ೦೯೩೮, ೨೭-೨; 1816). [ ಸಂ. (ಡೋಲಾ + ಉತ್ಸವ) ]

**ಡೋವಿ, ಡವಿಗೆ, ಡವುಗೆ, ಡೊಗೆ, ಡೊವಿಗೆ, ಡೋಗಿ, ಡೋಯಿಗೆ, ಡೋವಿಗೆ, ಡೋವೆ, ಡೌಗಿ, ಡಾಗೆ** (ನಾ). ೧. ತಲೆಯ ಚಿಪ್ಪು; ತಲೆಬುರುಡೆ; ಕರೋಟಿ: ವೇದಂಗಳಂ ಕೇಳು ನೆಂಟುದೊಡೆ ಬಟುನುಡಿಯೊಳಾದ ಫಲವೇನು ನಾಲಗೆಯ ಸಡಗರ ಡೋವಿಗಾದುಪಟವೆೃತ್ತು (ಅಶಿಜಂ. ೯-೬). ಡವಿಗೆ: ೧. ಪಾಕ ಮಾಡುವ ಭಾಂಡ ಸೊಣಿಗನ ಡ[ಪಾಠಾಂ. ಡೊ]ವಿಗೆಯಯ್ಯಾ (ಬಸವ. ೬೦೪): ಹೋಡುಗೈಯೊಳಗೆ ಡವಿಗೆಯನು ಹಿಡಿಯುತಲಿ ಬೇಡಿ ಉಂಡವನೆ (ಕನ್ನಡಾ. ೩೦೮): ಅಲ್ಲೊಂದು ಮನುಷ್ಯ ಡವಿಗೆ ಕಂಡಿತು (ಪೂವಾಸಾ. ೨೦). ೨. ಟೊಳ್ಳಾದ ದಪ್ಪ ಬಿದಿರು: "ಡವಿಗೆ – ದೊಡ್ಡ ತೊಳ್ಳು ಬಿದಿರು" (ಜಾಪಕೋ. ೬೨). ಡವುಗೆ: ೧. ಯೇಸುವಿನ ಚಿತ್ರದಲ್ಲಿ ಯೇಸುವಿನ ಕಾಲ ಬುಡದಲ್ಲಿ ಒಂದು ತಲೆಯ ಡವುಗೆ ಇದೆ (ಗೊರೂ.ಥಾ. ೦೮, ಬಿಪ್ಪಕಿ); ಅದು ಪ್ರಾಚೀನಕಾಲದ ಒಬ್ಬ ಮನುಷ್ಯನ ಡವುಗೆಯಾಗಿರಬಹುದೆಂಬ ತಿಳಿವಳಿಕೆ ಇದೆ (ಮುತಂ೬. ೨೨).

**ಡೊಗೆ:** ೧. ಒಟ್ಟೈಯಲುಗಳ ಕುಂಡಲಗಳಿಂದೆ ಕರಿಶಿರದ ಡೊಗೆಯ ಸಲಿಲದ ಕಮಂಡಲದಿಂದೆ (ಕೃಮಿಥಾ. ೧೬-೨೪); ಆನೆಯ ತಲೆಯ ಡೊಗೆಯೇ ಅವನ ಕಮಂಡಲುಂ (ಬಿದುರೆ. ೭೬). **ಡೊವಿಗೆ:** ೧. ಡೊವಿಗೆ ಮೃತ್ಯುವಿನ ಸುಡಿಗೊಳಗಾಯಿತ್ತು (ಬಸವ. ೫೬೯). **ಡೋಗಿ:** ೧. ಕೊರಳಿಗೊಂದಿದ ಗಂಡಮಾಲೆ ಡೋಗಿಯು ಹುಣ್ಣು ಶಿರಕೆ ಬೆನ್ನಿಗೆ ಜರಡಿಹುಣ್ಣು (ಮಲ್ಲಿಕ. ೧೦-೨೪). **ಡೋಯಿಗೆ:** ೧. ಅಯ್ದುಧದ ಹರಹುಗಳ ತಲೆಗಳ ಡೋ[ಪಾಠಾಂ. ದೋ]ಯಿಗೆಯ ಕಡಿಖಂಡಮಯದ ಮಹಾಯತದ ರಣದೊಳಗೆ ಬಂದನು ಭೀಷ್ಮನಿದ್ದೆಡೆಗೆ (ಕುಮಾ.ದ್ರೋ. ೧-೨೦). **ಡೋವಿಗೆ:** ೧. ನೆಲಕ್ಕೊಲೆವ ಡೋವಿಗೆ . . . ದರ್ಪವಳಿದವಯವಂ ಮೆಱೆವ ಘೋರತಪದಚಲಿತರನೀಕ್ಷಿಸಿದನವನೀಶನು (ಹರಿಶ್ಚ. ೬-೩೫). **ಡೋವೆ:** ೧. ಹೊರ ಕುಲದವನಂತೆ ಶಿರದ ಡೋವೆಯೊಳು ಕಾ ತಿರಿದು ತಿಂಬುವನೆಂದು ಹರನ ಜರಿದು (ಪ್ರಭುಲಿಂ. ೦೦೩-೨೨). **ಡೌಗಿ:** ೧. ಪ್ರತಿಯೊಂದು ನಾಟಕದಲ್ಲಿ ಕೆಲವು ದಿಂಡಗಳೂ ಹಲವು ಡೌಗಿಗಳೂ ಬರುತ್ತಿದ್ದವು (ಜನನಾ. VII, ಪ್ರಸ್ತಾವನೆ). 'ಡೌಗಿಬರ' ಪರಾ. ೨. 'ಡೌಗಿಕೊಳವಿ' ಪರಾ. **ಡೌಗೆ:** ೧. "ಒಡು = ೧. ಒಡಕ ಗಡಿಗೆ. ೨. ತಲೆಯ ಡೌಗೆ" (ಗಂಗಾಪು. ೫೯).

**ಡೋಗಿಯ ಬರ = ಡೋಗಿಬರ:** ತುಸು ದಿವಸಗಳಲ್ಲಿ ದೇಶದಲ್ಲಿ ಡೋಗಿಯ ಬರವು ಪ್ರಾಪ್ತವಾಯಿತು (ಗುರುಪ್ರ. ೬).

[ ←ಮರಾ. ಡೋಈ ]

**ಡೋವೆ** 'ಡೋವಿ' ನೋ.

**ಡೋಹ** 'ಡೋಹರ' ನೋ.

**ಡೋಹರ,** ಡೋಹ, ಡೋಹಾರ, ಢೋರ (ನಾ). ಚಂಡಾಲ ಜಾತಿಯವನು : ಅಪ್ಪನು ನಮ್ಮ ಮಾದರ ಚನ್ನಯ್ಯ ಬೊಪ್ಪನು ನಮ್ಮ ಡೋಹರ ಕಕ್ಕಯ್ಯ (ಬಸವ. ೩೪೮) : ಬೇಡಂಗೆ ಡೋಹ[ಪಾಠಾಂ. ಹಾ]ರಂಗೆ ಹೊಲೆಯಂಗೆ ರಾಮನಾಥಗೀಶ್ವರನೊಲಿದ ಪರಿಯ ನೋಡ (ಅಂಬಿಗ. ೪೦೨-೦೦೦); ವರ ಡೋಹರ ಕಕ್ಕಯ್ಯಂ ಛರಗುರು ಶಿವಲಿಂಗಭಕ್ತನೀ ವಸುಮತಿಯೊಳ್ (ವೃಷಬಿ. ೩೮-೦೦೪). **ಡೋಹ:** ವೇಸಿಕೆಯಿಲ್ಲದಾ ಪೊಲೆಯ ಮಾದಿಗ ಕೀಲಿಗ ಡೊಂಬ ಡೋಹನತ್ಯಾಸುರಕರ್ಮಿ ಕಳ್ಳ ಗಡುಹಿ ತೊನ್ನರೊಳಾದೊಡುರುಳ್ವ . . . ಸೂಳೆ (ಶಾಸ್ತ್ರಸಾ. ೬೦೦೨) ; ಮೂಧಾರ ಕೇರೆಲ್ಲ ಮೊದಲಿಗೆ ಹೊರಟೀತು ಅದು ನೋಡಿ ಡೋಹರೆಲ್ಲರು ಮಗ್ಗಿದರು (ಸಿದ್ಧಪು. ೪-೭೪). **ಡೋಹಾರ:** ಸಟ್ಟಯುಂದಂದನೆ ಸಿರಿಯಾಳನ ಮಡಿವಾಳನೆಂದೆಂಬೆನೆ ಮಾಚಯ್ಯನ ಡೋಹಾರನೆಂದೆಂಬೆನೆ ಕಕ್ಕಯ್ಯನ(ಬಸವ.೩೪೪); ಈತನೆ ಮೇಡಾರ ಕೇತಯ್ಯ ಪೆಂಬಾತನೀತನೇ ಡೋಹಾರ ಕಕ್ಕಯ್ಯನೆಂಬಾತನು (ಚೆಂಪು. ೫೬-೫೬). **ಢೋರ:** ಪೂರ್ವದ ಋಷಿಗಳೆಲ್ಲರು ಕಮ್ಮಾರ, ಮಚ್ಚಿಗಾರ, ಢೋರ, ಕಬ್ಬಲಿಗ, ನಾಯಿದ ಮೊದಲಾದ ಕುಲದಲ್ಲಿ ಹುಟ್ಟಿದವರಾದಾಗ್ಯೂ (ಕೃಷಿಕ್ರ. ೨೯೬); ಚರ್ಮಕ್ಕೆ ಕರೆ ಹಾಸುವುದೇ ಢೋರರ ಮುಖ್ಯ ಹೋರೆಯು (ಕಥಾಗಿ. ೨೦೪).

[ ←ಮರಾ. ಡೋಹರ್, ಡೋಹಾರ್, ಢೋರ್ ]

**ಡೋಹಾರ** 'ಡೋಹರ' ನೋ.

**ಡೋಳಾಕೇಳಿ** (ನಾ). ಉಯ್ಯಾಲೆಯ ಆಟ : ಡೋಳಾಕೇಳಿಯ ಕಂದುಕ ಕೇಳಿಯ . . . ಬಿನದದೊಳಿ ಸತಿಯನವರೊಸೆಯಿಸಿದರ್ (ಪುಷ್ಪಪು. ೯-೮೨).

[ ಸಂ. ಡೋಲಾಕೇಲಿ (ಡೋಲಾ + ಕೇಲಿ) ]

**ಡೋಳು** 'ಡೋಲು' ನೋ.

**ಡೋಳೋತ್ಸವ** 'ಡೋಲೋತ್ಸವ' ನೋ.

**ಡೋಱ** 'ಡೊಂಗಱ' ನೋ.

**ಡೋಱಗಳೆ** 'ಡೋಱುಗಳೆ' ನೋ.

**ಡೋಱಗೊಱೆ** 'ಡೋಱುಗೊಱೆ' ನೋ.

**ಡೋಱದಲೆ** (ನಾ). ಡೊಗರು ಬಿದ್ದ ತಲೆ; ಕುಳಿಬಿದ್ದ ತಲೆ : ಶರಧಿಯಲಿ ಹುಟ್ಟಿರ್ದ ವಿಷದಲಿ ಕರಿಕುದಲೆಯಾದವರು ಅಂಧಾಸುರನ ಬಿಡಿಸಲು ಹರನು ಹೊಡೆದಾ ಡೋಱದಲೆಯವರು (ಕಾಶಿರಾ. ೨೧-೧೬).

[ ಡೋಱ (<ಡೊಂಗಱ) + ತಲೆ$_1$ ]

**ಡೋಱವೋಗು** 'ಡೋಱುವೋಗು' ನೋ.

**ಡೋಱು** 'ಡೊಂಗಱ' ನೋ.

**ಡೋಱುಗಲೆ** (ನಾ). ಸೀಳಿದ ಗುರುತು ; ಗಾಯದ ಚಿಹ್ನೆ : ಸುರಪತಿಯು ಮೋಱಯಲೀತನೆಱಗಿದ ಡೋಱುಗಲೆ[ಪಾಠಾಂ. ಳೆ]ಯದೆ ಭೂತಳಾಧಿಪ ನೋಡು ದೇವಾಂತಕ ನಿಶಾಚರನ (ತೊರರಾ. ೬-೨೦-೩೮).

[ ಡೋಱು (<ಡೊಂಗಱ) + ಕಲೆ$_2$ ]

**ಡೋಱುಗಳೆ,** ಡೋಱಗಳೆ (ಕ್ರಿ). ೧. ಸೀಳು ; ತೂತುಮಾಡು ; ಕೊರೆ ; ಕತ್ತರಿಸು : ಐದಾಱು ಶರದಲಿ ಕರ್ಣನೆದೆಯನು ಡೋಱುಗಳೆಯಲು ಬಳಲಿದನು ಪೂರಾಯ ಘಾಯದಲಿ (ಕುಮಾ.ದ್ರೋ. ೫-೨೮) ; ತೊಡೆಯನು ಡೋಱುಗಳೆವ ಪುಳುವಿಗಿನಸುತನು ಬಳಲಿ ಮೈಮಱದೊಱಗಿದ ರಾಮಗೆ ನಿದ್ದೆಯಳಿವುದೆಂದು ಚಿಂತಿಸಿದ (ಕರ್ಣಮ. ೪-೮) : ಪಾರ್ಥಿಯ ಶಿಲೀಮುಖಾಳಿ . . . ಸ್ಯಂದನವಿತಾನವಂ ಡೋಱುಗಳೆದುದು (ಕೃಮಿಥಾ. ೨೨-೪೨). ೨. ಸೀಳಿ ಹೋಗು ; ಬಿರಿ ; ಭಂಗಹೊಂದು ; ಡೊಗರುಬೀಳು : ಎದೆ ಡೋಱುಗಳೆವಂತೆ ತಿವಿದುರುಳಿಸಿದ (ಭೃಗುವೇ. ೩-೦೩). **ಡೋಱಗಳೆ:** ೨. ಡೋಱ[ಪಾಠಾಂ. ಱು]ಗಳೆದುದು ಗರ್ವಪರ್ವತಂ (ರಶಿಜಂ. ೩೩-೨೬).

[ ಡೋಱು (<ಡೊಂಗಱ) + ಕಳೆ$_1$ ]

**ಡೋಱುಗೊಱೆ,** ಡೋರಿಗೊರೆ, ಡೋಱಗೊಱೆ (ಕ್ರಿ). ತೂತುಕೊರೆ; ರಂಧ್ರಮಾಡು ; ಸೀಳು ; ಛಿದ್ರಿಸು : ರಕ್ತಮಾಂಸಾಹಾರಿಯಾದ ದುಷ್ಕೀಟಕವೊಂದೈತಂದು ಕರ್ಣನ ತೊಡೆಯಂ ಡೋಱುಗೊಱದು ರಕ್ತಮನೀಂಟಿ ಮಾಂಸಮಂ ಭಕ್ಷಿಸುತ್ತಿರಲಾಗಿ(ಧಾರಕಾಂ.೩). **ಡೋರಿಗೊರೆ:** ಕಿನಿಸಾಂತು ಶರವರ್ಷಮಂ ಕರೆಯಲಸುರರಂ ತನುಗಳಂ ಡೋರಿಗೊರೆಯಲ್ಕಮಮ ದೈತ್ಯರನುಪಮಿತ ಖಡ್ಗ ತೋಮರ ಗದೆಗಳಿಂದಂತವಂ ಖಂಡಿಸುತಾಗಳು (ಛಾಯಾಸು. ೬). **ಡೋಱಗೊಱೆ:** ಕುಂತವೆರ್ದೆಯನು ಡೋಱಗೊಱದಂತೆ (ಚಳಿಸ. ೨೬).

[ ಡೋಱು (<ಡೊಂಗಱ) + ಕೊಱೆ$_1$ ]

**ಡೋಱುನೊಸಲು** (ನಾ). ಕುಳಿಯಾದ ಹಣೆ ; ಹಳ್ಳವಿರುವ ಹಣೆ ; ತಗ್ಗಿರುವ ಲಲಾಟ : ಏಳನೆಯ ಬಾಗಿಲಲಿ ಡೋಱುನೊಸಲಿನ ಕಿಱುಬೆಮರ ಕಾಹೇಱದಕ್ಷಿಯ ಸರಭಸದ ಪಡಿಹಾಱರಿಬ್ಬರು ನಿಂದಿರಲು (ನಿಧಾಗ. ೩-೬-೮).

[ ಡೋಱು (<ಡೊಂಗಱ) + ನೊಸಲು (<ನೊಸಲ್) ]

**ಡೋಱುಮೈ** (ನಾ). ಗೂಡುಬಿದ್ದ ಮೈ ; ಜೀರ್ಣವಾದ ದೇಹ: ಡೋಱುಮೈಯಾದ ಮುದುಕಿಹೋಹುದಱಿಂದ ಕಾಱಕೊಂಡುಣ್ಣೊ (ಸರ್ವಜ್ಞ. ೦೭೯೬). [ ಡೋಱು (<ಡೊಂಗಱ) + ಮೈ (<ಮೆಯ್) ]

**ಡೋಱುವೋಗು,** ಡೋಱವೋಗು, ದೋಱುವೋಗು (ಕ್ರಿ). ಡೊಗರು ಬೀಳು ; ಹಳ್ಳವಾಗು ; ಕುಳಿಬೀಳು ; ಸೀಳಿಹೋಗು ; ಬಿರಿ : ಕೀಱ ಕಾಲಿಡೆ ದಿಕ್ಕರಿಗಳೆದೆ ಡೋಱುವೋಗಲು ಸರ್ವ ಲಗ್ಗೆಯಲೇಱತೀ ದಳ (ಕುಮಾ.ಕ. ೧೫-೨೦); ಬಿದ್ದನು ಘಾತಿಯಲಿ ಧರೆ ಶೈಲ ವನ ಸಹಿತ ಡೋಱುವೋಗಲು (ನಿಧಾಗ. ೧೦-೩೨-೧೪), **ಡೋಱವೋಗು:** ಡೋಱವೋದುವು ತೋಳು ನೆತ್ತರ ಕಾಱ ರಾವಣ ಗಂಡುಗೆಟ್ಟನು (ಕಾಶಿರಾ. ೨-೩೧) ; ಬೀಸಿ ಬಾಲದಿ ಗೋಣ ಬಿಗಿದನು ಸಾಸಿಗನ ಶಿರ ಡೋಱವೋದುವು (ಕಾಶಿರಾ. ೨೨-೧೧). **ದೋಱುವೋಗು:** ವಿಮಾಱ ಪೊಗುವ ಅಂಗಜನ ಶರದಲಿ ದೋಱುವೋಯಿತು ಹೃದಯ (ಕುಮಾ.ವಿ. ೨-೦೦).

[ ಡೋಱು (<ಡೊಂಗಱ) + ಪೋಗು$_1$ ]

**ಡೋಳುಹೃದಯ** (ನಾ). ಸೀಳಿದ ಎದೆ; ಡೊಗರುಬಿದ್ದ ಎದೆ : ಹೋರುಗಳೆದಕ್ಷಿಯಿಂ ಡೋಳುಹೃದಯಂಗಳಿಂ (ಅಜಿತಂ. ೩೭-೩೭). [ ಡೋಳು (<ಡೊಂಗಲು) + ಹೃದಯ ]

**ಡೋಳಿಸಿಸು** (ಕ್ರಿ). ಹೋಳಾಗಿಸು ; ಸೀಳಿಹೋಗುವಂತೆ ಮಾಡು ; ಡೊಗರು ಬೀಳಿಸು : ಶರಗಳಿಂದಚ್ಚವರ ತನುಗಳಂ ಡೋಳಿಸಿಸಿಯಚ್ಚ ಸಾರಥಿ ತೇರ್ಗಳಂ ತಿರುವನೇಳಿಸಿದ ಬಿಲ್ಗಳಂ ಕಡಿಕಡಿದು (ಜಪು. ೪೯-೩೩). [ ಡೋಳು (<ಡೊಂಗಲು) + ಎನಿಸು$_1$ ]

**ಡೌಗಿ** 'ಡೋವಿ' ನೋ.

**ಡೌಗಿಕೊಳವಿ** (ನಾ). ಟೊಳ್ಳಾದ ದಪ್ಪ ಬಿದಿರಿನಿಂದ ಮಾಡಿದ ಕೊಳವೆ; ದಪ್ಪಬಿದಿರಿನ ಅಂಡೆ : ಹವ್ಯುಹಾಕಿ ಚಕ್ಕೆತೆಗೆಯಲು ಚರ್ಮದ ಚೀಲ, ಡೌಗಿಕೊಳವಿಯನ್ನೂ, ಚಹಾ ತಯಾರಿಸಲು ದನ, ಕುರಿ, ಮನುಷ್ಯರುಗಳ ಹಿಕ್ಕೆಗಳನ್ನೂ ಉರಿಹಚ್ಚುತ್ತಾರೆ (ಕೃಲಾಸ. ೩೩). [ ಡೌಗಿ (<ಡೋವಿ) + ಕೊಳವಿ (<ಕೊಟವಿ) ]

**ಡೌಗಿಬರ** 'ಡೋಗಿಬರ' ನೋ.

**ಡೌಗೆ** 'ಡೋವಿ' ನೋ.

**ಡೌಡೆ** 'ಡವುಡೆ$_1$' ನೋ.

**ಡೌಡೆವಱ** (ನಾ). ೧. ಡವುಡೆಯೆಂಬ ಚರ್ಮವಾದ್ಯ. ೨. ಡವುಡೆ ವಾದ್ಯದ ಶಬ್ದ : ನೆರೆದು ಪಳಂಚುವ ಕಾಲುಂಗುರದ ರವಂ ಮುಂದೆ ಡೌಡೆವಱಯಂ ಪೋಲುತ್ತಿರೆ (ಗಿರಿಕ. ೭-೫೦). [ ಡೌಡ (<ಡವುಡೆ$_1$) + ವಱ$_1$ ]

**ಡೌಲು, ಡವಲು, ಡವುಲು** (ನಾ). ೧. ರೀತಿ; ಪ್ರಕಾರ. ೨. ಬಿಣಹೆಮ್ಮೆ; ಬರಿಯ ಬಡಾಯಿ ; ಆಡಂಬರ : ಅಲ್ಲೊಂದು ಇಲ್ಲೊಂದು ಬಣ್ಣದ ನೂಲು ಚಿತ್ತರ ಬದುಕ ಸುತ್ತಿ ತೋರಿಸುತ್ತಿದೆ ಡೌಲು (ನಿಂಮು. ೩೦-೦) ; ಇದರೊಳಗೆ ನಾನು ಮನಸ್ಸಿಗೆ ಹಚ್ಚಿಕೊಳ್ಳತಕ್ಕದ್ದೇನೂ ಇಲ್ಲ ಎಂದು ಡೌಲಿನ ಮಾತು ಹೇಳಿ (ಮುಂಬಯಿ. ೩-೯೩). ೩. ದೊಡ್ಡಸ್ತಿಕೆ ; ಘನತೆ ; ವೈಭವ : ಬೆಳಗಿನ ಸ್ವಚ್ಛಂದ ಗಾಳಿಯಲ್ಲಿ ಡೌಲಿನಿಂದ-ಹಾರತೊಡಗಿದ ಆ ತ್ರಿವರ್ಣಧ್ವಜವನ್ನೆ ಅರೆಕ್ಷಣ ಪ್ರೀತಿ ಅಭಿಮಾನಗಳಿಂದ ನಿಟ್ಟಿಸುತ್ತಿದ್ದು (ಆಗಸ್ಟ್. ೧೮); ದೊಡ್ಡ ಸಂಬಳ ತೆಗೆದುಕೊಂಡು, ಮೂರಂಗುಲ ಜರತಾರಿ ರುಮಾಲು ಹಾಕಿಕೊಂಡು, ಡೌಲಿನಲ್ಲಿ ಅಮಲ್ದಾರರುಗಳು ಕಾಲಹಾಕು ತ್ತಿದ್ದರು (ನಟಸಾ. ೨). ೪. ದರ್ಪ ; ಠೀವಿ : ಪಂಡಿತರ ಸಭೆಗೆ ಓರ್ವನು ಬಹಳ ಡೌಲಿನಿಂದ ವಸ್ತ್ರಾಲಂಕಾರಭೂಷಿತನಾಗಿ ಬಂದನಂತೆ (ಹಾಂಸ. ೬೮). **ಡವಲು** : ೫. ಅಂದಾಜು ; ಊಹೆಮಾಡುವಿಕೆ. 'ಡವಲುಕಟ್ಟು' ಪರಾ. **ಡವುಲು**: ೨. 'ಡವುಲುಕೊಚ್ಚು', 'ಡವುಲುದಾರ' ಪರಾ. ೫. 'ಡವುಲಂದಾಜು', 'ಡವುಲುಜವಾಬಂದಿ' ಪರಾ. **ಡೌಲು**: ೨. ಈಗ ನನ್ನ ಮ್ಯಾಗೆ ಡೌಲ ಬಡೀತಾನ (ಪುರುಷ. ೦೦೯). [ ←ಅರ. ಹಿಂ. ಮರಾ. ಡೌಲ್ ]

**ಡೌಳಿ** 'ಟವಳಿ' ನೋ.

**ಡ್ಯಾಲಿಯಾ** 'ಡೇಲಿಯಾ' ನೋ.

**ಡ್ರಮ್ಮು** (ನಾ). ಪೀಪಾಯಿ: ಈ ಕೆಳಗಿನ ಇನ್ನೂ ಹತ್ತಾರು ತದ್ಭವಗಳನ್ನು ಈ ವರ್ಗಕ್ಕೆ ಸೇರಿಸಬಹುದು. ಉದಾ . . . ಬಾಟ್ಲಿ; ಆಸ್ಪತ್ರೆ; ಡ್ರಮ್ಮು (ಭಾಷಾಶಾ. ೦೭೭). [ ←ಇಂ. Drum ]

**ಡ್ರಾಮು** (ನಾ). ಮದ್ಯ ಮೊದಲಾದ ದ್ರವಗಳ ಒಂದು ಸಣ್ಣ ಅಳತೆ : ನಾಲ್ಕು ಡ್ರಾಮು ಸೆರೆ ಎಂಟು ಡ್ರಾಮು ಕೋಪ (ಬೆಂಗಬ. ೧೧). [ ←ಇಂ. Dram ]

**ಡ್ರಿಲ್ಲು** (ನಾ). ಕವಾಯಿತು ; ವ್ಯಾಯಾಮ ಶಿಕ್ಷಣ : ಕರಡಿ ಕಪಿಗಳಿಗಲ್ಲಿ ನಡೆಯುತಿದೆ ಡ್ರಿಲ್ಲು (ಕೋಗಿಲೆ. ೩-೪೬). [ ←ಇಂ. Drill ]

**ಡ್ರೈವರು** (ನಾ). ಮೋಟಾರುಬಂಡಿ ಮೊದಲಾದುವನ್ನು ನಡಸುವ ವನು; ಸಾರಥಿ; ಚಾಲಕ: ನಮ್ಮ ಕಾರಿಗೆ ಒಬ್ಬ ಡ್ರೈವರು ಬೇಕಾಗಿದ್ದಾನೆ (ರೂಢಿ). [ ←ಇಂ. Driver ]

*

# ಢ

**ಢ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ನಾಲ್ಕನೆಯ ಅಕ್ಷರ. ೨. [ಗಣಿತ] ನಾಲ್ಕು ಎಂಬ ಸಂಖ್ಯೆಯ ಸಂಕೇತ : "ಢಢಭವಂ ನೆಱ ನಾಲ್ಕು" (ಪಂಂಗಣಿ. ೦೦೪-೦೦).

**ಢಂ** (ನಾ). ಒಂದು ಅನುಕರಣ ಶಬ್ದ ; ಪಟಾಕಿ ಮೊದಲಾದ ಸಿಡಿ ಮದ್ದುಗಳು ಸಿಡಿಯುವಾಗ ಅಥವಾ ಕೋವಿ, ಫಿರಂಗಿ, ಪಿಸ್ತೂಲು ಮೊದಲಾದುವುಗಳಿಂದ ಗುಂಡು ಹಾರಿಸುವಾಗ ಉಂಟಾಗುವ ಶಬ್ದ.

**ಢಂಕೃತಿ** (ನಾ). ಢಂ ಎಂಬ ಧ್ವನಿ: ಹೈದರನಿಗೆ ಈ ಫಿರಂಗಿಗಳ ಢಂಕೃತಿಯು ಆಶ್ಚರ್ಯವನ್ನು ಮಾಡಿತು (ಒಡೆಕ. ೮೫). [ ಸಂ. ]

**ಢಕಲಪಟ್ಟಿ, ದಕಲುಪಟ್ಟಿ, ಢಕಲ್ಪಟ್ಟಿ** (ನಾ). (ಉಕ) ೧. ಕೆಲಸವನ್ನು ಮುಂದೂಡುವುದು. **ದಕಲುಪಟ್ಟಿ** : ೨. ಚಕ್ಕರು ; ತಪ್ಪಿಸುವಿಕೆ: ಬರುತ್ತೇನೆ ಎಂದು ಹೇಳಿ ದಕಲುಪಟ್ಟಿ ಕೊಟ್ಟ (ರೂಢಿ). ೩. ನೂಕುವಿಕೆ ; ದಬ್ಬಿ ಹೊರಗೆ ಹಾಕುವಿಕೆ ; (ಕೆಲಸದಿಂದ) ವಜಾ ಮಾಡುವಿಕೆ ; ಅವನಿಗೆ ದಕಲುಪಟ್ಟಿಯನ್ನು ಕೊಟ್ಟುಬಿಡುತ್ತಿದ್ದರು (ಬಂಗಾರ್ಯ ೩೧). **ಢಕಲ್ಪಟ್ಟಿ** : ೩. ರಂಗಣ್ಣನಿಗೆ ಹೊಸಹಳ್ಳಿಯಲ್ಲಿ 'ಢಕಲ್ಪಟ್ಟಿ' ಹೊನ್ನ ಹಳ್ಳಿಯಲ್ಲಿ ಅರ್ಧಚಂದ್ರಪ್ರಯೋಗ (ದುಂಬಿಕ ೦೭೧). [ ←ಮರಾ. ಢಕಲ್‌ಪಟ್ಟೀ ]

**ಢಕಲಾಯಿಸು** (ಕ್ರಿ). ಮುಂದಕ್ಕೆ ತಳ್ಳು; ನೂಕು; ದೂಡು: ಪೆಟ್ರೋಲು ಮುಗಿದು ಕಾರನ್ನು ಢಕಲಾಯಿಸಬೇಕಾಯಿತು (ರೂಢಿ). [ ಢಕಲಾ$_2$ (P ←ಮರಾ. ಢಕಲಣೇ) + - ಇಸು$_3$ ]

**ಢಕಾಯಿತ** 'ದಕಾಯಿತ' ನೋ.

**ಢಕಾಯಿತಿ** 'ದಕಾಯಿತ' ನೋ.

**ಢಕಾರ** (ನಾ). ಢ ಎಂಬ ಅಕ್ಷರ. [ ಸಂ. ]

**ಢಕ್ಕ** (ನಾ). = ಡಕ್ಕೆ ೧ : ಮುರಜೆ ಢಕ್ಕಂ ವೀಣೆ ಡಮರು ಕಾಳಂ ಮೇಳಂ (ಸಿದ್ಧಕಾ. ೮-೯). [ ಸಂ. ಢಕ್ಕಾ ]

**ಥಕ್ಕರ** 'ಠೊಕ್ಕರ್೩' ನೋ.

**ಥಕ್ಕಾಮುಕ್ಕಿ** 'ಧಕ್ಕಾಮುಕ್ಕಿ' ನೋ.

**ಥಕ್ಕಾರವ** (ನಾ). ಥಕ್ಕೆಯ ಶಬ್ದ : ದಳದ ಬಂಭಾರವಂ ರಣ ಕಿಲಕಿಲಾರವಂ ಪಟಹ ಥಕ್ಕಾರವಂ ಪುದಿದ ನಾನಾರವಂ (ಕೃಪಿಾಹ. ೨೨-೪). [ ಸಂ. (ಥಕ್ಕಾ + ರವ)]

**ಥಕ್ಕುಳಿ** (ನಾ). ಇಂದು ಮಾಡಬೇಕಾದ ಕೆಲಸವನ್ನು ನಾಳೆಗೆ ಮುಂದೂಡುವುದು ಅಥವಾ ತಾನು ಮಾಡಬೇಕಾಗಿ ಬಂದ ಕೆಲಸವನ್ನು ಉಪಾಯದಿಂದ ಇನ್ನೊಬ್ಬನ ಮೇಲೆ ಹೇರುವುದು: ಕಾಲಯವನನು ಕಾಯದಿಂದವೆ ಬೀಳಿಸಿದೆ ಮಾಗಧನನಾ ಪರಿ ಸೀಳಿಸಿದೆ ಭೀಷ್ಮಾದಿಗಳ ಸೋಲಿಸಿದೆ ಸಾವುದಲಿ ಡಾಳನತಿ ಥಕ್ಕುಳಿಯ[ಪಾಠಾಂ. ಡೊಂಕಣಿಯ] ಠಕ್ಕಿನ ಠೌಳಿಕಾಱನು ಬಿನ್ನ ಮಾಯೆಯ ಹೇಳಲಮ್ಮೆನು ಕೃಷ್ಣ ಕರುಣಿಸು ಕರ್ಣನಾರೆಂದ (ಕುಮಾ.ಕ. ೨೬-೨೬). [ ← ಮರಾ. ಥಕಲ್ ]

**ಥಕ್ಕೆ** (ನಾ).=ಡಕ್ಕೆ೧: ಥಕ್ಕೆ ಡಮರುಗ ಮೊಳಗಿದವು (ಕುಕರಾ. ೬-೨೦-೪೩); ಇಂತಷ್ಟವರಣದೊಳಗೊಂದೊಂದನೇ ನಂಬಿ ಕಂತುಹರನೊಲವ ಪಡೆದವರು ಪಲಕೆಲರುಂಟು ಸಂತಸದಿ ತಿಳಿದು ನಂಬುವುದೆಂದು ಸಾಱುತ್ತ ಥಕ್ಕೆಯಂ ಬಾಜಿಸುತ್ತ (ಪ್ರಾಭಲಾ. ೬-೪೦) ; ಪಟಹ ತಮ್ಮಟ ಥಕ್ಕೆ ಡವುಡೆ ಕಹಳಾಸಮುತ್ಕಟ ನಾದಮಳ್ಳಿಱಿಯೆ (ಚಿಬಕು. ೦೬-೦೩). [ ಸಂ: ಥಕ್ಕಾ ]

**ಥಕ್ಕೆವಾಜಿಸು** (ಕ್ರಿ). ೧. ಡಕ್ಕೆಯನ್ನು ಬಾರಿಸು. ೨. (ಆಲಂ) ಭಯದಿಂದ ಎದೆಯಲ್ಲಿ ಡಬಡಬ ಎಂಬ ಶಬ್ದ ಉಂಟಾಗು; ಎದೆಗುಂಡಿಗೆ ಡವಡವನೆ ಬಡಿದುಕೊಳ್ಳು : ದೆಸೆಯೊಳ್ ನಿಶ್ಚಳವಿರ್ಪ ದೇವರಿರ್ದ ಥಕ್ಕಾಧ್ಯಾನದಿಂ ಥಕ್ಕೆವಾಜಿಸೆ . . . ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಗಂ ಬಿಟ್ಟಗಂ (ಎಕ. XI, ದಾವಣ. ೨೩-೨೩; 1284). 'ಡಕ್ಕೆವಾಜಿಸು' ಪರಾ. [ ಥಕ್ಕೆ + ಬಾಜಿಸು ]

**ಥಗೆ** 'ದಗೆ೨' ನೋ.

**ಥಗೆವಡೆ** (ಕ್ರಿ). ಸೆಕೆಯನ್ನು ಹೊಂದು; ಉಷ್ಣತೆಯನ್ನು ಪಡೆ; ಕಾವೇರು: ಥಗೆವಡೆದೊಡಲೊಳು ಸ್ಫೋಟಕವೆದ್ದು ನಾಲಗೆ ನುಡಿಗೆಟ್ಟುವೆ (ಕೋಹಕ. ೯-೦೪). [ ಥಗೆ (<ದಗೆ$_1$) + ಪಡೆ$_1$ ]

**ಥಣ** (ನಾ). ಒಂದು ಅನುಕರಣ ಶಬ್ದ ; ಘಂಟೆ, ಜಾಗಟೆ ಮೊದಲಾದುವುಗಳನ್ನು ಬಡಿದಾಗ ಹುಟ್ಟುವ ಧ್ವನಿ.

ಥಣಥಣ (ದ್ವಿರುಕ್ತಿ) : ವೀರಘಳಕದ ಘಂಟೆ ಥಣಥಣಂ ಥಣಮೆನಲು (ಬಸವ. ದೇ. ೦೦೬-೨೧).

**ಥಣಥಣಿಸು** (ಕ್ರಿ). ಥಣಥಣ ಎಂದು ಶಬ್ದಮಾಡು : ಜಾಗಟೆ-ಗಂಟೆಗಳು ಥಣಥಣಿಸುವುವು (ಕನ್ನಜಾ. ೦೩). [ <ಥಣ + – ಇಸು$_3$ ]

**ಥಣತ್ಕೃತ** (ನಾ). ಥಣಥಣ ಎಂಬ ಶಬ್ದ ; ಘಂಟೆ ಮೊದಲಾದುವುಗಳ ಶಬ್ದ : ಉಲಿವ ಘಂಟೆಯ ಥಣತ್ಕೃತವೊಗೆಯೆ (ಚಿಬಕು. ೪೬-೩೬). [ ಸಂ. ]

**ಥಣಾಡಂಗುರ**, ಡಣಾಡಂಗುರ, ಡಾಣಾಡಂಗರ, ಡಾಣಾಡಂಗುರ, ಢಾಣಾಡಂಗುರ (ನಾ). ಘಂಟಾಘೋಷವಾಗಿ ಸಾರಿದುದು; ಎಲ್ಲರಿಗೂ ತಿಳಿದ ವಿಷಯ; ಬಹಿರಂಗವಾದುದು; ಪ್ರಚಾರವಾದುದು: ಇವಳ ಪವಿತ್ರ ಕತೆ ಇಡೀ ಗುಜ್ಜರಬೆಟ್ಟಿನಲ್ಲಿ ಥಣಾಡಂಗುರವಾಗಲಿಲ್ಲವೇ? (ಹೊಸಕ್ಕ. ೩೭). ಡಣಾಡಂಗುರ : ಇದು ಡಣಾಡಂಗುರವಾಗಿ ಸಾರುವ ವಿಷಯವಲ್ಲ (ಊಡಿ). ಡಾಣಾಡಂಗರ: ರಾಯರಿಂದ್ವರ ನಾ ಹ್ಯಾಂಗ ಬರತಿದ್ದ ಆಚಾರ ಡಾಣಾಡಂಗರಾಗಿ ? (ದೀಪನ. ೪೬). ಡಾಣಾಡಂಗುರ: ಬ್ರಿಟಿಶ್‌ಕೋರ್ಟನ್ನು ನಾವು ಮನ್ನಿಸುವುದಿಲ್ಲವೆಂದು ಡಾಣಾಡಂಗುರವಾಗಿ ಸಾರಿ (ಮಹಾಯೋ. ೧೪೯) ; ಬಸವಂತಿ ಡಾಣಾಡಂಗುರ ಮೋಟರಿನಲ್ಲಿ ಬಂದು ವಾಡೆಯಲ್ಲಿ ನಿಂತು ಬಿಡಲಿ (ದೀಪಹ. II, ೧೩೦) ; ಹೆಸರಿಗೆ ಮಾತ್ರ ಮುತ್ತೈದೆಯಾಗಿರುವುದಕ್ಕಿಂತ ಡಾಣಾಡಂಗುರವಾದ ವೈಧವ್ಯವೇ ಲೇಸು (ಸ್ತ್ರೀಕಿ. ೬). ಢಾಣಾಡಂಗುರ : ಅವನ ಕಿಡಿಗೇಡಿತನ ಹಳ್ಳಿಹಳ್ಳಿಯಲ್ಲೂ ಢಾಣಾಡಂಗುರವಾಗಿದೆ (ಊಡಿ). [ <ಥಣ + ಡಂಗುರ ]

**ಥಣಿರು** (ನಾ). ಒಂದು ಅನುಕರಣ ಧ್ವನಿ; ಘಂಟೆ ಮೊದಲಾದುವುಗಳ ಶಬ್ದ : ಬಿರುದಿನ ಬಿಲ್ಗಂಟೆ ಥಣಿರೆನೆ ಕೊಂಡ ಕಾರ್ಮುಕವ (ಪ್ರಾಭಹಕ. ೩೪-೨೯).

**ಥಣಿಲನೆ** (ಅ). ಥಣಿಲ್ ಎಂದು ಶಬ್ದವಾಗುವಂತೆ ; ಬೇಗನೆ ; ಪಕ್ಕನೆ : ಗಣಮಧ್ಯದೊಳು ತ್ರಿಣೆಯ ಹೃದಯಕವಾಟವ ಥಣಿಲನೆ ತೆಗೆದು ತೋರಲ್ಕೆ (ಕೋಹಕ. ೧-೦೦೮). [ ಥಣಿಲ್$_0$ + – ಅನೆ$_1$ ]

**ಥಪ್ಪಳ** 'ಡಪಳೆ' ನೋ.

**ಥಪ್ಪಳಸೀರೆ** (ನಾ). ಒಂದು ವಿಶಿಷ್ಟ ತರದ ನೆಯ್ಗೆಯುಳ್ಳ ಸೀರೆ : ಯಾಕೇನು. ತಾ ಯಾವಾಗರ ಉಡೋ ಥಪ್ಪಳಸೀರೆ ತಂಗಿ ಉಟ್ಟಳೂ ಅಂತ (ಪ್ರನಿ. ೨೬೦). [ ಥಪ್ಪಳ (<ಡಪಳೆ) + ಸೀರೆ$_2$ ]

**ಥಬ್** (ನಾ). ಒಂದು ಅನುಕರಣ ಶಬ್ದ : ಕಟಕದವರೆಲ್ಲ ಕಟಕಿಯ ನುಡಿವಂತೆ ಥಿಟಲು ಥಿಟಲು ಥಬ್ಬೆಂದು (ಹಂಪ್ರಸಾಂ. ೯-೪೩).

**ಥಬಕು** (ನಾ). ನಟನೆ; ಕಪಟ; ವಂಚನೆ; ಮೋಸ: ಶಾಂತಿಸಮ್ಮೇಳನದಲ್ಲಿ ಭಾರತ ಭಾಗ ವಹಿಸಿತು ಎನ್ನುವುದು ಸತ್ಯದ ಅಪಭ್ರಂಶ ; ಬರೀ ಥಬಕು (ಅಕ್ಷಸಾ. ೮೦). [ ←ಹಿಂ. ಥಬಕ್ = ಉಪಾಯ, ಯುಕ್ತಿ ]

**ಥಮಥಮ** (ನಾ). ಒಂದು ಅನುಕರಣ ಶಬ್ದ ; ಡಕ್ಕೆ ಮೊದಲಾದ ಚರ್ಮವಾದ್ಯಗಳನ್ನು ಬಾರಿಸುವಾಗ ಹುಟ್ಟುವ ಧ್ವನಿ. 'ಥಮಥಮತ್ಕಾರ', 'ಥಮಥಮಿಸು' ಪರಾ.

**ಥಮಥಮತ್ಕಾರ** (ನಾ). =ಥಮಥಮ : ತೇರುಗಳ ಚೀತ್ಕಾರ ಪಟು ರಣಭೇರಿಗಳ ಭಾಂಕಾರ ಭಟರ ಕಠೋರತರ ಹೂಂಕಾರ ಥಕ್ಕಾ ಥಮಥಮತ್ಕಾರ (ಅನಂರಾ. ೬-೦೦-೪೩). [ ಸಂ. ]

**ಥಮಥಮಿಸು** (ಕ್ರಿ). ಥಮಥಮ ಎಂದು ಶಬ್ದ ಮಾಡು : ಡೋಲಾಯಮಾನವಾಗಿ ಡೋಲಿನವನು ಥಮಥಮಿಸಿದ (ಮಾಮನಿ. ೨೦೯). [ ಥಮಥಮ + – ಇಸು$_3$ ]

**ಥಮಣಿ** 'ದಮಣಿ' ನೋ.

**ಥಮಾವಿ** 'ಡಮಾವಿ' ನೋ.

**ಥಮಾರ್** (ನಾ). ಒಂದು ಅನುಕರಣ ಪದ: ಸಿಡಿಮದ್ದು ಸಿಡಿದು ಥಮಾರ್ ಎಂದಿತು (ಊಡಿ).

**ಥಮಾರ** (ನಾ). [ಸಂಗೀತ] ಒಂದು ಬಗೆಯ ತಾಳ : ನಮ್ಮ ದೇಶದ ಸಂಗೀತದಲ್ಲಿ ರೂಪಕ (ದಾದರಾ), ಆದಿ (ತ್ರಿವಟ), ಝಂಪೆ, ಧ್ರುವದ, ತ್ರಿಪುಡೆ (ಥಮಾರ), ಧೂಮಾಳಿ, ಎಕ್ಕಾ ಎಂಬ ಹಲವು ತಾಳಪದ್ಧತಿಗಳಿರುವುವು (ಪಾಂಚಶ್ರ. II, ೧೦೪೦). [ ←ಹಿಂ. ಮರಾ. ಧಮಾರ್ ]

**ಥಮಾರನೆ** (ಅ). ಥಟ್ಟನೆ ; ಸ್ವಲ್ಪವೂ ವಿಳಂಬವಿಲ್ಲದೆ ; ಕೂಡಲೆ : ನಾನು ಕೇಳಿದರೆ ಥಮಾರನೆ ಉತ್ತರ ಕೊಟ್ಟಳು (ಜಾಡಿಗೇ. ೩೩). [ ಥಮಾರ್ + – ಅನೆ$_1$ ]

**ಥಮ್ಮನೆ** (ಅ). ಥಮ್ ಎಂಬ ಶಬ್ದವಾಗುವಂತೆ: ಅನುಕರಣಕ್ಕೆ – ಖಣಿಲ್ಲನೆ . . . ಥಮ್ಮನೆ, ಧೊಪ್ಪನೆ (ಶಮದ. ೦೪ ಪ್ರಯೋ). [ ಥಂ + – ಅನೆ$_1$ ]

**ಥರಕೆ** 'ಡರಕೆ' ನೋ.

**ಥರಕೆಹಾಕು** (ಕ್ರಿ). ಥರ್ ಎಂದು ತೇಗು : ಭೋಜನಮಾಡಿ ಬಂದದ್ದರಿಂದ ಅವನು ಐದು ನಿಮಿಷಗಳಲ್ಲಿ ಹತ್ತುಸಾರೆ ಥರಕೆಹಾಕಿದನು (ಮಕ್ಕಮ. ೦೩೬). [ ಥರಕೆ (<ಡರಕೆ) + ಹಾಕು (<ಪಾಯ್ಯು$_1$) ]

**ಧರಕೆ** 'ದರಕೆ' ನೋ.
**ಧಲಾಯಿತ** 'ದಲಾಯಿತ' ನೋ.
**ಧವಣೆ** 'ದವಣೆ' ನೋ.
**ಧವರಿ** (ನಾ). (?): ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಧವರಿಸುವ ಧವರಿಸಿ ಕುಸಿವ ಕುಸಿದು ಧವರಿ[ಪಾಠಾಂ. ಧವರಿ, ದಡಸಿ] ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣೆ ನಿಂದವು ಬಲದ ನಟ್ಟನಡುವೆ (ಸೋಮಕು. ೩.೨೯). [ ? ]
**ಧವರಿಸು** (ಕ್ರಿ). (?): ಬವರಿದಿರುಗುವ ತಿರುಗಿ ನಡೆವ ನಡೆದೊಡಲುಬ್ಬಿ ಧವರಿಸುವ ಧವರಿಸಿ ಕುಸಿವ ಕುಸಿದು ಧವರಿ ಬೀಸುವ ಬೀಸಿ ಕೈವಿಡಿವ . . . ಕರಿನಿವಹವತ್ಕಾಡಂಬರಂ ಮಿಕ್ಕು ಹಣ್ಣೆ ನಿಂದವು ಬಲದ ನಟ್ಟನಡುವೆ (ಸೋಮಕು. ೩.೨೯). [ ಧವರಿ + – ಇಸು$_3$ ]
**ಧವಳ** 'ಡಾಳ$_1$' ನೋ.
**ಧವಳಾರ** 'ಧವಳಾರ$_2$' ನೋ.
**ಧವಳಿಸು** (ಕ್ರಿ). ಅಲುಗಾಡಿಸು : ಅರೆಗಣ್ಣು ಮುಚ್ಚಿ ನಸುನಗುತ ಸಣ್ಣ ಬೆರಳು ಬಾಯೊಳು ಧವಳಿಸುತ ಪನ್ನಗಶಯನ ನಾಟಕದಿ ನಿನ್ನ ಮಗನ ಮುದ್ದು ನೋಡೆನುತ ಗೋಪಿ ತನ್ನ ಪತಿಗೆ ತೋಱಿದಳು (ಪುರಂದ. ೩-೦೩೩-೨). [ ಧವಳ$_0$ (P ←ಮರಾ. ಧವಳಣೇ) + – ಇಸು$_3$ ]
**ಧಳಾಯತ** 'ದಲಾಯಿತ' ನೋ.
**ಧಳಾಯಿತ** 'ದಲಾಯಿತ' ನೋ.
**ಧಳ್ಳಿಸು** (ಕ್ರಿ). ಪ್ರಕಾಶಮಯವಾಗು; ಕಾಂತಿಯಿಂದ ಮೆರೆ (?) : ಭದ್ರ ಲಕ್ಷಣದಿ ಶೋಭಿಸುವ ಗಾತ್ರಕನುವವು ರತ್ನಮಾಲೆಯಾಭರಣ ಜಗನ್ನೇತ್ರಾಂಗನಾಮಣಿಯರಂತೆ ಪಲ್ಲಕ್ಕಿಯೊಳ್ ಬರಲು ಸಭೆ ಧಳ್ಳಿಸುವೊಲು (ಜಿನಮು. ೪-೩೦). [ <ಧಾಳಿಸು$_1$ ? ]
**ಧಳ್ಳನೆ** (ಅ). ಧಳ್ ಎಂಬ ಶಬ್ದದೊಡನೆ: ಬಿಡದ ಧಳ್ಳನೆ ತೀಗಿ ನೆರವಿಯಂ ಬಯ್ದು ಬಱುನುಡಿಯ ಕಲಿವೀರಬಾಹುಕ (ಹರಿಶ್ಚಾ. ೦೦-೦೪).
[ ಧಳ್$_0$ + – ಅನೆ$_1$ ]
**ಧಾಕಿನಿ** 'ಡಾಕಿನಿ' ನೋ.
**ಧಾಕು** 'ಡಾಕು$_1$' ನೋ.
**ಧಾಕುಗೆಡಿಸು** (ಕ್ರಿ). ಕೆಚ್ಚನ್ನು ಕಳೆ ; ಎದೆಗುಂದಿಸು ; ಧೈರ್ಯಗೆಡುವಂತೆ ಮಾಡು : ಪಾಕಶಾಸನನನ್ನೆದಿ ವೃತ್ರನ ಧಾಕುಗೆಡಿಸಿ ದಧೀಚಿಯಸ್ಥಿಯಲೌಕಿ ಹೊಯ್ಯಲು (ಕುಮಾ.ಉ. ೪-೦೦೬). [ ಧಾಕು (<ಡಾಕು$_1$) + ಕೆಡಿಸು$_1$ ]
**ಧಾಣ** (ನಾ). ಹಾಳು ; ವ್ಯರ್ಥವಾದುದು.
**ಧಾಣಾಗು**=ಹಾಳಾಗು ; ವ್ಯರ್ಥವಾಗು ; ನಿರುಪಯುಕ್ತವಾಗು : ನೀ ಬರೋಬರಿ ಮಾಡ್ಲಿಲ್ಲಾ ಅಂದ್ರು ಎಲ್ಲಾ ಕೆಲಸ ಕೆಟ್ಟು ಧಾಣಾಗಿ ಹೋಗ್ತಾವ (ಕಹೂರ. ೨). [ ←ಮರಾ. ಧಾಣ=ತೇವವುಳ್ಳ, ಕೆಸರಾದ ]
**ಧಾಣಾಡಂಗುರ** 'ಢಣಾಡಂಗುರ' ನೋ.
**ಧಾಣೆ$_1$, ಡಾಣೆ, ಡಾಣ್ಕೆ$_2$, ದಾಣಾ, ದಾಣ್ಕೆ$_2$, ದಾಣ್ಕೆ$_3$** (ನಾ). ೧. ಒಂದು ಬಗೆಯ ಆಯುಧ; ಗದೆ: ನೆರೆದುದಭವನ ಕೆಲಬಲದಲುಬ್ಬರದ ಬೊಬ್ಬೆಯ ಜಡಿವ ಖಡ್ಗದ ಬೆರಳ ಚಕ್ರದ ಭವಣಿಗಳ ಧವಣಿಸುವ ಧಾಣೆಗಳ . . . ವರ ಮಹಾಗಣನಿಕರ ಪೊದಗಿತು(ಕುಮಾ.ಕ. ೭-೦೩). 'ನೇಗಹುಧಾಣೆ' ಪರಾ. ಡಾಣೆ : ೨. ದಪ್ಪಕೋಲು ; ಬಡಿಗೆ ; ದೊಣ್ಣೆ ; "ಲಗುಡ; ದಂಡ" (ನಾಚಿರಾ. ೬). ಡಾಣ್ಕೆ$_2$ : ೧. ಬೀಸುವ ಡಾಣೆಗೆ ತಲೆಯೊಡ್ಡುವಂತಿ ರೊಡ್ಡಿ ದನಲ್ಲೆ (ಪಾರ್ಶ್ವಪು. ೩-೦೦೩); ಕಡುಮಿಂ ಪಿಡಿದಿರ್ಪ ಡಾಣೆಯಂ ಜಡಿ (ದಶಕು. ೩-೪೨). ೨. ಸತ್ತಿರ್ದನಡ್ಡಾಹನಂ ಕಂಡದಟ ಪೊಡೆಯಂ ಡಾಣೆಯಿಂ ಪೊಯ್ಯಲ್ಕೆ (ಪಂಚತಂ. ೦೯-೦೩) ; ದುಷ್ಕೃತ ತಸ್ಕರನ ಪಿಡಿದಿರ್ಪ ಡಾಣೆ [ಪಾಠಾಂ. ದಾಣೆ]ಗಳರವಿಂದಾಕ್ಷಿಯರ್ (ಧರ್ಮಾಮೃ. ೭-೦೫೭) ; ಬನ್ನಿಯ ತರು ಡಕ್ಕೆಗೆ . . . ಚೆನ್ನಂಗಿಯ ತರು ಡಾಣೆಗೆ (ಕಮಲ. ೬೩ ಕ್ರಿಯಾ) ; ಕೊಡಲಿ ಕತ್ತಿ ಈಳಿಗೆ ಕುಡುಗೋಲು ಸುರಿಗೆಯಡ್ಡಾಯುಧ ಕುಠಾರ ಕೊಂತ ಡಾಣೆ ಮೊದಲಾದಾಯುಧಂಗಳ್ (ಹಸಾರ. ೬೨೭-೦೦) ; ಡಾಣೆ ಯಿಂದ ಕಂಡಕಂಡವರಿಡರಿಳಿದಲ್ಲಿಂ ಕಾಲುಗೊಂಡೋಡೆ (.ಶೀಮಿ ಕಾ. ೭-೦೦೦); ನೀವೆನ್ನ ಮನೆಯ ಹೊಗದೇಡ ಹೊಕ್ಕೊಡೆ ಹಿಡಿದ ಡಾಣೆಯಿಂ ನಿಮ್ಮೆಲ್ಲರಂ ಬಡಿವೆನು (ಸಮ್ಯಕ್ತ್ವ. ೯-೪೭) ; ಗದೆ ದುಂಡ ಡಾಣೆ ಕಬ್ಬಿನ ಕೋಲು . . . ಜವನ ದಾಡೆಗಳಂ (ಅನಂತ. ೨೪-೨೭). **ದಾಣಾ** : (ಗು). ೩. ದಪ್ಪನೆಯ; ಸ್ಥೂಲ. 'ದಾಣಾದಡಿ' ಪರಾ. **ದಾಣ್ಕೆ$_2$** : ೧. "ಸರ್ವಲಾ, ತೋಮರ – ಶ ಮರದ ಸಿಳ್ಳೆ, ದಾಣಿ ಮುಂತಾದ ಆಯುಧಕ್ಕೆ ಹೆಸರು" (ಸಿದ್ಧಾಂತಿ. ೩೩೪). **ದಾಣ್ಕೆ$_3$** : ೨. ಕತ್ತಿಯನು ದಾಣೆಯನು ಇಕ್ಕಿಯೆ ಉತ್ತಮಾಶ್ವವ ಮಾಡ್ವೆನೆಂದರೆ ಆಗುವುದೆ (ಜ್ಞಾಸಿಂ. ೭-೯೩). ೩. 'ದಾಣೆದಡಿ' ಪರಾ. [ ←ಮರಾ. ಧಾಣಾ ]
**ಧಾಣೆ$_2$** 'ದಾಣ$_1$' ನೋ.
**ಧಾನ** (ನಾ). (?) : ಮುತ್ತಿನ ಧಾನವ ಮೂಗು ನುಂಗಿತ್ತು ಕಂಡೆ ಕಂಗಳು ಹಸಿದು ವಜ್ರವ ನುಂಗಿತ್ತು ಕಂಡೆ (ಶರಕೋ. ೦೦೦-೦೪). [ ? ]
**ಧಾಲ** (ನಾ). = ಡಾಲು$_2$ ೧ : "ಡಾಲು–ಧಾಲ=ಅಡ್ಡಣ" (ಕರ್ನಾಕೋ. ೦೭).
[ ಸಂ. ]
**ಧಾಲು$_1$** 'ಡಾಳ$_1$' ನೋ.
**ಧಾಲು$_2$** 'ಡಾಲು$_1$' ನೋ.
**ಧಾವಣೆ** 'ದಾವಣ$_2$' ನೋ.
**ಧಾವಣಗಿರಿ** (ನಾ). ಸಾಲಾದ ಬೆಟ್ಟ ; ಪರ್ವತಗಳ ಪಂಕ್ತಿ ; ಪರ್ವತ ಶ್ರೇಣಿ : ಗಿರಿಯ ಡೆಂಕಣಜಂತ್ರವನು ತರಹರಿಸುವವರಾಶರಸ ಧಾವಣಿ [ಪಾಠಾಂ. ಧಾರುಣಿ]ಗಿರಿಯು ಧಾಳಿಗೆ ಧಾತುಗೆಟ್ಟುದು ಪಾಂಡುಸುತ ಸೇನೆ (ಕುಮಾ.ಕ. ೨೩-೬೭). [ ಧಾವಣಿ (<ದಾವಣ$_2$) + ಗಿರಿ$_1$ ]
**ಧಾವರಿಸು** 'ಡಾವರಿಸು' ನೋ.
**ಧಾಳ$_1$** 'ಡಾಳ$_1$' ನೋ.
**ಧಾಳ$_2$** 'ದವಳ$_1$' ನೋ.
**ಧಾಳ$_3$** 'ದಾಳ$_1$' ನೋ.
**ಧಾಳ$_4$** 'ದಾಳ$_2$' ನೋ.
**ಧಾಳಂಬಡೆ** (ಕ್ರಿ). ಪ್ರಕಾಶವನ್ನು ಪಡೆ ; ಬೆಳಗು ; ಉಜ್ವಲವಾಗು : ಜಲಜಲಿಸಿ ಧಾಳಂಬಡೆದುದಡವಿಗಿಚ್ಚು (ಸಮ್ಯಕ್ತ್ವ. ೦೦-೨೪).
[ ಧಾಳ$_1$ (<ಡಾಳ$_1$) + ಪಡೆ$_1$ ]
**ಧಾಳಕ** 'ಡಾಳಕ' ನೋ.
**ಧಾಳಕತನ** 'ಡಾಳಕತನ' ನೋ.
**ಧಾಳಕಿ** 'ಡಾಳಕಿ' ನೋ.
**ಧಾಳಯಿಸು** 'ಡಾಳಿಸು$_2$' ನೋ.
**ಧಾಳವಿಸು** 'ಡಾಳಯಿಸು$_1$' ನೋ.
**ಧಾಳಿಸು$_1$** 'ಡಾಳಯಿಸು$_1$' ನೋ.
**ಧಾಳಿಸು$_2$** 'ಡಾಳಿಸು$_2$' ನೋ.
**ಧಾಳು** 'ಡಾಳ$_1$' ನೋ.
**ಧಾಳೆ** 'ಡಾಳೆ' ನೋ.
**ಧಾಳೆಗೂಂಟಣೆ** (ನಾ). ವಂಚಕಿಯಾದ ಕುಂಟಣಿ : ಮತ್ತವಾ ಭೋಗಿನಿ ಗೃಹಮಾಲೆಯೊಳಾಲಾಪಿಸುವ ಧಾಳೆಗೂಂಟಣಿಯರಾಲಾಪವಂ (ಮಹಾಸೀ. ೦೯-೮೫ ವ). [ ಧಾಳೆ (<ಡಾಳೆ) + ಕೂಂಟಣಿ (<ಕುಂಟಣಿ) ]
**ಧಾಳೈಸು** 'ಡಾಳಯಿಸು$_1$' ನೋ.
**ಧಿಕ್ಕಿ** 'ಡಿಕ್ಕಿ' ನೋ.

**ಧಿಕ್ಕಿಯಾಡು** (ಕ್ರಿ): ಡಿಕ್ಕಿಹೊಡೆಯುವ ಆಟವನ್ನು ಆಡು; ಡಿಕ್ಕಿ ಹೊಡೆ: ನೂರು ಮದ್ದಾನೆಗಳು ಇರುಳ ಬಾನಿಗೆ ನುಗ್ಗಿ ಧಿಕ್ಕಿಯಾಡಿವೆ (ನಂಮು. ೩೯-೩). [ಧಿಕ್ಕಿ (<ಡಿಕ್ಕಿ) + ಆಡು$_1$ ]

**ಧಿಕ್ಕಿಹೊಡೆ** 'ಡಿಕ್ಕಿಹೊಡೆ' ನೋ.

**ಧಿಳ್ಳ, ಡಿಲ್ಲ, ಡಿಳ್ಳ, ಡಿಳ್ಳು, ಡೀಲ, ಡೀಲು, ದಿಳ್ಳ** (ನಾ). ೧. ಶಿಥಿಲತೆ; ಸಡಿಲು: ಬಲ್ಲಾಳ್ಗಳ್ ಬೀಟ್ಟುದುಂ ಕೋಂಟೆ ಧಿ[ಪಾಠಾಂ. ಡಿ]ಳ್ಳ ಮಾದೊಡಳ್ಳಿರ್ದಗಳ್ ಕೆಲಬರ್ ಬಾಳಂ ಬಿಟ್ಟು ಬಾಟನಾಸೆಗೆಯ್ಯೆಯುಂ (ಶಾಶ್ವ ೯ಪು. ೬-೦೩೨ ಬ). **ಡಿಲ್ಲ:** ೨. ಸುಲಭವಾಗಿ ತಿಳಿಯಲು ಶಕ್ಯವಿಲ್ಲದುದು; ಕ್ಲಿಷ್ಟವಾದುದು: ಡಿಲ್ಲವಹ ವೇದಾಂತದರ್ಥವ ಸೊಲ್ಲಿಸಲು ಸೂರಿಗಳ ವಾರ್ತೆಯನೆಲ್ಲ ಮನುಜರು ದಾಂಟಿದಂದದಲಿರ್ದು ದುಶ್ತರವು (ನಿಜಾಗು. ೦೧-೨೮-೨೮). **ಡಿಳ್ಳ:** ೧. ಜಲಪಕ್ಷಿಯುಂ ಜಡಿದು ನಾಣ್ನುಡಿ ಡಿಳ್ಳಮನ್ನೈದೆ ನಲ್ಮೆಯಿಂ ವಿಸುಪಥರಾಗ್ರುವಂ ಸವಿದಳಂಗನೆ (ದಶಕು. ೬-೦೩೭). ೩. ದಿಗಿಲು; ಭಯ; ಹೆದರಿಕೆ; ತಳ್ಳಂಕ; ಅಧೈರ್ಯ: "ಡಿಳ್ಳ[ಪಾಠಾಂ. ದಿಳ್ಳ]ಮೆನಲ್ ತಲ್ಲಣವುದು" (ಭಾಕವಿ. ೩೭). ೪. "ಬರಡು; ವ್ಯರ್ಥ" (ಸಿರಿಕೋ. ೨೦೦). ೫. ಅಧೈರ್ಯವುಳ್ಳದು; ಕೈಲಾಗದುದು; ಭಯಗೊಂಡುದು: ನೀ ನಗುವವ್ರೋಲ್ಲ ಮ್ಮೊಳಗು ಡಿಳ್ಳವೆ ರಪಣವಿದೆಲಾ ಬಹಳ ಭಂಡಾರ (ಕುವ್ಯಾಸ. ೦೯-೩). **ಡಿಳ್ಳು:** ೩. 'ಡಿಳ್ಳುಹೋಗು' ಪರಾ. **ಡೀಲ:** ೧. ಸಡಿಲವಾದ; ಡೀಲಬಿಟ್ಟ (Slack. ಇಂಕನಿ.). **ಡೀಲು:** ೧. "ಡೀಲು – ಸಡಿಲು" (ಹಾವಕೋ. ೬೩). **ದಿಳ್ಳ:** ೩. "ದಿ[ಪಾಠಾಂ. ಡಿ]ಳ್ಳಮೆನಲ್ ತಲ್ಲಣಮದು" (ಭಾಕವಿ. ೩೭).

**ಡಿಳ್ಳಮಾಗು, ಡಿಳ್ಳವಾಗು** = ೧. ದುರ್ಬಲವಾಗು; ಶಕ್ತಿಗುಂದು: ನಡೆ ತಡಮಾಗೆ ನುಣ್ನುಡಿ ತೊದಳ್ದೊಗ್ಗೆ ಝೊಂಪಿಸೆ ಕೆಂಪನಾಳ್ದು ಕಣ್ನುಡಿ ತನು ಡಿಳ್ಳಮಾಗೆ ವೃದ್ಧುಪಾನ ವಿನೋದದಿನಾದ ಸೋಂಕು ಚೆಲ್ವಿಡಿದಿರೆ ಬರ್ಪ ಗೋಷ್ಠಿ (ಸೂಕ್ತಿಸು. ೦೩-೩). ೨. ಅಧೈರ್ಯಗೊಳ್ಳು; ಬೆದರು; ಗಾಬರಿಯಾಗು: ನೋಡು ಲಕ್ಷ್ಮಣ ದುರ್ನಿಮಿತ್ತಂಗಳಂ ಪಥದೊಳು ಡಿಳ್ಳವಾದವುದೀಗಳೆನ್ನ ಮನಂ (ಜೈಮಿಭಾ. ೦೯-೩): ಪೂಗೊಳಲೆಂದು ಬಂದ ವಿಟಸಂತತಿಯುಳ್ಳಿರ್ದ ಡಿಳ್ಳವಪ್ಪಿನಂ ಪೂಗಣೆಯುರ್ಚೆ ಮೂರ್ಛೆಗೊಳಗಾಗಲೊಡಂ (ದಶಕು. ೦-೪೦). ೩. ಅಸಮರ್ಥವಾಗು; ವ್ಯರ್ಥವಾಗು: ಡಿಳ್ಳಮಾದುದೆ ಯೌವನಾಶ್ವ ಭೂಪತಿಯ ಬಲಂ (ಜೈಮಿಭಾ. ೪-೨೦): ಝಲ್ಲೆಂದ ಹೃದಯದ ಜೊಳ್ಳುನಾದವ ಕೇಳಿ ಡಿಳ್ಳವಾಯಿತು ಬಾಳು ನಾನೆಂದೆನೇ (ಸೂಗೀ. ೪೦-೮೧೪). ೪. ಸಡಿಲವಾಗು: ಅಮರ್ದ ಕಂಚುಳಿಕೆ ಪೆರ್ವೊಲೆಯಾಕೆಗೆ ಡಿಳ್ಳವಾಗಲೊಡವುಗಳಟ್ಟಿಯಿಂದುಲಿಯಲ್ (ನಳಚಂ. ೪೭೭). [ <ಪ್ರಾ. ಢಿಲ್ಲ. / ಮರಾ. ಢಿಲ್, ಢಿಲಾ, ಢೀಲ್ ]

**ಧಿಳ್ಳಾಯ** 'ಡಿಳ್ಳಾಯ$_1$' ನೋ.

**ಧೀಗು, ಡೀಗು** (ನಾ). ಹೊರೆ; ರಾಶಿ; ಸಮೂಹ: ಕೆಳಗೆ ಮೇಲೆ ಸಾಮಾನಿನ ಧೀಗು (ಅನ್ನ. ೧೦೩): ಫೈಲುಗಳ 'ಧೀಗಿ'ನ ಕೆಳಗೆ ಸಿಕ್ಕಿಬಿದ್ದ (ಜೀಪಾಠ. ೪೯). **ಡೀಗು:** ಕಳ್ಳಿನ ಡೀಗ ತಂದು ಅಗಸಿ ಮುಂದಿನ ಬಯಲೆಲ್ಲ ತುಂಬಿ ಬಿಡತೇವು (ಗ್ರಾಮಾಯ. ೨೨೯). [ ←ಮರಾ. ಢೀಗ್ ]

**ಧುಲಿ** (ನಾ).=ಡುಲಿ: "ಕಮಠೀ, ಧುಲೀ – ೨ ಹೆಣ್ಣು ಆಮೆ ಪೆಸರುಗಳು, ಅಂದರೆ ಸ್ತ್ರೀಕೂರ್ಮ" (ಸಿದ್ಧಾಂತಿ. ೭೩). [ ಸಂ. ಧುಲೀ ]

**ಧೆಂಕಣ** 'ಡೆಂಕಣಿ' ನೋ.

**ಧೆಂಕಣಿ** 'ಡೆಂಕಣಿ' ನೋ.

**ಧೆಂಕೆ** 'ಡಕ್ಕೆ' ನೋ.

**ಧೆಂಢೆಣಿಸು** 'ಟೆಂಟಣಿಸು' ನೋ.

**ಧೇಂಕಣಿ** 'ಡೆಂಕಣಿ' ನೋ.

**ಧೇಂಕಣೆ** 'ಡೆಂಕಣಿ' ನೋ.

**ಧೊಂಕಣಿ** 'ಡೊಂಕಣಿ' ನೋ.

**ಧೊಕ್ಕರ** 'ಡೊಕ್ಕರ$_3$' ನೋ.

**ಧೊಣೆ** 'ದೊಣೆ$_1$' ನೋ.

**ಧೋಂಗಿ, ಡೋಂಗಿ, ಡೋಂಗು, ಧೋಂಗು** (ನಾ). ಮೋಸ; ಸುಳ್ಳು; ವಂಚನೆ: ಅನೇಕರ ಹಾಗೆ "ಧೋಂಗೀ ಬ್ರಹ್ಮಚಾರಿ" ಯಾಗಿರಲಿಲ್ಲ (ನಾಕೋಲೀ. ೨೩೭); ಅನ್ನವಿಲ್ಲದೆ ಸಾಯುತ್ತಾಳಂತೆ. ಪ್ರಭೂ, ಇದೆಲ್ಲವೂ ಧೋಂಗಿ ಧೋಂಗಿ ಡೋಕಾರಿ (ಹನ್ನೊಂದ. ೬೩). **ಡೋಂಗಿ:** ನಮ್ಮ ಹತ್ತಿರ ನಿಮ್ಮ ಡೋಂಗಿ ತೆಗೀತೀರಾ (ಜಂಗೂರಿ. ೯). **ಡೋಂಗು:** ಪಕ್ಕಾಸುಳ್ಳು, ಧೋಂಗು, ವಿಪರೀತ ಸುಳ್ಳು (Rouser. ಇಂಕನಿ.). **ಧೋಂಗು:** ಈ ಧೋಂಗು ನಮ್ಮ ಮುಂದೆ ನಡೆಯುವಂತಿಲ್ಲ (ಹುಡ್ಯಾಟ. ೪೦); ನಾನು ನಿಮ್ಮಂತೆ ಈ ಧೋಂಗಿಗೆ ಮೋಸ ಹೋಗುವವಳಲ್ಲ (ಸ್ವಾತಿಜ. ೩೨೯); ಆದರ ಬರೇ ಧೋಂಗ ಮಾಡತೀದಿ ಅತು (ಮಿಂಚುಹು. ೮೫): ನಿನ್ನ ಮನಸಿನಾಗೂ ಎಲ್ಲಾ ಅದೇ ಮದವೀ ಮಾಡಿಕೊಬೇಕು ಅಂತ. ಆದರ ಬರೇ ಧೋಂಗ ಮಾಡತೀದಿ (ತಿಹುಗು. ೩೯); ತೀರ ಮರಥಾವ್ರಂಗ ಧೋಂಗ ಮಾಡತೀ (ದೀಪಹ. II, ೦೭೦).

**ಡೋಂಗಿ ಹೊಡೆ** = ಸುಳ್ಳುಹೇಳು: ನನ್ನ ಮುಂದೆ ಡೋಂಗಿ ಹೊಡೆಯ ಬೇಡ (ರೂಢಿ). **ಧೋಂಗಿ ಬಿಡು, ಡೋಂಗಿ ಬಿಡು** = ಡೋಂಗಿಹೊಡೆ: ಬಹಳ ದೊಡ್ಡ ವಿದ್ವಾಂಸರು ಎಂದು ಯಜಮಾನರು ಒಂದು ಧೋಂಗಿ ಬಿಟ್ಟರು (ನವನೀ. ೬೦); ಹುಡುಗರು ಡೋಂಗಿ ಬಿಡುತ್ತಿದ್ದಾರೆಯೋ ಏನೋ ನೋಡಬೇಕೆಂದು ದೇವಯ್ಯ ಅವರೆಲ್ಲರ ಕೈಗಳನ್ನೂ ಮೂಸಿ ಮೂಸಿ ಹುಬ್ಬೇರಿಸಿ ಕಣ್ಣರಳಿಸಿ ಬೆರಗಾದನು (ಮಲೆಮ. ೫೦೬).

[ ←ಹಿಂ. ಮರಾ. ಢೋಂಗೀ, ಢೋಂಗ್ = ಕಪಟಿ, ಮೋಸಗಾರ ]

**ಧೋಂಗು** 'ಧೋಂಗಿ' ನೋ.

**ಧೋಕಾ** 'ಧೋಕಾ' ನೋ.

**ಧೋರ** 'ಡೋಹರ' ನೋ.

**ಧೋಲಕೆ** (ನಾ).=ಡೋಲಕ: ತಾಳ, ಧೋಲಕಗಳ ಗಡಚಿಕ್ಕುವ ಅವಾಜನಲ್ಲಿ ಮಾಸ್ತರರ ದನಿ ಅವರಿಗೆ ಕೇಳಿಸಲಿಲ್ಲ (ಮೂರುದಾ. ೭೩).

[ ಸಂ. ಢೋಲಕ ]

**ಧೋಲು** 'ಡೋಲು' ನೋ.

**ಧೋಳು** 'ಡೋಲು' ನೋ.

*

# ಣ

**ಣ** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತೈದನೆಯ ಅಕ್ಷರ. ೨. [ಗಣಿತ]ಐದು ಎಂಬ ಸಂಖ್ಯೆಯ ಸಂಕೇತ : "ಜಣಮಶಮದ್ಯೆದು" (ಮಂಗರಾ. ೦೦೪-೦೦).

**ಣಕಾರ** (ನಾ). ಣ ಎಂಬ ಅಕ್ಷರ : ಭಿನ್ನಪದದೊಳಂ ಸಮಾಸ ಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ (ಶಮದ. ೦೫೮ ವೃತ್ತಿ). [ ಸಂ. ]

**ಣತ್ವ** (ನಾ). = ಣಕಾರ : ಸಂಧಿಸಿದ ನಕಾರಂ ಣತ್ವಂ ಪ್ರಸಿದ್ಧಂ (ಶಮದ. ೦೫೮). [ ಸಂ. ]

**ಣಮೋ** (ನಾ). ನಮಸ್ಕಾರ; ವಂದನೆ : ಣಮೋ ಸಿದ್ಧಾಣಂ ಣಮೋ ಅರಿಹಂತಾಣಂ (ಜೀವಂ. ೫೯-೫).

**ಣಮೋಣಮೊ** (ದ್ವಿರುಕ್ತಿ) : ಣಮ್ಮಣ ಣಮ್ಮಣ ಶಬ್ದದಿಂ ಕೂಡಿದ ವೀರಣಮ ನುಡಿಸುತೆ ಸಭೆಯೊಳಗೆ ಣಮೋಣಮೊಯೆಂಬ ಪ್ರಾಕೃತರ ನೀಕ್ಷಿಸುವ ಪ್ರಣಮರೂಪ ನಿನಗೆಱಗುವೆನು (ಶಕಸಾಂ. ೭೦-೫೭). [ <ಪ್ರಾ. ಣಮೋ ]

**ಣಮೋಕಾರ** (ನಾ). ನಮಸ್ಕಾರ : ಕೇಳಿದಿರೊ ದಿವ್ಯಧ್ವನಿ ಜೀವದ ಣಮೋಕಾರ ಕನ್ನಡದ ಟಂಕಾರ : ಧರ್ಮಸಾರ (ಜೀವಲ. ೫೯-೮).
[ <ಪ್ರಾ. ಣಮೋಕ್ಕಾರ ]

**ಣಾಂತ** (ನಾ). ಣಕಾರವು ಕೊನೆಯಲ್ಲಿರುವ ಶಬ್ದ : ನೆಗಟ್ದಿರ್ದ ರೇಫಱಟಣಾಂತಗಾಂತಸಾಂತೋತ್ವದಿದಿರ ವತ್ವಂ ಪತ್ವಂ ಪುಗುಗುಂ . . . ನಾಂತ ಣಾಂತಂ ಬತ್ವಂ (ಶಮದ. ೨೬೨). [ ಣ + ಅಂತ$_2$ ]

# ತ

**ತ$_1$** (ನಾ). ೧. ಕನ್ನಡ ವರ್ಣಮಾಲೆಯ ಮೂವತ್ತಾರನೆಯ ವರ್ಣ; ತಕಾರ. ೨. [ಗಣಿತ] ಆರು ಎಂಬ ಸಂಖ್ಯೆಯ ಸಂಕೇತ : "ಚತಪ ಮಾಱು" (ಮಂಗರಾ. ೦೦೪-೧೬). ೩. [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಒಂದು ಲಘುವುಳ್ಳ ಗಣ; ತಗಣ: (– –υ) ; ಮಯರಸತಜಭನೆಲಗವಿಸಿಚಯಮೆಂಬಿವು ನಿಯಮದಿಂ ಗಣಾಕ್ಷರಮಕ್ಕುಂ (ಛಂದೋಂಬು. ೦-೩೭).

**-ತ$_2$** (ಪ್ರ). ಒಂದು ಕೃದಂತ ಭಾವನಾಮ ಪ್ರತ್ಯಯ : ತಕಾರಕ್ಕೆ– ಅಱಿತಂ, ಕಡಿತಂ, ಉಱಿತಂ (ಶಮದ. ೨೦೦ ಪ್ರಯೋ).

**ತಉಡಿಮಾನ್ಯ** (ನಾ). ಒಂದು ಬಗೆಯ ಮಾನ್ಯ : ವೀರ ಪಣ್ಣಾಳ ವಿತ್ತಿಯೊಳ ಆರು ಸತ್ತಡು ತಉಡಿಮಾನ್ಯ ಆ ನಾ × × ಳುವ ದೇವರ ಮಕ್ಕಳಿಗೆ ಸಲುವಲುದು ಮಕ್ಕಳಿಲ್ಲದಿದ್ದಡೆ ಅಣ್ಣಾ ತಮ್ಮಂಗೆ (ಎಕ. IX, ಕಾನಕಾ. ೮೦-೧೦ ; 1306). [ <ತವುಡಿ$_1$ + ಮಾನ್ಯ ]

**ತಂ$_1$** 'ತಣ್$_2$' ನೋ.

**ತಂ$_2$** (ನಾ). [ಸಂಗೀತ] ಒಂದು ಗೀತಾಕ್ಷರ : ತಂ ಹ ಯ ಎ ಆ ದ ತಿನಂ ನಿತ ನಿತ ಗೀತಾಕ್ಷರೋಪಲಕ್ಷಿತಮುಂ ಗಮಕರಮಣೀಯಮುಂ ನಿಖಿಳಗೀತ ವಸ್ತ್ವಾದಿರೂಪಮುಮಪ್ಪಾಲಾಪಿಯೊಳಂ (ಚಂದ್ರಪ್ರ. ೦೫-೭೨ ವ). [?]

**ತಂಗಡಲೆ** (ನಾ). ಹಸಿ ಕಡಲೆ; ನೆನೆದ ಕಡಲೆ : ತಂಗಡಲೆಯ ಮಿಯ್ಸಿ ನೀರನೂಡಿಸುತೆ ವಿಹಂಗ ಸಂತೋಷದಿ ತಮ್ಮ ಪುಂಗಟ್ಟಿದ ಮುದ್ದು ಮಱಿಗಳ್ಗೆ ಗುಟುಕೀಯೆ (ಮೋಹತ. ೪-೦೯). [ತಂ$_1$ (<ತಣ್$_2$)+ಕಡಲೆ]

**ತಂಗಡಿ, ತಗಟೆ** (ನಾ). ಗೊಂಚಲು ಗೊಂಚಲಾಗಿ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಕುರುಚಲು ಗಿಡ ; ಆವರಿಕೆ ಗಿಡ ; ಹೊನ್ನಾವರಿಕೆ : ಪಳಸಂತತಿಯಿಂದೊಲೆದುಯ್ಯಲಾಡಿ ತೂಗಾಡುವ ತೆಂಗು ತಂಗಡಿಗಳಂ ಬೆಳೆದಿದ್ದ ಸುಗಂಧ ಸಾಳಿ ನಾಡಾಡಿಯರೂಡಿಯೂರ್ಗ್ಗಳಳವಲ್ಲದು ಮೊಪ್ಪುವ ಹೊನ್ನವಳ್ಳಿ ತಾಂ (ಎಕ. XII, ತಿಪಟೂ. ೧೨೮-೫೮ ; 1202) ; ತಂಗಡಿಹೂವ ಸುಟ್ಟು ಕರಕು ಮಾಡಿ ಹುಣ್ಣಿಗೆ ಮೇಲೆ ಹಾಕುವುದು (ವಿಶ್ವವಿ. ೦೭೫) ; ಗದ್ದೆ ಅಡಕೆತೋಟ ತೆಂಗು ತಂಗಡಿಯ ಭೂಮಿ ಪುಷ್ಪದ ತೋಟದ ಭೂಮಿ . . . ನಾಲು ಮಹತ್ತಿನ ಮಟಕ್ಕೆ ಸಿವಾರ್ಪಿತವಾಗಿ ಕೊಟ್ಟೆವು (ಎಕ. XIV, ಎಳಂದೂ. ೭೩-೩ ; ?). **ತಗಟೆ** : ಪಲ್ಲವ ಸತ್ತಿಗೆಯವನಲ್ಲ ತಗಟೆ[ಪಾಠಾಂ. ಟೆ]ಯ ಬಲ್ಲೆಯದವನಲ್ಲ . . . ನೃಪನು (ಷಡೇಶ್ರ. ೨೦-೫೯); ಒಂದು ತಗಟೇಗಿಡವ ಊರಲು ಒಂದು ಜತೆ ಘನ ಅಮೃತ ಹಸ್ತವ ಕಳುಹೊ ದೇವಾ (ಅರರೋ. ೨). [ ದೇ.೫ ತೆಲು. ತಂಗೆಡು, ತಂಗೇಡು ]

**ತಂಗಣೆ** (ನಾ). ತಂಗುವಿಕೆ; ಉಳಿದುಕೊಳ್ಳುವುದು: ಮೊದಲ ತಂಗಣೆಯ ಅವಧಿಯಲ್ಲಿ ನೆಕ್ಲುದೋವ್ ಮತ್ತು ಕಾತ್ಯೂಷಾರ ಬಾಂಧವ್ಯ ಹೀಗೆಯೇ ಬೆಳೆಯಿತು (ಪುನರು. ೫೮) ; ಪೀಟರ್ಸ್‌ಬರ್ಗ್ ನಗರದಲ್ಲಿ ಅವನ ತಂಗಣೆಗೆ ಆ ದಿನ ಕೊನೆಯ ಗಡುವಾಗಿತ್ತು(ಪುನರು. ೩೮೪). [ ತಂಗು$_1$ + – ಅಣೆ$_4$ ]

**ತಂಗದಿರ್** 'ತಣ್ಗದಿರ್' ನೋ.

**ತಂಗದಿರ** 'ತಣ್ಗದಿರ' ನೋ.

**ತಂಗದಿರದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ; ಶಿವ: ಗೋತ್ರಸುತೆ ದಯಾಪಾಂಗದಿಂ ನೋಡಿ ತಕ್ಕೈಸುತ್ತ ತಂಗದಿರದಲೆಯನಿಂಗಿತವನಱಿದು (ಪ್ರಾಭರಾ. ೬-೭೨).
[ ತಂಗದಿರ (<ತಣ್ಗದಿರ) + ತಲೆ$_1$ + – ಅ$_7$ ]

**ತಂಗದಿರ್ಗಲ್** 'ತಣ್ಗದಿರ್ಗಲ್' ನೋ.

**ತಂಗದಿರ್ವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಂಗದಿರ್ವಟ್ಟ** (ನಾ). ತಂಪಾದ ಕಿರಣಗಳ ಮಂಡಲವುಳ್ಳವನು; ಚಂದ್ರ: ಅದಟಿಂದಡಸಿ ಪಿಡಿದು ತಂಗದಿರ್ವಟ್ಟನ ಲೇಖೆಗರ್ಚಿ ಧರೆಗಿೞಿವ ವಿಧುಂತುದನೆನೆ ಘೀಟಿಡುತುಂ ಬಿದಿರ್ದು ನಿಡುಗೋಡೂಱ ಮತ್ತ ಕುಂಜರನಾಗಳ್ (ಉದ್ಭಟ. ೨-೫೮) : ತಂಗದಿರ್ವಟ್ಟನಿಂಗದಿರ್ದೊಂಗಲಂ ಪಿಂಗದೆ ಕಡಿದು ಕಂಡರಸಿ ಕರುವಿಟ್ಟು ಪೊಂಗಿ ತೂಳ್ದ ಬೆಳ್ದಿಳಗನುಗುೞ್ವೆಳೆ ಮುತ್ತಿನ ಮಾಡುವೆಟ್ಟುಗಳಿಂ ವಿರಾಜಿಪುದ್ಯಾನಮಂ (ಉದ್ಭಟ. ೯-೩೦ ವ)
[ ತಂಗದಿರ್ (<ತಣ್ಗದಿರ್) + ಬಟ್ಟು$_1$ (<ಬಟ್ಟ$_1$) + – ಅ$_7$ ]

**ತಂಗರಗ** 'ತಣ್ಗರಗ' ನೋ.

**ತಂಗಲ್** 'ತಣ್ಗಲ್' ನೋ.

**ತಂಗಲು** (ನಾ). ಹಸಿ ; ಒದ್ದೆಯಾಗಿರುವಿಕೆ ; ತೇವ.

**ತಂಗಲ ಭೂಮಿ**=ನೀರುಂಡ ಭೂಮಿ ; ತೇವವುಳ್ಳ ನೆಲ : ಅಂಡಜವೆಂದು ತತ್ತಿಯಲ್ಲಿ ಹುಟ್ಟುವ ಪ್ರಾಣಿಗಳು . . . ಉದ್ಭಿಜವೆಂದು ತಂಗಲ ಭೂಮಿಯಲ್ಲಿ ಹುಟ್ಟುವ ಪ್ರಾಣಿಗಳು ಜರಾಯುಜವೆಂದು ಮಾಸಿನಲ್ಲಿ ಹುಟ್ಟುವ ಪ್ರಾಣಿಗಳು ಈ ನಾಲ್ಕು ಪ್ರಕಾರದಲ್ಲಿ ಹುಟ್ಟುವ ಎಂಭತ್ನಾಲ್ಕು ಲಕ್ಷ ಜೀವರಾಶಿಗಳು (ಗಣಿಭಾ. ೪೮–೧).

[ ತಂ$_1$ (<ತಣ್$_2$) + – ಕಲು$_2$ (< – ಕಲ್$_4$) ]

**ತಂಗಲ್ಲು** 'ತಣ್ಗಲ್' ನೋ.

**ತಂಗಳನ್ನ** (ನಾ). ೧. ಆರಿದ ಅನ್ನ; ತಣ್ಣಗಾದ ಅನ್ನ. ೨. ಹಿಂದಿನ ದಿವಸ ಮಾಡಿದ ಅನ್ನ : ರಾತ್ರಿ ಊಟಮಾಡಿ ಉಳಿದ ತಂಗಳನ್ನವನ್ನು ಬೆಳಗ್ಗೆ ತಿಂದು ಎಲ್ಲರೂ ಹೊರಟರು (ಲೌಕ್ರೂ. ೬೦).

[ ತಂಗಳು (<ತಣ್ಗೂಟ್) + ಅನ್ನ$_3$ ]

**ತಂಗಳು** 'ತಣ್ಗೂಟ್' ನೋ.

**ತಂಗಳುತತ್ತ್ವ** (ನಾ). (ಆಲಂ)ಕೇಳಿ ಕೇಳಿ ಹಳೆಯದಾದ ನಿಷ್ಪ್ರಯೋಜಕ ತತ್ತ್ವ; ಗೊಡ್ಡು ತತ್ತ್ವ : ನಾವು ತಿಳಿಯುವುದೊಂದು ದೈವ ಬಗೆಯುವುದೊಂದು ಎಂದು ಅವಳಿಗೆ ಮುದುಕಿ ತಂಗಳುತತ್ತ್ವವನ್ನು ಉಪದೇಶಿಸಿದ್ದಳು (ಹಳ್ಳಿಹಾ. ೯೯). [ ತಂಗಳು (<ತಣ್ಗೂಟ್) + ತತ್ತ್ವ$_1$ ]

**ತಂಗಳುತತ್ತ್ವಜ್ಞಾನ** (ನಾ).=ತಂಗಳುತತ್ತ್ವ : ಊರವರು 'ಒಳ್ಳೆಯವರಿಗೆ ದೇವರು ಕಷ್ಟ ಕೊಡುವುದು ಹೆಚ್ಚು' ಎಂದು ತಂಗಳುತತ್ತ್ವಜ್ಞಾನ ಹೇಳುವಂತಾಯಿತು (ಕಂಬಹು. ೦೦೯). [ತಂಗಳು (<ತಣ್ಗೂಟ್)+ತತ್ತ್ವಜ್ಞಾನ]

**ತಂಗಳುಹಿಟ್ಟು** (ನಾ). ಹಿಂದಿನ ದಿವಸ ಮಾಡಿದ ರಾಗಿಮುದ್ದೆ; ಆರಿದ ಹಿಟ್ಟು : ತಂಗಿ ಬಡವಳಾದರೆ ತಂಗಳುಹಿಟ್ಟಿಗೂ ಗತಿಯಿಲ್ಲವೇ ? (ಗಾದೆ).

[ ತಂಗಳು (<ತಣ್ಗೂಟ್) + ಹಿಟ್ಟು$_1$ (<ಪಿಟ್ಟು) ]

**ತಂಗಳೂಟ** (ನಾ). ಹಿಂದಿನ ದಿವಸ ಮಿಕ್ಕ ಅನ್ನದ ಊಟ; ತಂಗಳನ್ನದ ಊಟ : ಸೂರ್ಯನು ನಾಲ್ಕಾಳುದ್ದ ಮೇಲಕ್ಕೇರಿದನು. ತಂಗಳೂಟದ ಹೊತ್ತಾಯಿತು (ಚಂಗಾಳ್. ೨೪); ದ್ಯಾವಮ್ಮಂದು ಇನ್ನೂ ತಂಗಳೂಟ ಆಗಿಲ್ಲವ ? (ಹೊಸಕ್ಷ. ೪೮). [ ತಂಗಳು (<ತಣ್ಗೂಟ್) + ಊಟ ]

**ತಂಗಟ್** 'ತಣ್ಗೂಟ್' ನೋ.

**ತಂಗಾನ** (ನಾ). ತಂಪಾದ ಕಾಡು : ಅಂದಿನ ಹೂಗಳಿಲ್ಲ ನಲಿವಕ್ಕಿಗಳಿಲ್ಲ, ಕೊಳಂಗಳಿಲ್ಲ ತಂಗಾನಗಳಿಲ್ಲ (ಗೀವಿಂ. ೦೦೮–೧).

[ ತಂ$_1$ (<ತಣ್$_2$) + ಕಾನ$_1$ (<ಕಾನ್) ]

**ತಂಗಾರ** (ನಾ). ಹಿತಕರವಾದ ಕಾರ : ವೀಳೆಯದೆಲೆ ಗಿಂಡಿ ತಂಗಾರದಡಕಿಲೆ [ಪಾಠಾಂ. ಮಡುಪನು ಕೊಡುತಿಹ ಕೆಲ]ಯೊಳಿಗ ಪದ್ಮಿನಿಯರಿಗೆ ಕಾಳಂಜ ಕೈದುವ ಹಸ್ತಿನಿಯರು ಪಿಡಿದೋಲೈಸಲೆಸೆದನಾ ಮದನ (ಭರತೆ. ೪೬–೬೧); 'ತಣ್ಗಾರು' ಪರಾ. [ ತಂ$_1$ (<ತಣ್$_2$) + ಕಾರ$_2$ ]

**ತಂಗಾಲ** (ನಾ). ತಂಪಿನ ಕಾಲ ; ಚಳಿಗಾಲ ; ಮಾಗಿಯ ಕಾಲ : ಮಾಟಕೂಟವೆಂಬ ಹೊಲದಲ್ಲಿ ಪಾಪಪುಣ್ಯವೆಂಬ ಬೀಜದ ಬಿತ್ತಿಕೆಲ್ಲ ತಂಗಾಲಕ್ಕೆ ಬೆಳೆದು ಮಳೆಗಾಲಕ್ಕೆ ತಗ್ಗಿ ಹೊಲದ ಒಳಹರಿಯಲ್ಲಿ ಜಲ ನಿಂದು ಹೋಯಿತ್ತು (ಪೋಶಿಮೂ. ೧೦೪–೪೦೬). [ ತಂ$_1$ (<ತಣ್$_2$) + ಕಾಲ ]

**ತಂಗಾಳಿ** 'ತಣ್ಗಾಳಿ' ನೋ.

**ತಂಗಿ$_1$** 'ತಂಗೆ' ನೋ.

**ತಂಗಿ$_2$** 'ತಗ್ಗಿ' ನೋ.

**ತಂಗಿಲ್ಪಾಸು** (ನಾ). ಉಪಯೋಗಿಸಿದ ಹಾಸುಗೆ ; ಹಾದರದ ಶಯ್ಯೆ : ನೋಟದೊಳೊಬ್ಬನ ನೆಟಿ ಚೀಟಿಯಿಂದೊಬ್ಬನ ಬರಿಸಿ ನೀಟನ ಮನ ತಂಗಿಲ್ಪಾಸೊಳು ವಂಚನೆ ಕೂಟದ ಹೆಂಗಳೊಪ್ಪಿದರು (ಕಂನವಿ. ೬–೦೨೮).

[ ? + ಪಾಸು$_2$ ]

**ತಂಗಿಸು** (ಕ್ರಿ). ತಂಗುವಂತೆಮಾಡು ; ವಿಶ್ರಮಿಸುವಂತೆ ಮಾಡು ; ನೆಲಸುವಂತೆ ಮಾಡು ; ನಿಲ್ಲಿಸು : ಬೆಂಗದಿರ ರಕ್ತಿಯನು ತಂಗದಿರ ಸಕ್ತಿಯನು ತಂಗಿಸಿತೊ ಮಳೆ ಮಂಜಿನೊಲವ ಮಧುರಾಮ್ನದೊಳು (ಸಾಂಂದಸ. ೩೩); ತಂಗಿಯ ಮನೆಗೆ ಹೋಗಿ, ತಂಗದೆ ಹೋಗುತಿದ್ದಾನೆ. ಆದುದರಿಂದ ತಂಗಿಸಿಕೊಡು (ಹಳ್ಳಿಹಾ. ೩೨) : ಎರಡು ದೊಡ್ಡ ನಿಲುವುಗನ್ನಡಿಗಳನ್ನು ಅಲ್ಲಿ ಗೋಡೆಗೆ ತಂಗಿಸಲಾಗಿತ್ತು (ಹೇಮಂತ. ೪೦೬).

[ ತಂಗು$_1$ + – ಇಸು$_3$ ]

**ತಂಗು$_1$** (ಕ್ರಿ). ಇಳಿದುಕೊಳ್ಳು ; ಉಳಿ ; ಇರು ; ನಿಲ್ಲು ; ವಸತಿ ಮಾಡು: ಬಿಡದಿಯ ಮನೆಯಲ್ಲಿ ಬೀಗರು ತಂಗಲು ಏರ್ಪಾಡುಗಳಾಗಿದ್ದುವು (ಭೂಕಾಂತ. ೬೪) : ಸಂಜೆಗೆಂಪಿನ ಹೂವು, ಕಂಗಳು ತಂಗುವ ಸೊಗಸಿನ ರೇವು (ಮಾಂದೇ. ೦೨–೩) : ಒಳ್ಳೆಯ ಹವೆಗಾಗಿ ಕಾಯುತ್ತಾ ಇಲ್ಲಿ ಆರು ತಿಂಗಳು ತಂಗಬೇಕಾಯಿತು (ಪ್ರವಾಕ. II, ೧೯೦).

[ ದೇ.$_8$ ತಮಿ. ತಙ್ಕು; ಮಲ. ತಙ್ಙು; ತೆಲು. ತಕ್ಕು; ಕೊಲಾ. ನಾಯ್ಕಿ. ತಕ್ ]

**ತಂಗು$_2$** (ನಾ). ೧. ಉಳಿಯುವುದು ; ಬಿಡಾರ ಮಾಡುವುದು ; ವಸತಿ ; ಬಿಡಾರ: "ಅಧಿವಾಸಃ = ತಂಗು " (ಕಾಕಕ್ಕ. ೦೬೧). " ವಸ್ತಿಃ = ತಂಗು " (ಕಾಕಕ್ಕ. ೧೬೧). ೨. ಆಧಾರ ; ಆಶ್ರಯ. 'ತಂಗೊಡೆ' ಪರಾ.

[ <ತಂಗು$_1$ ]

**ತಂಗು$_3$, ಟಂಗು** (ನಾ). ೧. ಕುದುರೆ ಮೊದಲಾದ ಪ್ರಾಣಿಗಳ ಜೀನನ್ನು ಬಿಗಿಗೊಳಿಸುವುದಕ್ಕಾಗಿ ಅವುಗಳ ಒಡಲಿಗೆ ಬಿಗಿದಿರುವ ಚರ್ಮದ ಪಟ್ಟಿ,–ಸುತ್ತುಪಟ್ಟಿ : ಹೊನ್ನ ಹಲ್ಲಣ . . . ಉನ್ನಂತ ರತ್ನ ಭಂಧಗಳ ತಂಗಿನವಟ್ಟೆ ಚಿನ್ನ ಪಂಜಿನ ಕಂಠಮಾಮಾ ಇಂದ್ರನೀಲದ ಹೇಮದ ತರಕಸ ಸಿಂಗಾಡಿ (ದೇವಾಂಪು. ೩–೧೪೮) ; ಕುದುರೆ ಮಾತಂತು ಆಯಿತು. ಇದರ ಕೋಗೀರು, ತಂಗು ಮುಂತಾದ ಸಾಮಾನುಗಳನ್ನು ನೀವು ಹೊರಬೇಕೋ (ಕಥಾಮಂ. IV, ೯೩) ; ಬೇಟೆಗೆ ಹೋಗಿ . . . ತಂಗನ್ನೂ ಕುದುರೆಯ ಮುಂಗಾಲು ಹಿಂಗಾಲುಗಳಿಗೆ ಕಟ್ಟುವ ಆಗಾಡಿ ಪಿಚಾಡಿ ಹಗ್ಗಗಳನ್ನೂ ಕೆಗೆದುಕೊಂಡು ಬಂದರು (ನಗೆಗ. ೩೦) : ಕುದುರೆಯು ಕಟ್ಟಿದುದೂ, ಅದರ ತಂಗು ಥಡಿಗಳು ಬಳಿಯಲ್ಲಿ ಬಿದ್ದಿರುವದೂ ಗೊತ್ತಾಯಿತು (ವಿಂಧ್ಯಾಲಿ. ೨). ೨. ಕುದುರೆಯನ್ನು ಹತ್ತುವುದಕ್ಕಾಗಿ ಅದರ ಮಗ್ಗುಲಲ್ಲಿ ನೇತು ಬಿಟ್ಟಿರುವ ಬಳೆ ; ರಿಕಾಪು ; ಅಂಕವಣೆ. **ಟಂಗು** : (ಕ).

**ಟಂಗು ಹರಿ** = ೧. ಕುದುರೆ ಮೊದಲಾದುವುಗಳ ನಡುಕಟ್ಟು ಕಿತ್ತು ಹೋಗು: ಟಂಗು ಹರಿಯಿತು, ಕಾಲು (ಕೋಲು) ಮುರಿಯಿತು(ಗಾದೆ). ೨. (ಆಲಂ) ಬಡತನವುಂಟಾಗು; ದಾರಿದ್ರ್ಯವನ್ನು ಹೊಂದು: (ಕ). **ತಂಗು ತಡಂಗು**="ಏರುವ ಕುದುರೆಗೆ ಇರಬೇಕಾದ ಪರಿಕರ; ಸಾಮಾನ್ಯವಾಗಿ ಎಲ್ಲ ಪರಿಕರ " (ನಮ್ಮನು. ೧೨೦).

[ ←ಪಾರ. ಹಿಂ. ಮರಾ. ತಂಗ್ ]

**ತಂಗುದಾಣ** (ನಾ). ತಂಗುವ ಸ್ಥಳ; ಬಿಡಾರ: ಆಗಾಗ ತನ್ನ ರಾಜಧಾನಿಗೆ ಹೋಗಿ ಬರುತ್ತಿದ್ದರೂ ಹೆಚ್ಚಾಗಿ ಆತನ ತಂಗುದಾಣವೆಂದರೆ ಮಾನ್ಯಖೇಟವೇ ಆಗಿತ್ತು (ವೀರಬಂ. ೪) : ರಾಯಭಾರದ ಈ ಪರಿವಾರಕ್ಕೆ ತಂಗುದಾಣಗಳಲ್ಲಿ ತಕ್ಕ ವ್ಯವಸ್ಥೆಗಳನ್ನು ಮಾಡಲು . . . ಇಬ್ಬರು ವೇಗಾಯಿಲರು ಅಂದು ದೋರಸಮುದ್ರವನ್ನು ಬಿಟ್ಟರು (ನವಶಿ.೩೦).

[ ತಂಗು$_1$ + ತಾಣ ]

**ತಂಗುದೊಡ್ಡಿ** (ನಾ). "ವ್ಯಾಪಾರಕ್ಕಾಗಿ ಹೊಡೆದುಕೊಂಡು ಹೋಗುವ ದನಗಳು ತಂಗಲು ದಾರಿಯಲ್ಲಿ ಮಾಡಿರುವ ಕೊಟ್ಟಿಗೆ, ಆವರಣ ತಂಗು ದೊಡ್ಡಿ , ಕೊಟ್ಟಿಗೆ" (Lsir. ೩೦೫೧).

[ ತಂಗು$_1$ + ದೊಡ್ಡಿ$_1$ (<ತೊಟ್ಟಿ$_1$) ]

**ತಂಗುಪಟ್ಟಿ** (ನಾ). = ತಂಗು₃ ೧ : ಬೆಳ್ಳಿಬಸವನ ಭರಣದ ಲೆಖ್ಖಾ . . . ೧ ಗಂಗದೊಗಲಿಗೆ ಬೆಲು ೧ ತಂಗುಪಟ್ಟಿ ೧ ಚಿತ್ರಿಕಲಶ (ಎಕ. XIV, ನಂಜನ. ೨೮೯-೨೯೮ ಕಲಂ : 1847) : "ಕುದುರೆ ತನ್ನ ಹಿಂಗಾಲ ಳ ಮೇಲೆ ನಿಲ್ಲುವುದು, ಮೊ. ತುಂಟತನವನ್ನು ಮಾಡದಂತೆ ತಡೆಯುವುದಕ್ಕಾಗಿ ಒಂದು ತುದಿಯನ್ನು ಅದರ ಕಡಿವಾಣಕ್ಕೂ ಮತ್ತೊಂದು ತುದಿಯನ್ನು ಅದರ ಸೊಂಟಪಟ್ಟಿಗೂ ತಳದಲ್ಲಿ ಸೇರಿಸಿ ಬಂಧಿಸಿರುವ ತೊಗಲಪಟ್ಟಿ (ಗಳು) ; ತಂಗುಪಟ್ಟಿ" (Martingale. ಇಂಕನ.). [ ತಂಗು₃ + ಪಟ್ಟಿ₂ ]

**ತಂಗುಬೆಳಕು** (ನಾ). ಸೂರ್ಯಾಸ್ತವಾದ ಮೇಲೂ ಸ್ವಲ್ಪಹೊತ್ತು ನಿಂತಿರುವ ಬೆಳಕು : ಬೇಸಗೆಯ ಸಂಧ್ಯಾಕಾಲದ ತಂಗುಬೆಳಕು ಕೂಡ ಅಳಿದುಹೋಗಿ ಕತ್ತಲೆ ಕವಿದಿತ್ತು (ನಂಟರು. ೯೩). [ ತಂಗು₁ + ಬೆಳಕು₂ (<ಬೆಳಗು₂) ]

**ತಂಗುಮನೆ** (ನಾ). ೧. ಬಿಡದಿ ಮನೆ: (+). ೨. ಪ್ರಯಾಣಿಕರು ತಾತ್ಕಾಲಿಕವಾಗಿ ತಂಗುವುದಕ್ಕಾಗಿ ನಿರ್ಮಿಸಿದ ಮನೆ,-ವಿಶ್ರಾಂತಿಗೃಹ ; ಪ್ರವಾಸಿ ಮಂದಿರ : ಒಂದು ಸಂಜೆ ಆಫೀಸು ಮುಗಿಸಿ ಯಶೋದ ವಿ. ಟಿ. ಯ ತಂಗುಮನೆಗೆ ಬಂದಿದ್ದಳು(ಪಾತ್ರ್ಯ. ೨೫೮). [ತಂಗು₁+ಮನೆ]

**ತಂಗುಳು** 'ತಣ್ಣಾಗುಲ್' ನೋ.

**ತಂಗುಟ್** 'ತಣ್ಣಾಗುಟ್' ನೋ.

**ತಂಗುಟ್ಟಿರಿಕ** (ನಾ). ತಂಗುಳನ್ನವನ್ನು ತಿರಿದು ಉಣ್ಣುವವನು ; ತಿರುಕ; ಭಿಕ್ಷುಕ : ತಮ್ಮಯ್ಯನಪ್ಪ ತಂಗುಟ್ಟಿರಿಕನ ಮಾತಂ ಕೇಳ್ದು (ಧರ್ಮಾಮೃ. ೯-೦೭೬). [ ತಂಗುಟ್ (<ತಣ್ಣಾಗುಟ್) + ತಿರಿಕ₁ ]

**ತಂಗೂಳು** 'ತಣ್ಣೂಟ್' ನೋ.

**ತಂಗೂಟ್** 'ತಣ್ಣೂಟ್' ನೋ.

**ತಂಗೆ**, ತಂಗಿ₁ (ನಾ). ೧. ಕಿರಿಯ ಸಹೋದರಿ; ಒಡಹುಟ್ಟಿದ ಕಿರಿಯಳು: ಇದನಟಿಪಾತ ಕೆಱಿಯುಂ ಕೋಡಿಯುಮನಟಿದು ಪಸುವುಮಾರ್ವರು × × × [ಕೊನ್ಡೋನವ]ನ್ತಮ್ಮಬ್ಬೆಯನ್ತಂಗೆಯುಮ × × × ಮಾಡಿ ಕೊಣ್ಡೋ[ಂ] (ಸೌಇಇ. XI-1, ೬-೨೮ : 837) ; ಭಟಾರರ ತಂಗೆಯಪ್ಪ ವೀರಶ್ರೀಯುಂ . . . ಪ್ರಳಾಪಿಸಿ ದುಃಖಂಗೆಯ್ಯೆ (ವಡ್ಡಾರಾ. ೧೦೮-೯) ; ಹಿಡಿಂಬನೆಂಬನವರ ಬರವನಱಿದು ತನ್ನ ತಂಗೆ ಹಿಡಿಂಬೆಯೆಂಬಳಂ ಕರೆದು (ಪಂಪಭಾ. ೩-೧೦ ವ) ; ಪತಿಯೊಡನೆನ್ನ ತಂಗೆ ದಹನಾರ್ಚಿಯೊಳೊಂದೆ ಮುಹೂರ್ತದೊಳ್ ನಿವೇದಿತತನುವಾದಳ್ (ಅಜಿಪು. ೦-೪೪). ೨. ಕಿರಿಯ ಹೆಂಗಸರನ್ನು ಸಂಬೋಧಿಸುವಾಗ ಹೇಳುವ ಮಾತು : ತಂಗೆ ತಲೆ ವೀದಿಯಂ ತೊಡೆಯದಿರು ಕೂಡೆ ಚಳೆಯಂಗೆಯ್ದಲಂಕರಿಸು (ಹರಿಶ್ಚ. ೯-೨೪). **ತಂಗಿ₁** : ೧. ನೀನಿದೇಂ ನಿಂದಿಲ್ಲಿ ಱೋದಗತನಂಗೆಯ್ದಾದುತ್ತಿರ್ಪೆ ಅತ್ತ ಪಿನ್ನ ತಂಗಿಗವಸ್ಥೆ ಪಿರಿದು (ಪಂಚತಂ. ೨೬೦-೦೨) ; ಪೊಱೆಯಿಲ್ಲಪ್ಪೊಡೆ ಸತಿ ಗಾದಱಿಕಂ ಮೇಣ್ ಕೂರ್ಪ ತಂಗಿಗೇಕಾಗದು (ಧರ್ಮಾಮೃ. ೯-೩೦) ; ಹರಿಯಂ ತಂಗಿಯ ಬಾಲನೆಂದು ಬಗೆದೇಂ ಕಂಸಾಸುರಂ ಕಿಡನೇ (ಸೋಮೇಶ. ೩೪) ; ಹಿಂದಣ ರಾವಣನೊಳವಗಡಿಸಿಯಾತನ ಮಾವನನು ಮುಱಿದವನ ತಂಗಿಯ ಮೂಗ ಭಂಗಿಸಿದ (ಕುಮಾ.ಸ. ೯-೩೦). ೨. ತಂಗಿ ನೀನಟಲಂ ತಳೆಯದಿರಾವಿರ್ವರುಂ ಸಮಸುಖದುಃಖ[ವೃತ್ತಿ]ಗಳಾದೆವು (ಶಾದಂಉ. ೩೨೪) ; ಬಾಲಕಿಯ ಬಾ ತಂಗಿ ಬಾ ನೀಲಾಲಕಿಯ ಬಾಯೆನುತ ಮಿಗೆ ಪಾಂಚಾಲೆಯನು ಕರೆದಸುರರಿಪು ಸೂಚಿಸಿದನಂಗನೆಗೆ (ಕುಮಾ.ಭಾ. ೧೦-೦೩). [ ದೇ.॥ ತಮಿ. ತಙ್ಕೈ ; ಮಲ. ತಙ್ಙ ; ತುಳು. ತಂಗಿ ; ಕೊಡ. ತಂಗೆ ; ಗೊಂಡಿ. ತಂಗೀ ; ಕುಇ. ಕುವಿ. ತಂಗಿ ]

**ತಂಗೆಡೆ** (ನಾ). ತಂಗುವ ಎಡೆ ; ಬಿಡಾರ : ಎಲ್ಲಾ ವೀರರುಗಳೂ ಫಲ್ಗುಣನನ್ನು ಹೊಗಳಿಕೊಂಡು ಉತ್ಸಾಹವಾಗಿ ತಮ್ಮ ತಂಗೆಡೆಗಳಿಗೆ ಹೋದರು (ವ್ಯಾಸಜಿ. ೩೮೭). [ ತಂಗು₁ + ಎಡೆ₃ ]

**ತಂಗೆಳು** 'ತಂಗೇಳು' ನೋ.

**ತಂಗೆಱೆ**[3] (ನಾ). ಒಂದು ಊರಿನ ಹೆಸರು : ಬಲಿವಂಶತಿಲಕ ಆಸನ್ದಿನಾಡ ನಾಳುತ್ತಿರೆ ತ್ರಿಬ್ಗಿಱಿಯಾ ದಣ್ಣರೆ ನೊಟಂಬು ತಂಗೆಱೆ ಸಲೆ . . . ಕಾದಿ ಸತ್ತಂ (ಎಕ. V, ಅರಸೀ. ೨೦೩-೬ : ಸು. 890). [ ? ]

**ತಂಗೇಳು**, ತಂಗೆಳು (ನಾ). (?): ಯಿದಕೆ ಅನ್ಯಾಯವು ಅನೊರ್ಬ ಮಾಡಿದವನು ಗಂಗೆಯ ತಡಿಯಲ್ಲಿ ತಂಗೇಳು ಕವಿಲೆಯಕೊಂದ ದೋಷಕೆ ಹೋಹರು (ಎಕ. IX, ಚಂಗಳೂ. ೦೩೪-೦೦ : 1308) ; ಯಿದಕೆ ಅರು ಅಳಿಹಿ ತಪಿದವರು ಗಂಗೆಯ ತಡಿಯಲು ತಂಗೇಳು ಕವಿಲೆಯ ಕೊಂದ ಪಾಪದಲಿ ಹೋಹರು (ಎಕ. IX, ಚಂಗಳೂ. ೯೭-೦೭ : 1347) ; ಅವನೊಬ್ಬ ಅಳಿದವ ಗಂಗೆಯ ತಡಿಯಲಿ ತಂಗೇಳು ಕಪಿಲೆಯನು ಬ್ರಾಹ್ಮರನು ಕೊಂದ ಪಾಪಕೆ ಹೋಹನು (ಎಕ. IX (B), ಕನಕ. ೬೩-೨೦ : ಸು. 1590). **ತಂಗೆಳು** : ಯಿದಕೆ ಆವನಾನೊಬನು ಅಳಿಪಿದವರು ಗಂಗೆಯ ತಡಿಯಲಿ ತಂಗೆಳು ಕಪಿಲೆಯ ಕೊಂದ ಪಾಪದಲಿ ಹೋಹರು (ಎಕ. IX (B), ಚಂಗಳೂ. ೦೬೩-೦೦; ಸು. 1700). [ ? ]

**ತಂಗೇಟುಫುಣುಸೆ** (ನಾ). ಒಂದು ಪ್ರದೇಶದ ಹೆಸರು (?): ಮಹಾನದಿವಾಯವ್ಯಾದಿಶಿಯಿಮ್ ಪೂರಮಟ್ಟು ತಂಗೇಟುಫುಣುಸೆವಿ ಆ ಪೇರೊರ್ಪಿ (ಪ್ರುಆರಿ. ೧೯೨೦, ೯-೨೪ ; ಕೃಅ). [ ತಂಗೇಟು₀ + ಫುಣುಸ (<ಫುಳಿಸ) ]

**ತಂಗೈ** (ನಾ). ತಣ್ಣಗಿರುವ ಕೈ : ಹಣದ ತಂಗೈ ನನ್ನ ಮುಂಗೈಯ್ಯ ಹಿಡಿದಂತೆ ನಿನ್ನ ಮಾತಿನ ಪಟ್ಟು ಮನಕನಿಸಿತು (ಸಹೀಗೀ. ೩೭-೬೨೪). [ ತಂ₁ (<ತಣ್₁) + ಕೈ₂ (<ಕೆಯ್₂) ]

**ತಂಗೊಡಗೆ** (ನಾ). ಒಂದು ಊರಿನ ಹೆಸರು. P ಈಗಿನ ಬಿಜಾಪುರ ಜಿಲ್ಲೆಯ ತಂಗಡಗಿ : ಪೆರ್ದೊರೆಱಿಯ ಬಡಗದಟಿಯ ತಂಗೊಡಗೆಯ ಬೀಡಿನೊಳ್ (ಸೌಇಇ. XI-1, ೦೦೩-೦೪ ; 1075). [ ? ]

**ತಂಗೊಡೆ** (ಕ್ರಿ). ಆಧಾರ ತಪ್ಪು ; ಆಶ್ರಯವಿಲ್ಲವಾಗು : ದಿಕ್ಕರಿಸ ಫಣಿಯು ಕೂರ್ಮಾದಿಗಳ್ತಂಗೊಡದು ಕುಕ್ಕುರಿಸೆ ಧರಣೀತಳಮ್ಮದಿರೆ ಕದಲು ಕುದಿದುಕ್ಕಿದುದು ಅತಿರಥಮಹಾರಥರ ಯುದ್ಧದೊಳ್ಪಡಿದನು ವಿರಾಟನೂನು (ತುರಂಗ. ೪೫ ಸೂಚನೆ). [ ತಂಗು₂ + ಒಡೆ₁ ]

**ತಂಗೊಳ** 'ತಣ್ಗೊಳ' ನೋ.

**ತಂಚಾವಂಚ** 'ತೊಂಚವಂಚ' ನೋ.

**ತಂಜಾಪುರಿ** (ನಾ). ಒಂದು ಊರಿನ ಹೆಸರು. P ಈಗಿನ ತಂಜಾವೂರು: ತಞ್ಜಾಪುರಿ ನಾಳ್ಕೇಳೋ ಪ್ರಮುಖಾದಿ ದುರ್ಗನಿವಹಾನ್‌ದಗ್ಧ (ಪ್ರುಆರಿ. ೧೯೨೦, ೦೦-೮೯ : 963) ; ಮಧುರೆ ತಂಜಾಪುರಿ ತೆಂಜರಾಯರ ಸಮ್ಮುಖದ ಮಂತ್ರಿನಿಕರವೈತಂದು (ಕಂಸವಿ. ೨೦-೩೩). [ ತಂಜಾ₀ + ಪುರಿ₂ ]

**ತಂಟಲಮಾರಿ** 'ತಂಟಲುಮಾರಿ' ನೋ.

**ತಂಟಲು** (ನಾ). ತಂಟೆ ; ತಕರಾರು. 'ತಂಟಲುಮಾರಿ', 'ತಾರಾ ತಂಟಲು' ವರಾ. [ ತಂಟೆ+ −ಅಲು₂ (< −ಅಲ್₂) ]

**ತಂಟಲುಮಾರಿ**, ತಂಟಲಮಾರಿ (ನಾ). ೧. ತಂಟೆ ತೆಗೆಯುವ ಸ್ವಭಾವದ ವ್ಯಕ್ತಿ : ಪೇಟೆ ಶಾಲೆಯೆಂದರೆ, ತಂಟಲುಮಾರಿ ಹುಡುಗರೂ, ಅವರ ದಾಂಧಲೆಯೂ . . . ಬಡಪಾಯಿ ಮೇಷ್ಟುಗಳು ಇವಿಷ್ಟರಲ್ಲಿಯೇ ಮುಗಿದು ಬಿಡುತ್ತದೆ (ರೂಪಸಂ. ೩೩); ಸೀನಭಟ್ಟ ಮಗ-ಮಹಾ ತಂಟಲುಮಾರಿಯವ (ಕೋದಂಡ. ೪೪). **ತಂಟಲಮಾರಿ** : ೨. ಗ್ರಾಮದೇವತೆ: ಕೊಡಗಿನ ಮಾರಿ ತಂಟಲಮಾರಿ ಗೌಡಗೆ ಬುದ್ಧಿ ಕಲಿಸಾಲೆಂತ . . . ಗೌಡ್ರ ಹಟ್ಟಿ ಬಾಗ್ಲಿಗೆ ಬಂದ್ಲು (ಜಗೀತ. ೩೭). ೩. ಕಂಲಟೆ ; ಜಾರೆ : ನೀನಾದರೆ . . . ವಶ್ಯಕರಮಾದ ಮದ್ದುಗಳನ್ನಿಟ್ಟು ವಶ್ಯರಂ ಮಾಡಿ ತಗಿಲಿಸಿಕೊಂಬ ತಂಟಲಮಾರಿಯೆ ಸರಿ (ಸೌಗಂಧಿ. ೩೦೯-೮). [ ತಂಟಲು + ಮಾರಿ₂./ತಮಿ. ತಣ್ಣುಮಾರಿ; ತುಳು. ತಂಟೆಲ್ಮಾರಿ ; ತೆಲು. ತಂಟಲಮಾರಿ, ತಂಟಾಲಮಾರಿ ]

**ತಂಟಲುಮಾರಿತನ** (ನಾ). ತಂಟೆ ತೆಗೆಯುವ ಸ್ವಭಾವ ; ಜಗಳಗಂಟತನ: ದಯಮಾಡಿ ತಂಟಲುಮಾರಿತನಕ್ಕೆ ಮನಸ್ಸು ಕೊಡಬೇಡ (ಮಹಾತ್ಮಾ. ೦೦೩). [ ತಂಟಲುಮಾರಿ + – ತನ ]

**ತಂಟು** 'ತಂಟೆ' ನೋ.

**ತಂಟೆ**, ತಂಟು (ನಾ). ೧. ಜಗಳ ; ತರಲೆ ; ತಕರಾರು : ಟೀಪುಸುಲ್ತಾನರ ಕೆಲಸದ ಮೇಲೆ ಮೂರು ಸರಕಾರದ ಕಡೆಯಿಂದಾ ಈ ತಂಟೆ ತಪ್ಪಿಸಿದರೆ (ರಾಜೇಂದ್ರ. ೭೫) ; ಇಬ್ಬರ ತಂಟೆಯಲ್ಲಿ ತೊಡಕಿದ ಹೊಲದ ಸೀಮೆಭಾಗ ದಂತೆ (ಅಶ್ವಮೇ. ೨) ; ನಾದವಿದ್ದರೆ ಘಂಟೆ, ವಾದವಿದ್ದರೆ ತಂಟೆ (ಗಾದೆ). ೨. ಕಷ್ಟ; ತೊಂದರೆ ; ಉಪದ್ರವ : ಪರಿಪರಿಯ ಸಾಲ ಜೂಜು ಮೊದಲಾದ ತಂಟೆಗಳನ್ನುಂಟುಮಾಡಿ (ಸೌಗಂಧಿ. ೦೩೪–೨) ; ಬಹಳ ತಂಟೆಗೆ ಬಂತು! (ದೇವೀಜಾ. ೨೦) ; ಅಣ್ಣನ ತಂಟೆ ತಡೆಯಲಾರದ ಸದಾಶಿವನೆನ್ನುವುದನ್ನು ಕೇಳಿ . . . ನೊಂದುಕೊಳ್ಳುತ್ತಿದ್ದಳು (ತ್ಯಾಗಮು. ೧೪೦). ೩. ಸಂಬಂಧ ; ಗೊಡವೆ ; ಗೋಜು : ಇನ್ನೆನಗಿದು ಬರುವುದುಂಟೆ ? ಬರಿದೇಕಿನ್ನಿದರ ತಂಟೆ (ಗೀವಿಂ. ೭೮–೭೨); ಸಂಸಾರಿಕರ ತಂಟೆಗೆ ಬರಲು ಏನಧಿಕಾರ ಈ ಸಂನ್ಯಾಸಿಗಳಿಗೆ (ಆಶ್ರಮ. ೦೦೨) ; ಅಜ್ಜಿ ಯಾವ ತಂಟೆಗೂ ಹೋಗುತ್ತಿರಲಿಲ್ಲ (ಧರ್ಮಶ್ರೀ. ೬). **ತಂಟು** : ೧. ಆಱು ಮಂದಿ ಮಕ್ಕಳುಂಟು (ವಕ್ಕಲುಂಟು) ಮತ್ತಾಱು ಮಂದಿ ಪ್ರೇರಕರುಂಟು ಪ್ರೇರಕರಿಗೆ ಕರ್ತರುಂಟು ವಿಚಾರ ಮಾಡಲಿಕ್ಕೆ ನಿಮ್ಮದೇನು ತಂಟು (ಪುರಂದ. ४–೧೬–೨).

**ತಂಟೆ ತಕರಾರು** = ಜಗಳ ; ವಿವಾದ : ನಮ್ಮ ಮಕ್ಕಳ ಕಾಲಕ್ಕೆ ತಂಟೆ ತಕರಾರು ಇರಕೂಡದು (ಅನಾಮಿ. ೬). **ತಂಟೆ ತಾಪತ್ರಯ** = ತಂಟೆ ತಕರಾರು: ನಾಲ್ಕಾರು ಪಾರಿವಾಳಗಳು ಯಾರ ತಂಟೆ ತಾಪತ್ರಯವೂ ಇಲ್ಲದೆ ಬಿಂಕದಿಂದ ಓಡಾಡುತ್ತಿದ್ದುವು (ಪುನರು. ೬). **ತಂಟೆ ತೀರಿಸು** = ಜಗಳ ಬಗೆಹರಿಸು: ಕುಂಟೆಕೊಳ್ಳುತ್ತಾ ತಂಟೆ ತೀರಿಸ್ಯಾನು (ಗಾದೆ). **ತಂಟೆ ಬಂಟೆ** = ತಂಟೆ ತಕರಾರು : ಆಯಾ ಸ್ಥಳದ ಮಟ್ಟದ ವಡೆರಗಳು ಯಿ ವಿಷಯವಾಗಿ ತಂಟೆಬಂಟೆಗಳ ಮಾಡಿದಲ್ಲಿ (ಮ್ಯಆರಿ. ೦೯೩೦, ४೩–೩೦ ; 1812). **ತಂಟೆ ಮಾಡು** = ತಕರಾರು ಮಾಡು : ಪಕ್ಕದ ಹೊಲದವರು ತಂಟೆ ಮಾಡಿದ್ದರಿಂದ ಜಗಳ ಆರಂಭವಾಯಿತು (ರೂಢಿ). **ತಂಟೆಯುವ** = ತಂಟೆಕೋರ ; ಉಪದ್ರವಕಾರಿಯಾದ ಮನುಷ್ಯ : ತಂಟೆಯುವನ ನಂಟಿಕೆ ಸಲ್ಲ, ಒಂಟಿಯಾಗಿ ಹೋಗ ಸಲ್ಲ (ಗಾದೆ).

[ ←ಮರಾ. ತಂಟಾ ; ಹಿಂ. ತಂಟಾ, ಟಂಟಾ ; ಗುಜ. ತಂಟೋ, ಟಂಟೋ ; ಸಿಂಧಿ. ಟಂಟ. / ತಮಿ. ತಣ್ಟು ; ತೆಲು. ತಂಟಾ]

**ತಂಟೆಕೋರ** (ನಾ). ತಂಟೆ ಮಾಡುವ ಸ್ವಭಾವದವನು ; ಜಗಳಗಂಟ : ಕೆಲಮಂದಿ ತಂಟೆಕೋರರಾದ ರೈತಜನರು ನಂಬರಿನ ಹದ್ದುಬಸ್ತಾದ ಬಾಂಧುಕಲ್ಲುಗಳನ್ನು ಮನಃಪೂರ್ವಕವಾಗಿ ಕಿತ್ತಿಸೆಯುವುದೂ ವುಂಟು (ಭೂಮಿಅ. ೩೮). [ ತಂಟೆ + – ಕೋರ$_3$ ]

**ತಂಟೆಗಾರ** (ನಾ). = ತಂಟೆಕೋರ : ಈ ರಂಗಪ್ಪನ ದಾಳಿ ಹೊರಟುದೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ ದಾಳಾದೂಳಿಯಾಗುವರು (ನಡೆದಾ. I, ४೩೬). [ ತಂಟೆ + – ಕಾರ$_1$ (< – ಕಾಱ) ]

**ತಂಡ**, ತಂಡು$_1$ (ನಾ). ೧. ಗುಂಪು ; ಹಿಂಡು ; ಸಮೂಹ : "ಭಂಬಲ್, ತುಱುಗಲ್ . . . ಸೇಣಿ, ತಂಡಂ, ಗುಂಡಿ . . . ಗುಮ್ಮಿ, ಗೊಂದಣ– ಈ ४೦ ಸಮೂಹಂ" (ಶಶಸ್ತಾ. ೦೧–೨೨೨) ; "ತಂಡಮೆನಲೋಳಿ" (ಛಾರನಿ. ೩೬) ; "ತಂಡಂ ತೆರಳ್ಕೆ ಮೊಕ್ಕಳ . . . ತೋಮಮಿವು ತಾವೆತ್ತಂ ಸ್ತೋಮಾಭಿಧಾನಮಕ್ಕುಂ" (ಕವಿಕಂ. ೦೦೬); ಕಣ್ಗಳಿಂ ಕೆಂಡದ ತಂಡಂಗಳು ಮುರಿಯು ತಂಡಂಗಳುಂ ಸೂಸೆ (ಪಂಪಭಾ. ೩–೧೬ ವ); ರಸಮನೀವುತ್ತಿರ್ದುರ್ದಿಕ್ಷುಪ್ರಕಾಂಡದ ತಂಡಂ (ಶಾಧಪು. ೦–೮೮) ; ಕಂಡು ಬೆಱಗಾದುದು ಕುಮಾರರ ತಂಡ (ಕುವ್ಯಾಅ. ೬–೩೯). ೨. ಪಕ್ಷ ; ಪಂಗಡ : ನೆಲೆವೆರ್ಚುಗೆ ನಿಮ್ಮೆರಡು ತಂಡವೊದವಿದ ನಣ್ಪಂ (ಪಂಪಭಾ. ೦೩–೬೭) ; ಇಂತೀ ಎರಡು ತಂಡದೊಳಾರು[ಪಾಠಾಂ. ಎರಡರಸುಗಳೊಳಾರು] ಸೋತರು ಸೋತ ಭೂಪತಿಗೆ ಪರುಷ ಹನ್ನೆರಡಬಲಿ ವನದೊಳಗಿರವು (ಕುವ್ಯಾಸ. ೦೬–४४) ; ತಮ್ಮ ಕೂಟನೀತಿಯಿಂದ ಎರಡು ತಂಡಗಳಾಗುವಂತೆ ಮಾಡಿದರು (ಜಗಸಂ. ४೬). **ತಂಡು$_1$**: ೧. ಅನೇಕ ಮುಸಲ್ಮಾನರ ತಂಡುಗಳು ನಿರ್ಭಯವಾಗಿ . . . ಹಿಂದುಸ್ಥಾನದಲ್ಲಿಯೇ ನೆಲೆಗೊಂಡು ಇರಲಾರಂಭಿಸಿದರು (ಹಿಂಮುಸ. ४೬).

**ತಂಡತಂಡ** (ದ್ವಿರುಕ್ತಿ) = ೧. ಅನೇಕ ಗುಂಪು; ಹಲವಾರು ಗುಂಪು: ಮನೋಭವನೊಡ್ಡಣದಂತೆ ತಂಡತಂಡದೆ ಪರಿತಂದು ಸೂಸಿದುದು ಸೇಸೆಯುನಂದು ಪುರಾಂಗನಾಜನಂ (ಪಂಪಭಾ. ४–೩೫) ; ತಂಡತಂಡದ ಗಣಕತತಿ ತಪ್ಪದೆನುತಮಿರೆ (ಬಸರ. ೫–೮೨) ; ಮೃಡಭಕ್ತಗಣತತಿ ತಂಡತಂಡದಲಿ ಸಡಗರದೊಳಿಯ್ತರೆ (ಬಸಪು. ೬–೨೦). ೨. ಬಗೆಬಗೆ ; ಹಲವು ಪ್ರಕಾರ; ನಾನಾ ವಿಧ: ಪುಂಡರೀಕಾಕ್ಷ ಸಿರಿ ಪುರಂದರವಿಠಲನ್ನ ತಂಡತಂಡದಿ ನೆನೆದು ಸುಖಿಯಾಗು ಮನವೆ (ಪುರಂದ. ೦–೦೫೯–४) ; ತಂಡತಂಡದ ವಿಹಗಾಲಾಪ ತುಂಬಿಯಾಖಂಡವಾಗಿರ್ದುದೇನೆಂಬೆ (ಮೋಹತ. ೫–೨೨) ; ಕಂಡಕಂಡದ್ದೆಲ್ಲ ಕಮಲನಾಭನ ಮೂರ್ತಿ . . . ತಂಡತಂಡದ ವಾರ್ತೆ ವಾರಿಜಾಕ್ಷನ ಕೀರ್ತಿ (ವಿದಾಕೃ. ೨೫–೦). **ತಂಡೋಪತಂಡ** = ತಂಡತಂಡ ೧: ಪಾಂಡವರ ಬಲದ ಮೇಲೆ ಬಿದ್ದು ತಂಡೋಪತಂಡವಾಗಿ ಚಂಡಕಾಂಡಗಳನ್ನು ಪ್ರಯೋಗಿಸಿ (ಕೃವಾಭೀ. ೦೧೦) ; ವಿಚಾರಪರರಾದ ಸಂಶೋಧಕರೂ ತಂಡೋಪತಂಡವಾಗಿ ಸಿದ್ಧವಾದರು (ಕ್ರಿಯಾಶಿ. ೦೦೨).

[ದೇ.೫ ಮಲ. ತಣ್ಟು ; ತುಳು. ತಂಡ, ತಂಡ್; ತೆಲು. ತಂಡ./ಸಂ. ದಂಡ]

**ತಂಡಂಗೊಳ್** (ಕ್ರಿ). ಗುಂಪುಗೂಡು; ನೆರೆ; ಸಂದಣಿಸು: ಜನಭವನದಿಂದಾ ಖಂಡಲನಿಭವಿಭವನಿರದೆ ಪೊಱಮಟ್ಟುದಿರೊಳ್ ಕಂಡಂ ನೆರೆದು ನಿಗುಂಬಿಸಿ ತಂಡಂಗೊಂಡಿರ್ದ ನರರ ಖಚರರ ಗುಂಡಂ (ಆದಿಪು. ४–೩).

[ ತಂಡ + ಕೊಳ್$_1$ ]

**ತಂಡಂಬೆಱು** (ಕ್ರಿ). = ತಂಡಂಗೊಳ್ : ಭಕ್ತರುತ್ಸಾಹದಿಂ ತಂಡಂಬೆತ್ತರರೇ ವುಘೇಯೆನುತುಮಿರ್ದರ್ (ಶ್ರೀಷಪಿ. ೩೬–೬೫). [ ತಂಡ + ಪೆಱು$_1$ ]

**ತಂಡಕ** (ನಾ). ೧. ಸರಿಯಾದ ಸಿದ್ಧತೆ; ಕಾರ್ಯದ ಸಂಪೂರ್ಣ ನಿರ್ವಹಣೆ. ೨. ಹೆಚ್ಚಾದ ಸಮಾಸಪದಗಳಿಂದ ಕೂಡಿದ ರಚನೆ. 'ದಂಡಕ$_2$' ಪರಾ. ೩. ಮರ ಅಥವಾ ಗಿಡದ ಕಾಂಡ. ४. ಐಂದ್ರಜಾಲಿಕ. ೫. ಮೋಸಗಾರ: ತಂಡಕನು ಅವ ನಿನ್ನ ಹೆಂಡತಿಯ ಕೂಡಿರಲು ಭಂಡ ಒಡಲನು ಪೊರೆದುಕೊಂಡಿರ್ಪ ಯಾಕೆ (ಶರಿಕ. ೬೨–೦). ೬. ತುಂಟ ; ಅಧಿಕ ಪ್ರಸಂಗಿ : ಎಲಾ ತಂಡಕ ಹುಡುಗನೇ ಇದು ಉಪ್ಪಲ್ಲ, ಬೆಲ್ಲ (ಕಥಾಮಂ. IV, ೬೮). ೭. ಅಲಂಕರಿಸುವಿಕೆ ; ಅಲಂಕರಣ. [ ಸಂ. ]

**ತಂಡಜ** (ನಾ). (?) : ಆದಿಯಲ್ಲಿ ಲಿಂಗಾರ್ಚನೆಯು ಮಾಡಿದ ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಖಂಡೇ. ೬೧–४೨). [ ? ]

**ತಂಡನಾಮೆ** (ನಾ). ವಿಚಾರಣೆ; ಪಂಚನಾಮೆ; ಮಹಜರು: ಪೋಲೀಸು ತಂಡನಾಮೆಯಾಗಿ ಶವಸಂಸ್ಕಾರವೂ ಮುಗಿಯಿತು (ತಳರು. ೫४). 'ಪಂಚನಾಮೆ' ಪರಾ. [ ತಂಡ+ನಾಮೆ$_2$ ]

**ತಂಡರಸಿ** 'ತಂದ್ರಾಸಿ' ನೋ.

**ತಂಡವಾಳ**, ತಾಂಡವಾಳ (ನಾ). ಎರಕ ಹೊಯ್ದ ಕಬ್ಬಿಣ ; ಬೀಡು ಕಬ್ಬಿಣ : ಅಗ್ನಿಸಂಯೋಗದಿಂದ ನೈಮಿತ್ತಿಕ ದ್ರವ್ಯತ್ವಮಂ ಪಡದು ನಾಶಮಾಗದೇ ಮರಳಿ ಕಠಿನವಾಗುವ ಚಿನ್ನ, ಬೆಳ್ಳಿ . . . ಕಂಚು ತಂ[ಪಾಠಾಂ. ತಾಂ]ಡವಾಳ ಮುಂತಾದಕ್ಕೆ ಲೋಹವೆಂದು ಹೆಸರು (ಸಿದ್ಧಾಂಶಿ. ೨೬೦). **ತಾಂಡವಾಳ**: "ಎರಕ ಹೊಯ್ದ ಕಬ್ಬಿಣ ; ತಾಂಡವಾಳ" (Cast-Iron. ಇಂಕನಿ.). [ ದೇ.೫ ತಮಿ. ತಣ್ಪವಾಳ ]

**ತಂಡಸ$_1$** 'ತಂಡಸು' ನೋ.

**ತಂಡಸ$_2$,** ತಾಂಡಸ (ನಾ). ಇಕ್ಕುಳ ; ಚಿಮಟ ; ಪಟಕಾರ : "ಇಕ್ಕುಟಂ ಲಾಳಿ ತಂಡಸಂ ಗಾರಿಕಾಖ್ಯಂ" (ಮಂಗರಾ. ೧೦೩-೮) : ತಂಡಸದಿನೊಯ್ಯನೆ ಕೀಳುವೆಂ ನೀ ನೆಮ್ಮಿಕೋ ಬಂದೀ ಮರನನೆನುತ (ಬಸಪು. ೪೪-೦೪) : ತಂಡಸದಿನಾ ದಸಿಯನಲುಗಿ ಕೀಳಲ್ಕೆ (ಆರಾಜ. ೮-೭೭): ಬಂಗರವು ತಂಡಸದಿ ಹುಡುಕಿಯೆ ಹಿಡಿದ ತೆರನಂತೆ (ಜ್ಞಾನಸಿಂ. ೧೮-೫೭): ಇಕ್ಕುರ್ಟಿಯ ತಂಡಸದ ಕರ್ತರಿಯು . . . ಬಡಿವ ಸೊನ್ನೆಗಾರರ ಸಾಲೆಯಿಂ (ರಾಮಾಶ್ವ. ೧೦೩-೦೯). **ತಾಂಡಸ :** "ಇಕ್ಕುಟ್-ವ್ಯಾಧಿವಿಕಾರಂ ; ಸಂದಂಶಂ : ತಾಂಡಸಂ" (ಶಮದ. ಪರಿ. ೫). [<ಪ್ರಾ. ಸಂಡಾಸ./ಸಂ. ಸಂದಂಶ ]

**ತಂಡಸಸರ** (ನಾ). ಒಂದು ಸರೋವರದ ಹೆಸರು : ತತೋ ನೈರುತ್ಯಾಂ ದಿಶಿ ತಂಡ [ಸಸರ]ಃ (ಶಾಶಾಸ. XX, ೬-೨೨ : 730). [ ತಂಡಸ? + ಸರ$_5$ ]

**ತಂಡಸಿ** 'ತಂಡಸು' ನೋ.

**ತಂಡಸು,** ತಂಡಸ$_1$, ತಂಡಸಿ, ತಂಡಸೆ, ತಂದಸಿ (ನಾ). ಒಂದು ಬಗೆಯ ಮುಳ್ಳುಮರ : "ಕಂಟಕಿಯೆನಲ್ ತಂಡಸು[ಪಾಠಾಂ. ಮುಂಡನೆಂಗು, ಕಂಡನೆಂಗು]" (ಮಂಗರಾ. ೩೭-೦೪) : ಕರಿಬೇವಿನಂಬಟೆಯು ತಾಱಿಯ ತಂಡಸಿನಾಸಿನಾನೆ ಬೊಬ್ಬುಲಿಯ (ಲೀಲಾವ. ೬-೨೬) : ತಂಡಸು ತವಸು . . . ಮಂದಾರಂಗಳಡಸಿ ತುಂಬಿದ ಚೆಲುವ ಭೂಜಂಗಳಿಂದ ಮಿಗೆ ಕಾನನಂ ಕಣ್ಗೆಸೆದುದು (ಹರಿಕ. ೩-೦೬) : ಕೊಡಸಿಗೆ ಬಾಗೆ ಬೇಲರಳಿ ತಂಡಸು ಕೊಂಡಸು ಜಾಲವಾಲದಿಂದಿಡಿಕಿಱಿದಿರ್ದ ಪೇರಡವಿಯೊಳ್ (ಧರ್ಮಪ. ೩-೪೭). **ತಂಡಸ$_1$ :** ತೇಗರುತಾಳ ತಂಡಸ ತಡಸ ತುಗ್ಗಿಲು . . . ಮೊದಲಾದ ವನಭೂಜಾಳಿಯಲಿ ಹೊಳೆದರಕಂಪನಸಮ ರಣರಥವ (ಕೃ ರ ರಾ. ೬-೦೫-೦೫) ; ತಂಡಸ ದಿಂಡ ಪೆರ್ಬೂರ . . . ತೇಗುಗಳ ವಿಸರ ನಾನಾವೃಕ್ಷ ಜಾತಿಯಿಂದೆಸೆವ ಘೋರಾರಣ್ಯ (ಸಿಂಗಿರಾ. ೩೦-೯) : ಆಲ ತಂಡಸ ತವಸಿ ಸಹಕಾರ ಕಿಂಶುಕ . . . ಸಿರಿಸಂಗಳಿಂದೆಸೆದುದಾ ಕಾಂತಾರವು (ಸಿದ್ಧೇಶ. ೮-೩). **ತಂಡಸಿ :** ಕಕ್ಕೆ ಬಿಕ್ಕೆ ತಂಡ[ಪಾಠಾಂ. ಡಿ]ಸಿ ತಾಱ . . . ಚಂಪಕಗಳಿಂದ ನಿಲ್ಲದೆ ಮೆಱೆವುದಾ ವಿಪಿನ (ಕುರಾಸಾಂ. ೪-೫) : ಹೇರಿಜೆಯಲಚಿ ತಂಡಸಿ ಮುಳ್ಳುಬೇಲಿಗಳ್ ಸೇರಿ ಮುಟ್ಟಿಹುವಾಗಸವನು (ಕಂಸವಿ. ೦೪-೩೩). **ತಂಡಸೆ :** ತಂಡಸೆ[ಪಾಠಾಂ. ಗೆಂಡಗೆ, ಗೆಂಡಸೆ]ಕಾಗೆದೊಂಡೆ ಪೆರ್ಗುರುಡಿಗೆ . . . ಕೊಂಡರೆದು ಲೇಪಿಸೆ (ಖಮದ. ೦೦-೫೦) : ಅಂಬಟೆಯು ಬಾರೆ ನೆಲ್ಲಿ ತಂಡಸೆ ಕರಗ ಸಂತಾಲ (ಮಹಾವಿ. ೭-೦೮). **ತಂದಸಿ :** ತಂದಸಿ, ಕಂಕಡ (ಪ್ರಾಕಿಗಿ. ೯೧-೫೦೫).

**ತಂಡಸೆ** 'ತಂಡಸು' ನೋ.

**ತಂಡಾಮುಂಡಾ** 'ತಂಡುಂಮುಂಡು' ನೋ.

**ತಂಡಾಯ** (ನಾ). ಪರಿಚಾರಕ ; ಸೇವಕ (?) : ಕಂದರ್ಪೇಸ್ವರದೇವರ ತ್ರಂಣ್ಣಾಯ ಕೊಳೆಯಂಗೆ ತಂಣ್ಣೇಸ್ವರ ಮತ್ತರು ಆಱು (ಕಇ. II, ೧೬-೫೭ : 1122). 'ತಂಡಾಲಯ' ಪರಾ. [ ?./ತಮಿ. ತ್ಣ್ಣ ]

**ತಂಡಾಲಯ** (ನಾ). = ತಂಡಾಯ : ಜ್ಞಾನಾರೂಢ ಪ್ರಾಣೇಶ್ವರ ನೆಂಬಾತನಲ್ಲಿಯ ದೇವರು ಒಂಬತ್ತು ಮಾನಿಸರು ತಂ[ಪಾಠಾಂ. ತಾಂ]ಡಾಲಯರು[ಪಾಠಾಂ. ತಂಡದಲ್ಲು] (ಜನ್ನವ. ಕ. ೪೪೮-೦೦೭೮); "ವ್ಯವಸ್ಥಾಪಕ" (ಜನ್ನವ. ಕ. ಕೋಶ). [ ? ]

**ತಂಡಿ,** ಚಂಡಿ$_1$, ತಂಡು$_6$, ಥಂಡಿ (ನಾ). ೧. ಚಳಿ ; ತಂಪು : ನೀರಿನ ಪಸೆಯಿಲ್ಲದಿದ್ದರೂ ವಾಯುವು ತೀರ ತಂಡಿಯಾಗುವುದು (ಬಾಲಶ್ರ. II, 667) ; ತಂಡಿಯಿಂದ ಹಿಮ್ಮಡಿ ಮುದುರಿ ಸೆಳೆಯುತ್ತದೆ (ಕುಡಿಕೊ. ೮೯). ೨. ತೇವ ; ಒದ್ದೆ : (ಕ). **ಚಂಡಿ$_1$ :** ೧. ವರರತ್ನಾಳಿರುಚಿಯಲಿ ಚಂಡಿಯಾಯಿತು ದಿವಸವಂದಿನಲಿ (ಕುವ್ಯಾಸ. ಒರಿಇ. ೫-೫೦) . ೨. ಒಣಗಿದಷ್ಟು ಒಣಗಲಿ. ತರಗೆಲೆಯು ಹಾಗೆ ಚಂಡಿಯಾಗಿ, ಬೆಂಕಿ ಊದಿದಷ್ಟು ನಂದುತ್ತದ (ಮರವ. ೨೨): ಮೈಯೆಲ್ಲ ಚಂಡಿ. ನನ್ನ ಬಟ್ಟೆಯಿಂದ್ಲೆ ವರ್ಸಿದೆ ದೇವರ (ಕರಂಬ. ೦೦೫). **ತಂಡು$_6$ :** ೨. ಹದಿನೈದು ದಿನದ ಮಳೆಯ ತಂಡಿನಿಂದ, ಹಪ್ಪಳಕ್ಕೆಲ್ಲಾ ಗಡ್ಡ ಮಿಸೆ ಬಂದಿತ್ತು (ಮರವ. ೨೩). **ಥಂಡಿ :** ೧. ಅಲ್ಲಿ ಬಂದು ಮುಟ್ಟಿದಾಗ ಥಂಡಿ ಸುರುವಾಗಿತ್ತು (ಸಮುಜೀ. ೬೦೮) ; ಛಾಳ ಥಂಡಿ ಹತ್ತಿದ್ದಿತಲಾ ಹಂಗಾರ (ಮುಗಿತು. ೨೬). ೨. ಮನೆ, ನೆಲ, ಗೋಡೆ ಎಲ್ಲಾ ಥಂಡಿ ಹತ್ತಿ ಜಿನುಗ್ತಿರೋವು (ಎಮುಕ. ೪೭).

**ಚಂಡಿಪುಂಡೆಯಾಗು** = ನೆನೆದು ಸೊಪ್ಪಾಗು : ನನ್ನ ತೊಡುಗೆಗಳೆಲ್ಲ ನೀರಲ್ಲಿ ನೆನೆದು ಚಂಡಿಪುಂಡೆಯಾಗಿ ಹೋದುವು (ನಡದಾ. II, ೦೦೪೩).
[ ← ಮರಾ. ಥಂಡೀ, ಥಂಡಾಈ ; ಹಿಂ. ಠಂಡೀ ]

**ತಂಡಿಲ** (ನಾ). ಹೋಮ ಹವನಗಳಿಗಾಗಿ ಶುಚಿಗೊಳಿಸಿ ಸಿದ್ಧಪಡಿಸಿದ ಚಚ್ಚೌಕವಾದ ಭೂಮಿ ; ಯಜ್ಞವೇದಿಕೆ : ಸ್ಥಂಡಿಲ; ತಂಡಿಲ (ಶಬ್ದಾನು. ೧೪೯ ಪ್ರಯೋ).
[<ಪ್ರಾ. ಥಂಡಿಲ. / ಸಂ. ಸ್ಥಂಡಿಲ ]

**ತಂಡಿಲು** (ನಾ). ಅಕ್ಕಿ ; ತಂಡುಲ : ಬೇಕಾದ ಬೇಳೆ ಬೆಲ್ಲವು ತುಪ್ಪ ತಂಡಿಲು ಜೋಕೆಯಾಗಿರ್ದ ಭಾಂಡವನು ನೀ ಕಟ್ಟಿ ಗೊಡೆಯೊಳಗೆ ತುಂಬು (ಅಮುಸಾಂ. ೩-೯): ಆ ಸತ್ತೆಂಬ ತಂಡಿಲು ಚಿದ್ರೂಪನಾದ ಶರಣನ ಮಹಾನುಭಾವಾಂತರಂಗ ಮೂರ್ತಿಗೊಂಡಿತ್ತೆಂಬುದೀಗ ಆ ಭತ್ತ ಸಿಕ್ಕಿತ್ತು. ಅರಮನೆಯಲ್ಲಿ ಎಂಬ ಶಬ್ದಕ್ಕರ್ಥ (ಪೋಲೀವಮಾ. ೨೪೧-೭೮೦ ಟೀಕೆ).
[ <ಸಂ. ತಂಡುಲ ]

**ತಂಡು$_1$** 'ತಂಡ' ನೋ.

**ತಂಡು$_2$** (ನಾ). ೧. ಕೋಲು ; ದೊಣ್ಣೆ ; ದಂಡ : (ಕ). ೨. ಭಾರವಾದ ಕಬ್ಬಿಣದ ಕೋಲು,-ಗದೆ : (ಕ). [ ←ತಮಿ. ತಣ್ಟು. / ಸಂ. ದಂಡ ]

**ತಂಡು$_3$** 'ತೊಂಡ$_1$' ನೋ.

**ತಂಡು$_4$** (ನಾ). ಮರದ ಸೌಟು : "ತಂಡೂಃ, ದಾರುಹಸ್ತಕಃ- ೨ ಕೈಬಟ್ಟು ಪೆಸರುಗಳು, ಮರದ ಸೊಟಕ, ಮರದ ಸೌಟು" (ಸಿದ್ಧಾಂತಿ. ೨೪೩).
[ ಸಂ. ತಂಡೂ ]

**ತಂಡು$_5$** (ನಾ). ಶಿವನ ದ್ವಾರಪಾಲಕರಲ್ಲಿ ಒಬ್ಬ ನಂದೀಶ್ವರ. ೩ ಅಣಕ ಮತ್ತು ನೃತ್ಯಕಲೆಗಳಿಗೆ ಈತನೇ ಆಚಾರ್ಯಪುರುಷ: ಶಿವನಾಪ್ರಯೋಗದೊದವಂ ತವಕಂ ಮಿಗೆ ನೆನೆದು ತಂಡುವಿಂಗುದ್ಧತ ನೃತ್ಯವ ನೊರೆಯಲಾತನೊಲವಿಂ ತವೆ ಭರತಂಗಿತ್ತೊಡಾಯ್ತು ತಾಂಡವದ ಪೆಸರ್ (ಲ್ಯಾಸರಂ.೬-೧೨); ತುಂಬುರು ತಂಡುವು ಡಿಂಡಿಮ ಬಾರಿಸೆ (ಗಣೇಶ. ೦೦-೨೬೯). 'ತಾಂಡವ' ಪರಾ. [ ಸಂ. ]

**ತಂಡು$_6$** 'ತಂಡಿ' ನೋ.

**ತಂಡುಂಮುಂಡು,** ತಂಡಾಮುಂಡಾ, ತಂಡಂಮುಂಡು, ತಂಡೋಮುಂಡೊ (ನಾ). ೧. ಚೆಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ಖಂಡದ ದೊಂಟಿಯು ಪುತ್ತುಂ ತಂಡುಂಮುಂಡಾಗಿ ಬಿರ್ದ ಪೆಣಗಳ ಪುಂಜಂ ಬೆಂಡೆರ್ದವು ಧುರದೊಳ್ ನೊರೆವಿಂಡೆದ್ದರ್ವಿಸುವ ಬಿಸಿಯ ನೆತ್ತರ ಕಡಲೊಳ್ (ಮಹಾಸೀ. ೧೨-೨೬). **ತಂಡಾಮುಂಡಾ :** ೨. ಗೃಹಕೃತ್ಯದ ಹೊಣೆಗಾರಿಕೆಗಳಿಲ್ಲದವನು; ಆಶ್ರಯರಹಿತನಾದ ವ್ಯಕ್ತಿ : ತಂಡಾಮುಂಡಾ ವಾಸುದೇವ (ದೂಧಿ). **ತಂಡುಮುಂಡು :** ೧. ಖಳ ಶಿರೋಮಣಿ ರಕ್ತಬೀಜಾಸುರನ ಸಂತತಿಯು ಗಲಭೆ ಕೈವ್ಯಸೋಂಕಿಗ ನಿವಿಷಲಲನೆಯರು ಮೋಣ್ಯೇರಿ ಬಾಳ್ವರೆ ಸಿಲುಕಿ ಕೆಡೆವರು ತಂಡುಮುಂಡಿಗೆ ಬೀದಿ ಬೀದಿಯಲಿ (ಅಂಬಿಕಾ. ೪೨-೪೮): "ಧಾಂಧಳೆ, ಕೋಟಲೆ" (ಪ್ರಭಾ). **ತಂಡೋಮುಂಡೊ :** (ಕ).
[ ?. / ತಮಿ. ತಣ್ಟಾಮುಣ್ಟಾ, ತಣ್ಟುಮಿಣ್ಟು = ಮೊಂಡುತನ ]

**ತಂಡುಮುಂಡು** 'ತಂಡುಂಮುಂಡು' ನೋ.

**ತಂಡುಲ,** ತಂಡುಳ (ನಾ). ೧. ಅಕ್ಕಿ: ನೆಟ್ಟನೆ ಪುಷ್ಪವಾಸನೆಯ ಕಪ್ಪುರ ಶಾಲಿಯ ತಂಡುಲಂಗಳಂ ನಿಟ್ಟೆಸರಿಟ್ಟು ಬಾಗಿ (ಸುಕುಮಾ. ೧೦-೧೦೮); ಪೃಜೆಯೆಲ್ಲಂ ಜಲಗಂಧಸ್ರುಜ ತಂಡುಲ ಧೂಪದೀಪ ಚರು ತಾಂಬೂಲ ವ್ರಜದಿಂ ಪೂಜಿಸುವುದು (ಯಶೋಚ. ೪-೭೩); ಮೋಡಗಳ ಮೊರದಲ್ಲಿ ತಾರೆಗಳ ತಂಡುಲವ ಒನೆವ ವನಿತೆಯ ಹಾಗೆ ತೊನೆಯೆ ಗಾಳಿ (ಕರುಣಾ, ೧೬-೭). ೨. (ಕಮಲದ) ಬೀಜ: ತಿಳಿದ ತಿಳಿಗೊಳದ ತಳತ ತಾವರೆಯರಳ ತಂಡುಲದ ರುಚಿಯ ಕಳಹಂಸೆ ಬಯಸುವಂತೆ (ಆದಪ. ೧೬-೩೩); ತಾಮರಸತಂಡುಲಂಗಳ ಜಕ್ಕುಲಿಸಿ ಕೊಕ್ಕಿನಿಂ ನಲಿದು ವಧುಗೂಡಿ ಸೇವಿಪ ಬಿಸಿಲ್ವಕ್ಕಿಗಳಿಂ (ಪರ್ವಾ. ೮-೩೯). ೩. ಒಂದು ಅಕ್ಕಿಯ ಕಾಳಿನಷ್ಟು ತೂಕ; ಮುತ್ತು, ರತ್ನ ಮೊದಲಾದುವುಗಳನ್ನು ತೂಕಮಾಡುವ ಒಂದು ಪ್ರಮಾಣ: ೧೬ ತಂಡುಳ ಅಂದರೆ ೧ ರತಿ (ಮುಂಬಯಿ. ೦೩೭). ೪. ಕೋಶ, ರವಿ, ತಂಡುಲ, ಅಗ್ನಿ, ತಪ್ತಮಾಷ, ಜಲ, ವಿಷ ಎಂಬ ಏಳು ಬಗೆಯ ದಿವ್ಯಗಳಲ್ಲಿ ಒಂದು. 'ದಿವ್ಯ' ನೋ. ೫. ಒಂದು ಬಗೆಯ ಔಷಧಿ ಸಸ್ಯ; ವಾಯುವಿಳಂಗ. **ತಂಡುಳ:** ೧. ಮಧುರಮೆಂಬ ಕಳಮತಂಡುಳಮಂ ಕಯ್ಯೆಯೆಂಬುದು ದುಷ್ಕ್ರೀತಿ (ಶಬ್ದಾರ. ೯೦೪-೧೦). [ಸಂ.]

**ತಂಡುಲೀಯ** (ನಾ). ಒಂದು ಬಗೆಯ ಸೊಪ್ಪು; ಕಿರುಕುಸಾಲೆ; ಕೀರೆ ಸೊಪ್ಪು; ಚಿಲುಕೀರೆ: "ತಂಡುಲೀಯಃ, ಅಲ್ಪಮಾರಿಷಃ – ೨ ಕೀರೇ ಸೊಪ್ಪು" (ಸಿದ್ಧಾಂತಿ. ೦೨೭). [ಸಂ.]

**ತಂಡುಲೀಯಕ,** ತಂಡುಳೀಯಕ (ನಾ). = ತಂಡುಲೀಯ: "ನೀರದದರವಂ ತಂಡುಲೀಯಕಂ ಮುದಿಷ್ಪಮೆನೆ ಕಿಱುಕುಸಾಲೆಯಕ್ಕುಂ" (ಮಂಗರಾ. ೯೨-೪೦). **ತಂಡುಳೀಯಕ:** "ತಂಡುಳೀಯಕಂ ಜಳಧರನಾಮಂ" (ವಸ್ತು.ಕೋ. ೩೭-೨೮). [ಸಂ.]

**ತಂಡುವಾದಿಸು** (ಕ್ರಿ). ಮೊಂಡುತನದಿಂದ ವಾದಿಸು; ವಿತಂಡವಾದ ಮಾಡು: ಇದು ರಾಗ ತೋರೆಯದವಗೆ ಮನಸಿಗೆ ಹತ್ತದು ಹೀಗೆ ಹಾಗ್ಯಾಕೆಂದು ತಂಡುವಾದಿಸಿದರೆ ಆಗುವುದೇನಯ್ಯಾ ಆದರಿಂದ ಫಲಿತಾರ್ಥ (ವಿಶ್ವಸು. ೨೨.೫).

[ತೊಂಡು₁? + ವಾದಿಸು]

**ತಂಡುಳ** 'ತಂಡುಲ' ನೋ.

**ತಂಡುಳಜಳ** (ನಾ). ಅಕ್ಕಿಯನ್ನು ತೊಳೆದ ನೀರು; ಅಕ್ಕಿಯ ಕಚ್ಚು; ಅಕ್ಕಚ್ಚು: ಸಿರಿಕಂಡಂ ಬ್ರಾಹ್ಮಿಯೆನಿಪ್ಪೆರಡಂ ಮೇಣಲ್ಲದಂದು ತಂಡುಳ ಜಳದಿಂದರಸಿನಮಂ ಪುಣಸೆಯ ಬೇರ ರಸಮುಮಂ ಕುಡಿಯೆ ಕಿಡಿಸುಗುಂ ಸ್ಫೋಟಕಮಂ (ಲೋಕೋಪ. ೯-೨೫).

[ತಂಡುಳ (= ತಂಡುಲ) + ಜಳ₂ (= ಜಲ₂)]

**ತಂಡುಳೀಯಕ** 'ತಂಡುಲೀಯಕ' ನೋ.

**ತಂಡೆ** (ನಾ). ೧. ಒಂದು ಬಗೆಯ ಕಾಲಿನ ಆಭರಣ; ರುಳಿ: ಅಡಿಯು ತಾವರೆ ತಂಡೆಯಂಬೆಯು ತೊಡೆಯು ಬಾಳೆಯು ಬಳುಕುತಿಹ ಬಡನಡುವು ಬಳ್ಳಿಯು (ಅರ್ಜುನವಿ. ೨೦-೩೪). ೨. ಎತ್ತಿನ ಕೊರಳಲ್ಲಿ ಕಟ್ಟುವ ಬಣ್ಣ ಬಣ್ಣದ ದಾರಗಳನ್ನು ಹೆಣೆದು ಮಾಡಿದ ಪಟ್ಟಿ; ಕೊರಳಪಟ್ಟಿ: ಎತ್ತಿನ ಕೊರಳಲ್ಲಿ ತಂಡೆ ಹಾಕಿದ್ದೇನೆ (ರೂಢಿ).

[ದೇ.ಶ ತಮಿ. ತಣ್ಟೈ; ಮಲ. ತಣ್ಡ; ತುಳು. ತಂಡೆ]

**ತಂಡೆಯ** (ನಾ). ಒಂದು ಊರಿನ ಹೆಸರು. ಈಗಿನ ನಂಜನಗೂಡು ತಾಲ್ಲೂಕಿನ ತಾಂಡ್ಯ: ಮಯ್ಸೂರ್ ನಾಡ ತಣ್ಡೆಯದ ಎಳ್ಳಿಯಮ್ಮನ ಮಗಂ ಮಾದಯ್ಯ (ಮೈಎಪಿ. ೦೯೩೭, ೫೫-೩: 1054); ಕಡೆಕೊಳಂ ಖಾರಪುರಂ ತಣ್ಡೆಯದ ಮುಕ್ಕೂಡು ಮೂಡಮೊಗದೆ ಪೋಗಿ (ಮೈಎಪಿ. ೦೯೩೪, ೩೮-೭: 11ನೆಯ ಶತ). [?]

**ತಂಡೇಲ** (ನಾ). ದೋಣಿಯ ಅಥವಾ ಹಡಗಿನ ಯಜಮಾನ,- ಮುಖ್ಯಸ್ಥ: ಅಲ್ಲಿಲ್ಲದ ದೋಣಿಯ ತಂಡೇಲನನ್ನು ಕುರಿತು ಆರ್ಭಟಿಸಿದೆ (ಮ್ಯಾಂಮಾ. ೫೦); ಬಂದರಿಗೆ ಹೋಗಿ ಅಲ್ಲಿನ ತಂಡೇಲರನ್ನು ಕರೆದು . . . ತನಿಖೆಮಾಡುತ್ತಾರೆ (ಚಾರುದಾ. ೬೩).

[ದೇ.ಶ ತಮಿ. ತಣ್ಬರ್, ತಣ್ಡೇಲ್; ಮಲ. ತಣ್ಡಾರ್; ತುಳು. ತಂಡೆಲ್, ತಂಡೆರೆ; ತೆಲು. ತಂಡೇಲು, ತಂಡೆಲು. / ಹಿಂ. ಮರಾ. ತಾಂಡೇಲ್]

**ತಂಡೋಮುಂಡೊ** 'ತಂಡುಂಮುಂಡು' ನೋ.

**ತಂತಿ** (ನಾ). ೧. ತಾಮ್ರ ಮುಂತಾದ ಲೋಹಗಳ ತೆಳುವಾದ ಎಳೆ; ತೆಳಂಕಂಬಿ; ಸರಿಗೆ: ಬೆರಲೊಳ್ ಬೀಣೆಯ ತಂತಿಗಳೊರಸಿದ ಕೆಂಗಲೆಗಳ್ (ಪಂಪಭಾ. ೬-೦೦); ಅರಿಭೂಪಾಳ ಸಿರಂಗಳಿಂದೆ ಸೊರೆಯಂ ತದ್ವಾಹು ಸಂದೋಹದಿಂ ಕರೆಯಂ ದಂಡಿಗೆ ಮಾಡಿ ಬೆಂನೆಸೆವ ಬೀಎಂ ತಂತಿಯಂ ಕಟ್ಟಿ (ಎಕ. VI, ಕಡೂರು. ೦೫೬-೩೬; ಸು. 1190); ಪದಿನಾಲ್ಕು ತಂತಿಯಿಂ ಮೆಱೆವ ವೀಣೆಯನಲ್ಲಿ ಪದಪಿನಿಂ ಮ್ರೇಳಯ್ಸಿ (ತಿರುನೀ. ೮೫-೨೩); ನೋಟರಾಯನ ಮೇಲೆ ನೆನಹು ರಾಗದ ಮೇಲೆ ನೀಟ ತಂತಿಯ ಮೇಲೆ ಬೆರಳು (ಭರತ. ೫-೫೮); ಧಾತುಗಳಿಂದ ಬೇಕಾದಷ್ಟು ಉದ್ದ ತಂತಿಯನ್ನು ಎಳೆಯಬಹುದು (ಮುಂಬಯಿ. ೪-೯೩). ೨. ವೀಣೆ ಮೊದಲಾದ ತಂತಿವಾದ್ಯ: ತಾಳ್ಯಾಕ ತಂತ್ಯಾಕ ರಾಗದ ಚಿಂತ್ಯಾಕ (ಗರ. ೦೨೨-೭); ಜೀವದ ರಸ ಹಿಂಡಿ ತುಂತುರು ಮಳೆಯಾಗಿ ತಂತಿಯ ತುಂಬೆಲ್ಲ ಸಿಡಿದಾಂಗ (ಸಖೀಗೀ. ೫೨-೦೪). ೩. ತಂತಿಯ ಮೂಲಕ ಕಳಿಸುವ ಸುದ್ದಿ; ತಾರು; ಟೆಲಿಗ್ರಾಂ: 'ಜಾಗ್ರತೆಯಾಗಿ ಹೊರಟು ಬಾ' ಎಂದು ತಂತಿ ಕೊಟ್ಟಿದ್ದನು (ಹಂದುಟಿ. ೭೩). **ತಂತಿಯ ದೀಪ** = ವಿದ್ಯುದ್ದೀಪ: ವಿದ್ಯುಚ್ಛಕ್ತಿ ಎಂದು ಹೇಳುವ ಬೆಳಕಿಗೆ ತಂತಿಯ ದೀಪ ಎಂತಲೂ ಹೇಳುವುದನ್ನು ಕೇಳಿದ್ದೇನೆ (ಕಟಸಾ. ೬೩).

[<ಪ್ರಾ. ತಂತೀ./ಸಂ. ತಂತ್ರಿ, ತಂತ್ರೀ]

**ತಂತಿಕಂಬ** (ನಾ). ವರ್ತಮಾನವನ್ನು ದೂರಕ್ಕೆ ಸಾಗಿಸುವ ತಂತಿಗಳನ್ನು ಬಿಗಿದ ಕಂಬ; ತಂತಿ ವರ್ತಮಾನದ ಕಂಬ: "ತಂತಿಕಂಬ; ತಾರುಕಂಬ" (Telegraph-post. ಪತ್ರಿನಿ. ೮೨). [ತಂತಿ + ಕಂಬ₁ (<ಕಂಭ)]

**ತಂತಿಕಚೇರಿ** (ನಾ). ತಂತಿ ವರ್ತಮಾನವನ್ನು ಕಳಿಸುವ ಕಚೇರಿ: (Telegraph-office. ಪತ್ರಿನಿ. ೮೨). [ತಂತಿ + ಕಚೇರಿ]

**ತಂತಿಕಟ್ಟು** (ಕ್ರಿ). ೧. ತಂತಿಯನ್ನು ಅಳವಡಿಸು: ವೀಣೆ . . . ಮೊದಲಾದ ತಂತಿಕಟ್ಟಿ ನುಡಿವ ವಾದ್ಯವನಱಿವುದು (ಆದಪ. ೬-೦೨). ೨. (ಅಲಂ) ನಿರ್ದಿಷ್ಟಪಡಿಸು; ಗೆರೆ ಎಳೆ: ಊರಗಾರಕಿ ವ್ಯವಹಾರದೊಳಗ ಹಾಂಗೆಲ್ಲಾ ತಂತೀಕಟ್ಟಿ ಕೆಲಸ ಸಾಗೂದುಲ್ಲ (ಗ್ರಾಮಾಯ. ೪೦).

[ತಂತಿ + ಕಟ್ಟು₁]

**ತಂತಿಕೊಡು** (ಕ್ರಿ). ತಂತಿಯ ಮೂಲಕ ಸಮಾಚಾರವನ್ನು ಕಳಿಸು: ಕಲಕತ್ತೆಗೆ ಹೊರಟ ಬಗ್ಗೆ ಬಾಬುಗಳಿಗೆ ತಂತಿಕೊಟ್ಟು ಹೊರಟುಬಿಟ್ಟೆನು (ಕೇಮುಂಕ. ೩೦೯). [ತಂತಿ + ಕೊಡು₁]

**ತಂತಿಜಾಲರಿ** (ನಾ). ತಂತಿಯಿಂದ ಮಾಡಿದ ಜಾಲರಿ: ಕಿಟಕಿ ಬಾಗಿಲುಗಳಿಗೆ ತಂತಿಜಾಲರಿ (wire-mesh) ಹಾಕಿಸುವುದರಿಂದ ಇವುಗಳ ಕಾಟ ಕಡಿಮೆಯಾಗುವುದು (ಗೃಹವಿ. ೧೮೭). [ತಂತಿ + ಜಾಲರಿ]

**ತಂತಿಟಪ್ಪಾಲು** (ನಾ). ತಂತಿಯ ಮೂಲಕ ಕಳಿಸುವ ವರ್ತಮಾನ,- ಸುದ್ದಿ; ಟೆಲಿಗ್ರಾಂ: (ಕ). [ತಂತಿ + ಟಪ್ಪಾಲು (<ಟಪಾಲು)]

**ತಂತಿಬಲೆ** (ನಾ). = ತಂತಿಜಾಲರಿ: ಈ ಕೋಣೆಯೂ ಎರಡು ತಂತಿಬಲೆಗಳಿಂದ ಇಬ್ಭಾಗವಾಗಿತ್ತು (ಪುನರು. ೧೮೮). [ತಂತಿ + ಬಲೆ₁]

**ತಂತಿಬಿಡು** (ಕ್ರಿ). ತಂತಿ ಸಮಾಚಾರವನ್ನು ಕಳಿಸು; ತಾರು ಕೊಡು: ಅದನ್ನು ಕೇಳಿ ಅವರು ನನಗೆ ತಂತೀ ಬಿಟ್ಟಿದ್ದರು (ಸ್ವ.ಚಿತಿ. ೫೦೩)

[ತಂತಿ + ಬಿಡು₁]

**ತಂತಿಮೆತ್ತೆ** (ನಾ). ಒಳಗೆ ಸ್ಥಿತಿಸ್ಥಾಪಕತ್ವವುಳ್ಳ ತಂತಿಯನ್ನು ಅಳವಡಿಸಿ ಮಾಡಿದ ಮೆತ್ತೆ,– ಆಸನ : ತಂತಿಮೆತ್ತೆಯ ಮೇಲೊಂದು ಶುಭ್ರವಾದ ಹಾಸುಗೆಯಿತ್ತು (ಪುನರು. ೨೩೫). [ ತಂತಿ + ಮೆತ್ತೆ ]

**ತಂತಿಮೇಹ** (ನಾ). = ತಂತುಮೇಹ : (ಪ). [ < ಸಂ. ತಂತುಮೇಹ ]

**ತಂತಿವರ್ತಮಾನ** (ನಾ). ದೂರಲೇಖಕದ ಮೂಲಕ ಕಳಿಸಿದ ಸುದ್ದಿ,– ಸಮಾಚಾರ: ೨೨೦೦೦ ಮೈಲು ದೂರ ತಂತಿವರ್ತಮಾನವು ನಡೆಯುತ್ತದೆ (ಭೂಗೋಳ. ೪೭). [ ತಂತಿ + ವರ್ತಮಾನ ]

**ತಂತಿವಾದ್ಯ** (ನಾ). ತಂತಿಗಳಿಂದ ಕೂಡಿರುವ ವೀಣೆ, ತಂಬೂರಿ ಮೊದಲಾದ ವಾದ್ಯ : "ತತಂ–ತಂತಿವಾದ್ಯಂ" (ಕಾಶಕ್ಕ. ೨೩೮); ತಂತೀವಾದ್ಯ ಯಾವುದೇ ಆದರೂ ಕಾಲಕ್ರಮೇಣ ವೀಣಾ ಎಂಬ ರೂಢನಾಮದಿಂದ . . . ಕಂಡುಬರುತ್ತದೆ (ಸಂಗೀತಂ. ೧೦೮). [ ತಂತಿ + ವಾದ್ಯ ]

**ತಂತಿವಾರ್ತೆ** (ನಾ). = ತಂತಿವರ್ತಮಾನ: ತಂತಿವಾರ್ತೆ ಕೇಳಿ ತಕ್ಷಣ ಹೊರಟರು (ಪ್ರಚ). [ ತಂತಿ + ವಾರ್ತೆ ]

**ತಂತಿಸಮಾಚಾರ** (ನಾ). = ತಂತಿವರ್ತಮಾನ : ತಂತೀಸಮಾಚಾರ, ವಾಯುಸಮಾಚಾರ, ವೀಣಾವಾದನ ಇತ್ಯಾದಿ ಸೂಕ್ಷ್ಮಸ್ವರೂಪವನ್ನು ಪಡೆಯುತ್ತದೆ (ಜೀವಾತ್ಮ. ೦೭೪). [ ತಂತಿ + ಸಮಾಚಾರ ]

**ತಂತಿಹಡುಕ** (ನಾ). ಸಂಬಂಧವನ್ನು ಕಡಿಯುವವನು : ಸಂತ್ಯಸಿಕೊಂಡು ಹೋದನೊ ದಾರಿಯಲಿ ಸಿಕ್ಕಿ ಭ್ರಾಂತುಗೊಂಡನೊ ಬೇಡ ಹೇಳವ್ವ ಶಾಯಿಯನೆ ತಂತಿಹಡುಕನನಾರು ಸೀಯದಿರ್ದರೆ ಹೋದನೆಂದಳಾ ಪದ್ಮಾವತಿ (ಗುಭಕ. ೨–೭೯): "ಅಂಕೆಯಿಲ್ಲದವನು, ಲಂಗು ಲಗಾಮಿಲ್ಲದವನು" (ಗುಭಕ. ಕೋಶ). [ < ತಂತು$_2$ + ಹಡುಕ ( < ಪಡುಕ) ]

**ತಂತು$_1$** (ನಾ). ೧. ಎಳೆ ; ದಾರ ; ನೂಲು ; ಸೂತ್ರ : "ತಂತು ಗುಣಂ ಸೂತ್ರಂ" (ವಸ್ತುಕೋ. ೬೬–೫೭); "ನೂತ ನೂಲೆಟಿಯಲ್ಲಿ . . . ತಂತುವದು" (ಮಂಗರಾ. ೦೫೪–೬೬); ಪಟವ ಹಡಿದು ತಂತುವ ನೋಡಲದೇಕೆ ಆ ಪಟವೇ ತಂತುವೆಂದಱಿದೊಡೆ ಸಾಲದೇ (ದೇವಾಪ. ೬೦–೧೨೫); ಸ್ನಾಯುಗಳ ಬಣ್ಣ ನಸುಗೆಂಪು; ಅವು ಹಲವು ತಂತುಗಳಿಂದುಂಟಾಗಿರುತ್ತವೆ (ಮುಂಬಯಿ. ೬–೩೦೪); ನಿರಾಕಾರ ಏಕಾಂತ ತಂತು ಸುತ್ತುತ್ತಲಿತ್ತು ನನ್ನ (ಅರಳು. ೦೯೭–೫). ೨. ಸಂಬಂಧ. 'ತಂತಿಹಡುಕ' ಪರಾ.

**ತಂತುಮಾತ್ರಬ್ರಾಹ್ಮಣ**=ತಂತಂಹಾರುವ: ಇವುಗಳಲ್ಲಿ ೧೦೫ ಕುಲಗಳು ತ್ರಿಕರ್ಮಿಗಳು ; ತಂತುಮಾತ್ರ ಬ್ರಾಹ್ಮಣರು (ಕುಲನಾ. ೦೫೦). **ತಂತುಮಾತ್ರಬ್ರಾಹ್ಮಣ** = ಜನಿವಾರದಿಂದ ಮಾತ್ರ ಬ್ರಾಹ್ಮಣನಾಗಿರುವಿಕೆ ; ಆಚಾರವಿಲ್ಲದೆ ಜಾತಿಯಿಂದ ಬ್ರಾಹ್ಮಣನಾಗಿರುವುದು : (ಪ). [ಸಂ.]

**ತಂತು$_2$** (ನಾ). ೧. ಉಪಾಯ ; ತಂತ್ರ : ಆಚಾರಮಾರ್ಗ ತಂತುವನಱಿವನಾವನೊರ್ವಂ ಬ್ರಹ್ಮವರ್ಚಸನಕ್ಕುಂ (ಮಂಗರಾ. ೬೪–೧); ಪಥದಲ್ಲಿ ಏಕಾಂತದಲ್ಲಿ ಕಾಂತೆಯ ಸಂಗಡದಲ್ಲಿ ಸಂತರ ಬಳಿಯಲ್ಲಿ ತಂತಿನಲ್ಲಿ ವನಾಂತರದಲ್ಲಿ . . . ಎಂತಾದರೂ ಮನದುಂತಿರಲಿ ಸಂತತ ಹರಿಪಾದ ಕ್ರಾಂತನಾಗಿ (ವಿಜಾಸು. ೬೯–೫); ಎಲ್ಲಾ ಕೊಡಗ ಮಾಡಿದ ತೂತು (ಕಂಗಾಳ್ಕ. ೪೦೪). 'ತಂತುಗಾರ' ಪರಾ. ೨. ಮುಖ್ಯವಾದುದು ; ಪ್ರಧಾನವಾದ ವಿಷಯ: "ಮುಖ್ಯದಲ್ಲಿ . . . ತಂತುವದು" (ಮಂಗರಾ. ೦೫೪–೬೬). 'ತಂತ್ರ' ಪರಾ. [ ? ]

**ತಂತುಕ** (ನಾ). ೧. (ರೇಷ್ಮೆಹುಳು, ಜೇಡರ ಹುಳು ಮೊದಲಾದುವುಗಳಲ್ಲಿ) ನೂಲನ್ನು ಹೊರಡಿಸುವ ಅಂಗ: ರೇಷ್ಮೆಕೋಶಗಳನ್ನು (Cocoons) ಮಾಡಲು ತಂತುಕ (Spinneret)ದ ಮೂಲಕ ಹೊರಬರುತ್ತದೆ (ಕೀಟವಿ. ೯೨). ೨. ದಾರವನ್ನು ತೆಗೆಯುವ ಸಾಧನ : ಸಂಶ್ಲೇಷಿತ ದಾರಗಳನ್ನು (Synthetic fibre) ತೆಗೆಯುವ ತಂತುಕಗಳನ್ನು (Spinneret) . . . ಬಳಸುತ್ತಾರೆ (ಶಿಲ್ಪನಾ. ೩೦೯). [ ಸಂ. ]

**ತಂತುಕಾರ** (ನಾ). ಜೇಡರ ಹುಳು: ನಿಚ್ಚಂ ತೊಯ್ದು ಮೃತಶಿಲೆಯ ಗೋಶಾಲೆ, ತಂತುಕಾರ ಸಹಸ್ರ ಜಾಲ ವೈರೂಪ್ಯದಿಂ, ಖಿನ್ನಮಿದೆ ಪಾಳೂರ ತುರುಪಟ್ಟಿಯೋಲ್ (ಶ್ರೀರಾಮಾ. ೮೫೦–೦೦). [ ಸಂ. ]

**ತಂತುಕುಳ** (ನಾ). "ಬ್ರಹ್ಮವರ್ಚಸ್ಸುಳ್ಳವರ ಸಮೂಹ (ಯಜ್ಞವನ್ನು ಮಾಡುವವರ ಗುಂಪು)" (ಲಕಿಕಂ. ಕೋಶ) : ದಧೀಚಿಮುನಿ ಯಜ್ಞಮಂಟಪಕೆ ಬಂದು ತಂತುಕುಳ ನೆರೆದುದಿನ್ನೆಲ್ಲರಳಿವುದು ದಿಟಂ . . . ಎಂದು ಮುಂತಿರ್ದು ನುಡಿದಂ (ಲಕಿಕಂ. ೧೮–೬). [ ತಂತು$_2$ + ಕುಳ$_5$ (= ಕುಲ) ]

**ತಂತುಕ್ರಿಯೆ** (ನಾ). ನೂಲಿನಲ್ಲಿ ಕೆಲಸ ಮಾಡುವುದು ; ಬಟ್ಟೆಯನ್ನು ನೇಯುವುದು: "ಕಿಸುವಣ್ಣ ಕೊರ್ಬುಗಳೊಳಂ . . . ತಂತುಕ್ರಿಯೆಯೊಳು ಕೆಚ್ಚೆಂದಕ್ಕು" (ಕಬ್ಬಮಂ. ೮೮); "ಘೃತದೊಳು ಪೇಟಲೇಂ ತಂತುಕ್ರಿಯೆಯೊಳು ನೆಯ್" (ಕಬ್ಬಮಂ. ೦೦೩). [ ತಂತು$_1$ + ಕ್ರಿಯೆ ]

**ತಂತುಗಟ್ಟು$_1$** (ಕ್ರಿ). (ಪಾಕ ಮೊದಲಾದುವು) ದಾರದಂತೆ ಎಳೆ ಬರುವ ಹಾಗೆ ಜಿಗುಟಾಗು ; ಎಳೆಪಾಕವಾಗು : ಅದು ಸುಮಾರು ಮೂರು ತಾಸು ಕುದಿದು ಕಷಾಯವು ತಂತುಗಟ್ಟುವ ಹಾಗೆ ಜಿಗುಟಾದ ಮೇಲೆ . . . ಕುದಿಸುವರು (ಮುಂಬಯಿ. ೫–೨೦೦). [ ತಂತು$_1$ + ಕಟ್ಟು$_1$ ]

**ತಂತುಗಟ್ಟು$_2$** (ನಾ). ದೇಹದಲ್ಲಿಯ ಮೂಳೆಗಳನ್ನು ಒಂದಕ್ಕೊಂದು ಸೇರಿಸಿ ಬಿಗಿಯುವ ಮೆತುವಾದ ಎಳೆಗಳಂತಹ ರಚನೆ; ಅಸ್ಥಿರಜ್ಜು : ಮೆಲ್ಲೆಲುಬುಗಳು (ಕಾರ್ಟಿಲೇಜಸ್), ತಂತುಗಟ್ಟುಗಳು (ಲಿಗಮೆಂಟ್ಸ್), ಸ್ನಾಯುಗಳು ತಗುಲಿಕೊಳ್ಳುವ ಕಂಡರಗಳಲ್ಲೂ (ಟೆಂಡನ್ಸ್) ಸೇರಿಕೊಳ್ಳುತ್ತದೆ (ಕವಿಕೋ. I, ೧೫). [ ತಂತು$_1$ + ಕಟ್ಟು$_2$ ]

**ತಂತುಗಾರ** (ನಾ). ಉಪಾಯಗಾರ ; ತಂತ್ರಗಾರ ; ಮೋಸಗಾರ : ತಂತುಗಾರನೊ ಶೃಂಗಾರವರನೊ ಪಂಥದ ದೈವವೆ ವಿಜಯವಿಠ್ಠಲರೇಯಾ (ಕೀರ್ತನ. ೦೩೩); ತಂತುಗಾರನೆ ನಮ್ಮ ವಿಜಯ ವಿಠ್ಠಲ ಸ್ವಾತಂತ್ರ ಸರ್ವೋತ್ತಮ (ವಿಜಾಸು. ೩–೪). [ತಂತು$_1$ + –ಕಾರ$_1$ ( < –ಕಾರ)]

**ತಂತುಚಿತ** (ನಾ). ನೂಲಿನಿಂದ ಕೂಡಿದುದು; ನೂಲಿನಿಂದ ನೆಯ್ದುದು; ಬಟ್ಟೆ : "ತಂತುಚಿತಂ ಕಾರ್ಪಾಸಕಂ" (ವಸ್ತುಕೋ. ೭೪–೦೯). [ ಸಂ. ]

**ತಂತುನಾಗ** (ನಾ). ಒಂದು ಬಗೆಯ ಮೀನು; ಶಾರ್ಕ್‌ಮೀನು. [ ಸಂ. ]

**ತಂತುನಾಭ** (ನಾ). ಜೇಡರ ಹುಳು. [ ಸಂ. (ತಂತು + ನಾಭಿ + –) ]

**ತಂತುಪಟ** (ನಾ). ನೂಲಿನ ಬಟ್ಟೆ : ತಂತುಪಟ ಸಾಕಿನ್ನು ಬೆಳವಿಗೆಗಂತ ವಾದುದು ಸುಲಿಯದಿರಿ ಹೋ (ತೊರರಾ. ೫–೮–೨೬). [ ತಂತು$_1$ + ಪಟ$_2$ ]

**ತಂತುಪಾಕ** (ನಾ). ಎಳೆ ಬರುವಂತೆ ಜಿಗುಟಾದ ಪಾಕ ; ಎಳೆಪಾಕ ; ಹದವಾದ ಪಾಕ : ನಾಲ್ಕುವರಹ ತೂಕ ಪಚ್ಚಗರ್ಪೂರವಂ ಪುಡಿ ಮಾಡಿ ಪಾಕದಲ್ಲಿ ಹಾಕಿ ತಂತುಪಾಕದಲ್ಲಿಳುಹಿ (ಸಕಪ್ಪ. ೦೩೬). [ತಂತು$_1$+ಪಾಕ$_2$]

**ತಂತುಮೇಹ** (ನಾ). ಮೇಹರೋಗದ ಒಂದು ಅವಸ್ಥೆ : (ಪ). [ತಂತು$_1$ + ಮೇಹ ]

**ತಂತುಯಂತ್ರ** (ನಾ). ನೂಲುವ ಯಂತ್ರ ; ರಾಟೆ : "ರಾಟಾ — ತಂತುಯಂತ್ರಂ" (ಕಾಶಕ್ಕ. ೧೬). [ ತಂತು$_1$ + ಯಂತ್ರ ]

**ತಂತುರ** (ನಾ). ಉಪಾಯ ; ತಂತ್ರ : ಉಕಾರಕ್ಕೆ–ಅಲ್ಪ–ಅಲುವ . . . ತಂತ್ರ–ತಂತುರ (ಶಮದ. ೨೫೪ ಪ್ರಯೋ). [ < ಸಂ. ತಂತ್ರ ]

**ತಂತುವಾಯ** (ನಾ). ೧. ಬಟ್ಟೆ ನೇಯುವವನು; ನೇಕಾರ: "ಕುವಿಂದಾಖ್ಯ ತಂತುವಾಯಂಗೆ" (ವಸ್ತುಕೋ. ೬೬–೫೭). ೨. ಜೇಡರಹುಳು : "ತಂತುವಾಯಃ–ಜೇಡನ ಪುಳುವುಂ, ಜೇಡನುಂ" (ಕಾಶಕ್ಕ. ೨೩೪); ತಂತುವಾಯದಿಂದೆಮ್ಮ ಲೋಕದೊಳಗಿನ್ನದೇನು ಬಂತು? ಅಲ್ಲಿ, ಇಲ್ಲಿ, ಎಲ್ಲೆಲ್ಲಿ ತೂಗಾಡಿ, ತಂತು, ತಂತು, ತಂತು! (ಚಂತನ. ೫೪–೦೦). ೩. ನೇಯುವುದು ; ನೆಯ್ಗೆ. ೪. ಮಗ್ಗ : "ಮಗ್ಗಂ ತಂತುವಾಯವಮಕ್ಕುಂ" : (ಮಂಗರಾ. ೦೦೩–೮). [ ಸಂ. ]

**ತಂತುಸ್ನಾಯು** (ನಾ). ಸೂಕ್ಷ್ಮವಾದ ಎಳೆಗಳನ್ನುಳ್ಳ ಸ್ನಾಯು: ತಂತುಸ್ನಾಯುವಿನ (Fibre Mascular) ಬೆನ್ನ ಬಳಿಯ ವಪೆ (ಶೀಟಿಬೆ. ೩೨). [ ತಂತು$_1$ + ಸ್ನಾಯು ]

**ತಂತುಹಾರುವ** (ನಾ). ಜನಿವಾರವನ್ನು ಧರಿಸುವುದರಿಂದ ಮಾತ್ರ ಬ್ರಾಹ್ಮಣ ಎನಿಸಿಕೊಂಡವನು; ಹುಟ್ಟಿನಿಂದ ಮಾತ್ರ ಬ್ರಾಹ್ಮಣನಾಗಿದ್ದು ಯೋಗ್ಯ ಆಚರಣೆಯಿಲ್ಲದವನು: ತಂತುಹಾರುವನಲ್ಲ ಸಾಕ್ಷಾತ್ ಬೊಮ್ಮನಪ್ಪನು (ಬಸಪು. ೫೫-೩೩). [ ತಂತು$_1$ + ಹಾರುವ (<ಪಾರ್ವ) ]

**ತಂತೋತಂತು** (ಅ). ಎಳೆಎಳೆಯಾಗಿ; ಸಂಪೂರ್ಣವಾಗಿ; ಚಾಚೂ ತಪ್ಪದೆ; ಅಕ್ಷರಶಃ: ನಿನ್ನ ತರ್ಕ ತಂತೋತಂತು ಸರಿಯಾದದ್ದೆ ನೋಡು (ಅಶ್ವಮೇ. ೫); ನನ್ನ ಅನುಭವಕ್ಕೆ ಮಾತ್ರ ಈ ಮಾತು ತಂತೋತಂತು ಅನ್ವಯಿಸಿತು (ಉಮಾಕಾ. ೫೩). [← ಮರಾ. ತಂತೋತಂತ ]

**ತಂತ್ರ** (ನಾ). ೧. ದಾರ; ನೂಲು; ತಂತು: ನೆಯ್ದಾಳುತಿದೆ ಜಗವನೊಂದತಿ ವಿರಾಡ್ವನಂ, ಸೂಕ್ಷ್ಮಾತಿಸೂಕ್ಷ್ಮ ತಂತ್ರದಿ ಬಿಗಿದು -ಕಟ್ಟಿಯುಂ ಜೀವಿಗಳ್ಗಿಚ್ಛೆಯಾ ಸ್ವಾತಂತ್ರ್ಯಭಾವಮಂ ನೀಡಿ (ಶ್ರೀರಾಮಾ. ೫೮-೧೩೨). ೨. ನೇಯುವಿಕೆ; ನೆಯ್ಗೆ. ೩. ಮಗ್ಗ. ೪. ಹೊದಿಕೆ; ಪರಿಧಾನ. ೫. ಧಾರ್ಮಿಕ ಉತ್ಸವ, ಸಮಾರಂಭ ಮೊದಲಾದವುಗಳ ಪ್ರಧಾನವಾದ ವಿಧಿ, ಕ್ರಮ ಮತ್ತು ಅನುಷ್ಠಾನ: ಓಂ ನಮ ಶಿವಾಯ ಎಂಬ ಮಂತ್ರವ ವಿಚಾಲಿಸಲಮ್ಮದೆ ನಿಂದುದು ತರ್ಕ ಭಯಂಕರ ಭ್ರಮೆಗೊಂಡಿತ್ತು ಮಂತ್ರ ತಂತ್ರ (ಬಸವ. ೮೦); ಧರ್ಮವೇ ಜಯವೆಂಬ ದಿವ್ಯಮಂತ್ರ ಮರ್ಮವನ್ನರಿತು ಮಾಡಲು ಬೇಕು ತಂತ್ರ (ಪುರಂದ. ೨-೬೫ ಪಲ್ಲವಿ). ೬. ಸಿದ್ಧಾಂತ; ತತ್ತ್ವ. ೭. ಶಾಸ್ತ್ರ: ನಿಜಸ್ವರೂಪ ನಿರೂಪಣ ಚಕಿತ ಸಕಲಸಮಾಮ್ನಾಯತಂತ್ರ ಲಕ್ಷ್ಮೀಕಾಂತ. (ಜಗವಿ. ೧-೮೦ ವ); ವಿದಿತವೇದವೇದಘೋಷದ ಪುರಾಣಪ್ರಸಂಗದ ತರ್ಕ ತಂ[ಶಾಸ್ತ್ರ. ಮಂ]ತ್ರ ಸಂವಾದದ . . . ಸಂಭ್ರಮಕೆ ಬೆಚಿಗಾದನು ಹರಿಶ್ಚಂದ್ರನು (ಹರಿಶ್ಚಾ. ೬-೩೯); ತಂತ್ರಗಳಲ್ಲಿ ಅನೇಕ ತಂತ್ರಗಳು ಶಾಕ್ತಮತವನ್ನು ನಿರೂಪಿಸುತ್ತವೆ . . . ವೇದಗಳು, ಆಗಮಗಳು, ತಂತ್ರಗಳು, ಪುರಾಣಗಳು – ಈ ನಾಲ್ಕು ವಿಭಾಗಗಳಲ್ಲಿಯೂ ಈ ಸಂಪ್ರದಾಯವನ್ನು ಕಾಣಬಹುದು (ಭಾರದ. ೨೩೦). ೮. ಇಂದ್ರಜಾಲ; ಯಕ್ಷಿಣೀವಿದ್ಯೆ. ೯. ಔಷಧಿದ್ರವ್ಯ; ಮೂಲಿಕೆ. ೧೦. ಉಪಾಯ; ಹಂಚಿಕೆ; ಯುಕ್ತಿ: ಆಗಳ್ ಮಂತ್ರಮಂ ತಂತ್ರದಿಂ ತಱಿದು ಪೊಸಮಸೆಯ ವಿಶಿಖಂಗಳಿಂ ಪಗೆಯ ಬಿಲ್ಲಂ . . . ಮುಕ್ಕಡಿಗೆಯ್ದು (ರಾಮಾಶ್ವ. ೧೪೩-೨೪); ಉರಗನ ವಿಷಕಿದೆ ಔಷಧಿ ಮಣಿಮಂತ್ರ ಖಳನ ವಿಷಕಿಲ್ಲವೋ ತಂತ್ರ (ಇಂಚಾಪ. ೧೪೩-೪); ಮಂತ್ರ ತಿಳಿಯದಿದ್ದರೂ ತಂತ್ರಕ್ಕೆ ಕಡಿಮೆ ಇಲ್ಲ (ಗಾದೆ). ೧೧. ಕಪಟೋಪಾಯ; ಸಂಚು; ಜ್ವಾಲೆ . . . ಅರ್ಜುನನ ಮೇಲೆ ತಂತ್ರವನೆಸಗಿ ಶಾಪಮಂ ಕುಡಿಸಿದಳ್ (ಕೃಮಿಥಾ. ೯ ಸೂಚನೆ); ಸುಟ್ಟು ಕುಹಕೋಪಾಯ ಕೆಟ್ಟ ತಂತ್ರಗಳನ್ನು . . ., ಬಟ್ಟೆ ತುದಿಯನು ಹೇಗೆ ಮುಟ್ಟಲಾಪುದೆ ನೋಡು (ಕವಿಪು. ೨-೩); ಮುಕ್ರಾಂಬೆಯ ತಂತ್ರಗಳು ನಮಗೆ ಗೊತ್ತಾಗಿವೆ (ರಾವಿಜ. ೧೫). ೧೨. ಪ್ರತಿಜ್ಞೆ; ಶಪಥ. ೧೩. ಗ್ರಂಥದ ಒಂದು ಭಾಗ, ಅಧ್ಯಾಯ: 'ಪಂಚತಂತ್ರ' ಪರಾ. ೧೪. ರಾಜನ ಪರಿವಾರ: ಅರಸನಡಿವಜ್ಜೆಯಂ ನೋಡುತ್ತಂ ಪೆಱಗಣಿಂದಂ ತಂತ್ರಮೆಲ್ಲಂ ಬಂದು . . . ಊರೊಳಗೆಲ್ಲಮಱಿಸಿ (ವಡ್ಡಾರಾ. ೧೧೧-೦೧). ೧೫. ಕೂಟ; ಸಭೆ. ೧೬. ಸೈನ್ಯ; ಪಡೆ: ತಮ್ಮ ಬೆಸದಿಂ ತಂತಮ್ಮ ಠಾಣಾಂತರಂಗಳೊಳ್ದರಂಗಜತಂತ್ರದಂತೆಸೆವಿನಂ ಚೆಲ್ವಾದುವಿಮ್ಮಾವುಗಳ್ (ಆದಿಪು. ೦೦-೯೬). 'ತಂತ್ರಪಾಲ', 'ತಳತಂತ್ರ$_1$' ಪರಾ. ೧೭. ಕುಲ; ವಂಶ. ೧೮. ಅಲಂಕಾರ; ಸಿಂಗಾರ. ೧೯. ಪ್ರಧಾನವಾದ ವಿಷಯ; ಮುಖ್ಯವಾದುದು. ೨೦. ಪರಮಾರ್ಥ; ಆತ್ಯಂತಿಕ ಸತ್ಯ. ೨೧. ಪ್ರಕ್ರಿಯೆ; ಪ್ರಯೋಗ ವಿಧಾನ: ಪಾತ್ರಗಳ ಅಂತರಂಗವನ್ನು ಅವುಗಳ ನಡೆವಳಿಕೆಯಲ್ಲಿಯ ವಿರೋಧಗಳ ಮೂಲಕ ಚಿತ್ರಿಸುವದು ಇಲ್ಲಿಯ ತಂತ್ರಗಳಲ್ಲೊಂದಾಗಿದೆ (ಹೊಸಕ್ಕಿ. ೨೮೪); ಅವರ ರಚನೆಗಳಲ್ಲಿ, ಗಾಯನದಲ್ಲಿ ಅಥವಾ ವಾದನದಲ್ಲಿ ಬಳಸಿದ ಹೊಸ ತಂತ್ರ . . . ಇಲ್ಲಿ ಕಾಣಬಹುದು (ಸಂಗೀತ. VI, ೩೮೩); "ಉಪಾಯ ಪರಿಧಾನ ವಿಧಾನ ಪ್ರಧಾನ ಸೇನೆ ಸಿಂಗರ ಪರಮಾರ್ಥ ತಂತು ಕುಲಭೇದಗಳಿಂತಿವು ತಂತ್ರವಾಚಕಂ" (ನಾನಾರ. ೬೬). ೨೨. ವಶ; ಅಧೀನ: ತಂತ್ರವೆಂದರೆ ಅಧೀನವೆಂದರ್ಥ (ಹಿಂದಶಾ. ೩೩೬). ೨೩. ಆಡಳಿತ; ರಾಜ್ಯಭಾರ: 'ಗಣತಂತ್ರ' ಪರಾ.

**ತಂತ್ರಮಾಡು** = ಉಪಾಯಮಾಡು: ಏನೋ ತಂತ್ರಮಾಡಿ ಕೆಲಸ ಗಿಟ್ಟಿಸಿಬಿಟ್ಟ (ರೂಢಿ). [ ಸಂ. ]

**ತಂತ್ರಂಬೆರಸು** (ಕ್ರಿ). ಪರಿವಾರದಿಂದ ಕೂಡಿಕೊಂಡಿರು; ಗುಂಪಿನೊಡನೆ ಇರು: ಭೋಗಿಕಟಕನ ಗಾಣಪತ್ಯಕೆ ಹೋಗನೇ ತಂತ್ರಂಬೆರಸಿ ಶಿವಯೋಗದಿಂದ ಕುಮಾರಪಾಲಕ ಗುರ್ಜರನು ಮುನ್ನ (ಬಸಪು. ೫೯-೬೫). [ ತಂತ್ರ + ಬೆರಸು$_1$ ]

**ತಂತ್ರಕ** (ನಾ). ಹೊಸಬಟ್ಟೆ; ನೀರಿಗೆ ಹಾಕದೆ ಇರುವ ಬಟ್ಟೆ. [ ಸಂ. ]

**ತಂತ್ರಗಾರ** (ನಾ). ಉಪಾಯಗಾರ; ಚತುರ: ಆ ಉಮೇದುವಾರರು ಬಹಳ ತಂತ್ರಗಾರರು (ಮಲೆನಾ. ೦೩೬); ತಂತ್ರಗಾರನನ್ನು ಕುತಂತ್ರಗಾರ ಜಯಿಸಿದ (ಗಾದೆ). [ ತಂತ್ರ + –ಗಾರ (< –ಕಾಱ) ]

**ತಂತ್ರಗಾರಿಕೆ** (ನಾ). ಉಪಾಯಕುಶಲತೆ; ಚಾತುರ್ಯ: ಬಂದ ಗಂಡಾಂತರಗಳನ್ನು ಬುದ್ಧಿಪೂರ್ವಕವಾದ ಉಪಾಯಾಂತರಗಳಿಂದ ಪರಿಹರಿಸುವ ಜಾಣತನಕ್ಕೆ ತಂತ್ರಗಾರಿಕೆ ಎಂದು ಹೆಸರು (ವಾರಾಕ್ಯ. ೬೦). [ ತಂತ್ರಗಾರ + –ಇಕೆ ]

**ತಂತ್ರಗೈ** (ಕ್ರಿ). ಉಪಾಯಮಾಡು; ಯುಕ್ತಿಯನ್ನು ಹೂಡು: ಶಕ್ತಿಯಿಂದಾಗದುದಾಗದೆ ತಂತ್ರಕೆ ತಂತ್ರಗೈವುದು ನೀನು ಹಾಗೆ (ಇಂಚಾಪ. ೯೦-೩೬). [ ತಂತ್ರ + ಗೈ (<ಕೆಯ್$_1$) ]

**ತಂತ್ರಜ್ಞಾನ** (ನಾ). ಪ್ರಯೋಗ ಪರಿಜ್ಞಾನ; ಶಾಸ್ತ್ರೀಯ ಜ್ಞಾನ: ವಿದೇಶಿ ವಿಮರ್ಶಕರು . . . ಭಾರತೀಯ ಕಲಾವಿದರಿಗೆ ತಂತ್ರಜ್ಞಾನವೇ ಇಲ್ಲವೆಂದು ತಿಳಿದಿದ್ದಾರೆ (ಭಾರದ. ೫೮೦). [ ತಂತ್ರ + ಜ್ಞಾನ ]

**ತಂತ್ರನಿಯಂತ್ರಣ** (ನಾ). ಸೈನ್ಯವನ್ನು ನಿಯಂತ್ರಿಸುವುದು; ಸೈನ್ಯಕ್ಕೆ ಮಾರ್ಗದರ್ಶನ ಮಾಡುವುದು: ತಂತ್ರನಿಯಂತ್ರಣಂ ಬಿನದವೋಲಗ ಮಕ್ಕರಗೊಟ್ಟೆ ಕಾರ್ಯ ಸನ್ಮಂತ್ರಂ . . . ತ್ರಿಜಗದ್ಗುರು ಪುಣತಿಯಂಬಿವನಾಗಳುಮೊಂದೆ ಕೀಲೆ ದಲ್ ಜಂತ್ರದ ಪಾವೆಯಂತೊಡವೊಡರ್ಚುವನಿಂದ್ರನುಮಾ ಪ್ರತೀಂದ್ರನುಂ (ಶಾಂತಿಪು. ೬-೧೧೦). [ ತಂತ್ರ + ನಿಯಂತ್ರಣ ]

**ತಂತ್ರಪಾಲ, ತಂತ್ರಪಾಳ** (ನಾ). ೧. ಸೈನ್ಯಾಧಿಕಾರಿ; ಸೇನಾಪತಿ: ಪಡವಳ್ಳಿಚಣ ಅಡಪದ ರಾಯಣ ತಂತ್ರಪಾಲ ಕೇಸಿಯಣನಿಂತಿವರೊಳಗಾಗಿ ಸಾಸಿರ ಪರಿಗ್ರಹ ಸಹಿತವಿಂದ್ರಕೇಸಿದೇವರಸಗ್ಗ್ಗೆ ದ್ರವ್ಯನಿವೇದನಂ ಮಾಡಿ (ಸೌಇಇ. XX, ೧೪೪-೫೫; 1166). **ತಂತ್ರಪಾಳ**: ೧. ತಂತ್ರಪಾಳ ವಿಳ್ಳಯ್ಯ (ಎಇ. XV, ೬೫-೧೦; 1050); ಶ್ರೀಮತ್ತಂತ್ರಪಾಳ ಚಾವುಣ್ಣಮಯ್ಯಂ ಪ್ರಮುಖ ಪ್ರಧಾನರುಂ (ಸೌಇಇ. XX, ೩೮-೨೪; 1058); ಶ್ರೀಮತ್ ಹನ್ನಿರ್ವ್ವರ ಗಂಡ ದಾಸರಸನ ತಂತ್ರಪಾಳ ಹನ್ನಿರ್ವ್ವರು ಮುನ್ನೆಯರ ತಂತ್ರಪಾಳರ ಗಂಡ ಮಸಣಯ್ಯನ ತಮ್ಮ ಬೊಪ್ಪಣ (ಎಕ. VII, ಹೊನ್ನಾ. ೯೬-೫; 1130); ಜಯಕೇಸಿ ದೇವರುಂ ತಂತ್ರಪಾಳ ಚಟ್ಟಮಯ್ಯನಾಯಕನುಂ (ಸೌಇಇ. XX, ೦೦೬-೪೨; 1138). ೨. ರಹಸ್ಯಗಳ ಪಾಲಕ: ತಂತ್ರಪಾಳ ಎಂಬ ಪದವನ್ನು ಸಂಪಾದಕರು "Secretary or gaurdian of secrets" ಎಂದು ಅನುವಾದಿಸುತ್ತಾರೆ. ಎಂದರೆ, ರಹಸ್ಯಗಳ ಪಾಲಕ ಎಂದು ಅವರ ಅಭಿಪ್ರಾಯವಾಗಿರುವಂತೆ ಕಾಣುತ್ತದೆ (ಶಶಾಅ. ೨೫೪). [ ಸಂ. ]

**ತಂತ್ರಪಾಳ** 'ತಂತ್ರಪಾಲ' ನೋ.

**ತಂತ್ರಪ್ರಯೋಗ** (ನಾ). ಇಂದ್ರಜಾಲದ ಪ್ರದರ್ಶನ; ಯಕ್ಷಿಣೀವಿದ್ಯೆಯ ಪ್ರಯೋಗ : ಇಂದ್ರಜಾಲವ ನೋಳ್ಪರನಿಬರ್ಗಂ ದೃಢಾಚರಿದೋರ್ವುದವರೊಳಸಂದ ತಂತ್ರಪ್ರಯೋಗವೇತ್ತರಿಗಳ್ಪರೊಡದಿಹುದೇ (ಗಗಜಾ. ೧೬-೩೦). [ ತಂತ್ರ + ಪ್ರಯೋಗ ]

**ತಂತ್ರಲಿಪಿ** (ನಾ). ಸಾಂಕೇತಿಕ ಲಿಪಿ : ಸ್ವಾಮಿ ಶಂಕರಾನಂದ ಎಂಬುವರು ಇಲ್ಲಿನ ಲಿಪಿ ತಂತ್ರಲಿಪಿಯೆಂದೂ, ಅದು ಏಕಾಕ್ಷರಗಳಿಂದ ರಚಿತವಾಗಿದ್ದು ಗುಪ್ತಭಾಷೆಯಲ್ಲಿ ಬರೆದ ವೇದಗಳೆಂದೂ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು (ದ್ರಾವಿವಿ. ೨೪). [ ತಂತ್ರ + ಲಿಪಿ ]

**ತಂತ್ರವೇದಿ** (ನಾ). ತಂತ್ರಗಳನ್ನು ತಿಳಿದವನು ; ವೈದ್ಯ : "ದೋಷಜ್ಞಂ ತಂತ್ರವೇದಿ " (ವಸ್ತುಕೋ. ೭೪-೪೨). [ ಸಂ. ತಂತ್ರವೇದಿನ್ ]

**ತಂತ್ರಶಾಸ್ತ್ರ** (ನಾ). ೧. ಆಗಮಶಾಸ್ತ್ರ : ಆಗಮಶಾಸ್ತ್ರವನ್ನು (ತಂತ್ರ ಪ್ರಧಾನವಾದುದರಿಂದ) "ತಂತ್ರಶಾಸ್ತ್ರ"ವೆಂದೂ ಪರ್ಯಾಯನಾಮದಿಂದ ಕರೆಯುತ್ತಾರೆ (ಭಾರದ. ೬೯). ೨. ಯಂತ್ರಕಲಾಶಾಸ್ತ್ರ : ತೀವ್ರಗತಿಯಲ್ಲಿ ಬೆಳೆಯತೊಡಗಿದ ತಂತ್ರಶಾಸ್ತ್ರ (Technology) ಜನರ ಜೀವನ ವಿಧಾನವನ್ನೇ ಕ್ರಾಂತಿಕಾರಿಯಾಗಿ ಬದಲಾಯಿಸಿದುದಲ್ಲದೆ ಅವರ ಮನೋಧರ್ಮವನ್ನೇ ಬದಲಾಯಿಸಿತು (ಜುಕ್ತಾರ. ೩೩, ೩೬೩೪). [ ತಂತ್ರ + ಶಾಸ್ತ್ರ ]

**ತಂತ್ರಶುದ್ಧಿ** (ನಾ). ಪ್ರಯೋಗದಲ್ಲಿರುವ ಶುದ್ಧತೆ; ವಿಧಾನದಲ್ಲಿ ದೋಷವಿಲ್ಲದಿರುವಿಕೆ: ಆ ಆಕ್ಷೇಪವು...(೪)ಸ್ವವಿರುದ್ಧವೆಂದೋ ಅಥವಾ (೫) ತಂತ್ರಶುದ್ಧಿ(Technical correctness)ಗೆ ವ್ಯತಿರಿಕ್ತವಾಗಿದೆಯೆಂದೋ ಇರುತ್ತದೆ (ಅರಿಶಾ. ೧೪೬). [ ತಂತ್ರ + ಶುದ್ಧಿ ]

**ತಂತ್ರಸಿದ್ಧಾಂತ** (ನಾ). ಪಾಂಚರಾತ್ರಾಗಮದಲ್ಲಿ ಪ್ರತಿಪಾದಿತವಾಗಿರುವ ನಾಲ್ಕು ವಿಧವಾದ ಸಿದ್ಧಾಂತಗಳಲ್ಲಿ ಒಂದು : ಪಾಂಚರಾತ್ರಾಗಮದಲ್ಲಿ –'ದಿವ್ಯಮಂತ್ರಸಿದ್ಧಾಂತ', 'ಆಗಮಸಿದ್ಧಾಂತ', 'ತಂತ್ರಸಿದ್ಧಾಂತ' . . . ಎಂದು ನಾಲ್ಕು ವಿಧ (ಭಾರದ. ೬೩). [ ತಂತ್ರ + ಸಿದ್ಧಾಂತ ]

**ತಂತ್ರಹಾಳ, ತಂತ್ರಾಳ** (ನಾ).=ತಂತ್ರಪಾಲ ೧ : ಹೆಮ್ಮಾಡಿನೃಪನ ನಚ್ಚಿನ ಜಯಸಂಸ್ಥಾನಕರ ಕಟ್ಟಿದಲಗದನಖಿಯರೆ ತಂತ್ರಹಾಳನಂ ತೊಂಡಮನ . . . ಅನ್ವಿನಿಸಿ ನೆಗಳ್ದ ತಂತ್ರಹಾಳ [ತೊಂ]ಡಮರಸಂಗನನುಜಾತನಾಗಿಯುಂ (ಸೌಇಇ. XV, ೯೩-೧೮ : 12ನೆಯ ಶತ). **ತಂತ್ರಾಳ** : ತುಳುವದ ಶಾಸನಗಳಲ್ಲಿ ಬರುವ ಅಧಿಕಾರಿಗಳು . . . ಮಹಾಪ್ರಭು, ಸೇನಾಪತಿ, ತಂತ್ರಾಳ, ತಂತ್ರಿನಾಯಕ (ತುಳುನಾ. ೨೬೦). [ <ಸಂ. ತಂತ್ರಪಾಲ ]

**ತಂತ್ರಹಾಳಿಕೆ** (ನಾ). ತಂತ್ರಪಾಲನ ಅಧಿಕಾರ,–ಹುದ್ದೆ : ಅನ್ವಯ್ಪರದಧ್ಯಕ್ಷಂ ಕುನ್ತಳಪತಿಯತ್ತ ಸುರಿಗೆವಿಡಿವಧಿಕಾರಂ ಸನ್ನತದ ತನ್ತ್ರಹಾಳಿಕೆಯಿನ್ತು ಮಹಾಮಾತ್ಯಪದವಿಗಿವು ಸಂಚಕರ (ಸೌಇಇ. XI-ii, ೧೬೪-೧೨ : 1126). [ ತಂತ್ರಹಾಳ + –ಇಕೆ ]

**ತಂತ್ರಹೂಡು** (ಕ್ರಿ). ಸಂಚುಮಾಡು ; ಉಪಾಯಮಾಡು: ಮುದುಕಿಯ ಆಸ್ತಿಪಾಸ್ತಿಯೆಲ್ಲ ಪರಭಾರೆಯಾಗುವಂತೆ ತಂತ್ರ ಹೂಡಿದ್ದ ವಕೀಲ (ಪುನರು. ೨೯). [ ತಂತ್ರ + ಹೂಡು$_1$ (<ಪೂಡು) ]

**ತಂತ್ರಾಧ್ಯಕ್ಷ** (ನಾ). ದಳಪತಿ ; ದಂಡನಾಯಕ : ತಂತ್ರಾಧ್ಯಕ್ಷನಂ ಬರಿಸಿ ಬೆಸಸುವುದು ಮಾತಂ ವಿಜಯಪ್ರಯಾಣಭೇರಿಯಂ ಪೊಯ್ಸಿದಾಗಳ್ (ಚಂದ್ರಪು. ೧೦-೧ ವ) : ಸಮರಪ್ರಸ್ಥಾನಭೇರಿಯಂ ಪೊಡೆಯಿಸೆಂಬುದುಮವಂ ತಂತ್ರಾಧ್ಯಕ್ಷನಪ್ಪ ಮೇಘನಾದನಂ ಬರಿಸಿ ಬೆಸಸುವುದುಂ (ರಾಜಶೇ.೬-೧೦ ವ). [ ತಂತ್ರ + ಅಧ್ಯಕ್ಷ ]

**ತಂತ್ರಾಲಯ** (ನಾ). ತಂತ್ರದ ನೆಲೆ ; ಉಪಾಯದ ನೆಲೆ : ವಿಷಯ ಲಗ್ನಾನಂದವಂ ಬೇರ್ಪಡಿಸಲಾದ ತಂತ್ರಾಲಯ ತೀರ್ಣಭಯ ಯತಿ ಸಿದ್ಧ ಸಂಸ್ಕೃಷ್ಟ ದೇವಾಲಯ (ಮಲಿದೇ. ೨೬-೯). [ ತಂತ್ರ + ಆಲಯ ]

**ತಂತ್ರಾವಾಪ** (ನಾ). ೧. ತಂತ್ರಗಳನ್ನು ಹೂಡುವಿಕೆ, –ಪ್ರಯೋಗಿಸುವಿಕೆ. ೨. [ರಾಜನೀ] ರಾಜ್ಯಪಾಲನೆಯ ಮತ್ತು ರಾಷ್ಟ್ರರಕ್ಷಣೆಯ ಚಿಂತೆ ; ಸ್ವರಾಷ್ಟ್ರ ಮತ್ತು ಪರರಾಷ್ಟ್ರ ವಿಚಾರ : ಮುಕ್ತಿಸಾಮ್ರಾಜ್ಯದೊಳತಿಪ್ರಾಜ್ಯ ಸಂಜನಿತ ನಿಸ್ಪೃಹನನವರತಕಲ್ಯಾಣ ಪರಿಮಿತದೊಳ್ ನಿರಂತರಂ ತಂತ್ರಾವಾಪ ಚಿಂತಾಂತರಾಯಪ್ರಾಯ ಸುಖಲವದೋಲ್ ಮಹೀತಳರಾಜ್ಯದೊಳ್ ನಿಱಿಸುವುದುಂ ಮದುವೆ ನಿಱಿಸುವುದು ಮೆನಗಶಕ್ಯಾನುಷ್ಠಾನಂ (ಆದಿಪು. ೮-೮ ವ). [ ತಂತ್ರ + ಆವಾಪ ]

**ತಂತ್ರಾಳ** 'ತಂತ್ರಹಾಳ' ನೋ.

**ತಂತ್ರಿ$_1$** (ನಾ). ೧. ತಂತ್ರಶಾಸ್ತ್ರವನ್ನು ಬಲ್ಲವನು ; ಆಗಮೋಕ್ತರೀತಿಯಲ್ಲಿ ಪೂಜಾವಿಧಿಯನ್ನು ನಡೆಸುವವನು: ಅವರು ಹಾಡುವ ಭೂತದ ಪಾಡ್ದನಗಳಲ್ಲಿ . . . ತಂತ್ರಿ, ಬ್ರಾಹ್ಮಣ, ಪುರೋಹಿತ, ಮೊದಲಾದವರು ಬರುತ್ತಾರೆ (ಜಾನಗೀ. ೫೪) ; ತಂತ್ರಿಯಾವರು ಕೂಡಾ ಹೇಳುತ್ತಾರೆ . . . ಆ ಕೊಳದ ಸುತ್ತಲೂ ಹದಿನಾರು ದೆವ್ವಗಳಿವೆ . . . ಎಂದು (ಪಶ್ಯಸ. ೨೬). ೨. ಯುಕ್ತಿಯನ್ನು ಬಲ್ಲವನು ; ಉಪಾಯಗಾರ : ಮಂತ್ರಿ ಬಸವನ ಕೇಳು ತಂತ್ರಿಗಳ ಮಂತ್ರಗಳು ಜಂತ್ರದಲಿ ತಲೆಯ ಕೊಟ್ಟಂತೆ (ಕನ್ನಜಾ. ೨೩೦) : ಅವನ ಮುಖಭಾವದಲ್ಲಿಯಾಗಲಿ ಅಥವಾ ಮಾತಿನಲ್ಲಿಯಾಗಲಿ ಅವನು ತಂತ್ರಿ ಎಂದು ಕಾಣುತ್ತಿರಲಿಲ್ಲ (ಮಲಿನಾ. ೧೫೯). [ ಸಂ. ತಂತ್ರಿನ್ ]

**ತಂತ್ರಿ$_2$** (ನಾ). ೧. ದಾರ ; ಎಳೆ ; ಸೂತ್ರ. ೨. ತಂತಿ ; ವೀಣೆ ಮೊದಲಾದ ವಾದ್ಯಗಳ ತಂತಿ : ನಯಮುಳವಟ್ಟ ಜೀವೆಯುಳವಟ್ಟ ಧರೋತ್ತರ ತಂತ್ರಮುಷ್ಟ ತಂತ್ರಿಯೊಳನುವಾದಿಯಾಗೆ ಪೊಸ ಮೂರ್ಛನೆ ರಂಜಿಸೆ ಮಂದ್ರ ತಾರ ಗೀತಿಯ ಚವಣೊಪ್ಪೆ . . . ವೀಣೆಯುಂ ಮಿಡಿದಳಿಕ್ಸೆರ್ದೆಯುಂ ಮಿಡಿದಳ್ ಪ್ರಗೀತರಾ (ಶಾಂತಿಪು. ೯–೧೮೬) ; ಸೇರಿಸಿ ತಂತ್ರಿಯುಂ ಸಂಚಿನಿಂ ಮೇಚನು ಬಾಱಿಸುತೆಸೆಯೆ ಭಾವೆಯರು (ಜೀವಂಧಾಂ. ೨೦-೦೩) ; ಗಗನ ವೀಣಾತಂತ್ರಿಯಂ ಮಿಡಿದ ತೆರನಾಗಲ್ (ಶ್ರೀರಾಮಾ. ೦-೦೬) ; ಸಹಸ್ರತಂತ್ರೀನಿಃಸ್ವನದಂತೆ . . . ಗುಡುಗಾಡುತ್ತಿದೆ ಗಗನದ ತುಂಬ ಪ್ರಣವಪ್ರವೀಣನ ನಾದಸ್ತಂಭ (ಅರಳು. ೬೬-೧). ೩. ಒಂದು ತಂತೀವಾದ್ಯ ; ವೀಣೆ: ವಾಣಿ, ಓ ಪ್ರಾಣವೀಣಾಪಾಣಿ, ಕವಿಯೆರ್ದೆಯ ರಸರಾಣಿ, ಮಿಡಿಯೆನ್ನಾತ್ಮತಂತ್ರಿಯಂ (ಶ್ರೀರಾಮಾ. ೦೪೨-೨). [ ಸಂ. ತಂತ್ರೀ ]

**ತಂತ್ರಿಕೆ** (ನಾ). ಒಂದು ಬಗೆಯ ಸಸ್ಯ ; ಅಮೃತಬಳ್ಳಿ : "ವತ್ಸಾದನೀ, ಛಿನ್ನರುಹಾ, ಗುಡೂಚೀ, ತಂತ್ರಿಕಾ . . . ಮಧುಪರ್ಣೀ – ೯ ಅಮೃತ ಬಳ್ಳೀ ಹೆಸರು" (ಸಿದ್ಧಾಂತಿ. ೦೦೩). [ ಸಂ. ತಂತ್ರಿಕಾ ]

**ತಂತ್ರಿಗ** (ನಾ). ೧. ಚಿತಾವಣಿ ಮಾಡುವವನು. ೨. ರಾಜತಂತ್ರವನ್ನು ಬಲ್ಲವನು : ನಾನು ವಾಲಗಕೆ ತಪ್ಪಿದದರಿಂದಿನ್ನು ತಂತ್ರಿಗನಪ್ಪುದದರಿಂ ರಾಜಗಪ್ರತಿಯುಪ್ಪರಾರೇಗೈದರಾಗದು ಎನಲು (ಬಿಜ್ಜಪು. ೬೬-೪). [ ತಂತ್ರ + –ಇಗ ]

**ತಂತ್ರೋದಿತ** (ಗು). ತಂತ್ರದಲ್ಲಿ ಹೇಳಿರುವ ; ನೀತಿಶಾಸ್ತ್ರೋಕ್ತವಾದ : ಸತ್ಪ್ರಜಾಪಾಲನೆಯ ನೆಗಳ್ದುಪಾಯಂಗಳಂ ಸಾರ್ದು ಶಕ್ತಿಸ್ಫುರಣಂ ಕೈಗಣ್ಮೆ ತಂತ್ರೋದಿತ ಗುಣಗಣವಂ ತಾಳ್ದಮೋಘಂ ಪ್ರಭುತ್ವಂ ದೊರೆಕೊಂಡೆಮ್ಮಾಳ್ದನಾದಲ್ಲಮವಿಭು ವಿರತಿಶ್ರೀಯಮಂ ಮಾಳ್ಕುದು (ರಾಜಶೇ. ೧-೦೩). [ ತಂತ್ರ + ಉದಿತ$_2$ ]

**ತಂಥಳಿಸು** 'ತಟತಟಿಸು' ನೋ.

**ತಂದನತಾನ** 'ತಂದಾನತಾನ' ನೋ.

**ತಂದನಾನ** 'ತಂದಾನತಾನ' ನೋ.

**ತಂದನೋತಾನಾನಿ** 'ತಂದಾನತಾನ' ನೋ.

**ತಂದನ್ನತಾ** 'ತಂದಾನತಾನ' ನೋ.

**ತಂದರಿ**, ತಂದಿರಿ, ತಂದುರಿ (ನಾ). ೧. ತೂಕಡಿಕೆ; ಜೊಂಪು. ೨. ದಣಿವು; ಬಳಲಿಕೆ ; ಆಯಾಸ : ತಂದ್ರಿ–ತಂದರಿ, ತಂದಿರಿ, ತಂದುರಿ (ಶಬ್ದಾನು. ೧೪೬ ವ್ಯಾಖ್ಯಾ). **ತಂದರಿ :** ಮೇಲಿನ ಪ್ರಯೋಗವನ್ನು ನೋಡಿ. **ತಂದುರಿ :** ಮೇಲಿನ ಪ್ರಯೋಗವನ್ನು ನೋಡಿ.

[ <ಸಂ. ತಂದ್ರಿ, ತಂದ್ರೀ ]

**ತಂದಲ್**, ತಂದಲು₁ (ನಾ). ೧. (ನೀರಿನ) ಹನಿ; ತುಂತುರು : "ಸೀವರ ಮೆಂದುಂ ತಂದಲೆಂದುಂ ಶೀಕರಂ" (ಶಶಸಾ. ೬–೧೪೩) : "ಸೀವರಂ ತಂದಲೆನೆ ಜಲಕಣಂ" (ಕಬ್ಬಿಕ್ಕಿ. ೧೨) ; ಗಲ್ಲಲನೊಕ್ಕ ಪಾಲ ತಂದಲ್ಗಳಿವಾವಗಂ ಮಡಿಯ ನೀರ್ ಕಡುವೆಳ್ಪಿನೊಳೊಂದೆ (ಲೀಲಾವ. ೩–೫೬) : ಪಜಿದಾಗಳ್ ಪನಿಪುಲ್ಲ ಬಿಂದುಗಳ ತಂದಲ್ . . . ನೆಟಿ ಸಾರುತ್ತಿರೆ (ಕುಸುಮಾ. ೬–೦೩) ; ಚಂದ್ರಮರೀಚಿಯಂತೆ ತನಿಮಾವಿನ ಪಣ್ಗಳ ತಂದಲಂತೆ . . . ಸೋಮ ರಾಜೇಂದ್ರನ ಕಬ್ಬಥಿಂಪು (ಉದ್ಭಟ. ೧–೩೨); ತನ್ನ ಕಂಬನಿಯ ತಂದಲಿಂದತಿ ಸ್ನೇಹಲತೆಯಂ ಬೆಳೆಯಿಸಿದಳ್ (ಅನಂಪು. ೮–೨೬ ವ) ; ಮುಗಿಲ ಪೊಜಿಯಿಂ ಸುರಿವ ಮುತ್ತುಗಳಂ ಕಾರ ಮುಂಬನಿಯ ತಂದಲೆಂದು ಬಂದು ನುಂಗ ಲಂಗೈಸುವ ಚಾದಗೆಯ ಮಱಿಗಳುಮಂ (ಕಬ್ಬಿಗಕಾ. ೨೩೪) ; ತನಿರಸದ ತಂದಲ್ ಸುರಿವರನೇಱಿಲ ಗೊಂಚಲಂ ಕಟ್ಟಿದಿರೊಳ್ ಕಂಡು (ರಾಜಶೇ. ೫೪–೬). ೨. ಬಿಟ್ಟೂಬಿಡದೆ ಸುರಿಯುವ ಮಳೆ ; ಜಡಿಮಳೆ : "ಸೋನೆ ಯೊಳ್ ತಂದಲಕ್ಕುಂ" (ಕರ್ಣಾನಿ. ೫೧) ; ಸೋನೆಯಿಂ ಸರಿಗಳಿಂ ತಂದಲ್ಗ ಳಿಂದಂದು ಭೂತಳಮೇಕಾರ್ಣವಮಾಗೆ (ಆದಿಪು. ೧೩–೫೯) ; ಎಳೆನೀರ ತಂದಲಂ ಕಱೆವೆಳೆದೆಂಗು (ಎಕ. XI, ದಾವಣ. ೩೫–೩೬; ಸು. 1160) ; ತಂದಲ್ ಸೋನೆ ನಟ್ಟ ಬಡಪಮೆನಲ್ಸುರಿದುವು ಬಿಡದೆ ಮಟಿಗಳಿರುಳುಂ ಪಗಲುಂ (ಜಗವಿ. ೪–೩೨) ; ಉತ್ತಮವನಂ ರಾಮಣೀಯಕ ತರುಗಳಿಂ . . . ಜೇನ್ನೆಯ್ಯ ತಂದಲ್ಗಳಿಂ (ವೀಶೈಪು. ೩–೯–೭). 'ಸೋನೆದಂದಲ್' ಪರಾ. **ತಂದಲು₁:** ೧. ತಂಬೆಲರ ಮೊಗಸಿರಿಯ ತಂದಲಿನ ಮೈದೊಡವು . . . ಕಂಗೊಳಿಪಂತೆ ಮಲ್ಲಿಗೆಗಳು (ಶಂಕರಾ. ೧–೪–೧೪). ೨. "ಮಳೆ, ಸರಿ, ಸರವು . . . ಒದ್ದೆ, ತಂದಲು, ತುಂತುರು" (ಕಂನುಹು. ೮೯).

**ತಂದಲು₁** 'ತಂದಲ್' ನೋ.

**ತಂದಲು₂** (ನಾ). ಸೇವಕ ; ದಾಸ (?) : ಮೂರಹರ ನಿಮ್ಮ ಪರಿಚಾರಕರ ದಾಸಿಯರ ತಂದಲೆನಗಿನಿತುಚಿತವೇ (ಕೊಟ್ಟೂರಬ. ೧–೭೦). 'ತಂಡಾಲಯ' ಪರಾ. [ ? ]

**ತಂದವೂರ್** (ನಾ). ಒಂದು ಊರಿನ ಹೆಸರು ; ಬೆಳ್ಳುಹೆಯಬ್ಬಿತ್ತಡೆ ನಾಡೆಬ್ಬಿತ್ತು ತುಂದವೂರ ಪನ್ನೆರಡು ಗೆದೆಯು ಪನ್ನೆರಡು(ಎಕ. VIII, ಸೊರಬ. ೪೭೭–೦೩ ; 991). [ ತಂದ ? + ಊರ್ ]

**ತಂದಸಿ** 'ತಂಡಸು' ನೋ.

**ತಂದಾನತಾನ**, ತಂದನತಾನ, ತಂದನಾನ, ತಂದನೋತಾನಾನಿ, ತಂದನ್ನತಾ, ತಂದಾನತಾನಾನ, ತಾಂದನಿತಾನೊ (ನಾ). ಜಾನಪದ ಹಾಡುಗಳಲ್ಲಿ ಬರುವ ಒಂದು ಪಲ್ಲವಿ ; "ದಂರುಗಮುರಗಿಯರ ಸೊಲ್ಲು" (ಜಾನಕೋ. ೩೪). **ತಂದನತಾನ :** (+). **ತಂದನಾನ :** (+). **ತಂದನೋತಾನಾನಿ :** ತಂದನೋತಾನಾನಿ ತಂದನೋತಾನಾನಿ ತಾನು ತಂದನು ತಂದೆ, ನಾನಿ ತಂದನುತಾನಿ ತಾನುತಂದನು ತಂದೆ ಶಿವ್ನೀಗೆ ಶರಣೊ (ಹುಟ್ಟಿಹ. ೩೦). **ತಂದನ್ನತಾ :** ತಂದನ್ನತಾಯೆಂದು ಕೈಲಿ ಕಿನ್ನರಿ ಧರಿಸಿ ಅಂದವಾಗಿ ಶ್ರೀಹರಿಯ ಮುಂದೆ ಕುಣಿವ ಚರಣ (ವಿದಾಳ್ವಿ. ೨೬–೦). **ತಂದಾನತಾನಾನ :** (+). **ತಾಂದನಿತಾನೊ :** ಕಿನ್ನೂಡಿ ಮೇಲೆ ಕಿರುಗೆಜ್ಜೆ–ತಾಂದನಿತಾನೋ (ಜಾಪದ. ೨೦).

[ ದೇ.॥ ತುಳು. ತಂದನ; ತೆಲು. ತಂದನತಾನ, ತಂದಾನತಾನ ]

**ತಂದಾನತಾನಾನ** 'ತಂದಾನತಾನ' ನೋ.

**ತಂದಿರಿ** 'ತಂದರಿ' ನೋ.

**ತಂದುರಿ** 'ತಂದರಿ' ನೋ.

**ತಂದೆ** (ನಾ). ೧. ಅಪ್ಪ ; ಜನಕ : ತನ್ದೆಯ ತಾಯ್ಗಿರಾ ಸನ್ನಾನಮ(೦) ನುಳಿದು ಬಿಸುಟೋಂ (ಸೌಇಇ. XI-I, ೦೦–೩ ; 866) ; ತಾಯ್ಗಂ ತಂದೆಗ ಮೆಲ್ಲಾ ನಂಟರ್ಗೆಯುತ್ಸಾಹಮುಂ ಸುಖಮುಂ ವಿಭವಮುಮಂ ಪಡೆವುದ ಱಿಂದಮಾ ಕೂಸಿಂಗೆ . . . ಭದ್ರಬಾಹುವೆಂಬ ಪೆಸರನೆಲ್ಲರುಂ ನೆರೆ ದಿಟ್ಟೊಡೆ (ವಡ್ಡಾರಾ. ೭೩–೦೬) ; ತಂದೆಯ ರೂಪೆ ತಂದೆಯ ವಿಳಾಸಮೆ ತಂದೆಯ ಚೆಲ್ವೆ . . . ತನ್ನೊಳಮರ್ಕೆವೆತ್ತುದು (ಆದಿಪು. ೮–೪೩) ; ಹಿತಮಂ ತೋಱುವನಾತ್ಮಬಂಧು ಪೊರೆವಾತಂ ತಂದೆ (ಸೋಮೇಶ. ೮). ೨. ಹಿರಿಯ ರನ್ನು ಕುರಿತು ಭಕ್ತಿ, ಗೌರವಗಳಿಂದ ಹೇಳುವ ಮಾತು: ತಂದೆ ಚಿತ್ತೈಸು ವುದು ಕಿಂಕರನ ಬಿನ್ನಪಂ (ನಂಚಿಕ. ೧–೭೩) ; ಎಮ್ಮಂತಪ್ಪ ಪಾಪಿಗಳಿಗೊಗೆ ವನೇ ತಂದೆಯೆನಲ್ (ಸಿದ್ಧರಾ. ೧–೨೯) ; ಗಂಗಾವರಕುಮಾರ ದ್ರೋಣ ಕೃಪರೀ ಸೆಱಗ ಬಿಡಿಸಿರೆ ತಂದೆಗಳಿರೆಂದೊಱಲಿದಳು ತರಳೆ (ಕುಮಾವ್ಯಾಸ. ೦೪–೦೦೪). ೩. ಕಿರಿಯರನ್ನು ಕುರಿತು ವಾತ್ಸಲ್ಯದಿಂದ ಹೇಳುವ ಮಾತು : ಬಾರೆಲೆ ತಂದೆ ಬಾರರಸ ಬಾ ಪೊರೆವಾಳ್ದನೆ (ಕಾದಂಪೂ. ೩೬೦); ಬಾಲ ಲಿಂಗವೆ ಬಾರ ತಂದೆ (ಬಸಪು. ೪೭–೨೯) ; ತಂದೆ ನಿನಗೆನ್ನಲ್ಲಿ ಋಣಸಂಬಂಧ ಸವೆದುದೆ ಶಿವಶಿವಾ ತಾ ಮಂದಭಾಗ್ಯಂಗಣುಗ ದಕ್ಕುವನಲ್ಲ ಎನಗೆಂದ (ಕುಮಾವ್ಯದ್ರೋ. ೮–೨೦). ೪. ಹೆಸರಿನ ಮುಂದೆ ಗೌರವಸೂಚಕವಾಗಿ ಬಳಸುವ ಶಬ್ದ. ಉದಾ : ಅಱುವಿನ ಮಾರಿತಂದೆ.

**ತಂದೆವಿರ್** (ಬಹುವ) : ವಿರ್ಗೆ–ತಂದೆವಿರ್, ತಾಯ್ವಿರ್, ಸೊಸೆವಿರ್ (ಶಬ್ದಮ. ೯೬ ಪ್ರಯೋ). **ತಂದೆಯ ತಂದೆ** = ೧. ಅಜ್ಜ ; ತಾತ ; ಪಿತಾಮಹ : "ತಾತ – ತಂದೆಯ ತಂದೆಗೂ . . . ಪಿತಾಮಹ ಎಂಬ ಹೆಸರು" (ನಾನಾರ. ೨೩ ಟೀಕ). ೨. ಬ್ರಹ್ಮ : "ಅಂಚೆದೇರಂ . . . ತಂದೆಯ ತಂದೆ, ಅರಲಿಚಂ, ನಾಲ್ಮೊಗಂ, ತಾವರೆವಸೆಯಂ – ಈ ೮ ಬ್ರಹ್ಮಂಗೆ ಪೆಸರ್" (ಶಶಸಾ. ೪೮–೦೩) ; "ಪೊಂಬೊಡೆಯಂ . . . ಬೊಮ್ಮ ತಂದೆಯ ತಂದೆ ವಿಸುಪ ತಾವರೆಗಂದನು ತಾಂ ಬ್ರಹ್ಮಗೆಸೆವ ನಾಮಂ" (ಕಬ್ಬಿಕ್ಕಿ. ೯). **ತಂದೆಯ ತಂದೆಯಿಲ್ಲದಂ** = ತಾತನಿಲ್ಲದವನಂ ; ವಿನಾಯಕ : "ಕರಿ ಮೊಗಂ, ಇಲಿದೇರಂ . . . ತಂದೆಯ ತಂದೆಯಿಲ್ಲದವಂ–ಈ ೭ ವಿನಾಯಕಂಗೆ ಪೆಸರ್" (ಶಶಸಾ. ೧–೪) : "ಬಿಜ್ಜೆವಳನೆಡರ್ಗೇಡಿ ಮೋಹಲರುಣಿವಸಿಱನು ತಂದೆಯ ತಂದೆಯಿಲ್ಲದಂ[ಪಾಠಾಂ. ತಂದೆಯಯ್ಯನಿಲ್ಲದವಂ] . . . ಎನೆ ವಿನಾಯಕನ ನಾಮಂ", (ಕಬ್ಬಿಕ್ಕಿ. ೫).

[ ದೇ.॥ ತಮಿ. ತನ್ತೈ; ಮಲ. ತನ್ತ; ತೆಲು. ತಂಡ್ರಿ, ತಂಡಿರಿ; ಪರ್ಜಿ. ತೆಂದ್; ಕುಇ. ಕುವಿ. ತಂಜಿ ]

**ತಂದ್ರ** (ಗು). ೧. ದಣಿದ ; ಬಳಲಿದ. ೨. ಸೋಮಾರಿಯಾದ ; ಮೈ ಗಳ್ಳತನದಿಂದ ಕೂಡಿದ. (ನಾ). ೩. ಮೈಗಳ್ಳತನ ; ಸೋಮಾರಿತನ; ಜಡತೆ : ಮಹೇಂದ್ರಂ ದಧೀಚಿಯಡೆಗಂ ತಂದ್ರಮನುಳಿದೆಯ್ದಿ ವಂದಿಸುತ್ತೆ ಬಳಿಕಂ (ಜಾರಾಸ್ಕ. ೧–೨–೪೨). [ ಸಂ. ]

**ತಂದ್ರತೆ** (ನಾ). ೧. ಬಳಲಿಕೆ; ದಣಿವು. ೨. ಆಲಸ್ಯ ; ಜಡತೆ ; ಮಾಂದ್ಯ : ತಳೆದ ಸುಮನೋದಾಮಂ ನೀರೋಡಿ ಬಾಡಿದುದಾಗಳಾಗುಳಿಯನೊಳ ಕೆಯ್ಮಿತ್ತಾಸ್ಯಾಂಭೋರುಹಂ ನಿಜದೇಹದುಜ್ಜ್ವಳಿಕೆ ಮಸುಳ್ದೆತಂದು ದೊಂದು ತಂದ್ರತೆ ಚಿತ್ರಮಂ ಬಳಸಿದುದು (ಚಂದ್ರಪು. ೯–೭೭).

[ ಸಂ. ತಂದ್ರತಾ ]

**ತಂದ್ರಾವಸ್ಥೆ** (ನಾ). ಸೋಮಾರಿತನ ; ಜಡತೆ : ಅತ್ತ ದೇಶವೂ ಮೂಕ–ಮೂಢ – ತಂದ್ರಾವಸ್ಥೆಯಿಂದ ಎಚ್ಚತ್ತು . . . ತನ್ನ ಭಾವನೆಗಳನ್ನು ವ್ಯಕ್ತಗೊಳಿಸಲು ತೊಡಗಿತು (ಮಹಾಯೋ. ೮೭). [ ತಂದ್ರ + ಅವಸ್ಥೆ ]

**ತಂದ್ರಾಸಿ, ತಂಡರಸಿ** (ನಾ). ಒಂದು ಬಗೆಯ ಗಿಡ: ತಂದ್ರಾಸಿ, ತಂಡರಸಿ, ತನಸಿಮೆಳೆ (ವೃಕ್ಷಾಗಿ. ೯೦-೮೦೭): ಸಂಕೀರ್ಣ: . . . ಹುರಗಲು, ಕಂಗೊಂದಿ, ತಂದ್ರಾಸಿ, ಮುಕ್ಕರಿವೆ (ಸಮ್ಮುಸು. ೨೩೮). **ತಂಡರಸಿ :** ಮೇಲಿನ 'ವ್ಯಟಿಗಿ' ಪ್ರಯೋಗವನ್ನು ನೋಡಿ. [ ? ]

**ತಂದ್ರಿ** (ನಾ). ೧. ಆಲಸ್ಯ ; ನಿರುತ್ಸಾಹ ; ಜಡತೆ : ಸಂದ್ಯತ್ನ ವಾತ್ಮವಾತ್ಮಕೆ ಬೇರೆ ಕರಣದಿಂ ತಂದ್ರಿ ಬಿಡೆ ದೊರೆವುದದು (ಮಂಕುಳೆ. ೬೯೩). ೨. ನಿದ್ದೆಯ ಮಂಪರು ; ಜೊಂಪು : ಲಕ್ಷ್ಮಣನನಪ್ಪಿಸಿದನಾತನುಂ ತಂದ್ರಿಯುಂ ಬಿಟ್ಟೇಳಲನಿಬರುಂ ತೊರೆಯ ಶಿವಸಲಿಲದೊಳ್ ಮೊಗಂ ದೊಳೆದು ಮುಂಬರಿದರ್ (ಶ್ರೀರಾಮಾ. ೦೩೯-೯೦೦): ಓದು ಓದುತ್ತಿರುವಾಗಲೇ ನಿದ್ರೆಯ ತಂದ್ರಿ ಕಣ್ಣಿಗೆ ಸೋಂಕಿಹೋಗುತ್ತಿತ್ತು (ಶಮುಕ. ೦೦೦). ೩. ಗುಂಗು; ತಲ್ಲೀನತೆ: ಬಾಬು ವಿಚಾರತಂದ್ರಿಯೊಳಗಿಂದ ಹೊರಬಿದ್ದು . . . ನೋಡಿದನು (ರಕ್ತಕ್ರ. ೦೫೦) ; ಮಧುಕರನು ತಂದ್ರಿಯಲ್ಲಿಯೇ ಕುಳಿತಿದ್ದನು (ಕೃತಿಕ್ಕ. ೦೦೦). [ ಸಂ. ]

**ತಂದ್ರಿತ** (ನಾ). ಮಗ್ನನಾದವನು; ತಲ್ಲೀನನಾದವನು: ನೀವು ವಿಚಾರದಲ್ಲಿ ತಂದ್ರಿತರಾಗದೆ ಇರಲಾರಿರಿ (ವೀರಚ. ೮). [ ಸಂ. ]

**ತಂದ್ರೀಭೂತ** (ಗು). ಜಡವಾದ; ಮಂದವಾದ; ಚಟುವಟಿಕೆಯಿಲ್ಲದ : ಭರತಂ ವಿಷಾದಭರ ತಂದ್ರೀಭೂತಚೇತಸನಾಗಿರ್ಪುದುಂ (ಪಂಪಾಮಾ. ೬-೦೦೨ ಪ). [ ಸಂ. ]

**ತಂದ್ರೆ** (ನಾ). ೧. ಆಲಸ್ಯ ; ಜಡತೆ : ಸ ನ್ನಿ ಪಾ ತ ಜ್ವ ರ ಲ ಕ್ಷ ಣ ಂ ತಂದ್ರೆ, ನಿದ್ರಾಭಂಗ . . . ಗಂಟಲನೋವು (ಸಕಪ್ಪ. ೯೭). ೨. ಮಗ್ನತೆ ; ಗುಂಗು: ಈ ತಂದ್ರೆಯು ಅವರನ್ನು ಮರುಳುಗೊಳಿಸಿತು (ಮಾಶಿಕೋ. ೯೩). [ ಸಂ. ತಂದ್ರಾ ]

**ತಂಪಗಿ** (ಕ್ರಿ). ತಂಪು ಆವರಿಸು,–ವ್ಯಾಪಿಸು : ಶಿಳಿಗೊಳನ ತಂಪಗಿವ ತೆಕ್ಕೆ ು ತೊಳಲಿಕೆಯ ತಾವರೆಯ ತನಿಪರಿಮಳದ ವಿಸರದ ಹಸರದಲಿ ತೀಡಿ ಬದು ತಂಗಾಳಿ (ಕೂರರಾ. ೨-೬-೩). [ತಂಪು₂(<ತಣ್ಪು₂)+ಅಗಿ₁]

**ತಂಪಿಗ** (ನಾ). ತಂಪನ್ನು ಉಂಟುಮಾಡುವವನು ; ಹಿತವನ್ನುಂಟು ಮಾಡುವವನು : ನೆಲೆಮೊಲೆಗಳಂ ತಡವುತೊತ್ತೊ ತಳಗ್ಗಿಯ್ಯ ತಂಪಿಗ ವಿರಹಮಂ ತವಿಸಿ ನೆರೆಯೊ ಹದಗಾಣಿ (ಚಂಪ್ರ. ೦೯-೩೬).

[ ತಂಪು₂ (<ತಣ್ಪು₂) + – ಇಗ ]

**ತಂಪಿಡಿ** 'ತಣ್ಪಿಡಿ' ನೋ.

**ತಂಪಿಸು** 'ತಣ್ಪಿಸು' ನೋ.

**ತಂಪು₁** (ಕ್ರಿ). ೧. ಶಾಖವನ್ನು ಕಳೆದುಕೊಳ್ಳು; ತಣ್ಣಗಾಗು : ಬಿಸಿಲು ತಂಪುವವರೆಗೆ ಹೊರಗೆ ಹೋಗಬೇಡ (ರೂಢಿ). ೨. (ದುಃಖ ಮೊದಲಾದ ಭಾವನೆಗಳ)ಆವೇಗ ಕಡಮೆಯಾಗು : ಮಂದಿ ಸುಳಿಯದೊಂದೆ ಗುಡಿಲು ; ತೋವು, ನೆರೆಯೊಳು ; ನೆರಳು ಸಾವತನಕ ನನ್ನ ನೋವು ತಂಪಲು (ಇಂಗೀತ. ೯೩-೦೯). [ <ತಂಪು₂ ]

**ತಂಪು₂** 'ತಣ್ಪು₂' ನೋ.

**ತಂಪುಕನ್ನಡಕ** (ನಾ). ಬಿಸಿಲಿನ ಚುರುಕು ಕಣ್ಣುಗಳಿಗೆ ತಗಲದಂತೆ ತಂಪಾಗಿಡುವ ಕನ್ನಡಕ : ಕಣ್ಣಿಗೆ ಬಿಸಿಲಿನ ತಂಪುಕನ್ನಡಕವನ್ನು ಹಾಕಿದ್ದರಿಂದಂತೂ ಯಾರಿಗೂ ನನ್ನ ಗುರುತು ಹತ್ತಲಿಲ್ಲ (ಮೋದಿಮು. ೨೦೭).

[ ತಂಪು₂ (<ತಣ್ಪು₂) + ಕನ್ನಡಕ₂ ]

**ತಂಪುಗೈ** 'ತಣ್ಪುಗೆಯ್' ನೋ.

**ತಂಪುಗೊಳ್** (ಕ್ರಿ). ತಾಪವನ್ನು ಆರಿಸಿಕೊಳ್ಳು; ತಣ್ಣಗೆ ಮಾಡಿಕೊಳ್ಳು: ಹರನುರಿಗಣ್ಣಿಳಿಧೆ ಬೆಂದ ಸಂತಾಪ ಹಿಮವರಕುಚಾನ್ವಿತೆಯರ ತಾಪ ಸ್ಮರ ನಿನ್ನ ಮೆಯ್ಯೊಳಗಿದೆ ತಂಪುಗೊಳ್ಳೆಂದು ತರಳೆ ನೂಂಕಿದಳು ತಾಣ್ಗೊಳದೆ (ಮೋಹತ. ೦೯-೭೮). [ ತಂಪು₂ (<ತಣ್ಪು₂) + ಕೊಳ್₁ ]

**ತಂಪುತೀಡು** (ಕ್ರಿ). ತಣ್ಣಗೆ ಬೀಸು; ತಂಪಾಗಿ ಸುಳಿ: ಇಂದಿರನ ದೆಸೆಗಂಪು ಮೂಡೆ ಕತ್ತರಿಯೊಡೆ ಮಂದಾನಿಲಂ ತಂಪುತೀಡೆ (ಚಿಬಪ್ರ. ೪-೭).

[ ತಂಪು₂ (<ತಣ್ಪು₂) + ತೀಡು₁ ]

**ತಂಪುವಡೆ** 'ತಣ್ಪುವಡೆ' ನೋ.

**ತಂಪುವೆಟ್ಟು** (ನಾ). ಹಿಮವತ್ಪರ್ವತ ; ಹಿಮಾಲಯ : ತಂಪುವೆಟ್ಟಿನ ಬಡಗಭಾಗದೊಳಗೊಪ್ಪುವುದು ಕಿಂಪುರುಷವರ್ಷಂ (ಚಿಬಪ್ರ. ೦೫-೦೭).

[ತಂಪು₂ (<ತಣ್ಪು₂) + ಬೆಟ್ಟು (<ಬೆಟ್ಟು₂) ]

**ತಂಪುವೇಳು** 'ತಣ್ಪುವೇಳು' ನೋ.

**ತಂಪುಹೊತ್ತು** (ನಾ). = ತಂಪೊಟ್ಟು : ಎಂಥ ಪುಣ್ಯಾತ್ಮ ! ಆತನನ್ನು ತಂಪುಹೊತ್ತಿನಲ್ಲಿ ನೆನೆಯಬೇಕು (ರೂಢಿ).

[ ತಂಪು₂ (<ತಣ್ಪು₂) + ಹೊತ್ತು₂ (<ಪೊಟ್ಟು) ]

**ತಂಪುಳಿ** (ನಾ). "ಕಾಯಿಸದ ಕಬ್ಬಿಣಕ್ಕೆ ಆಕಾರ ಕೊಡಲು ಉಪಯೋಗಿಸುವ ಉಕ್ಕಿನ ಅಥವಾ ಕಬ್ಬಿಣದ ಚಾಣ : ತಂಪುಳಿ" (Cold-chisel. ಇಂಕನಿ.). [ ತಂಪು₂ (<ತಣ್ಪು₂) + ಉಳಿ₂ ]

**ತಂಪೆರೆ** 'ತಣ್ಪೆಱೆ' ನೋ.

**ತಂಪೆಸೆ** (ಕ್ರಿ). ತಂಪಾಗಿ ಶೋಭಿಸು,–ಕಂಗೊಳಿಸು: ತಂಪೆಸೆವ ತಣ್ಣೆಳಲ ತಾಣಂ (ಪಸಮೋ. ೪-೨೨). [ ತಂಪು₂ (<ತಣ್ಪು₂) + ಎಸೆ₂ ]

**ತಂಪೇರು** 'ತಣ್ಪೇಱು' ನೋ.

**ತಂಪೇಱು** 'ತಣ್ಪೇಱು' ನೋ.

**ತಂಪೊಟ್ಟು** (ನಾ). ತಂಪಾದ ಹೊತ್ತು; ಸಂಜೆಯ ಹೊತ್ತು; ಸಾಯಂಕಾಲ: ಈ ಪೊಟ್ಟು ತಂಪೊಟ್ಟು ಪೂವಿನ ಪೊಟ್ಟೆಂಬಿನಮಾಯ್ತು ಧಾರಿಣಿಗೆ ಭಾಸ್ವನ್ಮಂಡಲಂ ಕುಂಡಲಂ (ಸೂಕ್ತಿಸು. ೮-೭).

[ ತಂ₁ (<ತಣ್₂) + ಪೊಟ್ಟು ]

**ತಂಬಟ, ತಂಬಟೆ, ತಂಬಟ್ಟು, ತಪಟೆ, ತಪ್ಪಟ, ತಪ್ಪಟೆ, ತಟಟೆ, ತಮಟೆ, ತಮ್ಮಟ್ಟ, ತಮ್ಮಟೆ, ತಮ್ಮಟ್ಟೆ** (ನಾ). ಒಂದು ಬಗೆಯ ಚಪ್ಪಟೆಯಾದ ಚರ್ಮವಾದ್ಯ ; ಹಲಗೆ : ವಿಳ್ಳಿಪ ಪಟಯಿಗೆ ಸೂಳ್ವಿಪ ತಂಬಟ [ಹಾಳಂ. ಮೃ]ಟಂ (ವರ್ಧಪು. ೮-೫೦) ; ಬೀಸುವ ಚಾಮರದ ಪೊಯ್ಯು ತಂಬಟದ . . . ಸರ್ವಸಂಭ್ರಮದ ನಡುವೆ ಸಕಲ ಜನದಾನಂದರಸಂ ಮಡುಗಟ್ಟಿ (ಸಂಪರ. ೮-೫೫) ; ಕಾಟಿಸುವ ತಂಬಟದ . . . ಕಾಳೆಯ ಬಲ್ಲುಲಿಯ ಸಡಗರಮೆಲ್ಲಾ ದೆಸೆಗಳಂ ಕಿವುಂಡುವಡಿಸೆ (ಕಳ್ಳಾಕಾ. ೨೫೦) ; ತುಡುಕಿದವು ತಂಬಟದ ದನಿ ಜಗದಡಕಿಲನು (ಕಿಪ್ಪಾಯ್ಕಷ್ಮೀ. ೬-೯೬) ; ಭೇರಿ ತಂಬಟ ಬೊಂಬುಳಿ ಬುರುಗು ಡಿಂಡಿಮದ ಮುಂಬರಿದೆಸೆವ ರವಗಳಾಕಾಶವ ತುಂಬಿದುವು (ಕಂಪಪು. ೮-೦೯). **ತಂಬಟೆ :** ಭೇರಿ ತಂಬಟೆ ನಿಸ್ಸಾಳ ಕಹಳೆಗಳ ಭೂರಿ ನಿನದ (ಅಂಜಚ. ೫-೯೯) : ತಂಬಟೆ ಡೋಳು ಚಂಬಕವಜ . . . ಕಹಳೆಗಳ ದನಿಯ ಬೆಂಬಳಿ (ಕುರಾಸಾಂ. ೦೦-೩೬) ; ಪಟಿಯ ಪೆರ್ಗಾಳೆಯ ಪಳಹದ ಕೊಬಲು ತಂಬಟೆಯು . . . ಭೇರಿಯ ಭೂರಿ ನಿನಾದಂ ದೆಸೆಮುಟ್ಟೆ ಪಳಂಚಲೆಯೆ (ರಾಮಾಕ್ಕ. ೫೦-೦) ; ತಂಬಟೆಯ ಹೊಯ್ದು ಮ್ಯಮರೆತವರು ಹಲರು (ವಿಶೀಗಿ. ೨೫-೪). **ತಂಬಟ್ಟು :** "ಆನಕ" (ನಾಚರಾ. ೬). **ತಪಟೆ :** ಕಠಿನ ದುಂದುಭಿ ತಪಟೆ ತಾಳ ಮದ್ದಲೆಗಳುಂ . . . ದಿಕ್ತಟಗಳೊಳ್ಮೊಳಗುತಿವೆ (ಅರ್ಜಾವಿ. ೨೪-೩೦). **ತಪ್ಪಟೆ :** ಕೊಂಬು ಕೊಳಲು ತಾಳ ತಪ್ಪಟೆ ಭೇರಿ ಸಂಭ್ರಮದಿಂದ ವೃಂದಾವನ ಸೇರಿ (ಪ್ರಸಧಾ. ೨೩-೪). **ತಪ್ಪಟೆ :** ಕೊಂಬು ಕೊಳಲು ತಪ್ಪಟೆ ಮೃದಂಗದ ರವ ತುಂಬಿತು ಲೋಕವನಿರದ (ರಾಮುವಿ. ೬-೦೨) ; ಚಪ್ಪಾಳೆಗಳ ರವ ಕೊಂಬು ಕೊಳಲು ಹೊನ್ನ ತಪ್ಪಟೆಗಳ ದನಿಯಿಂದ ಸರ್ವಶಯನ ರಂಗಧಾಮನ ತೇರು ಬಂದೊಪ್ಪಿತು ಮುನ್ನಿನ ಸ್ಥಳದೆ (ಕಂಸವಿ. ೨೫-೦೦೦). **ತಟಟೆ :** ತಟಟೆ ಕಾಸಿ ಸಿದ್ಧ ಮಾಡಿಕೊಂಡರು (ರೂಢಿ). **ತಮಟೆ :** ತಮಟೆಯನ್ನು

ಕಾಯಿಸಿ ಹೆಗಲಿಗೆ ಹಾಕಿಕೊಂಡು (ಹುಟ್ಟಿಹ. ೧೯): ಎದೆ ತಮಟೆಯಂತೆ ಬಡಿಯತೊಡಗಿತು (ಸಿಡಿಲು. ೮೭). **ತಮ್ಮಟ್ಟ₁:** ಪೊಯ್ಯೆ ನಿಸ್ಸಾಳ ತಮ್ಮಟದ ಭೇರಿಗಳಲ್ಲಿ ನೆರೆದುದು ಚಾತುರಂಗ ಬಲ (ಇಹರ. ದೇ. ೩೭-೨೧); ಸೂಳೈಪ ತಮ್ಮಟಂಗಳ . . . ಸಂಭ್ರಮದ ಸೌರಂಭದಿಂ ವಿಜಾಪ ನಡೆದನು (ಸಿದ್ಧರಾ. ೬-೨೧); ತಮ್ಮಟವೆಂಬ ಹಲಿಗೆ ಶಂಖವೆಂಬ ಧವಳ . . . ಜಯಘಂಟೆಯೆಂಬ ಜಾಗಟೆ ಇತ್ಯಾದಿ ಪಂಚಮಹಾವಾದ್ಯಂಗಳಂ (ವಿಜೀಳ. ೨೩೭); ಪಟಹ ತಮ್ಮಟ ಢಕ್ಕೆ ಡವುಡೆ ಕಹಳಾ ಸಮುತ್ಕಟನಾದವಳ್ಳಿಯಿಂ (ಚಲಖ. ೧೬-೧೩). **ತಮ್ಮಟೆ:** "ಆನಕಃ, ಪಟಹಃ-೨ ತಮ್ಮಟೆ ಹೆಸರುಗಳು" (ಸಿದ್ಧಾಂತಿ. ೫೪); ಮನಸ್ಸಿನಲ್ಲಿ ಬಂದರೆ . . . ಹದಿನೇಳುನೂರು ಡೋಲ್ಕು ನಗಾರಿ, ಹಲಿಗೆ, ತಮ್ಮಟೆ, ಶಂಖ, ತುತ್ತೂರಿಗಳನ್ನು ಬಾರಿಸಬಹುದು (ಕಂಠೀಹಂ. ೦೪೫). **ತಮ್ಮಟ್ಟೆ:** ಟೀಱಿದವು ಕಹಳೆಗಳುಂ ತಮ್ಮಟ್ಟೆ ಭೇರಿ ನಿನಾದ (ರಾಮಕ. ೨೩-೧).

[ದೇ.॥ ತಮಿ. ತವ್ವುಟ್ಟ, ತಪ್ಪಟ್ಟ, ತಪ್ಪಟ್ಟೈ; ಮಲ. ತಮ್ಮಿಟ್ಟ, ತಕ್ಕಿಟ್ಟ; ತುಳು. ತಂಬಟ, ತಂಬಟೆ, ತಂಬಡ, ತಬಟೆ, ತಮಟೆ, ತಮ್ಮಟೆ ; ತೆಲು. ತಮ್ಮಟ, ತಪ್ಪೆಟ ; ನಾಯ್ಕಿ. ತಪ್ಪಟೆ, ತಪ್ಪ ]

**ತಂಬಟಜಾಲಿ** 'ತಂಬತ್ತಿಜಾಲಿ' ನೋ.

**ತಂಬಟಕಿ** (ನಾ). (?) : ಹರಿಸು ಭೀಯಿಂದು ತುಚ್ಛಿತ ಬುದ್ಧಿಗಂಡರೆನು ತೊಱಿಸುವರ್ ಸಲಿಗೆಯಿತ್ತನ್ಯೋನ್ಯದಿಂ ಮೆಲ್ಲನೆ ತರಿಸುವರ್ ಅರಿಯ ದೋಲ್ ಮನೆಯ ತಂಬಟಕಿಯರ ಮೂಲದಿಂ ಲೂಟಿಯಂತೆ (ಜಿನಮು. ೪೯-೪೦) [ ? ]

**ತಂಬಟಿಗ** (ನಾ). ತಾಮ್ರದ ಕೆಲಸ ಮಾಡುವವನು : ಸ್ವರಮಾನಱಿಗೆ ಶಾಂ ಭರತಜ್ಞನಂದದಿಂ . . . ಎಱಕಮನಱಿಗೆ ತಂಬಟಿಗನಂತೆ (ಮುದ್ರಾ. ೧೦-೭೭). [ ತಂಬ₀ (<ತಾಂಬ್ರ) + – ಅಟಿಗ ]

**ತಂಬಟೆ** 'ತಂಬಟ' ನೋ.

**ತಂಬಟೆಗ** (ನಾ). ತಮಟೆ ಬಾರಿಸುವವನು : ಡೊಂಬಿಯ ತಂಬಟೆಗರು ಪಾಡುವ ಶಿವದಿಗಳು (ಸಾಹಿಶಿ. ೮೩). [ತಂಬಟೆ (<ತಂಬಟ) + – ಗ₃]

**ತಂಬಟೆಹೊಯಿಲು** (ನಾ). ತಮ್ಮಟೆಯ ಬಡಿತ : ತಂಬಟೆಹೊಯಿಲಿಲ್ಲ ವಾದ್ಯದ ಹಲುಬಿಲ್ಲ. ಹೆಣವ ಕೋಟೆಗೆ ನಾವು ತ್ವರೆಯಲೊಯ್ದಾಗ (ಇಂಗೀತ. ೧೯-೦). [ತಂಬಟೆ (<ತಂಬಟ) + ಹೊಯಿಲು (<ಪೊಯ್ಯು)]

**ತಂಬಟ್ಟ** 'ತಂಬಟ' ನೋ.

**ತಂಬತ್ತಿ** (ನಾ). = ತಂಬತ್ತಿಜಾಲಿ : (+). [ ? ]

**ತಂಬತ್ತಿಜಾಲಿ,** ತಂಬಟಜಾಲಿ (ನಾ). ಬಿಳಿಯ ಉದ್ದನೆಯ ಮುಳ್ಳು ಗಳಿರುವ, ಸುವಾಸನೆಯ ಹಳದಿ ಹೂವುಗಳನ್ನು ಬಿಡುವ ಒಂದು ಬಗೆಯ ಜಾಲಿ ; ಸುಗಂಧಜಾಲಿ: (+). **ತಂಬಟಜಾಲಿ :** ಪೀಕಜಾಲಿ, ತಂಬಟಜಾಲಿ (ವ್ಯಶಿಗಿ. ೧-೦೨). [ ತಂಬತ್ತಿ + ಜಾಲಿ₁ ]

**ತಂಬನಿ** 'ತಣ್ಬನಿ' ನೋ.

**ತಂಬಲ** (ನಾ). ೧. ಒದ್ದೆ; ತಂಪು; ತೇವ. 'ತಂಬಲಗಱ' ಪರಾ. (ಗು). ೨. ಆರ್ದ್ರ, ತೊಯ್ದ" (ಜಾನಕೋ. ೬೫).

**ತಂಬಲದ ಹುಳು** = ಬಚ್ಚಲು, ಮೋರಿ ಮೊದಲಾದ ತೇವವಾದ ಜಾಗಗಳಲ್ಲಿ ಇರುವ ಒಂದು ಬಗೆಯ ಹುಳು ; ಬಾಲದ ಹುಳು. [ <ತಣ್ಪು₂ ]

**ತಂಬಲಗಱ[3]** (ಕ್ರಿ). ತೇವವನ್ನುಂಟುಮಾಡು ; ತಂಪುಗೊಳಿಸು : ಶ್ರೀಕೃಷ್ಣನಂಭೋಧಿಮಾರ್ಗಣದಿಂದೆ ಮುಂಬರಿದೈದುವ ಕಾಲಾಗ್ನಿಯ ಮೆಟ್ಟ ತಂಬಲಗಱದನಾ ಬಲಕೆ (ಮೋಹತ. ೩೭-೫೮). [ ತಂಬಲ + ಕಱ[1] ]

**ತಂಬಹಾಲು** 'ತಣ್ಪಾಲ್' ನೋ.

**ತಂಬಳಕೋಲ್** (ನಾ). ಭೂಮಿಯನ್ನು ಅಳೆಯುವ ಒಂದು ಅಳತೆ ಗೋಲು,-ಪ್ರಮಾಣ (?) : ಪವಿತಗೆಯ ಸಾಲೆಯ ತ್ರಾಯಿಪುರುಷ ದೇವಗ್ಗೆಯಲ್ಲಿಯು ತಂಬಳಕೋಲಲಿನ್ನೂಱು ಮತ್ತರು ಕೆಯ್ಯು (ಎಇ. IV, ೬೫-೦೭ ; ಸು. 11ನೆಯ ಶತ). [ ತಂಬಳ₀ + ಕೋಲ್₁ ]

**ತಂಬಳಿ** 'ತಂಬುಳಿ' ನೋ.

**ತಂಬಾಕ** 'ತಂಬಾಕು' ನೋ.

**ತಂಬಾಕು,** ತಂಬಾಕ (ನಾ). ಒಂದು ಬಗೆಯ ಗಿಡ ಮತ್ತು ಅದರ ಸೊಪ್ಪು ; ಹೊಗೆಸೊಪ್ಪು : ತಂಬಾಕು, ಕಾಡುಸುಣ್ಣ ಹೊಗೆಸೊಪ್ಪು (ವ್ಯಶಿಗಿ. ೭೦-೧೪೫೨); ಅದೇ ಗುಡಿಸಲಿನಲ್ಲಿ ದೇವದಾಸ ತಂಬಾಕು ಸೇದುತ್ತಾನೆಂಬುದು ಪಾರ್ವತಿಗೆ ಗೊತ್ತಿದ್ದಿತು (ದೇವದಾ. ೮); ತಂಬಾಕು ಮಿಶ್ರಿತ ಕವಳವು ಅವರ ಗಲ್ಲವನ್ನು ಯಾವಾಗಲೂ ಉಬ್ಬಿಸುತ್ತಿತ್ತು (ರಂಗಕೋ. ೧). **ತಂಬಾಕ :** ಹಾಳುಭೂಮಿಗಳಲ್ಲಿ ಸಜ್ಜೆ ಮತ್ತು ಜೋಳವು ಗೊಬ್ಬರ ವಿಶೇಷವಾದರೆ ತಂಬಾಕವು ಬೆಳೆಯುತ್ತವೆ (ಕೃಷಿಶ. ೬೭); ಸಿಂಹಲದ್ವೀಪದಲ್ಲಿ . . . ಕಬ್ಬು, ತಂಬಾಕ, ಬುಂದು ಮುಂತಾದವುಗಳು ಬೆಳೆಯುತ್ತವೆ (ಮುಂಬಯಿ. ೪-೨೦೧); ತಂಬಾಕವನ್ನು ನಿಂದಿಸುತ್ತಲೇ ಅದನ್ನು ಅಗಿಯಲು ಸುರುವು ಮಾಡುತ್ತಾರೆ (ಗಾಳಿಗು. ೨೮).
[ ←ಹಿಂ. ತಂಬಾಕೂ, ತಮಾಕೂ ; ಮರಾ. ತಂಬಾಕೂ, ತಂಬಾಖು, ತಮಾಕೂ, ತಮಾಖು. / ಇಂ. Tobacco. / ಪೋರ್ಚ್. ಸ್ಪ್ಯಾನಿಷ್. ಟಬಾಕೋ ; ಜಪಾನೀ: ತಾಬಾಕೋ ]

**ತಂಬಾಲ್** 'ತಣ್ಪಾಲ್' ನೋ.

**ತಂಬಾಲ** (ನಾ). ಒಂದು ಊರಿನ ಹೆಸರು (?) : ಪಾರಾಶಗೋತ್ರದ ಆಪಸ್ತಂಬ ಸೂತ್ರದ ತಂಬಾಲದ ಕೃಷ್ಣಭಟರ ಮಕ್ಕಳು ದೇವಣಭಟರು (ಎಕ. XII, ತಿಪಟೂ. ೧೩೯-೦೨೫ ; ?). [ ? ]

**ತಂಬಾಲು** 'ತಣ್ಪಾಲ್' ನೋ.

**ತಂಬಾಣ** 'ತಾಂಬಾಣ' ನೋ.

**ತಂಬಾಳೆ** 'ತಾಂಬಾಣ' ನೋ.

**ತಂಬಿ₁** 'ತಮ್ಮ' ನೋ.

**ತಂಬಿ₂** (ನಾ). ದಂಡಿಸುವಿಕೆ ; ದಂಡನೆ ; ಶಿಕ್ಷೆ.

**ತಂಬಿ ಪಹುಂಚಾಯಿಸು** = ದಂಡಿಸು ; ಶಿಕ್ಷಿಸು : ತಮ್ಮ ರಾಜ್ಯದಲ್ಲಿ ಟೀಪುಸುಲ್ತಾನರ ಕಡೆಯಿಂದ ಉಂಬಳಿ ಪಡಕೊಂಡು ಇದ್ದಂತಾ . . . ಮುಸಲ್ಮಾನರಿಗೆ ತಂಬಿ ಪಹುಂಚಾಯಿಸಿ ಅವರನ್ನು ಪಲಾಯನಮಾಡಿ (ಇತಿಹಂಸ. ೨೦). [ ←ಅರ. ತಂಬೀಹ್ ; ಮರಾ. ತಬೀ ]

**ತಂಬಿಗೆ** 'ತಂಬುಗೆ' ನೋ.

**ತಂಬಿಟ್ಟು₁,** ತಣ್ಪಿಟ್ಟು (ನಾ). ಹುರಿಕಡಲೆ, ಅಕ್ಕಿ ಮೊದಲಾದುವು ಗಳ ಹಿಟ್ಟಿನಿಂದ ಮಾಡುವ ಒಂದು ಬಗೆಯ ಸಿಹಿ ತಿಂಡಿ: ಕಬ್ಬಿನ ರಸ ಜೇನುತುಪ್ಪ ನವಣೆಯ ಹಿಟ್ಟಿನ ತಂಬಿಟ್ಟು ಹೂರಿಗೆ ಕಡುಬು . . . ಮಂತ್ರಸಮನ್ವಿತವಾಗಿ ಪೂಜಾದಿನ ಬಲಿಯಂ ಕೊಡಲು (ಜಾಲತಿ. ೦೩೨-೨); ತಂಬಿಟ್ಟು ಕೊಡುವೆನು ದಾಸಯ್ಯ (ಪುರಂದ. ೨-೬-೫); ನಾಳಿಗೆ ಬೆಣ್ಣೆ ನೈವೇದ್ಯ, ತಂಬಿಟ್ಟು ನೈವೇದ್ಯ, ಕಡುಬು ನೈವೇದ್ಯ, ಅನ್ನೋದಕ ನೈವೇದ್ಯವೆಂದು ಪಲತೆರದ ಹರಕೆಯಂ ಪೊತ್ತರೆ (ಶರಲೀ. ೪೦೬); ನೆನಗಡಲೆ ಚಿಗುಳಿ ತಂಬಿಟ್ಟು ಉಂಡಲಿಗೆ ನಾನಾ ಫಲಂಗಳು (ಸೌಗಂಧಿ. ೪೩-೧೭); ತಂಬಿಟ್ಟು ತಣ್ಣುಹಿಟ್ಟು. ದೇವರನ್ನು ತಣಿಸುವ, ಅಥವಾ ದೇವರ ಕೋಪ ವನ್ನು ಶಂಪು ಮಾಡುವ ಹಿಟ್ಟು (ನಮ್ಮನು. ೮೪); ತಂಬಿಟ್ಟಿಗೆ ಉಪ್ಪುಂಟೆ ತವರಿಗೆ ಮುಪ್ಪುಂಟೆ? (ಹಳ್ಳಿಜಾ. ೮೩). **ತಣ್ಪಿಟ್ಟು :** ರೊಟ್ಟಿ ಸಕ್ಕರೆ ತುಪ್ಪ ಬೆಲ್ಲ ಗೋಧುವೆ ತಣ್ಪಿಟ್ಟು ರಾಯುಳ್ಳಿಯಪಿನಿಯ ಒಟ್ಟಿಲು . . . ಅಂಗಡಿಯೊಳು (ಕುಮಾರರಾ. ೯೨-೬೧). [ತಣ್₂+ಪಿಟ್ಟು /ಕೊಡ. ತಂಬುಟ್ಟೀ]

**ತಂಬಿಟ್ಟು₂** (ನಾ). ಒಂದು ಬಗೆಯ ಗಿಡ: ತಂಬಿಟ್ಟು, ಕುಕ್ಕುಟ, ಉತ್ಪಾಲ (ಪ್ರುಶಿಗಿ. ೫೨-೧೦೩೮). [ ? ]

**ತಂಬಿಲ** (ನಾ). (ಕರಾ) ಭೂತಗಳಿಗೆ ಮಾಡುವ ನೈವೇದ್ಯ: ಬನದ ಪಂಜುರ್ಲಿ ಇವನಲ್ಲಿ ಕೇಳಿ 'ತಂಬಿಲ' ವನ್ನು ಸ್ವೀಕರಿಸುತ್ತಾನೆ (ದೇಶಮ. ೪).
[ ←ತುಳು. ತಂಬಿಲ, ತಂಬಿಲೊ ]

**ತಂಬಿಸು₁** 'ತಣ್ಬಿಸು' ನೋ.

**ತಂಬಿಸು₂** (ಕ್ರಿ). ೧. ಸ್ತಂಭೀಭೂತವಾಗು; ನಿಶ್ಚಲವಾಗು; ನಿಂತುಬಿಡು: ಸೂತ್ರ ಹಱಿದ ಕಾವನ ಕೈಯ ಜಂತ್ರದ ಪುತ್ರಿಕೆ ನಿಂದ ಮಾಳ್ಕೆಯೊಳು ಧಾತ್ರೀಪತಿಯ ಮೊಗವ ಕಾಣುತಾ ಮೃಗನೇತ್ರೆ ತಂಬಿಸಿ ನಿಂದಳಾಗ (ಶ್ರೀಪಾಂ. ೪-೧೧೯). ೨. ತಡೆ ; ನಿಲ್ಲಿಸು: ಲಂಕಾಪುರದ ಲಗ್ಗೆಗೆ ಬೇಗ ಬೆಸಸಂ ಕೊಡುವುದೆಂದೆನಲು ಧರಣಿಪತಿಗಳ ನೀತಿ ಸಂಧಿಯ ಪರುಠವಿಪುದದ ಮೀರಿದಡೆ ಸಂಗರಕೆ ನೇಮವನೀವೆನೆಂಡವರುಗಳ ತಂಬಿಸಿದ (ಅಸಂರಾ. ೩ ೮-೧೦): ಕುಸುಮಮಂಜರಿಯಲ್ಲಿಯಧ್ವಗರ ತಂಬಿಸುವ ಸುಸ್ವರದ ಶುಕಪಿಕಂ ಕಾಣದಿಳೆಯಿಲ್ಲ (ಜಿನಮು. ೨-೦೮). ೩. ತೊಲಗಿಸು; ನಿವಾರಿಸು: ತುಂಬಿಗಳನೋಡಿಸದ ಚಂಪಕಂ ಸೋಕ್ಕಾನೆಯಂ ಬೆದಱಿಸದ ಸಿಂಗಮಂ ದಂಧಕಾರಮಂ ತಂಬಿಸದ ಚಂದ್ರಮಂಡಲಮಿರಲ್ (ಪ್ರಭುಥಾ: ೮-೨೦).
[ <ಸ್ತಂಭಿಸು ]

**ತಂಬು, ತಂಬೂ** (ನಾ). ತಾತ್ಕಾಲಿಕ ವಾಸಕ್ಕಾಗಿ ಹಾಕಿರುವ ಬಟ್ಟೆಯ ಬಿಡಾರ ; ಗುಡಾರ ; ಡೇರೆ : ಹೊದಿಸಿದ ತಂಬು ಅಂಬರ ತಾಗುವಂದದಿ ಪೈಸರಿಸಿ ನಿಲ್ಲಿಸಿದ ಬಲವಾ (ಸೌಂದಕಾ. ೬-೨೨) : ಮಹಾರಾಜರವರ ತಂಬಿಗೆ ಬಂದು (ರಾಜೇಂದ್ರ. ೯೩) ; ಈಗ ತಂಬು ಡೇರೆ ಮುಂತಾದ ದಂಡಿನ ಸಾಮಾನುಗಳನ್ನು ಮಾತ್ರ ಅವುಗಳ (ಆನೆಗಳ) ಮೇಲೆ ಹೇರುತ್ತಾರೆ (ಮುಂಬಯಿ. ೪-೨೩). **ತಂಬೂ :** ಅರಸುಮಗನ ಸ್ವಂತ ತಂಬೂದಲ್ಲಿ ಬಹಳ ಹೊತ್ತಿನಿಂದ ಸಂಗೀತ ಕಚೇರಿಯು ನಡೆದುದನ್ನು ಹೋದ ಕೂಡಲೆ ಕಂಡೆ (ಶ್ರೀಕಾಂತ: ೨) : ಸರ್ಕಸ್ಸಿನ ತಂಬೂದಲ್ಲಿ ಬಂದು ತಂತಿಯನ್ನು . . . ಸೂಕ್ಷ್ಮವಾಗಿ ನೋಡುತ್ತ ನಿಂತಾಗ (ಬೀದಿಮ. ೪೯).
[ ←ಪಾರ. ಹಿಂ. ಮರಾ. ತಂಬೂ ]

**ತಂಬುಗೆ, ತಂಬಿಗೆ** (ನಾ). ತಾಮ್ರ, ಹಿತ್ತಾಳೆ ಮೊದಲಾದ ಲೋಹಗಳಿಂದ ಮಾಡಿದ ನೀರಿನ ಸಣ್ಣ ಪಾತ್ರೆ; ಚೆಂಬು ; ಚರಿಗೆ : "ಜಲಪಾತ್ರೆಯ ಕಮಂಡಲಂ ಗಿಂಡಿ ತಂಬುಗೆ" (ಮಂಗರಾ. ೬೩-೨೫) ; ಮಡದಿಯರಾವಗರ [ಕೆ]ರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರ್ (ಶಾಶ. IV, ೧-೫೭; 1204); ನೀಗೆರ್ಗೊಟ್ಟ್ಪಳೊಂದು ಪೊಸ ತಂಬುಗೆಯಿಂ (ದಶಕು.೧೨-೦೨೯); ಪೊನ್ನ ತಂಬುಗೆಗಳೊಳು ಮೊಗೆ ಮೊಗೆದು (ಬಸಪು. ೫೮-೬೮): ತಳಿಗೆ ತಂಬುಗೆ ಗಿಂಡಿ ಹರಿವಾಣ ಪಡಿಗ ಬಟ್ಟಲು ಮೊದಲಾಗಿ ಭೋಜನಕೆ . . . ಅನುಗೊಳಿಸಿದರು (ಭರತ. ೪-೫೮). **ತಂಬಿಗೆ :** ಮಿಗೆ ರಮ್ಯವಡೆದ ಹೊಂಬರಿಯಣ ತಳಿಗೆ ತಂಬಿಗೆ ಗಿಂಡಿ ಗಿಣ್ಣಲುಗಳನು ನಗೆಮೊಗ ದರ್ಪಣ ಹಂಸಪುತ್ರಳಿಯ ದೀವಿಗೆಗಂಬಗಳನಿತ್ತನೊಲಿದು (ಪೋಹಶ. ೦೫-೦೮); ಹೊನ್ನ ತಂಬಿಗೆ ಗಿಂಡಿ ಪನ್ನೀರ ಚಂಬಿನಲಿ ಪೂರ್ಣ ಜಲವ ಕೊಂಡು (ಕಂಸವಿ. ೫-೫೫); ಕರತಳದಲ್ಲಿ ತಾಳ್ದು ಶಶಿಕಾಂತದ ತಂಬಿಗೆಯಂ (ಚಂದ್ರಭು. ೨-೩೦) ; ಅಲ್ಲಿ ತಂಬಿಗೆಯಲ್ಲಿ ನೀರಿದೆ ಕೈಕಾಲು ತೊಳೆದುಕೊ (ನಿಷ್ಕಾಮ. ೩೭); ಗಂಗೆಗೆ ಹೋದರೂ ತಂಬಿಗೇ ಮೇಲೆ ಜ್ಞಾನ (ಗಾದೆ); ಮನೆ ನಿಮ್ಮದು ತಂಬಿಗೆ ಮುಟ್ಟಬೇಡ (ಗಾದೆ). 'ಚೆಂಬು₁' ಪರಾ.

**ತಂಬಿಗೆ ತೆಗೆದುಕೊಂಡು ಹೋಗು** = ಶೌಚಕ್ಕೆ ಹೋಗು ; ಮಲವಿಸರ್ಜನೆಗೆ ಹೋಗು: ಅವನೀಗ ಇಲ್ಲ. ಮುಂಚಾನೆಯೇ ತಂಬಿಗೆ ತೆಗೆದುಕೊಂಡು ಹೋಗಿದ್ದಾನೆ (ರೂಢಿ). **ತಂಬಿಗೆ ಕೈಗೆ ಬರು** = ಬೇಡುವಂತಾಗು ; ಭಿಕ್ಷೆಗೆ ಹೋಗುವಂತಾಗು : ಸಿರಿ ಇದ್ದಾಗ ಮೆರೆದಿದ್ದನು. ಈಗ ತಂಬಿಗೆ ಕೈಗೆ ಬರುವಂತಾಯಿತು (ರೂಢಿ).
[ ದೇ.॥ ತಮಿ. ತವ್ವಿಕ್ಕೈ ; ತುಳು. ತಂಬಿಗೆ ; ತೆಲು. ತಂಬಿಗಿ, ತಂಬುಗ ]

**ತಂಬುರಿ** 'ತಂಬೂರಿ' ನೋ.

**ತಂಬುಲ, ತಾಂಬುಲ, ತಾಂಬುಳ, ತಾಂಬೂಟ, ತೊಂಬಲ₁, ತೊಂಬಲು** (ನಾ). ೧. ಅಡಕೆ; ಕ್ರಮುಕ: "ತಂಬುಲಂ, ಕ್ರಮುಕಂ–ಈ ೨ ತಂಬುಲಂ" (ಹಲಾಯು. ೯೦-೩೯೦): ಕ[ಯ್ಯ]ಲೆ ಕಯ್ಯೊಳೆ ಬಾಯ ತಂಬುಲಂ ಬಾಯೊಳೆ ತೋಱೆ ಮೆಯ್ಮಱೆದು ನೋಡಿದಳಾ ಸಮರೈಕಮೇರುವಂ (ಪಂಪಭಾ. ೪-೩೭). ೨. ವೀಳೆಯ ; ಅಡಕೆ ಮತ್ತು ಎಲೆ : "ತಂಬೂಲಮೆಂದು ವೀಳೆಯಮೆಂದುಂ ವೀಟಿಕೆ" (ಶಶಸಾ. ೨೫-೫೩೬): ಪೂವುಂ ತಂಬುಲಮುಂ ತಿಂಬಡಂಗಳುಂ ಬಂದುವು (ವಡ್ಡಾರಾ. ೦೦೬-೨೦) ; ತಂಬುಲಮಿಲ್ಲದ ವದನಂ . . . ಶೀತಲಜಲಮಿಲ್ಲದ ಪೂಗೊಳಂ ಮನಂಗೊಳಿಸುಗುಮೇ (ಅಜಿಪು. ೬-೯೫) ; ಒಂದನಲ್ಲದೆ ನಿನ್ನ ತಲೆಗೆರಡಂಬ ತೊಡಚಿದರೆ ಇಂದು ನಿನ್ನಯ ಬಾಯ ತಂಬುಲ ತಿಂದವನು ನೋಡು (ಕುಮಾರರಾ. ೦೭-೩೮). ೩. ಅಗಿದು ಉಗುಳುವ ಕವಳ ; ಚರ್ವಿತ ತಾಂಬೂಲ : ಕುರ್ಚಿಯ ಹಿಮ್ಮಗ್ಗಲು ಇರುವ ಕಿಟಕಿಯಲ್ಲಿ ತಂಬುಲದ ಪಿಚಕಾರಿಯನ್ನು ಬಿಡುತ್ತಿದ್ದರು (ರಂಗಕೋ. ೧). ೪. ಒಂದು ಬಗೆಯ ತೆರಿಗೆ; ತಂಬುಲಿಗರು ಕೊಡಬೇಕಾದ ತೆರಿಗೆ : ಮನ್ನೆಯದೆಱ್ ಆಳಿವಸತಾಯ ಪೊ[ಗೆ]ವೊಗೆ ತಳಾಱಿಗೂಲಿ ಇxದಿ ತಂಬುಲಂ ಮೊದಲಾಗಿ ಆತನ ಮಕ್ಕಳ್ಳ[ರುಳ್ಳ]ರ ಸರ್ವ್ವಬಾಧಪರಿಹಾರಂ ಕಾದು ನಡೆಯಿಸುವರ್ (ಶಾಶಾ. XI-1, ೬೫-೨೨: 1042) : ಚೈತ್ರವೈತ್ರಕೆ ಬಟ್ಟ ಪಣ ೪ ದಿವಸವಳ ದೇವ[ರ] × × × ಕೆಯರಂ × ಗಡಿಯ ತಂಬುಲಮಂ ಬಿಟ್ಟರು (ಶಾಶಾ. XX, ೦೩೭-೯; 1180). **ತಾಂಬುಲ :** ೨. ನಿಟಿಲಕ್ಕೆ ತಿಲಕಮದು ಕುಂತಳಕೆ ಕುಸುಮಗಳ್ ತುಟಿಗೆ ತಾಂಬುಲರಸಂ (ಪರಕು. ೦೫ ೩೫). **ತಾಂಬುಳ :** ೨. ಶ್ರೀ ಕೇದಾರೇಶ್ವರ ದೇವರಂಗಭೋಗಕ್ಕಂ ಧೂಪಾರತಿ ನಿವೇದ್ಯ ತಾಂಬುಳ ನಂದಾದೀವಿಗೆ ಪಾತ್ರ ಸಾವುಳಕ್ಕಂ (ಕಶಿಅ. ೦೬-೫-೨೭ ; 1186). △ **ತಾಂಬೂಟ :** ೨. ಬ್ರಹ್ಮೇಶ್ವರ ದೇವರಂಗಭೋಗ ಜಳಗಂಧಾಕ್ಷತೆ . . . ತಾಂಬೂಟಮೆಂಬ ಅಷ್ಟವಿಧಾರ್ಚನೆಗಂ (ಶಾಶಾ. XX, ೮೪-೪೬ ; 1128). **ತೊಂಬಲ₁ :** ೨. "ನಾನು ತೊಂಬಲ ತಂದುಕೊಡುತ್ತೇನೆ" ಎಂದವಳೇ . . . ವೀಳ್ಯ ಸಜ್ಜುಗೊಳಿಸುವ ನೆವದಿಂದ ಹೊರಟುಹೋದಳು(ಇಕ್ಕಳ. ೨೫೦). ೩. "ತೊಂಬಲ–ಎಂಜಲು" (ಜಾನಕೋ. ೬೮). **ತೊಂಬಲು :** ೩. ಚಿತ್ರ ನಿನ್ನಲ್ಲಿಡಿಸಿ ಕಾಯೊ ಕೊತ್ತಿನ ತೊಂಬಲು ತಿಂಬೆ (ಪೋಕ್ಷದೀ. ೩೦-೭) ; ಜಗದೀಶಾ ನಿನ್ನಯ ಉಗುರು ಕಾಣದವರು ಉಗುಳಿದಾ ತೊಂಬಲು ನಾನು (ಪೋಕ್ಷದೀ. ೮೯-೩).

**ತಂಬುಲ ತಿನ್ನು** = ಎಂಜಲನ್ನು ತಿನ್ನು : ಅವಳ ತಂಬುಲ ತಿನ್ನೋದಕ್ಕೆ ಅಲ್ಲಿಗೆ ಏಕೆ ಹೋದೆ ? (ರೂಢಿ). **ತಂಬುಲದೆಲೆ** = ವೀಳ್ಯದೆಲೆ : ಎರ್ಕೆಯಲೆಸಾಸಿವೆ ತಂಬುಲದೆಲೆಯಿವನಿಕ್ಕುಗೆ ಗೋಕುಲಕ್ಕೆ ರುಜೆ ತೀರ್ಗುಂ (ಲೋಕೋಪ. ೯-೨೧೮) : ಒಂಭತ್ತೆಕ್ಕೆಯ ಪೂವಂ ತಂಬುಲದೆಲೆ ಮೂಱಿರಲ್ಲಿ ಮಿದಿದಿಕ್ಕುಗೆ ಶೀತಂ ಬಪ್ಪಾಗಳು (ಕಲ್ಯಾಕಾ: ೩-೪೫). [ <ಸಂ. ತಾಂಬೂಲ ]

**ತಂಬುಲಂಗುಡು** 'ತಂಬುಲಂಗೊಡು' ನೋ.

**ತಂಬುಲಂಗೊಡು, ತಂಬಲಂಗುಡು** (ಕ್ರಿ). ವೀಳೆಯವನ್ನು ಕೊಡು ; ತಾಂಬೂಲವನ್ನು ಕೊಡು : ಸಾಹಸಾಭರಣನ ಸಾಹಸಮನಸಳವಲ್ಲದೆ ಪೊಗಟ್ದು ತೊಡೆಯನೇಱಿಸಿಕೊಂಡು ಬಾಯೊಳ್[ಪಾಠಾಂ. ಬಾಯ್ದಾಯೊಳ್]ತಂಬುಲಂಗೊಟ್ಟಂ (ಪಂಪಭಾ. ೭-೩೮ ವ) ; ಎನಗೆ ತಂಬುಲಂಗೊಡಲುಜ್ಜುಗಂಗೆಯ್ವಲ್ಲಿ ಸಡುಗುವ ಕಂದಳಮಂ ಚೆನ್ನೆ(ದಿಲೆಗೆತ್ತು (ಕಾದಂಬ. ೯೦). **ತಂಬುಲಂಗುಡು:** ಅವಂದಿರ್ಗಳ್ಗಪಜಾತ ಪರಿಚಯದಿಂ ತಂಬುಲಂಗುಡಲ್ವೇಟ್ದು (ಕಾದಂಬ. ೨೭೨). [ ತಂಬುಲ + ಕೊಡು₁ ]

**ತಂಬುಲಂಗೊಳ್** (ಕ್ರಿ). ತಾಂಬೂಲವನ್ನು ತೆಗೆದುಕೊಳ್ಳು; ವೀಳೆಯವನ್ನು ಸೇವಿಸು: ದಿವ್ಯಾಹಾರಂಗಳನಾರೋಗಿಸಿ ಕೆಯ್ಗುಟ್ಟಿಗೊಂಡು ತಂಬುಲಂಗೊಂಡು (ಪಂಪಭಾ. ೫-೭೭ ವ).
[ತಂಬುಲ + ಕೊಳ್$_1$]

**ತಂಬುಲಂದೀವು** (ಕ್ರಿ). ತಾಂಬೂಲವನ್ನು ತುಂಬು; ವೀಳೆಯವನ್ನು ಜೋಡಿಸು: ತಂಬುಲಂದೀವಿದ ಪೊಂಗವಳಿಗೆಯಂ ಪಿಡಿದಂದಿಕೆಗವಟಯ್ಯು ದಳೆಯೊರ್ವಳಿಂದ್ರವಧು ತಂಬುಲವಂ (ಶಾಂತಿಪು. ೯-೧೫೦).
[ತಂಬುಲ + ತೀವು]

**ತಂಬುಲಂಬಿಡಿ** (ಕ್ರಿ). = ತಂಬುಲಂಗೊಳ್: ಮಾಸಿದೆಯಾದ ಮೇಣುಡಲ. ತರಿಪೆವೆ ತಂಬುಲಂಬಿಡಿ (ಪಂಪಭಾ. ೮-೭೪). [ತಂಬುಲ + ಪಿಡಿ$_1$]

**ತಂಬುಲಗುಟುಕು** (ನಾ). ಬಾಯಿಗೆ ಬಾಯಿಟ್ಟು ಕೊಡುವ ತಾಂಬೂಲ; ಕುಟುಕುದಂಬುಲ: ದೇವಿಯ ಪಾಣಿಪದ್ಮದಿಂ ತೊಲಗದೆ ಪದ್ಮರಾಗನಿಭ ಚಂಚುವನೊಯ್ಯನೆ ನೀಡಿ ನೀಡಿ ತಂಬುಲಗುಟುಕಂ ಕೊಡುತ್ತೆ (ಕುಸುಮಾ. ೦೫-೨೦). [ತಂಬುಲ + ಕುಟುಕು$_2$]

**ತಂಬುಲಪೆಚ್ಚ** (ನಾ). ತಾಂಬೂಲದ ಹುಚ್ಚು ಹಿಡಿದವನು; ಅತಿಯಾಗಿ ತಾಂಬೂಲವನ್ನು ಸೇವಿಸುವವನು: ಪಚ್ಚ ಪಚ್ಚ ಎಲೆಗಳನ್ನು ನಿವಿಃಪಾರ್ಥದಲ್ಲಿ ಅರೆದು ಅಗಿದು, ಪಿಚಿ ಪಿಚಿ ಉಗುಳುವ ತಂಬುಲಪೆಚ್ಚರಾದ ಆ ಸದಾನಂದಿಗಳ ಬಗ್ಗೆ ನಾನಿಲ್ಲಿ ಬರೆಯಲು ಬಯಸುವದಿಲ್ಲ (ವಿಡಾಳ. ೦೫೭).
[ತಂಬುಲ + ಪೆಚ್ಚ (<ಪಿಚ್ಚ)]

**ತಂಬುಲಮಿಡು** (ಕ್ರಿ). ೧. ತಾಂಬೂಲವನ್ನು ಕೊಡು; ವೀಳೆಯ ನೀಡು. ೨. ಆಹ್ವಾನಿಸು.; ಕರೆ: ಜಗಳಕೆ ತಂಬುಲಮಿಟ್ಟು ವುಗ್ಗಡಿಸುವ ಬಗೆಯಾದುದಾ ಭದ್ರಹಸ್ತಿ (ಶ್ರೀಪಾಂ. ೬-೫೦). [ತಂಬುಲ + ಇಡು$_1$]

**ತಂಬುಲಿ** (ನಾ). ೧. ವೀಳೆಯದೆಲೆಯನ್ನು ಮಾರುವವನು; ತಂಬುಲಿಗ: ಹರದರ ಸುವ್ವೆಕ್ಕರ ಕಾರುಕರ ಚಿತ್ರಕರ ತಂಬುಲಿಗಳ ವಿನೋದಿಗಳ . . . ಸೇರುವೆಯ ಕಂಡು (ಅನ್ಯ್ರಾಪ. ೬-೯೮). ೨. ವೀಳೆಯದೆಲೆಯನ್ನು ಮಡಿಚಿಕೊಡುವವನು; ಹಡಪದವನು; "ಹಡಪಾಳಿ" (ಚಕುವಿ. ೬. I, ೨೫). [ತಂಬುಲ + -ಇ$_3$]

**ತಂಬುಲಿಗ** (ನಾ). ೧. = ತಂಬುಲಿ ೧: ಗೊಜ್ಜಿಗಂ ತಂಬುಲಿಗರಟ್ಟಂ ಕಳ್ಳಿಕ್ಕೋರ್ಗಳಿ ಕಾದಿ . . . ದೇವಲೋಕಕ್ಕೆಸೆದನ್ (ಎಪಿ. XVI. ೭೫-೦೦; 1007); ತಂಬುಲಿಗರ್ ನಂಬುಗೆಗಿಟ್ಟವರಂತೆ ಪೆಟಸಾರೆ (ಧರ್ಮಾಮೃ. ೨-೭೪); ದೂಸಿಗರ ಕಂಚುಗಾರರ ಬಳೆಗಾರರ ತಂಬುಲಿಗರ ಮಣಿಗಾರರ ಗಂದಿಗರಾವಣಂಗಳೊಳ್ ನಡೆತಂದರ್ (ಜಾಪಿ. ೬-೦೮); ಮಾಱುವಂಗೆ-ಗಂದಿಗಂ, ದೂಸಿಗಂ, ತಂಬುಲಿಗಂ (ಶಬ್ದಮ. ೦೯೭ ವೃತ್ತಿ); ತಂಬುಲಿಗ ಜಂಗವ ಜೋಗಿಗಳ ಜಂಗುಳಿಗಳಿಂಗಿಗಳೊಳಗೆ ರಥಾಡಿಸಿದನು ಶಿಶಾಳಿಗಳ (ಕೊರಡಾ. ೫-೮-೫೩). 'ತಂಬುಲಿಗವಸರ' ಪರಾ. ೨. = ತಂಬುಲಿ ೨: ಆಯ್ತು ಗೆಲೆಯ ಕೊಡುತಿರ್ದ ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದಗೆಲೆಯ ತನ್ನ ಕೈಯಾರೆ ಕೊಡತೊಡಗಿದನು (ಭರತೇ. ೨೭-೭೭).

ತಂಬುಲಿಗ ಸಾಸಿರ್ವರ್ = ವೀಳೆಯದೆಲೆಯ ವರ್ತಕ ಸಂಘದ ಸಾವಿರ ಸದಸ್ಯರು: ಸುಂಕದನ್ಯಾಯ ಪೆಚ್ಚಿದಡೆ ಬಾಳ್ಗುಳಿಯಯ್ದು ದಿಂಬರುಂ . . . ತಂಬುಲಿಗಸಾಸಿರ್ವರುಂ ಅಯ್ನೂರ್ವರುಂ ಪೋಗಿ . . . ಬಿನ್ನಪಂಗೆಯ್ವಡೆ (ಸೌಇಇ. IX-I, ೭೬-೦೦; 991); ಅಲ್ಲಿಯ ತಂಬುಲಿಗ ಸಾಸಿರ್ವರುಮಿಬ್ಬು ಹೇಱಿಗೆ x [ವೀ]ಸವಂ ಬಿಟ್ಟರು (ಸೌಇಇ. XV. ೨೭-೫೦: 1144); ದೇವರಂಗಭೋಗಕ್ಕೆ ತಂಬುಲಿಗಸಾಸಿರ್ವರಶೇಷವಿರ್ದು . . . ಕೊಟ್ಟರ್ (ಮುಂಬಗಾ. XI. ೨೫೪-೨೫; 1144).
[ತಂಬುಲ + -ಇಗ]

**ತಂಬುಲಿಗವಸರ** (ನಾ). ವೀಳೆಯದೆಲೆಯನ್ನು ಮಾರುವ ಅಂಗಡಿ; ತಂಬುಲಿಗರ ಅಂಗಡಿ: ವಾಲೆಗಾರ್ತಿಯರಲಗಣ್ಣಾಲರ್ವಳಗು ನಟ್ಟವೂರ್ ಬೀದಿಯೆಲೆಗಳ್ ತಂಬುಲಿಗವಸರದೊಳ್ ಕರಮೆಸೆಗುಂ (ಅನಂತಪು. ೬-೦೫). [ತಂಬುಲಿಗ + ವಸರ]

**ತಂಬುಲಿಗಸೆಟ್ಟಿ** (ನಾ). ತಾಂಬೂಲದ ವ್ಯಾಪಾರಿ; ವೀಳೆಯದೆಲೆಯ ವರ್ತಕ: ತಂಬುಲಿಗಸೆಟ್ಟಿಗಳು ಬಿಟ್ಟ ಧರ್ಮ್ಮವಾವುದೆಂದಡೆ ಹೇಱಿಂಗೆ ವೀಸ (ಸೌಇಇ. XI-II, ೦೫೮-೨೫; 1109). [ತಂಬುಲಿಗ + ಸೆಟ್ಟಿ]

**ತಂಬುಳಿ, ತಂಬಳಿ** (ನಾ). (ಕರಾ) ತೆಂಗಿನಕಾಯಿ, ಜೀರಿಗೆ ಮುಂತಾದುವನ್ನು ರುಬ್ಬಿ, ಅದಕ್ಕೆ ಮಜ್ಜಿಗೆ ಬೆಂದ ತರಕಾರಿಗಳನ್ನು ಹಾಕಿ ಕುದಿಸದೆ ಮಾಡುವ ಒಂದು ಬಗೆಯ ಮೇಲೋಗರ: ಪುಡಿಚಟ್ನಿ ಇದೆ. ತಂಬುಳಿ ಮಾಡಿದರಾಯ್ತು (ಬಂದಣೀ. ೬೦). **ತಂಬಳಿ**: ಬಟ್ಟಲಲ್ಲಿ ಅನ್ನ, ಕಾಳೆದ, ತಂಬಳಿ, ಸಾರು . . . ಕಂಡವು (ಚೀಳೆ. ೦೨೪); ಬೇಸಿಗೆ ಬಂದರೆ ಕೊಳದ ನೀರು ಹಸುರು ತಂಬಳಿಯಾಗುತ್ತದೆ (ಜಾಗುಡಾ. ೩೮).
[ತಂ$_1$ (<ತಣ್$_3$) + ಪುಳಿ$_3$. / ತುಳು. ತಂಬುಳಿ]

**ತಂಬುಊ** 'ತಂಬುಱು' ನೋ.

**ತಂಬೂರ** 'ತಂಬೂರಿ' ನೋ.

**ತಂಬೂರಿ, ತಂಬುರಿ, ತಂಬೂರ** (ನಾ). ಆಧಾರಶ್ರುತಿಗಾಗಿ ನುಡಿಸುವ, ನಾಲ್ಕು ತಂತಿಗಳುಳ್ಳ ಒಂದು ಬಗೆಯ ವಾದ್ಯ: ತಂಬೂರಿ ಮೊದಲಾದ ಅಖಿಲ ವಾದ್ಯಗಳಿದ್ದು . . . ಹರಿ ನಂಬಲಾಬಿ ಈ ಡಂಭಕದ ಕೂಗಾಟ (ಪುರಂದ. ೪-೭೭-೦); ತಾಳ ಶಂಖ ಭೇರಿಯು ತಂಬೂರಿಯು ಮೊದಲಾದ ಮೇಲು ಪಂಚಕಂಗಳೆಲ್ಲ ಹೊಗಳು ಹೊಗಳಲೂ (ಜಾದೀಸ. ೫೦-೨); ನಿಸ್ಸಾಳ ಪಟಹ ತಂಬೂರಿ ಪಣವ ಕಂಸಾಳೆ ಕಂಬು ಡಿಕ್ಕಿ ವಾದ್ಯ ಸೂಳೈಸುತಲಿರೆ (ವಿದಾಳ್ವ. ೭೬-೩); ಪಟುವಾದ ಬಾರ ತಂಬುರಿ ತುತ್ತೂರಿಗಳ್ (ಅಜಾಗವಿ. ೨೪-೩೦); ತಂಬೂರಿ ತುಂಬೆಲ್ಲ ಕೀಸರ ಬಾಸರ ಬೇಸರ ಬಂದೃತಿ (ಸಪೀಗೀ. ೪೮-೪). **ತಂಬುರಿ**: ಒಂದೆಡೆಗೆ ವೀಣೆ ಸಾರಂಗಿ ತಂಬುರಿಯಂತು ಸಂದಣಿಸಿ ಪೂರೈಸೆ (ಶ್ರೀಕಾಮ. ೪-೫೫). **ತಂಬೂರ**: ಮಾಧುರ್ಯತರದ ಸುಮ್ಮಾನದಿಂ ಪರವಶತೆಯಾಂತರೋಯನಲಂಬುಜಾನನೆಯರತಿಶಯದ ತಂಬೂರಗಳ ಪಿಡಿದು ವಾಲಗಿರ್ವರಂ ಕಂಡನು (ವಂಕಾರಾ. ೫-೪-೦೨)
[←ಅರ. ತಂಬೂರಾ; ಹಿಂ. ತಂಬೂರಾ, ತಾನ್‌ಪೂರಾ; ಮರಾ. ತಂಬೂರಾ, ತಂಬೋರಾ. / ಸಂ. ತುಂಬುರು = ಒಂದು ಬಗೆಯ ವೀಣೆ]

**ತಂಬೆಧಡೆ** (ನಾ). ಒಂದು ಊರಿನ ಹೆಸರು. ಈಗಿನ ವಿಜಾಪುರ ಜಿಲ್ಲೆಯ ತಮ್ಮಧಡ್ಡಿ: ಶ್ರೀಮತು ತಂಬೆಧಡೆ ಬಲೇಶ್ವರ ದೇವರ್ಗೆ ಬಿಟ್ಟ . . . ಮತರು ೩೦ (ಸೌಇಇ. XI-I, ೬೫-೦೦; 1088). [?]

**ತಂಬೆರಲ್** 'ತಂಬೆಲರ್' ನೋ.

**ತಂಬೆಲರ್, ತಂಬೆರಲ್, ತಂಬೆಲರು** (ನಾ). ತಂಪಾದ ಗಾಳಿ: ಕಪ್ಪಿತಪ್ಪ ತಂದೆಲರ್ ವೀಸಿ (ವದ್ಮಾರಾ. ೦೦೬-೨೦); ಮನವಾಱ ಶೀಡಿದುದು ತೆಂಕಣ ತಂಬೆಲರಪ್ಪಿಕೊಳ್ವವೋಲ್ (ಪಂಪಭಾ. ೦೪-೦೨); ಕಾವಂಗೆ ವಸಂತ ಸಮಯಮುಂ ವಸಂತಸಮಯಕ್ಕೆ ತಂಬೆಲರುಮೆಂಬಂತೆ (ಕಾದಂಪೂ. ೬೦೪). **ತಂಬೆರಲ್**: ಶೀಡುವ ತಂ[ಪಾಜಾಂ ತೆಂ]ಬೆರಲ್ (ಪಂಪಭಾ. ೩-೩೭); ತಂಬೆರಲ್ಪಂಚರಿಸಿದುದಾ ಪುರದ ಪೊಱಗೆ ಸುರಭಿಸಮೇತಂ (ಉದ್ಧಟ. ೭-೫). **ತಂಬೆಲರು**: ಸುಳಿವೆಲರು ತಂಬೆಲರು . . . ಹಂಸೆ ರಾಜಹಂಸೆಗಳಸೆದುವಾ ವನದೊಳು (ಹಕಕಾ. ೩-೩೭); ಪಸರಿಸಿತು ತಂಬೆಲರು ಬೀಸುದು ಬಿಸಿಲ ಬಿಂಕ (ಕುಮ್ಮಾಅ. ೦೬-೩೮); ಅಳಿವಿಂಡುಗಳ ಗಾನಕೆ ತಂಬೆಲರಿಗೆ . . . ತಲೆದೂಗುವಂದದೆ ಕಳವೆಯ ತೆನೆಗಳಂದೊಲೆದಾಡುತಿರ್ದುವು (ಕಂಪವಿ. ೫-೭೨). [ತಂಪು$_3$ (<ತಣ್ಪು$_3$) + ಎಲರ್]

**ತಂಬೆಲರು** 'ತಂಬೆಲರ್' ನೋ.

**ತಂಬೆಳಕು** 'ತಣ್ಬೆಳಗು' ನೋ.

**ತಂಬೆಳಗ** (ನಾ). ತಂಪಾದ ಬೆಳಕನ್ನು ಬೀರುವವನು ; ಚಂದ್ರ : "ತಂಬೆಳಗಂ[ಪಾಠಾಂ ತೆಣ್ಬೆಳಗಂ] . . . ಚುದ ಚೆಳಗದಿರ ಕತ್ತಲೆವಣಿಯ ಶಶಿಯ ನಾಮಂ" (ಕಬ್ಬಿಗ. ೪೩). [ ತಂಬೆಳಗು (<ತಣ್ಬೆಳಗು) + – ಅ₇ ]

**ತಂಬೆಳಗು** 'ತಣ್ಬೆಳಗು' ನೋ.

**ತಂಬೇಲು** (ಗು). ಹೆಚ್ಚಾದ ; ಅತಿಶಯವಾದ ; ತುಂಬಿದ : ದುಶ್ಶಾಸನೆ ಕೇಳು ತಂಬೇಲು ಗರ್ವದಿಂದ ದ್ರುಪದಾತ್ಮಜೆಯಮಗೆ ಈ ಕುಂಭಿಣಿಯೊಳು ಅಜೋದ್ಯವೆನಿಪ ಸುಖದ್ಯೂತದೊಳ್ ಸೋಲ್ದೊಳಿಸಿದ ಪ್ರಯುಕ್ತ ಬಾಯೆಂದು ಕರೆದರೆ . . . ಬಾಹೋಣಯಿಲ್ಲವೆಂದು ಪ್ರಾತಿಕಾಮಿಕನಿಗೆ ನಿರೂಪಿಸಿದಳಂತೆ (ದುಶ್ಶಾ. ೦೮).

[ ?. / ತುಳು. ತವೆುಲ್ = ತುಂಬಿ ತುಳುಕು ]

**ತಂಬೈಸು** 'ತಣ್ಬೈಸು' ನೋ.

**ತಂಭಾಲು** 'ತಣ್ಪಾಲ್' ನೋ.

**ತಃಖ್ತಿ** 'ತಖ್ತೆ' ನೋ.

**ತಃಪ್ತೆ** 'ತಖ್ತೆ' ನೋ.

**ತಕ** (?). (?) : ಕಗ್ಗಲಿವುರಕ್ಕೆ ಪಡವಲು ತಕದ ಕರಿಮುರುಟಿಗೆ ಬಡಗಣ ವೊತ್ತಿನಲ್ಲೂ ನೆಟ್ಟಕಲ್ಲು ೧ (ಎಕ. XIV, ಮೈಸೂರು. ೦೦೩-೩೯೦ ; 1674).

[ ? ]

**ತಕಣಿಚೆಯ** (ನಾ). ಒಬ್ಬಾತನ ಹೆಸರಂ (?) : ಮನೆವಗತಿ ತಕಣಿಚೆಯ ಕೊನವಮಾ ಎಚಿಅಂಗ ಪೊಲುಕೇಸಿಯ ಬೂದಿಗನ ಕಾಳಗದೊಳ್ . . . ಸತ್ತ (ಎಕ. III, ಮೈಸೂರು. ೪೪-೩ ; ಸು. ೨೨೦). [ ? ]

**ತಕತಕ** (ನಾ). ಕುಣಿಯುವುದನ್ನು ಸೂಚಿಸುವ ಒಂದು ಅನುಕರಣ ಪದ: ದೀಪಾವಳಿ ಬಂದರೆ ಹುಡುಗರು ತಕತಕ ಎಂದು ಕುಣಿಯುತ್ತಾರೆ (ರೂಢಿ).

**ತಕತ್ತು**, ತಕಥು, ತಗತ್ತು (ನಾ). ೧. ರಾಜ್ಯ : ಪಟ್ಟದ ಕೊರಸಿಯುನವನ ಕೈಗಿತ್ತಿದಂತಿರ್ಪುದೆನಲವನಳ್ಕಿ ಹೆಣಿಸಿ ನಿಲಲಾರದೆ ಕಂಪಿಸುತ್ತಿರಲವನಂ ಕಂಡಿವಂ ತಕತ್ತಿನಾಳ್ವುದರ್ಕಯೋಗ್ಯನೆಂದು ಬಗೆದು(ಕೆಳದಿ. ೯-೩೬). **ತಕಥು**: ೧. ಶಾಹಮುರ್ತಜಾ ಅಲ್ಲಿಯಾದಿಯಾಗಿ . . . ವಿಜಾಪುರದ ತಕಥನಾಳ್ದ ಪಾತುಶಾಹರ್ (ಕೆಳದಿ. ೯-೩೯). **ತಗತ್ತು**: ೨. ಸಿಂಹಾಸನ ; ಪಟ್ಟ : ಜಗದ ರಾಯರು ನಿನಗೆ ಸಾಟಿಯೆ ತಗತನಿಳಿಯ್ಕು ಪಾವಕನಿಳಿಯದಿ ವಂಗ ಸಹಿತ ಮಂಡಿಸುವದೂಚಿಸ್ಥಾನ ಹೋಗೆಂದ (ಅಂಬಿಕಾ. ೪೮-೭೩).

[ ←ಪಾರ. ಹಿಂ. ತಖ್ತ್ ; ಮರಾ. ತಕ್ತ್, ತಖತ್, ತಖ್ತ್ ]

**ತಕಥು** 'ತಕತ್ತು' ನೋ.

**ತಕಪಕ** (ನಾ). ಒಂದು ಅನುಕರಣ ಶಬ್ದ : ಅನ್ನ ತಕಪಕ ಎಂದು ಕುದಿದು, ಉಕ್ಕಿ ಹೊರಗೆ ಬರುತ್ತಿದ್ದಿತು (ರೂಢಿ). 'ತಕಪಕನೆ' ಪರಾ.

**ತಕಪಕನೆ** (ಅ). ತಕಪಕ ಎಂದು ; ತೀವ್ರವಾಗಿ : ಒಳಗೆ ತಕಪಕನೆ ಕುದಿವ ವಡಬಾಗ್ನಿಯ ಕಳಾಪದಿಂದಾ ಕಡಲ್ ಕಣ್ಗೆಸೆದುದು (ಜಲಕ್ರೀ. ೨-೩); ಕಡಲು ತಕಪಕನುಕ್ಕಲಮರರ ಗಡಣ ಕಂಗೆಟ್ಟೋಡಲು (ಪ್ರಹ್ಲಾ.ಚ. ೩-೪೫).

[ ತಕಪಕ + – ಅನೆ₁ ]

**ತಕಯೂದ** (ನಾ). ಕಟ್ಟು ; ನಿರ್ಬಂಧ : ಜುಲುಮು, ಜಬರದಸ್ತಿ, ಪೆಟ್ಟು, ಕೊಲೆ ಮಾಡದವರಿಗೆ ಚನ್ನಾಗಿ ಶಿಕ್ಷೆಮಾಡಿ ಮುಂದೆ ಈ ಪ್ರಕಾರ ಅನ್ಯಾಯ ವಾಗದ ಹಾಗೆ ತಕಯೂದ ಇಡಬೇಕು (ಮುಹಾಪಂ. II, ೭೩).

[ ←ಪಾರ. ತಕಯಾದ್ ]

**ತಕರಾರ್** 'ತಕರಾರು' ನೋ.

**ತಕರಾರು**, ತಕರಾರ್, ತಕರಾಲು, ತಕ್ರಾರ, ತಕ್ರಾರು(ನಾ).೧. ವಿವಾದ; ದೂರು: ಚೌಗ್ರಾಮದವರ ಕರಸಿಕೊಂಡು ಗಡಿ ತಕರಾರು ಬಾರದಂತೆ . . . ಭೂಮಿಗೆ ಶಿಲಾಸ್ಥಾಪಿತವ ಮಾಡಿಸಿಕೊಟ್ಟು (ಎಕ. VIII, ಸೊರಬ. ೩೩೪-೩೦; 1743). ೨.ಅಡ್ಡಿ ;ಆಕ್ಷೇಪಣೆ;ವಿರೋಧ:ಯಾರಾದರೂ ಕೊಡದೆ ತಕರಾರು ಮಾಡಿದರೆ (ಮೈಅರಿ. ೧೯೩೦, ೨೧-೨೦ ; 1712) ; ನನ್ನದೇನು ತಕರಾರು ಇಲ್ಲ (ಐದುಜ.೩೬); ತಂಟೆ ತೀರಿದರೂ ತಕರಾರು ಹೋಗಲಿಲ್ಲ (ಗಾದೆ). **ತಕರಾರ್**: ೧. ಕಂದಾಯ ಬಾಕಿ ಇರುವ ಜಮೀನಿನ ಸ್ವಾನ್‌ದಾರಿಕೆಯು ತಕರಾರ್ ಬಿದ್ದಿದ್ದಲ್ಲಿ . . . ಹರಾಜು ಮಾಡುವುದು ನ್ಯಾಯವಲ್ಲವು (ಗ್ರಾಪಂಕ. ೭೮). **ತಕರಾಲು**: ೨. ಕಂಚಿ ತನ್ನ ಮಕ್ಕಳ ಹೆಸರಿನಲ್ಲಿ . . . ನೀರಗಂಟಿತನ ನೋಡಿಕೊಳ್ಳಲು ಬಂದಾಗ ಮಾರಪ್ಪನ ಮಕ್ಕಳು ತಕರಾಲು ಎತ್ತಿದರು (ಊರುಕೆ. ೭೮). **ತಕ್ರಾರ**: ೧. ಗಡಿ ತಕ್ರಾರ ಬಾರದ ರೀತಿಯಲ್ಲಿ . . . ಶಿಲಾಸ್ಥಾಪಿತವ ಮಾಡಿಕೊಟ್ಟು (ಮೈಅರಿ. ೧೯೩೪, ೯-೦೪ : 1690). ೨. ಪ್ರತಿಯೊಬ್ಬ ಭಕ್ತರೂ ಹೀಗೆ ಒಂದಿರ್ದೊಂದು ಬಗೆಯಿಂದ ತಕ್ರಾರ ಹೂಡಿದರು (ಗಾಂಧಿಪು. ೦೭೩). **ತಕ್ರಾರು**: ೧. ಗಡಿ ತಕ್ರಾರು ಬಾರದ ರೀತಿಯವರ ಮುಂದಿಟ್ಟು ರೇಖೆ ಪ್ರಮಾಣು ಭೂಮಿಗೆ ಗಡಿಕಲ್ಲು ಹೂಳಿಸಿ ಕೊಟ್ಟು (ಮೈಅರಿ. ೧೯೩೯, ೭೦-೦೫ ; 1817).

**ತಕರಾರು ತೆಗೆ** = ಆಕ್ಷೇಪಿಸು ; ತಕರಾರು ಮಾಡು : ರೂಲ್ಸ ಪ್ರಕಾರ ನಾವು ನಡೆದುಕೊಂಡಿಲ್ಲ ಅಂತ ತಕರಾರು ತೆಗೆದು ನಮ್ಮ ಈ ದೀಪ ಬಂದ ಮಾಡಬಹುದು (ಮನಪಿ.೦೬೩). **ತಕರಾರು ಮಾಡು** = ೧. ದೂರು: ಮಾಣಿ ಬೋಣಿಯಾಗಲಿಲ್ಲವೆಂದು ತಕರಾರು ಮಾಡಿದ್ದರಿಂದ ಹೋಟಲಲ್ಲಿ ಜಗಳ ಕಾಯದೇಕಾಯಿತು (ಹೊಸಕ್ಷ. ೩೮). ೨. ಅಡ್ಡಿ ಮಾಡು ; ವಿರೋಧಿಸು : ಈಗ ಅವರ ಮಗ ಟೀಪುಸುಲ್ತಾನರು ತಕರಾರುಮಾಡಿ . . . ಶರಾರತು ಮಾಡುತ್ತಾರೆ (ರಾಜೇಂದ್ರ.೩೦). **ತಕರಾರು ಹೂಡು**=ತಕರಾರುಮಾಡು.೧: ಸಂಬಳ ಸಾಲದು . . . ಎಂದೆಲ್ಲರೂ ಅವರಿವರ ಮಾತು ಕೇಳಿ ತಕರಾರು ಹೂಡಿದೆವು (ಹುಚ್ಚುಹು. ೭೦) ; ನಾನು ಹಡಗಿನಿಂದ ಸಾಮಾನುಗಳನ್ನು ಇಳಿಸಿದೆನೊ ಇಲ್ಲವೊ ಇಲ್ಲಿಯ ರಾಜ ತಕರಾರು ಹೂಡಿದ (ಪ್ರಪಾ. II, ೦೯೦). [ ←ಅರ. ಹಿಂ. ಮರಾ. ತಕರಾರ್, ತಕ್ರಾರ್ ]

**ತಕರಾರು ಅರ್ಜಿ** (ನಾ). ೧. ಕೆಳಗಿನ ಕೋರ್ಟಿನ ತೀರ್ಪನ್ನು ಪ್ರತಿಭಟಿಸಿ ಸಲ್ಲಿಸಿದ ಅರ್ಜಿ : (*). ೨. (ನ್ಯಾಯಾಲಯಕ್ಕೆ) ಒಬ್ಬನು ಸಲ್ಲಿಸಿದ ಅರ್ಜಿಗೆ ಪ್ರತಿಯಾಗಿ ಸಲ್ಲಿಸಿದ ಅರ್ಜಿ : (*). [ತಕರಾರು + ಅರ್ಜಿ₂]

**ತಕರಾರುಇಸಮು** (ನಾ). ಅಡ್ಡಿ ಮಾಡುವ ಸ್ವಭಾವದವನು : ಬಲು ತಕರಾರು ಇಸಮು (ಕಮಕ. ೦೬೮). [ತಕರಾರು + ಇಸಮು (<ಇಸಂ)]

**ತಕರಾರುತಃಖ್ತೆ** (ನಾ). ೧. ಹಳ್ಳಿಯ ಶ್ಯಾನಂಭೋಗರು ಸರ್ಕಾರಿ ಜಮೀನುಗಳ ಒತ್ತುಗಡೆ ಮುಂತಾದ ವಿಚಾರಗಳನ್ನು ಗುರುತು ಮಾಡಿ ಇಟ್ಟಿರುವ ದಾಖಲೆ ಪುಸ್ತಕ. ೨. ತಕರಾರು ಅರ್ಜಿಗಳನ್ನು ನಮೂದು ಮಾಡುವ ಪುಸ್ತಕ : ಗ್ರಾಮ ಪಂಚಾಯತಿಯವರು ಯಾವಾಗಲೂ ಒಂದು ತಕರಾರು ತಃಖ್ತೆಯನ್ನು ಇಟ್ಟಿರಬೇಕು (ರೂಢಿ).

[ ತಕರಾರು + ತಃಖ್ತೆ (<ತಖ್ತೆ) ]

**ತಕರಾಲು** 'ತಕರಾರು' ನೋ.

**ತಕಲಿ**, ಟಕಳಿ (ನಾ). ನೂಲನ್ನು ತೆಗೆಯುವ ಒಂದು ಉಪಕರಣ ; ಕದಿರು : ರಂಗಣ್ಣ ಶಾಲಾ ಪಡಸಾಲೆಯಲ್ಲಿ ಕುಳಿತುಕೊಂಡು ತಕಲಿಯಿಂದ ನೂಲು ತೆಗೆಯುತ್ತಿರುವರು (ರಂಗಣ್ಣ. ೧೨) ; ಹಿಂದಿನ ಕಾಲದಲ್ಲಿ ಕೈಗಳಿಂದ ಅಥವಾ ತಕಲಿ, ಚರಕಗಳಂಥ ಸಣ್ಣ ಉಪಕರಣಗಳಿಂದ ಎಳೆಗಳನ್ನು ತೆಗೆಯುತ್ತಿದ್ದರು(ಗೃಹವಿ.೭೨). **ಟಕಳಿ**: ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲ (ಧಾರಸಂ. ೪೭); ಟಕಳಿಯಲ್ಲಿ . . . ನೂಲು ತೆಗೆಯುತ್ತಿದ್ದ (ದೀಪಶ. I, ೯೮). [ ←ಹಿಂ. ತಕಲೀ ]

**ತಕಲೀಫು** (ನಾ). ತೊಂದರೆ ; ಕಷ್ಟ : ಇದು ತುಂಬಾ ತಕಲೀಫು ಕೊಡುವ ಕೆಲಸ (ರೂಢಿ). [ ←ಅರ. ಹಿಂ. ಮರಾ. ತಕಲೀಫ್ ]

**ತಕಲು** 'ತಕ್ಕಿಲ್$_2$' ನೋ.

**ತಕಶೀರು** 'ತಕ್ಷೀರು' ನೋ.

**ತಕಶೀರುದಾರ** 'ತಕ್ಷೀರುದಾರ' ನೋ.

**ತಕಾರ** (ನಾ). 'ತ' ಎಂಬ ಅಕ್ಷರ : ಕಿಬ್ಬೆರ್ಕೆ ಕುಚೆಂಬೆಡೆಯಲ್ಲಿ ತಕಾರಂ ಸ್ವರಮಡಸೆ ಪರಕ್ಕುತ್ವಮುಸ್ವರಂ ನಿಲೆ ಪರದೋಳ್ (ಶಮದ. ೦೮೦).

[ ಸಂ. ]

**ತಕಾವಿ**, ತಗಾಯಿ, ತಗಾವಿ (ನಾ). ವ್ಯವಸಾಯದ ಸೌಕರ್ಯಗಳಿಗಾಗಿ ರೈತರಿಗೆ ಸರಕಾರದವರು ಕೊಡುವ ಸಾಲ.–ಮುಂಗಡ ಹಣ: ರೈತರಿಗೆ ಬೇಕಾದರೆ ಮುನಾಸಬು ತಕಾವಿ ಕೊಡುವುದಕ್ಕೂ . . . ಏರ್ಪಾಡಾಗಿತ್ತು (ಮುಹಾವಂ. II, ೩೦). **ತಗಾಯಿ:** ತಗಾಯಿ ವಸೂಲಿಯ ಕೆಲಸವನ್ನು . . . ಆ ಕಾಲದಲ್ಲಿ ಅವರು ಮಾಡುತ್ತಿದ್ದರು (ಪ್ರಾಂಕಶ್ರಿ. ೦೨೮) : ಇನ್ನೊಬ್ಬರಿಗೆ ತಗಾಯಿಯ ಹಣವನ್ನು ಕೊಡಿಸುವದಾಗಿಯೂ . . . ಹೇಳುವರು (ಗಂಗಾಸಾ. ೪೮). 'ತಗಾಯಿಸಾಲ' ಪರಾ. **ತಗಾವಿ :** ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡ ಕೊಂಡರು (ಪ್ರೇಮಶ್ರ. ೩).

[←ಅರ. ಹಿಂ. ತಕಾವೀ ; ಮರಾ. ತಕಾವೀ, ತಗಾಈ ]

**ತಕಾವಿರಕಮು** (ನಾ). ತಕಾವಿ ಸಾಲದ ಮೊತ್ತ : ಭೂಕಂದಾಯವನ್ನೂ ತಕಾವಿ ರಕಮನ್ನೂ ಸರಕಾರಕ್ಕೆ ತುಂಬಿ ಅಧಿಕಾರದಿಂದ ನಿವೃತ್ತರಾದರು (ವಾಕೊಟ. ೯).

[ ತಕಾವಿ + ರಕಮು (<ರಕಂ) ]

**ತಕಾವಿಸಾಲ**, ತಗಾಯಿಸಾಲ (ನಾ). = ತಕಾವಿ : ಸರ್ಕಾರದಿಂದ ರೈತರಿಗೆ ತಕಾವಿ ಸಾಲ (ಗ್ರಾಮಾಳ.೦೩೯). **ತಗಾಯಿಸಾಲ:** ತಗಾಯಿಸಾಲ ಮಂಜೂರ ಮಾಡುವ ಬಗ್ಗೆ ರೈತರು ಅಧಿಕಾರಿಗೆ ಅರ್ಜಿಮಾಡಿಕೊಂಡರು (ಕಠವೀ. ೭೫).

[ ತಕಾವಿ + ಸಾಲ$_1$ ]

**ತಕ್ಕ$_1$** (ನಾ). ೧. ಯೋಗ್ಯನಾದವನು ; ಅರ್ಹನಾದವನು ; ಸಮರ್ಥ ನಾದವನು: ಮಂದರಾಚಲಮಂ ತಂದವನಾವನಾತನೆ ವಲಂ ತಕ್ಕಂ ಪೆಜಿರ್ ತಕ್ಕರೇ (ಪಂಪಭಾ. ೭-೪೧) ; ಸೇನೆಯ ಬಹುಳತೆಯ ಲೆಕ್ಕಿಸಲ್ ತಕ್ಕನಾವಂ (ಕುಸುಮಾ. ೩-೧೪) ; ತಕ್ಕರಿಲ್ಲದ ಸಭೆ ಮದಾಂಬುವನುಕ್ಕದಿಭ (ಸಾಕ್ಷಿಭಾ. ೩-೦೦) ;ತಕ್ಕನ್ ತಕ್ಕಪೊಲ್ ಬಾಬ್ಬವನ್ (ಅಕ್ಕಿಕ್ಕಾ. ೦೯-೪೦೩). ೨. ಒಳ್ಳೆಯವನು ; ಸಜ್ಜನ : " ಕುಳಜಾತಂ ತಕ್ಕನಾರ್ಯಂ ಸುಜನನಭಿಜನಂ ಸಾಧು ಸದ್ವೃತ್ತನಪ್ಪಂ " (ವಸ್ತುಕೋ. ೧೦೦೦-೦೦) : . ತಕ್ಕನಂ ಪೊಲೆಯನೆ ಮಾಳ್ಪ ಮಂ ಪೊಲೆಯನಂ ತಕ್ಕನೆ ಮಾಳ್ಪ . . . ನೃಪಚಿತ್ತವೃತ್ತಿ ಸಂಚಲಂ (ಪಂಪಭಾ. ೧೨-೯೨) ; ಪಾಪಕ್ಕಂಜುಗುಂ ತಕ್ಕಂ (ಧಾಹಾಭೂ. ೮೦ ಉದಾ) ; ಮಕ್ಕಳಾಟಿಕೆಯಾದಡಾಗಲಿ ತಕ್ಕರಲ್ಲೆಂದೆನಲಿ ಸಲಹುವಡಕ್ಕ ಸೈರಂಧ್ರಿಯನು ಸೇರಿಸಬೇಕು ತನಗೆಂದ (ಕುವ್ಯಾವಿ. ೨-೪೬) ; ತಕ್ಕರ ಗೋಷ್ಠಿ ತನೂದರಿಯರ ಪೊಸ ತಕ್ಕೆ . . . ಹೃದಯಕ್ಕೆ ವಿಲಾಸಮನೀವುದು (ಜಯಕಾ. ೧-೨೪). ೩. ಹಿತವನ್ನು ಬಯಸುವವನು ; ಗೆಳೆಯ :. " ತಕ್ಕನೆಂಬುದು ಹಿತವಂ" (ಕಶಸಾ. ೧೮-೩೭೧) ; "ಹಿತವಂ ತಕ್ಕನೆನಿಸಿರ್ಕು" (ಅಭ್ಯಿಳ್ಳ. ೩೭) ; ನಿನ್ನ ಕೆಳೆ ಟಕ್ಕರ ಕೆಳೆಯಂತಕ್ಕುಮಲ್ಲದೆ ತಕ್ಕರ ಕೆಳೆಯಂತೊಪ್ಪಲಜಿಯದು (ಪಂಚತಂ. ೦೨೩-೦೯) : ನೆಯ್ದಿಲ ತಕ್ಕನುದಯಗಿರಿಶಿಖರಮನೇಜಿಲ್ (ಜಯುಕಾ. ೦೦-೩೯). ೪. ಊರಿನ ಮುಖ್ಯಸ್ಥ : " ಲಾ ಅಪ್ಪಯ್ಯ, ತಕ್ಕರಿ ದಾರೇನೊ? " ಎಂದನು (ಚಿಕಡಾ. ೨೪) : ನೀನು ಇಲ್ಲದುದು ಒಂದು ದೊಡ್ಡ ಕೊರತೆಯಾಯಿತೆಂದು ಊರ ತಕ್ಕ ಮತ್ತು ಅರುವರು ಹೇಳಿ ಕೊಂಡರು (ನಡದಾ. III, ೦೦೩೯). 'ಗ್ರಾಮತಕ್ಕ' ಪರಾ.

[ ತಕ್ಕು$_2$ + – ಅ$_7$. / ಕೊಡ. ತಕ್ಕ ]

**ತಕ್ಕ$_2$** 'ತಗು' ಪರಾ.

**ತಕ್ಕಡಿ$_1$** (ನಾ). ವಸ್ತುಗಳನ್ನು ತೂಕಮಾಡುವ ಸಾಧನ; ತ್ರಾಸು: ರತ್ನ ಪರೀಕ್ಷಕರು ಯಣಿಸಲಶಕ್ತರಾಗಿ ತಕ್ಕಡಿಗಳಿಂದಾ ಮಣಿ ಯಿಷ್ಟೆಂದು ತಿಳಿದವರಲ್ಲ (ಸೌಗಂಧಿ. ೭೩೩-೦೯) ; ಗೀತೆಯು ಪ್ರತಿಯೊಂದು ವಿಷಯದಲ್ಲಿ ತಕ್ಕಡಿಯನ್ನು ಸಮತೂಕವನ್ನಾಗಿ ಹಿಡಿಯಲು ಪ್ರಯತ್ನಿಸುತ್ತದೆ (ಗೀತಾಸಂ. ೧೨೩): ತಕ್ಕಡಿಗೋ ಬೇಡ ಕಾಣಿ ತೂಗುತಿರಲಿ ಸತ್ಯವಾಣಿ (ಅರಳು.೪೦೦-೫). **ತಕ್ಕಡಿ ಹಿಡಿ**=೧. ತೂಗು ; ತೂಕಮಾಡು. ೨. ವ್ಯಾಪಾರಮಾಡು. ೩. ಪರೀಕ್ಷಿಸು; ಬೆಲೆಕಟ್ಟು: ಪರಿಶೀಲಿಸಲಿ, ತಕ್ಕಡಿ ಹಿಡಿಯಲಿ, ಕೇಳಲಿ, ತೂರಲಿ (ಕೆ.ಸಾ. IV ೬೮೩೪). [ ದೇ.II ತಮಿ. ತಕ್ಕಟ್ಟಿ, ತಕ್ಕಟ್ಟೆ ; ಮಲ. ತಕ್ಕಡಿ ; ತುಳು. ತಕ್ಕಡಿ ; ತೆಲು. ತಕ್ಕೆಡ ]

**ತಕ್ಕಡಿ$_2$** (ನಾ). ಮೋಸ : ಎಱಕಮಲ್ಲದೆ ಪೊಲ್ಲದಾಗೆಜಿಗೆ ದೊರೆಕೊಂಡ್ಕೊಳ್ಳ ತೆಱನಲ್ಲದೆ ನೆಱೆಯೆ ಬರಲೆ ತಕ್ಕಡಿಯಲ್ಲಿ ಬೀಸುವಲ್ಲಿಯ ಬೀಸಲಱಿದೆಯಿಲ್ಲ . . . ಆಸುವನುಂ ಕೂಕುವನುಂ ಬೀಸುವನುಂ ಗಡಯೆ ನೆಗಬ್ದ ತಕ್ಕಡಿಯೊಳೆನುತ್ತಾಸದೆಯು ಕುಂಕದೆಯುಂ ಬೀಸದೆಯು ಬಿದ್ದ ಮೆಟ್ಟಿಗುಮೆಟ್ಟಿವ ಬೆಡೆಂಗಂ (ಎಳ. II, ೦೩೩- ೦೨೪ ; ೧೧೭).

[ ದೇ.II ತಮಿ. ತಕ್ಕಟ್ಟ ; ತೆಲು. ತಕ್ಕಡಿ ]

**ತಕ್ಕಡಿಗ** (ನಾ). ತಕ್ಕಡಿ ಹಿಡಿಯುವವನು ; ವ್ಯಾಪಾರಿ.

[ ತಕ್ಕಡಿ$_1$ + – ಗ$_3$ ]

**ತಕ್ಕಡುಗುದುರೆ** (ನಾ). ಯೋಗ್ಯವಾದ ಅಶ್ವ ; ಚುರುಕಾದ ಕುದುರೆ : ಲಂಡಿ ಸವೆದು ಹೋದರೆ ಬಿಚ್ಚುವುದ ತಾ ಕಂಡು ತಕ್ಕಡುಗುದುರೆಯನು ಕೊಂಡು ಬಂದೀ ಹುಯ್ಯಲೊಳಗೆಱಗುವೆನೆಂದು ಬಂಡಾದ ಬೆನಕರಾವುತನು (ಮೋಹತ. ೩೮-೪೨). [ ತಕ್ಕಡು$_6$ (P←ಮರಾ. ತಾಖಡಾ) + ಕುದುರೆ ]

**ತಕ್ಕನೆ** (ಅ). ಒಮ್ಮೆಲೆ ; ಥಕ್ಕನೆ : ಎನೆ ನಕ್ಕನ್ ತಕ್ಕನ್ ತಕ್ಕನತಿ ಕ್ರಮಣೀಯಮಿಾ ಜಯೋತ್ಸವದೊಳ್ (ವಿಷ್ಣುಪು. ೧೩-೦೦೩).

[ ತಕ್$_6$ + – ಅನೆ$_1$ ]

**ತಕ್ಕಯಿಸು** 'ತಟ್ಟೈಸು' ನೋ.

**ತಕ್ಕಲಿ** (ನಾ). ಒಂದು ಬಗೆಯ ಔಷಧಿ ಮೂಲಿಕೆ : ಕರ್ಕಾಟಕಶೃಂಗಿ, ಮರದರಿಸಿನ . . . ತಾರೆಬೇರು, ತಕ್ಕಲಿ ಇವಂ ಕಷಾಯವಿಟ್ಟು ಕೊಡಲು ವಾತಜ್ವರ ನಿಲ್ಲುವುದು (ಸಕವ್ಯ.೬೯). 'ತಕ್ಕಿಲ್$_1$' ಪರಾ. [ ? ]

**ತಕ್ಕಲು** 'ತಕ್ಕಿಲ್$_2$' ನೋ.

**ತಕ್ಕವಲ** (ನಾ). = ತಕ್ಕೋಲ$_2$ ೧ : ಉಪಯುಕ್ತಮಪ್ಪ ತಕ್ಕವಲ ವುಟ್ಟಯೇಲಕ್ಕಿ[ಪಾಠಾಂ. ತಕ್ಕಪ್ಪವಲಘಟ್ಟ] ತಗರಮಲಯಜಮಿನಿತುಂ . . . ಉಪಸೇವಿಸೆ ಪೊಗೆಯನೊಗೆದ ಬಟಲಿಕೆಯಟಗುಂ (ಶಮದ. ೨-೧೮೪).

[ <ಸಂ. ತಕ್ಕೋಲ ]

**ತಕ್ಕವಿಸು** 'ತಟ್ಟೈಸು' ನೋ.

**ತಕ್ಕಸೈಲ** (ನಾ). ಮೈಲುತುತ್ಥ ; ರಸಾಂಜನ : " ತಾರ್ಕ್ಷ್ಯಃ-ತಕ್ಕಸೈಲ " (ಓಷಧಿ. ೬೬). [ <ಸಂ. ತಾರ್ಕ್ಷ್ಯಶೈಲ ]

**ತಕ್ಕಳಿ** 'ತಕ್ಕಟು' ನೋ.

**ತಕ್ಕಳಿಸು**(ಕ್ರಿ). (ನೀರು ಮೊದಲಾದುವನ್ನು) ಚಿಮುಕಿಸು; ಸಿಂಪಡಿಸು: ತುಂಬಾ ಧೂಳಿದ್ದಿದೆ, ನೀರು ತಕ್ಕಳಿಸಬೇಕು (ಉಪ). [ ? + – ಇಸು$_3$ ]

**ತಕ್ಕಟು**, ತಕ್ಕಳಿ(ಕ್ರಿ).೧. ಘನತೆಯನ್ನು ಕಳೆದುಕೊಳ್ಳು; ಹಿರಿಮೆಗುಂದು: ಘನತೆಗೆಡು : ತಕ್ಕಟದೆನಗೆ ಸಪತ್ನಿಯರಿಕ್ಕುಂಗೂಟಂಗೆ ಬಯಸಿ ಪಾರ್ದಿರ್ಪ ವಿಷಾದಕ್ಕೆ ಗುರಿಯಪ್ಪ ದುರ್ಯಶಮಕ್ಕುಂ ತನಯಂ ತಪಕ್ಕೆ ಪಕ್ಕಾಗರೊಡಂ (ಪಂರಾಮಾ. ೬-೪೦). ೨. ಎದೆಗುಂದು ; ಶಕ್ತಿಗುಂದು ; ಧೈರ್ಯವುಡುಗು : ಇಭರಿಪುವಂ ತಕ್ಕಟಿವಿನೆಗಂ ನೊಂದು ನಿಂದು ಕೊಂದುದಿಭೇಂದ್ರಂ (ಶಾಂತಿಪು. ೨-೦೦೬) ; ಮಱುವಕ್ಕದ ನಾಯಕರನಾಜಿಯೊಳ್ಕಂಡಿನಿಸುಂ ತಕ್ಕಟದನೆ ಬಗೆಯೊಳ್ ಬೆಳ್ವಕ್ಕಿಯ ಪಿಂಡಿಂಗವಂದಿರಂ

ಸರಿಗಂಡಂ (ಪಂಪಭಾ. ೯-೫೮) ; ತಕ್ಕಟಿಯದೆಕ್ಕತುಳಂ ಪೊಣರ್ದು . . . ಒಂದನೊಂದಿಱಿಯಲಿರ್ದುವು ತಟ್ಟಿರದುಗ್ರ ದಂತಿಗಳ್ (ಪುಷ್ಪಪು. ೫-೯೦); ಪಜ್ಜೆ ಪಜ್ಜೆಗೆ ತಕ್ಕಟಿದು ಬಗೆಗುಂದಿ ಕಂಡರಂ ಬೆಸಗೊಳುತುಂ (ರಾಮಾಶ್ವ. ೧೧೦-೭). ೩. ಔಚಿತ್ಯವನ್ನು ಮೀರು ; ಮರ್ಯಾದೆಯನ್ನು ತಪ್ಪು : ನೆರೆಯೊಳಘಮರ್ಷಣದೊಳಿರ್ಪ ಮುನಿಗಳಂ ಲೆಕ್ಕಿಸದೆ ತಕ್ಕಟಿದು ಮುಕ್ಕುಳಿಸಿ ಜಕ್ಕುಳಿಸಿದಂ (ರಾಮಾಶ್ವ. ೧೩೭-೨೧). **ತಕ್ಕಳಿ :** ೨. ಬಿಕ್ಕುತುಂ ಬೀಗುತುಂ ಬಲ್ಪಳಿದು ಬಾಡುತುಂ ತಕ್ಕಳಿದು ತಡವಾಗಿ ಹೊರೆಯೇಱಿ ನೋಡುತುಂ (ನಂಬಿರ. ೭-೧೩೦); ಕೆಲ ಪೌಜು . . . ತಲ್ಲಣಂಗೊಂಡು ತಕ್ಕಳಿದು ನಿಂದೆಡೆಯಲ್ಲಿ ನಿಲ್ಲದಾಯಿತು (ಸಮ್ಯಕ್ತ್ವ. ೮-೫೦) ; ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯನೃ. ೭-೧).
[ ತಕ್ಕು₂ + ಅಟಿ₁ ]

**ತಕ್ಕಾಬಿಕ್ಕಿ, ತಕ್ಕಿಬಿಕ್ಕಿ** (ನಾ). ಮೋಸ ; ವಂಚನೆ ; ಅಪ್ರಾಮಾಣಿಕ ವ್ಯವಹಾರ: "ತಕ್ಕಾಬಿಕ್ಕಿ–ಮೋಸತನ" (ಜಾನಪದ. ೭೩). **ತಕ್ಕಿಬಿಕ್ಕಿ:** (*).
[ <ತಕ್ಕು₃ ]

**ತಕ್ಕಾಮೆ** (ನಾ). ೧. ಘನತೆ ; ಗೌರವ : ಜೊತೆ ತಕ್ಕರನ್ನತಾರೆ ; ಕೊಡಗ ಅದನ್ನ ತಡೆಯಬಹುದೆ ? ತಡದೆ, ತಕ್ಕಾಮೆ ಉಳಿಯತ್ತೇನು ? (ಜಿಳಿರಾ. ೧೧೯). ೨. ಒಡೆತನ ; ಪದವಿ ; ಸ್ಥಾನಮಾನ : ಇವರು ಬೇಸರಗೊಂಡ ವರಲ್ಲಿ ಮುಖ್ಯರಾದ ಜನ ಇಂಥವರು ನಾಡಿನ ಎಲ್ಲ ಸೀಮೆ ಎಲ್ಲ ತಕ್ಕಾಮೆ ಯಲ್ಲಿಯೂ ಇರುವರು (ಜಿಳಿರಾ. ೫೩). 'ತಕ್ಕುಮೆ' ಪರಾ.
[ ←ಕೊಡ. ತಕ್ಕಾಮೆ ]

**ತಕ್ಕಾರಿ** (ನಾ). ಒಂದು ಬಗೆಯ ಸಸ್ಯ ಮತ್ತು ಅದರ ಬೀಜ : ತಕ್ಕಾರಿ ಯೆಂಬ ಬೀಜವಂ ಚೂರ್ಣವಂ ಮಾಡಿ ನೀರಿನಲ್ಲಿ ಕದರಿ ಗಿಡಗಳ ಬೇರಿಗೆ ಹಾಕಿದರೂ . . . ಆ ಗಿಡಗಳು ಚನ್ನಾಗಿ ವೃದ್ಧಿಯಂ ಹೊಂದುವದಿಲ್ಲ (ಸೌಗಂಧಿ. ೪೩೭-೭೦). 'ತಕ್ಕಿಲ್₁' ಪರಾ. [ <ಸಂ. ತರ್ಕಾರೀ ]

**ತಕ್ಕಾಳಿ** (ನಾ). ಟೊಮ್ಯಾಟೊ; ಚಪ್ಪರಬದನೆ: ತಕ್ಕಾಳಿ (ಟೊಮ್ಯಾಟೋ) ಬೇರನ್ನು ಕಷಾಯಮಾಡಿ ಕಲ್ನಾರು ಗ ೧ ತೂಕವನ್ನು ಅರೆದು ಕಲಸಿ ತೆಗೆದುಕೊಳ್ಳಲು ಬಹುಮೂತ್ರ ನಿಲ್ಲುವುದು (ಸಕವ್ಯ. ೫೦೦ ಪಠಿ) : ಗೂದೆ ಹಣ್ಣು, ಚಪ್ಪರಬದನೆ, ಟೊಮಾಟೋ, ತಕ್ಕಾಳಿ (ವೃಕ್ಷಗಿ. ೫೦–೦೦೩೦) ; ವಿಟಮಿನ್ ಸತ್ವ ಅಧಿಕವಾಗಿರುವುದು ತಕ್ಕಾಳಿ ಹಣ್ಣುಗಳಲ್ಲಿ (ಕರಪ. ೪೦).
[ ದೇ.॥ ತಮಿ. ಮಲ. ತಕ್ಕಾಳಿ; ತೆಲು. ತಕ್ಕಲಿ ]

**ತಕ್ಕಿಬಿಕ್ಕಿ** 'ತಕ್ಕಾಬಿಕ್ಕಿ' ನೋ.

**ತಕ್ಕಿಲ್₁, ತಕ್ಕಿಲೆ** (ನಾ). ಒಂದು ಬಗೆಯ ಮರ ; ತಗ್ಗಿಮರ : ಎಲವಂ ಪಾದರಿ ಹಾಲೆ ನುಗ್ಗೆ . . . ಬೊಬ್ಬುಲಿ ತಕ್ಕಿ[ಪಾಠಾಂ. ತೊಕ್ಕ, ತೊಲ್ಕಿ] ಲ್ವರುಕಾಸು ನೆಲ್ಲಿ (ಸೂಕ್ತಿಸು. ೩-೨೩). **ತಕ್ಕಿಲೆ :** "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ–ಇ ತಕ್ಕಿಲೇಗಿಡ, ತಗ್ಗೀಸೊಪ್ಪಿನ ಗಿಡ" (ಸಿದ್ಧಾಂತಿ. ೧೦೧); ಈಜಿಗಿಡ, ಅಗ್ನಿಮಂದ, ತಕ್ಕಿಲೆ, ಟಾಟಣಗೆ ಮರ (ವೃಕ್ಷಗಿ. ೬೪–೦೩೦೦).

**ತಕ್ಕಿಲ್₂, ತಕಲು, ತಕ್ಕಲಂ, ತಕ್ಕಿಲು, ತರ್ಕಿಲ್** (ನಾ). ವ್ಯವಸಾಯಕ್ಕೆ ಯೋಗ್ಯವಾದ ಭೂಮಿ : ತಕ್ಕಿಲ ೩ ಮತ್ತರ್ಕ್ಕೆಯುಮಂ . . . ಬಿಟ್ಟರು (ಕಇ. II, ೦೦-೩೦ ; 1080) ; ನೆಸಱುವಾಡವಾ ಗಡಿಂಬದಿಂ ತಕ್ಕಿಲ ನೆಲ ಮತ್ತ ೨ (ಸೌಇಇ. IX-1, ೨೫೩-೬೯ ; 1149) ; ಹಳ್ಳದಿಂ ಪಡುವಲ್ ತಕ್ಕಿಲ ಮತ್ತರು ೩ (ಎಇ. XIV, ೨೭೨-೪೦ ; 1173) ; ಖಂಡಸ್ಫುಟಿತ ಜೀರ್ಣೋದ್ಧಾರವಿನ್ನಿನಿತಕ್ಕಂ ಬಿಟ್ಟ ತಕ್ಕಿಲ ಮತ್ತರ್ ೨ (ಸೌಇಇ. IX-1, ೨೯೭-೭೩ ; 1176). **ತಕಲು :** ಯೆರಡನೆಯ ಪರಿಸಕೆ ಪ ೨ ಮೂಱನೆಯ ಪರಿಸಕೆ ಪ ೩ ಯರಿ ಹೊಲ ತಕಲು ನೂಱಿಕೆ ಪ ೧ (ಎಇ. XIV, ತಿರುಮ. ೭೨-೨೩ ; 1309). **ತಕ್ಕಲು:** ಮಣ್ಣ ಮೊರಟಿ ಕೆಳಗಿರುವ ಕುರುಬರ ತಕ್ಕಲ ಮೂಡಣ ತೆವಿರೊತ್ತಿನಲ್ಲಿ ನೆಟ್ಟ ಕಲ್ಲು (ಎಇ. XIV, ನಂಜನ. ೨೯೫-೨೦೭ ; 1716) **ತಕ್ಕಿಲು :** ತೆವರಕೇರಿಯಡ್ಡವಸುಗೆಯ ತಕ್ಕಿಲು ಮತ್ತರು (ಎಇ. XIII, ೪೯-೮೦ ; 1112) ; ಹಟ್ಟಣದ ದಾರಿಯಿಂ ತೆಂಕಲು ತಕ್ಕಿಲು ಒಡ್ಡಿಹಟ್ಟಿಯ ಗಡಿಂಬದ ಘಳೆಯಲು ಮತ್ತರು (ಸೌಇಇ. IX-1, ೨೯೭-೪೩ ; 1177) ; ಸೋಭನೇಶ್ವರದ ಹೊಲಸ ಮೇರೆ ಮಸ್ಸಂ(ತ್ತಂ) ತೋಂಟ್ಟ[ತ]ಕ್ಕಿಲು ಅರವನ್ನ(ತ್ತ)ರು (ಸೌಇಇ. XV, ೦೩೦-೭ ; 1178) ; ಹಲವುತಕ್ಕಿಲ ನಡುವೆ ಸವೆದ ಬೆಳೆಕೈಯಂತೆ ಹಲವು ಬಸದಿಯ ನಡುವೆ ಸುರಹೊನ್ನೆ ಬಸದಿ ಯಗ್ಗಲಿಸಿ ಮೆಱೆಯಲು (ಸೋಮಚ. ೪-೦೫). △ **ತರ್ಕಿಲ್ :** ನಾಗಯ್ಯ ಗೇರಿಯ ಶತದ ತರ್ಕ್ಕಿಲ್ಗೆಯ್ಯ ಮತ್ತರು ೩ (ಕಇ. II, ೯-೦೯ ; 1075).

**ತಕ್ಕಲು ಕೀಳು** = ವ್ಯವಸಾಯದ ಭೂಮಿಯಲ್ಲಿರುವ ಕಳೆಯನ್ನು ಕೀಳಂ,–ಕಿತ್ತುಹಾಕು : ಆ ಸಾಲಿನಲ್ಲಿ ಸ್ವಲ್ಪ ತಕ್ಕಲುಕಿತ್ತು ಹೊಗೆಹಾಕ ಬೇಕೆಂದೂ ಅವರ ವಾದ (ಹಂಗಾಳ್ವ. ೩೦೩) ; ಮೂರು ಕೊಳಗದಷ್ಟು ತಕ್ಕಲು ಕಿತ್ತು ಹೊಗೆ ಹಾಕಿದ್ದರಿಂದ ಸುಂಕಗಿಂಕ ಕಳೆದು ಆರುವತ್ತು ವರಹ ಬಂತು (ಹಂಗಾಳ್ವ. ೩೦೩).

**ತಕ್ಕಿಲು** 'ತಕ್ಕಿಲ್₂' ನೋ.

**ತಕ್ಕಿಲೆ** 'ತಕ್ಕಿಲ್₁' ನೋ.

**ತಕ್ಕಿಸು₁** (ಕ್ರಿ). ಅಪೇಕ್ಷಿಸು ; ಬಯಸು : ತಕ್ಕಿಸಲೆ ತಕ್ಕ ಶೋಭೆಗೆ ಪಕ್ಕಾದೊಡಮರಸನಲ್ಲಿ ಪುಗಲೊಲ್ಲದೊಡಂ ಪಕ್ಕಣಮಂ ಬಲ್ಪಿಂದಂ ಪೊಕ್ಕುವು ನಿಯಮಿಸುವರಾರೊ ಕಣ್ಣಂ ಮನಮಂ (ಲೀಲಾವ. ೮-೪೦) ; ಅಸಮಶರನ ತನುವಾಂತನೆಳೆಸೆಯದು ತನಗಿನಿತು ಶೋಭೆಯೆಂದೊಲವಿಂ ತಕ್ಕಿಸಿದುದು ಕಡುಗಾಡಿಯೆನಲ್ ವಸುದೇವನ ಗಂಡಗಾಡಿ ಗಣನೆಗಳಂಬಂ (ಮಹಾಸೇ. ೪-೨). [ ತಕ್ಕು₂ + – ಇಸು₁ ]

**ತಕ್ಕಿಸು₂** 'ತಟ್ಕಿಸು' ನೋ.

**ತಕ್ಕಿಟಿ** (ಕ್ರಿ). ಸಾಮರ್ಥ್ಯ ತಗ್ಗು ; ಶಕ್ತಿಗುಂದು : ಎಳಯಜಳಧರದ ವೊಳ್ ಕಡುಮುಳಿಸಿಂ ಖಚರೇಂದ್ರಸೇನೆ ಕವಿದೆನಸುಂ ತಕ್ಕಿಟಿಯೆ ರಿಪು ಬಲದ ಮೇಲಾಗಳೆ ಸುರಿದುದು ತರಣೆ ಸರಲ ಬಲುಸರಿವಟಿಯಂ (ಶಾಂತೀಶ್ವ. ೩-೯೩). [ ತಕ್ಕು₂ + ಇಟಿ ]

**ತಕ್ಕು₁** (ಕ್ರಿ). ೧. ಪಡೆ ; ತೆಗೆದುಕೊಳ್ಳು : ಎಮ್ಮಣ್ಣ ಪಾತಿಯಿಂ ರಣವ ಜಯಿಸಲು ದಿವ್ಯವಸ್ತುಗಳ ನೀ ತಕ್ಕಿಕೊಂಡು ಬಹುದಯ್ಯಾ ಸೈರಂಧ್ರಿ ಯೆಂದುರೆ ಹರಸಿ ಬೀಳ್ಕೊಟ್ಟಳು (ಲಕ್ಷ್ಮಭಾ. ೪-೯-೬). 'ತೆಗೆ₁' ಪರಾ. ೨. (?) : ಮರೆವ ಮಧುಮಾಸವಿದು ವರ್ಷರ್ತುವಲ್ಲಲೇ ಬೆರಗಿದೇನುಕ್ಕಿ ದಂತ್ಯೆತಂದು ಪೆರ್ಜಲಂ ಪರಿದುಕ್ಕಿ ತಕ್ಕುತಿದೆ ಮಚ್ಚಿವಾರಾಧನೆಯು ಮೊಂದಲ್ಲದೆರಡು ವೇಳೆ (ಶರಪು. ೦೩-೨೯). [ ? ]

**ತಕ್ಕು₂, ತರ್ಕು** (ನಾ). ೧. ಶ್ರೇಷ್ಠತೆ ; ಘನತೆ; ದೊಡ್ಡಸ್ತಿಕೆ ; ಹಿರಿಮೆ; ಯೋಗ್ಯತೆ : ಅಂತದಟರನೊಂದೆವೊಯ್ಯುದ್ಧಮರದಂ ಬಲಮನ್ನನೆ ನೋಡೆ ತಕ್ಕನೆನ್ನದಟುಮನೆನ್ನ ವೀರಮುಮನಾಜಿಯೊಳೆನ್ನರಸಂಗೆ ತೋಱುವೆಂ (ಪಂಪಭಾ. ೦೦-೪೦) ; ಪುಸಿವುದೆ ತಕ್ಕು ಕೊಟ್ಟಟಿಬಿಕೊಳ್ವುದೆ ಮನ್ನಣಂ (ಎಇ. II, ೦೩೩-೪೫ ; 982) ; ತಕ್ಕಿನ ಪವಳದ ಸಂಕೆಯ ಟಕ್ಕೆಯ ಮಣಿ ಗಳನೇಕವಂ . . . ಸೂಱೆಗೊಳ್ವನವನುತ್ಸವದಿಂ (ಧರ್ಮಾಮೃ. ೨-೩೭) ; ಒಕ್ಕಲ್ತನಮುಮನಱಿವಿನ ತಕ್ಕುಮನಱಿವವಗುಣಂಗಳೆಮಗೇವುವು(ಪಂಹರಿ. ೦-೨೦) ; ಸದ್ವಿದ್ಯರ್ ಸಭಾಮಧ್ಯದೊಳ್ ಪಲಬರ್ ಸತ್ಯವಿಗಿತ್ತ ತಕ್ಕಿನ ಪೆಸರ್ ಸಲ್ವಂತೆ ನೀಚಂಗೆ . . . ಗಾವಿಲನೊರ್ವಂ ಕುಡೆ ಕೊಂಡ ತೊಂಡು ಪೆಸರಿಂದೇಂ ಸಲ್ವುದೇ ನಿಲ್ವುದೇ (ಧರ್ಮನಾ. ೦-೪೯). ೨. ತಕ್ಕುದು; ಯೋಗ್ಯವಾದುದು ; ಉಚಿತವಾದುದು : ರಕ್ಕಸನ ಮಾಡದೊಳಗಂ ಪೊಕ್ಕಾಪಂ ಸುಖದಿನಿರ್ದನಾತಂಗೆ ಕರಂ ತಕ್ಕಪ್ಪೆ[ಪಾಠಾಂ. ತಕ್ಕಿಪ]ನ್ನಾತ್ಮಜೆಯಂ ಮಿಕ್ಕಿರ್ದಾ ನಾಡುಮಂ ನಿತಾಂತಂ ಕುಡುವೆಂ (ಜೀವಸಂ. ೨೦೫-೪೯):

ಮಾರ್ಗಮಂ ತಕ್ಕೆನಿಸಿ ಪನ್ನೆರಡು ಸಾವಿರದ ಗಾವುದಮ್ಮಕ್ಕುದನುದಿನಕೆ ಪೋಪವನಾರುಯೆನುತಲಾ ಮಂತ್ರಿ ಸಹ ಯೋಚಿಸುತಿರೆ (ತುರಂಗ. ೩೩–೧೦). ೩. ಯೋಗ್ಯವಾದ ಮಾತು ; ನಾಣ್ಣುಡಿ ; ಗಾದೆ : ಕಾಲಕ್ ಬುದ್ಧಮಂಡ ಎದೆ ಚವುಟತ್ತೆ ಎಂಬ ಕೊಡವ ತಕ್ಕನ್ನು ಅರಿತು ನಡೆಯುವ ವರು ದೊರೆಗಳು (ಹುಂಡಿಹಾ. ೧೩) ; ಕೈಲಾಗದವನಿಗೆ ಮೂಗಿನ ತುದಿಯಲ್ಲಿ ಚೊಡಿ ಎಂಬ ತಕ್ಕನ್ನು ನೀನು ಕೇಳಿಲ್ಲವೆ? (ಹುಂಡಿಹಾ. ೦೩೦). ೪. ಶೌರ್ಯ; ಸಾಮರ್ಥ್ಯ ; ಪರಾಕ್ರಮ : "ಪನ್ನತಿಕೆ, ಪೆಟ್ಟುವೆರ್ಚು, ತಕ್ಕು . . . ಆರ್ಪು, ಅಣ್ಮು–ಈ ೮ ಪರಾಕ್ರಮಂ" (ಶಶಸಾ. ೦೩–೨೬೩) ; ನಲ್ಲಂಬಿಂದಿಸೆ ಪುಷ್ಪಬಾಣನೆರ್ದೆಯಂ ಬೆಂಬಿಟ್ಟು ಬೆಳ್ಕಾಗಿ ತಕ್ಕೆಲ್ಲಂ ಕೆಟ್ಟೆರ್ದೆಗೆಟ್ಟು ಜಂಗಮಲತಾ ಸಲ್ಲೀಲೆಯರ್ ಬಾಲೆಯರ್ ಚೆಲ್ಲಂ ಬೇಂಟದ ಕೋಟೆಯೊಳ್ ತೊಡರೆ (ಕಾವ್ಯಸಾ. ೩೩೦ ಕೂದ್ರಳ) ; ಕಡುಗೆಯ್ಮೆಯಾಗಿ ಶೀಘ್ರಸಂಧಾನವಿಸು ವಶ್ವಗ್ರೀವನ ತಕ್ಕುಂ ಬೇಗಯ್ಮೆಯುಂ ಕಿಡೆ (ಶಾಂತಿಪು. ೩–೬೦ ವ) ; ತಕ್ಕಿನಿನೀ ಶನೆಚ್ಚ ತಿಮಿರೇಷುಗಿನೇಷುವನಗ್ನಿಮಿತ್ರ ಬಾಣಕ್ಕಹಿಬಾಣಮಂ . . . ಅಧೋಕ್ಷಜನೆಚ್ಚು ಪೊಡರ್ವುದೆಂೋೞಿದಂ (ಜಗವಿ. ೦೮–೨೪) : ಧುರದೊಳಿ ದಿರ್ಚ್ಚಿದ ಪಗೆವರನುರವಣೆಯಿಂ ಗೆಲ್ವ ತಕ್ಕು . . . ಅಂಗರಕ್ಕೆಗೆ ನಿಜಂ (ಎಶ. ೮, ಅರಸೀ. ೩೯–೩೦ ; 1186) ; ವಿಕ್ಕರಸನುಂ ತಕ್ಕಂ ಬಿಸುಟ್ಟೋಡಿದಂ (ಪ್ರ್ಯಆರಿ. ೦೯೪೦, ೦–೬೨ ; 1800) ; ಏಕ್ಕಲಗಳು ತಮ್ಮ ತೆಗೆದ ಜಾಯಿಲಗಳ ನಿಕ್ಕಡಿಮಾಡಿ ಹಾಯ್ದುದನು ತ[ಹಾಶಾಂ. ಟ]ಕ್ಕಿನ ಬೇಡರ ಕೆಡಹಿದುದನು ಕಂಡಿಕ್ಕಿದನಾ ವನಚರನು (ಚೆಮಿಸಂ. ೩–೩೬) ; ಎಕ್ಕೆಯೊಳೊಕ್ಕು ಪಳಂಚುವ ಪಾಂಗಿಂ ತಕ್ಕು ವಿಾಗಿಲ್ಕೆಕ್ಕತುಳಂ ಪೊರ್ಕುಳಿವೊಕ್ಕು ಕರಂ ಹಾಡಾಹಾಡಿ ಯೊಳುಐದಿೞಿದರ್ ತಮ್ಮೊಳಗೆ (ಜಯಶಾ. ೬–೩೦). ೫. ಬೆಡಗು ; ಠೀವಿ : ಅವಿರಳವಾದ ತುಂಗಕುಚಭಾರದೆ ತೋಳ್ಪೆಣೆದಿಟ್ಟ ತಕ್ಕಿ ನೊಳ್ ಕವಣೆಯ ಗುಂಡು ಪಾಯುವ ಮೃಗಾವಳಿ ಪಾಯುವು . . . ಪಾಂಥರೆರ್ದೆ ಪವ್ವನೆ ಪಾಱುವವಾ ಪ್ರದೇಶದೊಳ್ (ಅಜಿಪು. ೦–೮೨). ೬. ಸ್ನೇಹ ; ಪ್ರೀತಿ : "ತಕ್ಕು, ಅಚ್ಚುಱು, ಒಱಲ್ . . . ಎಜ ು, ಓವು–ಈ ೮ ಸ್ನೇಹಕ್ಕೆ ಪೆಸರ್" (ಶಶಸಾ. ೦೯–೩೯೦); "ತಕ್ಕೆಂಬುದು ನೇಹ ಮಪ್ಪುದು" (ಚತುನಿ. ೩೬) ; "ಎಱಕಂ ತಕ್ಕಚ್ಚಱು ಕೂರ್ಪೊಱಲುಂ ಕಾದಲ್ಮೆಯೆನ್ನಲಿವು ಸುಸ್ನೇಹಂ" (ಕವಿಕಂ. ೦೬೩). ೭. ಆಸೆ ; ಇಚ್ಛೆ ; ಉತ್ಸಾಹ : ಕ್ಷಿತಿತಲಮಂ ಗೆಲ್ದಿರ್ದಪ್ರತಿಮಲ್ಲನನಿಕ್ಕಿ ಮುಯ್ಯನಣ ಮಾನದೆ ದಪಿಾತ ದುರಿತಮಲ್ಲನುಮನುಡಿವ ತಕ್ಕಿನಿಂ ಸಭೆಗೆ ನಡೆದ ನಿಂದ್ಯಾರ್ಚಿತನಾ (ಆದಿಪು. ೦೯–೦೩೪); ನಡೆತಂದರಾಜಗಿರ್ವಾಲದಲರಾತಿ ನಾಯಕರುವೊರ್ಬರನೊರ್ಬರೆ ಗೆಲ್ವ ತಕ್ಕಿನೊಳ್ (ಪಂಪಭಾ. ೦೦–೩೨) ; ಮುಕ್ಕುವೋಗದಳುಕುರ್ವಮಂ ನೋಟಕರಕ್ಕಿನಮಪ್ಪವರಿಂ ಪೊಗೞಿಸು ವೆನೆಂದು ತಱಿಸಂದು ತವಮ್ಮುಕಿರ್ವರುಮನಿಕ್ಕುವ ತಕ್ಕು ಕೈಮಿಕ್ಕು ನಿಲೆ (ಶಾಂತಿಪು. ೪–೩೬ ವ) : ಮಹೇಂದ್ರಂ ಪುರಮಂ ಪೊಱಮಟ್ಟು ಮಱುವಕ್ಕಮ ನಿಕ್ಕುವ ತಕ್ಕು ಮಿಕ್ಕು ಬರೆ ಕಡಂಗಿ ಕಾದುವಲ್ಲಿ (ಪಂಪರಾಮಾ. ೦೦–೫೦ ವ) ; ಪ್ರತಿರೋಧಕನಾರಟಗೊಳ್ವ ತಕ್ಕಿನವಂ (ವಸ್ತುಕೋ. ೬೩–೮೨) ; ಈ ಗೋಪಾಲಬಾಲಕರಂ ಮಟ್ಟಿಸುವೆನೆಂಬ ತಕ್ಕು ಮಿಕ್ಕು ಬರೆ (ಜಗವಿ. ೬–೯ ವ) ; ಬೆಳ್ಪಿಯ ಬಳ್ಪಿಮಾಡಮಂ ತಕ್ಕೆನೋಳೇಱಿ ನೋಡಿದಳ ದೊರ್ವಳಗುರ್ವಿಪ ಕರ್ವುವಿಲ್ಲನಂ (ಕಬ್ಬಿಗಕಾ. ೩೪೦). ೮. ನೆರವು; ಬೆಂಬಲ; ಆಶ್ರಯ: 'ತಕ್ಕುಗುಂಡು' ಪರಾ. ೯. ಕಾವ್ಯದಲ್ಲಿರುವ ಔಚಿತ್ಯ : ಕವಿತೆಯ ಬರ್ದು ಮೆಯ್ಸಿರಿ ಬೆಡಂಗು ರಸಂ ಬದುರೊಳ್ಪು . . . ಸವಿ ತಕ್ಕು ಪೊದಳ್ಕೆ ಬಿನ್ನಣಂ . . . ಪೊಡರ್ಪೆವರನಿತಿಂತುಟಿಂದೆಳೆದರಂ ಧರೆ, ಪೇಳ್ವೆಯ ಕಾಳ್ದೆಯೆಂದದು ? (ಸಂಶಪ. ೬–೦೦). △ ತರ್ಕು : ೪. ನಾಳೆ ನೋಡುವೆನಾತನ ಚಕ್ರದುರ್ಕುಮಂ ಮೊನೆಗನುಕೂಲರಾಗಿ ನೆಱಿವಂದ ನೃಪಾಳರ ತೋಳ ತರ್ಕುಮಂ (ಮಹಾನೇ. ೦೦–೯೯). [ <ತಗು ]

ತಕ್ಕು₃ 'ಟಕ್ಕು₁' ನೋ.

ತಕ್ಕು₄ 'ತಟ್ಕು' ನೋ.

ತಕ್ಕು₆ (ನಾ). ಒಂದು ಬಗೆಯ ಔಷಧಿ ಸಸ್ಯ : "ಪಟ್ಟರಣ – ತಕ್ಕು, ಗರುಗ" (ಓಷಧಿ. ೦೬೩).

ತಕ್ಕುಂಗೆಡು, ತಕ್ಕುಗಿಡು, ತಕ್ಕುಗೆಡು (ಕ್ರಿ). ೧. ಘನತೆಯನ್ನು ಕಳೆದು ಕೊಳ್ಳು ; ಹೀನಸ್ಥಿತಿಗೆ ಬರು ; ದೈನ್ಯಾವಸ್ಥೆಯನ್ನು ಹೊಂದು : ಶಾಮುಸವಿಲ್ಲದೆ ತಕ್ಕುಂಗೆಡದಧರಾಮಂ ರಿಪುನಿರ್ಧಾಮಂ ಶರಣಲಲಾಮಂ ಕೇಡೋಧಾಮಂ . . . ಕುಳ್ಳಿದು ಸೋಮೇಶನನೀಕ್ಷಿಸಿ (ಉದ್ಭಟೇ. ೩–೬೦). ತಕ್ಕುಗಿಡು : ೧. ಬಾಹುಬಲಮಿಲ್ಲದ ರಾಜಪುತ್ರನಂತೆ ತಕ್ಕುಗೆಟ್ಟು (ಶಾಂತಿಪು. ೪–೩೦ ವ). ೨. ಶಕ್ತಿಗುಂದು ; ನಿರ್ಬಲನಾಗು : ತೇರಚ್ಚುಂ ಮುಱಿಯೆಚ್ಚುಂ . . . ಸಾರಥಿಯಂ ಕೆಡೆಯುಚ್ಚುಂ ಮಾರುತಿಯ ರಣಕ್ಕೆ ತಕ್ಕುಗಿಡದವನಾವಂ (ಪಂಪರಾಮಾ. ೦೦–೩೨). ತಕ್ಕುಗೆಡು : ೧. ತಕ್ಕುಗೆಟ್ಟಿಲ್ಲ ಶಿವಶಿವಯೆನುತ್ತಂ ಜನಂ (ಪ್ರಭುಲಿ ೮. ಬೇ. ೬೩–೦೬) ; ಚಿತ್ರಜಚಾಪಂ ಮನಮಂ ಸುತ್ತಿರೆ ಮಿಗೆ ತಕ್ಕುಗೆಟ್ಟು ಪೌರೋಹಿತನುದ್ವೃತ್ತತೆಯನೊಕ್ಕು ಧೈರ್ಯಗೆಡುತ್ತಂ ದತ್ತೂರಮಂ ಸವಿದ ಮಾಟ್ಕೆಯೊಳಿರ್ದಂ (ಪುಷ್ಪಾಸ್ತ್ರ. ೦–೯೨). [ ತಕ್ಕು₂ + ಕೆಡು₁ ]

ತಕ್ಕುಗಿಡು 'ತಕ್ಕುಂಗೆಡು' ನೋ.

ತಕ್ಕುಗುಡು (ಕ್ರಿ). ನೆರವನ್ನು ನೀಡು ; ಒತ್ತಾಸೆಯಾಗು ; ಬೆಂಬಲ ವಾಗು : ಬೆರಲೆಡೆಯೊಳಡಸಿದ ಕಪ್ಪುರವಳುಕಿನೊಳೆ ನಗಿಸುವ ಜಿೋಡಗರ ನಿಡುವ ನೆವದಿಂ ಪರಿವ ಮುಗುಳ್ನಗೆಯ ಮುಗುಳ್ಗಳಿಗಿಂಗೆ ತಕ್ಕುಗುಡು ವಂತೆಯುಂ ಕೋಮಳಾಂಗುಳಿಜಾಳಕಂ ಮೆಱೆಯೆ (ಅನಂಪು. ೮–೭ ವ).

[ ತಕ್ಕು₂ + ಕುಡು₁ (<ಕೊಡು₁) ]

ತಕ್ಕುಗೆಡಿಸು (ಕ್ರಿ). ಘನತೆಯನ್ನು ತಗ್ಗಿಸು ; ಹಿರಿಮೆಯನ್ನು ಕುಂದಿಸು : ಕರೆಸೊಮ್ಮೆ ಬಾರದಿರ್ದರೆ ತಕ್ಕುಗೆಡಿಪೆನೆಂದೊರೆದ ಚೋಳನ ಬಱುನುಡಿಯ ಶಿರಸ [ ಸಾ ] ವಹಿಸಿಕೊಂಡು (ಭೃಚರಿ. ೦–೦೯೩); ತಕ್ಕೆದಿರ್ಪ ಮುನಿಸಾಪತ್ಯ ಸಂತಾನಮಂ ತಕ್ಕುಗೆಡಿಸಿ ರಾಜ್ಯಂಗೆಯ್ವನಾ ಪಣ್ಯವಧುವಾಟಿಯೊ ಳಗನಂಗಂ (ಉದ್ಭಟೇ. ೪–೦೬). [ ತಕ್ಕು₂ + ಕೆಡಿಸು₁ ]

ತಕ್ಕುಗೆಡು 'ತಕ್ಕುಂಗೆಡು' ನೋ.

ತಕ್ಕುಗೊಡು (ಕ್ರಿ). ವಂಚಿಸು ; ಟಕ್ಕಿಸು : ಚಿಂತಾಗತಿಯುಂ ತನ್ನ ಪೆಸರಂ ನನ್ನಿಮಾಡಿ ತರುಣಿಗೆ ತಕ್ಕುಗೊಟ್ಟು ಪೆಱಗೆ ಪಾಱಿ ಪೋಗಿ (ಅರ್ಧನೇ. ೬–೦೮ ವ). [ ತಕ್ಕು₃ (<ಟಕ್ಕು₁) + ಕೊಡು₁ ]

ತಕ್ಕುದಕ್ಕು (ನಾ). ಖಡ್ಗಯುಂದದದ್ದ ಒಂದು ವರಸೆ (?) : ಪುಸಿ ನಸು ವಂಚನೆ ನೋರ್ಪನುಮುದಗಲಿತು ತಕ್ಕುದಕ್ಕು ಪಗೆ ಕೆಯ್ಯುಗೆ ಕೆಯ್ಯುಸುರಿ ನುಸುಳೆಂಬ ಕೀಣದ ಕುಸುರಿಯನಱಿದಿಱಿದು ಮೆಱೆದು ನೆಱೆದುಱದರೆಬರ್ (ಪಂಪಭಾ. ೦೦–೮೦).

[ ಇಲ್ಲಿ ತಕ್ಕು ಮತ್ತು ದಕ್ಕು ಎಂಬವು ಭಿನ್ನ ಶಬ್ದಗಳಿರಬಹುದು ]

ತಕ್ಕುಬೊಕ್ಕು (ನಾ). ಒಂದು ಅನುಕರಣ ಶಬ್ದ : ತೆಱಪಂ ನಿಟ್ಟಿಸಿ ಕುಕಿಱಿದಿಱಿಕಡಂ ಮೆಟ್ಟಿ ತಕ್ಕುಬೊಕ್ಕೆನೆಯೆನೆ ತತ್ತಱದಱಿದ ಕಡಿತಲೆ ಯೊಳ್ಪಱಸಿಡಿಲರಹಲ್ಲವೀರನುಂ ಮದ್ದನುಂ (ಎಶ. XV, ಬೇಲೂರು ೩೬೦–೯ ; ಸು. 1200).

ತಕ್ಕುಮೆ (ನಾ). ೧. ತಕ್ಕುದಾಗಿರುವಿಕೆ ; ಔಚಿತ್ಯ : ಉಮಗೆ – ತಕ್ಕುಮೆ (ಶಮದ. ೨೦೦ ಪ್ರಯೋ). 'ತಕ್ಕುಮೆಗಿಡು', 'ತಕ್ಕುಮೆವಡೆ' ಪರಾ. ೨. ಯೋಗ್ಯತೆ ; ಅರ್ಹತೆ : ಗಂಡಿಲ್ಲದ ಭಟನ ಯುದ್ಧಮುಂ . . . ಮಿಂಡನ ತಕ್ಕುಮೆಯುಮೊಪ್ಪಲಾಱವು ಜಗದೊಳ್ (ಧರ್ಮಾಮೃ. ೬–೯೯); ಅಧಿಕಾರಿಗಳ್ಗಂ ಬಲ್ಲಿತ್ತಾದ ತಕ್ಕುಮೆಯುಂ ಬಿತ್ತರಿಪ ಬಗೆಬಗೆಯ ಮಹಾ ಬಿರುದುಗಳಂ ದಯೆಗೆಯ್ಯಲ್ಕೊಡಲ್ಪಾಡಿಯುಂ (ಮರಾಠ. ೬–೩೬) ; ತನ್ನ

ದಂಡಿನವರಿಗೆ ಅವರವರ ತಕ್ಕುಮೆಯಂತೆ ಹಣವನ್ನು ಕೊಟ್ಟು, ಉಳಿದುದನ್ನು ಕಾಬೂಲಿನಲ್ಲಿದ್ದ ತನ್ನ ಪ್ರಜೆಗಳಿಗೆ ಹಂಚಿದನು (ಮೋಬಾದ. ೨೩). ೩. ಶೌರ್ಯ ; ಪರಾಕ್ರಮ : "ಪನ್ನತಿಕೆ ಪೆಟ್ಟು ತಕ್ಕುಮೆಯುನ್ನುಂ ಕಾಂಸಾಸ ದಪ್ಪುವುದಟಾರ್ಪಣ್ಮೆಂದೆನ್ನಲ್ ಪರಾಕ್ರಮಾಖ್ಯಂ" (ಕವಿಕಂ. ೦೨೩). 'ತಕ್ಕೊರ್ಮೆ$_1$' ಪರಾ. [ ತಕ್ಕು$_2$ + – ಉಮೆ$_1$ ]

**ತಕ್ಕುಮೆಗಿಡು** (ಕ್ರಿ). ಔಚಿತ್ಯವಿಹಾರು : ನಿಮ್ಮ ಬಗೆಯ ದ್ರೋಹಿ ದುರಾತ್ಮರಿಗೆ ತಕ್ಕುಮೆಗಿಡದ ಒಂದೇ ದಂಡನೆ ಎಂದು ತರಿಸಂದು ಶಿರಚ್ಛೇದನಗೊಟ್ಟಿರುವರು (ಚಿಟ್ಟಿಅ. ೨೦೯–೨೨). [ ತಕ್ಕುಮೆ + ಕಿಡು (<ಕೆಡು$_1$) ]

**ತಕ್ಕುಮೆವಡೆ** (ಕ್ರಿ). ೧. ಔಚಿತ್ಯವನ್ನು ಪಡೆ ; ತಕ್ಕುದಾಗಿರು : ಮಹಾರಾಜ ಸನ್ನಿಧಿಯ ಭೋಗೋಪಭೋಗಗಳಿಗೆ ತಕ್ಕುಮೆವಡೆದ, ಉಪಸ್ಕರಾಲಂಕಾರಾದಿ ವಸ್ತು ಪ್ರಪಂಚವು . . . ರಂಜಿಸುತ್ತಿರುವುದು (ಚಿಟ್ಟಿಅ. ೦೩೮–೬) : ಮಹಾರಾಣಿಗೆ ತಕ್ಕುಮೆವಡೆದ ಬೀಡಾರವನ್ನು ನಿಮಗೆಂದೇ ಅಣಿಮಾಡಲಾಗಿದೆ (ಸವತಿ. ೨೬೯). ೨. ಘನತೆಯನ್ನು ಪಡೆ : ದುಃಖದಿಂ ಪರಿಪಕ್ವಮಾದೆ ; ತಕ್ಕುಮೆವಡೆದೆ (ಸಂಸಹ. ೨೩–೦೬).

[ ತಕ್ಕುಮೆ + ಪಡೆ$_1$ ]

**ತಕ್ಕೊರ್ಮೆ$_1$** (ನಾ). ಹಿರಿತನ ; ದೊಡ್ಡಸ್ತಿಕೆ ; ಘನತೆ : ತನ್ನದೊಂದು ಸವಿಗಂ ಸೋಲಕ್ಕವಿತ್ತಂ ನಿಜಕ್ರಮಮಂ ತನ್ನಯ ಬೇಟದಾಕೆಯ ಮಗಂಗೆಂದೊಂದಪಖ್ಯಾತಿ ಲೋಕಮನಾವರ್ತಿಸೆ ಬಟ್ಟೊಡೆನ್ನ ಕುಲಮುಂ ತಕ್ಕೊ[ಪಾಠಾಂ. ತ್ಕೊ]ರ್ಮೆಯುಂ ಮಾಸದೆ (ಪಂಪಭಾ. ೦–೭೦) ; ಪೇಸುಗೆಗೆಟ್ಟೀ ನಾಣಪುತ್ತ್ರಪ್ರಟೀಜಗಟದೊಳೇನಮ್ಮ ತಕ್ಕೊರ್ಮೆಯುಂಟೀ (ಶಾಂತಿಪು. ೬–೮೬) ; ಸರ್ವ್ವ ಜನೋಪಕಾರಿ ತಕ್ಕೊರ್ವ್ವೆಯ ಜನ್ಮಭೂಮಿ (ಎಪಿಕ. XI-ii, ೦೩೩–೨೪ : 1087) ; ಕಲಿಯುಂ ಛಾಗಿಯುಮಿನ್ನರಾರ್ ಮನುಕುಲರ್ ಮುನ್ನಾದರೆಂಬನ್ನೆಗಂ ನೆಲನಂ ನೇಸಱುಮುಳ್ಳಿನಂ ನಿಲಿಸಿದಂ ತಕ್ಕೊ[ಪಾಠಾಂ. ತ್ಕೊ]ರ್ಮೆಯಂ ಪೆರ್ಮೆಯಂ (ಪಂಪಾಮಾ. ೬–೦೭೦). [ ತಕ್ಕು$_2$ + ಊರ್ಮೆ. /ತಮಿ. ತಕ್ಕೊರ್ವ್ವೆ ]

**ತಕ್ಕೊರ್ಮೆ$_2$** (ನಾ). ಪ್ರೀತಿ ; ಸ್ನೇಹ : ಬಮ್ಮಯನೀಗಳೆಯ್ದೆ ಪರಿಭಾವಿಸಿ ನೋಳ್ಪಡೆ ಮೇಲೆನಿಪ್ಪನಾ ಧರ್ಮ್ಮಕನೂಭವಂಗೆನುತೆ ಬಣ್ಣಿಪುದೀ ಜಗವೆಲ್ಲಮೊಲ್ದು ತಕ್ಕೊರ್ಮೆಯನೆನ್ದೊಡೇಪೊಗಳ್ವನಿಂ ಪೊಗಳ್ವಂ ಬುಧಕಲ್ಪವೃಕ್ಷನಂ (ಕೊಲ್ಹಾಶಾ. ೮–೦೩ ; 1147). [ ತಕ್ಕು$_2$ + ಒರ್ಮೆ ]

**ತಕ್ಕೊರ್ಮೆಗೆಡು** (ಕ್ರಿ). ಘನತೆಯಿಲ್ಲವಾಗು ; ಯೋಗ್ಯವಾದುದನ್ನು ಕಡೆಗಣಿಸು : ವಿಟನಕ್ಕೆ ತೆರಳ್ವನ್ನವರಾಂ ಪೊಱಮಟ್ಟೆನೆಂದು ಕೇಳ್ದು ಮಗಳ್ದಿರಲಾಱದೊಂದು ಮೋಹದಿಂ ಬೆಂಬತ್ತಿದ ನಿನ್ನಂ ತಕ್ಕೊರ್ಮೆಗೆಟ್ಟುಂ ಪೇಟದೆಯುಮಾನ ಪಟುವಿಂಗಟ್ಟಿದೆನೇ (ರಾಮಾಶ್ವ. ೯೩–೨೨).

[ ತಕ್ಕೊರ್ಮೆ$_1$ + ಕೆಡು$_1$ ]

**ತಕ್ಕೆ$_1$** 'ತಟ್ಕೆ' ನೋ.

**ತಕ್ಕೆ$_2$** (ನಾ). ಯೋಗ್ಯಳಾದವಳು ; ತಕ್ಕವಳು : ನಿಮ್ಮಡಿಗಾಹಾರದಾನಂ ಕುಡಲ್ ತಕ್ಕೆನಲ್ಲೆನಾಂ ಸೂಳೆಯೆಂ (ಚಾವುಂಪು. ೩೮–೩೦).

[ ತಕ್ಕು$_1$ + – ಎ$_2$ ]

**ತಕ್ಕೆ$_3$, ಟಕ್ಕೆ$_1$, ತೆಕ್ಕೆ$_2$** (ನಾ). ದಿಂಬು ; ಒರಗುದಿಂಬು ; ಲೋಡು : ಕಚೇರಿಯ ತುಂಬ ಹಾಸಿದೆ ; ನಟ್ಟನಡುವೆ ಎದುರಿನ ಗೋಡೆಗೆ ಒಂದು ತಕ್ಕೆ (ವೃದ್ಧರಾ. ೯) ; ಹಾಸಿದ್ದ ಹೊಸ ಜಮಖಾನೆಯ ಮೇಲೆ ತಕ್ಕೆಗೆ ಒರಗಿ ಚೆನ್ನಪ್ಪ ಕುಳಿತುಕೊಂಡಿದ್ದ (ಜನಜೀ. ೩೪). **ಟಕ್ಕೆ$_1$**: ಮೂರೆಲೆ ಆಟ ಆಡಲು ಕುಳಿತಿದ್ದಾರೆ. ಹತ್ತಿರ ಒಂದೆರಡು ಟಕ್ಕೆಗಳು (ತಿಹುಗು. ೯೬). **ತೆಕ್ಕೆ$_2$** : ಗಾದಿಗಳನ್ನು ಜೋಡಿಸಿ, ಅವರ ತೆಕ್ಕೆಯನ್ನೇ ತಲೆಗಿಂಬುಮಾಡಿ ನಾನು ನನ್ನ ಸಜ್ಜಿಕೆಯನ್ನು ಸಜ್ಜುಗೊಳಿಸಿದೆ (ದೀಪಹ. II, ೦೮೦).

[ ←ಅರ. ಪಾರ. ಹಿಂ. ತಕಿಯಾ ; ಮರಾ. ತಕಿಯಾ, ತಕ್ಯಾ ]

**ತಕ್ಕೆಗಟ್ಟು$_1$** 'ತೆಕ್ಕೆಗಟ್ಟು' ನೋ.

**ತಕ್ಕೆಗಟ್ಟು$_2$** (ನಾ). ಅಪ್ಪುಗೆಯ ಹಿಡಿತ; ಆಲಿಂಗನದ ಬಂಧನ: ಬಟ್ಟೆಗರ ಬಗಸೆಗಣ್ಣಂ ಕರೆದು ಸವಿದಕ್ಕೆಗಟ್ಟಿನೊಳ್ನಾಸಿಕೆಯೊಳಿಟ್ಟಧರಪಾನಮಂ ಕೊಟ್ಟು (ಪದ್ಮರಾ. ೮–೦೦) ; ಪಟುಭಟರು . . . ಸುರಾಂಗನೆಯರ ತೋಳ ತಕ್ಕೆಗಟ್ಟಿನೊಳೊಱಗಿದರು (ಕುರಾಸಾಂ. ೦೨–೬೭).

[ ತಕ್ಕೆ$_1$ (<ತಟ್ಕೆ) + ಕಟ್ಟು$_2$ ]

**ತಕ್ಕೆಗೊಳ್** 'ತಟ್ಕೆಗೊಳ್' ನೋ.

**ತಕ್ಕೆಗೊಳಿಸು** (ಕ್ರಿ). ಅಪ್ಪುಗೆಗೆ ಒಳಪಡಿಸು; ತಬ್ಬಿಕೊಳ್ಳು: ಹೊಸಹೊನ್ನ ಬಿಂದಿಗೆದುಂಬಿಯೋಕುಳಿಯ ಇಂದಿಗೆ ಸುಖ ಸಿದ್ಧಿಸಿತೆಂದು ಚೆಲ್ಲಿದರಂದು ಕೃಷ್ಣನ ತಕ್ಕೆಗೊಳಿಸಿ (ಮೋಹತ. ೦೪–೬೯).

[ ತಕ್ಕೆಗೊಳ್ (<ತಟ್ಕೆಗೊಳ್) + – ಇಸು$_3$ ]

**ತಕ್ಕೆಬೀಳು, ತಳಿಕೆಬೀಳು, ತೆಕ್ಕೆಬೀಳು** (ಕ್ರಿ). ತೋಳುಗಳಿಂದ ಗಟ್ಟಿಯಾಗಿ ಅವುಚಿಕೊಳ್ಳು ; ತಬ್ಬು : ನಾನೂ ಅಳುತ್ತ ಅಮ್ಮನನ್ನು ತಕ್ಕೆಬಿದ್ದೆ (ಹಿಂದುಟಿ. ೨೦) ; ನನಗೆ ಚೆಲೋ ಚೆಲೋ ಗೊಂಬೆ ತಂದಿದ್ದೀಯಾ . . . ಕೊರಳಿಗೆ ತಕ್ಕೆಬಿದ್ದು ಮಗು ಕೇಳಿತು (ಎರಹ. ೫). **ತಳಿಕೆಬೀಳು** : ಅವಳು ಕಣ್ತೆರೆದುದನ್ನು ಕಂಡು ಎದ್ದು ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು (ಪ್ರೇಮಾಶ್ರ. ೬೦). **ತೆಕ್ಕೆಬೀಳು** : "ಅಪ್ಪಯ್ಯ" ಎಂದು ಶಾಸ್ತ್ರಿಗಳಿಗೆ ತೆಕ್ಕೆ ಬಿದ್ದು ತಡೆದಷ್ಟೂ ಅವಳಿಗೆ ಅಳು ಉಕ್ಕಿ ಬರುತ್ತಿತ್ತು (ಹೊಸಕ್ಷ. ೨೨) ; ಭಯ್ಯಾ ಮಲ್ಲನನ್ನು ತೆಕ್ಕೆಬಿದ್ದು ಅಳಹತ್ತಿದ (ಜೀದಾಪ. ೦೨೬).

[ ತಕ್ಕೆ$_1$ (<ತಟ್ಕೆ) + ಬೀಳು$_1$ (<ಬೀೞ್$_1$) ]

**ತಕ್ಕೆಮುಕ್ಕೆ, ತೆಕಿಮುಂಕ್ಕಿ, ತೆಕ್ಕಾಮುಂಕ್ಕೆ, ತೆಕ್ಕಿಮುಂಕ್ಕಿ** (ನಾ). ಬಿಗಿಯಾಗಿ ಹಿಡಿದುಕೊಳ್ಳುವಿಕೆ ; ಗಟ್ಟಿಯಾಗಿ ತಬ್ಬಿಕೊಳ್ಳುವುದು : ಒಬ್ಬರನೊಬ್ಬರು ತಕ್ಕೆಮುಕ್ಕೆಯಲ್ಲಿ ಹಿಚುಕಿ ಅಸುವನ್ನು ಹಿಂಡಲಣಿಯಾದ ವೀರರಿಬ್ಬರು ಒಬ್ಬರನ್ನೊಬ್ಬರು ಬಿಗಿದಪ್ಪಿಕೊಂಡು ಒಬ್ಬರೊಬ್ಬರ ಹೃದಯವನ್ನು ಸೂರೆಗೊಂಡರು (ಕವೀರ. ೬೩). **ತೆಕಿಮುಕ್ಕಿ** : 'ತೆಕಿಮುಕ್ಕಿಬೀಳಂ' ಪರಾ. **ತೆಕ್ಕಾಮುಕ್ಕೆ** : 'ತೆಕ್ಕಾಮುಕ್ಕೆಬೀಳಂ' ಪರಾ. **ತೆಕ್ಕಿಮುಕ್ಕಿ** : 'ತೆಕ್ಕಿಮುಂಕ್ಕಿಬೀಳು' ಪರಾ. [ <ತಕ್ಕೆ$_1$ ]

**ತಕ್ಕೆಯ್ಸು** 'ತಟ್ಕೆಯ್ಸು' ನೋ.

**ತಕ್ಕೆವರ್** (ಕ್ರಿ). ಗಂಪುಗೂಡು : ವಾಸವವೈರಿ ಮತ್ತೆ ಮಗುಟ್ದಿನ್ನೊಳೆ ಕೇಳ್ವನದಟ್ಟಿ ಪುಟ್ಟೆಯಥ್ಯಾಸನಿಮಿತ್ತದಿಂದಿರದೆ ಬರ್ಕುಮನುತ್ತಮೆ ತಕ್ಕೆವಂದು ಕೈಲಾಸಮನಂತಮಾಯ್ತನೆ ವಿಯತ್ತಳಮಂ ತುಡುಕುತ್ತು ಮಿರ್ಪವೋಲ್ ಭಾಸುರಮಾಗೆ ಸಾಂದ್ರ ಶಶಿಕಾಂತದ ದೇವನಿವಾಸ ಕೋಟಿಗಳ್ (ಕುಮುಮಾ. ೦೦–೦೩೯). [ ತಕ್ಕೆ$_1$ (<ತಟ್ಕೆ) + ಬರ್$_1$ ]

**ತಕ್ಕೆಯ್ಸು** 'ತಟ್ಕೆಯ್ಸು' ನೋ.

**ತಕ್ಕೋಲ$_1$** (ನಾ). ಒಂದು ಊರಿನ ಹೆಸರು. P ತಮಿಳುನಾಡಿನ ಅರಕೋಣದ ಬಳಿಯ ಈಗಿನ ತಕ್ಕೋಲ : ಶ್ರೀಮತ್ ಕನ್ನರದೇವ ಅಟ್ಟೋಪದೆ ಚೋಳರಾಜಾದಿತ್ಯನ ಮೇಲೆ ಬನ್ದು ತಕ್ಕೋಲದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿಬ್ದು (ಎಕ. III, ಮಂಡ್ಯ. ೪೦–೯ ; 950).

**ತಕ್ಕೋಲ$_2$** (ನಾ). ೧. ಒಂದು ಬಗೆಯ ಸುಗಂಧದ ವೃಕ್ಷ ಮತ್ತು ಅದರ ಕಾಯಿ : "ಪಂಚಸುಗಂಧಃ– ಶ್ರೀಗಂಧ, ತಕ್ಕೋಲ, ಜಾಯಿಫಲ, ಪದ್ಮಕೇಸರ, ತಾವರೆಯ ಕೇಸರ" (ಒಷಧಿ. ೯೨); ಜಾಜೀಕಾಯಿ, ಲವಂಗ, ಚವ್ಯ, ತಕ್ಕೋಲ . . . ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೃದ್ಧಸಾ. II, ೫೫) ; ಬದರಿ ತಕ್ಕೋಲ ನಾರಿಕೇಳಾಶ್ವತ್ಥ . . . ಭೂರುಹವೃಂದದಿಂ ಪೂಜ್ಯಮಾಗಿರ್ಪ ಆರಾಮಗಳು ಎಸೆವುತಿರ್ದುವು (ಕುಜೀಕೋ. ೪೪) ; ಜಂಬೀರ ಮಾಧವೀ ಮಧೂಕ ತಾಲ ತಕ್ಕೋಲ ತಮಾಲ ಹಿಂತಾಳ . . . ಸುಮನಸಭರಿತವಾಗಿ

ಶೋಭಿಸುತಲಿತ್ತು (ಪುರಾವಿ. ೯೭). ೨. ತಕ್ಕೋಲವೃಕ್ಷದಿಂದಾದ ಒಂದು ಬಗೆಯ ಸುಗಂಧದ್ರವ್ಯ,-ಸುಗಂಧದ ಔಷಧದ್ರವ್ಯ: ಕುಂಕುಮ ಕಸ್ತೂರೀ ಲವಂಗ ತಕ್ಕೋಲಮನಂಕ ಮೃಗಾಂಕಮಪ್ಪ ಚಂದ್ರಮ ಹಿಮ ಕೃತ್ಪುರವಿತದೊಳರೆಗೆ ಗಂಧೋದಕದಿಂ (ಲೋಕೋಪ. ೭-೭). 'ಕಕ್ಕೋಲ' ಪರಾ. [ ಸಂ. ]

**ತಕ್ಕೋಲಕ** (ನಾ).=ತಕ್ಕೋಲ$_2$ ೨: "ತಕ್ಕೋಲ ವೃಕ್ಷದ ಪರಿಮಳದ್ರವ್ಯ" (ಅಮರ. ೬೮೪). [ ಸಂ. ]

**ತಕ್ಕೋಲಪುಟ್ಟಿ** (ನಾ). = ತಕ್ಕೋಲ$_2$ ೨: "ತಕ್ಕೋಲಂ-ತಕ್ಕೋಲಪುಟ್ಟಿ" (ಒಷಧಿ. ೬೩): "ನಿಷ್ಕುಟಂ – ತಕ್ಕೋಲಪುಟ್ಟಿ" (ಒಷಧಿ. ೯೭).
[ ತಕ್ಕೋಲ$_2$ + ಪುಟ್ಟಿ ? ]

**ತಕ್ರರೋಹಿತ** (ನಾ). ಒಂದು ಬಗೆಯ ಗಿಡ: ನೀರು ಕಣಿಗಲು, ತಕ್ರರೋಹಿತ, ನೀರುಸಣ್ಣೆಸೊಪ್ಪು (ವೃಕ್ಷಗಿ. ೬೩-೦೫೧೦). [ Pಇದು 'ತಿಕ್ತರೋಹಿತ' ಎಂಬುದರ ಅಪಲಿಖಿತವಿರಬಹುದು]

**ತಕ್ರರೋಹಿತಕ** (ನಾ). ಒಂದು ಬಗೆಯ ಗಿಡ: ಮುಳ್ಳುಮುತ್ತಲ, ತಕ್ರರೋಹಿತಕ, ರೋಹಿತಕ (ವೃಕ್ಷಗಿ. ೮-೦೩೧). 'ತಕ್ರರೋಹಿತ' ಪರಾ.
[ ? ]

**ತಕ್ರ** (ನಾ). (ನಾಲ್ಕನೆಯ ಒಂದು ಭಾಗದಷ್ಟು) ನೀರು ಬೆರಸಿ ಕಡೆದ ಮೊಸರು; ಮಜ್ಜಿಗೆ: "ಗೋರಸ ದಂಡಾಹತ ಮಥಿತಾರಿಷ್ಟೋದಶ್ವಿದಾಪ್ತ ಮಂತದು ತಕ್ರಂ" (ವಸ್ತುಕೋ. ೯೨-೧); ಆಲದ ಬೀಜಲನರೆದು ತಕ್ರದೊಳ್ ಕುಡಿಯಲೊಡನೆಯತಿಸಾರರೋಗಮಾಗಳೆ ಕಿಡುಗುಂ(ಲೋಕೋಪ. ೯-೦೦೯); ಕಪಿಯಂ ಗಾಣಿಗ ಪಾವು ಕಾಪ್ಪಜನ ತಕ್ರಂ . . . ಧೂಮಮಂ ನಿಪುಣರ್ ಕಂಡರೆ ಪೋಗರ್ಕ್ಕೆ (ಸೂಕ್ತಿಸು. ೬೮); ಹಾಲೊಡೆಯೆ ಕಡೆದದನು ತಕ್ರವಾಗಿಪುದು . . . ಹಳದ ಹೊಸತಾಗಿಪುದು ಬಾಳಿಗದೆ ಚಿರಧರ್ಮ (ಮಂಕುಕ. ೨೩೨). [ ಸಂ. ]

**ತಕ್ರತೈಲ** (ನಾ). ಮಜ್ಜಿಗೆಯಲ್ಲಿ ಎಣ್ಣೆ ಮಿಶ್ರಿತರ ಔಷಧಿವಸ್ತುಗಳನ್ನು ಹಾಕಿ ಸಿದ್ಧಪಡಿಸಿದ ಒಂದು ಬಗೆಯ ಔಷಧಿ: ತಕ್ರತೈಲ – ಒಂದು ಕೊಳಗ ಮಜ್ಜಿಗೆಯಲ್ಲಿ ಒಂದು ಬಳ್ಳ ಎಣ್ಣೆಯಂ ಹನಿಸಿ ಪಾನಾಭ್ಯಂಗನ ನಸ್ಯಂಗಳಂ ಮಾಡಲು . . . ವಾತರೋಗ ಸಹ ಗುಣಮಕ್ಕುಂ (ಸಕವೈ.೦೦೩).
[ ತಕ್ರ + ತೈಲ ]

**ತಕ್ರಬಲಿ** (ನಾ). ಮೂಲಂಗಿ, ಈರುಳ್ಳಿ ಹಾಗೂ ಹಸಿಶುಂಠಿಗಳಿಗೆ ಮಜ್ಜಿಗೆ ಅಥವಾ ಹುಳಿ ಹಾಕಿ ಮಾಡುವ ಒಂದು ಬಗೆಯ ವ್ಯಂಜನ ಪದಾರ್ಥ: "ಮುಲ್ಲಂಗಿ ಮೊದಲಾದವುಳ್ಳಿಯುಲ್ಲಂಗಳೊಳ್ ಪುಳಿಮೆರಸಲವು ತಕ್ರಬಲಿ [ಪಾಠಾಂ. ತಕ್ರಕಂಬಲಿ, ಸಸ್ಯಬಲಿ]ಗಳಕ್ಕುಂ" (ಮಂಗರಾ. ೬೩-೭).
[ ತಕ್ರ + ? ]

**ತಕ್ರಾರ** 'ತಕರಾರು' ನೋ.

**ತಕ್ರಾರು** 'ತಕರಾರು' ನೋ.

**ತಕ್ರಿ** (ನಾ). ಒಂದು ಬಗೆಯ ಪೊದರು,-ಕಂಟಿ: "ಪಂಚಾಂಗುಲಿ – ಅವ್ವರಣೆ, ತಕ್ರಿ" (ಒಷಧಿ. ೯೩). [ ? ]

**ತಕ್ರೀರು** 'ತಕ್ಸೀರು' ನೋ.

**ತಕ್ಷ** (ನಾ). ೧. ಮರಗೆಲಸ ಮಾಡುವವನು; ಬಡಗಿ. ೨. ಸ್ಥಪತಿ; ಶಿಲ್ಪಿ:ಪವನಂಜಯನೆಂಬ ತುರಂಗರತ್ನದಿಂದಂ ಭದ್ರಮುಖನೆಂಬ ತಕ್ಷನಿಂದಂ . . . ಪದಿನೆಣ್ಬಾಸಿರ್ವರ್ ಮ್ಲೇಚ್ಛರಾಜರಿಂದಂ ನೆಟ್ಟೈಶ್ವರ್ಯಂ (ಶಾಂತಿಪು. ೧೧-೮೪ ವ). [ ಸಂ. ತಕ್ಷನ್ ]

**ತಕ್ಷಕ** (ನಾ). ೧. ಬಡಗಿ; ಮರಗೆಲಸ ಮಾಡುವವನು: "ವರ್ಧಕಿ ದಲ್ ರಥಕಾರಂ ತ್ವಷ್ಟ್ರ ಕಾಷ್ಠತಟ್ ತಕ್ಷಕಾಭಿಧಾನಮೆಸಿಕ್ಕುಂ" (ವಸ್ತುಕೋ. ೬೪-೭೩); ತಕ್ಷಕರು, ಚಿತ್ರಕಾರರು, ವೈದ್ಯರು, ಗಾಯಕರು, ಕವಿಗಳು ಎಲ್ಲರೂ ಸೇರಿ, ಆ ಚರಿತ್ರೆಯನ್ನು . . . ಒಂದು ಉಜ್ವಲ ಪ್ರಕರಣವೆನಿಸಿದ್ದಾರೆ (ಜೀವಸಾ. ೦೦). 'ತಕ್ಷಪತಿ' ಪರಾ. ೨. ಅಷ್ಟಫಣಿಗಳಲ್ಲಿ ಒಂದು; ವಾಸುಕಿಯ ಸಹೋದರ: ಇಂದ್ರಾಗ್ನಿ ಮೊದಲಾದೆಂಟು ದಿಕ್ಕಿನ ಭೂಮಿಯಂ ಕ್ರಮದಿಂ ಪೊತ್ತು ಅನಂತ ತಕ್ಷಕ . . . ಕಾಲವೆಂಬಷ್ಟಕುಲಫಣಿಗಳಿರ್ಪ೦ (ವಿವೇಕ. ೦೭೭); ಅಗ್ನಿಗೆ ತೃಪ್ತಿಯಾಯಿತು; ಆದರೆ ತಕ್ಷಕನು ತಪ್ಪಿಸಿಕೊಂಡು ಕುರುಕ್ಷೇತ್ರಕ್ಕೆ ಹೊರಟುಹೋದನು (ವಕಥಾ. ೬೪). ೩. ಒಂದು ಬಗೆಯ ಹಾವು,–ಸರ್ಪ: ತಕ್ಷಕಭೂಷಣ ಪಕ್ಷಿವಾಹನವಿನುತ ದಕ್ಷಶಿಕ್ಷಣನಿಪುಣಜಗದೇಕಶರಣ (ಯುಗಳ. ೨೦); ಬೆನ್ನಿನಲ್ಲಿ ಸ್ವಸ್ತಿಕ ಲಾಂಛನ ಉಳ್ಳುದು ತಕ್ಷಕನೆನಿಸಿಕೊಂಬುದು (ವಿಷಚಿ. ೨-೦). [ ಸಂ. ]

**ತಕ್ಷಕಪತಿ** (ನಾ). ಶ್ರೇಷ್ಠನಾದ ಶಿಲ್ಪಿ: ಕಾಮವೃಷ್ಟಿಯೆಂಬ ಭಂಡಾರಿಗನುಂ ಭದ್ರಮುಖನೆಂಬ ತಕ್ಷಕಪತಿಯುಂ . . . ಆತ್ಮೀಯ ಸಾಮ್ರಾಜ್ಯಪರಿಚ್ಛೇದಮಾಗೆ (ಆದಿಪು. ೦೩-೩ ವ). [ ತಕ್ಷಕ + ಪತಿ$_1$ ]

**ತಕ್ಷಕರತ್ನ** (ನಾ). [ಜೈನ] ಏಳು ಜೀವರತ್ನಗಳಲ್ಲಿ ಒಂದು; ವಾಸ್ತುಶಿಲ್ಪಿ; ಸ್ಥಪತಿ: ಅನುಸ್ಮರಣ ಮಾತ್ರ ನಿಷ್ಪಾದಿತ ಸಪ್ತತಳಾತಿಪ್ರಾಸಾದಪ್ರಕರನುಮಪ್ಪ ಭದ್ರಮುಖನೆಂಬ ತಕ್ಷಕರತ್ನಮುಂ (ಆದಿಪು. ೧೧-೩ ವ).
[ ತಕ್ಷಕ + ರತ್ನ ]

**ತಕ್ಷಣ$_1$** 'ತತುಕ್ಷಣ$_1$' ನೋ.

**ತಕ್ಷಣ$_2$** 'ತತುಕ್ಷಣ$_2$' ನೋ.

**ತಕ್ಷಣಿ** (ನಾ). ಮರವನ್ನು ಕೆತ್ತುವ ಒಂದು ಸಾಧನ; ಬಾಚಿ: "ವಾಸಿ ತಕ್ಷಣೀನಾಮಂ" (ವಸ್ತುಕೋ. ೩೦-೩೭).
[ ಸಂ. ತಕ್ಷಣೀ ]

**ತಕ್ಷೀರು** 'ತಕ್ಸೀರು' ನೋ.

**ತಕ್ಷೀರುವಂತ** (ನಾ). ತಪ್ಪಿತಸ್ಥ; ಅಪರಾಧಿ: ಈ ಇಬ್ಬರು ಚೇಲೇರು ಬಹಳ ತಕ್ಷೀರುವಂತರಿದ್ದಾರೆ (ರಾಜೇಂದ್ರ. ೩೭).
[ ತಕ್ಷೀರು (<ತಕ್ಸೀರು) + –ವಂತ ]

**ತಕ್ಷೋಪಜೀವ್ಯ** (ನಾ). ಮರಗೆಲಸದಿಂದ ಉಪಜೀವನ ಮಾಡುವವನು: ರವಿ ಚಾಪಕ್ಷೇತ್ರದೊಳ್ ನಿಂದೊಡೆ ಧನಪತಿ ಸತ್ಪೂಜಿತಂ . . . ತಕ್ಷೋ [ಪಾಠಾಂ. ಕಷ್ಟೋ]ಪಜೀವ್ಯಂ (ಜಾತಕ. ೦೭-೦೭).
[ ಸಂ. (ತಕ್ಷ + ಉಪಜೀವ್ಯ) ]

**ತಕ್ಸೀರ್** 'ತಕ್ಸೀರು' ನೋ.

**ತಕ್ಸೀರು**, ತಕಶೀರು, ತಕ್ಶೀರು, ತಕ್ಷೀರು, ತಕ್ಸೀರ್ (ನಾ). ಅಪರಾಧ; ತಪ್ಪು; ದೋಷ: ಯಾವುದಾದರೂ ಒಂದು ತಕ್ಸೀರಿನಲ್ಲಿ ಶಿಕ್ಷೆಯನ್ನು ಪಡೆದು (ಗ್ರಾಮೂಕ. ೧೦); ಕೋರ್ಟಿನಲ್ಲಿ ಕ್ರಮವಾದ ವಿಚಾರಣೆಯಾಗಿ ತಕ್ಸೀರು ರುಜುವಾತ್ತಾದ ಮೇಲೆ ಶಿಕ್ಷೆ ವಿಧಿಸಬೇಕು (ಸಕಕ. ೯೭). **ತಕಶೀರು:** 'ತಕಶೀರುದಾರ' ಪರಾ. **ತಕ್ಶೀರು:** ಮರಣದಂಡನೆ ತಕ್ಶೀರನ್ನು ಮರೆಪಡಿಸುವದಕ್ಕೆ ಇನಾಂ ಕೊಡುವದಾಗಿ ಹೇಳಿದರೆ . . . ಪೈದು ಅಥವಾ ಜುಮ್ಮಾನೆ (ಗ್ರಾಮೂಕ. ೧೮೪). **ತಕ್ಷೀರು:** ಇದು ಹೊರ್ತು ನಮ್ಮಿಂದಾ ಯೇನಾದರೂ ತಕ್ಷೀರು ಆಗಲಿಲ್ಲಾ (ರಾಜೇಂದ್ರ. ೦೦೮); ವಲ್ಲಭಭಾಯಿಯವರು ನ್ಯಾಯಾಧೀಶರ ಮುಂದೆ ಯಾವುದೋ ಒಂದು ತಕ್ಷೀರಿನ ಕುರಿತು ಜೋರಿನಿಂದ ವ್ಯವಹರಿಸುತ್ತಿದ್ದರು (ರಾಜಿವ. ೨೮); ಮುಂದೆ ಅವನು ತಕ್ಷೀರು ನಿರಾಕರಿಸಿದರೆ ಅವನ ಮೇಲೆ ನಿರಾನುಮಾನವಾದ ಪ್ರಮಾಣ ರೂಪವಾಗಿ ಅಂಗೀಕರಿಸಲ್ಪಡುವದಕ್ಕೋಸ್ಕರ ಅವನ ಕೈ ಉಂಗುರಗಳನ್ನು ಸೆಳಕೊಂಡು ಹಾಜರುಪಡಿಸಿದ್ದಾನೆ (ಪಾಗ್ಯೆವಿ. ೧೮೩). **ತಕ್ಸೀರ್:** ಅವರಿಗೆ ತಕ್ಸೀರ್ ವಿಚಾರಣೆ ಮಾಡುವ ಅಧಿಕಾರವನ್ನು (Magisterial power) ಕೊಟ್ಟಿತ್ತು (ಮಹಾಪಂ. II. ೨೭).
[ ←ಅರ. ಹಿಂ. ತಕ್‌ಸೀರ್; ಮರಾ. ತಕ್‌ಶೀರ್, ತಕ್‌ಸೀರ್ ]

**ತಕ್ಸೀರುದಾರ,ತಕಶೀರಂದಾರ** (ನಾ). ಅಪರಾಧಿ; ತಪ್ಪಿತಸ್ಥ: "ಅಪರಾಧಿ, ಪಾತಕಿ; ತಕ್ಸೀರುದಾರ" (Criminal. ಪತ್ರಿನಿ. ೨೭). **ತಕಶೀರುದಾರ:** ಪೈದಿನಿಂದ ತಪ್ಪಿಸಿಕೊಂಡು ಹೋದ ತಕಶೀರುದಾರನಿಗೆ ಆಸರೆಕೊಟ್ಟರೆ (ಗ್ರಾಮೂಳ. ೧೮೪). [ ತಕ್ಸೀರು + – ದಾರ್$_4$ ]

**ತಕ್ಸೀರುನಾಮೆ** (ನಾ). ಅಪಾದನೆಯ ವಿವರಣೆಗಳನ್ನು ತಿಳಿಸುವ ಪಟ್ಟಿ.
[ ←ಹಿಂ. ತಕ್ಸೀರ್‌ನಾಮಾ ]

**ತಖ್ತೆ**, ತಃಖ್ತ, ತಃಖ್ತೆ (ನಾ). ಆಯವ್ಯಯ ಮುಂತಾದ ವಿಷಯಗಳ ವಿವರಣೆಯ ಪಟ್ಟಿ,-ವಿವರಗಳನ್ನು ಸೂಚಿಸುವ ಪಟ್ಟಿ: ಕುಲ್ಲು ಜಮಾಬಂದೀ ಗೋಷ್ವಾರೆ ತಪ್ಸೀಲುವಾರು ಗ್ರಾಮವಾರು ತಖ್ತೆ ಸಹ ತಯಾರು ಮಾಡಿಸಿ (ಮಹಾಪಂ. II, ೭೨): ಲಾಭ ನಷ್ಟಗಳ ತಖ್ತೆಯನ್ನು ಪರಿಷ್ಕಾರವಾಗಿ ತಯಾರಿಸಿ ವಾರ್ಷಿಕ ಆದಾಯವನ್ನು ಕಂಡುಹಿಡಿಯುವ ವಿಧಾನ (ಭಾಗ್ಯಶಿ. ೮೩): **ತಃಖ್ತ:** (ಮೈಗೆಜ. IV, ೭೮೭). **ತಃಖ್ತೆ:** ಪ್ರತಿ ತಿಂಗಳು ವಾಢತಿಯಾಗತಕ್ಕ ತಲಬುಗಳ ಒಂದು ತಃಖ್ತೆಯನ್ನು ತಯಾರ್ಮಾಡಿ ರವಾನಿಸಬೇಕು (ಗ್ರಾಮೂಳ. ೫); ಮಕ್ಕಳ ಅಭಿವೃದ್ಧಿಯ ತಃಖ್ತೆಯನ್ನು ತಪ್ಪದೆ ಇಡಬೇಕು (ರಂಗಳ. ೮೦).
[ ←ಫಾರ. ತಖ್ತಹ್ ; ಹಿಂ. ತಖ್ತಾ ; ಮರಾ. ತಕ್ತಾ, ತಖ್ತಾ ]

**ತಗ** 'ದಗ' ನೋ.

**ತಗಚಿ** 'ತಗಚೆ' ನೋ.

**ತಗಚೆ**, ತಗಚಿ, ತಗಸಿ, ತಗ್ಗಚ್ಚಿ (ನಾ). ೧. ಅಗಸೆ; ಚೊಗಚೆ; ಚಕ್ರಮರ್ದ: "ಏಡಗಜಃ, ಪ್ರಪುನ್ನಾಟಃ, ದದ್ರುಘ್ನಃ, ಚಕ್ರಮರ್ದನಃ– ಈ ೪ ತಗ(ಚೆ)ಟೆ" (ಹಲಾಯು. ೬೦೦–೪೭೫); ನೆಗ್ಗಿಲ್ ತಗಚೆ ನಿದಿಗ್ಧಿಕೆ ತಗ್ಗಿಯಪಾಮಾರ್ಗದೊಡನೆ ಬೆರಸಿದುದಂ . . . ಕಾಡಿಸೊಗ್ಗಿಸಿದಂಧಿಲದೆ ಬೇದುಗಟ್ಟು ವಿಷಘ್ನಂ (ಖಮುದ. ೦೬–೭೪); ತಗಚೆ, ತಾಕೋಟೆ (ಮೈಶಗಿ. ೫೪–೦೦೯೫). ೨. ಹಿಪ್ಪನೇರಳೆ ಅಥವಾ ಉಪ್ಪುನೇರಳೆ ಗಿಡ: (*). **ತಗಚಿ:** ೧. "ಪ್ರಪುನ್ನಾಟಃ, ಏಡಗಜಃ ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ, ಈ ೬ ತಗಚಿ[ಪಾಠಾಂ. ಜೆ]" (ನಾಚಿರಾ. ೦೦೨); ಮುತ್ತುಗ ತಗಚಿ ಯಗಚಿ . . . ಮೊದಲಾದ ಗಗನವಂ ತುಡುಕುವ ವೃಕ್ಷಂಗಳ್ (ನಾಗಂಧಿ. ೫೪–೬). **ತಗಸಿ:** ೧. "ಪ್ರಪುನ್ನಾಟವಮದೇಡಗಜಂ ಕಟುತ್ಥಪರ್ಣಾಪ್ತೆ ತಗಸಿ (ವಸ್ತುಕೋ. ೩೩–೨೦). 'ಕೋಲ್ತಗಸಿ' ಪರಾ. **ತಗ್ಗಚ್ಚಿ:** ೧. "ಪ್ರಪುನ್ನಾಟಃ, ಏಡಗಜಃ, ದದ್ರುಘ್ನಃ, ಚಕ್ರಮರ್ದಕಃ, ಪದ್ಮಾಟಃ, ಉರಣಾಕ್ಷಃ–೬ ತಗಚೇ ಗಿಡದ ಹೆಸರುಗಳು, ತಗಚಿ, ತಗ್ಗಚ್ಚಿ" (ಸಿದ್ಧಾಂಔ. ೦೨೮).
[ ದೇ.॥ ತಮಿ. ತಕರೆ ; ಮಲ. ತಕರ ; ತೆಲು. ತಗರ್ಚೆ, ತಗಿರ್ಸ, ತಗಿರಿಸ ]

**ತಗಟ** (ನಾ). ಜರತಾರಿ ರೇಷ್ಮೆ: ಪಟ್ಟಸಾಲೆಯೊಳು ಮೇಲ್ಕಟ್ಟು ಲಕ್ಷಾವೆ ಬಾಳ್ವದು ಪಟ್ಟೆಮಂಚಕೆ ವಜ್ರದಾ ದಟ್ಟತವಾದ ಕಾಲ್ಗಳೊ ವಟ್ಟದ್ದಾ ಸೂವರಳೆ ಸುಪ್ಪತ್ತಿಗೆ ತಗಟ ತಲೆದಿಂಬು ಕಟ್ಟದಾ ಮುತ್ತಿನಾ ಗೊಂಚಲು (ಶ್ರೀಳ್ಳಪಾ. ೨೫). [ ದೇ.॥ ತಮಿ. ತಕಟ; ತೆಲು. ತಗಟ ]

**ತಗಟೆ** 'ತಂಗಡಿ' ನೋ.

**ತಗಡುತಿ** (ನಾ). ಒಂದು ಬಗೆಯ ಗಿಡ: ತಗಡುತಿ, ಹರಿಯಾಗೆ, ಮೈಸಾಲೆ (ಮೈಶಗಿ. ೫೦–೧೦೦೬). [ ? ]

**ತಗಡು** (ನಾ). ೧. ತೆಳುವಾಗಿ ಬಡಿದ ಲೋಹದ ಹಾಳೆ,–ಹಲಗೆ,–ಫಲಕ: ಬಿಳಿಯ ಕಬ್ಬಿನ ಜಂತೆಯೊತ್ತಿನೊಳು ಕೇತಕೀದಳದ ತಗಡವಕೆ ಮುಡಿವಾಳದ ಹೊದಕೆ (ಸೋಮಚ. ೧–೦೦೧): ಕಪ್ಪುರವಳಿಕಿನ ತಗಡಿಂದೆ ಮಾಡಿದಂತಿರೆ ಕಂಪಂ ತಳೆದ ಬಿಳಿಯೆಲೆಯನಂಬುಜದಳದಿಂ ಪುದಿವಂತೆ ಬಡಿದು ಸುರಸತಿಬಿತ್ತರ್ (ಪಾರ್ಶ್ವಪು. ೦೩–೦೨೭); ರವಿಯ ತಗಡೆನೆ ತೊಳತಪಾಯುಧನಿವಹ (ಕುಮಾ.ಉ. ೯–೬೧); ತಿಂಗಳ ತಂಗದಿರನು ತಗಡನು ತಳೆದಂಗಜನೆಂಬ ಸೊನ್ನಾರಿ ಹಿಂಗದೆ ಮಾಡುವನೆನೆ ಪಚ್ಚೆಗರ್ಪುರದಂಗಡಿಯದಚೊಳೊಪ್ಪಿದವು (ರಾಮವಿ. ೩–೬೫): ತಪ್ತಕಾಂಚನದ ತಗಡಿನಲ್ಲಿ ಬರೆದಂಥ ಜಂತ್ರದಂತೆ (ಅರಳು. ೪೯–೧೧). ೨. ಕುಂದಣದ ಹರಳುಗಳ ಕೆಳಗೆ ಜೋಡಿಸಿದ ಹೊಳಪಿನ ವರ್ತಿ,–ರೇಕು: ಹೊನ್ನ ತಗಡ ಮೇಲೆ ಹೊಳೆವ ಮಾಣಿಕವು ತಬ್ಬೆರ್ನೊಳಗತಿ ರಂಜಿಪುದೆ (ನೇಮಿಸಂ. ೧೦–೦೪೫); ಕುಂದಣದ ತಗಡಿಗಕ್ಷರ ತಾಗಿ ರಕ್ಷೆಯಾದಂತೆ (ಭರತ. ೪೨–೯). ೩. ಕನ್ನಡಿಯ ಹಲಗೆ; ಕನ್ನಡಿಯಂತಿರುವ ಲೋಹದ ಫಲಕ: ತಗಡಿನೊಳಗೆ ತೋರ್ಪ ಛಾಯಾಪ್ರತಿಮೆಯೊ ಹಗಲಲ್ಲಿ ಬೆಳುದಿಂಗಳಲ್ಲಿ ಸೊಗಸುವ ಛಾಯಾಪುರುಷನೊಯೆಂಬಂತೆ ಬಗೆಗೊಳಿಸುವುದಾತ್ಮರೂಪು (ಭರತ. ೦–೧೧೧). ೪. ಜರಿ; ಜರತಾರಿ; ಕಲಾಬತ್ತು: ಹೇಮವರ್ಣದ ತಗಡಿನಡಿಗೆಯ ಹೇಮಕೊರಳಿನ ಸೊಗಸು ಮಿಗಲು (ಸಂಥಹ. ೮–೯೮); ಹಳದಿ ಪೊಪ್ಪಳಿ ಚಂದ್ರಗಾವಿ ಬೊಂಬೆಯ ಬಣ್ಣ . . . ಹೊನ್ನ ತಗಡಿನ ಬಿಳುವಟ್ಟೆ ನಾನಾವರ್ಣದ ಜವಳಿಯ ಮಳಿಗೆಗಳೆಸೆದುವು (ಕಂಸವಿ. ೬–೬೧). ೫. ದಟ್ಟಣೆ; ಸಾಂದ್ರತೆ; ಸಂದಣೆ: ಒಗುಮಿಗೆಯ ಪರಿಮಳದ ಕಂಪಿನ ತಗಡ ತೆಕ್ಕೆಯ ಬೀದಿವರಿಗಳ . . . ಸೊಗಸ ಸೇರಿಸಿ ಮಂದಮಾರುತನಪ್ಪಿದನು ಮಗನ (ಕುಮಾ.ಆ. ೧೦–೪೩). 'ತಗಡುಗತ್ತಲೆ' ಪರಾ.
[ ದೇ.॥ ತಮಿ. ತಕಟು ; ಮಲ. ತಕಡು, ತಕಿಡು ; ತುಳು. ತಗಡ್ ;
ತೆಲು. ತಗಡು. / ಮರಾ. ತಗಡ್, ತಕಟ್ ]

**ತಗಡುಗತ್ತಲೆ** (ನಾ). ದಟ್ಟವಾದ ಕತ್ತಲೆ: ಅಂಡಲೆಯ ಬಲುನಿದ್ರೆ ನಳಿನಭವಾಂಡಭವನದ ತಿಮಿರರಕ್ಕಸಿ ಚಂಡಕರದೀಪವನು ಮಲಗಿಸಿ ಮಹಿಯ ಮಂಚದಲಿ ಮಂಡಿಸಿದಳೆನೆ ತ[ಪಾಠಾಂ. ನಲ]ಗಡುಗತ್ತಲೆ ಚಂಡಿಸಿತು ತತ್ಸಮಯದಲಿ (ತೊರರಾ. ೫–೨–೨).
[ ತಗಡು + ಕತ್ತಲೆ$_1$ (<ಕಟ್ತಲೆ) ]

**ತಗಡುನ್ನಾಡು** (ನಾ). ಒಂದು ನಾಡಿನ ಹೆಸರು: ಮಣಿಯಾಚಾರಿಯ ಅಟಿಯ ಪಾಲ್ಪಡುವಿನ ಚೋಳಾಚಾರಿ ತಗಡುನ್ನಾಡ ಪೊಲ್ಲೆಯೂರ ತುಱುವಿ ಕಳ್ಳಕ್ಕೊರ್ಣನ್ನುಪೋಗೆ . . . ಇಱಿದು ಸಗ್ಗಸ್ತನಾದಂ (ಎಕ. X, ಕೋಲಾರ. ೧೪–೫; 1035). [ ತಗಡು$_0$ + ನಾಡು ]

**ತಗಡುರಿ** (ನಾ). ದಟ್ಟವಾದ ಉರಿ: ಕನಲಿ ಫಲುಗುಣನಾದಡಿದ ಕೊಳ್ಳಿನುತ ಕೊಳ್ಳಿಯೊಳಿಟ್ಟನಗ್ನಿಯ ನೆನೆದು ಮಂತ್ರಿಸಲುರಿಮುಖದ ಕಾಬೊರ್ಗೆಯ ಮೊಬ್ಬಿನಲಿ ಹೊನಲುಗಿಡಿಗಳ ತಗಡುರಿಯು ಕೊಂಡಿ[ಡ]ನಲಿ ಮುತ್ತಿತು ರಥವನಾತನ ಧನುವನಾತನ ತನುವನು (ಕುಮಾ.ಆ. ೧೦–೩೩).
[ ತಗಡು + ಉರಿ$_8$ ]

**ತಗಡೂರ್**, ತಗಡೂರು (ನಾ). ಒಂದು ಊರಿನ ಹೆಸರು: ಪೊಂಕುನ್ನದ ಬಾರಾನ್ನರವಯ್ಯ ತಗಡೂರ ಕೆಳೆಯ ಕಾಳೆಗದೊಳೆ ಬಸವಯ್ಯನ ಮುನ್ದೆ ಕಾದಿ ಸತ್ತು (ಎಕ. X, ಬೌರಿಂಗ್. ೪೪–೩; ಸು. 950). **ತಗಡೂರು:** ತಗಡೂರು ಸ್ಥಳದ ಬದಣೆವಾಳ ಕಾಲುವಳ್ಳಿ (ಮೈಆರಿ. ೦೯೪೭, ೧೮–೬; 1488). [ ತಗಡು$_0$ + ಊರ್$_3$ ]

**ತಗಡೂರು** 'ತಗಡೂರ್' ನೋ.

**ತಗಣ** (ನಾ). [ಛಂದ] ಅಕ್ಷರಗಣಗಳಲ್ಲಿ ಒಂದು; ಎರಡು ಗುರು ಮತ್ತು ಕೊನೆಯಲ್ಲಿ ಒಂದು ಲಘುವಿರುವ ಗಣ (– – ∪): ತಗಣಾಂಬರ ಜಗಣಾರ್ಕಂ (ಛಂದೋಂಬು. ೬. ೧–೩೫). [ ತ$_1$ + ಗಣ ]

**ತಗಣೆ** 'ತಗುಣೆ' ನೋ.

**ತಗಣೆ** 'ತಗುಣೆ' ನೋ.

**ತಗತು$_1$** (ನಾ). ಕಲಾಬತ್ತು; ಜರತಾರಿ: ಚಿನ್ನದೆಳೆ ಮುಂಡಾಸನವು ಸಿರದಿಯಾಂತು ಧವಲಾಂಬರದ ತಗತಿನಂಗಿಯ ತೊಟ್ಟು ಸಂತಸದಿ ವಸುಮಯದ ಪಚ್ಚಡಂಗಳ ಪೊದೆದು (ನವಮೋ. ೨–೪೪). [ <ತಗಡು ]

**ತಗತ್ತು$_2$** 'ತಕತ್ತು' ನೋ.

**ತಗಪಡು** (ಕ್ರಿ). ಅಡ್ಡಿಮಾಡಲ್ಪಡು ; ನಿರ್ಬಂಧಕ್ಕೊಳಗಾಗು : ಭೋಗ ತೃಷ್ಣೆಯಿನುಬ್ಬಿದ ಕಿಱುಗೂಸುಗಳುಂ ಕೌಮಾರ ಬ್ರಹ್ಮಚಾರಿಗಳುಂ ಕಟ್ಟುಂ ಪಟ್ಟುಂ ತಗಪಟ್ಟುಂ ಸೆಱೆಯೊಳಿರ್ದುಂ ಅಳಲದೆ ಬೇಸಱದೆ ಮುನಿಯದೆ ಕಾಯಕ್ಕೆ ಶಮಂ ಪರವಶತೆ ಮಾಳ್ಪವರುಂ ನೀಚದೇವರಾಗಿ ಪುಟ್ಟುವರು (ಧ್ರಾವಕಾ. ೪೮-೧೪). 'ಅಗಪಡು' ಪಾಠಾ. [ <ತಗೆ + ಪಡು$_1$ ]

**ತಗಪ್ಪು** 'ತಗೆಪು' ನೋ.

**ತಗಬೊಗರಿ**(ನಾ). ಚಿನ್ನದ ಬುಗುರಿ; ಪೊಂಬುಗುರಿ: ಅಂಗಜನಮಳ್ಗುಡಿಗಳ ಬೆಳಗಾಯ್ಗಳ ತೇಂಗಾಯ್ಗಳ ತ[ತ]ಗಬೊಗರಿಗಳವೊಲ್ ಪಿಂಗಡೆಗೆಲ್ವ ಕುಚದ ಕೋಮಳೆಯರ್ ತೊಳಗಿದರಂತಲ್ಲಿ (ಜಯಕಾ. ೧೪-೨೭).
[ ತಗ$_0$ (P ←ತಮಿ. ತಙ್ಕ=ಚಿನ್ನ, ಅಪರಂಜಿ) + ಬೊಗರಿ ]

**ತಗರ್$_1$**, ತಗುರು (ಕ್ರಿ). ೧. ತಡೆ ; ಅಡ್ಡಗಟ್ಟು ; ಅಡ್ಡಿಪಡಿಸು ; ನಿರೋಧಿಸು: "ತಗರ್—ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ) ; ಪೋ ಪೋಗಲೆಂದೊಡಱುತ್ತುಂ ಪರಿತಂದು ತಾಗಿ ತಗರ್ದಂ [ಪಾಠಾಂ. ತಗೆದಂ, ತೆಗೆದಂ]ಗಂಗಾಸುತಂ ಭೀಮನಂ (ಪಂಪಭಾ. ೧೦-೧೦) ; ಕಂತವ್ವು ವಿಷಯಂಗಳಿಗೆ ಪರಿಯಲೀಯದೆ ತಗರ್ದು . . . ಚತುರ್ವಿಧಾ ಹಾರಮಂ ಅಷ್ಟಮಿ ಪರ್ವದಿನಂಗಳೊಳು ತೊಱೆವುದು (ಪಚಾರ. ೬೩೨-೧೦); ವ್ರತಸಮಿತಿ ಗುಪ್ತ್ಯಾದಿಗಳಿಂ ಕರ್ಮಗಳುಂ ತಗರ್ವುದು ಸಂವರತತ್ತ್ವಂ (ಶಾಸ್ತ್ರಟೀ. ೧೦೩-೧). ೨. ನಿಲ್ಲು; ಅಡ್ಡಿಗೊಳಗಾಗು; ನಿರ್ಬಂಧಿತವಾಗು: ಸುದತೀವಕ್ತ್ರಸುಧಾಂಶುದರ್ಶನದೊಳಾತಂಗಂದು ಕಾಮಾಂಧಕಾರದ ಪೆರ್ಚಾಯ್ತು ಮನಶ್ಚಕೋರಿಯ ರತಂ[ತರಂ]ಗಾಂಭೋಧಿಯಾಗಳ್ತಗರ್ದುದು ಬಲ್ಸೇದೆ ಪೊದಳ್ದು ಪೊಣ್ಮಿತು (ವೀರಪು. ೭-೪೮). **ತಗುರು**: ೧. ಆತು ತಗುರೊಮ್ಮೊಮ್ಮೆಗಂ ಪವನಸೂನು ಸಂಘಾತ ತಪ್ಪಿಸಿ ಪೊಯ್ದು ಕುರುನೃಪಂ ಮತ್ಸರದೊಳೀತ ಪೊಯ್ವನು ಬೀಳು ಬೀಳೆನುತಲದ ಬೀಯುಮವ್ವಾಳ್ಪನಾ ಕುರುಪತಿ (ತುರಂಗ. ೭೩-೪೧). [ ? ]

**ತಗರ್$_2$**, ಟಗರು, ತಗರು (ನಾ). ಗಂಡು ಕುರಿ ; ಮೇಷ : "ತಗರ್—ಗತಿಬಂಧನೇ (ನಿಲ್ಲಿಸು) ಅಜಭೇದೇ ಚ (ಟಗರು)" (ಶಮಧಾ); ಮೂಗುರ್ಚಿದೆಮ್ಮೆಪೋರಿಯುಂ ಪೆಱಪೊಟ್ಟದ ತಗರುಂ ತಾಗುವಂತೆ . . . ಪೆಣೆದಿಱಿವ ಪದದೊಳ್ (ಶಾಂತಿಪು. ೬-೮೨ ವ) ; ಕೊಣಕಿಟ್ಟು ತಗರೆರಡುಂ ತಮ್ಮೊಳ್ ತಾಗಿ ಕಿಡಿಗುಟ್ಟಿದಂತಾಗೆ ಪೋರುತ್ತಿರೆ (ಪಂಚತಂ. ೭೨-೦೩): ತಗರ್ ತಗರೊಳ್ ಮಲ್ಲರ್ ಮಲ್ಲರೊಳ್ ತಾಗುವಂತೆ ಕಿಚ್ಚುಂ ಕಿಡಿಯುಮಾಗಿ ತಂತಮ್ಮೊಳ್ ತಾಗಿ (ಧರ್ಮಾಮೃ. ೩-೮೭) : ಇಂಗುಳದ ಪಣ್ . . . ಲೊಕ್ಕಿಯ ಪರ್ಣಂಗಳ ರಸದಿಂ ನಸ್ಯಂ ಕಂಗಳೊಳೆಚ್ಚಲ್ಕೆ ತಗರ ವಿಷಮಂ ಕಳೆಗುಂ (ಖಚುರ. ೦೩-೭೭). **ಟಗರು**: ಪುರಾಣವೆಂಬುದು ಪುಂಡರ ಗೋಷ್ಠಿ ತರ್ಕವೆಂಬುದು ಟ[ಪಾಠಾಂ. ತ]ಗರ ಹೋರಟೆ (ಅವಚಂ. ೦೦೩-೪೬೩): ಟಗರಿನ ಹೋರಾಟದಂತೆ . . . ತಾನು ಹಿಡಿದುದ ಬಿಡದೆ ಹೋರಾಡುವುದೇ ತರ್ಕಮರ್ಕಟ ವಿಧಿ (ಸಿದ್ಧೇಪ. ೧೮-೪೩ ಟಿಪ್ಪಣಿ) : ಎಳ್ಳೂ ಹೊಲ್ದಾಗೆ ಎಳೆ ಟಗರಾ ಸಾಕಿ (ಜುಬ್ಬಿಹ. ೩೨). **ತಗರು**: ತಗರಿನ ಬಲಿದ ಕೊಂಬು ತನ್ನೆಡದ ಕೈಯಲಿ ಪಿಡಿದುಕೊಂಡು (ಬಸಪು. ೨೯-೪) ; ತಗರು ಮುಳಿದಾರಿದರೆ ತೋಳನು ತೆಗೆದು ಜೀವಿಸಲಱಿವುದೇ (ಕುಮ್ಮಾಳ. ೧೦-೪೫) ; ತಗರು ಸಿಪಿಲೆ ಕೋಳಿ ಕಾಳಗಗಳು (ಕಂನಪಿ. ೬-೧೪೭) ; ತೊಗರೆಯ ತೊಗೆ ಲೇಸು ತಿಗುರಿಗೆ ಮೊಳೆ ಲೇಸು ತಗರ ಹಿಂಗಾಲ ಸತು ಲೇಸು (ಸರ್ವಜ್ಞ. ೭೨೨).

ತಗರ ಕಾಳಗ = ಟಗರುಗಳನ್ನು ಹಂರಿದುಂಬಿಸಿ ಹೋರಾಟ ಮಾಡಿಸುವ ಒಂದು ಪಂದ್ಯ,—ಜೂಜು : ತಗರ ಕಾಳಗ ಮದಕರಿಗಳ ಹೋರಾಟ . . . ಸೊಗಸ ದೀಱಿದುದೋಲಗದೆ (ಕಂನಪಿ. ೨೦-೯೮).
[ ದೇ.॥ ತಮಿ. ತಕರ್ ; ತುಳು. ತಗರು, ಟಗರ್ ; ತೆಲು. ತಗರು ]

**ತಗರ$_1$** 'ತವರ' ನೋ.

**ತಗರ$_2$**(ನಾ). ಸುವಾಸನೆಯಾದ ಬಿಳಿಯ ಹೂವುಗಳನ್ನು ಬಿಡುವ ಒಂದು ಬಗೆಯ ಗಿಡ ; ನಂದಿಬಟ್ಟಲು ; ನಂದಿವರ್ಧನ : "ನಂದಿವಟ್ಟಮದು ತಗರ ಸಂಜ್ಞಿಕಂ ತಾನಕ್ಕುಂ" (ಪಚ್ಚೆಕೋ. ೩೮-೩೫) ; "ನಮ್ರಂ – ತಗರೆ, ನೀರುಮಂಜಿ" (ಒಷಧಿ. ೮೩) : ತಗರಂ ಕೊಳ್ಳುಳಿ ಸುಗ್ಗಿ ಕಗ್ಗೊಱಲೆ ತೊಟ್ಟಲ್ . . . ಪುತ್ರಿನ ಮಣ್ಣುಮಂ ಕದಡಿ ಕಾಸಿಟ್ಟೆಯ್ದೆ ಪೊಯ್ಯುವ ಬಾವುಗಳುಂ ತೀರ್ಚುಗುಂ (ಲೋಕೋಪ. ೯-೨೪೦) : ತಕ್ಕೋಲ, ಶ್ರೀಗಂಧ, ತಗರ, ಲಾವಂಚ, ಸಿವನ್ನಿಯ ಬೇರು . . . ಚೂರ್ಣಿಸಿ ಹಾಕಿ (ವೃಧ್ವಶಾ. I, ೪೦೫) : ಸಿಂಧುವಾರ ತಗರ ಮೊದಲಾದ ಲತಾವಿಶೇಷಂಗಳು ಕೊಂಬೆಗಳಂ ನೆಡಲು ಹುಟ್ಟುವವು (ಸೌಗಂಧಿ. ೪೨೫-೦೦). [ ಸಂ. ]

**ತಗರಪುರ** (ನಾ). ಒಂದು ಪಟ್ಟಣದ ಹೆಸರು. P ಈಗಿನ ಆಂಧ್ರ ಪ್ರದೇಶದ ಬಳಿ ಉಸ್ಮಾನಾಬಾದ್ ಸಮೀಪದಲ್ಲಿರುವ ತೇರ : ಮಹಾಸಾಮಂತಾಧಿಪತಿ ತಗರಪುರ ಪರಮೇಶ್ವರ ಸಿಲಾಹಾರ ನರೇಂದ್ರ (ಇಆ. V, ೨೭೮-೨ ; 1026). [ ತಗರ? + ಪುರ$_2$ ]

**ತಗರಬುಗರಿ** 'ತಗರುಬೊಗರು' ನೋ.

**ತಗರಸನ್ನೆ** (ನಾ). ಹತ್ತು ಬಗೆಯ ಲೆತ್ತದ ಆಟಗಳಲ್ಲಿ ಒಂದು (?) : ಅರಿದಿರಾದೊಡಾಡಿದಪೆನೆಕ್ಕಡಿಯ ಪಡೆ ಪಂಚಬಾಯಮಂ ವೀರವಿಳಾಸಮಂ ತಗರಸನ್ನೆಯನ್ನೆದೆರಡಂ ನೆಗಟ್ಟ ಚೌಸಾರಿಯನಾಱು ಪನ್ನೆರಡನೊಪ್ಪುವ ರಾಜಕುಮಾರನಂ ಮಹೋದಾರಮನೊಡ್ಡಿ ದೊಡ್ಡನೆನಿಸುತೆನ್ನನಮಂ ಕಡುಪಿಂ ಕಿರಳ್ದಿದಂ ಇವು ಮೊದಲಾಗಿ ಪತ್ತು ವಿಧದ ನೆತ್ತವನಾಡುವೆನೆಂದೆನ್ನಂ ಕೆರಳ್ದಲ್ (ದಕಕು. ೮-೯೨). [ ? ]

**ತಗರಿ** (ನಾ). ಕುದುರೆಯ ಬಾಲದ ಕೆಳಗಿನ ಭಾಗ : "ಬಾಲದ ಕೆಳಗು ತಗರಿಯೆಂಬ ಪೆಸರಕ್ಕುಂ" (ಅಶ್ವಶಾ. ೮೯-೦೦). [ ? ]

**ತಗರು** 'ತಗರ್$_2$' ನೋ.

**ತಗರುಬಿಗುರು** 'ತಗರುಬೊಗರು' ನೋ.

**ತಗರುಬೊಗರು**, ತಗರಬುಗರಿ, ತಗರುಬಿಗುರು (ನಾ). ೧. ಕಪಟ; ಮೋಸ ; ಬೂಟಾಟಿಕೆ : ದೇಟಪೊರ್ವೆಳಲ್ಲಿ ಪುರ್ದನಾಟಪೊರ್ವೆಳಲ್ಲಿ . . . ತಾಟೊಟು ತಗರುಬೊಗರು ಟಕ್ಕುಟೌಳಿಯೆಸಗುವ ಕೋಟಲೆ ಸಾಕು ದಮ್ಮಯ್ಯ (ಗೀತಗೋ. ೨೬). **ತಗರಬುಗರಿ**: ೧. ತಗೀರಿ, ತಗೀರಿ, ನೋಟಿನ ಕಟ್ ತಗೀರಿ . . . ಸುಂಕೆ ತಗರಬುಗರಿ ಒಡಿಬ್ಯಾಡಿ ಬುದ್ಧಿ (ಶಕಾರ. ೦೫೦). **ತಗರುಬಿಗುರು**: ೨. ತಬ್ಬಿಬ್ಬು ; ಗೊಂದಲ : ಸೇರೆಗಾರ ಕೇಳಿದ ಪ್ರಶ್ನೆಗಳಿಗೆ ಸಾಬ್ರು ಎಂಥೆಂಥ ಜಟಿಲ ಉತ್ತರ ಕೊಡುತ್ತಿದ್ದರು ಎಂದರೆ ಅವುಗಳ ವಿದ್ಯಾರ್ಥಿಗೇ ಚೀಂಕ್ರ ತಗರುಬಿಗುರಾಗಿ ಮಾರುಹೋಗಿ , . . ಒಪ್ಪಿಗೆ ಕೊಟ್ಟಿದ್ದನು (ಮಲೆಮ. ೭೮೨). [ ? ]

**ತಗರೆ** (ನಾ).=ತಗರ$_2$ : ಗಂಧ ತಗರೆಯ ಮೂಲ . . . ತಂದು ಶಂಖಿನಿ ಜಾತಿ ಪೆಣ್ಣಿಗೆ ಕೊಡಲು ತಾ ವಶ್ಯಾ (ಕೊಕ್ಕೋಕ. ೫-೩೩) [ <ತಗರ$_2$ ]

**ತಗರೆನಾಡು** 'ತಗಂರೆನಾಡು' ನೋ.

**ತಗರೇಱು** (ನಾ). ಮಲ್ಲಯುದ್ಧದ ಒಂದು ಪಟ್ಟು ; ತಗರಿನಂತೆ ಮೇಲೇರುವುದು (?) : ಲಾಗಿನಲಿ ಬವರಿಯಲಿ ಒಡಮುಱಿದಾಗಿನಲಿ ತಗರೇಱಿನಲಿ ಮೈಲಾಗಿನಲಿ ತೆಕ್ಕೆಯಲಿ . . . ಗೆಲುಸೋಲುಗಳ ಬಗೆ ಸಂದೇಹವಾಗಿರೆ ಭೀಮ ಜೀಮೂತಗಳು ಹಳಚಿದರು (ಕುಮ್ಮಾವಿ. ೬೦೪. ೪-೭೭). [ ತಗರು(<ತಗರ್$_2$) + ಏಱು$_6$ (<ಏಱ್$_6$) ]

**ತಗರ್ತಲೆಯು** (ನಾ). ಒಂದು ಬಗೆಯ ಬಾಣ : ನೆಱೆದು ನಿರ್ವಾಯಂ ನರುವಾಯಂ ಮುಮ್ಮೊನೆ ನೆರಕೆ ನಾರಾಚಂ ತಗರ್ತಲೆಯಂ ನೆಱನಂ[ವ]ಕಣೆ ಗೆಲೆಯಂಬು ಕಕ್ಕಂಬು ಕೆಲ್ಲಂಬು ಮೊನೆಯಂಬು . . . ಸಾರ್ದು ಸಾರ್ದೆ ಚ್ಚೆಚ್ಚು ಕಾದಿದರತಿರಥರೊಂದು ದಾವಂ (ಪಂಪಭಾ. ೦೨-೩೯). [ ? ]

**ತಗರ್ತಿ** (ನಾ). ಒಂದು ಸ್ಥಳದ ಹೆಸರು. P ಈಗಿನ ಸಾಗರ ತಾಲೂಕಿನ ತಗರ್ತಿ: ಮುದನು ತಗರ್ತ್ತಿ ಕೊರೆಯ ಹತ್ತಿ (ಮ್ಯಆರಿ. ೧೯೩೯. ೦೩-೪; 12ನೆಯ ೩೩). 'ತಾಗರತಿ' ಪರಾ. [ ? ]

**ತಗರ್ದಲೆಯ** (ನಾ). ಟಗರಿನ ತಲೆಯುಳ್ಳವನು; "ದಕ್ಷಬ್ರಹ್ಮ" (ಪ್ರಕಾ.). [ ತಗರ್$_2$ + ತಲೆ$_1$ + – ಅ$_7$ ]

**ತಗರ್ದೇರ** (ನಾ). ಟಗರನ್ನು ವಾಹನವಾಗಿ ಉಳ್ಳವನು; ಅಗ್ನಿ: "ಅಗಿನ ಮರಗೂಟಂ . . . ತಗರ್ದೇರ ಪೊಗೆವಟಯಿಗೆಯುನು ಕಾರ್ವಟ್ಟೆಗನಿವಯ್ದು ಯನಲನ ನಾಮವು" (ಕಬ್ಬ ಕು ೦. ೦೨) ; ತಗರ್ದೇರಂ ನೇಣ್ಗೆಯ್ದುಂ ಮುಂತಪ್ಪರ್ ದೆಸೆವಳರಾದರ್ (ಜಾಮಶ್ರ. ೦೧೦-೩).

[ ತಗರ್$_2$ + ತೇರ್$_2$ + – ಅ$_7$ ]

**ತಗರ್ವೆಣಗಿಸು** (ಕ್ರಿ).ಟಗರುಗಳನ್ನು ಕಾದಾಡಿಸು; ಟಗರಿನ ಕಾಳಗವನ್ನು ಏರ್ಪಡಿಸು: ತಗರ್ವೆಣಗಿಸುವ ಸಿಪಿಲೆಗಟ್ಟಿಸುವ ಕೋಳಿಗಾಳೆಗವ ಕಾದಿಸುವ . . . ರಾಜಪುತ್ರರ (ಪ್ರಮಿಥಾ. ೬-೩೯). [ ತಗರ್$_2$ + ಪೆಣಗಿಸು ]

**ತಗಲ್$_1$** 'ತಗುಳ್$_1$' ನೋ.

**ತಗಲ್$_2$** 'ದಗಲು' ನೋ.

**ತಗಲ** (ನಾ). ಮೋಸಗಾರ; ವಂಚಕ; ದ್ರೋಹಿ: ಜಸವಂತಸಿಂಗನು ತಗಲನಿದ್ದರಂತೂ ನೆಟ್ಟಗೆ ಆಯಿತು (ಕಮಲ. ೨೦); ಈಕೆಯು ನಖಶಿಖಾಂತ ತಗಲಳಿರುವಳೆಂದು ತಿಳಿದು ಆಕೆಯು ಹೆರಳು ಹಿಡಿದು ದರದರ ಎಳೆಯ ಹತ್ತಿದನು (ತುಳಸಿ. ೦೫೯). [ ತಗಲು$_3$ (<ದಗಲು) + – ಅ$_7$ ]

**ತಗಲಿಸು** 'ತಗುಳಿಸು' ನೋ.

**ತಗಲು$_1$** 'ತಗುಳ್$_1$' ನೋ.

**ತಗಲು$_2$** 'ತಗುಳ್$_2$' ನೋ.

**ತಗಲು$_3$** 'ದಗಲು' ನೋ.

**ತಗಲುಗಾರ** (ನಾ). ವಂಚಕ; ಠಕ್ಕ: ತಗಲುಗಾರನಿಗೆ ಬಗಲ ಮೇಲೆ ಜ್ಞಾನ (ಗಾದೆ). [ ತಗಲು$_3$ (<ದಗಲು) + – ಗಾರ (<– ಕಾಱ) ]

**ತಗಲುತನ** (ನಾ). ಅಪ್ರಾಮಾಣಿಕತೆ; ಮೋಸಗಾರಿಕೆ: ಅವನ ತಗಲುತನವನ್ನು ಬೈಲಿಗೆಳೆಯುವುದು ಬಿಗಿಯಲ್ಲ (ಕಮಲ. ೨೦). [ ತಗಲು$_3$ (<ದಗಲು) + – ತನ ]

**ತಗಲುಬೇರೀಜು** (ನಾ). ಲೆಕ್ಕಮಾಡುವಾಗ ತಪ್ಪಾಗಿ ಕೂಡಿಸುವುದು; ತಪ್ಪು ಸಂಕಲನ: ಕುಳಗಳು ಆಗಾಗ್ಗೆ ಒಯ್ದು ರಕಮುಗಳನ್ನು ಒಟ್ಟು ಗೂಡಿಸುವಾಗ "ನಾಲ್ಕೂ ಎರಡೂ (ಕೂಡಿ) ಎಂಟು" "ಎಪ್ಪತ್ತೇಳೂ ಆರು ಕೂಡಿ ಎಂಬತ್ತಾರು" ಹೀಗೆ ತಗಲುಬೇರೀಜು ಮಾಡುವರು (ಗುರುಜ. ೪). [ ತಗಲು$_3$ (<ದಗಲು) + ಬೇರೀಜು ]

**ತಗಲುಮೊಳೆ** (ನಾ). ಉಡುಪು ಮೊದಲಾದುವುಗಳನ್ನು ತಗಲು ಹಾಕು ವುದಕ್ಕಾಗಿ ಅಳವಡಿಸಿದ ಮೊಳೆ: ಅವರು ರುಮಾಲನ್ನೆತ್ತಿ ಸ್ಟ್ಯಾಂಡಿನ ತಗಲುಮೊಳೆಯ ಮೇಲೇರಿಸಿದಾಗ (ವಿಮೋಚ. ೦೮೦). [ ತಗಲು$_1$ (<ತಗುಳ್$_1$) + ಮೊಳೆ$_2$ ]

**ತಗಲುಸಾಕ್ಷಿ** (ನಾ). ಸುಳ್ಳು ಸಾಕ್ಷಿ: ನಾಯಕರು ತಗಲುಸಾಕ್ಷಿ ನುಡಿಯಲಿಲ್ಲ ಕೋರ್ಟಿನ ಮೆಟ್ಟಲು ಹತ್ತಲಿಲ್ಲ (ಗುರುಪ್ರ. ೨). [ ತಗಲು$_3$ (<ದಗಲು) + ಸಾಕ್ಷಿ ]

**ತಗಲೂಪಿ** 'ತಗಲೂಫಿ' ನೋ.

**ತಗಲೂಫಿ, ತಗಲೂಪಿ** (ನಾ). ಅಪ್ರಾಮಾಣಿಕತೆ; ಮೋಸ; ಠಕ್ಕು: ನಿಮ್ಮಪ್ಪಯ್ಯನಿಂದ ಜಮೀನು ತಗೊಂಡೋರು ಯಾರೂ ತಗಲೂಪಿ ಮಾಡಿಲ್ಲ; ಸಾಚಾ ವ್ಯಾಪಾರಮಾಡಿ, ರೊಕ್ಕಕೊಟ್ಟು ಜಮೀನು ತಗಂಡವರ (ಚಂದಕೋ. ೦೪೩). **ತಗಲೂಪಿ**: ಅವನೊಬ್ಬ ತಗಲೂಪಿ ಮನುಷ್ಯ (ರೂಢಿ). [ ←ಅರ. ಪಾರ. ಹಿಂ. ತಕಲ್ಲುಫ್; ಮರಾ. ತಕಲೂಪೀ, ತಕಲುಬೀ ]

**ತಗಲೆ** 'ದಗಲೆ$_1$' ನೋ.

**ತಗವು$_1$** 'ತಗಹು$_1$' ನೋ.

**ತಗವು$_2$** 'ತಗೆವು' ನೋ.

**ತಗವೆ** (ನಾ). ತಡೆ; ಅಡ್ಡಿ; ಪ್ರತಿಬಂಧ: ಕನ್ನಡದೊಳ್ ಯತ್ವ ವತ್ವಂಗಳ್ಗೆ ಬಹುಳತೆಯಿಂ ಲೋಪವುಂಟು – ಒತ್ತೆ + ಇಟ್ಟಂ = ಒತ್ತಿಟ್ಟಂ . . . ತಗವೆ ಯುಪ್ಪೊಡೆ, ತಗವಪ್ಪೊಡೆ (ಶಮದ. ೩೩ ಪ್ರಯೋ). 'ತಗವು$_1$' ಪರಾ.

[ <ತಗ್$_1$ + – ವೆ ]

**ತಗಸಿ** 'ತಗಚೆ' ನೋ.

**ತಗಸು** (ಕ್ರಿ). ಅಡ್ಡಿಪಡಿಸು; ನಿರ್ಬಂಧಪಡಿಸು; ಬಂಧನದಲ್ಲಿರಿಸು: ಹರನ ಭಕ್ತರ ಮಹಾತ್ಮೆಯನಱಿಯದೀ ಲಾವಕರ ಮಾತಗೇಳಿ ತಗಸಿದ ಭೂರಿ ದುರ್ಭಾವದುರವಣೆಯ ನೋಡಲೆಂದಾ ಶೀತಕರ ನಂದನನ್ನೆಸೆ (ಸಿಂಗಿರಾ. ೨೨-೩೪); ಕ್ರೀರೂಪು ನೃಪ ಧನದ ಕಾರ್ಪಣ್ಯದಿಂದಲತ್ಯಾ ರೋಷದಿಂದ ಲಿಂಗಾಂಗಿಗಳ ತಗಸೆ (ಸಿಂಗಿರಾ. ೨೨-೩೭).

[ ತಗ್$_1$ + – ಸು$_1$ ]

**ತಗಹಿಕ್ಕು** (ಕ್ರಿ). ತಡೆಯನ್ನು ಒಡ್ಡು; ಅಡ್ಡಿಪಡಿಸು; ನಿರ್ಬಂಧ ವನ್ನುಂಟುಮಾಡು: ಹಗಲಿರುಳೆಡೆವಿಡದೀ ಮಳೆ ಕಱೆದುದು ತೆಗಹಿಲ್ಲ ಮುಂದೆ ಹೆಚ್ಚುತಿದೆ ತಗಹಿಕ್ಕಿದಂತಾಯ್ತು ಪಾಯ್ದಳೆಕೆಂದು ಚಕ್ರಿಗೆ ಮತ್ತೆ ಯೋಚನೆಯಾಯ್ತು (ಭರತ. ೩೯-೬೨). [ತಗಹು$_1$ (<ತಗೆವು) + ಇಕ್ಕು]

**ತಗಹಿಡು** (ಕ್ರಿ). = ತಗಹಿಕ್ಕು: ಕೊಡುವೊಡವೆ ಬರಲಿ ಬಾರದೆ ಕೆಡಲಿ ಕಾನನದ ನಡುವೆ ತಗಹಿಟ್ಟುರಿಸಿ[ಪಾಠಾಂ. ತಗಹಿನಲಿರಿಸಿ]ಕೆಲವುದಿನ ವುಪವಾಸ ಬಡಿಸಿರ್ದು . . . ನುಡಿದವಧಿಯಾಯ್ತೆಂದು ಧರೆಯಱಿಯೆ ನೃಪನಂ ಹುಸಿಕನೆನಿಸು (ಹರಿಶ್ಚ. ೯-೦೬).

[ ತಗಹು$_1$ (<ತಗೆವು) + ಇಡು$_1$ ]

**ತಗಹು$_1$, ತಗವು$_1$** (ಕ್ರಿ). ತಡೆ; ನಿಲ್ಲಿಸು; ನಿರೋಧಿಸು: ನೆಗೆವ ಕಂಬನಿಯು ನಿಲ್ಲಿಸುತೇಳ್ವ ಶೋಕವ ತಗಹುತ ನೃಪ ಧೈರ್ಯದಿಂದ ಮೊಗವಿಡಿದೆತ್ತಿ ತಂಗಿಯರ ಕಂಬನಿಯು ಕೈಮಿಗೆ ಕೊಡೆದಳಲನಾಱಿಸಿದ (ಭರತ. ೭೯-೬೩). **ತಗವು$_1$**: "ವಿಷ್ಕಂಭಃ, ಪ್ರತಿಬಂಧಃ–ಈ, ಎರಡೂ ತಗವುದು" (ಶಬ್ದಾಯು. ೦೨೭-೮೪). [ <ತಗ್$_1$ + –ಹು$_1$ ].

**ತಗಹು$_2$** 'ತಗೆವು' ನೋ.

**ತಗಹು$_3$** (ನಾ). ಸಂಬಂಧ; ಸಂಪರ್ಕ; ಹೊಂದಿಕೆ: ಜಗದೊಳುಳ್ಳ ಚರಾಚರ ಪ್ರಾಣಿಗಳವೆಲ್ಲಿರ್ದಡೆಯೊಳಸುಗಳ ತಗಹು ಬಿಟ್ಟವು . . . ಲೋಕ ವಳುಕಿದವು (ಬಸವು. ೨೮-೩೩); ಹೆಗಲ ಕೊಯ್ಲಿನ ತಗ್ಗಿನಲಿ ಸೈನೆಗೆದ ರೋಮದ ವಿಕ್ರಮಾಗ್ನಿಯ ತಗಹು ಬಿಡದಭಿಮನ್ಯು ಮೆಱೆದನು ಶಸ್ತ್ರ ಶಯನದಲಿ (ಕುಮಾ.ದ್ರೋ. ೬-೬೨); ಹೊಗರುಗೆಟ್ಟುದು ಕುಮುದ ಕಮಳದ ಬಿಗುಹು ಬಿಟ್ಟುದು ಚಕ್ರವಾಕದ ತಗಹು ಕೆಟ್ಟುದು (ಕುಮಾ.ದ್ರೋ. ೦೫-೩೪).

[ <ತಗು + – ಹು$_2$ ]

**ತಗಳೂರ್** (ನಾ). ಒಂದು ಊರಿನ ಹೆಸರು: ದೇವಯನೆವ್ವೋನ್ ನೊಟವ್ವನ್ನಗಳೂರ ಕೋಟ್ಟೆ ಕೊಣ್ಡನ್ನು ಶತ್ತಾನ್ (ಎಕ. XII, ಮದ್ದಗಿ. ೩೮-೩ ; ಸು ೯೬೦). [ ತಗಳ್$_0$ + ಊರ್ ]

**ತಗಾದಿ** 'ತಗಾದೆ' ನೋ.

**ತಗಾದೆ, ತಗಾದಿ** (ನಾ). ೧. ಆಗ್ರಹ; ಒತ್ತಾಯ; ಬಲವಂತ: ಚಿಕ್ಕಮ್ಮಯ್ಯ ಊರಿಗೆ ಹೋಗಬೇಕು ಎಂದು ತಗಾದೆ (ಹಂಗಾಳ್ಯ. ೨೨೭); ಸರ್ಕಾರಿ ಅಧಿಕಾರಿಗಳಿಂದ, "ಮನೆಗಳನ್ನು ಬಿಟ್ಟು ಗುಡಿಸಲುಗಳಲ್ಲಿ ವಾಸಿಸಬೇಕೆಂದು" ತಗಾದೆ ಬಂದಿತು (ಗುರುದಾ. ೦೮). ೨. ಕೊಡಬೇಕಾದ ಹಣಕ್ಕಾಗಿ ಒತ್ತಾಯ ಮಾಡುವಿಕೆ: ಲೆಕ್ಕಾಚಾರ ಬಾಕಿಯಿಂದ ಅಥವಾ ಇತರ ವಿಧದಿಂದ ಸಾಲ ಯಾ ತಗಾದೆಯು ೨೦ ರೂಪಾಯಿ ಮೊಬಲಗು

ಯಾ ಪಮೌಲ್ಯಕ್ಕೆ ಮಾರದೆ ಇದ್ದ ಪಕ್ಷದಲ್ಲಿ (ಗ್ರಾಮೂಳ. ೨೦) : ಸಾಲಗಾರರ ತಗಾದೆಯನ್ನು ವ್ಯೆಮೇಲೆ ಅವನ ಸಾಲದ ತಗಾದೆ ತಾನೇ? (ಅನಾಮಿ. ೩); ಇಟ್ಟುಕೊಂಡು ದಾನಧರ್ಮ ಮಾಡುವುದು ವಿವೇಕವಲ್ಲ (ಮೋಹಿನೀ. ೭೨). ೩. ವ್ಯಾಜ್ಯ; ವಿವಾದ; ಮೊಕದ್ದಮೆ: (೬). ತಗಾದಿ : ೩. ಫವುಜಿನವರು ಅರಶಿನವರ ಮೇಲೆ ತಗಾದಿ ಕುಳಿತರು (ಹೃದಕ. ೬೦) ; ನಮ್ಮ ಹಿರಿಯರು ಗಳಿಸಿದ ಮಠ ಮಾನ್ಯವೆಂದು ಹೋರಾಡಿ, ತಳ್ಳಿ ತಗಾದಿ ಮಾಡಿ ಸರಕಾರಕ್ಕೆ ಹೊನ್ನ ಕೊಟ್ಟವರು ಮಹೇಶ್ವರರಲ್ಲ (ವಚಶಾ. I. ೩೩೦). ೪. ಒಂದು ಬಗೆಯ ಸುಂಕ (?) : ತಪ್ಪು ತಗಾದಿ ದಂಡ ಉಂಡಿಗೆ ಎಂದು ನಾಡವಳಿಕಾಅ ಪ್ರಭುಗಳು ಕೊಳಸಲ್ಲ (ಸೌಇಇ. IX-ii, ೪೩೩-೩೪ ; 1408).

ತಗಾದಿ ಹಚ್ಚು = ಒತ್ತಾಯ ಮಾಡು ; ಮೇಲಿಂದ ಮೇಲೆ ಕೇಳು : ಅರಮನೆಗೆ ಬಿಟ್ಟ ಮಡಕೆಗಳು ಬೇಕೆಂದು ತಗಾದಿ ಹಚ್ಚಿ ಬಹಳ . . . ತೊಂದರೆ ಪಡಿಸಿ (ಕಥಾಮಂ. IV, ೩೦). ತಗಾದೆ ಪತ್ರ = ಒತ್ತಾಯಮಾಡಿ ಬರೆಯುವ ಪತ್ರ : ಅವರಿಗೆ ಹಣ ಹಿಂತಿರುಗಿಸಿಯೆಂದು ತಗಾದೆ ಪತ್ರ ಬಂದಿತ್ತು (ರೂಢಿ). ತಗಾದೆ ಮಾಡು = ಒತ್ತಾಯ ಮಾಡು : ಸಿನಿಮಾ ನೋಡದಿದ್ದ ಅತ್ತೆಯನ್ನು ತಗಾದೆ ಮಾಡಿ ಅವಳು ಕೆಲವು ವೇಳೆ ಕರೆದು ಕೊಂಡು ಹೋಗುವುದೂ ಉಂಟು (ಮೂಲಾನ. ೧೪೨) ; ಸಾಲಗಾರರು ಬಹಳ ತಗಾದೆ ಮಾಡುತ್ತಿದ್ದಾರೆ (ರೂಢಿ).

[ ←ಹಿಂ: ತಗಾದಾ, ತಕಾಜಾ; ಮರಾ. ತಗಾದಾ ; ಅರ. ತಕಾಜಾ ]

**ತಗಾದೆಗಾರ** (ನಾ). ಒತ್ತಾಯ ಮಾಡುವವನು ; ನಮ್ಮಂತಹ ಬಡಜನರ ಬಾಗಿಲುಗಳನ್ನು ಸದಾ ತಟ್ಟುತ್ತಿರುವ ಈ ಸುಖೀ ತಗಾದೆಗಾರರು ನಮ್ಮನ್ನು ಶಾಂತಿಯಿಂದುಳಿಸಿದರೆ ಸಾಕು (ಸಾಹಿಪ್ರ. ೨೩೦).

[ ತಗಾದೆ + – ಗಾರ (< –ಕಾಱ) ]

**ತಗಾಯಿ** 'ತಕಾವಿ' ನೋ.

**ತಗಾಯಿಸಾಲ** 'ತಕಾವಿಸಾಲ' ನೋ.

**ತಗಾಯಿಸೂಟು** (ನಾ). ತಕಾವಿಸಾಲದ ಮರುಪಾವತಿಯ ಸಂಬಂಧದಲ್ಲಿ ತೋರುವ ವಿನಾಯತಿ,–ರಿಯಾಯತಿ : "ತಗಾಯಿ ಸೂಟ" ಬಿಡಿಸತಿ ಏನಪ? (ಕುಮೂಕಾ. ೧೮೯). [ ತಗಾಯಿ (<ತಕಾವಿ) + ಸೂಟು$_1$ ]

**ತಗಾವಿ** 'ತಕಾವಿ' ನೋ.

**ತಗಿಬಗಿ** 'ತಗೆಬಗೆ' ನೋ.

**ತಗಿಬಗಿಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸು ; ಕಕ್ಕಾಬಿಕ್ಕಿಯಾಗುವಂತೆ ಮಾಡು : ನಗೆಗಳಿಂ ಕಿಲಕಿಲರ ಪುರ್ಬಿನ ಬಿಗುಹಿನಿಂ ಕಿಲಕಿಲರ ,. . . ತಗಿಬಗಿಗೊಳಿಸಿ ಮಗ್ನರನು ಮಾಡಿ (ಅನಂರಾ. ೦-೨೨-೨೦).

[ ತಗಿಬಗಿ (<ತಗೆಬಗೆ) + ಕೊಳ್$_1$ + – ಇಸು$_8$ ]

**ತಗಿರಿಟ** (ನಾ). ಒಂದು ಊರಿನ ಹೆಸರು : ಶ್ರೀಮಜ್ಜಯಸಿಂಹದೇವರ್ ನಿಜವಿಜಯಕಟಕ ಸಮನ್ವಿತಂ ಲೀಳಾವಿಳಾಸದಿಂದೆ ತಗಿರಿಟ ನೆಲೆವೀಡಿನೊಳ್ . . . ಅಭಿನವ ತೇಜಮುಮಂ ಪಡೆದು (ಎಕ. VII, ಶಿಕಾರಿ.೨೦-೯; 1032).

[ ? ]

**ತಗಿಲ್** (ನಾ). ಸಂಬಂಧಪಟ್ಟುದು : "ದೇವಿಕಾ, ದೈವಿಕಂ–ಈ ೨ ದೇವರ ತಗಿಲ್" (ಕಾಶಕ್ಕ. ೦೮೧). [ ತಗು + – ಇಲ್$_3$ ]

**ತಗಿಸು** 'ತಟ್ಗಸಂ' ನೋ.

**ತಗು** (ಕ್ರಿ). ತಕ್ಕ$_8$ (ಭೂತಕೃ). ೧. ಸರಿಯಾಗು : ಹೊಂದು ; ಉಚಿತ ವಾಗು ; ಯೋಗ್ಯವಾಗು ; ಅನುರೂಪವಾಗು : ದೇವಿಯರ್ಕಳ ಕೈಯೊಳ್ ಋಷಿಯರ್ಕಳ್ಗುಣಲುಂ ಕುಡಿಯಲುಂ ತಗದು (ವಡ್ಡಾರಾ. ೧೦೪-೯) : ಕ್ಷೀರಾಬ್ಧಿಯ ನೀರಲ್ಲದೆ ಧೀರನ ಮಜ್ಜನಕೆ ಪೆಱವು ನೀರ್ ತಗವು (ಆದಿಪು. ೬-೮೦); ಅಲ್ಲಿಗಲ್ಲಿಗೆ ತಕ್ಕತಕ್ಕ ಬಗೆಬಗೆಗಳೊಳವೆಲ್ಲರ್ಕೆ ಕಟ್ಟುಮಟ್ಟಂ ಮಾಡಿ (ಪದ್ಮರಾ. ೪-೨೫) : ತೊಟ್ಟ ಜೋಹಕ್ಕೆ ತಕ್ಕ ನುಡಿಗಳ ಬಿಟ್ಟೆವಲ್ಲದೆ ನಿಮ್ಮ ರಾಯನ ಕಟ್ಟಲಾವೆವೆ (ಕುವ್ಯಾದ್ರೋ. ೨-೫೨) : ಅಂಗವಂಗಕ್ಕೆ ತಕ್ಕ ಲಾವಣ್ಯ (ಭರಚ. ೦-೫೨); ಬೆಕ್ಕು ನೀಂ ರಾವಣನೆ ರಾಮನು ಸೊಕ್ಕಿದಾನೆಯು ಪೇಳ್ ಜಗದಲಿ ತಕ್ಕುಮೇ ತತ್ಸಾಮ್ಯ ನಿನಗದು ಹಾಸ್ಯಕೆಡೆಯಲ್ತೆ (ಸೀತಾಚ. ೩.೦೬) ; ತಗುವ ನೆರವಿತ್ತ ಕಾಳಂ ನಿಲದೆ ನಡೆದು (ಕಾಕುಶ. ೧೪೧-೩೦೫). ೨. ಸಾಕಾಗು ; ಸಾಲು : ನಿನಗಮೆನಗಂ ಬೀಯಕ್ಕೆ ತಕ್ಕನಿತು ಪೊನ್ನಂ ಕೊಂಡು (ಪಂಚತಂ. ೦೬೦-೦೦).

ತಕ್ಕಂದ = ಯೋಗ್ಯವಾದ ರೀತಿ: ಇನ್ನಿದಕ್ಕೆ ತಕ್ಕುದಂ ತಕ್ಕಂದದೊಳ್ ಪೇೞ್ಂ (ಶಾಂತಿಪು. ೩-೬೬ ವ); ನೆಗಟ್ದ ಶೌರ್ಯಕ್ಕೆ ತಕ್ಕಂದದಿಂ ಪಾಂಡವರುಂ ಕೌರವರುಂ ಕೈಮುಗಿಯೆ ನೆಗಟ್ದ ಪೆಂಪಿಂಗೆ ತಕ್ಕಂದದಿಂ ಬಿರ್ದ್ದಿನವಜಂ ಗಾಂಡೀವಿಯೊಳ್ಕಾದಿದಂ (ಗದಾಯು. ೨-೩೦). ತಕ್ಕ ಮಟ್ಟಿಗೆ = ೧. ಸಾಕಾಗುವಷ್ಟು; ಸಾಕಷ್ಟು : ಇದರಿಂದ ಪ್ರಚಾರವೇನೋ ತಕ್ಕಮಟ್ಟಿಗೆ ನಡೆದರೂ ಉತ್ಪತ್ತಿಯು ಎಣಿಸಿದಷ್ಟು ಬರಲಿಲ್ಲ (ಚಿಕಸ. ೧೨೮). ೨ ಸ್ವಲ್ಪ ಮಟ್ಟಿಗೆ.; 'ಕೆಲಮಟ್ಟಿಗೆ : ನಿಮಗೆ ಚಿತ್ರಕಲೆಯಲ್ಲಿ ಚೆನ್ನಾಗಿ ಪರಿಶ್ರಮ ವಿದೆಯೆಂದು ಕೇಳಿದ್ದೆ ನಿಜವೆ? ತಕ್ಕಮಟ್ಟಿಗೆ ಉಂಟು (ಚಕ್ರದೇ. ೦೪೬). ತಕ್ಕಷ್ಟು = ಸಾಲುವಷ್ಟು : ಉಚಿತಕೆ ತಕ್ಕಷ್ಟು ಪೇಳ್ವೆನಧ್ಯಾತ್ಮವೆ ನಿಜತ ಪ್ರಯೋಜನವೆನಗೆ. (ಭರಚ. ೧-೦೩) ; ತಕ್ಕವನಲ್ಲಿ ಹೊಕ್ಕಿದ್ದರೆ ತಕ್ಕಷ್ಟು ಆದರೂ ಸಿಕ್ಕುವುದು (ಗಾದೆ). ತಕ್ಕುದು, ತಕ್ಕದ್ದು=೧. ಸರಿಯಾದುದು; ಉಚಿತವಾದುದು : "ತಕ್ಕುದೆನೆ ಸಹಜಮಕ್ಕು" (ಕಶರ. ೦೨೪) ; ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು . . . . ಇಡು ಮೃದುಪದಮಂ (ಕವಿರಾ. ೨-೪) ; ಇಱಿಯದೆ ಕಿಮ್ಮನಂತೆ ಭುವನಂಗಳಸುಂಗೊಳೆ ತಕ್ಕುದೆಂದೊಡೇ ಮಱುಕಮನೆಂಬುದೇವಿರಿದಿದೆನ್ನ ಭುಜಾಸಿಗೆ ತೇದು ಪೂಸಲುಂ ನೆಱಿಯದು (ಕಾವ್ಯಸಾ. ೪೧೧ ಪೂದ್ರಳ) ; ನುಡಿಯದೆ ಪೆಱತಂ ದ್ರೌಪದಿ ನುಡಿದಳ್ ತಕ್ಕುದನೆ (ಪಂಪಭಾ. ೭-೫೩) ; ತಕ್ಕುದೆ ಬೆರಸಲ್ಕೆ ಘೃತಮುಮಂ ತೈಲ ಮುಮಂ (ಧರ್ಮಾಮೃ. ೧-೪೨) ; ನಂಬಿಕೆ ನೆಚ್ಚಿಕೆಯಿಲ್ಲದ ದೇಶವು ಪ್ರಜಾ ಪ್ರಭುತ್ವಕ್ಕೆ ಎಂದೂ ತಕ್ಕುದಾಗಲಾರದು (ಯುಕ್ಷಪ್ರ. ೬೫) ; ಕುಜನರ ಸಂಗ ಅಜಗೂ ತಕ್ಕದ್ದಲ್ಲ (ಗಾದೆ). ೨. ಅಗತ್ಯವಾದುದು, ಬೇಕಾದುದು ಎಂಬ ಅರ್ಥದಲ್ಲಿ ಸೇರುವ ಪದ : ನೀನು ಈ ಕೆಲಸ ಮಾಡತಕ್ಕದ್ದು (ರೂಢಿ). ತಕ್ಕುವ (ಬಹುವ) : ಇವು ಚಮರೀ ಜಾತಂ ದುಗ್ಧವಾರ್ಧಿಫೇನೋಪಮಾನಮಿವು ನಿನಗೆಯೆ ತಕ್ಕುವು (ಆದಿಪು. ೧೬-೦೮). ತಕ್ಕೆಡೆ=ಉಚಿತ ವಾದ ಸ್ಥಳ,–ಅವಕಾಶ,–ಸನ್ನಿವೇಶ : ಮುಂದೆ ನಿಂದರಂ ಕಾಣದೆ ತಕ್ಕೆಡೆಯೊಳ್ ಕಡೆಗಣಿಸುವ ನೃಪವಿಡಂಬಮಿವು ಲಕ್ಷ್ಮಿ ನಿನ್ನ ದೂಸಱಿನಲ್ತೆಂ (ಗದಾಯು. ೯-೮) ; ತಕ್ಕೆಡೆಗೆ ತಕ್ಕುದಂ ಕುಡುವಂ (ಸಮಪ. ೬-೭೮) : ಅಱಿವಿಲ್ಲದ ತಕ್ಕೆಡೆಯೊಳ್ ತಱಿಸಲ್ಲದೆ ತೊಡರ್ದು ನಮೆವ ಜೀವಕ್ಕೆಲ್ಲಂ ನೆಱಿಯೆ ಹಿತಮೆಂದು ಬಗೆದಿದನಱಿಪುವೆಂ (ಜೀವಸಂ ೨-೭).

[ ದೇ.೩ ತಮಿ. ಮಲ. ತಕು; ತೆಲು. ತಗು ]

**ತಗುಣಬಿಗುಣಂಬರಿ** (ಕ್ರಿ). ಸ್ವೇಚ್ಛೆಯಾಗಿ ಓಡಾಡು : ಅಂತು ಕೊಂಡು ಪೋಪುದುಮೊಂದು ಪಡೆಯದಡಹಡಿಸಿ ನೋಡಿ ಕಾಣದೆ ಮಾಣದೆ ಮಗುಟ್ದು ಪಱಿ ಬೆಂಬತ್ತಿ ಸುತ್ತಿ ವಿಯತ್ತಳದೊಳ್ ತಗುಣಬಿಗುಣಂಬರಿದು ಬಂದು ಚಾರುದತ್ತನಿರ್ದ ತಿದಿಯನೊಯ್ದೀಕಾಕ್ಷನಷ್ಟ ಪಕ್ಷಿಯು ಸಮಕ್ಷಮಂ ಸಾರ್ದು (ನೇಮಿಪು. ೪-೦೦೬ ವ). [ ತಗುಣಬಿಗುಣ$_0$ + ಪರಿ$_2$ ]

**ತಗುಣಿ** 'ತಗುಣೆ' ನೋ.

**ತಗುಣೆ**, ತಗಣಿ, ತಗಣೆ, ತಗಂಣೆ, ತಿಗಣಿ, ತಿಗಣೆ, ತಿಗುಣೆ (ನಾ). ಗೋಡೆಯ ಬಿರುಕು, ಹಾಸಿಗೆ ಮುಂತಾದ ಕಡೆ ಇದ್ದು ಮನುಷ್ಯನ ರಕ್ತಹೀರುವ ಒಂದು ಬಗೆಯ ಹುಳು ; ಮತ್ಕುಣ : ಗುಡಮಾಕ್ಷಿಕ ಮಳಯುಜ ಎಂಬಿವನಿಂಬಾಗೊಡಗೂಡಿ ಧೂಪಿಸುಗೆ ಚಿಕ್ಕಡು ನೊಣಜುಂ ತಗುಣೆ ಬಾವಲೆಂಬಿವು ಕಿಡುಗುಂ (ಲೋಕೋಪ. ೯-೩೯) ; ತಗುಣೆಗಳಂ

ವೆಱತೇನೊರಸುತ್ತುಂ ಮೆಯ್ಯುಱಿಯದೆ ಕೊಲುತುಂ ನೊಣಂಗಳಂ ನಿರ್ದಯೆಯಿಂ ಇರ್ಪುದಂ (ಧರ್ಮಾಮೃ. ೩-೧೭೪) ; ಮಾನವನ ಕ್ಷುದ್ರಶತ್ರುಗಳ ಶ್ರೇಣಿಯಲ್ಲಿ ತಗಣೆಗೇ ಅಗ್ರತಾಂಬೂಲ (ನಂಟರು. ೪೭). **ತಗಣೆ:** ಮಲಗಿ ಶಿಶುವು ಇರುತಿರಲು ತಗಣೆ ಗುಂಗಾಡಿ ಕಚ್ಚಿ (ಚಿದಾವ. ೧೦೭-೭). **ತಗಣೆ:** ತಗಣಿ, ತಗಣೆ, ತಿಗಣೆ–ಈ ರೂಪಗಳನ್ನೂ ಕಿಟೆಲ್ ಉಲ್ಲೇಖಿಸುತ್ತಾನೆ (ನಂಟರು. ೩೮) : ತಗಣೆ ಉಪದ್ರ ಮಂಗಳಿಗೂ ಬಿಡಲಿಲ್ಲ (ಗಾದ). **ತಗುಣೆ:** ತಗುಣೆ ಹಬ್ಬುಲಿಯ ಹಿಡಿದಂದು ಹೆಣ್ಣಿನ ಬಗೆಯ ನಂಬುವವನು (ಸರ್ವಜ್ಞ. ೧೭೬೯) : ಚಿಕ್ಕಾಡಿ ತಗುಣೆಯೂ ರಕ್ಕಸರು ಜಾರೆಯರು ಒಕ್ಕಲಿಕ್ಕುವರು ಇರುಳಿಲ್ಲ ಬೆಳಗಾಗಿ ಸುಕ್ಕಿದಂತಿಹರು (ಸರ್ವಜ್ಞ ೧೮೩೩). **ತಿಗಣೆ:** ಶೂಲಿಯಿಂ ಕೊಂಡು ವಿಷವನು ಕೊರಳ ಪೂಸಲು ಖಂಡಿಯಲಿ ಸಿಡಿಯಲಿಕೆ ತಿಗಣೆಗಳಾದವಾಕ್ಷಣಕೆ (ಸಂಭಷ. ೬-೨೭ ಅಡಿಟಿ). **ತಿಗಣೆ:** "ಮತ್ಕುಣ – ತಿಗಣೆ" (ಓಷಧಿ. ೧೦೭) ; ಗಗನಯಾತ್ರಿಗಳಾದರಾ ಸೂರ್ಯಚಂದ್ರರು ಎಲ್ಲರು ತಿಗಣೆಗಂಜಿದರು (ಇಂದ್ರಾಪ. ೦೦೮-೭೮). **ತಿಗುಣೆ:** ಡುಂಡುಕನೆಂಬ ತಿಗುಣೆ ಬಂದು ಆನುಂ ನಿನ್ನ ಸಮೀಪದೊಳಿರ್ಪೆನೆನೆ (ಹಂಪಚಂ. ೧೨೩-೧೦) ; ದೇಶಾಂತ್ರಿಯೂದವ ತಿಗುಣೆ ಚಿಕ್ಕುಟ ಪಸಿವು ಬಾಯಾಱಿಕೆಗಂಜಿದರೆಂತಹುದು (ರೇವರ. ಹ. ೩೭೭-೧೨); ಚಿಕ್ಕಟು ತಿಗುಣೆಯ ತಿಕ್ಕುವಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೦).

[ದೇ.೩ ತುಳು. ತಗುಳೆ, ತಗುಲೆ, ಚಗುಳೆ, ಸಗುಳೆ ]

**ತಗುಣೆಗಾಟ** (ನಾ). ತಗುಣೆಗಳ ಕಾಟ ; ತಗುಣೆಗಳಿಂದಾಗುವ ಹಿಂಸೆ : 'ತಗುಣೆಗಾಟಂಗಾಡು' ಪರಾ. [ ತಗುಣೆ + ಕಾಟ$_1$ ]

**ತಗುಣೆಗಾಟಂಗಾಡು** (ಕ್ರಿ). ತಗುಣೆಯಂತೆ ಬಹಳವಾಗಿ ಹಿಂಸಿಸು,– ಮತ್ತೆ ಮತ್ತೆ ಕಾಡು : ಈ ರಾಜಹಂಸನಂ ಸರಸೀರತಲಂಪಟನನಸುರನೊರ್ವಂ ಗತ ಕೊಲ್ಗಾರವೂಲುದ್ಧತನಾದನಪಾರಬಲಂ ತಗುಳೆ ತಗುಣೆಗಾಟಂಗಾಡಲ್ (ಶಾಂತಿಪು. ೮-೬೮). [ ತಗುಣೆಗಾಟ + ಕಾಡು$_1$ ]

**ತಗುತ್ತೆಂಗು** (ನಾ). ಒಂದು ಬಗೆಯ ಮೂಲಿಕೆ (?) : ತಗುತ್ತೆಂಗು ಕೋಳಿಜುಟ್ಟಿನ ರಸ್ತದಿಂ ಅರೆದು ಗುಳಿಗೆಯಂ ಮಾಡಿ ಚೆಂದೆಂಗಾಯ ಎಲೆ ರಸದಲ್ಲೂ, ಆ ಬೀಜದಲ್ಲೂ ತೇದು ಹಚ್ಚಲು ಇರುಳುಗಣ್ಣು ಮಾಣ್ಗುಂ (ವಿಷ್ಣುವಿ. ೬೩). [ ? ]

**ತಗುಬಗೆ** 'ತಗೆಬಗೆ' ನೋ.

**ತಗುರು** 'ತಗರ್$_1$' ನೋ.

**ತಗುರೆನಾಡು, ತಗರೆನಾಡು** (ನಾ). ಒಂದು ಪ್ರದೇಶದ ಹೆಸರು : ತಗುರೆನಾಡ ಮಹಾಜನಂ ಪೋಗಿ ಕಣ್ಣರೂ (ಎಕ. VI, ಕಡೂರು. ೧೯೭-೩ ; 972). **ತಗರೆನಾಡು:** ಕೋಗೋಡಿನೊಕ್ಕಲ್ತಗರೆನಾಡ ಕೂಡಿಟ್ಟಲ್ಲಿ (ಮ್ಯಅರಿ. ೧೯೩೯, ೩೭-೧ ; 1034). [ ತಗುರೆ$_0$ + ನಾಡು ]

**ತಗುರ್ಚು** 'ತಗಳ್ಚು' ನೋ.

**ತಗುಲಿಸು** 'ತಗುಳಿಸು' ನೋ.

**ತಗುಲು$_1$** 'ತಗುಳ್$_1$' ನೋ.

**ತಗುಲು$_2$** 'ತಗುಳ್$_2$' ನೋ.

**ತಗುಲುಬೀಳ್, ತಗುಲುಬೀಳು** (ಕ್ರಿ). ೧. ನೇತುಬೀಳು; ಜೋತುಬೀಳು; ಕೈಗೆ ಸಿಕ್ಕು : ತಗುಲುಬಿಳ್ದಪುದೆಂತು ಪಕ್ಷವಿರಹಿತ ಪಕ್ಷಿಗೊಗುಮಿಗೆಯ ಶಾಖಾಗ್ರಫಲ (ಶರಸು. ೭-೨೭). **ತಗುಲುಬೀಳು:** ೧. ಸಲುಗೆಯಲಿ . . . ಮೈದುನನೆಂಬ ಮತ್ತೊಮ್ಮೆ ಬಗೆವ ಸಾಕ್ಷಾದ್ವಿಷ್ಣುವೆಂದೇ ತಗುಲುಬೀಳುವನೊಮ್ಮೆ ಕುತ್ತಿಗೆಗಡುತನ ನರ ಮಾಡೆ ಹರಿ ಸಂತೋಷಿಸುವನೆಂದ (ಜ್ಞಾನಸಿಂ. ೧೪-೯೩). ೨. ಗಂಟು ಬೀಳು; ಅಂಟು : ದೊಡ್ಡ ಕೆಲಸವೇ ನನಗೆ ತಗುಲು ಬಿತ್ತು (ರೂಢಿ).

[ ತಗುಲು$_1$ (<ತಗುಳ್$_1$) + ಬೀಳ್$_1$ (<ಬೀೞ್$_1$) ]

**ತಗುಲುಬೀಳು** 'ತಗುಲುಬೀಳ್' ನೋ.

**ತಗುಸಿ** (ನಾ). ಕುಂದು ; ದೋಷ : "ತಗುಸಿಯೆಂದೊಡೆ ಕುಂದುಂ" (ಕಾರನಿ. ೬೦). [ ? ]

**ತಗುಳ್$_1$, ತಗಲ್$_1$, ತಗಲು$_1$, ತಗುಲು$_1$, ತಗುಳು$_1$, ತಗುೞ್** (ಕ್ರಿ). ೧. ಸೇರು ; ಕೂಡಿಕೊಳ್ಳು ; ಹೊಂದಿಕೊಳ್ಳು : . ಪೆಱಗಸಿದಾಗಿ ಮುಂಂತಗಲಿತಪ್ಪುದಱಿಂದೆ ಧರಾತಳಂ ತಗುಳ್ದಿಱಪುದಱಿಂದೆ ಕೊಂಕಿ ಪರಿಯುತ್ತಿರವಿಂದೆ . . . ಪೋಲ್ವುದು ಮಹಾನದಿ ರುಂದ್ರಫಣೀಂದ್ರರಾಜನಂ (ಕಾವ್ಯಸಾ. ೭೪೭ ಶಾದ್ರಕ) : ಕಾರಕವಿಭಕ್ತಿಯೊಳೊಂದೆ ಸಮಾಸಯುಕ್ತಿ ಲೇಸಕ್ಕುಮಭೇದರೂಪಗುಣವಾಗೆ ತಗುಳ್ದಿರೆ ಮೇಣ್ ಕ್ರಿಯಾಪದಂ (ಕವಿರಾ. ೧-೧೧೭) ; ತಳಿರೋಳಿ ತಗುಳ್ದು ತಳ್ತ ಕೇತನತತಿ ಚಾಮರೋತ್ಕರದಲರ್ ಮಲಯಾನಿಲನಾಗೆ (ಆದಿಪು. ೦೩-೬) : ತಗುಳ್ದ ವಿಹತಾಂಬುವ ಬಲ್ಪೊನಲಿಂದಿರ್ಪಾಱದ ಬಟ್ಟೆಯೊಳೊಕ್ಕ ಪಲ್ಲವನಿಕಾಯದಿ ನಂದೞಿದಂ ಕಾಡಾನೆಗಳಾಗಡೆ ಪೋದುದಂ (ಕಾವ್ಯಾವ. ೬೩೬): ಅಗವದ ಬಗೆಯ ಹೊಗನಗಣಿತಸೂಕ್ಷ್ಮನು . . . ತಗುಳನಲಂಗ ತಿಳಿಯಲು ಹರಿಯಲು ಬಾರದಾರಿಗಗೋಚರನುಭಯಭ್ರಷ್ಟ (ಶಿವಗೀ. ೧೨೩-೩೦೨). ೨. ಅಂಟು ; ಹತ್ತು : ಮನೋಹರಮಾದುದಮರಕಾಂತೆಯರುರದೊಳ್ ಕುರುಳೊಳ್ತಗುಳ್ದ ದುಗ್ಧಲವಂಗಳ್ (ಆದಿಪು. ೬-೯೩) : ಮಹಾದೋಷಂ ತಗುಳ್ಗುಮೆಂದವಧರಿಸಿ (ವೃಷವಿ. ೩೩-೩೭). ೩. ಮೆಚ್ಚು ; ಇಷ್ಟಪಡು ; ಆಸಕ್ತಿವಹಿಸು : ಯಾಚಕಭೃಂಗಕೋಟಿ ಕೈಕೊಂಡು ನಿರಂತರಂ ತಗುಳ್ದು ಕೀರ್ತಿಪ (ಪಂಪಭಾ. ೧-೩): ವರ್ಣಕಂ ಕತೆಯೊಳೊಡಂಬಡಂ ಪಡೆಯ ಪೇೞ್ವೊಡೆ ಪಂಪನ ಪೇೞ್ವ ಮಂದು ಪಂಡಿತರ ತಗುಳ್ದು ಬಿಚ್ಚಟಿಸೆ ಪೇೞಲೊಡರ್ಚಿದೆನೀ ಪ್ರಬಂಧಮಂ (ಪಂಪಭಾ. ೧-೧೧) ; ವೀರಲಕ್ಷ್ಮಿಗಧಿನಾಯಕನೆನ್ನು ಧರಾತಳಂ ಮಹೋತ್ಸವದೆ ತಗುಳ್ದು ಬಣ್ಣಿಸುತವಿರ್ಪ್ಪುದು (ಸೌಇಇ. XX, ೩೦-೨೩ ; 1044). ೪. ಮೋಹಿಸು ; ಪ್ರೀತಿಮಾಡು : ಆತನ ಸುತರ್ ತಾಮಾಗಳೇ ಯೋಗ್ಯರಾಗರೆ ಪಟ್ಟಕ್ಕೆ ತಗುಳ್ದು ಪಾಲನೆಱಿವಿರ್ ಪಾವಿಂಗೆ (ಪಂಪಭಾ. ೨-೮೯). ೫. ಸಮೀಪಿಸು ; ಹಿಂಬಾಲಿಸು ; ಬೆನ್ನಟ್ಟು : "ತಗುಳ್ – ಅನುಧಾವನೇ (ಹಿಂದೋಡು)" (ಶಮುಧಾ) ; "ಬೆನ್ನಟ್ಟಿನಲು ತಗುಳ್ವುದಕ್ಕುಂ" (ಕವಿಕಂ. ೨೩೧) ; ಕರಿಣಿಯ ಸೀಯನಪ್ಪ ಮೊಲೆವಾಲ್ಗೆ ತಗುಳ್ವುದು ತಕ್ಕಿಶೋರಕೇಸರಿ . . . ಇಂದ್ರತನೂಜತಪಃಪ್ರಭಾವದಿಂ (ಪಂಪಭಾ. ೬-೮೦) : ಜಾಯಿಲಂಗಳ್ ಕಂಡು ತಗುಳ್ದು ಬಂದಮ್ಮ ಕಡಿದುವಾದೊಡೆ (ಪಂಪಚಂ. ೨೦-೨) : ಗಱವಟಿಯ ಪಾವಿನಂತೆ ದೆಂಬಟಿಯಂ ತಗುಳ್ದು ಪರಿತರೆ (ಸುಕುಮಾ. ೬-೩೩): ಗರ್ಭಿಣಿಯನೆಮ್ಮೆ ತಗುಳ್ದಂತೆ (ಧರ್ಮಾಮೃ. ೨-೭೦) : ಒತ್ತರಿಪ ಸಂಸಾರವಂ ಬೆಂಬತ್ತಿ ಪಾಱ ತಗುಳ್ದು ನಲಿದಾಡುತ್ತಲಿಪ್ಪವೊಲೆರಡು ಕಯ್ಯಂ ಬಿಚ್ಚಿಯಾಡುವನು (ಬಸವು. ೩-೩೭). ೬. ಆವರಿಸು; ಆಕ್ರಮಿಸು; ಮೇಲೆ ಬೀಳು: ಬಾಚಿಯಿಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೬೩) : ವಾರಣವಾಗಿ ಪೋರ್ವ ಪುಲಿಯಾಗಿ ತಗುಳ್ವ . . . ಮಹಾಸ್ತ್ರದಿನೆಚ್ಚು ಕಿರೀಟಿ ಕಾದಿದಂ (ಜಗವಿ. ೦೩-೨೧) ; ತಗುಳ್ದು ಪೊಯ್ದು ಗದೆಗೆ (ಚಂದ್ರಪು. ೧೦-೮೦) ; ಕಾಳ್ಗಿರ್ಚು ತಗುಳ್ದ ತೆಱದಿಂ ನಿಕ್ಕಸದ ನೊಂದು ಬೆಂದು ಬಳಲುತ್ತೆಂದಂ (ಗಿರಿಕ. ೦-೦೦೭) ; ಖಳನುರವಣಿಸಿದನು ರಾಹು ತಾರಾಧಿಪನ ತಗುಳ್ವಂತೆ (ಕುಮಾ.ಸ. ೧೯-೬೨); ಕಯ್ಗೊಳ್ಳಂ ರಾಷ್ಟ್ರದಿಂದೆಂದುಂ ತೆರೆಯಿಂ ಪೆರತೇನನುಂ ತಗುಳ್ವ ಸೊರ್ಕಂ ಪಗೆಯೊಳ್ ಆಳ್ಗಳಿಂದವನಳ್ಗಿಪಂ (ಸೌನಂದ. ೨-೩೩). ೭. ಓಡಿಸು ; ತೊಲಗಿಸು ; ನೀಗು ; ನಿವಾರಿಸು : ಕುಳಿಶಾಸ್ತ್ರಂ ಕುಧರಾಸ್ತ್ರಮಂ . . . ಜ್ವಳನಾಸ್ತ್ರಂ ಗಗನಾಸ್ತ್ರಮಂ ತಗುಳೆ (ಪರ್ವಪು. ೮-೬೩) ; ಅನೆಂತುಮುಂ ಹೋಗೆನೆಂದೆನಲುಪಾಯದಲು ನಿನ್ನಂ ತಗುಳಲೆಂದಾಡಿದನೆ ಧರೆಯ ಹಿತವನಾಚರಿಸಲಾಡಿದೆನಲ್ಲದೆ (ಸಿದ್ಧರಾ. ೩-೦೭)

ತಾನೊಗೆದತ್ತು ಕಾರ್ಮುಗಿಲ್ ಗಡಣಮೆನಿಪ್ಪ ದಂತಿತತಿಯಗ್ರದ ಡಿಂಡಿಮ ನಾದದಂತೆ ಪೆರ್ಗುಡುಗು ನಿದಾಘನಂ ತಗುಳಲ್ಕೆದಿದ ನೀರದ ಕಾಲರಾಜನಾ (ರಾಜಶೇ. ೮-೧೦೩). ೮. ವಿವೇಚನೆಯಿಲ್ಲದೆ ದೂಡಾಕು: ಏಂ ತಗುಳ್ದಿಯನ್ನುಃಖರದಿರೀವ ಮಾತನಿವನನುಣ್ಮುದು ಪಾಂಡವಮಾತನಗ್ನಿ (ಪಂಪಭಾ. ೫-೬೩). ೯. ತೊಡಗು; ಮೊದಲುಮಾಡು; ಪ್ರಾರಂಭಿಸು: ತಪಂಬಟ್ಟ ದಿವಸದಿಂ ತಗುಳ್ದಿಂದಿಂಗಯ್ದು ದಿವಸಮುಣ್ಬುದಿಲ್ಲ (ವಡ್ಡಾರಾ. ೮೩-೫); ಭದ್ರಶಾಲದಿಂ ತಗುಳ್ದು ಪಾಂಡುಕವನಂಬರಂ (ಆದಿಪು. ೪-೩೨೮); ಜಯಂ ಬೆಸಗೊಳೆ ಗಂಗಾದೇವಿ ಪೇೞಲ್ತಗುಳ್ದಳ್ (ಚಾವುಂಪು. ೮೩-೫): ಸವಿಸ್ತರಂ ಪೇೞಲ್ ತಗುಳ್ದು (ಪಂಚತಂ. ೬೦-೬). ೧೦. ಅನುಸರಿಸು; ಆಚರಿಸು; ಪಾಲಿಸು: ಭೋಗಿಪೆನೆನ್ನ ಜವ್ವನಮುಮಿಾಧನಮುಂ ತವುವನ್ನೆಗಂ . . . ಅನ್ನೆಗಮಾತ್ಮಜನಂ ತಗುಳ್ವೆನೆಂತಾಗಿಯುಮೆಂಬ ನಿನ್ನ ಮೊಲಗಟ್ಟಲೆಗಾಂ ಬೆಱಗಾದೆಂ (ಆದಿಪು. ೩-೬೩). ೧೧. ಉಂಟಾಗು; ಸಂಭವಿಸು; ಒದಗು; ಬರು: ಗುರುಸಮಕ್ಷಪರೋಕ್ಷವಿನೇಯವೃತ್ತಿಯಿಂದಮ್ಮನದುಕ್ಕೆಮಂ ತಗುಳೆ ನಿರ್ವಹಣಾಸ್ಥಿತಿಗುಯ್ದರೀ ಪುರಾಣಂ ಮಹಿರತ್ನಮಿಂತಿದೆಯಳಂಕೃತಿ (ಶಾಂತಿಪು. ೧೨-೩೧); ಅರೋಚಕಂ ತಗುಳ್ವಡೆ ಬಱಿದೇನೆ ಎತ್ತುವಡೆ . . . ತಗುಳ್ಗಂ ಪುಟ್ಟುಗುದಾತ್ತ ಬಲಕ್ಷಯಂ (ಕಲ್ಯಾಕಾ. ೬-೦); ದೀರ್ಘಕ್ಕೆ ದೀರ್ಘಮೊದವೆ ಸಮಸಂದಾ ಯುಗಳಂಗಳೊಳಮಳಿನಮಾಗೆಲ್ಲಿಯುಂ ಸವರ್ಣವಿಧಾನಂ (ಶಮದ. ೬); ತನಗೆ ಕಂತುಹರಕರುಣದಿಂ ತಗುಳ್ದ ರೂಪದೊಳು ಹಿಮವಂತಸುತೆಯಾಸ್ವಾಂತಮತ್ಯಂತಚಂಚಲಮಾದ ಬಳಿಕ ತಾನೆಂತು ನಿಶ್ಚಿಂತೆಯಿಂದಿರ್ಪೆಂ (ಮಂದಿಮಾ. ೯-೫೨). ೧೨. ಬಯ್ಯು; ತೆಗಳು; ಮೂದಲಿಸು: ಒರ್ವರೊರ್ವರಿಱಿಯುತ್ತಂ ಮುನಿದು ತಗುಳುತ್ತಂ . . . ಬಿಡದೆ ನರಳುತ್ತಂ ಪುಡಿಯೊಳು ಪೊರಳುತ್ತಮಿಪ್ಪರ್ (ಪ್ರಭುಲಿ. ೨೨-೧೫). ‘ತೆಗಟ್$_{1}$’ ಪರಾ. **ತಗಲ್$_{1}$**: ೧೩. ತಾಕು; ಸೋಂಕು; ಸ್ಪರ್ಶಿಸು: ಕಣೆ ಅವಂಗೆ ತಗಲ್ದು ಮೂರ್ಛೆವೋದಂ (ಅಚ್ಯುತ. ೪೩-೧೯). **ತಗಲು$_{1}$**: ೧. ಹೊಗಳಿದ ಭಕುತರ ತಗಲಿ ತೊಲಗನೆಂದು ಮಿಗೆ ಕೂಗುತ್ತಿರಲು (ವಿದಾಳ್ಕ. ೬೫-೨); ತನುಲತೆಗಳನ್ಯೋನ್ಯಮಾಗಿ ತಗಲಿರೆ . . . ತನುಭಾವವಮಳಿದು ನಿದ್ರಿಪ ಮಾನಿನೀಗಣವ ಕಂಡನಾ ವಾಯುಸುತನು (ಜೈಕಾರಾ. ೫-೪-೧೮); ೧೩. ತನೆಗಳನಶಿಯಾ ತಗಲಿ ಪೆರ್ಬಾಗಿಲೊಳು ಚಂದ್ರನನಾಗಿವವು (ಜಿನಭಾ. ೨-೨೨); ಈ ಬಾಣವು ಈ ನೀಚನ ಮಗನಿಗೆ ತಗಲಲಿ (ನೀತಿಚಂ. XI, ೧೪): ಆಕಾಶಬಾಣವನ್ನು (rocket) ಚಂದ್ರಗ್ರಹಕ್ಕೆ ತಗಲುವಂತೆ ಎಸೆದಿದ್ದಾನೆ (ಶಿಲ್ಪನಾ. ೧೮೨). ೧೪. ಸಂಭೋಗಮಾಡು: ತಗಲಿದವನಿಗೆ ಹಗಲೇನು ಇರುಳೇನು (ಗಾದೆ). **ತಗುಲು$_{1}$**: ೧. ಸೊಗಸಿಂದಮಾನಂದಗೊಳುವ ಸುಕುಮಾರಾಂಗಿ ಮಿಗೆ ರಕ್ಕಸೀಗಣದಿ ತಗುಲಿ ಸಂಕಟಗೊಂಬ ಬಗೆಯ ನೋಡಲು ವಿಧಿಯ ಬಲಮೆಂತೊ (ಜೈಕಾರಾ. ೫-೮-೧); ಕೇಶಿಧ್ವಜನು ಆ ರಾಜ್ಯಭೋಗಗಳಲ್ಲಿ ತಗುಲಿಕೊಳ್ಳದೆ ಯೋಗನಿಷ್ಠನಾಗಿದ್ದು . . . ಯಜ್ಞವನ್ನು ಮಾಡತೊಡಗಿದನು (ಸಾಹಿಶೀ ೯೬). ೨. ರಾವಣನ ತೇಜಸ್ಸಿಗೆ ಸ್ತ್ರೀವ್ಯಾಮೋಹದ ಕಳಂಕವೊಂದು ತಗುಲದಿದ್ದರೆ ಅವನ ಸಮಾನರು ಯಾರು (ಕಾವ್ಯಶ. ೪); ಒಂದು ಹುಲ್ಲುಕಡ್ಡಿ ನನ್ನ ಬಟ್ಟೆಗೆ ತಗುಲಿಕೊಂಡಿದೆ (ವೀತಿಚಂ. IV, ೨೮): ಅರಸರ ತೈಲಚಿತ್ರಕ್ಕೆ ನಂದಾದೀವಿಗೆ ತಗುಲಿ, ಅದು ಉರಿದುಹೋಗುತ್ತದೆ (ಸಂಸಳ. ೯೯). ೧೫. ಬೆಲೆಯಾಗು; ವೆಚ್ಚವಾಗು; ಖರ್ಚಾಗು: ಅಷ್ಟೇ ಕೆಲಸಕ್ಕೆ ಕನಿಷ್ಠಪಕ್ಷ ಹತ್ತು ರೂಬಲ್ ತಗುಲುತ್ತಿತ್ತು (ಪುನರು. ೨೬೪). **ತಗುಳು$_{1}$**: ೬. ಮಗನ ಕರೆದರೆ ಯಮನ ದೂತರ ತಗುಳುವಂದು ಸಮಿಾಪವರ್ತಿಯೆ ನಗಧರ ಶ್ರೀಕಾಂತ ಸಲಹೆನೆ ಮುನಿಕುಮಾರಕನ ಉಗುಳಿಚಿದೆಲಾ (ಕುವ್ಯಾಅ. ೨-೨೯); ಹಾಳಾಹಳಂ ತಗುಳಿ ನಾಲ್ದಿಕ್ಕನಾಂತು ನೆಱೆ ಪರಿಪರಿದು ಸುಡುತ ಬರಲು (ಲಶಿಚಂ. ೧೨-೮); ಭುಗುಭುಗಿಲು ಭುಗಿಲೆಂದು ಕೇಸುರಿ ತಗುಳಿದುದು (ನಿಭಾಗ. ೧೦-೧೬-೨೦). ೧೨. ಪಾಪಿ ಪೋಗೆಂದಂದು ನಿನ್ನಂ ಕೋಪದಿಂ ನಾಂ ನುಡಿದು ತಗುಳಿದ ಪಾಪವಂ ಸ್ಮರಿಸುವುದು (ಬಸವು. ೧೩-೨೩); ಜಿನದತ್ತ್ರಯಾಲಯಕೆ ಪುಗಲವಳ್ಕಂಡೆಲೇ ಕಡುಪಾಪಿ ಪೋಗೆಂದು ತಗುಳಿದಳ್ (ಸಮ್ಯಕೌ. ೧೦-೧೮): ವಿಭಾಡಿಸಿ ತಗುಳಲ್ ದೂತಂ ಬಂದಾಕ್ಷಣದೊಳ್ ವಿಕ್ರಮ ಕೌರವನೆಂದುಂದಮನೊರೆಯಲ್ (ಜಯುಕಾ. ೬-೧೦).
△ **ತಗುಟ್**: ೬. ಅಸಹಾಯುಸಿಂಹಂ ತಗುಟ್ದಿಳ್ದ ಬಡಿವಂ ದುಷ್ಟಮನ್ನೆಯಂ ಪ್ರಳಯಕಾಳಂ (ಸೌಇಇ. XX, ೨೪-೬; 1034).

**ತಗಲು ಹಾಕು, ತಗಲ್ಹಾಕು**=ತಗುಲಿಸು; ತೂಗುಹಾಕು; ಅಳವಡಿಸು: ಗುರು ಕೊಟ್ಟ ಚೀಲವೆಂದು ಗೂಟಕ್ಕೆ ತಗಲು ಹಾಕಿದರೆ ಹೊಟ್ಟೆ ತುಂಬೀತೆ (ನೀತಿಚಂ. VII, ೩೨); ಯಮನ ದೂತರು ಬಂದು ಪಾಶವನು ತಗಲ್ಹಾಕಿ ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು (ಪುರಂದ. ೧-೫೨-೫). **ತಗುಳೆ ಗಟಪು**= ಮನಸ್ಸಿಗೆ ತಾಕುವಂತೆ ಹರಟು; ಮರ್ಮೋದ್ಘಾಟನೆ ಮಾಡು: ಪದುಳಂ ಕುಳ್ಳಿರ್ದೆಮಗಾಯದ ಮಾತಂ ತಗುಳೆ ಗಟಪಿ ಪೋದಂ (ಗದಾಯು. ೨-೧೩). **ತಗುಳೆ ಪಾಡು** = ಮನಸ್ಸಿಗೆ ಹಿಡಿಸುವಂತೆ ಹಾಡು; ಮನೋಹರವಾಗಿ ಹಾಡು: ಪದ್ಮಜಂ ತಗುಳೆ ಪಾಡಿ ಸಾಮಂಗಳಂ (ಕಾವ್ಯಾವ. ೦೩೫). **ತಗುಳೆ ಪೀರು** = ಎಡೆಬಿಡದೆ ಕುಡಿ: ಬಡಬಾನಳಂ ಬಿಡದಾಗಳುಂ ತಗುಳೆ ಪೀರೆಯುಮಂತದೆಳ್ಳನಿತಪ್ಪೊಡಂ ತವದಂತೆವೊಲ್ (ಕಾವ್ಯಾವ. ೬೨೩). **ತಗುಳೆ ಬಾಜಿಸು**=ಹೊಂದಿಕೆಯಾಗಿ ಬಾರಿಸು; ಕೂಡಿಕೊಂಡು ಬಾಜಿಸು: ವಿತತ ಘನಾವನದ್ಧ ಸುಷಿರಂಗಳನೊರ್ಮೆಯೆ ಕೂಡೆ ಕೂಡಿಕೊಂಡತಿದ್ರುತವಾದಕರ್ತಗುಳೆ ಬಾಜಿಸೆ (ಮಲ್ಲಿಪು. ೮-೨೬). **ತಗುಳೆವರ್** = ಅನುರೂಪವಾಗು; ಹೊಂದಿಕೊಳ್ಳು; ಸಮನಾಗು: ಈತನುದಾತ್ತ ಪೂರ್ವಭೂಮಿಪರುಮನೊಳ್ಪಿನೊಳ್ ತಗುಳೆವಂದೊಡೆಯಾ ಕಥೆಯೊಳ್ ತಗುಳ್ಚಿ ಪೋಲಿಪೊಡೆನಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಪಂಪಭಾ. ೧-೧೪).

[ದೇ.॥ ತುಳು. ತಗರು, ತಗರ್; ತೆಲು. ತಗುಲು, ತವುಲು]

**ತಗುಳ್$_{2}$, ತಗಲು$_{2}$, ತಗುಲು$_{2}$, ತಗುಳು$_{2}$** (ನಾ). ೧. ಸೇರಿಕೆ; ಹೊಂದಿಕೆ; ಜೋಡಣೆ: “ತಗುಳೆಂದು ಸಂಧಾನಂ” (ಕಶಸಾ. ೨೮-೫೮೬). **ತಗಲು$_{2}$**: ೨. ಸಂಬಂಧ; ಸಂಪರ್ಕ: ಎಲ್ಲಿಯ ಗುಡಿಯ ಕಟ್ಟಿದ ಸಿದ್ಧರಾಮಯ್ಯ ಎಲ್ಲಿಯ ಬಟ್ಟೆ ಬಂತೆನಗೆ ಎಲ್ಲಿಯ ತಗ[ಗ]ಲು ತಾಪತ್ರಯವೆಂದಾಗ ಮಲ್ಲಿಕಾರ್ಜುನ ಚಿಂತಿಸಿದನು (ಅಮುಸಾಂ. ೫-೬೦): ತನಗೀ ವೃತ್ತಿಗಸಂಗತ್ವವ ತಿಳಿದನಿಗಘಪುಣ್ಯದ ತಗಲುಂಟೆ (ಕೈಳವ. ೫-೪೮-೪); ಹರಿಯ ನೆನೆಸಿದ ಹಗಲು ಮುಕ್ತಿಗೆ ಬಲು ವಿಗಿಲು ಹರಿಯ ನೆನೆಸದ ಹಗಲು ನರಕಕ್ಕೆ ತಗಲು (ವಿದಾಳ್ಕ. ೨೨-೨). **ತಗುಲು$_{2}$**: ೨. ಕೊಂಕು ಕೊಸರುಗಳ ಕಿನಿಸೆಂಬ ತಗುಲುಗಳ ಸೋಂಕದಿಹ . . . ನೆಲದೊಳು (ಜೈಕಾರಾ. ೬-೬೨-೩೫). **ತಗುಳು$_{2}$**: ೩. ಹತ್ತಿರ ಬರುವುದು; ಸಮಿಾಪಿಸುವುದು.

**ತಗುಲಾಗು**=ಸೇರುವೆಯಾಗು: ರಾಮಚಂದ್ರನ ಸೇವೆಗೆ ಕಲಿ ಹನುಮಂತನೇಮದೆ ತಗುಲಾದಂತೆ ಭೂಮಿಪ ಕಂಠೀರವೇಂದ್ರಗೆ ನಂದೇಂದ್ರ ತಾ ಮನೋಹರದೊಳೊಪ್ಪಿದನು (ಕಂಸವಿ. ೪-೧೦೪); ನಿಂಮ ಚರಣಾರವಿಂದದ ಸೇವೆಗೆ ತಗುಲಾಗಿಯಿಧೇವೆ (ಮ್ಯಅರಿ. ೧೯೪೩, ೫೦-೪೦; ಸು. 1709). **ತಗುಳುಮಗುಳು, ತಗಳುಮಗುಳು** = (ಶತ್ರುವನ್ನು) ತಾಗುವುದು ಮತ್ತು ಹಿಂದಿರುಗುವುದು; ಆಕ್ರಮಣ ಮಾಡಿ ಶತ್ರುವಿನ ಕೈಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು: ಎದ್ದು ನಭದೊಳ್ಪಳಂಚುವರೊಮ್ಮೆ ಭೂತಳದೊಳಿದ್ದು ಹೆಣಗುವರೊಮ್ಮೆ ಬಳಸಿ ಮಂಡಲದಿಂದ ಹೊದ್ದಿ ಹೋರುವರೊಮ್ಮೆ ತಗುಳುಮಗುಳಾಗಿ ತಾಗುವರೊಮ್ಮೆ ಸರಿಬರಿಯೊಳು (ಪ್ರಮಿಭಾ. ೨೨-೨೯); ತಗಳುಮಗುಳಾಗಸಮಸಮರದಲಗಣೆತದ ಭಟನಿವಹ ವಡಗೆಡೆದುಗುಳಿಚಿದರಸುಗಳನು (ಕೋಗಯು. ೫೦-೨೪). [<ತಗುಳ್1]

**ತಗುಳ** (ನಾ). ಒಟ್ಟಾಗಿರುವುದು; ಗೊಂಚಲು; ಮಂಜರಿ: ನಗೆಯಿಂದ ಬಿರಿವಂತೆ ಬಿರಿವ ಬಿರಿಮುಗುಳ ತಗುಳದಿಂ ಸೊಗಯಿಸುವ ಮಲ್ಲಿಕಾಲತೆಯ ಜೆಸಂಪಂಗಳುಂ (ಪುಷ್ಪ.ಪು. ೩-೩೯ ಪ); ಚೆಲ್ವಿಂ ಬಳ್ವಲಾದ ಮಲ್ಲಿಗೆಯ ಮುಗುಳ ತಗುಳದಿಂದೆಸೆವ ಬಾಸಿಗಂಗಳೊಳಮಳಂಕರಿಸೆ (ಪುಷ್ಪ.ಪು. ೪-೮೦ಪ). [<ತಗುಳ್$_1$ ?]

**ತಗುಳಿಸು**, ತಗಲಿಸಂ, ತಗುಲಿಸು (ಕ್ರಿ). ೧. ಸೇರಿಸು ; ಹೊಂದಿಸು : ಮೊಗಮೆಂಬಲರ್ಗೊಳದ ತಡಿಯೊಳಿರಿಸಿದಳಿವಳಂಚೆಗಳನೆನೆ ಸತಿಯ ಕಿವಿಯೊಳ್ ತಗುಳಿಸಿದಳ್ ಹಂಸರಚನೆಯೋಲೆಯನೊರ್ವಳ್ (ಪುಷ್ಪ.ಪು. ೯-೭೭). ೨. ತಳ್ಳಿಸು ; ಓಡಿಸು ; ಹೊರದೂಡಿಸು : ಹರಹರಾಯಿಂದೀ ವ್ರತಭ್ರಷ್ಟರ ದೆಸೆಯನೀಕ್ಷಿಪೊಡೆ ನುಡಿಪೊಡೆ ಪರಮಪಾತಕವೆಸುತ ಹುಗಲೀಯದೆ ತಗುಳಿಸಿದೊಡೆ (ಬಸವು. ೬೦-೨೭). **ತಗಲಿಸು** : ೧. ದಿಟ್ಟನೋಲೆ ಮೊಣಕಾಲಿಗೆ ತಗಲಿಸಿ ಗಟ್ಟಿಕಂಕಣ ಕಿವಿಗಿಟ್ಟು (ಪುರಂದ. ೧-೦೦೦-೪). ೩. ಮೆಂಟ್ಟಿಸು; ತಾಗಿಸು: ಮತ್ತೆ ಪ್ರಾಗ್ನ್ಯಾಸನೆಯ ಮೆಸರಿನ ಸುತ್ತುವಳ್ಳಿಯ ಮೆಟ್ಟರದ ಮೈ ಪತ್ತುತಿಹ ಸಂಕಲ್ಪ ಚಿಗುರಿಗೆ ಜುಟ್ಟ ತಗಲಿಸದೆ (ಗಗಶಾ. ೧೬-೦೮) : ನಾನು ಸ್ವಲ್ಪ ರೋಗದ ಸೋಂಕನ್ನು ತಗಲಿಸಿದರೆ ಅವು ಸತ್ತ ಪ್ರಾಣಿಯ ಅಂಗಾಂಗಗಳನ್ನೆಲ್ಲ ವ್ಯಾಪಿಸಿರುತ್ತವೆ (ವಿಶಾಸ.೬೩). **ತಗುಲಿಸು**: ೧. ಉಪ್ಪು ಮೆಣಸು ಜೀರಿಗೆ ಸರಿಯಾಗಿ ಹಾಕಿ ಸ್ವಲ್ಪ ಹಿಂಗು ತಗುಲಿಸಿ ಆಯಕಟ್ಟು ಮಾಡಿ (ಕಥಾಮಂ. IV, ೦೪). ೪. ನಿಂದಿಸು; ದಬಾಯಿಸು: ಆ ಚಿಕ್ಕಮಗು ಆ ಭಾರತದ ದೇವರಾಜ್ಜಯ್ಯ ಎಷ್ಟು ಧೈರ್ಯವಾಗಿ ಪಂಡಿತನಿಗೆ ಜವಾಬು ಕೊಟ್ಟ ನೀವೂ ಹಾಗೆಯೇ ಪಂಡಿತನಿಗೆ ತಗುಲಿಸಬೇಕಾಗಿತ್ತು (ಹಂಗಾಳ್ಕ. ೫೭೮). 'ತಗುಳ್ಚು' ಪರಾ. [ತಗುಳ್$_1$ + - ಇಸು$_3$]

**ತಗುಳ್ಚು**$_1$ 'ತಗುಳ್$_1$' ನೋ.

**ತಗುಳ್ಚು**$_2$ 'ತಗುಳ್$_2$' ನೋ.

**ತಗುಳ್ಚಿಸು** (ಕ್ರಿ). ನೂಕಂ ; ತೊಲಗಿಸು ; ನಿವಾರಿಸು ; ದೂರಮಾಡು: ಕರಕಪಾಲಮಂ ಕಂಡೊರ್ವ ಶಶಿಮುಖಿಯರಾದೊಡಂ ಭಯ ಬಿಭತ್ಸುಗೆ ಸಂದುದಿಲ್ಲವೆನೆ ಶಿವಮುಖಿದೊಳು ಬೆಸುಗೆಗಣ್ಗಳ್ ಪೆಜಿತು ಕಣ್ಬುವೇ ಮೇಣ್ ಮಿಕ್ಕ ರಸಮನಿತ್ತಾದೊಡಂ ಮೋಹರಸಮಂ ತಗುಳ್ಚಿಸಬಲ್ಲುದೇ (ಕಬಪು. ೨೦-೨) [ತಗುಳ್ಚು + - ಇಸು$_3$]

**ತಗುಳ್ಚು**, ತಗುರ್ಚು (ಕ್ರಿ). ೧. ಸೇರಿಸು ; ಕೂಡಿಸು ; ಬೆರಸು : ಅರಸನಜಿದೇಂ ಮಹಾಪುರುಷರತ್ನದೊಳ್ ರತ್ನಮಂ ತಗುಳ್ಚಿದನೊ (ಶಾಂತಿಪು. ೨-೭೫); ಪಟಗನ್ನಡಂ ಪುದುಂಗೊಳೆ ಕೊಟ ಸಕ್ಕದಮಂ ತಗುಳ್ಚೆ ಜಾಣ್ ಕಿಡೆ ಮುತ್ತಂ ಮೆಟಸಂ ಕೋದಂತಿರೆ ಪೇಟ್ವುಜಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೇ (ಕಾವ್ಯಾವ. ೫೫); ತದೀಯ ದುಸ್ಸರ ಸ್ವರದಶಾವ್ಯತಿಕರಕ್ಕೆ ತಲ್ಲಟಿಸಿ . . . ನಲ್ಲಳಸುವನಾಂ ಸಾಹಸದೊಳ್ ತಗುಳ್ಚಿ ನಿರೆ ಪಿಡಿವ ನಯಮಂ ಬಗೆದು (ವರ್ಧಪು. ೪-೮೨ಪ). ೨. ಅಳವಡಿಸು ; ಸಿಕ್ಕಿಸು : ಮಘವಂ ಶಚಿ ಪೂತ ಚೂತಮಂ ನೆರ್ವಿದಶೋಕವಲ್ಲರಿಯ ಪಲ್ಲವಮೊಂದನೆ ಕೊಯ್ದು ರಾಗದಿಂ ಸೋರ್ಮುಡಿಯೊಳ್ ತಗುಳ್ಚಿದೊಡೆ ಸೂಟನೆ ಬಾರಿಸಿದಂ (ಶಂಪಳಾ. ೫-೮೨); ಕೋಡ ಮೊನೆಯೊಳ್ ತಗುಳ್ಚಿದ ಸೂನಗಿಗತ್ತಿಯು (ರಾಜಶೇ. ೬-೧೦ಪ). ೩. ತೊಡು ; ಧರಿಸು : ಸೌಭಾಗ್ಯನಿಧಿಯ ವಿಯೋಗದಿಂ ಜೀವವಿಯೋಗಮಾಗದಿರ್ಕೆಂದು ತಗುಳ್ಚಿದ ರಕ್ಷಾವಳಿಯಂತೆ ಕೊರಲೊಳಿಕ್ಕಿರ್ದಕ್ಷಾವಳಿಯುಂ (ಕಾದಂಪೂ. ೭೫೦); ಗಳದೊಳ್ ತುಲಸೀಸ್ರಜಮಂ ತಗುಳ್ಚಿ (ದಿವ್ಯಚ. ೯-೦೪). ೪. ಹೊಂದಿಸು ; ಅನ್ವಯಿಸು : ಸಂಖ್ಯೆಗಳೊಳೇಕಬಹುತ್ವವಿಪರ್ಯಯಕ್ಕಸಂಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ (ಕವಿರಾ. ೦-೦೦೯) ; ಈ ಕಥೆಯೊಳ್ ತಗುಳ್ಚಿ ಪೊಲಿಪೊಡೆಸಗಟ್ಟಿಯಾದುದು ಗುಣಾರ್ಣವ ಭೂಭುಜನಂ ಕಿರೀಟಿಯೊಳ್ (ಶಂಪಳಾ. ೦-೦೪); ಓಹಿಲಯ್ಯಂಗೆ ಪೆರ್ಮೆಯಂ ತಗುಳ್ಚಿ ನೀಂ ವಿಗೆ ಪೊಗಳ್ವುದನುಚಿತಮಕ್ಕುಂ (ವೃಷವಿ. ೨೯-೧೬೬ಪ) : ಬೆಳಕಿನ ಅನುಭವವನ್ನು ಪರಿಭಾವಿಸಿ ಆ ಬೆಳಕನ್ನು ಗಾಂಧೀಜಿಯ ವ್ಯಕ್ತಿತ್ವದ ಚಿತ್ರಣಕ್ಕೆ ತಟಕ್ಕನೆ ತಗುಳ್ಚಿರುವುದು ತುಂಬ ಹಿತವಾಗಿದೆ (ಸೌಂದಸ. ೩೪೬). ೫. ತಗುಲಿಸಂ ; ಗಂಟುಹಾಕು : ಗಾಳುಗೊರವಂ ತಗುಳ್ಚಿ ಪಳಾಳಮನೇನೊಂದನಪ್ಪೊಡಂ ಗಟಪಿದೊಡಂ ಬೇಳುನ್ನುಡಿಗೆಳ್ದು ಕಿಮ್ಮನೆ ಬೇಳಲ್ ನಿಮಗಂತು ರಾಜಸೂಯಂ ಮೊಗ್ಗೇ (ಶಂಪಳಾ. ೬-೨೪). ೬. (ಉರಿ) ಹತ್ತಿಸು; ಅಂಟಿಸು: "ತಗುಳ್ಚು–ಉದ್ಯೋಗೇ, ಅಗ್ನಿಬಾಧನೇ ಚ" (ಶಮುಧಾ) ; ಬಳೆದ ತವಮೆಂಬ ಕರಡಮನೆಳವಲ್ಲದೆ ಸುಟ್ಟುಕಿಡಿಸಲೆಂದಜನುದಯಾಚಳದೊಳ್ ತಗುಳ್ಚಿ ತಳ್ತೊಡನಳುರ್ವ ದವಾಗ್ನಿಯ ಪೊಲರ್ಕನುದಯಂಗೆಯ್ದಂ (ಕಾವ್ಯಸಾ. ೮೭೦ ಕೂದ್ರಳ) : ಎನ್ನ ಬಸಿಜಿನೊಳ್ ಕಿಚ್ಚಂ ತಗುಳ್ಚಿದಂ (ಅರ್ಧನೇ. ೬-೬೯ಪ). ೭. ಮಾಡು ; ನಿರ್ವಿಸು : "ತತುಳ್ಚು–ಉದ್ಯೋಗೇ,ಅಗ್ನಿಬಾಧನೇ ಚ"(ಶಮುಧಾ);ಸುರಪತಿಯುಲ್ಲಿಯುಲ್ಲದ ಜಿನಾಭಿಷವೋತ್ಸವಮಂ ತಗುಳ್ಚನಾ ಸುರತರುಯಿಕ್ಷೆಯುಲ್ಲದುದಿಕೋದಿತ ಮಾಗದು (ಮಹಾನೀ. ೧-೫೫) ; ಅಲ್ಪಾರ್ಥವಸೊಳ್ದರೆ ವಸ್ತುವಿನರ್ಥವನು ಸಿರುತ್ತಿರೆ ತಗುಳ್ಚುವುದು ಸಂಹಿತೆಯುಂ (ಶಮುದ. ೬೪). ೮. ಆರಂಭಿಸು ; ತೊಡಗು; ಉಪಕ್ರಮಿಸು: ಪಂಕಜೋತ್ಕರಮುಮನಿಂದುಮಂಡಲಮುಮಂ ಮೊದಲೊಳ್ಮೆದಬ್ಜಜಂ ಮನೋಹರಮನೆ ಮಾಡಿದೀ ಪೊಗದ ಪೋಲ್ಕೆಗೆ ಮುನ್ನೆಗಳಲ್ಪಗುಳ್ಚಿ ಬಿತ್ತರಿಸಿದನಲ್ಲದಿಂತು ಸಮವಸ್ತುಗಳಂ ಪಡೆವಂತು ಗಾಂಪನೇ (ಕಾದಂಪೂ. ೭೪೩). ೯. ಆಗಿಸು; ಉಂಟುಮಾಡು: ನುಡಿಯಂ ತಗುಳ್ಚಿ ನೋಟಂ ನುಡಿ ಪರಿಚಯಮಂ ತಗುಳ್ಚಿ ಪರಿಚಯ ಮಳಿಪಂ ತಡೆಯದೆ ತಗುಳ್ಚಿ ಮನದಳಿಪೊಡಗೂ[ಡಿದು]ದಂ ತಗುಳ್ಚುಗುಂ ಕಾಮಿಗಳಾ (ಕವಿರಾ. ೩-೨೦೩) ; ಉತ್ತರಗೋಗ್ರಹಂ ಪಿರಿದುಮಾಗ್ರಹಮಂ ಮನದೊಳ್ ತಗುಳ್ಚಿ (ಶಂಪಳಾ. ೮-೯೩) ; ಮಾಡಿದಂ ಸಲೆ ಸಂದೆಯಮಂ ತಗುಳ್ಚದಂತೆ(ವಿಷ್ಣುಪು.೦೦-೦೫೩). ೧೦. ತಲುಪಿಸು;ಮುಟ್ಟಿಸು:ಮಾರಿಯ ಮಸಣಿಯ ಚೂಳಿಯಂ ಪಿಡಿದು ಜಡಿವ ಜವಹುರಮಂ ತಗುಳ್ಚಿ ತಾಮೊಕ್ಕಲಿಕ್ಕುವ . . . ಬಲ್ಗೈ ಬಂಟರ (ರಾಮಾಶ್ವ. ೯೦-೨೫). ೧೧. ತೊಲಗಿಸು; ನಿವಾರಿಸಂ ; ದೂರಮಾಡು : ಸುನಯಾಂಶುಗಳಿಂ ಕುನಯಾಂಧಕಾರದೊಂದುನ್ನತಿಯಂ ತಗುಳ್ಚಿ ಖರಭಾನುವಿನಂತೆಸೆದಂ ನರೇಶ್ವರಂ (ಚಾಳಪು. ೪-೩೫). **ತಗುರ್ಚು** : ೧. × × × ಪತಿ ಕೊಯ್ದೊಡೆ ನಡು ಕೋಯಿಲೆ ಪೋದುದು ತಗುರ್ಚಿ ಪೊಡೆಯ ಘರಿಯಲ್ಲಿನಲ್ಕೆ ತೋಳುಡಿದು ಸಲಕ್ಕೆ ವಿಟ್ಟು(F)ದು (ಸೌಇಇ. IX-I, ೦೬೩-೦೪ ; 1098).

[ತಗುಳ್$_1$ + - ಚು$_1$]

**ತಗುಳ್ಚು** (ನಾ). ೧. ಕೂಡಿಕೊಂಡಿರುವುದು ; ಬೆಸುಗೆ ; ಜೋಡಣೆ ; 'ಕೊಟ : ನಿಗಳಂಬೊಲ್ ತೊಡರ್ದೊಂದು ಮೋಹನಿಗಳಂ ತಜ್ಜನ್ಮದೊಳ್ ನೋಡೆ ತೊಟ್ಟಗೆ ಮತ್ತಂ ಪೊಸತಾಗೆ ತಮ್ಮ ಮನದೊಳ್ ತಳ್ಪೊಯ್ದು ತಳ್ಪಾ ತಗುಳ್ಚುಗಳೊಳ್ ಪೊಕ್ಕುವು ವಜ್ರಲೇಪದ ತಗುಳ್ಚಂ ಪೋಲ್ವಿನಂ ವಜ್ರನಾಭಿಗತಿಪ್ರೀತಿಯನುಂಟುಮಾಡಿದರವರ್ ಜನ್ಮಾಂತರಸ್ನೇಹದಿಂ (ಆದಿಪು. ೬-೨೨); ತೊಡೆಯ ತೋಳ ತಗುಳ್ಚಮದೊರ್ಪ್ಪೆ (ಚಂದ್ರಪು. ೮-೯೫). ೨. ಸಂಬಂಧ ; ಸಂಪರ್ಕ : ತ್ರಿದಶಾನಕಲಯದಿಂ ನೀರದಪಥದೊಳ್ ನಾರದಂಗೆ ತಾಂಡವದ ತಗುಳ್ಪೊದವಿದುದು (ಶಾಂತಿಪು. ೪-೫೭) ; ಪತ್ತಿದ ಸ್ನೈಪುವೆಯ್ದಿದತಿದುಃಖಿಮುಮೆನ್ನ ಪುರಾಕೃತಾರ್ಥ ಸದ್ವ್ಯಕ್ತಿಯ ದುಶ್ಚರಿತ್ರದ ತಗುಳ್ಚೆನೊಳಾದ ಶುಭಾಶುಭಂಗಳಿಂದೆತ್ತವಿವಾದುಮೆಂದೊಸಗೆಯಂ ಕರಮುಟ್ಟಿಗಮಂ ವಿಮೋಹದಿಂ ಚಿತ್ರದೊಳಾಗಲೀಯದೆ (ಜೀವಸಂ. ೭೩-೨೬). ೩. ಆಧಾರ ; ಆಶ್ರಯ ; ಅವಲಂಬನ : ನೆಲನಂ ಪರ್ವುವ ಬಳ್ಳಿಗಂ ಚದುರನೊಳ್ ಮೈಮ್ಮೆಯೊಡಂಬಟ್ಟು ತಳ್ತಲರ್ವಾ ಕೋಮಳೆಗಂ ತಗುಳ್ಚು ಪೆಜಿದೊಂದೆಂತಕ್ಕುಂ (ಆದಿಪು.೧೨-೦೪); ನಿನ್ನ ಹೇಮಲತಾವಿತಾನೋಪಮಾನ

ತನುಲತಾಪ್ರತಾನದ ತಗುಳ್ಪಿಂಗೀತನನಲ್ಪಕಲ್ಪಪಾದಪೋಪಮಾನಾನೂ ನಾಂಗಯಷ್ಟಿಯೆ ದೊರೆ (ಶಾಂತಿಪು. ೩-೧೨೬ ವ). ೪. ಆವರಣ; ಆಚ್ಛಾದನ: ನಗರನಾರೀಕದಂಬದ ಸೋರ್ಮುಡಿಯ ಸೊಂಪು ಕಾರ್ಮುಗಿಲ ತಗುಳ್ಪುಮಂ ನೆಗಟ್ಟಿಯುಂ (ಪುಷ್ಪ. ೩-೩೪ವ). ೫. ಪ್ರದರ್ಶನ (?): ಅಮರೇಂದ್ರುನಥವಿಘಾತಾರ್ಥವೌದ್ಧತ್ಯಾವಗತವುಮಾರಭಟ್ಯಾಯತ್ತಮುಮೆನಿಸಿದ ತಾಂಡವಧ ತಗುಳ್ಪಂ ತೋಱಲುದ್ಯೋಗಂಗೆಯ್ದು (ಪಂಪಾನೇ. ೯-೬೮). [ತಗುಳ್$_1$ + – ಪು$_3$]

△ತಗುಟ್ 'ತಗುಳ್$_1$' ನೋ.

**ತಗೆ$_1$** (ಕ್ರಿ). ೧. ತಡೆ; ನಿಲ್ಲಿಸು; ಅಡ್ಡಿಪಡಿಸು; ನಿರೋಧಿಸು: "ತಗೆ-ಸ್ತಂಭನೇ (ನಿಲ್ಲಿಸು)" (ಶಮದಾ): ಅಗಲಲಸಹ್ಯಮೆಂದು ಪೆಱಗೀ ಬಟಿಸಲ್ಕೆ ಮುಂದೆ ಬಂದಳೀ ತಗೆವೊಡೆ ಚಿತ್ರದುತ್ಕಲಿಕೆಯಂ ನಭಕೀ ನೆಗೆತಂದಳ್ (ಕಾದಂಬ. ೦೫೦); ಕರ್ಮಾಸ್ರವಮಂ ಜನಿಯಿಸಲೀಸದೆ ಸದ್ಗುಣದಿನಂತವಂ ತಗೆವುದದುವೆ ಸಂವರಮಕ್ಕುಂ (ಸುಕುಮಾ. ೮-೩೨): ಅಳವಿಯೊಳ್ ಬಳವದ ಹೊಂಕಾರದೆ ಬರೆ ತಗೆವಂ[ಪಾಠಾಂ. ತೆಗೆದಂ]ಸ್ತಂಬೇರಮಕಳಭಮಂ (ಕಾವ್ಯಾವ. ೪೬೩); ಸೊಂಕೆ ತಂದುಪ್ಪರದ ಬಿಱುವಿಸಿಲ ಬೀದಿಯೊಳು ತಗೆದನವನನಿಬರಂ ನಿಷ್ಕರುಣನು (ಹಡಕಾ. ೦೦-೪೬); ನೃಪಂ ಪಾವಕನೊಲುರಿದವರ ತಗದು [ಪಾಠಾಂ. ತೆಗೆದ]ದಯದಿಂ ಮುನ್ನ ಧನಗೊಳ್ಳೆನುತ್ತ ಪೇಳೆ (ಸಿಂಗಿರಾ. ೨೨-೦೦); ಬಿಗಿವ ಬಿಡಿಸಿಕೊಳ್ವ ತಗೆವ ತವಕಿಸುವ . . . ಹೋರಾಟದ ವಿಗಡ ಮಲ್ಲರುಗಳೊಪ್ಪಿದರು (ಕಂಸವಿ. ೨೦-೯೩). ೨. ತಡೆಯಾಗು; ಅಡ್ಡಿಯಾಗು: ಎನಗೆ ನೀವು ಮಾಡುವ ರಾಜಕಾರ್ಯದ ಮಣಿಹ ನಿಮಗೆ ತಗೆಯಿತು (ಭಸವ. ೧೧). ೩. ಸೆಳೆ; ಆಕರ್ಷಿಸು: ನೋಳ್ಪರ ಕಣ್ಣ ತ[ಪಾಠಾಂ. ತೆ]ಗೆವ ಪೊಲೆಯಃ (ಶಂಕರಾಸಾಂ. ೨೧-೪೬); ಕಣ್ಬುಗುವ ಸೆಣಸುವ ಮುಳಿವ ಚಿತ್ರವ ತಗೆವ ತಾಗಿಸುವೆಳಸಿ ಕೂಡುವ . . . ವೇಶ್ಯಾವೀಧಿ ಗಳೊಳಸುರಾರಿ ನಡೆತಂದ (ಅಕ್ರೂ.ಚ. ೬-೩೦). ೪. ಸ್ತಂಭೀಭೂತನಾಗು; ದಿಗ್ಭ್ರಮೆಗೊಳ್ಳು: ಸಾಗರದತ್ತನೆಂಬನೊಳ್ ಜೂದಾಡಿ ತನ್ನುಳ್ಳುದೆಲ್ಲಮಂ ಸೋಲ್ತು ಕುಡಲಿಲ್ಲದೆ ಸಮುದ್ರದತ್ತಂ ಸಾರಮೋಯಶಕ್ಯದ್ಯೂಮಾಂತರ್ಗತನಾಗಿ ಬಿಸಿಲೊಳ್ ತಗೆದಿರ್ದುದುಮಂ (ಜಾವುಂಪು. ೯೬-೯); ತಗೆಯಲ್ ಜ್ಞವಿನಿ ತಿಷ್ಠಿಕೊಂಡು ಪರಿಯಲ್ ವೈಶೇಷಿಕಂ . . . ಅಮ್ಮಮ್ಮ ಷಟ್ತರ್ಕವೀಧಿಗಳೊಳ್ ತೂಳ್ದಿತು ಗೋಪನಂದಿ ದಿಗಿಭಪ್ರೋದ್ಭಾಸಿ ಗಂಧದ್ವಿಪಂ (ಎಕ. ೪, ಚನ್ನರಾ. ೧೪೮-೩೮; 1094).

ತಗೆತಗೆ (ದ್ವಿರುಕ್ತಿ): ತಗೆತಗೆದು ತಗುಳ್ವೆಲ್ಲರಂ ದಹಿಸತೊಡಗಿತು ದಳ್ಳುರಿ (ಕೃಮಿಥಾ. ೮-೩೯). [ದೇ.೩ ತಮಿ. ತಕ್ಕೈ]

**ತಗೆ$_2$** (ನಾ). ೧. ತಡೆ; ಅಡ್ಡಿ; ಪ್ರತಿಬಂಧಕ: ಆ ಚಂಡಾಲಕನ್ನಿಕೆ ರೋಮಂ ಬೊರೆದ ಪಂದೊವಲ ಪಂಜರದೊಳಿಕ್ಕಿ ಮಹಾಶ್ವೇತಾವಲೋಕನ[ಕೆ] ತಗೆಯಂ ಮಾಳ್ಪಂತೆ ಪಡಿಯಂ ಕೆತ್ತಗುಟಿಯನಿಕ್ಕಿ (ಕಾದಂಬ. ೬೫೨). ೨.ತಂಗುವಿಕೆ; ನಿಲ್ಲುವಿಕೆ: ಬಳ್ಳವಟಿಯೊಳ್ ಮನದ ಚಿಂತೆಯನ್ ಪಲರ್ಮೆ ಪಿನ್‌ದಿರುಗಿದಪೆನೆಂದು ಪಿನ್‌ಮುನ್ ಅಲೆದು, ಪಲ ತಗೆಗಳ್ ಆದುವಯ್ (ಅಂತಿಗೊ. ೧೧-೨೦೬). [<ತಗೆ$_1$]

**ತಗೆಪ** (ನಾ). ಅಡ್ಡಿ; ನಿರ್ಬಂಧ; ಸ್ತಂಭನ: ತೆಗಪಂ, ತಗೆಪಂ, ತೊಡೆಪಂ, ನಡೆಪಂ, ಪೊಗೆಪಂ (ಶಬ್ದಾನು. ೩೬೧ ಪ್ರಯೋ). [ತಗೆ$_1$ + – ಪ$_3$]

**ತಗೆಪು**, ತಗಪ್ಪು, ತಗವು$_2$, ತಗಹು$_2$ (ನಾ). ೧. ಅಡ್ಡಿ; ನಿರ್ಬಂಧ: ಪೆಱರಱಿದು ತನ್ನ ಸಾಲಂಗೊಟ್ಟೊಡಂ ತಾನಱಿದು ಸಂಸಾರಮೋಹಂ ಗೆಟ್ಟೊಡಂ ಆತನ ತಗೆಪುಮಾತನ ಕರ್ಮದ ಬಗ(ಗು)ವುಂ ಪತ್ತುವಿಡುಗುಂ (ಜೀವಸಂ. ೧೬೩-೨೦ವ). ತಗಪ್ಪು: ೨. ಒತ್ತಾಯ; ತಗಾದೆ: ಒರ್ಮ್ಮೆತ್ತರ್ಗೆ ಇರ್ಕುಳ ಜೋಳಮ್ ಕುಡುವುದು ತಗಪ್ಪಿಲ್ಲ ಗೋಸನೆ ಇಲ್ಲ ರಾಜಪುರುಷರ್ಗೆ ಪುಗಿಲಿಲ್ಲ (ಇಆ. ೫, ೧೬೬-೪; 7ನೆಯ ಶತ). ತಗವು$_2$: ೧. ಇತ್ತನಂದೇ ಕೃಷ್ಣ ನಿನಗಾ ಪುತ್ರನನು ನೀ ಬೇಡಿಕೊಳಲೇಕುತ್ತಮನೆ ತಗ[ಪಾಠಾಂ. ಡ]ವೇಕೆ ತನ್ನನು ನಾಚಿಸಲದೇಕೆ (ನಿಭಾಗ. ೧೦-೬೩-೨೦); ತಗವಹುದು ತನಗೆನುತ ಶೈಲನಿತಂಬಕೈತಂದು ವಿಗಡ ರಕ್ಕಸನಾ ಹರಾದ್ರಿಯು ಬಿಗಿದನೈ (ಉತ್ತರಾ. ೫-೫೧). ತಗಹು$_2$: ೧. ತಪವೆಱಬುದು ತಗಹು ನೇಮವೆಂಬುದು ಬಂಧನ (ಅವಪಂ. ೧೫೮-೬೨೩); ಧ್ಯಾನದ ಧ್ಯೇಯವಳವಟ್ಟು ಆನಂದಿವಂಗೆ ತಪದ ತಗಹ[ಪಾಠಾಂ. ಫಲವೆ]ಲ್ಲಿಯದೊ (ಚನ್ನವ. ೪. ೩೨೪-೬೮೩); ಓಲಗದಿಂ ಪಡೆದಂ ತಗಹಿಂ ಸಿಲ್ಕಿದಂ (ಶಮದ. ೧೨೫ ಪ್ರಯೋ); ಹಗಲು ಹಱಿಬಿಂತೆಯನು ಮಾಳ್ಪರೆ ತಗಹಲಾ ಬಹುವಿಧ ಗೃಹವ್ಯಾಪ್ತಿಗಳ ಬಯಲಾಯಾಸ ಕೃತ್ಯದ ಕಾಲುಂಕಣ್ಣಿಗಳ (ನಿಭಾಗ. ೨-೧-೯); ಗಗನವನೊಳಕೊಂಬ ತಿಳಿವಿದ ಇದಕಲ್ಲಿ ತಗಹೇತಕಾಯ್ತೆಂಬನಾಗ (ಭರತ. ೬೦-೩೬). ೩. ಕವಿದಿರುವಿಕೆ; ಆವರಣ; ಮುಸುಕು; ಹೊದಿಕೆ: ಮಱವೆಯ ತ[ಪಾಠಾಂ.ತೆ]ಗಹು ತೆಗೆದೆಚ್ಚಱಕೆ ತೋಱಿತು (ಪ್ರಭುಲೀ. ೯-೧೫); ಉಗಿದವಂಬರವನು ಮಯೂಖಾಳಿಗಳು ಭುವನದ ಜನದ ಕಂಗಳ ತಗಹು ತೆಗೆದುದು ಸೆಱಿಯ ಬಿಟ್ಟರು ಜಕ್ಕವಕ್ಕಿಗಳ (ಕುಮಾರವ್ಯಾ. ೧-೪೩); ಕಳೆದರೀ ಚಂಡಾಂಶುವಂಶೋಜ್ವಲರು ಬಳಿಕಾ ಹಿಮಸಮಯವನು ಪುಲಿದೊಗಲ ಹರಿಣಾಜಿನದ ಹಾಸಿಕೆಯು ಹೊದಿಕೆಯಲಿ ತಳಿರ ತಗಹಿ[ಪಾಠಾಂ. ಡಿ]ನ ಮನೆಗಳಲಿ (ತೊರರಾ. ೩-೨-೫).

[ತಗೆ$_1$ + – ಪು$_2$/ತಮಿ. ತಕ್ಕೆಪ್ಪು]

**ತಗೆಬಗೆ**, ತಗಿಬಿಗಿ, ತಗುಬಗೆ (ನಾ). ೧. ಅರೆಮನಸ್ಸು; ಅನಿಶ್ಚಿತವಾದ ಮನಸ್ಸು: ಅಕ್ಕುಮಾನುಂ ತಗೆಬಗೆಯೊಳೊಪ್ಪುವೆಂ (ಧರ್ಮಾಮೃ. ೦೫-೩): "ಪ್ರತಿಹತವಾದ – ತಡೆದ – ಮನಸ್ಸು" (ಧರ್ಮಾಮೃ. ಕೋಶ). ೨. ಅಸ್ತವ್ಯಸ್ತತೆ; ತಗೆಬಗೆಯ ನಡೆನುಡಿಯ ಮಗಳ ನಡೆವಳಿಯಂ (ಕಾಲೂರ. ೪೬-೬೫): "ಕ್ರಮತಪ್ಪುವಿಕೆ" (ಕಾಲೂರ. ಟಿಪ್ಪಣಿ). ೩. ತೊಂದರೆ; ಹಿಂಸೆ: ಹಾವಿಂಗೆ ಹಾಲನೆಱೆದೊಡೆ ತೀವಿದ ವಿಷವಪ್ಪುದಲ್ಲದಂಗಜನಂ ಸಂಭಾವಿಸಿದೊಡೆ ಕೋಮಳೆಯರ ಜೀವಕೆ ತಗೆಬಗೆಯನೀವನೆಂಬುದು ಪುಸಿಯೇ (ನಳಚಂ. ೨೧೦). ೪. ಸಂಕಟ; ತಳಮಳ: ಉಸುರ ತಗೆಬಗೆಯೊಳ ಸುರೇಂದ್ರ ಬಸವಳಿದು (ಹರಿಶ. ೧೩-೩೮). ೫. ಲಗುಬಗೆ; ಅವಸರ: ತಗೆಬಗೆಯೊಳೋಡಾಡಿ ಕೆರವೊಂದು ಸವೆಯದಿರೆ (ಕಾಲೂರ. ೭೩-೧೩೨).

**ತಗಿಬಿಗಿ**: ೪. ತನ್ನ ರಕ್ಕೆಯಂ ನೆಗಪಲೆನುತೆಂದು ಬಿಟ್ಟಿದ ದೆಸೆಗಳೆಂಟು ಮುಚ್ಚಲು ತರಣಿಗುಸುರು ತಗಿಬಿಗಿಯಾಗಲು (ಕುರಂಗ. ೪-೩೯). ೫. ಬಗೆ ಬಗೆಯಾಟದಿ ಜಗವ ನಗಿಸುತ ತಗಿಬಿಗಿ ಓಡುತ್ತ ನೆಗೆದು ಕುಪ್ಪಳಿಸಿ (ಕರಲೀ. ೩೪೩-೮). ೬. ತಬ್ಬಿಬ್ಬು; ದಿಗ್ಭ್ರಮೆ: ಮಗುವಾಗಿ ಪೂತನಿಯ. ಮೊಲೆಯನುಂಡೆ ಇಂಥ ತಗಿಬಗಿಯಾಟಗಳೆಲ್ಲಿ ಕಲಿತ್ಯೋ ರಂಗ (ಪುರಂದ. ೪-೦೫೬-೩). 'ತಗಿಬಿಗಿಗೊಳಿಸು' ಪರಾ. ತಗುಬಗೆ: ೩. ಬಸಿಗೆ ಬಿಟ್ಟಿದ ಎದೆಯು ಮರುಚಲ ಬಸಿರಿಯ ಬಯಕೆಗೆ ತಗುಬಗೆಯಾಗುತಿರೆ (ಸಖೀಗೀ. ೪-೯೨); ಅಗ್ನೀವಹನ ಅವಸ್ಥೆ ತಗುಬಗೆಯಾಯಿತು ಇವನ ಗಂಟಲೂ ಕಟ್ಟಿಕೊಂಡಿತು (ನೀರಕ. ೩೨). 'ತೆಗೆಬಗೆ' ಪರಾ.

[ತಗೆ$_1$ + ಬಗೆ$_3$]

**ತಗೆವುಗಿಲ್** (ನಾ). (?): ಸ್ವಾಂತಂ ಪಂಚೇಷುವಿಂದಂ ತಗೆವುಗಿಲ[ಪಾಠಾಂ. ತಗೆವುಲ, ಜಂತಗೆವುಗಿಲ]ವೊಲಪ್ಪಂತು ಕಂದರ್ಪನೆಚ್ಚಿಟ್ಟಿಂತುಂ ಕೈವಾರದಟ್ಟಾಸುರವೆನೆ ಮುಳಿದೆಟ್ಟಟ್ಟಿ ಕೋದಂಡದಿಂ ಪೊಯ್ದಂತಾನುಂ ನಿನ್ನ ಸೌಂದರ್ಯದಿನೆನಗೊಳಗಾದಂ ದಶಗ್ರೀವನೆಂದಾ ಕಾಂತಾರತ್ನಕ್ಕೆ ವೈದೇಹಿಗೆ ಮಕುಟ ಹಟದ್ರತ್ನದಿಂದರ್ಘ್ಯಮಿತ್ತಂ (ಶಂರಾಪಟಾ. ೯-೮೪). [?]

**ತಗ್ಗೈರ್** 'ತಗ್ಗೈರು' ನೋ.

**ತಗ್ಗೈರು**, ತಗ್ಗೈರ್ (ನಾ). (ಕೆಲಸದಿಂದ) ತೆಗೆದುಹಾಕುವುದು; ಉಚ್ಚಾಟನೆ: (ಕ). ತಗ್ಗೈರ್: (ಕೃಸಗಿ. II. ೫೬೨).

[← ಹಿಂ. ತಗೀರ್, ತಗೀರೀ; ಮರಾ. ತಗಿರೀ; ಅರ. ತಗಯ್ಯುರ್]

**ತಗೊಣೆ** (?). (?) : ಶ್ರೀ ಪರದರ ಪನ್ನೆ ಮಿರಿಯನ್ನತಗೊಣೆ ರಣದೊಳಾ ಮಣಮೊಡ್ಡುವೊನ್ ಮೂಳಿಯೆನೆಯ್ಯಳ[ವೊ]ನ್ ಪೆಣದ ಸಜ್ಜಡಿ ಕಟ್ಟುವೊನ್ (ಕಇ. I, ೫-೨ : ೪ನೆಯ ಶತ). [ ? ]

**ತಗ್ಗಚ್ಚೆ** 'ತಗಚೆ' ನೋ.

**ತಗ್ಗಾಳು** (ನಾ). ಗಿಡ್ಡ ; ಕುಳ್ಳ : (ಕ). [ ತಗ್ಗು₂ + ಆಳು₃ (<ಆಳ್₃) ]

**ತಗ್ಗಿ**, ತಂಗಿ₂, ತರ್ಗಿ (ನಾ). ಒಂದು ಬಗೆಯ ಗಿಡ; ತಕ್ಕಿಲೆ; ಅಗ್ನಿಮಂಥ; ನರುವಲು: "ಜಯಾ, ಜಯಂತೀ, ತರ್ಕಾರೀ, ನಾದೇಯೀ, ವೈಜಯಂತಿಕಾ–ಈ ೫ ತಗ್ಗಿ" (ನಾಪಿರಾ. ೧೦೮) ; "ವಹ್ನಿಮಂಥಃ–ನರುವಲು, ತಗ್ಗಿ" (ಒಷಧಿ. ೧೧೭) ; ಬಿಲ್ವಂ ತಗ್ಗಿ ಸೀವನ್ನಿ ಪಾದರಿಯಾವುಂದ ಗೆಯೆಂಬಿವಂ ತೆಗಪಿ ಸೇಕಂಗೆಯ್ಯೆ ಮಾಣ್ಗುಂ ಕಫಂ (ಕೋಕಶಾಸ. ೯-೨೨೫) ; ಚಿಲ್ಲವೇ ಹೇಳಕಟ ಎನ್ನೀ ಚಿಲ್ಲತನವೆಂದಿಂಗೆ ಮಾಣ್ಬುದು ಸೊಲ್ಲು ತಗ್ಗಿಯ ಎನ್ನಳಲು ತಗ್ಗುವುದರೇತಜಲಿ (ಬಸಪು. ೪೩-೯೦) ; ತುಲಸಿಯು ನುಗ್ಗಿಯು ತಗ್ಗಿಯು . . . ಪತ್ರಂಗಳನೊಡನೆ ತೆಗಪಿಕೊಂಡದಱಿೊಳೆ ಸೇಕಂಗೆಯ್ಯೆ (ಅಶ್ವಶಾ. ೧೦-೨೦). **ತಂಗಿ₂** : ಸಣ್ಣನಾದ ಎಲುಗಳ ಹಾಕಿ ಮಣ್ಣು ಮೆತ್ತಿ ಆಮೇಲೆ ಒಳಗಿನ ಮಣ್ಣ ತಂದು ತಂಗಿಯ ರಸ ಹೊಯ್ದು ಅರೆದು (ಅಶ್ವಟೀ. ೭೯-೫). △ **ತರ್ಗಿ** : ಉಪಶಮಿಸುಗುಮಾತಪದೊಳ್ ಕಟ್ಟಿ ಪೂಸೆ ತರ್ಗಿಯ ರಸವಂ (ಅಶ್ವಶಾ. ೧೧-೬೯).

**ತಗ್ಗಿಯ ಮಾನ್ಯ**, ತಗ್ಗಿಯ ಮಾನ್ಯ = ಒಂದು ಬಗೆಯ ಮಾನ್ಯ,– ಉಂಬಳಿ : ದೇವರ ನಿವೇದಕ್ಕೆ ತಗ್ಗಿಯ ಮಾನ್ಯದೊಳಗೆ ಕೊಟ್ಟ ಮತ್ತರು ೧೬ ತೋಟ ಮತ್ತರು ೧ (ಕೂಲ್ಲಾಶಾ. ೬-೧೨; 1127); ಸಂಕ್ರಾಂತಿಪರ್ವ ನಿಮಿತ್ತಂ ಅಗ್ರಹಾರದ ತಗ್ಗಿಯಮಾನ್ಯದೊಳು ಠಾವಸೆಟ್ಟಿಯಕೆಱೆಏರಿಯ ಕೇಶವೇಶ್ವರದೇವರ ಭೂಮಿಯಿಂಬಡಗಲು (ಕಇ. V, ೨೫-೨೮; 1189). [?]

**ತಗ್ಗಿಲು** 'ತುಗ್ಗಿಲ್' ನೋ.

**ತಗ್ಗಿಸು** 'ತಟ್ಗಿಸು' ನೋ.

**ತಗ್ಗು₁** 'ತಟ್ಗು' ನೋ.

**ತಗ್ಗು₂**, ತರ್ಗು₂, ತೆಗ್ಗು₂ (ನಾ). ೧. ಕುಣಿ; ಹಳ್ಳ; ಕೆಳಕ್ಕೆ ಕುಸಿದುದು; ಗುಂಡಿ : ನೆಲನ ತಗ್ಗಿನಲು ಪ್ಪರದ ಮೆಯ್ಯೊಲವಿನಲಿ ಪಾರಗದ ಬವರಿಯ ಸುಳುಹಿನಲಿ . . . ಖಂಡೆಯದ ಖಣಿಕಟಿಲೆಸೆಯ ಕಾದಿದರು (ಕುಮಾವ್ಯಾ. ೦೪-೬) ; ಹಿಡಿಸದೆ ತುಂಬಿದೆ ತಗ್ಗಿಲ್ಲ ತೆವರಿಲ್ಲ (ಸಿಪಿಗೀ. ೨೪-೪೧೯) ; ನದಿ ಎತ್ತರವಾದ ಕಡೆಯಿಂದ ತಗ್ಗಾಗಿರುವ ಕಡೆಯನ್ನು ಹುಡುಕಿ ಹರಿಯುತ್ತದೆಯಲ್ಲವೆ? (ವ್ಯಾಸಪಿ. ೦೦೬) ; ಆಳವಾದ ತಗ್ಗನ್ನು ತೋಡಿ ಅದರಲ್ಲಿ ಹುಗಿದು ಬಿಡುತ್ತಿದ್ದೇನೆ (ಶ್ಯಾಮುತಾ. ೫). ೨. ಸಣ್ಣದು; ಕುಳ್ಳದುದು ; ಎತ್ತರವಲ್ಲದುದು : ಗುಡ್ಡದ ಮೇಲೆ ಅವನ ತಗ್ಗಾದ ಮನೆ ಕಾಣಿಸುತ್ತಿತ್ತು (ಮುಖಾಖ್ಯಾ. ೧೫). ೩. ಕುಗ್ಗಿರುವ ಸ್ಥಿತಿ; ಕಡಿಮೆಯಾಗಿರುವಿಕೆ ; ಕುಸಿತ : ಕುರುಳು ಜುಂಜುಮುದಲೆಯ ತಗ್ಗಿನ[ಪಾಠಾಂ. ದ]ಕೊರಳ ಕೆಂಗಱಿಗಣ್ಣ ಮೋಱೆಯ ಹಱುಗಡ್ಡದ (ನಳಚ. ೪-೪). ೪. ಬೆಲೆ ಹೆಚ್ಚಾಗಿರುವಿಕೆ ; ತುಟ್ಟಿಯಾಗಿರುವಿಕೆ : (ಪ್ರಗಿಚ. IV, ೭೮೬). 'ತಗ್ಗುಕಾಲ' ಪರಾ. ೫. ವ್ಯಾಪಾರದ ವಸ್ತುಗಳ ಪೂರೈಕೆ ಕಡಿಮೆಯಾಗಿರುವುದು. ೬. ಪಾತ್ರೆ ಮೊದಲಾದವು ನೆಗ್ಗಾಗಿರುವಿಕೆ: 'ತಗ್ಗೆತ್ತು' ಪರಾ. ೭. (ಆಲಂ) ಕಷ್ಟಕಾಲ : ತೆರೆಯಲಾರೆನು ಮರೆಯಲಾರೆನು ದೈವವಿತ್ತೀ ಕಷ್ಟವ ತಗ್ಗು ಸಾರುತಲಿರಲಿ ಸ್ಮಾರಕವಾಗಿ ಹಿಗ್ಗಿನ ನಷ್ಟವ (ಹಾಡುಪಾ. ೬೯-೨). **ತರ್ಗು₂** : ೪. ಧಾರಣೆಯ ತರ್ಗಂ ಹೋರುವವನು ನಿಂದಿತನು (ವೀಶೈಪು. ೪-೧೭-೨೯). **ತೆಗ್ಗು₂** : ೧. ನಿಬ್ಬಣದ ಈ ಎತ್ತು ಹುಗ್ಗಿಯ ಮೇದಾವ ತೆಗ್ಗಿನ ನೀರ ಕುಡಿದಾವ (ಜೋಳಗೀ. ೨೭) ; ನೆಲವು ಸಮತಲವಾಗಿರಲಿಲ್ಲ, ಅಲ್ಲಲ್ಲಿ ತೆಗ್ಗುಗಳು (ಕುಂಬಿಹಿಂ. ೬೪).

**ತಗ್ಗುತಿಟ್ಟು** = ೧. ಏರು ಇಳಿ ; ಹಳ್ಳ ದಿಣ್ಣೆ ; ಕಂಳಿ ತೆವರು. ೨. ಹೆಚ್ಚು ಕಡಿಮೆ; ನ್ಯೂನಾಧಿಕತೆ : ಅಲ್ಲಿ ರೂಪಗುಣಗಳಲ್ಲಿ ಸ್ವಲ್ಪ ತಗ್ಗುತಿಟ್ಟುಗಳಿರಬಹುದು, ಆದರೆ ಸತ್ವವೊಂದೇ (ರಾಮಾನ. ೧೧೪). **ತಗ್ಗುದಿಂಟೆ** = ತಗ್ಗುತಿಟ್ಟು ೧ : ತಗ್ಗುದಿಂಟೆ ಕಲ್ಲುಮುಳ್ಳು ಕೆಸರುನೆಲ ತಾಗುತಳ್ಳ (ಬಿಟ್ಟಳ. ೧೯೩-೧೦). **ತಗ್ಗುದಿನ್ನೆ** = ತಗ್ಗುತಿಟ್ಟು ೧ : ಕಿತ್ತಳೇಹಣ್ಣು . . . ಚೆನ್ನಾಗಿ ದಿಟ್ಟಿಸಿ ನೋಡಿದರೆ ಅದರ ಮೇಲೆ ಹಲವು ಸಣ್ಣ ಸಣ್ಣ ತಗ್ಗುದಿನ್ನೆಗಳು ಕಾಣಿಸುವವು (ಮುಂಬಯಿ. ೪-೬೬) ; ತಗ್ಗುದಿನ್ನೆಗಳು . . . ಸಾಲು ಸಾಲಾಗಿ ನಿಂತಿವೆ (ಅಕ್ಷರ. ೨). **ತಗ್ಗುಬ್ಬು** = ತಗ್ಗುತಿಟ್ಟು ೧ : (ಕ). **ತೆಗ್ಗುತೆವರು** = ತಗ್ಗುತಿಟ್ಟು ೨ : ಲೇಖಕರ ಸೌಮನಸ್ಯ . . . ಕತೆಯ ಹೇರುಪೇರುಗಳಲ್ಲಿ ತೆಗ್ಗುತೆವರುಗಳಲ್ಲಿ ತನ್ನ ಸಮತೂಕವನ್ನು ರಕ್ಷಿಸಿಕೊಳ್ಳುತ್ತಿದೆ (ಅಮೋಲ. I, ಸಂಪಾದಕರ ಮಾತು). [ <ತಟ್ಗು ]

**ತಗ್ಗುಕಾಲ** (ನಾ). ವಸ್ತುಗಳ ಪೂರೈಕೆ ಕಡಿಮೆಯಾಗಿರುವ ಕಾಲ : ಈ ತಗ್ಗುಕಾಲದಲ್ಲಿಯೂ ಸೀರೆಯ ಬೆಲೆ ನೂರ ಅರವತ್ತೇ ರೂಪಾಯಿ (ಶಿವರಾ. ೨೫). [ ತಗ್ಗು₂ + ಕಾಲ ]

**ತಗ್ಗುಗನ್ನಡಿ** (ನಾ). ಒಳಮುಖವಾಗಿ ಬಾಗಿರುವ ಕನ್ನಡಿ; ಅಂತರ್ಗೋಲ ಕನ್ನಡಿ : ತಗ್ಗುಗನ್ನಡಿಯನ್ನು ನಮ್ಮ ಮುಖದ ಹತ್ತಿರ ಹಿಡಿದುಕೊಂಡರೆ ಮುಖದ ದೊಡ್ಡ ಪ್ರತಿಬಿಂಬವು ಕಾಣುವುದಲ್ಲದೆ ಈ ಪ್ರತಿಬಿಂಬವು ತಲೆಕೆಳಗಾಗಿರದೆ ನೆಟ್ಟಗಿರುವುದು (ಭೌತವಿ. ೧೬೨). 'ಉಬ್ಬುಗನ್ನಡಿ' ಪರಾ. [ ತಗ್ಗು₂ + ಕನ್ನಡಿ₁ ]

**ತಗ್ಗುಗುಟ್ಟು** (ಕ್ರಿ). ತಗ್ಗುವಂತೆ ಕುಟ್ಟು; ಕುಸಿದು ಬೀಳುವಂತೆ ಹೊಡೆ,– ಮೆಟ್ಟು : ಚೆದಱಿದ ಬಾಳವ್ಯದ್ಧರನೆ ಬಾಯ್ಬಿಡೆ ಬಾಯ್ಬಿಡೆ ಸೀಳ್ದು ಪೋಲ್ದು ಬಂದದಿರದೆ ನಿಂದ ಬೀರರನೆ ಬೊಬ್ಬಿಡೆ ಬೊಬ್ಬಿಡೆ ತಗ್ಗು[ಪಾಠಾಂ. ಗ್ಗಿ]ಗುಟ್ಟಿ ಲಾಯದ ತುರಗಂಗಳಂ ತರದೆ ಗೋಟಾಡೆ ಗೋಟಾಡೆ ಕೋಡೊಳೆತ್ತಿ . . . ಕೊಂದುದಾ ಗಜಂ (ಪಾರ್ಶ್ವಪು. ೪-೦೫೬). [ ತಗ್ಗು₁ (<ತಟ್ಗು) + ಕುಟ್ಟು₁ ]

**ತಗ್ಗುದನಿ** (ನಾ). ತಗ್ಗಿಸಿದ ದನಿ ; ಕೆಳದನಿ : ಹೆಂಗಸರು ಗಂಡಸರೆಲ್ಲ . . . ತಗ್ಗುದನಿಯಲ್ಲಿ ಮಾತನಾಡುತ್ತ ಕುಳಿತಿದ್ದರು (ಪುನರು. ೨೫೬). [ ತಗ್ಗು₁ (<ತಟ್ಗು) + ದನಿ₂ ]

**ತಗ್ಗುನೆಲ** (ನಾ). ಎತ್ತರವಲ್ಲದ ಭೂಮಿ ; ತಗ್ಗಾದ ಭೂಮಿ : ಸಮುದ್ರವು ತಗ್ಗುನೆಲದ ಮೇಲೆ ಹೆಸರೂ ಬಣ್ಣವೂ ಬೇರೆ ಬೇರೆಯಾಗಿ ಮೆರೆಯುತ್ತದೆ (ಅನಂತ. ೪೦ ಟೀಕೆ). [ ತಗ್ಗು₂ + ನೆಲ₁ ]

**ತಗ್ಗುಬೀಳು**, ತೆಗ್ಗುಬೀಳು (ಕ್ರಿ). ಹಳ್ಳಬೀಳು ; ನೆಗ್ಗಾಗು : ಮನೆಯ ಪಾತ್ರೆಗಳೆಲ್ಲ ತಗ್ಗುಬಿದ್ದಿವೆ (ರೂಢಿ). **ತೆಗ್ಗುಬೀಳು** : "ಗುಣಿಗೆಗಲ್ಲ = ತೆಗ್ಗುಬಿದ್ದಗಲ್ಲ" (ಗಂಗಾಮು. ೦೦೬). [ ತಗ್ಗು₂ + ಬೀಳು₁ (<ಬೀೞ್₁) ]

**ತಗ್ಗುಮುಗ್ಗು** (ನಾ). ೧. ಹೆಚ್ಚು ಕಡಮೆ ; ಏರುಪೇರು : "ವಿಷಮ– ಸಮವಲ್ಲದ್ದು, ತಗ್ಗು ಮುಗ್ಗು" (ಗಂಗಾಮು. ೨೯೩). ೨. (ಆಲಂ) "ಸುಖದುಃಖ" (ಜಾನಪಕೋ. ೬೩). [ತಗ್ಗು₂ + ಮುಗ್ಗು₃/ತೆಲು. ತಗ್ಗುಮೊಗ್ಗು]

**ತಗ್ಗುಶ್ರುತಿ** (ನಾ). ತಗ್ಗಿದ ಶ್ರುತಿ; ಮಂದವಾದ ಶ್ರುತಿ : ಅವಳು ಹಾಡುವುದು ಯಾವಾಗಲೂ ತಗ್ಗುಶ್ರುತಿಯಲ್ಲಿಯೇ (ರೂಢಿ). [ತಗ್ಗು₂ + ಶ್ರುತಿ]

**ತಗ್ಗುಸಿರು** (ನಾ). ತಗ್ಗಿದ ದನಿ ; ಕೆಳದನಿ : "ಈಗ ತಾವೆ ಬಂದೆ" ಎಂದು ತಗ್ಗುಸಿರಿನಿಂದ ಹೇಳಿದೆ. (ಹಂಗಾಳ್ಳ. ೦೦೬). [ ತಗ್ಗು₂ + ಉಸಿರು₂ (<ಉಸಿರ್₂) ]

**ತಗ್ಗುಸೋಪಾನ** (ನಾ). ಇಳಿಯುವ ಸೋಪಾನ; ಇಳಿ ಮೆಟ್ಟಿಲು: ತಗ್ಗುಸೋಪಾನದೊಳಿಳಿವಾಗ ಮುನಿಗಳ್ಗೆ ಬೊಗ್ಗನೆ ಕೈಲಾಗುಗೊಡುವಾ ಉಗ್ಗಡ ದೇಱುಸೋಪಾನದೊಳವರ ಕೈಯೊಗ್ಗಿ ಹಿಡಿದು ಮೇಲೆ ನೆಗೆವಾ (ಭರತ. ೩-೬೮). 'ಏಱುಸೋಪಾನ' ಪರಾ. [ ತಗ್ಗು₂ + ಸೋಪಾನ ]

**ತಗ್ಗೆತ್ತು** (ಕ್ರಿ). ಪಾತ್ರೆಗಳ ತಗ್ಗುಗಳನ್ನು ಸರಿಪಡಿಸು : ನುಗ್ಗಾದ ಪಾತ್ರೆಗಳನ್ನು ತಗ್ಗೆತ್ತದಿದ್ದರೆ ಚೆನ್ನಾಗಿ ಕಾಣುವುದಿಲ್ಲ (ಊಢಿ).

[ ತಗ್ಗು$_2$ + ಎತ್ತು$_1$ ]

**ತಗ್ಗೊತ್ತು, ತರ್ಗೊತ್ತು** (ಕ್ರಿ). ೧. ತಗ್ಗುವಂತೆ ಒತ್ತು ; ಅದುಮು ; ಹತ್ತಿಕ್ಕು ; ನಿಗ್ರಹಿಸು : ಆದರಿಸುತಮರೇಂದ್ರನೆದ್ದನು ಹೋದ ವಜ್ರವ ಕೊಂಡು ನಗುತ ವಿಷಾದವನು ತಗ್ಗೊತ್ತಿ ನುಡಿದನು ದೈತ್ಯಪತಿಯೊಡನೆ (ನಿಭಾಗ. ೬-೦೦-೦೦). **ತರ್ಗೊತ್ತು** : ೨. (ಆಲಂ) ತಗ್ಗಿಸು ; ಕಡಮೆ ಮಾಡು : ಈ ಮತ್ಸರಮಂ ತರ್ಗೊತ್ತಿ . . . ರಕ್ಷಿಪ್ಪುದೆನ್ನಂ (ಕಲ್ಯಾಕ. ೦೦).

[ ತಗ್ಗು$_1$ (<ತಗ್ಗು) + ಒತ್ತು$_1$ ]

**ತಚ್ಚಣ** 'ತತ್‍ಕ್ಷಣ$_2$' ನೋ.

**ತಜವಿಜಿ** 'ತಜವೀಜು' ನೋ.

**ತಜವೀಜಿ** 'ತಜವೀಜು' ನೋ.

**ತಜವೀಜು, ತಜವಿಜಿ, ತಜವೀಜಿ, ತಜಬಿಜಿ** (ನಾ). ೧. ಏರ್ಪಾಟು ; ವ್ಯವಸ್ಥೆ ; ಸಿದ್ಧತೆ : ನಾ ಬಂದು ಎಷ್ಟೊತ್ತಾತು . . . ಚಹಾದ್ದೇನಾದರೂ ತಜವೀಜು ಮಾಡ್ರೀಯೋ (ದೀಪಕ. I. ೦೯). 'ತಜವೀಜುದಾರಿ' ಪರಾ. ೨. ಪ್ರಯತ್ನ ; ಉದ್ಯೋಗ : (ಪ್ರುಗಿತ. IV, ೬೮೭). **ತಜವಿಜಿ** : ೨. ಕಾಯಿ ತನಗೆ ಬೇರೆ ಮದುವೆ-ಮಾಡಿಸುವ ತಜವಿಜಯಲ್ಲಿದ್ದಾಳೆಂದು . . . ಅತ್ತೆಯನ್ನು ಇನ್ನಷ್ಟು ಅಂಜಿಸಿದ್ದ (ಹೊಸಕ್ಲ. ೨೬). ೩. ವಿಚಾರಣೆ ; ಶೋಧನೆ ; ಚೌಕಸಿ (ಉಕ) : "ತಜವಿಜ-ಹುಡುಕುವುದು; ಶೋಧ" (ಜಾನಕೋ. ೬೩). **ತಜವೀಜಿ** : ೨. ಅಸ್ತ್ರವಿಲೇವಾರಿಮಾಡುವ ತಜವೀಜಿಯಲ್ಲಿದ್ದಾರೆ. (ಊಢಿ). **ತಜಬಿಜಿ** : ೧. ಅಮುದಾ ನಗರಕ್ಕೆ ಬರುವ ಮಧ್ಯಮಾರ್ಗದಲ್ಲಿ ಪಾದಶಹಾರು ತಜಬಿಜಿಮಾಡಿ (ಕೆಳದಿ. ೩೮-೦೯).

[ ←ಅರ. ಹಿಂ. ತಜವೀಜ್ ]

**ತಜವೀಜುದಾರಿ** (ನಾ). ವಿಚಾರಣೆ ; ಶೋಧನೆ : ಪಟೇಲರ ಬಹಿರಂಗ ಹಾಜರುಬಾಕಿ ಮತ್ತು ತಜವೀಜುದಾರಿ ಹೆಚ್ಚಾದವು (ಕೆಲನ. ೩೧೩).

[<ತಜವೀಜು ]

**ತಜಿನೆವಟಯಿಗೆ** (ನಾ). ಒಂದು ಬಗೆಯ ಧ್ವಜ (?) : ಬೆಳ್ಗೊಡೆಗಳುಂ ಪಾಳಿಧ್ವಜಂಗಳುಂ ತಜಿನೆವಟಯಿಗೆಗಳುಂ ಚಂದ್ರಾದಿತ್ಯರ್ಕಳುಂ ಸಿಂಹ ವ್ಯಾಘ್ರ ಮಕರ ಮತ್ಸ್ಯಗಳೆಂದಿವು ಮೊದಲಾಗೊಡೆಯ ರಾಜ್ಯಚಿಹ್ನಂಗಳ್ ಮುಂದೆ ಪರಿಯೆ (ವಡ್ಡಾರಾ. ೦೩೭-೦೯). [ ತಜಿನೆ$_1$+ ಪಟಯಿಗೆ ]

**ತಜಿವಿಜಿ** (ನಾ). ಪಿಸುದನಿ(?): ಗಜಬಜಿಸಿ ಕೆಲಕೆಲರು ಹಾಸ್ಯದ ತಜಿವಿಜಿಗಳಿಂ ಕೆಲರು ಮುಸುಕಿನ ಗುಜುಗುಜುಗಳಿಂ ಕೆಲರು ಸಂಜ್ಞೆಗಳಿಂದ ಕೆಲರಿರ್ದಲು (ಅಹಂರಾ. ೬-೪-೨೩). 'ಗಜಿಬಿಜಿ' ಪರಾ. [ ? ]

**ತಜುಬಿಜಿ** 'ತಜವೀಜು' ನೋ.

**ತಜ್ಞ** (ನಾ). ವಿಷಯವನ್ನು ಬಲ್ಲವನು ; ತಿಳಿದವನು ; ನುರಿತವನು ; ಬುದ್ಧಿವಂತ : . ಮೋಹರಾಜನ ಸಂದಾಜ್ಞೆಯನಾವ ತಜ್ಞನುಮಣಂ ಮಿಜುಳ್ಚಿ ಮೇಣ್ ಬರ್ಪನೇ (ನೇಮಿಪು. ೦-೮೯) ; ತಜ್ಞರ್ ತಲೆದೂಗೆ ದೇವಸಭೆ ಸಂತೋಷಕ್ಕೆ ಪೊಕ್ಕಿಗೆ (ಪುಷ್ಪಪು. ೦೨-೫೦). [ ಸಂ. ]

**ತಜ್ಞ** (ನಾ). = ತಜ್ಞ : ಕಲಿಸಿದ ಭಾರ್ಗವಾತ್ಮಜರ ನೋಡಿದ ತಜ್ಞರ ಮುಯ್ಯುನೆತ್ತಿಯಂ ಗೆಲೆ ಸಲೆ ರಾಮಲಕ್ಷ್ಮಣರದೇಂ ನೆಱೆ ಕಲ್ತರೊ ಕೈದುವೆಲ್ಲವಂ (ಪಂರಾಮಾ. ೩-೦೫೦) ; ತಡೆಯದೆ ವಿಚಾರಿಸೆಂಬಜ್ಞತಜ್ಞರ ಬಗೆಗೆ ಸಂಶಯಂ ಸರಿಯಾದುದು (ಹರಿಕಾ. ೦೦-೨೬). [ ಸಂ. ತಜ್ಞ ]

**ತಜ್ಞತೆ** (ನಾ). ನಿಪುಣತೆ ; ಪಾಂಡಿತ್ಯ : ಉದಾತ್ತಾಲಾಪ ಪ್ರಯೋಗಂಗಳಿಂ ತಜ್ಞತೆಯನಾ ಮಾನಧರರ ಮುಂದಿಡಿಯುಂ (ಶಾಂತಿಪು. ೪-೮೨೫).

[ ಸಂ. ತಜ್ಞತಾ ]

**ತಟ$_1$** (ನಾ). ಒಂದು ಅನುಕರಣ ಶಬ್ದ. 'ತಟಗುಟ್ಟು' ಪರಾ.

**ತಟತಟ$_1$** (ದ್ವಿರುಕ್ತಿ) : ಜನಕೆಲ್ಲ ತಟತಟ ಬೆವರು ಸುರಿವುದು (ಸಿದ್ಧಪು. ೫-೪೬) ; ವರುಷವರುಷವೂ ನಾವಿದ್ದಲ್ಲಿಯೆ ಹೊಸ ವಿದ್ಯಾರ್ಥಿಗಳಾಗುವೆವು ಪುಟಗಳ ತೆರೆಯದೆ ತಟತಟ ಓದದೆ ಬಿಸಿಲಿಗೆ ಗಾಳಿಗೆ ಮಾಗುವೆವು (ಶಿಲಾಂ. ೦೬-೦೦).

**-ತಟ$_2$** (ಪ್ರ). ಒಂದು ಭಾವನಾಮ ಪ್ರತ್ಯಯ : 'ಎಳೆತಟ' ಪರಾ.

**ತಟ$_3$** (ನಾ). ೧. ಬೆಟ್ಟದ ತಪ್ಪಲು$_1$-ಇಳುಕಲು : "ಆ ನಗಕಟಕಂ ಪ್ರಸ್ಥಂ ಸಾನು ತಟಂ ಭೃಗು ನಿತಂಬಮಂತದು ತಪ್ಪಲ್ ತಾನೆನಿಸುಗುಂ" (ವಸ್ತುಕೋ. ೨೮-೨೭) : "ಸಾನುಕಟಕಂ ಭೃಗು ಪ್ರಸ್ಥಂ ತಟಂ ನಿತಂಬಂ ಗಿರಿಯ ಹೊರೆಯಕ್ಕು" (ಮಂಗರಾ. ೪೦-೨). ೨. ದಡ ; ಅಂಚು; ತೀರ : "ತೀರಂ ರೋಧಂ ತಟಂ ಪ್ರಪಾತಂ ಕೂಲಂ" (ವಸ್ತುಕೋ. ೨೯-೧೩); "ತಟಂ ದಡಂ" (ಚತುನಿ. ೯೩) ; ಕಾಸಾರದಾ ತಟದಿ . . . ತಪದಿ ಮುನಿಗಳ ಶ್ರೇಷ್ಠ ಮಾರ್ಕಂಡ್ಯನಿರೆ (ಪ್ರಾಕರಾ. ೦೦-೦೮) ; ಬಾಲಲೀಲೆಗಳಾಡಿದ್ದು ಯಮುನಾ ತಟದಲ್ಲಿಯೇ (ನನದಿ. ೦೩). ೩. ಸ್ಥಳ; ಪ್ರದೇಶ: ವೃಂದಾವನ ತಟದೊಳ್ ಗೋವೃಂದಾವನ ವಾಂಛೆಯಿಂದೆ ಮನೆಗಟ್ಟಿದನಾ ನಂದ (ಜಗವಿ. ೩-೬೬). ೪. ಹೊಲ; ಕ್ಷೇತ್ರ. ೫. ಆಕಾಶ. ೬. ದಿಗಂತ ; ಕ್ಷಿತಿಜ.

**ತಟತಟ$_2$** (ದ್ವಿರುಕ್ತಿ) : ತಟತಟ ತಾಗಿದ ಪರಮಾನಂದದಿ ಪುಟವೇಱಿದ ತನುಕಾಂತಿಯ ಲಿಂಗದಿ (ಯೋಗಾಂವಿ. ೬-೦೩) ; ಅಟಮಟ ಕುಟಿಲೇಂದ್ರಿಯಗಳ ತಟತಟಗಳ ಜಯಿಸಿದವನೆ ಪಟುಭಟನಣುಗ (ಷಟ್ಶಿಲ. ೨-೩೮). **ತಟತಟವಾಗಿ**=ಸಂಪೂರ್ಣವಾಗಿ : ನೀವು ತಟತಟವಾಗಿ ರೋಗರ ಸೇವೆಯಲಿ ಬೆಂದೊಡಲ ಹೊಱುವಿರಿ (ಕುಮಾವಿ. ೩-೬೪). [ ಸಂ. ]

**ತಟಂಕ, ತಡಂಗ** (ನಾ). ಕೆರೆ ; ತಟಾಕ : ಗೊಪ್ಪಯ ಸುತನ್ ಪರಮೇಶ್ವರ ದೇವಶಕ್ತಿಯಾಕ್ಷತ್ರಣೆಯಾ ತಟಂಕಮಿದು (ಎಕ. XVI, ಹಾವುಗ. ೦೨-೩ : ೭೬೩). **ತಡಂಗ** : ಅದೇಂ ನೆಱೆ ಪೋಲ್ತುದೋ ಚಂಡಹುಂಡ ಸಂಸ್ಥಾನದ ಗುಂಡುದೀವಿದ ತಡಂಗಮನಂಗದ ಪಾಂಗವಂದಿರಾ (ಅದಿಪು. ೫-೯೦) : ಕೊಲ್ವೆಸಕದಿಂ ಬಿಸಿನೀರ ತಡಂಗದಂದದಿಂದಿರೆ . . . ಪಾಂಥಜನಂ ನಡೆಯುತ್ತುಂ ಮಾರ್ಗದೊಳ್ (ಜಗವಿ. ೦೭-೭).

[<ಸಂ. ತಟಾಕ ]

**ತಟಂಕಷ** (ಗುಂ). ೧. ದಡವನ್ನು ಕೊರೆಯುವ. ೨. ಸಮಗ್ರವಾದ ; ಸಂಪೂರ್ಣವಾದ : ಜನೇಂದ್ರರುಂದ್ರ ಕಥೆಯೊಳ್ ನವಭಾವರಸಂಗಳಿಂ ತಟಂಕಷಮೆನೆ ತೋಱೆ (ಪುಷ್ಪಪು. ೦-೩೯). 'ಕೂಲಂಕಷ' ಪರಾ. [ಸಂ.]

**ತಟಂಬಿಡಿ** (ಕ್ರಿ). ದಂಡೆಗುಂಟ ಸಾಗು; ತೀರವನ್ನು ಅನುಸರಿಸು: ಓರಂತು ಪೋಪ ದಿವಿಜರ ಹಾರಿ ತಟಂಬಿಡಿದು ಪೊಕ್ಕು ಪೊಱಮಡುವೊಂದಾಕಾರಂ (ಶಾಂತಿಪು. ೦೦-೨೭). [ ತಟ$_3$ + ಪಿಡಿ$_1$ ]

**ತಟಕನೆ** 'ತಟಕ್ಕನೆ' ನೋ.

**ತಟಕಾವು** (ನಾ). ಅಡ್ಡಿ ; ತಡೆ; ವಿಘ್ನ : ಹೆಂಡ ಮಾರುವುದಕ್ಕೆ 'ತಟಕಾವು' ಮಾಡುವರಂತೆ (ಜೀವಮು. ೦೩೯). 'ಅಟಕಾವು' ಪರಾ.

[ ?. / ಮರಾ. ತಟಕಾ = ತಂಟೆ, ವಿವಾದ ]

**ತಟಕಿ** (ನಾ). ತಡಿಕೆ ; ತಟ್ಟಿ : ಮರುಗ ಪಚ್ಚೆಯು ದವನದಿಂದೆ ತಟಕಿಯ ಬಿಗಿದು ಸುರುಚಿರ ಸುಲಾಮಂಚದಿಂದ ಪಂದರ ರಚಿಸಿ (ನವಮೋ. ೦೦-೬೭).

[ <ತಡಿಕೆ ]

**ತಟಕು$_1$, ತುಟುಕು$_1$, ತೊಟಕು$_1$** (ಕ್ರಿ). ಹನಿ ; ತೊಟ್ಟಿಕ್ಕು : ಒಂಟಿ ಕುಕಿಲಿದು ಕೂಗದೇಕೆ ? ಬಿರಿನನೆ ನಾರು ಬೀರದೇಂ ? ತಟಕದೇ ಎಲೆವನಿ ಇದೇನು ? (ಗೀವಿಂ. ೨೦-೪೦). **ತುಟುಕು$_1$** : ಹನಿಗಳು ಬೀಳುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು (ಮೈಲಿಮಾ. ೦೨೨). **ತೊಟಕು$_1$** : ಮೈಯಿಂದ ಬೆವರು ತೊಟಕುತ್ತಿತ್ತು (ಬಂಗಾಡ. ೨೨). 'ತೊಟ್ಟಿಕ್ಕು' ಪರಾ.

**ತಟಕು₂**, ತಟಂಕು, ತಟುಗು, ತುಟುಕು₂, ತೊಟಕು₂ (ನಾ). ೧. ಹನಿ; ತೊಟ್ಟು; ಬಿಂದು: ಗುಟುಗುಟುಗುಟು ಎನುತಾ ತೆರಳುವ ಕಾಲಕ್ಕು ಗುಟುಕು ತಟಕಿನ ಚಿಂತೆ ತೊಲಗದಯ್ಯ (ಮೋಹದೀ. ೦೩೪-೩); ಬಾಯೊಳಗಿನ ಎಂಜಲ ತಟಕು ಆ ಹೂಡೆಯ ಮೇಲೆ ಬೀಳುವವು (ಮುಂಬಯಿ. ೩-೯೨) ; ಉಪ್ಪಿನ ರಾಶಿಯ ಮೇಲೆ ಮಜ್ಜಿಗೆ ತಟಕು (ಗಾದೆ). ೨. ಕೊಂಚ ; ತುಸು ; ಸ್ವಲ್ಪ : ತಟಕೂ ಅವರಿಗೆ ಚಿಂತೆಯಿರಲಿಲ್ಲ (ಪದ್ಮಸ. ೨೪೦). **ತಟುಕು :** ೧. ಎಣ್ಣೆಯ ತಟುಕನ್ನು ಕೆಲಕಾಲದಿಂದಲೂ ನೋಡದಿದ್ದ ಅವನ ಮುಂಗುರುಳು . . . ಜಡೆಕಟ್ಟಿ ಇತ್ತು (ವಿಧಿಪ್ರ. ೩೬). ೨. ಮೊಲೆಯುಣ್ಣನವ್ವ ತಟುಕು ಮುಖ ಮೇಲಕ್ಕೆತ್ತನವ್ವ (ಜಾನಪದ. ೦-೭೪-೦) ; ತನ್ನಿಂದ ಉಪಕಾರ ತಟುಕಾದರೂ ಇಲ್ಲ ಬಿನ್ನಾಣ ಮಾತಿಗೆ ಕೊನೆಯಿಲ್ಲವು (ಜಾಕಂದ. ೦-೦೦೬-೩). **ತಟುಗು :** ೨. ಮೊದಲೇ ತಟುಗು ಸೂಕ್ಷ್ಮ ಹೇಳಿದ್ರೆ ನಾನು ಕೂಗಾಡುತಿದ್ನಾ (ಮರಳಿ. ೪೦). **ತುಟುಕು₂ :** ೧. ಅಲ್ಲಿ ಇದ್ದವರೆಲ್ಲರು ಅವಳ ಬಾಯಿಗೆ ಒಂದೊಂದು ತುಟುಕು ಹಾಲು ಎರೆದರು (ಕಗದ್ಯ. ೪೦). **ತೊಟಕು₂ :** ೧. ಗುಟುಕು ಕೊಡು ತೊಟಕು ಕೊಡು (ಸಪೀಗೀ. ೧೯-೦೭). ೨. ತುಣುಕು ರೊಟ್ಟಿಗೂ ತೊಟಕು ಮಾನಕ್ಕೂ ಪಶುಗಳಂತೆ ಸಂಕಟಪಡಬೇಕಾದ ಈ ಕಾಲದಲ್ಲಿ (ವಿಜಾಮಂ. ೭೪).

**ತೊಟಕು ತೊಟಕು** (ದ್ವಿರುಕ್ತಿ) : ಕಿಂಡಿಗಿಂಡಿಯಿಂದ ಬೆಳಕು ಜಿನುಗು ತಿತ್ತು, ತೊಟಕು ತೊಟಕು (ನಡಿಂ. ೬೭-೩). [ <ತಟಕು₁ ]

**ತಟಕುಹನಿ**, ತುಟುಕುಹನಿ, ತೊಟಕುಹನಿ (ನಾ). ೧. ತೊಟ್ಟಿಕ್ಕುವ ಹನಿ ; ಉದುರುವ ಹನಿ : ತಟಕು[ಪಾಠಾಂ. ಟುಕು]ವನಿ ನೆತ್ತರಿನ ಲಯು ಸಂಘಟದ ಚಂಚಲ ಜೀವದಿಂದವಘಟೆಯ ಖಳ ನಿಮ್ಮಿದನು ಬಳಲಿಕೆಯಿಂದ ಹಳವಿಗೆಯ (ಕುಭಾರ. ೬-೪೦-೪೫). **ತುಟುಕುಹನಿ :** ೨. (ಆಲಂ) ಅಲ್ಪ ಸ್ವಲ್ಪ ; ತೀರ ಸ್ವಲ್ಪ : ಏನಾದರೂ ಬಂದರೆ ತುಟುಕುಹನಿ ಮಾತ್ರ (ಸನ್ನಾಸಿ. ೦೨೩). **ತೊಟಕುಹನಿ :** ೧. ಒಂದು ತೊಟಕುಹನಿ ಅಗಸದಿಂದ ಸಿಡಿದು ಬೀಳಲಿಲ್ಲ (ಬರಹಾ. ೫೦). [ ತಟಕು₁ + ಹನಿ₂ ]

**ತಟಕ್ಕನೆ**, ತಟಕನೆ (ಅ). ಬೇಗನೆ ; ಕೂಡಲೆ ; ಒಮ್ಮೆಲೆ ; ಇದ್ದಕ್ಕಿದ್ದಂತೆ : ಕಳಂಕಗಳು ಇದ್ದುದಿದ್ದ ಹಾಗೆ ತಟಕ್ಕನೆ ಹುಟ್ಟುವುದಿಲ್ಲ (ಜ್ಯೋತಿವಿ. ೮೯) ; ಇಂದಿರೆಗೆ ತಟಕ್ಕನೆ ಕೋಪ ಬಂತು (ನಿರಾಶ. ೧೨೮). **ತಟಕನೆ :** ಕೋಟೆಗಂ ತಟಕನೆ ಬಿಟ್ಟರೆನ್ನ ವ್ರತವೆಲ್ಲವ ತೀರಿಸಿಕೊಂಡು ನಿಲ್ಲದೆ (ಹಂಪೆಹೋ. ೩೬). [ ತಟಕ್° + - ಅನೆ₁ ]

**ತಟಗಿ** (ನಾ). (?) : ಮೆಣಸು ಸಂಬಾರ ತಟಗಿಯಲ್ಲವಕ್ಕಿ ಸಹಿತ (ಶಾಇಎ. ೦೯೨೯, ಮಂಗಳೂರು. ೪೬೫-೩೪ ; 1312). [ ? ]

**ತಟಗುಟ್ಟು** (ಕ್ರಿ). ೧. ಸುತ್ತಾಡು; ಅಲೆದಾಡು; ತೊಳಲು; ತಾಟಾಡು: ನಾನಾ ಯೋನಿಯಲಿ ತಟಗುಟ್ಟಿ[ಪಾಠಾಂ. ಭವಪಟ್ಟು]ಬಳಲುವುದುಚಿತವೇ (ಕುಪ್ರಾಲಾ. ೪-೦೨). ೨. ತಡವರಿಸಂ (?) : ಗಾಥಾಂಧಕಾರದಲಿ ತಟಗುಟ್ಟಿ ನಿದ್ರೆಯಲ್ಲಿರುತಿರ್ಪ ನೀರೆಯಂ ಸಾರ್ದೊಡುರಿವಸಾರಿಯಂತೊಪ್ಪಿರ್ದಳು (ಪರಬು. ೨೪-೦೨). ೩. ಹನಿಹನಿಯಾಗಿ ಸುರಿ ; ತಟತಟನೆ ಸುರಿ ; ತೊಟ್ಟಿಕ್ಕು : ಥಗೆಹೊಡೆದಳ್ಳೆ ಹೊಯ್ಯುತ ಬಿಸಿಲಿಂಗೆ ನಾಲಗೆ ನೀರು ತಟಗುಟ್ಟಿ ಸುರಿಯೆ (ಮೋಹತ. ೦೯-೦೪) ; ಅವನ ಕಣ್ಣೊಳಗಿಂದ ನಡು ನಡುವೆ ನೀರು ತಟಗುಟ್ಟುತ್ತಿತ್ತು (ನಿರಾಥ. ೯೩). ೪. ಗೊಣಗು : ಅವಳು ಬೆಳಗಿನಿಂದ ತಟಗುಟ್ಟುತ್ತಲೇ ಇದ್ದಾಳೆ (ರೂಢಿ).

[ ತಟ₁ + ಕುಟ್ಟು₁ ]

**ತಟಗುಡು** (ಕ್ರಿ). ತೊಟ್ಟಿಕ್ಕು ; ಹನಿಹನಿಯಾಗಿ ಬೀಳು ; ಸ್ರವಿಸು : ಗೌಳಿಗರ ಹಿಂದೆ ಧಾವಿಸಿ ಹೋಗಿ ಬಿದ್ದುಬಿದ್ದು ಆ ತಟಗುಡುತ್ತಿರುವ ಹನಿಗಳನ್ನು . . . ನೆಕ್ಕತೊಡಗಿದರು (ಅನ್ನ. ೩೩೭).

[ ತಟ₁ + ಕುಡು₁ (<ಕೊಡು₁) ]

**ತಟಜ** (ಗುಂ). ೧. ತೀರದಲ್ಲಿ ಹುಟ್ಟಿದ,-ಬೆಳೆದ : ತೊಲಗದೆ ಗಂಧಶಾಲಿ ವನಮಂ ತಟಜೋತ್ಪಳ ಗಂಧದೊಳ್ ತಡಂಗಲಸಿದ ಕಂಪಿನಾಸೆಗೆ ಮುಸುಂಕಿದ ಭೃಂಗಕದಂಬಕಂ (ಚಂದ್ರಪ್ರ. ೦-೯೪). (ನಾ). ೨. ತೀರದಲ್ಲಿ ಹುಟ್ಟಿದ ಮರ ಮೊದಲಾದುವು : ಕಿಡವಲ್ಕೇಕೆಳಸುವ ಕೂಲಂಕಷ ಶೈವಲಿನಿಯು ಪೋಲ್ ತಿಳಿದ ಜಲಮುಮಂ ತಟಜಮುಮಂ (ಶಾಕುಂತ. ೬೯-೨). [ಸಂ.]

**ತಟತಟ₁** 'ತಟ₁' ಪರಾ.

**ತಟತಟ₂** 'ತಟ₂' ಪರಾ.

**ತಟತಟನೆ** (ಅ). ೧. ಪಟಪಟನೆ ; ದಡದಡಿಸುತ್ತ : ಹುಸಿದು ಬಳುಕುಗು ತಟತಟನೆ ಕಾಟಸ್ಸುಗಡಿಗಳಂ ಪೊಡವಿಯೊಳು ಹೊಸೆಹೊಸೆದುಕೊಳುಗಂತ ಸಿಯ ಬಸುಱಿಂ (ಬಸವು. ೧೪-೦೭); ವಾತಪಿತ್ತವೆರಡಱ ದ್ವಂದ್ವಜರೋಗದಲ್ಲಿ ಅಡಿಗಡಿಗೆ ಹಾವಿನ ಹಾಗೆ ನಡೆಯುತ್ತಾ ತಟತಟನೆ ಹಾರಿಯಾಡುತ್ತಾ ಇಹುದು (ವೈದ್ಯಸಾ. I, ೪). ೨. ಬೇಗಬೇಗನೆ ; ಶೀಘ್ರವಾಗಿ : ಸಂಹಾರ ನಿಟಲರುದ್ರನವೋಲು ಬಗೆಯದತಿ ಪಟುಬಲರ ತಟತಟನೆ ಮಾರ್ಗವಂ ನಡಸಿದಂ ಯಮುನಗರಿಗಂ ಭೀಮ ಕಲಿತನದೊಳು (ಜೈಮಿನಿ. ೫೫-೩೦).

[ <ತಟ₁ + - ಅನೆ₁ ]

**ತಟತಟಿಸು** (ಕ್ರಿ). ತಳಮಳಿಸು ; ಸಂಕಟಪಡು : ನಿಂದು ಡಿಳ್ಳಿಸಿ ತಟತಟಿಸಿ ಮನನೊಂದು ಸುಯ್ಯುತೆ . . . ಚಿಂತಿಸುತಿರ್ದನಾ ಕಂಸ (ಅಕ್ರೂರ. ೬-೦೪).

[ <ತಟ₁ + - ಇಸು₃ ]

**ತಟಪಟ₁** (ನಾ). ಪ್ರಾಣಾಪಾಯ ; ಪ್ರಾಣಬಾಧೆ : " ತಟಪಟ[ಪಾಠಾಂ. ಕಟ, ತಟ, ಮಟ]ಮೆನೆ ತಾಂ ಪ್ರಾಣಬಾಧೆ " (ಛಾಂದಸಿ. ೩೦); ತಟಕಿನಿಂದ ತಟಪಟವಾಯಿತು (ಗಾದೆ). [ ? ]

**ತಟಪಟ₂** (ಅ). ೧.=ತಟತಟನೆ : ದಿಟಭಕ್ತನಂತೆ ಭಸಿತೋದ್ಧೂಳನಂ ಮಾಡಿ ತಟಪಟೆನುತಂಗಂ ಕರನ್ಯಾಸಮಂ ಮಾಡಿ (ಸೌಂದರ. ದೇ. ೬೩-೨). ೨. ಜೋರಾಗಿ ಮಿಡಿಯುತ್ತ ; ವೇಗವಾಗಿ ಹೊಡೆದುಕೊಳ್ಳುತ್ತ : (+).

**ತಟಪುಟನೆ**, ತಟಪೊಟನೆ, ತಟಹೊಟನೆ (ಅ). ದಡದಡನೆ ; ಪಟಪಟನೆ; ಬೇಗಬೇಗ : ತಳರ್ವಜ್ಜೆ ತಟಪುಟನಿಡುವಾಗ ಎಟರೆದೆ ತಳಹೊಳಗೊಳು ತಿಹುದೊಡನೆ (ಭರತ. ೦೨-೩೮) ; ಅಂಬರ ತುಡುಕೆ ಗಳೆಯನೇಱ ನೃಪನ ಮುಖಾಂಬುಜವನೆ ನೋಡುತಿರ್ದು ಕಂಬೆಳಗೊಲೆಯಲೊಡನೆ ತಟಪುಟ ನುಬ್ಬಿ ಡೊಂಬರು ಲಾಗುದೋಱುವರು (ಭರತ. ೨೦-೩೯). **ತಟಪೊಟನೆ :** ಅಟಮಟಲಿಪಿಗಾಗಿ ಕಟಕವಱಯೆ ಬಾಯ ತಟಪೊ[ಪಾಠಾಂ. ಮು] ಟನುಱ ಹೊಯ್ದುಕೊಂಡು ತುಟಿಯ ಚುಂಬಿಸುವ ಹಲ್ಲುಗಳ ನೀಗಿದರೆಂದು ಎಟ ನಕ್ಕು ನುಡಿದನೆಲ್ಲರೊಳು (ಭರತ. ೩೬-೯೨). **ತಟಹೊಟನೆ :** ವೈಶ್ಯನಿಕು ರುಂಬಮೆಲ್ಲಂ ತತ್ಪಲಂಗಳಂ ತಿಂದೊಡಲು ತುಂಬುವನಿತಱ ೞಿಕಾತಳಕೆ ತಟಹೊಟನೆ ಬಿಳ್ದುರುಳ್ದುದಂ ಕಂಡು (ಸಮ್ಯಶಾ. ೦೦-೩೦).

[ ತಟಪುಟ° + - ಅನೆ₁ ]

**ತಟಪೊಟನೆ** 'ತಟಪುಟನೆ' ನೋ.

**ತಟಬಂದಿ** (ನಾ). ರಕ್ಷಣೆಗಾಗಿ ಕಟ್ಟಿದ ಗೋಡೆ ; ಪ್ರಾಕಾರ ; ಕೋಟೆ ; ಕಿಲ್ಲೆ : ಕೈಲಾಸಪರ್ವತದ ಸುತ್ತಲಿನ ತಟಬಂದಿಯು ಸಿಡಿಯಹತ್ತಿ, ಪರ್ವತವೆಲ್ಲ ಲಿಕಿಲಿಕಿಯಾಗಿ ಮೇಲಿನವರು ಒಟ್ಟೊಬ್ಬರೆ ಕೆಳಗುರುಳ ಹತ್ತಿದರು (ಕೃವಕು. ೩೨೬) ; ಬಂಡುಗಾರರು ವಿಹನೆಗಾರ್ ಹಿಲ್ಲದ ಮೇಲೆ ತಟಬಂದಿಯನ್ನು ಕಟ್ಟಿಕೊಂಡು ಕೆಲವು ದಿವಸಗಳವರೆಗೆ ಇದ್ದರು (ಇಂಗ್ಲಇ. ೫೦). [ ←ಮರಾ. ತಟಬಂದೀ ]

**ತಟಮಟ** (ನಾ). ಕೊರತೆ ; ಅಭಾವ ; ತೊಂದರೆ : (+). [ ? ]

**ತಟವಟ** 'ತಾಟುಪೋಟು' ನೋ.

**ತಟವಟಗಾರ** (ನಾ). ಮೋಸಗಾರ ; ಕಪಟಿ ; ವಂಚಕ : (+).

[ ತಟವಟ (<ತಾಟುಪೋಟು) + - ಗಾರ (< - ಕಾಱ) ]

**ತಟವಾಣಿ₁** 'ತಟ್ಟುವಾಣಿ' ನೋ.

**ತಟವಾಣಿ₂** (ನಾ). ಗಟ್ಟಿಗಿತ್ತಿ; ದಿಟ್ಟೆ; ತಾಟಗಿತ್ತಿ: ಯಾರಿಗೂ ಅರೆ ಹೊಟ್ಟೆಯೂ ಇಲ್ಲದ ಹಾಗೆ ಮಾಡಿದೆಯಲ್ಲೇ, ತಟವಾಣಿ, ನಿನ್ನ ಹಾಳವಿದ್ಯಕ್ಕೆ ಬೆಂಕೀ ಹಾಕ (ಮಹಮರಾ. ೮೭); ಇವಳು ಸಾಧಾರಣ ಹೆಂಗಸಾಗಿ ತೋರುವುದಿಲ್ಲ; ಬಹು ತಟವಾಣಿಯಾಗಿ ತೋರುತಾಳೆ (ಹೀಟಿಮಾ. ೩೬). 'ಗಟ್ಟಿವಾಳಿ' ಪರಾ. [ ? ]

**ತಟವುಚ್ಚು** 'ತಟ್ಟುಚರ್ಚೆ' ನೋ.

**ತಟಸ್ತ** (ನಾ). = ತಟಸ್ಥ ೩: ತಟಸ್ತರಾಗಿಯಿದ್ದವರು ಅವ್ಮಾ ಯೇನು ದುಃಖವ ಪಡುತ್ತಿದ್ದೀರಿಯೆಂದು ಕೇಳಿದರೆ (ಚಿಕ್ಕಸ್ಕ. ೭-೦೩).

[ <ಸಂ. ತಟಸ್ಥ ]

**ತಟಸ್ಥ** (ಗುಂ). ೧. ದಡದಲ್ಲಿರುವ; ಹತ್ತಿರ ನಿಂತಿರುವ. ೨. ಯಾವ ಪಕ್ಷವನ್ನೂ ವಹಿಸದ: ನಮ್ಮದು ತಟಸ್ಥ ರಾಷ್ಟ್ರ (ರೂಢಿ). (ನಾ). ೩. ಯಾವ ಪಕ್ಷಕ್ಕೂ ಸೇರದವನು: ತಟಸ್ಥನಾದವನಿಗೆ ತಂಟೆಯೇನು (ಗಾದೆ). ೪. ಔದಾಸೀನ್ಯವನ್ನು ತಾಳಿದವನು; ಆಸಕ್ತಿಯಿಲ್ಲದವನು: ಅವಳು ಸರ್ವಾಂಗಸುಂದರಿಯಾಗಿರಲಿಲ್ಲವಾಗಿ ನಾವು ತಟಸ್ಥರಾದೆವು (ಕಥಾಕುಂ. ೯೩). ೫. ಚಲನೆಯಿಲ್ಲದಿರುವಿಕೆ; ನಿಷ್ಕ್ರಿಯತೆ: ಸಮಯವು ಸ್ತಬ್ಧವಾಯಿತು. ಜಗತ್ತು ತಟಸ್ಥವಾಯಿತು (ಸೀತಾರ. ೧); ಪ್ರಗತಿ ಮಾರ್ಗದಲ್ಲಿಯೇ ಅಥವಾ ತಟಸ್ಥವಾಗಿದೆಯೇ (ಭಾರದ. ೩೯೩). [ ಸಂ. ]

**ತಟಸ್ಥತೆ** (ನಾ). ಯಾವ ಪಕ್ಷವನ್ನೂ ವಹಿಸದಿರುವುದು: ಅಮೇರಿಕಾ ದೇಶವು ಸಜ್ಜನರಂತೆ ತಟಸ್ಥತೆಯಿಂದ ಸತ್ಯಾಸತ್ಯ ಪರೀಕ್ಷೆಯನ್ನು ನಡೆಸಿರುವಹು (ವಿಜಾಮಂ. ೮).

[ ಸಂ. ತಟಸ್ಥತಾ ]

**ತಟಹಾಯ್**, ತಟಹಾಯು, ತಟಾಯು (ಕ್ರಿ). ೧. ಸೀಳಿಕೊಂಡು ಹೋಗು; ಭೇದಿಸಿಕೊಂಡು ಹೋಗು: ಸುರುತಾಳ ಖಾನರ ಗಂಡ ನೆನಿಸಿಕೊಂಬ ಬಿರಿದಿನ ಭಟನಾರಿವನು ಇರದೆಳು ಕೊಪ್ಪರಿಗೆಯ ತಟಹಾಯ್ದುಚ್ಚ ಧುರಧೀರ ಬಾದುರಖಾನ (ಕಂಠೀರಾ. ೨೦-೮೩). ತಟಹಾಯು: ೧. ಕಟಕಿಯ ಮಾತುಗಳೇಕೆ ಕನ್ನಾಚೋರರ ದಿಟ ನೋಡು ನೋಡು ನಿನ್ನೆರ್ದೆಯ ತಟಹಾಯಬೇಕೆಂದು ಮಸೆದ ಕೂರ್ಗಣೆಯನಾರ್ಭಟದಿಂದಲಿಕ್ಕಿದರ್ ಖಳರು (ಪ್ರಾಚಕ. ೩೪-೨೬); ಆ ಬಾಣ ಸುಬಾಹುವಿನ ಎದೆಯೊಡೆದು ತಟಹಾಯಲು ಅವನು ಗತಪ್ರಾಣನಾಗಿ . . . ಒರಗಿದನು (ಕಳುಮಾ. ೦೪೯-೪). ತಟಾಯು: ೧. ಅದು . . . ಸುಯೋಧನನ ದೇಹದಲ್ಲಿ ನೆಟ್ಟು . . . ಆಚೆಗೆ ತಟಾದು ಭೂಮಿಯಲ್ಲಿ ಪ್ರವೇಶಿಸಿತು (ಕೃವಾಳ. ೨೬). ೨. ದಾಟು; ಹಾಯ್ದುಹೋಗು: ಅವನ ಅಂಗಡಿ ತಟಾದು ನೇರವಾಗಿ ಪೂರ್ವದಿಕ್ಕಿನ ಕಡೆ ಹೋಯಿತೆಂದರೆ ಸ್ವಲ್ಪ ದೂರದಲ್ಲೇ ಓಣಿ ಬಾಗುತ್ತದೆ (ಸಾಹೇಬ್. ೨). [ ತಟ್ಟು + ಹಾಯ್₁ (<ಪಾಯ್) ]

**ತಟಹಾಯಿಸು**, ತಟಾಯಿಸು (ಕ್ರಿ). ೧. ದಾಟಿಸು; ದಡವನ್ನು ಮುಟ್ಟಿಸು: ಆ ಕುರಿಗಳ ದೊಡ್ಡಿಯನ್ನು ಅಟ್ಟಿಕೊಂಡು ಹೋಗಿ, ಈ ನಾಡಿನ ಎಲ್ಲೆಯಿಂದಾಚೆಗೆ ತಟಹಾಯಿಸಿಬಿಡಬೇಕೆಂದು (ಮಂತ್ರಕ. ೯೬-೨೪). ೨. ದಾಟು; ಹಾಯ್ದು ಹೋಗು: ಅಪ್ರಮೇಯನನ್ನು ಕರೆದುಕೊಂಡು ಹೋಗುತ್ತಾ ಒಂದು ಕೊಟ್ಟಡಿಯಿಂದ ಇನ್ನೊಂದು ಕೊಟ್ಟಡಿ ಹೀಗೆ ಎಂಟು ಹತ್ತು ಬಾಗಿಲನ್ನು ತಟಹಾಯಿಸಿ ಹೋದರು (ಮುಸುಗ. ೦೦೦). ತಟಾಯಿಸು: ೧. ತಟ್ಟು ಇದ್ದರೆ ತಟಾಯಿಸಿ ನಡೆದಾನು (ಗಾದೆ). ೨. ಮೂರು ಪಹರೆಗಳನ್ನು ತಟಾಯಿಸಿ ಹೋಗಿ (ಚಾಂಚ್. ೨೨೪); ಇಷ್ಟು ಏರುಪೇರುಗಳನ್ನು ತಟಾಯಿಸಿ ಇಂಥ ಸತ್ವವನ್ನುಳಿಸಿಕೊಂಡು ಬಂದಿರುವುದು ಜಗತ್ತಿನ ಇತಿಹಾಸದಲ್ಲೇ ಹೊಸದು (ಭಾರದ. ೪೦೭).

[ ತಟಹಾಯ್ + – ಇಸು₃ ]

**ತಟಹಾಯು** 'ತಟಹಾಯ್' ನೋ.

**ತಟಹೊಟ** (ನಾ). ೧. ಆತುರ; ಉದ್ವೇಗ (?) : ಪಟುವಾಗಿ ಕರ್ಮಭಟನಂ ಜಯಿಸು ಬಯಲ ತಟಹೊಟದ ಕಾಂಕ್ಷೆಯನೆ ಪರಿಹರಿಸು (ಸಮ್ಯಗೌ. ೧-೩); "ಟಕ್ಕು, ಮೋಸ" (ಸಮ್ಯಗೌ. ಟಿಪ್ಪಣಿ). ೨. ತೊಂದರೆ; ಜಂಜಡ: ಆವ ಸಂಕಟದ ತಟಹೊಟಂ ಸಮನಿಸಿಲ್ಲ (ಪರಸು. ೯೦-೫೦). ೩. ಗದ್ದಲ; ಗಲಾಟೆ (?) : ಕಟಕಗಳ ಧನಿಯವುತ್ಕಟೆಯ ಮಾಗಧರ ಉಬ್ಬಟೆಯ ಕಾವಮಾಟದರ ತಟಹೊಟ ಮಹೋನ್ನತೆಯಕಟಕಟಾ ಬ್ರಹ್ಮಾಂಡಘಟವೊಡೆಯದಿರದೆನಲ್ ಪಟುತರದೊಳೊಪ್ಪಿರ್ದುದು (ಲಕ್ಷ್ಮೀಶಾ. ೬-೧-೩೦).

[ ? ]

**ತಟಹೊಟನೆ** 'ತಟಪುಟನೆ' ನೋ.

**ತಟಾಕ** (ನಾ). ಕೆರೆ; ಕೊಳ; ಕಾಸಾರ; ಪುಷ್ಕರಿಣಿ: "ಸರಸಿ ಸರಂ ಕಾಸಾರಂ ಸರೋಜಷಂಡಂ ತಟಾಕಮಾಧಾರಂ ಪುಷ್ಕರಿಣಿಯದು" (ವಸ್ತುಕೋ. ೨೪-೦೩); "ತಟಾಕಂ ಜಲಾಧಾರಮನೆ ಕೆರೆ" (ಮಂಗರಾ. ೦೨೩-೧೪); ಗಗನತಳಮ ಪಜ್ಜಿದು ಬಿಟ್ಟುದೆನಿಪ ಬಹು ತಟಾಕದಿಂ (ಹಂಪಭಾ. ೧-೫೭ ರಗಳೆ); ಕುಟಿಗಳ್ ಬಹು ತಟಾಕವಾದುವು (ಲೋಕೋಪ. ೧-೮ ಟೀಕೆ); ಉದಕವಚಿತ ಘನತಟಾಕಕ್ಕೆ ಫಲವಿಳುಹಿದ ಮರಕ್ಕೆ ನೆಟ್ಟನೆ ಜೋಡಿಯಾದುದಾ ಪುರಜನಂ (ಹಡಕಾ. ೯-೨೪). [ ಸಂ. ]

**ತಟಾಯಿಸು** 'ತಟಹಾಯಿಸು' ನೋ.

**ತಟಾಯು** 'ತಟಹಾಯ್' ನೋ.

**ತಟಾರನೆ** (ಅ). ಕೂಡಲೇ; ಇದ್ದಕ್ಕಿದ್ದಂತೆ; ತಟ್ಟನೆ: "ತಟಾರನೆ–ತಟಕ್ಕನೆ" (ಜಾನಕೋ. ೬೪). [ತಟಾರ್₀ + – ಅನೆ₁. / ತೆಲು. ತಟಾಲುನ]

**ತಟಿ** (ನಾ). ದಡ; ತೀರ: ಸಕಲವೆಂದಡೆ ಇಷ್ಟ ನಿಷ್ಕಲವೆಂದಡೆ ಅದಱ ಅಭೀಷ್ಟ ಈ ಉಭಯದ ತಟಿಗಾಱದೆ ಹೊತ್ತು ಹೋರುವ ಮಾತಿನ ಕತ್ತಿಯ ಬಾಯಿಧಾರೆಯ ಘಾಯಕ್ಕೆ ಇನ್ನೇತಱ ಮದ್ದು (ಪ್ರಾಚೀವ. ೪೪-೦೪೧).

[ ಸಂ. ತಟೀ ]

**ತಟಿಚ್ಚಂಚಳೆ** (ನಾ). ಮಿಂಚಿನಂತೆ ಚಂಚಲಳಾದವಳು,–ಅಸ್ಥಿರಳು: ತಟಿಚ್ಚಂಚಳೆ ಲಕ್ಷ್ಮೀಕಾಂತೆ ಪೂರ್ವಸ್ಥಿತಿಯನುಟಿದತಿಸ್ಥೈರ್ಯಮಂ ತಾಳ್ದಿದಳ್ (ಮಲ್ಲಿಪು. ೩-೧೯). [ಸಂ. ತಟಿಚ್ಚಂಚಲಾ (ತಟಿತ್ + ಚಂಚಲಾ)]

**ತಟಿಚ್ಛೃಂಗಾಟ** (ನಾ). ೧. ಮಿಂಚಿನಂತೆ ತಳತಳಿಸುವ ಚೌಕ,–ಚತುಷ್ಪಥ. ೨. ಮಿಂಚಿನ ಧಾರೆಯ ಸಂಚಾರ,–ಚಲನೆ; ಮಿಂಚುಗಳಿಂದಾದ ಚತುಷ್ಪಥ. ೧, ೨: ನಾಟಕ ಪ್ರಕರದಂತೆ ವಿಪುಳ ವೀಥಿ ವಿಭಾಸಿಯುಂ ಮೇಘಪಟಳದಂತೆ ತಟಿಚ್ಛೃಂಗಾಟನಿರತಮುಂ (ಪುಷ್ಪಕು. ೯-೩೦ ವ). [ ಸಂ. (ತಟಿತ್ + ಶೃಂಗಾಟ; ತಟಿತ್ + ಶೃಂಗ + ಅಟ) ]

**ತಟಿತ್ಕಣ** (ನಾ). ಮಿಂಚಿನ ಕಣ; ವಿದ್ಯುತ್ತಿನ ಕಿಡಿ: ಕುರುಕ್ಷೇತ್ರದೆರಡು ಬಣ ವಿಜ್ಞಾನದ ತಟಿತ್ಕಣ (ಸೂರ್ಯಪಾ. ೯೦-೫). [ಸಂ. ತಟಿತ್ + ಕಣ]

**ತಟಿತ್ತು** (ನಾ). ಮಿಂಚು: ಉಚ್ಚ ತಟಿತ್ಕರವಾಳನಾಂತು ತಜ್ವಲದ ಭಟಂ ಗದಂ ಕುಡದೆ ತನ್ನಯ ಜೀವನಮಿತ್ರದಬ್ದ (ರಾಜಶೇ. ೧-೯೯); ತಟಿತ್ಕೋಟಿನಿಭಕಾಯ ಜಗನ್ನಾಥವಿಠಲಯ್ಯಾ ವಿಠಲಯ್ಯ (ಜಗದಾ. ೧೩೮); ತಟಿತ್ತು ಮೇಘಂಬೊಕ್ಕು ಮರೆಯಪ್ಪವೋಲ್ (ಶ್ರೀರಾಮಾ. ೫೯೫-೨೯೨).

[ ಸಂ. ತಟಿತ್]

**ತಟಿತ್ಪ್ರಭೆ** (ನಾ). ಮಿಂಚಿನ ಹೊಳಪು,–ಪ್ರಕಾಶ: ತಟಿತ್ಪ್ರಭಾಪರಿಪ್ಲವಮಾದ ವಾಜಿಗಳ ವಂಗಡದಿಂದಮುಮಂ (ಶಾಕುಂತ. ೧೦೦-೧೭೦).

[ ಸಂ. ತಟಿತ್ಪ್ರಭಾ (ತಟಿತ್ + ಪ್ರಭಾ) ]

**ತಟಿದ್ವಲ್ಲರಿ**(ನಾ). ಬಳ್ಳಿಮಿಂಚು: ತಟಿದ್ವಲ್ಲರಿ ಬಳಸಿದ ಶರಲ್ಲಕ್ಷ್ಮಿಯಂತೆಯುಂ ತಾರಾವಳಿ ಬಳಸಿದಿಂದುಕಳೆಯಂತೆಯುಂ . . . ಕನ್ಯಾಕಾಕದಂಬದ ಬಳಸಿಂ ಬಗೆಗೊಳಿಸಿ (ಪಂಪಾಪಮಾ. ೫-೫೭ ವ). [ ಸಂ. (ತಟಿತ್ + ವಲ್ಲರಿ) ]

**ತಟಿದ್ವಳಯ** (ನಾ). ಮಿಂಚಿನ ಆವರಣ,–ವರ್ತುಲ : ತಟಿದ್ವಳಯ ವಿಳಸಿತಂಗಳಾಗಿ ನಿಜಪ್ರಕೋಷ್ಠನಿಷ್ಠಿತಂಗಳಪ್ಪ ವೀರಾಂಗದಂಗಳೆಂಬ ಕಟಕಂಗಳುಂ (ಆದಿಪು. ೧೫–೩೭).
[ ಸಂ. ತಟಿದ್ವಲಯ (ತಟಿತ್ + ವಲಯ) ]

**ತಟಿದ್ವಿಲಾಸ, ತಟಿದ್ವಿಳಾಸ** (ನಾ). ಮಿಂಚಿನ ಲೀಲೆ,–ಹೊಳಪು : ಈ ಕೇವಲ ಸೌಂದರ್ಯದ ಅದ್ಭುತವಾದ ತಟಿದ್ವಿಲಾಸವನ್ನು ನಾವು ಲಲಿತಾಸಹಸ್ರನಾಮದಲ್ಲಿ ಗುರುತಿಸಬಹುದು (ಸೌಂದಸ.೧೧೩). **ತಟಿದ್ವಿಳಾಸಃ** ದಶನಾಂಶು ಪೊದಟ್ದು ತಟಿದ್ವಿಳಾಸಮಂ ಗೆಲೆ ನುಡಿದಂ. . . ಖೇಚರಾಧಿಪಂ (ಶಂರಾಮೂ. ೫–೦೭). [ ಸಂ. (ತಟಿತ್ + ವಿಲಾಸ) ]

**ತಟಿದ್ವಿಳಾಸ** 'ತಟಿದ್ವಿಲಾಸ' ನೋ.

**ತಟಿನಿ** (ನಾ). ಹೊಳೆ; ತೊರೆ; ನದಿ: ಉರ್ವೀಧರ ಚಕ್ರಪ್ರಾಂತದೊಳ್ನಿರ್ಝರತತಿ ತಟಿನೀವ್ಯೂಹದೊಳ್ಪೂರವಾರಂ . . . ಪರ್ವಿಸುತ್ತಿರ್ದುವೆತ್ತಂ (ಶಾದಂಆ. ೫೩೨) ; ಇವರಲ್ಲಿ ಗುಪಿತಚರಿತೆಯ ಕಂಡು ದೇವಮುನಿ ತಟಿ[ಪಾಠಾಂ· ಟ]ನಿಗಳು ತವಸು ಫಲವಾಯಿತೆಂದು (ವಿದಾಳ್ಯ. ೧೪೦).
[ ಸಂ. ತಟಿನೀ ]

**ತಟಿನೀತನೂಜ** (ನಾ). ನದೀಸುತ ; ಗಂಗೆಯ ಮಗ ; ಭೀಷ್ಮ : ವಿವರಿಸಿ ತಿಳುಹಿದನು ತಟಿನೀತನೂಜನಜಾತಶತ್ರುವಿಗೆ. (ಶಿಮ್ಮುಆ. ೬ ಸೂಚನೆ).
[ ಸಂ. (ತಟಿನೀ + ತನೂಜ) ]

**ತಟಿನ್ನಾದ** (ನಾ). ಗುಡುಗು; ಮೇಘನಾದ: ಚತುರ್ದಶ ಭುವನಾವಧಿಯೆನೆ ದುರ್ಯಶಸ್ತಟಿನ್ನಾದ[ ಪಾಠಾಂ. ಪಟಹನಾದ ]ಮಾದಮೇನೊದವಿದುದೋ (ಶಂರಾಮೂ. ೬–೯೭).
[ ಸಂ. (ತಟಿತ್ + ನಾದ) ]

**ತಟಿನ್ಮಾಲಿಕೆ, ತಟಿನ್ಮಾಳಿಕೆ** (ನಾ). ಮಿಂಚಿನ ಮಾಲೆ : ಜಲಮಯಮಿಳೆಯೆಲ್ಲಂ ಪ್ರಜ್ವಲಿತ ತಟಿನ್ಮಾಲಿಕಾಮಯಂ ದೆಸೆಯೆಲ್ಲಂ (ವೃಷವಿ. ೧೪–೨೭). **ತಟಿನ್ಮಾಳಿಕೆ** : ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲ ಕೀಲಾವಳಿಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ . . . ಬಂದುದು . . . ಅಬ್ದಕಾಲಂ (ಚಂದ್ರಪು. ೪–೨೯).
[ ಸಂ. ತಟಿನ್ಮಾಲಿಕಾ (ತಟಿತ್ + ಮಾಲಿಕಾ) ]

**ತಟಿನ್ಮಾಳಿಕೆ** 'ತಟಿನ್ಮಾಲಿಕೆ' ನೋ.

**ತಟಿಲ್** (ನಾ). ಒಂದು ಅನುಕರಣ ಶಬ್ದ : ತಟಿಲ್ಪಟಿಲ್ಪಟಿಲ್ ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತಿಱಿದತ್ತು ಯುದ್ಧದೊಳ್ (ಗಿರಿಳ. ೬–೩೮).

**ತಟಿಲ್ಲತೆ** (ನಾ). ಬಳ್ಳಿಮಿಂಚು : ತಟಿಲ್ಲತೆವೊಲಾಕಾಶಕ್ಕೆ ನೆಗೆದು ಪಾಱಿದಳಾಗಳ್ (ಶಂರಾಮೂ. ೯–೧೦) ; ಇನಿಸಿನಿಸು ಮುಗಿಲ ತುಂತುರ್ವನಿಯ ತಟಿಲ್ಲತೆಯು ವಿಮಳ ಶಶಿರವಿಗಳ್ (ಅಟ್ಟಮು. ೮–೧೨೪) ; ನಯನಾಂಶು ಗಗನಕೆ ತಟಿಲ್ಲತೆಯು ಪರ್ಬಂ ಪಡೆಯಲು (ಚಳುಕು. ೫–೦೨).
[ ಸಂ. ತಟಿಲ್ಲತಾ (ತಟಿತ್ + ಲತಾ) ]

**ತಟಿಸು₁** 'ತಟ್ಟಿಸು' ನೋ.

**ತಟಿಸು₂** (ಕ್ರಿ). ಆವರಿಸು ; ಮುಸುಂಕಂ (?) : ಛಿಟಿಲು ಛಿಟಛಿಟಿಲೆಂದು ಸಿಡಿಯುತ ಖಟಖಟಿನ ಖಟಿಲೆಂದು ಕಣಗಳು ತಟಪಟನೆ ಹಾರುತಲಿ ಕಾರ್ಬೊಗೆ ತಟಿಸುತಾಕ್ಷಣದಿ (ಹಮಚ. ೬೬). [ ? ]

**ತಟುಕು** 'ತಟಕ್ಕು₂' ನೋ.

**ತಟುಗು** 'ತಟುಕಂ₂' ನೋ.

**ತಟುವಳ್ಳುವೆರೆ** (ನಾ). ಒಂದು ಗದ್ದೆಯ ಹೆಸರು (?): ಕೊಡುಗೂನ್ನಾಡಾ ಕಲ್ಲಿವುಸೂರಾ ಚೆಡಿ ಅಕ್ಕಿ ಕರ್ಗುಲವ್ವೊಲತ್ತಟುವಳ್ಳುವೆರೆಉಂ ವಸವಿಗಾಲುಂ ಎರಡು ಕಳಿನಿಉಂ ತೋಟ್ಟಮುಂ (ಮೈಆರಿ. ೧೯೨೫, ೧೦೭–೧೮ ; ೯ನೆಯ ಶತ).
[ ? ]

**ತಟಿ₁** (ಕ್ರಿ). ತಟ್ಟು ; ಬಡಿ : ಹತವಿಧಿಯೆ ! ಕದ ತೆರೆಯಲಿಲ್ಲ ಕದ ತಟಿದಾಗ. ಕದ ತೆರೆಯೆ, ಆ ಪುರುಷ ಬರಲೊಲ್ಲ (ಉಯ್ಯಾಲೆ. ೧೦–೧೩) : ತಾಗು, ತಗಲು; ಪಳಂಚಲೆ, . . . ತಟಿ, ಬಡಿ, ಸೋಂಕು (ಶಂಸುಹು. ೮೪). 'ತಟ್ಟು₁' ಪರಾ. [ <ತಟ್ಟು₁ ]

**ತಟಿ₂** (ನಾ). ತಡಿ ; ದಡ : ತುಂಗಭದ್ರೆಯ ತಟಿಯ ಕನ್ನನ (ಕಶಿಆ. ೧೦೯–೨೪–೦೦ : ?). [ ಸಂ. ತಟಾ ]

**ತಟಿತಟಿ** (ನಾ). ವ್ಯರ್ಥ (?) : ತಟಿತಟಿಯಹ ಲಾಲಸೆಯನು ಸೂಡಿ ಪಟಪಟನೈದಿ ಪರರ ತಾ ಬೇಡಿ ದಿಟಹುಸಿಗಳ ಮನದೊಳಗೆಡೆ ಮಾಡಿ ತಟಮನುಜರು ಬಳಲ್ವರು ಸುಖಕಾಡಿ (ಅಚಧೂ. ೨೯). [ ? ]

**ತಟ್ಟ₁** (ನಾ). ತಟ್ಟನ್ನು ಧರಿಸಿದವನು ; ಜೈನಯತಿ : ತಱಟುದಲೆಗಳ ತಟ್ಟರೋ ನೊರೆ ಸುರಿವ ಬಾಯ್ಮನಿಕೆ ಹಡಿಕೆಗಳೊ . . . ತಟ್ಟುಗಳ ಹಗರಣಿಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸವು. ೫೦–೫೩).
[ ತಟ್ಟು₇ + – ಅ₇ ]

**ತಟ್ಟ₂** 'ಥಟ್ಟು' ನೋ.

**ತಟ್ಟಗ್ಗೆಱೆ** (ನಾ). ಒಂದು ಊರಿನ ಹೆಸರು : ಪೊಲಮೇರೆ ತಟ್ಟಗ್ಗೆಱೆಯ ಕಿಟ್ಟಿಕೆಱೆ ಪೋಗಿ ಅಕ್ಷರಕಲ್ಲ ಮೇಗೆ (ಎಕ. II, ೩೫-೫ ; ಸು. ೮೦೦).
[ ? + ಕೆಱೆ ]

**ತಟ್ಟಡಿ** 'ದಟ್ಟಡಿ' ನೋ.

**ತಟ್ಟನೆ** (ಅ). ಕೂಡಲೆ; ಬೇಗನೆ: ಪೂಸರಳಿಂದೆ ಶಿವನ ತಟ್ಟನೆ ತಾಗಲಿಕ್ಕುವೆನೆಂದು ಬಾಸೆಯ ಕೊಟ್ಟ ಮನ್ಮಥ (ಮೋಹತ. ೫–೭೦) ; ನಿನ್ನಯ ಕರುಣಾದೃಷ್ಟಿಯೊಳೆನ್ನನುದ್ಧರಿಸಿ ತಟ್ಟನೆ ಸಲಹು (ಕಂಠವಿ. ೪–೩೮) ; ನೈಜವಾದ ಉಪಮಾನಗಳು ; ಮನಸ್ಸಿಗೆ ತಟ್ಟನೆ ಹೊಳೆಯುವಂತೆ ಜನ ಜೀವನದಿಂದಲೇ ಆರಿಸಿದ ಆಣಿಮುತ್ತುಗಳು (ಆಗದಾ. ೬೨).
[ <ತಟಕ್ಕನೆ ]

**ತಟ್ಟಮ್ಮ** (ನಾ). ಮೈಮೇಲೆ ಸಣ್ಣಗುಳ್ಳೆಗಳೇಳುವ ಒಂದು ಬಗೆಯ ರೋಗ; ಗೋಣಿತಟ್ಟು; ದಡಾರ:"ಗೊಬ್ಬರರೋಗ" (ಜಾನಕೋ. ೬೪).
[ ತಟ್ಟು₂ + ಅಮ್ಮ₂ ]

**ತಟ್ಟಲ್** (ನಾ). ಒಂದು ಊರಿನ ಹೆಸರು (?) : ತಟ್ಟಲ ಏಚಗಾವುಣ್ಡನ ಮಾವ ಸಾನ್ತಯ್ಯ ಕೊಟಗಮ್ಮನ್ನು ತುಱುವ ಕೊಣ್ಡು ಪೋಪಾಗ (ಮೈಆರಿ. ೧೯೪೧, ೨೫–೦೨ ; 1080). [ ? ]

**ತಟ್ಟಲಿ, ತಟ್ಟಲೆ** (ನಾ). (ಉಕ) "ಹೆಣ್ಣುಮಕ್ಕಳ ಚಪ್ಪಲಿ; ಕೆರವು" (ಜಾನಕೋ. ೬೪). **ತಟ್ಟಲೆ** : ಮಗಳಿಗೆ ಒಂದು ಜೊತೆ ಹೊಸ ತಟ್ಟಲೆ ಕೊಡಿಸಿದರು (ರೂಢಿ). [ ? ]

**ತಟ್ಟಲೆ** 'ತಟ್ಟಲಿ' ನೋ.

**ತಟ್ಟಾಡು** (ಕ್ರಿ). ೧. ಒಂದಕ್ಕೊಂದು ತಗಲು ; ಘರ್ಷಣೆಯಾಗು : ಜೋಗಿ ಜೋಗಿ ತಟ್ಟಾಡಿದರೆ ಮೈಯಲ್ಲಾ ಬೂದಿ (ಗಾದೆ). ೨. ಅತ್ತಿತ್ತ ಓಲಾಡು ; ತೂರಾಡು ; ತೂಗಾಡು : ಶಕ್ತಿಯು ಬತ್ತಿ ಕರಗಳು ಜಾರಿ ತಟ್ಟಾಡುತ್ತ ಏಂಗಡಗೊಲೆದು ನಿಂದನು (ಜನಭಾ. ೨೦–೧೨) ; ನೀತಿಯ ಮೆಟ್ಟಲ ಮೇಲೆಯೇ ನಿಲ್ಲಲಾರದೆ ತಟ್ಟಾಡುವವನು ನಿಯಮಗಳನ್ನು ಹೇಗೆ ಹಿಡಿದಾನು (ನೀಂಟ್ಯ. ೭). 'ತಾಟಾಡು' ಪರಾ.
[ ತಟ್ಟು₁ + ಆಡು₁. / ತೆಲು. ತಟ್ಟಾಡು ]

**ತಟ್ಟಾಮಾಲೆ** (ನಾ). ಅಪ್ಪಾಲೆ ತಿಪ್ಪಾಲೆ; ಕಳ್ಳಿಮಳ್ಳಿ (ಉಕ).
[ ←ತಮಿ. ತಟ್ಟಾಮಾಲೈ ]

**ತಟ್ಟಾರ** (ನಾ). ಅಕ್ಕಸಾಲಿಗ: ಚೋಮತ್ತಟ್ಟಾರ ನಾಮಧೇಯೇನ ಲಿಖಿತಂ ತಾಮ್ರಸಾಧನಂ (ಮೈಆರಿ. ೧೯೪೫, ೩೦–೫೨ ; ಸು. 610).
[ <ಸಂ. ತ್ವಷ್ಟೃ ]

**ತಟ್ಟಾಟಿಸು** (ಕ್ರಿ). ಸಂಪೂರ್ಣವಾಗಿ ಒಣಗಿಸು ; ನಿರ್ದ್ರವಗೊಳಿಸು ; ಬಳಲಿಸು : ತುಟಿಗಂಟಲಿರ್ಪೊಡಿ ನೆಟಿ ಪೊತ್ತಿ ಕರಮೆ ನೀರಡಿಕೆ ಮಿಗೆ ತಟ್ಟಾಟಿಸುತ್ತ ಬರೆ ಮರಗಿಟ್ಟನಂತೆ ಪಸಿವೊಳಗೊಳಗೆ ಸುಡುತ್ತ ಬರೆ (ಸಾನಂಚ. ೪-೧೬೦). [ ತಟ್ಟಾಟು + -ಇಸು₃ ]

**ತಟ್ಟಾಟು** (ಕ್ರಿ). ೧. ಒಣಗಿ ತಾರಲಾಗು ; ಸಂಪೂರ್ಣವಾಗಿ ನೀರು ಇಂಗಿಹೋಗು : ನಿರ್ದ್ರವಮಪ್ಪುದೇ ಕಾರಣವಾಗಿ ಕಡುವಿಸಿಲಿಂಗೆ ತಟ್ಟಾಟಿದ ಚರ್ಮದಿಂ ವೃಷ್ಟದ್ವಾರಂ ಮುಚ್ಚಲ್ (ಪಂಚತಂ. ೦೯-೯) ; ಮರ ತಟ್ಟಾಟಬೇಡೆಂದು ಇರಿಸಿ ಬಂದೆ (ಸರ್ವಜ. ೦೦೫-೫೩೩). ೨. (ಅಲಂ) ಇಲ್ಲವಾಗು; ಅದೃಶ್ಯವಾಗು: ಮೆಯ್ಯುಗ್ಗುಷ್ಟ ಏಟಿಸಿ ಬೇಟ ಬೇರೂಟಿಸಿ ಲಜ್ಜೆ ತಟ್ಟಾಟಿತವಳಿಗೆರ್ದೆಯೊಳಗೆ (ಶಂರಾಸಾಂ. ೩೨-೯). 'ತಾಟು₁' ಪರಾ. [ ತಟ್ಟು₀ + ಆಟು₁ ]

**ತಟ್ಟಿ₁, ಚಟ್ಟಿ₂, ಚಟ್ಟೆ₂** (ನಾ). ೧. ಬಿದಿರಿನ ತಡಿಕೆ ; ಬಿದಿರನ್ನು ಹೆಣೆದು ಮಾಡಿದ ಗೋಡೆ : ರಾಜಿಪುವು ಬಳ್ಳಿಗವುಂಗಿನ ತಟ್ಟಿ ಬಳ್ಳಿಮಾವಿನ ಮನೆ ಬಳ್ಳಿಮಲ್ಲಿಗೆಯ ಮಂಡವಮೆಂಬಿನಿತುಂ ಬಸಂತದೊಳ್ (ಶಾಂತಿಪು. ೬-೦೩೦); ವರವೇಲಿ ತಟ್ಟಿ ತಳೆ ಗೋಪುರವಾಳ್ವೆಟಿ ಪಡಿ ತವಂಗ ವಂಕದ ಕಳನೋವರಿ ಸೀಯಬಾರವಂತಃಪುರಮುಯ್ಯಾಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩) ; ನಮ್ಮನೆಯ ಮುಂಭಾಗಕ್ಕೆ ಕಾಂಪೋಂಡು ಹಾಕಿಸಬೇಕೆಂತ ತಟ್ಟಿಗಳನ್ನು ಕೊಂಡಿಟ್ಟಿದ್ದೆ (ಮುಳ್ಳಿಹಾ. ೦೬) : ಗಳಗಳು ನಿಂತವು; ತಟ್ಟಿಯೂ ತಯಾರಾಯಿತು; ಕೆಮ್ಮಣ್ಣು ಸೆಗಣಿಗಳನ್ನು ಕಲೆಯಿಸಿ ದಂಟಿನ ತಟ್ಟಿಗಳಿಗೆ . . . ತುಂಬ ಮೆತ್ತಿಸಿ ಭದ್ರಮಾಡಿಸಿದರು (ಗಂಗಾಸಾ. ೦೫೨). ೨. ಬಿದಿರಿನ ಚೌಕಟ್ಟು ; ಚಪ್ಪರ : ಮಿಂಚಿನ ತಟ್ಟಿಯಂ ಬಳಸಿದಂತಿರೆ ಕಣ್ಗಳ ಮಿಂಚು ಮೇಗೆ ಪೂಗೊಂಚಲ ಪಂದರಂ ಪಡೆಯೆ (ಅರ್ಧನೇ. ೨-೯೫); ನಡು ಜಗುಪ್ಪಾರಸದ ನಟ್ಟನಡುವೆಂದಿರದೆ ಎಡಬಲದ ಪ[ಪಾಠಾಂ.ಬ] ರಿಗಳಲ್ಲಿನ ತಟ್ಟಿಯಂ[ಪಾಠಾಂ. ಕಟ್ಟಡೆ]ದಿರದೆ (ಬಿಂಡೂರೀ. ಹ. ೫೦೩-೧೦). ೩. ಚಾಪೆ ; ಬಿದಿರಿನ ಚಾಪೆ : ಗುಣನಾತೀತ ವಿಮುಕ್ತ ಮಾರ್ಗಣಗಣಂ ಗೀರ್ವಾಣಮಾರ್ಗಾಂತದೊಳ್ ಪೆಣೆದರ್ ತಟ್ಟಿಯನೆಂಬಿನಂ ದಲೆನೆ ಪರ್ವಿರ್ಪನ್ನಮೆಚ್ಚೆಚ್ಚು . . . ಕಾದುತ್ತಿರಲ್ಕೆ (ನೇಮಿಪು. ೦೨-೩೪೮) ; ಮುಚಿದ ಗುಡಿಲೊಳಗೆ ಹಟಿದ ತಟ್ಟಿಯ ಮೇಲೆ ಹಟಿದ ದೊಂತೆಯ ಹಾಸಿಕೊಂಡು ಕೆಡೆದಿಹೆಂಗೆ (ಸರ್ವಜ. ೦೬೩-೬೬೬); ಹಿರಿಯ ಗಗನವ ಒಡಿದು ತೆರೆ ತಟ್ಟಿಯಂತೆ ಸುತ್ತಿರಿಸಲಳವಡೆ ಮುಕ್ತಿ ನರರ್ಗಪ್ಪುದು (ಸಾನಂಚ. ೨-೨೦೫) ; ಎನಗೊಂದು ಪಟಿದ ತಟ್ಟಿಯಂ ಮಠದ ಗೊಂಟನೊಳ್ ಪಾಸಿ ಕೊಟ್ಟೊಡೆ (ದ ಕ ಕು. ೦೦-೩೩೭) : ಒದೆದು ಸತ್ವದೊಳೌಂಕೆ ತಟ್ಟಿಯ ಮುದುಡುವಂದದಿ ಸುತ್ತಿ ಧರಣಿಯ (ಪ್ರಭ್ವಾಟ. ೩-೦೦). ೪. ತಡಿಕೆಯ ಬಾಗಿಲು,-ಕದ : ಸದನ ತಾನಿರಲಡವಿ ಯಾತಕೆ ಕದವಿರಲು ತಟ್ಟಿಗಳ ದ್ಯಾತಕೆ (ಶನಕಾಂ. ೨೩) ; ತಟ್ಟಿ ಮುಚ್ಚು (ರೂಢಿ). ೫. ಬಿದಿರಿನಿಂದ ಮಾಡಿದ ಬುಟ್ಟಿ ; ಮಂಕರಿ. ೬. ಜೇನುಗೂಡು : ನಾಲ್ಕೆಂಟು ತಟ್ಟಿಗಳು, ಆನೆಯ ಕಿವಿಗಳಂತೆ ಬಂಡೆಯ ಸೆರಗಿಗೆ ಅಲಂಕಾರವಾಗಿ ತೂಗಿ ಕೊಂಡಿದ್ದುವು (ಕುಡಿಕಟೂ. ೨೯). ೭. ಗುರಾಣಿ; ಢಾಲು : ಕರಮಸೆದತ್ತು ಕಲಾಭೃದ್ಬಿಂಬಂ ಬಿರಿಮುಗುಳ್ಗಣೆಯನ ಬಿಂಗದ ಬಿಚ್ಚಣದರಲಂಬನ ಮೂಲದ ತಟ್ಟಿಯ ಕಾವನ ಕೈಗನ್ನಡಿಯ . . . ವಿಲಾಸಮನನುಕರಿಸಿ (ಜಯುಕಾ. ೦೪-೭). **ಚಟ್ಟಿ₂** : ೮. ಯಾತ್ರಿಕರಿಗಾಗಿ ನಿರ್ಮಿಸಿದ ಹುಲ್ಲಿನ ಚಪ್ಪರ : ಒಂದು ರಾತ್ರಿ ಆತ ಒಂಟಿಯಾಗಿ ಚಟ್ಟಿಯೊಂದರಲ್ಲಿ ಮಲಗಿದ್ದ (ಸನ್ಯಾಸಿ. ೪೪). **ಚಟ್ಟೆ₂** : ೫. ಚಟ್ಟೆಯಾದರೂ ಬುಟ್ಟಿಯಷ್ಟು ದೊಡ್ಡದಿದೆ ಯಲ್ಲ (ರೂಢಿ).

**ತಟ್ಟಿಯ ಬಿಲ್ಲು** = ಒಂದು ವಿಧವಾದ ಬಿಲ್ಲು : ಅಲ್ಲಿಯಾತನ ಕೂಡೆ ತಟ್ಟಿಯ ಬಿಲ್ಲುಗಳನಾ ಪೊಂಗುವಿಲುಗಳ ಬಲ್ಲಿತೆನಿಪಾ ನಾಳಿವಿಲ್ಲುಗಳ . . . ಒಡಿದಾ ನಿಶಾಟರು ನೆರೆದುದವನೊಡನೆ (ಸಾಳ್ವಭಾ. ೫-೦೩). **ತಟ್ಟಿ ಹಾರಿಸು** = ಲಘುವಾಗಿ ಎಣಿಸು : ಸಲಹೆ ಕೊಟ್ಟ ಹಿತೈಷಿಗಳ ಮಾತನ್ನು ಅವನು ಮುಗುಳುನಕ್ಕು ತಟ್ಟಿ ಹಾರಿಸಿದ್ದನು (ಮಲೆಮ. ೦೦೦).

[ ದೇ.₁ ತಮಿ. ತಟ್ಟಿ, ತಟ್ಟೆಯ; ಮಲ. ತುಳು. ತಟ್ಟಿ; ಕುಇ. ತಟ. /ಪ್ರಾ. ತಟ್ಟೀ. / ಹಿಂ. ಮರಾ. ಚಟ್ಟೀ ]

**ತಟ್ಟಿ₂** (ನಾ). ಒಂದು ಬಗೆಯ ಸಸ್ಯ (?) : "ಕಾಷ್ಠವಲ್ಲಿಕಾ – ತಟ್ಟಿ" (ಓಷಧಿ. ೩೨). [ ? ]

**ತಟ್ಟಿಕೆ** (ನಾ). ತಾಗುವಿಕೆ ; ಸೋಂಕುವಿಕೆ ; ಸ್ಪರ್ಶ : ಪುಟ್ಟುಗೆ ಸದ್ವಂಶದ ಸವಿದಟ್ಟಿಕೆ ಸಲೆ ಸರಸಮನಿಸೆ . . . ಊದುವಿರಿನ್ನುಂ (ಜಳವಿ. ೬-೦೨೮). [ ತಟ್ಟು₁ + – ಇಕೆ ]

**ತಟ್ಟಿಗಟ್ಟು** (ಕ್ರಿ). ತಡಿಕೆ ಕಟ್ಟು (?) : ನೆರೆದು ಪೊತ್ತ ನೃಪಾಳಜಾಳ ಕಿರೀಟಕೋಟಿ ಮಣಿಪ್ರಭಾ ಪರಿಕರಂ ಧೃತವನೌಕ್ತಿಕಾತಪವಾರಣಕ್ಕೆ ಕದಂಬ ರಘುಲ್ಲರಿಗಳಪ್ಪಿನಮುಂದುಸಾರದದಂತೆ ತಾಳ್ದಿದುದಿತ್ತಲುಂ ಸುರಶರಾಸನ ದಿಂದಮೆಣ್ದೆಸೆ ತಟ್ಟಿಗಟ್ಟಿದ ಭಂಗಿಯಂ (ಅನಂಪು. ೯-೬೨) : ಶರದೊಳಿ ತಟ್ಟಿಗಟ್ಟಿದುದು ದಿಕ್ತಟವಂಬಿನ ಹಂದರಿಕ್ಕಿದಂಬರತಳವೆಂಬಿನಂ (ಅನಂಪು. ೦೪-೬). [ ತಟ್ಟಿ₁ + ಕಟ್ಟು₁ ]

**ತಟ್ಟಿಗೆ** (ನಾ). ತಡಿಕೆ (?) : ಚೌರಾಸಿ ಲಕ್ಷ ಜೀವಿಗಳೆಲ್ಲ ತಿರುಗುವ ರಾಟಲಗಂಟೆಂಬ ಕರರಾಟಳವ ಮಾಡಿ ಭಕ್ತೆಂಬ ಕದರಿಗೆ ಸರವುಕ್ತಿ ಬಿಲ್ಲ ಪೂಡಿದನು ಅಷ್ಟತನುಗಳ ಸೆಡೆಯ ತಟ್ಟಿಗೆಯ ಮಾಡಿ ಅಷ್ಟಂತರಂಗವ್ಪ ಮಂದವಾ ಜೇಷ್ಟ ಕುಂಟಿಯ ಮೊಳಗೆಗಳ ಮಾಡಿ ದಾರವ ಘಟ್ಟೊಸ್ಪ ಕಟ್ಟಿಗೆಸಿದದ (ದೇವಾಂಪು. ೫-೬೮). [ ? ]

**ತಟ್ಟಿಗೋಡೆ** (ನಾ). ಬಿದಿರು ಮೊದಲಾದುವನ್ನು ಹೆಣೆದು ಮಾಡಿದ ಗೋಡೆ; ತಡಿಕೆಗೋಡೆ: ಅಡಕೆದಬ್ಬೆಯ ತಟ್ಟಿಗೋಡೆಗಳನ್ನು ಹಾಕಿದ್ದರು (ಮಲೆಮ. ೦೦) ; ತಿಮ್ಮಪ್ಪಹೆಗ್ಗಡೆ ತಟ್ಟಿಗೋಡೆಯ ಒಳಗೆ ಹೋಗಿ (ಮಲೆಮ. ೬೦೪). [ ತಟ್ಟಿ₁ + ಗೋಡೆ ]

**ತಟ್ಟಿಡು** (ಕ್ರಿ). "ಪರಿತ್ಯಾಗಿಮಾಡು" (ಸಾನಂಚ. ಕೋಶ) : ಓಡಾಂತು ಕಯ್ಯಲ್ಲಿ ಮೋಚಾಂತು ತಲೆಯಲ್ಲಿ ಮಾನವಂ ತಟ್ಟಿಟ್ಟು ಕೀರ್ದ ತಟ್ಟುಟ್ಟಂಗೆ (ಸಾನಂಚ. ೬-೪೮). [ ತಟ್ಟು₀ + ಇಡು₁ ]

**ತಟ್ಟಿಬಲೆ** 'ತಟ್ಟಿವಲೆ' ನೋ.

**ತಟ್ಟಿಮೆಡಟು** (ಕ್ರಿ). ತಟ್ಟಿಯನ್ನು ಹೆಣೆ; ತಡಿಕೆ ಕಟ್ಟು: "ತಟ್ಟಿಮೆಡಟಿದಂ –ತಟ್ಟಿವೆಣೆದಂ" (ಕಮುದ. ಪರಿ. ೨) : ಮಿಂಚಂ ತ[ಪಾಠಾಂ. ಕೆ]ಟ್ಟಿ ಮೆಡಟಿ ದಂತೆ ಸುತ್ತಿಟಿದ ಕಾಲ್ಗಾಪಿನ ಕಡಿತಲೆಯ ಬಳಸಿದಗಣ್ಯ ಪಣ್ಯಾಂಗನಾ ಜನದ ನಡುವೆ ಮಣಿಮಯ ಪೀಠಂಗಳನೇಟಿ (ಪಂಪಭಾ. ೩-೫೫ ವ) : ನೂರುಯೋಜನದಳವಿಯ ಖಾಂಡವವನಮೆಲ್ಲಮಂ ತಟ್ಟಿಮೆಡಟಿ ಮಶಕಮಾತ್ರಮಪ್ಪೊಡಂ ಮಿಸುಕಲ್ ಛಿದ್ರಮಿಲ್ಲದಂತಾಗೆ ಶರಪಂಜರ ದೊಳ್ ಮುಚ್ಚಿ ಮುಸುಕಿದಾಗಳ್ (ಪಂಪಭಾ. ೫-೯೬ ವ). [ ತಟ್ಟಿ₁ + ಮೆಡಟು ]

**ತಟ್ಟಿಯು, ತಟ್ಟೆಯು** (ನಾ). ತಡ ; ಸಾವಕಾಶ ; ನಿಧಾನ: ತಡೆಯದೀ ಕಾರ್ಯವನು ನೀ ಕೈಯೊಡನೆ ಮಾಡುವುದುಚಿತವಿದನೀನೊಡಬಡದೆ ತಟ್ಟಿಯುವ ಮಾಡಲುಯೆಮ್ಮ ವಂಶಾಳಿ ಕೆಡುವುದು (ಜೀವಂಚ. ೪-೬೯) ; ಗಾಳಿಯಳ್ಳೆಯನಿಟಿಯಲಗ್ನಿಜ್ವಾಲೆಯಲಿ ತಟ್ಟಿಯುವೆ (ಕುಪ್ರಾಸ. ೦೪-೬೦). **ತಟ್ಟೆಯು** : ಹೋಗು ಫಲುಗುಣ ಕಂಸಮಥನನ ಬೇಗ ಬಿಜ ಯಂಗೈಸಿ ತಾ . . . ತಟ್ಟೆಯುವಾಗದೀಕ್ಷಣವೆನಲು (ಕುಪ್ರಾಸ. ೬-೦೮) ; ಗಮನ ತಟ್ಟೆಯುವಾಯ್ತು ವೇಗಭ್ರಮಣ ಜಡವಾಯ್ತು (ಕುಪ್ರಾದ್ರೋ. ೦೦-೨೫). [ ?. / ತಮಿ. ತಟ್ಟೆಯು = ಗುರಾಣಿ, ಢಾಲು ]

**ತಟ್ಟೆರಾಯ** (ನಾ). (ಕರಾ) ಬಿದಿರು, ಹುಲ್ಲು ಮೊದಲಾದುವುಗಳಿಂದ ಮಾಡಿದ ಬೆದರುಬೊಂಬೆ; ಬೆಚ್ಚು : ಅವುಗಳನ್ನು ಹೆದರಿಸಲು ಬೈಹುಲ್ಲಿನ ತಟ್ಟೇರಾಯನನ್ನು ತಯಾರಿಸಿದರು. ಮನುಷ್ಯಾಕೃತಿಯ ಈ ತಟ್ಟೇರಾಯ ನಿಗೆ ಹರಕು ಅಂಗಿ ತೊಡಿಸಿ . . . ಮಡಕೆಯ ಕುಲಾಯಿಯನ್ನಿಟ್ಟರು ತಲೆಗೆ (ಚಾರಿ. ೧೦೭). [ ತಟ್ಟೆ₁ + ರಾಯ ]

**ತಟ್ಟೆವಲೆ, ತಟ್ಟೆಬಲೆ** (ನಾ). ಒಂದು ಬಗೆಯ ಬಲೆ : ತಡಿಕೆವಲೆ ತಟ್ಟೆವಲೆ ಹಾಸುವಲೆ ಬೀಸುವಲೆ ಕೊಡತಿವಲೆ ಕೋಲುವಲೆ (ಹಜಕಾ. ೫-೮) : ಕಟ್ಟಿದನು ಕಣಿಗಳಲಿ ಸುತ್ತಲು ತಟ್ಟೆವಲೆಗಳ ಸೋಹಿನಲಿ (ಕುಮಾವ್ಯಾ. ೫-೬೪) : ಹಾಸುವಲೆ ಬೀಸುವಲೆಯು ತಟ್ಟೆವಲೆ ತಿಣ್ಣವಲೆ . . . ಪೇರ್ವಲೆಯ ಪೊಚ್ಚಿಗಳು ವಿಂಧ್ಯಕನ ಕೂಡೆ (ಶಾಳ್ವಭಾ. ೫-೧೮) : ತಡಿಕೆವಲೆ ತಟ್ಟೆವಲೆ ಸಾಲುವಲೆ ಕೋಲುವಲೆ . . . ಮಲೆವಲೆಗಳಿರ್ದುವಾ ಶಬರರಲ್ಲಿ (ಸಿದ್ಧೇಪು. ೮-೩). **ತಟ್ಟೆಬಲೆ** : ಪಾರವಲೆ ಗುಂಡಿವಲೆ ಮತ್ಸ್ಯಾನೆಯ ಬಲೆ ತಟ್ಟೆಬಲೆಗಳೆಂದಿವನು (ಪುರಾಣಸ. ೯-೩೭). [ ತಟ್ಟೆ₁ + ಬಲೆ₁ ]

**ತಟ್ಟೆವೆಣೆ** (ಕ್ರಿ).=ತಟ್ಟೆಮೆಡಲು : " ತಟ್ಟೆಮೆಡಚಿದಂ – ತಟ್ಟೆವೆಣೆದಂ " (ಶಮದ: ಪರಿ. ೨). [ ತಟ್ಟೆ₁ + ಪೆಣೆ₁ ]

**ತಟ್ಟಿಸು, ತಟಿಸು₁** (ಕ್ರಿ). ೧. ತಗುಲಿಸು ; ತಾಕಿಸು ; ಸೋಕಿಸು ; ಅನುಭವಕ್ಕೆ ತರು : ಕಟ್ಟಿದಾಗಳೆ ಕರ್ಮಗಳು ಫಲಗೊಡವವು ಕಟ್ಟಿರ್ದು ಕಾಲದ ಮೇಲೆ ಬಿಟ್ಟು ಪೋಪಾಗ ಜೀವಗೆ ಸುಖದುಃಖವ ತಟ್ಟಿಸಿ ತಾವು ಜಾಱುವುವು (ಭರತ. ೬೮-೫೫). **ತಟಿಸು₁** : ೧. ತೋಟದಲಿಹ ಹೂವಿಗೆಲ್ಲ ತಟಿಸೆ ನಾವು ನಿನ್ನ ಗಲ್ಲ . . . ನಕ್ಕೆ ನೀನು (ಚಂತಸ. ೨೪-೧೧). ೨. ಅಡ್ಡಿಪಡಿಸು; ತಡೆದು ನಿಲ್ಲಿಸು ; ತಡೆಹಿಡಿ : ಅಲ್ಲಿಯ ಸರ್ಪ ಫೂತ್ಕಾರ ಗಳಿಂದೆದ್ದ ವಿಷಧೂಮವು ಜಗತ್ತಿನ ಮೂಗನ್ನೇ ಮುಸುಕುತ್ತಿದೆ. ಯಾವ ಶಿವನು ಇದನ್ನು ತಟಿಸುವನೊ ಯಾರು ಬಲ್ಲರು (ಸಾಹಿಸಂ. ೨೦೦).

**ತಟ್ಟಿಸಿ ಮಾತಾಡು**=೧. ತಡವರಿಸಿ ಮಾತನ್ನಾಡು. ೨. (ಮಾತನಾಡು ವಾಗ; ಓದುವಾಗ) ತಡವರಿಸು ; ಉಗ್ಗು ; ಗಂಕ್ಕು (ಉಕ) : " ಉಗ್ಗು–ತಟ್ಟಿಸಿ ಮಾತಾಡು " (ಗಂಗಾಕು. ೩೮).

[ ತಟ್ಟು₁ + – ಇಸು₃ ]

**ತಟ್ಟೆಹುಚ್ಚ** (ನಾ). ವಿವೇಚನೆ ಇಲ್ಲದವನು ; ಮೂರ್ಖ : ಅವನೇನು ತಟ್ಟೆಹುಚ್ಚನಲ್ಲ (ಅಹಾಭೂ. ೫೯).

[ ತಟ್ಟೆ₀ (P ← ತಮಿ. ತಟ್ಟೆ₁) + ಹುಚ್ಚ (<ಪಿಚ್ಚ₁) ]

**ತಟ್ಟೆಱ** (ಕ್ರಿ). ಅಪ್ಪಳಿಸಿ ಹೊಡೆ : ಅಂತೆರಡುಂ ಬಲದ ಕರಿಘಟೆಗಳೊಂದೊಂದಱೊಳ್ ತಾಗಿ ತಟ್ಟೆಱಿಯೆ ಬಿಸುನೆತ್ತ [ರ] ರ್ಬಿಗಳುರ್ವಿ ಪಾಯೆ (ಪಂಪಭಾ. ೧೧-೯೬ವ). [ ತಟ್ಟು₁ + ಇಱ₁ ]

**ತಟ್ಟು₁** (ಕ್ರಿ). ೧. ಬಡಿ ; ಕುಟ್ಟು ; ಹೊಡೆ ; ಬಾರಿಸು ; ಅಪ್ಪಳಿಸು : "ತಟ್ಟು–ತಾಡನೇ" (ಶಮಧಾ); ಮೆಯ್ಯುಂ ವನದವದನೆ ಕೇಳ್ ಗ್ರೀಷ್ಮದೊಳ್ ನಿಚ್ಚವೆತ್ತಂ ಸತಿ ತಟ್ಟುತಿರ್ಪ[ ರ್ಪ ] [ಪಾಠಾಂ. ತಟ್ಟುಂತಿರ್ಪ] ಕಾಯ್ಪುಂದುರಿವ ಬಿಸಿಲೊಳ್ (ಕಾವ್ಯಾವ. ೮೦೮); ಪೊಯ್ವ ರಣತೂರ್ಯರವಂ ತಱಿಸಂದುತಾಗಿ ತಟ್ಟುತ್ತಿಱಿದವು (ಕುಹಾನೇ. ೧೨-೨೨೦) : ಮೆಟ್ಟುವ ತಟ್ಟುವ ಮೇಲೆವಾಯ್ವ . . . ದುಷ್ಟಮಪ್ಪ ಹಯಮಂ (ಧರ್ಮಾಪ. ೮-೦೩) ; ಕೈವಾರಿಸಿ ತೊಡೆದಟ್ಟಲೊಡನೆ (ಪೋಹತ. ೦೮-೦೦೦). ೨. ಮುಟ್ಟು ; ತಾಗು ; ಸೋಕು : ತನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂದೊಲ್ ಸೋಲ್ತು (ಪಂಪಭಾ. ೦-೭೦) ; ಪೊಡರ್ದುದ್ಯದ್ದ್ಯೋತಿ ತಟ್ಟುತ್ತಿಡಿದಳಿಗರ್ಗಳ ವಿನ್ನೂಡಿದಂತಪ್ಪುವೀಗಳ್ (ಕಾವ್ಯಾವ. ೦೩೭) ; ಕನಕದಾಸನ ಕಾವ್ಯದೊಳ್ ದೋಷ ತಟ್ಟದು (ಮೋಹತ. ೧-೨೪) ; ಕಲಿದೋಷಂ ತಟ್ಟದವೋಲ್ ಕುಲಜರನುದ್ಧರಿಸೆ (ಅಪ್ರತಿ. ೫೨-೨) : ಲೋಕದ ಚೆಲುವಿನ ವಸ್ತುಗಳು ಕವಿಯ ಮನವನ್ನು ಮುಟ್ಟುವ ಮತ್ತು ತಟ್ಟುವ ಪರಿಗಳನ್ನು ಹೀಗೆ ಗುರುತಿಸುತ್ತಾನೆ (ಸೌಂದಸ. ೨೪). 'ಮನದಟ್ಟು' ಪರಾ. ೩. ಬೆನ್ನು ಚಪ್ಪರಿಸು ; ಉತ್ಸಾಹಗೊಳಿಸು ; ಉಬ್ಬಿಸು : ಈಗಳ ನಿಮ್ಮಾಳ್ದನಂ ತಟ್ಟೆ ರಣಕಟ್ಟಿಂ (ರಾಮಾಶ್ವ. ೦೦೦-೦೪). ೪. ರೊಟ್ಟಿ, ವಡೆ, ಒಬ್ಬಟ್ಟು, ಮುಂತಾದ ಭಕ್ಷ್ಯಗಳನ್ನು ಕೈಯಿಂದ ಬಡಿದು ಮಾಡು : ಮೃದುಪಾಕ ಮಾಡಿ . . . ಹೆಚ್ಚುದುಪ್ಪದಿಂದವೆ ಬೆರಸಿ ವಡೆಯಂತೆ ತಟ್ಟಿಕೊಂಡು (ಸೂಪಶಾ. ೧-೬೮) ; ನಾಳೇನೇ ಒಬ್ಬಟ್ಟು ತಟ್ಟಿಟ್ಟುಕೊಂಡರೆ ನಾಡಿದ್ದು ಗೌರೀ ಬಾಗಿನ ಕೊಡೋದಕ್ಕೆ ಅನುಕೂಲವಾಗುತ್ತೆ (ಮಾಂಗಲ್ಯ. ೬೬) ; ರೊಟ್ಟಿ ತಟ್ಟು (ರೂಢಿ). ೫. ಲೇಪಿಸು ; ಬಳಿ ; ಸವರು : 'ತಟ್ಟುಕ' ಪರಾ. ೬. ಅಟ್ಟು ; ಓಡಿಸು : (+). ೭. ಮೆಲ್ಲನೆ ಬಡಿ : ಮಗುವನ್ನು ತಟ್ಟಿ ಮಲಗಿಸಿದಳು (ರೂಢಿ). ೮. ಅನ್ವಯಿಸು ; ಹೊಂದು : ಶಾಕುಂತಲ ನಾಟಕಕ್ಕಾದರೆ ಈ ಮಾತು ತಟ್ಟುವುದಿಲ್ಲ (ಕಾವ್ಯಸ. ೩೫). ೯. ಹಿಡಿಸು : ಇಷ್ಟವಾಗು : ಜಿನವಚನವೆಂತುಟಂತುಟುಮನನುನಯದಿಂ ಪೇಱದಂತೆ ತನ್ನಿಚ್ಛೆಗೆ ಕೆಮ್ಮನೆ ತ[ಪಾಠಾಂ. ಕ]ಟ್ಟೆ ಗಟಿಪಿ ಪೆಱರಂ ತನಗೆ ವಶಂ ಮಾಱ್ಪನೆಯ್ದುಗುಂ ದುರ್ಗತಿಯಂ (ಧರ್ಮಾಮೃ. ೫-೧೦೦). ೧೦. ಉಂಟುಮಾಡು; ತಗುಲಿಸು : ಕೊಟ್ಟು ಕುಡುಕುದಂಬುಲಮಂ ಸವಿಯಂ ತಟ್ಟುವ ತನಿಗಲೆಯುಪಚರದಿಂ ಮನಮುಟ್ಟಿ ಕರಂ ಕೂಡಿದರ್ (ಜಯನೃ. ೨-೫೩). ೧೧. ಬಯಸು ; ಇಚ್ಛಿಸು (?) : ಖ್ಯಾತಿ ಲಾಭ ಪೂಜೆಯಂ ತಟ್ಟದೆ ಇಹಪರಂಗಳಂ ಸಾರದೆ ಭವಬಂಧಕ್ಕೆ ಬಾರದೆ ಗೆಲ್ಲ ಸೋಲಕ್ಕೆ ಹಾರದೆ (ಅದವ. ೩೦-೮೭) . ೧೨. (?) : ತನ್ನನೆ ತಾನೊಲವಿಂದೆ ಜಾನಿಸುತ್ತಗಲದೆ ನಿಂದನೊರ್ವ ಸವಣಂ ಬಗೆಗೊಳ್ವೆಱ ತಟ್ಟತೆಂಬಿನಂ (ಕಾವ್ಯಕಾ. ೨೨೭).

**ತಟ್ಟಿ ನೋಡು** = ಪರೀಕ್ಷಿಸು : ಶಿವಮಂತ್ರ ಶಿವಲಿಂಗ ಭಸಿತ ರುದ್ರಾಕ್ಷಿಯೆಂಬವು ನೆಲಸಿ ನಿಂದೆಡೆಯೊಳವು ನಿಲ್ಲವೆಂಬುದಿದು ಶಿವವಾಕ್ಯವಿನ್ನೆನ್ನ ಮನವನಿನ್ನೇಂ ತಟ್ಟಿ[ಪಾಠಾಂ. ಥಟ್ಟಿಸಿ]ನೋಡುವೆ ಯತೀಶಯೆನಲು (ಸೋಮಚ. ೩-೪೪).

[ ದೇ.೫ ತಮಿ. ಮಲ. ತಟ್ಟು ; ಕೊಡ. ತಟ್; ತುಳು. ತೆಲು. ತಟ್ಟು ]

**ತಟ್ಟು₂** (ನಾ). ೧. ಅಪ್ಪಳಿಕೆ ; ಅಂಗೈ ಹೊಡೆತ. ೨. ಒಂದು ಬಗೆಯ ರೋಗ ; ಗೋಣೆತಟ್ಟು ; ದಡಾರ. ೩. ಸ್ಪರ್ಶ ; ಸೋಕುವುದು; 'ತಾಗುದಟ್ಟು', 'ಮುಟ್ಟುದಟ್ಟು' ಪರಾ. ೪. ಇಚ್ಛೆ ; ಬಯಕೆ : ಸ್ತ್ರೀ ಸಂನ್ಯಾಸಿಯಾದಡೇನಯ್ಯಾ ಜಾಗ್ರತ್ ಸ್ವಪ್ನ ಸುಷುಪ್ತಿಯಲ್ಲಿ ತಟ್ಟಿ [ಪಾಠಾಂ. ಟ್ಟು]ಲ್ಲದಿರಬೇಕು (ಸುಹಾದೇ.ಬ. ೦೦೫-೫೩೭). ೫. ಲೇಪಿಸುವುದು; ಲೇಪನ : ತಟ್ಟು ಚಟ್ಟು ಶಬ್ದೌ ಶ್ರೀಖಣ್ಡಕುಂಕುಮಾದಿ ಗಂಧದ್ರವ್ಯ ಕರ್ದಮಕೃತ ಸ್ಥಾಸಕವಚನೌ (ಶಬ್ದಾನು. ೪೯೦ ವ್ಯಾಖ್ಯಾ). ೬. [ನಾಟ್ಯ] ಭರತ ನಾಟ್ಯದ ಹತ್ತು ವಿಧವಾದ ಅಡವುಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ (೧) ತಟ್ಟು. (೨) ಮೆಟ್ಟು. (೩) ನಾಟು . . . (೧೦) ನಡೈ (ಅಭಾನ್ಯ. ೩೨) . [ <ತಟ್ಟು₁ ]

**ತಟ್ಟು₃** 'ತಟ್ಟೆ' ನೋ.

**ತಟ್ಟು₄, ಥಟ್ಟು₁** (ನಾ). ಪಕ್ಕ ; ಕಡೆ : ಆಗ್ನೇಯ ಮೊದಲಾಗಿ ನೈಋತ್ಯ ಪರಿಯಂತರ ತೆಂಕಣ ತಟ್ಟು . . . ಪಡುವಣ ತಟ್ಟು (ಪ್ರಾಆರಿ. ೦೯೪೭. ೦೮-೦೩; 1488); ಗೃಹಸ್ಥಾಶ್ರಮಮೇ ಒಂದು ತಟ್ಟುಂ ವಿಶ್ವಾದ ಮೂಱು ಮಾಶ್ರಮಂಗಳುಮೊಂದು ತಟ್ಟು (ಭಾರಶಾಂ. ೧೨-೫೮); ಬೀಳ್ವರು ಸಾವಿರದ ಸಂಖ್ಯಾತ ಬಲವು ಅತಿರಾವದಲಿ ಬಳಿಕೆರಡು ತಟ್ಟಿನ ಬಿಲ್ಲನತಿಬಲರು (ಕೋಗಯು. ೨೦-೬); ತಂಗಾಳಿ ಮೊದಲಾದ ವಿರಹೋದ್ದೀಪನಕಾರಿಗಳೆಲ್ಲವು ಒಂದು ತಟ್ಟು ಈ ಪಾಪಿಯಾದ ಚಂದ್ರನೆ ಒಂದು ತಟ್ಟು (ವಡಕಾ. ೩೩). **ಥಟ್ಟು₁**: ಕೆಟ್ಟೆವಕಟಕಟೆನುತ ನಾಲ್ವರೊಂದಾಗಿ ಬಾಯ್ಬಿಟ್ಟರೈ ಥಟಥಟ ಧ್ವನಿಗಂಜಿ ಶಿಖಿ ಯಾವ ಥಟ್ಟನೋಳ್ಪಂತೆನುತ (ತುರಂಗ. ೮೪-೪೦).

ತಟ್ಟಾಗು = ಪಕ್ಕಕ್ಕೆ ಸರಿ ; ಕೆಲಸಾರು ; ಹಿಂದೆಗೆ : "ಕೆಲಸಾರು = ಬದಿಗಾಗು, ತಟ್ಟಾಗು, ಸರಿ" (ಗಂಗಾಮ. ೯೭) ; ತುರಗದ ತಟ್ಟು ತಟ್ಟಾದು ದಾತನ ಭಟರೊಳಸರಿದು (ಜಂಪ್ರಸಾಂ.೮-೮೭); ಅರ್ಭಟಿಸುತ್ತ ಬರ್ಪಾಯುಧಕೆ ತನ್ನಯ ಮೆಯ್ಯಗೊಡದೆ ತಟ್ಟಾಗಲು (ನವಮೋ. ೧೨-೮೩).

[ ದೇ.: ತಮಿ. ತೆಲು. ತಟ್ಟು ]

**ತಟ್ಟು₆** 'ಥಟ್ಟು₂' ನೋ.

**ತಟ್ಟು₆** (ನಾ). ಕುದುರೆಗಳಲ್ಲಿ ಒಂದು ಬಗೆ ; ಗಿಡ್ಡ ಕುದುರೆ : ಹೆಣ್ಣು ಕುದುರೆಗಳನ್ನು ಟಾಕಣಾಗಳನ್ನು ತಟ್ಟುಗಳನ್ನು (ಗ್ರಾಮೂಕ. ೧೦೪) ; ಅವರ ಕುದುರೆಗಳು ತಟ್ಟುಗಳಾಗಿದ್ದವು (ಕೊಳಮು. ೭೬).

ತಟ್ಟಿನ ಬೆಂಬಳಿ = ತಟ್ಟುಕುದುರೆಗಳ ಮೇಲೆ ಹಾಕುವ ತೆರಿಗೆ (?) : ಅನುವು ಕೊಡವೀಸ ಹಂದರ ಹಣ ಹರವಿಗೂಳು ಮೇಟುಕೊಳಗ ಕಟಿಲೆಯ ಪಾವಂಶಿಗೆ ತಟ್ಟಿನ ಬೆಂಬಳಿಯ ಅರು ಹನ್ನೆರಡರ ದಂಡ (ಪ್ರುಅರಿ. ೧೯೩೪, ೨೭-೩೦ ; 1430). [ ←ಮರಾ. ತಟ್ಟೂ; ತಟೂ; ಹಿಂ. ತಟ್ಟೂ ]

**ತಟ್ಟು₇**, ತಾಟು₆ (ನಾ). ೧. ಗೋಣಿಯ ಪಟ್ಟೆ : ಕುನ್ನಿ . . . ಕಾಲೊರಸುವ ತಟ್ಟಿನ ಮೇಲೆ ನಿಂತು ಬಾಲವನ್ನು ಅಲುಗಾಡಿಸಿತು (ಪ್ರೇಮುಕ. ೧೮) ; ಹರಿದ 'ತಟ್ಟು'ಗಳ ಮೇಲೆ ಒರಗಿಕೊಂಡು ಉರುಳಾಡು ತ್ತಿದ್ದ (ಜನಸಿ. ೮೩). ೨. ಜೈನ ಅಥವಾ ಬೌದ್ಧ ಸಂನ್ಯಾಸಿಗಳ ವಸ್ತ್ರ,- ಹೊದಿಕೆ : "ತಟ್ಟು ಕಾಡನೇ, ಕ್ಷಪಣಕಾಚ್ಛಾದನೇ ಚ (ಜೈನ ಸಂನ್ಯಾಸಿಯ ಹೊದಿಕೆ)" (ಶಮುಧಾ) : "ಸವಣರ ಉಳ್ಳುಡೆ" (ಚತುವಿ. ೬. I, ೬೪) ; ತಟ್ಟು ದೋಷಮಂಬೊಡೆ ತಟ್ಟೆಂಬುದು ಪಸೆ (ಧರ್ಮಾಮ್ಮ. ೯-೮೯) ; ತಟ್ಟು ಕುಂಚ ಕಮಂಡಲುಗಳೇಂ . . . ಬೌದ್ಧಕಾರಿಗಳು ಕೇಳಿರೊ (ಮನುಗುಂ. ೨೪೭-೪) ; ಜಡೆಯೆಂಬುದು ಗೊರವಂಗೆ ತಟ್ಟೆಂಬುದು ಸವಣಂಗೆ (ಅನಂಪು. ೨-೩೮ ವ) ; ಋಷಿಯರ್ಗೆ ತಟ್ಟು ಕುಂಚ ಪುಸ್ತಕಂಗಳುಮಂ ಅಜ್ಜಿಯರ್ಗೆ ವಸ್ತ್ರಂಗಳುಮಂ ಕುಡುವುದು (ಪುಣ್ಯಾಸ್ರ. ೧-೧೦೭ ವ) ; ತಟ್ಟುಗಳ ಹೆಗರಣೆಗರೊ ಎನಲು ಮಲಧಾರಿಗಳು ಗಜಬಜಿಸಿ ನೆರೆವುತ್ತ (ಬಸಪು.೩೦-೫೩). **ತಾಟು₆** : ೧. ಚಾಪೆತಾಟುಗಳನ್ನು ಕಂಕುಳಲ್ಲಿರಿಸಿ . . . ಕೊನೆಯ ಬಾರಿ ಕಲಾವಿದರನ್ನು ಕಂಡು (ಬಣ್ಣಮಾ. ೩೨).

ತಟ್ಟು ಸೀಳು = ಚರ್ಮವನ್ನು ಸುಲಿ : ಕಟ್ಟಧಿಕ ಜಿನನನಾ ಪರಿಕರವ ನೆಯ್ದೆ ಹುಡಿಗುಟ್ಟುವನೆಯವನಿನ್ನಾವುಪಾಯದಿ ಪಿಡಿದು ತಟ್ಟ[ಪಾಠಾಂ. ಕಟ್ಟ, ದಟ]ಸೀಳುವೆವೆಂದು ನೆರೆದ ಶ್ರವಣನಿಕಾಯ ಕಿರಳಿ ಕಿಡಿಕಿಡಿ ಯೋದುದು (ಸೋಮಚ. ೪-೮೭). [ ?. / ಮರಾ. ತಾಟ್ ]

**ತಟ್ಟುಂಗೆಡೆ** (ಕ್ರಿ). ಶಕ್ತಿಗುಂದಿ ಬೀಳು ; ದುರ್ಬಲವಾಗಿ ಕುಸಿ : ಒಡೆದಡದ ಬರಿಯ ಪಲಗೆಯನುಡಿಯಲ್ಲಳ್ ನೆಳ್ಕು ನೆಳಲೆನಲ್ ಕರಿ ತಟ್ಟುಂಗೆಡೆಯೆ ಭಗದತ್ತನಿಟ್ಟಂ ಕಡುಪಿಂ ಪಿಡಿದಿರ್ದ ನಿಶಿತ ವಜ್ರಾಂಕುಶದಿಂ (ಪಂಪಭಾ. ೧೨-೦೯೩). [ತಟ್ಟು₈ (<ತಟ್ಟೆ) + ಕೆಡೆ₁ ]

**ತಟ್ಟುಂತಾಱುಂ**, ಥಟ್ಟುತಾಱು (ಅ). ಭಿನ್ನಭಿನ್ನವಾಗಿ ; ಚೆಲ್ಲಾಪಿಲ್ಲಿ ಯಾಗಿ ; ಅಸ್ತವ್ಯಸ್ತವಾಗಿ : ನಾಲ್ಕುಂ ತೆಱದ ಶಸ್ತ್ರಾಸ್ತ್ರಪುಂಜಂಗಳೊಳ್ ತಟ್ಟುಂತಾಱುಂ ಬೀೞ್ವ ಚತುರಂಗ ಪೃತನಾಪ್ರತಾನದ ತುಮುಲ ಸಮರಸಂಘಟ್ಟನಾಕಾಂಡ ಪ್ರಚಂಡ ಪ್ರಳಯಪ್ರಕ್ಷೋಭದೊಳಗೆ (ಅನಂಪು. ೦೪-೧ ವ). **ಥಟ್ಟುತಾಱು** : ಪರತರ್ಕ್ಕಟ್ಟುತಾಱಾದರ್ (ಶಬ್ದಾನು. ೭೩ ಪ್ರಯೋ). 'ತಾಱುತಟ್ಟುಂ', 'ತಾಱುಂತಟ್ಟುಂ' ಪರಾ. [ ? ]

**ತಟ್ಟುಕ** (ನಾ). ೧. ತಟ್ಟುವವನು ; ಹೊಡೆಯುವವನು : ಕಟ್ಟುಕಂ, ತಟ್ಟುಕಂ (ಕಮದ. ೨೦೩ ಪ್ರಯೋ). ೨. ಸುಗಂಧದ್ರವ್ಯವನ್ನು ಮೈಗೆ ಲೇಪಿಸುವವನು : "ತಟ್ಟುಕಂ, ಚಟ್ಟುಕಂ, ತಟ್ಟು ಚಟ್ಟು ಶಬ್ದೌ ಶ್ರೀಖಂಡ ಕುಂಕುಮಾದಿ ಗಂಧದ್ರವ್ಯಕರ್ದಮಕೃತ ಸ್ಥಾಸಕವಚನೌ ತತ್ಕುರ್ವನ್" (ಶಬ್ದಾನು. ೪೪೦ ವ್ಯಾಖ್ಯಾ). [ ತಟ್ಟು₁ + – ಕ₃ ]

**ತಟ್ಟುಗಿ**, ಥಟ್ಟುಗಿ (ಕ್ರಿ). ಜೋರಾಗಿ ಭೇದಿಸುವಂತೆ ಇರಿ ; ಬಲವಾಗಿ ನಾಟು ; ನಟ್ಟು ಹೊರಬೀಳು : ಕಾದಿ ತಟ್ಟುಗಿದು (ರಣದೆ) ತೆಗೆದ ನಕ್ಕುಂ ನಪ್ಪಂ (ವಸ್ತುಕೋ. ೮೩-೩); ಮದನಂ ವಿಯೋಗಿಗಳನಿಸಲೆರ್ದೆಯಂ ತಟ್ಟುಗಿದು ಲೋಹಿತಂಬೊರೆದಿರದುಣ್ಮಿದ ಶರವೆನೆ (ಅದ್ಯಟ. ೩-೪೮) ; ಅಳಿಯ ಮಾವನುಂ × × ಕಕಡೆ ಕಠಾರದೇಱು ತಟ್ಟುಗಿದು ಮುತ್ತ ಹೊತಂ (ಎಕ. VIII, ತೀರ್ಥಹ. ೨೩-೦೭; 1250); ನುಡಿದ ನುಡಿ ಕೂರಂಬಿನಂದದಿಂ ಹೃದಯಮಂ ತಟ್ಟುಗಿಯಲ್ (ಭಾವಚಂ. ೮-೩೩). **ಥಟ್ಟುಗಿ** : "ಥಟ್ಟುಗಿ [ಪಾಠಾಂ. ರಿ]ದುದೆನಲ್ಕೆ ಬೆಂಗೆ ಮೂಡಿದುದಕ್ಕುಂ" (ಭಾರತಿ. ೪೩) ; ಅಂಗಜಾಸ್ತ್ರತತಿ ಮೆಲ್ಲೆರ್ದೆಯಂ ಸಂಧಿಸಿ ಥಟ್ಟುಗಿಯಲ್ ಧೃತಿಗುಂದದೆ (ಅದ್ಯಟ. ೬-೧೩೦); ಶಕಟವ್ಯೂಹವನು ಮಧ್ಯದೊಳು ಥಟ್ಟುಗಿದುರವಣಿಸಿ ಪವಮಾನಸುತ ನಡೆದ (ಕುವ್ಯಾದ್ರೋ. ೧೨-೦೮); ಮದನ ವಿಯೋಗಿಗಳೆದೆಯ ಥಟ್ಟುಗಿದೆಚ್ಚ ಪದುಮಪುಷ್ಪದಲಗಿನಗ್ರದಲಿ (ಕಂಸವಿ. ೯-೧೮). 'ತಟ್ಟುಚ್ಚು' ಪರಾ. [ ತಟ್ಟು₁ + ಉಗಿ₃ ]

**ತಟ್ಟುಗುಟ್ಟು** (ಕ್ರಿ). ತಾಗಿ ಹೊಡೆ ; ಅಪ್ಪಳಿಸಿ ಹೊಡೆ : ಮುರಹರಂ . . . ಕೋಪದಿಂ ಧುರಧರರೆಗೆಯ್ದೆವಂದು ರಿಪುಸೇನೆಯನೋವದೆ ತಟ್ಟುಗುಟ್ಟಿ ಕಿಂಕರ ರಥವಾಜಿ ವಾರಣದಳಂ ಪಡಲಿಟ್ಟುದು ಯುದ್ಧಮಧ್ಯದೊಳ್ (ಮಹಾಸೇ. ೬-೯೯). [ ತಟ್ಟು₁ + ಕುಟ್ಟು₁ ]

**ತಟ್ಟುಗೆಡಹು** 'ಥಟ್ಟುಗೆಡಹು' ನೋ.

**ತಟ್ಟುಗೆಡೆ** 'ಥಟ್ಟುಗೆಡೆ' ನೋ.

**ತಟ್ಟುಚ್ಚು** 'ತಟ್ಟುಚ್ಚು' ನೋ.

**ತಟ್ಟುಡು** (ಕ್ರಿ). ಕಾವಿಯ ಬಟ್ಟೆಯನ್ನು ಧರಿಸು : ಮಾನವಂ ತಟ್ಟಟ್ಟು ಕೀರ್ದ ತಟ್ಟುಟ್ಟಂಗದಾರ್ಗಂಟು ರಾಗಂ (ಸಾನಂದ. ೭-೪೮); ಪೊರಮಟ್ಟನುಂ ಪೊರವಂಡದ ಕಾಮನಾರವಂ ತಟ್ಟುಟ್ಟನುಂ ಬಟ್ಟು ಕಳೆಯದೆ ಕಷಾಯನುಂ (ಸಾನಂದ. ೭-೯೯). [ ತಟ್ಟು₇ + ಉಡು₁ ]

**ತಟ್ಟುಪಳಗು** (ನಾ). ಒಂದು ಲೇಪನ ದ್ರವ್ಯ (?) : ಕರ್ಪೂರದ ಕಳಂಜು ೧ ಕಸ್ತೂರಿ ಕಳಂಜು।। ಕುಂಕುಮ[ದ ಹೂ]ಕಳಂಜು ೧ ತಟ್ಟು ಪಳಗು ಕಳಂಜು।। (ಸಾಇಇ. IX-II, ೩೩೦-೪ ; 1532). [ ತಟ್ಟು₂ + ಪಳಗು? ]

**ತಟ್ಟುಪೊಟ್ಟು** (ನಾ). ಒಂದು ಅನುಕರಣ ಶಬ್ದ : ತಮ್ಮ ಬಲಮುಂ ಮಾರ್ವಲವಂ[ನ]ಱಿಯದೆಯುಂ ಚಾತುರ್ವಲಂಗಳ್ಮೊದಲ ಸಮಕಟ್ಟು ಗೆಟ್ಟು ತಡವರಿಸಿ ತಟ್ಟುಪೊಟ್ಟೆಂದೆಚ್ಚುಮಿಟ್ಟುಮಿಱಿದುಗ್ಗಡಿಸೆ (ಪಂಪಭಾ. ೧೦-೬೦ವ) ; ಎರಡು ಬಲದ ದಟಂಗಳ್ಮೋಲಾಟಮಾಡುವಂತೆ ಕಿಱಿದಾನುಂ ಬೇಗಂ ತಟ್ಟುಪೊಟ್ಟೆಂದು ಕೋಟ್ಟುಕಟ್ಟೆ (ಪಂಪಭಾ. ೦೦-೫೦ವ).

**ತಟ್ಟುಬಳೆ** (ನಾ). ಚಪ್ಪಟೆಯಾಗಿ ಅಗಲವಾಗಿರುವ ಸಾದಾ ಬಳೆ : (ಕ).

[ ತಟ್ಟು₈ (<ತಟ್ಟೆ) + ಬಳೆ₃ ]

**ತಟ್ಟುಬೀಳು** 'ತಟ್ಟುವೀೞ್' ನೋ.

**ತಟ್ಟುಮಟ್ಟ** (ನಾ). ಲೇಪನದ ಮಣ್ಣು ; ಮತೀಯ ಲಾಂಛನವನ್ನು ಧರಿಸುವುದಕ್ಕಾಗಿ ಬಳಸುವ ಮಣ್ಣು : ತಟ್ಟುಮಟ್ಟ[ಪಾಠಾಂ. ತಟವಟ, ತಟ್ಟುಮುಟ್ಟ]ಯನಿಟ್ಟ ಭ್ರಷ್ಟಂಗೆ ಶಿಷ್ಯನಾದ ಕಷ್ಟನ ಮುಟ್ಟಲಾಗದಯ್ಯಾ (ಬಸವ. ೪. ೦೬೭-೩೩೬). [ ತಟ್ಟು₂ + ಮಟ್ಟ ]

**ತಟ್ಟುಮಣೆ** (ನಾ). ನೆಲ, ಮೊದಲಾದುವುಗಳನ್ನು ತಟ್ಟಿ ಸಮಮಾಡಲು ಉಪಯೋಗಿಸುವ ಸಾಧನ,-ಮಣೆ ; ಧಮ್ಮಸ್ಸು : ತಟ್ಟುಮಣೆ ಹೊಡೆದು ಸಮ ಮಾಡಬೇಕು (ರೂಢಿ). [ ತಟ್ಟು₁ + ಮಣೆ ]

**ತಟ್ಟುಮುಟ್ಟು** (ನಾ). ೧. ಮೈಲಿಗೆ ; ಸೂತಕ ; ಹೊಲೆ : ವ್ರತಕ್ಕೆ ಮುನ್ನವೆ ತಟ್ಟುಮುಟ್ಟು ತಾಗು ಸೋಂಕು ಬಪ್ಪುದನಱಿಯಬೇಕು (ಬಸವ. ೪. ೪೩೩-೪೦) ; ತಟ್ಟುಮುಟ್ಟು ತಾಗು ನಿರೋಧವಿಲ್ಲದಿಹುದೆ ಪೂಜೆ (ಕನ್ನವ. ೦೦೨-೩) ; ಮಂಗಳವಾರದ ದಿನ ಮನೆಯ ಸಾರಿಸೆಯಮ್ಮ

ತಟ್ಟುಮುಟ್ಟು ಹೊಱಿಯಿಕೆ ಬಿಸಾಡೆಯಮ್ಮ (ಶಿಪಗೀ. ೬೯೯ ಪ); ಅಶುದ್ಧ ಸಲೇಪಭಾವವಾ ಶ್ವಪಚನ ತಟ್ಟುಮುಟ್ಟಿನೆಡೆಯಲ್ಲಿಯೆ ಬರ್ಪುದಱಿಂ ಶಿವಾಧವಾ (ಶಿಕಳ. ೨೬). ೨. ದುರದೃಷ್ಟಕರವಾದ ಪೆಟ್ಟು ; ಆಘಾತ ; ಅಪಾಯ ; ಸಂದಿಗ್ಧ ಪರಿಸ್ಥಿತಿ ; "ಸಮಸ್ಯೆ" (ಜಾ ನ ಕೋ ೯. ೬೪). ೩. (?) : ಇಷ್ಟಲಿಂಗದಲ್ಲಿ ತಟ್ಟುಮುಟ್ಟು ಬಲ್ಲವಂಗೆ ಇಷ್ಟವ ಮುಟ್ಟುವ ಭೇದವು ತಟ್ಟದಿಹ ಪರಿ ಇನ್ನೆಂತೋ (ಮೋಳಿಮಾ. ೧೯-೭೦); "ಲಿಂಗ ಭೋಗೋಪಭೋಗ" (ಮೋಳಿಮಾ. ಕೋಶ); ಸಕ್ಕರೆಯ ರಾಶಿಗೆ ಕೇಸಿಯ ಕೆಲಸುಂಟೇ ನಿಶ್ಚಯದ ಲಿಂಗಾಂಗಿಗೆ ಉಭಯದ ತಟ್ಟುಮುಟ್ಟೆಂಬೀ ಗುಟ್ಟಿನ ಕುಲವಿಲ್ಲ (ಮುಡೀವ. ೨೬೬-೨೭); ಪ್ರಾಣಲಿಂಗಿ ಎಂದಡೂ ತಾನಾಗಿ ಶರಣನೆಂದಡೂ ತಾನಾಗಿ. . .ಸತ್ತು ಚಿತ್ತಾನಂದವೆಂಬ ಗೊತ್ತ ಹರಿದವಂಗೆ ತಟ್ಟು ಮುಟ್ಟು ಹತ್ತುವ ಭಾವ ಒಂದೂ ಇಲ್ಲ (ವಚಶಾ. I, ೧೨೧); ಇಷ್ಟ ಲಿಂಗಂ ಸುತ್ತಿ ಸಜ್ಜೆಯೊಳಗಿರುತಿಹುದು ತಟ್ಟುಮುಟ್ಟಿನ ಸುಖವನೆಹಗೆ ಯರ್ಪಿಸಬಹುದು (ದೀಕ್ಷಾಬೋ. ೩-೭೮). [ತಟ್ಟು$_1$ + ಮುಟ್ಟು$_2$]

**ತಟ್ಟುಮೆಟ್ಟು** (ನಾ). [ನಾಟ್ಯ] ಭರತನಾಟ್ಯದ ಹತ್ತು ಬಗೆಯ ಅಡವು ಗಳಲ್ಲಿ ಒಂದು : ಪ್ರಸಿದ್ಧ ನಾಟ್ಯಾಚಾರ್ಯರು ಈ ಅಡವುಗಳನ್ನು ಹತ್ತು ವಿಧವಾಗಿ ವಿಂಗಡಿಸಿದ್ದಾರೆ : (೧) ತಟ್ಟು, (೨) ಮೆಟ್ಟು, (೩) ನಾಟು, (೪) ತಟ್ಟುಮೆಟ್ಟು (ಅಭಾನೃ. ೩೨). [ತಟ್ಟು$_3$ + ಮೆಟ್ಟು$_2$]

**ತಟ್ಟುರ್ಚು**, ತಟವುಚ್ಚು, ತಟ್ಟುಚ್ಚು, ತಟ್ಟುಟ್ಟು, ಥಟ್ಟುಚ್ಚು (ಕ್ರಿ). ಸೀಳಿಕೊಂಡು ಹೊರಬರು ; ಭೇದಿಸಿಕೊಂಡು ಹೊರಗೆ ಕಾಣಿಸು ; ನಟ್ಟು ಪಾರಾಗು : ರೋಮಾಂಚಸಂಚಯಂ ತೊಟ್ಟಂಗಿಗಳ ತಟ್ಟುರ್ಚಿ ಪೆರ್ಚಿದ ಮುಯ್ಯಿನೆಡೆ ಪೊಟ್ಟಿನೊಡೆಯ ಪರಸ್ಪರಾಲಿಂಗನಂಗೆಯ್ದು (ಅನಂಪು. ೧೧-೨೪ ಪ); ಇಟ್ಟೆಡೆ ಸೆಲ್ಲೆಹ ಕಂಗಲ ಜೋಡೆನು ತಟ್ಟುರ್ಚಿ ಮೆಯ್ಯನುಚ್ಚಳಿಸಿ (ಕುಮಾರಾಂ. ೧೩-೧೧೭); ನೆಱೆ ತಾಗಿ ತಟ್ಟುರ್ಚಿತೆಂಬ ಶಕ್ತಿಯ ಕೈಮಱೆಯದೆ ಕೃಷ್ಣ ಖಂಡಿಸಿದ (ಮೋಹತ. ೪೦-೭೭); ಪೆರ್ವೆಟ್ಟಿನ ತಟ್ಟನೊಳ್ ನಟ್ಟು ತಟ್ಟುರ್ಚಲೆಱಗುವ ಬಱಸಿಡಿಲಂತೆಯುಂ (ಚಿಕವಂ. ೯೪-೫). **ತಟವುಚ್ಚು** : ಕರಿಯುರವಣಿಸಿ ಬಂದು ದೀರ್ಘಕರಾಗ್ರದಿಂ ಪಿಡಿದು ಭರದೊಳುದ್ಧರಿಕೆ ಹಾಯ್ಕಿ ಕೊಂಬುಗಳೆರಡ ನೆಗ್ಗಲು ದೇಹವದು ನೆತ್ತರು ಸುರಿಯೆ ತಟ[ಪಾಠಾಂ. ಟು]ವುಚ್ಚಿ ಜೀವವಿಯೋಗತಾಪದಲಿ (ಬಸವು. ೫೨-೧೧); ಉರಗವಿದು ಕರ್ಕೋಟಕನ ಬಗೆಯದಱ ಹಲ್ಲಿಂಗಳು ಎರಡೆರಡು ತಟವುಚ್ಚಿದವು (ಬಸವು. ೪೬-೩೩). **ತಟ್ಟುಚ್ಚು** : ಗಿರಿಘಟವಮಂ ತಟ್ಟುಚ್ಚ ಲಿಸುವವು (ಕುಮರಾ. ೮-೬೩); ಗಾಜಿನ ಕುಪ್ಪಿಗೆಯೊಳಗಿನ ದೀಪವನ್ನಿಟ್ಟರಾ ಜ್ಯೋತಿ ಹೊಱಗೆಸೆವಂತೆ ಶ್ರೀಜಿನನುಜ್ಜ್ವಲ ದೇಹವ ತಟ್ಟುಚ್ಚಿ ರಾಜಸುತಿ ಹುದಾತ್ಮಕಾಂತಿ (ಭರಚ. ೬೬-೯೦); ತಟ್ಟುಚ್ಚಿದ ಸರಂಗಳಂ ಕೀಳ್ದ (ಚಬಪು. ೫೬-೦೬). △ **ತಟ್ಟುಟ್ಟು** : ನಿಶ್ಶ್ರೇಷಮಾ ಯುದ್ಧದುಳ್ ಉಱಕೀಲಿಚ್ಚಿದ ವಂಬುವಾಳ್ಪಲಗೆಯುಳ್ತಟ್ಟುಟ್ಟು ವಲ್ಲನ್ನಿ ಪಿನ್ ಮಱಮೋಗೀಶ್ವರನುಳ್ಳೆ ಕದಿ ತಣದ ಸಾಗಮ್ಮನೀ ಶೂದ್ರುಕನ್ (ಸೌಇಇ. IX-1, ೩೯೨-೩; ೭ನೆಯ ಶತ); ೯ ಇದು 'ತಟ್ಟುಚ್ಚು' ಎಂಬುದರ ಅಪಲಿಖಿತವಿರಬಹುದು. **ಥಟ್ಟುಚ್ಚು** : ತೊಡು ನಿನ್ನ ಶರವ ನೀಂ ಗಿಡುಮರದ ಹೊದಱೊಳೆಡೆ ಯಾಡುತಿಹ ಹಕ್ಕಿಗಳ ಗಡಣವನು ಥಟ್ಟುಚ್ಚ[ಪಾಠಾಂ. ತಟ್ಟುರ್ಚ]ಲೆಸುವ ಬಲು ಬಿಲುಗಾಱ (ಸಾಳ್ಭಾ. ೨೩-೨೭); ಚುಚ್ಚಿದವು ಕೂಡೆ ಥ[ಪಾಠಾಂ. ತ]ಟ್ಟುಚ್ಚಿದವು ಸೀಳಾಗಿ ಪಚ್ಚಿದವು ಮೈಯೊಳಗೆ ಹೊಚ್ಚಿದವು ಹೊಗರಲಗು (ಕೃಮಿಭಾ. ೧೩-೧೮) : [ತಟ್ಟು$_1$ + ಉರ್ಚು]

**ತಟ್ಟುವರಿಯಿಸು** 'ಥಟ್ಟುವರಿಯಿಸು' ನೋ.

**ತಟ್ಟುವಾಣಿ**, ತಟವಾಣಿ$_1$ (ನಾ). 'ತಟ್ಟು' ಜಾತಿಯ ಹೆಣ್ಣು ಕುದುರೆ : ಕಡಿವಾಣಂಗಳಂ ಕಟ್ಟಿರುವ ತಟ್ಟುವಾಣಿಗಳ ಮೇಲ್ಮುಳಿತು (ಸೌಗಂಧಿ. ೧೦೩೩-೬). **ತಟವಾಣಿ$_1$** : (೬). [←ಹಿಂ. ಟಟವಾನೀ]

**ತಟ್ಟುವೀೞ್**, ತಟ್ಟುಬೀಳು (ಕ್ರಿ). ಕುಗ್ಗು ; ದುರ್ಬಲವಾಗಿ ಕುಸಿದು ಬೀಳು : ಅಹಿರಾಜಂ ಪಡೆ ತಟ್ಟುವೀೞೆ ದಿಗಿಭವ್ರಾತಂ ಕೊರಲ್ಮುಗ್ಗೆ (ಲೀಲಾವ. ೦-೮೭). **ತಟ್ಟುಬೀಳು** : ಸೂರ್ಯಾಸ್ತ್ರಮಯುಕ್ಕೆ ಪಾಂಡವರ ಪಡೆಯು ಮುರಿದು ತಟ್ಟುಬಿದ್ದಿತು (ಭೀಷ್ಮಪ. ೦೭೭). [ತಟ್ಟು$_3$ (<ತಟ್ಟೆ) + ಬೀೞ್$_1$]

**ತಟ್ಟುಸೆಱಗು** (ನಾ). ಜರತಾರಿ ಮಂತ್ತು ರೇಷ್ಮೆಯ ಕುಸುರಿಗೆಲಸ ಮಾಡಿದ ಸೆರಗು (?) : ಪೀತಾಂಬ್ರ ೧ಕ್ಕೆ ತಟ್ಟುಸೆಱಗು ಲತೆ ಹೂಗಳು ಸಹಾ ತೂಂಕ ೧೧೯ಕ್ಕೆ ವಿವರ ಸುತ್ತಣ ಲತೆ ಹೊಗಳು ಶಳ ಕೆಂಪು ೧೧೫೫ (ಸೌಇಇ. IX-II, ೫೪೭-೩; 1682). [ತಟ್ಟು$_6$ (<ತಗಡು) + ಸೆಱಗು.(<ಸೆಱಂಗು)]

△ **ತಟ್ಟುಟ್ಟು** 'ತಟ್ಟುರ್ಚು' ನೋ.

**ತಟ್ಟೆ**, ತಟ್ಟೆ$_1$, ತಟ್ಟು$_3$ (ನಾ). ೧. ಚಪ್ಪಟೆ ; ಸಮತಲ : ಭೂಮಿ ತಟ್ಟೆಯಾಗಿಲ್ಲ, ಗುಂಡಾಗಿದೆ (ರೂಢಿ). ೨. ಹಣ್ಣು–ಹಂಪಲು ಮೊದ ಲಾದುವುಗಳನ್ನು ಹರಡಿ ಇಡಲು ಉಪಯೋಗಿಸುವ ಬಿದಿರು ಅಥವಾ ಬೆತ್ತದ ಹೆಣಿಕೆಯಿಂದ ಮಾಡಿದ ಚಪ್ಪಟೆಯಾದ್ದ ಮುಚ್ಚಳ ದಂತಹ ಬುಟ್ಟಿ : ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು (ಚೂನ್ನಸಂ. ೨೫೦-೧). ೩. ಬೆತ್ತ, ಲೋಹ ಮೊದಲಾದುವು ಗಳಿಂದ ಮಾಡಿದ ಅಂಚುಳ್ಳ ಮುಚ್ಚಳದಂತಹ ಪಾತ್ರೆ : ಆಧಾರದಲಿಪ್ಪ ಮೂಲಿಕೆಯ ಬೇರನಗಿ(ರಿ)ದು ಆ ಇಂದ್ರಿಯವ ಕೂಡಿಕೊಂಡು ಮಲ ಮೂಱು ಮುಟ್ಟದ ತಟ್ಟೆಯಲ್ಲಿ ಬೇಗ ತೆಗೆದುಕೊಳ್ಳಿ (ಸರ್ವವ. ೧೯-೯೧). ೪. ತಳಿಗೆ ; ಹರಿವಾಣ; ಗಂಗಾಳ : ತಟ್ಟೆ ಬಟ್ಟಲಲ್ಲಿ ಎಡೆಮಾಡದೀರಾದರೆ (ಮಹಾದೇ. ಬ. ೧೨೪-೫೮೪); ಮಿಸುಸಿನದಟ್ಟೆಯೊಳೊಪ್ಪುವುಜ್ವಲ ಸೀಧುವಂ ನಡೆ ನೋಡಿ . . . ಮಗುಟ್ಟು ವಂದಿಸಿಯಾಂಟಿದಳ್ (ಉದ್ಭಟ. ೫-೮೨); ತಿಗುರನಿಕ್ಕುವ ಲೇಪಿಸುವ ತಟ್ಟೆಗಳ ತಿಲಕಾಂಜನಕರಂಡದ (ಬ ಸ ಪು. ೧೨-೧೧). ನವರತ್ನದಡ್ಡಣಿಗೆಯೊಳ್ ತಟ್ಟೆಬಟ್ಟಲನಿಟ್ಟು ಹೊನ್ನ ಹರಿಯಣ ಮುಂದೆ ಧಗಧಗಿಸುತಿರಲಲ್ಲಿ (ಸಮ್ಯಕ್ತ್ವ. ೪-೯). ೫. (ತಕ್ಕಡಿಯ) ಬಟ್ಟಲು ; ಪರಡಿ : ತಕ್ಕಡಿಯ ತಟ್ಟೆಗಳನ್ನು ನಿರ್ದೇಶಿಸುವ ಎರಡನೆಯ ವರ್ಗಕ್ಕೆ ಸೇರಿದ ಎರಡು ನಕ್ಷತ್ರಗಳು (ಜ್ಯೋತಿವಿ. ೪೦). ೬. (ಅವರೆಕಾಯಿ, ಕಡಲೆಕಾಯಿ ಮೊದಲಾದುವುಗಳಲ್ಲಿ) ಬೀಜ ಬಲಿಯದಿರುವ ಕಾಯಿ ; ಚಟ್ಟು : ತಟ್ಟೆ ಬೈಸಿ ಕೊಂಡರೂ ತಟ್ಟೆ ಹುಳಿ ಚೆನ್ನಾಗಿದೆ (ಗಾದೆ). ೭. ಸೀಳಿದ ಬಿದಿರು ; ದೆಬ್ಬೆ : (೬). **ತಟ್ಟು$_1$** : 'ತಟ್ಟತಳ$_1$' ಪರಾ. **ತಟ್ಟು$_3$** : ೧. ಚಟ್ಟುಮಂ ತಟ್ಟುಮಂ ತಟ್ಟು ಗೆಯ್ದಂತಪ್ಪತಿ ವಿಶಾಲವೆನಿಪ್ಪ ಪಾಸಱೆಯಂ . . . ಗಾಲನಿಟ್ಟಿದಾಗಳ್ (ಶಾಂತೀಶ್ವ. ೧೦-೧೧೮ ಪ); ಹೋಗುತ್ತ ಹೋಗುತ್ತ, ಬಂಡೆಯ ಮೈ ತಟ್ಟಾಗಿ ಇರುವ ಬದಲು, ಕೆಳಕ್ಕೆ ಇಳಿಯತೊಡಗಿತು (ಕುಡಿಕಥಾ. ೨೩). ೫. ಕೋಪವನ್ನು ತೆಗೆದು ಒಂದು ತಟ್ಟಿನಲ್ಲಿ ಇರಿಸಲು ಅಮರನೀತಿಯು ನೂತನ ವಾದ ಒಂದು ವಸ್ತ್ರವನ್ನು ತಂದು ಎರಡನೆ ತಟ್ಟಿನಲ್ಲಿ ಇರಿಸಲು (ಶಿವಚ. ೬೩-೭); ತ್ರಾಸಿನ ಒಂದು ತಟ್ಟಿನಲ್ಲಿ ಜಂಗಮರ ಕೌಪೀನವನ್ನು, ಮತ್ತೊಂದು ತಟ್ಟಿನಲ್ಲಿ ಬೇರೊಂದು ಕೌಪೀನವನ್ನಿಟ್ಟು ಮೇಲಕ್ಕೆತ್ತಿದರು (ಪುರಾವಿ. ೬೩). ೮. ಕತ್ತಿಯ ಅಲಗು,–ಧಾರೆ: "ಖಡ್ಗಫಲ, ಪುಷ್ಕರ – ಅಡ್ಡಾಯುಧದ ತಟ್ಟು" (ಹಲಾಯು. ೬); ಕತ್ತಿಕೊಂತದ ತಟ್ಟಿನ ಮೇಗೆ ಏನಾದರುವೆ ಚುಕ್ಕಿ ಕಂಡರೋ ತೀರಿ ಹೋಯಿತು ಅವನ ಬಾಳು (ಮಂತ್ರಕ. ೮೦-೧). ೯. ನಿತ್ರಾಣ ; ದೌರ್ಬಲತೆ ; ಅಶಕ್ತಿ : ಕಂಬನಿಗಳಂದುಂಬ ಗಳಗಳನೆ ಅಳುತ ನಿಟ್ಟುಸುರುಗಳಂ ಬಿಟ್ಟು ತಟ್ಟುತಟ್ಟಾಗಿ (ಸೌಗಂಧಿ. ೪೭೩-೩); ದನ ಹುಲ್ಲು ಇಲ್ಲದೆ ತಟ್ಟಾಗಿವೆ (ರೂಢಿ). ೧೦. ಕಿವಿಯ ಒಂದು ಆಭರಣ: ಮಗುವಿನ ಕಿವಿಗೆ ತಟ್ಟು ತೊಡಿಸಬೇಕು (ರೂಢಿ).

**ತಟ್ಟಾಗು** = ಸೋತುಹೋಗು; ನಿತ್ರಾಣವಾಗು: ಮುಟ್ಟಲಱಿಯವು ಯೋಗಿಗಳ ನಿರ್ಮಲ ಚಿತ್ತ ತಟ್ಟಾದುವಱಿಸಿ ವೇದಗಳು (ಕೃಷ್ಣಗೋ. ೧-೧೧೩). **ತಟ್ಟು ಮಾಡು** = ನಿತ್ರಾಣಗೊಳಿಸು ; ದುರ್ಬಲಗೊಳಿಸು; ಒಣಗಿಸು : ಕಾಲು ಕೈಯನಗಟಿ ತೋರಣದೊಳು ಕಟ್ಟಿ ಸೀಳಿ ನರರನಾಱಿಸುವರು ತಟ್ಟು ಮಾಡಿ ಪೋಳ್ದು ನೂಱುವರುಮವಿಟ್ಟು ವಕ್ತ್ರ ಭಾಳ ಚರಣ ಕರ ದೊಳಿಡಿಯ ಮೊಳೆಯನಿಕ್ಕಿ ಹೆಟ್ಟಿ (ಸಾನಂದ. ೬-೧೪೯ ರಗಳೆ). **ತಟ್ಟೆ ಹಾಕು**= ಊಟಕ್ಕೆ ಬಡಿಸು : ಅಡಿಗೆ ಮನೆಯಲ್ಲಿ ತಟ್ಟೆಹಾಕಿಕೊಂಡು (ದೂಅಟ್ಟ. ೧).
[ ದೇ.॥ ತಮಿ. ತಟ್ಟ, ತಟ್ಟೆ, ತಟ್ಟು, ತಟ್ಟೈ; ಮಲ. ತಟ್ಟ, ತಟ್ಟು; ತುಳು. ತಟ್ಟು; ಕೊಡ. ತಟ್ಟೆ; ತೆಲು. ತಟ್ಟ ]

**ತಟ್ಟೆಕಾಲು** (ನಾ). ಮಗ್ಗದ ಹಾಸಿಗೆ ಆಧಾರವಾಗಿ ನಿಲ್ಲಿಸುವ ಕತ್ತರಿ ಕಾಲು ; ತಿಕ್ಕಡಿ: (ರೀಕ್).
[ ತಟ್ಟೆ + ಕಾಲು₁ (<ಕಾಲ್₁) ]

**ತಟ್ಟೆಕೆಱೆ** (ನಾ) ಒಂದು ಊರಿನ ಹೆಸರು (?) : ದತ್ತಿ ತಟ್ಟೆಕೆಱೆ ಸರ್ವ ಬಾಧಾ ಪರಿಹಾರಾ (ಮ್ಯಆರಿ. ೧೯೩೩, ೧೧೩-೨೪ ; 10ನೆಯ ಶತ) ; ಪಟ್ಟದ ಬಸದಿಯ ಪ್ರತಿಬದ್ಧವಾಗಿ ಸಮಾದೇಯಮುರ್ಖ್ಯವಾಗಿ ಬಿಟ್ಟ ದತ್ತಿ ತಟ್ಟೆಕೆಱೆ ಸರ್ವ್ವಬಾಧಾ ಪರಿಹಾರ (ಎಕ. VII, ಶಿವಮೊ. ೪-೭೦ : 1122).
[ ? ]

**ತಟ್ಟೆಗಲ್ಲು** (ನಾ). ಚಪ್ಪಟೆಯಾದ ಕಲ್ಲು : ಅಲ್ಲಿಂದಂ ಪಡುವ ನಡದು ವಟ್ಟ ಹಲಗೆಗಲ್ಲು ಅಲ್ಲಿಂ ಪಡುವ ನಡದು ನಟ ತಟ್ಟೆಗಲ್ಲು (ಎಕ. XII, ತಿಪಟೂ. ೧೩೯-೭೩ ; ೪). [ ತಟ್ಟೆ + ಕಲ್ಲು (<ಕಲ್₂) ]

**ತಟ್ಟೆಗೋಡು** (ನಾ). ಚಪ್ಪಟೆಯಾದ ಕೋಡು,-ಕೊಂಬು : ನಮ್ಮ ಮನೆ ಎಮ್ಮೆಗೆ ತಟ್ಟೆಗೋಡು (ಕೂಡಿ). [ ತಟ್ಟೆ + ಕೋಡು₆ ]

**ತಟ್ಟೆಯ** 'ತಟ್ಟಯ' ನೋ.

**ತಟ್ಟೆವಟ್ಟಲು** (ನಾ). ೧. ತಟ್ಟೆ ಮತ್ತು ಬಟ್ಟಲು. ೨. ತಟ್ಟೆಯ ಸುತ್ತಲು ಇಡುವ ಬಟ್ಟಲು ; ಎಡೆಬಟ್ಟಲು : ಪೊನ್ನ ಪರಿವಾಣದೊಳು ದಿವ್ಯಾನ್ನಮುಮನು ತೀವಿ ತಾ ಪೊಳೆವ ಚಿನ್ನದುರೆ ತಟ್ಟೆವಟ್ಟಲಲಿ ತಿಳಿದುಪ್ಪಮಂ ಪೂರೈಸಿ (ನವಕೋ. ೯-೨೭). 'ಎಡೆವಟ್ಟಲ್' ಪರಾ.
[ ತಟ್ಟೆ + ಬಟ್ಟಲು (<ಬಟ್ಟಲ್) ]

**ತಟ್ಟೆವಳ್ಳ** (ನಾ). ಒಂದು ಪ್ರದೇಶದ ಹೆಸರು (?) : ಪಡೆದ ತಟ್ಟೆವಳ್ಳವ ಕಲ್ಲ ನಟು (ಮ್ಯಆರಿ. ೧೯೨೪, ೧೧೭-೧೦ ; ೩ನೆಯ ಶತ). [ ? ]

**ತಟ್ಟೈಸು** 'ಥಟ್ಟೈಸು' ನೋ.

**ತಟ್ಟ್ಯ** (ನಾ). ಎದುರಿಸುವವನು; ಪ್ರತಿಭಟಿಸುವವನು : ಆತನೀ ಪರಿ ಕಣೆಗಳಲಿ ಸತ್ವಾತಿಶಯುವನು ತೋಱದಡೆ ಮಾಂಧಾತನಲಿ ತಟ್ಟ್ಯರ ತಱಿದೊಟ್ಟಿದನು ಬೇಗದಲಿ (ಉತ್ತರಾ. ೧೬-೩೭). [ ? ]

**ತಡ₁** (ನಾ). ೧. ಅಡ್ಡಿ ; ತಡೆ ; ವಿಘ್ನ : ತಂದೆ ಪೇಟ್ಟಟ್ಟಿದ ರಾಜ ಸೂಯಮುಖಮಂ ತಡವಿಲ್ಲದೆ ಬೇಳ್ದ ಬೀರಮಂ ನೆಟ್ಟನೆ ನೀನೆ ಕಂಡಿಟಿಸಲಕ್ಕುಮೆ ಗಾಂಡಿವಿಯುಂ ಸುಯೋಧನಾ (ಗದಾಯು. ೨-೩೭). ೨. ಹೊತ್ತು ಮೀರುವುದು ; ಸಾವಕಾಶ ; ವಿಳಂಬ : ತಡವಾದರೆ ಬಡವಾದ ತಾಯ (ಮಹಾದೇ. ಬ. ೧೪೨-೩೨೩) : ತಡವಾದುದುಂಟು ನಲ್ಲನೆ (ಯಶೋಚ. ೨-೫೦) ; ಅರಗಿನರಸನ ಬಾಗಿಲಲಿ ದಳ್ಳುರಿಗೆ ತಡವೇ ಹೊಕ್ಕು ನಿಮಿಷದೊಳೊರಸಿದನು ಚತುರಂಗ ಬಲವನು (ಕುಮಾರವ್ಯಾ. ೫-೪೦). ೩. ಗಜಾರೋಹಣದ ರೀತಿಗಳಲ್ಲೊಂದು (?) : ಅಗ್ಗಳಮಾಗಿ ಕಾಲ್ಗಿಡಿಸಲುಂ ಮುರಿದು ಕಿಟ್ರಡಂ ತಡವೆಂಬಿವಱಿಂದಂ ಬಾಹು ಕೈಕೊಳ್ಳೆಂಬಿವು ಮೊದಲಾಗಿ ಗೋಮೂತ್ರ ಮಂಡಲಮುಮಾಕಾಶಂ ಪೇಜವಿತಿಯೆಂಬ ವಿಧಿಗಳೊಳ್ ಬಂದು ನೆಲೆಗಿಡಿಸಲುಂ ಪೊಲಗಿಡಿಸಲುಂ ಬಲ್ಲೆನೆನ್ನ ಕೆಯ್ಯೊಳ್ (ಶಾಂತಿಪು. ೩-೨೩ ವ).

**ತಡಮಾಗು₁, ತಡವಾಗು₁** = ೧. ವಿಳಂಬವಾಗು ; ನಿಧಾನವಾಗು : ಮರಣಕ್ಕನ್ನಿಂದೆ ನೀಂ ಮುಂಚಿದಯ್ ಮೊನೆಯೊಳ್ಪೊಟ್ಟಿಡಮಾಯ್ತು ದೊಂದೆಡೆಯೊಳಂ ಹಾ ವತ್ಸ ದುಶ್ಶಾಸನಾ (ಗದಾಯು. ೩-೭) ; ತಡವಾದ ವುದುಟಿದರನೀ ಯೆಡೆಗೆ ನಿಯೋಜಿಸಲಿಕೆಂಬವೊಲ್ ನೃಪವರನಿರ್ದೆಡೆಗೆ ಬಿಡದೆಡೆಯಾಡುವ ಬೆಸಕೆ ಕನ್ನೆ ತನ್ನಯ ಮನಮಂ (ಕಾದಂಬ. ೮೭) ; ಅಲ್ಪ ಶ್ರೀಮಂತನಂತೆ ನಡೆ ತಡವಾಗಲುಂ (ಧರ್ಮಾಮೃ. ೬-೩೮). ೨. ತಡವರಿಸು ; ತೊದಲು : ನುಡಿ ತಡವಪ್ಪುದೊಂದು ಮೊಗದೊಳ್ ಮಱುಕಂ ದೊರೆಕೊಳ್ವುದೊಂದು . . . ಕಳ್ಗುಡಿದವರಂದಮಿಂತು ಸಿರಿ ಸಾರ್ತರೆ ಸಾರ್ವುದು (ಪಂಪಭಾ. ೨-೪೯). **ತಡ ಮಾಡು₂** = ಕಾಲಹರಣ ಮಾಡು ; ವಿಳಂಬ ಮಾಡು : ಮಾಡಿಸಿ ಲಾಕ್ಷಾಮಯಮಂ ಮಾಡಮನತಿಗೋಪ್ಯದಿಂದಂ . . . ತಡ ಮಾಡದೆ ನಡೆತಂದು ತಮ್ಮ ಜನಕಂಗಾಗಳ್ (ಮಹಾನೀ. ೯-೪೯); ನಾನೇನು ಬೇಕೆಂದು ತಡಮಾಡಲಿಲ್ಲ (ಕೀಮೋಚ. ೧೦೯).
[ ದೇ.॥ ಮಲ. ತಡ = ಅಡ್ಡಿಪಡಿಸುವಂತಹುದು ; ಕೊಡ. ತಡು ; ತುಳು. ತೆಲು. ತಡ ]

**ತಡ₂, ದಡ₃, ಧಡ₁** (ನಾ). ೧. ತಡಿ ; ದಂಡೆ ; ಅಂಚು ; ತೀರ : ತಟ – ತಡ, ತಟ – ತಡಿ (ಶಮಾದ. ೨೩೫ ಪ್ರಯೋಗ) ; ತನ್ನಲ್ಲಿ ಸ್ನಾನವನ್ನು ಮಾಡಿದ ಮನುಷ್ಯರ ಸಕಲ ಪಾಪಗಳನ್ನು ಪರಿಹರಿಸುವಂತಾಗಿ ತನ್ನ ತಡದಲ್ಲಿ ಹುಟ್ಟಿದ ಹುಲ್ಲುಬಳ್ಳಿಗಳು (ಶಿವದ. ೨೮-೩). ೨. ಹೊಂದಾಣಿಕೆ ; ಬೆರೆಯುವಿಕೆ: 'ತಡಂಗಲಸು' ಪರಾ. ೩. ಸಮವಾದುದು ; ಸಾಟ ; ಸಮಾನ: 'ತಡಂಬರ್₂' ಪರಾ. **ದಡ₃** : ೧. ಇಂದು ನೀರದಡದಲ್ಲಿರುವನೆ ಏನೆಂದರು ಮುಖವೆತ್ತಿ ನೋಡನೆ (ಪುರಂದ. ೧-೫೪-೧) ; ಕಲಿ ವಸುದೇವ ಮಿಂದೀಸಾಡಿ ದಡದಲಿ ದೇವರನು ವಂದಿಸಿ (ಕಾಳ್ಯಭಾ. ೧೭-೧೦) ; ತಟ, ದಡ (ಶಬ್ದಾನು. ೧೪೩ ಪ್ರಯೋ) ; ಬೊಬ್ಬುಳಿ ತೆರೆಯನು ದಡಕ್ಕೆ ಹೊಮ್ಮಿಸಿ (ಕನ್ನಡಾ. ೧೧೧-೬). **ಧಡ₁** : ೧. ಹೊಳೆಗಳ ಧಡದಲ್ಲಿದ್ದ ಭೂಮಿಯಂತು ಕೇವಲ ಚಿನ್ನವೆಂದೆನ್ನಿಸಿಕೊಳ್ಳುತ್ತದೆ (ಮುಂಬಯಿ. ೫-೧೯೫) ; ವಿಶಾಲವಾದ ಅನಂತ ನೀಲ ಸಮುದ್ರದಲ್ಲಿ ಧಡ ಕಾಣದೇ ಅಲೆಯುತ್ತಿರುವ ಹಡಗದಂತಾಗಿರುವೆನು (ವಿದೂರಿಟ. ೧೫೭) ; ಸಮುದ್ರ ಧಡಕ್ಕೆ ಬಂದು ಕುಳಿತೆವು (ಮೋದಿವ. ೫೩).

**ತಡತಡಮಾಗು** = ತಡಮಾಗು₂ : ಅದಱ ಕಟಾಕ್ಷಚಂದ್ರಿಕೆ ಪಳಂಚಿ ಗವಾಕ್ಷದ ಚಂದ್ರಕಾಂತದಿಂದುಡುಗದೆ ಸೋರ್ವ ನೀರ್ವನಿಗಳುಣ್ಮಿದ ನರ್ತನ ಘರ್ಮವಾರಿಯೊಳ್ ತಡತಡಮಾಗೆ ಮಾಧವಿ ಮುಗುಳ್ವೊಲಿರ್ದಳ ವಿಂಡಿರಿಂದಂ (ಮಲ್ಲಿಪು. ೨-೭೦). **ತಡಮಾಗು₂, ತಡವಾಗು₂** = ೧. ಸಾಟಿಯಾಗು ; ಸಮಾನವಾಗು : ಅಕ್ಷಿಗಳ ಚಂದ್ರಿಕೆ ಚಂದ್ರಿಕೆಯಂ ಪಳಂಚಿಗೇಯದ ರುಚಿ ಕಂತುಚಾಪರುಚಿಯೊಳ್ ತಡಮಾಗೆ . . . ಕಾಂತೆ ಮಿಂಚು ಪೊಳೆದಾಡುವವೊಲ್ ಪೊಳೆದುಯ್ಯಲಾಡಿದಳ್ (ಜಗವಿ. ೧೭-೧೧೩) ; ಆಮೋದಿತಮುದಿತ ಮಧುಕರ ದಾಮಕದೊಳ್ ನೀಲರತ್ನದಾಮಂ ಮಲ್ಲೀಧಾಮಕದೊಳ್ ಮುಕ್ತಾಫಲದಾಮಂ ತಡವಾದುವೊಡನೆ ಮಣಿಮಂಡಪದೊಳ್ (ಪಂಪರಾಮಾ. ೫-೧೧೫). ೨. ಹೊಂದಿಕೊಳ್ಳು ; ಜೊತೆಯಾಗು : ಮೊಱೆ ತಡಮಾಗೆ ನಾಣಗಲೆ ತೆಳ್ವದನೊಳ್ಪದನಾಗಿ ಪಾಯೆ (ಸೂಕ್ತಿಸು. ೧೪-೩೭) ; ಸುರಸುಂದರಿಯರ್ ನಡೆತಂದರಂದು ಸುಯ್ಯೊಗೆ ಪಳಿಮಾಲೆ ತಮ್ಮ ಲಲಿತಾಲಕದೊಳ್ ತಡವಾದುದೆಂಬಿನಂ (ಪಂಪರಾಮಾ. ೧೭-೯೩). [ <ಪ್ರಾ. ತಡ. / ಸಂ. ತಟ ]

**ತಡ₃** (ನಾ). ಆಧಾರ ; ನೆಲೆ ; ತಳ : ತಡದಿಂ ಕಿತ್ತಡಿಯಿಂಬುದಗಡಿಗಡಿ ಪೊಕ್ಕು . . . ಪೊಯ್ದರ್ (ಗದಾಯು. ೮-೧೭). 'ತಡಂಗಿಡಿಸು' ಪರಾ.
[< ತಳ ]

**ತಡ₄** (ನಾ). ಗಾಬರಿ ; ಗೊಂದಲ ; ತಬ್ಬಿಬ್ಬು ; ದಿಗ್ಭ್ರಾಂತಿ : (ಕ).

**ತಡತಡ, ತಡದಡ** (ದ್ವಿರುಕ್ತಿ) : 'ತಡತಡವರ್', 'ತಡತ್ರಡಿಸು', 'ತಡ ದಡವರ್' ಪರಾ.

**ತಡತಡಂದೊಡರ್** = ಅಸ್ಥಿರತೆಯುಂಟಾಗು ; ತೂಕತಪ್ಪು : ಇರದೆ ಮನಕ್ಕೆ ಸೊಕ್ಕಡರೆ ಪೊಂಪುಟ್ವಿ ವಕ್ತ್ರದೊಳುಣ್ಮೆ . . . ಕಣ್ಮಲರೊಳ್ ನಸುಗಂಪು ಪೊಣ್ಮೆ ತಚ್ಚರಣಸರೋಜದೊಳ್ ತಡತಡಂದೊಡರ್ದಾ ರಸನಾಗ್ರದೊಳ್ ತೊದಟ್ವೆರಸಿದ ಮಾತಿನಿಂದೆಸೆದರಂಗನೆಯರ್ ಮಧುಪಾನಕೇಳಿಯೊಳ್ (ಕುಸುಮಾ. ೧೧-೧೬೦). **ತಡತಡಾಗು, ತಡತಡವಾಗು**=ಅಸ್ಥಿರವಾಗು ; ತತ್ತರಿಸು : ಅದು ತಡತಡಾದೊಡರ್ಹತ್ಪದಮನೆ ನಾಲಗೆಗೆ ತರ್ಪುದದು ಬಾರದೊಡಿರ್ಪುದಕಾರಮೊಂದಱೊಳ್ (ಆದಿಪು. ೨-೫೬) ; ಬಾಡಿದ ಪೂಮಾಲೆಯೊಡನೆ ಬಟಲ್ದ ಸೋಮರ್ಮಡಿಗಳು ಮಡಿಗಡಿಗೆ ತಡದಡವಪ್ಪ ನಡೆಗಳುಂಬೆರಸು (ಆದಿಪು.೧೦-೬೮ವ). **ತಡಮಾಗು$_1$, ತಡವಾಗು$_1$**=೧. ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ದಿಗ್ಭ್ರಾಂತವಾಗು: (೬). ೨. ತೊಡಕಾಗು; ತಪ್ಪಾಗು: ಪದದಪ್ಪದೆಯುಂ ಬಗೆ ಬೆದಱದೆಯುಂ ಕತೆ ಕೆಡದೆಯುಂ ಭವಾವಳಿ ತಡಮಾಗದೆಯುಂ (ಶಾಂತಿಪು. ೫-೧೦); ಸುಖದ ಸೊರ್ಪಿಯೆನಲ್ಕೆ ಪಾಡಿ ಮೆಚ್ಚಿಸುವನಿಮೇಷಗಾಯಕಿಯರಾಲಯದೊಳ್ ತಡಮಾಗದೋದಿ ಬಾಜಿಸುವ ಮರುದ್ಧರಾ ವಿವಿಧವಾದ್ಯವಿಶಾರದ ವಾದಕರ್ಕಳುಂ (ಮಹಾನೇ. ೨-೪೬) ; ಶಕ್ಕಳಿದು ತಡವಾಗಿ[ಪಾಠಾಂ. ಉಕ್ಕಿ ತಡಬಡವೋಗಿ. ತಳರ್ದುತಡಬಡವಾಗಿ]ಹೊರೆಯೇಱ ನೋಡುತುಂ (ಸಂಬಿರ. ೬-೧೩೦). **ತಡಮಾಡು$_1$** = ತಳ್ಳಂಕಗೊಳ್ಳು ; ಆಕುಲಗೊಳ್ಳು ; ಕಳವಳಗೊಳ್ಳು : ರೋಮೋದ್ಗಮಂ ಪೊಣ್ಮೆ . . . ಮತ್ತಂತೆ ನಡೆನೋಡಿ ಚಿತ್ರದೊಳ್ ತಡಮಾಡಿ (ಜಗವಿ. ೧೬-೧೦೮ ರಗಳೆ) : ನಿಂದ ಭರಕ್ಕೆ ಧಾತ್ರಿ ನಡುಗುತ್ತಿರೆ ಮೆಟ್ಟಲಯಕ್ಕೆ ದಿಗ್ಗಜಂ ಪಿಂದಡಿಯಿಟ್ಟು ಬೆರ್ಚುತಿರೆ ಪಿಂದೆಸೆಗಳ್ ತಡಮಾಡೆ[ಪಾಠಾಂ. ವಾಗೆ]ತಾಂಡವಾನಂದದಿನಾಡುವಲ್ಲಿ ಹರಿ (ಅನಂಪು. ೫-೯೮). [ ? ]

**ತಡಂ** (ಅ). ೧. ಬೇಗನೆ ; ಕೂಡಲೆ : ಓಲೆಯಂ ಬಾಚಿಸುವುದು ತಡಮೇಟ್ರಂದು ತಾಂ ಕಾಣ್ಬುದೆಮ್ಮಂ (ಕಾದಂಬ. ೨೫೯). ೨. ಮೆಲ್ಲನೆ ; ನಿಧಾನವಾಗಿ : ಸೊಗಯಿಸೆ ತೊಟ್ಟ ಪೂದುಡುಗೆ ಮೆಲ್ಲೆರ್ದೆಯೊಳ್ ತಡಮಾಡೆ ಗಾಡಿ (ಪಂಪಭಾ. ೨-೧೮) ; ಆನೆಯಾನೇಱ ಸೌಷ್ಠವದೆ ಬರ್ಪರಿಕೇಸರಿಯೊಂದು ಗಾಡಿಯುದ್ಧಾನಿ ತಗುಳ್ದು ಕಣ್ಣೊಳೆ ಕೊಟಲ್ದೆರ್ದೆಯೊಳ್ ತಡಮಾಡೆ (ಪಂಪಭಾ. ೪-೫೮) ; ಮಲಿನಂಗಳಂ ತೊಳೆಯೆಯೊ ತಡಂಬಡಿಸಿದೆಯೊ ಬಿಂದಿಗೆಯ (ಬಸವು. ೪೬-೧೩). [<ತಡ$_1$ ]

**ತಡಂಗ** 'ತ್ರಟಂಕ' ನೋ.

**ತಡಂಗಡಿ, ತಡಗಡಿ** (ಕ್ರಿ). ೧. ಸಂಪೂರ್ಣ ಕತ್ತರಿಸು ; ಪೂರ್ತಿ ಕಡಿ : ಸಂಧಿ ಸಂಧಿಗಳಂ ಗಂಟುಗಡಿವುದುಂ ತಡಂಗಡಿವುದುಂ (ಸುಕುಮಾ. ೧೦-೪೭ವ) : ದಾಟಿಯಂ ತಡಂಗಡಿದುಂ ಕೊಂತದಿಂ ತಗುಳ್ದಿಱಿದುಂ (ಧರ್ಮಾಮೃ. ೩-೭೩) : ಮಾಳವನಂ ತಡಂಗಡಿದು (ಎಇ. XV, ೩೨೦-೨೦ : 1172) : ಕೊಯ್ಕೆ ಪೊರಳ್ಚಿ ಕುತ್ತೆ ಕೊಱೆದಿಕ್ಕೆ ತಡಂಗಡಿದೊಟ್ಟೆ ನೆತ್ತಿಯಂ ಪೊಯ್ಕೆ (ಅನಂಪು. ೯-೩೨). ೨. ದಡವನ್ನು ಕೊಚ್ಚು ; ತಟವನ್ನು ಮೀರು : ಅದಱ ಬಿದುಮುಟ್ಟೆ ದಿವಮಂ ಮದಧಾರಾಸಾರದಿಂ ತಡಂಗಡಿದ ವಿಯನ್ನದಿಯುಸಿತಮಾಗೆ ಮೃಗಮದನದಿಯೆಂದೇವೈಪರಮರರಘಮರ್ಷಣದೊಳ್ (ಅನಂಪು. ೦೩-೨೦). **ತಡಗಡಿ** : ೧. ಕತ್ತಲೆಯ ಮೊತ್ತಮಂ ತಡಗಡಿದು ಬೆಳಗುತ್ತ ಪತ್ರಮಿತ್ರನುವುದಿಸಿದ (ನಪಮೋ. ೦೦-೪೩). [ತಡ$_2$ + ಕಡಿ$_1$]

**ತಡಂಗಲಸು, ತಡಂಗಲಿಸು** (ಕ್ರಿ). ೧. ಕೂಡಿಕೊಳ್ಳು ; ಒಂದಂಗೂಡು ; ಸೇರಿಕೊಳ್ಳು; ಬೆರೆ : ಆ ದೇವಗಣಿಕೆಯರ್ ಪೆಂಡವಾಸದೆಳಮೆಂಡಿರೊಳ್ ತಡಂಗಲಸಿ ನಿಲೆ (ಜಗವಿ. ೦೪-೯೨ ವ). ೨. ವ್ಯಾಪಿಸು: ಲವಲಿಕೆಯೆಂಬಳಂಘ್ರಿನಖರುಚಿ ತಡಂಗಲಸೆ ಪೂವಲಿಗೆದಱಿಯುಂ (ಚಂದ್ರಪ್ರ. ೧೦-೧೪೫ ವ) : ಯುವತಿಯರ ನುಡಿಯೊಳ್ ತಡಂಗಲಸಿದ ಪುಣ್ಯಪಾಠಕಜನಂಗಳಾಶೀರ್ವಾದನಾದಮುಮಂ (ಚಂದ್ರಪ್ರ. ೬-೯೬ವ). **ತಡಂಗಲಿಸು** : ೧. ನೇಱಿದ ನೇಜಿಲ ಪಣ್ಗೊನೆಯ ಸೀಗುರಿಗಳಮದಱೊಳ್ ತಡಂಗಲಿಸಿ ತೂಗುವ ಪೊಂಬಾಳೆಯ ಪೊಸ ಚಾಮರಂಗಳಂ (ಲೀಲಾವ. ೧೦-೫೫ವ) ; ನಳನಳಿಪ ಕೇಸರದ ಸಸಿಯೊಳ್ ತಡಂಗಲಿ[ಪಾಠಾಂ. ಲ]ಸಿ ಬೆಳೆದ ದವನದ (ಚಂದ್ರಪ್ರ. ೬-೯೫ವ);ಸಂಚರಿಸುವ ಚಂಚರೀಕಚಯದಿಂಪಿನ ಸೊಂಪಿನ ಗಾವರಂ ವಿಯಚ್ಚರಿಯರ ನೂಪುರಧ್ವನಿ ತಡಂಗಲಿಸಿತ್ತು ವಿವಾಹಗೇಹದೊಳ್ (ಶಾಂತೀಶ್ವ. ೪-೦೯೯). ೩. ಒಂದುಗೂಡಿಸು ; ಸೇರಿಸು : ಇಳೆಯಂ ವ್ಯೋಮಮುಮಂ ತಡಂಗಲಿಸಿ ದಿಕ್ಚಕ್ರಕ್ಕೆ ನಿಂದಿಕ್ಕೆ ಮಂಗಳ ತೂರ್ಯಧ್ವನಿ (ಅವಂಪು. ೦೪-೬೮). ೪. ಸಮಾನವಾಗು : ಎಲೆವಚ್ಚೆಯ ಪಲ್ಲಣಮುಳ್ಳಲರ್ದಡ್ಡಂ ಛತ್ರಮಡರ್ದ ನೊರೆ ಜಲ್ಲಿ ತಡಂಗಲಿಸೆಸೆಯೆ ರಾಜಹಂಸಂ ನಲವಿಂ ತೆರೆಗುದುರೆಯೇಱ ಕುಣಿಯಿಪನದಱೊಳ್ (ವ್ಯಾಪವಿ. ೪-೧೩).

[ ತಡ$_3$ + ಕಲಸು$_1$ ]

**ತಡಂಗಲಿಸು** 'ತಡಂಗಲಸು' ನೋ.

**ತಡಂಗಲು** (ನಾ). ಅಡ್ಡಿ ; ತೊಂದರೆ : ರಾಜಕೀಯ ಕಾರಣಗಳಿಂದಲೋ ಏನೋ ಈ ಮುನ್ನಡೆಗೆ ತುಸು ತಡಂಗಲಾಗಿ (ನಂಜುಂಡ. ೩೯).

[←ತಮಿ. ತಟುಙ್ಕಲ್ ]

**ತಡಂಗಾ** (ಕ್ರಿ). ನಿಲ್ಲುವಂತೆ ರಕ್ಷಿಸು ; ತಡೆದಿಟ್ಟುಕೊಳ್ಳು : ಕಣ್ಣೊಳೋಪರಂ ಕಾವುದು ಸುತ್ತಿ ಪತ್ತಿ ಸವಿಯೊಳ್ ಸೆಱಗೆಯ್ವುದು ಜೀವಮಂ ತಡಂಗಾವುದು (ಲೀಲಾವ. ೦೪-೪೩). [ ತಡ$_1$ + ಕಾ$_1$ ]

**ತಡಂಗಾಲ್, ತಡಂಗಾಲು, ತಡಗಾಲ್** (ನಾ) ೧. ನಡೆಗೆ ಅಡ್ಡಿಪಡಿಸುವ ಕಾಲು; ಅಡ್ಡಗಾಲು; ತೊಡರುಗಾಲು: ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳಪ್ಪುವು ಅವರ್ಕೆ ಪ್ರಯೋಗಂ—ಬೆಡಂಗು . . . ತೊಡಂಕು, ತಡಂಗಾಲ್ (ಶಮದ. ಸು. ೪೬ ಪ್ರಯೋ). ೨. ಅಡ್ಡಿ ; ತಡೆ; ನಿರೋಧ; 'ತಡಂಗಾಲ್ವೊಯ್' ಪರಾ. **ತಡಂಗಾಲು** : ೨. 'ತಡಂಗಾಲುವೊಯ್' ಪರಾ. **ತಡಗಾಲ್** : ೧. ಅರೆಬರ್ ತಡಗಾಲೆಂಬಂತಬಿಂದುವು ಮನಾಚರಿಪರ್ (ಶಮದ. ೦೬೩).

**ತಡಗಾಲ್ಮಾಧವ, ತಡಂಗಾಲಮಾಧವ** = ಶತ್ರುರಾಜರಿಗೆ ತೊಡರುಗಾಲಿನಂತಿರುವ ಮಾಧವ; ಒಂದು ಬಿರುದು: ಗಂಗನಿಂ ಭಯಮಿಲ್ಲದ ಹರಿವರ್ಮ್ಮ ವಿಷ್ಣುನೃಪನಿಂ ನಿಜದಿಂ ಬಳ್ಲೆ ತಡಂಗಾಲ್ಮಾಧವನಲ್ಲಿಂ ಬಳಿ ಚುಚ್ಚರ್ವಾಯ್ದು ಗಂಗನೃಪಾಳಂ (ಎಕ. VII, ಶಿವಮೊ. ೫೬-೮ ; 1116) : ಬಿರುದರಂ ತಡಂಗಾಲುಪೊಯ್ದುಡಿಗಿಡಿಸುವ ತಡಂಗಾಲಮಾಧವನ್ (ಎಕ. VII; ಶಿವಮೊ. ೪-೪೦ ; 1122). [ ತಡ$_1$ + ಕಾಲ್$_1$ ]

**ತಡಂಗಾಲು** 'ತಡಂಗಾಲ್' ನೋ.

**ತಡಂಗಾಲುವೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ಗೊಳ್** (ಕ್ರಿ). ಅಡ್ಡಗಾಲಾಗು ; ಕಾಲಿಗೆ ಅಡ್ಡಲಾಗಿ ಬರು : ಪೊಸವಾಣತಿವುಲ್ಲೆ . . . ತವಕದಿಂ ಬರುತ್ತುಂ ಕೂಡೆವರಲುಮಿರಲು ಮಱಿಯದೆ ತಡಂಗಾಲ್ಗೊಂಡು ತಡೆದು ತಡದಡವರ್ಪ ತರುಣ ಹರಿಣಂ (ಪುಷ್ಪಕೃ. ೩-೬೬ ವ). [ ತಡಂಗಾಲ್ + ಕೊಳ್$_1$ ]

**ತಡಂಗಾಲ್ಪೊಯ್** 'ತಡಂಗಾಲ್ವೊಯ್' ನೋ.

**ತಡಂಗಾಲ್ವೊಯ್, ತಡಂಗಾಲುವೊಯ್, ತಡಂಗಾಲ್ಪೊಯ್** (ಕ್ರಿ). ಅಡ್ಡಗಾಲು ಹಾಕು; ಅಡ್ಡಿಯನ್ನು ಉಂಟುಮಾಡು; ಅಡ್ಡಡ್ಡ ಬರು: ಮೊಗೆದು ಮೊಗೆದು ನೀರ ಮೊಗಕೆ ಚೆಲ್ಲುವ ಪುಟನೆಗೆವ ತಡಂಗಾಲ್ವೊಯ್ವ (ಕುರಾಸಾಂ. ೨೬-೧೦೦). **ತಡಂಗಾಲುವೊಯ್** : ಬಿರುದರಂ ತಡಂಗಾಲು ಪೊಯ್ದುಡಿಗಿಡಿಸುವ ತಡಂಗಾಲಮಾಧವಂ (ಎಕ. VII, ಶಿವಮೊ. ೪-೪೦ : 1122). **ತಡಂಗಾಲ್ಪೊಯ್** : ತೊಡರೆ ತಡಂಗಾಲ್ಪೊಯ್ದೊಡೆ ಕೆಡೆದುಂ

. . . ವೋದಿದೊಡಿರದಲ್ಲಡಗಾಗಿ ಮಡಿದು ಬಿಬ್ಬುವು ಗಡಣದ ಕರಿಘಟಿಗಳೇಂ ಬಲಸ್ಥನೋ ಭೀಮಂ (ಪಂಪಭಾ. ೧೧-೭೮); ಎನಿತಾನುಂ ಕುತ್ಸಿತಮಪ್ಪುದಾಹರಣೆಗಳಂ ತೋಱೆ ಶೂನ್ಯವಾದಮಂ ಮಾಡಿ ತಡಂಗಾಲ್ಗೊಯ್ದುದುಂ ಸಂಘಶ್ರೀಯ ವೃಥಾಲಾಪಕ್ಕೊಳಗಾಗಿ (ಧರ್ಮಾಮೃ. ೧೧-೧೫೭); ನೂಪುರದುಲಿಯ ಸನ್ನೆಗೆ ಬನ್ನನೆ ಬಂದು ಮಲ್ಲಡಿಗಳಂ ತಡಂಗಾಲ್ಗೊಯ್ವರ ಸಂಚೆಗಂಜಿಸೆ . . . ಮಣಿಗಂಭವಮನಿಂಬುಗೊಳ್ವ ಮಂದಗಮನೆಯರಿಂ (ಧರ್ಮನಾ. ३-೧೩३ ವ). [ ತಡಂಗಾಲ್ + ಪೊಯ್$_1$ ]

**ತಡಂಗಿಡಿಸು**, ತಡಗೆಡಿಸು (ಕ್ರಿ). ನೆಲೆಗೆಡಿಸು; ಆಧಾರವಿಲ್ಲದಂತೆ ಮಾಡು; ನಿರಾಧಾರಗೊಳಿಸು : ಸಿಂಧುತೋಯದಂತೆಬಿಗದರು ತಡಂಗಿಡಿಪ ನವ್ಯರನುರ್ವಿಪ ರಾಜಲೀಲೆ ಕಣ್ಣೆಱೆದುದು ಪುಷ್ಪದಂತ ಮಹಿಪಾಳನೊಳತ್ಯಮಳಾದ್ರ್ಯಶೀಲನೊಳ್ (ಪುಷ್ಪಪು. ೦೩-೬). **ತಡಗೆಡಿಸು** : ಗಿಡುವುಗಿಸಿತ್ತು ಪಾಂಡುಸುತರಂ ಯದುವಂಶವನೊರ್ವರೊರ್ವರಿಂ ತಡಗೆಡಿಸಿತ್ತು . . . ಮಿಕ್ಕರಂ ಬಿಡುವುದೆ ಬಾತೆಗೆಟ್ಟ ವಿಧಿ (ನೇಳೆಂ. ೬೪೩).

[ ತಡ$_3$ + ಕಿಡಿಸು (<ಕೆಡಿಸು$_1$) ]

**ತಡಂಗು** (ನಾ). ಕುದುರೆ ಸವಾರ ಕಾಲಿರಿಸಿಕೊಳ್ಳಲು ಇರುವ ಸಾಧನ ; ರಿಕಾಪು (?).

**ತಡಂಗಿನವ** = ರಿಕಾಪು ಹಿಡಿಯುವವನು ; ಕುದುರೆ ಚಾಕರ (?) : ಇಬ್ಬರೂ ಕುದುರೆಗಳನ್ನೇರಿ ಎದುರಲ್ಲಿ ನಾಲ್ಕು ಜನ ಹರಿಕಾರರನ್ನು ಬಿಟ್ಟುಕೊಂಡು ಜೊತೆಗೆ ನಾಲ್ಕು ಜನ ತಡಂಗಿನವರೊಂದಿಗೆ ಅಪ್ಪಂಗೊಳಕ್ಕೆ ಹೊರಟರು (ಚಿಕರಾ. ೩೪೩) ; ಅರಸ . . . ತಡಂಗಿನವನ ಸಹಾಯದಿಂದ ಕುದುರೆಯಿಂದಿಳಿದನು (ಚಿಕರಾ. ೩೪೫). [ ? ]

**ತಡಂಗುಂಡಿ** (ನಾ). ಸುತ್ತಲೂ ಕಟ್ಟೆಯಿರುವ ನೀರಿನ ಗುಂಡಿ ; ಕೊಳ ; ಸರೋವರ : ಸರಸಿಜದ ಸಿರಿಯ ನಾನವಹರಿಸಂ ವಮ್ಮುಖದಿನದುವೆ ನಿಜಮೆಂದು ತನೂದರಿ ತಂಡ[ ತಡಂ ]ಗುಂಡಿವುಗುವವೊಲರಸನ ಕೆಲದಲ್ಲಿ ಮುಱುಗಿದಳ್ ನಲಿದೊರ್ವಳ್ (ಚಂದ್ರಪು. ೬-೦೩೭); ಕರ್ಮಡುವಿನ ತಡಂಗುಂಡಿಯೊಳಡಂಗುವುವು (ರಾಮಾಶ್ವ. ३-೧೯) ; ತಡಂಗುಂಡಿಯೊಳೊತ್ತಿ ಬಾಳ್ಗಿಡಿಪ ಸಂಧಾನಕ್ಕೆ (ಸಂಸಪ. ೧೯-೧೦). [ ತಡ$_2$ + ಗುಂಡಿ$_2$ ]

**ತಡಂಗೂಡು** (ಕ್ರಿ). ಬೆರಸಿಕೊಳ್ಳು ; ಕೂಡಿಕೊಳ್ಳು : ತಳಿರಂ ತೂಗಿ ವರಾಗಮಂ[ ಪೊರೆ ]ದು ಪೂನೀರಂ ತಡಂಗೂಡಿ ಗುಗ್ಗುಳ ನಿರ್ಯಾಸಮನಾಂತು . . . ಗಂಧಂಗಳಂ ತಳೆದೇಂ ಗಂದಿಗರಂತೆ ಬಂದೊಲೆದುದೋ ಮತ್ತೊಂದು ಮಂದಾನಿಳಂ (ಅರ್ಧನೇ. ೫-೯೭). [ ತಡ$_3$ + ಕೂಡು$_1$ ]

**ತಡಂಗೆಡೆ** (ಕ್ರಿ). ಕಂಪಿಸಿದು ಬೀಳು; ತತ್ತರಿಸಿ ಬೀಳು; ನೆಲೆಗೆಡು : ಒರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗದಂಪತಿಗಳಂ (ಗಿರಿಕ. ೧-೧३೮ಪ); ಬೆದಱೆದುದಭ್ರಮುಱಿರಮಣನೊಟ್ಟಜೆಗೆಟ್ಟುದು ಪುಂಡರೀಕಮಟ್ಟುದು ಕುಮುದಂ ತಡಂಗೆಡೆದುದಂಜನಂ (ಪುಷ್ಪಪು. ೫-೮).

[ ತಡ$_3$ + ಕೆಡೆ$_1$ ]

**ತಡಂತಡಿಸು** 'ತಡತಡಿಸು' ನೋ.

**ತಡಂತೊಡರ್**(ಕ್ರಿ). ಸಮನಾಗಿ ತೊಡಕಿಕೊಳ್ಳು; ಚೆನ್ನಾಗಿ ಸೇರಿಕೊಳ್ಳು: ಸಂಚಳ ಮಿಾನಸಂಚಯಂ ಪೊದುಱುಗಲ್ ತಡಂತೊಡರ್ದು ತೋರ್ಪವೊಲೊಪ್ಪಿರೆ ಕೊಂಕುವೆತ್ತ ಸೀತೋದೆ ಸಡಿಲ್ದು ನೀಳ್ದ ಶರದಂ ನಿಱಿಗೊಂಡು ಬಟಲ್ದ ಭಂಗಿಯಿಂ (ಅರ್ಧನೇ. ೦-೬೧). [ ತಡ$_3$ + ತೊಡರ್$_1$ ]

**ತಡಂನುಡಿ** (ನಾ). ನಿಧಾನವಾಗಿ ಆಡುವ ಮಾತು; ತಡೆದು ತಡೆದು ಆಡುವ ಮಾತು: ನಡೆತಂದರ್ ಚೆಲ್ವಿಂದೊಲ್ನುಡಿಯ ತಡಂನುಡಿಯ ತೊದಳ ನುಡಿಯೊಳ್ವೆಂಡಿರ್ (ಜಗವಿ. ४-೦३೭). [ ತಡ$_1$ + ನುಡಿ$_2$ ]

**ತಡಂಬಡ** 'ತಡಬಡ' ನೋ.

**ತಡಂಬಡಿಸು** 'ತಡಬಡಿಸು' ನೋ.

**ತಡಂಬಡು**$_1$ (ಕ್ರಿ). ತಡಮಾಡು ; ವಿಳಂಬಮಾಡು : ಈಗಳೆನಸುಂ ತಡಂಬಡದೆ ಬಣ್ಣಿಸಿ ನಿನತೊಂದೊಲ್ಮೆವಡೆದಪೆಂ (ರಾಮಾಶ್ವ. ೪೪-೧೫) ; ತಡಂಬಡದಯ್ಯನ ನೇಹದಿಂ ತಾಂ ಮಱುಗದೆ ಬಗೆಗುಂದದೆ ಕಾಂತನಂ ರಣಕೆ ಬೀಱಿಕೊಟ್ಟಳ್ (ರಾಮಾಶ್ವ. ೧೩೦-೫).

[ ತಡ$_1$ + ಪಡು$_1$ ]

**ತಡಂಬಡು**$_2$ 'ತಡಬಡು' ನೋ.

**ತಡಂಬಡು**$_3$ (ಕ್ರಿ). = ತಡಂಬಡೆ : ಸೂಸುವ ಶೀಕರಾಳಿ ತಾರಕಗಣದೊಳ್ ಸಮುಂಬಡೆಯ ತೇಂಕುವ ಮೌಕ್ತಿಕ ರತ್ನಗರ್ಭಶುಕ್ತಿಕೆ ಪೆಱಿಯೊಳ್ ತಡಂಬಡೆ ಸುಧಾರ್ಣವವೊಪ್ಪಿದುದುದ್ಧತಾರ್ಣವಂ (ಜಗವಿ. ೧-೪೪).

[ ತಡ$_2$ + ಪಡು$_1$ ]

**ತಡಂಬಡೆ** (ಕ್ರಿ). ಸಮಕ್ಕೆ ಬರು; ಸಮಾನತೆಯನ್ನು ಪಡೆ; ಸರಿಯಾಗು: ಹೀರಮನೊಂದಿಸಿದ ಹಾರಮನುರಸಿಜಕೆಳಲಿಟ್ಟು ಸುಧಾಗಾರಮನೇಱಿ ತಡಂ[ಹಾಕಾಂ. ಜುತೆಡ್ಡಂ]ಬಡೆದಳ್ ನೀಹಾರಮಹೀಧರಮಂ ಪರ್ವಿದ ಶೃಂಗಾರಮರುಲ್ಲತೆಗೆ (ಉದ್ಭಟ. ४-೪೪).

**ತಡತಡಂಬಡೆ** (ದ್ವಿರುಕ್ತಿ) : ತುಂಬಿಗುರುಳೊಳ್ ತಡತಡಂಬಡೆದು ತುಂಬಿಗಳ ಬಿಂಬವೆಳಸುತಿರೆ (ಸೂಕ್ತಿಸು. ೦೩-೧೦). [ ತಡ$_4$ + ಪಡೆ$_1$ ]

**ತಡಂಬರ್**, ತಡವರ್ (ಕ್ರಿ). ೧. ತಡವಾಗಿ ಬರು; ನಿಧಾನವಾಗಿ ಬರು (?) : ಮತ್ತೊಂದು ದಿವಸಂ ಪ್ರಭಂಕರಿಯೆಂಬ ಕೊಳದೊಳ್ ಸ್ವೇಚ್ಛೆಯಿಂ ನೀಡುಂ ಕ್ರೀಡಿಸುತ್ತಂ ತಡಂಬಂದು ಮನಃಪೂರ್ವಕಮಲ್ಲದೆ ಪೊಱಮಡುವಾಗಳ್ (ವಡ್ಡಾರಾ. ೩೭-೩೦). **ತಡವರ್** : ೨. ಅಡ್ಡಿ ಬರು: ತಲೆಗರೆಯ ದಣ್ಣ ಸತ್ತರ ತಲೆಗಳನಟ್ಟೆಯೊಳವರ್ಚಿಕೊಂಡೊಯ್ಯೆಡೆಯೊಳ್ ತಲೆ ತಡವರಲಮರಿಯರೇಂ ತಲೆಯುಂ ತಲೆವಿಡಿದು ಬಿಡದೆ ತಲೆವತ್ತಿದರೋ (ಪಂಪಾಮ. ೦೩-೫೬) ; ನಟ್ಟಿರೆ ಕಿವಿಯುಂ ಕಣ್ಗಳ್ ಬಿಟ್ಟಿರೆ ಮೆಯ್ಯಱಿಯದೆಱಿಗಿ ತಡವಂದು ತಡಂಮೆಟ್ಟಿ . . . ಕರಂ ವಿಕಲನಾದ ತುರಗಂ ಸಾಯ್ಗುಂ (ಅಶ್ವಶಾ. ೧೧-೪೬). [ ತಡ$_1$ + ಬರ್$_1$ ]

**ತಡಂಬರ** (ನಾ). ಕಳವಳ; ಗಾಬರಿ; ಸಂಕಟ; ತಲ್ಲಳ (ತಲ್ಲಣ), ತಳಮಳ, ತಡಂಬರ, ಕಳವಳ, ಸಿಡಿವಿಡಿ, ಕಸಿವಿಸಿ, ಬೇಗುದಿ, ಅಳಲು, ಕೊಳಲು (ಕಂಸುಹು. ೮೪). [ ? ]

**ತಡಂಬರಿ** (ಕ್ರಿ). ೧. ಮುನ್ನುಗ್ಗು (?) : ತಳರೆ ತಳಚ್ಛುಗವಂಗೆ ಕನಕಾಚಳ ಮೊತ್ತುವವಂಗೆಲೇ ವಿಯತ್ತಳಮಲರ್ವ್ವಂಗೆ ತೀವಿ ತೆಗೆದಂಬು ತಡಂಬರಿವಂಗೆ ಕಂಟಕಪ್ರಳಯಂ . . . ಚಟ್ಟಮನೆಂಬ ಚಟ್ಟಿಗಂ. (ಎಕ. XI. ದಾವಣ. ४३-४८ ; 1164). ೨. ಹೊರಹೊಮ್ಮು,–ಸೂಸು : ಮುಸುಂಕುವ ಕುಂಕುಮಾಂಬು ಸಂಕುಲದೊಳದೊಂದು ಕೆಮ್ಮುಗಿಲ ಕಾವಣದೊಳ್ ಕುಡಿಮಿಂಚುಗಳ್ ತಡಂಬರಿವವೊಲೇಂ ಬೆಡಂಗಡರ್ದರೋ ರುಚಿಮದ್ವಿಚಳಲ್ಲ ತಾಂಗಿಯರ್ (ಅನಂಪು. ೬-३८).

**ತಡಂತಡಂಬರಿ** (ದ್ವಿರುಕ್ತಿ) : ಪಿಡಿದರಂಗನೆಯಂ ಪಿಡಿದೊಯ್ವರೆಂದು ತಲ್ಲಟಿಸಿ ತಡಂತಡಂಬರಿಯೆ ಪುಯ್ಯಲ ಗಾವಳ ಕೆಯ್ಯನಿಟ್ಟುದೀ ತೊಟಿಸಿದ ಪಾಂಗೆ ಕಟ್ಟಲೆ ಕಿಟುಂದಲೆಯಾದುದು ಕೂಡೆ ಪಟ್ಟಣಂ (ಅನಂಪು. ೧೧-೬೩).

[ ತಡ$_2$ + ಪರಿ$_2$ ]

**ತಡಂಬರೆ**$_1$ (ನಾ). ಅಡ್ಡಿಪಡಿಸುವಿಕೆ ; ಪ್ರತಿಭಟನೆ: ತಳ್ಪೊಯ್, ತಡಂಬರೆ ಪೋರ್ಕುಳಿ . . . ವಿಗು, ತಡಂಬೊಯ್ . . . – ಈ ೨೫ ಪ್ರತಿಹತಕ್ಕೆ ಪೆಸರ್ "(ಕಶಸಾ. ೦೫-३೯೭) ; "ತಡಂಬರೆಯು ಪ್ರತಿಹತಾಖ್ಯಂ "(ಕವಿಕಂ. ೦೩೯). [ ತಡ$_1$ + ಬರ್$_1$ + ? ]

**ತಡಂಬರೆ**$_2$ (ನಾ). ಸಮನಾದುದು: "ತಡಂಬರೆಯುಮೆಂದು ಸಮನೆನಿಪುದಕ್ಕೆ ನಾಮಂ " (ಅಭಿಕ್ಕಿ. ೬೯).

[ ತಡ$_2$ + ಬರ್$_1$ + ? ]

**ತಡಂಬಾಯ್**, ತಡವಾಯ್, ತಡವಾಯಂ, ತಡಹಾಯು (ಕ್ರಿ). ೧. ಅಧಿಕವಾಗು; ಅತಿಶಯವಾಗು; ಮೇರೆಮೀರು: ಬಲ್ಲಂ ನಿಷಾದಿಗಳಂ ದೊಲ್ಲದೆ ಕಿಟ್ಟಿ ಗೇಣೊಳೆ ತಡಂಬಾಯ್ದುಯ್ದ ತದ್ವೈರಿಯೋಧಿಗಳಂ ತಾನನೆ ತಕ್ಕಿನೆಕ್ಕತುಳದಿಂ ಕೈಯಾರ್ವಿನಂ ಕಾದಿದರ್ (ಚಂದ್ರಪು. ೧೧-೮೩). **ತಡವಾಯ್**: ೧. ಹೊತ್ತುವೆದೆಗಳ ಹೊಗೆವ ಮೋಚೆಯ ಕಿತ್ತಡದ ಕಡುಗೋಪ ಸುವತ[ಪಾಠಾಂ. ಸಮತೆ]ಗಳೆತ್ತಡಿಯ ತಡವಾಯ್ದು ನೃಪರೈತಂದರೊಗ್ಗಿನಲಿ (ಕುಮಾ.ಸ. ೧೭-೭೭). ೨. ಸಮನಾಗು; ಸಾಟಿಯಾಗು: ವರವರಧವಳಾಂಗದ್ಯುತಿ ಚರಚರದೂರ್ವಿ ಸ್ಫುಟತ್ತಟೋಜ್ಜ್ವಲ ಫೇನೋತ್ಕರಕರದೊಳ್ ತಡವಾಯ್ದಿರೆ ಪರಿಪರಿ ರಂಜಿಸುವುದೊಂದು ಕೊಳನಂ ಕಂಡಂ (ಆದಿಪು. ೧೧-೩೮); ಅಳಿಗೆ ಕುರುಳ್ ತಳಿರ್ಗೆ ತಳಂ ಕಳಿಕೆಗೆ ಬೆರಲ್ಗಳಲರ್ಗೆ ಕಣ್ಮಲರ್ ದೊರೆಯೆನೆ ಕೋಮಳಲತೆಗಳೊಳಂ ಸಲೆ ಕೋಮಳೆಯರ್ ತಡವಾಯ್ದರೆಯ್ದೆ ಪೂಗೊಯ್ಯಡೆಯೊಳ್ (ಚಂದ್ರಪು. ೬-೪೯). **ತಡವಾಯು**: ೧. ರಾಯರೆಲ್ಲರ ಗೆಲಿದು ತಂದೆನು ನಾಯಕವನನುಪಮಿತ ಮೌಲ್ಯವನಮಲ ಮೌಕ್ತಿಕವ ತಾಯ ಚಿತ್ತೈಸಿದಿರೆಯೆನೆ ತಡ[ಪಾಠಾಂ ಕಡೆ]ವಾಯಿದಳು ತನಿಹರುಷದಲಿ ಲೇಸಾಯಿತ್ತೆವರು ಕೂಡಿ ಭೋಗಿಪುದೆಂದಳಾ ಕುಂತಿ (ಕುಮಾ.ಆ. ೧೭-೬). **ತಡಹಾಯು**: ೩. ಎಲ್ಲೆಯನ್ನು ದಾಟಿ ಹೋಗು; ನುಗ್ಗಿಹೋಗು: ಕೊಪ್ಪರಿಗಗೆಳೆಳನು ತಡ[ಪಾಠಾಂ. ಟ]ಹಾಯಲೆಸುವೆನು (ಕುರಾಪಾಂ. ೧೮-೮೦); ಹೆಣ್ಣಾನೆಯು ಅದನ್ನು ತಡಹಾಯ್ದು ಬೇರುಸಹಿತವಾಗಿ ಕೆಡವಿದಂತೆ ಆಯಿತು (ತುಳಸಿ. ೦೦೪).

[ ತಡ$_3$ + ಪಾಯ್$_1$ ]

**ತಡಂಬುಗಿಸು** (ಕ್ರಿ). ಕೂಡಿಸು; ಸೇರಿಕೊಳ್ಳುವಂತೆ ಮಾಡು; ಬೆರಸು: ಆ ನರ್ತಕಿಯರ ಬಳ್ಳಿಗುರುಳ ಬಂಬಲೊಳ್ ತುಂಬಿಯ ಬಂಬಲಂ ತಡಂಬುಗಿಸೆ (ಅನಂಪು. ೧೦-೩೭ವ). [ತಡಂಬುಗು (<ತಡಂಬೊಗು)+-ಇಸು$_1$]

**ತಡಂಬುಗು** 'ತಡಂಬೊಗು' ನೋ.

**ತಡಂಬೂರು** (ನಾ). ಒಂದು ಊರಿನ ಹೆಸರು: ಪರಮೇಶ್ವರ ದತ್ತಿಯಾಗಿ . . . ಗುಡಿಯೂರು ತಡಂಬೂರು . . . ಧಾರಾಪೂರ್ವ್ವಕಂ ಮಾಡಿ ಕೊಟ್ಟರ್ (ಕಇಅ. ೦೦೯-೦೩-೩೩; 1050). [ ? + ಊರು$_3$ (<ಊರ್) ]

**ತಡಂಬೊಗು**, ತಡಂಬುಗು (ಕ್ರಿ). ಒಂದರೊಡನೊಂದು ಸೇರಿಕೊಳ್ಳು; ಸಮನಾಗಿ ಬೆರೆ; ಮಿಶ್ರವಾಗು: ದೆಸೆಯುಂ ತಳ್ಳೊಯ್ಯೆ ಕೀರ್ತಿಪ್ರಸರದೊಡನೆ ಕಾಲ್ಗೂಡಿ ತೀವ್ರಪ್ರತಾಪಂ . . . ಧರ್ಮಾವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಕೃತಂ (ಎಕ. V. ಚನ್ನರಾ. ೩೦೩-೯; 1223). **ತಡಂಬುಗು**: 'ತಡಂಬುಗಿಸು' ಪರಾ. [ ತಡ$_3$ + ಪೊಗು ]

**ತಡಂಬೊಯ್$_1$**(ಕ್ರಿ). ೧. ವಿರೋಧಿಸು; ಪ್ರತಿಭಟಿಸು. ೨. ಜೋರಾಗಿ ಹೊಡೆ (?): ಪಿಡಿದೊಂದೊಂದಂ ಗಾತ್ರಮಂ ತಿರಿಪಿಕೊಡೊಂದೊಂದ ಬೊಳ್ ಪೊಯ್ದು ಮಲ್ಲಡಗಪ್ಪನ್ನೆಗಮೆತ್ತಿಕೊಂಡಸಗಪೊಯ್ಲೊಳ್ ತಡಂಬೊಯ್ದುಂ[ಪಾಠಾಂ. ಪೊಯ್ದುತಂ, ಪೊಯ್ದುಂ, ಪೊಯ್ದೊಯ್ದು] . . . ಕೊಂದಂ ಮದೇಭಂಗಳಂ (ಪಂಪಭಾ. ೧೧-೦೦೪): "ಬಿರುಸಾಗಿ, ಜೋರಾಗಿ ಹೊಡೆದಂ" (ಪಂಪಟೀ. ೩೭೪). [ ತಡ$_1$ + ಪೊಯ್$_1$ ]

**ತಡಂಬೊಯ್$_2$** (ನಾ). ಅಡ್ಡಿಪಡಿಸುವಿಕೆ; ಪ್ರತಿಭಟನೆ: "ತಳ್ಪೊಯ್, ತಡಂಬರೆ . . . ತೊಡರ್, ಉರ್ಕೇರ್ಕೆ, ಮಿಗು, ತಡಂಬೊಯ್-ಈ ೨೫ ಪ್ರತಿಹತಕ್ಕೆ ಪೆಸರ್" (ಕಕಸಾ. ೧೩-೨೯೬). [ ತಡ$_1$ + ಪೊಯ್$_2$ ]

**ತಡಂಮಾಡು**, ತಡಮಾಡು$_1$ (ಕ್ರಿ). ತಬ್ಬಿಬ್ಬುಗೊಳಿಸು; ದಾರಿತಪ್ಪಿಸು; ತಳ್ವಂಕಗೊಳಿಸು: "ತಡಮಾಡು, ತಡಂಮಾಡು — ವಿಪರ್ಯಾಸೇ (ದಾರಿತಪ್ಪಿಸು)" (ಶಮುಧಾ). **ತಡಮಾಡು**: ೧. "ತಡಮಾಡಿದಂ=ತಳ್ವಂಕಗೊಳಿಸಿದಂ" (ಶಮುದ. ಪರಿ. ೨): "ತಡಮಾಡಿದನೆನಲ್ಕೆ ತಳ್ವಂಕಗೊಳಿಸಿದಂ" (ಅಭಿಕೈ. ೯೦). [ ತಡ$_4$ + ಮಾಡು$_1$ ]

**ತಡಂಮೆಟ್ಟು**, ತಡಮೆಟ್ಟು (ಕ್ರಿ). ೧. ಸಾವಕಾಶವಾಗಿ ನಡೆ; ನಿಧಾನಿಸು: ಚತುರಂಗಂ ಚತುರಂಗಸೈನ್ಯದೊಳಡು[ರ್ತಾಂ]ತಿಜ್ಜನೆಯ್ತಂದು ತಾಗಿ ತಡಂಮೆಟ್ಟದೆ ಕಾದೆ (ಪಂಪಭಾ. ೧೧-೭); ಗುರುಜಘನಭರಂಗಳಿಂ ತಡಂಮೆಟ್ಟುತುಂ . . . ಸೀತೆ ಸೆಡೆದು ಮೆಲ್ಲನೆ ನಡೆದಳ್ (ಪಂಪರಾಮಾ. ೬-೫೭); ಮೆಯ್ಮುಱಿಯದೆಆಗಿ ತಡವಂದು ತಡುಮೆಟ್ಟಿ ತಿದಿಯಂತೆ ಬಾತಿರೆ ಪೊಟ್ಟೆ ಕರಂ ವಿಕಲನಾದ ತುರಗಂ ಸಾಯ್ತುಂ (ಅಕ್ಕ. ೦೦-೪೬). ೨. (ಭಯದಿಂದ) ಮುಗ್ಗರಿಸು: ಬೆರ್ಚಿ ಪೋಳದು ಪರಿವ ಪೊಳೆವುಲ್ಲೆಗಳುಮಂ . . . ಸೋಂಕಿ ಪರಿವೆಯ್ಗಳುಮಂ ತಡಂಮೆಟ್ಟಿ ಪರಿವ ಕಡವಿನ ಕಾಡೆಮ್ಮೆಯ ವರೆಯ ಹಿಂಡುಗಳುಮಂ (ಪಂಪಭಾ. ೫-೪೮ ವ). **ತಡಮೆಟ್ಟು**: ಹರಲೊತ್ತೆ ಸೆಡೆವುತಂ . . . ಗುರು ಜಘನ ಭಾರದಿಂ ತಡಮೆಟ್ಟುತಂ(ಕುಮುಂರಾ. ೬-೩).

**ತಡತಡಮೆಟ್ಟು** (ದ್ವಿರುಕ್ತಿ): ಜೋಲ್ವ ಠ್ಠೋಂಪಿಸುವ ಭಂಗಿ ಮನಂಗೊಳೆ ತಕ್ಕಿನೆಕ್ಕೆಯೊಳ್ ತಡತಡಮೆಟ್ಟಿ ಪಾಡಿ ಪೊಸಕಕ್ಕಳನೀಂಟಿದುದಂಗನಾಜನಂ (ಸೂಕ್ತಿಸು. ೧೩-೬); ಕಡಲಿಟ್ಟೆಳೆವ ಕಂಬನಿಯು ತಡತಡಮೆಟ್ಟಿ ಬಳಲುತ ಬಳಕುತೇಳುತ . . . ಗೋಳಿಸಲಖಿಳಜನ ನಡೆತಂದುದರಮನೆಗೆ (ನಿಘಾಗ. ೪-೧೨-೩). [ ತಡ$_1$ + ಮೆಟ್ಟು$_1$ ]

**ತಡಕಯ್** 'ತಡಕೆಯ್' ನೋ.

**ತಡಕಲ್** (ನಾ). ಒಂದು ಊರಿನ ಹೆಸರು. ☞ಈಗಿನ ಮಹಾರಾಷ್ಟ್ರದ ತಡಿಖೇಲ್: ದೆಯಿಗಾವೆಯು ತಡಕಲ್ಲೆಡೆವೊಲದಲೆರಡೂರ ಪ್ರಜೆಗಳ ಸನ್ಮತದಿಂ ಬಿಟ್ಟ ಕರಿಯ ನೆಲಂ (ನಾಂದೇಡ್. ೮-೩೪; 1070); ತಡಕಲ್ಲ ಪ್ರಭು ದಣ್ಣನಾಯಕಂ ನಾಗವಮ್ಮರ್ಯ್ಯನುಂ (ನಾಂದೇಡ್. ೮-೪೧; 1070).

[ ? ]

**ತಡಕಸ** 'ತಡಗಸ' ನೋ.

**ತಡಕಾಟ** (ನಾ). ಹುಡುಕಾಟ; ಅರಸುವಿಕೆ: ಒಡಕುಬಾಯಿಯು ಸಿಡುಕು ಕಿಡಕುನುಡಿ ಮರ್ಮಡಿಯ ತಡಕಾಟ ಪರಿದಾಟವೆನಿತುವರೆಗೆ (ಧಾವಕೀ. ೨-೩೪). [ <ತಡಕಾಡು ]

**ತಡಕಾಡು** (ಕ್ರಿ). ೧. = ತಡಕು ೧: ಕತ್ತಲಲ್ಲಿ ತಡಕಾಡುವವನಿಗೆ ಬೆಳಕು ಸಿಕ್ಕಂತಾಯಿತು (ಹಂಗೀತ. ೮೭); ಬೆಂಕಿ ಪೊಟ್ಟಣಕ್ಕಾಗಿ ಅಂಗಿಯ ಕಿಸೆಗಳನ್ನು ತಡಕಾಡಿದ (ಹುಲ್ಲು. ಹ. ೨); ಒಂದೊಂದು ದಿನ ನನಗೆ ಪಾಠ ಹೇಳಿ ಕೊಡುವಾಗ ಮಾತಿಗೆ ತಡಕಾಡಿ,ಜ್ಞಾಪಕಕ್ಕೆ ಬರದೆ, ಆತನಿಗೆ ನಾಚಿಕೆಯಾಗುತ್ತಿತ್ತು (ನಿಬಂಧ. II, ೭೮). ೨. = ತಡಕು ೨: ಅವನ ಮಾತುಗಳು ನೇರವಾಗಿ ಹೃದಯವನ್ನು ತಡಕಾಡಿದವು (ಮಹಾಕ್ಷ್ಯಾ. ೭೩). [ ತಡಕು + ಆಡು$_1$ ]

**ತಡಕಿಲು** (ನಾ). ಒಂದು ಬಗೆಯ ಔಷಧಿ ಸಸ್ಯ: ತಡಕಿಲು ಬೇರನ್ನು ಗೋಮೂತ್ರದಲ್ಲರೆದು ಕುಡಿಯಲು ರಕ್ತಕಾಸ ನಿಲ್ಲುವುದು(ಸಕವೈ.ಪರಿ.೪೩೩). [?]

**ತಡಕಿಸು** (ಕ್ರಿ). ತಡಕುವಂತೆ ಮಾಡು; ಹುಡುಕಿಸು: (೬).

[ ತಡಕು + - ಇಸು$_1$ ]

**ತಡಕು** (ಕ್ರಿ). ೧. (ಕತ್ತಲಲ್ಲಿ) ಕೈಯಾಡಿಸಿ ನೋಡು; ತಡವರಿಸು; ಹುಡುಕು; ಅರಸು: ಬೆಟ್ಟಂಗಾಡನಡರ್ದು ಪೊಕ್ಕು ತಡಕುತ್ತಾ ದಿಟ್ಟಿಮುಂಗೆಟ್ಟು(ಹಮ್ಮೀರ. ೮-೩೩); ಒಂದು ಗೊಂಟನೊಳಾನಿರಲ್ಕೆ ಕರತಳದಿಂದೆ ತಡಕಿ ಕಂಡೆನ್ನ ತಲೆಯಂ ಸೋಕಿದು (ಪಾಸೋಪು. ೧೧-೨೯); ಬರೆಬರೆದಂತದಂ ತೊಡೆದು . . . ಒಂದುಮಂ ಸರಸ ಪದಾರ್ಥಮಂ ತ[ಪಾಠಾಂ. ತು]ಡಕಿ ಕಾಣದೆ. ಕಳ್ದು ಪರೋಕ್ಷಿಯುಕ್ತಿಯಂ (ರಾಜಶೇ. ೦-೨೩); ಪುಣ್ಯಭೂಮಿಗಳಲ್ಲೆಲ್ಲಾ ವ್ಯಾಪಿಸಿ ತಡಕಿ ನೋಡಿದಾಗ್ಯೂ . . . ಕಾಣದೆ (ಅರ್ಕಾಪಿ. ೨೯ ಸೂಚನೆ.): ಎರಡೂ ಜಗಲಿಗಳನ್ನು ತಡಕಿ ನೋಡಿದ (ಅನಾಥ ೦೯೨). ೨. ತಗುಲು; ತಾಕು; ಮುಟ್ಟು: ಕಣಜದಲ್ಲಿನ ಅಕ್ಕಿ ತೆಗೆಯುವುದಕ್ಕೆ ಕೈಹಾಕಿದ ತುಳಸಾಬಾಯಿಗೆ ಕೈಗೆ ಏನೋ ತಡಕಿದ ಹಾಗಾಯಿತು (ನಡೆದಾ. II, ೮೩೪). 'ತಡವು$_1$' ಪರಾ.

**ತಡತಡಕು** (ದ್ವಿರುಕ್ತಿ) : ಆ ನೆನಹಿನೊಸಗೆಗಳ ನಿಧಿಗೊಳುತ, ಗುಡಿಯೆ, ನಿಂತೆ ನನ್ನ ಮಾನಸ ನಿನ್ನ ಶ್ಯಾಮಸುಂದರಗರ್ಭದೊಳಗವನು ತಡತಡಕಿ ತೀರದಂತೆ (ಮಲಿದೇ. ೨-೧೧). [ <ತಡವು₂ + – ಕು ]

**ತಡಕೆ** 'ತಡಿಕೆ' ನೋ.

**ತಡಕೆಪಂದ್ಯ** 'ತಡಿಕೆಪಂದ್ಯ' ನೋ.

**ತಡಕೆಯ್**, ತಡಕಯ್, ತಡಕ್ಕೈ, ತಡೆಕ್ಕೈ (ನಾ). ಅಪ್ಪುಗೆ ; ತೆಕ್ಕೆ ; ಆಲಿಂಗನ: "ಪಟ್ಕಿತಟ್ಕ್ಯಸಿದಂ[ಪಾಠಾಂ. ಬಳ್ಕಿ ತಟ್ಕ್ಯಸಿದಂ, ಪಟ್ಕ್ಯಸಿದಂ]= ತಡಕೆಯ್ಯಂ[ಪಾಠಾಂ. ಕಯ್ಯಂ, ಕೈಯಂ, ಕೈಸಂದು]ಮಾಡಿದಂ" (ಕಮಡ. ಶಬ್ದ. ೧). **ತಡಕಯ್** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಡಕ್ಕೈ**: "ಪಟ್ಕಿ ತಟ್ಕ್ಯಸಿದನೆಂಬಲ್ಲಿ ತಡಕ್ಕೈಯ್ಯಂ ಮಾಡಿದನೆಂಬರ್ಥಂ" (ಕಮಡ. ೧೯ ಪ್ರಯೋ). **ತಡೆಕ್ಕೈ** : ವ್ಯಡನತಿ ಸಂತಸದಿಂದಂ ತಡೆಕ್ಕೈಯಂ ಮಾಡಿ ಮುದ್ದಿಸುತ್ತಿನಿವಾತಂ ನುಡಿವುತ (ವೀರವಿ. ೮-೫೧). [ <ತಟಕ್ಕಿ ]

**ತಡಕ್ಕೈ** 'ತಡಕೆಯ್' ನೋ.

**ತಡಗ** (ನಾ). ಗಂಟು ; ಮೂಟೆ : ದೇವಾಂಗವಸ್ತ್ರಂಗಳು ಮುಂತಾದ ಸರಿ ತಡಗ ಗಂಧ ಕಸ್ತೂರಿ ಕರ್ಪೂರ ಬಾಳು ಜವಾದಿ . . . ಮುಂತಾದ ಸಮಸ್ತ ಬೆವಹಾರಕೆಉ (ಎಕ. XII, ಸಿರಾ.೭೭-೧೪; 1670); ಪಶ್ಮಾವಳಿ ಮಂಚಿಸ್ಸಿಯ ಕಾಂಚಿನಾಲದ ಜವಳಿಯ ತಡಗದ[ ವ ] ಬೀಜಾದರು (ಜ್ಞಾನಸಿಂ. ೬-೭೩) ; ಗುಡಿ ಗೂಡಾರ ಸರಾತಿಪೆಟ್ಟಿಗೆ ಬೋನ ಗುಡಿಕೆ ನೂತನ ವಸ್ತ್ರಗಳ ತಡಗಗಳಾದಿ ನಾನಾ ಹೊಜೆಕಾಜಿರ ಗಡಣವೆಸೆದುದಲ್ಲಲ್ಲಿ (ರಾಮವಿ. ೬-೦೩) ; ಉರಿಯ ಮಳೆ ಸಂಗಡಿಸಿದೆಡೆಯೊಳು ಸಸಿದ ಹತ್ತಿಯ ತಡಗಮುಳಿವುದೆ (ಅಂಬಿಕಾ. ೩೦-೨೧). [ ? ]

**ತಡಗಡಿ** 'ತಡಂಗಡಿ' ನೋ.

**ತಡಗಣೆ** 'ತಡಗುಣೆ' ನೋ.

**ತಡಗಸ**, ತಡಕಸ (ನಾ). ಕ್ಷೋಭೆ ; ತೊಂದರೆ ; ಅಪಾಯ ; ಕೇಡು : "ತಡಗಸವೆಮನಲುಪಹತಿಯಕ್ಕು" (ಚತುನಿ. ೨೦೨) ; ಕಾಯ ತಡಗಸವ ಪರಿಹರಿಸು ಎಂದಾಣತಿಯನಿತ್ತು (ಕಗದ್ಯ. ೬೯). **ತಡಕಸ** : "ತಡಕಸ [ಪಾಠಾಂ. ತಡಗಸ, ಗಡಗಸ]ಮೆನಲುಪಹತಿಯಕ್ಕು" (ಛಾವಿ. ೬೦). [?]

**ತಡಗಾಲ್** 'ತಡಂಗಾಲ್' ನೋ.

**ತಡಗು** (ಕ್ರಿ). ತಡೆ; ಅಡ್ಡಿಪಡಿಸು : ಇಂತಪ್ಪವಂ ತಡಗ[ಪಾಠಾಂ. ಸ]ಲಾಗದೆಂಬುದುತ್ತರ ವಾಕ್ಯಂ (ನೀತಿವಾ. ೨೪-೧೧).
[ ದೇ.I ತಮಿ. ಮಲ. ತಟುಕ್ಕು ]

**ತಡಗುಂಡಿಗೆ** (ನಾ). ಜಲಪಾತ್ರ : "ತಡಗುಂಡಿಗೆಯೆನಲ್ಕಿ ತಾಂ ಜಲಪಾತ್ರ [ಪಾಠಾಂ. ಜಲಪ್ರತ್ಯಯಾಖ್ಯಂ]" (ಕಲ್ಯಕ್ಕ. ೭೩). [ ತಡ₁ + ಗುಂಡಿಗೆ ]

**ತಡಗುಣೆ**, ತಡಗಣೆ, ತಡುಗಣೆ, ತಡುಗುಣೆ (ನಾ). ಒಂದು ಬಗೆಯ ದ್ವಿದಳಧಾನ್ಯ; ಅಲಸಂದೆ; ಕಾರಾಮಣಿ: ಹೆಸರು ತಡಗು[ಪಾಠಾಂ. ಗ]ಣೆ ಕಡಲೆತೊಗರಿಗಳ ಬೇಳೆಯಂ ಹೊಸಬೆಲ್ಲವಿಕ್ಕಿ ಬೇಯಿಸಿ (ಸೂಪಶಾ. ೧-೭೦). **ತಡಗಣೆ**: ಅಲಸಂದಿ, ತಡಗಣೆ (ಮೈಕಿಗಿ. ೭೭-೦೫೯). **ತಡುಗಣೆ**: ಬದನೆ ಹೆಗ್ಗುಳ್ಳ ಪಡವಲ ಪಲಸು ತಡುಗಣೆ ಬಾಳೆ ಚಪ್ಪರದವರೆ (ಅನಂರಾ. ೬-೨೫-೭೯). **ತಡುಗುಣೆ** : ಎಳದಾದ ಕಡಲೆ ತಡುಗುಣೆ ಹೆಸರು ಕುಸುಬೆ ಮೊದಲಾದ ಹುರುಕಲು ರುಚಿನೋಡುತ್ತ (ಸೌಗಂಧಿ. ೩೭-೧೧).

**ತಡಗೆಡಿಸು** 'ತಡಂಗಿಡಿಸು' ನೋ.

**ತಡಗೆಯ್** (ಕ್ರಿ). ತಡೆ; ನಿಲ್ಲಿಸು; ಕಾಯು: ನಾಳಿನುದಯಕ್ಕೆ ಕೋಂಟೆಯ ನಿಕ್ಕಿಸಿದ ಬಳಿಕ ಪಾಳೆಯಂ ಸಹಿತ ಬಿಜಯಂಗೆಯ್ವೆರೆಂಬ ನುಡಿಗೇಳಿಯಂತೆಯೆ ಗೆಯ್ವೆನೆಂದು ತಡೆಗೆಯ್ದು (ಸಮ್ಯಕೌ. ೨-೫೨).
[ ತಡ₁ + ಕೆಯ್₁ ]

**ತಡಗೊಳ್** (ಕ್ರಿ). ತಡಮಾಡು; ವಿಳಂಬಮಾಡು: ತಡಗೊಂಡೆ[ಪಾಠಾಂ. ದ] ನಲ್ಲದೆ ಹಿಡಿಯ ನಾ ಕದ್ದನೆ (ಸರ್ವಜ್ಞ. ೧೪೦೧). [ ತಡ₁ + ಕೊಳ್₁ ]

**ತಡತ** 'ತಡೆತ' ನೋ.

**ತಡತಡವರ್**, ತಢದಡವರ್ (ಕ್ರಿ). ೧. ತೊಡರಂ ; ತಪ್ಪುತಪ್ಪಾಗು : ಕುಡುವುಂ ಕಯ್ಯುಂ ಜತಿಯೊಳ್ ತಡತಡವರೆ ವಾದಕಂಗೆ ಪುರ್ವಿಂ ಜತಿಯಂ ತೊಡರದೆ ನಡೆಯಿಸಿ . . . ನರ್ತಕಿಯೆ ಸಭೆಗೆ ವಾದಕಿಯಾದಳ್ (ಆದಿಪು. ೯-೩೨). ೨. ತೊದಲು ; ತಡವರಿಸು : ಮಗನನಪ್ಪಿಕೊಂಡಶ್ರುಜಲಂ ಗುಡುಗುಡನೆ ಸುರಿಯೆ ನಾಲಗೆ ತಡತಡವರೆ ನುಡಿದನಂಧನೃಪನಾ ನೃಪನಂ (ಗದಾಯು. ೪-೦೩). **ತಢದಡವರ್** : ೧. ತಡದಡವಾರದೆ ಗತಿಯೊಳ್ ತೊಡರದ ರಂಜಿಸಿದರಮರಲಂಜಿಕೆಯರ್ . . . ಕಡೆಯ ತಾಳದ ಯತಿಯೊಳ್ (ಅಜಿಪು. ೫-೪೦). [ <ತಡ₄ + ಬರ್₁ ]

**ತಡತಡಿಸು**, ತಡಂತಡಿಸು, ತಡದಡಿಸು (ಕ್ರಿ). ೧. (ಗಾಬರಿಯಿಂದ) ಮುಗ್ಗರಿಸು ; ತತ್ತರಿಸು ; ನಡಂಗು ; ತಡೆದು ತಡೆದು ನಡೆ : ತಡತ[ಪಾಠಾಂ. ವ]ಡಿಸಿ ಯತಿಯನಿಂತಿರೆ ತೊಡರ್ಚಿ ಕೆಡೆ ಪೇಟ್ಗೊಡಕ್ಕುಮದು ಯತಿಭಂಗಂ (ಕವಿರಾ. ೧-೭೩) ; ನಡೆದೊಡೆ ತಡತಡಿಸುವ ಕುಳ್ಳಿರ್ಪೂರ್ರೋರ್ವರಂ ಮಲಂಗುವ ಕಟ್ಟಲಸರಪ್ಪರಸುಗಳ್ಗೆ ರಾಜ್ಯಶ್ರೀ ಕೈಗಣ್ಪು ಪೂಣ್ಬುವುದು (ಧರ್ಮಾಮೃ. ೬-೦೩೩). **ತಡಂತಡಿಸು**: ೧. ಪದಂ ತಡಂತಡಿಸೆ ಹಮ್ಮಾಗ್ರಂಗಳಂ ಬಂದು ಸಂಗಡದಿಂದೇಜು ಲತಾಂಗಿಯರ್ತವಕದಿಂ ಶಾಂತೀಶನಂ ನೋಡಿದರ್ (ಶಾಂತೀಶ. ೧೫-೩೮). **ತಡದಡಿಸು** : ೧. ತಡದಡಿಸದೆ ನಡದು ದಹನನ[ಂ] . . . ವಾಯ್ದು ಸಮ್ಮುವೆ ಧೀರಂ (ಇಅ. XX, ೬೯-೩ ; ೪ನೆಯ ಕಿಪ) ; ತೋಂಕಡಿಂ ತಡದಡಿಸುತ್ತೆರ್ದು ತಡವರಿಸಿ (ಲೀಲಾವ. ೫-೦೩೪). ೨. ರಭಸದಿಂದ ಮುನ್ನುಗ್ಗು : ದಶನನಿಪೀಡಿತ ದಶನವಸನನಸಿಧೇನುವಂ ಕಿಟ್ಟು ನ ಡ ನ ಡ ನ ಡು ಗಿ ತಡದಡಿಸುತ್ತು ವಿಜುಯಲ್ ಪರಿವಾತಂ (ಆದಿಪು. ೨-೦೪ ವ). [ <ತಡ₄ + – ಇಸು₃ ]

**ತಡದಡ** 'ತಡತಡ' ನೋ.

**ತಡದಡವರ್** 'ತಡತಡವರ್' ನೋ.

**ತಡದಡಿಸು** 'ತಡತಡಿಸು' ನೋ.

**ತಡಪಡಿಸು** 'ಧಡಪಡಿಸು' ನೋ.

△**ತಡಪು₁** 'ತಡವು₂' ನೋ.

△**ತಡಪು₂** 'ತಡವು₃' ನೋ.

**ತಡಪು₃** 'ತೊಡಪು₁' ನೋ.

**ತಡಫಡಿಸು** 'ಧಡಪಡಿಸು' ನೋ.

**ತಡಬಡ**, ತಡಂಬಡ (ನಾ). ೧.ತಬ್ಬಿಬ್ಬು; ಗೊಂದಲ; ಆತಂಕ; ಭಯ: ಸಡಗರಂಗಳು ಗುಜುಗುಜುಗಳಾಬಿಡಿಗಳನುಚಿತ ಕಾರಣಂಗಳು ತ[ಪಾಠಾಂ. ಚ]ಡಬಡಂಗಳು ತಪ್ಪುಗಳು ಮುಂಡುಗಳು ಮುಜುಹುಗಳು (ಬಸವು. ೪೦-೬೨). ೨. ನಡೆನುಡಿಗಳಲ್ಲಿ ಉಂಟಾಗುವ ವ್ಯತ್ಯಾಸ, – ಅಸ್ಥಿರತೆ; ಅಸ್ತವ್ಯಸ್ತತೆ ; ತೊಡರು ; ತೊದಲು : ನುಡಿದ ಮಾತಿಂಗೆ ತಡಬಡ ಬಂದಲ್ಲಿ ನುಡಿದ ಭಾಷೆಗೆ ಭಂಗ ನೋಡಯ್ಯ (ಶೂನ್ಯಸಂ. ೨೫೪-೦೭); ನಡೆಗೆ ತಡಬಡಮಾಯ್ತು ವಾಣಿ ತಬ್ಬಿಬ್ಬಾಯ್ತು (ಶಬಪು. ೨೦-೦೯); ತಡಬಡ – ವಾಕ್ಯಂಕಠನಾರ್ಥಃ (ಶಬ್ದಾನು. ೨೦ ವ್ಯಾಖ್ಯಾ). ೩. ಅಡ್ಡಿ ; ತಡೆ : ಪರಿಪರಿ ಗೃಹವಸ್ತುಗಳನು ನೆರೆವುವುದವನೊಂದು ವಿಭವವ ಮಾಳ್ಪನೆಂದರೆ ತಡಬಡವುಂಟೆ ಬಲುಹ (ಭರತೇ. ೦೭-೦೦೩). **ತಡಂಬಡ** : ೧. "ತಡಂಬಡಮೆನೆ ತಳ್ಳಂಕಮದು" (ಚತುನಿ. ೨೧). ೨. ಮೊಗಮುಲದೊರ್ಪ್ಪ ಬಾಸೆ ಕಡು ನೇಜಾದವಾಗಿರೆ . . . ಕೈಮಿಗೆ ನಡೆದಳ್ ತಡಂಬಡಮೊಡಂಬಡೆ ಗರ್ಭದಗುರ್ವಿಂ (ಪುಣ್ಯಾಸ್ರ. ೩-೨೩).
[ ←ತಮಿ. ತಟಪಟ = ಆತುರಪಡು, ತತ್ತರಿಸು ]

**ತಡಬಡಂಗೊಳ್**, ತಡಬಡಗೊಳ್ (ಕ್ರಿ). ೧. ತಬ್ಬಿಬ್ಬಾಗು; ಗೊಂದಲದಲ್ಲಿ ಬೀಳು : ಅನುವಿಸುವ ಭಕ್ತನುರವಣೆಗೆ ಸಿಡಿಮಿಡಿಗೊಂಡು ಮನದೊಳಂಜುತ್ತೆ ನಡನಡುಗಿ ತಡಬಡಂಗೊಂಡು [ಪಾಠಾಂ. ಗೊಂಬುತ, ಬೋಗುತ] (ತಿರುರ. ದೇ. ೧೨-೦೨). ೨. ತೊದಲು ; ತಡವರಿಸು : ಮೃಡನರ್ಚನೋತ್ಸವದೊಳಿರದೆಯುಂಗದೊಳು ಬೆವರಿಡೆ . . . ಸೆರೆ ಬಿಗಿದು ನುಡಿ ತಡಬಡಂಗೊಳುತೆ ಕೊಂಡಾಡಿ ನೋಡಿ (ಪಾಸೋಪು. ೬-೨೨). **ತಡಬಡಗೊಳ್** : ೩. ಚಿಂತೆಗೊಳಗಾಗು ; ಆತಂಕಪಡು : ಊರ ಸೀರೆಗೆ ಅಗಸ ತಡಬಡಗೊಂಬಂತೆ [ಪಾಠಾಂ. ತಡಬಡಿಹಡೆದಂತೆ, ಬಡಿಹಡೆದಂತೆ] ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದೆಂದು ಮರುಳಾದೆ(ಬಸವ. ೩೦೯).

[ ತಡಬಡ + ಕೊಳ್$_1$ ]

**ತಡಬಡಂಬೋಗು** (ಕ್ರಿ). ತಬ್ಬಿಬ್ಬಾಗು ; ತಳ್ಳಂಕಗೊಳ್ಳು : ಬೇಡಲ್ಕೆ ಬೇಡದಿರಲ್ಕೆಯಂಜುತ್ತೆ ಬಂದು ಭಯದಿಂ ಕುಗ್ಗಿ ತಡಬಡಂಬೋಗುತ್ತೆ (ಮೂನರ. ದೇ. ೦೬೨-೦೨). [ ತಡಬಡ + ಪೋಗು$_1$ ]

**ತಡಬಡಗುಟ್ಟು** (ಕ್ರಿ). ತಡವರಿಸು ; ತೊದಲು : ಪ್ರೀತಿಯಿಂ ನೋಡುವಾ ವೈಶ್ಯನಂದನನ ಕಾತರಿಪ ಚಿತ್ತ ಕರಗುವ ಲಜ್ಜೆಯೋಸರಿಸುವಜೀವ್ವ ತಡಬಡಗುಟ್ಟುವಾ ಮಾತು (ಸಮ್ಯಕ್. ೯-೧೨). [ ತಡಬಡ + ಕುಟ್ಟು$_1$ ]

**ತಡಬಡಗೊಳ್** 'ತಡಬಡಂಗೊಳ್' ನೋ.

**ತಡಬಡಗೊಳಿಸು** (ಕ್ರಿ). ತಬ್ಬಿಬ್ಬುಗೊಳಿಸಂ; ತಡವರಿಸುವಂತೆ ಮಾಡು: ನುಡಿಗೆಡಿಸುವ ಕೂಡೆ ನುಡಿಸುವ ನುಡಿಗಳ ತಡಬಡಗೊಳಿಸಿ ನಗುವನು (ಧರಜ. ೬-೦೬). [ ತಡಬಡಗೊಳ್ (<ತಡಬಡಂಗೊಳ್) + – ಇಸು$_3$ ]

**ತಡಬಡನೆ** (ಅ). ಗೊಂದಲವಾಗಿ : ಕಡುಜಾಣವೆಣ್ಣುಗಳು ಕೂಡಿ ಆಗ ತಡಬಡನೆ ಹಿಡಿದು ಬಡಿದಾಡಿ . . . ಪೆಸರ ಬೆಡಗ ಪೇಳೆಂದು ಹೊಡೆದಾಡಿ (ಕರಪೀ. ೧೪೫-೧); ನಡುಗುತಲಿ ಬೆಮರಿಟ್ಟು ತಡಬಡನೆ ಕೆಡಹುತಲಿ ಅಡವಿಯೊಳಗವರು (ಹಮಚ. ೬೦). [ ತಡಬಡ + – ಅನೆ$_1$ ]

**ತಡಬಡಾಯಿಸು** (ಕ್ರಿ). ತಬ್ಬಿಬ್ಬಾಗು ; ಕಕ್ಕಾವಿಕ್ಕಿಯಾಗು : ಅಗಾಧವಾದ ಅಂತರಾಳದ ಮುಂದೆ ನಮ್ಮ ಮನಸ್ಸು ತಡಬಡಾಯಿಸಿ ಬೆರಗಾಗದೆ (ಜ್ಯೋತಿರ್ವಿ. ೨೬೨) ; ಉತ್ತರಕೊಡಲು ಸ್ವಲ್ಪ ತಡಬಡಾಯಿಸಿದುದು ನಿಜ (ಅವತಂ. ೦೬೬). [ < ತಡಬಡಿಸು ]

**ತಡಬಡಿಸು**, ತಡಂಬಡಿಸಂ, ತಡಮಡಿಸು, ತಡವಡಿಸು (ಕ್ರಿ). ೧. (ಭಾವಾತಿರೇಕದಿಂದ) ತಬ್ಬಿಬ್ಬಾಗಂ ; ಕಕ್ಕಾವಿಕ್ಕಿಯಾಗು : ಮಜ್ಜನ ಕಟಿದು ತಳ್ಕಿಱಿದು ತಪ್ಪಿ ತಡಬಡಿಸುತಂ ಪೊಸಪೂಜೆಯಂ ಮೆಱೆದು(ಹರಾರ. ಹ. ೦೯೩-೧೬) ; ಗಿರಿಜೆಯೊಡನುಸಿರ್ದುಂ ತಡಬಡಿಸುತ್ತೆ ಮಿಸುವ ಪೊಸ ಪುಸಿಮಾತಂ (ಗಿರಿಕ. ೯-೯೯). ೨. ತಡವರಿಸು; ತತ್ತರಿಸು; ಮಯಗ್ಗರಿಸಂ; ಎಡವು ; ನಡಗೆ ಅಸ್ಥಿರವಾಗು : ಹೋಗಲ್ಕಂಜಿ ಹೋ ಎನುತ ಕಾಲ ತಡಬಡಿಸುತ್ತ ನಿಲುತಂ (ಬಸಪು.೨೬-೨೮); ನಡೆ[ಪಾಠಾಂ. ನುಡಿ] ತಡಬಡಿಸುತ ಗೊಲ್ಲವೆಣ್ಣುಗಳು ಕಡುಗಾಡಿಯಿಂ ಬಂದು ಸೋಹುತಿಹರು ನೆಲ್ಲಮಡಿಗಳಿಗಿಳಿವ ಗಿಳಿಗಳ (ಕುರಾಸಾಂ. ೨-೩೬) ; ಇದಿರ್ವರ್ಪನಂ ಪದೆದು ನಿಟ್ಟಿಸಿ ಮೆಯ್ಮರವಟ್ಟುಳಟ್ಟಿಯಿಂ ತಡಬಡಿಸುತ್ತೆ ನಿಂದು ಪಳಗಾಜಿನ ಪುತ್ತಳಿಯಂತಿರೊಪ್ಪಿದರ್ (ರಸರ. ೧೦೯-೨) ; ಅಧರಂ ಬೆಳರ್ತುದು ನಡಗೆ ತಡಬಡಿಸಿದುದು (ಚಬಪು. ೩೭-೬೬) ; ಬಳಲುತ್ತಡವಿಯಲಿ ತಡಬಡಿಸಿ ಬೆಂಡಾಗುತ್ತೆ ಬೇಸರಿಸಿ (ರಾಮೂಸಂ. ೫-೩-೩). ೩. ತಬ್ಬಿಬ್ಬಾಗಿ, ತಡೆತಡೆದು ಮಾತನಾಡು ; ತಡವರಿಸುತ್ತ ನುಡಿ ; ತೊದಲಂ : ಅಂದದಿಂ ಶರಣಾರ್ಥಿಯೆಂದಹನೆಂದು ಬಾಯ್ತಡಬಡಿಸಿ (ಬಸಪು. ೩೭-೦೯) : ಬಂಬಲುಬಾಡುವಂಗ ತಡಬಡಿಪ ನುಡಿ (ಸಮ್ಯಕ್. ೧೦-೪೯): ರಾಜವಾರ್ತೆಯನು ತಡಬಡಿಸದೆ ಪೇಳ್ವ ರಾಯಭಾರಿಗಳಿಂ (ಕುರಾಸಾಂ. ೨೯-೬೮) : ತಡಬಡಿಸದೆ ಹಿಂದು ಮೆಟ್ಟದ ವಾಚಕ ವಡಗದೆ ವಕ್ಕಣೆ ಕೆಡದೆ . . . ರಾಯಸವಿಡಿದವನೋದಿದನಿಂತು (ರಾಮವಿ. ೧೫-೩೨) : ತೇಲಿ ಮುಗಿವ ಕಣ್ . . . ನಾಲಿಗೆಯೊಳ್ತಡಬಡಿಪಿನಿನುಡಿಗಳ್ (ಉದ್ಭದೇ. ೨-೬೫). ೪. ವ್ಯತ್ಯಸ್ತವಾಗು : ಬೀಯಲ್ ನುಣ್ಗೊರಲುಲಿ ಬಳಲಲ್ ಸುಯ್ ತಡಬಡಿಸಲ್ ಬಾಯ್ಗೂಟಂ ದಣಿಯುತ್ತಿರಲು(ಜಯುಕಾ. ೮-೬೪). ೫. ಶಬ್ದಮಾಡು ; ಕೋಲಾಹಲವುಂಟುಮಾಡು : ಸಡಗರಂಗಳು ಬರಿಯ ಠಕ್ಕಿನ ಗಡಬಡಂಗಳು ಚಾಂಗು ಥಲಗಳು ಕೊಡೆಗಳುಂ ಹಳವಿಗೆಗಳುಂ ತಡಬಡಿಪ ವಾದ್ಯಗಳು (ಬಸಪು. ೫೬-೧೬). ೬. ಚಡಪಡಿಸು ; ಕಳವಳಿಸು : ದ್ರಾಕ್ಷಾರಸ ತಪ್ಪಿಹೋದಾಗ ಅವಳ ಮನಸ್ಸಿಗೆ ತುಂಬ ಸಂಕಟವಾಗಿ ತಡಬಡಿಸುತ್ತಿದ್ದಳು (ಪುನರು. ೧೧) **ತಡಂಬಡಿಸು** : ೩. ಚರಣಂಗಳುಂ ನುಡಿಗಳುಂ ತಡಂಬಡಿಸಲತಿ ಭರವಸದೊಳಯ್ತಂದು ನೋಳ್ಪ ತರುಣೀಜನಂ (ಚಬಪು. ೫-೧೩) ; ದಡದಡಿಪಡಿ . . . ತಡಂಬಡಿಪ ತಳರ್ನುಡಿ (ರಾಜಶೇ. ೬-೩೩). **ತಡಮಡಿಸು** : ೧. ನುಡಿಯೊಳ್ಪುಸಿಮಾತಂ ಮೆಟ್ಟಡಿಕುಂ ತಡಮಡಿಸಿಪೊಂದನೊಂದುಂ ನೆಗಟ್ಟುಂ (ಮುದತಿ. ೧೧-೩೪). **ತಡವಡಿಸು** : ೧. ಅಚ್ಚಿಗಂಗೊಳಿಸಿ ತಡವಡಿ[ಪಾಠಾಂ. ಕಳವಳಿ]ಸಿತೆನ್ನಯ ಭಕ್ತಿ (ತಿರುಕ. ದೇ. ೨೧-೨೦): ಶೆಟ್ಟಿಯೆಂದುದ ಕೇಳಿ ತಡವಡಿಸುತಲವನೀತೆಂದ (ತ್ರಿಛಾತಿ. ೨೦-೧೨) ; ಕಡೆಗಂಗಳ ಸರಳಿಯೊಳು ತೊಡಕಿ ಹಮ್ಮಯಿಸುವರು ತಡವಡಿಸುವರು ಮತ್ತಲ್ಲಿ (ಕೊಲ್ಲಾಪ. ೨೯). ೭. ತಡಕಾಡು : ತಡವರಿಸಂ : ಬಟ್ಟೆಯೊಳ್ ಬಟ್ಟನೇಱಲ ಚೆಂಗಾರೆಯ ಮೆಲ್ದುಗುಟ್ಟ ಸಹಕಾರೋಚ್ಚಿಷ್ಟ ಪಕ್ಷಂಗಳಂ ತಡವಡಿಸಿ ಪುಡುಕಿ ಪಂಜಿನ ನಡುಬೀದಿಯೊಳಿರ್ದು ಮಱುಗುತಿರೆ ಕಂಡು (ಸುಕುಮಾ. ೪-೫೮). [ ತಡಬಡ + – ಇಸು$_3$ ]

**ತಡಬಡು**, ತಡಂಬಡು$_2$ (ಕ್ರಿ). ೧. ತತ್ತರಿಸು ; ದಡದಡಿಸು : ತಡಬಡುತ ಖಳನೆದ್ದು ಕಂಗಳ ಕಿಡಿಯುದುರೆ ಹೂಂಕರಿಸಿ (ಅನಂರಾ. ೬-೧೬-೨೯) ; ನಿನ್ನ ಸೈನ್ಯಗಳಲ್ಲಿ ಕೆಲವರು ಕಾಲುಗಳು ತಡಬಡಲು, ಶರೀರಗಳು ಬೆವರಲು . . . ಕೆಳಕ್ಕೆ ಬಿದ್ದು ಮುದುರಿಕೊಂಡಿದ್ದರು (ಕೃಪಾಥೀ. ೧೪೦). ೨. ದುಡುಕು ; ಆತುರಪಡು : ಗಡಿಗೆ ಮಡಿಕೆಯ ಕೊಂಡು ಅಡಿಗೆಯ ವೇಳೆಯೊಳು ಬಿಡದೆ ಮಳೆಮೋಡ ಪೊಡೆಯಲ್ಕೆ ಈರ್ವರ್ಗೆ ತಡಬಡಲಾಯ್ತು (ಸರ್ವಜ್ಞ. ೮). **ತಡಂಬಡು$_2$** : ೧. ಅನಂಗಾವೇಶದಿಂ ಕಾಲ್ತಡಂಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀವಿಪ್ರಮಾರ್ತಂಡನಂ (ಕಾವ್ಯಾವ. ೮೦೩). [ ತಡ$_4$ + ಪಡು$_1$. / ತೆಲು. ತಡಬಡು ]

**ತಡಬೆ** 'ತಡಮೆ' ನೋ.

**ತಡಮಡಿಸು** 'ತಡಬಡಿಸು' ನೋ.

**ತಡಮಾಗು$_1$** 'ತಡ$_1$' ಪರಾ.

**ತಡಮಾಗು$_2$** 'ತಡ$_2$' ಪರಾ.

**ತಡಮಾಡು$_1$** 'ತಡೆಂಮಾಡು' ನೋ.

**ತಡಮಾಡು$_2$** 'ತಡ$_1$' ಪರಾ.

**ತಡಮಾಡು$_3$** 'ತಡ$_4$' ಪರಾ.

**ತಡಮಾರಿ** (ನಾ). ತಡಮಾಡುವ ಸ್ವಭಾವದವನು : ಯಾವಾಗಲೂ ತಡಮಾರಿಯಾದ ಮ್ಯಾಥ್ಯೂ ನಿಕಿತಿಷ್ ಕೊಟ್ಟಕೊನೆಗೆ ಬಂದನು (ಪುನರು. ೩೨) 'ಹಠಮಾರಿ' ಪರಾ.

[ ತಡ$_1$ + – ಮಾರಿ$_1$ ]

**ತಡಮಿಕ್ಕು**, ತಡವಿಕ್ಕು$_1$ (ಕ್ರಿ). ತಡೆದಿಡು ; ತಡೆದು ನಿಲ್ಲಿಸು ; ಕಟ್ಟಹಾಕು : ಮನೋಜ ಚೈತ್ರಪತಾಕಾಪ್ರತಿಮಭ್ರೂವಿಭ್ರಮೆಯರಾ ಸ್ಮರಶರಾಸನ ಭ್ರೂವಿಭ್ರಮನಂ ತಮ್ಮ ಭ್ರೂವಲ್ಲಿಗಳೊಳ್ ತಡಮಿಕ್ಕಿಯುಂ (ಸುಕುಮಾ. ೦೦-೧೦೧ ವ). **ತಡವಿಕ್ಕು$_1$**: ಹಸ್ತಿಯ ಬೆಂಗೆವಂದು ಸುತ್ತಿಱಿದು ಪಗಲಂ ತಡವಿಕ್ಕಿದಂತೆ ಬೆಳಗುವ ಕೈದ್ಯಾವಿಗೆಗಳ ಬೆಳಗೆ ಬೆಳಗಾಗೆ (ಶಂಖಧಾ. ೦೨-೫೨ ವ). [ ತಡ$_1$ + ಇಕ್ಕು ]

**ತಡವೆ, ತಡಬೆ, ತೊಡವೆಂ** (ನಾ). ೧. ದನಕರಂಗಳು ಒಳಗೆ ಬರದಂತೆ ಬೇಲಿಗೆ ಅಳವಡಿಸಿರುವ ಬಿದಿರು ಅಥವಾ ಬೊಂಬಿನ ಚೌಕಟ್ಟು; ತಡೆಬಾಗಿಲು: ಮನೆಯ ಮುಂದಿನ ಅಡ್ಡಗಟ್ಟದ ಗುಜ್ಜು ತಡವೆ ದಾಟಿ, ಬೇಲಿಯೊಳಕ್ಕೆ ಹೋಗಿ ನಿಂತು . . . ಕರೆದರು (ಕೋಟಚ. ೨೩): ಸಿದ್ದಣ್ಣ ಕೂಸ್ರನ ಮನೆಯ 'ತಡವೆ' ದಾಟುವಾಗ (ಒಡ್ಡಿಉ. ೪೯): ಹೆಗ್ಗಡೆಯವರು . . . ತಡವೆಯತನಕ ಹೋದರು (ನಂಬಿನಾ. ೨೫೮). **ತಡಬೆ**: ೧. ತಡಬೆಯ ತೆಗೆಯುವ ಸದ್ದಾಯಿತೆನುವಳು ಅಡಿಗೆಯ ಮನೆಯಿಂದ ಬಂದು (ಚಂದ್ರವೀ.೨೨-೫೬); ಗುತ್ತಿ...ಹೆದ್ದಾರಿಯ ಅಂಚಿಗೆ ಹಾಕಿದ್ದ ಬಿದಿರಡ್ಡೆಯ ಬೇಲಿಯನ್ನು ಊಣುಗೋಲಿನ ಬದಿಯ ಇದ್ದ ತಡಬೆಯ ಮೇಲೆ ಹತ್ತಿ ದಾಟಿ ಮುಂಚೆಕಡೆಯ ಅಂಗಳಕ್ಕೆ ಹೋದನು (ಮಲೆಮ. ೫೮). ೨. ಅಡ್ಡಿ; ತಡೆ; ಪ್ರತಿಬಂಧ: ಧರೆಯ ನಿಮ್ನೋನ್ನತಂಗಳ ತಡಬೆಯೇನೊಳದೆ ಪ್ರತಿಭೆಯ ವಿಮಾನಯಾನಕ್ಕೆ? (ಶ್ರೀರಾಮಾ. ೦೨೫-೨೨). **ತೊಡವೆ**: ೧. ಅವರು ಜಗಲಿ ಇಳಿದು, ತೊಡವೆ ದಾಟಿ, ಮನೆ ಹಾದಿಯಲ್ಲಿ ಅರ್ಧ ಸಾಗಿಯಾಯಿತು (ಹಹಸ. ೪೨): ಆ ತಂಡ ರಸ್ತೆಯ ಹತ್ತಿರದ ಬಯಲಂಚಿಗೆ ಬಂದು . . . ಮತ್ತೆ ಎತ್ತರದ ತೊಡವೆ ಹತ್ತಿ ಹಾರಿ . . . ಹೊರಟು ಹೋದರು (ಶದ್ಮಸ. ೬೫): ಅಪ್ಪರಲ್ಲೆ ಐಕಾಳರ ಬಾಯಿಂದ, ಪದ್ಧತಿಯಂತೆ, ಕೊಡಮೆ ದಾಟುವಾಗ 'ಸಾಂಬಶಿವ' ಎಂದು ಕೇಳಿಬಾತು (ಮರಮ. ೩೨). [ <ತಡೆ$_1$./ತುಳು. ತಡವೆ./ಹ್ರಾ. ತಡಿವ ]

**ತಡವೆಟ್ಟು** 'ತಡಂವೆಟ್ಟು' ನೋ.

**ತಡಲು** (ಕ್ರಿ). ಹೂತುಹೋಗು: ಸಿಕ್ಕಿಕೊಳ್ಳು (?): ಗಾಲಿಗಳ್ಮಣಿನೊಗನ ಕೀಲಚ್ಚುಗಳ್ತಡಲಿ ಮೇಲೇಳದಿರೆ ಕುದುರೆಗಳ್ಬಳಲಿ ನಿಂದಿರಲ್ (ತುರಂಗ. ೬೦-೨೧). [ ? ]

**ತಡವಡಿಸು** 'ತಡಬಡಿಸು' ನೋ.

**ತಡವರ್** 'ತಡಂಬರ್' ನೋ.

**ತಡವರಿಸು$_1$** (ಕ್ರಿ). ೧. ಕೈಯಾಡಿಸಿ,ಹುಡುಕು; ತಡಕಾಡು; ಅರಸು; ಬೆದಕು: "ತಡವರಿಸು – ಅನ್ವೇಷಣೇ" (ಶಮುಧಾ): ನೇಱಲಮರದ ಕೆಟಗೆ ತಡವರಿಸಿ ನೇಱಲವಣ್ಗಳಂ ತಿಂಬ ಜಾತ್ಯಂಧಯಪ್ಪ ಪೊರೆಯರ ಕೂಸಂ ಕಂಡು (ವಡ್ಡಾರಾ. ೯-೨೪); ಬಿಲ್‌ಕಟ್ಟುವರ್ ಕೀಲಂ ತಡವರಿಸಿದರೆಂಬಂತೆ (ಧರ್ಮಾಮೃ. ೦೨-೬೫); ನಿಂದಿರದೆ ಹರಿದು ತಡವರಿಸಿ ಕಾಣದೆ ಮನಂ ನೊಂದು (ಸಿದ್ಧರಾ. ೨-೪೬); ಬಾಗಿಲನೊಂದು ಠಾವಿನೊಳಱಸಿ ತಡವರಿಸಿದೆನು ಭಿತ್ತಿಗಳ (ಕುವ್ಯಾಸ. ೧೨-೪೧). ೨. ಕೈಯಿಂದ ನೇವರಿಸಂ; ಸವರಂ; ಮುಟ್ಟು: ಇರ್ವರುಂ ಪರಸಿ ತಡವರಿಸಿಯುಂ ತೆಬ್ಬರಿಸಿಯು ಮಟ್ಟೈಱೊಳಕ್ಕೈಕೊಂಡು (ಪಂಪಭಾ.೦೩-೮ ವ): ಶಿರವ ತಡವರಿಸುತ ಮಹಾದೇವರಿಯ ಬವರದ ಬೋಳಕೊಮ್ಮಿಗೆ ಹರಣವುಳಿದುದೆಯೆನುತ ರವಿಸುತ ನೋಱಿದನು ಗಿರಿಯ (ಕೂಪರಾ. ೪-೩-೧೬); ಅವರಿಬ್ಬರೂ ಕೆಳಗೆ ಬಿದ್ದಿದ್ದ ವಸ್ತು ತಡವರಿಸಿ ನೋಡಿ (ಚಂಗಾಳ್ಯ. ೪೩೪). ೩. ನಡೆಗೆಡು; ತೆತ್ತರಿಸಂ; ದಡದಡಿಸು: ತಡವರಿಸುತ್ತಿರಲ್ಕೆ ತೊಡೆ ಜೋಲೆ ಸಡಿಲ್ದುಡೆ . . . ಸಂಭ್ರಮದಿಂ ಮಱಿಗೆಂಡು ನೋಡಿದರ್ (ಕಾದಂಅ. ೦೩೬); ತಡವರಿಸಿ ಬೀಟ್ವ ಮುನಿನಾಥನಂ ಬೀಟಲೀಯದೆ ತರ್ಕೈಸಿಕೊಂಡು (ಧರ್ಮಾಮೃ. ೪-೧೬೯). ೪. ತಡೆತಡೆದು ಮಾತನಾಡು: ಭಾಸ್ಕರ ಅವಾಕ್ಕಾದ, ನಾಲಗೆ ತಡವರಿಸತೊಡಗಿತು (ಕರುನ. ೨೨೩): ಇಂಗ್ಲಿಷಿ ನೆಲ್ಲಾದರೆ, ಒಂದೊಂದು ವೇಳೆ ತಡವರಿಸಬಹುದು (ಬಂಕಿಮು.೩೪): ಒಂದು ಸಲವಾದರೂ ತಪ್ಪಿದನೆ? ತಡವರಿಸಿದನೆ? (ನನ್ನಜೂ. ೩). [ <ತಡವು$_2$ ]

**ತಡವರಿಸು$_2$** (ಕ್ರಿ). ತಬ್ಬಿಬ್ಬಾಗು; ಕಕ್ಕಾಬಿಕ್ಕಿಯಾಗು; ಕಂಗೆಡು: ತಮ್ಮ ಬಲಮುಂ ಮಾರ್ವಲಮನಱಿಯದೆಯುಂ ಚಾತುರ್ವಲಂಗಳ್ ಮೊದಲ ಸಮಕಟ್ಟುಗೆಟ್ಟು ತಡವರಿಸಿ ತಟ್ಟು ಪೊಟ್ಟೆಂದೆಚ್ಚುಮಿಟ್ಟುಮಿಱಿದು (ಪಂಪಭಾ. ೧೧-೬೦ ವ): ನಡುಗಿ ತಡವರಿಸಿ[ಪಾಠಾಂ. ದಡಿಸಿ]ಬೆಂಕೆಯ ಕೆಡುಗಾಯ್ಪುಂಗಗಿದು ಜಡೆಗಳಿಡುವಿನೊಳಹಿಗಳ್ ತೊಡರ್ದು ನುಸುಳ್ದೋಡಿ ಗಂಗೆಯ ಮಡುಗಳನಡಹಡಿಸಿ ಪುಗ್ಗುವಿನಂ ಭಯವಶದಿಂ (ಕಾವ್ಯಾವ. ೪೧೦). [ <ತಡ$_4$ + - ಇಸು$_3$ ]

**ತಡವಳಿ** (ನಾ). ತಡ; ಸಾವಕಾಶ; ವಿಳಂಬ: ಒಂದೇ ಒಂದು ನಿಮಿಷದ ತಡವಳಿ ಇಲ್ಲದೆ ನಮ್ಮ ಚಕ್ರವರ್ತಿಗಳ ಭೇಟಿ ಸಾಗುತ್ತಿದೆ (ವೀರಬಂ. ೩೬). [ ತಡ$_1$ + - ವಳಿ$_1$ ]

**ತಡವಾಗು$_1$** 'ತಡ$_1$' ಪರಾ.

**ತಡವಾಗು$_2$** 'ತಡ$_2$' ಪರಾ.

**ತಡವಾಯ್** 'ತಡಂಬಾಯ್' ನೋ.

**ತಡವಾಯು** 'ತಡಂಬಾಯ್' ನೋ.

**ತಡವಿಕ್ಕು$_1$** 'ತಡಮಿಕ್ಕು' ನೋ.

**ತಡವಿಕ್ಕು$_2$** (ಕ್ರಿ). ೧. ಹಿಂದೆಹಾಕು; ಸೋಲಿಸಂ: ಇನಿಯವೆನಿಪ್ಪ ಮೆಲ್ನುಡಿಗಳುಂ ಕಳಕೋಕಿಳನಾದಮುಂ . . . ನಡೆಯುಂ ಕಳಹಂಸಯಾನಮುಂ ತಥತನಗೊಂದನೊಂದು ತಡವಿಕ್ಕು [ಪಾಠಾಂ. ಕರ್ಗ] ಗುಮಕ್ಕೆಯಿನಾ ಬನಂಗಳೊಳ್ (ಪುಲ್ಲಿಶ್ರೀ-೧೪-೦೦೦). ೨. ನಿಧಾನಮಾಡು; ಸಾವಕಾಶಮಾಡು: ಕಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರ ಕಾಂಚನೋಜ್ಜ್ವಳ ಕಳಶಂಗಳಿಂದಮಿರುಳುಂ ಪಗಲುಂ ತಡವಿಕ್ಕೆ ಕೈರವಂಗಳ್ ಕಮಲಂಗಳುಳ್ಳಲರ್ವುದಂ ತಡವಿಕ್ಕುವುದಾ ಜಿನಾಲಯಂ(ಲೀಲಾವ. ೮-೬೦). [ ತಡವು$_1$ + ಇಕ್ಕು$_4$ ]

**ತಡವಿಡು$_1$** (ಕ್ರಿ). ತಬ್ಬಿಬ್ಬಾಗು; ಗಾಬರಿಯಾಗು: ಕೊಡಹಿ ಕುಂಭಸ್ಥಳವ ತಡವಿಡಲುಡುಗಿದವು ದಿಗುದಂತಿ (ನಿಘಂಗ. ೮-೧೫-೩೬). [ ತಡ$_4$ + ಇಡು$_1$ ]

**ತಡವಿಡು$_2$** (ಕ್ರಿ). ೧. ತಡವರಿಸು; ತಡಕಾಡು; ಹುಡುಕು: ಒಡನೆ ಮಾನಿಸರಿಲ್ಲ ಕರೆದೊಡೆ ನುಡಿವರಿಲ್ಲ ಕರದ್ವಯದಿ ತಡವಿಡುತ ವೈಸರದೊಳಗೆ ಸೂಸಿತು ಮೈ ಮಹಾಸತಿಯ (ಕುವ್ಯಾಅ. ೯-೨೬). [ ತಡವು$_2$ + ಇಡು$_1$ ]

**ತಡವಿಡು$_3$, ತಡಹಿಡಂ** (ಕ್ರಿ). ೧. ತಡಮಾಡು: ಕೋಪದಿಂ ಹೊಡಕರಿಸಿ ತಡವಿಡದೆ ಕುಡುದಾಡೆಯಿಂ ಬೇಡವಡೆಯೊಡಲನೀಡಿಱುವುತ (ಹಡಕಾ.೬-೮). **ತಡಹಿಡು**: ೨. ತಡೆದಿಡು; ನಿರೋಧಿಸು: ಕಡೆಗಾಣದ ದುಃಖವೆಂಬ ಕಡಲೊಳಾ ಮಡದಿಯಾಳುತಲೇಳುತಿಹಳು ನುಡಿಯಲಮ್ಮದೆ ಮೌನವಿಡಿದು ಸಮೀಜನ ತಡಹಿಟ್ಟರೆನೆ ಸುಮ್ಮನಿಹರು (ಅಂಜಜ. ೬-೨೫). [ ತಡವು$_3$ + ಇಡು$_1$ ]

**ತಡವಿರ್**(ಕ್ರಿ). ತಡೆ; ನಿಲ್ಲು: ಹರಿದಾಡುತಿಹ ರಥಗಾಲಿಗಳ್ಪೂಳ್ ಕೆಲಕಡಗಲಾ ರಥಂ ತಡವಿರ್ದುದು (ತುರಂಗ. ೬೦-೨೦). [ ತಡವು$_1$ + ಇರ್$_1$ ]

**ತಡವು$_1$, ತಡಹು$_1$** (ಕ್ರಿ). ೧. ತಡೆ; ನಿಲ್ಲು; ವಿಳಂಬವಾಗು; ಸ್ತಿಮಿತವಾಗು: "ತಡವು–ಹಸ್ತಾನ್ವೇಷಣೇ, ಸ್ತಿಮಿತಭಾವೇ ಚ" (ಶಮುಧಾ); "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮಂ. ೧೦೯): ತಡವಲುಱಿ ದೈದು ತೆಗೆದಾನು ಸಾಲಿಗನು ನಡುವೆ ಜಗಳವನು (ಸರ್ವಜ್ಞ. ೦೪೦೦). **ತಡಹು$_1$**: ೨. ತಡಮಾಡು; ಸಾವಕಾಶಮಾಡು: ಒಡೆಯಗೆ ಚಿಂತೆಯಾದಾಗೂಟವಿವಾಹದ ಸಡಗರವೆ ನನಗಿಲ್ಲ ಸುಡುಸುಡಾ ಸುಖವ ಸಾಕಾ ಮಾತ ಮಱಿಯಿನ್ನು ತಡಹಲಾಗದು ಸ್ವಾಮಿಯೊಂದಾ (ಭರಕ. ೫೬-೬೮): ತಡಹದೆ ಮಾಡಿದ ನಿರ್ಜರೆ ಭವವೆಂಬ ಕಡಲೊಳು ತೊಳಲಿಸುತಿಹುದು (ಭರಕ. ೬೮-೬೬).

[ ದೇ.೫ ತಮಿ. ತಟಾಕ್ಕು; ಮಲ. ತಡಯು,ತಡುಕ್ಕು; ತುಳು. ತಡೆಯು, ತಡೆವು; ತೆಲು. ತಡಯು ]

**ತಡವು$_2$**, ತಡಪು$_1$, ತಡಹು$_2$ (ಕ್ರಿ). ೧. ತಡವರಿಸು ; ತಡಕಾಡು ; ಹುಡುಕು : "ತಡವು – ಹಸ್ತಾನ್ವೇಷಣೇ ಸ್ತಿಮಿತಭಾವೇ ಚ" (ಶಮದ); ಕತ್ತಲೆಯು ಕಾಹೊನಲನೀಸಾಡುವಂತೆ ತಡವುತ್ತ ನೋಡುತ್ತ . . . ತವಾತಮಗೆ ಕರೆದರು (ಸಿದ್ಧರಾ. ೩-೪೭) : ಪೊಂಗಳಶಂಗಳೊ ತನ್ನುರೋರುಹಂಗಳೊ ದಿಟಮೆಂದು ಕೈ ತಡವೆ ಕಣ್ ನಡೆಯಾಡೆ ಲತಾಂಗಿ ಕಂಡಳುಜ್ಜ್ವಳ ಕಳಶಂಗಳಂ (ಅನಂಪು. ೪-೧೧೮) : ರೂಪಕಂದರ್ಪನೆಂದೆನಿಸುವ ತನ್ನ ಪ್ರಾಣೋಪನ ತಡವಿ ನೋಡಿದಳು (ಪ್ರೋಹತ. ೨೭-೪೫); ಕಗ್ಗತ್ತಲೆಯಲ್ಲಿ ತಡವುತ್ತಾ ನಡೆದನು (ಮಲಿಮ. ೪). ೨. ನೇವರಿಸಂ: ಸವರು; ಮುಟ್ಟು: "ಕರದೆ ನೇವರಿಸುವಲ್ಲಿ ಸ್ತಿಮಿತದೊಳ್ ತಡವೆಂಬ ಶಬ್ದಮದು" (ಶಬ್ದಮ. ೧೧೯) : ಚಿತ್ರಭ್ರಾಂತಿಶ್ರಾಂತಂ ಪೊತ್ತುದುಮಂ ತಡವಿ ನೋಡುತಂ ಭಾಗಲಮಂ (ಶಂಕರಂ. ೧೪೭-೧೩) : ಕಯ್ಯಿಂದಲವಯವಂಗಳನೋವಿ ತಡವುತು (ಕುದ್ರರ. ದೇ. ೨೧೩-೪); ಸಂದಿಯಿಂ ಪೊಱಮಟ್ಟು ತನ್ನ ತಲೆಯಂ ತಡವಿ ನೋಡುತ್ತಿಪ್ಪನ್ನೆಗಂ (ಪುಣ್ಯಾಸ್ರ. ೫-೩೫ ಪ): ನಡೆ ವಿಜಯನಾಗೆಂದು ತನುವನು ತಡವಿದರು (ಕುಮಾರವ್ಯಾ. ೪-೫೩) . ೩. ಕೆಣಕು ; ಕೆರಳಿಸು : ವಿರಾಧನೆಂಬಾಸುರಂ ತಡವಲಿಕೆ ಕೊಬ್ಬ ಮುರಿದಾತನಂ ಸೀಳ್ದೊಗೆದು (ಹರಿಚ. ೨-೭); ತಡವದೆ ಬಹುತರವಾಗಿ ಹಾವುಗಳು ಕಚ್ಚುವದಿಲ್ಲ (ಮುಂಬಯಿ. ೨-೩೪) ; ಅವಳನ್ನು ತಡವುವದೂ ಸರ್ಪವನ್ನು ಕೆಣಕುವದೂ ಒಂದೇ (ರಂಗರೂ. ೦೮೩). △**ತಡಪು$_1$** : ೨. ಆ ಕುವರನ ನಟ್ಟಿನ ಬಿನದಕ್ಕೆ ಬಗೆವೆತ್ತು ನೋಡಿ ಮುದ್ದುಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ (ವೃಷವಿ. ೫೩-೮ ಪ). **ತಡಹು$_2$** : ೧. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು (ಅವಹಂ. ೨೦೯-೯೪೦) : ಸಡಿಲಾದ ಮುಡಿಯ ಸಾಗಿಸದೆ ಸೇವಕಿಯರ ತಡಹದೆ ಪತಿಗೆ ಶಂಕಿಸದೆ ನಡೆತರುತಿರ್ದರು (ಭರತ. ೪೩-೭೫). ೨. ಕೌರವ ಬಲದ ನಾಯಕರು ಶಿರವ ತಡಹುತ ತಮ್ಮ ಶಿಬಿರಕೆ ತಿರುಗಿದರು (ಕುಮಾರವ್ಯಾ. ೬-೭೩); ಪಣ್ಣಳ ರಸಾಯನಮನೀಂಟಿ . . . ನೀಗುರ್ಜಿಡಿದು ಹೊಟ್ಟೆಯ ತಡಹುತೆಳ್ದು ಕೈದೊಳೆದರಾಗ (ಸಮ್ಯಕ್ತ್. ೭-೨೮) ; ಮೈಯ ಗಾಯಂಗಳಂ ತಡಹಿ ತಕ್ಕೈಸಿ (ಕೃಮಿಥು. ೩೧-೫೯) : ಎಣ್ಣೆ ಗಂಟುಗಳ ತಡಹುತ ಬಣ್ಣದುಟಿಯ ಥಾವವ ದೀಟುತ ಮುದ್ದುವೆಣ್ಣುಗಳ್ಳೆ ತಂದರಾಗ (ಕಂಸವಿ. ೨೧-೭೪) . ೩. ಚೊಪ್ಪವಿಡಿದ ಹಂದಿಗೆ ತಡಹಿ [ಪಾಠಾಂ. ವಿ]ಬಿಡು ನಾಯನೆಚ್ಚರಳೆಯಂ. . . . ಎಂಬ ಬೇಡರ ಬೊಬ್ಬೆಯಿಂದಡವಿ ಘೀಳಿಟ್ಟುದು (ಹಕಾ. ೫-೨೩) ; ಈಗವಳ ಸುದ್ದಿಯನು ತಡಹದೇಡಮ್ಮಾಡಿ ರಾಯನ ವನಕೇಳಿಗೆಡಹಾಗದಿರದು ನಿನ್ನಾಣೆ (ನಾಗಕು. ೪-೩೨) ; ಯಕ್ಷ ರಾಕ್ಷಸ ಗಂಧರ್ವರಿಗೆ ಸಹ ನನ್ನ ತಮ್ಮಂದಿರನ್ನು ತಡಹುವ ಶಕ್ತಿಯಿಲ್ಲ (ಕಪಪು. ೬-೪೪). ೪. ಬಳಿ; ತೊಡೆ ; ಸವರು ; ಲೇಪಿಸು : ಪರಿಯಣಕೆ ತುಪ್ಪಮಂ ತಡಹಿ (ಸೂಪಶಾ. ೧-೨೦); ಹೂರಿಗೆಗೆ ಸಮದುಂಡೆಯೊಂದನೆ ತೆಗೆದು . . . ಪದಪಿನಿಂ ಹಂಚಿನೊಳು ತುಪ್ಪವ ತಡಹಿ ಅಡಲು ಮಂಡಗೆಯೆನಿಸಿಕೊಂಬುದು (ಸೂಪಶಾ. ೧-೨೯). ೫. ತಟ್ಟು ; ಬಡಿ : ನಿಶೆಯೊಳೈತಂದು ದಾಗಿಲ ತಡಹಲು (ನವಮೋ. ೧೫-೨) ; ಬಂದೊರ್ವ ಜಾರ ಬಾಗಿಲ ತಡಹಲು (ನವಮೋ. ೧೭-೨೫). [ ದೇ.॥ ತಮಿ. ತಟವು ; ಮಲ. ತಡವು ; ಕೊಡ. ತವ್ಡ್ ; ತೆಲು. ತಡವು, ತಡವು ]

**ತಡವು$_3$**, ತಡವು$_2$, ತಡಹು$_3$ (ನಾ). ೧. ಅಡ್ಡಿ ; ತಡೆ ; ವಿಘ್ನ : ಘೀನಿವನೆನಗೆ ಕೊಡಬೇಕಬೇಕೆಂದು ಕೊಂಡೊಯ್ವರೆನಗಿಲ್ಲಿ ತಡವುಂಟೆ ತಾತನರ್ಧಾಂಗಿ (ಕುರಾಸಾಂ. ೩೨-೯೭). ೨. ಸಾವಕಾಶ ; ವಿಳಂಬ : ಚರರಂ ತಡವಿಲ್ಲದೆ ಬೇಗಮಟ್ಟ ಪಂಕೇರುಹನಾಭನಂ ಬರಿಸಿ (ಶಂಶಭಾ. ೬-೨೦) ; ಮಗಂ ಪುಟ್ಟಿದಾಗಡೆ ಮಾಡಲ್ಪಗೆದಂದೆನಿಲ್ಲಿನಿಸುವಾಯುಷ್ಯಾಮಮಂ ಯಜ್ಞಮಂ ತಡವಂ ಮಾಡಿದೆನೀಗಳಿಂದೆ ಬಗೆ ನೀಂ ತತ್ಕಾರ್ಯಸಂಸಿದ್ಧಿಯಂ (ಕಾದಂಬ. ೭೨೪) : ತಡವು ಬೇಡೆನೆ ಕೌರವೇಂದ್ರನ ನುಡಿಗೆ ಮುನ್ನನಂ ವಾಯ್ತು (ಕುಮಾರವ್ಯಾ. ೧-೩೭). ೩. ಅವಕಾಶ ; ತೆರವು ; ಬಿಡುವು: 'ತಡವುಗೊಡು' ಪರಾ. △**ತಡಪು$_2$** ೧: (+). ೪. ತಿರುಪಿನ ಮೊಳೆಯು ಸಡಿಲವಾಗದಂತೆ ಅದರ ಕೊನೆಯಲ್ಲಿಡುವ ತಡೆಬಿಲ್ಲೆ : (+). **ತಡಹು$_3$** : ೧. ಶರಣರ್ಗೆ ತಡಹಿಲ್ಲವೆಂಬುದಂ ತನ್ನ ಮನಜ್ಞಾನದಿಂದವೇ ಅಱಿದು (ಭಸವ. ೫೧) ; ಬಿರಿದು ಕಟ್ಟಿದ ಬಂಟಂಗೆ ತಡಹಿಲ್ಲದೆ ಬಱುಬಂಗುಂಟೆ ಮನೆದಗಹು (ಕೋಲಶಾಂ. ೧೨-೫೭). ೫. ಏರಿ; ಕಟ್ಟೆ (?): ಕಡುಗಲಿ ವರುಣನಾತ್ಮಜರು ತಡಹನೊಡವ ಸಿಡಿಲಂತು ಗರ್ಜಿಸುತವೆ ನಡೆದು ಬಂದರರದೇನೆನಲಿ (ಅಂಜನ. ೬-೧೭೭) ; ಶೋಕಿಪ ಮಡದಿಯರ ಕಂಗಳ ಜಲ ತಡಹನೊಡೆದ ಮಳೆಯಾಯಿತು (ಅಂಜನ. ೭-೯೯).

[ <ತಡವು$_1$ ]

**ತಡವು$_4$** (ನಾ). ಸೋಂಕು ; ಸ್ಪರ್ಶ : ಹೊಣಕೆಗಳ ತಡಹುಗಳ ಕಲಿತನದ ಕಡುಹುಗಳ ರಣದವಕದಿಂ ಕುದಿಯುತಿಹುದು ಹಂಸಧ್ವಜನ ಪರಿವಾರಂ (ಜೈಮಿಭಾ. ೦೦-೪೧) ; ಸವಿ ಬೆಳಗು ತಡವು ದನಿ ನಾತವೆಂಬೈದಱ ಬಗೆ ತಿಳಿವನೆಡೆಯದೇ ಲೋಕಂ (ಕುಂಜೆ. ೧-೩-೭). 'ಕೈತಡವು' ಪರಾ.

[ <ತಡವು$_2$ ]

**ತಡವುಗೊಡು** (ಕ್ರಿ). ಅವಕಾಶಕೊಡು ; ತೆರವುಗೊಡು : ಇವು ಪಟ್ಟಣಂಗಳು ಇವು ಅರಣ್ಯಗಳು ಎಂದು ಪೆರ್ಬಡಿಶಿ [ ಬೇರ್ಪಡಿಸಿ ] ನೋಡುವುದಕ್ಕೆ ತಡವುಗೊಡದೆ (ಸೌಗಂಧಿ. ೦೭೮-೨೦). [ ತಡವು$_3$ + ಕೊಡು$_1$ ]

**ತಡವೆ** (ನಾ). ಸಲ ; ಸರತಿ : ಬಾರಿ : ವೆಂಕಟ್ರಾವು ಶಾಸ್ತ್ರಿಗಳಿಗೆ . . . ನಾಲ್ಕು ತಡವೆ ಪ್ರವರ್ತಿ ಆಗಿ ತೀರಿ ಹೋದದ್ದರಿಂದ (ಮ್ಯಕರಿ. ೧೯೩೮, ೫೩-೫ ; 1805) ; ಎರಡು ದಿನ ಮೂರುದಿನಕೆ ಒಂದೊಂದು ತಡವೆ ಬೆಂಗಳೂರು ಪ್ಯಾಟೆ ಹೊಕ್ಕು (ಹೃದರ. ೬೩) ; ಬಡಿಸುವಾಗ ಒಂದೆರಡು ತಡವೆ ಅಳಿಯನಾಗುವವನನ್ನು ನೋಡಿದಳು (ಸಾವಿತ್ರಿ. ೦೦).

[ ದೇ.॥ ತಮಿ. ತಟವೈ ; ತೆಲು. ತಡವ ]

**ತಡಸ** 'ತಡಸು$_3$' ನೋ.

**ತಡಸಲ$_1$** 'ತಡಸಲು$_1$' ನೋ.

**ತಟಸಲ$_2$** 'ತಡಸಲು$_2$' ನೋ.

**ತಡಸಲು$_1$**, ತಡಸಲ$_1$ (ನಾ). (ಉಕ) ೧. = ತಡಸು$_1$ : (+). ೨. ಎತ್ತರದಿಂದ ಆಳಕ್ಕೆ ಧುಮುಕುವ ನೀರು; ಅಬ್ಬಿ ; ಜಲಪಾತ ; ಧಬಧಬೆ (ಉಕ) : ತಡಸಲು ತಡಸಲು ಅಗೊ ಅಲ್ಲಿ, ದಡದಡ ಎನ್ನುವುದು ಎದೆ ಇಲ್ಲಿ (ಉಯ್ಯಾಲೆ. ೭೭-೦) ; ವಚನಗಳ ಪ್ರವಾಹ ಹತ್ತುಕಡೆಗೆ ಹರಿದು ತಡಸಲಾಗಿ ಬೀಳತೊಡಗಿತು (ಕಸಾಹ. ೩೧೫). **ತಡಸಲ$_1$** : ಸೆಳವಿನೋಳ್ಸಿಕ್ಕೊಡರಿ ತಡಸಲಕೆ ಬಿದ್ದಸುವನಳಿವಲ್ಲಿ (ದುರಪು. ೨೦-೧೧); ಗೋಕಾವಿಯ ಪಶ್ಚಿಮಕ್ಕೆ ಸುಮಾರು ಮೂರೂವರೆ ಮೈಲುಗಳ ಮೇಲೆ ಘಟಪ್ರಭೆಯ ತಡಸಲವುಂಟು (ಮುಂಬಯಿ. ೫-೬೭) ; ಕನ್ನಡದ ಈ ತುದಿಯು ತಡಸಲದಂದ ಜೋಗದ ಮಿಂಚಿಗೂ . . . ಇದುವು ನಡುಗಿಸಲರಿಯದೋ (ಅರಳು. ೩೦೨-೩). [?]

**ತಡಸಲು$_2$**, ತಡಸಲ$_2$ (ನಾ). ಒಂದು ಬಗೆಯ ಮರ : ತಡಸಲು ತಡ್ಸಾಲ್ (ಮೈಶಿಗಿ. ೪೧-೮೦೯) ; ಮರಗಳು: ಹೆಸವ . . . ಬೀಟೆ, ಪಚರಿ, ಬಿರಿಡಿ, ಕೂಲಿ, ತಡಸಲು, ತಪಸಿ, ನಂದಿ, ಕುಂಕುಮ (ನಮ್ಮನು. ೨೩೭). **ತಡಸಲ$_2$**: ತಡಸಲ (ಧಾಮಣ),–ತಕ್ಕಮಟ್ಟಿಗೆ ದೊಡ್ಡದು, ಕಟ್ಟಿಗೆ ನಸುಗೆಂಪು . . . ಗಾಡಿಗಳಿಗೆ ಮೇಲಾದದ್ದು (ಕಥಾಗಿ. ೪೦). [ ? ]

**ತಡಸಲುದೀಪ** (ನಾ). ನಿರ್ದಿಷ್ಟವಾದ ಕಡೆಗೆ ಅತಿಶಯವಾದ ಬೆಳಕನ್ನು ಹರಿಸುವ ವಿದ್ಯುದ್ದೀಪ : ರಂಗದ ಮೇಲೆ ವಿಶೇಷ ರೀತಿಯ ಕತ್ತಲೆ – ಬೆಳಕು ನಿಯೋಜನೆಗಾಗಿ ಹೊಸದಾಗಿ ನಾಲ್ಕು 'ತಡಸಲುದೀಪ' (Flood-light) ಕೊಂಡದ್ದಾಯಿತು (ನಟಸಾ. ೬೨೨).

[ P ಇದು ಇಂಗ್ಲಿಷಿನ 'Flood-light' ಎಂಬ ಪದದ ಅನುವಾದ ]

**ತಡಸು₁** (ನಾ). (ಗದ್ದೆಯಲ್ಲಿ ಒತ್ತಾಗಿ ಬೆಳೆದ ಸಸಿಗಳಂತೆ) ಒಂದಕ್ಕೊಂದು ತಡೆಯಾಗಿರುವಿಕೆ; ಪರಸ್ಪರ ಪ್ರತಿಬಂಧಕವಾಗಿರುವುದು : (ಕ).
[ ದೇ.? ಮಲ. ತಡಸ್ಸು ]

**ತಡಸು₂**, ತಡಸ (ನಾ). ಒಂದು ಬಗೆಯ ಮರ; ತಡಸಲು ಮರ : "ತಡಸು[ಪಾಠಾಂ. ತಟಸು] ನಿಟಿಳಂ" (ಮಂಗರಾ. ೩೬-೦೪); ಹಲಸಾಲಂ ತಡಸಾಸು ತೇಗು ತದಿಕು . . . ಎಂಬೀ ಮರದುಱುಗಲಿಱುಂಬಿನಿಂದತಿ ಗಹನಮೆನಿಪ ಗಹನಾಂತರದೊಳಗೆ (ಪಾರ್ಶ್ವಪು. ೦೨-೫೮); ಅಂಬಟೆ ತಡಸೀಳೆ ಬಾಳೆ ಸಿರಿಸಂ . . . ಇಡಿಕಿಱಿದಿರ್ದ ಪೇರಡವಿ (ಧರ್ಮಾಪ. ೩-೪೭); ಪಾಲಾಶಮರಟಾಳಮಾ ತಡಸು ಕಕ್ಕೆಯಂಕೊಲೆ . . . ಮೊದಲಾದ ವೃಕ್ಷಂಗಳಿಂ ವನಮೆಸೆದುದು (ಜಿಬಪು. ೩೩-೦೪). **ತಡಸ** : ಕಂಡಸ ತಡಸ[ಪಾಠಾಂ. ಲು]ತುಗ್ಗಿಲು ತದಿಕು ತವಸಿಗಳ . . . ತವಾಲತರು ಮೊದಲಾದ ವನ ಭೂಜಾಳಿಯಲಿ ಹೊಳೆದರು (ತೊರವಾ. ೭-೦೪-೦೭); ತಡಸ ತಾಱ ನೆಲ್ಲಿ ಹುಣಿಸೆ ಬಸುರಿ ಬೇವು ಮೊದಲಾದ ತರುಗಳು ಎಣಿಕೆಗೆ ಇಲ್ಲದಲ್ಲಿಹವು (ರಾಮವಿ. ೦೫-೫೪); ತಾವಿ ತ ತಡಸದ ಬೇವಿನ ಬೇಲದ . . . ಮರದೋಳಿಯಿಂದೆಸೆದುದಾ ವಿಪಿನ (ಕುರಾನಾಂ. ೨೭-೫೭).

**ತಡಹ** (ನಾ). ಗೊಡವೆ; ಗೋಜು; ಪ್ರಸಕ್ತಿ : ಕಾನನದಡೆಯು ಮೃಗಪಕ್ಷಿಗಳ ವಾರ್ತೆಯು ತಡಹವೇತಕ್ಕಕಟ (ಸದ್ಧುರು. ೭-೦೭). [<ತಡವು₂ ]

**ತಡಹರ** (ನಾ). "ಬೊಕ್ಕೆ; ಗುಳ್ಳೆ; ಹೊಪ್ಪಳೆ" (ಶ್ರ.ಭಾ.) : ಮೆಯ್ಯೊಳಿಟ್ಟ ಕೈ ಸಿಡಿಪಿನಮಳ್ಳಿಕೊಳ್ಳ ವಿರಹಜ್ವರದುಗ್ರತರಾತಿರೇಕದಿಂ ತಡಹರಮೆರ್ದು ವೆಂಬಿನೆಗಮೆರ್ದುವು ಮೆಯ್ಯೆವಿರಾ ಮೃಗಾಕ್ಷಿಯಾ (ಲೀಲಾವ. ೦೨-೩೭). 'ದಡಾರ' ಪರಾ. [ ? ]

**ತಡಹಾಯು** 'ತಡಂಬಾಯ್' ನೋ.

**ತಡಹಿಡು** 'ತಡವಿಡು₂' ನೋ.

**ತಡಹು₁** 'ತಡವು₁' ನೋ.

**ತಡಹು₂** 'ತಡವು₂' ನೋ.

**ತಡಹು₃** 'ತಡವು₃' ನೋ.

**ತಡಹು₄** (ನಾ). ೧. ಧೈರ್ಯ. ೨. ಸಮಾಧಾನ : ನಿನ್ನನು ಭಂಜಿಸಲು ಬಂದವನನಟ್ಟುವೆ ನಿನ್ನ ರಕ್ಷಿಸುವೆ ಕಂಜನಾಭ ಕಪರ್ದಿಗಳ ಪದಕಂಜಗಳ ಮೇಲಾಣೆ ದಿಟವಿದುವಂಜ ಬಿಡು ತಡಹಿರಲಿ ಮನದೊಳಗೆ (ಕೃಷ್ಣಗಾ. ೦೦-೯೭). [ ? ]

**ತಡಾಕ** (ನಾ). ಕೆರೆ; ತಟಾಕ. [ ಸಂ. ]

**ತಡಾಗ** (ನಾ). = ತಟಾಕ : ತಡಾಗತತಿ ಕಣ್ಗಳಿನುನ್ನತ ಪಾದಪೋತ್ಕರಂ ಸೀಗುರಿಯಿಂ ಕರಂ ಕಿಱಿಯವಾದವು ಕಣ್ಗೆ (ಅರ್ಧನೇ. ೭-೪); ಮಹಾಮಾಯೆ ತಡಾಗದಂಬಿಕೆ ವಸಂತಾದೇವಿ . . . ಶ್ರೀ ಗುಪ್ತಚಾಮುಂಡಿಯೆಂಬ ಮಹಾದೇವಿಯರಿರ್ಪ ಸೈಪಿನೊದವಿಂದಂ ಕುಕ್ಕನೂರ್ಪಾವನಂ (ಶಾಸಪ. ೮೭; 1179); ಕದಂಬವಂಶದ ಮಯೂರಶರ್ಮನು ತಡಾಗವನ್ನು ಕಟ್ಟಿಸಿದನೆಂದು ಬರೆದಿದೆ (ಕರ್ನಾಇ. ೦೬). [ ಸಂ. ]

**ತಡಾಯಿಸು** (ಕ್ರಿ). ದಾಟಿಸು; ದಂಡೆಗೆ ಮುಟ್ಟಿಸು : ದೊಡ್ಡ ಕಾರ್ಯ. ದೊಡ್ಡ ಮನಸ್ಸುಮಾಡಿ ನದಿ ತಡಾಯಿಸಬೇಕು (ಮಾಮುನ. ೦೪೭). 'ತಟಾಯಿಸು' ಪರಾ. [ ತಡ₂ + ಹಾಯಿಸು (<ಪಾಯಿಸು) ]

**ತಡಿ₁** (ನಾ). ತೇವ; ಒದ್ದೆ : ಅಳ್ಳಿಗಳನು ಹೊಯ್ಯುತ್ತ ಉಬ್ಬಸದಿ ತಡಿಯುನಿತು ಬಾಯೊಳಗಿಲ್ಲದಾರಿ ಒಣಗಿದ ನಾಲಿಗೆಯಲಿ ತೊದಲ್ನುಡಿಯಿಂದಯಿಂತೆಂದನು (ಶವಪೂ. ೨೮-೫೭). 'ತಡಿಯಾರಂ' ಪರಾ.
[ ←ತೆಲು. ತಡಿ ]

**ತಡಿ₂**, ದಡಿ₂, ಧಡಿ₁ (ನಾ). ೧. ದಡ; ದಂಡೆ; ತೀರ : ತುಂಗಭದ್ರೆಯಾ ತಡಿಯೊಳ್ ತಾಣ ಬೀಡುಗಳ್ ಇಟ್ಟು (ಇಅ. XI. ೦೨೭-೮; ೩೦೬) : ವಿಶಾಳೆಯೆಂಬ ತೊಱೆಯ ತಡಿಯೊಳನಿಬರುಮೇಕಪಾರ್ಶ್ವದೊಳ್ ಪಟ್ಟಿರ್ದು (ವಡ್ಡಾರಾ. ೧೦೦-೧೧); ಪೂಗೊಳದ ತಡಿಯ ಮಾಮರದಡಿಯೊಳ್ . . . ನಿತ್ಯನಿಯಮಂಗಳಂ ತೀರ್ಚಿ (ಪಂಚತಂ. ೦೨೦-೮); ಸಮುದ್ರದ ತಡಿಯಲೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದೊಡೆಂತಯ್ಯ (ಮಹಾದೇ.ಬ.೪೫-೦೦೭); ಕಂದನ . . . ಜಾಹ್ನವಿ ತರಂಗದಿ ನೋಯಲೀಯದೆ ಮುಳುಗಲೀಯದೆ ಚಾಚಿದರು ತಡಿಗೆ (ಕುಮಾವ್ಯಾ.ಆ. ೩-೨೨). ೨. ಎಲ್ಲೆ; ಮೇರೆ; ಮಿತಿ : ಲೋಗರ ಲೋಕದ ತೃಷ್ಣೆಗೆ ತಡಿಯುಂಟೆ (ರಾಮಾಶ್ವ. ೭೫-೪). ೩. ಸಮೀಪ; ಹತ್ತಿರ : ನೀ ನಡೆವ್ವೆ ಸಂಪತ್ತಿನ ತಡಿಗೆ (ಕಲಪು. ೭-೨೦). **ದಡಿ₂** : ೨. ಘುಡುಘುಡಿಸಿದನು ರೋಷವಹ್ನಿಯ ದ[ಪಾಠಾಂ. ತ]ಡಿಯ ಹೊಕ್ಕನು (ಕುಮಾವ್ಯಾ.ಸ. ೦೫-೩೭). ೪. ವಸ್ತ್ರ ಮೊದಲಾದವುಗಳ ಅಂಚು : ನನನಲ್ಲ ಮಲ್ಲಿಗ ದಡಿಯುಳ್ಳ ದೋತರ ಮಾನವಿಟ್ಟುಕೊಂಡು ತರುವೇನ ಮಾರಾಯ್ತು ಮೈಗೆ ಮುಡುಪಾಗಿ (ಜಾಸಿಗ.೯೩-೦೧). ೫. ದಿಂಡು; ಕಟ್ಟೆ : ಇದಿರಿನ ಕಿಡಕಿಯ ದಡಿಯಮೇಲೆ ಕೂತು . . . ಗೆಳೆಯನ ಮಾತನ್ನು ಆಲಿಸಹತ್ತಿದ (ಮುರುದಾ. ೨೦೦). **ಧಡಿ₁** : ೧. ಸಂಸಾರವೆಂದೆಂಬೊ ಉಬ್ಬಲದೊಳು ಬಿದ್ದು ಬಳಲಿ ತೊಳಲಿ ಒಬ್ಬರಾವರು ಧಡಿಗೆ ನಿಲಿಪಾರಿಲ್ಲ (ಮೋಕ್ಷದೀ. ೦೯೯). ೪. ಕಲ್ಲಪ್ಪ . . . ಧಡಿಯ ದೋತರವನ್ನು ಹೆಗಲಮೇಲೆ ಸರಿಯಾಗಿ ಒಗೆದುಕೊಂಡು . . . ನುಡಿದ (ಅಜೋಳ. ೪).

**ತಡಿದಡಿ, ತಡಿತಡಿ** (ದ್ವಿರುಕ್ತಿ) : ತಡಿತಡಿಯು ತೆಂಗಿನೆಳನೀರ್ ಕೂಡೆ ಕರೆಗಣ್ಮುವ ಕೊಳಂಗಳೊಳಪೊಕ್ಕು . . . ಎಳವಿದಿರ ಬಣ್ಣಮಂ ತಳೆದ ನೀರ್ವೆಣ್ಣಂತಿರ್ಪಳ್ (ಕಬ್ಬಿಕಾ. ೩೦೫); ಜಿನಮತಾಂಭೋಧಿಯುಮಂ ಪುಗದಾಗಮಮಜಾಪರ ಬಗೆವುಗದೆ ಕೆಲರ್ ಕವಿಗಳಾಡಿದರ್ ತಡಿದ[ಪಾಠಾಂ. ತ]ಡಿಯೊಳ್ (ಅಜಿಪು. ೦-೪೫); ಕಡಲ ತಡಿದಡಿಯೊಳಾತಂ ನಡಿಸಿದ ಕಾಂಚನ ಜಗಜ್ಜಯಸ್ತಂಭಂಗಳ್ (ಚಂದ್ರಪು. ೭-೩೧). **ತಡಿಗಾಗು**=ದಡವನ್ನು ಸೇರು : ತೆಪ್ಪವನು ನಂಬಿದಡೆ ತಪ್ಪದಲೆ ತಡಿಗಹುದು (ಸರ್ವಜ್ಞ. ೨೭೮).
[ <ಪ್ರಾ. ತಡಿ./ಸಂ. ತಟೀ ]

**ತಡಿ₃**, ಥಡಿ, ದಡಿ₃ (ನಾ). ೧. ಕುದುರೆಯ ಬೆನ್ನ ಮೇಲೆ ಹಾಕುವ ಹಲ್ಲಣ; ಜೀನು : ತ[ಪಾಠಾಂ. ದ]ಡಿಯ ಬಲಿಸುವ ಗುಳದ ಱಂಚೆಯ ಗಡಣಿಸುವ . . . ಉತ್ಸಹವಾಯ್ತುವರ ಪಾಂಡವರ ಬೀಡಿನಲಿ (ಕುಮಾವ್ಯಾ.ಉ. ೦೦-೦೨); ಅರೆಗಡಿದ ಪಕ್ಕರೆಯ ಖಂಡಿಸಿದ ತಡಿಯ . . . ಹೇರಾಳದಿಂ ಬಿಡದೆಸೆದುದು ರಣಭೂಮಿ (ಕುರಾಸಾಂ. ೨೦-೪೪); ಕುದುರೆಗೆ ತಡಿಯನ್ನು ಕೂಡ ಹಾಕದೆ ಅದನ್ನು ಹತ್ತಿಕೊಂಡು ಹೊರಟನು (ಪ್ರಮುಜ. ೭೦). **ಥಡಿ** : ೧. ಕುದುರೆಯ ಥಡಿಯಂಥ ಮೆತ್ತನ್ನ ಹಾಸಿಗೆ ನನಗೆ ಒಳ್ಳೆಯದೆನಿಸಿತು (ಸ್ವಪ್ನಕಿಜಿ. ೨೫೫); ಥಡಿ ಹಾಕೊ ರಾಯ ಕುದುರೇಗೆ (ಹಳ್ಳಿಯು. ೯೨). ೨. ಹಾಸು; ಹಾಸಿಗೆ : ನಡುಮನೆಯಲ್ಲಿ ಶೀನಪ್ಪಯ್ಯನಿಗೊಂದು ಥಡಿ ಹಾಕಿದರು (ಪ್ರಕ್ಕಿ. ೦೪೨). **ದಡಿ₃** : ೧. ತೆಗೆ ದಡಿಯ ಹಾಯಿಕು ಗುಳವ ಹಾ ಮೊಗವಡವ (ಕುಮಾವ್ಯಾ.ಶ. ೮-೦೧); ಕಡಿದ ಹಕ್ಕರಿಕೆಗಳ ಸೀಳಿದ ದಡಿಯ ನೆಗ್ಗಿದ ಗುಳದ ಱಂಚೆಯ . . . ಕುಸುರಿಗಳಲಿಸೆದುದು ರಣಭೂಮಿ (ಕುಮಾವ್ಯಾ.ಶ. ೦೫-೩೦). ೩. (?) : ಜೋಡಿ ಹಱಿದುದು ಸೀಸಕದ ದಡಿ ಬೀಡು ಬಿರಿದುದು ತಲೆಯ ಚಿಟ್ಟಿನ ಜೋಡು ಜಱಿದುದು ಮನಕೆ ಸುಱಿದುದು ಸೊಗಡು ರಣರಭಸ (ಕುಮಾವ್ಯಾ.ಉ. ೦೯-೩೭).
[ ←ಹಿಂ. ಮರಾ. ಥಡಾ ]

**ತಡಿಕೆ**, ತಡಕೆ (ನಾ). ೧. ಬಿದಿರು, ಗರಿ ಮೊದಲಾದುವುಗಳನ್ನು ಹೆಣೆದು ಮಾಡಿದ ತಟ್ಟಿ : ಎಲುವಿನ ತಡಿಕೆ ಕೀವಿನ ಹಡಿಕೆ ಸುಡಲೀ ದೇಹವ (ಮಹಾದೇ. ಬ. ೪೭-೦೦೮); ಕಡಹಿನಾಸೆಯೊಳೊರ್ವ ಬಡ ಸೂಳೆ ತನ್ನಯ ತಡಿಕೆಯಂತೆಸೆವ ಗಲ್ಲವನು ಮಿಡಿದಟ್ಟೆಯಿಂದ ಮಿಡಿಸಿ . . . ನಿಂದಿಹಳು (ಅಂಜಿಪ. ೩-೦೫೦); ತಡಿಕೆ ಮುಕ್ಕರಿ ಸಹ ಬಹ ಕಾಮಾಟದ ಬಿಡುಮುಂದಿಗೆ

ಲೆಕ್ಕವಿಲ್ಲ (ಕಂಪವಿ. ೧೧-೪೦) ; ಮುಡಿವಾಳ ಚಾಪೆಗಳಿಂ ತಡಿಕೆಗಳಿಂ ರಚಿಸಿ (ಸೌಗಂಧಿ. ೧೪೬-೧೭) : ಒಳಗೋಡೆಗಳೆಲ್ಲಾ ತಡಿಕೆ (ಅಲಿಮು. ೧೮೨). ೨. ಒಂದು ಬಗೆಯ ಬಲೆ ; ತಡಿಕೆವಲೆ : ತಡಿಕೆ ದೀವದ ಖಗವ್ಯಗ ಸಂತತಿ ಗೂಡಿ ನಡೆತಂದನಾ ವನಚರನು (ನೇಮಿಸಂ. ೨-೩೮) : ಬಾಣನಂದನನೆಯಂಬ ತಡಿಕೆಯ ಮಱೆಯ ಸುಜಾಣ ಮನ್ಮಥನುರುಳ್ಗಣೆಯ ಕೀಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೩-೦೬) ; ತಡಿಕೆಯುಂ ಪಿಡಿದೊರ್ವ ಮಾಯಾ ಪುಳಿಂದನಡಿಯಿಡುವುದುಂ ಕಂಡೊಂದು ಪುಲ್ಲೆ ತನ್ನೆರ್ದೆಯೊಳಂ ನಡುಗಿ (ಜೈಬಪು. ೫೩-೨೯) : ಪಾಸುವಲೆ ಬೀಸುವಲೆ ತಡಿಕೆ ಕಾಲ್ಗಣ್ಣಿಂಟುಗಟ್ಟಿಗೆಯು (ರಾಘಶ. ೧೭-೭೭). ೩. ತೆರೆ ; ಮರೆ : ಇವರನಂಗಡಿಯ ತಡಿಕೆಯ ಕೀಳಿಲ ಕೆಳಗಿಱದೊಡೆ ದಣ್ಡಮುಂ ದೋಷಮುಮಿಲ್ಲ (ಎಇ. XV, ೭೯-೨೬ ; 1050) : ಲೋಹದ ತಡಿಕೆಗಳ ನಳವಡಿಸಿ ಬೀಡಿನ ನಡುವೆ ರಚಿಸಿದರವನಪಾಲನ ರಾಜಮಂದಿರವ (ಕುವ್ಯಾಭೀ-೧-೩೦): ಈ ಪೀಠಗಳ ಸುತ್ತ ಬೆಳಕು ತೂರದ ಗಾಜನಿಂದ ಮಾಡಿದ ತಡಿಕೆಗಳಿವೆ (ಪ್ರಪಾಇ. I, ೩೯೭). ೪. ಚೌಕಟ್ಟು ; ಚಪ್ಪರ ; ಹಂದರ ; ಹೆಣಿಗೆ : ಕತೆಯ ತಡಿಕೆಯುನ್ನು ಎಲ್ಲಿಂದಲೋ ಎತ್ತಿಕೊಂಡಿದ್ದರೂ . . . ಮುನ್ನೂರು ಬರವಣಿಗೆಯ ಪುಟಗಳಷ್ಟು ವೃದ್ಧಿಯಾಗಿತ್ತು (ದಮ್ಮಮು. ೪): ಕಲೆಗಾರನೊಬ್ಬನು ಒಂದು ವಿಚಿತ್ರ ಸನ್ನಿವೇಶಕ್ಕೆ ಒಳಗಾಗಿ ಅವಸಾನ ಹೊಂದುವುದು ಇವುಗಳೆರಡರಲ್ಲಿಯೂ ಇರುವ ತಡಿಕೆ (ಅನುಕ. ೧೦೭)

ತಡಕೆ : ೪. ಬಳ್ಳಿಯನ್ನು ತಡಕೆಗಳ ಅಥವಾ ಕಂಬಗಳ ಮೇಲೆ ಹಬ್ಬಲು ಬಿಡಬಹುದು (ಅಹುಶಾ. ೧೨೯). [ ದೇ.ಶ ತಮಿ. ತಟುಕ್ಕು ; ಮಲ. ತಡುಕ್ಕು ; ತೆಲು. ತಡಕ, ತಡಿಕ ; ಕೊಲಾ. ತಡ್ಕಾ ]

**ತಡಿಕೆಗಟ್ಟು** (ಕ್ರಿ). ತಡಿಕೆಬಲೆಯನ್ನು ಕಟ್ಟು: ಎರೆಯ ಚೆಲ್ಲು . . . ಕೋಹುಗೊಡು ತಡಿಕೆಗಟ್ಟಂಟುದೊಡೆ (ಹಡಳಾ. ೫-೨೩). [ ತಡಿಕೆ + ಕಟ್ಟು₁ ]

**ತಡಿಕೆಗೋಡೆ** (ನಾ). ಬಿದಿರು ಅಥವಾ ಅಡಕೆ ದಬ್ಬೆಳಗನ್ನು ಹೆಣೆದು ತಡಿಕೆಗೆ ಮಣ್ಣು ಮೆತ್ತಿ ಮಾಡಿದ ಗೋಡೆ : ಪ್ರವೇಶಿಸಿತು ಪ್ರಥಮ ಕಿರಣಂ . . . ವರ್ಣಕುಟಿಯಂ, ತರಗೆಲೆಯ ತಡಿಕೆಗೋಡೆಯ ಬಿರುಕಿನಿಂದೆ (ಶ್ರೀರಾಮಾ. ೪೮೭-೨). [ ತಡಿಕೆ + ಗೋಡೆ ]

**ತಡಿಕೆಪಡಿ** (ನಾ). ಬಿದಿರಿನಿಂದ ಹೆಣೆದುಮಾಡಿದ ಬಾಗಿಲು ; ತಟ್ಟಿಯ ಬಾಗಿಲು: ಪನ್ನಗುಡಿ ತಡಿಕೆಪಡಿಯಂ ಕಿಲಕ್ಕೋಸರಿಸಿ ಬಂದಳು ಬಯಲ್ಗೆ (ಶ್ರೀರಾಮಾ. ೪೮೭-೪೦). [ ತಡಿಕೆ + ಪಡಿ₂ ]

**ತಡಿಕೆಬಲೆ** 'ತಡಿಕೆವಲೆ' ನೋ.

**ತಡಿಕೆವಲೆ, ತಡಿಕೆಬಲೆ** (ನಾ). ತಡಿಕೆಗಳಿಂದ ಮಾಡಿದ ಒಂದು ಬಗೆಯ ಬಲೆ : ತಡಿಕೆವಲೆ ಕಣ್ಣೆವಲೆ ನಿಟ್ಟಡಕಿಲ್ವಲೆ ಗೂಂಟವಲೆ . . . ಸಿಡುವಲೆಗಳೊಪ್ಪಿದವು (ಗಿರಿಕ. ೦-೮೦) : ತೊಡಕಿದನು ಗಡ ಗರುಡ ಹಾವಿನ ತಡಿಕೆವಲೆಯಲಿ (ಕುವ್ಯಾಕ. ೦೭-೩೦) : ಮಡದಿ ಮನೆ ಮನೆವಾರ್ತೆ ಮಕ್ಕಳಗಡಣವೆನ್ನದೆನುತ್ತ ಮಮತೆಯ ತಡಿಕೆವಲೆ[ಪಾಠಾಂ. ತಡಕಿವೂಲೆ] ಯಲಿ ತನು ಸಿಲುಕಿ (ನಿಭಾಗ. ೭-೦೪-೦೦) ; ಅಂಟುವಲೆಯ ತಡಿಕೆವಲೆಯ ಬೀಸುಬಲೆಯ (ರಾಮಾಶ್ವ. ೮೩-೨೨). ತಡಿಕೆಬಲೆ: ಮಡದಿಯನೋಟವೆಂಬೀ ತಡಿಕೆಬಲೆಯಲಿ ಸಿಕ್ಕಿ (ಅಮೃತ. ೨-೭೨). [ ತಡಿಕೆ + ಬಲೆ₁ ]

**ತಡಿಗಾಣ್** (ಕ್ರಿ). ದಡವನ್ನು ಕಾಣು; ತೀರವನ್ನು ಸೇರು: ಈ ಸಂಸಾರಾಂಭೋಧಿಯನೀಸುವ ನಿನಗಿದುವೆ ನಾವೆ ತಡಿಗಾಣ್ಬೆಯನಾಯಾಸದೊಳೆ (ಆದಿಪು. ೫-೭೦). [ ತಡಿ₂ + ಕಾಣ್ ]

**ತಡಿಗೂಡು** (ಕ್ರಿ). ದಡವನ್ನು ಸೇರು : ಹಱಗೋಲನೇಱದಡೆ ಅದ ಹಿಡಿವ ಕೆಱನಱದಿರಬೇಕು ತಡಿ ಮಡು ಅದಱಡಿಯನಱದು ತಡಿಗೂಡಬೇಕು (ಮೋಳಿಮಾ. ೩೬-೨೩೩). [ ತಡಿ₂ + ಕೂಡು₁ ]

**ತಡಿಗೆಹಣ** (ನಾ). ಕೊಡದೆ ಉಳಿದ ಹಣ ; ಬಾಕಿ ನಿಲ್ಲಿಸಿದ ಹಣ : ಮಿಟ್ಲಕೊಪ್ಪದ ಚಂನವೀರ ಗೌಂಡನು ತಡಿಗೆ ಹಣ ಅದೆ ಅಂತ ಹೇಳಿದ್ರಿಂದ (ಎಕ. VIII, ಸಾಗರ. ೪೬-೧೭ : ?). [ <ತಡೆ₁ + - ಗೆ + ಹಣ ]

**ತಡಿಗೊಳ್** (ಕ್ರಿ). ದಡವನ್ನು ಅನುಸರಿಸು ; ದಂಡೆಗುಂಟ ಇರು : ಆ ತರಂಗಿಣಿಯ ತಡಿಗೊಂಡು ಬೆಳೆದರವಿಂದ ಸರಸಿಜದರಲ್ (ರಾಜಶೇ. ೨-೮ ವ).

ತಡಿತಡಿಗೊಳ್ (ದ್ವಿರುಕ್ತಿ) : ತಡಿತಡಿಗೊಂಡಿಂಬಾಗೆ ಪೊಳೆವ ಪಚ್ಚೆಯ ಕೊಂಬುಗಳಂ ಪಿಡಿದು ನಿಳಿಕಿ ನೆಯ್ದಿಲನಾಯ್ದರ್ (ಲೀಲಾವ. ೫-೩೩). [ ತಡಿ₂ + ಕೊಳ್₁ ]

**ತಡಿದೆರೆ** (ನಾ). ದಡಕ್ಕೆ ಅಪ್ಪಳಿಸುವ ತೆರೆ : ತ್ರಿದಶೋರ್ವೀಜಂ ಪಯೋವಾರ್ಧಿಯ ತಡಿದೆರೆಗಳ್ ಪೊಯ್ದುಪೊಲ್ ನೀಡುಮಳ್ಳಾಡಿದುವು (ವರ್ಧಪು. ೦೦-೫೬). [ತಡಿ₂ + ತೆರೆ₄ ]

**ತಡಿಮಿಾಱು** (ಕ್ರಿ). ದಡವನ್ನು ಮಿಾರು ; ಮೇರೆ ಮಿಾರು : ತಡಿಮಿಾಱ ಬಂದ ತೆಂಕಣ ಬಡಗಣ ಕಡಲೊಂದನೊಂದು ತಾಗುವ ತೆಱದಿಂ (ಕಬ್ಬಿಕಾ. ೨೬೩). [ ತಡಿ₂ + ಮಿಾಱು ]

**ತಡಿಮುಟ್ಟು** (ನಾ). ದಡವನ್ನು ತುಳಿ ; ತೀರವನ್ನು ಸೇರು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳೆಗ್ಗೆದಿ ತಡಿಮುಟ್ಟಿ ಶಶಿಕಾಂತಕೂಲದೊಳಗೆ ಸಾಲುವಿಡಿದೊಪ್ಪಿದರು (ಕಂಪವಿ. ೨೩-೧೩೦). [ ತಡಿ₂ + ಮಟ್ಟು₁ ]

**ತಡಿಯಾರು** (ಕ್ರಿ). ತೇವ ಒಣಗಂ; ದ್ರವ ಬತ್ತು: ಒಡನೆ ದುಃಖಾನಲನು ಒಡಲನಾವರಿಸೆ . . . ಚೇತನದಿ ಸೊರಗಿ ಬಾಯ್ತುಡಿಯಾರಿ ಹವ್ವೈಸಿ (ನವವಜೀ ೭-೬). [ ತಡಿ₁ + ಆರು₄ (<ಅಱು₁) ]

**ತಡಿವಲೆ** (ನಾ).=ತಡಿಕೆವಲೆ: ತಡಿವಲೆಯ ಬಗರಗೆಯ ವಾಜಿಯ ಸಿಡಿವಲೆಯ ಕಾಲ್ಗಣ್ಣಗಂಪಿಲ ಬಡಿವಲೆಯ ಬೆಳ್ಳಾರವಲೆ ಪೇರ್ಬೀಸುವ ವಲೆಗಳನು (ಅನಂರಾ. ೩-೩-೫). [ <ತಡಿಕೆವಲೆ ]

**ತಡಿವಿಡಿ** (ಕ್ರಿ). = ತಡಿಗೊಳ್ : ಏಂ ನಡೆದುದೋ ಪೆರ್ಬಡೆ ಗಂಗೆಯ ತಡಿವಿಡಿದೆರಡನೆಯ ಗಂಗೆ ನಡೆವಂತಾಗಳ್ (ಆದಿಪು.೧೨-೬೩); ತಡಿವಿಡಿದೊಪ್ಪಿ ತೋಱುವ ತಮಾಲವನಂಗಳ ಮರ್ವು ಪರ್ವೆ (ಕಾದಂಪೂ. ೬೪೯); ತತ್ಕೂಪ ಸಮಿಾಪದೊಳ್ ನಿಂದು ಪೋಗಲಿಂಬಿಲ್ಲದೆ ತಡಿವಿಡಿದೆಟಲುತ್ತಿರ್ದ ಸರ್ಪನ ಬಾಲಮಂ ಬಳ್ಳಿಯೆಂದು ಬಗೆದು (ಪಂಚತಂ. ೧೦೮-೧೮) : ತಡೆದ ರಕ್ಕಸ ತಳವಱರ ಜವನಡೆಗೆ ಜಾಳಿಸುತಾಳುವೇರಿಯ ತಡಿವಿಡಿದು ಶೋಧಿಸಿದನಲ್ಲಿ ಸದನಸಂಕುಲವ (ತೊರರಾ. ೫-೨-೦೭). [ ತಡಿ₂ + ಪಿಡಿ₁ ]

**ತಡಿಸರಿ** (ಕ್ರಿ). ಹತ್ತಿರಬರು (?): ಇರಿವುರಿವಳ್ಕಂ ತಡಿಸರ[ರಿ]ದೆರದಪ್ಪಿದ ಹಾವು ಪಸಿದ ಪೆಣ್ಬುಲಿಯಾಂದಾ ಕರಡಿ ಕಡುಮುಳಿದ ಸಿಂಹಂ ಸ್ಫುರದನಲನ ಜ್ವಾಲೆ ಬಾಲೆಯೆಂಬನೆ ಸುಜನಂ (ಉಸಾರ. ೨೦೨). [ ತಡಿ₂ + ಸರಿ₁ ]

**ತಡಿಸಾರ್** (ಕ್ರಿ). ಕೊನೆಯನ್ನು ಮುಟ್ಟು; ಮುಗಿ ; ತೀರು: ಪೊಣ್ಮಿರ್ದ ಮೋಹಹೋದಯಂ ತಡಿಸಾರ್ದಿರ್ದಪುದು (ಅಜಪು. ೧೦-೩೪). [ ತಡಿ₂ + ಸಾರ್₁ ]

**ತಡಿಹುಡಿ** (ನಾ). "ಪುಡಿಪುಡಿ" (ಪ್ರಭಂ) : ಹೆಜ್ಜೆಹೆಜ್ಜೆಗೆ ವಸುಧೆ ತಡಿಹುಡಿಯಾಗುತಿರ್ದುದು (ಅಂಬಿಕಾ. ೪೨-೨೦). [ ? ]

**ತಡುಂಬು** (ಕ್ರಿ). ತಡೆ ; ನಿಧಾನಿಸು (?) : ಕುಡಿದು ಚಳಲ್ವುಳಲ್ಗರೆಯ ನಾಲಗೆಯಂ ಮಿಗೆ ನೀಡಿ ನೀರನೋಗಡಿಸಿ ಮರಲ್ದು ನಕ್ಕಿ ತುಟಿಯಂ ಕಡೆವಾಯ್ಗಳನಗ್ರುವಾದದಿಂ ತೊಡೆದು ತಡುಂಬಿ ತಾಂ ತೊಡಬಗೆತ್ತುವ [ಪಾಠಾಂ. ದೊಡಲನೆತ್ತುತ]ಮಾಗುಳಿಸುತ್ತೆ ಬಿಟ್ಟು ಕಣ್ಮೊರ್ದಗಳನಿಕ್ಕೆಲಕ್ಕಲಸಿ ಪೋಪ ತರಕ್ಷುವನುದ್ಬುಭುಕ್ಷುವಂ (ಲೀಲಾವ. ೬-೫೯). [ ? ]

**ತಡುಗಣೆ** 'ತಡಗುಣೆ' ನೋ.

**ತಡುಗುಣಿ** 'ತಡಗುಣಿ' ನೋ.

**ತಡುಪು** 'ತೊಡಪು$_2$' ನೋ.

**ತಡುಮಾಡು** (ಕ್ರಿ). ನೆಲೆಯಾಗಿ ನಿಲ್ಲು ; ಆಸಕ್ತವಾಗು ; ತೊಡಗು : ಬಾಡದ ಬಾಸಿಗವುಡೆ ಬೆಲ್ವೋಡದ ದಿವ್ಯಾಂಬರಂ ಮನಂಗೊಳೆ ಸುಖದೊಳ್ ಮೂಡುವ ಮುಟ್ಟುಡುವ ತಡುಮಾಡುವ ಬಗೆಯಿಲ್ಲದಲ್ಲಿ ಬಗೆ ಪೆಱತುಂಟೆ? (ಆದಿಪು. ೬-೪೦). [ P 'ತಡಮಾಡು' ಎಂಬುದರ ಅಪಲಿಖಿತ ]

**ತಡೆ$_1$** (ಕ್ರಿ). ೧. ತಡಮಾಡು ; ಹೊತ್ತುಗಳೆ ; ನಿಧಾನಿಸು : "ತಡ– ಕಾಲಕ್ಷೇಪೇ " (ಶಮುಧಾ) : ನಿಡಿಯಲರ್ಗಣ್ಗಳ ಬೆಡಂಗಿಯರ್ಕಳನರ್ಕಂ ನಡೆ ನೋಡಿ ಪೋಗಲಾಱದೆ ತಡೆಯ ಪಗಲ್ ಒರಿಯುವವ್ವುವಾ ಪುರವರದೊಳ್ (ಕಾವ್ಯಸಾ. ೧೭೮ ಚೂಡ್ರಾಳ); ಜಡಜನಮುಮೆಲ್ಲಮೋದಂ ತಡೆಯದೆ ಕಲ್ಗುಂ ಗುರೂಪದೇಶಕ್ರಮದಿಂ (ಕವಿರಾ. ೨-೧೦) ; ನೀರಂ ಕೊಂಡು ತಡೆಯದೆ ಬಾಯೆಂಬುದುಂ (ಪಂಚಥಾ. ೮-೪೦ ವ) : ತಡೆದ್ಯೆ ವಂಚಕ ಕೂರ್ತವೊಲ್ ಕುಱುಪುವೇಟ್ಪಿಲ್ಲಿರ್ದ (ಕಾದಂಪೂ. ೩೨೩); ಅನಲಜೆಯನಂದು ಪರಿಭವಿಸಿಯೆ ದಳ್ಳಿಂದುರಿದು ಸೊರ್ಕಿದವನಂ ಕೊಂದಂ ಕುರುಪತಿಯನಿಂ ಕೊಲಲ್ತಡೆದ ಪೆನೇ (ಗದಾಯು. ೬-೨೭); ಮಹಾಮಹಿಮ ರಾಜಸುತ ಪ್ರತಿಪತ್ತಿಯೆಂಬಿವಂ ತಡೆಯದೆ ವೀರಸಾನ್ತರ ಮಹೀಪತಿ ತಾ ದಯೆಗೆಯ್ದು ಕೊಳ್ವೊಡಂ. . . ನೆಗಟ್ತೆಯನೆಯ್ದೆ ಕೊಟ್ಟನ್ (ಪ್ರಾಆರಿ. ೧೯೩೦, ೭೪-೫೬ : 1058); ಮಗನೆ ನಿಜಾಯುಧವ ಹಿಡಿ ಶಲ್ಯ ತಡೆಯದಿರೇಳು ಕೃತವರ್ಮ (ಕುಮಾ‌ರವ್ಯಾ.ದ್ರೋ. ೫-೨೨) ; ಪೆಣ್ಗೆಳ ತನ್ನ ಮನದನ್ನ ಮಧುಮಿತ್ರನೆಂಬರಸಗಿಳಿಯಿರಾಳ್ ತಡೆಯ ಶೋಕಿಸುತಿರ್ದುದು (ಚಲಪು.೪೬-೪). ೨. ತಡವಾಗು ; ವಿಳಂಬ ವಾಗು : ಗಾಂಧಾರಿ . . . ತನ್ನ ಗರ್ಭಂ ತಡೆದುದರ್ಕೆ ಕಿನಿಸಿ ಕಿಂಕಿರಿವೋಗಿ (ಪಂಪಭಾ. ೧-೧೨ ವ). ೩. ಉಳಿ ; ನಿಲ್ಲು : ಆತನ ಕೆಲದೊಳ್ನೀರ ತಡೆದ ಬೇಗವೆನಿತು (ಕಾದಂಪೂ. ೮೦೬) ; ನಡೆದೊಡೆ ಕಾಲ್ನೊಂದಪುದೆಂದಡಿಗಡಿ ಗಾರಯ್ದು ತಡೆಯುಮೆಂದಾಳಿಯರಂ ಜಡಿವಾ ಜನನಿಯುಂ (ಧರ್ಮಾಮೃ. ೩-೫೫) ; ತಡೆಯದು ಜವ್ವನಂ ಪದವಿ ನಿಲ್ಲದು (ಅನಂಪು. ೯-೪೫); ಅರಮನೆ ಯೊಳಗೆ ಮತ್ತಾ ದಿನ ತಡೆದು ಶ್ರೀ ಗುರುಹಂಸನಾಥನ ಭಜಿಸಿ (ಭರತೇ. ೩೬-೫೪). ೪. ಅಡ್ಡಗಟ್ಟು ; ಎದುರಿಸು ; ನಿರೋಧಿಸು ; ನಿಲ್ಲಿಸು : ಅಡರ್ಪುದೆ ವಿಜಯಾರ್ಧ ಗಿರಿಯನಿಂತೀಗಳೆ ಪೊಣ್ಮಡಗಿಡುವುದೆ ಸಿಂಧುವನಿಂ ತಡೆವಂದುಮಿದಾವುದೆಮ್ಮನೆಮ್ಮನೆ ಬೆಸಸಾ (ಆದಿಪು. ೧೩-೨೦) : ಆರ್ ಕೊಳ್ವೊಡಂ ತಡೆಯದ ಕನಕರಾಶಿಯುಮಂ (ಅಜಿಪು. ೧೦-೧ ವ); ಖತಿಯಲಿ ಮಿಹಿರಸುತನಡಹಾಯ್ದು ತಡೆದನು ಮತ್ತೆ ಬಾಲಕನ (ಕುಮಾ‌ರವ್ಯಾ.ದ್ರೋ. ೫-೫೧) ; ಮೇದಿನಿಯೊಳಾರಾದೊಡಂ ಬಿಡುಕುಳ್ಳೊಡುನ್ನತ ಪರಾಕ್ರಮಿ ತಡೆಯಲಿ ವಾಜಿಯನು (ಜೈಮಿಭಾ. ೨-೨೮) ; ತಡೆದೊಡೆ ತಡೆವೆಮೆಂದು ಕಟ್ಟಿ ನುಡಿವುದುಂ (ರಾಮಾಶ್ವ. ೧೫೯-೧೦). ೫. ತಾಳಿಕೊಳ್ಳು ; ಸೈರಿಸು ; ಸಹಿಸು : ಪೆರ್ಬಟ್ಟೆಪ್ರತ್ತಿ ನೂಕುವ ಮಹಾವಾತಘಾತಮಂ ತಡೆದೊಲೆ ಯದಿಪ್ಪಂತಿರೆ (ಜೈಮಿಭಾ. ೪-೨೯). ೬. ಸರಿಹೋಗು; ಸಹನೀಯವಾಗು; ಒಗ್ಗು : ಮುಟ್ಟಿನವರಿಗೆ ರಾತ್ರೀಊಟ ತಡೆಯುವದಿಲ್ಲ (ಮುಂಬಯಿ. ೫-೧೫೨). ೭. ಹೆಚ್ಚು ಕಾಲ ಬಾಳು; ತಾಳಿಕೆ ಬರು; ಬಾಳಿಕೆ ಬರು : ಹೋದವರ್ಷ ಕೊಂಡ ಸೀರೆ ನಾಲ್ಕು ತಿಂಗಳು ತಡೆಯಲಿಲ್ಲ (ರೂಢಿ). 'ತಡೆತ' ಪರಾ. ೮.ನಿಂತುಹೋಗು ; ಸ್ಥಗಿತವಾಗು : ಬಾಳಂ ಕಿತ್ತೆತ್ತಿ ಪೊಯ್ಕಲದು ನಾಗವೇದಿಕೆಯಂ ತಾಗಿ ತಡೆಯೆ[ಪಾಠಾಂ.ದೊಡೆ](ಪಂಚತಂ. ೧೯೭-೯); ಬೆರ್ಚಿ ಭಯವಶದಿಂ ಪ್ಯೆನಡುಗೆ ಮತಿಗೆಟ್ಟು ಕಾಲ್ಗಳ್ ತಡೆದೊಡೆ (ಧರ್ಮಾಮೃ. ೭-೮೪): ಉಸಿರಿಕ್ಕುತಿರ್ಪುಸಿರ್ ತಡೆದೊಡಮಿಲ್ಲ (ಪಂಪಾಶ. ೮೩); ತಡೆಯದೆಲ್ಲೆಡೆಯೊಳ್ ತಾನು ಬೀಸುವೆನೀಯೆಡರನೇಳಿಪೆನೆಂದೆಲರು ಸಡಗರ ದಿಂದ . . . ಮುಡಿಯೊಳಾನುವುದು (ಹದಿಬ. ೨-೭). 'ತಡ$_1$' ಪರಾ.

**ತಡಕೊಳ್ಳು**=ತಾಳಿಕೊಳ್ಳು; ಸಹಿಸು; ಸೈರಿಸು: ಹವಣಿಸಿ ಹಲವು ಕಬ್ಬು ನವ ಕಾಡಿಪ ತನ್ನ ತವರವ ತಡಕೊಂಬುದರಿದೆ (ಜೋಹತ. ೪೧-೪೯) ; ಕಡು ಕೋಪ ಬಂದಾಗ ತಡಕೊಂಡವನೇ ಜಾಣ (ಗಾದೆ).

[ ದೇ.: ತಮಿ. ತಟು, ತಟ್ಟೈ ; ಮಲ. ತಟು, ತಟೆ ; ತುಳು. ತಡೆ ; ಕೊಡ. ತಡೆ ]

**ತಡೆ$_2$** (ನಾ). ೧. ತಡ ; ಸಾವಕಾಶ ; ವಿಳಂಬ : 'ತಡೆವಡು' ಪರಾ. ೨. ಅಡ್ಡಿ ; ನಿರ್ಬಂಧ ; ವಿಘ್ನ : ಬಯಲಿಂಗೆ ಕಡೆಯಿಲ್ಲ ಮರುತಂಗೆ ತಡೆಯಿಲ್ಲ (ಅವಚಂ. ೨೫೬-೧೧೭೯) ; ತಪನರಥಮದಾ ಪುರದೆ ಮಿಗೆ ಪುಗಲ್ ತಡೆಯಿಲ್ಲದಬ್ಜಜಂ ಮಾಡಿದ ರಂಧ್ರಪಥಂಗಳೆಂಬಿನಂ ರಾಜಿಪುವಾ ತೆನೆತೆನೆಗಳಂಬುಗಂಡಿಗಳೆನಸುಂ (ಕುಸುಮಾ. ೨-೭೮) ; ತೊಡೆಗಳೊ . . . ರಂಭಾವಿಭವದ ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ (ಗಿರಿಜಾ. ೧೦-೫೯); ನಿರಾಯುಧರನಿಱಿವಲ್ಲಿ ತಡೆಗಿಡೆಗಳುಂಟೇ (ಚಬಪು. ೨೧-೧೯) : ಈ ಕಲ್ಲುಮಣ್ಣಿನ ರಾಶಿ, ನದಿಯ ಓಟಕ್ಕೆ ತಡೆಯಾಗುತ್ತದೆ (ಸನದಿ. ೨೩). ೩. ಅಡ್ಡವಾಗಿ ಬರುವಿಕೆ : ಬಳಿಕ ಕಲಿ ರಾಧೇಯ ಬರುತಿರೆ . . . ವಾಯಸದ ತಡೆ ಭೂಮಿಕಂಪ ನಿಜಾಯುಧಂಗಳ ಕಿಡಿ ಗಜಾಶ್ವನಿಕಾಯ ರಥವಾಜಿಗಳ ಕಂಬನಿ ಕಾಣಲಾಯ್ತೆಂದ (ಕುಮಾ‌ರವ್ಯಾ.ಕ. ೮-೨೬). ೪. ಸಂಕೋಚ: ನುಡಿ ನೋಟ ಸರಸಗಳಿಂದ ಅಡಿಗಡಿಗಬಲೆಯರಂತರಂಗದ ತಡೆಯೊಡೆ ಯಿಸುತಿಹನೇನನೆಂಬೆ (ಭರತೇ. ೬-೭೯). ೫. ರಕ್ಷೆ ; ತಾಯಿತಿ: 'ತಡೆಗಟ್ಟು$_2$' ಪರಾ. ೬. (ನಿಂತಲ್ಲಿಯೇ ನಿಲ್ಲುವಂತೆ) ಹಾವುಗಳಿಗೆ ಹಾಕುವ ಮಂತ್ರ; ಸ್ತಂಭನಮಂತ್ರ : ತಡೆಯೆಂಬ ನುಡಿ ಪಾವಡಿಗರೊಳಲ್ಲದಾ ಪೊಡವಿ ಯೊಳಿಲ್ಲ ಭಾವಿಸಲು (ಕುರಾಸಾಂ. ೨-೭೯) ; ಕೊಡೆಯೆಂಬರಾತಪತ್ರವನು ತಡೆಯೆಂಬುದಹಿಮಂತ್ರದೊಳಗಲ್ಲದಾ ದೇಶದೆಡೆಯೊಳೀ ಶಬ್ದಂಗಳಿಲ್ಲ (ಜೋಹತ. ೨-೨೦). ೭. ತಿರುಪು ಅಥವಾ ತಿರುಗಣೆ ಸಡಿಲವಾಗದಂತೆ ಅದರ ಕೊನೆಯಲ್ಲಿ ಅಳವಡಿಸುವ ಚಿಕ್ಕ ಬಿಲ್ಲೆ : (ಕ). ೮. ಕಿವಿಯ ಹಾಲೆಯ ವೆಜ್ಜ ಮುಚ್ಚಿಹೋಗದಂತೆ ಇರಿಸುವ ಕಡ್ಡಿ,–ಬೆಂಡು : (ಕ). ೯. ವಿಾಸಲು ಪಡೆ ; ಕೈಗಾವಲಿನ ಸೈನ್ಯ (?) : ಶ್ರೀಮನ್ಮಹಾ ಪ್ರಧಾನಂ ತಡೆಯ ದಣ್ಡನಾಯಕಂ ಲಕ್ಷ್ಮಣಯ್ಯಂಗಳ್ (ಎಕ. XII. ೩೩೪-೫; 1125). ೧೦. ಆಜ್ಞೆ ಅಥವಾ ಕಾರ್ಯ ಜಾರಿಯಾಗದಿರುವಿಕೆ,–ಸ್ಥಗಿತ ಗೊಳಿಸುವಿಕೆ : ತಡೆಯ ಆಜ್ಞೆ ಹಠಾತ್ತನೆ ಆಗಮಿಸಿತು (ನಿಶಉ. ೨೪). ೧೧. ವೇಗವನ್ನು ತಡೆಯುವ ಸಾಧನ ; ಬಿರಿ : ಗಾಳಿಯ ತಡೆ (ರೂಢಿ).

**ತಡೆಹಾಕು**=೧. ನಿಲ್ಲಿಸು ; ತಡೆಗಟ್ಟು ; ತಡೆಯುಂಟುಮಾಡು : ನೀಲ, ಅರ್ಕನ ಹೂಂಕಾರಕ್ಕೆ ತಡೆಹಾಕಿ ಹೇಳಿದನು (ಬಂಗಾಹ. ೭೩). ೨. ಆಕ್ಷೇಪಿಸು ; ಆಕ್ಷೇಪಣೆಮಾಡು : (ಕ). [ <ತಡೆ$_1$ ]

**ತಡೆ$_3$** (ನಾ). ದಡ ; ತೀರ : " ತೀರಂ ತಟಂ ಕೂಲಮನೆ ತ್ರೋಱಿಯ ತಡೆ [ಪಾಠಾಂ. ಡಿ]ಗೆ ನಾಮಂ " (ಮಂಗರಾ. ೧೨೨-೧೦) : " ತಡೆ–ತಟಾ=ದಂಡೆ " (ಕರ್ಣಾಕೋ. ೧೬); ದೇವರೊಲವುಳ್ಳವರ ಕಂಡು ತಾನಾದನೆಂದೊಡೆ ಚಲಿಸದು ಕಂಡಯ್ಯ ನೇಮವೆಂದಡೆ ತಡೆಮುಟ್ಟಸಲೀಯ್ಯ (ಸಮೂವ. ೧೧-೪೦).

[ <ಸಂ. ತಟಾ ]

**ತಡೆಅರ್ಜಿ** (ನಾ). "ಪ್ರತಿಪಕ್ಷದ ಹೇಳಿಕೆಯನ್ನು ಕೇಳಿದ ಹೊರತು ಮುಂದಿನ ಕ್ರಮ ಜರುಗಿಸಕೂಡದೆಂದು ಹಾಕುವ ಅರ್ಜಿ ; ತಡೆ ಅರ್ಜಿ : ಎಚ್ಚರಿಕೆಯ ಅರ್ಜಿ" (Caveat. ಇಂಕನಿ.).

[ ತಡೆ$_3$ + ಅರ್ಜಿ$_2$ ]

**ತಡೆಕಟ್ಟು** 'ತಡೆಗಟ್ಟು$_1$' ನೋ.

**ತಡೆಕವಾಟ** (ನಾ). ತಡೆಯುವ ಬಾಗಿಲು,–ಕದ : ನೀರು ನಿರ್ಗಮನಾಳ ವನ್ನು ಹಾಯ್ದು ತಡೆಕವಾಟದ (ಚೆಕ್‌ವಾಲ್) ಮೂಲಕ ಉಗಿಯ ಗುಡಾಣವನ್ನು ಸೇರುತ್ತದೆ (ಕವಿಕೋ. I, ೭೪). [ ತಡೆ$_1$ + ಕವಾಟ ]

**ತಡೆಕಾವಲುಗಾರ** (ನಾ). (ಮುಷ್ಕರ ಮೊದಲಾದುವುಗಳಲ್ಲಿ ತಮ್ಮವರು ಕೆಲಸಕ್ಕೆ ಹೋಗದಂತೆ) ತಡೆಯುವ ಕಾವಲುಗಾರ : "ಕಾವಲುಪಡೆ, ಗಸ್ತುಪಡೆ; ತಡೆಕಾವಲುಗಾರರು ; ಪಿಕೆಟ್ " (Picket. ಪ್ರತಿನಿ. ೭೨).
[ ತಡೆ$_3$ + ಕಾವಲುಗಾರ (< ಕಾವಲುಗಾಱ) ]

**ತಡೆಕ್ಕೆ** 'ತಡಕೆಯ್' ನೋ.

**ತಡೆಗ** (ನಾ). ತಡೆಯುವವನು ; ಅಡ್ಡಿಪಡಿಸುವವನು : "ರುಂಧನ್ ರೋಧಕ: – ಈ ೨ ತಡೆಗಂ" (ಶಾಶಕ್ಯ. ೨೩೩). [ ತಡೆ$_3$ + – ಗ$_2$ ]

**ತಡೆಗಂಬಿ** (ನಾ). ತಡೆಯುವ ಕಂಬಿ,–ತಂತಿ : (ಇಳಿಜಾರಿನಲ್ಲಿ ಹೋಗುತ್ತಿರುವಾಗ) ಗಾಲಿ ತಿರುಗದಂತೆ ತಡೆಯುವ ಕಂಬಿ; ತಡೆಗಂಬಿ (Spoke. ಇಂಕನಿ.). [ ತಡೆ$_3$ + ಕಂಬಿ$_1$ ]

**ತಡೆಗಟ್ಟು$_1$**, ತಡೆಕಟ್ಟು (ಕ್ರಿ). ೧. ಅಡ್ಡಿಪಡಿಸು ; ಅಡ್ಡಗಟ್ಟು ; ತಡೆದು ನಿಲ್ಲಿಸು ; ಪ್ರತಿಬಂಧಿಸು ; ಸ್ತಬ್ಧಗೊಳಿಸು : ಕಂಪೆನಿಯ ಸೈನ್ಯವು ಅವರನ್ನು ತಡೆಗಟ್ಟುತ್ತಿದೆ (ಘೂರಾಚಿ. ೪೩೭) ; ರಾಜಭಟರು ರಾಜಒಡೆಯನನ್ನು ತಡೆಗಟ್ಟಲಿಲ್ಲ (ಶ್ರೀರಾಯ. ೩೦೦) ; ಅದನ್ನು ತಡೆಗಟ್ಟುವುದು ಅಪ್ಪಾಜಿಯವರಿಂದಲೂ ಸಾಧ್ಯವಲ್ಲ (ಚದೇವ. ೨೦೦) ; ವೃದ್ಧಾಪ್ಯ ಮತ್ತು ಮೃತ್ಯುಗಳನ್ನು ತಡೆಗಟ್ಟುವ ಉಪಾಯವನ್ನು ಈತ ಕಂಡುಹಿಡಿದಿದ್ದಾನು (ಅಶ್ರಮ. ೭೮) : ನಿಯಂತ್ರಣ ಕ್ರಮಗಳಿಂದ ನೊಣಗಳನ್ನು ತಡೆಗಟ್ಟಬಹುದು (ಅಜುಸಾ. ೫೦). **ತಡೆಕಟ್ಟು** : ೨. ಮಳೆ, ಬೆಂಕಿ, ಹಾವು, ಹುಲಿ ಮುಂತಾದುವನ್ನು ಮಂತ್ರಬಲದಿಂದ ಸ್ತಂಭನಗೊಳಿಸು : ಭವಭೂತಿಯು ತನ್ನ ವಿದ್ಯೆಯ ಶಕ್ತಿಯನ್ನು ತೋರಿಸಬೇಕೆಂದು ತಡೆಕಟ್ಟಿದನು; ಬರುತ್ತಿದ್ದ ಮಳೆಯು ನಿಂತು ಹೋಯಿತು (ನೀತಿಶಿಂ V, ೨೪) ; ಬೇಟೆಯಾಗದಿದ್ದರೆ ಯಾರೋ ತಡೆಕಟ್ಟಿರುವರು; ಅದನ್ನು ಬಿಡಿಸಬೇಕೆಂದು ಮಂತ್ರವಾದಿಯ ಬಳಿಗೆ ಹೋಗಿ ಆ ಶಾಸ್ತ್ರವನ್ನು ನೆರವೇರಿಸುತ್ತಿದ್ದರು (ಹುಟ್ಟಿಹ. ೨೭). [ ತಡೆ$_3$ + ಕಟ್ಟು$_1$ ]

**ತಡೆಗಟ್ಟು$_2$** (ನಾ). ೧. ಅಣೆಕಟ್ಟು : (ಕ). ೨. ಪೀಡಾಪರಿಹಾರಕ್ಕಾಗಿ ಕಟ್ಟುವ ರಕ್ಷೆ,–ತಾಯಿತ. ೩. ಅಡ್ಡಿ ; ತಡೆ; ಪ್ರತಿಬಂಧಕ : ಯಕ್ಷಿಣಿಯಾಟದಂತೆ ಫಕ್ಕನೆ ತೆರೆವ–ಕಣ್ಮಾಯವಾಗುವ – ಎದ್ದುರೆಯ ತಡೆಗಟ್ಟಾಗಿ ನಿಲ್ಲುವ–ಕದಬಾಗಿಲ್ಗಳೂ (ಚಟ್ಟಅ. ೪೯–೮). [ ತಡೆ$_2$ + ಕಟ್ಟು$_2$ ]

**ತಡೆಗಟ್ಟೆ** (ನಾ). ಅಡ್ಡಗಟ್ಟೆ ; ಅಣೆಕಟ್ಟು : (ಕ).
[ ತಡೆ$_1$ + ಕಟ್ಟೆ ]

**ತಡೆಗಡಿ** (ಕ್ರಿ). ೧.=ತಡಂಗಡಿ ೧ : ವೀರರಂ ತಡೆಗಡಿದ ನೆತ್ತರ ಕಡಲ್ಕಟ್ಟೆ (ಇಹರ. ದೇ. ೪೨.೪) ; ಮಿಾಱಿದಡೆ ಕೆಡಹಿ ತಡೆಗಡಿವೆನು (ಹಕಕಾ. ೧೧–೩೮); ತಡೆಗಡಿ ಸುಯೋಧನನೂರುಗಳನು (ಕುವ್ಯಾಸ. ೧೫–೩೦) : ತಾನೀ ಬಲವನೆಱೆ ತಡೆಗಡಿದು ಗೋಸಂಕುಲವ ತಿರುಹುವೆನೆಂದು ಮುಳಿದೀಕ್ಷಿಸಿ ಕುಮಾರಕರ (ಜೀವಂಚ. ೪೦–೩೪) ; ಎಚ್ಚೊಡಚ್ಯುತನ ಬಾಣಂಗಳ ತಡೆಗಡಿದು (ಮೋಹತ. ೪೦–೩೪) : ಬಂದ ವಾದಿಗಳ ನಾನಳವಿಯೊಳ್ಕಾಣೆನೆಂಬಂದವಾಗಲ್ಕೆ ತಡೆಗಡಿದು ಮೆದೆಗೆಡಹಿದಾ (ಕೃಮಿಥಾ. ೦೨–೪೩). ೨. ಅಡೆತಡೆಗಳನ್ನು ಗೆಲ್ಲು ; ವಿಘ್ನವನ್ನು ದಾಟು : (ಕ). ೩. ನಡುನಡುವೆ ಭಂಗವಾಗು : ಆಗಾಗ್ಗೆ ನರಳುದನಿಯಿಂದ ತಡೆಗಡಿಯುತ್ತಿದ್ದ ಅವಳ ಮೇಲುಗೊರಕೆಯನ್ನೂ . . . ಕೇಳಿಸಿಕೊಳ್ಳುತ್ತಿದ್ದಾಗ (ಪುನರು. ೫೪೪). ೪. ನಡುನಡುವೆ ನಿಲ್ಲಿಸು,–ಭಂಗಪಡಿಸು : ಇತರರು ತನ್ನ ಮಾತನ್ನು ತಡೆಗಡಿಯಲವಕಾಶಕೊಡಲಿಲ್ಲ (ಪುನರು. ೦೦೫). 'ತಡಂಗಡಿ' ಪರಾ.
[ ತಡೆ$_3$ + ಕಡಿ$_3$ ]

**ತಡೆಗಡಿಸು** (ಕ್ರಿ). ಸಂಪೂರ್ಣವಾಗಿ ಕತ್ತರಿಸಿ ಹಾಕಿಸು : ಕ್ಷಾತ್ರವ ತಡೆಗಡಿಸಿ ಚತುರಂಗ ಬಲವನು ಹುಡಿಹುಡಿಯ ಮಾಡುವರು (ಕುವ್ಯಾಉ. ೪–೭೭).
[ ತಡೆಗಡಿ + – ಇಸು$_3$ ]

**ತಡೆಗರ್ಚು** (ಕ್ರಿ). ದಂಡೆಯನ್ನು ಹಿಡಿ ; ದಡಕ್ಕೆ ಬರು (?) : ಎಡೆವಿಡದಾವಾವ ಕೆಱೆ ತೊಱೆ ಬಾವಿಯೊಳ್ತಡೆಗರ್ಚಿದುವು ನೀರ್ವಕ್ಕಿ ತಡೆಯದೆ ಬಹುಮೃಗ ಪೊಸ ತುಪ್ಪುಳಾಂತು ಮಯ್ಯುಡೆಯಲ್ಕೆನರರಳಲಿದರು (ಮೋಹತ. ೪–೪೪). [ ತಡೆ$_3$ + ಕರ್ಚು$_1$ ]

**ತಡೆಗಾಲ್**, ತಡೆಗಾಲು (ನಾ). ೧. ಮುಂದೆ ಹೆಜ್ಜೆ ಇಡದಂತೆ ಅಡ್ಡಿಪಡಿಸುವ ಕಾಲು ; ಅಡ್ಡಗಾಲು : ಪೌಜು ಬಂದೊಡನೊದಗಲಿಟ್ಟಣಪ ಜನದ ತಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯಲು (ಭಾವಚಿಂ. ೮–೧೮) ; ಸಂದಣಿಪ ಮುಂದಿಯೊಳಪೊಕ್ಕು ನಿಂದು ನಿರೀಕ್ಷಿಪಾಗಳ್ಕವಿವ ಪಡೆಯ ತಡೆಗಾಲ್ಪೊಡೆಯ ಪೊಡವಿಯೊಳ್ಕೆಡೆದು ಕಣ್ಗಟ್ಟಳಲ್ದು (ರಾಜಶೇ. ೦೩–೯೫ವ). 'ತಡೆಗಾಲ್ಪೊಯ್' ಪರಾ. ೨. ತಡೆತಡೆದು ನಡೆಯುವ ಕಾಲು ; ತಡವರಿಸುವ ಕಾಲು : ಸೆಡೆವ ನಡೆ ತೊಡೆಯ ತಡೆಗಾಲ್ ನಡುವಿಂಗತಿ ಗಾಢದುಡಿಗೆ ಬಡತನು . . . ಸೊಗಯಿಸಿತ್ತು ಪಂಕಜಮುಖಿಯೊಳ್ (ಗಿರಿಕ. ೩–೨೨). **ತಡೆಗಾಲು** : ೧. ತಿವಿದು ಹಿಂಗುವ ಭಟನ ಪವನಜನವಟಿ ತಡೆಗಾಲಿಂದ ಕೆಡಹಲು (ತೊರರಾ. ೫–೫–೩೩) ; ಒಡೆ ಬೆಂಬತ್ತುತಂ ತಡೆಗಾಲ ಹೊಡೆದಲ್ಲಿ ಕೂಡೆ ಬೊಬ್ಬೆಱಿದು (ವೀಕೃತ್ಯ. ೨–೧೨–೨೩); ತಡೆಗಾಲೊಳಾತನಂ ಕೆಡಹಿ ಭುಜಯುಗ್ಮಮಂ ತೊಡರಿಕೊಂಡುಪ್ಪರಿಸಿ (ಕೃಮಿಥಾ. ೨೪–೫೪)
[ ತಡೆ$_1$ + ಕಾಲ್$_1$ ]

**ತಡೆಗಾಲು** 'ತಡೆಗಾಲ್' ನೋ.

**ತಡೆಗಾಲ್ಪೊಡೆ** (ಕ್ರಿ). ತೊಡರುಗಾಲು ಹಾಕು ; ಕಾಲಿಗೆ ಅಡ್ಡ ಬರು : ಮೊಗವಂ ಮುರಿದು ಮೊಲೆಯೂಡಲಡ್ಡಸಾರ್ಚಿದ ಪುಲ್ಲೆಯಿರ್ದಂತೆ ಪರಿಚಯಕ್ಕೆ ಪರಿತಂದು ಡೆಕಹಾಯಪಾಲಂ ತೊಡೆಯೊಳ್ ತಡೆಗಾಲ್ಪೊಡೆದು ಕೊಣಕಿಡುವ ಕೊಣಸುಗಳಂ ಪಿಡಿದು ಮುದ್ದಾಡಿಸುತ್ತುಂ (ಅರ್ಧನೇ. ೧–೯೨ ವ). [ ತಡೆಗಾಲ್ + ಪೊಡೆ$_1$ ]

**ತಡೆಗಾಲ್ಪೊಯ್** (ಕ್ರಿ). ಅಡ್ಡಗಾಲುಹಾಕು,–ಹೊಡೆ: ಹೊಯ್ದು ತುಱ; ಬನು ಹಿಡಿದು ತಡೆಗಾಲ್ಪೊಯ್ದು ಕೆಡಹಿದನು (ಕುವ್ಯಾಕ. ೦೯–೪೮); ಬಾಸುಳೇಳ್ವಂತೆ ಬಡಿವ ತಡೆಗಾಲ್ಪೊಯ್ದು ಓಸರಿಸದೆ ಕೆಡಹುವನು ಗಾಸಿಮಾಡುವನು ಮಕ್ಕಳನು (ನೇಮಿಶಂ. ೦೫–೧೦೦).
[ ತಡೆಗಾಲ್ + ಪೊಯ್$_1$ ]

**ತಡೆಗಾಱ** (ನಾ). ಹಾವಿಗೆ ತಡೆಮಂತ್ರವನ್ನು ಹಾಕುವವನು; ಗಾರುಡಿಗ: ಹಾವನು ನಾ ಪಿಡಿವರೆ ತರಳ ನಾ ತಡೆಗಾಱನೆ (ಕನಕ. ೫೦–೭).
[ ತಡೆ$_3$ + – ಕಾಱ ]

**ತಡೆಗಿಡು** 'ತಡೆಗೆಡು' ನೋ.

**ತಡೆಗೆಡವು** 'ತಡೆಗೆಡಹು' ನೋ.

**ತಡೆಗೆಡಹು**, ತಡೆಗೆಡವು (ಕ್ರಿ). ಅಡ್ಡಗಟ್ಟಿ ಕೆಡಹು,–ಉರುಳಿಸು : ನುಡಿಯವೆ ನೀನಿಂತಿರ್ದೊಡೆ ಕೆಡೆನೂಂಕಿ ಪೊರಳ್ಚಿ ಗಂಟಲಂ ಮೆಟ್ಟಿ ಕರಂ ತಡೆಗೆಡಹಿ ತನುವ ಜಡಿದೆನ್ನೊಡಮೆಯನುಗುಱಿಸದೆ ಮಾಣೆಂ (ಧರ್ಮಾಮೃ. ೧೨–೨೦೯) ; ತಡೆಗೆಡಹಿ ಮೂಗಂ ಕೊಯ್ಯದೆ ಮಾಣ್ಬನೆ (ಬಸವ. ೪೦೩). **ತಡೆಗೆಡವು** : ವಾನರ ವರಧ್ವಜಂ ಮುಳಿದು ನೀಲಧ್ವಜನ ಸೇನೆಯಂ ತಡೆಗೆಡವು[ಪಾಠಾಂ. ಗಡಿಯು]ತಾತನಂ ಮುಸುಕಿದನನೂನ ಶರಜಾಲದಿಂ (ಕೃಮಿಥಾ. ೮–೩೭). [ ತಡೆ$_2$ + ಕೆಡಹು (< ಕೆಡವು) ]

**ತಡೆಗೆಡು**, ತಡೆಗಿಡು (ಕ್ರಿ). ತಡೆಯಿಲ್ಲದಂತಾಗು ; ಅನಿರ್ಬಂಧವಾಗು : ಅಡ್ಡಿಯಿಲ್ಲದಿರು : ನಡೆಗೆಡೆ ಚಿತ್ತಂ ಧೃತಿಲತೆ ಕುಡಿಗೆಡೆ ಮನಸಿಜ ವಿಕಾರತತಿ ಮಾನಸದೊಳ್ತಡೆಗೆ[ಪಾಠಾಂ. ಗಿ]ಡೆ ಕೈಯಂಕುಶಮದಂ ಪಡಲಿಡೆ ಧರಣಿಯೊಳೆ ವಿರಹವಿಹ್ವಳನಾದಂ (ವೃಷವಿ. ೨೮–೨೦). **ತಡೆಗಿಡು** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ.
[ ತಡೆ$_3$ + ಕೆಡು$_1$ ]

**ತಡೆಗೆಡೆ** (ಕ್ರಿ). ನಡೆಗೆಟ್ಟು ಬೀಳು ; ಎಡವಿ ಬೀಳು : ಉಡಿದುಡಿದು ಸೂಸಿದ ಮೃದುಮೃಣಾಳನಾಳ ತಂತುಜಾಲಕಡೊಳೊಯ್ಯನೊಯ್ಯನೆ ರಯ್ಯಮನೆ ನಡೆವಡೆಯೊಳಡಿ ತೊಡಂಕಿ ತಡೆಗೆಡೆವ ತರುಣ ಮರಾಳಂಗಳಂ ಕಂಡು (ರಾಜಶೇ. ೬-೨೪ ವ). [ ತಡೆ$_2$ + ಕೆಡೆ$_1$ ]

**ತಡೆಗೆಯ್** (ಕ್ರಿ). ಸ್ತಂಭನಗೊಳಿಸಂ ; ಚಲಿಸದಂತೆ ಮಾಡು : ಚ್ಯವನಂ ತನ್ನೊಂದು ಬಲ್ಮೆಯಿಂ ಸುರಪನುಮಂ ಕೈದುವಂ ತಡೆಗೆಯ್ವಂ (ರಾಮಾಶ್ವ. ೬೦-೧೯). [ತಡೆ$_2$ + ಕೆಯ್$_1$ ]

**ತಡೆಗೊಳ್** (ಕ್ರಿ). ಅಡ್ಡಬರಂ; ಅಡ್ಡಿಯಾಗು; ಅಡ್ಡಗಟ್ಟು; ತರುಬು: ಕೊರ್ವುಡುಗದ ಬಂದು ತಾಗೆ ಯಮಳರ್ ತಡೆಗೊಂಡೊಡೆ[ಪಾಠಾಂ. ರರಾರ್ತಿಡೆಗೋದಡೆ] . . . ರಥಂಗಳನಚ್ಚುಡಿಯೆಚ್ಚು (ಪಂಪಭಾ. ೧೨-೧೬೨) [ ತಡೆ$_2$ + ಕೊಳ್$_1$ ]

**ತಡೆಗೊಳಿಸು** (ಕ್ರಿ). ೧. ಅಡ್ಡಿಪಡಿಸಂ ; ನಿಲ್ಲಿಸು : (ಚ). ೨. ಕಟ್ಟು ; ಬಂಧಿಸಂ: ಉದ್ದಾನಂ, ಬಂಧನಂ – ೨ ಕಟ್ಟಿಹಾಕುವುದಕ್ಕೆ ಹೆಸರುಗಳು, ಕಟ್ಟು; ತಡೆಗೊಳಿಸುವಿಕೆ (ಸಿದ್ಧಾಂತಿ. ೨೦೯). [ ತಡೆಗೊಳ್ + – ಇಸು$_3$ ]

**ತಡೆತ**, ತಡತ (ನಾ). ಹೆಚ್ಚುಕಾಲ ಉಳಿಯುವಿಕೆ ; ಬಾಳಿಕೆ ; ತಾಳಿಕೆ : ಈ ರೀತಿ ತಡೆತ ಬಾರದ ಬಟ್ಟೆಗಳನ್ನು ಇಂಥಾ ಉಪಯೋಗಕ್ಕೆ ಕೊಳ್ಳುವುದು ಅನುಚಿತ (ಗೃಹವಿ. ೯೧) ; ಹೊರಗಡೆ ತಡೆತ ಬರುವ, ಮದುವಾದ ಅಸ್ಥಿ ಪಂಜರ–ಬಾಹ್ಯ ಚರ್ಮವಿದೆ (ಕೀಟಚಿ. ೫). **ತಡತ :** ಯಾಕೋ ಈ ಸೀರೆ ತಡತ ಬರಲೇ ಇಲ್ಲ (ರೂಢಿ). [ ತಡೆ$_2$ + – ತ$_8$ ]

**ತಡೆನಡೆ** (ನಾ). ನಿಧಾನವಾದ ನಡಿಗೆ : ನಿಧಾನಚಲನ; ಮಂದಗತಿ; ತಡೆನಡೆ (Drag. ಇಂಕಲಿ). [ ತಡೆ$_2$ + ನಡೆ$_2$ ]

**ತಡೆಪ** (ನಾ). ತಡ ; ಸಾವಕಾಶ ; ನಿಧಾನ : ತೊಡೆಪಂ, ನಡೆಪಂ, ಮೊಗೆಪಂ, ತಡೆಪಂ, ಅಣೆಪಂ (ಶಬ್ದಾನು. ೫೬೧ ಪ್ರಯೋ). 'ತಡೆಪಂಬೆಱು' ಪರಾ. [ ತಡೆ$_2$ + – ಪ$_8$ ]

**ತಡೆಪಂಬೆಱು** (ಕ್ರಿ). ಸಾವಕಾಶವಾಗು ; ನಿಧಾನವಾಗು : ಬೆಳಗಂಪಿಡಿ ದಧರಮಿಂಪನಪ್ಪಿದ ನುಡಿ ತಡೆಪಂಬೆತ್ತ ನಡೆ ನಿಜಂ ಕೋಮಳೆಯಾ (ಚಂದ್ರಪು. ೬-೬೮). [ ತಡೆಪ + ಪೆಱು$_1$ ]

**ತಡೆಬಂಡೆ** (ನಾ). ತಡೆಯುವ ಬಂಡೆ : ಓಡಿ ಹೋಗುವ ಬಾಣಭಟ್ಟ ಅಂದು ಪ್ರಳಯಪೂರದ ತಡೆಬಂಡೆಯಾಗುತ್ತಾನೆ (ಬಾಣಲ. ೧೪೨). [ ತಡೆ$_1$ + ಬಂಡೆ$_1$ ]

**ತಡೆಬಡೆ** (ನಾ). ೧. ಅಡ್ಡಿ : ಆತಂಕ ; ಅಡೆತಡೆ : ಜನಗಳ ತಡೆಬಡ ಇಲ್ಲದ ಮಾತಿನ ಪ್ರವಾಹವನ್ನು ಕೇಳಿ ಕೇಳಿ ಮಾಲತಿಗೂ ಚಟ್ಟುಹಿಡಿದಿತ್ತು (ಶಕಂಗ. ೨೯) ; ಅವರ ನಿವೃತ್ತಿಯ ಕುರಿತ ಇತ್ಯರ್ಥವು . . . ತಡವಾಗು ತ್ತಿರುವಾಗ ಬಂದಿತು ಮೃತ್ಯುವು ಅದಕ್ಕೆ ತಡೆಬಡೆಯಿಲ್ಲವಾಗಿ (ಇಂಚಾಕ. ೨೦-೯೩). ೨. ನಿಲುಗಡೆ ; ವಿರಾಮ : ನಾಲ್ಕೈದು ದಿನ ತಡೆಬಡೆಯಿಲ್ಲದ ಆಗಿದರು (ಹುಚ್ಚುಹ. ೬೨) : ಊರನ್ನು ತಲುಪುತ್ತಲೇ ತಡೆಬಡೆಯಿಲ್ಲದ ಅಂಗಡಿಯನ್ನು ತೆರೆಯುವ ಯೋಚನೆಯಲ್ಲಿ ಬಂದ (ಗಂಗಾಳ. ೦೩). 'ಅಡೆ ತಡೆ' ಪರಾ. [ ತಡೆ$_2$ + – ಪಡೆ$_6$ ]

**ತಡೆಬಿಡು** 'ತಡೆವಿಡು' ನೋ.

**ತಡೆಮಂತ್ರ** (ನಾ). ಸ್ತಂಭನಗೊಳಿಸುವ ಮಂತ್ರ : ಕಡಿಕಡಿದು ಕಿಡಹಿದರ್ ಕುರಿಕೋಳಿ ಲಕ್ಕಮಂ . . . ಕೂಗಿದರ್ ತಡೆಮಂತ್ರಮಂ (ಶ್ರೀರಾಮಾ. ೬೬೦-೨೪೦). [ ತಡೆ$_1$ + ಮಂತ್ರ ]

**ತಡೆಯಿಡು** (ಕ್ರಿ). ಅಡ್ಡಿಯುಂಟುಮಾಡಂ ; ತಡೆಯೊಡ್ಡು : ಬಲ್ಲಿದನಂಕ ಮಾಲೆಗೆ ತಡೆಯಿಡಲೇಕೆ ಹಲ್ಲ ಹೋಗಾಡಲದೇಕೆ (ಭರತ. ೩೯-೨೩). [ ತಡೆ$_2$ + ಇಡು$_1$ ]

**ತಡೆಯಿಸು**, ತಡೆಸಂ (ಕ್ರಿ). ಅಡ್ಡಿಪಡಿಸಂ ; ವಿಘ್ನಬರುವಂತೆ ಮಾಡಂ ; ನಿರ್ಬಂಧಿಸು : ನಿನ್ನನೆ ಪೂಜಿಸಿ ಪಡೆದರ್ಕನ್ನೆಯರಭಿಮತಮನಾದ ವಾರಾಧಿಸಲಾನಿನ್ನೆವರಂ ರತಿಪತಿ ನೀನೆನ್ನ ಮನೋರಥಮನೇಕೆ ಪೇಟ್ ತಡೆಯಿಸಿದ್ದೆ (ಕಾದಂಬ. ೬೮೪). **ತಡೆಸು :** ನುಡಿಸು ಕೈಲಾಸಮಂ ಕಿಡಿಸು ಹರಸಾಸಮಂ ತಡೆ[ಪಾಠಾಂ. ಡ]ಸದೆನ್ನಂ ದಾಳಿಯಿಡಿಸು ಬೇಗದೊಳಿ ನುತ್ತೊಡನೊಡನೆ ನೇಮಿಸಿದನು (ಜಬಪು. ೪೬-೨೨) ; ಅರೆನ್ನನಿಂತು ತಡೆ[ಪಾಠಾಂ. ಡ]ಸಿದರಾಯ್ತು ದುರ್ಭಿಕ್ಷಮುರೊಳ್ಳಳಿಯದೆ ಧಾನ್ಯಂ (ಕೃಮಿಥಾ. ೬-೫೦). [ ತಡೆ$_2$ + – ಇಸು$_3$ ]

**ತಡೆಯುಸಿರ್** (ನಾ). ತಡೆತಡೆದು ಆಡುವ ಉಸಿರಂ : ಕಿರುಬೆಮರ ತಡೆಯುಸಿರ ಕರುಣಾಸ್ಪದೆಯಾಗಿ (ಮುಂತ್ರಶ. ೫೮-೧೫). [ ತಡೆ$_1$ + ಉಸಿರ್$_2$ ]

**ತಡೆಯೋಟ** (ನಾ). "ಸ್ವಾಭಾವಿಕವಾಗಿರುವ ಅಥವಾ ಕೃತಕವಾದ ತಡೆಗಳನ್ನು ದಾಟಿಕೊಂಡು ಓಡಬೇಕಾದ ಜೂಜೋಟ : ತಡೆಯೋಟ" (Obstacle-race. ಇಂಕಲಿ.) [ ತಡೆ$_2$ + ಓಟ ]

**ತಡೆರಾಜ್ಯ** (ನಾ). "ಎರಡು ಪ್ರಬಲರಾಜ್ಯಗಳ ಮಧ್ಯೆ ಇದ್ದು ಒಬ್ಬೊಬ್ಬರಿಗೆ ಕಾದಾಟದ ಸಂಬಂಧವನ್ನು ಕಡಮೆ ಮಾಡುವ ಸಣ್ಣ ರಾಜ್ಯ : ತಡೆರಾಜ್ಯ" (Buffer-state. ಇಂಕಲಿ.). [ ತಡೆ$_2$ + ರಾಜ್ಯ ]

**ತಡೆವಡು** (ಕ್ರಿ). ತಡವಾಗು ; ನಿಧಾನವಾಗು : ಬನದಿಪ ಕಾಮಿನಿಯರ್ಗೆ . . . ನೊಸಲೊಳ್ ಬೆಮರ್ ಪನಿಯ ತೆಳ್ಳದಂಪು ಕಂಪಡರೆ ಎರ್ದೆ ದಡ ದಡಿಸೆ ಸುಯ್ ಪೆರ್ಚೆ ನಡೆ ತಡೆವಡೆ (ರಾಮಾಶ್ವ. ೧೨೩-೭). [ ತಡೆ$_2$ + ಪಡು$_1$ ]

**ತಡೆವಡೆ**, ತಡೆಹಡೆ (ಕ್ರಿ). ಅಡ್ಡಿಗೊಳಗಾಗು ; ತಡೆಯಲ್ಪಡಂ ; ನಿಂತು ಹೋಗು : ಸಡಗರಗಳಲ್ಲಿ ತಡೆವಡೆದು ಸುಗಿದು ನುಡಿಯರಾರುಂ (ಕಾಲಿಂಜರ. ೧೫೭-೩೪೮). **ತಡೆಹಡೆ :** ಅಲ್ಲಿ ತಡೆಹಡೆದು ತಾಂ ತಳುಹಿಲ್ಲದೆ ನಿಜದೇಶಕೆಯ್ದೆವಂದು (ಧರ್ಮಪ. ೨-೩೯). [ ತಡೆ$_2$ + ಪಡೆ$_1$ ]

**ತಡೆವರ್** (ಕ್ರಿ). ಅಡ್ಡಿಯಾಗಿ ಬರಂ : ತಡೆಯುಂಟುಮಾಡು : ಕಿಱುಂಬಿ ನಿರ್ಗಮಿಮಾವುಜ್ಜುಗಕ್ಕೆ ತಡೆವರ್ಪರ್ (ರಾಮಾಶ್ವ. ೫೭-೨). [ ತಡೆ$_2$ + ಬರ್$_1$ ]

**ತಡೆವಲೆ** (ನಾ). ಒಂದು ಬಗೆಯ ಬಲೆ : ನಡುವಲೆ ತಡವಲೆ ಸಿಡಿವಲೆ ನಿಡುವಲೆಗಳೊಪ್ಪಿದವು ಲುಬ್ಧಕರೊಳ್ (ಗಿರಿಕ. ೦-೮೦). [ ತಡೆ$_1$ + ಬಲೆ$_1$ ]

**ತಡೆವಿಡು**, ತಡೆಬಿಡು (ಕ್ರಿ). ೧. ತಡೆಯನ್ನು ತೆಗೆದುಹಾಕು ; ಬಂಧನ ದಿಂದ ಬಿಡುಗಡೆ ಮಾಡು : ಪಟುಭಟತರ್ಗಾಗಿದರ್ಕಲ್ಪಮೇಘಂಗಳಂ ತಡೆವಿಟ್ಟ ಮಳೆಯೆನಲ್ಕಸೆಗಱಿಯುತೆ (ಕೃಮಿಥಾ. ೮-೨೯). ೨. ಮಂತ್ರ ಪ್ರಭಾವದಿಂದ ಮುಕ್ತವಾಗು. ೩. ಬಿಡುಗಡೆ ಹೊಂದು; ಸ್ವತಂತ್ರವಾಗು : ತಾಂ ತನಗೆ ಹಯಂ ತಡೆವಿಟ್ಟ ಪಾವೆಂತಂತು ನಡೆವಟ್ಟು ತನ್ನಿಚ್ಚೆಯಿಂ ಪೋಗೆ (ರಾಮಾಶ್ವ. ೧೩೪-೧೨). **ತಡೆಬಿಡು :** ೧. ತಡೆಬಿಟ್ಟ ಕಂಬನಿಯು ಕೈಯಿಂದ ಮುಂಗಾಣದೆಡಹುತ್ತ ತಾಗುತ್ತ ಒಡವರ್ಪ ಪರಿವಾರವಮಂ ಕಂಡು (ಹರಿಶ್ಚ. ೯-೨೦). [ ತಡೆ$_2$ + ಬಿಡು$_1$ ]

**ತಡೆವೇಂಟೆ**, ತಡೆವೇಟೆ (ನಾ). ಒಂದು ಬಗೆಯ ಬೇಟೆ ; ಮೃಗಗಳನ್ನು ತಡೆದು ಆಡುವ ಬೇಟೆ : ಭಾಸುರ ವರೂಥವನೇಱಿ ಭೂಪಾಲಮಕರ ಧ್ವಜಂ ನಡೆಯೆ ತಡೆವೇಂಟೆಗೆ (ಹರಿಶ್ಚ. ೬-೧); ಮೇಲ್ವಾಸು ಮಂಚಗಳ ಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು (ಕುಠಾಸಾಂ. ೨೭-೪೭). **ತಡೆವೇಟೆ :** 'ತಡೆವೇಟೆಕಾತಿ' ಪರಾ. [ ತಡೆ$_2$ + ಬೇಂಟೆ ]

**ತಡೆವೇಂಟೆಕಾತಿ**, ತಡೆವೇಟೆಕಾತಿ (ನಾ). ತಡೆವೇಟೆಯನ್ನು ಆಡುವವಳು: ಜನಮನದ ಸಂಕಲೆವನೆಯೊ ಲೋಚನಮೃಗದ ತಡೆವೇಂ[ಪಾಠಾಂ. ವೇ]ಟೆಕಾತಿಯೊ ಮನುಮಥನ ಸಂಜೀವನೌಷಧಿಯೋ . . . ಎನಿಸಿದೂರ್ವಸಿ ಬಂದಳು (ಕುವ್ಯಾಳ. ೮-೧೦). **ತಡೆವೇಟೆಕಾತಿ** : ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಡೆವೆಂಟೆ + – ಕಾತಿ$_5$ ]

**ತಡೆವೇಟೆ** 'ತಡೆವೇಂಟೆ' ನೋ.

**ತಡೆವೇಟೆಕಾತಿ** 'ತಡೆವೇಂಟೆಕಾತಿ' ನೋ.

**ತಡೆಸು** 'ತಡೆಯಿಸು' ನೋ.

**ತಡೆಹಡೆ** 'ತಡೆವಡೆ' ನೋ.

**ತಡೆಹಿಡಿ** (ಕ್ರಿ). ೧. ತಡೆದು ಹಿಡಿ ; ಅಡ್ಡಿಪಡಿಸು ; ನಿಗ್ರಹಿಸಂ : ಅವರಿವರು ಓಡಿ ಬಂದು ಜಗಳವನ್ನು ಬಿಡಿಸಿ ತಿಮ್ಮನನ್ನು ತಡೆಹಿಡಿದರು (ತಿಂಮುಕ. ೩೩). ೨. (ದುಃಖ ಮೊದಲಾದ ಭಾವಗಳನ್ನು) ಒತ್ತಿರಿಸು; ಅದುಮಿಡು; ಹತ್ತಿಕ್ಕು: ಉಮ್ಮಳಿಸಿ ಬರುತ್ತಿರುವ ಎದೆಯ ದುಃಖವನ್ನು ಪ್ರಯತ್ನಪೂರ್ವಕವಾಗಿ ತಡೆಹಿಡಿಯುವಂತೆ . . . ತೋರುತ್ತಲಿತ್ತು (ಚಕಕ. ೧೦೪); ಉಕ್ಕುತ್ತಿದ್ದ ಕಣ್ಣೀರನ್ನು ಬಿಗಿಯಾಗಿ ತಡೆಹಿಡಿದನು (ಪುನರು ೧೯೦). ೩. ಪ್ರಕಟ ಪಡಿಸದೆ ಇರು ; ಜಾರಿಗೆ ತರದೆ ನಿಲ್ಲಿಸಂ : ಪರೀಕ್ಷೆಯ ಫಲಿತಾಂಶವನ್ನು ತಡೆಹಿಡಿದಿದ್ದಾರೆ (ರೂಢಿ). [ ತಡೆ$_2$ + ಹಿಡಿ$_1$(<ಪಿಡಿ$_1$) ]

**ತಣ್**$_1$, ತಣಿ$_2$ (ಕ್ರಿ). ತಣ್ಣಗಾಗು ; ಉಷ್ಣವಳಿ ; ಆರು : ಲಂಕೆ ಎಂಬ್ಳಳನೆ ಬೆಬ್ಬಳಿಸೆ, ಭಯಕೆ ನೆತ್ತರ್ ತಣ್ಪುವೋಲ್ (ಶ್ರೀರಾಮಾ. ೭೩೩-೭೭೦). **ತಣಿ$_2$** : ಬಿಸಿಲ್ ತಣಯೆ ತಂಗಾಳಿ ಮೈದೋಱೆ . . . ಸೀತಾಲಕ್ಷ್ಮಣರುತ್ತರಾಭಿಮುಖರಾಗಿ ಪೊಱಮಟ್ಟರ್ (ರಾಮಾಶ್ವ. ೩೨-೩) : ತಣದನ್ನ ತಂಗುಳೆನಿಕ್ಕುಂ (ಕಶರ. ೦೨೪); ಚಹಾ ಆಗಲಿ, ಬಿಸಿ ಇರುವಾಗಲೇ ಅದನ್ನು ತಣಯುವ ಮೊದಲೇ ಕೆಗೆದುಕೊಳ್ಳಿ (ಒಂಟಿದ. ೦೭೦).

[ ದೇ.೫ ತಮಿ. ತುಳು. ತಣಿ ]

**ತಣ್**$_2$, ತಂ$_1$, ತಣು$_1$ (ನಾ). ೧. ತಂಪು ; ಶೈತ್ಯ : (ಕ). (ಗುಂ). ೨. ತಂಪಾದ ; ಶೀತವಾದ ; ತಣ್ಣಗಿರುವ : 'ತಣ್ಣದಿರ್', 'ತಣ್ಣಳಸ', 'ತಣ್ಜೊಡರ್', 'ತಣ್ಬಿಸಿಲ್' ಪರಾ. **ತಂ$_1$** : ೨. 'ತಂಗಡಲ್', 'ತಂಗಾಲ' ಪರಾ. **ತಣು$_1$** : ೧. ತಣುವಿರಬಲ್ಲುದೇ ಅತಿಶುಷ್ಕವಾದ ಪರ್ಣತರುವಿಡಿದ ಅನಲನ ನಡುವೆ (ಮೋಕ್ಷಮಾ. ೧೬೦-೬೦೦) : ಸಕಲ ಗಣಸಂಕುಳಂ ತಣು[ಪಾಠಾಂ. ಸು]ವಿನೋಕುಳಿಯಮಾಡಿ (ಬಸರ. ೭-೧೮೪) ; ಭಾನು ತಣುವಾದಾನು ಸೋಮ ಸುಟ್ಟಾನು . . . ಜಗ ಶೂನ್ಯವಾದೀತು ಮೌನದಲಿ ಸಿದ್ಧನಿರಂ (ಮುಂಕುಕ. ೭೮೪).

[ <ತಣ್$_1$. / ತಮಿ. ಮಲ. ತಣ್ ; ತುಳು. ತಣು ; ಕೊಡ. ತಣಿ. / ಪ್ರಾ. ತಣ್ಣಾಯ = ಒದ್ದೆಯಾದ, ತೇವವಾದ ]

**ತಣವು** 'ತಣಿವು' ನೋ.

**ತಣಾಪತ್ರಿ** (ನಾ). ದೇವಾಲಯದ ವ್ಯವಸ್ಥಾಪಕ: ಸ್ಥಾನಪತಿ: ತಣಾಪತ್ರಿ ದೆಯಳ ಜೀಯನುಂ ಊರವುರವನ್ನು × × ಸಕ್ಷಿ (ಎಕ. III. ನಂಜನ. ೦೯೯-೩೦; ೧). 'ತಾನಪತಿ' ಪರಾ. [ <ಸಂ. ಸ್ಥಾನಪತಿ ]

**ತಣಿ$_1$**, ದಣಿ$_1$ (ಕ್ರಿ). ೧. ತೃಪ್ತಿಹೊಂದಂ; ಸಮಾಧಾನಗೊಳ್ಳು : " ತಣಿ ತೃಪ್ತೌ " (ಶಮಧಾ) ; ನೆಲನುಂ ವೆಳಗಾ ಪಾರ್ವ್ವರು[೦] ಪ್ರಜೆಯುಂ ತಣಿಗೆ (ಎಕ. VII, ಶಿಕಾರಿ. ೧೫೪-೧೮ ; ೬೬೬) ; ಕರುಣಿಸಿ ಪರ್ವವೆಂದು ತಣಿಯೆ ಯುಣಲಿಕ್ಕಿದೆನೆಂದೊಡೆ (ವಡ್ಡಾರಾ. ೭೭-೦೫); ಆತಂ ಬೆರಸದಲ್ಲವಂ ತಿಂದು ತಣಯದೆ ಪಲ್ಲಂ ತಿಂಬಂ (ಶಬ್ದಮ. ೩-೨೫) ; ಜಗಮೆಲ್ಲಂ ತಣಿಗುವೊಂದು ಬಳ್ಳಿಯ ಕಾಯೊಳ್ (ಲೋಕೋಪ. ೬-೫೮) ; ಮಾಣುದರವಿದೆ ಬೀಗಿಹುದು ಕಲ್ಯಾಣದೇವಾ ತಣಯಿರೇ (ಬಸಪು. ೫೯-೩) ; ಕಮ್ಮನೆ ತುಪ್ಪ ಕಜ್ಜಾಯ ಪಾಯಸದಿಂದೆ ದಮ್ಮನೆ ತಣದವೆಂದೆನುತ (ಮೋಹತ. ೩-೫೯) ; ಅದಕ್ಕೆ ತಂದೆನು ನಿನ್ನಡೆಗಿಂದು ಕಡುಬಂ ತಣವಂದಂ ನೀಡೆಂದು (ಗಡಕ. ೨-೩೦). ೨. ಆಯಾಸಗೊಳ್ಳು ; ಸೋತುಹೋಗು : " ದಟ್ಟಂದಱದು[ಪಾಠಾಂ. ಗೆಂಟೆಂದೆಱ'ದು] ದೆನಲ್ ತಣದುದು " (ಚತುಸಿ. ೩೪) : ಧೈರ್ಯಗೆಟ್ಟುದು ಕೂಡೆ ಕುರುಸೇನೆ . . . ತಣದುದ್ಯ ಪರಿಭವದ ಸೂಱೆಯಲಿ (ಕುವ್ಯಾದ್ರೋ. ೧೬-೧೨). **ದಣಿ$_1$** : ೧. ಇತ್ತುದನೆ ಕೊಂಡು ದ[ಪಾಠಾಂ. ತ]ಣಿಯದೆ ಮತ್ತಿನ್ನುಂ ಬೇಕುಮೆಂದು ಪಾಯ್ವುಮೂರ್ಛರ್ (ಸಮುಕ. ೩೯೦-೨೬ ಅನು. I) ; ಅಡಿ ಕಾಲು ದಣಿಯವು ನೋಡಿ ಕಣ್ಣು ದಣಿಯುವು ಹಾಡಿ ನಾಲಗೆ ದಣಿದುದು (ಬಸವ. ೪೮೭); ನೋಡಿ ದಣಿಯನು ಬಿರುದ ಹೊಗಳಿಸಿ ಹಾಡಿ ದಣಿಯನು ನಿಚ್ಚಲುಚಿತವ ಮಾಡಿ ದ[ಪಾಠಾಂ. ತ]ಣಿಯನು (ಕುವ್ಯಾಉ. ೧೦-೧೮); ಹಂಸ ನೀಕ್ಷಣದಿಂದುವ್ಮಿದಮೃತವ ಹಂಸನಂತೀಂಟ ದಣಿವನು (ಭರತ. -೨೯) ; ಕಂಡು ದಣಿದೆಯೋ ಉಂಡು ದಣಿದೆಯೋ (ಗಾದೆ). ೨. ಅರಿಗದಾಘಾತದಲಿ ಕೈಮೈದಣದು ಮನದಣದು ತೆರಳಿದರು (ಕುವ್ಯಾದ್ರೋ. ೩-೭೯) : ಶ್ರುತಿ ಶಾಸ್ತ್ರ ಪುರಾಣಗಳನೋದಿ ಬೆಂಡಾದೆ ಅತಿಶೀಲಗಳನೆಲ್ಲ ಮಾಡಿ ದಣದೆ (ಪುರಂದ. ೨-೧೮-೨). ೧, ೨ : ಚಣಚಣಕು ಪರಿಪೂರ್ಣ ನೀನು ತಣದೇ ದಣವೆ ; ನನಗೆ ಪೂರ್ಣತೆಯೆಂದೊ, ನಾನು ದಣದೇ ತಣವೆ (ಉಯ್ಯಾಲೆ. ೧೮-೦೩).

**ತಣಿತಣಿ** (ದ್ವಿರುಕ್ತಿ) : ತಣಿತಣದು ತಕ್ಕೈಸಿ ಮಿಕ್ಕು ಮಲೆಮಲೆದಾಡಿ (ಬಸರ. ೩-೦೦೪).

[ ದೇ.೫ ತಮಿ. ಮಲ. ತುಳು. ಕೊಡ. ತೆಲು. ತಣಿ ]

**ತಣಿ$_2$** 'ತಣ್$_1$' ನೋ.

**ತಣಿ$_3$**, ತನಿ$_3$ (ನಾ). ತೃಪ್ತಿಪಡಿಸುವಿಕೆ ; ತರ್ಪಣ : ತೊಡು ಜವದಿ ಬಿಡು ಬೇಗದಿಂದವನ ತಲೆಗಡಿದು ತಮ್ಮಂಗೆ ನೆತ್ತರ್ ತಣಿಯನೆರೆವೆ (ಶ್ರೀರಾಮಾ. ೮೦೨-೪೯). 'ತಣ್ಯೆಯೆಱ' ಪರಾ. **ತನಿ$_3$** : ಗರುಡನೂರವರೆಱವರೇ ನಾಗರಿಗೆ ತನಿಯನು (ಕುವ್ಯಾಕ. ೨-೧೫). 'ತನಿಯೆರೆ' ಪರಾ.

[ <ತಣಿ$_1$ ]

**ತಣಿಗೆ** 'ತಳಿಗೆ' ನೋ.

**ತಣಿವು$_1$**, ತಣಾವು, ತಣ್ಪು$_1$ (ಕ್ರಿ). ತಣಿಸು; ತೃಪ್ತಿಯನ್ನುಂಟುಮಾಡು; ಸಂತೋಷಪಡಿಸು : " ತಣಪು – ತೃಪ್ತೌ " (ಶಮಧಾ) ; ದಿವ್ಯಾಹಾರವನೂಡಿ . . . ತಾಂಬೂಲಾದಿಗಳಿಂ ತಣಪಿದಾಗಳ್ (ವಡ್ಡಾರಾ. ೫೫-೨೦) ; ದೇವ್ವರನುತ್ಸಾಹದಿನಾವಗಂ ತಣಪಿ (ಎಕ. XIII, ೩೨೯-೫ ; ೯೭೪) ; ನಿಜ ಸಂತತಿಯಂ ತಣಪಿ ಸುಹೃತ್ಸಂತತಿಯಂ ಪೆರ್ಚಿಪುದು (ಆದಿಪು. ೮-೭೩) ; ವನಬರ್ಹಿಗಳಂ ಮೇಘಧ್ವನಿ ತಣಿಪುವ ತೆಱದೆ ದೇವ ನಿನ್ನಯ ದಿವ್ಯಧ್ವನಿ ತಣಪಿದಪುದು ವಿಶ್ವಜನಮಂ (ಅಜಿಪು. ೮-೧೦) ; ತನ್ನಿಂದೆ ತಿಳಿದು ತನ್ನಂ ತನ್ನೊಳೆ ತಾಂ ನಿಂದು ತನ್ನೊಳುದಯಿಸಿದ ಸುಖಂ ತನ್ನನೆ ತಣಪುತ್ತಿರೆ (ಚಂದ್ರಪು. ೯-೨೨) ; ಜಾಗದೊಂದೆಸಕವಲಂಪಿನಿಂ ಬಡವರಂ ತಣಪುತ್ತಿರೆ (ಅಭಿನ್ನ. ೪೬) ; ಒಂದೆ ಶಶಿಬಿಂಬವೀ ಜಗದಿಂದೀವರತತಿಯನೆಯ್ದೆ ತಣಪುವ ತೆಱದಿಂ (ಶಾಶ್ವಸಾ. ೫೫೪). **ತಣಾಪು** : ಪೆಂಪಿನಿಂದೀವ × × ಮಂ ತಣಾಪಿ ಕಲ್ಪಕುಜಕ್ಕೆಣೆ × × × ಸುದ್ಧ ಮತಿವರದಾನ ಗುಣಭೂಷಣೆ (ಎಕ. VII. ಶಿವಮೊ. ೯೭-೨೦ : 1118) : ಬಸವಾದಿ ಶರಣರಾರೋಗಣಂ ಬರಲವರ ತಣುಪಲಂದಾಯ್ಕಕ್ಕಿಮಾರಣ್ಣನೊಪ್ಪಿದನು (ವೀಕ್ರಪು. ೭-೧೦-೧೨). **ತಣ್ಪು$_1$** : ಅನ್ಯಯದೊದವು ತಾಯುಮಂ ತಂದೆಯುಮಂ ತಣ್ಪದುದಪಾರ ರಾಗಾಮೃತದಿಂ (ಶಾಂತಿಪು. ೧-೭೮). [ ತಣಿ$_1$ + – ಪು$_1$ ]

**ತಣಿವು$_2$** (ನಾ).ತೃಪ್ತಿ ; ಸಮಾಧಾನ ; ಸಂತುಷ್ಟಿ : ಪಾಲ್ ಕೆಚ್ಚಲೊಳ್ ತಣವು ಊಟದೊಳ್ ಸೀರೆ ನೂಲೊಳ್ . . . ಪುಟ್ಟುವಂತೆ (ಧರ್ಮಾಮೃ. ೮-೦೩) ; ಲೋಕ ತಾಪದಿ ಬೆಂದು ತಣವನೆಳಸಿದವಂ ಈ ಕಂತೆಯಲ್ಲಿ ತನ್ನ ನಂದಿಕೆಯ ನೆಯ್ಯುಹನು (ಮುಂಕುಕ. ೯೪೦). [ ತಣಿ$_1$ + – ಪು$_2$ ]

**ತಣಿಯಿಸು**, ತಣಿಸು$_2$, ದಣಿಯಿಸು, ದಣಿಸು (ಕ್ರಿ). ೧. ತೃಪ್ತಿಪಡಿಸು; ಸಂತೋಷಪಡಿಸು: ಎಳವಾವಿನ ಚೆಲ್ವಿಂ . . . ತೆಂಕಣೆಲರೆನೆಲರೆನೀರ್ಗಳಿಂ ದೊಳದಿಂ ತಣಿಯಿಪುದು ಜನಂಗಳ ಪಂಚೇಂದ್ರಿಯಮನಂದು ಬಂದು ವಸಂತಂ (ಕಾದಂಬ. ೬೬೯); ತಮ್ಮೆಲ್ಲ ಹಸಿವುಗಳ ತಣಿಯಿಪನಿತನ್ನೊಳ್ನ್ಯ ಹೊಮ್ಮುಗೌದಾರ್ಯ ಜನಜನಪದಂಗಳಲಿ (ಮಂಕುಳ. ೯೯೪). **ತಣಿಸು$_2$:** ೧. ಗುಣಮೇಱದ ಧರ್ಮಂ . . . ನೃಪಾಗ್ರಣಿಯನಿಹಸೌಖ್ಯದಿಂದಮೆ ತಣಿವುದದೆ ಪರಮಸುಖೈಕಕಾರಣಮಲ್ತೇ (ಪು ಪು ಪು. ೩-೧೧); ಮಾಹೇಶ್ವರರಿಗಿಷ್ಟಾರ್ಥಂಗಳಿಂದಾದರಿಸಿ ಪರಿಚಯಂಗಳಿಂ ತಣಿಸುತ್ತ (ಬಸವು. ೪-೪೭); ರಣದೊಳಾಡುವ ಮರುಳೆ ಬಳಗವ ತಣಿಸಿದನು (ಕುಮಾರರಾ. ೫-೭೭); ಎಣಿಸುವುದವನೊಲಿದೆಸಗುವ ನಲ್ಮೆಯ ತಣಿಸುವು ದಿಂತು ಚಿತ್ರವನು (ಹದಿಬ. ೩-೪೩); ಕಣ್ಣುಗಳ ಹೊಳಪು ಮೊದಲೆ ಅವನ ನೀರಡಿಕೆಯನ್ನು ತಣಿಸಿತ್ತು (ಪಾಹುತ್. ೮೯). **ದಣಿಯಿಸು:** ೧. ಧರಣಿಯ ವರರ ದಣಿಯಿಸಿದಳು ಹಿರಣ್ಯದಾನದಲಿ (ಸಂಕ್ರಹ. ೨೦-೩೨). **ದಣಿಸು:** ೧. ಪರಿವಾರವನು ನಿರ್ದಾಯದಲಿ ದಣಿಸುವನು ರಿಪುಗಳ ಸಿರಿಯ ಸೂಱೆಯಲಿ (ಕುಮಾರರಾ. ೧-೧೭); ನಾನಾ ವರ್ಣಮಂ ಮಹಾಭೂರಿ ದಕ್ಷಿಣೆಗಳಿಂ ದಣಿಸುತಂ . . . ಬರುತಿರ್ದನು (ಜಲಪು. ೫-೧೭); ವಿಪ್ರವೃಂದಮಂ ದ[ಪಾಠಾಂ. ತ]ಣಿಸು ಬಹುವಿಧದಿಂದೆ (ಕೃಮಿಥಾ. ೩೦-೬೦). ೨. ಆಯಾಸಗೊಳಿಸಂ; ಶ್ರಮಪಡಿಸು; ದಣಿವುಂಟುಮಾಡು: ಗಂಡನ ದಣಿಸುವುದಿಲ್ಲಿಯಮಕುಂಡದೊಳಗೆ ಹಾಕಿ ಕುದಿಸುವರಲ್ಲಿ (ಪುರಂದ. ೨-೩೯-೨).

**ತಣಿತಣಿಸು**, ತಣಿಸುತಣಿಸು (ದ್ವಿರುಕ್ತಿ): ಚೆನ್ನೆಯರು ಕುಣಿಯುತಿಹರು ದಣಿವಿಲ್ಲ ವ್ಯಗೆ ತಂತಾನೆ ಒಳಗೆ ತಣಿತಣಿಸಿ ತಣಿಯುತಿಹರು (ಸೂರ್ಯಪಾ. ೫೭-೬); ದಾನಾರ್ಥಿಗಳನಂಬರ ಹೇಮಮಣಿಗಣ ಭೂಷಣಾವಳಿಯಿಂ ತಣಿಸಿ ತಣಿಸಿ (ಬಸವು. ೬-೨೯). [ ತಣಿ$_1$ + -ಇಸು$_2$ ]

**ತಣಿಯುಣ್**, ದಣಿಯುಣ್ (ಕ್ರಿ). ತೃಪ್ತಿಯಾಗುವಂತೆ ಊಟಮಾಡಂ: ದಿವ್ಯಾಹಾರಮನಾಕಂಠಪ್ರಮಾಣಂಬರೆಗಂ ತಣಿಯುಂಡು (ಪದ್ಮಾ. ರಾ. ೬೮-೨೨); ತಣಿಯುಂಡಮರ್ದಂ ಗೋಮೂತ್ರದಿಂದೆ ಬಾಯುಮ್ಮುಸಿದವೋಲ್ (ಪಂಪಭಾ. ೬-೪೮); ತಣಿಯುಂಡನಂತೆ ಸಾಲ್ಗುಮೆನ್ನದೆ (ಧರ್ಮಾಮೃ. ೧-೧೩೫): ಭೂತಪಿಶಾಚಕೋಟಿಯುಂ ನೆಱೆ ತಣಿಯುಣ್ಬು ಚೆಣ್ಣು ಮರಲ್ದಿಂನ್ನುಮದಕ್ಕಿಸಲಾಜಿವನ್ನೊಡೆ (ಎಕ. XVI, ಚಿಕ್ಕನಾ. ೯೮-೨೫: 1170); ಪಸಿವಿಂದೆ ನಿನ್ನ ಮೇಲೆ ಕಟ್ಟಿಟಿಗ ದಿನಮೆಲ್ಲ ತಣಿಯುಣುತೆ (ಬದ್ಧಪ್ರ. ೫೪-೧೦೬೫). **ದಣಿಯುಣ್:** ಗಗನದ ಮೇಘಂಗಳೆಲ್ಲಾ ಸುರಿದವು ಭೂಮಿಯ ಮೇಲೆ ಭೂಮಿ ದಣಿಯುಂಡು ಸಸಿಗಳೆಲ್ಲಾ ಬೆಳೆದವು (ಅವಕಂ. ೧೦೭-೪೯೭); ಅನಿತೋಗರವನೊಡನೆ ಕಱುಗಾವ ಮಕ್ಕಳುಗಳನಿಬರ್ಗೆ ದಣಿಯುಣಲಿಕ್ಕಿ ತಣಿದು (ಸಿದ್ಧರಾ. ೨-೦೭). [ ತಣಿ$_1$ + ಉಣ್ ]

**ತಣಿಯುಣಿಸು** (ಕ್ರಿ). ತೃಪ್ತಿಯಾಗುವಂತೆ ಉಣಿಸು: ಸುಪ್ರೀತನಾಗುವೊಲು ತಣಿಯುಣಿಸಿ (ಪಾರಸಿ. ೨೬-೮೮೩). [ ತಣಿ$_1$ + ಉಣಿಸು$_1$ ]

**ತಣಿಯೂಡು** (ಕ್ರಿ). ತೃಪ್ತಿಯಾಗುವಂತೆ ಊಟಮಾಡಿಸಂ; ತಣಿಯುಂವಂತೆ ತಿನ್ನಿಸು: ತೊಱೆದ ಮೊಲೆಯಂ ಸಾರ್ಚಿ ತಣಿಯೂಡದೆ ನಡೆಗೊಳಿಸಿ ತವಕದಿಂ ಬರುತ್ತುಂ (ಪುಷ್ಪಪು. ೩-೭೬ ಪ); ದಾನಜಳಮಂ ತಣಿಯೂಡಿದಡೆ (ಬೊಂಕಣಾ. ೧೯೩೬. ಪಾನಗಲ್. ೬೬-೪೭ ; ?). [ ತಣಿ$_1$ + ಊಡು$_1$ ]

**ತಣಿಯೆಱೆ**, ತನಿಯೆರೆ (ಕ್ರಿ). ೧. ತರ್ಪಣ ಕೊಡು; (ಹಾಲು ಮಂತಾದುವನ್ನು ಅರ್ಪಿಸಿ) ತೃಪ್ತಿಯನ್ನುಂಟುಮಾಡು : ಪೆಣವಾರೊ ಇದು ತಾನೆ, ಮಣ್‌ಮಾಡಿ ಪೋದರ್; ಬಱುಮಣ್ಣನೆಱೆ, ತಾವ್ ಶ್ರದ್ಧೆಯಿನ್ ತಕ್ಕಂತೆ ತಣಿಯೆಱೆದುಮಿರ್ಪರ್ (ಅಂತಿಗೊ. ೧೨-೨೨೮). **ತನಿಯೆರೆ:** ಇದೊ ತಂದೆ ತನಿಗಳನು. ನನ್ನ ಮಗನಯ್ಯಂಗೆ, ಪಿತೃಗಳಿಗೆ ತನಿಯೆರೆಯೆ (ಪಾರಸಿ. ೨೩-೫೦೮); ನಾಗರಿಗೆ ತನಿಯೆರೆಯುತ್ತಾರೆ (ರೂಢಿ). [ ತಣಿ$_1$ + ಎಱೆ$_1$ ]

**ತಣಿರು** 'ತಳಿರ್$_2$' ನೋ.

**ತಣಿವೀ** (ಕ್ರಿ). ತೃಪ್ತಿಯನ್ನು ನೀಡಂ; ತಣಿವನ್ನುಂಟುಮಾಡಂ: ಆಱಿಯದೆಳಸಿದೆನೆಂದು ನವಿಸಿದಸುರೆಯ ಬಸುರ ಬಱಿಸಳಿಯೆ ತಣಿವಿತ್ತು (ಸಿದ್ಧರಾ. ೬-೯);ಅಂತದು ತಣಿವೀವುದು ಬಾನುದ್ದಮಪ್ಪ ಪೇರೊಡಲವರ್ಗಂ (ಶಬ್ದಾನು. ೫೪೨ ಪ್ರಯೋ). [ ತಣಿವು + ಈ$_2$ ]

**ತಣಿವು**, ತಣವು, ತನಿವು, ದಣಿವು, ದಣುವು (ನಾ). ೧. ತೃಪ್ತಿ; ಸಮಾಧಾನ: "ಪರ್ಯಾಪ್ತಂ, ಉಪಸಂಪನ್ನಂ, ತೃಪ್ತಿ, ಸೌಹಿತ್ಯಂ–ಈ ೪ತ (ಣಿ) ಣುವು" (ಹಲಾಯು. ೫೪-೧೬೧); ತಣಿವಂ ಕೈಕೊಂಡಮೂರ್ತರ್ಚರಮತನು ಸಮಾಕಾರರ್ (ಆದಿಪು. ೧-೨); ಕನಸಿನ ತೊಱೆಯೊಳ್ ನೀರ್ಗುಡಿದು ತಣಿವನಱಿಸಿದರೊಳರೇ (ಶಾಂತಿಪು. ೪-೯೮); ತಣಿವಿಲ್ಲದರಂ ಪೂಜಿಸೆ ತಣಿವಕ್ಕುಮೆ (ಮಲ್ಲಿಪು. ೧೨-೧೬೦); ಪರಮಶಿವಸುಖಿ ಸಂಗಸುಧೆಯಂ ಸವಿಸವಿದು ತಣಿವಿಲ್ಲದೀಂಟುತ್ತ (ಬಸವು. ೩೫-೨); ಕಿಚ್ಚಿಂಗೆ ತಣಿವಿಲ್ಲ ಮೊಚ್ಚೆಗೆ ಹೊರೆಯಿಲ್ಲ (ಸರ್ವಜ್ಞ. ೪೮೯). **ತಣವು:** ೧. "ಸೌಹಿತ್ಯಂ, ತರ್ಪಣಾಂ, ತೃಪ್ತಿ – ೩ ತಣವು[ಪಾಠಾಂ. ತಣುವು]" (ಸಿದ್ಧಾಂತಕ. ೨೧೯); ಆರಾ ಅಮರ್ದನ ತೀರಾ ತಣವಿನ್ (ಹೊಂಗಳು. ೪೪-೫). **ತನಿವು:** ೧. ತಂಬೆಲರು ಜೀವಕ್ಕೆ ತನಿವು ನೀಡಿತ್ತು (ಜೀವನ.೭). **ದಣಿವು:** ೧. ಭೋಜನದ ದ[ಪಾಠಾಂ. ತ]ಣಿವು ಪರ್ಯಾಪ್ತಮುಪಪನ್ನಮಾತ್ಮತೃಪ್ತಿ ಸೌಹಿತ್ಯಮಕ್ಕುಂ (ಮಂಗರಾ. ೬೫-೭). ೨. ಆಯಾಸ; ಬಳಲಿಕೆ; ಶ್ರಮ: ನಿಪುಣಿಕೆ ಕ್ರಮಕ್ರಮೇಣ ದಣಿವಿನಿಂದ ಹಣ್ಣಾಗುತ್ತಲೆ ಇದ್ದಳು (ಪಾಂಡಳ. ೩೦೧); ಶ್ರೀನಿವಾಸ ಮಾತ್ರ ದಿನದ ದಣಿವಿನಿಂದ ಕೂಡಲೆ ನಿದ್ದೆಹೋದ(ತೀಮೋಡ. ೪೫). **ದಣುವು:** ೨. ದಣುವಿಲ್ಲದೊಲ್ದು ಕುಣಿವಚ್ಚ ಕೇಳಿಕೆಗಳಿಂ (ಉದ್ಭಟ. ೩-೯೮); ದಾರಿಗರಿಗೆ ದಣುವು ತೋರುತ್ತಿರಲಿಲ್ಲ (ಶ್ರೀರಾಪ. ೦೩). ೩. ಆಸೆ; ತೃಷೆ: ಪಾಂಡುಕುಮಾರರ ಚರಿತ್ರವು ಎಷ್ಟು ಕೇಳಿದರೂ ದಣುವು ತೀರದು (ಕೃಷ್ಣಾಳಿ. ೮೮).

ತಣವು ಮುದ್ದೆ = ತಂಬಿಟ್ಟು: ಅವರೂ ತಮ್ಮ ಕಾಣಿಕೆ ವಾಸಿಮಾಡಲು ಮಾರವ್ವನಿಗೆ ಕುರಿ, ಕೋಳಿ, ತೆಂಗಿನಕಾಯಿ, ತಣವು ಮುದ್ದೆಗಳನ್ನು ಅರ್ಪಿಸಲು ಮುಂದೆ ಬಂದಿದ್ದರು (ಊರುಳ. ೫).

[ ತಣಿ$_1$ + - ವು. / ತಮಿ. ತಣಿವು; ತೆಲು. ತನಿವು, ತನಿವಿ, ತನ್ವಿ, ತನ್ವು ]

**ತಣಿವೇಱು** (ಕ್ರಿ). ತೃಪ್ತಿಯನ್ನು ಹೊಂದು: ಪೊಗೆಸುತ್ತಿದಂತೆ ಕೈಕೊಂಬುದು ಹವ್ಯಮಂ ಬಯಸಿಯುಣ್ಬಮರರ್ ತಣಿವೇಱುವಂತೆವೋಲ್ (ಚಿಕವಿ. ೪-೭೭).

[ ತಣಿವು + ಏಱು$_1$ (<ಏಱ್$_1$) ]

**ತಣಿಸು$_1$**, ತಣ್ಣಿಸು, ತಣ್ಣೈಸು (ಕ್ರಿ). ೧. ತಣ್ಣಗೆ ಮಾಡು; ತಂಪುಗೊಳಿಸಂ; ಆರಿಸು: ತಣ್ಣೀರಾದಡಂ ತಣಿಸಿ ಕುಡಿ (ಪಾರ್ತೀಸು. ೬೬); ಕುಡಿಯುವ ನೀರನ್ನು . . . ಕುದಿಸಿ ಆದಮೇಲೆ ಮಣ್ಣಿನ ಪಾತ್ರೆಗಳಲ್ಲಿ ಹಾಕಿ ತಣಿಸಬೇಕು (ಅಡುಪಾ. ೮೪). **ತಣ್ಣಿಸು:** ೧. ಕಳ್ವಲೆಗಣಂ ಮಾರಾಂತ ಶೂರಂ ಲಸಲ್ಲಲಿತಂ ತಣ್ಣಿಪ ಚನ್ದ್ರನಂ ನುಡಿವರ್ (ಸಂಶಪ. ೦೪-೪); ಅಣ್ಣಾ ದತ್ತನ ಬಗೆಯ ಬೇಗೆಯನು ತಣ್ಣಿಸೈ (ನನಲ್ಲ. ೮೭-೦). ೨. ಅಡಗು; ಇಲ್ಲದಂತಾಗು : ಬಯಲಾತು ಮಾತಿನ ಭ್ರಾಂತಿ ತಣ್ಣಿಸಿತು. ಶಾಂತಿ (ಸೂರ್ಯಪಾ. ೧೮-೪). **ತಣ್ಣೈಸು:** ೧. ಸಣ್ಣಕ್ಕಿಯಶನ ಸದ್ಘೃತದೊಳೆ . . . ಕೈದಣ್ಣಲರ್ ದಧಿಪತ್ರಮಾಲೆ ತಣ್ಣೈಸದೆ ಪದಾರ್ಥಂಗಳ ರುಚಿಯ ಮುಕ್ಕಣ್ಣಗರ್ಪಿತವ ಮಾಡಿದರು (ಬೋಹಚ. ೨೭-೯). [ ತಣ್$_2$ + - ಇಸು$_2$ ]

**ತಣಿಸು$_2$** 'ತಣಿಯಿಸು' ನೋ.

**ತಣಿಸು$_3$** (ನಾ). ೧. ತಂಪು; ಶೈತ್ಯ: "ಸ್ವಿದಿ – ಶೈತ್ಯೇ, ತಣಿಸಿನೊಳ್" (ಕಾಶಕ್ಕ. ೮೨). ೨. ತೇವ; ಒದ್ದೆ: (?). ೩. ತೃಪ್ತಿ; ತುಷ್ಟಿ: ಗುಲಾಬಿ ನಗುವುದೊಂದರೆನಿಮಿಷ; ನಗಲು ಬಾಳ್ಮುಗಿಯುವುದು ಮುಗುಳು ದುಡಿತಕೆ ತಣಿಸು (ಮಂಕುಳ. ೪೭೮). 'ತಣ್ಣಸ' ಪರಾ. [ ತಣಿ$_1$ + - ಸು$_2$ ]

**ತಣು$_1$** 'ತಣ್$_2$' ನೋ.

**ತಣು$_2$** (ನಾ). (?) : ಕೆಲವಱೊಳ್ ವ್ಯಂಜನಮಿಲ್ಲ. . . ಕರು, ತಣು, ಅನು, ಕಟು (ಶಮದ. ೪೮ ಪ್ರಯೋ). [ ? ]

**ತಣುಕು** (ನಾ). ಒಂದು ಬಗೆಯ ಗಿಡ : ತಣುಕು, ಕಾಡುಬೆಂಡೆ (ವ್ಯಶಿಗಿ. ೪೦-೮೨೨). [ ? ]

**ತಣುನೆಳಲು** 'ತಣ್ಣೆಟಲ್' ನೋ.

**ತಣುಪು** 'ತಣಪು$_1$' ನೋ.

**ತಣೆಸೆ** (ನಾ). (?): ತಾವರೆಯ ತಣೆಸೆಯೊಳು (ಇಎ. ೦೯೪೬, ಮುಂಡರಗಿಶಾಟಾ. ೩೩೫-೯ ; ?). [ P ಇದು 'ತಣ್ಣಸೆ'ಯ ಅಪಲಿಖಿತವಿರಬಹುದು ]

**ತಣ್ಗಂಪು** (ನಾ). ಆಹ್ಲಾದಕರವಾದ ಸುವಾಸನೆ : ಅಧರದ ಪೊದಟ್ದ ತಣ್ಗಂಪಿಂಗಂ ಮೃಗನಯನೆಯರನೆ ಬಿಡದೋಲಗಿಸಿದುದಳಿನಿಕರಂ (ಆದಿಪು. ೧೧-೧೧೨) ; ವನಲತಾಳಿ ಪ್ರಸೂನಾವಳೀ ಗಂಧವಹಂ . . . ತಣ್ಗಂಪನೀ ಬೀಱಿದಪ್ಪುದು (ಕಾದಂಬ. ೭೦೭) ; ಕಂಪಿನೊಳ್ ಪೊಂಪುಟಿವೋಗುತಿರ್ದ ಮಾಳ ವಕ್ತ್ರಸರೋಜಮೆ ಸಾಲ್ಗುಮೆಂದು ತಣ್ಗಂಪನುಣಲ್ಕೆ ಬಂದಳಿಗಿ (ಧರ್ಮಾಮೃ. ೬-೨೦೦); ಮುಡಿಯಿಂದಂ ಬೀಟ್ದ ಪೂಮಾಲೆಯಿಂ ತ[ಪಾಠಾಂ. ಪು]ಣ್ಗಂಪಂ ಸವಿದಲ್ಲಿ ಪಂಗಡದೆ ಪಾಡುತಿರ್ಪ ಪೆಣ್ದುಂಬಿಯಿಂ (ಕಬ್ಬಿಗಕಾ. ೩೫) ; ನಸುಬಿರಿದ ಜಾಜಿಯ ನನೆಯ ತಣ್ಗಂಪನುಂಡು . . . ಸುಳಿವ ಮಱಿದುಂಬಿಯ ವಿಳಾಸದಂತೆ (ಸೌಂದಪು. ೧-೧೬).

[ ತಣ್$_2$ + ಕಂಪು ]

**ತಣ್ಗದಿರ್**, ತಂಗದಿರ್ (ನಾ). ತಂಪಾದ ಕಿರಣ : ಸ್ಮರಶರಮೇಪ್ಪುವೆಂಬ ಶಿಶಿರಾಂಶುವ ತಣ್ಗದಿರೇಪ್ಪುವೆಂಬ ಬದ್ದರನಱಿಯಟ್ಟ (ಅಜಿಪು. ೬-೨೬) ; ನೆಱಿದಿಂಗಳ ತಣ್ಗದಿರಂತೆ . . . ಲೋಲಲೋಚನರುಚಿ ಸುತ್ತಿಮುತ್ತಿದುದು (ಪಂಪಾಶ. ೫-೬೦) ; ಭುವನಮನಾವಗಂ ಪುದಿದು ಶೀವಿದ ತಣ್ಗದಿರ್ಗಳ್ ಪೊದಟ್ದ ಕೈರವವನಮಾದುವು (ಲೀಲಾವ. ೩-೬) ; ವರ ಹಿಮಕರಬಿಂಬದ ಬೆಂಬಳಿಯೊಳಿರ್ಪ ತಣ್ಗದಿರ್ಗಳೆನಲ್ (ಗಿರಿಜಾ. ೭-೯) : ಸೊಗಯಿಪ ಬೆಳ್ಪಸದನಮಂ . . . ಕೈಕೊಂಡಾಗಳ್ ಮಿಗೆ ತಣ್ಗದಿರಾವರಿಸಿದ ಮೃಗಧರ ಮಂಡಳಿಯವೋಲ್‌ವಿರಾಜಿಸುತಿರ್ದಳ್ (ಪಾರ್ಶ್ವಪು. ೬-೦೦೦). **ತಂಗದಿರ್**: ತಂಗದಿರ್ಗಳು ಸರ್ವಾಂಗದಿ ನೆಲಸಿರೆ (ಶಿವಗೀ. ೦೭೦-೮೩೧) : ತಳಿತ ತಂಪಿನ ತಂಗದಿರ ತೊಱಿಯೊಳಗೆ ಕೇಂಕಾಡಿದುದು ಬಲ (ಕುಮಾವ್ಯಾ. ೦೬-೦೮).

[ ತಣ್$_2$ + ಕದಿರ್$_2$ ]

**ತಣ್ಗದಿರ**, ತಂಗದಿರ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : "ಜೊನ್ನೊಡಲಂ . . . ತಣ್ಗದಿರಂ, ಅಲಿವೆಳಗಂ, ಮಂಜುಗೈಯ್ಯಂ . . . ತಿಂಗಳ್ – ಈ ೨೦ ಚಂದ್ರನ ಪೆಸರ್" (ಕಶಸಾ. ೩-೨೩) ; "ತಣ್ಗದಿರನೆನಲ್ಕೆ ಚಂದಿರಂ ಸೊದೆಗದಿರಂ" (ಕರ್ಣಾನಿ. ೯) ; ಆನನಾಂಬುಜಂ ತಣ್ಗದಿರಂಗೆ ಸೋಲಮನೊಡರ್ಚೆ (ರಾಜಶೇ. ೧೩-೬೦); ಬೆಂಗದಿರನ ಕಾಯ್ದು ತಣ್ಗದಿರನ ತಣ್ಪು . . . ಪಡಿಗೊಳೆ (ರಾಮಾಶ್ವ. ೭-೧೬) ; ಬೆಂಗದಿರನ ಬಿಸಿ ನಾನು, ತಣ್ಗದಿರನ ತಂಪಾನು ! (ಪಾಂಚಜ. ೦೬-೨೦). **ತಂಗದಿರ** : "ತಂಗದಿರನೆಂದೊಡಂಬುಜಬಾಂಧವಂ" (ಕಕರ. ೦೨೦); ತಂಗದಿರನಿಂದಿಂಗಡಲ್ ಪೆರ್ಚದಿರಲ್ (ನಂದಿಮೂ. ೯-೬೫) ; ಸರಸದಿಂ ತಂಗದಿರನುದಯದಿ ಶರಧಿ ಪೆರ್ಚುವ ತೆರದೊಳ್ (ಕೃಕರ್ಣಾ. ೩-೬೮) : ತಂಗದಿರ ನೇಸರರ್ ತಾವು ಕಡುಹರುಸದಿಂದೆಸಗುತಿರಲು (ಕವಿಕಾ. ೨-೧); ತಂಗದಿರನೆಸಕ ಕಣ್ಗಮೃತ, ಕಣಜಕದೇಂ ? (ಮಂಕುಕ. ೪೯೮). 'ಬೆಂಗದಿರ' ಪರಾ.

**ತಣ್ಗದಿರನನ್ವಯ** = ಚಂದ್ರವಂಶ : ತಣ್ಗದಿರನನ್ವಯದ ಪಾರ್ಥನ ತುರಂಗಮದು ಪೆಣ್ಗುದುರೆಯಾಗಿ . . . ಸ್ತ್ರೀ ರಾಜ್ಯಮಂ ಪೊಕ್ಕುದು (ಜೈಮಿಭಾ. ೦೫ ಸೂಚನೆ). [ ತಣ್ಗದಿರ್ + – ಅ$_7$ ]

**ತಣ್ಗದಿರವಕ್ಕಿ** 'ತಣ್ಗದಿರ್ವಕ್ಕಿ' ನೋ.

**ತಣ್ಗದಿರಱೆ** (ನಾ). ಚಂದ್ರಕಾಂತ ಶಿಲೆ ; ಅಮೃತಶಿಲೆ : ಪಾಸಿದ ತಣ್ಗದಿರಱೆಯ ಪಾದವಟ್ಟಗೆಗೊಳಗೇರಿಯ ನಿಡುಮರಂಗಳಿಱುಂಬಿನ ಕಟ್ಟಲೆಯನೊಳಕೊಂಡು (ರಾಮಾಶ್ವ. ೫೨-೧೯). [ ತಣ್ಗದಿರ + ಅಱೆ$_4$ ]

**ತಣ್ಗದಿರಾಡಿ** (ನಾ). ಚಕೋರ ಪಕ್ಷಿ ; "ಜೊನ್ನವಕ್ಕಿ" (ಚಿಹುನಿ. ಶ. I, ೩೮).

[ ತಣ್ಗದಿರ್ + – ಆಡಿ$_1$ ]

**ತಣ್ಗದಿರ್ಗಲ್**, ತಂಗದಿರ್ಗಲ್ (ನಾ).=ತಣ್ಗದಿರಱೆ: ಪೊಳೆವ ತಣ್ಗದಿರ್ಗಲ್ಲ ಪಸೆಯೊಳೇಳೆಲೆವಾಳೆಯೆಳೆಯಲೆಯ ಪಚ್ಚಡಿಸಿ . . . ಕಾಂತೆಯ ಮಲಂಗಿಸಿ (ಪದ್ಮರಾ. ೮-೯೨) ; ತಲೆವೆಱ ಸೆಜ್ಜೆವನೆಯ ತಣ್ಗದಿರ್ಗಲ್ಲ ಮೆಲ್ವಳಗೆಯುಂ ಸೋಂಕೆ ಕರಗಿ ಸೂಸೆ (ಸೌಂದಪು. ೭-೧) ; ತಳಿರೆಲೆ ಬಿಜ್ಜಳ ತಣ್ಗದಿರ್ಗಲ್ . . . ಬೆಳವನ್ನದಿನಾಳಿಯರೆಳಸಿ ಕರಂ ಸತ್ಕರಿಸಲು (ಜಯುಕಾ. ೯-೪೦) ; ಮೆಱಿವ ತಣ್ಗದಿರ್ಗಲ್ಲ ಮಂಟಪದೊಳ್ . . . ಸಂಭ್ರಮದೆ ಕುಳಿರ್ವಟ್ಟಣಾಗಿಯೊಡನೆ ಪಸೆನಿಂದು (ಭಾವಚಿಂ. ೯-೫೭). **ತಂಗದಿರ್ಗಲ್** : ಕಂಗೊಳಿಪ ಸೋಪಾನದಂತರಂಗಳೊಳೆಸೆವ ತಂಗದಿರ್ಗಲ್ಲ ಪುತ್ಥಳಿಗಳೋ (ಚಬಪು. ೪೫-೬೫); ತಂಗದಿರ್ಗಲ್ಲ ಗಹ್ವರದ ಚಂದಳಿರ್ವಾಸಿನೊಳತ್ತಮಿತ್ತ ಚೆಲ್ವಿಂಗೆಡೆಯಾಗಿ ಸೂಸಿದರಲುಂ (ಶಬಶಂ. ೧-೫೦). [ ತಣ್ಗದಿರ್ + ಕಲ್$_3$ ]

**ತಣ್ಗದಿರ್ವಕ್ಕಿ**, ತಂಗದಿರ್ವಕ್ಕಿ, ತಣ್ಗದಿರವಕ್ಕಿ (ನಾ). ಬೆಳುದಿಂಗಳ ಹಕ್ಕಿ; ಚಕೋರ ಪಕ್ಷಿ ; ಜೊನ್ನವಕ್ಕಿ : "ಜೊನ್ನವಕ್ಕಿ, ತಣ್ಗದಿರ್ವಕ್ಕಿ – ಈ ೨ ಚಕೋರಂ" (ಕಶಸಾ ೧೦-೨೦೩) ; ತಣ್ಗದಿರ್ವಕ್ಕಿ ಮೊಗವಿಟ್ಟು ನಭವ ನೋಡೆ (ರೀವಚ. ೬೪-೧೬). **ತಂಗದಿರ್ವಕ್ಕಿ** : "ತಂಗದಿರ್ವಕ್ಕಿ ಜೊನ್ನದ ಪಕ್ಕಿಯೆನೆ ಚಕೋರಂಗಳ ಪೆಸರ್" (ಕಬ್ಬಿಕೈ. ೨೦) ; "ಜೀವಂಜೀವ – ತಂಗದಿರ್ವಕ್ಕಿ" (ಪಾಹಟೀ. ೨-೬-೩೫ ವ). **ತಣ್ಗದಿರವಕ್ಕಿ** : "ತಣ್ಗದಿರವಕ್ಕಿಯೊಡನದು ಚಕೋರಾಖ್ಯೆಯಕ್ಕು" (ಕಕರ. ೪೨).

[ ತಣ್ಗದಿರ್ + ಪಕ್ಕಿ$_1$ ]

**ತಣ್ಗದಿರ್ಪೊದಱ್** (ನಾ). ತಂಪಾದ ಕಿರಣಗಳ ಸಮೂಹ : ತಿಂಗಳ ತಣ್ಗದಿರ್ಪೊದಱೊಳ[ಪಾಠಾಂ. ಬನ]ಪಾಂಗಚ್ಛವಿ ಸೆಣಸೆ ತಂದು ತಲೆವಾಗಿಪ ಪೊಲ್ . . . ಅಮರಾಂಗನೆ ಚಾಮರಮನಿಕ್ಕಿದಳ್ (ಅನಂಪು. ೪-೮೩).

[ ತಣ್ಗದಿರ್ + ಪೊದಱ್ ]

**ತಣ್ಗರಗ**, ತಂಗರಗ (ನಾ). ತಂಪಾದ ಕೊಡ ; ಶೀತಲ ಕಲಶ: ತಣ್ಗರಗದ ನೀರ್ವೆರಸು ಕೆಲದೊಳಿರ್ದ ಕೆಳದಿಯರನಟ್ಟುವುದುಂ (ಪಂಪಾಶ. ೭-೦೦೬ ವ): ಅಱಿವಟ್ಟಗೆಯೊಳ್ ಕಡುಗೋಡುವೆತ್ತ ತಣ್ಗರಗವನೆತ್ತಿ ನೀರೆಱಿಯೆ (ಜಗವಿ. ೦೭-೭೯) ; ಹಗಲಿನೊಳು ತಂದ ಪೊಸನೀರನಾಕ್ಷಣದೊಳಗೆ ಮಿಗೆ ಸೋದನೆಯ ಮಾಡಿ ತಣ್ಗರಗ[ಪಾಠಾಂ. ತಂಗರಗ]ದೊಳು ತುಂಬಿ (ಸೂಪಶಾ. ೩-೪೩) : ತಣ್ಗರಗದ ನೀರಿಂದ ತೊಳೆದಾನನ ಕರಚರಣಂಗಳನು (ಕುರಾಸಾಂ. ೩೬-೫) ; ಕುಳಿರ್ವಾಲಿನೀರನಬಳಾವಳಿ ತಣ್ಗರಗದೊಳೆ ತೀವಿ ಪಥಿಕರ್ಗೆಱಿಗುಂ (ವೃಷವಿ. ೪-೨೫). **ತಂಗರಗ** : ತಂಗರಗದಿಂ ಶೈತ್ಯೋದಕಮಂ ಕುಡಿಯಲೆಱಿವುತ್ತ (ಪುಣ್ಯಾಸ್ರ. ೨-೨೦ ವ) : ತಂಗರಗದ ತಿಳಿನೀರನಂಗದ ಮೇಲೆ ತಳಿವುತಿರಲು (ಪ್ರಭುಲಿಂಜ. ೪-೧೩) : ತನಿವಣ್ಣಾ ಹೊಱಿಗಳಿಂ ತಿಳಿದ ಜಲಪೂರ್ಣವಹ ತಂಗರಗದಿಂದಲಾಭರಿತ ಚಂದ್ರಾನನೆಯರಿಂ . . . ನಿರ್ಮಳ ವಸಂತಂ ಸಹಿತ ನಡೆದು ಪೊಱವೊಳಲ ಬನವೊಕ್ಕು ಬರೆ (ಚೀರಮ. ೫-೨೨).

[ ತಣ್$_2$ + ಕರಗ ]

**ತಣ್ಗಲ್**, ತಂಗಲ್, ತಂಗಲ್ಲು (ನಾ). ಚಂದ್ರಕಾಂತ ಶಿಲೆ : "ಸಸಿಗಲ್, ತಣ್ಗಲ್–ಈ ೨ ಚಂದ್ರಕಾಂತಂ" (ಕಶಸಾ. ೪-೫೩). **ತಂಗಲ್** : ಮಿಸುಪ ಪೇಡಾಕುಳಿಯ ಕುಂಕುಮರಸದ ಕತ್ತುರಿಗೆಸರ ತಂಗಲ್ಪೊಸರ್ಪ ಪನ್ನೀರುಗಳ . . . ಓಕುಳಿಯಾಡಿದರು (ಅನಂರಾ. ೧-೨೩-೩೦). **ತಂಗಲ್ಲು** : ಒಸರಲಾ ತಂಗಲ್ಲು ಕರಗಾದ ಜಲ ತಣ್ಣಸದೋಱ ಶ್ರಮವಡಗಿಪುದು (ಕಂವವಿ. ೬-೭೬). [ ತಣ್$_2$ + ಕಲ್$_3$ ]

**ತಣ್ಣಲಸುಗೂಟ್** (ನಾ). ತಣ್ಣನೆಯ ಕಲಸನ್ನ,-ಕಲಸಿದ ಅನ್ನ : ಕೆನೆಗೊಂಡ ಗಟ್ಟಿ ಮೊಸರಂ ಸುರಿದೇಲೆಯು ಚೂರ್ಣವಿಕ್ಕಿ . . . ಪವಣ್ಪುಗೆ ಕಲಸಿರ್ದ ತಣ್ಣಲಸುಗೂಟನಿಳಾಪತಿಗಿತ್ತನಟ್ಟಿಯಿಂ (ಲೀಲಾವ. ೩-೭೦). [ ತಣ್$_2$ + ಕಲಸುಗೂಟ್ ]

**ತಣ್ಣಳಸ** (ನಾ). = ತಣ್ಣರಗ : ತಾವರೆಯ ಕೊಡೆಯೆಲೆಗಳಿಂ ಮುಚ್ಚಿದ ಪಚ್ಚೆಯ ಪವಳದ ಪದ್ಮರಾಗದ ಪಳುಕಿನ ತಣ್ಣಳಸಂಗಳುಮಂ (ಕಾದಂಬ. ೨೦೬) ; ಪಱಿಪಡೆ ಸೇದೆ ಪಿರಿಂಗೆ ತೃಷೆ ತಣ್ಣಳಸಂಗಳನೆತ್ತಿ ನಿಂದು ನೀರೆಱಿವ ಚಳಲ್ಲತಾಂಗಿಯರ್ (ಅನಂಪು. ೧-೮೩). [ ತಣ್$_2$ + ಕಳಸ$_1$ ( = ಕಲಸ) ]

**ತಣ್ಗಾಚು** (ನಾ). ಹಿತಕರವಾದ ರಂಚಿಯುಳ್ಳ ಕಾಚು : ಬೆಳ್ಳಿಲೆ ಕ್ರಮುಕ ತಣ್ಗಾಜ[ಚ]ನಂ[ಪಾಠಾಂ. ಮೊದಲಾದಂ]ಗಡಿಯಿರೆ (ಅಭ್ಯಲೂ. ೩-೭೫). 'ತಂಗಾರೆ' ಪರಾ. [ ತಣ್$_2$ + ಕಾಚು$_1$ ]

**ತಣ್ಗಾಲ್** (ನಾ). = ತಣ್ಗಾಲುವೆ : ಸೊಕ್ಕೇಱಿದರ್ ಬೀಟ್ಗಿ ಕಾಮನ ಕೂರಂಬಿನ ಕೋಳ್ಗೆ ಸುಗ್ಗಿ ಪೊಸವೆಳ್ದಿಂಗಳ್ ಬನಂ ಬಂದ ಮಾವಿನಿತುಂ ತಣ್ಣೆದುವಕ್ಕಿ ತಂಬೆಲರ್ಗಳಿಂ ತಣ್ಗಾಲೊಳೆಂದೊರ್ವಳಚ್ಚನೆಯಾಟಂ ಸತಿ ಬೇಟದೇವತೆಗೆ ಪಾನೋನ್ಮತ್ತೆ ನಿಂದಾಡಿದಳ್ (ಅನಂಪು. ೮-೩೦). [ ತಣ್$_2$ + ಕಾಲ್$_2$ ]

**ತಣ್ಗಾಲುವೆ** (ನಾ). ತಂಪಾದ (ನೀರಿನ) ಕಾಲುವೆ : ನೀಲದ ನೆಲಗಟ್ಟು ಪರಿವೇಷ್ಟಿಸಿರ್ದ ತಣ್ಗಾಲುವೆ ತಳಿರ್ವಾಸಿನಲಿ ಮೂಲೋಕಮೋಹನರನ್ನೆಯ ಸ್ಯೆಜಿಡೆ (ಮೋಹತ. ೨೮-೦೩). [ ತಣ್$_2$ + ಕಾಲುವೆ (<ಕಾಲ್ವಾಯ್) ]

**ತಣ್ಗಾಳಿ, ತಂಗಾಳಿ** (ನಾ). ತಂಪಾದ ಗಾಳಿ : ಗಂಧೋದಕಮಂ ಮೇಲೆ ತಳಿದು ತಣ್ಗಾಳಿಯಂ ವಿಗುರ್ವಿಸಿ ದೇಹಕ್ಕಾಪ್ಯಾಯನಂ ಮಾಡೆ (ವಡ್ಡಾ. ೩೬-೦೩); ಎಲೆ ತಣ್ಗಾಳಿಯೆ ನೀನೇಕಲೆದಪೆ (ಕಬ್ಬಿಗಾ. ೬೫) ; ಆಳಿಯರ್ ಬೀಸುವ ಚವುರಾಲವಟ್ಟ ತಣ್ಗಾಳಿಯಿಂದವಳೊಡಲ್ಗಿಚ್ಚು . . . ಧಡಾಳಿಸಿತು (ಮೋಹತ. ೨೭-೬೨). **ತಂಗಾಳಿ :** ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಆಜಿಪು. ೬-೨೮) ; ಬಡತನದೊಳ್ ಸಿರಿ ಮೆಯ್ ಚಿಮುರ್ವೆಡೆಯೊಳ್ ತಂಗಾಳಿ ಮಱ್ವ ಪರ್ವಿದ ಸಮಯಕ್ಕುಡುಪೋದಯಮೆಂಬಂದದೆ ಗಡಣಿಸಿದುದು ಸುತನ ಬರವು ಬಯಸುವ ಪದದೊಳ್ (ಚಂದ್ರಪು. ೬-೯೨) ; ಪುಳಿನಕ್ಕೆ ತಂಗಾಳಿಗೆಸೆವ ದೀಹದ ಮೃಗಾವಳಿಗೆ ಬೆಱಗಾಗುತ್ತ ನಡೆತರುತ್ತ (ಹಡಿಶಾ. ೫-೫೬) ; ಅಗ ದಟ್ಟವಾಗಿ ಮೋಡಗಳು ಕವಿದುಕೊಂಡು ತಂಗಾಳಿ ಬೀಸಲಾರಂಭವಾಗಿತ್ತು (ರಾವಿಜ. ೨೫). [ ತಣ್$_2$ + ಗಾಳಿ$_1$ ]

**ತಣ್ಣೂಳ್** 'ತಣ್ಣೂಟ್' ನೋ.

**ತಣ್ಣೂಟ್, ತಂಗಳು, ತಂಗಟ್, ತಂಗುಳಂ, ತಂಗುಂಟ್, ತಂಗೂಳು, ತಂಗೂಟ್, ತಣ್ಣೂಳ್** (ನಾ). ೧. ತಣ್ಣಗಾದ ಅನ್ನ ; ಆರಿದ ಅನ್ನ : ತಣ್ಣೂಟಂ ಪಡವಿನೊಳಿಲೆಗಟ್ಟಿ ಮುಟ್ಟುಪಡೆದಱಸುವುದೇ (ಲೀಲಾವ. ೨-೦೧೫). **ತಂಗಳು :** ೧. ಇದ್ದ ತಂಗಳು ನನಗಿಕ್ಕು ನಿನಗೆಂದೆಂದಿಗೂ ಹಸಿವಿಲ್ಲದ ಹಾಗೆ ಮಾಡುತ್ತೇನೆ (ಗಾದೆ). ೨. (ಆಹಾರ ಪದಾರ್ಥಗಳ ವಿಷಯದಲ್ಲಿ) ಆರಿದುದಂ ; ಮಾಡಿ ಬಹಳ ಹೊತ್ತಾದುದು : ತಂಗಳು ಎರಡು ಮುದ್ದೆಗಳಿವೆ (ಜಂಗಾಳ್ಳಿ. ೧೭) ೩. ತಂಗಳೂಟ : ಬೆಳಗ್ಗೆ ಎದ್ದು ಸ್ನಾನ, ಶಿವಪೂಜೆ, ತಂಗಳು ತೀರಿಸಿಕೊಂಡು (ನಾಲ್ಕುಮು. ೩೪). ೪. ಹಳೆಯದು ; ಹಳಸಲಾದುದು ; ಹೊಸತನವಿಲ್ಲದುದು : ಹೋಗಲಿ ಆ ಹಳಬರ ತಂಗಳು – ಈ ನಿನ್ನ ಹಿರಿಯರೊಳಗೆ ಈಗ ಯಾರಿದ್ದಾರೆ ? (ನಡೆದಾ. I, ೪೪೫). 'ತಂಗಳಂತತ್ತ್ವಜ್ಞಾನ' ಪರಾ. **ತಂಗಟ್ :** ೧. ತಂಗಟಲ್ರು ಕದನ್ನಮಲ್ರು ಪೂರಣಗಡುಬುಂಟು (ರಾಮಾಶ್ವ. ೨೩-೨೨). **ತಂಗುಳು :** ೧. ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲೂ ತಂಗುಳವೇ ಲೇಸು (ಸರ್ವಜ್ಞ. ೧೫೩೪). ೨. ಶೈತ್ಯವಾದ ಜಲಪಾನದಿಂದಲೂ, ತಂಗುಳು ಅನ್ನವನ್ನುಂಬುವುದರಿಂದಲೂ . . . ಬಿಕ್ಕಳನ್ನುಂಟುಮಾಡುವುದು (ಶಳವೈ. ೨೪೧) : ಮುಂದುಕಿ ಬಲು ಬುದ್ಧಿವಂತೆ . . . ಅವನಿಗೆ ಬೆಚ್ಚಾಗಿ ತಂಗುಳು ಹಾಕಿದಳು (ಪಂಚಾಮ್ಮ. ೫೬). **ತಂಗುಟ್ :** 'ತಂಗುಟ್ಬಾರಿಕ' ಪರಾ. **ತಂಗೂಳು :** ೧. ಬಿಸಿಗೂಡಿ ತಂಗೂಳುಣಬೇಡ (ಸರ್ವಜ್ಞ. ೨೦೦೧). ೨. ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು (ನೆಲಮು. ೩೨-೦೪). **ತಂಗೂಟ್ :** ೧. ಉಣಲಱಿಯಂ ತಂಗೂಟಂ ಗುಣಮುಳ್ಳ ಗೃಹಸ್ಥನೆಂದೊಡಿಂ ತಪಸಿಗೆ ಪೇಟುಣಲಕ್ಕುಮೆ ತಂಗೂಟಂ (ಸಮಹ. ೧೪-೬೪). **ತಣ್ಣೂಳ್ :** ೧. ಇಪ್ಪ ಭೋಜನವುನುಂಡ ಮ್ಯಸಿರಿಯುತ್ತ ಖಳವ ಸೆಱಿವನೆಯ ತಣ್ಣೂಳಿತ್ತ (ಶ್ರೀರಾಮ. ೫-೮೫). [ ತಣ್$_2$ + ಕೂಟ$_1$ ]

**ತಣ್ಗೆಸಱ್** (ನಾ). ತಣ್ಣನೆಯ ಕೆಸರು,-ಪಂಕ : ಚಿಗಿದು ಹಾಱಿದ ವಿಹಗೇಶನುಬ್ಬಟೆಗೆ . . . ಕೂರ್ಮನ ದೇಹ ಹುಗಿದುದು ತಣ್ಗೆಸಱೊಳಗೆ (ಮೋಹತ. ೩೭-೪೭). [ ತಣ್$_2$ + ಕೆಸಱ್ ]

**ತಣ್ಗೊಳ, ತಂಗೊಳ** (ನಾ). ತಂಪಾದ (ನೀರಿನ) ಕೊಳ : ತಣ್ಗೊಳದೊಳ್ವಿಜೃಂಭಿವರಸಂಚೆ (ಉದ್ಭಟ. ೬-೪೫) ; ಬಿಸಿಲೊಳ್ ಬೇಗುದಿಗೊಂಡವಂ ತಣ್ಗೊಳನಂ ಪೊಕ್ಕಂತೆಯುಂ (ಕಬ್ಬಿಗಾ. ೩೨೦) ; ಚಂದ್ರಕಾಂತ ಕಲ್ಗಟ್ಟಿ ಸೋಪಾನ ತಣ್ಗೊಳದ ಮಧ್ಯದಲಿ . . . ವಿಮಾನಾಂಕನಿರ್ದನೋಲಗದಿ (ಮೋಹತ. ೫-೩೨) : ತಣ್ಗೊಳಂ ಕೆಱಿಕಾಲ್ವೆಗಳಿಲ್ಲದಿಳಯಿಲ್ಲ (ಜ್ಞಮಿಧಾ. ೧೮-೦೩). **ತಂಗೊಳ :** ತಂಗೊಳದೊಳಾಡಿ ತೊಯ್ದು ಮನಂಗೊಳಿಪರ ಸಂಚಿಯಂತೆ (ಉದ್ಭಟ. ೪-೨೯) ; ಉದಿಸಿತು ಘುಳುಘುಳು ಘುಳುಘುಳು ಧ್ವನಿ ತಂಗೊಳದೊಳು ತನುತಾಪದಿಂದೆ (ಮೋಹತ. ೯-೪೨) ; ಎಳನನೆಸೀವಿ ತೋರ್ಪ ಮೊನೆಮಲ್ಲಿಗೆ ತಾವರೆ ತೀವಿ ತೋರ್ಪ ತಂಗೊಳಂ (ರಾಜಶೇ. ೨-೩೭). [ ತಣ್$_2$ + ಕೊಳ$_2$ ]

**ತಣ್ಗೊಳ್ಪು** (ಕ್ರಿ). ತಂಪಾಗು ; ಶೀತಲವಾಗು : ದಕ್ಷಿಣದಿಕ್ಕಿನಿಂದ ಮೃದು ಮಧುರವಾಗಿ ಬೀಸುತ್ತಿದ್ದ ತಣ್ಗೊಂಡ ಮಂದಮಾರುತದಿಂದ (ಜೀವಿತಾ. ೮೦). [ ತಣ್$_2$ + ಕೊಳ್ಪು$_1$ (<ಕೊಳ್$_1$) ]

**ತಣ್ಗೋಡು** (ಕ್ರಿ). ತಂಬು ತಂಪಾಗು : ತಣ್ಣರಗದ ತಣ್ಗೋಡುವಾಲಿನೀರಂ ಅರ್ಪನಿತಂ ಕುಡಿದು (ಧರ್ಮಾಮೃ. ೦-೦೫೨). [ ತಣ್$_2$ + ಕೋಡು$_1$ ]

**ತಣ್ಗೊಡರ್** (ನಾ). ತಂಪಾದ ಬೆಳಕನ್ನು ಬೀರುವ ದೀಪ ; ಹಿತಕರವಾದ ದೀಪ : ಬೇಱದೊಂದು ಬಗೆಗಿಕ್ಕಿದ ಟಕ್ಕನೆ ವಶ್ಯದೊಂದು ತಣ್ಗೊಡರೆ[ಪಾಠಾಂ. ಕಣ್ಗೊಡವೆ]ನೆ ನೋಟ್ಪ ನೋಟಕರ ಕಣ್ಗೊಳಗಾದುದು (ಶಂರಾಮಾ. ೩-೩೧) ; ರನ್ನದ ತಣ್ಗೊಡರ್ ಮುಳಯಿದಂ ಕಸ್ತೂರಿ ಕಾಶ್ಮೀರಮೆಂಬಿವಱಿಂ ತೆಕ್ಕನೆ ತೀವಿ ಪೊಂಬರಿಯಣಂ ಚೆಲ್ವಾದುದು (ಆಗವಿ. ೧೦-೯೮) ; ಎಳವೆಱಿಯಂತೆ ಮಾಣಿಕದ ತಣ್ಗೊಡರಂತೆ . . . ತಳತ್ತಳಿಪಂಗಕಾಂತಿಯಿಂ ತಳೆದೆಸೆದಿರ್ಪ ಬಾಲಕನ ಮುಗ್ಧಮುಖೇಂದುವನಂದು ನೋಡಿ (ಪುಷ್ಪಪು. ೪-೩೮) ; ಮುಂಜೆರಂಗು ; ತಣ್ಗೊಡರ್ (ಕವಿಮದ. ೬೮ ಪ್ರಯೋ). [ ತಣ್$_2$ + ಸೊಡರ್ ]

**ತಣ್ಣಗಮ್ಮ** (ನಾ). ಶೀತಕರ ; ತಂಪನ್ನುಂಟು ಮಾಡುವವನು ; ಚಂದ್ರ : 'ತಣ್ಣಗಮ್ಮಂದಲೆಯ' ಪರಾ. [ ತಣ್$_2$ + ಕಮ್ಮ$_3$ ]

**ತಣ್ಣಗಮ್ಮಂದಲೆಯ** (ನಾ). ಚಂದ್ರನನ್ನು ತಲೆಯಲ್ಲಿ ಧರಿಸಿರುವವನು ; ಶಿವ : ತಣ್ಣಗಮ್ಮಂದಲೆಯ ನಿನ್ನನಿತ್ತುಂ ನಮಗೆ ಕೆನ್ನವಿತ್ತುಂ (ಪ್ರಭುಕು. ೩-೦೦೨). [ ತಣ್ಣಗಮ್ಮ + ತಲೆ$_1$ + - ಅ$_7$ ]

**ತಣ್ಣಗೆ$_1$** (ನಾ). ತಂಪನ್ನು ಬೀರುವ ನಗೆ ; ಉಲ್ಲಾಸಕರವಾದ ನಗೆ ; ಸುಖ ತರುವ ನಗೆ : ಬಿಸಿನಗೆ ಯಾವುದು ತಣ್ಣಗೆ ಯಾವುದು ಹುಸಿನಗೆ ಮುಗುಳು ನಗೆಗಳು . . . ಎಂತಿಹುವೆಂದು ನಸುನಗುತವಳು ಪಾಡಿದಳು (ಧರಣ. ೧೦-೩೦). [ ತಣ್$_2$ + ನಗೆ ]

**ತಣ್ಣಗೆ₁, ಥಣ್ಣಗೆ** (ಅ). ೧. ತಂಪಾಗಿ ; ಶೀತಲವಾಗಿ : ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ) ; ತಣ್ಣಗೆ ಮೊಸರಲ್ಲಿ ಬೆಣ್ಣೆ ಮುದ್ದೆಯಹಾಗೆ ಕಣ್ಣಿಗೆ ಕಾಣುವ ಹುಣ್ಣಿಮೆಚಂದ್ರನ (ಕಎಪು. ೮-೪). ೨. ಸುಖವಾಗಿ ; ಹಾಯಾಗಿ ; ಸಂತುಷ್ಟವಾಗಿ ; ಕ್ಷೇಮವಾಗಿ : ಹೋದವರು ಹೋಗಲಾಗಿ ಇರುವವರನ್ನು ತಣ್ಣಗೆ ಕಾಪಾಡಿಕೊಂಡು ಬಾ ಸ್ವಾಮಿ (ಎಹಮ್ಮ. XII, ೧೧ ಅಡಿಟಿ) : ಆ ಮಹಾತಾಯಿ ನಮ್ಮ ಮಹಾರಾಜರ ಮನೆತನವನ್ನು ತಣ್ಣಗೆ ಇಟ್ಟಿರಲಿ (ಕಳಹು. ೯೮). ೩. ಶಾಂತವಾಗಿ : ಹೆಣ್ಣಿನ ಪುಣ್ಯದೇವತೆ ಪಂಪಾದೇವಿ ತಣ್ಣಗಿರ್ದಡೆ ಸಾಕವಳು ಕಣ್ಣ ಬೇಡಿದರಿತ್ತವಳು (ಶಂಡಾಸಾಂ. ೩೩-೪೮) : ತಾಯಿಹೊಟ್ಟೆ ತಣ್ಣಗೆ ಮಾಡುವ ಸೀರೆಗಳನ್ನಷ್ಟು ಉಡಿಸಿ ಕಳಿಸಿದರೆ ಪಾರಾದನೆಂದು ಕಲ್ಲಪ್ಪ . . . ಓಡಾಡುತ್ತಿದ್ದಾನೆ (ಅಹೋಕ. ೦೪). ೪. ತೆಪ್ಪಗೆ ; ಕೆಲಸಮಾಡದೆ ; ನಿಶ್ಚಿಂತೆಯಾಗಿ ; ನಿಷ್ಕ್ರಿಯವಾಗಿ : ತಣ್ಣಗಿದ್ದರೆ ಮಣ್ಣಾದರೂ ಅಸಾಧ್ಯ (ಗಾದೆ) : ಏನಾದರೂ ಕೆಲಸ ಮಾಡು ಯಾಕೆ ತಣ್ಣಗೆ ಕುಳಿತಿರುವೆ? (ರೂಢಿ). **ಥಣ್ಣಗೆ** : ೨. ನಂಮ್ಮಾರೆ ವಿಶ್ವಾಸಿಟ್ಟು ಥಣ್ಣಗೆ ಕೂಡು ಅಂತ (ಅಶ್ವಮೇ. ೧೦೦) ; ಊರ ಥಣ್ಣಗ ಇರಲಿ ಅಂತ (ನಿಸರ್ಗ. ೧೩೪) ; ಊರ ಥಣ್ಣಗ ಇರತದ (ಗ್ರಾಮಾಯ. ೯೪).

**ತಣ್ಣಗಾಗು**=೧. ಕಾವು ಕಳೆದುಕೊಳ್ಳು ; ತಂಪಾಗು ; ಉಷ್ಣವಳಿ : ಪ್ರತಾಪದೊಳಗೆ ನಂದಿ ಮಿಗೆ ಕುಂದಿ ರವಿ ತಣ್ಣಗಾದನೆನೆ (ಕೃಮಿಥಾ. ೨೮-೫) : ಮುಟ್ಟಿದರೆ ಮೈ ತಣ್ಣಗಾಗತೊಡಗಿತ್ತು (ಕಾಲ.೩ರ. ೧೭, ಕಥಾಸಾರ). ೨. (ಬೆಂಕಿ, ದೀಪ ಮೊದಲಾದುವು) ನಂದಿ ಹೋಗು ; ಆರಿ ಹೋಗು : ಆ ಜ್ವಾಲೆಯು . . . ಜಾಜ್ವಲ್ಯಮಾನವಾಗಿ ನಿಲ್ಲದೆ ಉರಿದು ತಣ್ಣಗಾಯಿತು (ವಾರಾಳ್ಮ. ೨೭). ೩. ಅಡಗು ; ಇಲ್ಲದಂತಾಗು : ಅದನ್ನು ನೋಡಿದ ಮೇಲೆ ಉತ್ಸಾಹವೆಲ್ಲ ತಣ್ಣಗಾಯಿತು (ದ್ಯಾವಿವಿ. ೦೪೩) ; ಮಹಡಿಯ ಮೇಲೆ ಗದ್ದಲ ಮತ್ತೆ ತಣ್ಣಗಾಯಿತು (ಪುನರು. ೨೦೯). ೪. ನಿಷ್ಕ್ರಿಯವಾಗು ; ಸುಮ್ಮನಾಗು : ಅಲ್ಲಿನ ಸುತ್ತಮುತ್ತಣ ಗಿರಿಚರರು, ವನಚರರು ತಣ್ಣಗಾದರು (ರಾಜಸೊ. ೩೭) : ಗುಣಗಳನು ತಾವೆಣಿಸಲಾರದೆ ದಣಿದು ಶ್ರುತಿಗಳು ತಣ್ಣಗಾದವು (ರಘುವಂ. ೧೧-೩೩). ೫. ಸಮಾಧಾನಗೊಳ್ಳು ; ನೆಮ್ಮದಿಗೊಳ್ಳು ; ಶಾಂತವಾಗು : ನಾಲ್ಕು ಸೂತ್ರ ಓದಿ ಅರ್ಥಮಾಡಿಕೊಳ್ಳುವುದರೊಳಗೆ ಮನಸ್ಸು ತಣ್ಣಗಾಗುತ್ತ (ಹೊಸಕ್ಷಿ. ೧೭೪). ೬. ಸಾಯು ; ಮರಣಹೊಂದು : ರೋಗಿಗಳೂ ನಿರೋಗಿಗಳೂ ತಣ್ಣಗಾಗುವ ಹೊತ್ತು ಬಂದಂತೆಯೇ (ಸ್ವ.ತಿಜಿ. ೩೧೧). **ತಣ್ಣಗಿರು** = ೧. ತಂಪಾಗಿರು : ಬೇಸಿಗೆಯಲ್ಲಿ ಮರದ ನೆರಳು ತಣ್ಣಗಿರುತ್ತದೆ (ರೂಢಿ). ೨. ಹಾಯಾಗಿರು ; ಸುಖವಾಗಿರು : ದುಡಿವ ಬಡವನ ಹೊಟ್ಟೆ ತಣ್ಣಗಿರಲಿ (ನೆಲಮು. ೨೦-೨೨). ೩. ತೆಪ್ಪಗೆ ಇರು ; ಸುಮ್ಮನಿರು : ಯಾವುದಕ್ಕೂ ಉತ್ತರ ಕೊಡದೆ ತಣ್ಣಗೆ ಇದ್ದರೆ ಆಯಿತೆ ? (ರೂಢಿ). **ತಣ್ಣಗೆ ತಣಿ** = ಚೆನ್ನಾಗಿ ತೃಪ್ತಿಯನ್ನು ಹೊಂದು ; ಸಂಪೂರ್ಣವಾಗಿ ತಣಿ : ಧೂಪದ ಕವಲ್ಗೊಗೆಯೊಳ್ ತನಿಗಂಪನಂುಂಡು ತಣ್ಣಗೆ [ಪಾಠಾಂ. ನ್]ತಣದೊಯ್ಯನೊಯ್ಯನಿದಿರಂ ಬಟಿಯಿಂ ನೆಗೆಯುತ್ತಮಿರ್ಪ ತುಂಬಿಗಳ್ (ಪಂಪಾಭಾ. ೩-೭೭). 'ತಣ್ಣನೆ' ಪರಾ. [ ತಣ್₂ + – ಅಗೆ₃ ]

**ತಣ್ಣನೆ, ಥಣ್ಣನೆ** (ಅ). ೧. ತಂಪಾಗಿ ; ಶೀತಲವಾಗಿ ; ತಣ್ಣಗೆ : ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೊ ಕಾಮಬಾಣಂಗಳೊಳಾದ ಮೋದಿದುದೊ . . . ಮೋಹನಮನಗ್ಗಳ ನಿನ್ನಯ ವಾಕ್ಪ್ರಗುಂಭನಂ (ಚಂದ್ರಪ್ರ. ೦-೩೯) ; ತಣ್ಣನೆ ತೀಡಿತ್ತನಸುಂ ಪ್ರಭಾತಸಮಯಪ್ರೋದ್ಭೂತ ಶೀತಾನಿಲಂ (ಕುಸುಮಾ. ೦-೫೨) ; ಸುಣ್ಣವೆಲ್ಲಂ ತಣ್ಣನಾಗೆ (ವಾಗೀಶ. ದೇ. ೨೭೭-೦೪) ; ತಣ್ಣನೆ, ತಣ್ಣಗೆ, ನುಣ್ಣನೆ, ನುಣ್ಣಗೆ (ಶಬ್ದಾನು. ೪೯ ಪ್ರಯೋ). ೨. ಸುಖವಾಗಿ ; ಹಾಯಾಗಿ : ತಣ್ಣನೆ ಲೇಸಾಗಿ ಮಯದದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯುಂ ಮಣ್ಣಂ ಪೊಯ್ದಂತು ಮಾಡಿದ್ದೈ ದೂರ್ತಿಂದಂ (ಧರ್ಮಾಮೃ. ೯-೧೩೭) ; ಎನ್ನಯ ಪಳ್ಳಿಗೆಯಿತಂದು ತಣ್ಣನಿರು (ಬಸಪು. ೦೫-೧೭) ; ಭಕ್ತಿಯ ತಿಣ್ಣದಿಂ ತಲೆವಾಗಿ ವರಕೆಯ ತಣ್ಣನಾಂತು ಮಗುಳ್ದು ಪುರದೊಳು ಸುಖದೊಳಿರುತಿರ್ದ (ಸಾಳ್ವಭಾ. ೪-೨೪). ೩. ಶಾಂತವಾಗಿ ; ಅನುದ್ವಿಗ್ನವಾಗಿ : ಸಾವಿರ ಚೇಳ್ಗಳೊಮ್ಮಿಗಕಟಾ ಕಡಿವ ಯಾತನೆಯ ಸಿಲುಬೆಯೊಳಲುರಿಯ ತಣ್ಣನೆ ತಳೆದು (ಗೊರೂಥಾ. ೧೨-೨೯೭). **ಥಣ್ಣನೆ** : ೧. ಮುಳುಗಿ ಥಣ್ಣನೆ ತಣದು ನಿಂದನು (ಥತಜ. ೪-೯೧). ೨. ನೀವು ಥಣ್ಣನೆ ಸಿರಿ ಸಹಿತ ಮೃದು ಹಾಸಿನಂಕದಲೊಟಗುತ [ಗಲ] ವರನು ದೇವಕಾರ್ಯಕೆ ತಂದೆವಾತ್ಮಜನೆಂಬ ಸಲುಗೆಯಲಿ (ನಿಭಾಗ. ೧೧-೧೧-೩೭).

**ತಣ್ಣತಣ್ಣನೆ, ತಣ್ಣನೆತಣ್ಣನೆ** (ದ್ವಿರುಕ್ತಿ) : ಅವ್ಯಯ ಪದಾಂತ ಲೋಪಕ್ಕೆ – ಕಮ್ಮಕಮ್ಮನೆ, ತಣ್ಣತಣ್ಣನೆ (ಶಮದ. ೧೯೩ ಪ್ರಯೋ) ; ಕೋಪದಿದಿರೊಳೊರ್ವಾನಳಂ ತಣ್ಣತಣ್ಣನೆ (ಹಪ್ಪಳಾ. ೧-೪೧) ; ಮಾವಿನ ಸೊನೆದಂದಲೊಳ್ ನೆನೆದು ತಣ್ಣನೆ ತಣ್ಣನೆ ಬಂದುದಂದು . . . ಮಾರುತಂ (ಶಬ್ದಾನು. ೯೪ ಪ್ರಯೋ). **ತಣ್ಣನೆ ತಣಿ, ದಣ್ಣನೆ ದಣಿ**=ಸಂಪೂರ್ಣವಾಗಿ ತೃಪ್ತಿಯನ್ನು ಹೊಂದು : ನಾಳಿಕೇರೀಫಳಾಮೃತಾಸ್ವಾದದ ತಣ್ಣನೆ ತಣಿದು (ಆದಿಪು. ೧೧-೬೧) ; ಕಣ್ ತಣ್ಣನೆ ತಣಿವಿನಮೊಲ್ದು ನೋಡಿ (ಸಮಪ. ೧-೦೦೪) ; ತಣ್ಣನೆ ತಣಿದಿರೆ ಬನದೊಳ್ ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ (ಕಾವ್ಯಾವ. ೨೨೨) ; ನಡುಹಗಲಿಯದಿಂದೆಸೆವ ಸಿರಿಯ ನಡೆನೋಡಿ ದಣ್ಣನೆ ದಣಿವ ಕಾಲದೊಳು (ಧಾಪಚಂ. ೯-೧೫). **ತಣ್ಣನೆಯವನು** = ತಂಪಾಗಿರುವವನು ; ಚಂದ್ರ : ಬಂದನು ಸೋಮನು ಸೊದೆವನಿ ಸೋನೆಯ ಸಿಂಪಿಸಿ ತಣ್ಣನೆಯವನು (ಇಂಚಾಪ. ೧೧೧-೩೪). [ ತಣ್₂ + – ಅನೆ₁ ]

**ತಣ್ಣನೆಯ, ತಣ್ಣನ್ನ** (ಗು). ೧. ತಂಪಾದ ; ತಣ್ಣಗೆ ಇರುವ : ತಣ್ಣನೆಯ ಗಾಳಿ ಬೀಸುತ್ತಿದೆ (ರೂಢಿ). ೨. ಪ್ರಶಾಂತವಾದ : ಗಿಡಮರಗಳು, ಹುಲ್ಲು, ತೊಳೆದ ಹಸಿರುಬಣ್ಣವಾಗಿ ತಣ್ಣನೆಯ ನಗು ನಗುತ್ತಿವೆ (ಚಿತಂಬಾ. ೧). **ತಣ್ಣನ್ನ** : ೧. "ತಣ್ಣುಳಲು – ತಣ್ಣನ್ನ ಉಸುಬು" (ಗಂಗಾಮ. ೧೯೭). [ ತಣ್₂ + – ಅನೆಯ₁ ]

**ತಣ್ಣನ್ನ** 'ತಣ್ಣನೆಯ' ನೋ.

**ತಣ್ಣಲೆ** (ಕ್ರಿ). ತಂಪನ್ನುಂಟುಮಾಡು ; ತಂಪನ್ನು ಹರಡು : ತಣ್ಣ[ಪಾಠಾಂ. ಣ್ಣ]ಲೆವ ಕೊಳಕೈವಂದವಾಳಿನಂ ಪುಳಿನಂ ನಳಿನಂ ನಿಜಾರ್ತಿಯಂ ನೆಲೆವಿಡಿ [ಪಾಠಾಂ. ಗೆಲೆವಡೆ]ಯಲ್ ಬಳಿಕ್ಕವಳಟಲ್ದು ಬಟಲ್ದು ತೊಟಲ್ದು ಜಾನಿಪಳ್ (ಜಗಪಿ. ೧೧-೨೩) ; ಅವಳ ಬಿಸುಸುಯ್ಯ ಬೆಂಕೆಯೊಳ್ ಬೆರಸಿದನಿತಟಿಂಳೆ ತಣ್ಣ[ಪಾಠಾಂ. ಣ್ಣ]ಲೆವ ತೆಂಗಾಳಿಯುಂ ನಂಜಿನ ಧಾಳಿಯೆನಿಸಿ (ವರ್ಧಪು. ೪-೫೮ ಪ) : ಅಲರ್ವಂಡಂ ಮೊಗೆದು ತಳಿಯುತಿರೆ ತಣ್ಣಲರ್ಕೆಲದ ಪರಿಕಾಲ್ಗಳಿಂ ತಣ್ಣ[ಪಾಠಾಂ. ಣ್ಣ]ಲೆವೆಳವಸಲೆಗಳನೆಳಸಿ ಸುಟಿವೆಳೆಯುವಳಂ (ವರ್ಧಪು. ೪-೭೫). 'ತಣ್ಮಲೆ' ಪರಾ. [ ತಣ್₂ + ಅಲೆ₁ ]

**ತಣ್ಣಲೆಯಿಸು** (ಕ್ರಿ). ತಣಿಸು ; ತಂಪನ್ನುಂಟುಮಾಡು : ನಿಜಕೀರ್ತಿ ಬಂಧುರ ಸುಧಾವರ್ಷದಿಂ ಧರೆಯ ತಣ್ಣಲ[ಲೆ]ಯಿಸಿದನಾ ದಿಳೀಪಂ (ಕುಮುರಾ. ೧-೭೪). [ ತಣ್ಣಲೆ + – ಇಸು₃ ]

**ತಣ್ಣಸ, ತಣ್ಣಸು** (ನಾ). ೧. ತಂಪು ; ಶೈತ್ಯ : "ತಣ್ಣಸಮೆನೆ ಶೈತ್ಯಂ" (ಚತುನಿ. ೨೮) ; ಅರಲ್ದನೇಕ ಕೋಕನದವನಂಗಳೊಳ್ ಸುಟಿದು ತಣ್ಣ[ಪಾಠಾಂ. ನ್ನ]ಸಮಾಗದೆ ಕೂಡೆ ಬಂದ ಮಾವಿನಪೊಸಪೂವಿನೊಳ್ ಪೊರೆದು ಪೊಣ್ಮದ[ಕ]ಂಪು ಮೊಗಂಗಳಂ ಚಳಿಲ್ಲನೆ ಕೊಳೆ ಪೊಯ್ಕೆ ತೀಡಿದುದು ತೆಂಕಣಗಾಳಿ ವಸಂತಮಾಸದೊಳ್ (ಪಂಪಭಾ. ೫-೩೪) ; ಪೊದಟ್ದ ಕಣ್ಪನಿಯ ಬಾನಲ ತಣ್ಣಸದೊಳ್ ಪಗಿಲ್ತು ಪಾವಸೆಗೊಳೆ ಕಾರ ತಂದಲೊಳಗುಂದಲೆ ಯಾಗಿರೆ ನಟ್ಟು ಸೋರ್ವ ಪಾಳ್ವಸದಿಯ ಪೆಣ್ಣ ದೋಹದಪೊಲೊಪ್ಪಿದರ್

(ಶಾಂತಿಪು. ೮-೮೮) ; ಸೊಗಯಿಸುವ ಸಕ್ಕರೆಗಳೆಳನೀರ ಕಾಯಿದಿಳುಪಿ ತಣ್ಣಸವಾದ ತಾಣದೊಳಗಿರಿಸಿ (ಸೂಶಶಾ. ೨-೩೦) : ಬೆಂಗೆ ತಣ್ಣಸವೋಱಲೆಚ್ಚತ್ತು (ಚಲಪು. ೪೬-೨೨) ; ರೋಷಾಗ್ನಿ ಕರ್ಣನ ಸಿರಿವೊಗಮಂ ನೋಡಿದ ಮಾತ್ರದೊಳೆ ತಣ್ಣಸಮನೊಂದಿ ನಲ್ಮೆಯುಂಟಾಗುವುದು (ಭಾರಶಾಂ. ೧-೬). ೨. ಒದ್ದೆ; ಆರ್ದ್ರವಾದುದು : 'ತಣ್ಣಸಗೊಳ್', 'ತಣ್ಣಸವಸ್ತ್ರ' ಪರಾ. ೩. ತೃಪ್ತಿ ; ಸಮಾಧಾನ; ಸಂತುಷ್ಟಿ : ಪುಣ್ಣಮೆಯಾದುದು ಮುಖಚಂದ್ರಮಂಡಲ ತಣ್ಣಸವೆದೆಯೊಳಾದರಿಸೆ ಕಣ್ಣಱ ಯ ದೊ ಡೇ ನು ಕರುಳ್ಗಳ್ಬಲ್ದುದೆಂಬಂತೆ ಚಣ್ಣನ ತಾಯಿ ನೋಡಿದಳು (ಪ್ರಭುಲೀಶತ. ೧೩-೨೫) : ಹಣ್ಣದುತ್ಸಾಹವಮಂ ಕೇಳ್ದು ತನ್ನೊಡಲೊಳಗೆ ತಣ್ಣಸಂ ತಳ್ದು ಬಹ ನಿನ್ನ ನಿಜಮಾತೆಯಂ ಕಣ್ಣಾರೆ ಕಾಣ್ಬೆನೆಂತು (ಕೃಮಿಭಾ. ೧೩-೫೭). ತಣ್ಣಸು : ೧. 'ತಣ್ಣಸುವುಟ್ಟು' ಪರಾ. ೨. ಚಮರೀಮೃಗಂಗಳ ಸಾರಣೆಯೊತ್ತುಗೊಂಡು ನೆಲನ ತಣ್ಣಸಾಱ ತಮ್ಮ ಮೊಗದ ನರೆನವಿರಿನಂದ್ದುತೆ ಪೋಪ ಗಂಡುಗರಡಿಗಳಿಂ (ರಾಮಾಶ್ವ. ೪೩-೨೬). [<ತಣ್$_2$./ತುಳು. ತಣಸ್, ತನಸ್]

ತಣ್ಣಸಂದೋರು 'ತಣ್ಣಸಂದೋಱು' ನೋ.

ತಣ್ಣಸಂದೋಱು, ತಣ್ಣಸಂದೋರು, ತಣ್ಣಸದೋಱು (ಕ್ರಿ). ತಂಪುಂಟಾಗು ; ಶೀತವಾಗು : ಮೈಗಳ್ಗೆ ತಣ್ಣಸಂದೋ[ಪಾಠಾಂ. ತೋ] ಱಲಾ ಕೊಳದಿಂದೆ ಪೊಱಮಟ್ಟರು (ಕೃಮಿಭಾ. ೩೦-೧೨). ತಣ್ಣಸಂದೋರು: ಮೈಯೆಲ್ಲ ತಣ್ಣಸಂದೋರಿ ಮತಿಗೆಟ್ಟು ಕಾರುವುದುಂ (ಸಕಶ್ವ. ೧೪೯). ತಣ್ಣಸದೋಱು: ಒಸರಲಾ ತಂಗಲ್ಲು ಕರಗದ ಜಲ ತಣ್ಣಸದೋಱೆ ಶ್ರಮವಡಗಿಪುದು (ಕಂಜನವಿ. ೬-೬೬). [ತಣ್ಣಸ + ತೋಱು]

ತಣ್ಣಸಂಬಡೆ (ಕ್ರಿ). ತಂಪಾಗು ; ಶೈತ್ಯವನ್ನು ಹೊಂದು : ಹಿಮದಿಂದ ತಣ್ಣಸಂಬಡೆದಿರ್ದ ಮಾಗಿಯಂ ಕ್ರಮದಿಂದೆ ಜಾಱಿಸಿ (ಕೃಮಿಭಾ. ೩೦-೧೬). [ತಣ್ಣಸ + ಪಡೆ$_1$]

ತಣ್ಣಸಗದಿರ್ 'ತಣ್ಣಸಗೆಯ್' ನೋ.

ತಣ್ಣಸಗಯ್ಯ 'ತಣ್ಣಸಗೆಯ್ಯ' ನೋ.

ತಣ್ಣಸಗೆಯ್, ತಣ್ಣಸಗಯ್ (ನಾ). ತಂಪಾದ ಕಿರಣ ; ಶೀತಲವಾದ ಕಿರಣ : 'ತಣ್ಣಸಗೆಯ್ಯ' ಪರಾ. ತಣ್ಣಸಗಯ್ : 'ತಣ್ಣಸಗಯ್ಯ' ಪರಾ. [ತಣ್ಣಸ + ಕೆಯ್$_2$]

ತಣ್ಣಸಗೆಯ್ಯ, ತಣ್ಣಸಗಯ್ಯ (ನಾ). ತಂಪಾದ ಕಿರಣಗಳುಳ್ಳವನು ; ಚಂದ್ರ : 'ತಣ್ಣಸಗೆಯ್ಯವಟ್ಟು' ಪರಾ. ತಣ್ಣಸಗಯ್ಯ : ಬಿಸುಗಯ್ಯಂ [ಪಾಠಾಂ. ಮ್ಯಂ]ತಣ್ಣಸಗಯ್ಯಂ[ಪಾಠಾಂ. ಮ್ಯಂ]ಪೊಸ ಕಿಸುಬಿಸುಮಯ್ಯಂ ಕಣ್ಣಾದಂ (ಉದ್ಭಶೇ. ೧-೨). [ತಣ್ಣಸಗೆಯ್ + -ಅ$_7$]

ತಣ್ಣಸಗೆಯ್ಯವಟ್ಟು (ನಾ). ಚಂದ್ರಬಿಂಬ; ಚಂದ್ರಮಂಡಲ: ತಣ್ಣಸಗೆಯ್ಯವಟ್ಟನವಮರ್ದಾನನವೇಳಿಸೆ . . . ನಡೆದರ್ಪುಳಿಂದಿಯರ್ (ಉದ್ಭಟ. ೨-೩೩). [ತಣ್ಣಸಗೆಯ್ಯ + ಬಟ್ಟು$_1$ (<ಬಟ್ಟ$_1$)]

ತಣ್ಣಸಗೊಳ್, ತಣ್ಣಸುಗೊಳ್ (ಕ್ರಿ). ೧. ತಣ್ಣಗಾಗು : ತಂಪಾಗು. ೨. ಒದ್ದೆಯಾಗು ; ತೇವವಾಗು : ಒಸರ್ವ ಬೆರಲ ಬೆಮರ್ವನಿಯಿಂ ತಣ್ಣಸಗೊಂಡ ತಂತಿಗಳನಾಱಿಸುವರ್ ಬಿಸುಸುಯ್ದು ಕಿನ್ನರರ್ ಬೀಣೆಗಳಂ (ಲೀಲಾವ. ೯-೩೦). ತಣ್ಣಸುಗೊಳ್ : ೧. ಇನಶಶಿಗಳ್ ಬೆಳಗದಿರೆ ಕಿಚ್ಚು ತಣ್ಣಸುಗೊಳೆ (ಪುಣ್ಯಾಸ್ರ. ೮-೩೯). [ತಣ್ಣಸ + ಕೊಳ್$_1$]

ತಣ್ಣಸದಳೆ (ಕ್ರಿ). = ತಣ್ಣಸಂಬಡೆ : ಪುಳಕಾಂಬುವಿನಿಂದ ತನುಲತೆ ತಣ್ಣಸದಳೆಯೆ ನಿದ್ರಾಂಗನೆ ಸರಿಯೆ (ಕಂಜನವಿ. ೯-೧೯೭). [ತಣ್ಣಸ + ತಳೆ$_1$]

ತಣ್ಣಸದೋಱು 'ತಣ್ಣಸಂದೋಱು' ನೋ.

ತಣ್ಣಸವಸ್ತ್ರ (ನಾ). ಒದ್ದೆಬಟ್ಟೆ ; ನೆನೆದ ವಸ್ತ್ರ : ಕಳೆದು ತಣ್ಣಸವಸ್ತ್ರಗಳ ಚೀನಾಂಬರಗಳನುಟ್ಟು ಸತಿಯರೊಪ್ಪಿದರು (ಕಂಜನವಿ. ೨೫-೧೩೪). [ತಣ್ಣಸ + ವಸ್ತ್ರ]

ತಣ್ಣಸವಿಡಿ (ಕ್ರಿ). ತಂಪು ಹಿಡಿ; ತಣ್ಣಗಾಗು : ಒಡನಾಗ ಜಲಕೇಳಿಯೊಳಗೆ ಮೈ ತಣ್ಣಸವಿಡಿಯಲು ಭರದೊಳಗೈದಿ ತಡಿವೆಟ್ಟಿ . . . ಒಪ್ಪಿದರು ಚಲುವೆಯರಂ (ಕಂಜನವಿ. ೨೫-೦೩೦). [ತಣ್ಣಸ + ಪಿಡಿ$_1$]

ತಣ್ಣಸವೆಱು (ಕ್ರಿ). = ತಣ್ಣಸಂಬಡೆ : ಉಡುವಸನಂಗಳು ತೋಯ್ದು . . . ಕುಡಿತೆಗಣ್ಣಬರೆಯರುಗಳು ತಣ್ಣಸವೆತ್ತು ನಡುಗಿದರ್ (ಪ್ರಭುಲೀಶತ. ೦೪-೯೧). [ತಣ್ಣಸ + ಪೆಱು$_1$]

ತಣ್ಣಸಿಗ (ನಾ). ೧. ತಂಪಾದವನು. ೨. ಜಡಸ್ವಭಾವದವನು; ಆಲಸ್ಯಸ್ವಭಾವದವನು; ಆಲಸಿಗ: ನ ಶೀತಲಃ-ತಣ್ಣಸಿಗನಲ್ಲದೊಂ (ಆಲಸ್ಯನು) (ನೀತಿವಾ. ೧೦-೩೩). [ತಣ್ಣಸ + -ಇಗ]

ತಣ್ಣಸು 'ತಣ್ಣಸ' ನೋ.

ತಣ್ಣಸುಗೊಳ್ 'ತಣ್ಣಸಗೊಳ್' ನೋ.

ತಣ್ಣಸುವುಟ್ಟು (ಕ್ರಿ). ತಂಪುಂಟಾಗು ; ಶೈತ್ಯ ಒದಗು : ತಣ್ಣಸುವುಟ್ಟೆ ಬೆಟ್ಟವೇಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ (ಶಂಭಾಮಾ. ೬-೧೩೯). [ತಣ್ಣಸು (<ತಣ್ಣಸ) + ಪುಟ್ಟು$_1$]

ತಣ್ಣೆ, ಥಣ್ಣೆ (ನಾ). ನೀರು ; ಜಲ : ನೊಂದು ಬಾಯಾಱ ತಣ್ಣೀರ್ ತಣ್ಣೆ[ಪಾಠಾಂ. ನ್ನಿಯೆ]ಎನುತವಿರೆ (ಚಂಡೀರ. ರೇ. ೨೫೦-೧೬). ಥಣ್ಣೆ: ಥಣ್ಣೆಯೊಳಗೆ ಮುಳುಗಿದರೇನು (ಚಿಡಾವ. ೦೩೯-೧).

[ದೇ.॥ ತಮಿ. ಮಲ. ತಣ್ಣ]

ತಣ್ಣೆತು 'ತಣ್ಣೆತ್ತು' ನೋ.

ತಣ್ಣೆತ್ತು, ತಣ್ಣೆತು (ನಾ). ೧. ತಂಪಾದುದು; ತಂಪು; ಶೈತ್ಯ : "ತಣ್ಣೆತ್ತು ಶೈತ್ಯಮಕ್ಕುಂ" (ಕಶಿರ. ೪೩). (ಗು). ೨. ತಂಪಾದ ; ತಣ್ಣನೆಯ ; ಶೀತಲವಾದ : ಕೂರಿತ್ತು; ಉದ್ದಿತ್ತು; ನುಣ್ಣಿತ್ತು; ತಣ್ಣೆತ್ತು; ಬಿಣ್ಣಿತ್ತು (ಶಮದ. ೭೭ ಪ್ರಯೋ). ತಣ್ಣೆತು : ೧. " ಕೋಡುಂ ಕೊಟ್ಟಮುಂ ತಣ್ಣೆತೆಂದುಂ ಶೈತ್ಯಕ್ಕೆ ನಾಮಂ " (ಅಭ್ಯಿಕ್ಕ. ೨೨) ; " ಕುಳಿರು ತಣ್ಣೆತು ಕೋಡು ಕೊಟ್ಟವಿಂತಿವು ಶೈತ್ಯಕಳವಟ್ಟ ನಾಮವಕ್ಕುಂ " (ಶಬ್ದಮಂ. ೩೭) ; ವಡಬಶಿಖಿ ತಣ್ಣತನೆ ಕೋಪವಮಂ ತಾಳುವರು (ಸಿದ್ಧರಾ. ೧-೨೦); ಉರಿವ ಬೆಂಕಿಯು ತಣ್ಣತಾಗಲಿ (ರಾಮಾಸಂ. ೫-೪-೨೬).

ತಣ್ಣದುವು (ಬಹುವ) : ಚಂದ್ರಕರಂಗಳಿಂದು ತಣ್ಣದುವರ್ದೆಗಳ್ಕೆ (ಷಂಪಭಾ. ೫-೦೮). ತಣ್ಣದಂ, ತಣ್ಣದೊಂ = ತಣ್ಣಗೆ ಇರುವವನು ; ತಂಪಾದವನು : ಖರಕರನುಷ್ಣಮಂ ತೊಱೆದು ತಣ್ಣದನಪ್ಪೊಡವಿಂದು ತಣ್ಣನಚ್ಚರಿಯನೆ ಬಿಟ್ಟು ತೀವ್ರಕರನಪ್ಪೊಡಂ (ಧರ್ಮಾಮೃ. ೫-೧೯೮) : ಅತಿದೀಪ್ತಬೋಧಮಯನಾಗಿ ತಣ್ಣದೊಂ ಜನನಿಯುದರದೊಳ್ ರತ್ನಸ್ತ್ರೀ ಪ್ರತಿಕೃತಿಯೊಳರ್ಕಬಿಂಬ ಪ್ರತಿಬಿಂಬಂ ನೆಲಸಿ ಪೀಡೆಯಂ ಮಾಡುಗುಮೇ (ಶಾಂತಿಪು. ೯-೨೧೪). ತಣ್ಣದೆಯಾಗು=ತಂಪಾದವನಾಗು: ಮೆಚ್ಚಿ ಬರವನಗ್ನಿದೇವಂ ಬೇಡಿಕೊಳ್ಳಿಮೆಂದೊಡೆಮ್ಮನ್ವಯಕ್ಕೆ ನೀನ್ ತಣ್ಣದೆಯಾಗೆಂದು ಬೇಡುವುದುಂ (ಪಂಪಭಾ. ೫-೧೦೦ ವ).

[<ತಣ್$_2$]

ತಣ್ಣರ್ಪದಲೆ (ನಾ). ಒಂದು ಪ್ರದೇಶದ ಹೆಸರು : ಅನ್ತೆ ಬಂದು ತಣ್ಣರ್ಪದಲೆಯ ಪುಣುಸೆಯ ವಾಯವ್ಯನಾ ದೆಸೆಗೆ ಸೀಮೆನೊಕ್ಕಿಯೊಟ್ಟಿಯ (ಎಕ. IX (8), ಬೆಂಗಳೂ. ೧೩೦-೪೨ ; 825). [ ? ]

ತಣ್ಣಸು 'ತಣಸು$_1$' ನೋ.

ತಣ್ಣಱ್ (ಕ್ರಿ). (ತೆಳ್ಳಗಾಗುವಂತೆ) ಒತ್ತು (?) : ನುಣ್ಣನೆಯ ಹಿಟ್ಟನಂಗಯ್ಯ ಸರಿದಟ್ಟದೊಳು ತಣ್ಣಱದು[ಪಾಠಾಂ. ತಣಿದು]ಮಡಗಿಯೆಮ್ಮೆಯ ಬೆಣ್ಣೆಯಂ ಕಾಸಿ ಬೇಯಿಸೆ ಸಮುದ್ರಫೇನ (ಸೂಶಶಾ. ೧-೨೩). "ತಟ್ಟು" (ಸೂಶಶಾ. ಟೀಕೆ). 'ಲತೆಯಿಱ' ಪರಾ. [ P ಇದು 'ಸಣ್ಣಱ್' ಎಂಬುದರ ಅಪಲಿಖಿತವಿರಬಹುದು ]

**ತಣ್ಣೀರ್, ತಣ್ಣೀರು** (ನಾ). (ತಂಪಾದ) ನೀರು : ಮುನ್ನೀರ್ ಬೆನ್ನೀರನೆ ಬೆರಸಲಣ್ಣ ತಣ್ಣೀರೊಳವೇ (ಪಂರಾಮಾ. ೯-೯೨); ತಣ್ಣೆಲರ್, ತಣ್ಣೀರ್ (ಭಾಷಾಭೂ. ೧೧೪ ಉದಾ) : ತಣ್ಣೀರ ಕಣಿಕೆಯು ಹೊತ್ತು (ಗುಹ್ಯ ಮಂ. ೧೫-೧೮೭). **ತಣ್ಣೀರು** : ತನಿವಾಲೊಳುಕ್ಕರಿಸಿದಕ್ಕಿ ತಣ್ಣೀರೊಳಗೆ ನೆನೆದಕ್ಕಿ ಯಾವನು ಸರಿಗೂಡಿ ಹಾಲೊಳಗರೆದು (ಸೂ ಶ ಶಾ. ೧-೬೦) : ತಣ್ಣೀರು ಬೇಸಿಗ್ಗೆ ಗುಣ ತೋಚುತಲ್ಲ (ಪುರಂದ. ೩-೫೭-೫) : ಸರೋಜಪತ್ರಿಕೆಯ ಪೊಟ್ಟಣದಿ ರಾಜಾವ್ಯುತವೆನೆ ತಣ್ಣೀರ ತಂದಿತ್ತರು (ವೋಹತ. ೧೯-೫೩) : ತಣ್ಣೀರು ಆದರೂ ಪುಣ್ಯದಿಂದ ದೊರಕಬೇಕು (ಗಾದೆ).

ತಣ್ಣೀರವನು=(ದೇವಸ್ಥಾನಕ್ಕೆ) ನೀರನ್ನು ತರುವ ಕಾಯಕದವನು (?) : ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾರಾಯಣ ಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮೂಹಗಳೂ . . . ತಿರುಪಣಿ ತಿರುವಡಿ ತಣ್ಣೀರವರು ನಾಲ್ವತ್ತೆಂಟು ಜನಂಗಳು (ಎಕ. II, ೩೪೪-೧೨ : 1368). [ ತಣ್$_2$ + ನೀರ್$_1$ ]

**ತಣ್ಣೀರು** 'ತಣ್ಣೀರ್' ನೋ.

**ತಣ್ಣೀರೆರಚು** (ಕ್ರಿ). ೧.=ತಣ್ಣೀರೆರೆ. ೨. (ಆಲಂ) ನಿರುತ್ಸಾಹಗೊಳಿಸು: ಲಲಿತ ಬರುವುದಿಲ್ಲವೆಂದಾಗ ಅವರ ಉತ್ಸಾಹದ ಮೇಲೆ ತಣ್ಣೀರೆರಚಿದ ಹಾಗಾಯಿತು (ರೂಪಸ. ೩೩) : ನೆಕ್ಲದೋವನ ಉತ್ಸಾಹಕ್ಕೆ ತಣ್ಣೀರೆರಚಲು ಪ್ರಯತ್ನಿಸುತ್ತಿರುವಂತೆ ಅವನು ಮೌನವಾಗಿ ಹೊಗೆಯೆಳೆಯುತ್ತ ಕುಳಿತಿದ್ದನು (ಪುನರು. ೫೭೬). ☞ ಇದು ಇಂಗ್ಲಿಷಿನ 'To throw cold water on' ಎಂಬ ಪದಪುಂಜದ ಅನುವಾದವಿರಬಹುದು.
[ ತಣ್ಣೀರು (<ತಣ್ಣೀರ್) + ಎರಚು (<ಎಱಚು) ]

**ತಣ್ಣೀರೆರೆ** (ಕ್ರಿ). ೧. ತಣ್ಣೀರು ಸುರಿ. ೨. (ಆಲಂ) ಸಮಾಧಾನಮಾಡು: ಯುವರಾಜರೆದೆಯ ಸುಡುನೀರಿಗೆ ಒಂದಿಷ್ಟು ತಣ್ಣೀರೆರೆದಿರುವಂತೆ ತೋರಿಸಿ ಕೊಂಡಿದ್ದಾರೆ (ವೀರಬಂ. ೭೫).
[ ತಣ್ಣೀರು (<ತಣ್ಣೀರ್) + ಎರ್$_1$ (<ಎಱೆ$_1$) ]

**ತಣ್ಣೀರ್ದಳಿ** (ಕ್ರಿ). ತಣ್ಣೀರನ್ನು ಚಿಮುಕಿಸು,-ಸಿಂಪಡಿಸು : ಬಳಿಕ ಸೌಮಿತ್ರಿ ಮೞುಗಿ ತಣ್ಣೀರ್ದಳಿದು ಪತ್ರದೊಳ್ಕೊಡವಿಡಿದು . . . ರೋದಿಸಿದನು (ಕೃ ಮಿಥಾ. ೧೯-೧೭). [ ತಣ್ಣೀರ್ + ತಳಿ$_1$ ]

**ತಣ್ಣುಣುಕ** (ನಾ). ಒಂದು ಬಗೆಯ ಗಿಡ : ತಣ್ಣುಣುಕ, ಅಂಡಿಲು (ಮೃಜಿಗಿ. ೪೯-೯೮೬). [ ? ]

**ತಣ್ಣುಸಿರು** (ನಾ). ತಣ್ಣನೆಯ ನಿಶ್ವಾಸ : ಉತ್ಸಾಹ ಅಥವಾ ಕಾವು ಇಲ್ಲದ ಉಸಿರು : ಅವಳು ತಿರಸ್ಕಾರದ ತಣ್ಣುಸಿರಿನೊಡನೆಂದಳು (ನಿರಾಫ. ೩೦); ನಿನ ಮುಸುಕ ಕತ್ತಲೀಯೊಳಗ ಹೊರಳಿ ಬೆಳ್ಳಿಳಗ ಬಿಡತ ತಣ್ಣುಸಿರು (ನಾದಲೀ. ೫೫-೯). [ ತಣ್$_2$ + ಉಸಿರು$_2$ (<ಉಸಿರ್$_2$) ]

**ತಣ್ಣೆ** (ನಾ). (ಕರಾ) ತಂಗಳನ್ನ ; ನೀರುಹಾಕಿ ಇರಿಸಿದ ತಂಗಳನ್ನ : 'ತಣ್ಣೆಮಡೆ' ಪರಾ. [ ←ತುಳು. ತ್ಣಾಣ, ತ್ಣಾನ ]

**ತಣ್ಣೆಮಡೆ** (ನಾ). (ಕರಾ) ತಂಗಳು ; ತಂಗಳನ್ನ : ಅದಕೂ ಇದಕೂ ಬೀಗ, ತಣ್ಣೆಮಡೆಗೂ ಬೀಗ (ರೂಢಿ). [ ತಣ್ಣೆ + ಮಡೆ$_1$ ]

**ತಣ್ಣೆರಲ್** 'ತಣ್ಣೆಲರ್' ನೋ.

**ತಣ್ಣೆಲರ್, ತಣ್ಣೆರಲ್** (ನಾ). ತಂಪಾದ ಗಾಳಿ ; ತಂಗಾಳಿ : ಅಲರಿಂ ತುಂಬಿಗಳಿಂ ತಣ್ಣೆಲರಿಂ ತುಂಬಿದ ತಿಳಿಗೊಳದಿನೆಸೆವ ಬನಮಂ ಪೊಕ್ಕಳ್ (ಶಂಪರಿಭಾ. ೫-೨); ತಣ್ಣೆಲರೂದುತ್ತಿರಲಾನದರ್ಕೆಳಸಿ ಪಟ್ಟಿರ್ದಂ ಶಿಲಾಪಟ್ಟ ದೊಳ್ (ಕಾದಂಉ. ೫೭೨) : ಮೆಲ್ಲನೆ ತೊನೆಯುತ್ತುಮಿರ್ಪಲೆಯ ತಣ್ಣೆಲರಿಂ ಬೆಮರಾಱೆ . . . ಸುಖಮಂ ಪಥಿಕರ್ ಪಡೆವರ್ (ಚಂದ್ರಪು. ೩-೧೫); ಬಣ್ಣವಳಿಯದ ಪೂಗಳಂ ಕೊಯ್ದು ಬೆಂಡಾಗಿ ತಣ್ಣೆಲರ್ಗೊಡ್ಡಿ ಮೈ ಬೆಮರನಾಱಿಸಿಕೊಂಡು (ಕೃ ಮಿಥಾ. ೮-೧೮). **ತಣ್ಣೆರಲ್** : ತಣ್ಣೆರಲೆಸಗೆ ಕುಸುಮವರ್ಷಂ ದೊರೆಕೊಳೆ ಸಾಶ್ಚರ್ಯಮಾಯ್ತು ಪಂಚಾಶ್ಚರ್ಯಂ (ಆದಿಪು. ೭-೩) ; ಪತ್ರಿದೆಸೆಟ್ಕೊನೆ ಬಿರ್ಚಿ ತಣ್ಣೆರಲ್ಗೆಡೆದೆಱವಾಗೆ ಪೊತ್ಕು ಸುಚಿಯುತ್ತಿರೆ (ಚಂದ್ರಪು. ೮-೧೦೩); ಪೊಸ ಬೆಳೆಯಿಂ ಭೂಮಿ ಭೂಮಿಜದಿಂ ತಣ್ಣೆರಲಿಂ ಮಾರ್ಗಂ . . . ಎಸೆಗುಂ ದೇಶದೊಳ್ (ರಾಜಶೇ. ೨-೨೭).
[ ತಣ್$_2$ + ಎಲರ್ ]

**ತಣ್ಣೆಲೆ** (ನಾ) : ೧. ತಣ್ಣನೆಯ ಎಲೆ ; ಹಸಿರೆಲೆ : ತಿಕ್ಕಿ ತಣ್ಣೆಲೆಗಳಿಂ ಕಣ್ಣಳನದೊಬ್ಬನಾ ಕಕ್ಕುಗುರಿನೇಗರ್ಗಳಂ ಸುಯ್ವುಟ್ಟು ಸುಗಿದಂ (ಕಾಲೂರ. ೯೬-೧೯೬). ೨. ತಣ್ಣನೆಯ(ಹೂವಿನ) ಎಸಳು,-ದಳ: ಅರಲ್ದ ತಾವರೆಯ ತಣ್ಣೆಲೆಯ ಪಲಗೆಗಟ್ಟ[ಟ್ಟ]ನೋವರಿಗಳೊಳಗಣ ಕಪ್ಪುರ ವಳಿಕೆನಳವಟ್ಟ ಜಗಲಿಗಳ ಮೇಲೆ ಪಸರಿಸಿದ ಕುಸುಮದೆಸಟ ಪಸೆಗಳೊಳಂ (ಚಂದ್ರಪು. ೭-೯೫ ವ). [ ತಣ್$_2$ + ಎಲೆ$_1$ ]

**ತಣ್ಣೆಳಲ್** 'ತಣ್ಣೆಟಲ್' ನೋ.

**ತಣ್ಣೆಟಲ್, ತಣುನೆಳಲು, ತಣ್ಣೆಳಲ್**(ನಾ). ತಂಪಾದ ನೆಳಲು,-ಛಾಯೆ: ಪಿಂಛಾತಪತ್ರಂ ಪುದಿದೆತ್ತಂ ತಣ್ಣೆಟಲ್ಮಾಡುವುದು ಗಡಂ (ಪಂಪಭಾ. ೧೩-೯೮); ರಕ್ತಾಶೋಕ ತರುವಿನ ತಣ್ಣೆಟಲೊಳ್ (ಕಾದಂಪೂ. ೨೪೦); ನಿನ್ನ ಬೆಳ್ಗೊಡೆಯ ತಣ್ಣೆಟಲೊಳ್ ನಿಲಲಾರೊ ಯೋಗ್ಯರ್ (ಪಂರಾಮಾ. ೧೪-೧೯೪) ; ಕಲ್ಪ ಪಾದಪದ ತಣ್ಣೆಟಲಲ್ಲಿ ವಸಂತಲಕ್ಷ್ಮಿವೋಲ್ ನೆಲಸಿದ ಯಕ್ಷಿ (ಅರ್ಧನೇ. ೧-೯) : ತಣ್ + ನೆಟಲ್ = ತಣ್ಣೆಟಲ್ (ಶಮದ. ೧೫೪ ಪ್ರಯೋ). **ತಣುನೆಳಲು** : ತೊಳಪ ಪಲ್ಲವ ಸತ್ತಿಗೆಯ ತಣುನೆಳಲೊಳ್ (ಸಾಳ್ವಭಾ. ೧೯-೭೫). **ತಣ್ಣೆಳಲ್** : ಎತ್ತ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿ (ಗಿರಿಕ. ೦-೧೦೭) ; ಮಲ್ಲಿಕಾರ್ಜುನಂಟಪದ ತಳಿದ ತಣ್ಣೆಳಲ ತಿಳಿಗೊಳನ ಪುಳಿನ ಸ್ಥಳದಿ ದಿವ್ಯಲಿಂಗಂ ಮೆಱೆದುದು (ಸಿದ್ಧರಾ. ೨-೧೫) ; ಮುತ್ತಿನ ಸತ್ತಿಗೆಯ ತಣ್ಣೆಳಲೊಳತ್ತರದಾಲವಟ್ಟದ ಸೊಗಸಿನೊಳಮರ್ದು (ಬಸಪು. ೫-೪೫) ; ತಳಿತ ತಣ್ಣೆಳಲೊಳಗೆ ಹಾಸಿದ ತಳಿರ ಸಿಂಹಾಸನದ ಸುತ್ತಲು (ಕುಮ್ಕಾಅ. ೭೦೫. ೪-೫೦). [ ತ್ವಣ್ + ನೆಟಲ್$_1$ ]

**ತಣ್ಣೆಟಿ** (ನಾ). ತಂಪಾದ ಎಳೆ ; ತಣ್ಣನೆಯ ನೂಲು : ಎಳೆದನಿಸಿರ್ದ ಪಾವಸೆಯ ತಣ್ಣೆಟಿಯಿಂದಮೆ ನೆಯ್ದ ಸೀರೆ . . . ಕಣ್ಗೊಳಿ ನೆಲಸಿರ್ದ ರಲ್ಲಿ ಜಲದೇವಿಯರಂತೆ ವಿಳಾಸಿನೀಜನಂ (ಕಾದಂಉ. ೪೫೯).
[ ತಣ್$_2$ + ಎಟಿ$_2$ ]

**ತಣ್ಣೆಸು** 'ತಣಿಸಂ$_1$' ನೋ.

**ತಣ್ಪೊಡಲ್** (ನಾ). ತಂಪಾದ ಒಡಲು,-ಬಸಿರು; ಪ್ರಸನ್ನವಾದ ಶರೀರ: ತಿಂಗಳ ಬಾಲಸಂ ಪಡೆದ ತಣ್ಪೊಡಲಿಂದಿರಯಿರ್ಪ ತೌರು . . . ಎಂದೆನಿಸಿರ್ದುದಾ ಕಡಲ್ (ಕವಿಚ. III, ೫೨ ಹಾಲಾಸ್ಯಮಾಹಾತ್ಮ್ಯ).
[ ತಣ್$_2$ + ಒಡಲ್ ]

**ತಣ್ಪೊಱಿಗಲ್ಲು** (ನಾ). ತಂಪಾದ ನೀರನ್ನು ಒಸರುವ ಕಲ್ಲು,-ಚಂದ್ರ ಕಾಂತಶಿಲೆ : ತಿಣ್ಣವಾದರೆ ತನ್ನ ತಲೆದೊಱಿಯನು ಮುಕ್ಕಣ್ಣನೀ ಬನ ದೊಳಿಟ್ಟಂತೆ ತಣ್ಪೊಱಿಗಲ್ಲ ಸೋಪಾನದ ಕೊಳ (ಮೋಹತ. ೨೪-೫೫).
[ ತಣ್$_2$ + ಒಱಿಗಲ್ಲು ]

**ತಣ್ಣೋಟ** (ನಾ). ತಂಪಾದ ನೋಟ ; ಪ್ರಸನ್ನತೆಯಿಂದ ಕೂಡಿದ ದೃಷ್ಟಿ: ನಿಮ್ಮೂರ ಹೆಣ್ಣುಗಳ ಕಣ್ಣೋಟ; ತಣ್ಣೋಟ ಕರ್ಪು, ಬಲು ಕರ್ಪು (ಹೊಂಗಳು. ೧೫-೧೬).
[ ತಣ್$_2$ + ನೋಟ ]

**ತಣ್ಪೊಡವು** (ನಾ). ತಂಪನ್ನುಂಟುಮಾಡುವ ಆಭರಣ; ಮೈಗೆ ತಣ್ಣಗೆ, ಹಿತವಾಗಿರುವ ಒಡವೆ : ಕಂಪಿನೊಳ್ ಪೂರೆದ ವಸಂತದೊಳ್ಮುಗುಳ ತಣ್ಪೊಡವಂ ತುಡಿಸಲ್ಕೊಡರ್ಚಿದರ್ (ಕಾದಂಉ. ೭೮೫).
[ ತಣ್$_2$ + ತೊಡವು ]

**ತಣ್ದಳಿರ್** (ನಾ). ತಣ್ಣನೆಯ ಚಿಗುರು,–ತಳಿರು: ಎಯ್ದೆ ಮುಸುಂಕಿ ನಿಂದ ತಣ್ದಳಿರ್ಗಳಿನೊಪ್ಪಿ ತೋರ್ಪ ಜಲಮಂಟಪದಲ್ಲಿಗೆ ಬಂದನಾ ನೃಪಂ (ಕಾದಂಬ. ೭೫೮). [ ತಣ್$_2$ + ತಳಿರ್$_2$ ]

**ತಣ್ಪಟ್** (ಕ್ರಿ). ತಂಪು ನಾಶವಾಗು ; ಶೈತ್ಯವಿಲ್ಲದಂತಾಗು : ಅತುಳತುಷಾರಜನ್ಮಗೃಹವಿಂತಿದಂ ತಾನೆನಿಪಿಂದುಕಾಂತನಿರ್ಮಿತದೆಸೆದಿರ್ಪ ಸೆಜ್ಜೆವನೆ ತಣ್ಪಟ್ಟಿದುಂ ನೃಪಕಂತುಕಾಯದುದ್ಧತ ವಿರಹಾನಲ ಪ್ರಬಲ ತಾಪಕಳಾಪದೆ ಕಾಯ್ದು ಸಂತತಂ ಹುತವಹನಿರ್ಪ ಸೆಜ್ಜೆವನೆಯಂತೆ ಪೊಲಿರ್ದುದಾ (ಕುಸುಮಾ. ೧೦-೨೦). [ ತಣ್ಪು$_2$ + ಅಟ್$_1$ ]

**ತಣ್ಪಟ್ಟು** 'ತಂಬಿಟ್ಟು$_1$' ನೋ.

**ತಣ್ಪಡಿ, ತಂಪಿಡಿ** (ಕ್ರಿ). ತಂಪಿನಿಂದ ಕೂಡಿರು ; ಶೀತಲದಾಗಿರು : ಪೊಸ ಮಲ್ಲಿಗೆ ಮಲ್ಲಗೆ ಕಂಪು ನಾಱೆ ತಣ್ಪಡಿದೆಲರೂದೆ . . . , ಗುಣಾರ್ಣವಂ ನೆಱೆಯೆ ನಿಟ್ಟಿಸಿದಂ ಬೆಳಗಪ್ಪ ಚಾಪಮಂ (ಪಂಪಭಾ. ೪-೧೧೦). **ತಂಪಿಡಿ** : ಬಿಸಿಮಾಣ್ದ ರವಿಯೊ ತಂಪಿಡಿದಿರದ ಚಂದ್ರಮನೊ . . . ಪೇಳೆಂಬ ಸೌಭರಿಮುನಿಪನು (ಜೈಮಿಭಾ. ೦೦-೧೬). [ ತಣ್ಪು$_1$ + ಇಡಿ$_1$ ]

**ತಣ್ಪಡು** (ಕ್ರಿ). ತಂಪುಂಟುಮಾಡು : ಕಾಳಿಂದೀಜಲದಿಂದಮೇಂ ತೊಳೆದನೋ ತಣ್ಪಟ್ಟನೋ ಕಾರಗಿಲ್ಧೂಳಿಂ ಕತ್ತುರಿಯಿಂದಮಣ್ಪಡಿದನೋ . . . ಎಂಬಾಳಾಪಕ್ಕೆಡೆಯಾಗಿ ಮೂಜಗಮದೇನೊಪ್ಪಿತ್ತೊ ಪೆರ್ಮರ್ಬಿನಿಂ (ಚಳಪಿ. ೬-೧೩). [ ತಣ್ಪು$_2$ + – ಇಡು$_1$ ]

**ತಣ್ಪಿಸು, ತಂಪಿಸು, ತಂಬಿಸು$_1$, ತಂಬೈಸು, ತವಿಸು, ತವ್ಮಿಸು** (ಕ್ರಿ). ೧. ತಂಪುಗೊಳಿಸು ; ತಣ್ಣಗೆಮಾಡು : ತಿಳಿಪೊಸರ ಚೆಲ್ಲುವರ ಸವಿನುಡಿಯ ಹರಕೆಯಿದು ಬೇಗೆಗಳ ತಣ್ಪಿಸುವ ಮಾತು (ನಲ್ಮೆ. ೩೬-೬). **ತಂಪಿಸು** : ೧. ಬಿಸಿಲಿನ ಬೇಗೆಗೆ ತಲೆಯಾನಿಸಿ ತರುವುಂ ಶ್ರಿತರ ತಂಪಿಸು ಪೂಡೆಲೆ ನೆಳಲಿಂ (ಪಾಳಂತ. ೬೩-೧೦೭). ೨. ಆರಿಸು ; ನಂದಿಸು: ಪಾವಕ ಮಹಾಬಾಣಮಂ . . . ತೆಗೆದೆಚ್ಚೊಡವನಂದು ಕೈಗೆಡದೆ ಕರ್ಣಾತ್ಮಜಂ ವಾರುಣಾಸ್ತ್ರಪ್ರಯೋಗದೊಳದಂ ತಂಪಿಸಿದನು (ಜೈಮಿಭಾ. ೪-೩೬); ತನುವ ನಂಡಲೆವ ತಾಪಾಗ್ನಿಯ ರಭಳವ ಪುಳಕಾಂಬುವಿನಿಂದ ತಂಪಿಸು (ಕಂನವಿ. ೯-೦೮೫). **ತಂಬಿಸು$_1$** : ೩. ಆರು ; ತಣ್ಣಗಾಗು : ಬಾಣದ ಮದ್ದನರೆವ ಸಮಯಕೆ ಕಿಚ್ಚು ಮಾಣದೆ ಮನೆಗಳ ಸುಡಲು ಕ್ಷೋಣೇಶ ಸಿದ್ಧರಾಮನ ಪಾದದರಾಣೆಯಿಡಲು ತಂಬಿಸಿತು (ಅಮುಸಾಂ. ೪-೭೩). ೪. ಕೋಪ, ದುಃಖ ಮೊದಲಾದುವನ್ನು ತಗ್ಗಿಸು ; ಸಮಾಧಾನ ಮಾಡು ; ಶಮನಗೊಳಿಸು ; ಶಾಂತಗೊಳಿಸು : ಚೆಂದೊಡಲ ಬೇಗೆಯುವನೇತರದಿ ತಂಬಿಸುವೆಂ (ಸಮ್ಯಕೌ. ೫-೨೨) ; ಆ ಖಗನ ಅತಿಕೋಪವನು ತಂಬಿಸಿ (ನೇಮಿಸಂ. ೧೧-೫೧); ಬಳಲಿದ ಶ್ರಮವನು ತಂಬಿಸುವೆನೆಂದು ಅಳಿದು ರಕ್ಷಕರ ಕಾವಲಿಟ್ಟು (ಚಂದ್ರಹಾ. ೨-೬೪). ೫. ಇಂಗಿಸು; ನಿವಾರಿಸು: ಲಲಿತ ಕರ್ಪೂರ ತಾಂಬೂಲವಮಂ ತಮ್ಮಣಲೊಳಳವಡಿಸಿ ಪುದಿದ ಬೆಮರ್ಮನಿಗಳಂ ತತ್‌ಕ್ಷಣಂ ಕಳನ ದೂಳಿಯೊಳೆ ತಂಬಿಸಿ ಮುಂಚ್ಚಿಯಂ ಬಲಿದು (ಜಲಪು. ೧೬-೩೬). **ತಂಬೈಸು** : ೨. ತುರಗಗಳನೋಡಿಸುತ ನಿಲ್ಲಿಸುತ್ತ ನಿಲ್ಲಿಸುವ ತುರುಬಿ ತಂಬೈಸುವರುವಾಳಿಸಿ ಮುರಿವ ಹೋರುವ ಮೆರೆವ ಕುಣಿಸುವ ಚಪಳಗತಿಗಳಲಿ (ಮೂಲರಾ. ೪-೯). **ತವಿಸು** : ೨. ಅಸ್ತ್ರಗಳು ದೇವಲೋಕಮನ್ನಿಂದು ಸುಡುತ್ತಿದೆ ಬೇಗೆ ಪರಿಹರಿಸುಯೆನಲಿಂದ್ರನಂದನಂ ತವಿಸಿದನು (ತುರಂಗ. ೩೧-೨೯). ೪. ಹೊಂದಿರುವ ದುಃಖವಂ ತಮಿಸಿ (ತುರಂಗ. ೩೪-೬); ಬಳಲಿಕೆಯ ತಮಿಸಿ ಮುಂದುರವಣಿಸಿ (ತುರಂಗ. ೭೩-೧೬). **ತವ್ಮಿಸು** : ೪. ಸೊಗಸಿನಿಂ ಬಸವ ನೀಲಾಂಬಿಕೆಯು ಗುರುವರನ ಹಸುವ ತವ್ಮಿಸುವೆವೆನುತ (ಚೋರಬ. ೯-೭೩); ನೀವೀಗ ಕೋಪವ ತವ್ಮಿಪುದು ತವ್ಮಿಪುದು ಗಾಂಗೇಯಯೆಂದನು ನೋಡಿ ಧರ್ಮಜನು (ಜಿನಭಾ. ೩೯-೫೯).

[ ತಣ್ಪು$_2$ + – ಇಸು$_3$ ]

**ತಣ್ಪು$_1$** 'ತಣಿವು$_1$' ನೋ.

**ತಣ್ಪು$_2$, ತಂಪು$_2$** (ನಾ). ೧. ತಣಿವು ; ಶೈತ್ಯ : "ತಣ್ಪೆಂದು ಶೈತ್ಯಂ" (ಶಶಸಾ. ೨೬-೫೬೮) ; ಕುಡಿಯಲ್ ನೀರುಂಟು ಪದ್ಮಾಕರಾಳಿಗಳೊಳ್ ತಣ್ಪುಗಳುಂಟು ಹೇಮಲತಿಕಾ ಕುಂಜಂಗಳೊಳ್ (ಪಂಪಭಾ. ೬-೩೦) ; ಸಿಂಪಣಿಯ ತಣ್ಪಿನಿಂ ಪೂವಲಿಯ ತಿಣ್ಪಿನಿಂ ಮನಂಗೊಳಿಸುವ ಭವನಾಂಗಣದೊಳವತರಿಸಿ (ಕಾದಂಬ. ೪೬೩): ತಣ್ಪಂ ಬಿಟ್ಟು ಬಿಸಿಲಂ ಕಾಯ್ದು ಪಿತ್ತಾಧಿಕನುಮಂ ಪೋಲ್ವಂ (ಧರ್ಮಾಮೃ. ೮-೫೧) ; ಕಾಲ ತಳಂ ನೆರೆ ತಣ್ಪಾಗಿರೆ ಸರುಜಂ (ಕಲ್ಯಾಕಾ. ೨-೫೩) ; ಅಪ್ಪಿನಿಂ ತಣ್ಪು ಮಲಯಾದ್ರಿಯಿಂ ಮಲಯಜಂ . . . ಪುಟ್ಟುವಂತಿರೆ ಪುಟ್ಟಿದಂ (ಬಸರ. ೧-೧೩೬) ; ಕಂಪಿಸುವ ನುಣ್ಪಿನ ತಣ್ಪ[ಪಾಠಾಂ. ತಂಪಿ]ನಾವೋದಿಸುವ ಸೊಂಪಿನ ಬಿಲ್ವಪತ್ರೆಯ ನಾಗಕೊಯ್ಯೆಂದು (ಬಸಪು. ೧೮-೩೦); ರವಿರುಚಿ ತಣ್ಪನೇಱೆ [ಪಾಠಾಂ. ತಣ್ಣಸೆರೆ] ಕೇತಕಿವನಂ ಸುಳಿಯೇಱೆ (ಸಾಳ್ವಭಾ. ೨೬-೦೮) ; ನಿನ್ನ ತಣ್ಪು ಶಾಂತಿ ಸವಿದು ಶಾಂತಿಗೊಳುವೆನು (ವಿಸೀಗೀ. ೬೫-೧೭). ೨. ತೃಪ್ತಿ; ಸಂತುಷ್ಟಿ; ಸುಖ : ವಜ್ರಮಂ ಮಸೆದಂತೆ ತಣ್ಪು ಮನದೊಳ್ ಪೊಂಪುಳಿಪೋಗೆ (ಶಾಂತಿಪು. ೨-೨೭ ವ). **ತಂಪು$_2$** : ೧. ಪೂಗೊಳಂಗಳೊಳ್ ತೇಂಕಿ ಪಾಱುವ ಪಕ್ಕಿಗಳೆಱಂಕೆ [ವಿಡಿದುದಿರ್ಪ] ತಂಪನೀವ ತುಂತುರ್ಮನಿಯ ತುಱುಗಲಮುಂ (ಕಾದಂಬ. ೫೨೬) ; ಬೇವಿನ ಗೊಟ್ಟೆಯೊಳಿನಿದನರ್ಕನೊಳ್ ತಂಪಂ . . . ಘನಮಾಗಿರಲಱಸಿ ತೊಟಲುವಾತನೆ ಗಾಂಪಂ (ಧರ್ಮಾಮೃ. ೫-೧೬೦) ; ಮನದ ಕೋಪವ ಹೃದಯದಲ್ಲಿಟ್ಟುಕೊಂಡಿಪ್ಪವನ ಅವನ ಪಾದಕ್ಕೆ ಎನ್ನ ನೊಸಲ ತಂಪ ತಂದು ತಳಿವೆ (ಸಿದ್ಧವ. ೪. ೧೦೨-೩೪೪) ; ತೆಗೆದುದಗ್ಗದ ತಂಪು ನದಿ ಸರಸಿಗಳ ತಡಿಯುಲಿ (ಕುಮಾವ್ಯಾ. ೫-೫) ; ದೆಸೆದೆಸೆಗೆ ಬೀರ್ಪ ತನಿಗಂಪಿನಿಂ ತಂಪಿನಿಂ . . . ಆ ಕೊಳಂ ಕಣ್ಗೆಸೆದುದು (ಜೈಮಿಭಾ. ೧೫-೯). ೨. ಹೆತ್ತ ನಿನ್ನೊಡಲಿಂಗೆ ತಂಪಿನ ತೆತ್ತಿಗನೊ ಮೇಣ್ ಬಹಳ ತಾಪದ ಮುತ್ತಯನೊ ಕುರುರಾಯನೆಲೆ ಧೃತರಾಷ್ಟ್ರ ಕೇಳೆಂದ (ಕುಮಾವ್ಯಾದ್ರೋ. ೪-೨) ; ಅಕ್ಕತಮ್ಮದಿರೊಬ್ಬರೊಬ್ಬರನೋರಂತೆ ನೆನೆಯದಿದ್ದರೆ ತಂಪೆ ಮನಕೆ (ಇಂಚಾಪ. ೩೨-೭೯). ೩. ನೆಳಲಿನ ತಂಪಾದ ಪ್ರದೇಶ: ದಕ್ಷಿಣದ್ವಾರದ ವೃಕ್ಷದ ತಂಪಿನಲ್ಲಿ ಸ್ವಯಂಜ್ಯೋತಿಯ ಕಂಡೆನಯ್ಯ (ಅದಪ. ೨೪-೬೯) : ತಳಿತ ಮರನಡಿಗಳೊಳಗೆಳಲತೆಯ ತಂಪಿನೊಳು . . . ಅಱಸಿದಂ ಸಿದ್ಧರಾಮನಾ ಪರ್ವತಾಗ್ರಣಿ ಮಲ್ಲಿಕಾರ್ಜುನನನು (ಸಿದ್ಧರಾ. ೨-೩೬). ೪. ಹಿಮಂ ; ಮಂಜು. 'ತಂಪುಬೆಟ್ಟ' ಪರಾ.

**ತಣ್ಪಾಗು, ತಂಪಾಗು**=೧. ತಣ್ಣಗಾಗು: ಪೊಱಗಣ್ಗೆ ಪೋಗಿ ತಣ್ಪಪ್ಪೆಡೆಯೊಳ್ ಪಡುಗುಂ (ಧರ್ಮಾಮೃ. ೧-೧೫೬). ೨. ದುಃಖ ಮೊದಲಾದ ಭಾವನೆಗಳ ಆವೇಗ ಕಡಮೆಯಾಗು : ಶಶಿವದನೆಯ ಮನಸ್ತಾಪ ತಂಪಾದುದು (ಮೋಹತ. ೪-೯೩). **ತಂಪಿನ ಗಿರಿ** = ಹಿಮವತ್ಪರ್ವತ ; ಹಿಮಾಲಯ: ಭಾರತವರುಷವನು ದಾಂಟಿದನು ತಂಪಿನಗಿರಿಯ ತಪ್ಪಲನಿಳಿದನು (ಕುಮಾವ್ಯಾ. ೪-೩೫). **ತಂಪಿನ ಬೆಟ್ಟ**=ತಂಪಿನ ಗಿರಿ : ತರಳಾಕ್ಷಿ ತಂಪಿನ ಬೆಟ್ಟದಬಲೆಗೆ ವಿಧಿ ಸದಸ್ಯವ ಕೊಟ್ಟವೊಲು ತನುವೆಳದಳಾ ಮೇನಕಿಯ ಜಠರದಲಿ (ನಿಭಾಗ. ೪-೫-೨).

[ ತಣ್$_2$ + – ಪು$_2$. / ತಮಿ. ತಣ್ಪು ; ಮಲ. ತಣುಪ್ಪು ]

**ತಣ್ಪುಗಂಪು** (ನಾ). ತಂಪಾದ ಸುಗಂಧ ; ಹಿತಕರವಾದ ಪರಿಮಳ : ಪಾದರಿಗಳ ತಣ್ಪುಗಂಪು ಸರಸೀರುಹದೊಳ್ ತನಿಗಂಪು . . . ಬಗೆಗೊಂಡುದು ತದ್ವನದೊಳ್ (ರಾಜಶೇ. ೧೦-೧೯). [ ತಣ್ಪು$_2$ + ಕಂಪು ]

**ತಣ್ಪುಗೂಡು** (ಕ್ರಿ). ಶೈತ್ಯದಿಂದ ಕೂಡಿಕೊಂಡಿರು ; ತಂಪಿನಿಂದ ಬೆರೆತಿರು : ವದನಶಶಿಯ ತಣ್ಪುಗೂಡಿ ಸೌರಭ್ಯದೆ ಪುದುಗಿದ ಮಂದಮಾರುತನ . . . ಸೂಸುಪೋಲೊರ್ಪ ಚದುರೆ ಬೀಸಿದಳಾಲವಟವ (ಕಂನವಿ. ೨೪-೮೦). [ ತಣ್ಪು$_2$ + ಕೂಡು$_1$ ]

**ತಣ್ಪುಗೆಯ್, ತಂಪುಗೈ** (ಕ್ರಿ). ೧. ತಂಪನ್ನುಂಟುಮಾಡು : ಕರಿಯ ಕರ್ಬಿನ ಕಾವಿ[ನೆ]ಳ ಮೈಂದವಾಟಿಯೆಲೆಯ ಬಿಜ್ಜಣಿಗೆಗಳಿಂ ಬೀಸಲ್ಕೇಟ್ಟು ತಣ್ಪುಗೆಯ್ಯೆ (ಪಂಪಭಾ. ೫-೬ ವ). **ತಂಪುಗೈ** : ೨. ಪ್ರಸನ್ನತೆಯುಂಟು ಮಾಡು ; ಸಂತೋಷಪಡಿಸು : ಆದಿದೇವರೆ ಮುನ್ನ ತಂಪುಗೈದನು ದೇವರಾದರಿಸಿದಿರೆಮ್ಮನಿಂದು (ಭರಜ. ೫೮-೮). [ ತಣ್ಪು$_2$ + ಕೆಯ್$_1$ ]

**ತಣ್ಪುಗೊಳಿಸು** (ಕ್ರಿ). ೧. ತಣ್ಣಗೆಮಾಡು. ೨. ಸಮಾಧಾನಗೊಳಿಸು : ಮನದೊಳುರ್ಕುವ ಮುಳಿಸನೀಜಾತಿಗಿದುಚಿತವೆಂದು ತಿಳಿದು ಮನದೊಳೆ ತಣ್ಪುಗೊಳಿಸಿ (ಚಳವಿ. ೬-೨೩೬ ವ). [ ತಣ್ಪು$_2$ + ಕೊಳ್$_1$ + – ಇಸು$_3$ ]

**ತಣ್ಪುದರ್** (ಕ್ರಿ). ತಂಪನ್ನು ತರು ; ತಂಪನ್ನುಂಟುಮಾಡು : ಸತಿಯರ್ ಕರ್ಪೂರ ಪಾಳೀಕೃತ ಸತಿಯರೆನಲ್ ನಲ್ಲರೊಳ್ ತಣ್ಪುದಂದರ್ (ಜಗವಿ. ೧೭-೮೧). [ ತಣ್ಪು$_2$ + ತರ್ ]

**ತಣ್ಪುವಡೆ, ತಂಪುವಡೆ** (ಕ್ರಿ). ತಂಪನ್ನು ಹೊಂದು ; ತಣ್ಣಗಾಗು : ತುಹಿನಕರನ ತಣ್ಗದಿರ್ಗಳ ತನಿಸೋಂಕಿನಿಂ ತಣ್ಪುವಡೆದ ಕಾರಹಾರಂಗಳೊಳಂ (ಕಾದಂಬ. ೫೭೮) ; ವನದೇವತೆಯರಮೃತಸಾರವಾರಿಯಂ ಪಚ್ಚವರಲ ಕರಗಂಗಳೊಳ್ ತೀವಿ ತೆಂದೆಲರ ಪೊಯ್ಲಿನಿಂ ತಣ್ಪುವಡೆಯಲೆಂದು ನೆಱಿಪಿದಂತಿರ್ದ ನೀಗಾಯ ತುಱುಗಲಿಂದೆಱಗಿದ ನಾಳಿಕೇರ ಭೂರುಹಂಗಳುಂ (ಚಂದ್ರಪ್ರ. ೦-೦೦೫ ವ). **ತಂಪುವಡೆ** : ಹಂಸಧ್ವಜು ನಂದನನನೆಣ್ಗಾದಿರ್ದ ಕೊಪ್ಪರಿಗೆಯೊಳ್ತಂದು ಕಡಹಿಸಲಚ್ಯುತಧ್ಯಾನದಿಂ ತಂಪುವಡೆದನವನಚ್ಚರಿಯನೆ (ಜೈಮಿಭಾ. ೧೧ ಸೂಚನೆ). [ ತಣ್ಪು$_2$ + ಪಡೆ$_1$ ]

**ತಣ್ಪುವೀಱು** (ಕ್ರಿ). ೧. ತಂಪನ್ನುಂಟುಮಾಡು. ೨. ನೆಮ್ಮದಿಯುಂಟು ಮಾಡು; ಸುಖ ತರು : ಚಿಂತಿಸುತೆ ಪಲವಂದದೆ ಬಗೆ ನೊಂದು ಹಮ್ಮದಂ ಬೋಗಿರೆ ಪಾರ್ಥಂ ದಯೆಯಿಂದವನಿರ್ದೆಡೆಗಿಂದುಧರಂ ತಳೆದು ತಣ್ಪುವೀಱಿದನಾಗಳ್ (ಕಲಶಂ. ೪-೦೩೬). [ ತಣ್ಪು$_2$ + ಬೀಱು$_1$ ]

**ತಣ್ಪುವೆಸ** (ನಾ). ತಂಪನ್ನುಂಟುಮಾಡುವ ಕೆಲಸ ; ಶೈತ್ಯೋಪಚಾರ : 'ತಣ್ಪುವೆಸಕೆಯ್' ಪರಾ. [ ತಣ್ಪು$_2$ + ಬೆಸ$_1$ ]

**ತಣ್ಪುವೆಸಕೆಯ್** (ಕ್ರಿ). ತಂಪನ್ನುಂಟುಮಾಡುವ ಕೆಲಸವನ್ನು ಮಾಡು; ಶೈತ್ಯೋಪಚಾರ ಮಾಡು : ಮಲಯಪವಿಹಾರಣೇರಣ ಚಲತ್ತರುಶಾಖೆಗಳೊರ್ಮೊರ್ಗೊರ್ಮೆ ನೀರೊಳಗೆ ಬಬಲ್ದು...ನ್ನಭಂಬರಂ ಮಿಳಿರ್ದಲಂಪಿನ ದಂಪತಿಯಿರ್ಪ್ಪ ಜೊಂಪಮಂ ತಳಿತಳಿದಲ್ಲಿ ತಣ್ಪು[ಪಾಠಾಂ. ಸಾಂಕು, ಗೂಂಕು]ವೆಸಕೆಯ್ವುವು ತೀರವನಾಂತರಾಳದೊಳ್ (ಆದಿಪು. ೧೧-೬೭). [ ತಣ್ಪುವೆಸ + ಕೆಯ್$_1$ ]

**ತಣ್ಪುವೆಱು, ತಂಪುವೆಱು** (ಕ್ರಿ). ತಂಪನ್ನು ಹೊಂದು ; ತಂಪಾಗಿರು : ಮರಂಗಳ ಚಿಗುರ್ಗಳಿಂದೊಗೆದೆಲರಿಂ ತಣ್ಪುವೆತ್ತಿರ್ಪ ತೀರಜಲಂಗಳೊಳಂ (ಕಾದಂಪೂ. ೦೧೭) ; ಕಮಲಭವಂ ಲಸತ್ಪರಿಮಳೋತ್ಕರದಿಂ ಕರುವಿಟ್ಟು ಮಾಡಿದಂಗವಿದೆನೆ ತಣ್ಪುವೆತ್ತ ವಿಜಯಾವತಿದೇವಿಯ ಮೆಯ್ (ಕುಸುಮಾ. ೫-೧೨೭). **ತಂಪುವೆಱು** : ಓಪರೊಳ್ನೆರೆದು ವಿರಹಿಗಳ್ಮಲಯಜದ ಘನಸಾರದೊಳ್ದಂಪುವೆತ್ತು (ಜೈಮಿಭಾ. ೮-೫). [ ತಣ್ಪು$_2$ + ಪೆಱು$_1$ ]

**ತಣ್ಪುವೇಱು** (ಕ್ರಿ). ತಂಪನ್ನು ಹೊಂದಿರು ; ಶೈತ್ಯವನ್ನು ತುಂಬಿಕೊಂಡಿರು: ಕುಕಿಲ್ವ ಪಿಕಾಳಿ ತಣ್ಪುವೇಱಿದ ಸುಟಿಗಾಳಿ (ಪುಷ್ಪಪು. ೨-೨೦). [ ತಣ್ಪು$_2$ + ಪೇಱು$_1$ ]

**ತಣ್ಪುಳಿಲ್** 'ತಣ್ಪುಟಿಲ್' ನೋ.

**ತಣ್ಪೂಳಿಗ** (ನಾ). ತಂಪನ್ನುಂಟುಮಾಡುವ ಸೇವೆ ; ಶೈತ್ಯೋಪಚಾರ : ವ್ಯೆಮರೆತೊರಗಲಾಕೆ, ಪಿಡಿದೆತ್ತಿ ಕುಳ್ಳಿರಿಸಿ ತಣ್ಪೂಳಿಗವನೆಸಗಿ . . . ಕರ್ಚಿದನ್ ಕಣ್ಪನಿಪೊನಲ್ಗಳಿಂ ಭರತನಾ ರಘುರಾಮನಂಬಿಕೆಯ ಪುಣ್ಯಮಯ ಪದ್ಮಪಾದಂಗಳಂ (ಶ್ರೀರಾಮಾ. ೧೧೬-೧೧೯). [ ತಣ್ಪು$_2$ + ಊಳಿಗ (<ಊಟಿಗ) ]

**ತಣ್ಪೆಱೆ, ತಂಪೆರೆ** (ಕ್ರಿ). ತಂಪನ್ನು ಸೂಸು,-ಬೀರು : ಓಡಿದೆನ್ . . . ತಣ್ಪೆಱೆವ ಪೊನಲೆಡೆಗೆ (ಬದ್ಧಕ್ರ. ೩೬-೭೭೩). **ತಂಪೆರೆ** : ತಂಪೆರೆಯಬೇಕಾದ ಎಲೆ, ಹುಲ್ಲಿನ ಹಸಿರು, ಬಿಸಿಯನ್ನೇ ಕಕ್ಕುತ್ತಿವೆ (ದಕಂಬಾ. ೦೦). [ ತಣ್ಪು$_2$ + ಎಱೆ$_1$ ]

**ತಣ್ಪೇರಿಸು** (ಕ್ರಿ). ೧. ತಂಪನ್ನುಂಟುಮಾಡು. ೨. ತೃಪ್ತಿಗೊಳಿಸು : ಧಾರುಣಿಯುಂ ಶಕ್ರಂ ತಣ್ಪೇರಿಪನೆೊಳ್ಸರಿಯು ಸೂಸಿ ಕೃಷ್ಣಮಹೀಶಂ ಸಾರತರೋತ್ಸರ್ಗಪಯಃಪೂರದೆ ತಣ್ಪೇರಿಪಂ (ನರಜ. ೪೧-೯೦). [ ತಣ್ಪೇರು (<ತಣ್ಪೇಱು) +– ಇಸು$_3$ ]

**ತಣ್ಪೇರು** 'ತಣ್ಪೇಱು' ನೋ.

**ತಣ್ಪೇಱು, ತಂಪೇರು, ತಂಪೇಱು, ತಣ್ಪೇರು** (ಕ್ರಿ). ತಣ್ಣಗಾಗು ; ಉಷ್ಣತೆಯನ್ನು ಕಳೆದುಕೊಳ್ಳು : ಸರಳಾಂಗಂ ವಿಾಗೆ ಕುಂದಿ ತೋಱೆ ಕಿವಿಗಳ್ ತಣ್ಪೇಱೆ[ಪಾಠಾಂ. ಗಂಪೇಱೆ] (ರೋಕೋಪ. ೯-೨೧೨) ; ತಣ್ಪೇಱಿದ ಪಱೆಯಂತೆ ದನಿ ಪೊಱಮಡದೆ (ಧರ್ಮಾಮೃ. ೦-೧೭೮) ; ಸರಸೀಜಾತ ಪಯಃಕಣಪ್ರತತಿಯಿಂ ತಣ್ಪೇಱೆ . . . ತೀಡಿದುದಿಂತು ಜಾಂಬೂಕವನೋದ್ಭೃಂಗೀರುತಂ ಮಾರುತಂ (ಕುಸುಮಾ. ೬-೪೫). **ತಂಪೇರು** : ನಿರುತವೈಶ್ವರ್ಯ ಕೈಸಾರಿದೊಡೆ ಸಂತಸದಿ ಪರಮಶಾಂತಿಯಲಿ ಪೆರ್ಚುವ ಮಾಳ್ಕೆಯಿಂದೆ ಮೈ ತಂಪೇರಿ (ನವಮೋ. ೧೫-೮). **ತಂಪೇಱು** : ಬೆದಱಿ ಬಂದಿಗೆ ಸಿಲುಕಿತವನಿಪನದಟು ವಿಕ್ರಮವಹ್ನಿ ತಂಪೇಱಿದುದು (ಕುಮಾ.ಭೀ. ೧೦-೧೭). **ತಣ್ಪೇರು**. 'ತಣ್ಪೇರಿಸು' ಪರಾ. [ ತಣ್ಪು$_2$ + ಏಱು$_1$ (<ಏಱ್$_1$) ]

**ತಣ್ಪೊದವು** (ಕ್ರಿ).=ತಣ್ಪೇಱು: ತಣ್ಪೊದವಿದ ನಿರ್ಝರಾಂಬುಗಳನೊಯ್ಯನೆ ಪೀರ್ದು (ಕಾವ್ಯಾವ. ೭೨೨). [ ತಣ್ಪು$_2$ + ಒದವು$_1$ ]

**ತಣ್ಬಗೆ** (ನಾ). ಆರ್ದ್ರ ಹೃದಯ ; ಕರುಣೆಯಿಂದ ಕೂಡಿದ ಮನಸ್ಸು : ಕಣ್ಬಡಿಯೊನಲ್ ಗುಣಂಗಳ್ ಪೆಣ್ಬರಿಜಂ ತಳೆದು ತೊಳವುವೆಂಬಂತೆವೂಲೀ ತಣ್ಬಗೆಯ ರಾಣಿಯೊಲವಿಂ ಪಣ್ಬಡೆಗುಂ ಕಲ್ಪಕಲ್ಪ ಸಂಕಲ್ಪಂಗಳ್ (ಚಳವಿ. ೩-೭೩). [ ತಣ್$_2$ + ಬಗೆ$_3$ ]

**ತಣ್ಬನಿ, ತಂಬನಿ** (ನಾ). ತಂಪಾದ ಹನಿ ; ತಣ್ಣನೆಯ ಬಿಂದು: ಮನ ಮೊಲ್ಲಾತನ ಗಾಡಿಯಂ ದರವುರುಂಗಂಡಾಕೆಗಳ್ . . . ಚಂದನಕಂ ಪಸುರ್ಪಸೆವ ಬಾಳ್ಗೊಂಪಕ್ಕಮೊಂದೊಂದೆ ತಣ್ಬನಿಯೊಳ್ಗೋಡಿಸುತಿರ್ಪ [ಪಾಠಾಂ. ಬೊಳ್ಕೂಡಿರಿಸಿರ್ಪ]ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ (ಆದಿಪು. ೧-೭೫) ; ತಣ್ಬನಿಯುಂ ಚಂದನಗಂಧಮುಂ ಮಲೆಯೊರಲ್ತಂದೀಯೆ ಬಂದತ್ತು ಫಾಲ್ಗುನಂ (ಅರ್ಧನೇ. ೨-೫೭) ; ತದ್ವನದ ಕೊಳಂಗಳೊಳ್ದೆರೆಯಿನುಣ್ಮುವ ತಣ್ಬನಿಯಿಂದೆ ಪಾದ್ಯಮಿತ್ತು (ಚಂದ್ರಪ್ರ. ೭-೮೩) ; ಚಂದನದ ಪೊಟ್ಟಣಂಗಳಿಂ ಪಟ್ಟನೆ ಪನಿವ ತಣ್ಬನಿಯ ತಂದಲುಂ (ವರ್ಧಪು. ೫-೬೧ ವ). **ತಂಬನಿ** : ಬೇಗ ಮುಸಗಲಿಂತು ಶಾನೆ ದೂರವೆ ವೃಷ್ಟಿ ತಂಬನಿಗಿಂಬಾಗೆ ತಾನೆ ಮೊಳೆಯುದೆ ಸೃಷ್ಟಿ ? (ಗೀವಿಂ. ೧೦೭-೩೧) : ತೊಳೆವ ಮಳೆಯೆನಿತರಿಂ ಚೆಲ್ವಡೆದುದೀ ಸುಗ್ಗಿ ಕುಳಿರ ತಂಬನಿಯನಿತರಿಂ ಮಿಂದಿರುವುದು (ಕಾಲಾರ. ೧೧೮-೨೪೭). [ ತಣ್$_2$ + ಪನಿ$_2$ ]

**ತಣ್ಬಸಲೆ** (ನಾ). ತಂಪಾದ ಹುಲ್ಲುನೆಲ,–ಹುಲ್ಲುಗಾವಲು : ಸ್ಮರನೊತ್ತಿದನುಂಡಿಗೆಯುಂ ಬಿರುದಿಂಗೀ ಧರೆಯ ಬೆನ್ನೊಳೆನಿಸಿರ್ಪುವು ತದ್ವಿರಹಾರ್ತೆ ಮೆಯ್ಯನಿಕ್ಕಿರೆ ಕರಿಂಕುವೋದೆಡೆಯ ಪಚ್ಚೆ ತಣ್ಬಸಲೆಗಳೊಳ್ (ವರ್ಧಪು. ೪-೫೯). [ ತಣ್$_2$ + ಪಸಲೆ ]

**ತಣ್ಬಾಲ್, ತಂಬಹಾಲು, ತಂಬಾಲ್, ತಂಬಾಲು, ತಂಭಾಲು** (ನಾ). ತಣ್ಣನೆಯ ಹಾಲು : ಚಾರಿವರಿದು ಚಂದ್ರಸುರಧೇನು ಕೂರ್ತು ಚಕೋರವತ್ಸಗೆ ಮೊಲೆಗುಡಲು ಪೂರಿಸಿ ಕಡೆವಾಯೊಳಿವ ತಣ್ಬಾಲೆನೆ ಸೋರಿತು ಬೆಳ್ದಿಂಗಳೆಳೆಗೆ (ಮೋಹತ. ೧೬-೫೫). **ತಂಬಹಾಲು**: ಉದಯದಲಿ

ವಂದು ಸಿದೆ ತಂಬಹಾಲು ಅಸ್ತಮಯದಲಿ ವಂದು ಸಿದೆ ತಂಬಹಾಲ ಲೆಕ್ಕದಲಿ ಶ್ರೀ ಪಾರಿಸ್ವನಾಥ ದೇವರಲಿ . . . ಬಟ್ಟ ಧರ್ಮಸಾಧನ (ಕಇ. III-1, ೧೧-೪೫ ; 1542). **ತಂಬಾಲ್ :** ಎಳಗಂದಿ ಕರ್ಮಜಾವಿನ ತೊಱೆದ ತಂಬಾಲಂ ಬೆರೆದು ಹಸಿಸಿ (ರಾಮಾಶ್ವ. ೧೦೧-೧). **ತಂಬಾಲು :** ಬಿಲುವಾಲು ತಂಬಾಲು ಕೆನೆವೆರೆಸಿದ ಪಾಲು ಸುಲಲಿತ ಬಟ್ಟವಾಲುಗಳ . . . ಲಲನೆಯರುಣಬಡಿಸಿದರು (ಕಂನವಿ. ೮-೯೧) ; ಶಾಂತಲಾದೇವಿ . . . ತಂಬಾಲಿನ ಗಿಂಡಿಯನ್ನು ತನಿವಣ್ಣುಗಳ ಹರಿವಾಣಗಳನ್ನು ನೋಡಿದಳು (ಸವತಿ. ೮೫). **ತಂಭಾಲು :** ಯಿಪ್ಪತ್ತನಾಲ್ಕು ಮುಡ ಭತ್ತಕೆ ತಂಭಾಲು ಯೆರಡು ಸಿದ್ದೆ ಹಾಲನೂ ಯೆರಡು ಹೊತ್ತು ನಡಿಸಿ ಬಹರು . . . ಹಂನೆರಡು ಮುಡೆ ಭತ್ತಕ್ಕೆವೊಂದು ಸಿದ್ದೆ ತಂಭಾಲನುವೊಂದು ಹೊತ್ತು ನಡಸುಉವದು (ಕಇ. III-1, ೧೧-೮ ; 1542).

[ ತಣ್$_2$ + ಪಾಲ್$_1$ ]

**ತಣ್ಬಿಸಿಲ್, ತಣ್ಬಿಸಿಲು** (ನಾ). ೧. ತಂಪಾದ ಬಿಸಿಲು; ತೀಕ್ಷ್ಣವಲ್ಲದ ಬಿಸಿಲು ; ಎಳೆಬಿಸಿಲು ; ಹಿತವಾದ ಬಿಸಿಲು : ಅನುಕ್ರಮದಿಂ ತಣ್ಬಿಸಿಲಾಯ್ತನಂತರಂ ಪೊಂಬಿಸಿಲಾದುದು (ಹಂರಾವಾ. ೧೧-೧೭೭) ; ರವಿಕಿರಣಂ ನೀರೋಡುತ್ತಿವೆ ತಣ್ಪಂ ಬೀಱುತಿವೆ ರಥಾಂಗಕುಲಂಗಳ್ ತವೆ ತಣ್ಬಿಸಿಲೊಳ್ ನಿಂದಿರ್ದಿವೆ ಮೇಘಂ ಹಿಂಡಿ ಹರಹಿದುತಿವೆ ನಭದೊಳ್ (೧೮೪. ೯-೬೩) ; ಎಸೆದನಚ್ಚರಿ ನಡುವಗಲಿವನೊಬ್ಬ ತಣ್ಬಿಸಿಲ ಭಾಸ್ಕರ ನೋಯೆಂದೆನಿಸಿ (ಭರತ. ೩-೨೪) ; ತರಣಿ ನಿಶಿಸಂಗಮಂ ಬಯಸಿ ವಿಧುವೇಷವುಂ ಧರಿಸಿ ಬರಲೊಗೆದ ತಣ್ಬಿಸಿಲೊ ಪೇಳೆಂಬಿನಂ ಕರಮೆ ಸೆದುದ್ದೆದ ಚಂದ್ರಾತಪಂ (ಚಬಪು. ೯-೨೦); ನೇಸರಿದೊ ತಣ್ಬಿಸಿಲ ಬೆಳ್ಮಳೆಯು ಕರೆಯುತಿವೆ (ಹಬ್ಬರ. ೫-೬೬). ೨. ತಂಪಾದ ಕಾಂತಿ,–ಪ್ರಕಾಶ: ಉತ್ತಂಸ ಮಣಿಮರೀಚಿಗಳಿಂ ಭೂಪಾಲನ ಚರಣಸರೋಜಕ್ಕೊಲಗಿಸಿದನುದಯ ಸುಂದರಂ ತಣ್ಬಿಸಿಲಂ (ಹಂರಾಮಾ. ೩-೫). ೩. ಬೆಳುದಿಂಗಳು ; ಚಂದ್ರಿಕೆ : ನೆಱೆದಿಂಗಳ ತಣ್ಬಿಸಿಲ್ಮುಗುಳ್ಮಲ್ಲಿಗೆ ಬಂದ ಮಾವು . . . ತುಂಬಿಯ ಗೇಯ ಮೆಂಬಿನಂ ಬಲ್ಲವರಂ ಮನಂಗೊಳಿಸುಗುಂ ಕೃತಿ (ಮಲ್ಲಿಪು. ೧-೪೪). **ತಣ್ಬಿಸಿಲು :** ೨. ಎಱಗುವ ದಿವಿಜರ ಮಕುಟದ ತುಱುಗಿದ ಮಾಣಿಕದ ತಣ್ಬಿಸಿಲುಗಳ ಪೊಳಪಿಂ (ಎಕ. VI, ಚಿಕ್ಕಮ. ೧೬೦-೪೪ ; 1103).

[ ತಣ್$_2$ + ಬಿಸಿಲ್ ]

**ತಣ್ಬಿಸಿಲು** ‘ತಣ್ಬಿಸಿಲ್’ ನೋ.

**ತಣ್ಬುಳಿಲ್** ‘ತಣ್ಬುಟಿಲ್$_1$’ ನೋ.

**ತಣ್ಬುಟಿಲ್$_1$, ತಣ್ಪುಳಿಲ್, ತಣ್ಬುಳಿಲ್** (ನಾ). ತಂಪಾದ ಮಳಲು,–ಮರಳ ದಂಡೆ : ತರುಣಿಯರಾ ವಿಲಾಸ ಕುಸುಮಾಸ್ತ್ರನಿರೀಕ್ಷಿಸೆ ಕಾಮ ತಾಪದಿಂ . . . ಕೊರಗಿ ಮೃಣಾಳನಾಳಿಕೆಗೆ ಚಂದನದಣ್ಕಿಗೆ ತಣ್ಬುಟಿಲ್ಗೆ ತಣ್ಗರಗದ ಸೂಸುನೀರ್ಗೆ ಕೊಳವೇರ್ಗೊಡಲಂ ಗುಱಿಯಾಗೆ ಮಾಡುವರ್ (ಮಲ್ಲಿಪು. ೩-೨೮); ಪಾಸಿದ ಪಸೆಯ ಪಸರದಂತ್ರಸದಳಮೆಸೆವ ಸುಣ್ಬೆಳಂತಿಗೆ ಮಟಲ ತಣ್ಬುಟಿಲೊಳ್ ವಿಲಾಸಂಬಡೆದ ಬಾಲಸಹಕಾರನಂದನಂ (ಅನಂಪು. ೭-೭ ವ). **ತಣ್ಪುಳಿಲ್ :** “ತಣ್ಪುಳಿಲೆನೆ ಸೈಕತಂ” (ಚಚುನಿ. ೧೦). **ತಣ್ಬುಳಿಲ್ :** ಸುಖದ ತನಿರಸದ ಪೆರ್ಮಡು ಸುಖದೊತ್ತಿನ ಸುತ್ತಸುಖದ ತಣ್ಬುಳಿಲೆನಿಕುಂ (ಶ್ರೀಶದಾ. ೬೭) ; ತಳಿರ್ಜೊಂಪದೋಪರಿಯ ತಣ್ಪುಳಿಲೆಡೆಯೊಳ್ಮಿಸುಪ ಚಂದ್ರಕಾಂತದ ಘಟ್ಟದೊಳ್ . . . ತೀವಿ ಪಥಿಕರ್ಗೆಱೆಗುಂ (ವೃಷವಿ. ೪-೨೬) ; ತಣ್ಬುಳಿಲಿರ್ಪೆಡೆಯೊಳುಮಾರವೆಗಳ ತಣ್ಣೆಳಲೊಳು (ಗೊಮ್ಮಟ. ೩-೧೨೦). [ ತಣ್$_2$ + ಪುಟಿಲ್$_1$ ]

**ತಣ್ಬುಟಿಲ್$_2$** (ನಾ). “ತಂಪಾದ ತೋಪು” (ಹಂಪದೀ. ೧೦೧) : ಎಲ್ಲಿ ಕೊಳನೆಲ್ಲಿ ತಣ್ಬುಟಿಲೆಲ್ಲಿ ಲತಾಭವನವೆಲ್ಲಿ ಧಾರಾಗೃಹಂ (ಹಂಪಭಾ. ೩-೧೯).

[ ತಣ್$_2$ + ಪುಟಿಲ್$_2$ ]

**ತಣ್ಬೆಮರ್** (ನಾ). ತಣ್ಣಗಿರುವ ಬೆವರು : ಆತನ ರೂಪವೆಂಬಾರು ಸುಧಾರಸಮಂ ನಯನಂಗಳೆಂಬ ಸತ್ಪಾತ್ರಗಳಲ್ಲಿ ಕಾಮಿನಿಯರಾತುರದಿಂ ಕುಡಿದಂತರಂಗದೊಳ್ಮೂತನವಾಗಿ ತೀವಿದೊಡಮುಣ್ಮುವ ತಣ್ಬೆಮರೊಂದು ದಂಭದಿಂದಾತತವಾಗಿ ತಾಂ ಪೊಱಗೆ ಪೊಣ್ಮಿದುದೆಂಬಿನವೊಪ್ಪಿ ತೋಱುಗುಂ (ಶಾಂತಿಪು. ೩-೩). [ ತಣ್$_2$ + ಬೆಮರ್$_8$ ]

**ತಣ್ಬೆಳಗು, ತಂಬೆಳಕು, ತಂಬೆಳಗು** (ನಾ). ೧. ತಂಪಾದ ಬೆಳಕು ; ಶೀತಲವಾದ ಕಾಂತಿ : ನುಣ್ಬುಟಿಲೊಳಗದಿರ್ಮುತ್ತೆ ಪವಣ್ಪಡೆ ಕಟ್ಟಲಿಸಿ ಬೆಳೆದು ಬಳಸಿದರ್ಗಡದಂ ತಣ್ಬೆಳಗನೀಯೆ ಬೆಳತಿಗೆಗಣ್ಬೆಳಗೊಳಪೊಕ್ಕು ಚಪಳೆ ಕಳಿಕೆಯನಾಯ್ದಳ್ (ಚಂದ್ರಪು. ೭-೧೦೫) ; ರತ್ನಕಲಶಂಗಳ ತಣ್ಬೆಳಗುಣ್ಮಿ ಪೊಣ್ಮೆ (ಕುಸುಮಾ. ೧೧-೧೪೦). ೨. ಬೆಳುದಿಂಗಳು ; ಚಂದ್ರಿಕೆ : ಅಭಿಷವವಿಧಿಯಂ ಮಾಡುವೆಂ ಚಂದ್ರಿಕಾವಾರಿಯಿನೆಂಬಂತೆತ್ತಲುಂ ತಣ್ಬೆಳಗಿನ ಬಳಗಂ ಸಿಂಪಿಸಲ್ . . . ಬಂದುದಯಿಸಿತುದಯಾದ್ರೀಂದ್ರದೊಳ್ಚಂದ್ರಬಿಂಬಂ (ಕಾದಂಉ. ೩೭೬) ; ಬಂದೆಳಮಾವೆಂದೊಡೆ ನೆಱೆದಿಂಗಳ ತಣ್ಬೆಳಗೆಂದೊಡಾನ್ದವುರಿವಂ ಗೊರವಂ (ಕಬ್ಬಿಗಕಾ. ೧೪೬). **ತಂಬೆಳಕು :** ೨. ತಂಬೆಳಕಾಗಲಿ ನಂಬೆಳಕೆನುವೊಲು ಹೊಂಬೆಳಕೀ ಹೊರಸೂಸಲಿ (ಅರಳು. ೩೧೧-೭) ; ಹೊತ್ತು ಮೇಲೇರಿದರು, ಬಿತ್ತದಲೆ ಸುಡುಬಿಸಿಲ ಸುತ್ತ ಹೂ ಬಿಸಿಲು ದೀಪಾಗಿ ಬೆಳಗುವದು ಎತ್ತ ನೋಡಿದರು ತಂಬೆಳಕು (ಕನ್ನಡಾ. ೨೦೫). **ತಂಬೆಳಗು :** ೧. ಎಳೆಯ ಬೆಳದಿಂಗಳವೊಲೀಕೆಯ ತಳತಳಿಪ ಮುಖ ಚಂದ್ರಮನ ತಂಬೆಳಕು ಸುಳಿದುದು (ಕುವ್ಯಾಅ. ೮-೧೯೬). ೨. ಅಟ್ಟುದು ಪಶ್ಚಿಮಾಬ್ಧಿಯೊಳ್ ತಂಬೆಳಗೊಂದೆ ಜೋಡೆ ನಲಿವಾಡೆ ಸಮುಜ್ಜ್ವಲ ಚಂದ್ರಮಂಡಲಂ (ಉದ್ಭಟ. ೧೦-೧೦೪). [ ತಣ್$_2$ + ಬೆಳಗು$_2$ ]

**ತಣ್ಬೆಳಗುಮಣಿ** (ನಾ). ತಂಪಾದ ಬೆಳಕನ್ನು ಸೂಸುವ ಮಣಿ,–ರತ್ನ : ಅರಗಿಳಿಯೆಸಗುಂ ತಣ್ಬೆಳಗುಮಣಿಯ ಪೇಟೆಯೊಳಿಂಬಾಗಿ ಮನಂಗೊಳಿಪ್ಪ ಮರಕತಮಣಿವೊಲ್ (ಉದ್ಭಟ. ೩-೨೫). [ ತಣ್ಬೆಳಗು + ಮಣಿ$_3$ ]

**ತಣ್ಬೊಲ** (ನಾ). ತಂಪಾದ ಹೊಲ : ತಣ್ಬೊಲಂ ಕಲ್ಮರಂ ಪೊರೆವ ನಾಡಲ್ಲಿ (ಕಾಲಿಂರ. ೩-೨೫). [ ತಣ್$_3$ + ಪೊಲ ]

**ತಣ್ಬೊಳೆ** (ನಾ). ತುಂಪಾದ ಹೊಳೆ : ತಣ್ಣನೆಯ ನದಿ : ಅಸಿಯ ಳ ಯೌವನವನವುಂಟು ಲಾವಣ್ಯರಸದ ತಣ್ಬೊಳೆಯುಂಟು ಭಾವಾ (ಭರತ. ೯-೪೬) ; ಬೀಯೊಷಿಯದ ಬಯಲ ತಣ್ಬೊಳೆ ಆಸೋಪಸಿನ ದಡದಲ್ಲಿ ಬೆಳಗಾಲವನ್ ನೂಂಕೆ ಬಿಡಿಸುವನು (ಪಾರಸಿ. ೩೦-೬೯೨).

[ ತಣ್$_2$ + ಪೊಳೆ$_4$ (<ಪೊಟೆ$_1$) ]

**ತಣ್ಬೊಟ್ತು** (ನಾ). ತಂಪು ಹೊತ್ತು : ತಣ್ಬೊಟ್ತಾದುದು ತಳರ್ದುದು ನುಣ್ಪುಸಲೆಗೆ ಹಂಸಮಿಥುನಂ (ಲೀಲಾವ. ೫-೭೫). [ ತಣ್$_2$ + ಪೊಟ್ತು ]

**ತಣ್ಮಡು** (ನಾ). ತಂಪಾದ ನೀರಿನ ಮಡು; ತಣ್ಣೀರ ಕೊಳ: ಹಿಮವುಂಡು ಬಾಟ್ಟಿ ತಣ್ಮಡುವಿನ ಪೂವೆ ಸುಟ್ಟಪುದು (ಅರ್ಧನೇ. ೪-೮೨) ; ಕಪ್ಪುರದ ಪುಳಿಲ್ ಪಗಿಲ್ತಲರ ಬಾಡಿನ ಸಣ್ಣ ಮಣಲ್ ಮನಕ್ಕೆ ಬಂದಿರೆ ಕೃತಕ ಪ್ರವಾಹಿನಿಯ ತಣ್ಮಡುವಂ[ಪಾಠಾಂ. ಕಲಂ] ಬಿಡದಿರ್ಪ ನಲ್ಲಳಂ (ವರ್ಧಪು. ೪-೭೩). [ ತಣ್$_2$ + ಮಡು$_2$ ]

**ತಣ್ಮಲೆ** (ಕ್ರಿ). ೧. (ಅಲಂ) ಹಿತವಾಗಿ ಪಸರಿಸು,–ಹರಡು,–ಆವರಿಸು,–ವ್ಯಾಪಿಸಂ : ಅರ್ಹತ್ಪದವಂ ನೆನೆಯುತ್ತುಮನುಪ್ರೇಕ್ಷೆಯೆ ಮನದೊಳ್ ತಣ್ಮಲೆಯೆ ಸೇಸೆಗೊಳ್ ಖಚರಪತೀ (ಆದಿಪು. ೩-೫೭): ಕಂಪು ತ[ಪಾಠಾಂ.ಕ]ಣ್ಮಲೆಯೆ ಪೂತ ಸುರಯಿಯಿಂ (ಹಂಪಭಾ. ೩-೨೩) ; ಅರ್ಕನೆ ಸಸಿ ದಿವಸಮೆ ರಾತ್ರಿಯಾದುದೆನೆ ಕಲ್ನೆಲೆಯೊಳ್ ವಿಸುಕದೆ ಶಾಂತರಸಂ ಮಾನಸದೊಳ್ ತಣ್ಮಲೆಯೆ ನೆಲಸಿದಂ ಯೋಗೀಂದ್ರಂ (ಚಂದ್ರಪು. ೧೧-೧೩) ; ಓರೊರ್ಮೆ ತಣ್ಮಲೆವ ಕಪ್ಪುರದ ಜಗಲಿಯೊಳ್ ಕರಮೆ ಕೊರಗಿದ ಶರೀರವಲ್ಲರಿಯ ನೀಡಾಡಿ (ವರ್ಧಪು. ೪-೫೮ ವ) ; ಸುತ್ತಿ ನಡೆ ನೋಟ್ಟ ದೇವರ ಮೊತ್ತಂ

ತಣ್ಮಲೆಯೆ ಘುಸೃಣಮಲಯಜರಸಮಂ ಬಿತ್ತರದಿಂ ಕಟಿದವುವಿದ ಮುತ್ತಿನ ಮಾಣಿಕದ ಲಂಬಣಂ ನುಣ್ಬೆಳಗಂ (ಅನಂಪು. ೫-೩೨) : ಸೇದೆಯಂ ನೂಂಕಿ ದೊಂದುಳಿಯಪ್ಪಾ ತಣ್ಮಲೆಯೆ (ಕಾಲೂರ. ೧೫೩-೨೨೫). ೨. (ಅಲಂ) ಹಿತವನ್ನು ಹೊಂದು ; ಸುಖಪಡು : ನೆಗಟ್ದೀ ಷಟ್ಖಂಡಮಂ ಸಾಧಿಸಿದೊಡೆ ಫಲಮೇಂ ಭೋಗದಿಂ ಸಾಧ್ಯಮೇಂ . . . ಪಡೆವೆ ಶಾಶ್ವತ ಶ್ರೀಯನೆಂಬುಜ್ಜುಗದೊಳ್ ಚಿತ್ತಂ ಕರಂ ತಣ್ಮಲೆಯೆ ನೆಱೆಯೆ ನಿಶ್ಚೈಸಿದಂ ಸಾರ್ವಭೌಮಂ (ಆದಿಪು. ೬-೨೬) ; ಎರೆ ಪರಪುಷ್ಪ ಕೇಳಿಲೆ ಮಧುವ್ರತ ಕೇಳ್ . . . ನೆನೆಯುತಿರ್ಪುದು ಕೂರ್ಪುದು ಸೈರಿಸಿರ್ಪುದಗ್ಗಲಿಸಿದ ನಲ್ಮೆ ತಣ್ಮಲೆಯೆ ಬೆನ್ನನೆ ಪೋದಪೆವೆಮ್ಮ ಸ್ವಾಮಿಯಾ (ಆಜಿಪು. ೬-೧೧೨); ಅಂತವೆ ತಣ್ಮ[ಪಾಠಾಂ. ಣ್ಮೆ]ಲೆದು ನಲಿವ ಮನದೊಳ್ ತದೀಯ ವಿರಹೋಪಚಾರಿತ ಚೇಷ್ಟೆಗಳೆ ಮತ್ತಮವಿಚಳಂಗಳಾಗೆ (ವರ್ಧಪು. ೪-೭೨ ವ).

[ ತಣ್$_2$ + ಮಲೆ ? ]

**ತಣ್ಮಲೆಯೆಲರ್** (ನಾ). ಬೆಟ್ಟದ ತಂಗಾಳಿ: ತಣ್ಮಲೆಯೆಲರೊಳಲೆದುದಯ್ ಸಿಪಿರೆವಕ್ಕಿಯ ಸಿಳ್ಪಿನಿಂಚರಂ (ಶ್ರೀರಾಮಾ. ೩೦೧-೮).

[ ತಣ್$_2$ + ಮಲ್$_4$ + ಎಲರ್ ]

**ತಣ್ಮಳಲ್** (ನಾ). = ತಣ್ಬುಟಿಲ್$_1$ : ಭಾಸುರದ ಪೌಳಿಯಂಗಣದಲ್ಲಿ ತಣ್ಮಳಲ ಪೊನ್ನ ಜಗುಲಿಯನಾಗಿಸಿ (ನವಮೋ. ೨೨-೧೭).

[ ತಣ್$_2$ + ಮಳಲ್ (<ಮಣಲ್) ]

**ತ್ಮಣೆಯ್** (ನಾ). ತಂಪಾದ ದೇಹ ; ತಣ್ಣನೆಯ ಒಡಲು.
ತಣ್ಮೆಯ್ಯವೆಟ್ಟ=ಹಿಮಾಲಯ ಪರ್ವತ; ಹಿಮವಂತ: ತ್ಮಣೆಯ್ಯವೆಟ್ಟ ಮಗಳಪ್ಪಾ (ನಂದಿಮಾ. ೧೮-೧೫). [ ತಣ್$_2$ + ಮೆಯ್ ]

**ತಣ್ಣಣ** (ನಾ). ವೀಣೆಯ ಧ್ವನಿ : "ತಣ್ಣಣ [ಪಾಠಾಂ. ತಿತ್ತಣಂ, ತಿಣ್ಣಣಂ] ವೀಣೆಯ ಧ್ವನಿಯಕ್ಕು" (ಮಂಗರಾ. ೨೪-೮).

**ತಣ್ಣಾಳ್ಳಿ** (ನಾ). ಒಂದು ಊರಿನ ಹೆಸರು : ವಡಗಣ್ಣಾ ಸೀಮೆ ಪೆರಮಾಟಿ ಪಡುವಣ್ಣಾ ಸೀಮೆ ತಣ್ಣಾಳ್ಳಿ ಗಾರವಾಟಿ(ಎಕ. XXI, ೨೯-೧೬೮; 8 ನೆಯ ಶತ). [P ಇದು ಹೊನ್ನಾವರದ ಸಮೀಪದಲ್ಲಿರುವ 'ತುಂದೊಳ್ಳಿ' ಇರಬಹುದು.] [ ? + ಪಳ್ಳಿ$_1$ ]

**ತಣ್ಣಾಲಿಗಾಲ್** (ನಾ). ಒಂದು ಕಾಲುವೆಯ ಹೆಸರು : ಅನ್ನೆ ಬನ್ದು ಕಾಯೂರ ಇಗ್ಗಲಿಯ ಅರಿಪುರ ಮೂಜೂರ ಸನ್ನಿನಲ್ಲಿ ತಣ್ಣಾಲಿಗಾಲ ಮೂಡಣ ಪೇರೊಟ್ಟೆಯಿಂ (ಎಕ. III, ನಂಜನ. ೧೩೯-೧೯ ; 916).

[ ತಣ್ಣಾಲಿ$_0$ + ಕಾಲ್$_2$ ]

**ತಣ್ಹೆ** (ನಾ). ತೃಷ್ಣೆ ; ವಿಷಯಲಾಲಸೆ : ತಣ್ಹೆಯರಣ್ಯಮಂ ತರಿದು ತೋರ್ದನರಿಯಟ್ಮಂಗಿಕದ ಧಮ್ಮಮಗ್ಗಂ (ಗಿರಿವಿಂ. ೪೫-೭).

[ <ಪ್ರಾ. ತಣ್ಹಾ. / ಸಂ. ತೃಷ್ಣಾ ]

**ತತ** (ಗು). ೧. ವಿಸ್ತರಿಸಿದ ; ಬಿಚ್ಚಿದ ; ಹರಡಿದ ; ವ್ಯಾಪ್ತವಾದ : ವಿಳಸದ್ವಂದನಮಾಳೆಯಿಂ ತತಪತಾಕಾನೀಕದಿಂ ಕೀರ್ಣಪುಷ್ಪಳಸತ್ಸಂಗದಿ ನಂಗನಾಲಟಹ ವಾದ್ಯವ್ರಾತದಿಂ ಗೀತದಿಂ (ಪುಷ್ಪಪು. ೧೩-೧೧೮). (ನಾ). ೨. ವೀಣೆ ಮೊದಲಾದ ತಂತೀವಾದ್ಯ : "ತತಮೆಂಬುದು ತಂತ್ರಿಯೊಳನ್ವಿತಂ" (ವಸ್ತುಕೋ. ೭೯-೨೫) ; ಅತಿಮೃದುರವದಾಯಿಗಳಂ ತತ ಘನ ಸುಷಿರಾವನದ್ಧ ವಾದ್ಯಂಗಳಂ (ಆದಿಪು. ೫-೩೫); ದಿವಿಜವಾದಕ ಕರಹತ ತತವಿತತಘನ ಸುಷಿರಾವನದ್ಧ ವಾದಿತ್ರಂ ಸಂಗೀತ ತೂರ್ಯಮಾಗೆ(ಶಾಂತಿಪು. ೧೦-೬೦ ವ) ; ತತವಿತತಾದಿ ವಾದ್ಯಪ್ರಸರಮೇಳನದಲಿ ಸೊಗಸಲಾಡುತ್ತ ಕೇಳಿಸಲು (ಬಸವ. ೩೭-೨) ; ತಂತಿಯಂ ಕಟ್ಟಿ ನುಡಿಸುವ ವೀಣಾದಿಕವೇ ತತಮೆನಿಸುವುದು (ವಿವೇಕ. ೨೩೭). ೩. ಗಾಳಿ ; ವಾಯು. ೪. ಭೇರಿ ಮೊದಲಾದ ಚರ್ಮವಾದ್ಯ : ಚರ್ಮತತ ನಿಮಿತ್ತ ಪುಷ್ಕರ ಭೇರೀ ಮೃದಂಗಾದಿ ಪ್ರಭವಂ ತತಮೆಂಬುದು. (ತತ್ತ್ವಪ್ರ. ೨೪೩). [ ಸಂ. ]

**ತತಲೋಚನ** (ನಾ). ವಿಶಾಲವಾದ ಕಣ್ಣು : ವಿರಹಶಿಖಿ ಪ್ರತಪ್ತ ತರುಣೀ ತತಲೋಚನರೋಚಿಯಿಂ (ರಾಜಶೇ. ೭-೯೨). [ ತತ + ಲೋಚನ ]

**ತತಾತಪ**(ನಾ). ಹರಡಿದ ಬಿಸಿಲು: ಸುಳಿಗೊಳುತತ್ತ ಸುಟ್ಟುರೆ ಧರಾರಜಮಂ ಕೆಳೆಗೊಂದೆ ದಂಡದಂತುಳಿದ ತತಾತಪಂ ಬಳಸಿ ಪಲ್ಲವದಂತಿರೆ . . . ಬಟ್ಟ ಬಲ್ಮುಗಿಲ್ವಳಿದುದು ಕಾಲಭೂಪತಿಯ ಪೀಲಿಯ ಸತ್ತಿಗೆಯೊಂದು ಲೀಲೆಯಿಂ (ರಾಜಶೇ. ೮-೯೫). [ತತ + ಆತಪ ]

**ತತಿ$_1$**, ತತು, ತತುವು (ನಾ). ೧. (ಮುಖ್ಯವಾಗಿ ಕೃಷಿಗೆ ಸಂಬಂಧಿಸಿದಂತೆ) ಸರಿಯಾದ ಸಮಯ ; ಹದವಾದ ಕಾಲ: ತತಿ ಮೀರದ ಹಾಗೆ ರಾಗೀ ಅಗೆ ಹೊಯ್ದು (ಸ್ಯಾಂಡರ್. ೨೮) ; ಗಂಗಿ ಹತ್ತಿ ಕೆಂಪುಹತ್ತಿಯನ್ನು ಮೃಗಶಿರ ಆರದ್ರಿ ಪುಷ್ಯ ಮಳೆಗಳಲ್ಲಿ . . . ಬಿತ್ತಬೇಕು. ಈ ಹತ್ತಿಗೆ ಇದೇ ತತಿಯು (ಕೃಷಿಪ್ರ. ೭೬) ; ತತಿಗೆ ಸರಿಯಾಗಿ ಒಂದು ಮಳೆ ಹೊಡೀತು ಅಂದರ ಹದಿನೈದು ಚೀಲ ಕಾಳ ಬರತೈತಿ (ಜಾಬಲ. ೧೦). **ತತು :** ೨. ಸುಗ್ಗಿಯ ಕಾಲ; ಸುಗ್ಗಿ : ಈಗ ಮಾವಿನ ಹಣ್ಣಿನ ತತು (ಕಿಂ). **ತತುವು:** ೧. (೬). [ ದೇ.॥ ತಮಿ. ತೆಲು. ತತಿ ]

**ತತಿ$_2$** (ನಾ). ಗುಂಪು ; ಸಮೂಹ ; ಶ್ರೇಣಿ : ಸಕಲಂ ತತಿ ವ್ರಾತಂ . . . ರಾಶಿ ಚಯ ಕುಳಮೆನಲ್ ಮತ್ತೆ ಸ್ತೋಮಕ್ಕೆ ನಾಮಮಕ್ಕುಂ" (ಮಂಗರಾ. ೧೨೬-೧) ; ಕಳಹಂಸ ಕೋಮಲ ಸ್ವರತತಿಯಿಂ ಕಳಾಪಿಗಳ ಚಾವಳ ನಿಸ್ವನದಿಂ ಬಹುಸಾರಸ ಪ್ರಭಾಸುರ ರುತಿರಾಜಿಯಿಂದೆ ವಿಪುಳಾನದಿ ನಾದಮಯಂ ನಿರಂತರಂ (ಕುಸುಮಾ. ೧-೮೨) ; ಸುಧೆಯು ಜನಿಸಲು , ಯಾ ವಿಬುಧರ ತತಿಗೆಱೆದಮರರ ಮಾಡಿದ್ಯೆ ನೀನು (ಸಂಭಕ. ೮-೯೦). [ ಸಂ. ]

ತತು 'ತತಿ$_1$' ನೋ.

**ತತುಕ್ಷಣ$_1$**, ತಕ್ಷಣ$_1$ (ನಾ). ಆ ಕ್ಷಣ ; ಅದೇ ಸಮಯ : ಮುತ್ತಿದ ಬೂದಿಯೂಱಲೆ ತಚ್ಚತುರ್ಗುಣಮನೆ ಕೊಂಡದನಟ್ಟು ಪೂಸಿದೊಡಂ ತತುಕ್ಷಣದೊಳೆ ಮಾಣಿಸುಗುಂ ಗುದಾಂಕುರದೇಟ್ಗೆಯಂ (ಕೋಕೋಪ. ೯-೧೪೨) ; ಸದುಗುರುವಿನಂಘ್ರಿಸ್ಮರಣೆ ಜನಿಸಲು ಹಿಂಗುವುದು ಗರವದು ತತುಕ್ಷಣಕೆ (ನಿಘಂ. ೪-೧೫-೧೫). **ತಕ್ಷಣ$_1$ :** ತಕ್ಷಣದೊಳರಸನ ತಾಗಿ ದ್ರೋಣನ ಕಣಿಕಿ . . . ಸೆಣಸಿ ನಿಂದನು (ಕುಮಾರವ್ಯಾಸ. ೧೬-೪೮).

[ <ಸಂ. ತತ್‌ಕ್ಷಣ ]

**ತತುಕ್ಷಣ$_2$**, ತಕ್ಷಣ$_2$, ತಚ್ಚಣ (ಅ). ಆ ಕ್ಷಣದಲ್ಲಿ; ಆಗಲೇ; ಕೂಡಲೇ: ಆ ತತುಕ್ಷಣವೊಯ್ದುದಂ ಸಂಪ್ರೀತಿಯೊಳೆ ಮಾಡಿದಳು ಪಾಕವಂ (ಬಸವ. ೨೪-೨೬) ; ಆ ತತುಕ್ಷಣ ಧನುವ ಬಿಸುಟು ವಿಧೂತರಿಪುಬಲ ಪಾರ್ಥನಿದ್ದನು ಹೊತ್ತ ದುಗುಡದಲಿ (ಕುಮಾರವ್ಯಾಸ. ೩-೬೨) : ಪೂತುರೆನುತಂಗದನು ಪುಟನೆಗೆದಾ ತತೂ[ತು]ಕ್ಷಣ ಖಳನ ಮುಂದಲೆಯಾತು ಹಿಡಿದರೆ ಕೊರಳು ಸಿಕ್ಕಿತು ಕೈಗೆ ಹಾರದಲಿ (ಕಾಶಿರಾ. ೨೦-೩೪). **ತಕ್ಷಣ$_2$ :** ಅವನು ತಕ್ಷಣವೆ ಪ್ರಶ್ನಿಸಿದನು (ಪುನರು. ೩೧೧). **ತಚ್ಚಣ :** "ತಚ್ಚಣ – ತತ್ಕ್ಷಣ = ಆಗಲೇ" (ಶಬ್ದಕೋ. ೦೭).

[ <ತತುಕ್ಷಣ$_1$ ]

**ತತುವ**, ತತ್ತುವ (ನಾ). = ತತ್ತ್ವ : ಕಾಯಸೌಖ್ಯಕೆ ಕಾಮಸುಖದ ವಿಡಾಯ ತತುವಕೆ ವೇಡಗೊಂಡು ನವಾಯಿಯಲಿ ದುರ್ಗತಿಗೆ ದುವ್ವಾಳಿಸುವನಲ್ಲೆಂದ (ಕುಮಾರವ್ಯಾಸ. ೮-೩೧). 'ತತುವಮಾರ್ಗ' ಪರ್ಾ. **ತತ್ತುವ :** (೬). [<ಸಂ. ತತ್ತ್ವ ]

**ತತುವಮಾರ್ಗ** (ನಾ). ತತ್ತ್ವದ ಹಾದಿ ; ತತ್ತ್ವಮಾರ್ಗ : ಶ್ರುತಿಕಥಾಭಾಗ ಪದ್ಯ . . . ತತುವಮಾರ್ಗದಿ ನುಡಿವ ಬಲು ಉನ್ನತ ಮಹಿಮರಾ ನೋಡಿದೆ (ತೀರ್ಥಮ. ೬೨). [ ತತುವ + ಮಾರ್ಗ ]

ತತುವು 'ತತಿ$_1$' ನೋ.

**ತತ್ಕಾರು** (ನಾ). (?): ಲಾಹೆರಿಯ ಮಧ್ಯದೇಶಂಗಳೊಳ್ ಮಡಗಿ ತತ್ಕಾರಿನಿಂ ನಿಟ್ಟಸುರೆ ಬೆಳಗಿದರ್ ರಾಗಗಳ ಭೇದದಂತೆ (ಪರಶು. ೨೧-೧೫). 'ತತ್ತಕಾರ' ಪರಾ. [?]

**ತತ್ಕಾಲ** (ನಾ). ಆ ಕಾಲ; ಆ ಸಮಯ; ತಕ್ಷಣ: ಆರ್ಯರಾತ್ಮ ತನುಗಳ್ ತತ್ಕಾಲದೊಳ್ ಮಾಯಮಾಗೆ (ಶಾಂತಿಪು. ೬-೧೨); ಸುತನಂ ಕಂಡುರ್ಬಿ ತತ್ಕಾಲದೊಳ್ . . . ಇತ್ತರಂದು ಸಕಲರ್ಗಾನಂದದಿಂ ವಸ್ತ್ರಮಂ (ಹಮ್ಮಿರ. ೨-೨೪); ಒಂದು ಮನೆಯನ್ನು ನೋಡಿದರೆ ತತ್ಕಾಲದಲ್ಲಿ ಮನುಷ್ಯರು ಕಾಣದೆ ಇದ್ದಾಗ್ಯೂ ಅದು ಮನುಷ್ಯ ಕಟ್ಟಿದ್ದಲ್ಲವೆಂದು ಎಂದಾದರೂ ನೆನಸುವನೋ (ಮುಂಬಯಿ. ೪-೩೯).

[ ಸಂ. (ತದ್ + ಕಾಲ) ]

**ತತ್ಕಾಲಂ** (ಅ). ೧. ಆ ಕಾಲದಲ್ಲಿ; ಆಗಿನ ಕಾಲದಲ್ಲಿ: ದೊರೆಕೊಂಡಿರೆ ಸೊಗಯಿಸುಗುಂ ಪುರಾಣಕಾವ್ಯಪ್ರಯೋಗದೊಳ್ ತತ್ಕಾಲಂ ವಿರಸಕರಮವು ದೇಸಿಗೆ ಜರದ್ದ್ರವಿಪಯಸುರತರ ಸರಸಿಕತಮೋಲ್ (ಕವಿರಾ. ೧-೫೦). ೨. ಕೂಡಲೆ; ಒಡನೆ. [ ಸಂ. ]

**ತತ್ಕಾಲೀನ** (ಗು). ಆ ಕಾಲದ; ಆ ಕಾಲಕ್ಕೆ ಮಾತ್ರ ಸಂಬಂಧಪಟ್ಟ; ತಾತ್ಕಾಲಿಕ: ಪತ್ರಿಕೆಗಳಿಗೆ ಇತಿಮಿತಿಯಿದೆ. ಅವು ತತ್ಕಾಲೀನವಾದವು (ಪತ್ರಿಕಾ. ೫೬). [ ಸಂ. ]

**ತತ್ಕ್ರಿಯ** (ಗು). ನಿರ್ದಿಷ್ಟವಾದ ಕೆಲಸದಲ್ಲಿ ತೊಡಗಿದ. [ ಸಂ. ]

**ತತ್ಕ್ಷಣ** (ನಾ). ಆ ಗಳಿಗೆ; ಅದೇ ಗಳಿಗೆ. [ ಸಂ. (ತದ್ + ಕ್ಷಣ) ]

**ತತ್ಕ್ಷಣಂ** (ಅ). ಆ ಸಮಯದಲ್ಲಿ; ಅದೇ ಗಳಿಗೆಯಲ್ಲಿ; ಕೂಡಲೆ; ಒಡನೆ. [ ಸಂ. ]

**ತತ್ತ₁** (ನಾ). ನಿಜವಾದುದು; ಸತ್ಯ; ತಥ್ಯ: "ತತ್ತ(ತ್ತು) – ತಥ್ಯ = ನಿಜ" (ತದ್ಭವಕೋ. ೧೬). [ <ಸಂ. ತಥ್ಯ ]

**ತತ್ತ₂** 'ತಳ್₂' ಪರಾ.

**ತತ್ತ₃** 'ತಳ್₃' ಪರಾ.

**ತತ್ತಕಾರ** (ನಾ). [ಸಂಗೀತ] ತಾಳಹಾಕುವಾಗ ಮಾಡುವ ಶಬ್ದೋಚ್ಚಾರಣೆ: ಸುರುಚಿರ ಸೂತ್ರಧಾರಕ ತತ್ತಕಾರವ ವಿರಚಿಸಿ ಜವನಿಕದೆಗೆಯೆ . . . ಸುಪ್ರೌಢೆಯರುರು ಪುಷ್ಪಗಳ ಸೂಸಿದರು (ಕಂಪವಿ. ೬-೬೦); ತತ್ತಕಾರವನೆಸಗಿ ಠೆಂಕಕಿಠೆಂಕಕಿಟಮೆನಲು ತಿತ್ತಕಟ ಧಿಕಟ ನಭ ತೊಂಗ ಕಿಟಜಟಟವೆಸಗೆ (ಲಿಂಗಪು. ೨೬-೦೮). [ದೇ.॥ ತೆಲು. ತತ್ತಕಾರ, ತತಕಾರ]

**ತತ್ತನಯ** (ನಾ). ಆತನ ಮಗ: ತತ್ತನಯಂ . . . ಚಾಪಾಗಮಚತುರ ಚತುರ್ಮುಖಂ ಚತುರ್ಮುಖನೆಂಬಂ (ಪಂಪಭಾರ. ೨-೬೨ ವ).

**ತತ್ತನಯರು** = ಆ ಮಕ್ಕಳು: ತತ್ತನಯರೊಳೆನಗೆ ತಾನೆ ದೊರೆಕೊಂಡವಂ ದತ್ತನೆಂದನಂ (ಜೈಮಿಭಾ. ೨೮-೫೬). [ಸಂ. (ತದ್+ತನಯ)]

**ತತ್ತಪಣ** 'ತತ್ತುಪಣ' ನೋ.

**ತತ್ತಪಣಂಗೆಯ್** 'ತತ್ತುಪಣಂಗೆಯ್' ನೋ.

**ತತ್ತಬಳ** (ನಾ). (?): ತತ್ತಬಳ[ಪಾಠಾಂ. ಳಿ]ತಾಳಗೊಟ್ಟಯನುತ್ತೊಂದು [ಪಾಠಾಂ. ತ್ತಾದಂ]ರುಷಿಯರೊಡನೆ ಜಡಮತಿಗಳು ಪೋರುತ್ತಿರ್ಪರ್ (ಸಮುಪ. ೦೯-೧೬). [?]

**ತತ್ತರ, ತತ್ತಟ** (ನಾ). ೧. ನಡುಕ; ಕಂಪನ: ಹತ್ತು ಶಿರದನ ಕರದ ಘಾಯದ ತತ್ತರಕೆ ಬೆಂಡಾಗಿ ದಿವಿಜರು ಅಳಲುತ್ತ ಬಂದರು (ಗಗಕಾ. ೦೩-೩೨); ಕೊಂದಾಗಿ ಮನದೊಳು ನಡುಗಿ ತತ್ತರ ಪುಟ್ಟ (ಯಕೋರ. ೯೧). 'ತತ್ತರಂಗೊಳ್', 'ತತ್ತರಂಬಡೆ' ಪರಾ. ೨. ಅತಿಯಾದ ಆತುರ; ಅವಸರ; ಗಡಿಬಿಡಿ: ತತ್ತರಬೇಡೊಯ್ಯನೊಲ್ಲಾಗಿ ನಿರ್ವಿಸಪ್ಪತ್ತರದ ಭವವಾಸಗಳಾ (ಭರತ. ೬೧-೩೩). ೩. ಕಕ್ಕಾಬಿಕ್ಕಿ; ತಬ್ಬಿಬ್ಬು; ಗಾಬರಿ; ಗೊಂದಲ; ದಿಗ್ಭ್ರಮೆ: ಆನೇ ಗುಂಪುಗಳು . . . ತತ್ತರದಿಂದ ವನದಲ್ಲಿರುವ ಹುಲ್ಲೆ ಮೊದಲಾದ ಮೃಗಗಳನ್ನು ತುಳಿಯುತ ಘೀಳಿಡುತ, ದಿಕ್ಕುದಿಕ್ಕುಗಳಿಗೋಡಿದವು (ಶೃಪಾಳ. ೧೫೦). △ **ತತ್ತಟ**: ೩. ಹಟಾಗವಿಗಳ ಕಬ್ಬಂಗಳ ಹೊಟಗಳಿಯಕ್ಕರದ ಹೊಲಿಗೆ ಬಿರ್ಚಿದೊಡಲ್ಲಂ ಬಟಾ ತಾಟಾಗ ಬೀಟಾಗ ವತ್ತಟತತ್ತಟವೆಕ್ಕಸಕ್ಕಮಸ್ತಂವ್ಯಸ್ತಂ (ಗಿರಿಕ. ೧-೨೩); ದಮನಂ ಹಯಮಂ ಸೆಟಾವಿಡಿದು ನಿಜಪುರಕೆ ಕಳಿವಲೊಡಮಿತ್ತಲ್ ಹಯದ ಬೆಂಬಲದ ಕಾಪಿನಾಳ್ಗಳ್ ತತ್ತಟದಿನೊತ್ತರಿಸಿ ಪತ್ತೆಸಾರ್ದು (ರಾಮಾಶ್ವ. ೧೬-೦೧). 'ತರ್₁', 'ಎತ್ತಟತತ್ತಟ', 'ತಟತಟ' ಪರಾ.

[ ದೇ.॥ ತಮಿ. ಮಲ. ತತ್ತರ; ತೆಲು. ತತ್ತಟ ]

**ತತ್ತರಂಗೊಳ್, ತತ್ತರಂಗೊಳು, ತತ್ತರಗೊಳಂ, ತತ್ತರಗೊಳ್ಳು** (ಕ್ರಿ). ೧. ನಡುಕವನ್ನು ಹೊಂದು; ನಡುಗು; ಕಂಪಿಸು; ತತ್ತರಿಸು: ನಡು ಬಳ್ಕೆ ತತ್ತರಂಗೊಳೆ ನಡೆ ಮುಟ್ಟಿ ನಲ್ಲನಡಿದಾವರೆಯೊಳ್ ಮುಡಿಯಿಟ್ಟು ಮೊಟ್ಟಿದರ್ (ಚಕವಿ. ೬-೨೪೮). **ತತ್ತರಂಗೊಳು**: ಅಬ್ಧಿಯೊಳ್ ಛಾಯೆ ಕಂಗೊಳಿಸೆ ತತ್ತರಂಗೊಳುತುರಗಸಂದೋಹ ನಕ್ರ ನೀರಾನೆಗಳ್ಳುಳಿದಾಟದಿ ಮತ್ತೊಂದನೊಂದರೆದು ಪಾತಾಳದೆಡೆಗೈದೆ (ಪಂಚಾರಾ. ೫-೧-೨೪). **ತತ್ತರಗೊಳು**: ೧. ಇಟ್ಟು ತತ್ತರಗೊಳುತ ಬೀಳುತ ಕೊಟ್ಟ ಕೈಯನು ಪಿಡಿದುಯೇಳುತ (ಕೃಕಶಾರ. ೧-೬೦). ೨. ಆತುರಪಡು: ಹೃದಯದ ಬಯಕೆಯನರುಹಲು ನಾಚುತಲಿರೆ ತತ್ತರಗೊಳುತಿಹ ಬಗೆಯು (ಕವಿಕಾ. ೩೩-೪). **ತತ್ತರಗೊಳ್ಳು**: (ಕ). [ತತ್ತರ+ಕೊಳಂ (<ಕೊಳ್₁)]

**ತತ್ತರಂಗೊಳು** 'ತತ್ತರಂಗೊಳ್' ನೋ.

**ತತ್ತರಂದರಿ** 'ತತ್ತಟಂದಟ' ನೋ.

**ತತ್ತರಂಬಡು, ತತ್ತರಬಡು** (ಕ್ರಿ). ಆತುರಪಡು; ತವಕಿಸು: ಅಮರ್ದಂ ಪೀರ್ವಾಸೆಯಿಂ ತತ್ತರಂಬಡುತಿರ್ಪೊಗ್ಗಿವಿ (ಚಕವಿ. ೪-೯೦). **ತತ್ತರಬಡು**: ತತ್ತರಬಡದೆ ಕಂಗೆಡದೆ ಭುಕ್ತಿಯು ಕಿಚಿತುತ್ತು ತುತ್ತಾಗಿ ಕೈಕೊಂಡು ತುತ್ತಿಗೆ ತಕ್ಕ ಪಾನವ ಕೊಂಡು ಸುಖಿಸಿರಿ (ಭರತ. ೦೯-೩೬).

[ ತತ್ತರ + ಪಡು₁ ]

**ತತ್ತರಂಬಡೆ**(ಕ್ರಿ). ನಡುಕದಿಂದ ಕೂಡಿರು; ಗದ್ಗದವಾಗು: ತತ್ತರಂಬಡೆದ ಮಾತು (ರೀವಣ. ೪೮-೯). [ ತತ್ತರ + ಪಡೆ₁ ]

**ತತ್ತರಗಡಿ** (ಕ್ರಿ). ಚೂರುಚೂರಾಗಿ ಕತ್ತರಿಸು; ಉರವಣಿಸಿ ಪೊಕ್ಕು ಎವೆಯಾಟ ಮಾತ್ರದಲಿ ತತ್ತರಗಡಿದು ಮೆದೆಗೆಡಹಿ (ನವಮೋ. ೨೯-೦೪); ಬಾಣಂಗಳನ್ನು ತತ್ತರಗಡಿದು ನಗುತ (ನವಮೋ. ೩೩-೦೪). 'ತತ್ತಟಂದಟ' ಪರಾ. [ <ತಟ₁ + ಕಡಿ₁ ]

**ತತ್ತರಗುಟ್ಟು** (ಕ್ರಿ). (ಭಯದಿಂದ) ನಡುಗು; ತತ್ತರಿಸು: ಯಾವ ಸಮಯದಲ್ಲಿ ಏನಾಗುವುದೋ ಎಂದು ನನ್ನ ಮನವು ತತ್ತರಗುಟ್ಟುವುದು (ಪಿಶಾಚ. ೧೩೦); ಕಾಲವು ಕಳೆದ ಹಾಗೆಲ್ಲಾ ದೇವೇಂದ್ರನ ಮನವು ತತ್ತರಗುಟ್ಟಲಾರಂಭಿಸಿತು (ಜನ್ನಜೀ. ೦೩೨). [ ತತ್ತರ + ಕುಟ್ಟು₁ ]

**ತತ್ತರಗೊಳು** 'ತತ್ತರಂಗೊಳ್' ನೋ.

**ತತ್ತರಗೊಳ್ಳು** 'ತತ್ತರಂಗೊಳ್' ನೋ.

**ತತ್ತರಣೆ, ತತ್ತರಾಣೆ, ತತ್ರಾಣಿ** (ನಾ). (ಉಕ) ರೈತರು ಹೊಲಕ್ಕೆ ಅಥವಾ ಪ್ರವಾಸಕ್ಕೆ ಹೋಗುವಾಗ ಕೊಂಡೊಯ್ಯುವ ಕುಡಿಯುವ ನೀರಿನ ಪಾತ್ರೆ; ಹೂಜಿಯ ಆಕಾರದಲ್ಲಿದ್ದು ಚಪ್ಪಟೆಯಾಗಿರುವ ಮಣ್ಣಿನ ಪಾತ್ರೆ: ಹಾದೀಯ ಬುತ್ತಿಗಳ ತಗತೀಲಿ ಕಟಿಗೊಂಡು ನೀರಿನ ತತ್ತರಣಿ ತುಂಬ್ಯಾರಾಗ (ಕನ್ನಜಾ. ೩೩೦). **ತತ್ತರಾಣೆ**: ರೊಟ್ಟಿ ಚಟ್ನಿ ಕಟ್ಟಿಕೊಂಡು ನೀರಿನ ತತ್ತರಾಣಿ ಬಗಲಿಗೇರಿಸಿ . . . ಸಜ್ಜಾಗಿ ನಿಂತನು (ಹವನ. ೧೦೬). **ತತ್ರಾಣಿ₁**: ಒಂದು ತತ್ರಾಣಿಯನ್ನು ಗಾಡಿಯ ಕಳಿಗೆಗೆ ಕಟ್ಟಿದನು (ಬಾಬಲ. ೩೩).

[ ←ಮರಾ. ತತ್ತರಣೇ, ತತ್ತರಾಣೇ ]

**ತತ್ತರದರಿ** 'ತತ್ತಱಂದಱ್' ನೋ.

**ತತ್ತರನಡೆ** (ಕ್ರಿ). ಅಸ್ಥಿರವಾದ ಹೆಜ್ಜೆಗಳನ್ನಿಡು ; ತಪ್ಪು ತಪ್ಪು ಹೆಜ್ಜೆಗಳನ್ನಿಡು ; ದಟ್ಟಡಿಯಿಡು : ತತ್ತರನಡೆವ ತೊದಲ್ನುಡಿವ ತಾ ಪೆತ್ತ ಮಾತೆಯನೊಮ್ಮೆ ತೊಡರ್ವ (ಶಾಂತೀಶ. ೮-೧೦). [ ತತ್ತರ + ನಡೆ$_1$ ]

**ತತ್ತರಪಡು** (ಕ್ರಿ). ತಬ್ಬಿಬ್ಬಾಗು: ಪಾಪಿಷ್ಠನಾದ ಬೇಡನು ತತ್ತರಪಡುತ್ತಾ . . . ಓಡಿಹೋಗಿ ಹುಲಿಯ ಬಾಯಿಗೆ ತುತ್ತಾದನು (ಕಥಾಮಂ. IV, ೮೬).
[ ತತ್ತರ + ಪಡು$_1$ ]

**ತತ್ತರಬಡು** 'ತತ್ತರಂಬಡು' ನೋ.

**ತತ್ತರಾಣೆ** 'ತತ್ತರಣೆ' ನೋ.

**ತತ್ತರಿಸು** (ಕ್ರಿ). ೧. ನಡುಂಗು; ಕಂಪಿಸು ; ತಡಬಡಿಸು : ಭೀಕರ ಶಬರಸೇನೆ ಕವಿದುದು ಸರಭಸದಿಂ ದೆಸೆ ಮಸುಳ್ದು ತತ್ತರಿಸುವಿನಂ (ಕುಸುಮಾ. ೧೪-೯೩); ನಡುನಡುಗಿ ಬಟಲ್ದು ತತ್ತರಿಸುತ್ತೆ . . . ಕಳ್ಗುಡಿದು ಸೋರ್ಕೆ ರಮಣಿಯರೆಸೆದರ್ (ಉದ್ಭಟ. ೫-೯೦) ; ಅಂಧಕಾರಣ್ಯದಲ್ಲಿ ನಿಂದು ತತ್ತರಿಸುತಿಹೆನೋ (ಪುರಂದ. ೧-೬-೧) ; ದೊಡ್ಡ ಸಂಸಾರಭಾರವನು ಹೊರುತಾ ಹೆಗಲ ಹೊರೆಯಲಿ ಬಳುಕಿ ತತ್ತರಿಸುತಿರುತಾ ದುಗುಡದಿಂ ಬಳಲುವನು (ಕವಿಪು. ೩೬-೨) ; ಓಣಿಯ ಜನ ತತ್ತರಿಸಿದರು (ಹಬ್ಬಬ. ೮೧). ೨. ತ್ವರೆಗೊಳ್ಳು; ಆತುರಪಡು : ಸುವಿಟನ ತೊಡೆ ಸೋಂಕಿದುತ್ತಮ ಗಣಿಕೆಗೆ ತವಕ ತತ್ತರಿಸುತೇಳ್ವಂತೆ ಅವನೀಶರತ್ನನ ತೊಡೆಸೋಂಕಲೊಡನೆ ವಾರುವಮಣಿ ನಲಿದು ಕುಣಿದುದು (ಭರತ. ೨೯-೨೧). ೩. ಅಲುಗಾಡು ; ಅಲ್ಲಾಡು (?) : ಕಲಧೌತಂ ಪರಿಸೂತ್ರಂ ಸಾಲಮೆನಸುಂ ಕಣ್ಗೊಳ್ಪ ಬೆಳ್ದಿಂಗಳಂ ಪೊಳೆವಿಂದೂಪಳಗೋಪುರಂ ಬೆಳಗಿನಿಂದಂ ಬೀಱ್ ಸಾರದ್ರುಮಂಗಳ ಷಂಡಂ ನೆಱ್ ಸುತ್ತಿ ತತ್ತರಿಸೆ ಮಾನಸ್ತಂಭಮಾಕಾಶಮಂಡಲಮಂ ಚಿತ್ರಿಸೆ ತನ್ನ ರತ್ನರಚನಾರಶ್ಮಿಪ್ರತಾನಂಗಳಿಂ (ಮಹಾನೇ. ೪-೯೬). [ತತ್ತರ + – ಇಸು$_3$]

**ತತ್ತಲಮಗ** (ನಾ). ಯಾವಾಗಲೂ ಸೇವೆಗೆ ಸಿದ್ಧನಾಗಿರುವವನು ; ಜೀತದ ಆಳು : ಆಚಾರವೆ ಪ್ರಾಣವಾದ ರಾಮೇಶ್ವರಲಿಂಗವು ಅವರಿಗೆ ತತ್ತಲಮಗನಾಗಿಪ್ಪನು (ಬಸವೇಶ್ವ. ೯೦)
[ <ತೊಟ್ಟು + ಮಗ ]

**ತತ್ತಲುಗೂಸು** (ನಾ). = ತತ್ತಲಮಗ : ತತ್ತ್ವವಿದೆಯೆಂದು ಮಿಕ್ಕಾದವರಿಗೆ ಹೇಳುವಾಗ . . . ಆ ತತ್ತ್ವವೂ ವಸ್ತುವೂ ತನ್ನ ತತ್ತಲುಗೂಸೇ (ಸರ್ವವ. ೧೨೯-೬೩೪). [ <ತೊಟ್ಟು + ಕೂಸು ]

**ತತ್ತವಣೆ, ತಥಪಣೆ** (ನಾ). ೧. ಜೋಡಣೆ ; ಹೊಂದಿಕೆ : ಉತ್ತಮದ ಗದೆ ವಜ್ರ ಘಂಟೆವಂಕುಶವೆನಿಪ ಪುಟ್ಟೆ ಭರದಿ ಹತ್ತಿರೆಯಿತರೆ ನಸುನಗುತ್ತಲಭವಂ ಭುಜಕೆ ತತ್ತವಣೆಯಾಗಿ ಧರಿಸಿರಲು (ಅಶಿಹಂ. ೨೦-೧೨). "ಅಲಂಕಾರ" (ಅಶಿಹಂ. ಕೋಶ); ಹತ್ತುಸಾವಿರ ಕೈ ಪ್ರಮಾಣದ ಸುತ್ತುವಳಯದ ಮಣಿಯ ಶಿಲೆಗಳ ತತ್ತವಣೆಗಳ ತೆಕ್ಕೆವೆಳಗಿನ . . . ವರವಿಧಾನದಲೆಸೆದುದಾಸ್ಥಾನ (ಕುವ್ಯಾಸ. ೦-೧೪). ೨. ಹೊಂಚಿಕೆ ; ಉಪಾಯ : ಮುತ್ತಯನು ಮಾಡಿದ ನಿಯೋಗದ ತತ್ತವಣೆ ಲೇಸಾಯ್ತು (ಕುವ್ಯಾವಿ. ೬-೨೮). ೩. ವಿಸ್ತಾರ; ಹಬ್ಬುಗೆ : ಮೇರುವಿಗೆ ಪಶ್ಚಿಮದಿಶಾವೃತದಾಚೆ ವಿಸ್ತರದ ಯೋಜನಗಳೆರಡು ಸಾವಿರದಳವಿಯುತ್ತಮದ ನೀಲಪರ್ವತದವಧಿ ದಕ್ಷಿಣಕೆ ನೈಷಧಾಚಲವೆ ಮೊದಲು ತತ್ತವಣೆ ಮೂವತ್ತ ನಾಲ್ಕು ಸಾವಿರ ಯೋಜನ (ಅಶಿಹಂ.೨೬-೬೦). ೪. ರಹಸ್ಯ; ಮರ್ಮ (?): ಅತಿಕಾಮುಕನು ಲುಬ್ಧನು ಶೂರನೆಂಬವನು ಕ್ಷುತ್ತು ಘನವಾಗುಳ್ಳನಿಂತೀ ಹತ್ತುಜನವಾವಾಗ ಧರ್ಮದ ತತ್ತವಣೆಗಳನಱಿಯರೈ (ಕುವ್ಯಾಉ. ೩-೬೬). **ತಥಪಣೆ** : ೧. ಒಬ್ಬೊಬ್ಬರಂ ತರ್ಕೈಸಿ ತಥಪಣೆಗಳೆರಡರೊಪ್ಪಗೆಯಾಗಿ ನೆರೆ ಪೋಲ್ತು ಸುಖನಿದ್ರೆಯೊಳಗಿರಲು (ನವಮೋ. ೨೬-೨೪). 'ತತ್ತ್ರುಪಣ' ಪರಾ.
[ <ತತ್ತು$_2$ ]

**ತತ್ತಳ$_1$** 'ತಟತಟ' ನೋ.

**ತತ್ತಳ$_2$** 'ತಲ' ಪರಾ.

**ತತ್ತಳಂಗೊಳ್, ತತ್ತಳಂಗೊಳು, ತತ್ತಳಗೊಳ್** (ಕ್ರಿ). ಕಂಗೆಡು ; ತಬ್ಬಿಬ್ಬಾಗು ; ದಿಕ್ಕುತಪ್ಪು : ಮತ್ತದಂತಿಯು ತೆಱದಿನೊತ್ತಿ ಭರದಿಂ ಪಾರ್ಥನೊತ್ತಿಗೈತರೆ ಕಂಡು ಹರಿ ವಿಜಯನಂ ಜಱೆಯಲು ತತ್ತಳಂಗೊಳೆ ದೆಚ್ಚು (ಜೈಮಿಥಾ. ೧೪-೧೩). **ತತ್ತಳಂಗೊಳು** : ಅಱೆಯೆನೆಂದರ್ಬಿಸದೆಯಿರಬಹುದೆ ಶ್ರೀಗುರುವೆ . . . ಚಿತ್ತೈಸುವಿದಱೊಳಗೆ ತತ್ತಳಂಗೊಳುವವಗೆ (ದೀಕ್ಷಾಬೋ. ೧೦೦-೬೬). **ತತ್ತಳಗೊಳ್**. 'ತತ್ತಳಗೊಳಿಸು' ಪರಾ. [ ತತ್ತಳ$_1$ (<ತಟತಟ) + ಕೊಳ್$_1$ ]

**ತತ್ತಳಂಗೊಳು** 'ತತ್ತಳಂಗೊಳ್' ನೋ.

**ತತ್ತಳಂಬೀಳು** (ಕ್ರಿ). ಹೆದರು ; ಗಾಬರಿಪಡು ; ಇತ್ತನಾಗ ದಧೀಚಿ ಚೆನ್ನಸ್ಥಿತ್ತ.ಸುರರಿಗೆ ವಿಶ್ವಮಿತ್ರನು ಮತ್ತೆ ಬಹು ಉಪದ್ರ ಕೊಡೆ ತಪ್ಪಿದನೆ ವಾಸಿಷ್ಠಪುತ್ರ ಕೇಳಪ್ಪಧುಗಳು ಸತ್ಕಕೆ ತತ್ತಳಂಬೀಳುವರೆ (ಜ್ಞಾನಸಿಂ.೨೪-೨೪).
[ ತತ್ತಳ$_1$ (<ತಟತಟ) + ಬೀಳು$_1$ (<ಬೀೞ್$_1$) ]

**ತತ್ತಳಗೆಯ್** (ಕ್ರಿ). ಕೋರೈಸು ; ಕುಕ್ಕು : ಸುತ್ತಣ ಮಣಿಗಲ್ಲ ತೊಂಗೋಟೆ ನೋಡಲು ತತ್ತಳಗೆಯ್ವುದಕ್ಷಿಗಳ (ಮೋಹತ. ೩-೩).
[ ತತ್ತಳ$_1$ (<ತಟತಟ) + ಕೆಯ್$_1$ ]

**ತತ್ತಳಗೈ** (ಕ್ರಿ). ತಬ್ಬಿಬ್ಬುಗೊಳ್ಳು. 'ತತ್ತಳಗೈಸು' ಪರಾ.
[ ತತ್ತಳ$_1$ (<ತಟತಟ) + ಗೈ (<ಕೆಯ್$_1$) ]

**ತತ್ತಳಗೈಸು**(ಕ್ರಿ). ಕಂಗೆಡಿಸು; ದಿಕ್ಕು ತೋಚದಂತೆ ಮಾಡು: ಮಾಡಿರುವ ಪಾತಕವು ವ್ಯಾಧಿರೂಪಗಳಿಂದ ಪೀಡಿಸಿ ತನುವ ತತ್ತಳಗೈಸಿ ನೆಲಕಿಕ್ಕಿ ತೀಡಿ ಬಸವಳಿದ ಬಳಿಕ (ಕನಕ. ೨೧೩-೧). [ ತತ್ತಳಗೈ + – ಸು$_1$ ]

**ತತ್ತಳಗೊಳ್** 'ತತ್ತಳಂಗೊಳ್' ನೋ.

**ತತ್ತಳಗೊಳಿಸು** (ಕ್ರಿ). = ತತ್ತಳಗೈಸು : ಎತ್ತಲಡಗಿದಿ ಎನ್ನ ಚಿತ್ತದ ವಲ್ಲಭನೆ ತತ್ತಳಗೊಳಿಸುವುದು ಸೋತ್ತುಮತನವಲ್ಲ (ಮೋಕ್ಷದೀ. ೯೪-೩).
[ ತತ್ತಳಗೊಳ್ (<ತತ್ತಳಂಗೊಳ್) + – ಇಸು$_3$ ]

**ತತ್ತಳಿಕೆ** (ನಾ). ಕಳವಳ ; ತಳಮಳ : ತತ್ತಳಿಕೆಯಂ ಮತ್ತೆ ತಾಳಲಾರದೆ ತಾನೆ ಚಾವಡಿಗಿರದೆ ಪರಿಯಲಾ ಕಾಣಿಸಿತು . . . ಶ್ರೀರಾಮನಕ್ಷುಬ್ಧ ಶರಧಿಸಮ ವಿಗ್ರಹಂ (ಶ್ರೀರಾಮಾ. ೬೮-೧೬) ; ಬಿಂಕದ ಎಡೆಗಡಲುಬ್ಬರವಿಳಿತಕೆ ಸೃಷ್ಟಿಸಿದು ಪ್ರಾಣದ ತತ್ತಳಿಕೆ (ಭಾವಗೀ. ೩೪೫).
[ ತತ್ತಳ$_1$ (<ತಟತಟ) + – ಇಕೆ ]

**ತತ್ತಳಿಸು** 'ತಟತಟಿಸು' ನೋ.

△**ತತ್ತಱ** 'ತತ್ತರ' ನೋ.

**ತತ್ತಱಂತಱ್** 'ತತ್ತಱಂದಱ್' ನೋ.

**ತತ್ತಱಂದಱ್**, ತತ್ತರಂದರಿ, ತತ್ತರದರಿ, ತತ್ತಱಂತಱ್, ತತ್ತಱತಱ್, ತತ್ತಱದಱ್, ತತ್ತಱ್ದಱ್, ತಳ್ತಱವಱ್ (ಕ್ರಿ). ಚೂರುಚೂರಾಗಿ ಕಡಿ ; ಕೊಚ್ಚಿಹಾಕು : ಖದಿರಯುಗಳಮಂ ತಱ್ವಂತೊಂದಿ ನಿಲ್ಲದಿಂದೆ (ದಲ್) ತತ್ತಱಂದಱ್ವೆನೆಂದು (ಶಾಂತಿಪು. ೩-೬೬ ವ); ವೀರರಂ ಧುರದೊಳೆ ತತ್ತಱಂದಱ್ದು ತಳ್ಗಿಸುತ . . . ನೆಗಳ್ದನಕ್ರಮಕಾರಿ .ಜಿತಾರಿ ತಾರಕಂ (ಗಿರಿಜಾ. ೬-೫) ; ನಿನ್ನನೀ ಧುರದೊಳೆನ್ನ ಶರಾಳಿಯ ಕೂರ್ಪು ತತ್ತಱಂದಱ್ಯದೆ (ಮಹಾನೇ. ೬-೨೪) ; ಗಜನಿಕರದೊಳ್ ಕಂಠೀರವಂ ಪೊಕ್ಕು ತತ್ತಱಂದಱ್ವೋಲ್ (ಚಿಟಪು. ೪೩-೯) ; ದುಷ್ಟರಾಕ್ಷಸರಂ ಸಮೂಲಂ ತತ್ತಱಂದಱ್ದುದಱಿಂ ಮೂಜಗಮುಂ ಸೊಗಂ ಬಾಳ್ವುದು (ರಾಮಾಶ್ವ. ೦೨-೧೩). **ತತ್ತರಂದರಿ**: ಸಿಂಹವಕ್ತ್ರನ ಸೇನೆಯಂ ಬಿಡದೆ ತತ್ತರಂದರಿವುತಿರೆ (ಪೋರಾಸು. ೬೯-೨೨). **ತತ್ತರದರಿ** : ಅವನ ಸೈನ್ಯದವರಸ್ತ್ರೊ ತತ್ತರದರಿಂದೇ ತೀರಿಸೋಣ (ಏಗದ. ೫೨-೨). **ತತ್ತಱಂತಱ್** : ಗಾಣದೊಳಿಕ್ಕಿ ಪಿಱ್ವ

ಕೀಸಿ ಸಾಸಿವೆಯಂ ಬಱಿವ ತತ್ತಱಿಂ[ಪಾಠಾಂ. ಟ] ತ[ಪಾಠಾಂ. ದ]ಱಿವ ಪಲತೆಱದ ದಂಡನೆಗಳುಂ (ವರ್ಧಮಾ. ೧೧-೪೭ ವ). **ತತ್ತಱತಱಿ**: ಗೋವರಣ್ಕೆ ಬರೆ ಪಾಯಿಸಿ ಘೋಟಯಿಲರ್ ತಗುಳ್ದು ತತ್ತಱತಱಿ [ಪಾಠಾಂ. ಳ್ದಱಿದಿಱಿ, ಳ್ದಱದಿಱಿ]ದಿಕ್ಕಿ ದೇಗುಲಕೆ ಪೆರ್ಮುರನಂ ಕಡಿವಂತೆ ಮಾಡಿದರ್ (ಶಂಖಭಾ. ೮-೯೩); ಬಾಗಿಲೊಳ್ ಮುಸುಱಿ ನಿಂದ ಘಟಾವಳಿಯಂ ತೆರಳ್ಚಿ ತತ್ತಱದಱಿದೊತ್ತಿ ಪೊಕ್ಕನಭಿಮನ್ಯು ವಿರೋಧಿ ಬಳಾಂಬುರಾಶಿಯಂ (ಶಂಖಭಾ. ೧೧-೯೩); ಸುತ್ತಿದ ಅಪ್ಪುವುದಂಗಳನೆಲ್ಲವ ತತ್ತಱದಱಿದನು ತನುಗುಣಂಗಳ (ಶಿವಗೀ. ೨೪೯); ತತ್ತಱದಱಿದು ಹೊಯ್ದಾಡಿದರ್ದು ಗುಜ್ಜರದ ರಾವುತರು (ಕುಮಾ.ಭೀ. ೪-೬೦); ಅನಿತು ಬಲವಂ ಕರದ ಚಕ್ರದಿಂ ತತ್ತಱದಱಿದು (ಕೃಮಿಭಾ. ೨೦-೩೦). **ತತ್ತಱಿದಱಿ**: ಹಸಿವು ತೃಷೆ ವಿಷಯವೆಂಬ ಮರಂಗಳನೆ ಕಂಡು ಪರಿಣಾಮವೆಂಬ ಕೊಡಲಿಯಲ್ಲಿ ತತ್ತಱಿದಱಿದು (ಚನ್ನವ. ಶ. ೧೦೯-೨೬೭); ಅಳ ತತ್ತಱಿದಱಿದು ತಳಪಟ ಮಾಡಿದನು ದ್ರೋಣ (ಕುಮಾ.ದ್ರೋ. ೧೮-೪೭); ಶ್ರೀಗಿರಿಯಲ್ಲಿ ಗೆಯ್ದು ತನುವ ತತ್ತಱಿದಱಿದನಘನೆಂದೆನಿಸಿಕೊಂಡನು (ಭೈರವೇ. ೧-೩೪೦). **ತಳ್ತಱಿದಱಿ**: ಭಾಳ ಕೀಲಿಕ್ಕೊನೆಯಿಂ ತಳ್ತಱಿದಱಿ [ಪಾಠಾಂ.ಟಮಾಱಿ] ದುಬ್ಬರವೆಂಬಿವನಱಿದಿಱಿದರ್ ಪೆಣಬಣಂಬೆಗಳ್ ನೆಗೆವಿನೆಗಂ (ಶಂಖಭಾ. ೧೧-೮೩).

**ತತ್ತಱಿಂದಱಿಯಿಸಿಕೊಳ್** = ಚೂರುಚೂರಾಗಿ ಕತ್ತರಿಸಿಕೊಳ್ಳು : ಹೊತ್ತಗಾಯದೊಳುರುಳಬೀಳುವರ್ಗಡಿಯಿಲ್ಲತತ್ತಱಿಂದಱಿಯಿಸಿ ಕೊಳುತ್ತ ಹೊಯ್ದಾಡುವರ್ಗಡಿಯಿಲ್ಲ (ಸಮ್ಯಕ್ತ್ವ. ೮-೪೧). [ <ತಱಿ$_1$ ]

△ **ತತ್ತಱಗೊಳ್** (ಕ್ರಿ). ಕಂಗೆಡು ; ತಬ್ಬಿಬ್ಬಾಗು ; ದಿಕ್ಕುತಪ್ಪು: ಭೂಪಾಲರ ಪಡೆ ತಳವೆಳಗಾಗಿ ತತ್ತಱಗೊಳುತ . . . ಕವಿದುದು (ಕರ್ಣಪ. ೩-೧೭).

[ ತತ್ತಱ (<ತತ್ತರ) + ಕೊಳ್$_1$ ]

**ತತ್ತಱತಱಿ** 'ತತ್ತಱಿಂದಱಿ' ನೋ.

**ತತ್ತಱದಱಿ** 'ತತ್ತಱಿಂದಱಿ' ನೋ.

**ತತ್ತಱಿದಱಿ** 'ತತ್ತಱಿಂದಱಿ' ನೋ.

**ತತ್ತಟ** 'ತಟತಟ' ನೋ.

**ತತ್ತಟಗುದಿ** 'ತಟತಟಗುದಿ' ನೋ.

**ತತ್ತಟದುಱಿ** 'ತೊಟ್ಟುಱಿದುಱಿ' ನೋ.

**ತತ್ತಾತಿತ್ತಿ** (ನಾ). (?): ಹುಟ್ಟುವಾತ ಮದ್ದಳೆಯ ಕಟ್ಟದ ನಡೆವಾತ ತಾಳವನೊತ್ತಿದ ಬಿಡುವಾತ ಶ್ರುತಿಯನೆತ್ತಿದ ತತ್ತಾತಿತ್ತಿಯೆಂಬಾಟ ಇತ್ತಲೆ ಉಳಿಯಿತ್ತು (ಅಂಬಿಪ. ೨೦೬-೨); "ಆತ್ಮತ್ರಯಂಗಳಲ್ಲಿ ಕೂಡಿ ಪ್ರವರ್ತಿಸುತ್ತಿರ್ಪರೆಂಬುದೀಗ ತತ್ತಾತಿತ್ತಿಯೆಂಬಾಟಯೆಂಬ ಶಬ್ದಕ್ಕರ್ಥ" (ಅಂಬಿಪ. ಟೀಕು). [ ? ].

**ತತ್ತಿ** (ನಾ). ಮೊಟ್ಟೆ ; ಅಂಡ : "ಅಂಡಂ ತಾಂ ತತ್ತಿ" (ಶಬ್ದಕೋ. ೪೦-೧೧); "ಪೇಶೀ, ಕೋಶ,ಅಂಡಂ – ಈ ೩ ತತ್ತಿ" (ನಾಚಿರಾ. ೦೦೩); ಓವದೆ ರಣದೊಳ್ ಮಕ್ಕಳನಾಂ ಕೊಂದೊಡೆ ತನ್ನಿಕ್ಕಿದ ತತ್ತಿಯನೆ ಪಾವು ನೊಣೆವಂತಕ್ಕುಂ (ಶಂಖಭಾ. ೧೧-೦೩); ನೆಲಕ್ಕೆ ಬಿಟ್ಟೊಡೆದ ಪಲ್ಲಿಯ ತತ್ತಿಯೊಳಗಿರ್ದ ಮಱಿ ಕಲದೊಳಿರ್ದ ಮಕ್ಷಿಕಮಂ ಓಡಿದುಕೊಳ್ವುದಂ ಕಂಡು (ಜಾವುಂಪು. ೯೯-೦೩); ನೆಗೆದ ಮುಗಿಲ್ವೊಯ್ಲಿಂ ತಾರಗೆಗಳ್ ಒಡೆದೊಡೆದು ಸೂಸಿದಪ್ಪುವೆನಲ್ ಮಿಂಚುಗಳಿಕ್ಕುವ ತತ್ತಿಗಳೆನಲುಗು ತಂದವು ತುಱುಗಿ ತೋರವನಿ ಪೊಸಗಾರೊಳ್ (ಮಲ್ಲಿಪು. ೮-೮೭); ತಾರಗೆಗಳ ತತ್ತಿಗಳಂ ಕಾರಿರುಳೊಳ್ ಕಱಿವ ಗಗನಲಕ್ಷ್ಮಿಪೊಲ್ (ಸೂಕ್ತಿಸು. ೬-೧೭); ತರಣಿಬಿಂಬದ ತತ್ತಿಗಳನುತ್ತರಿಸಿ ತೋಱುವ ತಿಮಿರವುಂಟೇ (ಕುಮಾ.ಶ. ೦೬-೩೭). [ ದೇ.॥ ತುಳು. ತತ್ತಿ ]

**ತತ್ತಿಕ್ಕು** (ಕ್ರಿ). "ಆಲಿಂಗಿಸು, ಸೇರಿಸು" (ಸಿದ್ಧರಾ. ಕೋಶ.) : ಹೊತ್ತ ಮದನನ ವೇಷವವಯವದೊಳತಿ ಚೆಲುವುವೆತ್ತ ರತಿಕಲಹಚಿಹ್ನಂ ಹಸಿಯ ಹರೆಯ ಕೈ ತತ್ತಿಕ್ಕಿದಡದ ಕೋಮಳೆವೆರಸಿ ಬಂದು ವಂದಿಸಿ ನಿಂದು ನೀಲಪಟನು (ಸಿದ್ಧರಾ. ೪-೬೧). [ ತತ್ತು$_4$ + ಇಕ್ಕು ]

**ತತ್ತು$_1$** (ಕ್ರಿ). ಆಲಿಂಗಿಸು ; ಅಪ್ಪು : ಜಪವನಲುಕುತಂ ಕುಲುಕುತಂ ಇಷ್ಟಲಿಂಗವ ಪಣೆಯೊಳೊತ್ತುತಂ ತತ್ತುತಂ ಶಿಷ್ಟಪೂಜೆಯ ತೋಱಿಯ ಸನಕಂ ವ್ಯಸನಕಂ ವ್ಯಾಪರಿಪನೆ ಶರಣನು (ಷಶಿಲ. ೩-೬೩). [<ತಟ್$_1$]

**ತತ್ತು$_2$** (ನಾ). ೧. ಸೇರಿಕೊಂಡಿರುವುದು ; ಸಂಬಂಧಿಸಿರುವುದು ; ಹೊಂದಿಕೆ; ಜೋಡಣೆ; ಸಂಬಂಧ : ತಿರುಳು ಅಂಕುರ ನಾಸ್ತಿಯಾದಲ್ಲಿ ಸಿಪ್ಪೆ ಹುಟ್ಟುವುದಕ್ಕೆ ಉಭಯದ ತತ್ತಿಲ್ಲದಾಗದು (ಅಱಮಾ. ೧೬೯-೧೬೧) ; ಕುಂಭಗಳ ಹುದುಗಿಕ್ಕಿದ ಕಿಚ್ಚು . . . ಒಳಗೆ ಮುಟ್ಟಿದಡೂ ಹೊಱಗೆ ಮುಟ್ಟಿದಡೂ ಪಾಕಪ್ರಯತ್ನ ತಪ್ಪದಾಗಿ ಇಂತೀ ಗುಣದಂತೆ ಹೊಱಗಣ ಕ್ರಿಯಾಪದ ಒಳಗಣ ಜ್ಞಾನಸಂಭವ ಉಭಯದ ತತ್ತಿಲ್ಲ (ಮುದೇವ. ೨೬೭-೨೭). ೨. ಹಂಚಿಕೊಂಡ ಭಾಗ,-ಪಾಲು : ಮಹಾಜನಂಗಳು ತಂವೊಳು ಸರ್ವೈಕ್ಯವತ್ತವಾಗಿ ತಮಗೆ ಪ್ರವಿಷ್ಟವಾದ ಭೂರಣನ ನಿರುಗುಂದದ ಹಳ್ಳಿಗಳನು ಧ್ರುವವುಂಡಿಗೆಯಾಗಿ ಹಚ್ಚಿಕೊಂಡ ಕ್ರಮ ಆನೆಗನ ಕಱಿ ಆ ಕಾಳಬೋವನಹಳ್ಳಿ ಮಂಚಗೌಡನಹಳ್ಳಿ ತತ್ತು ೧ ಕಂ ವ್ರಿತ್ತಿ ೨೪ . . . ಅಜ್ಜಗೌಡನಹಳ್ಳಿ ಕುನಿಕಿಲ ಹಳ್ಳಿ ತತ್ತು ೧ ಕಂ ವ್ರಿತ್ತಿ ೨೭ ಅನ್ತು ತತ್ತು ನಾಲ್ಕಕಂ ವ್ರಿತ್ತಿ ನೂಱು (ಎಕ. XII, ತಿಪಟೂ. ೪೧-೪೩; 1324) ; ಮಾರುಗಡಿಗೆಯ ಮಲ್ಲರಸಯ್ಯಂಗಳ ತತ್ತಿನ ಹೊಂನೆಯನ ಹಳ್ಳಿ . . . ಆ ತತ್ತಿನ ವ್ರಿತ್ತಿ ಹನ್ನೊಂದಱವೊಳಗಣ ವ್ರಿತ್ತಿಗಳಿಗೆ ಹಳ್ಳಿವಿವರಣೆಗಳಾಗಿ . . . ಮಾಡಿಕೊಂಡ ಕ್ರಮ (ಮೈಆರಿ. ೧೯೪೦, ೧೧-೧೨ ; 1360) ; ಗುಂಭಳ್ಳೀ ಗ್ರಾಮದಲ್ಲಿ ಕಾಗಲವಾಡೀ ತತ್ತಿನ ಮಹಾಜನರಿಗೆ ಬಿಡಿಸಿಕೊಟ್ಟ ಹೊಲಕ್ಕೆ ನೆಟ್ಟ ಕಲ್ಲ ವಿವರ (ಎಕ. III, ತಿರುಮ. ೬೩-೫೬೦ ; 1748).

**ತತ್ತುಮಾಡಿಸು** = ಸೇರುವಂತೆ ಮಾಡು ; ಸೇರಿಸು : ಎತ್ತಿ ಬರೆಯಿಸಿ ಖಾನರ ರಾಜ್ಯಂಗಳ ತತ್ತುಮಾಡಿಸಿ ಬಾದುರಗೆ ಇತ್ತನು (ಕಾರಾಸಾಂ. ೧೮-೯೮). **ತತ್ತುಹಾಕು** = (ಕರಾ) (ದನಗಳನ್ನು) ಜೊತೆಯಾಗಿ ಕಟ್ಟು : ಇಷ್ಟು ಕಿರಿಯಗಲದ ದಾರಿಯಲ್ಲಿ ದನಗಳಿಗೆ ತತ್ತುಹಾಕಿ ಹೊಡೆದರೆ ನಡೆಯಲಾಗಲಿಕ್ಕಿಲ್ಲ (ರೂಢಿ). [ <ತತ್ತು$_1$ ]

**ತತ್ತು$_3$** (ನಾ). ೧. ಎಡಹುವಿಕೆ; ಮುಗ್ಗರಿಸುವುದಂ: (ಸ). ೨. ಅಪಾಯ ; ಗಂಡಾಂತರ ; ದುರದೃಷ್ಟ : ಕರವೊಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋತ್ಕರದ ವಿಪತ್ತು ತಾರಗೆಗಳ ತತ್ತು [ಪಾಠಾಂ. ತುತ್ತು, ಕರ್ತು]ಸುಧಾಂಬುಧಿಯೊತ್ತು . . . ಮೂಡ ದೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ (ಗಿಱಿಶ. ೪-೮೩) ; (ಪುಷ್ಪಾಸ್ತ್ರ. ೧-೧೧೭ ನೋ.).

[ ದೇ.॥ ತಮಿ. ತತ್ತು ]

**ತತ್ತು$_4$** (ನಾ). ಅದು ; ಪರಮಾತ್ಮ : ಭಕ್ತನ ತತ್ತು ಕುಱುಹಿನ ಇಷ್ಟ ಐಕ್ಯನ ತತ್ತು ಕುಱುಹಿನ ಕಳೆ (ಕಲ್ಯಾಣಶಿ. ೨೯೪-೩೮). 'ತತ್ತುಗೊತ್ತು' ವರಾ.

**ತತ್ತಾಗು** = ಅದು ಆಗು ; ಪರಮಾತ್ಮನಾಗು : ಆತ್ಮಘಟ ಮಧ್ಯದಲ್ಲಿ ನಿಂದು . . . ಬಾಯಲ್ಲಿ ಉಱುಬಂತೆ ಪಂಚೇಂದ್ರಿಯಕ್ಕೆ ತತ್ತಾಗಿ ಹಂಚಿಕೊಂಡಿಹುದು ಒಂದೆ ಆತ್ಮ (ಅಱಮಾ. ೧೪೪-೧೪೯); ಕತ್ತಲೆಯು ಬೆಳುದಿಂಗಳೆಂಬೆರಡು ಕುಱುಹಿಲ್ಲದತ್ಕಮಲ ದಿವದಲ್ಲಿ ಬಱಿಯ ಬಿಸಿಲಿಪ್ಪಂತೆ ತತ್ತಾದ ಪುಣ್ಯಪಾಪದ ಕುಱುಹಿಗೆಡೆಗುಡದ ಭಕ್ತಿಯೆನಿಸುವ ಪದದಲಿ ನಿತ್ಯವೆನಿಸುವ ಶೈವತೇಜವೇ ತೊಳಗಿ ಬೆಳಗುತಿಪ್ಪುದು (ಲಶಿಚಂ. ೫೪-೪೩); "ಯಥಾರ್ಥವಾದ, ಅದರತನ ಒದಗಿದ, ಸಂಬಂಧಿಸಿದ" (ಲಶಿಚಂ. ಕೋಶ). [ <ಸಂ. ತದ್ ]

**ತತ್ತು$_6$** 'ತಳ್$_3$' ಪರಾ.

**ತತ್ತುಕ**(ನಾ). ಜೊತೆಯಂವ ; ಗೆಳೆಯ ; ಜೊತೆಗಾರ (?) : ಹುತ್ತಿನಿಂ ಫಣಿವೆರಸಿ ಕೆಡೆಯೆ ಕಂಡೊಡನಿರ್ದ ತತ್ತು[ಪಾಠಾಂ. ಜತ್ತ]ಕಂಗಳು ಹೆದಱಿ ಬಿಟ್ಟೋಡಿ ಹೋದರೂರತ್ತಲ್ (ಹಪಕಾ. ೧೨-೧೦) : "ಬಾಲಕ" (ಶ್ರಧಮ್ಮ): "ವಟು" (ಷಟ್ಪನಿ). [ ತತ್ತು$_2$ + – ಕ$_3$ ]

**ತತ್ತುಗಾಱಿಕೆ** (ನಾ). ಪರಸ್ಪರ ಹೊಂದಾಣಿಕೆ : ಎತ್ತ ನಡೆದಳವಳೆಡಬಲ ಕೊಳೆದಳಿನ್ನತ್ತ ಬಂದಂತಾಯ್ತು ನಿಮ್ಮ ತತ್ತುಗಾಱಿಕೆಯ ಬಲ್ಲೆನು ಸುಮ್ಮನಿರಿಯೆಂದು ಒತ್ತಿ ನುಡಿದನು ರಾಣಿಯರ (ಭರಚ. ೧೪-೧೨೫).
[ ತತ್ತು$_2$ + – ಕಾಱ + – ಇಕೆ ]

**ತತ್ತುಗೊತ್ತು** (ನಾ). "ತತ್ತ್ವದ ಗೊತ್ತು, ನಿಜದ ತಿಳಿವಳಿಕೆ" (ಪ್ರೌಢಮೂ. ಕೋಶ) : ಇಷ್ಟಲಿಂಗಕ್ಕು ಪ್ರಾಣಲಿಂಗಕ್ಕು ತತ್ತುಗೊತ್ತಲ್ಲದೆ ಬೆಚ್ಚಂತಿರಬಲ್ಲರೆ ಆತನೇ ಇಷ್ಟ – ಪ್ರಾಣ – ತೃಪ್ತವುಕ್ತನೆಂಬೆ(ಪ್ರೌಢಮೂ. ೧೯-೬೨) : ನಿನ್ನಂಗವೆನ್ನಂಗದಲ್ಲಿ ಪ್ರೇರಿಸಿ ನಿನ್ನಲಿವು ಎನ್ನಾತ್ಮನಲ್ಲಿ ನಿಂದು ಅಱಿವಹನ್ನಕ್ಕ ನನಗೂ ನಿನಗೂ ತತ್ತುಗೊತ್ತು (ಸರ್ವಪ. ೫೮-೩೦೩) : ರೂಪುರುಚಿಯಾಗುವ ಭಾವ ನಿನ್ನೊಡನೆ ನನಗೂ ನಿನಗೂ ತತ್ತುಗೊತ್ತು (ಸುಂಕಬಂ. ೪೪) ; ಮನ ವಚನ ಕಾಯ ತ್ರಿಕರಣಶುದ್ಧವಾಗಿ ಭಕ್ತಂಗೆ ಸತ್ಯ ವಿರಕ್ತಂಗೆ ಜ್ಞಾನವೆಂದು ತತ್ತುಗೊತ್ತನಿಕ್ಕಿ ಹಚ್ಚಿ ಹಾಯ್ಕಿದಲ್ಲಿ ಈ ಉಭಯದ ಚಿತ್ರದಲ್ಲಿ ವೇದಿಸುವ ವಸ್ತು ಆವುದು (ಮಾಧೂಳ. ೪೬೩-೭೯).
[ ತತ್ತು$_6$ + ಗೊತ್ತು ]

**ತತ್ತುಗೊಳ್** (ಕ್ರಿ). ಕೂಡಿಕೊಳ್ಳು ; ಸೇರಿಕೊಳ್ಳು : ತತ್ತುಗೊಂಡಿಹ ಮಹಾದೋಷಗಳು ನಾಲ್ಕು (ರತ್ನಶಾ. ೨೦-೦೩). [ ತತ್ತು$_2$ + ಕೊಳ್$_1$ ]

**ತತ್ತುಪಣ**, ತತ್ತ್ರಪಣ (ನಾ). ಜೊತೆಗೊಳಿಸುವಿಕೆ; ಹೊಂದಿಕೊಳ್ಳುವಿಕೆ: ನಿತಂಬಿನಿ ನಾನಾಪ್ರಕಾರದ ತತ್ತುಪಣಂಗಳಿಂ ಜೊತ್ತಿಸಿ ವಶೀಕೃತಂಮಾಡಿ (ಸುಕುಮಾ. ೭-೧೩ ವ). 'ತತ್ತುಪಣಂಗೆಯ್' ಪರಾ. **ತತ್ತ್ರಪಣ** : 'ತತ್ತ್ರಪಣಂಗೆಯ್' ಪರಾ. 'ಜಾಣಪಣ' ಹೋ.
[ ತತ್ತು$_2$ + – ಪಣ$_1$ ]

**ತತ್ತುಪಣಂಗೆಯ್**, ತತ್ತ್ರಪಣಂಗೆಯ್ (ಕ್ರಿ). ಜೊತೆಗೊಳಿಸು (?) : ಮೇಗುದೋಱುವರ್ ತತ್ತುಪಣಂ[ಪಾಠಾಂ. ವಳ್ತುಳ್ತುಪಣಂ]ಗೆಯ್ವರ್ ಮೆಳ್ಪಡಂ ನುಡಿವರ್ (ಮುದಶಿ. ೧೦-೭೫). **ತತ್ತ್ರಪಣಂಗೆಯ್** : ನಿಜ ತನೂಜಂಗೆ ವಿವಾಹೋತ್ಸವಮಂ ಮಾಡಲೆಂದು ಮನದೊಳ್ ಮಂತಣಮಿರ್ದು . . . ತನ್ನ ಬಲ್ಲಂದದೊಳೆಲ್ಲಂ ನುಡಿದೊಡಂಬಡಿಸಲೆಂದು ಕೆಲಕ್ಕೆ ಬಂದು ಕೆಯ್ಯನೊತ್ತಿಯುಂ ಕಾಲನೊತ್ತಿಯುಂ ತತ್ತ್ರ[ಪಾಠಾಂ. ತ್ತು]ಪಣಂಗೆಯ್ದು (ಅಜಿಪು. ೫-೯೫ ವ). [ ತತ್ತ್ರಪಣ + ಕೆಯ್$_1$ ]

**ತತ್ತುವ** 'ತತುವ' ನೋ.

**ತತ್ತ್ವ**(ನಾ). ೧. ಪರಮಾತ್ಮನ ಸ್ವರೂಪವೇ ಆಗಿರುವ ಆತ್ಮನ ಸ್ವರೂಪ. ೨. ದಿಟ; ಸತ್ಯ: ಸಾವುಂ ಪುಟ್ಟುಮದಿಲ್ಲದನಾವನವಂ ದೇವನಾತನೆಂದುದೆ ತತ್ತ್ವಂ (ಶಂಪಶಂ. ೧೨೦-೧೬) ; ಬಿಸುಟು ಮಿಥ್ಯಾಮಾರ್ಗಮಂ ಮಾಯೆ ಲೌಕಿಕಮಂ ತತ್ತ್ವವಿರುದ್ಧಮಂ ಕುಮತವಮಂ (ಸುಕುಮಾ. ೧-೪೬) ; ತತ್ತ್ವವನಱಿದೆನೆಂದು ಮೃತ್ಯುವ ಕರೆಕೊಂಡೆನಯ್ಯಾ (ಬಸವ. ೩೨೬). ೩. ಸಾರಭೂತವಾದ ಗುಣ ; ಸಾರಸತ್ತ್ವ. ೪. ಮೂಲಭೂತವಾದ ವಸ್ತು; ಭೂಮಿ, ನೀರು, ತೇಜಸ್ಸು, ಅನಿಲ, ಆಕಾಶವೆಂಬ ಪಂಚ ಮಹಾಭೂತಗಳು : "ಭೂಸಲಿಲ ತೋಜೋನಿಲಾಕಾಶಮಿವು ತತ್ತ್ವ ಭಾಷೆಯಕ್ಕು" (ಮಂಗರಾ. ೦೬-೧೪). ೫. ಸೃಷ್ಟಿಯ ಎಲ್ಲ ವಸ್ತುಗಳಲ್ಲಿಯೂ ಇರುವ ಸತ್ತ್ವ, ರಜಸ್ಸು, ತಮಸ್ಸೆಂಬ ಮೂರು ಗುಣಗಳು. ೬. (ಸಾಂಖ್ಯದರ್ಶನದ ಪ್ರಕಾರ) ಮೂಲಭೂತವಾದ ಇಪ್ಪತ್ತೈದು ವಸ್ತುಗಳು : "ಪ್ರಕೃತಿ ಮಹತ್ ಅಹಂಕಾರ, ಕಣ್ಣು ಮೊದಲಾದ ಜ್ಞಾನೇಂದ್ರಿಯಗಳು ಐದು, ವಾಕ್ಕು ಮೊದಲಾದ ಕರ್ಮೇಂದ್ರಿಯಗಳು ಐದು, ಉಭಯ ಸ್ವರೂಪವಾದ ಮನಸ್ಸು, ತನ್ಮಾತ್ರೆಗಳು ಐದು, ಆಕಾಶಾದಿ ಭೂತಗಳು ಐದು ಜೀವಾತ್ಮನೂ ಸೇರಿ ಇಪ್ಪತ್ತೈದು ತತ್ತ್ವಗಳು" (ಹಿಂದಸಾ. ೫೫). ೭. ಇಪ್ಪತ್ತೈದು ಎಂಬ ಸಂಖ್ಯೆಯ ಸಂಕೇತ: "ತತ್ತ್ವಮಿಪ್ಪತ್ತೈದು" (ಮಂಗರಾ. ೦೦೪-೯). ೮. ಸಿದ್ಧಾಂತ ; ನಿಯಮ ; ಸೂತ್ರ : 'ಮುಯ್ಯಕ್ಕೆ ಮುಯ್ಯ' ಎಂಬ ತತ್ತ್ವವನ್ನು ಲೋಕಮಾನ್ಯ ಟಿಳಕರು ಪ್ರತಿಪಾದಿಸಿದರೆ . . . ಮೋಸಕ್ಕೆ ಸತ್ಯವೆಂದು ಮಹಾತ್ಮಾ ಗಾಂಧೀಜಿಯವರು ಸಾರಿದರು (ಧರ್ಮಸಾ. ೧೪೮). 'ತತ್ತ್ವಪ್ರಣಾಲಿ' ಪರಾ. ೯. ಆಗಮದ ರೀತಿಯಲ್ಲಿ ಉಕ್ತವಾದ ೩೬ ತತ್ತ್ವಗಳು : ಷಟ್ತ್ರಿಂಶ ತತ್ತ್ವಕ್ಕತೀತ ಕೂಡಲಸಂಗ (ಬಸರ. ೦೩-೬೭) ; ಆಗಮ ರೀತ್ಯಾ ಷಟ್ತ್ರಿಂಶ ತತ್ತ್ವಗಳು (ವಿವೇಕ. ೧೬೨). ೧೦. ಅರ್ಥ; ತಾತ್ಪರ್ಯ: ಸಂಧಿ ವಿಭಕ್ತಿ ಸಮಾಸಗಳಂದಮನವಱಿಡೆಯೊಳ್ಪಿದೆ ತುಱುಗಿದ ತತ್ತ್ವದ ಬಂಧಮನಱಿಯದೆ ಪೇಟ್ವಂ ಮಂದಿಯ ಕಂಡೂಳ್ವ ನಾಯ ನಿಷ್ಕಾರಣದೊಳ್ (ಜಕುನಿ. ೧೩೬). ೧೧. [ಕಾವ್ಯಮೀ] ಶ್ಲೇಷಾಲಂಕಾರಗಳಲ್ಲಿ ಒಂದು ಬಗೆ; ಒಂದು ಅರ್ಥದ ಜೊತೆಯಲ್ಲಿಯೇ ಮತ್ತೊಂದು ಅರ್ಥವು ಬರುವಂತೆ ಮಾಡುವ ವರ್ಣನೆ : ಬಗೆಗೆ ಪೆಱತರ್ಥಮೊಂದಂ ನೆಗಟ್ಚುತಂ ನೆಗಟ್ವ ತತ್ತ್ವವರ್ಣನೆ ತತ್ತ್ವಂ (ಕಾವ್ಯಾವ. ೬೫೫). ೧೨. [ಸಂಗೀತ] ವಿಲಂಬಿತ ಲಯ : (ಕ). P ಈ ಶಬ್ದವನ್ನು 'ತತ್ವ' ಎಂದು ಬರೆಯುವುದೂ ಉಂಟು. [ ಸಂ. ]

**ತತ್ತ್ವಕಾರಣ** (ನಾ). ಸೃಷ್ಟಿತತ್ತ್ವಕ್ಕೆ ಆಧಾರಭೂತನಾದವನು: ತತ್ತ್ವಾತೀತಂ ತತ್ತ್ವವಿಭುತ್ವಯುತಂ ತತ್ತ್ವಕಾರಣಂ . . . ಎಸೆದನಾಸ್ಥಾಯಿಕೆಯೊಳ್ (ರಾಜಶೇ. ೧೪-೧೦೧). [ ತತ್ತ್ವ + ಕಾರಣ ]

**ತತ್ತ್ವಕೋವಿದ** (ನಾ). ತತ್ತ್ವವನ್ನು ಕೂಲಂಕಷವಾಗಿ ಬಲ್ಲವನು; ತತ್ತ್ವಜ್ಞಾನಿ : ವಿಶ್ವವಿಖ್ಯಾತ ತತ್ತ್ವಕೋವಿದರು, ಉದ್ದಾಮ ಸಾಹಿತಿಗಳು ಭಗವದ್ಗೀತೆಯ ಅಮೃತಪಾನ ಮಾಡಿ ತಮ್ಮ ಬಾಳಜ್ಯೋತಿಯನ್ನು ಬೆಳಗಿಸಿಕೊಂಡಿದ್ದಾರೆ (ಧರ್ಮಸಾ. ೧೨೭).
[ ತತ್ತ್ವ + ಕೋವಿದ ]

**ತತ್ತ್ವಗರ್ಭ** (ನಾ). ತತ್ತ್ವದಿಂದ ತುಂಬಿದುದು; ತತ್ತ್ವಜ್ಞಾನವನ್ನೊಳಗೊಂಡುದು : ಭಾವಂ ಭಾಸುರ ತತ್ತ್ವಗರ್ಭಮಯನಂ ಚಾರಿತ್ರಗರ್ಭಂ . . . ಎಂಬನ್ನೆಗಂ ತ್ರೈವಿದ್ಯ ಶ್ರುತಕೀರ್ತಿದೇವನೆಸೆದಂ (ಚಂದ್ರಪು. ೧-೨೪).
[ ತತ್ತ್ವ + ಗರ್ಭ ]

**ತತ್ತ್ವಚಯ** (ನಾ). ತತ್ತ್ವಗಳ ಸಮೂಹ : ಜಿತಕರ್ಮಂ ಸಮುಪಾತ್ತ ತತ್ತ್ವಚಯಮರ್ಮಂ . . . ಜಿನಧರ್ಮಂ (ಚಂದ್ರಪು. ೧-೮).
[ ತತ್ತ್ವ + ಚಯ ]

**ತತ್ತ್ವಜ್ಞ**(ನಾ).=ತತ್ತ್ವಕೋವಿದ : ಕಲಾಕುಶಲನಂ ತತ್ತ್ವಜ್ಞನಂ ಪೆತ್ತಪೈ (ಶಂರಾಮಾ. ೧೦-೧೪). [ ಸಂ. ]

**ತತ್ತ್ವಜ್ಞಾನ** (ನಾ). ಮೋಕ್ಷಕ್ಕೆ ಸಾಧಕವಾದ ಪರಮಾತ್ಮನ ಅರಿವು; ಸತ್ಯದ ಅರಿವು :). ತತ್ತ್ವಾಲೋಕಂ – ತತ್ತ್ವಜ್ಞಾನಂ (ಅಪ್ಪುದು) (ಶಮದ. ೩ ಟೀಕು). [ ತತ್ತ್ವ + ಜ್ಞಾನ ]

**ತತ್ತ್ವಜ್ಞಾನಿ** (ನಾ). ತತ್ತ್ವಗಳನ್ನು ಬಲ್ಲವನು; ದಾರ್ಶನಿಕ : ರಾಮಕೃಷ್ಣ ಪರಮಹಂಸ, ವಿವೇಕಾನಂದ ಅರವಿಂದರಂಥ ತತ್ತ್ವಜ್ಞಾನಿಗಳು . . . ಭಗವದ್ಗೀತೆಯಿಂದ ಸ್ಫೂರ್ತಿ ಪಡೆದಿದ್ದಾರೆ (ಧರ್ಮಸಾ. ೧೨೭).
[ ಸಂ. ತತ್ತ್ವಜ್ಞಾನಿನ್ ]

**ತತ್ತ್ವದರ್ಶಿ** (ನಾ).=ತತ್ತ್ವಜ್ಞಾನಿ : ಈ ವೈವಿಧ್ಯ ಪ್ರಯೋಜನದ ತತ್ತ್ವವನ್ನು ಪ್ಲೇಟೋ ತತ್ತ್ವದರ್ಶಿಯು ಬಹುವಾಗಿ ಪ್ರತಿಪಾದಿಸಿದ್ದಾನೆ (ರಾಜ್ಯಶಾ. ೪೨). [ ಸಂ. ತತ್ತ್ವದರ್ಶಿನ್ ]

**ತತ್ತ್ವದೃಷ್ಟಿ** (ನಾ). ಪರತತ್ತ್ವವನ್ನು ಕುರಿತ ಆಲೋಚನೆ; ತಾತ್ತ್ವಿಕ ದೃಷ್ಟಿ: ಭಾರತೀಯ ತತ್ತ್ವದೃಷ್ಟಿಗೆ ತಾತ್ತ್ವಿಕ ವಿಮರ್ಶೆಯೇ ಮುಖ್ಯವಾಗಿ ಕಾಲಮಾನಗಳ ವಿಚಾರ ಅಪ್ರಸ್ತುತವೆನಿಸಿದಂತಿದೆ (ಧಾಕದ. ೧೦೯). [ ತತ್ತ್ವ + ದೃಷ್ಟಿ ]

**ತತ್ತ್ವಪರಿಣತ**(ನಾ).=ತತ್ತ್ವಕೋವಿದ: ಸುದತ್ತಾಚಾರ್ಯರ ಸಮುದಾಯದೊಳಿರ್ದು ತತ್ತ್ವಪರಿಣತನಾದಂ (ಜುಕೋಜ. ೪-೬೭).
[ ತತ್ತ್ವ + ಪರಿಣತ ]

**ತತ್ತ್ವಪ್ರಣಾಲಿ** (ನಾ). ಸಿದ್ಧಾಂತದ ಕ್ರಮಂ; ವಿಚಾರಸರಣಿ: ಮಹಾತ್ಮಾ ಗಾಂಧೀಜಿಯವರ ತತ್ತ್ವಪ್ರಣಾಲಿ ಕ್ರೈಸ್ತರ ಮತ್ತು ಕಾಂಟ ಮಹಾಶಯನ ತತ್ತ್ವಗಳ ಮೇಲೆ ನಿಂತಿದೆ (ಧರ್ಮಸಾ. ೧೪೯). [ ತತ್ತ್ವ + ಪ್ರಣಾಲಿ ]

**ತತ್ತ್ವಪ್ರತಿಪಾದನ** (ನಾ). ತತ್ತ್ವದ ವಿವರಣೆ; ಸಿದ್ಧಾಂತವನ್ನು ಪ್ರತಿಪಾದಿಸುವುದಂ: ಚೇತನಾಚೇತನ ವಸ್ತುಗಳೆಲ್ಲ ಈಶ್ವರಾಂಶ ಎಂಬ ತತ್ತ್ವ ಪ್ರತಿಪಾದನವನ್ನೂ . . . ವಿವರಿಸಿದೆ (ಜುಕ್ಕಾರ. ೦೦೧, ೩೬೩೫): ಉಪನಿಷತ್ತಿನ ತತ್ತ್ವಪ್ರತಿಪಾದನ ಮತ್ತು ನೀತಿಸಂದೇಶ ಇದಕ್ಕೆ ಭಿನ್ನವಲ್ಲ (ಜುಕ್ಕಾರಿ. ೮೩). [ ತತ್ತ್ವ + ಪ್ರತಿಪಾದನ ]

**ತತ್ತ್ವಬೋಧ** (ನಾ).=ತತ್ತ್ವಜ್ಞಾನ: ಕಾವ್ಯಸಮಾಧಿಯಿಂ ಪರಂಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ತ್ವಬೋಧಮುದ್ಯೋತಿಪುದೆಂಬುದಂ ಬಯಸಿ ಪೇಟಲೊಡರ್ಚಿದೆನೀ ಪ್ರಬಂಧಮಂ (ಜಗವಿ. ೦-೧೬).
[ ತತ್ತ್ವ + ಬೋಧ ]

**ತತ್ತ್ವಮಸಿ** (ನಾ). [ಅದ್ವೈತ] ನೀನೆ ಪರಮಾತ್ಮ ಎಂಬ ಜ್ಞಾನ; ಆತ್ಮ ಮತ್ತು ಬ್ರಹ್ಮರ ಐಕ್ಯಜ್ಞಾನ: ತತ್ತ್ವಮಸಿ ಎಂಬುದನಱಿದು ಕತ್ತಲೆದೊಡುವಿರಯ್ಯಾ (ಬಸವ. ೯೧): ತತ್ತ್ವಮಸಿ ವಾಕ್ಯದೊಳು ಲಿಂಗಾಂಗದ ನಿರಂತರಿತ ಸಂಯೋಗಮಂ ತಿಳಿಯ ಪೇಳ್ದ ದೇಶಿಕೋತ್ತಮನ ಚರಣಾಂಬುಜಕ್ಕೆ ಶರಣು (ಲಶಿಜು. ೩೨-೩); ವಿನುತಾತ್ಮ ಸುಸ್ವಯಂಪ್ರಕಾಶ ತತ್ತ್ವಮಸಿಯನಘ ಜೀವಾತ್ಮತಾದಾತ್ಮ್ಯ ಸತ್ಯಬ್ರಹ್ಮಘನತರಾನಂದವಾಕ್ಯಾರ್ಥ. . .ಬಿತ್ತರಿಪೆನು (ವೀಕ್ಯಪು. ೩-೦೩); ಸೂಚನೆ 'ತತ್ತ್ವಮಸಿ' ಎಂಬ ವೇದಾಂತವಾಕ್ಯದಲ್ಲಿ ತತ್ ಎಂದರೆ ಸರ್ವಶಕ್ತಿ ಮೊದಲಾದ ಗುಣವುಳ್ಳ ಬ್ರಹ್ಮನೆಂದರ್ಥ. ತ್ವಂ ಎಂದರೆ ಅಲ್ಪಶಕ್ತಿ ಮೊದಲಾದ ಸಕಲ ದೋಷವುಳ್ಳ ನೀನು ಎಂದರ್ಥ (ಹಿಂದಸಾ. ೨೦೬). [ P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ; ವಾಕ್ಯ: ತದ್ + ತ್ವಂ + ಅಸಿ ]

**ತತ್ತ್ವರಹಸ್ಯ** (ನಾ). ಸತ್ಯದ ಮರ್ಮ: ಪರಮ ತತ್ತ್ವರಹಸ್ಯವನು ವಿಸ್ತರಿಸಿ ತುರ್ಯಾರೂಢರಾಗಿಯೆ ಚರಿಸುತಿಹ ಗಗನಾರ್ಯರಿಗೆ . . . ವಂದಿಸುವೆ (ಗಗಜಾ. ೧-೦). [ ತತ್ತ್ವ + ರಹಸ್ಯ ]

**ತತ್ತ್ವವೇದಿ** (ನಾ).=ತತ್ತ್ವಕೋವಿದ: ಆ ಕಪಿ ತಾಂ ತಾಪಸರ ಸಮೀಪದೊಳ್ ಬಳೆದ ಕಾರಣದಿಂ ತತ್ತ್ವವೇದಿಯಪ್ಪುದಱಿಂ ಮತ್ತವಿಂತೆಂದುದು (ಪಂಚತಂ. ೧೪೩-೦೪). [ ಸಂ. ತತ್ತ್ವವೇದಿನ್ ]

**ತತ್ತ್ವಶಾಸ್ತ್ರ** (ನಾ). ತತ್ತ್ವಸ್ವರೂಪವನ್ನು ತಿಳಿಸುವ ಶಾಸ್ತ್ರ; ದರ್ಶನ ಶಾಸ್ತ್ರ: ಸೌಂದರ್ಯಮೀಮಾಂಸೆ . . . ಅಲ್ಲಿ ತತ್ತ್ವಶಾಸ್ತ್ರದ(Philosophy) ಅಂಗವಾಗಿ ಬರುತ್ತದೆ (ಭಾರಮೀ. ೮). [ ತತ್ತ್ವ + ಶಾಸ್ತ್ರ ]

**ತತ್ತ್ವಸುವಾಲಿ** (ನಾ). ತತ್ತ್ವಬೋಧಕವಾದ ಸುವ್ವಾಲೆ ಪದ: ತತ್ತ್ವ ಪ್ರತಿಪಾದಕವಾದ ವಿಷಯಗಳನ್ನೇ . . . ಶ್ರೀ ಜಗನ್ನಾಥದಾಸರು ಜನಸಾಮಾನ್ಯರಿಗೆ 'ತತ್ತ್ವಸುವಾಲಿ' ಗಳಲ್ಲಿ ಹೇಳಿದ್ದಾರೆ (ಜಗದಾ. ೩೧೩).
[ ತತ್ತ್ವ + ಸುವಾಲಿ (<ಸುವ್ವಲೆ) ]

**ತತ್ತ್ವಾತೀತ** (ನಾ). ಎಲ್ಲ ತತ್ತ್ವಗಳನ್ನು ಮೀರಿದವನು; ಭಗವಂತ: ತತ್ತ್ವಾತೀತಂ ತತ್ತ್ವವಿಭುತ್ವಯುತಂ . . . ಎಸೆದನಾಸ್ಥಾಯಿಕೆಯೊಳ್ (ರಾಜಶೇ. ೧೪-೧೦೦). [ ತತ್ತ್ವ + ಅತೀತ ]

**ತತ್ತ್ವಾಧಿಕಾರಿ** (ನಾ). ತತ್ತ್ವೋಪದೇಶಕ್ಕೆ ಯೋಗ್ಯನಾದವನು,-ಅರ್ಹತೆಯನ್ನು ಪಡೆದವನು: ದಂಭದರ್ಪಗಳೇನುಮಿಲ್ಲದ ಶಾಂತರೇ ತತ್ತ್ವಾಧಿಕಾರಿಗಳು (ಅಮೃತ. ೧-೦೯). [ ತತ್ತ್ವ + ಅಧಿಕಾರಿ₁ ]

**ತತ್ತ್ವಾನುಭಾವ** (ನಾ). ತತ್ತ್ವದ ಅನುಭವ; ತತ್ತ್ವ ಸಾಕ್ಷಾತ್ಕಾರ: ಚಿತ್ತನಿರ್ಮಲವಾದಾತ್ಮನು ಭಕ್ತಿಯಿಂದ ಸತ್ಯಶರಣರಲ್ಲಿ ತತ್ತ್ವಾನುಭಾವವ ಬೆಸಗೊಂಡರೆ ನಿತ್ಯ ಶಿವಪದ ಘಟಿಸುವುದಕ್ಕೆ ತಡವಿಲ್ಲವಯ್ಯಾ (ಅಖಂಡೇ. ೧೯೬-೦೬). [ ತತ್ತ್ವ + ಅನುಭಾವ ]

**ತತ್ತ್ವಾರ್ಥ** (ನಾ). ಸತ್ಯ; ವಸ್ತುಸ್ಥಿತಿ: ತತ್ತ್ವಾರ್ಥಮನಱಿಯದ ಮುನ್ನಮಪಾರ್ಥಂ ರಂಜಿಸದ ಕಾಕು ಮಣಿಯುವೊಲಿರದೇ (ಜಗವಿ. ೦-೧೪); ಯಾವುದೋ ಘನವಾದ ತತ್ತ್ವಾರ್ಥವನ್ನು ಕೇಳಿದವನಂತೆ ಏಜೆಂಟ್ ತಲೆದೂಗಿದ (ಯೋಧಪು. ೨೩). [ತತ್ತ್ವ + ಅರ್ಥ ]

**ತತ್ತ್ವಾಲೋಕ** (ನಾ).=ತತ್ತ್ವಜ್ಞಾನ: ಅರ್ಥದೆ ತತ್ತ್ವಾಲೋಕಂ ತತ್ತ್ವಾಲೋಕದಿನಾಕಾಂಕ್ಷಿಪ ಮುಕ್ತಿಯುಕ್ಕುಂ (ಶಮದ. ೩). [ತತ್ತ್ವ + ಆಲೋಕ]

**ತತ್ತ್ವೌಘ** (ನಾ). ತತ್ತ್ವಗಳ ಸಮೂಹ; ನಿಯಮಾವಳಿ: ದಕ್ಷಿಣಾವೃತ್ತವೃತ್ತ ತ್ರಿತಯಾಂತರ್ವರ್ತಿ ತಾನೆಂಬಿನಮನುಗತ ತತ್ತ್ವೌಘದೊಳ್ ತತ್ತ್ವದಿಂದನ್ವಿತಮಂ ವಿಸ್ತಾರಮತ್ಯಪ್ರಕಟಿತ ಮನದಿಂ ಮೆಚ್ಚಿದಂ ದೇವರಾಜಂ (ಅಜಿಪು. ೩-೦೨). [ ತತ್ತ್ವ + ಓಘ ]

**ತತ್ಥಳಿಸು** 'ತಟತಟಿಸು' ನೋ.

**ತತ್ಪದ** (ನಾ). ಆ ಸಮಯ: ವನರುಹಷಂಡದ ವಾರಿಯು ತನಿಗೊರ್ಬುಗೆ ತೊಲಗಿ ತಿಳಿಯೆ ತತ್ಪದದೊಳ್ ತಾವಿನಮುಖ ವೀಕ್ಷಾತುರತೆಯಿನೆನಸುಂ ನಿಮಿರ್ದಂತೆ ತೋಱಿದವು ಜಲಜಂಗಳ್ (ಕುಸುಮಾ. ೬-೪೬).
[ ಸಂ. (ತದ್ + ಪದ) ]

**ತತ್ಪರ** (ಗು). ೧. ಅನಂತರದ; ಅದಾದಮೇಲೆ ಬರುವ. ೨. ಮುಖ್ಯವಲ್ಲದ; ಮತ್ತೊಂದಕ್ಕೆ ಅಂಗವಾದ. ೩. ಅದನ್ನೇ ಪರಮಾರ್ಥವೆಂದು ತಿಳಿದ; ಅದರಲ್ಲಿ ಆಸಕ್ತಿಯುಳ್ಳ,-ಶ್ರದ್ಧೆಯುಳ್ಳ,-ಮಗ್ನನಾದ,-ತಲ್ಲೀನನಾದ. (ನಾ). ೪. ಆಸಕ್ತನಾದವನಂ; ಪರಾಯಣನಾದವನು: ಸಕಳಾಗಮಕೋವಿದರೆಂದು ಧರ್ಮ್ಮತತ್ಪರರಿವರೆಂದು ಕೂರ್ತು (ಸೌಇಇ. XX, ೪೯-೩೮; 1076); ಪ್ರತಿಯೊಂದು ಧರ್ಮದವರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ತತ್ಪರರಾಗಿ ಸಮಾಜದ ಭದ್ರತೆಯನ್ನು ಕಾಪಾಡಿಕೊಂಡು ಹೋಗುವುದು ಅಂದಿನ ಮುಖ್ಯ ಗುರಿಯಾಗಿತ್ತು (ಧರ್ಮಸಾ. ೧೧೪). [ ಸಂ. (ತದ್ + ಪರ) ]

**ತತ್ಪರತೆ**(ನಾ). ೧.ಹೊಂದಿಕೊಳ್ಳುವಿಕೆ: ಇರೆ ಶಬ್ದಾರ್ಥಂಗಳ್ ತತ್ಪರತೆಯಿಂ (ಕಾವ್ಯಾವ. ೪೩೦). ೨. ಆಸಕ್ತಿ; ಶ್ರದ್ಧೆ; ಪರಾಯಣತೆ: ರೋಮಂಥಲೀಲಾ ತತ್ಪರತೆಯಿಂ ದರನಿಮೀಲಿತಾಕ್ಷಂಗಳಾದ ಕಾಡೆಮ್ಮೆಯ ಮೊಗದಿನುಗುವ ನೊರೆಯಂ (ಚಂದ್ರಪು. ೮-೯ ವ): ತಪಸ್ವಿಕಾರ್ಯದಲ್ಲಿ ನನಗಿರುವ ತತ್ಪರತೆಯನ್ನು ತಿಳಿಸಿ ಅವರ ಭೃತ್ಯಕೃತ್ಯವನ್ನು ನೆರವೇರಿಸತಕ್ಕವನಾಗು (ಶಾಕುಂತ. ೨೯-೧೬). [ ಸಂ. ತತ್ಪರತಾ ]

**ತತ್ಪುರುಷ** (ನಾ). ೧. ಪರಮಾತ್ಮ. ೨. ಶಿವನ ಪೂರ್ವದಿಕ್ಕಿನ ಮುಖ: ಮಾರುತವೆಲ್ಲ ಮಹಾದೇವನ ತತ್ಪುರುಷಮುಖ ನೋಡಾ (ಸಿದ್ಧವ. ೯೯-೩೮೩): ಪರಶಿವನ ತತ್ಪುರುಷಮುಖದಿಂದ ವಾಯುತತ್ತ್ವ ಪುಟ್ಟಿತ್ತು (ಅಖಂಡೇ. ೩೯-೨೨). 'ಅಘೋರ' ಪರಾ. ೩. [ವ್ಯಾಕ] ಸಮಾಸಗಳಲ್ಲಿ ಒಂದು; "ಉತ್ತರಪದದ ಅರ್ಥವು ಪ್ರಧಾನವಾಗಿ ಪೂರ್ವಪದವು ತೃತೀಯಾದಿ ವಿಭಕ್ತಿಗಳಿಂದ ಕೂಡಿ ಆಗುವ ಸಮಾಸವು ತತ್ಪುರುಷ" (ಕ್ವಬಿಡಿ. ೨೧): "ಉತ್ತರಪದದರ್ಥಂ ಮಯ್ಯೊತ್ತಿರೆ ತತ್ಪುರುಷಂ" (ಕಾವ್ಯಾವ. ೨೦೪); ತತ್ಪುರುಷಕ್ಕೆ-ಮಲ್ಲಿಗೆನನೆ, ಮಾಣಿಕಗೆಂಪು, ಅಲರ್ವಕ್ಕಿ (ಶಮದ. ೧೬೪ ಪ್ರಯೋ). [ ಸಂ. ]

**ತತ್ಪುರುಷವಕ್ತ್ರ** (ನಾ).=ತತ್ಪುರುಷ ೨ : ಸುಲಲಿತ ನವಕನಕಕಂಜಕಿಂಜಲ್ಕದ ಮಂಜುಲರುಚಿಯಂ ಪಳಿದೆಸೆದುದು ವಿಲಸಿತ ತತ್ಪುರುಷವಕ್ತ್ರವಾಹಿ ಕುಂಡಲನಾ (ಶಬಶಂ. ೩-೬). [ ತತ್ಪುರುಷ + ವಕ್ತ್ರ ]

**ತತ್ಪೂರ್ತ** (ಗು). "ಒಂದು ಉದ್ದೇಶಕ್ಕಾಗಿ ಗೊತ್ತುಮಾಡಿದ ; ಅವಶ್ಯ ಬಿದ್ದಂತೆ ನೇಮಿಸಿದ; ತತ್ಪೂರ್ತ" (ಕಿಟೆ ೩೦೦. ೩೦೪೫.). [ ಸಂ. (ತದ್ + ಪೂರ್ತ) ]

**ತತ್ಪೂರ್ವ** (ಗು). (ಅದಕ್ಕಿಂತ) ಹಿಂದಿನ ; ಮುಂಚಿನ : ಋಷಭದೇವನ ಕಾಲವು ತತ್ಪೂರ್ವದ್ದು (ಭಾರದ. ೧೬೯). [ ಸಂ. (ತದ್ + ಪೂರ್ವ) ]

**ತತ್ಪ್ರಾಣ** 'ತತ್ತ್ರಾಣ' ನೋ.

**ತತ್ರಾಪಿ** (ಅ). ಅದರಲ್ಲೂ ; ವಿಶೇಷವಾಗಿ : ತತ್ರಾಪಿ, ಯುದ್ಧ ಮುಗಿದು ಶಾಂತಿಯುಗ ಆರಂಭವಾದಂದಿನಿಂದ . . . ಅದರ ಗುರಿಯನ್ನು ಯಾರು ಕೇಳಬೇಕು (ನಾಡಿಗೇ. ೨೬೯); ತತ್ರಾಪಿ ಈ ಕಾಲಗಳಲ್ಲಿ ಸರ್ಕಾರದ ಒಂದು ಸಾಧಾರಣವಾದ ಉದ್ಯೋಗ ದೊರೆತಾಗ್ಯೂ ಜನರು ಅಟ್ಟಹಾಸದಿಂದ ಮೆರೆಯುತ್ತಾರೆ (ಮಾಮರ. ೭೧). [ ಸಂ. (ತತ್ರ + ಅಪಿ) ]

**ತತ್ತ್ವ₁** (ನಾ). ೧. ≡ ತತ್ತ್ವ ೧ : ನಿನ್ನ ಬೆಸಗೊಂಡ ತತ್ತ್ವ[ಶಾಶಾಂ. ತ್ವ]ಮುಂ ಹೇಯೋಪಾದೇಯರೂಪದಿಂ ದ್ವಿವಿಧಮಕ್ಕುಂ (ಆದಿಪು. ೦೦-೬೧ ವ) : ಪಗೆವಂಗಂ ಕೆಳೆಯಂಗವಾರ್ದ್ರಮತಿಯಂ ತ್ವನ್ಮೂರ್ತಿ ತೀರ್ಥೇಶ ಮಾಡುಗು ಮಾಳೋಚಿಸೆ ನಿನ್ನ ತತ್ತ್ವಮ[ವಿ]ಸಂವಾದಂ ದುರಾಪಂ ಗುಣಾಬ್ಧಿಗಭೀರಂ ಭವದೀಯಂ (ಶಾಂತಿಪು. ೮-೧೫೫); ವಸ್ತುವಿನ ಸ್ವರೂಪಮಂ ತತ್ತ್ವಮೆಂಬುದು (ಜ್ಞಾನಕಾ. ೬೪-೦೫). ೨. ≡ ತತ್ತ್ವ ೪ : ಧರೆ ಜಲಾನಲ ಮಾರುತಾಂಬರ ವಿರುವ ತತ್ತ್ವಗಳು (ಗಗಚಾ. ೪-೧೨೮). ೩. ≡ ತತ್ತ್ವ ೬: ಐದು ತತ್ತ್ವಗಳಾದ ಪೊಂದಕ್ಕೆದು ಕಡೆಯಲಿ ತತ್ತ್ವವಿಷ್ಟತ್ತೈದು ಕೂಡಿದ ತನುವಿನಲಿ ವಂಚಿಸದೆ ನೀನಿರಲು (ಹರಿಸಾ. ೬೫) ; ಸುಗ್ರಾಸಪೊಬ್ಬರಿಗಂಪವಾಸಪೊಬ್ಬರಿಗೆನ್ನುವ ತತ್ತ್ವವು ಸಾಕು (ಇಂಚಾಪ. ೧೭೮-೮೦). [ ಸಂ. ]

**ತತ್ತ್ವ₂** (ನಾ). [ವ್ಯಾಕ] 'ತ' ಎಂಬ ಅಕ್ಷರ ; ತಕಾರ : ಋತ್ವಕ್ಕಾರಾದೇಶಂ ತತ್ತ್ವಂ ಪೀನಂ ವಿಧಾತ್ಯ ಶಬ್ದಂ ರಾಂತಂ (ಕಶುಜ. ೮೪). [ ಸಂ. ]

**ತತ್ತ್ವಗೋಷ್ಠಿ** (ನಾ). ತತ್ತ್ವವಿಚಾರವನ್ನು ಕುರಿತು ಚರ್ಚೆಮಾಡುವ ಸಭೆ : ಯೋಜಿಪ ಬಾಜಿಪ ತತ್ತ್ವಗೋಷ್ಠಿಯೊಂದುಟಿಯದೆ ಭಾವಿತಾತ್ಮರ ಹಮಿಂದ್ರರೊಡಂಬಡೆದಿಚ್ಛೆ ರೂಪಮಂ ನೆಬಲುಂಮನೆಯ್ದು (ಶಾಂತಿಪು. ೯-೦೩೦). [ ತತ್ತ್ವ₁ + ಗೋಷ್ಠಿ ]

**ತತ್ತ್ವಜಿಜ್ಞಾಸು** (ನಾ). ತತ್ತ್ವವನ್ನು ತಿಳಿಯ ಬಯಸುವವನು : ನಚಿಕೇತನಂಥ ತತ್ತ್ವಜಿಜ್ಞಾಸುಗಳು ಮಾನವನ ಇತಿಹಾಸದಲ್ಲಿ ವಿರಳ (ಜುಕ್ಯಾರ. ೩, ಪೀಠಿಕೆ). [ ತತ್ತ್ವ₁ + ಜಿಜ್ಞಾಸು ]

**ತತ್ತ್ವಜ್ಞ** (ನಾ). ೧. ತತ್ತ್ವವನ್ನು ಬಲ್ಲವನು. ೨. (ಯಾವುದೇ ಶಾಸ್ತ್ರದ) ನಿಯಮಗಳನ್ನು ಚೆನ್ನಾಗಿ ತಿಳಿದವನು : ತತ್ತ್ವಂ ವ್ಯಾಜಸ್ತುತಿ . . . ಎಂದಿಂತು ತಾತ್ಪರ್ಯದಿಂದಂ ತತ್ತ್ವಜ್ಞರ್ ವಿಸ್ತರಿಸೆ ನೆಗಟ್ಟುಂ ಶ್ಲೇಷಭಾಗ ಪ್ರಭೇದಂ (ಕಾವ್ಯಾವ. ೬೩೪). [ ಸಂ. ತತ್ತ್ವಜ್ಞ ]

**ತತ್ತ್ವಜ್ಞಾನ** (ನಾ). ≡ ತತ್ತ್ವಜ್ಞಾನ : ಮುನಿಮುಖ್ಯರಿವರಜ್ಞಾನಿಗಳು ಶಿಶುಪಾಲ ತತ್ತ್ವಜ್ಞಾನ ಪಂಡಿತನು (ಕುವ್ಯಾಸ. ೮-೩೦) ; ತತ್ತ್ವಜ್ಞಾನಕ್ಕೆ . . . ಮನನ ಧ್ಯಾನಗಳು ಮುಖ್ಯ ಸಾಧನಗಳು (ಭಾರದ. ೨೮೦). [ ತತ್ತ್ವ₁ + ಜ್ಞಾನ ]

**ತತ್ತ್ವಜ್ಞಾನಿ** (ನಾ). ≡ ತತ್ತ್ವಜ್ಞಾನಿ : ದೊಡ್ಡ ತತ್ತ್ವಜ್ಞಾನಿ, ಲೇಖಕ ನೆಂಬುದನ್ನು ಬಲ್ಲೆ (ಮೂರುದಾ. ೧೩೪). [ ಸಂ. ತತ್ತ್ವಜ್ಞಾನಿನ್ ]

**ತತ್ತ್ವದೃಷ್ಟಿ**(ನಾ). ≡ ತತ್ತ್ವದೃಷ್ಟಿ: ತತ್ತ್ವದೃಷ್ಟಿಯಿಲ್ಲದ ಅಂಥ ಶಿಕ್ಷಣ ಫಲಪ್ರದ ವಾಗುವುದು ಹೇಗೆ ಸಾಧ್ಯ (ಶಿಕ್ಷದ. ೫) ; ಸಂಸ್ಥೆಯ ಕಾರ್ಯಕ್ರಮಗಳ ತತ್ತ್ವದೃಷ್ಟಿ ಮತ್ತು ಉದ್ದೇಶ (ಶಿಕ್ಷದ. ೩೩೨). [ ತತ್ತ್ವ₁ + ದೃಷ್ಟಿ ]

**ತತ್ತ್ವನಿಕ್ಷೇಪ** (ನಾ). ತತ್ತ್ವದ ನೆಲೆ,-ನಿಧಿ : ದೊರಕಿತು ಸತ್ಕಾವ್ಯ ಸರಸ ಕಥಾಲಾಪದೊಳಗತುಳ ತತ್ತ್ವನಿಕ್ಷೇಪ (ಇಂಚಾಪ. ೪೨-೯೯). [ ತತ್ತ್ವ₁ + ನಿಕ್ಷೇಪ ]

**ತತ್ತ್ವನಿಶ್ಚಯ** (ನಾ). ತತ್ತ್ವವನ್ನು ಕುರಿತ ನಿಶ್ಚಿತವಾದ ಜ್ಞಾನ : ತತ್ತ್ವನಿಶ್ಚಯಮನಾಂತ ಲಸನ್ಮತಿ . . . ವಿಲಾಸಮಂ ಸಮಂದ್ದರಿಪ (ಚಂದ್ರಪು. ೩-೮೪). [ ತತ್ತ್ವ₁ + ನಿಶ್ಚಯ ]

**ತತ್ತ್ವಪಟಲ** (ನಾ). ತತ್ತ್ವಸಮೂಹದ ಅಧ್ಯಾಯ : ವಾತೂಲತಂತ್ರದೊಳು ತತ್ತ್ವಪಟಲದೊಳುಸುರ್ದ . . . ಪಂಚವಿಂಶತಿ ಮಹಾಲಿಂಗೋದ್ಭವ ಪ್ರಸಂಗಂ (ವೀರಪು. ೬-೬-೮೨). [ ತತ್ತ್ವ₁ + ಪಟಲ₁ ]

**ತತ್ತ್ವಪದ** (ನಾ). ತತ್ತ್ವವನ್ನು ಪ್ರತಿಪಾದಿಸುವ ಹಾಡು ; ತಾತ್ತ್ವಿಕ ವಿಚಾರಗಳುಳ್ಳ ಹಾಡು : ಶರೀಫರ ತತ್ತ್ವಪದಗಳು ಇದೇ ಮಾದರಿಯ ಪದಗಳು (ಶರೀಪ. I, ಮೊದಲಮಾತು). [ ತತ್ತ್ವ₁ + ಪದ₃ ]

**ತತ್ತ್ವಪ್ರತಿಪಾದನೆ** (ನಾ).=ತತ್ತ್ವಪ್ರತಿಪಾದನ: ಆಧ್ಯಾತ್ಮಿಕ ದೃಷ್ಟಿಯಿಂದ ನೂತನ ವೈಜ್ಞಾನಿಕ ಸಿದ್ಧಾಂತಗಳೂ ಉತ್ತಮವಾದ ತತ್ತ್ವಪ್ರತಿಪಾದನೆ ಯಾಗಿಲ್ಲ (ಜುಕ್ಯಾರ. ೪೧, ಪೀಠಿಕೆ). [ ತತ್ತ್ವ₁ + ಪ್ರತಿಪಾದನೆ ]

**ತತ್ತ್ವಭಾವನೆ** (ನಾ). ತತ್ತ್ವವನ್ನು ಕುರಿತು ಆಲೋಚನೆ ಮಾಡುವುದು: ತತ್ತ್ವಭಾವನೆಗೆ ಮನಂದಂದು . . . ತಪಶ್ಚರಣನಿರತನಾದೊಂ (ಶಾಂತಿಪು. ೩-೬೭ ವ) ; ತತ್ತ್ವಭಾವನೆಯಂ ಪರಿಭಾವಿಸುತ್ತುಮಿರಲದುವೆ ವೈರಾಗ್ಯ ಹೇತುವಾಗೆ (ಪುಷ್ಪಪು. ೯-೬ ವ). [ ತತ್ತ್ವ₁ + ಭಾವನೆ ]

**ತತ್ತ್ವಮಥನ** (ನಾ). ತತ್ತ್ವವನ್ನು ಕುರಿತ ಚರ್ಚೆ : ಈ ಬಗೆಯ ಸತ್ಯಾನ್ವೇಷಣೆ ಮತ್ತು ತತ್ತ್ವಮಥನವೂ ಕೊನೆಗೆ ವಿಫಲವಾಗುತ್ತದೆ (ಜೊಸಕ್ಕ. ೨೮೭). [ ತತ್ತ್ವ₁ + ಮಥನ ]

**ತತ್ತ್ವಮಸಿ** (ನಾ). ≡ ತತ್ತ್ವಮಸಿ: ಸದ್ಗುರು ಮುಖದಿ ತತ್ತ್ವಮಸಿಯನೆ ತಿಳಿದು ಸತ್ಯವಿಂತೆಂದು ಅರಿದಿಪ್ಪ ಜ್ಞಾನಿ ತಾ ಸತ್ತು ಹುಟ್ಟುವನೆ (ಸರ್ವಜ್ಞ. ೩೫೦). [ ಸಂ. ತತ್ತ್ವಮಸಿ ]

**ತತ್ತ್ವಮೂಲ** (ನಾ). ಸತ್ಯದ ಮೂಲ : ತತ್ತ್ವಮೂಲದ ನಿಜವನ್ನರಿದ ಸತ್ಯಸಂಧನಿಗೇಕೆ ಕರ್ಮಜ್ಞಾನವಳಕಿಗಳು (ಗಗಚಾ. ೧೭-೪೯). [ ತತ್ತ್ವ₁ + ಮೂಲ ]

**ತತ್ತ್ವರುಚಿ** (ನಾ). ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಅಭಿರುಚಿ ; ತತ್ತ್ವಜಿಜ್ಞಾಸೆ : ಮಾನಿತ ತತ್ತ್ವಾರ್ಥಶ್ರದ್ಧಾನದಿನಾ ಸೂರ್ಯಮಿತ್ರ ಮುನಿಪತಿಗವಧಿಜ್ಞಾನಂ ತೊಟ್ಟನೆ ಪುಟ್ಟಿದುದೇನಂ ಪುಟ್ಟಿಸದು ತತ್ತ್ವರುಚಿ ಪುಟ್ಟಲೊಡಂ (ಸುಕುಮಾ. ೩-೪೭). [ ತತ್ತ್ವ₁ + ರುಚಿ ]

**ತತ್ತ್ವವಿದ**(ನಾ).=ತತ್ತ್ವಕೋವಿದ: ತತ್ತ್ವವಿದರಾದೊಡಂ ಸರಸತ್ಯಕ್ಕೆಡೆಗುಡದ ಜಡರದೆಂತರಿದಪರೋ (ಅಕಂಪು. ೧-೪೪); ಲೋಕ ಸನ್ಮಾನ್ಯನು ಆ ಮಂಕು ತಿಮ್ಮನು ಅನುಭಾವಿಕವಿ ತತ್ತ್ವವಿದನು (ಇಂಚಾಪ. ೬೩-೧). [ <ಸಂ. ತತ್ತ್ವವಿದ್ ]

**ತತ್ತ್ವವಿನಿಶ್ಚಯ** (ನಾ).=ತತ್ತ್ವನಿಶ್ಚಯ : ತತ್ತ್ವವಿನಿಶ್ಚಯಮ ಮನಂಬುಗೆ ಮುಂದಂ ಮನಂಬೊಕ್ಕಪುದೇ (ಶಾಂತಿಪು. ೯-೧೧). [ತತ್ತ್ವ₁ + ವಿನಿಶ್ಚಯ]

**ತತ್ತ್ವವಿಲಾಸಿ** (ನಾ). ತತ್ತ್ವಜಿಜ್ಞಾಸೆಯಲ್ಲಿ ಆನಂದಪಡತಕ್ಕವನು,-ಆಸಕ್ತನಾದವನು: ಈ ಸಿರಿ ಈ ಸೊಬಗೀ ಪ್ರಾಯದೊಳು ಬುದ್ಧಿ ಬೇಸರ ವಾಗದೆಚ್ಚತ್ತು ಆ ಸಿದ್ಧಪದವಿಗೆ ಕಣ್ಣಿಟ್ಟು ತತ್ತ್ವವಿಲಾಸಿಯಾರರಸ ನಿನ್ನಂತೆ (ಭರಚ. ೨-೪೦). [ ಸಂ. ತತ್ತ್ವವಿಲಾಸಿನ್ ]

**ತತ್ತ್ವವೇತ್ತ** (ನಾ).=ತತ್ತ್ವಕೋವಿದ : ರಸ್ಕಿನ್ ಎಂಬ ಸುಪ್ರಸಿದ್ಧ ಆಂಗ್ಲ ತತ್ತ್ವವೇತ್ತನು . . . ಈ ರೀತಿ ಬರೆಯುತ್ತಾನೆ (ಭಾಶಾಶ. ೨೫) ; ಆ ತತ್ತ್ವವೇತ್ತರ ಕಾವ್ಯವಿಭೂತಿಯ ನೆನೆದು ವಂದಿಸುವೆನು ನಾನು (ಇಂಚಾಪ. ೨೦೩-೧). [ ಸಂ. ತತ್ತ್ವವೇತ್ತೃ ]

**ತತ್ವವೇದಿ** (ನಾ). = ತತ್ತ್ವಕೋವಿದ : ಕುಲೋದ್ಭೂತರುಂ ತತ್ವವೇದಿಗಳುಂ ಮನೆವಾಟನಾಸೆವಡಲಾಗದು (ಶಾಂತಿಪು. ೪-೮೩ ವ). [ಸಂ. ತತ್ತ್ವವೇದಿನ್]

**ತತ್ವಶಾಸ್ತ್ರ** (ನಾ). ಅಧ್ಯಾತ್ಮತತ್ತ್ವವನ್ನು ತಿಳಿಸುವ ಶಾಸ್ತ್ರ; ದರ್ಶನ ಶಾಸ್ತ್ರ: ಹಿಂದಿನ ಕಾಲದಲ್ಲಿ ವಿಜ್ಞಾನವೇ (Science) ಬೇರೆ, ತತ್ತ್ವಶಾಸ್ತ್ರವೇ (Philosophy) ಬೇರೆ ಎಂಬ ವಿವೇಚನೆಯು ಸ್ಪಷ್ಟವಾಗಿರಲಿಲ್ಲ (ಭಾಶಾವಿ. ೩).
[ ತತ್ತ್ವ$_1$ + ಶಾಸ್ತ್ರ ]

**ತತ್ವಸಾಕ್ಷಾತ್ಕಾರ**(ನಾ). ತತ್ತ್ವವನ್ನು ಕಾಣುವುದು, -ಅನುಭವಿಸುವುದು: ತತ್ವಸಾಕ್ಷಾತ್ಕಾರವನ್ನು ಪಡೆದಿರುವ ಜ್ಞಾನಿಗಳು ಈ ತತ್ವಗಳು ೩೬ ಎಂದು ನಿರೂಪಿಸಿರುವರು (ಭಾಕದ. ೩೦೩). [ ತತ್ತ್ವ$_1$ + ಸಾಕ್ಷಾತ್ಕಾರ ]

**ತತ್ವಸುವ್ವಾಲಿ** (ನಾ). = ತತ್ತ್ವಸುವಾಲಿ : ಜಗನ್ನಾಥದಾಸರ . . . ತತ್ವಸುವ್ವಾಲಿಗಳು ತ್ರಿಪದಿಯ ರೂಪದಲ್ಲಿಯೂ ಇವೆ (ಸುವರ್ಣ. ೧೦೬).
[ ತತ್ತ್ವ$_1$ + ಸುವ್ವಾಲಿ (<ಸುವ್ವರೆ) ]

**ತತ್ವಾಂಧ** (ನಾ). ತತ್ವದ ವಿಷಯದಲ್ಲಿ ಕುರುಡಾದವನು ; ತತ್ವವನ್ನು ತಿಳಿಯಲಾರದವನು : ಜೀವಿತ ಮರಣಂಗಳೆಂಬವಚಟ್ಟಳಮುಂ ಪುಸಿಯ ಪೊಟ್ಟಳಮುಮಕ್ಕುಮದರ್ಕ[ ರ್ಣ ] ಹೃದಯನುಮನೇಡಮೂಕನುಂ ತತ್ವಾಂಧನುಂ ವಸ್ತುಬಾಹ್ಯನುಂ ನೇಟುಗುಂ (ಶಾಂತಿಪು. ೮-೧೩೩ ವ).
[ ತತ್ವ$_1$ + ಅಂಧ ]

**ತತ್ವಾತ್ಮಕ** (ನಾ). ತತ್ತ್ವಗಳನ್ನು ಒಳಗೊಂಡಿರುವವನು; ತತ್ತ್ವಸ್ವರೂಪ; ಪರಮೇಶ್ವರ : ಧರಣಿ ಮೊದಲೆನೆ ಭೂತಪಂಚಕ ಮರುತಪಂಚಕ ವಿಷಯ ವಿಂದ್ರಿಯ ಕರಣವಿಪ್ಪತ್ತೈದು ತತ್ವಾತ್ಮಕನ ಚಿಂತಿಸಿದ (ಕುವ್ಯಾಅ. ೫-೦).
[ ಸಂ. ತತ್ತ್ವಾತ್ಮಕ ]

**ತತ್ವಾನ್ವೇಷಣೆ** (ನಾ). ಸತ್ಯವನ್ನು ಹುಡುಕುವುದು; ತತ್ತ್ವದ ಶೋಧನೆ: ವಿಜ್ಞಾನದ . . . ತತ್ವಾನ್ವೇಷಣೆಯ ಮಾರ್ಗದಲ್ಲೇ ಏನೋ ನ್ಯೂನತೆ ಇದೆಯೆಂದು ವ್ಯಕ್ತವಾಗುತ್ತದೆ (ಜುಕ್ಮಾಕ. ೫, ೬೬೫). [ತತ್ತ್ವ$_1$+ಅನ್ವೇಷಣೆ]

**ತತ್ವಾರ** (ನಾ). ಕೊರತೆ ; ಅಭಾವ : ದೇಶದಾಗ ಧಾನ್ಯದ ರಾಶಿ ತುಂಬಿದ್ದರೂ ಬಹು ಜನರಿಗೆ ತುತ್ತುಕೂಳಿಗೆ ತತ್ವಾರ ಬಂದು ಕೂತದ (ಜನಹೀ. ೬) ; ತವರುಮನೆಯಿಂದು ಬಂದರೆ ಒಂದು ಕವ್ವು ಚಹಾಕ್ಕೂ ತತ್ವಾರ (ನಕಪಿ. ೦೯) ; ಹೆಸರು ಕ್ಷೀರಸಾಗರಭಟ್ಟ ಮನೆಯಲ್ಲಿ ಮಜ್ಜಿಗೆಗೆ ತತ್ವಾರ (ಗಾದೆ).

**ತತ್ವಾರವಾಗು** = ಅಭಾವವುಂಟಾಗು; ಕೊರತೆಯಾಗು : ಮಜ್ಜಿಗೆಗೆ ತತ್ವಾರವಾಗಿಲ್ಲ (ಚಾಳಿಗಿ. ೩೦) ; ತುತ್ತುಗಂಜಿಗೆ ತತ್ವಾರವಾಗಿರುವಾಗ (ಮುಂಗಾಮು. ೩೦). [ ದೇ.॥ ತುಳು. ತತ್ವಾರ, ತತ್ವಾರ ]

**ತತ್ವಾರ್ಥ** (ನಾ). = ತತ್ತ್ವಾರ್ಥ : ನುಡಿದುದೆ ತತ್ವಾರ್ಥಂ ಕೆಯ್ದುಡಿದುದೆ ಸತ್ವೈಕಹಿತಕರಂ (ಪುಷ್ಪಪು. ೦-೧೪) ; ಲೀನವಾದ ತತ್ವಾರ್ಥವನ್ನು ಹೊಂದಿಸುವುದು ಲಿಂಗ (ಅಕ್ಕಮಾ. ೩೦). [ ತತ್ತ್ವ$_1$ + ಅರ್ಥ ]

**ತತ್ವಾರ್ಥವಿನಿಶ್ಚಯ** (ನಾ). = ತತ್ವನಿಶ್ಚಯ: ಬಗೆ ತತ್ವಾರ್ಥವಿನಿಶ್ಚಯಂ ಬಡೆಯ ನೈರ್ಗ್ರಂಥ್ಯಂ ಪೊದಟ್ಟತ್ತು (ಪುಷ್ಪಪು. ೦-೫).
[ ತತ್ವಾರ್ಥ + ವಿನಿಶ್ಚಯ ]

**ತತ್ವಾರ್ಥಶ್ರದ್ಧಾನ** (ನಾ). ತತ್ತ್ವಾರ್ಥದಲ್ಲಿ ಶ್ರದ್ಧೆ,-ನಂಬಿಕೆ : ಅಲ್ಲಿ ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ (ಆದಿಪು. ೧೬-೬೦ ವ) ; ತತ್ವಾರ್ಥ ಶ್ರದ್ಧಾನ ಪಟುತ್ವಂ ಸಮ್ಯಕ್ತ್ವಂ (ಶಾಂತಿಪು. ೬-೪೬).
[ ಸಂ. ತತ್ತ್ವಾರ್ಥಶ್ರದ್ಧಾನ ]

**ತತ್ವಾಲೋಕ** (ನಾ). = ತತ್ತ್ವಾಲೋಕ. [ ತತ್ವ$_1$ + ಆಲೋಕ ]

**ತತ್ವೋಕ್ತಿ** (ನಾ). ತತ್ತ್ವವನ್ನು ಕುರಿತ ಮಾತು : ತತ್ವೋಕ್ತಿ ನಿರ್ಣೀತಿ ಯೊಳ್ ಪೊಟ್ಟುಗಳೆವುತ್ತಿರ್ದಂ ನರೇಂದ್ರಾತ್ಮಜಂ (ಪುಷ್ಪಪು. ೪-೭೬).
[ ತತ್ತ್ವ$_1$ + ಉಕ್ತಿ ]

**ತತ್ವೋಪನ್ಯಾಸ** (ನಾ). ತತ್ತ್ವವನ್ನು ಕುರಿತ ವ್ಯಾಖ್ಯಾನ : ಭಾರತದಲ್ಲಿ ಬರುವಂತೆ ದೀರ್ಘವಾದ ತತ್ವೋಪನ್ಯಾಸಗಳಾಗಲಿ ಅಧ್ಯವಿಚಾರಗಳಾಗಲಿ ರಾಮಾಯಣದಲ್ಲಿ ಕಂಡುಬರುವುದಿಲ್ಲ (ಭಾರದ ೮೯). [ತತ್ತ್ವ$_1$ + ಉಪನ್ಯಾಸ]

**ತತ್ಸಮ** (ಗು). ೧. ಅದಕ್ಕೆ ಸಮಾನವಾದ : ದಟ್ಟಡಿಯನಿಕ್ಕುವ ಬಾಲಕನಂಗ ದೊಂದು ಮಾರ್ವೊಳಪಿರೆ ನೀಲಕುಟ್ಟಿಮದೊಳುರ್ವರೆ ತಜ್ಜನನೀಸಪಕ್ಷಿ ಕಾಂ ತಳೆದಳೊ ತತ್ಸಮಾತ್ಮಭವನಂ ಪುರುಡಿಂದೆನೆ ಕಣ್ಗೆ ರಂಜಿಕುಂ (ರಾಜಶೇ. ೪-೬೨). (ನಾ). ೨. ವ್ಯತ್ಯಾಸವನ್ನು ಹೊಂದದೆ ಅಥವಾ ಅಲ್ಪ ವ್ಯತ್ಯಾಸ ದೊಂದಿಗೆ ಕನ್ನಡದಲ್ಲಿ ಬಳಕೆಯಾಗುವ ಸಂಸ್ಕೃತ ಶಬ್ದ : ಮಣಿ ಮಂಚಂ ಪಟ್ಟಣಂ ತೋರಣಮಟ್ಟಂ . . . ಗಲ್ಲಂ ಮಲ್ಲಂ ತಳಮಿಂತೆಲ್ಲಂ ತತ್ಸಮಮುಂ (ಶಮದ. ೨೪೯); ಚಿಂತೆ ಪರಿಹರಿಪ ಮಾಟ್ಕೆಯೊಳಂತುಸುರ್ವಂ ದೇಸಿ ತದ್ಭವಂ ತತ್ಸಮಮಂ (ಚಕುಪಿ. ೨) ; ಮಲ್ಲಗಾಳೆಗ ಮಲ್ಲವಾತು ಮಲ್ಲಮುರಾಂತಕಂ ತಾನಿವೆಂದು ಸೊಬಗಿಡಿದ ತತ್ಸಮಕೆ ಕನ್ನಡ ಸಕ್ಕದಂ ಗಳಲಿ ಕ್ರಮದಿಂದ ತೋರ್ಪುದಾಹರಣೆಯಕ್ಕುಂ (ಕಬ್ಬಿಕ್ಕಿ. ೯೯); ವಿಕಾರವನ್ನು ಪಡೆಯದ ಅಥವಾ . . . ಅತ್ಯಲ್ಪವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೆ 'ತತ್ಸಮ' ವೆಂಬ ಹೆಸರು ಬಳಕೆಗೆ ಬಂದಿದೆ. ಆದರೆ ಕೇಶಿರಾಜನು ಅವನ್ನು ಸಮಸಂಸ್ಕೃತವೆನ್ನುತ್ತಾನೆ (ಕ್ಕೆಬಿ. ೧೪). [ ಸಂ. (ತದ್ + ಸಮ) ]

**ತತ್ಸವಿತುರ್ವರೇಣ್ಯ** (ನಾ). ಗಾಯತ್ರೀ ಮಂತ್ರವನ್ನು ಜಪಮಾಡು ಪವನಂ ; ವೈದಿಕ ಬ್ರಾಹ್ಮಣ : ಅಹಿಂಸಾಲಕ್ಷಣೋ ಧರ್ಮಮೆಂಬುದನೀ ತತ್ಸವಿತುರ್ವರೇಣ್ಯರಱಿದರ್ (ಸಮಪ. ೩೬೯, ಅನು. I) ; (ತತ್ಸವಿತು ರ್ವರೇಣ್ಯರೆಂದು ಶ್ರೌತರ್) (ಶಮದ. ೭೫ ಪ್ರಯೋ). [P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ ; ತದ್, ಸವಿತುಃ, ವರೇಣ್ಯ ಎಂಬ ಮೂರು ಪದಗಳು. ಕೇಶಿರಾಜನ ಪ್ರಕಾರ ಇಂತಹ ಪದಪುಂಜಗಳಂ ಮತ್ತು ವಾಕ್ಯಗಳನ್ನು ಕನ್ನಡದಲ್ಲಿ ಲಿಂಗವಾಗಿ ಉಪಯೋಗಿಸಬಹುದು.]

**ತತ್ಸ್ವರೂಪ** (ನಾ). ಆ ಸ್ವರೂಪ ; ಅದರ ಸ್ವರೂಪ : ತದ್ಗಣಿಕಾ ಭವನಮುಮಂ ತೋಱಿ ನಾಯಕಂ ನಾಗರಕಾದಿಗಳ್ಗೆ ತತ್ಸ್ವರೂಪಕಥನ ಪಿತತನಾಗಿ ಪೋಗಿ (ಶಾಂತಿಪು. ೮-೯೦ ವ) ; ಪಿಗೆ ನುಡಿಯಲಮ್ಮೆನು ತತ್ಸ್ವರೂಪವ ತೋಱಬೇಕೆಂದ (ಕುವ್ಯಾಭೀ. ೩-೬೦).
[ ಸಂ. (ತದ್ + ಸ್ವರೂಪ) ]

**ತತ್ಸ್ವರೂಪಗುಣ** (ನಾ). ಅದಕ್ಕೆ ಸಮಾನವಾದ ಧರ್ಮವುಳ್ಳುದು : ಉರುಪಿತ್ರಶೋಕಪಲ್ಲವ ವಿರಚಿತ ಶಯನೀಯಮನ್ನ ಮೆಯ್ಯಂ ಪೀನಂ ಸ್ಫುರದನಲ ಪ್ರತಿನಿಧಿ ತತ್ಸ್ವರೂಪಗುಣಮಕ್ಕುಮೆಂಬುದೆಂದುಂ ಯುಕ್ತಂ (ಕವಿರಾ. ೩-೩೭). [ ತತ್ಸ್ವರೂಪ + ಗುಣ ]

**ತಥಪಣೆ** 'ತತ್ತ್ವಪಣೆ' ನೋ.

**ತಥಾಗತ** (ಗು). ೧. ಆ ರೀತಿಯಾಗಿರುವ; ಆ ಸ್ಥಿತಿಯಲ್ಲಿರುವ. (ನಾ). ೨. ಬುದ್ಧ : " ಬುದ್ಧಂ ಸಮಂತಭದ್ರಂ ಸಿದ್ಧಾರ್ಥಂ ಮುನಿ ತಥಾಗತಂ . . . ಶಾಕ್ಯ ಸುಗತಂ " (ಪಮ್ಪುಕೋ. ೨-೦೦); ಶೈವಾನ್ ಪಾಶುಪತಾಂಸ್ತಥಾಗತ ಸುತಾನ್ ಕಾಪಾಲಿಕಾನ್ (ಎಕ. II, ೬೭-೭೦ ; 1129) ; ಬಾಗುವೆನಾ ಸುಗತನಿಗಾತನೆನ್ನ ತಥಾಗತ ಕರುಣಾಳು ಹಿತನು (ಸೌನಂದ. ೦೫-೩೭) : ಬತ್ತಿದಡೆಗೆ ಚಿಮ್ಮುವ ತೊರೆ ಬರುವದೆಂತೊ ಅಪರಿಹಾರ್ಯ ಅಂತೆ ತಥಾಗತನ ಕಾರ್ಯ (ಕ್ರೌಂಚಪ. ೬೦). ೩. ಜೈನ ಅಥವಾ ಬೌದ್ಧ ಭಿಕ್ಷು : ಉಪಾಸಕರಲ್ಲದವರ ಮನೆಯಲ್ಲಿ ತಥಾಗತರು ಭಿಕ್ಷೆಯನ್ನು ಗ್ರಹಿಸುವುದಿಲ್ಲ (ತೀರ್ಥಕ. ೬೩). 'ತಥಾಗತಮತ' ಪರಾ. ೪. ಜಿನ.
[ ಸಂ. ]

**ತಥಾಗತಮತ** (ನಾ). ಬೌದ್ಧಮತ : ತಥಾಗತಮತಮಂ ತಿರಸ್ಕರಿಸಿ . . . ಲೋಕಾಯತಶಾಕ್ಯಮತಾವಲಂಬಿಯನವಿಲಂಬಿತಂ ಗೆಲ್ದು (ಶಾಂತಿಪು. ೮-೧೪೭ ವ). [ ತಥಾಗತ + ಮತ ]

**ತಥಾತಿಥಿ** (ನಾ). ಪೂರ್ವೋಕ್ತ ತಿಥಿ ; ಹಿಂದೆ ಹೇಳಿರುವ ದಿವಸ : ಈ ವೀರನರಸಿಂಗರಾಯಪುರವನು ನಿಂಮ ಗ್ರಾಮಕೆ ತಥಾತಿಥಿಯಲಾ × × × ವೀರನರಸಿಂಗದೇವಮಹಾರಾಯರಿಗೆ ಶುಕ್ರುತವಾಗಬೇಕೆಂದು . . . ಕೊಟ್ಟೆಉ (ಸೌಇಇ. IX-II, ೪೭೮-೧೩ ; ?). [ ಸಂ. (ತಥಾ + ತಿಥಿ) ]

**ತಥಾಸ್ತು** (ಅ). ಹಾಗೇ ಆಗಲಿ ; ಆಗಲಿ : ಸರ್ವರಾಜ್ಯವನಾದಡಂ ನಿಮಗೆ ಕೊಡಹಡೆವೆನ್ನಸಲ್ಲದೀಯೊಂದುತೇಜಮಂ ಕೊಡೆನೆಂದು ಭೂಪಾಲನು ನುಡಿಯಲು ತಥಾಸ್ತು ಹಡೆದೆಂ ಹಡೆದನವನೀಶರೊಡೆಯ . . . ಎಂದೆಡೆವಿಡದೆ ಹೊಗಳೆ (ಹರಿಶ್ಚ. ೮.೩೨) ; ಅವರ್ಕೆ ಸಿರಿಯರಸಂ ತಥಾಸ್ತು, ಎಂದು ಕಳುಪಿದಂ (ರಾಮಾಶ್ವ. ೧೩-೧೦).
[ P ಸಂಸ್ಕೃತದಲ್ಲಿ ಇದು ಒಂದು ಪದವಲ್ಲ, ವಾಕ್ಯ; ತಥಾ + ಅಸ್ತು ]

**ತಥ್ಯ** (ನಾ). ನಿಜವಾದುದು ; ಸತ್ಯ : ಪಾಂಡುತನಯರ್ ನಿರ್ದೋಷಿಗಳ್ ತಥ್ಯಮಿಂತು ರಣಸ್ಥಾನದೊಳಿನ್ನರಟ್ಟುಡಿವೆನೆ? (ಪಂಪಭಾ. ೧೩-೫೦) ; ಪಥ್ಯಮುಂ ತಥ್ಯಮುಮಾಗೆ ನುಡಿದು ಸಂಬೋಧಿಸಿದ ಗುರುಗಳ ವಚೋವಿಸ್ತರಮಂ . . . ಅವಧಾರಿಸಿ (ಸುಕುಮಾ. ೧೨-೧೩ ವ) ; ತಡವಿದೇತಕೆ ತಥ್ಯವನು ಗೋರಕ್ಷ ನೋಡೆಂದ (ಪ್ರಭುಲಿಂ. ೧೯-೩೩) ; ನೀನಾಡಿದಿನಿತೆಲ್ಲವುಂ ತಥ್ಯವಹುದು (ಜೈಮಿಭಾ. ೯-೩೦) ; ಪಾಂಡುರಂಗನು ಹೇಳಿದ ಮಾತಿನಲ್ಲಿ ತಥ್ಯವಿತ್ತು (ಸಮಚೀ. ೯೭೮). [ ಸಂ. ]

**ತಥ್ಯಾಂಶ** (ನಾ). ನಿಜಾಂಶ ; ಸತ್ಯದ ಅಂಶ : ಇವುಗಳಲ್ಲಿ ತಥ್ಯಾಂಶವು ಎಷ್ಟಿದೆ ಎಂಬುದನ್ನು ಹೇಳುವುದಕ್ಕೆ ಸಾಧ್ಯವಿಲ್ಲ (ಕರ್ನಾಟ. ೭).
[ ತಥ್ಯ + ಅಂಶ ]

**ತಥ್ಯಾಭಿಯೋಗ** (ನಾ). ನಿಜವಾದ ಪ್ರಯತ್ನ,-ಉದ್ಯೋಗ : ಮಳಯಕೇತು . . . ತನ್ನ ಮಂತ್ರಿ ಮುದ್ರಾರಾಕ್ಷಸರಿಗೆ ತಥ್ಯಾಭಿಯೋಗವಾದೊಡಂ ಮಿಥ್ಯಾಭಿಯೋಗಮೆಂದು ನಿಶ್ಚೈಸಿ ನಿರ್ವಿಚಾರದಿಂ ನಿರ್ದಾಟಿಸಿ ಕಳೆದೊಡೆ (ಶಂಕರಶಂ. ೨೪೮-೧೭). [ ತಥ್ಯ + ಅಭಿಯೋಗ ]

**ತಥ್ಯೆ** (ನಾ). = ತಥ್ಯ : " ತಥ್ಯೆ ಸತ್ಯೋಕ್ತಿ " (ವಸ್ತುಕೋ. ೩೦-೩೩).
[ ಸಂ. ತಥ್ಯ ]

**ತದಂಗುಟ್ಟೆ** (ನಾ). ಒಂದು ಊರಿನ ಹೆಸರು (?) : ತದಙ್ಗುಟ್ಟೆ ಸೋಮಯಾಜಿ ಭಟ್ಟಸ್ಯ ಪುತ್ರಾಯ (ಮ್ಯಆರಿ. ೧೯೪೨, ೭೩-೧೦೬ ; 819).
[ ? ]

**ತದಂಶಕ** (ನಾ). ಆತನ ಅಂಶದಿಂದ ಕೂಡಿದುದು ; ಪರಮಾತ್ಮನ ಅಂಶರೂಪವಾದುದು : ಸಂದ ವಿಶ್ವಮದಾತ್ಮನಿಗೆ ಬೇರೊಂದು ತೋರಿದಡಂ ತದಂಶಕಮೆಂದು ತಿಳಿ (ಗಗಶಾ. ೧೪-೨೦). [ಸಂ.]

**ತದಕಲ್** (ನಾ). ಹೊಡೆತ ; ಪೆಟ್ಟು : " ತೃಂಹಣಂ, ತೃಂಹಣೀಯಂ, ಈ ೨ ತದಕಲ್ " (ಕಾಶಕ್ಕ. ೨೨೩).
[ ತದಕು$_1$ (<ಸದಕು$_1$) + – ಅಲ್$_2$ ]

**ತದಕು$_1$** 'ಸದಕು$_1$' ನೋ.

**ತದಕು$_2$** (ನಾ). ಹೊಡೆಯುವುದು ; ಬಡಿಯುವುದು. ೨. ರತಿಚಾಪಲ್ಯ : ಮುದುಕನಾದರೂ ತದಕು ಬಿಡಲಿಲ್ಲ (ಗ್ರಾ). [ <ತದಕು$_1$ ]

**ತದಕು$_3$** 'ತದುಕು$_3$' ನೋ.

**ತದಕುಗ** (ನಾ). ಹೊಡೆಯುವವನು : "ತೃಂಹನ್, ತೃಂಹಕಃ, ತೃಂಹಃ, ಈ ೩ ತದಕುಗಂ" (ಕಾಶಕ್ಕ. ೨೨೩).
[ ತದಕು$_1$ (<ಸದಕು$_1$) + – ಗ$_2$ ]

**ತದನಂತರ$_1$** (ನಾ). ಅದರ ತರುವಾಯ : ತದನಂತರದೊಳ್ ಬಂದು (ನೇಮಿಪು. ೮-೧೬೬) ; ತದನಂತರದೊಳಾ ಮುರಾಂತಕಂ ಧೃತರಾಷ್ಟ್ರ . . . ಕುಂತಿಯರ್ಗಭಿನಮಿಸಿ (ಜೈಮಿಭಾ. ೭-೧೯). [ ಸಂ. (ತದ್ + ಅನಂತರ) ]

**ತದನಂತರ$_2$** 'ತದನಂತರಂ' ನೋ.

**ತದನಂತರಂ, ತದನಂತರ$_2$** (ಅ). ಆ ಬಳಿಕ ; ಆಮೇಲೆ : ತದನಂತರಮಿರದಾಕೆಯನುದಾತ್ತ ಧಾತ್ರೀತನೂಜೆ ಪರಿವಿಡಿಯೊಳ್ ತಂದಿದಿರೊಳ್ ನಿಱಿಸಿ (ಶಾಂತಿಪು. ೩-೧೨೦) ; ತದನಂತರಂ ಕಾಯಕ್ಲೇಶಮೆಂಬಾಱನೆಯ ತಪಮನೆತ್ತಿಕೊಂಡು (ಸುಕುಮಾ. ೪-೮ ವ) ; ತಮ್ಮೊಳಾಳೋಚಿಸಿ ತದನಂತರಂ (ಜಗವಿ. ೧-೩೩ ವ). **ತದನಂತರ$_2$ :** ಮನಸ್ಸಿನ ಅನುಸಂಧಾನದ ರೂಪದಲ್ಲಿ ತದನಂತರ ವ್ಯಕ್ತವಾಗುವ ವಿಮರ್ಶವು ಪ್ರತಿಯೊಂದು ಸ್ಥಿತಿಯಲ್ಲಿಯೂ ಬೇರೆಯಾಗಿರುತ್ತದೆ (ಶತ್ತ್ವಪ್ರಾ. ೪೪೩). [ <ತದನಂತರ$_1$ ]

**ತದರಬಂಡಿ** (ನಾ). ಒಂದು ಊರಿನ ಹೆಸರು (?) : ತದರಬಣ್ಡಿ ಅಣರೆಯರ ಮಗ ನೆಲ್ಲಲ್ಲಅಣಮ್ಮನಳಿಯ ತೊಱುವನಿಕ್ಕಿಸಿ ಸಗ್ಗಿಯಾದು (ಎಳ್. IX, ಹೊಸಕೋ. ೦೦೦-೩ ; ಸು. ೯೦೦). [ ? ]

**ತದರ್ಥ** (ಗು). ನಿರ್ದಿಷ್ಟ ಉದ್ದೇಶಕ್ಕಾಗಿ ಗೊತ್ತುಮಾಡಿದ ; ತಾತ್ಕಾಲಿಕ : " ಕಾತ್ಕಾಲಿಕ ; ತದರ್ಥ " (Ad hoc. ಪತ್ರಿಪ. ೩).
[ ಸಂ. (ತದ್ + ಅರ್ಥ) ]

**ತದರ್ಥನ್ಯಾಯಾಧೀಶ** (ನಾ). ನಿರ್ದಿಷ್ಟವಾದ ನ್ಯಾಯವಿಚಾರಣೆಗಾಗಿ ನೇಮಕಗೊಂಡ ನ್ಯಾಯಾಧೀಶ : ತದರ್ಥನ್ಯಾಯಾಧೀಶರು (Ad hoc Judges. ಪತ್ರಿನಿ. ೩) ; ನ್ಯಾಯಾಧೀಶರೊಬ್ಬರು ಅವಶ್ಯ ಕಂಡಷ್ಟು ಕಾಲದ ವರೆಗೆ . . . ತದರ್ಥನ್ಯಾಯಾಧೀಶ ರೂಪದಲ್ಲಿ ಹಾಜರಾಗಿ ಕೆಲಸಮಾಡುವಂತೆ ಲಿಖಿತ ಮೂಲಕವಾಗಿ ಬಿನ್ನೈಸಬಹುದು (ಭಾಧಾನ. ೬೯).
[ ತದರ್ಥ + ನ್ಯಾಯಾಧೀಶ ]

**ತದರ್ಥಸಮಿತಿ** (ನಾ). ನಿರ್ದಿಷ್ಟ ಉದ್ದೇಶಕ್ಕಾಗಿ ರಚಿತವಾದ ಸಮಿತಿ : " ತದರ್ಥ ಸಮಿತಿ " (Ad hoc Committee. ಪತ್ರಿನಿ. ೩).
[ ತದರ್ಥ + ಸಮಿತಿ ]

**ತದರ್ಧ** (ನಾ). ಅದರ ಅರ್ಧದಷ್ಟು ಪ್ರಮಾಣ ; ಅದರ ಅರ್ಧ : ಷಟ್ಪದಿಗಾಱಾಱಡಿಯರಡಱಲ್ಲಿಯೊಂದೇನಿಯಮಂ ಮೂಱಕ್ಕೊಂದು ತದರ್ಧಂ (ಛಂದೋಂಬು. ೩-೨೦ ಅಡಿಟಿ). [ ಸಂ. (ತದ್ + ಅರ್ಧ) ]

**ತದರ್ಧಪ್ರಮಿತ** (ಗು). ಅದರ ಅರ್ಧದಷ್ಟು ಅಳತೆಯ : ಅದು ಯೋಜನ ಶತಮೂಲ ವಿಸ್ತೃತಮುಂ . . . ತದರ್ಧಪ್ರಮಿತೋಪರಿಮತಲವಿಸ್ತಾರಮುಂ (ಆದಿಪು. ೧೩-೬೯ ವ). [ ತದರ್ಧ + ಪ್ರಮಿತ ]

**ತದವಸಾನ** (ನಾ). ಅದರ ಕೊನೆ,-ಮುಕ್ತಾಯ : ಪ್ರಿಯಮಿತ್ರ ಮಜ್ಜನಂಬುಗುವಿನಮಲ್ಲಿರ್ದು ತದವಸಾನದೊಳಶೇಷಭೂಷಣಭೂಷಿತೆಯುಂ ಪಡಿಯಱಿಂ ಕಾಣಿಸೆಯುಂ (ಶಾಂತಿಪು. ೯-೧೦೦ ವ).
[ ಸಂ. (ತದ್ + ಅವಸಾನ) ]

**ತದಸು** (ಕ್ರಿ). ೧. ಹೊಡೆಯಿಸು ; ತದೆಯಿಸು : ಬಂಟನಾಗಿಹ ಕೃಷ್ಣನಿಂ ತದಸಿಕೊಂಡಂಗೆ ಕುಂಠಣೆಯನಾಡಿ (ಜಕೋಪು. ೧೩-೩). ೨. ಸಂಭೋಗಿಸು : ಚಲಿಸಿ ಮೂತ್ರವೊಸರ್ವ ತೂತುಗಳೆಳಿದವದಿರು ತದಸಿಕೊಂಬಾ ಕುಳಿಗಳು ರಜೋದೂಷ್ಯವಹ ರೋಹಿತದ ಕುರುವುಗಳು (ಬಸಪು. ೪೦-೬೦).
[ <ತದೆ$_1$ + – ಸು$_1$ ]

**ತದಸ್ತು** (ಅ). ಅದು ಆಗಲಿ : ನೀವುಂ ಹಸ್ತೋದಕಂಗೆಯ್ವುದೆನೆ ಭಾಸ್ಕರ ಭಟ್ಟ ದಣ್ಣನಾಯಕಂ ತದಸ್ತುವೆಂದು . . . ಹಸ್ತೋದಕಂ ಮಾಡಿ ಬಿಟ್ಟರ್ (ಸೌಇಇ. XX, ೪೭-೪೨ ; 1072). 'ತಥಾಸ್ತು' ಪರಾ.
[ P ಇದು ಸಂಸ್ಕೃತದಲ್ಲಿ ಒಂದು ಪದವಲ್ಲ ; ವಾಕ್ಯ : ತದ್ + ಅಸ್ತು ]

**ತದಾತನ** (ಗು). ೧. ಆ ಸಮಯದ. (ನಾ). ೨. ಆಗಲೇ ಇರತಕ್ಕುದು ; ವರ್ತಮಾನ ಕಾಲದ್ದು : ನೈಮಿತ್ತಕನಂ ಬರಿಸಿ ತದಾತನಮುಮತ್ಯಂತ ನೂತನಮುಮಪ್ಪುದೊಂದು ಲಗ್ನಮಂ ಪೇಟಮೆಂಬುದುಂ (ಶಾಂತಿಪು. ೩-೩೭ ವ). 'ಅಧುನಾತನ' ಪರಾ. ೨. = ತದಾತ್ವ : " ತದಾತ್ವಂ ತದಾತನಂ ತತ್ಕಾಲಂ " (ವಸ್ತುಕೋ. ೧೮-೧೮). [ ಸಂ. ]

**ತದಾತ್ವ** (ನಾ). ವರ್ತಮಾನ ಕಾಲ; ತತ್ಕಾಲ : "ತತ್ಕಾಲಂ, ತದಾತ್ವಂ—ಈ ೨ ಆಗಳೆಯಪ್ಪ ಕಾಲಂ" (ಹಲಾಯು. ೨೦-೧೦೮). [ಸಂ.]

**ತದಾತ್ವಸುಖ** (ನಾ). ತಾತ್ಕಾಲಿಕ ಸುಖ ; ವರ್ತಮಾನಕಾಲದ ಸುಖ : ಭಾವಿಯೆನಿಸಿರ್ದ ಭೋಗದೊಳಾವುದು ನಿಶ್ಚಯಮತೀತಮದತೀತಮೆ ದಲ್ ಜೀ[ವಂ] ತದಾತ್ವಸುಖಲವಸೇವೆಗೆ ಕಳವಳಿಪುದದಟಿ'ೂಳೇಂ ಪುರು ಳುಂಟೇ (ಚಂದ್ರಪ್ರ. ೫-೩೭). [ತದಾತ್ವ + ಸುಖ]

**ತದಾನೀಂ** (ಅ). ಆಗ ; ಆ ಸಮಯದಲ್ಲಿ. [ಸಂ.]

**ತದಾರಭ್ಯ** (ಅ). ಆಗಿನಿಂದ ; ಅಂದಿನಿಂದ. [ಸಂ. (ತದ್ + ಆರಭ್ಯ)]

**ತದಿಕು** 'ತದುಕು$_2$' ನೋ.

**ತದಿಗಿಣ** (ನಾ). ಸಂಗೀತ, ನೃತ್ಯಗಳಲ್ಲಿ ತಾಳವನ್ನು ಸೂಚಿಸುವ ಒಂದು ಅನುಕರಣ ಪದ. 'ತದಿಗಿಣಿಸು' ಪರಾ.

**ತದಿಗಿಣಿಸು** (ಕ್ರಿ). ಕುಣಿ; ನರ್ತಿಸು : ಹಮಿಂಗ್ ಬರ್ಡ್ ಎಂಬ ಹೂಗುಬ್ಬಿಯು ಹೂವಿನ ಒಳಗೆ ತನ್ನ ನೀಳ ಚುಂಚನ್ನು ನೀಡಿ ಜೇನನ್ನು ಹೀರುವ ತನಕ, ಅದೇ ಸ್ಥಳದಲ್ಲಿ ತದಿಗಿಣಿಸಿ (Flutter) ಹಾರುವುದುಂಟು (ಬಾಲಪ್ರ. III, ೦೩೦೭). [ತದಿಗಿಣ + -ಇಸು$_3$]

**ತದಿಗಿಲು** 'ತದುಂಕಿಲು' ನೋ.

**ತದಿಗೆ** (ನಾ). ಹುಣ್ಣಿಮೆ ಅಥವಾ ಅಮಾವಾಸ್ಯೆಯ ನಂತರದ ಮೂರ ನೆಯ ದಿನ ; ಪಕ್ಷದ ಮೂರನೆಯ ದಿನ ; ತೃತೀಯೆ : ನಿಮಗಕ್ಷಯ ದಾನಮಕ್ಕೆಂದು ಪುಣ್ಯದಿನಂ ವೈಶಾಖಶುದ್ಧ ತದಿಗೆಯಕ್ಷತೃತೀಯೆಯೆಂಬ ಪುಣ್ಯದಿನಮಾಯ್ತು (ಶಾಪುಂಪು. ೫೩-೨೭) ; ಯಕಾರಕ್ಕೆ ಗಕಾರಂ . . . ದ್ವಿತೀಯಾ—ಬಿದಿಗೆ ; ತೃತೀಯಾ—ತದಿಗೆ (ಶಮದ. ೨೫೯ ವೃಮೋ) ; ಆ ಪಕ್ಷಂಗಳೊಳಗೆ . . . ಕುಬೇರನೇ ದೇವತೆಯಾಗುಳ್ಳ ತದಿಗೆ . . . ಚಂದ್ರ ನಧಿದೇವತೆಯಾದಪೌರ್ಣಿಮೆಯನಿಪ ಶುಭಾಶುಭರೂಪಮಾದ ಹದಿನೈದು ತಿಥಿಗಳುಳ್ಳದ್ದೇ ಶುಕ್ಲಪಕ್ಷ (ವಿವೇಕ. ೩೨೦). [<ಸಂ. ತೃತೀಯಾ]

**ತದೀಯ** (ಗು). ಅವನಿಗೆ ಸಂಬಂಧಿಸಿದ ; ಆ ವ್ಯಕ್ತಿಯ ; ಅದರ ; ಅವರ : ತದೀಯ ಕರ್ಣಾರ್ಭಣಂ ಪೊರ್ದಿ. (ಆದಿಪು. ೨-೯೨ ವ) : ತದೀಯಾಂಬುಜಪದಮಂ ತನ್ನ ಶಿರೋಂಬುಜದಿಂದರ್ಚಿಸಲ್ ಪರಿಚ್ಛೇದಿ ಸಿದಂ (ಜಯಕೋಕ ೪-೪೪). [ಸಂ.]

**ತದುಕ** 'ತದುಂಕು$_2$' ನೋ.

**ತದುಂಕಿಲು, ತದಿಗಿಲು** (ನಾ). ಒಂದು ಬಗೆಯ ಮರ ಮತ್ತು ಅದರ ಕಾಯಿ : ನೆಲ್ಲಿ ಹೇರಳೆ ನಿಂಬೆ ಮಾಗಾಯಲ್ಲ ಮಣಸೇಲಕ್ಕಿಗರಿಯೆಳೆ ಬೆಲ್ಲವತವುಂಬಟೆಯ ತದುಕಿಲಸುಂಡೆ . . . ಗುಳ್ಳ ತಿಂತ್ರಿಣಿಯುಪ್ಪುಗಾಯ ಗಳೆಲ್ಲ ಸುವ್ವಾರಿಯರು ಬಡಿಸಿದರು (ಅನಂತ. ೬-೨೫-೩೮). **ತದಿಗಿಲು** : ಆಲವರಳಿಯ ಅತ್ತಿ ಕಿತ್ತಳೆ ಜಾಲ ತದಿಗಿಲು . . . ಬಿದಿರು ಬೂರಗ ಲೀಲೆಯೊಳು ಮನವೊಪ್ಪಿತು (ಗೋಪಾಲ. ೦-೫). [<ತದುಕು$_2$]

**ತದುಕು$_1$** 'ಸದಕು$_1$' ನೋ.

**ತದುಕು$_2$, ತದಕು$_3$, ತದಿಗು, ತದುಕ** (ನಾ). ಒಂದು ಬಗೆಯ ಮರ ; ಅನೆಬೇಲ ; ಸಲ್ಲಕೀವೃಕ್ಷ : "ಗಜಭಕ್ಷ್ಯಾ, ಸುವಹಾ, ಸುರಭೀ, ರಸಾ, ಮಹೇರಣಾ, ಕುಂದುರುಕೀ, ಸಲ್ಲಕೀ, ಹ್ಲಾದಿನೀ ಈ ೮ ತದುಕು" (ನಾಚಿರಾ. ೦೦೦) ; ಕುದಿಯಿಸುವುದೆಣ್ಣೆಯಂ ಮಯಂ ತದುಕಂ ಗುಗ್ಗುಳದಿನಕ್ಕಿ . . . ತವಕ್ಷೀರದಿನಕ್ಕಾ ತೈಲದೊಂದು ಕಾಳಿಕೆ ಕಿಡುಗುಂ (ಲೋಕೋಪ. ೬-೦೩) : ಮಾಗುಳಿ ಬಿದಿರ ಕಳಲೆ ಪೊಸ ತದುಕಂಬಟೆಯ ಕಾಯ್ಗಳಿಂದ ಸಮೆದೊಪ್ಪುವುಪ್ಪಿನ ಕಾಯ್ಗಳಂ ಮಾಳ್ಪುದು (ಸೂಪಶಾ. ೩-೦೭) ; ಆನೆ ಏಂಡತ್ತಲೊಂದೆಸೆಯ ಆನಂದ ಮಿಗೆಯಾಡುತಿರ್ದುವು ತದುಕಿನ ಕಾನನ ದೊಳು ಮೇವುಗೊಳುತ (ನಾಗಕು. ೦೩-೦೭೭). **ತದಕು$_3$** : "ಸಲ್ಲಕೀ, ಗಜಪ್ರಿಯಾ—ಈ ೨ ತದಕು" (ಹಲಾಯು. ೩೩-೪೭) ; ತದ[ಪಾಠಾಂ. ದು]ಕಿನ ತಾಳ ತೆಂಗಿನ ತಳಂಕಿನ ತುಂಬುರ ಚಿಲ್ಲ ಬೆಲ್ಲವತ್ತದ . . . ಮರಂಗಳ ಕೊಂಬುಗಳ್ (ಲೀಲಾವ. ೬-೨೭) ; (ಸೂಕ್ತಿಸು. ೩-೨೫ ಸೋ) : ಹುಣಿಸೆ ತದಕು ತುಂಬುರು ಬೆಳಲ್ ಬೆಲ್ಲವತ್ತ . . . ಚನ್ನಂಗಿ ಮೊದಲಾದ ವೃಕ್ಷಂಗಳಂ ವನಮೆಸೆದುದು (ಜಲಪು. ೫೩-೦೮). **ತದಿಕು** : ಪುಳಿಗೂಟಂ ತದಿಕಿನ ಕೆಂದಳಿರಂ ಪಾಲ್ಗೆನೆಯನೆಳೆಯ ಪುಲ್ಲಂ . . . ತಂದು ಪೊರೆವುದುಂ ಗಜಶಿಶುವಂ (ಧರ್ಮಾಮೃ. ೧೨-೦೫೯) ; ಬೇಲ ಬೇವಿಬ್ಬಡಲ ತೇಗರುತಾಳ ತಂಡಸ ತಡಸ ತುಗ್ಗಿಲು ತದಿಕು ತಮಗಳ . . . ತಮಾಲ ತರು ಮೊದಲಾದ ವನ ಭೂಜಾಳಿಯಲಿ ಹೋಳಿದರಕಂಪನನಸಮರಣರಥವ (ತೊರವೆ. ೬-೦೪-೦೮) ; ಮೊದಲ ಮಾವು ತದಿ[ಪಾಠಾಂ. ದು]ಕಿನೆಳೆಗಾಯಿಕ್ಕಿ ಪೊಗ್ಗರಿಸಿಯರ್ಧಮಂ ಬಿದಿರ ನಳಿಗೆಯೊಳಿಕ್ಕಿಯರ್ಧಮಂ ನೇತ್ರದೊಳು ಕಟ್ಟಿ ಕೃತ್ಯಂ ಮಾಳ್ಪುದು (ಸೂಪಶಾ. ೨-೪೭). **ತದುಕ** : ಹಾಲೆ ಹಲಸು . . . ಜಾಲ ತದುಕ ಅರನೆಲಿಮೇಲೆನಿಸುವ ಮಾವು ಆಲದಮರಗಳ ಸಾಲೆಸದಿಹವು ಅಲ್ಲಲ್ಲಿ (ಮಾದೇಸಾಂ. ೦-೫೦).

**ತದುಕಿನಧೂಪ** = ಒಂದು ಬಗೆಯ ಧೂಪ ; ಹಾಲುಮಡ್ಡಿ : "ತುರುಷ್ಕ, ಪಿಂಡಕಃ, ಸಿಲ್ಹಃ, ಯಾವನಃ—ಈ ೪ ತದುಕಿನ ಧೂಪ. ಮಡ್ಡಿಯ ಧೂಪವೆಂದೂ ಎಂಬರು" (ನಾಚಿರಾ. ೦೦೪).

**ತದುಕುಗಾನು** (ನಾ). ತದುಕಿನ ಮರಗಳಿರುವ ಕಾಡು, -ಅಡವಿ ; ಸಲ್ಲಕೀವನ:ಮುಂತೊಂದು ತದುಕುಗಾನೊಳು ಹೇರಾನೆಯ ತಿಂಥಿಣಿಯನು ಕಂಡನಾಗ (ಶ್ರೀಪಾಲ. ೬-೪೨). [ತದುಕು$_2$ + ಕಾನು (<ಕಾನ್)]

**ತದುಕ್ತ** (ಗು). ಅದರಲ್ಲಿ ಹೇಳಿದ ; ಆ ವಿಷಯದಲ್ಲಿ ಹೇಳಿರುವ : ಓರ್ವಂ ಪಾರ್ವಂ ಬಂದು ತೀರ್ಥಯಾತ್ರಾಫಲಮಂ ತದುಕ್ತವಿಧಿಯಂ ನೆಱ ತಿಳಿಪಿ ಮಾಯಮಾದೊಂದು ಕನಸಂ ಕಂಡು (ರಾಮಾಶ್ವ. ೬೩-೦೭). [ಸಂ. (ತದ್ + ಉಕ್ತ)]

**ತದುಗತ** (ಗು). = ತದ್ಗತ ೧ : ತದುಗತವಾಗಿ ನಿರಂತರ ನಿಜಲಿಂಗದಿ ಪರಮಾನಂದವನೆಯ್ದಿ (ಶಿವಗೀ. ೪೦೮) ; ಜಗದ ಕಣ್ಣಿಗೆ ಮಾಯದ ಮಂಜ ಕವಿಸಿ ನಿಜಪದದಲ್ಲಿ ತದುಗತನಾದ (ಕರಕ. ೩೪೯).
[<ಸಂ. ತದ್ಗತ]

**ತದುಪಾಂತ** (ನಾ). ಅದರ ಪಕ್ಕ, -ಸಮೀಪ: ಮತ್ತಂ ತದುಪಾಂತದೊಳ್ (ಶಾಂತಿಪು. ೧-೬೦ ವ) ; ತದುಪಾಂತ ಸಮಯದೊಳನ್ನತರ ವೇದನೀಯ ದೇವಗತಿ . . . ಎಂಬೆಪ್ಪತ್ತೆರಡುಂ ಪ್ರಕೃತಿಗಳಂ ದೂರೀಕೃತಂ ಮಾಡಿ (ಶಂರಾಮಾ. ೧೩-೮೦ ವ) ; ಅಧರವೋಷ್ಠ ದಂತವಾಸಂ ತದುಪಾಂತಮಂತದು ಸೃಕ್ವಾಭಿಧಾನಂ (ವಸ್ತುಕೋ. ೬೯-೦೫). [ಸಂ. (ತದ್ + ಉಪಾಂತ)]

**ತದುಭಾಗ** (ನಾ). ಅದರ ಭಾಗ ; ಆ ಭಾಗ : ಗಿರೀಂದ್ರ ವನಾಂತರದ ಪುಣ್ಯಾಗಣಿತ ತೀರ್ಥಂಗಳೊಳು ತದುಭಾಗ[ಪಾಠಾಂ. ತದ್ಭಾಗ]ಪುಣ್ಯಾಯತನ ಗಣ್ಯಸ್ಥಾನ ಭೂಮಿಯಲಿ (ಬಸವ. ೦೯-೩೨). [<ಸಂ. ತದ್ಭಾಗ]

**ತದೆ$_1$** 'ಸದೆ$_1$' ನೋ.

**ತದೆ$_2$** (ನಾ). ಬಡಿತ ; ಹೊಡೆತ ; ಪೆಟ್ಟು : ಅವರಾತಂಗವಾತನೊಂದು ತದೆಗಂ ಬೆಂಗೊಟ್ಟಂತುಮಿಂತುಮೋಡಿ ತಮ್ಮೊಡೆಯಂಗಿಂತಿದಂ ಪೇಳ್ವುದುಂ (ರಾಮಾಶ್ವ. ೦೫೪-೩). [<ತದೆ$_1$]

**ತದೆವಡೆ** (ಕ್ರಿ). ಏಟು ತಿನ್ನು : ಊರ ಸೀರೆಗಸಗಂ ತದೆವಡೆದನೆನಿಪ್ಪ ನಾಡನುಡಿ (ಅರ್ಜನೀ. ೮-೭೯). [ತದೆ$_2$ + ಪಡೆ$_1$]

**ತದೇಕಚಿತ್ತ** (ನಾ). ೧. ಅದರಲ್ಲೇ ನೆಟ್ಟ ಮನಸ್ಸು. ೨. ಅದರಲ್ಲೇ ನೆಟ್ಟ ಮನಸ್ಸುಳ್ಳವನು ; ತನ್ಮಯವಾದ ಮನಸ್ಸುಳ್ಳವನು : ಮೊಕ ದ್ದಮೆಗೆ ಸಂಬಂಧಿಸಿದ ಕಡತವನ್ನು ಬಿಚ್ಚಿಕೊಂಡು ತದೇಕಚಿತ್ತನಾದನು (ಪುನರು. ೩೬೪) ; ತದೇಕಚಿತ್ತನಾಗಿ ನನ್ನ ವಾಚನವನ್ನು ಕೇಳುತ್ತ ಕುಳಿತ (ದೀಪಕ. II, ४). [ಸಂ. (ತದ್ + ಏಕಚಿತ್ತ)]

**ತದ್ಗತ** (ಗು). ೧. ಅದರಲ್ಲಿ ಮಗ್ನನಾದ,-ಆಸಕ್ತನಾದ,-ಶ್ರದ್ಧೆಯುಳ್ಳ. (ನಾ). ೨. ಲೀನನಾದವನು ; ಐಕ್ಯಹೊಂದಿದವನು : ಕೂಡಲ ಸಂಗಮದೇವನಲ್ಲಿ ತದ್ಗತನಾ[ಪಾಠಾಂ. ವಾ]ದೆನಯ್ಯಾ (ಬಸವ. ೮೮೫).

**ತದ್ಗತವಾಗು** = ಐಕ್ಯವಾಗು ; ಲೀನವಾಗು : ತನ್ನಲ್ಲಿ ತಾನು ತದ್ಗತವಾಗಿಪ್ಪ ಶಿವಯೋಗಿಗೆ ಭಿನ್ನವಿಲ್ಲ ನೋಡ (ಶರಚ. ೩೭೦).

[ ಸಂ. (ತದ್ + ಗತ) ]

**ತದ್ಗುಣ** (ಗು). ೧. ಆ ಗುಣವುಳ್ಳ. (ನಾ). ೨. ಅದರ ಅಥವಾ ಆ ವ್ಯಕ್ತಿಯ ಗುಣ,-ಲಕ್ಷಣ. ೩.=ತದ್ಗುಣಾಲಂಕಾರ: ಅತಿ ಬಹುಲಸ್ಥಿತಿಯಿಂ ಸಂಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ (ಕಾವ್ಯಾವ. ೭೮೭).

[ ಸಂ. (ತದ್ + ಗುಣ) ]

**ತದ್ಗುಣಾಲಂಕಾರ** (ನಾ). [ಕಾವ್ಯಮೀ] ಅರ್ಥಾಲಂಕಾರಗಳಲ್ಲಿ ಒಂದು: ಒಂದು ವಸ್ತು ತನ್ನ ಗುಣಮಂ ಬಿಟ್ಟುಪೆಱತೊಂದಱ ಗುಣಮಂ ಪಡೆಯೆಯುದು ತದ್ಗುಣಾಲಂಕಾರಮೆನಿಪುದು ಎಂತೆನೆ:-ಮುತ್ತಿನ ಸರಮಂ ಕೆಂದಳದೊತ್ತಿನೊಳಿಟ್ಟೆಱಗಿ ನಿನಗೆ ಸಾಮಂತನೃಪರ್ ಮತ್ತದನೆ ಪದ್ಮರಾಗಂಗೆ ತ್ತಚ್ಚರಿವಡುವರ್ (ಅಪ್ರತಿ. ೧೦೯-೩೦) ; ಯಾವುದಾದರೂ ಒಂದು ವಸ್ತು ತನ್ನಗುಣವನ್ನು ಬಿಟ್ಟು ಮತ್ತೊಂದು ವಸ್ತುವಿನ ಗುಣವನ್ನು ಪಡೆಯಿತೆಂದು ವರ್ಣಿಸುವುದು ತದ್ಗುಣಾಲಂಕಾರ (ಕೃಬಿಡಿ. ೨೦೭).

[ ತದ್ಗುಣ + ಅಲಂಕಾರ ]

**ತದ್ದಯ್ಯ** (ನಾ). ಒಬ್ಬಾತನ ಹೆಸರು : ಶ್ರೀಮತ್ತದ್ದಯ್ಯ ಮಾಖಣ್ಣ ಭಟ್ಟರ್ಗ್ಗೆ ವಿದ್ಯಾದಾನಗೊಟ್ಟ ಮಣ್ಣು ಬಟ್ಟವಾಳಯ್ಯಣ್ಣಾಗಂ (ಎಕ. ೪, ಅರಕ. ೨೪-೭ ; ಸು. ೧೦೦೦). [ ತದ್ದ ? + ಅಯ್ಯ₁ ]

**ತದ್ದರ** (ನಾ). ಒಬ್ಬಾತನ ಹೆಸರು : ಮತ್ತನನ್ತೂರಯ್ಯಸ್ತ್ರದಱ ಚತುರಾಘಾಟದ ಸೀಮೆಯಾವುದೆಂದರೆ ತದ್ದರಪೊಲದ ಬ[ಡ]ಗಿ ಪೊಲದ ಸಂದಿನಲೀಶಾನ್ಯದ ಗುಡ್ಡೆ . . . ಅಲ್ಲಿಂ ಬಡಗಲು ಸೀವಟ್ಟದ ತದ್ದರಪೊಲದ ಸಂದಿನಲು ವಾಯವ್ಯದ ಗುಡ್ಡೆ (ಸೌಇಇ. XX, ೦೯-೩೭, ೯೮೦). [ ? ]

**ತದ್ದಲು** (ನಾ). ಬೇಲಿ ಮೊದಲಾದವುಗಳಿಗೆ ಇಡುವ ಮುಳ್ಳಿನ ಬಾಗಿಲು ; "ಕುರಿಯ ರೊಪ್ಪಕ್ಕೆ ಅಥವಾ ಹುಲ್ಲುಕೊಪ್ಪಲು ಮುಂತಾದುವುಗಳ ಬಾಗಿಲಿಗೆ ಇಡುವ ಬಿದಿರುಮುಳ್ಳಿನ ಅಥವಾ ಸೋಗೆಯ ಬಾಗಿಲು." (ನನ್ನೂರು. ಟಿಪ್ಪಣಿ) : ಹುಲ್ಲನ್ನು ತಿಂದು ಬಾಯಾರಿದ ಕುರಿಮರಿಗಳು ತದ್ದಲಿನ ಆ ಕಡೆ (ನನ್ನೂರು. ೧೫). 'ತಡಮೆ' ಪರಾ. [ ? ]

**ತದ್ದವಾಡಿ** 'ತರ್ದವಾಡಿ' ನೋ.

**ತದ್ದಿನ** (ನಾ). ೧. ಆ ದಿನ : ಸುರೆ ಮಾಂಸವ ಭುಂಜಿಸುವ ತದ್ದಿನವೇ ದೋಷದಿನ (ಅದವ. ೯೪-೧೫೭). ೨. ಶ್ರಾದ್ಧ ; ತಿಥಿ : ಕುಂತಿಯ ಪತಿಯ ತದ್ದಿನ ಕಾಲ ಬಂದುದು ಕೃಷ್ಣನಿರುತಿರೆ ತದ್ದಿನಂಗಳಲಿ(ಕುವ್ಯಾಆ.ಓಶಿಇ. ೩-೦); ತದ್ದಿನಕೆ ಮಱುದಿವಸದೊಳ್ಳೆಳ್ಳು ಚಹೆನಪಾತ್ರಂಗೆ (ಕೃಮಿಛಾ. ೧೦-೨೭). ☞ ಶ್ರಾದ್ಧವು ಅಮಂಗಳವಾಚಕವೆಂದು ಹೀಗೆ ಪ್ರಕಾರಾಂತರದಿಂದ ಹೇಳಲ್ಪಡುತ್ತದೆ. [ ಸಂ. (ತದ್ + ದಿನ) ]

**ತದ್ದು** 'ತರ್ದು₂' ನೋ.

**ತದ್ಧರ್ಮ** (ಗು). ೧. ಆ ಕೆಲಸವನ್ನುಳ್ಳ. (ನಾ). ೨. ಆ ಧರ್ಮ ; ಆ ಕೆಲಸ. [ ಸಂ. (ತದ್ + ಧರ್ಮ) ]

**ತದ್ಧಿತ** (ಗು). ೧. ಅದಕ್ಕೆ ಹಿತವಾದ. (ನಾ). ೨. [ವ್ಯಾಕ] ಧಾತುವಲ್ಲದ ಪ್ರಕೃತಿಗಳಿಗೆ ಸೇರಿ ವಿಶಿಷ್ಟವಾದ ಅರ್ಥವನ್ನು ಸೂಚಿಸುವ ಪ್ರತ್ಯಯ: ಚರಮಸ್ವರಕ್ಕೆ ಚರಮಾಕ್ಷರಕಕ್ಕುಂ ಲೋಪಮಗ್ರದೊಳ್ ತದ್ಧಿತವೊಂದಿರೆ (ಶಮದ. ೩೦೯) ; ಮಿಕ್ಕ ಪ್ರಕೃತಿಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ತದ್ಧಿತಪ್ರತ್ಯಯಗಳೆಂದೂ . . . ಹೆಸರಿದೆ (ಕೃಬಿಡಿ. ೧೫). ೩. [ವ್ಯಾಕ] ತದ್ಧಿತಪ್ರತ್ಯಯ ಸೇರಿ ಆದ ನಾಮಪದ : ಗಣನಾವಿಶೇಷ ಪರಿಪೂರಣದೊಳಮನಿತಿನಿತೆನಿತ್ತು ಶಬ್ದಂಗಳ ಪೂರಣದೊಳಮನೆಯ ಪ್ರತ್ಯಯಮೊಣರ್ದು ಸಮಂತೊಂದಿ ತೋಱುಗುಂ ತದ್ಧಿತದೊಳ್ (ಕಾವ್ಯಾವ. ೩೭೮).

[ ಸಂ. ]

**ತದ್ಧಿತಾಂತ** (ನಾ). [ವ್ಯಾಕ] ತದ್ಧಿತಪ್ರತ್ಯಯಗಳು ಸೇರುವುದರಿಂದ ಉಂಟಾಗುವ ಪದ: ಮಿಕ್ಕ ಪ್ರಕೃತಿಗಳ ಮೇಲೆ ಸೇರುವ ಕೆಲವು ಪ್ರತ್ಯಯಗಳಿಗೆ ತದ್ಧಿತಪ್ರತ್ಯಯಗಳೆಂದೂ ಇವುಗಳಿಂದ ನಿಷ್ಪನ್ನವಾದ ಶಬ್ದಗಳಿಗೆ ತದ್ಧಿತಾಂತಗಳೆಂದೂ ಹೆಸರಿದೆ (ಕೃಬಿಡಿ. ೧೫).

**ತದ್ಧಿತಾಂತ ನಾಮ**=ನಾಮಪ್ರಕೃತಿಯ ಮೇಲೆ ತದ್ಧಿತಪ್ರತ್ಯಯವು ಸೇರಿ ಆಗುವ ಪದ: ನಾಮಪ್ರಕೃತಿಗಳಿಗೆ ಬೇರೆ ಬೇರೆ ಅರ್ಥಗಳಲ್ಲಿ ಬೇರೆ ಬೇರೆ ಪ್ರತ್ಯಯಗಳು ಸೇರಿ ತದ್ಧಿತಾಂತನಾಮಗಳಾಗುತ್ತವೆ (ಮಧ್ಯಮ. ೧೩೭). **ತದ್ಧಿತಾಂತ ಭಾವನಾಮ** = ತದ್ಧಿತಪ್ರತ್ಯಯ ಸೇರಿ ಸಾಧಿತವಾದ ಭಾವನಾಮ : ಭಾವವನ್ನು ಎಂದರೆ ವಸ್ತುಧರ್ಮವನ್ನು ತಿಳಿಸುವ ಕೆಲವು ತದ್ಧಿತಪ್ರತ್ಯಯಗಳು ಸೇರಿದರೆ ತದ್ಧಿತಾಂತಭಾವನಾಮಗಳಾಗುತ್ತವೆ (ಕೃಬಿಡಿ. ೦೯) ; ಭಾವನಾಮಗಳಲ್ಲಿ ಧಾತುಗಳಿಂದ ಹುಟ್ಟತಕ್ಕವುಗಳಿಗೆ ಕೃದಂತಭಾವನಾಮಗಳೆಂದೂ, ನಾಮಪ್ರಕೃತಿಗಳಿಂದ ಹುಟ್ಟತಕ್ಕವುಗಳಿಗೆ ತದ್ಧಿತಾಂತ ಭಾವನಾಮಗಳೆಂದೂ ಹೆಸರು (ಮಧ್ಯಮ.೧೨೪). **ತದ್ಧಿತಾಂತಾವ್ಯಯ**=ನಾಮಪ್ರಕೃತಿಯ ಮೇಲೆ ತದ್ಧಿತಪ್ರತ್ಯಯವು ಸೇರಿ ಆಗುವ ಅವ್ಯಯ : ತದ್ಧಿತಾಂತಾವ್ಯಯಗಳು – (i) ಸಾದೃಶ್ಯಾರ್ಥದಲ್ಲಿ . . . ಪೊಲ್, ಅಂತೆಪೋಲ್, ಅಂತಿರೆಪೋಲ್ ಎಂಬ ಪ್ರತ್ಯಯಗಳು ಬರುವುವು . . . ಹರಿಪೊಲ್, ಇಂದ್ರುಂಬೋಲ್. (ii) ಒಂದು ಮೊದಲಾದ ಸಂಖ್ಯಾವಾಚಿಗಳಿಗೆ ಆವೃತ್ತಿ ಎಂಬರ್ಥದಲ್ಲಿ ಮೆ ಸೇರುವುದು–ಒರ್ಮೆ, ಇರ್ಮೆ, ಸಾಸಿರ್ಮೆ (ಕೃಬಿಡಿ. ೩೨). [ ತದ್ಧಿತ + ಅಂತ₂ ]

**ತದ್ಬಲ, ತದ್ಬಳ** (ನಾ). ೧. ಒಂದು ಬಗೆಯ ಬಿಲ್ಲು : ದಂಡಾಸನಂ ತೀರಿ "ತದ್ಬಲ[ಪಾಠಾಂ. ಳ]ವೆಂದು ಬಿಲ್ಲ ಭೇದಂಗಳಕ್ಕು" (ಪಂಗಂಶಾ. ೮೭-೩೩). 'ತೀರಿ' ಪರಾ. ತದ್ಬಳ: ೨. ಒಂದು ಬಗೆಯ ಬಾಣ: "ತೀರೀ ತದ್ಬಳಃ . . . ಅಂಬಿನ ಭೇದಂಗಳು " (ಹಠಾಯು. ೭೭-೩೧೩). [ ಸಂ. ]

**ತದ್ಬಳ** 'ತದ್ಬಲ' ನೋ.

**ತದ್ಭವ** (ಗು). ೧. ಅದರಿಂದ ಹುಟ್ಟಿದ, - ಉಂಟಾದ ; ಅದರಲ್ಲಿ ಹುಟ್ಟಿದ ; ಅಲ್ಲಿಯ : ಗೃಹೋಪಕಂಠವನಭೂಜಮ ಕಲ್ಪಮಹೀಜದೊಪ್ಪಮಂ ತಳೆಯೆ ಧನಾಢ್ಯ ದಂಪತಿಯ ತದ್ಭವ ಡಂಪತಿಯಂದಮಂ ಪುದುಂಗೊಳಿಸೆ ಪುರಂ ವಿರಾಜಿಪುದು ದೇವಕುರುಪ್ರತಿಮಾನಮಂಬಿನಂ (ಚಂದ್ರಪು. ೦೧-೭೨). (ನಾ). ೨. ಅದರಲ್ಲಿ ಹುಟ್ಟಿದುದು ; ಅಲ್ಲಿ ಜನ್ಮತಾಳಿದುದು : ಅವಱ ವಿಪರ್ಯಯವೃತ್ತಿ ಪ್ರವಿಭಕ್ತ ವಿಕಲ್ಪಮುಕ್ಕುಮುತ್ತರವರ್ಗಂ ಸವಿಶೇಷ ಗುಣಮನತಿಶಯಧವಳೋಕ್ತಿಕೃಮದಿನಱಿಪುವೆಂ ತದ್ಭವದೊಳ್ (ಕವಿರಾ. ೨-೩೫) ; ಕರಚರಣ ಸಮಾಯೋಗದೆ ಕರಣಾ ನೂಱೆಂಟು ತದ್ಭವಂಗಳ್ ಮೂವತ್ತೆರಡಂಗಹಾರವೆಸೆದುವು ಸರೋಚಕಂಗಳ್ ಸುಚಾರಿಗಳ್ ಸುರಪತಿಯಾ (ಅಜಿಪು ೩-೮). ೩. ಆ ಜನ್ಮ ; ಪೂರ್ವಜನ್ಮ : ಇನ್ನೆನ್ನ ನಿನ್ನ ತದ್ಭವ ಸಂಬಂಧದ ಬಂಧುರಲಂಬಪ್ರಾರಂಭಮಮಂ ಕೇಳ್ವೆಯಪ್ಪೊಡೆ (ಶಾಂತಿಪು. ೭-೮೨ ವ) ; ಜಾತಿಸ್ಮರೆಯಾಗಿ ತದ್ಭವಪ್ರತ್ಯಯದಿಂ ಭವಸ್ವರೂಪಮಂ . . . ಕೇಳ್ದು ತಿಳಿದು (ಸುಕುಮಾ. ೮-೦ ವ). ೪. [ವ್ಯಾಕ] ಸಂಸ್ಕೃತದಿಂದ ಅಥವಾ ಪ್ರಾಕೃತದಿಂದ ಹುಟ್ಟಿದ ಅಪಭ್ರಂಶ ಶಬ್ದ : ಸಕ್ಕದದ ತದ್ಭವಂಗಳ ಲಕ್ಕಣಮಂ ಕನ್ನಡಕ್ಕೆ ಲಕ್ಷಿಸಿ ಪೇಟ್ದಿಂ (ಶಮದ. ೨೫೩) ; ವಿಕಾರವನ್ನು ಪಡೆದ ಸಂಸ್ಕೃತ ಶಬ್ದಗಳಿಗೂ ವಿಕಾರವನ್ನು ಪಡೆದ ಅಥವಾ ಪಡೆಯದ ಪ್ರಾಕೃತಶಬ್ದಗಳಿಗೂ 'ತದ್ಭವ' ವೆಂಬ ಹೆಸರಿದೆ (ಕೃಬಿಡಿ. ೦೯). [ ಸಂ. (ತದ್ + ಭವ) ]

**ತದ್ಭಾವ** (ನಾ). ೧. ಅದರ ಭಾವ ; ಅದರ ಪರಿಣಾಮ : "ತಳ್ಕು – ಅನುಲೇಪನೇ, ತದ್ಭಾವೇ ಚ(ಪ್ರಕಾಶ)" (ಶಮದ). ೨. ಅದರ ಸ್ವಭಾವ. ೩. ಒಂದು ಇನ್ನೊಂದಾಗಿ ಮಾರ್ಪಡುವುದು : ಉತ್ಪಾದ ತದ್ಭಾವ, ಪರಿಣಾಮ, ಅವಸ್ಥೆ, ಆಕಾರ ಎಂಬೀ ಪದಗಳು ಏಕಾರ್ಥಕಗಳು (ಹಿಂದಸಾ. ೭೮). [ ಸಂ. (ತದ್ + ಭಾವ) ]

**ತದ್ರೂಪ** (ನಾ). ೧. ಅದರ ರೂಪ,–ಆಕಾರ : ಇಂತಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ ಇಂತೀ ಆತ್ಮತತ್ವ ಭೇದದಲ್ಲಿ ಆಗುಬೇಗೆಯನಱಿಯಬೇಕು (ವೀಶೀಮಾ. ೧೧–೪೧). ೨. ಅದರಂತೆ ಇರುವುದು ; ಪ್ರತಿರೂಪ ; ಯಥಾವತ್ತಾದ ರೂಪ : ಕತೆಗಾರ್ತಿಯರು ಸಾಂಸಾರಿಕ ಜೀವನದಲ್ಲಿಯ ಅತ್ತೆ – ಸೊಸೆಯರ ಸಂಬಂಧ . . . ಭಾವ–ಮೈದುನರ ಸಂಬಂಧಗಳನ್ನು ತದ್ರೂಪವಾಗಿ, ರಸವತ್ತಾಗಿ ಚಿತ್ರಿಸಬಲ್ಲರು (ಜಾಗಿನ. III, ಮುನ್ನುಡಿ). [ ಸಂ. (ತದ್ + ರೂಪ) ]

**ತದ್ರೂಪು** (ನಾ). ೧. = ತದ್ರೂಪ ೧ : ಇಂತಿಹ ತದ್ರೂಪು ತದ್ರೂಪಂಗಳ ಹೊದ್ದಿಹವಾದ ಕಾರಣ (ವೀಶೀಮಾ. ೧೧–೪೧). ೨. = ತದ್ರೂಪ ೨ : ಹಾಗೆ ಪಡೆದ ಬಿಂಬಕಲ್ಪನೆ ಪ್ರತ್ಯಕ್ಷಾನುಭವದ ತದ್ರೂಪವಾಗಿದ್ದರೆ ಅದು ವಾಸ್ತವಿಕ (ನೈಜ) ಬಿಂಬಕಲ್ಪನೆ (ಶಿಕ್ಷರ. ೫೦೭). [ <ಸಂ. ತದ್ರೂಪ ]

**ತದ್ವತ್ತು** (ಗು). ಅದರ ಹಾಗಿರುವ ; ಅದರಂತಿರುವ.

**ತದ್ವತ್ತಾಗಿ** = ಅಂತೆಯೇ ; ಹಾಗೆಯೇ ; ಇದ್ದುದಿದ್ದಂತೆ ; ಯಥಾವತ್ತಾಗಿ: ಅಲ್ಲಿ ಕಾಣುವುದು ನಡೆಯುವುದೆಲ್ಲವನ್ನೂ ತದ್ವತ್ತಾಗಿ ಚಿತ್ರಿಸಲು ಅವನ ತೊಡಗುತ್ತಾನೆಂದು ಭಾವಿಸೋಣ (ಸಮಾಲೋ. ೦೦೩) ; ಪಾಶ್ಚಾತ್ಯ ಅರ್ಥಶಾಸ್ತ್ರದ ತತ್ತ್ವಸಿದ್ಧಾಂತಗಳನ್ನು ತದ್ವತ್ತಾಗಿ ಅಂಗೀಕರಿಸಿ (ಭಾರದ. ೩೩೦). [ ಸಂ. ತದ್ವತ್ ]

**ತದ್ವಿಪರೀತ** (ನಾ). ಅದಕ್ಕೆ ವಿರುದ್ಧವಾದುದು; ಬೇರೆಯಾದುದು: ಹುಸಿ ಪರದ್ರೋಹವು ಪರಸ್ತ್ರೀವ್ಯಸನ . . . ಆತ್ಮಸ್ತುತಿಯನಿಷ್ಟವನು ಬಿಸುಟು ತದ್ವಿಪರೀತದಲಿ ವರ್ತಿಸುವನವನೇ ರಾಯನು (ಕುವ್ಯಾಉ. ೩–೭೧); ಬಡವರ ಸಮಯಕ್ಕೆ ಅವನ ನಡತೆ ತದ್ವಿಪರೀತ (ನಿಬಂಧ. I, ४೯४).

[ ಸಂ. (ತದ್ + ವಿಪರೀತ) ]

**ತದ್ವಿರುದ್ಧ** (ಗು). ಅದಕ್ಕೆ ಪ್ರತಿಯಾದ,–ವಿರುದ್ಧವಾದ : ದೇಶಂ ಪರರಾಷ್ಟ್ರಾದಿ ನಿವೇಶಾಂತಂ ತದ್ವಿರುದ್ಧವಚನಂ ಮಿಗೆ ಸಂಕ್ಲೇಶಕರಂ (ಕವಿರಾ. ೧–೧೧೧). [ ಸಂ. (ತದ್ + ವಿರುದ್ಧ) ]

**ತದ್ವ್ಯತಿರಿಕ್ತ** (ನಾ). ಅದರಿಂದ ಭಿನ್ನವಾದುದು,–ಬೇರೆಯಾದುದು : ಪಿಡಿದು ನಿಮ್ಮಾಗ್ರಹದಿಂದು ನಿಱಿಸಿದ ಪದಾರ್ಥ ಸುಖದುಃಖ ಹರ್ಷ ವಿಷಾದಂಗಳೊಳಾದುದೊಂದು ವಿಜ್ಞಾನ ಸಂತಾನಮಾದುದಲ್ಲದ ತದ್ವ್ಯತಿರಿಕ್ತಂ ಜೀವನೆಂಬುದಿಲ್ಲ (ಶಾಂತಿಪು. ೮–೧೧೩ ಪ).

[ ಸಂ. (ತದ್ + ವ್ಯತಿರಿಕ್ತ) ]

**-ತನ** (ಪ್ರ). [ವ್ಯಾಕ] ಒಂದು ತದ್ಧಿತ ಭಾವನಾಮ ಪ್ರತ್ಯಯ : ತನವಿಕೆಯುಮೆಂಬಿವುಂ ಚೇತನಭಾವದೊಳಕ್ಕುಂ (ಶಾವ್ಯಾವ. ४೯४) ; ತನಕ್ಕೆ – ಕಲಿತನಂ, ಚದುರತನಂ, ಆಳ್ತನಂ, ಜಾಣತನಂ (ಶಮದ. ೨೦೧ ಪ್ರಯೋ). [ <ಪ್ರಾ. ತಣ ]

**ತನಕ, ತನಕ್ಕ** (ಅ). ಪರ್ಯಂತ; ವರೆಗೆ: ಆಡುವನ್ನತನಕ ಅಂಗಳ ಬಾಗಿಲಲ್ಲಿ ಗುಡಿಗೂಱ ಎನ್ನಬಹುದೆ (ಬಲೀಶ್ವ. ೩೭) ; ಆನಂದದಿಂದಾಡಿ ಪಾಡಿದನು ನಡುವಗಲ ತನಕ (ಸಿದ್ಧರಾ. ೨–೧೭); ಪುಟ್ಟಿದುದು ಮೊದಲಿಂದು ತನಕೊಂದಡಕೆ ಹಂಗಿನೊಳೊಂದೆನುಸಿಕನೆ (ಬಸಪು. ೭೧–೫೭) ; ಋಷಿಗಳೈವರ ಕಾಲದಲಿ ಕರೆ ನಾಳೆತನಕಿಹೆನೆಂದನಸುರಾರಿ (ಕುವ್ಯಾಆ. ೭೦೩ ೩–೧) ; ತಾನು ತನ್ನ ಮಕ್ಕಳ ಕಾಲ ತನಕ ನಾಲ್ಕು ಮುಂಡಿ ತಳೆವನೂ ಗೇಣಿಗೆ ಬಿತ್ತಿ (ಸಾಇಇ. IX-II, ४४४–४೪; 1433):ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ (ಪುರಂದ. ೩–೧೪೯ ಪಲ್ಲವಿ) ; ಮುಂಡಿಯ ತನಕ ಬರುವ ಒಂದು ಪಂಚೆ (ಕಳಹು. ೧). **ತನಕ್ಕ** : ಚೇಳು ವ್ಯಾಳಂ ಮಕ್ಷಿಕ ಪಾಳಿದವವು ಪುಚ್ಛದಂತ ಶಿರದಿಂ ವಿಷಮಂ ತಾಳಿದ ವಿಷಮಂ ದುರ್ಜನ ಕಾಲಿಂದಂ ಶಿರತನಕ್ಕ (ನೀತಿಸಾ. ೩೨೩). 'ಅನ್ನಕಂ' ಪರಾ. [ ದೇ.; ತೆಲು. ದನುಕ, ದಾಕ ]

**ತನಕರ** 'ತನಕರಂ' ನೋ.

**ತನಕರಂ, ತನಕರ** (ಅ). = ತನಕ : ಪಾಂಡವರು ಇಂದಿನಾಹವ ತನಕರಂ ಸೌಖ್ಯಜೀವಿಗಳು (ತುರಂಗ. ೭೩–೫೪). **ತನಕರ** : ಅವರು ಇನ್ನಿಷ್ಟು ದಿನ ತನಕರ ನೊಂದಡವಿಯೊಳಗೆ ನಡೆದಿಲ್ಲಿ ಪರಿಯಂತರಂ ಬಂದದೇನವ ರಾಘವೇ (ತುರಂಗ. ४೩–೯). 'ಅನ್ನಕ್ಕರ' ಪರಾ. [ <ತನಕ ]

**ತನಕಲಿ, ಟಣಕಲಿ** (ನಾ). ನೀರಿನಲ್ಲಿ ಜೊಂಡಿನಂತೆ ಬೆಳೆಯುವ ಒಂದು ಬಗೆಯ ಗಿಡ ; ಆಪು : ಇದರಿಂದ ಬಿಸಿಲಿಗೆ ತಲೆಯನ್ನು ಮರೆ ಮಾಡಿಕೊಳ್ಳುವ ಪರಂಗಿ ಟೋಪಿಗಳನ್ನು ಮಾಡುತ್ತಾರೆ. ಕರೇ ಬೆಂಡು ಅಲಿಗಿನ ಗಿಡ, ತನಕಲಿ (ಮೈಜಿಗ. ३–३೦). **ಟಣಕಲಿ**: (೩). [?]

**ತನಕಿ, ತನಖೆ₁, ತನಿಕಿ, ತನಿಕೆ, ತನಿಖಿ, ತನಿಖೆ**(ನಾ). ೧. ಪರೀಕ್ಷಿಸುವುದು; ವಿಚಾರಣೆ ; ಶೋಧನೆ : (೩). **ತನಖೆ₁** : ೧. ಶ್ರೀತ್ರಿಪುರಪತಿ ಗಿರ್ರಿ ಮೇಲೆ ಆಗತಕ ಬ್ರಾಹ್ಮಣ ಸಂತರ್ಪಣೆ ಬಗ್ಗೆ ತನಖೆ ಅಪ್ಪಣೆ ಕೊಟ ವಿವರಾ (ಮೈಅರಿ. ೧೯೩೮, ३೭–३ ; 1830). ೨. (ಹಳ್ಳಿಗಳಲ್ಲಿ) ಒಬ್ಬನಿಗೆ ಸೇರಿದ ಜಮೀನುಗಳು ಮತ್ತು ಅವುಗಳಿಂದ ಬರಬೇಕಾದ ಕಂದಾಯದ ವಿವರಗಳನ್ನು ತಿಳಿಸುವ ದಾಖಲೆ ಪುಸ್ತಕ : (೩). **ತನಿಕಿ** : ೧. ಗೌಡರು ನನ್ನನ್ನೇ ತನಿಕೀಗೆ ತಗೊಂಡರೆ ನಾ ಹ್ಯಾಗೀ ಊರಾಗಿರೋದು (ಸ್ವಾಳ. IX, ३೮). **ತನಿಕೆ** : ೧. ತನಿಕೆ ಕ್ರಮ ನಡೀಬೇಕಂತೆ ಅಂದನು (ಮುನಿಮಾ. ३೦೩). **ತನಿಖಿ** : ೧. ಕೊತ್ವಾಲನನ್ನು ಕರೆಸಿ ಅವನು ನಡಸಿದ ತನಿಖಿಯು ಸ್ವಭಾವವನ್ನು ತಿಳಕೊಳ್ಳಬೇಕಾಗಿದೆ (ವಾಗ್ದೇವಿ. ३೦೭). **ತನಿಖೆ** : ೧. ವ್ಯಾಜ್ಯದ ತನಿಖೆಯು ಬಗ್ಗೆ ಒಂದು ದಿವಸವನ್ನು ಗೊತ್ತುಮಾಡತಕ್ಕದ್ದು (ಗ್ರಾಮಾಳ. ३೮).

**ತನಿಕೆ ಮಾಡು** = ಶೋಧನೆ ಮಾಡು : ಆಫೀಸಿನ ವರ್ಗಖಿರದಿಗಳನ್ನ ವಸಾ ತನಿಖೆ ಮಾಡಿದನು (ಪುನರು. ३೬४) ; ಅವರು ಹೊರಗೆ ಬರುವ ಜನರನ್ನೂ ಒಳಗೆ ಹೋಗುವ ಜನರನ್ನೂ ತನಿಖೆಮಾಡಿ ನೋಡುತ್ತಿದ್ದರು (ಕಂಗಾಳ್ಳ. ३೧३). [ ←ಅರ. ಹಿಂ. ತನಕೀಹ್ ]

**ತನಕ್ಕ** 'ತನಕ' ನೋ.

**ತನಖಾ** 'ತನಖೆ₂' ನೋ.

**ತನಖೆ₁** 'ತನಕಿ' ನೋ.

**ತನಖೆ₂, ತನಖಾ** (ನಾ). ಸಂಬಳ ; ತಲಬು : ಬಹದರರಿಗೆ ಸಲ್ಲತಕ್ಕ ತನಖೆಹಣವನ್ನು ಸತ್ಯಮಂಗಲದಲ್ಲಿ ದಳವಾಯಿ ದೇವರಾಜಯ್ಯ ಅರಿಶಿನವರು ತರಿಸಿಕೊಳುತ್ತಾಯಿರಲಾಗಿ (ಹೈದರ. ೭३). **ತನಖಾ** : ಸೈನಿಕರ ತನಖಾಗಳು (ತಿಂಗಳ ಸಂಬಳಗಳು) ಕಾಲಕಾಲಕ್ಕೆ ಸರಿಯಾಗಿ ದೊರೆಯುತ್ತಿದ್ದುದರಿಂದ (ಕಥವಿ. II, ३४೧).

[ ←ಪಾರ. ತನಖ್ವಾಹ್ ; ಹಿಂ. ತನಖಾಹ್ ; ಮರಾ. ತನಖಾ, ತನ್ಖಾ ]

**ತನತು** 'ತನತ್ತು' ನೋ.

**ತನತ್ತು, ತನತು, ತನ್ನತು, ತನ್ನದು** (ಸ). ತಮುತು, ತಮುತ್ತು, ತಮುತುು,ತಮುತ್ತು, ತಮುದು, ತಮ್ಮದು, ತಮ್ಮುತು,ತಮ್ಮುತ್ತು (ಬಹುವ) : ತನಗೆ ಸೇರಿದುದು. "ತನತ್ತೆಂದುಂ ತನ್ನದು" (ಕಶಸಾ. ३೭–೫४३): ಅನಿತ್ಯನಿತ್ಯಂ ವನದೊಳ್ ವನೇಚರಂ ತನತ್ತು ಬಿಲ್ಲಾನದನೊತ್ತಿ ಕೀಸುಗುಂ (ಛಾಪಾಭೂ. ೬೮ ಉದಾ) ; ಮುನಿಸಿದು ನಿನತ್ತು ಸೈರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆಸಕಂ (ಶಮದ. ೧४೭ ಪ್ರಯೋ). **ತನತು** :

**ತಪ್ಪಿಸು** (ಕ್ರಿ). ೧. ತಪ್ಪುಮಾಡು : ಸಾರಿಯನಿಡುತ ತಪ್ಪಿದೆನೆಂದೊ ಪಾಸಂಗಿಗಳ ನಾನಿಂತೊಂದನೊಂದಂ ಒಡಿದು ತಪ್ಪಿಸಿ ಹಾಯಿಕಿದೆನೆಂದೊ (ಬಸಪು. ೪೩-೧೩). ೨. ತಪ್ಪುವಂತೆ ಮಾಡು ; ನೆರವೇರದಂತೆಮಾಡು; ಅಡ್ಡಿಪಡಿಸು : ಇವ ತಪ್ಪಿಸಿ ಎನ್ನುವ ರಕ್ಷಿಸಯ್ಯ (ಬಸವ. ೧೧) ; ಬೊಪ್ಪ ನಿತ್ತನು ವರವನೆವಗದು ತಪ್ಪಿಸಲು ತೀರುವುದೆ . . . ತಪ್ಪಿಸಿತಲೇ ದೈವಗತಿ ನಮ್ಮಪ್ಪನೇ ಕೆಡಸಿದನು ನವಗಿನ್ನಪ್ಪುದಾಗಲಿ (ಕುವ್ಯಾ.ಸ. ೧೬-೬); ಬುದ್ಧಿಯು ವಿಧಿಯನ್ನು ತಪ್ಪಿಸಲಾರದು (ವಜಭಾ. ೯). ೩. ಮೀರು ; ಅತಿಕ್ರಮಿಸು : ಪರಿವಿಡಿಯ ದಿನವೇಳೆದಪ್ಪಿಸದಿರು ಮಱೆಯದಿರು ನೀನಲಸದಿರು ತರಳೆ (ಬಸಪು.೦೪-೩); ಕೊಟ್ಟ ಮಾತನ್ನು ತಪ್ಪಿಸಬಾರದು (ರೂಢಿ). ೪. ಸಿಕ್ಕದಿರು; ತೊಡಕದಿರು ; ದೂರವಿರು : ಕಳದಿಯನಾಗಳ್ಕರ್ಣೋತ್ಪಳದಿಂದಂ ಮೋದೆ ತಪ್ಪಿಸಲ್ಪರಿವಳ ಬೆನ್ನೊಳೆ ಪರಿವಳಿರದೆ ನಗುತಂ ನಳಿನಾನನೆ (ಕಾದಂಸಂ. ೯೯) ; ಚಕ್ರದಂತೆ ತಪ್ಪಿಸಲರಿದಪ್ಪ ಸೂಜಿಯ ಮೊನೆಯಂತೆ ಕೂರಿತಪ್ಪ (ಧರ್ಮಾಮೃ. ೩-೦೮೬). ೫. ಕಳೆ; ನೀಗು ; ಹೋಗಲಾಡಿಸು; ನಿವಾರಿಸು; ಪರಿಹರಿಸು : ತಪ್ಪಿಸಿ ಕಾಂತರಂ ಸಿಡಿದು ಮೆಲ್ಲನೆ ಬಂದು ಬಂದುಪಕಾಂತರಂ ಸಮಂತಪ್ಪಿ (ಉದ್ಭಟ. ೧೦-೦೦೨) : ತಪ್ಪಿಸಿದನುದ್ಧವಗೆ ಶಾಪವ ತಪ್ಪಿಸಿದನಿಲ್ಲುಳಿದ ಯಾದವದರ್ಪಕರಿಗಸುರಾರಿ (ನಿಭಾಗ. ೦೦-೧-೪೮) ; ಸುಲಭವಾಗಿ ನಿಮ್ಮೆಲ್ಲರ ಬಂಧನವನ್ನು ತಪ್ಪಿಸಿ ಬಿಡುವೆನು (ರಾವಿಜ. ೧೬) ; ಅವನ ನಶ್ಯದ ಚಟವನ್ನು ತಪ್ಪಿಸಿದರು (ರೂಢಿ). ೬. ದೊರೆಯದಂತೆ ಮಾಡು ; ದಕ್ಕದಂತೆ ಮಾಡು : ಬೊಪ್ಪ ದೇಶಿಗರಾದೆವ್ಯ ವಿಧಿ ತಪ್ಪಿಸಿತಲಾ ನಮ್ಮ ಭಾಗ್ಯವನು (ಕುವ್ಯಾಆ. ೫-೨೦) ; ಆತ ತಡವಾಗಿ ಬಂದು ನನಗೆ ಗಾಡಿ ತಪ್ಪಿಸಿ ಬಿಟ್ಟ (ರೂಢಿ). ೭. ತಡೆ ; ನಿಲ್ಲಿಸು : ತನುಜ ಕೇಳಚ್ಚರಿಯನಾ ಸ್ಯಂದನದ ಮೇಲಣ ಮುಂಡ ಬೊಬ್ಬೆಯ ನಿನದ ತಪ್ಪಿಸಿ ತಪ್ಪದೆಸುತಿರ್ದುದು ಕಕುತ್ಸ್ಥಜನ (ತೊರರಾ. ೩-೩-೨೪) ; ದರ್ಪಕಶಾಸ್ತ್ರವಲ್ಲದೆ ಧರಿತ್ರಿಯೊಳಿಡಿದಿರ್ಪ ನಾನಾ ಶಾಸ್ತ್ರಗಳನು ತಪ್ಪಿಸೆ ಶ್ರವಣನಾಳವ ಮುಚ್ಚುವಂದದೆ ಕೊಪ್ಪನಿಕ್ಕಿದರು ಕರ್ಣದಲಿ (ಮೋಹತ. ೨೩-೩೬); ಮಗುವಿಗೆ ಎದೆ ಹಾಲು ತಪ್ಪಿಸಿದ್ದಾರೆ (ರೂಢಿ). ೮. ಚಾತುರ್ಯದಿಂದ ಜಾರಿಕೊಳ್ಳು ; ನಂಣುಚಿಕೊಳ್ಳು : ಮಗುವು ರಾಘವನೆಂದು ತಪ್ಪಿಸಿ ನುಡಿದ ನುಡಿ ನಿನಗೆ ನಿಗರವೇ (ತೊರರಾ. ೧-೯-೩೦) : ಅವಳು ಬೇಕಾದಷ್ಟು ನೆವ ಹೇಳಿ ತಪ್ಪಿಸಿಕೊಂಡಾಗ್ಯೂ ಅವನು ಕೇಳಲಿಲ್ಲ (ಮುಂಬಯಿ. ೪-೬). ೯. ಮಾರ್ಗ ಬಿಟ್ಟು ಹೋಗುವಂತೆ ಮಾಡು ; ಬೇರೆ ಕಡೆಗೆ ತಿರುಗಿಸು : ಹಿಡಿದು ಬಿಗಿವೆನು ಪಾರ್ಥನನು ಕೆಲಕಡೆಗೆ ತಪ್ಪಿಸಿ ಧರ್ಮಪುತ್ರನ ಬಿಡೆನು (ಕುವ್ಯಾದ್ರೋ. ೦-೪೦). ೧೦. ವಿಮುಖವಾಗು ; ಮಾರ್ಗವನ್ನು ಬಿಟ್ಟು ಬೇರೆ ದಾರಿ ಹಿಡಿ ; ದಾರಿ ತಪ್ಪು: (ಕ).೧೧. ಮಾಡದೆ ಇರು; ಮಾಡದೆ ಬಿಡು: ಸಾಲೆಗೆ ಹೋಗುವುದನ್ನು ತಪ್ಪಿಸಬಾರದು (ಮುಂಬಯಿ. ೬-೧೨) ; ನೀನು ಈಗ ಎರಡು ದಿವಸದಿಂದ ಆ ಕೆಲಸಕ್ಕೆ ತಪ್ಪಿಸಿದರೂ ತಪ್ಪಿಸಿರಬಹುದು (ಮುಂಬಯಿ. ೪-೧೫೪) ; ನಾಳೆ ನಮ್ಮ ಮನೆಗೆ ಬರಲು ತಪ್ಪಿಸಬೇಡ (ರೂಢಿ). ೧೨. ಕೆಡಿಸು; ಹಾಳುಮಾಡು : ವಿಧಿಯು ಬುದ್ಧಿಯನ್ನು ತಪ್ಪಿಸಿಬಿಡುತ್ತದೆ (ವಜಭಾ. ೯). ೧೩. ಮರೆಯಾಗುವಂತೆ ಮಾಡು ; ಕಾಣದಂತೆ ಮಾಡು : 'ಕಣ್ತಪ್ಪಿಸು' ಪರಾ. ೧೪. ಕಳಚು ; ಬಿಚ್ಚು ; ಬಿಡಿಸು : ಗಂಟು ತಪ್ಪಿಸು (ರೂಢಿ): ಕುಣಿಕೆ ತಪ್ಪಿಸು (ರೂಢಿ). ೧೫. ಪಾರುಮಾಡು ; ಉಳಿಸು : ಈ ಹಿಂಸೆಯಿಂದ ನನ್ನನ್ನು ತಪ್ಪಿಸು (ರೂಢಿ).

**ತಪ್ಪಿಸಾಟ** = ತಪ್ಪಿಸುವಿಕೆ ; ಜಾರಿಕೊಳ್ಳುವುದು : ಒಳ್ಳೆಯ ಪದ್ಯಕಾವ್ಯದ ಎಷ್ಟೋ ಭಾಗದಲ್ಲಿ ಸರಳರಗಳೆಯೆಂಬ ನಂಬಿಗೆಯನ್ನು ಉಂಟುಮಾಡುವ ನಿರಂತರ ಸೂಚನೆಯೂ ಅದರ ತಪ್ಪಿಸಾಟವೂ (Evasion) ಮೋಹಕತೆಯನ್ನು ತಂದಿವೆ (ಗೊಕ್ಕುಗು. ೦೧೬). **ತಪ್ಪಿಸಾಡು** = ಮರೆಯಾಗಿ ಓಡಾಡು : ಅವನೇಕೆ ಹೀಗೆ ದೂರ ದೂರ ಪಲಾಯನಮಾಡಿ ತಪ್ಪಿಸಾಡುತ್ತಿರುವ ? (ಇಪ್ಪಕ. ೨೬೪). **ತಪ್ಪಿಸಿಕೊಳ್ಳು** = ೧. ಓಡಿಹೋಗು ; ಪರಾರಿಯಾಗು: ಆ ರಾತ್ರಿ ಹಯಾತನ ತಂದೆ ಅಲ್ಲಿಂದ ತಪ್ಪಿಸಿಕೊಂಡು ಹಿಂತಿರುಗಿ ಬಂದು ನಡದದ್ದನ್ನೆಲ್ಲಾ ನಮ್ಮೂರಿನಲ್ಲಿ ಹೇಳಿದ (ಜಂಗಾಳಿ. ೨೮); ನಾವುಗಳು ಈ ದಿನವೇ ಇಲ್ಲಿಂದ ತಪ್ಪಿಸಿಕೊಂಡು ಹೋಗಬೇಕಾಗಿದೆ (ರಾವಿಜ. ೧೮). ೨. ನಂಣುಚಿಕೊಳ್ಳು ; ಜಾರಿಕೊಳ್ಳು : ನೀವು ದಿಕ್ಕುಂದೆಸೆಯು ಯೆನುತಿರೆ ದೇವ ದೇವ ತಪ್ಪಿಸಿಕೊಂಡು ಹೋಹುದು ನೀತಿಯೇ ನಿಮಗೆ (ಬಸಪು. ೯೬-೯೭); ತನ್ನಱಿವುದೋಱದೆ . . . ತಾ ತನ್ನ ತಪ್ಪಿಸಿಕೊಂಡು ಹೋದನು (ಶೂನ್ಯಸಂ. ೨೬-೦೯). ೩. ಮಾರ್ಗ ಬಿಟ್ಟುಹೋಗು ; ತನ್ನ ಜೊತೆಯವರಿಂದ ಅಥವಾ ಗುಂಪಿನಿಂದ ಬೇರೆಯಾಗು ; ಸಂಬಂಧ ಕಳೆದುಕೊ ; ದಾರಿತಪ್ಪು : ಅದರ ಸಂಗಡ ಮನುಷ್ಯನ ಹೆಜ್ಜೆಯಿಲ್ಲದ ಕಾರಣ ಅದು ಬಹುತರ ತಪ್ಪಿಸಿಕೊಂಡ ಒಂಟೆಯೆಂದು ಗ್ರಹಿಸಿದೆನು (ಮುಂಬಯಿ. ೪-೧೭೦) ; ಮಗು ತಪ್ಪಿಸಿಕೊಂಡಿದೆ (ರೂಢಿ).

[ ತಪ್ಪು$_1$ + – ಇಸು$_3$ ]

**ತಪ್ಪು$_1$** (ಕ್ರಿ). ೧. ರೀತಿಗೆಡು ; ಕ್ರಮಕೆಡು ; ತಪ್ಪುಮಾಡು : " ತಪ್ಪು – ಸ್ಖಲನೇ " (ಶಮುಧಾ) ; ಪಾಂಗಱಿದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇಟ್ದುದಾಗಮಮುದಾರನೃಪತುಂಗದೇವ ವಿದಿತಕ್ರಮದಿಂ (ಕವಿರಾ. ೧-೪೪) : ದಿವ್ಯಶರದಿಂ ಶಿರಮಂ ಪಱಿಯೆಚ್ಚೊಡಾತನೊತ್ತಂ ಬದಿನಾಂತೊಡಾಂ ಬಱಿದೆ ತಪ್ಪಿದೆನೆಂದು ಕಿರೀಟಿ (ಪಂಪಭಾ. ೧೧-೭೯) ; ತಪ್ಪಿತಪ್ಪಿ ತಿದ್ದಿಕೊಂಡಿಹನೆಂದರೆ ಹಸನಾಗಬಲ್ಲುದೆ (ಶೂನ್ಯಸಂ. ೪೧-೨೧). ೨. ಅನ್ಯಾಯ ಅಥವಾ ಅಪಚಾರ ಮಾಡು ; ಕೆಡಕುಮಾಡು ; ದ್ರೋಹ ಬಗೆ : 'ಅಟ್ಟಱೊಳೆನ್ನಂ ಪೊರೆದಯ್ದೆ ನಂಬಿದ ನೃಪಂಗೆಂತಾಜಿಯೊಳ್ ತಪ್ಪುವೆಂ (ಪಂಪಭಾ. ೯-೭೦) ; ಚಾಳುಕ್ಯವಂಶದೊಳೆಲ್ಲಿಯುಮಿನ್ನೆವರೆಗಂ ನುಡಿದು ಪುಸಿವುದುಂ ಆಡಿ ಅಳುಪುವುದುಂ ಕೂಡಿ ತಪ್ಪುವುದುಂ . . . ಕನಸಿನೊಳಪ್ಪೊಡಮಿಲ್ಲಂ (ಗದಾಯು. ೨-೬ ವ) ; ಆನುಮಾತನುಂ ಪರಸ್ಪರೋಪಕಾರಿಗಳದಱಿಂದೋರೊರ್ವರ್ಗೆ ತಪ್ಪುವರಲ್ಲ (ಪಂಚತಂ. ೦೦೬-೧) ; ಒಂದಿಱುಂಪೆಯ ಪ್ರಾಣಕ್ಕಂ ತಪ್ಪದಾತಂ ನಿನ್ನ ಪ್ರಾಣಕ್ಕೆ ತಪ್ಪುವನೆ ತಪ್ಪಲಱಿಯಂ (ಧರ್ಮಾಮೃ. ೨-೦೩೫) ; ಜವನ ಮಿಾಸೆಯ ಕೀಳುವರು . . . ಆಳಿಗಾಳ್ದನಂ ಕೊಲ್ವರು ತಪ್ಪೆ ತಪ್ಪುವರು (ಸೌಇಇ. XI-1, ೨೮೫-೩೬ ; 12ನೆಯ ಶತ) : ಸಾಕಿದ ಪತಿಗೆ ತಪ್ಪಿದನ . . . ಗತಿಗಳಾಗಲಿ ರಣದೊಳೋಡಿದರೆ (ಕುವ್ಯಾದ್ರೋ. ೨-೮). ೩. ಮೀರು ; ಅತಿಕ್ರಮಿಸು ; ಭಂಗಮಾಡು ; ನಡೆಸದೆ ಇರು : ಈ ಸ್ಥಿತಿಯನ್ ತಪ್ಪಿ ಕೊಣ್ಡರಪ್ಪೊಡೆ (ಹೈಆರಿ. ೦೯೩೬, ೨೬-೫೬ : 972) ; ಷಡ್ಗುಣಾಳಂಕಾರಂ ನುಡಿದು ತಪ್ಪದಂ (ಸೌಇಇ. IX-1, ೨೨-೬ ; 897) ; ಅವರ್ ನನ್ನಿಯಂ ತಪ್ಪೆಯುಂ ಸಪ್ತ ಸಮುದ್ರಂ ಮೇರೆಯಂ ತಪ್ಪೆಯುಮೊಳರೆ ಬಿಗುರ್ತಾಂಪವರ್ (ಪಂಪಭಾ. ೮-೮೬) ; ಈ ಸ್ಥಿತಿಯಂ ತಪ್ಪದನ್ತು ಊರೊಡೆಯ ಪಿಟ್ಟಯ್ಯಂ . . . ಪನ್ನಿಮ್ಮರ್ತ್ತರ್ಕೆಯ್ಯಂ ಕೊಟ್ಟರ್ (ಇಆ. XII, ೨೫೬-೧೧; 951); ಪಱಿಯಂ ಕೇಳ್ದೆನೊ ಮೇಣ್ನುಡಿವಪಱಿಯಂ ತಪ್ಪಿದೆನೊ (ಗದಾಯು. ೫-೦೪); ಸಂದ ರೇವಣಸಿದ್ಧನಾಡಿ ತಪ್ಪುವನೆ (ಸಿದ್ಧರಾ. ೧-೪೫) ; ಸತಿಯನೊಲ್ಲೆನು ಬ್ರಹ್ಮಚರ್ಯಸ್ಥಿತಿಗೆ ತಪ್ಪುವನಲ್ಲ (ಕುವ್ಯಾಆ. ೨-೩೬); ಕೊಟ್ಟ ಭಾಷೆಗೆ ತಪ್ಪಿದರೆ ಸೃಷ್ಟಿಯೊಳು ಶ್ರೀಹರಿಯು ಮೆಚ್ಚನು (ಗೋಹಾಡು. ೭೮). ೪. ಬಿಡು ; ಉಳಿ : ಮನೆಮನೆದಪ್ಪದೆ ಪರಿಪರಿದನವರತಂ ತಿರಿವರನ್ನಸಮಯದ ಯತಿಗಳ್ (ಸಮುಪ. ೬-೦೩) ; ಮನೆಮನೆದಪ್ಪದೆ ಕೈಯೊಡ್ಡಿ ಬೇಡುವಂತೆ ಮಾಡಯ್ಯ (ಮಹಾದೇ. ಬ. ೭೯-೨೦೦); ಗಗನದಿಂದಿಳಿವಂಗಾಧಾರವಾಗುತ್ತೆ ತಪ್ಪುವರೆ (ಬಸರ. ೪-೨೯) ; ಉಪದೇಶ ಕೇಳಿದರೂ ಉಪದ್ರ ತಪ್ಪಲಿಲ್ಲ

(ಗಾದೆ). ೫. ನೆರವೇರದಿರು ; ನಡೆಯದಿರು ; ಆಗದಿರು : ಕೀರ್ತಿನೊಳ್ ಬಿಟ್ಟಂಗೆ ಸಾವು ತಪ್ಪದು (ಪಂಚತಂ. ೮೯-೩) ; ಜಂಗಮಮುಖದಿಂದೆ ನಿಂದೆ ಬಂದರೆ ಕೊಂಡವಾಟಿಂಗೆ ಹೋಹುದು ತಪ್ಪದು (ಬಸವ. ೧೦೬) ; ಸಾವಕಾಶ ಮಾಡಿದರೆ ವಿಪತ್ತು ತಪ್ಪದು (ರಾವಿಜ. ೦೬). ೬. ಸಿಕ್ಕದಿರು ; ದೊರೆಯದಿರು : ಪಾಂಡವರ್ ಮುನ್ನಮೆ ನಿನ್ನ ಕೆಯ್ಗೆವಂದರೆನಗಮಾ ಬೆಸಂ ತಪ್ಪಿದುದು (ಪಂಪಭಾ. ೮-೪೩ ವ) ; ರಣದ ಮಾಸಲಿನೇಟು ತಪ್ಪಿತು (ಕುಮಾರವ್ಯಾ. ೦-೨೪). ೭. ಇಲ್ಲವಾಗು ; ಚ್ಯುತವಾಗು : ಅರಯಿದು ಮಗನೆನಿಸುವೀ ಮಮಕಾರವಪ್ಪೊಳು ಮೊಳೆತಡಾ ದಾತಾರನುಳಿವನ್ನಿಂದ ತಪ್ಪುವುದೆನುತ ಮನದೊಳಗೆ (ಕುಮಾರವ್ಯಾ. ೬-೩೨) : ಪದವಿ ತಪ್ಪಿದ ಮೇಲೆ ನೆಂಟರಿಪ್ಪರೆ ನಮಗೆ ಕಟ್ಟಿಟ್ಟ ಹಗೆ ಕಾಣ ಕೊನೆಗೆ (ಇಂಡಾಪ. ೯೨-೩೦). ೮. ತಾಗದಿರು ; ಬೀಳದಿರು : ಅವನಿಯಂ ಪೊಯ್ದು ಕಯ್ಯಪ್ಪಿದೊಡಂ ತಪ್ಪುಗು . . . ಸಾವುಂ ನೋವುಂ ಏಗೆಯ್ದುಂ ತಪ್ಪಲಱಿಯದು (ಧರ್ಮಾಮೃ. ೬-೦೦೦) ; ಕೋಲು ತಪ್ಪಿದ ಫಣಿಯವೊಲು ಲಯಕಾಲ ಕೊದಱುವ ಸಿಡಿಲವೊಲು ಹೀಹಾಳಿಸುತ ತಮತಮಗೆ ಬಯ್ದುದು ಕೊಡೆ ಪರಿವಾರ (ಕುಮಾರವ್ಯಾ. ೦೩-೦) ; ಬೀಸುವ ದೊಣ್ಣೆ ತಪ್ಪಿದರೆ ಸಾವಿರ ವರ್ಷ ಆಯುಸ್ಸು (ಗಾದೆ). ೯. ಸುಳ್ಳಾಗು ; ಹುಸಿಯಾಗು ; ವ್ಯರ್ಥವಾಗು; ನಿಷ್ಫಲವಾಗು: ನಿನಗೀವುದನೀಂ ನುಡಿದನೆ ಏ ಅದು ಕಯ್ಯದು ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ (ಎಕ. II, ೩೯-೯೮ ; 974) ; ಈತಂ ಕಾರ್ಯಾತುರನಪ್ಪುದು ತಪ್ಪದು (ಪಂಚತಂ. ೩೪-೬) ; ಪರಮಾಗಮಂ ಪುಸಿಯೆಂಬೆಯಪ್ಪೊಡೀ ಸಿದ್ಧಾಂತದೊಳ್ ಪೇೞ್ದವಿಪ್ಪ ಗಣಿತ ಜೋಯಿಸಂಗಳೇಕೆ ತಪ್ಪವು (ಧರ್ಮಾಮೃ. ೩-೧೯೬) ; ಸವಣರ ನುಡಿಯೆಂದುಮೆಂತುಮೀಂ ತಪ್ಪುಗುಮೇ (ಚಂದ್ರಪ್ರ. ೬-೯೪) ; ಬಳಿಕ್ಕೆ ಹಗಡಗಿ ಹೋದನೋ ತಾನೆ ಬಲ್ಲಂ ಕುಱುಹು ತಪ್ಪದೆನುತ್ತಾರ್ಕೈದನು (ಸಿದ್ಧರಾ. ೨-೩೩) : ನಾ ಕೊಟ್ಟ ವರದೊಳು ತುಸುಮಾತ್ರ ತಪ್ಪದು (ಮೋಹತ. ೪-೨೪). ೧೦. ಸಂಳ್ಳಾಡು ; ಸಂಳ್ಳಾಹೇಳಂ : ಮಟ್ಟಿಗಾಲ ಮುಂಟೆಂದು ತಪ್ಪಿದ ಜೋಯಿಸಂ ಬಾವಿಯು ನೀರನಡಕಿ ನೀರ್ವೊಯ್ದ ನೆಂಬ ಕಥೆಯಂತೆ (ಪಂಚತಂ. ೧೨೬-೨) ; ಸಾಕ್ಷಿಯಾಗಿ ತಪ್ಪಿ ನುಡಿವರ್ಗೆ ಪಾಪಮ ಸಂಭವಿಸುವುದು (ಪಂಚತಂ. ೦೬೬-೦೬) : ಕುರುಕುಲಲಲಾಮರು ತಪ್ಪಿನುಡಿಯರೆನುತ್ತ ಮಂಡಿಸಿದ (ಕುಮಾರವ್ಯಾ. ೦೩-೩೯). ೧೧. ದಂರಾಸೆ ಮಾಡು ; ಕಾವಿಂಸು : ಪರಲಲನೆಗೆ ತಪ್ಪಿದನಂ ಧರಣೀಶಂ ಕಂಡು ಕನರ ದಿರ್ದಡೆ (ಸಮಪ. ೩-೬೦) ; ಪರರ ಸತಿಯಾನನಂಗರತಿಯಲಿ ಬೆರಸಿತಿಲ್ಲ ಸಮಸ್ತ ಸುಜನರ ಸಿರಿಗೆ ತಪ್ಪಿದುದಿಲ್ಲ (ಕೊರರಾ. ೦-೩-೦೯) ; ಯಿದಕೆ ತಪ್ಪಿದವನು ತಂನ x x ತಾಯಿಗೆ ತಪ್ಪಿದವನು (ಎಕ. XIV, ಹುಣಸೂ. ೦೪೮-೪; ?). ೧೨. ಹಾಳಾಗು; ಹದಗೆಡು; ಕೆಡು: ರಾಯನನುಜರು ಕೈದುಗೊಳೆ ರಣದಾಯ ತಪ್ಪಿತು ನೃಪತಿ ಮಾರಿಯ ಬಾಯ ತುತ್ತಾದನು (ಕುಮಾರವ್ಯಾ. ೩-೨೨) ; ದೇವತೆಗಳು ಧರಿಸಿದ ಪುಷ್ಪಮಾಲ್ಯಂಗಳು ಬಾಡಿದವು ದೇವತೆಗಳ ಮುಖಕಾಂತಿಯು ತಪ್ಪಿತು (ಕೃಷ್ಣಾಅ. ೩೨) ; ಜಾತಿ ತಪ್ಪಿದರೂ ನೀತಿ ತಪ್ಪಬಾರದು (ಗಾದೆ). ೧೩. ಎದುರಿಗೆ ಬಾರದೆ ಇರು : ನಾಳೆ ಫಲುಗುಣ ತಪ್ಪಿದರೆ ಭೂಪಾಲಕನ ಕಟ್ಟುವೆನು ರಣದಲಿ ಶೂಲಿಯಡ್ಡೈಸಿದರೆ ಹಿಡಿವೆನು ಚಿಂತೆ ಬೇಡಿದಕೆ (ಕುಮಾರವ್ಯಾ. ೪-೯). ೧೪. ಗುರಿ ಕೆಡು : ಅಪರಾದ್ಧೇಷುವೆಂಬವನೆಚ್ಚು ತಪ್ಪಿದವಂ (ಹಲಾಯು. ೭೭-೩೦೭) ; ಬೆಟ್ಟಮೆಚ್ಚ ಧನಿಯ ಸರಲೆಂಬಿವು ತಪ್ಪುವೊಡಂ (ಚಂದ್ರಪ್ರ. ೬-೯೪) ; ತಪ್ಪಿದ ಹೆಜ್ಜೆಗಳಿಗೆ ಸರಿಯಾದ ದಾರಿಯನ್ನೂ . . . ಕೊಟ್ಟಿತು (ಪ್ರಬಂಧ. ೩೪). 'ಕೈ ತಪ್ಪು₁' ಪರಾ. ೧೫. ಗುರಿಗೆ ಸಿಕ್ಕದಿರು : ಪೆಣ್ಣಳಿಟ್ಟ ಕೀರ್ಗಲ್ಲಗಳನೊಂದಿನಿತ್ತೂಲಿದು ತಪ್ಪುಕೆ ಕಾಡಿದುದೊಂದು ಕೋಡಗಂ (ಕವಿಚ. II, ೨೨೩ ರಾಮನಾಥವಿಲಾಸ). ೧೬. ಮುಗಿ ; ತೀರು; ಕಳೆ: ಅವಧಿ ತಪ್ಪಿದುದಾಜಿನೆ ಪತ್ತು ತಿಂಗಳಾದುವು ಬರಲಾತನಾಱದೊಡೆ ಸಾಯಲುಮಾಜಿನೆ (ಆದಿಪು.೧೨-೪೩); ಅಂಬರಿಗುಮಾಯು ತಪ್ಪಿದೊಡೆಬೀ ನಾಣ್ನುಡಿಯನಲ್ಲಿ ಪುಸಿಮಾಡದೆ ಕೂರಂಬೊಂದು ಬಂದು ನಡೆ (ಧರ್ಮಾಮೃ. ೧-೨೦೯). ೧೭. ಅಯೋಗ್ಯವಾಗು ; ತಪ್ಪಾಗು ; ಪ್ರಮಾದವಾಗು : ಈ ಧನು ಚಂಡಿಯಿದು ನಮಗಲ್ಲ ನಾವ್ ಮುಂಕೊಂಡು ತಪ್ಪಿತು (ಕುಮಾರ್ಯಾಅ. ೦೪-೦೬) ; ಲೆಕ್ಕ ತಪ್ಪಿತು (ರೂಢಿ).

ತಪ್ಪದೆ, ತಪ್ಪಾದೆ (ನಿಷೇಧಾರ್ಥಕ ರೂಪ) ೧. ಬಿಡದೆ; ಕುಂದಿಲ್ಲದೆ; ಲೋಪವಿಲ್ಲದೆ : ಕಟ್ಟಿಪ್ಪಿನಾ ಶೈಲದುಳ್ . . . ತಪ್ಪದೆ ನೋನ್ತ (ಎಕ. II, ೭೭-೩ ; ಸು. 700); ಅನುವರ್ಷಂ ತಪ್ಪದೆ [ತಾಂ] ತನೆಯಾಪ್ಪುದದರ್ ಸಮಾಂಸಮಿನಿಯೆ(ನಿ)ಕ್ಕುಂ (ವಸ್ತುಕೋ. ೯೦-೮) : ಹಣವನ್ನು ತಿಂಗಳ ಅಂತ್ಯದಲ್ಲಿ ತಪ್ಪದೆ ಕೊಡಬೇಕು (ಆಡುಸಾ. ೦೨೩); ಕಟ್ಟಿಪ್ಪಿನಾ ವೆಟ್ಟದುಳ್ಶ್ರೀಸಂಗಂಗಳ ಪೇಳ್ದ ಸಿದ್ಧ ಸಮಯನ್ತಪ್ಪಾದೆ ನೋನ್ತುಮ್ಮಿನಿನ್ (ಎಕ. II, ೨೭-೦ : ಸು. 700). ೨. ನಿಶ್ಚಯವಾಗಿ ; ಖಂಡಿತವಾಗಿ : ಮಸಂಗಳೊಳೀತನ ಪದಿನಾಲ್ಕನೆಯಾತಂ ತಪ್ಪದಪ್ಪನೆನಿಸಿಯುಂ (ಆದಿಪು. ೬-೭೦) ; ನಿಜಾಭಿಮಾನಮಂ ಧರಿಯಿಸುವಲ್ಲಿ ಚಾದಗೆವೊಲಪ್ಪುದು ತಪ್ಪದವಾತ್ಮಲಕ್ಷಣಂ (ಕಾವ್ಯಸಾ. ೪೨೨). ತಪ್ಪತಪ್ಪದೆ = ತಪ್ಪದೆ ೧. ಸೊಪ್ಪುಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತೆ ತಪ್ಪತಪ್ಪದೆ ಶರಶರಂಗಳಂ ತೆಗೆದಚ್ಚು (ಕ್ರಿಮಿಥಾ. ೨೮-೪೦). ತಪ್ಪಲೆಚ್ಚಂ = ಬಾಣಪ್ರಯೋಗದಲ್ಲಿ ಗುರಿ ತಪ್ಪಿದವನು ; ತಪ್ಪಾಗಿ ಗುರಿಯಿಟ್ಟು ಬಾಣ ಪ್ರಯೋಗ ಮಾಡಿದವನು: ಲಕ್ಷ್ಯಚ್ಯುತಂ ತಪ್ಪಲೆಚ್ಚನ[ಪಾಠಾಂ. ವನ]ಕ್ಕು (ಮಂಗರಾ. ೬೭-೩೩). ತಪ್ಪಿ ಬರು = ೧. ದ್ರೋಹ ಬಗೆ; ಎದುರುಬೀಳು : ಕುಮಾರ ಬಲ್ಲಾಳದೇವನು ತಮ್ಮಯ್ಯಂಗೆ ತಪ್ಪಿ ಬಂದು ತಳಿಗೆ ನಾಡಂ ಕೊಡಗಿ ನಾಡಂ ಹೊಕು (ಮೈಆರಿ. ೦೯೩೨, ೩೪-೩ ; 1172 ?). ೨. ಆಕಸ್ಮಾತ್ತಾಗಿ ಬರು : ತಾವು ನಮ್ಮ ಮನೆಗೆ ತಪ್ಪಿ ಬಂದಂತೆ ಕಾಣುತ್ತದೆ! (ರೂಢಿ). [ದೇ.೩ ತಮಿ.ಮಲ. ತುಳು. ತಪ್ಪು ; ಕೊಡ. ತಪ್ ; ತೆಲು. ತಪ್ಪು ]

ತಪ್ಪು₂, ತರ್ಪು₁ (ನಾ). ೧. ಎಡಹುವುದು; ಮುಗ್ಗರಿಸುವುದು: ಜಾರುವುದು : 'ಕೈತಪ್ಪು₂' ಪರಾ. ೨. ಅಪರಾಧ; ಅವಿವೇಕ; ಪ್ರಮಾದ; ಪಾಪ : ಅವರ್ ತಪ್ಪಿದ ಬಟ್ಟೆಕ್ಕೆ ತಪ್ಪಿದ ತಪ್ಪೆ[೦] [ಪಾಠಾಂ. ಲೆ]ಗಳ ನನ್ನಿಗೊಪ್ಪವಲ್ಲದ ತಪ್ಪೇ (ಪಂಪಭಾ. ೭-೫೨); ಎನ್ನ ತಪ್ಪು ಅನಂತಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲಾ (ಬಸವ. ೩೨೨); ಒಲ್ಲದಿರಬೇಡ ಲೇಸೊಲ್ಲೆಯೇ ಕೊಲ್ಲೆಯೆಮ್ಮಲ್ಲಿ ತಪ್ಪಿಲ್ಲ (ಹದಶಾ. ೮-೭೭); ತಪ್ಪುಗಳನೆಲ್ಲ ನೀನೊಪ್ಪಿ ಕೊಳ್ಳೊ ನಮ್ಮಪ್ಪ (ಪುರಂದ. ೧-೦೭೭ ಪಲ್ಲವಿ). ೩. ಸಲ್ಲದುದು ; ಸರಿಯಲ್ಲದುದು ; ಅನುಚಿತವಾದುದು : ತಪ್ಪುವನೆ ನುಡಿಯನೆಂಬುದಿದೊಪ್ಪದು ನಿನಗೆ (ಪಂಪಭಾ. ೬-೫೨) : ಕಾರ್ಯಸಖಂ ಶಕುನಿ ಗಡಾ ಶೌರ್ಯಸಖಂ ಸೂತಜಂ ಗಡಾ ಭೀಷ್ಮಶರಾಚಾರ್ಯರ ನುಡಿ ತಪ್ಪು ಗಡಂ (ಗದಾಯು. ೨-೨೭). ೪. ಕುಂದು ; ದೋಷ ; ಸ್ಖಾಲಿತ್ಯ : ಎನ್ನೊಂದು ತಪ್ಪನಱಿದತ್ತೆಂದೀ ಮನಕಂ ಪಿರಿದುಂ ಲಜ್ಜಿಸುವೆಂ (ಕಾದಂಬ. ೨೯೯); ಈ ಶತಕದೊಳ್ ತಪ್ಪಿರ್ದೊಡಂ ತಿದ್ದಿ ತೋರ್ಪುದು (ಸೋಮೇಶ. ೨); ಇನ್ನೆನ್ನ ಮೇಲೆ ತಪ್ಪಿಲ್ಲ ತಪ್ಪಿಲ್ಲೆನುತೆ (ತಿರುರ. ದೇ. ೦೩-೦೦) ; ತನುಜ ತಪ್ಪೇನದಕೆ ಕಾಳೆಗವೆನಗೆ ತನಗೆನಬೇಕು ವೀರರು (ಕುಮಾರವ್ಯಾ. ೧-೩೩) ; ಶುಕಸಾರಿಕೆಗಳು ಹೆಜ್ಜೆಹೆಜ್ಜೆಗೂ ವಿದ್ಯಾರ್ಥಿಗಳ ತಪ್ಪುಗಳನ್ನು ತಿದ್ದುತ್ತಿದ್ದವು (ಬಾಡಅ. ೯). ೫. ಕೇಡು ; ದ್ರೋಹ : ಪಿಂಗಳಕನನಗೆ ತಪ್ಪಂ [ಪಾಠಾಂ. ಪ್ಪಲ್]ಬಗೆವಾಗಳೆಂತಿರ್ಪಂ (ಪಂಚತಂ. ೦೭೬-೮). ೬. ಸುಳ್ಳು ; ಅಸತ್ಯ : ಕರ್ಣ ತಪ್ಪಿಲ್ಲೆಂದೆನಿಪ ನುಡಿಯೊಳ್ . . . ಎಸೆದಂ (ಛಂದೋಂಬು. ೦-೨೪); ಹಿಂದುಳಿದ ಸಂಪದವನೆಣಿಸುವುದು ಹುಸಿಯಲ್ಲವಿಂದೀಗ ತೋಱಬವಪ್ಪುದೆ ಹುಸಿಯದುಂಟೆ ತಪ್ಪೆಂದಡದಕೇಂ (ಹದಶಾ. ೧೨-೪೧). ೭. ಅಪರಾಧ

ಕ್ಕಾಗಿ ತೆರಬೇಕಾದ ದಂಡ : ನಾನೀಗ ತಪ್ಪು ವಸೂಲು ಮಾಡದಿದ್ದರೆ ನಾಳೆ ಒಣಮೇವಿಗೆ ಸೊನ್ನೆ ಬೀಳುತ್ತದ (ಪುನರು. ೨೮೭). 'ತಪ್ಪುತೆರು' ಪರಾ. ೮. ಒಂದಂ ಬಗೆಯ ತೆರಿಗೆ,–ಸುಂಕ : ಮನ್ನೆಗಾಣಿಕೆ ಸೇಸೆ ತಪ್ಪನ್ನೆಯ ವಾಯದಾಯಮಿವು ಸಲ್ಲವು (ಸೌಇಇ. IX-I, ೨೩೦–೪೫; 1149): ಅನ್ಯಾಯ ಕಿಱುಕುಟ ತಪ್ಪು ತೌಡಿ ಪೊಟಗಾರ ಸಮಸ್ತ ಬಳಿ ಸಹಿತಂ . . . ಸಲುಉದು (ಎಕ. XI, ಹಿರಿಯೂ. ೮೭–೨೦ ; 1318) ; ಅಳಿವಂ ನ್ನಾಯ ಸುಂಕ ಹಟ್ಟದರೆ ತಪ್ಪು ತೌವುಡಿ . . . ಕೊಟ್ಟೆಉ (ಎಕ. XI, ಚಿತ್ರದು. ೨–೨೨ ; 1355) ; ಪೊಸಗೆವುಪಚಾರ ತಪ್ಪುಪೊಪ್ಪು ಸುಂಕಸಾದಿಲ . . . ವೊ[ದ]ಲಾಗಿ ಆವುದೊಂದುಯಿಲ್ಲದೆ . . . ಸರ್ವ್ವಬಾಧೆ ಪರಿಹಾರ (ಸೌಇಇ. IX-II, ೪೦೮–೩೦ ; 1804). ೯. ಹರಕೆ ತೀರಿಸಲಾಗದದಂಡಕ್ಕಾಗಿ ದೇವರಿಗೆ ದಂಡದ ರೂಪದಲ್ಲಿ ಕೊಡುವ ಕಾಣಿಕೆ: ಹರಕೆ ತೀರಿಸಲಿಲ್ಲ, ನಂಜುಂಡನಿಗೆ ತಪ್ಪುಕಟ್ಟಬೇಕು (ರೂಢಿ). 'ತಪ್ಪುಗಾಣಿಕೆ' ಪರಾ. ೧೦. (?) : ವನದಲ್ಲಿ ಹುಲ್ಲೆ ಕಾಡುಹಂದಿವೊದಲಾದ ಮೃಗಗಳನ್ನು ಕೊಂದು . . . ಕಾಡುಕಿಚ್ಚಿನಲ್ಲಿರುವ ಬೆಂಕಿಯಲ್ಲಿ ಸುಟ್ಟು ತನ್ನ ಕಯ್ಯಲ್ಲಿರುವ ಕತ್ತಿ ಕೊನೆಯಿಂದ ಎತ್ತಿ ಪೂದಿ ತಪ್ಪುಮಾಡಿ ಬೆಂತೊ ಬೇಯಲಿಯಿಲ್ಲವೊ ರುಚಿಯಾಗಿದೆಯೊ ಯಿಲ್ಲವೊ (ಶಿವದ. ೧೦೩–೭). △ತರ್ಪು₁: ೬. ಸೀರ್ಪಿನ ಬಣ್ಣದ ಮುಗಿಲುಂ ನೇರ್ಪಡೆ ಮಟಿಯಾಗದಾದೊಡಂ ಮಟಿ ಕಿಱಿದುಂ ತೋರ್ಪಂತೆ ಪನಿತು ಮಾಣ್ಬುಂ ತರ್ಪಿಲ್ಲ ಕಪಿಲವರಹವಿಹರ ಗಾರ್ಗ್ಯರ (ವಾತ)ದಿಂ (ಅಟ್ಮಸು. ೮–೧೩).

ತಪ್ಪುತಪ್ಪು (ದ್ವಿರುಕ್ತಿ): ಇಂದುವಮೌಳಿಗೆ ಮುನ್ನವರ್ಪಿಸಿ ಸಂದ ನಿರ್ಮಾಲ್ಯದ ಶಿರೋಬ್ಜವನಿಂದು ಸಂದಿಸಿಕೊಳ್ಳುವರೇ ಇದು ತಪ್ಪು ತಪ್ಪೆನುತ (ಬಸಪು. ೪೯–೧೭). ತಪ್ಪುಒಪ್ಪಿಕೊಳ್ಳು = ಮಾಡಿದ ಅಪರಾಧ ವನ್ನು ಒಪ್ಪಿಕೊಳ್ಳು; (೬). ತಪ್ಪು ಮಾಡು=೧. ಸಲ್ಲದುದನ್ನು ಮಾಡು; ಅಪರಾಧಮಾಡು: ತಪ್ಪು ಮಾಡಿದೆ, ಕ್ಷಮಿಸಿ (ರೂಢಿ). ೨. ತಪ್ಪಾಗಿ ತಿಳಿದುಕೊಳ್ಳು,–ಭಾವಿಸು : ನೀವ್ಯಾರೋ ದಾರಿಹೋಕರೆಂದು ತಪ್ಪು ಮಾಡಿದೆ (ಪುನರು. ೨೮೨). ೩. ದೋಷಮಾಡು ; ಪ್ರಮಾದಮಾಡು : ಲೆಕ್ಕ ತಪ್ಪು ಮಾಡಿದ್ದೀಯ (ರೂಢಿ).

[ <ತಪ್ಪು₁./ತಮಿ. ಮಲ. ತುಳು. ತೆಲು. ತಪ್ಪು ]

**ತಪ್ಪುಕ** (ನಾ). ೧. ತಪ್ಪುಮಾಡಿದವನು ; ದ್ರೋಹಿ ; ಅಪರಾಧಿ : ಈ ಸೀಮೆಯಲ್ಲಿ ತಪ್ಪಿದೆನಾದಡೆ ಆಚಾರವೆ ಪ್ರಾಣವಾದ ರಾಮೇಶ್ವರಲಿಂಗಕ್ಕೆ ತಪ್ಪುಕನಹೆನು (ಬಲೀಶ್ವ. ೬೩) : ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯ (ಬಸವ. ೩೨೦) ; ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು ತಪ್ಪುಕರಾದರು ಹಲಬರು (ಅವಹಂ. ೪೩–೦೯೨). ೨. ನಿಯಮವನ್ನು ಅಥವಾ ಆಜ್ಞೆಯನ್ನು ಮೀರಿದವನು : ತಪ್ಪಬಾರದು ರಾಯರಾಡಿದ ಭಾಷೆ ಕಪ್ಪವ ಸುರುತಾಳನಿಗೆ ತಪ್ಪುಕರಾಗದೀವುದು ಕಜ್ಜ (ಕುರಾಸಾಂ. ೦೪–೭). [ ತಪ್ಪು₂ + – ಕ₃ ]

**ತಪ್ಪುಕಲ್ಪನೆ** (ನಾ). ತಪ್ಪಾಗಿ ಭಾವಿಸುವುದು ; ತಪ್ಪಾಗಿ ಊಹಿಸು ವುದು : ತಪ್ಪುಕಲ್ಪನೆಯಿಂದ ಅನಾಹುತ ತಪ್ಪಿದ್ದಲ್ಲ (ರೂಢಿ).

[ ತಪ್ಪು₂ + ಕಲ್ಪನೆ ]

**ತಪ್ಪುಕಾಣಿಕೆ** 'ತಪ್ಪುಗಾಣಿಕೆ' ನೋ.

**ತಪ್ಪುಕೊಡು** (ಕ್ರಿ). ದಂಡಕೊಡು : ಅವನು ಮಾಡಿದ ಅಪರಾಧಕ್ಕೆ ೨೫ ರೂಪಾಯಿ ತಪ್ಪುಕೊಡಬೇಕೆಂದು ಪಂಚರು ತೀರ್ಮಾನಿಸಿದರು (ರೂಢಿ).

[ ತಪ್ಪು₂ + ಕೊಡು₁ ]

**ತಪ್ಪುಗಂಟು** (ನಾ). ೧. ತಪ್ಪಾಗಿ ಹಾಕಿದ ಗಂಟು ; ಬಿಚ್ಚಲಾಗದ ಗಂಟು ; ತೊಡಕಾದ ಗಂಟು : (೬). ೨. ನಿಯಮಕ್ಕೆ ವಿರುದ್ಧವಾದ ಸೇರುವಿಕೆ,–ಸಂಬಂಧ : (೬). ೩. ಸಂಪರ್ಕ ಕಳೆದು ಹೋಗುವಿಕೆ ; ಸಂಬಂಧ ತಪ್ಪುವಿಕೆ : ನಾವು ಮುಂದೆ ಹೋಗುವೆವು; ನೀನು ಹಿಂದೆ ಉಳಿಯುವೆ. ನಮಗೂ ನಿಮಗೂ ತಪ್ಪುಗಂಟಾದೀತು (ಮುಂಬಯಿ. ೩–೭೭).

[ ತಪ್ಪು₁ + ಗಂಟು ]

**ತಪ್ಪುಗಾಣ್** (ಕ್ರಿ). ತಪ್ಪಾಗಿ ಭಾವಿಸು ; ತಪ್ಪಾಗಿ ಎಣಿಸು : ಮುಂದಪ್ಪುದನ್ ತಪ್ಪುಗಂಡನ್ (ಪಾರಸಿ. ೧೭–೩೯೭). [ತಪ್ಪು₂+ಕಾಣ್]

**ತಪ್ಪುಗಾಣಿಕೆ, ತಪ್ಪುಕಾಣಿಕೆ** (ನಾ). ಮಾಡಿದ ತಪ್ಪಿಗಾಗಿ ದಂಡದ ರೂಪದಲ್ಲಿ ಕೊಡುವ ಕಾಣಿಕೆ; ತಪ್ಪುದಂಡ : ನಾವು ಈ ಪ್ರಪಂಚದಲ್ಲಿ ಏನಾದರೂ ಮಾಡಬಾರದ್ದನ್ನು ಮಾಡಿದರೆ ಅದಕ್ಕೆ ಒಂದಲ್ಲ ಒಂದು ರೀತಿ ಯಲ್ಲಿ ತಪ್ಪುಗಾಣಿಕೆ ಕೊಡಲೇ ಬೇಕಾಗುತ್ತೆ (ವೀರಯೋ. ೩೪). ತಪ್ಪುಕಾಣಿಕೆ : ನಂಜುಂಡೇಶ್ವರನಿಗೆ ತಪ್ಪುಕಾಣಿಕೆ ಕೊಡಲು ನಂಜನ ಗೂಡಿಗೆ ಹೋಗಬೇಕಾಗಿದೆ (ರೂಢಿ).

[ ತಪ್ಪು₂ + ಕಾಣಿಕೆ (<ಕಾಣ್ಕೆ) ]

**ತಪ್ಪುಗಾರ** 'ತಪ್ಪುಗಾಱ' ನೋ.

**ತಪ್ಪುಗಾಲು** (ನಾ). ೧. ಕತ್ತರಿಗಾಲು ಹಾಕಿ ಒಂದು ಪಾದವನ್ನು ನೆಲದ ಮೇಲೆ ಊರಿ ಇನ್ನೊಂದನ್ನು ಊರದೆ ಅಡ್ಡವಾಗಿ ಇಟ್ಟಿರು ವುದು : ತಪ್ಪುಗಾಲಿಕ್ಕಿ ತ್ರಿಭಂಗಿಯಿಂದು ನಿಂದು ಒಪ್ಪುತಿರ್ಪೊಂದು ಪೊಸ ಕೊಳಲಂ ಕೊಳುತ್ತಂದು (ಅನಾರ. ದೇ. ೧೪೦–೧೩). ೨. = ತಪ್ಪುಹೆಜ್ಜೆ : ಮಗು ತಪ್ಪುಗಾಲು ಹಾಕುತ್ತಿದೆ (ರೂಢಿ). [ತಪ್ಪು₁ + ಕಾಲು(<ಕಾಲ್₁)]

**ತಪ್ಪುಗಾಱ, ತಪ್ಪುಗಾರ** (ನಾ). ತಪ್ಪುಮಾಡಿದವನು; ಅಪರಾಧಿ: ದರ್ಪ ದಲಿ ಧಿಕ್ಕರಿಸಿ ನೋಡುವ ತಪ್ಪುಗಾಱನನೊಯ್ದು ಸೂಚೀಮುಖ ಸಮಾಖ್ಯ ದಲಿ. . .ನೇಣಿನಲಿ ಹೊಲಿವರು (ನಿಧಾಗ ೫–೧೧–೪೧) ; ತಪ್ಪುಗಾಱನೆ ಬೀಳ ಧೋಗತಿಗೆಂದಳಱಿ ಮುನಿದು (ನಿಧಾಗ. ೬–೦೫–೪೪). ತಪ್ಪುಗಾರ : ಯಾರು ಇದರೊಳಗೆ ತಪ್ಪುಗಾರರು ಇದು ತಿಳಿಯದ ಹೊರತು ನಾ ಏನೂ ಬರೀಲಿಕ್ಕೆ ತಯಾರಿಲ್ಲ (ಅಶನಾ. ೧೧೩) ; ತನ್ನನ್ನು ತಪ್ಪುಗಾರನೆಂದು ತಿಳಿದಿ (ಇಪ್ಪತ. ೨೬೩). [ ತಪ್ಪು₂ + – ಕಾಱ ]

**ತಪ್ಪುಗೊಳ್** (ಕ್ರಿ). ತಪ್ಪನ್ನು ಎಣಿಸು ; ಅಪರಾಧವೆಂದು ಭಾವಿಸು : ಒಪ್ಪುಗೊಂಬನೊ ಮೇಣು ತನ್ನಲಿ ತಪ್ಪುಗೊಂಬನೊ ತನ್ನ ಮತಿಗೀ ಮುಪ್ಪು ಬಂದುದಿದೇಕೆ (ನಿಧಾಗ. ೧೦–೧೩–೪೨). [ತಪ್ಪು₂ + ಕೊಳ್₁ ]

**ತಪ್ಪುತಡ** (ನಾ). = ತಪ್ಪುತಡೆ : ತಪ್ಪುತಡವಿಲ್ಲದೆ ತಪಸಿಗವ್ವುದೇ ಶೂಲದ ವಿಧಿ (ಸರ್ವವ. ೧೬೨–೭೭೮). [ ತಪ್ಪು₂ + ತಡ₁ ]

**ತಪ್ಪುತಡೆ** (ನಾ). ತಪ್ಪು; ಸ್ಖಾಲಿತ್ಯ: ಬಾಲಪ್ರಪಂಚವೆಂಬ ಜ್ಞಾನಕೋಶವು ಅದರಲ್ಲಿ ಎಷ್ಟೆ ತಪ್ಪುತಡೆಗಳಿದ್ದರೂ ಬಾಲಕರಿಗಿಂತ ಬಾಲಕರ ತಂದೆತಾಯಿ ಗಳಿಗಾಗಿಯೇ ರಚಿಸಿರಬೇಕಾಗಿ ಕಂಡು ಬರುವದು (ಸಾಹಿಸಂ. ೧೯೨).

[ ತಪ್ಪು₂ + ತಡೆ₂ ]

**ತಪ್ಪುತಾಕು** (ನಾ). = ತಪ್ಪುತಡೆ : ತಪ್ಪಿದರ್ಗುಳಿವಿನ್ನೆಂತೊ ತಪ್ಪುತಾಕನು ನೋಡದೊಲು ರಂಗಾಯೆಂಬಳಿಪ್ಪನ್ನ ಪೊರೆಯದೇನಿಹನೆ (ಕಕಸಾ೦. ೩೭–೯೭). [ ತಪ್ಪು₂ + ತಾಕು₂ (<ತಾಂಕು₂) ]

**ತಪ್ಪುತೆರು** (ಕ್ರಿ). ತಪ್ಪಿಗಾಗಿ ದಂಡ ಸಲ್ಲಿಸು ; ತಪ್ಪುದಂಡ ಕೊಡು : ಹಸುಗಳನ್ನು ಬಿಟ್ಟುಬಿಡಬೇಕೆಂದೂ ತವ್ಮು ಬಳಿ ತಪ್ಪುತೆರಲು ಹಣವಿಲ್ಲ ವೆಂದೂ. . .ಅವರು ಪ್ರಾರ್ಥಿಸಿದರು (ಪುನರು. ೨೮೭).

[ ತಪ್ಪು₂ + ತೆರು₁ (<ತೆಱು₁) ]

**ತಪ್ಪುತೆಱು** (ಕ್ರಿ). ಮರೆಯಾದದ್ದು ಕಾಣು; "ದೋಷವನ್ನು ಪ್ರಕಟಿಸು" (ಪ್ರಭಣ್ಣ) : ನಯನಾಯುಸ್ಕಾಂತ ಸಂದರ್ಶನದಿಂ ಮುನ್ನವೊಳಗೆ ಸಿಲ್ಕಿದ ನನೆಯ ಪೂಣುಂಬುಗಳ್ [ಪಾಠಾಂ. ಳ] ತ[ಪಾಠಾಂ. ಗ]ಪ್ಪುತೆಱೆದು ಪೊಱಮಡುವಂತೆ ಮೆಯ್ಮುವಿರ್ ಮೊಗಸೆ (ಲೀಲಾವ. ೧೦–೪೫ ವ).

[ ತಪ್ಪು₂ + ತೆಱ್₁ ]

**ತಪ್ಪುದಂಡ** (ನಾ). ತಪ್ಪು ಮಾಡಿದ್ದಕ್ಕಾಗಿ ತೆರಂವ ಹಣ : ದಣ್ಣಾಯಕರ ಪದತಳಕ್ಕೆಱಗಿ ತಪ್ಪುದಂಡಕ್ಕೆ ಪನ್ನಿಚ್ಛಾಸಿರ ಹೊನ್ನಂ ಕೊಟ್ಟು (ಬಸರ. ೬-೮೬). [ ತಪ್ಪು₂ + ದಂಡ ]

**ತಪ್ಪುದಂಡಣೆ** (ನಾ). ತಪ್ಪಿಗೆ ಕೊಡಂವ ಶಿಕ್ಷೆ : ತಿಳಿಯೆಯೇನ್ ನೀನ್, ಬಱಿದೆ ಬಡಬಡಿಪ ನಾಲಗೆಗೆ ತೆಱಲಿರ್ಪ ತಪ್ಪುದಂಡಣೆಗಳೇನೆಂಬುದನ್? (ಬದ್ಧಪ್ರ. ೦೯-೩೮೪). [ ತಪ್ಪು₂ + ದಂಡಣೆ ]

**ತಪ್ಪುದಲೆ** (ನಾ). (?) : ತಿಪ್ಪಗನು ಸುಂಕವನು ಕಟ್ಟಿಯೆ ತಪ್ಪುದಲೆ ಮಾಡುತ್ತಲಿರಲಿಕೆಪೊಪ್ಪುವಡೆ ತಿಪ್ಪಗನು ಬೇರೆ ಸುಂಕದವ ಬೇರೆ (ಜ್ಞಾನಸಿಂ. ೮-೦೩೦). [ ? ]

**ತಪ್ಪುದಾರಿ** (ನಾ). ಯೋಗ್ಯವಲ್ಲದ ಮಾರ್ಗ ; ಅಡ್ಡದಾರಿ : ತಪ್ಪುದಾರಿ ಹಿಡಿದೊಪ್ಪದಿಂ ನಡೆದರ್ (ಚಿಕವಂ. ೪೩-೧೮) ; ತನ್ನವನು ತಪ್ಪುದಾರಿಗೆ ಹೋಗುತ್ತಲಿದ್ದರೆ . . . ತಿಳಿಯ ಹೇಳಿ ತಿರುಗಿಸಬೇಕು (ಪಡಕಾ. ೨೭).
[ ತಪ್ಪು₂ + ದಾರಿ ]

**ತಪ್ಪುನಂಬುಗೆ** (ನಾ). ಸಲ್ಲದ ನಂಬಿಕೆ; ತಪ್ಪುಕಲ್ಪನೆ ; ಕುರುಡುನಂಬಿಕೆ; ಅಂಧಶ್ರದ್ಧೆ : ಈ ತಪ್ಪುನಂಬುಗೆಯನ್ನು ಕ್ರಮೇಣ ವಾದಿಸಿ ಬಿಡಿಸಿದೆ (ಕಂಗಾಳ್ಕ. ೨೯೦). [ ತಪ್ಪು₂ + ನಂಬುಗೆ ]

**ತಪ್ಪುನಡೆ** (ನಾ). ಸಲ್ಲದ ನಡವಳಿಕೆ ; ಕೆಟ್ಟ ನಡತೆ : "ಕುರಾ-ತಪ್ಪುನಡೆ" (ಕಾಶಕ್ಕ. ೨೨). [ ತಪ್ಪು₂ + ನಡೆ₂ ]

**ತಪ್ಪುನುಡಿ** (ನಾ). ದೋಷಯುಕ್ತವಾದ ಮಾತು: "ತಪ್ಪುನುಡಿ ಅಬದ್ಧವೆಂಬುದು" (ಹಲಾಯು. ೨೩-೦೪೦). [ ತಪ್ಪು₂ + ನುಡಿ₂ ]

**ತಪ್ಪುನೆಪ್ಪು** (ನಾ). ತಪ್ಪಾದುದು ಮತ್ತು ಸರಿಯಾದುದು ; ದೋಷಗುಣ : ತಪ್ಪುನೆಪ್ಪುಗಳ ವಿಮರ್ಶೆಗಾಗಲಿ ತಿದ್ದುವ ಗೊಡವೆಗಾಗಲಿ ಹೋಗಲಿಲ್ಲ (ರೂಪಸಂ. ೨೯). [ ತಪ್ಪು₂ + ನೆಪ್ಪು₆ (< ನೇರ್ಪು₁) ]

**ತಪ್ಪುನೋಟ** (ನಾ). ಕದ್ದುನೋಡುವುದು ; ಕಳ್ಳನೋಟ (?) : ಮನೋಜನ ಪೂವಿನಂಬು ತೀವಿದ ದೋಣೆ ತೀವಿ ತನ್ನನಿಸೆ ಜಾಣನೆ ತಪ್ಪದೆ ತಪ್ಪುದಪ್ಪ ನೋಡಿದುದಱಿಂ ಗುಣಾರ್ಣವನನಾ ಸತಿ ತಪ್ಪದ ತಪ್ಪುನೋಟದೊಳ್ (ಪಂಪಭಾ. ೪-೪೦). [ ತಪ್ಪು₁ + ನೋಟ ]

**ತಪ್ಪುನೋಡು** (ಕ್ರಿ). ನೇರವಾಗಿ ನೋಡುವುದನ್ನು ತಪ್ಪಿಸಿ ನೋಡಂ ; ಕದ್ದು ನೋಡು : ಸಾಧ್ವಸದಿಂ ಬೆಮರ್ ಬೆಮರ್ವೆಡೆಗಳಿನುಣ್ಣ ಪೊಣ್ಮಿದುದು ಕಣ್ ನಡೆ ನೋಡದೆ ತಪ್ಪುನೋಡಿ ನಾಣೆಡೆಯೊಳಮಾದು ದಾಸತಿಗೆ ನೋಡಲೊಡಂ ಪಡೆವೆಚ್ಚಿ ಗಂಡನಂ (ಪಂಪಭಾ. ೫-೦೫) ; ಅವನವನತಾನನನವಾಂಗಾವಲೋಕನದೊಳಾಕೆಯುಂ ತಪ್ಪುನೋಡುತ್ತುಂ ಪೋಗಿ (ಶಾಂತಿಪು. ೮-೮೩ ವ). [ ತಪ್ಪು₁ + ನೋಡು ]

**ತಪ್ಪುಮೂಲೆ** (ನಾ). ಯಾರೂ ಬಾರದ ಪ್ರದೇಶ; ಕೊಂಪೆ: ಇಷ್ಟುದೂರ, ವಿವಿಕ್ತವಾದ ಈ ತಪ್ಪುಮೂಲೆಗೆ ಬಂದ ಕಾರಣವೇನು (ಪುನರು. ೫೬೪).
[ ತಪ್ಪು₂ + ಮೂಲೆ ]

**ತಪ್ಪುವಟ್ಟೆ** (ನಾ). ಸಲ್ಲದ ದಾರಿ ; ದುರ್ಮಾರ್ಗ : ಮತಿವಂತನಿರ್ದುಂ ತಪ್ಪುವಟ್ಟೆ ಪೋಗುವುದು ನಾಣ್ಗೇಡು (ಬದ್ಧಪ್ರ. ೫೫-೨೩೦).
[ ತಪ್ಪು₂ + ಬಟ್ಟೆ₂ ]

**ತಪ್ಪುವಿಡಿ, ತಪ್ಪುಹಿಡಿ** (ಕ್ರಿ). ತಪ್ಪನ್ನು ಕಂಡುಹಿಡಿ,-ಗುರುತಿಸು : ಮುನಿಕುಮಾರರೋದುವ ವೇದವೇದಾಂಗಂಗಳಂ ತಪ್ಪುವಿಡಿದು ಜಡಿದು ಬಗ್ಗಿಸುವ . . . ಅರಗಿಳಿಗಳುಮಂ (ಪಂಪಭಾ. ೧-೦೦೫ ವ) : ವೇದಂಗಳ ನೋದೆ ತಪ್ಪುವಿಡಿದಂತೇವಾಸಿಗಳ್ಗೋದುವೇಟ್ಟುವು . . . ಕೀಳೀಶುಕ ಸಾರಿಕಾತತಿಗಳ್ (ಜಗವಿ. ೯-೦೦೫). **ತಪ್ಪುಹಿಡಿ** : ವಿದಿತ ಜಂಗಮವಾಗಿ ಮುನ್ನಾಡಿದ ನುಡಿಗಳೊಳು ತಪ್ಪುಹಿಡಿಯೆ[ಪಾಠಾಂ. ತಪ್ಪ ಹಿಡಿಯೆ, ಹಿಡಿಯೆ ತಪ್ಪುಮ]ನಿದಕೆ (ಬಸಪು. ೨೫-೩೩). [ ತಪ್ಪು₂ + ಪಿಡಿ₁ ]

**ತಪ್ಪುಸಹಿಸು** (ಕ್ರಿ). = ತಪ್ಪುಸೈರಿಸು : (ಹ). [ ತಪ್ಪು₂ + ಸಹಿಸು ]

**ತಪ್ಪುಸಾಧಿಸು** (ಕ್ರಿ). ತಪ್ಪುಮಾಡಿ ಮಾಡಿಲ್ಲವೆಂದು ಸಾಧಿಸು ; ತಾನು ಮಾಡಿದ್ದೇ ಸರಿಯೆಂದು ವಾದಿಸು: ತಪ್ಪು[ಪಾಠಾಂ. ಪ್ಪ]ಸಾಧಿಪ ನೃಪನೊಳಿಪ್ಪವನೆ ಕಡುಹೆಡ್ಡ (ಸರ್ವಜ್ಞ. ೭೭೭) : ಮಾಡೋದು ಮಾಡಿ, ತಪ್ಪುಸಾಧಿಸಬೇಡ, ಸುಮ್ಮನಿರು (ರೂಢಿ). [ ತಪ್ಪು₂ + ಸಾಧಿಸು ]

**ತಪ್ಪುಸೈರಿಸು** (ಕ್ರಿ). ತಪ್ಪನ್ನು ಸಹಿಸಿಕೊಳ್ಳು. [ತಪ್ಪು₂ + ಸೈರಿಸು ]

**ತಪ್ಪುಹಚ್ಚು** (ಕ್ರಿ). = ತಪ್ಪುಹೊರಿಸು : (ಹ). [ ತಪ್ಪು₂ + ಹಚ್ಚು₁ ]

**ತಪ್ಪುಹಿಡಿ** 'ತಪ್ಪುವಿಡಿ' ನೋ.

**ತಪ್ಪುಹೆಜ್ಜೆ**(ನಾ).೧.=ತಪ್ಪಡಿ₁ ೧: ಈ ತಪ್ಪುಹೆಜ್ಜೆಗಳನ್ನಿಡುವಾಗ ಮಗುವು ಎಳುವುದು ಬೀಳುವುದು ಜಾಸ್ತಿಯಾಗುತ್ತದೆ (ಗೃಹವಿ. ೧೨೭). **೨.** ತಪ್ಪುದಾರಿಯಲ್ಲಿ ಇಡುವ ಹೆಜ್ಜೆ ; ತಪ್ಪಾದ ನಡವಳಿಕೆ : ಮಂತ್ರಿಮಂಡಲವು ಕಾರ್ಯರೀತಿಯಲ್ಲಿ ಪೇಚಾಡುತ್ತಿರುವಂತೆ ಅಥವಾ ತಪ್ಪುಹೆಜ್ಜೆ ಹಾಕುವಂತೆ, ತೋರಿದಾಗ ಅದಕ್ಕೆ ಯುಕ್ತಮಾರ್ಗವನ್ನು ಸೂಚಿಸುವುದು (ರಾಜ್ಯಾಂಗ.೯೭).
[ ತಪ್ಪು₂ + ಹೆಜ್ಜೆ (< ಪಜ್ಜೆ) ]

**ತಪ್ಪುಹೊರಿಸು** (ಕ್ರಿ).ದೋಷಾರೋಪಣೆ ಮಾಡು: ತಪ್ಪುಹೊರಿಸಿದವನಿಗೆ ಒಪ್ಪುವವನು ಯಾರು (ಗಾದೆ) ; ನನ್ನ ಮೇಲೆ ವೃಥಾ ತಪ್ಪುಹೊರಿಸಬೇಡ (ರೂಢಿ). [ ತಪ್ಪು₂ + ಹೊರಿಸು (< ಪೊಱಿಸು) ]

**ತಪ್ಪುಹೊರು** 'ತಪ್ಪುಹೊಱು' ನೋ.

**ತಪ್ಪುಹೊಱು, ತಪ್ಪುಹೊರು** (ಕ್ರಿ).ದೋಷಾರೋಪಣೆಗೆ ಗುರಿಯಾಗು; ಅಪವಾದವನ್ನು ಹೊರು : ತಪ್ಪುಹೊಱದವೊಲಾವ ಶಪಥವನೊಪ್ಪುಗೊಳಲದ ಮಾಡುವೆನು ದಿಟ ತಪ್ಪು ಸಂಧಿಸಿತಾದಡಿಲ್ಲಿಯೆ ಬಿಸುಡುವೆನು ತನುವ (ಕೊರಚಾ. ೬-೫೩-೭೮). **ತಪ್ಪುಹೊರು** : ಯಾರೋ ಮಾಡಿದ ಕೆಲಸಕ್ಕೆ ತಾನು ತಪ್ಪುಹೊರಬೇಕಾಯಿತು (ರೂಢಿ).
[ ತಪ್ಪು₂ + ಹೊಱು (< ಪೊಱು) ]

**ತಪ್ಪೆಣಿಕೆ** (ನಾ). ತಪ್ಪು ಕಲ್ಪನೆ,-ಗ್ರಹಿಕೆ : ರಾಣಿವಾಸದೊಡನೆ ಕಲಹಿಸಿ ಕೋಪಿಸಿಕೊಂಡಿದ್ದ ರಾಯರ ತಪ್ಪೆಣಿಕೆಯನ್ನು ತಿದ್ದುವುದಕ್ಕಾಗಿಯೇ (ಸಾಹಿಜೀ. ೯೦). [ ತಪ್ಪು₂ + ಎಣಿಕೆ ]

**ತಪ್ಪೇಲಿ** 'ತಪ್ಪಲೆ' ನೋ.

**ತಪ್ಪೊಪ್ಪಿಗೆ** (ನಾ). ತಪ್ಪನ್ನು ಒಪ್ಪಿಕೊಳ್ಳುವುದು : ತಾನೇ ಗುಂಡು ಹಾರಿಸಿದ್ದೆಂದು ತಪ್ಪೊಪ್ಪಿಗೆಯ ಮುಚ್ಚಳಿಕೆ ನೀಡಿದ್ದರಿಂದ ಅವಳಿಗೆ ಶಿಕ್ಷೆ ವಿಧಾಯಕವಾಯಿತು (ಪುಷರು.೪೯೩). [ತಪ್ಪು₂ + ಒಪ್ಪಿಗೆ (< ಒಪ್ಪುಗೆ)]

**ತಪ್ಪೊಪ್ಪು₁** (ಕ್ರಿ). ತಪ್ಪನ್ನು ಒಪ್ಪಿಕೊಳ್ಳು : ಹುಚ್ಚನಿಂ ತಪ್ಪೊಪ್ಪೆ ಬಾಯ್ಕ್ಕುಗಳಂ ಬಿಗಿದು (ಕಾಲೂರ. ೭೭-೦೪೦). [ ತಪ್ಪು₂ + ಒಪ್ಪು₁ ]

**ತಪ್ಪೊಪ್ಪು₄** (ನಾ). ತಪ್ಪು ಮತ್ತು ಸರಿ ; ಗುಣ ಮತ್ತು ದೋಷ ; ನ್ಯಾಯಾನ್ಯಾಯ : ದ್ಯೂತಪ್ರಸಂಗದಲ್ಲಿ ಆಟಗಾರರ ತಪ್ಪೊಪ್ಪುಗಳನ್ನು ಸೂಚಿಸಿ ಸರಿಗೊಳಿಸುವ 'ಮಧ್ಯಸ್ಥ' . . . ಆ ದ್ಯೂತವನ್ನು ನಿರೀಕ್ಷಿಸುತ್ತಿರಬೇಕೆಂಬುದು ಪದ್ಧತಿ (ಕನ್ನಡಿ. ೧೬೯) ; ಹೆಬ್ಬುಲಿಯು ಬರಂತಿಹುದು ತಪ್ಪೊಪ್ಪುಗಳ ನೆಲದ ಕೀಳ್ಮೇಲನೆಣಿಸಿ (ಕಾಲೂರ. ೯೪-೦೮೬).
[ ತಪ್ಪು₂ + ಒಪ್ಪು₂ ]

**ತಪ್ಪೋಲೆ** (ನಾ). ಗ್ರಂಥದ ಮುದ್ರಣದಲ್ಲಿ ಉಳಿದುಕೊಂಡಿರುವ ತಪ್ಪುಗಳನ್ನೂ ಅವುಗಳ ತಿದ್ದುಪಡಿಗಳನ್ನೂ ಸೂಚಿಸುವ ಪಟ್ಟಿ : ಒಂದು ಪುಸ್ತಕದಲ್ಲಿ ಅದರಲ್ಲಿಯ ಅಶುದ್ಧಗಳನ್ನು ಕೊಟ್ಟಿರುವ ಪಟ್ಟಿ ; ತಪ್ಪೋಲೆ (Erratum. ಇಂಕನ್.); ಪೀಠಿಕಾಭಾಗಕ್ಕೆ ಸಂಬಂಧಿಸಿದ ಭಾಗಗಳಾವುವೆಂದರೆ: (೧) ಪುಸ್ತಕದ ಸಂಕ್ಷೇಪವಾದ ಹೆಸರು . . . (೯) ಚಿತ್ರಪಟ್ಟಿ (೧೦) ತಪ್ಪೋಲೆ (೧೧) ಉಪನಾಮ (ಮುದ್ರಕ. ೪೨). [ ತಪ್ಪು₂ + ಓಲೆ ]

**ತಪ್ಸೀಲು** 'ತಪಸೀಲು' ನೋ.

**ತಫರೀಕು** (ನಾ). ಹಂಚುವಿಕೆ ; ಪಾಲುಮಾಡುವಿಕೆ: (ಕ).
[ ←ಅರ. ಹಿಂ. ಮರಾ. ತಫರೀಕ್ ]

**ತಫಾವತು** (ನಾ). ೧. (ಲೆಕ್ಕಪತ್ರ ಮೊದಲಾದುವುಗಳ ವಿಷಯದಲ್ಲಿ) ಹೆಚ್ಚುಕಡಮೆ ; ವ್ಯತ್ಯಾಸ ; ಅಂತರ ; ಫರಕು : ಮೂರುವರುಷದ ಮೇಲೆ ಟೀಪುಸುಲ್ತಾನರು ಸಲ್ಲಾಕಿ ತಫಾವತು ಮಾಡುವವರಾಗಿಯೂ ನಾನಾಪ್ರಕಾರ ವಿರುದ್ಧಮಾಡುವ ಮತಲಬ್ಬಿನಲ್ಲಿ ಇದ್ದಾರೆಯಂಬ ಸಮಾಚಾರ (ರಾಜೇಂದ್ರ. ೫೪). ೨. ನ್ಯೂನತೆ ಅಥವಾ ದೋಷದಿಂದ ಕೂಡಿದುದು ; ತಪ್ಪು : ಈ ಪ್ರಕಾರ ಗಳಿಗ್ಗೆ ಮಂದೊಂದು ಮಾತು ಆಗುವದರಿಂದ ನಿಮ್ಮ ಮಾತು ತಫಾವತು ಆಗಿ ಕಾಣುತ್ತದೆ (ರಾಜೇಂದ್ರ. ೬೪). [ ←ಅರ. ಹಿಂ. ಮರಾ. ತಫಾವತ್ ]

**ತಫಾವತುಗಾರ** (ನಾ). ಹಣವನ್ನು ತಿಂದು ಹಾಕುವವನು,–ದುರುಪಯೋಗ ಮಾಡಿಕೊಳ್ಳುವವನು : ತಫಾವತುಗಾರ ತಳ್ಳಿದರೆ ತಿಪ್ಪಯ್ಯಗೆ ಏನು ಕೋಪ ? (ಗಾದೆ). [ತಫಾವತು + – ಗಾರ (<– ಕಾರ) ]

**ತಬಕ₁** (ನಾ). ಗೊಂಚಲು; ಸಮೂಹ (?) : ಕಬರಿಯರಳ ಕಯ್ಯ ರತ್ನದ ತಬಕೂರ್ವಿ[ಪಾಠಾಂ. ಸ್ತಬಕೂರ್ವಿ, ತಬಕೊರ್ವಿ]ಕೆಯ ತೋಳ್ಗಳೆಂದಳಾಗಲ ಪಳಾಳಿಗಬಲೆ ನೋಡಲವನ ಚಿತ್ರವನೆಂದು (ಕೂಬಸೋ. ೨೩–೨೦).
[ <ಸಂ. ಸ್ತಬಕ ]

**ತಬಕ₂** 'ತಬಕು' ನೋ.

**ತಬಕು, ತಬಕ₂, ತಬುಕು** (ನಾ). ತಾಂಬೂಲ, ಪೂಜೆಯ ಸಾಮಾನು ಮೊದಲಾದುವುಗಳನ್ನು ಇಡಲು ಉಪಯೋಗಿಸುವ, ಚಿತ್ರಕೆಲಸದ ಲೋಹದ ತಟ್ಟೆ : ತಂಬುಲಿಗನ ಕೈಯ ತಬಕನರ್ಕಕೀರ್ತಿ ಒಯ್ಯನೆ ಸೆಳೆಕೊಂಡು ತಂದೆಗೆರೆಯ ತನ್ನ ಕೈಯಾರೆ ಕೊಡತೊಡಗಿದನು (ಭರತ. ೨೭-೬೬); ಕಸ್ತೂರಿ ಗಂಧ ಅತ್ತರು ಹೊಸ ಚಿನ್ನಮಯ ತಬಕನಲಿ ಹಿಡಿದವರು ಕೆಲರು (ಶ್ರೀಕೃಪಾ. ೩೭) ; ತಾಂಬೂಲದ ತಬಕು (ಬೆಳುಮ. ೧೬೦) ; ತಬ್ಬಲಿ ತಬಕು ಕದ್ದು ಜಗಲೀಲಿ ಸಿಕ್ಕಿ ಬಿದ್ದ (ಗಾದೆ). **ತಬಕ₂** : ತಬಕಗಳ ಹಿಡಿದು ನಿಂದವರು ಹಾರ ಹಿಡಿದವರು (ಶ್ರೀಕೃಪಾ. ೦೮) ; ಬೆಳ್ಳಿಯಿಂದ ತಾಟು ತಬಕ ಬಟ್ಟಲು ತಂಬಿಗೆ ಪೇಲೆ ಮುಂತಾದ ಸಾಮಾನುಗಳನ್ನು . . . ಮಾಡುವ ನಡತೆಯುಂಟು (ಮೈಂಬಯಿ. ೪-೦೫೦) ; ಕುಂಕುಮ ಅರಿಷಿಣ ಮೊದಲಾದುವುಳ್ಳ ಪೂಜೆಯ ತಬಕವಿದೆ (ನಾಧಾರಿ. ೩೮). **ತಬುಕು** : ನಗುತ ತಾಂಬೂಲವನು ತಬುಕಿನಲಿಯಿರಿಸಿ (ಬಾಹಾಶ. ೦೦) ; ಅವನ ಮುಂದಕ್ಕೆ ವೀಳೆಯದ ತಬುಕನ್ನು ತಂದಿರಿಸಿದಳು (ಕುಡಿಕೊ. ೪೮).
[ ←ಅರ. ಹಿಂ. ಮರಾ. ತಬಕ್ ]

**ತಬಟೆ** 'ತಂಬಟ' ನೋ.

**ತಬಣ್ಣಬಲ** (ನಾ). ಒಂದು ಊರಿನ ಹೆಸರು : ಪಣ್ಡಿತ ಭಟಾರರ್ತ್ತಾಣಮನಾಳುತಿರೆ ತಬಣ್ಣಬಲಬ್ಬಿನೊಳೆ ಈಸಗಮುಣ್ಣ ಸತ್ತೊಡೆ (ಮ್ಯಅರಿ. ೦೯೨೭, ೦೦೦-೪ ; 10ನೆಯ ಶತ). [ ? ]

**ತಬಲ** 'ತಬಲೆ' ನೋ.

**ತಬಲಕು** (ನಾ). ಕಾಗದ ಪತ್ರಗಳ ಕಟ್ಟು,–ಕಂತೆ : (ಕ).
[ ←ಅರ. ತಬ್ಲಕ್ ; ಮರಾ. ತಬಲಕ್ ]

**ತಬಲಕುದಾರ** (ನಾ). ೧. ಕಾಗದಪತ್ರಗಳನ್ನು ಕಟ್ಟುವ ದಾರ. ೨. ಸೆಣಬಿನ ದಾರ. [ ತಬಲಕು + ದಾರ₁ ]

**ತಬಲಾ** 'ತಬಲೆ' ನೋ.

**ತಬಲಾತರಂಗ** (ನಾ). ತಬಲಾದ ನಾದದ ಅಲೆ : ಉಕ್ಕು, ಉತ್ಸಾಹಗಳಿಗೆ ತಬಲಾತರಂಗವೂ ಜಲತರಂಗವೂ ಸಹಾಯ (ವಾಲಪ್ರ. II, ೯೭೬). 'ಕಾಷ್ಠತರಂಗ', 'ಜಲತರಂಗ' ಹೋ.
[ ತಬಲಾ(<ತಬಲೆ) + ತರಂಗ ]

**ತಬಲೆ, ತಬಲ, ತಬಲಾ**(ನಾ). (ತಾಳವನ್ನು ಸೂಚಿಸುವುದಕ್ಕಾಗಿ ಬಾರಿಸುವ) ಒಂದು ಬಗೆಯ ಚರ್ಮವಾದ್ಯ,–ತಾಳವಾದ್ಯ: ತಬಲಾದವನು ತಬಲೆಯನ್ನು ಸರಿಪಡಿಸಿದ (ಅಜೋರೀ. ೦೬೪) ; ಒಂದು ತಬಲೆಯನ್ನು ತೆಗೆದುಕೊಂಡು ದವದವ ಬಡಿಯತೊಡಗಿದರು(ಕುರಿಹಿಂ. ೪). **ತಬಲ**: ತಬಲ ಹೊಡೆಯುವುದರಲ್ಲಿ ಆತ ಎತ್ತಿದ ಕೈ (ರಾಯಚ. ೩೫). **ತಬಲಾ** : ಜೊತೆಗೆ ರೋಹಿಣಿಯು ಸ್ವರಸೇರಿಸಿ, ತಬಲಾ ಬಾರಿಸುತ್ತಿದ್ದಳು (ಬಂಕಿಮ. ೬೨).
[ ←ಅರ. ತಬಲಹ್, ತಬ್ಲ ; ಹಿಂ. ಮರಾ. ತಬಲಾ ]

**ತಬಸಿ** 'ತವಸಿ' ನೋ.

**ತಬೀಯತು, ತಬ್ಬೇತ** (ನಾ). ೧. ಪ್ರಕೃತಿ ; ಸ್ವಭಾವ : (ಕ). **ತಬ್ಬೇತ**: ೨. ಆರೋಗ್ಯ : ತಬ್ಬೇತ ಠೀಕ್ ಅದ ಇಲ್ಲೋ ? (ದೀಪಹ. II, ೨೦೦).
[ ←ಅರ. ತಬೀಯತ್; ಹಿಂ. ತಬೀಅತ್; ಮರಾ. ತಬಿಯತ್ ]

**ತಬುಕು** 'ತಬಕು' ನೋ.

**ತಬೇಲಿ, ತಬೇಲೆ** (ನಾ). ಕುದುರೆ ಲಾಯ ; ಅಶ್ವಶಾಲೆ : ಬೆಳಗಿನ ಕುದುರೆಗಳನ್ನು ಕೋಚಿನ ಸೇಜು ತಬೇಲಿಗೆ ತರುತ್ತಲೂ, ಅವು ಆರುತ್ತಲೇ ಅವಕ್ಕೂ ಮಾಲೀಸ್ (ಹಂಗೂಲಿ. ೭೫) ; ನಮ್ಮ ಸೋದರಮಾವ ಕರೀಂಖಾನರು ಹುಜೂರು ತಬೇಲೀಲೆ ಅಲ್ವಾ ಇರೋದು (ಮಲ್ಲಿ. ೩೩). **ತಬೇಲೆ** : 'ಖಾಸ್‌ತಬೇಲೆ' ಪರಾ.
[ ←ಹಿಂ. ತಬೇಲಾ, ತವೇಲಾ ; ಮರಾ. ತಬೇಲಾ; ಅರ. ತವೇಲಹ್, ತವೀಲಾ ]

**ತಬೇಲೆ** 'ತಬೇಲಿ' ನೋ.

**ತಬ್ದಿಲು** 'ತಬ್ದೀಲು' ನೋ.

**ತಬ್ದೀಲು, ತಬ್ದಿಲು** (ನಾ). ಬದಲಾವಣೆ : ಪಲ್ಲಟ ; ಪರಿವರ್ತನೆ ; ಅದಲುಬದಲು : ಚಾಲ್ತಿ ಸಾಲಿನ ಬಾಕಿಯನ್ನೂ ಗುದಸ್ತ ಬಾಕಿಯನ್ನೂ ಬೇರೆ ಬೇರೆ ಹಾಕಿ ಎಂದು ಹೇಳಿದರೆ ಎರಡನ್ನೂ ತಬ್ದೀಲುಮಾಡಿ ತಲೆಕೆಡಿಸುತ್ತಿದ್ದರು (ನನ್ನೂ ರ್ಮ್ಯ ೦೫೩). **ತಬ್ದಿಲು** : ಅವಸರದಲ್ಲಿ ಒಂದರ ಶಬ್ದ ಇನ್ನೊಂದಕ್ಕೆ ತಬ್ದಿಲಾಗಿ ಬರೆಯಲ್ಪಟ್ಟ ಕೆಲವು ತೂಗುಪಟ್ಟಿಗಳೂ ಇವೆ (ರೂಪಸಂ. ೫೯). [←ಅರ. ಹಿಂ. ತಬ್‌ದೀಲ್ ]

**ತಬ್ಬರಿಸು₁** (ಕ್ರಿ). ಎಡಹು ; ಮುಗ್ಗರಿಸು : ತವಕಪಟ್ಟವ ತಬ್ಬರಿಸಿ ಬಿದ್ದ (ಗಾದೆ). 'ಕಬ್ಬರಿಸು', 'ಟೆಬ್ಬರಿಸು' ಹೋ. [ ದೇ.₂ ತಮಿ. ತವಱು ]

**ತಬ್ಬರಿಸು₂** (ಕ್ರಿ). ತಬ್ಬು ; ವ್ಯಾಪಿಸು (?) : ವರ್ಣಿಸುವ ಗಬ್ಬಿಗರ್ ತ್ರೈಲೋಕ ದುರ್ಲಭದ ನಿರ್ಣಯದ ಆಗಾರಮಂ ಪೊಕ್ಕು ವ್ಯಂತರು ಪಚರ್ಣಯ ಕದಂಬ ಸೌರಂಭಮಾಘ್ರಾಣವಂ ನಿಬ್ಬರದಿ ತಬ್ಬರಿಸಲು (ಜನಮು. ೩೦-೩೦). 'ಇಕ್ಕರಿಸು₂', 'ಉಕ್ಕರಿಸು' ಹೋ.
[<ತಬ್ಬು₂ + – ಇಸು₃ ]

**ತಬ್ಬರಿಸು₃** (ಕ್ರಿ). ೧. ಭಯ ವಿಹ್ವಲನಾಗು. ೨. ದುಃಖಪರವಶನಾಗು : (ಕ). ೩. ಆಶ್ಚರ್ಯ ಚಕಿತನಾಗು: 'ತಬ್ಬಿಬ್ಬು' ಪರಾ. [ ? ]

**ತಬ್ಬಲಿ** (ನಾ). ೧. ತಂದೆಯನ್ನು ಅಥವಾ ತಾಯಿಯನ್ನು ಇಲ್ಲವೆ ತಂದೆ ತಾಯಿಗಳಿಬ್ಬರನ್ನೂ ಕಳೆದುಕೊಂಡಿರುವ ಮಗು ; ಅನಾಥ ಶಿಶು ; ಪರದೇಶಿ ಮಗು : ಈತಂಗಳು ತಬ್ಬಲಿಗಳಲ್ತು (ಅದ್ಭುತ. ೪೭-೭); ದೀನ ತಬ್ಬಲಿಯ ಕಾಪಾಡುವವರಿಲ್ಲ (ಕವಿಪು. ೩೩-೭); ಪಾಂಡವರು ತಂದೆಯಿಲ್ಲದ ತಬ್ಬಲಿಗಳಾಗಿದ್ದಾಗ ನೀನು ಅವರನ್ನು ಪೋಷಿಸಿದೆ (ವಚಧಾ. ೨೫೩) ; ತಬ್ಬಲಿ ಹುಡುಗಿ ಕೈಬಿಡಬೇಡ (ಕಳಕು. ೮೭). ೨. ದಿಕ್ಕಿಲ್ಲದುದು; ಅನಾಥವಾದುದು : ಆ ಭಿಕ್ಷುಕನ ಹಣ ತಬ್ಬಲಿಯಾಗಿ ಬಿದ್ದಿತ್ತು (ರೂಢಿ). 'ತಬ್ಬಲಿಪ್ರೇತ' ಪರಾ. ೩. ಕೀಳಾದ ವಸ್ತು ಅಥವಾ ತುಚ್ಛನಾದ ವ್ಯಕ್ತಿ : 'ತಬ್ಬಲಿದನ', 'ತರಂವಲಿ' ಪರಾ.
[ದೇ.₂ ತುಳು. ತಬ್ಬಲು, ತಬ್ಬಲಿ; ತೊದ. ತೊಬಿರಿ]

**ತಬ್ಬಲಿಕೂಸು** (ನಾ). ತಾಯಿಯಿಲ್ಲದ ಮಗು ; ಅನಾಥಶಿಶು : (ಕ).
[ ತಬ್ಬಲಿ + ಕೂಸು ]

**ತಬ್ಬಲಿದನ** (ನಾ). ತೊಂಡುದನ ; ಪೋಲಿದನ : (ಕ).
[ ತಬ್ಬಲಿ + ದನ ]

**ತಬ್ಬಲಿಪ್ರೇತ** (ನಾ). ಕೇಳುವವರಿಲ್ಲದ ಹೆಣ; ದಿಕ್ಕಿಲ್ಲದ ಶವ ; ಬೇವಾರ್ಸಿ ಹೆಣ : ನೀರ ಪಾತಳಿಯ ಮೇಲೆ ಕವುಚಬಿದ್ದ ತಬ್ಬಲಿಪ್ರೇತ ತೇಲುತ್ತಿತ್ತು (ಮೂಕಜ್ಜಿ. ೩೭೬). [ ತಬ್ಬಲಿ + ಪ್ರೇತ ]

**ತಬ್ಬಿಬ್ಬಾಟ** (ನಾ). ದಿಗ್ಭ್ರಮೆಗೊಳಿಸುವ ಆಟ : ಒಬ್ಬಳ ಬಸಿಱಿಂದಲಿ ಬಂದು ಮತ್ತೊಬ್ಬಳ ಕೈಯಿಂದಲಿ ಬಳೆದು ಕೊಬ್ಬಿದ ಭೂಭಾರವನಿಳುಹಲು ಇಂಥ ತಬ್ಬಿಬ್ಬಾಟ[ಪಾಠಾಂ. ತಬ್ಬುಬ್ಬಿದಾಟ]ಗಳೆಲ್ಲಿ ಕಲಿತೆಯ್ಯ (ಪುರಂದ. ೧-೯೭-೧). [ ತಬ್ಬಿಬ್ಬು + ಆಟ ]

**ತಬ್ಬಿಬ್ಬಿ** 'ತಬ್ಬಿಬ್ಬು' ನೋ.

**ತಬ್ಬಿಬ್ಬಿಗೊಳ್** 'ತಬ್ಬಿಬ್ಬುಗೊಳ್' ನೋ.

**ತಬ್ಬಿಬ್ಬು, ತಬ್ಬಿಬ್ಬಿ** (ನಾ). ೧. ಕಕ್ಕಾಬಿಕ್ಕಿ ; ದಿಗ್ಭ್ರಮೆ : ತಾಮಸ ತಲ್ಲಣ ತಬ್ಬಿಬ್ಬು ತಳ್ಪಂಕ ಕಾಮುಕಾರಿಕೆ ಕಟ್ಟಳಲಸೀಮೆ ಯಱಿಯದರ್ ಸಲಹು (ಶತಸಾಂ. ೩೪-೭೮) ; ತವೆ ತಬ್ಬಿಬ್ಬಂ ತಾಳ್ದಿ ತೂ ಟ್ಬಿ ತಾ ಳ್ದ ನ ಸಿರಿಯಂ (ಚಕವಿ. ೨-೯೭) ; ಅತ್ಯಗತ್ಯವಾದ ಮಹತ್ಕಾರ್ಯವನ್ನು ಎಸಗುವಾಗ . . . ಹೃದಯದೌರ್ಬಲ್ಯಗಳು, ಕ್ಷುದ್ರಬಾಧೆಗಳು, ತಬ್ಬಿಬ್ಬುಗಳು "ಶ್ರೀ"ಯವರಿಗೆ ಒದಗಿ ಬಂದುದು ಪ್ರಕೃತಿವಿಲಾಸ (ಕಬಸಾ. X, ಪೀಠಿಕೆ). ೨. ನಡೆನುಡಿಗಳಲ್ಲಿ ತಡಬಡ,– ತಡವರಿಸುವಿಕೆ : ಬೆನ್ನೊಳ್ ನಟ್ಟ ಸರಳ ತಬ್ಬಿಬ್ಬಿಸವ ನಡೆನುಡಿಗಳ (ಜಬಪು. ೯೯-೨೪). **ತಬ್ಬಿಬ್ಬಿ** : ೧. ಪ್ರಸಾದವ ಕೊಂಡಲ್ಲಿ ಉಳಿಕಳವುಬ್ಬಸ ತಬ್ಬಿಬ್ಬಿ ಹಾನಿ ವೃದ್ಧಿಗೆ ಎಡೆಯಿಲ್ಲದೆ (ಬಾಸೋಕಸಂ. ೪೬) ; ಪೊಡವಿಪಾಲರು ವಿಕಳದ ನುಡಿಯ ತಬ್ಬಿಬ್ಬಿಗಳಲಿರ್ದರು (ಷನಶ್ಚು. ೦೪-೧೯); ತಬ್ಬಿಬ್ಬಿಯಿಲ್ಲದೆ ಮಲೆವುತ ಸಾಗುತಂದುಬ್ಬಿನಿಂದೆಳೆದ ಹುಯ್ಯಲನು (ಕು ರಾ ಸಾ ೦. ೦೯-೧೦೬).

ತಬ್ಬಬ್ಬನಾಡು = ತೊದಲುತ್ತ ಮಾತನಾಡು ; ಅಸ್ತವ್ಯಸ್ತವಾಗಿ ಮಾತಾಡು; ಅರ್ಥವಿಲ್ಲದ ಮಾತನಾಡು: ಸಪ್ತಾವಸ್ಥೆಯಡಸಿರ್ದರಂತೆ ತಬ್ಬಬ್ಬನಾಡುತ್ತ ಮಧುಪಾನದಬಲೆಯರೆಸೆದರು (ಚೀರಮ. ೮-೩೩). **ತಬ್ಬಿಬ್ಬಾಗು, ತಬ್ಬಿಬ್ಬಿಯಾಗು** = ೧. ಕಕ್ಕಾಬಿಕ್ಕಿಯಾಗು ; ದಿಕ್ಕು ತೋಚದಂತಾಗು ; ಗಾಬರಿಯಾಗು : ನಾನು ತಬ್ಬಿಬ್ಬಾಗಿ ಉತ್ತರವಿತ್ತೆ (ನಾಘೋಲಿಕಿ ೨೩೬) ; ಒಂದು ಕ್ಷಣ ಅವನು ತಬ್ಬಿಬ್ಬಾದ (ಹೊಸಕ್ಕಿ. ೩೭). ತಬ್ಬಿಬ್ಬಿಯಾಗದೆ ತಳ್ಪಂಕಗೊಳ್ಳದೆ ಬೊಬ್ಬೆಯಿಕ್ಕದೆ ಜೋಕೆಯಱಿದು . . . ಒಂದೊಂದು ಕಲೆಯ ವ್ಯೆಯುಬ್ಬುವೊಲು ಕೇಳಿಸಿದರು (ಭರತ. ೧-೭೧) ; ಸಮಾಜದ ಸನ್ನಿವೇಶಗಳನ್ನೇ ಶಾಲೆಯ ಎಳೆಯ ಮಕ್ಕಳ ಮುಂದೆ ತಂದೊಡ್ಡುವುದಾದರೆ, ಅವರು ತಬ್ಬಿಬ್ಬಿಯಾದಾರು (ಶಿಕ್ಷಣ. ೬೯). ೨. ತಡವರಿಸು; ತೊದಲು: ನಡೆಗೆ ತಡಬಡಮಾಯ್ತು ವಾಣಿ ತಬ್ಬಿಬ್ಬಾಯ್ತು (ಜಬಪು. ೨೦-೦೯). **ತಬ್ಬಿಬ್ಬುಮಾಡು** = ಏನೂ ತೋರದಂತೆ ಮಾಡು ; ತಬ್ಬಿಬ್ಬುಮಾಡು ; ಪೀಡಿಸು ; ಕಾಡಿಸು (Molder. ಇಂಕಿನಿ.).

[ ದೇ.II ತುಳು. ತಬ್ಬಿಬ್ಬು, ತಬ್ಬುದಿಬ್ಬು ; ತೆಲು. ತಬ್ಬಿಬ್ಬು ]

**ತಬ್ಬಿಬ್ಬುಗೊಳ್, ತಬ್ಬಿಬ್ಬಿಗೊಳ್, ತಬ್ಬಿಬ್ಬುಗೊಳು** (ಕ್ರಿ). ಗಾಬರಿಗೊಳ್ಳು ; ಕಕ್ಕಾಬಿಕ್ಕಿಯಾಗು ; ದಿಗ್ಭ್ರಾಂತನಾಗು ; ದಿಕ್ಕುತೋಚದಂತಾಗು: ದಬ್ಬುದಲೆಗೊಂಬ ವಾರಣ ವಾಹಕಪ್ರತತಿ ತಬ್ಬಿಬ್ಬುಗೊಂಬ [ಪಾಠಾಂ. ಬ್ಬಿ ನಡೆವ] ತುರಗಾರೋಹಕ ಪ್ರತತಿ (ಸಮ್ಮಕಾ. ೮-೬೩) ; ತಬ್ಬಿಬ್ಬುಗೊಂಡು ವೊಱೆಗೆಯ್ವರಿಂ ಸುಯ್ವರಿಂ (ಜಬಪು. ೯೬-೨೦) ; ಇಂತು ಮಾಱಾಂತ ಬಲಮಂ ಕಡಿದಬ್ಬರಕೆ ತಿಗುಳನಾಡನಿತುಂ ತಬ್ಬಿಬ್ಬಿಗೊಳೆ (ಚಕವಿ. ೫-೯೦). **ತಬ್ಬಿಬ್ಬಿಗೊಳ್** : ಸಬ್ಬಜನರು ತಬ್ಬಿಬ್ಬಿಗೊಳಲು ಊರಬ್ಬರ[ಪಾಠಾಂ. ಗಳು ತಬ್ಬಿಬ್ಬುಗೊಳುತಿರಲುಬ್ಬೆಗ]ಪಿರಿದಾಯ್ತೆಂದು (ತ್ರಿಪುಸಾಂ. ೧೬-೦೮೩) ; ತಬ್ಬಿಬ್ಬಿಗೊಂಬ ಹಿರಣ್ಯಾಕ್ಷನ ಪೌಜನುಬ್ಬೆಯ ಕಂಡು ಕೋಪದೊಳು (ನೇಮಿಸಂ. ೧೨-೭೩) : ಬೊಬ್ಬೆಯಬ್ಬರದುಬ್ಬಿಗೆ ಭೀತಿಗೊಂಡಾಗ ತಬ್ಬಿಬ್ಬಿಗೊಂಡುಱೆ ಭಟರು . . . ಕಂಗೆಟ್ಟೋಡೆ (ಕಂನವಿ. ೧೮-೫೦). **ತಬ್ಬಿಬ್ಬುಗೊಳು**: ಮಾಱುವ್ರತಕ್ಕೆ ಮುಕ್ಕುತಕ್ಕೆನಾಗಿ ತಬ್ಬಿಬ್ಬುಗೊಳುತ್ತಿದ್ದೇನೆ (ಖಲೀಶ್ಚ. ೪೩) ; ಇದು ಮನಸಿನ ವಿಕಾರವೆಂಬುದನು ಒಬ್ಬರೂ ತಿಳಿಯದೆ ತಬ್ಬಿಬ್ಬು[ಪಾಠಾಂ. ಬ್ಬಿ]ಗೊಳುತ್ತಿದಾರೆ ನೋಡಾ (ಸಿದ್ಧವ. ೧೦೯-೩೩೮). [ ತಬ್ಬಿಬ್ಬು + ಕೊಳ್$_1$ ]

**ತಬ್ಬಿಬ್ಬುಗೊಳಿಸು** (ಕ್ರಿ). ಗಾಬರಿಗೊಳಿಸು; ಕಕ್ಕಾಬಿಕ್ಕಿಗೊಳಿಸು: ಜನರ ತಲೆಯೊಳು ಬರೆದ ಬದಿಯ ತಬ್ಬಿಬ್ಬುಗೊಳಿಸುವನು (ಗೀತಗೋ. ೦೯-೧) : ತಬ್ಬಿಬ್ಬುಗೊಳಿಸುತ ತವಕದಿಂ ಪಿಡಿದರು ಹೆಬ್ಬುಲಿ ಕರಡಿ ಹಂದಿಗಳ (ಚಂದ್ರಹಾ. ೧-೬೬). [ ತಬ್ಬಿಬ್ಬುಗೊಳ್ + – ಇಸು$_3$ ]

**ತಬ್ಬಿಬ್ಬುಗೊಳು** 'ತಬ್ಬಿಬ್ಬುಗೊಳ್' ನೋ.

**ತಬ್ಬಿಬ್ಬುಮಾತು** (ನಾ). ತಡಬಡಗೊಂಡ ಮಾತು : ತಬ್ಬಿಬ್ಬುಮಾತು ಗಳಿಂದಾ ತನ್ನ ಸೇವಕರಂ ಕೂಗಿ (ಸಾಗಂಧಿ. ೫೩೮-೦೩).
[ ತಬ್ಬಿಬ್ಬು + ಮಾತು$_1$ ]

**ತಬ್ಬಿಬ್ಬುವೋಗು** (ಕ್ರಿ).=ತಬ್ಬಿಬ್ಬುಗೊಳ್: ತಾಳವೇಳದ ಗತಿಯ ಗಮಕದ ಕೀಲಣೆಯ ಕಾಲಾಟ ವಿಘಟಿಸಿ ಚಾಳಿಯಲಿ ತಬ್ಬಿಬ್ಬುವೋಗು[ಪಾಠಾಂ. ವೆನಿಸು]ತಲಿರ್ದಳಾ ಮಾಯೆ (ಪ್ರಭುಲೀ. ೭-೨೬). [ತಬ್ಬಿಬ್ಬು + ಪೋಗು$_1$]

**ತಬ್ಬಿಸು** (ಕ್ರಿ). ೧. ಅಪ್ಪಿಕೊಳ್ಳುವಂತೆ ಮಾಡು ; ಆಲಿಂಗಿಸುವಂತೆ ಮಾಡು : (ಕ). ೨. ಹುಲ್ಲಿನ ಹೊರೆ, ಸೌದೆ ಮೊದಲಾದುವನ್ನು ತೆಕ್ಕೆಯಲ್ಲಿ ಹಿಡಿಸು : (ಕ). [ ತಬ್ಬು$_1$ (<ತಬ್ಬು$_1$) + – ಇಸು$_3$ ]

**ತಬ್ಬು$_1$** 'ತೆಬ್ಬು$_1$' ನೋ.

**ತಬ್ಬು$_2$** 'ತೆಬ್ಬು$_2$' ನೋ.

**ತಬ್ಬೇತ** 'ತಬೀಯತು' ನೋ.

**ತಮ** (ನಾ). ೧. ಕತ್ತಲೆ; ಅಂಧಕಾರ: "ತಿಮಿರಂ . . . ಅಂಧಕಾರಂ ತಮಂ ತಮಿಸ್ರಮದಕ್ಕುಂ" (ವಸ್ತುಕೋ. ೦೦-೬೩) ; " ಮರ್ಚಣೆ ತಮಂ " (ಕಬ್ಬಿಗ. ೧೧); ತಮದೊಡ್ಡಿರ್ದವೊಲಿರ್ದ ಕಾಮ್ಮುಗಿಲ ತಳ್ತೊಡ್ಡೆಲ್ಲಮಂ . . . ಎಚ್ಚು ತೂಳ್ದಿ (ಆದಿಪು. ೦೩-೭೧) ; ತಮಂ ತಲೆಯನೆತ್ತದಂತು ಮುಸುಳ್ವಂತು ಸೂರ್ಯೇಂದುಗಳ್ ಸಮಸ್ತ ಮಣಿಕೂಟ ಕೋಟಿಗಳ ಕಾಂತಿಗಳ್ ಸಂತತಂ ನಿವಿರ್ಕೆವಡೆದೊಪ್ಪೆ (ಲೀಲಾವ. ೮-೭೦) ; ಪಗಲು ಕಡೆಗಾಣೆ ತಮವೆಂಬ ಗಿಡುಗಂಗಳ್ಕಿ ಖಗದ ಮಱಿಗಳು ಬಿಗುತರ್ಽೀಡಿ (ಭಾವಚಿಂ. ೭-೦೪). ೨. ಮೂರು ಮೂಲ ಗುಣಗಳಲ್ಲಿ ಒಂದು ; ತಮೋಗುಣ: ಸತ್ವಂ ಸಾತ್ವಿಕಗುಣಕೆ . . . ಅಧಿಕೋದ್ಧತ್ವಂ ತಮಕ್ಕೆ ನೆಲೆಯಾಯ್ತುತ್ಕಂತಂ ನೃಪನಿದೇಂ ತ್ರಿಮೂರ್ತ್ಯಾತ್ಮಕನೋ (ಪುಷ್ಪ ಪು. ೩-೬) ; ಹರಿ ದತ್ತಾತ್ರೇಯನಗಜಾವರನೇ ದುರ್ವಾಸನಬ್ಜಜಂ ಚಂದ್ರಂ ಭಾಸುರಚಿತ್ತ ತಮದ್ಯಗೋದ್ಭವರುರುತೇಜಃಪುಂಜರಾದರತ್ರಿಗೆ ಪುತ್ರರ್ (ಎಕ. V, ಬೇಲೂರು. ೯೨-೦೩; 1279) ; "ಕಾಲತುದಿ" (ಜಾತಕಮಂ. ಟಿಪ್ಪಣಿ. ೨೯೩): ಯಮುಳರೊಱಗಿರೆ ಕಂಡು ಮನದಲಿ ತಮವ ಹಿಡಿದನು ನೀರು ಗುಡಿದೀ ಮುಮತೆ ಮಿಗಲಾರ್ಪವನೆನುತಿಳಿದನು ಸರೋವರವ (ಕುವ್ಯಾ. ಅ. ೨೩-೨೨). ೧,೨:ಕಣ್ಮಲರ ಬೆಳ್ಪುಗಳಾಲಿಯ ಕಟ್ಟಿನೊಳ್ ಪೊದಳ್ದೊಡನೊಡ ನೋಡುವಟ್ಟೆನಗೆ . . . ಸತ್ವಮುಂ ತಮಮುಮಂ ಕಡೆಗಣ್ಣೊಳ್ ಕಂಡೆನೋ ಪಳಾ (ಪಂಪಭಾ. ೪-೭೮). ೩. ಕತ್ತಲೆಯನ್ನು ಹರಡುವ ಅಸ್ತ್ರ; ಅಂಧಕಾರಾಸ್ತ್ರ:ಅರಸನೆಚ್ಚಾ ಸರ್ಪಬಾಣವ ಗರುಡಬಾಣದಿ ತಮಕೆ ತರಣಿಯ(ಕಾಶಿರಾ. ೨೨-೩೦). ೪. ರಾಹು : "ಭಾನುರಿವು ಸಿಂಹಿಕಾಪ್ರಿಯಸೂನು ತಮಂ

ರಾಹು" (ವಸು, ಕೋ. ೧೩-೭೫); ತಮ ಶಶಾಂಕನ ನುಂಗಲಾಜಿದೆ ಕ್ರಮದಲಾ ರೋಹಿಣಿಯು ನುಂಗಲು ಭ್ರಮಿಸಿ ಹರಿತಹವೋಲು (ಕೌಶಿರಾ. ೩೭-೧೫). ೫. ಅಜ್ಞಾನ : ಮಾಂದಿಸಿ ತಮಮಂ ದೃಷ್ಟಿಯೊಳೊಂದಿಸಿ ತತ್ತ್ವಾರ್ಥಮಂ ಜಗದ್ವ್ಯವಹಾರಕ್ಕಂದು[ಱಿ] ಮಾಡಿದ ವಿದ್ಯಾನಂದಸ್ವಾಮಿಯ ಮಹೋದಯಂ ಕೇವಳಮೇ (ಪುಷ್ಪಪು. ೧-೨೫); ವೇದ ತಮದಿ ಮುಳುಗಿತ್ತು, ಮನುಜಮನ ತಮದ ಬೀಡು ಆಗಿ (ಅರಳು. ೪೩೪-೧೧). ೬. ಸಲ್ಲದ ಕಾರ್ಯ; ಪಾಪ: ಮಾಡದೊಡೆ ತಾಯ್ಗೆ ಮರಣಂ ಮಾಡಿದೊಡೆನ್ನೊಂದು ಗತಿಗೆ ಕೇ[ಡಿಂ]ಧೇನಂ ಮಾಡುವೆನೆಂದಾಂ ದೋಳಮನಾಡೆ ಮನಂ ತಮಮನಪ್ಪುಕಯ್ಯನೀಳೇಶಂ (ಯಶೋಚ. ೩-೨೦). ೭. ಪಾದಾಗ್ರ; ಕಾಲಿನ ತುಂದಿ. ೮. ರಾಕ್ಷಸ ; ದುಷ್ಟ : ಎಲೆ ಮುರಾರಿ ಮುಕುಂದ ವೇದವ ಕಳಲು ತಮನನು ಸೀಳ್ದೆ (ಕೌಶಿರಾ. ೮೩-೪೭) ; ಘನ ತಮನ ವಧಿಸುತಲಿ ವೇದವ ವನಜಸಂಭವಗಿತ ಮತ್ಸ್ಯನೆ (ಸುದಾಮು. ೩-೧೫).

[ ಸಂ. ]

**ತಮಂಗ** (ನಾ). ವೇದಿಕೆ ; ಜಗಲಿ ; ರಂಗಸ್ಥಳ : 'ತಮಂಗ ಮಂಟಪ' ಪರಾ. [ ಸಂ. ]

**ತಮಂಗಮಂಟಪ** (ನಾ). ರಂಗಮಂಟಪ; ಸಭಾಮಂದಿರ: ಮೂಡಮಟ್ಟಿನ ಕೋಡುಂಗಲ್ ನಡೆದು ಬರ್ಪಂತೆ ಬಂದು ತಮಂಗಮಂಟಪದ ಮತ್ತವಾರಣದ ಕೆಲಕ್ಕೆ ಮತ್ತವಾರಣಮಂ ಸಾರ್ಚಿ ಪೊಡಮಡುತ್ತುಂ (ಅನಂಪು. ೨-೨೯ ವ). [ ತಮಂಗ + ಮಂಟಪ ]

**ತಮಂಧ** (ನಾ). ೧. ಕಗ್ಗತ್ತಲೆ; ದಟ್ಟವಾದ ಕತ್ತಲೆ : ತಮಂಧ ಘನ ಜ್ಯೋತಿ ಕಿಱಿದೆನ್ನಬಹುದೇ (ಬಸವ. ೬) ; ಮುಕುರಕ್ಕೆ ತಮಂಧವೆಂದು ಒರಸಿದವರುಂಟೇ (ವರ್ಧಮಾ. ೪೯-೧೫೩) ; ಹಂಪೆಯ ಮಾದಿರಾಜನ ಜ್ಞಾನದೀಪ್ತಿಕೆ ಕವಿವ ಮಾಯಾತಮಂಧವಳಿವಂತೆನ್ನ ಹೃದಯದೊಳು ಬೆಳಬೆಳಗುಗೆ (ಹರಿಕಾ. ೧-೧೦). ೨. ಅಜ್ಞಾನ : ತಮಂಧ ಗುಜ಼ಿಯಾಗಿ ಲಯವಾಗಿ ಹೋದವರ ಕಂಡೆ ಕಾಮ ಗುಜ಼ಿಯಾಗಿ ಬೆಂದು ಹೋದವರ ಕಂಡೆ (ಅಪಹಂ. ೩೧-೧೩೫) ; ಮೋಹ ಮಾಯಾಧಿಕ ತಮಂಧ ಸಮೂಹಮಂ ಸಂಹರಿಸಿ (ಬಸಪು. ೮-೫೭) ; ಕಡು ಚೆಲುವಿನೂರ್ವಸಿಯ ಸಂಗವ ಬಿಡದೆ ವಿಷಯಾಸಕ್ತನಾಗಿಯೆ . . . . ಕಡುತಮಂಧ[ಪಾಠಾಂ. ಡ]ದೊಳಿರ್ದನು (ನಿಘಾಗ. ೦೦-೩೨೩). [ <ಸಂ. ತಮೋಂಧ ]

**ತಮಂಧಪಟ** (ನಾ). = ತಮಂಧವೃಂದ: ಒಡಲುಗೊಂಡ ತಮಂಧ ಪಟಪೋ ನಡೆವ ನೀಲಾದ್ರಿಗಳೊ . . . ಎನಲೆಡೆವಿಡದೆ ಸಂದಣಿಸಿ ಬೇಡರು ಬಂದರಾಯೆಡೆಗೆ (ಬಸಪು. ೫೮-೪೮). [ ತಮಂಧ + ಪಟ₃ ]

**ತಮಂಧವೃಂದ** (ನಾ). ಕಗ್ಗತ್ತಲೆಯ ಮೊತ್ತ, ಹರಹು: ಇದು ಪರ್ಬಿರ್ದ ತಮಂಧವೃಂದಮಿದು ಕಾಳಿಂದೀ ಪ್ರವಾಹಾಂಬುವಿಂತಿದು . . . ತಾನೆಂಬಂತೆ ಮೆಯ್ಗುಕ್ಕಿನೊಪ್ಪದಿನಂದೇಳ್ತರುತಿರ್ದುದುಗ್ರ ಶಬರಾನೀಕಂ (ಶ್ರೀ ಪು ವಿ. ೨೭-೪೩). [ 'ಮಂಧ + ವೃಂದ ]

**ತಮಂಧಾಕಾರ** (ನಾ). ಶೂನ್ಯ (?) : ಭ್ರೂಮಧ್ಯಸ್ಥಾನದಲ್ಲಿ ಆಜ್ಞಾಚಕ್ರ ಮನವೆಂಬ ಮಹಾಭೂತ ತಮಂಧಾ[ಪಾಠಾಂ. ದಾ]ಕಾರ ದ್ವಿದಳ ಪದ್ಮ ಅಲ್ಲಿಹ ಅಕ್ಷರವೆರಡು (ಅಪಹಂ. ೪೪-೧೮೮). [.? ]

**ತಮಃಪಟ** (ನಾ). = ತಮಂಧಪಟ : ಬೆಸಗೊಳೆ ದಶನದ್ಯುತಿ ದೆಸೆದೆಸೆಯ ತಮಃಪಟಮನುಗಿಪಟಂಗೊಳೆ ದೇವಂ ಬೆಸಸಿದನಾ ಕನ್ನೆಗೆ (ಶಾಂತಿಪು. ೪-೬೫); ಘನಮೋಹತಮಃಪಟಾವೃತಂ ಜಗಮದಟಿಗೊಳ್ ಮುನಿಭಾನು ಭವದ್ವಾಕ್ಪ್ರಭೆಯನಿಶಂ ಬೆಳಗದೊಡೆ ಸತ್ಪ್ರವರ್ತನಮುಂಟೇ (ಚಂದ್ರಪು. ೯-೩೦); [ ಸಂ. (ತಮಸ್ + ಪಟ) ]

**ತಮಃಪಟಲ, ತಮಃಪಟಳ** (ನಾ). ಕತ್ತಲೆಯ ಮೊತ್ತ ; ಅತಿಶಯವಾದ ಅಂಧಕಾರ : ಮಡದಿಯರ ಮುಡಿಮುಡಿಗಳೊಡನೊಡನೊರಸಲೊಡನೊಗೆದು ನೆಗೆವ ಪುದಿಗತ್ತುರಿಯ ಪರಾಗಪಟಲಂ ಪರೆದು ಪರಿಕಲಿಸಿ ಹಸನರುಚಿ ಚಂದ್ರಿಕೆಗಗಿದು ನೆಗೆವ ತಮಃಪಟಲದಂತೆ ಪರಿರಂಜಿಸೆಯುಂ (ರಾಜಶೇ. ೭-೧೭ ವ). **ತಮಃಪಟಳ :** ಬಲವರುತಿರ್ಪ ಭಾನುಗೆ ತಮಃಪಟಳಂ ಸುಗಿದಭ್ರಮೇಖಿಳಾವಳಯಮನಾಸೆವಟ್ಟು ನೆಲಸಿರ್ದ ದೊಪೇಟ್ನೆ ಮಂದರಾಗ್ರದೊಳ್ ನೆಲಸಿದ ನೀಲಚೂಳಿಕೆ (ಮಲ್ಲಿಪು. ೧೨-೯೦).

[ ಸಂ. (ತಮಸ್ + ಪಟಲ) ]

**ತಮಃಪಟಳ** 'ತಮಃಪಟಲ' ನೋ.

**ತಮಃಪ್ರಭೆ** (ನಾ). ಒಂದು ನರಕದ ಹೆಸರು ; ಕತ್ತಲೆ ತುಂಬಿರುವ ನರಕ : ಪದಿನಾಱು ಸಾಸಿರಯೋಜನ ಬಾಹುಲ್ಯದಿಂ ತಮಃಪ್ರಭೆಯೆಂಬಾಱನೆಯ ನರಕಂ (ಸುಕುಮಾ. ೧೧-೪೧ ವ).

[ ಸಂ. ತಮಃಪ್ರಭಾ (ತಮಸ್ + ಪ್ರಭಾ) ]

**ತಮಃಸಂಗತಿ** (ನಾ). ೧. ಕತ್ತಲೆಯ ಒಡನಾಟ,–ಸಹವಾಸ. ೨. ತಮೋಗುಣದ ಸಂಪರ್ಕ. ೧, ೨ : ತಮಃಸಂಗತಿ ರಾತ್ರಿಗಾಱಿಡಿ ಸುಗಂಧೋತ್ಫುಲ್ಲಪುಷ್ಪಕ್ಕುಪಾತ್ರ ತಪೋಹೀನತೆ ಚೈತ್ರದೇಙ್ಗೆ ಮಹದ್ವಂದಿಗ್ರಹಂ ತ್ಯಾಗಿಗವ್ರತಯೋಗಂ ಜಳಪಕ್ಷಿಗಲ್ಲದೆ ಜನಕ್ಕಿಲ್ಲಿಲ್ಲಿ ಬೇಱಿಲ್ಲಿಯುಂ (ಪುಷ್ಪಪು. ೨-೨೯).

[ ಸಂ. (ತಮಸ್ + ಸಂಗತಿ) ]

**ತಮಕ** (ನಾ). ಶ್ವಾಸರೋಗದಲ್ಲಿ ಒಂದು ಬಗೆ : ಈ ಶ್ವಾಸರೋಗವು ಕ್ಷುದ್ರಕವೆಂದೂ, ತಮಕವೆಂದೂ, ಛಿನ್ನವೆಂದೂ, ಮಹಾನೆಂದೂ, ಊರ್ಧ್ವವೆಂದೂ ಐದು ವಿಧವಾಗಿರ್ಪುದು. . . ವಾಯುವು ಊರ್ಧ್ವಮುಖವಾಗಿ ಶ್ಲೇಷ್ಮವನ್ನು ಪ್ರತಿಲೋಮವಾಗಿ ಶಿರಸ್ಸಿಗೈದಿಸಿ ತಮಕವೆಂಬ ಶ್ವಾಸವನ್ನುಂಟುಮಾಡುವುದು (ಸಕವ್ಯ. ೨೨೮). [ ಸಂ. ]

**ತಮಕು** (ನಾ). ಡಂಗುರ ಸಾರುವ ಒಂದು ಚರ್ಮವಾದ್ಯ ; ತಮಟೆ : ಎನಗೊಂದೇ ತೊಣೆ ಬೆಂಗಳೂರು ಬಟಿಕಂ ಬೇಱೊಂದು ನಾಡೆಂದಿಗುಂ ಮನಗಾಣಲ್ಕೆಣೆಯಾಗದೆಂದು ತಮಕಂ ಪೊಯ್ಯುತ್ತೆ ತುಂಕೂರು ತಾಂ ಜನರಿಂದಂ ಪೆಸರಾಂತೆ (ಮೈಸೂಮ. ೩-೦೨). 'ಟಮಂಕು' ಪರಾ.

[ ←ಹಿಂ. ಮರಾ. ಟಮಕೀ./ತಮಿ. ತಮುಕ್ಕು ]

**ತಮಟೆ** 'ತಂಬಟ' ನೋ.

**ತಮಟೆಬಳ್ಳಿ** (ನಾ). ಒಂದು ಬಗೆಯ ಬಳ್ಳಿ : ತಮಟೇಬಳ್ಳಿ, ಶಂಟಿ (ಮೈಔಗ. ೦೬-೨೯೭). [ ತಮಟೆ₀ + ಬಳ್ಳಿ ]

**ತಮಡಿ** 'ತಮ್ಮಡಿ' ನೋ.

**ತಮಣೆ** 'ತಮ್ಮಣೆ' ನೋ.

**ತಮತ** (ಗು). ೧. ಇಚ್ಛಿಸುವ ; ಹಂಬಲಿಸುವ. ೨. ಬಯಸಲ್ಪಟ್ಟ ; ಅಪೇಕ್ಷಿಸಲ್ಪಟ್ಟ. [ ಸಂ. ]

**ತಮತು** 'ತನತ್ತು' ಪರಾ.

**ತಮತ್ತು** 'ತನತ್ತು' ಪರಾ.

**ತಮನ** (ನಾ). ಉಸಿರುಕಟ್ಟುವಿಕೆ. [ ಸಂ. ]

**ತಮನಿಭ** (ನಾ). ಕತ್ತಲೆಯಂತೆ ಇರುವುದು : ಮಲಯದ ಅನಿಲನು ತಾನಹನನಲನು ಮಣಿಭವನವು ತಮನಿಭವು ಕನ್ನಡಿಸುವ ನವಕವಿಯುವ ನಾವನು ವಿರಹಿಣಿಯರ ಬವಣೆಯನು (ಇಂದಾಹ. ೨೦೦-೮೭).

[ ಸಂ. (ತಮ + ನಿಭ) ]

**ತಮಪ್ರಭೆ** (ನಾ). = ತಮಃಪ್ರಭೆ : ಅಲ್ಲಿಂ ಕೆಳಗೇಕರಜ್ಜು ಪ್ರಮಾಣಾಂತರದೊಳಮಘವಿಯೆಂಬ ಪೆಸರ ತಮಪ್ರಭೆಯೆಂಬಾಱನೆಯ ನರಕವಿರ್ದುದು (ಅಜಿಪು. ೧೧-೬ ವ) ; ಅಧೋಲೋಕದಲ್ಲಿ (೧) ರತ್ನಪ್ರಭೆ, . . . (೬) ತಮಪ್ರಭೆ, (೭) ಮಹಾತಮಪ್ರಭೆ ಎಂದು ಏಳು ನರಕಗಳು ಇರುತ್ತವೆ (ಜೈನಪ. ೪೪೭). [ <ಸಂ. ತಮಃಪ್ರಭಾ ]

**ತಮರ್**, ತವರ್, ತವರು$_1$, ತವುರು, ತೌರು (ನಾ). ೧. ತನ್ನವರು ; ಬಾಂಧವರು ; ಸ್ವಕೀಯರು : (+). ೨. ಜನ್ಮಸ್ಥಳ ; ಹುಟ್ಟೂರು. 'ತಮರೂರ್' ಪರಾ. **ತವರ್** : ೧. ಜನಪಿತೃಗಳ್ ಜನತನಯಂ ಜಿನೇಂದ್ರ ತವರೆಲ್ಲಮೊಡನೆ ತಳರಲೊಡಂ ಬಿಮ್ಮನೆಯಾಗಿ ಮದುವೆಗಳುಪಿದ ಮನೆಯಂದದಿನಿರ್ದುದಂದಯೋಧ್ಯಾನಗರಂ (ಅಜಿಪು. ೬-೯೦) ; ತಾಯೇ ತವರೇ ತ್ರಿಭುವನದಾಯುವೆ ಜಗದುಸಿರೆ ಜಗದ ಕಣ್ಣೆ ಜಗನ್ನಿರ್ಮಾಯನಿಧಿಯೇ ಸುಧಿಯೇ ಕಾಯೆನ್ನಂ ಕರುಣದಿಂದೆ ಸಲಹೆನುತಿರ್ದಂ (ಗಿರಿಕ. ೪ ೪೮). ೩. ನೆಲೆ; ವಾಸಸ್ಥಾನ; ಆಶ್ರಯಸ್ಥಾನ : ಅಱಿವಿನ ತವರೆನೆ ಧರ್ಮದ ದಗುಂತಿಯೆನೆ ನೆಗಟ್ದಳ್ ಭೂಭುವನಕ್ಕೆ ಸಾವಿಯಬ್ಬೆಗವುವನಿಜೆಗಂ ದೊರೆಯೆನಲ್ಕೆ ಪೆಣ್ದರುಮೊಳರೇ (ಎಕ. II, ೦೩೯-೬ ; ಸು. 950) ; ಇದು ಪೆಂಪಿಂಗೆ ತವರ್ಸುಖಕ್ಕೆ ಕಣಿ ಸೌಖ್ಯಕ್ಕಾಗರಂ (ಸುಕುಮಾ. ೦-೬೯) ; ದಯಾನದಿಗುತ್ಪತ್ತಿಯು ಬೆಟ್ಟು ತತ್ವದ ತವರ್ . . . ಎನೆ ಜನಂ ಭೂಭಾಗದೊಳ್ಪೆಂಪುವೆತ್ತುದು (ಸೌಇಇ. XI-I, ೧೧೧-೦೮ ; 1071) ; ಠಕ್ಕಿನ ಪಟಕ್ಕೆ ಕಾಳಿಯ ತವರ್ ಕವಡಿಂಗೆಡೆ ಸೋರ್ಕಿನಿರ್ಕೆ (ಚಿಕವಿ. ೬-೭೪). ೪. ಹುಟ್ಟಿದ ಮನೆ; ತಾಯಿ-ತಂದೆಗಳ ಮನೆ : ತಾಯ್ತಂದೆ ಬಂಧು ಬಳಗವೆ ಕುಲವೆ ಬಲವೆ ಛಲವೆ ತವರೆ ಕಣ್ಣೆ ಗತಿಯು ಮತಿಯೆ . . . ಕಾವುದು ಕಾವು[ದೆ]ಂಬೆ (ಬಸರ. ೨-೩೪). **ತವರು$_1$** : ೧. ತಂದೇ ತವರೇ ಹೊಣೆಯೇ ತೊಣೆಯೇ (ಉದ್ಭದೇ. ೩-೨೮). ೨. ಈತನ ತವರು ಹಂಪಿಯ ಬಳಿಯ ನಿಂಬಾಪುರ (ಭಾರದ. ೨೮೬). ೩. ದಯದ ಸಿರಿಯುಂ ದಯದ ತವರುಂ ದಯದೊಱತೆಯುಂ . . . ಎಂದೆನಿಪ (ಸಾನಂಚ. ೮-೬೭); ರಸಪೂರ ಭಾವದ ತವರೆನಿಸಿ ತ್ರಿಜಗದ ಸಭೆಯು ಬೆಱಗಾಗೆ ನರ್ತಿಸಿದ (ಸಾಳ್ವಭಾ. ೩೩-೯೯) ; ಭಾರತ ಖಂಡದವನಿಯೊಪ್ಪುತಿಹುದು ಸಕಲ ಸುಖಭೋಗ ಮೋಕ್ಷಕ್ಕೆ ತಾಂ ತವರೆನಿಸುತ (ಗುರುಚಾ. ೦-೦೪) ; ಆಸೆಯ ರಂಗವೊ, ಈ ಭುವನವು ಆಶಯಗಳ ಹಿರಿ ತವರೊ (ವಿಸೀಗೀ. ೮-೨) ; ಎಲ್ಲ ವಿದ್ಯೆಯ ತವರು ಆಕೆ (ಸಮುಜೀ. ೨೦೯). ೪. ತವರು ಪೊಕ್ಕಿಲು ಮಾಗಿ ಮದ್ಗೃಹವಿವಳ್ಗೀ ಸಂತಸಕ್ಕಿಲ್ಲ (ಅರ್ಧನೀ. ೬-೦೯) ; ಆ ಸತಿ ತನ್ನ ತವರಿನಲಿ ಇರಲು ಬಹುದಿನ ಸವೆಯೆ (ಕುಮ್ಯಾಅ. ೬೮೩. ೨೫-೪೫) ; ಮಾವನ ಮಗಳು ಮುನಿದು ತವರಿಗೆ ಹೋಗ್ಯಾಳೊ (ಗಾಳಿಗು. ೦೬) ; ಹೊಸ ಹೆಂಡತಿಯನ್ನು ಮೊದಲ ಬಾರಿ ತವರಿಗೆ ಕಳುಹಿಸಿದ ಗಂಡನಂತೆ . . . ತಪಸ್ಸು ಮಾಡಿದ (ಹುಚ್ಚುಹು. ೧೭). 'ತವರುಮನೆ' ಪರಾ. **ತವುರು** : ೩. ಹಿಂದೂ ಸಂಸ್ಕೃತಿಯ ತವುರಾಗಿದ್ದ ವಿಜಯನಗರದ ಕಾಲದಲ್ಲಿ ನಾಟ್ಯಕಲೆಯು . . . ಮಾನ್ಯವಾಗಿತ್ತು (ಭಾರದ. ೫೫೧). ೪. ವರಕುಮಾರರು ನಮಗೆ ಜನಿಸಿದ ಹರುಷವಾರ್ತೆಯ ನಮ್ಮ ತವು[ಪಾಠಾಂ. ಶೌ]ರಿಗೆ ನಿರುತದಲಿ ಹೇಳೆನಲು (ಸಂಭಪ. ೦೫-೯೩) ; ಅಟ್ಟಕೆ ಏಣ್ಯಾಸ ಬೆಟ್ಟಕೆ ಬಿದಿರಾಸೆ ಹೆಣ್ಣುಮಕ್ಕಳಿಗೆ ತವುರಾಸೆ (ನಾಪದ. ೬೮). **ತೌರು** : ೧. ಅತ್ತಿಗೆ ತೌರಲ್ಲ ಹಿತ್ಲಾಳೆ ನಗವಲ್ಲ (ಇಂಜಾಪ. ೦೬೦-೯೩) ; ಹೋಗೋಳು ಹೋಗ್ತೀಯ ಹೊನ್ನೋಲೆ ಅತಿಗಮ್ಮ ತೌರೊಳ್ಳೇದೆಂದು ಇರಬೇಡ (ನಾಪದ. ೬೦). ೩. ಭಾಗೀರಥೀಪತನ ಗತಿಗೆ ತೌರಿದೆಯೆನುತ . . . ನೋಡುತ್ತ ಬೆರಗಿನಿಂ ಕುಳ್ಳಿರ್ದನು (ವಂಕಾರಾ. ೫-೨-೩). ೪. ಹೆಣ್ಣುಮಕ್ಕಳನ್ನು ತೌರಿಗೆ ಕರೆದುಕೊಂಡು ಬಂದು (ಮುಗಮೂಂ. ೧) ; ಹೆಂಡತಿಯನ್ನು ಒಮ್ಮೆ ತೌರಿಗೆ ಕಳಿಸಿದವರು . . . ಹಿಂದೆ ಕರೆದುಕೊಂಡು ಬರಲೇ ಇಲ್ಲ (ರಕ್ತರೂ. ೫೩).

**ತವರುಮಾಡಿಸು** = ತವರುಮನೆಯ ಉಪಚಾರವನ್ನು ಮಾಡಿಸು : ಅವರವರ ಪತಿಕುಲದಿಂದ ಒಟ್ಟಿಗೆ ಕರತಂದು ಅವರಿಗೆ ತವರುಮಾಡಿಸುವಲ್ಲಿ ಆತನ ಮನಸ್ಸು ಸುಖಾಸುಖಗಳ ನಡುವೆ ಆಂದೋಲಿಸುವಂತೆ (ಕನ್ನಇ. ೩).

[ದೇ.೩ ತಮಿ. ಮಲ. ತವರ್; ತೆಲು. ತವುರು]

**ತಮರೂರ್**, ತವರೂರು, ತೌರೂರು (ನಾ). ೧. (ಹೆಣ್ಣಿನ) ಹುಟ್ಟಿದ ಊರು ; ಜನ್ಮಸ್ಥಳ : ತಮರೂರ್ಗೆಪೋಪ ಕುಲಜಾಂಗನೆಯರ್ ಕಮಲೋದರಂಗೆ ಪಡೆದರ್ ಮುದಮಂ (ಕಾವ್ಯಾವ. ೬೨). **ತವರೂರು** : ೧. ಸುಲೋಚನೆಯಾವುದ್ದಾಮ ನದಿಯು ಹೆಮ್ಮಡುವಂ ಹೊಕ್ಕಳ್ ತಾಮರಸನಿವಾಸಿನಿ ತವರೂರಂ ತವಕದಿ ಹುಗುವಂತೆ (ಜಯುಕಾ. ೯-೨೯) ; ಶ್ರೀಕಾಂತಂಗೆ ತವರೂರೆನಿಸಿ ಸಂತಸವಡೆದುದಾ ಸೌರಾಷ್ಟ್ರ ಸಕಲದಿಗಂತಕ್ಕೆ ಸತ್ಕೀರ್ತಿವಡೆದು (ಮೋಹಚ. ೨-೧೫) ; ತವರೂರ ಮಱೆಯಿಸಿ ನಿದ್ರೆಯ ತೊಱೆಯಿಸಿ ಸವಿಗಳನಱಿಯಿಸು (ಭರಚ. ೬-೩೯) ; ಅವನ ತವರೂರಿನವರಾದರೂ ಅವನನ್ನು ಒಪ್ಪದೆ ಒಲ್ಲದೆ ಹೀಗಳೆದರು (ಗೊರೂ.ಥಾ. V. ಮುನ್ನುಡಿ) ; ತವರೂರ ದಾರೀಲಿ ಕಲ್ಲಿಲ್ಲ ಮುಳ್ಳಿಲ್ಲ (ಹಳ್ಳಿಯ. ೯೧). ೨. ಆಶ್ರಯಸ್ಥಾನ; ನೆಲೆ: ಕಾಮ ಕ್ರೋಧ ದ್ವೇಷ ಮೋಹಗಳ ತವರೂರು ರಾಜಕೀಯವೆಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು (ಶ್ರೀರಾಯ. ೨೭೪). **ತೌರೂರು** : ೧. ಹೆಣ್ಣಿಗೆ ತೌರೂರು ರಸಬಾಳೆಹಣ್ಣಂತೆ (ಜಗೀತ. ೩೦) ; ತೊಟ್ಟಿಲ ಹೊತ್ಕೊಂಡು ತವರುಬಣ್ಣ ಉಟ್ಕೊಂಡು ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತೌರೂರ ತಿಟ್ಹತ್ತಿ ನಿಂದು ನೋಡ್ಯಾಳೋ (ಗರತಿ. ೫೬). ೨. ಇಂದಿನ ಕಳಸಾಪುರವೆಂದರೆ . . . ಕೃತ್ರಿಮ ಮೋಸಗಳ ತೌರೂರು (ಕಳಹು. ೦೦೩). [ತಮರ್+ಊರ್]

**ತಮರ್ಮನೆ**, ತವರುಮನೆ, ತವರ್ಮನೆ, ತೌರುಮನೆ, ತೌರ್ಮನೆ (ನಾ). ೧. (ಹೆಣ್ಣಿನ) ಹುಟ್ಟಿದ ಮನೆ ; ತಂದೆತಾಯಿಯರ ಮನೆ : ಗಟಪುವೆಳಗಿಳಿಯ ಬಳಗಕ್ಕೆ ತಮ[ಪಾಠಾಂ. ವ]ರ್ಮನೆಯಾದಿಮ್ಮಾವಿನ ಪೊದಱೊಳಂ (ಕಬ್ಬಿಕಾ. ೩೦). **ತವರುಮನೆ** : ೧. ನಿನ್ನ ದೆಸೆಯಿಂ ಮಿಗೆ ತವರುಮನೆಗಾಯ್ತು ಕಡುದುಃಖಗಳು (ಸಾಳ್ವಭಾ. ೩೧-೩೬) ; ತನ್ನ ತವರುಮನೆಗೆಲ್ಲ ತಾನೊಡತಿಯೆಂಬುನ್ನತಿವಡೆವುದಱಿಂದ ತನ್ನಿನಿಯನಿಗೂಳಿಗದವಳಪ್ಪುದು ಸಂಪನ್ನತೆಯೆಂದು ಬಗೆವುದು (ಹರಿಬ. ೩-೩೫) ; ತವರು ಮನೆಯಲ್ಲಿ ಹೆಂಡತಿಯನ್ನು ಬಿಟ್ಟು ಬಂದು ನಾರಾಯಣ ಎಲ್ಲಿಗೋ ಓಡಿಹೋದನು (ತ್ಯಾಗಮ. ೨೦೯) ; ತಾಯಿ ಇದ್ದರೆ ತವರುಮನೆ, ನೀರಿದ್ದರೆ ಕೆರೆ ಭಾವಿ (ಗಾದೆ). ೨. ನೆಲೆ; ಆಕರ; ಆಶ್ರಯ : ಸವಿನುಡಿಯ ದುರ್ವ್ಯಸನಿ ತೊಂಡಿನ ತವರುಮನೆ ಬಾಹಿರರಿಗಾಶ್ರಯಭವನ (ಕುಮ್ಯಾಸ. ೧೦-೧೨) ; ನೀಲಗಿರಿ ಹಲವು ದ್ರಾವಿಡಭಾಷೆ ಉಪಭಾಷೆಗಳ ತವರುಮನೆಯಾಗಿದೆ (ದ್ರಾವಿವಿ. ೪೦೧). **ತವರ್ಮನೆ**: ೧. ಮದಾಳಿಯುಂ ನಂದನವನದಿಂ ಸರೋಜವನದಿಂದಮಗಲ್ದ ಮದಾಳಿಯಂತೆ ಮಱುಗಿ ತನ್ನ ತವರ್ಮನೆಯಲ್ಲಿರ್ಪುದುಂ (ಸುಕುಮಾ. ೬-೩೨ ವ) ; ತವರ್ಮನೆಯವರಂ ಕಂಡೊಡೆ ರಾಗಿಸಿ ಕರೆದೊಡನುಂಡುಂ ಬೇಡಿದುದನೀವರಱಗುಲಿವೆಂಡಿರ್ (ಸಮುಪ. ೫-೯೭) ; ಎನ್ನ ತವರ್ಮನೆ ಗೆಂಟಾದುದಕ್ಕುಬ್ಬೆಗಂಬಟ್ಟಿರ್ದಂ (ಬಂಹರಿ. ೯-೩೦ ವ) ; ಲಕ್ಷ್ಮಿಯ ತವರ್ಮನೆ ತಿಂಗಳ ಪೆತ್ತ ತಂದೆ . . . ವಲಂ ಮಹಾರ್ಣವಂ (ಕಾವ್ಯಸಾ. ೬೯). ೨. ಪಂಡಿತಮಂಡಳಿಗಂ ಕವಿಮಂಡಳಿಗಂ ತನ್ನ ಮನೆ ತವರ್ಮನೆ (ಅಜಿಪು. ೦-೨೮) ; ಸಕಲಗುಣಾಢ್ಯೆ ಸತ್ಯದ ತವರ್ಮನೆ . . . ನಿರ್ಮಳ ಸಚ್ಚರಿತ್ರೆ (ಧರ್ಮಾಮೃ. ೮-೧೫೭) ; ಸುರತರು ಸುಗಂಧದ ತವರ್ಮನೆಯಿದೆಂದೆನಿಪ ಪೂದೋಟಮಂ ದೂರದಿಂ ಕಂಡು ಸೋಂಪೇಱ (ಪುಷ್ಪರ.ಹ. ೫೨೨-೨೨) ; ಕಡು ಚೆಲುವಿನ ತವರ್ಮನೆ ಇದು (ಸಾಳ್ವಭಾ. ೩೦-೩೦) ; ಅವನಾಶ್ರಮವು ವಿದ್ಯೆಯ ತವರ್ಮನೆಯಾಗಿತ್ತು (ಮಹಿಸ. ೩೦). **ತೌರುಮನೆ** : ೧. ತೌರುಮನೆಗೆಯ್ದಿರ್ದ ಬಹುದಿನ ನಾರಿ ರನ್ನೆ ಸುಭದ್ರೆ (ಜಿನಭಾ. ೬೨-೪೭) ; ಎಂಥ ಮೋಹದ ಮಗಳಾದರೂ ತೌರುಮನೆಯನ್ನು ಒಂದು ದಿನ ಬಿಡಲೇಬೇಕು (ಕಾವ್ಯಸ. ೪೭) ; ಸಕಲ ಸೌಭಾಗ್ಯಕ್ಕೂ ತೌರುಮನೆಯಾದ ಲಕ್ಷ್ಮಿಯು ತಾನು ಉದ್ಧಾರವಾಗಬೇಕೆಂದು ನಿನ್ನ ಕೈ ಹಿಡಿದು ನಿನ್ನ ಮನೆಯಲ್ಲಿ ನೆಲೆಯಾಗಿದ್ದಾಳೆ (ನೀತಿಚಂ.

VIII, ೨೯). **ತೌರ್ಮನೆ:** ೧. ಅವರ್ಗೆ ತಾಯ್ಮನೆ ಅವರ್ಗೆ ತೌರ್ವನೆ [ಪಾಠಾಂ. ತವರ್ಮನೆ]ಯುವರ್ಗೆ ಹೊಕ್ಕಿಲಮನೆಯುು ಮೇಳುಂಗವಿಯು ಬೆಳಗುವನೆಯ್ದೆ ರಕ್ಷಿಪ್ಪರಮನೆಯುು ತಾನೆ (ಶಾನಂಚ. ೯-೧೨). ೨. ಮನಸಿಜ ನಂಕದ ಕಣವಿಂಪಿನ . . . ಚದುರ ತೌರ್ವನೆಯೆನಿಸಿ ವಿರಾಜಿಕುಂ ಸುವೇಶ್ಯಾವಾಟಂ (ಉದ್ಭಟ. ೦-೭೯) ; ಅಂತಃಪುರವು ಲಕ್ಷ್ಮಿಗೆ ತೌರ್ಮನೆ ಯಾಗಿಯಿರುತ್ತಿರಲು (ಸೌಗಂಧಿ. ೩೦-೧೧).

[ ತವರ್ + ಮನೆ ]

**ತಮವಿಡಿ** (ಕ್ರಿ). ೧. ಕತ್ತಲೆ ಕವಿ; ಅಂಧಕಾರ ಆವರಿಸು: (+). ೨. ಮಂಕು ಕವಿ ; ಅಜ್ಞಾನ ಆವರಿಸು : ಕುಮತಿಗಳು ನಾಯ್ಗಾಲನುಂಡರೊ ತಮವಿಡಿದು ಮರುಳ್ಗೊಂಡರೊ (ಬಸವು. ೫೯-೩೦). [ ತಮ + ಪಿಡಿ₁ ]

**ತಮಸಾನದಿ** (ನಾ). ಒಂದು ನದಿಯ ಹೆಸರು : ಪುಣ್ಯಾಶ್ರಮವೊಂದು ತಮಸಾನದಿಯ ತೀರದೊಳ್ ಪೆಸರ್ವಡೆದಿರ್ಪುದು (ಅದ್ಭುತ. ೦-೬) ; ಅಯೋಧ್ಯೆಗೆ ಅನತಿದೂರದಲ್ಲಿ ಹರಿಯುವ ತಮಸಾನದಿಯ ತೀರದಲ್ಲೇ ಅವನ ಪುಣ್ಯಾಶ್ರಮವು . . . ಇದ್ದಿರಬೇಕು (ಭಾರದ. ೮೭)

[ ಸಂ. ತಮಸಾನದೀ (ತಮಸಾ + ನದೀ) ]

**ತಮಸಿ** (ನಾ). ಒಂದು ನರಕದ ಹೆಸರು : ಪಂಕಪ್ರಭೆಯೊಳ್ ಆರಾ ಮಾರಾ ತಾರಾ ಚರ್ಚಾ ತಮಸೀ ಘಾಡಾ . . . ಪ್ರಕೀರ್ಣಕವಿಕಲ್ಪದಿಂ ದಶಲಕ್ಷಬಿಲಂಗಳಪ್ಪುವು (ಶತ್ರ್ಯ. ಪ್ರ. ೧೨೦). [ ? ]

**ತಮಸೀಲು** (ನಾ). = ತಪಶೀಲು : ಟೀಪುಸುಲ್ತಾನರ ಶೀಮೆ ಸರಹದ್ದು ತಮ್ಮ ಶೀಮೆ ಸರಹದ್ದು ಸಹ ನೋಡಿ ತಮಸೀಲಲ್ಲುು ಬರಕೊಂಬ ಬಗ್ಗೆ ಈ ಇಂಜನೇರುಸಾಹೇಬರು ಮಹಾಬುದ್ಧಿಶಾಲಿಯರಾಗಿ ಇದ್ದಾರೆ (ರಾಜೇಂದ್ರ. ೫೦). [ P ಇದು ತಪಶೀಲು ಎಂಬುದರ ಅಪಲಿಖಿತ ]

**ತಮಸೂಕು** (ನಾ). ಕರಾರುಪತ್ರ; ಲಿಖಿತ ದಾಖಲೆ : (+).

[ ←ಅರ. ಹಿಂ. ತಮಸ್ಸುಕ್; ಮರಾ. ತಮಸೂಕ್, ತಮಾಸೂಕ್ ]

**ತಮಸ್ತಮ** (ನಾ). ಗಾಢವಾದ ಕತ್ತಲೆ ; ಘೋರಾಂಧಕಾರ : ಚಂಡ ವಿರೋಧಿಸಾಧನ ತಮಸ್ತಮ[ಪಾಠಾಂ. ಶ್ಚಯ]ಮೋಡೆ ವಿಶಿಷ್ಟಪದ್ಮಿನೀ ಷಂಡಮರಲ್ದು ರಾಗದಿನೊಲಿಲ್ದಿರೆ . . . ವಿ ಕ್ಕ ಸ ವ ಪ್ರಚಂಡ ಮಾರ್ತಾಂಡನಲರ್ಚುಗೆನ್ನ ಹೃದಯಾಂಬುಜಮಂ ನಿಜವಾಙ್ಮರೀಚಿಯಿಂ (ಶಂಖಭಾ. ೦-೩) ; ಆ ಚರಿಕೆ ಗೃಧ್ರಪಿಂಛಮಹಾಚಾರ್ಯಾಂಘ್ರಿನಖಭಾನು ರುಚಿಯರ್ಹದ್ಬಲ್ಯಾಚಾರ್ಯ ಪದನಖರ ಶಶಿರೋಚಿ ಮದೇನಸ್ತಮಸ್ತ ಮೋನಿರಸನಮಂ (ಚಂದ್ರಪ್ರ. ೦-೦೮).

[ ಸಂ. (ತಮಸ್ + ತಮಸ್) ]

**ತಮಸ್ತೋಮ** (ನಾ). ಕತ್ತಲೆಯ ಮೊತ್ತ,–ಹೆರೆಹು : ತಮಸ್ತೋಮ ಚೈತ್ರಾದೀಪಂಗಳ್ . . . ಮಹದಮೃತನಿಧಿಸ್ಫೂರ್ತಿಗಳ್ ಪುಷ್ಪದಂತ ಶ್ರೀಪಾದಂಗಳ್ (ಪುಷ್ಪಪು. ೦-೧). [ ಸಂ. (ತಮಸ್ + ಸ್ತೋಮ) ]

**ತಮಸ್ವಿನಿ** (ನಾ). ಇರುಳು ; ರಾತ್ರಿ: " ತಮಿಸ್ರಾ, ತಮಿಸ್ರಾ, (ಕಥಿತಾ), ತಮಸ್ವಿನೀ, ವಿಭಾವರೀ . . . ರಾತ್ರಿ :– ಈ ೧೯ ಇರುಳಿನ ಪೆಸರ್ " (ಹಲಾಯು. ೦೮-೧೦೭); ವಾರಕಾಂತೆಯರ ಭೂಷಣಕಾಂತಿಯ ಕೆಂಬಿಸಿಲ್ಗಳಾ ವಗಮೆಸೆಯುತ್ತಿರಲ್ ವಿಷಮಬಾಣನ ತೀವ್ರ ಶರಾನಳಾರ್ಚಿಗಳ್ ತಗುಳ್ದು ವೆನಲ್ಕೆ ತೋರ್ಪುವು ತಮಸ್ವಿನಿಗಳ್ ವಿಧುವಿಪ್ರಲಂಭದಿಂ (ಕಾದಂಪೂ. ೩೦೨). [ ಸಂ. ತಮಸ್ವಿನೀ ]

**ತಮಸ್ಸಂಹೃತಿ** (ನಾ). ೧. ಕತ್ತಲೆಯನ್ನು ಹೋಗಲಾಡಿಸುವುದು. ೨. ಅಜ್ಞಾನ ನಿವಾರಣೆ. ೧, ೨ : ಜನಕನೊಳನುರೂಪತೆಯಿಂ ತನೂಭವಂ ತಾಳ್ದಿದಂ ತಮಸ್ಸಂಹೃತಿಯಿಂ ಘನತೇಜದಿನುನ್ನತಿಯಿಂ ಕನತ್ಪ್ರದೀಪೋ ಪಜಾತದೀಪಾಕೃತಿಯಿಂ (ಚಂದ್ರಪ್ರ. ೪-೯).

[ ಸಂ. (ತಮಸ್ + ಸಂಹೃತಿ) ]

**ತಮಸ್ಸು** (ನಾ). ೧. ಕತ್ತಲೆ; ಅಂಧಕಾರ. ೨. ರಾಹು. ೩. ಅವಿದ್ಯೆ ; ಅಜ್ಞಾನ : ತಮಸ್ಸು ಮಾಯೆ ಮೋಹ ಅವಿದ್ಯೆ ಅನೃತಾತ್ಮಿಕೆಯೆಂಬವೇ ಮಾಯಾಪಂಚಕಂ (ವಿವೇಕ. ೨೮) ; ಜ್ಞಾನದ ಜ್ಯೋತಿ ಜಗದ ತಮಸ್ಸಿಗೆ ಹಿಡಿದಂತಿದೆ ದೀಪ (ಅರಳು. ೩೯೧-೧೦). ೪. ಗುಣತ್ರಯಗಳಲ್ಲಿ ಒಂದು; ತಮೋಗುಣ: ತಮಸ್ಸೆಂದರೆ ನಿದ್ರೆ, ಆಲಸ್ಯ,ಮೋಹ,ಮೊದಲಾದುವುಗಳಿಗೆ ಹೇತುವಾಗಿರುವ ಗುಣ (ಹಿಂದಸಾ. ೨೩೭). ೫. ಪಾಪ.

[ ಸಂ. ತಮಸ್ ]

**ತಮಸ್ಸ್ವಭಾವ**(ನಾ). ತಾಮಸ ಸ್ವಭಾವ: ಪಡೆಯಬೀಯಲಾದೊಡ[ರಿ]ಯುಂ ಕಿಡಿಸುಗುಮಂತಕಳಂಕ ನೃಪಮಂಡಲಮಂ ತಡೆಯದೆ ತಮಸ್ಸ್ವಭಾವಂ ಕಿಡಿಸುವವೋಲಬೀದು ರಾಹು ಶಶಿಮಂಡಲಮಂ (ಕವಿರಾ. ೩-೧೪೭).

[ ಸಂ. (ತಮಸ್ + ಸ್ವಭಾವ) ]

**ತಮಟ್** (?). (?) : ತೆಮಟ್, ಎಸಟ್, ತಮಟ್, ಪಸಟ್, ತುಟಿಲ್ (ಶಬ್ದಾನು. ೦೪೦ ವ್ಯಾಖ್ಯಾ). [ ? ]

**ತಮಾಂ, ತಮಾಮು** (ಗು). ಎಲ್ಲ ; ಸಕಲ ; ಪೂರ್ತಿ ; ಸಂಪೂರ್ಣ : ಈ ಪ್ರಕಾರವೇ . . . ತಮಾಂ ಗ್ರಾಮ ಮುನಸೂಫರುಗಳು ನಡೆದುಕೊಳ್ಳ ಬೇಕು (ಗ್ರಾಮಾಕ. ೨) ; ತಮಾಂ ದಂಡು ಉರುಳಿಹೋಯಿತು (ಕರ್ಣಾಸಂ. ೨೩). **ತಮಾಮು:** ಈ ವಿಷಯದಲಿ ಕುಂಪಣೀ ತಮಾಮು ಇಂಗ್ರೀಜರು ಬರೆದು ಕಳಿಸಿರುವದೇನೆಂದರೆ (ಚಾಮರಾಜ ೨೨೪) ; ಲಡಾಯದ ಕೈಫಿಯತ್ತು ತಮಾಮು ಬರೆಯುವ ಬಗ್ಗೆ ನಾವು ವಕೀಲರಾಗಿ ದೊರೆಗಳ ಬಳಿಯ ಇದ್ದೇವು (ರಾಜೇಂದ್ರ. ೧೧೯). [ ←ಅರ. ಹಿಂ. ತಮಾಮ್ ]

**ತಮಾಮು** 'ತಮಾಂ' ನೋ.

**ತಮಾಲ, ತಮಾಳ** (ನಾ). ೧. ಒಂದು ಬಗೆಯ ಮರ ; ಹೊಂಗೆ: ಕಱಂಗಿ ಕತ್ತಲಿಪ ತಮಾಲಪಾದಪದ ಪಲ್ಲವಮಂ (ಕಾದಂಪೂ. ೭೯೭) : ತುಱುಗಿದೆಲೆವಸೆಯೊಳೊಲೆದಾಡುವ ತಮಾಲಂಗಳಿಂ (ಹರಿಕಾ. ೩-೩೩) ; ಮಧುಲಕ್ಷ್ಮಿಯ ಕೇಶಪಾಶಮೆನೆ ಮಡಲ್ತು ಕಱಂಗಿ ಕಟ್ಟಲಿಸಿದ ತಮಾಲದಿಂ (ರಾಮಾಶ್ವ. ೫೩-೦೮) ; ವಸಂತದ ಮುನ್ಸೂಚನೆಯನ್ನು ಎಲ್ಲಕ್ಕೂ ಮೊದಲಿಗೆ ಹೊತ್ತು ತಂದ ತಮಾಲವನ್ನು ನೋಡಿದಾಗ(ಉಪಸೂ. ೦೫೭). ೨. ಹಣೆಯ ಮೇಲೆ ಇಟ್ಟುಕೊಳ್ಳುವ ಬೊಟ್ಟು ; ತಿಲಕ : (+). ೩. ಕತ್ತಲೆ: ಗಿರಿಜಾಲೋಲ ಭವರಜದೂರ ಪಾಪತಮಾಲಭಾಸ್ಕರ (ಶಂಕರಾ. ೪-೦). **ತಮಾಳ :** ೧. " ಕಾಳಸ್ಕಂಧಂ ತಮಾಳಮೆನೆ ತಾಪಿಚ್ಛಂ " (ವಸ್ತುಕೋ. ೩೪-೮) ; ಸರಳ ತಮಾಳ ತಾಳ ಹರಿಚಂದನ ನಂದನಭೂಜರಾಜಿಯಿಂ ಸುರಿವಲರೋಳಿ ತದ್ವನಲತಾಂಗಿಯ ಸೂಸುವ ಸೇಸೆಯಾಯ್ತು (ಪಂಪಭಾ. ೫-೫೨) ; ತಿಳಿಗೊಳದ ತಡಿಯ ತಮಾಳದ ತಣ್ಣೆಲಲ ಪದ್ಮರಾಗದ ಪಾಸಱೆ ಯ ಮೇಲೆ ನಿಂದು (ಮಲ್ಲಿಪು. ೩-೦೦೫) : ಒಂದು ಭಯಂಕರಭಲ್ಲಮುಲ್ಲ ಸದ್ಭಾಳತಮಾಳಗುಲ್ಮದೊಳಗಿರ್ಪುದುಂ (ಪುಷ್ಪಪು. ೫-೭೨).

[ ಸಂ. ]

**ತಮಾಲಪತ್ರ, ತಮಾಳಪತ್ರ** (ನಾ). ೧. ಹೊಂಗೆಯ ಎಲೆ: " ಕಾಲಸ್ಕಂಧ–ಅಕ್ಷಿ, ತುಂಬರು, ತಮಾಲಪತ್ರ, ಪರಂಬೆ, ಪತ್ರಕ? " (ಓಷಧಿ. ೩೦). ೨. = ತಮಾಲ ೨ : " ತಿಳಕಂ ತಮಾಲಪತ್ರಂ " (ವಸ್ತುಕೋ. ೭೭-೯). ೧, ೨ : ಆ ಮಹಾವನಂ . . . ಕಾಂತಾಕದಂಬದಂತೆ ಲೋಹಿತ ಚಂದನಾಲಂಕೃತಮುಂ ತಮಾಲಪತ್ರ ಶೋಭಿತಮುಂ (ಚಂದ್ರಪ್ರ. ೫-೫೨ ವ). **ತಮಾಳಪತ್ರ :** ೧. ತಮಾಳಪತ್ರದ ತಮಾಳಪತ್ರಮುಮಂ ಹೊನ್ನೆಯ ಚಿನ್ನಪೂವುಮಂ . . . ಮನೋಹರಮೆನೆ ಸಮೆದು ತಮತಮಗೆ ಪಸದನಂಗೊಂಡು (ಚಂದ್ರಪ್ರ. ೭-೦೧೯ ವ). ೨. " ತಿಳಕಂ, ತಮಾಳಪತ್ರಂ, ಚಿತ್ರಕಂ . . . ಲಲಾಟಿಕಾ–ಈ ೬ ಬೊಟ್ಟು " (ಹಲಾಯು. ೮೯-೩೦೭).

[ ತಮಾಲ + ಪತ್ರ ]

**ತಮಾಲಪತ್ರ** (ನಾ). ಹೊಂಗೆ ಎಲೆ: ದ್ರಾಕ್ಷಿಚೂರ್ಣ, ದ್ರಾಕ್ಷಿಹಣ್ಣು, ಕೊತ್ತುಂಬರಿ . . . ಏಲಕ್ಕಿ, ತಮಾಲಪತ್ರ, ನೆಲ್ಲಿಚಟ್ಟು . . . ಸಕ್ಕರೆ ಬೆರಸಿ ನಿತ್ಯವೂ ಉದಯಕಾಲದಲ್ಲಿ ಸೇವಿಸೆ ಪಿತ್ತಜ್ವರ, ಪಾಂಡು, ಕಾಮಾಲೆ ಸಹ ಮಾಣ್ಗುಂ (ಸಕವೈ. ೮೪). [ ತಮಾಲ + ಪತ್ರ$_1$ ]

**ತಮಾಲಮಾಲೆ** (ನಾ). ಹೊಂಗೆಯ ಮರಗಳು ಗುಂಪು: ತಮಾಲಮಾಲೆಗಳೆ ಸಂಗೀತಶಾಲೆಗಳಾಗೆಯುಂ . . . ಚಂಪಕವೀಥಿಗಳೆ ವಿನೋದ ವಿಹರಣ ವೀಥಿಗಳಾಗೆಯುಂ ಬೀಡುಬಿಡುತ್ತುಂ (ಚಂದ್ರಪು. ೬-೮೬ ವ).
[ ತಮಾಲ + ಮಾಲೆ ]

**ತಮಾಲರೇಖೆ** (ನಾ). ತಿಲಕದ ಗೆರೆ : ವಣಿವಾಸಜೀಯೊಳಮರ್ಚಿ ರಚಿಸಿದ ತಮಾಲರೇಖೆಯು . . . ಕಣ್ಗೆವಂದ ಗಂಧಸಿಂಧುರ ಸಂದೋಹದಿಂ (ರಾಜಶೇ. ೬-೦೦ ವ). [ ತಮಾಲ +ರೇಖೆ ]

**ತಮಾಲವನ** (ನಾ). ಹೊಂಗೆಮರಗಳ ತೋಪು : ಮುಂದೆ ಮಂದೈಸಿದ ತಮಾಲವನದ ಕಾಳದೊಳಂ ಮುಗುಳ್ತ ಮಾಧವೀಲತೆಯ ಜೊನ್ನದೊಳಂ (ಮಲ್ಲಿಪು. ೩-೦೦೦). [ ತಮಾಲ + ವನ ]

**ತಮಾಲವೀಥಿ** (ನಾ). ತಮಾಲವೃಕ್ಷಗಳ ಸಾಲು : ಎಡವಿಡದಿಡಿದ ತಮಾಲವೀಥಿಯೊಳೊಗೆದ ಕತ್ತಲೆಯಿಂ (ಕಾದಂಪೂ. ೦೧೬).
[ ತಮಾಲ + ವೀಥಿ ]

**ತಮಾಲವೃಕ್ಷ** (ನಾ).=ತಮಾಲ ೧ : "ತಮಾಲಃ– ವರಣ, ತಮಾಲವೃಕ್ಷ" (ಓಷಧಿ. ೬೩) . [ ತಮಾಲ + ವೃಕ್ಷ ]

**ತಮಾಲಿ, ತಮಾಳಿ** (ನಾ). ವರುಣವೃಕ್ಷ; ವಲಸೆಗಿಡ. **ತಮಾಳಿ**: 'ತಮಾಳೀವನ' ಪರಾ. [ ಸಂ. ತಮಾಲೀ ]

**ತಮಾಶೆ** 'ತಮಾಷೆ' ನೋ.

**ತಮಾಷೆ, ತಮಾಶೆ, ತಮಾಸೆ** (ನಾ). ೧. ವಿನೋದದ ಪ್ರಸಂಗ ; ಮೋಜಿನ ಸಂಗತಿ ; ಮನೋರಂಜಕವಾದ ದೃಶ್ಯ : ಎಲ ಎಲಾ ಒಳ್ಳೇ ತಮಾಷೆ ಇವರು ಆನೆಯನ್ನು ಮುಟ್ಟಿನೋಡಿ ಏನು ಹೇಳುತ್ತಾರೋ ಕೇಳೋಣ (ಕಥಾಮಂ. IV, ೨೨) ; ಬರುತ್ತಿರುವಾಗ ಒಂದು ತಮಾಷೆ ನಡೆಯಿತು (ಕಂಚಾಮ್ಮ. ೧). ೨. ಮೋಜಿನ ವಸ್ತು ; ವ್ಯಕ್ತಿ ತಮಾಷೆ ಯಾಗಿದೆ ಅಂದುಕೊಂಡೇ ನಾನು ಅವನ ಬಗ್ಗೆ ತಿಳಿದುಕೊಂಡೆ (ನಡದಾ. II, ೧೦೨೪) ; ಸರಿಯಾಗಿ ಮಾತನಾಡಿದರೆ ಒಂದು ತಮಾಷೆ ಕೊಡುತ್ತೇನೆ (ಅಂಚೂ. ೦೩೬). ೩. ನಗೆ; ಹಾಸ್ಯ; ವಿನೋದ : ಜಗಲಿ ಮೇಲೆ ಎಲ್ಲರೂ ತಮಾಷೆಯಾಗಿ ಮಾತನಾಡುತ್ತಿದ್ದೆವು (ಹುಟ್ಟಿಕ. ೦೩೪); ತಮಾಷೆಗಾಗಿ ಅವಳ ಕಿವಿಹಿಂಡಿದೆ (ನಾಪೋಲೀ. ೧೮೨) ; ಎಲ್ಲರೂ ತಮಾಷೆಯಾಗಿಯೂ, ಸಂತೋಷವಾಗಿಯೂ ಕಾಲ ಕಳೆದೆವು (ಪ್ರಕಾಶ. ೧೧೩). ೪. ಇಂದ್ರಜಾಲದ ಪ್ರದರ್ಶನ ; ಗಾರುಡಿಯ ಆಟ : (ಕ). **ತಮಾಶೆ**: ೧. ಅದೊಂದು ತಮಾಶೆಯಾಗಿತ್ತು (ನಡದಾ. I, ೪೪೩). ೫. ಶೃಂಗಾರದ ಅತಿರೇಕವುಳ್ಳ ಒಂದು ಬಗೆಯ ಗ್ರಾಮೀಣ ರೂಪಕ : ತಾನೂಬಾಯಿಯಾ ಸಾತಾರಕರ ಮೇಳದ 'ಗೋಕುಲಗಮನ' ತಮಾಶೆಯ ಆಟ (ದೀಪಕ. II, ೩೮೩). **ತಮಾಸೆ** : ೧. ಬಂದರೆ ತಮಾಸೆ ನೋಡುವಿರಿಯೆಂದೂ ಹೇಳಿ (ಹೈದರ. ೬೪).
**ತಮಾಷೆಮಾಡು** = ಹಾಸ್ಯಮಾಡು : ಚೇಷ್ಟೆಮಾಡು : ಆ ಕುರಿತು ನನ್ನನ್ನು ಒಂದು ಬಗೆಯಿಂದ ತಮಾಷೆ ಮಾಡಿದಳು (ನಿಷ್ಕಾಮ. ೧೮) : ತಮಾಷೆಮಾಡುತ್ತ ಹೇಳಿದರು (ಮರಳಿ. ೬).
[ ←ಅರ. ತಮಾಶಾ ; ಹಿಂ. ಮರಾ. ತಮಾಶಾ, ತಮಾಸಾ ]

**ತಮಾಷೆಗಾರ** (ನಾ). ೧. ಆಟ, ನೋಟ, ಪ್ರದರ್ಶನ ಮುಂತಾದಂವು ಗಳಲ್ಲಿ ಆಸಕ್ತಿಯುಳ್ಳವನು: (ಕ). ೨. ತಮಾಷೆಮಾಡುವುದೇ ಜೀವನ ವೃತ್ತಿಯಾದವನು ; ಹಾಸ್ಯಗಾರ ; ವಿದೂಷಕ : (ಕ).
[ ತಮಾಷೆ + – ಗಾರ ( < – ಕಾಱ ) ]

**ತಮಾಷೆಬಂಗಲೆ** (ನಾ). (ಮನರಂಜನೆಯನ್ನುಂಟುಮಾಡುವ) ಪ್ರಾಣಿ ಸಂಗ್ರಹಾಲಯ ; ಮೃಗಪಕ್ಷಿಗಳ ಪ್ರದರ್ಶನಾಲಯ : ಹುಡುಗರೆಲ್ಲ ತಮಾಷೆಬಂಗಲೆಗೆ ಹೊರಡಲು ತವಕಿಸುತ್ತಾರೆ (ಮಧ್ಯಮ. ೬೩).
[ ತಮಾಷೆ + ಬಂಗಲೆ ]

**ತಮಾಸೆ** 'ತಮಾಷೆ' ನೋ.

**ತಮಾಳ** 'ತಮಾಲ' ನೋ.

**ತಮಾಳಪತ್ರ** 'ತಮಾಲಪತ್ರ' ನೋ.

**ತಮಾಳಿ** 'ತಮಾಲಿ' ನೋ.

**ತಮಾಳಿಕಾಳಕೆ** (ನಾ). ೧. ತಮಾಲದಂತೆ ಕಪ್ಪಾದ ಕುರುಳುಳ್ಳವಳು. ೨. ತಮಾಲವೃಕ್ಷಗಳೇ ಕೂದಲಾಗುಳ್ಳವಳು. ೧, ೨ : ಲಲಿತತಮಾಳಿ ಕಾಳಕೆ ಕನದ್ದ್ವಿಜಪಙ್ಕ್ತಿ ನಿಕಾಮಕೋಮಳಾಂಗಲತೆಯಶೋಕಕಾಂತ ಕಳಿಕಾಧರೆ . . . ಬರಲ್ ವನಲಕ್ಷ್ಮಿ ಪೇಟ್ಟುವರ್ ಕಲಪಿಕನಾದದಿಂದೆ ನಿಜಲೀಲೆಯನೀಕ್ಷಿಸಲೆಂದು ದೇವಿಯುಂ (ಚಂದ್ರಪು. ೬-೬೧).
[ ಸಂ. ತಮಾಲಿಕಾಲಕಾ (ತಮಾಲಿಕಾ + ಅಲಕ + – ) ]

**ತಮಾಳೀವನ** (ನಾ). = ತಮಾಲವನ : ಘನವಹ್ನಿಜ್ವಾಲೆ ಧೂಮಾವಳಿಯೊ ಗಗನಗಂಗಾತಟೋದ್ಯತ್ತಮಾಳೀವನಮೋ ವಿದ್ಯುನ್ನಟೀಕರ್ಬುರ ಜವನಿಕೆಯೋ . . . ಮೇಚಕನೆ ನೆಗೆದುದಳಿಶ್ಯಾಮಳಂ ಮೇಘಜಾಳಂ (ಚಂದ್ರಪು. ೪-೩೧) ; ನಿಗಳನ್ನೀಳ ಸ್ತನಯಿತ್ನುಕುಳತಮಾಳೀವನಪ್ರಸೂನಂ ಗಳೆನಿಸಿದುವು ಕರಕಂಗಳ್ (ಚಂದ್ರಪು. ೪-೩೬).
[ ಸಂ. ತಮಾಲೀವನ (ತಮಾಲೀ + ವನ) ]

**ತಮಿ$_1$** (ನಾ). ತಾಮಸ ಸ್ವಭಾವದವನು; ಅಜ್ಞಾನಿ: ಸಮಯವಱಿಯದ ತಮಿಗಳಿರಾ ಒಡೆಯನನಱಿಯದ ಕಡುಮೂರ್ಖರಿರಾ (ವಾಗೀರ. ದೇ. ೨೩೩-೩). [ ಸಂ. ತಮಿನ್ ]

**ತಮಿ$_2$** (ನಾ). ಇರುಳು ; ರಾತ್ರಿ : "ತಮಿ[ಮಾ]ಸತೇಯಿ ಶರ್ವರಿ ತಮಿಸ್ರೆ ನಿಶೆ . . . ಯಾಮಿನಿಯಕ್ಕುಂ" (ವಸ್ತುಕೋ. ೦೫-೩). [ ಸಂ. ]

**ತಮಿಸು** 'ತಣ್ಣಿಸು' ನೋ.

**ತಮಿಸ್ರ** (ನಾ). ಕಗ್ಗತ್ತಲೆ ; ಗಾಢಾಂಧಕಾರ : "ತಿಮಿರಂ ಸಂತಮಸಂ ಧ್ವಾಂತಮಂಧಕಾರಂ ತಮಂ ತಮಿಸ್ರಮುದಕ್ಕುಂ ಸಮುದಿತ ಘನಬಹುಳ ತಮಂ ತಮಿಸ್ರಮಂತಂಧತಮಸಮಕ್ಕುಂ ಪೆಸರಿಂ" (ವಸ್ತುಕೋ. ೦೧-೬೩); ಪರೆವುದು ದುರಿತತಮಿಸ್ರಂ . . . ಯಶೋಧರ ಚರಿತ್ರಕಥಾಶ್ರವಣಮೆಂಬ ಚಂದ್ರೋದಯದೊಳ್ (ಯಶೋಚ. ೦-೪). [ ಸಂ. ]

**ತಮಿಸ್ರೆ** (ನಾ). ೧. ಗಾಢವಾದ ಕತ್ತಲೆ ; ಅಂಧಕಾರ. ೨. ಇರುಳು : ರಾತ್ರಿ: "ತಮಿ[ಮಾ]ಸತೇಯಿ ಶರ್ವರಿ ತಮಿಸ್ರೆ . . . ಯಾಮಿನಿಯಕ್ಕುಂ" (ವಸ್ತುಕೋ. ೦೫-೩). [ ಸಂ. ತಮಿಸ್ರಾ ]

**ತಮಿಳ** (ನಾ). ತಮಿಳುದೇಶದವನು : ತಮಿಳರನ್ನು ಅರವರೆಂದೂ, ತಿಗಳರೆಂದೂ . . . ಕರೆದಿದ್ದಾರೆ (ದ್ರಾವಿವಿ. ೦೦೪).
[ ತಮಿಳು ( <ತಮಿಟ್ ) + – ಅ$_7$ ]

**ತಮಿಳಿತ್ತಿ** (ನಾ). ತಮಿಳು ದೇಶದವಳು : ಗೊತ್ತಾಗಲಿಲ್ಲವೆ, ಅವಳು ತಮಿಳಿತ್ತಿ, ಅವಳಿಗೆ ಕನ್ನಡ ಬರೋದಿಲ್ಲವೆಂತ (ನಡದಾ. II, ೯೩೦).
[ ತಮಿಳು ( <ತಮಿಟ್ ) + – ಇತ್ತಿ ]

**ತಮಿಳು** 'ತಮಿಟ್' ನೋ.

**ತಮಿಟ್, ತಮಿಳು** (ನಾ). ೧. ದ್ರಾವಿಡಭಾಷೆಗಳಲ್ಲಿ ಒಂದು ; ಅರವಭಾಷೆ ; ತಿಗುಳರ ಭಾಷೆ : ದ್ರವಿಳ >ದಮಿಟ್ >ತಮಿಟ್ ಆಗಿದೆಯೆಂದೂ ವಿವರಿಸುವರು (ದ್ರಾವಿವಿ. ೦೧೯) ; ಶಿಲಪ್ಪದಿಕಾರಮ್‌ನಲ್ಲಿ ತಮಿಟ್ ಎಂಬ ಪದ, ಬಹುಶಃ ಮೊಟ್ಟಮೊದಲ ಬಾರಿಗೆ, ಪ್ರಯೋಗ ವಾಗಿದೆ (ದ್ರಾವಿವಿ. ೧೦೦). ೨. ಅರವಭಾಷೆಯನ್ನಾಡುವವರ ದೇಶ ;

ತವಿಂಳುದೇಶ : ಮುತ್ತುವಿುಟ್ ಪಾಟ್ಟಿನ ತಮಿಟ್‌ಮಗಳ್ ಪೆತ್ತ ನು ಣ್ ತ ಣ್ ಬೆ ಳ ಗಿ ನ ಮುತ್ತಿನ ಮಣಿಯನ್ (ಹೊಂಗಳು. ೪೪-೩).

**ತಮಿಳು** : ೧. ಸಂಸ್ಕೃತಭಾಷೆಯೊಂದನ್ನು ಬಿಟ್ಟರೆ ಭಾರತೀಯ ಭಾಷೆಗಳಲ್ಲೆಲ್ಲಾ ತಮಿಳು ಬಹಳ ಪ್ರಾಚೀನಕೃತಿಗಳನ್ನು ಪಡೆದ ಭಾಷೆ (ದ್ರಾವಿ. ೦೦೭). [ ದೇ.॥ ತಮಿ. ಮಲ. ತಮಿಟ್ ; ತುಳು. ತಮುಳ್, ತಮುಳು. /ಸಂ. ದ್ರವಿಡ, ದ್ರಮಿಲ, ದ್ರವಿಡ ]

**ತಮುತು** 'ತನತ್ತು' ಪರಾ.

**ತಮುತ್ತು**' ತನತ್ತು' ಪರಾ.

**ತಮೋಂಧ** (ನಾ). ಕಗ್ಗತ್ತಲೆ ; ಗಾಢಾಂಧಕಾರ : ತುಱುಗಿದ ತಮೋಂಧವೊಯ್ಯನೆ ಜಾಱಿತಳಿಕುಲದ ಸೆಱೆ ಬಿಟ್ಟುದು . . . ತಲೆದೋಱಿದಂ ತರಣಿ (ಜಮಿಭಾ. ೩೦-೭೩). [ ಸಂ. (ತಮಸ್ + ಅಂಧ) ]

**ತಮೋಗುಣ** (ನಾ). ಸೃಷ್ಟಿಯ ಮೂರು ಮೂಲಗುಣಗಳಲ್ಲಿ ಒಂದು ; ತಮಸ್ಸು : ಸತ್ವಗುಣಾಭಿಮಾನಿ-ಶ್ರೀದೇವಿಯು, ರಜೋಗುಣಾಭಿಮಾನಿ ಭೂದೇವಿಯು, ತಮೋಗುಣಕ್ಕೆ-ಅಭಿಮಾನಿ ದುರ್ಗಾದೇವಿ (ಹಸಾರ. ೦-೨ ವಿಶೇಷಾರ್ಥ); ಪ್ರಕೃತಿ, ಪುರುಷ . . . ಸತ್ವರಜಸ್ತಮೋಗುಣಗಳ ವಿಭಾಗ-ಈ ಎಲ್ಲವನ್ನು ಕುರಿತು ಸಾಂಖ್ಯದರ್ಶನ ವಿಮರ್ಶಿಸಿದೆ (ಭಾರದ. ೦೦೩). [ ಸಂ. (ತಮಸ್ + ಗುಣ) ]

**ತಮೋಘ್ನ** (ಗು). ೧. ಕತ್ತಲೆಯನ್ನು ಹೋಗಲಾಡಿಸುವ. (ನಾ). ೨. ಅಗ್ನಿ : "ಸಪ್ತಾರ್ಚಿಃ . . . ತಮೋಘ್ನಃ, ಲೋಹಿತಾಶ್ವಃ, ಹುತಾಶನಃ-ಈ ೪೦ ಕಿಚ್ಚಿನ ಪೆಸರ್" (ಹಲಾಯು. ೦೨-೩೪). [ ಸಂ. ]

**ತಮೋಜ್ಞ** (ನಾ). ತಮೋಗುಣದಿಂದ ಉಂಟಾದ ಅಜ್ಞಾನ ; ವಿಂಥ್ಯಾಜ್ಞಾನ : ನುಡಿಗೆ ಪುಸಿದಟವಟದಿಂದನ್ಯರ್ಗೆ ಕನ್ನೆಯನಿತ್ತೆಮ್ಮನೇಳಿಸಿದ ಕಾರಣದಿಂದೆ ನಿನಗೆ ತಮೋಜ್ಞಮಕ್ಕೆ (ಅದ್ಯಾಕ. ೦೪-೦೩). [P 'ತಮೋಜ್ಞತೆ' ಯೆಂಬುದು ಸರಿಯಾದ ರೂಪ]

**ತಮೋಧಿ** (ನಾ). ಅಂಧಕಾರದ ರಾಶಿ : ಭವದಿಂದಂ ಭವದೊಳ್ ವ್ರತಂ ದ್ವಿವಿಧಂ . . . ಉದಾತ್ತೋದ್ದಿಕ್ರಮಾವಾಪ್ತಿ ಸಪ್ತವಿಧಂ ಪೇೞ್ವ ತಮೋಧಿಯಂ ಕಿಡಿಸಿದಂ ಸೌಜನ್ಯಕಂದಾಂಕುರಂ (ಶಾಂತಿಪು. ೦೦-೦೦೪). [ ಸಂ. ]

**ತಮೋಪಹ** (ಗು). ೧. ಕತ್ತಲೆಯನ್ನು ಕಳೆಯುವ. (ನಾ). ೨. ಅಗ್ನಿ. ೩. ಸೂರ್ಯ. ೪. ಚಂದ್ರ. [ ಸಂ. ]

**ತಮೋಬಂಧ** (ನಾ). ಅಜ್ಞಾನದ ಕಟ್ಟು,-ಬಂಧನ : ನೆಱಿವಂ ತಾಳ್ದಿದಪಾಸ್ತದುರ್ನಯತಮೋಬಂಧಂ ಶ್ರುತಸ್ಕಂಧಮಾದಱಿಂದಂ ಗಣನಾಯಕರ್ಸಮಱ್ ಭವ್ಯಶ್ರೇಣಿಗವ್ಯಾಜದಿಂದಱಿಯಲ್ಕಾಲ್ಪನುಯೋಗಮಾದುದು (ಆದಿಪು. ೧-೩೪). [ ಸಂ. (ತಮಸ್ + ಬಂಧ) ]

**ತಮೋಮಣಿ** (ನಾ). ೧. ಒಂದು ಬಗೆಯ ರತ್ನ ; ನೀಲರತ್ನ ; ಇಂದ್ರನೀಲ. ೨. ಮಿಂಚುಹುಳು ; ಹೊನ್ನೆಹುಳು ; ಖದ್ಯೋತ. [ ಸಂ. (ತಮಸ್ + ಮಣಿ) ]

**ತಮೋಮಯ** (ಗು). ಕತ್ತಲೆ ಕವಿದ,-ತುಂಬಿದ ; ಅಂಧಕಾರ ಆವರಿಸಿದ. [ ಸಂ. ]

**ತಮೋಯೋಗ್ಯ** (ನಾ). ತಮೋಲೋಕವನ್ನು ಪಡೆಯಲು ಯೋಗ್ಯನಾದವನು : ಜೀವಾತ್ಮರಲ್ಲಿ ಉತ್ತಮಮಧ್ಯಮಾಧಮ ಭೇದದಿಂದ ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಭೇದವಿರುವುದು (ಹಿಂದಶಾ. ೨೭೪). [ ಸಂ. (ತಮಸ್ + ಯೋಗ್ಯ) ]

**ತಮೋರಿ** (ನಾ). ೧. ಕತ್ತಲೆಯ ವೈರಿ ; ಸೂರ್ಯ : ಕುರುರಾಜೋಗ್ರತಮಸ್ತಮೋರಿ ಕುರುರಾಜೇಭೇಂದ್ರಕಂಠೀರವಂ (ಗದಾಯು. ೧-೭೪). ೨. ಅಗ್ನಿ. ೩. ಚಂದ್ರ. [ ಸಂ. (ತಮಸ್ + ಅರಿ) ]

**ತಮೋಲೋಕ** (ನಾ). ಕತ್ತಲೆಯ ಲೋಕ ; ಪಾಪಿಗಳು ಹೊಂದುವ ಲೋಕ ; ನರಕ : ಎರಡನೆಯವರು ನಿತ್ಯನರಕವೆಂಬ ತಮೋಲೋಕ ಪ್ರಾಪ್ತಿಗೆ ಸಾಧನವನ್ನು ಸಂಪಾದಿಸಿಕೊಂಡು ನಿತ್ಯದುಃಖಾನುಭವಕ್ಕೆ ಸಿದ್ಧರಾಗುವರು (ಹಿಂದಶಾ. ೨೭೩). [ ಸಂ. (ತಮಸ್ + ಲೋಕ) ]

**ತಮೋವಿಕೃತಿ** (ನಾ). ೧. ಕತ್ತಲೆಯ ವಿಕಾರ. ೨. ತಮೋಗುಣದ ವಿಕಾರ. ೧, ೨ : ಆತತ ಸೈನ್ಯರಜಸ್ಸಂಜಾತ ತಮೋವಿಕೃತಿ ತೂಳ್ದಿದುದು ಸತ್ತ್ವಮುಮಂ ಖ್ಯಾತರಿಪುಭೂಮಿಪಾಲವ್ರಾತಕ್ಕಾಶ್ರಯವಿಶೇಷಮೇಂ ಕೇವಲಮೋ (ಚಂದ್ರಪು. ೦೦-೨೯). [ ಸಂ. (ತಮಸ್ + ವಿಕೃತಿ) ]

**ತಮೋವಿಭ್ರಾಂತಿ** (ನಾ). ರಾಹುವೆಂಬ ಭ್ರಾಂತಿ : ಕರಿ ಪರ್ಬಾವನ ಮರ್ಚಿ ಪುಷ್ಕರದೆ ಬೀಸುತ್ತಿಟ್ಟೊಡಾಕಾಶದೊಳ್ . . . ತಮೋವಿಭ್ರಾಂತಿಯಿಂದಳ್ಕೆ ಭಾಸ್ಕರನೇಳ್ತರ್ಪುದನೊತ್ತಿ ಖಂಡಿಸಿ ಖಗೇಶಂ ರಕ್ಷಿಸಿತ್ತರ್ಕನಂ (ರಾಜಶೇ. ೫-೭೮). [ ಸಂ. (ತಮಸ್ + ವಿಭ್ರಾಂತಿ) ]

**ತಮೋವೈರಿ** (ನಾ). ಕತ್ತಲೆಯ ಶತ್ರು ; ಸೂರ್ಯ : "ಹರಿದಶ್ವಂ ತಮೋವೈರಿ ಹಂಸಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ." (ಮತ್ತುಕೋ. ೦೦-೭೪). [ ಸಂ. (ತಮಸ್ + ವೈರಿ) ]

**ತಮೋಹ** (ನಾ). ೧. ಕತ್ತಲೆಯನ್ನು ನಿವಾರಿಸುವವನು : ಆ ನೃಪೇಂದ್ರಂ . . . ವೀತಿಹೋತ್ರನಂತೆ ವಿತತಕಾಂತಾರತಮೋಹನುಂ (ರಾಜಶೇ. ೩-೯ ವ). ೨. ಸೂರ್ಯ. ೩. ಅಗ್ನಿ. ೪. ಚಂದ್ರ. [ ಸಂ. ]

**ತಮೋಹರ** (ಗು). ೧. ಕತ್ತಲೆಯನ್ನು ಕಳೆಯುವ ; ಅಂಧಕಾರವನ್ನು ಪರಿಹರಿಸುವ : ಶರದದ ಚಂದ್ರನಂ ವಿಮಲಚಂದ್ರಿಕೆ ಬಾಳದಿನೇಶನಂ ತಮೋಹರಕಿರಣಂ . . . ಪೊರ್ದುವಂತೆ ಸುಂದರ ನವಯೌವನಂ ನೆಱೆಯೆ ಪೊರ್ದೆ ಗುಣಾರ್ಣವನೊಪ್ಪಿ ತೋಱಿದಂ (ಪಂಪಭಾ. ೨-೩೯). (ನಾ). ೨. ಕತ್ತಲೆಯನ್ನು ಕಳೆಯುವುದು ; ಅಂಧಕಾರದ ನಿವಾರಣೆ : ಬಲವದ್ವೈರಿ ತಮೋಹರಾತಿಪಟುಗಳ್ ಪದ್ಮಾಸನಸ್ಪರ್ಶ ಸಲ್ಲಲಿತಂಗಳ್ . . . ಮಹೀವಲಯೋದ್ದ್ಯೋತ ಕರಂಗಳಾನತಜನಕ್ಕಾನಂದಮಂ ಮಾೞ್ಕೆ ಮಂಗಳಮಂ ಚಂಡಕರಂ ಮಹೀವಳಯದೊಳ್ಪಾಳುಕ್ಯಮಾರ್ತಂಡನಾ (ಗದಾಯು. ೦-೪). ೩. ಅಜ್ಞಾನವನ್ನು ನಿವಾರಿಸುವವನು : ತತ್ಸುರಸಮುದಯಂ ಚೇತೋವಾಕ್ಕಾಯಶುದ್ಧಿಗಳೊಳ್ ತಮೋಹರನನೆಱೆದರ್ (ಶಾಂತಿಪು. ೧೦-೨೦). [ ಸಂ. (ತಮಸ್ + ಹರ) ]

**ತಮ್ಮ**, ತಂಬಿ₁ (ನಾ). ೧. ಕಿರಿಯ ಸಹೋದರ : "ಕನಿಷ್ಠಃ, ಅವರಜಃ, ಅನುಜಃ – ಈ ೩ ತಮ್ಮಂ" (ಹಲಾಯು. ೮೩-೩೩೨) : "ಜಘನ್ಯಜಃ, ಕನಿಷ್ಠಃ, ಯವೀಯಸ್, ಅವರಜಃ, ಅನುಜಃ – ಈ ೫ ತಮ್ಮನು" (ನಾಚಿರಾ. ೦೦೯) ; ಈ ಕಲ್ಲ ಪುಱೆದೆಗಾವುಣ್ಡ ತಮ್ಮ ಗುಱೆಯಮ್ಮ ನಿಱಿಸಿದೊ (ಎಇ. XXI, ೨೦೮-೪ ; 888) : ಆ ಕೂಸೆಂಬುದು ನಿಮ್ಮ ತಮ್ಮನಪ್ಪ ವಾಯುಭೂತಿಯ ಜೀವಮೆನೆ (ವಡ್ಡಾರಾ. ೧೦-೦) ; ಅವರ ತಮ್ಮೋ ಅಮ್ಮಯ್ಯಂ ದೇಗುಲಮುಂ ಮಾಡಿಸಿ (ಎಕ. VIII, ತೀರ್ಥಹ. ೨೭-೧೧ ; 929) ; ನೀಂ ಕ್ರೋಧನನಾಗಲ್ ನಿನ್ನ ತಮ್ಮಂ ನಿನಗೆಱಿಗಂ (ಆದಿಪು. ೧೪-೮೪) : ತನ್ನ ತಮ್ಮನ ಕಣ್ಣಂ ಕರ್ದುಂಕುವ ಕಾಗೆಗಳುಮಂ . . . ಕಂಡು (ಗದಾಯು. ೫-೩ ವ) ; ಅಳುಕುವೆಡಕಟ ಕೊಲ್ಲೆನು ನಿನ್ನ ತಮ್ಮನ ಕರಸು ಫಲುಗುಣನ (ಕುಮಾ.ಕ. ೩೦-೦೫). ೨. ಹಿರಿಯರು ಕಿರಿಯರನ್ನು ಕುರಿತು ಮಾತನಾಡುವಾಗ ಪ್ರೀತಿ, ವಿಶ್ವಾಸ ಸೂಚಕವಾಗಿ ಬಳಸುವ ಮಾತು : ತಮ್ಮ ಕೇಳು ಪುರಾತರೊಳಗೊಲವಿಂ ಮಹಿಳೆಯರನಾತ್ಮಭವರಂ ತಮ್ಮುವಂ ಕೊಟ್ಟವರೊಳರು (ಬಸಪು. ೨೫-೦೭) ; ಎಲವೋ ತಮ್ಮ ನಿಮಗಿಂದಸುರರಿಪು ತೆತ್ತಿಗನಲೇ (ಕುಮಾದ್ರೋ. ೦೦-೫೦).

**ತಂಬಿ₁** : ೧. ದೇವನೂರ ಚಿಕ್ಕೇಶವನ ದೇವಗಳ ತಂಬಿಗಳ ಮಕ್ಕಳು (ಎಕ. VI, ಕಡೂರು. ೧೩-೮ ; 1518).

ತಮ್ಮಂದಿರ್, ತಮ್ಮಂದಿರು, ತಮ್ಮಗಳು, ತಮ್ಮದಿರು, ತಮ್ಮರು (ಬಹುವ): ತವ್ಮಂದಿರಪ್ಪ ಕುಮಾರರೊಡನೆ ಸ್ವಾಮಿ ಕಾರ್ತಿಕಂ ಬಳೆದು (ವರ್ಧ್ಮಾ. ೧೧೬-೧೭); ಈ ತವ್ಮಂದಿರೊಳಿಂತಿಂತು ಕಟ್ಟುವರ್ಗದು ಪೆಂಪೇ (ಆದಿಪು. ೧೪-೧೨೮); ತವ್ಮಂದಿರ್ ತಾಯಿಂದಿರ್ ಅಣ್ಣಂದಿರ್ ತಂದೆವಿರ್ (ಧಾತುಧೂ. ೪೩ ಉದಾ); ನಿನಗೆ ಎಷ್ಟು ಜನ ತಮ್ಮಂದಿರು‍ (ರೂಢಿ); ಬಾಳಿನಲಿ ಕೈಹಿಡಿದು ನಡೆಸಿದಿರಿ ಜೊತೆಯ ಅಣ್ಣಗಳನು ತಮ್ಮಗಳಿಗೆ ಕಂಡದ್ದ ತೋರಿ ತೆರೆಸಿದಿರಿ ಕಣ್ಣುಗಳನು (ಹೃದಸ. ೭೬-೧೭); ಶಿವಶಿವಾ ಕೌರವನ ತಮ್ಮದಿರವಗಡಿಸಿದರು. (ಕುಮ್ಮಾಶ. ೧೩-೧೯); ಧರ್ಮಸುತ ಸಭೆಯೊಳೊಪ್ಪಿದಂ ತಮ್ಮರೊಡನೆ (ತುರಂಗ. ೨೩-೧).

[ ದೇ.ಶ ತಮಿ. ತವ್ಪಿ ; ಮಲ. ತಮ್ಬಿ, ತಮ್ಮಾನ್ ; ತುಳು. ತವ್ಮಯ್ಯ, ತವ್ಮೆಯ ; ಕೊಡ. ತಂಬಿ, ತಮ್ಮಣೇ ; ತೆಲು. ತವ್ಮು ; ಗೊಂಡಿ. ತವ್ಮುರ್ ; ಕುಇ. ತಂಬೆಸ ]

**ತಮ್ಮಂಗವಮ** (?) (ನಾ). (?) : ತಪ್ಪು ತಉಡಿ ದಂಡ ಉಂಡಿಗೆ ಹಡರಹನು ಕೊಂಬಂಣ ಕೊಡಿದೆ ತಂವಮಂಗವವು ಹಿಡಿವೆ (ಎಕ. IX, ಆನೆಕಾ. ೪೧-೦೩ ; 1300). [ ? ]

**ತಮ್ಮಗೌಡ** (ನಾ). ಒಬ್ಬಾತನ ಹೆಸರು : ರೇವಂತ ನಡೆಗೌಡ ಸುರಿತಂಣ ಪಿರಿಯ ತಪ್ಮಗೌಡರು (ಎಕ. VII, ಶಿವಮೊ. ೧೧೪-೧೭ : 950).

[ ತಮ್ಮ + ಗೌಡ$_1$ (<ಗಾವುಂಡ) ]

**ತಮ್ಮಚಿ** (ನಾ). ಒಂದು ಊರಿನ ಹೆಸರು (?) :

**ತಮ್ಮಚಿಯ ಮುದ್ರೆ** = ನಾಣ್ಯಗಳ ಮೇಲೆ ಒತ್ತುತ್ತಿದ್ದ ಒಂದು ಬಗೆಯ ಮುದ್ರೆ : ಕುಳಿಯ ಸುಂಕವ ತಮ್ಮಚಿ[ಯ] ಮುದ್ರೆಯ ಪೊತ್ತ ದೊಳ್ × × × ಕೆ ತಿಂಗಳಿಗೊಂದು ಗದ್ಯಾಣ ಪೊನ್ನುಮಂ ತಮ್ಮಚಿಯ ಮುದ್ರೆಯ ಮೂಱುವೀಸದ ಹತ್ತಡಕೆಯ . . . ಲೆಕ್ಕಂ ಮಾಡಿ ಕುಡುವರ್ (ಸೌಇಇ. XI-ii, ೧೫೦-೫೨ : 1102). [ ? ]

**ತಮ್ಮಟ$_1$** 'ತಂಬಟ' ನೋ.

**ತಮ್ಮಟ$_2$, ತಮ್ಮಡ$_1$** (ನಾ). ಒಂದು ಬಗೆಯ ಬಳ್ಳಿ: (ಮೃಶಿಗ. ೭೨-೧೨೬೪).

**ತಮ್ಮಡ$_1$** : 'ತಮ್ಮಡವಳ್ಳಿ' ಪರಾ. [ ದೇ.ಶ ತಮಿ. ತವ್ಮತ ]

**ತಮ್ಮಟೆ** 'ತಂಬಟ' ನೋ.

**ತಮ್ಮಟ್ಟೆ** 'ತಂಬಟ' ನೋ.

**ತಮ್ಮಡ$_1$** 'ತಮ್ಮಟ$_2$' ನೋ.

**ತಮ್ಮಡ$_2$** (ನಾ). ತಡೆದುದು ; ಅಡ್ಡಿ ; ವಿಘ್ನ : "ತಮ್ಮಡಂ=ತಡೆದುದು" (ಶಮದ. ಪರಿ. ೨). [ ?./ತಮಿ. ತವ್ಮಿಟು ]

**ತಮ್ಮಡವಳ್ಳಿ** (ನಾ). = ತಮ್ಮಟ$_2$ : "ಕ್ಷಾರಕಿಯೆನಲ್ಕೆ ತಮ್ಮಡ[ಪಾಠಾಂ. ಡಿ] ವಳ್ಳಿ[ಪಾಠಾಂ. ಲ್ಲಿ]"(ಮಂಗರಾ. ೪೪-೫೫). [ತಮ್ಮಡ$_1$ (<ತಮ್ಮಟ$_2$)+ಬಳ್ಳಿ]

**ತಮ್ಮಡಿ$_1$, ತಮಡಿ** (ನಾ). ೧. ಗುರು; ಆಚಾರ್ಯ : ಸ್ವಸ್ತಿ ಶ್ರೀಭಟ್ಟಾರಕ ಥಿಟ್ಟಗಪಾನದಾ ತವ್ಮಡಿಗಳ ಶಿಷ್ಯರ್ (ಎಕ. II, ೧೯-೧ : ಸು. 700); ಆಟ್ಟುಱ ತವ್ಮಡಿಗಳ . . . ನಿಸಿಧಿಗೆ (ಎಕ. II, ೧೫-೦ : ಸು. 800); ಶ್ರೀಸಿಂಹನನ್ದಿ ತವ್ಮಡಿಗಳ್ (ಕೊಶ್ಯಶಾ. ೭-೧ ; 1010) : ಆದಿಯೊಳು ಕಂಡ ನವಣೆಯ ಕೆಯ್ಯ ತವ್ಮಡಿಯ ಹೆಸರಲೊಂದು . . . ಗುರು ಮೂರ್ತಿಯಲಿ ಬಳಿಕ್ಕೊಂದಂತು ಹದಿನೇಳು ಯೋಗಲಿಂಗಂಗಳಂ ನಿರ್ಮಿಸಿ ದನು (ಸಿದ್ಧರಾ. ೩-೪೪). ೨. ಒಡೆಯ ; ಯಜಮಾನ : ತಮ್ಮಡಿಗೆ ಪೊಱವ ಶ್ವಾನಂ ದವ್ಮಿ[ಪಾಠಾಂ. ವರ್ಮ, ಧರ್ಮ]ಯನೇಕೆ ಬಾಬಲಿ ತ್ತಪುದು ಎಂಬಂತೆ (ಶಂಕಶಂ. ೧೭೮-೧೫). ೩. ಪೂಜಾರಿ ; ಅರ್ಚಕ : "ದೇವಾಜೀವಃ, ದೇವಲ" (ನಾಚಿರಾ. ೬) ; ಪೂಜಿಸುವ ತವ್ಮಡಿ ಲಿಂಗ ವಾದುದ ಕಂಡೆ (ಮೋಳಿಮಾ. ೨೬೭-೮೧೯) ; ಕವಾಟಂ ಬಂಧಿಸಿ ಪಿರಿದುಂ ಬೀಯಗವುನಿಕ್ಕಿದರ್ ತವ್ಮಡಿಗಳ್ (ಉದ್ಭಟ. ೧೧-೫೮) ; ಕಣ್ಣಪನ ಮನದ ವಿರಳಪ್ರಿಯಭಕ್ತಿಯಂ ಮುಗ್ಧಸ್ವಭಾವವನು ಭವಹರಂ ತಾಂ ತಮ್ಮಡಿಗೆ ತೋಱುವೆನೆನುತ (ಬಸಪು. ೦೮-೪೩) : ಶ್ರೀಸೋಮೇಸ್ವರನ ತಮ್ಮಡಿ ಕೇತಜೀಯ (ಎಕ. XI, ಹಿರಿಯೂ. ೫೨-೫೬; 1428): ಗುಡಿಯ ಗೋಪುರಮಂ ಕೆಡಪಿ ತವ್ಮಡಿಯಂ ಜಡಿಯಲು (ವೃಷವಿ. ೫೬-೪ ವ) ; ಆ ದಾರಿಯಲ್ಲಿ ಹೋಗುತ್ತಿದ್ದ ಒಬ್ಬ ತವ್ಮಡಿ ಇವರ ಮಾತುಗಳನ್ನು ಕೇಳಿ ಹತ್ತಿರ ಬಂದು (ನಗಗ. ೫೬) ; ತನಗೇ ಇಲ್ಲದ ಮಾರಿ ತಮ್ಮಡಿಗೆ ವರ ಕೊಟ್ಟೀತೇ? (ಗಾದೆ). ೪. ಋಷಿ ; ಮುನಿ : ಇದೇನು ತವ್ಮಡಿ ನಿನಗೆ ತಪದಲಿ ಖಡ್ಗ ವೇಕೆ (ಕುಮ್ಮಾಆ. ೬-೨) ; ಜಡೆಯ ಹೊತ್ತುದೊ ಸಿಡಿಲು ಶಿವಶಿವ ಪಡಬ ತವ್ಮಡಿ ಯಾದನೋ (ಕೌಶಿಕಾ. ೩-೧೩). **ತಮಡಿ** : ೩. ಮನವ ಮಡಿಯಾಗಿಡಲು ದಮ್ಮಡಿಯ ತಮ್ಮಡಿ ನಮಗೆ ಬೇಕೀತನಿಗೊ ನಲ್ಮೊರೆಯ ತಮಡಿ (ಗಡೇಶ. ೭೦-೫). [ ←ತೆಲು. ತವ್ಮಡಿ ]

**ತಮ್ಮಡಿ$_2$** 'ತಮ್ಮಡೆ' ನೋ.

**ತಮ್ಮಡೆ, ತಮ್ಮಡಿ$_2$**(ನಾ). (?) : ಆ ಮುಗುಳಸಹಳ್ಳಿಯಲ್ಲಿ ತಮ್ಮಡೆಯಾದಡೆ ಅಣ್ಣನೊಡವೆ ತವ್ಮಂಗೆ ತಮ್ಮನೊಡವೆಯಣ್ಣಂಗೆ (ಎಕ.IX,ಚನ್ನಪ.೭೩-೩೧; 1318). **ತಮ್ಮಡಿ$_2$**: ಅನ್ಯಾತ್ರರೂ ಇಲ್ಲದಿದ್ದಡೆ ಆ ಅಪುತ್ರಿಕದ ನಕಟಿ ದೇವಾಲ್ಯ ಕಿಕ್ಕುವದು ತವ್ಮಡಿ ಎಂಬ ವಾರ್ತೆ ಇಲ್ಲವೊಡವತಲೆ (ಎಕ. IX, ಚನ್ನಪ. ೭೩-೩೬ ; 1318). [ ? ]

**ತಮ್ಮಣ** 'ತಮ್ಮಣೆ' ನೋ.

**ತಮ್ಮಣಗೊಳಿಸು** (ಕ್ರಿ). ಸಮಾಧಾನಪಡಿಸು ; ಶಾಂತಗೊಳಿಸು : ನಾನೇ ತಪ್ಪನ್ನು ಒಪ್ಪಿಕೊಂಡಂತಾಗಿ ಅವಳ ಬೇಗುದಿಯ ಮನಸ್ಸನ್ನು ತಮ್ಮಣ ಗೊಳಿಸಿದಂತೆಯಾಗಿತ್ತು (ಹೇಮುಂತ. ೨೭). [ತವ್ಮಣಗೊಳು + – ಇಸು$_3$]

**ತಮ್ಮಣಗೊಳು, ತಮ್ಮಣಗೊಳ್ಳು** (ಕ್ರಿ). ಉಪಶಮನಗೊಳ್ಳು; ಶಾಂತತೆ ಹೊಂದು; ಸಮಾಧಾನವಾಗು. 'ತವ್ಮಣಗೊಳಿಸು' ಪರಾ. **ತಮ್ಮಣ ಗೊಳ್ಳು**: ನಟರಾಜನ ಭಾವಸಮಾಧಿಯು ಒಂದಿಷ್ಟು ತಮ್ಮಣಗೊಂಡ ಬಳಿಕ ನಸು ಕಣ್ತೆರೆದು ನಿಟ್ಟಿಸಿದರೆ ಮುಂದೆ ನಿಂತ ಗೌರಿ ಮೊರೆಯಿಡುತ್ತಿದ್ದಾಳೆ (ಕಾಳಲ. ೧). [ ತಮ್ಮಣ (<ತವ್ಮಣೆ) + ಕೊಳು (<ಕೊಳ್$_1$) ]

**ತಮ್ಮಣಗೊಳ್ಳು** 'ತವ್ಮಣಗೊಳು' ನೋ.

**ತಮ್ಮಣೆ, ತಮಣೆ, ತವ್ಮಣ** (ನಾ). ಶಾಂತಿ; ಸಮಾಧಾನ; ಉಪಶಮನ: ದೇಶದಲ್ಲಿ ತಮ್ಮಣೆ (ಶಾಂತಿ) ಯಿರಲಿಲ್ಲ (ಅಶ್ಮರ. ೦೪೦). **ತಮಣೆ** : ಕಾನಾಗ ತಣಿಯದೆ ಯಾರು ಏನೆಂದರು ತಮಣೆಗೆ ಬರುವುದೆ ಗೋಳು (ಇಂಚಾಪ. ೫೦-೪೪). **ತಮ್ಮಣ** : 'ತವ್ಮಣಗೊಳಿಸು', 'ತವ್ಮಣಗೊಳು' ಪರಾ.

**ತಮ್ಮಣೆಯಾಗು** = ಶಮನವಾಗು; ಶಾಂತವಾಗು : ಇವರ ದಂಗೆಗಳು ತವ್ಮಣೆಯಾದವು (ಇಂಗ್ಲಂಡ. ೨೦೦). [?./ಪ್ರಾ. ಥಂಭಣ./ಸಂ. ಸ್ತಂಭನ ]

**ತವ್ಮತು** 'ತನತ್ತು' ಪರಾ.

**ತಮ್ಮದು** 'ತನತ್ತು' ಪರಾ.

**ತಮ್ಮಲೋಪಾದಿ** (ನಾ). (?) : ಸತ್ತಿಮಂಗಲದ ಸಾಮಿಯ ಸಮ್ಮಸ್ದಂ ಮಾರಯ್ಯನುಂ ಪುಣಿಸೆಯಮ್ಮನುವಿಟ್ಟು ತಮ್ಮಲೋಪಾದಿಗೊಟ್ಟರ್ (ಎಕ. IX, ಹೊಸಕೋ. ೧೧೧-೭ ; 997). [ ? ]

**ತವ್ಮಿನುಗ** (ನಾ). ತಂಪಾದ ಬೆಳಕು ಅಥವಾ ಕಾಂತಿಯುಳ್ಳವನು ; ಚಂದ್ರ : ಕೆಂಗದಿರ ತವ್ಮಿನುಗ ಮರಗೂಳ (ಮುಲ್ಲಾರಿ. ೨-೪೧).

[ ತಂ$_1$ (<ತಣ್$_2$) + ಮಿನುಗು$_2$ + – ಅ$_7$ ]

**ತಮ್ಮಿಸು** 'ತಣ್ಪಿಸು' ನೋ.

**ತಮ್ಮುಟುಕಾಱ** (ನಾ). ತವ್ಮಟೆ ಬಾರಿಸುವವನು : 'ಅಮೃತಪಡಿ ನಂದಾ ದೀಪ್ತಿ ನೈವೇದ್ಯ ಸ್ಥಾನಿಕ ಹಸಟು ತಂಮುಟುಕಾಱರಿಗೆ ಸಂದು ಬಂದು (ಎಕ. VIII, ಸೊರಬ. ೩೭೯-೧೯ ; 1533).

[ ತಮ್ಮುಟು$_0$ (<ತಂಬಟ) + – ಕಾಱ ]

**ತಮ್ಮುತು** 'ತನತ್ತು' ಪರಾ.

**ತಮ್ಮುತ್ತು** 'ತನತ್ತು' ಪರಾ.

**ತಮ್ಮುಳಿ** (ನಾ). ಒಬ್ಬಾತನ ಹೆಸರು (?) : ಬಾಗೆಯೂರ ಬಲ್ಲಹನೇಚಿ ನೊಳ್ಳಿಯಾನ್ ವೈರಿಗಳ್ ಸಮಪದರುಳ್ ಕೊಪ್ಪಳವೂರಬಾಳಿಯೊಳ್ಪೊಣ್ಣೆ ದಿಕ್ಕಿಜ್ಜಿಯ ತಮ್ಮುಳಿ ಪಡೆಯುಳಿಬಿದು ಸತ್ತನ್ (ಎಕ. XVI, ತುರುಕೂ. ೯೩-೧೪ ; ಸು. 780). [ ? ]

**ತಮ್ಮೆ** (ನಾ). ೧. ಕಿವಿಯ ಹಾಲೆ, ಮೂಗಿನ ತುದಿ ಮುಂತಾದ ಮೂಳೆಯಿರದ ಸ್ಥಳ. ೨. (ಕುದುರೆ, ದನ ಮುಂತಾದುವುಗಳನ್ನು ಕಟ್ಟಿ ಹಾಕಲು ಬಳಸುವ) ಹಗ್ಗದ ಕುಣಿಕೆ. ೩. ದನಗಳ ಗಂಗೆದೊಗಲು : (ಕಿ). [ ದೇ.; ತೆಲು. ತಮ್ಮೆ ]

**ತಮ್ಮೆಗಿಡ** (ನಾ). ೧. ಒಂದು ಬಗೆಯ ಗಿಡ ; "ಉದ್ದಾಲಕ" (ಶಂಡಿಕ). ೨. ಒಂದು ಬಗೆಯ ಪೊದೆ. P ಇದರ ಬೇರನ್ನು ಔಷಧಿಗಾಗಿ ಉಪಯೋಗಿಸುತ್ತಾರೆ. [ ತಮ್ಮೆ$_{೦}$ + ಗಿಡ (<ಗಿಡು) ]

**ತಯಾರಿ** 'ತಯಾರು' ನೋ.

**ತಯಾರಿಕೆ** (ನಾ). ೧. ಅಣಿಮಾಡುವಿಕೆ ; ಸಿದ್ಧಪಡಿಸುವಿಕೆ : ಅಜಯ . . . ಬಾಂಬ್ ತಯಾರಿಕೆಯ ಕೆಲಸದಲ್ಲಿ ನಿರತನಾಗುತ್ತಿದ್ದ (ಅಕ್ಷ್ಯಕ್ಷF. ೧೩೮) ; ಉಪಕರಣಗಳ ತಯಾರಿಕೆಯ ಹಕ್ಕನ್ನು ತಮಗೆ ವರ್ಗಾಯಿಸಬೇಕೆಂದು ಬೇಡಿಕೆ ಬಂದಿತು (ಸಸ್ಯಕ. ೯೯). ೨. ತಯಾರಾದ ವಸ್ತು : ಇದು ಟಾಟಾ ಕಂಪನಿಯ ತಯಾರಿಕೆ (ರೂಢಿ). [ ತಯಾರು + – ಇಕೆ ]

**ತಯಾರಿಸು** (ಕ್ರಿ). ಸಿದ್ಧಪಡಿಸು ; ಸಜ್ಜುಗೊಳಿಸು : ದೊಡ್ಡ ಒಲೆಯಾದರೆ ಯಾವುದೇ ಅಡುಗೆಯನ್ನೂ ಅದರಲ್ಲಿ ತಯಾರಿಸಬಹುದು (ಅಡುಶಾ. ೦೬) ; ಒಂದು ಕಾವಡಿಯನ್ನು ತಯಾರಿಸಿ ಹೊರಟನು (ಸುಧಾ. ೫೬) ; ಚಹಾ ತಯಾರಿಸಿಕೊ (ಮಹಾಕಾ. ೦೩). [ ತಯಾರು + – ಇಸು$_{೩}$ ]

**ತಯಾರು, ತಯಾರಿ, ತಯ್ಯಾರಿ** (ನಾ). ಸಿದ್ಧತೆ ; ಸಿದ್ಧಪಡಿಸುವಿಕೆ ; ಏರ್ಪಾಡು ; ಸಜ್ಜು ; ಅಣಿ. **ತಯಾರಿ** : ಇನ್ನೊಂದು ಗ್ಲಾಸು ಎತ್ತಿ ಕುಡಿಯುವ ತಯಾರಿಯಲ್ಲಿದ್ದರು (ದೀಪಹ. I, ೦೫೯). **ತಯ್ಯಾರಿ** : ಮೊದಲು ಚಹಾ ಫಳಾರದ ತಯ್ಯಾರಿ ನಡೀಲಿ (ಧನಂಜ. ೫೬).

**ತಯಾರಾಗು** = ೧. ಸಿದ್ಧವಾಗು ; ಅಣಿಯಾಗು : ಸಂಗಡಿಗರೊಡನೆ ತಯಾರಾಗಿ ಬನ್ನಿರಿ (ನಡದಾ. I, ೪೩೮) ; ಅವಳು ತಿರುಗಿ ಹೊಡೆಯಲು ತಯಾರಾಗುವವರೆಗೂ ಹೊಡೆಯುತ್ತಿರುವುದೇ ಮೇಲು (ಹುಚ್ಚುಹು. ೦೫). ೨. ನಿರ್ಮಾಣವಾಗು ; ಉತ್ಪನ್ನವಾಗು : ಭ್ರೂಣವು ತಯಾರಾಗುವುದು (ಸಸ್ಯಕ. ೦೮). **ತಯಾರುಮಾಡಿಸು, ತಯ್ಯಾರುಮಾಡಿಸು**=ಸಿದ್ಧವಾಗುವಂತೆ ಮಾಡು ; ರಚಿಸುವಂತೆ ಮಾಡು ; ನಿರ್ಮಾಣಮಾಡಿಸು : ಬೆಳೆದು ಬದಲಾಯಿಸುತ್ತಿರುವ ಕನ್ನಡಕ್ಕೆ ತಕ್ಕ ವ್ಯಾಕರಣವೊಂದನ್ನು ತಯಾರುಮಾಡಿಸಿಕೊಡುವ ಕೆಲಸವು ನಮ್ಮ ವಿದ್ಯಾಪ್ರಚಾರ ಇಲಾಖೆಯವರ ದೃಷ್ಟಿಯಲ್ಲಿದೆ (ಸಾಹಿಕ. ೫೮) ; ಕೋಟೆಯನ್ನು ರಚಿಸಿ, ಅದರ ಸುತ್ತ ಅಗಳು ಮುಂತಾಗಿ ತೆಗೆಸಿ ತಯ್ಯಾರುಮಾಡಿಸಿ (ರಾಜೇಂದ್ರ. ೨). **ತಯಾರುಮಾಡು** = ೧. ಸಿದ್ಧಮಾಡು; ಸಜ್ಜುಮಾಡು ; ಅಣಿಗೊಳಿಸು : ಶ್ರೀಪಾದರಾಜರು ದ್ವೈತಮತ ಪ್ರಚಾರಮಾಡಲು . . . ಭಾಗವತರ ತಂಡವೊಂದನ್ನು ತಯಾರು ಮಾಡಿದರು (ಜಗದಾ. ೮೧); ಮೈಸೂರಿನಿಂದಲೇ ತಯಾರುಮಾಡಿ ತಂದಿದ್ದ ಚಿರೋಟಿಗಳನ್ನೂ . . . ಎಲ್ಲರಿಗೂ ಹಂಚಿದರು (ಮೂಲಾನ. ೦೨೩). ೨. ಉತ್ಪಾದಿಸು ; ಉತ್ಪನ್ನಮಾಡು : ಇಂತಹವರು ಇಲ್ಲಿಯೋ, ಹೀಗೆಯೋ ಅದನ್ನು ತಯಾರುಮಾಡಿ ಇಂಥವರ ಮೂಲಕವೇ ಮಾರಿರುವರೆಂಬುದು ತಿಳಿಯದು (ಹಡಪ್ರ. ೧೦).

[ ←ಹಿಂ., ಮರಾ. ತಯಾರ್, ತಯಾರೀ, ತಯ್ಯಾರ್, ತೈಯಾರೀ ; ಪಾರ. ತಯ್ಯಾರ್, ತಯ್ಯಾರೀ ; ಅರ. ತೈಯಾರ್ ]

**ತಯಿಮಾಸ** 'ತ್ರೈಮಾಸ' ನೋ.

**ತಯ್ಯಾನ** (ನಾ). (?) : ಸಡಗರದಿ ಬಹರಗ್ರ ವೈಮಾನ ತಯ್ಯಾನ ತುಡುಕು ತಿಹವೇಣ್ಡಿಸೆಯ ಸಿಂಗರದ ಭಂಗರದೊಳ್ಸಿದೆ ಮಧುಬಲಿ ಬಂಧನ (ಜಿನಮು. ೪೬-೨೯). [ ? ]

**ತಯ್ಯಾರಿ** 'ತಯಾರು' ನೋ.

**ತರ್, ತರು$_{1}$** (ಕ್ರಿ). ತಂದ (ಭೂತಕೃ), ತಂದು (ಭೂತನ್ಯೂ), ತರ್ಪ, ತಹ$_{1}$, ತಾಪ$_{1}$ (ವರ್ತಕೃ), ತಾ$_{1}$, ತಾರ್$_{4}$ (ವಿಧ್ಯರ್ಥ). ೧. ತೆಗೆದುಕೊಂಡು ಬರು: ಪದಿಂಬರ್ ತರ್ಪ ಪೂಜೆಯ ನೊರ್ವನೆ ತರ್ಪಂ (ವಡ್ಡಾರಾ. ೭೬-೪) ; ಪೇರಡವಿಯೊಳ್ ಪಣ್ಫಲಂಗಳ ನಱಸಿ ತಸ್ನಿಮೆಂದು ಪೇಟ್ಬುದುಂ (ಧರ್ಮಾಮೃ. ೨-೧೮೩) ; ತಾರಂ ತಾರರ್ ; ಬಾರಂ ಬಾರರ್ (ಭಾಷಾಭೂ. ೨೨೬ ಉದಾ) ; ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ಮುಂಡಗೆ ಹುವ್ವ ತಾಹೆನಲ್ಲದೆ ಹುಲ್ಲ ತಾರೆನು (ಮಹಾದೇ. ೧೧-೧) ; ಹೊಳಲ ಹೊಱಶೂಲದಲಿ ರಿಪುಗಳ ಸೆಳಸುವೆನು ತಾ ಏಳೆಯುವನು (ಕುಮಾಭೀ. ೧-೬). ೨. ಕರೆತರು ; ಕರೆದುಕೊಂಡು ಬರು : ತಾರಾ ಜಾನಕಿಯಂ ಪೋಗಿ ತಾರಾ ತರಳನೇತ್ರೆಯಂ (ಕವಿರಾ. ೨-೧೨೮) ; ನಾಳಿನೋಲಗದೊಳ್ ತಂದು ಕಾಣಿಸು (ಶಂಖಭಾ. ೯-೨೮ ವ) ; ಆಕೆಯಂ ತರ್ಪುದನುಬಿಯೆ ಬಟಿಕ್ಕಿಲ್ಲ ಬೇಱೊಂದುಪಾಯಂ (ಕಾದಂಪೂ. ೮೫೯) ; ಅಪ್ಸರಗಣಿಕೆಯರು ಕೋಮಳನ ತಂದರು ವಾಸವನ ಸಿಂಹಾಸನದ ಹೊರೆಗೆ (ಕುಮಾದ್ರೋ. ೬-೬೫) : ಅರ್ಧರಾತ್ರಿಯ ಹೊತ್ತಿನೊಳಗಾಗಿ ಸುಗುಣಾನಿರುದ್ಧನ ತಹೆನು (ಮೋಹತ. ೩೧-೧೦); ನಾಲ್ಕೆಂಟು ದಿನದೊಳು ಕಂತುಸನ್ನಿಭನ ನಾ ತಹೆನು (ಕಂನವಿ. ೯-೦೪೫). ೩. ಕೊಡು ; ನೀಡು : ಚಿಂತಿಸದಿರ್ ತಾ ತೋಱು ನಿನ್ನೀ ಬರೆದ ಪಟಮನುತ್ಫುಲ್ಲಪಂಕೇಜನೇತ್ರೇ (ಆದಿಪು. ೩-೪೪) ; ಎನಗೆ ತರಲಾಱದಿರ್ದೊಡಂ ನಿಮಗಪ್ಪನಿತಾಹಾರಮನಿಂದಿನೊಂದು ದಿವಸಕ್ಕಮಱಸಿಕೊಳ್ಳಿಂ (ಶಂಕತಂ. ೦೪೩-೧) ; ಒನಕೆಯುಂ ತಾ ಶಿರದೊಳಾಂ ಸುತ್ತಿದಪೆನೆಂಬಾ ನರನವೊಲು ಆಯಿತ್ತು (ಲಸಪು. ೨೦-೨೧) ; ಅಮಲ ಸುಮತಿಯಂ ತಾಯೆನಗೆ ತಾಯೆ (ಕ್ಷಮಿಭಾ. ೦-೪). ೪. ವಿಸ್ತರಿಸು ; ಚಾಚು : ಕಯ್ದುಗೆ ಕರಮಂ ತರಲಾಱದೆ (ಗದಾಯು. ೪-೩೧). ೫. ಎತ್ತು; ಹೊರಕ್ಕೆ ತರು: ಎಳೆಯಂ ವಿಕ್ರಮದಿಂ ತರಲ್ ಮಹೀಧರಂ ಮುನ್ ಪಂದಿಯಾದಂತೆ (ಶಂಖಭಾ. ೮-೫೫). ೬. ಉಂಟುಮಾಡು : ಮುದಿತ ಸುರಾನಂದ ಬಾಷ್ಪೋದಬಿಂದೂತ್ಕರ ಮೆಂಬಂತಾಗೆ ತಂದತ್ತರಲ ಮಟಿಗಳಿಂ ಪುಷ್ಪಮೇಘಪ್ರತಾನಂ (ಆದಿಪು. ೦೪-೦೦೮) ; ಬವರವಾದರೆ ಹರನ ವದನಕೆ ಬೆವರ ತಹೆನು (ಕುಮಾದ್ರೋ. ೪-೫೬). ೭. ನಿಶ್ಚಯಿಸು ; ನಿರ್ಧರಿಸು : ಅತ್ತ ಮನಂ ತರಲೆವೇಡ (ಸಮುಪ. ೩-೮೧) ; ಈ ಧರ್ಮಮಂ ಪತ್ತುವಿಡಿಸಿ ಮದೀಯ ಧರ್ಮದೊಳೆ ಪತ್ತಿಸುವೆನೆಂಬ ಬಗೆಯಂ ತಂದು ಸೆಟ್ಟಿಗಿಂತೆಂದು (ಧರ್ಮಾಮೃ. ೧-೧೦೯) : ಜನದ ಕೊಲೆಗೆಲಸದ ನಿರೂಪಕೆ ಮನವ ತಂದಳು ಮೃತ್ಯು (ಕುಮಾದ್ರೋ. ೬-೩೫). ೮. ಮದುವೆ ಮಾಡಿಸು ; ಸಂಬಂಧ ಬೆಳೆಯುವಂತೆ ಮಾಡು: ಆತನ ತಂಗೆಯಂ ಜ್ಯೋತಿರ್ಮಾಲೆಯಂ ನಿಮ್ಮ ಮಗನರ್ಕಕೀರ್ತಿಗೆ ತರ್ಪುದು (ದಾವುಂಪು. ೫೦-೧೫). ೯. ಮದುವೆ ಮಾಡಿಕೊಳ್ಳು ; ಸಂಬಂಧ ಬೆಳೆಸು : ಎರಡನೆಯ ಹಿಡಿಂಬಿಯುನೆಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ (ಗದಾಯು. ೨-೯). **ತರು$_{1}$** : ೧. ತಮ್ಮಲ್ಲಿದ್ದ ಪುಡಿದುಡ್ಡುಗಳಿಗೆ ಎಣ್ಣೆಯನ್ನು ಕೊಂಡು ತಂದರು (ರಾವಿಜ. ೨೩) ; ಮರಿಯಾನೆ ಬೆಳ್ಳಿಹೊರೆ ತರುವುದೆಂಬಂತೆ (ಕಾಲೂರ. ೬೩-೧೩೦). ೨. ಎಲೆ ನಾರಿ ನೀನಾತನ ತರುವನಕ ಸಲೆ ಸೈರಿಸದೆನ್ನ ಮನಸು (ಕಂನವಿ. ೯-೦೫೧) : ಅದೇ ದೇವರು ನನ್ನನ್ನು ಇಲ್ಲಿಗೆ ತಂದನೆಂದು ತಿಳಿದುಕೋ (ಮುಂಬಯ. ೪-೭೮). ೩. ತಾರಕ್ಕ ಬಿಂದಿಗೆ ನಾ ನೀರಿಗ್ಹೋಗುವೆ ತಾರೇ ಬಿಂದಿಗೆಯ

(ಪುರಂದ. ೧-೪೯ ಪಲ್ಲವಿ) : ಇಲ್ಲಿ ತಾ ಅದನ್ನು ನಾವಿಬ್ಬರೂ ಸರಿಯಾಗಿ ಹಂಚಿಕೊಂಡು ಬಿಡುವಾ (ಮುಂಬಯಿ. ೪-೩೦) ; ಮಾತು ಬಲ್ಲವ ಮಾಣಿಕ ತಂದ, ಮಾತು ಅರಿಯದವ ಜಗಳ ತಂದ (ಗಾದೆ). ೧೦. ಕೊಂಡುಕೊಳ್ಳು: ತನಗೆ ಹೇಗೋ ದೊರೆತ ದುಡ್ಡು ತರುವ ಪಡಿಪದಾರ್ಥ ಅದು ಗುರು ಲಿಂಗ ಜಂಗಮಕ್ಕೆಂದೂ ಅರ್ಪಿತವಾಗಬಾರದು (ಮೋಳಿಗೆಮಾ. ೦೬೩ ಪ್ರಸ್ತಾವನೆ) ; ದುಡ್ಡಿದ್ದರೆ ಅದನ್ನೂ ತರಬಹುದಿತ್ತು (ರೂಢಿ).

ತಂದಿಕ್ಕು = ೧. ಸಂಪಾದಿಸಿಕೊಡಂ; ತಂದುಕೊಡಂ: ಆವಿರ್ಭಾರುಂ ತಿರಿದು ತಂದಿಕ್ಕಿದಂಜಲೆವುಟುವಮಂ ತಿಂದು (ಆದಿಪು. ೩-೩೪ ವ) : ಇನ್ನುಮಂ ನ್ನೊಡಲೊಳಿನ್ನೀ ಪ್ರಾಣಮುಳ್ಳನ್ನಮೋವದೆ ಕೌಂತೇಯರನಿಕ್ಕಿ ಪಂದಲೆಗಳಂ ತಂದಿಕ್ಕು (ಗದಾಯು. ೯-೨೯) ; ಕಂದಮೂಲಫಲಂಗಳಂ ಪೆಱರ್ ತಂದಿಕ್ಕೆ ತಿಂದು ಆನಂದಮನಸ್ಕರಾಗಿ ನಿಂದ ತಪೋಧನರುಮಂ (ಹಂಪಶತ. ೦೯-೦೦). ೨. ತೆಗೆದುಕೊಂಡು ಬಂದು ಬಡಿಸು,-ನೀಡು : ಮೋನದಿಂದಮುಂಡ್ಡುದು ನಾವೇನಂ ತಂದಿಕ್ಕಿದೊಡಂ (ಧರ್ಮಾಮೃ.೧-೦೬೩). ೩. ಎಸೆ ; ಬಿಸುಡು ; ಕೆಡವು : ಈ ದೊರೆಯನುಮಳವಟೆಯೆ ವಸುಂಧರೆಯೊಳ್ ತಂದಿಕ್ಕಿ ಭಂಗಮಂ ಮಾಡುವೆನೇ (ಆದಿಪು. ೧೪-೧೦೨) : ಇಂತನ್ನಯದಿಂದೀ ಪಟುವಿನೊಳೆನ್ನರಸನನಿಂತು ಬಿದಿಯ ತಂದಿಕ್ಕುವುದೇ (ಪುಪಥಾ. ೨-೩೨). ೪. ತಂದು ಸೇರಿಸು ; ಕೂಡಿಸು ; ಬೆರೆಸು : ಮುಖದರ್ಪಣಕ್ಕೆ ತಂದಿಕ್ಕಿದ ರನ್ನದ ಹಿಡಿ ಸೂದೆಯುಮೋನೆನೆ . . . ಕಂಬುಕಂಧರಮಸೆಗುಂ (ಮಲ್ಲಿಪು. ೩-೭೩) ; ಸಕ್ಕದಮಂ ಪೇಟ್ವೊಡೆ ನೆಟಿ ಸಕ್ಕದಮಂ ಪೇಟ್ಗೆ ಸುದ್ದಗನ್ನಡದೊಳ್ತಂದಿಕ್ಕುವುದೇ ಸಕ್ಕದಮಂ (ಧರ್ಮಾಮೃ. ೧-೪೨). ೫. (ಜಗಳ, ವಿರಸ ಮುಂತಾದುವನ್ನು) ಉಂಟುಮಾಡು : ಆ ಕೊರಮ ಅವರಿಬ್ಬರ ನಡುವೆ ತಂದಿಕ್ಕಿದ (ರೂಢಿ). ತಂದಿರಿಸು = (ಸಮೀಪಕ್ಕೆ) ತಂದು ಇಡು ; ತೆಗೆದುಕೊಂಡು ಬಂದು ಇಡಂ : ಪೆಲೆಯ ಕರುಮಾಡದ ಕಾಂಚನಕಲಶತತಿಯಿನೆಸೆದುದು ಕನಕಾದ್ರಿ ಯನಲ್ಲಿ ಕಡೆದು ತಂದಿ[ಪಾಠಾಂ. ಕಂಡ]ರಿಸಿದವೋಲ್ (ಕಾದಂಪೂ. ೩೦೪) : ಮಂಗಳದ್ರವ್ಯಂಗಳಂ ಕೂಡೆ ತಂದಿರಿಸಿ (ನಂಜಿರ. ೩-೫೯) : ಬೆಟ್ಟವ ಕಿತ್ತು ತಂದಿರಿಸಿದಂದದಿ ಮುಗಿಲಟ್ಟಣೆ ತನೆಗಳಗ್ರದಲಿ ಬಟ್ಟರನ್ನಗಳ ತೆತ್ತಿಸಿದ ಹೊಂಗಲಸಂಗಳಿಟ್ಟರ್ದುವು (ಮೋಹತ. ೨೬-೮). ತಂದೀ=ತಂದುಕೊಡಂ : ಕಾಣಿಕೆಯ ತಂದಿತ್ತರು ಗೀರ್ವಾಣಫಣಿನರರಾಜರು (ತೊರವೆರಾ. ೧-೭-೨) : ಕಂಗೊಳಿಸುವ ಮಾದಳವಣ್ಣ ತಂದಿತ್ತು (ಮೋಹತ. ೪-೩೦). ತಂದುಕೊಡು, ತಂದುಕುಡು = ತೆಗೆದುಕೊಂಡು ಬಂದು ಕೊಡಂ ; ಒದಗಿಸು : ತಂದೆ ತಾಯ್ಗಳು ಮೃಗಗಳಾದವು ಬಂಧು ಬಳಗವು ಖಗಗಳಾದುವು ತಂದು ಕೊಟ್ಟವರಾದರಾ ಮೃಗಗಳು ಕಿರಾತಂಗೆ (ಶಾಳ್ವಭಾ. ೩-೩೦); ಅಂಜನಚೋರಂ ಘುಟಿಕಾಪ್ರಯೋಗದಿಂದದೃಶ್ಯರೂಪದಿಂ ಪೋಗಿ ಕಳ್ದು ತಂದು ಕುಡುವ ಸಮರ್ಥನೆಂಬುದಂ ತಾಂ ಬಲ್ಲಳಪ್ಪುದಱಿಂದ (ಧರ್ಮಾಮೃ. ೨-೦೦೮). ತಂದುಕೊಳ್, ತಂದುಕೊಳು, ತಂದುಕೊಳ್ಳು = ೧. ಕರೆದುಕೊಳ್ಳು ; ಬರಮಾಡಿಕೊಳ್ಳು : ತನಗಱಿಕೆಯು ಮಿಟ್ಟುವನಿಂತು ತಂದುಕೊಂಡರು ಮೊಳರೇ (ಶಾಂತಿಪು. ೩-೭೨) ; ಮುಂಗುರುಳಗರ ಕಣ್ಣಿನೊಳೊತ್ತಿ ಜಲವನು ಹಿಂಗದೆ ತಂದುಕೊಂಡಾಗ ಅಂಗನೆ ಪುಸಿಗೆ ದುಃಖಿಸುತ (ಕಂಸವಧೆ. ೬-೦೬೬). ೨. ತಾಳು ; ಹೊಂದು ; ಪಡೆ : ತಂದೆ ನೀನಹನೆಂಬ ಹಮ್ಮನು ತಂದುಕೊಳದಿರು (ತೊರವೆರಾ. ೧-೯-೩೯). ೩. ಮದುವೆ ಮಾಡಿಕೊಳ್ಳು ; ಮನೆ ತುಂಬಿಸಿಕೊಳ್ಳು: ಮಾವನ ಮಗಳೆ, ತಂದುಕೊಂಡೇನು ತೆರ ಹೇಳೆ (ಹಳ್ಳಿಪಾ. ೫೨). ತಂದುಹಾಕು=೧. ಸಂಪಾದನೆ ಮಾಡು ; ಗಳಿಸಿಕೊಡು: ಹತ್ತು ಜನರ ಸಂಸಾರಕ್ಕೆ ತಂದುಹಾಕುವವ ಒಬ್ಬನೇ ಆದರೆ ಬಹಳ ತೊಂದರೆ (ರೂಢಿ). ೨. (ಜಗಳ, ವಿರಸ ಮುಂತಾದುವನ್ನು) ಉಂಟು ಮಾಡು ; ಕಲ್ಪಿಸು ; ಉತ್ಪತ್ತಿಮಾಡು : ಎನಗೂ ನಿನಗೂ ಹಗೆಯಿಲ್ಲ, ಎನ್ನೆಡೆ ನಿನ್ನೆಡೆ ತಂದುಹಾಕಿದವರ ಹಗೆ (ಸೌಗಂ. ೫೯) : ತಂದುಹಾಕಿ ತಮಾಷೆ ನೋಡಿದ (ರೂಢಿ). ತಂದೊಡ್ಡು = ೧. ಈಡುಮಾಡು ; ಗುರಿಮಾಡು : ವನಿತೆಯುಮಂ ನಂಟರುಮಂ . . . ತೊಱೆದು ತಪಕಂ ತನುವಂ ತಂದೊಡ್ಡಿ (ಧರ್ಮಾಮೃ. ೬-೬೯). ೨. ಉಂಟುಮಾಡು ; ಕಲ್ಪಿಸು : ಆಗ ಮನೋವ್ಯಥೆಯನ್ನುಂಟುಮಾಡುವ ಸನ್ನಿವೇಶಗಳನ್ನು ತಂದೊಡ್ಡಬೇಕು (ಶಿಕ್ಷದ. ೦೦೯). ತರವೇಟ್, ತರಹೇಳು = ೧. ತರುವಂತೆ ಹೇಳು ; ತೆಗೆದುಕೊಂಡು ಬರುವಂತೆ ಹೇಳು : ಸಾರಥಿಯಪ್ಪುದಪ್ಪ ನೆನಗೀತನ ಪೋ ಪೆಱರೇವರಿಂ ನೆರಂಬಾರೆನೆನುತ್ತೆ ತನ್ನ ರಥಮಂ ತರವೇಟ್ಟು (ಪಂಪಭಾ. ೮-೯೦): ಅದು ಪೂಜೆಗಾಗೆ ನೀನೇನಂ ತರವೇಟ್ಟೊಡಂ ತಂದಿತ್ತಪೆನಿದೊಂದು ಮಾತ್ರಂ ಬೇಡ (ಧರ್ಮಾಮೃ. ೨-೧೦೮) ; ತರವೇಟ್ ಮಾಣಿಕ್ಯಭಂಡಾರಮಂ (ಕಾವ್ಯಾವ. ೪೦೩). ೨. ಕರೆತರುವಂತೆ ಹೇಳು ; ಕರೆದುಕೊಂಡು ಬರುವಂತೆ ಹೇಳು : ತರವೇಟ್ಟು[ಪಾಠಾಂ. ಟಿ] ವಿಜಯಪರ್ವತಗಜಮಂ (ಆದಿಪು. ೧೨-೫೩) : ಎನ್ನ ಮಗನನಂತಕವುರದಿಂ ತರವೇಟ್ಟುದು (ಅಜಪು. ೦೦-೧೫) ; ಕನಸಿಂದದಂ ನೆರೆದವನಂ ನೆನಸಿಂ ನೆರೆದಪ್ಪೆನೆಂದು ತರವೇಟ್ಟಪೆ ಕಾಂತನರ (ಆಗವಿ. ೧೭-೦೧೨) : ತರವೇಟ್ ಸಾಳುವ ಮೇಗನಂ ತೊಗರನೂ ಹೊಸ್ಕಾಳನಂ ಜೂಗನಂ (ನಳಚಂ. ೬೬) ; ಆತ್ರಸವರಿಗೆ ನೇಮವನು ಮುನಿಪೋತ್ರಮನ ತರಹೇಳೆ(ತೊರವೆರಾ.೦-೩-೩೪). ತರವೋಗು=ತರಲು ಹೋಗು ; ತೆಗೆದುಕೊಂಡು ಬರಲು ಹೋಗು : ಸಮಿತ್ಕುಶಮಂ ತರವೋಪ ಧೌತವಲ್ಕಲಮನಲುಂಬುದಕ್ಷಮಣಿಯುಂ ಸಮಿಪೀ ವ್ಯವಸಾಯಮೆತ್ತಲುಂ (ಕಾದಂಪೂ. ೩೫). ತರುಬರು = (ಊರಿಗೆ) (ಸಾಮಾನು ಮೊದಲಾದುವನ್ನು) ಕೊಂಡು ತಂದು ಒದಗಿಸು ; ವಹಿವಾಟು ನಡೆಸು: ಜಯಂತನು ಮನೆಯ ತರುಬರುವ ವ್ಯವಸ್ಥೆಯನ್ನು ಮಾಡುತ್ತಿದ್ದನು (ಜಯಂತ. ೦೫೩); ಮನೆಯಲ್ಲಿ ತರುಬರುವ ಸಣ್ಣ ದೊಡ್ಡ ಕೆಲಸಗಳನ್ನೆಲ್ಲ ಅವನೇ ಮಾಡುತ್ತಿದ್ದನು (ಸಂಚಿತ್ರ. ೨೪) : ತರುಬರೋನ ಹೆಂಡತಿ ಅಡಬಲ್ಲಳು. ತಲೆಕೆರೆದುಕೊಂಡು ಉಣಬಲ್ಲಳು (ಗಾದೆ). ತಾರಮ್ಮಯ್ಯ = ಸಣ್ಣಮಕ್ಕಳನ್ನು ಆಡಿಸುವ ಒಂದು ಬಗೆಯ ಆಟ ಮತ್ತು ಆಗ ಹೇಳುವ ಹಾಡು : ಕೈದು ತಾರಮ್ಮಯ್ಯಕ್ಕೆ ತೊಡಲ ನುಡಿಯು ತಿಲ್ಲಾಣ (ಕಾಯ್ಕಾ ಲಿ. ೦೦೯-೩). ತಾರಮ್ಮಯ್ಯ ಮಾಡು = ೧. ತಾರಮ್ಮಯ್ಯಹಾಡು : ಏನೋ ಸಮಯ ಎಂದು ಸಹಾಯ ಕೇಳಿದರೆ ತಾರಮ್ಮಯ್ಯ ಮಾಡಿಬಿಟ್ಟರು (ರೂಢಿ). ೨. ನಟಿಸು ; ಸೋಗುಹಾಕು. ತಾರಮ್ಮಯ್ಯ ಹಾಡು = ನಕಾರ ಸೂಚಿಸು; ಇಲ್ಲವೆಂದು ಕೈಯಾಡಿಸು: 'ಹಣಕ್ಕೇ ಕಷ್ಟವಾಗಿದೆಯಪ್ಪಾ, ನೋಡೋಣ ತಡೆ' ಎಂದು ತಾರಮ್ಮಯ್ಯ ಹಾಡಿದರು (ಜುಲೇ. ೦೭೨). ☞ ಈ ಧಾತು ಹಲವು ಶಬ್ದಗಳ ಜೊತೆಗೆ ಸೇರಿ ಸಂಯುಕ್ತಧಾತುಗಳಾಗಿ ವಿವಿಧವಾದ ಅರ್ಥಗಳಲ್ಲಿ ಬಳಕೆ ಯಾಗುತ್ತದೆ. ಉದಾ: ಎಯ್ತರ್, ಇಱುತರ್, ನಡೆತರ್, ಬೀೞ್ತರ್, ಮಂಸಂದರ್ ಇತ್ಯಾದಿ. [ದೇ.೩ ತಮಿ. ಮಲ. ತರು; ತೆಲು. ತೇರ್]

ತರ್₁ (ನಾ). (ಭಯ ಅಥವಾ ಕೋಪದಿಂದ) ನಡುಗುವುದನ್ನು ಸೂಚಿಸುವ ಒಂದು ಅನುಕರಣ ಶಬ್ದ. 'ತರಗಂಟ್ಟು', 'ಥರ್₁' ಪರಾ.

ತರತರ₁ (ದ್ವಿರುಕ್ತಿ) : ಅದನ್ನು ಕೇಳಿ ತರತರ ಎಂದು ನಡುಗಿದಳು (ರೂಢಿ).

ತರ್₂ (ನಾ). ಸುಂಕ; ತೆರಿಗೆ : ತಿಬುನರಯಂಗಲ್ಲ ಕೊಯ್ದೆಲೆಯ ಹೇಱಿಂಗೆ ವೀಸವೊಂದು ತರ (?ಕೊಟ್ಟರ್) (ಮುಂಬರಾ. XI, ೨೩೪-೨೭ ; 1144). [☞ ಇದು 'ತೆರ' ಎಂಬುದರ ಅಪಲಿಖಿತವಿರಬಹುದು ]

ತರ್₃, ಥರ್₃ (ನಾ). ೧. ಸಾಲು ; ಓಳಿ ; ಕ್ರಮ ; ಪಂಕ್ತಿ : "ತರ ಪರಿವಿಡಿಯೆನಲ್ಕಿವು ಪರಿಯರ್ಥದೊಳ್" (ಕಕರ. ೪೪) ; ತರದಿಂ ದೆಯ್ವದ

ಮೊಗದೊಳ್ ಕರದೊಳ್ ತೊಡೆಯೊಳ್ ಪದಂಗಳೊಳ್ ದ್ವಿಜರೂ ಭೂಪರುಮಂತೆ ವೈಶ್ಯರುಂ ಶೂದ್ರರುಮೋಜೆಯಿನೊಗೆದರೆಂಬರಿನ್ನವು ಪುಸಿಗಳ್ (ಸಮಚ. ೧೧-೫೯); ಇಂತು ತರದಿಂ ಸ್ವಪ್ನಂಗಳನೀರೆಂಟಂ ನೃಪ ಕುಲತಿಳಕನ ಸಿದ್ಧಾರ್ಥನರಸಿ ಕಂಡಳ್ನಲವಿಂ (ವರ್ಧಪು. ೧೩-೬೩); ತರದೆ ಪಾಜಿದುವು ಬೆಳ್ವಕ್ಕಿ ನೂರ್ಲ್ದೆಗೆದಂತೆ (ಅನಂಪು. ೯-೧೩ ರಗಳೆ): ಹರಿಸದೆ ಸಗ್ಗದ ಜತಿಗಳ್ ನೆರೆದಂತೆರಡುಂ ಕೆಲಂಗಳೊಳ್ ತರದಿಂ ಕುಳ್ಳಿರೆ (ಅಭ್ಯಕಾ. ೧೮೫). ೨. ಸರಿಯಾದುದು ; ಯೋಗ್ಯವಾದುದು ; ಉಚಿತವಾದುದು : ತರವಲ್ಲದ ಕಾರ್ಯವ ಕೆಗ್ಗಡೆ ಸುರನರನಾಗಲೋಕ ಮೆಚ್ಚುವುದೇ (ತೊಣಚ. ೭-೫೦); ಇವಳು ನವ್ಮೊಡೆಯಂಗೆ ತರವಾದವಳ್ (ದೇವೀಮ. ೫-೭೩); ಕಯ್ಗೆ ಬಾರದ ಬೇಂಟೆಗಿಂದು ಕಯ್ ತುಡುಕುವುದೆ ತರವಲ್ಲ (ಅಂತಿಗಿ. ೫-೬೬). ೩. ಅಂತಸ್ತು ; ಯೋಗ್ಯತೆ ; ದರ್ಜೆ : ಬರಿಸಿ ಮುಖಿಗಳನವರವರ ತರವಱಿದು ಕೊಡಿಸಿದನು (ಉತ್ತಾಅ. ೩-೩೭). ೪. ಮನೋಹರತೆ ; ಸೌಂದರ್ಯ : ಮುನ್ನ[೦] ಕೆಯ್ಗೆ[ಯ್ಸುತಿರ್ದ] ತರದ ಗುಱುಗೆಯರಪ್ಪಂತಃಪುರ ಪುರಂಧ್ರಿಯರಂ ಕರೆದು (ಪಂಪಭಾ. ೩-೪೪ ವ) : ತವತವಗೆ ಸಿದ್ಧ ಕನ್ಯಾನಿವಹಂ ಸಂಧ್ಯಾರ್ಚನಕ್ಕೆ ಸೂಸಿದ ಕುಸುಮಾಳಿಪೊರೆಸೆಯೆ ಪರೆದು ಕಣ್ಗೊಳಿಪುವು ತರದಿಂ ತುಱುಗಿ ಮಿಱುಪ ತಾರಾನಿಕರಂ (ಕಾದಂಪೂ. ೫೫೦) ; ಅಲರ್ಗಳನಾಂತ ಪಾದರಿಗಳೊಳ್ ತರದಿಂದೆಱಗಿರ್ದ ತುಂಬಿಗಳ್ (ಅಭ್ಯಕಾ. ೫೭). ಥರ$_4$: ೨. ದೊರೆಗಳೊಲುಮೆ ಉಂಟೆಂದೆಲ್ಲರೊಳು ಹಗೆ ಥರವಲ್ಲ [ಪಾಠಾಂ. ದೊರೆ ಎನ್ನ ಬಲವು ಸುಸ್ಥಿರ ವೆಂದೆಲ್ಲರ ಹಗೆ ತರವಲ್ಲ] (ಪುರಂದ. ೨-೪೩-೨) ; ಥರವಲ್ಲದ ಮಾತು ಮರಾ ಏರಿದರೂ ಆದೀತೇ ? (ಗಾದೆ). ೩. ಬೊಕ್ಕಸದಿ ತರಿಸಿದಂ ಧನಕನಕಮಣಿಗಳಂ ದಿಕ್ಕುದಿಕ್ಕಿನ ಧರಣಿಸುರರಿಗಂ . . . ಅವರವರ ಥರವನರಿತು ಇತ್ತನು (ಕುರಂಗ. ೯೧-೩೦).

ತರಂತರ, ತರತರ$_4$, ಥರಥರ$_4$ (ದ್ವಿರುಕ್ತಿ): ೧. ಸಾಲು ; ಪಂಕ್ತಿ ; ಕ್ರಮ : ನವದೂರ್ವಾಂಕುರಮಂ ಪಲ್ಲವಮಂ ಪೂಗೊಂಚಲಂ ತರಂತರದಿಂ ನೀಡುಮಪೊಲ್ಮಣಿಕಿರಣಂ ಪೊಣ್ಮುವಿನಂ ಮಣಿದೊಡವನೊರ್ವಳಂಗನೆಗಿತ್ತಳ್ (ಮಲ್ಲಿಪು. ೪-೬೨) ; ಮುತ್ತು ಪಚ್ಚೆ ಪವಳಂ ವಜ್ರಂ ಸುನೀಲಂ ತರಂತರದಿಂ ಸಾಲಿಡೆ (ಪುಣ್ಯಪು. ೯-೫೪) ; "ತರತರವೆಂದು ಪಂಕ್ತಿಯೊಳ್" (ಶಬ್ದಾನಿ. ೦೨) ; ನೆಲದಾಕಾಶದೆಡೆಯೊಳಂಬುಗಳಂ ತರತರದಿಂದೆಚ್ಚು ಸೋಪಾನಂ ಮಾಡಿ (ಪಂಪಭಾ. ೭-೩೮ ವ) ; ಕಾಮರ್ಣವ ತುಡುಕಿ ತರತರದಲ್ಲೆತಂದು ಬಿಲ್ಲಿನ ತಿರುವ ತೊಡಿಸಲು (ಸಂಭಚ. ೧೯-೨೮) ; ವರ ಸಣ್ಣಕ್ಕಿಯೋಗರ ತೊವ್ವೆ ಪರಿದ್ಮವ ತರತರದಲಿ ಬಡಿಸಿದರು (ಭೋಜಚ. ೩-೩೦). ೨. ಸಮೂಹ ; ಗುಂಪು ; ರಾಶಿ : ಸುರಿವ ಖಂಡದ ರಕುತಧಾರೆಗೆ ತರತರದಿ ದಾಯ್ದೆಗೆದು ಶಾಕಿನಿಯರ ಸಮೂಹವು ಬಳಿಯಲ್ಲೆದಿತು ಪಾರ್ಥನಂದನನ (ಲಕ್ಷ್ಮೀದ್ರೋ. ೩-೪೧) ; ಕರುಣಾಮೃತಾಬ್ಧಿಯ ಕಲ್ಲೋಲಗಳಂತೆ ತರತರ ದೊಳು ಕವಿತರುವ ಸರಸಕಟಾಕ್ಷವನೆಸಗಿಯೆನ್ನೊಳು (ಹದಿಬ. ೦-೫೦) ; ಧುರದೊಳಗೆ ಬಿಲುಗಾಱರೊಗ್ಗಿನ ಹರಿಗೆಕಾಱರು ಹಲಗೆಯವರುಬ್ಬರದ ಡೊಂಕಣೆಕಾಱರಾಂತು ಕೃತಾಂತನಾಲಯುವ ಥರಥರದಿ ತೀವಿದರು ರುಧಿರದ ಹರಹು ಹೇರಾಳಿಸಿತು ಚೂಣಿಯೊಳು (ಉತ್ತಾಭೀ. ೪-೪೬). ೩. ಅಂತಸ್ತು ; ದರ್ಜೆ ; ಮಟ್ಟ : ಕೊಟ್ಟನು ಬಂಗಾರವ ಬಲುಸುರುಳಿನ ಪಟ್ಟೆಯ ಕರಿತುರಂಗಗಳ ಕೊಟ್ಟನವರ ತರತರವಱಿದವನಂತೆ (ಹಾಮುವಿ. ೭-೪೮). ತರದೆ = ನಿರಂತರವಾಗಿ ; ಒಂದೇ ಸಮನೆ : ಅನುಭವಿಸಿದ ಕೋಟಲೆಗಳನಿನಿಸಂದೆಣಿಸಲ್ಕೆ ಮೌಕ್ತಿಕಾಕ್ಷಾವಳಿಯುಂ ಮವಜದಳನಯನೆ ಸಮದಪಳಿಪೆ ಸುರಿದುವು ತರದೆ ತೋರ ಕಣ್ಬನಿದುಱುಗಲ್ (ಕಾದಂಉ. ೨೯೨). [ದೇ.೫ ತಮಿ. ಮಲ. ತುಳು. ತೆಲು. ತರ]

ತರ$_4$ 'ಥರ$_4$' ನೋ.

ತರ$_5$ (ನಾ). ಜವ ; ವೇಗ : "ರಯಂ ಜವಂ ರಂಹಸಂ ತರ ಸ್ಯದಮೆನೆ ವಾಜಮೆನಲೋಟಮಕ್ಕುಂ" (ಮಂಗರಾ. ೮೦-೦೫); "ತರ-ತರಸ್=ವೇಗ" (ಶಬ್ದಕೋ. ೦೭) : ತರದೇಂ ಬರ್ಪುದೆ ತೊಟ್ಟನಿಲ್ಲಿಗೆ ಮಹೀಭೃತ್ಯಂತುಮಂ ದೇವಿ ಮಯ್ಗರೆದಾತಂ ಬರವೇಟ್ಪುಮೆಂದಿರದೆ ನಿನ್ನಂ ತಂದೆ (ಕುಸುಮಾ. ೦೩-೯೭). [ಸಂ. ತರಸ್]

ತರ$_6$ 'ತರಹ' ನೋ.

ತರಂಗ (ನಾ). ೧. ಅತ್ತಿತ್ತ ಅಲೆಯುವುದು,-ಚಲಿಸುವುದು. ೨. ನೀರು, ವಿದ್ಯುತ್ತು, ಶಬ್ದ ಮೊದಲಾದುವುಗಳ ತೆರೆ,-ಅಲೆ: "ವೀಚೀ, ಭಂಗಃ, ತರಂಗಃ – ಈ ೩ ತೆರೆ" (ಹಲಾಯು. ೧೦೯-೩೦) ; "ವಳಿಯೆನೆ ತರಂಗಮದು ಕಾಂ" (ಕವಿಕಂ. ೯೦) : ರಂಗತ್ತುಂಗತರಂಗಭಂಗುರಲಸದ್ಗಂಗಾಜಳಂ (ಪಂಪಭಾ. ೦೪-೩೧) ; ಜಳಧಿ ತರಂಗತಾಚಿತ ಮಹೀಪತಿ ಚಕ್ರಧರಂ ತಪಂಬಡಲ್ (ಅಜಪು. ೧೧-೧) ; ಒದೆವ ಮಂದರವನು ತರಂಗದಲುದಧಿ ಹೊಯ್ವಂದದಲಿ ಹೊಕ್ಕವು ಕುದುರೆ (ಉತ್ತಾಳ. ೧೧-೮) ; ಉಚ್ಚಳಿತ ತರಂಗಪ್ರಪಾತದಿಂ ಚಲಿಯಿಪ ಪಾಂಗಳವಡೆ (ರಾಜಶೇ. ೦೨-೭೪) ; ಪೊಲ್ಮನೆ ಯೊಳಿರ್ದು ಸೀತಾದೇವಿ ತಾನುತ್ಕಂಠೆ, ನೋಡುತಿರ್ದಳ್ ತರಂಗೋಲ್ಲಾ ಸಮಂ (ಶ್ರೀರಾಮಾ. ೩೩೧-೬). ೩. ಭಾಗ ; ಪ್ರಕರಣ ; ಅಧ್ಯಾಯ : ಆ ಒಂದು ಸಾಹಸದ ಸೋಲು-ಗೆಲವುಗಳನ್ನು ಈ ಪ್ರಬಂಧದ ತರಂಗ ತರಂಗ ಗಳಲ್ಲಿ ಯಾರಾದರೂ ಕಾಣಬಹುದು (ಸೌಂದರ ೧, ಮೊದಲಮಾತು). ೪. ಕುದುರೆಯ ಒಂದು ಬಗೆಯ ಗತಿ ; ನಾಗಾಲೋಟ. ೫. [ಛಂದ] ಪ್ರತಿಪಾದದಲ್ಲಿ ಇಪ್ಪತ್ತೊಂದು ಅಕ್ಷರಗಳಿರುವ ಒಂದು ಸಮವೃತ್ತ: ಪಾವಕಂ ತ್ರಿದಿವ ಪಾವಕಂ ದಿವಿಜ ಪಾವಕಂ ಸುರವ ಪಾವಕಂ . . . ಧಾವಿಸಿಂತಿದನೆ ಪೀವರಸ್ತನೆ ತ[ಪಾಠಾಂ. ತು]ರಂಗವುಂ (ಛಂದೋಂಬು. ೨-೦೫೦). [ಸಂ.]

ತರಂಗಭಂಗ (ನಾ). ಅಲೆಗಳು ಒಡೆಯುವಿಕೆ,-ಚೂರಾಗುವಿಕೆ : ಸುಧಾರ್ಣವಮಸದತ್ತು ರತ್ನವಳಯಾಂಚಿತ ತುಂಗತರಂಗಭಂಗದಿಂ (ಮಲ್ಲಿಪು. ೦೨-೧೫೦). [ತರಂಗ + ಭಂಗ]

ತರಂಗಮಾಲೆ (ನಾ). ಅಲೆಗಳ ಸಾಲು : ಕರಿಮಕರಂಗಳುಚ್ಚಳಿತ ಭಂಗುರ ತುಂಗತರಂಗಮಾಲೆಯಿಂ ಖರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀಕರದೊಳೆ ನಾಂದು (ಕಾವ್ಯಸಾ. ೭೮ ಕೊದ್ರಳ).

[ತರಂಗ + ಮಾಲೆ]

ತರಂಗರೇಖೆ (ನಾ). ಅಲೆಯ ಆಕಾರದಲ್ಲಿ ಅಂಕುಡೊಂಕಾಗಿ ಇರುವ ರೇಖೆ,-ಗೆರೆ : ಸಂದೇಹಗ್ರಸ್ತವಾದ ಅಕ್ಷರವನ್ನೋ ಪದವನ್ನೋ ಪಂಕ್ತಿ ಗಳನ್ನೋ ನಿರ್ದೇಶಿಸಲು . . . ಅವುಗಳ ಕೆಳಗೆ ಒಂದು ತರಂಗರೇಖೆಯನ್ನು ಎಳೆದಿರುತ್ತಾರೆ (ಕನ್ನಸಂ. ೨೦೮). [ತರಂಗ + ರೇಖೆ]

ತರಂಗಲಹರಿ (ನಾ). ಅಲೆಗಳ ಸಾಲು,-ಪರಂಪರೆ: ಒಂದೇ ತರಂಗಲಹರಿ ಯಲ್ಲಿ ಬರುವ ಜಾತಿಯವು (ಮೂಕಶೀಕಾ. ೩೨-೨).

[ತರಂಗ + ಲಹರಿ$_1$]

ತರಂಗಲೇಖೆ (ನಾ). ಅಲೆಯ ತಂದಿ : ತಡೆಯದ ಚಿತ್ರವೇತ್ರಧರೆಯಿಂ ರಥಮಂ ಕ್ಷಿತಿಪಾಂತರಕ್ಕದಂ ನಡೆಯಿಸಿದಳ್ ಸವಿಸ್ತಾರಣಸಮುತ್ಥವಿಲೋಲ ತರಂಗಲೇಖೆ ಚೆಲ್ವಿಡಿದ ಸರೋರುಹಾಂತರಕೆ ಮಾನಿತಮಾನಸರಾಜ ಹಂಸಿಯಂ ನಡೆಯಿಸುವಂತೆ ಸುಂದರನತಾಂಸೆಯನಲ್ಪಕಪೋಲಮಾಂಸೆಯಂ (ಶಾಂತಿಪು. ೫-೧೧೨). [ತರಂಗ + ಲೇಖೆ]

ತರಂಗವಾದ (ನಾ). [ವಿಜ್ಞಾ] ಬೆಳಕು ಅಲೆಗಳ ಮೂಲಕ ಪ್ರಸರಿಸುವು ದೆಂಬ ವಾದ : ತರಂಗವಾದವೂ ಬೆಳಕು ಪ್ರಸರಿಸುವಾಗ ಅನುಸರಿಸುವ ನಿಯಮಗಳನ್ನು ಸಾಧಿಸಲು ತಕ್ಕ ತಳಹದಿಯಾಗಿದೆ (ಭೌತವಿ. ೨೦೧).

[ತರಂಗ + ವಾದ$_3$]

**ತರಂಗವಿಕ್ಷೇಪ** (ನಾ). ಅಲೆಗಳ ತುಯ್ದಾಟ,–ಕ್ಷೋಭೆ: ನಕ್ಷತ್ರಮಾಲೆಗಳು . . . ನೀಲಾಂಬರದಲ್ಲಿ ತೇಲಾಡುವುದಾದರೆ ಅದಾ ಸಾಗರದ ತರಂಗ ವಿಕ್ಷೇಪದ ಸ್ವರೂಪಕ್ಕೆ ಹೋಲುವುದು (ಕಪಾಕುಂ. ೧೮).
[ ತರಂಗ + ವಿಕ್ಷೇಪ ]

**ತರಂಗಾಭ** (ಗು). ಅಲೆಗಳಂತಿರುವ : ಸಾರಸಾರಸನಾದಾಮಸಾರಸಾರ ನಿತಂಬೆಯಂ ತಾರಾತಾರಾತರಂಗಾಭಾಕಾರತಾ ರ ಮ ಣೀ ಯ ಯ ಂ (ಕವಿರಾ. ೨-೧೩೦). [ ಸಂ. ]

**ತರಂಗಿಣಿ** (ನಾ). ೧. ತೆರೆಗಳಿಂದ ಕೂಡಿದುದು ; ಹೊಳೆ ; ತೊರೆ; ನದಿ : "ಹ್ರದಿನಿ ತರಂಗಿಣಿ . . . ಧುನಿ ತೊಱೆ" (ವಸ್ತುಕೋ. ೨೩-೧೧) : ನಿರವದ್ಯ ನಿಖಿಲ ವಿದ್ಯಾತರಂಗಿಣೀಸಂಗದಲಿ ತೋಱುವ ಸುಳಿಯಂತಿರೆ . . . ಗಂಭೀರ ನಾಭಿಮಂಡಲಮಸೆಗುಂ (ಕಾದಂಪೂ. ೬೩೬); ಸೀತಾ ತರಂಗಿಣೀತರಂಗೋತ್ಕರೆಯುಂ ನೀಲಾಚಲ ವಿಚಿತ್ರರತ್ನಕಟಕಮುಂ . . . ತನಗೆ ಸಹಜಾಭರಣಮಾಗೆ (ಮಲ್ಲಿಪು. ೩-೨೩ ವ); ನವೀನ ನಿಜಭಕ್ತಿತರಂಗಿಣಿ ಮಿಱುತುಬ್ಬುರಂಬರಿಯುತುಂ (ಶಂಪಾಶ. ೬); ಲಕ್ಷ್ಮಣದೇವನೆಸೆದನಯ್ . . . ನೆರೆಯೇರ್ದ ಮಳೆಗಾಲದ ಮಹಾ ತರಂಗಿಣಿಯ ಧೀರ ಶೈಲಿಯಲಿ (ಶ್ರೀರಾಮಾ. ೨೬-೬೮೮). ೨. [ಸಂಗೀತ] ಒಂದು ರಾಗದ ಹೆಸರು : ತರಂಗಿಣಿ–ಚಾರುಕೇಶಿ (ಸಂಗೀಶಂ. ೯೬). [ ಸಂ. ತರಂಗಿಣೀ ]

**ತರಂಗಿತ** (ಗು). ಅಲೆಗಳಿಂದ ಕೂಡಿರುವ; ತೆರೆಗಳಿದ್ದಿರುವ ; ಅಲೆಅಲೆಯಾಗಿರುವ : ದೂರದ ತರಂಗಿತ ದಿಗಂತದಲಿ ಚೈತ್ರರವಿ ಮುಗಿಲ ನೆತ್ತರ್ಗೆಂಪಿನಲಿ ಮುಳುಗುವೋಲಂತೆ (ಶ್ರೀರಾಮಾ. ೧೯-೩೬೮). [ ಸಂ. ]

**ತರಂಗಿಸು** (ಕ್ರಿ). ೧. ಅಲೆಯಂತೆ ಚಲಿಸು,– ಸಂಚಲವಾಗು : ಮತ್ತಂ ವಳಿವಕ್ರತೆಯನೀವ ವಹಣಿ ತರಂಗಿಸುವ ತಿರುವು ಸುಳಿಗೊಳ್ವ ಹೆಂಪು ಇಂಪಂ ಕಱಿವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ (ಗಿರಿಕ. ೨-೦೦೫ ವ); ಘನಮೃದುತರ ಮೃದಂಗಗತಿ ರಯಿಸಲು ತರಂಗಿಸುವ ತಾನಮಾನಂಗಳ ಸುಗೀತಂಗಳು (ಸೌಂದಪು. ೦-೯೦). ೨. (ಅಲಂ) ಸಂದಣಿಸು ; ದಟ್ಟಯಿಸು : ಕಿಲಬಿಲದೊಳ್ ತುರಂಗಬಲಂ ತರಂಗಿಸೆ ಪದಾತಿಬಲಂ ಪಡಿಸಲಿಸೆ (ಸಂಬಿರ. ೦೨-೦೯) ; ತರಂಗಿಪ ತನು ಕಾಂತಿಯಿಂದ ಶೃಂಗಾರರಸ ತಾನೆ ಸ್ತ್ರೀರೂಪನಾಂತ ಬೆಡಂಗಿನೊಳಿರ್ದಳಾ ಕನ್ನೆ (ಧರಚ. ೫೮-೯೬). [ ತರಂಗ + – ಇಸು$_4$ ]

**ತರಂಗು** (ನಾ).=ತರಂಗ ೨ : "ತರಂಗ–ತರಂಗು; ದಂಡ–ದಂಡು" (ಶಮದ. ೨೭೮ ವೃತ್ತಿ); "ತರಂಗು – ತರಂಗ = ನೀರ ತೆರೆ" (ತದ್ಭಕೋ. ೧೬).
[ <ಸಂ. ತರಂಗ ]

**ತರಂಗೊಳ್** (ಕ್ರಿ). ೧. ಸಾಲುಗೊಳ್ಳು ; ಕ್ರಮವನ್ನು ಹೊಂದು : ತರಂಗೊಂಡಿಕ್ಕಿದ ಹೊಸ ಹೊಂಗೇದಗೆಯಸಲ್ಗಳ್ (ಜಮಚ. ೫-೬). ೨. ಸಾಲುಗೊಳಿಸು ; ಕ್ರಮಪಡಿಸು : ಎಣಿಸಿ ತರಂಗೊಂಡು ನಕ್ಷತ್ರಮಂ ಪೇರಾರಾನುಂ ಬಲ್ಲರೆ (ಎಕ. VII, ಶಿವಮೊ. ೬೯-೮೬ ; 1112). ೩. ಒಟ್ಟುಗೂಡು ; ಗುಂಪುಗೂಡು ; ಮೇಲೆ ಮೇಲೆ ಒದಗಂ : ವಿತತ ಪ್ರಾಚ್ಯಾದ್ರಿಪೀಠಾಗ್ರಿಮದರುಣಶಿಲಾವ್ಯತ್ಯಲಿಂಗಂಬೊಲಿಂಬಾಯ್ತು ತರಂಗೊಂಡೇಟ್ಗೆಯಿಂ ರಾಗದಿನುಪಚಿತಚೇತಶ್ಚಕೋರೀಕದಂಬಂ (ಜಗವಿ. ೧೬-೦೦೯) ; ಅಖಿಲವಿಮಾನ ತರಂಗೊಂಡು ತಡೆಯದೆ ನೂಂಕೆ (ಧರಚ. ೫೭-೮೫). ೪. ಮನೋಹರವಾಗು ; ಸುಂದರವಾಗು : ಇದೇಲಾವನ ವೊಡ್ಡುಗೊಂಡ ಕದಳೀಕಾಂಡಂ ತರಂಗೊಂಡ ಚೂತದ ಸಾಲ್ (ಶಂಕಾಮಾ. ೦-೦೦೦).

**ತರತರಗೊಳ್ಳು** (ದ್ವಿರುಕ್ತಿ) : ದಂಡಧರ ಸೇನಾಧಿಪರು ಉದ್ದಂಡ ರಾಜರು . . . ತಂಡತಂಡದಿ ನಮಿಸಿ ತರತರಗೊಂಡು ಕುಳಿತಿರೆ (ಬಿಜ್ಜಪು. ೬೬-೦೩). [ ತರ$_3$ + ಕೊಳ್$_1$ ]

**ತರಂಗೊಳಿಸು** (ಕ್ರಿ). ಕ್ರಮಪಡಿಸು ; ಓರಣಗೊಳಿಸು : ತೆಗೆದು ತರಂಗೊಳಿಸಿದ ಪಂಚವರ್ಣಗೆಯ ಪಟ್ಟೆಯ ಸಿಂಗರಿಸಿದ ಮಕರತೋರಣದ . . . ವೈಢೂರ್ಯದ ಲೋವೆಯ ಗಾಡಿವಡೆದ ಮಂಟಪದ ಮಧ್ಯದಲ್ಲಿ ನೆರೆದ ವಿಬುಧರಿಂ (ರಾಜಶೇ. ೮-೫ ವ).
[ ತರಂಗೊಳ್ + – ಇಸು$_3$ ]

**ತರಂಟು** 'ತಱಂಟು' ನೋ.

**ತರಂಡ$_1$** (ನಾ). ನೀರಿನ ಮೇಲೆ ಹೋಗುವ ಸಾಧನ; ತೆಪ್ಪ; ದೋಣಿ: ಎಸೆವ ವಾರ್ಧಿಯಂ ನೋಡುತುಂ ಕೊಂಡಾಡುತುಂ ತರಂಡದ ಮೇಲವ ರ್ಪೋಗುತಿರೆ (ಶಬ್ದಕಾ. ೧೦-೦೬೬) : ಕುಲುಷಜಲಮುತ್ತರಿಪೊಡವದಿರ ಲಲಿತಪದಧೂಳೀತರಂಡಂಗೊಳದೆ ಶಕ್ತನೆ ಮಾನವಂ ದುರ್ವಾರನವಂಧ್ಯ ದೃಶಂ (ವಿಜೀಥ. ೦೨-೬). [ ಸಂ. ]

**ತರಂಡ$_2$** (ನಾ). ಒಂದು ಬಗೆಯ ಸಸ್ಯ (?) : "ಗ್ರಂಥಿಫಲಾ – ತರಂಡ" (ಓಷಧಿ. ೯೬). [ ? ]

**ತರಂಬಿಡಿ, ತರವಿಡಿ, ಥರಂಬಿಡಿ, ಥರವಿಡಿ** (ಕ್ರಿ). ೧. ಸಾಲುಹಿಡಿ ; ಕ್ರಮವನ್ನು ಹೊಂದು : ದೆಸೆದೆಸೆಯೊಳ್ ತರಂಬಿಡಿದು ಪಾಱುವ ವೀರರ ಸೆಕ್ಕೆ (ಎಕ. VII, ಶಿಕಾರಿ. ೨೪೨-೨೨ : 1163). ೨. ಚೆಲುವಾಗು ; ಮನೋಹರವಾಗು : ಎಡ್ಡವಾದ ಪಡ್ಡಳಿಯ ಕಿಱುನನೆಯ ಕೊನೆ ತರಂಬಿಡಿದು ತೋಱ ಮೂಱುಂ ಧಾರೆಗಳನಳವಡಿಸಿದ ಕಿಂಕಿರಾತದೆಸಟಿ ಕಂಕಣಂಗಳುಮಂ (ಜಗವಿ. ೬-೦೬ ವ) ; ಪರಿವಿಡಿಯಿಂ ತರಂ[ಪಾಠಾಂ. ದಿತ್ತರಂ]ಬಿಡಿದು ಕಂದರ್ಪನಂ ಪಿಂದುಗಳೆವಂದವಂ ತಳೆದು ನಿಂದ ರಾಜಪುತ್ರರಿಂ (ರಾಜಶೇ. ೫-೦೯ ವ). **ತರವಿಡಿ:** ೧. ತರವಿಡಿದು ಹಡಪದಾರತಿಯ ಮಜ್ಜನದ ಸಿಂಗರದ ಭೂಷಣ ಯಕ್ಷಕರ್ದಮದ . . . ನೆರವಿಗಳ್ಸಹಿತ ಪುಷ್ಪಕವೇಱ (ಲಕಿಚಂ. ೦೩-೬); ಕುರುಬಲನಿಕರ ತಳಿತುದು ತರವಿಡಿದು ಕಳನೊಂದು ಮೂಲೆಯಲಿ (ಕುಮ್ಯಾಕ. ೨-೯). ೨. ಚಿಮ್ಮುವ ಚಾಮರದ ತರವಿಡಿದ ಸೀಗುರಿಗಳ ವಿಡಾಯಿಯ ನೊಸಲ ಬಾಸಿಗದ . . . ರಾಜಕುಮಾರಕರು ನಡೆತಂದರೊಲವಿನಲಿ (ಕೊರಚಾ. ೧-೦೬-೯೦). **ಥರಂಬಿಡಿ :** ೧. ಸಿರಿ ಸತಿಯರ ಸಾಲ್ವಿಡಿದಿಹ ಸರ್ವಾಮರನಿಚಯದ ಮುಂದೆ ಥರಂಬಿಡಿದಿಪ್ಪ ದಿಶಾಧಿಪರಂ ಬಳಸಿದ ಮನುಮುನಿತತಿಯಿಂ ಸಭೆಯೊಪ್ಪಿದುದು (ವೀರೇಚ. ೧-೦೫). **ಥರವಿಡಿ:** ೧. ಅಂಗಣದ ವೀಧಿಗಳ ಥರವಿಡಿದಂಗಡಿಯ ಪುಣ್ಯೋಪಕರಣದ ತುಂಗರಚನೆಯ ರಾಜಮಾರ್ಗದ ವರಪತಾಕೆಗಳ . . . ಈಕ್ಷಿಸುತ ನಡೆದರು (ನಿಘಗ. ೦೦-೩೬-೩೦).

**ತರತರಂಬಿಡಿ** (ದ್ವಿರುಕ್ತಿ) : ೧. ಸಾಲಾಗು ; ಕ್ರಮವಾಗಿರು ; ಓಳಿಗೊಳ್ಳು : ಗಜಘಟಾಫಳಕ ಕರಿಮಕರ ಕೈಗೈದ ಬಿಳಿಯ ಚಮರಿಗಳು ನೊರೆ ತರತರಂ[ಪಾಠಾಂ. ಥರಥರಂ] ಬಿಡಿದ [ಪಾಠಾಂ. ಬಿಡದೆ, ವಿಡಿದ] ಛಟ್ಟುಗಳು ತೆರೆತೆರೆಯ ಬಳಗ (ಸೋಮಚ. ೫-೩೦) ; ಮಹಾವಿಭವದಿಂ ಪರಿಪರಿಯ ಬಣ್ಣದಾರತಿಗಳಂ ಹೊನ್ನ ಹರಿವಾಣಂಗಳೊಳ್ ತುಂಬಿಸಿ ತರತರಂಬಿಡಿದು ನಡೆತಂದು . . . ನಿವಾಳಿಸಿ ಬಿಸುಟು ತೂಪಿಱದು (ಹಲಪು. ೫-೧೯). ೨. ಮನೋಹರವಾಗು; ಚೆಲುವಾಗು: ಮತ್ತಮಾಸ್ಥಾನಮೆಂಬ ನೀರ್ ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದುಗುಡಿಸಿದ ರತ್ನರಾಶಿಗಳೆ ವೆಂಬಂತೆ ಮಣಿನಿಕರಖಚಿತ ಮಕುಟಕೋಟಿಗಳ್ ಮೆಱೆಯೆ (ಗಿರಿಕ. ೨-೦೦೫ ವ). [ ತರ$_3$ + ಪಿಡಿ$_1$ ]

**ತರಂಬೆಱು** (ಕ್ರಿ).=ತರಂಬಿಡಿ ೧: ನೆರೆನೆರೆದು ತರಂಬೆತ್ತು ಭರ್ಮಹರ್ಮ್ಯಂಗಳೊಳ್ಕೂರ್ಮೆಯಿಂ ನೋಳ್ಪ ಪೊಳಲ್ವೆಂಡಿರ ಕಣ್ಗೆ ಕೌತುಕಾವಹಮಾಗೆ ನರೇಂದ್ರಂ ತುರಂಗಮಂ ಕರತಳಾಸ್ಫಾಳನಂಗೆಯ್ದು (ರಾಜಶೇ.೦೩-೬೬ ವ).
[ ತರ$_3$ + ಪೆಱು$_1$ ]

**ತರಕಟ** 'ತಱಕಟ' ನೋ.

**ತರಕಟಾಲು** (ಗು). ಕೆಲಸಕ್ಕೆ ಬಾರದ; ಉಪಯೋಗವಿಲ್ಲದ: ತರಕಟಾಲು, ಕ್ಷುದ್ರ,-ಮನುಷ್ಯ (Scrub. ಇಂಕಿನಿ.) ; ಅದು ನಿಮ್ಮ ತರಕಟಾಲು ಗಡಿಯಾರದ ಹಾಗಲ್ಲ (ಸಾಹೇಬ್. ೯೪). 'ತಟಕಟ' ಪರಾ.
[ ←ತೆಲು. ತರಕಟ, ತಟಕಟ = ವ್ಯರ್ಥ, ಪೊಳ್ಳು ]

**ತರಕಲು** (ನಾ). ೧. ಒರಟಾದಂದು ; ನಯವಿಲ್ಲದಂದು. ೨. ಕಲ್ಲು, ಮರಳುಗಳ ಸಣ್ಣ ಕಣ. ೩. (ಧಾನ್ಯಗಳ) ನುಚ್ಚು; ತರಿ; ರವೆ: (+).
ತರಕಲು ತರಕಲು (ದ್ವಿರುಕ್ತಿ) : ಅವರು ಆ ಕಡ್ಡಿಯನ್ನು ಪೆಟ್ಟಿಗೆಯ ಮೇಲೆ ತರಕಲು ತರಕಲಾಗಿದ್ದ ಕಡೆ ಸ್ವಲ್ಪ ತಿಕ್ಕಿದರು (ಕೆಳಹು. ೯೮) ; ಅವರ ಮೈಯೂ ಮೊಸಳೆಯ ಚರ್ಮದಂತೆ ತರಕಲು ತರಕಲು (ನನ್ನೂರು. ೩೮)... [ ತರಕು + – ಅಲು ( < – ಅಲ್₂)./ ತೆಲು. ತರಕಲು ]

**ತರಕಷ್** 'ತರಕಸ' ನೋ.

**ತರಕಷಿ** 'ತರಕಸ' ನೋ.

**ತರಕಸ**, ತರಕಷ್, ತರಕಷಿ (ನಾ). ೧. ಬಾಣದ ಕೋಶ ; ಬತ್ತಳಿಕೆ : ತರಕಸ ಸಿಂಗಾಡಿ ಕೂರಂಬು ಪೇಡೆಯ ಕರವಾಳು (ಕಂಪ್ರಸಾ. ೨೦-೫೪) ; ಸರಳು ತುಂಬಿದ ತರಕಸ ಸಿಂಗಾಡಿಗಳಿರದ ಸಾಸಿರ ಬಂಡಿಗಳಲಿ ಪರಿಪೂರ್ಣದಲಿ ಬರುತಿರ್ದುವು (ಕೆಂನವಿ. ೦೦-೩೭) ; ಬೆನ್ನ ಬಳಿಯ ತರಕಸ (ಬತ್ತಳಿಕೆ) ಗಳನ್ನು ಪುಡಿಮಾಡಿದರು (ಕರ್ಣಾಟ. ೦೪೭). ೨. ಅಂಬು; ಬಾಣ: ಅದಜ ಮೇಲಿದ್ದ ಬಲ್ಲಹಂಗೆ ಬಲ್ಲೆಹ ಟೌಳಿ ಸುಲಲಿತ ತರಕಸ ಸಿಂಗಾಡಿಗತ್ತಿ (ಹುಂಕಬಂ. ೬೪) ; ತರಕಸ ಸಿಂಗಾಡಿ ಕರದೊಳು ಬಲ್ಲೆಯ ತುರಗದ ಮೇಲೆ ಕತ್ತಿಗಳು . . . ಠೌಳಿಯನಾಂತುರವಣಿಸಿತು ರಾವುತರು (ಅಂಜಕ. ೬-೬೦). ೩. ಬಿಲ್ಲು; ಧನುಸ್ಸು : ಪೊನ್ನ ಬತ್ತಳಿಕೆಯಂ ಬೆನ್ನೊಳ್ಕಳೆದು ತರಕಸ ಮನೆದವಗೆರೊಳ್ಕೊಡರ್ಚಿ (ರಾಜಶೇ. ೬-೦೦ ವ). **ತರಕಷ್:** ೨. ಮೊದಲು ತರಕಷ್ ಕಮಾನ್ ಲಡಾಯಿ ಆಯಿತು (ಚಿಕ್ಕದಾ. ೩೭). **ತರಕಷಿ :** ೨. ಅನಂತರ ರಾಜಭೂವರರು ಖಾಸಾ ಆನೆಗಳಿಗೆ . . . ಸವಡೋಲು ಹಾಕಿಸಿ ತರಕಷಿ ಕಮಾನುಗಳನ್ನು ಆ ಸವಡೋಲಿನಲ್ಲಿಡಿಸಿದರು (ಬಖೈರು. ೦೪).
[ ←ಹಿಂ. ತರಕಸ್, ತರಕಶ್, ತೀರಕಸ್ ; ಮರಾ. ತರಕಸ್, ತರಕಶ್, ತರ್ಕಶ್ ; ಪಾರ. ತರ್‌ಕಶ್, ತೀರ್‌ಕಶ್ ]

**ತರಕಾರಿ**, ತರ್ಕಾರಿ₂ (ನಾ). ೧. ಕಾಯಿಪಲ್ಯ ; ಅಡುಗೆಗಾಗಿ ಬಳಸುವ ಸಸ್ಯ, ಕಾಯಿ ಮೊದಲಾದಂವು : ಮಾರುಕಟ್ಟೆಯಿಂದ ತಂದ ತರಕಾರಿಗಳನ್ನು ಮೊದಲು ತೊಳೆದು . . . ಕೊನೆಗೆ ಬೇಯಿಸುವುದಷ್ಟೆ (ಅಡುಗೆ. ೦೨) ; ರಾಧಾಬಾಯಿ ತರಕಾರಿ ತರಲೆಂದು ಕೆಲಸದ ಆಳಿನ ಜೊತೆಗೆ ಮಾರ್ಕೆಟಿಗೆ ಹೋದರು (ವಾತ್ಸಲ್ಯ. ೨೫) ; ತರಕಾರಿ ತೋಟಗಳನ್ನು ಮಾಡಬೇಕಾದರೆ ನೀರು, ಗೊಬ್ಬರ ಇವುಗಳ ವಸತಿ ಚೆನ್ನಾಗಿರಬೇಕು (ವ್ಯವಮ. ೫೪). ೨. ತರಕಾರಿಯನ್ನು ಬೇಯಿಸಿ ಮಾಡಿದ ಪಲ್ಯ : ತರಕಾರಿ ಊಟಕ್ಕೆ ಸೊಗಸು ಕೊಡುತ್ತದೆ (ರೂಢಿ). **ತರ್ಕಾರಿ₂:** ೧. ತರ್ಕಾರಿ ತರಲು ಚಿಲ್ಲರೆ ತೆಗೆದುಕೊಳ್ಳಲು ಅಂಗಿಯ ಜೇಬಿಗೆ ಕೈಹಾಕುತ್ತಾನೆ (ನಡದಾ. I, ೩೧೨). [ ←ಪಾರ. ಹಿಂ. ಮರಾ. ತರಕಾರೀ ]

**ತರಕಿ**, ತರಕ್ಕಿ(ಗು). ೧. ಬಲವಾದ; ಹೆಚ್ಚಿನ; ಮೇಲಾದ: ದುರುಳ ದೈತ್ಯರ ಕೊಂದು ನಾರಿಯರಿಗೊಲಿದು ನೀ ಸರಕು ಮಾಡದೆ ಜಾಂಬವಂತನೊಡನೆ ತರಕಿ ಯುದ್ಧವ ಮಾಡಿ ತಪ್ಪದೆ ಮುರಹರಾ ಕೌಸ್ತುಭ ಸ್ಯಮಂತಮಣಿ ಮುದ್ದು ಕನ್ನಿಕೆಯ ಕರಗ್ರಹಣವನೆ ಮಾಡಿ (ಶ್ರೀಕೃಪಾ. ೦೪). **ತರಕ್ಕಿ :** (ನಾ). ೨. ಏಳಿಗೆ ; ಅಭಿವೃದ್ಧಿ ; ಉನ್ನತಿ : ನಿಮ್ಮ ತರಕ್ಕೀ ಸಲುವಾಗಿ ನಾನೇಸ್ವತಃ ನಿಮ್ಮನ್ನು ರಿಕಮೆಂಡ್ ಮಾಡಿ ಕಳಿಸೀನಿ(ಜೀದಾನ. ೬೨).
[ ←ಮರಾ. ತರಕೀ ; ಪಾರ. ಅರ. ಹಿಂ. ತರಕ್ಕೀ ]

**ತರಕು**, ದರಕು, ದರಗು₂, ದೊರಗು (ನಾ). ೧. ಒರಟಾದುದು; ನಯವಿಲ್ಲದುದು. ೨. ತರಿತರಿಯಾದುದು; ನುಚ್ಚು : (+). **ದರಕು :** ೧. 'ದರಕಂದನಿ' ಪರಾ. **ದರಗು₂ :** ೧. 'ದರಗುನಾಲಗೆ' ಪರಾ. **ದೊರಗು:** ೧. ಒರಟಾದ ನೆಲ ಇಲ್ಲವೆ, ದೊರಗಿನ ಮೈಯುಳ್ಳ ಪದಾರ್ಥ (ಶಾಂಕ್ಯ. II, ೮೦೪) ; ಪಾತ್ರೆ ಒರಸುವ ವಸ್ತ್ರ ದೊರಗಾಗಿ ಟವಲಿನಂತೆ ಇರಬೇಕು (ಅಡುಗೆ. ೪೭).
ತರಕುತರಕು (ದ್ವಿರುಕ್ತಿ) : ಹಿಟ್ಟು ತರಕುತರಕಾಗಿದೆ (ರೂಢಿ).
[ < ತಱು₃. / ತಮಿ. ತರಿಚು; ಮಲ. ತರಿಸು; ತುಳು. ದೊರಗ್ ]

**ತರಕ್ಕಿ** 'ತರಕಿ' ನೋ.

**ತರಕ್ಕು** (ನಾ). ಒಂದು ಬಗೆಯ ಭೂಮಿ (?) : ಮುಕ್ಕಣ್ಣ ಕತ್ತು ಮಣುಮ್ಮನೆಯುಮ್ಮಾಟುಪ್ಪಟ್ಟಿಯುಂತರಕ್ಕುಮತ್ ಒಡೆಲನ್ (ಮೈಅರಿ. ೦೪೪೨, ೩೦-೫೪.; 610). [ ? ]

**ತರಕ್ಷು** (ನಾ). ೧. ಹುಲಿಯ ಜಾತಿಗೆ ಸೇರಿದ, ಮೈಮೇಲೆ ಪಟ್ಟೆಗಳುಳ್ಳ ಒಂದು ಬಗೆಯ ಪ್ರಾಣಿ; ಕಿರುಬ. ೨. ಹುಲಿ; ವ್ಯಾಘ್ರ: "ವ್ಯಾಘ್ರಃ, ದ್ವೀಪೀ, ಪುಂಡರೀಕಃ, ತರಕ್ಷುಃ, . . . ಮೃಗಾರಿಃ – ಈ ೭ ಹುಲಿ" (ಹಲಾಯು. ೩೮-೬೩) ; ವಾಯಸಗೃಧ್ರಸಂಕುಳವೃಕಪ್ರಕರೋರು ತರಕ್ಷು ಋಕ್ಷ ಗೋಮಾಯು ನಿಕಾಯಮಂ ತಣಿಪಿ (ಶಂಕರಶಂ. ೬೦-೦೦೭); ಎರಲೆಯ ಕೋಡಿಂ ಕಣ್ಣಂ ತರಕ್ಷು ತುಱುಸಿದುವು ನೆಱೆದು ಸಿಂಗದ ಮಱೆಗಳ್ ಶರಭದ ಕೆಲದೊಳ್ ನಲಿದುವು ನಿರವದ್ಯಚರಿತ್ರನಿರ್ದ ಮಹಾಶ್ರಮದೊಳ್ (ಮಲ್ಲಿಕಾ. ೦೪-೦೫); ತರುಣ ವನಹರಿಣಯುಗವಂ ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ (ಯಶೋಚ. ೧-೪೭); ಕನಲ್ಕೆಯಿಂ ನೋಡಿ ಕಡಂಗಿ ಗರ್ಜಿಪ ತರಕ್ಷುಗಳೊಪ್ಪುಗುಮಾ ವನಾಂತದೊಳ್ (ರಾಜಶೇ. ೩-೬೩). [ ಸಂ. ]

**ತರಗ** 'ತಱಗು' ನೋ.

**ತರಗಡಿ** (ಕ್ರಿ). ಸಾಲನ್ನು ಕಡಿ; ಗುಂಪಿನಿಂದ ಬೇರೆಮಾಡು: ಪಿಂಕೊಂಡು ಬಹ ಸೇನೆ ತರಗಡಿದು ಕರಗಡಿದು ನೂಂಕಿದರು (ಜನಮು. ೩೪-೨೫).
[ ತರ₃ + ಕಡಿ₃ ]

**ತರಗಡೆ** (ನಾ). ಕೊರತೆ ; ನಷ್ಟ ; ಹಾನಿ : ಅಪಹಾರಃ, ಅಪಚಯಃ – ೨ ಹಾನಿಯ ಪೆಸರು. ಕೊಯಿಲು, ಕಸುಗೊಳ್ಳುವಿಕೆ, ತರಗಡೆ ಬರುವಿಕೆ (ಸಿದ್ಧಾಂತಿ. ೩೦೦). [ < ತಟಕಟ ]

**ತರಗತಿ** (ನಾ). ೧. ವರ್ಗ ; ಇಯತ್ತೆ; ಕ್ಲಾಸು : ಕೊನೆಯ ತರಗತಿಯವರೆಲ್ಲಾ ನುಗ್ಗಿ ಖುರ್ಚಿಗಳನ್ನು ಆಕ್ರಮಿಸಿ . . . ಕಲ್ಲುಗಳನ್ನು ತೆಗೆದುಕೊಂಡು ಹೊಡೆಯಲಾರಂಭಿಸಿದರು (ರಾಯಚೆ. ೬೭) ; ಪ್ರಥಮ ಮಧ್ಯಮ ತರಗತಿಯ ಪಾಠಗಳನು ಮನೆಯೊಳೆ ಹೇಳಿದರೆನಗೆ (ಇಂಜಾಕ. ೧೪-೫೮). ೨. ಮಟ್ಟ ; ದರ್ಜೆ : ಸಲಕರಣೆಗಳು . . . ಒಳ್ಳೆಯ ತರಗತಿಯವುಗಳಾಗಿರಬೇಕು (ಅಡುಗೆ.೩೨): ಬಿ. ಎ. ಪರೀಕ್ಷೆಯಲ್ಲಿ ಅತಿಉಚ್ಚ ತರಗತಿಯಲ್ಲಿ ಉತ್ತೀರ್ಣನಾದನು (ಸಸ್ಯಶ. ೯೫). ☞ಇದನ್ನು 'ತರ+ಗತಿ' ಎಂಬ ಸಂಸ್ಕೃತ ಶಬ್ದಗಳಿಂದ ರೂಪಿಸಿಕೊಂಡಿರಬಹುದು. ತರ = ತರಣ, ಗತಿ = ಗಮನ. [ ?. / ತೆಲು. ತರಗತಿ ]

**ತರಗಬರಗ** 'ತಾಱುಗಬೀಱುಗ' ನೋ.

**ತರಗಾರ** (ನಾ). ಇಟ್ಟಿಗೆ ಕೆಲಸ ಮಾಡುವವನು ; ಉಪ್ಪಾರ : ಗೋಡೆಯನ್ನು ತರಗಾರರು ಕಟ್ಟುತ್ತಾರೆ (ಮುಂಬಯಿ. ೪-೦೦೮) : ಅವಳ ಗಂಡ ರುದ್ರಪ್ಪ ತರಗಾರ (ಬೆಂದಜೀ. ೬೪). [ ? + – ಗಾರ ( < –ಕಾಱ) ]

**ತರಗು₁** 'ತಱಗು' ನೋ.

**ತರಗು₂**, ತರುಗು (ನಾ). ೧. ದಳ್ಳಾಳಿ ; ಸುಂಕ ; ವಟ್ಟ: 'ತರಗು ಪೇಟೆ' ಪರಾ. ೨. ದಳ್ಳಾಳಿ ವ್ಯಾಪಾರ ನಡೆಸುವ ಸ್ಥಳ : ಹಳೇ ತರಗಿಗೆ ಬಂದು ಯಾರನ್ನು ಕೇಳಿದರೂ ಹೇಳುತ್ತಾರೆ (ಶಾಯಿಕ. ೬೨).
ತರುಗು : ೩. ಸೋಡಿ ; ರಿಯಾಯಿತಿ : "ತರುಗು, ವಟ್ಟ, ದಳ್ಳಾಳಿ" (Discount. ಶಾರಿನಿ. ೩೦).

**ತರಗಿನಂಗಡಿ** = ದಳ್ಳಾಳಿ ಅಂಗಡಿ; ವ್ಯಾಪಾರದ ವಹಿವಾಟದ ಮೇಲೆ ರುಸುಮು ತೆಗೆದುಕೊಳ್ಳುವ ಅಂಗಡಿ: (+). **ತರಗಿನ ಪೇಟೆ** = ಮಾರುವ ಸ್ಥಳ; ಅಂಗಡಿ ಬೀದಿ: ವಿಪಣಿ, ಪಣ್ಯವೀಥಿಕಾ – ೨ ಅಂಗಡಿಬೀದಿ, ತರಗಿನ ಪೇಟೆ, ಮಾರ್ಕೆಟ್ಟು, ಮಾರುವ ಕೇರಿ (ಸಿದ್ಧಾಂತಿ. ೮೮).

[ ದೇ.೩ ತಮಿ. ಮಲ. ತರಕು; ತೆಲು. ತರಗು, ತರುಗು, ತಱುಗು ]

**ತರಗುಗುಡಿಸು** (ಕ್ರಿ). ೧. ಒಣಗಿದ ಎಲೆಗಳನ್ನು ಗುಡಿಸು; ಕಸಕಡ್ಡಿಗಳನ್ನು ಗುಡಿಸು: ಅವನು ತರಗುಗುಡಿಸುತ್ತಿದ್ದಾನೆ (ರೂಢಿ). ೨. (ಆಲಂ) (ಮನೆ ಕಟ್ಟುವ ಸಂದರ್ಭದಲ್ಲಿ) ಭೂಶುದ್ಧಿಮಾಡು: ಯಲೆಯೂರವಳಿತವದರವನಹಳಿ ಗ್ರಾಮವನು ನಿನಿಗೆ ಪುತ್ರಿಕೆ ನಡದು ಬರುವಂತ ತರಗು[ಗು]ಡಿಸಿ ಕಟ್ಟಿಸಿದ ದಸೆಗೌಡನ ಹಳಿ (ಎಕ. XII, ತಿಪ. ೯೩–೦೦: ೧); ಅವರು ತರಗುಗುಡಿಸಿ ಮನೆ ಕಟ್ಟಿದಾಗ ಯಾವ ತರಹ ಮನೆ ಕಟ್ಟಿದರೋ ಅದೇ ತರಹ ಮನೆಗಳಲ್ಲಿ, ಬಹುಶಃ ಅದೇ ಮನೆಗಳಲ್ಲಿ, ಈಗಲೂ ಇದ್ದಾರೆ ಎಂದು ಹೇಳಬಹುದು (ಜನ್ಮಭೂ. ೬).

[ ತರಗು₁ (<ತಱಗು) + ಗುಡಿಸು₁ (<ಗುಡಿಯಿಸು) ]

**ತರಗುಟ್ಟು** (ಕ್ರಿ). (ಕೋಪ ಅಥವಾ ಭಯದಿಂದ) ನಡುಗು; ಕಂಪಿಸು: ತರಗುಟ್ಟುತ್ತಾ . . . ಅವರ ಮನೆಯ ಋಣಾನುಬಂಧ ಹರಿಯಿತು ಎಂದು ಮನಸ್ಸಿನಲ್ಲಿ ತೀರ್ಮಾನಿಸಿಕೊಂಡಳು (ಕೂನೆಕ. ೦೧೯). 'ಥರಗುಟ್ಟು' ಪರಾ.

**ತರತರಗುಟ್ಟು** (ದ್ವಿರುಕ್ತಿ): ಅವನು ಹೆದರಿಕೆಯಿಂದ ತರತರಗುಟ್ಟಿದ (ರೂಢಿ). **ತರತರಗುಟ್ಟಿಸು** = ಬಹಳವಾಗಿ ನಡುಗಿಸು: ಅನೇಕ ವಿಷಯಗಳನ್ನು ಸಂಗ್ರಹಿಸಿಕೊಂಡು ಬಂದಿದ್ದ ನಬತೋವ್ ತರತರಗುಟ್ಟಿಸುವಂಥ ಸುದ್ದಿ ತಂದಿದ್ದನು (ಪುನರು. ೩೪೩). [ ತರ₁ + ಕುಟ್ಟು₁ ]

**ತರಗುಪೇಟೆ** (ನಾ). ದಳ್ಳಾಳಿ ವ್ಯಾಪಾರ ನಡೆಯುವ ಪೇಟೆ,–ಮಾರುಕಟ್ಟೆ: ಹೊಸ ತರಗುಪೇಟೆಗಳ ಮಂಡಿವರ್ತಕರು (ಗ್ರಾಮಿಣಾಂ. ೦೧೯).

[ ತರಗು₂ + ಪೇಟೆ₂ ]

**ತರಗೆಲೆ** 'ತಱಗೆಲೆ' ನೋ.

**ತರಚಲು** (ನಾ). ತರಚಿಕೊಂಡುದಂ; ಪರಚಿದುದು: ಏನಾದರು ಗೀಚುಗಳು ಛಾಯೆಗಳು ತರಚಲುಗಳು (ಗ್ರಾಮೂಕ. ೩೯).

[ ತರಚು₁ (<ತಱಚು) + – ಅಲು (< – ಅಲ್₂) ]

**ತರಚೀಟಿ** (ನಾ). ಕರೆಚೀಟಿ; ಅಪ್ಪಣೆ ಚೀಟಿ: ತಾಚಿತಸು ಕಂಠದಲುಸುರ ಪರಿಪಾಟ ತಪ್ಪಿತು ಮೃತ್ಯುವಿನ ತ[ಪಾಠಾಂ. ಥ, ದ, ಧ]ರಚೀಟಿ ಹಿಡಿದನೊ ಹೇಳೆನಲು ಮಲಗಿದನು ಮೈಮಱೆದು (ಕುಮಾವ್ಯಾಸ. ೬–೧೨).

[ ? + ಚೀಟಿ₂ (<ಚೀಟು₂) ]

**ತರಚು₁** 'ತಱಚು' ನೋ.

**ತರಚು₂** 'ತಱಾಚು' ನೋ.

**ತರಜಿಗತ್ತರಿ** (ನಾ). (ಕುದುರೆಗೆ ತೊಡಿಸುವ) ಒಂದು ಬಗೆಯ ಆಭರಣ: ನೆತ್ತಿಯ ಬೆಳ್ಗಱೆಯ ನೊಸಲ ಕನ್ನಡಿಯ ರೇವಂತಮಾಲೆಯ ಗರ್ಗರದ ತರಜಿಗತ್ತರಿಯ ಪೊರ್ಕುಳ ಘಂಟೆಯ . . . ತುರಗಸಂಘಾತದಿ (ರಾಜಶೇ. ೬–೧೧ ವ). [ ? ]

**ತರಟ** (ನಾ). ಬೋಳುತಲೆಯುಳ್ಳವನು: ಅವನೊಬ್ಬ ತರಟ (ರೂಢಿ).

[ ತರಟು (<ತಱಂಟು) + – ಅ₇ ]

**ತರಟು** 'ತಱಂಟು' ನೋ.

**ತರಟುತಲೆ** 'ತಱಂಟುದಲೆ' ನೋ.

**ತರಟುದಲೆ** 'ತಱಂಟುದಲೆ' ನೋ.

**ತರಟೆ** 'ತಱಟೆ₂' ನೋ.

**ತರಡಿ** (ನಾ). (ಉಕ) ಚಿಕ್ಕ ತಟ್ಟೆ; ಸಣ್ಣ ತಬಕ: ವಿಜಯಾಬಾಯಿ ಎದ್ದು ಒಳಗೆ ಹೋಗಿ ಒಂದು ತರಡಿಯಲ್ಲಿ ಆಗಲೇ ತಯಾರಮಾಡಿದ ಗುಲಾಬಜಾಮು ಮತ್ತು ಚಕ್ಕುಲಿ ತೆಗೆದುಕೊಂಡು ಬಂದಳು (ಕ್ಷಿತಿಜ. ೬೦).

[ ←ಮರಾ. ಥರಡೀ ]

**ತರಡಿಗೆ** (ನಾ). (?): ಪಡುವಲು ತೆಂಕಣದ ಕಲ್ಲಯ ಬಂಡರೆ ಬಡಗಲು ಪಡುವಲು ಕರಿಯ ತರಡಿಗೆ ಮೂಡಲು ಬಡಗಲು ಬೀಜನ ಮರಡಿ . . . ಬಂಡೆ ತೆಂಕಲು ಯೀ ಚತುಸೀಮೆ (ಎಕ. X (೩), ಮಾಲೂರು. ೧೧೬–೦೦: 1496). [ ? ]

**ತರಡು** 'ತರುಡು' ನೋ.

**ತರಣ₁** (ನಾ). ತ್ರಾಣ; ಶಕ್ತಿ; ಸಾಮರ್ಥ್ಯ: "ತ್ರಾಣ – ತರಣ" (ಶಮದ. ೨೫೪ ಪ್ರಯೋ): "ತರಣ – ತ್ರಾಣ = ಶಕ್ತಿ, ಆಧಾರ" (ಶಬ್ದಕೋ. ೧೬); ಅಂದಿನ ಮಹಿರಾವಣ ರಾವಣ ಕುಂಭಕರ್ಣಾದ್ಯರ ಸೊರ್ಕುಂ ಜೆರ್ಕುಂ ನಿಮ್ಮವರ ತರಣದ ನೆಲೆಯಂ ಪೇಳುವೆ! (ರಾಮಾಕ್ಷ. ೧೧೨–೧೯). [ <ಸಂ. ತ್ರಾಣ ]

**ತರಣ₂** (ಗು). ೧. ದಾಟಿಸುವ; ಪಾರುಗಾಣಿಸುವ: ಪ್ರಬಲಭಕ್ತಿಪುಂಡಂ ಸುಗುಣಮಣಿಕರಂಡಂ ಭವಾಂಬುಧಿತರಣ ತರಂಡಂ (ಶದ್ವರಾ. ೦–೧೯). (ನಾ). ೨. ದಾಟುವಿಕೆ; ಪಾರಾಗುವಿಕೆ. 'ತರಣಪಣ್ಯ' ಪರಾ. ೩. (ನೀರನ್ನು) ದಾಟುವ ಸಾಧನ; ಹಡಗು, ದೋಣಿ, ಹರಿಗೋಲು ಮುಂತಾದುವು: ಸಕಲ ಭಯಹರನೆ. ನಿನ್ನಭಯಕರಂ ಸಂಸಾರವಾರ್ಧಿ ತರಣಂ ಶರಣಂ (ವಶ್ರತಂ. ೧೬–೦೨೦). [ ಸಂ. ]

**ತರಣಕ** (ನಾ). ದಾಟುವವನಂ; ಪಾರಾಗುವವನಂ; ಅತಿಕ್ರಮಿಸುವವನು: ಧೃತಮಾನಮಾನಸರ್ಕುಪಿತಮುಖರ್ಕರ್ಶವಿರ್ತತರಣತರಣಕರ್ಚಂಡಭುಜಬಲಯುತರ್ನತಕಾರ್ಕಾರ್ಕಾರ್ಗಗಳ್ಕಡುಪಿಂದೆ ಕಾದಿದರ್ (ಕೃಮಿಧಾ. ೨೨–೩೦). [ ಸಂ. ]

**ತರಣದ್ರೋಣಿ** (ನಾ). (ನೀರನ್ನು) ದಾಟಿಸುವ ದೋಣಿ; ಹರಿಗೋಲು: ದುರಿತವ್ರಾತಲತಾಕೃಪಾಣಿ ವಿಸರದ್ದು ರ್ಬೋಧ ರೋಧಸ್ವಿನೀತರಣದ್ರೋಣಿ . . . ವಾಣಿ (ಚಂದ್ರಸೂ. ೦–೦೨). [ ತರಣ₂ + ದ್ರೋಣಿ ]

**ತರಣಪಣ್ಯ** (ನಾ). ದಾಟಿಸುವುದಕ್ಕಾಗಿ ಕೊಡುವ ಕೂಲಿ; ದೋಣಿಗೆ ಕೊಡುವ ಕೂಲಿ: ನಾವಿಕರ್ಗೆ ತರಣಪಣ್ಯಮನಿತ್ತು ಮನ್ನಿಸಿ ಇರ್ವರುಮನುಕೂಲದೆಡೆಯ ಪುಳಿನದೊಳಿಟ್ಟರ್ (ರಾಮಾಕ್ಷ. ೩೦–೯).

[ ತರಣ₂ + ಪಣ್ಯ ]

**ತರಣಿ** (ನಾ). ೧. ದಾಟುವಿಕೆ; ಹಾಯುವಿಕೆ. ೨. ದಾಟುವ ಸಾಧನ: ದೋಣಿ; ಹರಿಗೋಲು; ಹಡಗು: "ತರಣಿ ಯಾನಪಾತ್ರಂ" (ವಸ್ತುಕೋ. ೨೩–೦೦): ಪ್ರಬಲವಾದ ಜಲಪ್ರವಾಹದ ವೇಗವು ತರಣಿಯನ್ನು ರಸೂಲಪುರದ ನದಿಯ ಮಧ್ಯಭಾಗಕ್ಕೆ ಹೊಡೆದುಕೊಂಡು ಹೋಯಿತು (ಕಪಾಕುಂ. ೮). ೩. ಸೂರ್ಯ; ರವಿ; ಭಾನು: "ರವಿ ಮಾರ್ತಂಡಂ . . . ತರಣಿ ಸಪ್ತಾಶ್ವನಾದಿತ್ಯನಕ್ಕುಂ" (ವಸ್ತುಕೋ. ೦೦–೩೪); ಸನ್ನೈಯಮಾಯಿಕೋದ್ಯಕ್ತಿಮಿರ ತರಣಿಯಾ ಬಂಧನೀ ಬಂದನೀ ಬಂದನ್ (ಎಕ. II, ೦೪೦–೦೪೬: 1145); ನರಸಿಂಗವೊನೆಯರ್ ಶಾವೆ ಕೈಗೊಟ್ಟು ತರಣಿಯುಂ ಪೂರ್ವಾದ್ರಿಗೇಱುಸುವ ಮಾಳ್ಕೆಯಿಂ (ನಂಬಿರ. ೩–೬೪); ತರಣಿ ತೇಜಂಗೆಡದಿರಗ್ನಿ ಬಿಸುಪಾಱದಿರು (ಹಜಕಾ. ೨–೩೦); ತರಣಿ ದೂರದೊಳಿಹನು; ಕಿರಣ ನಮಗೆಟಕುವುದು (ಮಂಕುಕ. ೨೦೯). ೪. ಒಂದು ಬಗೆಯ ಅಸ್ತ್ರ; ಸೂರ್ಯಾಸ್ತ್ರ: ಅರಸನೆಚ್ಚಾ ಸರ್ಪಬಾಣವ ಗರುಡಬಾಣದಿ ತಮಕೆ ತರಣಿಯ (ಕೌಶಿಕಾ. ೨೨–೩೦). ೫. ಒಂದು ಬಗೆಯ ಸಸ್ಯ: ತರಣಿ, ರಾಯಭೋರೆ (ವೃಕ್ಷಶಿ. ೩೦–೩೬೪): ಪಾಪಟಿ, ಪಾಮಟಿ, ತರಣಿ, ಸೂಳೆಬೊಟ್ಟುಗಿಡ (ವೃಕ್ಷಶಿ. ೬೦–೦೨೦೩).

ತರಣಿಯ ತನಯ=ಸೂರ್ಯನ ಮಗ ; ಕರ್ಣ : ತರಣಿಯ ತನಯನ ನೆನೆದಾಸ್ಮರಣದೇ ಕಯ್ಗಣ್ಮುವೆನ್ನ ಶೋಕಮಹಾಸಾಗರಮಂ ತವೆ ಪೀರ್ದುದು ಕೀಕರ ಮತೆಯ್ಯೋಪಾಗ್ನಿ ಬಾಡಬಾಗ್ನಿಯ ತೆಱದಿಂ (ಗದಾಯು. ೫-೩೭). [ ಸಂ. ]

**ತರಣಿಕರ** (ನಾ). = ತರಣಿಕಿರಣ : ತರಣಿಕರೋತ್ಕರಾಹತಿಗೆ ತಕ್ಕ ತಮಂ ನೆಱೆ ಬಂದು ತನ್ನಸಾವರಿಸಿದುದು (ಕಂಸುಮೂ. ೨-೫೮) [ ತರಣಿ + ಕರ$_3$ ]

**ತರಣಿಕಾಂತ** (ನಾ). ಸೂರ್ಯಕಾಂತ ; ಸ್ಫಟಿಕ : "ತರಣಿಕಾಂತಮಿನಾಶ್ಮ ಮೆಂದೆನಲ್ ಸ್ಫಟಿಕಮಕ್ಕು" (ಮಂಗರಾ. ೩೧-೩). [ ತರಣಿ + ಕಾಂತ$_2$ ]

**ತರಣಿಕಿರಣ** (ನಾ). ಸೂರ್ಯಕಿರಣ : ತರಣಿಕಿರಣಕ್ಕೆ ಭುಗಿಲೆಂದುಱಿವಿನ ಮಾಣಿಸಾನುಱಿಂದಮೋಸಱಿಪೆಡೆಯೊಳ್ (ಚಂದ್ರಕು. ೧೧-೩೭). [ ತರಣಿ + ಕಿರಣ$_1$ ]

**ತರಣಿಕುಲ** (ನಾ). ೧. ಹಡಗುಗಳ ಗುಂಪು,-ಸಮೂಹ. ೨. ಸೂರ್ಯ ವಂಶ; ರವಿಕುಲ: ತರಣಿಕುಲಾಗ್ರಗಣ್ಯ ಬಿಡದಾಲಿಸು (ಉದ್ಭಟ. ೭-೧೧೯). ೧, ೨ : ತರಣಿಕುಲರಥಘನಹರಿದ್ವಿರದಾತುಳವನಚರಾಗ್ರಪದಬಲದಿಂದಂ ಧರಣೀಶಂ ರಾವಣನವೊಲ್ ಸುರಗಣವರವರದ ಶರಧಿಕರಮೆಸೆದಿರ್ದಂ (ಚವಿಜ್ಞಾಕ. ೧-೪೦). [ ತರಣಿ + ಕುಲ ]

**ತರಣಿಜ** (ನಾ). ೧. ಸೂರ್ಯನ ಮಗ; ಕರ್ಣ; ತರಣಿಜನಂತೆ ದಾನ ಗುಣದಿಂ ರಘುವಂಶಜನಂತೆ ಸತ್ಯದಿಂ . . . ಅಮರನೀತಿ ಸಮಾಖ್ಯದ ಭಕ್ತ ನೊಪ್ಪುವಂ (ಶ್ರೀಕುವಿ. ೯-೫). ೨. ಸುಗ್ರೀವ : ಮುನ್ನ ನೊಂದವರಳು ಕುವರು ದಿಟ ಎನ್ನ ಪತಿ ತರಣಿಜನ ನುಡಿಸುವೆ ಹರನ ಹೊಣೆಗೊಡುವೆ (ಲಾಶಿರಾ. ೭-೩). ೩. ಶನಿ. ೪. ಯಮ. [ ಸಂ. ]

**ತರಣಿನಂದನ** (ನಾ). = ತರಣಿಜ ೨ : ತರಣಿಯಂತಿಹ ರತುನಪದಕವ ತರಣಿನಂದನಗಿತ್ತ ಮಾಣಿಕವಿರಚಿತಾಂಗವನಿತ್ತನಂಗದಗೆ (ಲಾಶಿರಾ. ೪೪-೫೨). [ ತರಣಿ + ನಂದನ ]

**ತರಣಿಪ್ರಭ** (ನಾ). ಸೂರ್ಯನಂತೆ ಕಾಂತಿಯುಳ್ಳವನು,-ತೇಜಸ್ವಿ ; ತರಣಿಪ್ರಭನರ್ಭಕನೀ ತರುಣಿಯ ಹೃತ್ತಿಮಿರಮಂ ನಿರಾಕರಿಸಿ ಪುರಸ್ಕರಿಸಿದಂ (ಜಗವಿ. ೨-೯೨). [ ಸಂ. (ತರಣಿ + ಪ್ರಭಾ + –) ]

**ತರಣಿಬಾಣ** (ನಾ). ಸೂರ್ಯಬಾಣ ; ಸೂರ್ಯಾಸ್ತ್ರ: ಕೆರಳಿ ಕೋದಂಡ ದಲಿ ರಘುಪತಿ ತರಣಿಬಾಣವ ಹೂಡಿ ತೆಗೆದಿಸೆ . . . ಬೆಳಕು ಪಸರಿಸಿತು (ಲಾಶಿರಾ. ೦೯-೨೭). [ ತರಣಿ + ಬಾಣ ]

**ತರಣಿವೀಥಿ** (ನಾ). ಪೂರ್ವಪಶ್ಚಿಮವಾದ ಬೀದಿ ; ಸೂರ್ಯಬೀದಿ : ಎರಡು ಬಾಗಿಲ ಸೂತ್ರದಲಿ ವಿಸ್ತರಿಸಿದಂಗಡಿ ಸೋಮವೀಥಿಯು ತರಣಿ ವೀಥಿಯಲವರವರ ಪಾಳಿಯಕಿ ಮುರಿವುಗಳ ಸುರರು ಸ್ಪೃಶ್ಯಿಸಬಾರದಿನ್ನೀ ನರರುಗಳ ಪಾಡೇನು (ಕುವ್ಯಾಲಾ. ೦೦-೪೮). 'ಸೋಮವೀಥಿ' ಪರಾ. [ ತರಣಿ + ವೀಥಿ ]

**ತರಣಿಸುತ** (ನಾ). ಸೂರ್ಯನ ಮಗ; ಶನಿ : ಗುರುರವಿಗಳುತ್ತುಂಗ ಭಾಗೆಯಲಿರಲು ತರಣಿಸುತ ಜೂಕದಲಿ ಮೆಱೆದಿರೆ . . . ಪುತ್ರೋದಯ ಗಳಾದವು ಭೂಪ ದಶರಥಗೆ (ಲಾಶಿರಾ. ೦-೭೭). [ ತರಣಿ + ಸುತ ]

**ತರಣೋಪಾಯ** (ನಾ). ದಾಟುವ ಉಪಾಯ ; ಪಾರಾಗುವ ಹಂಚಿಕೆ: ಅವರೊಡನೆ ಸಹಕಾರವಾಗಲೀ "ರಾಜಿ" ಯಾಗಲೀ ಸಾಧ್ಯವಿರಲಿಲ್ಲ ಸಾಧಿಸಿದರೆ ಅದು ಕೇಶವನೊಡನೆ ಸಾಧಿಸಬೇಕು. ಇದೇ ತರಣೋಪಾಯ ವೆಂದು ಅವರಿಗೆ ಮನವರಿಕೆಯಾಯಿತು (ಜಮುಜೀ. ೩೪೩). [ ತರಣ$_2$ + ಉಪಾಯ ]

**ತರತಮ** (ನಾ). ಹೆಚ್ಚುಕಡಮೆ ; ಮೇಲುಕೀಳು ; ತಾರತಮ್ಯ : ತರತಮವಮಾಗಿ ಯೋಗಿತತಿ ಯೋಗವಿಭೇದದೆ ನಿಟ್ಟಿಪ . . . ಮಹಾತ್ಮನೆ (ಜಗವಿ. ೬-೯೦) : ವಾಚಕರ ತರತಮಗಳನ್ನರಿತು ಗ್ರಂಥಗಳನ್ನಾಯ್ದುಕೊಳ್ಳಬೇಕು (ಗ್ರಂಥಾಲ. ೦೦). [ ಸಂ. ]

**ತರತಮಭಾವ** (ನಾ). ನ್ಯೂನಾಧಿಕ್ಯ ; ತಾರತಮ್ಯ : ಕೂಡಿ ನುಡಿವಡೆ ಯೊಳೆಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ (ಶಮದ. ೮೪೧). [ ತರತಮ + ಭಾವ$_2$ ]

**ತರತರ$_1$** 'ತರ$_1$' ಪರಾ.

**ತರತರ$_2$** 'ತರ$_2$' ಪರಾ.

**ತರತರ$_3$** 'ತರಹ' ಪರಾ.

**ತರತರನೆ** (ಅ). ಗಡಗಡನೆ : ಛಳಿಯಿಂದ ಅವನು ತರತರನೆ ನಡುಗುತ್ತಿದ್ದಾನೆ (ರೂಢಿ). [ <ತರ$_1$ + – ಅನೆ$_1$ ]

**ತರತರಿಸು$_1$** (ಕ್ರಿ). ನಡುಗು ; ಕಂಪಿಸು : ಹಱಿಯ ಹೊಯ್ಲುನೆಲುಮುರಗಿರಿ ತರತರಿಸೆ (ಕೂಕರಾ. ೩-೬-೮) : ಎಡವುತೆ ಪೂರ್ಣಕುಂಭಗಳ ಭೃಂಗಾರವ ಕೆಡವುತ ತರತರಿಸುತೆ ಬಿರ್ದು ಒಡೆವುತೆ ಗಳಿಗೆಮಟ್ಟಲ ಮಾರ್ಗರ ಮೇಲೆ ಕೆಡೆದನು ಮೂರ್ಛೆವೋದವನಂತೆ (ಶ್ರೀಕುಶಿ. ೯-೨೫). [ <ತರ$_1$ + – ಇಸು$_2$ ]

**ತರತರಿಸು$_2$** (ಕ್ರಿ). ವಿಧವಿಧವಾಗಿರು : ಫಲ್ಲಿಸಿ ಗಟ್ಟಿಯ ಕಟ್ಟಿದ ಪರಿಯ [ಯು]ರು ಪುಲ್ಲಿಗೆಗಳು ತರತರಿಸೆ (ಮೋಹತ. ೩-೫೭). [ <ತರ$_2$ + – ಇಸು$_2$ ]

**ತರತರೀತ** (ನಾ). ೧. ಸೊಗಸಾದುದು ; ತಾಜಾ : ನಮಗೆ ತರತರೀತ ಬೇಕು (ಕಕ್ತಧ್ಯ. ೩೦೮). ೨. ಚಟುವಟಿಕೆಯುಳ್ಳದು ; ಲವಲವಿಕೆಯುಳ್ಳದು : ಜಳಕಾ ಬಗೀಹರಿಸಿ, ಅಷ್ಟ ಉಂಡ ಅಡ್ಡಾಗರಿ ತರತರೀತ ಆಗತೀರಿ (ದೀಪಹ. I, ೦೩೫). [ ←ಮರಾ. ತರತರೀತ್ ]

**ತರತ್ತರಂಗ** (ನಾ). ಚಲಿಸುತ್ತಿರುವ ಅಲೆ : ಭಾಸ್ಕರತನೂಜೆಯುಭಯತಟ ನಿಕಟಕುಸುಮನಿವಹ ತತ್ಪರಾಗಪಟಳ ಪಿಶಂಗತರತ್ತರಂಗಸರೋಜೆಯುಂ ಮೆಚ್ಚಿ ಪೊಗಟ್ದು ಜಲಕ್ರೀಡೆಯಾಡಲ್ ಬಗೆದು (ಪಂಪಭಾ. ೫-೫೮ ವ). [ ಸಂ. (ತರತ್ + ತರಂಗ) ]

**ತರತ್ತರಂಗೆ** (ನಾ). ಚಲಿಸುತ್ತಿರುವ ಅಲೆಗಳುಳ್ಳವಳು ; ಉಕ್ಕುತ್ತಿರುವ ತರಂಗಗಳುಳ್ಳವಳು ; ನದಿ : ಗಂಗೆಗೆ ಶಫರೋಚ್ಚಲಿತ ತರತ್ತರಂಗೆ ಗೊರ್ವಳೆ ಬಂದಳ್ (ಪಂಪಭಾ. ೦-೯೦). [ ಸಂ. ತರತ್ತರಂಗಾ (ತರತ್ + ತರಂಗ + –) ]

**ತರತ್ತರಳ** (ಗು). ಚಲಿಸುವ ; ಕಂಪಿಸುವ ; ಚಂಚಲವಾದ : ಸುಳಿವಲ್ ಮಿಂಚಿನ ಗೊಂಚಲುಟ್ಟ ದುಗುಲಂ ಗಂಗಾನದೀಫೇನಮುಜ್ಜ್ವಲ ಮುಕ್ತಾ ಭರಣಂ ತರತ್ತರಳ ತಾರೋದಾರ ಭಾಭಾರಮಂಗಲಕಾ ಲಾಲಿತ ಸಾಂದ್ರ ಚಂದನರಸಂ ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗೆ[ಡೆ]ಯಾಗೆ ಬೆಳ್ಪಸದಳಕೆ ಕಣ್ಗೊಪ್ಪಿತ್ತಾ ಕಾಂತೆಯಾ (ಪಂಪಭಾ. ೧-೧೩೭). [ ಸಂ. ತರತ್ತರಲ (ತರತ್ + ತರಲ) ]

**ತರತ್ತಾರನೇತ್ರ** (ನಾ). ೧. ಚಂಚಲವಾದ ಗುಡ್ಡೆಯಿರುವ ಕಣ್ಣು. ೨. ಅಂತಹ ಕಣ್ಣುಗಳುಳ್ಳವನು : ಘನಕೋಪಾಟೋಪವಮಂ ತಾಳ್ದರುಣತರ ತರತ್ತಾರನೇತ್ರಂ ತತಸ್ಪಂದನಯುಕ್ತೋಷ್ಠಂ . . . ಭೋಂಕನೆ ಬಂದಂ (ರಾಜಶೇ. ೫-೧೨೦). [ ಸಂ. (ತರತ್ + ತಾರ + ನೇತ್ರ) ]

**ತರದೂದು, ತದರ್ೂದು** (ನಾ). ೧. ಸಜ್ಜು ; ಏರ್ಪಾಟು ; ಸಿದ್ಧತೆ ; ತಯಾರಿ : ಆಳು ಬಹಳ ತರದೂದಿನಿಂದ . . ತಗಾದೆ ತಪ್ಪಿಸಿಕೊಂಡು . . . ಓಡಿಹೋದನು (ಕಥಾಮಂ. IV, ೬೫) : ಕಮ್ಮಾ ಇಷ್ಟು ಈಡೇರುವುದಕ್ಕೆ ತಕ್ಕ ತರದೂದನ್ನು ಮಾಡುತ್ತಿದ್ದರು (ಮುಸುಗ. ೫೨) : ನನಗೆ

ಬಹಿಷ್ಕಾರ ಹಾಕಿಸಬೇಕೆಂತ ತರದೂದು ನಡೆಸುತ್ತಾ ಇದ್ದಾರೆಂತ ಹೇಳು (ಘೋಂಗ್ಡಿ. ೨೨); ಹೀಗೆ ಕೆಲಸದ ತರದೂದಿನಲ್ಲಿರುವಾಗ ಒಂದು ವಿಶೇಷ ಘಟನೆ ಜರುಗಿತು (ಇಬದು. ೦೨೯). **ತರ್ದೂದು :** ೨. ಅವಸರ ; ಜರೂರು: ಅವರು ತರ್ದೂದಾಗಿ ಹುಣಸೂರಿಗೆ ಹೋಗವ್ರೆ (ಸರ್ವಮಂ. ೧೩). [←ಅರ. ತರದ್ದೂದ್; ಹಿಂ. ತರದ್ದುದ್; ಮರಾ. ತರತೂದ್, ತರದೂದ್ ]

**ತರದೆವಾಡಿ** 'ತರ್ದವಾಡಿ' ನೋ.

**ತರನದಿ** (ನಾ). ದಾಟಬೇಕಾದ ನದಿ : ಉರಗವು ಗಜ ಹಯ ಸಿಂಹವು ಚರಿಸುವ ಪಥದೊಳಗೆ ತಾವು ಬೆದರದೆ ಬೇಗಂ ಹರಿಯನು ನೆನೆಯುತ ವನದೊಳ್ ತರನದಿಗಳ ದಾಂಟಿ ಭರದಿ ಬಂದರು ವನದೊಳ್ (ಹಮಿಕ. ೭೩). [ಸಂ. ತರನದೀ ]

**ತರನ್ಮಣಿ** (ನಾ). (?) : ಕಿಱಿದೆಂದನಱಿವೆಮ್ಮಿಂದುಱಿದ ನರಂ ಚಿಂತಿತಾರ್ಥದಿ ತರನ್ಮಣಿಯಂ ಕಿಡಿದೆಂದುಱಿದನ ತೆಱದಿಂ ಬಱಿದಾಗದೆ ಬಯಸಿದರ್ಥವಂ ಪಡೆದಪನೆ (ಶ್ರೀಪದಾ. ೦೦). [ ? ]

**ತರಹಡಿ** (ನಾ). ಅಡಕೆಯಲ್ಲಿರುವ ಧೂಳು, ಚೂರುಗಳ ತೂಕವನ್ನು ಸರಿತೂಗಿಸುವುದಕ್ಕಾಗಿ ಕೊಡುವ ಹೆಚ್ಚಿನ ಭಾಗ : ಗೇಣದಾರರು ಗೇಣಿಯನ್ನು ಕೊಡುವುದರ ಜೊತೆಗೆ ತರಕಾರಿ, ತರಪಡಿ, ತಳರಾಸಿ, ವೋಲ್ಗೊಳಗ, ಲಾಭಸೆರೆ ಮುಂತಾದ ಮರ್ಯಾದೆಗಳನ್ನೂ ಭೂಮಾಲೀಕರಿಗೆ ಕೊಡಬೇಕಾಗಿತ್ತು (ಶಂಬಹಂ. ೦೦).

[ ತರ? + ಪಡಿ$_1$ ]

**ತರಪಣ್ಯ** (ನಾ). = ತರಣಪಣ್ಯ. [ ಸಂ. ]

**ತರಪು** (ನಾ). ವಜ್ರವನ್ನು ಹೋಲುವ ಒಂದು ಬಗೆಯ ಕಡಮೆ ಬೆಲೆಯ ಬಿಳಿಯ ಹರಳು : (ಕ).

[ ದೇ.॥ ತಮಿ. ತರುಪ್ಪು, ತಱುಪ್ಪು; ತೆಲು. ತರಪು, ತಱುವು ]

**ತರಪೇತಿ** 'ತರಬೇತು' ನೋ.

**ತರಪೇತು** 'ತರಬೇತು' ನೋ.

**ತರಪೇತುಕೇಂದ್ರ** (ನಾ). (ಯಾವುದಾದರೊಂದು ವಿಷಯದಲ್ಲಿ) ಶಿಕ್ಷಣವನ್ನು ಕೊಡುವ ಕೇಂದ್ರ,–ಸಿದ್ಧಪಡಿಸುವ ಸಂಸ್ಥೆ : ಅವನು ತರಪೇತು ಕೇಂದ್ರದಲ್ಲಿ ಶಿಕ್ಷಣ ಪಡೆದು ಬಂದಿದ್ದಾನೆ (ರೂಢಿ).

[ ತರಪೇತು (<ತರಬೇತು) + ಕೇಂದ್ರ ]

**ತರಫ್** 'ತರ್ಫೆ' ನೋ.

**ತರಫು, ತರ್ಫೆ, ತರ್ಫು** (ನಾ). ೧. ನಿಟ್ಟು; ದಿಕ್ಕು ; ಪಕ್ಷ. 'ಚೌತರಫು' ಪರಾ. ೨. ಗುಂಪು; ಬಣ; (ಕ). ೩. ದೇಶದ ಒಂದು ಭಾಗ; ಜಿಲ್ಲೆ: (ಕ). **ತರ್ಫೆ:** ೨. ಮುನಿಸೀಪಾಲಿಟಿ ಮತದಾರ ತರ್ಫೆಯಿಂದ ಅನಿಲನು ಆ ಕಾರಕೂನನ ಮೇಲೆ ಕೇಸು ಹಾಕಿದನು (ಅಹನಾ. ೮೦) : ಇಸೋಪನು ಮುಂದೆ ಬಂದು, ತನ್ನ ಒಡೆಯ ತರ್ಫೆಯಿಂದ . . . ಹೇಳಿದನು (ಇಸೋಕ. ೯). **ತರ್ಫು :** ೧. ಪ್ರಜೆಗಳ ತರ್ಫೆನಿಂದ ಕರಿಸಿಕೊಂಡ ಪ್ರತಿನಿಧಿಗಳನ್ನು ಕೂಡಿಕೊಂಡು ರಾಜ್ಯವನ್ನು ಸಾಗಿಸಿದರು (ಮುಂಬಯಿ. ೬೦೩೦) ; ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮರಾಜರವರು ಹೇಳಿದರು (ಕಲನ. ೩೮೩).

[ ←ಅರ. ಹಿಂ. ಮರಾ. ತರಫ್, ತರ್ಫ್ ]

**ತರಫೆ** 'ತರ್ಫೆ' ನೋ.

**ತರಬರ** (ನಾ). ಆತುರ ; ಬೇಗ (?) : ತರಬರದೊಳು ವೈಷ್ಣವರನು ಮೆರವಿಗೊಂಡಿರದೈತಂದೊಡನೆನ್ನ ಕರೆದೊಯ್ಯು (ಕರ್ನಾಕ. ೩೩೬).

[ ? ]

**ತರಬಿಯತ್ತು** 'ತರಬೇತು' ನೋ.

**ತರಬೇತಿ** 'ತರಬೇತು' ನೋ.

**ತರಬೇತು, ತರಪೇತಿ, ತರಪೇತು, ತರಬಿಯಂತ್ತು, ತರಬೇತಿ, ತರ್ಬಿಯತ್ತು** (ನಾ). ಶಿಕ್ಷಣ ; ತಿದ್ದುವಿಕೆ; ಪಳಗಿಸುವಿಕೆ; ಸಿದ್ಧಗೊಳಿಸುವಿಕೆ: ಅನುಭವಶಾಲಿಗಳಾದ ಒಬ್ಬ ವೈದ್ಯರನ್ನೂ, ಉತ್ತಮ ತರಬೇತು (Training) ಪಡೆದ ಸೂಲಗಿತ್ತಿಯನ್ನೂ ಗೊತ್ತುಮಾಡಬೇಕು (ಗೃಹವಿ. ೧೦೨). **ತರಪೇತಿ :** ವಸ್ತುತಃ ನಿಸ್ಸ್ವಾರ್ಥತೆಯ ಸಾಧನೆಗೆ ಅದು ಉತ್ತಮ ತರಪೇತಿಯನ್ನು ಕೊಡಬಲ್ಲದೆಂಬುದನ್ನು ಹಿಂದೂಧರ್ಮವು . . . ತೋರಿಸಲು ಯತ್ನಿಸುತ್ತಿದೆ (ತತ್ವಶಾ. ೩೭೮) ; ಆತನಿಗೆ ಕೆಲವು ಅರ್ಹತೆಗಳಿರಬೇಕು : ಸೂಕ್ಷ್ಮದೃಷ್ಟಿ, ಹೆಚ್ಚಿನ ಲೌಕಿಕಜ್ಞಾನ . . . ಮುದ್ರಣದಲ್ಲಿ ತರಪೇತಿ . . . ಮತ್ತು ಎಲ್ಲಾ ವಿಷಯಗಳ ಅರಿವು (ಮುದ್ರಕ. ೨೯). **ತರಪೇತು :** "ಅವನ ತರಪೇತೇ ಇರಬೇಕು" ಎಂದು . . . ಹೇಳುತ್ತಾರೆ (ಗೋಕುರ. ೬೦) ; ನೀವೆಲ್ಲ ಮುಂದೆ ನಮ್ಮ ದೇಶದ ನಾಯಕರಾಗುವವರು. ಈಗಿನಿಂದಲೇ ಅದಕ್ಕೆ ತರಪೇತು (ಅನಾಮಿ. ೫೨). **ತರಬಿಯತ್ತು :** ಜ್ಞಾಪಕಶಕ್ತಿಯ ತರಬಿಯತ್ತಿಗೆ ಕೋಷ್ಟಕಗಳ ಅಭ್ಯಾಸವೂ ಅರ್ಥರಹಿತವಾದರೂ . . . ಪದ್ಯಗಳ ಕಂಠಪಾಠವೂ ಆರಂಭವಾದುವು (ಶಿಕ್ಷದ. ೦೨೩) ; ಅನುವಂಶೀಯತೆ, ಪರಿಸ್ಥಿತಿ ಮತ್ತು ತರಬಿಯತ್ತು ಈ ಮೂರರ ಸಂತತವಾದ ಪ್ರಭಾವದಿಂದ ಪ್ರತಿಯೊಬ್ಬರ ವ್ಯಕ್ತಿತ್ವವೂ ಬೆಳೆಯುತ್ತದೆ (ಕ್ರಿಯಾಶಿ. ೦೬). **ತರಬೇತಿ :** ಜೋಸೆಫ್‌ಹೂಕರನ ಸಸ್ಯವಿಜ್ಞಾನದ ವಿದ್ಯಾಭ್ಯಾಸ ಮತ್ತು ತರಬೇತಿ, ತಂದೆಯ ವನಸ್ಪತಿಗಳ ಸಂಗ್ರಹದಿಂದ ಪ್ರಾರಂಭವಾಯಿತೆನ್ನಬಹುದು (ಸಸ್ಯಕ. ೮) ; ಅಧ್ಯಾಪಕತರಬೇತಿಗೆ ಸೇರುವ ಯೋಚನೆ ಮಾಡಿದ (ತ್ಯಾಗಮ. ೧೮೮) ; ನಾಳಿನಿಂದಲೇ ನಮ್ಮ ತರಬೇತಿ ಆರಂಭವಾಯಿತೆಂದೇ ತಿಳಿಯಿರಿ (ಅಹನಾ. ೦೬) **ತರ್ಬಿಯತ್ತು :** ಬಹಳ ಬಗೆಯಿಂದಾ ನಮಗೆ ತರ್ಬಿಯತ್ತು ಮಾಡಿದರು (ರಾಜೇಂದ್ರ. ೦೦೫).

**ತರಬೇತಾಗು, ತರಪೇತಾಗು** = ತರಪೇತಿಯನ್ನು ಹೊಂದು; ಶಿಕ್ಷಣವನ್ನು ಪಡೆ : ತರಬೇತಾದವರು ೩೦–೪೦ಜನ (ಸಸ್ಯಕ. ೫೯) : ಈ ರೀತಿ ತರಪೇತಾದ ಮಾರ್ಕೊಪೋಲೊನನ್ನು ಖಾನನು ಕಳುಹಿಸಿಕೊಟ್ಟನು (ಪ್ರವಾಸ. II, ೭) : ವೃತ್ತಿಶಿಕ್ಷಣಶಾಲೆಯಿಂದ ಹೊರಬಿದ್ದವರೆಲ್ಲರೂ ತಕ್ಷಣ ಕಾರ್ಯ ಆರಂಭಿಸುವಷ್ಟು ತರಪೇತಾಗಿರುವುದಿಲ್ಲ (ಶಿಕ್ಷದ. ೮೭೬). **ತರಬೇತುಕೊಡು, ತರಪೇತಿಕೊಡು** = ಶಿಕ್ಷಣವನ್ನು ಕೊಡು: ನಂಜರಾಜನೇ . . . ಸೈನ್ಯಕ್ಕೆ ತರಬೇತು ಕೊಟ್ಟು ಯುದ್ಧಕ್ಕೆ ಸಿದ್ಧಪಡಿಸುತ್ತಿದ್ದನು (ಶ್ರೀರಾಯ. ೧೦೬) : ಸಾಹಿತ್ಯ, ನಟನಾಕೌಶಲ್ಯದಲ್ಲಿ ತರಬೇತು ಕೊಟ್ಟವರು ನಮ್ಮ ರಾಯರು (ಬೆಂದಜೀ. ೦೦೮) ; ಅವರಿಗೆ ತರಬೇತು ಕೊಡುತ್ತಿದ್ದ ಆಸ್ಪತ್ರೆಗಳು ಕೂಡ ಸುಸಂಘಟಿತವಾಗಿದ್ದವು (ಮಾಸೂ. ೩೩); ಅನೇಕ ಕಾರ್ಯಾಲಯಗಳನ್ನು ಇಡಿಸಿ ಕೆಲಸವಿಲ್ಲದವರಿಗೆ ತರಪೇತಿ ಕೊಡಿಸಿದೆವು (ಪ್ರತಾಪ. ೯೦). **ತರಬೇತುಗೊಳಿಸು, ತರಬಿಯತ್ತುಗೊಳಿಸು** = ತರಬೇತುಮಾಡು : ಮಗನನ್ನು ಬಟ್ಟೆ ಹೊಲಿಯುವುದಕ್ಕೆ ತರಬೇತುಗೊಳಿಸಿದ್ದ (ತ್ಯಾಗಮ. ೫೩); ಮಾಧವರಾಯರ ಉಪದೇಶವೂ, ಸಹವಾಸವೂ ದೇಶಕ್ಕಾಗಿ ದುಡಿಯಲು ತರಬೇತುಗೊಳಿಸಿತು (ಕುರುಕಾ. ೧೪೨) : ಅಪರಾಧಿಯನ್ನು ಉಳಿಸುವುದಕ್ಕಾಗಿ ಈ ವಕೀಲರು ಸುಳ್ಳು ಹೇಳುವ ಸಾಕ್ಷೀದಾರರನ್ನು . . . ತರಬಿಯತ್ತುಗೊಳಿಸುತ್ತಿರುತ್ತಾರೆ (ಮಾತನಾ. ೯೩). **ತರಬೇತುಮಾಡು, ತರಪೇತುಮಾಡು, ತರಬಿಯತ್ತುಮಾಡು** = ತಯಾರು ಮಾಡು ; ಸಿದ್ಧಮಾಡು ; ಪಳಗಿಸು : ಅವರನ್ನು ತರಬೇತುಮಾಡಲು ಮೈಸೂರು ಸರ್ವಪ್ರಯತ್ನವನ್ನೂ ಮಾಡಬೇಕು (ದಾದಾನ. ೧೪೭) ; ತರಬೇತು ಮಾಡಿದರೆ . . . ಮಗುವನ್ನು ಬೆಳೆಸುವ ಕೆಲಸ ಸುಲಭವಾಗುತ್ತದೆ (ಗೃಹವಿ. ೧೧೩) : ಆತನಿಗಾಗಿಯಾದರೂ ಆಕೆಯನ್ನು ತರಪೇತುಮಾಡಬೇಕು (ಕಂಕಣ. ೭೯); ಕಾಶೀಬಾಯಿಯವರು . . ಸ್ತ್ರೀಯರನ್ನು ತರಪೇತು ಮಾಡುವುದರಲ್ಲಿ ರಾಣಿಗೆ ಸಹಾಯವೆಸಗುತ್ತಿದ್ದರು (ಝಾರಾಣಿ. ೦೬೯) ;

ಅವನು ನಮ್ಮ ಟೀಮನ್ನು ಎಷ್ಟು ಚೆನ್ನಾಗಿ ತರಪೇತು ಮಾಡಿದ ಎಂದರೆ ಶಾಲೆಯ ಎಲ್ಲಾ ಟೀಮುಗಳನ್ನೂ ನಾವೇ ಗೆದ್ದು ಜಯಭೇರಿ ಹೊಡೆದುಬಿಟ್ಟೆವು (ಶಾಲಮ. ೨೨೦): ಅವನ ನಾಟಕಗಳಲ್ಲಿ ಆಗಿಂದಾಗ ಜಂಕೆಯ ಬೇಟೆ, ಕುದುರೆಗಳನ್ನು ಸಾಕಿ ತರಬಿಯತ್ತುಮಾಡುವುದು . . . ಅಲ್ಲಗಳೆಯಬುವವಥಾದ್ದಲ್ಲ (ಷೇಕ್ಸ್‌ಪಿ. ೭).

[ ←ಅರ. ತರ್ಬಿಯತ್ ; ಹಿಂ. ತರಬಿಯತ್ ; ಮರಾ. ತರಬೇಜ್ ತರಬೇತ್, ತರಬೇದ್ ]

**ತರಮು** (ನಾ). (ಉಕ) ಕಂದಾಯ : ಅವನು ತರಮು ಕಟ್ಟಿ ಬರಲಿಕ್ಕೆ ಹೋಗಿದ್ದಾನೆ (ರೂಢಿ).

[ ←ಅರ. ಮರಾ. ತರವ್ = ಕಂದಾಯ ಹಾಕಲು ಆಸ್ತಿಯನ್ನು ಬೆಲೆ ಕಟ್ಟುವುದು ]

**ತರಲ, ತರಳ** (ಗು). ೧. ಅತ್ತಿತ್ತ ಚಲಿಸುವ; ಕಂಪಿಸುವ; ಚಂಚಲವಾದ; ಅಸ್ಥಿರವಾದ: ದುಃಖದ ಹೊರ ಉಬ್ಬರವು ಹೀಗೆ ತರಲವಾಗುತ್ತ ಹೋಗು ವದೇನೋ ನಿಜವೇ (ಕಾಳಿರಾ. ೩). ೨. ಹೊಳೆಯುವ ; ಮಿಂಚುವ ; ಮಿರುಗುವ. 'ತರಲತೆ' ಪರಾ. ೩. ದ್ರವರೂಪವಾದ; ದ್ರವೀಭೂತ ವಾದ. ೪. ಕಾಮುಕನಾದ ; ವಿಷಯಲಂಪಟನಾದ. (ನಾ). ೫. ಬೆರಗು ; ವಿಸ್ಮಯ ; ಆಶ್ಚರ್ಯ : ತರಲಾ[ಪಾಠಾಂ. ಳಾ]ರ್ಥದಲ್ಲಿ ಬೆಳ್ಪಳಿಮಕ್ಕುಂ (ಶಮದ. ೩೧೨). ೬. ಎಳೆವಯಸ್ಸಿನವನು ; ಬಾಲಕ ; ಹುಡುಗ : " ಚಂಚಲಃ ಹಾರಮಧ್ಯಮಣಿ ಬಾಲಕರುಂ ತರಲಾಭಿಧಾನ " (ನಾನಾರ. ೬೪). ೭. ಹಾರದ ಮಧ್ಯದಲ್ಲಿರುವ ಮಣಿ,-ರತ್ನ ; ಪದಕ: "ಹಾರಮಧ್ಯದ ರತ್ನನಾಯಕಂ ತರಲ[ಪಾಠಾಂ. ಳ]ಮದು " (ಮಂಗರಾ. ೦೦೦-೨೪); ಮಿರುಗುವ ಕೆಂಬರಲ ತರಲದಂತಿರೆ ಸಸಿಗಲ್ (ದಮುಕ್ತ. ೧-೯೦). ೮. [ಛಂದ] ಪ್ರತಿಪಾದದಲ್ಲಿ ಹತ್ತೊಂಬತ್ತು ಅಕ್ಷರಗಳಿರುವ ಒಂದು ಸಮವೃತ್ತ. ತರಳ: ೧. ತರಳಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೊ (ಕುಜಪು. ೨-೫೯); ವಿದ್ಯಾಧರನ ಜನ್ಮಸ್ಥಾನವಾದತ್ರಸಮ ತರಳಗಂಭೀರಸದ್ಗೇಹವಾದತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ (ಎಕ. VIII, ಸೊರಬ. ೨೬೦-೧೫ ; 1408) : ಆ ಗಂಭೀರ ದಿಗ್ದಂತಿ, ತೊರೆದು ಗಾಂಭೀರ್ಯಮಂ, ತರಳ ಚಂಚಲಚಿತ್ತದಿಂ ಬೀದಿವರಿವುದಯ್ ದೆಸೆದೆಸೆಗೆ (ಶ್ರೀರಾಮಾ. ೯೬-೫೬೩). ೨. ತರಳಸ್ಫಾಟಿಕ ಭಿತ್ತಿರುಚಿರಮಂ . . . ಪುರಾಣಕೂಪಮನಗಾಧಮಂ ಭೀಕರಮಂ ಅಂತಾ ಬಾವಿಯಂ ತೋರಿಜ್ (ಶಂಕರಶಂ. ೯೦-೦೬). ೫. "ತರಳಂ ಚಂಚಲರೂಪಂ " (ವಸ್ತುಕೋ. ೦೨೬-೫೩). ೬. ತರಳನಪೂರ್ವಿಗಂ . . . ವರವಿಪ್ರಂ (ಗಿರಿಕ. ೯-೯೦); ಮನೆಯವರೆಯ್ದೆ ಕರಕರಿಪ ದುಃಖವನು ತರಳ ನಿನ್ನಂ ನೋಡಿ ಮಱೆದು ಪರಿಣಾಮಮಂ ಧರಿಸುತಿಪ್ಪೆನ್ನ ಗೋಣಂ ಕೊಯ್ದ. (ಹಡಕಾ. ೦೫-೨೪) ; ತರಳರರ್ಜುನ ಸಾತ್ಯಕಿಗಳಿವದಿರಿಗೆ ಪಂಥವದೇತಕೆ (ಕುಮ್ಮಾದ್ರೋ. ೦೫-೦೫) ; ನರಸಿಂಹನ ಜಯಂತಿಯಲಿ ಜನಿಸಿದೀ ತರಳನು ನರಸಿಂಹನೃಸೆ (ಕಂಸವಿ. ೪-೬೭); ಈ ತರಳ ಬಟ್ಟಯಣ್ಣನು . . . ಆನೆಗಳ ಹಿಂಡು ಹಿಂಡು ಗಳನ್ನೂ, ಕೊಳೆಯನ್ನೂ ತಂದನಂತೆ (ಸವತಿ. XII, ಪ್ರಸ್ತಾವನೆ). ೭. "ತರಳಂ ಹಾರೋಪವದ್ಧ ಮಧ್ಯಮರತ್ನಂ " (ವಸ್ತುಕೋ. ೦೨೬-೫೩) : " ಹಾರದ ನಡುವೆಯಿದ್ದ ನಾಯಕರತ್ನವು ತರಳಂ ಎನಿಸುಗು " (ನಾಚಿರಾ. ೧೫೩) : ತರಳಮನಾಂತ ಚಂದನದಲಂಕೃತಿ ಭಾವಮನಾಂತ ವಸ್ತುವಿಸ್ತರ ಕೃತಿ (ಚಂದ್ರಪು. ೩-೫೯): ೮. ಸುರವ ಶೀತಕರಾಗ್ನಿ ಮಾರುತ ಭಾನುಯುಗ್ಮಗಣಂ ಗಳಿಂ ಪರದೊಳೊಪ್ಪೆ ಹಿಮಾಂಶು ಶೇಖರನಿರ್ದು ವಿಶ್ರಮಣಂ ದಿಶಾಕರಿಯೊ ಳಾಗಿರೆ ಸಂದು ದಿಂ ತಿ ದು . . . ತರಳಂ ಕವೀಂದ್ರಜನಸ್ತುತಂ (ಛಂದೋಂಬು. ೨-೦೨೧). ೯. ಮಗ ; ಸಂತ : ತಾಯಿ ಮಾರಿಯಾದರೆ ತರಳನೆಲ್ಲಿ ಹೋದಾನು ? (ಗಾದೆ). [ ಸಂ. ]

**ತರಲತೆ, ತರಳತೆ** (ನಾ). ೧. ಕಂಪಿಸುವಿಕೆ ; ಚಂಚಲವಾಗಿರುವಿಕೆ ; ಚಾಂಚಲ್ಯ : ಸರಳತರೋಷ್ಣನಿಶ್ವಸಿತಮಾರುತನಿಂದೆ ನಿಜೋತ್ತರೀಯ ದೊಳ್ ತರಲ[ಪಾಠಾಂ. ಳ]ತೆಯಂ ನಿಯೋಜಿಪ ನೆಗಟ್ಟಿಗೆ ಕಾರಣಮೇನೊ ಕಾಮಿನೀ (ಚಂದ್ರಪು. ೩-೫೪). ೨. ಹೊಳೆಯುವಿಕೆ ; ಪ್ರಕಾಶ ; ಮಿರುಗುವಿಕೆ. ತರಳತೆ: ೧. ನೀಂ ಭವ್ಯನ್ಯೆ ಮತ್ತಿನ ಮಿಥ್ಯಾಜ್ಞಾನಿವೊಲ್ ನೀಂ ತರಳತೆವೆರಸುಂತೇಕೆ ವಿಭ್ರಾಂತನಪ್ಪೈ (ಆದಿಪು. ೩-೭): ಅನ್ಯಮರ್ಗಿಥವಿಸಿದೊಡಂಜುವುದೆ ಸ್ವೈರಣೆ ತರಳತೆಯ ನೋಡುತ್ಸಾಹ ಮೆಂಬರ್ಧೂರ್ತರ್ (ಕಾದಂಪೂ. ೫೬೬); ಕರೆದು ತಳ್ಳುವ, ತಳ್ಳಿರಿಸು ತೊಳಗೆ ಕಿಚ್ಚಿಡುವ ತರಳತೆಯದೇಂ ತಂತ್ರ ? (ಮಂಕುಳ. ೧೬೯).

[ ಸಂ. ತರಲತಾ ]

**ತರಲಾಕ್ಷಿ, ತರಳಾಕ್ಷಿ** (ನಾ). ೧. ಚಂಚಲವಾದ ಕಣ್ಣು. ೨. ಚಂಚಲವಾದ ಕಣ್ಣುಗಳುಳ್ಳವಳು ; ಚಂಚಲಾಕ್ಷಿ : ಲಿಪಿಯನೆತ್ತಿ ವಾಚಿಸಿಕೊಂಡ ತರಲಾ[ಪಾಠಾಂ. ಳಾ]ಕ್ಷಿ ಶಾಸನದಕೆ ಮತ್ತೊಂದಭಿಪ್ರಾಯಮಂ ತಿಳಿದಳ (ಪ್ರಮಿಥಾ. ೩೦-೨೬). ತರಳಾಕ್ಷಿ: ೧. ತರಳಾಕ್ಷಿದ್ವಂದ್ವಂ (ಲೀಲಾವ. ೨-೯೬). ೨. ತರಳಾಕ್ಷಿಯನಾ ಕಾದಂಬರಿಯಂ . . . ಚಿಂತಿಸುತುಮಿರ್ದಾಯಿರುಳನ ದೆಂತಾನುಮವನಿಪಾಲಂ ಕಳೆದಂ (ಕಾದಂಬು. ೧೮೩) ; ಅಲರ್ಗಣೆಯ ನರ್ಚಿಸಿದ ವಿಚಕಿಲಮಾಲೆಯನಾಂತ ಪೂರ್ಣಕುಂಭದ ಚೆಲ್ವಂ ಗೆಲೆವಂದುದಿಲ್ಲ ಕುಚಮಂಡಲಮಿದು ತರಳಾಕ್ಷಿ ಮುತ್ತಿನೇಕಾವಳಿಯಿಂ (ರಾಜಶೇ. ೩-೫೯).

[ ಸಂ. ತರಲಾಕ್ಷೀ (ತರಲ + ಅಕ್ಷಿ + –) ]

**ತರಲಾಪಾಂಗ, ತರಳಾಪಾಂಗ** (ನಾ). ಚಂಚಲವಾದ ಕಡೆಗಣ್ಣು ; ಕಡೆಗಣ್ಣ ನೋಟ : ತರಲಾಪಾಂಗವಿಲಾಸಸ್ಫುರಿತಮೆ ಲೆಕ್ಕಣಿಕೆಯಾಗೆ ನಲ್ಲಳ ಮುನ್ನಂ ಬರೆದತನುಚರಿತವಿಗಾಗಳ್ ಬರೆದಂತಿರ್ದಪುದು ಮನ್ಮನಃ ಪುಸ್ತಕದೊಳ್ (ಆದಿಪು. ೯-೦೪) ; ತರಲಾಪಾಂಗದಿನಾ ನೃಪಾಲತಿಲಕಂ . . . ನಿರಂತರಮುದ್ಯಾನವನೊೞದಮಂ ಸಲಿಸುವಂ (ಅನಂಪು. ೨-೦೮). ತರಳಾಪಾಂಗ: ಪರುಷಾಳಾಪವಪ್ಪುಮತಿನಿಷ್ಠುರವೀಕ್ಷಣಮುಖವಿಕಾರಮಂ ಮಱಸಿರೆಯುಂ ತರಳಾಪಾಂಗಮುಮಾಕೆಯ ದರಹಸಿತಮುಮಱಿಯೆ ಪೇಟ್ದುಮೆಱಕಮನಿರ್ದಯೊಳ್ (ಕವಿರಾ. ೩-೧೦೯) ; ತರಳಾಪಾಂಗಂಗಳೊಳ್ ಮಚ್ಚರಿಸಲರ್ಗಣೆಯಂ ಕಟ್ಟಿ ತೂಪಂದದಿಂ (ಲೀಲಾವ. ೭-೦೪) ; ತರುಣಿ ಯರ ತನುಪರಿಮಳದ ಸೋಂಕಿನಲಿ ಸುತ್ತಲುಪರಿಮಳಿಸಿದುದು ತರು ಸುತರಳಾಪಾಂಗರೋಚಿಯಲಿ ಮುರಿದುದಾ ಮರಗತ್ತಲೆಯ ವ್ಯೆಸಿರಿ (ತೊರರಾ. ೦-೫-೯೫). [ ಸಂ. (ತರಲ + ಅಪಾಂಗ) ]

**ತರಲಾಯತಾಕ್ಷಿ, ತರಳಾಯತಾಕ್ಷಿ** (ನಾ). = ತರಲಾಕ್ಷಿ ೨ : ಚಿಂತಾ ತರಳತ್ವಮಂ ತೊಱೆವುದಂತದಱಿಂ ತರಲಾ[ಪಾಠಾಂ. ಳಾ]ಯತಾಕ್ಷಿ ನಿರ್ಹೇತುಕಮಪ್ಪ ಖೇದಮಂ (ಚಂದ್ರಪು. ೩-೬೫) : ಲಾವಣ್ಯಕಾಂತಿಯಿಂ ದಿಕ್ತಟವ ಬೆಳಗುತ್ತ ನಿನ್ನ ನಡೆಮುಖವಿರಲು ತರಲಾಯತಾಕ್ಷಿ (ಧನ್ಯಾಲೋ. ೦೦೪). ತರಳಾಯತಾಕ್ಷಿ: ಇಂದುಕರಶ್ಚುತ ಚಂದ್ರಕಾಂತ ಪುತ್ರಿಕೆಯೊಸರ್ವಂತೆ ಝುಮ್ಮಗೆ ಬೆಮರ್ತಿರವಿಂ ತರಳಾಯತಾಕ್ಷಿಯಾ (ಶಾಂತಿಪು. ೮-೯೬). [ ಸಂ. (ತರಲ + ಆಯತ + ಅಕ್ಷಿ + –) ]

**ತರಲಿತ, ತರಳಿತ** (ನಾ). ಅಲ್ಲಾಡುವುದು ; ಚಲಿಸುವುದು ; ಚಂಚಲ ವಾದುದು: "ತರಲಿ[ಪಾಠಾಂ.ಳಿ]ತಂ ಪ್ರೇಂಖಿತಂ ಲುಳಿತಮಲ್ಲಾಡುವುದು" (ಮಂಗರಾ. ೧೩೪-೩೨). ತರಳಿತ: "ಪ್ರೇಂಖೋಳಿತಂ, ತರಳಿತಂ, ಪ್ರೇಂಖಿತಂ, ಲುಳಿತಂ – ಈ ೪ ಅಲ್ಲಾಡುವುದು ". (ಹಲಾಯು. ೧೨೩-೭೧).

[ ಸಂ. ]

**ತರಲೆ$_1$, ತರಳ$_1$** (ನಾ). ೧. ಕಾಟ ; ಹಿಂಸೆ ; ತಂಟೆ ; ಪೀಡೆ ; ಜಂಜಾಟ: ಈ ಒಣ ತರಲೆ ಏಕೆ ಕಟ್ಟಿಕೊಳ್ಳುತ್ತೀ ಅಪ್ಪ ? (ಕಾಮಿಕಾಂ. ೫): ಹೋದ ಮರುದಿನವೇ ತಲೆತುಂಬ ತರಲೆ ತುಂಬಿಕೊಂಡು ಕಟ್ಟಮೋರೆ

ಮಾಡಿಕೊಂಡು ಹಿಂದಿರುಗುತ್ತಿದ್ದ (ಬಾಗಿನ. ೨೮) ; ಸಂಸಾರ ಅಂದ್ಮೇಲೆ ತರಲೆ ತಾಪತ್ರಯ ಇದ್ದೇ ಇರುತ್ತೆ (ಹೊಸಕ್ಷ. ೯೩). ೨. ಅಪ್ರಯೋಜಕವಾದುದಂ ; ನಾಡಾಡಿಯಾದುದು : ಅವನ ಬ್ಯಾಟಂಗು ಸಹ ಅಂಥ ತರಲೆಯಲ್ಲ (ಸ್ವಾಮಿಸ್ಕ್ವೇ. ೧೬೬) ; ಮನೆಯ ಕಡೆ ತರಲೆ ಹೊಲದ ಕಡೆ ಪುರಲೆ (ಗಾದೆ). ೩. ಆಧಾರರಹಿತವಾದ ದೂರು; ಪಿಸುಣು ; ಚಾಡಿ : ಅರಸರ ಕಿವಿಗೆ ತರಲೆ ಹಾಳು, ಬಾಗಿಲ ಕಿವಿಗೆ ಒರಲೆ ಹಾಳು (ಗಾದೆ). ೪. ತರಲೆಮಾಡುವ ಸ್ವಭಾವದವನು ; ತಂಟೆಕೋರ : ಆ ತರಲೆಯ ಸಹವಾಸ ಮಾಡಬೇಡ (ರೂಢಿ). ತರಳೆ$_1$: ೪. "ಶುದ್ಧ ತರಳೆಗಳು" ಎಂದು ರಾಮಣ್ಣನವರು ಒಂದೇ ಮಾತಿನಲ್ಲಿ ಉತ್ತರ ಕೊಟ್ಟರು (ಕಳಹು. ೧೦೪).

[ ದೇ.॥ ತುಳು. ತರಳೆ ]

**ತರಲೆ$_2$, ತರಳೆ$_2$** (ನಾ). ಅಕ್ಕಿಯ ಗಂಜಿ; ಅಂಬಲಿ. ತರಳೆ$_2$ : "ಯವಾಗೂ . . . ತರಳಾ, ವಿಲೇಪಿಕಾ – ಈ ೫ ಗಂಜಿ " (ಹಲಾಯು. ೫೩-೧೬೫).

[ ಸಂ. ತರಲಾ ]

**ತರಲೆಅರ್ಜಿ, ತರಳೆಅರ್ಜಿ** (ನಾ). ತಂಟೆ, ತಕರಾರುಗಳಿಂದ ಕೂಡಿದ ಅರ್ಜಿ : ಒಂದೋ ಎರಡೋ ಮೂಕರ್ಜಿ ತರಲೆಅರ್ಜಿ ಬೋರಂಟೆ ಬಿಟ್ಟಿಕಾಯ್ತು (ಮುನಿಮಾ. ೧೦೫). ತರಳೆಅರ್ಜಿ : ಶ್ಯಾನುಭೋಗನೂ ಸಹ ರೈತರಿಗೆ ವಿರೋಧವಾಗಿ ಬೇಕಾದಂತೆ ತರಳೆಅರ್ಜಿಗಳನ್ನು ಬರೆಯುತೊಡಗಿದ್ದನು (ಗರುಡಾ. ೦೦೩). 'ಮೂಗರ್ಜಿ' ಪರಾ.

[ ತರಲೆ$_1$ + ಅರ್ಜಿ$_2$ ]

**ತರಲೆಕಾರ** (ನಾ) ತರಲೆಯನ್ನುಂಟುಮಾಡುವವನು ; ತಂಟೆಕೋರ : " ದ್ರಾಘಕಃ, ದ್ರಾಘನಃ, ದ್ರಾಘಮಾಣಃ – ಈ ೩ ತರಲೆಕಾರನಂ, ನಿಡಿಯನುಂ " (ಅಕಳ್ಕ. ೯೩). [ ತರಲೆ$_1$ + – ಕಾರ$_1$ (< ಕಾಱ) ]

**ತರಲೆತನ** (ನಾ). ತರಲೆಮಾಡುವ ಸ್ವಭಾವ ; ಕಿಡಿಗೇಡಿತನ : ಹಳ್ಳಿಗಳು ಏಳಿಗೆಯಾಗಬೇಕಾದರೆ, ಇಂಥ ತಂದಿಟ್ಟು ತಮಾಷೆ ನೋಡುವ ತರಲೆತನ ತಪ್ಪಬೇಕು (ಸಮ್ಯಾಳಿ. ೪೪). [ ತರಲೆ$_1$ + – ತನ ]

**ತರಲೆವ್ಯವಹಾರ** (ನಾ). ತಂಟೆ, ತಕರಾರುಗಳಿಂದ ಕೂಡಿದ ಕಾರ್ಯಭಾರ,–ವಹಿವಾಟು : ಯಾವುದೋ ತರಲೆವ್ಯವಹಾರ, ನಾನು ಸಿಕ್ಕಿಕೊಂಡು ಒದ್ದಾಡಬೇಕಾಗಿದೆ (ರೂಪಸ. ೨೬೩). [ ತರಲೆ$_1$ + ವ್ಯವಹಾರ ]

**ತರಲೇಕ್ಷಣ** (ನಾ). ಚಂಚಲವಾದ ಕಣ್ಣು : ನಮ್ರಶಿರೋಧರೆ ಸೀತೆ ಲೋಕಸಂತ್ರಾಸಿಯ ರೂಪು ಪಾದನಖದರ್ಪಣದೊಳ್ ಪಲವಾಗಿ ತೋಱೆ ಕಂಡಾ ಸತಿ ಬೆರ್ಚಿ ಮುಚ್ಚಿದಳೆರಟ್ಕರದಿಂ ತರಲೇಕ್ಷಣಂಗಳಂ (ಪಂಪರಾಮಾ. ೯-೦೦೨). [ ಸಂ. (ತರಲ + ಈಕ್ಷಣ) ]

**ತರವಂಗಿ** 'ತರುವಂಗಿ' ನೋ.

**ತರವತ** (ನಾ). ತೀಕ್ಷ್ಣತೆ; ತೀವ್ರತೆ (?): ಕಿರಿಯಣ್ಣನರ್ಥೋಪಾರ್ಜನೆಯಿಂ ಮನದೆರಕದಿನಾ ದಶಪುರಕೆ ತರವತನಾದ ಬೇಸಗೆಯೊಳು ಬಂದೊಂದು ಮಿರುಪ ದೈವದ ಶಾಲೆಯೊಳು ಮಲಗಿರಲು (ಪ್ರಭಂಜ. ೩-೦೨೬).

[ ? ]

**ತರವರಿ** (ಕ್ರಿ). (ಯೋಗ್ಯತೆಯಲ್ಲಿ) ವ್ಯತ್ಯಾಸವನ್ನು ತಿಳಿ,–ತಾರತಮ್ಯವನ್ನು ತಿಳಿ : ತರವರಿತು ಇಹಪಾರ ಶಾಸ್ತ್ರಿಗ ದುರುಳನಡೆಗೈನೆಂದು ವಹಿಸಿತಿ ಮುರುಕದಲಿ ನಿಪಗಿತ್ತ ರಾಜ್ಯವ ಬಸವನೆನಲರಸು (ಬಿಜ್ಜಪು. ೭೦-೩೦); ರಾಜಕುಮಾರಕರ್ ಸಂಭ್ರಮಂ ಮಿಕ್ಕು ಪೊಕ್ಕು ತರವರಿದಿಕ್ಕಿದ ಪೊನ್ನಗದ್ದುಗೆಗಳೊಳುಕ್ಕಿಮಂ ಮಿಗೆ ಕುಳ್ಳಿರ್ಪಾಗಳ್ (ದಮಸ್ಕ. ೪-೬ ವ).

[ ತರ$_3$ + ಅರಿ$_2$ (<ಅಱ) ]

**ತರವಳಿ$_1$** (ನಾ). ತೆರ ; ಪ್ರಕಾರ ; ರೀತಿ: ಪರಿಪರಿಯ ವರ್ಣಾಶ್ರಮಂಗಳ ತರವಳಿಯ ಕೇರಿಗಳ ಲಕ್ಷ್ಮೀಕರವನಭಿವರ್ಣಿಸುವಡಸದಳವಾಗಿ ಫಣಿಪತಿಗೆ (ಅನಂತಾ. ೦-೧೭-೩). [ ←ತಮಿ. ತರವಟಿ ]

**ತರವಳಿ$_2$** (ಗುಂ). ಕ್ಷುದ್ರವಾದ ; ಅಲ್ಪವಾದ: ಪರಮಾತ್ಮ ನೀನು ಪರತತ್ತ್ವವೆಂದು ಭಾವಿಸಿ ನಿನ್ನ ಬಯಸಿ ಮಿಕ್ಕ ತರವಳಿ ದೈವದಾಸೆಗೆ ಸಿಲುಕಿ ದಾರಿದಪ್ಪುವೆನೆಂತು (ಗೀತಗೋ. ೬೫). [ ? ]

**ತರವಾರ, ತಲವಾರ್, ತಳವಾರ$_2$** (ನಾ). ಕತ್ತಿ ; ಖಡ್ಗ : ಕಾಲಭೈರವನ ಹಣೆಗಣ್ಣಿನಂತೆ ಕಿಚ್ಚಿಡುವ ಪುಲಿಕೇಶಿಯ ತರವಾರದ ಧಾರೆಯಿಂದ ಪಲ್ಲವೇಂದ್ರನ ಕೆಚ್ಚೆದೆ ಬಾಡಿಹೋಯಿತು (ಕರತ್ನ. ೦೨). ತಲವಾರ್ : ಪೋಲಿ ಸಾಂಬಾ ತಲವಾರ್ ಪೆಟ್ಟು ತಿಂದು ಗೌಡರ ಕೇರಿ ತಾಲಿಂನಲ್ಲಿ ಸಾಯುತಾ ಬಿದ್ದಿದ್ದಾನೆ (ಕಲಸ. ೨೭೩) ; 'ತಲವಾರ್' ಶಬ್ದಕ್ಕೆ ಒಂದು ವಿಶೇಷ ಅರ್ಥವಾಗುತ್ತದೆಂಬುದನ್ನು . . . ತಿಳಿಸಿರಿ (ಭಾರತಿ. ೧೫). ತಳವಾರ$_2$ : ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ ತಳವಾರಲು ತಳ್ತ ಭೂಪಾಳರ ಹೆಡತಲೆಯಂ ಧೊಪ್ಪೆನಲು ಹೊಯ್ದ ಗಂಡಂ(ಎಕ. IV, ನಾಗಮಂ. ೭೩-೦೦ : 1145).

[ ←ಹಿಂ. ಮರಾ. ತರವಾರ್, ತಲವಾರ್ / ಸಂ. ತರವಾರಿ]

**ತರವಾರಿ** (ನಾ). = ತರವಾರ : " ತರವಾರಿ ಮಂಡಲಾಗ್ರಂ . . . ಅಡಾಯುಧಮೆನಿಕ್ಕು " (ಮಂಗರಾ. ೮೮-೩೭) ; ತದ್ವಧೂದ್ಯಗುತ್ಪಳಿಕಾಳಿಕುಟುಮಳಿತಹೃದ x ದು ರವಿಮಂಡಳಮೊ ತರವಾರಿ ಪೆಮ್ಮೆಗಭೂಪಾಳಕನ (ಸೌಇಇ. XI–II, ೦೨೯-೦೭ ; 1083) : ಜಾನುದಘ್ನಮಾದುವು ತರವಾರಿಯಿಂದಿಱಿಯೆ ಲೋಹಿತವಾರಿಗಳಾಸವಾರಿಗಳ್ (ಪಂಪಾಮಾ. ೦೩-೩೦) ; ಕದನದೊಳಂದು ನಿನ್ನ ತರವಾರಿಯ ಬಾಯಿಗೆ ಮೆಯ್ಯನೊಡ್ಡಲಾಱದೆ ನಳಿದಿನ್ನುವಂತದನೆ ಜಾನಿಸಿ ಜಾನಿಸಿ (ಎಕ. II, ೨೪೦–೨೩ ; 1176) ; ಚಾಪವಿದ್ಯೆಯಂ ಚಾರಣ ಚೂರಣಾದಿ ತರವಾರಿಯ ವಿದ್ಯೆಯನಾಗಮಂಗಳಂ . . . ಈತನಲ್ಲದಿಳೆಯೊಳ್ ಮಿಗೆ ಬಲ್ಲವರಾರ್ (ದಶಕು. ೧೦–೯೩).

[ ಸಂ. ]

**ತರವಿಡಿ** 'ತರಂಬಿಡಿ' ನೋ.

**ತರವೀಸ, ತಾರವಿಸ** (ನಾ). ಒಂದು ಬಗೆಯ ನಾಣ್ಯ ಮತ್ತು ಅದರ ಬೆಲೆ : ನೂರಯಿಪ್ಪತ್ತು ವರಹ ತರವೀಸ ಉಳಿಯದೆ ನಂಮ ಅರಮನಿಗೆ ಸಾಕಲ್ಯವಾಗಿ (ಎಕ. VI, ಕೊಪ್ಪ. ೨೦–೬ ; 1591 ?). ತಾರವಿಸ : ಮುವತ್ತು ವರಹಂನು ತಾರವಿಸ ವುಳಿಯದೆ ಸಲ್ಲಿಸಿಕೊಂಡೆವಾಗಿ (ಮ್ಯಾಅರಿ. ೧೯೩೦, ೦೦–೧೯; 1585). [ ←ಪಾರ. ತರ್ವೀಜ್ ]

**ತರಸ$_1$** (ಗು). ೧. ಚಲಿಸುವ; ಸಂಚರಿಸುವ : "ತ್ರಾಸ – ತರಸ " (ಶಮದ. ೨೩೪ ಪ್ರಯೋ). (ನಾ). ೨. ಭಯ ; ಹೆದರಿಕೆ ; ಅಂಜಿಕೆ : " ತರಸಂ ತ್ರಾಸದೊಳಂ " (ಕರ್ನಾನಿ. ೯೨) ; " ತರಸ – ತ್ರಾಸ = ಭಯ, ಆಯಾಸ " (ಕದ್ಯಕೋ. ೧೭). [ <ಸಂ. ತ್ರಾಸ ]

**ತರಸ$_2$** (ನಾ). ಮಾಂಸ ; ಬಾಡು ; ಅಡಗು : " ಪಲಲಂ, ಜಾಂಗಲಂ . . . ತರಸಂ – ಈ ೮ ಮಾಂಸ " (ಹಲಾಯು. ೦೦೪–೯); ಹಿಂಸಾಜನ್ಮಂ ತರಸಂ ಅದಂ ತಿನ್ಬುದಾರ್ಗಮಟಿನಲ್ತು (ನೀತಿಮಂ. II, ೨೦೪). [ ಸಂ. ]

**ತರಸು** (ನಾ). ಸಾಗುವಳಿಯಿಲ್ಲದುದಂ ; ಜಂಬರು. 'ತರಸುಭೂಮಿ' ಪರಾ. [ <ತರಕು ]

**ತರಸುಭೂಮಿ** (ನಾ). ಸಾಗುವಳಿಯಿಲ್ಲದ ಭೂಮಿ ; ಪಾಳುಬಿದ್ದ ಭೂಮಿ ; ಬಂಜರು : (ಕ).

[ ತರಸು + ಭೂಮಿ ]

**ತರಸ್ವಿ** (ಗುಂ). ೧. ವೇಗವಾದ; ಶೀಘ್ರವಾದ. (ನಾ). ೨. ವೇಗಶಾಲಿ; ಚುರುಕಾದವನು : " ತರಸ್ವಿನ್, ತ್ವರಿತಃ, ವೇಗಿನ್, ಪ್ರಜವೀ, ಜವನಃ, ಜವಃ– ೬ ಜಾಗ್ರತೆಯೂ, ತ್ವರೆಯೂ, ವೇಗವೂ ಉಳ್ಳವನು " (ಸಿದ್ಧಾಂತಿ. ೨೨೨). ೩. ಕೆಚ್ಚುಳ್ಳವನು; ಧೈರ್ಯಶಾಲಿ; ಶೂರ; ಧೀರ. ೪. ಚಾರ; ದೂತ ; ಹರಿಕಾರ. ೫. ಗರುಡ. [ ಸಂ. ತರಸ್ವಿನ್ ]

**ತಱುಂಪು** 'ತಱುಂಬು₁' ನೋ.

**ತಱುಂಬು₁**, ತರುಂಬು₁, ತರುಬು, ತರುಮು, ತರ್ಬು₂, ತರ್ಮು, ತೞುಂಪು, ತಱುಬು₁ (ಕ್ರಿ). ೧. ತಡೆ ; ನಿಲ್ಲಿಸು ; ಮುಂದೆಹೋಗದಂತೆ ಮಾಡು : "ತಱುಂಬು – ಗತಿಸ್ತಂಭೇ(ಅಡ್ಡಗಟ್ಟು)ಶಿಲೋದ್ವಹನದಾರೌ ಚ (ಸನ್ನೆಯ ಕೋಲು)" (ಶಮದ); ಎನಸುಂ ಮೈ ಬಸುವೇಱೆ ವಾಸಗೃಹಮಂ ತೀವಿತ್ತು ಸುಯ್ದಾಗಳೆ . . . ವಿಗಳದ್ಬಾಷ್ಪಾಂಬುಧಾರಾಳಿ ತದ್ವನಭೂಜಾವಳಿಗಾಲವಾಲಜಲವಾಯ್ತುಬ್ಬಾಕ್ಷ ನಿನ್ನಂದಮಂ ನೆನೆಯುತ್ತಿರ್ಪ ಮನಂ ತಱುಂಬುತಿರೆ ಜೀವಂ ನಿಂದುದಾ ತನ್ವಿಯಾ (ಆಗವಿ. ೧೧-೩೯); ಆಲಿಂಗನೇಚ್ಛೆಯೊಳ್ ನಿಮಿರ್ದ ಗಾತ್ರಮಂ ತಳರಲೀಯದೆ ತಱುಂಬುವಂತಿರೆಗ್ಗಳಿಸಿದುತ್ಕಟ ಸ್ತಬ್ಧಭಾವಮುಂ (ವರ್ಧಪು. ೬-೧೨ ವ). ೨. ಎದುರಿಸು ; ಪ್ರತಿಭಟಿಸು : ಒತ್ತಿ ತಱುಂಬಿ ನಿಂದ ರಿಪುಭೂಜಸಮಾಜದ ಬೇಗಗಳಂ ನಭಕ್ಕೆತ್ತದೆ ಬಂದು ತನ್ನ ಮಱೆವೊಕ್ಕೊಡೆ ಕಾಯದೆ . . . ಮಾಣ್ದು ಬಾಟ್ಟ ಪುಟುವಾನಸನೆಂಬನಜಾಂಡಮೆಂಬುದೊಂದತ್ತಿಯ ಪೆಣ್ಣೊಳಿರ್ಪ ಪುಟುವಲ್ಲದೆ ಮಾನಸನೇ ಮುರಾಂತಕಾ (ಶಂಪಥಾ. ೫-೬೩); ಅಭ್ರಮನಿರದೆ ತಱುಂಬುವ ತೆಱದಿಂದಮೆತ್ತಿಪೊತ್ತಂಸದೊಳಭ್ರಂಬರೆಗಮೊಗೆಯೆ ನೋಟಕ್ಕೆಂಬಾದುದು ಮೇಘರಥ ವಿಯತ್ಪಥಗಮನಂ (ಶಾಂತಿಪು. ೯-೬೩); ಎಂತೊದಱುವರೆಂತು ಪಾಯಿಸುವರೆಂತು ತಱುಂಬುವರೆನ್ನುತ್ತ ನಿಲ್ವರೆಂತೊದವುವರೆಂತು ಲಕ್ಷ್ಮಣನೊಳಾಂತು ಬರ್ದುಂಕುವರನ್ನಭೂಭುಜರ್ (ಎಕ. VII, ಶಿಕಾರಿ. ೧೩೬-೩೯ ; 1068); ವಿನಮಿತನಾಗಿ ನಿಂದು ನಿಜ ನಿಶ್ವಸಿತೋಚ್ಚತೆಯಂ ತಱುಂಬಿ ಮೆಲ್ಲನೆ ನಿಟಿಲಾಗ್ರಘರ್ಮಜಲಮಂ ಬೆರಲಿಂ ಬಟಿಯುತ್ತುಂ (ಕುಸುಮಾ. ೧೧-೯); ಮುಟ್ಟಿ ಮೂದಲಿಸಿ ಕಟ್ಟಿದಿರ್ಗೆವಂದು ಮೆಟ್ಟಿ ತಱುಂಬಿದ ಸಿಂಹಚೂಡನಂ . . . ಕಂಡು (ಅನಂಪು. ೧೧-೪೯ ವ). ೩. ತಾಗು ; ತಗಲು : ಗಗನತಳಮಂ ತಱುಂಬುವಂತಿರ್ದ ಶಿಖರಿ ಶಿಖರಂಗಳಿಂದಂ . . . ಭಯಂಕರಾಕಾರಮಪ್ಪ ದ್ಯೈತವನಕ್ಕೆ ಬಂದು (ಶಂಪಥಾ. ೬-೨೯ ವ); ಅಸುರಮಾಗ ದಾಡೆಗಳೊಡಲ್ಬಳೆ ದಂಬರಮಂ ತಱುಂಬೆ (ಶಂರಾಮಾ. ೧೧-೧೧೬); ತನು ತನುವಂ ತಱುಂಬೆ ಮಿಗೆ ಕೂರಸಿ ಕೂರಸಿಯಂ ಪಳಂಚೆ (ಎಕ. VII, ಶಿಕಾರಿ. ೨೪೨-೨೩ ; 1163). ೪. ಮುಂದುವರಿಯದಿರು ; ನಿಲ್ಲು ; ಸ್ಥಗಿತವಾಗು : ಚಕ್ರರತ್ನಮಯೋಧ್ಯಾಪುರಮಂ ಪುಗದೆ ತಱುಂಬಿ ನಿಂದುದಂ ಕಂಡುಂ (ಆದಿಪು. ೧೪-೩ ವ); ಒಳಗೆ ಸಮಸ್ತ ಭೂಭೃದಧಿಕಂ ಪ್ರಬಳಂ ಮನುಜೇಂದ್ರ ಮಂದರಂ ಬಳೆಯೆ ತಱುಂಬಿ ಸಂಚಳಿಸದಿರ್ದಪುದೀ ನಡು (ಪುಷ್ಪಪು. ೪-೪). ೫. ಪರವಾಗು ; ಮುಂದೆ ಬರು: ಪ್ರತಿಷೇಧದ ಧಾತುಗೆ ಮುಂದೆ ತಱುಂಬೆ ವಿಭಕ್ತಿ ಪೂರ್ವಕಾಲಕ್ರಿಯೆಯೊಳ್ ಪ್ರತಿಷೇಧಮದೆಂಬುದು ಮುಂದೆ ತೋಱೆ ಮೇಣ್ ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ (ಶಮದ. ೭೧). ೬. ವಿಸಾರಿಸು ; ಸೋಲಿಸು ; ಗೆಲ್ಲು : ಮೇನಕೆ ರಂಭೆಯೂರ್ವಶಿ ಸುಕೇಶಿ ತಿಲೋತ್ತಮೆ ಮಂಜುಘೋಷೆಯೆಂಬೀ ನೆಗಟ್ದಗ್ಗದಚ್ಚರಿಯರಚ್ಚರಿಯಪ್ಪ ವಿಳಾಸಮಂ ನಿಜಭ್ರೂನಟನೈಕದೇಶಮೆ ತಱುಂಬಿದುದೆಂಬ ಸುರೂಪ ವಿಭ್ರಮಶ್ರೀ ನಿಜಮಾಗೆ ರಂಜಿಸುವರಲ್ಲಿಯ ರೂಢಿಯ ಗಾಡಿಗಾರ್ತಿಯರ್ (ಪುಷ್ಪಪು. ೨-೬೬). ೭. ಎತ್ತು ; ಆಕ್ರಮಿಸು; ಹಿಡಿ; ಸುತ್ತುಗಟ್ಟು: ಪದದಿನಿಸಂ ತಳರ್ಚುವ ತಳರ್ಚಿದುದಂ ಮೊಟಕಾಲ್ಗೆ ತರ್ಪ ತಂದುದನುರದಿಂ ತಱುಂಬುವ ತಱುಂಬಿದುದಂ ಪೆಗಲಲ್ಲಿಗೆತ್ತುವೆತ್ತಿದುದನೆ ನೆತ್ತಿಯೊಳ್ ತಳೆದು ಪೊಂಗಳ ಭಾರಮನುಯ್ವ ವಿಪ್ರವೃಂದದ ಪಡಿಮಾತೆ ಪೇೞದೆ ಯುಧಿಷ್ಠಿರ ರಾಜನ ಬಾಗದೇಟ್ಗೆಯಂ (ಆಗವಿ. ೧೬-೧೪); ಪರನೃಪನೆನ್ನ ಮಿತ್ರಪುರಮಂ ತವೆ ಮುತ್ತಿದನೆಂದು ಕೇಳ್ದು ಚಿಚ್ಚರಮಿದೆ ಬಂದೆನಿತ್ತಲವನತ್ತ ಮದೀಯ ಪುರಪ್ರಭಾಗಮಂ ಭರದೆ ತಱುಂಬಿದಂ ಗಡವನಂ ತಗುಳ್ದಟ್ಟುವೆಂ (ರಶರ. ೦-೭೦). **ತರುಂಬು₁** : ೨. 'ತರುಂಬುವುದಂ' ಪರಾ. **ತರುಬು** : ೧. ಜಕಾತಿ ಕಟ್ಟೆಯನ್ನು ದಾಟ ಮುಂದೆ ಇರುವ ಗಿಡದ ಕೆಳಗೆ ಗಾಡಿಯನ್ನು ಯಲ್ಲನು ತರುಬಿದನು (ರಕ್ತಧ್ವ. ೦೩): ಅನಂತ ಪಾರವಾದ ಒಂದು ಕುರಿಯ ಹಿಂಡನ್ನು ಕಣ್ಣೆದುರಿಗೆ ತರುಬಿಕೊಂಡು ಅವುಗಳನ್ನು ಒಂದೊಂದಾಗಿ ಎಣಿಸಲು ನನಗೆ ಹೇಳಲಾಯಿತು (ಗಾಳಿಪ. ೧೨೦); ಹುಲ್ಲನ್ನು ಮೇಯಿಸಲೆಂದು ತಮ್ಮ ಎಮ್ಮೆಗಳನ್ನು ತರುಬಿ ನಿಂತಿದ್ದಳು (ನಡೆದಾ. II, ೧೨೬೨). ೨. ತರುಬುವವನು ಬಹು ವಿಘ್ನದಲಿ ವಿಧಿ ತರುಬಲಾರದೆ ನಿಲಲು ಕೆಲಕಡೆಗುರುಬಬೇಕೈ ಮುಂದಣಾ ಮಾರ್ಗವನು ತಾ ಹತ್ತಿ (ಜ್ಞಾನಸಿಂ. ೦೩-೪೦); ತಾಯಿಯ ಧನಿಯು ತಾರಕ್ಕೆ ಮುಟ್ಟಲು ಶಂಕರರಾಯರು ಅದನ್ನು ತರುಬಿ ಎಂದರು (ಕನಕೆ. ೩೯). ೪. ಹೋಗು ನಿನದಾರಿ ಬಲುದೂರ ಆವೂರ ತೇರು ನಿನಗಾಗಿ ತರುಬಯ್ತೊ (ಹಳ್ಳಿಯ. ೩೦). ೮. ಅಟ್ಟು ; ಓಡಿಸು ; ಪ್ರೇರಿಸು : ಮನಸ್ಸು ಮುಂದುಗಡೆಯಲ್ಲಿ ಎಳೆವಂತೆ ಇರುವುದು ; ಮನ್ಮಥನು ಹಿಂಭಾಗದಲ್ಲಿ ತರುಬುವಂತೆ ಇರುವನು (ವಿಕಾ. ೧೬); ಕಿನ್ನರನು ಓಡಿ ಹೋಗಿದ್ದ ಬೀಮಣ ತ್ರಿಶಂಕು ಶನಿಯರನ್ನು ಅಲ್ಲಿಗೆ ತರುಬಿಕೊಂಡು ಬರುವನು (ಬಿಗಾಳಿ. ೯): ಉರುಬಿ ನಿಂದಾ ಬರುವ ಕರಿಗಳು ಎರಗಿ ಬರುತಿಹ ಗಂಡು ಮೃಗಗಳು ತರುಬಿ ಬರುತಿಹ ಮಲೆಯ ಹೋರಿಯು ಬಳಸೆ ಮೆರೆದವರಣ್ಣದಿ (ಗೋಹಾಡು. ೦೫). **ತರುಮು** : ೧. ಓಡುವವನೂ ಚೆತ್ತಲೆ ತರುಮುವವನೂ ಚೆತ್ತಲೆ (ಕಥಾಮಂ. IV, ೨೦). **ತರ್ಬು₂** : ೧. ಕುಶನೊಂದಿ ಹೊಂದೇರ ಶರದರ್ಬುವ ನೋಡೆಂದು ಚೆಂಬಲದ ವಾಹಿನಿಯ ತರ್ಬಿದಂ ಸರ್ಬ ಸನ್ನಾಹದಸ್ತ್ರಂಗಳಂ ಚೆಲ್ಲಿ ಎಲ್ಲಾ ದೇಶಕೆ (ಜನಮು. ೩೮-೮). **ತರ್ಮು** : ೯. ತಗ್ಗಿಸು ; ಕಡಿಮೆ ಮಾಡು : ಈ ಸತಿಯುಮ್ಮಳವನೆನಸದಲೆ ಮನವನು ನಮ್ಮದಿಯೊಳಿದಿರೆಂದು ಪೇಳುವಿರಕಟ ಶೋಕವನು ತರ್ಮದಿರಲಾ ನಾಮ ಸಲುವುದೆ (ಜನಭಾ. ೪೮-೩೦). ೧೦. ತಾಗುವಂತೆ ಮಾಡು ; ಮುಟ್ಟಿಸು : ನಮ್ಮ ವಿದ್ಯಾನಾಡಿನೊಳು ದುಷ್ಕರ್ಮನಿವನಾರಾರಿಗುವಟಳ ತರ್ಮುವನು (ಜನಭಾ. ೪೫-೪). **ತೞುಂಪು** : ೨. ಅನನ್ತಪಾಳನಾಗಳೆ × × ಕೆಯ್ಗುಮಾಗಳೆ ಕಡಂಗುಗುಮಾಗಳೆ ನಟ್ಟು ನಿಲ್ಕುಮಾಗಳೆ ತಱಿಸಲ್ಗುಮಾಗಳೆ ತೞುಂಪುಗುಮಾಗಳೆ ಪೊಟ್ಟುವಾಯ್ಗುಂ . . . ಆಗಳೆ ಕೊಂದು ಕೂಗುಗು (ಕಕ. V, ೦೪-೭ ; 1099). **ತಱುಬು₁** : ೧. "ತಱುಬೆಂದೆನೆ ತಡೆಯಲ್ಕೆ" (ಕವಿಕಂ. ೧೯೯). ೨.ಸದಾಶಿವನ ಪೂಜಿಸುವೆನೆಂದು ಹೋದಡೆ ತಱುಬಿ[ಪಾಠಾಂ. ಕದುಬಿ] ಹಿಡಿವವಯ್ಯಾ ಸಕಲ ವಿಪತ್ತುಗಳು (ವಚನವ. ೪. ೨೨೦-೪೧೨); ಮುಱಿದು ಬಹ ನಿಜಸೇನೆಗಭಯದ ಸೆಱಗ ಬೀಸುತ ಭೀಮಸೇನನ ತಱುಬಿ ನಿಂದನು ಭೀಷ್ಮ (ಕುಮ್ಮಾಭೀ. ೬-೫); ತಱುಬಿ ಕಾದುವ ಕಲಿಗಳಲುಗಳ ಮುಱಿದು ರಕುತದ ಹಿಂಡಿ ನೆತ್ತರ ತೊಱೆಯ ಹರಿಸಿದರೂರೊಳಗಲದಲಸುರಭಟನಿಕರ (ತೊರದಾ. ೬-೩೭-೧೪); ಪೆಱನೊಸಲಿನ . . . ಪೆಣ್ಗಳ ತಂಡ ತಱುಬಿದುದಾರತಿವಿಡಿದು (ಕುರಾಸಾಂ. ೩೪-೦೩); ಬಿರುದಿನ ಹೊಣಕೆಯ ಹೊಂತಕಾರಿಗಳಾಗ ತಱುಬಿದರರಿವಾಹಿನಿಯ (ಕಂನವಿ. ೦೫-೨೫); ಸರಥಂ ಸುರಥಂ ದಂಡಂಗೊಂಡು ದಾಟುವ ದೆಖ್ಖಾಳದ ದಕ್ಕಡಿಗರಂ ತಱುಬಿ ನಿಂದಂ (ರಾಮಾಶ್ವ. ೦೪೩-೨೨); ಎನ್ನೊಡೆಯ, ತಱಿಸಂದು ತುಱುಗಳನ್ ಕೊಲ್ವೆಯಾ? ಮೂಗುಸಿರ್ಗಳನ್ ತಱುಬಿ, ಮಂದೆಗಳನಿಡಿದು (ಅಶ್ವತ್ಥಾ. ೮-೦೫೮). ೩. ತಾಯಿಮಳಲನು ತಱುಬಿದಬುಧಿಯ ದಾಯಿಗರು ತಾವಿವರೆನಲು ಬಡೆ ನೋಯ ಬೆರಸಿದುದುಭಯಬಲ ಬಲುಖತಿಯ ಬಿಂಕದಲಿ (ಕುಮ್ಮಾಶ. ೨-೧೫). ೪. ಎಲೆ ಧನಂಜಯ ಹಗೆಯ ಹೆಚ್ಚಿದ ಹಳುವವಿದೆಲಾ ವಜ್ರಸುತ ನಿನ್ನಳವಿಯಲಿ ತಱುಬಿದೆ ಸುಯೋಧನ ಸೈನ್ಯಗಿರಿನಿಕರ(ಕುಮ್ಮಾಭೀ. ೩-೨೫); ಇರದೊಂದು ಪೆರ್ಗುಂಡನು ಕಟ್ಟಿ ಕೊರಳಲಿ ಪುರದ ಬಾಗಿಲೊಳ್ ನಿಂದಿರಲ್ ಬಟ್ಟೆಯಿಲ್ಲದೆ ಸರ್ವರುಂ ತಱುಬಿ ನಿಲೆ (ಚಿಬಪು. ೬-೩೬). ೧೧. ಕಳಿಸು ; ತಳ್ಳು ; ನೂಕು (?) : ಪೆಣ್ಡಂಬಿಗಳ ಸರಮನೆತ್ತಿ ತಱುಂಬುತ್ತುಂ ಬಂದುದಾ ಪ್ರಭಾತ ಸಮಾರಂ (ಶಂಪಥಾ. ೦೨-೧೦೫) :

ರಾಜಗೃಹಕ್ಕೆ ಮಿಕ್ಕ ಗಜದಂತಚಯಂಗಳುಮಂ ಚಮೂರ ಕೃಷ್ಣಾಜಿನವನ್ನವಸ್ತ್ರಚಯಮಂ ಬಿದಿರಕ್ಕಿಯುಮಂ ತಱುಂಬಿ . . . ತದ್ವೃಷಭದತ್ತನ ಗೇಹದೊಳಂದು ಕಂಡೆ ನಾನೀ ಜನಸಂಸ್ತುತ ಪ್ರತಿಯುಗಂಗಳನರ್಩್ಚಿಪ ಸಜ್ಜನಂಗಳಂ (ನೇಮಿಪು. ೧-೭೩) ; ಕೆಲವು ದಿವಸಕ್ಕೆ ಭವದೇವಂ ಬಂದು ಸುಕಾಂತನಂ ಕೊಲ್ವೆನೆಂದು ತಾನುಪಾರ್ಜಿಸಿ ತಂದ ಧನವೆಲ್ಲಮಂ ಕೊಟ್ಟು ಭೃತ್ಯರಂ ತಱುಬಲದಂ ಸುಕಾಂತಂ ಕೇಳ್ದು ಭವದೇವನಂಜಿಕೆಗೆ ಪುರಮಂ ಬಿಟ್ಟು (ಪುಣ್ಯಾಸ್ರ. ೬-೪೩ ವ) ; ಸುಕಾಂತನಂ ಕೊಲ್ವೆನೆಂದು ತಾನಾರ್ಜಿಸಿ ತಂದ ದ್ರವ್ಯದಿಂ ಪಲಂಬರ್ವೀರ ಭಟರಂ ತಱುಬಿ ರಾತ್ರಿಯೊಳು ಸುಕಾಂತಂ ತನ್ನಿರ್ದ ಮನೆಯಂ ಮುತ್ತೆ (ಪುಣ್ಯಾಸ್ರ. ೦೧-೫ವ).
[ ದೇ.॥ ತಮಿ. ತಱುಗು = ತಡೆಯಲ್ಪಡು ; ತೆಲು. ತಱುಮು, ತಱುವು ]

**ತಱುಂಬು$_2$, ತರಂಬು$_2$, ತರುಂಬು$_2$, ತಱುಂಬೆ, ತಱುಪು$_1$, ತಱುಬು$_2$**(ನಾ). ೧. ತಡೆಯುವಿಕೆ ; ಪ್ರತಿಭಟನೆ : "ತಱುಂಬೆಂದು ತಡೆವುದು" (ಕಶಸಾ ೨೩-೪೮೦). ೨. ಭಾರವಾದ ಕಲ್ಲುಗಳನ್ನು ಎತ್ತಲು ಉಪಯೋಗಿಸುವ ಕೋಲು ; ಸನ್ನೆಕೋಲು : "ತಱುಂಬು–ಗತಿಸ್ತಂಭೇ (ಅಡ್ಡಗಟ್ಟು) ಶಿಲೋದ್ವಹನ ದಾರೌ ಚ (ಸನ್ನೆಯ ಕೋಲು)" (ಶಮಧಾ); "ಗತಿಸ್ತಂಭದೊಳ್ ಸಿಲೆಯನೆತ್ತುವ ಮರದೊಳಂ ತಱುಂಬಕ್ಕು" (ಶಬ್ದಮಂ. ೦೦೨). ೩. (ನದಿಯ ನೀರು ತಂದು ನೂಕಿರುವ) ಮರಳುರಾಶಿ: ಕಾಡಾನೆಗಳ ಕೋಡೇಱಿಂದಿಡಿದು ಕಳೆದ ಖರ್ಜೂರದ ಕಡಿಗಳಂತೆ ತಡಿದಡಿಯ ತಱುಂ [ಪಾಠಾಂ. ಱುಂ]ಬಿನೊಳ್ ಬಿಸಿಲಂ ಕಾಯ್ವ ಮೊಸಳೆವಿಂಡಿನ ಪಸರಂಗಳೊಳಂ (ಚಂದ್ರಪ್ರ. ೫-೪೦ ವ) ; ತಱುಂಬಿನೊಳ್ ಬಿಟ್ಟ ಮೀನಂತೆ ಮಿಡಮಿಡ ಮಿಡುಕಿ (ಜೀವಸಂ. ೧೦೩-೪೬ ವ). **ತರುಂಬು$_2$** : ೪. ಅಡ್ಡಿ ; ತೊಂದರೆ. 'ತರುಂಬುವಡು' ಪರಾ. **ತರುಬು$_2$**: ೨. ತರುಬಿಲ್ಲದ ಒಡ್ಡನು, ಬರಿಸಿಲ್ಲದ ಹುರಿಯು (ಗಾದೆ). **ತಱುಂಬೆ** : ೩. ತಪೋಧನರಾಹಾರದಾನಕ್ಕಮ್ಮಾಟಕೂಟಕ್ಕಂ ತಱುಂಬೆಯ ಪೊಲದ ಹಗರಣಿಗನ ಬಾಗಿಂ ಪಡುವಣ ದೆಸೆಯಲಿ ದಿನಗುಣಿಗನ ಮೂಱು ಮತ್ತರು (ಸೌಇಇ. IX-1, ೧೬೫-೪೨ ; 1099). **ತಱುಪು$_1$** : ೩. ಏಳಸಲ್ಲತಿಕಾಗೃಹವಾಳಿ ಮಂಗಳಾಸ್ಪದ ಪುಲಿನಸ್ಥಲಂ ಪುದಿದ ಕಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬುನೆಲನುಂ ಪರಿಭಾವಿಪೊಡಿಲ್ಲದಲ್ಲಿಯುಂ (ಶಾಂತೀಶ್ವ. ೧-೦೦೧). **ತಱುಬು$_2$** : ೨. ರಕ್ಕಸಕಿಂಕರರು ಬೊಬ್ಬಿಱಿದು ಬಲುಸನ್ನೆಗಳಲುಕ್ಕಿನ ತಱುಬುಗಳಲೆತ್ತಿದರು ತೇರಿಗೆ ತಗ್ಗಲವನಿತಳ (ತೊರರಾ. ೫-೭-೬). [ <ತಱುಂಬು$_1$ ]

**ತಱುಂಬುನೆಲ** (ನಾ). ಮರಳಂ ಭೂಮಿ ; ಉಸುಕು ನೆಲ (?): ಮದನವಿಹಾರ ಭೂಮಿಯೆನಿಸಿರ್ಪ ವನಾವಳಿ ವಾರಿಜಾಕರಂ ವಿದಳಿತ ಪುಷ್ಪರಾಜಿ . . . ಪುದಿದ ಕಂಪಿನ ಶಾಲಿಯ ಕೆಯ್ವೊಲಂಗಳಿಲ್ಲದ ತಱುಪುಂ ತಱುಂಬುನೆಲನುಂ ಪರಿಭಾವಿಪೊಡಿಲ್ಲದಲ್ಲಿಯುಂ (ಶಾಂತೀಶ್ವ. ೦-೧೦೦).
[ ತಱುಂಬು$_2$ + ನೆಲ$_1$ ]

**ತಱುಪು$_1$** 'ತಱುಂಬು$_2$' ನೋ.

**ತಱುಪು$_2$** (ನಾ). ಕಡೆಗಂದಿಯಾದ ಹಸು ಅಥವಾ ಎಮ್ಮೆ. 'ತಱುಂಪೆರ್ಮೆ' ಪರಾ. [ ?. /ತಮಿ. ತಱುವು=ಕಡಮೆಯಾಗು ]

**ತಱುಪೆರ್ಮೆ** (ನಾ). ಕಡೆಗಂದಿ ಎಮ್ಮೆ : ನೆಱೆಪೂರಸುಗೆ ಕಾವಲಿಯಂ ಕಿಱುಕುಸಲೆಯ ಬೇರೊಳಕ್ಕೆ ಕೊಳಗುಳಿಕಲೆಯೊಳ್ ತಱುಪೆರ್ಮೆಯ ಪಾಲಂ ಬಱಿಕೆರೆದಟ್ಟೊಡೆ ಮೃದುವೆನಿಪ್ಪ ಪಾಲವುಗಕ್ಕುಂ (ಲೋಕೋಪ. ೮-೯) ; ತುಱುವೆಯ ಬೇರನಿಕ್ಕಿ ತಱುಪೆರ್ಮೆಯ ಪಾಲುಮಮರ್ಧಮಪ್ಪಿನಂ ಮಱುಗಿಸಿ . . . ಮಾಟ್ಟುದು ಕ್ಷೀರದುಂಡೆಯಂ (ಲೋಕೋಪ. ೮-೧೦) ;
[ ತಱುಪು$_2$ + ಎರ್ಮೆ ]

**ತಱುಬಿಸು** (ಕ್ರಿ). (?) : ಅಟಲಪಡಿಯ ಜ ೧ ತಱುಬಿಸಿಕೊಂಡು ಉಂಬ (ಬೊಂಕಪಾ. ೦೯೪೮, ಕುಮಟ. ೦೦೦-೬ ; ?). [ ? ]

**ತಱುಬು$_1$** 'ತಱುಂಬು$_1$' ನೋ.

**ತಱುಬು$_2$** 'ತಱುಂಬು$_2$' ನೋ.

**ತಱುಬುಲ್ಲು** (ನಾ). ಒಂದಂ ಬಗೆಯಂ ಹುಲ್ಲು; "ಕುಡುಂಗಕ"(ನಾಚಿರಾ. ೬).
[ ? + ಪುಲ್ಲು (<ಪುಲ್) ]

**ತಱುಮಿಂಡಿ** 'ತುಱುಮಿಂಡಿ' ನೋ.

**ತಱುವಾಳ** (?). (?) : ಧುರದೊಳ್ ಗುಂಡಪಮಾತ್ರಂ ನರಮೇಧಪಮಾಡದುಳಪನೆಂದೆನಲಾ ಭೀತರು ಮರನನೇಱಿ ಹೂವಿನ ತಱುವಾಳ ತಱುವಾಳ ಎನುತ್ತಮಿರ್ದ್ದರದೇನೋ (ಎಕ. V, ಬೇಲೂರು. ೩-೯೦ ; 1397 ?). [ ? ]

**ತಱುವಾಯ್, ತರುವಾಯ$_1$, ತರುವಾಯಿ, ತರ್ವಾಯ$_1$, ತರ್ವಾಯಿ, ತಱುವಾಯ$_1$, ತಱುವಾಯಿ, ತಱುವಾಯು** (ನಾ). ೧. ಕ್ರಮ ; ಪರಿವಿಡಿ : "ತಱುವಾಯೆಂದುಂ, ಪಾಟಿಯೆಂದುಂ ಕ್ರಮಂ" (ಕಶಸಾ. ೨೫-೫೦೯); ತಱುವಾಯಿಂದಾ ಯುಗಳಂಗಳೊಳ್ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ ದೀರ್ಘಕ್ಕೆ ದೀರ್ಘಂ ಪರಮಾದೊಡಂ . . . ಸವರ್ಣಸಂಜ್ಞೆ ವರ್ತಿಸುಗುಂ (ಶಮದ. ೭ ವೃತ್ತಿ) ; ತಱುವಾಯಿಂ ಗುರುವುಂ ದೀರ್ಘಮುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು (ಶಮದ. ೧೦ ವೃತ್ತಿ) ; ಕ್ರಮದೆ – ತಱುವಾಯಿಂದೆ (ಶಮದ. ೧೦ ಟೀಕೆ). ೨. ಅನಂತರದ ಸಮಯಂ ; ಮುಂದಿನ ಸರದಿ : ಆ ತಱುವಾಯಲಿ [ಪಾಠಾಂ. ಅನಂತರಂ] . . . ವನಪ್ರತೋಳಿಕಾದ್ವಾರಮಂ ಪೊಕ್ಕು (ಚಂದ್ರಪ್ರ. ೭-೮೩ ವ) ; ರಾಯಕಟಕಪಿತಾಮಹನ ತಱುವಾಯಲಭಿಷೇಕವನು ಕೌರವರಾಯ ಮಾಡಿಸಿ ಪತಿಕರಿಸಿದನು ಕುಂಭಸಂಭವನ (ಕುಮಾರವ್ಯಾ. ೦ ಸೂಚನೆ) ; ನೀವು ಕಟಕಾಚಾರ್ಯ ಪುತ್ರರು ನೀವಿರಲು ಕೃಪನಿರಲು ದಳವಾಯ್ ನಾವಹೆವೆ ನೀವೆಂದು ತೇಜೋದ್ವಯದಲಧಿಕರಲೆ ನಾವು ತಱುವಾಯವರು (ಕುಮಾರವ್ಯಾ. ೧-೨೦); ಇಳೆಯ ಮೇಲೆ ಕೌಂತೇಯನ ಮಹಾಧ್ವರದ ವಾಜಿಗಳ್ತಿರುಗಿ ತಱುವಾಯೊಳಿಲ್ಲಿಗೆ ಬಂದೊಡಾವು ಕಟ್ಟಿದೆವು (ಜೈಮಿಭಾ. ೩೨-೩) ; ಕೃಷ್ಣಾಚ್ಯುತರೆಂಬ ರಾಯರ್ಕ್ಕವರ ತಱುವಾಯಿಂ ಮುಂದದೊಳೆಳೆಯಂ ಪೊಱೆದ ಸದಾಶಿವರಾಯಂಗೆ (ಚೆಳವಂ. ೨-೧). ೩. ಸಮಯ ; ಅವಕಾಶ ; ಪ್ರಸಂಗ : ಇಲ್ಲಿ ಭಯ ಬೇಡಾವ ರಣವಿದು ತಲ್ಲಣಕೆ ತಱುವಾಯೆ ದೀವಿಗೆ ಪಲ್ಲವಿಸಿದರೆ ತಳಿತುದೇ ಭುಜಶೌರ್ಯ ಕುರುಬಲಕೆ (ಕುಮಾರವ್ಯಾ. ೧೫-೩೯). **ತರುವಾಯ$_1$** : ೧. "ಕ್ರಮಃ – ತರುವಾಯಂ" (ಕಾಶಕ್ಕ. ೪೦). **ತರುವಾಯಿ** : ೧. "ತರುವಾಯಿಯೆನಲು ತರ ಪರಿವಿಡಿಯೆನಲ್ಕಿವು ಪುಪರಿಯರ್ಥದೊಳ್" (ಕಶರ. ೪೪). **ತರ್ವಾಯ$_1$**: ೨. ಉದಿತ ಧರ್ಮದ ನೆಲೆಯನುರ್ವೀಶ ನೀತಿಗಳ ನಿಶ್ಚಯವನ್ನೆದ ಸಾಂಗೋಪಾಂಗವಾಗಿ ಬರಿಸಿ ತರ್ವಾಯೊಳಾ ಕುಮಾರರ್ಗೆ ಮುನಿನಾಥಂ ಧನುರ್ವೇದಮಂ ಶಿಕ್ಷೆಗೈದು (ಜೈಮಿಭಾ. ೧೯-೫೪); ಧರ್ಮದಿಂದಮೆ ರಾಜ್ಯ ಪರಿಪಾಲನಂಗೆಯ್ದು ವೈಕುಂಠಯಾತ್ರೆಯಂ ಮಾಡಿದನಾ ತರ್ವಾಯದೊಳ್ (ದಿವ್ಯಸೂ. ೬-೨೮ ವ) ; ಆ ತರ್ವಾಯದ ಹಾಡೇ ನಿಜವಾದ ಲಾವಣಿ (ಸುವರ್ಣ. ೪೩). ೪. (ಹೇಳಿದ ಪಾಠವನ್ನೇ) ಪುನಃ ಪುನಃ ಹೇಳುವುದು; ಸಂತೆ ಹೇಳುವುದು ; ಪುನಃ ಪುನಃ ಪಠಿಸುವುದು : ತರ್ವಾಯಕ್ಕೆ ಸಿಕ್ಕಿದಲ್ಲಿ ವೇದಾಂತಿಯಾದ ಆಗುಬೇಗೆಯನಾಡಿಹೆನೆಂದು ಆಗಮಿಕನಾದ (ಶಿವಮಂ. ೪೪) ; ಕೇಳುವ ಕೆಲವು ವಿದ್ಯಾರ್ಥಿಗಳಿಗೆ ವಸ್ತ್ರ ಕೂಳು ವೀಳೆಯ ವಿತ್ತು ಮುದದಿ ಆಳುಗೊಳಿಸಿ ಪ್ರತಿದಿವಸದಿ ತರ್ವಾಯ ಹೇಳುವ ವಿಬುಧರೊಪ್ಪಿದರು (ಮೋಹತ. ೩-೩೭) ; ಯಜುಃಶಾಖೆ ಅಧ್ಯಯನಕೆ . . . ಗ ೧೨ ಆ ತರ್ವಾಯ ಕೌಶಿಕಗೋ ಅಪಸ್ತಂಭ × × × ಭಟ್ಟರಿಗೆ . . . ಗ ೧೨ (ಎಕ. VIII, ತೀರ್ಥಹ. ೧೯-೦೦೧ ; 1573). ೫. ಪುನಃ ಅದನ್ನೇ ಮಾಡುವುದು; ಪುನರಾವೃತ್ತಿ : ಸರ್ವರೊಳಗೆ ಮುತ್ತೈದೆಯಾಗಿರ್ದ

ವೈಧವ್ಯವನಾಂತು ಬಾಳುವೆನೆ ಗರ್ವದ ನುಡಿಯಲ್ಲ ತನಗೆ ತನ್ನಾಳ್ದನ ತರ್ವಾಯ ಮಾಡೆಂದಳಳುತ (ಮೋಹತ. ೮-೩೬). **ತರ್ವಾಯಿ :** ೪. ಅ ಗೋತ್ರದ ಆ ಗ್ರಾಮದ ತಿರುಮಲಭಟ್ಟರ ಪುರುಷೋತ್ತಮ ಭಟ್ಟರಿಗೆ ಶಾಸ್ತ್ರದ ತರ್ವಾಯಿಗೆ ಕಾರಗಡೀಲಿ ಗ ೧೮ (ಎಕ. VIII, ತೀರ್ಥಹ. ೧೯-೧೦೪ ; 1673). **ತಱುವಾಯ್$_1$:** ೧. 'ತಱುವಾಯಗೊಳ್' ಪರಾ. **ತಱುವಾಯಿ :** ೧. "ಪಾಟಿ ತಱುವಾಯ ಕ್ರಮವಾದು" (ಕವಿಕಂ. ೨೦೮). 'ತಱುವಾಯಿಗೊಳ್' ಪರಾ. **ತಱುವಾಯು :** ೧. "ಪರ್ಯಾಯಂ" (ನಾಚಿರಾ. ೬).

[ದೇ.॥ತಮಿ. ತಱುವಾಯ್,ತರುವಾಯ್; ತೆಲು. ತರುವಾಯಿ,ತರುವಾತ]

**ತಱುವಾಯ್$_1$** 'ತಱುವಾಯ್' ನೋ.

**ತಱುವಾಯ್$_2$**, ತರುವಾಯ್$_2$, ತರುವಾಯೆ, ತರ್ವಾಯ್$_2$ (ಅ). ಆಮೇಲೆ ; ಆ ಬಳಿಕ : ರಾಯ ಕಟಕಾಚಾರ್ಯನಾ ತಱುವಾಯ ಸೇನಾ ಪಟ್ಟವನು ರಾಧೇಯನಲಿ ರಚಿಸಿದನು ಮುದದಲಿ ಕೌರವರ ರಾಯ (ಕುವ್ಯಾಕ. ೧ ಸೂಚನೆ) ; ಸಮರದಲಿ ಗುರು ಗಾಂಗೇಯ ಕರ್ಣ ದ್ರೌಣಿಗಳ ತಱುವಾಯ ಲೆಕ್ಕಕೆ ಸಂದನೈ ಮಝು ಪೂತು ಪಾಯ್ಕೆನುತ (ಕುವ್ಯಾಕ. ೨೦-೩೩). **ತರುವಾಯ್$_2$ :** ತರುವಾಯ ಹೇಳ್ವೆ (ಜ್ಞಾನಸಿಂ. ೧-೧೭) ; ಕಾಯಿಗಳನ್ನು ಒಣಗುವ ತನಕ ಗಿಡದ ಮೇಲೆ ಬಿಡುತ್ತಾರೆ. ತರುವಾಯ ಅವನ್ನು ಕೊಯ್ದು . . . ವ್ಯಾಪಾರಕ್ಕೆ ಕಳುಹಿಸುತ್ತಾರೆ (ಮುಂಬಯಿ. ೪-೪೦). **ತರುವಾಯೆ :** ಶ್ರೀಮಂತರು ನಿವೃತ್ತರಾದ ತರುವಾಯೆ–ದಳವಾಯಿ ತನವಂ ಕೊಡಿಸಬೇಕೆಂದೂ (ಚಿಟ್ಕಅ. ೨೨-೭). **ತರ್ವಾಯ್$_2$ :** ಆ ತರ್ವಾಯ ವೈಶ್ವದೇವವಂ ಮಾಡಿ (ಚುಕಸ. ४೧) ; ಯೋಗ್ಯೋಪಚಾರಂಗೈದು ತರ್ವಾಯಯಾಸನವನಿತ್ತು ಕುಳ್ಳಿರಿಸಿ (ಜೋರಟ. ೧-೩೨).

[ <ತಱುವಾಯ್$_1$ ]

**ತಱುವಾಯಗೊಳ್, ತರ್ವಾಯಗೊಳ್, ತಱುವಾಯಿಗೊಳ್** (ಕ್ರಿ). ಕ್ರಮವಾಗಿರು ; ಸಾಲಾಗಿರು : ತಱುವಾಯ[ಪಾಠಾಂ. ಯಿ]ಗೊಂಡು ಕುಳ್ಳಿಹಲ್ಲಿ ಸಂಸ್ತ್ಯಾಯ ಎನಿಸುಗು (ನಾಚಿರಾ. ೬). **ತರ್ವಾಯಗೊಳ್ :** ಗೀರ್ವಾಣ ಯಕ್ಷ ಗುಹ್ಯಕ ಸಿದ್ಧ ಸಾಧ್ಯ ಗಂಧರ್ವ ಕಿಂಪುರುಷ ಕಿನ್ನರರ ತರ್ವಾಯಗೊಂಡು ಮೇಲೇಳುಲೋಕದೊಳಿಪ್ಪ ಸರ್ವರ ರೂಹ ತೋಱಿದಳು (ಮೋಹತ. ೩೦-೧೦). **ತಱುವಾಯಿಗೊಳ್ :** ಮೇಲಿನ 'ನಾಚಿರಾ' ಪ್ರಯೋಗದ ಪಾಠಾಂತರವನ್ನು ನೋಡಿ.

[ ತಱುವಾಯ್$_1$ (<ತಱುವಾಯ್) + ಕೊಳ್$_1$ ]

**ತಱುವಾಯಿ** 'ತಱುವಾಯ್' ನೋ.

**ತಱುವಾಯಿಗೊಳ್** 'ತಱುವಾಯಗೊಳ್' ನೋ.

**ತಱುವಾಯು** 'ತಱುವಾಯ್' ನೋ.

**ತಱಿ$^3$** 'ತಱಿ$_1$' ನೋ.

**ತಱಿ$^3$ಕಾಡು** 'ತಱಿ$^3$ಕ್ಕಾಡು' ನೋ

**ತಱಿ$^3$ಯ$_1$** 'ತಱಿ$_3$' ನೋ.

**ತಱಿ$^3$ಯ$_2$** (ನಾ). ತರಿಭೂಮಿ (?) : ಸಂಭು ಮೇಳೇಶ್ವರದೇವರಿಗೆ ಹೊಲಸ್ಥಳಕಂ ೩೦ ಗದ್ದೆ ಸ್ತ ಹೊಲವೇರಿಯ ಕೆಯಿ ಕೊ ೬ ತಱಿ$^3$ಯದ ಹಾಳಕೆಯಿ ಕೊ ೧೪ ಕಂಬಹಾಳ ಕೆಯಿ ಕೊ ೬ ಹತ್ತಿಯಹಾಳ ಕೆಯಿ ಕೊ ೪ (ಮೈಅರಿ. ೧೯೨೮, ೧೭-೫೪ ; ಸು. 1200). 'ತರಿ$_5$' ಪರಾ.

[ ? ]

**ತಱಿ$^5$ದಾರಿ** (ನಾ). (?) : ತೆಲ್ಲಿಗ ಸೋಯಿ ಸೆಟ್ಟಿ ತಾನೂರಕಯ್ಯಲು ಆಱು ಹೊಂಗೆ ಬ್ಯವಹಾರವಾಗಿ[ಮಾಡಿದ]ಗುಗುವಿನ ದಶಕದ ತಱಿ$^5$ದಾರಿಯಿಂದ × × × ಮಟುಕಂ ಗಿರ ೧೦೦ಮಂ ತೋಟಕ್ಕೆ ಕೊಟ್ಟನ್ (ಕಇ. I. ೩೩-೩೨ ; 1246). [ ? ]

**ತಟ್$_1$, ತಳ್$_1$** (ಕ್ರಿ). ತಳಿತ$_1$, ತಳ್ತ$_1$, ತಟ್ಟಿ (ಭೂತಕೃ), ತಳುತು. ತಳ್ತು$_1$, ತಟ್ಟು (ಭೂತನ್ಯೂ). ೧. ಸೇರು ; ಕೂಡು; ಒಡಗೂಡು : ಶ್ರೀತಟ್ಟುರದೊಳ್ ಕೌಸ್ತುಭಜಾತದ್ಯುತಿ ಬಳಸಿ ಕಾಂಡಪಟದಂತಿರೆ ಸಂಪ್ರೀತಿಯಿನಾವನನಗಲ್ ನೀತಿನಿರಂತರನುದಾರನಾ ನೃಪತುಂಗಂ (ಕವಿರಾ. ೧-೦) ; ಪಸರಿಸಿ ನೀಳ್ದ ತನ್ನ ಜಸದೊಳ್ ಪೆಱನೊರ್ವನ ಕೀರ್ತಿ ತಟ್ಟು ರಂಜಿಸೆ (ಪಂಪಭಾ. ೦೪-೩೯) ; ಎರಡುಂ ವಿದ್ಯಾಧರಶ್ರೇಣಿಯೊಳಿಡೆಯೆಡೆಯೊಳ್ ಜೈನ ಚೈತ್ಯಾಳಿ ತಟ್ಟಂಬರಮಂ ತಟ್ಕೈಸಿ ನಾನಾ ಮಣಿ ಕಿರಣಗಣ ಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೦೦೭) ; ವಿಸರುಹದಂತೆ ಕೇಸರಮನಾಂತುದು . . . ಚಂದ್ರಮನಂತೆ ಸುಪಕ್ಷದಿಂದೆ ರಂಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ (ಹುಕೋಹ. ೩-೭೮): ಪೂಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಲ್ಲಿ ತಟ್ಟು . . . ಎಲರಲ್ಲಿ ತೀಡುವುದು ಮೆಲ್ಲನೆ ಮೆಲ್ಲನೆ ರಯ್ಯಮೆಂಬಿನಂ (ಕಬ್ಬಿಕಾ. ೩೩). ೨. ಬಿಗಿ ; ಬಂಧಿಸು ; ಅಪ್ಪು : ನಾಗಶಯ್ಯೆಯೊಳ್ ನಾಗಿಣಿ ನಾಗಬಂಧದೊಳ್ ತಟ್ಟು ಗುಣಾರ್ಣವನಂ ಮರುಳ್ಚಿದಳ್ (ಪಂಪಭಾ. ४-೦೭) ; ಬಲದೇವಂ . . . ತವ್ಮಂ ಸಯೆ ಬಳ್ಳಿಯುಂ ನಿಗಳಮುಂ ತಟ್ಟಂದುವುಂ ಬಳ್ಳಿಸಂಕಲೆಯುಂ ಪೋದ ಗಜಂ ಬನಕ್ಕೆ ತಳರ್ವಂತುದ್ವೇಗದಿಂ ಮೋಹಶೃಂಖಲೆ ಪಾಱೆಟಿ ತಪೋವನಕ್ಕೆ ತಳರ್ದು (ಶಾಂತಿಪು. ४-೦೦೮). ೩. ಹೊಂದಿಕೊಳ್ಳು ; ಹೊಂದಿಕೆಯಾಗಿರು ; ಅನುರೂಪವಾಗಿರು : ಸಮಸಂಸ್ಕೃತಂಗಳೊಳ್ ತಟ್ಟ[ಪಾಠಾಂ. ಸಯ್ತು]ಮರ್ದಿರೆ ಕನ್ನಡಮನಱಿದು ಪೇಟ್ಗೆ (ಕವಿರಾ. ೧-೫೦) ; ಬಗೆ ಪೊಸತಪ್ಪುದಾಗಿ ಮೃದುಬಂಧದೊಳೊಂದುವುದೊಂದಿ ದೇಸಿಯೊಳ್ ಪುಗುವುದು ಪೊಕ್ಕ ಮಾರ್ಗದೊಳೆ ತಟ್ಟುದು ತಟ$^3$ನ್ನಡೆ ಕಾವ್ಯಬಂಧಮೊಪ್ಪುಗುಂ (ಪಂಪಭಾ. ೧-೮) ; ತ್ರಿದಶ ಮರುದಿಂದ್ರ ಪುರಚಂದ್ರಸಲಿಲಂಗಳ್ ತುದಿಯೊಳಿರೆ ತಟ್ಟು ಹರರಲ್ಲಿ ಯತಿ ನಿಲ್ಕುಂ (ಛಂದೋಂಬು. ೨-೦೫೮). ೪. ದಟ್ಟೈಸು ; ಇಟ್ಟಣಿಸು ; ಸಾಂದ್ರವಾಗು ; ಗಾಢವಾಗು : ಕೊಂಕಿದ ಕೊಂಕು ತದ್ವಿಷಯ ಕಾಂತೆಯ ಪುರ್ವಿನ ಕೊಂಕಿನಂತೆ ಚೆಲ್ವಂ ಕುಡೆ ತಟ$^3$ರಟ್ಟಡಿಯ ಪೂಮರದಿಂ ಕಟ$^3$ವೂಗಳತ್ತಮಿತ್ತಂ ಕವಿದಲ್ಲಿ ಮೆಲ್ಲನುಗೆ (ಆದಿಪು. ೧-೬೧). ೫. ಅಂಟು ; ತಗುಲು ; ಹತ್ತು : ನೆತ್ತರ್ ತಟ್ಟ ಬಲ್ದಲೆಯ . . . ಸಾಧಕಿ ಬತ್ತಲೆ ಬರ್ಪಳೊಪ್ಪಿದಳ್ (ಕಾವ್ಯಸಾ. ೫೩೩ ಸೂಕ್ತಿ); ಕ್ಷತ್ರತೇಜಂ ಹಿಮಮಳುರ್ವವೊಲಬ್ಜಂಗಳಂ ಗರ್ವಮದ್ಭ್ಯಮಿಪರಂ ತಟ್ಟಿಳ್ದು ಕೊಂಡತ್ತದು (ಶಾಂತಿಪು. ೧೦-೧೧೦). **ತಳ್$_1$ :** ೧. ಮಲೆಕನ್ನನೊಲಿದಂತೆ ನಿಂದಿಸಲ್ಕೆನ್ನ ಸತ್ಕುಲದ ಕುಂದಂ ನೋಡ ನಿನಗಲ್ಲ ಮದನಹರ ಜಲಜ ಸಂಭವಗರಿದು ತತ್ತಡೆಲೆ ಮುನಿಪ ಕೇಳೆಂದನು ಹರಿಶ್ಚಂದ್ರನು (ಹಚಕಾ. ೮-೩೮) ; ಮಡುವಿನಲಿ ತಳುತಿರಲಿಕಂದಿರನಡಿಗೆಱಗಿ ಶ್ರೀ ಗರುಡದೇವರ ಝುಡಿತೆಯಲಿ ಕಳುಹಿದನು ಬಂದನು ಕದ್ರುವಿನ ಮನೆಗೆ (ಸಂಭಪ. ೫-೫೮) : ರುಧಿರಾಂಭೋನಿಧಿಯೊಳಂಭೋಧಿ ತಳ್ತುದು (ಉತ್ತ ರಾ. ೫-೨೨): ಸಹಜಾತರಾದ ನಿಮ್ಮೈವರೊಳ್ ತಾ ತಳ್ತಿರದೆ ವಿರೋಧಿಸಿದನೆಮ್ಮಯ್ಯಂ (ಕೃಮಿಭಾ. ೨-೩೯). ೪. ರವಿಕರ ಕೆಡಗುಡದಿಡಿದಿಡಿದು ಸುತ್ತಿ ಮುತ್ತಿ ಕವಲಿಱಿದು ಕವಿವ ಲತಾಂತಜಾಳದ ತಳ್ತ ನೆಳಲಿಂ ಕಳ್ತಲಿಸುವ ಓಲಗ ಸಾಲೆಯೊಳ್ (ಗಿರಿಳ. ೭-೧೧ ವ) : ಬಾಲಳಿಗುರುಳವರು ನುಣ್ಗುರುಳ ತಳಿತ ನೀಲದ ಕುರುಳವರಾ ಕುವರಿಯ ಬಳಿವಿಡಿದ್ಯೈದಿತೂಗ್ಗಿನಲಿ (ಮೋಹತ. ೨४-೦೧). ೬. ನೆಡು ; ನಾಟು : ನರನ ಕುದುರೆಯ ಮೇಲೆ ಸಿಂಧದ ಹರಿಯ ತನುವಿನ ಮೇಲೆ ತಳಿತವು ಶರನಿಕರ (ಕುವ್ಯಾದ್ರೋ. ೩-೫೦) : ಎಸಲು ಕಣೆ ಮುಕ್ಕುರುಕಿದವು ಹೊಸ ಮಸೆಯ ಧಾರೆಯ ತೋರಕಿಡಿಯಲಿ ಮುಸುಕಿತರಸನ ತೇರು ತಳಿತವು ಮೆಯ್ಯೊಳಂಬುಗಳು (ಕುವ್ಯಾದ್ರೋ. ೫-೨೧).

ತಱ್ತಪ್ಪು, ತಳ್ತಪ್ಪು = ಗಾಢವಾಗಿ ಆಲಿಂಗಿಸು: ಸರ್ವಾಂಗವನೆನ್ನಂಗಂಗಳೊಳ್ ಮೆಯ್ಗರೆದುವೆನಿಸಿ ಮೆಯ್ಯಾರೆ ತಱ್ತಪ್ಪಿ (ಕಾದಂಉ. ೫೨೨): ಶಾಂತಲಾದೇವಿ ಬಮ್ಮಲದೇವಿಯನ್ನು ತನ್ನ ಎರಡೂ ತೋಳುಗಳಿಂದ ತಳ್ತಪ್ಪಿ ಕರೆದುಕೊಂಡಳು (ಸವತಿ. ೦೦೦). ತಱ್ತಿಡಿ = ದಟ್ಟವಾಗಿ ಕವಿ ; ಗಾಢವಾಗಿ ಆವರಿಸು : ತಮಾಲವನಂಗಳ ಮರ್ವು ಪರ್ವಿ ಕರ್ಮುಡುಗಳೊಳಿಯ್ದ ಮಾರ್ತೊಳಗೆ ನೀಲಸರೋಜವನಂಗಳಲ್ಲಿ ತಱ್ತಿಡಿದಿರೆ ಕಾಳಗತ್ತಲೆ ತಗುಳ್ದಿರುಳಾದುದೆ ಗೆತ್ತು (ಕಾದಂಪೂ. ೭೩೯). ತಱ್ತಿಡು = ಒಂದಕ್ಕೊಂದು ಹೆಣೆ ; ತಳಕುಹಾಕು : ಎರಡು ಕೆಯ್ಯಂ ತಱ್ತಿಟ್ಟು ಮಾಱ್ಪುದುಂ . . . ಎಂದಿವು ಮೂವತ್ತೆರಡು ದೋಷಂಗಳಪ್ಪುವು (ಪಸಾರ. ೭೮೭-೧೭). ತಱ್ತಿರು = ೧. ಕೂಡಿರು ; ಹೊಂದಿರು : ತಳಿರಿಂ ತಱ್ತಿರ್ದ ಶೋಕದ್ರುಮವೆಳಗೊನರಿಂದೊಂದಿತಿವ್ಮಾವು (ಕಾದಂಉ. ೭೬೦) ; ಪರಮಾಳೋಚನದೊಳ್ . . . ನಿಬಿಡಕಾಯೋತ್ಸರ್ಗದೊಳ್ ಶುದ್ಧಿ ತಱ್ತಿರೆ (ಸುಕುಮಾ. ೪-೧೫). ೨. ತಟ್ಟಿರು ; ತಾಗಿರು ; ತಗುಲು : ಮದನದಾವದಹನಂ ತಱ್ತಿರ್ದಪುದಿಲ್ಲ ನಿನ್ನನದಱಿಂದುಪದೇಶಂಗೆಯ್ಯುತಿರ್ಪುದಿದು ಸುಖಮಲ್ತೆ (ಕಾದಂಪೂ. ೮೪೯): ೩. ಬೆರೆತಿರಂ ; ಲೀನವಾಗಿರು: ಅಕ್ಷಯಸುಖದೊಳ್ ತಱ್ತಿರು ನೀಂ ಸುರುಳ್ದಿರ್ಪ ಮರುಳ್ತನಮಿನ್ನೇಕೆ ದೇವಜನ್ಮಾಟವಿಯೊಳ್ (ಅಜಿಪು. ೬-೭೮) : ಜಿನಪಾದಾಂಭೋಜದೊಳ್ತಱ್ತಿರೆ ಮತಿ (ಧರ್ಮಾಮೃ. ೦-೫); ತಱ್ತಿರ್ದನಿಂದ್ರಪ್ರತಿಮಂ ಲೀಲಾವತೀದೇವಿಯ ಹೃದಯದೊಳ್ (ಲೀಲಾವ.೧೪-೯೭). ತಱ್ತಿಮೆ, ತಳಿತೆವೆ=ದಟ್ಟವಾದ ರೆಪ್ಪೆಗೂದಲು,-ಕಣ್ಣೆವೆ : ಬಳ್ವಳ ನೀಳ್ದ ಕಣ್ಮಲರ ತಱ್ತಿಮೆಯಿಂ ಕರೆಗಣ್ಮಿ . . . ಬಾಷ್ಪಜಳಮಂ ಕಳೆದು (ಪಂಪಭಾ. ೭-೬೮) : ತಱ್ತಿಮೆದುಱುಗಲಿನಿಱಿದುವು ಮಿಗೆ ಬಾಷ್ಪವಾರಿ ಧಾರಾಪೂರಂ (ಕಾದಂಪೂ. ೮೩೦) ; ಅಳಕನಿಚಯದ ಕುಂಭಿನೊಸಲಿನ ತಳಿತೆವೆಯ ನಿಡುಹುಬ್ಬುಗಳ (ಕುವ್ಯಾಭೀ. ೩-೭೭). [ದೇ.॥ ತಮಿ. ತಱಾಲ್, ತಱು=ಅಪ್ಪಿಕೊಳ್ಳುವಿಕೆ ]

△ತಱ್₂ 'ತಳ್₂' ನೋ.

**ತಱತಱ, ತತ್ತಳ₁, ತತ್ತಱ, ತಳತಳ, ತಳಥಳ, ತಳ್ತಳ, ತಱ್ತಱ (ನಾ).** ೧. ತೀವ್ರವಾಗಿ ಕುದಿಯುವುದನ್ನು ಅನುಕರಿಸುವ ಶಬ್ದ. 'ತಱತಱಗುದಿ' ಪರಾ. ೨. ಹೆಚ್ಚಾಗಿ ಪ್ರಕಾಶಿಸುವುದನ್ನು ಅನುಕರಿಸುವ ಶಬ್ದ : ಗಱಗಱ, ಕವಕವ, ಛಱಿಲ್, ಛಱಲ್, ತಱತಱ . . . ಖಱಿಲನೆ, ದುಧುಮ್ಮನೆ ಇತ್ಯಾದಿ (ಶಬ್ದಮ. ೫೨). 'ತಱತಱನೆ', 'ತಱತಱಿಸು' ಪರಾ. ತತ್ತಳ₁ : ೨. ತತ್ತಳ ಸೀರೆಯನುಟ್ಟು ಮುತ್ತುರತ್ನ ಮಾಣಿಕವ ತೊಟ್ಟು (ಎಬಕಾ. ೧೩೭-೭). ೩. ಕಕ್ಕಾಬಿಕ್ಕಿ ; ತಬ್ಬಿಬ್ಬು; ಗಾಬರಿ; ಗೊಂದಲ ; ದಿಗ್ಭ್ರಮೆ: ಬಿತ್ತಿದರು ಕುರುಪತಿಗೆ ಭಯವನು ತತ್ತಳದ ತವಕದಲಿ ರಾಯನ ಮೊತ್ತದಕ್ಷೋಹಿಣಿಯ ಮಾರ್ಬಲ ಸಹಿತ ಹೊಱವಂಟ (ಕುವ್ಯಾಉ. ಓರಿಇ. ೨೫-೫) ; ತತ್ತಳದ ಬೇಟದೊಳ್ಬೆಂಡಾಗಿ ವಿಷಯ ನಿಂದಿರ್ದಳಾತನ ಪೊರೆಯೊಳು (ಕ್ರಮಿಭಾ. ೩೦-೨೩) ; ಸುತ್ತುದೆ ಪಲಬಗೆಯ ತೀರ್ಥಯಾತ್ರಾದಿಗಳಂ ಗೊತ್ತಿನ ಹಾಲಾಸ್ಯದೊಳಂ ತತ್ತಳಮಂ ಬಿಟ್ಟು ಮುಕ್ತಿಯ ಪಡೆದನವಂ (ಹಾಲಾಸ್ಯ. ೧-೧-೭೧). ತತ್ತಱ: ೧. 'ತತ್ತಱಗಂದಿ' ಪರಾ. ತಳತಳ: ೧. 'ತಳತಳನೆ' ಪರಾ. ೨. ರಕ್ತಾಶೋಕಪಲ್ಲವದಂತೆ ತಳತಳ ತೊಳಗುವ [ಪಾಠಾಂ. ತೊಳತೊಳಗುವ]ಕರತಳ ಪಲ್ಲವಂಗಳ್ (ಪಂಪಭಾ. ೨-೩೯ ವ). 'ತಳತಳಿಸು' ಪರಾ. ೪. ತೊಳಲುವುದನ್ನು ಅಥವಾ ಸಂಕಟಪಡುವುದನ್ನು ಅನುಕರಿಸುವ ಶಬ್ದ : ಬಡವರನ್ನು ಯಾಕೆ ಸುಮ್ಮನೆ ತಳತಳ ಅನ್ನಿಸುತ್ತೀ ? (ರೂಢಿ). ೫. ಸೂರ್ಯೋದಯಂ; " ಉದಯ " (ಚತುನಿ. ೬. I, ೨೩). ತಳಥಳ: ೨. 'ತಳಥಳಿಸು' ಪರಾ. ತಳ್ತಳ: ೨. 'ತಳ್ತಳಗಂದಿ' ಪರಾ. ತಱ್ತಱ: ೧. 'ತಱ್ತಱಗುದಿ' ಪರಾ.

ತತ್ತಳಮಾಡು = ಗಾಬರಿಯಿಂದ ಮಾಡು ; ಗಡಿಬಿಡಿಯಿಂದ ಮಾಡು (?) : ನಿತ್ಯಕರ್ಮವ ಮಱೆದರು ದೇವಪೂಜೆಯ ತತ್ತಳ ಮಾಳ್ಪರು ತಪದ ಚಿತ್ತಪನೊಡೆದರು ಸನ್ಮುನಿವರರು ದಂಡೆತ್ತಿ ಮನ್ಮಥ ಬಹ ಭರಕೆ (ಮೋಹತ. ೬-೨೮). ತತ್ತಳವಾಗು = ತಳಮಳಗೊಳ್ಳು; ಕಾತರಗೊಳ್ಳು : ಗಳರವಗಳ ಮಾಳ್ಪ ಬಗೆದರೆ ಹಲುಬುವ ಕೋಳರ್ವಕ್ಕಿ ಕೆಲವು ಲಾವುಗೆಯ ಬಳಸದ ದನಿಗೇಳ್ದ ಮುನಿಗಳ ಚಿತ್ತ ತತ್ತಳವಾದುದೇನ ಹೇಳುವೆನು (ಮೋಹತ. ೭-೧೭).

**ತಱತಱಗುದಿ, ತತ್ತಱಗುದಿ, ತಳ್ತಳಗುದಿ, ತಱ್ತಱಗುದಿ (ಕ್ರಿ).** ತೀವ್ರವಾಗಿ ಕುದಿ; ಜೋರಾಗಿ ಮರಳು; ಕತಕತನೆ ಕುದಿ: "ತಱತಱಗುದಿ, ತಱ್ತಱಗುದಿ—ಎಂಬಿವು ಕಾಸುವ ರಸದ್ರವ್ಯಾನುಕರಣಂಗಳ್" (ಶಮದ. ಪರಿ. ೧). ತತ್ತಱಗುದಿ : ಮೇಗೆ ಸಿಡಿಲ್ದಗುಳಂತೆ ಕೂಡೆ ತತ್ತಱಗುದಿಯುತ್ತುಮಿರ್ಪ ಕುದಿಯೊಳ್ ಸಿಡಿದಲ್ಲಿಯ ಮುತ್ತುಗಳ್ (ಪಂಪಭಾ. ೧೦-೧೫೩) ; ತತ್ತಱಗುದಿದುವು ಭವನ ದೀರ್ಘಿಕಾಬ್ಧಜಲಂಗಳ್ (ಶಾಂತಿಪು. ೩-೧೦೭) : ತತ್ತಱಗುದಿದು ಕಾಯ್ದ ಕಾಯ್ಗೊಡದೆಣ್ಣೆಯೊಳರ್ದಿ (ಅಜಿಪು.೦೧-೧೦ ವ). ತಳ್ತಳಗುದಿ : ತಳ್ತಳಗುದಿದೆಣ್ಣೆಯೊಳ್ ಬಟಲೆ ತೆಗೆವುದುಂ (ಸುಕುಮಾ. ೦೧-೪೭ ವ). ತಱ್ತಱಗುದಿ : ಮೇಲಿನ 'ಶಮದ' ಪ್ರಯೋಗವನ್ನು ನೋಡಿ. [ ತಱತಱ + ಕುದಿ₁ ]

**ತಱತಱನೆ, ತಳತಳನೆ, ತಳ್ತಳನೆ (ಅ).** ೧. ಹೆಚ್ಚಾದ ಕಾಂತಿಯಿಂದ ಕೂಡಿ ; ತಳತಳಿಸುತ್ತ ; ಪ್ರಕಾಶಮಾನವಾಗಿ : ಪಂಚಪಾಂಡವರ ತಲೆಗಳಂ ಕೊಂಡು ತಱತಱನೆ ನೇಸರ್ಮೂಡುವಾಗಳ್ ಬಂದು (ಗದಾಯು. ೯-೩೨ ವ) ; ತಱತಱನೆ ನೇಸರ್ಮೂಡಿದುದು ಮಿಱ್ತು ಮೂಡುವ ತೆಱದಿಂ (ಶಮದ. ೧೯೩ ಪ್ರಯೋ). ತಳತಳನೆ : ೧. ತಳತಳ[ಪಾಠಾಂ. ಥಳಥಳ]ನೆ ಕಾಹೇಱಿದದಱಿ ನಲಿದು ಛತ್ರೀಸಾಯುಧಂಗಳಿನಲಘುಮತಿಯುಲಿ ವೀರಗೆಲಸವನಾಚರಿಸಿ (ಬಸಪು. ೫೩-೫೩): ತಳತಳನೆ ತೊಳಪ ರವನದ ಬೆಳಗಂತಃಸ್ಥಿತ ಕೃಪಾಸುಧಾಂಭೋನಿಧಿಯಗ್ಗಳಿಸಿ ತೆರೆಮಸಗಿದಂತಿರೆ ಜಳರುಹರಿಪುಮೌಳಿ ತಾಪಸಂಗಿಂತೆಂದಂ (ಶಬಶಂ. ೨-೧೧೪). ೨. ಕೊತಕೊತನೆ ; ಕತಕತನೆ ; ತೀವ್ರವಾಗಿ : (೬). ತಳ್ತಳನೆ : ೨. ತಳ್ತಳನೆ ಕುದಿವ ಕರ್ಬೊನ್ನ ಕಾಯ್ಗೊಂಡೆಣ್ಣೆಯೊಳ್ ಬಟಲೆ ತೆಗಪುವರುಂ (ಆದಿಪು. ೫-೮೫ ವ). [ ತಱತಱ + - ಅನ್₁ ]

**ತಱತಱಿಸು, ತಂಥಳಿಸು, ತತ್ತಳಿಸು, ತತ್ಥಳಿಸು, ತಳತಳಿಸು, ತಳತ್ತಳಿಸು, ತಳಥಳಿಸು, ತಳದಳಿಸು, ತಳ್ತಳಿಸು, ತಱತ್ತಱಿಸು (ಕ್ರಿ).** ೧. ಹೆಚ್ಚಾಗಿ ಹೊಳೆ,-ಪ್ರಕಾಶಿಸು; ತೇಜೋಮಯವಾಗಿರು: ಉರಿಯುರುಳಿಯಂತಪ್ಪ ಕಣ್ಣಿಂ ಕೃತಾಂತನಂತಾಕಾರವಾಗಿ ತಱತಱಿಸಿ ಪೊಳೆವ ಕತ್ತಿಗೆಯುಂಬೆರಸು ಪೊಱಮಟ್ಟು ಕೀರ್ತಿಗೆಯೆಂಬುಗ್ರ ದೇವತೆ . . .ಬೆಸನಂ ಬೇಡೆ (ಪಂಪಭಾ. ೮-೪೨ ವ); ಸಿಡಿಲ ಬಳಗಮನೊಳಕೊಂಡಂತೆ ತಱತಱಿಸಿ ಪೊಳೆವ ಕೆಯ್ದುಗಳ್ ತೀವಿದ. . .ಪಸುರ್ಪೊನ್ನ ರಥಮನೇಱಿ (ಪಂಪಭಾ. ೧೨-೫೩ ವ) : ಪೊಱಗಣೊಳಗಣೆರಡುಂ ಲೇಶ್ಯಾಶುದ್ಧಿಯಂ ತಾಳ್ದಿ ತಱತಱಿಸಿ . . . ಮಣಿಕುಟ್ಟಿಮಭೂಮಿಭಾಗದೊಳಮಮಿತವಿಕ್ರಮದೇವನ ದಿವ್ಯಚ್ಛಾಯೆ ಪ್ರತಿಬಿಂಬಿಸೆ (ಶಾಂತಿಪು. ೯-೩೩ ವ). ತಂಥಳಿಸು : ೧. ಮೊಳಗಿದುದು ರಣಭೇರಿ ಗಾರ್ದಭಕಲಿತ ಘೋರ ವರೂಥವೇರಿದ ಹೊಳೆಹೊಳೆದು ಚಲಿಸುವ ಮಯೂರಧ್ವಜನ ಟೆಕ್ಕೆನಲಿ ಛಲಪದದ ಚತುರಂಗಬಲ ತಂಥಳಿಸಿ ನಡೆದುದು (ಅನಂರಾ. ೬-೫-೩). ತತ್ತಳಿಸು : ೧. ಗಂಧಾದಿ ಪಂಚ ತನ್ಮಾತ್ರೆಗಳು ನಿತ್ಯವೊಂದೊಂದಕ್ಕೆ ನಾನಾಪ್ರಭೇದದಿಂ ಬೇಱೆ ಬೇಱಿರುತಿಪ್ಪವು ಪ್ರತ್ಯಕ್ಷಮೆನಿಸಿತೋದೊಂದಱೊಳವೆಲ್ಲವುಂ ತತ್ತಳಿಸಿದೊಂದೆ ರೂಪಿನೊಳಿರುತಿಪ್ಪವು (ಲಶಿಚಂ.೫೩-೪೭). ೨. ಗಾಬರಿಗೊಳ್ಳು; ಹೆದರು; ನಡುಗು : ಬೆದಱಿದಳು ಮಾಯೆಯುಪ

ಮೃತ್ಯು ತತ್ತಳಿಸಿತ್ತು ಕದಲಿದಂ ಕಾಲಂ (ಲಕಿಜಂ. ೩೦-೧೩). **ತತ್ಥಳಿಸು :** ೧. ಮುತ್ತಿನಾ ತುರಾಯಿ ಅಂಗಿ ಮುಂಡಾಸು ತತ್ಥಳಿಪ ತಾಳಿ ವಜ್ರತಾಳಿ ಚೌಕುಲಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ४०-४). **ತಳತಳಿಸು :** ೧. ತಳತಳಿಸಿ ತೊಳಗಿ ಬೆಳಗುವ ಪಳಿಕಿನ ಸಟಿಯೊಂದು ಮಟಿಯೊರ್ದೆರಲೆ ಮಹೋಜ್ವಳ ತುಹಿನಕಿರಣಮಂಡಲದೊಳಗಣ ಹರಿಣಂಬೊಲೊಪ್ಪಿ ತೋಱಿತ್ತಾಗಳ್ (ಕಾವ್ಯಸಾ. ೧೦೫೦ ಕೂದ್ರಕ); ಬೆಳಗುವ ಮಂಗಳ ದೀಪಾವಳಿಗಳ ಬೆಳಗತ್ತಮಿತ್ತಮುಚ್ಚೊತ್ತಿದವೋಲ್ ತಳತಳಿಸಿ ಬೆಳಗೆ ಬೆಳಗನೆ ಪೊಳೆತಂತೊಪ್ಪಿದುವು ತೊಳಪ ರನ್ನದ ಕೇರ್ಗಳ್ (ಆದಿಪು. ४-೩४); ನವಯುವ್ವನರಾಗರಸಾರ್ಣವದೊಳ್ ತಳತಳಿಸಿ ಪೊಳೆವುತಿರ್ದವು ಮುತ್ತುಂ ಪವಳಮುಮೆನೆ ಕಣ್ಗೊಳಿಪುವು ಯುವತಿಯ ಸುಲಿಪಲ್ಲುಮೆಸೆವ ಬಿಂಬಾಧರಮುಂ (ಕಾದಂಬ. ೦೫); ತಳತಳಿಪ[ಪಾಠಾಂ. ಕಳಕಳಿಪ]ರನ್ನದೆನೆ ಶತಯೋಜನಂಗಳಿಂಬಳತೆ (ಜಬಪು. ೨೯-೯). ೩. ತೀವ್ರವಾಗಿ ಕುದಿ,– ಮರಳು : ಶ್ರವಣವಿವರಕ್ಕೆ ಲೋಹದ್ರವಮಂ ತಳತಳಿಸಿ ಕಾಯ್ದುದಂ ಬಿಟ್ಟಂತಾ ಯುವತಿ ಕಡುನೊಂದು (ಮಹಾನೀ. ೦೭-೨೨). **ತಳತ್ತಳಿಸು:** ೧. ಪೊಟಲೊಳಗೊಪ್ಪೆ ಕನ್ನಡಿಯ ಕಂಚಿನ ತೋರಣದೋಳಿಗಳ್ ತಳತ್ತಳಿಸೆ ವಿಚಿತ್ರಕೇತುತತಿಗಳ್ ಮಿಳಿರ್ದಾಡೆ (ಪಂಪಭಾ. ೩-೭४) ; ಪೊಳೆದೆಸೆವ ರತ್ನದ ರ್ಪಣದೊಳಗೆ ತಳತ್ತಳಿಪ ತರಣಿಕಿರಣಾವಳಿವೋಲ್ (ಕಾದಂಪೂ. ४೩४) ; ತಳ್ಪೊಯ್ದು ತರಳನಯನದ ಬೆಳ್ಪು ತಳತ್ತಳಿಸಿ ಮಿಳಿರ್ದು ಪೊಳೆಯೆ (ಸುಕುಮಾ.೦೧-೦४); ಕಲ್ಪಲತೆಗೆ ಪಾಸಟಿಯಾದಲ್ ನಳನಳಿಸುವ ಜಿನಶಿಶುವಂ ತಳೆದು ತಳತ್ತಳಿಪ ಹರಿಯ ವರವಧುವಾಗಳ್ (ವರ್ಧಪು. ೧೩-೯೭). **ತಳಥಳಿಸು :** ೧. ತಳಥಳಿಪ ಪದಾರ್ಥಮನೇಂ ಕಾಣ್ಬನೆ ದೋಷದೃಷ್ಟಿ ದುರ್ಮತಿ (ಕಬ್ಬಾಸು. ೧೯೦ ಪ್ರಯೋ). **ತಳದಳಿಸು :** ೧. ಪುರು ಪರಮೇಶ್ವರನ ದೂತನಂ ಕಾಣ್ಬವೊಲಾ ಭರತಂ ಕಂಡಂ ಕೆನ್ನೆಯ ನರೆಯಂ ತಳದಳಿಸಿ ಪೊಳೆವ ಮಣಿದರ್ಪಣದೊಳ್ (ಆದಿಪು. ೧೭-೩೦) ; ತಳದಳಿಸಿ ತೊಳಗಿ ಬೆಳಗುವ. ವಿಳಸನ್ಮಣಿಕಿರಣಶಿಖಿಯ ಬಳಗದ ಬೆಳಗಂ ತಳೆದೆಸೆವ ತಾಣದೀವಿಗೆಗಳಂ (ಶಾಂತಿಪು. ೬-೧೦೭) ; ತಳದ[ಪಾಠಾಂ. ತ, ಥ]ಳಿಸಿ ಪೊಳೆಯೆ ಸೀತೆಯ ಚಳನಯನಂ ಖಚರ ಚಕ್ರವರ್ತಿಯ ಚಿತ್ತಂ ಕೊಳ ದೊಳಗೆಳವಾಟಿ ತೆಱಂಬೊಳೆವಂತೆ ಕಲಂಕಿ ಕದಡಿದತ್ತಾಕ್ಷಣದೊಳ್ (ಪಂಪರಾಮಾ. ೯-೭೯). **ತಳ್ತಳಿಸು :** ೩. ಎಱೆವರ್ ತಳ್ತಳಿಸಿ ಕುದಿವ ಲೋಹದ್ರವಮಂ (ವರ್ಧಪು. ೦೧-೨೧). **ತಟತ್ತಟಿಸು :** ೧. ತಟತ್ತಟಿಸಿ ಬೆಳಗೆ ಕೆಯ್ದಾವಿಗೆಗಳ್ (ಪಂಪಭಾ. ४-೩೩) ; ಬೆಳಗುವ ಸೊಡರ್ಗಳ ಬೆಳಗುವುನಿಳಿಸಿ ತಟತ್ತಟಿಸಿ ಪೊಳೆಯೆ ತಮ್ಮಯ ಬೆಳಗಗ್ಗಳಿಸಿ ತಟತ್ತಟಿಸಿ ವಿದ್ಯುದ್ವಿಳಸಿತಮೆನಿಸಿದುವು ನರನ ದಿವ್ಯಾಸ್ತ್ರಂಗಳ್ (ಪಂಪಭಾ. ೧೦-४೭). 'ಥಳಥಳಿಸು' ಪರಾ. [ ತಟತಟ + – ಇಸು₃ ]

**ತಟತ್ತಟಿಸು** ' ತಟತಟಿಸು ' ನೋ.

**ತಟಪಟ** (ನಾ). ಒಂದು ಅನುಕರಣ ಶಬ್ದ. ' ತಟಪಟನೆ ' ಪರಾ.

**ತಟಪಟನೆ** (ಅ). ತೀವ್ರವಾಗಿ ; ಕಠಕಠನೆ : ಪಟುಗಟಿದ ಪಾಪಮುಂ ಕೈಗಟಿದ ತಪೋನಳನೆ ಸುಡುಗುಮೊಟ್ಟಿದ ಕಿಚ್ಚಿಂ ತಟಪಟನೆ ಪುಳ್ಳಿಯೊಳಗಣ ಪುಟು ಬೇಗಂ ಬೇಗುವುಮೆಗ್ಗ ಬೇಗುವು ದುರಿತಂ (ಅರ್ಧನೇ. ४-೦೨೯). [ ತಟಪಟ + – ಅನ್ನೆ₁ ]

**ತಟಲ್**, ತಳಲು₃, ತಳಿಲು₁ (ನಾ). ಬಲಿತ ಕಾಯಿ ; ಒಣಗಿದ ಕಾಯಿ : "ತಟಲ್=ಮುತ್ತ ಕಾಯ್" (ಶಮದ. ಶರಿ. ೧) ; "ತಟಲೆಂದು ಮುತ್ತ ಕಾಯ್" (ಶಶಸಾ. ೩-೭೯) ; ಪಂಚಾಕ್ಷರೋಚ್ಚಾರಣ ಕಾಲ ಪರ್ಯಂತಂ ತಟಲೊಳಗಣ ಬೀಜದಂತೆ ದ್ರವ್ಯಮನೋವಾಕ್ಕಾಯದೊಳೊಂದದೆ (ಪುಷ್ಪಪು. ೧४-೩೦ ವ). **ತಳಲು₃ :** ಹೊಲದವರೆಯ ನೆಟ್ಟು ಸೊಡಗೆಯ ಸುಲಿದಲ್ಲಿ ತಳಲು ಬಲಿದು ಒಡೆದುದಿಲ್ಲ (ಮೋಳಿಮಾ. ೨೭೩-೮೦೭) ; ಅದಾರಿಯಲ್ಲಿ ಉದ್ದಕ್ಕೂ ಹತ್ತುಮಾರು ಇಪ್ಪತ್ತುಮಾರಿಗೊಂದರಂತೆ ಕೊಬ್ಬರಿ ತಳಲುಗಳು ಬಿದ್ದಿರುತ್ತಿದ್ದುವು (ಗರುಡಾ. ೦೦೦). **ತಳಿಲು₁ :** ಹೊಲಕ್ಕೆ ಹೋಗಿ ಅವರೆ ತಳಿಲು ಆಯ್ದುಕೊಂಡು ಬಂದಳು (ಅನಾಮಿ. ೩೦).

**ತಟಿ**, ತಳಿ₄ (ನಾ). ೧. ಮರದ ದಿಮ್ಮಿ ; ಕೊರಡು ; ದಪ್ಪನಾದ ಮರದ ತುಂಡು : "ತಟಿ=ಸ್ಥೂಲ ದಾರು ; (ಸತ್ಯಾರ್ಥದೊಳ್ ಕುಳಂ)" (ಶಮದ. ಶರಿ. ೧); ಗಿಡುವಂ ಪಿತ್ತಿಲನೋಣಿಗೇರಿದುಕುಱಿಂ ಪ್ರಾಕಾರಮಂ ನುರ್ಗಿದಂಗಡಿಯಂ ಬೇಲಿಯನಿಕ್ಕಿಸಿರ್ದ ತಳಿ[ಟಿ]ಯಂ ನೀರ್ದಾಣಮಂ . . . ಆಟಿದೇಗುಲಂಗಳೆಡೆಯಂ ಕಾದಿರ್ಪ ಪಾಣ್ಬರ್ಕಳುಂ (ಸೂಕ್ತಿಸು. ೮-೧೩೩). 'ನೂಂಕುದಟಿ' ಪರಾ. ೨. ಆನೆಗಳು ಹೋರಾಡುವುದಕ್ಕಾಗಿ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕಿದ ಬೇಲಿ ; "ಆನೆಗಳನ್ನು ಗುದ್ದಾಡಲಿಕ್ಕೆ ಬಿಡುವ ಸ್ಥಳ" (ಕ್ರಿಟ್ಟೆ) : ತನ್ನ ಮನೆಯಂಗಣದೊಳ್ ಸೆಂಡಾಡುವ ತಟಿಯುಮಾನೆಯ ನೇಱುವ ವಿನೋದಂ ವೈಹಾಳಿ ಮೊದಲಾಗೊಡೆಯ ವಿನೋದಸ್ಥಾನಂ ಗಳೆಲ್ಲಮಂ ಮಾಡಿಸಿ (ವಡ್ಡಾರಾ. ४೩-೨೦) ; ತೋರದೆರೆ ಮುಱಿಯೆ ಮೂಡುವ ವಾರಣಮಂ ಪೋಲ್ತುದದಸಿ ನಿಡುಗಯ್ಯಂ ಭಂಡಾರಿಸಿ ಮೆಡಟಿದ ತಟಿಯಂ ಬಾರಿಯುಮಂ ಮುಱಿಯೆ ಪೊಯ್ದು ಪೊಱಮಡು ವಿಭವಮಂ (ಅರ್ಧನೇ. ೩-೧೧೩) ; ಸ್ತಂಬೇರಮನೆಂಟುಮನೊತ್ತಂಬದೆ ದಿಗಧಿಪರೊಳೀಟ್ಟುಕೊಂಡವನದಟಂ ಕಂಬಕ್ಕಂ ತಟಿಗಂ ತೊಡೆಗಂ ಬೀದಿಗಮಳವಡಲ್ ಖಳಂ ಶಿಕ್ಷಿಸಿದಂ (ಆಗಪಿ. ೧೧-೬೨) ; ಜಗಜಟ್ಟಿಗಳಖ್ಖಡಂಗಳೊಳ್ ಮರಳದೆ ಪಾರ್ವಶಕ್ತಿ ತಟಿ[ಪಾಠಾಂ. ಳಿ, ಲಿ] ಯೊಳ್ ನಡೆಪೋರ್ವ ಮದದ್ವಿಪಂಗಳೊಳ್ ಪುರುಡಿಸೆ ಸುತ್ತಲುಂ ಪೊಱ ಪೊಟಲ್ಮೆಟಿಗುಂ ವಿಜಯೋತ್ಸವಂಗಳಂ (ಅನಂಪು. ೧-೮೯) ; (ಸೂಕ್ತಿಸು. ४-೬೩ ನೋ) ; ತಟಿಯೊಳ್ ಚೌದಂತನೆನ್ನಾನೆಗೆ ಮಲೆದೊಡೆ ವೈಹಾಳಿಯೊಳ್ ದಿಗ್ಗಜಂ ಬೆಂಬಟಿಯೊಳ್ ಕಾಲ್ಗೋದೊಡೆ (ಅನಂಪು. ೨-೩೦). "ಆನೆ ಹೋರಲಿಕ್ಕಿದ ಸ್ಥಳಂ" (ಶಬ್ದಸಾ. II, ೦೫४ ಟಿಪ್ಪಣಿ) ; ಗರುಡಿಯ ಬಳಸಿಂ ಬಿಜ್ಜೋದರಗಳದಿಂದಾನೆ ಹೋರಲಿಕ್ಕಿದ ತಟಿಯಿಂ (ಶಮದ. ೧೦೭ ಪ್ರಯೋ) ; ತ[ಪಾಠಾಂ. ಕ]ಟಿಯೊಳ್ ಪೋರ್ವ ಮದಾಂಧ ಸಿಂಧುರ ಚಯಂ ವಾಹ್ಯಾಳಿಗೈತರ್ಪ ಶಾಕಳ ವಾಹಾವಳಿ . . . ಮನಂಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ (ಧರ್ಮನಾ. ೨-४४). ೩. ಶತ್ರುಗಳು ಕೋಟೆಯನ್ನು ಮುತ್ತದಂತೆ ಸುತ್ತಲೂ ಮರದ ದಿಮ್ಮಿಗಳನ್ನು ನೆಟ್ಟು ಹಾಕುವ ಬೇಲಿ: ವರವೇಲಿ ತಟ್ಟಿ ತಟಿ ಗೋಪುರ ವಾಳ್ವಱಿ ಪಡಿ ತವಂಗವಂಕದ ತಳನೋವರಿ ಸೀಯುಬಾರವಂತಃಪುರ ಮುಯ್ಯಲ್ ಕೃತಕ ಶಿಖರಿಯುದ್ಯಾನವನಂ (ಪುಷ್ಪಪು. ೬-೨೩). **ತಳಿ₄ :** ೧. ಕಳನ ಚೌಕದ ಸುತ್ತಲೊಟ್ಟಿಸಿ ತಳಿಗಳನು ಬಹಳಾಗ್ನಿಯನು ಕೈಕೊಳಿಸಿದರು ದಹಿಸಿದರು ಬಹಳಾಕ್ಷೋಹಿಣೀಭಟರ (ಕುಮ್ಮಾಗ. ೦೨-೨೩) ; ತೊಲಿ ತಳಿ ವರನೂಲ ಹರಿಗೆ ಬದ್ದರ ಬಂಡಿ ಬಲೆ ಹಗ್ಗ ಮರುಳ ಕೈ ಕವಣೆ ಹಲಗೆ ಸಬಳ ದಸಿ ಹಾವಿನ ಹೇಳಿಗೆ ಸಲೆ ಮೆಟಿದವು ದುರ್ಗದೊಳಗೆ (ಕುರಾಸಾಂ. ४೨-೩೭) ; ಪಾಳೆಯಗಳ ಸಂರಕ್ಷಣೆಗಾಗಿ ಅಲ್ಲಲ್ಲಿ ದೊಡ್ಡ ದೊಡ್ಡ ತಳಿ(ಮರದ ದಿಮ್ಮಿ)ಗಳನ್ನು ಸುತ್ತಲೂ ನಿಲ್ಲಿಸಿ ಅವುಗಳಿಗೆ ' ಮುಳುವೇಲಿ 'ಗಳನ್ನು ಬಿಗಿಯುತ್ತಿದ್ದರು (ಕರ್ನಾಜ. ೩೮). ೨. ತಳಿಯ ದಾಟುವ ಕರಿಯಂ ಘಳಿಲನೆವಿಡಿದುಗಿಯ (ಎಕ. VIII, ನಗರ. ೩೩-४೩ : 1077). ೩. ಜಕ್ಕಿಯ ನಾಯಕಂ ಮೊನೆಯಿಟ್ಟಗೊಂಡನಾಯಕರ ಮೇಲವಾಯಲು ತಳಿಯ ಮಟಿವಿಡಿದು ಹಡಿಕಟ್ಟಿದಾಳೆಚ್ಚು ಗೂಡಂಬುಗೊಂಡು ಕೆಡಹಲ್ (ಪ್ರಾಆರಿ. ೧೯४೦, ४೨-೧ : 13ನೆಯ ಶತ) ; ಥಗೆಯ ತಳಿ ಮುಱಿದುದು ಮನೋರಥದಗಳು ತುಂಬಿತು ನರನ ಮನ ಬುದ್ಧಿಗಳು ನೆಱೆ ಸಿಲುಕಿತ್ತು ಹರುಷೋತ್ಸವದ ದಾಳಿಯಲಿ (ಕುಮ್ಮಾಅ

೬-೧೦೦) : ತಳಿ ನಡೆಚಪ್ಪರ ಡಗ್ಗೆ ಬದ್ದರಗಳ ಬಳಿಸಂದು ಭಟರು ಸಂದಣಿಸಿ ಬಳಿಸಿ ಕೋಟೆಯ ಲಗ್ಗೆಯೊಳು ಹತ್ತಿದರು ಕಳಕಳರವ ಮಸಗೆ ಬಲದೊಳು (ಕುರಾಸಾಂ. ೪೫-೨) : ತಳಿ ಬೇಲಿ ಬದ್ದರಗಳಂ ಮುಱಿದು ಕೊಂಡೊಯ್ಯ ನೊಳಪೊಕ್ಕು (ಚಲಪು. ೫೦-೧೨). ೪. ಬೆಂಕಿ ; ಕೆಂಡ : ತಳಿರ ತಗಡಿನ ಮನೆಗಳಲಿ ತಳಿಗಳ ಶಿಖಾಸೇವೆಯಲಿ ನೆನೆದನು ಬಳಿಕ ಭರತನೃಪಾಲನಾ ಭಾಸ್ಕರಕುಲೋತ್ತಮನ (ಕೊರರಾ. ೩-೨-೫). ೫. ಬೇಲಿ: ಕೆಲದೊಳ್ಳೆ ಗಾವುದದೊಳಿಕ್ಕಿದ ತಳಿಯ ಮಧ್ಯದೊಳಖಿಳ ವಸ್ತ್ರಾವಳಿಯನೊಟ್ಟಿದರು (ಕುವ್ಯಾಸ. ೬-೧೪) ; ತಳಿಯ ಮುಱಿದು ಕರಿಪತಿ ಕದಳೀವನದೊಳಗೆ ಪೋಗಲು ಕಲಭಗಳು ಬಳಿಸಲುವಂತಾ ರಾವುನಿಱಿದ ಬಲದೊಳಪೊಕ್ಕುದಾ ಪರಿವಾರ (ಕುರಾಸಾಂ. ೪೦-೩೬).

**ತಟಿಕಿಕ್ಕು** 'ತಟ್ಕಿಕ್ಕು' ನೋ.

**ತಟಿಕು** 'ತಟ್ಕು' ನೋ.

**ತಟಿಗೋಂಟೆ** (ನಾ). ಒಂದು ಬಗೆಯ ಕೋಟೆ ; ಮರದ ದಿಮ್ಮಿಗಳಿಂದ ಮಾಡಿದ ಕೋಟೆ (?) : ನಿಶಿತ ಶರಕೋಟಿಯೊಳ್ ತಳಿ[ಟಿ]ಗೋಂಟೆಯನಿಕ್ಕಿ (ಪಂಪಭಾ. ೧೨-೧೮ ವ) ; ಕೋಂಟೆಗೆ – ತಟಿಗೋಂಟೆ, ಧೂಳಿಕೋಂಟೆ, ಹತ್ತುಗೋಂಟೆ, ಹೆಡಗೆಗೋಂಟೆ (ಶಮದ. ೨೯೮ ಪ್ರಯೋ). [ ತಟಿ + ಕೋಂಟೆ ]

**ತಟುಂದಾಟಿ$^{3}$** (ನಾ). ಒಂದು ಬಗೆಯ ಪೊದೆ; ಅಗ್ನಿಮಂಥ; ನರುವಲು: ನಂದಪ್ಪೊಲಯನೇರಿನಂದಪೊಲೆಯನೇರಿಯಿ[ಂ]ಮೇಲಯೇರಿ ತಟುಂದಾಟಿ[ತ]ಟುಂದಾಟಿ ಅಡುಂಬು ಅಡು[ಂ]ಬಿನಿಂದಂ ವಾಯುವ್ಯ[ದ] ಕೋಣ ಪಿರೆಯು ಉಟಿಂದಿ(ಎಇ.X, ೬೬-೬೬; ಸು. 892). [ ←ತಮಿ. ತಟುತಾಟ್ಟಿ ]

**ತಟಿ$^{3}$, ಚಳ್$_{4}$, ಚಳೆಯ್ಯ$_{3}$, ತಳ್$_{4}$** (ನಾ). ೧. ಒಂದು ಬಗೆಯ ಕೊಡೆ,– ಛತ್ರಿ,–ಸತ್ತಿಗೆ : "ತಳಿ–ಧಾರಣೇ ; ಆತಪತ್ರ ಭೇದೇ ಚಟಂ (ತಟಿ)" (ಶಮಧಾ) ; ಕೊಡೆ ತಟಿ ತಳ್ತ ಸೀಗುರಿ ಕರೀಂದ್ರ ಘಟಾಳಿ ತುರಗಂ ಸೈನ್ಯಮುರ್ಕುಡುಗದೆ ಬರ್ಪ ನಾಯಕ ಬಲಂ (ಆದಿಪು. ೪-೯೨) ; ಒತ್ತಿದ ತಳ್ಕೆತ್ತಿದ ಶಟಿ ಮುತ್ತಿನ ಪೊಸದುಡುಗೆ ತಳಿರ ಸೋರ್ಮುಡಿ ಮನಮಂ ಪತ್ತಿಸಿ ಜೊತ್ತಿಸೆ . . . ಬಂದರರಸಿಯರರೆಬರ್ (ಪಂಪಭಾ. ೫-೫೯) ; ಸುಟಿಗಳ್ನೀರ್ದಿಗುರಿಯವೋಲ್ಸುಳಿದುವು ತೆರೆ ತೆರೆಯನಟ್ಟಿದುವು ಬೆಟ್ಟದ ಬೆಂಬಟಿಯಂ ಬೆಟ್ಟಟ್ಟುವವೋಲ್ತಟಿ ತಳ್ತವೊಲಿರ್ದುವೊಗೆದ ಮಣಿಕಿರಣಂಗಳ್ (ಪಂಕಾಮಾ. ೧೨-೯೦); ಕೊಡೆಯ ತಟಿಯ ಸೀಗುರಿಯ ಚೌಕಸತ್ತಿಗೆಯ ಮುತ್ತಿನ ಝಲ್ಲರಿಯ ಮೊತ್ತಮಂ (ಚಂದ್ರಪು. ೧೨-೮೩ ವ) ; ತಳಿತ ತಟಿಯ ನೆಟಲೊಳು ಬಂದು ತನ್ನಯ ನಿಳಯವನೊಳಪೊಗುತಿರಲು (ಅಂಚಜ. ೧೦-೨೩೫). 'ಪೀಲಿದಟಿ' ಪರಾ. **ಚಳ್$_{4}$** : ೨. ಮದುವೆ ಮುಂತಾದ ಮಂಗಳಕಾರ್ಯಗಳ ಮೆರವಣಿಗೆಯಲ್ಲಿ ನಾಲ್ಕು ಮೂಲೆಗೂ ನಾಲ್ಕು ಜನ ಹಿಡಿದುಕೊಂಡುಹೋಗುವ ಬಿಳಿಯ ಬಟ್ಟೆಯ ವಿತಾನ; (ಎಚಿಪ್ಪು. I, ೧೦). **ಚಳೆಯ್ಯ$_{3}$** : ೧. ಎತ್ತಿದ ಚಳ[ಳಿ]ಯ ವೃತ್ತತೆಯ ನೋಳ್ಪೊಡೆ ಕಣ್ದಾ ಕುತ್ತಿದುವೇನ ಬಣ್ಣಿಸುವೆ ಲಾಗಿಸಿ ನಭಕುಪ್ಪರಿಸುವ ಬಂದಿದಿರಾಗಿ ನಿಲ್ಲುವ ಭೂತದಂತೆ (ಮೋಹತ. ೦೦-೬೬). ೨. ಧಾರೆಗೆ ಹೊತ್ತಾಯಿತು ಚಳೆಯ ಹಿಡಿದು ವರನನ್ನು ಕರೆತನ್ನಿ (ರೂಢಿ). **ತಳ್$_{4}$** : ೧. "ಸಿತಚ್ಛತ್ರದೊಳ್ ತಳೆಯಕ್ಕು" (ಕಶರ. ೪೩) : ಮದನಮದಮರ್ದನನ ಬರವಿಂಗೆ ಕೂಡೆ ನೆಗಪಿದ ತಳಿಗ[ಪಾಠಾಂ. ಳಿಗ]ಳೆನಿಸಿರ್ದವಾ ಮೇಘ (ಸಿದ್ಧರಾ. ೩-೩೨); ಕರಿಣಿಗಳು ತಳೆ ಮಾಡಿ ಪಲ್ಲವವಿಡಿವವಾತಪಜಾಲ ಬಳಸಿದುದೆಂದು ಕೇಸರಿಗೆ (ವರ್ಧಚ. ೯-೨೮); ಮಾರುತ ಪರಿಮಳದಾಲವಟ್ಟವನಿಕ್ಕೆ ಆರವೆ ತಳೆ ಛತ್ರವಿಡಿಯೆ (ಅಮುಸಾಂ. ೫-೫೫).

**ತಟಿಯವರ್**=ಛತ್ರಿಹಿಡಿಯುವವರು ; ಸೇವಕರು : ಪ್ರಸಾದಮನ್ನು ಇಜ್ಜಣಮಟಿಯೆ ನರಗನಿಱಿಯೆ ತನ್ನಟಿಯನುಂ ತನ್ನ ಮಕ್ಕಳುಂ ತನ್ನೊಕ್ಕಲುಂ ಪ್ರಜೆಯುಂ ತಟಿಯವರುಂ ಪೆರ್ಮ್ಮಾಡಿಯ ಬೆಸದೊಳಿಱಿದು ನರಗನೊಳಿಱಿದು ಕಾದಿ ಸತ್ತರ್ (ಎಕ. VI, ಕಡೂರು. ೦೪೭-೭ ; 972). [ ದೇ.ಶ ತಮಿ. ತಟ್ಟಿ ; ಮಲ. ತಟ ]

**ತಟಿಕಾಡು** 'ತಟಿಕ್ಕಾಡು' ನೋ.

**ತಟಿಕ್ಕಾಡು, ತಲಕಾಡು, ತಳಕಾಡು, ತಳೆಕಾಡು, ತಱಿಕಾಡು, ತಟಿಕಾಡು** (ನಾ). ಒಂದು ಊರಿನ ಹೆಸರು ; P ಈಗಿನ ಮೈಸೂರು ಜಿಲ್ಲೆಯ ತಲಕಾಡು : ಕಾರ್ತ್ತಿಗೆ ಪುಣ್ಣಮೆ ಅನ್ದು ತಟಿಕ್ಕಾಡು ಇರ್ಪ್ಪತ್ತಯ್ವರ್ಕಂ ಸಿನ್ದರಸರುಂ ದೇವಸತ್ತಿ ಅರಸರುಂ (ಎಕ. III, ತಿರುಮ. ೧-೪; 726). **ತಲಕಾಡು**: ತಲಕಾಡ ಹನ್ನು × × ವರು ಮದ್ದೂರ ಗಣೆಯರುಂ (ಎಕ III, ನಂಜನ. ೧೨೨-೨೬ : ? ಕೃಶಾ) ; ಶ್ರೀ ಸಾಕ್ಷಿನಾಂ ತಲಕಾಡು ಹನುವನು (ಇಅ. VIII, ೧-೩ ; ? ಕೃಶಾ). **ತಳಕಾಡು** : ಮತ್ತಂ ಚಕ್ರಗೊಟ್ಟ ತಳಕಾಡು ನೀಲಗಿರಿ ಕೊಂಗು ನಂಗಲಿ ಕೋಳಾಲಂ ತೆರೆಯೂರು ಕೊಯತೂರು (ಎಕ. II, ೧೬೨-೨೬ : 1123) ; ತಳಕಾಡು ಗಂಗವಾಡಿ ನೊಳಂಬವಾಡಿ ಕೊಂಗು ನಂಗಲಿ ಬನವಸೆ . . . ಇಂತೀ ಸಮಸ್ತ ದುರ್ಗ್ಗಂಗಳಂ (ಎಕ. VII, ಶಿವಮೊ. ೪೦-೫೩ : 1180). **ತಳೆಕಾಡು**: ಹೊಯ್ಸಳದೇವರಾಜ್ಯಂ ತಳೆಕಾಡ ಪಟ್ಟಣವ್ ಆ ಪುರದಜುಸಾಯಿರಮುವ್ . . . ನಗರೀಶ್ವರ ದೇವರ್ಗೆ ಕೊಟ್ಟ ಧರ್ಮವ್ (ಮ್ಯಾಆರಿ. ೧೯೦೫, ೨೦-೭ ; 1147) ;ತಳೆಕಾಡು ಸಾಡು ಕೊಂಡ ಭುಜಬಳವೀರ ಗಂಗಂ (ಮ್ಯಾಆರಿ. ೧೯೨೬, ೪೧-೨೦ ; 1173). **ತಱಿಕಾಡು** : ಶ್ರೀ ಕಾಲಾವಿಗ್ಗ್ನರವಡಿಗಳ ಶಿಷ್ಯರ್ ತಱಿಕಾಡ ಪೆಱ್ದಿಡಿಯ ಮೊದೆಯ ಕಲಾಪಕದ ಗುರವಡಿಗಳ್ಪೆರ್ಪ್ಪತ್ತೊನ್ದು ದಿವಸಂ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೩೩-೨ ; ಸು. 700). **ತಟಿಕಾಡು** : ತಟಿಕಾಡಾ ಮೇಗೆಟ್ಟನ್ದು ಪೆರ್ಮ್ಮನಡಿಗಳಾ ಬೆಸದೆ ಮಹಾರಾಜಪ್ಪುಲಿನಾಡಾ ನೆಱಿಯಲ್ನೇಟಿನ್ದಡೆ (ಸೌಇಇ. IX-I, ೨೦-೪ : 9ನೆಯ ಶತ) ; ತಟಿಕಾಡ ಮಹಾನಗರಮುಂ ಪಟ್ಟಣವಸನ್ತರ ಮಣ್ಟಾಯ್ಯನು ಇಪ್ಪತ್ತು ಅಯ್ವರು (ಎಕ. XIV, ತಿರುಮ. ೨೦೪-೬ ; ಸು. 933). [ ? ]

**ತಟಿದುಱುಗಲ್** (ನಾ). ಕೊಡೆಗಳ ನೆರವಿ ; ಸತ್ತಿಗೆಗಳ ಸಂದಣಿ : ಸಿವಿಗೆ ತಟಿದುಱುಗಲೊಡನಿಕ್ಕುವ ಕುಂಚಂ ಲೀಲೆವಡೆಯೆ ಚೆಲ್ವೆಸೆದುದು ಷಣ್ಣವತಿ ಸಹಸ್ರಾಂತಃಪುರವುವಯವದೊಳೆ ಭರತ ಚಕ್ರವರ್ತಿಯ ಕೆಲದೊಳ್ (ಆದಿಪು. ೧೧-೩೯) : ಕಿಕ್ಕಿಱಿಗಿಱಿದ ತಟಿದುಱುಗಲ ನಡುವೆ ಪೊನ್ನರಥವನೇಱಿ ನಿಂದಂ ಭೂರಿಶ್ರವಂ (ಪಂಪಭಾ. ೧೦-೫೭ ವ). [ ತಟಿ$^{3}$ + ತುಱುಗಲ್ (<ತುಱುಂಗಲ್) ]

**ತಟಿವಿಡಿ, ತಳೆವಿಡಿ** (ಕ್ರಿ). ಬಿಳಿಯ ಕೊಡೆ ಹಿಡಿ ; ಛತ್ರಿಯನ್ನು ಹಿಡಿ : ಗಟಿಯಿಸುವ ತಮಂ ಮೂಡಲ್ ಪೊಟಿಗಟ್ಟುವ ಸಂಜೆಗೆಂಪು ಪಡುವಲ್ ಕೈಕೊಂಡೆಟರೆ ಧರೆಗರ್ಭನಾರಿಯ ತಟಿವಿಡಿದಂತಾಯ್ತು ಗಗನಮಂಡಲಮಿನಿಸುಂ (ಅನಂಪು. ೭-೭೨). **ತಳೆವಿಡಿ** : ಮಳೆ ಕೊಡುವ ಬೆಟ್ಟಗಳ ಮೊಲೆಯುಂಡು ಹಸುರೆಲೆಯ ತಳೆವಿಡಿದು ನೆಲದ ದಾರಿಯ ನೋಳ್ಪ ಚೆಲುವೆ (ಕಾಲೂರ. ೨೩-೭). [ ತಟಿ$^{3}$ + ಪಿಡಿ$_{1}$ ]

**ತಟ್ಕಯಿಸು** 'ತಟ್ಕೈಸು' ನೋ.

**ತಟ್ಕಯ್ಸು** 'ತಟ್ಕೈಸು' ನೋ.

**ತಟ್ಕಿಕ್ಕು, ತಳುಕಿಕ್ಕು, ತಟಿಕಿಕ್ಕು** (ಕ್ರಿ). ತಳಕುಹಾಕು ; ಜೋಡಿಸು; ಹೊಂದಿಸು ; ಅಳವಡಿಸು : ಆಕೆಯ ರೂಪಾತಿಶಯಮಂ ಪೇಟ್ವಡೆ . . . . ನಖನಿಕಾಯಂಗಳ್ಗೆ ತಾರಾವಳಿಗಳ ತೋರವೆಳಗುಗಳಂ ತಟ್ಕಿಕ್ಕಿದಂತೆ (ಪುಣ್ಯಾಸ್ರ. ೨-೭೨ ವ). **ತಳುಕಿಕ್ಕು** : ಬೆಳಗು ಬೆಳಗಂ ಹಳಚಿದಂತಾಯ್ತು ಭಯಜ್ಞಾನ ತಳು[ಪಾಠಾಂ. ಳಿ]ಕಿಕ್ಕಿ ಕಳೆಯಲಳವಟ್ಟುದುಭಯಜ್ಞಾನ (ದೀಕ್ಷಾಬೋ. ೧೪೩-೧೮); ಪದಕೆಲಗಲಂದು ಬಿಗಿಯಪ್ಪಿ ಕರದಿಂ ಕರವ

ತಳುಕಿಕ್ಕಿ ಇಂದುಧರ ನಡೆತಂದನರವಮನೆಗೆ (ಬಿಜಿಂ. ೯-೨೯); ಮತ್ತೆ ಹೂವಿನ ಮಳೆಗಳಾತನ ನೆತ್ತಿಯಲಿ ಸುರಿದವು ಮುರಾಂತಕನತ್ತ ತಿರುಗಿದನವನಿಪನ ಕರತಳವ ತಳುಕಿಕ್ಕಿ (ಕುವ್ಯಾಗ. ೮-೪೨); ಮತ್ಕರತಳ ದೊಡನೆಯಂತಕನು ನಿಜ ಕರತಳವ ತಳುಕಿಕ್ಕಿ (ತಿಮ್ಮ. ೬-೭೦). ತಟಿಕಿಕ್ಕು: ಪೊಡರ್ಪ ದಾಡೆಗಳ್ ಪಿರಿದಳವಟ್ಟ ಮೀಸೆ ತಟಿಕಿಕ್ಕಿದ ಪುರ್ವುಡಿದಿರ್ದ ಮಯ್ (ಪುಷ್ಯಾಸ್ರ. ೮-೧೦).
[ ತಟ್ಟು + ಇಕ್ಕು ]

**ತಟ್ಕಿಸು, ಠೆಕ್ಕಿಸು, ತಕ್ಕಿಸು$_2$, ತರ್ಕಿಸು$_1$, ತಳ್ಕರಿಸು, ತಳ್ಕಿಸು, ತೆಕ್ಕಿಸು** (ಕ್ರಿ). ೧. ಅಪ್ಪು ; ಆಲಿಂಗಿಸು : ಪಡಗೊಡೆಯ ಪಲಗೆಯೊಂದಂ ಪಿಡಿದಬಲೆಯನೆನ್ನ ಕೌಂಕುಳೊಳ್ ತಟ್ಕಿಸಿಕೊಂಡಡೆವಿಡದೆ ಪುಣ್ಯದಿಂದಂ ತಡಿಗೆಯ್ದಿದಂ (ದಳಕು. ೨-೮೪); ಎನ್ನಂ ತನ್ನಿರ್ಕೆಯ್ಯಿಂ ಕರಂ ತಟ್ಕಿಸಿ (ದಳಕು. ೦೩-೬೨). ಠೆಕ್ಕಿಸು: ೨. ಒಡ್ಡು ; ಅಡ್ಡವಾಗಿ ಹಿಡಿ; ಮುಂದಕ್ಕೆ ಚಾಚು : ತೊಲತೊಲಗೆನುತುಂ ಹರಿಗೆಯ ಠೆಕ್ಕಿಸಿ ಸಲೆ ಕೂರಸಿಯಂ ಚಿಮ್ಮುತ್ತಂ ಬಂದು (ಕುಮುರಾ. ೮-೪೫). ತೆಕ್ಕಿಸು$_2$ : ೧. ಬಿಸುಡದಿರು ಬಿಸುಡದಿರು ಬೇಡಬೇಡಕಟಕಟ ಹಸುಳೆ ನೊಂದಹನೆಂದು ಬೀಳ್ವವನನೆತ್ತಿ ತಕ್ಕಿಸಿಕೊಂಡು (ಹಶಕಾ. ೧೨-೩೭); ನೊಸಲೆಡೆಯನು ಚುಂಬಿಸಿ ತಕ್ಕಿಸುತ ಪರವಶೆಯಾದಳೀನ ಬಣ್ಣಿಸುವೆ (ಶಂನವಿ. ೯-೧೭೭); ತಕ್ಕಿಸಿದನ್ನೆವರಂ (ತುರಂಗ. ೨೬-೧೫). ೩. ನೆಡು ; ನಾಟು ; ಚುಚ್ಚು : ತರಣಿಜಂ ಕಡು ಮುಳಿದು ಖಾತಿಯಿಂದ ಮಕ್ಕಳ ಶಿರೋಮಣಿಗೆ ತೆಗೆದೆಸಲ್ಕಣೆ ಶಿಶುವ ತಕ್ಕಿಸಿತು (ತುರಂಗ ೫೦-೩೩). ತರ್ಕಿಸು$_1$ : ೪. ತಾಕು ; ತಗುಲು : ಮುಟ್ಟು : ನೆಗೆದುರಿ ಭುಗ್ಭುಗಿಲ್‌ಭುಗಿಲೆನುತುಮಗುರ್ವಿಸಿ ಪರ್ವೆ ನೀಳ್ದ ನಾಲಗೆಗಳ ತಕ್ಕೆ ತರ್ಕಿಸೆ ನಭಸ್ಥಲವಂ (ಮುಹಾನೀ. ೦೬-೨೯). ೫. ಜೋಡಿಸು; ಜೊತೆ ಮಾಡು; ಸೇರಿಸು : ತನ್ನ ಪುತ್ರಂಗೆ ತಾನೆ ಗುರುವಾದೆನೆಂಬ ಗುರುದ್ರೋಹಿಯ ಮಾತು ಕೇಳಲಾಗದು ಎನ್ನ ತಂದೆಯೇ ಎನಗೆ ಗುರುವೆನ್ನುವ ಗುರುದ್ರೋಹಿಯ ಮುಖವ ನೋಡಲಾಗದು ಅವರಿಬ್ಬರೊಳಗೆ ಗುರುಶಿಷ್ಯ ಸಂಬಂಧವನಾಚರಿಸಿದೊಡೆ ಅವರಿಬ್ಬರ ತರ್ಕಿಸಿ ಕಟ್ಟಿ ಹೊತ್ತಿಸಿ ನೊಂದಿಸಿ ಸುಡುವ ನಮ್ಮ ಕೂಡಲ ಚನ್ನ ಸಂಗಮದೇವಾ (ಚನ್ನವ. ೨೫-೩). ತಳ್ಕರಿಸು : ೧. ಕರುವು ಬಂದಿದಿರ ಹುದು ಮೋಹನದ ರೂಪಿನಲಿ. . . ಕರೆದು ತಳ್ಳುವ, ತಳ್ಕರಿಸುತೊಳಗೆ ಕಿಟ್ಟಿಡುವ ತರಳತೆಯದೇಂ ತಂತ್ರ ? (ಮಂಕುಳ. ೧೭೯). ತಳ್ಕಿಸು : ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨) ; ತಳ್ಕಿಸುವ ಪ್ರೀತಿಯಿಂ ತವಕಿಸಿ ನಿಗುರ್ವ ತೋಳ್ (ಚಲಪು. ೧೯-೩೨). ತೆಕ್ಕಿಸು : ೧. ಕುಡಿಯಲ್ಕಣವಾಜಿದೊಡಂ ಕುಡಿಸಿದನೊಡನುಂಡವಂಗವಂ ತೆಕ್ಕಿಸಿ ಕೊಂಡಡವಮವನ ವಿಷಮದಿಟಿಗುಂ (ಖಮದ. ೫-೫೪) ; ಒಬ್ಬಳನು ಮುದ್ದಿಡುತ ಒಬ್ಬಳನು ತೆಕ್ಕಿಸುತ ಮತ್ತೊಬ್ಬಳನು ಬಳಸುತಾ (ಸನಲ್ಲ. ೩೫-೫). [ ತಟ್ಕು + – ಇಸು$_3$ ]

**ತಟ್ಕಿಟಿ** (ನಾ). ತಾಗಿ ಇರಿಯುವಿಕೆ; ಸಂಘಟ್ಟನ (?): ತಕ್ಕುಂ ತಗುಳ್ದು ಕಾಯ್ದೊಪ್ಪದವೆ ಕೋಟ್ಕಳ ತಳ್ಕಿ [ಟ್ಕಿ] ಟಿಯಿಂದೆ ಕಂಡಮಲ್ಲೊಕ್ಕರ ತೇನತೇನಮವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ ನಿಜ ಭುಜಾರ್ಗಳಮಗ್ಗಳೆಯಾಗಿ ಸಾರ್ಚಿ ಕೈಯಿಕ್ಕಿಸಿ ಪಿಂಗಿಪಂ ಪಿಡಿದು ಪಿಂಗಿಸುವಂತಿರೆ ಜಂತ್ರದಾನೆಯಂ (ಅನಂಪು. ೬-೦೨).
[ ತಟ್ಕು + ಇಟಿ$_4$ ]

**ತಟ್ಕು, ತಕ್ಕು$_4$, ತಳಕು$_3$, ತಳುಕು$_3$, ತಳ್ಕು$_5$, ತಟೀಕು** (ನಾ). ೧. ಒಂದಕ್ಕೊಂದು ತಳುಕು ಹಾಕಿಕೊಂಡಿರುವುದು; ಹೆಣೆದುಕೊಂಡಿರುವಿಕೆ ; ಹೆಣಿಕೆ ; ಜೋಡಣೆ : ಎಲೆವಳ್ಳಿಯ ತಟ್ಕಿನಿಂ ಮನಂಗೊಳಿಪ ಕೌಂಗಿನ ಮರಂಗಳೊಳಂ (ಕಾದಂಪೂ. ೯೭). ೨. ಅಪ್ಪುಗೆ ; ಆಲಿಂಗನ : ತೊಳಗುವ ಹಾರಮನಾಗಳ್ತಳೆವಂತಿರೆ ನೆಲಕೆ ಬೀಟ್ಸಿನಂ ಪಿಡಿದಕ್ಷಾವಳಿಯಂ ಕೊರಲೊಳ್ತಳೆದಾಂ ತಳೆದೆಂ ಮುನಿಪತಿಯ ತೋಳ ತಟ್ಕಿನ ಸುಖಮಂ (ಕಾದಂಪೂ. ೭೭೦); ಕಡಲೊಳ್ ನೇಸಱನಟ್ದಲುಂ ಪೊಡವಿಯಂ ನರ್ಗೊತ್ತಲುಂ ಕೊಂಕಿ ಘೀಳಿಡೆ ತಟ್ಕಿಂ ದೆಸೆಯಾನೆಯಂ ಮುಟಿಯಲುಂ . . . ಬಗೆದನಾಗಳ್ ದಪ್ಪದಿಂ ದಪ್ಪಗಂ (ಕಬ್ಬಿಕಾ. ೦೫೨). ತಕ್ಕು$_4$ : ೩. ಗಜಾರೋಹಣದ ಒಂದು ರೀತಿ (?) : ತಮ್ಮ ತಕ್ಕಿನ ಮೂಱುಂ ತಕ್ಕುಗಳುಮನಡರಿಯುಂ ತೊಡರಿಯುಂ ನುಡಿದುತೆ ತಂತಮ್ಮಾನೆಯೊಳ್ಪಿನ ಮುಮಂ ಬಿನ್ನಣಮುಮಂ ಮೆಱೆದು (ಶಾಂತಿಪು. ೩-೨೭ ವ) : ತಕ್ಕು ತಗುಳ್ದು ಕಾಯ್ದೊಪ್ಪದವೆ . . . ಮೊಗಂಬೊಕ್ಕ ಗಜಂಗಳಂ ನಿಜಭುಜಾರ್ಗಳ ಮಗ್ಗಳೆಯಾಗೆ ಸಾರ್ಚಿ (ಅನಂಪು. ೬-೧೨). ತಳಕು$_3$ : ೧. ಅದು ಕೇವಲ ಒಂದೆರಡು ದಿನಗಳ ಜೋಡಲ್ಲ; ದೇಹಗಳೆರಡರಲ್ಲಿಯೂ ಜೀವವಿರುವ ತನಕ ಒಂದಾಗಿರುವ ತಳಕನ್ನು ಹಾಕಬೇಕಾಗಿತ್ತು (ಚಂದುಟಿ. ೪೫). ೪. ಪರಸ್ಪರ ಸಂಬಂಧ : ಕೌಟುಂಬಿಕ ಸಂಬಂಧಗಳಿಗೂ ಕೌಟುಂಬಿಕ ಸುಖದುಃಖಗಳಿಗೂ ತಳಕು ಇರುವುದರಿಂದ (ಕುಟುಂಬ. ೦೫); ಇಂತಹ ಕ್ಷುದ್ರ ಜೀವನಕ್ಕೆ ಮತ್ತೆ ಎಂತೆಂತಹ ಆಶೆಗಳ ತಳಕನ್ನು ಹಾಕಿರುವೆ (ಅಂತರಾ. ೪೦). ೫. ಸ್ಪರ್ಧಿಗಳ ಜೋಡು,-ಜೊತೆ : ಎಂಟು ಹತ್ತು ತಳಕುಗಳ ಕುಸ್ತಿ ಮುಗಿಯಿತು (ಗ್ರಾಮಾಯ. ೨೬೧). ೬. “ಕೂಡಿಸುವುದು ; ಪೋಣಿಸಿ ಕಟ್ಟುವುದು” (ಜಾನಕೋ. ೬೫). ತಳುಕು$_3$ : ೧. ನಗುತ ಸಾಕೇಳೆಂದು ರಾಯನ ತೆಗೆದು ತಳ್ಕಿಸಿ ಕೈಯ ತಳುಕಿನೊಳಗಧರನು ನೃಪಸಭೆಗೆ ಬಿಜಯಂಗೈದನೊಲವಿನಲಿ (ಕುವ್ಯಾಸ. ೬-೨೨); ಕಂಡು ಬಿಗಿಯಪ್ಪಿ ಕರದಿಂ ತಳುಕನಿಕ್ಕಿ (ಸೌಂದಪು. ೫-೫೦); ತಳುಕಿನ ಕನಕಲತೆಗಳಂತೆ ತೋಳ್ತೊಡೆ ಬಳಿಕೊಂದಱೊಂದಱೊಳ್ ತಳೆದು ಪುಳಕಿತಮಪ್ಪಂತೆ (ಬೋಹಶ. ೨೭-೪೩). ೭. ಸಿಕ್ಕು ; ತೊಡಕಂ : ನಕಲಿಯಿದು ನಿಜವೆಂದು ಮೋಸ ಹೋದೀರಯ್ಯ ನೀವಿವರ ಬಲೆಯ ತಳುಕಿಗೆ ಬೀಳದಿರಿ (ಕೋಗಿಲೆ. ೭೦-೩೯). ೮. ಹೆಣಿಕೆಯ ತೋರಣ : ವರಚಿತ್ರಪತ್ರಂಗಳೆಸೆವ ಮಣಿಮಾಲೆಗಳು ತರದಿಂದ ಕ[ತ]ಳುಕು ದಂಡಾವಳಿಗಳಿಂತಿವೇ ಸ್ಫುರಿಸಿಯೊಪ್ಪುತ್ತಿರ್ದವಾ ಮರುಳಕಂಕಣ ಮುಮಿರ್ದಲ್ಲಿ ಮೂಱು ಸುತ್ತು (ವೀಕೃಪು. ೮-೨೦-೪೭) ; ಸತ್ಕರಿಹ ಸದನಗಳು ಭಿತ್ತಿಯಿಲ್ಲವು ಪರುಷ ಮುತ್ತು ಬಿಗಿದಿಹ ತಳುಕು ಸುತ್ತಲೆಸೆದಿಹವು (ಶರಲೀ. ೩೦-೩). ೯. ಒಂದು ಬಗೆಯ ಸರ,-ಹಾರ : ತಳುಕು ಕಡಗ ಕಂಕಣ ಝಣಝಣಿಸಲು ತುಳುಕಿದರ್ ಗಂಧೋದಕವ (ಮೋಹಶ. ೧೪-೫೦). ತಳ್ಕು$_5$ : ೧. ಅಲಗ್ಗಳ ಗೊಂಚಲೆಱಗಿಸದ ಲತೆಲತೆಗಳಡರದ ತಳ್ಕಿನಿಂ ಚಿಗುರದಿಮ್ಮಾವು (ಕೃಮಿಥಾ. ೩-೩). ೮. ಸಸಿಗಲ್ಲ ಕೊತ್ತಳಗಳಗಣಿತದ ವೈಡೂರ್ಯದೆಸಕಮಾಂತಿರುವ ಕಿಱುವಾಗಿಲುಗಳಡಿಗಡಿಗೆ ವಸುರನ್ನ ತಿಂತಿಣಿಗಳಾಂತಿರುವ ತಳ್ಕುಗಳಲೆಸೆದುವಾ ಪಾಲಕಗಳು (ವಂಕಾರಾ. ೫-೨-೪). ತಟೀಕು : ೧. ‘ತಟೀಕಿಕ್ಕು’ ಪರಾ.

**ತಳಕುಹಾಕು, ತಳುಕುಹಾಕು** = ೧. ಸೇರಿಸಿ ಕಟ್ಟು: ಉಳಿದ ನಾಲ್ಕೆಂಟು ಕುದುರೆಗಳನ್ನು ತಳಕುಹಾಕಿ ಮುಂದೆ ಬಿಟ್ಟರು (ಮೇದಮ. ೧೨೬). ೨. ಒಂದಕ್ಕೊಂದು ಗಂಟುಹಾಕು ; ಸಂಬಂಧ ಕಲ್ಪಿಸು : ಕುಮಾರವ್ಯಾಸನ ಕಾಲದೊಡನೆ ಇವನ ಕಾಲವನ್ನು ತಳಕುಹಾಕಬೇಕಾಗಿಲ್ಲ (ಕಸಾಚ. ೨೩೮); ವಿಶ್ವಾಸಕ್ಕೂ ವ್ಯವಹಾರಕ್ಕೂ ತಳಕುಹಾಕಲು ಮನಸ್ಸಾಗಲಿಲ್ಲ (ಹಂಗೀತ. ೧೫೧) ; ನಿನ್ನ ಲಗ್ನಾನೂ ಅದನ್ನೂ ತಳಕುಹಾಕಿ ನಿಂತಾರ ಅವರು (ಸಮುಜೀ. ೨೪೭) : ಆ ಗುಣವನ್ನಿಲ್ಲಿ ತಳುಕುಹಾಕಿ ಸಮಾಧಾನಕ್ಕೆ ಬರುವುದು (ನನ್ನಜೊ. ೩೦). ತಳುಕಾಗಿ ನಿಲ್ಲು=ಒಗ್ಗಟ್ಟಾಗಿ ನಿಲ್ಲು; ಹೊಂದಿಕೊಂಡು ನಿಲ್ಲು ; ಒತ್ತಾಸೆಯಾಗಿ ನಿಲ್ಲು (?) : ೬೨ ವೃತ್ತಿಯ ಮಹಾಜನಂಗಳು ಹಿರಿಯ ಮಹಾ × × × ಲು ತಂವೊಳಡಂಬಟ್ಟುಯೆಂದಿಂಗೆವೊ ತಳುಕಾಗಿ ನಿಂದರು (ಎಕ. VI, ತರೀಕೆ. ೫೫-೩೦ : 1291). ತಳುಕಿನ ಸರ,

**ತಳಿಕಿನ ಸರ** = ಒಂದು ಬಗೆಯ ಸರ : ಅವಳು ಹೊಸದಾಗಿ ಮಾಡಿಸಿದ ತಳುಕಿನ ಸರ ಚೆನ್ನಾಗಿದೆ (ರೂಢಿ); ತಳಿಕಿನ ಸರ, ಮುತ್ತಿನ ಸರ, ಅಡ್ಡೆಳಿಸರ ಮೊದಲಾದ ಹಾರಗಳನ್ನು . . . ಆ ವನದಲ್ಲಿರುವ ಬ್ರಾಹ್ಮಣರಿಗೆ ಕೊಟ್ಟು (ಶ್ರವಾಅ. ೨೧೦). [ ದೇ.॥ ತಮಿ. ತಟುಕು = ಅಪ್ಪಿಕೊಳ್ಳು ]

**ತಟ್ಕೆ, ತಕ್ಕೈ$_1$, ತರ್ಕೆ, ತಳಿಕೆ$_1$, ತಳ್ಕೆ, ತೆಕ್ಕೆ$_1$, ತೆರ್ಕೆ** (ನಾ). ೧.ಅಪ್ಪುಗೆ; ಆಲಿಂಗನ : " ತಟ್ಕೆಯೆಂದಾಲಿಂಗನಂ " (ಅಭಿಸಾ. ೨೦-೪೧೮) ; " ಅಪ್ಪುಗೆ ತಟ್ಕೆಗಂ ಪೆಸರು " (ಶಬ್ದಮಂ. ೭೭) ; ಕೂಟದೊಳುಣ್ಮಿದ ಬೆಚ್ಚ ತಟ್ಕೆಯೊಳ್ ಕೂಟ ಸುಖಂಗಳಂ ಪಡೆದನೇಂ ಚದುರಂ ಗಳ ಬದ್ದದಲ್ಲಟಂ (ಪಂಪಭಾ. ೩-೮೨) ; ನಾನೊಲ್ದ ತಂಗೆ ಕಿಡೆದೊಲ್ದಣ್ಣನೊಲ್ಮೆಯಾ ತಟ್ಕೆಯೊಳ್ ಪಟ್ಟು (ಅಂಕಿಗೊ. ೪-೫೯). 'ತಟ್ಕೆಗೆಯ್', ತಟ್ಕೆಗೊಳ್' ಪರಾ. **ತಕ್ಕೈ$_1$**: ೧.ಚೆನ್ನಮಲ್ಲಿಕಾರ್ಜುನ ಒಂದಿರುಳಗಲಿದಡೆ ತ[ಪಾಠಾಂ. ತೆ]ಕ್ಕೆ ಸಡಿಲಿದ ಜಕ್ಕವಕ್ಕಿಯಂತಾದೆನವ್ವಾ (ಮಹಾದೇ. ಬ. ೧೪೨-೩೨೩); ಜಕ್ಕವಕ್ಕಿಗಳೆಲ್ಲ ತಕ್ಕೆಯನುಳಿದು . . . ಪೋದವು ದಿಕ್ಕುದಿಕ್ಕಿಗೆ ತಮತಮಗಾಗ (ಅಂಜಪ. ೭-೦೪೩) ; ಆ ಮಹಾವಜ್ರಾಯತ ಪ್ರೋದ್ದಾಮದಾಯಸ ಭೀಮತನು ನಿರ್ನಾಮವೆನೆ ನುಗ್ಗಾಗಿ ಬಿದ್ದುದು ನೃಪನ ತ[ಪಾಠಾಂ. ತೆ]ಕ್ಕೆಯಲಿ (ಕುವ್ಯಾಗ. ೧೧-೩೯); ಚುಂಬನಕೇನಿಚ್ಚೆ ತಕ್ಕೆಗಾವುದು ಸವಿದಂಬುಲ ವೇನಮಾಡುವುದು (ಭರತ. ೧೦-೨೮) ; ಚೂತಮಾ ಮಲ್ಲಿಗೆಯನಪ್ಪಿದುದು ಬೇಗದೊಳ್ ಕುರುವಕಂ ಮಾಧವಿಯ ತಕ್ಕೆಗೊಳಗಾದುದು (ಜಬಪು. ೧೧-೨೩) ; ಸೊಕ್ಕು ಜವ್ವನೆಯ ತಕ್ಕೆಯ ಸವಿಯಂದದೆ ಸಕ್ಕರೆ ಚಿಲುಪಾಲಿನಂತೆ ಅಕ್ಕಟಿಂದಲಿ ಕೇಳುವರಿಗತಿ ಹರುಷವ ಮಿಕ್ಕಿಸಗುವುದೀ ಕಾವ್ಯ (ಕಂಸವಿ. ೦-೦೭). ೨. ಎರಡು ತೋಳುಗಳ ಹಿಡಿತ: ಇಕ್ಕಿದ ಹೆಜ್ಜೆಯ ತೆಗೆಯದು ಮೊನಗೆ ನಿಲ್ಲದು ತಕ್ಕಿಗೆ ಬಾರದು (ಸರ್ವಪ. ೨೦೩-೯೨೪); ತಕ್ಕೆಗೆ ಸಿಕ್ಕಿದ ಚಾವಡಿಗಂಬ . . . ಎಂತಹ ಗರ್ವಿಷ್ಠನಾದರೂ ಬಗ್ಗಿ ಹೋಗಬೇಕಾದ ತಗ್ಗಿನ ಬಾಗಿಲು (ಪಳಮ. ೧). ೩. ಗುಂಪು ; ಸಮೂಹ: ಉನ್ನತ ಮಣಿರಥಪ್ರತತಿಯ ತಕ್ಕೆಗಳ್ಗವಧಿ ಮುನ್ನಿಲ್ಲ (ಜಬಪು. ೨೬-೭). ೪. ಒಂದೆಡೆ ಸೇರುವಿಕೆ ; ಸೇರುವೆ (?) : ಒತ್ತುವ ಕೋಡ ಕಾಳೆ ಕುಣಿಮೋಜೆಗೆ ಬಾಜಿಪ ಜುಂಜೆ . . . ಕಿಱುನಾಯ್ಗಳ ಪಿಂಡ ತಕ್ಕೆ ಮತ್ತೊತ್ತುವ ಗರ್ಜಿತಂ ಮಱೆವ ಬೆಟ್ಟದ ಬೇಡರ ಪಳ್ಳಿಪಳ್ಳಿಯೊಳ್ (ಸೂಕ್ತಿಸು. ೩.೨೦೦). **ತರ್ಕೆ** : ೧. ರಂಭೆಯೂರ್ವಸಿ ತಿಲೋತ್ತಮೆ ಮೇನಕಾಸ್ತ್ರೀಯರುಂ ಬಿಡದೆಯೋಲೈಸೆ ಸಕಲ ವೈಭವಗಳೊಳು ಕುಂಭ ಕುಚೆಯರ ತರ್ಕೆಯಿಂದ ಕೈಲಾಸದೊಳು ಸ್ಥಿತಿರ್ಪನೆಂದನಾರ್ಯಂ (ಗುರುಜಾ. ೭-೭೧). **ತಳಿಕೆ$_1$** : ೧. 'ತಳಿಕೆಬೀಳು' ಪರಾ. **ತಳ್ಕೆ** : ೧. " ಆಲಿಂಗನಂ ತಳ್ಕೆಯೆನಿಪುದು " (ಅಭಿರ. ೪೩) ; ನೆನೆವೊಡೆ ನಿಳ್ಕದ ಈಕ್ಷಿಪೊಡೆ ಸಿಲ್ಕದ ಕೀರ್ತಿಪೊಡೊಲ್ಲದ ಶಕ್ಯಮೆಂದೆನಿಸದ ಕೂಡಲುಜ್ಜುಗಿಸೆ ತಳ್ಕಿಗೆ ಸಲ್ಲದ ದಿವ್ಯಲಿಂಗಮಂ (ಪ್ರಭುವಿ. ೨೩-೨೭) ; ಪ್ರಾಣಕಾಂತರ ತಳ್ಕೆ ಸಡಿಲಿ (ವಚಕಾ. ೭೩) ; ನೆಲಬಾನ ತಳ್ಕೆಯಲಿ ನೇಸರನು ಬಿಡುಗಣ್ಣನಾಗುತಿರಲು (ಭಾವಜೀ. ೧-೫) ; ಇರುತಿಹುದು ಬರಿ ಮೂರು ದಿನದ ಬಾಳ್ಕೆ . . . ಮತ್ತೆ ಕಾದಿಹುದದೋ ! – ಚಿತೆಯ ತಳ್ಕೆ! (ಕವಿಕಾ. ೫೪-೬). **ತೆಕ್ಕೆ$_1$**: ೧. ಫಲಿತ ಶಾಳೀವನದ ಮುತ್ತಿದ ಗಿಳಿಗಳೋ ತಾವರೆಯ ತೆಕ್ಕೆಯೊಳಿದ ಮಱಿ ದುಂಬಿಗಳೊ ವೃಷಸೇನನ ಶರಾವಳಿಯೊ (ಕುವ್ಯಾಕ. ೨೦-೧೦); ಹರುಷದಲಿ ಮುಂಡಾಡಿ ತೆಕ್ಕೆಯಲಿರಿಸಿ ಮುದ್ದಿಪ ವರ ಜನನಿ ಜನಕರಿಗೆ . . . ಪರಮಾನಂದಗೊಡುತಿಹನು (ಸಾಳ್ವಭಾ. ೩೩-೧೧೪) ; ತಮ್ಮನಿಯರ ತೊಡರ್ದ ತೆಕ್ಕೆಯನೊದ್ದು . . . ಐತರಲು (ಜಬಪು. ೦೯-೮). ೨. ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು (ಅವಚಂ. ೨೬೫ ೧೨೦೩) ; ಬಿಡದೆ ತೆಕ್ಕೆಯೊಳಲ್ಲಮನ ಬಯಲೊಡಲ ಬಂಧಿಸಲೆಂದು ಬಿಗಿಯಲು ಹಿಡಿಹಿಗ್ಗಿಲ್ಲದೊಡವರು ಬೆಱಗಾಗಿರ್ದರದ ಕಂಡು(ಪ್ರಭುಲೀ. ೧೩-೦೪) : ಅವರೆ ಸಿಂಹದ ತೋಳ ತೆಕ್ಕೆಯು ಕರಿಯ ಸೆಳೆವಂದದಲಿ . . . ಧರಣೀಪಾಲನ ತೆಗೆದು ಭೀಮನ ಬರಿಯನೆಚ್ಚನು (ಕುವ್ಯಾಕ. ೧೪-೨) ; ಅವನ ತೆಕ್ಕೆಯಲಱಿಯದಕಟಾ ರವಿಕುಲೇಶನು ಸಿಲುಕೆ (ಕಾಶಿರಾ. ೬-೬೨) ; ನೆಲದ ಆಧಾರದಲಿ ನಿಂತು ಹರಿಯುವ ನೀರು ನೆಲದೊಡಲ ಕೊರೆದು ಮುಕ್ಕಿತು ಒಂದ ತೆಕ್ಕೆಯಲಿ ಇಕ್ಕೆಲದ ಬಾಳು–ಬದುಕು (ನೆಲಮು. ೧೪-೧೪). ೩. ಬರಸಿಡಿಲ ಬಳಗದಂತೆ ಕುಳಿಕಾಹಿಯು ಕಡುಪಿನಂತೆ ನೆಲಮುಕ್ಕನ ತೆಕ್ಕೆಯಂತೆ ಇರ್ದ ಅಸಂಖ್ಯಾತ ದೈತ್ಯನಾಯಕರ (ಜಗವಿ. ೧೫-೧೫ ವ) ; ನಿಪ್ಪಸರ ಕವಿಗಳ ತೆಕ್ಕೆಗಳಿಂ ತಿಱುಪಾಡೋದುತೆ (ತಿರುನಾ. ದೇ. ೦೧೧-೨೧); ವಾರಣಾವಳಿಗಳ ಪದಾತಿಯ ತೇರ ತೆಕ್ಕೆಯನಿಕ್ಕಿದನು ಪ್ರತ್ಯೇಕ ಸಾವಿರವ(ಕುವ್ಯಾಶ. ೩-೫೭); ಮಿಕ್ಕು ಶತಸಾವಿರದ ಕಂಬದ ತೆಕ್ಕೆಗಳ ತನಿವೆಳಗಿನಲಿ ಕಣ್ಣೆಕ್ಕಲಸದಳವೆಂಬವೊಲು (ತೊರರಾ. ೫-೨-೬೧) ; ಎಷ್ಟು ಸಸಿಗಳನ್ನು ಬೆಳಸುತ್ತೀರೋ ಅಷ್ಟೆಲ್ಲಕ್ಕೂ ಒಂದೊಂದು ತೆಕ್ಕೆ ಕೆಲಸ ನಿಮಗೆ ಬೀಳುತ್ತದೆ (ಗಾಳಿಪ. ೧೦೫). ೫. ಸುತ್ತಿಕೊಂಡಿರುವಿಕೆ ; ಸುರಳಿಯಾಗಿರುವಿಕೆ : ಭೀಮನ ಕಳಕಳಕೆ ಕಿವಿಯೊಡೆದು ತಿಳಿದುದು ನಿದ್ರೆ ಮುಱಿದಿಕ್ಕಿಯು ಮಹೋರಗನ ತೆಕ್ಕೆ ಸಡಲಿತು (ಕುವ್ಯಾಅ. ೧೩-೩೩). ೬. (?) : ತನ್ನನ್ನು ಮಿಕ್ಕು ಬದುಕುವೆನೆಂಬ ಕಾಲನ ತೆಕ್ಕೆ ಕಂಟಕ ತನ್ನ ಧನುವಿಗೆನುತ್ತ ಬೊಬ್ಬಿಱಿದ (ನಿಭಾಗ. ೪-೧೨-೧೩). **ತೆರ್ಕೆ** : ೩. ವಾಜಿರಾಜಿಗಳ್ ತೆರೆಗಳ ತೆರ್ಕೆಯಂತೆ ಕವಿತಂದುವು (ಪಂರಾಮಾ. ೪-೫೫) : " ಪರಂಪರೆ " ( ಪಂರಾಮಾ. ಕೋಶ ). ೭. (ಒಂದರೊಡನೊಂದು) ಸೇರಿರುವಿಕೆ,–ಕೂಡಿರುವಿಕೆ : ಬಱಿದೆ ಬೆಱಗಾಗಿ ತುಱುಗೆಮೆಯ ತೆರ್ಕೆಯೊಳ್ ಬಂಬಳಿಪ ಕಣ್ಬನಿಗಳೊಸಱೆ ಮಸುಳನಾದ ದಿಟ್ಟಿಯಂ ಬಲ್ಪಿನಿಂ ನಿಲಿಸಿ (ವರ್ಧಪು. ೪-೬೨ ವ).

**ತೆಕ್ಕೆತೆಕ್ಕೆ** (ದ್ವಿರುಕ್ತಿ) : ಇರ್ವರುಮೋರೋರ್ವರೊಳ್ ತೆಕ್ಕೆತೆಕ್ಕೆಯಿಂ ಬಾಹ್ಯಾಭ್ಯಂತರ ಪರಿಗ್ರಹಂಗಳಂ ಪರಿಚ್ಛೇದದಿಂ ತೊಱೆದು (ಶಾಂತಿಪು. ೭-೭೦ ವ) ; ಅವನೀಶನಾಜ್ಞೆಯಿಂದಾ ನಂದನಕೆ ಹೋದ ಯುವತಿಯರ ವಿರಹದಿಂದಾ ತಂತಮ್ಮ ಭವನದಂಗಣದಗ್ರಶಾಲೆಯೊಳ್ತೆಕ್ಕೆತೆಕ್ಕೆ [ಪಾಠಾಂ. ತೆಟ್ಟೆತೆಟ್ಟೆ] ಯೊಳು ನಿಂದು (ಸಮ್ಯಕ್ತ್ವಕೌ. ೩-೨): ದಿಕ್ಕುದಿಕ್ಕಿನೊಳು ನಿಲಿಸಿದಳು ಪಾನರ ತೆಕ್ಕೆತೆಕ್ಕೆಯ ಪೌಜುಗಳನು (ಕುರಾಸಾಂ. ೪೩-೩೭). **ತೆಕ್ಕೆಗೊಂದಿಸು** = ಅಪ್ಪುಗೆಗೆ ಅಳವಡಿಸು ; ಅಪ್ಪಿಕೊಳ್ಳು : ಗಗನಮಂ ತೆಕ್ಕೆಗೊಂದಿಸಿದರುಂಟೆ ( ಜೈಮಿಭಾ. ೨೬-೨೧ ). **ತೆಕ್ಕೆಹಾಕು, ತೆಕ್ಕೆಹಾಕು** = ೧. ಅಗಡು ಪ್ರಾಣಿಯನ್ನು, ಪಳಗಿಸಿದ ಅಥವಾ ಸಾಧುವಾದ ಪ್ರಾಣಿಯೊಂದಿಗೆ ಕಟ್ಟು : (ಕ). ೨. (ಪ್ರಾಣಿಗಳ) ಹಗ್ಗಗಳನ್ನು ಸೇರಿಸಿ ಕಟ್ಟು : ಅವೆರಡಕ್ಕೂ ತೆಕ್ಕೆಹಾಕಿ ಕಟ್ಟಿದ್ದಿದ್ದರಿಂದ ಅವು ಒಂಟಿಗೆ ಒಂದೊಂದು ಪಕ್ಕದಲ್ಲಿ . . . ನೇತಾಡುತಿದ್ದವು (ಪಚಭಾ. ೩೪೭). ೩. ( ಹಾವುಗಳಂ ) ಒಂದಕ್ಕೊಂದು ಕೂಡಿರು ; ಅಪ್ಪಿಕೊಂಡಿರು : ಹಾವುಗಳು ತೆಕ್ಕೆಹಾಕಿಕೊಂಡಿವೆ (ರೂಢಿ). [ <ತಟ್ಕು ]

**ತಟ್ಕೆಗೆಯ್, ತಳ್ಕೆಗೆಯ್, ತೆಕ್ಕೆಗೆಯ್, ತೆಕ್ಕೆಗೈ**(ಕ್ರಿ). ೧. ಅಪ್ಪಿಕೊಳ್ಳು; ತಬ್ಬಿಕೊಳ್ಳು ; ಆಲಿಂಗಿಸು : ತನ್ನ ಮನದೆಱಕದಿನಿಯಳಂ ಕಂಡು ನಸುನಕ್ಕು ಮುಟ್ಟೆ ಸಾರ್ದು ತಟ್ಕೆಗೆಯ್ದು ನುಣ್ಗಲ್ಲಮನಲುಗಿ (ರಾಮಾಶ್ವ. ೪೯-೦). **ತಳ್ಕೆಗೆಯ್** : ತವಕದಿಂದಂ ತಳ್ಕೆಗೆಯ್ಯೆ ಬರಿಕೆಯ್ಯ ತೋಳ್ಗಳ ನೀಟಿ (ಜಬಪು. ೦೯-೩೭). ೨. ತೋಳುಗಳಲ್ಲಿ ಬಲವಾಗಿ ಹಿಡಿ; ತಬ್ಬಿ ಹಿಡಿ : ಓಡಿಯೆ ಕರಾಗ್ರಮುಂ ಬಿಡಿಸುತೌಂಕೆ ಬಿದಿರ್ಚುವ ತಟ್ಕೆಗೆಯ್ಕೆ ಮೆಯ್ಗೊಡಪಿ ತೆರಳ್ಚುವ . . . ಬಿನ್ನಣಮೊಪ್ಪೆ ಕಡಂಗಿ ಕಾದಿದರ್ (ಶಬಶಂ. ೪-೭೩). **ತೆಕ್ಕೆಗೆಯ್** : ೧. ಚೆಂದುಟವಾಯನೀಂಟ ನಳಿತೋಳೆಡೆಯೊಳ್ ಸಲೆ ತೆಕ್ಕೆಗೆಯ್ದು (ಕಾವ್ಯಸಾ. ೫೭೪) ; ಕಲೆವಂತರಪಹರಿಸಿದರುಮಾಗಿಯ ಬಟ್ಟಮೊಲೆವೆಣ್ಗಳ ತೆಕ್ಕೆಗೆಯ್ದು (ಮೋಹತ. ೪-೪೭). **ತೆಕ್ಕೆಗೈ** : 'ತೆಕ್ಕೆಗೈಸು' ಪರಾ. [ ತಟ್ಕೆ + ಕೆಯ್$_1$ ]

**ತಟ್ಕಿಗೊಳ್, ತಕ್ಕಿಗೊಳ್, ತೆಕ್ಕಿಗೊಳ್, ತೆಕ್ಕಿಗೊಳ್ಳು, ತೆರ್ಕಿಗೊಳ್** (ಕ್ರಿ). ೧=ತಟ್ಕಿಗೆಯ್ ೧: ಮುಳಿದು ವಿಯುಕ್ತ ವಲ್ಲಭಜನಂ ತಳುವಿಲ್ಲದೆ ತಟ್ಕಿಗೊಂಡುದು . . . ಏನಳವಿಗಳುಂಬಮೋ ಪುದಿದ ಮಾಗೆಯ ಶೀತ ವಿಜೃಂಭಪಾತನಂ (ಕುಸುಮಾ. ೬-೩೦). ೨. ಹಿಡಿ : ಇದಿರ್ವಂದರಸಿಯ ಸರಸಿಜ ಮೃದುಕರಮಂ ತಟ್ಕಿಗೊಂಡು ಪಕ್ಕಗೆ ವಂದು (ಜಿಕವಿ. ೪-೧೦೬). ೩. ಸೇರಿರಂ; ಜೋಡಣೆಯಾಗಿರಂ: ಫಣಗಣ ವಿವಿಧಾಲಂಕೃತಂ ತಟ್ಕಿಗೊಂಡಿರ್ದ ಪತತ್ರಂ ತನ್ನೊಳೊಪ್ಪಿರ್ಪಹಿಕುಲರಿಪುವಂ ಸಂತತಂ ಸದ್ವಿಹಂಗಾಧಿಪನಂ ಮಚ್ಚಿತ್ತದೊಳ್ ಭಾವಿಸಿದೆಂ (ದಶಕು. ೯-೮೯). **ತಕ್ಕಿಗೊಳ್:** ೧. ತಕ್ಕಗೊಂಡೆನ್ನ ಪೀಡಿಸಬೇಡ ಕಡು ಕೈತ್ಯವಕ್ಕಿಯೊಳಿರಿಸು (ಮೋಹತ. ೨೬-೫೯) : ಕುವರ ಕಂಗೆಟ್ಟು ಬಿದ್ದಪನೆಂದು ತಕ್ಕಿಗೊಂಡವಳ ನುಣ್ಮೊಲೆಯ ಬಳ್ಪಿಡಿದ (ಮೋಹತ. ೩೧-೨೬). **ತೆಕ್ಕಿಗೊಳ್** : ೧. ರಾಹು ತೆಕ್ಕಿಗೊಂಡವೊಲಳವಟ್ಟು ರಂಜಿಪುದು ಕೇಳ್ ಮಾಡಿ ಪಂಕರುಹಾಕ್ಷಿಯೊರ್ವಳಾ (ಧರ್ಮಾಮೃ. ೬-೨೦೨) ; ಜಗವ ಮೋಹಿಸುತಿಹ ಕಾಮನ ತೆಕ್ಕಿಗೊಂಡಿರ್ದ ಕೋಮಲತರ ಬಾಹುಗಳಿಂದೆ (ಮೋಹತ. ೧೦-೨೬). **ತೆಕ್ಕಿಗೊಳ್ಳು** : ೧. ಪ್ರೇಮ ಪರವಶರಾಗಿ . . . ಪತಿಗಳನ್ನು ಮೇಲೆ ಮೇಲೆ ತೆಕ್ಕಿಗೊಳ್ಳುತ್ತಿದ್ದಾರೆ (ಶ್ರೀ ರಾ ಪ. ೯). ೪. ಇಟ್ಟಣಿಸು ; ಸಂದಣಿಸು:ಗುಜುಗುಜುಗುಟ್ಟುತಂ ಬೀದಿಬೀದಿಯೊಳ್ ಮನೆಮನೆಯೊಳಂ ತೆಕ್ಕತೆಕ್ಕಿಗೊಂಡೆಲ್ಲರುಂ ಘನತರದೆ ವಿಹ್ವಲಾನ್ವಿತರಾಗಿರಲ್ಕೆ (ಪಾಸೋಪು. ೭-೧೬೮) ; ಮುಂಚೂಣಿಯ ಒಂದೊಂದು ಗಾಡಿಯಲ್ಲಿಯೂ ಆರಾರು ಜನ ರುಗ್ಣ ಕೈದಿಗಳು ಇರುಕಿರುಕಿ ತೆಕ್ಕಿಗೊಂಡಿದ್ದರು (ಪುನರು. ೫೫೫). **ತೆರ್ಕಿಗೊಳ್** : ೪. ಅಗೆ ಮೂಡುವಂದದಿಂ ತೆರ್ಕಿಗೊಂಡು ಕಿಱುಮನೆಯ ಸೆಲೆಗಳಿಡಿಕಿಱಿದಿರೆ (ವರ್ಧಪು. ೧೧-೪). [ತಟ್ಕಿ + ಕೊಳ್$_1$]

**ತಟ್ಕಿಯ್ಸು** 'ತಟ್ಕೈಸು' ನೋ.

**ತಟ್ಕೈಸು, ತಕ್ಕಯಿಸು, ತಕ್ಕವಿಸು, ತಕ್ಕೆಯ್ಸು, ತಕ್ಕೈಸು, ತರ್ಕಯಿಸು, ತರ್ಕವಿಸು, ತರ್ಕೆಯ್ಸು, ತರ್ಕೈಸು, ತಳ್ಕಯ್ಸು, ತಳ್ಕವಿಸು, ತಳ್ಕೈಸು, ತಟ್ಕಯಿಸು, ತಟ್ಕಯ್ಸು, ತಟ್ಕಿಯ್ಸು, ತೆಕ್ಕಯಿಸು, ತೆಕ್ಕೆಯ್ಸು, ತೆರ್ಕಯ್ಸು** (ಕ್ರಿ). ೧. ಕೂಡಿಕೊಂಡಿರು ; ಒಳಗೊಳ್ಳು: ಆಯತ ಯದುವಂಶ ಕುಲಶ್ರೀಯಂ ತಟ್ಕೈಸಿದದಟರತಿರಥರವರತ್ನಾಯತ ಭುಜಪರಿಘನಾರಾಯಣಬಲದೇವರೆಂಬರಂಬುಜವದನೇ (ಪಂಪಭಾ.೪-೫೬): ಬಾಳುಮತ್ತಪರಂ ಬೆರಸು ಮಿಂಚಂ ತಟ್ಕೈಸಿದ ಕಾರ ಕಾರ್ಮುಗಿಲಂತೆ ತಿಱ್ಱನೆಯ್ತರ್ಪ ದವಿತಾರಿಯಂ ನೋಡಿ (ಶಾಂತಿಪು. ೭-೫೪ ವ) ; ಪದೆಪಂ ಕೆಯ್ತದೊಳುಂಟು ಮಾಡಿ ನಯಮಂ ವಾಗ್ವೃತ್ತಿಯೊಳ್ ತೋಱಿ . . . ಎಸಕದೊಳ್ ಮೆಲ್ಪಂ ಪಳಂಚಲ್ವಿ ಕಣ್ಬದಿರೊಳ್ ಕಾಮಿನಿ ಕಾಮರಾಗರಸಮಂ ತಟ್ಕೈಸಿ ತಳ್ಪೊಯ್ದು ಮೇಳದೊಳಂ ಪೊಕ್ಕನಸುಂ ಮನಂಗೊಳಿಸಿದೊಳ್ ನಾನಾ ಪ್ರಕಾರಂಗಳಿಂ (ಸುಕುಮಾ. ೬-೧೦). ೨. ಅಪ್ಪು ; ಆಲಿಂಗಿಸು : ಎರಡು ಕೊಂಬುಗಳುಮಂ ತಟ್ಕೈಸಿಯಾದಮಾನುಂ ಬಿಗಿದಪ್ಪಿಕೊಂಡು ಸತ್ತರ್ (ವಡ್ಡಾರಾ. ೪೫-೧೬) : ಕೊಂತಿ ಬಂದು ಕರ್ಣನ ಕಳೇವರಮಂ ತಟ್ಕೈಸಿಕೊಂಡು ಪಾಂಡವರಯ್ವರುಮನಲ್ಲಿಗೆ ಬರಿಸಿ (ಪಂಪಭಾ. ೧೪-೮ ವ) ; ಕಾಲ ಮೇಲೆ ಮುಱಿಗಿದ ವಿನಯಾಭಿರಾಮನಂ ತೆಗೆದು ತಟ್ಕೈಸಿ ಪರಸಿ (ಕಾದಂಬ. ೨೬೫): ಜನಾರ್ದನನಾ ಮಂದರಮಂ ತಟ್ಕೈಸಿದ ಭುಜಪರಿಘಂಗಳಿನೆನ್ನನೊಲ್ದು ತಟ್ಕೈಸುಗುಮೋ (ಜಗವಿ. ೫-೬೨); ಪಟ್ಕಿ ತಟ್ಕೈಸಿದಂ[ಪಾಠಾಂ. ಬಳ್ಕಿ ತಟ್ಕೈಸಿದಂ, ಪಟ್ಕೈಸಿದಂ]= ತಡಕೆಯ್ಕಂ ಮಾಡಿದಂ (ಶಮದ. ಪರಿ. ೦) ; ಪುಷ್ಪಕದಿಂ ನೆಲಕ್ಕಿೞಿದು ತನ್ನಿಪ್ಪತ್ತು ತೋಳ್ಗಳಿಂದಾ ಗಿರಿಯಂ ತಟ್ಕೈಸಿ ಅಳ್ಳಾಡಿಸೆ (ಧರ್ಮಪ. ೯-೪೮ ವ); ಗಟ್ಟನಟ್ಟಿಱಿಂ ಬಿಗಿಬಿಗಿದು ತಟ್ಕೈಸುತ್ತುಂ(ಜಿಕವಿ. ೬-೦೫೬ ವ). ೩. ತಬ್ಬಿ ಹಿಡಿ ; ಇರುಕು : ಕರಿದಂತಂಗಳನಾಂತು ಪೀಲಿವೊಱೆಯುಂ ತಟ್ಕೈಸಿ ಗಂಧೇಭ ಬಂಧುರ ಮುಕ್ತಾಫಳಭಾರಮಂ ತಳೆದು . . . ಬಂದರನೇಕರ್ ಬೞಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ (ಕಾದಂಪೂ. ೧೬೯). ೪. ತಾಕು ; ತಗುಲು ; ಮುಟ್ಟು : ಎರಡುಂ ವಿದ್ಯಾಧರ ಶ್ರೇಣಿಯೊಳೆಡೆಯಡೆಯೊಳ್ ಜೈನ ಚೈತ್ಯಾಳಿ ತಳ್ತಂಬರಮಂ ತಟ್ಕೈಸಿ ನಾನಾಮಣಿಕಿರಣಗಣಜ್ಯೋತಿಗಳ್ . . . ಬೆಳಗೆ (ಶಾಂತಿಪು. ೨-೧೧೬). ೫. ಅರಳಿಸು; ವಿಕಾಸಗೊಳ್ಳುವಂತೆ ಮಾಡು: ತ್ರಿಲೋಕೀದೀಪಂ ತಟ್ಕೈಸುಗಸ್ಮನ್ಮತಿ ಕುಮುದಿನಿಯಂ ನೇಮಿಚಂದ್ರಂ ಜಿನೇಂದ್ರಂ (ಲೀಲಾವ. ೧-೦). ೬. ಮಡಿಸು ; ಬಾಗಿಸು : ಗೆಂಟಾದುದೆ ಪೋದಪ್ಪುದಿನ್ನೆಚ್ಚಪೆನೆನುತೆ ನೃಪಂ ತೀವಿ ತೊಟ್ಟಾರೆ ತಟ್ಕೈಸಿದ ಮುಂಗಾಲ್ ಪೊಕ್ಕ ಪಿಂಗಾಲ್ ನೆಗೆದುಡುಗಿದೊಡಲ್ ಬಿಟ್ಟ ಕಣ್ ನೆಟ್ಟ ಕರ್ಣಂ ಪದವಿಟ್ಟೈದಾಜಿನೇೞಿ ಸರಳಿಸಿದುದು ಭೀತಾಂತರಂಗಂ ಕುರಂಗಂ (ಸೂಕ್ತಿಸು. ೪-೦೨೯). ೭.ಸಂತೈಸು; ಶಮನಗೊಳಿಸು; ಸಮಾಧಾನಪಡಿಸು; ತಲೆ ನೇವರಿಸು: ಅೞಲನೆರ್ದೆಯೊಳ್ ತಿಣ್ಣಂ ತಟ್ಕೈಸಿ ಪುತ್ರವಿಮೋಹದಿಂದೆೞವಿ ತನುವಂ . . . ಅೞುತುಂ (ಕಾವ್ಯಾವ. ೮೦೫). **ತಕ್ಕಯಿಸು :** ೨. ಮುಂದಿರ್ದ ವಾಗೀಶನಂ ತಕ್ಕಯಿಸಿ ನಲಿದು (ವಾಗೀರ. ದೇ. ೨೬೫-೧೭); ನಕ್ಕು ವಾಸುಗಿ ಭೀಮಸೇನನ ತಕ್ಕಯಿಸಿ ಕೈದಣಿಯೆ . . . ಮನೆಗೆ ನಡೆಯೆಂದು (ಸಂಭಪ. ೦೬-೨೪). **ತಕ್ಕವಿಸು:** ೨. ಪವನಸುತನೇ ಬಾ ಎನುತ ತಕ್ಕವಿಸಿದನು (ಕುವ್ಯಾಗ. ೧೧-೭೨). **ತಕ್ಕೆಯ್ಸು:** ೨. ಸಕ್ಕರೆಯ ಕೊಡನ ತುಂಬಿ ಹೊಱಗೆ ಸವಿದರೆ ರುಚಿಯುಂಟೆ ತಕ್ಕೆಯ್ಸಿ[ಪಾಠಾಂ.ಕೈಸಿ]ಭುಜ ತುಂಬಿ ಲಿಂಗಸ್ಪರ್ಶನವ ಮಾಡದೆ ಅಕ್ಕಟಾ ಸಂಸಾರ ವೃಥಾ ಹೋಯಿತ್ತಲ್ಲಾ (ಬಸವ. ೫೧೮) : ಪೊಡವಡುತ ತಕ್ಕೆಯ್ಸು[ಪಾಠಾಂ. ತಕ್ಕೈಸು, ತರ್ಕೈಸು]ತಂ ಕೈವಿಡಿದು ಕುಣಿವುತ ತಣಿವುತಂ (ಬಸಪು.೫೯-೨೭); ತವಕದಿಂದಿದಿರೆದ್ದು ಜನಕನನವನಿಪತಿ ತಕ್ಕೆಯ್ಸಿ[ಪಾಠಾಂ. ಕ್ಕೈಸಿ] . . . ನಿಲಿಸಿದನು ಸಿಂಹಾಸನಾರ್ಧದಲಿ (ತೊರರಾ. ೧-೧೬-೦೬). **ತಕ್ಕೈಸು :** ೨. ಪರಸಿ ತಕ್ಕೈಸಿಕೊಂಡು ಮಹಾವಿಭೂತಿಯಿಂದರಮನೆಗೊಡಗೊಂಡು ಬಂದು (ಧರ್ಮಾಮೃ. ೧೪-೦೭೦) ; ತತ್ಪಿತೃವ್ಯಂ ಧರಾಧೀಶ್ವರನಾಶೀರ್ವಾಕ್ಸಮೇತಂ ತೆಗೆದು ಬಿಗಿದು ತಕ್ಕೈಸಿದಂ ಪ್ರೀತಿಯಿಂದಂ (ವರ್ಧಪು. ೦-೭೧) ; ತಕ್ಕೈಸಿ ಮುಂಡಾಡಿ ಸೊಕ್ಕೇಱಿ ನೋಡುತಂ (ಮುಱಿರ. ದೇ. ೬೪-೫) ತೆಗೆದಾತನನು ತಕ್ಕೈಸಿದನು ಕಾರುಣ್ಯನಿಧಿ ನಗುತ (ಕುವ್ಯಾದ್ರೋ. ೧೫-೨). ೭. "ಅದೆಲ್ಲಾ ಅರ್ಧದಿನದಲ್ಲಿ ಸರಿಹೋಗೋದಲ್ಲ ಪುಟ್ರಂಗು—ಕಾಲಬೇಕು—ತಾಳಬೇಕು, ತಾಳ್ಮೆಬೇಕು" ಎಂದು ತಕ್ಕೈಸಿದೆ (ವೃದ್ಧವಿ. ೫೬) ; ಬಾಗಿ ಬಿನ್ನೈಸುತಿಹ ಪಣ್ಗೊನೆಗಳು! ತೂಗಿ ತಕ್ಕೈಸುತಿರಲುಯ್ಯಲೆಗಳು! (ಕವಿಕಾ. ೭೬-೬). ೮. ಅಪ್ಪಿಕೊಳ್ಳುವಂತೆ ಮಾಡು : ಪರನಾರಿಯರ ಸಂಗವಿಲ್ಲಿ ಉಕ್ಕು ಎಱೆದ ಸತಿಯರ ತಕ್ಕೈಸುವರಲ್ಲಿ (ಪುರಂದ. ೨-೪೯-೦); ನಡುಗುವರ್ಜುನದೇವನನು ತೆಗೆದಡಿಗಡಿಗೆ ತಕ್ಕೈಸಿ ಭೀತಿಯ ಬಿಡಿಸಿ . . . ನಡಸಿದನು ಕಾಳೆಗಕೆ (ಕುವ್ಯಾಭೀ. ೬-೭೮). **ತರ್ಕಯಿಸು :** ೨. ಅರ್ಕೇಂದು ಸಂಪದಂಗಳನಿರ್ಕೆಳ್ತ ಕರಂಗಳಿಂ ನಭೋವಲ್ಲಭೆಯಂ ತರ್ಕಯಿಸಿ ನಾಲ್ಕುದೆಸೆಯೊಳಮಿರ್ಕುಂ ವಿಂಶತಿ ಸಹಸ್ರ ಸೋಪಾನಂಗಳ್ (ಮಲ್ಲಿಪು.೦೭-೧೧೮); ಸೋಲಕಾರ್ತಿಯರ್ ಕಣ್ಸೋಲಮಂ ಕಾಣ್ಕೆಗೊಟ್ಟು . . . ರಾಗರಸದೊಳ್ಮುೞುಗುತ್ತಂ ತೇಪೆಕಾರ್ತಿಯರ್ ತೆಪ್ಪಂಬಿಡಿವಂತೆ ತಾಪದಿಂ ಮೃಣಾಳನಾಳದ ಪೊರಳಿಯಂ ಪೊರಳ್ದು ತರ್ಕಯಿಸಿಯುಂ (ಅರ್ಧನೇ. ೫-೨ ವ). **ತರ್ಕವಿಸು:** ೨. ತಲೆದಡವಿ ತರ್ಕವಿಸಿ ತಂಬುಲವಂ ಬಾಯ್ತುಂಬಲಿಕ್ಕಿಯಂಜದಿರೆಂದು (ಶಂಕಳಂ. ೭೧). ೭. ಇತ್ತಲು ರಾಮನಾ ಕುಂತಳಂಗಳಂ ತರ್ಕವಿಸಿ ಸಂತಾಪಮನಪ್ಪುಕೆಯ್ದು ಹಮ್ಮದಂಬೋಗೆ (ಪುಣ್ಯಾಸ್ರ. ೬-೪೦ ವ). **ತರ್ಕೆಯ್ಸು :** ೨. ಪೊಡೆವಟ್ಟ ನಿಜತನೂಜೆಯಂ ಕಲ್ಯಾಣಭೋಗಭಾಗಿಯಾಗೆಂದು ಪರಸಿ ತರ್ಕೆಯ್ಸಿ[ಪಾಠಾಂ. ಕೈಸಿ]ಕೊಂಡು (ಆದಿಪು. ೪-೭೬ ವ) ; ಅರಸಂ ಕರತಳತಾಡನ

ಪುರಸ್ಸರಂ ದೇವ ಬನ್ನಿವೆಂದೊಲವಿಂದೊಡ್ಡಿರೆ ಕೈಯನೊಲ್ಲದೆನ್ನಯ ಕೊರಲಂ ತರ್ಕೈಯ್ಪು[ಪಾಠಾಂ. ತಟ್ಕೈಪ] ತನಯನೆಂದಾದಪನೋ (ಚಂದ್ರಪು. ೩-೪೬); ಮೃದುಮಧುರಾಂಚಿತೋಕ್ತಿಗಳಿಂದ ಬೋಧಿಸಿ ತರ್ಕೈಯ್ಸಿ [ಪಾಠಾಂ. ತಕ್ಕವಿಸಿ, ತಳ್ಕೈಸಿ] ತಾಂ ಕಂದನಂ ಹೊಡವಡಿಸಿ ಕೊಂಡು (ಬಸವಪು. ೪-೬೮). **ತರ್ಕೈಸು :** ೨. ಅಂಭಶ್ಶೀಕರಂಗಳ್ಪ್ರಸರಿಸೆ ವಿಚಲದ್ವೀಚಿಹಸ್ತಂಗಳಿಂ ಮೆಲ್ಲಗೆ ತರ್ಕೈಸಿತ್ತು ಪೂರ್ವಾಬ್ಧಿಯನಖಿಳ ನದೀ ಖ್ಯಾತ ಸೀತಾಪ್ರವಾಹಂ (ಮಲ್ಲಿಪು. ೨-೧೦) ; ಗೆಜ್ಜೆಗಳುಲಿಗೊದವಿದ ಕಂಕಣದುಲಿಗಳೆಸೆಯೆ ಬರ್ಪಾತ್ಮಜನಂ ಮದಧಿಪನೆನ್ನಂ ತರ್ಕೈಸಿದ ತೋಳಂ ತೆಗೆದದೆಂದು ತಟ್ಕೈಸುಗುವೋ (ಅರ್ಧನೇ. ೧-೧೦೩); ಚಕ್ರಪಕ್ಷಿಯುಗಂಗಳ್ ತರ್ಕೈಸಲ್ ತಮವಾಗಳ್ ಬರ್ಕಟಬಯಲಾದುದು (ಗಿರಿಜೆ. ೫-೫) ; ಇಲ್ಲೀಗ ಕಂಡೆನಾದಡೆ ಚರಣದಲ್ಲಿ ದೊಪ್ಪನೆ ಬಿದ್ದು ಬಗಿದು ತರ್ಕೈಸಿ ಬಸಿಱಂ ಬಗಿದು ಹೊಕ್ಕು ಬೆರಸಿ ತಲ್ಲೀಯವಪ್ಪೆನು (ಸಿದ್ಧ ರಾ. ೨-೫೫). ೪. ಪಟುಪಟಹರಟನಮಾಶಾತಟಮಂ ತರ್ಕೈಸೆ . . . ವಿಶಾಲ ಸ್ಫಟಿಕ ಶಿಳಾತಳಕೆ ವಿಜಯಿ ಬಿಜಯಂಗೆಯ್ದಂ (ವರ್ಧಪು. ೦೫-೬). ೯. ಗುಂಪುಗೊಳ್ಳು; ಸಂದಣಿಸು: ತರ್ಕೈಸಿ ಸುರಿವ ತೆಱದಿಂದುರ್ಕಂಬುಗಳೆಱಗಿ ರೋಮರೋಮಕ್ಕೆ . . . ನಾಂಟಿದುವರಾತಿಭಟರಮಯಮಂ (ಜಗವಿ.೬-೮೧). **ತಳ್ಕಯ್ಸು :** ೧. ಪರಿಪೂರ್ಣ್ಣೇಂದು ಪ್ರಭಾ ವಿಭ್ರಮದೊಳಮುದ್ದುರ್ಗಂಗಾಪಗಾಸ್ಫಾರ ರುಗುವಿಸ್ತರಮಂ ತಳ್ಕಯ್ಸಿ ದುಗ್ಧಾರ್ಣ್ಣವ ನವರುಚಿಯಂ ತಾಳ್ದಿ ನೀಳ್ದಪ್ಪುದಾದಂ . . . ವಿಯನ್ಮಂಡಪಾಗ್ರಂಬರೆಗಂ ಶ್ರೀ ವಿಷ್ಣುದಂಡಾಧಿಪ ವಿಪುಳಯಶಃಕಲ್ಪವಲ್ಲೀವಿಳಾಸಂ (ಎಕ. V, ಬೇಲೂರು. ೧೬-೩೦ ; 1186). **ತಳ್ಕವಿಸು :** ೨. ತೆಗೆದು ತಳ್ಕವಿಸಿದ ರಾಗಳಾತನಂ ರಘೂದ್ವಹಂ ಪಸರಿಸಿದಂ ಸ್ವಭಾವಹಂ (ಕುಮುರಾ. ೪-೯೮ ರಗಳೆ). **ತಳ್ಕೈಸು:** ೨. ಬಂಡಿಯೊಳು ಬರ್ದುಂಕಿ ಕುಳ್ಳಿರ್ದ ಮಗನಂ ಕಂಡೆತ್ತಿ ತಳ್ಕೈಸಿ (ನಂಬಿರ. ೨-೫೭) ; ಅಳ್ಕಿ ಪುಳಿಂದಂ ಕಾಣಾತೆ ತಳ್ಕೈಸಿಯೆ ಕೊಂಡು ಶುನಕನೆರಡುಂ ಕಡಿಯುಂ ಕಾಳ್ಕಿರ್ಚು ತಗುಳ್ದ ತೆಱದಿಂ . . . ನೊಂದು ಬೆಂದು ಬಳಲುತ್ತುಂದಂ (ಗಿರಿಜೆ. ೦-೧೦೬) ; ಅಖಂಡಹರ್ಷದಿನೆತ್ತಿ ತಳ್ಕೈಸಿ ಮೊಲೆಯೂಡೆ (ಪದ್ಮರಾ. ೧-೯). ೬. ಸುಜನನುತ ಚರಿತ್ರಂ ಭವಾಂಬುಧಿ ವಹಿತ್ರನೆಂದೆನಿಪ ಗೌರಾರ್ಯ ಚಿಚ್ಚಂದ್ರಮಂ ತಳ್ಕೈಸುಗೆಮ್ಮ ಮತ್ಕೃತ್ಪಲಿ ನಿಯಂ (ಪದ್ಮರಾ. ೦-೨೪). **ತಟ್ಕಯಿಸು:** ೨.ಬೀಯಗನನಟ್ಕಱಿಂ ತಟ್ಕಯಿ [ಪಾಠಾಂ. ಟ್ಕೈ]ಸಿ ತತ್ಕರ ಪ್ರಸಭಾಕೃಷ್ಟ ನಿಕಟ ವಿಷ್ಟರೋಪವಿಷ್ಟಂ (ವರ್ಧಪು. ೫-೪೫ ವ). **ತಟ್ಕಯ್ಸು :** ೨. ನಿಜಾವರಜನ ಕಳೇವರಮಂ ತಟ್ಕಯ್ಸಿ[ಪಾಠಾಂ. ರ್ಕೈಸಿ]ಕೊಂಡು (ನೇಮಿಪು. ೦೪-೯೮ ವ). **ತಟ್ಕೈಯ್ಸು :** ೨. ಆಭರಣಕ್ಕಾಭರಣಂ ಜಿತಸ್ಮರನ ರೂಪೆಂದೀಕ್ಷಿಸಲ್ ತನ್ನ ಸಾಸಿರ ಕಣ್ಣೆಯ್ದದೆ ಕೋಟಿ ಕಣ್ಗೆ ಬಯಸುತ್ತಟ್ಕರ್ತು ತಟ್ಕೈಯ್ಸುತುದ್ಧರಿಸಿರ್ದಂ ಹರಿ ಕಾಂಕ್ಷಿಸುತ್ತೊಲವಿನಿಂ ಶ್ರೀಭವ್ಯರತ್ನಾಕರಂ (ಪುಷ್ಪಪು. ೧೧-೬೫). **ತೆಕ್ಕೆಯಿಸು :** ೯. ಎಕ್ಕೆ ಎಲಚಿಯು ಲಕ್ಕಿಗಿಡಗಳು ಸೊಕ್ಕಿ ಮೆರೆವಾಸೀಗೆ ಮರಗಳು . . . ತೆಕ್ಕೆಯಿಸಿತಾರಣ್ಯದಿ (ಗೋಪಾಲು. ೬). **ತೆಕ್ಕೆಯ್ಸು:** ೪. ಬಳಸುತ್ತಂ ಕೀರ್ತಿಸುತ್ತಂ ಸುಳಿದು ಸುಳಿದು ತೆಕ್ಕೆಯ್ಸಿರಲ್ (ಮೈಆರಿ. ೧೯೩೭, ೨೮-೨೬ ; 1148). **ತೆರ್ಕೆಯ್ಸು :** ೪. ಬಳಸುತ್ತುಂ ಕೀರ್ತಿಸುತ್ತುಂ ಸುಳಿದು ಸುಳಿದು ತೆರ್ಕೆಯ್ಸಿರಲ್ ಕೂಡೆ ಶೇಷೋಜ್ಜ್ವಳ ಕಾಯಂ ತೀವಿದಾ ಪೇಳಿಗೆವೊಲಿರೆ ಸರೋಜಾತಜಾಂಡಂ . . . ವಿಷ್ಣು ಪೆತ್ತಂ ಬೆಡಂಗಂ (ಎಕ. V, ಹಾಸನ. ೫೩-೧೫ ; 1170). [ ತಟ್ಕ + – ಇಸು$_3$ ]

**ತಟ್ಗಿಯೂರ್** (ನಾ). ಒಂದು ಊರಿನ ಹೆಸರು : ಶ್ರೀ ಪುರುಷ ಪ್ರಿಥಿವೀ ರಾಜ್ಯಗೆಯೆ ವ್ಯಾಳ ಕಟ್ಟಾಡರ ತಟ್ಗಿಯೂರಾಳ . . . ಪಣಾಪುಲ್ಲು ಇದಕೆ ಸಾಕ್ಷಿ (ಎಕ. IV, ಗುಂಡ್ಲುಪೇ. ೪೬-೨ ; ಸು. 750).

[ ತಟ್$_0$ + ಊರ್ ]

**ತಟ್ಗಿಸು, ತಗಿಸು, ತಗ್ಗಿಸು, ತರ್ಗಿಸು, ತಳ್ಗಿಸು. ಸಗ್ಗಿಸು** (ಕ್ರಿ). ೧. ತಗ್ಗುವಂತೆ ಮಾಡು ; ಕುಸಿಯಿಸು : ತಾಳಲಾಗದ ತೀವ್ರತರ ಕಷ್ಟಂಗಳಿರದೆ ತಟ್ಗಿಪುದು ತಾನವನ ಕೊರಲನ್ (ಬದ್ಧಪ್ರ. ೪೯-೦೦೭೦). ೨. ಕೀಳು ಮಾಡು : ನಿಱಿವಿಡಿದುಟ್ಟ ಪಟ್ಟುಡೆಯಂದಿನ ತ್ರಿವಿಕ್ರಮ ಮೂರ್ತಿಯ ತೆಳ್ಪಿನ ಪೊಗರ ನಿಗರದೊಳ್ಪುಡೆಯಂ ತಟ್ಗಿಸಿ ಕಟ್ಗಿಸಿ ಮುಟ್ಗಿಸೆ (ರಾಮಾಶ್ವ. ೧೩೯-೦೪). ೩. ದಮನ ಮಾಡು ; ಹತ್ತಿಕ್ಕು ; ಶಮನಗೊಳಿಸು : ತನುಗುಣರಾಜಿಯಂ ಬಿಡದೆ ತಟ್ಗಿಸಿ ಪೆರ್ಚಿಸಿ ಸದ್ವಿವೇಕಮಂ ಘನಮೆನೆ ಪೂರ್ಣಸೌಖ್ಯದಿರವಂ ಪಡೆವಂತೆ . . . ಧರಣೀಶನೊಪ್ಪಿದಂ (ಉದ್ಭಟ. ೧೧-೨೦). **ತಗಿಸು :** ೧. ಈ ಸಮರವನ್ನು ಮುಗಿಸು ಸೊಕ್ಕಿದವರನು ತಗಿಸು (ಗೀವಿಂ. ೨೦-೧೨). **ತಗ್ಗಿಸು :** ೧. ಕವಿತಪ್ಪ ತುರಗದುರವಣೆಯನಂದೀಕ್ಷಿಸುತೆ . . . ತಿರುಗಿ ಭಟಲನೆ ಹೊಡೆದು ತಗ್ಗಿಸುತೆ ನುಗ್ಗಿಸುತೆ (ಇಹರ. ದೇ. ೪೨-೧೮) ; ಚರ್ಮರತ್ನದ ಬಲಮಂ ತಗ್ಗಿಸುವೆನೊಂದಿರುಳ್ ನಿದ್ರೆಯ ಹಂಬಲನೊಲ್ಲದಿರ್ದೊಡೆನುತಗ್ಗಲಿಸಿ ದುರುಕ್ತಿಯನುಸಿರ್ದಂ (ದಶಕು. ೮-೧೮೨) ; ಕೆರಳಿದನು ಕಲಿಭೀಷ್ಮನರ್ಜುನನುರವಣೆಯ ಗೆಲುವರೆ ಮುರಾರಿಯ ಭರವಸವ ತಗ್ಗಿಸಿದಡಲ್ಲದೆ ಕಾದಲರಿದೆನುತ (ಕುವ್ಯಾಭೀ.೬-೨೩); ಮುರಿದೇಳ್ವ ಕೆಂದೂಳ್ಗಳಾಗ ತರಣಿ ಮಂಡಲವ ಮುಂಬಲಿದು ಮುಂಕೊಳುತಂದು ಕಿರಣದೇಳಿಗೆಯ ತಗ್ಗಿಸಿತು (ಕಂನವಿ. ೧೬-೨೮) ; ಕ್ಷಣಕಾಲ ತಲೆ ತಗ್ಗಿಸಿಕೊಂಡೇ ಇದ್ದನು (ಚಂಗಾಳ್ಯ. ೬೮). ೩. ತತ್ಕ್ಷಣದೊಳ್ ಮಸಗಿದ ಶೂಲೆಯನವ ತಗ್ಗಿಸುಗುಂ ಮಟ್ಗಿಸುವ ತೆಱದಿ ನುದಕಂ ಶಿಖಿಯಂ (ಲೋಕೋಪ. ೯-೮); ರೂಪಿನಲಿ ಸೊಬಗಿನಲಿ ಶೌರ್ಯಾಟೋಪದಲಿ ಕುಂದಿಲ್ಲ ಮನ್ಮಥತಾಪವನು ತಗ್ಗಿಸಲು ತಕ್ಕವನಹನು (ತೊರರಾ. ೩-೪-೧೬) ; ಇನ್ನು ಮೇಲೆ ರೈತರಿಗೆ ಸರಾಗ ಮಾಡಿಕೊಟ್ಟರೆ ಅರಮನೆಯ ಕೆಲಸ ಕೆಟ್ಟು ಹೋಗುವದೆಂದು ಪರ್ಯಾಲೋಚನೆ ಮಾಡಿ ರೈತರನ್ನು ತಗ್ಗಿಸುವ ನಿಮಿತ್ಯವಾಗಿಯೂ (ಜಾಮವಂ. ೦೨೨). ೪. ಕಡಮೆ ಮಾಡು; ಕುಂದಿಸು: ತರತರದೆ ಪಿಂಭಾತಪತ್ರಂ ಪಿರಿದು ತಮಮಂ ಮಾಡೆ ಶಸ್ತ್ರೋತ್ಕರ ಕಳಿತ ತೀವ್ರಾಂಶು ತಗ್ಗಿಸೆ ರವಿನಿವಹದಂತೆ . . . ತೋಱತ್ತು ಚತುರಂಗಂ (ಕುಮುರಾ. ೩-೨೮). **ತರ್ಗಿಸು :** ೩. ಸಿಡಿಲಂ ಜೇಱೇಳೆ ಹೊಯ್ವಂ ಬಿಡೆ ಬೆದರಿಸುವಂ ಸಿಂಗಮುಂ ಕಾಳನಂ ಕಣ್ಗಿಡೆ ಬಾಹಾಗರ್ವದಿಂ ತಗ್ರ್ಗಿಸುವಂ . . . ಎಕ್ಕಲ ಕ್ಷೋಣಿಪಾಳಂ (ಎಕ. VIII, ಸೊರಬ. ೧೩೮-೩೧: 1145); ಆ ಕೊರ್ಬಂ ತರ್ಗಿಸುವೆನವರ್ಗಳಂ ಕರೆಯೆಂದಂ (ದಶಕು.೧೦-೧೨೨). **ತಳ್ಗಿಸು :** ೩. ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀಕರ ಫಣಿಲೋಕಮಂ ಹಿಳಿದು ನಾಕಮನೋಡಿಸಿ ನಿಂದ ವೀರರಂ ಧುರದೊಳೆ ತತ್ತಱಂದಱದು ತಳ್ಗಿಸುತಪ್ರತಿಮಪ್ರತಾಪಭಂಗುರಭುವನತ್ರಯಂ . . . ಜಿತಾರಿ ತಾರಕಂ (ಗಿರಿಜೆ. ೬-೫). **ಸಗ್ಗಿಸು :** ೫. ಸೋಲಿಸು ; ಮಣಿಯುವಂತೆ ಮಾಡು: ರಾಜಕುಮಾರನನ್ನು ಮೂರು ದಿನದಲ್ಲಿ ಹಾಕಿದ್ದನ್ನು ತಿನ್ನುವ ಸ್ಥಿತಿಗೆ ಸಗ್ಗಿಸಿದನು (ಸಣ್ಣಕ. VIII, ೮೬).

**ತಟ್ಗಿಸಿಕೊಳ್** = ಹತ್ತಿಕ್ಕಿಕೊಳ್ಳು ; ಉಪಶಮನ ಮಾಡಿಕೊಳ್ಳು : ಅಂತಸ್ತಾಪದಿಂದಾದ ಕೋಪಮಂ ತಟ್ಗಿಸಿಕೊಂಡು (ದಶಕು. ೪-೧೬ ವ).

[ ತಟ್ಗು + – ಇಸು$_3$ ]

**ತಟ್ಗು, ತಗ್ಗು$_1$, ತರ್ಗು$_1$, ತಳ್ಗು, ತೆಗ್ಗು$_1$, ಸಗ್ಗು** (ಕ್ರಿ). ೧. ಕುಗ್ಗು ; ಕುಸಿ ; ಕ್ಷೀಣವಾಗು : "ತಟ್ಗು – ಕ್ಷೀಣತ್ವೇ" (ಶಮಧಾ): "ತಟ್ಗುಬಟ್ಗಿನೆ ಕುಸಿವುದು" (ಸಂಜೀವ. ೬) ; ಉಡಿದಿರ್ದಚ್ಚುಱದೀಸು ತಟ್ಗಿದ ನೊಗಂ ಜೇಱಟ್ಟ ಚಕ್ರಂ ಸಿಡಿಲ್ ಪೊಡೆದಂತೊರ್ಮೆಯೆ ಸೂಸಿ ಪಾಱದ ಮಡಂ ನುಗ್ಗಾದ ಕೀಲ್ . . . ಕಡಲಂ ಮುಟ್ಟೆ ತೆರಳ್ವ ನೆತ್ತರ ಪೊನಲ್ ಕಣ್ಗೊಂಡುದುಗ್ರಾಜಿಯೊಳ್ (ಪಂಪಭಾ. ೧೦-೯೧) : ಅಂತಾ ಸಂಗ್ರಾಮದೊಳ್ ತನ್ನನುಜತನುಜಜಾಮಾತೃವರ್ಗಂ

**ತಾಮ್ರಫಲಕ** (ನಾ). = ತಾಮ್ರಪಟ : ಇವುಗಳಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ದೊರೆತವೆಂದರೆ ತಾಮ್ರಫಲಕಗಳು (ಭಾರಪ. ೧೬).
[ ತಾಮ್ರ + ಫಲಕ ]

**ತಾಮ್ರಭಸ್ಮ** (ನಾ). ತಾಮ್ರದೊಡನೆ ಇತರ ಕೆಲವು ದ್ರವ್ಯಗಳನ್ನು ಸೇರಿಸಿ ತಯಾರಿಸಿದ ಬೂದಿ ; ತಾಮ್ರದ ಭಸ್ಮ : ಹಿಪ್ಪಲಿ ೧ ತೂಕ, ತಾಮ್ರಭಸ್ಮ ಗ ೨ ತೂಕ ಸಹ ಪ್ರತಿಪಾಕವಿಕ್ಕಿ ಸೇವಿಸೆ ಅಸ್ಥಿಗತಜ್ವರ ಮಂದಾಗ್ನಿ ಸಹ ಕೆಡುಗುಂ (ಸಳವ್ಯ. ೦೦೮). [ ತಾಮ್ರ + ಭಸ್ಮ ]

**ತಾಮ್ರಮಯ** (ಗು). ತಾಮ್ರದಿಂದ ಮಾಡಿದ; ತಾಮ್ರದಿಂದ ತುಂಬಿದ: ಅಂತು ತಾಮ್ರಮಯ ಗುಹ್ಯಕ ಪ್ರತಿರೂಪಂ ಕಿಚ್ಚಿಂಗೆ ತೋಱಿದರಗು ಕರಗುವಂತೆ ಕರಗಿ ಪೊನಲ್ವರಿಯೆ (ಶಾಂತಿಪು. ೬-೨೯ ವ). [ ಸಂ. ]

**ತಾಮ್ರಮರ್ದಕ** (ನಾ). = ತಾಮ್ರಕಾರ : ಗಂದಿಗರು . . . ತಾಮ್ರಮರ್ದಕರು ಮಲ್ಲರು ಜಾಲಗಾರರು ಮೊದಲಾದ ಜಾತಿಯವರೂ ಅಲ್ಲಿ ವಾಸಿಸುತ್ತಿದ್ದರು (ಕರ್ಣಾಜ. ೧೩೭). [ ತಾಮ್ರ + ಮರ್ದಕ ]

**ತಾಮ್ರಮರ್ದನ** (ನಾ). = ತಾಮ್ರಕಾರ : ವಸುವಿಭೇದಕ ತಾಮ್ರಮರ್ದನ ಮಸಗ ಮುಟ್ಟಿಗ . . . ಹರದರ ಕೇರಿ (ತೊರರಾ. ೩-೮-೩೨).
[ ತಾಮ್ರ + ಮರ್ದನ ]

**ತಾಮ್ರಮುಖ**(ನಾ). ೧. ಕೆಂಪುಮೂತಿಯುಳ್ಳದು; ಗಿಣಿ; ಶುಕ: ಶೀತೋಪಚಾರಮಂ ಕರಮಾ ತಾಮ್ರಮುಖಂಗೆ ಮಾಡುತುಂ ರಂಜಿಸಿದಂ (ಉದ್ಭಟ. ೩-೧). ೨. ಕೆಂಪು ಮುಖದವನು; ಪರಂಗಿಯವನು: ತಾಮ್ರಮುಖರ್ ಕಟ್ಟಿಕೊಂಡ ಇಕ್ಕೇರಿ ಸೊರಬ . . . ಮುಂತಾದ ಕೋಂಟೆಗಳಂ ಸಾಧಿಸಿ (ಕೆಳನೃ. ೬-೦೩). 'ತಾಮ್ರತುಂಡ' ಪರಾ. [ ತಾಮ್ರ + ಮುಖ ]

**ತಾಮ್ರಮುಖಿ** (ನಾ). ಕೆಂಬಣ್ಣದ ಮುಖವುಳ್ಳವನು; ಪರಂಗಿಯವನು: ಈ ತಾಮ್ರಮುಖಿಗಳ ಅಧಿಕಾರಿಗಳ ದುರ್ಮಾರ್ಗತನಗಳು ಅವರಲ್ಲಿಯೇ ಹುಟ್ಟಿ . . . ಅವರಲ್ಲಿಯೇ ಅಡಗಿ ಹೋಗುತ್ತಿದ್ದರೆ (ಅದೂಟ. ೬೩) : ಸುರಪುರ ರಾಜ್ಯವು ಬ್ರಿಟಿಷರ ಪಾಲಾಗಿ ತಾಮ್ರಮುಖಿಯೋರ್ವನ ವಿಚಾರಣೆಗೊಳಪಟ್ಟಿತು (ಕಥವಿ. II, ೩೪೦). [ ಸಂ. ತಾಮ್ರಮುಖಿನ್ ]

**ತಾಮ್ರಲೋಚನ** (ನಾ). ೧. ಕೆಂಪಾದ ಕಣ್ಣು. ೨. ಕಣ್ಣು ಕೆಂಪಾದವನು; ಕೋಪಗೊಂಡವನು : ಕೌರವ ಕುಳಾಂತಕಂ ತರಳತಾಮ್ರಲೋಚನನಾದಂ (ಗದಾಯು. ೮-೩) ; ದೋಃಕಂಡೂಯನಮಂ ಕಟಲ್ಚಲೆಡೆಯಾಯ್ತೆನುತ್ತುಮುತ್ತರಳತಾಮ್ರಲೋಚನನಾದಂ (ಪಂಪಾಮಾ. ೦೩-೩).
[ ತಾಮ್ರ + ಲೋಚನ ]

**ತಾಮ್ರವಲ್ಲಿ** (ನಾ). ನೆಲನೆಲ್ಲಿ; ತಮಾಲಿಕೆ: "ತಮಾಲೀ, ಕಿಱುನೆಲ್ಲಿ, ತಾಮ್ರ(ಂಭ್ರ)ವಲ್ಲಿ" (ಒಷಧಿ. ೬೩). [ ಸಂ. ತಾಮ್ರವಲ್ಲೀ ]

**ತಾಮ್ರಶಾಸನ** (ನಾ). ತಾಮ್ರಪಟಗಳ ಮೇಲೆ ಕೊರೆದಿರುವ ಶಾಸನ : ಶ್ರೀವೀರಣ ಮಹಾಚಾರ್ಯ್ಯೋ ವ್ಯಲಿಖತ್ತಾಮ್ರಶಾಸನಂ (ಎಕ. XII, ಚಿಕ್ಕನಾ. ೩೯-೨೭೬; 1639); ತಾಮ್ರಶಾಸನಗಳೆಲ್ಲ ಸಾಮಾನ್ಯವಾಗಿ ದಾನ ಶಾಸನಗಳು (ಕಶಾಅ. ೪೧). 'ಶಿಲಾಶಾಸನ' ಪರಾ. [ತಾಮ್ರ + ಶಾಸನ]

**ತಾಮ್ರಶಿಖಿ** (ನಾ). ಒಂದು ಬಗೆಯ ಸಸ್ಯ : (ಮ್ಯಡಿಗಿ. ೩-೪೦). [ ? ]

**ತಾಮ್ರಶಿರ** (ನಾ). ಒಂದು ಬಗೆಯ ಹಾವು : ಆ ದೇಶದಲ್ಲಿ ತಾಮ್ರಶಿರ (Copper-head) ಎಂಬ ಇನ್ನೊಂದು ವಿಷವಿರುವ ಹಾವಿದೆ (ಶಾಂಅ್ಯ. I, ೧೦೮).
[ ತಾಮ್ರ + ಶಿರ ]

**ತಾಮ್ರಾಕ್ಷ** (ನಾ). ೧. ಕೆಂಪು ಕಣ್ಣುಳ್ಳದು ; ಕೋಗಿಲೆ. ೨. ಕಾಗೆ. ೩. ಕೆಂಪು ಕಣ್ಣುಳ್ಳವನು. [ ಸಂ. (ತಾಮ್ರ + ಅಕ್ಷಿ + – ) ]

**ತಾಮ್ರಾಧರೆ** (ನಾ). ಕೆಂಪು ಬಣ್ಣದ ತುಟಿಯುಳ್ಳವಳು ; ಸುಂದರಿ : ವಿರಾಜಿಸುತಿರ್ಪ ತಾಮ್ರಾಧರೆಯರ ಸೀಮಂತಮಣಿ ಸೀತಾರಮಣಿ (ಜೈಮಿಥಾ. ೦೮ ಸೂಚನೆ). [ಸಂ. ತಾಮ್ರಾಧರಾ (ತಾಮ್ರ + ಅಧರ + –)]

**ತಾಮ್ರಾಸ್ಯ** (ನಾ). = ತಾಮ್ರತುಂಡ ೨ : ನವಕಂಜಚ್ಛದ ತಳ್ಪದೊಳ್ಪಡದೆ ತತ್ತಾಮ್ರಾಸ್ಯನಂ . . . ಪಟ್ಟಿರಿಸಿ (ಉದ್ಭಟ. ೩-೨).
[ ತಾಮ್ರ + ಆಸ್ಯ ]

**ತಾಯ್, ತಾಯಿ** (ನಾ). ೧. ಹಡೆದವಳು; ಮಾತೆ ; ಜನನಿ: "ಜನನಿ ಸವಿತ್ರಿ ಮಾತೃ ಸುಮ ತಾಯ್" (ವಸ್ತುಕೋ. ೩೪-೧೬) ; ತನ್ನೆಯ ತಾಯ್ವಿರಾ ಸನ್ಮಾನಮ(ಂ)ನುಳಿದು ಬಿಸುಟೋಂ ಮಱುವಾರ್ತೆಗೊಳ್ಳ[ನ್] (ಸೌಇಇ. XI-1, ೧೧-೩ ; 866) ; ವೈರಾಗ್ಯಪರಾಯಣನಾಗಿ ತಾಯುಂ ತಂದೆಯುಮಂ ನಂಟರುಮಂ ಬಿಡಿಸಿ (ವಡ್ಡಾರಾ. ೬೨-೭) ; ಪಡೆದರ್ ತಾಯುಂ ತಂದೆಯುಮೊಡಲಂ ಪ್ರಾಣಮುಮಂ (ಪಂಪಭಾ. ೯-೮೧) ; ಪರಸ್ತ್ರೀಯರಂ ತಾಯಂ ಕಾಣ್ಬಂತೆ ಕಾಣ್ಬುದು (ಧರ್ಮಾಮೃ. ೬-೦೪೩) ; ನೆಲದಲಿ ಮೂಡಿದ ಸ್ವಯಂಭುಲಿಂಗಕ್ಕೆ ನೆಲಂ ತಾಯಾಗಲಱಿಯದೆಂಬಂತೆ (ಬಸರ. ೨-೩) ; ಹೆತ್ತ ತಾಯಂ ಮಾಱಿ ತೊತ್ತ ಕೊಂಬರೆ (ಹಡಕಾ. ೮-೭೬) ; ಸಂಹರಿಸು ದೈತ್ಯನನೆಂದು ತಾಯ್ ಹರಸಿದಳು ನಂದನನ (ಕುವ್ಯಾಅ. ೦೦-೨೬) ; ಅಮಲಸುಮತಿಯುಂ ತಾಯೆನಗೆ ತಾಯೆ (ಜೈಮಿಥಾ. ೦-೪) ; ತಾವ್ ಮೊದಲು ಬದುಕಿ ತಾಯ್ ಮೊದಲು ಬದುಕಿ (ಹೊಂಗಳು. ೧೮-೭); ೨. ಸ್ತ್ರೀಯರನ್ನು ಗೌರವದಿಂದ ಸಂಬೋಧಿಸುವ ಒಂದು ಪದ : ಉಪಾಯವಾವುದೋ ಹೇಳಕಟ ತಾಯೆ (ಬಸಪು. ೪೩-೯); ನೀ ಮೈದುನಂಗೆ ಪೇಳ್ದನ್ನ ಬಿಡಿಸೌ ತಾಯೆ (ತುರಂಗ. ೨೪-೨೪); ಯಾರು ನಿಂದವರಲ್ಲಿ ತಾಯೆ (ಗಠಿ. ೩೪-೦). ೩. ಹೆಣ್ಣುಮಕ್ಕಳನ್ನು ವಾತ್ಸಲ್ಯದಿಂದ ಸಂಬೋಧಿಸುವ ಒಂದು ಪದ : ಮನೆಯಿಂದಗಲದಿರು ತರುವಲಿಗಳೊಡನಾಡದಿರು ತಾಯೆ (ಬಸಪು. ೦೪-೨). ತಾಯಿ: ೧. "ಜನಯಿತ್ರೀ, ಪ್ರಸೂಃ, ಮಾತಾ, ಜನನೀ ಈ ೪ ತಾಯಿ" (ನಾಚಿರಾ. ೧೧೮) ; ಶ್ರೀ ಮಹಾದೇವಿರರಸಿ ಪೆರ್ಮ್ಮಾನಡಿಗಳ ಅರಸಿಯರ ತಾಯಿ (ಎಕ. XI, ಚಳ್ಳಕೆ. ೩೩-೩ ; 816) ; ತಂದೆ ನೀನು ತಾಯಿ ನೀನು ಬಂಧು ನೀನು ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯಾ (ಬಸವ. ೪೭೯) : ತಾಯಿಯುಳ್ಳೊಡೆ ದುರುಳಗರಳವನೇಕೆ ಸುತನಂ ಕುಡಿಯಲೀಸುವಳು (ಬಸಪು. ೦೩-೮) ; ತಾಯಿ ಕಱುಗಳ ಬಿಡದವೊಲು ನಿರ್ದಾಯದಲಿ ನಿಜಭಕ್ತಸಂಗದ ಮಾಯೆ ಬಿಡದೈ ನಿನ್ನನು (ಕುವ್ಯಾಅ. ೧೪-೧೪) ; ಸತ್ಯವೇ ನಮ್ಮ ತಾಯಿ ತಂದೆ (ಗೋಹಾಡು. ೬೨): ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ (ಗಾದೆ). ೨. ತಾಯಿಯೆಂದಾನು ನುಡಿದೇನು ಪರಸ್ತ್ರೀಯ (ಸರ್ವಜ್ಞ. ೦೩) ; ಯಾರವ್ವ ನೀ ತಾಯಿ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ? (ಹೊಂಗಳು. ೦೭-೧೩).

**ತಾಯಿಗಂಡ, ತಾಯಿಗ್ಗಂಡ** = ತಾಯಿಗೆ ದ್ರೋಹ ಬಗೆಯುವವನು ; ಮಾತೃದ್ರೋಹಿ ; ಪಾಪಿ : ಶಿವನೀನ್ಹೇಗಾದ್ಯೋ ತಾಯಿಗಂಡ ಹರ ನೀ ಹೇಗಾದ್ಯೋ (ಪುರಂದ. ೧-೧೮೭ ಪಲ್ಲವಿ) : ಅವನೂ ಆಯಿತು; ಅವನಪ್ಪನೂ ಆಯಿತು . . . ತಾಯಿಗಂಡರು (ಸ್ವಪ್ನಹೊ. ೦೨೩) ; ಪಾತಾಳ ಕಂಡರು ಕೆಲ ತಾಯಿಗ್ಗಂಡರು (ನಾದಲೀ. ೪೧-೩); ಆ ತಾಯಿಗ್ಗಂಡ ಗುತ್ತಿ, ನಮ್ಮ ಮನೇ ಮೇಲೆ ಯಾವಾಗಲೂ ಕತ್ತಿ ಕಟ್ಕೋಕೆ ಸಮಯ ಕಾಯ್ತಾ ಇರ್ತಾನಲ್ಲಾ (ಮಲಮ. ೩೩೦). **ತಾಯ್ತವರ್** = ಹುಟ್ಟಿದ ನಾಡು ; ಜನ್ಮಭೂಮಿ : ಏಷಿಯದ ಸಾಮ್ರಾಜ್ಯಕೇಂದ್ರವೆ ಓ ಪರ್ಸ! ಐಶ್ವರ್ಯಭೂಮಿಯೇ, ಪೋರಾಳ ತಾಯ್ತವರೆ (ಪಾರಸಿ. ೦೧-೨೩).
[ ದೇ.॥ ತಮಿ. ತಾಯ್ ; ಮಲ. ತುಳು. ತೆಲು. ತಾಯಿ ]

**ತಾಯುಂದೆ** (ನಾ). ಒಬ್ಬಾತನ ಹೆಸರು (?) : ಆಳುತಿಟ್ಟು ತಿಟಗಲೂರ ತಾಯನ್ದೆಯರ ಪೂರ್ವಜರ (ಮ್ಯಆರಿ. ೧೯೧೯, ೧೨-೩ ; 700). [ ? ]

**ತಾಯುಂದೆಕೆಱೆ** (ನಾ). ಒಂದು ಕೆರೆಯ ಹೆಸರು (?): ಪಡುವಯ್ ಅಲೆ ತಾಯಂದೆಕೆಱೆಯ (ಮ್ಯಆರಿ. ೧೯೧೪, ೧೩-೬೩ ; 806).
[ ತಾಯಂದೆ? + ಕೆಱೆ ]

**ತಾಯಚ್ಚು**, ತಾಯಿಅಚ್ಚು (ನಾ). ಮೊದಲನೆಯ ಅಚ್ಚು; ಮೂಲ ಅಚ್ಚು : ತಾಯಚ್ಚೊಂದನ್ನು ಚೆನ್ನಾಗಿ ತಯಾರು ಮಾಡಿದರೆ ಎಷ್ಟು ಸುಂದರಮೂರ್ತಿಗಳನ್ನಾದರೂ ಅಚ್ಚು ಮಾಡಬಹುದು (ರೂಢಿ). **ತಾಯಿಅಚ್ಚು** : ಎರಡನೆಯ ಅಚ್ಚು ಮೂಲಪ್ರತಿಯಾದ ಮಯಣದ ಅಚ್ಚಿನಂತೆಯೇ ಇರುವುದು ಇದಕ್ಕೆ 'ತಾಯಿ' (Mother) ಅಚ್ಚು ಎನ್ನುತ್ತಾರೆ (ಪಾಂಶ್ರ. III, ೦೪೦೩). [ತಾಯಿ (<ತಾಯ್) + ಅಚ್ಚು$_3$ ]

**ತಾಯತ** 'ತಾಯಿತಿ' ನೋ.

**ತಾಯತಿ** 'ತಾಯಿತಿ' ನೋ.

**ತಾಯಾಳಿಕೆ** (ನಾ). "ಒಂದು ಕುಟುಂಬದಲ್ಲಿ ತಾಯಿಯೇ ಯಜಮಾನಿಕೆ ನಡೆಸುವ ಸಮಾಜ ಪದ್ಧತಿ; ತಾಯಾಳಿಕೆ ; ಮಾತೃಯಜಮಾನ್ಯ" (Matriarchy. ಇಂಕಿನಿ.): ದಕ್ಷಿಣ ಭಾರತದಲ್ಲಿ ತಾಯಾಳಿಕೆ (Matriarchy) ಅನುಷ್ಠಾನದಲ್ಲಿರುವುದು ಎಲ್ಲರಿಗೂ ತಿಳಿದ ವಿಷಯ (ಪ್ರವಾಇ. I, ೯೭ ಅಡಿಟಿ). [ತಾಯ್ + ಆಳಿಕೆ (<ಆಳ್ಕೆ) ]

**ತಾಯಿ** 'ತಾಯ್' ನೋ.

**ತಾಯಿಅಚ್ಚು** 'ತಾಯಚ್ಚು' ನೋ.

**ತಾಯಿಗಂಪು** (ನಾ). ಮೂಲತಃ ಇರುವ ಸುವಾಸನೆ ; ಶ್ರೇಷ್ಠವಾದ ಸುವಾಸನೆ : ಸೀಯನುಣ್ಣುವ ಕಬ್ಬು ಪಣ್ಗಳ ತಾಯಿಗಂಪಿನ್ನ ಮರುಗ ಹುಗಳ ತಳಿದ ತೆಜಿನಾಯ್ತು (ಸಾಳ್ವಭಾ. ೩-೨೨). [ತಾಯಿ (<ತಾಯ್) + ಕಂಪು ]

**ತಾಯಿಗ್ರಾಮ** (ನಾ). ಮುಖ್ಯವಾದ ಹಳ್ಳಿ,–ಗ್ರಾಮ : ಈ ತಾಯಿ ಗ್ರಾಮಗಳಿಗೆ ಸಲುವ ಉಪಗ್ರಾಮಗಳು ಹೊನ್ನಲಗೆರೆಯ ಉಪಗ್ರಾಮ (ಎಕ್. XIV, ಮಂಡ್ಯ. ೦೩೩-೦೯ : 1622). [ತಾಯಿ (<ತಾಯ್) + ಗ್ರಾಮ ]

**ತಾಯಿತ** 'ತಾಯಿತಿ' ನೋ.

**ತಾಯಿತನ** 'ತಾಯ್ತನ' ನೋ.

**ತಾಯಿತಿ**, ತಾತಿ, ತಾಯತ, ತಾಯತಿ, ತಾಯಿತ, ತಾಯಿತು, ತಾಯಿತ್ತು, ತಾಯ್ತು (ನಾ). ೧. ಕೈಗಾಗಲಿ, ಕೊರಳಿಗಾಗಲಿ ಕಟ್ಟಿಕೊಳ್ಳುವ ರಕ್ಷಾಮಂತ್ರವನ್ನು ಒಳಗೊಂಡ ತಾಮ್ರ ಅಥವಾ ಬೆಳ್ಳಿಯ ತೆಳುವಾದ ತಗಡಿನ ಸುರುಳಿ : ಮೈಮೇಲೆ ಧರಿಸಿಕೊಳ್ಳುವ ತಾಯಿತಿ, ಕಾಪು, ರಕ್ಷೆ, ಯಂತ್ರ" (Periapt. ಇಂಕಿನಿ.); ಮಹಾ ತೈಲಂಗಳು ತಾಯಿತಿಗಳು (ಸೌಗಂಧಿ. ೩೯-೩) ; ಚಿನ್ನಗಳನ್ನು ಜನ ತಾಯಿತಿಗಳಾಗಿ ಕಟ್ಟುತ್ತಿದ್ದರು (ಸಾಕಾಪ್ರ. ೦೪೭) ; ಈ ಬರೆಹಗಳು ತಾಯಿತಿಗಳ ಮೇಲಿನ ಲಿಪಿಯನ್ನು ಹೋಲುತ್ತವೆ (ಧಾರಪ. ೦೦). **ತಾತಿ** : ೧. ತಾಮ್ರದ ತಾತ್ಮಂಟು ನನ್ನ ತೋಳಲ್ಲಿ (ಹಳ್ಳಿಪಾ. ೧೨). ೨. ಒಂದು ಬಗೆಯ ಆಭರಣ ; ಪದಕದ ಸರ : ಝುಣಝುಣತ್ಕಾರಮುಂ ಮಾಳ್ಪ ಕಿಂಕಿಣೆಗಳಂ ಘಂಟೆಗಳನೋರಂತೆ ತಾತಿ ಮೊದಲಾದವಂ ಕಟ್ಟಿ (ಹದ್ಮಪು. ೩-೯೩) : ಕಿಂಕಿಣಿಯ ಕಂಕಣದ ತಾತಿಯ ಘಂಟೆಗಳ ಝುಣಝುಣ ನಿನದವೆಸೆಯಲು (ಕುರಾಸಾಂ. ೬-೦೦೦) ; ಥಳಥಳಿಸುವ ಬಾಹುಲಿ ವಜ್ರವೈಡೂರ್ಯದಳೆದಿಹ ಹವ್ಮಾರ ತಾತಿ (ಕಂನವಿ. ೨೩-೩೯) ; ಕಟ್ಟಿದನು ಮಣಿ ತಾತಿಯಂಗುಲಕಟ್ಟ ಮುದ್ರಿಕೆಯು (ಕರಲೀ. ೨೨೯-೨) ; **ತಾಯತ** : ೧. ರೋಗರುಜಿನದ ಕಾರಣ ಹೇಳುವುದು ಮಂತ್ರ ತಾಯತ ಕೊಡುವುದು (ಕರ್ನಾಟ. ೨೩) ; ಒಂದು ತಾಯತ ನಿನ್ನ ಹತ್ತಿರ ಇದೆಯ (ಮಲನಾ. ೯೦). ೨. ಚರಣ ಪೆಂಡೆಯುವಿಟ್ಟು ಮೆರೆವ ತಾಯತವಿಟ್ಟು (ಕರಲೀ. ೦೩೯-೩) ; ಹವಳ ಚಿಂಬಳ ಸರ ಮ್ಯಾಲೆ ಮುತ್ತಿನ ಸರ ತಾಯತ ನಡುವ ನ್ಯಾವಳ (ಲೋಕಗೀ. ೨೯). **ತಾಯತಿ** : ೧. ಯಂತ್ರದ ತಾಯತಿಗಳು ಮಡಗಿ (ಸೌಗಂಧಿ. ೦೬೬-೦೦) ; ಆ ಗುಪ್ತನಿಧಿ ಇರುವ ಸ್ಥಳವನ್ನು ತಿಳಿಸಲು ಒಂದು ನಕ್ಷೆ ಬರೆದು, ಈ ತಾಯತಿಯಲ್ಲಿ ಇರಿಸಿದ್ದೇನೆ (ದಾಜಿಂ ೧ ದ. ೯೦): ಆದುದರಿಂದ ಈ ಮುದ್ರಿಕೆಗಳು 'ತಾಯತಿ' ಅಥವಾ 'ಯಂತ್ರ' (ಆಮ್ಯುಲೆಟ್ಸ್) ಎಂದು ನಿರ್ಧರಿಸಬೇಕಾಗಿದೆ (ಭಾರಪ. ೧೬). **ತಾಯಿತ** : ೧. ಯಂತ್ರ ತಂತ್ರ ಮಂತ್ರ ತಾಯಿತ ಆಯ್ತೊ, ಏನು ಮಾಡಿದರೂ 'ಬೆನ್ನ ಬಿಡುವಳೆ ಮೃತ್ಯು ವ್ಯರ್ಥ ಜೀವಾತ್ಮಾ!' (ಕರಪ. ೬೯೦) ; ಭಸ್ಮ, ಚೀಟು, ತಾಯಿತಗಳನ್ನೂ ಕೂಡ ಮಂತ್ರಿಸಿ ದೋಷಪರಿಹಾರಕ್ಕೆ ಕೊಡಬೇಕು (ರಕ್ತಕೂ. ೦೯) ; 'ಶಲ್ಪಿ'ನ ಮೇಲೆ ಧೂಳಿ ಮುಸುಕಿದ ಬಾಟಲಿಗಳು ಮತ್ತು ಶೂನ್ಯಗರ್ಭ ತಾಯಿತಗಳು (ಕುರಿಹಿಂ. ೧೪೪). ೨. ಸರ ಮತ್ತು ಚಿಂತಾಕ ಸರಿಗೆ ತಾಯಿತ ಮುತ್ತು ಮೆರೆವ ಯೇಕಾವಳಿಯು (ಕ್ರಿಕ್ಕಪಾ. ೧೨). **ತಾಯಿತು** : ೨. ಥಳಥಳಿಸುವ ಕೊರಳೊಳು ತ್ರಿವಳಿ ನ್ಯಾವಳಿ ತಾಯಿತು (ವಿದಾಕ್ಕ. ೬೧-೨). **ತಾಯಿತ್ತು** : ೨. ವೈರಾಗ್ಯವೆಂಬ ಒಪ್ಪುವ ಮೂಗುತಿ ತಾರತಮ್ಯ ಜ್ಞಾನ ತಾಯಿತ್ತು ಮುತ್ತುಸರ ಕರುಣರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು (ಪುರಂದ. ೦-೩೪-೪). **ತಾಯ್ತು** : ೨. ಕೊರಳ ಸರವಣಿ ತಾಯ್ತು ಬೆರಳ ಉಂಗುರ ಹೊನ್ನ ಉಡಿದಾರವಿಟ್ಟು (ಕರಗೀ. ೩೯೦-೪). [←ಹಿಂ. ಮರಾ. ತಾಈತ್ ; ಪಾರ. ಅರ. ತಾವೀಜ್]

**ತಾಯಿತು** 'ತಾಯಿತಿ' ನೋ.

**ತಾಯಿತ್ತು** 'ತಾಯಿತಿ' ನೋ.

**ತಾಯಿನಾಡು** 'ತಾಯ್ನಾಡು' ನೋ.

**ತಾಯಿನುಡಿ** 'ತಾಯ್ನುಡಿ' ನೋ.

**ತಾಯಿಬೇರು** 'ತಾಯ್ವೇರ್' ನೋ.

**ತಾಯಿಭಂಡ** (ನಾ). ಮೂಲಧನ : ದ್ವಾವತಿಯ ಭಂಡಮೆ ತಾಯಿ[ಭ]ಂಡ ಮಾಗೆಯುಂ ಐಸಂಬರಮೆ ಅಮೌಲ್ಯವಸುಗಳಾಗೆಯುಂ ನಡೆದುಂ ನುಡಿದುಂ (ಕಇ. IV, ೩೩-೦೪; 1000?). [ತಾಯಿ (<ತಾಯ್)+ಭಂಡ$_1$ (<ಬಂಡ$_1$)]

**ತಾಯಿಮನೆ** 'ತಾಯ್ಮನೆ' ನೋ.

**ತಾಯಿಮಳಲು** 'ತಾಯ್ಮಣಲ್' ನೋ.

**ತಾಯಿಮಾತು** (ನಾ). ಮಾತೃಭಾಷೆ : ನಿಮ್ಮ ತಾಯಿಮಾತಿನಲ್ಲಿ ನಿಮಗೆ ಅಕ್ಕರೆಯೇ ಇಲ್ಲವಲ್ಲ (ಕಚಸಾ. ೬). [ತಾಯಿ (<ತಾಯ್) + ಮಾತು$_1$ ]

**ತಾಯಿರೆಕ್ಕೆ** (ನಾ). ಗಿಡಮರಗಳ ಮೊದಲ ಟಿಸಿಲು,–ಕವಲು : ತಾಯಿ ರೆಕ್ಕೆ ಕಡಿಯ ಬೇಡ(ರೂಢಿ). [ತಾಯಿ (<ತಾಯ್) + ರೆಕ್ಕೆ (<ಎಱಂಕೆ)]

**ತಾಯಿಲಿ** (ನಾ). ತಾಯಿ ಇಲ್ಲದ ವ್ಯಕ್ತಿ ; ತಬ್ಬಲಿ : " ತಾಯಿಲಿ, ತಬ್ಬಲಿ, ದೇಸಿಗ, ದಿಕ್ಕೇಡಿ " (ಕಂನುಹು. ೮೩) ; ಆವರ್ತಂ [ತಾಂ] ಗಳಬ್ಬಗಿಯಾಗೆ ತಾಯಿಲಿ (ಲೋಕೋಪ. ೦೦-೨೩). [ತಾಯ್ + – ಇಲಿ$_3$ ]

**ತಾಯಿವನೆ** 'ತಾಯ್ವನೆ' ನೋ.

**ತಾಯಿವಳ** 'ತಾಯ್ವಳ್ಳ' ನೋ.

**ತಾಯಿವಳ್ಳ** 'ತಾಯ್ವಳ್ಳ' ನೋ.

**ತಾಯಿವೇರು** 'ತಾಯ್ವೇರ್' ನೋ.

**ತಾಯಿಳೆ** (ನಾ). = ತಾಯ್ನಾಡು : ಐಕ್ಯಮತ್ಯದಿಂ ಬಾಳುವುದೆ ತಾಯಿಳೆಯ ಹೆಬ್ಬಾಳಿಕೆಯ ಮರ್ಮ (ಹಚ್ಚಿರ. ೯೨-೮). [ತಾಯ್ + ಇಳೆ ]

**ತಾಯೀಚಲು** (ನಾ). "(ಜೇನಂಹುಳಂ, ಮೊ. ಗಳಲ್ಲಿ) ಪೂರ್ಣ ವಿಕಾಸ ಹೊಂದಿದ, ಮರಿ ಹಾಕುವ ಹೆಣ್ಣು ; ತಾಯೀಚಲು" (Queen-Bee ಇಂಕಿನಿ.). [ತಾಯ್ + ಈಚಲು$_2$ (<ಈಚಲ್$_2$) ]

**ತಾಯೂರ್** (ನಾ). ಒಂದು ಊರಿನ ಹೆಸರು : ತಾಯೂರ ಪಟೆಕಟಿ ಬಸವಯ್ಯ (ಎಕ್. III, ನಂಜನ. ೯೭-೩ : 898 ?) ; ತಾಯೂರ ಪಡುವಣ ದೆಸೆಯ ಕೊರಕೊರೆಯ ಪಳ್ಳ (ಎಕ್. III, ನಂಜನ. ೦೩೯-೦೨ : 916 ?) ; ಮೂಗೂರ ಸೀಮೆಯ ತಾಯೂರ ಸ್ಥಳದ ತಾಯೂರಗ್ರಾಮ (ಎಕ್. III, ನಂಜನ. ೦೪೦-೧೦ : 1586). [ತಾಯ್ + ಊರ್ ]

**ತಾಯೆಳೆ** (ನಾ). = ತಾಯಿಳೆ : ಬ್ರಹ್ಮಜ್ಞಾನದೆ ಕಾಯೆ ತಾಯೆಳೆಯ ಧರ್ಮಗ್ಲಾನಿಯಿಂ ಹಾನಿಯಿಂ (ಗಿಳವಿಂ. ೫೨-೯). [ ತಾಯ್ + ಎಳೆ$_6$ ]

**ತಾಯ್ಗಂಡಿ** (ನಾ). ಮುಖ್ಯವಾದ ತೂಬು : ನಾಯ್ಮಣಿಗೆಱೆಯ ತಾಯ್ಗಣ್ಡಿ ಮುಕೂಡಲ್ (ಇಳ. XII, ೧೬-೪ ;739) ; ಅನ್ತೆ ಸಯ್ಕನೆ ಪೋವಿ ನಾಯ್ಮಣಿಗೆಱೆಯ ತಾಯ್ಗಂಡಿ (ಎಕ. XII, ಗುಬ್ಬಿ. ೬೧-೯೩; 812). [ ತಾಯ್ + ಕಂಡಿ$_1$ ]

**ತಾಯ್ಗಣ** (ನಾ). ಕಣದ ಮಧ್ಯಭಾಗ ; ಮೇಟಿಯ ಸುತ್ತಣ ಭಾಗ : ತಾಯ್ಗಣದ ತುಂಬ ರಾಶಿಯಿದೆ (ರೂಢಿ). [ ತಾಯ್ + ಕಣ$_1$ (<ಕಳ$_3$) ]

**ತಾಯ್ಗನಿ** (ನಾ). ಜನ್ಮಸ್ಥಳ ; ಆಕರ : ನಿನ್ನ ತಾಯ್ಗನಿ ಎಲ್ಲಿ ? ಅಗೆದ ಗುದ್ದಲಿ ಎಲ್ಲಿ? (ಗಿಳವಿಂ. ೩೦-೬೩). [ ತಾಯ್ + ಗನಿ (<ಕಣಿ$_6$) ]

**ತಾಯ್ಗರು** (ನಾ). ೧. ನೆಲೆ ; ಮೂಲಸ್ಥಾನ ; ತಾಯ್ವನೆ : ನಟ್ಟನೆ ಪುನುರ್ಜಾತಕ್ಷಯ ಶ್ರೀಗೆ ತಾ[ಯ್ಗ] [ಪಾಠಾಂ. ಯು]ರು ರತ್ನತ್ರಿತಯಾವಭಾಸಿ ಬಹು ಬಂಧಚ್ಛೇದಿ ಸಂಸಾರ ಸಂಹರಣಂ (ಸುಕುಮಾ. ೧-೬) ; ಪುರುಷಕಾರದ ತಾಯ್ಗರು ಪೆಂಪಿನಾಗರು ಚಲದ ವಿನಾಯಕಂ (ಕಇ. IV, ೧೦-೩೫; 1121): ಸುರೇಶ್ವರಭವನಕ್ಕೆ ತಾನೆ ಪಡಿಚಂದಮಿದೆಂಬಿನಮಚ್ಚರಕ್ಕೆ ತಾಯ್ಗರು ಕರುಮಾಡಮೊಪ್ಪುವುದಲಂಕೃತ ಸಪ್ತತಳಂ ನಿರಾಕುಳಂ (ಪುಷ್ಪಪು. ೨-೯೨). ೨. ಆಕರ : ಸೊಗಯಿಸುವಚ್ಚ ಬೆಳ್ಪಿಗೆಯ ತಾಯ್ಗಱು [ರು] ಕಾಮನ ಕೀರ್ತಿ (ಲೀಲಾವ. ೭-೫೫) ; ಉತ್ತಮಗುಣ ತಾಯ್ಗರು ಕಡುಚೆಲುವಿನ ಚಿತ್ರರಸಲೆ ಸುಭಗತೆಯ ಪುತ್ಥಳಿ (ಶ್ರೀಪಾಲ. ೨-೭): ವಾದ್ಯರಭಸಂ ಲಯಾಂಬುದದ ಸಿಡಿಲ ನಿನದಕ್ಕೆ ತಾಯ್ಗರು[ಪಾಠಾ. ರ]ವೆನಿಸಿತೆನೆ (ಚೆಲುಪು. ೩೮-೩೦). [ ತಾಯ್ + ಕರು$_3$ ]

**ತಾಯ್ಗರುಳು** (ನಾ). ತಾಯಿಯ ಅಂತಃಕರಣ,–ಮಮತೆ : ಅತ್ತಿಮಬ್ಬೆಯ ತಾಯ್ಗರುಳು ಕುದಿಯಿತು (ದಾನಚಿಂ. ೦೫೬). [ ತಾಯ್ + ಕರುಳು (<ಕರುಳ್) ]

**ತಾಯ್ಗಾಡು** (ನಾ). ರಕ್ಷಣೆಯ ಸ್ಥಾನವಾದ ಕಾಡು; ಮೂಲಸ್ಥಾನವಾದ ಕಾಡು : ಮನಸಿಜನೆಂಬಾನೆಗೆ ತಾಯ್ಗಾಡೆನಿಪ್ಪ ಚೆಲ್ವಂ ತಳೆದುದ್ಯಾನವನದೊಳಗೆ ಪೊಕ್ಕಂ(ಮಲ್ಲಿಪು. ೬-೦) ; ಕುಸುಮೇಷುಗೆ ಬೀಡು ವೃಷದ್ವಿಪಕ್ಕೆ ತಾಯ್ಗಾಡು (ಪುಷ್ಪಪು. ೯-೦೮). [ ತಾಯ್ + ಕಾಡು$_2$ ]

**ತಾಯ್ಗಿರಿ** (ನಾ). ಬೆಟ್ಟಗಳಿಗೆ ತಾಯಿಯಂತೆ ಇರುವುದು ; ದೊಡ್ಡ ಬೆಟ್ಟ ; ಪ್ರಮುಖವಾದ ಪರ್ವತ: ಕುಳನಗಂಗಳ ಕುಲದೈವಮಧಿರಾಜಂ ತಾಯ್ಗಿರಿ ಮೇರು ಮಹೀಧರೇಂದ್ರಂ (ಶಾಂತಿಪು. ೦೦-೬೬). [ ತಾಯ್ + ಗಿರಿ$_1$ ]

**ತಾಯ್ಗುಟಿ** (ನಾ). ಬುಡದ ಸುತ್ತಣ ಪಾತಿ : ಪೊಡೆವೂಗಾವಿನ ನೆವದಿಂ ಕುಡಿವರಿದು ಕೊನರ್ತು ಪರ್ಬುವ ಜಗತೀಲತೆಯ ದಾಂಗುಡಿಯ ತಾಯ್ಗುಟಿಯೆನಿಪ್ಪ ಸುಟಿಪೊರ್ಕುಟಿಂ (ಚಿಕವಂ. ೩೪-೧೪). [ ತಾಯ್ + ಕುಟಿ$_2$ ]

**ತಾಯ್ತಿ** 'ತಾಯಿತಿ' ನೋ.

**ತಾಯ್ತನ, ತಾಯಿತನ** (ನಾ). ತಾಯಿಯಾಗಿರುವಿಕೆ ; ಮಾತೃತ್ವ : ಅವರಿಗೆ ತಾಯ್ತನ ಮತ್ತು ಮಕ್ಕಳ ಪೋಷಣೆ ವಿಚಾರವಾಗಿ ಸೂಕ್ತವಾದ ತಿಳುವಳಿಕೆ ಬೇಕು (ಗೃಹವಿ. ೯೬); ನಿಮ್ಮ ತಾಯ್ತನದ ತಂಪು ನಮ್ಮನ್ನು . . . ಅಲ್ಲಿಯೂ ಕಾಯುತ್ತಿರುತ್ತದೆ (ಸವತಿ. ೧೪೪). **ತಾಯಿತನ**: ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಗೊಲಿದು ಸಲೆ ಮಾಱುವೋದೆನು ನಿನ್ನ ತಾಯಿತನವನೊಲ್ಲೆ ಹೋಗೇ (ಮಹಾದೇ. ಬ. ೪೪-೧೦೨) ; ಕೂಸಿಗೆ ಹಾಲುಹಣ್ಣುಗಳಿಲ್ಲವೆಂದು ಅವಳ ತಾಯಿತನ ವೇದನೆಯನ್ನು ಅನುಭವಿಸಿ (ರಂಗರೋ. ೧೦೧). [ ತಾಯ್ + – ತನ ]

**ತಾಯ್ತೊಟ್ಟಿಲ್** (ನಾ). ಮುಖ್ಯವಾದ ಆಧಾರ,–ಆಶ್ರಯ : ಜಗಕ್ಕೆ ತನ್ನುಂಗುಟವೋ ತಾಯ್ತೊಟ್ಟಿಲಾದ ಗಿರಿಸುತೆಯುಂ . . . ರನ್ನದೊಟ್ಟಿಲೊಳಗಿರಿಸುತ್ತುಂ (ಗಿರಿಜಾ. ೩-೬೬). [ ತಾಯ್ + ತೊಟ್ಟಿಲ್$_1$ ]

**ತಾಯ್ನಾಡು, ತಾಯಿನಾಡು** (ನಾ). ಹುಟ್ಟಿದ ದೇಶ ; ಮಾತೃಭೂಮಿ: ಒಸಗೆಯ ತನ್ನಿರಿ ತಾಯ್ನಾಡಿರವಿಗೆ (ಕನ್ನಡಾ. ೦೧೪-೧೭). **ತಾಯಿನಾಡು**: ತಾಯಿನಾಡಿಗೆ ಜಯವೆನ್ನಿ (ರೂಢಿ). [ ತಾಯ್ + ನಾಡು ]

**ತಾಯ್ನುಡಿ, ತಾಯಿನುಡಿ** (ನಾ). ತಾಯಿಯಿಂದ ಕಲಿಯುವ ನುಡಿ ; ಮಾತೃಭಾಷೆ : ತಾಯ್ನುಡಿಗೆ ದುಡಿದು ಮಡಿ ಇಹಪರಗಳೇಳ್ಗೆ (ಕಹಪು. ೬-೧೪೩): ಐಕ್ಯದ ನಿಜಬೀಜ ತಾಯ್ನುಡಿಯೊಲವಿನೊಳಿಲ್ಲೇನು (ಕನ್ನಡಾ. ೯೪). **ತಾಯಿನುಡಿ**: ಮೊಲೆವಾಲಿನೊಡಗೂಡಿ ಬಂದ ನುಡಿ ತಾಯಿನುಡಿ (ಕೋಗಿಲೆ. ೪೦-೯). [ ತಾಯ್ + ನುಡಿ$_2$ ]

**ತಾಯ್ನೆಲ** (ನಾ). ಹುಟ್ಟಿದ ಭೂಮಿ ; ಜನ್ಮಭೂಮಿ : ಸುಗಿವ ಮಳೆಹಳೆಯುಗೆಯೊಳಡಗಿರ್ಪ ಬೇರ್ಗಳಿಂ ಚಿಗುರಿಸಿತು ತಾಯ್ನೆಲದ ಹಸುರುಡುಗೆಯೊಡಲುಂ (ಕಾಲೂರ. ೪೫-೬೩). [ ತಾಯ್ + ನೆಲ$_1$ ]

**ತಾಯ್ಪೇರು** 'ತಾಯ್ವೇರ್' ನೋ.

**ತಾಯ್ಮಣಲ್, ತಾಯಿಮಳಲು, ತಾಯ್ಮಳಲ್, ತಾಯ್ಮಳಲು, ತಾಯ್ಮಟಲ್** (ನಾ). (ಜಲಾಶಯಗಳ) ತಳದಲ್ಲಿರುವ ಮರಳು ; ಅಡಿಮಳಲು : ಇಂಗಡಲ ತಾಯ್ಮಣಲ್ ಬೆಳ್ದಿಂಗಳ ಬಯಲಂತೆ ವಿಶದಮಾಗೆ (ವರ್ಧಪು. ೦೪-೩೩). **ತಾಯಿಮಳಲು**: ತಾಯಿಮಳಲನು ತಱುಬಿದಬುಧಿಯ ದಾಯಿಗರು ತಾವಿವರೆನಲು (ಕುಮಾ.ಕ. ೨-೧೩) ; ಪಡೆಯ ನಡೆಸುವ ತಾಯಿಮಳಲೊಳಗೆ (ಶಾಕಿ ರಾ. ೧೫-೪೨). **ತಾಯ್ಮಳಲ್**: ತಾಯ್ಮಳಲ್ವರೆಗಂ ತುಳುಂಕುವೆಂ (ಮಹಾನೇ. ೭-೪೧) ; ಬಲವಾರಾಸಿಯಲಿ ತಾಯ್ಮಳಲ ಮೊಗೆದವು ಭೀಷ್ಮನಂಬುಗಳು (ಕುಮಾ.ಭೀ. ೯-೦೦) ; ತಾಯ್ಮಳಲು ಬ್ಬುಕಿದುರ್ದು ಶರಧಿಯಲಿ (ಕೊರರಾ. ೪-೩-೯) ; ಅಬ್ಧಿಯಂತಿಂತಾಗಿ ತಾಯ್ಮಳಲ್ಗಡಿಗಾಣಲು (ಚೆಲುಪು.೨೧-೫). **ತಾಯ್ಮಳಲು**: ದೆಸೆದೆಸೆಗೆ ಶರನಿಧಿಯ ತಾಯ್ಮಳಲು ಸೂಸಿತು (ಸಾಕ್ಷಿಭಾ. ೨೫-೮). 'ತಾಯ್ಮಳಲುಗಾಣಿಸು' ಪರಾ. △ ತಾಯ್ಮಟಲ್: 'ತಾಯ್ಮಟಲ್ದೆಱೆ', 'ತಾಯ್ಮಟಲ್ತೋಱು' ಪರಾ. [ ತಾಯ್ + ಮಣಲ್ ]

**ತಾಯ್ಮನೆ** 'ತಾಯ್ವನೆ' ನೋ.

**ತಾಯ್ಮಳಲ್** 'ತಾಯ್ಮಣಲ್' ನೋ.

**ತಾಯ್ಮಳಲು** 'ತಾಯ್ಮಣಲ್' ನೋ.

**ತಾಯ್ಮಳಲುಗಾಣಿಸು** (ಕ್ರಿ). ೧. (ನದಿ ಮೊದಲಾದವುಗಳಲ್ಲಿ) ಅಡಿಯಲ್ಲಿರುವ ಮರಳು ಕಾಣುವಂತೆ ಮಾಡು ; ತಳದ ಮರಳನ್ನು ಕಾಣಿಸಂ : ಚವುಡಯ್ಯಗಂಜಿ ಜಲಂ ಮುರಿದು ವಿತಳಕ್ಕಿಳಿಯಿತೆನೆ ಬಿಮ್ಮಿದು ನೆಱೆ ಸರಿಯಲದು ತಾಯ್ಮಳಲುಗಾಣಿಸಲು (ಬಸಪು. ೩೫-೯೩). ೨. (ನದಿ ಮೊದಲಾದವುಗಳಲ್ಲಿ) ತಳ ಕಾಣು ; ಬತ್ತಿಹೋಗು : ಬಳಿಕ ಮೂಱು ದಿನಕ್ಕೆ ತೊಱೆ ತಾಯ್ಮಳಲುಗಾಣಿಸಲು (ಬಸಪು. ೫೦-೬೭) [ ತಾಯ್ಮಳಲು (<ತಾಯ್ಮಣಲ್) + ಕಾಣಿಸು ]

△ **ತಾಯ್ಮಟಲ್** 'ತಾಯ್ಮಣಲ್' ನೋ.

**ತಾಯ್ಮಟಲ್ದೆಱೆ** (ಕ್ರಿ). = ತಾಯ್ಮಳಲುಗಾಣಿಸಂ : ವಾರಾಸಿಯಂ ತಾಯ್ಮಟಲ್ದೆಱೆವಂತೀಂಟುವೆನೋ (ಜಗವಿ. ೭-೩೫). [ ತಾಯ್ಮಟಲ್ (<ತಾಯ್ಮಣಲ್) + ತೆಱೆ$_1$ ]

**ತಾಯ್ಮಟಲ್ತೋಱು** (ಕ್ರಿ). = ತಾಯ್ಮಳಲುಗಾಣಿಸು : ಕಾಲಾಳ್ಗಳಬ್ಬರಕ್ಕೆ ತಾಯ್ಮಟಲ್ತೋಱೆ ಮೇರೆದಪ್ಪಿದ ಮುನ್ನೀರೊಳ್ (ಕಬ್ಬಿಗಕಾ. ೨೮೮). [ ತಾಯ್ಮಟಲ್ (<ತಾಯ್ಮಣಲ್) + ತೋಱು ]

**ತಾಯ್ಮನೆ, ತಾಯಿಮಂನೆ, ತಾಯಿಂವನೆ, ತಾಯ್ಮನೆ** (ನಾ). ೧. ತಾಯಿಯ ಮಂನೆ; ತವರುಮನೆ: ಕಳುಹುವುದು ಸೌಭದ್ರೆಯನು ನಿಜಲಲನೆಯರ ನ ವ ರ ವ ರ ತಾಯ್ಮನೆಗಳಿಗೆ (ಕುವ್ಯಾಅ. ೨-೩೨): ಅಂಗಭವನೇ ತನ್ನ ತಾಯ್ಮನೆಗೆ ಕೇಡನೆಣಿಸುವನೆರ್ದೆಯೊಳು (ಜಲಪು. ೪೫-೦೪). ೨. ಆಶ್ರಯ; ನೆಲೆ; ಮೂಲಸ್ಥಾನ: "ಇಕ್ಕೆ, ಇಂಬು, ಗೊತ್ತು, ನೆಲೆ, ತಾಣಂ, ತಾಯ್ಮನೆ . . . ಈ ೧೫ ಆಶ್ರಯಕ್ಕೆ ಪೆಸರ್" (ಕಶಸಾ. ೦೫-೨೯೦); ವಿನಯದ ನೆಲೆ ಧರ್ಮದ ತಾಯ್ಮನೆ ಸತ್ಯದ ಜನ್ಮಭೂಮಿ (ಸೌಇಇ. IX-1, ೦೬೦-೦೯; 1091): ಸಿರಿಯ ತಾಯ್ಮನೆ ರಾಮನ ಪೇರುರು (ಪಂರಾಮಾ. ೩-೧೫೪); ಬಗೆದಂತೆ ಮಾಳ್ಪ ಮೈಮೆಗೆ ಜಗದೊಳ್ ಜನಭಕ್ತಿ ತಾನೆ ತಾಯ್ಮನೆಯಲ್ತೇ (ವರ್ಧಪು. ೦೨-೦೭): ತ್ಯಾಗಗುಣಕ್ಕೆ ತಾಯ್ಮನೆ (ಎಇ. XXI, ೦೩-೩೨; 1260). **ತಾಯಿಮನೆ:** ೧. ನಂಬಿ ನೆನೆವರ ತಾಯಿಮನೆಯನು ನೆನೆದು ಸುಖಿಸುತ್ತ (ನಿಭಾಗ. ೪-೧೦-೧೫): ತಾಯಿಮನೆಯಿಂದ ಅತ್ತೆಯ ಮನೆಗೆ ಕಳುಹಿಸಲ್ಪಟ್ಟ ಹೆಣ್ಣಿನಂತೆ (ಸೌಗಂಧಿ. ೫೬೭-೭): ಮಲೆಯ ನಾಡೆನಗೆ ತಾಯಿಮನೆ (ಶ್ರೀರಾಮಾ. ೧೨೫-೮). ೨. ಸಾಯಕವ ಹಿಡಿ ಸಾಕು ಸೋಲದ ತಾಯಿಮನೆ ನಿನಗಿದಿರಲಿದೆ (ಕುವ್ಯಾಕ. ೪-೨). **ತಾಯಿವನೆ:** ೨. ಘೋರ ತರ ವನವಿದ್ದುದೊಂದತಿ ಕ್ರೂರಮೃಗಗಳ ತಾಯಿವನೆ (ಸಾಳ್ವಭಾ. ೧೬-೩). **ತಾಯ್ಮನೆ:** ೧. ತುಳುವರ ತಾಯ್ಮನೆಯುಳಿದರ ಕಾಯ್ಮನೆ (೧೪ವಿಂ. ೪೬-೨). ೨. ಅದು ವೇದಂಗಳ ತಾಯ್ಮನೆಯದು ನಾನಾ ತರ್ಕದಿರ್ಕೆದಾಣಂ (ಎಇ. XVIII, ೦೯೧-೨೦; 1104): ಪುಸಿಯ ತಾಯ್ಮನೆ ಪಾಪದಾಗರಂ (ಧರ್ಮಾಮೃ. ೧೨-೭೭): ಅದು ಸತ್ಯದ ತಾಯ್ಮನೆ ಮಿಕ್ಕ ಹೆಮ್ಮೆಗಾಸ್ಪದ ಮೆನಿಸಿತ್ತು (ಕಇ. IV, ೧೦-೦೬; 1121); ಲೀಲೆಯ ತಾಣ ತಾಯ್ಮನೆ ಖೇಳಮೇಳವದ ಮದದ ಮಡು (ಕುವ್ಯಾಅ. ೦೨-೪).

[ ತಾಯ್+ಮನೆ ]

**ತಾಯ್ವಳ್ಳ, ತಾಯಿವಳ, ತಾಯಿವಳ್ಳ** (ನಾ). ಕೆರೆಕಟ್ಟೆಗಳಿಗೆ ನೀರನ್ನು ಒದಗಿಸುವ ಹಳ್ಳ; ಮುಖ್ಯವಾದಹಳ್ಳ: ಅಲ್ಲಿಂ ಬಡಗ ದೇವಣನ ಕೆಱೆಯ ತಾಯ್ವಳ್ಳ (ಎಕ. II, ೩೨೭-೭೮; 1181). **ತಾಯಿವಳ:** ವಾಳಿಯ ಬೆಟ್ಟದಿಂ ಬಂದ ತಾಯಿವಳದಿಂ ತೆಂಕಲು (ಎಕ. XIV, ಎಳಂದೂ. ೦೮೭-೧೨; 1530). **ತಾಯಿವಳ್ಳ:** ಅಲ್ಲಿಂದ ಹಡುವಲು ಸವಣನ ಕೆಱೆಯ ತಾಯಿವಳ್ಳಂ ಮೇರೆ (ಎಕ. VII, ಶಿವಮೊ. ೫೬-೭೮; 1116): ನಾರಸಿಹ್ಮಪುರದ ಹೊಲ ಮೇರೆ ದಕ್ಷಿಣಕ್ಕೆ ಹೊನ್ನಸಮುದ್ರದ ಕೆಱೆ ಇಂದ ಬಂದ ತಾಯಿವಳ್ಳ ಮೇರೆ (ಎಕ. IX(s), ಬೆಂಗಳೂ. ೩೧-೦೪; 1532). [ ತಾಯ್ + ಪಳ್ಳ ]

**ತಾಯ್ವಾಲ್** (ನಾ). ತಾಯಿಯಂ ಹಾಲು: ಆರ್ ಕಾಮರುಂತಕರಾಜಂ ಬಲಗರ್ವಿತಂ ಮುಳಿದೊಡಂ ತಾಯ್ವಾಲೆ ನಂಜಾದೊಡಂ (ಶಾಂತಿಪು. ೬-೯೩).

[ ತಾಯ್ + ಪಾಲ್$_{1}$ ]

**ತಾಯ್ವಿಡಿ** (ನಾ). ತಾಯಿಯಾದ ಆನೆ: ತಾಯ್ವಿಡಿ [ಪಾಠಾಂ. ಯ್ವೊಡೆ]ಯ ಸೋಂಕಿ ನಿಂದು . . . ಕಳಭವ್ರಜಮಿರ್ಪುದದೊಂದು ತಾಣದೊಳ್ (ಜಗವಿ. ೧೬-೧೧; ಸೂಕ್ತಿಸು. ೩-೬೦ ನೋ); ನುಸುಳ್ದೋಡಿ ಕಾಡಿ ಸಂಗಳಸಿ ತದೊಂದು ಪಲ್ಲಮಱೆ ತಾಯ್ವಿಡಿಗಂತುಮನಂತಸೌಖ್ಯಮಂ (ಚಂದ್ರಪು. ೫-೬೫); ಬಾಯ್ವಿಡುತ್ತಿದಿದ ಮಱೆಯಂ ತಾಯ್ವಿಡಿ ನಡೆ ನೋಡಿ ಬಾಡಿ (ರಾಜಶೇ. ೫-೪೦). [ ತಾಯ್ + ಪಿಡಿ$_{3}$ ]

**ತಾಯ್ವೀಡು** (ನಾ). = ತಾಯ್ಮನೆ ೨: ಸೊಬಗಿನ ಸಂತತಿಯ ತಾಯ್ವೀಡು ಲಕ್ಷ್ಮಿಯ ಸಂತಸದ ಬಾಳ್ವೀಡು (ಸಾಳ್ವಭಾ. ೨-೧): ಜಗದೊಳ್ ಜಾಣರ ಮೆಚ್ಚು ಸತ್ವವಿಸಮೂಹಕ್ಕೆಯ್ದೆ ತಾಯ್ವೀಡು (ನಾನಾರ. ೧೬೯).

[ ತಾಯ್ + ಬೀಡು$_{2}$ ]

**ತಾಯ್ವೆದೆ** (ನಾ). ಹದವಾದ ಬೆದೆ; ಫಲಪ್ರದವಾಗುವ ಬೆದೆ: 'ತಾಯ್ವೆದೆಗೂಡು' ಪರಾ. [ ತಾಯ್$_{1}$ + ಬೆದೆ$_{1}$ ]

**ತಾಯ್ವೆದೆಗೂಡು** (ಕ್ರಿ). (ನೆಲವು) ಬಿತ್ತನೆಗೆ ಹದವಾಗು; ಒಳ್ಳೆಯ ಹದವನ್ನು ಹೊಂದು: ನೆಲನುಟ್ಟಂತೆವೊಲಾಗೆ . . . ತಾಯ್ವೆದೆಗೂಡೆ ಬಿತ್ತಿ ಪೆಣನಂ ಬೇಱೊಂದು ಶೌರ್ಯಾಂಕುರಂ ತಲೆದೋಱಿತ್ತು (ಪಂರಾಮಾ. ೧೦-೦೨೭). [ ತಾಯ್ವೆದೆ + ಕೂಡು$_{1}$ ]

**ತಾಯ್ವೇರ್, ತಾಯಿಬೇರು, ತಾಯಿವೇರು, ತಾಯ್ಬೇರು** (ನಾ). ೧. ಮುಖ್ಯವಾದ ಬೇರು; ಮಧ್ಯದ ಬೇರು: ಯುಕ್ತಿವಲ್ಲಿಗಳ ತಾಯ್ವೇರಂ ಛೇದಿಪ ಚಿಕದೇವೇಂದ್ರನ ವಾದದೊಳ್ (ಚಿಕವಿ. ೪-೦೦೨). **ತಾಯಿಬೇರು:** ದೂರ ದೂರ ಬೇರು ಚಾಚಿ ಟೊಂಗೆ, ಟಿಸಿಲು ಮನುಕುಲ; ತಾಯಿಬೇರು ಕಾಯಬೇಕು ಹಣ್ಣಾಗಲಿ ಹಂಬಲ (ನೆಲಮು. ೨೫-೧೧): ತಾಯಿಬೇರನ್ನು ಕಡಿದು ಹಾಕಿದರೆ ಮರವು ತನಗೆ ತಾನೇ ಒಣಗಿಹೋಗುವುದು (ಹ್ಮಪುಹ. ೩೭): ಸ್ವಾತಂತ್ರ್ಯವು ವಿಕಾಸಕ್ಕೆ ತಾಯಿಬೇರಿನಂತೆ (ಜೀವಾತ್ಮ. ೨೬೨). ೨. (ಆಲಂ) ಮೂಲ; ಮುಖ್ಯ ಆಧಾರ: ವಿವೇಚನೆಯಿಲ್ಲದ ವಿದ್ಯಾಭ್ಯಾಸಪದ್ಧತಿಯು ನಮ್ಮ ಜನರನ್ನು ಅವರ ತಾಯಿಬೇರಿನಿಂದ ದೂರವಾಡಿತು (ಸಂಗೀತ. VI, ಮುನ್ನುಡಿ): ಭಾರತೀಯ ಸಂಗೀತದ ತಾಯಿಬೇರು ವೇದಗಳಲ್ಲಿ (ಭಾರದ. ೫೩೭). **ತಾಯಿವೇರು:** ೧. ಪೆಂಪಿನಲಿ ಮಾಮೇರು ಸುಕೃತದ್ರುಮದ ತಾಯಿವೇರು (ಸೌಂದಪು. ೨-೮). **ತಾಯ್ಬೇರು:** ೧. ಒಂದಿರುಳಿನ ಒಡನಾಟದಿ ನೆಲದಾಳಕೆ ನೀರು ಚಿಗಿಯಿತು ತಾಯ್‌ಬೇರು (ನೆಲಮು. ೮-೩). [ ತಾಯ್ + ಬೇರ್ ]

**ತಾಯ್ವೊಲ** (ನಾ). ತಾಯ್ನೆಲ; ಆಕರ; ಮುಖ್ಯವಾದ ಕ್ಷೇತ್ರ: ಪೆಂಪಿಂಗಿಕ್ಕೆ ಚಾಗಕ್ಕೆ ತಾಯ್ವೊಲನಣ್ಮಗೆ ಮಾಂತನಕ್ಕೆ ಗುಱಿ (ಹ್ಯಆಸಿ. VIII, ೦೦-೭೨; 1058). [ ತಾಯ್ + ಪೊಲ ]

**ತಾರ್** 'ತಾಱು$_{2}$' ನೋ.

**ತಾರ$_{1}$** (ನಾ). ತಾಮ್ರದ ಒಂದು ಚಿಕ್ಕ ನಾಣ್ಯ: ಹಣವ ಕೊಟ್ಟು ಹಾದರವ ಮಾಡುವುದಱಿಂದ ತಾರವ ಕೊಟ್ಟು ಸೂಳೆಗೆಯ್ಯಬಾರದೆ (ಬಸಹ. ೪೨-೧೦೬): ಹತ್ತಿಯ ಭಂಡಿಗೆ ತಾರಂ ಮೂಱು (ಎಇ. XIII, ೨೨-೫೪; 1204): ತುಪ್ಪ ಕುಡುತೆ ೨ಕ್ಕೆ ತಾರ ೫ ತೋಯಿ ತಾ ೨ (ಸೌಇಎ. ೧೯೨೯, ಮುಂಗಳೂರು. ೪೬೫-೩೩; 1312); ಆನೆಹಳ್ಳಿಯಿಂದ ತಾರ ಇನ್ನೂರ ಎಂಭತ್ತಾರ ಲೆಕ್ಕದಲ್ಲಿ ಗ ೨೦ (ಮ್ಯಆರಿ. ೧೯೩೪, ೩೦-೨೦; 1457): ಆರಿಗಾದರೂ ಒಂದು ತಾರವನು ಕೊಡ ಲೋಭಿ (ಸರ್ವಜ್ಞ. ೬೮೭).

[ ದೇ.೫ ಮಲ. ತುಳು. ತಾರ ]

**ತಾರ$_{2}$** 'ತಾಱು$_{2}$' ನೋ.

**ತಾರ$_{3}$** (ಗು). ೧. ದೊಡ್ಡ ಧ್ವನಿಯುಳ್ಳ; ಎತ್ತರದ ಸ್ವರವುಳ್ಳ: ಇರ್ದಂತೆ ಚೀರ್ದೊರಲಿದನ್ ತಾರನಿಸ್ವನದಿ (ಶ್ರೀರಾಮಾ. ೨೫೪-೭೦೧): ತಾರಪಂಚಮದಾಗ ಕೋಗಿಲಾ ಕೂಗುತದೊ (ಗಂಗಾಕ. ೭೭-೯). ೨. ಒಳ್ಳೆಯ; ಅತ್ಯುತ್ತಮವಾದ.(ನಾ). ೩. ದಾಟುವುದು. ೪. ತೇಲುವಿಕೆ. ೫. ಈಜುವುದು. ೬. ಇಳಿಯುವಿಕೆ. ೭. ಉಚ್ಚ ಶಬ್ದ; ಎತ್ತರವಾದ ಧ್ವನಿ: "ಉದ್ದ ಧ್ವನಿ ತಾರ (ವ)ಮೆಂಬುದು" (ಹಲಾಯು. ೨೩-೧೩೯); "ತಾರಮೆನಲುಚ್ಚದಾ ಧ್ವನಿಯಕ್ಕು" (ಮಂಗರಾ. ೨೩-೩): ಸಂಕಟಕೆ ಬೇಡಾದ ದಟ್ಟಡವಿಯೊಡಲಿಂದ ತಾರದಲಿ ಕೂಗುವನು (ಭಾಸನಾ. ೧೨). ೮. ಬೆಳ್ಳಿ: "ರಜತಂ, ಕಳಧೌತಂ, ರೂಪ್ಯಂ, ತಾರಂ – ಈ ೪ ಬೆಳ್ಳಿ" (ಹಲಾಯು. ೨೮-೦೮): ತರದಿಂ ಚಾಷ ಮಯೂರ ತಾರ ತಿಳಗೋಕ್ಷೀರಾಬ್ಜ ನೀರೋಪಮಂ ದೊರೆಕೊಳ್ಗುಂ ಶಶಿಭಾನುಗಳ್ಗೆ . . . ಪರಿವೇಷಂ (ಲೋಕೋಪ. ೪-೨೯): ಹಲ ಮುಸಲಾಯುಧು ನಡೆವ ತಾರ ನಗೇಂದ್ರ ಮನೊಂದು ಕರ್ಮುಗಿಲ್ ಬಳಸಿದವೊಲ್ ವಿರಾಜಿಸೆ ವಿನೀಲಪಟಂ ನಡೆತಂದು (ಪಂರಾಮಾ. ೬-೭೩). ೯. ಕಣ್ಣಿನ ಗುಡ್ಡೆ; ಕನೀನಿಕೆ: ಚಂದ್ರಾಪೀಡನನಪಾಂಗ ವಿಕ್ಷೇಪ ತರಳತರ ತಾರ ಶಾರೋದರ ನಯನಂ

ಗಳಿಂದಡಿಗಡಿಗೆ ನೋಡುತ್ತುಮಿರ್ದರ್ (ಕಾದಂಉ. ೫೦) ; ಪುಂಡರೀಕಾಕ್ಷ ವದನ ವಿನ್ಯಸ್ತ ತರಳ ತಾರ ನೇತ್ರರುಂ (ಜಗವಿ. ೩-೯೪ ವ). ೧೦. ನಕ್ಷತ್ರ; ತಾರೆ : ಶ್ರೀಯುಂ ಜಯಶ್ರೀಯುಮನನವರತಂ ಮಾಳ್ಕೆ ಚಂದ್ರಾರ್ಕ ತಾರಂಬರಂ (ಎಕ. VI, ಕಡೂರು. ೩೭-೩೫ ; 1187 ?) : ಆಚಂದ್ರತಾರಾರ್ಕ ವಾಗಚಲಖ್ಯಾತಿಜಃ ಶಾಳ್ದರ್ (ಸೋಮೇಶ. ೯೦) ; ಭೂಚಂದ್ರಾರ್ಕ ತಾರಂಬರಂ ಕಲಿ ಹರಿಶ್ಚಂದ್ರರಾಯಂ ಸತ್ಯವೆರಸಿ ಬಾಳಲಿ (ಹಚಕಾ. ೧೩-೦೪). ೧೧. ಶುದ್ಧವಾದ ಮುತ್ತು : ಸುರನದಿಯ ತಾರಹಾ × × ರದ ಸುರದಂತಿಯ ರಜತಗಿರಿಯ ಚಂದ್ರನ ಬೆಳ್ಪಿಂ ಪಿರಿದು (ಎಕ. II, ೭೧-೦೫; 1180). ೧೨. ಮುತ್ತಿನ ಸರ : "ಮುತ್ತಿನ ಹಾರದಲ್ಲಿಯುಂ ತಾರ ಎಂಬುದು" (ಹಲಾಯು. ೦೩೩-೦೨). 'ತಾರಹಾರ' ಪರಾ. ೧೩. ಮುತ್ತನ್ನು ಶುದ್ಧಮಾಡುವುದು,- ಶುಭ್ರಗೊಳಿಸುವುದು. ೧೪. ಮುತ್ತಿನ ಪಾರದರ್ಶಕತೆ,-ಸ್ವಚ್ಛತೆ. ೧೫. ಗಾಳಿ ; ವಾಯು. ೧೬. ನದಿ. ೧೭. ಆಕಾಶ; ಗಗನ. ೧೮. ಓಂಕಾರ ; ಪ್ರಣವ. ೧೯. ವಿಷ್ಣು. ೨೦. ಒಂದು ಪರ್ವತ ; ಬೆಳ್ಳಿಯ ಬೆಟ್ಟ : ಮೇರು ಪಡುವಣ್ಗೆ ಸೀತಾತೀರಂ ತೆಂಕಣ್ಗೆ ನೀಲಗಿರಿ ಬಡಗಣ್ಗಾ ತಾರಂ . . ತನಗೆ ಸೀಮೆಯೆನಿಕ್ಕುಂ (ಮಲ್ಲಿಪು. ೨-೦೨). ೨೧. ಒಬ್ಬ ರಾಕ್ಷಸನ ಹೆಸರು ; ತಾರಕಾಸುರ. ೨೨. ಶುಭ್ರವಾದುದು ; ಬಿಳಿ. ೨೩. ತಂತಿ; ಸರಿಗೆ. ೨೪. [ಸಂಗೀತ] ಮೂರು ಸ್ವರಸ್ಥಾಯಿಗಳಲ್ಲಿ ಕೊನೆಯದು : ಮಂದ್ರ ತಾರಗೀತೆಯ ಪವಣೊಪ್ಪೆ . . . ವೀಣೆಯಂ ಮಿಡಿದಳ್ (ಶಾಂತಿಪು. ೯-೦೮೭) ; ಕೋಗಿಲೆ ಗಿಳಿ ತುಂಬಿ ಮಹೀಶನ ಕಿವಿಗಾಗಳ್ ಕ್ರಮದಿತ್ತುವು ತಾರ ಮಧ್ಯ ಮಂದ್ರಸ್ವರದಿಂ (ಚಂದ್ರಪು. ೭-೮೨) ; ಯಥೋಚಿತ ತಾರ [ಪಾಠಾಂ. ತಾಳ, ರಾಗ] ಮಧುರ ಮಂದ್ರಂಗಳಿಂ ಹಾಡಿ ಭೂಪತಿಯ ದುಗುಡವನು ತೊಳೆದರು (ಹಚಕಾ. ೭-೪); ತಾನದೋಜೆಯೊಳ್ ತಾರ ಮಂದ್ರ ವಿಭೇದದಿಂ ಜೇಂಗೊಡಮಂ ಮುಸುಱ ಮೊರೆವ ಮಱಿದುಂಬಿಗಳ ಗಾನದಂತೆ (ರಾಮಾಶ್ವ. ೨೩-೧೦). 'ತಾರಸ್ವರ' ಪರಾ. "ಘನ ಬಿಳಿದುಂ ಗಿರಿ ನಭ ವಾಹಿನಿ ಮರುತಂ ದೈತ್ಯ ಗಾನಭೇದಂಗಳ್ ಲೋಚನಮಧ್ಯಂ ತಾರಕಿ ಮುತ್ತಿನೊಳುಂ ಹನ್ನೊಂದು ತಾರ ಶಬ್ದಂ ಜಗದೊಳ್" (ನಾನಾಳಂ. ೩೦): "ನಗ ಮರುತಂ ಋಕ್ಷ ಮುಕ್ತಾಫಲಂಗಳ್ ದೃಗುಮಧ್ಯಂ ದೈತ್ಯ ಸಂಗೀತಕ ನದಿ ನಭ ಶುಭ್ರಾದಿಗಳ್ ತಾರ ಶಬ್ದಂ" (ನಾನಾರ. ೪೦). [ಸಂ.]

**ತಾರ$_4$** 'ತರ್' ಪರಾ.

**ತಾರಕ** (ನಾ). ೧. ದಾಟಿಸುವವನು ; ಸಂರಕ್ಷಿಸುವವನು ; ಕಷ್ಟದಿಂದ ಪಾರುಮಾಡುವವನು : ಭವಾಂಬುನಿಧಿತಾರಕಂ . . . ರಘುಪ್ರವರ ನರ್ಚಿಸಿದಂ (ಹಂರಾಮಾ. ೦೪-೨೦೭) ; ದಂಡಧರಬಾಧೆಯ ನಿವಾರಕನೆ ತಾರಕನೆ(ಪ್ರಾಭರಾ.೧೬-೧). ೨. ದಾಟಿಸುವುದು; ಸಂರಕ್ಷಿಸುವಂತಹುದು: ಹರನಧಿಕನಲ್ತೆ ತಾರಕದಕ್ಷರತ್ರಯಕೆ (ಪದ್ಮರಾ. ೧೦-೩); ಇದುವೆ ಪಂಚಾಕಾಶ ತಾರಕವಿದನು ದೇಶಿಕನಿಂದ ಬಲ್ಲವ . ... ಬ್ರಹ್ಮಪದವನ್ನೈದುವನು (ಗಗತಾ ೨೦-೨೦) : ತಾರಕವಾದ ಕಾಶಿಯಿಂದ ಪ್ರತ್ಯೇಕಗಳಾಗಿರುವ ಲಿಂಗಗಳೆಲ್ಲವೂ . . . ಕಾಣಲ್ಪಡುವವು (ಅರ್ಕಮಾ. ೦೩೦); ಈ ತಾತ್ವಿಕ ಭೂಮಿಕೆ ಒಮ್ಮೆ ತಾರಕವಾಗುವಂತೆ ಬದಲಾದ ಪರಿಸ್ಥಿತಿಯಲ್ಲಿ ಮಾರಕವೂ ಆಗುತ್ತದೆ (ಕರ್ನಾಟ. ೪೯೭). ೩. ಒಬ್ಬ ರಾಕ್ಷಸನ ಹೆಸರು : ಅಪ್ರತಿಮಪ್ರತಾಪ ಭಂಗುರ ಭುವನತ್ರಯಂ ನೆಗಳ್ದನಕ್ರಮಕಾರಿ ಜಿತಾರಿ ತಾರಕಂ (೧೧ಶ. ೭-೫); ತಾರಕನಿಂದ ಭಂಗಂಬಟ್ಟ ದೇವೇಂದ್ರತ್ವಮೇಕೆಮಗೆ (ಬಸಪು. ೦೭-೨೨) ; ತಾರಕನ ಕೈಟಭನ ಮಹಿಷನ ವೀರ ಜಂಭನ . . . ಆರುಭಟೆ ರಣದುಬ್ಬಟೆಯ ಜಜ್ಝರಿತನವಿವನೊಬ್ಬನಲಿ (ಕುವ್ಯಾದ್ರೋ. ೧೭-೩೭). ೪. ನಕ್ಷತ್ರ; ತಾರೆ: "ಭಂ, ನಕ್ಷತ್ರಂ, ತಾರಕಂ, ತಾರಕಾ, ಜ್ಯೋತಿಃ . . . ಉಡು,-ಈ ೯ ನಕ್ಷತ್ರದ ಪೆಸರ್" (ಹಲಾಯು. ೧೦-೫೦) ; ಮತ್ಯರ್ಣದೊಳ್ ತಾರಕೋಜ್ವಳಮಂ ರಂಜಿಪ ಪುಷ್ಪಮಂಜರಿಯನತ್ಯೌತ್ಸುಕ್ಯದಿಂದಿಕ್ಕಿದಂ (ಕಾದಂಪೂ. ೭೭೯) ; ಚಂದ್ರನ ಬೆಳಗಿನೊಳೇಂ ತಾರಕಕ್ಕುಂಟೆ ತೇಜಂ (ಆನಂಪು. ೦೩-೫೭). ೫. ಏರುದನಿ ; ಉಚ್ಚಧ್ವನಿ : ಪ್ರಪಂಚದ ಎಲ್ಲ ವಸ್ತುಗಳೂ ಒಂದು ಹೆಮ್ಮೇಳವಾಗಿ ತಾರಕದಲ್ಲಿ ಕೂಗಿದುವು (ಬಳಜೀ. ೧೮೨) ; ತಾರಕದ ಚೀತ್ಕಾರ (ಹೊಸಕ್ಕ. ೨೭೪). ೬. ಕಣ್ಣುಗುಡ್ಡೆ ; ಕನೀನಿಕೆ: ತಾರಕಮದು ನೆನೆಯಿಪ್ಪುದು . . . ಅಳಿಶಿಶುವಂ (ರಾಜಶೇ. ೭-೫೦). ೭. ದೋಣಿ ; ತೆಪ್ಪ : ತಾರಕ[ಪಾಠಾಂ. ಕಾರ]ನುಂಗಿದ ಜಲವ ಬೇಱ ಶೋಧಿಸಲುಂಟೆ ಅಯ್ಯ (ಬಿಬ್ಬಬಾ. ೫೯-೨೩). ೮. ಹಡಗು. ೯. ಹಡಗು ನಡೆಸುವವನು ; ನಾವಿಕ. ೧೦. ಬೆಳ್ಳಿ. 'ತಾರಕಾದ್ರಿ' ಪರಾ. ೧೧. [ಜೈನ] ಪಿಶಾಚಿಗಳ ಹದಿನಾಲ್ಕು ವರ್ಗಗಳಲ್ಲಿ ಒಂದು : ಕುಂಭಂಡರುಂ . . . ಸಮ್ಮೋಹರುಂ ತಾರಕರುಂ . . . ತೂಷ್ಣೀಕರುಂ ಪವನರುಂ ಎಂದು ಪಿಶಾಚರ್ ಚತುರ್ದಶವಿಧಂ (ತತ್ತ್ವಪ್ರ. ೦೯೩). [ಸಂ.]

**ತಾರಕಂಠ** (ನಾ). ಉಚ್ಚಸ್ವರದ ಧ್ವನಿ ; ಚೀರುದನಿ : ತಾರಕಂಠದಲ್ಲಿ ಮಾತುಕತೆಯಾಡುತ್ತಿದ್ದ . . . ಕೆಂಪು ಮೋರೆಯ ಬೆಮರಿಡಿದ ಹೆಂಗಸರಿಂದ ಕುಳ್ಳಿಡೆಗಳೆಲ್ಲ ಭರ್ತಿಯಾಗಿದ್ದುವು (ಪುನರು. ೪೫೪). [ತಾರ$_3$ + ಕಂಠ]

**ತಾರಕಗಣ** (ನಾ). ನಕ್ಷತ್ರಗಳ ಗುಂಪು ; ತಾರೆಗಳ ಸಮೂಹ : ಸೂಸುವ ಶೀಕರಾಳಿ ತಾರಕಗಣದೊಳ್ ಸಮಂಬಡೆಯೆ ತೇಂಕುವ ಮೌಕ್ತಿಕ ರತ್ನ ಗರ್ಭಶುಕ್ತಿಕೆ ಪೆಱಯೊಳ್ ತಡಂಬಡೆಯೆ ಸುಧಾರ್ಣವಮೊಪ್ಪಿದುದು (ಜಗವಿ. ೦-೪೪). [ತಾರಕ + ಗಣ]

**ತಾರಕಜಿತ್ತು** (ನಾ). ತಾರಕನೆಂಬ ಅಸುರನನ್ನು ಜಯಿಸಿದವನು ; ಸ್ಕಂದ : ತಾರಕಜಿನ್ನಾಗೇಶ್ವರ ನೀರಜಭವ . . . ಅಱದು ನುತಿಸಲಶಕ್ಯಂ (ಹಮ್ಮೀರ. ೦-೨೮) [ಸಂ. ತಾರಕಜಿತ್]

**ತಾರಕಣೆ** 'ತಾರ್ಕಣೆ' ನೋ.

**ತಾರಕಮಂತ್ರ** (ನಾ). ೧. ಮೋಕ್ಷದಾಯಕವಾದ ಮಂತ್ರ: ಇದುವೆ ತಾರಕ ಮಂತ್ರ ಬ್ರಹ್ಮಾದ್ಯರಿಗಗೋಚರವೆನಿಸುತಿರ್ಪುದು (ಗಗತಾ. ೨೦-೯) ; ನಾವು ಮೊದು ದೇಹಿಗಳ್ಗೆ ತಾರಕಮಂತ್ರಮಾಗಿರ್ಪನಂ ಪೞಯಲುಂಟೆ (ರಾಮಾಶ್ವ. ೨೪-೨). ೨. ದಾಟಲು ಸಹಾಯ ಮಾಡುವಂತಹುದು : ಅದನ್ನು ಸಾಧಿಸಬೇಕಾದರೆ ಪ್ರೇಮವೊಂದೇ ತಾರಕಮಂತ್ರವಾಗಿರುವುದು (ಪ್ರಲಂಧ. ೮೫). [ತಾರಕ + ಮಂತ್ರ]

**ತಾರಕಮಥನ** (ನಾ). ತಾರಕಾಸುರನನ್ನು ನಾಶಮಾಡಿದವನು ; ಷಣ್ಮುಖ. [ತಾರಕ + ಮಥನ]

**ತಾರಕರಾಜ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ತೇಜದಿಂದಿನರಾಜ ತಾರಕರಾಜ . . . ಓಜೆಯೊಳು ಸುರರಾಜ (ಬಸಪು. ೯-೩೦). [ತಾರಕ + ರಾಜ]

**ತಾರಕರಿಪು** (ನಾ). ತಾರಕನೆಂಬ ರಾಕ್ಷಸನ ಶತ್ರು; ಷಣ್ಮುಖ: "ಷಡಾನನಂ ವಹ್ನಿಜಂ ತಾರಕರಿಪು ಸ್ವಾಮಿ ಕಾರ್ತಿಕೇಯುಂ" (ಮಂಗರಾ. ೫-೦೬). [ತಾರಕ + ರಿಪು]

**ತಾರಕಶಕ್ತಿ** (ನಾ). ರಕ್ಷಿಸುವ ಬಲ,-ಪರಾಕ್ರಮ : ಸಾಹಿತ್ಯವೊಂದೆಯೆ ನನ್ನ ಸಂಜೀವಿನಿ ಅದೇ ನನ್ನ ತಾರಕಶಕ್ತಿ (ಇಂಚಾಪ. ೪೮-೨೭) : ಉದಾತ್ತವಾದ ಆಲೋಚನೆ, ಆಚರಣೆ, ಜೀವನದರ್ಶನಗಳಿಂದ ಅದು ತಾರಕಶಕ್ತಿಯಾಗಬೇಕು (ಸುವರ್ಣ. ೨೦೯). [ತಾರಕ + ಶಕ್ತಿ]

**ತಾರಕಾಂಚಿತ** (ಗು). ೧. ಕಣ್ಣುಗುಡ್ಡೆಯುಳ್ಳ; ಕನೀನಿಕೆಯಿಂದ ಕೂಡಿದ. ೨. ತಾರಕನೆಂಬ ರಾಕ್ಷಸನನ್ನು ಒಳಗೊಂಡ. ೧, ೨: ಧೀರದೈತ್ಯ ವಿಶೇಷದಂತಶಿರಾಗಲೋಚನದಂತೆವೋಲ್ ತಾರಕಾಂಚಿತರಂಜಿತಂ (ಹಮ್ಮೀರ. ೨-೭೦). [ತಾರಕ + ಅಂಚಿತ$_1$]

**ತಾರಕಾಕ್ಷ** (ನಾ). ತಾರಕಾಸುರನ ಮಗ ; ತಾರಾಕ್ಷ : ತಾರಕಾಕ್ಷನ ಕುಂಭಕರ್ಣನ ಮುರ ಗುಹಾಸುರನ ಆರುಭಟೆ . . . ಇವನೊಬ್ಬನಲಿ(ಕುಮಾ. ರಾ. ೧೭-೩೭). [ ಸಂ. ]

**ತಾರಕಾದ್ರಿ** (ನಾ). ಬೆಳ್ಳಿಯ ಬೆಟ್ಟ ; ಕೈಲಾಸ ಪರ್ವತ : ಮಿಸುಗುವ ತಾರಕಾದ್ರಿರುಚಿಯಿಂ . . . ಮಿಗಿಲಾಗಿ ಪರ್ವಿ ರಾಜಿಸುವುದು ಕೀರ್ತಿ (ಎಕ V, ಹಾಸನ. ೩೩-೩೦ ; 1170). [ ತಾರಕ + ಅದ್ರಿ ]

**ತಾರಕಾರಾತಿ** (ನಾ). = ತಾರಕರಿಪು : ಶ್ರೀ ತಾರಕಾರಾತಿತಾತಾ ಮದೀಶ ವಿಖ್ಯಾತಾಮಳಿನ ದಿವ್ಯ ಪೂತಾತ್ಮ (ವೀಕ್ಕಪು. ೭-೨-೧) ; ದೈತ್ಯರ ಪುರವ ಪಾಳ್ಗೆಯ್ದು ತಾರಕಾರಾತಿಯೆಂಬಭಿಧಾನದಿಂದ ವೃಂದಾರಕರ ಪೊರೆದ ಕ್ರೌಂಚಾರಿ ರಕ್ಷಿಪುದೆನ್ನ (ಪ್ರಾಥ. ೧-೦೩). [ ತಾರಕ + ಅರಾತಿ ]

**ತಾರಕಾರಿ** (ನಾ). ೧. = ತಾರಕರಿಪು : " ಗೌರೀಪುತ್ರಃ . . . ಸ್ವಾಮಿ, ತಾರಕಾರಿಃ, ಕುಮಾರಃ . . .–ಈ ೨೦ ಕಾರ್ತಿಕೇಯನ ಪೆಸರ್" (ಹಲಾಯು. ೩-೨೦) ; ಮುದದಿಂದ ಸಾದು ಕಸ್ತೂರಿಯನೀವುದು ದೇವ ಬೆನಕಂಗೆ ತಾರಕಾರಿಗೆ ಎನಗೆ ನೀವಿಂದು (ಸಂಬಿಕ. ೧೭-೯೧) ; ದಿನಕರ ಶಶಾಂಕಂ ತಾರಕಾರಿ ಗಜವದನ ವಾಸಿಷ್ಠ ಮನುಮುನಿ ನಿಕರವು ನೆರೆದು (ಹಡಕಾ. ೧೯-೬). ೨. ತಾರೆಗಳ ಶತ್ರು; ಸೂರ್ಯ. ೧, ೨: ಕಮಳಬಂಧುರಸಸ್ಮಿತ ವಕ್ತ್ರಭಾಸುರಂ ಬಹುಕರರಂಜಿತಂ . . . ತಾರಕಾರಿ ಮಿಗೆ ಮಾಡುಗೆ ಭವ್ಯತರಪ್ರಮೋದಮಂ (ರಾಜಶೇ. ೧-೮). [ ತಾರಕ + ಅರಿ₂ ]

**ತಾರಕಿ** 'ತಾರಗೆ' ನೋ.

**ತಾರಕಿತ** (ಗು). ನಕ್ಷತ್ರಗಳಿಂದ ತುಂಬಿರುವ ; ತಾರೆಗಳಿಂದ ಆವೃತವಾಗಿರುವ : ಸಭಾಂಗಣವೊಪ್ಪೆ ವೀರನಾರಾಯಣನಾ ತಾರಕಿತ ನಭದವೊಲ್ ಸೊಗಯಿಸುಗುಂ (ಕವಿರಾ. ೩೦-೦೮೦);ಸಕಳ ದಿಗಂತರಾಳನುಂ ಕುಸುಮಾಸಾರ ತಾರಕಿತ ಗಗನತಳ ವಿಲಸಿತನುಂ (ಸುಕುಮಾ. ೮-೯೯ ವ) ; ತಾರಕಿತಮಮಿತರತ್ನಚ್ಛಾಯೆಯಿಂದಂಬರಂ ಮೇಚಕಿತಮೆನಿಸಿ ಬಂದಂ (ಮಲ್ಲಿಪು. ೯-೭೯) ; ಜಲಬಿಂದುಗಳಿಂ ದಿವದೊಳ್ ತಾರಕಿತಂ ಮಾಡುವುದು ನಭೋಭಾಗಮಂ ತದಂಭಃಪೂರಂ (ಚಂದ್ರಪು. ೦೦-೪೯). [ ಸಂ. ]

**ತಾರಕೆ** (ನಾ). ೧. ತಾರೆ ; ನಕ್ಷತ್ರ : " ಋಕ್ಷಮುಡು ತಾರಕೆ . . . ಎನೆ ನಕ್ಷತ್ರಮಕ್ಕು " (ಮಂಗರಾ. ೦೦-೩) ; ಬಿದಿರಿದುವು ಮುಕುಟ ತಾಗಿ ತಾರಕೆಗಳು . . . ಕೂಡಲಸಂಗಮದೇವನಿಂದು ನಾಟ್ಯವನಾಡೆ (ಬಸವ. ೩೯೦). ೨. ಕಣ್ಣಿನ ಗುಡ್ಡೆ ; ಪಾಪೆ : ಕಣ್ಣಿನ ತಾರಕೆ (Pupil) ಸಣ್ಣದಾಗಿ ರಬಹುದು (ಶಲಕೋ. ೯೪). ೧, ೨: ಕಂಗಳ ಕಾಳಗ ನೋಟದ ಮಸಕ ಮಿಂಚಿನ ಗೊಂಚಲು ತಾಗಿದಂತಾದೆನವ್ವಾ ತಾರಕೆ ತಾರಕೆ ಸೂಸಿದಂತೆ (ತಳತಂತೆ) . . . ಅವ್ವಾ (ಸರ್ವಾವ. ೭೯-೩೭೭). [ ಸಂ. ತಾರಕಾ ]

**ತಾರಕೋತ್ಕರ** (ನಾ). ನಕ್ಷತ್ರಗಳ ಗುಂಪು,–ರಾಶಿ : ಸೊಗಯಿಪ ತಾರಕೋತ್ಕರದ ಮಧ್ಯದ ಶೀತಮರೀಚಿ ರೋಹಿಣೀಯುಗಮೆನೆ (ಚಂದ್ರಪು. ೭-೦೩೦). [ ತಾರಕ + ಉತ್ಕರ ]

**ತಾರಗಂಟು** (ನಾ). ಒಂದು ಬಗೆಯ ಗಂಟು: ಒಂದು ತಾರಗಂಟು ಒಂದು ಜಿಗುಳುಗಂಟು ಒಂದು ಕುಬುಹುಗಂಟು ಮೂಟಬಿ ಮುದ್ರೆಯ ಮಿಹಿ ಹಾಜಿತ್ತು ಹಕ್ಕಿ (ಮನುಗುಂ. ೨೫೯-೩೦). [ ತಾರ? + ಗಂಟು ]

**ತಾರಗದ** 'ತಾರುಗದವು' ನೋ.

**ತಾರಗಬೀರಗ** 'ತಾಱುಗಬೀಱುಗ' ನೋ.

**ತಾರಗಿರೀಂದ್ರ** (ನಾ). = ತಾರಾಗ : ತಾರಗಿರೀಂದ್ರದಗ್ರದೊಳ್ ಶಂಕರನೊರ್ವ . . . ಒಪ್ಪಿರೆ (ವೃಷವಿ. ೩-೭೬). [ ತಾರ್ಕ್ಷ + ಗಿರೀಂದ್ರ ]

**ತಾರಗೆ**, ತಾರಕಿ (ನಾ). ತಾರೆ ; ನಕ್ಷತ್ರ : " ಮೀನ್, ತಾರಗೆ, ಉಡು್ಲ್ – ಈ ೩ ನಕ್ಷತ್ರಕ್ಕೆ ಪೆಸರ್ " (ಕಶಸಾ. ೪-೯೩) ; ತಾರಗೆ ಗಳಗೆಗಳಂತಿರೆ ತಾರಾಪಥದೊಳ್ ನಿರಂತರಂ (ಅದಿಪು. ೬-೩೪) ; ಶಶಿನಾಯಕ ಮಣಿ ತಾರಗೆ ಪೊಸಮುತ್ತಿನ ಸೂ[ಸುವ] ಗಡಾ (ಸೌತ್ಇ. XX, ೪೯-೩೭ ; 1076 ?) : ತಾರಗೆಯುಂ ತಮಂ ಸೆಜೆಗೆ ತಂದವೊಲ್ (ಶಂರಾಮಾ. ೦೪-೦೨೬) ; ಒರ್ವ ಚಂದ್ರಮನ ಕಾಂತಿ ಹಲವುಂ ತಾರಗೆಯ ಬೆಳಗನು ಹರಿಯಿಸುವ ತೆಱದಿ (ಸಮ್ಯಕ್. ೧-೪೭); ವಿಮಲ ತಾರಗೆಯಂತೆ ಗೆಯ್ವ ಕಣ್ಣನ್ನೆ (ಗಿರಿ. ೨೯-೪).

**ತಾರಕಿ:** ಅಂತರಂಗದ ಭುವನವ ಮೆಟ್ಟಿ ನೋಡುತಿಪ್ಪ ಬೆಡಗಿನ ತಾವರೆಯ ಮಧ್ಯದ ತಾರಕಿ [ಪಾಠಾಂ. ತಾರೆ]ಯನಾರೂ ಅಱಿಯರಲ್ಲಾ (ಅಪಡಂ. ೧೬೮-೭೩೮) : ತಾರಕಿಗಳರಸಂ . . . ಚೋರರನಾರೈವ ತಳಾರ ಚಂದ್ರನುದಯಂಗೆಯ್ದಂ (ಸೂಕ್ತಿಸು. ೮-೨೩೮) : ಸಿತಾಕ್ಷತಾವಳಿಯು ತಾರಕಿಗಳೆಸೆದ [ಪಾಠಾಂ. ತಾರಕಿತವಾದ]ಭ್ರುವೆನೆ ರಿಪುವಾರಣದ ಮಸ್ತಕದ ಮುತ್ತುಗಳೋರಣೆಸರೊಪ್ಪಿದುದು (ಕುಮಾ. ರಾ. ೬-೪೩). [ <ಸಂ. ತಾರಕಾ ]

**ತಾರಗೆದಾಣ** (ನಾ). ನಕ್ಷತ್ರಗಳ ಆಶ್ರಯಸ್ಥಾನ ; ತಾರೆಗಳ ತಾಣ ; ಆಕಾಶ: ತಾರಗೆದಾಣದಂತೆ ಯತಿಸಂತತಿಯಿಂತಿರೆ . . . ಸಾರಸದೇಟ್ಗೆಯಿಂ ಸರಸಿ ಕಣ್ಗೆಸೆದಿರ್ದುದು (ದಶಕು. ೦೩-೩೧). [ ತಾರಗೆ + ತಾಣ ]

**ತಾರಗೆದುಱುಗಲ್** (ನಾ). ನಕ್ಷತ್ರಗಳ ಸಂದಣಿ,–ಗುಂಪು : ತಾರಗೆದುಱುಗಲ್ ನವಸಂಧ್ಯಾರಾಗದೊಳೆಸೆವ ತೆಱದೆ ಪದನಖರುಚಿಗಳ್. . .ರಾರಾಜಿಸೆ (ಜಗಪಿ. ೦-೩೪). [ ತಾರಗೆ + ತುಱುಗಲ್ (<ತುಱುಂಗಲ್) ]

**ತಾರಗೆಯಾಣ್ಮ** 'ತಾರಗೆಯಾಳ್ಮ' ನೋ.

**ತಾರಗೆಯಾಳ್ಮ**, ತಾರಗೆಯಾಣ್ಮ (ನಾ). = ತಾರಕರಾಜ : " ಇಂಗದಿರ ತಾರಗೆಯಾಳ್ಮ [ಪಾಠಾಂ. ಣ್ಮ] ನೀರಣುಗನು"(ಕಬ್ಬಮಂ. ೦೭).ತಾರಗೆಯಾಣ್ಮ : " ತಾರಗೆಯಾಣ್ಮನೆಂದು ನಿಶಾಕರಂ" (ಕರ್ಣಾನಿ. ೬೪) ; " ತಾರಗೆಯಾಣ್ಮನೆಸೆ ಚಂದಿರಂ " (ಕಶಕ. ೪೪). [ ತಾರಗೆ + ಆಳ್ಮ ]

**ತಾರಗೆವಟ್ಟೆ** (ನಾ). ನಕ್ಷತ್ರಮಾರ್ಗ ; ಆಕಾಶ : " ತಾರಗೆವಟ್ಟೆಯೆನಲ್ಕೆ ವ್ಯೋಮಂ " (ಕರ್ಣಾನಿ. ೩೪) : ತಾರಗೆವಟ್ಟೆಯುಂ ದೆಸೆಗಳುಂ ನೆಲನುಂ ಕಡಲುಂ ಬನಂಗಳುಂ ಕಾರಿರುಳ್ಗೆದೆ ನುಂಗಿದವೊಲಾದುದು (ಕಬ್ಬಿಗಕಾ. ೨೬೬); ಮರಕತದೊಂದು ಕಳಸದಿಂ ತಾರಗೆವಟ್ಟೆ ಮುಟ್ಟೆ ನಿಗುರ್ದಾ ಸೈಪಿನಾಗರಂಬೋಲ್ . . . ದೇಗುಲಂ ಕಣ್ಗೆಡ್ಡಮಾಗಿ ರಂಜಿಕುಂ (ರಾಮಾಶ್ವ. ೩೪-೨೩). [ ತಾರಗೆ + ಬಟ್ಟೆ₁ ]

**ತಾರಗ್ರೀವ** (ನಾ). ಎತ್ತರವಾದ ಧ್ವನಿ ; ಉಚ್ಚ ಕಂಠ : ಮಾರೊರಲ್ದತ್ತು ತಾರಗ್ರೀವದಿಂ ಗುಹೆಯ ಗೋನಾಳಿ(ಶ್ರೀರಾಮಾ. ೨೮೦-೭೪). [ತಾರ್ಕ್ಷ+ಗ್ರೀವ]

**ತಾರಜ** (ನಾ). (?) : ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ ತಾರಜ ತಂಡಜ ರೋಮಜರಿಗೆ ಪ್ರಳಯವಾಯಿತ್ತು (ಅಖಂಡೇ. ೭೧-೪೨). [ ? ]

**ತಾರಣ** (ನಾ). ೧. ದಾಟುವಿಕೆ. ೨. ದಾಟಿಸುವ ಸಾಧನ ; ದೋಣಿ ; ನಾವೆ : ಘೋರ ಭವಾಬ್ಧಿಗೆ ತಾರಣ ಘಾಳಿಗೆ ಮಾರಣ ನಿರ್ವಾಣ ಪದಕೆ ಕಾರಣ (ಭರತೇ. ೦-೩೭೩). ೩. ದಾಟಿಸುವಿಕೆ. ೪. ದಾಟಿಸುವವನು. ೫. ಕಷ್ಟದಿಂದ ಪಾರುಮಾಡುವುದು. ೬. ಕಷ್ಟದಿಂದ ಪಾರುಮಾಡುವವನು. ೭. ಅರವತ್ತು ಸಂವತ್ಸರಗಳಲ್ಲಿ ಹದಿನೆಂಟನೆಯದು : ಮತ್ತಮಾ ವರುಷವೇ ಪ್ರಭವ, ವಿಭವ . . . ತಾರಣ . . . ಅಕ್ಷಯವೆಂದಱುವತ್ತು ತೆಱನಾಗಿಹುದು (ವಿವೇಕ. ೩೨೦). ೮. ಅಡವು ; ಈಡು : ಬ್ಯಾಂಕಿಗೆ ತಕ್ಕ ತಾರಣ (ಅಡವು) ಕೊಟ್ಟು ಸಾಲ ದೊರಕಿಸುವುದು (ಬ್ಯಾಂಕಶ್ಕ. ೩೪). [ ಸಂ. ]

**ತಾರಣೆತ** (ಗು). (?) : ಕನೆಗೂಡಿ ಪರಿಮಳವ ನುಡಿದ ರಸಕೊಡ ಚಿಮ್ಮಲನುವಾದ ತಾರಣೆತ ಪಾಯಸವ ಚಿತ್ರಯಿಸಿ (ಲಿಂಗಪು. ೮-೩). [ ? ]

**ತಾರತಕ್ಕಡಿ** 'ತಾರಾತಿಗಡಿ' ನೋ.

**ತಾರತಕ್ಕಡಿಗ** (ನಾ).ಮೋಸಗಾರ ; ವಂಚಕ : ಆ ಠಕಿಕತನದ ತುಡುಗಣೆ ತಾರತಕ್ಕಡಿಗನಿಗೆ ರಾಜಗಾಂಭೀರ್ಯವೆಲ್ಲಿಂದ ಬರಬೇಕು? (ಮಂತ್ರಶ. ೦೩೦-೩). [ ತಾರತಕ್ಕಡಿ (<ತಾರಾತಿಗಡಿ) + – ಇಗ ]

**ತಾರತಮತೆ** (ನಾ). = ತಾರತಮ್ಯ : ತಾರತಮತೆಯ ಬಲ್ಲ ಪುರುಷರ ಚಾರು ಚರಿತವನಱಿವೆ (ಕುವ್ಯಾಕ. ೩-೨೨). [ <ಸಂ. ತರತಮತಾ ]

**ತಾರತಮ್ಯ** (ನಾ). ಹೆಚ್ಚು ಕಡಮೆ ; ಮೇಲು ಕೀಳು ; ನ್ಯೂನಾಧಿಕ್ಯ ; ತರತಮಭಾವ : ಆರು ಮೆಚ್ಚುವರಿದನು ಬಿಡು ಬಿಡು ತಾರತಮ್ಯವ ನಱಿಯ ಕೇಳ್ದ ಮಾತುಗಳನೆಂದ (ಕಾಶಿರಾ. ೩೭-೧೯) ; ಅವರವರ ತಾರತಮ್ಯವನಱಿದುತ್ಸವದಿಂದಂ ಬೀಳ್ಕೊಟ್ಟಂ (ವೀರವಿ. ೯-೮೬) : ಧರ್ಮಗತಿಯ ತಾರತಮ್ಯವ ತಿಳಿವೊಡೆ ಪೆರ್ಮೆಯ ಬಿಟ್ಟು . . . ನೀ ನಡೆ ಮಿಥಿಲೆಗೆ (ಹರಿಬ. ೨-೪೯) ;ಆ ಪ್ರೇಮವೆಂಬ ಪುನೀತ ವಸ್ತುವಿಗೆ ಪಕ್ಷಪಾತವಿಲ್ಲ ತಾರತಮ್ಯವಿಲ್ಲ (ಸುಂದರಿ. ೦೪); ಬರುವವರ ತಾರತಮ್ಯ ನೋಡಿ ಅವರ ಸ್ವಾಗತ ಸಮಾರಂಭವು ಜ ರ ಗ ಬೇ ಡ ವೇ (ಗುರುಹ. ೪) ; ಸಂಸಾರದಲ್ಲಿ ಈ ತಾರತಮ್ಯವೇಕೆ? (ಬಂಕಿಮ. ೧೧೪). [ ಸಂ. ]

**ತಾರತಿಗಡಿ** 'ತಾರಾತಿಗಡಿ' ನೋ.

**ತಾರನಗ** (ನಾ). ಬೆಳ್ಳಿಯ ಬೆಟ್ಟ : ತಾರನಗಂಗಳಂ ಕವಲಿನೊಳ್ಪಿಲೆಯಿಂದ . . . ಪೋಲ್ವುದು . . . ಚಟ್ಟಲದೇವಿಯ ಪದ್ಮಕೋದ್ರುಮಂ (ಎಕ. VIII, ನಗರ. ೪೦-೩೩ ; 1077). [ ತಾರ್$_3$ + ನಗ$_2$ ]

**ತಾರಮಾರ** 'ತಾರಂಮಾರ್ಉ' ನೋ.

**ತಾರಯಿಸು**, ತಾರಯ್ಸು, ತಾರವಿಸು, ತಾರ್ಯಸು (ಕ್ರಿ). ೧. ದೊಡ್ಡ ಧ್ವನಿ ಮಾಡು. ೨. (ತಾರಸ್ವರದಲ್ಲಿ)ಹಾಡು: ಒಸೆದು ನೃಪಾಲನಾಡಿಸಿದ ಸೋಗೆಗಳಂತಿವು ಚಕ್ರಿ ಬೀಣೆ ಬಾಜಿಸೆ ಸುತಿಗೂಡಿ ತಾರಯಿಪ ತುಂಬಿಗಳಿಂತಿವು (ವರ್ಧಪು. ೩-೬೦) ; ತಾರ + ಇಸಿದು = ತಾರಯಿಸಿದು (ಶಮದ. ೩೪ ವ್ಯಯೋ). **ತಾರಯ್ಸು**: ೨. ತಾರಯ್ಸು [ಪಾಠಾಂ. ತಾರ್ಯಸು] ತ್ರಿಮುಬ್ಬುತಗೀತಜತಿಗಳಿಗೆ ಹಾಡುತುಂ (ಬಸಪು. ೧೭-೨೦). **ತಾರವಿಸು**: ೨. ಮಱುದುಂಬಿಗಳ ನುಣ್ಗುರಮಂ ಸೂಱಿಗೊಂಡಂತೆ ತಾರವಿಸುತಿರೆಯುಂ (ಶಾಂತೀಶ್ವ. ೬-೯೩ ವ) : ಏಳಿ ಕಂಸಾಳಂಗಳಂ ಪಿಡಿದೋಳಿಯಿಂದಂ ತಾರವಿಸುತಿರೆ (ಬಸಪು. ೧೨-೪೪).**ತಾರ್ಯಸು**: ೨. ಬಂದು ತಾರ್ಯಸುತಿದೆ ಮಧುರ ಕಹಳೆ (ಅಷ್ಟಾ. ಸ್ತೂ ೯-೬೬) : ಅಳಿಗಳಾಣತಿಯಂ ಮಾಟಿಸ್ಪಿಡೆಯೊಳ್ ಕಿನ್ನರ ಕನ್ನೆಯರೊಡನೆಯ ತಾರ್ಯಸಿ ಚಿಹಣತನವಂ ಸಲಿಕುಂ (ಚಂದ್ರಪ್ರಪು. ೧೧-೩೬) ; ಸಂತತಪೂರ್ವ್ವವ ಶರ್ವನ ಸಭೆಯೊಳ್ ಗಡಣದ ಕಿನ್ನರಿಯತರ್ಾರ್ಯಸಲ್ (ಶೃಂಗೀರ. ಹ. ೪೬೬-೧೧). [ ತಾರ್$_3$ + – ಇಸು$_3$ ]

**ತಾರಯ್ಸು** 'ತಾರಯಿಸಂ' ನೋ.

**ತಾರರಮಣ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ತಾರರಮಣನ ಸೋಲಿಪ ನಖದ ಕಾಂತಿ (ವಿದಾಳ್ವ. ೧೧-೦). [ ತಾರ್$_3$ + ರಮಣ ]

**ತಾರವಿಸ** 'ತರವೀಸ' ನೋ.

**ತಾರವಿಸು** 'ತಾರಯಿಸಂ' ನೋ

**ತಾರಶೈಲ** (ನಾ). ಬೆಳ್ಳಿಯ ಬೆಟ್ಟ; ಕೈಲಾಸಪರ್ವತ: ರಣದೊಳ್ ರಾವಣನಂ ಜವಂಗೆ ಪೊಸತಿಕ್ಕಲ್ ತಾರಶೈಲಕ್ಕೆ ತೆಂಕಣದಂ ಕಂಕಣದಂತೆ ಕೈಗೆ ವರಿಸಲ್ ಭೂಚಕ್ರಮಂ ಚಕ್ರಮಂ (ಶಂರಾಮಾ. ೩-೦೬೦). [ ತಾರ್$_3$ + ಶೈಲ ]

**ತಾರಷಡ್ಜ** (ನಾ). [ಸಂಗೀತ] ತಾರಸ್ಥಾಯಿಯಲ್ಲಿ ಹಾಡುವ 'ಸ' ಎಂಬ ಸ್ವರ: ಇಂತಹ ಸ್ವರಕ್ಕೆ ತಾರಷಡ್ಜವೆಂದು (Octave=ಅಷ್ಟಮಸ್ವರ)ಹೆಸರು (ಭಾಕವಿ. ೦೨೮); ಒಂದು ತಂತಿಯ ಉದ್ದವನ್ನು ಅರ್ಧಮಾಡಿ ಎಳೆತವನ್ನು ಮೊದಲಿನಂತೆಯೇ ಇಟ್ಟದ್ದರೆ ಬರುವ ಸ್ವರವು ತಾರಷಡ್ಜ (ಭಾಕವಿ. ೦೪೩). [ ತಾರ್$_3$ + ಷಡ್ಜ ]

**ತಾರಸರ** (ನಾ).=ತಾರಸ್ವರ ೨: ತಾರಸರದಲಿ ಕೊರಲನೆತ್ತಿ ಹೇಳು (ವಿಸೀಗೀ. ೩೨-೧೧). [ ತಾರ್$_3$ + ಸರ$_3$ ]

**ತಾರಸಿ** (ನಾ). (ಗಾರೆ ಅಥವಾ ಸಿಮೆಂಟಿನಿಂದ ಮಾಡಿದ)ಮೇಲ್ಛಾವಣಿ; ಮಾಳಿಗೆ : ತಾರಸಿಯ ಎರಡು ಮಹಡಿಯ ಭವ್ಯ ಮನೆ (ಅನ್ನಪೂ. ೩೦) ; ತಾರಸಿಯನ್ನು ನೋಡುತ್ತಾ ಯೋಚಿಸುವಾಗ ಎಲ್ಲಾ ಯೋಚನೆಗಳೂ ಮನಸ್ಸಿನ ಮುಂದೆ ಹಾದುಹೋಗುತ್ತವೆ (ಕುಸುಸಂ. ೧೦). [ ←ಇಂ. Terrace ]

**ತಾರಸಿಯಕಾಯಿ** (ನಾ). ಒಂದು ಬಗೆಯ ಕಾಯಿ : "ಕಟು–ತಾರಸಿಯ ಕಾಯಿ, ಎಳ್ಳು" (ಒಷಧಿ. ೦೯). [ ತಾರಸಿ? + ಕಾಯಿ$_1$ (<ಕಾಯ್$_1$) ]

**ತಾರಸ್ಥಾಯಿ** (ನಾ). [ಸಂಗೀತ] "ಷಡ್ಜ ಸ್ವರದಿಂದ ಆರೋಹಣ ಕ್ರಮದಲ್ಲಿ ಬಂದು ಇನ್ನೂ ಮೇಲಿನ ಷಡ್ಜ ಸ್ವರವನ್ನು ಸೇರುವ ಸಪ್ತಸ್ವರ ಸಮುದಾಯ" (ಸಂಗೀತಂ. ೧೮) ; ತಾರಸ್ಥಾಯಿಯ ಶಬ್ದಗಳು ಅಂತರ್ಗತವಾಗುವುದು ಸುಲಭ (ಭಾಕವಿ. ೦೪೯) ; ಅವರು ತಾರಸ್ಥಾಯಿಯಲ್ಲಿ . . . ಹಾಡುತ್ತಿದ್ದ ಬೃಗಗಳು (ಭಿಕರ್ಾಗಳು) ಎಲ್ಲರ ಮನಸ್ಸನ್ನೂ ಸೂರೆಗೊಳ್ಳುತ್ತಿದ್ದುವು (ಸಂಗೀತ. ೨೬). [ ತಾರ್$_3$ + ಸ್ಥಾಯಿ ]

**ತಾರಸ್ವರ** (ನಾ). ೧. ಜೋರಾದ ಧ್ವನಿ : ಅವನು ತಾರಸ್ವರದಲ್ಲಿ ಮಾತು ಮುಂದುವರಿಸಿದನು (ಪುನರು. ೧೯೧). ೨. [ಸಂಗೀತ] ಏರಂದನಿ ; ಉಚ್ಚಸ್ವರ : ವರಮಂದ್ರ ಮಧ್ಯತಾರಸ್ವರದಿಂದಂ . . . ಪಾಡಿದಂ (ವೀರವಿ. ೬-೪೦) : ಮಂದ್ರ ಮಧ್ಯಮತಾರಸ್ವರಗರ್ಭ ಮಧುರ ಸಂಗೀತ (ಯಾದವ. ೩-೦ ವ). [ತಾರ್$_3$ + ಸ್ವರ ]

**ತಾರಹಾರ** (ನಾ). ಮುತ್ತುಗಳನ್ನು ಪೋಣಿಸಿ ಮಾಡಿದ ಸರ,–ಹಾರ : ಎನಗಾಸದೆೊೀಜ್ ಬಿಸಸಿತಮೆನಿಸುವ ನಿಜತಾರಹಾರಲತೆಯಿಂದು ಹಂಸನ ಪೊಲ್ಮಾನಸಸಂಭವಮೆನಿಪ ಮದೀಯಾಭಿಮಾನಮಂ ಕಟ್ಟೊಯ್ದೌ (ಕಾದಂಪೂ. ೬೦೨); ತಾರಹಾರ ಶಂಖ ಶಶಾಂಕ ಶಾರದಾಭ್ರ ವಿಭ್ರಮಭ್ರಾಜಿತ ತ್ರಿಭುವನಾಂತರಾಳ ಪ್ರವರ್ತಿತ ಕೀರ್ತಿಗಳಂ . . . ಕಂಡು (ಸುಕುಮಾ. ೯-೦೦೮ ವ) ; ಮುಕ್ತಾಫಲ ತರಲತರತ್ತಾರಹಾರೇಂದು ಕುಂದೋಪಮ ಕೀರ್ತಿವ್ಯಾಪ್ತ (ಎಕ. II, ೬೪-೬೪ ; 1168) ; ನೀಂ ಮುಟ್ಟಲಂಜುವ ತಾ[ಪಾಠಾಂ. ತೋ]ರಹಾರಂ ಭಕ್ತರ ಕೊರಳ್ಗಳೊಳು (ಬಸರ. ೮-೮೩) ; ಮುಕ್ತಾಕುಂಡಳಂ ಗಂಡದೊಳ್ ವಿಳಿದರ್ಾಡುತ್ತಿರೆ ತಾರಹಾರಕಿರಣಂ ಬೆಳ್ದಿಂಗಳಂ ಬೀಱೆ (ರಾಜಶೇ. ೦೪-೨) ; [ ತಾರ್$_3$ + ಹಾರ್$_1$ ]

**ತಾರಾಕೂಟ** (ನಾ). ವಧೂವರರ ನಕ್ಷತ್ರಗಳ ಹೊಂದಾಣಿಕೆ,–ಸಂಬಂಧ; ದ್ವಾದಶಕೂಟಗಳಲ್ಲಿ ಒಂದು : ಇನ್ನು ಜಾತಕ ನೋಡಿ, ತಾರಾಕೂಟ ಲೆಕ್ಕಹಾಕಿ, ಗಂಟುಹಾಕಿಕೊಂಡ ಮದುವೆಯ ಗತಿ ಏನಾದೀತೋ ಎಂಬ ಭಯ (ಸ್ವಪ್ನಪೂ. ೨೩೨). 'ದಿನಕೂಟ' ಪರಾ. [ ಸಂ. (ತಾರಾ + ಕೂಟ) ]

**ತಾರಾಗ** (ನಾ). ಬೆಳ್ಳಿಯ ಬೆಟ್ಟ ; ರಜತಾದ್ರಿ : ಎಲೆ ತಾರಾಗಂ ಹರು ಕಣ್ಣಿಡೆ ಕರಗಿದುದು (ಕಾದಂಪೂ. ೬೩೪) ; ಮಾಂಗಲ್ಯತಾರಾಗತುಂಗತರ ಶೃಂಗಾನುಸಂಗಾಯತನ ಜಿ ತಾ ನಂ ಗ ಭವಭಂಗ (ಉದ್ಭರೀ. ೬-೪೪) : ತಾರಾಗವುಂ ದಾಂಟಿ, ಋಷಭಾದ್ರಿಯಂ ನೋಡಿ, ಗುರುತಿಸಿದನೆಳದ ನೋಷಧಗಿರಿಯ ಮೇಘಾಚ್ಛನ್ನ ಜ್ಯೋತಿಶೃಂಗರುಗದಲ್ಲಿ (ಶ್ರೀರಾಮಾ. ೬೨೩-೪೪೪). [ ತಾರ್$_3$ + ಅಗ$_2$ ]

**ತಾರಾಗಣ** (ನಾ). ೧. ತಾರೆಗಳ ಗುಂಪು; ನಕ್ಷತ್ರಗಳ ಸಮೂಹ: ತಾರಾಗಣಂಗಳ್ ನಿಂದ ನೆಲೆಯಿಂ ದೆಸೆಯಂ ಪೊಟ್ಟುಮನಱಿದು ತೆಂಕವೊಗದೆ ಪಯಣಂಬೋಗಿ (ಪಂಪಭಾ. ೩-೮ ವ) ; ಜಲದಾಧ್ವಂಬರಮೊತ್ತಿದಂಘ್ರಿಯ ನಖಾಂಶುಶ್ರೇಣಿ ತಾರಾಗಣಚ್ಛಲದಿಂದಿರ್ದನಂ . . . ಬಲಿಯಂ ಮೆಟ್ಟ ರಸಾತಳಕ್ಕಟ್ಟಿದೈ ನೀಂ (ಜಗವಿ. ೦-೩೯). ೨. ನಟನಟಿಯರ ಗುಂಪು : ಈ ಚಿತ್ರದಲ್ಲಿ ಪ್ರಸಿದ್ಧ ತಾರಾಗಣವಿದೆ (ರೂಢಿ). [ ಸಂ. (ತಾರಾ + ಗಣ) ]

**ತಾರಾಗಣವಿಮಾನ** (ನಾ). [ಜೈನ] ಒಂದು ಬಗೆಯ ಜ್ಯೋತಿರ್ವಿಮಾನ: ಸಾಸಿರದ ನೂಱಿಪ್ಪತ್ತೊಂದು ಯೋಜನಮಗಲದಿಂ ತಾರಾಗಣ ವಿಮಾನಂಗಳಿರ್ಕುಂ (ಸುಕುಮಾ. ೧೧-೫೯ ವ). [ ತಾರಾಗಣ + ವಿಮಾನ ]

**ತಾರಾಗರ್ಭ** (ನಾ). ಸೌರವ್ಯೂಹದಿಂದಾಚೆಗಿರುವ ನಕ್ಷತ್ರಪುಂಜಗಳಿಂದಾಗಲಿ. ಅನಿಲದ್ರವ್ಯ ಅಥವಾ ನಕ್ಷತ್ರದ್ರವ್ಯದಿಂದಾಗಲಿ ಆದ ಆಕಾಶದ ಕಾಂತಿಪ್ರದೇಶ; ಜ್ಯೋತಿಃಪಟಲ ; ಜ್ಯೋತಿರ್ಮೇಘ : ಅಗ್ನಿಕುಂಡದುರಿ ದೇದೀಪ್ಯಮಾನವಾದುದು . . . ರಾತ್ರಿಯಾಕಾಶದಲಿ ಕಾಣ್ಬೊಂದು ತಾರಾಗರ್ಭದಂತೆ (ಶ್ರೀರಾಮಾ. ೧೧-೨೬೫) : ಮೃಗರಾಶಿ (Orion)ಯಲ್ಲಿರುವ ದೊಡ್ಡ ತಾರಾಗರ್ಭ(Nebula)ವನ್ನು ನೋಡಿದನು (ವಿಜ್ಞಾ.ಕ. ೫೬). [ ಸಂ. (ತಾರಾ + ಗರ್ಭ) ]

**ತಾರಾಗುಚ್ಛ** (ನಾ). ನಕ್ಷತ್ರಗಳ ಗುಂಪು: ಯೌಧಿಷ್ಠಿರ ತಾರೆಗಳಿಲ್ಲದ ತಾರಾಗುಚ್ಛಗಳಿಲ್ಲವೇ ಇಲ್ಲವೆಂದು ಹೇಳಬಹುದು (ಜಗತ್ತು. ೪೪).
[ ಸಂ. (ತಾರಾ + ಗುಚ್ಛ) ]

**ತಾರಾಚಲ, ತಾರಾಚಳ** (ನಾ). = ತಾರಾಗ : ಮುಂದಣ ತಾರಾಚಲಶಿಖರಮನೇಱಿದತ್ತು ಕಿನ್ನರಮಿಥುನಂ (ಕಾದಂಪೂ. ೬೨೨) : ತಾರಾಚಲಂಗಳಂತೆ ದೆಸೆಯಂ ಧವಲಿಸುವ ದವಳಾರಂಗಳಿಂ (ಮಲ್ಲಿಪು. ೨-೫೪) ; ಘನ ತಾರಾಚಲರಾಜಂಗನುಗುಣರಚಿತಾಭ್ರತುಂಗಪಟಕುಟಿಯ ಮಹಾಕನಕದ ಕಂಬಂ ಬೋಲ್ಕಿಗೆ ಮಿನುಗುಗುಂ (ಹಮ್ಮಿರ. ೦-೩೪). **ತಾರಾಚಳ :** ತುಹಿನಕರ ಸುರೇಭೇನ್ದ್ರ ನೀಹಾರ ತಾರಾಚಳ (ಸೌಇಇ. XX, ೨೦-೩೬; 1019); ತಾರಾಚಳದೊಡನೆ ರೋಹಣಂ ಪೋರ್ದುದೆನಲ್ ವಾರಣದೊಡನೆ ಖಗಪ್ರಭು . . . ಪೊಣರ್ದಂ (ಜಗವಿ. ೧೩-೧೦೦). [ ತಾರ್‌₃ + ಅಚಲ ]

**ತಾರಾಚಳ** 'ತಾರಾಚಲ' ನೋ

**ತಾರಾಜು** (ನಾ). ನಾಶ; ಧ್ವಂಸ: ಬೆಂಗಳೂರು ಪ್ಯಾಟಿ ಹೊಕ್ಕು ಲೂಟಿಸುತ್ತಾ ಬಹಳ ಮುಗ್ಗಡೆಯಾದ್ದರಿಂದ ಬೆಂಗಳೂರು ಶೀಮೇನೆಲ್ಲಾ ತಾರಾಜುಮಾಡಿ ಕೋಟೆಗೆ ರಸ್ತು ಬಿಡದೆ (ಹೈದರ. ೬೬). [ ←ಪಾರ. ಹಿಂ. ತಾರಾಜ್ ]

**ತಾರಾಟ** (ನಾ). ಓಡಾಟ ; ಪದೇ ಪದೇ ಬಂದು ಹೋಗುವಿಕೆ : ಏನೇ ಹುಡುಗಿ ತಾರಾಟ, ಶಾನುಭೋಗರ ಮನೆ ದೇವರೂಟ (ಗಾದೆ).
[ <ತಾರಾಡು ]

**ತಾರಾಡಿಸು** (ಕ್ರಿ). ತುಂಬ ಓಡಾಡಿಸು ; ನಿಂತಲ್ಲಿ ನಿಲ್ಲದಂತೆ ಮಾಡು : ಹರಣ ಶಾಣೆ ಹಗ್ಗದ ಸರಪಣಿ ತಾರಾಡಿಸುವಂತೆಲೋ (ನಾಪದ. ೦೪೩) : ಕರಿಪತಿ ಕಪಿಲೇಶ್ವರನನ್ನು ರೋಡಾಡಿಸಿ, ತಾರಾಡಿಸಿ ಬಂದ ದಾರಿಗೆ ಸುಂಕವಿಲ್ಲದ ಹಾಗೆ, ಹಿಮ್ಮೆಟ್ಟುವಂತೆ ರಾಮ ಕಾದಾಡಿದನು (ನಂಜುಂಡ. ೪೫).
[ ತಾರಾಡು + - ಇಸು₃ ]

**ತಾರಾಡು** (ಕ್ರಿ). ಓಡಾಡು ; ಬಂದು ಹೋಗಿ ಮಾಡು ; ಎಡೆತಾಕು : ನೂರಾಡಿ ಏನು ಫಲವು ತಾರಾಡುವಾಗ ಒಲವು (ಸಖೀಗೀ. ೨೦-೨) : ಗೃಹಿಣಿಗೆ ಅಡಿಗೆಮನೆಗೂ ಉಗ್ರಾಣಕ್ಕೂ ತಾರಾಡುವುದರಲ್ಲಿ ವ್ಯರ್ಥವಾಗಿ ಕಾಲ, ಶಕ್ತಿ ಕಳೆದುಹೋಗುತ್ತದೆ (ಗೃಹವಿ. ೧೬೫): ಕಲ್ಲು ಮುಳ್ಳುಗಳು ಹೇರಳವಾಗಿ ಬೆಳೆದು ತಾರಾಡುವುದೇ ಬಹಳ ಕಷ್ಟವಾಗುತ್ತಿತ್ತು (ರಾಯಚ. ೯).

**ತಾರಾಡಿ ಹೋಗು** = ಕಷ್ಟಪಡು; ಹಿಂಸೆಗೊಳಗಾಗು : ನಾಗುವು ಈ ಎರಡು ಕಡೆಯ ಎಳೆತದಿಂದ ತಾರಾಡಿ ಹೋದಳು (ನಾಲ್ಕುಮು. ೮೦).
[ <ತಾಱು₆ + ಆಡು₁ ]

**ತಾರಾತಂಟಲು** (ನಾ). ತಂಟೆ ; ತಕರಾರು : ಮೂರು ಹೊತ್ತೂ ತಾರಾತಂಟಲು, ತಗರುಬಗರು . . . ಮನೆಹಾಳುತನ ಇವೆಲ್ಲಾ ಕಲಿತುಕೊಂಡರೆ ದೇವರು ಹ್ಯಾಗಿರುತಾನೋ ಮನೇಲಿ ? (ಶ್ರೀಕಥ. ೩೬).
[ ? + ತಂಟಲು ]

**ತಾರಾತಿಕಡಿ** 'ತಾರಾತಿಗಡಿ' ನೋ.

**ತಾರಾತಿಗಡಿ, ತಾರತಕ್ಕಡಿ, ತಾರತಿಗಡಿ, ತಾರಾತಿಕಡಿ** (ನಾ). ಮೋಸ; ವಂಚನೆ ; ಕಪಟೋಪಾಯ: ಏನಾದರೂ ತಾರಾತಿಗಡಿ ಮಾಡಿಯೇ ಬಗೆಹರಿಸಿ ಸಂಸಾರ ಸಾಗಿಸಬೇಕು (ಗಂಗಾಸಾ. ೪೬). **ತಾರತಕ್ಕಡಿ :** 'ತಾರತಕ್ಕಡಿಗ' ಪರಾ. **ತಾರತಿಗಡಿ :** "ತಾರತಿಗಡಿ-ವಂಚನೆ" (ಜಾನಕೋ. ೬೬). **ತಾರಾತಿಕಡಿ:** ಇನ್ಸ್‌ಪೆಕ್ಟರರು ಬಂದಾಗ . . . ಏನಾದರೂ ತಾರಾತಿಕಡಿ ಮಾಡಿದರಾಯಿತು (ಸ್ವಪ್ನಹೊ. ೬೬) ; ನನ್ನ ಕೈಕಾಲು ಗಟ್ಟಿಯಾಗಿರುವಷ್ಟು ದಿನ, ಏನಾದರೂ ತಾರಾತಿಕಡಿಮಾಡಿ ಬದುಕಿಯೇನು (ಜಿಗುಕ. ೬೨).
[ ? + ತಿಗಡಿ ]

**ತಾರಾದ್ರಿ** (ನಾ). = ತಾರಾಗ : ಶಾರದಾಭ್ರ ತಾರಾದ್ರಿ ಪಯಃಕುಂದೇಂದು ಯಶೋಭಾಸುರನೆಂದು ಮಸಂಗೊಂಡು (ಸುಕುಮಾ. ೦-೫೬); ತಾರಾದ್ರಿಯೊಳು ಮುನ್ನ ನಾವೆಂದು ಕಂಡುದಿಲ್ಲೀ ರೂಪನೆಂದು ನುಡಿದರು (ಭರತ. ೪೪-೬೮) : ಇಂಗಡಲ ಮಧ್ಯದೊಳು ತಾರಾದ್ರಿ . . . ರಾಜಿಸುತಿರ್ಪುದು (ಪ್ರಾರ್ಥಲಾ. ೦-೨೮). [ ತಾರ್‌₃ + ಅದ್ರಿ ]

**ತಾರಾಧಿನಾಯಕ** (ನಾ). = ತಾರಾಧಿಪ : ತಾರಾಧಿನಾಯಕಂ ನಿಲೆ ಹೋರೇಶಂಗುಪಚಯರ್ಕ್ಷದೊಳ್ . . . ಅರಿಷ್ಟಂ ಕೆಡುಗುಂ (ಜಾತತಿ. ೭-೬). [ ಸಂ. (ತಾರಾ + ಅಧಿನಾಯಕ) ]

**ತಾರಾಧಿಪ** (ನಾ). ನಕ್ಷತ್ರಗಳ ಪ್ರಭು ; ತಾರೆಗಳ ಒಡೆಯ ; ಚಂದ್ರ : ಸುತಾರೆಗೆ ತಾರಾಧಿಪನಂತೆ ವಿಸ್ತರಿಸಿದಂ ಪ್ರಾಣೇಶ್ವರಪ್ರೀತಿಯಂ (ಶಾಂತಿಪು. ೬-೨೩). [ ಸಂ. (ತಾರಾ + ಅಧಿಪ) ]

**ತಾರಾಧಿಪತಿ** (ನಾ). = ತಾರಾಧಿಪ : "ತಾರಾಧಿಪತಿ . . . ಅಬ್ಧಿನಂದನಂ ದ್ವಿಜರಾಜನೆನೆ ಸುಧಾಂಶುವೆನಿಕ್ಕುಂ" (ಮಂಗರಾ. ೦೧-೪); ತಾರಾ ಜಾನಕಿಯುಂ ಪೋಗಿ ತಾರಾ ತರಳನೇತ್ರಯುಂ ತಾರಾಧಿಪತಿ ತೇಜಸ್ವಿ ತಾರಾದಿವಿಜಯೋದಯಾ (ಕವಿರಾ. ೨-೦೨೮). [ ಸಂ. (ತಾರಾ + ಅಧಿಪತಿ) ]

**ತಾರಾಧೀಶ** (ನಾ). = ತಾರಾಧಿಪ : ಇದು ಚಿತ್ರಂ ನಿಜವಕ್ತ್ರಶೋಭೆ ತಾರಾಧೀಶನಂ ಗೆಲ್ದುದು (ಜಗವಿ. ೨-೬೨). [ ಸಂ. (ತಾರಾ + ಅಧೀಶ) ]

**ತಾರಾಧೀಶ್ವರ** (ನಾ). = ತಾರಾಧಿಪ : ತಾರಾಧೀಶ್ವರನುದಯದೆ ವಾರಾಸಿ ಕಡಂಗಿ ಪೆರ್ಚುವಂತೆ (ಧರ್ಮಾಮೃ.೦೪-೧೪೦). [ಸಂ. (ತಾರಾ + ಅಧೀಶ್ವರ) ]

**ತಾರಾಧ್ವ** (ನಾ). ನಕ್ಷತ್ರಮಾರ್ಗ ; ಆಕಾಶ : ಆ ಮಹಾರ್ಣವಂ . . . ತಾರಾಧ್ವದಂತೆ ದುರ್ಧರ ಗ್ರಹನಿರುದ್ಧಮುಂ ನಾಗಲೋಕದಂತನಿಮಿಷ ಪ್ರಕೀರ್ಣಕಮುಂ . . . ಎನಿಸಿದುದು (ಜಗವಿ. ೦-೪೪ ವ).
[ ಸಂ. ತಾರಾಧ್ವನ್ (ತಾರಾ + ಅಧ್ವನ್) ]

**ತಾರಾನಿಕರ** (ನಾ). = ತಾರಾನಿವಹ : ತಾರಾನಿಕರಾವೇಷ್ಟಿತ ತಾರಾಪತಿಯಂ . . . ಅನಂತವೀರ್ಯಂ ಕಂಡಂ (ಆದಿಪು. ೦೬-೪೬).
[ ಸಂ. (ತಾರಾ + ನಿಕರ) ]

**ತಾರಾನಿವಹ** (ನಾ). ನಕ್ಷತ್ರಗಳ ಗುಂಪು ; ತಾರೆಗಳ ಸಮೂಹ : ಅಮಲ ತಾರಾನಿವಹದಲಿ ರೋಹಿಣಿಯವೋಲ್ . . . ಕಂಡನವ ಪಾಂಚಾಲ ನಂದನೆಯು (ಕುವ್ಯಾವಿ. ೨-೫) ; ತಾರಾನಿವಹವ ನಡೆಯಿಪ ಪರಿವಹ ಪವನನ ಮಾರ್ಗವಿದು (ಶಾಕುಂತ. ೦೦೦-೧೬೯). [ ಸಂ. (ತಾರಾ + ನಿವಹ) ]

**ತಾರಾನೀಕ** (ನಾ). = ತಾರಾನಿವಹ : ತುಹಿನಕರ ಸುರೇಭೇನ್ದ್ರ ನೀಹಾರ ತಾರಾಚಳ ತಾರಾನೀಕ (ಸೌಇಇ. XX, ೨೦-೩೬ : 1019).
[ ಸಂ. (ತಾರಾ + ಅನೀಕ) ]

**ತಾರಾನ್ವಯ** (ನಾ). ಉತ್ತಮ ವಂಶ (?) : ನಿಯುತಸಮುಚ್ಚಯಸಾರಾಸಾಧನೀಯಾದಿ ತಾರಾನ್ವಯ ಪರಮತಪೋನುಷ್ಠಾನನಿಷ್ಠಾರ್ಥಸಿದ್ಧಂ (ಕವಿರಾ. ೩-೨೧೫). [ ಸಂ. (ತಾರಾ + ಅನ್ವಯ) ]

**ತಾರಾಪತಿ** (ನಾ). = ತಾರಾಧಿಪ : ಧರಾಧಿಪಾ ನಿನ್ನನ್ನಂ ವಿತತ ಯಶನಿಲಯ ತಾರಾಪತಿ ದಿನಕರಸದೃಶತೇಜನೆಂಬುದುಮುಂಟೇ (ಕವಿರಾ. ೩-೮೪) ;

ತಾರಾನಿಕರಾವೇಷ್ಟಿತ ತಾರಾಪತಿಯಂ . . . ಅನಂತವೀರ್ಯಂ ಕಂಡಂ (ಆದಿಪು. ೧೬-೪೬) : ತಾರೆಗಳ ನಡುವಣ ತಾರಾಪತಿಯ ಕಳೆಯಂತೆ . . . ಸಕಲಸ್ತ್ರೀಯರ ನಡುವೆ ಗಿರಿರಾಜತನೂಜೆ ವಿರಾಜಿಸುತಿರ್ದು (೧ ರಿ ಶ. ೪-೪೩ ವ). [ ಸಂ. (ತಾರಾ + ಪತಿ) ]

**ತಾರಾಪಥ** (ನಾ). ೧. ನಕ್ಷತ್ರಮಾರ್ಗ; ಆಕಾಶ: "ನಭಃ . . . ತಾರಾಪಥಃ, ಪುಷ್ಕರಂ . . . ದ್ಯುಃ-ಈ ೧೫ ಆಕಾಶಂ" (ಹಲಾಯು. ೨೨-೦೩೬) ; ತಾರಾಪಥಕ್ಕೆ ನೆಗೆದಂ ಸುರಗಜಸ್ಥಿತಂ (ನಂಬಿರ. ೦೯-೬೦). ೨. ತಾರಾ ಭಗವತಿಯ ಪಾದ. ೧, ೨ : ಗ್ರಹಗತಿಯಂ ಕಂಡು ತಥಾಗತಮತೋಪಾಸಕನಂತೆ ತಾರಾಪಥಕ್ಕೆಱಗಿ (ಸುಕುಮಾ. ೩-೬ ವ). [ ಸಂ. (ತಾರಾ + ಪಥಿನ್ + -) ]

**ತಾರಾಪರಿಕರ** (ನಾ). = ತಾರಾನಿವಹ : ಸುತ್ತಿದ ತಾರಾಪರಿಕರಮೆನೆ ವಜ್ರಾವಳಿ ವಿರಚಿತ ಕೇಯೂರವಳಯಮೇಂ ತೊಳಗಿದುದೋ (ಚಂದ್ರಪು. ೬-೫೯). [ ಸಂ. (ತಾರಾ + ಪರಿಕರ) ]

**ತಾರಾಪುಂಜ** (ನಾ). ೧. ನಕ್ಷತ್ರಗಳ ಸಮೂಹ,-ಗುಂಪು : ನಕ್ಷತ್ರಪುಂಜ ; ತಾರಾಪುಂಜ (Cluster of stars. ಪಾರಿಭಿ. ೧೬). ೨. ಗಮನ ಸೆಳೆಯುವುದಕ್ಕಾಗಿ ಹಾಕುವ ಮೂರು ನಕ್ಷತ್ರ ಚಿಹ್ನೆ : (Asterism. ಪಾರಿಭಿ. ೬). [ ಸಂ. (ತಾರಾ + ಪುಂಜ) ]

**ತಾರಾಬಲ** (ನಾ). [ಜ್ಯೋತಿ] ಜನ್ಮನಕ್ಷತ್ರದಿಂದ ಇಷ್ಟಕಾಲದ ನಕ್ಷತ್ರದವರೆಗೆ (ಎರಡೂ ಸೇರಿ) ಲೆಕ್ಕಮಾಡಿ ೯ ರಿಂದ ಭಾಗಿಸಿದಾಗ ಶೇಷ ೨, ೪, ೬, ೯ ಉಳಿದರೆ ಬರುವ ಬಲ,-ಪ್ರಭಾವ,-ಫಲ : ಎಮ್ಮವರು ಬೆಸಗೊಂಡರೆ . . . ಚಂದ್ರಬಲ ತಾರಾಬಲವುಂಟೆಂದು ಹೇಳಿರಯ್ಯಾ (ಬಸವ. ೮೩) : ಯಾದವ ನಾರಾಯಣನ ಅವತಾರಕ್ಕೆ ತಾರಾಬಲಂ ಅಯಿಶ್ವರ್ಯಕ್ಕೆಯಾದಿತ್ಯಬಲಂ (ಸೌಇಇ. XX, ೨೦೨-೦೦ ; 1244). [ ಸಂ. (ತಾರಾ + ಬಲ) ]

**ತಾರಾಭಗವತಿ** (ನಾ). [ಬೌದ್ಧ] ಒಬ್ಬ ದೇವತೆಯ ಹೆಸರು : ತಾರಾಭಗವತಿಯ . . . ಬೌದ್ಧದೇವರ ಅಲ್ಲಿಯ ಸಮಸ್ತ ಪರಿವಾರದೇವರ ಅರ್ಚ್ಚನಪೂಜನಾನಿಮಿತ್ತಕ್ಕಂ (ಎಕ. VII, ಶಿಕಾರಿ. ೦೭೦-೦೫ ; 1065). [ ಸಂ. ತಾರಾಭಗವತೀ (ತಾರಾ + ಭಗವತೀ) ]

**ತಾರಾಭ್ರಮಂಡಲ** (ನಾ). ನಿರ್ಮಲವಾದ ಆಕಾಶ : ದಶಗ್ರೀವಂ . . . ಬಂದೊಡ್ಡಿ ತಾರಾಭ್ರಮಂಡಲಮಂ ಮೂವಳಸಾಗೆ ಮುತ್ತೆ (ಪಂರಾಮಾ. ೫೩-೩೨). [ ತಾರ$_3$ + ಅಭ್ರ + ಮಂಡಲ ]

**ತಾರಾಮಂಡಲ** (ನಾ). ೧. ನಕ್ಷತ್ರಗಳ ಸಮೂಹ : ಕೋಟಿ ಕೋಟಿ ತಾರಾಮಂಡಲಗಳಲ್ಲಿ ನಮ್ಮದು ಒಂದಂತೆ (ಮೂರುದಾ. ೨೦೭). ೨. ನಕ್ಷತ್ರಗಳಿಂದ ಕೂಡಿದ ಆಕಾಶಮಂಡಲ,-ನಭೋಮಂಡಲ : ತಮಂಧಮೆಂಬ ಕೊಪ್ಪರಿಗೆಯಲ್ಲಿ ತಾರಾಮಂಡಲದ ಉದಕವ ತುಂಬಿ ಮಹಾಂಧಕಾರದಿಂದ ಉರುಹರಾಗಿ ದಾವಾನಳವೆದ್ದಿತ್ತು (ಪ್ರಭುಲಿಮಾ. ೨೩೪-೭೮೭). ೩. ಒಂದು ಬಗೆಯ ಸುಡುಮದ್ದು : (ಕ). [ ಸಂ. (ತಾರಾ + ಮಂಡಲ) ]

**ತಾರಾಮಾರು** 'ತಾರುಮಾರು$_2$' ನೋ.

**ತಾರಾಮಾರ್ಗ** (ನಾ). ೧. ನಕ್ಷತ್ರಮಾರ್ಗ; ಆಕಾಶ. ೨. ಒಂದು ಬಗೆಯ ಸೀರೆ ; ಆಕಾಶಬಣ್ಣದ ಸೀರೆ : ರಂಗು ತರಂಗ ತಾರಾಮಾರ್ಗ ಗುಜ್ಜರಿ ಸಿಂಗಳ ಗುಲುಗುಂಜಿ ಮಡಿಯು (ಅಮುಕಾಂ. ೪-೦೨). [ ಸಂ. (ತಾರಾ + ಮಾರ್ಗ) ]

**ತಾರಾಮೂಲ** (ನಾ). ನಕ್ಷತ್ರದ್ರವ್ಯ; ಜ್ಯೋತಿರ್ಮೇಘ ; ನೀಹಾರಿಕೆ : ಬಹುದೂರದಲ್ಲಿ ಹೊಗೆಯ ಸುರುಳಿಯಂತೆ ಇತರ ಲೋಕಗಳು ಕಾಣುವುವು. ತಾರಾಮೂಲ(Nebula)ಗಳೆನ್ನಬಹುದು (ವಾಂಪ್ರ. I, ೨೪೪). [ ಸಂ. (ತಾರಾ + ಮೂಲ) ]

**ತಾರಾಮೃಗ** (ನಾ). ಮೃಗದ ಆಕೃತಿಯಲ್ಲಿರುವ ನಕ್ಷತ್ರ ; ಮೃಗಶಿರಾ ನಕ್ಷತ್ರ : ರುದ್ರನು ತಾರಾಮೃಗವನ್ನು ಅಟ್ಟಿಕೊಂಡು ಹೋದಂತೆ, ಜಿಂಕೆಯನ್ನು ಅಟ್ಟಿಕೊಂಡು ಹೋದನು (ವಚಭಾ. ४०೬). [ ಸಂ. (ತಾರಾ + ಮೃಗ) ]

**ತಾರಾಮೈತ್ರಿ** (ನಾ). ದರ್ಶನಮಾತ್ರದಿಂದಲೇ ಉಂಟಾಗುವ ಪ್ರೀತಿ ; ಕಣ್ಬೇಟ ; ಚಕ್ಷೂರಾಗ : ಎಲ್ಲಿಯಾದರೂ ಆನಂದಮಯವಾದ ಪ್ರೀತಿಯುಂಟಾದರೆ ಜನರು ಅದಕ್ಕೆ ತಾರಾಮೈತ್ರಿಯೆಂತಲೂ . . . ಅನ್ನುತ್ತಾರೆ (ಉರಾಜ. ೯೪). [ ಸಂ. ತಾರಾಮೈತ್ರೀ (ತಾರಾ + ಮೈತ್ರೀ) ]

**ತಾರಾಯಂತ್ರ** (ನಾ). ವಿದ್ಯುತ್ತಿನ ತಂತಿಗಳ ಮೂಲಕ ಸಮಾಚಾರಗಳನ್ನು ದೂರಕ್ಕೆ ಕಳಿಸುವ ಯಂತ್ರ ; ಟೆಲಿಗ್ರಾಫ್ : ಇಂಗ್ಲೆಂಡದಿಂದ ಅಮೇರಿಕದವರೆಗೆ ತಾರಾಯಂತ್ರದ ತಂತಿಯುನ್ನು ಈ ಮಹಾಸಾಗರದೊಳಗೆ ಹಾಕುವ (ಮುಂಬಯಿ. ೬-೩೦೩) ; ರೇಲು, ವಿಮಾನ, ತಾರಾಯಂತ್ರ ಆದಿಗಳ ಆವಿಷ್ಕಾರ ಇವು ದುರುಪಯೋಗ, ಸದುಪಯೋಗ ಎರಡೂ ಆದದ್ದುಂಟು (ಯಾತ್ರಿಕ. ೨೯) ; ತಾರಾಯಂತ್ರಗಳ, ಬಾನುಲಿಯ . . . ವರ್ತಮಾನ ವಿನ್ಯಾಸಗಳ ಸಂಕೀರ್ಣ ಸ್ಪರ್ಧೆ(ರಕ್ತದೃ. ೧೫೬). [ <ತಾರ$_3$ + ಯಂತ್ರ ]

**ತಾರಾಯುಗ್ಮ** (ನಾ). ಜೋಡಿ ನಕ್ಷತ್ರ : ಎರಡು ತಾರೆಗಳಿವೆ. ಬರಿಯ ಕಣ್ಣಿಗೆ ಎರಡೂ ಸೇರಿ ಒಂದೇ ಆಗಿ ಕಾಣುತ್ತವೆ. ಇಂಥ ತಾರೆಗಳಿಗೆ ತಾರಾಯುಗ್ಮಗಳೆಂದು ಹೆಸರು (ಜಗತ್ತು. ೬೩) ; ಇದು ಬಹು ಸುಂದರವಾದ ತಾರಾಯುಗ್ಮ (ನಕ್ಷತ್ರ. ೭೧). [ ಸಂ. (ತಾರಾ + ಯುಗ್ಮ) ]

**ತಾರಾರಾಜ** (ನಾ). ನಕ್ಷತ್ರಗಳ ಅರಸ; ಚಂದ್ರ : ತಾರಾರಾಜಕಲಾಪಚೂಡ ಕರುಣಾಪಾಂಗಂ ನಿರಂಗಂ ಮೃಡಂ . . . ಕೂರ್ತೀಗೆ ನಿರ್ವಿಘ್ನಮಂ (ಹಮ್ಮೀರ. ೦-೬೭). [ ಸಂ. (ತಾರಾ + ರಾಜನ್ + -) ]

**ತಾರಾವರ್ಗಾಂಕ** (ನಾ). ಕಾಂತಿಯ ಮೇರೆಗೆ ನಕ್ಷತ್ರಗಳಿಗೆ ಕೊಟ್ಟ ವರ್ಗಸಂಖ್ಯೆ : ಶೂನ್ಯವರ್ಗಾಂಕದ ತಾರೆಗಿಂತ ಎರಡೂವರೆಯಷ್ಟು ಕಾಂತಿಯ ತಾರಾವರ್ಗಾಂಕ-೧ ಆಗುತ್ತದೆ (ನಕ್ಷತ್ರ. ೦೩). [ ಸಂ. (ತಾರಾ + ವರ್ಗಾಂಕ) ]

**ತಾರಾವಳಿ** (ನಾ). ೧. ನಕ್ಷತ್ರಗಳ ಸಾಲು, - ಗುಂಪು : ಗಗನತಳದೊಳ್ ಪೊಳೆವ ತಾರಾವಳಿಯಂತೆ ನೀಲದ ನೆಲಗಟ್ಟಿನೊಳ್ ಪೊರೆದ ಪೂವಲಿ (ಕಾದಂಪೂ. ೬೯) ; ತಾರಾವಳಿಯಲರ್ಚಲಾರ್ಕುಮೆ ಭಾವಿಸೆ ಹಿಮಕಿರಣನಂತೆವೋಲ್ ಕುಮುದಿನಿಯಂ (ಪುಷ್ಪಪು. ೩-೭೪). ೨. ಒಂದು ಬಗೆಯ ಸೀರೆ : ಧಾವಳ್ಯ ದಿವ್ಯ ತಾರಾವಳಿಯ ಗಗನಮಾಲಾವಳಿಯ ವಿರುಪ ನೇತ್ರಾವಳಿಯ ಮುಖ್ಯ ನಾನಾವಿಧದ ಸೀರೆಗಳ . . . ಬೇಹಸಿತ ತೆಗೆದು (ನವಮೋ. ೧೭-೬೦). [ ಸಂ. ತಾರಾವಲಿ (ತಾರಾ + ಆವಲಿ) ]

**ತಾರಾವೀಧಿ** (ನಾ). = ತಾರಾಪಥ : ರಾಜವೀಧಿಯೊಳ್ ತಾರಾವೀಧಿಯಂ ಪುಗುವ ಚಂದ್ರನಂತೆ ಬರ್ಪ ಮನುಜೇಂದ್ರಚಂದ್ರನಂ ನೋಡಲೆಂದು ನೆರೆದು (ಮಲ್ಲಿಪು. ೯-೯). [ ಸಂ. (ತಾರಾ + ವೀಧಿ) ]

**ತಾರಾಸಂದೋಹ** (ನಾ). = ತಾರಾನಿವಹ : ತಾರಾಸಂದೋಹಮಧ್ಯಾಮೃತಕಿರಣನವೋಲ್ . . . ಎಸೆದನೊಲವಿನಂದುದ್ಭಟಕ್ಷೋಣಿಪಾಲಂ (ಉದ್ಭಟ. ೨-೬). [ ಸಂ. (ತಾರಾ + ಸಂದೋಹ) ]

**ತಾರಾಹಾರ** (ನಾ). = ತಾರಹಾರ: ಪಡೆಯಲಾಗವಶಿತರಲತರತ್ತಾರಾಹಾರುಜಿತನೀಹಾರಂ (ಆದಿಪು. ೧೨-೧೧೪) ; ಸೊಗಯಿಸಿದುದು ವಿಮಳತರಳ ತಾರಾಹಾರಂ (ಚಂದ್ರಪು. ೬-೫೮). [ ಸಂ. (ತಾರಾ + ಹಾರ) ]

**ತಾರಾಳಿ** (ನಾ). = ತಾರಾವಳಿ ೧ : ಶಶಿ ಸೂರ್ಯ ತಾರಾಳಿಗಳ್ ಕೈಕೆ ಭರತರಿಗಾಗಿ (ಶ್ರೀರಾಮಾ. ೨೭-೭೦೦). [ ಸಂ. ತಾರಾಲಿ (ತಾರಾ + ಆಲಿ) ]

**ತಾರಿ$_1$** 'ತಾಱು' ನೋ.

**ತಾರಿ$_2$** (ನಾ). ೧. ನಾವೆ ; ದೋಣಿ : ಕರೆಯುತಿದೆ ಅಲ್ಲಿ ದೂರ, ಬೆಳುದಿಂಗಳ ತಾರಿ, ಕನಸು ಹಾಯಿ ಹಾರಿ (ನಡಬಂ. ೨-೭) ; ತೆಪ್ಪವೊ ತಾರಿಯೊ ಹರಿಗೋಲೊ ಹಡಗವೊ ತೆರೆ – ತೊಡೆ – ತೊಟ್ಟಿಲನೇರೋಣ ಬಾ (ಸಹೀಗೀ. ೦-೦೫). ೨. (ಕರಾ) ನೀರಿನ ಹರಹನ್ನು ದಾಟುವ ಸ್ಥಳ ; "ನದಿ ದಾಟುವ ಸ್ಥಳ" (ಸಿರಿಕೋ. ೨೨೫) : ಎರಡು ಮೂರು ತಾರಿಗಳನ್ನು ದಾಟುವುದಲ್ಲವಾಗಿದ್ದರೆ, ಇನ್ನೆರಡು ಗಂಟೆಗಳಷ್ಟು ಮುಂಚೆ ಬರುತ್ತಿದ್ದೆ (ಹಾರುದಾ. ೨೬೦) ; ಕೋಡೀಬಾಗ ಸದಾಶಿವಗಡಗಳ ಹತ್ತಿರ ಈ ತಾರಿಯ ಅಗಲ ೩ ಮೈಲಿಗಿಂತ ಹೆಚ್ಚುಂಟು (ಕಾರವ. ೦೩).

[ <ಸಂ. ತರಿ, ತರೀ ]

**ತಾರಿಕಾಯಿ** 'ತಾಟಿಗಾಯ್' ನೋ.

**ತಾರಿಕೆ** (ನಾ). ಒಂದು ಬಗೆಯ ಸಸ್ಯ : ಮುಳ್ಳಿಕಾದಂಟು, ತಾರಿಕೆ (ಮೃಶಿಗಿ. ೫೨-೧೦೩೭). [ ? ]

**ತಾರಿಣಿ** (ನಾ). ೧. ಶಕ್ತಿದೇವತೆಯಾದ ದುರ್ಗೆ. ೨. ಬೌದ್ಧರ ಒಬ್ಬ ಶಕ್ತಿದೇವತೆ : (*). [ ಸಂ. ತಾರಿಣೀ ]

**ತಾರಿಸು$_1$** 'ತಾಟಿಸು' ನೋ.

**ತಾರಿಸು$_2$** (ಕ್ರಿ). ಪಾರುಗಾಣಿಸು ; ದಾಟಿಸು ; ರಕ್ಷಿಸು : ತಾರಿಸೋ ಶ್ರೀಹರಿ ನಮ್ಮ ತಾರಿಸೋ (ಪುರಂದ. ೩-೬೯ ಪಲ್ಲವಿ) ; ಮಹಾರಾಜರಲ್ಲಿದ್ದ ನಿಮ್ಮ ಪ್ರೇಮವೇ ನಮ್ಮೆಲ್ಲರನ್ನು ತಾರಿಸಿತು (ಚುದುರಾ. ೦೫೩) ; ಕ್ಷುದ್ರ ವಿಷಯ ಸುಖಕ್ಕಾಗಿ ಹುಟ್ಟಿಸಿದ ಈ ಸಂತತಿಯು ನಮ್ಮನ್ನು ಎಷ್ಟು ಮಾತ್ರ ತಾರಿಸೀತು (ಶ್ರವಚು. ೩೭೪). [ <ತಾರಣ + – ಇಸು$_3$ ]

**ತಾರಿಸೇವೆ** (ನಾ). ದೇವರಿಗೆ ಮಾಡುವ ಒಂದು ಬಗೆಯ ಕೈಂಕರ್ಯ ; ತೆಪ್ಪೋತ್ಸವ : ಸರ್ವವಾದ್ಯಗಳೆಸೆಯೆ ತಾರಿಸೇವೆಯ ಮಾಡಿ ಸ್ವಾಮಿ ವೀಳ್ಯಮಂತ್ರಾಕ್ಷತೆ ಕಾರುಣ್ಯದಲಿ ಬೆರಸಿ ಮಾರಜನಕಗೆ ಏಕಾಂತ ಸೇವೆಯ ಮಾಡಿ (ವಾದಿಕೀ. ೬೩-೧೩). [ ತಾರಿ$_2$ + ಸೇವೆ$_2$ ]

**ತಾರೀಕು** 'ತಾರೀಖು' ನೋ.

**ತಾರೀಖು, ತಾರೀಕು** (ನಾ). ತಿಂಗಳ ಪ್ರತಿದಿನ ; ದಿನಾಂಕ ; ತೇದಿ : ಭೂರಿಕಾರುಣ್ಯದಿಂದೊಂದೆ ತಾರೀಖಿನೊಳ್ಪ್ರಜೆಯ ವಾರಮಂ ಶರೆಬಿಟ್ಟು ಕಳಿಸಿರ್ದನೆಂಬುವೊಲ್ (ಸಿದ್ಧಕಾ. ೧೦-೯) ; ಚುನಾವಣೆಯ ತಾರೀಖು ಇನ್ನೂ ಒಂದು ವಾರವಿದ್ದುದರಿಂದ (ರಾಯುಕ. ೯೦): ರುಜು ಹಾಕಿದಿರೋ? ಅದರ ಕೆಳಗೆ ತಾರೀಖೂ ಹಾಕಿ (ರಂಗವ. ೭೫) ; ಪಾವತಿ ಮಾಡಿದ ತಾರೀಖನ್ನು ಮಾತ್ರ ದಾಖಲ್ಮಾಡತಕ್ಕ ವಿಷಯದಲ್ಲಿ ಎಚ್ಚರಿಕೆಯುಳ್ಳವರಾಗಿರಬೇಕು (ಗ್ರಾಮೂಕ. ೭). **ತಾರೀಕು :** ಅಹಮ್ಮದಿ ದವಲತ್ತಿಗೆ ಶ್ರೇಯಸ್ಸು ಅಪೇಕ್ಷಿಸಿಕೊಂಡು ಸುಖದಲ್ಲಿಯಿರೋದು ತಾರೀಕು (ಎಕ. IX, ದೊಡ್ಡಬ. ೦೨-೭ ; ಸು. 1796).

[ ←ಅರ. ಪಾರ. ಹಿಂ. ಮರಾ. ತಾರೀಖ್ ]

**ತಾರೀಪು** 'ತಾರೀಫು' ನೋ.

**ತಾರೀಫ್** 'ತಾರೀಫು' ನೋ.

**ತಾರೀಫು, ತಾರೀಪು, ತಾರೀಫ್** (ನಾ). ೧. ಹೊಗಳಿಕೆ ; ಮೆಚ್ಚಿಗೆ ; ಪ್ರಶಂಸೆ : ನಮ್ಮ ತಾರೀಫಿನಿಂದ ಸಾಹೇಬರ ಝುಲ್ಲು ಬಿಟ್ಟಿತು (ದೀಪಹ. II, ೨೩೮) ; ಜಾಗೀರಿಯ ಕಣಜಗಳೆಲ್ಲ ತುಂಬಿ ತನ್ನ ಮೇಲ್ವಿಚಾರಣೆಯ ತಾರೀಫು ನಡೆದದ್ದು . . . ಒಂದೊಂದಾಗಿ ಕಣ್ಣ ಮುಂದೆ ಸರಿದವು (ಕಪ್ಪುಹು. ೩೦). **ತಾರೀಪು :** ೧. ಇದರ ತಾರೀಪು ಹತ್ತು ಪಾಲಲ್ಲು ಒಂದು ಪಾಲಾದರೂ ನಮ್ಮಿಂದ ಆಗದು (ರಾಜೇಂದ್ರ. ೯೯) ; ಅದರ ತಾರೀಪು ಏನು ಮಾಡುತ್ತೀ ಬಿಡು (ಮೂರುದಾ. ೪೯). ೨. ತಮಾಷೆ ; ಚೇಷ್ಟೆ : ಈ ಮಾತ್ಯಿಗೆ ತಾರೀಪು ಅಂದರೆ, ತಾರೀಪು ! (ಮರಮ. ೫೫೭). **ತಾರೀಫ್ :** ೧. ಅನವಶ್ಯವಾದ ತಾರೀಫ್ ಯಾರಿಗೂ ಮಾಡಕೂಡದು (ರೂಢಿ).

**ತಾರೀಪು ಮಾಡು, ತಾರೀಫು ಮಾಡು, ತಾರೀಫ್ ಮಾಡು** = ೧. ಹೊಗಳು; ಪ್ರಶಂಸೆಮಾಡು; ಮೆಚ್ಚು : ಉಳಿದ ಸರ್ವಕಾಲ ಮೊಮ್ಮಗನ ಬಾಲ ಲೀಲಾವಿಲಾಸದ ತಾರೀಫು ಮಾಡುವುದರಲ್ಲಿ ಕಳೆಯುತ್ತಿದ್ದ (ದೀಪಹ. II, ೮೦); ಕೊಂಡುಕೊಂಡವನು ಅದನ್ನು ತಾರೀಫುಮಾಡುತ್ತ ತೆಗೆದುಕೊಂಡು ಹೋದನು (ದೇಶಾಂಕ. ೪೮) ; ಅಮ್ಮ ತನ್ನ ಮೊಮ್ಮಗಳನ್ನು ತಾರೀಪು ಮಾಡುತ್ತಾಳೆ (ಹೊಸಕ್ಷ. ೨೦೯) ; ಈ ಅನಾರೋಗ್ಯ ವಾತಾವರಣದಲ್ಲಿದ್ದೂ ನಿನ್ನ ಶಾರೀರ ಶರೀರ ಎರಡನ್ನೂ ಚೆನ್ನಾಗಿಟ್ಕೊಂಡಿದ್ದೀಯಲ್ಲಾ ಅದಕ್ಕೆ ನಿನ್ನ ತಾರೀಫ್ ಮಾಡಬೇಕು (ಮೂಮುನ. ೬೬) ; ನಿಮ್ಮ ಶಕ್ತಿ ತಾರೀಫ್ ಮಾಡಬೇಕಾದದ್ದೆ ! ನೀವು ಹೇಳಿದ ಎರಡು ಭವಿಷ್ಯಗಳೂ ಸರಿಹೋದುವಲ್ಲ ! (ಕೃಷ್ಣಭೂ. ೩೩). ೨. ತಮಾಷೆ ಮಾಡು ; ಕುಚೇಷ್ಟೆ ಮಾಡು : "ಇವತ್ತು ಶೀನಪ್ಪ ಸೇರೆಗಾರರ ಆಸ್ತಿ, ಅಸ್ತಿ ಎರಡೂ ಪರಾಧೀನವಾಗುತ್ತದೆ" ಎಂದು ತಾರೀಫುಮಾಡುತ್ತ ತಿರುಗುವವರೇ ಎಲ್ಲರು (ಹಹಸ. ೨೪).

[ ←ಅರ. ತಾರೀಫ್ ; ಹಿಂ. ತಾರೀಫ್; ಮರಾ. ತಾರೀಫ್. ತಾರೀಪ್ ]

**ತಾರು$_1$** 'ತಾಱು$_1$' ನೋ.

**ತಾರು$_2$** (ಕ್ರಿ). ದಾಟು : ನದಿಯ ತಾಱ್[ರ]ದೊಡಂ ಫಲ ತರುಗೆ ಪೋದೊಡಂ (ಅಟ್ಟಮು. ೩-೩). [ ಸಂ. ತಾರ=ದಾಟುವುದು ]

**ತಾರು$_3$** 'ತಾಳ್$_3$' ನೋ.

**ತಾರು$_4$** (ನಾ). ತಂತಿಯ ಸಮಾಚಾರ : ನಾನು ಮನೆ ತಲುಪಿದಾಗ ನನ್ನ ಮಾವನಿಂದ ತಾರು ಬಂದಿತ್ತು (ಗಾಳಿಗು. ೭೦) ; ವಿಷಾದವಾರ್ತೆಯ ತಾರುಗಳ ಮೂಲಕ . . . ವ್ಯಾಪಕವಾಯಿತು (ಗುರುದ. ೧೩) ; ಅಪೂರ್ವನು ನಿರಾಶೆ, ಸಿಟ್ಟಿನಿಂದ ಕೇಂದ್ರ ಅಂಚೆಮನೆಗೆ ತಲುಪಿ ತಾಯಿಗೆ ತಾರು ಕಳಿಸಿ (ಭಾರತಿ. ೪) ; ಸೇವಕನನ್ನು ಕೂಗಿ ಅರ್ಜಂಟ್ ತಾರು ಕಳುಹಿಸಲು ಆಜ್ಞೆ ವಿಧಿಸಿದರು (ರತ್ನಗೋ. ೧೨).

**ತಾರುಮಾಡು** = ತಂತಿಕೊಡು: ಅವಳು ತೀರ್ಗಡೆಯಾದ ಸುದ್ದಿಯನ್ನು ತಾರುಮಾಡಿ ತಿಳಿಸಿದಳು (ರೂಢಿ). [ ←ಹಿಂ. ಮರಾ. ತಾರ್ ]

**ತಾರು$_5$** 'ಟಾರು' ನೋ.

**ತಾರುಂಬಳಿ** 'ತಾಱುಂಬಟಿ' ನೋ.

**ತಾರುಗದ** 'ತಾರುಗದವು' ನೋ.

**ತಾರುಗದವು, ತಾರಗದ, ತಾರುಗದ** (ನಾ). ಅಗುಳಿಯನ್ನು ಉಳ್ಳ ಕದ; ಜೋಡುಕದ : ಜಹ್ಮೆಯೇ ಬಾಗಿಲೆಂಟು ಕಂಡಿಗಳೇ ಗವಾಕ್ಷಂಗಳು . . . ತುಟಿಯೆರಡು ತಾರುಗದವುಗಳು (ವೀಶೈಪು. ೪-೨೦-೩೦). **ತಾರಗದ :** ಹದಿನಾಲು ವರ್ತನದ ಕೊಂಡಿ ಗುರು ಲಘುವೆಂಬ ತಾ[ಪಾಠಾಂ. ತೋ]ರಗದ ಅದಕ್ಕೆ ಅಗುಳಿ ದಿವರಾತ್ರಿ (ಮೋಹಮೂ. ೨೩೨-೭೮೪) ; ತಾರಗದವನೆ ತೋರತುಟಿಯಿದೆ (ಕರಿಕ. ೮೦-೭). **ತಾರುಗದ :** ಈ ಬಾಗಿಲಿಗೆ ಅಧರ ತಾರುಗದ ದಂತಂಗಳಗುಳಿ (ಅದವ. ೧೫-೩೩).

[ ತಾರು$_4$ (<ತಾಳ್$_3$) + ಕದವು$_1$ ]

**ತಾರುಗೂಡು** 'ತಾರ್ಗೂಡು' ನೋ.

**ತಾರುಣ್ಯ** (ನಾ). ಹರಯ ; ಪ್ರಾಯ ; ಯೌವನ : ಪೊಸವೆಳ್ದಿಂಗಳೆತ್ತನ್ನ ತಾರುಣ್ಯವಿಡಂಬಂ ತಾನಿದೆತ್ತೊತ್ತರಿವ ವಿಧಿಯುಮೆತ್ತ (ಚಂದ್ರಪು. ೮-೭೮) ; ತಾರುಣ್ಯಕಡಿಯಿಡುವ ಕೌಮಾರಮೂರ್ತಿಯಾ ಬಾಲಋಷಿ ಕಾಡನೇರಿದನು ರಾಮಾಶ್ರಮಕೆ (ಶ್ರೀರಾಮಾ. ೧೭೧-೨೪೩) ; ತಾರುಣ್ಯದಲ್ಲಿ ಸಹಧರ್ಮಿಣಿಯ ಅನುರಾಗ (ಶಿಕ್ಷರ. ೮೦) ; ತಾರುಣ್ಯವೇ ರೂಪು ಕಾರುಣ್ಯವೇ ಗುಣ (ಗಾದೆ).

[ ಸಂ. ]

**ತಾರುಣ್ಯವತಿ** (ನಾ). ಜವ್ವನೆ ; ತರುಣಿ ; ಯುವತಿ : ಮನೋಹರ ಕ್ರೀಡಾಗಾರದ್ವಾರದೇಶದೊಳ್ ತಾರುಣ್ಯವತಿ . . . ಶರೀರದ ಸಹಜ

ಸುರಭಿಗಂಧಮಂ ಗಂಧವಹಂಗೊಟ್ಟು ತಂಗುಡುವಂತಿರೆ (ಚಂದ್ರಪು. ೮-೬೧ ವ); ಮತ್ತವೊರ್ವಳಗಣ್ಯಲಾವಣ್ಯ ತಾರುಣ್ಯವತಿ . . . ಕಣ್ಗೆ ತೋಱಿದಳ್ (ರಾಜಶೇ. ೦೦-೮೯ ವ) ; ಮೊದಲು ಮೊದಲು ಕುಸುಮ ನಸುನಾಚಿದಳು. ಎಷ್ಟಾದರೂ ಹೆಣ್ಣು ! ಅದರಲ್ಲಿ ತಾರುಣ್ಯವತಿ ! (ಜಾಗಿನ. ೬೧).
[ ಸಂ. ತಾರುಣ್ಯವತೀ ]

**ತಾರುತಟ್ಟು** 'ತಾಱುಂತಟ್ಟು' ನೋ.

**ತಾರುಮಾರು₁** 'ತಾಱುಮಾಱು' ನೋ.

**ತಾರುಮಾರು₂, ತಾರಮಾರ, ತಾರಾಮಾರು** (ಅ). ಕ್ರಮವಿಲ್ಲದೆ; ಅರ್ಥವಿಲ್ಲದೆ ; ಅಕ್ರಮವಾಗಿ : ನನ್ನಹಾಗೆ ಅವನು ಕೂಡ ಉಣ್ಣುತ್ತಿದ್ದ. . . . ಚಂದ್ರನನ್ನು ತಾ ಎಂದು ತಾರುಮಾರು ತೊದಲುತ್ತಿದ್ದ (ನಡಬಂ. ೮೩-೪). **ತಾರಮಾರ**: ಕಾರಮಾರ ಮನೆಯಲ್ಲೆಲ್ಲ ಅಲೆಯುತ್ತಿತ್ತು (ತಾವರಿ. ೧೯). **ತಾರಾಮಾರು**: ತನ್ನೆದುರಿಗಿದ್ದ ಶತ್ರುವನ್ನು ಆತ ತಾರಾಮಾರು ಭಕ್ತಿಯಿಂದ ಹೊಡೆದ (ನಿಶಉ. ೧೩೩). [ <ತಾಱುಮಾಱು ]

**ತಾರುಯಂತ್ರ** (ನಾ). "ದೂರಲೇಖಕ (ಪಾರಿ) ; ತಾರುಯಂತ್ರ; ಟೆಲಿಗ್ರಾಫು" (Telegraph. ಪಶ್ರಿನಿ. ೮೩). [ ತಾರು₃ + ಯಂತ್ರ ]

**ತಾರುಸುದ್ದಿ** (ನಾ). ತಂತಿಯ ಮೂಲಕ ಕಳಿಸುವ ಸುದ್ದಿ,-ಸಮಾಚಾರ: ತನ್ನ ಕಿಸೆಯಲ್ಲಿದ್ದ ತಾರುಸುದ್ದಿಯನ್ನು ಮೇಜಿನ ಮೇಲೆ ಒಗೆದು ಅದರ ಪರಿಣಾಮವನ್ನು ನಿರೀಕ್ಷಿಸುತ್ತ ಕುಳಿತ (ನಟಸಾ. ೩೬೩).
[ ತಾರು₃ + ಸುದ್ದಿ ]

**ತಾರೆ₁** 'ತಾಱು' ನೋ.

**ತಾರೆ₂** (ನಾ). ೧. ನಕ್ಷತ್ರ : "ವಿಮಾನಱಿಲು ತಾರಗೆಯು ತಾರೆ [ಪಾಠಾಂ. ತಾರಕಿ]ಯಲ್ಲಿ" (ಕಬ್ಬಮಂ. ೦೭) ; ಅಂಬರು ವಿನುತ ಹಿಮಾಂಶುವಿಲ್ಲದೊಡೆ ತಾರೆಗಳುಳ್ಳೊಡಮೆಂತು ರಂಜಿಕುಂ (ಜಾಧಪು. ೩-೫); ತೆರಳಿಸಿತು ಬಿಱುಗಾಳಿ ತಾರೆಯ ನೆರವಿಯನು (ಕಾಶ್ಯಖಾ. ೧೬-೩೪) ; ಕಾವರೆಯಲ್ಲಿ ತಾರೆ ಜನನಂ ಬಡೆದಂದು (ರಾಜಶೇ. ೬-೨೬) ; ಕಾರಿರುಳಾಗಸದಿ ತಾರೆ ನೂರಿದ್ದೇನು ? ದಾರಿಗನ ಕಣ್ಗೆ ಬೇಕೊಂದು ಮನೆಬೆಳಕು (ಮಂಕುತಿ. ೪೨೪). ೨. ಕಣ್ಣುಗುಡ್ಡೆ ; ಪಾಪೆ ; ಕನೀನಿಕೆ : "ಕನೀನಿಕೆಯುದಕ್ಷಿಮಧ್ಯಂ ತಾರೆಯೆನಲಾಲಿ" (ಮಂಗರಾ. ೯೩-೨) ; ಕನ್ನೆ ನುಡಿಯಲೊಡರಿಸಿ ನಿಷ್ಕಂಪಮೆನಿಪ್ಪ ತಾರೆಗಳ್ಬೆರಸೆವೆಯಿಕ್ಕದೆ ನೋಡುತಿರ್ದಳ್ (ಕಾದಂಅ. ೩೮೭). ೩. ಮುತ್ತು. ೪. ಮುತ್ತಿನ ಹಾರ : "ಮೌಕ್ತಿಕದ ಹಾರಮಂ ತಾರೆಯೆಂಬುದು" (ಮಂಗರಾ. ೦೩೯-೬). ೫. ಬೃಹಸ್ಪತಿಯ ಹೆಂಡತಿ : ಬಾನಗಲಂ ತೊಟಲ್ವ ಚೆಂದವಂ ಕಡೆಗೆ ತಾರೆಯಂ ಮಱೆವುಗನೆ (ರಾಮಾಕ್ಷ. ೫೬-೧೦). ೬. ವಾಲಿಯ ಹೆಂಡತಿ: ವಾಲಿ . . . ತನ್ನರಸಿ ತಾರೆಯನರಸಿದಂ (ಶ್ರೀರಾಮಾ. ೨೮೦-೯೮). ೭. ಗಾಳಿ ; ವಾಯು. ೮. ಚಲನಚಿತ್ರದ ಅಥವಾ ನಾಟಕರಂಗದ ನಟ ಅಥವಾ ನಟಿ : ನಿಜವಾಗಿಯೂ ಅವಳು ಹಾಲಿವುಡ್ಡಿನ ತಾರೆಯ ಪರೀಕ್ಷೆಯನ್ನು ಕೊಡಲು ಯೋಗ್ಯಳಾದವಳು (ಮಹಾತ್ಮಾ. ೧೦೭). ೯. ಬೆಳ್ಳಿ: "ಮುತ್ತಿನೊಳ್ ರೌಪ್ಯದೊಳು ಖುಕ್ಷದೊಳು ವಾತದೊಳು ಕಣ್ಣಾಲಿಗಳೊಳು ತಾರಾಖ್ಯವಕ್ಕುಂ" (ಮಂಗರಾ. ೦೫೦-೯೯).
**ತಾರೆಯ ತಿಂಗಳು** = ಶರದೃತು (?) : ಕಾರು ತಿಂಗಳು ತಾರೆಯ ತಿಂಗಳಲ್ಲಿ ಆಣೆಯ ಕುಡಿ ಊರಾಣೆ (ಸೌಇಇ. ೧೯೩೦, ಕುಂದಾಪುರ. ೩೫೭-೦೩ : 1379 ?). [ ಸಂ. ತಾರಾ ]

**ತಾರೆಕಾಯಿ** 'ತಾಱಿಗಾಯ್' ನೋ.

**ತಾರೆಣ್ಣೆ** 'ಟಾರೆಣ್ಣೆ' ನೋ.

**ತಾರೆಮರ** (ನಾ). ಒಂದು ಬಗೆಯ ಮರ; ತಾರಿ : ತಾವರ[ ತಾರೆ ] ಮರದ ಬದಣಿಕೆಯಂ ರೋಹಿಣಿನಕ್ಷತ್ರದಲ್ಲಿ ತಂದು ಮುಂಗೈಗೆ ಕಟ್ಟುವುದು (ಸಕವೈ. ೦೨೦). [ ತಾರೆ₁ (<ತಾಱ್) + ಮರ₁ ]

**ತಾರೆಲೆ** (ನಾ). ಒಂದು ಬಗೆಯ ಜಾನಪದ ಗೀತೆ : ಅತಿಗಭೀರಂ ಕಾವ್ಯಂ ನೀರಸರಱಿವಂತೆನಿದು ತಾರೆಲೆಯೇ ಬೀದಿವಾಡೆ (ಗಿರಿಕ. ೦-೩೦) ; ತಪ್ಪಳಿ ಗುಟ್ಟುತ ತಾರೆಲೆವಾಡುತ ಬಪ್ಪ ಗೋವಳರ ಮಧ್ಯದೊಳು ಒಪ್ಪದಿನಾ ಬಲಕೇಶವರೀರ್ವರು ಬರ್ಪ ಪಟ್ಟಣದ ದಾರಿಯೊಳು (ನೇಮಿಸಂ. ೧೭-೧೦೩).
[ ? ]

**ತಾರೇಯ** (ನಾ). ತಾರೆಯ ಮಗ ; ಅಂಗದ : ತಾರೇಯನಾ ಪುರುಹೂತ ವೈರಿಯ ಕೂಡೆ ಕಾದುತ ಕಾತರಿಸದೊಡನೊಡನೆ ತಿವಿದನು ಮುಷ್ಟಿ ಯುದ್ಧದಲಿ (ಕಾಶಿರಾ. ೨೬-೩೯). [ ಸಂ. ]

**ತಾರೇಶ** (ನಾ). ನಕ್ಷತ್ರಗಳ ಒಡೆಯ ; ಚಂದ್ರ : ತಾರೇಶಂ ನಿಲೆ ಮೇಷದೊಳ್ . . . ನಿರ್ಧನನೆನಿಕ್ಕುಂ (ಜಾತಿತಿ. ೨೦-೦); ತಾರೇಶ ತಾರ್ಕ್ಷ್ಯನಂತು ವಿಸಾರಿತಪಕ್ಷಂ ಬರಲ್ ನಭಶ್ಚಂದನ ಧಾತ್ರೀರುಹಮಂ ಸುತ್ತಿದ ಕಾಳೋರಗನೋಡುವವೊಲೋಡಿಪೋದುದು ತಿಮಿರಂ (ಜಗವಿ. ೧೬-೧೦೭).
[ ಸಂ. (ತಾರಾ + ಈಶ) ]

**ತಾರೈಸು** 'ತಾರಯಿಸು' ನೋ.

**ತಾರ್ಕಣಸು** 'ತಾರ್ಕಣೆಸು' ನೋ.

**ತಾರ್ಕಣೆಸು, ತಾರ್ಕಣಸು** (ಕ್ರಿ). ಹೋಲಿಸಿ ಸರಿನೋಡು ; ಪುಷ್ಟೀಕರಿಸು ; ದೃಢಪಡಿಸು : ತರಹರಿಸಿ ತಾರ್ಕಣಿಸಿ ನೆನಹು ಹುರಿಗೊಳಿಸಿ (ಸದ್ಗುರು. ೨-೯) ; ಗ್ರಾಮವನು ತಾರ್ಕಣಿಸಿ ಕೊಟ್ಟು ಯಿ ಹಂನೆರಡು ಹೊಂನನೂ ಆಚಂದ್ರಾರ್ಕಸ್ಥಾಯಿಯಾಗಿ ಪಾಲಿಸಿದೆಉ (ಕಇ. I, ೫೮-೦೮ ; 1446) ; ಮಿಕ್ಕವರಂ ತಾರ್ಕಣಿಸಿ ಸಮರಕೇಳಿಗೆ ನೂರ್ಕಡಿಗಡಿದಂ ನೃಪಾಲಕಂ ರಿಪುಬಲಮಂ (ಕಬ್ಬಾಸು. ೯೦ ವ್ಯಾಖ್ಯಾ). **ತಾರ್ಕಣಸು** : ಗ್ರಾಮನನು ತಾರ್ಕಣಾಸಿ ಕೊಟ್ಟು ಸಾನ್ನವನ್ನು ಬರಸಿಕೊಟ್ಟು (ಕಇ. I, ೫೯-೦೫ ; 1446). [ ತಾರ್ಕಣೆ + - ಇಸು₃ ]

**ತಾರ್ಕಣೆ, ತಾರಕಣೆ, ತಾರ್ಕಣ್ಯ, ತಾರ್ಕಾಣಿ, ತಾರ್ಕಾಣೆ** (ನಾ). ೧. ಸ್ವತಃ ನೋಡುವಿಕೆ ; ವೈಯಕ್ತಿಕವಾದ ಪರಿಶೀಲನೆ : (೬). ೨. ಪ್ರತ್ಯಕ್ಷ ಪ್ರಮಾಣ ; ನಿಶ್ಚಯ ; ರುಜುವಾತು ; ದೃಢೀಕರಣ : ಹಲವು ಪರಿಯ ಬಯಕೆ ತಾರ್ಕಣೆ[ಪಾಠಾಂ. ಣ್ಣೆ, ಣ್ಯ]ಯಾದಂತೆ (ಅನಹಂ. ೨೦-೮೧) ; ಈ ಭಾಷೆ ಮನ ತಾರ್ಕಣೆಯಾಗಿ ಹುಸಿಯಲ್ಲ (ಸಿದ್ಧೇಪ. ೭೩-೨೦೦); ಮೃಗಧರನಿಗೆ ಕಮಲಕೆ ವೈರವೆಂದೆಂಬ ಬಗೆ ತಾರ್ಕಣೆಯಾಯಿತು (ಜೀವಂಸಾ. ೧೬-೧೫) ; ನೆನಸಿಕೋ ನೀಲಕಂಠನ ವಧೂಟಿಯ ಮಾತ ಮನಸಿಗೆ ತಾರ್ಕಣೆಯಾಯ್ತು (ವೋಹಹ. ೨೭-೫೫). ೩. ಒಂದು ವಿಷಯಂವನ್ನು ಸಾಧಿಸಲು ಕೊಡುವ ದೃಷ್ಟಾಂತ,- ಉದಾಹರಣೆ : ಇದಕೆ ತಾರ್ಕಣೆಯಾಪುದೆ ನರಹರಿಯಿಂದುದುಭವಿಸಿದ ಮಾಸ ತಿಥಿ ಯು (ಕಂಠವಿ ೧.೦೧ [illegible] ಬಲ್ಮೆಯಿಂದ ಎಲ್ಲವೂ ಕೈಗೂಡುತ್ತದೆ ಎನ್ನುತಾರಲ್ಲಾ [illegible] ತಾರ್ಕಣೆಯನ್ನು ಈಗ ನಮ್ಮ ಕಣ್ಣೆದಿರಿಗೆಯೇ ಕಂಡೆವು (ನಗಗ. ೨೦) . [illegible] ಸೇವೆ ಮಾಡಿದವರಲ್ಲೂ ನಂಬುಗೆ ತೋರಲಿಲ್ಲ. ಈ ದಿನ ತಾರ್ಕಣೆಯಾಯಿತು (ಹಂಗೀಶ. ೩೭). ೪. ಹೊಂದಾಣಿಕೆ ; ಸಂಯೋಗ : ಮನವಮನ ತಾರ್ಕಣೆಯ ಕಂಡು ಅನುಭವಿಸಲು ನೆನಹೇ ಘನವಹುದಲ್ಲದೆ ಅದು ಹವಣದಲ್ಲಿ ನಿಲ್ಲುವುದೇ (ಮಹಾದೇ. ಬ. ೪೪-೦೦೨): ಎನಗೆ ಬೇರೇನಿನ್ನು ಬರಲೀ ವನಕೆ ನಿಮ್ಮಯ ಚಿತ್ತವರಿಯದೆ ಮನಕೆ ಮನ ತಾರ್ಕಣೆ ಗಡೇಸೇಸುಂಟು ಹೇಳುವುದು (ಕೋಗಯು. ೦೫-೦೫) : ಅವಳ ಭಾವಜೀವನಕ್ಕೂ ಅವನ ಪಾಶವೀಜೀವನಕ್ಕೂ ಯಾವ ತಾರ್ಕಣೆಯೂ ಇರಲಿಲ್ಲ (ನಟಸಾ. ೬೪೨); ಕ್ಯಾಂಟನ ನಿಲುವಿಗೂ ಇದಕ್ಕೂ ಗಮನೀಯವಾದ ತಾರ್ಕಣೆ ಇವೆ (ತತ್ವಪ್ರಾ. ೨೦೭). **ತಾರಕಣೆ** : ೩. ಅದಕ್ಕೊಂದು ತಾರಕಣೆ ಕೊಡ್ತೀವಿ ಕೇಳಿ(ಹುಟ್ಯಹ.೭೩). **ತಾರ್ಕಣ್ಯ**: ೨.ಬೇರೆ ತಾರ್ಕಣ್ಯಗಳನ್ನು ಕೋರ್ಟಿಗೆ ಒದಗಿಸಿಕೊಡಲು ಸಿದ್ಧನಾಗಿದ್ದೇನೆ (ಮುಸುಗ.

**ತಾಳಹಣ್ಣು** (ನಾ). ತಾಳೆಯ ಹಣ್ಣು : ಬೆರಳು ತಾಳಹಣ್ಣ ಹಿಸಿಕಿದಡೆ ಮಲಲುಂಟೆ (ಮಹಾದೇ. ಬ. ೧೦೦-೩೫೦). 'ತಾಳೆಹಣ್ಣು' ಪರಾ.

[ ತಾಳ್$_2$ (= ತಾಲ) + ಹಣ್ಣು$_3$ (<ಪಣ್$_3$) ]

**ತಾಳಹಳವಿಗೆ** (ನಾ). ತಾಳೆಯ ಮರದ ಗುರುತುಳ್ಳ ಧ್ವಜ; ಬಲರಾಮನ ಧ್ವಜ: ಕುರುಪತಿಯನವಗಡಿಸಿ ತಾಳಹಳವಿಗೆಯವನು ಯಾದವಜಾಲ ಸಹಿತೈತಂದು . . . ಆಜಿ ದನು ಕೃಷ್ಣನಭಿಮತವ (ಕುವ್ಯಾ.ಗ. ೬-೮). [ ತಾಳ್$_2$ (= ತಾಲ) + ಹಳವಿಗೆ (<ಪಟವಿಗೆ) ]

**ತಾಳಹಾಕು** (ಕ್ರಿ). ೧. ಅಗುಳಿ ಹಾಕು : ಬಾಗಿಲಿಗೆ ತಾಳಹಾಕಿದ್ದೇನೆಂದು ಧೈರ್ಯಗೊಂಡು ಮತ್ತೆ ನಿರ್ಲಕ್ಷವಾಗಿ ತನ್ನ ಕಾರ್ಯದಲ್ಲಿ ತೊಡಗಿದಳು (ಕಾನೂರು. ೮೦) ; ನಿಮ್ಮ ದಾರೀ ಕಾಯುತ್ತ ಬಾಗಿಲ ತಾಳಹಾಕಿಕೊಂಡು ಇಲ್ಲಿಯೇ ಕುಳಿತಿದ್ದೆವು (ಹರಿವ. ೨೩). ೨. [ಸಂಗೀತ] ತಾಳವನ್ನು ಹಾಕು; ತಾಳಹಿಡಿ : ಪದಗಳನ್ನು ತನ್ನ ಕೊಳಲಲ್ಲಿ ನುಡಿಸತೊಡಗಿದ, ಬೇರೊಬ್ಬ ತರುಣ ತಾಳಹಾಕತೊಡಗಿದ (ಹಾಹುತ್. ೯೨). ೩. (ಆಲಂ) ಹೊಂಗುಟ್ಟು ; ಅನುಸರಿಸು ; ಸಮ್ಮತಿಸು : ನಾನೇಕೆ . . . ಅವರು ಹೇಳಿದ್ದಕ್ಕೆ ತಾಳಹಾಕಿ ನನ್ನ ವಿಚಾರಸ್ವಾತಂತ್ರ್ಯವನ್ನು ಅದುಮಿಡಬೇಕು (ದೂರಸ. ೨೦೫) ; ಅದಕ್ಕೆ ಅವನ ಮನವೂ ತಾಳಹಾಕಿತು (ಹೇಮಂಳೂ. ೨) ; ವಸ್ತಾದಅಲ್ಲಿಸಾಹೇಬನು ಕೂಡ ಶಮಸುದ್ದೀನನ ಮಾತಿಗೆ ತಾಳಹಾಕತೊಡಗಿದ್ದರಿಂದ ಅದಕ್ಕೊಂದು ಸ್ವರೂಪ ಬರತೊಡಗಿತು (ಹಬ್ಬಿಬ. ೪೦). [ ತಾಳ್$_2$ (= ತಾಲ) + ಹಾಕು (<ಪಾಯ್ಯು$_1$) ]

**ತಾಳಹಿಡಿ** (ಕ್ರಿ). = ತಾಳಹಾಕು ೧ : ಅವನ ನಡುಗೆಗೆ ನನ್ನ ನಾಡಿಗಳು ತಾಳಹಿಡಿಯುವುವು, ಅವನ ಹೆಜ್ಜೆಗೆ ನನ್ನ ಪ್ರಾಣವು ಗೆಜ್ಜೆಹಾಕುವುದು (ಜಯಂತ. ೩೩೭). [ತಾಳ್$_2$ (= ತಾಲ) + ಹಿಡಿ$_1$ (<ಪಿಡಿ$_1$) ]

**ತಾಳಹೀನ** (ನಾ). ತಾಳ ರಹಿತವಾದುದು ; ತಾಳವನ್ನು ಅನುಸರಿಸ ದಿರುವುದು : ತ್ರಿಪದಿಯನ್ನು ತಾಳಹೀನವೆಂದು ಹೇಳಿರುವ ಪೂರ್ವ ಲಾಕ್ಷಣಿಕರ ಉಕ್ತಿಗೆ . . . ಪ್ರಸ್ತಾರ ಹಾಕಿಯೇ ತೋರಿಸಿದ್ದಾರೆ (ಸಂಕೋಧ. IX, ಮುನ್ನುಡಿ) : ತಾಳಹೀನವಾದ ಸಂಗೀತವೇ ಆಗಲೀ . . . ನೃತ್ಯವೇ ಆಗಲಿ, ಶೋಭಿಸುವುದಿಲ್ಲ (ಸಂಗೀತಂ. ೨೯೩).

[ ತಾಳ್$_2$ (= ತಾಲ) + ಹೀನ ]

**ತಾಳಿ$_1$** 'ತಾಲಿ$_1$' ನೋ.

**ತಾಳಿ$_2$** 'ತಾಲಿ$_3$' ನೋ.

**ತಾಳಿ$_3$** 'ತಾಳ್$_4$' ನೋ.

**ತಾಳಿ$_4$** (ನಾ). ಬೆರಣಿಯ ಒಟ್ಟಿಲು,-ರಾಶಿ; ತಣ್ಣಾಳಿಯಿಂದವ ಳೊಡಲ್ಗಿಚ್ಚು ತಾಳಿಯ ಹಾಕಿ ಪೆರ್ವೊಜಗೊಂಡ ತೆಜದಿ ಧಡಾಳಿಸಿತುಷ್ಣ ಸಂಘಟಿಸಿ (ಮೋಹತ. ೨೭-೬೨); ಹೆಣವನ್ನು ದಕ್ಷಿಣಕ್ಕೆ ಕಾಲುಮಾಡಿ ತಾಳಿಯ ಮೇಲೆ ಮಲಗಿಸಿ (ಶಭಾಗ. ೯೦). [ ←ಮರಾ. ಥಾಳ್ ]

**ತಾಳಿ$_5$** (ನಾ). (?) : ಹುಲಿಮುಖದ ಹರಿಯುಗವ ಸುತ್ತಲು ನಿಲಿಸಿ ಬಾಂಧವ ತಾಳಿಗಳ ಕಂಗೊಳಿಪ ರಾಜಾಲಯದ ಬಲ್ಮೆಯ ನೋಡಿ (ಮೃಣಾಳಾ. ೩-೩೦). 'ತೆಟಿ' ಪರಾ. [ ? ]

**ತಾಳಿಕಟ್ಟು** 'ತಾಳಿಗಟ್ಟು' ನೋ.

**ತಾಳಿಕೆ$_1$** (ನಾ). ೧. ಸಹನೆ ; ಸೈರಣೆ ; ತಾಳ್ಮೆ : ಬನ್ನಾಣದೊಳ್ ಬಿಂಕದೊಳ್ತಾಳಿಕೆಯೊಳುರುತರ ತ್ರಾಣದೊಳ್ . . . ಕಾಣೆನವರಿರ್ವರ್ಗೆ ಸಮರಾದ ಕಲಿಗಳಂ (ಕೃಮಿಥಾ. ೨೨-೧೨); ತಾಳದಲ್ಲಿ ಜಾಣನಾದರೆ ತಾಳಿಕೆಯಿದ್ದೀತೇ ? (ಗಾದೆ). ೨. ಬಾಳಿಕೆ ಬರುವುದಂ ; ಹೆಚ್ಚು ಕಾಲ ಉಳಿಯುವಿಕೆ : ತಾಳಿಕೆ ಬರುವಂಥ ಉಕ್ಕಾಗಿ ಬರುತಿರೆ ಮುಕ್ಕಾದ ಮೊನೆಯಾಗ ಮಸೆಯುತಿದೆ (ಸಹೀಗೀ. ೦೦-೧೯) ; ನೋಡುವವರಿಗಾದರೂ ತಾಳಿಕೆ ಬರುವಂತಿರಬೇಡವೇ (ಮರಳಿ. ೭೮) : ಅತ್ಯಂತ ತಾಳಿಕೆಯುಳ್ಳ ದ್ದಾಗುವಂತೆ ಆ ಚರ್ಮವನ್ನು ಹೊಸೆದನು (ಬಂಗಾಹ. ೨೦). ೩. ಧರಿಸುವುದು ; ಧಾರಣೆ : "ತ್ರಸ–ಧಾರಣೇ, ತಾಳಿಕೆಯೊಳ್" (ಶಾಕಶ್. ೨೭೯) ; ತಮಾಲ ತರುಗಳ ತಾಳಿಕೆಯ ತೋಳುಗಳ ನೆಗಪಿನ ಲಾಳಿಕಾಬಿರ ದೇವ (ತೊರರಾ. ೬-೨೦-೮೯). [ ತಾಳ್$_1$ + – ಇಕೆ ]

**ತಾಳಿಕೆ$_2$** 'ತಾಲುಗೆ' ನೋ.

**ತಾಳಿಕೆ$_3$** (ನಾ). ಹೊಂದಾಣಿಕೆ : ಹುಲ್ಲೆ ಹಾರಿದ್ದಕ್ಕೂ ಹುಲಿ ಅಡರಿದ್ದಕ್ಕೂ ತಾಳಿಕೆ ಇಲ್ಲ (ಗಾದೆ). [ ತಾಳ್$_3$ + – ಇಕೆ ]

**ತಾಳಿಗಟ್ಟು, ತಾಳಿಕಟ್ಟು** (ಕ್ರಿ). ಮಂಗಳಸೂತ್ರವನ್ನು ಕಟ್ಟು : ಚಂದ್ರಾಭರಣಂ ಮನವೊಸೆದು ತಾಳಿಗಟ್ಟದನೆನೆ ಮೆಚಿದುದು ಕೊರಲೊಳೇಕಮುಖ ರುದ್ರಾಕ್ಷಂ (ಗಿರಿಶ. ೩-೮೬). **ತಾಳಿಕಟ್ಟು** : ತಾಳಿಕಟ್ಟೋಕೆ ಕೂಲೀನೆ ? (ಲಾವಿ). [ ತಾಳಿ$_1$ (<ತಾಲಿ$_1$) + ಕಟ್ಟು$_1$ ]

**ತಾಳಿಗೆ** 'ತಾಲುಗೆ' ನೋ.

**ತಾಳಿಗೆದೆರೆ** (ನಾ). ಅಂಗುಳಿನ ತೆರೆ,-ಗೆರೆ,-ಸುಕ್ಕು : ತಾಲುವಿಂದೆ ಕೆಳಗಣ (ಗುಂ)ನೆಲೆಯುಂ ತಾಳಿಗೆದೆರ ದ್ವಾತ್ರಿಂಶತವಾಳಿಕರ್ಗಂ ಕೂರ್ಮೆಯೆಂಬ ಪೆಸರಿಂ ತೋರ್ಕುಂ (ಅಶ್ವಶಾ. ೯-೫). [ ತಾಳಿಗೆ (<ತಾಲುಗೆ) + ತೆರ್$_4$ ]

**ತಾಳಿಚೌಕುಳಿ** (ನಾ). ಒಂದು ಬಗೆಯ ಆಭರಣ: ತಾಳಿವಜ್ರ ತಾಳಿಚೌಕುಳಿ [ಪಾಠಾಂ. ಲಿ]ಮುತ್ತಿನ ಕುಂಡಲವಿಟ್ಟು (ಪಾರಿಜಾ. ೪೦-೪) ; ವನಪಾಲಕರಿ ಗುಡುಗೊರೆ ತಾಳಿಚೌಕುಳಿಯಿತ್ತು ಹರುಷದಿ ಬೀಳುಕೊಟ್ಟನು (ಕೋಗಿಯು. ೩-೫೯) ; ನೀಲದೊಂಟಿಯು ತಾಳಿಚೌಕುಳಿ . . . ಕಾಲಸರಗಳು ಲೋಲ ಧರಿಸಿಯೆ ಮೆರೆದನು (ಗಜೇಶಾದು. ೬).

[ ತಾಳಿ$_1$ (<ತಾಲಿ$_1$) + ಚೌಕುಳಿ (<ಚೌಕಳಿ) ]

**ತಾಳಿದ, ತಾಳದ** (ನಾ). ಒಂದು ಬಗೆಯ ತಾಳಿಸಿದ ವ್ಯಂಜನ ; ಪಲ್ಯ : ಬೆಲೆವೆಣ್ಗೆ ಬೇಟವೇಂ ತಾಳಿದಮುಕ್ಕುಮೋ ಕಟವೆಯೋಗರಮುಕ್ಕುಮೋ (ಲೀಲಾವ. ೨-೫೭) ; ಬಿಸಿಯುಸನ ತೊಯೆ ತುಪ್ಪಂ ತಾಳಿದ[ಪಾಠಾಂ. ಲ] ಪಳಿದ್ಯ ಕಜ್ಜಾಯ (ಸಮ್ಯಕ್ತ್ವ. ೪-೧೦) ; ಬಜ್ಜೆ ತಾಳಿದಗಳಂ ಕೆಲಬಲದಿ ಬಡಿಸುತಂ (ಲಿಂಗಪು. ೮-೪). **ತಾಳದ** : ತಾಳದ ಸೀಕರಣೆ ಕಸರಿ ಪಚ್ಚಡಿಗಳು ಮೇಲಾದ ಷಡುರಸಗಳನು . . . ಲೋಲಾಕ್ಷಿಯರು ಬಡಿಸಿದರು (ಕಂಸವಿ. ೮-೭೫) ; ಈ ಜ್ವರಕ್ಕೆ ಎಳೆಯ ಬದನೆಕಾಯಿಯ ತಾಳದ, ಬಜ್ಜಿಗೆ ಅನ್ನ ಸಹ ಪಥ್ಯವನ್ನು ಕೊಡಿಸುವುದು (ಸಕವ್ಯ. ೯೧) ; ಬಟ್ಟಲಲ್ಲಿ ಅನ್ನ, ತಾಳದ, ತಂಬುಳಿ, ಸಾರು . . . ಮೊದಲಾದುವು ಎಲ್ಲ ಕಂಡುವು (ಕುಕಥ. ೧೨೪) : ಸಮುದ್ರದ ನಳ್ಳಿಯ ಪಲ್ಯ, ಉಪ್ಪುವಿಸಾನಿನ ತಾಳದ . . . ಈ ಭಕ್ಷ್ಯಗಳು ಭೋಜನ ಮೇಲಿದ್ದುವು (ಪುನರು. ೧೦೮).

[ <ತಾಳಿಸು ]

**ತಾಳಿಬೊಟ್ಟು** (ನಾ). ಮಾಂಗಲ್ಯ : (ಕ).

[ ತಾಳಿ$_1$ (<ತಾಲಿ$_1$) + ಬೊಟ್ಟು$_2$ (<ಬಟ್ಟು$_1$) ]

**ತಾಳಿಮಿಕೆ** (ನಾ). ಸಹನೆ ; ತಾಳ್ಮೆ : ಸಂತರ ನೆರೆಯಲ್ಲಿ ತಾಳಿಮಿಕೆಯಲ್ಲಿ ನಡೆದು (ವಿಶಾಸು. ೭೪-೫). [ ತಾಳಿಮೆ (<ತಾಳ್ಮೆ) + – ಇಕೆ ]

**ತಾಳಿಮೆ** 'ತಾಳ್ಮೆ' ನೋ.

**ತಾಳಿಲ** 'ತಾಳಿಲು' ನೋ.

**ತಾಳಿಲು, ತಳಿಲು$_2$, ತಾಳಲ, ತಾಳಲು, ತಾಳಿಲ** (ನಾ). = ತಾಳಿದ : ಕಿಚ್ಚಡಿ ಬೋಣವು ಪಚ್ಚಡಿ ತಾಳಿಲು ಹೆಚ್ಚಿನ ಪಳಿದೆಯು . . . ಕುಳಿತುಣಬನ್ನಿ (ಶರಲೀ. ೮೭-೧೭). **ತಳಿಲು$_2$** : ತರತರದ ಪಚ್ಚಡಿಗಳು ತಳಿಲು ಸೀಕರಣೆಯುೂ ಕರಿದ ತುಪ್ಪದ ಅಪೂಪವೂ ಚಿತ್ರಾನ್ನ ದಧ್ಯನ್ನ (ಪಾರಿಜಾ. ೬೩-೮). **ತಾಳಲ** : ಅವರೆಕಾಯ ತಾಳಲದ ಸವಿಯ ಬಯಸಿ ಲೇಸಾಗಿ ಬಂದೆವು (ಗುರುಚಾ. ೧೦-೯೨). **ತಾಳಲು** : ಪರಿಪರಿಯ ತಾಳಲುಪ್ಪಿಸಕಾಯ್ ಪಳಿದ್ಯ (ಚಿಬಪು. ೩-೭೦). **ತಾಳಿಲ** : ಅಕ್ಕಿಯೋಗರ ಬಾಟೆ ತಾಳಿಲವದೇಂ

ಮನಂಗೊಂಡಿರೆ ಚಲ್ಲಕಾರ್ತಿಯರ್ ಬಡಿಸಿ (ಪುಣ್ಯಾಸ್ರ. ೩-೪೯): ಮೂಱು ಬಗೆಯ ತಾಳಿಲಯೆರಡು . . . ಸಾಸವೆ (ಬೊಂಶಾ. ೧೯೪೦, ಕುಮುಟ. ೧೦೩-೨೭ : 1476); ರಾಜಾನ್ನದ ಕೂಳಿಕ್ಕಿ ತೊಯೆ ತುಪ್ಪವೆಱೆದು ತಾಳಿಲ ವಿಡೆ (ನೇಮಿಸಂ. ೩೯-೧೪೩); ತಾಳಿಲ ಕೊಣಬು ಪುಡೆಯ ಮುಂತಾದ ಮೇಲೋಗರವನನುವಮಾಳ್ಪುದು (ಸೂಪಶಾ. ೫-೩೭); ಕಲಸುಮೇಲೋಗರ ತಾಳಿಲ ಮುಂತಾದ ಪಂಚಭಕ್ಷಕ್ಕೆ ಅಕ್ಕಿ ಹಾನೆ ೨ (ಎಇ. VIII, ೦೩೨-೩೯ ; 1586). [ <ತಾಳಿಸು₂ + – ಇಲು₂ (<–ಇಲ್₃) ]

**ತಾಳಿವಜ್ರ** (ನಾ). ಒಂದು ಬಗೆಯ ಆಭರಣ : ತಾಳಿವಜ್ರ ತಾಳಿಬೌಕುಳಿ ಮುತ್ತಿನ ಕುಂಡಲವಿಟ್ಟು (ವಾದಿಕೀ. ४೦-४).
[ ತಾಳಿ₁ (<ತಾಲಿ₁) + ವಜ್ರ ]

**ತಾಳಿಸಪತ್ರ** 'ತಾಳೀಸಪತ್ರ' ನೋ.

**ತಾಳಿಸಪತ್ರೆ** 'ತಾಳೀಸಪತ್ರೆ' ನೋ.

**ತಾಳಿಸು₁** (ಕ್ರಿ). ನಿಲ್ಲಿಸಂ; ತಡೆಹಿಡಿ : ಸರಗೊಡ್ಡಿ ಬೇಡುವೆ ತಾಳಿಸ್ಯಲ್ಲಯ್ಯ ಕುದುರೆಯ (ನಾಪದ. ೧೦೦). [ ತಾಳ್₁ + – ಇಸು₃ ]

**ತಾಳಿಸು₂** (ಕ್ರಿ). ತುಪ್ಪ ಅಥವಾ ಎಣ್ಣೆಯಲ್ಲಿ ಬೇಯಿಸಂ,–ಬಾಡಿಸು,–ಹುರಿ : ಕಾಯ್ದ ಕಾವಲಿಗಳೊಳ್ ಪೆರ್ವುರ[ಪಾಕಾಂ. ಮೊರ್ವುರ] ನಾಗೆ ತಾಳಿಸುವರುಂ (ಆದಿಪು. ೫-೮೫ ವ) ; ಮತ್ತಮಾವಿನ ಘೃತದಿಂದೆ ತಾಳಿಸಿ ರಸಾಯನವಮಾಗಡುಗೆ (ಲೋಕೋಪ. ೮-೩೧) : ಮೇಳಿಸಿ ಜೀವಾವಳಿಗಳ ತಾಳಿಸುವರನಚ್ಚಗೆಂಡದೊಳ್ ಕಾವಲಿಯೊಳ್ ತಾಳಿಸುವರ್ (ಸುಕುಮಾ. ೧೦-४೭) ; ಎಣ್ಣೆಯೆಱೆದು ತಾಳಿಸುವರುವಯ್ಯ (ಸಾನಂಚ. ೬-೦೬೧ ರಗಳೆ); ಭವ್ಯಕಲ್ಪದ್ರುಮಫಲಂಗಳನವ್ಯಯಾವ್ಯತದಿಂದ ತಾಳಿಸಿ (ಬಸವು. ೮-೩೮) : ಘಟ್ಟಿಮೆಣಸುಳ್ಳಿ ಮೊದಲಾದ ಸಂಭಾರಗಳನಿಟ್ಟು ತಾಳಿಸಿದ ಪುಡಿಗಳನದಱೊಳು[ಱ] ತುಂಬಲಿಟ್ಟು (ಸೂಪಶಾ. ४-೦೯) : ಕುದಿವೆಣ್ಣೆ ಯಲಿ ಹಾಯ್ಕಿಸಿ ತಾಳಿಸೀ ಪಾಷಿಯನು (ಕೃಷ್ಣಾಲ. ೯-೩೪).
[ ದೇ.೩ ತಮಿ. ಮಲ. ತಾಳಿತ್ತು, ತಾಳಿಪ್ಪು ; ತೆಲು. ತಾಳಿಂಚು ]

**ತಾಳಿಸು₃** (ಕ್ರಿ). ತಾಳೆ ನೋಡು ; ಹೋಲಿಸು : ನೀವು ಭಾರತೀಯರು ಕಾವ್ಯದಲ್ಲಿ ಓದಿದ್ದನ್ನು ಇಲ್ಲಿ ಖುದ್ದು ಕಾಣಲು, ತಾಳಿಸಿ ನೋಡಲು ಬರುತ್ತೀರಿ (ಹೊಸಕೃ. ೨೦೨). [ ತಾಳ್₃ + – ಇಸು₃ ]

**ತಾಳೀತರು** (ನಾ). = ತಾಳೆಮರ : ಪೇರೀಳೆ ತಾಳೀತರು ತೆಂಗುಂ ಕೌಂಗು . . . ಸಾಲ್ಗೊಂಡು ಕಣ್ಗೊಪ್ಪುತಿರ್ಕುಂ (ರಾಜಶೇ. ೨-೩೭).
[ ಸಂ. ತಾಲೀತರು (ತಾಲೀ + ತರು) ]

**ತಾಳೀಫಳ** (ನಾ). ತಾಳೆಮರದ ಹಣ್ಣು : ಶೋಣಾಂಶುಮನ್ಮಂಡಳಮಂ ತಾಳೀಫಳಂಗೆತ್ತಳಿಸಿ ತುಡುಕುಗುಂ ಬಾಲಶಾಖಾಚರಂಗಳ್ (ರಾಜಶೇ.೬-೨೦).
[ ಸಂ. ತಾಲೀಫಲ (ತಾಲೀ + ಫಲ) ]

**ತಾಳೀಸಪತ್ರ** 'ತಾಳೀಸಪತ್ರೆ' ನೋ.

**ತಾಳೀಸಪತ್ರೆ**, ಚಾಳೀಸಪತ್ರ, ತಾಳಿಸಪತ್ರ, ತಾಳಿಸಪತ್ರೆ, ತಾಳೀಸಪತ್ರ, ತಾಳೇಶಪತ್ರೆ, ತಾಳೇಸಪತ್ರ, ತಾಳೇಸಪತ್ರೆ (ನಾ). ಒಂದು ಬಗೆಯ ಔಷಧಿ ಸಸ್ಯ : "ಪತ್ರಕ, ಪತ್ರಕಾ – ಈ ಯೆರಡುಂ ತಾಳೀಸಪತ್ರೆ" (ಓಷಧಿ. ೯೦); ತಾಳೀಸಪತ್ರೆ, ಮೆಣಸು ಇಂತಿವೆರಡಂ ಸಮಭಾಗವಂ ಒಂದು ಭಾಗವೆಂದು ಯೋಚಿಸಿಕೊಂಡು (ವಿವ್ಯವಿ. ೩೮). ಚಾಳೀಸಪತ್ರೆ : ಚಾಳೀಸ ಪತ್ರೆ ಗ ೧ ತೂಕ, ಮೆಣಸು ಗ ೧ ತೂಕ . . . ಇವೆಲ್ಲವಂ ಕೂಡಿ ಚೂರ್ಣವ ಮಾಡಿ (ವಿವ್ಯವಿ. ೨೦೦). ತಾಳಿಸಪತ್ರ : "ಕಾಸಘ್ನ: – ತಾಳಿಸಪತ್ರ, ತಾಟಿ" (ಓಷಧಿ. ೨೯). ತಾಳಿಸಪತ್ರೆ : ಗೊರಜಿ, ಈಚಲಿ, ಚರಿಜಲಿ, ತಾಳಿಸಪತ್ರೆ (ವ್ಯಾಕಿಗಿ. ೩೭-೭೩೭). ತಾಳೀಸಪತ್ರ : "ತಾಳೀಸಕಂ, ತಾಳೀಸ ಪತ್ರಂ – ಈ ಯೆರಡುಂ ತಾಳೀಸಪತ್ರ" (ಓಷಧಿ. ೭೭): "ನೀಲಂ – ತಾಳೀಸ ಪತ್ರ, ಕಾಚಲವಣ" (ಓಷಧಿ. ೮೮). ತಾಳೇಶಪತ್ರೆ : (ವ್ಯಾಕಿಗಿ. ೧-೦). ತಾಳೇಸಪತ್ರ : "ಕರಿಣಾ–ಚವ್ಯ, ಗಜಹಿಪ್ಪಲಿ, ವರಿವತ್ರ, ತಾಳೇಸಪತ್ರ, ಲವಂಗಪತ್ರ" (ಓಷಧಿ. ೨४). ತಾಳೇಸಪತ್ರೆ : ಶುಂಠಿ, ಹಿಪ್ಪಲಿ, ತಾಳೇಸ ಪತ್ರೆ . . . ಲವಂಗ ಇವುಗಳನ್ನು ಸಮಾಂಶವಾಗಿ ಅರೆದು ಜೇನುತುಪ್ಪ ಗೂಡಿ ಸೇವಿಸೆ ಶ್ಲೇಷ್ಮಜ್ವರ ನಾಶವಾಗುವುದು (ಸಕಶ್ಯ. ೮೭).
[ ←ಹಿಂ. ತಾಲೀಶಪತ್ರ್ ; ಮರಾ. ತಾಲೀಸಪತ್ರ್ ]

**ತಾಳು₁** 'ತಾಳ್₁' ನೋ.

**ತಾಳು₂** 'ತಾಳ್₂' ನೋ.

**ತಾಳು₃** 'ತಾಳ್₃' ನೋ.

**ತಾಳು₄** 'ತಾಲು' ನೋ.

**ತಾಳುಂತಟ್ಟುಂ**, ತಾಳುತಟ್ಟು (ಅ). ದಿಕ್ಕಾಪಾಲಾಗುವಂತೆ : ದಂತಿ ಗಳೊಡ್ಡಿನ ಕಾಲ್ಗಾಪಾಂತೊಂದಱೊಳೊಂದು ಪೊಯ್ಯೆ ತಾಳುಂತಟ್ಟುಂ (ಮಹಾನೇ. ೧೨-೫೩). ತಾಳುತಟ್ಟು : ಪುಷ್ಪಶರ ಸಂತತಿಯಿಂ ಬಿಡದೆಚ್ಚು ತಾಳುತಟ್ಟಾಗೆ ತಗುಳ್ದು (ಧರ್ಮಾಮ್ಯ. ೦೩-೦೦೫). [ <ತಾಱುಂತಟ್ಟು ]

**ತಾಳುಂತಟ್ಟುಂಬೊಯ್** (ಕ್ರಿ). ಸಿಕ್ಕಾಪಟ್ಟೆ ಹೊಡೆ, – ಬಡಿ : ತಾಳುಂ ತಟ್ಟುಂಬೊಯ್ವರ್ ಗೋಟಿಯಲರ್ (ಹಂರಾಮ. ೦೩-೬೪).
[ ತಾಳುಂತಟ್ಟುಂ + ಪೊಯ್₁ ]

**ತಾಳುಕುಪ್ಪೆ** (ನಾ). ಧಾನ್ಯಗಳಿಂದ ಬೇರೆಮಾಡಿದ ದಂಟುಗಳ ರಾಶಿ,– ಗುಂಪು : (೬). [ ತಾಳು₂ (<ತಾಳ್₂) + ಕುಪ್ಪೆ₁ ]

**ತಾಳುಗೆ** 'ತಾಲುಗೆ' ನೋ.

**ತಾಳುತಟ್ಟು** 'ತಾಳುಂತಟ್ಟುಂ' ನೋ.

**ತಾಳುತಳ** (ನಾ). ಅಂಗಾಲಿನ ಕೆಳಭಾಗ : ಕೋಮಳ ತಾಳು[ಪಾಕಾಂ. ಲು] ತಳಸಂಘಟ್ಟಮಾತ್ರ ಕ್ಷೋದನೀಯವೋದಕಮುಮಂ (ಆದಿಪು. ೦೦-೨೭ ವ).
[ ತಾಳು₄ (=ತಾಲು) + ತಳ (=ತಲ) ]

**ತಾಳುತುದಿ** (ನಾ). ತಳದಿಂದ ತುದಿ; ಕೊನೆಮೊದಲಂ : ತಾಳುತುದಿಯಾಗಿ ವಿಚಾರಿಸಿ ನಿಶ್ಶಂಕೆಯಾಗುವಂತೆ ದೃಢಮಾಡಿಕೊಳ್ಳುವುದು (ಜಿಟ್ಕಅ. ೦೮೩-೦೯). [ ತಾಳು₂ (<ತಾಳ್₂) + ತುದಿ ]

**ತಾಳುಬೀಳು** 'ತಾಳೆಬೀಳು' ನೋ.

**ತಾಳುಮೆ** 'ತಾಳ್ಮೆ' ನೋ.

**ತಾಳುರೋಗ** 'ತಾಲುರೋಗ' ನೋ.

**ತಾಳುವಂಶ** (ನಾ). ಕುದುರೆಯ ತಾಲುಪ್ರದೇಶದಲ್ಲಿರುವ ಅಡ್ಡ ಗೆರೆ,– ರೇಖೆ : ಆ ತ(ಥ)ರಗಳ ಮೇಲ್‌ರೇಖೆಗೆ ಖ್ಯಾತಂ ತಾಂ ತಾಳುವಂಶ ಮೆಂಬಭಿಧಾನಂ (ಅಶ್ವಶಾ. ೯-೭). [ ತಾಳು₄ (= ತಾಲು) + ವಂಶ ]

**ತಾಳುವನ** (ನಾ). ತಾಳೆಯ ಮರಗಳ ಕಾಡು ; ತಾಲವನ : [ಉ]ದಯ ತಾಳುವನ ಬಡಗ ತಯಿಪಾಡಿಯ ಒಳಗೆ (ಸೌಇಇ. IX-ii, ४೭೩-೨೭ : 1487). [ ತಾಳು₃ (<ತಾಳ್₃) + ವನ ]

**ತಾಳುವಾರ** 'ತಾಳ್ವಾರ' ನೋ.

**ತಾಳೆ₁** 'ತಾಟಿ' ನೋ.

**ತಾಳೆ₂** 'ತಾಳ್₃' ನೋ.

**ತಾಳೆ₃** (ನಾ). ಹೊಂದಾವಣೆ ; ಮೇಳ ; ಹೊಂದಿಕೆ : ನಮ್ಮ ಇಂದ್ರಿಯಗಳ ಜ್ಞಾನಕ್ಕೂ ವಸ್ತುವಿನ ಯಥಾರ್ಥಸ್ವರೂಪಕ್ಕೂ ತಾಳೆ ತಪ್ಪಿದಾಗ ನಮ್ಮ ಜ್ಞಾನ ಸುಳ್ಳಾಗುತ್ತದೆ (ತತ್ತ್ವಶಾ. ೩೨೭).
ತಾಳೆಮಾಡು = ತಾಳೆನೋಡಂ : ಬ್ರಾಹ್ಮಿಲಿಪಿಯನ್ನು ಗ್ರೀಕ್ ಲಿಪಿಗಳೊಡನೆ ತಾಳೆಮಾಡಿ ನೋಡಿ (ದ್ರಾವಿವಿ. ೩४). ತಾಳೆಯಾಗು = ಹೊಂದಾಣಿಕೆಯಾಗು; ಮೇಳವಾಗು : ನಕ್ಷೆಯ ಸರಹದ್ದು ಗುರುತಿಗೂ ಭೂಮಿಯ ಮೇಲೆ ಕಾಣುವ ಗುರುತಿಗೂ ತಾಳೆಯಾದ ಮೇಲೆ (ಭೂಮಿಅ. ೩೮). [ ←ಮರಾ. ತಾಳ್. ತಾಳಾ./ಸಂ. ತಾಲ ]

**ತಾಳೆಗರಿ** (ನಾ).=ತಾಲಪತ್ರ.೩ : ಲಿಪಿಕಾರರು ತಾಳೆಗರಿಯ ಮೇಲೆ ಹಿಂದೆ ಬರೆಯುತ್ತಿದ್ದ ಕಾಲದಲ್ಲಿ ಕಬ್ಬಿಣದ ಕಡ್ಡಿಯನ್ನು . . . ಲೇಖಣಿಯಾಗಿ ಬಳಸುತ್ತಿದ್ದರು (ದ್ರಾವಿಪಿ. ೫೯) ; ನಮ್ಮೂರಿನಲ್ಲಿ ಎಲ್ಲಿ ನೋಡಿದರೂ ಲಿಪಿ, ಶಾಸನಗಳು, ತಾಳೆಗರಿಗಳು ಹೇರಳವಾಗಿ ಬಿದ್ದಿವೆ (ರಾಯುಶ. ೬).

[ ತಾಳೆ₂ (<ತಾಳ್₃) + ಗರಿ (<ಗಱ) ]

**ತಾಳೆಛತ್ರ** (ನಾ). ತಾಳೆಯ ಗರಿಗಳಿಂದ ಮಾಡಿದ ಕೊಡೆ : ಕೆಲವರ ಅಡಿಗೆ ಪಾತ್ರಗಳು, ಮಳೆಗೆ ಹಿಡಿಯುವ ತಾಳೆಛತ್ರಗಳು ಎಲ್ಲ ಇದ್ದ ಸ್ಥಳವನ್ನೆಲ್ಲ ಆಕ್ರಮಿಸಿದ್ದುವು (ರಕ್ತರೂ. ೫೯). [ ತಾಳೆ₂ (<ತಾಳ್₃) + ಛತ್ರ₂ ]

**ತಾಳೆದನಿ** (ನಾ). ತಾಳೆಯ ಮರದೆಲೆಗಳ ಧ್ವನಿ,-ಶಬ್ದ : ಒಗೆದೊಂದು ತಾಳೆದನಿಗೇಳ್ದ ಗಜವ್ರಜದಂದಮಾಗೆ (ಕಾದಂಪೂ. ೩೫).

[ ತಾಳೆ₂ (<ತಾಳ್₃) + ದನಿ₂ ]

**ತಾಳೆನೋಡು** (ಕ್ರಿ). ಪರಸ್ಪರ ಹೋಲಿಸಿ ನೋಡು,-ಹೊಂದಿಸಿ ನೋಡು : ಆಸ್ತಿವಂತ ತನ್ನ ಖಾತೆಯ ಲೆಕ್ಕವನ್ನು ತಾಳೆನೋಡುತ್ತಾನೆ (ನಿಬಂಧ. II, ೨೯೦); ಹಣವನ್ನು ಎಣಿಸಿ ಲೆಕ್ಕದ ಪ್ರಕಾರ ತಾಳೆನೋಡಿದಾಗ ಆನಂದನ ಎದೆ ಒಡೆಯಿತು (ಮರಳಿ. ೬೦) ; ಗಡಿಯಾರದ ಮುಳ್ಳು ತಾಳೆ ನೋಡಿಕೊಂಡು (ಕಂಗೂಲಿ. ೮೨). [ ತಾಳೆ₃ + ನೋಡು ]

**ತಾಳೆಬೀಳು**, ತಾಳುಬೀಳು (ಕ್ರಿ). ಮೇಳ ಹೊಂದು ; ಸರಿಹೋಗು : (೬). **ತಾಳುಬೀಳು :** ಅವರೊಂದು ಕನ್ನಡದ ಉಪನ್ಯಾಸವನ್ನು ಕೊಡುವುದಕ್ಕೂ ತಾತ್ಕಾಲಿಕವಾಗಿದ್ದ ಅವರ ನೌಕರಿ ಹೋಗುವುದಕ್ಕೂ ತಾಳುಬಿತ್ತು (ಕಯಾತ್ರ. ೪). [ ತಾಳೆ₃ + ಬೀಳು₁ (<ಬೀೞ್₁) ]

**ತಾಳೆಬೆಲ್ಲ**, ತಾಟಿಬೆಲ್ಲ (ನಾ). ತಾಳೆಮರದ ರಸದಿಂದ ತಯಾರಿಸಿದ ಬೆಲ್ಲ : (೬). **ತಾಟಿಬೆಲ್ಲ :** (೬). [ ತಾಳೆ₂ (<ತಾಳ್₃) + ಬೆಲ್ಲ ]

**ತಾಳೆಮರ**, ತಾಟಿಮರ, ತಾಟಿಮರ, ತಾಟ್ಮರ (ನಾ). ತಾಳೆಯ ಮರ ; ತಾಳಮರ: "ತೃಣರಾಜಾಹ್ವಯಃ, ತಾಳಃ – ೨ ತಾಳೇಮರದ ಹೆಸರು" (ಸಿದ್ಧಾಂತಿ. ೦೩೩) ; ತಾಟಿನುಂಗು ಮರ, ತಾಳೆಮರ (ಮೃಣಿಗಿ. ೦೩-೨೩೪) ; ತಾಳೆಮರ ಉದ್ದವಾದರೆ ಕೋಳಿಗೆ ಬಂದದ್ದೇನು? (ಗಾದೆ). **ತಾಟಿಮರ :** ಉತ್ತಾರ ಕೊಟ್ಟದು ತಾಟಿಮರ ೫೦ಕೆ ಗ ೧ (ಎಳ. VIII, ತೀರ್ಥಹ. ೬-೦೫೫: 1723). △ **ತಾಟಿಮರ :** "ತೃಣರಾಜ, ತಾಲ" (ನಾಜಿರಾ. ೬) ; ಅದಱ ತದನನ್ತರ ಚೈಕೋಲ ತಾಟಿಮರ ಅದಱ ತದನಾನ್ತರ ಮಟ್ಟಱಯ ಕುರಟಿಗೊಣ್ಣ (ಸೌಇಇ. IX-1, ೪೦-೨೫ : 11ನೆಯ ಶತ). △ **ತಾಟ್ಮರ :** [ನೀ]ಟ್ಟ ತಾಟ್ಮರದವೊಲಪ್ಪುಡಲ್ (ಹಂಪಭಾ. ೦೨-೭).

[ತಾಳೆ₂(<ತಾಳ್₃) + ಮರ₁]

**ತಾಳೆಯೋನ್** (ನಾ). ಒಬ್ಬಾತನ ಹೆಸರು (?) : ಪೆರಿಯವನ್ ಕೋಲ್ಲಗಾಂ[ತು] ಭಳ್ದನ್ ಎಳಾ ಆಲಕ್ಕೊವಾಡಿ ತಾಳೆಯೋನ್ ವಿಾ × ನೆಯ್ಮು ಇಕ್ಕಿಸಿ ಸತ್ತಾನ್ (ಸೌಇಇ. IX-1, ೨-೦೦ ; ಸು. ೯ನೆಯ ಶತ). [ ? ]

**ತಾಳೆಯೋಲೆ** 'ತಾಳೋಲೆ' ನೋ.

**ತಾಳೆಲೆ** (ನಾ). ತಾಳೆ ಮರದ ಎಲೆ: ಸಿಡಿಲಿನುಱುಬೆಯ ತಾಳೆಲೆಯೊಳು ಮಾಡಿದ ಕೊಡೆ ತಾಳಲಾವುದೇನು (ಕಂಸವಿ. ೦೮-೦೫).

[ ತಾಳೆ₂ (<ತಾಳ್₃) + ಎಲೆ₁ ]

**ತಾಳೆವಾಲೆ** 'ತಾಳೋಲೆ' ನೋ.

**ತಾಳೆವೋಲೆ** 'ತಾಳೋಲೆ' ನೋ.

**ತಾಳೆಸೊಪ್ಪು** (ನಾ). ಒಂದು ಬಗೆಯ ಸಸ್ಯ : "ಇಂದಿರಾ–ತಾಳೆಸೊಪ್ಪು, ಹಾವುಮಕ್ಕಿ" (ಓಷಧಿ. ೦೩). [ ತಾಳೆ ? + ಸೊಪ್ಪು₃ ]

**ತಾಳೆಹಣ್ಣು**, ತಾಟಪಣ್, ತಾಟವಣ್ (ನಾ). ತಾಳೆಯ ಹಣ್ಣು ; ತಾಳಹಣ್ಣು : ತಾಳೆಹಣ್ಣು ತಾನೇ ಬಿದ್ದರೂ ಬಾಳದ ಮುರವಗೆ ಬಾಯಿ ಮುಚ್ಚಿತು (ಗಾದೆ). △ **ತಾಟಪಣ್ :** ಚೆನ್ನರ ಸಂದ ಚೆನ್ನಪೊಂಗರ ತಲೆ ತಾಟವಣ್ ಕೆದಱದಂತೆ ನಿರಂತರವಾಜಿರಂಗದೊಳ್ ಪರೆದಿರೆ (ಹಂಪಭಾ. ೮-೦೦೬). △ **ತಾಟವಣ್ :** ಕಡಿದು . . . ತಾಟ[ಪಾಠಾಂ. ಟಿ]ವಣ್ಣ ಬಣ್ಣಕ್ಕೆಣೆಯಾದ ಚಂಚುಪುಟದಿಂದವು (ಕಾದಂಪೂ. ೦೩೬).

[ ತಾಳೆ₂(<ತಾಳ್₃) + ಹಣ್ಣು₃(<ಪಣ್₃) ]

**ತಾಳೆಹಾಕು** (ಕ್ರಿ). = ತಾಳೆನೋಡು : ಹೀಗೆ ಅನೇಕ ವಿಷಯಗಳನ್ನು ತಾಳೆ ಹಾಕಿಕೊಂಡು ರಾಜರ ಮನಸ್ಸು ಶ್ರೀದೇವಿಯಲ್ಲಿ ಅನುರಕ್ತವಾಗಿರಬಹುದು (ಶ್ರೀರಾಯ. ೩೪) ; ಲೆಕ್ಕವನ್ನು ಮಾಡಿದ್ದು ಸರಿಯಾಗಿದೆಯೇ ಎಂದು ತಾಳೆ ಹಾಕಿ ನೋಡಬೇಕು (ಶಿಕ್ಷದ.೩೩೩).

[ ತಾಳೆ₃ + ಹಾಕು(<ಪಾಯ್ಚು₁) ]

**ತಾಳೆಹೂ** 'ತಾಟಿ³ ಹೂ' ನೋ.

**ತಾಳೆಹೆಂಡ** (ನಾ). ತಾಳೆಮರದಿಂದ ತಯಾರಿಸಿದ ಹೆಂಡ : (೬).

[ ತಾಳೆ₂ (<ತಾಳ್₃) + ಹೆಂಡ ]

**ತಾಳೇಬಂದು** (ನಾ). ಜಮಾಖರ್ಚು ಪಟ್ಟಿ; ಆಯವ್ಯಯ ತಖ್ತೆ: ಆ ಕಂಪನಿಗಳ ಸಾಧಾರಣ ವಸ್ತುಸ್ಥಿತಿಯನ್ನು ಅವುಗಳ ತಾಳೇಬಂದುಗಳ (Balance sheets) ಪರಿಶೀಲನದ ಮೇಲಿಂದ ತಿಳಿದುಕೊಳ್ಳುವರು (ಬ್ಯಾಂಕಿಕ್. ೦೦೬) ; ಬೆಳಗಾವೀ ಜಿಲ್ಲೆಯ ದಪ್ತರಿನಲ್ಲಿ ಈಗಿನ ಲೆಕ್ಕದ ಪದ್ಧತಿಗೆ ಹೊಂದುವಂಥ ತಾಳೇಬಂದು . . . ದೊರಿಯುತ್ತದೆ (ಕರ್ಣಾಗ. ೩೯೦). [ ←ಮರಾ. ತಾಳೇಬಂದ್ ]

**ತಾಳೇಶಪತ್ರೆ** 'ತಾಳೀಸಪತ್ರೆ' ನೋ.

**ತಾಳೇಸಪತ್ರ** 'ತಾಳೀಸಪತ್ರೆ' ನೋ.

**ತಾಳೇಸಪತ್ರೆ** 'ತಾಳೀಸಪತ್ರೆ' ನೋ.

**ತಾಳೈಸು** (ಕ್ರಿ). ತಾಳವನ್ನು ಸೂಚಿಸು : ಕಡೆಗಂಗಳ ಕೊನೆಯೊಳು ತಾಳೈಸಲು[ಪಾಠಾಂ. ಕೊನೆಯೊಳ್ಮೇಳೈಸಲ್] (ಭೃಂಗೀಶ. ಹ. ೪೬೮-೦೦).

[ ತಾಳ₂ (= ತಾಲ) + – ಇಸು₃ ]

**ತಾಳೋದ್ಘಾಟನಿ** (ನಾ). ಅಗುಳಿಯನ್ನು ಕಳಚುವುದು ; ಒಂದು ಕಳ್ಳವಿದ್ಯೆ : ತಾಳೋದ್ಘಾಟನಿ ವಿದ್ಯಾಮಂತ್ರ . . . ಮೊದಲಾಗೊಡೆಯ ತಸ್ಕರಶಾಸ್ತ್ರಂಗಳೊಳಾದಮಾನುಂ ಕುಶಲನಂತಪ್ಪ ಕಳ್ಳಂ (ವಡ್ಡಾರಾ. ೦೨೨.೦೬). [ ಸಂ. ತಾಲೋದ್ಘಾಟನೀ (ತಾಲ + ಉದ್ಘಾಟನೀ) ]

**ತಾಳೋಲೆ**, ತಳಲೆ, ತಳಾಲೆ, ತಾಳೆಯೋಲೆ, ತಾಳೆವಾಲೆ, ತಾಳೆವೋಲೆ (ನಾ). ೧. (ಮುತ್ತೈದೆತನದ ಸೂಚಕವಾಗಿ) ಸ್ತ್ರೀಯರು ಧರಿಸುವ ಕರ್ಣಾಭರಣ ; ತಾಳೆಗರಿಯಿಂದ ಮಾಡಿದ ಓಲೆ : ನಿಕ್ಕುವದಿಂ ತಾಳೋಲೆಯ ನಿಕ್ಕುವವರ್ಪಲರೊ ನೋಡ ಪೊನ್ನೋಲೆಯನಂತಿಕ್ಕುವ ವರ್ಪಲರೊ(ಧರ್ಮಾಮೃ. ೦-೨೦೦) ; ಪಾದಕ್ಕೆ ಎರಗಿ ಸೆರಗೊಡ್ಡಿ ಬೇಡುವೆ ತಾಳೋಲೆ ಗೈದೆತನಗಳ (ನಾಶಪ. ೨೦೦). **ತಳಲೆ :** ೨. ತಾಳೆಗರಿ, ಅಡಕೆಯ ಹಾಳೆಮೊದಲಾದುವುಗಳಿಂದ ಮಾಡಿದ ಟೋಪಿ:ತಲೆಮೇಲೆ ಹಾಳೆಯ 'ತಳಲೆ' (ನಿಶಮ. ೨೪). **ತಳಾಲೆ :** ೨. "ನೋಡಲ್ಲಿ, ನಿನ್ನ ತಳಾಲೆ ತೇಲಿ ಹೋಗ್ತಾ ಇದೆ." ತೇಲಿ ಹೋಗುತ್ತಿದ್ದ ತನ್ನ ಹಾಳೆಟೋಪಿಯನ್ನು ಹಿಡಿದೆತ್ತಿಕೊಳ್ಳಲೆಂದು ಓಂಚಲು ಒಂದು ಹಾಸುಬಂಡೆಗೆ ಹಾರಿ . . . ತಳಾಲೆಯನ್ನು ತಂದಳು (ಮಲೆಮ. ೦೬೦) ; ತಳಾಲೆ ತೆಗೆದುಬಿಡೆ; ನಿನ್ನ ಮುಖದ ಅಂದಾನೇ ಕೆಡಿಸ್ತದೆ (ಮಲೆಮ. ೬೬೩). **ತಾಳೆಯೋಲೆ :** (೬). **ತಾಳೆವಾಲೆ :** ೩. ತಾಳೆಮರದ ಗರಿ : ತಾಳೇಮರದ ಹೆಸರು . . . ಬಹುಮುಂದಿ ತಾಳೇವಾಲೇ ಮರವೆನ್ನುವರು (ಸಿದ್ಧಾಂತಿ. ೦೩೩). **ತಾಳೆವೋಲೆ:** ೩. ತಾಳೆವೋಲೆಗಳೞುವುವ ಲಿಪಿ ಭೇದವ (ಜಿನರಾ. ೬-೭೩).

[ ತಾಳೆ₂ (<ತಾಳ್₃) + ಓಲೆ ]

**ತಾಳ್ಕೆ** (ನಾ).=ತಾಳಿಕೆ₁ ೩ : "ಧರಣಂ, ಧಾರಣಂ . . . ಧಾರ್ಯಂ ಈ ೬ ತಾಳ್ಕೆ" (ಕಾಶಕ್ತ. ೦೨೮). [ ತಾಳ್₁ + – ಕೆ ]

**ತಾಳ್ಮೆವಂತ** (ನಾ). ಸಹನೆಯಿಂದ ಕೂಡಿರುವಾತ; ತಾಳ್ಮೆಯುಳ್ಳವನು : "ವ್ಯಪ್ಸಃ, ವ್ಯಪ್ಸವಾನ್. . . ಮರ್ಷಾಣಃ, ಈ ೬ ಹುಸಿಗನುಂ, ತಾಳ್ಮೆವಂತನುಂ" (ಕಾಶಕ್ಕ. ೨೦೪). [ ತಾಳ್ಮೆ + – ವಂತ ]

**ತಾಳ್ಗೆಯ್** (ಕ್ರಿ). ಕಾಪಾಡು ; ಸಲಹು ; ರಕ್ಷಿಸು : ಕೆಳೆಗೊಳ್ಳಂ ನೆವಮಿಲ್ಲದೆಲ್ಲ ಜಗಮುಂ ತಾಳ್ಗೆಯ್ವುವಾ ದೈವಮುಂ ತಳರ್ವನ್ನಂ ಚಿಕದೇವರಾಯನ ದಯಾಂಕುರಂ ಕಟಾಕ್ಷಾಂತದೊಳ್ (ಚಿಕವಿ. ೩-೧೦೬).

[ ತಾಳ್$_1$ + ಕೆಯ್$_1$ ]

**ತಾಳ್ಪು$_1$** (ಕ್ರಿ). ೧. ಹೊಂದು; ಪಡೆ : ಸಮಾಧಿಯೊಳೆ ಮುಡಿಪಿ ತಾಳ್ದಿದನ್ನ ತಮರೇನ್ದ್ರಭೋಗಮಂ (ಎಕ. III, ಮೈಸೂರು.೬-೩ ; ಶ. 750); ದಾನಾಸುಮೋದ ಪ್ರಭಾವದಿಂದುಪಶಮಭಾವಮಂ ತಾಳ್ದಿ (ಆದಿಪು. ೩-೨ ವ) : ತಾನುಂ ತ್ರಿಖಂಡಮಂಡಲಾಧಿಪತ್ಯಮಂ ತಾಳ್ದಿ ಪೌದನಪುರಮಂ ಪೊಕ್ಕು (ಶಾಂತಿಪು. ೩-೬೪ ವ) ; ದಕ್ಷಿಣಬಾಹುದಂಡದೆ ಜಯಶ್ರೀಕಾಂತೆಯುಂ ತಾಳ್ದಿ (ಗದಾಯು. ೯-೩೯) ; ಚರಿಯಿಪ ಖಗಮೃಗಕುಳಮಾ ಪವಮಮುನೀಶ್ವರ ತಪಃಪ್ರಭಾವದಿನತ್ಯಾದರಮಂ ತಾಳ್ದಿ ಪರಸ್ಪರ ವಿರೋಧಮಂ ಬಿಸುಟವು (ಸುಕುಮಾ.೮-೬೨); ಶಾಂತರಸಮಂ ಕಾರುಣ್ಯಮಂ ತಾಳ್ದಿ (ಶಂರಾಮಾ.೦-೩). ೨. ಧರಿಸು ; ತಳೆ : "ತಾಳ್ಡು–ಧಾರಣೇ" (ಶಮದಿ) ; ತದಾಜ್ಞೆಯಂ ನಿಜ ಕಿರೀಟದೊಳ್ ತಾಳ್ದಿದಂದದಿಂ ಸೊಗಯಿಸಿದರ್ (ಆದಿಪು. ೧೩-೬೯) : ಇತ್ತ ಸರ್ವದಯಿತೆ ಗರ್ಭಮಂ ತಾಳ್ದಿ ಸಾಗರದತ್ತಂ ಕಂಡು (ಜಾವುಂಪು. ೧೦೦-೧೪); ಅಂಗನೋಚಿತ ರಸಾಲಂಕಾರವಂ ತಾಳ್ದದೊಪ್ಪಿದ ವಾಕ್ಸುಂದರಿ ಬಂದು ಸನ್ನಿಹಿತೆಯಕ್ಕೆನ್ನೀ ಮುಖಾಂಭೋಜದೊಳ್ (ಗದಾಯು. ೦-೭) ; ದಿವಮಂ ಮುಟ್ಟಿದ ಪೆಂಪು ಭೂವಲಯಮಂ ತಾಳ್ದಿರ್ದ ಧೈರ್ಯೋದಯಂ (ಮಲ್ಲಿಪು. ೧-೬೪) ; ವಿಜಯಶ್ರೀಯುಂ ಭುಜದೊಳು ತಾಳ್ದದೇಯ (ಎಕ. VIII (೩), ಸೊರಬ, ೩೮೬-೩ : 1201). ೩. ಸಹಿಸು ; ತಡೆದುಕೊಳ್ಳು ; ತಾಳಿಕೊಳ್ಳು : ಅರಿಗನಂ ಕಾಣುತ್ತೆ . . . ತಾಳ್ದಲರಿದೆಂದಿರ್ಕಚ್ಚೆಯುಂ ಕಟ್ಟಿದರ್ (ಪಂಪಭಾ. ೪-೩೪); ದೇವಕೃತಂಗಳುಮಂ ಸ್ವಾಭಾವಿಕಮುಮನ ಜಿತ ನೀನೆ ತಾಳ್ದಿದೆ (ಅಜಿಪು. ೮-೧೭) ; ಇಂತೀ ಪದಿನಾಲ್ಕುಮನತ್ಯಂತು ದೃಢಹೃದಯನಾಗಿ ತಾಳ್ದಿರ್ದಂಗೋರಂತೆ ನಿರಂತರಸೌಖ್ಯಂ ಭ್ರಾಂತಿಲ್ಲದೆ ಕುಡುಗಳ್ಲಿ ಸಂದೆಯಮುಂಟೇ (ಧರ್ಮಾಮೃ. ೧-೮೨). ೪. ಕೈಕೊಳ್ಳು ; ತೆಗೆದುಕೊಳ್ಳು: ಮತ್ತಂತತಿಶಯದೆ ಮಹಾಪುರುಷವ್ರತಮಂ ತಾಳ್ದುವಳುದಾರಚರಿತಕ್ರಮದಿಂ (ಕವಿಜಾ. ೩-೧೬೨) ; ಮುನ್ನಿನ ರಾಜ್ಯಲೀಲೆಯುಂ ನೆನೆಯದೆ ತಾಳ್ದಿದಂ ವಿಮಲವಾಹನಯೋಗಿ ತಪೋನಿಯೋಗಮಂ (ಅಜಿಪು. ೩-೨) ; ಸುಷೇಣರೆಂಬ ಮುನಿಮುಖ್ಯರಲ್ಲಿ ಜಿನದೀಕ್ಷೆಯಂ ತಾಳ್ದಿದಂ (ಸುಕುಮಾ ೧೧-೩೧). ೫. ಹಿಡಿದುಕೊಳ್ಳು ; ಹಿಡಿ : ಮಗುಳ್ದಾನಿಲ್ಲಿಗೆ ಬರ್ಪುದುಂ ತನುವಿನೊಳ್ ಪ್ರಾಣಂಗಳಂ ದೇವಿ ತಾಳ್ದುಗುವೋ (ಕಾದಂಬ. ೩೭೪). ೬. ಹೊರು ; ಹೊತ್ತುಕೊಳ್ಳು: ಜಲಧಿತರಂಗತಾಟಿತ ಧರಾತಲಭಾರವಿದೆತ್ತ ಬಾಲನೆತ್ತಳವಿನಿತುಂಟೆ ತಾಳ್ದಲಿದನೊಟ್ಟಜೆಯಿಂ ಕೊಳಲೇದು ವೈರಿಗಳ್ ತಳರ್ದಪರ್ (ಆದಿಪು. ೪-೮೪).

**ತಾಳ್ದುಕೊಳ್** = ಸಹಿಸಿಕೊಳ್ಳು ; ಸೈರಿಸು : ತಾಳ್ದುಕೊಳಲರಿದಪ್ಪ ಪತನಕ್ಕೆ ಪಕ್ಕಪ್ಪ ಪಾಡಿಂದ ಉಬ್ಬಿಪಲ್ಲವಾಱಿವು (ಬಲ್ಲಪ್ರ. ೪೮-೦೦೩೩).

**ತಾಳ್ದು$_2$** 'ತಾಳ್$_1$' ಪರಾ.

**ತಾಳ್ಮೆ**, ತಾಳಿಮೆ, ತಾಳುಮೆ (ನಾ). ೧. ಸಹನೆ ; ಸೈರಣೆ ; ತಾಳುವಿಕೆ : ತೊಣೆಯಲ್ ತಾಳ್ಮೆಯನಾಂತವಂ ಬೆರೆತೊಡಂ ನಿರ್ಗರ್ವಿ (ಸೋಮೇಶ. ೩೨); ತಾಳ್ಮೆ ಇರಲಿ ಪ್ರಯತ್ನವನ್ನು ನಿಲ್ಲಿಸಬೇಡ (ಜಾಲಮ. ೨೨೨) ; ಜ್ವರದ ತಾಪದಿಂದ ಜರ್ಜರಿತನಾದ ಅನಂದ ತನ್ನೆಲ್ಲ ತಾಳ್ಮೆಯನ್ನು ಕಳೆದುಕೊಂಡಿದ್ದ (ಶೇಮೋಡ. ೧) ; ತಾಳ್ಮೆ ಇದ್ದ ಪುರುಷನಲ್ಲಿ ಬೀಳು ಇದ್ದರೆ ಬಾಳ್ಯಾನು (ಗಾದೆ). **ತಾಳಿಮೆ :** ೧. ತಾಳಿಮೆಗುಂಟೆ ಹಳವೆ (ಗಿರಿಜಾ. ೩೦-೯೪). ೨. ಸಾವಕಾಶ ; ತಡ : ತಾಳಿಮೆಯ ಮಾಡದಿರೆಂದು ಆ ಕ್ಷಣ ಕಳ್ಳಿಬಡಿಗೆಯ ತಂದು (ಕಾರವಿ. ೩-೧೩). **ತಾಳುಮೆ :** ೧. ತಾಳುಮೆಯು ಶಮದವುವು ಸಹಜವು (ಜ್ಞಾನಸಿಂ. ೧೬-೩೧) ; ತವಕದಿಂ ಕೇಡು ತಾಳುಮೆಯುಳುಮೆಯಿದನಿಂದು ಸವಿನಯದಿಪೊಲಿಸಿಕೊಂಬೊದು (ನವಮೋ. ೯-೨೦) ; ಆತುರದಿನ್ ಅಡುಗೆ ಪಕ್ವಹುದೆ ? ತಾಳುಮೆಯ ಪರಿಪಾಕ (ಮಂಕುಕ. ೭೮೧).

[ ತಾಳ್$_1$ + – ಮೆ$_1$ ]

**ತಾಳ್ಮೆಗೆಡು** (ಕ್ರಿ). ಸೈರಣೆಯನ್ನು ಕಳೆದುಕೊಳ್ಳು; ತಾಳ್ಮೆ ಇಲ್ಲದಂತಾಗು: ಆಗ ಭೀಮನು ತಾಳ್ಮೆಗೆಟ್ಟು ಕೈ ಕೈ ಹಿಸಿಕಿಕೊಳ್ಳುತ್ತ . . . ಎಂದನು (ವಚಭಾ. ೨೯೪) ; ಅದುವರೆಗೂ ಮೌನವಾಗಿದ್ದ ಜೈಗೋಪಾಲ್ ತಾಳ್ಮೆಗೆಟ್ಟು ಗಡಬಡಿಸಿದ (ಅಕ್ಷಾರ್ಶ. ೧೧೪) ; ಅವರು ಬಂದು ತಲುಪಿದುದೇ ತಾಳ್ಮೆಗೆಟ್ಟವರ ಹಾಗೆ (ಮೂರುದಾ. ೨೬೦). [ ತಾಳ್ಮೆ + ಕೆಡು$_1$ ]

**ತಾಳ್ಮೆತಪ್ಪು** (ಕ್ರಿ). = ತಾಳ್ಮೆಗೆಡು: ತಾಳ್ಮೆತಪ್ಪಿದರೆ ಅಪಯಶಸ್ಸು ಬರುತ್ತದೆ (ಭಾರದ. ೧೧೩). [ ತಾಳ್ಮೆ + ತಪ್ಪು$_1$ ]

**ತಾಳ್ಮೆವಂತ** (ನಾ). ತಾಳ್ಮೆಯುಳ್ಳವನು; ಸಹನೆ ಇರುವವನು: "ಕ್ಷಂಪನ್, ಕ್ಷಂಪಃ, ಕ್ಷಂಪಕಃ, ಈ ೩ ತಾಳ್ಮೆವಂತಂ" (ಕಾಶಕ್ಕ. ೨೩೪).

[ ತಾಳ್ಮೆ + – ವಂತ ]

**ತಾಳ್ವ** 'ತಾಳ್$_1$' ಪರಾ.

**ತಾಳ್ವಾರ**, ತಾವಾರ, ತಾಳವಾರ$_1$, ತಾಳುವಾರ (ನಾ). ೧. ಮನೆಯ ಮುಂದಿನ ತಗ್ಗಾದ ಅಂಗಳ; ಇಳಿಜಲಾದ ಅಂಗಳ: (೩). **ತಾವಾರ:** ೨. ಒಪ್ಪಾರು ಮನೆ ; ಒಪ್ಪಾರು ಗುಡಿಸಲು : ಕ್ರೈಸ್ತ ಪೂಜಾಗೃಹದ ಪಶ್ಚಿಮ ಪಾರ್ಶ್ವದಲ್ಲಿಯ ಹೊರಕೋಣೆ, ತಾವಾರ (Ante-chapel. ಇಂಕನಿ); (ದನಕರುಗಳನ್ನು ಕಟ್ಟುವುದು, ಮೊ. ಕ್ಕೆ ಉಪಯೋಗಿಸುವ) ಗುಡಿಸಿಲು ; ಜೋಪಡಿ ; ಕೊಟ್ಟಿಗೆ ; ಗಾಡಿಖಾನೆ ; ಸಾಮಾನನ್ನು ಶೇಖರಿಸಿಡುವ ಕರ್ಮಶಾಲೆಯಾಗಿ ಉಪಯೋಗಿಸುವ ಮನೆ; ಪಟ್ಟಡಿ; ತಾವಾರ"(Shed. ಇಂಕನಿ.).

**ತಾಳವಾರ$_1$ :** ೧. "ರಥ್ಯಾ, ಪ್ರತೋಳೀ, ವಿಶಿಖಾ ಇ ಊರೊಳೊಗಿರುವ ಮುಖ್ಯವಾದ ಚಾವಡಿ ಜಗಲಿ, ಬೀದಿಜಗಲಿ, ತಾಳವಾರ, ಕೈಸಾಲೆ, ಜಗಲಿ" (ಸಿದ್ಧಾಂತಿ. ೮೪). **ತಾಳುವಾರ :** ೨. ತಗಡು ಬಡಿದ ತಾಳುವಾರಂಗಳಿಂ (ಸೌಗಂಧಿ. ೧೩೦-೪).

[ ದೇ.ಗ ತಮಿ. ಮಲ. ತಾಟ್ವಾರ ; ತೆಲು. ತಾಳ್ವಾರ, ತಾಳುವಾರ ]

**ತಾಳ್ವೆ** (ನಾ). = ತಾಳ್ಮೆ ೧: "ಕ್ಷ್ಮಾಯಿಕಿ, ಕ್ಷ್ಮಾಣಂ, ಕ್ಷ್ಮಾಣೀಯಂ–ಈ ೩ ತಾಳ್ವೆ" (ಕಾಶಕ್ಕ. ೦೦೪). [ ತಾಳ್$_1$ + – ವೆ ]

**ತಾಱ್$_1$** 'ತಾಱು$_1$' ನೋ.

**ತಾಱ್$_2$**, ತಾರ್, ತಾಱು$_2$ (ನಾ). ಒಳಿತು ಕೆಡಕುಗಳ ಸೂಚನೆ; ಶಕುನ: "ಶಕುನ ಶೋಷಣಗಳೊಳ್ ತಾಱೆನಿಕ್ಕುಂ" (ಶಬ್ದಮಂ. ೦೦೬); ಸೇಗ್ಗೆಗ್ ಸೀಗರ್ಗಳ್ ತಾರ್ಗಳ್ (ಶಮದ. ೪೧). **ತಾರ್ :** ತುರುವಿಂದು ಬಲವಂದು ತಾರ್ಗಳಂ ಬರೆಯುತಿರೆ (ಕಾಲೂರ. ೩೯-೯೬). **ತಾಱು$_2$ :** "ತಾಱು – ಶೋಷಣೇ, ಶಕುನೇ ಚ" (ಶಮದಿ) ; ಸರಾಗದಿನೊಲಿದು ದಂಪತಿ ತಾಱ [ಪಾಠಾಂ. ತರವ]ನಿತ್ತವು ಕರಿಯ ಹಕ್ಕಿಗಳು ಸುಳಿದಪವಡದಲಿ ಹಂಗ ಬಲದಲಿ (ತೊರರಾ. ೧-೬-೭).

**ತಾಱನಾಡು** (ನಾ). ಒಂದು ಸ್ಥಳದ ಹೆಸರು : ದಂಡಾಯಕರು ತಾಱನಾಡು ಹದಿನಾಡು ಕುನಾಡನು . . . ರಾಜ್ಯಂಗೆಯುತ್ತಮಿರಲು (ಎಕ. III, ತಿರುಮ. ೩೧-೩೦ ; 1196). [ ತಾಱ ? + ನಾಡು ]

**ತಾಱಲ್** (ನಾ). ೧. ಒಣಗಿರುವುದು ; ಶುಷ್ಕವಾದುದು ; ಸೊರಗಿ ಹೋಗಿರುವುದು:ತಾಱಲಾದುವು ತನು ಕೂಟ ನೀರ ದೆಸೆಯಿಲ್ಲದೊಡಲ್ಗಳ ನೆಂತು ತಾಳ್ದುವಂ (ಆದಿಪು. ೯-೮೯). ೨. ಕುರುಚಲು ಗಿಡಗಳ ಗುಂಪು ; ಪೊದರು : ಪೊಸಗಾರೊಳ್ಪಾಱಲೊಳ್ ಕಣ್ಣರೆಮುಗುಟ್ದಿರೆ . . .

ನಿಂದುದು ವನಮಹಿಷೀವೃಂದಂ (ಮಲ್ಲಿಪು.೮-೯೯): ನಿಂದಿರ್ದುದೋರೊಂದೆಡೆಯೊಳ್ ತಾಱಲ್ಗಳೊತ್ತಂಬಡಿದು ಮೃಗವ್ಯಗ್ರೀವೃಂದಮೋರಂದದಿಂದಂ (ಚಂದ್ರಪ್ರ. ೪-೪೬) : ಸಿಂಹ ಕಿಶೋರರು ನಡುಸೂಲೊಳ್ಸೆರ್ಕಿ ಕಣ್ಣಂ ತೆಱೆದಿಭಪತಿಯಂ ತಾಱಲೊಳ್ಕಂಡು ಕಾಯ್ಪಿಂ ನಡು ಪಾಯ್ದು (ಅನಂಪು. ೧೨-೬೨) : ತಾಱಲೊಸರ್ದಾಣ ಮಹಾಗ್ರಹಂ ತೊಱೆ ಕೊಳಂ ಪುಲ್ವಟ್ಟೆಗಳ್ ಕಾಮುರ್ಕಂ (ಸೂಕ್ತಿಸು. ೩-೨). ೩. (ಕುರಂಚಲುಗಿಡಗಳಿಂದ ಕೂಡಿದ) ಪ್ರದೇಶ ; ತಪ್ಪಲು ; ಕಿಬ್ಬಿ : ಕರುಣಾಧ್ವನಿ ಪೊಂಪುಱಮಾದುದು ಗಿರಿಯ ಪಿರಿಯ ತಾಱಲೊಳಾಗಳ್ (ಶಾಂತಿಪು. ೯-೮೨) ; ಪೆಸರ್ವಡೆದುವು ಸೌಗಂಧಿಕಮೆಂದದಱ ತಾಱಲೊಳ್ ಕಿಸುಗಲ್ಗಳ್ (ಚಂದ್ರಪ್ರ. ೧೨-೯೯): ಆ ವರಾಹಸಂದೋಹಮಿರ್ದ ಶಾಲೆ[ಲಿ]ಯ ತಾಱಲೊಳ್ (ಶಾಂತೀಶ್ವ. ೩-೮೭ ವ). [ ತಾಱು$_1$ + – ಅಲ್$_2$ ]

**ತಾಱಲ್ವಿಡಿ** (ಕ್ರಿ). ಪೊದೆಯನ್ನು ಹಿಡಿ ; ಹೊದರನ್ನು ಸೇರು : ತಾಱಲ್ವಿಡಿದು ಗೋರಿವರಿದುಮೆನೆ ಕುನುಂಗಿ ಕೆಲ್ಲಯಿಸಿ ನೋಟ್ಟ ತರಳಲೋಚನದ ಸರಳಾಪಾಂಗಂ ಹರಿಣೀಭಾವಮಂ ಮನಂಗೊಳಿಸಿ (ಅನಂಪು. ೬-೧೬ ವ). [ ತಾಱಲ್ + ಪಿಡಿ$_1$ ]

**ತಾಱವಱು** 'ತಾಱುಮಾಱು' ನೋ.

**ತಾಱೆ**, ತಾರಿ$_1$, ತಾರೆ$_1$, ತಾಱೆ$_1$ (ನಾ). ೧. ಒಂದು ಬಗೆಯ ಮರ; ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧವಾದ ತಾರೆ, ಅಳಲೆ, ನೆಲ್ಲಿ ಎಂಬ ತ್ರಿಫಲಗಳಲ್ಲಿ ಒಂದು ; ಕಲಿದ್ರುಮ ; ಈ ತಾರೆಮರದಲ್ಲಿ ಕಲಿಪುರುಷನು ವಾಸಿಸುತ್ತಿರುವನೆಂಬ ನಂಬುಗೆಯಿದೆ : "ತಾಱೆಯಲಿ ಭಂಡಿಯಲಿ . . . ಅಕ್ಷಮೆನಿಸಿಕ್ಕು" (ಮಂಗರಾ. ೧೪೫-೩೦) ; ತಾಱೆ ಹೊನ್ನೆ ಕುಟಜಂ . . . ಪನಸು ನಿಂಬಂ (ಕಾವ್ಯಸಾ. ೦೦೪೦ ಪೂರ್ವ) : ತಾಱೆಯ ಕಳವಿನ ಮರಂಗಳು ಮೇರೆ (ಸೌಇಇ. IX-1, ೦೦೯-೪೩ ; 1067) ; ಪಾದರಿ ತಾಱೆ ತಂಡಸು . . . ಕವುಂಗಿಮಾವು (ಪಾರ್ಶ್ವಪು. ೦೨-೫೮) ; ತಾಱೆ ತೇಗು ತಱೆ ತಂಡಸಿ ಬೊಬ್ಬುಲಿ (ಪುಣ್ಯಸ್ರ. ೩-೭೪); ಕಡವೊಡವೆಕ್ಕೆ ಕಕ್ಕೆ ತಱೆ ತಾಱೆ . . . ತಡಸೀಳೆ ಬಾಱೆ (ಧರ್ಮಪ. ೩-೪೭) ; ನೆಲ್ಲಿ ನೇಱಲು ತಱೆ ತಾಱೆ ಕಡವ ಕನ್ನೆಲ್ಲಿ ಹಲಸು (ಕುಠಾಪಾಂ. ೨೭-೫೫). ೨. (?) : ಮೂಡಣ ಪಳ್ಳ ಅದಱ ತೆಜ್ಕಣ ದೆಸೆ [ಮಣ್ಣಗೆಱೆ]ಗೂಟ್ಟಂ ತಾಱೆಯಂ ಕೊ[ತ್ತೂರ್]ಗು ××× ಏಯ ಕೆಱೆಗೊಟ್ಟಂ (ಸೌಇಇ. XI-1, ೯-೨೯ ; 862); ಬ್ರಹ್ಮದೇವಂಗೆ ಗದ್ದೆ ತಾಱೆಯಿಂದಿಬ್ಬಡಗಲು ನಟ್ಟ ಕಲ್ಲಿಂದ ಮೂಡಣ ನಿವೇಸನ (ಎಕ. XII, ತಿಪಟೂ. ೪೨-೪೦ ; 1229). **ತಾರಿ$_1$**: ೧. ತಾರಿ . . . ದೊಡ್ಡ ಮರ (ಕಭಾಗ. ೪೦). **ತಾರೆ$_1$** : ೧. "ವಿಭೀತಕಃ . . . ಭೂತಾವಾಸಃ, ಕಲಿದ್ರುಮಃ ೬ ತಾರೆಯ ಮರ" (ಸಿದ್ಧಾಂತಿ. ೦೦೦) ; ತಾರೆಯು ಸೀಗೆ ಬೇಲ ಬಗುನಿಯುಂ (ಸವಮೋ. ೮-೯) ; ಮುತ್ತುಗ ತಾರೆ ಮುಂತಾದ ಹೆಮ್ಮರಗಳು ವತ್ತಾಗಿ ತೋರ್ದವಾ ವನದಿ (ಸೌಗಂಧಿ. ೨-೩೪) ; ಸ್ವಲ್ಪ ಮುಂದೆ ಹೋಗಲು ಹಣ್ಣುಬಿಟ್ಟದ್ದ ಒಂದು ತಾರೆಯ ಮರ ಕಾಣಿಸಿತು (ವಡಭಾ. ೧೪೧). **ತಾಱೆ$_1$** : ೧. "ಕಲಿಃ, ಅಕ್ಷಃ, ವಿಭೀತಃ–ಈ ೩ ತಾಱೆ" (ಹಲಾಯು. ೧೦೦-೪೬೪) ; ಎರಟ್ಟೆ ಪುಣಾಸೆಎ ಮೂಡಾಯೋಡಿ ನೀರಿಱಿವ ತಾಱೆಎ (ಎಕ. XVI, ಗುಬ್ಬಿ. ೬೫-೫೨ : 733) ; ತಾಱೆಯ ಮಾವಿನ ಮುಳ್ಮರನ ಪಾಲ್ಮರಂಗಳ ಸುರಗೇಹಾವಳಿಯ ಮರಂ ಕರಮಶುಭಾವಹಮಕ್ಕುಂ ಗೃಹಕ್ಕೆ ಗೃಹಶಲ್ಯಂಗಳ್ (ಲೋಕೋಪ. ೩-೯) ; ಉಜ್ವಲವಾಗಿ ತಾನುರಿವ ತಾಱೆಯ ತೆಂಗಿನೆಕ್ಕೆಯ ಮಾವಿನಿಂಧನಮಂ . . . ತರಿಸಿ (ಧರ್ಮಾಮೃ. ೯-೦೭೧) ; ಅರನೇಱಿಲ್ತಾಱೆ ತುಂಬುರ್ತದುಕಳಿಲೆಲಮ ನೆಲ್ಲಿ (ಗಿರಿಳ. ೧-೬೨) : ತರತರದಿಂ ಶೋಭಿಸುವ ತಾಱೆಯಿಂದ . . . ಕಾನನಂ ಕಣ್ಗೆಸೆದುದು (ರಾಘವ.೦೭-೫೪); ಗಂಧಕದ ತೈಲವನು ಕುಂದದಲೆ ರಸಕಿತ್ತು ಕಂದಿವ ತಾಱೆಯೊಡಗೂಡೆ ಹೇಮ ತಾ ಮುಂದೆ ಬಂದಕ್ಕು (ಸರ್ವಜ್ಞ.೦೯೬೭).

**ತಾಱೆಯಕಾಯಿ**, **ತಾರೆಯಕಾಯಿ** = ತಾಱೆಗಾಯ್ : ದಿನವೆರಡಕ್ಕೆ ತಾಱೆಯ ಕಾಯ ಪ್ರಮಾಣಾಹಾರವಾಗಿ (ಪುಣ್ಯಸ್ರ. ೦೦-೬ ವ); "ಅಕ್ಷಫಲಃ – ತಾರೆಯಕಾಯಿ" (ಓಷಧಿ. ೬).

[ ದೇ.೩ ತಮಿ. ತಾನ್ರಿ, ತಾನಿ ; ಮಲ. ತಾನ್ನಿ ; ತುಳು. ದಾಂಡಿ ; ತೆಲು. ತಾಡಿ, ತಾಂಡ್ರ ]

**ತಾಱೆಗಬೀಱೆಗ**, ತರಗಬರಗ, ತಱಬಱಕ, ತಾರಗಬೀರಗ (ನಾ). ಅಸ್ತವ್ಯಸ್ತವಾದುದು ; ತಾರುಮಾರು : ಎಲ್ಲಂ ಬಱೆ ತಾಱೆಗಬೀಱೆಗ [ಪಾಠಾಂ. ತಾಱೆಗೆಬೀಱೆಗ]ವೆತ್ತಱತತ್ತಱವೆಕ್ಕಸಕ್ಕಮಸ್ತಂಬ್ಯಸ್ತಂ (ಗಿರಿಳ. ೦-೨೩). **ತರಗಬರಗ** : ತರಗಬರಗ ಎಕ್ಕಸಕ್ಕ ಅಸ್ತವ್ಯಸ್ತವಾಗುವುದು (ಪಾಹಿವಿ. ೫೦). **ತಱಬಱಕ**: ಅಱೆಯದ ಬಾಲಂ ಬೀದಿಯ ಹಱೆಮಣ್ಣಂ ಮಾಡಿದೊಂದು ಹಾಪೆಯ ತೆಱದಿ ತಱಬಱಕಂ ವಿಕಟಾಕೃತಿ ನೆಱೆ ನಿಷ್ಕುರನಿವೃತಹುಂಡಸಂಸ್ಥಾನಂಗಳ್ (ಶಾಂತೀಶ್ವ. ೯-೦೦೭). **ತಾರಗಬೀರಗ** : ತಮಿಳಿನಲ್ಲಿಯಂತೂ . . . ತುಂಬಾ ಅಸ್ತವ್ಯಸ್ತ 'ತಾರಗಬೀರಗ'ವಾದದ್ದು ಎಂದು ಅರ್ಥವಂತೆ (ಭಾಷಾಶಾ. ೮೬). [ ? ]

**ತಾಱೆಗಾಯ್**, ತಾರಿಕಾಯಿ, ತಾರೆಕಾಯಿ, ತಾಱೆಕಾಯಿ(ನಾ). ತಾರೆಯ ಮರದ ಕಾಯಿ: ರುದ್ರಾಕ್ಷಿಯಂ ತಾಱೆಗಾಯೆಂದು ಶುನಕನ ಕೊರಲೊಳು ಧೀರನಿವ ಕಟ್ಟಿದನು (ಪ್ರಭುಪು. ೩-೧೨೦). **ತಾರಿಕಾಯಿ**: ಅಳಲೆಕಾಯಿ, ತಾರಿಕಾಯಿ ಹಾಂಗು ಹತ್ತಿಯ ಕಾಳು, ಇವುಗಳ ಮಜೂರಿ (ಮುಂಬವ್ಯಾ. ೦೮ ಪ್ರಸ್ತಾವನೆ). **ತಾರೆಕಾಯಿ** : ಕೊತ್ತುಂಬರಿ, ಕೊಡಸಿಗೆಬೇರು . . . ತಾರೆಕಾಯಿ, ನೆಲ್ಲಿಚಟ್ಟು . . . ಸಮದಿಂ ಕಷಾಯ ಕಾಯಿಸಿ ಕೊಡಲು ವಾತಜ್ವರಂ ಮಾಣ್ಗುಂ (ಖಗೇಂ. ೬೫) ; ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ (ವಿಷಚಿ. ೨೦-೫). **ತಾಱೆಕಾಯಿ** : ಕಲ್ಕದ್ರವ್ಯ . . . ತಾಱೆಕಾಯಿ–ಇವಿಷ್ಟನ್ನೂ ಪ್ರತ್ಯೇಕ ಒಂದು ವರಹ ತೂಕವ ಸಣ್ಣನಾಗಿ ಕತ್ತರಿಸಿ ಚೂರ್ಣಿಸಿ (ವೈದ್ಯಸಾ. II, ೫೫). [ ತಾಱೆ + ಕಾಯ್$_4$ ]

**ತಾಱೆಗೆ** (ನಾ). ಒಣಗುವಿಕೆ ; ಬಾಡುವಿಕೆ : ಬೇಡಿಗೆ, ಮೂಡಿಗೆ, ತಾಱೆಗೆ, ಮಾಱೆಗೆ, ಪೊಲಿಗೆ (ಶಬ್ದಾನು. ೫೬೩ ಪ್ರಯೋ). [ <ತಾಱು$_1$ + – ಗೆ ]

**ತಾಱಿಸು**, ತಾರಿಸು$_1$ (ಕ್ರಿ). ೧. ಒಣಗಿಸು; ಬಾಡಿಸು: ಎಳೆಯ ಬಾಳೆಯ ಸುಳಿಯನನಲಜ್ವಲನದುಬ್ಬಟೆ ತಾಱಿಸಿ[ಪಾಠಾಂ. ಕಾಱಿಸಿ]ದವೊಲು ಬಳಲಿದ ಬಲೆಯ ಕಂಡು (ನಳಚ. ೫-೨). **ತಾರಿಸು$_1$** : ೨. ಶಕ್ತಿಗುಂದುವಂತೆ ಮಾಡು ; ಸಾರವಿಲ್ಲದಂತೆ ಮಾಡು : ಶೂರನಹ ವೈರಿಯನು ದೂರದಲೆ ತಾರಿಸುವ ಸಾರವಹ ನಿಮ್ಮ ಮಂತ್ರಗಳ ಕಂಡು (ದಿರೀಚ. ೧-೫೦). [ ತಾಱು$_1$ + – ಇಸು$_3$ ]

**ತಾಱು$_1$**, ತಾರು$_1$, ತಾಱ್$_1$ (ಕ್ರಿ). ೧. ಸೊರಗು ; ಬಡಕಲಾಗು : ಭೀಮನಾದೊರ್ದೆ ದೀಡಾಡಿದೊಡೆ . . . ಪಾಱೆ ತಾಱಿದ ಪೇರಾನೆಯೊಡಲ್ಗಳಭ್ರತಳದೊಳ್ ಸಿಲ್ಕಿರ್ದುವು (ಪಂಪಭಾ. ೦೧-೬೭) ; ವ್ರತಮಂ ಪೇೞ್ವೊಡೆ ನೋಂತು ತಾಱಿದೊಡಲುಂ ಚಕ್ರೇಶನಾಚಕ್ಷಾಧಿಪಂ ಸುತನಂ ಪೇೞ್ವೊಡೆ ಚಕ್ರವರ್ತಿ ಕಟಕಕ್ಕಾರಾಧ್ಯೆಯಾಗಿರ್ದೆ (ಅಜಿಪು. ೧೨-೮); ಬ್ರಹ್ಮಚಾರಿಯ ತಾಱಿದೊಡಲುಮಂ ಒಳಗಡಂಗಿದ ಕಣ್ಣುಮಂ ಮಾಯಾಸಂಯಮುಮುಮಂ ಮನದೊಳ್ ಮೆಚ್ಚಿ (ಧರ್ಮಾಮೃ. ೬-೪೫) : ಎನಿತಾನು ಮಱಿಸಿ ಕಾಣದೆ ತನು ತಾಱೆ (ಅನಂಪು. ೧೭-೬೭) : ಕಾಳಿಕೆಯ ಮೋಱೆಯ ತಾಱಿದೊಡಲುಗಳ . . . ದೇವರಿಂದ್ರನಸಱಿಸಿ ಕಂಡರು (ಕುಮಾವ್ಯಾ. ೬-೧೨). ೨. ಬತ್ತು ; ಒಣಗು ; ಬಾಡು : "ತಾಱು – ಶೋಷಣೇ, ಶಕುನೇ ಚ" (ಶಮಧಾ) : ಮಾಸಿ ತಾಱಿದ ಕುರುಳ್ಗಳುಂ (ಗದಾಯು. ೯-೩) : ತಾಱುವ ತಾಳ್ಗಳುಮಗುರ್ವಿಸಲ್ ಕಾಡಕೋಣನೆಯ್ದುದುದಱಲಂ (ಜಗವಿ. ೦೭-೩೮) ; ತಾಱೆತಂತಃಕರಣ ಕಾಮನ ಕೂರುಗಣೆ ಕಾಲಿಕ್ಕಿದವು (ಕುಮಾವ್ಯಾವಿ. ೨-೧೫).

೩. ಕುಗ್ಗು ; ಕುಂದು ; ಮ್ಲಾನವಾಗು: ತಾಱಿ ತಲ್ಲಣಿಸಿ ಬೀಳುತ ಕ್ಷುಧೆಯಡಸಿ ಬಾಯಾಱಿ (ಅಂಜಚ ೯-೦೬೬) ; ತಾಱಿದಾನನದಿಳಿದ ಹುಬ್ಬಿನ . . . ವೃದ್ಧರನು ತೋಱಿದನು (ಕುವ್ಯಾ,ಅ. ೦೫-೧೦) ; ಭೋಗಿಗಳು ಬೀಗಿದರು ತಾಱಿದುದು ವಿಯೋಗಿವ್ರಾತವತಿಭಯದಲಿ (ಸೌಂದಪು. ೦೦-೭). ೪. ಕಡಮೆಯಾಗು ; ಕ್ಷೀಣಿಸು: ನೂಱು ಗಾವುದ ಮತ್ತೆ ಕ್ರಮದಿ ತಾಱಿ ತಗ್ಗಿತು ನೋಡೆ ಪಗಡೆಯ ಕಾಯಂತೆ ತೋಱುತಿದ್ದುದು ವೃಷಭಾದ್ರಿ (ಭರತ. ೩೬-೮೦) ; ಬರ್ದು ಕೆಲಸಾರ್ದುದು ಕೈಮೆ ಕಟಲ್ದುದುಬ್ಬರಂ ತಾಱಿತು (ಚಳವಿ. ೬-೨೦೯). ೫. ಬೇಯು ; ಬೆಂದುಹೋಗು (?) : ಸರಸ್ತಟಾಕದ ಶಫರಾಳಿ ಕುತ್ಸಿಸರ ಮೀನವೊಲಿರ್ದುದು ತಾಱಿ ತಳ್ತು ಪರ್ವಿದ ಪಟುವಗ್ನಿಯುಂಡುಳಿದ ಕಾಂಡವದಂತೆವೊಲಿರ್ದುದಾವಗಂ (ಚಂದ್ರಪು. ೯-೭೯). ೬. (?) : ಸರ್ವ ಸುರರಂದು ನಗಜಾಧಿಪಂಗಿದು ಸುಗಿದು ತಾಱುವರುಯೆಂದಜಿಯ ಮೋಕ್ಷಂ(ಸಾನಂಚ.೨-೪೯). ತಾರು$_1$: ೧. ಪರರ ಕಣ್ಣಂಜಲಿರದಿನಿತು ಮಿಗೆ ತಾಗೆ ತನು ತಾರುಗುವೆನುತ್ತ (ಕುಮಾಪು. ೪-೧೦೯); ಅವಳು ತುಂಬ ತಾರಿಹೋಗಿದ್ದಾಳೆ (ಪುನರು. ೪೦೦). ೨. ಕೆರೆಯ ಅಂಗಳದಂತೆ ತಾರಿವೆ ಹಸುಳೆಯಂಗಳು (ದ್ರಾಕ್ಷ ದಾ. ೫೮-೫). ೩. ಮಾರಿದಳಲಿನೆದೆಯಾರಿದೆ ಸೈಸದೆ ತಾರಿದೆ (ಇಂದ್ರಕೀ. ೯) : ಶೋಕದಿಂದ ಮನಸ್ಸು ತಾರಿದರೂ ಅವನು ಕರ್ತವ್ಯವನ್ನು ಬಿಟ್ಟು ಕದಲಲಿಲ್ಲ (ಭೀಷ್ಮಚ. ೨೪). ೬. ಮೂಡಿದರುಣಾಭ್ರದೊಳ್ ತೋರುತಿಹ ತಾರುತಿಹ ಭೀಕರದೊಳ್ಪಿದ ದಳವು (ಜಿನಮು. ೨೫-೪). ತಾಱ್$_1$ : (ಕ).

**ತಾಱಪೊಯ್, ತಾಱಹೊಯ್**=ಸದೆಬಡಿ : ಸಾರಥಿಯ ತಾರಪೊಯ್ದನು (ತುರಂಗ. ೫೭-೬೦) ; ತಾರಹೊಯ್ದನು ಕೆಡೆದವಾನೆಗಳು (ತುರಂಗ. ೫೧-೪). **ತಾಱಮುಱಿ** = ಭಂಗಿಸು ; ಭಗ್ನಗೊಳಿಸು : ಜೋನಗ ಬೇನಬೊಂಟರಂ ತಾರಮುರಿದವರನಪ್ಪಳಿಸಿ (ತುರಂಗ. ೧೯-೩೦).

[ ದೇ.॥ ಮಲ. ತಾಱು ; ತೆಲು. ತಾಱು, ತಾರು ]

**ತಾಱು$_2$**, ತಾರ್$_2$ (ನಾ). ಒಣಗಿದಂದಂ ; ಶುಷ್ಕವಾದಂದಂ: 'ತಾಱುಗುಂಡೆ' ಪರಾ. ತಾರ್$_2$: ಒಣಗಿ ತಾರವಾದ ಸಿಬಿರಿನ ಪೆಂಡಿಯನ್ನು ತೆಗೆದು (ದೀಚಚ. II, ೩).

**ತಾರ ಗೋಟಡಿಕೆ** = ಒಣಗಿ ಗಟ್ಟಿಯಾದ ಗೋಟಡಕೆ : (ಕ).

[ < ತಾಱು$_1$ ]

**ತಾಱು$_3$**(ನಾ). ೧. ತೆಂಗು, ಅಡಕೆ, ಉತ್ತುತ್ತೆ, ಬಾಳೆ ಮೊದಲಾದುವುಗಳ ಗೊಂಚಲು,-ಗೊನೆ. ೨. ಗುಂಪು ; ಸಮೂಹ : ಚಂಪಕದ ಮಾಲೆಯನು ಮಾಱುವ ನೆವದಿ ಪಿಡಿಯಲಳಿಗಳು ಕಂಡು ತಾಱುಬೇಱಾಗಲೋಡಿದವು (ಅನಂಚ. ೦-೦೬೩) : ಜಾಱಿದಂದದಿ ಸೂತ್ರಿಸಿದಂತೆ ನಡಸಿದರ್ತಾಱುಬೇಱಾಗದಂದದಲಿ (ಅನಂಚ. ೬-೭೬). 'ತಾಗೊರ್ಡಂ', 'ತಾಗೊರ್ಳ್' ಪರಾ. [ ದೇ.॥ ತಮಿ. ತಾಱು ]

**ತಾಱು$_4$** 'ತಾಱ್$_2$' ನೋ.

**ತಾಱು$_5$** (ನಾ). ಅಸ್ತವ್ಯಸ್ತತೆ ; ಗೊಂದಲ : 'ತಾಱುಂತಟ್ಟುಂ' ಪರಾ.

[ ? ]

**ತಾಱು$_6$** (ನಾ). ಒಂದಂ ಬಗೆಯಂ ಭೂಮಿ : ಮೂಗಣ್ಣುಗ ಭತ್ತಂ ಪೊಕುಳಿಮಕ್ಕಿಯ ಪಲಸಿನ ತಾಱಿನಿತ್ತರೆ (ಎಕ. VI, ಚಿಕ್ಕಮ. ೬೫-೯: 1060 ?): ತೋಟಿಗರಿತ್ತುವರ್ಷಂಪ್ರತಿ ಕಂಡಗೆಯಂ ಸ್ಥಿರತರ ತಾಱಿಂಗೆ ರಂಗಭೋಗಕ್ಕೆಂದುಂ (ಕಇ. I, ೩೦-೩೩ : 1222) ; ಮೂಡಲರಿಯ ತಾಱು ಹನ್ನೆರಡು (ಕಇ. III, ೬-೨೯ : 1349); ತೆಂಗಿನ ತಾಱಿಂದ ಪಡುವ ಬಡಗ (ಸೌಇಇ. ೦೯೩೦, ಕುಂದಾಪುರ. ೫೩೬-೪೪ : 1871) ; ಮೂಲದ ಜವಳಿಯ ತಾಱಗಡಿಯಿಂದಂ ಬಡಗಲು (ಸೌಇಇ. IX-ii, ೪೨೪-೪೫ : 1436). 'ತಾಱುವಾರಿ' ಪರಾ. [ ? ]

**ತಾಱುಂಗಾಮಲೆ** (ನಾ). ಸೊರಗಿಸುವ ಕಾಮಾಲೆ ರೋಗ : ಸಂತಾಪವೆನಿಸುವುದುಗ್ರತಾಪವೆನಿಸುವುದು ತಾಱುಂಗಾಮಲೆ (ಸಾನಂಚ. ೫-೦೩).

[ ತಾಱು$_1$ + ಕಾಮಲೆ ( < ಕಾಮಾಲೆ) ]

**ತಾಱುಂಗೊಡು** (ಕ್ರಿ). (?) : ಅಳ್ಳೆಗೊಂಬಿನೊಳ್ ತೆಱಂದಿಱಿದು ತಾಱುಂಗೊಟ್ಟು ನಿಡುಸರಮನಿಟ್ಟು . . . ತುಂಬಿ ತಿಳಿದು ಬಳೆದ ಬಂಡಂ ಗಂಡುದುಂಬಿಯುಂ ತಾನುಮುಂಡು (ಲೀಲಾವ. ೦೦-೫೪ ವ).

[ ತಾಱು? + ಕೊಡು$_1$ ]

**ತಾಱುಂತಟ್ಟು$_1$**, ತಾರುತಟ್ಟು, ತಾಱುತಟ್ಟು, ತಾಱುಥಟ್ಟು, ಥಾಱುಥಟ್ಟು (ನಾ). ಗುಂಪು ; ಸಮೂಹ : ದಟ್ಟಣೆ : ಸೇನಾಭಟಭೋರ್ಂಕಿನೆ ತಾಱುಂತಟ್ಟುವೀಟಲ್ (ಶಾಂತೀಶ್ವ. ೩-೧೫) : ಕೊಂಚವೆಟ್ಟಂ ತಟ್ಟುರ್ಚಿದಂತೆ ತಾಱುಂತಟ್ಟಾಗಿ ಕೆಡಪಿ ಮಟ್ಟಿಡುವುದುಂ (ಚಳವಂ. ೪೭-೭). **ತಾರುತಟ್ಟು**: ಆರಿಗಂ ಗೆಲಲಾರದಮರರ ತಾರುತಟ್ಟನೆ ಬಡಿದು (ರಾಮಾಸಂ. ೬-೯-೪೫) ; ಪಾಳೆಯ ಕಂಡ ಕಂಡ ಕಡೆಗೆ ತಾರುತಟ್ಟಾಗಿ ಚೆದುರಿ ಹೋಗುತ್ತದೆ (ಸಂಜುಂಚ. ೯೭) ; ತಲೆಕೆದರಿಕೊಂಡು ತಾರುತಟ್ಟಾಗಿ ಓಡಿಹೋದರು (ಕರ್ಣಾಅ. ೧೫೦). **ತಾಱುತಟ್ಟು** : ವನಮೃಗರಾಜಿಗಳ್ . . . ಮರೀಚಿಕಾಜಲಕ್ಕನುನಯದಿಂ ಕರಂ ಪರಿದು ಲಂಘಿಸಿ ತಮ್ಮೊರ್ದೆಯಾಱಿ ತಾಱುತಟ್ಟಿನಲಸುವಿಂದಗಲ್ದುವು (ದಕಳು. ೪-೨೩) ; ತಾಱುತ[ಪಾಠಾಂ. ಥ]ಟ್ಟಿನ ಹೆಣದ ಮೆದೆ ಹೇರಾಳ ರಂಜಿಸಿತು (ಕುವ್ಯಾ,ದ್ರೋ. ೦೦-೬) ; ನಳನೃಪಾಲನ ಶರಹತಿಗೆ ನೆಱಿಮುಗ್ಗಿ ಕೆಡೆದುದು ತಾಱುತ[ಪಾಠಾಂ. ಥ]ಟ್ಟಿನಲಿ (ನಳಚ. ೯-೩೫) ; ಆ ಸೇನೆಯಂ ತಾಱುತಟ್ಟಾಗಿ ಕೆಡಹಿದರೊಂದು ನಿಮಿಷದೊಳ್ (ಜೈಮಿಭಾ. ೨೦-೪೪) ; ವೈರಣೆಗಳ ಸೀಳಿ ತಲೆಯ ಕೆದಱಿಕೊಂಡು ತಾಱುತಟ್ಟಾಗಿಯೋಡಿದರು (ಕಂನವಿ. ೦೫-೯೬). **ತಾಱುಥಟ್ಟು** : ತೋಱಿಕಳೆವುದು ತಾವು ಹೇಳದ ತಾಱುಥಟ್ಟಿನ ಮಾತದೆಲ್ಲವನೆನಲಿಕಿಂತೆಂದ ತಾಱುಥಟ್ಟನು ಹೇಳ್ವ ನೀಱಿರು ತೋಱಿ ನುಡಿಯರು (ಸಂಭಚ. ೩-೮); ತಾಱುಥಟ್ಟಿಗೆ ಕೆಡೆದವಾನೆಗಳು (ಕುವ್ಯಾ,ಭೀ. ೮-೪೮) ; ತನಿಚೂಣಿ ಮಸಗಿತು ತಾಱುಥಟ್ಟಿನಲಿ (ಕುವ್ಯಾ,ಕ. ೨-೦೬) : ವಿಮಾಱಿದನು ಸುರರಾಜ ಜಿತುವಿನ ತಾಱುಥ[ಪಾಠಾಂ. ತ]ಟ್ಟಿನ ಕದನವನು (ತೊರಬಾ. ೬-೪೬-೪೭) : ಕಂಡರು ದೂರದಲಿ . . . ಖಗಕುಲವೇಱಿದೆಳೆಗೊಂಬುಗಳ ತಳಿರ್ಗಳ ತಾಱುಥಟ್ಟಿನ ಹಸುರೆಲೆಯ ತಂಪಿನ ಮಹಾವಟವ (ವಿಭಾಗ. ೪-೩-೨೫) ; ತುಱುಗಿದ ಹಯಂ ತಾಱುಥಟ್ಟಾಯ್ತು (ಚದಪು. ೪೩-೨೭). **ಥಾಱುಥಟ್ಟು** : ಅಲರ್ಗಣ್ ಬೆಂಡೇಱಿ ರೋಮಾಂಚನದೊದವಿನಿತುಂ ಥಾಱುಥಟ್ಟಾಗೆ (ರಸರ. ೦-೧೭).

[ ತಾಱು$_3$ + ತಟ್ಟು$_2$ ]

**ತಾಱುಂತಟ್ಟಂ**, ತಾಱುಂತಟ್ಟುಂ (ಅ). ಅವ್ಯವಸ್ಥೆಯಾಗಿ ; ಚೆಲ್ಲಾಪಿಲ್ಲಿಯಾಗಿ : ತಾಱುಂತಟ್ಟುಂ ಬಿರ್ದ ಕಾಮುಕಜನಕ್ಕೆ (ಲೀಲಾವ. ೩-೨೦) ; ಹುಲ್ಲೆಡೆ ಹೆಲ್ಲವಾಗಿ ತಾಱುಂತಟ್ಟಂ ಬೀಟುತ್ತಿರೆ (ಕುಸುಮಾ. ೦೪-೨೯ ವ). **ತಾಱುತಟ್ಟಂ** : ಬಗೆಗೆಟ್ಟು ತಾಱುತಟ್ಟಂ ಪರಿದು (ಕುಶಾಸಾಂ. ೩೮-೧೦೯). 'ತಟ್ಟುಂತಾಱುಂ' ಪರಾ.

[ ತಾಱು$_5$ + ತಟ್ಟು$_2$ ]

**ತಾಱುಂತಟ್ಟುಗುತ್ತು** (ಕ್ರಿ). ಗುಂಪುಗುಂಪಾಗಿ ಹೊಡೆ,-ಇರಿ : ತಾಱುಂತಟ್ಟುಗುತ್ತುತ್ತೆ ಬಲ್ಮೆಯೊಳಡ್ಡಂ ಬರುತಿರ್ಪ ಕೊಂಕಣಿಗರಂ ಕೀನಾಶಲೋಕಕ್ಕೆ ನಿಶ್ಚಯದಿಂದೆಯ್ದಿಸುತುಂ (ಎಕ. VIII, ಸೊರಬ. ೦೫೨-೧೬ : 1380). [ ತಾಱುಂತಟ್ಟು + ಕುತ್ತು$_1$ ]

**ತಾಱುಂತೀರು** (ನಾ). ಚೆಲ್ಲಾಪಿಲ್ಲಿ ; ಅಸ್ತವ್ಯಸ್ತತೆ : ಸರ್ವಾಂಗದೊಳೆಡೆದೆಱಿಪಿಲ್ಲದೆ ಕೊಂಡು ತೋಱುವ ಬಲ್ಲೇಱುಗಳ ನೆಱವಣೆಯಿಂ ತಾಱುಂತೀಱಾ[ರಾ]ಗಿ ಬೀಟ್ದು ಸತ್ತ ಕುದುರೆಗಳ ಬಳಗಂ (ಪಾರಪು. ೦೩-೧೦೯ ವ). [ ತಾಱು$_5$ + ತೀರು$_3$ ]

**ತಾಱುಂಬರಿ** 'ತಾಱುಂಬೞಿ' ನೋ.

**ತಾಱುಂಬಳೆ** 'ತಾಱುಂಬೞಿ' ನೋ.

**ತಾಱುಂಬೞಿ**, ತಾರುಂಬಳಿ, ತಾಱುಂಬರಿ, ತಾಱುಂಬಳೆ (ನಾ). ೧. ಅಸ್ತವ್ಯಸ್ತವಾದುದಂ : ಹಂತಿದಪ್ಪಿ ತಾಱುಂಬೞಿಯುಂ ತೆರಳ್ದ ಕುರುಳ್ (ಚಂದ್ರಪ್ರ. ೮-೭೩). ೨. ಸುತ್ತುಮುತ್ತು ; ಎಲ್ಲಕಡೆ : ಅಳಿಗಳ ಬಳಗಂ ತಾಱುಂಬೞಿಯಿಂ ಬರುತಿರೆ (ಕುಸುಮಾ. ೫-೭೯). **ತಾರುಂಬಳಿ :** ೧. ಮನೆಯ ಒಡೆಯನು ಅಕಾಲಮರಣ ಹೊಂದಿದ ಕೂಡಲೆ ಉಳಿದವರತಾರುಂಬಳಿಯು ಎಷ್ಟು ಆಗುತ್ತದೆ (ಚರಸಂ. ೭೮); ತಾರುಂಬಳಿಯಿಂದ ದೊಮ್ಮಳಿ ಸುತ್ತ ಹೋಗಿ, ಕಯ್ದುಗಳ್ಗೆರಗುವರು (ಮಂತ್ರಶ. ೧೫೩-೧೪). **ತಾಱುಂಬರಿ:** ೧. ಕೊಳೆ ಸುಡು ತಾಱುಂಬರಿಯೆಂಬಿವು ಪದದ ಮೊದಲೊಳಿರಲಶುಭಕರಂ (ಕವಿಜ. ೩-೩೨). **ತಾಱುಂಬಳೆ:** ೧. ತಾಱುಂಬಳೆ[ಪಾಠಾಂ. ೞಿ] ಬಿಟ್ಟ ಚಂಚು ಬೆಮರಿಂ ಕಡೆಗೆನ್ನಗೆ ಬಾನಲಾದ ಬೊಟ್ಟು (ಕಮುದ. ನ. ೦೮೩ ಪ್ರಯೋ).

[ ತಾಱು$_6$ + ಬೞಿ$_2$ ]

**ತಾಱುಂಬೞಿಗೊಳ್** (ಕ್ರಿ). ಹರಡು ; ವ್ಯಾಪಿಸು : ಹಂಸಮಂಡಳಿ ತಾಱುಂಬೞಿಗೊಳ್ವ ತಾವರೆಗೊಳಂ (ಅನಂಪು. ೧-೯೪).

[ ತಾಱುಂಬೞಿ + ಕೊಳ್$_1$ ]

**ತಾಱುಂಬೞಿಯಂ** (ಅ). ದಿಕ್ಕಾಪಾಲಾಗಿ ; ಎಲ್ಲಕಡೆಗೆ : ಅಲರ್ಗೆ ಫಲಕೆ ಪರಿದತ್ತಳವೆಂಡಿರ ನೆರವಿ ನಲಿದು ತಾಱುಂಬೞಿಯಂ (ಚಂದ್ರಪ್ರ. ೭-೯೮).

[ <ತಾಱುಂಬೞಿ ]

**ತಾಱುಕುಂಡೆ** 'ತಾಱುಗುಂಡೆ' ನೋ.

**ತಾಱುಗುಂಡೆ**, ತಾಱುಕುಂಡೆ (ನಾ). ಒಣಗಿದ ಕುಂಡೆ : ದುರುಳಕಾಲನ ಬಾಯನೊದೆದಾಕರಿಸಿ ತಾಟಿಸಿ ಅವಧಿ ವಿಧಿಗಳ ತಾಱು[ಪಾಠಾಂ. ಱ] ಗುಂಡೆಗಳ [ಪಾಠಾಂ. ಕುಂಡೆಗಳನುಱದೆ] (ಬಸಪು. ೪೭-೧). **ತಾಱುಕುಂಡೆ:** ತ್ರೈವಿದ್ಯರಂ ತಂದು ತಾಱುಕುಂಡೆಯ [ಪಾಠಾಂ. ಚಾಟುಗುಂಡಿಯನೆ] ಹಾಯಿಸಿ (ಸೋಮಚ. ೬-೪೩). [ ತಾಱು$_3$ + ಕುಂಡೆ$_1$ ]

**ತಾಱುತಟ್ಟು** 'ತಾಱುಂತಟ್ಟು' ನೋ.

**ತಾಱುತಟ್ಟುಂ** 'ತಾಱುಂತಟ್ಟುಂ' ನೋ.

**ತಾಱುಥಟ್ಟು** 'ತಾಱುಂತಟ್ಟು' ನೋ.

**ತಾಱುಮಾಱು**, ತಾರುಮಾರು$_1$, ತಾಱುವಱು, ತಾಱುವಾಱು (ನಾ). ೧. ಚೆಲ್ಲಾಪಿಲ್ಲಿ ; ಅವ್ಯವಸ್ಥೆ ; ಅಸ್ತವ್ಯಸ್ತತೆ : ವಾರುವಗಳು . . . ಕೇರಿ ಕೇರಿಯೊಳು ತವ್ವಿಚ್ಚಿಯೊಳಗೆ ಸಲೆ ತಾಱುಮಾಱಾಗಿಯೋಡಿದವು (ಕಂನವಿ. ೦೩-೯೦). **ತಾರುಮಾರು$_1$ :** ೧. ತಾರುಮಾರಾಗಿ ತೂರುಬೀಳುತಿರುವ ರಾಕ್ಷಸ ಸ್ತ್ರೀ ಪುರುಷರಂ ನೋಡಿ (ಸೌಗಂಧಿ. ೨೯೦-೦೯) ; ಮರಾಟೆಯವರಿಗೆ ದಿಕ್ಕು ತೋಚದಂತಾಗಿ ತಾರುಮಾರಾಗಿ ಪಲಾಯನ ಮಾಡಿದರು (ಒಡಳ. ೪೮) : ಈಗ ಎಲ್ಲವೂ ತಾರುಮಾರಾಯಿತು (ಭಾರವೀ. ೭೨): ಕಲ್ಪವೃಕ್ಷಗಳ ಚಿಗುರು ಎಲೆಯ ತೂರಾಡು ತಾರುಮಾರು(ಕವೋಳ. ೦೬-೬೨). ೨. ಅಸಂಬದ್ಧತೆ ; ಅಸಾಂಗತ್ಯ : ಊರು ಹೆಸರು ಮುಂತಾದ್ದನ್ನು ವ್ಯತ್ಯಸ್ತಮಾಡಿ ತಾರುಮಾರಾಗಿ ಬರೆದರು (ಪುರಾವಿ. ೭). ೩. ಗಜಿಬಿಜಿ ; ಗೊಂದಲ: ತಾರುಮಾರು ಮಾಡುವವನನ್ನು ಯಾರು ತಾನೇ ನಂಬ್ಯಾರು? (ಗಾದೆ). **ತಾಱುವಱು :** ೧. "ತಾಱುವಱಾದುದಸವಸಂ" (ವಸ್ತುಕೋ. ೧೦೬-೩೩); ತಾಱುವಱಾಗೆ ಜಯಂ ಜೊಮ್ಮೇಱುವ ಟೆಂಟಣಿಸುವರಸನರಸನೆ ವಿರಸಂ(ಶಾಂತಿಪು. ೨-೪೧); ಭೀಕರ ಗದಾಘಾತದೊಳಂ ಜಾಱಿ ಪಱಿವಱಿದು ತಾಱುವಱಾದ [ಪಾಠಾಂ. ತೂಱುಪಾಱಾದ] ಕಾಂಭೋಜಾವಳಿಗಳ ತುರುಷ್ಕ ತುರಂಗಮಂಗಳಡಿಯೊಳ್ (ಗದಾಯು. ೬-೨೮ ವ) ; ತಾಱು[ಪಾಠಾಂ. ಶಾಱು]ವಱಾದ ಕೇಶಮನುಗುರ್ಮೊನೆಯಿಂ ತೆಗೆದೊತ್ತಿ (ಲೀಲಾವ. ೫-೧೩೬) : ತಾಱುವಱಾದ ಸೂಸುಗುರುಳಂ ತವೆ ತಿರ್ದುವ . . . ತೊಂಡೆವಾಯ್ಗೆ ನಱುದಂಬುಲಮಂ ಕುಡುಕಿಕ್ಕುವಂದವಂ ತೋಱಿ (ಧರ್ಮನಾ. ೩-೧೫೨). **ತಾಱುವಾಱು:** ೩. ಜೀವನುವೆಂಬತ್ತುನಾಲ್ಕುಲಕ್ಷಯೋನಿವಮುಖದೊಳಗೊಂದಾ ಮನುಷ್ಯನದಱೊಳೆಂತಾನುತಾಱುವಾಱಾಗಿ ಬಂದಲ್ಲಿ (ಜೀವಸಂ. ೯-೯ ವ).

[ ದೇ.೫ ತಮಿ. ಮಲ. ತಾಱುಮಾಱು ; ತುಳು. ತಾರುಮಾರು ; ತೆಲು. ತಾಱುಮಾಱು ]

**ತಾಱುವಾರಿ** (ನಾ). ಒಂದು ಬಗೆಯ ಭೂಮಿ (?): ಅಕ್ಕಿ ಸಹ ಹನ್ನೆರಡು ಮುಡಿ ತಾಱುವಾರಿಯ ಬಗೆಯ ಬೆಟ್ಟಿನ ಒಳಗೆ ಆಱುಮುಡಿ (ಸೌಇಇ. IX-ii, ೪೬೪-೨೦ ; 1472). 'ತಾಱು$_8$' ಪರಾ. [ ? ]

**ತಾಱುವಾಱು** 'ತಾಱುಮಾಱು' ನೋ.

**ತಾಱುಹಂಗ** (ನಾ). ಶಕುನದ ಪಕ್ಷಿ ; ಹಂಗ : ಕರಿಯ ಹಕ್ಕಿಯ ತಾಱುಹಂಗನ ವಾಮದುಡಿಕೆಗಳ ನರಿಗಳೊದಱದವಿದಿರಿನಲಿ (ಕುವ್ಯಾಸ. ೦೩-೨). [ ತಾಱು$_4$ (<ತಾಱ್$_2$)+ಹಂಗ ]

**ತಾಱ್$_1$** 'ತಾಱ್' ನೋ.

**ತಾಱ್$_2$** (ನಾ). (?) : ಕಮ್ಮೊಳೆಯ ತಾಱಯಗೊಡಲ ಮೂಡನ ಮೊಯ್ಯ ಕಂಬ ನೂಱಱುವತ್ತು (ಎಕ. VI, ಚಿಕ್ಕಮ. ೨೨-೪೫ ; 1178). [ ? ]

**ತಾಱ್ಕಾಯಿ** 'ತಾಱುಗಾಯ್' ನೋ.

**ತಾಱೆಲೆ** (ನಾ). ಒಣಗಿದ ಎಲೆ ; ತರಗೆಲೆ : ಪಾದಪದಲಕ್ಷ್ಮಿ ಬೆದಱಿ ಸೂಱೆಗೊಟ್ಟಂದದೆ ಪರಳ್ಗಳು ಮುಂತಾದ ತಾಱೆಲೆ ನೆಲಕುದುಱಿದುವು (ಮೋಹಚ. ೪-೪೩). [ ತಾಱು$_1$ + ಎಲೆ$_1$ ]

△ **ತಾಟ್$_1$** 'ತಾಳ್$_2$' ನೋ.

△ **ತಾಟ್$_2$** 'ತಾಳ್$_3$' ನೋ.

△ **ತಾಟ** 'ತಾಳ್$_3$' ನೋ.

**ತಾಟಕೆಱೆ** (ನಾ). ಒಂದು ಕೆರೆಯ ಹೆಸರು : ಆ ಕೆಱೆಗೆ ಐಯ್ಗಣ್ಡುಗ ಮಣ್ಣು ಕೊಟ್ಟಿಯ ತಾಟಕೆಱೆ ಆ ಕೆಱೆಗೆ ಐಯ್ಗಣ್ಡುಗ ಮಣ್ಣು (ಎಕ. XII, ಶಿರಾ. ೨೪-೪೮ ; 900). [ ತಾಟ ? + ಕೆಱೆ ]

△ **ತಾಟಪಣ್** 'ತಾಳೆಹಣ್ಣು' ನೋ.

△ **ತಾಟಮರ** 'ತಾಳೆಮರ' ನೋ.

**ತಾಟಲಿಯ** (ನಾ). ಒಬ್ಬಾತನ ಹೆಸರು : ವಾರಬದಿಗದಾಲನುಂ ತೆಳ್ಳನುಂ ತಾಟಲಿಯನುಂ ವೇಬಲನುಂ . . . ಇಲ್ಲಿಯ ಪುರದ ಒಕ್ಕಲಿವರು (ಎಕ.III ನಂಜನ. ೦೩೯-೬ ; 915 ?). [ ? ]

△ **ತಾಟವಣ್** 'ತಾಳೆಹಣ್ಣು' ನೋ.

**ತಾಟಿವಡುಗುಡ್ಡಿ** (ನಾ). ಒಬ್ಬಾತನ ಹೆಸರು : ಆತ್ರೇಯಗೋತ್ರದೊಡೆಯ ತಾಟಿವಡುಗುಡ್ಡಿಗಳ ಮಗಂ ಪುಳ್ಳಿಯಯ್ಯ ಮಾಡಿಸಿದ ತೂವಪ್ಪು (ಎಕ. X(೪), ಮೂಲೂರು. ೦೭೧-೩ ; ಸು. 10ನೆಯ ಶತ). [ ? ]

△ **ತಾಟು** 'ತಾಳ್$_2$' ನೋ.

**ತಾಟುಗಿ** (ನಾ). (?) : ಬೇರುಗಿ, ಬೇರುಗಿತಿ ; ತಾಟುಗಿ, ತಾಟುಗಿತಿ (ಶಬ್ದಾನು. ೧೯೩ ಪ್ರಯೋ). [ ತಾಟುಗ$_0$ + -ಇ$_2$ ]

**ತಾಟುಗಿತಿ** (ನಾ). (?) : ಬೇರುಗಿ, ಬೇರುಗಿತಿ; ತಾಟುಗಿ, ತಾಟುಗಿತಿ (ಶಬ್ದಾನು ೧೯೩ ಪ್ರಯೋ). [ ತಾಟುಗ$_0$ + -ಇತಿ$_1$ (< -ಇತ್ತಿ) ]

**ತಾೞ್**, ತಾಳೆ$_1$ (ನಾ). ಕೇದಗೆ ; ತಾಳೆಗಿಡ : (ಸಂ). **ತಾಳೆ$_1$ :** "ಖರಃ - ತಾಳೆ" (ಬಷಧಿ. ೪೩) : ಬಿದೆಕಾರು ಮೂಱಿತಿಳ ೨ ತಾಳೆ ೨ ಮರ ಬಿದೆಕಾರು (ಸೌಇಎ. ೧೯೩೦, ಮಂಗಳೂರು. ೩೩೮-೮ ; 1228) : ತಾಳೆಯ ಹೂವಿನೆ ಸಳೊಯನೆ ಸುಲಿದಿಂಪ್ರವಾಳೆಯ ಹಣ್ಣನಾ ರಾಯಾ ಲಾಲಿತ ಪ್ರಶಿಮೆಯ ಭುಜ ಮುಟ್ಟ ಮೆದೆಗಟ್ಟ ಥಾಳಿಪಂತಭಿಷೇಕಗೈದಾ (ಭರಚ. ೦೬-೬೪).

[ ದೇ.೫ ತಮಿ. ತಾಟ್ಟಿ ]

**ತಾಟಿಹೂ,** ತಾಳಿಹೂ (ನಾ). ಕೇದಗೆ ಹೂ: (ಕ). **ತಾಳಿಹೂ:** "ಕೇತಕಿ–ತಾಳಿಹೂ" (ಒಷಧಿ. ೯೦); ಕೇತಕೀಪುಷ್ಪ ಅಂದರೆ ತಾಳಿಹೂವನ್ನು ಧರಿಸಿದಲ್ಲಿ (ಸಕಪ್ತ. ೯೯); ತಾಳಿಹೂ ಗರುವಲಿಯ ಬೆನ್ನಟ್ಟಿ ಚುಚ್ಚುವುದು (ಕಾಲೂರ. ೦೦೩–೨೩೪); ತುರುಬು ಇಲ್ಲದವಳಿಗೆ ತಾಳಿ ಹೂವೇ ? (ಗಾದೆ). [ ತಾಟಿ + ಹೂ₂ (<ಪೂ₂) ]

**ತಾಟಿಜೀಯ** (ನಾ). ಒಬ್ಬಾತನ ಹೆಸರು : ವಿಕ್ರಮಾದಿತ್ಯಕೊಂಗ್ಯೊದು [ಪ]ನ್ನೆಸೆಲುಂಗ್ಗಾರು ತಾಟಿಜೀಯರ್ಗೆ ಎರೆಕಾಡು ಇಪ್ಪತ್ತೈಮತ್ತರು (ಸೌಇಇ. IX-1, ೪೭–೭ ; ಸು. ೨ನೆಯ ಶತ). [ ? ]

**ತಾಟ್ಟುವಾಯ** (ನಾ). ಒಬ್ಬಾತನ ಹೆಸರು : ಬೆಳ್ಗಲ್ಯೊಬಡು ಪಶ್ಚಿಮಾ ಯಾನ್ಸಿ ಪೊನ್ಗವಿ ತಾಟ್ಟುವಾಯರಾ ಕಟಿ (ಎಕ. IV, ನಾಗಮಂ. ೮೩–೬೩; 776). [ ? ]

**ತಾಟ್ನಿಲ್ಲ** (ನಾ). ಒಂದು ವಂಶದ ಹೆಸರು (?): ಪೊದಲ್ನಾಡಬುವತ್ತುವು ನಾಳಿ ತಾಟ್ನಿಲ್ಲರ x x x ಕಾಮನ್ನಯರಾ ಶ್ರೀ ಕಣ್ಣಯ್ಯ ತುಬುಗೊಣ್ಡಲ್ಲಿ . . . ಸತ್ತ (ಎಕ. X, ಶ್ರೀನಿವಾ. ೫೦–೭ ; 800 ?). [ ? ]

△ **ತಾಟ್ಯರ** 'ತಾಳೆವ ರ' ನೋ.

.**ತ್ರಿ**' ನೋ.

**ತಿ₂** (ನಾ). ಮೂರು ಎಂಬ ಸಂಖ್ಯೆ: "ತಿ–ತ್ರಿ=ಮೂರು" (ತದ್ಭಕೋ. ೦೭): ತಿಗೆ–ತ್ರಿಗುಣಂ–ತಿಗುಣಂ, ತ್ರಿಶರಂ–ತಿಸರಂ, ತ್ರಿಶೂಲಂ–ತಿಸುಳಂ (ಶಮದ. ೨೯೦ ಪ್ರಯೋ). [ <ಸಂ. ತ್ರಿ ]

**ತಿಂಕಚರ** (ನಾ). ಒಂದು ಮನೆತನದ ಹೆಸರು (?): ತಟಂಕಮಿದು ತಿಜ್ಜಚರ ನೆಜಿದಕಳತಿಯಾ ಆಕಳಿ ಸಮುದೊಯ ತಟಾಕ (ಎಕ. XVI, ಪಾವುಗ. ೦೨–೩ : 754). [ ? ]

**ತಿಂಗಣಿ,** ತಿಂಗಿಣಿ (ನಾ). ತೊಟ್ಟಿಲ ಮೇಲಿನ ಅಥವಾ ಹಂದರ ಮೊದಲಾದುವುಗಳ ವಿತಾನದಲ್ಲಿ ಇಳಿಬಿಡುವ ಒಂದು ಅಲಂಕಾರದ ಗೊಂಡೆ,–ಕುಚ್ಚು: ಇಂಗಡಲೆಂಬ ಸೆಜ್ಜೆವನೆಯೊಳ್ ತೆರೆದೊಟ್ಟಿಲ ಮೇಲೆ ಕೆಂಬರಲ್ತಿಂಗಣಿಗಟ್ಟಿದಂತುದಯಶೈಲಶಿಖಿಂಡದೊಳಿಂದುಮಂಡಲಂ (ಮಲ್ಲಿಪು. ೭–೨೯); ಮಾಣಿಕದ ತಿಂಗಣಿಯಂ ಮಾಣದೆ ಕಣ್ಬೆಳಗು ಬಳಸೆ ಮುತ್ತಿನ ಸುತ್ತಂ ಮಾಣಿಕದ ಮೇಲೆ ಮಕ್ಕಳ ಮಾಣಿಕಮಡಿಗಡಿಗೆ ತೊಟ್ಟಿಲೋಳ್ ಪುಟ್ಟಿಸುಗುಂ (ಅನಂಪು. ೬–೪); ಶಿಲ್ಪಿಗಳ ಕಲ್ಪವತಿಯು ಅಭಿಷೇಕಮಂಡಪವನ್ನು ಸಮೆದಿದ್ದನೆಂದಮೇಲೆ ಕೇಳುವದೇನು ? ಮುತ್ತಿನ ಸೂಸಕ, ಮರಕತದ ತಿಂಗಣ . . . ರನ್ನದ ರಂಗವಲ್ಲಿ ! (ಶಾಹಿಸಂ. ೩೭). **ತಿಂಗಿಣಿ :** ಕೋದ ಮುತ್ತಿನ ಸೂಸಕದೊಳಂ ಚೆಂಬೊನ್ನ ತಿಂಗಿಣಿಯೊಳಂ ಚೀನದ ದೇವಾಂಗದ ನೇತ್ರದ ಮೇಲ್ಕಟ್ಟಿನೊಳಂ . . . ವಿಚಿತ್ರಾಂಶುಕ ವಿವಿಧ ಧ್ವಜಂಗಳೊಳಂ ಬಹು ವಿಧ ನೂತ್ನ ರತ್ನ ತೋರಣಂಗಳೊಳಂ ನೆಜಿದು (ಪುಷ್ಪಪು. ೮–೫೦ ವ). [ ? ]

**ತಿಂಗಣಿಗೆ** (ನಾ). = ತಿಂಗಣಿ : ಅದಲ್ಲದೆಯುಮಪವರ್ಗಲಕ್ಷ್ಮಿಯ ಲಾಸ್ಯ ಪೂಜಾಕುಸುಮಂಗಳಂತೆ ಮಧ್ಯರಂಗದೊಳೆಸೆವ ಪೊಸಮುತ್ತಿನ ಸೂಸಕದ ಪೊನ್ನ ತಿಂಗಣಿಗೆಯು ನೆಟಲ ತುಬುಗಲಿಂ ವಿರಾಜಿಸುವ ಪೂಜಾಗೃಹದಿಂ (ಮಲ್ಲಿಪು. ೨–೭೪). [ <ತಿಂಗಣಿ ]

**ತಿಂಗಣಿಮಾರ** (ನಾ). ಒಬ್ಬಾತನ ಹೆಸರು : ಕಕ್ಕರ ಮದಲೂರೆಜಿದು ತೊಟುಗೊಣ್ಡೊಡೆ ತಿಜ್ಜಣಿಮಾರ ಶ್ರೀಮೇಟ್ ತಿಜ್ಜಣಿಯೂರುಳ್ಳಿಗಿ . . . ಪಲರನೆಜಿದು ಸಗಮೇಜಿದನ್(ಎಕ. X, ಶಿಡ್ಲಘ. ೩೨–೪; ಸು. 870 ?). [?]

**ತಿಂಗಣಿಯೂರ್** (ನಾ).ಒಂದು ಊರಿನ ಹೆಸರು:ಕಕ್ಕರ ಮದಲೂರೆಜಿದು ತೊಟುಗೊಣ್ಡೊಡೆ ತಿಜ್ಜಣಿಮಾರ ಶ್ರೀಮೇಟ್ ತಿಜ್ಜಣಿಯೂರುಳ್ಳಿಗಿ . . . ಪಲರನೆಜಿದು ಸಗಮೇಜಿದನ್ (ಎಕ. X, ಶಿಡ್ಲಘ. ೩೨–೪; ಸು. 870 ?). [ ತಿಂಗಣಿ₀ + ಊರ್ ]

**ತಿಂಗಳ್,** ತಿಂಗಳು (ನಾ). ೧. ಚಂದ್ರ ; ಪೆರೆ : "ಜೊನ್ನೊಡಲಂ . . . ಕಟ್ಟಲೆವಣಿ, ತಿಂಗಳ್–ಈ ೨೦ ಚಂದ್ರನ ಪೆಸರ್" (ಕಶಶಾ. ೩–೨೩) : "ಮೃಗಾಂಕನೊಳ್ ತಿಂಗಳ್" (ಕರ್ಣಾನಿ. ೨೦) ; ನಗೆಯೆಂಬ ನೆವದ ಬೆಳಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಮೆಂಬೀ ನೆವದೆ ಲಕ್ಷ್ಮಮೆನೆ ತದ್ವ್ಯಾಜಂ (ಶವಿರಾ. ೩–೨೩); ತಿಂಗಳ ತಣ್ಣದಿರ್ಗಳೊಳ[ಮಿರ್ದ್ದಟಿಯದ] ಸಿರಿಕಂಡದಣ್ಪನೊಳವೆಡವಿಡ ದಾಲಿನೀರ್ವನಿಗಳಂ ಸಿಂಪಿಸುವ ನೀಜೊಂಪಂಗಳೊಳಂ (ಕಾದಂಬ. ೫೯೪); ತಿಂಗಳ ಬಿಂಬಮಂ ಹಿಳಿದು ಪಿಂಡೆ ಪಳಚ್ಚನೆ ಸೋರ್ವ ಸೋನೆಯಂತೆ . . . ಏಂ ಸೀಯನುಣ್ಪುದುದೊ ಗೇಯದ ಮೆಲ್ಲುಲಿ (ವಿರೂಪಾ. ೭೫) ; ಎಳೆವಿಂಚಿನಂದದ ಬೊಂಬೆಯೊ ತಿಂಗಳ ತಿಳಿವೆಳಗಿನೊಳ್ಗಾದ ರೂಪೊ (ಭರತ. ೨–೭೭) ; ಅಂಗಜನ ಕಣೆಗಳಂ ಬೀಜಿ ನೋಟಂ ಮೊಗಂ ತಿಂಗಳಂ ವಿಜಿ (ಹಲಪು. ೫–೦೦). ೨. ಚಂದ್ರನ ಬೆಳಕು ; ಇಂದು ಕಾಂತಿ : ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲವಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್ (ಆದಿಪು. ೬–೨೮) : ತಿಂಗಳ ಸೊಂಪು ಗುಂಪುವಡೆದೆಣ್ದೆಸೆಗಂ ಪರಿಗೊಂಡುದೆಂಬಿನಂ (ಕಬ್ಬಿಕಾ.೧೭); ತಿಂಗಳ ಸೊಂಪು ಪುಷ್ಪಬಾಣದ ಪೊದೆ ರಾಗದಾಗರವಮನಂಗನ ಕೈಪಿಡಿ ನಲ್ಲಳೊಲ್ಮೆಯನ್ನದ ಪೆಡತೆಂಬುದೇ ಮಧುರ ಮಾಧವ ನಿನ್ನಯ ವಾಗ್ವಿಳಾಸಮಂ (ಧರ್ಮನಾ. ೦–೭೧) : ಲವಲಿಯ ತನಿವಣ್ಣಗೆಣೆಯೆನೆ ತೋರ್ಪುದು ತಾನಿಂದು ತಿಂಗಳಾಭರಣ ವನದ ಚಕೋರದ ಸವಿದುತ್ತಿ ದಾವುದು ಹರಿಣವಿಲ್ಲದ ಶೀತಕಿರಣ (ಇಂಜಾಪ. ೧೭೯–೩೦). ೩. ಚಂದ್ರನು ಭೂಮಿಗೆ ಒಂದು ಸುತ್ತು ಬರುವ ಕಾಲದ ಅವಧಿ; ಸಾಮಾನ್ಯವಾಗಿ ಮೂವತ್ತು ದಿನಗಳು : ಉಗ್ರಸೇನ ಗುರುವಡಿಗಳ್ ಒನ್ದು ತಿಜ್ಗಳ್ ಸನ್ಯಾಸನಂ ನೋನ್ತು ಮುಡಿಪ್ಪಿದಾರ್ (ಎಕ. II, ೨೫–೨ ; ಸು. 700) ; ಇಂತು ವರ್ಷಾಕಾಲದ ನಾಲ್ಕು ತಿಂಗಳೊಳಂ ಮರ್ದನೂಡಿ (ವಡ್ಡಾರಾ. ೧೭೦–೨೭); ಅವಧಿಯನೊಂದು ತಿಂಗಳೆಡೆಯಿಟ್ಟು (ಆದಿಪು. ೦೨–೪೩); ಒಂದು ತಿಂಗಳ್ವಿಹರಣ ವಿಧಿಯಂ ಮಾಣ್ದು ಬಂದಜಿತನಾಥಂ ಧ್ಯಾನವಿಧಾನದಿಂ ಕರ್ಮಂಗಳಂ ಕಿಡಿಸಿದಂ (ಅಜಿಪು. ೮–೨೮ ವ) ; ಮತ್ತಮೊಂದೆರಡು ತಿಂಗಳ್ ವಿಶೇಷಮಾಗಿ ನೋಂತು ಕೊಟ್ಟಪೆಂ (ಧರ್ಮಾಮೃ. ೦–೦೮೨) ; ತಿಂಗಳೇಳಱ ಗರ್ಭದಲಿ ರಘುವುಂಗವನನಗಲಿದಳು (ತೊರರಾ. ೦೩–೮). **ತಿಂಗಳು :** ೧. ತಿಂಗಳ ಸೂಡಿದ ಆಭವನು ಭವಭಂಗಿತರಿಗಾರಿಗೂ.ಗೋಚರಿಸನು ನೋಡಾ (ಸಿದ್ಧೇವ. ೧೨೨–೩೭೭) ; ತಿಂಗಳುವೊಡನುರ್ಕುವ ಬೆಳ್ದಿಂಗಳುಂ (ಚಿಕವಿ. ೬–೨೫) ; ತೊಳೆದ ಬಾನೊಳಗೊಂಟಿಮೋಡದ ನೆರೆಗೆ ನುಸುಳಿದ ತಿಂಗಳು (ಇಂಗೀತ. ೦೨–೯) ; ಮುಳುಗುವ ನೇಸರೊ ಮೂಡುವ ತಿಂಗಳೊ (ಅನಿಕೇ. ೩೦–೦೩). ೨. ತಿಂಗಳಿಗೆ ತಂಪಿಹುದೆ ಸಾಗರಕೆ ಗೆಂಪಿಹುದೆ (ಗೀವಿಂ. ೨೨–೩೪). 'ಬೆಳುದಿಂಗಳು' ಪರಾ. ೩. ಕೇತು ವಿಲಗ್ನದೊಳಿರೆ ಪುಟ್ಟಿದ ಮನುಜ ನೊಂದು ತಿಂಗಳು ಬಾಟ್ಟುಂ (ಜಾತತಿ. ೬–೧೦) ; ಒಂದು ತಿಂಗಳು ಪಲವು ಮನ್ನಣೆಯಿಂದ ಮನ್ನಿಸಿ ತನ್ನ ಸೇನಾಪ್ಯಂದವನು (ಕುಮ್ಯಾಸ. ೩–೨೩) ; ನರಪತಿಯೊಂದು ತಿಂಗಳು ವನದೊಳಗೆ ವಿಹರಿಸಿ (ಜೀವಂಸಾಂ. ೦೪–೭೨) : ಮೇರ ತಿಂಗಳು ನಾಲ್ಕಜಿಣಿಕೆಯ ಕಾಲ ಸವೆದುದು (ತೊರರಾ. ೪–೭–೫) ; ನಿದ್ದೆಯ ಕಾಣದೆ ತಿಂಗಳಾರಾಗಿತ್ತು (ಇಂಜಾಪ. ೪೫–೧೩).

**ತಿಂಗತಿಂಗಳು,** ತಿಂಗಳ್ತಿಂಗಳು, ತಿಂಗಳ್ದಿಂಗಳ್ (ದ್ವಿರುಕ್ತಿ) : ಅವ್ವಗಳಿಗೆ (ತೆಂಗು) ತಿಂಗತಿಂಗಳಿಗೆ ಹೊಸ ಹೂವು ಬಿಟ್ಟು ಇಪ್ಪತ್ತು ಇಪ್ಪತ್ತೈದು ಕಾಯಿ ಆಗುತ್ತವೆ (ಮುಂಬಯಿ. ೨–೫೦) ; ಧಾರಾಪೂರ್ವಕಂ ಮಾಡಿ ಗುಡಿಕಲ್ಲ ೨೪೮ ಸ್ಥಳದ ಹೆಜ್ಜುಂಕದಲ್ಲಿ ತಿಂಗಳ್ತಿಂಗಳಿಗೆ ಕೊಟ್ಟ ಗದ್ಯಾಣ ೧ (ಸೌಇಇ. IX-1. ೨೭೯–೨೦ ; 1166) ; ಮುದ್ರಾವಣದ ಸುಂಕದೊಳಗೆ ತಿಂಗಳ್ದಿಂಗಳ್ಗೆ ಹತ್ತು ಹತ್ತು ದ್ರವ್ಯಮಂ ಬಿಟ್ಟಂ (ಎಇ. XXVIII, ೫–೫೭ ;

1082). **ತಿಂಗಳಂ ಸೂಡಿದವ** = ಚಂದ್ರನನ್ನು ತಲೆಯಲ್ಲಿ ಧರಿಸಿದವನು ; ಚಂದ್ರಶೇಖರ ; ಶಿವ : ತಿಂಗಳಂ ಸೂಡಿದವನ ಸರ್ವೋತ್ತುಂಗವಾಹನ ವಿಾಶ್ವರನ ಗಣಪುಂಗವರ್ಗೇಱುವ ಮಹಾಸಿಂಹಾಸನಂ ಬಸವ (ಬಸಪು. ೧-೩೨). **ತಿಂಗಳ ಜೂಟ** = ತಿಂಗಳಂ ಸೂಡಿದವ : ತಿಂಗಳ ಜೂಟಗೆ ಸುರಸತಿಯರು ತಂದ ಮಂಗಳಜಲಕುಂಭದಂತೆ (ಮೋಹತ. ೨೪-೩೦). **ತಿಂಗಳಣುಗ** = ಚಂದ್ರನ ಮಗ ; ಬುಧ : "ತಿಂಗಳಣುಗನೆನೆ ಬುಧನೆನಿಕ್ಕು" (ಕಶಬ. ೪೬). **ತಿಂಗಳ ಧರ** = ತಿಂಗಳಂ ಸೂಡಿದವ : ತಿಂಗಳಧರನ ಪೂಜಿಸು ಮನವೆ (ಸಿದ್ಧವ. ೪. ೯೮-೩೨೮); ತಿಂಗಳಧರ ಧವಳಾಂಗ ಗಂಗಾಧರ (ಸೌಂದಕಾ.೧-೧೧). **ತಿಂಗಳ ಪಕ್ಷ**= ತಿಂಗಳಲ್ಲಿಯ ಹದಿನೈದು ದಿವಸ: ತಿಂಗಳ ಪಕ್ಷಗಳನ್ನು ಹೇಳದೆ ವರ್ಷಋತು ಎಂಟನೆಯ ಪಕ್ಷ ಎಂದು ಮೊದಲಾಗಿ ಋತುಪಕ್ಷಗಳನ್ನು ಹೇಳಿದ (ಕರ್ಣಾಟ. ೮). **ತಿಂಗಳ ಬೆಳಕು, ತಿಂಗಳ ಬೆಳಗು** = ಚಂದ್ರನ ಬೆಳಕು; ಬೆಳುದಿಂಗಳು : ಶರಣನೆಂದು ವಚನಂಗಳ ಹಾಡಿದರೆ ತಿಂಗಳ ಬೆಳಕಿನ ಸಿರಿಯಂ ಕಂಡು ನಾಯಿ ಹರುಷಂಗೊಂಡು ಬಳ್ಳಿಟ್ಟು ಬೊಗುಳಿದಂತಾಯಿತು (ಪ್ರಸವ. ೩೬) ; ತಳತಳಿಸಿ ಬೆಳಪ ತಿಂಗಳಬೆಳಗಂ ಕವರ್ವಂತೆ ಮೆಱೆವ ಮೆಯ್ಯೊಳಗಿಂ (ಕಬ್ಬಿಗಕಾ. ೭೬) ; ತಿಂಗಳ ಬೆಳಗಿನ ದಾರೆಯ ಸಂಗಡಮನೆ ಮೆಱೆಯುತಿರ್ಪ ಗಂಜಯನಾಗಳ್ ತೆಂಗಿನ ತಿಳಿವಟ್ಟಲೊಳಾತಂಗೆಱೆದರ್ (ದಶಕು. ೦೨-೦೨೩). **ತಿಂಗಳ ಮಾವ** = ಚಂದ್ರನಿಗೆ ಅಕ್ಕರೆಯಿಂದ ಸಂಬೋಧಿಸುವ ಹೆಸರು : ಅಂಗನೆ ರೂಪಿಂದ ತಿಂಗಳಮಾವನ ತಂಗಿ (ಅಂಜಚ. ೪-೯) : ತಿಂಗಳಮಾವನು ಬಾನಿನಂಗಳದೊಳು ಮೂಡಿ ಬಂದಿರುವನು ಹೇಗೆ (ಚಂದ್ರವೀ. ೧೬೬-೬೦). 'ಚಂದಮಾಮ' ಪರಾ. **ತಿಂಗಳ ಲೇಖೆ** = ಚಂದ್ರನ ಕಲೆ : ತಿಂಗಳ ಲೇಖೆಯಂ ಬಿಡದೆ ಗೂಡಿದವಂಗೆ ಮಹೇಶ್ವರಂಗೆ . . . ಸುಧೂಪವಮಂ ಮಿಗೆ ಸಮರ್ಪಿಸಿದಂ (ಉದ್ಭಟ. ೧೧-೮೩). **ತಿಂಗಳುಗಟ್ಟಳೆ, ತಿಂಗಳುಗಟ್ಟಲೆ, ತಿಂಗಳುಗಟ್ಲೆ** = ೧. ಹಲವು ತಿಂಗಳುಗಳ ವರೆಗೆ : ತಿಂಗಳುಗಟ್ಟಳೆ ಉಪದೇಶ ಮಾಡಿದರೂ ಅವನು ಸಿಗರೇಟಿನ ಚಟವನ್ನು ಬಿಡಲಿಲ್ಲ (ರೂಢಿ) ; ತಿಂಗಳುಗಟ್ಟಲೆಯಾದರೂ ಮಲೇರಿಯಾ ಜ್ವರ ಗುಣವಾಗುವುದಿಲ್ಲ (ರೂಢಿ). ೨. ಪ್ರತಿ ತಿಂಗಳು : ಸಂಬಳದಲ್ಲಿ ಐವತ್ತು ರೂಪಾಯಿ ತಿಂಗಳುಗಟ್ಲೆ ಕೂಡಿಸಿ ಸಾಲಾ ಹರಿಸಬೇಕೆಂದು ಆಲೋಚನೆ ಮಾಡಿದ್ದೇನೆ (ಕಥಾಮಂ. IV, ೩). **ತಿಂಗಳು ತುಂಬು** = (ಗರ್ಭಿಣಿಗೆ) ನವಮಾಸ ತುಂಬು : ಆಕೆಗೆ ತಿಂಗಳು ತುಂಬಿದೆ (ರೂಢಿ). **ತಿಂಗಳುವಾರು** = ತಿಂಗಳುಗಳ ಮೇರೆಗೆ ; ತಿಂಗಳಿಗೆ ಇಂತಿಷ್ಟು ಎಂದು : ಆಯಾ ತರಗತಿಗಳಿಗೆ ಪಠ್ಯವಸ್ತುವನ್ನು ತಿಂಗಳುವಾರು ಹಂಚಿಕೊಂಡು ವರ್ಷಾಂತ್ಯದಲ್ಲಿ ಪೂರೈಸಿದರೆ ಉಪಾಧ್ಯಾಯರ ಕೆಲಸ ಮುಗಿಯಿತು (ಶಿಕ್ಷದ. ೧೨೮). **ತಿಂಗಳೊಪ್ಪತ್ತು** = ಸುಮಾರು ಒಂದು ತಿಂಗಳು ; ಹೆಚ್ಚುಕಡಮೆ ಒಂದು ತಿಂಗಳು : ಮತ್ತೆ ತಿಂಗಳೊಪ್ಪತ್ತು ಕಳೆಯುವುದರೊಳಗಾಗಿ ಫಲಿತಾಂಶ ಹೊರಬಿತ್ತು (ಧೀಮಂಕಾ. ೦೮). [ ದೇ.೩ ತಮಿ. ಮಲ. ತಿಙ್ಙಳ್ ; ತುಳು. ತಿಂಗೊಳು; ಕೊಡ. ತಿಂಗ ; ಕೋತ. ತಿಂಗಳ್ ]

**ತಿಂಗಳರೆ** (ನಾ). ಚಂದ್ರನ ಅರ್ಧಭಾಗ ; ಅರ್ಧಚಂದ್ರ : ಹೊನ್ನ ಬಣ್ಣದ ಮೈವೆಳಗು . . . ಚಿನ್ನಮಾಣಿಕದುಟಿ ಬಗಸೆಗ[ಣ್] ತಿಂಗಳರೆ ನೊಸಲು (ಸಾಳ್ವಭಾ. ೪-೬). [ ತಿಂಗಳ್ + ಅರೆ₃ ]

**ತಿಂಗಳವರೆ** (ನಾ). ಬಿತ್ತಿದ ಒಂದು ತಿಂಗಳಿಗೆ ಕಾಯಿಬಿಡುವ ಒಂದು ಬಗೆಯ ಅವರೆ : ತಿಂಗಳವರೇ, ಕೋತಂಬರಿ, ಹಸೀಮೆಣಸಿನಕಾಯಿ ತಕ್ಕೊಂಡು ಬಾ (ರಕ್ತರ್ಕ್ಸ. ೨೦). [ ತಿಂಗಳು (<ತಿಂಗಳ್) + ಅವರೆ₁ ]

**ತಿಂಗಳಿಗೆ** (ನಾ). ಹಣೆಗೆ ಹಚ್ಚಿಕೊಳ್ಳುವ ಬೊಟ್ಟು; ತಿಲಕ : "ತಿಂಗಳಿಗೆಯೆಂದು ತಿಲಕಂ" (ಕಶಸಾ. ೬೩-೯೧೨); "ಜೂಳಿಯ ತಿಂ[ಪಾಠಾಂ. ದಿಂ]ಗಳಿಗೆಯೆನಲ್ ನೇರಬೊಟ್ಟಿಗೆ ಪೆಸರ್" (ಕಬ್ಬಿಗೈ. ೨೬). [ ? ]

**ತಿಂಗಳು** 'ತಿಂಗಳ್' ನೋ.

**ತಿಂಗಳುಬೆಳಕು** (ನಾ). ಚಂದ್ರನ ಪ್ರಕಾಶ ; ಬೆಳುದಿಂಗಳು : ತಿಂಗಳು ಬೆಳಕಿನ ಇರುಳಿನಲಂದು ಅಮ್ಮನು ಕೆಲಸದೊಳಿರುತಿರೆ ಕಂಡು (ಕಪತು. ೩-೧೧) ; ತಿಂಗಳುಬೆಳಕೆಂದರೆ, ಪ್ರಾತಃಕಾಲದ ಬ್ರಾಹ್ಮೀಮುಹೂರ್ತದಲ್ಲಿಯೂ ಭೂದೇವಿಗೆ ಕ್ಷೀರಾಭಿಷೇಕವನ್ನೆಸಗುವಂತಿತ್ತು (ನಾಡೋಜ.೩೮೪). [ ತಿಂಗಳು (<ತಿಂಗಳ್) + ಬೆಳಕು₂ (<ಬೆಳಗು₂)]

**ತಿಂಗಳೋಡು** (ನಾ). (ಕರಾ)ಸೌರಮಾನ ತಿಂಗಳ ಮೊದಲನೆಯ ದಿನ : ಈವತ್ತು ತಿಂಗಳೋಡು, ಹಣ ಯಾರಿಗೂ ಕೊಡಬೇಡ (ರೂಢಿ). [ ತಿಂಗಳು (<ತಿಂಗಳ್) + ಓಡು ?. / ತುಳು. ತಿಂಗೊಡೆ]

**ತಿಂಗಳ್ಗಲ್** (ನಾ). ಚಂದ್ರಕಾಂತ ಶಿಲೆ : ಗಲ್ಗಲನೆ ಕರಗುವಾಲಿಯಕಲ್ಗಳ ಪೋಲ್ ಕರಗಿ ಪರಿವ ಜೊನ್ನದ ತಿಂಗಳ್ಗಲ್ಗಳೊಸರದೆನೆ ಕಳಿದ್ಯಕಿಲ್ಗೊಳನೆನೆ ಕುಳಿರ್ದುದಾ ಜಳಂ ತಿಳಿಗೊಳದಾ (ಅರ್ಧನೇ. ೫-೦೦೯) [ ತಿಂಗಳ್ + ಕಲ್₃ ]

**ತಿಂಗಳ್ಪಕ್ಕಿ** (ನಾ). ಬೆಳುದಿಂಗಳನ್ನೇ ಆಹಾರವಾಗಿ ಉಪಯೋಗಿಸಿಕೊಳ್ಳುವುದೆಂದು ಭಾವಿಸಲಾದ ಒಂದು ಬಗೆಯ ಪಕ್ಷಿ; ಜೊನ್ನವಕ್ಕಿ; ಚಕೋರಪಕ್ಷಿ : ತಿಂಗಳ್ಪಕ್ಕಿ, ತೇನೆ, ತನ್ನೆಣೆವಕ್ಕಿಯಂ ಕರೆದು ಕೂಗುತ್ತೆ (ಶ್ರೀರಾಮಪು. ೨೬೧-೯೦೦). [ ತಿಂಗಳ್ + ಪಕ್ಕಿ₁ ]

**ತಿಂಗಿಣಿ** 'ತಿಂಗಣಿ' ನೋ.

**ತಿಂಗುಳಿ** (ನಾ). ೧. ಆಹಾರಕ್ಕಾಗಿ ಸಾಕಿರುವ ಕಂಠಿ. ೨. ತಿನಿಸು ; ಆಹಾರ : "ಅವಿಷಂ – ಆಹಾರಂ (ತಿಂಗುಳಿ)" (ನೀತಿವಾ. ೨೮-೫೫) : ತನುವಂ ನಂಬಿರ್ದು ಕೆಟ್ಟಿಂ ಜವಂಗೆನ್ನಂ ತಿಂಗುಳಿ ಮಾಡದೀಗಳೆ ಜಿನಶ್ರೀ ದೀಕ್ಷೆಯಂ ತಾಳ್ದುವೆಂ (ಧರ್ಮಾಮೃ. ೦೦-೨೮೬) ; ಸವಿಗಂಡರಸಿ ಬಾಣಸಿನ ಮನೆಯೊಳ್ ಕಟ್ಟಿದ ಪೋಂತಂ ತಿಂಗುಳಿವಮಾಡಿದಳೆದಂ (ಯಶೋಚ. ೩-೬೮). [ ತಿನ್ + ಕುಳಿ₃ ]

**ತಿಂಗುಳಿದಿನ್** (ಕ್ರಿ). ಆಹಾರವನ್ನು ತಿನ್ನು,–ಉಣ್ಣು : ದೂಱಲಱಿಯೆನು ಸುಭಟರಿಗೆ ಮನ ಬೇಱೆ ನುಡಿ ಬೇಱಾಯ್ತು ಸಮರದೊಳೇಱ ತಿಂಗುಳಿದಿಂದು ದಣಿದುದು ನಮ್ಮ ಬಲವೆಂದ (ಕುಮಾ್ಯಧೀ. ೭-೮). [ ತಿಂಗುಳಿ + ತಿನ್ ]

**ತಿಂಟೆ** 'ತಿಟ್ಟು₃' ನೋ.

**ತಿಂಡಿ** (ನಾ). ೧. ತಿನಿಸು ; ಆಹಾರ ; ಖಾದ್ಯ : ತೆಮ್ಮಲಿನ ತಿಂಡಿಗಳ್ ಹಸುರೆಲೆಯ ತಟ್ಟೆ (ಕಾಲಕೂರ. ೬೩-೦೦೬) ; ತಿವಾರಿ ತಿಂಡಿಯನ್ನು ಅಣಿ ಮಾಡುವ ಕೆಲಸದಲ್ಲಿ ತೊಡಗಿದ (ಧಾರಕಿ. ೬) ; ಹಸುಬೆಯಲ್ಲಿದ್ದ ತಿಂಡಿಯ ಗಂಟು ದಾರಿಯುದ್ದಕ್ಕೂ ಅವನಿಗೆ ಜ್ಞಾಪಕ ಬರುತ್ತಿತ್ತು (ಕಳಹು. ೪) ; ನಿಮಗೋಸುಗವಾಗಿಯೇ ತಿಂಡಿಗಳನ್ನು ತಯಾರಿಸಹೇಳಿದೆ (ಕಾಲಯಾ. ೧೧). ೨. (ಉಕ) ತುರಿಕೆ ; ನವೆ ; ತೀಟೆ : ಕ್ವಾಟಿಟಲ್ಲಾ ಏನು ? ಆ್ಟವನ್ನು ಬಾಂಬು, ತಲೆ ತುಂಬ ತಿಂಡಿ, ಹೇನು! (ಸೂರ್ಯಪಾ. ೫೨-೨); ಸಹನೆ ಸಹಾನುಭೂತಿಗಳನ್ನು ಕಂಡರೆ ಮೈಯೆಲ್ಲ ಕೆರೆಯುವಷ್ಟು ತಿಂಡಿಯೇಳುತ್ತಿತ್ತು (ಕಾಲಚ.೫೦) : ಜನರು ತಮ್ಮ ನಾಲಗೆಯ ತಿಂಡಿಯನ್ನು ಹೀಗೇಕೆ ತೀರಿಸಿಕೊಳ್ಳಬೇಕೋ (ಮೂರುದಾ. ೧೩೦). ೩. (ಆಲಂ) ಸೊಕ್ಕು ; ಗರ್ವ : ನಿನಗೆ ತಿಂಡಿ ಜಾಸ್ತಿಯಾಗಿದೆ (ರೂಢಿ).

**ತಿಂಡಿತಿನಿಸು** = ಆಹಾರ; ಖಾದ್ಯ : ತಿನ್ನಲು ತಿಂಡಿತಿನಿಸು, ಕುಡಿಯಲು ಎಳನೀರು (ಶೀಮೋದ. ೫೦). **ತಿಂಡಿತೀರ್ಥ**=ಆಹಾರ ಮತ್ತು ಪಾನೀಯ: ತಿಂಡಿತೀರ್ಥ ಆಟಪಾಟಾದಿಗಳಿಗೆ ಬೇಕಾದ ಸಮಸ್ತ ವಸ್ತುಗಳೂ ಅಲ್ಲಿ ಸಿದ್ಧವಾಗಿವೆ (ಜೀವಾತ್ಮ. ೨೦೨) ; ಸಂತೋಷದಿಂದಲೇ ಗೋದಮ್ಮ ತಿಂಡಿತೀರ್ಥ ಬೇಗನೆ ಒದಗಿಸಿಕೊಟ್ಟು ಜೋಯಿಸರಲ್ಲಿಗೆ ಕಳುಹಿಕೊಟ್ಟಳು (ಕಾಗದು. ೬). [ ದೇ.೩ ತಮಿ. ತಿನ್ಬೆ ; ಕೊಡ. ತೆಲು. ತಿಂಡಿ ]

**ತಿಂಡಿಪೋತ, ತಿಂಡಿಹೋತ** (ನಾ). ಆಹಾರವನ್ನು ಹೋತದಂತೆ ತಿನ್ನು ವವನು; ಅತಿಯಾಗಿ ತಿನ್ನುವವನು; ಹೊಟ್ಟೆಬಾಕ: ಕೆಲಸಕ್ಕೆ ಬಾರದ ತಿಂಡಿಪೋತ ಎನಿಸಿಕೊಂಡನು (ಶಿರ್ಯಾಕೀ. ೩೧); ಅಧ್ಯಾಪಕರು ನಮ್ಮನ್ನು ತಿಂಡಿಪೋತರು ಎನ್ನಬಹುದು (ಅಲಮ. ೦೦೪); ತಿಂಡಿಪೋತ ನಂಜೇಲಿಂಗ ಭಟ್ಟನ ಕಥೆಯನ್ನು ಹೇಳಿದೆ (ಇಬದು. ೮). **ತಿಂಡಿಹೋತ**: (ಅ).
[ ತಿಂಡಿ + ಪೋತ$_1$ (<ಪೋಂತು)./ತಮಿ. ತಿನ್ಪೋತ್ತು$_2$ ; ತೆಲು. ತಿಂಡಿಪೋತು ]

**ತಿಂಡಿಪೋತತನ, ತಿಂಡಿಹೋತತನ** (ನಾ). ಅತಿಯಾಗಿ ತಿನ್ನುವ ಸ್ವಭಾವ; ಹೊಟ್ಟೆಬಾಕತನ: ಅವನ ತಿಂಡಿಪೋತತನವನ್ನು ನೋಡಿದರೆ ಜುಗುಪ್ಸೆಯಾಗುತ್ತದೆ (ರೂಢಿ). **ತಿಂಡಿಹೋತತನ**: (ಅ).
[ ತಿಂಡಿಪೋತ + – ತನ ]

**ತಿಂಡಿಬಾಕ** (ನಾ). = ತಿಂಡಿಪೋತ: (ಅ). [ ತಿಂಡಿ + – ಬಾಕ ]

**ತಿಂಡಿಶ** (ನಾ). ಒಂದು ಬಗೆಯ ಶಾಕ,–ಸಸ್ಯ: ಸವತೆ, ತಿಂಡಿಶ . . . ಇವು ಕಫವಾತಕರ (ಅಷ್ಟಾಂಗ. ೦೩೭). [ ? ]

**ತಿಂಡಿಹೋತ** 'ತಿಂಡಿಪೋತ' ನೋ.

**ತಿಂಡಿಹೋತತನ** 'ತಿಂಡಿಪೋತತನ' ನೋ.

**ತಿಂಡುಕ** (ನಾ). ಒಂದು ಬಗೆಯ ಗಿಡ; ತೂಬರೆ ಗಿಡ: ಕುಪರಥ, ಹಿಗೆ, ತುವಂಕಿ, ತಿಂಡುಕ, ಹೊಳೆತುಮ್ಮಿ, ಬಂಧ (ವೃಜಿಗಿ. ೩೦–೬೦೩).
[ <ಸಂ. ತಿಂದುಕ ]

**ತಿಂಡೆ** 'ತಿಟ್ಟು$_3$' ನೋ.

**ತಿಂತಿ** 'ತೀಂಟೆ$_1$' ನೋ.

**ತಿಂತಿಡಿ** (ನಾ). ಹುಣಿಸೆಮರ. [ ಸಂ. ತಿಂತಿಡೀ ]

**ತಿಂತಿಡಿಕ** (ನಾ). = ತಿಂತಿಡಿ. [ ಸಂ. ತಿಂತಿಡಿಕಾ ]

**ತಿಂತಿಡೀಕ** (ನಾ). ೧. = ತಿಂತಿಡಿ. ೨. ಮುಖ್ಯವಾಗಿ ಹುಣಸೆಹಣ್ಣಿನಿಂದ ತಯಾರಿಸಿದ, ಹುಳಿಯಾದ ಗೊಜ್ಜು ಅಥವಾ ಸಾಂಬಾರು.
[ ಸಂ. ತಿಂತಿಡೀಕಾ ]

**ತಿಂತಿಣಿ$_1$, ತಿಂಥಿಣಿ** (ನಾ). ಗುಂಪು; ಗೊಂದಣಿ; ಸಮೂಹ: "ಬಂಬಲ್, ತುಱುಗಲ್, ಒಟ್ಟಜೆ, ತಿಂತಿಣಿ . . . ಗೊಂದಣ–ಈ ೪೦ ಸಮೂಹಂ" (ಶಬಸಾ. ೦೧–೨೨೨); "ಗೊಂದಣ ತೆರಳ್ಕೆ . . . ತಿಂತಿಣಿ . . . ತೊಂಬೆಯನೆ ಶ್ರೇಣಿಕಾಖ್ಯಂ" (ಅಭ್ನಮಂ. ೫೫); ರವಿಕಿರಣಾಳಿಗಳ್ ಧ್ವಜಪಟಾಳಿಯ ತಿಂತಿಣಿಯಿಂದಮುರ್ಚಲಾಱವೆ (ಶಂಶಥಾ. ೦೦–೩೦); ತಱಗೆಲೆ ಬಳ್ಳಿ ಯೆಂಬವಱ ತಿಂತಿಣಿಯೊಳ್ಮುರಗಾತಿವೇಗದಿಂದಱಿಯಲೆ ಬಂದುದಿಲ್ಲ ಪಥಮುಂ (ಕಾದಂಪೂ. ೬೨೭); ಗಣ ತಿಂತಿಣಿಯೊಳಗಿರಿಸೆನ್ನನು ಲಿಂಗವೇ (ಬಸವ. ೩೭೭); ಅಂತವರನೊತ್ತಿಟ್ಟ ಮನೆಯನೇವೊಗಳ್ವೆನದು ತಿಂತಿಣಿಯ ಸೂನೆಗಾಱಿರ ನಿಳಯ ರಕ್ಕಸಿಯ ಮಾಡ ಹಾವಿನ ಹೇಳಿಗೆ (ಹಹಕಾ. ೧೨–೨); ಛತ್ರಚಾಮರದ ತಿಂತಿಣಿ (ದಶಕು. ೮–೨); ಸಂಪಗೆಯರಳ ಪರಿಮಳ ಪಥ್ಯವೇ ತುಂಬಿಗಳ ತಿಂತಿಣಿಗೆ (ಶಂಪ್ರಾ.ದ್ರೌ. ೪–೪೩). **ತಿಂಥಿಣಿ**: ಪುಣ್ಯ ತಿಂಥಿಣಿಗಳನಂದಗುರ್ವುವೆರಸಾಡಿದುವೊಂದೆರಡಾನೆಯಟ್ಟೆಗಳ್ (ಜಂಜಕಾ. ೬೦–೫೭); ಚೆನ್ನಮಲ್ಲಿಕಾರ್ಜುನ ಜಂಗಮದ ತಿಂಥಿಣಿಯಲ್ಲಿ ಓಲಾಡುವೆ (ಮಹಾದೇ. ಬ. ೬೮–೦೬೪); ನರ್ತಕರ ವರ್ತಕರ ವೊತ್ತ ದೊತ್ತರದ ತಿಂಥಿಣಿಯನೊತ್ತರಿಸಿ ಇಟ್ಟಣಿಸಿದ ಕಟ್ಟಣಕದಾಸ್ಥಾನದೊಳು (ಬಸರ. ೬–೨೩); ಕಂತುಹರನವರೊಡನೆ ಹರಹರ ಮಂತಣದಿ ತಿಂಥಿಣಿ ಯೊಳತಿ ನಿಶ್ಚಿಂತನು (ಸಾನಂಚ. ೭–೭೭). P ಇದು 'ತಿಣಿ'ಯ ದ್ವಿರುಕ್ತಿ ಯಿರಬಹುದು. [ <ತಿಣ್$_2$ ]

**ತಿಂತಿಣಿ$_2$** (ನಾ). = ತಿಂತಿಡಿ: "ತಿಂತಿಣಿ – ತಿಂತ್ರಿಣಿ – ಹುಣಸೆಮರ" (ತದ್ಭಕೋ. ೫೦). [ <ಪ್ರಾ. ತಿಂತಿಣೀ./ಸಂ. ತಿಂತ್ರಿಣೀ ]

**ತಿಂತಿಣಿಗೊಳ್** (ಕ್ರಿ). ಗುಂಪು ಸೇರು; ಒಟ್ಟುಗೂಡು; ದಟ್ಟಯಿಸು: ದಿತಿಸುತನ ಸೇನಾನೀಕವಡಗಡಿಗೆ ಉಲಿದು ತಿಂತಿಣಿ[ಪಾಠಾಂ. ಟಿಂಟಣಿ] ಗೊಂಡು ಸಿಂಹದ ಮೆಳೆಯ ನರಿಗಳು ಕೆಣಕುವಂದದಿ ತಲೆಯ ಬರಹವ ತೊಡೆಯೆ ಹಳಚಿದರಾಗ ಹರಿಯೊಡನೆ (ಸಂಭಚ. ೮–೧೦೯); ತಿಂತಿಣಿಗೊಂಡೆಸೆ ವ್ಯವತ್ಸಾಱು ಜನಾಂತಂ ನೆಲಸಿಹುವು (ಜಯುಕಾ. ೦–೩೫).
[ ತಿಂತಿಣಿ$_1$ + ಕೊಳ್$_1$ ]

**ತಿಂತಿಣಿವಡೆ** (ಕ್ರಿ). = ತಿಂತಿಣಿಸು: ಪಲವುಂ ಪರಿಯ ಪಕ್ಕಿಗಳ ಪರ್ಚಿದ ಸರಂಗಳಂ ಹರಣಂಬಡೆದಂತೆ ಪರಿವಡೆದು ತಿಂತಿಣಿವಡೆದ ಪೇರಡವಿಯೊಳ್ (ಕಬ್ಬಿಗಾ. ೨೦೭). [ ತಿಂತಿಣಿ$_1$ + ಪಡೆ$_1$ ]

**ತಿಂತಿಣಿವಣ್** (ನಾ). ಒತ್ತೊತ್ತಾಗಿ ಸೇರಿರುವ ಹಣ್ಣು; ಗೊಂಚಲು ಗೊಂಚಲಾದ ಹಣ್ಣು: ತಿಂತಿಣಿವಣ್ಣನಾಂತ ಕದಳಂ ಪದವಣ್ಬುದಿದೀಳೆ (ಜಗವಿ. ೨–೧೫); ನೆಲಕ್ಕೆ ಜೋಲ್ವ ತಿಂತಿಣಿವಣ್ಣನಾಂತ ಸಣ್ಣಗೊಂಬಿಂದಿಂಬು ವಡೆದ ದಾಳಿಂಬಂಗಳೊಳಂ (ಕಬ್ಬಿಗಾ. ೩೦); ನಾಡೆ ಕೊರ್ವಿ ತಿಂತಿಣಿ ವಣ್ಣಳಾಂತ ಕದಳಂ (ಜಬಪು. ೦೧–೨೨). [ ತಿಂತಿಣಿ$_1$ + ಪಣ್$_3$ ]

**ತಿಂತಿಣಿವರಿ** (ಕ್ರಿ). ಗುಂಪಾಗು; ಕಿಕ್ಕಿರಿ: ಜನಪದಂ ಧಗೆಯ ಹಬ್ಬಾವಂತೆ ಹೊರಟು ತಿಂತಿಣಿವರಿದು ಬಂತು (ಗೂಢೊಥಾ. ೦೧–೨೭೯).
[ ತಿಂತಿಣಿ$_1$ + ಪರಿ$_2$ ]

**ತಿಂತಿಣಿಸು** (ಕ್ರಿ). ಗುಂಪಾಗು; ಕಿಕ್ಕಿರಿ; ಒತ್ತೊತ್ತಾಗಿ ಸೇರು; ಸಮೂಹವಾಗು: ತಿಂತಿಣವ ನಿಳಯದಿಂ . . . ಒಪ್ಪುವುದಿಳೆಯೊಳೋಪಧಿ ಪ್ರಸ್ಥಪುರಂ (ಗಿರಿಕ. ೨–೦೦೦); ದಿಶಾಚತುಷ್ಟಯಂ ಪ್ರಣಿಹಿತಿಹೇತಿ ತಿಂತಿಣಿಸಿದಂತೊಡವಂದುದು ಪಣ್ಣದಾನೆ (ಅನಂಪು. ೧೧–೭೪); ತಿಂತಿಣಿಸಿ ಗಗನದೊಳ್ತುಂಬಿಗಳ್ಕಾರಮುಗಿಲಂತೆ ನವಪಾರಿಜಾತದ ಕುಸುಮ ಪರಿಮಳಕೆ ಸಂತತಂ ಮುಸುಕಲ್ (ಜೈಮಿಥಾ. ೩೩–೨೦). [ ತಿಂತಿಣಿ$_1$ + – ಇಸು$_3$ ]

**ತಿಂತೆ** 'ತೀಂಟೆ$_1$' ನೋ.

**ತಿಂತ್ರಿಣಿ** (ನಾ). ಹುಣಿಸೆಮರ; ತಿಂತಿಣಿ: ಘನಸಾರ ಖರ್ಜೂರ ಕರ್ಪೂರ ಚೂತ ಪನಸು ತಿಂತ್ರಿಣಿ ಬಿಲ್ವ ಪಾಟಲಾಶೋಕ ಜನನುತ ಮಂದಾರ (ಸೌಗಂಧಿ. ೬–೪೪); ತಿಂತ್ರಿಣೀವೃಕ್ಷದ ಪೊಸಫಲದೊಳ್ಸಾರವಂ ಕಂಡ ಕಾಲಕ್ಕೆ (ಶಂಕಶ. ೯೩–೫೩). [ ಸಂ. ತಿಂತ್ರಿಣೀ ]

**ತಿಂಥಿಣಿ** 'ತಿಂತಿಣಿ$_1$' ನೋ.

**ತಿಂದುಕ** (ನಾ). ತೂಬರೆಗಿಡ ಮತ್ತು ಅದರ ಕಾಯಿ: "ತಿಂದುಕಃ, ಸ್ಫೂರ್ಜಕಃ, ಕಾಲಸ್ಕಂಧಃ, ಶಿತಸಾರಕಃ–೪ ತುಂಬರಗಿಡ, ತೂಬರೇಗಿಡ. ಇದನ್ನು ಜಗಳದ ಮರವೆಂದು ಕೆಲವರನ್ನುವರು" (ಸಿದ್ಧಾಂತಿ. ೧೦೭); ತಿಂದುಕ ಪೀನಫಲಂಗಳೆ . . . ತಿಂದು (ಕಾವ್ಯಾವ. ೫೨೭); ನಾನಾ ಬಗೆಯ ನಾರುಬೇರುಗಳೂ . . . ಹಣ್ಣುಹಂಪಲುಗಳೂ, ಬೆಳೆಯುತ್ತವೆ. ಉದಾಹರಣೆಗೆ ಅಮ್ರ . . . ತಿಂದುಕ, ಉದುಂಬರ (ಪ್ರವಾಇ. I, ೨೦೫).
[ ಸಂ. ]

**ತಿಂಪು** 'ತಿಣ್ಪು' ನೋ.

**ತಿಂಪುಗೆಡು** (ಕ್ರಿ). ಗೌರವವನ್ನು ಕಳೆದುಕೊಳ್ಳು; ಹಗುರವಾಗು; ಅವಮಾನ ಹೊಂದು: ಖಳನ ದೆಸೆಯಿಂ ತಿಂಪುಗೆಟ್ಟವು ಪೇಳಲೇನದನು (ನಿಘಾಗ. ೭–೮–೨೭). [ ತಿಂಪು (<ತಿಣ್ಪು) + ಕೆಡು$_1$ ]

**ತಿಂಬ** 'ತಿನ್' ಪರಾ.

**ತಿಂಬಂಡ, ತಿಂಬಡ** (ನಾ). ತಿನ್ನುವ ಪದಾರ್ಥ; ತಿನಿಸು; ತಿಂಡಿ: ಅಜ್ಜರ್ಕಳ ಮನೆಯಿಂದಂ ಪೊಸಲುಮುಡಲುಂ ತುಡಲುಂ ಪೂವುಂ ತಂಬುಲಮುಂ ತಿಂಬಂ[ಪಾಠಾಂ. ಬ, ಬ]ಡಂಗಳುಂ ಬಂದುವು (ವಡ್ಡಾರಾ. ೦೦೭–೨೦). **ತಿಂಬಡ**: ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. [ ತಿನ್ + ಬಂಡ$_3$./ತಮಿ. ತಿನ್ಪಣ್ಣ; ತೆಲು. ತಿನುಬಂಡ ]

**ತಿಂಬಡ** 'ತಿಂಬಂಡ' ನೋ.

**ತಿಂಬಿಸು** (ಕ್ರಿ). ತುಂಬಿಸು; ಭರ್ತಿಮಾಡು: ಜಳಜಾತಿಕಾವಳಯಮಾನಳುಂಬ ಮಾಗೆ ತಿಂಬಿಸಿಯುಂ (ಪುಷ್ಪಪು. ೭-೬೯ ವ). [ ತಿಂಬು$_1$ + – ಇಸು$_3$ ]

**ತಿಂಬು$_1$** (ಕ್ರಿ). ೧. ತುಂಬು ; ವ್ಯಾಪಿಸು : ಕೆಂಬಣ್ಣದ ಕುದುರೆಗಳೊಳೊಡಂಬಡೆ ನಿಜರಜತರಥಮಾಗುರ್ವುರ್ವರೆಯಂ ತಿಂಬೆ[ಪಾಠಾಂ.ತುಂಬೆ]ಕಳಶ ಧ್ವಜಂ ಮಿಳಿರ್ದಂಬರಮಂ ಬಳಸೆ ನಿಂದನಾತಂ ದ್ರೋಣಂ (ಪಂಪಭಾ. ೧೧-೫೪) ; ನಗದ ಮಾರ್ದನಿ ಕಿವಿಗಂ ತಿಂಬಿ (ಶಾಂತಿಪು. ೨-೧೦೨) ; ಸೊಪಡಿಂ ಸೊರ್ಕಿಸುತುಂ ಕರೇಣುಕುಳಮಂ ಸಾದಾರ್ದುರ್ಮ ಸಾಮೋದ ಪಲ್ಲವಮಂ ಮೇವುತೆ ತಿಂ[ಪಾಠಾಂ. ತೀಂ]ಬ ತುಂಬಿಗಳನುದ್ಯದ್ಗಲ್ಲದಿಂದಗ್ರ ಪಲ್ಲವದೊಳ್ ಸೋವುತೆ ಸೋರ್ವ ದಾನಜಲದಿಂದಂ ಸಲ್ಲಕೀಕಾನನೋದ್ಭವಮಂ ಮಾಡುತು ಮಾಡುತಿರ್ದುವಗದೊಳ್ ಕೋಡಿಟ್ಟು ಕಾಡಾನೆಗಳ್(ಲೀಲಾವ.೮-೩); ನೀಲದುನ್ಮುಖಮಯೂಖಸಂಕುಳಂ ಕೊಡಂಕೆಯೊಳ್ ತಿಂಬಿತೆಂಬಂತೆ (ಚಂದ್ರಪ್ರ. ೬-೬೩ ವ) ; ತಿಂಬಿ ಗಟಿಪುವ ಗಿಳಿಗಳೊಡನೆಳಸಿ ಮಾತಾಡಿ (ಪುಷ್ಪಪು. ೨-೪೪) ; ಲೊಕ್ಕಿಯ ಕಷಾಯಮುಂ ಕೆ(ಕು)ಡಿಸುಗುಮುಷ್ಣಂಬುವೆ ಮೇಣಾ ಮಧುವಿಂ ತಿಂಬಿದ ವಿಷಮಂ(ಖಮದ.೨-೧೪೩). ೨. ತುಂಬಿಸು ; ಭರ್ತಿಮಾಡು : "ತಿಂಬು-ಪೂರಣೇ" (ಶಮದ) ; ರುಚಿವೆತ್ತಿರ್ದ ಪಾನಮಿದು ಮಜ್ಜಿಗೆ ತಾನಿದು ಶಿಖರಿಣಿಯೆನುತುಂ ತಿಂಬಿದಿಂಬಿ ತಂದೆಟಿದರಬಲೆಯರ್ ಸಿರ್ಪುಗಳಿಂ (ಸುಕುಮಾ. ೧೧-೩೧) ; ದೆಸೆಯಂ ಪೊಂಬಣ್ಣದಿಂ ತಿಂಬುವ ಕಳಮವನಂ (ಎಕ. XI, ದಾವಣ. ೩೫-೩೫ ; ಸು. 1160) ; ಬಳಸಿದಗಟನೊಗುವಿಂಗೆ ತಿಂಬಿ ತುಂಬುವರಿಯುಸಿಯುಂ (ಚಂದ್ರಪ್ರ. ೮-೪೩ ವ) ; ಅಂಬರಮೆಯ್ದೆ ತಿಂಬಲಿಕ್ಕಿದ ಕಡೆಮುತ್ತಿನೋಳಿಯೆನೆ ಕಣ್ಗೊಳಿಸಿರ್ದುವು ತಳ್ತು ತಾರೆಗಳ್ (ಕುಸುಮಾ. ೪-೪೦) ; ವರ್ಣಮಾಲಿಕೆಯೆಂಬಳ್ ಬಹು ರತ್ನಪ್ರಾಂಶುಪ್ರಸರದಿಂ ಪಲತೆಱದ ವರ್ಣಪೂರಂಗಳಿಂ ಪರಿಪೂರ್ಣಮಾಗಿ ಬೆಡಂಗುವಡೆಯೆ ತಿಂಬಿಯುಂ (ಶಾಂತೀಶ್ವ. ೧೩-೨೨೯ ವ). 'ತುಂಬು$_1$' ಪರಾ.

△ **ತಿಂಬು$_2$** (ಕ್ರಿ). ತಿನ್ನು ; ಭಕ್ಷಿಸು : ಮಣ್ಣು ತಿಂಬುವದಱಿಂದ ಪಾಂಡು ರೋಗ ಹುಟ್ಟುವದು (ವೈದ್ಯಸಾ. I, ೩೩೩) ; ಅಶನವಾದರೆ ತಿಂಬುತಿಹನು ಮೂರು ಪಂಚೇರ (ಜ್ಞಾನಸಿಂ. ೨.೧೦); ಬುತ್ತಿ ತಿಂಬುವಗೆ ಲತ್ತೆಯುಂಬುವ ಗಾದೆ (ಮಹಾವಿ. ೪-೯೪). [ <ತಿನ್ ]

**ತಿಂಬೊಡೆ** (ನಾ). [ಸಂಗೀತ] ಹಾಡುವ ಒಂದು ಕ್ರಮ (?) : ಮಿಕ್ಕ ತಿಂಬೊಡೆ ತ್ರಿವಳಿಗಳೆಂದೆಂಬ ಸೂಳುಕ್ರಮದಿಂದ ಪಾಡಿದರು (ತರ್ಕೆಶಾ. ೭-೫೭). [ ? ]

**ತಿಕ, ತಿಗ, ತೀಗ** (ನಾ). ೧. ಕುಂಡೆ ; ಗುದ ; ಪೃಷ್ಠಪ್ರದೇಶ ; ಆಸನ ; ಅಂಡು:ಘಟ ದೀಪಾಂತರವಾರುತಮಾವಿಂದ ಬಂದಿತ್ತೊಂದು ವಿಕಟಾಂಗದ ಕುದುರೆ ಬಾಯಿಗೆ ಹಲ್ಲಣ ತಿಕಕ್ಕೆ ಕಡಿವಾಣ ಹಲ್ಲಿಗೆ ಹಕ್ಕರಿಕೆ (ಸುಂಕಬಂ.೭೪); ಆಸನದ ಪೊಱಗೆ ಪೃಷ್ಠಮದೀಸನಿಪಾ ಪೆಸರದಕ್ಕುಮದಱಿಂ ನಡುವಣ ದೇಶದ ನಿಟ್ಟೆಲುವಿಂಗಂ ಆಸರಿಸುಗು ಮಲಕುಟಂ ತಿಕಂ ತಾಮೆಂದುಂ (ಅಶ್ವಶಾ. ೯-೪೪); ಕುಕುಂದರೌ–ಕುಕುಂದರವೆಂಬ ಪೆಸರ್ವಡೆದಿರುವವು–ಅವು ತಿಕಕ್ಕೆ ಸಮೀಪವರ್ತಿ ಕೂಪಂಗಳು (ಬಾಹಟೀ. ೨-೪-೨೪ ವ) ; ಉದ್ಯೋಗವಿಲ್ಲದ ಬಡಗಿ ಮಕ್ಕಳ ತಿಕ ಕೆತ್ತಿದ (ಗಾದೆ); ತೆಂಗಿನಮರ ಏರುವವನ ತಿಕ ಎಲ್ಲಿ ತನಕ ಹಿಡಿದಾನು? (ಗಾದೆ). ೨. ಮೂರರ ಗುಂಪು : "ತಿಗ(ತಿಕ)–ತ್ರಿಕ = ಮುಕ್ಕೂಟ" (ತದ್ಭಕೋ. ೧೭). **ತಿಗ**: ೧. "ತ್ರಿಕ – ತಿಗ" (ಶಮದ. ೨೯೦ ಪ್ರಯೋ) ; ತಿಗವೆತ್ತಿ ಕರದೆ ತೊಡೆಗಳನಗಲಿಸಿ (ಮನ್ಮವಿ. ೧೪-೪) ; ತುದಿವೆರಳ ಬೊಬ್ಬೆಗಳ ತಿಗ[ಪಾಠಾಂ. ಹರೆ]ಗಳ ತದಹದಬ್ಬರ ವಱಿಯಲೀತನನಿದಿರುಗೊಂಡಪ್ಪಿದರು (ತೊರಲಾ.೫-೯-೭). ೨. "ತಿಗ(ತಿಕ)–ತ್ರಿಕ– ಮುಕ್ಕೂಟ" (ತದ ಕೋ. ೧೭). ೩. ಬೆನ್ನೆಲುಬಿನ ಕೆಳಭಾಗ ; ಕಟಿಪ್ರದೇಶ : ಅಂತು ಶಿವಂಗೆ ದೂರವಾದನೆಂಬ ಕೋಪದಿಂ ತಿಗದೊಳಿಕ್ಕಿರ್ದ ನಂಜನೆಂಜಲಿಪ ಕುಡುಗೋಲಂ ತೆಗೆದುಕೊಂಡು (ತ್ರಿಪುವಿ. ೦೪-೨೫ ವ). ೪. ಪಗಡೆಯಾಟದಲ್ಲಿ ಮೂರರ ಸಂಕೇತವುಳ್ಳ ಒಂದು ಗರ,–ಮೂರರ ಗರ : ಬಿಡು ತಿಗ ದುಗ ಪಂಚಿಯನೊಡ್ಡಿಡಸಿದ ಚಾರಿಯನೆ ಪೊಯ್ದು ಗುಣಿಸು. . . ಎನಿಪ್ಪ ನುಡಿ ನೆಗಟಲ್ ಲೆತ್ತವಾಡಿದರ್ ದಂಪತಿಗಳ್ (ಉದ್ಭಟ. ೧೧-೦೫); ದುಗನ ಹಾಯಿಕುತನಗೆ ಹಾಯಿಕು ತಿಗನವೆಂ[ಪಾಠಾಂ. ಹಾಯ್ಕುತ್ತಿಗನವೆಂ]ಬಬ್ಬರದ ಹಾಸಂಗಿಗಳ ಬೊಬ್ಬೆಯ (ಕುಮ್ಯಾಸ. ೧೩-೫೦) ; ಎಸೆವ ದಾಯವನೆಸೆವ, ದುಗ ಬೀಳ್ಕೆ, ತಿಗ ಬೀಳ್ಕೆ ! (ಹರಿಶ್ಚಂ. ೪-೫೭). **ತೀಗ**: ೨. ದುಗಂ, ದೂಗಂ ; ತಿಗಂ, ತೀಗಂ (ಶಬ್ದಾನು. ೩೭೮ ಪ್ರಯೋ). 'ಇರ್ತಿಗ' ಪರಾ. [ <ಸಂ. ತ್ರಿಕ ]

**ತಿಕಟ** 'ತಿಗಟ' ನೋ.

**ತಿಕಟಂ** 'ತಿಗಟಂ' ನೋ.

**ತಿಕಡಿ, ತಿಗಟಿ, ತಿಗಟೆ** (ನಾ). ೧. ತ್ರಿಕೋಣಾಕೃತಿ ; ತ್ರಿಭುಜ : (ಕಿ). ೨. (ಬ್ರಿಟಿಷರ ಆಳಿಕೆಯಲ್ಲಿ) ಜೈಲಿನಲ್ಲಿ ಅಪರಾಧಿಗಳ ಬೆನ್ನ ಮೇಲೆ ಏಟು ಕೊಡುವಾಗ ಉಪಯೋಗಿಸುತ್ತಿದ್ದ ತ್ರಿಭುಜವುಳ್ಳ ಒಂದು ಸಾಧನ : ನಾಲ್ವರು ವಿದ್ಯಾರ್ಥಿಗಳಿಗೆ 'ತಿಕಡಿ'ಯ ಮೇಲೆ ಹನ್ನೆರಡು ಏಟು ಕೊಡಬೇಕೆಂಬ ಕ್ರೂರ ಆಜ್ಞೆ ವಿಧಿಸಿಹೋದರು (ಆಗಸ್ಟ್. ೮೦) ; 'ತಿಕಡಿ' ಯನ್ನು ಹೊತ್ತುಕೊಂಡು ಬರಲು ಅತ್ತ ಕೆಲವರು ಹೋಗುತ್ತಲೂ ಇತ್ತ ಹೊಡೆಯುವ ಬಾರಕೋಲು ಸಿದ್ಧವಾಯಿತು (ಆಗಸ್ಟ್. ೮೦). ೩. ಗಾಡಿ ಹೊಡೆಯುವವನು ಕುಳಿತುಕೊಳ್ಳುವುದಕ್ಕಾಗಿ ಗಾಡಿಯ ಮುಂಭಾಗದಲ್ಲಿ ಅಳವಡಿಸಿದ ತ್ರಿಕೋಣಾಕಾರದ ರಚನೆ ; ಕತ್ತರಿ : ಬಂಡಿಗಾರ ಮತ್ತೆ ತಿಕಡಿಯ ಮೇಲೆ ಕುಳಿತುಕೊಂಡು ಜೋರಾಗಿ ಗಾಡಿ ಓಡಿಸಿದನು (ಪುನರು. ೫೬೨). ೪. ಕಲ್ಲುಕೆಲಸದವನು ಸಮತಲರೇಖೆಯನ್ನು ಪರೀಕ್ಷಿಸುವ ಒಂದು ಸಲಕರಣೆ ; ಕಲ್ಲುಕಂಟಿಗನ ಮಟ್ಟಕೋಲು; ಮಲೊಲೆಮಟ್ಟ: (ಕಿ). ೫. ಕ್ರೈಸ್ತಮತದವರಲ್ಲಿ ಕೆಥೋಲಿಕ್ ಪಂಗಡದವರು ತಮ್ಮ ಧರ್ಮದ ಸಂಕೇತವಾಗಿ ಧರಿಸಿಕೊಳ್ಳುವ ಅಡ್ಡಪಟ್ಟಿ ; ಕ್ರಾಸು : ಮಹಾರಷ್ಯದ ರಾಜಾಧಿರಾಜ ರಝಾರನು ವಜ್ರ ಖಚಿತವಾದ ತಿಕಡಿಯನ್ನೂ ಒಂದು ಲಕ್ಷ ಫ್ರಾಂಕುಗಳ ದ್ರವ್ಯನಿಧಿಯನ್ನೂ ಕೊಟ್ಟನು (ವಿಕಾಸ. ೫೮) ; ಕ್ರೈಸ್ತರು ಆರಾಧಿಸುವ ವಿಗ್ರಹವನ್ನಾಗಲಿ, ಕ್ರಾಸುಗಳೆಂಬ ತಿಕಡಿಗಳನ್ನಾಗಲಿ, ಮಹಮ್ಮದೀಯರು ನಾಶಪಡಿಸಲಾಗದು (ಪೈಗಂಬ. ೧೯೯). ೬. ದಾರ ಅಥವಾ ಹಗ್ಗವನ್ನು ಹುರಿಮಾಡುವಾಗ ಬಳಸುವ ಒಂದು ಕವೆಗೋಲು : (ಕಿ). **ತಿಗಟಿ**: ೧. ಅರ್ಜುನನು ಬಾಣದ ತಿಗಟಿ ಕಟ್ಟಿಕೊಟ್ಟು ತಲೆದಿಂಬು ಮಾಡಿದನು (ಸುವರ್ಣ. ೪೬). ೪. ನಾನು ಒಂದು ದಿವಸ ಹೊಸಮನೆಯನ್ನು ಕಟ್ಟುವ ಕೆಲಸ ನೋಡಲಿಕ್ಕೆ ಹೋದಾಗ ನನ್ನ ತಿಗಟಿಯನ್ನು ಮನೆಯಲ್ಲಿ ಮರೆತು ಹೋಗಿದ್ದನು (ಮುಂಬಯಿ. ೪-೧೦೬); ಬಾವಿಯ ಸಮೀಪದಲ್ಲಿ ಎತ್ತರ ಮಾಡಿಹೋಗುತ್ತ ಹೋಗುತ್ತ ತಿಗಟಿಯಿಂದ ತೂಗಿ ಸ್ವಲ್ಪಸ್ವಲ್ಪ ಇಳಿಸುತ್ತ ನೀರಿನ ಕಾವಲಿಯನ್ನು ಚೆನ್ನಾಗಿ ಮಾಡಿಬಿಟ್ಟರೆ (ಕೃಷಿಪ್ರ. ೧೦೦). **ತಿಗಟೆ**: ೭. ಪೃಷ್ಠಭಾಗ ; ಗುದ ; ಆಸನ : "ಗುದ ತಿಗಟೆ" (ಬಾಹಟೀ. ೨-೫-೮೨ ವ).

**ತಿಕಡಿಹಿಡಿಸು** = ಹಿಂಸೆಕೊಡು : ಹೆಣ್ಣಗೆ ತಿಕಡಿಹಿಡಿಸಿ ಒಲ್ಲೆ ಅನ್ನು ಬಾವಿಗೆ ಬೀಳುತ್ತೇನೆ ಅನ್ನು ಅಂತ ಹೇಳಿಕೊಟ್ಟು, ಮಾನಸಪ್ಪ ಮಾಡುತ್ತಾರೆ (ಬೆಂಗೂಲಿ. ೦೭೦).

[ ←ಹಿಂ. ಟಿಕಠೀ. / ಪ್ರಾ. ತಿಕಠ್ಠ. / ಸಂ. ತ್ರಿಕಾಷ್ಠ ]

**ತಿಕಾಳಿ** (ನಾ). ಚೀಲದ ಬಂಡಕ್ಕೆ ಹೊಲಿದ ವಸ್ತ್ರದ ತುಂಡು: (ಸ್ಯಾಂಡರ್). [ ? ]

**ತಿಕೀಟು** 'ಟಿಕೀಟು' ನೋ.

**ತಿಕ್ಕ** (ಗು). = ತೀಕ್ಷ್ಣ ೧ : " ತೀಕ್ಷ್ಣ – ತಿಕ್ಕ " (ಶಮದ. ೨೬೦ ಪ್ರಯೋ) : " ತಿಕ್ಕಂ ತೀಕ್ಷ್ಣದ ನಾಮದೊಳ್ " (ಕರ್ಣಾನಿ. ೬೨) : " ತೀಕ್ಷ್ಣ – ತಿಕ್ಕ " (ಶಬ್ದಾನು. ೧೬೦ಪ್ರಯೋ): "ತಿಕ್ಕನೆ[ಪಾಠಾಂ. ಮುರ್ಕನೆ] ತೀಕ್ಷ್ಣಂ "(ಶವಿಶಂ. ೫೪). [ < ಪ್ರಾ. ತಿಕ್ಖ. / ಸಂ. ತೀಕ್ಷ್ಣ ]

**ತಿಕ್ಕಲಾಟ** (ನಾ). ತಬ್ಬಿಬ್ಬಾದ ನಡವಳಿಕೆ ; ಭ್ರಮೆಗೊಂಡಿರುವಿಕೆ : (ಕ). [ ತಿಕ್ಕಲು₁ + ಆಟ ]

**ತಿಕ್ಕಲು₁** (ನಾ). ಹುಚ್ಚು ; ಚಿತ್ತವಿಭ್ರಮ ; ಭ್ರಮೆ : ಇಂತಹ ಕಲ್ಪನೆಯ ಪ್ರಾಬಲ್ಯವೇ ಮೆದುಳಿನಲ್ಲಿ ವಿಕಾರವನ್ನುಂಟುಮಾಡಿ ಮನಬಂದಂತೆ, ತಿಕ್ಕಲು ಮಾತುಗಳನ್ನಾಡಿಸುವುದು ಅಸಂಭವವೇನೂ ಅಲ್ಲ. ಇದೇ ದವ್ವ (ಜೀವಾಕ್ಕ. ೨೩೦). 'ತಿಕ್ಕಲಾಟ' ಪರಾ.

ತಿಕ್ಕಲುತಿರುಗು = ಹುಚ್ಚು ಕೆರಳು ; ಚಿತ್ತಭ್ರಮೆಯುಂಟಾಗು : ಅವತ್ತು ಅದೇನು ತಿಕ್ಕಲುತಿರುಗಿತ್ತೋ ಏನೋ (ಉಮಾಶಿ. ೮೩).

[ದೇ.॥ ತಮಿ. ತಿಕ್ಕೆಪ್ಪು, ತಿಯಕ್ಕ ; ತೆಲು. ತಿಕ್ಕ ]

**ತಿಕ್ಕಲು₂**(ನಾ). ಉಗ್ಗುವಿಕೆ; ಬಿಕ್ಕುವಿಕೆ; ಗುಕ್ಕುವಿಕೆ; ಮಾತನಾಡುವಾಗ ತಡವರಿಸುವಿಕೆ : (ಕ). 'ಬಿಕ್ಕಲು' ಪರಾ.

[ ದೇ.॥ ತಮಿ. ಮಲ. ತಿಕ್ಕು ]

**ತಿಕ್ಕಾಟ** (ನಾ). ೧. ಉಜ್ಜುವಿಕೆ ; ಅರೆಯುವಿಕೆ; ಘರ್ಷಣೆ; ತಾಕಲಾಟ: ಆದೊಂದು ನನ್ನ ಪ್ರಕೃತಿಯ ಪೇಚಾಟ; ತಿಳುವಳಿಕೆಯ ತಿಕ್ಕಾಟ (ವೃದ್ಧರಾ. ೧೧ ಮುನ್ನುಡಿ) : ಉತ್ಪತ್ತಿಯಾಗುವ ಶಕ್ತಿಯಲ್ಲಿ ಕೊಂಚ ಭಾಗವು ಚಲಿಸುವ ಯಂತ್ರಭಾಗಗಳಲ್ಲಿ ತಿಕ್ಕಾಟದಿಂದ ನಷ್ಟವಾಗಿ (ಶಿಲ್ಪಸಾ. ೨೨೦) ; ನೆಕ್ಲ ದೋವ್‌ನ ಹೃದಯದಲ್ಲಿ ಎರಡು ಭಾವನೆಗಳು ಮೂಡಿ ಪರಸ್ಪರ ತಿಕ್ಕಾಟ ಪ್ರಾರಂಭವಾಗಿತ್ತು (ಪುನರು. ೮೧) ; ಸಕಲಧರ್ಮಗಳ ತವರೂರಾದ ಭಾರತ ವಂತೂ ಭಿನ್ನಭಿನ್ನ ಧರ್ಮಗಳ ತಿಕ್ಕಾಟದ ಒಡಕುಮನೆಯಾಗಿದ (ಧರ್ಮಸಾ. ೨). ೨. ವಿವಾದ; ಜಗಳ ; ಕಲಹ ; ಹೋರಾಟ: ಮೇ ತಿಂಗಳಲ್ಲಿ ಮತ್ತೊಂದು ತಿಕ್ಕಾಟ ನಡೆದು ನಾಲ್ಕು ಮಂದಿಯ ಬಲಿದಾನ ವಾಯಿತು (ಅಕ್ಕಾರ್ಕ. ೧೯೩) : ಜೀವನದ ತಿಕ್ಕಾಟ ಮುಕ್ಕಾಟಗಳಲ್ಲಿ ಮಾನವನಿಗೆ ಶೃಂಗಾರವು ಸಿಂಪಿನಲ್ಲಿದ್ದ ಮುತ್ತಿನಂತೆ (ಕನ್ನಜಾ. ೯೦) ; ಮನೆಯಲ್ಲಿ ಇಷ್ಟು ತಿಕ್ಕಾಟ ನಡೆದೂ ಕೂಡ ಬಾಬಣ್ಣ ದೀಪಾವಳಿಗೆ ಅಕ್ಕನನ್ನು ಕರೆದು ಕೊಂಡೇ ಬಂದ (ಅಕೋಕ. ೧೦೩) [ ತಿಕ್ಕು + ಆಟ ]

**ತಿಕ್ಕಾಡು** (ಕ್ರಿ). ಉಜ್ಜು ; ಘರ್ಷಿಸು : ಮರಗಳು ಒಂದಕ್ಕೊಂದು ತಿಕ್ಕಾಡುತ್ತಿವೆ (ರೂಢಿ). [ ತಿಕ್ಕು + ಆಡು₁ ]

**ತಿಕ್ಕಿಸು** (ಕ್ರಿ). ಉಜ್ಜಿಸು : ಮುಸುರೆ ಪಾತ್ರೆಯನ್ನು ಚೆನ್ನಾಗಿ ತಿಕ್ಕಿಸು (ರೂಢಿ). [ ತಿಕ್ಕು + – ಇಸು₁ ]

**ತಿಕ್ಕು** (ಕ್ರಿ). ೧. ಒರೆ ; ತೇಯು : ಎಕ್ಕತೂಳದ ಭಟತತಿಯ ಚಿಕ್ಕಟು ತಿಗುಣೆಯ ತಿಕ್ಕುವೆಂದದಿ ನೆಲಕಿಕ್ಕಿದನರೆಗಳಿಗೆಯೊಳು (ನೇಮಿಸಂ. ೨೯-೩೧): ಹಕ್ಕಿಗಳರಸನು ಮೋರನ ನೆಲಕಿಕ್ಕಿ ತಿಕ್ಕಿತು ಕೂಗಿ ಬೊಬ್ಬಿಡಲು (ಮೋಹತ. ೩೮-೨೯). ೨. ಉಜ್ಜು ; ಒರಸು: ಅಡಿಗಡಿಗೆ ಮೂತ್ರಿಸುಗುಂ ಮೈಮುರಿವು ದುಂ ಚೆಟ್ಟುಗುಂ ಮುಖುವ ತಿಕ್ಕಿಕೊಂಡಟುಗುಂ (ಬಾಲಚಿ. ೧೨೩-೧೨) ; ಗಟ್ಟಿಗೊಂಡುವೆಯ ನಾಲ್ಪಳ್ಳವ ನನೆಹಿ . . . ಬಿಸಿಲೊಳಗೊಣಗಲಿ ಟ್ಟೊಂದು ಬಳ್ಳಮಪ್ಪನ್ನೆವರ ಚೆನ್ನಾಗಿಯೆ ತಿಕ್ಕಿ ಗಟ್ಟಿಗೆಯ್ದು (ಸೂಪಶಾ. ೧-೯) : ಆಗಳೆ ಕಣ್ಣು ತಿಕ್ಕುತ್ತೊಯ್ಯನೆಯವೊಂದೆರಳ್ಕುಱಿಯೆ (ಭರತೇ. ೯-೬೩) ; ಬರ್ದಿಲದ ಪೆರ್ಗೆಚ್ಚಲಾವು ತಿಕ್ಕುವುದು ಬಾಗ್ ಬೆನ್ನ (ಕಾಲುಕೆ. ೩೭-೪೦). ೩. (ಉಜ್ಜಿ) ಶುಚಿಮಾಡು ; ಬೆಳಗು ; ತೊಳೆ : ಮುಸುರೆ ತಿಕ್ಕುವವಳು ನಾಲ್ಕುದಿನಗಳಿಂದ ಬರಲಿಲ್ಲ (ರೂಢಿ). ೪. ತೀಡು ; ನಯ ಮಾಡು ; ಪಾಲೀಸು ಮಾಡು : ಅಂಬಲೀ ಕುಡಿಯುವವನಿಗೆ ಮಿಸೆ ತಿಕ್ಕುವವನೊಬ್ಬ (ಗಾದೆ). ೫. ಉಜ್ಜಿ ತೆಗೆ ; ಒರಸಿ ತೆಗೆ ; ಅಳಿಸು : ಕಡುತದಲ್ಲು ಮಧ್ಯ ಮೂರು ಪಂಕ್ತಿ ತಿಕ್ಕಿ ಬರದು ಇದ್ದದ್ದನ್ನು ಮಹಾರಾಜರ ಕಡೆಯವರು ತಿಳಿದು (ರಾಜೇಂದ್ರ. ೬೩). ೬. (ಅಲಂ) ನಾಶಮಾಡು : ಇದಿರಾದರೆ ತಿಕ್ಕುವೆನುಯಿಂದ್ರಾದಿ ದಿಕ್ಪಾಲತತಿಗಳಂ (ತುರಂಗ. ೩-೩೪).

ತಿಕ್ಕಿ ತೀಡು = ನಯವಮಾಡು : ನಿನ್ನ ಗಾನದ ಬೆಳಕು ನೆಲಬಾನುಗಳ ತಿಕ್ಕಿ ತೀಡುತಿದೆ (ನೆಲಮು. ೪೧-೨೧). ತಿಕ್ಕಿಮುಕ್ಕು=೧. ಬಹಳ ತೊಂದರೆ ಕೊಡು ; ನಿರಂತರವಾಗಿ ಕಾಡು : ಎಡೆಬಿಡದೆ ಕಷ್ಟಕೊಡು : ನನ್ನ ತಂದೆ ಜೀವಿಸಿದಷ್ಟು ಕಾಲವೆಲ್ಲ ಸ್ವಂತಕ್ಕೆ ಪಟ್ಟ ಪಾಡು, ಮನೆ ಮಂದಿಗೆಲ್ಲ ಕೊಟ್ಟ ಕಷ್ಟ ತಿಕ್ಕಿಮುಕ್ಕಿದಂತಾಗಿತ್ತು (ಸ್ಮೃತಿಚಿ. ೩೧೮) ; ನಾವು ಒಮ್ಮೆ ಬಂದು ಮನೆಯಲ್ಲಿ ಕಾಲಿಕ್ಕಿತೆಂದರೆ ತಿರುಗಾಮುರುಗಾ ಆ ಮನೆಯನ್ನೇ ತಿಕ್ಕಿಮುಕ್ಕುತ್ತದೆ (ವೈಶಾಖ. ೧೪). ೨. ಹೇಳ ಹೆಸರಿಲ್ಲದಂತೆ ನಾಶ ಮಾಡು.–ಧ್ವಂಸಮಾಡು ; ನಿರ್ನಾಮವಮಾಡು : ಸುರನರೋರಗರಂಬ ಬಹಳ ನಿಶಾಟರ ತಿಕ್ಕಿಮುಕ್ಕುವರು (ಮೋಹತ. ೩೩-೧೪) : ಉಕ್ಕಿದ ಕಡುಗೆಂಪಿಡಿ ಕೋಲ್ಗಳ ತಿಕ್ಕಿಮುಕ್ಕಿದ ಮುರಹರಾಗ್ರಜನ ಟಕ್ಕಿಸಿ ಹೋದಡೆ ಬಿಡೆನೆಂದು (ಮೋಹತ. ೩೯-೯) ; ಉಳಿದ ಹುಲುದಿವಿಜ ಮನು ಮುನಿಜನರ ತಿಕ್ಕಿಮುಕ್ಕದೆ ಬಿಡುವನೇ (ನವಮೋ. ೨೪-೬೯) ; ರಿಪುವನು ತಿಕ್ಕಿಮುಕ್ಕುವೆನೆನುತ ರಥವನೇರಿದನು (ರಾಮಾಶಂ. ೬-೯-೨೭).

[ ದೇ.॥ ಮಲ. ತಿಕ್ಕು, ತಿರಕ್ಕು ; ತುಳು. ತಿಕ್ಕು, ತಿಕ್ಕ್ ]

**ತಿಕ್ಕುಮುಕ್ಕಾಟ** (ನಾ). ಘರ್ಷಣೆ ; ತಿಕ್ಕಾಟ : ಒತ್ತಾಯದ ಪ್ರಕಾರ ಜನರ ಭಾಷೆಯು ಬೇರೆ ಭಾಷೆಗಳ ತಿಕ್ಕುಮುಕ್ಕಾಟದಲ್ಲಿ ಸಿಕ್ಕುವುದು (ವಿಚಾಮಂ. ೧೪) ; ಪೌರ್ವಾತ್ಯ ಸಂಸ್ಕೃತಿಗೂ ಪಾಶ್ಚಾತ್ಯ ಸಂಸ್ಕೃತಿಗೂ ತಿಕ್ಕುಮುಕ್ಕಾಟ ಬಂದಿದೆ (ಸಾಹಿಸಂ. ೨೦೦). [ ತಿಕ್ಕು + ಮುಕ್ಕು₁ + ಆಟ ]

**ತಿಕ್ಕುವರಿ** (ಕ್ರಿ). ತಿಕ್ಕುತ್ತ ಮುಂದಕ್ಕೆ ಸಾಗು ; ನಾಶಮಾಡುತ್ತ ಮುಂದೆ ಹೋಗು : ಎಕ್ಕತುಳದಲಿ ರಕ್ಕಸರ ಸಲೆ ಕಕ್ಕುಲತೆಯನೆ ತಿಕ್ಕುವರಿದನು ಚಾಚಿ ನೆಲಪರಿತು (ಮೂಬಲರಾ. ೩-೧೮).

[ ತಿಕ್ಕು + ಪರಿ₂ ]

**ತಿಕ್ತ** (ಗು). ೧. ಕಹಿಯಾದ. ೨. ಹರಿತವಾದ ; ಚೂಪಾದ. ೩.(ಅಲಂ) ಮನಸ್ಸನ್ನು ನೋಯಿಸುವ ; ಅಪ್ರಿಯವಾದ : ನೆನಪಿದೆಯೆ, ಜೀವಿತೇಶ್ವರಿ, ಸ್ವಯಂವರದ ಆ ತಿಕ್ತಕಥೆ ? (ಶ್ರೀರಾಮಾ. ೨೧೩-೬೬). ೪. (ಅಲಂ) ಉಗ್ರವಾದ ; ಕಠಿನವಾದ : "ಕಹಿ, ಕಟು, ತಿಕ್ತ, ಮನಸ್ಸಿಗೆ ಹಿತವಲ್ಲದ; ಮನಸ್ಸು ಕೊರೆಯುವ; ವ್ಯಥೆತುಂಬಿರುವ ; ಕಠೋರ, ಉಗ್ರ; ನಿಷ್ಠುರ; ಮನೋವೇಧಕ" (Bitter. ಇಂಕಕನಿ.) ; ಎನ್ನ ತಾಯ್ಮಧುರ ವಾತ್ಸಲ್ಯದಾ ತಿಕ್ತಕರ್ತವ್ಯಮಂ ಮಾಣ್ದಿಂತುಟರಲಿ ? (ಶ್ರೀರಾಮಾ. ೧೦೯-೨೪೮). (ನಾ). ೫. ಆರು ವಿಧವಾದ ರಸ (ರುಚಿ)ಗಳಲ್ಲೊಂದಾದ ಕಹಿ : "ತುವರಂ ತಿಕ್ತಂ ಮಧುರಂ ಲವಣಂ ಕಟು ಕಾರಮೆಂದು ರಸಮಾಱು ತೆಱಂ " (ವಸ್ತುಕೋ. ೯೪-೧೩) ; " ತಿಕ್ತಮೆನೆ ಕಹಿಯಕ್ಕು " (ಮಂಗರಾ. ೬೩-೩); ತಿಕ್ತ ಕಟು ಕಷಾಯಾಮ್ಲಮಧುರ ಭೇದದಿಂ ರಸ ನಾಮಮಂ ಪಂಚವಿಧ ಮಕ್ಕುಂ (ಅಜಿಪು. ೧೧-೨ ವ) : ರಸಪಂಚಕನಾಮಕರ್ಮೋದಯಂ ದೇಹಕ್ಕೆ ತಿಕ್ತಕಟುಕ ಕಷಾಯಾಮ್ಲಮಧುರನಾಮೋಪೇತ ಪಂಚರಸಮಂ ಮಾಡ್ಕುಂ (ತತ್ತ್ವಪ್ರ. ೨೯೭); ಜೈನರು ರಸಗಳನ್ನು ಐದೆಂದು ಪರಿಗಣಿಸುತ್ತಾರೆ: ಮಧುರವಾಮ್ಲಂ ಕಟುಕ ಲವಣ ತಿಕ್ತಂ ಕಷಾಯೊದವಿದಿಂತಾಱನಿಪ ರುಚಿಕರಂಗಳು ಸಹಿತ (ಲಶಿಚಂ. ೩೯-೨೯). ೬. ಸುಗಂಧ ; ಒಳ್ಳೆಯ ವಾಸನೆ; ಸೌರಭ್ಯ: "ಕಟು, ತಿಕ್ತ, ಕಷಾಯಮೆಂಬವು ಸೌರಭ್ಯದಲ್ಲಿಯುಂ . . . ವರ್ತಿಸುಗುಂ " (ಹಲಾಯು. ೧೩೩-೨೭). [ ಸಂ. ]

**ತಿಕ್ತಕ** (ಗು). ೧. ಕಹಿಯಾದ. (ನಾ). ೨. "ಕಹಿಪಡವಲ ; ಪಡುವಲ ಬಳ್ಳಿ" (ಗಂಗಾಮ. ೧೫೨). ೩. ಕಗ್ಗಲಿಮರ ; ಖದಿರ. ೪. ಇಂಗುದೀ

**ತಿಕ್ತಕೆ** (ನಾ). ಒಂದು ಬಗೆಯ ಗಿಡ: "ತಿಕ್ತಕಿ[ಕೆ]ಯೆನಲ್ ಕಾರೆಯಕ್ಕು" (ಮಂಗರಾ. ೪೩-೩೭). [ಸಂ. ತಿಕ್ತಕ]

**ತಿಕ್ತಪರ್ವ** (ನಾ). ಒಂದು ಬಗೆಯ ಬಳ್ಳಿ: "ತಿಕ್ತಪರ್ವಾ-ಚಕ್ರವರ್ತಿ ಸೊಪ್ಪು, ಅಮೃತಬಳ್ಳಿ, ಯಷ್ಟಿಮಧುಕ" (ರುದ್ರನಿ. ೨೩೯). [ಸಂ. ತಿಕ್ತಪರ್ವನ್]

**ತಿಕ್ತಶಾಕ** (ನಾ). ೧. ಕಹಿಯಾದ ಕಾಯಿಪಲ್ಯ; ಕಹಿ ಹಸುರುವಾಣಿ,-ತರಕಾರಿ; "ಕಹಿಪಲ್ಯೆ" (ಗಂಗಾಮ. ೧೩೩). ೨. ಬಸಲೆಗಿಡ: "ವರುಣಃ, ವರಣಃ, ಸೇತುಃ, ತಿಕ್ತಶಾಕಃ, ಕುಮಾರಕಃ- ಈ ಬಸಲೇಗಿಡ; ಮದಬಸಲೇ ಗಿಡ; ಉಲಿವಿಂಬಸಲೆ" (ಸಿದ್ಧಾಂತಿ. ೦೦೩). [ತಿಕ್ತ + ಶಾಕ$_1$]

**ತಿಕ್ತಾಲಾಬು** (ನಾ). ಒಂದು ಬಗೆಯ ಸಸ್ಯ; ಕಹಿಸೋರೆ: ತಿಕ್ತಾಲಾಬು ಭಾಜನಗತದುಗ್ಧದವೋಲು ಮಿಥ್ಯಾತ್ವಾನಂತಾನುಬಂಧಿ ಉದಯವಶದಿಂ ವಿಪರೀತಾಭಿನಿವೇಶರೂಪಕ್ಕುಮತಿ ಕುಶ್ರುತವಿಭಂಗಮೆಂಬ ಜ್ಞಾನತ್ರಯಂ (ಪಸಾರ. ೫೭೭). [ತಿಕ್ತ + ಅಲಾಬು]

**ತಿಕ್ತೆ** (ನಾ). ಒಂದು ಬಗೆಯ ಸಸ್ಯ; ಕಟುಕರೋಹಿಣಿ: "ತಿಕ್ತಾ-ಕಟುಕ ರೋಹಿಣಿ; ಗಂಡಲೀ" (ರುದ್ರನಿ. ೨೩೯). [ಸಂ. ತಿಕ್ತಾ]

**ತಿಗ** 'ತಿಕ' ನೋ.

**ತಿಗಟ, ತಿಕಟ, ತಿಗಡ$_2$, ತಿಗುಡ, ತಿಡ್ಡ, ತ್ರಿಗುಟ** (ನಾ). ಉದ್ದ; ಮುಂದೆ ಮತ್ತು ಹಿಂದೆ: ಅಡ್ಡಮುಂ ತಿಗಟಮುಂ ತಾಱುಂತಟ್ಟುವಿದಿರುಂ ಬಟಿಯುಂ ಬಿಟ್ಟಂ ಬಟಲದ (ಲೀಲಾವ. ೬-೫೫ ವ); ಹರನ ಮುಂದಡ್ಡಮುಂ ತಿಗಟಮುಂ ಪರಿವಾಡಿ (ಅನಾರ. ದೇ. ೧೮೪-೨೩). 'ತಿಗಟಂ' ಪರಾ. **ತಿಕಟ:** 'ತಿಕಟಂ' ಪರಾ. **ತಿಗಡ$_2$:** 'ತಿಗಡಂ' ಪರಾ. **ತಿಗುಡ:** 'ತಿಗುಡಂ' ಪರಾ. **ತಿಡ್ಡ:** "ಸೊಟ್ಟ, ಅಂಕು, ಡೊಂಕು, ಒಂಕು, ಕೊಂಕು, ಕುಡು, ಅಡ್ಡ, ತಿಡ್ಡ" (ಕಂನುಹು. ೯೧); ಅಂತಿದಿರುಂ ಬಟಿಯುಂ ಪಾಸು ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಡ್ಡ[ಪಾಠಾಂ. ತಿಗಟ]ಮುಂ ಪರಿದು (ಗದಾಯು. ೬-೨೪ ವ). 'ಅಡ್ಡತಿಡ್ಡ$_1$' ಪರಾ. **ತ್ರಿಗುಟ:** ಪುಟವೇಳುತಡ್ಡಮುಂ ತ್ರಿಗುಟಮಂ ಪರಿದಾಡಿ ನ ಟ ನ ಂ ತಿ ರು ಗ್ಗ ಡಿ ಸಿ ಕುಣಿಕುಣಿದು ಕೊಂಡಾಡಿ (ಪುಷ್ಪರ. ಹ. ೫೨೩-೧). [?]

**ತಿಗಟಂ, ತಿಕಟಂ, ತಿಗಡಂ, ತಿಗುಡಂ, ತ್ರಿಕಟಂ** (ಅ). ಉದ್ದವಾಗಿ; ಮುಂದಕ್ಕೆ ಮತ್ತು ಹಿಂದಕ್ಕೆ: ಘೊಳ್ಳನೆ ಸಭೆ ನಗೆ ಪಲ್ಲಂ ಕಿರಿವುತ ಅಡ್ಡಂ ತಿಗಟಂ ವಿಸಟಂಬರುತಂ (ಭ್ರಂಗೀರ. ಹ. ४೭೩-೮). **ತಿಕಟಂ:** ಮುಂದಕ್ಕುಬಾಚಿಓಡಿ ನಿಲುತ್ತಂ ಹಿಂದಕ್ಕೆಯ್ದುಂದರ್ತಿಗೆ ನಿಲುತಂ ನಡುವಡ್ಡಂ ತಿಕಟಂ [ಪಾಠಾಂ. ತಿಗಟ, ತಿಗಟಂ, ತಿಗಡ, ತಿಗಡಂ, ತಿಗುಡಂ] ಪರಿದಾಡುತೆ (ತಿರುನಾ. ಹ. ೧೦೭-೨೦). **ತಿಗಡಂ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತಿಗುಡಂ:** ಮೇಲಿನ ಪ್ರಯೋಗದ ಪಾಠಾಂತರವನ್ನು ನೋಡಿ. **ತ್ರಿಕಟಂ:** ತೂಗಾಡುತೆ ಮಡಕೆಗಳಂ ಬಾಜಿಸಿ . . . ಅಡ್ಡಂ ತ್ರಿಕಟಂ ಬಲಿವುತೆ ಬಾಜಿಸಿ (ಕುಂಬಾ. ಹ. ೨೫೩-೦೩). [<ತಿಗಟ]

**ತಿಗಟ** 'ತಿಕಡಿ' ನೋ.

**ತಿಗಟು** 'ತಿಗುಡು$_1$' ನೋ.

**ತಿಗಟೆ** 'ತಿಕಡಿ' ನೋ.

**ತಿಗಡ$_1$** 'ತಿಗುಳ' ನೋ.

**ತಿಗಡ$_2$** 'ತಿಗಟ' ನೋ.

**ತಿಗಡಂ** 'ತಿಗಟಂ' ನೋ.

**ತಿಗಡಿ** (ನಾ). ವಂಚನೆ; ಮೋಸ; ಕಪಟ: (ಸ). 'ತಾರಾತಿಗಡಿ', 'ತಿಗಡಿಬಿಗಡಿ' ಪರಾ.

[←ಹಿಂ. ತಿಕಡಮ್; ಮರಾ. ತಿಗಡೂ... ಏನ ಮಾಲು]

**ತಿಗಡಿಬಿಗಡಿ** (ನಾ). ೧. (ಮಾತಿನಲ್ಲಿ) ಅಸಂಗತತೆ; ಅಸಂಬದ್ಧತೆ: (ಸ್ಯಾಂಡರ್). ೨. ಮೋಸ; ವಂಚನೆ; "ಠಕ್ಕತನ" (ಜಾನಕೋ. ೬೭). ತಿಗಡಿಬಿಗಡಿ ಮಾತಾಡು = ಅಸಂಬದ್ಧವಾಗಿ ನುಡಿ: (ಸ್ಯಾಂಡರ್).

[←ತುಳು. ತಿಗಡಿಬಿಗಡಿ]

**ತಿಗಡು$_1$** (ಕ್ರಿ). ಹೊಡೆ; ಬಡಿ: ತಿಗಡ[ಪಾಠಾಂ. ಗಿದ]ಲೊದಚುವ ಪರಿಗೆಗಳ ಗೌಜಿನ ಹೆಗ್ಗಹಳೆಗಳ . . . ಮಹಾಧ್ವನಿ ಬಗಿದುದೈ ತಾವರೆಯ ತನಯನ ಕರ್ಣಕೋಟರವ (ಕುಮಾವ್ಯಾ.ಭೀ. ३-४). [<ತೀಡು$_2$ ?]

**ತಿಗಡು$_2$** 'ತಿಗುಡು$_1$' ನೋ.

**ತಿಗಡು$_3$** 'ತಿಗಡೆ$_2$' ನೋ.

**ತಿಗಡೆ$_1$** 'ತಿಗುಡು$_1$' ನೋ.

**ತಿಗಡೆ$_2$, ತಿಗಡು$_3$, ತಿಗುಡು$_2$, ತಿಗುಡೆ** (ನಾ). ೧. ಔಷಧಿಗೆ ಉಪಯೋಗವಾಗುವ ಒಂದು ಬಗೆಯ ಬಳ್ಳಿ ಮತ್ತು ಅದರ ಗಡ್ಡೆ; ರೇಚನಿ: "ಕುಟಕಿ ತಿಗಡೆ" (ಅಶಾನಿ. ೬-೩೫); "ಕುಂಭಧಾತ್ರೀ-ತಿಗಡೆ-ಕುಪ್ಪಸಗಣಿಕೆ, ನೆಲಗಡವು" (ಒಷಧಿ. ೩೬); ತಿಗಡೆ ಕುಂಠಿ ಶಿವೆ ಬೆಲ್ಲಮೆಂಬ ಮದ್ದುಗಳ . . . ತಿಂಗೆ ಮಾಡುಗುಮುದಾರ್ಗಮಧಿಕಂ ವಿರೇಕಮಂ (ಲೋಕೋಪ. ೯-೩೫); ತಿಗಡೆ ಧಾತಕಿಯೆಲೆ ಹಿಂಗು ಬೀರಕಯುಗ (ಸಾಳ್ವಸಾಂ. ೦೨). ೨. ಒಂದು ಬಗೆಯ ಮರ: ತಿಗಡೆ ಪಥ್ಯೋರ್ವೀರುಹಾಶೋಕ ಪಾದರಿ ನೇಱಿಲ್ ಕುಶ ಕಾಶೆಯೆಂಬಿವಱೊಳಾದುದಂತರ್ದಕ್ತ್ರಲುತ್ತರದೊಳ್ ಹಸ್ತಯುಗಕ್ಕೆ ಪಂಚಪುರುಷಂ ಗುಣ್ಯಾದೊಡಕ್ಕುಂ ಜಳಂ (ಲೋಕೋಪ. ೫-೨೦). **ತಿಗಡು$_3$:** ೧. "ಐರಾವತೀ-ಕಲ್ಲತಿ, ತಿಗಡು, ಭೇಳ" (ಒಷಧಿ. ೧೮). **ತಿಗುಡು$_2$:** ೧. ಪಟಗಣಿ, ಸೊನೆಪಟ್ಟ, ತಿಗುಡು (ಪ್ರಾಚಿನಿ. ೫೮-೧೧೬೪). **ತಿಗುಡೆ:** ೧. ಇಂಗಿನೆಲೆ ಮುಸ್ತೆಯಿಳಿಲೆ ಲವಂಗಂ ಬಜೆ . . . ತಿಗುಡೆ ವಿಳಂಗಂ ಪಿಪ್ಪಲಿಯೆ ಮರಿಚ ಸೈಂಧವಲವಣಂ (ಅಶ್ವಶಾ. ೬-೪೪); ತಿಗುಡೆ ನೀಲಿಬೇರು ಅಳಲೆಕಾಯಿ ತಾರೆಕಾಯಿ ನೆಲ್ಲಿಕಾಯಿ ಯಿಷ್ಟು ಸಮಾಂಶವಾಗಿ ಕೂಡಿ ಅರ[ದು]ದಂ ಕೊಡಲು ವಿರೇಚನವಹುದು (ವಿಷಚಿ. ३०-४). ೨. "ಭೂರಿಫೇನ-ಸಮಗಾ ? ತಿಗುಡು" (ಒಷಧಿ. ೦೧೩).

[ದೇ.॥ ತುಳು. ತಿಗಡಿ; ತೆಲು. ತೆಗಡ./ಸಂ. ತ್ರಿಕಟ.]

**ತಿಗಡೆಹಿಪ್ಪಲಿ** (ನಾ). ಒಂದು ಬಗೆಯ ಔಷಧ ದ್ರವ್ಯ: "ಮಹಾಶ್ಯಾಮಃ- ಹೊನ್ನಾವರೆ, ತಿಗಡೇಹಿಪ್ಪಲಿ" (ಒಷಧಿ. ೦೧೪).

[ತಿಗಡೆ$_1$ (<ತಿಗುಡು$_1$) + ಹಿಪ್ಪಲಿ]

**ತಿಗಣೆ** 'ತಗಣೆ' ನೋ.

**ತಿಗಣೆ** 'ತಗುಣೆ' ನೋ.

**ತಿಗಮರಿ** 'ತಿಗಮಾರಿ' ನೋ.

**ತಿಗಮಾರಿ, ತಿಗಮರಿ** (ನಾ). [ನಾಟ್ಯ]ನೂರೆಂಟು ಕರಣಗಳಲ್ಲಿ ಒಂದು ಬಗೆ; ಸೊಂಟದ ಚಲನವಲನಗಳ ಮೂಲಕ ಮಾಡುವ ಒಂದು ಬಗೆಯ ಅಭಿನಯ: ಮತ್ತಂ ದಿಂಡು ಮುಂಡಾಸಮಾ . . . ತಿಗಮಾರಿ ಮೊಳೆಯುಂ ಮುರಿದ ನಡುವಂ ಮೊಸಳೆವರಿ ಜಲಶಯನ ಚ್ಯುತಂ ಮತ್ಸ್ಯಪುಟಂ ಲಂಕಾದಹನಮೆಂಬ ಪಲವುಂ ತೆಱದ. ಕರಣಂಗಳಿಂ (ಧರ್ಮಾಕ. ३-३೬ ವ). **ತಿಗಮರಿ:** ಹೊಜಿಮೊಳೆ ಒಳಮೊಳೆ ತಿಗಮರಿ ಜಲಶಯ ಮೆಱೆವ ಲಂಕಾದಹನಾದಿ ನೂಱೆಂಟು ಕರಣಗಳನು ಕ್ರಮದಿಂದಲಾ ನಾರೀಮಣಿಗಳು ತೋಱು (ಜ್ಞಾನಸ. ४೧-೦೫೩). [?]

**ತಿಗರಿ** 'ತಿಗುರಿ' ನೋ.

**ತಿಗಲು** (ನಾ). ಕಷ್ಟ; ತೊಂದರೆ: ಈ ಉಂಗುರದಿಂದ ಆಗುವ ಕೇಡನ್ನು ತಪ್ಪಿಸಿಕೊಳ್ಳುವುದಕ್ಕೆ ಹೋಗಿ, ಮತ್ತೊಂದು ತಿಗಲಿಗೆ ಖಂಡಿತಾ ಸಿಕ್ಕಿಕೊಳ್ಳುತ್ತೇನೆ (ಮಕಮು. ೬೮೪). [?]

**ತಿಗಳ** 'ತಿಗುಳ' ನೋ.

**ತಿಗಳಾಣ್ಯ** 'ತಿಗುಳಾಣ್ಯ' ನೋ.

**ತಿಗಳಾರಿ** (ನಾ). ತಮಿಳು ಲಿಪಿ : ತಿಗಳಾರಿ, ಗ್ರಂಥಲಿಪಿ, ನಾಗರಿ ಲಿಪಿಗಳನ್ನುಳಿದು, ಕನ್ನಡಅಕ್ಷರವಿರುವ ಓಲೆಗಳನ್ನೆಲ್ಲ ತಿರುವಿಹಾಕಿದ (ಯುಕ್ಷಬ. V ಮುನ್ನುಡಿ). [ <ತಿಗುಳ ]

**ತಿಗಳಿ** 'ತೇವುಳು' ನೋ.

**ತಿಗಳಿತ್ತಿ** 'ತಿಗುಳಿತ್ತಿ' ನೋ.

**ತಿಗಳು** 'ತಿಗುಡು₁' ನೋ.

**ತಿಗುಂಡ** (ನಾ). ೧. ಮೂರು ಅಗ್ನಿಕುಂಡ. ೨. ನೀರಿನ ಮೂರು ಹೊಂಡ,–ಜಲಾಶಯ : "ತಿಗುಡಂ – ತ್ರಿಕುಂಡಂ" (ಶಬ್ದಾನು. ೩೭೬ ಪ್ರಯೋ). [ <ಸಂ. ತ್ರಿಕುಂಡ ]

**ತಿಗುಡ** 'ತಿಗಟ' ನೋ.

**ತಿಗುಡಂ** 'ತಿಗಟಂ' ನೋ.

**ತಿಗುಡು₁**, ತಿಗಟು, ತಿಗಡು₂, ತಿಗಡೆ₁, ತಿಗಳು, ದಿಗುಡು (ನಾ). ಮರ ಮೊದಲಾದ ವನಸ್ಪತಿಯ ಸಿಪ್ಪೆ ; ತೊಗಟೆ ; ಚಕ್ಕೆ : "ತ್ವಗ್ವಲ್ಕಲಂ ವಲ್ಕಮೆನೆ ಮರದ ತಿಗುಡಕ್ಕು" (ಮಂಗರಾ. ೩೨-೩) ; ನೆಗಟ್ಟ್ರಿದು ಪಾಲ್ಮರಂಗಳ ತಿಗುಳ್ಗಳಿಕ್ಕಿದ ಕಷಾಯಜಳದಿಂದಿಂದ್ರಂ ವಿಗತಕಷಾಯಂಗೆ . . . ಮಾಡಿದಂ ಮಜ್ಜನವಂ (ಅಜಿಪು. ೪-೭೯); ಒರ್ವರದ ತಿಗುಡು ಮತ್ತೊಂದು ಮರನನೇಂ ಪತ್ತುಗುಮೇ (ಶಂರಾಮಾ. ೧೪-೧೭) : ವಿಕಿಕ್ಕಾದ ಹೊಱಗಣ ಹೊರೆಯ ತಿಗುಡಂ ಕೆತ್ತಿ ಕಂಬವ ಶುದ್ಧೈಸಿ (ಸರ್ವವ. ೧೧೯-೬೧೭) ; ಪರಿವತಿಸಾರಂ ಪಿರಿದಾಗಿರೆ ಹೂಲಿಯ ಬೇರ ತಿಗುಡನೆಮ್ಮೆಯ ಮೊಸರೊಳ್ ಬೆರಸಿಟ್ಟು ಸೈಂಧವಂ ಕೂಡಿರೆ ಮಲುವುದು (ಕಲ್ಯಾಕಾ. ೪-೦೩) ; ಈ ಬೇರಿನ ತಿಗುಡಂ ಮೊಲೆಹಾಲಲ್ಲಿ ತೇದು ಹಚ್ಚಲು ತಿಮಿರಗಣ್ಣು ಮಾಣ್ಗುಂ (ವಿಶ್ವವಿ. ೦). **ತಿಗಟು :** ತೋರ ಹುನಿಗಲ ತಿಗಟು ಬಜೆ ವಿಳಂಗಸಾರ ಭದ್ರಮುಸ್ತೆಇವಂ . . . ಪೂಸುವುದು (ಬಾಲಚಿ. ೦೩೯-೦೨). **ತಿಗಡು₂ :** ಸಾವೆಂದು ಕಾಯುಮಂ ತಿಗಡುಮಂ [ಪಾಠಾಂ. ಪಣ್ಣುಮಂ ಕಾಯುಮಂ]ತಿಂದು (ಧರ್ಮಾಮೃ. ೦೨-೨೦೪) ; ಮರ ತಿಗಡು ಹಗಿನ ಮೊದಲಾದವಱಲ್ಲಿಯ ಗಂಧವನಱಿವುದು ಆಚಾರಲಿಂಗ ದಲ್ಲಿಯ ಗುರುಲಿಂಗ (ಆದವ. ೩-೦೨) ; ಕಾಚತೆಂಡೆಯ ಬೇರು . . . ಮೊಳಗದ ಬೇರಿನ ತಿಗಡು, ಇವಂ ಸಮಾನಂಗೊಂಡು ಚೂರ್ಣವಂ ಮಾಡಿ . . . ನಸ್ಯಮಾಡಲು ಹದಿನಾಲ್ಕು ಬಗೆ ಮೊಲನಾಗರ ವ್ಯಾಧಿ ಗುಣವಹುದು (ವಿಶ್ವವಿ. ೯೯). **ತಿಗಡೆ₁ :** [ಎಲೆಯಡಿಕೆ ಸುಣ್ಣದಿಂ ಪಲ್ ಕಱೆಯಪ್ಪುದು] ಅಣಲೆ ತಿಗಡೆಯಿಂ ಬಸಿಱೊಡೆವುದು (ಧರ್ಮಾಮೃ. ೯-೧೦೮). **ತಿಗಳು :** ಎಲವದ ಹಗಿನು, ಬೆಲ್ಲವತ್ತುದ ಹಣ್ಣಿನ ತಿಗಳು . . . ಇವಂ ಸಮಾನಂ ಗೊಂಡು ನಸುಬಿಸಿಯಂ ಮಾಡಿ (ವಿಶ್ವವಿ. ೩೩). **ದಿಗುಡು :** "ದಿಗುಡು = ತಿಗುಡು, ಮರದ ತೋಟೆ" (ಗಂಗಾಸು. ೦೬೬).

**ತಿಗುಡು₂** 'ತಿಗಡೆ₂' ನೋ.

**ತಿಗುಡೆ** 'ತಿಗಡೆ₂' ನೋ.

**ತಿಗುಣ** (ನಾ). ೧. ಮೂರರಷ್ಟು ; ಮುಮ್ಮಡಿ : "ತಿಗುಣ–ತ್ರಿಗುಣ= ಮುಮ್ಮಡಿ"(ತದ್ಭಕೋ. ೧೭) : ಪೂರ್ವಪದಂ ತದ್ಭವ ಮಾದುದರ್ಕೆ . . . ತ್ರಿಗುಣ-ತಿಗುಣ (ಶಮದ. ೨೮೯ಪ್ರಯೋ); ಹೊಗಳಲನುವವು ಸೈನ್ಯವಿಂತೀ ದುಗುಣವಂಧಾಸುರನ ಸೇನೆಗೆ ತಿ[ಪಾಠಾಂ. ತ್ರಿ]ಗುಣವಿದು ರಾವಣನ ಮೋಹರಕೆನುತ (ತುವ್ಯಾವಿ. ೬-೬೧). ೨. ಮೂರುಸಲ ; ಮೂರು ಬಾರಿ : ಅಂತಿದಿರುಂ ಬಟಿಯುಂ ಪಾಸುಂ ಪೊಕ್ಕುಂ ದುಗುಣಮುಂ ತಿಗುಣಮುಂ ಅಡ್ಡಮುಂ ತಿಗಟ[ಪಾಠಾಂ. ತಿಡ್ಡ]ಮುಂ ಪರಿದು(ಗದಾಯು. ೬-೨೮ ವ) ; ದುಗುಣ ತಿಗುಣಂ ಪ[ಪಾಠಾಂ. ತಿ]ಱಿದು ದೆಸೆವಲಿಗೆಯ್ವ (ಅನಂಪು. ೦೪-೭ ವ). [ <ಪ್ರಾ. ತಿಉಣ./ಸಂ. ತ್ರಿಗುಣ ]

**ತಿಗುಣಂಗೊಳ್** (ಕ್ರಿ). ಮೂರುಪಾಲಷ್ಟು ಆಗು ; ಮುಮ್ಮಡಿಯಾಗು: ತಕ್ಕು ತಗುಳ್ದು ಕಾಯ್ದೊದವೆ ಕೋಟ್ಕಳ ತಳ್ಕೞಿಯಿಂದೆ ಕಂಡಮಲ್ಲೊಕ್ಕರೆ ತೇನತೇನಮವತಂ ಬಿಗುಣಂ ತಿಗುಣಂಗೊಳಲ್ ಮೊಗಂಬೊಕ್ಕ ಗಜಂಗಳಂ . . . ಪಿಂಗಿಪಂ (ಅನಂಪು. ೬-೦೨). [ ತಿಗುಣ + ಕೊಳ್₁ ]

**ತಿಗುಣಿಸು** (ಕ್ರಿ). ಮೂರರಷ್ಟು ಮಾಡು ; ತ್ರಿಗುಣಿಸು : ಸಂಗಳಿಸಿದ ಪುಣ್ಯಪ್ರಭಾವವಂ ತಿ[ಪಾಠಾಂ. ತ್ರಿ]ಗುಣಿಪವೋಲ್ (ಚಂದ್ರಪು. ೯-೫೩). [ ತಿಗುಣ + – ಇಸು₃ ]

**ತಿಗುಣೆ** 'ತಗುಣೆ' ನೋ.

**ತಿಗುರಿ**, ತಿಗರಿ, ತಿಹುರಿ (ನಾ). ಕುಂಬಾರನ ಚಕ್ರ ; ಕುಲಾಲ ಚಕ್ರ : "ಚಕ್ರಮೆನೆ ತಿಗುರಿ" (ಮಂಗರಾ. ೦೦೩-೮) ; "ತಿಗುರಿಯೆಂದು ಕುಲಾಲ ಚಕ್ರಂ" (ಶಶಸಾ. ೩೦-೬೩೩); "ತಿಗುರಿಯೆ ಕುಲಾಲಚಕ್ರಂ" (ಕವಿಶಂ. ೨೪೯); ಅದು ತಿಗುರಿಯಂದದಿಂ ತಿರಿದುದು (ಶಂರಾಮಾ. ೪-೦೦೭) ; ಕಳಕಳರವದಿಂ ಬ[ದಿ]ದಿರುಂ ಬಟಿಯುಂ ಪಾಸುಂ ಪೊಕ್ಕುಂ ತಿಗುರಿಯುಂ ಬುಗುರಿಯುಂ ಜಾತಿಯುಂ ಭೀತಿಯುಂ ಆಗೆ ಪರಿವಾಗಳ್ (ಧರ್ಮಾಮೃ. ೬-೦೦೪); ಉಂತೆ ಜಗಂಗಳಂ ತಿಗುರಿಗಂ ತರುತಿರ್ಪ ಮನೋಜನೀ ವಸಂತಂ ತಲೆದೋಱಿತು (ಚಂದ್ರಪು. ೬-೪೯) : ಕುಂಬಾಱರ ತಿಗುರಿಯೊಳಿಟ್ಟಂಬಿನೊಳಂ ತಿರಿಪೆ (ಖಮದ. ೨-೦೯೦) : ಕೋಲಿಂದಾಡುವ ತಿಗುರಿಯವೋಲಂತಿರೆ (ಕಾವ್ಯಸಾ. ೦೦೦೩) ; ಅರ್ಜುನನ ತೇರಿರದ ತಿಱ್ಱನೆ ತಿಗುರಿಯಂತೆ ತಿರುಗಿತದನೇ ನೆಂಬೆನದ್ಭುತವನು (ಕೃಮಿಭಾ. ೦೩-೩). **ತಿಗರಿ :** ಕುಲಾಲನು ತಿಗರಿಗೆ ಮಣ್ಣು ಮಾಡಿ ಕೋಲಿನಿಂದ ತಿರುಹೆ ಮನದಲ್ಲಿ ನೆನೆದು ಕೈಯಲ್ಲಿ ಹಿಡಿದಲ್ಲಿ ಹಲವು ರೂಪಿನ ಭಾಂಡಗಳಾಗುವ ಹಾಗೆ (ಮೋಕ್ಷಮಾ. ೦೨೦-೪೭೪ ಅರ್ಥ) ; ವೇಗದಿಂದ ತಿರುಗುವುದೊಂದು ತಿಗರಿಯು ದಂಡಿಯ ಮೇಲೆ ನಾವು ಏನನ್ನಾದರೂ ಇಟ್ಟರೆ, ಅದು ಹೊರಗೆ ಚಿಮ್ಮಲ್ಪಡುತ್ತದೆ (ಚಿತ್ರೀತಿಶ್ಯಾ. ೩೨); ತಿಗರಿ ತಿರುಗಿಸುತ್ತ ಗಡಗಿಯನ್ನು ನಗುನಗುತ್ತ ಮೂಡಿಸುತ್ತಿದ್ದ ಮಲ್ಲಪ್ಪ ಇವನೇ ಏನು? (ರಾಜಾದೇ. ೯೪) ; ಅದನ್ನು ಕುಂಬಾರನು ತಿಗರಿಯ ಮೇಲೆ ಹಾಕಿ, ಪಾತ್ರೆಗಳನ್ನು ಮಾಡಿ ಆವಿಗೆಯೊಳಗೆ ಸುಡುತ್ತಾನೆ (ಮುಂಬಯಿ. ೦-೯). **ತಿಹುರಿ :** ಭರದಿ ತೆಱಂದಿರಿವಾ ತಿಹುರಿಯ ಮೇಲಿರದಿಟ್ಟು ಕುಂಬಱಗೋಲಾ ಪರಿಯೆಸೆ ಗಜವೆಡೆಯಾದಶ್ವನ ಮೇಲೆ ಪಿರಿದೊಪ್ಪಿದನು ವಾಹಕನು (ಶ್ರೀಪಾಲ. ೧-೧೨).

[ದೇ.೫ ತಮಿ. ತಿಕಿರಿ; ತುಳು. ತಗೊರಿ]

**ತಿಗುರಿಕ್ಕು** (ಕ್ರಿ). ಪರಿಮಳದ್ರವ್ಯವನ್ನು ಲೇಪಿಸು ; ಪರಿಮಳವಸ್ತುವನ್ನು ತೀಡು : ಗಂಧಕಸ್ತೂರಿಯಿಂದೆ ತಿಗುರಿಕ್ಕಿ ಪಾವುಡೆಯಿಂದೊರಸಿದರು ಸೌಖ್ಯದಲಿ (ಮೋಹತ. ೨೬-೩); ತಿಗುರಿಕ್ಕಿ ಭೂಷಣಗೆಯ್ಯಲೆಳಸೆ (ವಂಕಾಅ. ೧-೨೦-೩೦) ; ಮುದದಿ ಕುಂಕುಮರಸವ ಹದಮಾಡಿ ಹಸ್ತದೊಳ್ಪಟ್ಟಲಂ ಪಿಡಿದು ಬೇಗ ಪದ ಮಸ್ತಕಾದಿ ಸಂಹನನದೊಳ್ತಿಗುರಿಕ್ಕಿ ಮದವಳಿಗರಂ ಮಾಡಿ (ಸಿದ್ಧಕಾ. ೧೧-೧೦). [ ತಿಗುರು₂ (<ತಿವಿರ್ₗ) + ಇಕ್ಕು ]

**ತಿಗುರಿಡು** (ಕ್ರಿ). = ತಿಗುರಿಕ್ಕು : ಪರಿಮಳದ ಕುಂಕುಮದ ತಿಗುರಿಟ್ಟ ಮಾಂಗಲ್ಯ ವಿರಚನೆ (ರೇವಣ. ೯೫-೩೦).

[ ತಿಗುರು₂ (<ತಿವಿರ್ₗ) + ಇಡು₁ ]

**ತಿಗುರಿದಿರುಗಿಸು** (ಕ್ರಿ). ಕುಂಬಾರನ ಚಕ್ರವನ್ನು ತಿರುಗಿಸುವಂತೆ ತಿರುಗಿಸು : ವಿಲಯಾನಿಲನ ಯಿಮ್ಮಡಿಗೆ ಪೆರ್ಚಿ ಪೊರೆದೆದ್ದು ಸುತ್ತಿ ವಿಮುತ್ತಳವ ತಿಗುರಿದಿರುಗಿಸುತೆ ತಾರಾಳಿಯುದುರೆ (ನವಮೋ. ೬-೬).

[ ತಿಗುರಿ + ತಿರುಗಿಸು ]

**ತಿಗುರಿದಿರುಪು** (ಕ್ರಿ). = ತಿಗುರಿದಿರುಗಿಸು : ಅನಂತಾಬ್ಧಿಮೆಂದು ಭೂಮಿಯುಂ ತಿಗುರಿದಿರುಪಿಯುಂ (ಜಗವಿ. ೯-೫೩ ವ).

[ ತಿಗುರಿ + ತಿರುಪು₁ (<ತಿರಿಪು₁) ]

**ತಿಗುರಿಸು** (ಕ್ರಿ). ೧. (ಸುಗಂಧದ್ರವ್ಯವನ್ನು) ಪೂಸು,– ಅನುಲೇಪಿಸು,– ಹಚ್ಚು : ಗೋರೋಚನಾದಿ ಗಂಧಂಗಳಿನಾ ಪೊಗರೊಗುವರಲ್ದ ಪೊಸಮಲ್ಲಿಗೆ ಸೌಸವಮುಳ್ಳ ತನುಗೆ ಮಿಗೆ ತಿಗುರಿಸಿದರ್ (ವಿಷ್ಣು.ಪು. ೫-೮-೫೭). ೨. (ಸುಗಂಧದ್ರವ್ಯವನ್ನು) ಪೂಸುವಂತೆ ಮಾಡು,– ಹಚ್ಚುವಂತೆ ಮಾಡು : ಅವನ ಕರಾಬ್ಜದ ಪರಿಮಳವನು ನಿನ್ನ ಜವಳಿ ಪೊಲೆಗಳ ಮಧ್ಯದಲ್ಲಿ ತವೆ ತಿಗುರಿಸಿಕೊಂಡು (ಕಂಸವಿ. ೬-೧೩೪). [ ತಿಗುರು₂ (<ತಿಮಿರ್₂) + – ಇಸು₃ ]

**ತಿಗುರು₁** 'ತಿಮಿರ್₁' ನೋ.

**ತಿಗುರು₂** 'ತಿಮಿರ್₂' ನೋ.

**ತಿಗುರೇಚಿಸು** (ಕ್ರಿ). (ಸುಗಂಧದ್ರವ್ಯವನ್ನು) ಪೂಸು,–ಲೇಪಿಸು : ಮಸೆಗಣೆಯ ಬತ್ತಳಿಕೆ ತಿಗು[ಪಾಠಾಂ.ವಿ]ರೇಚಿಸಿದ ಮೈ ಕತ್ತುರಿಯ ತಿಲಕದ ನೊಸಲಿನಾತನ ನೋಡು ಗರುಡಿಯ ಜಾಣ ದ್ರೋಣನನು (ಕುಮಾ.ಭೀ. ೩-೮). [ ತಿಗುರು₂ (<ತಿಮಿರ್₂) + ಏಚಿಸು ]

**ತಿಗುಳ, ತಿಗಡ₁, ತಿಗಳ** (ನಾ). ತಮಿಳು ಮಾತನಾಡುವವನು ; ಅರವ : "ತಿಗುಳ ದ್ರಾವಿಡನಕ್ಕು" (ಮಂಗರಾ. ೧೧೨-೭) ; "ತಿಗುಳನೆನೆ ದ್ರವಿಡ" (ಳಕರ. ೪೭) ; ತಳಕಾಡು ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ (ಎಕ. XII, ಗುಬ್ಬಿ. ೩೪-೧೪ ; 1134) ; ಕಾವೇರಿಯ ಕಾಲನಾ ತಿಗುಳ[ಪಾಠಾಂ. ಟ]ನೇಂ ಕಡಗೊಂಡನೊ ಬಡ್ಡಿಗೊಂಡನೋ (ಕವಿರಾ. ಮಾ. ೧೭೮ ಪ್ರಯೋ); ಕನಡಿಗಳಿಗೆ ಗ ೧೦ ತಿಗುಳರು ತೆರ್ಯುವ ಗ ೬೫ (ಎಕ. XV, ಬೇಲೂರು. ೨೯೮-೭೦; 1279); ನಿರುಪಮ ವೀರರೊದಗಿತು ತಿಗುಳ ರಾವುತರು (ಕುಮಾ.ಭೀ. ೪-೬೫) ; ನಗೆವೊಗದರಸಗೆ ಕೈಮುಗಿದೊಲಿದನು ತಿಗುಳರರಸನೊಂದು ಕಡೆಗೆ (ಭರತ. ೨೨-೧೯) ; ಕತ್ತಲೆಮನೆಯ ಹೊಕ್ಕಚಿಯದ ತಿಗುಳಗೆ ಮತ್ತೆ ಕೊಡಾ ವೀಳೆಯವನು (ನಾಗಳು. ೧೭-೨೦); ಕಾಳಕೂಟದ ವಿಷವು ಚೇಳು ನಂಬಿದ ಹಗೆಯು ಹಾಳೂರ ಚುಚಿಚಿ ನಸುಗುನ್ನಿ ತಿಗುಳರ ಗಾಳಿ ಬೇಡೆಂದ (ಸರ್ವಜ್ಞ. ೧೩೮೫). **ತಿಗಡ₁** : ಎಲೆದೋಟಗಳನ್ನು ಬಹುಶಃ ತಿಗಡರೇ ಮಾಡುತ್ತಾರೆ (ಮುಂಬಯಿ. ೫-೧೯೫). **ತಿಗಳ** : ಬಟಕಳದೊಳಗೆ ಮುಂಡವಳಿಯ ಗ್ರಾಮದ[ತಿಗ]ಳ ನಾಗಮನೆಯ ವಾಮನ ಉಪಾಧ್ಯಾಯರ ಮಗ (ಕಇ. I, ೫೮-೮ ; 1446) ; ತಿಗಳರುಡುಗೆಯುಟ್ಟು ಸೊಗಸು ಚೆಪ್ಪಗಳಿಟ್ಟು ಅಗಿಲು ಚಂದನ ಗಂಧ ಧರಿಸಿ . . . ಸೊಗಸುದೋರಿ ನಗುತ ಬಂದಳು ರಾಜನಾಸ್ಥಾನಕೆ (ಸೌಂದರ್ಯ. ೩-೨೫).

ತಿಗುಳಮಾರಿ=ತಮಿಳರಿಗೆ ಮೃತ್ಯುದೇವತೆಯಂತಿರುವವನು; ಇಚುವ ಬೆಡಂಗ ಸತ್ಯಾಶ್ರಯನ ಒಂದು ಬಿರುದು : ತಿಗುಟ(ಳ)ಮಾರಿ ಶ್ರೀಮತ್ ಸತ್ಯಾಶ್ರಯದೇವ(ಂ) (ಎಇ. XVI, ೭೯-೪ ; 1007).

[ ದೇ.॥ ತಮಿ. ತಿಕಳ ; ತೆಲು. ತಿಗುಳ ]

**ತಿಗುಳನಾಡು** (ನಾ). ತಮಿಳುದೇಶ : ತಿಗುಳನಾಡ ಸೆಟಿಯಂ ತಾನೊಂದಿ ದತಿದುಃಖದೊಳಿ ಬೆಂದು ನಿಲಲಿನ್ನರಿದೆಂದು (ಧರ್ಮಾಮೃ. ೧-೧೬೬) ; ತೆಲುಗಾಣೆಯ ತೆರಬೀದಿ ತಿಗುಳನಾಡು ತಿಳಿದೆಡೆಯಾಡುವ ದಾರಿ (ಕುರಾಸಾಂ. ೫-೪೭). [ ತಿಗುಳ + ನಾಡು ]

**ತಿಗುಳಾಣ್ಯ, ತಿಗಳಾಣ್ಯ** (ನಾ). ತಮಿಳುನಾಡು,—ದೇಶ : ಅಗಲ ದಾರ್ಯಾಖಂಡದೊಳಗುಳ್ಳ ನೃಪರೊಳು ತಿಗುಳಾಣ್ಯದರಸನ ನೋಡು (ಭರತ. ೫೩-೧೧೫) ; ಸಂಭ್ರಮದಿ ತಿಗುಳಾಣ್ಯದಿಂ ಬಂದ ವೀರೇಶನೆಂಬವರಿ ಗೊಲಿದು ಅಂಬಕವನಿತ್ತಾ ತ್ರಿಯಂಬಕ ಸಿದ್ಧೇಶ ಶರಣಾಗು (ಮಡಿಕ್ಕಾ. IV, ೦೦೦೫ ಸಿದ್ಧೇಶ್ವರ ಕೃತಿ). **ತಿಗಳಾಣ್ಯ**: ಚತುರ್ದಿಕ್ಕು ಐವತ್ತಾರು ದೇಶದಲ್ಲೂ ಹೆರೋಗಟಾ ಮಾರೋಪೇಟೆ ತಿಗಳಾಂಣ್ಯಾ ಮಗಳಾಂಣ್ಯಲ್ಲಿ ನೆಟ್ಟ ಕಲ್ಲು ಬಿಟ್ಟ ಬಸವಿ (ಎಕ. XVI, ಗುಬ್ಬಿ. ೬೩-೬೫ ; ಶು. 1672). 'ತೆಲುಗಾಣೆಯ' ಪರಾ. [ <ತಿಗುಳ ]

**ತಿಗುಳಿ** (ನಾ). ಒಂದು ಬಗೆಯ ಸೀರೆ : ದುಡಾವಳಿಯ ಚಾಪಗಂಟಿಯು ಬೊಂಬೆಗಣ್ಣ ಚಿತ್ರಾವಳಿಯ ಸರಹುವ್ವ ಪೊಪ್ಪಳಿಯು ತಿಗುಳಿ ರಾಗಾವಳಿಯ . . . ನೇತ್ರಾವಳಿಯು ಮುಚ್ಚು ನಾನಾವಿಧದ ಸೀರೆಗಳ (ನವಮೋ. ೧೭-೬೦). [ ? ]

**ತಿಗುಳಿತ್ತಿ, ತಿಗಳಿತ್ತಿ** (ನಾ). ತಮಿಳರವಳು; ಅರವ ಹೆಂಗಸು: ತಿಗುಳಿತ್ತಿಯರು . . . ಆಲಿಂಗನ ಮೊದಲಾದ ರತಿಯಲ್ಲಿ ಬಂಧುಗಳಲ್ಲಿಯು ಪ್ರೀತಿಯುಳ್ಳವರು (ಸಾಗಂಧಿ. ೪೯೫-೧೮). **ತಿಗಳಿತ್ತಿ**: ತಿಗಳಿತ್ತಿ ಬಾಯಿ ಕಣಕಬೇಡ, ಬಗುಳೋ ನಾಯಿ ಬಡಿಯಬೇಡ (ಗಾದೆ).

[ ತಿಗುಳ + – ಇತ್ತಿ ]

**ತಿಗುಳು** (ನಾ). ತಮಿಳರ ಮಾತು ; ತಮಿಳು ಭಾಷೆ ; ನಾಗರ ಕಂನಡ ತಿಗುಳಾರ್ಯ್ಯವನೋದಿಸುವ ಬಾಲಶಿಕ್ಷೆ ಉಪಾಧ್ಯರ ಜೀವಿತಕ್ಕೆ ೧ಕ್ಕೆ ಗದ್ಯಾಣಂ ಆಱು (ಎಕ. III, ತಿರುಮ. ೨೭-೩೪; 1290) ; ಅದು ತಿಗುಳಿನೊಳು ಪುಳಿಚ್ಚುತ ಬದನೆಗಾಯೆ ದು ಪೆಸರನೊಲವಿಂ ಕರೆವುದು (ಸೂಪಶಾ. ೪-೧೫); ಪಾರಿಸಿಯಾಂಧ್ರ ಮರಹಾಟ ಕರ್ಣಾಟ ಹಳೆಗನ್ನಡ ತಾನಲ್ಲ ತಿಗುಳು ಸಕ್ಕಜ ನಾಗರದ ಲಿಪಿಯು ಈ ನರರ ಲಿಖಿತದೊಳಗೊಂದಕ್ಕೆ ಸಮನಿಸದು (ಜೋರಬ. ೩-೨೯). [ ತಿಗುಳ + – ಉ₄ ]

**ತಿಗ್ಮ** (ಗು). ೧. ಉಷ್ಣವಾದ; ಬಿಸಿಯಾದ; ತೀಕ್ಷ್ಣ; ಪ್ರಖರ: 'ತಿಗ್ಮಕರ' ಪರಾ. ೨. ಹರಿತವಾದ; ನಿಶಿತವಾದ; ಚೂಪಾದ: 'ತಿಗ್ಮಾರಿ' ಪರಾ. ೩. ಉಗ್ರವಾದ ; ಕ್ರೂರವಾದ. (ನಾ). ೪. ಉಷ್ಣತೆ : "ತೀವ್ರಂ, ತಿಗ್ಮಂ, ಖರಂ . . . ಪಟು–ಈ ೭ ಉಷ್ಣರಶ್ಮಿ" (ಹಲಾಯು. ೮-೪೧). ೫. ಸೂರ್ಯ. [ ಸಂ. ]

**ತಿಗ್ಮಕರ** (ನಾ). ೧. ಉಷ್ಣವಾದ ಕಿರಣ. ೨. ಉಷ್ಣವಾದ ಕಿರಣಗಳನ್ನುಳ್ಳವನು; ಪ್ರಖರಕಿರಣ ; ಸೂರ್ಯ : ತಿಗ್ಮಕರನುದಯದೊಳ್ ಪುತ್ರನಂ ಪೆತ್ತಳ್ (ಆದಿಪು. ೭-೩೭) ; ಅಶೇಷವಂ ಬೆಳಗೆ ತಿಗ್ಮಕರಂ ದೆಸೆಗಾಣದಿರ್ದ ಕೌಶಿಕನಯನಂಗಳಂ . . . ಏಕೆಯೊ ಮಾಡಿದನಬ್ಜವಿಷರಂ (ಪಂರಾಮಾ. ೧-೬೦). [ ತಿಗ್ಮ + ಕರ₃ ]

**ತಿಗ್ಮತೆ** (ನಾ). ೧. ಉಷ್ಣತೆ; ಪ್ರಖರತೆ: ಚಂಡಕರದ್ಯುತಿ ಪುಗದು ಪೊಕ್ಕೊಡಂ ತಿಗ್ಮತೆಯಂ ಬಿಡುವುದದು ಮತ್ಪ್ರತಾಪದಿನಲ್ತೆ (ಚಂದ್ರಪು. ೫-೭೨). ೨. ಹರಿತವಾಗಿರುವಿಕೆ ; ಮೊನಚಾಗಿರುವಿಕೆ. ೩. ಕ್ರೂರತೆ.

[ ಸಂ. ತಿಗ್ಮತಾ ]

**ತಿಗ್ಮಪ್ರಭೆ** (ನಾ). ಪ್ರಖರವಾದ ಕಾಂತಿ ; ತೀಕ್ಷ್ಣವಾದ ಪ್ರಕಾಶ,– ಹೊಳಪು : ಅಭಿಷೇಕವೃಷ್ಟಿಸೂಚಕಮುಭಯಪ್ರತಿಸೂರ್ಯಬಿಂಬಮೊಗೆ ದುವು ತಿಗ್ಮಪ್ರಭೆ ಪಾರ್ಶ್ವದೊಳೆಸೆದಿರ್ದುವು ಶುಭಾಸನಂ ಸಿಂಹಪೀಠದೆರಡುಂ ಕೆಲದೊಳ್ (ಮಲ್ಲಿಪು. ೧೨-೧೦೨). [ ತಿಗ್ಮ + ಪ್ರಭೆ ]

**ತಿಗ್ಮಮರೀಚಿ** (ನಾ). ೧. ತೀಕ್ಷ್ಣವಾದ ಪ್ರಭೆ. ೨. = ತಿಗ್ಮಕರ ೨ : ಕುಮುದದಮನಲರ್ಚಿ ಹಿಮರುಚಿಗೆ ಮಹೋತ್ಸವಮಿತ್ತುದಬ್ಜಮಂ ಕೊರಗಿಸಿ ತಿಗ್ಮಮರೀಚಿಯನದು ಮಸುಳಿಸಿತು (ರಾಜಶೇ. ೯-೨೦).

[ ತಿಗ್ಮ + ಮರೀಚಿ ]

**ತಿಗ್ಮರುಕ್ಕಾಂತಿ** (ನಾ). ಸೂರ್ಯನ ಬೆಳಕು,–ಪ್ರಭೆ : ಆ ತಿಗ್ಮರುಕ್ಕಾಂತಿ ತೀವಿದುದೆತ್ತಲ್ ಬಹುತೇಜದಿಂ (ವಿಷ್ಣುಪು. ೮-೮೪).

[ ಸಂ. (ತಿಗ್ಮರುಚ್ + ಕಾಂತಿ) ]

**ತಿಗ್ಮರುಚಿಮಾಲಿ** (ನಾ). ಉಷ್ಣವಾದ ಕಿರಣಗಳ ಮಾಲೆಯುಳ್ಳವನು ; ಸೂರ್ಯ : ಆನುಂ ಕಾಯನೆಂದಾದವೆ ಕರುಣಿಸಿದಂತೆಯ್ದೆ ಸಂಕೋಚಿಸಿ ತ್ರೈಯ್ಯನೆ ಸುತ್ತಂ ಸೂಸಿದೀಶಾನನ ಜಡೆಗಳವೊಲ್ಕಾಯ್ದು ಪೊನ್ನೀರ್ಗ ಎಲ್ಗೆಂಪಿನ ಪೆಂಪಂ ಸಿಂಪಿಸುತ್ತಿರ್ದ ಹಿಮರುಚಿಗಳಂ ತಿಗ್ಮರುಚಿಮಾಲಿಬಿಂಬಂ (ಕಾದಂಬ. ೩೭೪). [ ಸಂ. ತಿಗ್ಮರುಚಿಮಾಲಿನ್ ]

**ತಿಗ್ಮರುಚಿ** (ನಾ). =ತಿಗ್ಮಕರ ೨: ಉದಯಗಿರಿಶೇಖರನಾದ ತಿಗ್ಮರುಚಿಮರೀಚಿನಿಕುರುಂಬಚುಂಬಿತಾಂಭೋಜವನಲಕ್ಷ್ಮಿಯೊಡನೆ ಲಬ್ಧಪ್ರಬೋಧೆಯಾಗೆ (ಸುಕುಮಾ. ೯-೧೧೩ ವ). [ ತಿಗ್ಮ + ರುಚಿ ]

**ತಿಗ್ಮರೋಚಿ** (ನಾ). =ತಿಗ್ಮಕರ ೨: ಇಭ್ಯಕುಲಾಂಬರ ತಿಗ್ಮರೋಚಿಯಂ ತನಯುನನಂದೆ ಪೆತ್ತವೊಲದೇನನುರಾಗಮನಪ್ಪುಕೆಯ್ದಳೊ (ಸುಕುಮಾ. ೧೦-೪). [ ತಿಗ್ಮ + ರೋಚಿ ]

**ತಿಗ್ಮಾಂಶು** (ನಾ). =ತಿಗ್ಮಕರ ೨: "ತರಣಿ . . . ತಿಗ್ಮಾಂಶು ಮಾರ್ತಾಂಡ ನಕ್ಕಂ" (ಮಂಗರಾ. ೧೦-೧); ಪ್ರತಾಪನಿಲಯಂ ತಿಗ್ಮಾಂಶುವಿಂ ಸತ್ಕಲಾಚತುರಂ ಚಂದ್ರನಿನಾದಮಂ ನಿನಗೆ ನೇತ್ರಾನಂದನಂ ನಂದನಂ (ಪಂರಾಮಾ. ೩-೯೧). [ ತಿಗ್ಮ + ಅಂಶು ]

**ತಿಗ್ಮಾರಿ** (ನಾ). ತೀಕ್ಷ್ಣವಾದ ಚಕ್ರವನ್ನುಳ್ಳವನು; ವಿಷ್ಣು: ಪುರುಷೋತ್ತಮಂಗೆ ಜಗದಾತ್ಮಕಂಗೆ ತಿಗ್ಮಾರಿಗೆ ನಮಿಸುವೆಂ (ವಿಷ್ಣುಪು. ೩-೧೭೩). [ ಸಂ. ತಿಗ್ಮಾರಿನ್ ]

**ತಿಚುಕ** (ನಾ). ಒಂದು ಬಗೆಯ ಹಕ್ಕಿ: ಚಿಲಿಮಿಲಿಗ ಕಂಬೂತ ತಿಚುಕ ಮರಕುಟಕ ಕಬ್ಬಕ್ಕಿಗಳು ಮುಂತಾದ ಪ್ರಾಣಿಗಳನುರಿದಗ್ನಿ ದಹಿಸಿತು (ಕುರಂಗ. ೧೬-೩೭).' ಕೀಚಕ್ಕಿ' ಪರಾ. [ ? ]

**ತಿಚೆ** (ನಾ). ಮೂರು ಋಕ್ಕುಗಳು: ಕೊಡೆ ಗುಡಿ ತೋರಣಂ . . . ತಿಚೆ ಮಂಗಳಗೀತನಾದಮೆಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜ ನಾ ನು ರಾಗವುಂ (ಕಾವ್ಯಾವ. ೩೩೨). [ <ಸಂ. ತೃಚ ]

**ತಿಜಣೆಯೂರ್** (ನಾ). ಒಂದು ಊರಿನ ಹೆಸರು: ಕನ್ನಳ್ಳಿಯ ರಾಜಿಗದೊಳ್ತ × × ಚ್ಚನ್ ಕವಿತ್ತೂರನ್ ಪಸುವಳಿ ಧನುವಟ್ಟ ಕೊನ್ದು ಬಿಟ್ಟಾರ್ ಅವರ್ಗ್ಗೆ ಕೊಟ್ಟೊದು ತಿಜಣೆಯೂರ ನೀಡು (ಎಕ. IX(೩), ಹೊಸಕೋ. ೧೮೯-೪; ಸು. ೫೦೦). [ ತಿಜಣ್ಣೆ + ಊರ್ ]

**ತಿಜೂರಿ** 'ತಿಜೋರಿ' ನೋ.

**ತಿಜೂರಿವರ್ಗ** (ನಾ). ಶ್ರೀಮಂತರ ವರ್ಗ; ಧನಿಕರ ಪಂಗಡ: ತಿಜೂರಿ ವರ್ಗವಿರುವ ತನಕ ಮಜೂರಿಯ ದುಃಖ ತಪ್ಪಿದ್ದಲ್ಲ (ಸಮುಚ. ೯೮೩). [ ತಿಜೂರಿ (<ತಿಜೋರಿ) + ವರ್ಗ ]

**ತಿಜೋರಿ, ತಿಜೂರಿ** (ನಾ). ೧. ಬೆಳ್ಳಿ, ಬಂಗಾರ, ಹಣ ಮೊದಲಾದ ಅಮೂಲ್ಯ ವಸ್ತುಗಳನ್ನಿಡುವ ಭದ್ರವಾದ ಕಬ್ಬಿಣದ ಪೆಟ್ಟಿಗೆ,-ಬೀರು: ಎಲ್ಲವನು ಎಣಿಸಿಟ್ಟ ಬೆಳ್ಳಿಯ ತಿಜೋರಿ (ನಂಮು. ೭೩-೪); ಈ ವಾರದೊಳಗಾಗಿ ರಕಮು ಬಡ್ಡಿ ಸಹಿತ ನನ್ನ ತಿಜೋರಿ ಸೇರಬೇಕು (ಹೊಸಚಿ. ೩೧); ಗುಮಾಸ್ತ ಅವರ ಎದುರಲ್ಲೇ ಇದ್ದ ದಪ್ಪಬಾಗಿಲಿನ ಭದ್ರಬೀಗದ ತಿಜೋರಿಯ ಬಾಗಿಲನ್ನು ತಗೆದ (ರಕ್ತರೂ. ೧೦೭); ನಾವು ಮುತ್ತು ರತ್ನಗಳನ್ನು ತಿಜೋರಿಯಲ್ಲಿ ಇಡುತ್ತಿದ್ದಂತೆ ಆಗ ಚಹದ ಪುಡಿಕೆಗಳನ್ನು ಭದ್ರವಾಗಿ ಇಡುತ್ತಿದ್ದರಂತೆ! (ಪತ್ರಿಕಾ. ೦೩). ತಿಜೂರಿ: ೧. ತಿಜೂರಿಯೊಳಗಿನವು ಬೆಳ್ಳಿ ಬಂಗಾರ ಎಲ್ಲಾ ಒಯ್ದು ನಿಮ್ಮ ರಂಭಾಗೆ ಕೊಡಿರಿ (ಇತಿಶ್ರೀ. ೬೯). ೨. ಭಂಡಾರ; ಬೊಕ್ಕಸ; ಖಜಾನೆ: ಸರಕಾರದ ತಿಜೂರಿಯನ್ನು ತುಂಬಲು ಮತ್ತೆ ಬೇರೆ ಕಂದಾಯವನ್ನು ಕೊಡಬೇಕೋ (ಸಮುಚ. ೨೩೭).

[ ←ಹಿಂ. ಮರಾ. ತಿಜೋರೀ. / ಇಂ. Treasury ]

**ತಿಟತಿಟ, ತಿಟಮಿಟಿ** (ನಾ). (ಉಕ) ಬಹಳ ಬಿಗಿಯಾದುದು; ಹತ್ತೆಯಾದುದು: ಮಟಮಟ ಮಧ್ಯಾಹ್ನ ತಿಟತಿಟ ಕುಪ್ಪಸ (ಗರತಿ. ೬೮). ತಿಟಮಿಟಿ: ಗುಲಾಬಿಬಣ್ಣದ ಜರದ ಕಡ್ಡಿಯ ರವಕೆ ತಿಟಮಿಟಿಯಾಗಿ ಅಂಟಿಕೊಂಡಿದ್ದರಿಂದ (ಮುತ್ತುಮು. ೦೪); ಹೂವಿನ ಟೊಪ್ಪಿಗೆಯನ್ನು ಹಾಕಿಕೊಂಡು ತಿಟಮಿಟಿಯಾದ ಚಲ್ಲಣ ಧರಿಸಿದ ಹುಸೇನಿಯು . . . ಒಮ್ಮೆ ಗಟ್ಟಿಯಾಗಿ ಚೀರಿಸಿದನು (ರಂಗರೋ. ೧೪೦). [ ? ]

**ತಿಟಮಿಟಿ** 'ತಿಟತಿಟ' ನೋ.

**ತಿಟುವಟ** (ನಾ). ವಹಿವಾಟು (?): ಕೀರಿಲ್ಲ ತಿಟುವಟವಿಲ್ಲ ಜಂಭ ಮಾತ್ರ ತೋಂಬೇ ಅಷ್ಟು (ಗಾದೆ). [ ? ]

**ತಿಟ್ಟ**₁ 'ತಿಟ್ಟು₃' ನೋ.

**ತಿಟ್ಟ**₂ (ನಾ). ೧. ಕುಂಚದಿಂದ ಬರೆದ ಚಿತ್ರ,-ನಕ್ಷೆ,-ಭಾವಚಿತ್ರ: "ತಿಟ್ಟಮನೆ ತೀಡುವುದು" (ಕವಿಕಂ. ೨೩೦); ತದೀಯ ಸಿತಕೇತು ಪಟಂ ಬರೆದಿಟ್ಟ ತಿಟ್ಟದೊಪ್ಪುವ ಪಟದಂತೆ ನಿಶ್ಚಳಿತಮಾದುದು ವೇಗ ಮರುತ್ಪ್ರಯೋಗದಿಂ (ಶಾಂತಿಪು. ೪-೬೦); ತಿಟ್ಟವ ಲಕ್ಷಿಸುವುದು ಲೆಕ್ಕಣಿಕೆಯಲ್ಲವೆ ಆ ತಿಟ್ಟ ಲೆಕ್ಕಣಿಕೆಯ ಲಕ್ಷಿಸಬಹುದೇ (ಪ್ರಭುಲಿಂಗಲೀ. ೧೨೭-೪೯೪); ಇದು ನವಯೌವನರಸಚಿತ್ರದ ತಿಟ್ಟಂ . . . ಎಂಬಂದದಿನೆಸೆದುದು ನಿಸದಮುವಳ ಕೊಡಗೂಸುತನಂ (ವರ್ಧಪು. ೯-೨೦); ಭಾರತಿ ಮನದಟ್ಟಿಯಿಂ ಬರೆದ ತಿಟ್ಟಮೆನಲ್ ಪಟಚಿತ್ರವೊಂದು ಚಿತ್ರತೆವಡೆದಿರ್ದುದು (ಕು ಸು ಮಾ. ೦೨-೭೭); ಬಳಿಕಂಗೋದ್ಭವನಾ ತಿಟ್ಟಮನತಿಚತುರಂ ಬಿನ್ನಣಸುತೆ ಬರೆದಂ (ಜಯುಕಾ. ೩-೦೩); ಪಟ್ಟಣವಾಸಿಗರೂರುಗರೊಡನೊಂದು ಬಟ್ಟೆಯೊಳಗೆ ಹೋಗುವಾಗ ಸಟ್ಟಾಟವಾಡುತ ಹೋಹಂತೆ ಪೋಪಡ ತಿಟ್ಟವಿಹುದು (ಭರತೇ. ೫-೦೦೦). ೨. ಪಡಿಯಚ್ಚಿನ ಗೊಂಬೆ, -ಪುತ್ಥಳಿ, -ಸಾಲಭಂಜಿಕೆ: ಮೃತ್ತಿಕೆಯ ತಿಟ್ಟದಿಂದ ಮಯಣದ ಕರುವಿಟ್ಟು ಆ ಘಟವ ಲಕ್ಷಿಸಲಿಕ್ಕಾಗಿ . . . ಮಧ್ಯದಲ್ಲಿ ನಿಂದ ತಿಟ್ಟದಂತೆ (ಪ್ರಭುಲಿಂಗಲೀ. ೨೦೩-೩೩); ತರ್ಗರ್ಗಯ್ಯೊಳರರೆ ರಂಜಿಸುವ ಪೂಚೆಂಡಿನಿಂ ಸಿಂಗರಕ್ಕಿಟ್ಟ ತಿಟ್ಟವೋ ಯಿದೆನಿಸಿ (ಪದ್ಮರಾ. ೫-೪೨). [ ದೇ.॥ ತೆಲು. ತಿಟ್ಟ ]

**ತಿಟ್ಟ**₃ (ನಾ). ೧. ನಿಯಮ; ಕಟ್ಟಳೆ; ನಿಬಂಧನೆ; ಕಟ್ಟುಪಾಡು: ಈ ಬೀದಿಗೀತನಿಟ್ಟುದೆ ತಿಟ್ಟಂ (ಚಳವಿ. ೬-೧೨೫). ೨. ದೃಢನಿಶ್ಚಯ; ದೃಢ ನಿರ್ಧಾರ: ನಿಮ್ಮ ಸುಭವ ನಿಮ್ಮ ತಿಟ್ಟವೆಂಬುದು ಪರಬೊಪ್ಪುವ ತುಡುಕಿ ತೂಗುತಿದೆ (ಭರತೇ. ೭೦-೫೮); ಕಟ್ಟದಿರೊಲು ಕಣ್ಣೆಸೆಯಲವನ ನೋಡಿ ತಿಟ್ಟವ ನೆನೆದು ತಾನಿಂತು (ನಾಗಕು. ೩೨-೧೦೦). ೩. ಏರ್ಪಾಡು; ವ್ಯವಸ್ಥೆ; ಅಚ್ಚುಕಟ್ಟು; ಓರಣ: ನಿಷ್ಕಾಳಿಧಿಗೆ ತಿಟ್ಟವಾಗಿಟ್ಟ ದಾರಿ (ಪದ್ಮರಾ. ೬-೮೩); ನಿಮ್ಮ ತಂಗಿಯದೇನ ಮಾಡಿದಳೆನಿತಲ್ಲ ನಮ್ಮ ಸೋದರನ ತಿಟ್ಟಗಳು ಹಮ್ಮನಾಡಿದಿರಿ ಸಾಕೆಂದು ರಾಣಿಯರಾಡಿ ತಮ್ಮೊಳಪ್ಪತಿ ಮಾಡಿದರು (ಭರತೇ. ೩೭.೪೫). ೪. ಹಂಚಿಕೆ; ಉಪಾಯ; ತಂತ್ರ: ಖಳರೆನಿಸುವಾ ಹುಲಿಯ ಭೃತ್ಯರು ಒಳಗೆ ತಾವೊಡಗೂಡಿ ಬಾದಾಗಳೆ ನರಿಯ ಕೆಡಿಸುವರೆ ತಿಟ್ಟವನೊಡ್ಡಿದರು (ತಿಮ್ಮಕಾಂ. ೪-೨೫). 'ದಿಟ್ಟ₂' ಪರಾ. [ ದೇ.॥ ತಮಿ. ಮಲ. ತಿಟ್ಟ ]

**ತಿಟ್ಟನೆ** (ಅ). ರಭಸವಾಗಿ; ವೇಗವಾಗಿ: "ತಿಟ್ಟನೆ ಬಟ್ಟನೆಯೆಂಬಿವಜಿಹ್ಮಳ್ ಛುಮಾರ್ಥಂ" (ಶಮುದ. ೩೦೭); ಘೋರಸಂಸಾರಮಹೋಗ್ರಾರಣ್ಯದೊಳ್ ತಿಟ್ಟನೆ ತಿರಿದು ಕರಂ ಸೇದೆಗೆಟ್ಟಿರ್ದು (ಸುಕುಮಾ. ೧೨-೩); ಅಟ್ಟಿಂಬುದಕ್ಕೆ ನೆಲಹೊಲನ ಕಾಣದೆ ತಿಟ್ಟನೆ ತಿರುಗಿ (ಪ್ರಭುಲಿಂಗಲೀ. ೦೮೦-೭೭೯); ಮರುದ್ವಿಮಾನಪುಕರಂ ತಿಟ್ಟನೆ ತಿರಿಯೆ (ಜಗವಿ. ೧೨-೪೫); ದೂರಿಸುತೆ ವ್ಯವಹಾರದಿಂದೆ ತಿಟ್ಟನೆ ತಿರುಗಿ (ಬಿಂದೋರಿ. ಹ. ೫೦೪-೦೯); ಸುರಗಿರಿಯ ಬಿಲ್ಲಾಗಿ ಮಾಡಿ ನೆಲನಂ ತಾಳಿದುರಗನಂ ತಿರುವಾಗಿ ಬಲಿದು ಕಮಲಾಕ್ಷನಂ ಶರವಾಗಿ ತೊಟ್ಟು ತಿಟ್ಟನೆ ತಿರುಗುವಾ ಪುರವನಸುವಂದು ಸಂಧಾನಿಸಿ (ಸೌಂದಪು. ೬-೩೦). 'ತಿಜ್ಜನೆ' ಪರಾ. [ ? + -ಅನ್ನೆ ]

**ತಿಟ್ಟವಿಡು** 'ತಿಟ್ಟವಿಡು' ನೋ.

**ತಿಟ್ಟವಡು** (ಕ್ರಿ). ಓರಣವಾಗು; ಅಚ್ಚುಕಟ್ಟಾಗು: ಬಟ್ಟ ಪೊಂಬರಿವಾಣದಂಚಿನೊಳಗೆ ಸಾಲುಬಟ್ಟಲು ಕೆಲವು ಬಟ್ಟಲೊಳು ಇಟ್ಟ ಮಾಣಿಕದ ಸೋಟಿಗೆಗಳೆಸೆಯೆ ತಿಟ್ಟವಟ್ಟು ತಿಂತಿಣಿಯೊಳೊಪ್ಪಿದನು (ಭರತೇ. ೪-೬೩).

[ ತಿಟ್ಟ₃ + ಪಡು₁ ]

**ತಿಟ್ಟವಣೆ** (ನಾ). ಹಂಚಿಕೆ ; ಉಪಾಯ (?) : ಧೃಷ್ಟದನುಜರ ಕೊಲುವರೆ ಉದು [ಒಂದು] ತಿಟ್ಟವಣೆಯ ಮನದೊಳಗೆ ಯೋಚಿಸುತ ಕಮಲಭವಾ (ದೇವೀಪು. ೦-೬೫). [ ತಿಟ್ಟು$_3$ + -ಅಣೆ$_4$ ]

**ತಿಟ್ಟವಿಕ್ಕು** (ಕ್ರಿ). ಚಿತ್ರಬರೆ ; ಚಿತ್ರಿಸು : ತಿಟ್ಟವಿಕ್ಕಲು ತಿದ್ದಲರಿದೆನಿಸುವ ಮೆಯ್ಯ ಕಟ್ಟಾಯವೇಱುವ ಪ್ರಾಯ ಕಟ್ಟಾಣಿ ಹೆಂಗಳೆಸೆದರು (ಭರತ. ೧೩-೫೯). [ ತಿಟ್ಟು$_2$ + ಇಕ್ಕು ]

**ತಿಟ್ಟವಿಡು, ತಿಟ್ಟಮಿಡು** (ಕ್ರಿ). ೧. = ತಿಟ್ಟವಿಕ್ಕು : " ತಿಟ್ಟವಿಡು-(ತಿಟ್ಟ + ಇಡು) ಚಿತ್ರಪ್ರಾರಂಭೇ " (ಶಮುಧ) ; ಅಪಗತ ಪಾಕಸತ್ತ್ವಮಪಸಾರಿತಮಾರುತಮಾಗಿ ತಿಟ್ಟವಿಟ್ಟುಪವನದಂತುಟಾದುದು ಬನಂ ಜನಚಂದ್ರ ತಪಃಪ್ರಭಾವದಿಂ (ಶಾಂತಿಪು. ೧೧-೦೦೭) ; ನಗೆಮೊಗವನು ತಿಟ್ಟವಿಡುತಿರಲಾ ಕಾವ ನಗುತ ತನ್ನಿಕ್ಷುಚಾಪವನು ಮಿಗೆ ಜೇವಡೆಗೆಯ್ದು ಬಗೆಗೆ ಲೆಕ್ಕಣಿಕೆಯ ಬೆಗಡುಗೊಂಡೀಡಾಡಿದಳು (ಅಂಜಚ. ೬-೧೧) ; ಪಳಿಕಿನ ವಿಶಾಲಪಟ್ಟದ ಮೇಲೆ ನೂಲುವೊಯ್ದು ತಿಟ್ಟವಿಟ್ಟಣ್ಕೆಗೆಯ್ದು (ಪುಷ್ಪಪು. ೧೪-೨೯ ವ) ; ಚಿಟ್ಟೆ ನೀ ನೆನವೊಳೆಸ್ನೆಳವೆಯನಳುಂಬಂ ತಿಟ್ಟವಿಡೆ ಕಣ್ಮಲೆವುದೆಮ್ಮಯ ಕುಟುಂಬಂ (ಗೀವಿಂ. ೧-೮). ೨. ಬೊಂಬೆಯನ್ನು ತಯಾರಿಸು ; ಗೊಂಬೆಯನ್ನು ಮಾಡು : ನೆಟ್ಟನೆ ಮೂಱು ಲೋಕದೊಳುಳ್ಳ ರೂಪಿನಿಂ ತಿಟ್ಟವಿಟ್ಟನೊ ಬದಿಯೆನಿಸಿ ಕಟ್ಟಾಣಿವಮುತ್ತು ವಿಶಾಲಲೋಚನೆಯೆಂಬ ಪಟ್ಟದರಾಣಿಯಾ ನೃಪಗೆ (ನಾಗಕು. ೩-೮೮) ; ತಿಟ್ಟವಿಟ್ಟ ಪಾಪೆಯೆನೆ ಮೂಗುವಟ್ಟಿರ್ದರ್ (ರಾಮಾಶ್ವ. ೧೧-೧೯). ೩. ಚಿತ್ರದಂತೆ ಮೂಡು, -ಸ್ಪಷ್ಟವಾಗು : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲೀ. ೬-೮). **ತಿಟ್ಟಮಿಡು** : ೧. ಬರೆಯಲೆಂದು ಬಟ್ಟಗೆವಲಗೆಯಂ ತರಿಸಿ ತಿಟ್ಟಮಿಟ್ಟು ಬರೆವನ್ನೆಗಂ (ಆದಿಪು. ೪-೬೩ವ); ಇದರಂದಕ್ಕಬ್ಬಜಂ ಕೂಡ ಬಟ್ಟಗೆಯಂ ತಿಟ್ಟಮಿಡಲ್ಕಿದೇನ್ನೆರೆವ (ಎಕ. V, ಅರಕ. ೯೯-೮ ; 1079) ; ಬಟ್ಟಗೆವಲಗೆಯೊಳಾಗಳೆ ದಿಟ್ಟಗೆ ನೇರ್ವಟ್ಟು ತೋಱೆ ನೆಟ್ಟನೆ ಭೂಪಂ ತಿಟ್ಟಮಿಡಲ್ ಬಗೆವುದು . . . ಅಂತು ಸಂಸಾರವೈಚಿತ್ರ್ಯಂ ತನ್ನ ಚಿತ್ರಭಿತ್ತಿಯೊಳ್ ತಿಟ್ಟವಿಟ್ಟಂತು ನಿಲೆ (ಪಾರ್ಶ್ವಪು. ೪-೭೦ ವ). [ ತಿಟ್ಟು$_2$ + ಇಡು$_1$ ]

**ತಿಟ್ಟು$_1$** (ಕ್ರಿ). ೧. ತೆಗಳು ; ಬಯ್ಯು ; ನಿಂದಿಸು : " ತಿಟ್ಟು-ಭರ್ತ್ಸನೇ (ಬಯ್ಯು), ಉನ್ನಸಭೂಮೌ ಚ " (ಶಮುಧ) ; ಸಂತರ್ ತಮ್ಮಂ ಖಳರ್ ಮನವಂದಂತು ತಿಟ್ಟೆ ಮೂಗುವಟ್ಟಂತಿರ್ಪರ್ (ನೀತಿಪಂ. I, ೧೮೫) ; ಘಟ್ಟಗರಾಗಿಹ ತಿಟ್ಟದ ರಿಪುಗಳ ದಟ್ಟಿಸಿ ಕೊಲ್ಲುವ ಪಟ್ಟದ ಕತ್ತಿಯನೊಬ್ಬಿಸಿ ಕೊಳ್ಳೀಗ (ಹಮುಚ. ೪೬) ; ಆ ಬ್ರಹ್ಮನ ತಿಟ್ಟ . . . ಸಿಗ್ಗಿನೊಳೆ ಸಾವತ್ರಲ್ಮನಂ ಮಾಡುವಂ (ಸಂಸಪ. ೦೫-೦೬); ಸನ್ನ ತಿಟ್ಟ ನುಡಿದ ನುಡಿಯಾಗಳುಂ ನನ್ನ ಯೆರ್ದೆಯೊಳಗೆ ನೆಲೆಗೊಂಡಿರ್ಪುದು (ಸೌನಂದ. ೭-೧೮). ೨. ಕಡೆಗಣಿಸು ; ಕೀಳುಮಾಡು ; ಮೀರು : ಘನತೇಜಂ ತಿಟ್ಟೆ ತಿಗ್ಮಾಂಶುವಂ (ಪುಷ್ಪಪು. ೪-೮೦).

[ದೇ.೫ ತಮಿ. ತೆಲು. ತಿಟ್ಟು ]

**ತಿಟ್ಟು$_2$** (ನಾ). ಬಯ್ಗುಳು ; ತೆಗಳಿಕೆ ; ನಿಂದೆ : " ತಿಟ್ಟು-ಬೈಗುಳ್ " (ಶಮರ. ಪರಿ. ೩) : " ತಿಟ್ಟೆನೆ ಬೈಗುಳೊಳ್ " (ಕರ್ಣಾನಿ. ೨೯) ; " ತಿಟ್ಟೆನೆ ತಾಂ ಬೈಗುಳಕ್ಕು " (ಕವಿಕಂ. ೦೬೩). [ <ತಿಟ್ಟು$_1$./ತಮಿ. ತಿಟ್ಟು ]

**ತಿಟ್ಟು$_3$, ಚಿಟ್ಟೆ$_3$, ತಿಂಟೆ, ತಿಂಡೆ, ತಿಟ್ಟ$_1$, ತಿಟ್ಟೆ, ತೀಂಟ್ಟೆ$_2$, ದಿಂಟೆ, ದಿಂಡೆ$_1$, ದಿಡ್ಡೆ$_1$, ದೀಂಟ, ದೀಂಟೆ** (ನಾ). ೧. ಎತ್ತರವಾದ ಪ್ರದೇಶ ; ತೆವರು ; ದಿಬ್ಬ ; ದಿಣ್ಣೆ ; ಉನ್ನತಭೂಮಿ : ಸರಸಿಯ ನಡುವಣ ತಿಟ್ಟಿನ ಕಳಹಂಸನ ಕೆಲದೊಳ್ ಬೆಳೆದೊಱಗಿದ ಬೆಳದಾವರೆಯಂತೆ (ಜಯನೃ. ೦೧-೩೫) : ಭರದಿಂದಾ ಕೊಂಡದ ತಿಟ್ಟಿಗೆ ಬಂದು (ನೇಮಿಸಂ. ೮-೦೦೧); ಅಪನ ಕೈಕಾಲು ಬಿಗಿದು ಕಟ್ಟಿ ಹರಿವ ಹೊಳೆಯೊಳ್ ಬಡಿಸಲಾ ದೈವವಶದಿನವನುರುಳ್ದೊಂದು ಮಳಲ ತಿಟ್ಟಿಗೆ ಸೇರಲು (ಹಮುನಕಾ. ೫೧-೧೫); ಸೈನ್ಯ ಬರುವ ದಾರಿಯಲ್ಲಿ ಹಳ್ಳ ತಿಟ್ಟುಗಳ ಸರಿಮಾಡಿ (ಸೌಗಂಧಿ. ೫೧-೧೫) ; ತೊಟ್ಟಿಲ ಹೊತ್ಕೊಂಡು ತೌರ ಬಣ್ಣಾ ಉಟ್ಕೊಂಡು . . . ತೌರೂರ ತಿಟ್ಹತ್ತಿ ನಿಂದು ನೋಡ್ಯಾಳೋ (ಹಳ್ಳಿಪ. ೯೩). ೨. ದಡ : ತೀರ ; ಅಂಚು : ನದಿಯೆರಡು ತಿಟ್ಟೊರಸಿರಲ್ (ಭೃಂಗವೇ. ೩-೧೯೩). ೩. ಸಮೂಹ ; ರಾಶಿ : ಮೇಲ್ಕಟ್ಟುಗಳ ತಿಟ್ಟುಗಳ ಬಹು ಚಿತ್ರಪತ್ರದಿಂದ (ಷತಿಂ. ೭-೭). **ಚಿಟ್ಟೆ$_3$** : ೪. (ಎತ್ತರವಾದ) ಜಗಲಿ, -ಕಟ್ಟೆ : ಊಟವಾದ ಮೇಲೆ ಒಬ್ಬೊಬ್ಬರಾಗಿ ಅಗ್ರಹಾರದ ಬ್ರಾಹ್ಮಣರು ಮನೆಯ ಚಿಟ್ಟೆಯ ಮೇಲೆ ನೆರೆಯುತ್ತಾರೆ (ಸಂಸ್ಕಾರ. ೩) : ನೀವು ಹಾಳೆಗಳನ್ನೆಲ್ಲಾ ಕಟ್ಟಿ, ಕೊಟ್ಟಿಗೆ ಚಿಟ್ಟೆಯ ಮೇಲೆ ಸೇರಿಸಿಡಿ (ದಾಳಿವೃ. ೧೬೩). **ತಿಂಟೆ** : ೧. ಪರಿವ ಬಱವೊನಲ್ಗಳುಮಂ ಮಣಲ ತಿಂಟೆಯ ನುಣ್ಪುಮಂ ದರಿಯ ನೆಟಿಲ ತಣ್ಪುಮಂ . . . ಅರ್ತಿಯೊಳ್ ನೋಡುತ್ತಂ ಬರೆ (ಬಂಹರಿ. ೩-೮ ವ) ; ಆ ನೀರ ತಡಿಯೊಳು ಸಣ್ಣಮಪ್ಪ ಮಣಲ ತಿಂಟೆಯೊಳಂದಡಿವಜ್ಜೆಯಂ ಕಂಡಿದು ವಿಪರೀತಮೆಂದು (ಬಂಹರಿ. ೩-೮ ವ) ; ಮಳಲ ತಿಂಟೆಯೊಳು ನಳಿನಮಂದಿರದೊಳು ಪೊಳೆವ ಲತಾಭವನದೊಳು (ಅಂಜಚ. ೧೫-೦೧). ೪. ಜೂದಿನ ತಿಂ[ಪಾಠಾಂ. ತೀಂ]ಟೆಯೆ ನೆಲಸಿರ್ಪ ತಾಣಂ (ಪಾರ್ಶ್ವಪು. ೩-೭೦) : ಜೂಜಿನ ತಿಂಟೆಗೆ ಪೋಗಿ ಪ್ರಧಾನರಪ್ಪ ನಾನಾ ಮಂಡಳಿಕ ಸಾಮಂತರೊಡನೆ ಜೂಜಾಡಿ (ಪುಣ್ಯಾಸ್ರ. ೭-೫೬ ವ). **ತಿಂಡೆ** : ೧. ಸೀಯಮಂಗಲದ ಪೊಲ ಮೇರೆ ಇಸಾನದ ದೆಸ ನಡುಗಲ್ಲೆ ಅಮ್ಮಲ ತಿಣ್ಡೆಯಿನ್ತೆಂಕಾಯ್ ಪೇರೊಟ್ಟಿಯೆ (ಎಕ. X(8), ಚಿಕ್ಕಬ. ೦೦೬-೬೬ : 850). **ತಿಟ್ಟ$_1$** : ೧. ಬೆಟ್ಟದಿಂದುಬ್ಬಿ ಭೂಮಿಗೆ ಸಿಂಧುನದಿ ಬೀಳ್ವ ತಿಟ್ಟದೊಳ್ಕಳಗೆ ಪ್ರತಿಮೆಯ ಬಿಟ್ಟ ಜಡೆಯ ಮೇಲೆ ಬೀಳ್ವ ಗಂಗಾಂಬುವ ನಿಟ್ಟಿಸಿದನು ನಟನಾಥ (ಭರತ. ೩೬-೪೮). ೫. ಎತ್ತರವಾದ ಪೀಠ, -ಆಸನ : ನಟ್ಟನಡುವಗಲ ಮಾರ್ತಾಂಡನೇಱಿದ ರಥದ ತಿಟ್ಟವೋ ಭೂಮಂಡಲದ ನಡುವೆ ಪೊಳೆವ ಪೊಂಬೆಟ್ಟವೋ (ಚಲಪು. ೩೭-೩೩). ೬. ಮೇಲುಭಾಗ : ಮುಂಗಾರ ಸಿಡಿಲ ಮೊಟಗಂ ಕೇಳ್ಪ ಸುರುಂಟು ಮಣಂಬೆಯ ತಿಟ್ಟದಂತೆ (ರಾಮಾಶ್ವ. ೩೫-೫). **ತಿಟ್ಟೆ** : ೧. ಈ ಚತುಸ್ಸೀಮೆಯ ಒಳಗೆ ಉಳಂಥಾ ಬೆಟ್ಟು ತಿಟ್ಟೆ ಹಕ್ಕಲು ಹಡಲು ಹೊಲನು . . . ನಡದು ಬಹುದು (ಸೌಇಇ. IX-ii, ೪೧೭-೯ ; 1377) : ನುಣ್ಮಳಲ್ದಿಟ್ಟೆ ಪೊಱವಾಱ ಬಟ್ಟ ಪೊಱವಾಱುಗಳ ಬಲನೆಯರ್ . . . ಬರುತಿರ್ದರು (ಚಲಪು. ೩೭-೪೩) ; ಹೊನಲೊಳು ಪರಿತಂದು ಮಳಲ ತಿಟ್ಟೆಯೊಳು ನಿಂದಾಗ (ಜ್ಞಾನಚ. ೧೭-೭). ೪. ಜೂದಿನ ತಿಟ್ಟೆಯಲ್ಲಿ ಬೆಲೆವೆಣ್ಗಳ ಕೇರಿಗಳಲ್ಲಿ ನಿಚ್ಚಲುಂ . . . ಸಮಾಚರಿಸುತ್ತಮಿರ್ದನತ್ಯಾದರದಿಂದೆಸಲ್ ಖಳನವಂ (ಪುಣ್ಯಾಸ್ರ. ೪-೩೭) ; ನಿನಗೆ ದಣುವಾಗುತ್ತಿದೆ. ಇಲ್ಲಿ ತಿಟ್ಟೆಯ ಮೇಲೆ ಕುಳಿತುಕೊ (ನಿಷ್ಪ್ರಪ. ೮೭). ೭. (?) : ಕೋಗಿಲೆಯ ಬಾಗಿ[ಲ್ಗಾ]ಪಿನರಂತೆ ಪುಗಿಲ್ಪುಗಿಲೆನೆ ಉಯ್ಯಲು ಹಬ್ಬೆಯಾಡುವರಂತೆ ತಿಟ್ಟೆಯೆಳಾಡೆ ಹಿಂದೋಳಂ ಮಹದಾನಿಯ ಕೀರ್ತಿಯಂತೆಲ್ಲಾ ದೆಸೆಯೊಳ ಮೆಸೆಯೆ ಬಂದ ಸುಗ್ಗಿಯೊಳ್ (ಬಂಹರಿ. ೫-೫ ವ). **ತೀಂಟ್ಟೆ$_2$** : ೪. ಮೇಲಿನ 'ತಿಂಟೆ' ಉಲ್ಲೇಖದ 'ಪಾರ್ಶ್ವಪು' ಪ್ರಯೋಗದ ಪಾಠಾಂತರವನ್ನು ನೋಡಿ. **ದಿಂಟೆ** : ೧. ದಿಂಟೆಗಳೊಳಂ ದೇಗುಲಂಗಳೊಳು ವಿಹಾರಂಗಳೊಳಂ ಇರ್ದು (ಪದ್ಮಾರಾ. ೧೨೩-೨೫): ತೊಱೆಯೆರಡುತಡಿಯ ಬಳಿಯ ಮಳಲ ದಿಂಟೆಯಂತೆ (ಧರ್ಮಾಮೃ. ೧೩-೧೮೭) ; ನುಣ್ಮಣಲ ದಿಂಟೆಯೊಳು ತಳಿರ ಹಸೆಯಂ ಹಾಸಿ (ಕನ್ನರ. ೮೩-೩) : ಇಂತೀರೆಱೆಡು ಗೋಂಟೆಯ ಸನಿಯದ ದಿಂಟೆಯೊಳ್ (ಚಿಕವಿ. ೫-೩೪). **ದಿಂಡೆ$_1$** : ೧. ಪಡುವಯ್ನಡದು . . . ತೆಂಕೈ ದಿಣ್ಡೆಯಿನ್ ಪಡುವಯ್ನೇಡಿ ಪೋದ ಒಟಿಪ್ಪಿ (ಎಕ. X(8), ಚಿಕ್ಕಬ. ೬೭-೦೮ ; ಸು. 850); ಖಂಡೆಯವನು ಜಡಿದು

. . . ತುಂಡಿಸಿ ಬೇತಾಳಶಿರವ ದಿಂಡೆಯು ಮರಕೆ ಕಟ್ಟಲು(ಹಮದ. ೩-೭೬). ೪. ಬೀದಿವೀದಿಗಳೊಳ್ ಜೂಜಿನ ದಿಂಡೆಯೊಳ್ . . . ಅವಿನೀತರ್ ನೀತಿಗೆಟ್ಟಾಡುವರ್ (ಸುಕುಮಾ. ೨-೭). **ದಿಡ್ಡೆ$_1$** : ೧. ಬಂದೊಂದು ದಿಡ್ಡೆಯನೇಱಿ ತಾವೆಲ್ಲರು ನಿಂದು ನೋಡಿದರು ಪಾಳೆಯವ (ನಾಗಕು. ೦೬-೩೨). **ದೀಂಟು** : ೧. ದೀಂಟು [ಪಾಠಾಂ. ಟಿ] ಗುಳಿಗಳನಱಿಯ ದೇಳುತ್ತೆ ಬೀಳುತ್ತೆ . . . ಅಂಬಿಕಾಭವನಮಂ ಸಾರ್ದನು (ಜೈಮಿಭಾ. ೩೦-೩೪). **ದೀಂಟೆ** : ೧. ತೊಱೆಯ ಮಣಲ ದೀಂಟೆಗಳ ನುಣ್ಪುಮಂ (ಬಂಹರಿ. ೨-೪೨ ವ). ೪. ಕೇಸರಿಯ ದಾಡೆಯು ಜೂದಿನ ದೀಂಟೆ [ಪಾಠಾಂ. ದಿಂಟೆ] ಪೀಲಿಯುಂ ಪೊದೆಸಿದ ಪಂದರಾಳಿಯಲರಾನೆಯ ಮುತ್ತಿನ ರಾಸಿ (ಅರ್ಧನೇ. ೩-೩೦).

[ ದೇ.॥ ತಮಿ. ತಿಟ್ಟು, ತಿಟ್ಟೈ ; ಮಲ. ತಿಟ್ಟು, ತಿಟ್ಟ ; ತುಳು. ತಿಟ್ಟೆ, ಚಿಟ್ಟೆ ; ತೆಲು. ತಿಟ್ಟ ]

**ತಿಟ್ಟುವಾಯ್** (ನಾ). ತೆಗಳುವ ಬಾಯಿ ; ಪರದೂಷಣೆಯಲ್ಲಿ ಆಸಕ್ತಿಯುಳ್ಳ ಬಾಯಿ : ತಿಟ್ಟುವಾಯ ಅಶ್ಲೀಲನೂ, ಕಯ್ಗನಿಸಿನ ಶಸ್ತ್ರಾಡಂಬರನೂ-ಆವುದಕ್ಕೂ ಹೇಸದ ಪಿಶಾಚವತಾರನೇ ಆಗಿರು (ಬಟ್ಟೆ. ೦೭೩-೩). [ ತಿಟ್ಟು$_1$ + ಬಾಯ್ ]

**ತಿಟ್ಟೆ** 'ತಿಟ್ಟು$_3$' ನೋ.

**ತಿಡ್ಡ** 'ತಿಗಟ' ನೋ.

**ತಿಣ** (ನಾ). ಹುಲ್ಲು ; ತೃಣ : "ತೃಣ–ತಿಣ" (ಶಮದ. ೨೬೮ಪ್ರಯೋ) : "ತಿಣವೆಂದು ತೃಣ" (ಶಶಸಾ. ೩೦-೬೬೮) ; "ತೃಣ–ತಿಣ" (ಶಬ್ದಾನು. ೦೩೮ ಪ್ರಯೋ). 'ತಿಣಂಗಿಱು' ಪರಾ. [ <ಸಂ. ತೃಣ ]

**ತಿಣಂಗಿಱು** (ಕ್ರಿ). ಹುಲ್ಲಿಗೆ ಸಮವಾಗಿ ಭಾವಿಸು ; ಅತಿ ನಿಕೃಷ್ಟವಾಗಿ ಕಾಣು : ನಿಸದದಿಂದವನಂ ತಿಣಂಗೆತ್ತು ಬಿಟ್ಟು (ಪಾಸೋಪು. ೯-೧೬೯).

[ ತಿಣ + ಗಿಱು ]

**ತಿಣಕು** 'ತಿಣುಕು$_1$' ನೋ.

**ತಿಣಾತುರ್ಯ** (ನಾ). ಆಹಾರದಲ್ಲಿ ಆಸಕ್ತಿ (?) : ಹಸಿವು ತೃಷೆವೆಸನಂಗಳಲ್ಲಿ ಅಲಕ್ಷಿತನಾಗಿ ಪಾಶಬದ್ಧವಿರಹಿತನಾಗಿ ಗುಣಾವಗುಣವ ವಿಚಾರಿಸದೆ ತಿಣಾತುರ್ಯ ಮುಕ್ತ್ಯಾತುರ್ಯ ಸ್ವಯಿಶ್ವಾತುರ್ಯವೆಂಬ ವುಂಬ ಠಾವಿನಲ್ಲಿ ಬದ್ಧನಾಗದೆ ಸ್ತುತಿಗೆ ನಿಲ್ಲದೆ ನಿಂದೆಗೋಡದೆ ಉಭಯವನೇನೆಂದು ಅಱಿಯದೆ (ಷಟಗೋ. ೦೦೪-೦೨೩). [ ? ]

**ತಿಣ್$_1$** (ಕ್ರಿ). ೧. ಒಟ್ಟಿಗೆ ಸೇರು ; ಒಂದುಗೂಡು ; ಬೆರೆ ; ಗುಂಪುಗೂಡು : "ತಿಣ್–ಸಂಕೀರ್ಣೇ (ಬೆರಸು)" (ಶಮಧಾ). ೨. ಚಿಂತೆಗೊಳಗಾಗು ; ಕಳವಳಿಸು (?) : ದಣಂದಣರನೆ ಪೊಯ್ವ ಮಹಾನಿಸ್ಸಾಣದ ಬಲ್ಲನಿಯಂ ಕೇಳ್ದು ಎಣಿಸಿದರೆರ್ದೆಗೆಟ್ಟರ್ ಭಯಯುಕ್ತರ್ ಪೆಣನಾದರ್ ಪೆಂಪಳಿದರ್ ಜಗುಳ್ದರ್ ತಿಣಿದರ್ ತಕ್ಕಳಿದರ್ ಪರಪೃಥಿವೀಪಾಲಕ ಬಲದವರು (ಜಯುಕಾ. ೭-೦). ೩. (?) : ತಣಪಾಶೆ ಮಾತನಾಡುತ ಮಣವರು ಮೊದಲೊಳಗೆ ಬರಲು ವೈದ್ಯನ ಜನರುಂ ತಿಣಿವರು . . . ತಣಿಯಾಗಲು ನೋಡರವನ ಧನಭಯದಿಂದಂ (ನೀತಿಸಾ. ೮೪೨).

[ ದೇ.॥ ತಮಿ. ತಿಣಿ, ತಿಳ್ಳಿ ]

**ತಿಣ್$_2$** (ನಾ). ಗುಂಪು ; ಸಮೂಹ : ಬಡವ ಬಲ್ಲಿದ ಬುಧ ಯಾಚಕರೆನ್ನದೆ ತಡಗ ತಡಗ ಜವುಳಿಗಳ ತೊಡವು ಪೆಟ್ಟಿಗೆ ಪೆಟ್ಟಿಗೆಗಳ ತಿಣಿಯಿತ್ತು ಒಡನೆ ಶರ್ಕರೆಯ ತಿದ್ದಿಸಿದ (ಜ್ಞಾನಪ. ೩೭-೦೩೮). 'ತಿಂತಿಣಿ$_1$' ಪರಾ.

[ <ತಿಣ್$_1$ ]

**ತಿಣಿಕಿಸು** (ಕ್ರಿ). ಒದ್ದಾಡುವಂತೆ ಮಾಡು ; ಕಷ್ಟಪಡಿಸು ; ಬಳಲಿಸು : ಟಪ್ಪುವನು ತಿಣಿಕಿಸುತ ಕಾದಾಡತೊಡಗಿದರು (ವಿಜದ. ೭೩).

[ ತಿಣಿಕು$_1$ (<ತಿಣುಕು$_1$) + – ಇಸು$_3$ ]

**ತಿಣಿಕು$_1$** 'ತಿಣುಕು$_1$' ನೋ.

**ತಿಣಿಕು$_2$** 'ತಿಣುಕು$_2$' ನೋ.

**ತಿಣಿವು** (ನಾ). (?) : ಕಾಲ್ಗಳ ಕಪ್ಗಳ ತುರಗದ ಕಾಲ್ಗಳ ತಿಣಿವುಗಳೊಳಲ್ಲಿ ಬಂಚಿಸುತಟಿಗಂ ಗೆಲ್ಗುಮನೆ ನೆಗಟ್ದ ಮಾರ್ಗ್ಗದೆ ಗೆಲ್ಗುಮ ಪಿಣಿದಲ್ಲಿ ಕೀರ್ತ್ತಿನಾರಾಯಣನಂ (ಎಕ. II, ೧೩೩-೧೪೭ ; 982). [ ? ]

**ತಿಣುಕಾಟ** (ನಾ). ತಿಣುಕುವಿಕೆ ; ಒದ್ದಾಟ ; ಕಷ್ಟಪಡುವುದು : (ಕ).

[ ತಿಣುಕು$_1$ + ಆಟ ]

**ತಿಣುಕಾಡು** (ಕ್ರಿ). ಬಹಳ ಕಷ್ಟಪಡು,–ಒದ್ದಾಡು : ಆಮೇಲೆ ಕರ್ಣನ ಕವಚವನ್ನು ಸೀಳಿ ಹೊಗಳುಗೊಂಡ ಸೂರ್ಯಕುಮಾರನೂ ತಿಣುಕಾಡುವಂತೆ ಬಾಣಪ್ರಯೋಗವನ್ನು ಮಾಡಿದನು (ವ್ಯಾಸಜಿ. ೩೯೨).

[ ತಿಣುಕು$_1$ + ಆಡು$_1$ ]

**ತಿಣುಕು$_1$, ತಿಣಕು, ತಿಣಿಕು$_1$** (ಕ್ರಿ). ೧. ಭಾರವನ್ನಾಗಲಿ, ನೋವನ್ನಾಗಲಿ ತಾಳಲಾರದೆ ಒದ್ದಾಡು,– ಆಯಾಸಪಡು ; ಮುಲುಕು : ಕಣ್ ತುಮುಟಿ ಪೆರ್ಚಿಡೆಯುಂ ಮಣಿ ಸೂಸೆ ಬೇಸಱಿಂ ತಿಣುಕಿದನಾ ನಲುವ್ಮಳಿಸಿ ಶೇಷನಶೇಷ ಮಹೀವಿಭಾಗಮಂ (ಪಂಪಭಾ. ೯-೯೯) ; ತಿಣು [ಪಾಠಾಂ. ಣಿ] ಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ (ಕುವ್ಯಾಅ. ೧-೧೭) ; ಅನಿಲಜ . . . ಬೊಬ್ಬಿಱಿದು ತಿವಿದನು ತಿಣುಕಲ ಸುರೇಂದ್ರ (ತೊರರಾ. ೬-೨೭-೩೯) ; ಧರಣಿಯ ಪೊರೆಯೊಳು ತಿಣುಕುವ ಫಣಿ ಮೇಲೆ ಹಾಯಾಗಿ ಹರಿ ಮಲಗಿಹನು (ಇಂಚಾಕ. ೧೦೪-೭). ೨. ಅಪಾನವಾಯುವನ್ನು ಬಿಡು ; ಹೂಸು ; ಹುರಿಕೆಬಿಡು : "ತಿಣುಕು (ತಿಣಕು)–ಅಪಾನವಾಯೌ" (ಶಮಧಾ). **ತಿಣಕು** : ೧. ಮಲಗಿರುವ ಹಾವನ್ನು ಕೆಣಕಬೇಡ ಕಚ್ಚಿ ವಿಷ ಕಾರಿದರೆ ತಿಣಕಬೇಡ (ನಾದಲೀ. ೬೩-೦೨) ; ರಾಯರ ಹೆಂಡತಿ ಹೆತ್ತರೆ ಊರೆಲ್ಲ ತಿಣಕಬೇಕೋ ? (ಗಾದ). **ತಿಣಿಕು$_1$** : ೧. ಎಲ್ಲಿ ಇಣಿಕಿದರೂ, ತಿಣಿಕಿ ನೋಡಿದರು ತನ್ನಸಗಲಲೆಡೆಯಿಲ್ಲ ಎಂದರಿದು . . . ನಿಶ್ಚಿಂತ ನಿವಾಸಿಯಾಗಿದ್ದುದೇ ಶರಣನ ಸುಜ್ಞಾನ (ವೋಣಮಾ. ೪ ಪ್ರಸ್ತಾವನೆ).

[ ದೇ.॥ ತುಳು. ತೀಂಕು ; ತೆಲು. ತಿನುಕು ; ಮಲ್ತೊ. ತಿಂಕ್ ]

**ತಿಣುಕು$_2$, ತಿಣಿಕು$_2$** (ನಾ). ಅತಿಕಷ್ಟ ; ತೊಂದರೆ ; ಹೆಣಗಾಟ : ಗೆಡೆವಚ್ಚುಗೊಂಡು ಪಾಂಡವರನಕಾರಣಂ ಕೆಣಕಿದೀ ಪೊಸ ಪೊಟ್ಟುಱೊಳಾದ ಕಿರ್ಚ್ಚ ಕೌರವರ್ಗಿದು ನಾಡೆಯುಂ ತಿಣುಕನಾಗಿಸದೇಂ ಗಳ ಸಯ್ತು ಪೋಕುಮೇ (ಪಂಪಭಾ. ೨-೮೭) ; ಜೂದಾಡಿ ಸೋಲ್ತು ನನ್ನಿಗೆ ಮೇದಿನಿಯುಂ ಕೊಟ್ಟು ಪಾಂಡುನಂದನರೀಗಳ್ ಪೋದೊಡಮೇನ್ ತಿಣುಕಾಗದೆ ಪೋದುಪುದೇ ನಮ್ಮ ನೃಪತಿಗವು ತವುದಲೆಯೊಳ್ (ಪಂಪಭಾ. ೬-೧೮). **ತಿಣಿಕು$_2$** : ಉತ್ತರಭರತದೊಳಾದಾಪತ್ತಂ ನೀನಱಿಯಯಕ್ಕುಮಾಗಿತುಂ ಬಲಮಂ ಮುತ್ತಿ ಚಿಲಾತಾವರ್ತರ್ ಸುತ್ತಲುವೋಸಾಡಿ ಪಿರಿದು ತಿಣಿಕಂ ತಂದರ್ (ಆದಿಪು. ೧೪-೭೦). [ <ತಿಣುಕು$_1$ ]

**ತಿಣುಱು** (ಕ್ರಿ). ಕಟ್ಟು ; ನಿಲ್ಲು ; ತಡೆ : ಮೂಱು ಝಾವದ ಶೂಲೆಗೆ ಹೊಟ್ಟೆ ಬಾವುದು ನಿಲಲಾಱದೆ ನಡುಗುವುದು. ವಿಸಾಱಿದರೆ ಬೀಳುವುದು ಮೂತ್ರ ತಿಣುಱುವುದು (ಅಶ್ವವೈ. ೧೧-೨೩ ಟೀಕು) : ಕೆಡವಡೆ ಮೇಳ್ವಡಂ ಪಡುವಡಂ ಭರಣಂ ತಿಣುಱುತ್ತಮಿಪ್ಪಡಂ ಚರಣವನಾವಗಂ ಬಡಿವಡಂ ಪೆರತೆನಿತು ಶೂಲೆ ತೋಱಿತೆಂದಱಿ (ಅಶ್ವವೈ. ೦೧-೯೭).

[ ದೇ.॥ ತಮಿ. ತಿಣಱು ]

**ತಿಣ್ಣ** (ನಾ). ೧. ಒಜ್ಜೆ ; ಹೊರೆ ; ಭಾರ : "ಬಿಣ್ಪೆಂದುಂ ತಿಣ್ಣಮೆಂದುಂ ಭಾರಂ" (ಕಶಸಾ. ೨೭-೩೭೭) ; "ಭಾರಮದು ತಿಣ್ಣ ಬಿಣ್ಪುಂ" (ಕವಿಕಂ. ೨೨೩); ತೊಡೆಯ ಬಿಣ್ಪು ಪದಾಂಬುರುಹಕ್ಕೆ ತಿಣ್ಣಮೇಂ (ಪಂಪಭಾ. ೩-೪೭); ಮೇದಿನಿಯು ತಿಣ್ಣವನಿಳುಹಲೋಸುಗರ ಆಹವದೊಳರ್ಜುನನ ರಥದೊಳು

ವಾಹಕನು ತಾನಾಗಿ (ಕುಮಾ.ಭಾ. ೩-೯೩) ; ಭೂಮಿಯು ತಿಣ್ಣವನು ತಿದ್ದಲಿಕೆ ಹರಿ ನರನಾಗಿ ರೂಹಿಸಿದ (ತೊರರಾ. ೬-೨-೨೦) : ಸಣ್ಣವನೆನಬೇಡ ಹರಿ ತನ್ನ ಪೆತ್ತವಳಣ್ಣನ ಮಡುಹಿ ಮೇದಿನಿಯ ತಿಣ್ಣವನಿಳುಹಿದ (ಮೋಹತ. ೧೨-೧೬) ; ಪೆಣ್ಣವದಿಂ ಪಾತಕದಿನಿತೊಂದು ತಿಣ್ಣವಂ ಪೊಱುವೊಡೆಂದೇಂ ಬಿದಿ ಮಾಡಿದನೇ (ರಾಜಶೇ. ೧೩-೨೬). ೨. ದೊಡ್ಡದಂ ; ಸ್ಥೂಲವಾದುದು ; ದಪ್ಪವಾದುದು ; ತೋರವಾದುದು : ಸಣ್ಣಂ ನಡು ತಿಣ್ಣಂ ಮೊಲೆ . . . ಬಣ್ಣಿಸಲರಿದಬ್ಜಜಂಗವಾಕೆಯ ರೂಪಂ (ಕಾವ್ಯಸಾ. ೨೮೧ ಶೂದ್ರಕ) ; ತಿಣ್ಣವಾದಾನೆಸಮ್ಮದ ಹೊದಿಕೆಯಿಂ . . . ವಿಶ್ವನಾಥು ಪ್ರಸನ್ನನಾದು (ಪದ್ಮರಾ. ೭-೩೫). ೩. ಅಧಿಕವಾದುದು ; ಹೆಚ್ಚಾದುದು ; ಆಧಿಕ್ಯ : ಬಿಱುವಿಸಿಲುಂ ಸುಡುತಿರೆ ನೀರಡಿಕೆ ತಿಣ್ಣಮಾದತ್ತಾಗಳ್ (ಕಾದಂಪೂ. ೧೯೭) : ನಿಮಗಂ ಪುಣ್ಣ ಬೇನೆ ತಿಣ್ಣಮದಱಿಂ ಮೇಲೆ ಕ್ಷುಧಾಪೀಡೆಯಾದುದಪ್ಪೊಡೆ ಶರೀರವಂ ಸಂಹರಿಸಲ್ಬಾರದು (ಪಂಚತಂ. ೧೪೪-೬) ; ನಿನ್ನ ಗುರು ಹೇಳನೇ ತನ್ನ ಸುತರಳಲ ತಿಣ್ಣವಂ (ಹದಿಶಾ. ೮-೯) ; ಮುಚ್ಚುಮಱೆಯೇಕಣ್ಣ ತಿಣ್ಣದ ಕಿಚ್ಚುದೋಱದೆ ನಮಗೆ (ತೊರರಾ. ೬-೨-೩೨) ; ದುಃಖದ ತಿಣ್ಣವೆನಗಾಯಿತು (ನಿಘಾಗ. ೭-೪-೪). ೪. ತುಂಬಿದುದು ; ಪೂರ್ಣವಾದುದು ; ಮುಂದಣ್ಗೊಪ್ಪುವ ಪಳದಿಯ ಬಣ್ಣಂ ಸಂದಿರ್ಪುದು ಕರ್ಣಿಕೆಯದು ತಿಣ್ಣಂ (ಹಾಲಾಸ್ಯ. ೧-೧-೨೦ ರಗಳೆ). ೫. ಶ್ರೇಷ್ಠವಾದುದು ; ಹಿರಿಮೆ ; ದೊಡ್ಡತನ : ತಿಣ್ಣವೆನಿಸುವ ಭಕ್ತಿ ಕಣ್ಪಡೆದ ಪರಿಯೊಳಿರೆ (ಶಾಂರ. ದೇ. ೨೮೯-೨೨) ; ನೇರಿಳೆರಸದಿಂದ ತಿಣ್ಣವೆಂದೆನಿಸಿದ ನಿಸ್ಸಂಗರಾಗಶೇಷವನು ತಳೆದ ಆ ಗೋದೆಯ ಕೂಲದೊಳು (ಗಾಥಾಸ. ೪೯-೮೯). ೬. ಗಟ್ಟಿ ; ಬಿರುಸಾದುದು ; ದೃಢವಾದುದು : ಕೊಂಬಿಱಿಬಿದ ಮರದಿಂದಗ್ಗಳಂ ತಿಣ್ಣಮಾದಂ (ಶಮುದ. ೨೪೨ ಪ್ರಯೋ). ೭. ಕಷ್ಟ ; ಕಠಿನವಾದುದು ; ಪ್ರಯಾಸಕರವಾದುದಂ : ಆಣ್ಣನಾಜ್ಞಾಭಂಗಕಿದು ತಾ ತಿಣ್ಣವೀ ದೇವಿಯರ ನುಡಿ (ತೊರರಾ. ೩-೯-೧೩) ; ಸಣ್ಣನಡುವಿನ ಚೆಲ್ವಿನತ್ತಿಗೆಯು ವಂಗಿದಿರ್ನಡೆದು ಮನ್ಮಥಯುದ್ಧಕೆ ತಿಣ್ಣವೆನ್ನದೆ ನಿಂದಳ್ (ಭಾವಚಿಂ. ೬-೨೪) ; ಲಜ್ಜಿಸುವ ತಿಣ್ಣಮಂ ಬಿಡಿಸಿ . . . ಪ್ರಚ್ಛನ್ನ ಸಂಭೋಗಿಗಳ್ ಕಣ್ಗೆಸೆದರು (ಕಬಪು. ೧೦-೫೯) ; ಹೀಗೆ ಮೂರುವಿಧದ ಮುನಿಷಿಗಳನ್ನು ಅವರ ಯೋಗ್ಯತಾನುಸಾರವಾದ ಸಂಬಳವನ್ನು ಕೊಡುವುದು ತಿಣ್ಣವಾಗಿತ್ತು (ಮುಸುಗ. ೩೫). ೮. ಪ್ರಬಲನಾದವನು ; ಬಲಿಷ್ಠ ; ಶಕ್ತಿಸಂಪನ್ನ : ಕಣ್ಣತ್ತು ನುತಿಗೈದು ಕಣ್ಣ ಪಡೆದು ಮತ್ತಾ ಕಣ್ಣತ್ತು ಬಳಿಕದ ಪಡೆದು ಕಣ್ಣ ಮೂಗಳವ ಮುಕ್ಕಣ್ಣನಿಂ ಪಡೆದನು ತಿಣ್ಣನೀತನಿಗೆ ತೋಡಹುದೆ (ಭೈರವೇ. ೪-೭೫).

[ ದೇ.॥ ತಮಿ. ತಿಣ್ಣ ; ಮಲ. ತಿಣ್ಣ, ತಿಣ್. / ಪ್ರಾ. ತಿಣ್ಹ. / ಸಂ.ತೀಕ್ಷ್ಣ ]

**ತಿಣ್ಣಂ** (ಅ). ೧. ಹೆಚ್ಚಾಗಿ ; ಅಧಿಕವಾಗಿ ; ವಿಶೇಷವಾಗಿ : ಮುನ್ನಂ ರಘುಕುಲದಹನೋಗ್ರೇಷುವಿಂ ಕಾಯ್ದು ತಿಣ್ಣಂ ಕುದಿಗೊಂಡಟ್ಟಿತ್ತು (ಎಕ. X, ಮುಳಬಾ. ೩೮-೧೩ : ಸು. 990) ; ಎಣ್ಣೆಯಂ ತಿಣ್ಣಮೆಱೆಯದಿರ್ (ವರ್ಧಮಾ. ೭೭-೩) : ನಿಜವಿಜಯಸಿಂಧುರಮುಮಂ ತಿಣ್ಣಂ ನೂಂಕಲುಮಮುಂಕಲುಂ ಬೆಸಸಿ (ಆದಿಪು. ೧೪-೯೪ ವ) ; ಪೊಱಮಯ್ಯಂತಾಗೆ ತಿಣ್ಣಂ ತೆಗೆನೆಱೆದಿಸೆ . . . ಖಚರಪತಿ ಭರಂಗೆಯ್ದು ಕೆಯ್ವೋಗದೆಚ್ಚಂ (ಶಾಂತಿಪು. ೪-೪೨) ; ಕಣ್ಣಂ ರಸನೆಯನೆರ್ದೆಯುಂ ತಿಣ್ಣಂ ದಣಿಯಿಸುವ ಪಲವು ಪೂವಿಂ ಕಾಯಿಂ ಪಣ್ಣಿಂದೆಸೆವಿಮ್ಮಾವಿರೆ ಪಣ್ಣುವಿನಂ ಬಾರ್ತೆಯಿಲ್ಲದೀ ನೇಱಲೊಳೇಂ (ಶಬ್ದಾನು. ೪೭೪ ವ್ಯಾಖ್ಯಾ). ೨. ದಟ್ಟವಾಗಿ ; ನಿಬಿಡವಾಗಿ: ಪಡಿಗಳನಮರ್ಚಿ ಬಿಲ್ಲುಂ ಕುದುರೆಯುಂ ಕಾಲಾಳುಂ ನಾಯ್ಗಳುಮಂ ತಿಣ್ಣಮಿರಿಸಿ (ಪಂಪಭಾ. ೫-೪೭ ವ) ; ಸ್ನೇಹಾಭ್ಯಂಗಮನುಳ್ಳ ಮೆಯ್ಯನೆ ರಜಂ ತಿಣ್ಣಂ ತಗುಳ್ವಂತೆ (ಜೀವಸಂ. ೧೪೦-೧೮) : ತಿಣ್ಣಮೆನಲಂಶುಪರಿಯಲ್ಮುಣ್ಣಿಸಿದೆಳಸಂಜೆಗೆಂಪದಂಟರಲೆಸೆವಕ್ಷುಣ್ಣರುಚಿವಡೆದುಡುಗಳನೆ ಪೆಣ್ಣುಗುರ್ಗಳಿವೆಸೆದುವಾಂತು ಲಾಕ್ಷಾರಸಮಂ (ಉದ್ಭಟ. ೫-೫೩). ೩. ರಭಸವಾಗಿ ; ತೀವ್ರವಾಗಿ ; ವೇಗವಾಗಿ : ಅನಿಬರುಂ ಬಾಳ್ಗಿ[ಟ್ಟಿ] ಮೇಲ್ವಾಯ್ದೊಡರ್ಬಿಸೆ ತಿಣ್ಣಂ ತೆಗೆದರ್ಧಚಂದ್ರಶರದಿಂ ಸೂಟ್ಸೂಟೞೆಚ್ಚಾಗಳ್ (ಪಂಪಭಾ. ೧೨-೧೪೫). ೪. ಸ್ಥಿರವಾಗಿ ; ಚಾಂಚಲ್ಯವಿಲ್ಲದೆ : ಚಂಚಲನಾಗದೆ ತಿಣ್ಣಂ ನಡೆವವನೆ ತಾಂ ತಪೋಧನನಕ್ಕುಂ (ಧರ್ಮಾಮೃ. ೭-೪೪) ; ಅಣ್ಣನ ಮಾತಂ ಮನದೊಳ್ ತಿಣ್ಣಂ ತಳೆದು (ಯಶೋಚ. ೧-೫೦). ೫. ಗಟ್ಟಿಯಾಗಿ ; ಬಿಗಿಯಾಗಿ ; ಭದ್ರವಾಗಿ : ಕಣ್ಣಂ ತಿಣ್ಣಂ ಮುಚ್ಚಿಕೊಂಡಿರ್ಪ ಕಾರಣಮಾವುದು (ಪಂಚತಂ. ೧೭೩-೧೭).

ತಿಣ್ಣಮಾಗು = ೧. ಭಾರವಾಗಂ: ನಿನಗೆ ನೀರ್ತೀವಿರ್ದ ಪೊಂಗಳಸವಿದು ತಿಣ್ಣಮಾಗದು (ಜೈಮಿಭಾ. ೩೪-೨). ೨. ಅತಿಶಯವಾಗು ; ಹೆಚ್ಚಾಗು : ವಿಷಮವಿಷಸದೃಶವಿಷಯಾಮಿಷಕಾಂಕ್ಷೆಯೆ ತಿಣ್ಣಮಾಗೆ ಮತಿಗೆಟ್ಟು (ಸುಕುಮಾ. ೮-೩೬) ; ಆಕೆಯ ಮೇಲೆ ಮೋಹಮುಂ ಸ್ನೇಹಮುಂ ತಿಣ್ಣಮಾಗೆ (ಧರ್ಮಾಮೃ. ೨-೧೧೨) ; ಪಸಿವು ನೀರಟ್ಕೆಯುಂ ತಿಣ್ಣಮಾಗಲ್ (ನೇಮಿಪು. ೧೩-೫೫ ವ). ೩. ಸಾಂದ್ರವಾಗು ; ನಿಬಿಡವಾಗು : ತಾಳುಂತಟ್ಟುಂ ಪೊಯ್ಕೆ ಕಡಿಖಂಡಮಾದ ಮಯ್ಯುಂ . . . ದೆಸೆದೆಸೆಗೆ ತಿಣ್ಣಮಾಗೆ ಸೂಸುವ ಕಣ್ಣಾಲಿಗಳುಂ (ಪಂರಾಮಾ. ೧೩-೫೪ ವ) ; ಮಂಗಳವಾಡದ ಮಹಾಶಿವಲಿಂಗ ದಂಷ್ಟ್ರಗಳೊಳಂ . . . ನುಣ್ಣೆಸಳ್ಗಳು ತಿಣ್ಣಮಾಗಿ ತೀವಿರೆ (ಬಸರ. ೬-೮೫).

[ <ತಿಣ್ಣ ]

**ತಿಣ್ಣಂಬೆಱು** (ಕ್ರಿ). ಆಧಿಕ್ಯವನ್ನು ಹೊಂದು ; ಹೆಚ್ಚಾಗು : ಪೆಣ್ಣಂಚೆಯೆಱಂಕೆಯ ಪೊಯಿಲಿಂದು ತಿಣ್ಣಂಬೆತ್ತುಣ್ಮುವ ನೀರ್ವನಿಯಿಂ ಬಣ್ಣಂಬಡೆಯೆ . . . ಸುಳಿಗೆಲರಾ ಬನದೊಳ್ (ಉದ್ಭಟ. ೨-೨೧).

[ ತಿಣ್ಣ + ಪೆಱು$_1$ ]

**ತಿಣ್ಣಗೆಡಿಸು** (ಕ್ರಿ). ೧. ಭಾರವನ್ನು ತಗ್ಗಿಸು ; ಹೊರೆಯಿಳಿಸು : ಭೂಮಿಯ ತಿಣ್ಣಗೆಡಿಸಿದನಸುರಮರ್ದನನು (ನಿಘಾಗ. ೧೧-೦-೬). ೨. ದೃಢತೆಯನ್ನು ಕೆಡಿಸು ; ಚಂಚಲಗೊಳಿಸು : ಭರದಿ ತೊಲಗಿಸಿ ಲಜ್ಜೆ ತಿಣ್ಣಗೆಡಿಸುತಮವನನುಱೆ ಕಲೆಯ ತೋಳ್ಱಿಯಾಲಿಂಗಿಸುವ ಬಾಲೆಯುಂ ತರವಱಿದು ಚದುರನೊಂದುವ ತೆಱಂಗಂಡು ನಡೆಯರ್ ಮುಂದಕಲ್ಲಿಂದವು (ಚಕುಪು. ೧-೬-೩೭). [ ತಿಣ್ಣಗೆಡು + -ಇಸು$_3$ ]

**ತಿಣ್ಣಗೆಡು** (ಕ್ರಿ). ೧. ಭಾರ ಕುಗ್ಗು ; ಭಾರವಿಲ್ಲದಾಗು ; ತೂಕ ಕಳೆದುಕೊಳ್ಳು. 'ತಿಣ್ಣಗೆಡಿಸು' ಪರಾ. ೨. (ಆಲಂ) ಶಕ್ತಿಗುಂದು ; ದುರ್ಬಲವಾಗು; ಕ್ಷೀಣಿಸಂ: ಬಣ್ಣವಳಿದಮರ್ದುಣಿಸನುಳಿದು ಜಾಣ್ನುಡಿಯೆಡಹಿ ತಿಣ್ಣಗೆಟ್ಟು (ಉದ್ಭಟ. ೪-೪೦) ; ಕಣ್ಣೀರ್ಗಳಂ ಸುರಿವುತಂ ದಂಪತಿಗಳು ಬೆಳರ್ವಣ್ಣಮೆಯ್ಯನ ನೆನೆವುತಾಲೋಚನೆಗೈದು ತಿಣ್ಣಗೆಟ್ಟಿರುವ ಸಮಯದೊಳು (ಪ್ರಭುಪು. ೩-೧೧೨). [ತಿಣ್ಣ + ಕೆಡು$_1$]

**ತಿಣ್ಣಗೊಂಬು** (ನಾ). ದಟ್ಟವಾದ ಕೊಂಬೆ : ತಿಣ್ಣಗೊಂಬಿನೊಳ್ ಬಣ್ಣವಳಿಯದ ಪಣ್ಣಂ ತಿಂದು ತಣ್ಣನೆ ತಣಿದು (ಗಿರಿಕ. ೧-೧೨೮ ವ).

[ ತಿಣ್ಣ + ಕೊಂಬು$_1$ ]

**ತಿಣ್ಣಜವ್ವನ** (ನಾ). ೧. ತುಂಬುಜವ್ವನ ; ಪೂರ್ಣಯೌವನ ; ತುಂಬಿದ ಪ್ರಾಯ : ತಿಣ್ಣಜವ್ವನದ ಚಂಚಿತಿಯರ ಮೆಯ್ ಕಾರ್ಬಣ್ಣದ ಚೆಲ್ವ ನೋಳ್ಪರಿಗೆ ಹುಣ್ಣಮೆಯಾಳ್ದ ತನ್ನೆಸಕವನವರೆಸಳ್ಗಣ್ಗೊಳು ಸಾರ್ಚಿದಂತಿಹುದು (ಮೋಹತ. ೧೯-೬೨). ೨. ತೋರವಾದ ಮೊಲೆ ; ತುಂಬುಸ್ತನ : ಚಿತ್ರ ಪೆಣ್ಣ ಕಂಡಿನಿತು ಭ್ರಾಮಿಸಿದೆ ತಿಣ್ಣಜವ್ವನವೆತ್ತ ಕೆಳದಿ ಕೇಳ್ ನಿಮ್ಮನು ಕಣ್ಣಾಱೆ ಕಂಡರಿನ್ನೆಂತೋ (ಮೋಹತ. ೩೧-೨೪).

[ ತಿಣ್ಣ + ಜವ್ವನ ]

**ತಿಣ್ಣನೆ** (ಅ). ೧. ಚೆನ್ನಾಗಿ ; ಹೆಚ್ಚಾಗಿ ; ವಿಶೇಷವಾಗಿ ; ಅಧಿಕವಾಗಿ : ಬಳಿಕ ಮಾಯಾಂಗನೆಯ ಮನಸಿಗೆ ತಿಳಿವು ತಿಣ್ಣನೆ ತಿಟ್ಟವಿಟ್ಟತು (ಪ್ರಭುಲಿಂ. ೬-೮). ೨. ರಭಸವಾಗಿ ; ತ್ವರೆಯಾಗಿ ; ಕೂಡಲೆ : ಮುಂದಿನುಣ್ಬರ ಬಾಯೊಳ್ ತಿಣ್ಣನೆ ಕಿರ್ಚಂ ಪುಡಿಯಂ ಮಣ್ಣಂ ಪೊಯ್ದಂತು ಮಾಡಿದ್ದೈ ದೂರ್ತಿಂದಂ (ಧರ್ಮಾಮೃ. ೯-೧೩೬) : ಉಣ್ಣದರೂರೊಳಗಣ ದೇವಿಯರಂ ನುಣ್ಣಸಿದಸಿಧಾರಾಪೂರ್ವಕದಿಂ ತಿಣ್ಣನೆ ಕೈಗೂಡಿಸಿ ಭೂತಮುಮಂ ಬಿರ್ದುವೊಲೆಯ್ದಿಸುವಂ (ಜಯನೃ. ೬-೯). ೩. ಬಿಗಿಯಾಗಿ ; ಗಟ್ಟಿಯಾಗಿ; ದೃಢವಾಗಿ : ನಿನ್ನ ಮೋಹವು ಎಂಬ ಉನ್ನತದ ಪಾಶದಲಿ ತಿಣ್ಣನೇ ಬಿಗಿದಿರ್ಪ ನುಸುಳುವರಾರು (ಸುಶಾರ. ೧೫-೩). [ ತಿಣ್ಣ + - ಅನೆ₁ ]

**ತಿಣ್ಣಮಾತು** (ನಾ). ತೀಕ್ಷ್ಣವಾದ ಮಾತು ; ಕಠೋರವಾದ ನುಡಿ ; ಉಗ್ರವಚನ : ಕಣ್ಕೊಳ್ಳುರಿಯ ಸೂಸುತಣ್ಣಾನಡಿದ ಕಡುತಿಣ್ಣಮಾತಿಗೆ ನಸುನಗುತ (ಶ್ರೀಕೃಷ್ಣಾಂ. ೦೨-೧೪೦). [ ತಿಣ್ಣ + ಮಾತು₁ ]

**ತಿಣ್ಣಮಿಡು** (ಕ್ರಿ). ಬಲವಾಗಿ ಹೊಡೆ : ಅವನ ವಠಾಥವನೆ ತಿಣ್ಣ ಮಿಟ್ಟೊಡೆ (ಶಂಕಥಾ. ೦೨-೧೪೯). [ ತಿಣ್ಣಂ + ಇಡು₁ ]

**ತಿಣ್ಣಮೊಲೆ** (ನಾ). ೧. ದೊಡ್ಡ ಮೊಲೆ ; ಪೀನಕುಚ ; ಗುರುಕುಚ : ತಿಣ್ಣಮೊಲೆಗಳ್ಗೊಡಳೆ ಬೆನ್ನ ಸೋಮರ್ಮುಡಿಯುಲೆಯೆ (ಕ್ಷ್ಮಿಮಿಥಾ. ೮-೧೮). ೨. ಬಿಗಿಯಾದ ಮೊಲೆ ; ಬಿಗಿಯುಂಟ ಕುಚ : ತಿಣ್ಣಮೊಲೆ ಬಣ್ಣಿಡರ ಕಾಬ್ಬಂದಗತಿಗಲಸೆ (ಕ್ಷ್ಮಿಮಿಥಾ. ೧೮--೩೪). [ ತಿಣ್ಣ + ಮೊಲೆ₁ ]

**ತಿಣ್ಣವಡೆ** (ಕ್ರಿ). ಅತಿಶಯವನ್ನು ಹೊಂದು ; ಆಧಿಕ್ಯವನ್ನು ಪಡೆ : ತಿಣ್ಣವಡೆದ ಪವಳದ ಪಸರಗಳಾಗ ಕಣ್ಣ ಕೊಕ್ಕರಿಸುತೊಪ್ಪಿದುವು (ಕಂನವಿ. ೬-೬೭) ; ಕಣ್ಣನೊಳಗೆ ಖಾನ ಕನಸಿನೊಳಗೆ ಖಾನ ಬಣ್ಣಿಸೆ ಮನದೊಳು ಖಾನ ತಿಣ್ಣವಡೆದ ಖಾನನ ಸುದ್ದಿ ಜಪವಾಗಿ ಬಣ್ಣಗೆಟ್ಟುದು ಲೋಕವೆಲ್ಲ (ಕಂನವಿ. ೦೧-೩೪). [ ತಿಣ್ಣ + ಪಡೆ₁ ]

**ತಿಣ್ಣವಲೆ** (ನಾ). ಮೃಗಗಳನ್ನು ಹಿಡಿಯಲು ಬಳಸುವ ಒಂದು ಬಗೆಯ ಭಾರವಾದ ಬಲೆ: ತಿಣ್ಣವಲೆ ಜೋಡುವಲೆ ಹೊಸೆದಿಕ್ಕಣ್ಣವಲೆ ಪೂಜೆಗಳು ವಿಂಧ್ಯಕನ ಕೂಡೆ (ಸಾಳ್ವಭಾ. ೫-೦೮). [ ತಿಣ್ಣ + ಬಲೆ₁ ]

**ತಿಣ್ಣವೆಳಗು** (ನಾ). ದಟ್ಟವಾದ ಬೆಳಕು ; ಹೆಚ್ಚಾದ ಬೆಳಕು : ಬಂದುಗೆಯ ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ ತವ್ಮೊಳಿರ್ಪುಡಿಸೆ (ಗಿರಿಜಾ. ೬-೦೦ ವ). [ ತಿಣ್ಣ + ಬೆಳಗು₃ ]

**ತಿಣ್ಣಸಂಕಲೆ** (ನಾ). ೧. ಭಾರವಾದ ಸಂಕೋಲೆ ; ಹೊರೆಯಾದ ಬೇಡಿ. ೨. (ಅಲಂ) ಅತಿ ನಿರ್ಬಂಧ ; ಕಟ್ಟೊತ್ತಾಯ : ಕಣ್ಣಲಿವರ ಕಪ್ಪ ದೊಳ್ಕೊಡರ್ದು ಶಿಷ್ಯತೆಯಿಂ ಕಲೆಗಲ್ವ ತಿಣ್ಣಸಂಕಲೆಗೆ ಬೆಮರ್ತು ಸುಯ್ವರದ ! (ಸಂಸಪ. ೫-೭). [ ತಿಣ್ಣ + ಸಂಕಲೆ ]

**ತಿಣ್ಣೆ** (ನಾ). ಒಂದು ಊರಿನ ಹೆಸರು : ತೆಂಕನೋಡಿ ಕಿಬರ ತಿಂಣೆ ಪೆಣ್ಣಗಾಲನಿ ಎರೆಟ್ಟಿಸಣ್ಣಾರಿ ಭೂಮಿನ್ನ ಪೇರೊಟ್ಟಿಯ ತುಟ್ಟಿಲೆ ಎರವಡಿಯ (ಎಕ. III, ನಂಜನ. ೦೨೨-೧೮ : ಕೃ.ಶಾ). [ ? ]

**ತಿಣ್ಣಿತು** (ಗು). ೧. ಭಾರವಾದ. ೨. ದೊಡ್ಡದಾದ. (ನಾ). ೩. ದೊಡ್ಡದು: ತಿಣ್ಣಿತಾದುವು ಮೊಲೆ ಮುಡಿ ಪೊಜವರ್ಗಳು ನುಣ್ಣಿತಾದುವು ಕದಪುಗಳು (ನಾಗಕು. ೫-೩೩). [ < ತಿಣ್ಣ ]

**ತಿಣ್ಣಿಸು, ತಿಣ್ಣೈಸು** (ಕ್ರಿ). ೧. ಹೆಚ್ಚಾಗು ; ಉಲ್ಬಣಿಸು : ಸಣ್ಣವನು ಸಲೆ ಮಕ್ಕಳಾಟದಿ ಮಣ್ಣನೊಯ್ಕ ರಸಾತಲಕೆ ಕಡು ತಿಣ್ಣಿಸಲ್ಕಮರರಿಗೆ ಭಯ (ಪ್ರಹ್ಲಾದ. ೧೫-೬೫). ೨. ತುಂಬು ; ವ್ಯಾಪಿಸು : ನಯನದಿ ತಿಣ್ಣಿಸಿದವಶ್ರುಗಳು (ಜರಾಮಾ. ೬೭-೩೮) ; ಕಣ್ಣು ಮನ ಕೊಂಬನಿತು ಅವನಿಯ ತಿಣ್ಣಿಸಿಹ ಬಲ (ಜರಾಮಾ. ೨೨೦-೬). **ತಿಣ್ಣೈಸು** : ೩. ದಪ್ಪವಾಗು ; ದೊಡ್ಡದಾಗು : ಗುಣವತಿಯ ತೆಳ್ವಟ್ಟ [ ತೆಳ್ವೊಟ್ಟೆ ] ನವಮಾಸಂಬರಂ ತಿಣ್ಣೈಸಿರಲ್ (ಮದೀಪು. ೩-೮). [ ತಿಣ್ಣ + - ಇಸು₃ ]

**ತಿಣ್ಣೈಸು** 'ತಿಣ್ಣಿಸು' ನೋ.

**ತಿಣ್ಪು, ತಿಂಪು** (ನಾ). ೧. ಭಾರ ; ಹೊರೆ : ಬಲ್ಮೊಲೆಯ ತಿಣ್ಪಿಂಗೆ ನಡು ಬಳ್ಕೆ (ರಾಮಾಶ್ವ. ೯-೧೧). ೨. ದೊಡ್ಡದಾಗಿರುವಿಕೆ ; ದೊಡ್ಡದು : ಕಡೆದು ಮಾಡಿದುವೆನಿಪ ಪೊಱವಾಱ ತಿಣ್ಪನಿಂ (ಅಜಿಪು. ४-೭) : ಬಟ್ಟ ಎರ್ದೆವೊಲೆಯೇಂ ತಿಣ್ಪೊ ಕಾಯ್ಪುವನ ಬಿಸುಪಿಗೇಂ ಬಿರ್ದಾಗಿ ತಂದಿತ್ತ ಕಟ್ಟಳೆಯ ಮೊಗೆಯೇ? (ಕಾಲಾರ. ೧೨೭-೨೭೦). ೩. ಹೆಚ್ಚಳ; ಅತಿಶಯ; ಹಿರಿಮೆ ; ಮಹತ್ವ: ದಿಟ್ಟತೆಮಳ್ಕನ್ನೆಗಂ ನುಣ್ಪಂ ತಿಣ್ಪುಮನೊಳಕೊಂಡು . . . ಮಾಡಿದ ವಾಹಳಿಗಳ್ ಮನೋಹರಂ (ಶಾಂತಿಪು. ೯-೧೪೩ ವ) : ಸಿಂಪಿಣಿಯ ತಣ್ಪನಿಂ ಪೂವಲಿಯ ತಿಣ್ಪನಿಂ ಮನಂಗೊಳಿಸುವ ಭವನಾಂಗಣ ದೊಳ್ (ಕಾದಂಕ. ४೬೨); ಮೃಗರಾಜನ ಶಕ್ತಿತ್ರಯದ ಗುಣ್ಪುಮಂ ಬಾಹುಬಲದ ತಿಣ್ಪುಮನಱಿದಂ ಬಗೆಯೊಳ್ (ಪಂಪಭಾ. ೯೬-೯) ; ಪರವೆ ಕೇಕಿಗಳ ತಾಂಡವಮಂ ನುಣ್ಬರದ ತಿಣ್ಪು ಘನಘೋಷಗಭೀರಂ (ಕಾವ್ಯಾವ. ೭४). ४. ದೃಢತೆ ; ಸ್ಥೈರ್ಯ : ಕುಲಗಿರಿಗಳ ಬಣ್ಪುಮಂ ಧರಾತಳದ ತಿಣ್ಪುಮಂ . . . ಅವರವರ ದೆಸೆಗಳಿಂ ತೆಗೆದೊಂದು ಮಾಡಿ (ಪಂಪಭಾ. ೧-೧೩೯ ವ) : ಎಳೆಯೊಳು ಸಾದೃಶ್ಯಮಪ್ಪಂದೆಱಿಗವಿಭುಗೆ ಬಿಣ್ಪಿಂಗೆ ಗುಣ್ಪಿಂಗೆ ತಿಣ್ಪಿಂಗೆಳೆ ಪಾರಾವಾರವಿಂದ್ರಾಚಳಂ (ಎಇ. XVI, ೬೦-೧४ ; 1081) ; ಕನಕಾದ್ರೀಂದ್ರಕ್ಕಮಂಭೋನಿಧಿಗಮವನಿಗಂ ಪೆಂಪಿನೊಳ್ಗಿಣ್ಪ ನೊಳ್ತಿಣ್ಪನೊಳೆಂತುಂ ತಾನೆ ಪೋ: ಪಾಸಟಿ (ಎಕ. VIII, ತೀರ್ಥಹ. ೧९२-೭ ; 1103). **ತಿಂಪು:** ೩. 'ತಿಂಪುಗೆಡು' ಪರಾ.

[ < ತಿಣ್ಣ + - ಪು₂ ]

**ತಿತಯ** (ನಾ). ಮೂರರ ಸಮುದಾಯ ; ಮೂರು : ತದ್ಭಿತೇ- ತಿತಯಂ, ತ್ರಿತಯಂ (ಶಬ್ದಾನು. ३೭೭ ಪ್ರಯೋ). [ < ಸಂ. ತ್ರಿತಯ ]

**ತಿತವು** (ನಾ). ಒಂದರಿ ; ಜರಡಿ ; ಸಾರಣಿಗೆ. [ < ಸಂ. ತಿತಉ ]

**ತಿತಿ₁** (ನಾ). ಸ್ಥಿತಿ : ಉತ್ಪತ್ತಿ ತಿತಿ ಲಯರಹಿತನೆನಿಪ . . . ಶ್ರೀ ಗುರುವೆ (ಬಸವು. ೭-೧३); ಸ್ಥಾನ-ತಾಣ ; ಸ್ಥಿತಿ-ತಿತಿ (ಶಬ್ದಾನು. ೧४९ ಪ್ರಯೋ).

[ < ಸಂ. ಸ್ಥಿತಿ ]

**ತಿತಿ₂** (ನಾ). = ತಿಥಿ : "ತಿತಿ - ೧. ಸ್ಥಿತಿ, ೨. ತಿಥಿ" (ತದ್ಭಕೋ. ೧೭)

[ < ಸಂ. ತಿಥಿ ]

**ತಿತಿಕ್ಷಾನ್ವಿತ** (ಗು). ೧. ಸಹನೆಯಿಂದ ಕೂಡಿದ ; ಸೈರಣೆಯುಳ್ಳ. (ನಾ). ೨. ತಾಳ್ಮೆಯುಳ್ಳವನು; ಸಹನೆಯಿಂದ ಕೂಡಿದವನು: ಮುನಿದೊಡನೆ ಕೆಳರ್ದು ನುಡಿದನುಜನಂ . . . ತಿತಿಕ್ಷಾನ್ವಿತನನಾಕುಳಂ ನುಡಿಗುಮೆಸೆಯೆ ದಶನದ್ಯುತಿಗಳ್ (ಶಾಂತಿಪು. ३-४೦) ; ಗುಣಿ ತಿತಿಕ್ಷಾನ್ವಿತ ನಿರ್ಮಲಚರಿತ ನೆರಪನಱಿಯಂ . . . ಎನಿಪನಪ್ಪುದು ಕೆಳೆಯಂ (ಪಂಚತಂ. ३४೭-२).

[ ಸಂ. (ತಿತಿಕ್ಷಾ + ಅನ್ವಿತ) ]

**ತಿತಿಕ್ಷು** (ನಾ). ಸಹನೆಯುಳ್ಳವನು ; ತಾಳ್ಮೆಯುಳ್ಳವನು : ತಿತಿಕ್ಷು ಎಂದರೆ ಸಹನಶೀಲನಾಗಬೇಕು (ಭಾತತ್ತ್ವ. ೫೦೭). [ ಸಂ. ]

**ತಿತಿಕ್ಷೆ₁** (ನಾ). ತಾಳ್ಮೆ ; ಸೈರಣೆ ; ಸಹನೆ : "ಕ್ಷಾಂತಿ ತಿತಿಕ್ಷೆ ಸಹಿಷ್ಣುತೆಯು" (ಪಶ್ಚಕೋ. ೦೦२-೮) ; ಪ್ರಾರಬ್ಧಸಿದ್ಧಮಾದ ತಾಪತ್ರಯ ಶೀತೋಷ್ಣಾದಿ ದುಃಖಂಗಳಂ ಸೈರಿಪುದೆ ತಿತಿಕ್ಷೆಯಕ್ಕುಂ (ವಿವೇಕ. ೦೫) ; ಶಾಂತಿಯಿಂ ಸುಖ ದುಃಖವುಭಯವನಿಂತು ಸೈರಿಸುವುದೆ ತಿತಿಕ್ಷೆಯು (ಗಗಕಾ. ३-२೫) : ನನಗಿರಲಿ ಆ ಶಿಕ್ಷೆ ! ಶಿಕ್ಷೆಯೆಂದರಿಯದಿರ್ ಶಿಕ್ಷೆಯಲ್ತು, ತಿತಿಕ್ಷೆ (ಶ್ರೀರಾಮಾ. ೭೭೦-२೬४). [ ಸಂ. ತಿತಿಕ್ಷಾ ]

**ತಿತಿಕ್ಷೆ₂** (ನಾ). ಕುದುರೆಸವಾರಿಯಲ್ಲಿ ಒಂದು ಬಗೆ (?) : ದಾರ ಗತಿ ಲಯ ಪೊಯ್ದು ಕಾಯಿಕ್ಷಂ ತಿತಿಕ್ಷೆ ಪಿತನೆರಿತುರ(ಗ?) ಸಮಾನಂ . . . ಎಂಬ ಭೇದಂಗಳಿಂದಶ್ವಮನೇಜಲು ರೇಟಿಗನೃಪತಿ ತಾನೆ ಬಲ್ಲಂ (ಮದಕಿ. ೦-२०). [ ? ]

**ತಿತಿಯ** (ಗು). ಮೂರನೆಯ: ತಿತಿಯಂ, ತೃತೀಯಂ; ಚೌತಂ, ಚತುರ್ತ್ಥಮಿತಿ (ಶಬ್ದಾನು. ೩೭೬ ವ್ಯಾಖ್ಯಾ). [ <ಸಂ. ತೃತೀಯ ]

**ತಿತ್ತರಬಿತ್ತರಿ** (ನಾ). "ಗಜಿಬಿಜಿ" (ಕಾನಕೋ. ೬೬). [ ? ]

**ತಿತ್ತಿ** 'ತಿದಿ' ನೋ.

**ತಿತ್ತಿರ** (ನಾ). ಒಂದು ಬಗೆಯ ಹಕ್ಕಿ ; ತಿತ್ತಿರಿಹಕ್ಕಿ ; ಕವುಜಗ: ಅವನ ಪಂಡಿತಭಾವವನ್ನು ಪ್ರಕಾಶಪಡಿಸುವುದಕ್ಕಾಗಿ ಗೋವು . . . ಜಿಂಕೆ, ತಿತ್ತಿರ, ದೇವತೆ, ನಾಗರಾಜ, ತಪಸ್ವಿ, ಬ್ರಾಹ್ಮಣ ಬಾಲಕರು ಎಂಬ ಹದಿನಾಲ್ಕು ವಿಷಯಗಳನ್ನು ಅವನ ಬಳಿ ತಂದರು (ಬುದ್ಧಪ. ೪೦). [ ಸಂ. ]

**ತಿತ್ತಿರವಕ್ಕಿ** (ನಾ). = ತಿತ್ತಿರ: "ತಿತ್ತಿರಃ–ತಿತ್ತಿರವಕ್ಕಿ" (ನಾಚಿರಾ. ೧೧೫).
[ ತಿತ್ತಿರ + ಪಕ್ಕಿ$_1$ ]

**ತಿತ್ತಿರಿ**, ತುತತೂರಿ, ತುತ್ತಾರಿ, ತುತ್ತುರಿ, ತುತ್ತೂರಿ (ನಾ). ೧. ಉದ್ದವಾದ ಒಂದು ಬಗೆಯ ಊದುವ ವಾದ್ಯ ; ತೂರ್ಯ: ಬಿರುದಿನ ಕಹಳೆ ತಿತ್ತಿರಿಗಳಲ್ಲಲ್ಲಿ (ಇಹರ. ದೇ. ೩೭-೨೨); ಎಡವಿಡದೆ ಚೀಱಿದವು ಕೋಟಿ ಹೆಗ್ಗಾಳೆಗಳು ಚಿನ್ನತಿತ್ತಿರಿ ಬೊಂಬುಳಿ (ಹರಿಶಾ. ೩-೧೯) ; ಕಹಳೆಯ ಗೌಳಿಗಳ ತಿತ್ತಿರಿಯ ಚಿನ್ನದ ಚೀಱುಗಳ ನಿಡುಗೊಂಬುಗಳ ಚಂಬಕನ ನಿರ್ಘೋಷ ಡೋಱುಗಳೆದುವು (ಕುವ್ಯಾಕ. ೨೦-೭) ; ಹತ್ತು ದಮಾಮ ಹತ್ತು ಡೋಳು ಕಹಳೆ ಹತ್ತು ಹತ್ತು ತಿತ್ತಿರಿಯೊಂದು ಭೇರಿ (ಕುರಾಸಾಂ. ೪೧-೬೬): ಬೊಂಬುಳಿ ಪಟಹ ಮೃದಂಗ ತಿತ್ತಿರಿ ಕಾಳೆ ಬೆಂಬಳಿಯೊಳು ಗಳಬಳಿಸೆ (ಭರತ. ೪೦-೩೦). **ತುತತೂರಿ:** ೧. ಕಹಳಾ ಭೇರಿ ನಗಾರಿ ತಮ್ಮಟೆ ತುತತೂರೀ ಪೌರಿ ನೌಪೂರಿಗಳ್ (ಬೀಳವಂ. ೨-೨೮೧) ; ಕವಿತೆ ಜೀವನ ಸಮರ ಯೋಧರ ತುತತೂರಿ (ಗೀವಿಂ. ೨೧-೯) ; ತುತತೂರಿಯನೂದಿದರೆ ತುಬಟ ಬಂದೀತೆ ? (ಗಾದ) ; ತುತತೂರಿಗೆ ಮುತ್ತು ಕೊಟ್ಟ ಹಾಗೆ (ಗಾದ). **ತುತ್ತಾರಿ:** ೧. ಆ ಕಾಲದಲ್ಲಿ ಕೆಲವರು . . . ಹೆಗ್ಗಾಳ ತುತ್ತಾರಿ ಮೊದಲಾದ ವಾದ್ಯಗಳನ್ನು ಮಾಡುತ್ತಲಿರುವವರೂ (ಕೃವಾಶ. ೮೦). **ತುತ್ತುರಿ:** ೧. ಆರೆಚ್ಚರಕೀ ತುತ್ತುರಿ ಬಾನೊಳು ಮೊಳಗುತಿದೆ (ಗಜೀಶ. ೨೪-೩) ; ವಿಪ್ಲವಮೂರ್ತಿಯ ಕಳಿಸ್ಯಾಳಸಂಚನು ತುತ್ತುರಿಯನೂದುತ ನೀ ಬಾರ ! (ಪಾಂಚಜ. ೨೪-೨೩). ೨. ಗಲಾಟೆ; ಗದ್ದಲ: ತುತ್ತುರಿ ಜಂಗುಳಿ ದೈವಗಳನೆಲ್ಲವ ಹಿಂಡುಮಾಡಿ ಕಾಪ(ಮ?) ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಾಳನೀತ (ಸರ್ವಪ. ೮೭-೪೮೪). **ತುತ್ತೂರಿ:** ೧. ತಂಬಟೆ ಹಱೆ ಚಂಬಕ ಮವುರಿ ತುತ್ತೂರಿ ಮುಂಬರಿದೆಸೆವ ನಾನಾವಾದ್ಯಗಳಾಡಂಬರ (ಕಂನವಿ. ೩-೩೮) ; ತಂಬೂರಿ ತುತ್ತೂರಿಗಳ್ (ಪರ್ಷನ. ೩-೩೧) ; ದಾಸಯ್ಯನು ಒಂದು ತುತ್ತೂರಿ ಊದಿ ಬವನಾಸಿ ತುಂಬ ಭತ್ತ ತುಂಬಿಕೊಂಡು ಹೋಗುತ್ತಿದ್ದನು (ಹುಟ್ಟಿಹ. ೬೪).
'[ ದೇ.॥ ತಮಿ. ತುತ್ತಾರಿ, ತಾತ್ತಿರಿ ; ಮಲ. ತುತ್ತಾರಿ;
ತುಳು. ತಿತ್ತಿರಿ, ತುತ್ತಾರಿ, ತುತ್ತೂರಿ; ತೆಲು. ತುತಾರ./
ಮರಾ. ತುತಾರೀ. / ಸಂ. ತೂರೀ, ತೂರ ]

**ತಿತ್ತಿರಿ$_2$** (ನಾ). = ತಿತ್ತಿರ : "ಕ್ರಕರ ಕಪಿಂಜಳ ತಿತ್ತಿರಿ ಚಕೋರ ಹಾರೀತ ಕುರವ . . . ಶಾರಿಕಾದಿಗಳ್ ವಿಹಗಜಾತಿಯುಕ್ಕುಂ" (ವಸ್ತುಕೋ. ೪೩-೨೧); ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ಕೊಲುತ ಬಹ ಬೇಡರ್ಗೆ ಸಿಕ್ಕದೋಡಿದುದೊಂದೆರಳೆ (ಜೈಮಿಭಾ. ೨೮-೫೨); ಕಂಕಂ ತೊಂಡಿಗಂ ಸೋರೆ ತಿತ್ತಿರಿ ಕೋಕಂ ಪಿಕಳಂ ಬಕಂ ಶಿಖಿ ಶುಕಂ . . . ಚಿಲುಕೂಲಿ ರತ್ನವಿಗ ವಿಕರ್ಣಂ ತದ್ವನಾಗೌಘದೊಳ್ (ರಾಜಶೇ. ೫-೫೯); ಗೌಜು ತಿತ್ತಿರಿ ಘೂಕಂ ಶಿಖಿ (ಯಾದವ. ೪-೫೩). [ ಸಂ. ]

**ತಿತ್ತಿರಿ$_3$** (ನಾ). ಒಂದು ಬಗೆಯ ಮರ: ಗಿರಿಕರ್ಣಿಕಾ ತಿತ್ತಿರಿಯೆಂಬ ವೃಕ್ಷಗಳು ಫಲವಾಗದೆಯಿರುವ ಮರಗಳು (ಸೌಗಂಧಿ. ೪೨೭-೧೦).
[ ? ]

**ತಿತ್ತಿರಿಗಾಳೆ** (ನಾ). ಒಂದು ಬಗೆಯ ಕಹಳೆ: ಕರ್ಣವುಂ ತೆಱೆದು ತಿತ್ತಿರಿಗಾಳೆಯನಾಲಿಸುತ್ತೆ ಪಿಂಡೊಡೆಯದೆ ಕೂಡಿ ಬರ್ಪ ಪಲವಾಕಳನೀಕ್ಷಿಸಿದಂ ನರಾಧಿಪಂ (ಲೀಲಾವ ೫-೧೦೩): ಬೊಂಬುಳಿಯಟ್ಟುಗಾಳೆಯ ತಿತ್ತಿರಿಗಾಳೆಗಳ ಕೋಳಾಹಳವೆತ್ತಂ ಶೀವೃತ್ತಿರ (ಕುಮುರಾ. ೮-೩೭) ; ಲೋಲ ಕರ್ಣವನೆತ್ತಿ ತಿತ್ತಿರಿಗಾಳೆಗಳ ನಿಂದಾಲಿಸುತ . . . ಕಱುಗೂಡಿ ಗೋವನ ಗಾಳಿಗೈತಹ ಗೋವುಗಳ ಸುಕುಮಾರನೀಕ್ಷಿಸಿದ (ಜೀವಂಜ. ೬-೨೬).
[ತಿತ್ತಿರಿ$_1$ + ಕಾಳೆ (<ಕಹಳೆ)]

**ತಿತ್ತಿರಿವಕ್ಕಿ** (ನಾ). = ತಿತ್ತಿರ : "ತಿತ್ತಿರಃ – ತಿತ್ತಿರಿವಕ್ಕಿ" (ನಾಚಿರಾ. ೧೧೫).
[ ತಿತ್ತಿರಿ$_2$ + ಪಕ್ಕಿ$_1$ ]

**ತಿಥಿ** (ನಾ). ೧. ಚಾಂದ್ರಮಾನದ ಒಂದು ದಿವಸ: "ಪಾಡಿವಮಾದಿಯೆನೆ ತಿಥಿ ಪಕ್ಷಸ್ಥಿತಿಯೊಳ್ ಪದಿನಯ್ದುಕ್ಕುಂ" (ವಸ್ತುಕೋ. ೦೬-೭); "ನಾಡಿಯಾಜು ವತ್ತಕ್ಕೆ ಒಂದು ತಿಥಿಯಕ್ಕು" (ಕುಂಗರಾ. ೨೦-೯) : ಇಪ್ಪತ್ತುನಾಲ್ಕು ತಿಥಿಯಿಂದ ವೆಗ್ಗಳ . . . ನಿಮ್ಮ ಮಾಣದೆ ನೆನೆವಂಗೆ (ಬಸವ. ೬೧೦) ; ಅಖಂಡಜ್ಞಾನ ಸತ್ಕ್ರಿಯಾಚಾರಮಯವಾದ ಶರಣಂಗೆ ವಾರ ತಿಥಿ ಲಗ್ನ ವಿಘ್ನಂಗಳಿಲ್ಲ (ಅಖಂಡೀ.೩೧೨-೧೦೨); ಮಾಸಕೆ ಪಕ್ಷವೆರಡು ತಿಥಿ ಮೂವತ್ತುಂ (ಭಾಸ್ಕರ. ೫೨-೨). ೨. ಪಿತೃಗಳು ಗತಿಸಿದ ದಿನ ಮತ್ತು ಆ ದಿನದಲ್ಲಿ ಪ್ರತಿವರುಷವೂ ಆಚರಿಸುವ ಶ್ರಾದ್ಧ ; ಪಿತೃಕಾರ್ಯ ; ತದ್ದಿನ : ತಿಥಿ ಮೇಲೆ ತಿಥಿ ಬರಲೊ ಗೋವಿಂದ (ಗಾದ).

**ತಿಥಿಮಾಡು**=೧. ಶ್ರಾದ್ಧಮಾಡು. ೨. ಕಷ್ಟಕೊಡು; ಹಿಂಸೆಪಡಿಸು: ಇವತ್ತು ನಿನ್ನ ತಿಥಿಮಾಡಿಬಿಡುತ್ತೇನೆ (ರೂಢಿ). [ ಸಂ. ]

**ತಿದಂಡಿ** (ನಾ). (ವಾಗ್ದಂಡ, ಮನೋದಂಡ ಮತ್ತು ಕಾಯದಂಡ ಸೂಚಕವಾದ) ತ್ರಿದಂಡವನ್ನು ಹಿಡಿಯುವ ಸಂನ್ಯಾಸಿ.–ಯತಿ : ತಿದಂಡಿ, ತ್ರಿದಂಡಿ; ತಿಗುಂಡಂ, ತ್ರಿಕುಂಡಂ (ಶಬ್ದಾನು. ೩೭೬ ಪ್ರಯೋ).
[ <ಸಂ. ತ್ರಿದಂಡಿನ್ ]

**ತಿದಿ**, ತಿತ್ತಿ (ನಾ). ೧. ಬೆಂಕಿಗೆ ಅಥವಾ ಊದುವ ವಾದ್ಯಗಳಿಗೆ ಗಾಳಿಯನ್ನೂದುವ ಚರ್ಮದ ಸಲಕರಣೆ : "ದೃತಿ ಎಂಬುದು ತಿದಿ" (ಹಲಾಯು. ೦೨೬-೭೯); ಉಸಿರೊತ್ತಿಂ ತಿದಿಯಂತಿರೊತ್ತಿದ ಬಸಿಱ್ ಪೋತಂದ ಕಣ್ ಬಿಟ್ಟ ಬಾಯ್ (ಪಂಪಭಾ. ೧೨-೦೫೧) ; ತನ್ಮುಖ ಯುಗದಿಂದರುಣಜಳಮುಣ್ಮೆ ತಿದಿಗಳಸಿರದೊತ್ತುವ ಕಮ್ಮಱಂ ಬೊಲಿರ್ದಂ ಭೀಮಂ (ನೇಮಿಪು. ೧೨-೦೫೮) ; ವಿಶ್ವಾಸಭುಗಂ ತಿದಿಗಳೊಳ್ ನಿಂದಿಸುವುದು ಯುದ್ಧದೊಳ್ . . . ಅರ್ಥವಾದಂ ಸ್ತೋತ್ರದೊಳಲ್ಲದೆ ತನ್ನೊಳಿಲ್ಲೆನಿಸಿರ್ಪುದು (ದಕಳು. ೧-೨೨ ವ) ; ಆಕೆಯು ತಿದಿ ಉಬ್ಬಿದಂತೆ ಉಬ್ಬಿರುತ್ತಾಳೆ (ಮೋಹಿನೀ. ೨೯). ೨. ಚರ್ಮ; ತೊಗಲು: ತಿದಿಯಾಗಿದು ಕೊಟ್ಟನೊಡವುಟ್ಟಿದ ಕವಚವಮನಮರಪತಿಗೆ (ಕಂಪಭಾ. ೦೨-೦೦೯) ; ಕಳ್ಳರ ಕೊಲ್ಲು ತಿವಿ ತಿದಿಯುಸುಗಿಯೆಂಬ ಕಳಕಳರವದ ಘಲ್ಲಣೆಯ ಭಟರ ತಿಂತಿಣಿಯೊಳು (ಹರಿಶಾ. ೦೩-೫) : ಅಡಿಯಿಂದಂ ತಿದಿಯಾಗಿಯುತ್ತಿರೆಯುಂ ನಡೆಯಿಱಿದರ್ದೆಯುಂ ಬಗಿಯುತ್ತಿರೆಯುಂ (ಬಂಹರಿ. ೧೦-೯ ರಗಳೆ); ಅಹಿತರ ತಿದಿಯ ಸುಲಿವೆವು ಬೆಸಸು ನೀಮವನು (ಕುವ್ಯಾಉ. ೨-೪೩) : ಎಲವೊ ಕವಿ ಕವಿ ಕೊಲ್ಲು ತಿದಿಯನು ಸುಲಿಯೊ (ವಿಭಾಗ. ೭-೪-೩೬). ೩. ನೀರು, ಎಣ್ಣೆ ಮೊದಲಾದುವನ್ನು ತುಂಬುವ ಚರ್ಮದ ಚೀಲ ; ಪಕಾಲಿ : ಡವಿಗೆಯಯೆರಡೂ ತಿದಿಗಳನ್ನು ಇಬ್ಬಿಬ್ಬರು ಬೋಯಿಗಳು ಪಲ್ಲಕ್ಕಿಗಳಂತೆ ಹೊರುವರು (ಕಥಾಗ. ೫೭). **ತಿತ್ತಿ :** ೧. ತಿತ್ತಿಗಳ್ ಮೊರೆಯುತ್ತೇನು ಸಿರಿಕ್ಕವೇ (ಸೋಮೇಶ. ೧೮): ತುತ್ತು ತುತ್ತಿಗೆ ಹೊಟ್ಟೆ ತಿತ್ತಿಯಂತಾಗುವದು ತುತ್ತ ಅರಗಳಿಗೆ ತಡೆದಿಹರೆ ಹೆಡೆಹಾವು ಹುತ್ತಬಿಟ್ಟಂತೆ (ಸರ್ವಜ್ಞ. ೨೦೦೪). ೨. ತಿತ್ತಿಯ ಹಿಡಿವ ಮಾದಿಗನಿಗೆ ಹೊತ್ತಿಹ ಮೂಗಿನ ನಾತ ನಿಶ್ಚಯ ಉಂಟೇ ಇತ್ತಣವರಿಗಲ್ಲದೆ (ಮೋಳಿಮಾ. ೪೭-೧೯೩). ೩. ತಿತ್ತಿ ಸಿದ್ಧಿಗೆ

ತೊಗಲ್ನೀರಿನೊಳಗೆ ಬಂದತ್ತು ಗಂಗಾಸಾಗರವು (ಕುಂಇಾಸಾಂ. ೧೯-೧೧); ನೀರಿನ ತಿತ್ತಿಯನ್ನು ತಂದಳು (ದಾಂಕ. ೩೩೭). ೪. ಚೀಲ; ಮೂಡೆ: ದಿವಿಜರಂ ಮೇಲಕಡರದಂತಿಱಿದಿಱಿದು ನೂಂಕುವರ್ ಹಾಯ್ಕುವರುವುರಿವ ಮದ್ದಿನ ತಿತ್ತಿಯಂ (ಜಬಪು. ೪೨-೪೩). ೫. ಒಂದು ಬಗೆಯ ವಾದ್ಯ: ರಾಗಗಳ ವೇದ್ಯಗಾಣಿಸಿದರು ತಿತ್ತಿ ದಂಡಿಗೆ ಶ್ರುತಿ ಹೃದ್ಯವಾಗಿರೆ ಹೊಸತೆನಿಸಿ (ಭರತ. ೦೨-೪೧). [ <ಸಂ. ದೃತಿ ]

**ತಿದಿಯುಗಿ** (ಕ್ರಿ). ತೊಗಲನ್ನು ಉಚ್ಚು; ಚರ್ಮವನ್ನು ಸುಲಿ: ಅಂತು ತನ್ನ ಸಹಜ ಕವಚವಂ ನೆತ್ತರ್ ಪನಪನ ಪರಿಯೆ ತಿದಿಯುಗಿವಂತುಗಿದು ಕೊಟ್ಟೊಡೆ (ಪಂಪಭಾ. ೧-೧೧೨ ವ); ಆಪಾದಮಸ್ತಕಂಬರಂ ಮೃತ್ತಿಸಿ ಪತ್ತಿ ತಿದಿಯುಗಿಯ[ಪಾಠಾಂ. ಗುರೊ]ತ್ತೆ ಕೇಸುರಿಯ ಬಣ್ಣವಾಗೆ ಕರವೆ ಕರಗಿಸಿದ ಕಾಳಾಯಸರಸಮನೊಟ್ಟಯಿಸಿ (ಅಜಿಪು. ೧೧-೧೦ ವ); ಕತ್ತರಿಯಿಂದರಿವ ಕಾವಲೆಯೊಳಿಕ್ಕಿ ಕರಿವ ತಿದಿಯುಗಿವ . . . ತತ್ತಱದಱುವ ಪಲತೆಱದ ದಂಡನೆಗಳುಂ (ವರ್ಧಪು. ೧೧-೪೭ ವ); ತಿದಿಯುಗಿದು ಕೆದಱಿ ಕೊಳಗುಂದಿನೆಣ್ಣೆಯೊಳರ್ದಿ ತೆಗೆದು (ಶಾಸ್ತ್ರಟೀ. ೩-೩೭). [ತಿದಿ + ಉಗಿ$_1$]

**ತಿದಿಯುಸಿರ್** (ನಾ). ಚರ್ಮದ ಚೀಲದಿಂದ ಹೊರಹೊಮ್ಮುವ ಗಾಳಿ: ಮೆಯ್ಯಿದಿ ನೀಳ್ದ ಸುಯ್ಯಿದಿಯುಸಿರ್ವಿರಹಜ್ವರದೇಟ್ಗೆ ಕಿಚ್ಚು (ಶೃಂಗಾರ. ೪-೩೪); ಉದಯಿಸೆ ಕೋಪವಹ್ನಿಯುರಿಗಣ್ಗಳಗುರ್ವಿಸಿ ನಾಸಿಕಾಗ್ರದಿಂ ತಿದಿಯುಸಿರಂತೆ ತೀಕ್ಷ್ಣಮುಸಿರುಣ್ಕೆ (ಪಾಹಾನೇ. ೩-೦೪೧).

[ ತಿದಿ + ಉಸಿರ್$_2$ ]

**ತಿದಿಯೂದು** (ಕ್ರಿ). ೧. ತಿದಿಯನ್ನು ಒತ್ತಿ ಗಾಳಿ ಬರುವಂತೆ ಮಾಡು; ತಿದಿಯನ್ನು ಒತ್ತು. ೨. (ಆಲಂ) ಪ್ರೋತ್ಸಾಹಿಸು; ಪುಷ್ಟಿಕೊಡು: ಭಾವ ಕೃಷ್ಣರಾಯ ಈ ಯೋಚನೆಗೆ ಪುಟಕೊಟ್ಟ. ಅರ್ಧಾಂಗಿ ತಿದಿಯೂದಿದಳು (ಉರುಳಾ. ೧೩೨). ೩. (ಆಲಂ) ಜೋರಾಗಿ ಅಳು; ಸದ್ದುಮಾಡುತ್ತಾ ಅಳು: ನಿನಗೇನಾಯಿತು ತಿದಿಯೂದಲಿಕ್ಕೆ (ರೂಢಿ).

[ ತಿದಿ + ಊದು$_1$ ]

**ತಿದಿಯೊತ್ತು** (ಕ್ರಿ).=ತಿದಿಯೂದು ೧: ಆಸ್ಯದಿನುಗುವ ರಕ್ತಮುರಿಯೆಸೆ ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ (ಭಾಷಾಭೂ. ೧೮೭ ಉದಾ); ಸೈನಿಕನೊಬ್ಬ . . . ಸಾಮೋವರ್ (ಬೆಂಕಿಗೂಡಿನ ವ್ಯವಸ್ಥೆಯಿರುವ ರಷ್ಯಾದೇಶದ ಟೀಪಾತ್ರೆ) ನಳಿಕೆಯನ್ನೊಂದು ಕಾಲಿನಲ್ಲಿ ತಿದಿಯೊತ್ತುತ್ತ ನಿಂತಿದ್ದನು (ಪುನರು. ೩೧೧). [ ತಿದಿ + ಒತ್ತು$_1$ ]

**ತಿದ್ಗಡಿ** (ನಾ). (ಮನಸ್ಸನ್ನು) ತಿರುಗಿಸುವಿಕೆ; ತಿದ್ದುವಿಕೆ. 'ತಿದ್ಗಡಿಗೈ' ಪರಾ. [ P ಇದು 'ತಿದ್ದುಗಡೆ' ಎಂಬ ಶಬ್ದವನ್ನು ಛಂದಸ್ಸಿಗಾಗಿ ಬದಲಾಯಿಸಿದ ರೂಪವಿರಬಹುದು ]

**ತಿದ್ಗಡಿಗೈ** (ಕ್ರಿ). (ಮನಸ್ಸನ್ನು) ತಿರುಗಿಸು; ತಿದ್ದು: ಮಲ್ಲನುಪಯುಕ್ತಿಯಲಿ ಗುಣವತಿಗೆಲ್ಲ ತಿದ್ಗಡಿಗೈದು ಸುತ ಗಳದಲ್ಲಿ ಲಿಂಗವ ಕಟ್ಟಿಸಿ ದರಿನ್ನಾಯ್ತು ಕಲ್ಯಾಣ (ಬಿಜ್ಜಪು. ೯೩-೯).

[ ತಿದ್ಗಡಿ + ಗೈ (<ಕೆಯ್$_1$) ]

**ತಿದ್ದಾಣಿಕೆ** (ನಾ). ತಿದ್ದುವಿಕೆ; ಸರಿಪಡಿಸುವಿಕೆ: ಆದರೆ ಆ ತಿದ್ದಾಣಿಕೆಯಿಂದ ಮೂಲಕೃತಿ ವಿಕಾರಗೊಳ್ಳಬಾರದು (ಸಾಹಿಪ್ರ. ೧೨). 'ಸಾಕಾಣಿಕೆ', 'ಹೊಂದಾಣಿಕೆ' ಪರಾ. P ಇದು ಬಹುಶಃ 'ತಿದ್ದುವಣಿಕೆ' ಆಗಿರಬಹುದು.

[ ತಿದ್ದು$_1$ (<ತಿರ್ದು$_1$) + – ಅಣ + – ಇಕೆ ]

**ತಿದ್ದಿಕೆ** (ನಾ). ಒಪ್ಪಗೊಳಿಸುವಿಕೆ; ಸರಿಪಡಿಸುವಿಕೆ; ತಿದ್ದುವಿಕೆ: (ಕ).

[ ತಿದ್ದು$_1$ (<ತಿರ್ದು$_1$) + – ಇಕೆ ]

**ತಿದ್ದಿಸು** 'ತಿರ್ದಿಸು' ನೋ.

**ತಿದ್ದು$_1$** 'ತಿರ್ದು$_1$' ನೋ.

**ತಿದ್ದು$_2$** 'ತಿರ್ದು$_2$' ನೋ.

**ತಿದ್ದುಗಡೆ** (ನಾ). (ಮನಸ್ಸನ್ನು) ತಿದ್ದುವಿಕೆ. 'ತಿದ್ಗಡಿ' ಪರಾ.

[ <ತಿರ್ದು$_1$ ]

**ತಿದ್ದುಗಾರ** (ನಾ). ಸರಿಪಡಿಸುವವನು; ಪರಿಷ್ಕರಿಸುವವನು; ತಿದ್ದುಪಡಿ ಮಾಡುವವನು: ಮೂಲಕ್ಕೆ ಸರಿಯಾಗಿ ನಕಲನ್ನು ತಿದ್ದುವ ಕೆಲವರು ಸಂನ್ಯಾಸಿಗಳೂ ಇದ್ದರು; ಅವರನ್ನು ತಿದ್ದುಗಾರರೆಂದು (Correctors) ಕರೆಯುತ್ತಿದ್ದರು (ಕನ್ನಸಂ. ೨೧).

[ ತಿದ್ದು$_2$ (<ತಿರ್ದು$_2$) + – ಕಾರ$_1$ (< – ಕಾಱ) ]

**ತಿದ್ದುಪಡಿ** (ನಾ). ಸುಧಾರಣೆ; ತಿದ್ದುಪಾಟು; ಸರಿಪಡಿಸುವಿಕೆ: ನಿಮ್ಮ ತಿದ್ದುಪಡಿಯು ಮೂಲಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾಗುವುದಲ್ಲ! (ನಡದಾ. I, ೩೭೩); ಹಲವು ಪ್ರತ್ಯಂತರಗಳು ಕಾಲಕ್ರಮದಲ್ಲಿ ಲಿಖಿತವಾಗುವಾಗ ತಿದ್ದುಪಡಿಗಳೂ ಹೊಸಪಾಠಗಳೂ ಸ್ವೀಕೃತವಾಗಿ ಮೊದಲು ಬರೆದಿದ್ದುವು ತ್ಯಾಜ್ಯವಾಗುತ್ತವೆ (ಕನ್ನಸಂ. ೭೩): ಭಾಷಾಂತರಕಾರ್ಯವು ಪೂರ್ತಿಯಾಗುವಷ್ಟರಲ್ಲಿ ಭಾರತದ ಸಂವಿಧಾನವು ತಿದ್ದುಪಡಿಯಾಯಿತು (ಭಾಧಾನ. ೬೭೮೪). [ ತಿದ್ದು$_2$ (<ತಿರ್ದು$_2$) + – ಪಡಿ$_3$ ]

**ತಿದ್ದುಪಡೆ** (ನಾ). ತಿದ್ದುಪಾಟು; ಸರಿಪಡಿಸುವಿಕೆ: ಬರೆದ ಮುಖವನ್ನೇ ಮತ್ತೆ ಬರೆಯಲಾಗಿತ್ತು. ಒಂದರಕ್ಕಿಂತ ಒಂದು ತಿದ್ದುಪಡೆಯಾಗಿದ್ದುವು (ರಂಗರೂ. ೧೦೭); ಅವನ್ನೆಲ್ಲಾ ನಾಶಮಾಡಬೇಕೆಂಬುದೇ ನನ್ನ ವಿಚಾರದ ತಿದ್ದುಪಡೆ (ಅಮಗಾಂ. ೧೩); ತಿದ್ದುಪಡೆಯು ಅವಶ್ಯವೆಂದು ರತ್ನಾಕರವರ್ಣಿಯ ಅಭಿಪ್ರಾಯವಾಗಿದೆ (ನವ್ಯಕಾ. ೧೦೩).

[ ತಿದ್ದು$_2$ (<ತಿರ್ದು$_2$) + – ಪಡೆ$_6$ ]

**ತಿದ್ದುಪಾಟು** (ನಾ). ೧.=ತಿದ್ದುಪಡಿ: ಭಕ್ತರಿಗೆ ಧರ್ಮೋಪದೇಶ ಮಾಡುತ್ತ ವೀರಶೈವರ ಆಚಾರ, ವಿಚಾರ, ನಡೆನುಡಿಗಳನ್ನು ತಿದ್ದುಪಾಟು ಮಾಡುತ್ತಿದ್ದರಿ (ಗುರುದ. ೧೯): ವಿಲಾಯಿತಿ ಮೊದಲಾದ ತಿದ್ದುಪಾಟುಳ ದೇಶಗಳಲ್ಲಿ ತಾವ್ರುದ ತಗಡುಗಳನ್ನು ಮನೆಗಳ ಮೇಲೆಯೂ ಹೊಚ್ಚುತ್ತಾರೆ (ಮುಂಬಯಿ. ೪-೧೩೭): ಪ್ರಚಲಿತವಿದ್ದ ಲಕ್ಷಣಗಳಲ್ಲಿ ಅಗತ್ಯವಿದ್ದ ತಿದ್ದುಪಾಟುಗಳನ್ನು ಮಾಡಿದನು (ತತ್ವಪ್ರಾ. ೨೪೩). ೨. ಪಳಗಿಸುವಿಕೆ.

[ ತಿದ್ದು$_2$ (<ತಿರ್ದು$_2$) + – ಪಾಟು$_2$ ]

**ತಿದ್ದೋಲೆ** (ನಾ). ಒಪ್ಪೋಲೆ; ಶುದ್ಧಿಪತ್ರ: ತಿದ್ದೋಲೆ; ಶುದ್ಧಿಪತ್ರ (Corrigendum. ಇಂಕನಿ.). [ ತಿದ್ದು$_2$ (<ತಿರ್ದು$_2$) + ಓಲೆ ]

**ತಿನ್, ತಿನು, ತಿನ್ನು** (ಕ್ರಿ). ತಿಂಬ (ವರ್ತಕೃ). ೧. (ಆಹಾರವನ್ನು) ಸೇವಿಸು; ಭುಜಿಸು; ಭಕ್ಷಿಸು; ಉಣ್ಣು: "ತಿನ್ – ಖಾದನೇ" (ಶಮುಧಾ): ಗೃಹ ಕೋಕಿಲಂಗಳೊಂದೊಂದಂ ಒಂದೊಂದು ಕಾದಿ ತಿನೆ (ಪಾಪುಂಪು. ೨೦-೧೨); ಪಕ್ಕಿಗಳಲ್ಲಿ ತಿಂದುಬಿಡದ ನೆಲ್ಗಳ ನುಚ್ಚುಗಳಂ ಫಲಂಗಳಂ ಪಕ್ಕದೊಳಿರ್ದ ಗೂಡುಗಳಿನಾಯ್ದೆನಗಿಕ್ಕುಪನಟ್ಟಿಱಿಂದೆ (ಕಾದಂಪೂ. ೧೩೭); ತಿಂಬರನಲ್ಲದೆ ಕುಱಿ ಮಚ್ಚದು (ಅಜಿಪು. ೨-೭೪); ಅದಱಿನೆನಗಂ ಕೊಲ್ವುದುಂ ತಿಂಬುದುಂ ಧರ್ಮಮಲ್ಲದೆ ಪೆಱತು ಧರ್ಮಮಾವುದುಮಿಲ್ಲ (ಪಂಚತಂ. ೬೧-೦೩); ಪಟ್ಟಿರ್ದ ನಾಯ ಸಡುವಂ ಮೆಟ್ಟಿ ಕನಲ್ದೊಡನೆ ಮೇಲೆ ಪಾಯ್ದದು ತಿನೆ (ಧರ್ಮಾಮೃ. ೨-೩೭); ಹೊಲಸು ತಿಂಬುವನೇ ಹೊಲೆಯ (ಬಸವ. ೩೯೦); ತಿರುಳನು ತಿಂಬಾಸೆ ನಿನಗಿಹುದಾದರೆ ಚಿಪ್ಪನು ಒಡೆಯಲೆ ಬೇಕು (ಇಂಚಾಪ. ೨೧೭-೬೮). ೨. ಕೊಲ್ಲು; ನಾಶಮಾಡು: ನಿಮ್ಮ ಮೂವತ್ತಿರ್ವರುಮಂ ರಾಕ್ಷಸಂ ನುಂಗಿ ತಿಂಬುದಂ ಕನಸುಗಂಡು ಪೇೞ್ಗುಂ (ವಡ್ಡಾರಾ. ೧೦೦-೦೦); ನಿಮ್ಮ ಕುಲಂಗಳಾಂತು ಮಾರ್ಮಲೆವನನಟ್ಟಿ ತಿಂಬುವೆ (ಪಂಪಭಾ.೧೦-೨೧); ತಮ್ಮ ಬುದ್ಧಿ ತಮ್ಮನೆ ತಿಂದಿತ್ತು ನಿಮ್ಮನೆತ್ತ ಬಲ್ಲರು (ಅವಚಂ. ೭೩-೩೨೪): ಡೊಂಬಿಗರ ಡಾವರಿಗರಿವದಿರ ತಿಂಬೆನೀಗಳೆ ತರುಣಿ ಕೇಳೆನುತಂಬುಜಾಕ್ಷಿಯ ಸಂತವಿಟ್ಟನು

(ಕುವ್ಯಾಸ. ೧೫-೩೫). ೩. ಕುಟುಕು; ಕಚ್ಚು; ಕಡಿ: ತೇಲ್ಚಿಂದ ಮಗುವಿನಂತೆ (ಧರ್ಮಾಮೃ. ೧೪-೮೪); ಹಾವು ತಿಂದವರ ನುಡಿಸಬಹುದು . . . ಸಿರಿಗರ ಹೊಡೆದವರ ನುಡಿಸಲುಬಾರದು ನೋಡಯ್ಯಾ (ಬಸವ. ೦೩೨): ಸೊಸೆಗೆ ಪಲ್ಲ ತಿನುತೆ (ಲೀಲಾವ. ೫-೧೩೪); ಮರದ ಕೊಂಬೇಲಿ ಬಿದ್ದನೋ ಫಣಿ ತಿಂದುದೊ (ಹಡಿಜ. ೧೨-೦೫); ಅವನಂ ತಿಂಬುದುವಾ ತಿಂದ ಫಣಿಯುದಾಗಳೆ ಸಾಯ್ದುಂ (ಖಮಜ. ೧೬-೧೬೧). ೪. ದುರುಪಯೋಗ ಮಾಡು; ಅಪವ್ಯಯಮಾಡು; ಪೋಲುಮಾಡು: ಈ ವರ್ಗರ್ ಸೂಳೆಯರ್ಗೆ ಧನವೆಲ್ಲಮಂ ತಿಂದು ನಿರ್ಧನನಾಗಿ (ಪುಣ್ಯಾಸ್ರ. ೨-೨೦ ವ); ಬಿರುದ ಹೊಗಳಿಸಿಕೊಂಡು ದಾತಾರರ ಹಣವ ಸಲೆ ತಿಂದು ಹೆಚ್ಚಿದ ಹಿರಿಯ ಡೊಳ್ಳಿನ ರಾವುತರ ಕೆಡಹಿದನು (ಕುವ್ಯಾದ್ರೋ. ೧೦-೦೮). ೫. ಅನುಭವಿಸು: ದುಷ್ಪನೊರ್ವ್ವನದಱ ಫಲವಂ ತವೆ ತಿವ್ಪುವಂ (ಎಕ. VIII, ನಗರ. ೬೦-೧೩; ೩೨೦); ಕೂರ್ಗಣೆಯಿಂದೆಚ್ಚು ಬಱಿಗಾಯಗಾಣಿಸಿದರು ತಿನ್ನೆನುತೆ (ಮೋಹತ. ೫-೧೨). ೬. ನವೆಯಾಗು; ತಿನಿಸುಂಟಾಗು: ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸಲಾಱದೆ (ಧರ್ಮಾಮೃ. ೧-೧೬೫): ಅಂಗೈ ತಿಂದುದೆನ್ನ ಕಂಗಳು ಕೆತ್ತುತಿಹುವಯ್ಯಾ ಬಂದಹರಯ್ಯಾ ಪುರಾತರೆನ್ನ ಮನೆಗೆ (ಬಸವ. ೩೬೧). ತಿನು: ೧. ಎಡಗೆಯ್ಯೊಳೆ ತೋಡಿ ಬೆಣ್ಣೆಯಂ ತಿನುತಿರೆ ಗೋಪಿ ಕಂಡು (ಜಗವಿ. ೩-೫೦); ಪೊಡವಿಗೆ ಪೊಱಮಟ್ಟು ಕಳಿವಣ್ಣಳ ತಿನ ತೊಡಗಿದರೇನ ಹೇಳುವೆನು (ಮೋಹತ. ೦೯-೫೪). ತಿನ್ನು: ೧. ಅವಱ ತತ್ತಿಗಳನಾ . . . ಪಾವು ಪಲಕಾಲಂ ತಿನ್ನುತ್ತಿರೆ (ಪಂಚತಂ. ೮೨-೫): ಒಂದಿಷ್ಟು ಅನ್ನ ತಿಂದು ಕಾಲೇಜಿನ ಕಡೆಗೆ ಹೊರಟೆ (ಅಂಹೂ. ೫೪): ಹನುವಂತರಾಯ ಹಗ್ಗ ತಿನ್ನುವಾಗ ಪೂಜಾರಿ ಶಾವಿಗೆ ಬೇಡಿದ (ಗಾದೆ). ೫. ಕೂರ್ಗಣೆಯು ಗಾಯವ ತಿನ್ನು ಹೋಗೆಂದು ಹೊಡೆದನೆಂಬುಗಳ (ಮೋಹತ. ೩೮-೬).'ನೋವುತಿನ್ನು', 'ಪೆಟ್ಟುತಿನ್ನು' ಪರಾ. ೭. (ಆಲಂ) ಲಂಚ ತೆಗೆದುಕೊಳ್ಳು: ಅವನು ಚೆನ್ನಾಗಿ ತಿಂದೇ ಕೆಲಸ ಮಾಡಿಕೊಡೋದು (ರೂಢಿ). 'ಹಣತಿನ್ನು' ಪರಾ.

ತಿಂದು ತೇಗು=೧. ಹೊಟ್ಟೆ ತುಂಬಿ ತೇಗು; ಸಂತೋಷಪಡು: ಅಕ್ಕನ ಮನೆಯೊಳು ನಲಿದೆವು ನಕ್ಕೆವು ನಾವುಂಡು ತಿಂದುತೇಗಿದೆವು (ಇಂದಾಪ. ೧೩-೫೦). ೨. ನಾಶಮಾಡು; ಹಾಳುಮಾಡು: ತಿಂದು ತೇಗಿದತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಹಂಪೆಯಾಳ್ದನಾ (ಗಿರಿಕ. ೮-೪೬). ತಿಂದು ಹಾಕು=೧. ನಾಶಮಾಡು: ಶತ್ರುವನ್ನೂ ವ್ಯಾಧಿಯನ್ನೂ ಎಳೆಯತನದಲ್ಲೇ ನಿಗ್ರಹಿಸದೆ ಹೋದರೆ . . . ನಮ್ಮನ್ನೇ ತಿಂದುಹಾಕುತ್ತವೆ (ಚಿಕ್ಕದೇ. ೮೨). ೨. ಅಪಹರಿಸು: ಸ್ವಾಹಾಮಾಡು: ಇನ್ನೊಬ್ಬರ ಹಣವನ್ನು ತಿಂದುಹಾಕುವುದರಲ್ಲಿ ಅವನು ನಿಸ್ಸೀಮ (ರೂಢಿ). ತಿಂದೋಡಿ= ತಿಂದು ತಿರುಗುವವಳು; ಉಂಡಾಡಿ: ತಿಂದೋಡಿ ನಿನ ಗಂಡ ತಿಂದೇನು ಮಾಡೆಂದ ತಿಂದೇಳು ಮನಿಯ ತಿರುಗೆಂದಾ ಉಟಸೀರಿ ಉಂಗುಟಕ ಹಾಕಿ ಹರಿಯೆಂದ (ಗರತಿ. ೬೨). ತಿಂಬುಂಬ ಸಮಯ = ಮಾಂಸಾಹಾರವನ್ನು ತಿನ್ನುವ ಜಾತಿ: ತಿಂಬುಂಬ ಸಮಯವೆಮ್ಮದು (ಸಮ್ಯಕ್. ೯-೦೬). [ ದೇ.॥ ತಮಿ. ತಿನ್; ಮಲ. ತಿನ್ನು; ತುಳು. ತಿನ್; ಕೊಡ. ತಿನ್ನ್; ತೆಲು. ತಿನು; ಕೊಲಾ. ಸಾಯ್ಕು. ಪರ್ಜಿ ತಿನ್. ]

ತಿನಸಿಗ 'ತಿನಿಸಿಂಗ' ನೋ.

ತಿನಸು 'ತಿನಿಸು$_2$' ನೋ.

ತಿನಸುಗೂಳಿ (ನಾ). ಮಿತಿಮೀರಿ ತಿನ್ನುವವಳು: ತಿನಸುಗೂಳಿಯ ಬಾಳು ಕನಸಿನಲಿ ಉಂಡಂತೆ ತೊನಸಿ ಮುದಿಎತ್ತ ಹರಿತಿಂದು ಹುಳಗಳನು ಜನಿಸಿಬಿಟ್ಟಂತೆ (ಸರ್ವಜ್ಞ. ೦೮೫೬).

[ ತಿನಸು (<ತಿನಿಸು$_2$) + ಕೂಳ್ (<ಕೂಟು$_1$) + – ಇ$_2$ ]

ತಿನಸುಬಕ್ಕ 'ತಿನಿಸುಬಕ್ಕ' ನೋ.

ತಿನಾಳಿ 'ತಿನ್ನಾಳಿ' ನೋ.

ತಿನಿ$_1$, ತೀನಿ, ತೀನೆ (ನಾ). ೧. ಆಹಾರ; ತಿನಿಸು; ಊಟ: ಸದನಾಂತರದೊಳುತ್ಕೃಷ್ಟತಿನಿಯಂ ತಿನುತ (ಶಂಕದಾ. ೮-೧೬). ತೀನಿ: ೧. "ಭಕ್ಷಿತಂ, ಭಕ್ಷಣಂ, ಭಕ್ಷಣೀಯಂ, ಭಕ್ಷ್ಯಂ–ಈ ೪ ತೀನಿ" (ಕಾಶಕ್ಕ. ೨೫೩); ಭೂತದ ಹೆಣಸ ತೀನಿಗೆ ತವಕಿಸುವ ವೇತಾಳಸಂತತಿಯ (ಕುವ್ಯಾಗ. ೩-೧೨): ತನ್ನ ವಿನೋದಕ್ಕಾಗಿ ಸಾಕುವ ಹುಲಿಗೆ ತನ್ನ ರೈತರ ದನ ತೀನಿ (ಸಣ್ಣಕ. IV, ೬೫); ಅಂಗಡಿಗೆ ಕೈಹಾಕಿ ತೀನಿಯ ದಿನಸುಗಳನ್ನು ಬೊಗಸೆ ಬೊಗಸೆಯಾಗಿ ಹಂಚುತ್ತಿದ್ದನು (ಕಭವಿ. II, ೩೧೪); ಹೀಗೆಲ್ಲ ತೀನಿ ಕೊಟ್ಟರೆ ತಾನೆ ಹೋರಿಗೆ ಕಸುವು ಬರೋದು (ಚಿಲುಮ. ೦೬೬); ತಿಂದವನ ತೀನಿ ಹೆಚ್ಚು, ಮಿಂದವನ ಕೊಳೆ ಹೆಚ್ಚು (ಗಾದೆ). ೨. ತಿನ್ನುವಿಕೆ; ಭಕ್ಷಣ: "ಭಕ್ಷಣೇ–ತೀನಿಯೊಳ್" (ಕಾಶಕ್ಕ. ೨೬); ಗಂಡನಿಗೆ ಗಳಿಕೆ ತೋರಿಸಬೇಡ, ಮಕ್ಕಳಿಗೆ ತೀನಿ ಕಲಿಸಬೇಡ (ಗಾದೆ). ೩. ನವೆ; ತುರಿಕೆ: ಗುದ ತೀನಿ ತಿಂಬುದು . . . ಇದು ಶ್ಲೇಷ್ಮ ಮೂಲವ್ಯಾಧಿಯ ಲಕ್ಷಣ (ವಿವೈವಿ. ೧೪೦). ತೀನೆ: ೧. ತನ್ನ ಮಗನು ತೀನೆ ಹಾಕಿಕೊಂಡು ತಿನ್ನುತ್ತಿದ್ದ ಬೆಳ್ಳೀ ಬಟ್ಟಲನ್ನು ಸುಮತಿಯು ದೃಷ್ಟಿಸಿ ನೋಡಲು (ಸುಮಚ. ೦೧); ಬೇಕಾದ ತೀನೆಯನ್ನು ಕೊಂಡು ಕೊಳ್ಳಲು ಅಂಗಡಿಯಲ್ಲಾ ಮುಚ್ಚಿರುತ್ತಾರೆ (ಪೀಟಮಾ. ೪೪). ೩. ಆನೆ ಮದದಿಂದೊಮ್ಮೆ ತೀನೆಯನು ಕಳೆಯಲ್ಕೆ ತಾನೊರಸೆ (ದಿಲೀಚ. ೨-೩೬). [<ತಿನ್./ತಮಿ. ತೀನಿ; ಮಲ. ತೀನ್; ತುಳು. ತೀನಿ, ತೀನು]

–ತಿನಿ$_2$ (ಪ್ರ). ತಿನ್ನುವ ವ್ಯಕ್ತಿ ಎಂಬರ್ಥದಲ್ಲಿ ಸೇರುವ ತದ್ಧಿತಪ್ರತ್ಯಯ: ಉಣ್ಬ, ಕುಟ್ಟುವ, ಕೊಲ್ವ, ಕೊಳ್ವ, ತಿನ್ಬ ಎಂಬೀ ಉತ್ತರಪದಗಳಿಗೆ ಕ್ರಮವಾಗಿ ಉಣಿ . . . ತಿನಿ ಎಂಬ ಆದೇಶಗಳು ಬರುವುವು ಉದಾ:– ಅಲರುಣಿ . . . ಅಡದಿನಿ (ಕೃಪಿಡಿ. ೨೬). 'ಪಿಱುತಿನಿ ಪರಾ.

[ ತಿನ್ + – ಇ$_3$ ]

ತಿನಿಕೆ (ನಾ). ಒಂದು ಬಗೆಯ ವನಸ್ಪತಿ; "ಯವನಾಲ, ತಕ್ಷುಪತ್ರ" (ಪಂಡಿತ. ೨೫೬). [ ? ]

ತಿನಿಶ (ನಾ). ಒಂದು ಬಗೆಯ ಸಸ್ಯ; ನೆಮ್ಮಿಗಿಡ; ಹುಲಿಗಿಲಮರ: "ತಿನಿಶಾ ಸೇಮಿ ತಾಂ ರಥದ್ರುಮಮಕ್ಕುಂ" (ವಸ್ತುಕೋ. ೩೫-೧೫): "ತಿನಿಶಃ, ಸ್ಯಂದನಃ . . . ಚಿತ್ರಕೃತ್–೨ ಹುಲಿಗೇ ಮರದ ಹೆಸರುಗಳು; ಹುಲಿಗಲಿ, ನೆಮ್ಮಿ, ಹೊಂಗೆ" (ಸಿದ್ಧಾಂತಿ. ೦೦೩). [ ಸಂ. ]

ತಿನಿಸು$_1$, ತಿನ್ನಿಸು (ಕ್ರಿ). ಉಣಿಸು; ತಿನ್ನುವಂತೆ ಮಾಡು: ರಿಪುಗಳ ಕಡಿದು ತಿನಿಸುವೆನಿದಕೆ ಸಂಶಯವೇಕೆ (ಕುವ್ಯಾಆ. ಓರಿಇ. ೨೫-೦೩); ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು ಪುಂಡರೀಕಾಕ್ಷ ಹುಲ್ಲನು ತಿನಿಸಿದಾ (ಪುರಂದ. ೦-೧೪೬-೩); ತನಿರಸ ತೀವಿದ ಪಣ್ಗಳ ತಿನಿಸಿ ಓವಿದ ಕರ್ತನ ತೋಱು (ಮೋಹತ. ೯-೨೪). ತಿನ್ನಿಸು: ಒಂದು ಜೋಳದ ಭಕ್ಕರಿಯನ್ನು ಅಭಿಮಂತ್ರಿಸಿ, ಈ ಪದವನ್ನು ಪಾಡಿ ಪರಮಾತ್ಮನಿಗರ್ಪಿಸಿ ಆಚಾರ್ಯರಿಗೆ ತಿನ್ನಿಸಿದರು (ಜಗದಾ. ೧೫೧); ಅವರು ಅವನಿಗೆ ಗೋಮಾಂಸವನ್ನು ತಿನ್ನಿಸಿ . . . ಕರೆದುಕೊಂಡು ಹೋದರಂತೆ (ಚಂಗಾಳ್ಕ. ೨೬).

[ ತಿನ್ + – ಇಸು$_3$ ]

ತಿನಿಸು$_2$, ತಿನಸು (ನಾ). ೧. ತಿನ್ನುವ ಆಹಾರಪದಾರ್ಥ; ತಿಂಡಿ; ಉಣಿಸು: ನಿಮ್ಮಡಿ ಬೆಸಸಿಮೆನ್ನ ಭರ್ತಾರಿಯು ಮಾವಿನ ಪಣ್ಣನೇಕೆ ಬಯಸಿದಳೆನಿತಾನುಂ ವಸ್ತುನಿಕರಮಿರ್ದುಂ ತಿನಿಸಂ (ಧರ್ಮಾಮೃ. ೮-೪೫): ಪುರದಲಿ ಸತ್ತ ಹೆಣಗಳ ತುಱುಗಿದರು ತಿನಿಸಿಂಗೆ ಹಸಿವಿಗೆ ನೆಱೆಯದಾದುದು (ತೊರರಾ. ೬-೨೬-೫೬); ಸುತ್ತಲೂ ಸೊಗಸಾದ ನೋಟ ನೋಡುತ್ತ ತಿನಿಸನ್ನು ತಿಂದೆವು (ಕಹಪು. ೨-೯೦). ೨. ನವೆ; ತುರಿಕೆ: ನಸುಗುನ್ನಿ ಮುಟ್ಟಿದಂತಿರೆ ಬಸವಲ್ಲದೆ ತಿಂಬ ಮೆಯ್ಯ ತಿನಿಸಿಂಗಂ ಸೈರಿಸ

ರಾಜಿದೆ (ಧರ್ಮಾಮೃ. ೧-೧೬೩); ಆಗಳೆ ಕರ್ದಮ(ಮಂ)ದಿಂ ಪೊಸಲ್ ಕಳೆಗುಂ ಸಂದೇಹಮೇಕೆ ತುಱುಚಿಯ ತಿನಿಸಂ (ಶಮದ. ೨-೧೦೦). **ತಿನಸು:** "ಕಂಡೂತಿಃ, ಕಂಡೂಯಾ, ಕಂಡೂಃ, ಕಂಡೂಯನಂ, ಖರ್ಜೂಃ-ಈ ೫ ತಿನಸು" (ಹಲಾಯು. ೯೯-೪೪೯); "ತಿಂಡಿ, ತಿನಸು, ತೀಟೆ, ತುರುಸು, ನಸೆ, ತೀನಿ" (ಕಂಸುಹು. ೮೩). [ <ತಿನ್ ]

**ತಿನಿಸುಗ**, ತಿನಸಿಗ (ನಾ). ತಿಂಡಿಪೋತ ; ತಿನ್ನುವವನು ; ಭಕ್ಷಕ : "ಅದನ್, ಅದಃ , ಅದಕ ೩-ಈ ೩ ತಿನಿಸುಗಂ" (ಶಾಶಕ್ಕ. ೧೬೨). **ತಿನಸಿಗ:** ಬೆಕ್ಕಿನ ಜಾತಿಯ ತಿನಸಿಗರು ಹಡೆದ ಬದುಕನೇ ಕಿನುವವರು (ಮುಕ್ತ್ಯಶಂ. ೬೬-೪). [ ತಿನಿಸು₁ + - ಇಗ ]

**ತಿನಿಸುಗಾತಿ** (ನಾ). ಮಿತಿಮೀರಿ ತಿನ್ನುವವಳು: ಆ ತಿನಿಸುಗಾತಿ ಹೆಂಗಸನ್ನು ನೋಡಿದರೆ ನಗುಬರುತ್ತದೆ (ರೂಢಿ). [ ತಿನಿಸು₂ + - ಗಾತಿ₅ ]

**ತಿನಿಸುಬಕ್ಕ**, ತಿನಸುಬಕ್ಕ (ನಾ). ೧. ಹೊಟ್ಟೆಬಾಕ ; ತಿಂಡಿಪೋತ ; ಮಿಂತಿಮೀರಿ ತಿನ್ನುವವನು : ಅವನೊಬ್ಬ ತಿನಿಸುಬಕ್ಕ (ರೂಢಿ). (ಗು). ೨. ಮಿತಿಮೀರಿ ತಿನ್ನುವ : ಇವು ಬಹಳ ತಿನಿಸುಬಕ್ಕ ಪ್ರಾಣಿಗಳು (ಮುಂಬಯಿ. ೩-೮೪). **ತಿನಸುಬಕ್ಕ:** ೨. ಅದರ ಜಾತಿಯು ಬಹು ತಿನಸುಬಕ್ಕಾಗಿಯೂ ಮೂಢವಾಗಿಯೂ ಇರುವದು (ಮುಂಬಯಿ. ೫-೧೬).
[ ತಿನಿಸು₂ + - ಬಕ್ಕ₂ (< - ಬಾಕ) ]

**ತಿನಿಹಿ**, ತಿನುಹಿ (ನಾ). ತಿನ್ನುವ ಸ್ವಭಾವವುಳ್ಳದು: 'ಹೆಣದಿನಿಹಿ' ಪರಾ. **ತಿನುಹಿ:** 'ಹೆಣದಿನಂಹಿ' ಪರಾ. [ ತಿನಿಹು + - ಇ₃ ]

**ತಿನಿಹು** (ನಾ). ತಿನ್ನುವಿಕೆ : ಹೆಣನ ತಿನಿಹಿ[ಪಾಠಾಂ. ತೀನಿ]ಗೆ ತವಕಿಸುವ ವೇತಾಳ ಸಂತತಿಯ (ಶುಪ್ಯಾಗ. ೩-೧೨). [ ತಿನಿ + - ಹು₂ ]

**ತಿನು** 'ತಿನ್' ನೋ.

**ತಿನುಹಿ** 'ತಿನಿಹಿ' ನೋ.

**ತಿನ್ನ** (ನಾ). ತಿನ್ನಲಾಗದುದು ; ಉಚ್ಛಿಷ್ಟ ; ಎಂಜಲು: "ಎವುಟಿಂದುಂ, ತಿನ್ನಮೆಂದುಂ, ಪತ್ರಳಿಯೆಂದುಂ ಎಂಜಲ್" (ಕಶಸಾ. ೨೩-೫೦೬).
[ <ತಿನ್ ]

**ತಿನ್ನಬಾಕ** (ನಾ). = ತಿನಿಸುಬಕ್ಕ : ತಲಗರು ಕಸುವುಳ್ಳವರು . . . ಒಳ್ಳೆ ತಿನ್ನಬಾಕರು (ಕಥಾಗ. ೮೩). [ <ತಿನ್ನು + - ಬಾಕ ]

**ತಿನ್ನಾಸಕ** (ನಾ). ತಿನ್ನುವುದರಲ್ಲಿ ಹೆಚ್ಚು ಆಸೆಯುಳ್ಳವನು ; ತಿನ್ನಾಳಿ ; ತಿಂಡಿಪೋತ : ಕೈಕಾಲು ಸಣ್ಣ ಹೊಟ್ಟೆ ಡುಮ್ಮ ; ಬಹು ತಿನ್ನಾಸಕ (ಮೇದಿಮ. ೪) ; ನೀವು ತಿನ್ನಲಿಕ್ಕೆ ತರತೀರಿಲ್ಲೊ ? ತಿನ್ನಾಸಕ ತರತದೇಳು (ಅಮಿನಿ. ೨೩); ವಸುಭೂತಿ ಬ್ರಾಹ್ಮಣವರ್ಯನಲ್ಲ, ತಿನ್ನಾಸಕನೂ ಹಣಲೋಭಿಯೂ ಆದ ಸಾಧಾರಣ ವೈದಿಕ (ಶವನಿ. ೮೯). [ <ತಿನ್ ]

**ತಿನ್ನಾಸಕತನ** (ನಾ). ತಿನ್ನುವುದರಲ್ಲೇ ಆಸಕ್ತಿಯಿರುವಿಕೆ ; ಅತಿಯಾಗಿ ತಿನ್ನುವ ಸ್ವಭಾವ : ನಾಡಿನಲ್ಲಿ ಬೇರೆ ಬೇರೆ ಭಾಗಗಳಿಗೆ ಹೋಗಿ ನೋಡಿದರೂ ಅಲ್ಲಿಯ ವೈಚಿತ್ರ್ಯಗಳಂತೆ ತಿನ್ನಾಸಕತನದ ಕತೆಗಳೂ ಸಿಕ್ಕುವವು (ಶ್ರೀರಂಗ. ೨೬). [ ತಿನ್ನಾಸಕ + - ತನ ]

**ತಿನ್ನಾಸಕಿ** (ನಾ). ತಿನ್ನುವುದರಲ್ಲಿ ಬಹಳ ಆಸಕ್ತಿಯುಳ್ಳವಳು ; ಹೊಟ್ಟೆಬಾಕಿ : ನೀನು ಬಲು ತಿನ್ನಾಸಕಿ (ಬೀರಬ. ೮೬). [ ತಿನ್ನಾಸಕ + - ಇ₂ ]

**ತಿನ್ನಾಳಿ**, ತಿನಾಳಿ, ತೀನಾಳಿ (ನಾ). = ತಿನ್ನಾಸಕ : "ಭಕ್ಷಕಃ, ಘಸ್ಮರಃ, ಅದ್ಮರಃ-ಈ ೩ ತಿನ್ನಾಳಿ" (ಹಲಾಯು. ೫೮-೧೯೫). **ತಿನಾಳಿ:** ಕೂಟ್ಬಣಗನೆನಲ್ಕೆ ಜಗದಿ ತಿ[ಪಾಠಾಂ. ತೀ]ನಾಳಿವೆಸರ್" (ಕವಿಕಂ. ೦೫೬) ; ಮಹಾರಾಜರನ್ನು . . . ತಿನಾಳಿಯೆಂದು ಬಯ್ಯುವೇ (ವಿಗಡ. ೪೧-೨೪). **ತೀನಾಳಿ:** "ತೀ[ಪಾಠಾಂ. ತಿ]ನಾಳಿಯೊಳಗೇವೆಟ್ಟೆ ಕೂಟ್ಬಣಿಗ" (ಶಬ್ದಮಂ. ೪೯); ಕೌಂಟ್ಲ್‌ರವರು ತೀನಾಳಿ ಹುಡುಗರಿಗೆ ಆದರ್ಶ ಉಪಾಧ್ಯಾಯರು (ಹುಮುಖ. ೩೪). [ ತಿನ್ + - ಆಳಿ₃ ]

**ತಿನ್ನಿಸು** 'ತಿನಿಸು₁' ನೋ.

**ತಿನ್ನು** 'ತಿನ್' ನೋ.

**ತಿಪರ** (ನಾ). ಒಂದು ಬಗೆಯ ಆಭರಣ (?) : ಅವರಂಜ ಚಿನ್ನಾಕೆ ತಿಪರಾವ ತಿರುವ್ಯಾರೆ ಸಕಲಸಂಪನ್ನರ ಮಗಳು ನೀಲಮ್ಮಾಗೆ ತಿಪರವ ತಿರುವ್ಯಾರೆ ಬಸವಣ್ಣ (ಗೌರಪ. ೦). [ಇದು ತಿರುಪು ಇರಬಹುದೆ ? ]

**ತಿಪಲಾಟ** (ನಾ). ಕಷ್ಟ ; "ಪೇಚಾಟ ; ತೊಂದರೆ" (ಜಾನಕೋ. ೬೬).
[ ತಿಪಲು₀ (<ತಿಪ್ಪಲು) + ಆಟ ]

**ತಿಪುರ**, ತಿವುರ, ತಿಹುರ (ನಾ). = ತ್ರಿಪುರ : ಹರನಾಜ್ಞೆಯಿಂದಿಂದ್ರನತುಳ ಸನ್ನಾಹದಿಂದಿರದೆ ತಿ[ಪಾಠಾಂ. ತ್ರಿ]ಪುರಕೆ ಲಗ್ಗೆಯಿಂ ಬಿಡಲ್ (ಶಬಪು. ೪೨ ಸೂಚನ). **ತಿವುರ:** 'ತಿವುರಾಂತಕ' ಪರಾ. **ತಿಹುರ:** ತಿಹುರಮನುರಿಪಲ್ ತ್ರಿವಿರೋಚನನಾ ದ್ರುಹಿಣ ಚತುರ್ಭುಜರಾದಿಯ ಸುರಬಲಸಹಿತಂ ದಿವ್ಯ ವರೂಥಮನಡರ್ದಿಯ್ದುವ ತೆಱದಿಂ (ಜಯಕಾ. ೬-೨೩).
[ <ಪ್ರಾ. ತಿಉರ. / ಸಂ. ತ್ರಿಪುರ ]

**ತಿಪುರಾಂತಕ**, ತಿವುರಾಂತಕ, ತಿಹುರಾಂತಕ (ನಾ). ತ್ರಿಪುರಗಳನ್ನು ನಾಶಮಾಡಿದವನು ; ಶಿವ : ಪೂರ್ವಪದಂ ತದ್ಭವಮಾದುದರ್ಕೆ . . . ತ್ರಿಪುರಾಂತಕ – ತಿಪು [ಪಾಠಾಂ. ವು] ರಾಂತಕ (ಶಮದ. ೨೮೯ ಪ್ರಯೋ). **ತಿವುರಾಂತಕ:** ಪೂರ್ವಪದಂ ತದ್ಭವಮಾದುದರ್ಕೆ-ಗ್ರಾಮರಸ – ಗಾವರಸ . . . ತ್ರಿಪುರಾಂತಕ-ತಿವುರಾಂತಕ (ಶಮದ. ೨೮೯ ಪ್ರಯೋ). **ತಿಹುರಾಂತಕ:** ತಿಹುರಾಂತಕಂ (ಶಬ್ದಾನು. ೨೯೬ ಪ್ರಯೋ). [ <ಸಂ. ತ್ರಿಪುರಾಂತಕ ]

**ತಿಪ್ಪ** (ನಾ). ಬೂದಿರಾಶಿಯ ಮೇಲಿರುವವನು ; ಶ್ಮಶಾನವಾಸಿ ; ಶಿವ: 'ತಿಪ್ಪಯ್ಯ' ಪರಾ. [ ತಿಪ್ಪೆ + - ಅ₇ ]

**ತಿಪ್ಪಗ** (ನಾ). (?) : ತಿಪ್ಪಗನು ಸುಂಕವನು ಕಟ್ಟಿಯೆ ತಪ್ಪುದಲೆ ಮಾಡುತ್ತಲಿರಲಿಕವೊಪ್ಪುವದೆ ತಿಪ್ಪಗನು ಬೇಡಿ ಸುಂಕದವ ಬೇಡಿ (ಶ್ಯಾಸಿಂ. ೮-೧೩೦). [ಇದು 'ತಪ್ಪುಕ = ತಪ್ಪುಮಾಡುವವನು' ಎಂಬುದರ ಅಪಲಿಖಿತವಿರಬಹುದು ]

**ತಿಪ್ಪಣ** (ನಾ). ೧. (?) : ನೆಟ್ಟಗಳೆ ಮೂಜು ತಿಪ್ಪಣದ ಮಣೆ ಒಂದು ಮಣೆಯಲ್ಲಿ ಕುಳಿತು ಅಣಲ ಸಂಚವ ತಿಂದಿತ್ತು (ಮನುಗುಂ. ೨೬೯-೮೩) ; ಸಂಚಿತ ಕರ್ಮವನನುಭವಿಸುತ್ತಿಹುದೆಂಬುದೀಗ ತಿಪ್ಪಣದ ಮಣೆ . . . ಎಂಬ ಶಬ್ದಕ್ಕರ್ಥ (ಮನುಗುಂ. ೯೯). ೨. ದ್ರವಪದಾರ್ಥವನ್ನು ತುಂಬುವ ಪಾತ್ರೆ (?) : ಅಪ್ಪುವಾಸವ ತುಂಬುವ ತಿಪ್ಪಣದಂತೆ ತುಂಬುವಲ್ಲಿ ಕಟ್ಟಿಲ್ಲ (ಮಹೇಮಿಂ. ೯೪-೭೦). [ ? ]

**ತಿಪ್ಪಣ್ಣ** (ನಾ). ಒಬ್ಬಾತನ ಹೆಸರು : ಬರೆದಂ ದ್ವಿಜಪಾದಪಂಕಜಭ್ರಮರ ಬಲದೇವಯ್ಯನು ಮೂಂಕಿಯಯ್ಯನ ಮಗ ತಿಪ್ಪಣ್ಣ ಬರೆದ ಮಂಗಳಂ (ಎಕ. XI, ದಾವಣ. ೨೦-೩೨ ; 1046). [ ತಿಪ್ಪ + ಅಣ್ಣ₁ ]

**ತಿಪ್ಪಯ್ಯ** (ನಾ). ಒಬ್ಬಾತನ ಹೆಸರು : ಸ್ವಸ್ತಿಶ್ರೀ ತಿಪ್ಪಯ್ಯ ಬರೆದಂ (ಎಕ. XI, ದಾವಣ. ೦೬-೨೨ ; 889) ; ತಿಪ್ಪಯ್ಯನೆಂಬಾ ಪದಿನೇಟ್ಬಾನಿಸಂ (ಎಕ. V, ಅರಕ. ೩೧-೬ ; 920). [ ತಿಪ್ಪ + ಅಯ್ಯ₁ ]

**ತಿಪ್ಪರದಂಡ** (ನಾ). ಆಡಿಸುವ ದೊಣ್ಣೆ ; ತಿರುಗಿಸುವ ದೊಣ್ಣೆ (?) : ಅಪ್ಪಪ್ಪಾ ಈತನೇ ಬಲುದೈವ ತಪ್ಪುಹೊರಿಸಿ ವಾರಿಗೆವರ ತಿಪ್ಪಾ [ಪ್ಪ] ರದಂಡವಾಡಿಸುವ (ವಿಕ್ಕೋ ೀಸು. ೨೩-೪). [ <ತಿರಿಪ್ಪು₃ ? + ದಂಡ ]

**ತಿಪ್ಪರಲಾಗ** (ನಾ). ೧. ತಿರಂಗಿಕೊಂಡು ಹಾಕುವ ಲಾಗ; ಅಂತರಲಾಗ; ದೊಂಬರ ಲಾಗ. ೨. (ಅಲಂ) ಹೆಣಗಾಟ ; ಪ್ರಯತ್ನ : ವಾದದ ಆವೇಶದಲ್ಲಿ ತನ್ನ ಗುರು ವಸಂತರಾಯನ ವಿಚಾರಸರಣಿಯನ್ನು . . . ಬರೀ ಬುದ್ಧಿಶಕ್ತಿಯ ತಿಪ್ಪರಲಾಗವೆಂದೂ ಕರೆದ(ದೂರಸ.೪೪); ವೀರ್ಯವೇ ನಿಷ್ಠೆಯಿಂದ ಸಾಕಾರವಾಗುತ್ತದೆ, ಹಠದ ತಿಪ್ಪರಲಾಗವಲ್ಲ (ನಲಮು. VII, ನಾಲ್ಕುಮೂರು).

ತಿಪ್ಪರಲಾಗ ಹಾಕು = ೧. ಓಲಾಡು: ಮನಸ್ಸು ತಿಪ್ಪರಲಾಗ ಹಾಕಿತು (ಹೊಸಕ್ಕಿ. ೮೪). ೨. ಕಷ್ಟಪಡು ; ಪ್ರಯತ್ನಿಸು : ಹಾಂಗ ಮಾಡಲಿಕ್ಕೆ ಬರೂದುಲ್ಲೋ ಆಚಾರಿ: ನಾನು ಭಾಳ ತಿಪ್ಪರಲಾಗಾ ಹಾಕಿದೆ (ತಿಮಗು. ೭೪). ತಿಪ್ಪರಲಾಗ ಹೊಡೆ = ೧.=ತಿಪ್ಪರಲಾಗ ಹಾಕು ೨ : ತಿಪ್ಪರಲಾಗ ಹೊಡೆದರೂ ಅದು ತಪ್ಪುವ ಹಾಗಿರಲಿಲ್ಲ(ಸಮಜೀ. ೧೨೩೪). ೨. ತೇರ್ಗಡೆ ಹೊಂದದಿರು: ರಾಜುವು ಮೂರುರೂಪಾಯಿಯ ಪರೀಕ್ಷೆಯಲ್ಲಿ ಮೂರು ಸಲ ತಿಪ್ಪರಲಾಗ ಹೊಡೆದಿದ್ದ (ಎಚಹೆ. ೧೭). 'ತಿಪ್ಪು' ಪರಾ.

[ <ತಿರಿಪ್ಪು₂ ? + ಲಾಗ ]

ತಿಪ್ಪಲ್ (ನಾ). (?) : ಯಾರು ತಿಪ್ಪಲ್ ಬಗೆವರವರೆ ಗೌರಿಯಂಸು ಪುತ್ರಿಯನು ಕುಸುಮಕುಮಾರಿಯನು ಕನಸಿನಲಿ ಕಂಡತ ಜೀವರಲ್ತೀ ಕರಂ (ವಿವೇಥ. ೮-೩೪). [ ? ]

ತಿಪ್ಪಲಾಟ (ನಾ). (ಬುಗುರಿಯಂತೆ) ತಿರುಗುವಿಕೆ ; ಸುತ್ತಾಟ (?) : ಇಂತೆಸೆದ ಬೆಳಕಿನಲಿ ಕೆಲವು ಇದ್ದಲ್ಲೆ ತಿಪ್ಪಲಾಟದಲಿ ತೊಡಗಿವೆ (ಸುನೀತ. ೮೦-೪). 'ತಿಪ್ಪರಲಾಗ' ಪರಾ. [ <ತಿಪ್ಪು + ಆಟ ]

ತಿಪ್ಪಲಿ 'ಹಿಪ್ಪಲಿ' ನೋ.

ತಿಪ್ಪಲು (ನಾ). ಪೀಕಲಾಟ ; ತೊಂದರೆ ; ಕಷ್ಟ : "ತಿಪ್ಪಲು, ಪಿಪ್ಪಲು ಪಾಟ–ಕಷ್ಟ" (ಗಂಗಾಮು. ೧೫೩). 'ಚಿಪ್ಪಳು' ಪರಾ. [ ? ]

ತಿಪ್ಪಲುಗಾರ (ನಾ). ಅಧಿಕಾರ ನಡೆಸುವವನು; ದಬ್ಬಾಳಿಕೆ ನಡೆಸುವವನು : ಆ ಕಾಲದಲ್ಲಿ ಅರಸರು ತಿಪ್ಪಲುಗಾರರು (ಜುಲುಂಗಾರರು ಆಳುವವರು) (ಅಕ್ಕರ. ೧೨೩). [ ತಿಪ್ಪಲು + – ಕಾರ₁ (< – ಕಾರ ) ]

ತಿಪ್ಪು 'ತಿರಿಪ್ಪು₁' ನೋ.

ತಿಪ್ಪುಳ್ 'ತುಪ್ಪುಟ್' ನೋ.

ತಿಪ್ಪುಳ 'ತುಪ್ಪುಟ್' ನೋ.

ತಿಪ್ಪುಳು 'ತುಪ್ಪುಟ್' ನೋ.

ತಿಪ್ಪುಟ್ 'ತುಪ್ಪುಟ್' ನೋ.

ತಿಪ್ಪೂರ್ (ನಾ). ಒಂದು ಊರಿನ ಹೆಸರು : ತಿಪ್ಪೂರ ಕಾಡಸ್ವಾಮಿಗಳ್ಗೆ ಬ್ರಹ್ಮಾದೆಯ ಕ್ರಮದೆನ ಮಲೂರ ಕೆಱೆ ಕೀೞೆ ಪಡಿಕಂಡುಗಂ ಪ್ರಿಹಿ ಭೂಮಿ ದತ್ತ್ವಮ್ (ಇಆ. V, ೦೩೭-೦೩ ; 454 ಕ್ರಶಾ). 'ತಿಪ್ಪೆಯೂರ್' ಪರಾ. [ ? + ಊರ್ ]

ತಿಪ್ಪೆ, ತಿರ್ಪೆ (ನಾ). ೧. ಕಸದ ಗುಡ್ಡೆ ; ರಾಶಿ : ತಿಪ್ಪೆ ಮೇಲೆ ಮಲಗಿ ಉಪ್ಪರಿಗೆ ಕನಸು ಕಂಡ ಹಾಗೆ (ಗಾದೆ). ೨. ಕಸಕಡ್ಡಿಗಳನ್ನು ಹಾಕುವ ಸ್ಥಳ : ವಾರಿಜಷಂಡವುಂ ಪಡೆದು ಪೊರ್ದುವವೊಲ್ ಕಳಹಂಸೆ ತಿಪ್ಪೆಯಂ ಪೊರ್ದುಗುಮೆ (ಧರ್ಮಾಮೃ. ೪-೨೦೦) : ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು (ಕೂನ್ನಸಂ. ೨೨೫-೦೩) ; ಹತ್ತು ಸಾವಿರ ಹೊನ್ನು ತಿಪ್ಪೆಯಲಿ ಹೋಳಿಟ್ಟು ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣ (ಪುರಂದ. ೦-೮೭-೨) ; ಎಳುನೆಲೆಯುಪ್ಪರಿಗೆಯತ್ತೀ ಕೀಳುದಿಪ್ಪೆಯದೆತ್ತ (ಸಾಳ್ವಭಾ. ೦೭-೩೪); ಶ್ವಾನ ತಿಪ್ಪೆಯ ಮೇಲೆ ಮಲಗಿರಲು . . . ಏನೋ ವಾಸನೆ ಬೀಸಲದು ಹಾರಿ ದುಮುಕುವುದು (ಮಂಕುಕ. ೯೦೫) ; ಕೋಳಿ ಕಾಲಿಗೆ ಗೆಜ್ಜೆ ಕಟ್ಟಿದರೂ ತಿಪ್ಪೆ ಕೆರೆಯದೆ ಇದ್ದೀತೇ (ಗಾದೆ).

△ ತಿರ್ಪೆ : 'ತಿರ್ಪೆಸುಂಕ' ಪರಾ.

ತಿಪ್ಪೆಕೆದರು = ಹಳೆಯ ಸಂಗತಿಗಳನ್ನು ಬಯಲಿಗೆಳೆ : ಅವನನ್ನು ರೇಗಿಸಿ ರೇಗಿಸಿ ತಿಪ್ಪೆಕೆದರಿದರು (ರೂಢಿ). ತಿಪ್ಪೆಗುಂಡಿ, ತಿಪ್ಪೆಯಗುಂಡಿ= ಕಸಕಡ್ಡಿಗಳನ್ನು ಹಾಕುವ ಗುಂಡಿ: ವ್ಯವಸಾಯವೇ ಮುಖ್ಯವಾಗಿದ್ದುದರಿಂದ ತಿಪ್ಪೇಗುಂಡಿಗಳು ಊರಿಗೆ ಸಮೀಪವಾಗಿದ್ದುವು (ಹುಟ್ಟಿಹ. ೫) ; ವಿಷಯ ಕೂಪವೆಂಬ ತಿಪ್ಪೆಯ ಗುಂಡಿಯ ನೀರ ಕುಡಿದು (ಸಿದ್ಧೇವ. ೪೨-೧೦೭). ತಿಪ್ಪೆಸಾರಿಸು = ೧. ತಿಪ್ಪೆಮುಚ್ಚಿ ಮೇಲೆ ಅಲಂಕಾರಮಾಡು. ೨. ವಿಷಯವನ್ನು ಮರೆಮಾಚು ; ಲೋಪದೋಷಗಳನ್ನು ಮುಚ್ಚಿಡು : ಮೂಲಿಕೆಗಳ ಶಕ್ತಿಯೂ ಅಪಾರವೆಂದೇ ಹೇಳಬೇಕು, ಎಂದು ತಿಪ್ಪೆಸಾರಿಸುವ ಮಾತನ್ನಾಡಿದನು (ಬಿನ್ನಬೀ. ೧೮೩).

[ ದೇ.ಗ ತಮಿ ತಿಪ್ಪೈ ; ತುಳು. ತಿಪ್ಪೆ ; ತೆಲು. ತಿಪ್ಪ ]

ತಿಪ್ಪೆಯೂರ್ (ನಾ). ಒಂದು ಊರಿನ ಹೆಸರು: ಕನಕಸೇನ ಭಟ್ಟಾರರ್ಗ್ಗೆ ತಿಪ್ಪೆಯೂರೊಳಾದ ಅಟ್ಟದೆಱೆಯುಂ ಕುಱುದೆಱೆಯುಮುಟ್ಟಸಾಮನ್ತದೆಱೆಯೆಲ್ಲವಮ್ಬಿಟ್ಟನ್ (ಎಕ. III, ಮಳವ. ೩೦-೧೦ ; 909).

[ ತಿಪ್ಪೆ + ಊರ್ ]

ತಿಪ್ಪೆವಳ್ಳ (ನಾ). ತಿಪ್ಪೆಗುಂಡಿ : ಬಾವಿಯಂನಜಸಿ ಬನ್ನಂಬಟ್ಟು ಬಾವಿಯಾಗಿ ಬಸಗೆಟ್ಟು ಅಲ್ಲಿರ್ಪ ತಿಪ್ಪೆವಳ್ಳದೊಳ್ಪಾವಸೆಗಟ್ಟ . . . ಪೂಲಸುಗಂಪಿಡುವ ನೀರನೆ ಕುಡಿದು (ಚಿಕದಂ. ೫೭-೧). [ ತಿಪ್ಪೆ + ಪಳ್ಳ ]

ತಿಪ್ಪೆಸುಂಕ, ತಿರ್ಪೆಸುಂಕ (ನಾ). ತಿಪ್ಪೆಗಳ ಮೇಲಿನ ತೆರಿಗೆ: ಕಂದಾಯ: ತೇಜ ಸಾಮ್ಯಾಗಾಣಾಯಿಯುಮಂ ಪಡಿಯದೆ ತಿಪ್ಪೆಸುಂಕ ಮನೆದೆಱೆ (ಬೊಂಕಶಾ. ೦೯೩೭, ಸಿಂದಗಿ. ೪೧-೪೩ ; 1097) ; ತಿಪ್ಪೆಸುಂಕ ಗಾಡಿಯ ಸುಂಕಂ ಒಂದು ಗಾಣಂ ಇನ್ನಿತುಂ ಕೆಱೆಯ ಭಣ್ಣಂಗೆ ಬಿಟ್ಟ ಧರ್ಮ್ಮ (ಎಕ. XI, ದಾವಣ. ೦೩೯-೫೨ ; 1106) ; ಹೇಱಿಸಲು ಎಲೆ ೧೦೦ ನ್ಯಾಯದಲು ಮುದ್ರಾಪಣ ತಿಪ್ಪೆಸುಂಕ ರಾಶಿಯ ದೇವಗೊಳಗ ೨ ಗಾಣದಲೆಣ್ಣೆ ಸೊಳಸಿಗೆ (ಸೌಇಇ. IX i. ೨೩೩-೬೨ ; 1139). △ ತಿರ್ಪೆಸುಂಕ : ಬೋವಕ್ಕಳ್ ತಂದು ಪಱಿಯಾವ ಬಾಡುಕಾಯಿಗೆ ತಿರ್ಪೆಸುಂಕವ ಕೊಟ್ಟರ್ (ಮುಂಬರಾ. X, ೨೭೦-೭೫ ; 1229). [ ತಿಪ್ಪೆ + ಸುಂಕ ]

ತಿಪ್ಪೆಹೊಳು (ನಾ). ತಿಪ್ಪೆಯಲ್ಲಿ ಮುಚ್ಚುವಂತೆ ರಾಶಿ ಹಾಕಿದ ಕಸಕಡ್ಡಿ ಮುಂತಾದುವು : ಬಾದು ವರುಷದ ತಿಪ್ಪೆಹೂಳಿನ್ನೊಂದು ವರುಷಕೆ ವ್ಯತ್ತಿಕೆಯು (ಬಿಜಾಪು. ೯೮-೩೪). [ ತಿಪ್ಪೆ + ಹೂಳು (<ಪೂೞ್₂) ]

ತಿಪ್ಪೇಱು (ನಾ). ಒಂದು ಸ್ಥಳದ ಹೆಸರು : ತಿಪ್ಪೇಱುವಪ್ ಅಭ್ರುಮ್ ಲಿಹಪ್ ಅತಿಶಯವಾಸ್ (ಮ್ಯಾಆರಿ. ೦೯೨೧, ೧೧-೬೭ ; 967). [ ? ]

ತಿಬು 'ತಿಬ್ಬ₂' ನೋ.

ತಿಬ್ಬ₁, ತಿಬ್ಬರ, ತೀವರ (ಗು). ೧. ಚುರುಕಾದ ; ಶೀಘ್ರವಾದ : "ತೀವ್ರಕ್ಕೆ ತಿಬ್ಬಮೆಂಬರು ಕವಿಗಳ್" (ಕವಿಕಂ. ೨೦೦) ; ತೀವ್ರ–ತಿಬ್ಬ, ನೇತ್ರ–ನೆತ್ತ (ಶಮತ. ೨೬೦ ವೃಯೂ). ೨. ತೀಕ್ಷ್ಣವಾದ : ಮನದರ್ತ್ತಿ ಪೋಪಿನಂ ಮೇರುನಗದಕೃತ್ರಿಮ ಜಿನಾಲಯಂಗಳನಿಂತನವರತಂ ನೋಡುವ ಭಾವನೆ ಪೋಗದು ತಿಬ್ಬಮಿನ್ನುಮದು ಕಾರಣದಿಂ (ಧರ್ಮಾಮೃ. ೫-೧೨೨) ; ತಿಬ್ಬವೊಗಂ ಬಯಂಬಡಿಪ ತೇಜಮನುಳ್ಳ ದೃಢಾಂಗ(ಹಾರಾಸ್ಕ.೧-೧೩-೪೭). (ನಾ). ೨. ಅತಿಶಯವಾದುದು; ಶ್ರೇಷ್ಠವಾದುದು; ಅಧಿಕವಾದುದು: ಕುಲಜನೀತನೆ ಪಂಡಿತನೀತನುಜ್ಜ್ವಲಯಶೋಧಿಕನೀತನೆ ತಿಬ್ಬಮೆಂದಲಸಿ ಪೇಟ್ವ (ಕವಿರಾ. ೧-೧೩೯) ; ಜನವಚನಮೆ ತಿಬ್ಬಮೆಂದು ನಂಬಿದ ಫಲ (ಧರ್ಮಾಮೃ. ೨-೧೫೧) ; ಅಧರವ ಸವಿದನು ತಿಬ್ಬದ ಸುಸಿಲೊಳು ಕೃಷ್ಣ (ಪರ್ಗಿಕ. ೫-೬೩). ೪. ಬೇಗ ; ಜಾಗ್ರತೆ : ಪಡಿಹಾರಿಗಳ ತಿಬ್ಬದಿಂ ಕರೆದು (ಆರಾಕ. ೧೩-೭೭). ತಿಬ್ಬರ: ೪. "ತಿಬ್ಬರಂ ತೀವ್ರನಾಮಂ" (ಕರ್ಣನಿ.೫೩). ತೀವರ : ೪. ದೇವತೆಗಳು ಕಾವಲರಿದು ನಾವು ಕೆಡಲು ಬೇಡ ಇದ್ದ ಮರುಳ ಕೂಡಿ ತೀವರದೊಳು ತಿರುಗೆಂದ (ಹರಿಶಾಂ. ೩-೭೭) ; ಹರಿಯೆ ಗತಿ ಹರಿಗೆ ನಿಜವೆಂದು ತಿಳಿದು ತೀವರದಿಂದ ಒಡಂಬಡುವದು ಜನರು (ತೀರ್ಥಮ. ೨೦೭) ; ತೀವರದಿಂದ ವರವನುಗಿದು ಸ್ಥಾವರಕೆ ಸಮಮಾಡುವೆ (ಶ್ರೀಕೃಪಾ. ೭೦). [ ಪ್ರಾ. ತಿವ್ವ./ಸಂ. ತೀವ್ರ ]

ತಿಬ್ಬ₂, ತಿಬು (ನಾ). ಒಂದು ಬಗೆಯ ಹೂವು : "ದಿವ್ಯಂ – ಬರ್ಬರ ಚಂದನ, ತಿಬ್ಬ" (ಒಷಧಿ. ೭೫). ತಿಬು : "ದಿವ್ಯಪುಷ್ಪ – ಕಣಿಗಲು,ತಿಬು, ಅತ್ತಿ" (ಒಷಧಿ. ೭೫). [ <ಸಂ. ದಿವ್ಯ? ]

ತಿಬ್ಬ$_3$ ‘ತಿಬ್ಬಂ’ ನೋ.

**ತಿಬ್ಬಂ, ತಿಬ್ಬ$_3$** (ಅ). ಬೇಗನೆ ; ಶೀಘ್ರವಾಗಿ : ತಿಬ್ಬಂ ನುಡಿದಂ–ತಿಬ್ಬನುಡಿದಂ (ಶಬ್ದಾನು. ೨೯೩ ಪ್ರಯೋ). ಅದಱಿಂ ಮುಂಚೆ ಪಳಂಚೆ ಪಾಱಿದುದು ತಿಬ್ಬ- ಬಾಣಮನ್ಯಂ (ಶಬಶಂ. ೪-೪೦). ತಿಬ್ಬ$_3$ : ಮೇಲಿನ ‘ಶಬ್ದಾನು’ ಪ್ರಯೋಗವನ್ನು ನೋಡಿ. [ <ತಿಬ್ಬ$_1$ ]

**ತಿಬ್ಬಂಮಾಡು** (ಕ್ರಿ). ೧. ವೇಗಗೊಳಿಸು. ೨. ದೃಢಪಡಿಸು ; ನಿಜಗೊಳಿಸು (?) : ಕೆಲರ್ ಮಿಟ್ಟುಗಾಡಿಯುಂ ಬರ್ದುಂಕಲಾಗದೆಂಬ ಮಾತಂ ತಿಬ್ಬಂಮಾಡಿ ಸೌಜನ್ಯಕಂದಾಂಕುರನ ಶರಕ್ಕಳ್ಕ ಬೆಳ್ಕತೋರ್ಱೆಡೆಯುಂ . . . ಬಿಟ್ಟರ್ (ಶಾಂತಿಪು. ೪-೩೦ ವ); ಮನಮಂ ತಿಬ್ಬಂ ಮಾಡಿ (ಧರ್ಮಾಮೃ. ೩-೨೧) : ತಿಬ್ಬಂ ಮಾಡಿದಂ = ತಿಬ್ಬವೆಹಗಹುದಹಗೆ ಮಾಡಿದಂ (ಶಮದ. ೦೪೪ ಪ್ರಯೋ). [ ತಿಬ್ಬ$_1$ + ಮಾಡು$_1$ ]

**ತಿಬ್ಬಯಲು** (ನಾ). ಒಂದು ಸ್ಥಳದ ಹೆಸರು (?) : ಹಿರಿಯ ಕೆಱೆಯ ತಿಬ್ಬಯಲಲು ಬಟ್ಟಿಗ ಗಟ್ಟವೊಂದುವೂರಿನ್ದ ಹಡುವಣ ಹೊಲದಲ್ಲಿ ಬೆದ್ದಲೆ ೪೨ (ಎಕ. V, ಹಾಸನ. ೫೮-೪೮ ; 1174).

[ ತಿಬ್ಬ? + ಬಯಲು (<ಬಯಲ್) ]

**ತಿಬ್ಬರ** ‘ತಿಬ್ಬ$_1$’ ನೋ.

**ತಿಬ್ಬಳಿ** (ನಾ). ಬುದ್ಧಿ ; ಎಚ್ಚರ ; ಜ್ಞಾನ : ತಿಬ್ಬಳಿಯಡಂಗಿ ಬಿಳ್ದಾ ವೀರಭಟವಿತತಿ ಸಿಬ್ಬದಿಗೊಳುತ್ತ ಸಿಡಿಮಿಡಿಗೊಂಬ ನೃಪಸಮಿತಿ (ಸಮ್ಯಕ್. ೮-೬೩) : ಏನೋ ಎಲಾ ತಿಬ್ಬಳಿ ಇಲ್ಲದೆ ಮಾತನಾಡುತ್ತೀರಿ (ಕಥಾಮಂ. IV, ೦೮).

**ತಿಬ್ಬಿ** (ಗು). ಯುನಾನಿ ಚಿಕಿತ್ಸೆಗೆ ಸಂಬಂಧಿಸಿದ : ‘ತಿಬ್ಬಿವೈದ್ಯ’ ಪರಾ.

[ ←ಅರ. ತಿಬ್ಬೀ ]

**ತಿಬ್ಬಿವೈದ್ಯ** (ನಾ). ಯುನಾನಿ ವೈದ್ಯ ; ಹಕೀಮ : ಆಯುರ್ವೇದ ಪಂಡಿತರನ್ನನುಸರಿಸುವಂತೆ ತಿಬ್ಬಿವೈದ್ಯರನ್ನು ಅಪೇಕ್ಷಿಸುವುದಾಗಲಿ ಹಿಂದುಗಳಿಗೆ ಎಂದೂ ಕಷ್ಟವೆಂದೆನಿಸಿರಲಾರದು (ಭಾರದ. ೪೦೮).

[ ತಿಬ್ಬಿ + ವೈದ್ಯ ]

**ತಿಬ್ಬು** ‘ತಿರುವು$_3$’ ನೋ.

**ತಿಮರು$_1$** ‘ತಿಮಿರು$_1$’ ನೋ.

**ತಿಮರು$_2$** (ನಾ). (?) : ಬಿತ್ತುವ ಮಾ ೩ ಪಣುವೆ ತಿಮರು ಬಿತ್ತುವ ಮ ೩ (ಸೌಇಎ. ೦೯೨೯, ಮಂಗಳೂರು. ೪೬೫-೧೩ ; 1812). [ ? ]

**ತಿಮರೆ** (ನಾ). ಒಂದು ಬಗೆಯ ಸೊಪ್ಪು ; ಒಂದೆಲಗ; ಇಲಿಕಿವಿಸೊಪ್ಪು : ಇಗೋ ತಿಮರೆ. ತಂಬ್ಳಿ ಮಾಡು ನೋಡೋಣ (ಬಾಳಿಗಿ. ೧೦೬).

[ ? ]

**ತಿಮಿ** (ನಾ). ೧. ಮೀನು ; ಮತ್ಸ್ಯ : “ಮೀನಂ ಶಫರಂ ತಿಮಿ ಪಾಠೀನಂ ಝಷಮನಿಮಿಷಂ ವಿಸಾರಂ ಮತ್ಸ್ಯಂ ಮೀನವೆಸರ್” (ವಸ್ತುಕೋ. ೨೨-೫); “ಮೀನಂ ಝಷಂ ತಿಮಿ ವಿಸಾರಮಾ ಶಿಲ್ಕಿ . . . ವೈಸಾರಿಣಂ ಮತ್ಸ್ಯಮೆನೆ ಮೀನ್ಗೆ ನಾಮಂ” (ಮಂಗರಾ. ೦೨೧-೬). ೨. ದೊಡ್ಡ ಗಾತ್ರದ ಮೀನು : “ ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) –ಈ ೪ ಒಂದೊಂದಕ್ಕೆ ಹಿರಿಯುವಪ್ಪ ಮೀನ್” (ಹಲಾಯು. ೧೦೯-೩೮) ; ಜಳಧಿಯೊಳೆ ತಿಮಿ ತಿಮಿಂಗಿಳಗಿಳ ಮಕರ ಪ್ರಕರ ಶಂಕ ಸಂಭವಮಕ್ಕುಂ (ಕಾವ್ಯಾವ. ೮೮೩) ; ಕಿರುಮೀನ್ಗೆ ಕೆರೆ ಕೊಳಂ ಪೊಳೆ ಸಾಲ್ಗುಮಾ ತಿಮಿಗೆ ಪೇಳ್ಕುಂ ಜಲಕ್ರೀಡೆಗಾರುಂದ್ರಸಾಗರಸಲಿಲವಿಸ್ತಾರ (ಶ್ರೀ ರಾ ಮಾ. ೪-೯೫) : ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ಆ ತಿಮಿಂಗಿಳನುಮನೀ ತಿಮಿಂಗಿಳಗಿಳಂ ತವೆ ನುಂಗಿದೆನೊಂದೆ ತುತ್ತಿನೊಳ್ (ಮಂತ್ರಶ. ೫೬-೧೬) : ಸಮುದ್ರದಡದಲ್ಲಿ ತಿಮಿಜಾತಿಗೆ ಸೇರಿದ ಪ್ರಾಣಿಗಳೂ ಇವೆ (ಪ್ರವಾಇ. I, ೫೬). [ ಸಂ. ]

**ತಿಮಿಂಗಿಲ, ತಿಮಿಂಗಿಳ** (ನಾ). ‘ತಿಮಿ’ ಎಂಬ ಮೀನುಗಳನ್ನು ನುಂಗುವ ಬಹಳ ದೊಡ್ಡ ಗಾತ್ರದ ಒಂದು ಬಗೆಯ ಮೀನು : ತಿಮಿಂಗಿಲ ಮತ್ಸ್ಯ ಕಚ್ಛಪ ಕರಿ ಮಕರಗಳಡಸಿ ತುಂಬಿದ ಹಗೆಯೆನಿಸಿ . . . ಮೆಱೆದುದರರೆ ಪಶ್ಚಿಮವನನಿಧಿ (ಸೋಮಚ. ೧-೬೦) ; ಮಿಗೆ ತಿಮಿಂಗಿಲನೊಡನೆ ಹುಲುಮೀನುಗಳು ಮಾಡುವುದೇನು (ಕುಮಾರದ್ರೋ. ೩-೪೨); ಅಡಿಯೆ ಮೇಲಾದವ್ರೋಲೋಕರಿಪುದದ್ರಿಸಮ ಊರ್ಮಿಮಾಲಾ ಭಯಂಕರ ಸಮುದ್ರಂ, ತಿಮಿಂಗಿಲಂ ತೃಣದ ಕಣವಾಯಿತೆಂಬಂತೆ (ಶ್ರೀ ರಾ ಮಾ. ೦೬೫-೧೬೦); ಇದು ತಿಮಿಂಗಿಲ ಮೊಸಳೆ ಮೀನಂಗಳ ಬಾಳ ಕೊಳಗುಳದಾಕರ! (ಮಾನಸ. ೪೧-೩). **ತಿಮಿಂಗಿಳ** : “ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ)–ಈ ೪ ಒಂದೊದಕ್ಕೆ ಹಿರಿಯುವಪ್ಪ ಮೀನ್” (ಹಲಾಯು. ೧೦೯-೩೮) ; ಬಾಳೆಗಳಂ ತಿಮಿ ನುಂಗೆ, ನುಂಗಿದಾಗಳೆ ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲಗಿಲ, ತಿಮಿಂಗಿಳಗಿಳ** (ನಾ). ‘ತಿಮಿಂಗಿಲ’ ಎಂಬ ಮೀನಂಗಳನ್ನು ನುಂಗುವ ಅತಿ ದೊಡ್ಡ ಗಾತ್ರದ ಒಂದು ಬಗೆಯ ಮೀನು: ಅದಕ್ಕೆ ಮೊದಲು ನಾನು ತಿಮಿಂಗಿಲಗಿಲವಾಗಿದ್ದೆನು (ಮಂತ್ರಶ. ೫೬-೦೯). **ತಿಮಿಂಗಿಳಗಿಳ**: “ ರೀರಲ್ಲಃ, ತಿಮಿಃ, ತಿಮಿಂಗಿಳಃ (ತಿಮಿಂಗಿಳಗಿಳಃ) – ಈ ೪ ಒಂದೊಂದಕ್ಕೆ ಹಿರಿಯುವಪ್ಪ ಮೀನ್” (ಹಲಾಯು. ೧೦೯-೩೮) ; ತಿಮಿಯುಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂಗಿಳಮುಮನಾ ತಿಮಿಂಗಿಳಗಿಳಂ ತವೆ ನಂಗಿದುದೊಂದು ತಾಣದೊಳ್ (ಕಾವ್ಯಾವ. ೮೮೪). [ ಸಂ. ]

**ತಿಮಿಂಗಿಲನ್ಯಾಯ** (ನಾ). ದೊಡ್ಡದು ಚಿಕ್ಕದನ್ನು ತಿಂದು ಜೀವಿಸುವ ನ್ಯಾಯ : ಈ ತಿಮಿಂಗಿಲನ್ಯಾಯದಿಂದ ಸ್ವಾತಂತ್ರ್ಯ ಸಿದ್ಧಿಯಾದೀತೆ (ಹಾಡುಹು. ೬೮). [ ತಿಮಿಂಗಿಲ + ನ್ಯಾಯ ]

**ತಿಮಿಂಗಿಲರಾಶಿ** (ನಾ). ಒಂದು ನಕ್ಷತ್ರ ಪುಂಜದ ಹೆಸರು : ಅಗ್ನಿಕುಂಡ ಶಿಲ್ಪಶಾಲೆಗಳ ಮೇಲಕ್ಕೆ ಅಂದರೆ ಉತ್ತರ ವಾಯವ್ಯಗಳಿಗೆ ಹಬ್ಬಿ ತಿಮಿಂಗಿಲರಾಶಿ ವ್ಯಾಪಿಸಿದೆ (ನಕ್ಷತ್ರ. ೨೧). P ಇದು ಇಂಗ್ಲಿಷಿನ ‘Cetus’ ಎಂಬುದರ ಕನ್ನಡ ಅನುವಾದ. [ ತಿಮಿಂಗಿಲ + ರಾಶಿ ]

**ತಿಮಿಂಗಿಳ** ‘ತಿಮಿಂಗಿಲ’ ನೋ.

**ತಿಮಿಂಗಿಳಗಿಳ** ‘ತಿಮಿಂಗಿಲಗಿಲ’ ನೋ.

**ತಿಮಿತ** (ಗು). ಅಲುಗಾಡದ ; ಅಚಲವಾದ ; ಸ್ಥಿರವಾದ : “ಸ್ತಿಮಿತಂ ತಿಮಿತಂ” (ವಸ್ತುಕೋ. ೧೦೬-೫೧) ; ತಿಮಿತ ಕಪೋಲಾವಳಗ್ನಾಳಕಂ ಯೌವತಮಾದಂ ಕಣ್ಗೆವಂದಿರ್ದುದು ಕೃತಸಲಿಲಕ್ರೀಡಮಸ್ತ್ರೋಷ್ಣಪೀಡಂ (ಚಂದ್ರಪ್ರ. ೬-೧೪೯). [ ಸಂ. ]

**ತಿಮಿತ್ತಿಳಿಕ** (ನಾ). ಕಾಡಿಗೆಯ ತಿಲಕ (?) : ಅದಲ್ಲದೆಯುಂ ತಿಮಿತ್ತಿಳಿಕಮೆಂಬುದು ಪಸುಗೂಸಿಂಗೆ ಮಸಿಯೆಂಬುದು ಹುರಿಯೋಡಿಂಗೆ (ಅನಂಪು. ೨-೨೮ ವ).

[ P ಇದು ‘ತಿಮಿರ್ತಿಲಕ’ ಎಂಬುದರ ಅಪಲಿಖಿತವಿರಬಹುದು ]

**ತಿಮಿರ್$_1$, ತಿಗಂರು$_1$, ತಿಮಿರು$_1$, ತಿವ್ರುರು$_1$** (ಕ್ರಿ). ೧. (ಚರ್ಮವನ್ನು) ತಿಕ್ಕಿ ಶುಭ್ರಗೊಳಿಸು ; ಚೊಕ್ಕಟಗೊಳಿಸು: “ತಿಮಿರ್–ತ್ವಙ್ಮಲ ವಿಸರ್ಜನೇ” (ಶಮಧಾ). ೨. ಗಂಧ ಮೊದಲಾದುವನ್ನು ಲೇಪಿಸು,-ಉಜ್ಜು,-ಪೂಸು: ಬಱಿಯುಂ ಯಕ್ಷಕರ್ದಮದ ಕೆಯ್ಗಟ್ಟಿಯೊಳ್ ಕೆಯ್ಯಂ ತಿಮಿರ್ದು ತಂಬುಲಮುಂ ಕೊಂಡು (ಪಂಪಭಾ. ೩-೭೯ ವ) : ಕೈಘಟ್ಟಿಯೊಳಂಗೆಯ್ಯಂ ತಿಮಿರ್ದು (ಸುಕುಮಾ. ೧೧-೩೦) ; ಅಗ್ರಪಲ್ಲವದ ಚಪ್ಪರಕೆಗಳಂ ಬೆಪ್ಪಳಿಸಿ ನೆಗೆದು ತಿಮಿರ್ದ ಕುಂಕುಮದಿಂ (ಅನಂಪು. ೨-೨೯ ವ) : ಬಾರಯ್ ನೀರೆಱೆವೆಂ ಮೀಯಿಸುವೆಂ ಪೂಸುವೆಂ ಬಾವನ್ನದಿಂ ತಿಮಿರ್ವೆಂ ತಿಲಕಮನಿಡುವೆಂ ತನಿವಣ್ಗಳಂ ತಿನಲೀವೆಂ,ನಿನ್ನನಗಲದಾವಗಂ ಸೇವಿಸುವೆಂ(ರಾಮಾಶ್ವ.೬೧-೧೬).

ಕರ್ನಾಟಕ ಸರ್ಕಾರದ ಉದಾರ ಧನಸಹಾಯದಿಂದ ಕನ್ನಡಿಗರ ಬಹುದಿನಗಳ ಬೇಡಿಕೆಯಾಗಿದ್ದ ಕನ್ನಡ ನಿಘಂಟಿನ ಎಂಟು ಸಂಪುಟಗಳು ಈಗ ಪುನರ್ಮುದ್ರಣಗೊಂಡು ನಿಮ್ಮ ಕೈಸೇರುತ್ತಿವೆ.

ಸಮಸ್ತ ಕನ್ನಡಿಗರಿಗೆ ಈ ಸಂಪುಟಗಳನ್ನು ಒಪ್ಪಿಸಲು ನೆರವು ನೀಡಿದ ಕರ್ನಾಟಕ ಸರ್ಕಾರವನ್ನು ನಾನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಡಾ. ನಲ್ಲೂರು ಪ್ರಸಾದ್ ಆರ್. ಕೆ.
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು